ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ ೩೨೦

# ವಿಶ್ವಪ್ರಭೆ

ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ
ಮಹಾಭಿನಂದನ ಗ್ರಂಥ

**ಸಂಪುಟ-೨; ಭಾಗ-೨**

ಸಂಪಾದಕರು:
ಪ್ರೊ. ಜಿ. ಎಚ್. ಹನ್ನೆರಡುಮಠ

ಶ್ರೀ ಕಾಶೀ ಜ್ಞಾನ ಸಿಂಹಾಸನದ -
ಜ್ಞಾನ ಮಂದಿರಕ್ಕೆ -
ನಿಟುರ್ಕಿನಿದ್ದು.
21-1-1993




ಪ್ರಕಾಶಕರು:
ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳಿ
ಮೂರುಸಾವಿರಮಠ ಹುಬ್ಬಳ್ಳಿ

**VISHVAPRABHE:**
an Anthology of Miscellaneous Writings of SHREE MOOJAGAM; (one of the anthologies in MOOJAGAM MAHABHINANDANA SAMPUTA-Vol. II Part II) Edited by Prof. G. H. Hanneradumath, Published by Shri Jagadguru Gangadhara Dharma-pracharaka Mandali Moorusavira-math Hubli-20.

Pages : (1057 To 1904) = 848 + 24 + 484 - 1356

**Printed at:**
Twaritha Mudranalaya, Near Kumbaragaradi, Gangapurpeth Gadag

ಬೆಲೆ: ೫೦೦-೦೦

(ಭಾಗ ೧-೨ ಸೇರಿ; ಎರಡೂ ಕೆಲಿಕೊ ಬೈಂಡ್)

1991



ಮುದ್ರಣ:
ಕುಂಬಾರಗರಡಿ ಹತ್ತಿರ, ಗಂಗಾಪೂರ ಪೇಟೆ.
ತ್ವರಿತ ಮುದ್ರಣಾಲಯ: ಗದಗ-582 101

ಮುದ್ರಣದ ಅವಧಿ
ಎರಡು ತಿಂಗಳು

# ಸಂಪಾದನೆ

"ಚಿತ್ರಭೆ"ಯಿಂದ "ವಿಶ್ವಪ್ರಭೆ"ಯವರೆಗೆ ಪೂಜ್ಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಸಾಹಸ–ಸಾಧನೆ–ಸಂಪಾದನೆಗಳ ಯಾತ್ರೆ ಒಂದು ಅದ್ಭುತ ನಿದರ್ಶನ. ಒಂದು ವ್ಯಕ್ತಿ ಸಂಪುಟದಲ್ಲಿ ಬೃಹತ್ ಬದುಕಿನ ವಿಹಂಗಮಾವಲೋಕನದ ವ್ಯಾಪ್ತಿ-ದೀಪ್ತಿಗಳು ತುಂಬಿರುವದು ಪ್ರತ್ಯಕ್ಷ ಪವಾಡ! ನೂರು ವ್ಯಕ್ತಿಗಳು ಮಾಡಲಾರದ ಸಹಸ್ರಮುಖಿ ಕಾರ್ಯರಂಗದ ಈ ಕಾಯಕತೋರಣ ಓರಣಗೊಂಡಿರುವದು ಇಲ್ಲಿ....ಈ "ಮೂಜಗಂ" ಮಹಾವ್ಯಕ್ತಿತ್ವದಲ್ಲಿ!!

"ವಿಶ್ವಪ್ರಭೆ" ಕನ್ನಡ ಸಾಹಿತ್ಯದ ಸಂಪಾದನೆಯ ಗ್ರಂಥಗಳಲ್ಲಿ ತನ್ನತನದ ವಿಶಿಷ್ಟವಾದ ಪದರು–ಪಡಸಾಲೆಗಳನ್ನು ಪಡೆದಿದ್ದು; ಒಟ್ಟು ಮೂರು ಬೃಹತ್ ಸಂಪುಟಗಳಲ್ಲಿ; ಅಂದಾಜು ೩೫೦೦ ಪುಟಗಳಲ್ಲಿ ಇದರ ನಿರ್ಮಾಣ ಪೂರ್ಣಗೊಳ್ಳಲಿದೆ. ಈ ಮೂರು ಸಂಪುಟಗಳಲ್ಲಿ ಪೂಜ್ಯ ಜಗದ್ಗುರುಗಳ ಸಮಗ್ರ ಸಾಹಿತ್ಯ ಕೃತಿಗಳನ್ನು ಇದೀಗ ಒಂದೆಡೆಗೆ ದೊರೆಯುವಂತೆ ಸಂಯೋಜಿಸಿದ್ದು, ತಮ್ಮ ಕೈಗೆ ನೀಡಲು ಸಂತಸವಾಗುತ್ತಿದೆ. ತ್ವರಿತ ಮುದ್ರಣಾಲಯದ ಶ್ರೀ ಫ. ಶಿ. ಭಾಂಡಗೆಯವರ ಮುನ್ನೆಚ್ಚರಿಕೆಯ ನೆರವು ಇಲ್ಲದಿದ್ದರೆ ಇಷ್ಟೊಂದು ಬೃಹತ್ ಗ್ರಂಥವನ್ನು ಅಲ್ಪಕಾಲದಲ್ಲಿ ಅಚ್ಚು ಹಾಕಿ ನಿಮ್ಮ ಕೈಗೆ ಕೊಡಲು ಅಸಾಧ್ಯವಾಗಿತ್ತು. ಶ್ರೀ ಫ. ಶಿ. ಭಾಂಡಗೆಯವರು ಈ ಮೂರು ಸಂಪುಟಗಳ ಕರಾರುವಾಕ್ಕಾದ, ಅಚ್ಚುಕಟ್ಟಾದ ಮುದ್ರಣಕ್ಕಾಗಿ ತಮ್ಮ ಏನೆಲ್ಲ ಶಕ್ತಿ–ಯುಕ್ತಿಗಳನ್ನು ಸಮರ್ಪಿಸಿದ್ದಾರೆ. ನಮ್ಮೊಂದಿಗೆ ಅವರು ಹಗಲಿಗೆ ಹಗಲು ಕೊಟ್ಟು ಗ್ರಂಥದ ಮಹಾಸೃಷ್ಟಿಗೆ ದುಡಿದಿದ್ದಾರೆ.

ಪೂಜ್ಯ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಹುಟ್ಟು ಕವಿಗಳು ಹಾಗೂ ಚಿಂತನಶೀಲರು. ಅವರ ಎಡೆಬಿಡದ ಕಾರ್ಯರಂಗದ ಮಧ್ಯದಲ್ಲೂ ಸಿಡಿದು ಬಂದಿರುವ ಅಂದಾಜು ೩೦ ಗ್ರಂಥಗಳಲ್ಲಿ ಕೆಲವು ಕಾಲಕೋಶದಲ್ಲಿ ಕಳೆದು ಹೋಗಿವೆ. ನಮಗೆ ಲಭ್ಯವಾದ ೨೪ ಗ್ರಂಥಗಳನ್ನು ಇಲ್ಲಿ ನಿಮ್ಮ ಕೈಗೆ ಕೊಡುತ್ತಿದ್ದೇವೆ. ಗದ್ಯ–ಪದ್ಯ–ಉಪನ್ಯಾಸ–ಉಪದೇಶ–ಆಶೀರ್ವಾದಗಳ ಮೂಲಕ ತನ್ನ ಪಾತಳಿಯನ್ನು ಕಂಡುಕೊಂಡ ಜಗದ್ಗುರುಗಳ ಸಾಹಿತ್ಯ ಅವರ ತೀರ ಇತ್ತೀಚಿನ "ಪೂರ್ಣಾಜ್ಞ

ವಚನಗಳ" ಮೂಲಕವಾಗಿ ಹೊಸ ತಿರುವು–ಹೊಸ ಗಡುವು ಪಡೆದಿದೆ. ಈ
ಕೃತಿಗಳಲ್ಲಿ ಮೂರುಸಾವಿರಕ್ಕೂ ಅಧಿಕವಾದ ಅವರ ಪೂರ್ಣಜ್ಞ ವಚನ
ಗಳನ್ನು ಅಡಕಗೊಳಿಸಿರುವದು ನಮ್ಮ ಒಂದು ಸಾಹಸವೇ ಎಂದು ಹೇಳ
ಬಹುದು. ಯಾಕೆಂದರೆ ಪೂರ್ಣಜ್ಞ ವಚನಗಳೆ ಶ್ರೀ ಮಹಾಜಗಂ ಅವರ
ಸಾಹಿತ್ಯ ಸಮಾರಾಧನೆಯ ವಿಶೇಷ ಹಬ್ಬದೂಟವಾಗಿದ್ದು ಅವನ್ನು ಕೈ
ಬಿಟ್ಟರೆ ಮೂಲ ಜೀವಾಳವನ್ನೇ ಕೈಬಿಟ್ಟಂತೆ ಎಂಬ ವಿಚಾರ ನಮ್ಮದಾಗಿತ್ತು.
ಈ ದಿಶೆಯಲ್ಲಿ ನಾವು ಮುನ್ನುಗ್ಗಿದಾಗ ಈ ಸಂಭಾವನೆಯ ಎರಡನೇ ಗ್ರಂಥ
ಸಂಪುಟವೇ ಇಪ್ಪತ್ತೈದು ನೂರು ಪುಟ ದಾಟಿರುವದರಿಂದ ಇದನ್ನು ಭಾಗ–೧
ಭಾಗ–೨ ಹೀಗೆ ಎರಡು ಭಾಗಗಳಲ್ಲಿ ತರುವದು ಅನಿವಾರ್ಯವಾಯಿತು.

"ವಿಶ್ವಪ್ರಭೆ"ಯ ಇನ್ನೆರಡು ಸಂಪುಟಗಳಲ್ಲಿ (ಸಂಪುಟ–೧ ಮತ್ತು ಸಂಪುಟ–೩) ನಾಡಿನ ಹಿರಿಯ ಲೇಖಕರ ಪ್ರಜ್ಞಾಪೂರ್ಣ ಲೇಖನಗಳ ದೊಡ್ಡ ವನಭೋಜನವೆ ತಮಗೆ ಕಾದಿದ್ದಿದೆ. ಮೊದಲನೆ ಸಂಪುಟದಲ್ಲಿ ಜಗದ್ಗುರುಗಳ ಬೆಳಗು-ಬೈಗುಗಳನ್ನು ಸಮೀಪದಿಂದ ಕಂಡವರಿಂದ ಲೇಖನ ಗಳನ್ನು ಸಂಕಲಿಸಲಾಗಿದೆ. ಜೊತೆಗೆ ಚಿಂತನಪರ ಲೇಖನಗಳ ಸಂಗ್ರಹವನ್ನು ಅಡಕಗೊಳಿಸಿದ್ದೇವೆ. ಮೂರನೆಯ ಸಂಪಾದನೆಯ ಸಂಪುಟದಲ್ಲಿ ಸರ್ವ ಧರ್ಮಗಳ ಸಿದ್ಧಾಂತದ ಸಾರದರ್ಶನವನ್ನು ಪರಿಣತರಿಂದ ಬರೆಸಿ ಮುದ್ರಿಸ ಲಾಗುತ್ತಿದೆ.

ತಾವು ಈ ಮಹಾನ್ ಗ್ರಂಥ ಶ್ರೇಣಿಗಳ ಪರ್ವತ ಪಂಕ್ತಿಯಲ್ಲಿ ಪ್ರೀತಿ ಯಿಂದ ವಿಹರಿಸುತ್ತೀರೆಂದು ಅಭಿಮಾನದಿಂದ ನಂಬುತ್ತೇವೆ. ಈ ಮಹಾ ಸಂಪುಟ ಪ್ರಕಟವಾಗಲು ನೆರವು ನೀಡಿದ ಅಭಿನಂದನ ಸಮಿತಿಯ ಪ್ರಕಾಶಕ ರಿಗೂ ಹಾಗೂ ಸಂಪೂರ್ಣ ಜವಾಬ್ದಾರಿ ವಹಿಸಿ ಓರಣವಾಗಿ ಅಚ್ಚುಗೊಳಿ ಸಿದ ತ್ವರಿತ ಮುದ್ರಣಾಲಯದ ಶ್ರೀ ಫ. ಶಿ. ಭಾಂಡಗೆ ಅವರಿಗೂ ಕೃತಜ್ಞತೆ ಸಲ್ಲಿಸುತ್ತೇವೆ.

೧೫–೮–೯೯೧ **—ಪ್ರೊ. ಜಿ. ಎಚ್. ಹನ್ನೆರಡುಮಠ**

# ಪ್ರಕಾಶನ

ಪೂಜ್ಯ ಜಗದ್ಗುರುಗಳ ಗ್ರಂಥಗಳು ಎಷ್ಟು? ಕಳೆದುಹೋದ ಗ್ರಂಥಗಳೆಷ್ಟು? ಉಳಿದ ಗ್ರಂಥಗಳೆಷ್ಟು?....ಮುಂತಾದ ಸಮಸ್ಯೆಗಳು ನಮ್ಮನ್ನು ಕಾಡುತ್ತಿದ್ದವು. ಜೊತೆಗೆ; ಜಗದ್ಗುರುಗಳ ಮುದ್ರಿತ ಗ್ರಂಥಗಳು ಕೂಡಾ ಕೆಲಕೆಲವು ಪ್ರತಿ ತೀರಿ ಹೋಗಿ, ಮಠದಲ್ಲಿಯೇ ಒಂದು ಪ್ರತಿ ಕೂಡ ಉಳಿಯದ ಪರಿಸ್ಥಿತಿ ಉಂಟಾಯಿತು. ಕೆಲವು ಪುಸ್ತಕಗಳಿಗಾಗಿ ಕರ್ನಾಟಕದ ಮಠಗಳಲ್ಲಿ ಹುಡುಕಾಡಿಸಬೇಕಾಯಿತು. ಈ ಮಧ್ಯದಲ್ಲಿ ಪೂಜ್ಯ ಜಗದ್ಗುರುಗಳ ಸಮಸ್ತ ಕೃತಿಗಳನ್ನು ಒಂವೆಡೆ ಕಾಣುವ ಬೇಡಿಕೆ ಭಕ್ತರಿಂದ ಮೇಲಿಂದ ಮೇಲೆ ಬರುತ್ತಲೇ ಇತ್ತು. ಈ ಎಲ್ಲಾ ಗ್ರಂಥಗಳನ್ನು ಒಂದೇ ಬೃಹತ್ ಹೆಬ್ಬೊತ್ತಿಗೆಯಲ್ಲಿ ತರುವ ದೊಡ್ಡ ಸಾಹಸವನ್ನು ಯಾರಿಗೆ ಒಪ್ಪಿಸುವದೆಂಬ ಸಮಸ್ಯೆಯೂ ಬಂತು. ಪೂಜ್ಯ ಜಗದ್ಗುರುಗಳೊಂದಿಗೆ ಮೂವತ್ತು ವರ್ಷ ಹತ್ತಿರದ ಒಡನಾಟವಿರುವ ಪ್ರೊ. ಜಿ. ಎಚ್. ಹನ್ನೆರಡುಮಠ ಅವರೇ ಈ ಕಾರ್ಯಮಾಡಲು ಸರ್ವಸಮರ್ಥರೆಂಬುದು ನಮಗೆ ಖಾತ್ರಿ ಆಯಿತು. ಹನ್ನೆರಡುಮಠರು ಸ್ವತಃ ಕವಿಗಳಿದ್ದು ಹೆಸರಾಂತ ಸಾಹಿತಿಗಳಿರುವದು ತಮಗೆಲ್ಲ ವಿದಿತ ಸಂಗತಿ. ಅವರು ಸಂಪಾದಿಸಿದ "ಚಿತ್ರಾಭೆ" ಹಾಗೂ "ರಜತ ದೀಪ್ತಿ"ಗಳು ಈಗಾಗಲೇ ಬಹುಜನರ ಪ್ರೀತಿ ಸಂಪಾದಿಸಿವೆ. ಆದ್ದರಿಂದ ಈ ಮಹಾಕೃತಿಯ ಸಂಪಾದನೆಯ ಹೊಣೆಗಾರಿಕೆಯುನ್ನು ಅವರ ಮೇಲೆ ಹೊರಿಸಲಾಯಿತು. ಜಗದ್ಗುರುಗಳ ಎಲ್ಲ ಗ್ರಂಥಗಳನ್ನು ಒಂದೆಡೆಯಲ್ಲಿ ಸಮಗ್ರವಾಗಿ ಮುದ್ರಿಸಲು ಪೂಜ್ಯ ಜಗದ್ಗುರುಗಳ ಸಮ್ಮತಿಯನ್ನೂ ನಾವು ಪಡೆದೆವು. ಇದೀಗ ಎಲ್ಲ ಕೃತಿಗಳನ್ನು ಒಂವಡೆ ನೋಡಬೇಕೆಂಬ ಓದುಗರ ಲವಲವಿಕೆ ಇಲ್ಲಿ ಏರ್ಪಟ್ಟಿದೆ.

ಪ್ರೊ. ಹನ್ನೆರಡುಮಠ ಅವರು ಈ ಸಮಗ್ರ ಸಂಪುಟಕ್ಕೆ ಆರಂಭದಲ್ಲಿ ಪೂಜ್ಯ ಜಗದ್ಗುರುಗಳ ಸಮಸ್ತ ಕೃತಿಗಳ ಪರಿಚಯ ನೀಡುವ ಅತ್ಯುಪಯುಕ್ತವಾದ ಒಂದು ಸಂಗ್ರಾಹ್ಯ ವಿಮರ್ಶೆ ಬರೆದಿದ್ದಾರೆ. ಅಷ್ಟೇ ಅಲ್ಲ; ಈ ಮಹಾಸಂಪುಟದ ಕೊನೆಯಲ್ಲಿ ಆಯಾ ಗ್ರಂಥಗಳ ಬಗೆಗೆ ನಾನಾ ವಿಮರ್ಶಕ ವಿದ್ವಾಂಸರು ಬರೆದ ಲೇಖನಗಳನ್ನು ಪ್ರಕಟಿಸಲಾಗಿದೆ. ಹೀಗೆ ಈ ಸಮಗ್ರ ಸಾಹಿತ್ಯ ಸಂಪುಟವು ಸಂಪೂರ್ಣ ಸಾಹಿತ್ಯ ಮುದ್ರಣದೊಂದಿಗೆ, ಸಮಗ್ರ

ವಿಮರ್ಶೆಯನ್ನೂ, ಬಿಡಿವಿಮರ್ಶೆಯನ್ನೂ ಪಡೆದು ತನ್ನ ವೈಶಿಷ್ಟ್ಯವನ್ನು ಮೆರೆದಿದೆ. ನಾಡಿನ ಸಮಸ್ತ ಅಭಿಮಾನಿ ಓದುಗರು ಈ ಸಮಗ್ರ ಸಾಹಿತ್ಯ ಸಂಪುಟವನ್ನು ಪ್ರೀತಿಯಿಂದ ಸ್ವೀಕರಿಸುವಂತಾಗಲಿ.

ಪೂಜ್ಯ ಜಗದ್ಗುರುಗಳವರ ಷಷ್ಟ್ಯಬ್ದಿ ಪೂರ್ತಿ ಸಮಾರಂಭ ಸಮಿತಿಯವರು ಈ ಸಮಗ್ರ ಸಾಹಿತ್ಯ ಸಂಪುಟವನ್ನು ಮಹಾಭಿನಂದನ ಸಂಪುಟದ ಎರಡನೆಯ ಭಾಗವಾಗಿ ಮುದ್ರಿಸಲು ಅನುಮತಿಸಿದ್ದಕ್ಕೆ ಅವರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಗ್ರಂಥವನ್ನು ಸುಂದರವಾಗಿಯೂ ಚೊಕ್ಕಟವಾಗಿಯೂ ಸಕಾಲದಲ್ಲಿ ಮುದ್ರಿಸಿದ ತ್ವರಿತ ಮುದ್ರಣಾಲಯದ ಶ್ರೀ ಫ. ಶಿ. ಭಾಂಡಗೆ ಅವರಿಗೂ ಅಭಿನಂದನೆ ಸಲ್ಲಿಸುತ್ತೇವೆ.

ಈ ಹೆಬ್ಬೊತ್ತಿಗೆ ನಿಮ್ಮ ಮನೆ ಬೆಳಗಲಿ, ಮನ ಬೆಳಗಲಿ ಎಂದು ಹೃದಯಾರೆ ಹಾರೈಸುತ್ತೇವೆ.

ಅಧ್ಯಕ್ಷರು

೨-೯-೧೯೯೧

ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ
ಮಹಾಸ್ವಾಮಿಗಳವರ ಷಷ್ಟ್ಯಬ್ದಿ ಸಮಿತಿ

# ಪರಿವಿಡಿ

# ನಮ್ಮ ವಿದೇಶಯಾತ್ರೆ

ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ
ಮಹಾಸ್ವಾಮಿಗಳವರು ಮೂರುಸಾವಿರಮಠ
ಹುಬ್ಬಳ್ಳಿ

ಪ್ರಕಾಶಕರು:
ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ
ಮೂರುಸಾವಿರಮಠ, ಹುಬ್ಬಳ್ಳಿ.
೧೯೭೯

# ಮುನ್ನುಡಿ

'ಶ್ರೀಮೂಜಗಂ'ಯೆಂಬ ಕಾವ್ಯನಾಮದಿಂದ ಶ್ರೀ ಜಗದ್ಗುರು ಗಂಗಾಧರ ರಾಜ ಯೋಗೀಂದ್ರ ಮಹಾಸ್ವಾಮಿಗಳು. ಮೂರುಸಾವಿರಮಠ ಹುಬ್ಬಳ್ಳಿ. ಅವರು "ನಮ್ಮ ವಿದೇಶ ಯಾತ್ರೆ"ಯೆಂಬ ಪ್ರವಾಸ ಕಥನ ಕೃತಿಯನ್ನು ರಚಿಸಿ, ಕನ್ನಡ ಸಾಹಿತ್ಯಕ್ಕೆ ಒಂದು ಉತ್ತಮ ಕೃತಿಯನ್ನು ನೀಡಿದ್ದಾರೆ. ಕನ್ನಡ ಸಾಹಿತ್ಯ ರಂಗದಲ್ಲಿ ಪ್ರವಾಸ ಕಥನದ ಕೃತಿಗಳು ವಿರಳ. ಈ ಕೃತಿಯಿಂದ ಶ್ರೀಗಳು ಸಾಹಿತ್ಯಾಭಿಮಾನಿಗಳಿಗೆ ಪ್ರವಾಸದ ಚಿರ ನೆನಹುಗಳ, ಕಂಡ ಸುಂದರ ತಾಣಗಳ ಪರದೇಶ ನಿವಾಸಿಗಳ ನಡೆ-ನುಡಿ, ಕಲೆ-ನೆಲೆ, ಜೀವನದ ಬೆಲೆಗಳ ಸುಂದರ ಚಿತ್ರಣವನ್ನು ರಚಿಸಿ, ಬೆಲೆ ಬಾಳುವ ಕೊಡುಗೆಯನ್ನು ನೀಡಿದ್ದಾರೆ.

ನಾಲ್ಕು ಭಾಗಗಳನ್ನೊಳಗೊಂಡ ಶ್ರೀಗಳವರ ಈ ಕೃತಿಯ ಮೊದಲನೆಯ ಭಾಗದಲ್ಲಿ ಅವರು ಜಪಾನ ದೇಶದಲ್ಲಿ ಜರುಗಿದ ವಿಶ್ವಧರ್ಮ ಶಾಂತಿ ಪರಿಷತ್ತಿನಲ್ಲಿ ಹಿಂದೂ ಧರ್ಮ ಹಾಗೂ ವೀರಶೈವ ಧರ್ಮವನ್ನು ಪ್ರತಿನಿಧಿಸುವ ಹೊಣೆಗಾರಿಕೆಯನ್ನು ಯಶಸ್ವಿಯಾಗಿ ನಿರ್ವಹಿಸಿದ ನಿರೂಪಣೆಯಿದೆ. ವಿಶ್ವಶಾಂತಿಗೆ ಚೈತ್ರಯಾತ್ರೆ ಕೈಕೊಂಡ ಶ್ರೀಗಳು ವಿದೇಶ ಯಾತ್ರೆಯನ್ನು ಯಶಸ್ವಿಯಾಗಿ ಪೂರೈಸಿದ ಪರಿಚಯಾತ್ಮಕ ವಿವರಣೆಯನ್ನು ಕೊಡುತ್ತ, ನಮ್ಮನ್ನೂ ತಮ್ಮ ಜೊತೆಗಾರರಂತೆ ಮುಂದೆ ಮುಂದೆ ಸಾಗಿಸಿಕೊಂಡು ಹೋಗುತ್ತಾರೆ. ಎರಡನೆಯ ವಿಶ್ವಸಮರದಲ್ಲಿ ಬಾಂಬ್ ದಾಳಿಯಿಂದ ನೆಲಸಮವಾಗಿದ್ದ ಆದರೆ ಇಂದು ವಿಶ್ವರಂಗದ ಭವ್ಯ ರಾಷ್ಟ್ರವೆಂದು ತನ್ನ ಪ್ರಾಮಾಣಿಕ ಸೇವೆ, ಸತತೋದ್ಯೋಗ, ರಾಷ್ಟ್ರ ಭಕ್ತಿ, ವಿಜ್ಞಾನ, ಅಂತರ್‌ಜ್ಞಾನಗಳ ಆಸಕ್ತಿಯಿಂದ ಶರವೇಗದಿಂದ ರೂಪಗೊಳ್ಳುತ್ತಿರುವ ಜಪಾನ ದೇಶದ ಯಾತ್ರೆಯನ್ನು ಸುಂದರವಾಗಿ ಶ್ರೀಗಳು ಚಿತ್ರಿಸಿದ್ದಾರೆ. ಯಾವುದೇ ತರ ತಮಕ್ಕೆ ಭೇದ ಭಾವಕ್ಕೆ ಬೆಲೆ ಕೊಡದ, ಕನಿಷ್ಠ-ಗರಿಷ್ಠ, ಮೇಲೆ-ಕೆಳಗೆ, ಹೆಚ್ಚು-ಕಡಿಮೆ ಎಂಬ ಅಲ್ಪ ವಿಚಾರಗಳಿಗೆ ಆಸ್ಪದವಿಲ್ಲದ, ಹಿಂದೂ, ಜೈನ, ಸಿಖ, ಬೌದ್ಧ, ಕ್ರಿಶ್ಚಿಯನ್, ಮುಸ್ಲಿಂ, ಬಹಾಯಿ, ಫಾರಸಿ, ಸಿಂಟೊ, ಜ್ಯೂ, ಕನ್‌ಫ್ಯೂಶಿಯನ್ ಮುಂತಾದ ಭಿನ್ನ ಭಿನ್ನ ಧರ್ಮದವರು ತಮ್ಮ ಪ್ರಭೇದಗಳನ್ನು ತೊರೆದು, ವಿಶ್ವ ಮಾನವ ಧರ್ಮದ ಸರ್ವೋತ್ತಮ ಧ್ಯೇಯವನ್ನು ಚರ್ಚಿಸಿ ಶಾಂತಿಯನ್ನು ಪ್ರಸ್ತಾಪಿಸಲು ಒಂದೆಡೆ ಸೇರಿದ ಅಪ್ರತಿಮ ಸಮ್ಮೇಲನ-"ವಿಶ್ವಧರ್ಮ ಮತ್ತು ಶಾಂತಿ ಪರಿಷತ್ತು" ಯಶಸ್ವಿಯಾಗಿ ಜರುಗಿದ ನೈಜ ವಿವರಣೆಯನ್ನು ಅವರು ಸೊಗಸಾಗಿ ಚಿತ್ರಿಸಿದ್ದಾರೆ. ಮುಂದುವರಿದು ಅವರು ಪರಿಷತ್ತಿನ ಸಂಯೋಜಕರು ವ್ಯವಸ್ಥೆಗೊಳಿಸಿದ ಸುಂದರ ಪಟ್ಟಣಗಳಾದ-ಕ್ಯೂಟೋ, ನಾರಾ ಹಾಗೂ ಟೇರಾ ಇವುಗಳ ಸಂದರ್ಶನದ ವಿವರಗಳನ್ನು ಚೆನ್ನಾಗಿ ಮೂಡಿಸಿದ್ದಾರೆ. "ಅಲ್ಲಿಯ ದೇವಾಲಯದ ಸುತ್ತ ಭಿಕ್ಷುಕರು, ಕೀಳು ಪ್ರಾಣಿಗಳು ಹೊಲಸಿನ ಬೀಡು, ಗದ್ದಲ ನಮಗೆ ಎಲ್ಲಿಯೂ ಕಾಣಲಿಲ್ಲ. ಆ ಎಲ್ಲ ದೇವಾಲಯಗಳು ನಿಜವಾಗಿ ದೇವರ ಆಲಯ

ಗಳಾಗಿದ್ದವು" ಎಂಬ ವಾಕ್ಯಗಳನ್ನು ಓದಿದಾಗ–ಅಲ್ಲಿಯ ದೇವಾಲಯಗಳ, ಜನರ ಬಗ್ಗೆ ಸುಂದರ ಕಲ್ಪನೆ ನಮಗೆ ಕಂಡು ಬರುತ್ತದೆ. "ಪ್ರವಾಸಿಕರ ನಂದನವನ: ಸಾರಾ" ಲೇಖನ ದಲ್ಲಿ ಅಲ್ಲಿಯ ನಾಡ ಸೊಬಗು, ಜನರ ನಮ್ರತೆ, ಭಾರತೀಯರ ಬಗ್ಗೆ ಅವರಲ್ಲಿರುವ ಪ್ರೀತಿ ವಿಶ್ವಾಸಗಳ ನೆಲೆ–ಬೆಲೆಯನ್ನು ವ್ಯಕ್ತಗೊಳಿಸಿದ್ದಾರೆ. ಅಲ್ಲಿಯ ಜನರಿಗೆ ತಮ್ಮ ನಡೆ–ನುಡಿ ಗಳಿಂದ ಶ್ರೀಗಳು ಆತ್ಮೀಯರಾಗಿ ಕಂಡುಬಂದಿರುವದರಲ್ಲಿ ಸಂದೇಹವಿಲ್ಲ. "ಜಕಾರ್ತದಲ್ಲಿ ಮೂರು ದಿನಗಳು" ಎಂಬ ಲೇಖನದಲ್ಲಿ ಜಕಾರ್ತಾದ ಸೆಂಟ್ರಲ್ ಮ್ಯುಜಿಯಂದಲ್ಲಿ ಕಂಡು ಬರುವ ಶೈವ ಪರಂಪರೆಯ ೧೦–೧೫ ಸುಂದರವಾದ ಶಿವಲಿಂಗಗಳನ್ನು, ನಟರಾಜ ಮೂರ್ತಿಯನ್ನು ಅವರು ಕಂಡ ಬಗ್ಗೆ ಓದಿದಾಗ, ಶೈವಧರ್ಮ ವಿಶ್ವವ್ಯಾಪಿಯಾದುದೆಂಬುದು ಗೋಚರಿಸುತ್ತದೆ.

ಶ್ರೀಗಳು ಮುಂದುವರಿದು ತಮ್ಮ ಲೇಖನ "ಥೈಲಾಂಡಿನಲ್ಲಿ ಎರಡು ದಿನಗಳು" ಇದರಲ್ಲಿ ಬುದ್ಧನ ಬಂಗಾರದ ಮೂರ್ತಿಯ ಬಗ್ಗೆ, ಸನ್ಯಾಸಿಗಳ ವಿಶ್ವವಿದ್ಯಾಲಯ ಇಲ್ಲಿ ಎಲ್ಲರೂ–ವಿದ್ಯಾರ್ಥಿಗಳು, ಪ್ರಾಧ್ಯಾಪಕರು ಆಡಳಿತ ಸಿಬ್ಬಂದಿಯವರು ಸನ್ಯಾಸಿಗಳಾಗಿರುವ ದೊಂದು ವೈಶಿಷ್ಟ್ಯವಾಗಿದೆಯೆಂಬುದನ್ನು ತಿಳಿಸಿದ್ದಾರೆ. ಮೊದಲನೆಯ ಭಾಗದ ಮುಕ್ತಾಯದಲ್ಲಿ ತಮಗೆ ಆ ಪರಿಷತ್ತಿನಲ್ಲಿ ಹನ್ನೆರಡನೆಯ ಶತಮಾನದ ಅನುಭವ ಮಂಟಪದ ಪ್ರತಿಧ್ವನಿ ಮೊಳಗಿದಂತಾಯ್ತೆಂಬುದನ್ನು ವ್ಯಕ್ತಗೊಳಿಸಿದ್ದಾರೆ.

೧೯೭೦ರಲ್ಲಿ 'ಲ್ಯೂವೆನ್'ದಲ್ಲಿ ಜರುಗಿದ "ದ್ವಿತೀಯ ವಿಶ್ವಧರ್ಮಗಳ ಶಾಂತಿ ಪರಿ ಷತ್ತಿನ" ವಿವರಣೆ ಈ ಪುಸ್ತಕದ ಎರಡನೆಯ ಭಾಗದಲ್ಲಿ ಸಮಾವೇಶಗೊಂಡಿದೆ. ಈ ಪರಿ ಷತ್ತಿನಲ್ಲಿ ಶ್ರೀಗಳವರು "....ನಾವು ಪರಸ್ಪರ ಸಹಾಯ ಸಹಕಾರಗಳ ಸಿದ್ಧಾಂತಗಳನ್ನು ಮರೆತು ಬಿಟ್ಟಿದ್ದೇವೆ. ಸಮಗ್ರ ಪೃಥ್ವಿಯೇ ನಮ್ಮ ಮನೆ ಹಾಗೂ ಮಾನವಮಾತ್ರರೆಲ್ಲರೂ ಸಹೋದರ ಸಹೋದರಿಯರು; ಎಂಬ ಮೂಲತತ್ವವನ್ನೇ ನಿರ್ಲಕ್ಷಿಸಿದ್ದೇವೆ...."ಮುಂತಾಗಿ ಆ ಪರಿಷತ್ತಿನಲ್ಲಿ ಹೇಳಿದ ಅವರ ಮಾತುಗಳು ಚಿಂತನ ಶೀಲವಾಗಿವೆ.

ಲ್ಯೂವೆನ್ ಗಾತ್ರದಲ್ಲಿ ಕಿರಿದಾದರೂ ಪ್ರಗತಿಯಲ್ಲಿ ಹಿರಿದಾದ ಪಟ್ಟಣ ಬ್ರುಸೆಲ್, ಲ್ಯೂವೆನ್, ಬೆಲ್ಜಿಯಂ, ಇಂಗ್ಲಂಡ್. ಲಂಡನ್ ನಗರ, ಪ್ಯಾರಿಸಗಳ ನೈಜ ವರ್ಣನೆಯು ಈ ಗ್ರಂಥದಲ್ಲಿ ಸೊಗಸಾಗಿ ಮೂಡಿದೆ. ಜೊತೆಯಲ್ಲಿ ಈ ಗ್ರಂಥದ ಮೂರನೆಯ ಭಾಗದಲ್ಲಿ ಶ್ರೀಗಳವರ ಇಂಗ್ಲೀಷ ಭಾಷಣಗಳ ಕನ್ನಡ ಅವತರಣಿಕೆಗಳನ್ನು, ನಾಲ್ಕನೆಯ ಹಾಗೂ ಕೊನೆಯ ಭಾಗದಲ್ಲಿ–Speeches delivered in English on various occasions ಸೇರಿಸಿ, ಪ್ರವಾಸ ಕಥನದೊಂದಿಗೆ ತಮ್ಮ ಹೃದಯಾಂತರಾಳದಿಂದ 'ಚಿತ್ ಸುಮನ'ಗಳನ್ನಾಯ್ದು ಮುಮುಕ್ಷುಗಳಿಗೆ, ಶಾಂತಿ ಪ್ರಿಯರಿಗೆ, ವಿಶ್ವಮಾನವ ಧರ್ಮಾಭಿ ಮಾನಿಗಳಿಗೆ ಶ್ರೀಗಳ ಮಾನವೀಯ ಮೌಲ್ಯಗಳ ದಿವ್ಯ ಕಾಣಿಕೆಯನ್ನಿತ್ತಿದ್ದಾರೆ.

ಪೂಜ್ಯ ಶ್ರೀಗಳವರ ಭಾಷೆ ಸರಳ ಹಾಗು ನೇರವಾಗಿ ಓದುಗರನ್ನು ತಲುಪುತ್ತದೆ.

'ಲಂಡನ್ ಕಣ್ಣಿಗೆ ಹಬ್ಬ. ಬಣ್ಣಮಯ ಚಲುವ ಪಟ್ಟಣದಲ್ಲೂ ಮೋಹಕ ಪ್ರಕೃತಿ. ರಾಜ ಠೀವಿಯ ಸೌಂದರ್ಯ. ಎಲ್ಲೆಲ್ಲೂ ಶ್ರೀಮಂತಿಕೆ ಸಹಜವಾಗಿದೆ' ಇಂಥ ವಾಕ್ಯಗಳು ಕಿರಿದಾದರೂ ಅರ್ಥವತ್ತಾಗಿ ಹೇಳಿರುವದರಲ್ಲಿ ಸಂದೇಹವಿಲ್ಲ. ಸೊಗಸಾಗಿ ಮುದ್ರಣಗೊಂಡ ಈ ಕೃತಿಯಲ್ಲಿ ಅಲ್ಲಲ್ಲಿ ಮುದ್ರಣಾಕ್ಷರ ದೋಷ ಹಾಗೂ 'ಸ್ಪೆಲಿಂಗ್ ಮಿಸ್ಟೇಕು' ಇಣುಕಿ ಹಾಕಿದರೂ ಅದು ಗೌಣವೆನಿಸಿ, ಓದುಗರನ್ನು ಈ ಕೃತಿ ಸುಲಭವಾಗಿ ಓದಿಸಿಕೊಂಡು ಹೋಗುತ್ತದೆ.

ಪರಮ ಪೂಜ್ಯ "ಶ್ರೀಮೂಜಗಂ" ಅವರ ಲೇಖನಿಯಿಂದ ಇಂಥ ಇನ್ನೂ ಹಲವಾರು ಕೃತಿಗಳು ಹೊರಬಂದು, ಜನತೆಯಲ್ಲಿ ಸಾಹಿತ್ಯಾಭಿರುಚಿ ಉದಾತ್ತ ಮಾನವೀಯ ಮೌಲ್ಯಗಳನ್ನು ಸಮಾಜದಲ್ಲಿ ಬೇರೂರುವದಕ್ಕೆ ಸಹಾಯಕವಾಗಿ ಅವು ಚಿರಂತನ ಸ್ಫೂರ್ತಿಯನ್ನೀಯಲೆಂದು ಹಾರೈಸುತ್ತೇನೆ.

ಕುಲಪತಿಗಳ ನಿವಾಸ
ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ —ಸದಾಶಿವ ಒಡೆಯರ
"ಮಹಾಶಿವರಾತ್ರಿ"
ತಾ. ೨೫-೨-೧೯೭೬

# ನಮ್ಮ ನುಡಿ

ಸನ್, ೧೯೬೯ ಇರಬಹುದು. ಶ್ರೀಯುತ ಯಮುನಾಮೂರ್ತಿಯವರು ನಮ್ಮ ಹತ್ತಿರ ಬಂದು, ದಿಲ್ಲಿಯಲ್ಲಿ ನಡೆದ ಕಮೀಟಿಯ ವಿಚಾರವನ್ನು ತಿಳಿಸುತ್ತ, ತಮಗೆ ೧೯೭೦ ರಂದು ಜಪಾನ ದೇಶದ ಕಿಯೋಟೋನಗರದಲ್ಲಿ ಪ್ರಪ್ರಥಮವಾಗಿ ನಡೆಯಲಿರುವ ಜಾಗತಿಕ ಶಾಂತಿ ಪರಿಷತ್ತಿನಲ್ಲಿ ಭಾಗವಹಿಸಲು, ಆಮಂತ್ರಣ ಕೊಡಲು ಕಳಿಸಿದ್ದಾರೆ. ಆದಕ್ಕೆ ತಾವು ಒಪ್ಪಬೇಕು ಎಂದು ಕಳಕಳಿಯಿಂದ ಹೇಳಿದರು. ವಿದೇಶಕ್ಕೆ ಹೇಗೆ ಹೋಗಬೇಕು? ಅಲ್ಲಿ ಆಚಾರ ವಿಚಾರದ ಬಗ್ಗೆ ತಕ್ಕವ್ಯವಸ್ಥೆಯಾಗುತ್ತದೆಯೋ ಹೇಗೆ? ಎಲ್ಲ ವಿಷಯವನ್ನು ವಿವರವಾಗಿ ಕೇಳಿದೆವು. ನಿಮಗೆ ಬೇಕಾದ ಎಲ್ಲ ವ್ಯವಸ್ಥೆಯನ್ನು ಮಾಡಲಾಗುವದು. ಅವಶ್ಯ ಬರಲೇಬೇಕು. ಅದಕ್ಕೆ ನಾವು ನಮ್ಮ ಪೀಠದ ಭಕ್ತರನ್ನು ಕೇಳಿ, ಅವರು ಒಪ್ಪಿಗೆ ಕೊಟ್ಟರೆ ಮಾತ್ರ ಬರುತ್ತೇವೆಂದು ತಿಳಿಸಿದೆವು. ಮತ್ತೆ ಕೆಲವು ದಿನಗಳ ನಂತರ ಡಾ|| ಆರ್. ಆರ್. ದಿವಾಕರರು ನಮ್ಮ ಹತ್ತಿರ ಬಂದು, ಯಮುನಾಮೂರ್ತಿಯವರೂ ನಾವೆಲ್ಲರೂ ಕೂಡಿಯೇ ನಿಮ್ಮ ಹೆಸರನ್ನು ಕಳಿಸಿದ್ದಾಗಿತ್ತು. ಈ ಸಮಯದಲ್ಲಿ ಧರ್ಮಗುರುಗಳೇ ಬರದೇ ಹೋದರೆ ಜಾಗತಿಕ ಶಾಂತಿ ಪರಿಷತ್ತಿಗೆ ಶೋಭೆ ಬರದು; ನೀವು ಅವಶ್ಯವಾಗಿ ಒಪ್ಪಲೇಬೇಕು ಎಂದು ಪರಿಪರಿಯಿಂದ ಹೇಳಿದರು. ಆ ಕೂಡಲೇ ಪ್ರಮುಖ ಭಕ್ತರೆಲ್ಲರನ್ನು ಮಠಕ್ಕೆ ಕರೆಯಿಸಿ, ಈ ಎಲ್ಲ ಸಂಗತಿಯನ್ನು ತಿಳಿಸಿದೆವು. ಡಾ|| ಆರ್. ಆರ್. ದಿವಾಕರರೂ ಸಹ ಅವರೆಲ್ಲರಿಗೆ ತಿಳಿವಳಿಕೆ ನೀಡಿದ ಮೇಲೆ ಎಲ್ಲ ಭಕ್ತರೂ ಒಪ್ಪಿಗೆ ನೀಡಿದರು. ಶ್ರೀರಂಗನಾಥ ದಿವಾಕರರು ತುಂಬಾ ಸಂತೋಷಗೊಂಡರು. ದಾರಿಯುದ್ದಕ್ಕೂ ವ್ಯವಸ್ಥೆಗಾಗಿ, ಪ್ರೊ|| ಎ. ಎಲ್. ಹಿರೇಮಠ ಅವರೂ ನಿಮ್ಮೊಡನೆ ಇರಲಿ ಎಂದು ದಿವಾಕರರು ತಿಳಿಸಿ, ಮುಂದಿನ ವ್ಯವಸ್ಥೆಗಾಗಿ ದಿಲ್ಲಿಗೆ ತೆರಳಿದರು. ಆ ಪ್ರಕಾರ ನಾವೆಲ್ಲರೂ ೧೯೭೦ ರಂದು ಜಗತ್ತಿನಲ್ಲಿಯೇ ಪ್ರಥಮವಾಗಿ ಜಪಾನದ ಕಿಯೋಟೋನಗರವಲ್ಲಿ ಜರುಗಿದ ಜಾಗತಿಕ ಶಾಂತಿ–ಧರ್ಮ ಪರಿಷತ್ತಿನಲ್ಲಿ ಭಾಗವಹಿಸಿದೆವು. ಆ ಸಮಾರಂಭಕ್ಕೆ ಸುಮಾರು ೩೮ ರಾಷ್ಟ್ರದ ತತ್ವಜ್ಞಾನಿಗಳು, ಹಾಗೂ ಧರ್ಮ ಗುರುಗಳು ಸೇರಿದ್ದರು. ಸಮಾರಂಭವು ಒಳ್ಳೆಯಯಶಸ್ವಿಯಾಗಿ ಜಗತ್ತಿಗೆ ಪರಿಣಾಮಕಾರಿಯಾಯ್ತು. ಮತ್ತೆ ೧೯೭೪ ರಂದು The Second World Conference on Religion and Peace ಲುವೆನ್‌ದಲ್ಲಿಯ ಬೆಲ್ಜಿಯಂದಲ್ಲಿ ಕರೆಯಬೇಕೆಂದು ನಿರ್ಧಾರ ಮಾಡಿ, ಜಾಗತಿಕ ಶಾಂತಿ ಪರಿಷತ್ತಿನ ಪ್ರಧಾನ ಕಾರ್ಯದರ್ಶಿಗಳಾದ ನ್ಯೂಯಾರ್ಕಿನ ಡಾ. ಹೋಮರ್‌ಜೆ. ಎ. ಜಾಕ್ ಅವರಿಂದ ದ್ವಿತೀಯ ಜಾಗತಿಕ ಶಾಂತಿ ಧರ್ಮ ಸಮ್ಮೇಲನಕ್ಕೂ ಬರಬೇಕೆಂದು ಆಮಂತ್ರಣ ಪತ್ರ ಬಂದಿತು. ಜೊತೆಗೆ ಡಾ|| ಆರ್. ಆರ್. ದಿವಾಕರರ ಪತ್ರವೂ ಬಂದಿತು. ಇದೆಲ್ಲ

ವಿಷಯವನ್ನು ನಮ್ಮ ಸದ್ಭಕ್ತರಿಗೂ, ಸ್ವಾಮಿಗಳವರಿಗೂ ತಿಳಿಸಲಾಯ್ತು. ಎಲ್ಲರೂ ಆನಂದದಿಂದ ಸಮ್ಮತಿಸಿದರು. ಆ ಪ್ರಕಾರ ಹೋಗಿ ಬಂದೆವು. ಎರಡೂ ಸಮ್ಮೇಲನಗಳು ಯಶಸ್ವಿಯಾಗಿ ಜರುಗಿದವು.

ವಿದೇಶಕ್ಕೆ ಹೋದ ಅನುಭವವನ್ನು ಬರೆದು ಸಮಾಜಕ್ಕೆ ನೀಡಬೇಕೆಂದು ಅನೇಕ ಜನ ಸ್ವಾಮಿಗಳು ಹಾಗೂ ಪ್ರಾಧ್ಯಾಪಕರು ಒತ್ತಾಯಿಸಿದರು. ಬರೆಯಲೊ ಬೇಡವೊ ಎಂಬ ವಿಚಾರದಲ್ಲಿಯೇ ಅನೇಕ ದಿನಗಳು ಕಳೆದವು. ಅದರಲ್ಲಿಯೂ ನಮಗೆ ಸಮಯದ ಅಭಾವ. ನಮ್ಮದು ಬಿಡುವಿಲ್ಲದ ಜೀವನ. ಹೀಗಾಗಿ ಬರೆಯಲು ತೊಂದರೆಯಾಯ್ತು. ವಿದೇಶಕ್ಕೆ ಹೋದಾಗ ಬರೆದುಕೊಂಡ ಟಿಪ್ಪಣಿಯ ಡಾಯರಿಯು ಕಳೆದದ್ದೂ, ಎರಡು ವರ್ಷದ ನಂತರ ದೊರೆಯಿತು. ಅದರಲ್ಲಿಯೂ ಬರೆದದ್ದು ಅಲ್ಪಸ್ವಲ್ಪ ಹೀಗಾಗಿ ಅನೇಕ ವರ್ಷಗಳು ಗತಿಸಿದವು. "ನಮ್ಮ ವಿದೇಶಯಾತ್ರೆ" ಈ ಪುಸ್ತಕದಲ್ಲಿ ಸವಿಸ್ತಾರವಾಗಿ ವಿಷಯವು ಬರದಿದ್ದರೂ ಇಷ್ಟಾದರೂ ಈ ಹೊತ್ತಿಗೆ ಬಂದಿದ್ದಕ್ಕೆ ಕನ್ನಡಿಗರ ಕೈಗೆ ನೀಡಿದ್ದಕ್ಕೆ ಸಂತಸ ಪಡಬೇಕಾಗಿದೆ. ಈ ಪುಸ್ತಕ ಬರೆಯುವಾಗ ಪ್ರೊ|| ಜಿ. ಎಚ್. ಹನ್ನೆರಡುಮಠ ಅವರು ಬಹಳ ಸಹಕಾರ ನೀಡಿದರು. ವಿದೇಶದಿಂದ ಬಂದ ನಂತರ ಹುಬ್ಬಳ್ಳಿ, ಬೆಂಗಳೂರಲ್ಲಿ ಹೊರಡಲಿರುವ "ಸಂಯುಕ್ತ ಕರ್ನಾಟಕ" ವಾರದ ವಿಭಾಗದಲ್ಲಿ ನಮ್ಮ ಅನುಭವಗಳು ಬಂದಿದ್ದರಿಂದ ಪುಸ್ತಕ ಬರೆಯಲು ಬಹಳ ಅನುಕೂಲವಾಯ್ತು. ಹೀಗಾಗಿ ಇವರೀರ್ವರನ್ನು ಈ ಸಮಯದಲ್ಲಿ ಸಂಸ್ಮರಿಸಬೇಕಾಗಿದೆ. ವಿದೇಶಕ್ಕೆ ಹೋಗಿ ಅನುಭವ ಪಡೆದು ಬಂಧ ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯ ಕುಲಪತಿಗಳಾದ ಶ್ರೀ ಎಸ್. ಎಸ್. ಒಡೆಯರ್ ಅವರು ಸುಂದರವಾದ ಮುನ್ನುಡಿಯನ್ನು ಬರೆದುಕೊಟ್ಟದ್ದಕ್ಕೆ ನಮಗೆ ತುಂಬಿದ ಸಂತಸವಾಗಿದೆ. ಆಗಾಗ ಪ್ರೊ|| ಎ. ಎಲ್. ಹಿರೇಮಠ ಅವರು ಕೆಲವು ಸೂಚನೆಗಳನ್ನು ನೀಡಿದ್ದಾರೆ.

ನಮಗೆ ಸರ್ವ ವಿಧದಿಂದ ಸಹಕಾರ ನೀಡಿದ ಎಲ್ಲರಿಗೂ ಕರ್ತೃ ಜಗದ್ಗುರು ಗುರು ಸಿದ್ಧೇಶ್ವರನು ಹರಸಿ, ಆಶೀರ್ವದಿಸಲಿ.

ಹುಬ್ಬಳ್ಳಿ
೨೫–೨–೭೯
ಶಿವರಾತ್ರಿ

—ಶ್ರೀ ಮೂಜಗಂ

# ಪ್ರಕಾಶಕರ ನುಡಿ

ಕರ್ನಾಟಕದ ಇತಿಹಾಸದಲ್ಲಿ ವೀರಶೈವ ಧರ್ಮದ ಜಗದ್ಗುರುಗಳೊಬ್ಬರು ಕಡಲಿನಾಚೆಗೆ ಹೋಗಿ, ಹಿಂದೂಧರ್ಮ ಹಾಗೂ ವೀರಶೈವಧರ್ಮದ ತತ್ವವನ್ನು ಬಿತ್ತರಿಸಿದವರಲ್ಲಿ ಹುಬ್ಬಳ್ಳಿ ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳೇ ಮೊದಲಿಗರು. ಜಗತ್ತಿನಲ್ಲಿಯೇ ವಿಶ್ವಶಾಂತಿ ಧರ್ಮ ಸಮ್ಮೇಲನವು ಜಪಾನದಲ್ಲಿಯ ಕಿಯೋಟೋ ನಗರದಲ್ಲಿ ಜರುಗಿದ್ದು ಪ್ರಪ್ರಥಮವಾದುದು.

ಇಂತಹ ಮಹತ್ವಪೂರ್ಣ ವಿದೇಶಯಾತ್ರೆಯ ಅನುಭವಗಳನ್ನು ಪುಸ್ತಕ ರೂಪದಲ್ಲಿ ಹೊರಬಂದು ಜನತೆಗೆ ನೀಡಬೇಕೆಂದು ಜೆ. ಜೆ. ಧರ್ಮಪ್ರಚಾರ ಮಂಡಳಿದವರ ಹಂಬಲವು ಬಹುದಿನದಿಂದಲೂ ಇತ್ತು. ಮೇಲಿಂದ ಮೇಲೆ ಪೂಜ್ಯ ಜಗದ್ಗುರು ಮಹಾಸನ್ನಿಧಿಗೆ ತಮ್ಮ ವಿದೇಶಯಾತ್ರೆಯ ಪ್ರವಾಸ ಕಥನವನ್ನು ಬರೆದುಕೊಡಲು ಹಲವು ಬಾರೆ ಕೇಳಿಕೊಂಡೆವು. ಅವರಿಗೆ ಸಮಯದ ಕೊರತೆಯಿದ್ದುದರಿಂದ ನಮ್ಮ ಸಮಾಜಕ್ಕೆ ಅವರ ಪುಸ್ತಕ ದೊರೆಯದಾಯಿತು. ಕೊನೆಗೆ ೮ ವರ್ಷಗಳ ನಂತರವಾದರೂ ನಮಗೆ ಬರೆದು ಕೊಟ್ಟದ್ದಕ್ಕಾಗಿ ಬಹಳ ಆನಂದವಾಗಿದೆ.

ಶ್ರೀ ಜಗದ್ಗುರುಗಳು ಧೈರ್ಯಮಾಡಿ ವಿದೇಶಕ್ಕೆ ದಯಮಾಡಿಸಿ, ವೀರಶೈವ ಹಾಗೂ ಹಿಂದೂ ಧರ್ಮದ ವಿಚಾರವನ್ನು ತಿಳಿಸಿಬಂದುದು ಕನ್ನಡಿಗರೆಲ್ಲರೂ ಹೆಮ್ಮೆ ಪಡತಕ್ಕ ವಿಷಯವಾಗಿದೆ. ಈ ಗ್ರಂಥವು ಕನ್ನಡಿಗರಿಗೆ ಮೆಚ್ಚುಗೆಯಾಗಬಹುದೆಂದು ಆಶಿಸಿದ್ದೇವೆ.

ಈ ಗ್ರಂಥಕ್ಕೆ ಸನ್ಮಾನ್ಯ ಶ್ರೀ ಎಸ್. ಎಸ್. ಒಡೆಯರ್ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ. ಅವರು ಸುಂದರವಾದ ಮುನ್ನುಡಿಯನ್ನು ಬರೆದುಕೊಟ್ಟು ಪ್ರೋತ್ಸಾಹ ನೀಡಿದ್ದಕ್ಕೆ ನಮ್ಮ ಹಾರ್ದಿಕ ವಂದನೆಗಳು.

ವೇಳೆಗೆ ಸರಿಯಾಗಿ "ಸಂಯುಕ್ತ ಕರ್ನಾಟಕ" ಪ್ರೆಸ್ಸಿನವರು ಸುಂದರವಾಗಿ ಮುದ್ರಿಸಿ ಕೊಟ್ಟಿದ್ದಕ್ಕೆ ನಮ್ಮ ಹಾರ್ದಿಕ ಕೃತಜ್ಞತೆಗಳು.

೨೫-೨-೭೯

— ಪ್ರಕಾಶಕರು

# ಪರಿವಿಡಿ

# ವಿಶ್ವಶಾಂತಿಗೆ ಚೈತ್ರಯಾತ್ರೆ

"ಸಕಲ ಜೀವರಾಶಿಗೆ ಲೇಸನೆ ಬಯಸುವವನೇ ಕುಲಜ"– ಎಂಬ ಸರ್ವ ಧರ್ಮ ಸಮಭಾವನೆಯುಳ್ಳ ಶರಣರ ಮಾನವೀಯ ವಿಚಾರ ಮೌಲ್ಯಗಳನ್ನು ಸಮುದ್ರದಾಚೆಗಿನ ಅನ್ಯದೇಶಗಳಲ್ಲಿಯೂ ಪ್ರಸಾರಮಾಡಬೇಕೆಂಬ ಹಿರಿದಾದ ಹಂಬಲವು ನಮ್ಮ ಅಂತರಂಗದಲ್ಲಿ ಅನೇಕ ವರ್ಷಗಳಿಂದ ಪುಟಿಯುತ್ತಿತ್ತು. ಆ ಆಶೆ ಹರಡಿ ಹೆಮ್ಮರವಾಗಲು ಒಂದು ದೇವ ನಿರ್ಮಿತ ಸದವಕಾಶ ತಾನೇ ತಾನಾಗಿ ನಮಗರಿಯದಂತೆಯೇ ನಿರ್ಮಾಣವಾಯಿತು; ನಮ್ಮ ಗುರುಗಳಾದ ಪೂಜ್ಯ ಶ್ರೀ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳ ಹಾಗೂ ಲಿಂ. ಶ್ರೀ ಹಾನಗಲ್ಲ ಕುಮಾರಸ್ವಾಮಿಗಳ ಸಂಕಲ್ಪ ಬಲವೇ ಮೂರ್ತಿವೆತ್ತು ಬಂದಂತೆ, ನಮ್ಮ ನಾಡಿನ ಹಿರಿಯ ವಿಚಾರವಾದಿಗಳಾದ ಮತ್ತು ದಕ್ಷ ಪತ್ರಿಕೋದ್ಯಮಿ ಗಳಾದ ಶ್ರೀ ರಂಗನಾಥ ದಿವಾಕರ ಅವರು ನಮ್ಮ ಮಠಕ್ಕೆ ಈ ಅಪೂರ್ವ ಆಮಂತ್ರಣ ವನ್ನು ನೀಡಲು ಆಗಮಿಸಿದರು. ಜಪಾನ ದೇಶದಲ್ಲಿ ಜರುಗಲಿರುವ ವಿಶ್ವಧರ್ಮಗಳ ಶಾಂತಿ ಪರಿಷತ್ತಿನಲ್ಲಿ ಹಿಂದೂ ಧರ್ಮ ಹಾಗೂ ವೀರಶೈವ ಧರ್ಮವನ್ನು ಪ್ರತಿನಿಧಿಸುವ ಮಹಾ ಹೊಣೆಗಾರಿಕೆಯನ್ನು ನಮ್ಮ ಮೇಲೆ ಹೇರಿದರು. ಮೊದಮೊದಲು ಭಯ, ಕಳವಳ, ಪರದೇಶ ಪ್ರವಾಸವೆಂದರೆ ನಮ್ಮ ಪೂಜಾ–ವಿಧಾನಗಳಿಗೆ ಎಲ್ಲಿ ತೊಂದರೆಯಾಗುವದೋ ಎಂಬ ಶಂಕೆ. ಅದಕ್ಕೆಲ್ಲ ಸಮಾಧಾನ ನೀಡಿದವರೂ ಶ್ರೀ ರಂಗನಾಥ ದಿವಾಕರರೇ. ಕೊನೆಗೆ ನಾಡಿನ ಸಮಸ್ತ ಭಕ್ತರ ಸತ್ಪ್ರೇರಣೆಯೇ ಕ್ರಿಯಾಶಕ್ತಿಯನ್ನು ಪೂರೈಸಿತೆಂಬಂತೆ ಈ ಮಹಾಕಾರ್ಯವನ್ನು ಒಪ್ಪಿಕೊಂಡೆವು. ಹಿಂದೂ ಧರ್ಮ ಹಾಗೂ ವೀರಶೈವ ಧರ್ಮವನ್ನು ವಿಶ್ವಧರ್ಮಗಳ ಅಂತರ್ರಾಷ್ಟ್ರೀಯ ಸಮ್ಮೇಲನದಲ್ಲಿ ಪ್ರತಿನಿಧಿಸುವ ಮಹಾಕಾರ್ಯಕ್ಕೆ ಸನ್ನದ್ಧ ರಾದೆವು. ಮುಂದಿನ ೮–೧೦ ತಿಂಗಳುಗಳ ಸಮಯ ಈ ದಿಸೆಯಲ್ಲಿ ಆಳವಾದ ವ್ಯಾಸಂಗಕ್ಕೆ ಮೀಸಲಾಯಿತು. ಹಲವು ಧರ್ಮಗಳ ತುಲನಾತ್ಮಕವಾಗಿ ಹಾಗೂ ವಿವೇಚನಾತ್ಮಕವಾಗಿ ಅಧ್ಯಯನವನ್ನು ಮಾಡುವದರ ಜೊತೆಗೆ ಮನದಲ್ಲಿ ಮತ್ತೆ ಅನೇಕ ವಿಚಾರಗಳ ಧಾರೆ ಉದಿಸಲು ಪ್ರಾರಂಭವಾಯ್ತು. ಈಗಾಗಲೇ ಹತ್ತಾರು ಧಾರ್ಮಿಕ ಹಾಗೂ ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸಿದ್ದು, ಅವುಗಳು ಇನ್ನೂ ಬಾಲ್ಯಾವಸ್ಥೆಯಲ್ಲಿಯೇ ಇರುವಾಗ ನಮ್ಮ ಪ್ರಯಾಣದಲ್ಲಿ ಏನಾದರೂ ವ್ಯತ್ಯಾಸವಾದರೆ ಅವುಗಳ ಸ್ಥಿತಿಗತಿಯೇನು? ಎಂಬ ಸಹಜ ಶಂಕೆ ಮನದಲ್ಲಿ ಉದ್ಭವವಾಗುತ್ತಿತ್ತು. ಆದರೂ ನಮ್ಮ ಭಕ್ತರೇ ನಮ್ಮ ವಿವಿಧ ಆವಶ್ಯ ಗಳ ಭಾರವನ್ನು ನಿರ್ವಹಿಸಲು ಸಿದ್ಧರಾಗಿರುವಾಗ ಮತ್ತೇಕೆ ಭಯ? ಎಂಬ ವಿಚಾರವೂ ಮನದಲ್ಲಿ ಮೂಡುತ್ತಿತ್ತು. ಒಮ್ಮೊಮ್ಮ ನಿದ್ರೆಯಿಲ್ಲದೆ ಇಡೀ ರಾತ್ರಿಯೆಲ್ಲವನ್ನು ವಿಚಾರ

ದಲ್ಲಿಯೇ ಕಳೆಯುವ ಪ್ರಸಂಗ ಬರುತ್ತಿತ್ತು. ಅದರಲ್ಲಿಯೂ ಅಧ್ಯಯನದ ಚಿಂತೆ. ಹೀಗಾಗಿ ಏನೇನೋ ಕಲ್ಪನೆಗಳು ಮನಸ್ಸಿನಲ್ಲಿ ಮೂಡಿ ಕೋಲ್ಮಿಂಚಿನಂತೆ ಸರಿಯುತ್ತಿದ್ದವು.

ವಿದೇಶಯಾತ್ರೆಗೆ ಹೊರಡುವ ಮುನ್ನ ಹುಬ್ಬಳ್ಳಿಯ ಪ್ರಮುಖ ಪೇಟೆಗಳಲ್ಲಿ ಸತ್ಕಾರವೇ ಸತ್ಕಾರ. ಆ ಸಮಾರಂಭಗಳ ಪೂಮಾಲೆ ನೋಡಿದರೆ ಒಂದು ಟ್ರಕ್ಕು ತುಂಬುವಷ್ಟು! ಇವೆಲ್ಲವನ್ನು ನೋಡಿದರೆ ಮನಸ್ಸಿಗೆ ಏನೇನೋ ಪರಿಕಲ್ಪನೆ. ಒಮ್ಮೆ ಉತ್ಸಾಹ; ಮತ್ತೊಮ್ಮೆ ನಿರುತ್ಸಾಹ. ಬಹುದೂರ ಹೋಗುವ ನಾವು ಮತ್ತೊಮ್ಮೆ ಈ ನಾಡಿಗೆ ಬರಬಹುದೋ ಇಲ್ಲವೋ ಎಂಬ ಆಶಂಕೆ. ಕಾರಣ, ವಿಮಾನ ಅಪಹರಣ ಗಳಿಗೆ ಸುಗ್ಗಿಯ ಕಾಲ ಅದು. ಒಂದು ದೃಷ್ಟಿಯಿಂದ ವಿಮಾನ ಪ್ರವಾಸವೇ ಪ್ರತಿಯೊಬ್ಬರ ಅಂತಃಕರಣದಲ್ಲಿ ಸುಪ್ತಕಂಪನಗಳನ್ನು ಕೆರಳಿಸುವ ಭಯಾನಕ ಯಾತ್ರೆ. ಭಕ್ತರೂ ಕೂಡ ನಮ್ಮ ಕ್ಷೇಮದ ಬಗ್ಗೆ ಕಳಕಳಿ ಪಡುತ್ತಿದ್ದರು. ಆದರೆ, ಮಾನಸಿಕವಾಗಿ ಏನೇ ಬಂದರೂ ನಾವು ಸಂಕಲ್ಪ ಸಿದ್ಧರಾಗಿ ಎಟೆಗೊಟ್ಟು ನಿಂತೆವು. ವಿಶ್ವಧರ್ಮ-ಯಾತ್ರೆಗಾಗಿ ನಾವು ಭೌತಿಕ ಗಂಡಾಂತರಗಳನ್ನು ಎದುರಿಸಿದರೂ ಏನು ತಪ್ಪು? ಗಂಡಾಂತರಗಳನ್ನು ಎದುರಿಸುವ ಶಕ್ತಿ ಶ್ರೀ ಗುರುಸಿದ್ದೇಶ್ವರನ ಮೇಲೆ ಹಾಕಿಬಿಟ್ಟರೆ ಒಳಿತೆಂದು ಭಾವಿಸಿ, ನಿಶ್ಚಿಂತರಾಗಿರುತ್ತಿದ್ದೆವು. ಅತ್ತ, ವಿದೇಶಗಳ ಧೃತಿಗತಿಯ ಪ್ರಗತಿಯನ್ನು ನೋಡಬೇಕೆಂಬಾಶೆ. ಇತ್ತ ಸ್ವದೇಶದಲ್ಲಿ ನಮ್ಮನ್ನು ಪ್ರೀತಿಸುವ ಗೌರವಿಸುವ ಭಕ್ತರ ಅಪಾರ ಮಮತೆ ಹೀಗಿರುವಾಗ ನಾವು ಭಯಪಡುವ ಕಾರಣವಿಲ್ಲವೆನಿಸಿತು.

ಇದಲ್ಲದೆ, ಏತನ್ಮಧ್ಯೆ ಮತ್ತೆ ಬೇರೆ ಸಮಸ್ಯೆಗಳು ನಮ್ಮ ಮನದಲ್ಲಿ ಮೂಡುತ್ತಲಿದ್ದವು. ಸ್ವಾಮಿಗಳಾದವರು ವಿದೇಶಕ್ಕೆ ಹೋದರೆ ಅಪವಿತ್ರರಾಗಿ ಬಿಡುತ್ತಾರೆ ಎಂಬ ಕೆಲವರ ಸಾಂಪ್ರದಾಯಿಕವಾದ ಮೂಢ ನಂಬಿಕೆಗಳು ಕಿವಿಗೆ ಬೀಳುತ್ತಿದ್ದವು. ಈ ವಿಚಾರ ಗಳನ್ನು ಕೇಳಿದಾಗ ಒಮ್ಮೊಮ್ಮೆ ನೋವು. ಇನ್ನೊಂದು, ನಮ್ಮ ಆಚಾರಕ್ಕೆ ತೊಂದರೆಯಾದರೆ ಹೇಗೆ? ಎಂಬ ಸಮಸ್ಯೆ. ಮೊದಲನೆಯ ಸಮಸ್ಯೆಗೆ ನಾವೇನು ಹೆದರಬೇಕಾಗಿಲ್ಲವೆಂದು ದೃಢನಿರ್ಧಾರ ಮಾಡಿಕೊಂಡೆವು. ಆದರೆ ಎರಡನೆಯ ಸಮಸ್ಯೆಯು ಸ್ವಲ್ಪ ಕಾಡಿತು. ಯಾಕೆಂದರೆ, ನಾವು ಜಗದ್ಗುರು ಪೀಠವನ್ನೇರಿದವರು. ಜನರು ಅನೇಕ ರೀತಿಯಿಂದ ಅನೇಕ ಬಗೆಯಾಗಿ ನೋಡುತ್ತಾರೆ, ತೆಗಳುತ್ತಾರೆ, ಹೊಗಳುತ್ತಾರೆ. ಹಾಗಾದರೆ ವಿದೇಶ ಪ್ರವಾಸ ಬಿಡಬೇಕೋ ಹೇಗೆ? ಬಿಟ್ಟರೂ ಚಿಂತೆ; ಬಿಡದಿದ್ದರೂ ಚಿಂತೆ. ಗುರುಗಳ, ಲಿಂ. ಹಾನಗಲ್ಲ ಕುಮಾರ ಸ್ವಾಮಿಗಳವರ ಸತ್ಯ ಸಂಕಲ್ಪ ಈಡೇರಿಸಬೇಕಾದರೆ ಎಷ್ಟೇ ಕಷ್ಟ ಬಂದರೂ ಹೋಗಲೇಬೇಕು. ಸಾಧ್ಯವಾದಷ್ಟು ಕಾರ್ಯವನ್ನು ಪೂರೈಸಬೇಕು. ಅದರಲ್ಲಿಯೂ ಅನೇಕ ಜನ ಸ್ವಾಮಿಗಳವರ ಹಾಗೂ ಭಕ್ತರ ಧೈರ್ಯ, ಪ್ರೋತ್ಸಾಹ ನೋಡಿದರೆ ಆಚಾರಕ್ಕೆ ಏನೂ ಚ್ಯುತಿಯಿಲ್ಲವೆಂಬುದು ಅರ್ಥವಾಗುತ್ತಿತ್ತು. ಜೊತೆಗೆ ನಮ್ಮ ಆಚಾರ-ಶುದ್ಧಿಯ ಸ್ನಾನ ಪೂಜೆ ಪ್ರಸಾದಗಳ ಬೆಂಬಲಕ್ಕೆ ಪ್ರೊ. ಎ.

ಎಲ್. ಹಿರೇಮಠ ಅವರು ಇದ್ದೇ ಇರುತ್ತಾರೆ. ಅವರಿಂದ ನಮ್ಮ ಆಚಾರಗಳಿಗೆ ಅನು ಕೂಲವಾಗುತ್ತದೆ ಎಂಬ ಭರವಸೆಯು ಧೈರ್ಯವನ್ನು ತರುತ್ತಿತ್ತು.

ವಿದೇಶಕ್ಕೆ ಹೊರಡುವ ಏರಡು ದಿನ ಮೊದಲು, ಹುಬ್ಬಳ್ಳಿ ಮೂರುಸಾವಿರಮಠ, ಇಲ್ಲಕಲ್ಲ ವಿಜಯಮಹಾಂತೇಶಮಠ ಹಾಗೂ ಧಾರವಾಡ–ಮುರಘಾಮಠಗಳಲ್ಲಿ ನಮಗೆ ಸತ್ಕಾರಗಳಾದವು. "ನಾವು ಇನ್ನೆರಡು ದಿನಗಳಲ್ಲಿ ವಿಮಾನವೇರಿ ವಿದೇಶಕ್ಕೆ ಹೊರಡು ವವರಿದ್ದೇವೆ. ನಾವೇನೋ ಜಗದ್ಗುರುಗಳಾದರೂ, ಸಮಾಜದ ಹಾಗೂ ನಿಮ್ಮೆಲ್ಲರ ಪ್ರತಿನಿಧಿಯಾಗಿ, ಮಗುವಾಗಿ ವೀರಶೈವವು ವಿಶ್ವದ ಧರ್ಮವೆಂಬುದನ್ನು ವಿದೇಶಿಯರಿಗೆ ತಿಳಿಸಲು ನಿಮ್ಮೆಲ್ಲರ ಶುಭಹಾರೈಕೆಯನ್ನು ಹೊತ್ತುಕೊಂಡು ಹೊರಟಿದ್ದೇವೆ. ನಾವು ತಿರುಗಿ ಬರುವವರೆಗೂ, ನಿಮ್ಮ ಲಿಂಗದ ಮೇಲೆ, ನಿಮ್ಮ ನಿಮ್ಮ ಇಷ್ಟ ದೇವರ ಮೇಲೆ, ಶ್ರೀಗಳ ವಿದೇಶ ಪ್ರವಾಸವು ಸುಖಕರವಾಗಲೆಂದು ಪತ್ರಿ ಧರಿಸಿ, ಶುಭಕೋರಿದರೆ ನಿಮ್ಮೆಲ್ಲರ ಇಚ್ಛೆ ಈಡೇರಲು ಸಾಧ್ಯ; 'ಸ್ವಾಮಿ ವಿವೇಕಾನಂದರು ವಿದೇಶಕ್ಕೆ ಹೋದಾಗ ಪರಮಹಂಸರು ಅವರ ಶಕ್ತಿಗೆ ಬಲಬರುವಂತೆ ಕಲಕತ್ತೆಯಲ್ಲಿದ್ದುಕೊಂಡೇ ಧ್ಯಾನ ಮಾಡುತ್ತಿದ್ದರಂತೆ' "ಈ ಧ್ಯಾನದ ಬಲವು ಎಲ್ಲ ಬಲಕ್ಕೂ ಮಿಗಿಲಾದುದು. ಏನೆಲ್ಲವನ್ನು ಧ್ಯಾನಬಲದಿಂದ ಸಾಧಿಸ ಬಹುದು" ಎಂದು ಈ ರೀತಿ ನುಡಿದಾಗ ಎಷ್ಟೋ ಜನರ ಕಣ್ಣಲ್ಲಿ ನೀರು ಬಂದಿದ್ದು ನೋಡಿ ಮನಸ್ಸು ಮರುಗಿತು, ಧೈರ್ಯವನ್ನು ತಂದಿತು. ಸತ್ಕಾರ್ಯದ ಪ್ರವಾಸವಿದ್ದಾಗ ಅಧೈರ್ಯ ಮಾಡಲೇಬಾರದೆಂದು ಮನಸ್ಸಿನಲ್ಲಿಯೇ ನಿರ್ಧಾರವಾಗುತ್ತಿತ್ತು. ಬಸವ ಧರ್ಮವನ್ನು ವಿದೇಶದಲ್ಲಿ ಪ್ರಚಾರ ಮಾಡಬೇಕು. ಬಸವ ಧರ್ಮದಲ್ಲಿರುವ ಮಾನವೀಯ ಮೌಲ್ಯವನ್ನು ವಿದೇಶಿಯರಿಗೆ ಸಾರಿ ಹೇಳಬೇಕು, ಎಂಬ ಹಂಬಲ ತುಂಬಿದಾಗ ಭಯ ಪಡುವದೇಕೆ? ಪಾಸ್‌ಪೋರ್ಟಿನ ಎಲ್ಲ ವ್ಯವಸ್ಥೆಯನ್ನೂ ಆಪ್ತಕಾರ್ಯದರ್ಶಿಗಳಾದ ಪ್ರೊ. ಎ. ಎಲ್. ಹಿರೇಮಠರು ಅಣಿಗೊಳಿಸಿದ್ದರು.

**ಪೂರ್ವರಂಗ**

ಈ 'ಜಾಗತಿಕ ಧರ್ಮ ಮತ್ತು ಶಾಂತಿ ಪರಿಷತ್ತ'ನ್ನು ಜಪಾನಿನ ಕ್ಯೊಟೋ (Kyoto) ನಗರದಲ್ಲಿ ಕರೆಯುವ ಪೂರ್ವರಂಗ ನಮ್ಮ ದೇಶದ ರಾಜಧಾನಿ ದಿಲ್ಲಿಯಲ್ಲಿಯೇ ಮೊದಲು ನಿರ್ಮಾಣವಾಯಿತು. ೧೯೬೭ರ, ಜನೆವರಿ ತಿಂಗಳಲ್ಲಿ ದಿಲ್ಲಿಯಲ್ಲಿ ಒಂದು ಪ್ರಾಸ್ತಾವಿಕ ಸಭೆಯನ್ನು ಕರೆಯಲಾಯಿತು. ವಿಶ್ವದ ೫೦ ರಾಷ್ಟ್ರಗಳಿಂದ ಆಗಮಿಸಿದ ಅನೇಕ ಪ್ರತಿನಿಧಿಗಳ ಈ ಪರಿಷತ್ತಿಗೆ ನಮ್ಮನ್ನು ವ್ಯಾಖ್ಯಾನಕ್ಕಾಗಿ ಆಮಂತ್ರಿಸಲಾಗಿತ್ತು. ಆಗ ಭಾರತದ ರಾಷ್ಟ್ರಪತಿಗಳಾಗಿದ್ದ ಶ್ರೀ ಝಕೀರ ಹುಸೇನರು ಪರಿಷತ್ತನ್ನು ಉದ್ಘಾಟಿಸಿ ದರು. ಉಪಪ್ರಧಾನಿಯಾಗಿದ್ದ ಶ್ರೀ ಮುರಾರಜಿ ದೇಸಾಯಿ ಅವರು ಸಮಾರೋಪ ಮಾಡಿದರು. ಆಗ ರಚಿಸಲ್ಪಟ್ಟ ಕಾರ್ಯಕಾರಿ ಮಂಡಲಿಯು ಜಾಗತಿಕ ಪರಿಷತ್ತನ್ನು ಕ್ಯೊಟೋದಲ್ಲಿ ಆಕ್ಟೋಬರ ತಿಂಗಳಲ್ಲಿ ಕರೆಯಬೇಕೆಂದು ಠರಾಯಿಸಿತು. ವಿನಾಶೋನ್ಮುಖ

ವಾದ ಈ ಜಗತ್ತನ್ನು ಗಂಡಾಂತರದಿಂದ ಪಾರುಮಾಡಲು ವಿಶ್ವದ ಹಿರಿಯ ಮುತ್ಸದ್ದಿಗಳು, ಧರ್ಮಪರಿಪಾಲಕರು, ಗುರುತರ ಹೊಣೆಗಾರಿಕೆಯನ್ನು ಹೊತ್ತು ಸನ್ನದ್ಧರಾದರು. ದಿಲ್ಲಿಯ ಆರ್ಚ್‌ಬಿಶಪ್ ಏಂಜಿಲೋ ಫರ್ನಾಂಡೀಸರ ಅಧ್ಯಕ್ಷತೆಯಲ್ಲಿ ಕಾರ್ಯಕಾರಿ ಮಂಡಳವೊಂದು ರಚಿಸಲ್ಪಟ್ಟಿತು. ಅಮೇರಿಕೆಯ ಡಾ|| ಹೋಮರ ಎ. ಜಾಕ್ ಅವರು ಈ ಮಂಡಳದ ಪ್ರಧಾನ ಕಾರ್ಯದರ್ಶಿಗಳು. ಪರಿಷತ್ತಿನ ಕೇಂದ್ರ ಕಚೇರಿ ನ್ಯೂಯಾರ್ಕಿನಲ್ಲಿ ಸ್ಥಾಪಿತವಾಗಿತ್ತು. ಕ್ಯೂಟೋದಲ್ಲಿ ಜರುಗಲಿರುವ ಈ ಸಮ್ಮೇಳನಕ್ಕೆ ಭಾರತದ ಪ್ರತಿನಿಧಿಗಳನ್ನು ಆಯ್ಕೆಮಾಡಿ ಕಳಿಸುವ ಜವಾಬ್ದಾರಿಯು ಮಹಾತ್ಮಾ ಗಾಂಧಿ ಪ್ರತಿಷ್ಠಾನ ಮಂಡಳದವರದಾಗಿತ್ತು. ಆ ಮಂಡಳದ ಅಧ್ಯಕ್ಷರಾದ ಡಾ|| ರಂಗನಾಥ ದಿವಾಕರರು ನಮಗೆ ಆಮಂತ್ರಣವನ್ನು ನೀಡಿದರು. ನಾವು ಸಂದರ್ಶಿಸಬೇಕಾದ ಇಂಡೋನೇಶಿಯಾ, ಮಲೇಶಿಯಾ, ಹಾಂಗ್‌ಕಾಂಗ್, ಥಾಯ್‌ಲ್ಯಾಂಡ್, ಸಿಂಗಾಪೂರ ದೇಶಗಳಲ್ಲಿರುವ ಭಾರತ ರಾಯಭಾರಿ ಕಚೇರಿಗಳಿಗೆ ಪತ್ರವ್ಯವಹಾರ ಮಾಡಿ, ನಮ್ಮ ವಾಸ್ತವ್ಯಕ್ಕೆ ಸಕಲ ಅನುಕೂಲತೆಗಳನ್ನು ಒದಗಿಸಿಕೊಟ್ಟವರು ಶ್ರೀ ದಿವಾಕರರವರೇ. ಆ ಸಮಯದಲ್ಲಿ ವಿದೇಶ ಮಂತ್ರಿಗಳಾಗಿದ್ದ ಶ್ರೀ ಸ್ವರ್ಣಸಿಂಗರು ತುಂಬಾ ಸಹಕಾರ ನೀಡಿ ಅನುಕೂಲತೆಯನ್ನು ಮಾಡಿಕೊಟ್ಟರು.

## ಅಂತರ್ರಾಷ್ಟ್ರೀಯ ತಾಳ್ಮೆ–ತಿಳುವಳಿಕೆ

ಇಂದು ವಿಶ್ವ ಚಿಕ್ಕದಾಗಿದೆ. ವಿಚಾರ ಹಿರಿದಾಗಿದೆ. ದೇಶ-ವಿದೇಶಗಳು ಒಡನಾಡಿಗಳಾಗಿ ಸಹಬಾಳ್ವೆ ನಡೆಸದೇ ಗತ್ಯಂತರವಿಲ್ಲ. ಅಂತರ್ರಾಷ್ಟ್ರೀಯ ತಾಳ್ಮೆ-ತಿಳುವಳಿಕೆ-ಸಾಮರಸ್ಯಗಳಿಗಾಗಿ ವಿಶ್ವದ ಧುರೀಣರು ಹೋರಾಡುತ್ತಿದ್ದಾರೆ, ಇಂತಹ ಗಹನ ಪರಿಸ್ಥಿತಿಯಲ್ಲಿ ಆಯಾ ಧರ್ಮಗಳು ನಿಷ್ಕ್ರಿಯವಾಗಿ ಮೂಲೆಗುಂಪಾಗಿ ಕುಳಿತರೆ ಹೇಗೆ? ಇಂದು ಯಾವುದೇ ಧರ್ಮವಿರಲಿ, ಅದರ ಮಾನವೀಯ ಮೌಲ್ಯಗಳಿಗೆ ಅಗ್ರಸ್ಥಾನ. ಧರ್ಮಧರ್ಮಗಳಲ್ಲಿ ಸಂಕುಚಿತ ಪ್ರವೃತ್ತಿ, ಸ್ವಮತ ಆಡಂಬರ, ಪರಮತ ದ್ವೇಷ ಇವು ಇಂದಿಗೆ ಸಲ್ಲವು. ಹೀಗಿರುವಾಗ "ದಯವೇ ಧರ್ಮದ ಮೂಲವಯ್ಯ", "ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ", "ಅಯ್ಯಾ ಎಂದೊಡೆ ಸ್ವರ್ಗ, ಎಲವೋ ಎಂದೊಡೆ ನರಕ", "ಕಾಯಕವೇ ಕೈಲಾಸ", "ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ" —ಮೊದಲಾದ ಸರ್ವಕಾಲ ಸರ್ವದೇಶ ಸಂಪೂಜಿತವಾದ ಶರಣರ ಮಾನವೀಯ ಮೌಲ್ಯಗಳನ್ನು ವಿಶ್ವಧರ್ಮಗಳ ಅಟ್ಟಣೆಯ ಮೇಲೆ ನಿಂತು ಘೋಷಿಸಲು ನಮಗೆ ಇದೊಂದು ಹಿರಿದಾದ ಅವಕಾಶ ದೊರೆಯಿತು. ಇದು ನಮ್ಮ ವೈಯಕ್ತಿಕ ವಿಜಯ-ಯಾತ್ರೆಯೆಂಬ ಭಾವನೆ ನಮಗೆ ಸಮ್ಮತವಲ್ಲ. ಇದು ಕೇವಲ ಆ ಮಹಾಮಹಿಮರಾದ ಶರಣರು ಸಂತರು ಬಾಳಿ ಬೆಳಗಿದ ನಾಡವರ, ಸಮಸ್ತ ಸದ್ಭಕ್ತರ ಹೃತ್‌ಸಂಕಲ್ಪದ ಚೈತ್ರಯಾತ್ರೆಯಂದು ನಮ್ಮ ನಮ್ರ ತಿಳುವಳಿಕೆ.

ಈ ಬೃಹತ್ ಸಮ್ಮೇಳನವನ್ನು ಹಮ್ಮಿಕೊಂಡಿದ್ದ ಜಪಾನ ದೇಶವು ಇಂದು ಜಾಗತಿಕ ರಂಗದಲ್ಲಿ ಮುಂದುವರಿದ ರಾಷ್ಟ್ರ. ಅದು ತನ್ನ ಪ್ರಾಮಾಣಿಕ ಸೇವೆ, ಸತತೋದ್ಯೋಗ, ರಾಷ್ಟ್ರಭಕ್ತಿ, ವಿಜ್ಞಾನ, ಅಂತರ್‌ಜ್ಞಾನಗಳ ಆಸಕ್ತಿಯಿಂದ ಶರವೇಗದಿಂದ ರೂಪುಗೊಳ್ಳುತ್ತಿದೆ. ಗೃಹೋದ್ಯೋಗಗಳಿಂದ ಹಿಡಿದು ಮಹೋದ್ಯೋಗಗಳವರೆಗೆ ಆರ್ಥಿಕ ಸೌಲಭ್ಯಗಳೊಂದಿಗೆ ಕಲಾಪೂರ್ಣತೆಯನ್ನು ತುಂಬಿ ವಿಕಾಸಗೊಳ್ಳುತ್ತಿದೆ. ಎರಡನೇ ಮಹಾಯುದ್ಧದ ಭಯಂಕರ ಬಾಂಬ ದಾಳಿಯಿಂದ "ಜಪಾನು ಇನ್ನಿಲ್ಲ" ಎನ್ನಿಸಿಕೊಂಡ ಆ ದೇಶ, ತನ್ನ ನೋವುಗಳನ್ನು ನುಂಗಿಕೊಂಡಿದೆ. ಹೊಸ ಜೀವನಕ್ಕೆ ನಾಂದಿಯಾಗಿದೆ. ಇಂಥ ಪ್ರಬುದ್ಧ ರಾಷ್ಟ್ರದಲ್ಲಿ ಶರಣರ ಘನತತ್ತ್ವಗಳನ್ನು ಬೀರಿದರೆ ಅದಕ್ಕೊಂದು ಖಚಿತ ವ್ಯಾಪಕತೆ ದೊರೆತೀತೆಂಬುದು ನಮ್ಮ ಮನೀಷೆ— ಲಿಂ. ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರ ಹಾಗೂ ಲಿಂ. ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳವರ ಸಂಕಲ್ಪವೇ ಶಕ್ತಿಯಾಯಿತು. ಸಮಸ್ತ ಭಕ್ತರ ಹೃನ್ಮಂದಿರಗಳ ಆಶಾದೀಪ್ತಿಯೆ ಚೈತನ್ಯವಾಯಿತು— ಅಂತೆಯೇ ನಮ್ಮ ದೂರ ಯಾತ್ರೆಯು ಯಾವ ತೊಂದರೆಯನ್ನು ಕಾಣದೆ ಯಶಸ್ವಿಯಾಯಿತು. ಅನೇಕ ಧರ್ಮ ಸಂಸ್ಕೃತಿಗಳ ಮಧುರ ಸಂಗಮಕ್ಕೆ ನಾಂದಿಯಾಯಿತು.

**ಬೆಳಗಾವಿಯಿಂದ ಕ್ಯೋಟೋ**

೧೯೭೦ ಅಕ್ಟೋಬರ ೧೨ರಂದು ಸೋಮವಾರ ಮರೆಯಲಾಗದ ದಿನ! ೮-೧೦ ಸಾವಿರ ಸ್ತ್ರೀ-ಪುರುಷರು ನಮ್ಮ ಮಠದಿಂದ ನಮ್ಮನ್ನು ಬೀಳ್ಕೊಟ್ಟಾಗ ಮಾತಿಗಿಂತ ಮೌನ ಸುಖವೆನಿಸಿತು. ನೂರಾರು ತಾಯಂದಿರು ಆರತಿ ಬೆಳಗಿದರು. ಭಕ್ತರ ಭಕ್ತಿಯೇ ನಮ್ಮ ರಕ್ಷಾ-ಕವಚವಾಗಿ ನಮ್ಮ ಕಾರಿನಲ್ಲಿ ಸಾಗಿದೆವು. ನಮ್ಮ ಕಾರನ್ನು ಸುಮಾರು ನೂರಾರು ಕಾರುಗಳು ಹಿಂಬಾಲಿಸಿದಾಗ ಬೇಡವೆಂದು ಹೇಳಲು ಶಬ್ದ ಸಾಲಲಿಲ್ಲ. ಸಂಜೆಯ ಶೀತಲ ಕಿರಣಗಳಲ್ಲಿ ಬೆಳಗಾವಿಯ ವಿಮಾನ ನಿಲ್ದಾಣ ಹಸಿರು ದಿನ್ನೆಗಳ ಮಧ್ಯದಲ್ಲಿ ಕಂಗೊಳಿಸುತ್ತಿತ್ತು. ಆಗಲೇ ಗಂಟೆ ೫-೧೫. ನಮ್ಮ ಕಾರು ಅಲ್ಲಿಗೆ ಬರುತ್ತಲೇ ನಾಡಿನ ಅನೇಕ ಸ್ವಾಮಿಗಳ, ಸಹಸ್ರಾರು ಭಕ್ತರ ಹಿಗ್ಗಿನ ರಾಶಿ. ಅವರೆಲ್ಲರ ಉದ್ವೇಗ-ಹರ್ಷ-ಹಾರೈಕೆಗಳ ವಂದಾನಾಭಿಲಾಷೆಗಳನ್ನು ಸಹಿಸುವದೇ ನಮಗೆ ಕಷ್ಟವಾಯಿತು. ಸಮಯ ತೀರ ಅಲ್ಪ, ಸ್ವಾಮಿಗಳ-ಭಕ್ತರ ಶುಭಹಾರೈಕೆ ಅನಂತ. ಅವರೆಲ್ಲರ ಶುಭೇಚ್ಛೆಯೇ ನಮ್ಮ ಪ್ರಯಾಣಕ್ಕೆ ಮಂಗಳದ ರಕ್ಷೆಯಾಯಿತು. ನಮಗೆ ಮುಂದಿನ ಮಹಾಕಾರ್ಯದ ಶ್ರೇಯೋಭಿಲಾಷೆಗೆ ಭರವಸೆಯಾಯಿತು. ಅಂದೇ ನಾವು ನಮ್ಮ ಆಪ್ತಕಾರ್ಯದರ್ಶಿಗಳಾದ ಪ್ರೊ. ಎ. ಎಲ್. ಹಿರೇಮಠರೊಂದಿಗೆ ಮುಂಬಯಿ ಮಾರ್ಗವಾಗಿ ದಿಲ್ಲಿಯನ್ನು ತಲುಪಿದೆವು. ಅಂದು ಸಂಜೆಯ ಪೂಜೆಗೆ ದಿಲ್ಲಿಯ ಎಸ್. ಸಿ. ಜವಳಿ ವಕೀಲರ ಮನೆಯಲ್ಲಿ ಅನುಕೂಲವಾಯಿತು. ಮರುದಿನ ಶ್ರೀರಂಗನಾಥ ದಿವಾಕರರು ನಮ್ಮೊಂದಿಗೆ ಸಹಪಾಂಥರಾಗಿ ಕೂಡಿಕೊಂಡರು. ಅವರೊಂದಿಗೆ ದಿಲ್ಲಿಯಿಂದ ವಿಮಾನ ಮಾರ್ಗವಾಗಿ ಕಲಕತ್ತೆಯನ್ನು

ತಲುಪಿ, ಅಲ್ಲಿಯ ಇನ್‌ಕಮ್‌ಟ್ಯಾಕ್ಸ್ ಅಸಿಸ್ಟಂಟ ಕಮಿಶನರರಾದ ಶ್ರೀ ಹೊಸಮನಿಯವರ ಮನೆಯಲ್ಲಿ ತಂಗಿದೆವು. ದಿನಾಂಕ ೧೪ ರಂದು ಮುಂಜಾನೆ ಏಯರ್ ಇಂಡಿಯಾದ ಇಂಟರ್ ನ್ಯಾಶನಲ್ ಸರ್ವಿಸಿನ ಬೋಯಿಂಗ ವಿಮಾನವು ನಮ್ಮನ್ನು ಕಲಕತ್ತೆಯಿಂದ ಹಾಂಗ್‌ಕಾಂಗ್ ಮಾರ್ಗವಾಗಿ ಜಪಾನಿನ ಕ್ಯೂಟೋ ನಗರಕ್ಕೆ ಕೊಂಡೊಯ್ಯಿತು. ಮಧ್ಯದಲ್ಲಿ ಹಾಂಗ್‌ಕಾಂಗ್‌ದಲ್ಲಿ ಏಯರ್ ಇಂಡಿಯಾದವರು ವ್ಯವಸ್ಥೆಮಾಡಿದ ನಿವಾಸದಲ್ಲಿ ಕೆಲಕಾಲ ನಿಂತೆವು. ಹೀಗಾಗಿ ಪ್ರವಾಸ ಮಧ್ಯದಲ್ಲಿ ನಮ್ಮ ಪೂಜಾವಿಧಿಗೆ ಯಾವ ತೊಂದರೆಯೂ ಉಂಟಾಗಲಿಲ್ಲ. ದಿ. ೧೫ ಗುರುವಾರ ಮಧ್ಯಾಹ್ನ ನಮ್ಮ ವಿಮಾನವು ಹಾಂಗ್‌ಕಾಂಗ್‌ದಿಂದ ಕ್ಯೂಟೋ ಮಾರ್ಗದಲ್ಲಿ ನೀಲವರ್ಣ ಸುತ್ತುವರಿದ ಸಾಗರದ ಮೇಲೆ ಅತೀ ಎತ್ತರದಲ್ಲಿ ಹಾರುತ್ತಿತ್ತು. ನಮ್ಮಿಂದ ತೀರ ಕೆಳಗೆ ನೀಲಸಮುದ್ರ, ಮೇಲೆ ನೀಲಗಗನ. ಮುಗಿಲು ಕಡಲುಗಳೆರಡನ್ನೂ ಭೇದಿಸಿ ಹಾರುತ್ತಿರುವ ನಮ್ಮ ವಿಮಾನವು, ಸಾಧಕರ, ಸಿದ್ಧರ, ಶರಣರ ಸಂದೇಶವನ್ನು ಅನಂತತೆಗೂ ಮುಟ್ಟಿಸಲೆಂದು ಹಾರುತ್ತಿದೆಯೋ ಎಂಬಂತೆ ನಮಗೆ ಭಾಸವಾಯಿತು. ಸಂಜೆಯ ಸೂರ್ಯನು ಜಪಾನಿನ ಬೆಟ್ಟಗಳ ಮೇಲೆ ರಂಜಿಸುತ್ತಿದ್ದಂತೆ ಓಸಾಕಾ ನಗರ ವಿಮಾನ ನಿಲ್ದಾಣದಲ್ಲಿ ನಮ್ಮ ಗಗನ ನೌಕೆ ಇಳಿಯಿತು. ವಿಶ್ವಧರ್ಮ ಶಾಂತಿ ಪರಿಷತ್ತಿನ ಅಧಿಕಾರಿಗಳು ನಮ್ಮನ್ನು ನಮಗಾಗಿ ಕಾಯ್ದಿರಿಸಿದ ಗ್ರ್ಯಾಂಡ್ ಹೋಟೆಲದಲ್ಲಿ ಅತ್ಯಾಧುನಿಕ ಸುಸಜ್ಜಿತವಾದ ಬಿಡಾರ ಸ್ಥಾನಕ್ಕೆ ಕರೆದೊಯ್ದರು. ನಮ್ಮ ಅರ್ಚನಾದಿ ನಿತ್ಯಕರ್ಮಗಳಿಗೆ ಯಾವ ವ್ಯತ್ಯಯ ಬಾರದಂತೆ ಪರಿಷತ್ತಿನವರು ಮುಂಜಾಗ್ರತೆ ವಹಿಸಿದ್ದರಿಂದ ಅಲ್ಲಿ ಪ್ರತ್ಯೇಕವಾಗಿ ಎಲ್ಲ ವ್ಯವಸ್ಥೆಗಳನ್ನು ಮಾಡಲಾಗಿತ್ತು.

## ಕ್ಯೂಟೋದಲ್ಲಿ ಸಮ್ಮೇಳನ ಪ್ರಾರಂಭ

ಅಕ್ಟೋಬರ ದಿ. ೧೬ ಶುಕ್ರವಾರ ಮುಂಜಾನೆ ೯-೩೦ ಗಂಟೆಗೆ ಬಹಿರಂಗ ಅಧಿವೇಶನ (Plenary Session) ಪ್ರಾರಂಭವಾಯಿತು. ನಾವಿದ್ದ ಸ್ಥಾನದಿಂದ ಹತ್ತು ಮೈಲು ದೂರದಲ್ಲಿರುವ "ಅಂತರ್‍ರಾಷ್ಟ್ರೀಯ ಸಮ್ಮೇಲನ ಮಂದಿರ" (International Conference Hall) ಕ್ಕೆ ನಮ್ಮನ್ನು ಕೊಂಡೊಯ್ದರು. ಐದುಕೋಟಿ ರೂಪಾಯಿಗಳನ್ನು ವೆಚ್ಚಮಾಡಿ ಕಟ್ಟಲಾದ ಆ ಭವ್ಯ ಸಭಾಮಂದಿರವು. ಸುತ್ತಲಿನ ಪರ್ವತ ಶ್ರೇಣಿಗಳ ಮಧ್ಯದಲ್ಲಿ, ನಿಸರ್ಗ ಸೌಂದರ್ಯದ ಮಡಿಲಲ್ಲಿ ಎದ್ದು ಕಾಣುತ್ತಿತ್ತು. ಅತ್ಯಾಧುನಿಕ ವಾಸ್ತುಶಿಲ್ಪ-ಶೈಲಿಯಲ್ಲಿ ಭವ್ಯವಾಗಿ ರೂಪುಗೊಂಡ ಆ ಮಂದಿರ ಯಾರನ್ನಾದರೂ ದಿಗ್‌ಭ್ರಮೆಗೊಳಿಸುವಂತಿತ್ತು. ಅಚ್ಚ ಹೊಸಮಾದರಿಯ ವಿದ್ಯುದಲಂಕಾರ, ಏರ್‌ಕಂಡೀಶನ್‌ವ್ಯವಸ್ಥೆ, ಟೆಲಿವ್ಹಿಜನ್—ಚಲನಚಿತ್ರ—ಟೇಪರೆಕಾರ್ಡಿಂಗ್-ಪ್ಲ್ಯಾಶ್

ಚಿತ್ರಕಾರರಿಗೆ ಪ್ರತ್ಯೇಕ ಭೂಮಿಕೆ, ವರ್ಣರಂಜಿತ ಸುಸಜ್ಜಿತಆಸನ, ಜಪಾನಿನ ಬಣ್ಣ ಬಣ್ಣದ ನವೀನ ನಕ್ಷೆಗಳು ಹಾಗೂ ರೇಖಾಕೃತಿಯ ಉಬ್ಬು ಚಿತ್ರಗಳಿಂದ ಆ ಸಭಾಮಂದಿರ ಅತ್ಯಾಧುನಿಕ ಸೌಕರ್ಯ-ಸೌಂದರ್ಯಗಳಿಂದ ಶೋಭಿಸುತ್ತಿತ್ತು. ಜಪಾನದ ಅತ್ಯಂತ ಪ್ರಭಾವಿ ಧರ್ಮವಾದ ಬೌದ್ಧಮತದ ಸಾಕ್ಷಾತ್ ಪ್ರತೀಕವಾದ ಈ ಮಂದಿರವು ಕಳಸ ಪ್ರಾಯವಾಗಿ ಕಂಗೊಳಿಸುತ್ತಿತ್ತು. ಕ್ಯೂಟೋ ನಗರ ಜಪಾನಿನ ಬೌದ್ಧ ಧರ್ಮೀಯರಿಗೆ ಕೇಂದ್ರಭೂಮಿ. ಹೀಗಾಗಿ ಆ ಸರ್ವಧರ್ಮ ಸಮ್ಮೇಲನಕ್ಕೆ ತನ್ನದೇ ಆದ ವೈಶಿಷ್ಟ್ಯ ತುಂಬಿಬಂದಿತ್ತು.

ಈ 'ವಿಶ್ವಧರ್ಮ ಮತ್ತು ಶಾಂತಿ ಪರಿಷತ್ತಿ'ಗೆ ಪ್ರಪಂಚದ ನಲ್ವತ್ತು ರಾಷ್ಟ್ರಗಳಿಂದ ಮೂರುನೂರಕ್ಕೂ ಮೇಲ್ಪಟ್ಟು ಪ್ರತಿನಿಧಿಗಳು ಪ್ರತ್ಯಕ್ಷ ಭಾಗವಹಿಸಿದ್ದರು. ಜಗತ್ತಿನಲ್ಲಿ ಶಾಂತಿ-ಪ್ರತಿಷ್ಠಾಪನೆಯಾಗುವಂತೆ ಕಾರ್ಯ ನಿರ್ವಹಣೆಯನ್ನು ರೂಪಿಸಲು ಧರ್ಮಗುರುಗಳೂ ಧರ್ಮ-ಪರಿಪಾಲಕರೂ ಧಾರ್ಮಿಕ ಪ್ರವೃತ್ತಿಯುಳ್ಳವರೂ ವಿಶ್ವ ಶಾಂತಿಯಲ್ಲಿ ಆಸಕ್ತಿಯುಳ್ಳವರೂ ಹೀಗೆ ಒಂದು ಕಡೆ, ವಿವಿಧ ಮತ ಪಂಥ ಪಂಗಡಗಳ ಜನರು ಸೇರಿದ್ದು; ಪ್ರಪಂಚದ ಇತಿಹಾಸದಲ್ಲಿಯೇ ಅದ್ವಿತೀಯವಾದ ಘಟನೆಯಾಗಿತ್ತೆಂದು ಹೇಳಬಹುದು. ಹಿಂದೂ, ಜೈನ, ಸೀಖ, ಬೌದ್ಧ, ಕ್ರಿಶ್ಚಿಯನ್, ಮುಸ್ಲಿಂ, ಬಹಾಯಿ, ಮಹಮ್ಮದೀಯ, ಫಾರಸಿ, ಷಿಂಟೋ, ಕನ್‌ಫ್ಯೂಶಿಯನ್, ಜ್ಯೂ ಮುಂತಾದ ಭಿನ್ನ ಭಿನ್ನ ಧರ್ಮದವರು ತಮ್ಮ ಪ್ರಭೇದಗಳನ್ನು ಮರೆತು, ಮಾನವ ಧರ್ಮದ ಸರ್ವೋತ್ತಮ ಧ್ಯೇಯವನ್ನು ಚರ್ಚಿಸಿ ಶಾಂತಿಯನ್ನು ಪ್ರಸ್ತಾಪಿಸಲು ಒಂದೆಡೆ ಸೇರಿದ ಅಪ್ರತಿಮ ಸಮ್ಮೇಲನವು ಇದಾಗಿದ್ದಿತು. ಇಲ್ಲಿ ತಾರತಮ್ಯ ಭೇದಭಾವಕ್ಕೆ ಆಸ್ಪದವಿರಲಿಲ್ಲ. ಕನಿಷ್ಠ ಗರಿಷ್ಠ, ಹೆಚ್ಚು ಕಡಿಮೆ, ಮೇಲೆ ಕೆಳಗೆ ಎಂಬ ಕ್ಷುಲ್ಲಕ ವಿಚಾರಗಳ ಗೊಂದಲ ವಿರಲಿಲ್ಲ. ವಿಶ್ವ ಬಾಂಧವ್ಯವೇ ಸರ್ವರ ಗುರಿಯಾಗಿತ್ತು. ಸೌಹಾರ್ದತೆ, ಸಹಿಷ್ಣುತೆ, ಸಹಕಾರ ಭಾವನೆ ಇವೇ ಉತ್ತಮ ಆದರ್ಶಗಳಾಗಬೇಕೆಂದು ಸಾರಿ ಹೇಳಲು ಕೂಡಿದಂತಿತ್ತು ಈ ಮಾನ್ಯಸ್ತೋಮ. (೧) ಮಾನವೀಯ ಹಕ್ಕುಬಾಧ್ಯತೆಗಳ ಸಂರಕ್ಷಣೆಯಿಂದ ಕೂಡಿದ ಶಾಂತಿ (೨) ಆರ್ಥಿಕ ಸಾಮಾಜಿಕ ದೃಷ್ಟಿಯಿಂದ ಹಿಂದುಳಿದ ರಾಷ್ಟ್ರಗಳ ಪ್ರಗತಿಪರವಾದ ಶಾಂತಿ (೩) ಮಾರಕ ಶಸ್ತ್ರಾಸ್ತ್ರಗಳ ಸನ್ಯಾಸಯುಕ್ತವಾದ ಶಾಂತಿ-ಈ ತ್ರಿವಿಧ ಶಾಂತಿಸ್ಥಾಪನೆಯೇ ಈ ಮಹಾಸಭೆಯ ಕೇಂದ್ರೋದ್ದೇಶ. ಈ ಸಮ್ಮೇಳನಕ್ಕೆ ಜಗತ್ತಿನ ನಾನಾ ಭಾಗಗಳಿಂದ ಪ್ರತಿನಿಧಿಗಳಲ್ಲದೆ ಅನೇಕ ಪ್ರತಿಷ್ಠಿತ ವ್ಯಕ್ತಿಗಳೂ ದರ್ಶಕರಾಗಿಯೂ ಬಂದಿದ್ದರು. ದ್ವಾರಕಾ ಪೀಠದ ಮತ್ತು ಕಾಶ್ಮೀರ ಪೀಠದ ಶಂಕರಾಚಾರ್ಯರ ಪ್ರತಿನಿಧಿಗಳು, ರಾಮಕೃಷ್ಣ ಮಿಶನ್, ಭಾರತೀಯ ವಿದ್ಯಾಭವನ ಈ ಸಂಸ್ಥೆಗಳಿಂದಲೂ ಪ್ರತಿನಿಧಿಗಳು ಭಾಗವಹಿಸಿದ್ದರು. ಪರಿಷತ್ತಿನ ಗೌರವ ಕಾರ್ಯದರ್ಶಿ ರೆ. ಕೋಶೋ ಓಥೋನಿ (Rev. Kosho Ohtoni), ಜಪಾನಿನ ಧರ್ಮ ಸಂಸ್ಥೆಯ ಅಂತರ್ರಾಷ್ಟ್ರೀಯ ನಿರ್ವಾಚನಾಧಿಕಾರಿ ರೆ. ನಿಖ್ಯೊ ನಿವ್ಯಾನೋ (Rev. Nikhyo Niwano), ಧಾರ್ಮಿಕ

ಸ್ವಾತಂತ್ರ್ಯದ ಅಂತರ್ರಾಷ್ಟ್ರೀಯ ಸಂಘದ ಅಧ್ಯಕ್ಷ ಡಾ|| ದಾನಾ ಮ್ಯಾಕಲೀನ ಗ್ರಿಲಿ (Dr. Dana Mclean Greely, Chairman of the world Conference as President of the International Association for Religions Freedom), ಆರ್ಚಬಿಶಪ್ ಲ್ಯಾಂಜಲೋ ಫರ್ನಾಂಡೀಸ್ (Arch Bishop Angelo Fernandes), ಪ್ರೊ. ಆರ್. ಜೆ. ವೆಬ್ಲೊಸ್ಕಿ (Prof. R. J. Weblowsky, Professor of Comparative Religion, Habrew University, Jerusalem), ಡಾ. ಯುಗೆನೆ ಕಾರಸನ್ ಬ್ಲೇಕ್ (Dr. Eugene Carson Blake Council Societies of the World Council of Churches), ಸರ್ ಮಹಮ್ಮದ ಝಾಫ್ರುಲ್ಲಾ ಖಾನ (President of the International Court of Justice Hague), ಪರಿಷತ್ತಿನ ಪ್ರಧಾನ ಕಾರ್ಯದರ್ಶಿ ಡಾ|| ಹೋಮರ್ ಎ. ಜಾಕ್ (Dr. Homer A. Jack) ಡಾ. ರಂಗನಾಥ ದಿವಾಕರ ಮುಂತಾದ ಪ್ರತಿಷ್ಠಿತ ವ್ಯಕ್ತಿಗಳು ಧರ್ಮ ಮತ್ತು ಶಾಂತಿಗಳ ಪರಸ್ಪರ ಸಂಬಂಧದ ಅವಶ್ಯಕತೆಯನ್ನು ಒಳ್ಳೇ ವಿದ್ವತ್ಪೂರ್ಣವಾಗಿ ಸಭೆಯಲ್ಲಿ ಪ್ರಸ್ತಾಪಿಸಿದರು.

ಆ ಸಾರ್ವತ್ರಿಕ ಅಧಿವೇಶನ (Plenary Session) ದ, ಕಾರ್ಯಕ್ರಮವು ಶ್ರೀ ರಂಗನಾಥ ದಿವಾಕರರಿಂದ ಆರಂಭವಾದುದು ನಮಗೆ ಸಂತೋಷವನ್ನು ತಂದು ಕೊಟ್ಟಿತು. ಅದು ಸರ್ವಧರ್ಮದವರು ಸಮಭಾವನೆಯಿಂದ ಪಾಲುಗೊಳ್ಳುವ ಸಭೆ ಯಾದುದರಿಂದ ಪ್ರತಿ ಅಧಿವೇಶನದ ಆರಂಭಕ್ಕೆ ಒಂದೊಂದು ಧರ್ಮದವರ ಪ್ರಾರ್ಥನೆಗೆ ಅನುಕೂಲ ಮಾಡಿಕೊಡಲಾಗಿತ್ತು. ಅಂದು ಬೌದ್ಧ ಪ್ರಾರ್ಥನಾ ಸೇವೆ (Buddhist Prayer Service) ಯಿಂದ ಆರಂಭವಾಯಿತು. ಸ್ವಾಗತ ಸಮಾರಂಭದಲ್ಲಿ ಪರಿಷತ್ತಿನ ಗೌರವ ಕಾರ್ಯದರ್ಶಿ ರೆವ್ಹ. ಕೋಶೋ ಓಥೋನಿ ಅವರು ಜಾಗತಿಕ ವೈರ, ವೈಷಮ್ಯ, ಯುದ್ಧ-ದಾಹಗಳನ್ನು ಎಲ್ಲ ಧರ್ಮಗಳ ಗುರುಗಳೂ ಪಂಡಿತರೂ ನಿರೋಧಿಸಿ, ಶಾಂತಿಯ ಕ್ರಿಯಾತ್ಮಕವಾದ ನಿರ್ದಿಷ್ಟ ಕ್ರಮಗಳನ್ನು ಕೈಕೊಂಡು, ವಿಶ್ವಶಾಂತಿಗೆ ನೆರವಾಗ ಬಲ್ಲ ಗುರಿಯನ್ನು ಸಾಧಿಸಬೇಕೆಂದು ವಿನಂತಿಸಿಕೊಂಡರು. ಈ ಬಹಿರಂಗಾಧಿವೇಶನದ ಅಧ್ಯಕ್ಷತೆ ವಹಿಸಿದ್ದ ಆರ್ಚಬಿಷಪ್ ಆ್ಯಂಗ್ಲೊ ಫರ್ನಾಂಡೀಸ್ (Arch Bishop Anglo Fernandes) ಅವರು ಧರ್ಮವು ಮಾನವ-ಮಾನವರನ್ನು ಒಗ್ಗೂಡಿಸಬೇಕು. (Religion must bind man to man) ಎಂದು ಹೇಳುತ್ತ, ಇಂದು ಸಾಮಾಜಿಕ, ಬೌದ್ಧಿಕ, ಅಂತರಾಷ್ಟ್ರೀಯ, ವಿಚಾರ ರಂಗಗಳಲ್ಲಿ ಪಲ್ಲಟ ಅವಶ್ಯವೆಂದೂ, ಇದು ಮಾನವನ ಅವಿಭಾಜ್ಯ ಧ್ಯೇಯವೆಂದೂ ಹೇಳಿದರು. ಪರಿಷತ್ತು ಜಗತ್ತಿನ ಮುಂದೆ ಇರಿಸಬೇಕಾದ ಶಾಂತಿ ತತ್ತ್ವದ ಧ್ಯೇಯಧೋರಣೆಗಳ ಚರ್ಚೆಗಳು ಯಶಸ್ವಿಯಾಗಿ ಜರುಗಲೆಂದು ಹಾರೈಸಿದರು.

ಅಂದಿನ ಸಭೆಯು ಅತ್ಯಂತ ಆಕರ್ಷಿತವಾಗಿತ್ತು. ಜ್ಞಾನ ವಿಜ್ಞಾನ ಐಶ್ವರ್ಯಗಳು ಧರ್ಮ ಪರಿಷತ್ತಿನ ಸೇವೆಗಾಗಿ ಒಗ್ಗೂಡಿ ನಿಂತಿದ್ದವು. ಭಾರತೀಯರಾದ ನಮಗೆ ಅಲ್ಲಿಯ ಮಹತ್ವ, ಭಾಷಣಕಾರರು ತಮಗೆ ಕೊಟ್ಟ ಸಮಯವನ್ನು ಅತಿಕ್ರಮಣ ಮಾಡದೇ ತತ್‌ಕ್ಷಣವೇ ಭಾಷಣ ನಿಲ್ಲಿಸುವಿಕೆ, ಸಭಿಕರ ಸಂಪೂರ್ಣ ನಿಶ್ಯಬ್ದತೆ, ಅಚ್ಚು ಕಟ್ಟುತನ–ಇವು ಆಕರ್ಷಕವಾಗಿ ಕಂಡವು. ಪ್ರತಿಯೊಂದು ಶಬ್ದವನ್ನೂ ಅವರು ತೂಗಿ ನೋಡಿ ಬಳಸುವದು, ಅರ್ಥವಿಲ್ಲದ ಅಲಂಕಾರಿಕ ಭಾಷೆಯ ಸುದೀರ್ಘವಾದ ಭಾಷಣ ವನ್ನು ಅವರೊಂದಿಗೂ ಮಾಡರು. ಅವರೆಲ್ಲರೂ ನಗುವಲ್ಲಿ, ಚಪ್ಪಾಳೆ ತಟ್ಟುವಲ್ಲಿ ಕೂಡ ಒಂದು ಬಗೆಯ ತೂಕ, ಇತಿ ಮಿತಿ ಇದ್ದವು. ಅದನ್ನು ನೋಡಿದಾಗ ನಮ್ಮ ಭಾರತ ದಲ್ಲಿ ಇಂತಹ ದೃಶ್ಯಗಳನ್ನು ಎಂದು ಕಾಣುವೆವೊ ಎಂಬ ಆಂತರಿಕ ಕಳವಳ ನಮಗೆ ತಾನೇತಾನಾಗಿ ಉಂಟಾಯಿತು.

## ಅಪರಾಹ್ನದ ಅಧಿವೇಶನ

ಅಂದಿನ ಬಹಿರಂಗಾಧಿವೇಶನದ ಮಧ್ಯಾಹ್ನದ ಸಭೆ ೧–೩೦ ಕ್ಕೆ ಇಸ್ಲಾಂ ಪ್ರಾರ್ಥನಾ ಸೇವೆ (Islamic Prayer Service) ಯಿಂದ ಪ್ರಾರಂಭವಾಯಿತು. ಜಾಗತಿಕ ಶಾಂತಿ ಸಮ್ಮೇಲನದ ಸೆಕ್ರೆಟರಿ ಜನರಲ್‌ರಾದ ಡಾ॥ ಹೋಮರ ಎ. ಜಾಕ್ (Dr. Homer A. Jack) ಅವರ ಭಾಷಣ ಉದ್ಬೋಧಕವೂ ವಿಚಾರ ಪ್ರಚೋದಕವೂ ಆಗಿತ್ತು. ಈ ಸಮ್ಮೇಲನದ ಧ್ಯೇಯೋದ್ದೇಶಗಳ ಬಗ್ಗೆ ಬಹುದಿನಗಳಿಂದ ಪರಿಶ್ರಮಿಸಿದ ಅವರು ನಮ್ಮ ವಿಚಾರಗಳ ಕಾರ್ಯ–ಸಾಫಲ್ಯತೆಯ ಬಗ್ಗೆ ಮಾರ್ಮಿಕವಾಗಿ ಮಾರ್ಗ ದರ್ಶನ ನೀಡಿದರು. ನಂತರ ನಾವೆಲ್ಲರೂ ತಂಡತಂಡವಾಗಿ ಆಯಾ ಧರ್ಮಗಳ ನಿರ್ದಿಷ್ಟ ಕ್ರಮಗಳನ್ನು ನಿರ್ಧರಿಸಲು ಉಪಸಮಿತಿಗಳಲ್ಲಿ ಭಾಗವಹಿಸಿದೆವು. ಬೌದ್ಧ, ಕ್ರಿಶ್ಚಿಯನ್, ಹಿಂದೂ, ಇಸ್ಲಾಂ, ಯಹೂದ್ಯ, ಜಪಾನೀ ಬುಡಕಟ್ಟಿನ ಶಿಂಟೋ, ಸೀಖ, ಝೂರತುಷ್ಟ್ರ, ಜಪಾನಿ ಇನ್ನುಳಿದ ಮತಗಳು ಹಾಗೂ ಜಪಾನೇತರ ದೇಶಗಳ ಉಳಿದ ಮತಗಳು (Miscellaneous Non–Japnese Religions) ಹೀಗೆ ಆಯಾ ಧರ್ಮಗಳ ಉಪಸಮಿತಿಗಳು ತಮ್ಮ ತಮ್ಮ ಸೈದ್ಧಾಂತಿಕ ತತ್ತ್ವಗಳನ್ನು ಕ್ರೋಢೀಕರಿಸಿ, ಪರಿಷತ್ತಿಗೆ ಸಾದರಪಡಿಸುವದಕ್ಕಾಗಿ ಬೇರೆ ಬೇರೆ ಘಟಕಗಳಾಗಿ ವಿಸರ್ಜನೆ ಹೊಂದಿದ್ದವು. ಪ್ರತಿ ಯೊಂದು ಧರ್ಮದವರಿಗೂ ಮತ್ತೆ ಪ್ರತ್ಯೇಕ ಉಪ ಸಭಾಮಂದಿರಗಳನ್ನು ಯೋಜಿಸ ಲಾಗಿತ್ತು. ಪ್ರತಿ ಉಪಸಮಿತಿಗೂ ಒಬ್ಬ ಸಭಾಧ್ಯಕ್ಷ ಹಾಗೂ ಒಬ್ಬ ಸಂಯೋಜನಾಧಿ ಕಾರಿ (Reporter)ಯನ್ನು ಗೊತ್ತು ಮಾಡಲಾಗಿತ್ತು. ಹೀಗೆ ಆ ವಿಶ್ವ–ಪರಿಷತ್ತಿನ ವ್ಯಾಪ್ತಿ ಹಿರಿಯದಾಗಿತ್ತು.

ನಮ್ಮ ಹಿಂದೂ ಘಟಕದ ಉಪಸಮಿತಿಯಲ್ಲಿ ನಾವು ಮಾತನಾಡುತ್ತ, "ಹಿಂದೂ ಧರ್ಮದಲ್ಲಿ ವೀರಶೈವಧರ್ಮವು ವಿಶ್ವಧರ್ಮವಾಗಬಲ್ಲ ಮೌಲ್ಯಗಳನ್ನು ಹೊಂದಿದೆ"

ಎಂಬ ವಿಷಯವನ್ನು ದಾರ್ಶನಿಕವಾಗಿ ಸಿದ್ಧಮಾಡಿಕೊಟ್ಟೆವು. ನಮ್ಮ ಅಭಿಪ್ರಾಯವನ್ನು ಆ ಉಪಸಮಿತಿಯು ಗೌರವದಿಂದ ಸ್ವೀಕರಿಸಿತು.

ಅಂದು ಸಂಜೆ ಗ್ರ್ಯಾಂಡ್ ಹೋಟೆಲಿನಲ್ಲಿ ಜಪಾನ ಧಾರ್ಮಿಕ ಸಂಸ್ಥೆಯವರು ಏರ್ಪಡಿಸಿದ ವಿವಿಧ ವಿನೋದಾವಳಿಗಳನ್ನು ವೀಕ್ಷಿಸಿದೆವು. ಜಪಾನ ದೇಶದ ಜಾನಪದ ಶೈಲಿಯ ಸಂಗೀತ ನರ್ತನಗಳ ಜೋಡಣೆ, ದೇಶೀಯ ವಿವಿಧಾಲಂಕಾರಗಳ ಉಡುಪು, ಜಪಾನೀ ವಾದ್ಯವಾದನ- ಇವು ಭಾರತೀಯರಾದ ನಮಗೆ ಸ್ವಾಭಾವಿಕವಾಗಿ ವಿಲಕ್ಷಣ ವಾಗಿ ಆನಂದವನ್ನು ನೀಡಿದವು. ನಂತರ ಪ್ರತಿನಿಧಿಗಳೆಲ್ಲರೂ ತಮ್ಮ ಹಸಿವೆಯನ್ನು ಪೂರೈಸಲು ಅಣಿಮಾಡಿದರು. ನಮಗಾಗಿ ಸಂಜೆಯ ಪೂಜಾವಿಧಿ ದಾರಿಕಾಯುತ್ತಿತ್ತು. ಪೂಜಾ ನಂತರ ಹಾಲು-ಹಣ್ಣು ಇಷ್ಟರಿಂದಲೇ ಅಂದಿನ ಪ್ರಸಾದ ಪೂರೈಸಿದೆವು.

## ನಮ್ಮ ಉಪನ್ಯಾಸ

ಅಕ್ಟೋಬರ ದಿ. ೧೭ ನಮ್ಮ ಜೀವನದಲ್ಲಿ ಒಂದು ಮೈಲುಗಲ್ಲು ಎಂದು ನಮ್ಮ ನಮ್ರ ಗ್ರಹಿಕೆ. ಅಂದಿನ ವಿಜಯಕ್ಕೆ ನಾವು ಕಾರಣರಲ್ಲ; ಆ ಅಂತರಾತ್ಮ ಮೂಲ ಕರ್ತೃ ಶ್ರೀ ಗುರುಸಿದ್ಧೇಶ್ವರನು. ನಾವು ಆತನ ಇಚ್ಛಾಮಾತ್ರದಿಂದ ವರ್ತಿಸುವವರು. ಅಂತೆಯೇ ಅಂದಿನ ವಿಜಯ ಫಲ ಅವನಿಗೆ ಮೀಸಲು.

ಅಂದು ನಸುಕು ಹರಿಯುದ ಮುನ್ನ ಎಚ್ಚರಾಯಿತು. ಇನ್ನೂ ಕ್ಯೋಟೋ ನಗರ ಗಾಢವಾದ ನಿದ್ರೆಯಲ್ಲಿ ಆಲಂಗಿತವಾದಂತಿತ್ತು. ನಮ್ಮ ಸ್ನಾನ ಪೂಜೆಗಳು ಮುಗಿಯು ವಷ್ಟೊತ್ತಿಗೆ ಪೂರ್ವ ಬೆಟ್ಟದ ಓರೆಯಿಂದ ಸೂರ್ಯ ಥಳಥಳಿಸಿದ. "ಓ ಇಂದು ನಮ್ಮ ಸರದಿ, ನಾವು ಕನ್ನಡಿಗರಿಂದ ಹೊತ್ತು ತಂದ ಕರ್ತವ್ಯ-ಭಾರವನ್ನು ನೀಗಿಸಬೇಕಾದ ಸುಸಂಧಿ" ಎಂದು ನೆನೆದಾಗ ರೋಮಾಂಚನವೂ ಅಂತರಂಗದಲ್ಲಿ ಕಂಪನವೂ ಉಂಟಾದವು. ಹುಬ್ಬಳ್ಳಿಯನ್ನು ಬಿಡುವಾಗಲೇ ನಮ್ಮನ್ನು ಬೀಳ್ಕೊಡುವ ಭಕ್ತರಿಗೆ ಹೇಳಿದ್ದೆವು. "ನಾವು ನಿಮ್ಮೆಲ್ಲರ ಪುತ್ರ. ನಿಮ್ಮ ಉದ್ದೇಶ ಸಾಧಿಸುವುದಕ್ಕಾಗಿಯೇ ವಿದೇಶಕ್ಕೆ ತೆರಳುವೆವು" ಎಂದು. ಆ ಬಹುಜನರ, ಆಶೋತ್ತರಗಳ ಸಂಕಲ್ಪಸಿದ್ಧಿಯನ್ನು ಎದುರಿಸಲು ಸನ್ನದ್ಧ ರಾದೆವು. ಆದರೂ ಆ ಸಮಯದಲ್ಲಿ ಅನೇಕ ಬಗೆಯ ವಿಘ್ನಗಳನ್ನು ಎದುರಿಸ ಬೇಕಾಯ್ತು. ಭಾರತದಲ್ಲಿಯ ಮಹಾರಾಷ್ಟ್ರ, ಆಂಧ್ರ, ಉತ್ತರಪ್ರದೇಶ, ಬಿಹಾರ, ಬಂಗಾಲ ಮುಂತಾದ ರಾಜ್ಯಗಳಿಂದ ಅನೇಕ ಸಾಧು-ಸಂತರು, ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ತತ್ತ್ವವೇತ್ತರು, ಕುಲಪತಿಗಳು ಆಗಮಿಸಿದ್ದರು. ಅವರಲ್ಲಿಯೇ ಚರ್ಚೆ ಪ್ರಾರಂಭವಾಯಿತು: ಬಹಿರಂಗ ಅಧಿವೇಶನಕ್ಕೆ ಮಹಾರಾಷ್ಟ್ರದವರು ತಮ್ಮ ವ್ಯಕ್ತಿಗಳನ್ನು ಆರಿಸಬೇಕು, ಬಿಹಾರದವರು ತಮ್ಮ ವ್ಯಕ್ತಿಗಳನ್ನು ಆರಿಸಬೇಕೆಂದು, ಹೀಗೆ ಪ್ರತಿ

ಯೊಂದು ರಾಜ್ಯದವರ ಪ್ರಯತ್ನ ನಡೆದದ್ದು ನೋಡಿ ಅತೀವ ಸಂಕಟಕ್ಕೀಡುಮಾಡಿತು. ಈ ಚರ್ಚೆಯಲ್ಲಿ ಕರ್ನಾಟಕಕ್ಕೆ ಅವಕಾಶ ದೊರೆಯುತ್ತದೆಯೋ ಇಲ್ಲವೋ ಎಂಬ ವಿಚಾರ ಗಳ ತೆರೆಗಳು ಮನಸ್ಸಿನಲ್ಲಿ ಸುಳಿಯುಹತ್ತಿದವು. ಅಂದು ನಮಗೆ ಇಡಿಯ ದಿನವೇ ನಿದ್ದೆ ಯಿಲ್ಲ. ಬೆಳಗಿನವರೆಗೆ ಶ್ರೀ ಗುರುಸಿದ್ಧೇಶ್ವರನನ್ನೇ ಸ್ಮರಿಸಿದ್ದಾಯಿತು. ಬಹುದೂರ ಬಂದು ನಮ್ಮ ಕಾರ್ಯ ಸಫಲವಾಗದಿದ್ದರೆ ಹೇಗೆ? ನಾವು ಮುಖ್ಯವಾಗಿ ಬಂದದ್ದು ದೇಶ ನೋಡಲಿಕ್ಕಲ್ಲ; ಭಾರತೀಯ ಸಂಸ್ಕೃತಿಯ ತತ್ತ್ವವನ್ನು ಬಿತ್ತರಿಸಲಿಕ್ಕೆ ಎಂಬುದು ಮನಸ್ಸಿ ನಲ್ಲಿ ಕೊರೆಯುತ್ತಿತ್ತು. ಚಿಂತೆಯ ಸಾಗರದಲ್ಲಿ ಮುಳುಗಿದೆವು. ನಾವು ಬೆಳಗಿನ ಪೂಜೆ ಯನ್ನು ಪೂರೈಸಿಕೊಂಡು ಅಧ್ಯಯನ ಕೋಣೆಗೆ ಬರುವಷ್ಟರಲ್ಲಿಯೇ ನಮಗಾಗಿಯೇ ಒಂದು ಓಲೆ ಟೇಬಲ್ಲಿನ ಮೇಲೆ ಕಾಯುತ್ತಿತ್ತು. ಅದನ್ನು ಆತುರತೆಯಿಂದ ಒಡೆದು ನೋಡಿದಾಗ, ಆ ಓಲೆ ಸಾಮಾನ್ಯವಾಗಿರದೇ, ನಮ್ಮನ್ನು ಕರ್ತೃ ಶ್ರೀ ಗುರುಸಿದ್ಧೇಶ್ವರನೇ ಬಂದು ಕೃಪೆಮಾಡಿ ದಂತೆ, ಬಹಿರಂಗ ಅಧಿವೇಶನದಲ್ಲಿ ನಮ್ಮ ಉಪನ್ಯಾಸವನ್ನು ಏರ್ಪಡಿಸಿರುವ ಬಗ್ಗೆ ಆಮಂತ್ರಣ ಹೊತ್ತು ತಂದ ಪತ್ರವಾಗಿತ್ತು. ಓದಿ ಆನಂದಭರಿತರಾದೆವು. ಸಂಕಲ್ಪ ಈಡೇರಿದಂತಾಯ್ತೆಂದು ಭಾವಿಸಿಕೊಂಡೆವು.

### ಅಧಿವೇಶನ ಪ್ರಾರಂಭ

ಅಂದು ಬಹಿರಂಗಾಧಿವೇಶನ ಮಂಟಪದಲ್ಲಿ (Plenary Session) ಯಹೂದಿ ಪ್ರಾರ್ಥನಾ ಸೇವೆ (Jewish prayer Service)ಯಿಂದ ಸಭೆ ಪ್ರಾರಂಭವಾಯಿತು. ಡಾ. ಹಿಡಕೆ ಯುಕಾವಾ (Dr. Hideki Yukawa) ಅವರು "ನಿಶ್ಶಸ್ತ್ರೀಕೃತ ವಿಶ್ವ ನಿರ್ಮಾಣ" (The creation of the world without Arms) ಎಂಬ ವಿಷಯದ ಬಗ್ಗೆ ಮಾತನಾಡಿದರು. ಎಲ್ಲ ದೇಶಗಳು ಮಾರಕಾಸ್ತ್ರಗಳ ಸ್ಪರ್ಧೆಯನ್ನು ನಿಲ್ಲಿಸಿ, ಸಾಂತಿ ಸಹಭಾವಗಳಲ್ಲಿ ಪಾಲುಗೊಳ್ಳಬೇಕೆಂದು ಅವರು ಕೇಳಿಕೊಂಡರು.

ಭೋಜನಾನಂತರದ ಬಹಿರಂಗಾಧಿವೇಶನವು ಮಧ್ಯಾಹ್ನ ೧೨ ಕ್ಕೆ ಕ್ರೈಸ್ತ ಪ್ರಾರ್ಥನಾ ಸೇವೆಯಿಂದ ಪ್ರಾರಂಭವಾಯಿತು. ಡಾ. ಯುೂಜಿನ್ ಕಾರ್ಸನ್ ಬ್ಲೇಕ್ (Dr. Eugene Carson Blake) ಅವರು ಅಸಭಿವೃದ್ಧ ರಾಷ್ಟ್ರಗಳ ಪ್ರಗತಿಯ ಬಗ್ಗೆ ಮಾತನಾಡುತ್ತ, ಜಾಗತಿಕ ಮೈತ್ರಿಯೇ ಹಿಂದುಳಿದ ದೇಶಗಳ ಪುರೋಭಿವೃದ್ಧಿಗೆ ಮೂಲ ತತ್ತ್ವವೆಂದು ಹೇಳಿ ಎಲ್ಲರ ಸಹಬಾಂಧವ್ಯ ಐಕ್ಯತೆಗಾಗಿ ಕೇಳಿಕೊಂಡರು.

ಆ ಮೇಲೆ ಬಂತು ನಮ್ಮ ಸರದಿ. ಆಗಲೇ ವೇಳೆ ೨-೩೦. ಬಹಿರಂಗಾಧಿವೇಶನದ ಸಭಾಮಂದಿರ ಕಿಕ್ಕಿರಿದು ತುಂಬಿತ್ತು. ಎಲ್ಲಿ ನೋಡಿದಲ್ಲೆಲ್ಲ ಪ್ರಜ್ಞಾವಂತರಾದ ಪ್ರಬುದ್ಧ ಜನರು. ಭಾರತದಿಂದ ಬಂದ ನಾಲ್ವತ್ತು ಪ್ರತಿನಿಧಿಗಳ ಪೈಕಿ ಕೇವಲ ನಮಗೆ ಈ ಬಹಿರಂಗಾಧಿವೇಶನದಲ್ಲಿ ಮಾತನಾಡುವ ಅವಕಾಶ ದೊರೆತದ್ದು ಶ್ರೀ ರಂಗನಾಥ ದಿವಾಕರ ಹಾಗೂ ಪ್ರಧಾನ ಕಾರ್ಯದರ್ಶಿಗಳಾದ ಡಾ. ಹೋಮರ ಎ. ಜಾಕ್ ಮತ್ತು ಅಧ್ಯಕ್ಷರಾದ

ಆರ್ಚಬಿಷಪ್ ಎಂಜಿಲೋ ಫರ್ನಾಂಡೀಸ್ ಹಾಗೂ ನಮ್ಮ ಆಪ್ತ ಕಾರ್ಯದರ್ಶಿ ಪ್ರೊ|| ಎ. ಎಲ್. ಹಿರೇಮಠ ಅವರ ಪ್ರಯತ್ನ ವಿಶೇಷದಿಂದ. ನಮ್ಮ ಪರಿಚಯವನ್ನು ಡಾ. ಹೋಮುರ ಎ. ಜಾಕ್ ಅವರ ಸೂಚನೆಯ ಮೇರೆಗೆ ಡಾ. ಹುಸೇನರು ಮಾಡಿ ಕೊಟ್ಟರು.

ವೇಳೆಗೆ ಸರಿಯಾಗಿ ನಾವು ಸಭಾಮಂದಿರದ ಭವ್ಯ ವೇದಿಕೆಯನ್ನು ಹತ್ತುತ್ತಿರುವಾಗಲೇ ಎಲ್ಲ ಪ್ರತಿನಿಧಿಗಳ ದೀರ್ಘ ಕರತಾಡನ ಹಾಗೂ ಹರ್ಷೋದ್ಗಾರಗಳು ನಮ್ಮನ್ನು ಸ್ವಾಗತಿಸಿದವು. ನಾವು ಧರಿಸಿದ್ದ ಕಾಷಾಯಾಂಬರ, ವಿಭೂತಿ, ಕೈಯಲ್ಲಿ ಹಿಡಿದ ಯೋಗದಂಡ ಇವು ಅವರ ಕರತಾಡನಕ್ಕೆ ಮೂಲ ಪ್ರೇರಣೆಯೆಂಬುದು ನಮಗೆ ತಿಳಿದು ತುಂಬ ಸಂತೋಷವಾಯಿತು. ವೇದಿಕೆಯ ಮೇಲೆ ಟೆಲೆವ್ಹಿಜನ್, ಚಲನಚಿತ್ರ, ದೇಶ ವಿದೇಶದ ಪತ್ರಿಕೆಗಳ ಛಾಯಾಗ್ರಾಹಕರ ಪ್ರಚಂಡ ಫ್ಲ್ಯಾಶಗನ್ ಪ್ರಕಾಶಗಳ ಸುರಿಮಳೆಯಲ್ಲಿ ನಾವು ಒಂದು ನಿಮಿಷ ಮೌನವಾಗಿ ನಿಂತು ಅಂತರಂಗದಲ್ಲಿ ಪರಮಾತ್ಮನನ್ನು ಧ್ಯಾನಿಸಿದೆವು. ಪ್ರಭು ಶಕ್ತಿ ತಾನೇತಾನಾಗಿ ಮಿಂಚಿನಿಂದ ಧುಮುಕಿಬಂದಿತು. ಮಹಾಪ್ರೇರಣೆಯನ್ನು ನೀಡಿತು. ನಂತರ ನಮ್ಮ ಇಂಗ್ಲೀಷ್ ವ್ಯಾಖ್ಯಾನವನ್ನು, "Fellow Seekers of peace" ಎಂದು ಸಭೆಯನ್ನು ಸಂಭೋದಿಸುತ್ತ ಪ್ರಾರಂಭಿಸಿದೆವು. ಧರ್ಮ ಮತ್ತು ಶಾಂತಿ ವಿಚಾರವನ್ನು ಕುರಿತು ವೀರಶೈವ ಧರ್ಮವು ವಿಶ್ವಧರ್ಮಕ್ಕೆ ಪೂರಕವಾಗಿದೆ ಎಂಬುದನ್ನು ನಾವು ತಿಳಿಯಪಡಿಸಿದೆವು. ಶರಣರು ಸಾರಿದ ಕಾಯಕ, ಸ್ತ್ರೀ ಸ್ವಾತಂತ್ರ್ಯ, ಜಾತ್ಯತೀತಭಾವನೆ, ಉಪಜಾತಿಗಳ ನಿರಸನ, ಕ್ರಿಯಾಜ್ಞಾನಗಳ ಸಾಮರಸ್ಯ, ಅಂತರಂಗ ಬಹಿರಂಗಶುದ್ಧಿ, ಜೀವನ ಹಾಗೂ ಭೌತಿಕ ಶರೀರದಲ್ಲಿ ದ್ವೇಷಭಾವನೆ, ಸಕಲ ಜೀವ ರಾಶಿಯ ಮುಕ್ತಸೇವೆ– ಈ ಎಂಟು ತತ್ತ್ವಗಳನ್ನು ಆಧಾರಪೂರ್ವಕವಾಗಿ ಬಿತ್ತರಿಸಿದೆವು. ವೀರಶೈವ ಧರ್ಮದ ಸಾರ್ಥಕತೆಯು ಜಾತೀಯ ಕಟ್ಟು ನಿಟ್ಟುಗಳನ್ನು ಕಡಿದು, ಸಮಗ್ರ ಮಾನವ ಪ್ರಪಂಚದೊಂದಿಗೆ "ಎನಗಿಂತ ಕಿರಿಯರಿಲ್ಲ" ಎಂಬ ಸಹಭಾವನೆಯೊಂದಿಗೆ ಬೆರೆಯುವಲ್ಲಿಯೇ ಅಡಗಿದೆ ಎಂದು ಹೇಳಿ, ವಿಶ್ವಶಾಂತಿಗೆ ಪ್ರತಿಯೊಬ್ಬ ವೀರಶೈವನು ಸಿದ್ಧ, ಅದು ಆತನ ಬಾಳಿನ ಉಸಿರು, ಕರ್ತವ್ಯದ ಕರೆ ಎಂಬುದನ್ನು ಸಾರಿದೆವು. ನಮ್ಮ ಉಪನ್ಯಾಸ ನಡೆದಾಗ ಸಂಪೂರ್ಣ ತುಂಬಿದ ಸಭಾ–ಭವನ ನಿಶ್ಶಬ್ದವಾಗಿತ್ತು. ಎಲ್ಲ ಪ್ರತಿನಿಧಿಗಳು ಅಂತ್ಯತ ಆತುರತೆಯಿಂದ ಲಕ್ಷ್ಯಪೂರ್ವಕವಾಗಿ ಆಲಿಸಿದರು. "ಧರ್ಮದಲ್ಲಿ ರಾಜಕಾರಣ ಸೇರಬಾರದು. ರಾಜಕಾರಣದಲ್ಲಿ ಧರ್ಮ ಸೇರಬೇಕು" ಎಂದೊಡನೆಯೇ ಎಲ್ಲರೂ ಚಪ್ಪಾಳೆ ತಟ್ಟಿ ಸ್ವಾಗತಿಸಿದರು. ನಮ್ಮ ಈ ಆಂಗ್ಲ ಭಾಷಣದ ಸಮಗ್ರ ಪಾಠವನ್ನು ಈ ಪುಸ್ತಕದ ಕೊನೆಯಲ್ಲಿ ಅನುಬಂಧರೂಪದಲ್ಲಿ ಕೊಡಲಾಗಿದೆ. ಈ ಉಪನ್ಯಾಸದ ಕೊನೆಗೆ: ನಮ್ಮವೇ ಆದ ಹತ್ತು ಸೂಚನೆಗಳನ್ನು ವಿಶ್ವಪರಿಷತ್ತಿನ ರಚನಾತ್ಮಕತೆಯ ಬಗ್ಗೆ ಸಭೆಯ ಮುಂದಿಟ್ಟೆವು. ಆ ಸೂಚನೆಗಳನ್ನು ಸರ್ವರೂ ಆಸ್ಥೆಯಿಂದ ಕೇಳಿಕೊಂಡರಲ್ಲದೇ,

ಆಗಲೇ ಅದರಲ್ಲಿಯ ಒಂದೆರಡು ಅಂಶಗಳು ಕಾರ್ಯರೂಪದಲ್ಲಿ ಬಂದುಬಿಟ್ಟವು. ಆ ಸೂಚನೆಗಳು ಹೀಗೆ ಇವೆ–

೧) ಜಗತ್ತಿನ ಸರ್ವಧರ್ಮಗಳಿಂದ ಆಯ್ಕೆಯಾದ ಪ್ರತಿನಿಧಿಗಳನ್ನೊಳಗೊಂಡ ಒಂದು ಕೇಂದ್ರೀಯ ವಿಶ್ವಧರ್ಮ ಶಾಸನ ಸಂಸ್ಥೆ ರೂಪಿತವಾಗಬೇಕು.

೨) ಈ ಸಂಸ್ಥೆಗೆ ವಿಶ್ವದಾದ್ಯಂತ ಶಾಖೋಪಶಾಖೆಗಳು ಇರಬೇಕು.

೩) ಇದರ ಅಸ್ತಿವಾರಕ್ಕೆ ಮೂಲ ಬಂಡವಾಳ ಸಂಗ್ರಹವಾಗಬೇಕು.

೪) ಪ್ರತಿಯೊಂದು ರಾಷ್ಟ್ರೀಯ ಧರ್ಮಶಾಸನ ಸಂಸ್ಥೆಗಳ ಸದಸ್ಯರು ಪ್ರತಿ ತಿಂಗಳೂ ಒಂದೆಡೆ ಸೇರಿ, ಚರ್ಚಿಸಿ, ನಿರ್ಣಯಗಳನ್ನು ಕೈಕೊಂಡು, ವಿಶ್ವಧರ್ಮ ಶಾಸನ ಸಂಸ್ಥೆಗಳು ಕೇಂದ್ರ ಕಚೇರಿಗೆ ತಮ್ಮ ಕಾರ್ಯಕ್ರಮಗಳ ಗತಿ–ಪ್ರಗತಿಗಳನ್ನು ವರದಿಮಾಡಬೇಕು.

೫) ಬಹುಸಂಖ್ಯಾತ ಧರ್ಮಪ್ರತಿನಿಧಿಗಳ ಒಪ್ಪಿಗೆಯ ಮೇರೆಗೆ ವಿಶ್ವಧರ್ಮ ಸಂಸ್ಥೆಯು ಕೇಂದ್ರೀಯ ಕಚೇರಿಯನ್ನು ಆಯ್ಕೆಮಾಡಿಕೊಳ್ಳಬೇಕು.

೬) ವಿಶ್ವಧರ್ಮಗಳ ಶಾಸನ ಸಂಸ್ಥೆಯು ಕಾಲಕಾಲಕ್ಕೆ ತನ್ನ ನಿರ್ಣಯಗಳನ್ನು ಜಗತ್ತಿನ ಧರ್ಮಾಧಿಕಾರಿಗಳಿಗೆ ತಿಳಿಸುತ್ತಿರಬೇಕು. ಈ ಸಂಸ್ಥೆಯು ನಿರಂತರ ವಾಗಿ ರಾಷ್ಟ್ರೀಯ ಹಾಗೂ ಪ್ರಾಂತೀಯ ಧರ್ಮಾಧಿಕಾರಿಗಳೊಂದಿಗೆ ಸಂಪರ್ಕ ಹೊಂದಿರಬೇಕು.

೭) ವಿಶ್ವದ ಪೀಠಾಚಾರ್ಯರ ಸಂಖ್ಯಾ ಸಂಗ್ರಹಣ ಕಾರ್ಯ ನಡೆಯಬೇಕು.

೮) ನೈತಿಕವಾಗಿ ಮುಗ್ಗರಿಸಿದ ದೀನ ದಲಿತರ ಸಮಾಜಗಳನ್ನು ಶಾಂತಿ ಹಾಗೂ ಸುಜ್ಞಾನದತ್ತ ಪುನರುತ್ಥಾನಗೊಳಿಸುವದೇ, ಈ ವಿಶ್ವಸಂಸ್ಥೆಯ ಹೆಗ್ಗುರಿ ಯಾಗಿರಬೇಕು.

೯) ಆಯಾ ದೇಶಗಳ ಧರ್ಮಾಚಾರ್ಯರು ತಮ್ಮ ಜನರಲ್ಲಿ ಶುದ್ಧ ಧರ್ಮಾ ಚರಣೆಯ ಸಂಸ್ಕಾರವನ್ನು ಅರಳಿಸಿ, ಅವರ ಒಲವನ್ನು ವಿಶ್ವ ಮಾನವ ಸಖ್ಯ ದತ್ತ ಸಂಪಾದಿಸಲು ಸರ್ವತೋಮುಖ ಪ್ರಯತ್ನಗಳನ್ನು ಕೈಕೊಳ್ಳಬೇಕು. ಅಲ್ಲದೆ ಅವರು ತಮ್ಮ ದೇಶಗಳ ಪ್ರಾಂತೀಯ ಹಾಗೂ ಕೇಂದ್ರೀಯ ಸರ್ಕಾರ ಗಳ ಬೆಂಬಲವನ್ನು ಪಡೆಯುವಲ್ಲಿ ಹಿಂದಾಗಕೂಡದು.

೧೦) ಈ ವಿಶ್ವ–ಧರ್ಮಗಳ ಶಾಸನ ಸಂಸ್ಥೆಯು ಜಗತ್ತಿನ ನಾನಾ ರಾಷ್ಟ್ರಗಳಲ್ಲಿ ಕಾಲ ಕಾಲಕ್ಕೆ ವಿಶ್ವಧರ್ಮ ಪರಿಷತ್ತನ್ನು (ಕ್ಯೂಟೋದಲ್ಲಿ ಕರೆದಂತೆ) ಸಂಯೋಜಿಸ ಬೇಕು.

ಈ ಎಲ್ಲ ನಮ್ಮ ವಿಚಾರಗಳು ಸಭಿಕರಿಗೆ ತುಂಬಾ ಹಿಡಿಸಿದ್ದನ್ನು ನೋಡಿ ನಮಗೆ ಸಂತಸವೆನಿಸಿತು.

ಭಾಷಣ ಮುಗಿದ ಕೂಡಲೆ ದೀರ್ಘ ಕರತಾಡನಗಳ ಮಧ್ಯೆ ಅನೇಕ ಜನರು ಎದ್ದು ಬಂದು ನಮಗೆ ಹೃದಯಪೂರ್ವಕವಾಗಿ ಅಭಿನಂದನೆಗಳನ್ನು ಸಲ್ಲಿಸುತ್ತಿರುವದನ್ನು ನೋಡಿದಾಗ, ನಾವು ಶ್ರೀ ಜಗದ್ಗುರು ಗುರುಸಿದ್ಧೇಶ್ವರನ ಕೃಪೆಯಿಂದ ಪಟ್ಟಪರಿಶ್ರಮ ಸಾರ್ಥಕವಾಯಿತೆಂದು ಅನಿಸಿತು. ಮನಸ್ಸಿಗೆ ತೃಪ್ತಿಯಾಯಿತು. 'ಭಾರತದ ವತಿಯಿಂದ ನಮ್ಮ ಹಿಂದೂ ಧರ್ಮಗುರುಗಳಾದ ನಿಮಗೆ, ನಮ್ಮ ಹಿಂದೂ ಧರ್ಮವನ್ನು ಪ್ರತಿನಿಧಿಸಲು ಅವಕಾಶ ದೊರೆತದ್ದು ನಮಗೆ ತುಂಬ ಹೆಮ್ಮೆಯ ಸಂಗತಿ'ಯೆಂದು ಭಾರತದ ಪ್ರತಿನಿಧಿಗಳು ತಮ್ಮ ಅಭಿಪ್ರಾಯವನ್ನು ನಂತರ ನಮ್ಮೆದುರು ಅರುಹಿದರು.

ನಂತರ ಬಹಿರಂಗಾಧಿವೇಶನ ಮುಗಿದು, ಉಪಸಮಿತಿಗಳ ಕ್ರಿಯಾಸಮಿತಿಗಳು (Conference Workshops) ತಮ್ಮ ಕಾರ್ಯಕ್ಕಾಗಿ ವಿಸರ್ಜನೆ ಹೊಂದಿದವು. ಪ್ರತಿ ಅಧಿವೇಶನದ ಮಧ್ಯದಲ್ಲಿ ಹತ್ತು ನಿಮಿಷ ವಿಶ್ರಾಂತಿ ಇರುತ್ತಿತ್ತು. ಎಲ್ಲ ಪ್ರತಿನಿಧಿಗಳೂ ಹೋಗಿ ಬರುತ್ತಿದ್ದರು.

## ಅಮೇರಿಕೆಯ ಪತ್ರಿಕಾಕರ್ತರಿಗೆ ಸಂದರ್ಶನ

ಮರುದಿನ ದಿ. ೧೮-೧೦-೭೦ ರಂದು ಅಮೇರಿಕೆಯ ಪತ್ರಿಕಾ ಪ್ರತಿನಿಧಿಗಳ ಒಂದು ತಂಡ ನಮ್ಮನ್ನು ಭೆಟ್ಟಿಯಾಗಿ ನಮ್ಮ ಸಂದರ್ಶನ (Interview) ಪಡೆಯಿತು. ವೀರಶೈವ ಧರ್ಮ ಎಂದರೇನು? ಭಸ್ಮಧಾರಣವೇಕೆ? ಕಾವಿ ಉಡುಗೊರೆಯ ಉದ್ದೇಶವೇನು? ಲಿಂಗವೆಂದರೇನು? ಅದರ ರಚನಾ ವಿಧಾನದ ತತ್ತ್ವವೇನು? ಅದರ ಅರ್ಚನ ವಿಧಾನಗಳೇನು? ಅದರಿಂದ ನಿಮಗೆ ಏನು ಫಲ? ಮೊದಲಾದ ಅನೇಕ ಪ್ರಶ್ನೆಗಳನ್ನು ಕೇಳಿದರು. ಅವರಿಗೆಲ್ಲ ಷಟ್‌ಸ್ಥಲ, ಪಂಚಾಚಾರ, ಅಷ್ಟಾವರಣಗಳ ಪರಿವಿಡಿಯನ್ನು ಸಂಕ್ಷಿಪ್ತದಲ್ಲಿ ತಿಳಿಸಿಕೊಟ್ಟು ಸಮಾಧಾನಕರವಾದ ಉತ್ತರಗಳನ್ನು ನೀಡಿದೆವು. ಭಸ್ಮ ಹಾಗೂ ಲಿಂಗವನ್ನು ತೋರಿಸಿ ಅವುಗಳ ಪೂಜಾ ಪದ್ಧತಿಯನ್ನು ವಿವರಿಸಿದೆವು. ನಮ್ಮ ವಿಚಾರಗಳನ್ನು ಅವರು ಕೂಲಂಕಷವಾಗಿ ಕೇಳುತ್ತಲೇ ಅವುಗಳ ಟಿಪ್ಪಣೆಗಳನ್ನು ಬರೆದುಕೊಂಡರು. ನಮ್ಮೊಂದಿಗೆ ಅನೇಕ ಭಸ್ಮದ ಘಟ್ಟಿ ಹಾಗೂ ಲಿಂಗಗಳನ್ನು ಒಯ್ದಿದ್ದೆವು. ಅವುಗಳ ಕ್ರಿಯಾ ಪದ್ಧತಿಯನ್ನು ವಿವರಿಸಿದೆವು. ಅನೇಕರಿಗೆ ಭಸ್ಮಧಾರಣವೂ ಆಯಿತು. ನಮ್ಮ ವಿವರಣೆಯನ್ನು ಅವರು ಟೇಪ್ ರೆಕಾರ್ಡ್ ಮಾಡಿಕೊಂಡು, ನಮ್ಮ ದಿಗ್ದರ್ಶನವನ್ನು ಚಿತ್ರಿಸಿಕೊಂಡರು.

ಮರುದಿನ ಸಭಾಭವನದ ವಿಶ್ರಾಂತಿ ಧಾಮದ ಒಂದು ಭಾಗದಲ್ಲಿ ನಾವು ಆಸೀನರಾದಾಗ, ಜಪಾನಿನ ಮಿ. ಇವಾಓ. ಪಿ. ಹಿನೋ (Mr. Iwao P. Hino) ಎಂಬುವರು, ಉಮೋಟೋ (Oomoto) ಎಂಬ ಧಾರ್ಮಿಕ ವೃತ್ತಪತ್ರಿಕೆಯ ಸಂಪಾದಕರು ನಮ್ಮ ಸಂದರ್ಶನವನ್ನು ಪಡೆದರು. ಅವರು ತಮ್ಮದೇ ಆದ ಶೈಲಿಯಲ್ಲಿ ವಂದಿಸಿ, ಭಾರತೀಯ ಧರ್ಮಗಳ ಬಗ್ಗೆ, ಮಠಗಳ ಕಾರ್ಯಕ್ಷೇತ್ರಗಳ ಬಗ್ಗೆ ತುಲನಾತ್ಮಕ ವಿಚಾರ ವಿನಿಮಯವನ್ನು ಮಾಡಿದರು. ನಮ್ಮ ಸಮಗ್ರ ಭಾಷಣವನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿದರು.

ಜಪಾನದಲ್ಲಿ ಅನೇಕರು ನಮ್ಮಿಂದ ಭಸ್ಮವನ್ನು ಸ್ವೀಕರಿಸಿ ಧಾರಣಮಾಡಿಕೊಂಡರು. ಕೆಲವರಿಗೆ ದೃಷ್ಟಿಯೋಗ, ಅನುಸಂಧಾನಕ್ಕಾಗಿ ಲಿಂಗವನ್ನು ನೀಡಿದೆವು. ಅವರೆಲ್ಲರೂ ಅವನ್ನು ಭಯಭಕ್ತಿಯಿಂದ ಸ್ವೀಕರಿಸಿದ್ದು ನೋಡಿ ತುಂಬಾ ಆನಂದವಾಯಿತು. ಲಿಂಗ-ರುದ್ರಾಕ್ಷಿ-ಭಸ್ಮಗಳ ಈ ಶುದ್ಧ ಆಚಾರ ನಿಷ್ಠೆಯಲ್ಲಿ ವೈಜ್ಞಾನಿಕ ತಿರುಳು ಅಡಗಿದೆ ಎಂಬುದು ಈಗಾಗಲೇ ಪಾಶ್ಚಿಮಾತ್ಯ ಪ್ರಪಂಚಕ್ಕೆ ಮೆಲ್ಲನೇ ಅರಿವಾಗುತ್ತಿದೆ. ನಮಗಿಂತಲೂ ಅವರಿಗೆ ಇವುಗಳನ್ನು ಅರಿತು ಆಚರಿಸುವಲ್ಲಿ ಕುತೂಹಲ, ಜಿಜ್ಞಾಸೆ ಕೆರಳುತ್ತಿರುವದು ಶುಭೋದಯದ ಸಂಕೇತ.

## ಬೌದ್ಧರ ಕೇಂದ್ರ: ಕ್ಯೂಟೋ

ದಿ. ೧೯ ರಂದು ಜಪಾನಿನ ಶಾಂತಿ-ಪರಿಷತ್ತಿನ ಸಂಯೋಜಕರು ನಮಗೆ ಸುಪ್ರಸಿದ್ಧ ಧಾರ್ಮಿಕ ಹಾಗೂ ಐತಿಹಾಸಿಕ ಸ್ಥಳಗಳಾದಕ್ಯೂಟೋ (Kyoto), ನಾರಾ ಹಾಗೂ ಟೇರಾ ಪಟ್ಟಣಗಳನ್ನು ತೋರಿಸುವ ವ್ಯವಸ್ಥೆ ಮಾಡಿದ್ದರು. ಕ್ಯೂಟೋ ನಗರಕ್ಕೆ ತನ್ನದೇ ಆದ ನಿಸರ್ಗ ರಮಣೀಯತೆ ಇದೆ. ಅದರ ಮೂರು ದಿಕ್ಕುಗಳನ್ನು ಹಸಿರು ಪರ್ವತಶ್ರೇಣಿ ಆವರಿಸಿದ್ದರಿಂದ ತಾಯಿ ಮಡಿಲಲ್ಲಿ ಮಗುವು ಸಂಪಾಗಿ ನಿದ್ರಿಸಿದಂತೆ ಆ ಪಟ್ಟಣವು ಪ್ರವಾಸಿಕರಿಗೆ ತೋರುತ್ತದೆ. ಅದೊಂದು ನೈಸರ್ಗಿಕವಾದ ಕಣಿವೆ ಪ್ರದೇಶ, ರಾಜರ ಅರಮನೆಯ ಉಪಯೋಗಕ್ಕೆ ಬರುವ ರೇಶಿಮೆ ಹಾಗೂ ಜರತಾರಿ ಬಟ್ಟೆಗಳ ನಾಜೂಕು ಕುಸುರುಗೆಲಸಗಳಿಗೆ, ಹೊಂಬಣ್ಣದ ಅರಗಿನ ವಸ್ತುಗಳಿಗೆ (Lacqurc Waee) ಅಲಂಕಾರಕ್ಕಾಗಿ ಸಿದ್ಧಪಡಿಸಿದ ಸೂಕ್ಷ್ಮ ಚಿತ್ರದ ಮಣ್ಣಿನ ಪಾತ್ರೆಗಳಿಗೆ ಇದು ಇತಿಹಾಸ ಪ್ರಸಿದ್ಧ. ಐತಿಹಾಸಿಕ ಕಟ್ಟಡಗಳು ಈ ಪಟ್ಟಣದ ಎಲ್ಲ ಭಾಗಗಳಲ್ಲಿ ಎತ್ತರ ಹಾಗೂ ಹರವುಗಳಲ್ಲಿ ಕಾಣುತ್ತಿರುವುದರಿಂದ ಇದರ ಪ್ರಾಚೀನತೆಯು ಕಲ್ಪನೆ ಸ್ವಾಭಾವಿಕವಾಗಿ ಉಂಟಾಗುತ್ತದೆ. ಬೌದ್ಧ ಸನ್ಯಾಸಿಗಳಿಗೆ ಇದು ಪವಿತ್ರವಾದ ಭೂಮಿ. ಬೌದ್ಧ ದೇವಾಲಯಗಳಿಂದ ನಗರ ಕಂಗೊಳಿಸುತ್ತದೆ.

### ಹೆಇನ್ ಮಂದಿರ (Heian Shrine)

ಕ್ರಿ.ಶ. ೭೯೪ಕ್ಕೆ ಕಾಮು (Kammu) ಚಕ್ರವರ್ತಿ ಕ್ಯೂಟೋವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು, ಅದನ್ನು ಸಾಂಸ್ಕೃತಿಕ ಕೇಂದ್ರವಾಗಿ ಪರಿವರ್ತಿಸಿದನು. ಆತನ ೧೧೦೦ ನೆಯ ವರ್ಷದ ಸ್ಮಾರಕವಾಗಿ ಈ ಭವ್ಯ ದೇವಾಲಯ ಮೂರ್ತಿವೆತ್ತಿದೆ. ಪ್ರಕೃತಿಯ ಹೊಂಬಣ್ಣಗಳೊಂದಿಗೆ ಮಾನವ ನಿರ್ಮಿತ ಈ ಕಲಾಸೌಧವು ಸರಿದೊರೆಯಾಗಿ ಹೆಣೆದುಕೊಂಡು ನಿಂತಂತಿದೆ. ಹಸಿರು ವೃಕ್ಷಗಳ ಲಲಿತ ಹೊಂಡಗಳ ಪಾರ್ಶ್ವದಲ್ಲಿ ಇದು ನಿಂತಿದೆ. ಚೌಕಾಕೃತಿಯ ಪಟಾಂಗಣ ತಲಶಿಲೆಯ ಮೇಲೆ ಜೋಡಿಸಿದ ದುಂಡಾದ ಎತ್ತರವಾದ

ಕೆಂಪು ಕಂಬಗಳು, ಉಪ್ಪರಿಗೆಯ ಮೇಲ್ಛಾವಣಿಯ ಸೌಧ, ಅದರ ಮೇಲೆ ಎತ್ತರವಾಗಿ ತ್ರಿಕೋಣಾಕೃತಿಯ ಪುಟ್ಟ ಚಪ್ಪರಗಳ ಸಾಲುಗಳು; ಇವು ಸಾಧಾರಣವಾಗಿ ಜಪಾನಿ ಮಾದರಿಯ ಬೌದ್ಧ ದೇವಾಲಯಗಳ ಮಾದರಿ. ಕೆಲವು ಕಡೆಗೆ ಇಂಥ ಮೇಲ್ಛಾವಣಿಗಳ ಅನೇಕ ಅಂತಸ್ತುಗಳ ಎತ್ತರದ ಸೌಧಗಳನ್ನು ಕಾಣಬಹುದು. ಭಾರತದ ವೈವಿಧ್ಯಪೂರ್ಣ ವಾದ ಕಲ್ಲಿನ ದೇವಾಲಯಗಳಿಗೂ ಇಲ್ಲಿಯ ಕಟ್ಟಿಗೆ ದೇವಾಲಯಗಳಿಗೂ ಅಜಗಜಾಂತರ. ಕಟ್ಟಿಗೆಯ ಕಂಬ–ತೊಲೆಗಳೇ ಹೆಚ್ಚು. ಹೀಗಾಗಿ ಇಲ್ಲಿಯ ದೇವಾಲಯಗಳು ಎಷ್ಟೇ ಪ್ರಾಚೀನವಾದರೂ, ಮರಗೆಲಸದ ಕೆತ್ತನೆಯ ಸ್ತಂಭ ಮುಂತಾದವುಗಳನ್ನು ಶತಮಾನ ದಿಂದ ಶತಮಾನಕ್ಕೆ ಬದಲಿಸುತ್ತ ಬಂದಿರುವ ಸಾಧ್ಯತೆ ಹೆಚ್ಚು. ಅಲ್ಲದೆ ಆಗಾಗ ಅಗ್ನಿ ಭಯ ಇವುಗಳಿಗೆ ತಪ್ಪಿದ್ದಲ್ಲ ಹೇಇನ್ ಮಂದಿರವನ್ನು ನಾವು ನೋಡಲು ಹೋದಾಗ ಸುತ್ತಲಿನ ಪುಷ್ಪಿತ ವನಶ್ರೇಣಿಯ ತಿಳಿನೀರಿನ ಹೊಂಡಗಳು, ಉದ್ಯಾನವನಗಳು ನಮ್ಮನ್ನು ಸೆರೆಹಿಡಿದವು. ಜಪಾನೀಯರು ಪ್ರಕೃತಿ ಪ್ರೇಮಿಗಳು. ಅವರ ಬಟ್ಟೆಗಳೂ ಪ್ರಕೃತಿ ಯಂತೆಯೇ ವರ್ಣ ವೈವಿಧ್ಯಗಳಿಂದ ಶೋಭಿತವಾಗಿರುತ್ತವೆ. ದೇವಾಲಯದ ಪರಿಸರದಲ್ಲಿ ಈ ಶಾಂತಿಯ ಪರಿಸರವನ್ನು ಅವರು ಇನ್ನೂ ಅಪೇಕ್ಷಿಸುತ್ತಾರೆ.

ಹೇಇನ್ ದೇವಾಲಯವನ್ನು ವನದೇವತೆ ಎಂದೇ ಜಪಾನಿಯರು ಬಗೆಯುತ್ತಾರೆ. ಇದರ ಮಧ್ಯ ಮಹಾದ್ವಾರವು ಎರಡು ಎತ್ತರದ ಕಂಬಗಳ ಮೇಲೆ, ಗಗನಕ್ಕೆ ಅಡ್ಡವಾಗಿ ಹಾಸಿದ ಅಡ್ಡತೊಲೆಗಳಿಂದ ಭವ್ಯವಾಗಿ ಕಾಣುತ್ತದೆ. ಹೇಇನ್ ಮಂದಿರದ ಪ್ರಾಂಗಣ ದಲ್ಲಿರುವ ಬಕ್ಕೋರೋ (Bakkoro) ಮತ್ತು ಸೋರ್ಯೋ (Soryo) ಮಂದಿರಗಳು ತಮ್ಮ ಸೌಂದರ್ಯಕ್ಕೆ ಜಗತ್ತಿನ ಪ್ರವಾಸಿಗಳನ್ನೆಲ್ಲ ಆಕರ್ಷಿಸಿವೆ. ಚೆರಿ (Cherry) ಗಿಡ ಗಳು ಈ ಸೌಧಗಳನ್ನು ಹೂವಿನ ಗೊಂಚಲುಗಳಿಂದ ಸುತ್ತಲೂ ಶೃಂಗರಿಸಿದ್ದೊಂದು ಮನ ಮೋಹಕ. ಈ ಮಂದಿರದ ಸುತ್ತ ೩೦,೦೦೦ ಚೌ. ಮೀಟರು ವ್ಯಾಪಿಸಿರುವ ಪವಿತ್ರ ತೋಟ (The Holy Garden) ಇದನ್ನು ಸರ್ವಋತುಗಳಲ್ಲಿಯೂ ಸುಂದರವಾಗಿ ಕಾಣುವಂತೆ ಏರ್ಪಡಿಸಲಾಗಿದೆ. ತನ್ನ ನಾಜೂಕು ಸೌಂದರ್ಯದಿಂದ ಜಗತ್ತಿನ ಪ್ರವಾಸಿಗ ರನ್ನು ಇದು ಸದಾ ಆಕರ್ಷಿಸುತ್ತದೆ. ಇದರಲ್ಲಿ ತೋಟಗಳು, ಕೆಂಪು–ನೀಲ ಕಮಲಗಳು, ಹಸಿರು ಹಾಸಿಗೆಗಳು, ಚೆರಿ ಪುಷ್ಪವಾಟಿಯ ಮಂಟಪಗಳು, ಹಳದಿ ವರ್ಣದ ಮೇಪಲ್ (Maple) ಗುಲ್ಮರಾಶಿಗಳು ಬಣ್ಣಬಣ್ಣದ ಹೂಗಳ ಬನಗಳು, ಹೊಂಡಗಳ ಮಧ್ಯದಲ್ಲಿ ದುಂಡುಗಲ್ಲಿನ ದಾರಿಗಳು ಕಣ್ಣಿಗೆ ಹಬ್ಬವನ್ನು ನೀಡುತ್ತವೆ. ಈ ಮಂದಿರದ ನೈಸರ್ಗಿಕ ಸೌಂದರ್ಯವು ನಾವು ಭಾರತಕ್ಕೆ ಬಂದರೂ ಕಣ್ಣೆದುರು ಕಟ್ಟಿದಂತಿದೆ.

### ಚಿಯೂನ್–ಇನ್ (Chion in) ದೇವಾಲಯ

ಕ್ಯೂಟೋದ ಚಿಯಾನ್–ಇನ್ ದೇವಾಲಯವು ಜೋಡೋ (Jodo) ಸಂಪ್ರ ದಾಯಕ್ಕೆ ಒಳಪಟ್ಟ ಶ್ರೇಷ್ಠವಾದ ಜಪಾನೀ ಮಾದರಿ. ಜಪಾನಿನಲ್ಲಿ ಬೌದ್ಧಧರ್ಮ ಒಂದೇ

ಆದರೂ ಅದರಲ್ಲಿ ಆಚಾರ–ಅರ್ಚನೆ ವಿಷಯದಲ್ಲಿ ಅನೇಕ ಸಂಪ್ರದಾಯಗಳಿರುವದನ್ನು ನಾವು ಗಮನಿಸಿದೆವು. ಉದಾಹರಣೆಗೆ: ಸೈಚೋ (Saicho) ಗುರುವಿನಿಂದ ಸ್ಥಾಪಿಸಲ್ಪಟ್ಟ ಟೆಂಡೈ (Tendia) ಮತ, ಕೂಕೈ (Kukai) ಗುರುವಿನಿಂದ ಸ್ಥಾಪಿಸಲ್ಪಟ್ಟ ಶಿಂಗಾನ್ (Shingon) ಮತ, ಹೋನೆನ್ (Honen) ಗುರುವಿನಿಂದ ಸ್ಥಾಪಿತವಾದ ಶಿನ್ (Shin) ಮತ, ಹಾಗೂ ನಿಚಿರೆನ್ (Nichiren) ಗುರುವಿನಿಂದ ಸ್ಥಾಪಿತವಾದ ನಿಚಿರೆನ್ ಮತ. ಇದಲ್ಲದೇ ಇನ್ನೂ ಮಿಶ್ರಸಂಪ್ರದಾಯಗಳನ್ನು ನಾವು ಪರಿಗಣಿಸಿದೆವು. ಇವೆಲ್ಲ ತಮ್ಮವೇ ಆದ ಭಿನ್ನ ಭಿನ್ನ ಅಧಿಕಾರ ಪೀಠಗಳಿಗೆ ಒಳಪಟ್ಟಿವೆ. ಆದರೂ ಒಟ್ಟಿನಲ್ಲಿ ಬೌದ್ಧ ತತ್ತ್ವದ ಅನುಸಂಧಾನವನ್ನು ಹೊಂದುತ್ತವೆ. ತಾತ್ತ್ವಿಕವಾಗಿ ಇವುಗಳಿಗೆ ವೈಷಮ್ಯ ಕಂಡು ಬರುವದಿಲ್ಲ.

ಚಿಯೋನಿನ್ ದೇವಾಲಯ ಹೇಇನ್ ಮಂದಿರದಂತೆ ಕಲಾಪೂರ್ಣವಾಗಿದ್ದರೂ ಬೃಹತ್ ಪ್ರಮಾಣದಲ್ಲಿ ವ್ಯಾಪಿಸಿದೆ. ಇದು ಜೋಡೋ ಸಂಪ್ರದಾಯದ ಪ್ರಧಾನ ದೇವಾಲಯ. ಈ ಸಂಪ್ರದಾಯದ ಏಳು ಸಾವಿರಕ್ಕೂ ಹೆಚ್ಚು ದೇವಾಲಯಗಳು ಜಪಾನಿನ ತುಂಬ ಹರಡಿಕೊಂಡಿದ್ದು ಇವುಗಳ ಪ್ರಧಾನ ಮಠಾಧಿಪತಿಯು (Arch Bishop) ಇಲ್ಲಿ ನೆಲೆಸಿದ್ದಾನೆ. ನಾವು ಇಲ್ಲಿಯ ಬೌದ್ಧ ಪ್ರಾರ್ಥನೆಯಲ್ಲಿ ಭಾಗವಹಿಸಿ, ಅವರ ಪ್ರಾರ್ಥನೆಯ ಕ್ರಮ–ಶಿಸ್ತು–ಸಂಘಟನೆಗಳನ್ನು ಕಂಡುಕೊಂಡೆವು. ಈ ದೇವಾಲಯವು ನಾಲ್ವತ್ತು ಮೂರು ಎಕರೆಗಳನ್ನು ವ್ಯಾಪಿಸಿದೆ. ಗುಡಿಯ ಒಳಭಾಗದಲ್ಲಿ ಬೌದ್ಧ ಧರ್ಮದ ವಿಶಿಷ್ಟ ಕೆತ್ತನೆಯ ಶೈಲಿ, ಸುಂದರವಾದ ಪಾರ್ಶ್ವಚಿತ್ರಗಳು. ಕುಸುರುಗೆಲಸದಿಂದ ಮಾಡಿದ ಶಿಲ್ಪಗಳು, ವಿವಿಧ ಭಂಗಿಯ ಬುದ್ಧನಶಿಲೆ ಹಾಗೂ ಕಂಚಿನ ಮೂರ್ತಿಗಳು, ಎದ್ದು ಕಾಣುವ ತೈಲಚಿತ್ರಗಳ ಒಳಂಕಣ ಗೋಡೆಗಳು ಹಾಗೂ ಕೆಲವು ಐತಿಹಾಸಿಕ ದಾಖಲೆಗಳು ಹೀಗೆ ಈ ದೇವಾಲಯವು ಪ್ರವಾಸಿಗರಿಗೆ ಅನೇಕ ಮಾಹಿತಿಯನ್ನು ಒದಗಿಸುತ್ತದೆ. ಇದರ ಪ್ರಾರ್ಥನಾ ಭಾಗಗಳಲ್ಲಿ ಮಾತ್ರ ಸಂಚರಿಸಲು ನಮಗೆ ಅವಕಾಶ ದೊರೆಯಿತು. ಮುಖ್ಯ ಭವನದ ಪಶ್ಚಿಮಕ್ಕೆ ಇರುವ ಅಮೀಡಾ ಡೊ (Amida Do) ದಲ್ಲಿ ೯ ಫೂಟು ಎತ್ತರದ ಅತ್ಯಂತ ಸುಂದರವಾದ ಬುದ್ಧನ ಮೂರ್ತಿ ಕಂಗೊಳಿಸುತ್ತದೆ. ಅತ್ಯಂತ ಸೂಕ್ಷ್ಮವಾದ ಕಲೆಗಾರಿಕೆಯಿಂದ ಬುದ್ಧನ ಎರಡೂ ಪಾರ್ಶ್ವಗಳಿಗೆ ಶೃಂಗಾರ ಮಾಡಲಾಗಿದೆ. ಚಿಯೋನಿನ್ ದೇವಾಲಯದ ಸುತ್ತಲಿನ ತೋಟ, ಹೊಂಡ, ವನವೈಭವ ಹಾಗೂ ಇನ್ನುಳಿದ ಅನೇಕ ಚಿಕ್ಕ ದೇವಾಲಯಗಳು ಪ್ರೇಕ್ಷಣೀಯವಾಗಿವೆ.

**ಕರುಣಾಳು ದೇವತೆ** (Godess of Mercy)

ನಂತರ ನಮ್ಮನ್ನು ರ್‍ಯೋಝೆನ್ ಕ್ಯುನಾನ್ (Ryozen Kunnon) ಬಳಿ ಪರಿಷತ್ತಿನವರು ಕರೆದೊಯ್ದರು. ಜಪಾನ ದೇಶವು ಭೂಕಂಪದಿಂದ ಸಾವಿಗೀಡಾದುದಕ್ಕಿಂತಲೂ ಹೆಚ್ಚಾಗಿ ಎರಡನೇ ಮಹಾಯುದ್ಧದ ಬಾಂಬದಾಳಿಯಿಂದ ವಿನಾಶವಾಯಿತು.

ಹಿರೋಶಿಮಾ, ನಾಗಾಸಾಕಿ ಪಟ್ಟಣಗಳ ಲಕ್ಷಾವಧಿ ಜನತೆ ಈ ಮೃತ್ಯು ದೇವತೆಗೆ ಬಲಿಯಾದರು. ಆದ್ದರಿಂದ ದ್ವಿತೀಯ ಮಹಾಯುದ್ಧದಲ್ಲಿ ಮೃತರಾದವರ ಆತ್ಮಕ್ಕೆ ಚಿರಶಾಂತಿ ದೊರೆಯಲೆಂದು ೧೯೫೫ ರಲ್ಲಿ ಈ ರ್‍ಯೋರೆಝೇನ್ ಕ್ಯೂನಾನ್‌ದಲ್ಲಿ 'ಕರುಣಾಳು ದೇವತೆ'ಯ ಸುಮಾರು ೧೫ ಫೂಟು ಎತ್ತರದ ಭವ್ಯ ಮೂರ್ತಿಯನ್ನು, ದೊಡ್ಡ ಮಂಟಪದ ಮೇಲೆ ಕೂಡ್ರಿಸಿರುವರು. ಕಂಬನಿಯ ಮಾಲೆಯನ್ನು ಎದೆಯ ಬಟ್ಟಲೊಳಿಟ್ಟು ನಾವಿಲ್ಲಿ ಬಗಬೇಕು. ದೇವತೆ ಶ್ವೇತವರ್ಣವಾಗಿದ್ದು ಆಚ್ಛಾದನೆಯಲ್ಲಿ ಕಾರುಣ್ಯವದನೆಯಾಗಿ ಕುಳಿತಿದ್ದಾಳೆ.

**ಸಾಂಜು ಸಾಂಜೆಂಡೊ ದೇವಾಲಯ**

ಇಷ್ಟಕ್ಕೇ ಕ್ಯೂಟೋ ಮುಗಿಯಲಿಲ್ಲ. ಇನ್ನೂ ಹಲವು ಪ್ರದೇಶಗಳನ್ನು ತೋರಿಸಿದರು. ಅವೆಲ್ಲವೂ ಎಂದೂ ಮರೆಯದ ನೆಲೆವೀಡುಗಳು. ನಾವು ವೇಳೆಯ ಅಭಾವದಿಂದ ಕೆಲಕಾಲ ಮಾತ್ರ ನಿಟ್ಟಿಸಿದೆವು. ಟೆಂಡೈ (Tendai) ಪಂಥದ ಸಾಂಜು ಸಾಂಜೆಂಡೊ (Sanju Sangendo) ದೇವಾಲಯದಲ್ಲಿ ೩೯೩ ಫೂಟು ಉದ್ದದ ಐದಾರು ಸಾಲುಗಳಲ್ಲಿ ನೂರಾರು ದೇವತಾ ವಿಗ್ರಹಗಳನ್ನು ತೋರಿಸಿದರು. ಅವುಗಳ ಆಕೃತಿ ವೈವಿಧ್ಯವನ್ನು ನೋಡಿ ಬೆರಗಾದೆವು. ಈ ವಿಗ್ರಹಗಳು ಮನಮೋಹಕವೂ ಭವ್ಯವೂ ಆಗಿವೆ. ಇದು ೧೨ನೆಯ ಶತಮಾನದಲ್ಲಿ ಕಟ್ಟಲ್ಪಟ್ಟ ಸುಂದರ ಸದನ.

ಇನ್ನೊಂದು ಬೌದ್ಧ ದೇವಾಲಯ: ಕಿಯೊಮಿಝು ಟೆಂಪಲ್ (Kiyomizu Temple). ಇದು ೧೫೮೩ ರಿಂದ ೧೬೧೮ರ ಮೊಮೋ ಯಾಮಾ (Momo yama Period) ಅವಧಿಯಲ್ಲಿ ಕಟ್ಟಲ್ಪಟ್ಟ ಬೃಹನ್ಮಂದಿರ. ಇದರ ಕಟ್ಟಿಗೆಯ ತಲಸಜ್ಜಿಕೆ ೧೬೪ ಫೂಟು ಎತ್ತರವಾಗಿದೆ. ಅದರ ಮೇಲೆ ಕಟ್ಟಿದ ಕಟ್ಟಿಗೆಯ ಕಟ್ಟಡವೇ ಈ ದೇವಾಲಯ. ಇದರ ತಲಸಜ್ಜಿಕೆಯೇ ಅರ್ಥಾತ್ ವೇದಿಕೆಯೇ ಇಷ್ಟೊಂದು ಎತ್ತರವಾಗಿರುವದರಿಂದ, ಎತ್ತರವಾದ ಮರಗಳು ಇದರ ಪ್ರಾಂಗಣದಲ್ಲಿ ನಿಂತ ನಮ್ಮ ಕಾಲಕೆಳಗೆ ಆಗುತ್ತವೆ.

ಇನ್ನೊಂದು ದರ್ಶನೀಯ ದೇವಾಲಯ: ಜೋಡೋ ಶಿನ್‌ಶು (Jodo Shinshu sect) ಪಂಥದ ಹಿಗಾಶಿ ಹೊಂಗಾಜಿ (Higashi Honganji Temple) ಬೌದ್ಧ ದೇವಾಲಯ. ೧೮೯೫ ರಲ್ಲಿ ಕಟ್ಟಲ್ಪಟ್ಟ ಈ ದೇವಾಲಯದ ರಚನೆಯಲ್ಲಿ ಮಹಿಳೆಯರ ಹೇರಳವಾದ ತಲೆಗೂದಲುಗಳಿಂದ ಮಾಡಿದ ಹಗ್ಗಗಳನ್ನೇ ಬಳಸಲಾಯಿತಂತೆ. ಜಪಾನಿಗರ ಬೌದ್ಧ ಮೂಢ ಭಕ್ತಿಗೆ ಇದೊಂದು ನಿದರ್ಶನ.

ಇದೂ ಅಲ್ಲದೆ, ಕ್ರಿ. ಶ. ೧೪೫೦ರ ಬಿಳಿಗಲ್ಲುಗಳ ರೋಆಂಜಿ ದೇವಾಲಯ (Ryoanji Temple), ಸೈಹೋಜಿ (Saihoji) ದೇವಾಲಯದ ಪ್ರಸನ್ನ ಹೂದೋಟ, ಟೆಂರೂಜಿ(Tenryuiji) ಗುಡಿಯ ಕ್ರಿ. ಶ. ೧೩೩೮–೧೫೭೩ ರಷ್ಟು ಪೂರ್ವದ ಚಲುವಿನ

ಹಸಿರುತೋಟ ಮುಂತಾದವು ಕ್ಯೂಟೋ ನಗರದ ಬೌದ್ಧ ಧರ್ಮದ ದರ್ಶನೀಯತೆಯನ್ನು ಹೆಚ್ಚಿಸಿವೆ.

ಕ್ಯೂಟೋದ ಬೌದ್ಧ ಮಂದಿರಗಳಲ್ಲಿ ವ್ಯವಸ್ಥೆ, ಶಿಸ್ತು, ಸಂಘಟನೆ ಬಂದವರನ್ನು ಹಾರ್ದಿಕವಾಗಿ ಸ್ವಾಗತಿಸುವ ವಿಧಾನ ನಮ್ಮನ್ನು ಬೆರಗುಗೊಳಿಸಿದವು. ಆಯಾ ದೇವಾಲಯಗಳಲ್ಲಿ ಬಹಿರಂಗದ ಶಾಂತಿ, ಶಿಸ್ತು ಪರಿಪಾಲನೆಯ ವಾತಾವರಣದಲ್ಲಿಯೇ ಭಕ್ತಿಯು ತಾನಾಗಿ ಪ್ರಕಟವಾಗುವಂತೆ ಅವರು ವ್ಯವಸ್ಥೆ ಮಾಡಿದ್ದರು. ದೇವಾಲಯದ ಸುತ್ತ ಭಿಕ್ಷುಕರು, ಕೀಳುಪ್ರಾಣಿಗಳು, ಹೊಲಸಿನ ಬೀಡು, ಗದ್ದಲ ನಮಗೆ ಎಲ್ಲಿಯೂ ಕಾಣಲಿಲ್ಲ. ಆ ಎಲ್ಲ ದೇವಾಲಯಗಳು ನಿಜವಾಗಿ ದೇವರ ಆಲಯಗಳಾಗಿದ್ದವು.

## ಪ್ರವಾಸಿಕರ ನಂದನವನ: ನಾರಾ (Nara)

ಇದೊಂದು ವನವೃಕ್ಷಗಳು ಇಡಿಕಿರಿದ ನಗರ. ಓಕ (Oak) ಮರಗಳು ಹಸಿರು ತೊಂಗಲುಗಳನ್ನು ಚಾಚಿನಿಂತಿರುವ ಅಂಕುಡೊಂಕಾದ ಗುಡ್ಡಗಳ ಓರೆಯಲ್ಲಿ ಈ ಪಟ್ಟಣವು ನಿಸರ್ಗರಮಣೀಯವಾಗಿ ಮಲಗಿದೆ. ಏಳೆಂಟು ಶತಮಾನಗಳಿಗೂ ಪೂರ್ವದಲ್ಲಿದ್ದ ಯಾಕುಸಿಜಿ (Yakushiji), ಕೋಫುಕುಜಿ (Kafukuji), ಹೊರ್ಯೂಜಿ (Horyuji) ಹಾಗೂ ತೊಡಜಿ (Todaji) ಮುಂತಾದ ಬೌದ್ಧಧರ್ಮದ ಸನ್ಯಾಸಿಮಠ (Monasteries)ಗಳು ಇಲ್ಲಿ ಕಾಣುವದರಿಂದ ಇದರ ಪುರಾತನತ್ವ ಎದ್ದು ಕಾಣುತ್ತದೆ. ಜಪಾನಿಗರ ಧಾರ್ಮಿಕ ಶ್ರದ್ಧೆಗೆ ಇದು ತವರೂರು. ಬುದ್ಧನ ಅನೇಕ ಆಕಾರದ ಶಿಲಾ ಪ್ರತಿಮೆಗಳನ್ನು ಇಲ್ಲಿ ಗಮನಿಸಬಹುದು. ಒಂದು ಕಾಲಕ್ಕೆ ಇದೇ ಜಪಾನದ ರಾಜಧಾನಿಯಾಗಿತ್ತಂತೆ. ಸುಮಾರು ೧೩೦೦ ವರುಷಗಳ ಪೂರ್ವದ ಬೌದ್ಧ ವಿಹಾರಗಳು ಹಾಗೂ ಮಂದಿರಗಳು ಇಲ್ಲಿ ಇನ್ನೂ ಅಚ್ಚಳಿಯದೇ ಕಾಲಪುರುಷನ ಅನುಗ್ರಹದಿಂದ ಉಳಿದುಕೊಂಡಿವೆ. ಈ ನಗರದ ಜನಸಂಖ್ಯೆ ೧೫೦,೦೦೦ ಇದ್ದರೂ ಇದರ ವನ್ಯ ಸೌಂದರ್ಯಕ್ಕೆ ಬಾಧೆಯಿಲ್ಲ. ಕಾರಣ ೫೩೦ ಹೆಕ್ಟರಭೂಮಿಯ ವಿಶಾಲವಾದ ಮೈದಾನವನ್ನು ಉದ್ಯಾನವನವಾಗಿ ಪರಿವರ್ತಿಸಿದ್ದಾರೆ. ಇಲ್ಲಿ ನೂರಾರು ಚಿಗರೆಗಳು ವನದೇವತೆಯರಾಗಿ ಚಲಿಸುತ್ತಿರುತ್ತವೆ. ಪ್ರತಿವರ್ಷ ಈ ನಂದನವನ ಜಗತ್ತಿನ ಎಂಭತ್ತು ಲಕ್ಷ ಪ್ರವಾಸಿಗರನ್ನು ಆಕರ್ಷಿಸುತ್ತದಂತೆ.

### ತೋಡೈಜಿ (Todaiji) ದೇವಾಲಯ

ನಾರಾದ ತೊಡೈಜಿ ಮಂದಿರ ತುಂಬ ಪ್ರಸಿದ್ಧವಾಗಿದೆ. ಅಲ್ಲಿಯ ಬೃಹತ್ ಬುದ್ಧನ ಶಿಲಾಪ್ರತಿಮೆಯನ್ನು ನೋಡಬಹುದು. ಸುಮಾರು ೨೦ ಫೂಟು ಎತ್ತರದ ಈ ಪ್ರತಿಮೆ, ಮಾನವ ಪ್ರೇಮವನ್ನೂ ಅನುಕಂಪವನ್ನೂ ಹೊತ್ತು, ಅಭಯದ ಹಸ್ತ ಮುದ್ರೆಯನ್ನು ತೋರುತ್ತಾ ಕುಳಿತಿರುವ ಧ್ಯಾನಾಸಕ್ತನಾದ ಬುದ್ಧನ ದರ್ಶನವನ್ನು ನೀಡುತ್ತದೆ. ಸುತ್ತಲೂ

ಸಾಲಂಕೃತ ಶಿಲ್ಪದ ಭಿತ್ತಿ ಕೆತ್ತನೆಯಿಂದ ಕಳೆಗೊಂಡಿದೆ. ಸಮೀಪದಲ್ಲಿದ್ದ ಸರುಸವಾ ಹೊಂಡ (Sarusawa Pond) ಪ್ರವಾಸಿಕರು ನೋಡದಿದ್ದರೂ ಆಕರ್ಷಿಸುತ್ತದೆ. ಅದರ ಸುತ್ತಲೂ ಓಕ ಮರಗಳು ನಗುನಗುತ್ತಾ ನಿಂತಿವೆ. ಅಲ್ಲಿಂದ ಸುಮಾರು ೪೦ ಮೆಟ್ಟಿಲುಗಳನ್ನು ಏರಿದರೆ ಐದು ಅಂತಸ್ತಿನ ಸರುಸವಾ ಬೌದ್ಧ ವಿಹಾರ ಗೋಚರಿಸುತ್ತದೆ. ಬೆಳ್ಳಿಯಾಕೃತಿಯ ಆದರ ಶಿಖರ ಗಗನಕ್ಕೆ ಹೆಮ್ಮೆಯಿಂದ ಚಾಚಿದೆ.

### ಶೋಸೋ–ಇನ್ (Shoso–in) ಅರಮನೆ

ಈ ನಗರದ ಶೋಸೋ–ಇನ್ ಅರಮನೆ ೧೨೦೦ ವರ್ಷಗಳ ಹಿಂದಿನ ಜಪಾನಿ ರಾಜ–ರಾಣಿಯರು ಬಳಸುತ್ತಿದ್ದ ಅಲಂಕಾರ ವಸ್ತುಗಳ ಸಂಗ್ರಹವನ್ನು ತೋರಿಸುತ್ತದೆ. ಅದರಿಂದ ಅಂದಿನ ಜಪಾನೀ ಶ್ರೀಮಂತಿಕೆಯು ಸುಖಜೀವನದ ಅರಿವು ಮೂಡುತ್ತದೆ. ಇಲ್ಲಿಯ ಶಿಂಟೊ (Shinto) ದೇವಾಲಯ ಜಪಾನೀ ವಾಸ್ತುಶಿಲ್ಪದ ಒಳ್ಳೇ ಮಾದರಿಯಾಗಿದೆ. ಅರಮನೆಯಲ್ಲಿ ಇರಿಸಿದ ಬೆಲೆ ಬಾಳುವ ದಾಗೀನುಗಳು, ಕರಕುಶಲ ಪಾತ್ರೆಗಳು, ವರ್ಣರಂಜಿತ ಶಿಲ್ಪಗಳು, ಗಾಜಿನ ವಿಲಾಸಿ ಉಪಕರಣಗಳು, ಮೆತ್ತನೆಯ ಹಾಸುಗೆಗಳು, ಗೃಹೋಪಯೋಗಿ ಜೀನಸುಗಳು, ಜೊತೆಗೆ ಯುದ್ಧೋಪಕರಣಗಳು ಸಂಗ್ರಾಹ್ಯವೂ ಶ್ರೀಮಂತವೂ ಆಗಿವೆ.

### ಜಪಾನಿನ ಧಾರ್ಮಿಕ ಮಂದಿರ: ಟೆನ್ರಿಕ್ಯೊ (Tenrikyo)

ಇಲ್ಲಿ ಶಿಶುವಿಹಾರದಿಂದ ಹಿಡಿದು ವಿಶ್ವವಿದ್ಯಾಲಯದ ವರೆಗೆ ಧಾರ್ಮಿಕ ಶಿಕ್ಷಣವನ್ನು ಹಾಗೂ ಸಾಂಸ್ಕೃತಿಕ ಅಧ್ಯಯನವನ್ನು ನೀಡಲಾಗುತ್ತದೆ. ಈ ಪೀಠ ಟೆನ್ರಿ (Tenri) ನಗರದಲ್ಲಿದೆ. ಇಲ್ಲಿಯ ವೈದ್ಯ ಶಾಲೆಯಲ್ಲಿ ವೈದ್ಯಕೀಯ ಔಷಧಿಯೊಂದಿಗೆ ಆಧ್ಯಾತ್ಮಿಕ ಶುಶ್ರೂಷೆಯನ್ನು (Spiritual Treatment) ರೋಗಿಗಳಿಗೆ ನೀಡಲಾಗುತ್ತದೆ. ಇಲ್ಲಿ ವಿಶ್ವವಿಖ್ಯಾತ ವಸ್ತು ಸಂಗ್ರಹಾಲಯ ಹಾಗೂ ಲಾಯಬ್ರರಿಗಳು ಇವೆ. ಜಪಾನಿನ ತುಂಬ ಇದರ ಅಂಗವಾಗಿ ೧೬೦೦ ಪ್ರಾರ್ಥನಾ ಮಂದಿರಗಳು ಹರಡಿವೆಯಂತೆ. ಅವುಗಳಲ್ಲಿ ೧,೨೦,೦೦೦ ಧರ್ಮೋಪದೇಶಕರು ಕಾರ್ಯನಿರತರಾಗಿದ್ದಾರಂತೆ. ಅಲ್ಲದೇ ೨೦,೦೦,೦೦೦ ಉಪಾಸಕರು ಇರುವರೆಂದೂ ಇಲ್ಲಿಯ ವಿವರಣೆಯಿಂದ ನಮಗೆ ತಿಳಿದು ಬಂತು. ಇದು ನಿಜಕ್ಕೂ ಬೃಹತ್ ಧರ್ಮಪೀಠ.

### ಶ್ರೀಮತಿ ಮಿಕಿ ನಾಕಾಯಾಮಾಳ (Miki Nakayama) ಸಾಧನೆ

ಟೆನ್ರಿಕ್ಯೋದ ಕಥೆಯೇ ಸುಂದರ. ಟೆನ್ರಿ ಓ–ನೊ–ಮಿಕೊಟೊ (Tenri–O–No Mikoto) ಎಂಬ ದೇವರು (God the Parent) ಕ್ರಿ. ಶ. ೧೮೩೮ರ ಅಕ್ಟೋಬರ ೨೬ ರಂದು ಅಲ್ಲಿಯ ಶ್ರೀಮತಿ ಮಿಕಿ ನಾಕಾಯಾಮಾಳಿಗೆ ಪ್ರತ್ಯಕ್ಷವಾಗಿ ಈ ದೇವಮಂದಿರವನ್ನು ಸ್ಥಾಪಿಸುವ ಪ್ರೇರಣೆ ನೀಡಿದನಂತೆ. ಅಂದಿನಿಂದ ಇಂದಿಗೆ ಇದು ಜಪಾನಿನಲ್ಲಿ

ಬೆಳೆದುಬಂದಿದೆ ಮಾತ್ರವಲ್ಲ; ಅಮೇರಿಕಾ, ಕ್ಯಾನಡಾ, ಬ್ರಾಝಿಲ್, ಕೋಲಂಬಿಯಾ, ಮೆಕ್ಸಿಕೋ, ಪೆರು, ಕಾಂಗೋ, ಯುರೋಪ ಮತ್ತು ಏಶಿಯಾ ಖಂಡದ ದೇಶಗಳಲ್ಲಿ ಇದರ ಭಕ್ತರು ಅಸಂಖ್ಯವಾಗಿ ಬೆಳೆದಿದ್ದಾರಂತೆ. "ಜಗತ್ತಿನ ಮಾನವರೆಲ್ಲರೂ ಸಹೋದರ-ಸಹೋದರಿಯರು. ಟೆನ್ರಿಕೋ ದೇವನ ಮಕ್ಕಳು. ಜೀವನದ ನಿಜವಾದ ಆನಂದ ವನ್ನು ಅರಿಯುವದೇ ಆತನ ಸೃಷ್ಟಿಯ ರಹಸ್ಯವಾಗಿದೆ"-ಎಂಬುದೇ ಈ ಅಧ್ಯಾತ್ಮ ಪೀಠದ ಮುಖ್ಯ ಉಪದೇಶವಾಗಿದೆ. ಈ ಪೀಠದ ಉಪಾಸಕರು ವಾಸಿಸುವ ಕಟ್ಟಡವೇ ಆರು ಅಂತಸ್ತುಗಳ ವಿಸ್ತಾರವಾದ ಅತ್ಯಾಧುನಿಕ ನಿಲಯವಾಗಿದೆ. ಅಲ್ಲಿಯ ಮುದ್ದು ಮಕ್ಕಳು ಸಮವಸ್ತ್ರದಲ್ಲಿ ನಿಂತು ಭಕ್ತಿಯಿಂದ ಕೈಜೋಡಿಸಿ ಪ್ರಾರ್ಥಿಸುವದೇ ಒಂದು ದೃಶ್ಯ ವಾಗಿದೆ. ಇಲ್ಲಿ ಅನಾಥ ಬಾಲಕ ಬಾಲಿಕೆಯರಿಗೆ ಆಶ್ರಮವನ್ನು ತೆರೆಯಲಾಗಿದ್ದು, ದಾದಿಯರು ಅವರನ್ನು ಮಕ್ಕಳಂತೆ ಪಾಲನೆ ಮಾಡುತ್ತಾರೆ. ಇಲ್ಲಿಯ ಟೆನ್ರಿ ಸಂಕೋಕನ್ ವಸ್ತು ಸಂಗ್ರಹಾಲಯ (Tenri Sankokan Museum of University) ದಲ್ಲಿ ಬೌದ್ಧರ ಪ್ರಾಚೀನ ಹಳೆಯುಳಿಕೆಯನ್ನು ಕಾಣಬಹುದು. ಒಟ್ಟಿನಲ್ಲಿ ಟೆನ್ರಿ ಜೀವನ ಸಂಸ್ಕೃತಿ ಜ್ಞಾನಗಳ ಸಂಗಮದಲ್ಲಿ ಆಧ್ಯಾತ್ಮವನ್ನು ಕಂಡುಕೊಂಡ ಪವಿತ್ರ ಕ್ಷೇತ್ರವಾಗಿದೆ.

## ಜಪಾನ ಮಹಿಳೆಯ ಭಾರತ ಪ್ರೇಮ

ದಿ. ೨೦-೧೦-೭೦ ರಂದು ಒಂದು ಕಾರ್ಯದ ನಿಮಿತ್ತ ಒಸಾಕಾ ನಗರಕ್ಕೆ ಹೋಗ ಬೇಕಾಯ್ತು. 'ದಿ ನ್ಯಾಶನಲ್ ಬ್ಯಾಂಕ್ ಆಫ್ ಅಮೇರಿಕಾ'ದಲ್ಲಿ ಕೆಲಸವಿತ್ತು. ಟ್ರೇನಿನಲ್ಲಿ ೫೦ ಮೈಲು ಪ್ರವಾಸ ಮಾಡಿ ಟ್ಯಾಕ್ಸಿ ಮಾಡಿಕೊಂಡು ಬ್ಯಾಂಕಿಗೆ ಹೋದೆವು. ಟ್ಯಾಕ್ಸಿ ಡ್ರಾಯವರನ ಪ್ರಾಮಾಣಿಕತೆಯನ್ನು ನೋಡಿ ಆಶ್ಚರ್ಯವಾಯಿತು. ತನಗೆ ಕಾಯಿದೆ ಪ್ರಕಾರ ಸಲ್ಲುವದಕ್ಕಿಂತಲೂ ಹೆಚ್ಚಿಗೆ ಒಂದು ಪೈಸೆಯನ್ನು ಸಹ ತೆಗೆದುಕೊಳ್ಳಲು ಒಪ್ಪಲಿಲ್ಲ. "ನಾವು ಸಂತೋಷದಿಂದ ಕೊಡುತ್ತೇವೆ ತೆಗೆದುಕೊಳ್ಳಿ" ಎಂದು ಹೇಳಿದರೆ, ("It is a crime if I accept more") "ನಾನು ಹೆಚ್ಚಿಗೆ ತೆಗೆದುಕೊಂಡರೆ ಅಪರಾಧವಾಗುವದು" ಎಂದು ನುಡಿದು ನಮ್ಮನ್ನು ಆಶ್ಚರ್ಯಚಕಿತರನ್ನಾಗಿ ಮಾಡಿದ. ಬ್ಯಾಂಕಿನ ಒಳಗೆ ಹೋದೆವು. ಬ್ಯಾಂಕಿನ ಪರಿಚಾರಕರು ಒಳ್ಳೇ ವಿನಯದಿಂದ ಕರೆದೊಯ್ದು, ನಮಗೆ ಪೀಠವನ್ನು ಕೊಟ್ಟು ಅಭಿವಂದಿಸಿ ಮ್ಯಾನೇಜರರಿಗೆ ನಮ್ಮ ವಿಷಯ ತಿಳಿಸಿದರು. ನಮಗೆ ಒಂದು ಚೆಕ್ಕನ್ನು ಅಮೇರಿಕೆಯಿಂದ ನಮ್ಮ ಶಿಷ್ಯರೊಬ್ಬರು ಕಳಿಸಿದ್ದರು. ಅದನ್ನು ಕ್ಯಾಶ್ ಮಾಡಿಸಬೇಕಾಗಿತ್ತು. ಬ್ಯಾಂಕಿನ ಮ್ಯಾನೇಜರ ಜಪಾನಿ ಮಹಿಳೆ. ನಮ್ಮ ಚೆಕ್ಕನ್ನು ಸಹಿ ಮಾಡಿ ಕೊಟ್ಟೆವು. "ಚೆಕ್ಕಿನ ಬಗ್ಗೆ ಮಾಹಿತಿ ಬಂದಿಲ್ಲ. (Advice) ಚೆಕ್ ಕಳಿಸಿದವರ ಸಹಿಯ ದಾಖಲೆಯೂ (Speciman Signature) ನಮ್ಮಲ್ಲಿರುವದಿಲ್ಲ." ಅದಕ್ಕೇನು ಮಾಡುವದು?-ಎಂದು ಬ್ಯಾಂಕ್ ಕ್ಯಾಷಿಯರನು ಕೇಳಿದನು. ಆ ಮೇಲೆ ಮ್ಯಾನೇಜರ ಮಹಿಳೆ ಅತಿ ವಿನಯದಿಂದ ನಮಗೆ ಕೈ ಮುಗಿದು ಆಸನವನ್ನು ಕೊಟ್ಟು ಕುಳ್ಳಿರಿಸಿ-"ತಾವು ಯಾವ ದೇಶದಿಂದ ಬಂದಿರುವಿರಿ, ಕಾಯಕವಾವುದು, ಹೋಗುವುದೆಲ್ಲಿಗೆ"

ಎಂಬುದಾಗಿ ಪರಸ್ಪರ ಶೀಲ ಸೌಜನ್ಯಕ್ಕೆ ಭಂಗಬರದಂತೆ ನಮ್ಮನ್ನು ಕೇಳಿದಳು. ಅದಕ್ಕೆ "ನಾವು ಭಾರತ ದೇಶದವರು, ಕರ್ನಾಟಕದಿಂದ ಬಂದವರು, ವೀರಶೈವ ಧರ್ಮದ ಪೀಠದವರು, ವಿಶ್ವಧರ್ಮ ಶಾಂತಿ ಪರಿಷತ್ತಿಗೆ ಬಂದ ಭಾರತದ ಪ್ರತಿನಿಧಿಗಳು, ಕ್ಯೂಟೋದಲ್ಲಿ ಪರಿಷತ್ತಿನ ಕಾರ್ಯ ಪೂರೈಸಿದ ಕೂಡಲೇ ಟೋಕಿಯೋಕ್ಕೆ ಹೋಗಿ, ಅಲ್ಲಿಂದ ಆಗ್ನೇಯೇಶಿಯಾ ರಾಷ್ಟ್ರಗಳಿಗೆ ಭೆಟ್ಟಿಕೊಟ್ಟು ಪರಿಷತ್ತಿನ ಫಲಶ್ರುತಿಯನ್ನು ಅಲ್ಲಿಯ ರಾಷ್ಟ್ರೀಯರಿಗೆ ತಿಳಿಸಿ, ಮರಳಿ ನಮ್ಮ ದೇಶಕ್ಕೆ ಹೋಗಬೇಕಾಗಿದೆ" ಎಂದೆವು. ಮ್ಯಾನೇಜರ ಮಹಿಳೆಯು ಬಹಳ ಸಂತೋಷಪಟ್ಟು ನಮ್ಮ ಚೆಕ್ಕನ್ನು ಕ್ಯಾಷ್‌ಮಾಡಿ ನಮಗೆ ಡಾಲರ್ಸ್ ಕೊಡಲು ಹೇಳಿದಳು. ನಮಗೆ ಆಶ್ಚರ್ಯವಾಯಿತು. "ಚೆಕ್ಕು ಕ್ಯಾಷ್ ಆಗಲು, ಅವಶ್ಯವಾದ ಮಾಹಿತಿ ದೊರೆತಿಲ್ಲವೆಂದು ನಿಮ್ಮ ಕ್ಯಾಶಿಯರ್ ಹೇಳಿದರು, ಅದು ಹೇಗೆ ನೀವು ನಮ್ಮ ಚೆಕ್ಕನ್ನು ಮಾನ್ಯ ಮಾಡಿದಿರಿ" ಎಂದು ಕೇಳಿದೆವು. ಅದಕ್ಕೆ ಆ ಮಹಿಳೆ—"Yes but you have come here from India, the holy land in which Lord Buddha was born, and His Holiness is a saint, I have positive trust and reverence in you the Indians, if the cheque is nat Jenuine, I may loose some money, but I can't loose good people like you" —"ಭಾರತ ದೇಶ ಬುದ್ಧ ದೇವನ ಜನ್ಮಭೂಮಿ, ನೀವು ಪುಣ್ಯ ರಾಷ್ಟ್ರದ ಜನ, ಸ್ವಾಮೀಜಿಯವರು ಯೋಗಿಗಳಾಗಿದ್ದಾರೆ, ನೀವು ಕೊಟ್ಟ ಚೆಕ್ ಮೋಸದ್ದಿದ್ದರೆ, ನಾನು ಕೇವಲ ಹಣವನ್ನು ಕಳೆದುಕೊಳ್ಳಬಹುದು. ಆದರೇನಂತೆ? ನಿಮ್ಮನ್ನು ಮಾತ್ರ ಖಂಡಿತ ಕಳೆದುಕೊಳ್ಳಲಾರೆ" ಎಂದು ಉತ್ತರಿಸಿದಳು. ಇದನ್ನು ಕೇಳಿದೊಡನೆ ನಾವು ಕ್ಷಣ ಹೊತ್ತು ಸುಮ್ಮನಾದೆವು. ಭಾರತೀಯರನ್ನು ಈ ಜನ ಎಷ್ಟು ಗೌರವದಿಂದ ಪ್ರೀತಿಸುವರಲ್ಲಾ ಎಂದು ವಿಸ್ಮಯಾನಂದವಾಯಿತು. ಹಣವನ್ನು ಪಡೆದೆವು. ನಮಗೆ ಪುನಃ ವಂದಿಸಿದಳು. ನಮ್ಮ ಕೈಚೀಲದಲ್ಲಿದ್ದ ಕೆಲವು ಹಣ್ಣುಗಳನ್ನು ತೆಗೆದುಕೊಂಡು ನಾವು ಮಹಿಳೆಗೂ ಕ್ಯಾಶಿಯರನಿಗೂ ಆಶೀರ್ವಾದ ಕೊಟ್ಟೆವು. ಕೃತಜ್ಞತೆಯ ಭಾವದಿಂದ ನಮ್ಮ ಕಣ್ಣು ನೀರಿಟ್ಟವು. ನಮ್ಮನ್ನು ಓಸಾಕಾ ಸ್ಟೇಶನ್ನಿಗೆ ಕರೆದುಕೊಂಡು ಹೋಗಿ ತಿಕೀಟ ತೆಗೆಯಿಸಿ ಸುರಕ್ಷಿತವಾಗಿ ಕ್ಯೂಟೋ ಮುಟ್ಟುವಂತೆ ವ್ಯವಸ್ಥೆ ಮಾಡಿಬರಬೇಕೆಂದು ಹೇಳಿ, ತಮ್ಮ ಸೇವಕನನ್ನು ನಮ್ಮೊಡನೆ ಕಳಿಸಿಕೊಟ್ಟಳು. ಈ ಘಟನೆ ನಮ್ಮ ಮನದಲ್ಲಿ ಚಿರಸ್ಮರಣೀಯವಾಗಿ ಉಳಿಯಿತು.

## ಜಪಾನಿನ ಇಂದ್ರಲೋಕ ಟೋಕಿಯೊ (Tokyo)

ದಿನಾಂಕ ೨೨, ಗುರುವಾರ-ಕ್ಯೂಟೋದಿಂದ ಟೋಕಿಯೋಕ್ಕೆ ಜಗತ್ತಿನಲ್ಲಿಯೇ ಅತಿ ಹೆಚ್ಚು ವೇಗದ ಬುಲೆಟ್ ಟ್ರೇನ (Bullet Trian) ದಲ್ಲಿ ಪ್ರಯಾಣ ಬೆಳೆಸಿದೆವು. ಗಂಟೆಗೆ ೧೨೦ ಮೈಲು ವೇಗ. ಆದರೂ ಒಳಗೆ ಸಪ್ಪಳ ಕೇಳದಂತೆ ವ್ಯವಸ್ಥೆ. ವಿಮಾನ ದಲ್ಲಿದ್ದಂತೆ ಆಸನಗಳ ಜೋಡಣೆ. ನಮ್ಮ ರೈಲುಗಳಂತೆ ಬಿಡಿ ಬಿಡಿ ಡಬ್ಬಿಗಳಲ್ಲ. ಇಡೀ ರೈಲು ಒಂದೇ ಬೋಗಿಯಾಗಿತ್ತು. ಏಳೆಂಟುನೂರು ಜನ ಪ್ರಯಾಣಿಕರಿಗೆ ಸುಖ ಪ್ರವಾಸ. ರೈಲಿನಲ್ಲಿಯೇ ಊಟ ಚಹ ವ್ಯವಸ್ಥೆ ಮಾಡಿದ್ದರು. ನಾವು ನಮ್ಮ ನಿಯಮ ದಂತೆ ಎಲ್ಲಿಯೂ ಏನೂ ತೆಗೆದುಕೊಳ್ಳುತ್ತಿರಲಿಲ್ಲ. ಅನೇಕರು ಹಣ್ಣುಗಳನ್ನಾದರೂ ತೆಗೆದುಕೊಳ್ಳಲು ನಮಗೆ ಒತ್ತಾಯಿಸಿದರು. ಸ್ನಾನಮಾಡಿಯೇ ತೆಗೆದುಕೊಳ್ಳಬೇಕೆಂಬ ನಮ್ಮ ಧರ್ಮದ ಆಚಾರ ಪದ್ಧತಿಯನ್ನು ಅವರಿಗೆ ಹೇಳಿ ಸಮಾಧಾನಪಡಿಸುತ್ತಿದ್ದೆವು. ಈ ರೈಲು ಕೇವಲ ೨||| ಘಂಟೆಯಲ್ಲಿ ೩೫೦ ಮೈಲು ದೂರದ ದಾರಿ ಕ್ರಮಿಸಿತು. ಮಧ್ಯದ ನಿಲ್ದಾಣಗಳಲ್ಲಿ ಕೆಲವೇ ನಿಮಿಷ ನಿಲ್ಲುತ್ತಿತ್ತು. ವಿದ್ಯುತ್ ಚಾಲಿತ ಬಾಗಿಲು ಗಳು. ತಾವೇ ತೆರೆದು ತಾವೇ ಮುಚ್ಚಿಕೊಳ್ಳುತ್ತಿದ್ದವು. ಅಷ್ಟರಲ್ಲಿಯೇ ಇಳಿಯುವದು ಹತ್ತುವದು ಆಗಬೇಕು. ನೂಕು ನುಗ್ಗಲಂತೂ ನಾವು ಕಾಣಲೇ ಇಲ್ಲ. ಪ್ರತಿಯೊಬ್ಬ ರಲ್ಲಿಯೂ ಪರಸ್ಪರ ತಿಳಿವಳಿಕೆ, ಶಿಸ್ತು, ಅಚ್ಚುಕಟ್ಟುತನ, ಜಪಾನೀ ಜನರು ಈ ರೈಲು ಹೋಗುವದನ್ನು ನೋಡಿ ತಮ್ಮ ವಾಚು ಸರಿಪಡಿಸಿಕೊಳ್ಳುತ್ತಾರಂತೆ. ಈ ಸ್ಥಿತಿ ನಮ್ಮ ಭಾರತದ ರೈಲುಗಳಿಗೆ ಎಂದು ಬರುವದೋ ಎಂದು ನಮಗೆ ವಿಷಾದವನ್ನಿಸಿತು.

### ಸೌಂದರ್ಯದ ಅಧಿದೇವತೆ ಟೋಕಿಯೊ

ಟೋಕಿಯೋದ ಬೌದ್ಧ ಸಂಘದ ಅಧ್ಯಕ್ಷರಾದ ನಿಕ್ಕೊ ನಿವ್ಯಾನೋ (Nikkyo Niwano) ಅವರ ಆಮಂತ್ರಣದ ಮೇರೆಗೆ ನಾವು ಟೋಕಿಯೊ ತಲುಪಿದೆವು. ಪ್ರಪಂಚದಲ್ಲೇ ಸುಂದರ ಪಟ್ಟಣಗಳಲ್ಲೊಂದು ಹಾಗೂ ದೊಡ್ಡ ನಗರವೆಂದು ನಾವು ಪುಸ್ತಕದಲ್ಲಿ ಓದುತ್ತಿದ್ದೆವು. ಕಣ್ಣಾರೆ ಕಂಡು ದಿಙ್ಮೂಢರಾದೆವು. ೧ ಕೋಟಿ ೧೦ ಲಕ್ಷ ಜನಸಂಖ್ಯೆ. ಅಲ್ಲಿಯ ೫೦-೬೦ ಅಂತಸ್ತಿನ ಮನೆಗಳು ಲೆಕ್ಕವಿಲ್ಲದಷ್ಟು. ತೀರ ಚಿಕ್ಕ ಕಟ್ಟಡವೆಂದರೂ ೧೫-೨೦ ಅಂತಸ್ತುಗಳಾಗಿದ್ದವು. ರಸ್ತೆಯಲ್ಲಿ ಜನರೇ ಕಾಣುತ್ತಿರಲಿಲ್ಲ. ಬರೀ ಕಾರುಗಳು. ಸಹಸ್ರಾರು ಕಾರುಗಳ ವಾಹನಗಳೇ ಅಲ್ಲಿಯ ಜನಸಂದಣಿ. ಇಷ್ಟೊಂದು ಕಲ್ಪನಾ ಲೋಕ ಮೀರಿಸುವ ಬೃಹತ್‌ಗಾತ್ರದಲ್ಲಿ ಆ ಪಟ್ಟಣ ಬೆಳೆದಿದ್ದರೂ ಎಲ್ಲಿಯೂ ಹೊಲಸು, ಕೊಳಚೆ, ಹಾಳೆಯ ಕಸದ ಚೂರುಗಳು, ತಿಂದು ಚಲ್ಲಿದ ಸಾಮಾನು, ಧೂಳಿನ ಜಾಡುಗಳು ಕಾಣಿಸಲಿಲ್ಲ. ಎಲ್ಲವೂ ಶುಭ್ರ, ಸ್ವಚ್ಛ, ನಿರ್ಮಲ, ಇದೇ ವಿಚಿತ್ರ. ರಾತ್ರಿಕಾಲದಲ್ಲಿ ಟೋಕಿಯೋ ನೋಡಿದರಂತೂ ಕವಿಗಳು ಕಾವ್ಯದಲ್ಲಿ ವರ್ಣಿಸಿದ ಸ್ವರ್ಗೀಯ ಕಲ್ಪನಾಲೋಕವನ್ನೂ ಮೀರಿಸುವಂತೆ ಭಾಸ. ಇಂದ್ರಜಾಲದಂತೆ

ವಿದ್ಯುತ್ತಿನ ಉಪಯೋಗ. ದಾರಿಗಳೂ, ಸೌಧಗಳೂ ಬಣ್ಣ ಬಣ್ಣದ ಬೆಳಕಿನ ಚಲಿಸುತ್ತಿರುವ ಚೈತ್ರಯಾತ್ರೆಯಂತೆ ಕಂಗೊಳಿಸುವವು. ಇಡೀ ಜಪಾನದ ದಾರಿಯಲ್ಲಿ ನಿಂತು ಹರಟೆ ಹೊಡೆಯುವದು, ಕಟ್ಟೆಯಮೇಲೆ ಕುಳಿತು ಕಾಲಹರಣ ಮಾಡುವದು, ಎಲೆ ಅಡಿಕೆಯನ್ನು ಜಗಿದಲ್ಲೇ ಪಿಚ್ಚನೆ ಉಗುಳುವದು, ಬೀಡಿ ಸಿಗರೇಟುಗಳನ್ನು ಬೀಸಾಡುವದು ಮೊದಲಾದ ಅಸಹ್ಯ ದೃಶ್ಯಗಳನ್ನು ನಾವು ಎಲ್ಲಿಯೂ ಕಾಣಲಿಲ್ಲ.

## ಆಧುನಿಕ ಸುಂದರ ನಗರ

ಟೋಕಿಯೋ ರಾಜಕೀಯವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಜಗತ್ತಿನ ಗಮನ ಸೆಳೆದ ಅತ್ಯಾಧುನಿಕ ಮಾದರಿಯ ಪಟ್ಟಣ. ಅಗ್ನಿ ಆಹುತಿ, ಭೂಕಂಪ, ಎರಡನೇ ಮಹಾಯುದ್ಧದ ಬಾಂಬ ದಾಳಿಗಳಿಂದ ಈ ಪಟ್ಟಣ ಭಸ್ಮವಾಗಿ ಮತ್ತೆ ಮೈ ಕೊಸರಿ ಎದ್ದಿದೆ. ೧೯೨೩ರ ಸಪ್ಟಂಬರ ೧ ರಂದು ಸಂಭವಿಸಿದ ಭೂಕಂಪದಲ್ಲಿ ೭೪,೦೦೦ ಜನರು ಒಂದೇ ದಿನಕ್ಕೆ ಆಹುತಿಯಾದರಂತೆ. ಎರಡನೇ ಮಹಾಯುದ್ಧ ಇದಕ್ಕೂ ಹೆಚ್ಚು ಜನರನ್ನು ನುಂಗಿತು. ಬಾಂಬಗಳ ಸುರಿಮಳೆಯಿಂದ ಪಟ್ಟಣ ನಾಶವಾಯಿತು. ಮತ್ತೆ ವಿನಾಶದ ಅವಶೇಷವೂ ಉಳಿಯದಂತೆ ರೂಪುಗೊಂಡುದು ಜಪಾನೀಯರ ಕರ್ತೃತ್ವ ಶಕ್ತಿಯ ಸಾಹಸ ಪ್ರವೃತ್ತಿಯ ಸಂಕೇತ. ಈ ಒಂದೇ ನಗರ ಅನೇಕ ವಿಶ್ವ ವಿದ್ಯಾಲಯಗಳ ವಸ್ತು ಸಂಗ್ರಾಹಾಲಯಗಳ ಹಾಗೂ ಲೈಬ್ರರಿಗಳ ಕೇಂದ್ರವೇ ಆಗಿದೆ. ಟೋಕಿಯೋ ರಾಷ್ಟ್ರೀಯ ವಸ್ತು ಸಂಗ್ರಹಾಲಯ (Tokyo National Museum). ಆಧುನಿಕ ಕಲೆಯ ರಾಷ್ಟ್ರೀಯ ವಸ್ತುಸಂಗ್ರಹಾಲಯ (The National Museum of Modern Art), ರಾಜಧಾನಿಯ ಕುಶಲ ಕಲೆಗಳ ಸಂಗ್ರಹಾಲಯ (The Metro Politan Fine Art Gallery) ಅಲ್ಲದೆ ವೈಜ್ಞಾನಿಕ ಪ್ರದರ್ಶನಗಳನ್ನೂ ಕಾಣಬಹುದು. ನಮಗೆ ದೊರೆತುದು. ತೀರ ಅಲ್ಪ ಸಮಯ. ಅಷ್ಟರಲ್ಲೇ ಸಭೆ, ಸಮಾರಂಭ, ಸತ್ಕಾರಕೂಟಗಳು ನಮ್ಮ ಸಮಯದ ಬಹುಭಾಗವನ್ನು ಖರ್ಚುಮಾಡಿದವು. ಜಗತ್ತಿನಲ್ಲಿಯೇ ಅತಿಸುಂದರವಾದ ಯೂನೊ (Uno) ಹಾಗೂ ಶೀಬಾ (Shiba) ಉದ್ಯಾನವನಗಳನ್ನು ನೋಡಲು ಕನಿಷ್ಠ ಹತ್ತಾರು ದಿನಗಳಾದರೂ ಬೇಕಾದೀತು. ಯೂನೋ ಒಂದರಲ್ಲಿಯೇ ವೈಜ್ಞಾನಿಕ ವಸ್ತುಸಂಗ್ರಹಾಲಯ, ಕಲಾ ಸಂಗ್ರಹಾಲಯ (The Art Gallery), ವಿಜ್ಞಾನ ಸಂಸ್ಥೆ, ಗ್ರಂಥಾಲಯ (The Veno Library) ರಾಷ್ಟ್ರೀಯ ವಸ್ತು ಸಂಗ್ರಹಾಲಯ ಹಾಗೂ ಪ್ರಾಣಿ ಸಂಗ್ರಹಾಲಯ, (The Veno Zoo) ಗಳು ಇವೆ. ಇವೆಲ್ಲವೂ ಜಪಾನಿಗರ ನೂರಾರು ವರ್ಷಗಳ ಪರಿಶ್ರಮದ ಫಲವಾಗಿ ಬೆಳೆದು ನಿಂತಿವೆ. ಕಲೆಗಾರರ ಕಲಾವೈಭವದೊಂದಿಗೆ ವಿಜ್ಞಾನದ ಅಗಾಧ ಸಾಧನೆಗಳನ್ನು ಇಲ್ಲಿ ಕಾಣಬಹುದು. ಇತಿಹಾಸದ ವಿವಿಧ ಮುಖಗಳನ್ನು ಪ್ರಾಚ್ಯಕೋಶಾಗಾರದಲ್ಲಿ ದರ್ಶಿಸಬಹುದು. ಉದ್ಯಾನದ ನೂರಾರು ಕಾರಂಜಿಗಳ ಶಿಲಾಮೂರ್ತಿಗಳ ಸೊಬಗನ್ನು

ಕಾಣುತ್ತ ವಿಹರಿಸಬಹುದು. ಇಲ್ಲವೇ ನಗರದ ಎತ್ತರದ ಸ್ತಂಭ (T. V. Tower) ಏರಿ ನಗರವನ್ನು ವೀಕ್ಷಿಸಬಹುದು. ಒಟ್ಟಿನಲ್ಲಿ ಟೋಕಿಯೋ ಆಧುನಿಕ ಸುಂದರ ನಗರ. ಅದಕ್ಕೆ ಇನ್ನೂ ಭವಿಷ್ಯವಿದೆ. ಬೆಳವಣಿಗೆಗೆ ಅವಕಾಶವಿದೆ.

**ಮಾಯಾದ್ವಾರಗಳು**

ಟೋಕಿಯೋದ ಬೌದ್ಧ ಸಂಘದವರು ನಮ್ಮನ್ನು ಅಲ್ಲಿಯ ಅತ್ಯಾಧುನಿಕ 'ಇಂಪೀರಿಯಲ್' ಭವನದಲ್ಲಿ ಇಳಿಸಿದರು. ಕ್ಯೂಟೋ ಹಾಗೂ ಟೋಕಿಯೋಗಳಲ್ಲಿ ನಾವಿಳಿದುಕೊಂಡ ರೂಮುಗಳ ಬಾಗಿಲುಗಳು ವಿದ್ಯುತ್ತಿನ ಜೋಡಣೆಯಿಂದ ಸ್ವಯಂಚಾಲಿತವಿದ್ದವು. ಅಂದರೆ ಆ ಕೋಣೆಗಳನ್ನು ಪ್ರವೇಶಿಸಲು ಹೋದಾಗ ಥಕ್ಕನೆ ಅವು ತಾವಾಗಿಯೇ ತೆರೆಯುತ್ತಿದ್ದವು. ಒಳಗಡೆ ಹೋದಕೂಡಲೇ ಮುಚ್ಚಿಕೊಳ್ಳುತ್ತಿದ್ದವು. ನಾವು ಕೈಯಿಂದ ಮುಟ್ಟದೇ ಅವು ತಾವೇ ತೆಗೆದು ಮತ್ತೆ ಹೋದ ನಂತರ ತಾವೇ ಮುಚ್ಚಿಕೊಳ್ಳುತ್ತಿದ್ದವು. ಇದೊಂದು ವಿದ್ಯುತ್ತಿನ ಕುಶಲ ಜೋಡಣೆ. ನೆಲದಲ್ಲಿಯೇ ನಮ್ಮ ಕಾಲು ನಡಿಗೆಯ ಭಾರಕ್ಕೆ ಹೋಗುವಂತೆ ಬಾಗಿಲುಗಳಿಗೆ ಸಂಪರ್ಕ ಕೂಡ್ರಿಸಲಾಗಿತ್ತು.

ಅಲ್ಲಿಯ ವಿಶ್ರಾಂತಿ ಭವನದಲ್ಲಿ ರೂಮುಗಳು ಅತ್ಯಾಧುನಿಕ ಶೈಲಿಯಿಂದ ಅರಮನೆಯಂತೆ ರಂಜಿಸುತ್ತಿದ್ದವು. ಟೆಲಿವ್ಹಿಜನ್, ರೇಡಿಯೋ, ಫೋನ ಮುಂತಾದ ವ್ಯವಸ್ಥೆಯನ್ನು ಕೋಣೆಗಳಲ್ಲಿಯೇ ಇರುತ್ತಿದ್ದವು. ಏರ್‌ಕಂಡೀಶನ್ಡ ರೂಮುಗಳೇ ಜಾಸ್ತಿ. ಕಸಗೂಡಿಸಲು ಕೂಡ ಪರಿಶ್ರಮ ಪಡಬೇಕಾಗಿಲ್ಲ. ಕಸಗೂಡಿಸುವ ಯಂತ್ರದ ಬಟನ್ ಅಲ್ಲಿಯ ಸೇವಕ ಒತ್ತಿದನೆಂದರೆ ಆಯ್ತು, ಆ ಯಂತ್ರದ ಕಸಗೂಡಿಸುವದು ಮಾತ್ರವಲ್ಲ ತನ್ನ ಹೊಟ್ಟೆಯಲ್ಲಿ ಕಸವನ್ನು ತುಂಬಿಕೊಳ್ಳುತ್ತಿತ್ತು.

**ಫ್ಯುಮನ್ (Fuman) ಪ್ರಾರ್ಥನಾ ಮಂದಿರ**

ಬೌದ್ಧರ ಪ್ರಾರ್ಥನಾ ಮುದಿರ ಫ್ಯುಮನ್ ಹಾಲ್ (Fuman Hall) ಅಗಾಧವಾದುದು. ಆ ಬೌದ್ಧಮುದಿರಕ್ಕೆ ಕೋಟ್ಯಾವಧಿ ರೂಪಾಯಿ ಖರ್ಚು ಮಾಡಿ ಕಟ್ಟಿದ ಎಂಟು ಅಂತಸ್ತಿನ ಅರ್ಧಗೋಲಾಕೃತಿಯ ಅತಿ ಸುಂದರ ಸೌಧ, ದಿಲ್ಲಿಯ ಪಾರ್ಲಿಮೆಂಟು ಭವನಕ್ಕಿಂತಲೂ ಭವ್ಯ. ಅದರ ಮೇಲೆ ಅತೀ ಎತ್ತರದ ಗೋಲಾಕೃತಿಯ ಕಲಶ. ಒಳಗಿನ ಪ್ರಾರ್ಥನಾಮುದಿರವೇ ಸುಮಾರು ನಾಲ್ಕು ಅಂತಸ್ತು ಎತ್ತರದ ಭವ್ಯ ಮಂದಿರ. ಅದೊಂದಕ್ಕೆ ಲಕ್ಷಾವಧಿ ರೂಪಾಯಿ ಖರ್ಚು ಮಾಡಿದಂತೆ ವೈಭವದಿಂದ ಕಾಣುತ್ತಿತ್ತು. ಅಲ್ಲಿಯ ಆಸನಗಳು, ಎತ್ತರವಾದ ಮಂಟಪ, ಬುದ್ಧಮೂರ್ತಿ ಇವು ಟೋಕಿಯೋದ ಶ್ರೀಮಂತಿಕೆಯ ದ್ಯೋತಕವಾಗಿದ್ದವು.

ಅಲ್ಲಿ ಸುಸಜ್ಜಿತವಾದ ಸಾಲಂಕೃತ ಆಸನಗಳ ಮೇಲೆ ನಮ್ಮೆಲ್ಲರನ್ನು ಕುಳ್ಳಿರಿಸಿದರು. ಐದು ವರ್ಷದ ಒಂದೇ ಸಮ ಎತ್ತರದ ೧೫೦ ಬಾಲಿಕೆಯರು ನಮಗೆ ಮಾಲೆ ಅರ್ಪಿಸುವ ದೃಶ್ಯ ಕಲಾಯುತವೂ ಮನಮೋಹಕವೂ ಆಗಿತ್ತು. ಅನಂತರ ನಮ್ಮೆಲ್ಲರನ್ನು

ಬೌದ್ಧ ಸಂಘದ ಅಧ್ಯಕ್ಷರು ಸ್ವಾಗತಿಸುತ್ತ–ನಾವೆಲ್ಲರೂ ಬಂಧುಗಳಂತೆ ವರ್ತಿಸೋಣ. ಪ್ರಪಂಚಕ್ಕೆ ಶಾಂತಿದೊರೆಯಲು ಏನೇನು ಬೇಕೋ ಅವೆಲ್ಲವುಗಳಿಗೆ ಅನುಕೂಲವಾಗಿ ಹೊಂದಿಕೊಂಡು ಹೋಗೋಣ. ನಮ್ಮ ಸಂಸ್ಥೆಯ ಮೇಲೆ ನಿಮ್ಮೆಲ್ಲರ ಆತ್ಮೀಯತೆ ಮಮತೆ ನಿರಂತರವಾಗಿಯೂ ಉಳಿಯಲಿ" ಎಂಬ ಭಾವನೆಯನ್ನು ವ್ಯಕ್ತಗೊಳಿಸಿದರು. ಅನಂತರ ಹಾಯಸ್ಕೂಲು ಕಾಲೇಜಿನ–ವಿದ್ಯಾರ್ಥಿ–ವಿದ್ಯಾರ್ಥಿನಿಯರಿಂದ ಕೆಲವು ನಾಟಕಗಳನ್ನು ವಿವಿಧ ವಿನೋದಾವಳಿಗಳನ್ನೂ ಪ್ರದರ್ಶಿಸಿದರು. ನಮ್ಮನ್ನು ನಗೆಗಡಲಿನಲ್ಲಿ ತೇಲಿಸಿ ಕಣ್ಮನಗಳನ್ನು ಸಂತೃಪ್ತಿಪಡಿಸಿದರು. ೪ ತಾಸಿನ ವರೆಗೂ ನಡೆದ ಈ ಕಾರ್ಯಕ್ರಮ ನಮಗೆ ತಿಳಿಯದಂತೆ ಕೊನೆಗೊಂಡಿತು. ಅಲ್ಲಿ ನೆರೆದ ಸಹಸ್ರಾರು ಜನ ಮಾನ್ಯರು, ಮಹಿಳೆಯರು ತಮ್ಮ ಜಪಾನಿ ಪದ್ಧತಿಯ ವಂದನೆಗಳನ್ನರ್ಪಿಸುತ್ತ, ಮೈಯನ್ನು ತಬ್ಬಿ, ಕೈ ಕುಲುಕಿ, ತುಂಬಿದ ಹೃದಯದಿಂದ ಮಾತು ಮೌನವಾಗಿ, ಪ್ರಾಂಜಲ ಮನಸ್ಸಿನಿಂದ ನಮಗೆಲ್ಲ ಶುಭಾಶಯಗಳನ್ನು ಕೋರಿ ಬೀಳ್ಕೊಟ್ಟರು. ನಾವು ಇವೆಲ್ಲವನ್ನು ಶಾಂತ ಗಾಂಭೀರ್ಯದಿಂದ ನಿರೀಕ್ಷಿಸುತ್ತ ಭಾವತುಂಬಿ ಮಂದಿರದ ಹೊರಗೆ ಬಂದೆವು.

### ಭಾರತೀಯರ ಬಗ್ಗೆ ಪ್ರೇಮ

ಟೋಕಿಯೋದ ನಮ್ಮೆಲ್ಲರ ಸತ್ಕಾರ ಸಭೆಗೆ ೮–೧೦ ಸಾವಿರಕ್ಕೂ ಮೇಲ್ಪಟ್ಟು ಜನರು ಆಗಮಿಸಿದ್ದರು. ಭಾರತದವರ ಮೇಲೆ ಅವರಿಗೆ ಎಲ್ಲಿಲ್ಲದ ಪ್ರೇಮ, ಅಭಿಮಾನ, ಭಾರತವೆಂದರೆ ಧರ್ಮ, ಆಧ್ಯಾತ್ಮ ಯೋಗಗಳ ಕೇಂದ್ರ ಭೂಮಿಯೆಂಬ ಗೌರವ ಅವರಲ್ಲಿ ಮನೆ ಮಾಡಿಕೊಂಡಿದೆ. ಅಲ್ಲಿಯ ಸಾವಿರಾರು ಸ್ತ್ರೀ ಪುರುಷರು ತಮ್ಮ ಜಪಾನೀ ಪದ್ಧತಿಯ ನಮಸ್ಕಾರ ಮಾಡುತ್ತ, ನಮ್ಮ ಬಟ್ಟೆಯನ್ನು ಹಿಡಿದು ಮೈಯನ್ನು ತಟ್ಟಿ ಕೈಕುಲಕಿಸುತ್ತ ವಂದಿಸುವ ದೃಶ್ಯ ತುಂಬ ಆತ್ಮೀಯವಾಗಿತ್ತು. ಜಪಾನೀ ಸ್ತ್ರೀಯರಲ್ಲಿ ನಾಚುಕೆ, ಅಂಜಿಕೊಳ್ಳುವ, ಇಲ್ಲವೆ ಮುದುಡಿಕೊಳ್ಳುವ ಸ್ವಭಾವ ಎಲ್ಲಿಯೂ ಕಾಣಲಿಲ್ಲ. ಅವರು ಬಿಚ್ಚು ಮನಸ್ಸಿನಿಂದ ತಾವಾಗಿ ಬಂದು ಕೈಕುಲುಕಿಸಿ, ವಂದನೆ ಅರ್ಪಿಸಿ, ಧನ್ಯವಾದಗಳನ್ನು ಹೇಳುವಾಗ ಅವರ ಪರಿಶುದ್ಧ ನಿರ್ಮಲ ಭಾವ ತಾನೇತಾನಾಗಿ ನಮಗೆ ವ್ಯಕ್ತವಾಗುತ್ತಿತ್ತು. ಪ್ರಾಮಾಣಿಕತೆಗೆ ಜಪಾನದೇಶ ಮುಂದುವರೆದದೇಶವೆಂದು ಹಿರಿಯರು ಹೇಳಿದ ನುಡಿ ಪ್ರತ್ಯಕ್ಷ ನೋಡಿ ಮನಸ್ಸಿಗೆ ಸಮಾಧಾನವಾಯ್ತು. ಇವರಲ್ಲಿಯ ರಾಷ್ಟ್ರಾಭಿಮಾನವೂ ಅದೇ ರೀತಿಯಾಗಿ ಕಂಗೊಳಿಸುತ್ತಿತ್ತು.

## ಜಪಾನು ಮುಂದುವರಿದ ರಾಷ್ಟ್ರವೇಕೆ?

ಕರ್ತವ್ಯ ದಕ್ಷತೆ, ಪ್ರಾಮಾಣಿಕತೆ, ಅಚ್ಚುಕಟ್ಟುತನ, ಉದ್ಯೋಗ ಶೀಲತೆ, ಪರಸ್ಪರ ಸಹಕಾರ, ಸಮಯ ಪರಿಪಾಲನೆ, ಉತ್ಸಾಹ, ಸಾಹಸ, ಸ್ವಚ್ಛತೆ, ಶಿಸ್ತು ಇವೇ ಗಾತ್ರದಲ್ಲಿ

ಕಿರಿದಾದ ಜಪಾನ ದೇಶವನ್ನು, ಪಾತ್ರದಲ್ಲಿ ಹಿರಿದಾಗಿ ಮಾಡಿದ ಸದ್ಗುಣಗಳು ಈ ಗುಣಗಳು ಯಾವವೂ ನಮಗೆ ಹೊಸದಲ್ಲ. ಇವೆಲ್ಲವೂ ನಮಗೆ ಗೊತ್ತು. ಆದರೆ ನಮ್ಮ ನಮ್ಮ ಕಾರ್ಯಾಚರಣೆಯಲ್ಲಿ ಎಷ್ಟರ ಮಟ್ಟಿಗೆ ಅಳವಡಿಸಿಕೊಂಡಿರುವೆವೋ ದೇವರೇ ಬಲ್ಲ. ಜಪಾನಿಗರ ಸತತೋದ್ಯೋಗ ಪ್ರಾಮಾಣಿಕತನ, ಕರ್ತವ್ಯನಿಷ್ಠೆ ಮೊದಲಾದವುಗಳು ನಮ್ಮ ದೇಶದಲ್ಲಿಯೂ ಕೃತಿಯಲ್ಲಿ ಬಂದರೆ ನಮ್ಮ ದೇಶ ಸರ್ವವಿಧದಿಂದಲೂ ಪ್ರಗತಿ ಸಾಧಿಸಬಲ್ಲದೆಂಬ ಭಾವನೆ ನಮಗೆ ಜಪಾನ ಸಂಚಾರದಲ್ಲಿ ಉಂಟಾಗುತ್ತಿತ್ತು. ಅದೆಂದು ಬರುತ್ತದೆಯೋ ನೋಡಬೇಕು.

### ಜಪಾನಿನ ಮಹಿಳೆ

ಜಪಾನಿನ ಪ್ರತಿಯೊಂದು ಸಾಮಾಜಿಕ ರಂಗದಲ್ಲಿಯೂ ಮಹಿಳೆ ಪುರುಷನಿಗೆ ಸರಿಸಾಟಿಯಾಗಿ ನಿಂತು ಕಾರ್ಯ ಪ್ರವೃತ್ತಳಾದದ್ದು ನಮಗೆ ಸ್ಪಷ್ಟವಾಗಿ ಕಂಡುಬಂತು. ಅಲ್ಲಿ ಅವಳು ಗೃಹಿಣಿಯೂ ಅಹುದು. ಆದರ್ಶ ದೇವತೆಯೂ ಅಹುದು. ದೇಶದ ಏಳಿಗೆಯ ಪ್ರತಿಯೊಂದು ಮಜಲುಗಳಲ್ಲಿಯೂ ತಾನು ನೆರವಾಗಬಲ್ಲೆನೆಂಬ ನಂಬಿಗೆ ವಿಶ್ವಾಸ ಅವಳಿಗಿದೆ. ನಮ್ಮ ದೇಶದಲ್ಲಿ ಮಹಿಳೆಯರ ವ್ಯಕ್ತಿತ್ವಶಕ್ತಿ (Man Power) ಸರಿಯಾಗಿ ವಿನಿಯೋಗವಾಗುತ್ತಿಲ್ಲ. ಕಾರಣ ಅವಳು ದೇಶಸೇವೆಗಾಗಿ ಸಮಾಜದ ಏಳ್ಗೆಗಾಗಿ ಮುಂದೆ ಬಂದರೆ ಎಲ್ಲಿ ಅವಳ ಗೃಹಿಣಿ ಪಟ್ಟಕ್ಕೆ ಧಕ್ಕೆ ಬರುತ್ತದೆಯೋ ಎಂಬ ಸಂಶಯ ಇಲ್ಲಿ ಕೆಲವರಿಗೆ ಉಂಟು. ಆದರೆ ಅವಳ ಆದರ್ಶ ಶೀಲತೆ, ಚಾರಿತ್ರ್ಯ ಸಂಪನ್ನತೆ ದೇಶಸೇವೆಯೆಂಬ ಒರೆಗಲ್ಲಿಗೆ ಹಚ್ಚಿ ತಿಕ್ಕಿದಾಗಲೇ ಇನ್ನೂ ಸ್ಫುಟವಾಗಬಲ್ಲುದು. ಜಪಾನಿನ ಮಹಿಳೆಯರು ನಮ್ಮೊಂದಿಗೆ ಮಾತನಾಡುವಾಗ, ವೀರಶೈವ ಹಾಗೂ ಹಿಂದೂ ಧರ್ಮದ ಆಚಾರ ವಿಚಾರಗಳನ್ನು ಕೇಳುವಾಗ ಅವರಲ್ಲಿ ಎಳ್ಳಷ್ಟು ಅಸಹಜ ನಾಚಿಕೆ, ಭಯ, ಮುದುಡಿ ನಿಲ್ಲುವ ಸ್ವಭಾವ ನಮಗೆ ಕಂಡು ಬರಲಿಲ್ಲ. ಹೀಗಾಗಿ ಅಲ್ಲಿ ಯಾವುದೇ ವೈಷಯಿಕ ವಿಚಾರಗಳು ಬರಲು ಆಸ್ಪದ ಉಳಿಯುವದಿಲ್ಲ. ಇದೇ ಅವರ ಚಾರಿತ್ರ್ಯ, ಸಂಪನ್ನತೆ ಎಂಬುದು ಕಂಡು ಬಂದಿತು. ಆಫೀಸುಗಳಲ್ಲಿ, ಪೇಟೆಯಲ್ಲಿ, ಅಂಗಡಿಗಳಲ್ಲಿ, ಕಾರಖಾನೆಗಳಲ್ಲಿ, ವಿದ್ಯಾಮಂದಿರಗಳಲ್ಲಿ ಪ್ರತಿಯೊಂದು ಕಾರ್ಯರಂಗದಲ್ಲಿಯೂ ಜಪಾನಿನ ಸ್ತ್ರೀ ನಿರತಳಾಗಿದ್ದಾಳೆ. ಟ್ರಕ್ಕುಗಳನ್ನೂ ಸಹ ಅವರು ನಡೆಸುತ್ತಿದ್ದುದನ್ನು ನಾವು ನೋಡಿ ಚಕಿತರಾಗಿ ಹೋದೆವು.

### ಅತಿಥಿ ದೇವೋಭವ

ತಮ್ಮ ದೇಶಕ್ಕೆ ಆಗಮಿಸಿದ ವ್ಯಕ್ತಿಗಳಿಗೆ, ಆದರೋಪಚಾರಗಳನ್ನು ನೀಡಿ, ಅವರಿಗೆ ಸರಿಯಾದ ಮಾರ್ಗದರ್ಶನ ನೀಡುವ ಭಾವನೆ ನಮಗೆ ಅಲ್ಲಿ ಕಂಡು ಬಂದಿತು. ಆತಿಥ್ಯ ಸತ್ಕಾರದಲ್ಲಿ ಭಾರತೀಯರಂತೆ ಅವರೂ ಮಿಗಿಲಾಗಿದ್ದಾರೆ. ನಾವು ಏನು ಬೇಕಾದ್ದನ್ನು ಕೇಳಿದರೂ ಅವರು ಮುಖದ ಮೇಲೆ ಅಸಂತೋಷ ಭಾವನೆ ತೋರದೇ ನಮ್ಮ ತೊಂದರೆ

ಗಳನ್ನು ನಿವಾರಿಸುವಲ್ಲಿ ನೆರವಾಗುತ್ತಿದ್ದರು. "ಅತಿಥಿ ದೇವೋಭವ" ಎಂಬ ಸೂತ್ರವನ್ನು ಅವರು ಅರಿಯದಿದ್ದರೂ ಆಚಾರದಲ್ಲಿ ಅನುಸರಿಸಿ ತೋರುತ್ತಿದ್ದರು.

ಜಪಾನದಲ್ಲಿ ಜಾಗೆಗೆ ಬಹಳ ಮಹತ್ವ. ಎಳ್ಳಷ್ಟು ಸಹ ಜಾಗವನ್ನು ಅವರು ಕೆಡಿಸುವದಿಲ್ಲ. ಅದಷ್ಟೇ ಸ್ವಲ್ಪ ಸ್ಥಾನವಿದ್ದರೂ ಅದರ ಸರಿಯಾದ ಉಪಯೋಗ ಅವರು ಪಡೆದುಕೊಳ್ಳುತ್ತಾರೆ.

## ಉಲ್ಲಾಸಪೂರ್ಣ ಆರೋಗ್ಯ

ಜಪಾನದ ಹೆಣ್ಣುಮಕ್ಕಳು ನೋಡಲಿಕ್ಕೆ ಸಣ್ಣ ವಯಸ್ಸಿನಂತೆ ಕಂಡರೂ ಅವರನ್ನು ವಿಚಾರಿಸಿದಾಗ ೪-೬ ಮಕ್ಕಳ ತಾಯಂದಿರೆಂದು ಗೊತ್ತಾಗುತ್ತಿತ್ತು. ಇದರಿಂದ ಅವರು ಪ್ರಕೃತಿಯ ಸ್ವಾಸ್ಥ್ಯದ ಬಗ್ಗೆ ಹೆಚ್ಚು ಕಾಳಜಿ ವಹಿಸುತ್ತಿದ್ದುದು ಕಂಡು ಬರುತ್ತಿತ್ತು. ಪುಟ್ಟ ಮಕ್ಕಳಿಂದ ಹಿಡಿದು ವೃದ್ಧರ ವರೆಗೆ ಒಳ್ಳೆಯ ಆರೋಗ್ಯಕಾಯರಾಗಿ ತೋರುತ್ತಿದ್ದರು. ಮುಖದ ಮೇಲೆ ಚಿಂತೆ, ವ್ಯಾಧಿ ಲಕ್ಷಣ, ವ್ಯಾಕುಲತೆಗಳು ಅಲ್ಲಿ ಕಡಿಮೆ. ಸದಾ ಕಾಲ ಉಲ್ಲಾಸದ ನಗುಮುಖ ಸಂಭ್ರಮದ ಚಟುವಟಿಕೆ ಆರೋಗ್ಯಕರ ಅಭಿವ್ಯಕ್ತಿ. ಬೇಸರ, ನಿಟ್ಟುಸಿರು ಬಳಲಿಕೆಗಳನ್ನು ಅಲ್ಲಿ ಕಾಣಲು ಹುಡುಕುತ್ತ ಹೋಗಬೇಕಾದೀತು.

## ಭಾರತೀಯರ ಬಗ್ಗೆ ಪ್ರೇಮ

ಭಾರತವೆಂದರೆ ಅವರಿಗೆ ಒಂದು ಬುದ್ಧ ಕ್ಷೇತ್ರ. ಹೀಗಾಗಿ ಭಾರತೀಯರೆಂದರೆ ಗುರುಪರಂಪರೆಯುವರೆಂಬ ಭಾವನೆ ಅವರ ಅಂತರಂಗದಲ್ಲಿ ಅರಳಿಕೊಂಡಿದೆ. ಅಲ್ಲದೆ ಭಾರತವೆಂದರೆ ಧರ್ಮ ಅಧ್ಯಾತ್ಮ , ಯೋಗಗಳ ನೆಲೆವೀಡೆಂದೂ; ಸಂತರ, ಸಾಧಕರ, ಶರಣರ, ಆಶ್ರಮವಾಸಿಗಳ ಮೂಲಕೇಂದ್ರವೆಂದೂ ಅವರು ಪರಿಗಣಿಸಿದ್ದಾರೆ. ಈ ಅಭಿಪ್ರಾಯವನ್ನು ನಮ್ಮೆದುರಿಗೆ ಮೇಲಿಂದ ಮೇಲೆ ವ್ಯಕ್ತಪಡಿಸಿದರು. ಅದನ್ನು ನೆನೆದಾಗ ನಮ್ಮ ದೇಶದ ಪುರಾತನ ಸಂಸ್ಕೃತಿ, ಆಧ್ಯಾತ್ಮ , ದೇವಪ್ರೇಮ ಕ್ರಮೇಣ ಕಡಿಮೆಯಾಗುತ್ತ; ನಾಸ್ತಿಕ ಜನಾಂಗ ಮೆಲ್ಲನೆ ತಲೆ ಎತ್ತುತ್ತಿರುವುದರ ನೆನಪು ನಮಗುಂಟಾಗಿ ಕಳವಳವಾಯಿತು. ಈ ವಿಷಯ ಭಾವನೆಯ ಉಚ್ಚಾಟನೆಗೆ ಬದ್ಧಕಂಕಣರಾಗಬೇಕೆಂಬ ಸಂಕಲ್ಪ ಮೂಡಿಬಂದಿತು.

## ನಮ್ಮ ಕಾವಿಬಟ್ಟೆ-ಭಸ್ಮ

ನಮ್ಮ ವಿಶಿಷ್ಟ ವೇಷ ಭೂಷಣಗಳಾದ ಕಾವಿಬಟ್ಟೆ, ಲಿಂಗ, ಕಾವಿಯ ಪೇಟಾ, ರುದ್ರಾಕ್ಷಿ, ಭಸ್ಮ, ಪಾದದ ಕಡಾವುಗೆಗಳನ್ನು ಕಂಡು ಆ ಜನ ಆಶ್ಚರ್ಯಗೊಳ್ಳುತ್ತಿದ್ದರು. ಭಸ್ಮ ಧಾರಣೆಯ ಬಗ್ಗೆ, ಲಿಂಗದ ವೈಶಿಷ್ಟ್ಯತೆಯ ಬಗ್ಗೆ ಅನೇಕ ಕಡೆಗೆ ಚರ್ಚೆ ವಿಚರ್ಚೆಗಳು ನಡೆಯುತ್ತಿದ್ದವು. ಅನೇಕರು ವೇಷಭೂಷಣಗಳ ಬಗ್ಗೆ ವೈಜ್ಞಾನಿಕವಾದ ಚರ್ಚೆಗೆ ಮೊದಲು ಮಾಡುತ್ತಿದ್ದರು. ಅವರಿಗೆಲ್ಲ ನಾವು ಸರಿಯಾಗಿ ಸಮಾಧಾನ ಹೇಳಿ ಇವುಗಳ ಮಹತ್ವವನ್ನೂ ವಿವರಿಸಿದೆವು. ಶಿವಯೋಗ ಮಂದಿರದ ಭಸ್ಮದ ಗಟ್ಟಿಗಳನ್ನು ಕೊಟ್ಟೆವು.

ಅವುಗಳನ್ನು ಅವರು ಅತ್ಯಂತ ಭಕ್ತಿಯಿಂದ ಸ್ವೀಕರಿಸಿದ್ದನ್ನು ಕಂಡು ನಮಗೆ ಸಂತೋಷ ವೆನಿಸಿತು.

### ಫೋಟೋ ತೆಗೆದುಕೊಳ್ಳುವವರಿಗೆ ಹಬ್ಬ

ನಮ್ಮ ವೇಷಭೂಷಣಗಳನ್ನು ನೋಡಿ ಫೋಟೋ ತೆಗೆದುಕೊಳ್ಳುವವರ ಸಂಖ್ಯೆ ಸಾಕಷ್ಟು ಕಂಡು ಬಂದಿತು. ಮಾರ್ಗದಲ್ಲಿ ನಮ್ಮನ್ನು ನಿಲ್ಲಿಸಿ, ವಿಶ್ವವಿದ್ಯಾಲಯ ಕಾಲೇಜು ಗಳ ಸ್ತ್ರೀ ಪುರುಷರು ಫೋಟೊ ತೆಗೆದುಕೊಳ್ಳುತ್ತಿದ್ದರು, ಜಪಾನಿ ಭಾಷೆಯಲ್ಲಿ ವಂದ ನಾರ್ಪಣೆಯ ಮಾತುಗಳನ್ನು ಕೇಳುತ್ತ ನಮ್ಮ ಬಟ್ಟೆಯನ್ನು ಮುಟ್ಟಿ ಮುಟ್ಟಿ ನೋಡಿ ಕೈ ಕುಲುಕಿಸುತ್ತಿದ್ದರು.

ನಮ್ಮ ಪೂಜಾ ವೇಳೆಯಲ್ಲಿ ಒಳಗೆ ಬರಬಾರದೆಂಬ ತಿಳುವಳಿಕೆ ಅವರಿಗಿತ್ತು. ಒಮ್ಮೆ ನಾವು ಪೂಜೆಗೆ ಕುಳಿತಾಗ ಒಬ್ಬರು ಅರಿಯದೇ ಒಳಗೆ ಪ್ರವೇಶಿಸಿದರು. ಆಗ ನಾವು ಸ್ವಲ್ಪ ಖಿನ್ನಮನಸ್ಕರಾದುದನ್ನು ಅವರು ಗ್ರಹಿಸಿ, ಪ್ರತಿಸಲ ಬಾಗಿಲಲ್ಲೇ ನಿಂತು ನಮಗೆ ಬೇಕಾದ ವಸ್ತುಗಳ ಬಗ್ಗೆ ಕೇಳುತ್ತಿದ್ದರು. ಇದರಿಂದ ಅವರ ವಿನಯ ಪ್ರವೃತ್ತಿ, ವ್ಯವಹಾರ ಸೂಕ್ಷ್ಮತೆಗಳನ್ನು ಕಂಡುಕೊಳ್ಳಬಹುದು.

ಅಲ್ಲಿಯ ಸೇವಕರು ಬಹಳ ಪ್ರಾಮಾಣಿಕರು. ಕೋಣೆಯಲ್ಲಿ ಸಾಕಷ್ಟು ಸಾಮಾನು ಬಿದ್ದುದು ಕಂಡು ಬಂದರೂ, ನಾವಿಲ್ಲದಾಗ ಕಸಗೂಡಿಸಲು ಬಂದಾಗ ಯಾವ ಸಾಮಾನು ಸಹ ಹೋಗದಂತೆ ನೋಡಿಕೊಳ್ಳುತ್ತಿದ್ದರು.

### ಓರಣ ಹಾಗೂ ಅಲಂಕಾರ

ಸ್ವಚ್ಛತೆ, ಶಿಸ್ತು, ಅಲಂಕಾರಗಳು ಜಪಾನೀಯರ ರಕ್ತಗತವಾದ ಗುಣಧರ್ಮಗಳು. ಅಲ್ಲಿಯ ಕೋಣೆಗಳನ್ನೂ ಮನೆಗಳನ್ನೂ ನೋಡಿದರೆ; ಅತ್ಯಂತ ಕಾಳಜಿವಹಿಸಿ, ಓರಣ ಗೊಳಿಸಿದ್ದು ಎದ್ದು ಕಾಣುತ್ತಿತ್ತು. ಅಲ್ಲೆಲ್ಲ ಅಲಂಕಾರಗಳಿಗೆ ಹೆಚ್ಚು ಪ್ರಾಶಸ್ತ್ಯ. ಜಪಾನಿಗರು ಇದ್ದುದರಲ್ಲಿಯೇ ಬೆಡಗಿನ ಜೀವನವನ್ನು ಕಂಡುಕೊಳ್ಳುವ ಬುದ್ಧಿಯುವರು. ಕಬ್ಬಿನ ಸಿಪ್ಪೆ, ಕಾಗದ, ಹುಲ್ಲು, ಚಿಪ್ಪು, ಒಡೆದ ಕಾಜು, ಬೆಂಡು ಮೊದಲಾದವುಗಳು ನಿರುಪಯುಕ್ತವೆಂದು ನಾವು ಒಗೆಯಬಹುದಾದ ವಸ್ತುಗಳನ್ನೂ ಗೃಹೋಪಯೋಗಿ ವಸ್ತುಗಳನ್ನಾಗಿಯೂ ಅಲಂಕಾರಗಳನ್ನಾಗಿಯೂ ಪರಿವರ್ತಿಸಿ ಬಿಡುತ್ತಾರೆ. ಪ್ರತಿಯೊಂದು ಮನೆಗೆ ಒಂದು ಸುಂದರವಾದ ಕೈತೋಟ. ಅಲ್ಲಿ ಅಷ್ಟರಲ್ಲಿಯೇ ಬಣ್ಣ ಬಣ್ಣದ ಗಿಡಗಳೂ ಹೂಗಳೂ, ತರಕಾರಿ ಜೀನಸುಗಳೂ ಮುಂತಾದವನ್ನು ಸಮೃದ್ಧವಾಗಿ ಬೆಳೆಸುತ್ತಾರೆ. ಮನೆಯೇ ಆಗಲಿ, ಮಠವೇ ಆಗಲಿ, ರಸ್ತೆಗಳೇ ಆಗಲಿ ಎಲ್ಲ ಕಡೆಗೂ ಅಷ್ಟೇ ದಕ್ಷತೆ, ಶಿಸ್ತು ಹಾಗೂ ಸ್ವಚ್ಛತೆ, ಮನೆಯ ಕಸಗೂಡಿಸಿ ದಾರಿಗೆ ಬೀಸಾಡುವ ರೀತಿ ನಾವು ಅಲ್ಲಿ ಕಾಣಲಿಲ್ಲ. ಎಲ್ಲವೂ ಅವಂಗೆ ಅಷ್ಟೇ. ಕಾರಣ ಅವರಲ್ಲಿ "ಇದು ನಮ್ಮ ಮನೆ" ಎಂಬ ಭಾವನೆಯಿದ್ದಂತೆ; "ಇದು ನಮ್ಮ ದೇಶ" ಎಂಬ ಭಾವನೆಯೂ ಉಂಟಾಗಿದೆ. ಈ ಭಾವನೆ ಭಾರತದಲ್ಲಿಯೂ

ಬೇಗ ಬರಲೆಂದು ನಾವು ಅಂತರಂಗದಲ್ಲಿ ಕಳಕಳಿಯಿಂದ ಪ್ರಾರ್ಥಿಸಿದೆವು. ಜಪಾನದಲ್ಲಿ ಧರ್ಮ ಬುದ್ಧಿ ಇದ್ದಂತೆ ವಿಲಾಸ ಜೀವನವೂ ಇತ್ತಿತ್ತಲಾಗಿ ಬೆಳೆಯುತ್ತಿರುವದು ನಮ್ಮ ಗಮನಕ್ಕೆ ಬಂದಿತು. ಕ್ಯೂಟೋ, ನಾರಾಗಳಲ್ಲಿ ವಿಲಾಸ ಪ್ರವೃತ್ತಿ ಅಷ್ಟೊಂದು ಒಡೆದು ಕಾಣುವದಿಲ್ಲ. ಅಲ್ಲಿ ಧಾರ್ಮಿಕ ಶ್ರದ್ಧೆ ಆಳವಾಗಿದೆ. ಆದರೆ ಅಂತರ್ರಾಷ್ಟ್ರೀಯ ನೇರ ಸಂಪರ್ಕವನ್ನು ಇರಿಸಿಕೊಂಡ ಟೋಕಿಯೋ ಪಟ್ಟಣ ಮಾತ್ರ ವಿಲಾಸ ಪ್ರವೃತ್ತಿಯ ಕಡೆಗೆ ನಡೆಯುತ್ತಿದೆ. ಅಲ್ಲಿ ಅನೇಕ ನೈಟ್ ಕ್ಲಬ್ಬುಗಳು, ಶೃಂಗಾರಕ್ಕೆ ಪೂರಕವಾದ ಹೋಟೆಲ್ಲು ಗಳೂ, ವಿಲಾಸದ ಮೇಜವಾನಿಗಳೂ, ನರ್ತನ ಕೇಳಿಗಳೂ ಮೈಯಿಕ್ಕಿವೆ ಎಂಬ ವಾರ್ತೆ ನಮಗೆ ತಿಳಿದುಬಂತು.

ಒಟ್ಟು ನೋಟದಲ್ಲಿ ಜಪಾನು ಪ್ರಗತಿಪರ ರಾಷ್ಟ್ರವೆಂಬಲ್ಲಿ ಸಂಶಯವಿಲ್ಲ. ಆ ಪ್ರಗತಿಗೆ ಅವರ ಪ್ರಾಮಾಣಿಕವಾದ ಸೇವೆಯೇ ಮೂಲಕಾರಣ. ವೈಜ್ಞಾನಿಕ ರಂಗದಲ್ಲಿ, ಸಾಮಾಜಿಕ ರಂಗದಲ್ಲಿ, ಆರ್ಥಿಕ ರಂಗದಲ್ಲಿ, ಶೈಕ್ಷಣಿಕ ರಂಗದಲ್ಲಿ ಅದು ಗಮನಾರ್ಹ ಪ್ರಗತಿಯನ್ನು ಸಾಧಿಸಿದೆ. ಜಗತ್ತಿನ ಶ್ರೀಮಂತಿಕೆಯ ಭಂಡಾರವೆನಿಸಿದ ಕೆಲವು ರಾಷ್ಟ್ರ ಗಳನ್ನು ಅದು ಕೆಣಕಿ ಮುನ್ನಡೆಯುತ್ತಿದೆ. ಇನ್ನು ಒಂದೆರಡು ದಶಕಗಳಲ್ಲಿ ಇದೇ ರೀತಿ ಯಲ್ಲಿ ಮುಂದುವರಿದಿದ್ದಾದರೆ ಜಗತ್ತಿನ ತೀರ ಶ್ರೀಮಂತ ರಾಷ್ಟ್ರಗಳನ್ನು ಅದು ಹಿಮ್ಮೆಟ್ಟಿಸ ಬಹುದೆಂದು ನಮ್ಮ ಗ್ರಹಿಕೆ.

## ಕಡಲ ದಂಡೆಯ ಬೆಡಗು "ಹಾಂಗ್‌ಕಾಂಗ್"

ಟೋಕಿಯೋದಿಂದ ದಿ. ೨೪ ಶನಿವಾರ ರಾತ್ರಿ ಹಾಂಗ್‌ಕಾಂಗ್ (Hongkong)ಕ್ಕೆ ಪ್ರಯಾಣ ಹೊರಟೆವು. ಟೋಕಿಯಾದ ಅಂತರ್ರಾಷ್ಟ್ರೀಯ ವಿಮಾನ ನಿಲ್ದಾಣದಿಂದ ನಮ್ಮ ಗಗನವಾಹನ ಆಗಸಕ್ಕೆ ಹಾರಿದಾಗ, ಇಡೀ ಟೋಕಿಯೋ ಪಟ್ಟಣವೇ ಒಂದು ಪ್ರಚಂಡ ಪ್ರಕಾಶದ ಕಾರಂಜಿಯಂತೆ ಗೋಚರಿಸಿತು. ಆ ದೃಶ್ಯ ನೋಡುತ್ತಿರುವಂತೆ ಕೆಲವೇ ನಿಮಿಷಗಳಲ್ಲಿ ದೂರ ಗಗನದ ಮೋಡಗಳಾಚೆ ಅನಂತ ಕತ್ತಲೆಯಲ್ಲಿ ತೇಲಿ ಹೋಯಿತು. ನಮಗೆ ವಿಮಾನದಲ್ಲಿಯೇ ಸ್ವಲ್ಪ ವಿಶ್ರಾಂತಿ. ವಿಮಾನ ಪರಿಚಾರಿಕೆಯರು ನಮ್ಮ ವಿಮಾನ ಪ್ರಯಾಣಗಳಲ್ಲಿ ನಮ್ಮ ಬಳಿ ಬಂದು ಉಪಹಾರ ಏನಾದರೂ ಬೇಕೆ ಎಂದು ವಿಚಾರಿಸುತ್ತಿದ್ದರು. ನಮ್ಮ ನಕಾರಾತ್ಮಕ ಉತ್ತರ ಕೇಳಿ ಇನ್ನುಳಿದವರನ್ನು ವಿಚಾರಿಸುತ್ತಿದ್ದರು. ಮುಂದಿನ ವಿಮಾನ ನಿಲ್ದಾಣ ಬರುವಷ್ಟರಲ್ಲಿ ಅನೇಕರು ಶಾಖಾಹಾರ, ಮಾಂಸಾಹಾರ, ಹಣ್ಣು-ಹಂಪಲ, ಪೆಪ್ಪರಮೆಂಟ, ಚಾಕಲೇಟ, ಅಡಿಕೆ ಮೊದಲಾದದ್ದ ನ್ನೆಲ್ಲ ಬೇಕಾದಷ್ಟು ಜಗಿಯುತ್ತಿದ್ದರು. ನಮಗೆ ವಿಮಾನದಲ್ಲಿ ನಿದ್ರಿಸಲು ಸ್ವಲ್ಪ ವಿಶ್ರಾಂತಿ. ನಮ್ಮ ವಿಮಾನ ನಾಲ್ಕೈದು ಗಂಟೆ ಪ್ಯಾಸಿಫಿಕ್ ಸಮುದ್ರದ ಮೇಲೆ ಕತ್ತಲೆಯನ್ನು ಕೊರೆ ಯುತ್ತ ಹಾರುತ್ತಿತ್ತು. ಹಾಂಗ್‌ಕಾಂಗ್‌ನ ಸಮುದ್ರ ದಂಡೆಯಲ್ಲಿರುವ ಅಂತರ್ರಾಷ್ಟ್ರೀಯ

ವಿಮಾನ ನಿಲ್ದಾಣ ಕೈಟಕ್ (Kitak) ದಲ್ಲಿ ಇಳಿಯುವಾಗ ಆಗಲೇ ಬೆಳಗು ಹರಿದಿತ್ತು.

ಅಲ್ಲಿಯ ವಿಮಾನ ನಿಲ್ದಾಣದಲ್ಲಿ ಭಾರತದ ರಾಯಭಾರಿಗಳು ನಮ್ಮನ್ನು ಸ್ವಾಗತಿಸಿದರು. ನಮಗಾಗಿ ಪ್ರತ್ಯೇಕವಾಗಿ ವ್ಯವಸ್ಥೆಮಾಡಿ ಭಾರತೀಯ ಮಂದಿರಕ್ಕೆ ನಮ್ಮನ್ನು ಅವರು ಕರೆದೊಯ್ದರು. ಪ್ರಯಾಣದಲ್ಲಿ ಶ್ರೀ ರಂಗರಾವ ದಿವಾಕರರು ಹಾಗೂ ನಮ್ಮ ಆಪ್ತಕಾರ್ಯದರ್ಶಿ ಪ್ರೊ. ಎ. ಎಲ್. ಹಿರೇಮಠರು ಮತ್ತು ನಮ್ಮೊಂದಿಗೆ ಅಲ್ಲಿ ಶ್ರೀಮತಿ ಚಂದ್ರಿಕಾ ಗುತ್ತಲ ಇದ್ದರು. ಭಾರತದ ರಾಯಭಾರಿಗಳೊಂದಿಗೆ ಜಪಾನಿನ ಶಾಂತಿ ಪರಿಷತ್ತಿನ ಧ್ಯೇಯ ಧೋರಣೆಗಳ ಬಗ್ಗೆ ಕೆಲ ಕಾಲ ಚರ್ಚಿಸಿದೆವು. ಅಲ್ಲಿ ಹಿಂದೂ ದೇವಾಲಯದಲ್ಲಿ ಸ್ಥಾಪಿತವಾದ ಗಾಂಧಿ ಸ್ಮಾರಕ ಲೈಬ್ರರಿಗೆ ಭೆಟ್ಟಿಕೊಟ್ಟೆವು.

**ಅತೀ ಸುಂದರ ಬಂದರ**

ಹಾಂಗ್‌ಕಾಂಗ್ ಬಂದರು ಜಗತ್ತಿನಲ್ಲಿಯೇ ಅತೀ ಸುಂದರ ಬಂದರಗಳಲ್ಲೊಂದು. ಚೀನದ ಆಗ್ನೇಯ ಭಾಗಕ್ಕೆ ಪರ್ವತದ ಎತ್ತರವಾದ ಕಡಲದಂಡೆಯ ಮೇಲೆ ಚಾಚಿಕೊಂಡಿದೆ. ಸಾಗರ ಹಾಗೂ ಪರ್ವತ ಶೃಂಗಗಳ ಸಖ್ಯದಿಂದ ಇದೊಂದು ನಿಸರ್ಗದ ತವರಾಗಿದೆ. ಸುತ್ತಲಿನ ಗುಡ್ಡಗಳ ಕಣಿವೆಗಳು, ಆಲ, ನೀಲಗಿರಿ, ಜಾಲಿ (Acacia), ಆಲಿವ್ (Olive) ಹಾಗೂ ತಾಳೆ (Palm) ಮರಗಳಿಂದ ಇಡಿಕಿರಿದಿವೆ. ಆಳವಾದ ಸಮುದ್ರದಂಡೆ ಇದ್ದುದರಿಂದ ಪಶ್ಚಿಮ ಪ್ಯಾಸಿಫಿಕ್ ಕಡಲದಂಡೆಯಲ್ಲಿ ದಕ್ಷಿಣ ಚೀನದ ದಂಡೆಗುಂಟ ಇದೊಂದು ಅತ್ಯುತ್ತಮ ಬಂದರ. ಆದ್ದರಿಂದ ವ್ಯಾಪಾರಿ ಸರಕುಗಳನ್ನು ಸಾಗಿಸಲು ಅತ್ಯುತ್ತಮ ಸ್ಥಳವಾಗಿದೆ. ನಮಗೆ ದೊರೆತ ಅತ್ಯಲ್ಪ ಸಮಯದಲ್ಲಿ ಬಂದರದ ಕೆಲವು ಭಾಗಗಳನ್ನು ಮಾತ್ರ ನೋಡಿಕೊಂಡು ಬಂದೆವು. ನೂರಾರು ಡೋಣಿಗಳ ದೊಡ್ಡ ದೊಡ್ಡ ಅನೇಕ ಹಡಗುಗಳು ಇಡಿಕಿರಿದಿದ್ದವು. ಬಂದರದ ದೃಶ್ಯ ನೋಡಿದರೆ ಸರಕುಗಳನ್ನು ಸಾಗಿಸಲೆಂದೇ ಇದು ವಿನಿಯೋಗವಾಗುತ್ತದೆಯೋ ಎನ್ನುವಷ್ಟು ಅದಕ್ಕೆ ವ್ಯಾಪಾರಿ ಮಹತ್ವ ಬಂದಿರುತ್ತದೆ.

ನಂತರ ಅಲ್ಲಿಯ ವಿಕ್ಟೋರಿಯಾ ಗಾರ್ಡ್‌ನ ನೋಡಿಕೊಂಡು ಬಂದೆವು. ಅತ್ಯಾಧುನಿಕ ಶಿಲ್ಪದ ಕಾರಂಜಿಗಳು, ಕಲಾತ್ಮಕ ಶಿಲಾಪ್ರತಿಮೆಗಳು, ವಿಶಾಲ ಹುಲ್ಲು ಹಾಸಿಗೆಗಳ ಪಕ್ಕದಲ್ಲೇ ದಟ್ಟಾದ ಎಲೆ ಗುಂಪುಗಳು, ಬಣ್ಣ ಬಣ್ಣದ ಬಳ್ಳಿ ಮಂಟಪಗಳು ಆ ತೋಟದ ವೈಭವವನ್ನು ಹೆಚ್ಚಿಸಿದ್ದವು.

**ಹಾಂಗ್‌ಕಾಂಗ್ ಪಟ್ಟಣ**

ಹಾಂಗ್‌ಕಾಂಗ್ ಸುಮಾರು ೨೦ ಲಕ್ಷ ಜನವಸತಿಯುಳ್ಳ ಸುಂದರ ನಗರ. ಉತ್ಕೃಷ್ಟ ಬಂದರ ಚೀನದ ಆಗ್ನೇಯ ದಿಕ್ಕಿನಲ್ಲಿ ಪರ್ವತದ ಎತ್ತರವಾದ ಇಳುಕಲಿನಲ್ಲಿ ವಿಸ್ತಾರವಾಗಿ ಹಬ್ಬಿದೆ. ವಿಸ್ತಾರವಾದ ಸಾಗರ, ಉನ್ನತವಾದ ಗಿರಿ ಶಿಖರ ಇವುಗಳ ಪರಸ್ಪರ ಸಖ್ಯವನ್ನು ಪಡೆದು, ಪ್ರಕೃತಿಯ ಚಲ್ವನಾಂತು, ನವನಾಗರೀಕತೆಯ ಆಕರ್ಷಣ ಸಾಮಗ್ರಿ

ಗಳೊಡಗೂಡಿ ಔನತ್ಯದಿಂದ ನಿಂತಿದೆ ಈ ನಗರ. ರಸ್ತೆಗಳು ಬಹಳ ಸುಂದರವಾಗಿದ್ದು ದಾರಿದೀಪಗಳಿಂದ ಕಂಗೊಳಿಸುತ್ತವೆ. ರಾತ್ರಿಯಲ್ಲಿ ಭಯವಿಲ್ಲದೆ ತಿರುಗಾಡಬಹುದು. ಚೀನಿ ಮತ್ತು ಇಂಗ್ಲೀಷ ಭಾಷೆಯಲ್ಲಿ ಸಂಗೀತ, ನಾಟಕ, ಗಾಯನ ಮುಂತಾದವುಗಳನ್ನು ಇಲ್ಲಿ ಕಾಣುತ್ತೇವೆ. ಇಲ್ಲಿ ನಕಲಿ ಮಾಲು ಕೊಟ್ಟು ಮೋಸ ಮಾಡುತ್ತಿರುವವರಿದ್ದಾರೆಂಬುದು ಅಲ್ಲಿಯವರಿಂದ ತಿಳಿದು ಬಂದಿತು. ಒಂದು ಅಮೇರಿಕೆಯ ಡಾಲರಿಗೆ ೬ ಹಾಂಗ್‌ಕಾಂಗ್ ಡಾಲರ ಕೊಡುತ್ತಾರೆ. ಇಲ್ಲಿಯ ಜನರು ಹೆಚ್ಚಾಗಿ ಬೇಯಿಸಿದ ಬಾತು ಕೋಳಿ, ಹಂದಿಯ ಮರಿ, ಮೀನು ಮುಂತಾದ ಪ್ರಾಣಿಗಳನ್ನು ತಿನ್ನುತ್ತಾರೆಂಬುದು ತಿಳಿಯಿತು. ಜಪಾನದಂತೆ ಇಲ್ಲಿ ಪ್ರಾಮಾಣಿಕರು ಸಿಗುವದು ದುರ್ಲಭ. ಆದರೂ ಕರ್ತವ್ಯ ನಿಷ್ಠರು. ಸಮಯವನ್ನು ದುರುಪಯೋಗ ಮಾಡಿಕೊಳ್ಳಲಾರರು. ಇಲ್ಲಿ ವಿಲಾಸ ಪ್ರಿಯರೆಂಬುದು ಕಂಡುಬಂದಿತು.

ನಮ್ಮೊಡನೆ ಡಾ. ರಂಗನಾಥ ದಿವಾಕರ, ಪ್ರೊ. ಎ. ಎಲ್. ಹಿರೇಮಠ ಹಾಗೂ ಶ್ರೀಮತಿ ಚಂದ್ರಿಕಾ ಗುತ್ತಲ ಇವರಿದ್ದರು. ದಿವಾಕರರ ನಿರ್ದೇಶನದ ಮೇಲೆ ನಾವು ನೋಡಲಿರುವ ಆಯಾಯ ದೇಶಗಳಲ್ಲಿರುವ ಭಾರತ ರಾಯಭಾರಿ ವರ್ಗದವರು ನಮಗೆಲ್ಲರಿಗೂ ವ್ಯವಸ್ಥೆ ಮಾಡಿದ್ದರು. ಹಾಂಗ್‌ಕಾಂಗ್‌ನಲ್ಲಿ 'ಅಲ್ಬಾ' (Alba) ಭವನದಲ್ಲಿ ವ್ಯವಸ್ಥೆ ಏರ್ಪಡಿಸಿದ್ದರು. ಅಲ್ಲಿ ವ್ಯಾಸ್ತವ್ಯವನ್ನು ಮಾಡಿದೆವು. ಮರುದಿನ ಭಾರತದ ಹಾಯ್‌ಕಮಿಶನರ ಶ್ರೀ ಸಿದ್ಧಾರ್ಥಾಚಾರಿ ಅವರನ್ನು ಭೆಟ್ಟಿಯಾದೆವು. ಮೈಸೂರಿನವರಾದ ಅವರ ಆತ್ಮೀಯತೆಯನ್ನು ಹೇಳುವದೆಂತು? ನಮ್ಮನ್ನು ಅತ್ಯಂತ ಗೌರವದಿಂದ ಬರ ಮಾಡಿಕೊಂಡು ಯೋಗಕ್ಷೇಮವನ್ನು ವಿಚಾರಿಸಿದರು. ಧರ್ಮಗುರುಗಳು ಹೀಗೆ ವಿದೇಶ ಪ್ರವಾಸ ಮಾಡಿ ಅಲ್ಲಲ್ಲಿಯ ವೈಶಿಷ್ಟ್ಯಗಳನ್ನರಿತು ನಮ್ಮ ದೇಶದಲ್ಲಿ ಪುನರುತ್ಥಾನ ಕಾರ್ಯವನ್ನು ಕೈಗೊಳ್ಳಬೇಕೆಂಬ ವಿಷಯವಾಗಿ ನಮ್ಮೊಡನೆ ಸಂಭಾಷಣೆ ಮಾಡಿದರು. ಅಲ್ಲಿಂದ ಹ್ಯಾಪಿ ವ್ಹ್ಯಾಲಿ (Happy Valey) ಎಂಬಲ್ಲಿರುವ ಹಿಂದೂ ಟೆಂಪಲ್ಲಿಗೆ (Hindu Temple) ನಮ್ಮನ್ನು ಕರೆನೊಯ್ದರು. ಭಾರತೀಯ ವರ್ತಕರು ಆ ಸ್ಥಳದ ಸ್ವಾಯತ್ತತೆಯನ್ನು ಪಡೆದು ಅಲ್ಲಿ ಒಂದು ಸುಂದರವಾದ ದೇವಾಲಯ ಮತ್ತು ಗಾಂಧಿ ಸ್ಮಾರಕ ಲಾಯಬ್ರರಿ ಸ್ಥಾಪಿಸಿದ್ದಾರೆ. ಶ್ರೀ ಶೀತಲ ಎಂಬುವರು ಈ ಸಂಸ್ಥೆಯ ವ್ಯವಸ್ಥಾಪಕರು. ಶ್ರೀ ಶರ್ಮಾ ಎಂಬುವವರು ಈ ದೇವಾಲಯದ ಅರ್ಚಕರು. ಅವರು ನಮ್ಮನ್ನು ಸ್ವಾಗತಿಸಿದರು. ಡಾ. ದಿವಾಕರರು ಶಾಂತಿ ಪರಿಷತ್ತಿನ ಧ್ಯೇಯ ಧೋರಣೆಗಳನ್ನು ವಿವರಿಸಿದರು. ನಮ್ಮಿಂದ ಸಾಮಾಜಿಕ, ಧಾರ್ಮಿಕ ವಿಷಯಗಳನ್ನರಿತು ಸಂತೋಷ ಪಟ್ಟರು. ಮುಂದ ನಾವು ಜಕಾರ್ತಾಕ್ಕೆ ಪ್ರಯಾಣ ಬೆಳೆಸಿದೆವು.

# ಜಕಾರ್ತಾದಲ್ಲಿ ಮೂರು ದಿನಗಳು

ಹಾಂಗ್‌ಕಾಂಗ್‌ದಿಂದ ದಿ. ೨೬ ರಂದು ವಿಮಾನ ಮಾರ್ಗವಾಗಿ ಹೊರಟು ೭–೮ ತಾಸು ಪ್ರಯಾಣಮಾಡಿ, ಇಂಡೋನೇಶಿಯಾದ ರಾಜಧಾನಿ ಜಕಾರ್ತಾ ತಲುಪಿದೆವು. ಅಲ್ಲಿ ಭಾರತದ ರಾಯಭಾರಿ ಶ್ರೀ ಎನ್. ಬಿ. ಮೆನನ್ ಗಾಂಧಿ ಸ್ಕೂಲಿನ ಪ್ರಿನ್ಸಿಪಾಲರು, ಸಾರ್ವಜನಿಕ ಸಂಪರ್ಕಾಧಿಕಾರಿ ಶ್ರೀ ಕೆ. ಪ್ರತಾಪ ಅವರು ನಮ್ಮನ್ನು ಸ್ವಾಗತಿಸಿದರು. ಅಲ್ಲಿಯ ಸುಪ್ರಸಿದ್ಧ ಪಂಜಾಬಿ ವರ್ತಕರಾದ "ಪ್ರೀತಂ ಸಿಂಗ್" ಅವರ ಮನೆಯಲ್ಲಿ ನಮ್ಮ ವಾಸ್ತವ್ಯಕ್ಕಾಗಿ ಪ್ರತ್ಯೇಕ ವ್ಯವಸ್ಥೆ ಮಾಡಿದರು.

### ನಗರ ವೈಭವ

ಜಕಾರ್ತಾ ಪಟ್ಟಣ ಜಾವಾ ನಡುಗಡ್ಡೆಯ ವಾಯುವ್ಯ ದಿಕ್ಕಿಗೆ ಇದೆ. ೧೭ನೇ ಶತಮಾನದಿಂದ ಡಚ್ ಆಡಳಿತಕ್ಕೆ ಇದು ಒಳಪಟ್ಟಿದ್ದರಿಂದ ಡಚ್ ಪ್ರಭಾವ ಇಲ್ಲಿಯ ಕಟ್ಟಡಗಳ ಶೈಲಿಯಲ್ಲಿ ಎದ್ದು ಕಾಣುತ್ತದೆ. ಇಲ್ಲಿಯ ಆ್ಯಮ್ಸ್ಟರ ಡ್ಯಾಮ್ ಅಗಸೆ (Amster Dam) ಪುರಾತನ ಹಳೆಯುಳಿಕೆಯಾಗಿ ನಿಂತಿದೆ. ಅದರ ಬಾಗಿಲಿನ ಎರಡು ವಿಕಟಾಲಂಕಾರದ ಭವ್ಯ ಮೂರ್ತಿಗಳು ಪ್ರವಾಸಿಗರನ್ನು ಆಕರ್ಷಿಸುತ್ತವೆ. ಮಧ್ಯ ಪಟ್ಟಣದ ವಿಶಾಲವಾದ ಮಾರ್ಗಗಳ ಇಕ್ಕೆಲಕ್ಕೆ ಬಣ್ಣ ಬಣ್ಣದ ಅಂಗಡಿಗಳು ಕಾಣುತ್ತವೆ. ದಾರಿಯಲ್ಲಿ ಕಾಡುಗಳೊಂದಿಗೆ ಕುದುರೆ ವಾಹನಗಳನ್ನು ಗಮನಿಸಬಹುದು. ಚಿಲಿವೊಂಗ್ (Chiliwong) ನದಿ ನಗರಮಧ್ಯದಲ್ಲಿ ಅನೇಕ ಕಾಲುವೆಗಳಲ್ಲಿ ಹರಿದದ್ದರಿಂದ ಪುಟ್ಟ ಡೋಣಿಗಳ ಸುಂದರ ಸಮೂಹವನ್ನೇ ಅಲ್ಲಿ ಕಾಣಬಹುದು. ಎಲ್ಲಿ ನೋಡಿದಲ್ಲಿ ಅತ್ಯಂತ ಸುಂದರವಾದ ಹೋಟೆಲು, ಬ್ಯಾಂಕು, ಥೇಟರ, ಕ್ಲಬ್, ಹಾಸ್ಟೆಲ ಚರ್ಚುಗಳು, ಭವ್ಯ ಸೌಧಗಳು ಬಣ್ಣ ಬಣ್ಣದ ಮೆರಗಿನಲ್ಲಿ ಎದ್ದು ಕಾಣುತ್ತಿದ್ದವು.

### ಶಿವಲಿಂಗಗಳ ದರ್ಶನ

ಜಕಾರ್ತಾದ ಸೆಂಟ್ರಲ್ ಮ್ಯುಜಿಯಂ ಕಟ್ಟಡ ಎತ್ತರದ ದುಂಡು ಕಂಬಗಳಿಂದ ಅಲಂಕೃತವಾಗಿ ನಿಂತ ಬಿಳಿಯ ವರ್ಣದ ಸೌಧವಾಗಿದೆ. ಇಲ್ಲಿ ಇತಿಹಾಸ ಪೂರ್ವದ ಪ್ರಾಣಿಗಳ ಹಳೆಯುಳಿಕೆಯಿಂದ ಅತ್ಯಾಧುನಿಕ ಕಾಲದವರೆಗಿನ ಭಿನ್ನ ಭಿನ್ನ ಧರ್ಮಗಳ, ಸಂಸ್ಕೃತಿಗಳ ವಸ್ತುಗಳ ಮಹಾಸಂಗ್ರಹವನ್ನು ಕಾಣಬಹುದು. ಶೈವ ಪರಂಪರೆಯ ೧೦–೧೫ ಸುಂದರವಾದ ಶಿವಲಿಂಗಗಳನ್ನು, ನಟರಾಜ ಮೂರ್ತಿಗಳನ್ನು ನಾವು ಕಂಡೆವು. ಭಾರತದ ಅನೇಕ ದೇವತಾ ಮೂರ್ತಿಗಳೂ ಇಲ್ಲಿ ಸ್ಥಾನವನ್ನು ಗಳಿಸಿವೆ. ಇವುಗಳ ಯೋಜನೆ ಹಾಗೂ ಪ್ರದರ್ಶಿಸಿದ ಕ್ರಮಗಳು ಮೆಚ್ಚತಕ್ಕಂತಹವು.

ಭಾರತೀಯರ ಬಗ್ಗೆ ಇಲ್ಲಿ ಬಹಳ ಪ್ರೇಮ. ಈ ನಗರದ ಅನೇಕ ಹೋಟಲ್ಲು ಗಳಿಗೆ ಸಿನಿಮಾ ಮಂದಿರಗಳಿಗೆ ಮಹಾಭಾರತದ, ರಾಮಾಯಣದ ಹೆಸರುಗಳಿವೆ. ಅನೇಕ

ರಿಗೆ ರಾಮ, ಸೀತಾ, ಲಕ್ಷ್ಮಣ ಮೊದಲಾದ ಭಾರತದ ಹೆಸರುಗಳಿವೆ. ಇಲ್ಲಿ ಮುಸಲ್ಮಾನ ಜನರು ಹೆಚ್ಚು ಇದ್ದರೂ ಹಿಂದೂ ಧರ್ಮದ ಮೇಲೆ ಹೆಚ್ಚು ಪ್ರೀತಿ ಇದ್ದುದು ಎದ್ದು ಕಾಣುತ್ತದೆ.

## ಪ್ರೀತಂ ಸಿಂಗರ ಆತಿಥ್ಯ

ಸಾರ್ವಜನಿಕ ಸಂಪರ್ಕಾಧಿಕಾರಿಗಳಾದ ಶ್ರೀ ಕೆ. ಪ್ರತಾಪ ಎಂಬವರು ಅಲ್ಲಿಯ "ಪ್ರೀತಂ ಸಿಂಗ" ಎಂಬ ಪಂಜಾಬಿ ಶ್ರೀಮಂತ ವರ್ತಕರ ಮನೆಯಲ್ಲಿ ನಮ್ಮ ವಾಸ್ತವ್ಯಕ್ಕೆ ವ್ಯವಸ್ಥೆಯನ್ನು ಮಾಡಿದ್ದರು. ಶ್ರೀ ಪ್ರೀತಂ ಸಿಂಗ ಇವರು ಅತ್ಯಂತ ಧಾರ್ಮಿಕರು ಅವರ ಮಕ್ಕಳು ಸಹ ಅಷ್ಟೇ ಸುಶೀಲರು. ಅತ್ಯಂತ ಭಕ್ತಿಭಾವನೆಯಿಂದ ಏನೊಂದೂ ಅನಾನುಕೂಲವಾಗದಂತೆ ಮೂರು ದಿವಸಗಳ ಪರ್ಯಂತ ನಮ್ಮ ಸೇವೆ ಮಾಡಿದರು. ಕರ್ಮ ಧರ್ಮ ಸಂಯೋಗದಿಂದ ದೀಪಾವಳಿ ಹಬ್ಬವನ್ನು ಅವರ ಮನೆಯಲ್ಲಿಯೇ ನೆರವೇರಿಸಿ ದೆವು. ಭಾರತೀಯರಾದ ಶ್ರೀ ಪ್ರೀತಂ ಸಿಂಗ ಮತ್ತು ಅವರ ಬಳಗದವರು ನಮ್ಮ ಸಂಸ್ಕೃತಿಯ ಪರಂಪರೆಯಂತೆ ತಮ್ಮ ಅಂಗಡಿಗೆ ಕರೆದುಕೊಂಡು ಹೋಗಿ ಲಕ್ಷ್ಮಿ-ಸರಸ್ವತಿ ಪೂಜೆಯನ್ನು ಮಾಡಿ, ನಮ್ಮಿಂದ ಆಶೀರ್ವಾದವನ್ನೂ ಫಲ ಮಂತ್ರಾಕ್ಷತೆಯನ್ನೂ ಪಡೆದು ಕೊಂಡರು. ಇವರ ಮನೆಯಲ್ಲಿ ನಾವು ಭಾರತದ ದೇಶವನ್ನು ಬಿಟ್ಟು ೧೨ ದಿವಸಗಳಾದ ಮೇಲೆ ಅನ್ನ ಪ್ರಸಾದವನ್ನು ಸ್ವೀಕರಿಸಿದೆವು. ಈ ವರೆಗೆ ಹೆಚ್ಚಾಗಿ ಹಾಲು ಹಣ್ಣಿನ ಮೇಲೆಯೇ ಇದ್ದೆವು.

## ಶ್ರೀಮತಿ ಕಾತ್ಯಾಯನಿಗೆ ಭಸ್ಮ ಮತ್ತು ಲಿಂಗ

ಆದಿನ ಮಧ್ಯಾಹ್ನ ಭಾರತೀಯ ಮಹಿಳಾ ಸಂಘದವರ (Indian women's Association) ಆಮಂತ್ರಣದಂತೆ, ಪ್ರಿ. ರಾಮ ಇವರೊಡನೆ ಅಲ್ಲಿಗೆ ದಯಮಾಡಿಸಿ, ಆ ಸಂಘದಲ್ಲಿ ಭಾರತೀಯ ಮಹಿಳೆಯರ ಪವಿತ್ರ ಆದರ್ಶಗಳನ್ನು ನಿರೂಪಿಸಿದೆವು. ವಿಶೇಷತಃ ಅಕ್ಕಮಹಾದೇವಿ, ಬಸವೇಶ್ವರ ಇವರ ಬಗ್ಗೆ ಹಿಂದಿಯಲ್ಲಿ ಒಂದು ಗಂಟೆ ಕಾಲ ಭಾಷಣ ಮಾಡಿದೆವು. ಮರುದಿನ ರಾಯಭಾರಿ ವರ್ಗದವರು ಭೋಜನ ಸಮಾರಂಭವನ್ನು ಏರ್ಪ ಡಿಸಿದ್ದರು. ಮಹಾತ್ಮಾ ಗಾಂಧಿ ಸ್ಕೂಲಿನ ಪ್ರಿ. ರಾಮ ಅವರು ಸಹಭೋಜನಕೂಟ ವನ್ನು ಏರ್ಪಡಿಸಿದ್ದರು. ನಾವು ಎರಡೂ ಭೋಜನ ಸಮಾರಂಭಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡರೂ ನಿಯಮದ ಪ್ರಕಾರ ಏನನ್ನೂ ಸ್ವೀಕರಿಸಲಿಲ್ಲ. ಅಲ್ಲಿ ಆಗಮಿಸಿದ ಸದ್ಗೃಹಸ್ಥರ ಅನೇಕ ಪ್ರಶ್ನೆಗಳಿಗೆ ಉತ್ತರಿಸುವದೇ ನಮ್ಮ ಕೆಲಸವಾಯಿತು. ಈ ನಮ್ಮ ಪ್ರಸಾದ ಬಗ್ಗೆ ಕಟ್ಟುನಿಟ್ಟಿನ ಜೀವನಕ್ಕೆ ಬಹುಜನರು ಆಕರ್ಷಿತರಾಗುತ್ತಿದ್ದುದು ಕಂಡು ಬಂದಿತು. ಈ ಭೋಜನಕೂಟದ ಸಮಾರಂಭಕ್ಕೆ ಆಮಂತ್ರಿತರಾದವರಲ್ಲಿ ಮುಸಲ್ಮಾನ ಮಹಿಳೆಯಾದ ಮಾಜಿ ಮಂತ್ರಿ ಶ್ರೀಮತಿ ಕಾತ್ಯಾಯನಿಯೂ ಒಬ್ಬಳು. ನಾವು ಧರಿಸಿದ ಲಿಂಗ-ಭಸ್ಮ-ರುದ್ರಾಕ್ಷಿಗಳ ಬಗ್ಗೆ ಅವಳು ಅನೇಕ ಪ್ರಶ್ನೆಗಳನ್ನೇ ಕೇಳಿದಳು. ನಾವು

ಅವಳಿಗೆ ತಾತ್ವಿಕವಾಗಿ ವೈಜ್ಞಾನಿಕವಾಗಿ ಸಮರ್ಪಕ ಉತ್ತರವನ್ನು ಹೇಳಿ ಶಿವಲಿಂಗವನ್ನೂ ಭಸ್ಮದ ಗಟ್ಟಿಯನ್ನೂ ಕೊಟ್ಟೆವು. ಅವಳು ಅವುಗಳನ್ನು ಭಯ ಭಕ್ತಿಯಿಂದ ಸ್ವೀಕರಿಸು ವದು ಮಾತ್ರವಲ್ಲದೇ ಪ್ರತಿದಿನ ಅವುಗಳನ್ನು ಪೂಜಿಸುವ ವಿಧಿ ವಿಧಾನಗಳನ್ನು ಆಸ್ಥೆಯಿಂದ ಕೇಳಿಕೊಂಡು ಇವುಗಳ ಬಗ್ಗೆ ಇನ್ನೂ ಹೆಚ್ಚಾಗಿ ಅರಿತುಕೊಳ್ಳಲು ಭಾರತಕ್ಕೆ ಬಂದಾಗ ನಮ್ಮ ಮಠಕ್ಕೆ ಬರುವದಾಗಿ ಹೇಳಿದಳು.

**ರಾಯಭಾರಿಗಳ ನಿರಾಸೆ**

ಇಲ್ಲಿ ಭಾರತದ ರಾಯಭಾರಿಗಳು ನಮ್ಮೆಲ್ಲರಿಗೆ ಔತಣಕೂಟವೊಂದನ್ನು ಏರ್ಪಡಿ ಸಿದ್ದರಷ್ಟೆ. ಆದರೆ ಪೂಜಾ ಸಮಯದಲ್ಲಿ ಮಾತ್ರ ನಾವು ಮಡಿಯಿಂದ ಮಾಡಿದ ಪ್ರಸಾದ ಸೇವಿಸುವ ಕ್ರಮದ ಬಗ್ಗೆ ಅವರಿಗೆ ಹೇಳಿದಾಗ ಸ್ವಾಭಾವಿಕವಾಗಿ ಅವರಿಗೆ ಬಹಳಷ್ಟು ನಿರಾಶೆಯಾಯಿತು. ಆದರೂ ಅವರಿಗೆ ನೋವಾಗಬಾರದೆಂದು ಆ ಔತಣ ಕೂಟಕ್ಕೆ ಬಂದು, ಊಟ ಮಾಡುವವರ ಮಧ್ಯದಲ್ಲಿ ಏನೂ ಸ್ವೀಕರಿಸದೇ ಪಾಲ್ಗೊಂಡೆವು. ನೀವೇಕೆ ಎಲ್ಲರೊಂದಿಗೆ ಆಹಾರ ಸ್ವೀಕರಿಸಬಾರದೆಂಬ ಬಗ್ಗೆ ಹಲವರು ಪ್ರಶ್ನೆಗಳನ್ನು ಕೇಳಿದರು. ನಾವೇ ಸೈದ್ಧಾಂತಿಕವಾಗಿ ಮತ್ತು ಅನೇಕ ಆಚಾರ ಧರ್ಮಗಳ ಸೂತ್ರಗಳಿಂದ ತಿಳಿಹೇಳಿ ಅವರಿಗೆ ಸರಿಯಾದ ವಿವರಣೆ ನೀಡಿ ಸಮಾಧಾನ ಹೇಳಿದೆವು. "ಪ್ರಸಾದ" ಈ ವಿಷಯದ ಬಗ್ಗೆ ವಿವರಿಸಿದ ನಂತರ ಸಮಾಧಾನ ಪಡುತ್ತಿದ್ದರು. ವೀರಶೈವ ಧರ್ಮದ ನಿಯಮಬದ್ಧವಾದ ಈ ವಿಷಯವನ್ನು ಕಂಡು ಆಶ್ಚರ್ಯಪಡುತ್ತಿದ್ದರು. ಮರುದಿನ ಇಲ್ಲಿಯ ಗುರುದ್ವಾರಗಳಿಗೆ ಭೆಟ್ಟಿ ಕೊಟ್ಟು ಅವರ ಕಾರ್ಯ ಚಟುವಟಿಕೆಗಳನ್ನು ಅವಗಾಹಿಸಿದೆವು. ಅವರು ಧರ್ಮದ ತತ್ವ, ಇತಿಹಾಸದ ಬಗ್ಗೆ ಆಂಗ್ಲಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ಪ್ರಕಟಿಸುತ್ತಿರುವದು ಸ್ತುತ್ಯಕ್ರಮ. ತರುಣ ಸಂಘ (Youth Centre) ಹಾಗೂ ಸ್ವಾತಂತ್ರ್ಯ ಸ್ತಂಭ (Piller of Liberty) ಗಳನ್ನು ನೋಡಿಕೊಂಡು ಬಂದೆವು. ಪ್ರೀತಂ ಸಿಂಗರಿಗೂ ನಮ್ಮನ್ನು ಬೀಳ್ಕೊಡಲು ಬಂದ ಜನರಿಗೂ ಫಲಾಶೀರ್ವಾದ ಮಾಡಿ ಮುಂದಿನ ಪ್ರಯಾಣದ ಸಿದ್ಧತೆ ಮಾಡಿದೆವು.

## ಸಿಂಗಾಪೂರ ಹಾಗೂ ಕೌಲಾಲಂಪೂರ

ದಿ. ೨೯ ಗುರುವಾರ ವಿಮಾನ ಮಾರ್ಗವಾಗಿ ಜಕಾರ್ತಾದಿಂದ ಹೊರಟು ಸಿಂಗಾಪೂರದ ಪಯಾಲೇಬರ್ (Payalaber) ಅಂತರ್ರಾಷ್ಟ್ರೀಯ ವಿಮಾನ ನಿಲ್ದಾಣ ದಲ್ಲಿ ಮಧ್ಯಾಹ್ನ ಒಂದು ಗಂಟೆಗೆ ಬಂದು ಇಳಿದೆವು. ಭಾರತದ ರಾಯಭಾರಿಗಳು ನಮ್ಮನ್ನು ಸ್ವಾಗತಿಸಿದರು.

"ಸಿಂಗಾಪೂರ"ವು ಅಂತರ್ರಾಷ್ಟ್ರೀಯ ವ್ಯಾಪಾರ ಕೇಂದ್ರ. ಇಲ್ಲಿಯ ಬಂದರ,

ವಿಮಾನ ನಿಲ್ದಾಣ ಅತ್ಯಂತ ಪ್ರಸಿದ್ಧವಿರುವದು. ಚೀನ–ಜಪಾನ–ಮಲಾಯಾ–ತಮಿಳ–ಇಂಗ್ಲಿಷ–ಹಿಂದಿ ಭಾಷೆಗಳನ್ನಾಡುವ ಜನರನ್ನೊಳಗೊಂಡ, ಸರಾಸರಿ ೨೦ ಲಕ್ಷ ಜನಸಂಖ್ಯೆಯುಳ್ಳ ಈ ಸುಂದರ ನಗರ ಅಂತರ್ರಾಷ್ಟ್ರೀಯ ಬಾಂಧವ್ಯದ ಪ್ರತೀಕವಾಗಿದೆ.

## ನಿಸರ್ಗ ರಮಣೀಯ ಶ್ರೀ ರಾಮಕೃಷ್ಣಾಶ್ರಮ

ಇಲ್ಲಿಯ ಪ್ರಶಾಂತ ಸುಂದರ ರಾಮಕೃಷ್ಣಾಶ್ರಮದಲ್ಲಿ ನಮಗೆ ಇಳಿದುಕೊಳ್ಳುವ ವ್ಯವಸ್ಥೆ ಮಾಡಿದ್ದರು. ಈ ಆಶ್ರಮದ ಅಧ್ಯಕ್ಷರಾದ ಶ್ರೀ ಸ್ವಾಮೀ ಸಿದ್ಧಾತ್ಮನಂದಜೀ ಅವರು ಕ್ಯೂಟೋದ ಸಭೆಯಲ್ಲಿ ನಮ್ಮನ್ನು ಸಂದರ್ಶಿಸಿ, ಸಿಂಗಾಪುರದಲ್ಲಿ ರಾಮಕೃಷ್ಣ ಆಶ್ರಮಕ್ಕೆ ಬರುವ ಬಗ್ಗೆ ಮೊದಲೇ ವಿನಂತಿಸಿಕೊಂಡಿದ್ದರು. ಆಶ್ರಮದ ವ್ಯವಸ್ಥಾಪಕರಾದ ಸ್ವಾಮೀ ದಾಮೋದರಾನಂದಜಿ ಮತ್ತು ಸ್ವಾಮೀ ಅಗೇಹಾನಂದಜೀ ಇವರು ವಾಸ್ತವ್ಯಕ್ಕೆ ಬಹಳ ವ್ಯವಸ್ಥೆಯನ್ನು ಮಾಡಿದ್ದರು. ಶ್ರೀ ರಾಮಕೃಷ್ಣಾಶ್ರಮ ನಿಜವಾಗಿಯೂ ಪುಣ್ಯಧಾಮ. ಭಾರತೀಯ ಧಾರ್ಮಿಕ ಸಂಸ್ಕೃತಿಯನ್ನು ಪ್ರಪ್ರಥಮವಾಗಿ ವಿದೇಶಗಳಲ್ಲಿ ಪ್ರಸಾರ ಮಾಡಿ, ವೇದವೇದಾಂತದ ಅಮರ ಸಂದೇಶಗಳನ್ನು ಪಾಶ್ಚಾತ್ಯ ದಿಗ್ದಿಗಂತಗಳಲ್ಲಿ ಅನುಕರಣಿತವಾಗುವಂತೆ ತಮ್ಮ ಸಿಂಹನಾದದಿಂದ ಘೋಷಿಸಿದ ಸ್ವಾಮೀ ವಿವೇಕಾನಂದರಿಂದ ಸ್ಥಾಪಿಸಲ್ಪಟ್ಟು ಸ್ಫೂರ್ತಿಯನ್ನು ಪಡೆದ ಶಾಂತಿಧಾಮವಿದು. ಇಲ್ಲಿಯಂತೂ ನಾವು ನಮ್ಮ ಮೂರುಸಾವಿರ ಮಠದಲ್ಲಿರುವಂತೆ ಅತ್ಯಂತ ಆನಂದದಿಂದ ಇದ್ದೆವು. ಪತ್ರಿಪುಷ್ಪಗಳ ವಾಟಿಕೆಯಿಂದ ವಿಸ್ತಾರಗೊಂಡ ಸುಂದರ ಆರಾಮ, ನಗರದ ಗಜಿಬಿಜಿಯಿಂದ ದೂರವಿದ್ದ ಪ್ರದೇಶ, ನಿಸರ್ಗದ ರಮಣೀಯತೆ, ಪ್ರಶಾಂತ ಪವಿತ್ರ ವಾತಾವರಣದಿಂದ ಕೂಡಿದ ಪ್ರಾರ್ಥನಾ ಮಂದಿರ (Prayer Hall) ಇತ್ಯಾದಿಗಳು ನಮಗೆ ಬಹಳ ಹಿಡಿಸಿದವು. ಇಲ್ಲಿ ಅನಾಥ ಮಕ್ಕಳ ಪಾಲನೆ ಪೋಷಣೆ ಒಳ್ಳೇ ವ್ಯವಸ್ಥಿತವಾಗಿ ನಡೆಯುತ್ತಿದೆ. ನಮ್ಮ ಮೂರುಸಾವಿರಮಠದಂತೆ ದೇವರ ಪ್ರಾರ್ಥನೆ, ಭಜನೆಗಳ ಕಾರ್ಯಕ್ರಮವೂ ಪ್ರತಿನಿತ್ಯ ಕ್ರಮಬದ್ಧವಾಗಿ ನಡೆಯುತ್ತದೆ. ಇವೆಲ್ಲವನ್ನೂ ನಾವು ನಿರೀಕ್ಷಿಸಿ ಅತ್ಯಂತ ಪ್ರಫುಲ್ಲಿತರಾಗಿ ಎರಡು ದಿನಗಳನ್ನು ಕಳೆದೆವು. ನಮ್ಮ ಮಠದಲ್ಲಿಯಂತೆಯೇ ಇಲ್ಲಿ ನಮ್ಮ ತ್ರಿಕಾಲಪೂಜೆಗೆ ಅನುಕೂಲವಾಯಿತು. ಇಲ್ಲಿಂದ ಹೊರಡುವ ಮುನ್ನ ಇಲ್ಲಿರುವ ಅನಾಥಾಶ್ರಮಕ್ಕೆ ಸಹಾಯಾರ್ಥಕವಾಗಿ ೫೦ ಡಾಲರ ದೇಣಿಗೆ ನೀಡಿದೆವು. ಮಠದ ವ್ಯವಸ್ಥಾಪಕ ಸ್ವಾಮಿಗಳಿಗೆ ವಿಭೂತಿ–ಲಿಂಗ ಮತ್ತು ಕೆಲ ಪುಸ್ತಕಗಳನ್ನು ಆಶೀರ್ವದಿಸಿದೆವು.

## ಕೃತ್ರಿಮ ಅರಣ್ಯ

ಇಲ್ಲಿ "ಟಾಯಗರ ಗಾರ್ಡನ್" ಎಂಬ ಕೃತ್ರಿಮ ಅರಣ್ಯ ನೋಡತಕ್ಕಂತಹದು. ಇದರ ಸುತ್ತಳತೆ ಸುಮಾರು ಒಂದು ಮೈಲು, ಇಲ್ಲಿ ಅನೇಕ ಬಗೆಯ ಹುಲಿ, ಸಿಂಹ, ಕರಡಿ, ಮಂಗ, ಕಾಡಾನೆ, ಕಾಡಕೋಣ, ನೀರಾನೆ, ಹಾವುಗಳು, ಪಕ್ಷಿಗಳು, ರಾಕ್ಷಸರ ಮೂರ್ತಿಗಳು,

ತರುಲತೆಗಳು ಎಲ್ಲವೂ ಕೃತ್ರಿಮುವಾಗಿ ಮಾಡಿದವುಗಳೇ. ಒಂದು ಕೃತ್ರಿಮ ಗುಡ್ಡವನ್ನೇ ಕಟ್ಟಿ ಅದರಲ್ಲಿ ಈ ಅರಣ್ಯವನ್ನು ಮಾಡಿದ್ದಾರೆ.

ಸಿಂಗಾಪೂರದಲ್ಲಿ ಭಾರತದವರಾದ ಶ್ರೀ "ಜುಮಾಭಾಯ್" ಎಂಬವರು ಆಗರ್ಭ ಶ್ರೀಮಂತರು, ಗಾಂಧೀ ತತ್ವನಿಷ್ಠರು; ಭೋಜನಕೂಟವನ್ನು ತಮ್ಮ ಮನೆಯಲ್ಲಿ ಏರ್ಪಡಿಸಿದ್ದರು. ಭೋಜನಕೂಟಕ್ಕೆ ನಗರದ ಪ್ರತಿಷ್ಠಿತ ವ್ಯಕ್ತಿಗಳು ಭಾರತದ ಹಾಯಕಮಿಶನರ ಶ್ರೀ ಪ್ರೇಮಭಾಟಿಯಾ ಮತ್ತು ರಾಯಭಾರಿ ವರ್ಗದವರೂ ಬಂದಿದ್ದರು. ನಮ್ಮೊಡನೆ ಸಾಮಾಜಿಕ ಧಾರ್ಮಿಕ ವಿಷಯುಗಳನ್ನು ಚರ್ಚಿಸಿ ಅತ್ಯಂತ ಸಂತೋಷಪಟ್ಟರು. ಮರುದಿನ ನಮ್ಮನ್ನು ಕೌಲಾಲಂಪೂರಕ್ಕೆ ಬೀಳ್ಕೊಟ್ಟರು.

**ಕೌಲಾಲಂಪೂರದಲ್ಲಿ**

ಸಿಂಗಾಪುರದಿಂದ ಮಲೇಶಿಯಾ ದೇಶದ ರಾಜಧಾನಿ ಕೌಲಾಲಂಪೂರಕ್ಕೆ ದಿನಾಂಕ ೧ ನವಂಬರದಂದು ವಿಮಾನದಿಂದ ಬಂದು ತಲುಪಿದೆವು. ಭಾರತದ ರಾಯಭಾರಿ ಕಚೇರಿಯ ಮುಖ್ಯಾಧಿಕಾರಿಗಳಾದ ಶ್ರೀ ಗುಪ್ತಾ ಅವರು ಸ್ವಾಗತಿಸಿದರು. ಭಾರತದ ಓವರ್‌ಸೀಜ್ ಬ್ಯಾಂಕಿನ (Overseas Bank of India) ಮುಖ್ಯ ಅಕೌಂಟಂಟರಾದ ಶ್ರೀ ದೊರೆಸ್ವಾಮಿ ಅಯ್ಯರ ಇವರ ಬಂಗ್ಲೆಯಲ್ಲಿ ನಮ್ಮ ವಾಸ್ತವ್ಯಕ್ಕೆ ವ್ಯವಸ್ಥೆ ಮಾಡಿದ್ದರು. ಅಲ್ಲಿ ವಿಶ್ರಾಂತಿ ಪಡೆದೆವು.

ಇದೇ ದಿನ ಸಾಯಂಕಾಲ ಸ್ವಾಮಿ ವಿವೇಕಾನಂದಭವನದಲ್ಲಿ ನಮ್ಮ ಭಾಷಣವನ್ನೇರ್ಪಡಿಸಿದ್ದರು. ಶ್ರೀ ಸ್ವಾಮಿ ಪ್ರಣವಾನಂದಜೀ ಇವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ನಾವು ವಿವೇಕಾನಂದರ ಜೀವನ, ಕರ್ತೃತ್ವಶಕ್ತಿ, ಹಿಂದೂ ಧರ್ಮದ ಪುನರುತ್ಥಾನ ಮತ್ತು ಜಾಗತಿಕ ಶಾಂತಿ ಇತ್ಯಾದಿ ವಿಷಯುಗಳ ಬಗ್ಗೆ ಉಪನ್ಯಾಸ ಮಾಡಿದೆವು. ಶ್ರೀ ರಂಗನಾಥ ದಿವಾಕರರು ಶಾಂತಿ ಪರಿಷತ್ತಿನ ಫಲಶ್ರುತಿಯನ್ನು ಕುರಿತು ಮಾತನಾಡಿದರು.

ಮರುದಿನ ಸ್ವಾಮಿ ಶಿವಾನಂದಜೀ ಇವರಿಂದ ಸ್ಥಾಪಿಸಲ್ಪಟ್ಟ ದೈವೀ ಜೀವನ ಸಂಸ್ಥೆಗೆ (The Divine Life Society) ಸಂಸ್ಥೆಯ ಅಧ್ಯಕ್ಷರಾದ ಶ್ರೀ ಸ್ವಾಮಿ ಪ್ರಣವಾನಂದಜೀ ಅವರ ಆಮಂತ್ರಣದ ಮೇರೆಗೆ ಹೋದೆವು. ನಮ್ಮನ್ನು ಬರಮಾಡಿಕೊಂಡು ಸಂಸ್ಥೆಯ ಕಾರ್ಯಕಲಾಪಗಳ ಪರಿಚಯವನ್ನು ಮಾಡಿಕೊಟ್ಟರು. ಆಶ್ರಮದ ಸಂಚಾಲಕರು ಕೈಕೊಂಡ ಭಾರತೀಯ ತತ್ವಪ್ರಚಾರ–ಸಂಘಟನೆ–ಧಾರ್ಮಿಕ ಗ್ರಂಥ ಪ್ರಕಟನೆಯ ಕಾರ್ಯ ಇವುಗಳನ್ನು ನೋಡಿ ನಾವು ತುಂಬ ಮೆಚ್ಚಿಕೊಂಡೆವು. ಇವರು ಇಂಗ್ಲೀಷಿನಲ್ಲಿ ಧ್ಯಾನ, ಪೂಜೆ, ಮಂತ್ರ, ಪ್ರಾರ್ಥನೆಗಳ, ಕ್ರಮುಗಳ ಬಗ್ಗೆ ಅನೇಕ ಗ್ರಂಥಗಳನ್ನು ಪ್ರಕಟಿಸಿ ಪ್ರಸಾರ ಮಾಡುತ್ತಾರೆ. ನಮ್ಮೊಂದಿಗೆ ಅವರು ೨–೩ ಗಂಟೆಗಳ ಕಾಲ ನಮ್ಮ ದೇಶದ ಧಾರ್ಮಿಕ ವಿಷಯುಗಳನ್ನು ಕುರಿತು ವಿಚಾರ ವಿನಿಮಯ ಮಾಡಿದರು. ಈ

ಚರ್ಚೆಯಲ್ಲಿ ಡಾ. ದಿವಾಕರರು ಹಾಗೂ ನಮ್ಮ ಕಾರ್ಯದರ್ಶಿ ಪ್ರೊ. ಎ. ಎಲ್. ಹಿರೇಮಠರು ಭಾಗವಹಿಸಿದ್ದರು.

### ಬಟುಗವಿಗಳು (Batu Caves)

ಕೌಲಾಲಂಪುರದಿಂದ ಏಳು ಮೈಲು ಅಂತರದಲ್ಲಿರುವ ಪರ್ವತ ಶ್ರೇಣಿಗಳಲ್ಲಿ ಬಟು ಗವಿಗಳು ಜಗತ್ಪ್ರಸಿದ್ಧ. ಇಲ್ಲಿ ಬಂದ ಪ್ರವಾಸಿಗರು ಇವುಗಳನ್ನು ನೋಡುವ ಸದಾವಕಾಶ ಕಳೆದುಕೊಳ್ಳುವದಿಲ್ಲ. ಸುಮಾರು ೩೦೦ ಮೆಟ್ಟಿಲುಗಳನ್ನು ಏರಿ ಈ ಗವಿಗಳಿಗೆ ಹೋಗ ಬೇಕು. ಅರಣ್ಯ ಸೌಂದರ್ಯಕ್ಕೆ ಬಾಧೆ ಬಾರದಂತೆ ಈ ಮೆಟ್ಟಿಲುಗಳನ್ನು ಅತಿ ಸುಂದರ ವಾಗಿ ಜೋಡಿಸಿ ವಿದ್ಯುತ್ತಿನ ಸೌಂದರ್ಯ ಒದಗಿಸಿದ್ದಾರೆ. ಬಟುಗವಿಗಳು ನೋಡಲು ರುದ್ರರಮಣೀಯವಾಗಿವೆ. ಅವುಗಳ ಒಳಗೆ ಹೋದರೆ ವಿಜಾಪುರದ ಗೋಳಗುಮ್ಮಟ ದಂತ ಅತಿ ದೊಡ್ಡ ಒಳಭಾಗವನ್ನು ಕಾಣಬಹುದು. ಭಾರೀ ಗಾತ್ರದ ಚೂಪಾದ ಕೊರಕಲು, ಬಂಡೆಗಳು ಎಲ್ಲಿ ಜಾರಿ ಮೈಮೇಲೆ ಬೀಳುವವೋ ಎಂಬಂತೆ ಭಯಾನಕ ದೃಶ್ಯ. ಆದರೂ ಆ ಭಯದಲ್ಲಿಯೇ ಸಂತೋಷದ ಅನುಭವ. ಇಲ್ಲಿಯ ಬಂಡೆಗಲ್ಲುಗಳು ಬೇರೆ ಬೇರೆ ಬಣ್ಣದವುಗಳಿವೆ. ಒಂದು ಗವಿಯಲ್ಲಿ ಹಿಂದೂ ಧರ್ಮದ ಪರಂಪರೆಯ ಒಂದು ದೊಡ್ಡ ಆಕಳು ಇದೆ. ಅದಕ್ಕೆ ಐದು ಕಾಲುಗಳಿವೆ; ಇಲ್ಲಿ ಒಂದು ಷಣ್ಮುಖಸ್ವಾಮಿಯ ದೇವಾಲಯವೂ ಇದ್ದುದು ಗಮನೀಯ. ಇದು ಹಿಂದೂಗಳಿಗೆ ಪವಿತ್ರ ಯಾತ್ರಾ ಸ್ಥಳ ವಾಗಿದೆ. ಜಾತ್ರೆಗಳಲ್ಲಿ ಹಿಂದೂಗಳು ಬಂದು ವ್ರತನಿಯಮಗಳನ್ನು ಕೈಕೊಳ್ಳುತ್ತಾರೆ. ಆಗ ಕೆಲವರು ಉದ್ದವಾದ ತಾಮ್ರದ ಡಬ್ಬಣದಂತಹ ಆಯುಧವನ್ನು ನಾಲಿಗೆಗೆ ಚುಚ್ಚಿ ಕೊಳ್ಳುವ ಪರಂಪರೆ ಇದೆಯಂತೆ. ಆಗ ನಮಗೆ ದ್ರಾವಿಡ ಮೂಲದ ವೀರಭದ್ರನ ಕುರುಹು ಇದಾಗಿರಬಹುದೆಂದು ಅನಿಸಿತು. ಗವಿಯಲ್ಲಿ ಇನ್ನೂ ದೂರಕ್ಕೆ ಹೋದರೆ ಪ್ರಚಂಡ ಕತ್ತಲು. ಬ್ಯಾಟರಿ ಹಚ್ಚಿ ನೋಡಬೇಕಾದಂತಹ ದಟ್ಟ ಕತ್ತಲು. ಕೌಲಾಲಂಪುರದ ಈ ಭವ್ಯ ದೃಶ್ಯವನ್ನು ನೋಡಿ, ದಾರಿಯುದ್ದಕ್ಕೂ ಪ್ರಕೃತಿಯ ಹಚ್ಚಹಸುರಿನ ಚೆಲುವನ್ನು ಗಿರಿಕಂದರಗಳ ಘನತೆ ಗಂಭೀರತೆಯುನ್ನು ನಿರೀಕ್ಷಿಸುತ್ತ ಪ್ರಶಾಂತನಗರಕ್ಕೆ ಹಿಂದಿರುಗಿದೆವು.

### ಆಧುನಿಕ ಶೈಲಿಯ ಮಸೀದೆ

ಕೌಲಾಲಂಪುರದಲ್ಲಿ ಕೋಟ್ಯಾವಧಿ ರೂಪಾಯಿ ವೆಚ್ಚಮಾಡಿ ಕಟ್ಟಿಸಿದ ಮುಸಲ್ಮಾನರ ಮಸೀದೆಯನ್ನು (Musjid Nagar) ನೋಡಲು ಮರೆಯುವಂತಿಲ್ಲ. ಇದು ಭಾರತದ ಮಸೀದೆಗಳಂತೆ ಇರದೇ ಸಂಪೂರ್ಣ ಅತ್ಯಾಧುನಿಕ ಮಾದರಿಯ, ಅತ್ಯಂತ ಸುಂದರವಾದ ಕಟ್ಟಡವಾಗಿದೆ. ನಾವು ಪ್ರವೇಶಿಸಿದಂತೆ ನಮ್ಮ ಪ್ರತಿಬಿಂಬವನ್ನು ನೆಲದಲ್ಲಿ ಕಾಣುತ್ತೇವೆ. ಅತ್ಯಂತ ಹೊಳಪುಳ್ಳ ಶಿಲೆಗಳ ಜೋಡಣೆಯು ಚತುಷ್ಕೋಣಾಕಾರದ ಮಧ್ಯ ಮಂಟಪದಲ್ಲಿ ನಿರ್ಮಲ ನೀರಿನಿಂದ ತುಂಬಿದ ಪುಷ್ಕರಣಿ ಇರುವದೋ ಹೇಗೆ ಎಂಬ ಭ್ರಾಂತಿ ಬಂದು,

ಮಹಾಭಾರತ ಕಾಲದ ಇಂದ್ರಪ್ರಸ್ಥನಗರಿಯಲ್ಲಿದ್ದ ಪಾಂಡವರ ಅರಮನೆಯ ಸಭಾ ಭವನದ ವರ್ಣನೆಯ ವಿಚಾರ ಮನಸ್ಸಿನಲ್ಲಿ ಮಿಂಚಿತು. ನಾವೆಲ್ಲ ಇಲ್ಲಿಯ ಓರಣ ತೋರಣಗಳನ್ನು ಮನಸಾರೆ ಮೆಚ್ಚಿದೆವು.

**ಚಂದ್ರಗ್ರಹದ ಶಿಲೆ**

ಇಲ್ಲಿಯ ಪ್ರಸಿದ್ಧವಾದ ವಸ್ತುಸಂಗ್ರಹಾಲಯಕ್ಕೆ ರಾಯಭಾರಿ ವರ್ಗದವರು ನಮ್ಮನ್ನು ಕರೆದುಕೊಂಡು ಹೋದರು. ಪ್ರಾಚೀನ ಪಳೆಯುಳಿಕೆಗಳ ಕಲಾವಸ್ತುಗಳ ಹಾಗೂ ದೇವತಾವಿಗ್ರಹಗಳ ಸಂಗ್ರಹ ವಿಪುಲವಾಗಿದೆ. ಅತ್ಯಂತ ಮಹತ್ವದ ಸಂಗತಿ ಯೆಂದರೆ, ಅಲ್ಲಿ ಚಂದ್ರಲೋಕದಿಂದ ಭೂಲೋಕಕ್ಕೆ ತೆಗೆದುಕೊಂಡು ಬಂದ ಚಂದ್ರಶಿಲೆಯ ಒಂದು ಸಣ್ಣ ತುಣುಕನ್ನು ಕಂಡೆವು. ಅದು ಒಂದು ಕಾಜಿನ ಗುಂಡಿನಂತೆ ಹೊಳಪುಳ್ಳ ದ್ದಾಗಿದೆ. ಇದನ್ನು ನೋಡಿ ನಾವು ಬಹಳ ಸಂತೋಷಪಟ್ಟೆವು.

**ಕೌಲಾಲಂಪುರದಲ್ಲಿ ಪಾದಪೂಜೆ**

ಮಲೇಶಿಯಾದ ಉದ್ಯೋಗ-ಸಂಪರ್ಕ ಮಂತ್ರಿಗಳಾದ (Minister of Works, Posts, Telecommunication) ವ್ಹಿ. ಜಿ. ಸಂಬಂಧನ್ ಅವರು ಹಾಗೂ ಅವರ ಪತ್ನಿ ನಮ್ಮನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಪಾದಪೂಜೆ ಮಾಡಿಸಿದರು. ಭಕ್ತಿಭಾವದಿಂದ ಭಜನೆ ಮಾಡಿದರು. ಹಿಂದೂ ಪದ್ಧತಿಯಂತೆ ಹಣ್ಣು ಹಂಪಲ ದಕ್ಷಿಣೆ ಸಮರ್ಪಿಸಿ ವಂದಿಸಿದರು. ಅವರ ಮನೆಯವರು ತುಂಬ ಭಾವಿಕರು. ದಂಪತಿಗಳಿಬ್ಬರೂ ವೀರಶೈವ ಧರ್ಮದ ಬಗ್ಗೆ ಕೆಲವು ಸಂಗತಿಗಳನ್ನು ನಮ್ಮಿಂದ ಬಹಳ ಆಸ್ಥೆಯಿಂದ ಕೇಳಿ ತಿಳಿದುಕೊಂಡರು ಮತ್ತು ಮಂತ್ರಿಗಳ ಮನೆಯವರಾದ ಶ್ರೀಮತಿ ಸಂಬಂಧನ್ ಅವರು ಲಿಂಗಾಷ್ಟಕವನ್ನು ಹೇಳಿದಾಗ ನಮಗೆ ಅತ್ಯಾಶ್ಚರ್ಯ ಹಾಗೂ ಆನಂದವಾಯಿತು. ಶ್ರೀಮತಿ ಸಂಬಂಧನ್ ಅವರು ಸಂಸ್ಕೃತದಲ್ಲಿ ಬಿ. ಎ. ಪದವೀಧರರು. ಸಂಸ್ಕೃತದ ಬಗ್ಗೆ ಒಳ್ಳೆಯ ಪ್ರೇಮ ಹಾಗೂ ಅಭಿಮಾನ ಬೆಳೆಯಿಸಿಕೊಂಡವರು. "ಮಾಳವಿಕಾಗ್ನಿಮಿತ್ರ" ನಾಟಕದ ನಾಂದಿ ಶ್ಲೋಕದ ಈಶ್ವರಸ್ತವನವನ್ನು ನಮ್ಮ ಆಪ್ತಕಾರ್ಯದರ್ಶಿ ಪ್ರೊ. ಎ. ಎಲ್. ಹಿರೇಮಠ ಅವರಿಂದ ಬರೆಸಿಕೊಂಡು, ಅರ್ಥವಿವರಣೆಯನ್ನು ತಿಳಿದುಕೊಂಡು, ನಮ್ಮ ಸನ್ನಿಧಿಯಲ್ಲಿ ವೀಣಾವಾದನದೊಂದಿಗೆ ರಾಗಬದ್ಧವಾಗಿ ಹಾಡಿದರು. ಭಾರತೀಯರು ಎಲ್ಲಿದ್ದರೂ ತಮ್ಮ ಧರ್ಮದ ಪರಂಪರೆಯನ್ನು ಸಂಸ್ಕೃತಿಯ ಸಂಬಂಧವನ್ನು ಬಿಡದೆ ಮುಂದುವರಿಸಿಕೊಂಡು ಹೋಗುವರೆಂಬುದನ್ನು ಅವರಲ್ಲಿ ನಾವು ಕಂಡುಕೊಂಡೆವು.

# ಥೈಲ್ಯಾಂಡಿನಲ್ಲಿ ಎರಡು ದಿನಗಳು

ಬೌದ್ಧಧರ್ಮದ ಮತ್ತೊಂದು ನೆಲೆವೀಡು ಈ ಥೈಲ್ಯಾಂಡು. ಅದರಲ್ಲೂ ಇದರ ರಾಜಧಾನಿ ಬ್ಯಾಂಕಾಕ್ ನೂರಾರು ಬೌದ್ಧ ಮಂದಿರಗಳನುಳ್ಳ ಮಹಾ ಯಾತ್ರಾಸ್ಥಳ. ಆಗ್ನೇಯ ಏಶಿಯಾದಲ್ಲಿಯೇ ಅತಿದೊಡ್ಡ ವಿಮಾನ ನಿಲ್ದಾಣವಾದ ಬ್ಯಾಂಕಾಕಿನ ಡಾಂಗ್ ಮಂಗ್ (Dang Maung) ಅಂತರ್ರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ನಾವು ನವ್ಹಂಬರ ದಿ. ೩ ರಂದು ಮಧ್ಯಾಹ್ನ ಬಂದಿಳಿದೆವು. ಭಾರತದ ರಾಯಭಾರಿ ವರ್ಗದವರು ನಮ್ಮನ್ನು ಸ್ವಾಗತಿಸಿ ಹಿಂದೂ ದೇವಾಲಯದಲ್ಲಿ ಸರಿಯಾದ ವ್ಯವಸ್ಥೆ ಮಾಡಿ ಇಳಿಸಿದರು.

## ಬೌದ್ಧ ಸನ್ಯಾಸಿಗಳ ನೆಲೆವೀಡು

ಪೌರ್ವಾತ್ಯ ರಾಷ್ಟ್ರಗಳಲ್ಲಿ ಥೈಲ್ಯಾಂಡು ಅತ್ಯಂತ ಸುಂದರವಾದುದು. ಪ್ರತಿವರ್ಷ ಲಕ್ಷಾವಧಿ ಪ್ರವಾಸಿಗರನ್ನು ಪರರಾಷ್ಟ್ರಗಳಿಂದ ಆಕರ್ಷಿಸುತ್ತದೆ. ಎಲ್ಲಿ ನೋಡಿದಲ್ಲಿ ಬೌದ್ಧ ಮಂದಿರಗಳು ಬಣ್ಣ ಬಣ್ಣದ ಮೇಲ್ಹಾವಣಿಯ ಛಪ್ಪರಗಳಿಂದ ಹೊಳೆ ಹೊಳೆಯುವ ಕಲಶಗಳು ಈ ನಗರಕ್ಕೆ ಅಪೂರ್ವ ವೈಭವವನ್ನು ನೀಡಿವೆ. "ಕಣ್ಣು ಚೆಲ್ಲಿದ ಕಡೆ ಬೌದ್ಧ ಸನ್ಯಾಸಿಗಳು. ಇದೊಂದು ಭಾರತದ ಕಾಶಿ ಪಟ್ಟಣವಿದ್ದಂತೆ. ಬೌದ್ಧರ ಧರ್ಮದ ಗುರುಗಳೇ ಥೈಲ್ಯಾಂಡಿನ ಆಡಳಿತ ಸೂತ್ರವನ್ನು ವಹಿಸಿಕೊಂಡಿದ್ದಾರೆ. ಅದರ ಮುಖ್ಯ ಗುರುಗಳನ್ನು (His Holiness Supreme patriach of Thiland) ಅವರ ಮಠದಲ್ಲಿ ಭೆಟ್ಟಿಯಾದೆವು. ಅವರೊಂದಿಗೆ ವಿಶ್ವಶಾಂತಿ ಸಮ್ಮೇಲನದ ಬಗ್ಗೆ ಚರ್ಚೆ ನಡೆಯಿತು. ದುಭಾಷಿ ಶ್ರೀ ಶರ್ಮರ ಮುಖಾಂತರ ನಾವಿಬ್ಬರೂ ಮಾತಾಡಿದೆವು. ಥಾಯಿ ಭಾಷೆಯನ್ನು ಅರಿತ ಸಾರ್ವಜನಿಕ ಸಂಪರ್ಕಾಧಿಕಾರಿ ಶ್ರೀ ಶರ್ಮಾ ಅವರು ನಮ್ಮೊಡನೆ ಇರುತ್ತಿದ್ದರು. ಶ್ರೀ ಸಚಿದೇವ ಎಂಬ ಸದ್ಗೃಹಸ್ಥ ದೊಡ್ಡ ಶ್ರೀಮಂತರು, ಮಿಲ್ಲುಗಳ ಮಾಲೀಕರು ಮತ್ತು ಡೈರೆಕ್ಟರರು. ಅತ್ಯಂತ ಸಾದಾ ಖಾದಿ ಉಡುಪನ್ನು ಧರಿಸಿದವರಿದ್ದರೂ ತಮ್ಮ ಶೀಲ ಸೌಜನ್ಯದಿಂದ, ಔದಾರ್ಯ ಘನತೆಗಳಿಂದ ಅತ್ಯಂತ ಪ್ರಭಾವಶಾಲಿಗಳಾಗಿ ಕಾಣುತ್ತಿದ್ದರು. ಇವರು ಎರಡು ಸಾವಿರ ವಿದ್ಯಾರ್ಥಿಗಳ ಹಾಯಸ್ಕೂಲನ್ನು ನಡೆಸುತ್ತಾರೆ. ಭಾರತದಿಂದ ಬಂದವರಿಗೆ ಆತಿಥ್ಯವನ್ನು ಅರ್ಪಿಸುತ್ತಾರೆ. ನಮ್ಮನ್ನು ಅತ್ಯಂತ ಗೌರವಾದರಗಳಿಂದ ಪುರಸ್ಕರಿಸಿ ಪೂಜಾ ಪ್ರಸಾದಗಳಿಗೆ ಎಲ್ಲ ವ್ಯವಸ್ಥೆಯನ್ನು ಮಾಡಿದರು.

## ಸನ್ಯಾಸಿಗಳ ವಿಶ್ವವಿದ್ಯಾಲಯ

ನಮ್ಮ ಕುತೂಹಲವನ್ನು ಕೆರಳಿಸಿದ ಸಂಗತಿ ಎಂದರೆ ಬ್ಯಾಂಕಾಕಿನ ಬೌದ್ಧ ಸನ್ಯಾಸಿಗಳ ವಿಶ್ವವಿದ್ಯಾಲಯ (Mahachulalong Kornraja Vidyalay), ಈ ವಿಶ್ವವಿದ್ಯಾಲಯದಲ್ಲಿ ಸಾಧು ಸನ್ಯಾಸಿಗಳ ಹೊರತು ಪ್ರಾಪಂಚಿಕರಾರೂ ಇಲ್ಲ. ಎರಡು

ಸಾವಿರಕ್ಕೂ ಮೇಲ್ಪಟ್ಟು ಸನ್ಯಾಸಿಗಳು, ಬ್ರಹ್ಮಚಾರಿಗಳು, ಸ್ವಾಮಿಗಳು, ವಟುಗಳು ಇದ್ದರು. ಇವರ ಹೊರತು ಬೇರೆ ಯಾರೂ ಅಭ್ಯಾಸ ಮಾಡುವಂತಿಲ್ಲ. ಇಲ್ಲಿಯ ಪ್ರೊಫೆಸರರೂ ಸನ್ಯಾಸಿಗಳೇ, ಪ್ರಿನ್ಸಿಪಾಲರೂ ಸನ್ಯಾಸಿಗಳೇ, ಆಡಳಿತ ವರ್ಗದವರೂ ಸನ್ಯಾಸಿಗಳೇ, ವಿದ್ಯಾರ್ಥಿಗಳೂ ಸನ್ಯಾಸಿಗಳೇ. ಈ ಸಂಸ್ಥೆಯನ್ನು ನೋಡಿದಾಕ್ಷಣ ನಮಗೆ ಹೇಳತೀರದಷ್ಟು ಮನಸ್ಸಿಗೆ ಆನಂದವಾಯಿತು. ನಮ್ಮ ಮಠದ ಸ್ವಾಮಿಗಳ ತರಬೇತಿಗಾಗಿ ನಾವು ಸ್ಥಾಪಿಸಿರುವ ವಟುಗಳ ಸಂಸ್ಕೃತ ವಿದ್ಯಾಲಯವನ್ನು ಇದೇ ಮಾದರಿಯಲ್ಲಿ ಮುಂದು ವರಿಸಬೇಕೆಂಬ ಬಯಕೆ ನಮಗಾಯಿತು. ಇದರ ಅಧ್ಯಕ್ಷರಾದ ಬುದ್ಧಾಚಾರ್ಯ (Somdech Phra Buddhacharya was Arunrajavarma) ರೊಂದಿಗೆ ಅತ್ಯಂತ ಉತ್ಸಾಹದಿಂದ ನಾಲ್ಕು ತಾಸು ಕಳೆದೆವು. ಅವರು ನಮಗೆ ಅತೀವ ಮಾನ ಮರ್ಯಾದೆ ಸಲ್ಲಿಸಿ, ನೆನಪಿಗಾಗಿ ಬುದ್ಧನ ಬಂಗಾರದ ಪ್ರತಿಮೆಯೊಂದನ್ನು ಹಾಗೂ ಪರಿಚಯ ಗ್ರಂಥಗಳನ್ನು ಕೊಟ್ಟರು.

**ಬುದ್ಧನ ಬಂಗಾರದ ಮೂರ್ತಿ**

ಇಲ್ಲಿಯ ವಾತರಾಜ ಪ್ರದಿಸ್ಥ (Watraja Pradisth) ದೇವಾಲಯದ ಬುದ್ಧನ ಮೂರ್ತಿ ಸುಪ್ರಸಿದ್ಧ. ಇದನ್ನು ಸಂಪೂರ್ಣವಾಗಿ ಬಂಗಾರದಿಂದ ಮಾಡಿದ್ದಾರೆ. ಇದಕ್ಕೆ ಆರು ಟನ್ ಬಂಗಾರ ಬಳಸಲಾಗಿದೆಯೆಂದು ಅಲ್ಲಿಯ ಪೂಜಾರಿಗಳು ನಮಗೆ ಹೇಳಿದರು. ಬಹುಶಃ ಅದು ಅತಿಶಯೋಕ್ತಿಯಾದರೂ ಮೂರ್ತಿಯ ಅನರ್ಘ್ಯ ಬೆಲೆಯನ್ನು ಅಲ್ಲ ಗಳೆಯುವಂತಿಲ್ಲ. ಇದು ಸಾಲಂಕೃತ ಮಂಟಪದಲ್ಲಿದೆ. ಮಂಟಪದ ಕುಸುರು ಕೆತ್ತನೆಯ ಕೆಲಸವನ್ನು ಎಷ್ಟು ವರ್ಣಿಸಿದರೂ ತೀರದು. ಈ ದೇವಾಲಯದ ಒಳ ಪಾರ್ಶ್ವದಲ್ಲಿ ಬುದ್ಧನ ನೂರಾರು ಪ್ರತಿಮೆಗಳು ಅಪೂರ್ವ ಸೌಂದರ್ಯದಿಂದ ಮೆರೆಯುತ್ತವೆ. ಇದನ್ನು ನೋಡಿದರೆ ಒಂದು ಐಶ್ವರ್ಯಭರಿತ ಅರಮನೆಯನ್ನು ನೋಡಿದಂತೆ ಭಾಸವಾಗುತ್ತದೆ. ಬ್ಯಾಂಕಾಕಿನ ರಾಜಮಾನ್ಯ ಮನಿಚಾಪಲ (Manichapal of King Buddha) ದೇವಾಲಯ 'ವಾತರಾಜ ಪ್ರದಿಸ್ಥ'ದಂತೆಯೇ ಅಲಂಕಾರ ವೈಭವದಿಂದ ಕೂಡಿದೆ. ಜಪಾನಿನಂಥ ಎತ್ತರವಾದ ಬುದ್ಧನ ಶಿಲಾಮೂರ್ತಿಗಳು ಇಲ್ಲಿ ರಾರಾಜಿಸುತ್ತಿವೆ.

ಬ್ಯಾಂಕಾಕ್ ಒಂದರಲ್ಲಿಯೇ ಅರವತ್ತು ಸಾವಿರಕ್ಕಿಂತ ಹೆಚ್ಚು ಬೌದ್ಧ ಸನ್ಯಾಸಿಗಳಿರು ವರಂತೆ. ಅವರು ಬುದ್ಧನೇ ದೇವರೆಂದು ಆರಾಧಿಸುತ್ತಾರೆ. ಇಲ್ಲಿಯ ಅನೇಕ ಬುದ್ಧ ದೇವಾಲಯಗಳನ್ನು ತೋರಿಸುವಲ್ಲಿ ನಮಗೆ ವೆನ್ ಸಿವ್ಲಿ ಬೋಧ (Ven Sivlibodh) ಅವರು ತುಂಬಾ ನೆರವಾದರು. ಇಲ್ಲಿಯ ಬೌದ್ಧ ರಾಜಗುರುಗಳೊಂದಿಗೆ ಕೆಲಕಾಲ ವಿಶ್ವ ಧರ್ಮ ಹಾಗೂ ವೀರಶೈವ ಧರ್ಮದ ತಾತ್ವಿಕ ಚರ್ಚೆಗಳನ್ನು ಮಾಡಿದೆವು.

**ಮರಳಿ ತಾಯ್ನಾಡಿಗೆ**

ಆಗಲೇ ಭಾರತ ಮಾತೆಯ ಪುಣ್ಯಭೂಮಿ ನಮ್ಮನ್ನು ಕೈಬೀಸಿ ಕರೆಯುತ್ತಿತ್ತು.

ಪಯಣ ಸಾಕಾಯಿತು. ಭಕ್ತರ ನೆನಹು ಬಾರಿಬಾರಿಗೆ ನಮ್ಮನ್ನು ಸೆಳೆಯಿತು. ದಿ. ೫ ರಂದು ಬ್ಯಾಂಕಾಕ್‌ದಿಂದ ಹೊರಟು ವಿಮಾನ ಮಾರ್ಗವಾಗಿ ಬಂಗಾಲ ಉಪಸಾಗರದ ಆಕಾಶಪಥವನ್ನು ಪ್ರವೇಶಿಸಿ, ಕಲಕತ್ತೆಗೆ ಸಂಜೆ ಎಂಟು ಗಂಟೆಗೆ ತಲುಪಿದೆವು. ಶ್ರೀ ಗುರುಸಿದ್ಧೇಶ್ವರನ ಕೃಪೆಯಿಂದ ಸಮಸ್ತ ಕನ್ನಡಿಗರ ಭಕ್ತಿ ಪ್ರಾರ್ಥನೆಗಳಿಂದ ನಮ್ಮ ಪ್ರಯಾಣ ಸುಖಕರವಾಯಿತು. ನಮ್ಮ ದೂರ ಪ್ರವಾಸದಲ್ಲಿ ಏನೂ ತೊಂದರೆಯಾಗ ಬಾರದೆಂದು ಸಾವಿರಾರು ಭಕ್ತರು ಗುಪ್ತವಾಗಿ ವ್ರತ ನಿಯಮಗಳನ್ನು ಹಿಡಿದಿದ್ದರು. ಅವರಲ್ಲಿ ಅಸಂಖ್ಯಾತರು ತಾಯಂದಿರೇ ಎಂದು ನಮ್ಮ ಗ್ರಹಿಕೆ. ಅವರೆಲ್ಲರಿಗೂ ಕುಮಾರ ಮಹಾಶಿವಯೋಗಿ ಹಾಗೂ ಗುರುಸಿದ್ಧೇಶ್ವರ ಪ್ರಭು ಕಲ್ಯಾಣವನ್ನು ನೀಡಲೆಂದ್ವ ನಾವು ಪ್ರಾರ್ಥಿಸುತ್ತೇವೆ. ನಮ್ಮ ಸಮಸ್ತ ಭಕ್ತರಿಗೂ ಸಮಗ್ರ ಕನ್ನಡ ಜನಕೋಟಿಗೂ ಭಗವಂತನು ಒಳ್ಳೆಯದನ್ನು ಮಾಡಲೆಂದು ಧ್ಯಾನಿಸುತ್ತೇವೆ. ಈ ಪ್ರವಾಸದಲ್ಲಿ ಸಹಪಾಂಥ ರಾಗಿದ್ದ ಶ್ರೀ ರಂಗನಾಥ ದಿವಾಕರ, ನಮ್ಮ ಆಪ್ತಕಾರ್ಯದರ್ಶಿ ಪ್ರೊ. ಎ. ಎಲ್. ಹಿರೇಮಠ ಹಾಗೂ ಅಲ್ಲಲ್ಲಿ ಉಪಚರಿಸಿದ ಭಾರತದ ರಾಯಭಾರಿ ವರ್ಗದವರನ್ನು ನಾವು ಮರೆಯುವಂತಿಲ್ಲ.

ಅಂದು ಕಲಕತ್ತೆಯ ಇನ್‌ಕಮ್‌ಟ್ಯಾಕ್ಸ ಆಫೀಸರ ಎಮ್. ಪಿ. ಹೊಸ ಮನಿಯವರ ಮನೆಯಲ್ಲಿ ವಾಸ್ತವ್ಯ. ಅಲ್ಲಿಯೇ ಅವರ ಆದರಾತಿಥ್ಯದಲ್ಲಿಯೇ ಪ್ರವಾಸದ ಪ್ರಯಾಸ ವನ್ನು ನೀಗಿದೆವು. ಶ್ರೀ ರಾಮಕೃಷ್ಣರ ಬೇಲೂರ ಮಠಕ್ಕೆ ಹೋಗಿ ಅಲ್ಲಿಯ ಸ್ವಾಮಿ ಗಳನ್ನು ಸಂದರ್ಶಿಸಿದೆವು. ನಂತರ ದಿ. ೭ ರಂದು ದಿಲ್ಲಿಗೆ ವಿಮಾನ ಮೂಲಕ ಪ್ರಯಾಣ. ದಿಲ್ಲಿಯಲ್ಲಿದ್ದಾಗ (Indian Express) ದಿನಪತ್ರಿಕೆಯ ಮುಖಪುಟದಲ್ಲಿ, ಮೂರು ಸಾವಿರ ಮಠದ ಚಿಕ್ಕ ಆನೆಯಾದ ಗಣೇಶನು ವಿದ್ಯುತ್ತಿನಾಘಾತದಿಂದ ತೀರಿದ ವಾರ್ತೆ ಚಿತ್ರದೊಂದಿಗೆ ಇದ್ದುದನ್ನು ನೋಡಿ ಮನಸ್ಸಿಗೆ ಬಲು ದುಃಖವಾಯ್ತು. ಈ ಆನೆಯು ಬಹಳ ಬುದ್ಧಿಶಾಲಿಯಿದ್ದು, ಮತ್ತೊಂದು ಆನೆಗಿಂತಲೂ ಸುಂದರವಾಗಿದ್ದು, ಹೇಳಿದ ಮಾತನ್ನು ಕೇಳುತ್ತಿತ್ತು. ನಮ್ಮನ್ನು ಕಂಡೊಡನೆಯೇ ಓಡಿ ಬಂದು ನಮ್ಮ ಹತ್ತಿರ ನಿಲ್ಲುತ್ತಿತ್ತು. ಅದಕ್ಕೇನಾದರೂ ತಿನ್ನಲು ಕೊಟ್ಟೊಡನೆಯೇ ತಿಂದು ನಮಸ್ಕರಿಸಿ ಮುಂದೆ ಹೋಗುತ್ತಿತ್ತು. ಅದು ಮಾಡುತ್ತಿದ್ದ ಆಟಪಾಟಗಳ ನೆನಪು ಬರತೊಡಗಿತು. ಮೂಕ ಪ್ರಾಣಿಯಲ್ಲ ಕಾಣುವ ಕೃತಜ್ಞತೆಯು ಮನುಷ್ಯರಲ್ಲಿ ದೊರೆಯುವದು ದುರ್ಲಭ. ಎರಡು ಮೂರು ದಿನ ಮುಂಚೆ ನಾವು ಥೈಲ್ಯಾಂಡ್‌ದಲ್ಲಿದ್ದಾಗ ನಮ್ಮ ಕನಸಿನಲ್ಲಿ ಈ ಆನೆ ಬಂದಾಗ, ಹೀಗೇಕೆ ಸ್ವಪ್ನಬಿದ್ದಿತೆಂಬುದರ ಬಗ್ಗೆ ಶ್ರೀ ಹಿರೇಮಠರೊಂದಿಗೆ ಒಂದು ತಾಸಿನವರೆಗೆ ಚರ್ಚೆಮಾಡಿದ್ದೆವು. ಇಲ್ಲಿಗೆ ಬಂದೊಡನೆಯೆ ಈ ಘಟನೆಯಾದದ್ದು ತಿಳಿದು ನಮ್ಮಿರ್ವರಿಗೂ ಅಚ್ಚರಿಯಾಯ್ತು. ಆನೆ ನಂಬಿಗೆಯ ಪ್ರಾಣಿಯೆಂಬುದು ಎಲ್ಲರಿಗೂ ತಿಳಿದ ಮಾತಲ್ಲವೆ? ಹುಬ್ಬಳ್ಳಿಗೆ ತೀವ್ರ ಹೋಗಬೇಕೆನ್ನುವ ಆತುರತೆಯೂ ನಮಗೆ ಹಿರಿದಾಯ್ತು.

ದಿನಾಂಕ ೧೧ರಂದು ಮುಂಬಯಿಗೆ ವಿಮಾನದಲ್ಲಿ ಪ್ರಯಾಣ. ಅಲ್ಲಿ ಅಸಿಸ್ಟಂಟ್ ಇನ್‌ಕಮ್‌ಟ್ಯಾಕ್ಸ್ ಕಮಿಶನರ್ ಪ್ಹಿ. ಆರ್. ಹಿರೇಮಠರ ಮನೆಯಲ್ಲಿ ವಾಸ್ತವ್ಯ. ದಿ. ೧೧ ರಂದು ಮುಂಬೈಯಿಂದ ಹೊರಟು ಬೆಳಗಾವಿ ವಿಮಾನ ನಿಲ್ದಾಣಕ್ಕೆ ೧೧ ಗಂಟೆಗೆ ತಲುಪಿದೆವು. ಧಾರವಾಡ, ಬೆಳಗಾವ, ಜಿಲ್ಲೆಗಳ ಸಾವಿರಾರು ಭಕ್ತರಿಂದ ಹಾರ್ದಿಕ ಸ್ವಾಗತವನ್ನು ಸ್ವೀಕರಿಸಿ, ಮಾರ್ಗಮಧ್ಯದಲ್ಲಿ ಅನೇಕರ ಗೌರವಾದರಗಳನ್ನು ಕೈಗೊಂಡು, ಹುಬ್ಬಳ್ಳಿಯ ನಮ್ಮ ಮಠಕ್ಕೆ ಆಗಮಿಸಿದೆವು. ಅಲ್ಲಿ ಸಹಸ್ರಾರು ಭಕ್ತರ, ಪತ್ರಿಕಾಕರ್ತರ, ಗಣ್ಯವ್ಯಕ್ತಿಗಳ ಪ್ರಚಂಡ ಹಾರ್ದಿಕ ಸ್ವಾಗತವನ್ನು ಕೈಕೊಳ್ಳುವದೇ ಮಹಾ ಸಮಸ್ಯೆ ಯಾಯಿತು. ಅನಂತರ ತನ್ನ ನಾಲ್ಕನೆಯ ವಯಸ್ಸಿನಿಂದಲೂ ಶ್ರೀ ಮೂರುಸಾವಿರ ಮಠದ ಸೇವೆ ಸಲ್ಲಿಸಿ, ಎಲ್ಲ ಜನರ ಪ್ರೀತಿಗೆ ಪಾತ್ರವಾಗಿದ್ದ ಗಜ "ಗಣೇಶ"ನ ಬಗ್ಗೆ ವಿಚಾರಿಸಿದೆವು. ಎಲ್ಲವನ್ನು ಕೇಳಿ ಕಳವಳವುಂಟಾಯ್ತು. ೨೨ ವರ್ಷದ ಈ ಗಜವು ಇರುವವರೆಗೆ ಸಾರ್ಥಕ ಸೇವೆ ಸಲ್ಲಿಸಿತ್ತು. ಎಲ್ಲರ ಮನವನ್ನೂ ಆಕರ್ಷಿಸಿತ್ತು. ಈಗ ಸತ್ತು ಬದುಕಿದೆ. ಇದ್ದಾಗ ಸೇವೆ ಸಲ್ಲಿಸಿದ "ಗಣೇಶ" ಸತ್ತರೂ ಇದ್ದು ಸೇವೆ ಸಲ್ಲಿಸು ತ್ತಿದೆ. ಮೂರುಸಾವಿರಮಠದಿಂದ ದಾನವಾಗಿ ನೀಡಿದ ಈ ಗಜದ ಅಸ್ಥಿ ಪಂಜರ **Elephant Skeleton** ಈಗ ಪಿ. ಸಿ. ಜಾಬಿನ ಸಾಯನ್ಸ ಕಾಲೇಜಿನ ಪ್ರಾಣಿಶಾಸ್ತ್ರ ವಿಭಾಗದಲ್ಲಿ ವಿದ್ಯಾರ್ಥಿಗಳಿಗೆ ಅಧ್ಯಯನ ಸಾಧನವಾಗಿ ನಿಂತಿದೆ. ಈ **Elephant Skeleton** ನ್ನು ಈಗಾಗಲೇ ಮೂರು ಲಕ್ಷಕ್ಕಿಂತ ಹೆಚ್ಚು ಜನರು ನೋಡಿದ್ದಾರೆಂದು ಜಾಬಿನ ಸಾಯನ್ಸ ಕಾಲೇಜಿನ ಪ್ರಿನ್ಸಿಪಾಲರಾದ ಬೆಲ್ಲದ ಚಂದ್ರಶೇಖರಪ್ಪನವರು ತಿಳಿಸಿ ದರು ಮತ್ತು ಪ್ರದರ್ಶನಕ್ಕಾಗಿ ಇಡಲ್ಪಟ್ಟ ಈ ಆನೆಯ ಅಸ್ಥಿಪಂಜರವು ಕರ್ನಾಟಕದಲ್ಲಿ ಇದು ಮೊದಲನೆಯದಾಗಿದ್ದು, ಭಾರತದಲ್ಲಿ ನಾಲ್ಕನೆಯದಾಗಿದೆ. ಈಗಲೂ ಇದರ ಬೆಲೆ ಒಂದು ಲಕ್ಷಕ್ಕಿಂತ ಹೆಚ್ಚು ಎಂದು ತಿಳಿಸಿದರು. ಆನೆ ಇದ್ದರೂ ಬೆಲೆ, ಸತ್ತರೂ ಬೆಲೆ.

ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರನ ಅನುಗ್ರಹ ಭಕ್ತರ ಹಾರೈಕೆ ಅಭಿ ಲಾಷೆಯೇ ನಮ್ಮ ಈ ಯಶಸ್ವಿಯಾತ್ರೆಗೆ ಪೋಷಕ, ಪ್ರೇರಿತ. ಈ ಜಾಗತಿಕ ಧರ್ಮ ಹಾಗೂ ಶಾಂತಿ ಸಮ್ಮೇಳನದಲ್ಲಿ ನಾವು ವಿಜಯವೇನಾದರೂ ಸಂಪಾದಿಸಿದ್ದರೆ ಅದು ನಮ್ಮದಲ್ಲ; ಸಮಸ್ತ ಕನ್ನಡ ಭಕ್ತಕೋಟಿಗೆ ಮೀಸಲು, ಅದು ನಿಮ್ಮೆಲ್ಲರ ಗೆಲುವು.

**ಶಾಂತಿ ಪರಿಷತ್ತಿನ ಫಲಶ್ರುತಿ**

ಕ್ಯೂಟೋ ಶಾಂತಿ ಪರಿಷತ್ತಿನ ಪೂರ್ವನಿಯೋಜಿತ ಗುರಿ "ವಿಶ್ವಶಾಂತಿ" ಅದ ಕ್ಕಾಗಿ ಪರಿಷತ್ತಿನ ಸಮಿತಿಯವರು ಹಲವಾರು ತಿಂಗಳು ಮುಂಚಿತವಾಗಿಯೇ ಕೆಲವು ವಿಶ್ವವಿಖ್ಯಾತ ತಜ್ಞರಿಂದ ಅಭಿಪ್ರಾಯಗಳನ್ನು ತರಿಸಿಕೊಂಡಿದ್ದರು. ರೆವ್ಹ. ಇರುಘಾಹ ಡೆಗುಸೀ ಓಮೋಟೊ (Rev. Deguece Ohmoto) ಅವರು ತಮ್ಮ ಅಭಿಪ್ರಾಯ ವನ್ನು ಪರಿಷತ್ತಿನ ಕಾರ್ಯಕಾರಿ ಮಂಡಲಿಗೆ ಹೀಗೆ ತಿಳಿಸಿದರು–

"ಅಂತರ್ರಾಷ್ಟ್ರೀಯ ಯುದ್ಧಗಳನ್ನು ನಿಲ್ಲಿಸುವದು ಮಾತ್ರವಲ್ಲದೇ; ಮಾನವ ಜೀವಿತಕ್ಕೆ ಗಂಡಾಂತರಕಾರಿಯಾದ ಯಾವುದೇ ಪಾಶವೀ ಕೃತ್ಯಗಳನ್ನು ತಡೆಯುವದ ರಲ್ಲಿಯೂ ವಿಶ್ವಶಾಂತಿ ಸಮ್ಮೇಲನವು ಬದ್ಧ ಕಂಕಣವಾಗಬೇಕು."

"Therefore in the conference, the meaning of peace should be discussed from not only the standpoint of our emanicipation from the wars between the countries, but also should be expanded to the emanicipation from all the dangers threatening the existance of Mankind."

ರೆವ್ಹ. ಮಾಸಾಹಿಸಾ ಗೋಇ (Rev. Masahisa Goi) ಅವರು ಪರಿಷತ್ತಿನ ಶಾಂತಿತತ್ವ ಕೇವಲ ಮಾತಿನಲ್ಲಿ ಉಳಿಯದೇ, ಪ್ರತ್ಯಕ್ಷ ಕಾರ್ಯರಂಗದಲ್ಲಿ ಬರಬೇಕೆಂಬು ದನ್ನು ಒತ್ತಿ ಹೇಳಿದರು—

"If we cannot show a practical method to approach the realization of world peace our ideal will be a desk theory and we ourselves will suffer the blame that religion can individual. but it gives up saving all mankind from a world piont of view."

**ಸಹಭಾವ-ಸಹಶಕ್ತಿ**

ವಿಶ್ವಧರ್ಮಗಳ ಶಾಂತಿಪರಿಷತ್ತಿನ ಸೆಕ್ರೆಟರಿ-ಜನರಲ್‌ರಾದ ಹೋಮರ್ ಎ. ಜಾಕ್ (Homer A. Jack) ಅವರು, ನಾವೆಲ್ಲ ಮುರಿದುಹೋಗುವದಕ್ಕಿಂತ ಒಲಿದು ಒಂದಾಗುವದೇ ಮೇಲೆಂದು ಸಾರಿದರು. (The things which unite us are more important than the things which divide us). ಅವರ ವರದಿಯ ಪ್ರಕಾರ ಕ್ಯೂಟೋ ಪರಿಷತ್ತಿನ ಅಂಕಿಅಂಶಗಳು ಕೆಳಗಿನಂತಿವೆ—

**೧. ಪರಿಷತ್ತಿಗೆ ಆಮಂತ್ರಿತರಾಗಿ ಬಂದ ಸದಸ್ಯರು** ೨೧೨

**೨. ಬೇರೆ ಬೇರೆ ಧರ್ಮದವರು**

| | | |
|---|---|---|
| i) | ಕ್ರೈಸ್ತರು (Christians) | ೬೨ |
| ii) | ಬೌದ್ಧರು (Buddhists) | ೩೭ |
| iii) | ಹಿಂದೂಗಳು (Hindus) | ೨೩ |
| iv) | ಇಸ್ಲಾಂ (Moslems) | ೧೮ |
| v) | ಶಿಂಟೋ (Shintoists) | ೧೭ |
| vi) | ಜ್ಯೂ (Jews) | ೭ |
| vii) | ಶೀಖರು (Sikhs) | ૩ |
| viii) | ಜೈನ (Jain) | ೧ |

ix) ಝೋರೋ ಆಸ್ಟ್ರೀಯನ್ (Zoroastrians) ೨
x) ಕನ್‌ಫ್ಯೂಶಿಯನ್ (Confucian) ೧
xi) ಇತರ (Other Religions) ೧೧

**೩. ಬೇರೆ ಬೇರೆ ದೇಶದವರು**

i) ಜಪಾನ ೫೨
ii) ಭಾರತ ೩೩
iii) ಅಮೇರಿಕೆ ೩೨
iv) ಇಂಗ್ಲಂಡ ೧೨
v) ಸಿಂಗಾಪೂರ ೮
vi) ಪಾಕಿಸ್ತಾನ ೭
vii) ಇಂಡೋನೇಶಿಯಾ ೬

(ಒಟ್ಟು ೭ ದೇಶಗಳ ಪ್ರತಿನಿಧಿಗಳು ಪಾಲ್ಗೊಂಡಿದ್ದರು)

**೪. ಇದಲ್ಲದೇ ೭೯ ಜನ ವಿಶೇಷ ಅತಿಥಿಗಳು (ವಾರ್ತೆ, ಚಿತ್ರ, ಮುಂತಾದವರು) ಹಾಗೂ ೨೦೦೦ ಜನ ಬಹಿರಂಗ ಸಭೆಗೆ ಬಂದವರು.**

**ಶುದ್ಧಿ–ಸಿದ್ಧಿ–ಸಾಮರಸ್ಯ**

ನಮ್ಮೆಲ್ಲರಲ್ಲೂ ಒಂದುತನದ ಉತ್ಕಟ ಹಂಬಲ, ಮಾನವ ಕುಲ ಕುಟುಂಬದ ನೆಂಟಿನ ಒಲವು, ಮೈತ್ರಿಯ ಆವಶ್ಯಕತೆಗಳು ಎದ್ದು ಕಂಡವು. ಪರಿಷತ್ತಿನವರು ವರ್ಣಿಸಿದಂತೆ, ಜಗತ್ತಿನ ೭ ದೇಶಗಳಿಂದ, ೧೦ ವಿವಿಧ ಹಾಗೂ ಪ್ರಮುಖ ಧರ್ಮಗಳಿಂದ ಆಗಮಿಸಿದ ನಾವೆಲ್ಲರೂ ಒಂದುತನವನು ಹಂಚಿಕೊಂಡೆವು. ಪರಿಷತ್ತಿನ ವರದಿಯಲ್ಲಿ ಕ್ರೋಡೀಕರಿಸಿದ ಈ ಅಂಶಗಳು ಅತ್ಯಂತ ಮಹತ್ವದವುಗಳು ಇರುವದರಿಂದ ಇಲ್ಲಿ ಅವನ್ನು ಕೊಟ್ಟಿದ್ದೇವೆ–

೧) ಮಾನವ ಕುಟುಂಬದ ಅಪ್ಪಟ ಮೈತ್ರಿ, ಹಾಗೂ ಮಾನವರೆಲ್ಲರ ಸಹಯೋಗ ಸಮಗೌರವ.

"A conviction of the fundamental unity of the human family, and the equality and dignity of all human beings."

೨) ವ್ಯಕ್ತಿಗತ ಪಾವಿತ್ರ್ಯ ಹಾಗೂ ನಿರ್ಮಲ ಅರುಹು.

"A sense of the sacredness of the individual person and his conscience."

೩) ಮಾನವ ಕುಲಗೌರವ.

"A sense of the value of human community."

೪) ಬಲವೇ ಪ್ರಧಾನವಲ್ಲ; ಹಾಗೂ ಮಾನವ ಬಲವು ಸ್ವಯಂ ಪರಿಪೂರ್ಣ ವಾಗಲೀ ಸಾರ್ವತ್ರಿಕವಾಗಲೀ ಅಲ್ಲ.

"A realization that might is not right and that human power is not selfsufficient and absolute."

(೫) ಮತ್ಸರ-ವೈರ-ಸಾಮರ್ಥ್ಯಗಳಿಗಿಂತ ಪ್ರೇಮ, ಅನುಕಂಪ, ನಿಸ್ವಾರ್ಥ, ಅಂತರಂಗ ಸತ್ಯಶುದ್ಧಿ ಹಾಗೂ ಆತ್ಮದ ಅರಹುಗಳು ಮಹಾಘನವಾದವುಗಳು.

"A belief that love, compassion, Selflessness and the force of inner truthfulness and of the spirit have ultimately greater power than hate, enmity and self-interest."

(೬) ಸಿರಿಗರ ಹೊಡೆದವರ ವಿರುದ್ಧವಾಗಿ ನಿಂತು; ದೀನದಲಿತರ ರಕ್ಷಣೆಗೆ ಕಟಿ ಬದ್ಧನಾಗುವದು.

"A sense of obligation to stand on the side of the poor and the oppressed as against the rich and the oppressors."

(೭) ಭವಿಷ್ಯದ ನೆಮ್ಮದಿಯಲ್ಲಿ ಪ್ರಗಾಢ ವಿಶ್ವಾಸ.

"A profound hope that goodwill finally prevail."

**ಪರಿಷತ್ತಿನ ನಿರ್ಣಯಂಗಳು**

ಈ ಉದ್ದೇಶ ಹಾಗೂ ಆಶೋತ್ತರಗಳನ್ನು ನಾವು ನೆನಹಿನಲ್ಲಿರಿಸಿ, ವಿಶ್ವಶಾಂತಿ ಸಮ್ಮೇಲನದಲ್ಲಿ ಪಾಲುಗೊಂಡೆವು. ಸುಮಾರು ೩೯ ದೇಶಗಳ ನಾನಾ ಪ್ರತಿನಿಧಿಗಳು, ಬಹಿರಂಗಾಧಿವೇಶನದ (Plenary sessions) ಅತ್ಯಂತ ಮಹತ್ವದ ಅಂಗವಾದ ಕ್ರಿಯಾ ಸಮಿತಿಗಳಲ್ಲಿ (Conference workshops) ಪಾಲುಗೊಂಡೆವು. ಜಗತ್ತಿನ ಹತ್ತು ಪ್ರಧಾನ ಧರ್ಮಗಳಿಂದ ನಾವು ಸಹಭಾಗಿಗಳಾಗಿ ಸಹಭಾವನೆಯಿಂದ ಚರ್ಚಿಸಿದೆವು. ಈ ಕ್ರಿಯಾಸಮಿತಿಗಳ ನಿರ್ಧಾರವನ್ನೇ ಕ್ರೋಡೀಕರಿಸಿ ದಿನಾಂಕ ೨೧ರ ಬಹಿರಂಗಾಧಿವೇಶನದಲ್ಲಿ ಅಂತಿಮ ನಿರ್ಣಯಕ್ಕಾಗಿ ಮುಂದಿರಿಸಲಾಯಿತು. ಪರಿಷತ್ತು ಕೆಲಕಾಲ ಚರ್ಚೆಯ ತರುವಾಯ ಒಮ್ಮತದಿಂದ ನಿರ್ದಿಷ್ಟ ನಿರ್ಣಯಗಳನ್ನು ಕೈಗೊಂಡಿತು. ಅವು ಸ್ಥೂಲವಾಗಿ ಹೀಗಿವೆ—

(೧) ಸಂಯುಕ್ತ ರಾಷ್ಟ್ರ ಸಂಘವು ೧೯೪೮ ರಲ್ಲಿ ಘೋಷಿಸಿದ ಮಾನವೀಯ ಹಕ್ಕು ಬಾಧ್ಯತೆಗಳ ಶಾಂತಿಯುತ ಪುರಸ್ಕಾರ.

(೨) ಎಲ್ಲ ದೇಶಗಳ ಸಾಮಾಜಿಕ ಹಾಗೂ ಆರ್ಥಿಕ ಪ್ರಗತಿಯಲ್ಲಿ (Socio-economic development) ಶಾಂತಿಯುತ ಸಮಾನಾವಕಾಶ; ಹಿಂದುಳಿದ ರಾಷ್ಟ್ರಗಳ ಹಾಗೂ ಜನಾಂಗಗಳ ಅಭಿವೃದ್ಧಿಯಲ್ಲಿ ಶಾಂತಿಯುತ ಪರಿಹಾರ.

(೩) ಶಾಂತಿಗಾಗಿ ಪ್ರತಿಯೊಂದು ರಾಷ್ಟ್ರವೂ ಶಸ್ತ್ರಾಸ್ತ್ರಗಳ ಸನ್ಯಾಸ ಕೈಕೊಳ್ಳಬೇಕು.

ಒಟ್ಟಿನಲ್ಲಿ ನಿಶ್ಯಸ್ತ್ರೀಕರಣ–ಪ್ರಗತಿ ಮಾನವ ಹಕ್ಕುಗಳ ಪುನರುತ್ಥಾನ (Disarmament, Development, Human Rights) ಇದೇ ಕ್ಯೂಟೋದ ವಿಶ್ವಧರ್ಮಗಳ ಶಾಂತಿಪರಿಷತ್ತಿನ ಸಂದೇಶ. ಇದೇ ಫಲಶ್ರುತಿ.

**ಅನುಭವ ಮಂಟಪದ ಪ್ರತಿಧ್ವನಿ**

ನಾವು ಗಮನಿಸಿದ ಪ್ರಕಾರ ಸದ್ಯ ನಡೆಯುತ್ತಿರುವ ವ್ಹಿಯಟ್‌ನಾಮ್ ಯುದ್ಧವನ್ನು ನಿಲ್ಲಿಸಬೇಕೆಂಬ ವಿಚಾರಗಳು ಎಲ್ಲ ಕ್ರಿಯಾಸಮಿತಿಗಳಲ್ಲಿ ಹಾಗೂ ಬಹಿರಂಗಾಧಿವೇಶನಗಳಲ್ಲಿ ಕೇಳಿಬಂದವು. ಮಾನವನು ಮಾನವನನ್ನು ಹಿಂಸಿಸುವದಾಗಲೀ, ಕೊಲೆ ಮಾಡುವದಾಗಲೀ, ಧರ್ಮಬಾಹಿರ. ೨೦ನೇ ಶತಮಾನದ ಈ ಶಾಂತಿಪರಿಷತ್ತಿನಲ್ಲಿ ಕೈಕೊಂಡ ಶಾಂತಿ, ಅಹಿಂಸೆ, ಸಮಾನಾವಕಾಶಗಳ ನಿರ್ಣಯವನ್ನು, ಎಂಟುನೂರು ವರ್ಷಗಳ ಹಿಂದೆಯೇ ಕಲ್ಯಾಣದಲ್ಲಿ ನೂರಾರು ಶರಣರು ತಮ್ಮ ಅನುಭವ ಮಂಟಪದಲ್ಲಿ ಕೈಕೊಂಡು; "ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ", "ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ", "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" –ಎಂದು ಘೋಷಿಸಿದ್ದರು. ಆದರೆ ದುರ್ದೈವಕ್ಕೆ ಇಂದಿನ ಶಾಂತಿಪರಿಷತ್ತಿಗೆ ಇರುವ ರೇಡಿಯೋ ವಾರ್ತಾ, ಟೆಲಿವ್ಹಿಜನ್, ಚಲನಚಿತ್ರ ಹಾಗೂ ಅಂತರ್ರಾಷ್ಟ್ರೀಯ ಸುಲಭ ವಾಹನ ಸಂಪರ್ಕಗಳು ಕಲ್ಯಾಣದ ಅನುಭವಮಂಟಪಕ್ಕೆ ಇರಲಿಲ್ಲ. ಆದ್ದರಿಂದ ಆ ಮಾತುಗಳು ಹಳಬರ ಮಾತುಗಳಾಗಿ, ತಾಳೋಲೆಗಳಲ್ಲಿಯೇ ಮಲಗಿಹೋಗಿದ್ದವು. ಆದರೆ "ಶರಣರ ನುಡಿ ಪಾವನ" ಅವಕ್ಕೆ ವಿನಾಶವಿಲ್ಲ. ಅಂತೆಯೇ ಶರಣರ, ಸಂತರ, ಮಹಾತ್ಮರ, ನುಡಿಗಳ ಮಾರ್ನುಡಿಗಳನ್ನೇ ನಾವು ಕ್ಯೂಟೋ ಶಾಂತಿಪರಿಷತ್ತಿನಲ್ಲಿ ಕೇಳಿದೆವು. ೧೨ನೇ ಶತಮಾನದ ಶರಣರ ಆ ನುಡಿಗಳನ್ನು ಅದೇ ಶತಮಾನದ ಜನತೆಯೇ ಮರೆತು ರಕ್ತದ ಹೋಳಿಯನ್ನಾಡಿತು. ಅದರಂತೆ ೨೦ನೇ ಶತಮಾನದ ಶಾಂತಿಪರಿಷತ್ತಿನ ವಿದ್ವನ್ಮಣಿಗಳ ಮಹಾವಾಕ್ಯಗಳನ್ನು ಮತ್ತೆ ಈ ಶತಮಾನದ ಜನತೆ ಮರೆತು, ಮೂರನೇ ಮಹಾಯುದ್ಧವನ್ನು ಬರಮಾಡಿಕೊಳ್ಳದಿರಲಿ. ಈ ಮಾನವ ದುರಂತ, ನರಬಲಿ, ರಕ್ತತರ್ಪಣ, ಅನ್ಯ ನೆಲಜಲಗಳಿಗೆ ದಾಹ, ದುರಹಂಕಾರದ ಧಾಷ್ಟ್ಯ್ರ ಬಳಿಗೆ ಇನ್ನು ಕೊನೆಯ ಪರದೆ ಬೀಳಲಿ, ಜನ ಬದುಕಲಿ, ನಾವು ಬದುಕಿ ಇನ್ನೊಬ್ಬರನ್ನು ನಮ್ಮೊಂದಿಗೆ ಬದುಕಿಸುವಂತಾಗಲಿ, ಆಚಾರವೇ ಸ್ವರ್ಗವಾಗಿ ನಿಲ್ಲುವಂತಾಗಲೆಂದು ಪರಮಾತ್ಮನಲ್ಲಿ ಅನನ್ಯಮನಸ್ಕರಾಗಿ ಪ್ರಾರ್ಥಿಸುತ್ತೇವೆ.

–ಸತ್ಯಂ ಶಿವಂ ಸುಂದರಂ–

# ಯುರೋಪು ಯಾತ್ರೆಯ ಪೂರ್ವರಂಗ

೧೯೭೦ರ 'ಟೋಕಿಯೋ'ದ "ಪ್ರಥಮ ವಿಶ್ವಧರ್ಮಗಳ ಶಾಂತಿಪರಿಷತ್ತಿ"ನಿಂದ; ೧೯೭೪ರ 'ಲ್ಯೂವೆನ್'(Leuven)ದ "ದ್ವಿತೀಯ ವಿಶ್ವಧರ್ಮಗಳ ಶಾಂತಿ ಪರಿಷತ್ತಿ"ಗೆ ಯಾತ್ರೆ! ಶುಭಯಾತ್ರೆ!! ವಿಶ್ವಶಾಂತಿಗಾಗಿ ವಿಶ್ವಧರ್ಮಗಳ ಪ್ರಾಚಾರ್ಯರೆಲ್ಲರ ೧೯೭೦ರ ಕೂಗಿಗೆ ೧೯೭೪ರ ಮಾರ್ಕೂಗು!!!

## ಅಣ್ವಸ್ತ್ರಗಳ ಪೈಪೋಟಿ: ಮಿಲಿಟರಿ ಸ್ಪರ್ಧೆ

ಸೂರ್ಯೋದಯವಾದರೆ ಸಾಕು; ಅಶಾಂತಿಯ ರಕ್ತರಾತ್ರಿಗಳು ಗೋಪುರಕಟ್ಟಿ ನಿಲ್ಲುತ್ತಿರುವ ಕಾಲ. ವ್ಹಿಯಟ್‌ನಾಮು ಕದನದಲ್ಲಿ ವಿಶ್ವದ ಶಕ್ತಿ ಬಣಗಳ ರಕ್ತಪ್ರವಾಹ. ಚೀನಪಾಕಗಳ ಔದ್ಧತ್ಯ. ಇಜಿಪ್ತ ಇಸ್ರೇಲಗಳ ಪ್ರಾಣದಾಹ. ಡಿಗೋಗಾರ್ಸಿಯಾದಲ್ಲಿ ಹೊತ್ತುತ್ತಿರುವ ಬೆಂಕಿಯ ಹೊಂಚು ಅಣ್ವಸ್ತ್ರಗಳ ಅಸಂತೃಪ್ತಿ ಪೈಪೋಟಿ; ಮಿಲಿಟರಿ ಸ್ಪರ್ಧೆಯಲ್ಲಿ ವ್ಯಕ್ತಿ ಶಕ್ತಿಯ (Man-power) ಹ್ರಾಸ. ಎಲ್ಲವೂ ಶಾಂತ ವಿಶ್ವವನ್ನು ಅಶಾಂತಿಗೆ, ಅಷ್ಟೇ ಅಲ್ಲ; ಅಂತಿಮ ಮಂಗಳಾರತಿಗೆ ಎಳೆದು ಒಯ್ಯುತ್ತಿವೆ. ಈ ಸಮಯದಲ್ಲಿ, ಮಾನವೇತಿಹಾಸದ ಸಾವಿರ ವರ್ಷಗಳಲ್ಲಿ ಧರ್ಮಧ್ವಜವನ್ನು ಹಾರಿಸಿದ ಜಾಗತಿಕ ಧರ್ಮಗಳು ಹಾಗೂ ಧರ್ಮವೇತ್ತರು, ಮಠಾಧಿಪತಿಗಳು ಕೈಕಟ್ಟಿ ಕುಳ್ಳಿರ ಬೇಕೇನು? ಧರ್ಮಕ್ಕಾಗಿ ಕೂಗಿದವರು ಶಾಂತಿಗಾಗಿ ಶ್ರಮಿಸಬೇಡವೇ? ಈ ಗಂಡಾಂತರ ಪ್ರಶ್ನೆ ಪರಿಹಾರಕ್ಕೆ ಪಣತೊಟ್ಟದ್ದು ಜಪಾನಿನ ಕ್ಯೂಟೋ ವಿಶ್ವಶಾಂತಿ ಸಮ್ಮೇಲನ (World Conference on Religion and Peace Kyoto, Japan, 1970). ಅಲ್ಲಿ ಕೂಡಿದವರು ೩೯ ರಾಷ್ಟ್ರಗಳ ಧರ್ಮದ ಮುಖಂಡರು. ಇಲ್ಲಿ ಬೆಲ್ಜಿಯಂ ದೇಶದ ಲ್ಯೂವನ್ನಿನಲ್ಲಿ; ಸುಮಾರು ೫೦ ರಾಷ್ಟ್ರಗಳ ಪ್ರತಿನಿಧಿಗಳು ಸೇರಿದರು. ಲ್ಯೂವನ್ನಿನ "ಮರಿಯಾ ಥೆರೇಸಾ ಕಾಲೇಜಿ"ನಲ್ಲಿ (Maria Theresia College), "ಗ್ರೋಟೆ ಔಲಾದ" (Grote Aulad) ದೊಡ್ಡ ಸಭಾಂಗಣದಲ್ಲಿ, ವಿಶ್ವಧರ್ಮಗಳ ದ್ವಿತೀಯ ಶಾಂತಿ ಪರಿಷತ್ತು. (Second world Conference on Religion and Peace) ೧೯೭೪ ಆಗಸ್ಟ್ ೨೮ ರಿಂದ ಸಪ್ಟೆಂಬರ ೩ರ ವರೆಗೆ ನೆರವೇರಿತು.

## ಒತ್ತಾಯದ ಕರೆ: ಆತ್ಮೀಯ ಆಮಂತ್ರಣ

ಜಪಾನಿನ ಶಾಂತಿಪರಿಷತ್ತಿನಲ್ಲಿ ಭಾಗವಹಿಸಿದ ನಾವು ಮತ್ತೆ ಬೆಲ್ಜಿಯಮ್ಮಿನ "ಲ್ಯೂವೆನ್" ಪರಿಷತ್ತಿಗೆ ಹೋಗಿಬರಲು ಕಾರಣವೇನು? ಇದು ಸಹಜ ಪ್ರಶ್ನೆ.

ಅಮೇರಿಕೆಯ ಡಾ|| ಹೋಮರ್ ಎ. ಜಾಕ್(Homer A. Jack)ಅವರು WCRPಯ (World Conference on Religion and Peace) ಪ್ರಧಾನ ಕಾರ್ಯದರ್ಶಿಗಳಾಗಿದ್ದು; ನಮ್ಮನ್ನು ಪರಿಷತ್ತಿನ ಕಾರ್ಯಕಾರಿ ಮಂಡಲಿಯ ಸದಸ್ಯರನ್ನಾಗಿ ಮಾಡಿಕೊಂಡರು. ಅವರಿಂದ ಅಮೇರಿಕೆಯಲ್ಲಿ ಕಳೆದ ವರ್ಷ ಸೇರಿದ ಮೀಟಿಂಗ್‌ಗೆ ಬರಲು ನಮಗೆ ಒತ್ತಾಯದ ಕರೆ ಎರಡು ಸಲ ಬಂದರೂ ನಾವು ಹೋಗಲಿಲ್ಲ. ಅದಕ್ಕೆ ಬೆಳೆಯುತ್ತಿರುವ ನಮ್ಮ ಮಠದ ಕಾರ್ಯಭಾರವೇ ಕಾರಣ. ಒಂದು ಸಲ ಬರಗಾಲದ ಬವಣೆಯಲ್ಲಿದ್ದ ಕರ್ನಾಟಕದ ಕೆಲವು ಜಿಲ್ಲೆಗಳ ಸಲುವಾಗಿ ಪಾದಯಾತ್ರೆ ಮಾಡಿ ಧನಧಾನ್ಯ ವಸ್ತ್ರಗಳನ್ನು ಕೂಡಿಸಿ ಹಂಚುವ ಸಲುವಾಗಿ ಕಾರ್ಯನಿರತರಾಗಿದ್ದೆವು. ಇನ್ನೊಂದು ಸಲ ಹುಬ್ಬಳ್ಳಿಯಲ್ಲಿಯೇ ರಾಷ್ಟ್ರಮಟ್ಟದ "ಅಖಿಲ ಭಾರತ ಸರ್ವಧರ್ಮಗಳ ಶಾಂತಿ ಪರಿಷತ್ತನ್ನು" ಹಮ್ಮಿಕೊಂಡುದರಿಂದ ಅಮೇರಿಕೆಗೆ ಹೋಗುವದು ಅಸಾಧ್ಯವಾಯಿತು. ಹುಬ್ಬಳ್ಳಿಯಲ್ಲಿ ನಾವು ಕೈಕೊಂಡ "ಸರ್ವಧರ್ಮಗಳ ಶಾಂತಿಪರಿಷತ್ತಿನ" ಪ್ರಭಾವವು ಡಾ|| ಹೋಮರ್ ಎ. ಜಾಕ್ ಅವರ ಮೇಲೆ ಹಾಗೂ ಚೇರಮನ್‌ರಾದ ಆರ್ಚಬಿಶಪ್ ಆ್ಯಂಗ್ಲೋ ಫರ್ನಾಂಡಿಸರ (Archbishop Angelo Fernandes) ಮೇಲೆ ದಟ್ಟವಾಗಿ ಉಂಟಾಯಿತು. ಸ್ವತಃ ಹೋಮರ್ ಎ. ಜಾಕ್ ಅವರೇ ಹುಬ್ಬಳ್ಳಿ ಕಾರ್ಯಕ್ರಮಗಳ ವಾರ್ತೆಯನ್ನು ಅಮೇರಿಕೆಯ ಪ್ರಮುಖ ದಿನಪತ್ರಿಕೆಯಾದ "ಅಮೇರಿಕನ್ ಟಾಯಿಮ್ಸ್"ದಲ್ಲಿ ಪ್ರಸಾರಿಸಿದರು. ಆದರೂ ಹುಬ್ಬಳ್ಳಿಯ ನಮ್ಮ ಮಠದ ಕಾರ್ಯಬಾಹುಲ್ಯಕ್ಕಾಗಿ ಲ್ಯೂವನ್ನಿನ ಪರಿಷತ್ತಿಗೆ ಪ್ರಯಾಣಿಸಲು ನಮ್ಮ ಮನಸ್ಸಿಗೆ ಬೇಡವೆನಿಸಿತು. ಒಂದೆಡೆಗೆ ಶರಣರ ಶಾಂತಿ ಸಂದೇಶವನ್ನು ಐರೋಪ್ಯ ರಾಷ್ಟ್ರಗಳ ವಿಚಾರ ಲೋಕದಲ್ಲಿ ಪ್ರಸಾರಗೊಳಿಸಬೇಕೆಂಬ ಹಂಬಲ. ಇನ್ನೊಂದೆಡೆಗೆ ನಮ್ಮ ಮಠದ ಎಡೆಬಿಡದ ಕಾರ್ಯರಂಗ ಕೊನೆಗೆ ನಮ್ಮ ಅಸಮ್ಮತಿಯೇ ಗೆದ್ದುಬಿಟ್ಟಿತು. ನಮಗೆ ಬರಲು ಅನುಕೂಲವಿಲ್ಲವೆಂದು ಪರಿಷತ್ತಿಗೆ ಬರೆದೂ ಆಯಿತು. ಆದರೇನು? ಡಾ|| ಹೋಮರ್ ಎ. ಜಾಕ್ ಅವರಿಂದ ದ್ವಿತೀಯ ಜಾಗತಿಕ ಧರ್ಮಗಳ ಶಾಂತಿಪರಿಷತ್ತಿಗೆ ಬರಲೇಬೇಕೆಂದು ಒತ್ತಾಯದ ಕರೆಬಂದಿತು. ನಾವು ನಮ್ಮ ಮಠದ ಭಕ್ತರೊಂದಿಗೆ ಆಲೋಚಿಸಿ ಮೌನ ತಾಳಿದೆವು. ಅಷ್ಟರಲ್ಲಿ ಡಾ|| ಹೋಮರ್ ಎ. ಜಾಕ್ ಅವರಿಂದ ದ್ವಿತೀಯ ಪತ್ರ ಬಂದಿತು. ಹಿಂದಿನ ಅವರ ಪತ್ರಕ್ಕೆ ಉತ್ತರ ಹೋಗದ್ದರಿಂದ ಅವರು ಒತ್ತಾಯಿಸಿ ಮರುಉತ್ತರಕ್ಕಾಗಿ ವಿನಂತಿಸಿದ್ದರು. ಒಪ್ಪಿಗೆಗೆ ಕೇಳಿಕೊಂಡಿದ್ದರು. ಇದೇ ಸಮಯದಲ್ಲಿ ಶ್ರೀ ರಂಗನಾಥ ದಿವಾಕರ ಅವರಿಂದ ಮತ್ತು ಭಾರತೀಯ ನಿಯೋಗದ ಕಾರ್ಯದರ್ಶಿಗಳಾದ ರಾಧಾಕೃಷ್ಣನ್ ಅವರಿಂದ ನಮಗೆ ಪರಿಷತ್ತಿಗೆ ಹೋಗುವದರ ಸಲುವಾಗಿ ಒತ್ತಾಯದ ಓಲೆಗಳು ಬಂದವು. ಆದರೆ ಇದೇ ಕಾಲಕ್ಕೆ ಕೆಲವು ಮಠಗಳ ಪಟ್ಟಾಧಿಕಾರದ ಕಾರ್ಯದಲ್ಲಿ ಅಧ್ಯಯನಕ್ಕೆ ಬಿಡುವಿಲ್ಲದ್ದರಿಂದ ಉತ್ತರಿಸಲು ಸಾಧ್ಯವಾಗಲಿಲ್ಲ. ಮತ್ತೆ ಲ್ಯೂವನ್‌ದಿಂದ ಡಾ|| ಹೋಮರ್ ಎ. ಜಾಕ್ ಅವರ ಮೂರನೆಯ ಪತ್ರ ಬಂದು ಕೈಸೇರಿತು. ಅದರಲ್ಲಿ "ನಿಮ್ಮಿಂದ ಒಂದು

ಪತ್ರವೂ ಇಲ್ಲದ ಮೂಲಕ ನಿರಾಶೆಗೊಂಡಿದ್ದೇವೆ. ಕೊನೆಗೆ ತಮ್ಮ ಅಭಿಪ್ರಾಯವನ್ನಾದರೂ ಬರೆದು ಕಳಿಸಿರಿ ಮತ್ತು ಲ್ಯೂವೆನ್ನಿನಲ್ಲಿ ಆಗತಕ್ಕ ಕಾರ್ಯಕ್ರಮಗಳ ನಿರ್ಣಯ ಬಗ್ಗೆ ತಮ್ಮ ಒಪ್ಪಿಗೆಯನ್ನು ನೀಡುವಲ್ಲಿ ನಮಗೆ ಅಧಿಕಾರವನ್ನು ನೀಡಬೇಕು" ಎಂದು ಬರೆದಿದ್ದರು. ನಾವು ಪರಿಷತ್ತಿನ ಕಾರ್ಯಕ್ರಮಗಳ ಬಗ್ಗೆ ನಮ್ಮ ಆಲೋಚನೆಗಳನ್ನು ಅವರಿಗೆ ತಿಳಿಸಿ ಅವರಿಗೆ ಅಭಿಪ್ರಾಯದ ಅಧಿಕಾರ ಕೊಟ್ಟೆವು; ಅಲ್ಲದೆ ನಮಗೆ ಗದಗ ತೋಂಟದಾರ್ಯಮಠ ಹಾಗೂ ಬೇರೆ ಮತ್ತೆ ಕೆಲವು ಮಠಗಳ ಪಟ್ಟಾಭಿಷೇಕಗಳ ಹೊಣೆಗಾರಿಕೆ ಇದ್ದುದರಿಂದ ಬರಲು ಬಿಡುವಿಲ್ಲವೆಂದು ಬರೆದೆವು. ಇದೇ ಸಮಯಕ್ಕೆ ಬೆಂಗಳೂರಿಗೆ ಫೋನಮಾಡಿ ದಿವಾಕರ ಅವರಿಗೆ ನಮ್ಮ ಅಭಿಪ್ರಾಯವನ್ನು ಅರುಹಿ ಅವರನ್ನು ನಿರುತ್ಸಾಹಗೊಳಿಸಿದ್ದಾಯಿತು. ಆದರೆ ಡಾ|| ಹೋಮರ್ ಎ. ಜಾಕ್ ಅವರು ನಮ್ಮ ಪತ್ರಕ್ಕೆ ಅತ್ಯಂತ ದುಃಖಿತರಾಗಿ ಬರೆಯುತ್ತ–"ನಿಮ್ಮ ಪತ್ರ ನಮ್ಮನ್ನು ದುಃಖಸಾಗರದಲ್ಲಿ ಮುಳುಗಿಸಿತು. ದಯವಿಟ್ಟು ತಾವು ಇನ್ನೂ ವಿಚಾರಿಸಿ; ಧರ್ಮದ ದೃಷ್ಟಿಯಿಂದ ತಾವು ಒಪ್ಪಿ, ನಿಮ್ಮ ಕೆಲಸಗಳನ್ನು ಸ್ವಲ್ಪಮಟ್ಟಿಗೆ ಬದಿಗೊತ್ತಿ ಬಂದರೆ ಮನಸ್ಸಿಗೆ ಬಹಳ ಸಮಾಧಾನವಾಗುವದು. ನಿಮಗೆ ಎಲ್ಲತರದ ಪೂಜಾವ್ಯವಸ್ಥೆ ಮಾಡಲಾಗುವದು. ಹವೆ ಚೆನ್ನಾಗಿದೆ. ಲ್ಯೂವೆನ್ ಸುಂದರ ನಗರವಿದ್ದು, ಸೃಷ್ಟಿ ಸೌಂದರ್ಯ ಚೆನ್ನಾಗಿದೆ. ಇನ್ನೊಮ್ಮೆ ವಿಚಾರಿಸಿ ನಮ್ಮ ಆಗ್ರಹದ ಕರೆಯನ್ನು ಮನ್ನಿಸುವಿರೆಂದು ನಂಬಿರುವೆವು" ಎಂದು ಬರೆದರು. ನಮಗೂ ಮನಸ್ಸಿನಲ್ಲಿ ಕಸಿವಿಸಿಯಾಯಿತು. ಈ ಮನಸ್ಥಿತಿಯಲ್ಲಿ ರಾಧಾಕೃಷ್ಣ ಅವರೂ ನಮಗೆ ಎರಡನೆಯ ಪತ್ರ ಬರೆದು; ಅದರಲ್ಲಿ– "ನಿಮ್ಮ ಹಿಂದಿನ ಪರಿಷತ್ತಿನ ಭಾಷಣ ಹಾಗೂ ಹುಬ್ಬಳ್ಳಿಯಲ್ಲಿ ನೀವು ಜರುಗಿಸಿದ ಸರ್ವಧರ್ಮದ ಸಮ್ಮೇಲನ ಎಲ್ಲರನ್ನೂ ಪ್ರಭಾವಿತರನ್ನಾಗಿ ಮಾಡಿದೆ. ನಿಮಗೆ ಒಬ್ಬರೆ ಬರಲು ಕಷ್ಟವಾದರೆ ನಿಮ್ಮೊಡನೆ ಪ್ರೊ. ಎ. ಎಲ್. ಹಿರೇಮಠ ಇರುತ್ತಾರೆ. ಅವರನ್ನು ಡೆಲಿಗೇಟ್ ಅಂತ ಮಾಡುತ್ತೇವೆ. ನಿಮ್ಮೊಡನೆ ಕರೆದುಕೊಂಡು ಬರಬಹುದು. ಅಲ್ಲಿ ನಿಮಗೆ ಎಲ್ಲ ವ್ಯವಸ್ಥೆಯೂ ಆಗುತ್ತದೆ" ಎಂದು ಬರೆದಿದ್ದರು.

## ಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ಸಂಕಲ್ಪ!

"ಇದು ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರನ ಸಂಕಲ್ಪ" ಎಂದು ನಮ್ಮ ಅಂತರಾತ್ಮ ನಿರೂಪಿಸಿತು. ಪರಿಷತ್ತಿಗೆ ಹೋಗಲು ತಪ್ಪಿಸಿಕೊಳ್ಳುವ ನಮ್ಮ ಯತ್ನಗಳೆಲ್ಲ ವಿಫಲವಾದವು. ನಮ್ಮ ಶ್ರೀ ಮೂರುಸಾವಿರಮಠದ ಭಕ್ತರಿಂದಲೂ ನಮಗೆ ಒತ್ತಾಯಗಳು ಬಂದವು. ನೇರವಾಗಿ ಲ್ಯೂವೆನ್ನಿಗೆ ನಮ್ಮ ಒಪ್ಪಿಗೆ ಕಳುಹಿಸಿದೆವು. ಒಪ್ಪಿಗೆಯ ಉತ್ತರಕ್ಕೆ ಡಾ|| ಹೋಮರ್ ಎ. ಜಾಕ್ ಅವರಿಂದ ಆನಂದಪೂರಿತ ಮಾರುತ್ತರ ಬಂದಿತು. ಅದರಲ್ಲಿ ಅವರು **"It is good to hear from you and to know that you will be attending our Second world Conference. As I wrote earlier, our Conference world not be right without you."**

ಅಂತೂ ನಮ್ಮ ಪರಿಷತ್ತಿನ ಸಿದ್ಧತೆ ಪ್ರಾರಂಭವಾಯಿತು. ಅನೇಕ ಗ್ರಂಥಗಳ ಸಮಾ

ಲೋಚನೆ ಹಾಗೂ ವಿದ್ವಾಂಸರೊಂದಿಗೆ ಸಮಾಲೋಚನೆಯಾಯಿತು. ಈ ಅಧ್ಯಯನದ ಕಾಲದಲ್ಲಿ ಪ್ರೊ. ಮೆನೆರ್‌ಕ್ಸಿಸ್ ಹಾಗೂ ಎಸ್. ಎಂ. ಅಂಗಡಿ ಅವರ ಸಹಕಾರವು ದೊರೆಯಿತು. ಕೊನೆಗೆ ಬಸವಣ್ಣನವರ–"ಉರಿಬರಲಿ ಸಿರಿಬರಲಿ ಬೇಕು ಬೇಡೆನ್ನೆನಯ್ಯಾ!".... "ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೆ ಬರಲಿ" ಎಂಬ ಧೀರ ವಾಣಿ ದಾರಿದೀಪವಾಯಿತು. ನಿರ್ಧಾರ ನಿಂತಿತು. ಸಂಕಲ್ಪ ಕೂಡಿತು.

## ಶಾಂತಿಯಾತ್ರೆ–ಶುಭಯಾತ್ರೆ

ದಿನಗಳು ಸಮೀಪಿಸುತ್ತಿದ್ದಂತೆ ನಮ್ಮ ಯುರೋಪದ ಯಾತ್ರೆಯ ವಿಷಯವನ್ನು ಗುಟ್ಟಾಗಿ ಇರಿಸಿದೆವು. ಕಾರಣ "ಸನ್ಮಾನ ಸಮಾರಂಭ"ಗಳ ಹಾವಳಿಯಾಗಬಾರದೆಂದು. ಪತ್ರಿಕೆಗಳಿಗೂ ಸುದ್ದಿ ಮುಟ್ಟಿಸಲಿಲ್ಲ. ಹಿಂದಿನ ಸಲ ನಮ್ಮನ್ನು ಬೀಳ್ಕೊಡಲು ನೂರಾರು ಸ್ವಾಮಿಗಳು ವಿಮಾನ ನಿಲ್ದಾಣಕ್ಕೆ ಬಂದಿದ್ದರು. ಅವರಿಗೆ ತೊಂದರೆಯಾದೀತೆಂದು ಆದಷ್ಟು ಗುಟ್ಟಾಗಿ ಉಳಿದೆವು. ಆದರೇನು? ಕಿವಿಯಿಂದ ಕಿವಿಗೆ ತಾನು ತಾನಾಗಿಯೇ ಹರಡಿತು. ನಮ್ಮ ಬೆಲ್ಜಿಯಂ ಪ್ರವಾಸದ ಟಿಕೇಟುವ್ಯವಸ್ಥೆ ಪರಿಷತ್ತಿನವರು ಮಾಡಿದ್ದರು. ನಂತರ ಬ್ರುಸೆಲ್ಸ್, ಲಂಡನ್, ಫ್ರಾನ್ಸ್, ಬರ್ಲಿನ್, ಜಿನೇವಾ, ರೋಮ, ಆ್ಯಮ್‌ಸ್ಟರ್‌ಡ್ಯಾಮ ಇವುಗಳನ್ನು ಸಂದರ್ಶಿಸಲು ನಮಗೆ ಹಾಗೂ ಪ್ರೊ|| ಎ. ಎಲ್. ಹಿರೇಮಠರಿಗೆ ವಿಮಾನ ಟಿಕೇಟನ್ನು WCRPಯ ಭಾರತೀಯ ಕಾರ್ಯದರ್ಶಿಗಳಾದ ರಾಧಾಕೃಷ್ಣನ್ ಅವರು ತೆಗೆದಿರಿಸಿದ್ದರು. ಟಾಯಿಮ್ ಟೇಬಲ್ ನಿರ್ಧಾರವಾಯಿತು. ದಿನ ಸಮೀಪಿಸಿತು. ಧಾರವಾಡದ ಶಾಖಾ ಮೂರುಸಾವಿರಮಠದಲ್ಲಿ ಹಾಗೂ ಹುಬ್ಬಳ್ಳಿಯ ಕಲ್ಯಾಣಮಠಗಳಲ್ಲಿ ಮತ್ತು ಎರಡೆತ್ತಿನ ಮಠಗಳಲ್ಲಿ ಸತ್ಕಾರ ನಡೆಯಿತು. ಬೆಂಗಳೂರ ವಿಮಾನ ನಿಲ್ದಾಣದ ಮೂಲಕ ಹೋಗಲಿದ್ದ ನಮ್ಮ ಪೂರ್ವಭಾವಿ ಟಾಯಿಮ್ ಟೇಬಲ್ ಬದಲಾಗಿ, ಗೋವೆಯಿಂದ ಹೋಗುವದು ನಿರ್ಣಯವಾಯಿತು.

## ಹುಬ್ಬಳ್ಳಿಯಿಂದ ದಿಲ್ಲಿಗೆ

ಅಗಸ್ಟ್, ೨೨; ಮುಂಜಾನೆ ೮–೩೦; ಎಷ್ಟೇ ಗುಪ್ತವಾಗಿ ಸಿದ್ಧವಾದರೂ ನಮ್ಮೊಂದಿಗೆ ಗೋವೆಗೆ ಎಷ್ಟೋ ಕಾರುಗಳು ಬಂದವು. ನೂರಾರು ಭಕ್ತರು ಹಾಗೂ ಮಠದ ಮಹಿಳಾ ಕಾಲೇಜಿನ ವಿದ್ಯಾರ್ಥಿನಿಯರು ಶಿಸ್ತಿನಿಂದ ಮಠದಲ್ಲಿ ಬೀಳ್ಕೊಡಲು ನಿಂತ ದೃಶ್ಯ ನಯನಮನೋಹರವಾಗಿತ್ತು. ಸಾಲು ಸಾಲಾಗಿ ನಿಂತು ಚಿಂಚಣಿ, ಕೆಳದಿ, ಬೀಳಗಿ ಶ್ರೀಗಳು ಮತ್ತು ಕುಮಾರೇಶ್ವರ ಶಿವಯೋಗಿ ಸಂಘದ ಸಾಧಕರು ಸಾಷ್ಟಾಂಗ ಹಾಕಿದಾಗ ಅದೇಕೋ ಮನಸ್ಸಿನಲ್ಲಿ ರೋಮಾಂಚನವಾಯಿತು. ಅದೇ ಮಧ್ಯಾಹ್ನ ೩ ಗಂಟೆಗೆ ಕೆರವಲೆ ವಿಮಾನದಿಂದ ಗೋವೆಯಿಂದ ಮುಂಬಯಿಗೆ ಬಂದೆವು. ಅಲ್ಲಿ ಎಮ್. ಪಿ. ಹೊಸಮನಿ (ಅಸಿಸ್ಟಂಟ ಇನ್‌ಕಮ್ ಟ್ಯಾಕ್ಸ್ ಕಮಿಶನರ) ಅವರ ಧರ್ಮಪತ್ನಿ, ಹಾಗೂ ವ್ಹಿ. ಆರ್. ಹಿರೇಮಠ ಬೆಂಡಿಗೇರಿ ಪಟ್ಟದೇವರು ಸ್ವಾಗತ ಕೋರಿದರು.

ಇದೇ ದಿನ ರಾತ್ರಿ ನಮ್ಮ ವಿಮಾನ ದಿಲ್ಲಿಯ ಪಾಲಂ ನಿಲ್ದಾಣ ತಲುಪಿತು. ಅಲ್ಲಿ ಶ್ರೀ ಸಿ. ಆರ್. ಹಿರೇಮಠ ಅವರು ಸ್ವಾಗತ ನೀಡಿದರು. ಎರಡು ದಿನ ಅವರ ಮನೆಯಲ್ಲಿ ಹಾರ್ದಿಕವಾದ ಆದರಾತಿಥ್ಯ ನಡೆಯಿತು. ಕೆಲದಿನಗಳಿಂದ ಅಂಟಿದ್ದ ಜ್ವರದಬಾಧೆ ಅಲ್ಲಿ ತಂಗಿ ಉತ್ಸಾಹ ಇಮ್ಮಡಿಸಿತು.

## ರಾಷ್ಟ್ರಪತಿಗಳೊಂದಿಗೆ

ದಿನಾಂಕ ೨೩ ರಂದು ಮಧ್ಯಾಹ್ನ ನೂತನ ರಾಷ್ಟ್ರಪತಿಗಳಾಗಿ ಆಯ್ಕೆಯಾಗಿದ್ದ ಫಕರುದ್ದೀನ ಅಲಿ ಅಹಮ್ಮದ ಅವರೊಂದಿಗೆ ಸಂದರ್ಶನವಾಯಿತು. "ನಿಮ್ಮ ಮಾರ್ಗ ದರ್ಶನದಲ್ಲಿ ಭಾರತ ಸಮೃದ್ಧಕಾಣಲಿ" ಎಂದು ಹಾರೈಸಿದರು. ಅವರು ನಮ್ಮ ಶಾಂತಿ ಯಾತ್ರೆಗೆ ಶುಭ ಕೋರಿದರು. ಅವರಿಗೆ (Thus spoke Basava) ನಾವು ಬರೆದ (Hearts blossom) ಮತ್ತು ಮೂರುಸಾವಿರಮಠದ ಇತಿಹಾಸ ಕೈಪಿಡಿ ನೀಡಿದೆವು.

ಇದಕ್ಕೆ ಮುಂಚಿತವಾಗಿ ನಿಯೋಜಿತ ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರಿಗೆ ಸಂದರ್ಶನ ನೀಡಿದೆವು. ಅವರೊಂದಿಗೆ ತತ್ತ್ವಚರ್ಚೆ ಸಾಮಾಜಿಕ ಚರ್ಚೆಯಾದನಂತರ ಭಸ್ಮ ರುದ್ರಾಕ್ಷಿಗಳೊಂದಿಗೆ ಆಶೀರ್ವದಿಸಿದೆವು. ಅದಕ್ಕೆ ಅವರು "ಹಿಂದಿನ ಸಲ ನಾವು ಗವರ್ನರ ಆಗುವದಕ್ಕಿಂತ ಮುನ್ನ ನೀವು ಆಶೀರ್ವದಿಸಿದ್ದಿರಿ. ಅನಾಯಾಸ ಈ ಸಲವೂ ಉಪರಾಷ್ಟ್ರಪತಿಯಾಗುವ ಮುನ್ನ ತಮ್ಮ ಆಶೀರ್ವಾದ ದೊರೆತುದು ದೈವ ಘಟನೆ. ದೇವರೇ ಆಶೀರ್ವಾದ ಮಾಡಲು ನಿಮ್ಮನ್ನು ಕಳಿಸಿದ್ದಾನೆ" ಎಂದು ನುಡಿದರು. ಪಾಸ್ ಪೋರ್ಟ ಮತ್ತು ವೀಸಾಗಳ ವ್ಯವಸ್ಥೆ ಮಾಡಿಕೊಳ್ಳಲಾಯ್ತು.

## ದಿಲ್ಲಿಯಿಂದ ಲ್ಯೂವೆನ್ನಿಗೆ

ದಿನಾಂಕ ೨೫ ರಂದು ಬ್ರಾಹ್ಮೀಮುಹೂರ್ತ! ನಸುಕಿನ ಮೂರು ಗಂಟೆ!! ಮೂರ ನೂರಕ್ಕಿಂತಲೂ ಮೇಲ್ಪಟ್ಟು ಪ್ರಯಾಣಿಕರನ್ನು ಹೊತ್ತ ಜಂಬೋಜಟ್ ವಿಮಾನ ನಮ್ಮನ್ನು ಆ್ಯಮಸ್ಟರ್‌ಡ್ಯಾಮಿಗೆ ಕರೆದೊಯ್ಯಿತು. ಸತತವಾಗಿ ಅನೇಕ ಗಂಟೆಗಳ ಪ್ರಯಾಣ. ವಿಮಾನದಲ್ಲಿ ಎಲ್ಲಿಯ ಪೂಜೆ? ಎಲ್ಲಿಯ ಪ್ರಸಾದ? ವಿಮಾನ ಪರಿಚಾರಿಕೆಯಿಂದ ಎಲ್ಲರಿಗೂ ಕಾಲಕಾಲಕ್ಕೆ ಊಟೋಪಚಾರ ಸಲ್ಲುತ್ತಿತ್ತು. ಆದರೆ ನಮ್ಮ ಧಾರ್ಮಿಕ ನಿಯಮವನ್ನು ತಿಳಿದ ಪರಿಚಾರಿಕೆಯರು ತಿಂಡಿ ತಿನಿಸುಗಳನ್ನು ನಮ್ಮ ಬಳಿಗೆ ಜಾಣತನದಿಂದ ತರಲಿಲ್ಲ. ನಮ್ಮ ಜೊತೆಗೆ ಪ್ರಯಾಣದಲ್ಲಿ ನಮ್ಮ ಆಪ್ತ ಕಾರ್ಯದರ್ಶಿ ಪ್ರೊ॥ ಎ. ಎಲ್. ಹಿರೇಮಠ, ಬಸವರಾಜ ಸ್ವಾಮಿಗಳು ಗುಳೇದಗುಡ್ಡ, ಸದ್ಯೋಜಾತ ಶಿವಾಚಾರ್ಯರು ಡಾವಣಗೆರೆ, ಹೊಂಬುಜ ಜೈನಮಠದ ಸ್ವಾಮಿಗಳು, ಚಂದ್ರಶೇಖರ ದೇವರು ಹೊಸಮಠ, ಡಾ॥ ಉಪಾಧ್ಯ ಇದ್ದರು. ಇದಲ್ಲದೆ ಭಾರತದ ಅನೇಕ ಪ್ರತಿನಿಧಿಗಳು ನಮ್ಮ ಸಂಗಡವಿದ್ದರು.

ವಿಜ್ಞಾನ ಅದ್ಭುತ ಸಾಧನೆಯೆಂಬಂತಿದ್ದ ಜಂಬೋಜಟ್ ವಿಮಾನ ತಾಸಿಗೆ ೬-೭ ನೂರು ಮೈಲು ವೇಗದಿಂದ ಸಾಗಿದರೂ ನಾವು ಬ್ರುಸೆಲ್ಸ್ ತಲುಪಲು ಅನೇಕ ಗಂಟೆಗಳೇ

ಬೇಕಾದವು. ಮಾರ್ಗದಲ್ಲಿ ಅಥೆನ್ಸದತ್ತ ನಡೆದಾಗ ನಮ್ಮ ವಿಮಾನ ೩೮ ಸಾವಿರ ಅಡಿ ಎತ್ತರದಲ್ಲಿ ಹಾರುತ್ತಿತ್ತು. ನಮ್ಮ ಬುಡದಲ್ಲಿ ದೈತ್ಯಾಕಾರದ ಬಿಳಿಯ ಮೋಡಗಳ ದೃಶ್ಯ ದರ್ಶನೀಯವಾಗಿತ್ತು. ಹೊಟ್ಟೆಯಲ್ಲಿಯ ನೀರು ಕೂಡಾ ತುಳುಕಿಸದಂತೆ ವಿಮಾನ ನಮ್ಮನ್ನು ನಿಶ್ಚಲವಾಗಿ ಕೊಂಡೊಯ್ಯುತ್ತಿತ್ತು. ಮೆಡಿಟರೇನಿಯನ್ ಸಾಗರದ ಜಲುವು ನೀಲಿಮೆಯಿಂದ ಸರ್ವಾಂತರ್ಯಾಮಿ ಎನಿಸುತ್ತಿತ್ತು.

ಮಧ್ಯಾನ್ಹ ೧೨ ಗಂಟೆಗೆ ಆ್ಯಮ್‌ಸ್ಟರ್‌ಡ್ಯಾಮಿಗೆ ಬಂದು ಇಳಿದೆವು. ಅಲ್ಲಿಂದ ಮತ್ತೊಂದು ವಿಮಾನದಲ್ಲಿ ಬ್ರುಸೆಲ್ಸ್ ತಲುಪಿದಾಗ ಮಧ್ಯಾನ್ಹ ೪-೩೦ ಆಗಿತ್ತು. ಅಲ್ಲಿ ಡಾ॥ ಹೋಮರ್ ಎ. ಜಾಕ್ ಅವರು ನಮ್ಮನ್ನು ಸ್ವಾಗತಿಸಿ ಕಾರಿನಲ್ಲಿ ನೇರವಾಗಿ ಲ್ಯೂವನ್ನಿಗೆ ಕರೆದೊಯ್ದರು. ಲ್ಯೂವೆನ್ನಾದ ಕ್ಯಾಥೋಲಿಕ್ ವಿಶ್ವವಿದ್ಯಾಲಯದ ಅಪೂರ್ವ ಸುಂದರ ಹಾಸ್ಟೆಲಿನಲ್ಲಿ ನಮಗೆ ತಂಗುವ ವ್ಯವಸ್ಥೆ ಇದ್ದಿತ್ತು. ನಮ್ಮ ಪೂಜೆ ಪ್ರಸಾದಗಳಿಗೆ ಪ್ರತ್ಯೇಕವಾಗಿ ಪ್ರಶಾಂತ ವ್ಯವಸ್ಥೆ. ಮಾರ್ಗಾಯಾಸದಿಂದ ದಣಿವು, ಬೇಗನೆ ಸ್ನಾನ ಪೂಜೆ ಅರ್ಪಿತಗಳನ್ನು ಪೂರೈಸಿ ವಿಶ್ರಾಂತಿ ಪಡೆದೆವು.

## ಶಾಂತಿಸೌಹಾರ್ದಗಳ ನೆಲವೀಡು "ಲ್ಯೂವೆನ್"

ಇಂಗ್ಲಂಡ್, ಫ್ರಾನ್ಸ್, ಸ್ವಿಝರಲ್ಯಾಂಡ, ಲಂಕ್ಸೆಬರ್ಗ, ಜರ್ಮನಿ ಹಾಗೂ ನೆದರ್ಲ್ಯಾಂಡಗಳಿಂದ ಸುತ್ತುವರಿದ ಪುಟ್ಟರಾಷ್ಟ್ರ ಬೆಲ್ಜಿಯಂ (Belgium) ಕೇವಲ ೧೧,೭೮೯ ಚದರ ಮೈಲು ಕ್ಷೇತ್ರಫಲ. ೮೯೮ ಮೈಲು ಸೀಮಾರೇಖೆ. ೪೧ ಮೈಲು ಉತ್ತರ ಸಮುದ್ರದ (North See) ಕಡಲದಂಡೆ. ಕೇವಲ ೯೬೫೯೦೪೪ (ಅಂದರೆ ಒಂದುಕೋಟಿಗಿಂತಲೂ ಕಡಿಮೆ) ಜನಸಂಖ್ಯೆ. ಆದರೂ ವಾರ್ಷಿಕ ತಲಾ ಆದಾಯ ೧೧೯೭೬೩ ಫ್ರಾಂಕುಗಳು. ದಾರಿಯ ಮೇಲೆ ಅಡ್ಡಾಡುವವರೇ ಇಲ್ಲ. ಕಾರಣ ಎಲ್ಲರೂ ಕಾರಿನಲ್ಲಿ ಅಡ್ಡಾಡುವವರು! ಇಷ್ಟು ಪುಟ್ಟ ದೇಶದಲ್ಲೂ ಮೂರು ಪ್ರಧಾನ ಭಾಷೆಗಳು: ಫ್ರೆಂಚ್, ಡಚ್, ಜರ್ಮನ್, ಇಂಗ್ಲಂಡಿಗೆ ೬೦೦೦ ಮೈಲು ದೂರದಲ್ಲಿದ್ದ ಭಾರತದಲ್ಲಿರುವಷ್ಟು ಇಂಗ್ಲೀಷಿನ ಹುಚ್ಚು ಭ್ರಮೆ ಕೇವಲ ಅದರ ಪಕ್ಕದಲ್ಲೆ ಇರುವ ಈ ಪುಟ್ಟ ರಾಷ್ಟ್ರದಲ್ಲಿ ಇಲ್ಲ. ಇಂಗ್ಲೀಷ ಬಾರದವರೇ ಅಧಿಕ. ಪ್ರತಿಶತ ೫೬% ರಷ್ಟು ಡಚ್ ಮಾತಾಡುವವರು, ಪ್ರತಿಶತ ೩೨% ರಷ್ಟು ಫ್ರೆಂಚರು; ಉಳಿದವರು ಜರ್ಮನಿಗರು ಹಾಗೂ ಮಿಶ್ರಜನಾಂಗದವರುಂಟು.

**ಕಿರಿಯ ದೇಶ....ಹಿರಿಯ ಸಾಧನೆ!**

ಆಶ್ಚರ್ಯದ ಸಂಗತಿಯೆಂದರೆ ಭಾರತಕ್ಕಿರುವಂತೆ ಬೆಲ್ಜಿಯಂ ದೇಶಕ್ಕೆ ತನ್ನದೇ ಆದ ನೈಸರ್ಗಿಕ ಖನಿಜಸಂಪತ್ತುಗಳಿಲ್ಲ. ಆದರೂ ಅದು ವಿಶ್ವದಲ್ಲಿ ಔದ್ಯೋಗಿಕರಣದಲ್ಲಿ

ಮುಂದುವರಿದ ರಾಷ್ಟ್ರ, ನಮ್ಮ ದೇಶದ ಒಂದು ಪ್ರಾಂತಕ್ಕಿಂತಲೂ ಕಿರಿದಾದ ಈ ದೇಶ; ೧೯೭೧ರಲ್ಲಿ ೧,೨೪,೪೫,೦೦೦ ಟನ್ ಉಕ್ಕು ಉತ್ಪಾದಿಸಿತು. ಇದು ವಿಶ್ವದ ಉಕ್ಕಿನ ಉತ್ಪಾದನೆಯ ಪ್ರತಿಶತ ೨೨% ರಷ್ಟು! ಇದು ೧೯೭೧ರಲ್ಲಿ ೨,೯೬,೬೦೦ ಮಿಲಿಯನ್ ಫ್ರಾಂಕುಗಳ ಯಂತ್ರಗಳನ್ನು ಹೊರ ಜಗತ್ತಿಗೆ ಮಾರಿತು. ಭಾರತದಂಥ ಬೃಹತ್ ರಾಷ್ಟ್ರ ಅಚ್ಚರಿಪಡುವ ಪೆಡಂಭೂತಸಾಧನೆ ಇದಲ್ಲವೆ? ಇಷ್ಟೊಂದು ಯಂತ್ರೋಪಕರಣಗಳಿಗೆ ಕಾಲಿಡಲು ತೆರಪಿಲ್ಲದಷ್ಟು ಚಿಕ್ಕದಾದ ಈ ದೇಶದಲ್ಲಿ ಬೇಸಾಯಕ್ಕೆ ದೊರೆತ ಭೂಮಿ ಅತ್ಯಲ್ಪ. ಆದರೂ ಇದು ೧೯೭೧ರಲ್ಲಿ ೪,೪೪,೬೦೦ ಟನ್ ಕಾಯಿಪಲ್ಲೆ, ೧೫೦೦೦ ಟನ್ ಹೂಗಳನ್ನು ಯುರೋಪರಾಷ್ಟ್ರಗಳಿಗೆ ರವಾನಿಸಿತು. ಇಲ್ಲಿ ೨೬ ಲಕ್ಷ ಗೋಸಂಪತ್ತು, ೪೯ ಲಕ್ಷ ಹಂದಿಗಳ ಸಂಪತ್ತು ಉಂಟು.

### ಸೌಂದರ್ಯ ರಾಣಿ ಲ್ಯೂವೆನ್

ಬೆಲ್ಜಿಯಂದ ರಾಜಧಾನಿ ಬ್ರುಸೆಲ್ಸ್ (Brussels). ಅಲ್ಲಿಂದ ಪೂರ್ವಕ್ಕೆ ಒಂದು ತಾಸಿನ ಕಾರುದಾರಿ ಲ್ಯೂವೆನ್ (Leuven) ನಾವು ಇಳಿದು ಕೊಂಡುದು ಇಲ್ಲಿಯ ಕೆಥೋಲಿಕ್ ವಿಶ್ವವಿದ್ಯಾಲಯದಲ್ಲಿ (Katholieko Universiteit to Leuven) ಇದು ಜಗತ್ತಿನ ಎಲ್ಲ ವಿಶ್ವವಿದ್ಯಾಲಯಗಳಲ್ಲಿಯೇ ಪ್ರಾಚೀನ ವಿಶ್ವವಿದ್ಯಾಲಯ. ಕ್ರಿ. ಶ. ೧೪೨೫ ಕ್ಕೆ ಪ್ರಾರಂಭವಾದುದು. ೫೦೦ ವರ್ಷಗಳ ಮೇಲೂ ತನ್ನ ಪೂರ್ಣ ಸೌರಭ ನಿರ್ಭರವಾಗಿ ಅರಳಿ ನಿಂತಿದೆ. ಇದು ಎಲ್ಲ ವಿಧದಿಂದಲೂ ಪರಿಪೂರ್ಣ ವಿಶ್ವವಿದ್ಯಾಲಯ. ಮಾನವೀಯ ಜ್ಞಾನೋನ್ನತಿಯ ಸರ್ವಮೂಲಗಳ ಪುಟ, ಕೈಪಿಡಿ. ಅವರೇ ಹೇಳುವಂತೆ– "The Katholieko Universrteit to Leuven is a complete university, encompassing almost every discipline and field of study. Its academic staff and student body profit enormously from this broad intllectual base, for it enables them to meet today's demands for specialization departmentalization and interdisciplinary research".

ಲ್ಯೂವೆನ್ ೫೦೦ ವರ್ಷಗಳಿಗಿಂತಲೂ ಪೂರ್ವದಿಂದಲೇ ವಿಶ್ವವಿದ್ಯಾಲಯದ ನಗರವಾಗಿ ಬೆಳೆದು ಬಂದಿದೆ. ಈ ನಗರವೇ ಒಂದು ಪ್ರಾಚೀನ ವಿಶ್ವವಿದ್ಯಾಲಯ. ಇದನ್ನು ಈ ನಗರದ ಪ್ರತಿದಾರಿಯಲ್ಲೂ ಸೌಧಗಳಲ್ಲೂ, ಹೂ–ಬನ–ಬಳ್ಳಿ–ಮಾಡಗಳಲ್ಲೂ ಕಂಡರಿಯಬಹುದು. ೧೫೧೨ರಲ್ಲಿಯೇ ಇಲ್ಲಿ ಕಲಿತ ಎರಾಸ್‌ಮಸ್ ಪೋಪನಾಗಿ ಬೆಳಗಿದೆ. ಅಂದಿನಿಂದ ಇಂದಿಗೆ ಜಾಗತಿಕ ರಂಗದ ನಾನಾ ಮೂಲಗಳಿಗೆ ಈ ವಿಶ್ವವಿದ್ಯಾಲಯ ಸ್ಫೂರ್ತಿಯ ಸೆಲೆಯಾಗಿದೆ. ಇಲ್ಲಿ ಇಂದು ೧೫೦೦ ಪ್ರಾಧ್ಯಾಪಕರು, ೧೬೦೦೦ ವಿದ್ಯಾರ್ಥಿಗಳು ಉಂಟು. ಎರಡು ಮಹಾಯುದ್ಧಗಳಲ್ಲಿ ಇಲ್ಲಿಯ ಕಟ್ಟಡಗಳು ಭಸ್ಮೀಭೂತವಾದರೂ, ಮತ್ತೆ ಗಟ್ಟಿಯಾಗಿ ಮೇಲೆದ್ದಿವೆ. ಇಂದು ಇಲ್ಲಿ ೫ ರಿಂದ ೬೦ ಅಂತಸ್ತುಗಳವರೆಗೆ

ಕಟ್ಟಡಗಳುಂಟು. ನಗರದ ಒಟ್ಟು ಜನಸಂಖ್ಯೆ ೬೦,೦೦೦ ನಗರದ ಪ್ರಾಚೀನ ಅರ್ವಾಚೀನ ಕಟ್ಟಡಗಳು ಇಲ್ಲಿ ಪ್ರಕೃತಿಯ ಚಲುವಿನೊಂದಿಗೆ ಮಿಶ್ರಗೊಂಡು ಹೂವಿನಿಂದ ಹೂತು ನಿಂತಿವೆ.

## ಯಾತ್ರಿಕರ ಸ್ವರ್ಗೀಯ ಸುಂದರ ಧಾಮ

ದಣಿದು ಬಂದ ಯಾತ್ರಿಕರಿಗೆ ಬ್ರುಸೆಲ್ಸಿಗಿಂತಲೂ ಲ್ಯೂವೆನ್ನು ವಿಶ್ರಾಂತಿ ಧಾಮ. ಆಹ್ಲಾದಕರ ಹವೆ. ನಮ್ಮ ಪಟ್ಟಣಗಳಂತೆ ಗಜಿಬಿಜಿ, ಗಡಿಬಿಡಿ, ದುರ್ಗಂಧದ ದಾರಿ ಸ್ವಚ್ಛಂದ ಮೂತ್ರಾಲಯ, ಸಂತೆಯ ಗದ್ದಲು ಇಲ್ಲಿ ಹುಡುಕಿದರೂ ಕಾಣದು. ದಾರಿಯಲ್ಲಿ ಜನರ ಸುಳಿವೇ ಕಾಣದು. ಎಲ್ಲರೂ ಕಾರಿನಲ್ಲಿ ಸಾಗುತ್ತಾರೆ. ಎಲ್ಲೆಲ್ಲೂ ಸ್ವಚ್ಛತೆ. ದಾರಿಯ ಕಸಗೂಡಿಸುವವರು ಮೋಟರಿನಲ್ಲಿ ಯಂತ್ರವಿಟ್ಟುಕೊಂಡು ಬರುತ್ತಾರೆ. ಹೆಚ್ಚಾಗಿ ಇಲ್ಲಿ ದುಡಿತವೇ ದೇವರು ಇದು ಒಟ್ಟಾರೆ ಬೆಲ್ಜಿಯಮ್ಮಿನ ಇಲ್ಲವೇ ಯುರೋಪ ಖಂಡದ ಗುಣಧರ್ಮವೆಂದು ಹೇಳಬಹುದು. ಒಟ್ಟಿನಲ್ಲಿ ಭಾರತೀಯರು ಧರ್ಮವನ್ನು ಹೇಳುತ್ತಾರೆ. ಇವರು ಆಚರಿಸುತ್ತಾರೆ. ಕಾರಣ ನಮ್ಮಲ್ಲಿಯಂತೆ ಅಂಗಡಿ ಕಟ್ಟೆಯ ಮೇಲೆ ದಾರಿಯ ಕೂಟದಲ್ಲಿ ಹರಟೆಖೋರ ವೃತ್ತಿಯಲ್ಲಿ ಸಿಕ್ಕಾಪಟ್ಟೆ ಮಾತನಾಡುತ್ತ ನಿಲ್ಲುವ ಜನ ಇಲ್ಲಿ ಒಬ್ಬರೂ ಕಾಣುವುದಿಲ್ಲ. ಇವರಿಗೆ ದುಡಿತವೇ ದೇವರು. ಪ್ರಾಮಾಣಿಕತೆ ಇಲ್ಲಿಯ ಸಮಾಜಧರ್ಮ. ಯಾವ ಅಂಗಡಿಯಲ್ಲೂ ಗಿರಾಕಿಗೆ ಕೊಡುವವನಿಲ್ಲ. ತಾವೇ ಬೇಕಾದ ವಸ್ತು ಕೈಹಾಕಿ ಪಡೆದುಕೊಂಡು, ಒಂದು ಕೌಂಟರಿನಲ್ಲಿದ್ದ ಮಾಲಿಕನಿಗೆ ಹಣತೆತ್ತು ಸಾಗಬೇಕು. ಪ್ರಾಮಾಣಿಕತೆಗೆ ಇದೊಂದು ದೊಡ್ಡ ಕುರುಹು. ಕಾಯಿಪಲ್ಲೆ ಬೇಕಾದರೂ ಅಷ್ಟೆ, ಪ್ರತಿಯೊಂದರ ಮೇಲೂ ಅದರ ಬೆಲೆ ಇರುತ್ತದೆ. ಅಂಗಡಿಕಾರರು ಎಲ್ಲಿಯೋ ಕುಳಿತಿರುತ್ತಾರೆ. ಅವರಿಗೆ ಹಣ ಕೊಟ್ಟರಾಯಿತು. ಅವರಿಗೆ ಗಿರಾಕಿಗಳ ಮೇಲೆ ವಿಶ್ವಾಸ ಉಂಟು. ಫೋಟೋ ಬೇಕಾದರೆ ಒಂದು ಅಂಗಡಿಯ ಪರದೆ ಎಳೆದುಕೊಂಡು ನಿಂತರೆ ಎರಡು ನಿಮಿಷದಲ್ಲಿ ಮಶಿನಿನಿಂದ ನಮ್ಮ ಫೋಟೋ ಪಕ್ಕದ ಬಾಕ್ಸಿನಲ್ಲಿ ಬಂದು ಬೀಳುತ್ತದೆ. ಗಿರಣಿಗೆ ಹಾಕಿದ ಜೋಳ ಹಿಟ್ಟಾಗಿ ಬೀಳುವಂತೆ!! ನಂತರ ಮಾಲಿಕನಿಗೆ ಅದರ ಹಣ ತೆತ್ತು ಹೋಗಬೇಕು. ಇನ್ನೊಂದು ವಿಚಿತ್ರವೆಂದರೆ ಇಲ್ಲಿಯ ಜನರಿಗೆ ಆಗೊಮ್ಮೆ ಈಗೊಮ್ಮೆ ಕಾಫಿ ಹವ್ಯಾಸ ಅದಕ್ಕಾಗಿ ದಾರಿಯಲ್ಲಿ ಅಲ್ಲಲ್ಲಿ "Coffee Cabin" ಯಂತ್ರಗಳುಂಟು ಆದರ ಒಂದು ಖಾನೆಯಲ್ಲಿ ಹಣಹಾಕಿದರಾಯಿತು. ತಕ್ಷಣ ಒಂದು ಕಪ್ಪು ಬಿಸಿ ಕಾಫಿ ತಾನಾಗಿಯೇ ಬರುತ್ತದೆ! ಈ ಯಂತ್ರಕ್ಕೆ ದುಡ್ಡು ಹಾಕದಿದ್ದರೆ ಕಾಫಿ ಬರುವುದಿಲ್ಲ!!

## ಮರೆಯದ ಮಧುರ ಆತಿಥ್ಯ

'ಅತಿಥಿ ದೇವೋ ಭವ' ಎಂದು ನಾವು ಹೇಳುತ್ತೇವೆ. ನಮ್ಮ ಅತಿಥಿಗಳೆಂದರೆ ಬೀಗರು ಬಿಜ್ಜರು, ಮಿತ್ರರು, ವ್ಯವಹಾರಸ್ಥರು. ಆದರೆ ನಾವು ಪ್ರತ್ಯಕ್ಷ ಅನುಭವಿಸಿದ

ಬೆಲ್ಜಿಯಂ ದೇಶದ ಒಂದು ಘಟನೆ ತೀರಾ ವಿಚಿತ್ರ. ನಾವು ಲ್ಯೂವೆನ್ನಿನಲ್ಲಿ ನಡೆದು ಹೋಗುತ್ತಿರುವಾಗ ಅಲ್ಲಿಯ ಮೆಡಿಕಲ್ ಕಾಲೇಜಿನ ಒಬ್ಬ ವಿದ್ಯಾರ್ಥಿನಿಯ ತಾಯಿ, ತನ್ನ ಕಾರು ನಿಲ್ಲಿಸಿ:- ಬನ್ನಿರಿ. ನಿಮ್ಮ ಸ್ಥಾನಕ್ಕೆ ಬಿಡುತ್ತೇನೆ. ಅಲ್ಲದೆ ಇಲ್ಲಿಯ ಹಳೆಯ ಕಟ್ಟಡಗಳನ್ನು ತೋರಿಸುತ್ತೇನೆ ಎಂದು ಅಪರಿಚಿತಳಾದ ಆ ಗೃಹಿಣಿ ನಮ್ಮನ್ನು ತನ್ನ ಕಾರಿನಲ್ಲಿ ಕರೆದುಕೊಂಡು, ಸಮಗ್ರ ಲ್ಯೂವೆನ್ ತೋರಿಸಿ, ಕೊನೆಗೆ ತನ್ನ ಮನೆಗೆ ಕರೆದು ಕೊಂಡು ಹೋದಳು. ನಾವು ಪ್ರೊ. ಎ. ಎಲ್. ಹಿರೇಮಠರೊಂದಿಗೆ ಅವಳ ಸುಂದರ ತೋಟದಲ್ಲಿ ಕುಳಿತೆವು. ಅವಳು ತನ್ನ ತೋಟದ ಸೇಬು, ಬಾದಾಮಿ ಮುಂತಾದ ಹಣ್ಣು ಗಳನ್ನು ಹರಿದುಕೊಟ್ಟಳು. ಅವಳ ತೋಟದಲ್ಲಿ ನಾವು, ಹೊಂಬುಜದ ಜೈನ ಸ್ವಾಮಿ ಗಳು ಹಾಗೂ ದಾವಣಗೆರೆಯ ಸದ್ಯೋಜಾತ ಸ್ವಾಮಿಗಳು ಸಾಕಷ್ಟು ತಿರುಗಾಡಿದೆವು. ಹಣ್ಣುಗಳನ್ನು ಹರಿದುಕೊಂಡೆವು. ಅತಿ ಪರಿಚಿತವಿದ್ದವರಿಗೂ ಇಷ್ಟು ಮಾಡಲಿಕ್ಕಿಲ್ಲ: ಹಾಗೆ ಅವರು ನಮ್ಮನ್ನು ಉಪಚರಿಸಿದರು. ನಂತರ ಆ ಗೃಹಿಣಿಯೇ ಕಾರಿನಲ್ಲಿ ನಮ್ಮನ್ನು ನಮ್ಮ ಸ್ಥಾನಕ್ಕೆ ತಂದು ಇಳಿಸಿದಳು. ಪ್ರೊ. ಎ. ಎಲ್. ಹಿರೇಮಠರು ನಮ್ಮ ಪರಿಚಯ ತಿಳಿಸಿದ ಮೇಲೆ ಅವಳು ನಮ್ಮನ್ನು ಬಲು ವಿಶ್ವಾಸ, ಪೂಜ್ಯ ಭಾವನೆಗಳಿಂದ ಸತ್ಕರಿಸಿ ನಾವಿದ್ದ ಸ್ಥಳಕ್ಕೆ ತನ್ನ ಮಕ್ಕಳನ್ನೆಲ್ಲ ಕಾರಿನಲ್ಲಿ ಕರೆತಂದಳು. ನಾವು ಅವಳಿಗೆ ಒಂದು ಲಿಂಗು, ರುದ್ರಾಕ್ಷಿ, ಭಸ್ಮ, ಗಂಧದ ಕಟ್ಟಿಗೆಯಲ್ಲಿರುವ ನಮ್ಮ ಹೆಸರು, ಬಸವಣ್ಣನವರ ಇಂಗ್ಲೀಷ ಅನುವಾದಿತ ವಚನಗಳು, ನಾವು ಬರೆದ "Hearts Blossoms" ಗ್ರಂಥ ಕೊಟ್ಟೆವು. ಅವನ್ನೆಲ್ಲ ಕಂಡು ಅವಳು ಬೆರಗಾಗಿ "Oh God!" ಎಂದು ಉದ್ಗಾರ ತೆಗೆದಳು.

## ನಾವು ಭಾರತೀಯರು! ಆದರೆ....?

ನಮಗೆ ಫ್ರಾನ್ಸದ ವೀಸಾ ಬೇಕಾಗಿತ್ತು. ಅದನ್ನು ಅವಳಿಗೆ ತಿಳಿಸಿದೆವು. ಅವಳ ಮಕ್ಕಳು ಸಂತೋಷದಿಂದ ಒಪ್ಪಿ, ಮರುದಿನ ನಮ್ಮನ್ನು ತಮ್ಮ ಕಾರಿನಲ್ಲಿ ಬ್ರುಸೆಲ್ಲಿಗೆ ಕರೆದುಕೊಂಡು ಹೋದರು. ಫ್ರಾನ್ಸದ ಅಂಬೆಸಿಗೆ ಹೋದಾಗ, ಇಂಡಿಯದ ಅಂಬೆಸಿ ಆಫೀಸಿನಿಂದ ಪರಮಿಶನ್ ಲೆಟರ್ ಬೇಕೆಂದು ಹೇಳಿದರು. ಆಗ ಇಂಡಿಯದ ಆಫೀಸಿಗೆ ಬಂದೆವು. ನಮಗೆ ಇಂಡಿಯದ ಆಫೀಸಿನ ಕಾರಕೂನನಿಂದ ಬಂದ ಉತ್ತರ— "ಈಗ ಸಾಧ್ಯವಿಲ್ಲ. ಇಂಡಿಯಾದಿಂದ ಎಷ್ಟು ಜನ ಬಂದಿದ್ದೀರಿ? ಎಲ್ಲರೂ ಬಂದಮೇಲೆ ನೋಡೋಣ". ಇದೇ ಅಲ್ಲವೇ ಇಂಡಿಯದವರ ಬಗ್ಗೆ ಇಂಡಿಯದವರು ಹೊರಗೆ ಕೂಡ ತೋರುವ ಮಮತೆ? ವಿಶ್ವಶಾಂತಿ ಪರಿಷತ್ತಿನ ಕಾರ್ಯರಂಗದ ಬಗೆಗಾದರೂ ಅಲ್ಲಿರುವ ಭಾರತೀಯನಿಗೆ ಗೌರವ ಬೇಡವೇ? ಆ ದೇಶದವರು ನಮ್ಮನ್ನು ತಮ್ಮ ಕಾರಿನಲ್ಲಿ ಅಷ್ಟು ದೂರ ಕರೆದೊಯ್ದರು. ನಮ್ಮ ದೇಶದವರು ನಮ್ಮ ದೇಶದವರ ಬಗ್ಗೆ ಅನಾದರ ತೋರಿದರು! ನಾವು ಅವರಿಗೆ— "ಇಷ್ಟು ದೂರದಿಂದ ಬಂದಿದ್ದೇವೆ. ನಾವು ಭಾರತ

ದವರು. ಭಾರತದವರೇ ಸಹಕಾರ ನೀಡದಿದ್ದರೆ ಮತ್ತಾರು ನೀಡಬೇಕು?" ಎಂದೆವು. ಅದಕ್ಕೆ ಆತ– "ಈಗ ಸಾಧ್ಯವಿಲ್ಲ. ನಾಳೆ ಮುಂಜಾನೆ ಬನ್ನಿ" ಎಂದ. ಆದರೆ ಮರು ದಿನವೇ ನಮ್ಮ ಜಾಗತಿಕ ಶಾಂತಿ ಪರಿಷತ್ತು ಇತ್ತು. ಮತ್ತೆ ಇಲ್ಲಿ ಬರುವದು ಅಸಾಧ್ಯ. ಪ್ರೊ. ಎ. ಎಲ್. ಹಿರೇಮಠರು ಅವನಿಗೆ– "ನಾಳೆ ವರ್ಲ್ಡ್ ಕಾನಫರನ್ಸ್ ಇದೆ. ಕಾರ್ಯಕ್ರಮ ಬಿಟ್ಟು ೩೦–೪೦ ಮೈಲು ಹೇಗೆ ಬರಬೇಕು? ಇಲ್ಲಿ ಭಾಷೆಯ ಕಷ್ಟ. ಎಕ್ಸಚೇಂಜಿನಲ್ಲಿ ದೊರೆತ ಅಲ್ಪ ಹಣದಿಂದ ದುಡ್ಡಿನ ಕಷ್ಟ. ಅಪರಿಚಿತ ಸ್ಥಾನದಲ್ಲಿ ನೀವು ಸಹಕಾರ ನೀಡಬೇಕು. ನಾವು ಮನುಷ್ಯರು. ನಿಯಮ ಬಿಟ್ಟು ಬಂದಿಲ್ಲ. ಹಾಗೆ ಮಾಡ ಬೇಡಿ" ಎಂದರು ಅದಕ್ಕೆ ಬಂದ ಉತ್ತರ– "ಸಾಧ್ಯವಿಲ್ಲ....ಹೋಗಿ!" ನಂತರ ನಾವು ಅಲ್ಲಿಯ ಮೇಲಾಧಿಕಾರಿಗೆ ಭೆಟ್ಟಿಯಾದೆವು. ಅಧಿಕಾರಿಯಿಂದ ಅವನಿಗೆ ಫೋನ ಸಂದೇಶ ಬಂತು. ಆತ ಕಣ್ಣು ಕೆಂಗಿಡಿಮಾಡಿಯೇ ನಮಗೆ ಪರ್ಮಿಶನ್ ಲೆಟರ್ ಕೊಟ್ಟ! ಆದರೇನು? ಆತ ನಮ್ಮ ಸಮಯ ಬಹುಪಾಲು ನಷ್ಟಮಾಡಿ; ಫಾರ್ಮ ತುಂಬಿದ್ದರಿಂದ ಫ್ರಾನ್ಸ ಎಂಬೆಸಿಯಲ್ಲಿ ಅದು ಸ್ವೀಕೃತವಾಗಲಿಲ್ಲ! ಲಂಡನ್ ಎಂಬೆಸಿ ಮುಚ್ಚಿಹೋಗಿತ್ತು!! ಮುಖ ಒಣಗಿಸಿಕೊಂಡು ಮರಳಿದೆವು!!! ನಾವು ಭಾರತೀಯರು!!!!.... ಆದರೆ?

ನಮಗೆ ಕಾರಿನಿಂದ ಒಯ್ದು ಸಹಾಯ ಸಲ್ಲಿಸಿದ ಆ ಅತಿಥೇಯ ದೇಶದ ಆ ಕುಟುಂಬದವರ ಹೆಸರು ಇಂತಿವೆ— ೧) Ghislaike Steyaert ೨) Dominigu Elaven ೩) Thierry Lavenne ಇವರೆಲ್ಲ ಅಂದು ನಮಗಾಗಿ ಸುಮಾರು ೬೦೦–೭೦೦ ರೂಪಾಯಿ ಖರ್ಚುಮಾಡಿಕೊಂಡಿರಬಹುದು.

## ದ್ವಿತೀಯ ವಿಶ್ವಧರ್ಮಗಳ ಶಾಂತಿಸಮ್ಮೇಲನ

ದಿನಾಂಕ ೨೮; ಅಗಸ್ಟ; ಮುಂಜಾನೆ ೯ ಗಂಟೆ: ಲ್ಯೂವೆನ್ನಿನ "ಮರಿಯಾ ಥೆರೆಸಿಆ" ಕಾಲೇಜಿನ (Maria Theresia College) ಸಭಾಂಗಣದಲ್ಲಿ ಪರಿಷತ್ತಿನ ಪ್ರಧಾನ ಸಭೆ (Plenary Session) ಪ್ರಾರಂಭವಾಯಿತು. ಇದೊಂದು ಅತ್ಯಾಧುನಿಕ ಸಲಕರಣೆ ಗಳಿಂದ ಸುಸಜ್ಜಿತವಾದ ಶ್ರೀಮಂತವೂ ಧೀಮಂತವೂ ಆದ ಸುಂದರ ಸಭಾಂಗಣ. ಇಲ್ಲಿ ೫೦ ರಾಷ್ಟ್ರಗಳ ೧೭೭ ಪ್ರತಿನಿಧಿಗಳು ಆಸೀನರಾಗಿದ್ದರು. ತುಂಬ ಹಿತಕರವಾದ ಹವೆ. ಉಲ್ಲಾಸಕರ ಪ್ರಕೃತಿ. ಸ್ಫೂರ್ತಿದಾಯಕವಾದ ವಾತಾವರಣ. ಇಂತಹ ಪ್ರಶಾಂತ ಶೀತಲ ಲ್ಯೂವೆನ್ ಪರಿಷನ್ಮಂದಿರದಲ್ಲಿ; ನಾವು ವಿಶ್ವದ ಪ್ರಕ್ಷುಬ್ಧ ಯುದ್ಧ ಭೀತಿ. ರಕ್ತದ ಚೀರಾಟ, ಮಾನವತೆಯ ಅಸಂತೃಪ್ತಿ, ಜಿಗುಪ್ಸೆ, ವ್ಯಕ್ತಿಸ್ವಾತಂತ್ರ್ಯದ ದಬ್ಬಾಳಿಕೆ, ಶ್ರೀಮಂತಿಕೆಯ ಪೈಪೋಟಿಗಳ ಜ್ವಲಂತವಾದ ವಿಶ್ವಸಮಸ್ಯೆಗಳ ಬಗ್ಗೆ ನಿರ್ಣಯಾತ್ಮಕವಾಗಿ ಚರ್ಚೆ ಮಾಡಲು ಸೇರಿದೆವು.

**"Workshop" ಹಾಗೂ "Plenary Session"ಗಳು**

ಇಲ್ಲಿ ಭಾರತೀಯ ಸಭೆಗಳಂತೆ ಉದ್ದುದ್ದ ಭಾಷಣಗಳ ಮಲ್ಲಯುದ್ಧಕ್ಕೆ ಎಷ್ಟೂ ಅವಕಾಶವಿಲ್ಲ. ಮಾತು ಸಂಕ್ಷಿಪ್ತ. ದೀರ್ಘ ಭಾಷಣವೆಂದರೆ ಮೂರು ನಿಮಿಷಗಳು ಮಾತ್ರ! ಉದಾಹರಣೆಗೆ.... "All should speak nomore than three minutes during any one intervention and preferably less...." ಎಂದು ಪರಿಷತ್ತಿನ ನಿಯಮಾವಳಿಯಲ್ಲಿ (Rules Procedure B-1) ಮೊದಲೇ ಸ್ಪಷ್ಟಪಡಿಸಲಾಗಿತ್ತು. ಇಲ್ಲಿ ಪ್ರಶ್ನೋತ್ತರಗಳೇ ಹೆಚ್ಚು. ದಿಲ್ಲಿ (೧೯೬೮) ಹಾಗೂ ಕ್ಯೂಟೋ (೧೯೭೦) ಗಳ ಅನುಭವ ಇಲ್ಲಿ ಪರಿಪಕ್ವತೆ ತಲುಪಿತ್ತು. ಅಂತೆಯೇ ವಿಭಾಗೀಯ ಚರ್ಚಾಕೂಟಗಳ (Workshops) ವ್ಯವಸ್ಥೆ ಅಗ್ರಪ್ರಾಶಸ್ತ್ಯ ಪಡೆದಿತ್ತು. ಪ್ರಧಾನ ಸಭೆಗೆ ಅವಕಾಶ ವಿಲ್ಲ. ವಿಭಾಗೀಯ ಉಪಸಭೆಗಳಲ್ಲಿ ಜಾಗತಿಕ ಸಮಸ್ಯೆಗಳೆಲ್ಲ ಚರ್ವಿತಚರ್ವಣವಾಗಿ ಸಿದ್ಧವಾಗುತ್ತಿದ್ದವು. ಅವುಗಳ ನಿರ್ಣಯವನ್ನು ಬಹಿರಂಗ ಸಭೆ ಸ್ವೀಕರಿಸುತ್ತಿತ್ತು. ಇದೇ ಪದ್ಧತಿ. ಭಾವನಾಪರ ಭಾಷಣಗಳಿಗೆ, ಗಾಳಿಯಲ್ಲಿ ತೂರುವ ಉಪನ್ಯಾಸಗಳಿಗೆ ಎಷ್ಟೂ ಸ್ಥಾನವಿಲ್ಲ. "ವೇದ ವೇದಾಂತವನ್ನೋದಿ ಜ್ಞಾನ ಸೂರೆ ಮಾಡುವ ಜಂಗಮ ಕ್ರಿಯಾ ಹೀನವಾದರೆ ಆಗದು ಸಮರಸ"; ತನ್ನೊಳರಿದೆನೆಂಬ ಮಹಾಂತಂಗೆ ಸತ್ಕ್ರಿಯಾಚರಣೆಯೇ ಸಾಧನ ಕಾಣಭೋ"; "ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮ ದೇವನೆಂತೊ ಲಿವನಯ್ಯಾ?" "ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗವು ಘಟಸರ್ಪದಂತೆ"....ಎಂಬ ಶರಣರ ಸತ್ಯಸೆಲೆ ೧೨ನೆಯ ಶತಮಾನದ ಕೊನೆಯಲ್ಲಿ ಬತ್ತಿ; ಮತ್ತೆ ಲ್ಯೂವೆನ್ನಿನಲ್ಲಿ ಸೆಲೆಯೊಡೆದಂತೆ ನಮಗೆ ಭಾಸವಾಯಿತು. ಕಲ್ಯಾಣದಲ್ಲಿ ಅನೇಕ ಉಪಸಭೆಗಳಲ್ಲಿ ಶರಣರು ಅಂಶತಃ ಚರ್ಚೆಮಾಡಿದ ವಿಷಯಗಳು; ಅನುಭವಮಂಟಪದಲ್ಲಿ ಪಾಸಾಗುತ್ತಿದ್ದವು. ಇದಕ್ಕೆ ಶೂನ್ಯ ಸಂಪಾದನೆಯ ಆಧಾರವುಂಟು. ಅದೇ ರೀತಿ ಇಲ್ಲಿಯಾದರೂ ಅನೇಕ "Workshop" ಇಲ್ಲವೆ "Commissions" ಗಳಲ್ಲಿ ಚರ್ಚೆ ಗೊಂಡ ವಿಷಯುಗಳು ಅಂತಿಮವಾಗಿ "Plenary Session" ದಲ್ಲಿ ನಿರ್ಣೀತವಾಗು ತ್ತಿದ್ದವು. ಕಾಲ-ದೇಶ-ಭಾಷೆ ಬೇರಾದರೂ "ಕಾಯಕ ತತ್ವ"ದ ನೈಷ್ಠಿಕ ಆಚರಣೆ ಒಂದೇ! ಕ್ಯೂಟೋ ಹಾಗೂ ಲ್ಯೂವೆನ್ ವಿಶ್ವಧರ್ಮಗಳ ಶಾಂತಿ ಸಮ್ಮೇಲನದ ನಿರ್ಮಾಣ ಸಂಪೂರ್ಣ ನಿಂತುದು "Workshop" ಗಳ ಅಸ್ತಿವಾರದ ಮೇಲೆ. ಮುಂದೆ ಬಹಿರಂಗ ಸಭೆಯಲ್ಲಿ (Plenary Session) ಈ ವಿಧ ವಿಭಾಗೀಯ ಚರ್ಚಾಕೂಟಗಳ (Work-shops) ನಿರ್ಣಯಗಳು ಅಂತಿಮವಾಗಿ ನಿರ್ಧಾರಿತವಾಗುತ್ತಿದ್ದವು. ಹೀಗೆ Workshop ಗಳ ಉಪಸಮಿತಿಗಳ ಚರ್ಚೆಗಳಿಗೆ Plenary Session ಗಳ ಸರ್ವಾನುಮತದ ಮುದ್ರೆ ಬಿದ್ದಾಗಲೇ ಅದು "ವಿಶ್ವಶಾಂತಿ ಸಮ್ಮೇಳನ"ದ ಘೋಷಣೆಯಾಗುತ್ತಿತ್ತು.

**ಚರ್ಚೆಗೆ ಎತ್ತಿಕೊಂಡ ವಿಷಯುಗಳು**

ಲ್ಯೂವೆನ್ WCRPಯ (World Conference on Religion and

Peace) ಮುಂದಿದ್ದ ಚರ್ಚಾ ವಿಷಯಗಳು ಒಟ್ಟು ನಾಲ್ಕು. ಅವು ಇಂತಿವೆ....

೧) ನಿಶ್ಶಸ್ತ್ರೀಕರಣ ಹಾಗೂ ರಕ್ಷಣೆ (Disarmament and Security)

೨) ಆರ್ಥಿಕ ಅಭಿವೃದ್ಧಿ ಹಾಗೂ ಮಾನವೀಯ ಸ್ವಾತಂತ್ರ್ಯ (Economic Development and Human Liberation)

೩) ಮಾನವೀಯ ಹಕ್ಕು ಬಾಧ್ಯತೆಗಳು (Human Rights and Fundamental Freedoms)

೪) ಪರಿಸರದೊಂದಿಗೆ ಬಾಳುವೆ (Environment and Survival)

ಇದಲ್ಲದೆ; ಆರು ಅಂತರ್ರಾಷ್ಟ್ರೀಯ ನ್ಯಾಯಬೇಡಿಕೆಯ ಚರ್ಚಾಕೂಟಗಳು (Panel Discussion Groups) ಸಂಯೋಜಿತವಾಗಿದ್ದವು. ಅವು ನಿರ್ದಿಷ್ಟವಾದ ಕಾರ್ಯಧೋರಣೆಯ ಮೇಲೆ ಸಿದ್ಧವಾದವುಗಳು. ಅವು ಇಂತಿವೆ:

A) ಇಂಡೋ ಚೀನಾದಲ್ಲಿ ಯುದ್ಧಶಾಂತಿಗಾಗಿ ಯತ್ನ (In helping end the war in Indochina)

B) ದಕ್ಷಿಣ ಆಫ್ರಿಕೆಯಲ್ಲಿಯ ವರ್ಣಭೇದದ ವಿರುದ್ಧ ಹೋರಾಟ (In Southern Africa-the Struggle Against Racism)

C) ದಕ್ಷಿಣ ಫಿಲಿಫೈನ್ಸ, ಮಧ್ಯಪೂರ್ವ, ಸೈಪ್ರಸ್ ಹಾಗೂ ಉತ್ತರ ಐರ್‌ಲ್ಯಾಂಡಗಳ ವಿಶೇಷ ಘರ್ಷಣೆಗಳು

D) ಆಕ್ರಮಣ ಹಾಗೂ ಅನಾಕ್ರಮಣ (Violence and Nonviolence)

E) ಧಾರ್ಮಿಕ ಸಂಸ್ಥೆಗಳಲ್ಲಿ ಶಾಂತಿಗೆ ಅಗ್ರಸ್ಥಾನ (In Determining Peace Priorities in Religious Institutions)

F) ಶಾಂತಿಗಾಗಿ ಶಿಕ್ಷಣ (In Educating For Peace)

ಇವೆಲ್ಲ ಉಪಸಭೆಗಳು ಅತ್ಯಂತ ಶಿಸ್ತಿನಿಂದ, ಪೂರ್ವನಿಯೋಜಿತವಾದ ಬೇರೆ ಬೇರೆ ಕೊಠಡಿಗಳಲ್ಲಿ ನಿರ್ದಿಷ್ಟ ಪಡಿಸಿದ ಸಮಯದಲ್ಲಿ ನಡೆದವು. ಅಲ್ಲಿ ಇಂಗ್ಲೀಷ, ಫ್ರೆಂಚ್, ಕೆಲವೆಡೆ ಜಪಾನಿ ಭಾಷೆಗಳಿಗೆ ಅನುಕೂಲಮಾಡಿಕೊಡಲಾಗಿತ್ತು. ಯಾರಿಗೂ ಮೂರು ನಿಮಿಷಕ್ಕಿಂತ ಹೆಚ್ಚಿನ ಅವಕಾಶವಿಲ್ಲ. ಇವರೆಲ್ಲರ ಚರ್ಚೆಗಳ ನಿರ್ಣಯ ಅಂತಿಮ ದಿನಕ್ಕೆ ಒಂದು ದಿನ ಮೊದಲು ನಿರ್ಧಾರವಾಗುತ್ತಿತ್ತು. ಕೊನೆಯ ಬಹಿರಂಗ ಸಭೆಯಲ್ಲಿ (Plenary Session) ಈ ನಿರ್ಧಾರಗಳು ನಿರ್ಣಯಗಳಾಗಿ ಪಾಸಾಗುತ್ತಿದ್ದವು. ಒಮ್ಮೆ ಹೀಗೆ ಸ್ವೀಕೃತವಾದ ಗೊತ್ತುವಳಿಗಳ ಮೇಲೆ ಪುನಃ ಚರ್ಚೆನಡೆಯಲಾರದು. ಅದೇ ಪರಿಷತ್ತಿನ ಅಂತಿಮ ನಿರ್ಣಯ. ಈ ಸೂಚನೆಗಳು ನೀಡಿದ ಅಭಿಪ್ರಾಯಗಳು ಕೇವಲ ಟೈಪುಕಾಗದದ ಮೇಲಲ್ಲ. ಕೂಡಲೇ ಮುಂಬರುವ ದಿನಗಳಲ್ಲಿ ನಿಯೋಜಿತ ಕಾರ್ಯನಿರ್ವಾಹಕ ಮಂಡಲಿ (Working Party) ಅದನ್ನು ಅನುಸಂಧಾನಕ್ಕೆ ತರಲು ಶ್ರಮಿಸುವದು. ಜಗತ್ತಿನ ಯಾವುದೇ ಭಾಗದ ಯಾವುದೇ ಯುದ್ಧಭೀತಿಗಳ ವಿರುದ್ಧ

ಈ ಪಾರ್ಟಿಗಳು ಹೋರಾಡುವವು. ನಮ್ಮ ದೇಶ ಎದುರಿಸಿದ "ಬಂಗಲಾ ದೇಶ" ಗಂಡಾಂತರ ವಿರುದ್ಧ ರಾಷ್ಟ್ರೀಯ ಹಾಗೂ ಅಂತರ್ರಾಷ್ಟ್ರೀಯ ಮಟ್ಟದಲ್ಲಿ ಈ ಕಾರ್ಯ ನಿರ್ವಾಹಕ ಮಂಡಲಿ ಕೈಕೊಂಡ ಕಾರ್ಯ ಅತ್ಯಂತ ಯಶಸ್ವಿಯಾಗಿತ್ತು ಎಂಬ ವಿಷಯ ಬಹುಜನರಿಗೆ ಗೊತ್ತಾಗಿಲ್ಲ.

### Workshop ಗೆ ನಾವು ನೀಡಿದ ಸಲಹೆಗಳು

ನಾವು ೨ನೆಯ ಕ್ರಿಯಾಸಮಿತಿಯ (Workshop) ಮೆಂಬರರಾದುದರಿಂದ; ದಿನಾಂಕ ೨೮ ರಂದು ಮಧ್ಯಾಹ್ನ ಅಲ್ಲಿ "ಹಿಂದುಳಿದ ರಾಷ್ಟ್ರಗಳು ಹಾಗೂ ಶಾಂತಿ" (Underdeveloped Countries and Peace) ಬಗೆಗೆ ಮಾತಾಡಿದೆವು. ನಮ್ಮ ಮಾತಿನಲ್ಲಿ ಪರಸ್ಪರ ಭಾವೈಕ್ಯ, ಸಹಕಾರ, ಬಾಂಧವ್ಯಗಳೇ ಹಿಂದುಳಿದ ರಾಷ್ಟ್ರಗಳನ್ನು ಮೇಲೆತ್ತುವ ಪೂರಕಗಳು ಎಂಬ ಅಂಶಗಳನ್ನು ಒತ್ತಿ ಹೇಳಿದೆವು. ಬಡವ ಹಾಗೂ ಶ್ರೀಮಂತರ ಅಂತರ ಉಂಟಾಗುವ ಕಾರಣಗಳನ್ನು ಊಹಿಸಿ ಸಲಹೆಗಳನ್ನು ನೀಡಿದೆವು. ಮೇಲಿನ ಅಭಿಪ್ರಾಯವುಳ್ಳ ನಮ್ಮ ಮಾತಿನ ಸಾರವಾಕ್ಯಗಳು ಹೀಗಿವೆ–

"....ನಾವು ಪರಸ್ಪರ ಸಹಾಯ–ಸಹಕಾರಗಳ ಸಿದ್ಧಾಂತಗಳನ್ನು ಮರೆತುಬಿಟ್ಟಿದ್ದೇವೆ. ಸಮಗ್ರ ಪೃಥ್ವಿಯೇ ನಮ್ಮ ಮನೆ ಹಾಗೂ ಮಾನವಮಾತ್ರರೆಲ್ಲರೂ ಸಹೋದರ ಸಹೋದರಿಯರು; ಎಂಬ ಮೂಲತತ್ವವನ್ನೇ ನಿರ್ಲಕ್ಷಿಸಿದ್ದೇವೆ....ನೈಸರ್ಗಿಕ ಸಂಪನ್ಮೂಲಗಳಿಗೂ ಮತ್ತು ಜನಸಂಖ್ಯೆಗೂ ಮಧ್ಯಂತರದಲ್ಲಿ ಉಂಟಾದ ಅಸಮತೋಲನದ ಸ್ಥಿತಿಯು ದೇಶವನ್ನು ಬಡತನಕ್ಕಾಗಲಿ ಸಿರಿತನಕ್ಕಾಗಲಿ ಕೊಂಡೊಯ್ಯುತ್ತಿದೆ. ಜನಸಂಖ್ಯಾ ಸ್ಫೋಟದ ಒತ್ತಡದೆದುರು ನೈಸರ್ಗಿಕ ಸಂಪನ್ಮೂಲಗಳು ಹಿಂದೇಟು ಹಾಕಿದರೆ ರಾಷ್ಟ್ರವು ದಟ್ಟದಾರಿದ್ರ್ಯದಿಂದ ಬಳಲುವದು ಖಂಡಿತ,.. ಜಾಗತಿಕ ಸಂಯುಕ್ತ ಸಂಸ್ಥೆಯು "ಜಾಗತಿಕ ಸಂಯುಕ್ತ ರಾಷ್ಟ್ರ"ವಾಗಿ ಪರಿವರ್ತಿತವಾಗಬೇಕು. ಅದು; ವಿಶ್ವಾದ್ಯಂತವಿರುವ ಸಂಪನ್ಮೂಲಗಳನ್ನು ಸಮಗ್ರ ವಿಶ್ವೋನ್ನತಿಗಾಗಿ ಪರಿವರ್ತಿಸುತ್ತ; ಸಮಸ್ತ ಮಾನವತೆಯ ಸಾಮಾಜಿಕ ಪುರೋಭಿವೃದ್ಧಿಗೂ ಹಾಗೂ ಜೀವನದ ಸಾಂಪತ್ತಿಕ ಸ್ವಾಸ್ಥ್ಯಕ್ಕೂ ಆದ್ಯ ಗಮನ ನೀಡಬೇಕು. ಇಷ್ಟಾದರೆ; ಮಾನವೀಯ ನೆಮ್ಮದಿಯ ಫಲವು, ವಿಶ್ವಶಾಂತಿಯ ಕುಸುಮದಿಂದ ಫಲಿಸುತ್ತದೆ...."

ಇಂಗ್ಲೀಷ ಭಾಷಣದ ಇದರ ಮೂಲ ಹೀಗಿದೆ–

"...We have forgotten the principles of mutual help, co-operation. We have forgotten the main principle that the whole world is the single home and the humanity resides in it as brothers and sisters....The unequilibrium position between the natural resources and the population leads the country towards poverty or richness. If the natural resources are very

few comparable to the high population pressure, that country suffers lot due to poverty....The world organisation should turn to the world federation which should aim at the promotion of social progress and better standards of life of the whole humanity, which should exploit the natural resources of the world for the development of the whole world. Then the fruit of the welfare of the humanity comes out of the flower of international peace....''

(ಈ ಭಾಷಣದ ಪೂರ್ತಿ ಪಾಠ ಪುಸ್ತಕದ ಕೊನೆಗೆ ಕೊಡಲಾಗಿದೆ)

ನಮ್ಮ ವಿಚಾರಗಳನ್ನು ಕೇಳಿಕೊಂಡ ನಂತರ ಅಂದು "ಧರ್ಮ ಮತ್ತು ಜನಸಂಖ್ಯಾ" (Religion and Population) ಕಮಿಟಿಯಲ್ಲಿ ನಮ್ಮನ್ನು ಭಾರತದ ಪರವಾಗಿ ಮೆಂಬರ ಎಂದು ಆಯ್ಕೆಮಾಡಿಕೊಂಡರು.

### "ಲಾ ಲಿಬರಾ ಬೆಲ್ಜಿಕ್" ದಿನಪತ್ರಿಕೆಯಲ್ಲಿ....

ಇದು ಬೆಲ್ಜಿಯಂ ದೇಶದ ಸುಪ್ರಸಿದ್ಧ ದಿನಪತ್ರಿಕೆ. ನಾವು ಭಾಷಣ ಮಾಡಿದ ಮರುದಿನ; ಈ ಪತ್ರಿಕೆಯ ಮುಖ ಪುಟದಲ್ಲಿ ಮೂರು ಕಾಲಮಿನಷ್ಟು ಉದ್ದಗಲದ ನಮ್ಮ ಫೋಟೋ ಅದರ ಶೀರ್ಷಿಕೆಯ ಕೆಳಗೇ ಬಂದುದನ್ನು ಕಂಡೆವು. ಆ ದಿನ ದಾರಿಯಲ್ಲಿ ನಾವು ಎಲ್ಲಿ ಹೋದರೂ ಜನರೆಲ್ಲ ಪತ್ರಿಕೆಯಿಂದ ನಮ್ಮ ಗುರುತು ಹಿಡಿದು ಕುತೂಹಲದಿಂದ ನಮ್ಮನ್ನೇ ನೋಡತೊಡಗಿದರು. ಪ್ರತಿಯಾಗಿ ಅವರಿಗೆ ನಮ್ಮ ಮಂದಹಾಸವನ್ನು ನೀಡಿ ಮುಂದೆ ಸಾಗುವದೊಂದೇ ನಮಗುಳಿಯಿತು. ನಮ್ಮ ಕಾವಿಯ ಬಟ್ಟೆ, ರುದ್ರಾಕ್ಷಿ, ಭಸ್ಮ, ಪೇಟ, ಕಾವಿಯ ಉಣ್ಣೆ ಶಾಲು, ಕಡಾವಿಗೆ ಬೆತ್ತಗಳು ಕೇವಲ ಸೂಟುಧಾರಿ ಜನರ ಮಧ್ಯದಲ್ಲಿ ಬಹುಜನಾಕರ್ಷಣೀಯವಾಗಿ ಎದ್ದು ತೋರುತ್ತಿದ್ದವು. ನೋಡಿದವರಲ್ಲಿ ಸಹಜ ಕುತೂಹಲದೊಂದಿಗೆ ಗೌರವ ಭಕ್ತಿಗಳಿಗೆ ಕಾರಣವಾಗುತ್ತಿದ್ದವು.

ಅಂತೂ; ಲ್ಯೂವೆನ್ನಿನ ದ್ವಿತೀಯ ವಿಶ್ವಧರ್ಮಗಳ ಶಾಂತಿ ಸಮ್ಮೇಲನದಲ್ಲಿ ನಮಗೆ ಜಪಾನದ ಕ್ಯೂಟೋದಂತೆಯೇ ಹಾರ್ದಿಕ ಸ್ವಾಗತ, ನಮ್ಮ ವಿಚಾರಗಳ ಅಭಿವ್ಯಕ್ತಿಗೆ ಸಂತೋಷಕರ ವಾತಾವರಣ ದೊರತದ್ದರಿಂದ ನಮಗೆ ಅಮಿತಾನಂದವಾಯಿತು. ನಾಳಿನ ಬಹಿರಂಗ ಸಭೆಯ ಸಿದ್ಧತೆಗಳನ್ನು ಇಂದೇ ನಾವು ಮನಸಿನಲ್ಲಿ ಮಾಡಿಕೊಳ್ಳುತ್ತ, ಭಗವಂತನ ಕೃಪೆಗಾಗಿ ಪ್ರಾರ್ಥಿಸಿ ಪವಡಿಸಿದೆವು.

## ಬಹಿರಂಗ ಸಭೆ (Plenary) ಯಲ್ಲಿ ಭಾಷಣ

ಒಂದೆರಡು ದಿನಗಳಲ್ಲಿ ನಮ್ಮ ಶಾಂತಿ ಪರಿಷತ್ತಿಗೆ ಗಂಭೀರವಾದ ನಿಲವು ಪ್ರಾಪ್ತವಾಗಿತ್ತು. ಹೊಸದೇಶ, ಹೊಸಬೀಡುಗಳ ಪರಕೀಯತೆ ಮಾಯವಾಗಿ ಎಲ್ಲರಲ್ಲಿ

ವೈಚಾರಿಕ ಕೂಟ ಕೂಡಿತ್ತು. ಒಂದುತನ ಮೂಡಿತ್ತು. ದಿನಾಂಕ ೨೮ ಹಾಗೂ ೨೯ರ Workshop ಗಳಲ್ಲಿ ನಾವು ಜನಸಂಖ್ಯಾ ಸಮಸ್ಯೆ, ಹಿಂದುಳಿದ ರಾಷ್ಟ್ರಗಳ ಬವಣೆಯನ್ನು ಕಂಡು ಮಾತನಾಡಿದೆವು. ನಮ್ಮ ಅಭಿಪ್ರಾಯಕ್ಕೆ ಅನೇಕ ದೇಶಗಳ ಪಂಡಿತರ ಹಾರ್ದಿಕ ಸಮ್ಮತಿ ದೊರೆತುದು ನಮಗೆ ತೃಪ್ತಿಯನ್ನು ತಂದಿತು.

ದಿನಾಂಕ ೩೦ ರಂದು ಸಾರ್ವತ್ರಿಕ ಶಾಂತಿ ಸಭೆಯನ್ನು ಉದ್ದೇಶಿಸಿ ಭಾಷಣ ಮಾಡುವ ಅವಕಾಶ ನಮಗೆ ಲಭ್ಯವಾಯಿತು. ಅಲ್ಲಿ ನೆರೆದ ಸುಮಾರು ೫೦ ರಾಷ್ಟ್ರಗಳ ಪಂಡಿತರು ನಮ್ಮನ್ನು ಹಾರ್ದಿಕವಾಗಿ ಆಲಿಸಿದರು. ಪ್ರಶ್ನೆಗಳನ್ನು ಕೇಳಿದರು. ನಾವು ಸೂಕ್ತವಾಗಿ ನಮ್ಮ ಅಭಿಪ್ರಾಯ ಮಂಡಿಸಿದೆವು. ನಮ್ಮ ಮುದ್ರಿತ ಭಾಷಣ ಪ್ರತಿಗಳನ್ನು ಸರ್ವರಿಗೂ ಹಂಚಲಾಯಿತು. ನಮ್ಮ ಭಾಷಣದ ಅಂತಿಮದಲ್ಲಿಯ "ನಮ್ಮ ಪ್ರತಿಜ್ಞೆ" (Our Pledge) ಎಲ್ಲರ ಮೇಲೆ ಪರಿಣಾಮ ಉಂಟುಮಾಡಿತು. ಅದರಲ್ಲಿ ನಾವು ಹೇಳಿದ ಅಂಶಗಳು ಸಂಗ್ರಹವಾಗಿ ಇಂತಿವೆ–

"...ಇಂದು ಪ್ರಪಂಚದಲ್ಲಿ ಸುತ್ತೆಲ್ಲ ಯುದ್ಧ ಭೀತಿಯ ಭಯವೇ ಹೆಚ್ಚಾಗಿ ಕಾಣುತ್ತಲಿದೆ. ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರವನ್ನು ಹತ್ತಿಕ್ಕಬೇಕು, ಅದರ ಶಕ್ತಿಯನ್ನು ಹೀರಬೇಕು ಎಂಬ ಇದೇ ತಾಮಸೀಯ ಹೊಂಚಿನ ಪ್ರವೃತ್ತಿಯು ಬೆಳೆಯುತ್ತಿರುವಾಗ, ಪ್ರಪಂಚದ ಎಲ್ಲ ರಾಷ್ಟ್ರದ ಧರ್ಮಗುರುಗಳು ಹಾಗೂ ತತ್ವ ಜಿಜ್ಞಾಸುಗಳು ಆಲೋಚನೆಮಾಡಿ, ವಿಶ್ವಶಾಂತಿಗೆ ಈ ಪ್ರಪಂಚದಲ್ಲಿ ಹೋರಾಡುವದು ಅತ್ಯಾವಶ್ಯಕ. ಪ್ರಪಂಚದ ತತ್ತ್ವವೇತ್ತರು ಮೇಲಿಂದ ಮೇಲೆ ಹೀಗೆ ಸೇರಿ ಪ್ರಪಂಚಕ್ಕೆ ಧಾರ್ಮಿಕ ಸಂದೇಶವನ್ನು ಬೀರುತ್ತಿದ್ದರೆ ಪ್ರಪಂಚದಲ್ಲಿ ಹಬ್ಬಿರುವ ಈರ್ಷೆ–ದ್ವೇಷಗಳ ಜ್ವಾಲೆಯು ಸ್ವಲ್ಪಾದರೂ ನಂದೀತು. ಪ್ರಪಂಚಕ್ಕೆ ಶಾಂತಿ ಸಿಕ್ಕೀತು. ಸರ್ವಧರ್ಮಗಳ ಧಾರ್ಮಿಕ ಶಕ್ತಿಯ ಕಿರಣಗಳು ರಾಷ್ಟ್ರರಾಷ್ಟ್ರಗಳ ಮೂಲೆ–ಮೂಲೆಗಳಿಗೂ ಹೋಗಿ ಪ್ರೋಜ್ವಲಗೊಳಿಸಿ, ತಾಮಸೀಯ ಪ್ರವೃತ್ತಿಯನ್ನು ನಷ್ಟಗೊಳಿಸಲು ಸಹಾಯ ವಾದೀತು. ಅದರಿಂದ ಇಂದಿನ ರಾಜಕಾರಣದಲ್ಲಿರುವ ಅನೇಕ ಭಿನ್ನಾಭಿಪ್ರಾಯಗಳು ನಶಿಸಿ ಹೋಗಬಹುದು. ಅದಕ್ಕಾಗಿ ಪ್ರಪಂಚದ ಧರ್ಮಗುರುಗಳು ಇಂದು ಹಸಿದ ಜಗತ್ತಿಗೆ ಬೇಕಾದ ಸರ್ವತೋಮುಖ ಸುಧಾರಣೆ, ಜಾಗತಿಕ ಶಾಂತಿ ರಕ್ಷಣೆ, ರಾಷ್ಟ್ರ–ರಾಷ್ಟ್ರಗಳ ಸ್ನೇಹ ಸಂವರ್ಧನೆ, ಮಾನವೀಯ ಮೂಲಭೂತ ಹಕ್ಕುಗಳ ಪೋಷಣೆ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ವೈದ್ಯಕೀಯ ರಂಗಗಳಲ್ಲಿ ಅಂತ ರಾಷ್ಟ್ರೀಯ ಸಹಕಾರ ಸಂಪಾದನೆ; ಎಲ್ಲಕ್ಕೂ ಮಿಗಿಲಾಗಿ ಧಾರ್ಮಿಕ ಭಾವನೆ ಪ್ರಪಂಚದ ತುಂಬೆಲ್ಲಾ ಹಬ್ಬುವಂತೆ ಮಾಡಿ, ಲೋಕಕ್ಕೆಲ್ಲ ಸುಂದರವಾಗುವಂತೆ ಕಾರ್ಯರೂಪಕ್ಕೆ ತರುವದೇ ನಮ್ಮ ಕರ್ತವ್ಯ...."

ಇದರ ವಿಸ್ತೃತ ಇಂಗ್ಲೀಷ ಮೂಲ ಹೀಗಿದೆ–

"....Today the sombre spectre of a probable third world war hovers all over the world. When one nation is waiting for an

opportunity to put down another, and when snch a brutish attitude prevails everywhere, it is quite essential, nay urgent, that all the religious heads and spiritual seekers of every nation should join together and strive for world peace. If leaders of thought and seekers after truth assemble (as we have done now) frequently, and propagate the message of religion, the flames of hatred and rivalry, spite and jealousy which have stretched over the world, might be extinguished at least partialy, and to that limited extent the world will have peace, the rays of spirit might reach every nook and corner of the world ilumine the darkest spotless in ignorance and inertia, which might iron out the differences that persist in the political field, and supply solutions to many a knotty problem confronting the political leaders of the world. Therefore, it is our primary duty as religious heads to work for an all-sided improvement in the living conditions of men, to guard world peace, to promote friendship and understanding between nations, to safeguard the fundamental rights of many to create a climate of international co-operation in the economic, social, cultural, educational and medical spheres, above all, to spread the spirit of religion the world over and make the world a healthy home for all to dwell in happily.''

(ಇಂಗ್ಲೀಷ ಭಾಷಣದ ಪೂರ್ಣ ಪಾಠವನ್ನು ಈ ಪುಸ್ತಕದ ಕೊನೆಗೆ ಕೊಡಲಾಗಿದೆ)

**ಒಲವಿನಿಂದ ಅರಳಿದ "Hearts Blossoms"**

ದಿನಾಂಕ ೩೧ ರಂದು ಸಂಜೆ; ನಮ್ಮ ಗ್ರಂಥ "Hearts Blossoms"ದ ಉದ್ಘಾಟನಾ ಸಮಾರಂಭವು ೧೫-೨೦ ರಾಷ್ಟ್ರಗಳ ಮುಖಂಡರ ಎದುರು ಜರುಗಿತು. ಡಾ. ಹೋಮರ ಎ. ಜಾಕ್ ಅವರು ಬಿಡುಗಡೆ ಮಾಡಿದರು. ಸಮಾರಂಭದ ಅಧ್ಯಕ್ಷತೆಯನ್ನು WCRP ಯ ವೈಸ್-ಪ್ರೆಸಿಡೆಂಟರಾದ ಅಮೇರಿಕೆಯ ಡಾ. ಡಾನಾ ಲ್ಯೂಕ್ಲೀನ್ ಗ್ರೀಲೆ (Dr. Dana Luclean Greeley) ಅವರು ವಹಿಸಿದ್ದರು. ಸಭೆಯಲ್ಲಿ ನಮ್ಮ ಪರಿಚಯವನ್ನು ಪ್ರೊ. ಎ. ಎಲ್. ಹಿರೇಮಠರು ಮಾಡಿಕೊಟ್ಟರು.

"Hearts Blossoms" ದಲ್ಲಿ ಹೆಚ್ಚಾಗಿ ಜೀವನದ ಅನುಭವಗಳೇ ಶಬ್ದರೂಪಕ ತೊಟ್ಟಿವೆ. ಸಾಧಕ ಜೀವನದಲ್ಲಿ ಆಗುವ ಕಷ್ಟ ಸುಖಗಳ ಹೊಯ್ದಾಟ ಇಲ್ಲಿ ಕಾಣುತ್ತೇವೆ. ಮೊದಲು ನಾವು ಸಾಹಿತ್ಯ ರಂಗದಲ್ಲಿ ಬಹುಕಾಲ ಕಳೆಯುತ್ತಿದ್ದೆವು. ಜಗದ್ಗುರು ಸ್ಥಾನಕ್ಕೆ

ಪೀಠಾರೋಹಣ ಮಾಡಿದ ನಂತರ; ಶಾಲೆ, ಕಾಲೇಜು, ಪತ್ರಿಕೆ, ದವಾಖಾನೆ, ಅನೇಕ ಧಾರ್ಮಿಕ ವಿದ್ಯಾಲಯಗಳು, ರೀಸರ್ಚ್ ಇನ್‌ಸ್ಟಿಟ್ಯೂಟ, ಗ್ರಂಥ ಮುದ್ರಣ ಮುಂತಾದ ಕೆಲಸಗಳ ಉಬ್ಬರದಲ್ಲಿ ನಾವು ತೊಡಗಿದ್ದರಿಂದ, ಸಾಹಿತ್ಯನಿರ್ಮಾಣ ಸಂಪೂರ್ಣ ತಟಸ್ಥ ವಾಗದಿದ್ದರೂ ಹೇರಳ ಅಡೆತಡೆ ಅನುಭವಿಸಿತು. ಆದರೂ ಈ ಲೋಕೋನ್ನತಿಯ ಸಹಸ್ರ ಸಹಸ್ರ ತೊಂದರೆಗಳಲ್ಲಿಯೇ ಒಂದು ಬಗೆಯ ಪರಿಪಕ್ವ ಜೀವನಾನುಭವವು ಚಿಗುರೊಡೆದು ದಲಬಿಟ್ಟಿತು. ಇಂತು ಇದರ ಅಭಿವ್ಯಕ್ತಿಯೇ ನಮ್ಮ ಮೊದಲ ವಚನ ಸಂಕಲನ "ಚಿತ್ಸುಮನ" ಈ ವಚನಗಳನ್ನು ಇಂಗ್ಲೀಷಿಗೆ ಭಾಷಾಂತರ ಮಾಡಿಸಿ, ಪರ ರಾಷ್ಟ್ರದಲ್ಲಿ ಪ್ರಚಾರಮಾಡಿ, ನಮ್ಮ ಭಾವನೆಗಳನ್ನು ತಿಳಿಸಬೇಕೆಂದು ಬಹುದಿನಗಳ ಆಶೆ ಇತ್ತು. ಅದು ಈಗ, ಲ್ಯೂವೆನ್ನಿನ ಜಾಗತಿಕ ವೇದಿಕೆಯ ಮೇಲೆ ಫಲಿಸಿದಂತಾಯಿತು.

ಭಾವಕುಸುಮವನ್ನು ಅರಳಿಸಲು ವಚನಮಾಧ್ಯಮವು ಬಲು ಸುಂದರ ಹೃದಯ ದಂತರಂಗವನ್ನು ಜನಸಾಮಾನ್ಯರಿಗೂ ತಿಳಿಯಪಡಿಸಿ, ಮಹದ್ವಿಚಾರವನ್ನು ತಿಳಿ ಭಾಷೆ ಯಲ್ಲಿರಿಸಿ, ಅಂತರ್ಭಾವಗಳನ್ನು ಆಳವಾಗಿ ವಿಚಾರಿಸಿ, ವಿವೇಚಿಸಿ, ಅನುಭವಿಸಿ ಬರೆಯುವದೇ ವಚನ. ವಚನ ಹಾಗೂ ಕಾವ್ಯ ರಚನೆಗೆ ಹೃದಯ ಸಂವೇದನೆಯೇ ಮೂಲಕಾರಣ. ಹೃದಯ ಶ್ರೀಮಂತಿಕೆಯಿಂದ ಕಾವ್ಯಕ್ಕೆ ಹೆಚ್ಚು ಬೆಲೆ ಮತ್ತು ಬಲ ಬರುತ್ತದೆ. ಈ ವಿಜ್ಞಾನ ಯುಗದಲ್ಲಿ ಯಾರಿಗೂ ಶಾಂತಿ ಸಮಾಧಾನಗಳಿಲ್ಲ. ಇಂತಹ ಕಾವ್ಯ ರಚನೆ ಮಾಡುತ್ತ ಹೋದರೆ ಮನಸ್ಸಿಗೆ ಸ್ವಲ್ಪಾದರೂ ನೆಮ್ಮದಿಯುಂಟಾದೀತೆಂಬ ಭಾವನೆಯಿಂದ ಬರೆದಿದ್ದೇವೆ. ನಾವು ಕನ್ನಡದಲ್ಲಿ ಬರೆದ "ಚಿತ್ಸುಮನ"ದ ಇಂಗ್ಲೀಷ ಅನುವಾದವನ್ನು ಮಾಡಿದ ಪ್ರೊ. ಮೆನೆಝಿಸ್ ಹಾಗೂ ಎಸ್. ಎಮ್. ಅಂಗಡಿ ಅವರನ್ನು ಸ್ಮರಿಸದೆ ಇರಲಾರೆವು. ಒಟ್ಟಾರೆ, ಬೇರೆ ಬೇರೆ ಭಾಷೆಗಳಲ್ಲಿ ಸಾಹಿತ್ಯವು ಭಾಷಾಂತರಿತವಾಗುತ್ತಿದ್ದರೆ, ಮಾನವ ಪ್ರಜ್ಞೆ, ಕಾಲ-ದೇಶ-ಮತ-ವರ್ತಮಾನಗಳನ್ನು ಬಂಧನವನ್ನು ಮೀರಿ, ವಿಶ್ವ ಮಾನಸ ಪ್ರಜ್ಞೆ, ಅರಳುತ್ತದೆ ದೇಶ ದೇಶಗಳ ಬಾಂಧವ್ಯ ಬಲಯುತವಾಗುತ್ತದೆ. ವಿಶ್ವ ಶಾಂತಿಗೆ ಸಹಕಾರಿಯಾಗುತ್ತದೆ. ನಮ್ಮ ಈ ವಿಚಾರಗಳನ್ನೊಳಗೊಂಡ ಆಂಗ್ಲ ಭಾಷಣ ವನ್ನು ಎಲ್ಲರೂ ಶಾಂತವಾಗಿ ಕೇಳಿದರು. ನಮ್ಮ ಕೃತಿಯನ್ನು ಬಿಡುಗಡೆ ಮಾಡಿದ, ಹಾಗೂ ವಿಶ್ವಶಾಂತಿ ಪರಿಷತ್ತಿನಲ್ಲಿ ಅದರ ಬಿಡುಗಡೆಗೆ ಅನುಕೂಲ ಮಾಡಿಕೊಟ್ಟ ಅವರೆಲ್ಲ ರನ್ನೂ ಅಭಿವಂದಿಸಿದೆವು. ನಮ್ಮ ಆಂಗ್ಲ ಭಾಷಣದ ಸಾರವನ್ನು ಇಲ್ಲಿ ಕಾಣಬಹುದು–

''This, a small collection of my compositions, entitled 'Heart's Blossoms' is released jest now. It has given me great pleasure This collection mostly reveals my experiences in life. You may find in it reflected pains and joys I have undergone in my life as a seeker or an aspirant. During my student days and thereafter I was much absorbed in writing and reading literature. But recently, since I ascended the pontifical seat of Moorusavirmath, I have been complled to take interest in the

activites pertaing to the development of educational institutions. research institutes, medical centres and hospitals which naturally blocked my literary persuits. None the less, I believe, social work of the nature of the one that I have been doing all these days will be congenial to the growth of literary genius. The feelings evoked by the sweet of one's brow, when they find honest expression, will blossom into literary compositions.

"It has been my long felt desire to lend English garb to my thoughts and writings and present in countries outside India. I am glad it is materialised now."

(ನಮ್ಮ ಆಂಗ್ಲ ಭಾಷಣದ ಪೂರ್ಣ ಪಾಠವನ್ನು ಪುಸ್ತಕದ ಕೊನೆಗೆ ಕೊಡಲಾಗಿದೆ.)

ಈ ಕೃತಿಯು ಬಗ್ಗೆ ಡಾ. ಹೋಮರ ಎ. ಜಾಕ್ ಹಾಗೂ ಡಾ. ಡಾನಾ ಮ್ಯಾಕ್ಲೀನ್ ಗ್ರೀಲೆ ಅವರು ಹಾರ್ದಿಕವಾಗಿ ಮಾತನಾಡಿದರು. ಮಾತ್ರವಲ್ಲ; ಡಾ. ಗ್ರೀಲೆ ಅವರು ಈ ಗ್ರಂಥದ ಬಗ್ಗೆ ಲಿಖಿತದಲ್ಲಿ ನೀಡಿದ ಅಭಿಪ್ರಾಯ ಇಂತಿದೆ–

"A very beautiful and inspiring book with real spiritual sensitivity is the new volume titled 'Hearts Blossoms'."

ಈ ಸಮಾರಂಭಕ್ಕೆ ಆಗಮಿಸಿದ ಕರಾಚಿ ವಿಶ್ವವಿದ್ಯಾಲಯದ ಉಪಕುಲಪತಿ "ಮೊಹಮ್ಮದ ಹುಸೇನ" ಅವರು ನೀಡಿದ ಲಿಖಿತ ಅಭಿಪ್ರಾಯ ಕೆಳಗಿನಂತಿದೆ–

"In the name of Allah; I have read with great interest the collection of poems of Srimanmaharaja Niranjana jagadguru Gangadhara Rajayogeendra Mahaswamiji of Moorusavirmath in English translation entitled 'Heart's Blossoms', I found in this beautiful book not only sweet specimen of excellent poetry but also many a world of wisdom which could only come from a person who could give deep thought to problems of life and morality."

**Mohamud Husain**, Ph. D Hong., D. Litt
Vice-chancellor, University of Karachi

ಇದೇ ಸಮಾರಂಭದಲ್ಲಿ; ಹುಬ್ಬಳ್ಳಿಯಿಂದ ಒಯ್ದಿರುವ "Thus Spoke Basava" ಇಂಗ್ಲೀಷ ಪುಸ್ತಕಗಳನ್ನು ಎಲ್ಲರಿಗೂ ವಿತರಣೆ ಮಾಡಿದೆವು. ಅಲ್ಲಿಯ ಸದಸ್ಯರೆಲ್ಲರೂ ಅವನ್ನು ಉತ್ಸುಕತೆಯಿಂದ ತೆಗೆದುಕೊಂಡರು.

**"ಕೇಂದ್ರೀಯ ಆರ್ಥಿಕ ಸಮಿತಿ" ನಮ್ಮ ಕೊರಳಿಗೆ!**

ಒಂದುವಾರದ ದ್ವಿತೀಯ ವಿಶ್ವಧರ್ಮಗಳ ಶಾಂತಿ ಪರಿಷತ್ತು ದಿನಾಂಕ: ೩,

ಸಪ್ಟೆಂಬರ (೧೯೭೪) ದಂದು, ಅಪರಾಹ್ನದ ಸಾರ್ವತ್ರಿಕ ಸಭಾಂಗಣದಲ್ಲಿ ಮಹಾಮಂಗಳ ವಾಯಿತು. ಇದರಲ್ಲಿ ಒಂದು ವಾರದ ಉಪಸಭೆಗಳ ಗೊತ್ತುವಳಿಗಳು ಸ್ವೀಕೃತವಾದವು. ಇದೇ ಸಭೆಯಲ್ಲಿ ನಮ್ಮನ್ನು ವಿಶ್ವಧರ್ಮಗಳ ಅಂತರ್ರಾಷ್ಟ್ರೀಯ ಶಾಂತಿ ಸಮ್ಮೇಳನದ ಸಂಸ್ಥೆಯ "ಸೆಂಟ್ರಲ್ ಫಾಯನಾನ್ಸ ಕಮಿಟಿ"ಗೆ ಮೆಂಬರ ಎಂದು ಆಯ್ಕೆಮಾಡಿಕೊಂಡರು. ಇದಕ್ಕೆ ಅಮೇರಿಕೆಯ ಡಾ. ಗ್ರೀಲೆ ಹಾಗೂ ಭಾರತದ ರಂಗನಾಥ ದಿವಾಕರ ಅವರ ಒತ್ತಾಯವೇ ಕಾರಣ. ಅಂತೂ ಒಲ್ಲೊಲ್ಲದೆ ಪರಿಷತ್ತಿಗೆ ಬಂದರೆ, ಅದರ ಆರ್ಥಿಕ ಆಡಳಿತದ ಜವಾಬ್ದಾರಿ ನಮ್ಮ ಕೊರಳಿಗೆ ಬಿತ್ತು!

ಇಂದಿನ ಸಭೆಯಲ್ಲಿ WCRPಯ ಚೇರಮನ್ನರಾದ ಆರ್ಚಬಿಶಪ್ ಆ್ಯಂಗ್ಲೋ ಫರ್ನಾಂಡೀಸ್ ಅವರು ತಮ್ಮ ಸಂದೇಶವಾಚನದಲ್ಲಿ; ಹುಬ್ಬಳ್ಳಿಯ ನಮ್ಮ ಮೂರುಸಾವಿರ ಮಠದಲ್ಲಿ ಜರುಗಿದ ಭಾರತೀಯ ಮಟ್ಟದ ಶಾಂತಿ ಪರಿಷತ್ತನ್ನು ಮನಸಾರೆ ಕೊಂಡಾಡಿದರು. ಹಾಗೂ ೫೦ ರಾಷ್ಟ್ರಗಳಿಂದ ಆಗಮಿಸಿದ ಸರ್ವರಿಗೂ ಆ ಬಗೆಯಾಗಿ ಶಾಂತಿ ಪರಿಷತ್ತಿನ ಸಂದೇಶವನ್ನು ತಮ್ಮ ತಮ್ಮ ದೇಶದ ಜನತೆಗೆ ತಲುಪಿಸಬೇಕೆಂದು ನಿರೂಪಿಸಿದರು.

### ಮರೆಯದ ನೆನಹು

ಲ್ಯೂವೆನ್ನಿನ WCRP IIದಲ್ಲಿ ನಮ್ಮ ಗಮನವನ್ನು ಹೆಚ್ಚು ಆಕರ್ಷಿಸಿದ ವ್ಯಕ್ತಿಗಳೆಂದರೆ— ಡಾ. ಹೋಮರ್ ಎ. ಜಾಕ್ (ಜನರಲ್ ಸೆಕ್ರೆಟರಿ), ಆರ್ಚಬಿಶಪ್ ಆ್ಯಂಗ್ಲೋ ಫರ್ನಾಂಡೀಸ್ (ಚೇರಮನ್), ಡಾ. ಡಾನಾ ಮ್ಯಾಕ್‌ಲೀನ್ ಗ್ರೀಲೆ (ವ್ಹಾಯಿಸ್-ಚೇರಮನ್), ಪ್ರೊ. ಮಹಮ್ಮದ ಹುಸೇನ (ವ್ಹಾಯಿಸ್-ಚಾನ್ಸಲರ್: ಕರಾಚಿ ವಿಶ್ವವಿದ್ಯಾಲಯ), ಆರ್. ಆರ್. ದಿವಾಕರ (ವ್ಹಾಯಿಸ್-ಚೇರಮನ್), ಡಾ. ಮರಿಯಾ ಎ. ಲಸ್ಕರ್ (ವ್ಹಾಯಿಸ್-ಚೇರಮನ್: ಜರ್ಮನಿ), ರೆ. ನಿಕ್ಯೋ ನಿವ್ಯಾನೊ (ವಾಯಿಸ್-ಚೇರಮನ್: ಜಪಾನ), ಪ್ರೊ. ಯೋಶಿಕಿ ಲಿಸಾಕಾ (ಚೇರಮನ್: ಪ್ರೊಗ್ರ್ಯಾಮ್ ಕಮಿಟಿ, ಜಪಾನ), ಡಾ. ಎ. ಎನ್. ಉಪಾಧ್ಯಾಯ, ಡಾ. ಶ್ರೀನಿವಾಸ ಐಯ್ಯಂಗಾರ ಮುಂತಾದವರು. ನಾವು ಹೆಸರರಿಯದ ಇನ್ನೂ ಹಲವರು ಉಂಟು. ಇವರೆಲ್ಲ ನಮ್ಮ ಪೀಠದ ಪರಂಪರಾಗತದ ಘನತೆ ಗೌರವಗಳಿಗೆ ಸರಿಯಾಗಿ ನಮ್ಮೊಂದಿಗೆ ನಡೆದುಕೊಂಡುದು ಶ್ರೀ ಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ಕೃಪೆ.

### ಹಿಟ್ಲರನ ಘೋರ ಹತ್ಯಾಕಾಂಡ

ಈ ಮಧ್ಯ ದಿನಾಂಕ ೨ ರಂದು, ಎರಡನೆಯ ಮಹಾಯುದ್ಧದಲ್ಲಿ ಹಿಟ್ಲರನ ಹತ್ಯಾಕಾಂಡ ನಡೆದ ಬ್ರಿಂಡಾಕ್ (Breendok) ಗೆ ನಮ್ಮೆಲ್ಲರನ್ನು WCRPಯ ವಿಶೇಷ ವಾಹನಗಳಲ್ಲಿ ಕರೆದೊಯ್ದರು. ಇದೊಂದೇ ಸ್ಥಾನದಲ್ಲಿ ಹಿಟ್ಲರ ೬೦,೦೦೦ ಜನರನ್ನು ಕೊಲ್ಲಿಸಿದ್ದಾನೆ. ಸುತ್ತೆಲ್ಲ ಕೋಟೆ ನೀರು, ನಡುವೆ ಕಾರಾಗೃಹ. ಇಲ್ಲಿ ಹಿಟ್ಲರನ ರಾಕ್ಷಸೀ ಸೇನೆಗೆ ಹಬ್ಬ. ಮಾರಣ ಹೋಮ. ಅನೇಕರನ್ನು ಅನೇಕ ಬಗೆಯ

ಮೈನವಿರೇಳುವ ಚಿತ್ರಹಿಂಸೆ ಮಾಡಿಕೊಂದರು. ಮೈಗೆ ಉಪ್ಪಿನ ನೀರು ಉಗ್ಗಿ ಒಂದೊಂದೇ ಚೂರು ಕೊಯ್ಯುತ್ತ ಕೊಲ್ಲುವದು, ಕುತ್ತಿಗೆಗೆ ಉರುಲುಹಾಕಿ ಕೇವಲ ಅರ್ಧ ಕೊಂದು ಮೋಜು ಮಾಡುವದು, ಬತ್ತಲೆ ಮಾಡಿ ಉರಿ ಹಚ್ಚಿ ಸುಡುವದು, ಗುಂಡಿನ ಗುರಿ ಇಡುವ ವಿಹಾರಕ್ಕೆಂದು ಅನೇಕರನ್ನು ದೂರದಿಂದ ಗುಂಡಿಕ್ಕಿ ನಲಿದಾಡುವದು. ಇಂಥ ಕರಾಳ ಭೀಕರ ರಾಕ್ಷಸ ಹತ್ಯಾಕಾಂಡದಲ್ಲಿ ಸಿಕ್ಕು; ಅದು ಹೇಗೊ ಪಾರಾದ ೭೫ ವರ್ಷ ವಯುಸ್ಸಿನ ವೃದ್ಧನೊಬ್ಬ ಇಲ್ಲಿಯ ಹತ್ಯಾಕಾಂಡದ ಕಥೆಯನ್ನು ಹೇಳುತ್ತ ಅಳತೊಡಗಿದನು. ಹಿಟ್ಲರನ ಸೇನೆ ಎರಡು ಬಾರಿ ಸಮಗ್ರ ಬೆಲ್ಜಿಯಂ ದೇಶವನ್ನು ಸುಟ್ಟು ಬೂದಿ ಮಾಡಿದ್ದುಂಟು. ಅದನ್ನೆಲ್ಲ ನೆನೆಸಿ ನಾವು ಅಲ್ಲಿ ವಿಶ್ವಶಾಂತಿಗಾಗಿ ಭಗವಂತನಲ್ಲಿ ಕಂಠತುಂಬಿ ಪ್ರಾರ್ಥಿಸಿದೆವು.

ಅಲ್ಲಿಂದ ಮರಳಿ ಬಂದಾಗ ಬೆಲ್ಜಿಯಮ್ಮಿನ ರಾಜಧಾನಿ ಬ್ರುಸೆಲ್ಸ (Brussels) ಸಂದರ್ಶಿಸಿದೆವು. ಇಲ್ಲಿ ಹುತಾತ್ಮ ಗೋಪುರ (Tomb of the Unknown soldier) ನಗರದ ಪ್ರಧಾನ ಚೌಕ, ರಾಜ ದಂಪತಿಗಳು ವಾಸಿಸುವ ಅರಮನೆ (The Royal Palace), ಅಂತರ್ರಾಷ್ಟ್ರೀಯ ವಾಣಿಜ್ಯ ಕೇಂದ್ರ (Centre International), ಲಾ ಬಾಸಿಲಿಕ್ (La Basilique) ಪುರಾತನ ಚರ್ಚು, ಗ್ರ್ಯಾಂಡ್ ಸ್ಕ್ವೆಯರ್‌ಗಳನ್ನು ದರ್ಶಿಸಿದೆವು. ಪುರಾತನ ಶೈಲಿಯಲ್ಲಿ ಭವ್ಯವೂ ಎತ್ತರವೂ ಕಲಾತ್ಮಕವೂ ಆಗಿ ನಿರ್ಮಿತವಾದ ಚರ್ಚು ನಮ್ಮನ್ನಾಕರ್ಷಿಸಿತು. ಬೆಲ್ಜಿಯಂ ದೇಶ ವೈಜ್ಞಾನಿಕ ಯಂತ್ರ ಸಾಮರ್ಥ್ಯವನ್ನೂ, ಪ್ರಾಕೃತಿಕ ಹಸಿರು ಸೌಂದರ್ಯವನ್ನೂ ಸಮ ಪ್ರಜ್ಞೆಯಿಂದ ಅರಳಿಸಿದ ಪುಟ್ಟ ನಾಡು. ಯುದ್ಧಗಳಿಂದ ಕಂಗೆಟ್ಟ ಇಲ್ಲಿಯ ಜನರ ಮುಖದಲ್ಲಿ ಚಿಂತೆ ಇಲ್ಲ, ನಿಟ್ಟುಸಿರಿಲ್ಲ, ಭಯಭೀತಿಯಿಲ್ಲ. ಇದ್ದುದೆಲ್ಲ ಗುಲಾಬಿ ಹೂವಿನ ಪ್ರಸನ್ನ ನಗೆ. ಸದಾವಕಾಲ ಕಾರ್ಯನಿಷ್ಠೆ. ಸಹಜ ಸ್ವಾಭಿಮಾನ. ಪೂರ್ಣ ದೇಶಾಭಿಮಾನ, ಪ್ರಾಮಾಣಿಕತೆ ಇಲ್ಲಿ ಎದ್ದು ಕಾಣುವ ಗುಣ.

## ಸೂರ್ಯ ಮುಳುಗದ ದೇಶ "ಇಂಗ್ಲೆಂಡ"

ಬ್ರುಸೆಲ್ಸದಿಂದ ಲಂಡನ್ನಿಗೆ ಕೇವಲ ನಾಲ್ವತ್ತೈದು ನಿಮಿಷಗಳ ವಿಮಾನ ದಾರಿ. ಬೆಳಗಾವಿಯಿಂದ ಮುಂಬೈಗೆ ಹೋದಷ್ಟು ಹತ್ತಿರ. ಅಷ್ಟರಲ್ಲೇ ಉತ್ತರ ಸಮುದ್ರ (North Sea) ದಾಟಿ ಹೋಗುತ್ತೇವೆ. ಯುರೋಪಿನ ದೇಶಗಳನ್ನು ದಾಟುವದೆಂದರೆ ನಮ್ಮ ದೇಶದ ಪ್ರಾಂತಗಳನ್ನು ಕೆಲವು ಸಲ ಜಿಲ್ಲೆಗಳನ್ನು ದಾಟಿದಂತೆ! ಆದರೂ ಅವುಗಳ ವೈಜ್ಞಾನಿಕ ರಂಗದ ಮಹತ್ಸಾಧನೆ ತಮ್ಮ ಬೃಹದ್ಭಾರತವನ್ನು ದಿಗ್ಭ್ರಮೆಗೊಳಿಸುವಷ್ಟು ಕಲ್ಪನಾತೀತ. ಇಲ್ಲಿಯ ಒಂದೊಂದು ಪುಟ್ಟ ದೇಶವೂ ನಮಗೆ ಸಾಲ ಇಲ್ಲವೆ ನೆರವು ಕೊಡಬಲ್ಲವು. ಅವರು ತಮ್ಮ "ವ್ಯಕ್ತಿಶಕ್ತಿ" (Man Power) ಯ ಪರಮಾವಧಿ

ಬಳಕೆ ಮಾಡಿಕೊಂಡದ್ದೇ ಇದಕ್ಕೆ ಕಾರಣ. ನಮ್ಮವರಲ್ಲಿ ಬಹು ಸಂಖ್ಯಾತರಿಗೆ "ವ್ಯಕ್ತಿ ಶಕ್ತಿ"ಯೆಂಬುದೊಂದು ಉಂಟೆಂಬುವ ಕಲ್ಪನೆಯೂ ಇಲ್ಲ.

ಬ್ರುಸೆಲ್ಸಿನಿಂದ ವಿಮಾನ ಮಾರ್ಗವಾಗಿ ಡಾ. ದಿವಾಕರ ಮತ್ತು ಪ್ರೊ. ಎ. ಎಲ್. ಹಿರೇಮಠರೊಂದಿಗೆ ಲಂಡನ್ ತಲುಪಿದೆವು. ಲಂಡನ್ನಿನ ಹ್ಯಾಥ್ರೋ ಏರ್‌ಪೋರ್ಟಿನಲ್ಲಿ; ನಮ್ಮ ಆಪ್ತಕಾರ್ಯದರ್ಶಿಗಳಾದ ಪ್ರೊ. ಎ. ಎಲ್. ಹಿರೇಮಠರ ಅಳಿಯಂದಿರಾದ ಡಾ. ಸಚ್ಚಿದಾನಂದ ಮೂರ್ತಿ, ಅವರ ಧರ್ಮಪತ್ನಿ (ಪ್ರೊ. ಹಿರೇಮಠರ ಹಿರಿಯ ಮಗಳು) ಸೌ. ಶೋಭಾ, ಡಾ. ಮುನಿಶಂಕರ ಹಾಗೂ ಅವರ ಪತ್ನಿ, ಮೇಜರ್ ರಾಮಚಂದ್ರನ್ ಸ್ವಾಗತಿಸಿದರು. ವಿಮಾನದಿಂದ ಇಳಿಯುತ್ತಿದ್ದಂತೆ ಲಂಡನ್ನಿನ ಕೊರೆಯುವ ಚಳಿ ನಮ್ಮನ್ನು ಸ್ವಾಗತಿಸಿತು. ಆಗಲೇ ಸಂಜೆ. ನೇರವಾಗಿ ಡಾ. ಮೂರ್ತಿ ಅವರ ಮನೆ ಸೇರಿ. ಸ್ನಾನ-ಪೂಜೆ ತೀರಿಸಿ ವಿಶ್ರಾಂತಿ ಪಡೆದೆವು. ಡಾ. ಮೂರ್ತಿಯವರು ಕರ್ನಾಟಕದವರು. (ಶಿರಾ–ಹಿರಿಯೂರಿನವರು) ಸುಸಂಸ್ಕೃತರು. ಲಂಡನ್ನಿನಲ್ಲಿ ಒಳ್ಳೆಯ ಪ್ರ್ಯಾಕ್ಟೀಸು ಉಳ್ಳ ಸಾಹಸಿಗರಾದ ಶಿಶು ರೋಗ ತಜ್ಞ ವೈದ್ಯರು. ಅವರಿಗೆ ಅವರ ಗುಣರೂಪಗಳಿಗೆ ತಕ್ಕ ಮಡದಿ; ನಮ್ಮ ಆಪ್ತಕಾರ್ಯದರ್ಶಿ ಪ್ರೊ. ಎ. ಎಲ್. ಹಿರೇಮಠರ ಮಗಳು ಸೌ. ಶೋಭಾ. ಇವರೂ ಸಹ ಬಿ. ಎ. ಪದವೀಧರೆ. ಅವರ ಮನೆಗೆ ಬಂದಾಗ ಕನ್ನಡನಾಡಿನ ನಮ್ಮ ಭಕ್ತರ ಮನೆಗೇ ಬಂದಂತೆ, ಆದರದ ಆತಿಥ್ಯ ದೊರೆಯಿತು.

### ಕಣ್ಣಿಗೆ ಹಬ್ಬ: ಲಂಡನ್ ನಗರ

ದಿನಾಂಕ ೫: ಸಪ್ಟಂಬರ ಮುಂಜಾವು. ಲಂಡನ್ನಿನ ಡಾ. ಮೂರ್ತಿಯವರ ಮನೆಯಲ್ಲಿ ಸುಖದಿಂದ ಪೂಜೆಯಾಯಿತು. ಇಷ್ಟು ದಿನ ಲ್ಯೂವೆನ್ನಿನಲ್ಲಿ ಹಣ್ಣು ಹಾಲಿನ ಮೇಲೆಯೇ ನಮ್ಮ ಪ್ರಸಾದ ಮುಗಿದಿತ್ತು. ಹಣ್ಣು ಹಾಲಿನ ಹೊರತು ಆ ಅಪರಿಚಿತ ದೇಶದಲ್ಲಿ ಮತ್ತೇನನ್ನೂ ಬಯಸುವಂತಿರಲಿಲ್ಲ. ಎಷ್ಟೇ ತೊಂದರೆಗಳು ಬಂದರೂ ನಮ್ಮ ಪೂಜಾನಿಷ್ಠೆಗಳಿಗೆ ಭಂಗ ಬರಲಿಲ್ಲ. ಅದು ಶ್ರೀ ಗುರು ಕೃಪೆ. ನಮ್ಮೊಡನಿದ್ದ ಪ್ರತಿನಿಧಿಗಳೆಲ್ಲ ಬ್ರುಸೆಲ್ಸಿನಲ್ಲಿ ಕಾಫಿ ಹೌಸಿಗೆ ಹೋಗುತ್ತಿದ್ದರು. ಪ್ರತಿನಿಧಿಗಳಿಗಾಗಿ ಅಲ್ಲಿ ವೆಗ್ಗಳವಾಗಿ ಭೋಜನ ವ್ಯವಸ್ಥೆ ಇತ್ತು. ಆದರೆ ನಮ್ಮ ಆಚಾರಕ್ಕೆ ತಕ್ಕಂತೆ ನಾವು ನಮ್ಮ ಕೋಣೆಯಲ್ಲಿಯೇ ಹಾಲು ಹಣ್ಣಿನ ಮೇಲೆ ಅರ್ಪಿತ ಮುಗಿಸುತ್ತಿದ್ದೆವು. ಮೂರ್ತಿಯವರ ಮನೆಯಲ್ಲಿ ಭಾರತೀಯ ವಿಧಾನದ ಪ್ರಸಾದ ದೊರಕಿತು. ನಂತರ ನಮ್ಮನ್ನೂ, ರಂಗನಾಥ ದಿವಾಕರ ಹಾಗೂ ಹಿರೇಮಠರನ್ನೂ ಕರೆದುಕೊಂಡು ಡಾ. ಮೂರ್ತಿಯವರು ಲಂಡನ್ ನಗರ ದರ್ಶನಕ್ಕೆ ಕರೆದೊಯ್ದರು.

ಲಂಡನ್ ಕಣ್ಣಿಗೆ ಹಬ್ಬ. ಬಣ್ಣಮಯ ಚಲುವು. ಪಟ್ಟಣದಲ್ಲೂ ಮೋಹಕ ಪ್ರಕೃತಿ. ರಾಜಠೀವಿಯ ಸೌಂದರ್ಯ. ಎಲ್ಲೆಲ್ಲೂ ಶ್ರೀಮಂತಿಕೆ ಸಹಜವಾಗಿದೆ. ಬ್ರುಸೆಲ್ಸ ನೋಡಿ ಮುಂಬೈ ಮರೆತಿದ್ದೆವು. ಈಗ ಲಂಡನ್ ನೋಡಿ ಬ್ರುಸೆಲ್ಸ್ ಮರೆತೆವು.

"ಸೂರ್ಯ ಮುಳುಗದ ದೇಶ!", "ಆಳುವದಕ್ಕಾಗಿಯೇ ಹುಟ್ಟಿ ಬಂದ ದೇಶ" ಎಂದು ಕರೆಸಿಕೊಂಡ ಈ ದೇಶದ ಕಟ್ಟಡಗಳಲ್ಲೂ ರಾಜಠೀವಿ ರಾರಾಜಿಸುತ್ತಿದೆ. ಜನತೆಯ ಮುಖಭಾವದಲ್ಲೂ ರಾಜಪರಂಪರೆಯ ಸಹಜತೆ ಹೊರಹೊಮ್ಮುತ್ತಿದೆ. ಇಲ್ಲಿಯ ರಕ್ತದಲ್ಲಿ ಪುಕ್ಕತನ ಮುಗ್ಗಲುಗೇಡಿತನಗಳಿಲ್ಲ. ಸದಾ ಹಸನ್ಮುಖತೆ, ಶೌರ್ಯ, ಅಪರಿಮಿತ ಆಶೋತ್ತರ, ಸಾಹಸೀ ಮನೋಭಾವ, ಸೌಂದರ್ಯ ಎಲ್ಲವೂ ಭಾರತೀಯರ ಸೂಕ್ಷ್ಮ ದೃಷ್ಟಿಯ ಕಣ್ಣುಗಳಿಗೆ ಎದ್ದು ಕಾಣುವ ಪ್ರಮುಖ ಲಕ್ಷಣಗಳು.

**ಯುಗಾಂತರ ಸಾಕ್ಷಿ "ಥೇಮ್ಸ ನದಿ"**

ಇಲ್ಲಿಯ ಥೇಮ್ಸನದಿ (River Thames) ಲಂಡನ್ನಿನ ಯುಗಾಂತರ ಬೆಳವಣಿಗೆಗೆ ಏಕೈಕ ಸಾಕ್ಷಿ. ರೋಮನ್ ಆಕ್ರಮಣಗಳ ಗುರುತುಗಳು ಈ ದಡದಲ್ಲಿ ಇನ್ನೂ ಉಂಟು. ೯೦೦ ವರ್ಷ ಪೂರ್ವದ ಲಂಡನ್ ವಿಜಯಿ ವಿಲಿಯಂನ (William the Conqueror) ಕುರುಹುಗಳು ಇಂದಿಗೂ ಸ್ಪಷ್ಟವಾಗಿದೆ. ಈ ನದಿಯಿಂದಲೇ ಪೂರ್ವದ ರೋಮನ್, ಡ್ಯಾನಿಶ್ ಹಾಗೂ ನಾರ್ಮನ್ ಆಕ್ರಮಣಕಾರರು ಈ ಪಟ್ಟಣದ ಚಲುವನ್ನು ಕೊಳ್ಳೆ ಹೊಡೆದರು. ಭವಿಷ್ಯದಲ್ಲಿ ತಾವೇ ಲಂಡನ್ನಿನ ಮಕ್ಕಳಾಗಿ ಬಾಳಿದರು. ಹೀಥರೊ ನಿಲ್ದಾಣದಲ್ಲಿ ಆಗಸದಿಂದ ವಿಮಾನದಲ್ಲಿ ಭೂಮಿಗೆ ಇಳಿಯುವ ಯಾತ್ರಿಕರಿಗೆ ಈ ಥೇಮ್ಸ ಮಾತೆಯ ಸ್ವಾಗತವು ಸದಾ ಲಭ್ಯವಿರುತ್ತದೆ.

ಥೇಮ್ಸ ನದಿಯ ಪಾರ್ಶ್ವಗಳಲ್ಲಿದ್ದ ಬ್ಲಾಕ್ ಹೀಥರ ೧೮ನೆಯ ಶತಮಾನದ ಅರಮನೆಯ ಕೆಂಗಲ್ಲಿನ ಕಟ್ಟಡಗಳು, ಗ್ರೀಕ್ ವಿಚ್‌ನ ರಾಯಲ್ ನ್ಯಾವಲ್ ಕಾಲೇಜ, ಚಾರ್ಲ್ಟನ್ ಅರಮನೆ, ಟಾವರ್ ಬ್ರಿಜ್, ಕ್ರ್ಯಾಡಲ್ ಟಾವರ್ ಅತ್ಯಾಧುನಿಕ ಶೈಲಿಯ ೨೦–೨೫ ಅಂತಸ್ತಿನ ಆಫೀಸ ಕಟ್ಟಡಗಳು, ಬ್ಯಾಂಕ್ ಆಫ್ ಇಂಗ್ಲಂಡ, ಸೇಂಟ ಬಾರ್ಥೋಲೋಮ್ಯು ಚರ್ಚು, ಅಮೇರಿಕನ್ ಮೆಮೋರಿಯಲ್ ಚಾಪೆಲ್, ರಾಯಲ್ ಫೆಸ್ಟಿವಲ್ ಹಾಲ್; ಹಾಗೂ ಶೆಲ್ ಸೆಂಟರುಗಳನ್ನು ಕಾರಿನಲ್ಲಿ ದೃಷ್ಟಿಮಾತ್ರದಿಂದ ನೋಡುತ್ತ ಸೇಂಟ ಪಾಲ್ಸ್ ಕೆಥೆಡ್ರೆಲ್ (St. Paul's Cathedral)ಗೆ ಬಂದೆವು.

**ಲಂಡನ್ನಿನ ಮಹೋನ್ನತಿ: ಸೇಂಟ ಪಾಲ್ಸ್ ಕೆಥೆಡ್ರೆಲ್**

ಇದು ಸರ್ ಕ್ರಿಸ್ಟೋಫರ್ ರೆನ್ನಿನ (Sir Christoper Wren), ೧೬೭೫–೧೭೦೮ರ ಮಧ್ಯದಲ್ಲಿ ನಿರ್ಮಾಣವಾದ ಅಮರ ಕಲಾಕೃತಿ. ನೋಟದಲ್ಲಿ ಮೈಸೂರ ಲಲಿತ ಮಹಲನ್ನೂ, ಬೆಂಗಳೂರಿನ ವಿಧಾನ ಸೌಧದ ಬುರುಜನ್ನೂ ಹೋಲುತ್ತದೆ. ಎರಡನೇ ಮಹಾಯುದ್ಧದಲ್ಲಿ ಇದರ ಮೇಲೆ ಎರಡು ಸಲ ಬಾಂಬದಾಳಿಯಾಗಿ; ಇದರ ಪ್ರಾರ್ಥನಾ ಪೀಠಕೂಡ ಭಸ್ಮವಾಗಿ ಮತ್ತೆ ನವೀಕೃತವಾಗಿದೆ. ಇದರ ಇತಿಹಾಸದೊಂದಿಗೆ ಸೆಣಸಾಟವೇ ತುಂಬ ವಿಚಿತ್ರ. ಸುಮಾರು ೧೩೫೦ ವರ್ಷಗಳ ಹಿಂದೆಯೇ ಇದನ್ನು ಸೇಂಟ ಪಾಲನ ಗೌರವಾರ್ಥ ಕಟ್ಟಲಾಯಿತು. ಲಜ್‌ಗೇಟ ದಿಬ್ಬದ ಮೇಲೆ (Ludgate Hill) ರಾರಾಜಿ

ಸುತ್ತಿದೆ. ಇದು ೧೨೦೦ ವರ್ಷಗಳ ಪೂರ್ವದಲ್ಲಿಯೇ ಸುಟ್ಟು ಭಸ್ಮವಾಯಿತು. ನಂತರ ಕ್ರಿ. ಶ. ೬೭೫–೬೮೫ರಲ್ಲಿ ಕಟ್ಟಲ್ಪಟ್ಟಿತು. ಮುಂದೆ ಕ್ರಿ. ಶ. ೯೬೨ರಲ್ಲಿ ಕಡಲ ದರೋಡೆಗಾರರಿಂದ ನಾಶವಾಯಿತು. ಮತ್ತೆ ಕಟ್ಟಲ್ಪಟ್ಟಿತು. ನಂತರ ಕ್ರಿ. ಶ. ೧೦೮೭ರಲ್ಲಿ ಸ್ಯಾಕಸ್ನರಿಂದ ಭಸ್ಮವಾಯಿತು. ಮತ್ತೆ ಕಟ್ಟಲ್ಪಟ್ಟಿತು. ನಂತರ ಮೋರೀಸ್ ನಾರ್ಮನ್ (Maurice Norman) ಇದನ್ನು ಆಮೂಲಾಗ್ರವಾಗಿ ಬದಲಿಸಿ ಅತೀ ದೊಡ್ಡದಾದ ಚರ್ಚನ್ನು (Old St. Paul's Cathedral) ನಿರ್ಮಿಸಿದನು. ಈ ಭವ್ಯಾದ್ಭುತ ಕಟ್ಟಡದ ತೈಲಚಿತ್ರಗಳು ಇಂದಿಗೂ ಕಾಣದೊರೆಯುತ್ತವೆ. ಆದರೆ ಇದೂ ಕೂಡ ೧೬೬೬ರ ಮಹಾ ಅಗ್ನಿಯಲ್ಲಿ (Great Fire of London) ಸಂಪೂರ್ಣ ಸುಟ್ಟು ಭಸ್ಮವಾಯಿತು. ನಂತರ ಮಹಾಶಿಲ್ಪಿ ಸರ್ ಕ್ರಿಸ್ಟೋಫರ್ ರೆನ್ (Sir Christopher Wren) ಇದರ ಹೊಸ ನಕ್ಷೆಯನ್ನು ಸಿದ್ಧಪಡಿಸಿ, ಇದನ್ನು ರಮ್ಯಾದ್ಭುತವಾಗಿ ನಿರ್ಮಿಸಿದ ನಂತರ ಎರಡನೆಯ ಮಹಾಯುದ್ಧದ ಬಾಂಬ ದಾಳಿಯಿಂದ ಕೆಲಭಾಗಗಳು ನಾಶವಾದವು. ಅದನ್ನು ಪುನರ್ನಿರ್ಮಿಸಲಾಯಿತು.

ಇಂದು ಕಾಣುವ ಈ ಕ್ರಿಸ್ತ ದೇವಾಲಯ ಬೃಹದ್ಭವ್ಯ ವಾಸ್ತುಶಿಲ್ಪ ಲೀಲೆ! ಬಂಗಾರ ಬಣ್ಣದಿಂದ ರಾರಾಜಿಸುವ ನೂರಾರು ಭವ್ಯ ಕಮಾನುಗಳು, ಅವುಗಳ ಮೇಲೆ ಉಬ್ಬು ಚಿತ್ರಗಳು, ಗಾಜಿನ ಸ್ವರ್ಗೀಯ ಕಿಡಕಿಗಳು, ಪ್ರಾರ್ಥನೆಯ ವೇದಿಕೆಗಳು, ವರ್ಣ ಶಿಲೆಗಳಿಂದ ಅಲಂಕೃತವಾದ ಗೋರಿಗಳು (Sarcophagi), ಭಿತ್ತಿ ನಕ್ಷೆಗಳು, ಅವರ್ಣನೀಯ ಬೈಬಲ್ ಚಿತ್ರಗಳು, ಮೇಲಾಗಿ ಬೃಹದ್ವ್ಯಾಸದ ಭವ್ಯ ವರ್ತುಲಗೋಪುರ ಎಲ್ಲವೂ ಲಂಡನ್ ಧಾರ್ಮಿಕ ಸಂಸ್ಕೃತಿಗೆ ಶಿಖರಪ್ರಾಯವಾಗಿವೆ. ಇಲ್ಲಿ ಕಲಾವಿದ ಹೋಲ್ಮನ್ ಹಂಟರನ (W. Holman Hunt)– "ದಿ ಲೈಟ್ ಆಫ್ ದಿ ವರ್ಲ್ಡ್" ತೈಲ ಚಿತ್ರ ಅವರ್ಣನೀಯವಾಗಿದೆ. ಯೇಸುವು ಕೈಯಲ್ಲಿ ದೀಪವೊಂದನ್ನು ಹಿಡಿದು, ಒಬ್ಬ ಭಕ್ತನ ಮುಚ್ಚಿದ ಬಾಗಿಲು ಬಡಿದು, ತೆರೆಯಲು ಹೇಳುತ್ತಿದ್ದಾನೆ. ಚಿತ್ರದ ಕೆಳಗೆ– "Behold I stand at the door and knock. If any man hear my voice and open the door, I will come in to him" ಎಂಬ ವಾಕ್ಯಗಳುಂಟು. ಈ ಚಿತ್ರದಲ್ಲಿ ಯೇಸುವಿನ ದೈವೀ ಮುಖ ಭಾವ, ಆತ್ಮಪ್ರಭೆ, ಕಂದೀಲಿನ ಪ್ರಕಾಶ ಕಲಾ ವಂತಿಕೆಯಿಂದ ಕಂಗೊಳಿಸುತ್ತಿವೆ.

## ಟ್ರ್ಯಾಫಲ್‌ಗರ್ ಸ್ಕ್ವೇರ್

ನಂತರ ನಾವು ಟ್ರ್ಯಾಫಲ್‌ಗರ್ ಸ್ಕ್ವೇರಿಗೆ (Trafalgar Square) ಬಂದೆವು. ೧೮೦೫ರ ಸಾಗರ ಯುದ್ಧ ವಿಜಯದ ಸಂಕೇತವಾಗಿ ಇಲ್ಲಿ ನೆಲ್ಸನ್ ವಿಜಯಸ್ತಂಭ (Nelson Column) ನಿಂತಿದೆ. ೧೪೫ ಫೂಟು ಎತ್ತರದ ಈ ಸ್ತಂಭ ಸಿಲಿಂಡಿರಾಕೃತಿಯಲ್ಲಿ ಆಗಸಕ್ಕೆ ಚಾಚಿದೆ. ಇದರ ಮೇಲೆ ನೆಲಸನ್ನನ ೧೭ ಫೂಟು ಎತ್ತರದ ಮೂರ್ತಿ,

ಕೆಳಗಡೆಗೆ ನಾಲ್ಕು ಎಣ್ಣೆಗಲ್ಲಿನಲ್ಲಿ ಕೆತ್ತಿದ ಸಿಂಹಗಳು ಸುಂದರವಾಗಿವೆ. ಇದೇ ಚೌಕದಲ್ಲಿ ಚಾರ್ಲಸ್-I ಅಶ್ವಾರೋಹಿ ಪ್ರತಿಮೆ, ನ್ಯಾಶನಲ್ ಗ್ಯಾಲರಿ, ಸೇಂಟ ಮಾರ್ಟಿನ್ ಚರ್ಚು ಇವೆ. ಅರಮನೆಯ ಬೀದಿ, ಸರಕಾರಿ ಕಾರ್ಯಾಲಯಗಳು, ದರ್ಶನೀಯಸ್ಥಳಗಳಿಗೆಲ್ಲ ಟ್ರಾಫಲ್‌ಗರ್ ಚೌಕವು ಮಧ್ಯವರ್ತಿಯಾಗಿರುವದರಿಂದ ಇದಕ್ಕೆ ಲಂಡನ್ ನಗರದ ಕೇಂದ್ರೀಯ ಚಲುವಿದೆ. ಈ ಚೌಕದ ನೆಲ್ಸನ್ ವಿಜಯಸ್ತಂಭದ ಕೆಳಗೆ ನಗರ ವಿಲಾಸಿಗಳ ವಿಶ್ರಾಂತಿಯನ್ನು ಕಾಣಬಹುದು. ಇಲ್ಲಿ ಎರಡು ಸುರಸುಂದರ ಕಾರಂಜಿಗಳಿದ್ದುದರಿಂದ ಅದರ ಸುತ್ತಲೂ ಹೂಬಳ್ಳಿಹಬ್ಬಿದಂತೆ ವಿಲಾಸವತಿಯರಾದ ತರುಣೆಯರೊಂದಿಗೆ ತರುಣ ಜನಾಂಗದ ಹರಟೆಯ ಸನ್ನಿವೇಶಗಳನ್ನು ಧಾರಾಳವಾಗಿ ಕಾಣಬಹುದು. ಸಿಗರೇಟು ಸೇದು ವಲ್ಲಿ ಪುರುಷರಿಗಿಂತ ಸ್ತ್ರೀಯರು ಮಿಗಿಲೆಂಬಂತೆ ತೋರುತ್ತಾರೆ. ಸ್ತ್ರೀಪುರುಷರ ನಡತೆಯಲ್ಲಿ ಮುಚ್ಚುಮರೆಯಾಗಲಿ, ಅಪ್ರಮಾಣಿಕತೆಯಾಗಲಿ, ಒಳಗೊಂದು ಹೊರಗೊಂದು ಪ್ರವೃತ್ತಿ ಯಾಗಲಿ ತೋರುವಂತಿರಲಿಲ್ಲ.

### ಬಕಿಂಗಹ್ಯಾಮ್ ಅರಮನೆ

ನಂತರ ಬ್ರಿಟೀಶ ಅರಸು ಮನೆತನ ವಾಸಿಸುವ ರಾಣಿಯ ಅರಮನೆಯನ್ನು (Bucking ham palace) ಸಂದರ್ಶಿಸಿದೆವು. ಅರಮನೆ ಹಳೆಯ ವಾಸ್ತುಶಿಲ್ಪದಲ್ಲಿ ಭವ್ಯವಾದರೂ; ಅದರ ಪಕ್ಕದ ನೂತನ ಸೌಧಗಳ ಎದುರು ಸಪ್ಪೆಯಾಗಿ ತೋರುತ್ತದೆ. ಸಾಮ್ರಾಜ್ಯ ಹೋದರೂ ಸಾಮ್ರಾಜ್ಯವಾದ ಹೋಗಿಲ್ಲವೆಂಬಂತೆ ಇಲ್ಲಿಯ ಜನತೆಯಲ್ಲಿ ರಾಜಪೂಜೆ ಮನೆಮಾಡಿದೆ. ಪರಂಪರೆಯ ಪ್ರೀತಿ, ದೂರಾಗಿಲ್ಲ. ಅಂತೆಯೇ ಇಂಗ್ಲೆಂಡು ಈ ರಾಜಮಾನ್ಯತೆಯನ್ನು ಉಳಿಸಿಕೊಂಡಿವೆ. ಆದರೇನು? ದೂರದ ಪಾರ್ಕಲೇನಿನಲ್ಲಿ ಆಕಾಶದೆತ್ತರಕ್ಕೆ ಕಟ್ಟಿದ ಹಿಲ್ಟನ್ ಹೋಟೆಲ್ಲು (Hilton Hotel) ತನ್ನನೆರಳಿನಿಂದ ಈ ರಾಣಿಯ ಅರಮನೆಯನ್ನು ಮುಚ್ಚಿಬಿಟ್ಟಿದೆ!

ಪ್ರವಾಸಿಗರಿಗೆ ಸದಾ ಆಕರ್ಷಕ ಸ್ಥಳಗಳಾಗಿ ದಿ ಟಾವರ್ ಆಫ್ ಲಂಡನ್ (The Tower of London). ಪಾರ್ಲಿಮೆಂಟ ಭವನ, ವೆಸ್ಟಮಿನಿಸ್ಟರ ಅಬೆ (West minister Abbey) ಇವು ಹೆಸರು ವಾಸಿಯಾಗಿವೆ. ವೆಸ್ಟಮಿನಿಸ್ಟರ ಚರ್ಚು ೨೮೪ ಫೂಟು ಎತ್ತರದ ಚೌಕಾಕೃತಿಯ ಗೋಪುರ ಹೊಂದಿದ್ದು, ಒಳಗೆ ವಿಲಕ್ಷಣವಾದ ವಾಸ್ತು ಶಿಲ್ಪ ಸಂಯೋಜನೆಯನ್ನು ಸಾಧಿಸಿದೆ. ಸಾಕಷ್ಟು ಎತ್ತರದ ಒಳಮಾಳಿಗೆಯ ಡೋಮು ಗಳು, ಕುಸರು ಕೆತ್ತನೆಯ ಛಾವಣಿಗಳು, ವರ್ಣಮಯ ಗ್ಲಾಸುಗಳ ಬೃಹತ್ ಕಿಡಕಿಗಳು, ಸುಂದರವಾದ ಬಲಪೀಠ, ಇವುಗಳಿಂದ ಈ ಕಟ್ಟಡ ವೈಭವಪೂರ್ಣವಾಗಿದೆ. ಇಂಗ್ಲೆಂಡಿನ ಪಾರ್ಲಿಮೆಂಟ್ ಭವನವು ಪ್ರಖ್ಯಾತವಾದ ವೆಸ್ಟಮಿನಿಸ್ಟರ ಅರಮನೆಯಲ್ಲಿ (palace of westminister) ಇದೆ. ಈ ಕಟ್ಟಡಕ್ಕೆ ೧೦೦೦ ವರ್ಷಗಳ ಇತಿಹಾಸವಿದೆ. ಮೊದಲು ಅರಮನೆಯ ರಾಜ-ರಾಣಿಯರ ವಾಸಸ್ಥಳವಾಗಿದ್ದ ಇದು, ನಂತರ ಸರಕಾರಿ ಭವನ

ವಾಯಿತು. 'ಸರ್ ಬೆಂಜಾಮಿನ್ ಹಾಲ್'ದ ಹೆಸರಿನಲ್ಲಿ ಸುಂದರವಾದ ಹಳೆಯ ಗೋಪುರ ಗಡಿಯಾರ 'ಬಿಗ್ ಬೆನ್' (Big Ben) ಇದೆ. ಇದರ ಆವಾರದಲ್ಲಿ ಅಶ್ವಾರೋಹಿ ಕರಿಯ ಕಲ್ಲಿನ ಮತ್ತು ಕಂಚಿನ, ಮೂರ್ತಿಗಳು, ಸಿಂಹಗಳ ಬೃಹತ್ ಪ್ರಮಾಣದ ಮೂರ್ತಿಗಳು ಉಂಟು. ಸಮಗ್ರ ಕಟ್ಟಡ ರಚನೆ, ದೂರದಿಂದ ನೋಡಿದರೂ, ಅಪ್ಪಟ ರಾಜಗಾಂಭೀರ್ಯ ದಿಂದ ಕಂಗೊಳಿಸುತ್ತದೆ.

## ಹೂದೋಟಗಳ ವರ್ಣಪೂರ್ಣ ನಗರ

ಇಂಗ್ಲೆಂಡಿನ ಹೈಡ ಪಾರ್ಕ (Hyde Park), ಸೇಂಟ ಜೇಮ್ಸ್, ಪಾರ್ಕ, ರೀಜಂಟ್ಸ ಪಾರ್ಕ, ಗ್ರೀನ್‌ಪಾರ್ಕ್, ಕೆನ್‌ಸಿಂಗ್ಟನ್ ಗಾರ್ಡನ್ಸ....ಈ ಹೂದೋಟಗಳನ್ನು ನೋಡಿದ ಮೇಲೆ ಭಾರತದ ನೆನಹುಬಂದು ತುಂಬ ಕಳವಳ ಮೂಡಿತು. ನಮ್ಮ ಪುರಾಣಗಳ ಯಾವ ಇಂದ್ರನ ನಂದನವನವೂ ಇವುಗಳ ಒಂದು ಅಂಗುಲಕ್ಕೆ ಆಗದು. ಇಲ್ಲಿಯ ಅಗಾಧ ಹೂಗಳ ವಸಂತರಾಶಿ ಸೌಂದರ್ಯವಿಸ್ಮಿತ ಸ್ವರ್ಗವನ್ನು ಭೂಮಿಗೆ ಉರುಳಿಸಿಬಿಟ್ಟಿದೆ! ಇವೆಲ್ಲ ರಾಜಪೂಜಿತ ರಾಜಪೋಷಿತ ಹೂಬನಗಳು. ಲಂಡನ್ನಿನ ಸುಮಾರು ಅರ್ಧಭಾಗ ಇಲ್ಲಿಯ ತೋಟಗಳು, ದಾರಿಯ ಕೂಟಗಳು ಹಾಗೂ ಥೇಮ್ಸನದಿ ಇವೆ ತುಂಬಿವೆ. ಹೀಗಾಗಿ ಇದಕ್ಕೊಂದು ತನ್ನತನದ ವಿಸ್ಮಯ ಚಲುವು ಉಂಟಾಗಿದೆ. ಇಲ್ಲಿರುವ ಒಟ್ಟು ಹತ್ತು ರಾಷ್ಟ್ರೀಯ ಹೂದೋಟಗಳಲ್ಲಿ ಹೈಡ್‌ಪಾರ್ಕ ಹಾಗೂ ಕೆನ್‌ಸಿಂಗ್‌ಟನ್ ಗಾರ್ಡನ್ನುಗಳು ಸುರಸುಂದರವೂ ನಗರಕ್ಕೆ ಮಧ್ಯವರ್ತಿಯೂ ಆಗಿವೆ ಹೊರವಲಯದಲ್ಲಿರುವ ಹ್ಯಾಂಪ್ಟನ್ ಕೋರ್ಟ ಪಾರ್ಕ್ (Hampton Court Park) ಒಂದೇ ೧೭೫೦ ಎಕರೆಯಷ್ಟು ವಿಸ್ತಾರವಾಗಿದೆ. ಅರಣ್ಯ ಸದೃಶವಾಗಿದೆ. ರಿಚ್‌ಮಂಡ್ ಪಾರ್ಕ್ (Richmond Park) ಇದು ೨೪೭೦ ಎಕರೆ ವಿಸ್ತಾರವಾಗಿದೆ. ಇವು ಮೊದಲು ಬೇಟೆಯಾಡುವ ಅರಣ್ಯಗಳಾಗಿದ್ದ ವಂತೆ. ನಂತರ ಅಲ್ಲಿ ಅರಮನೆಗಳು, ಚರ್ಚುಗಳು ಹುಟ್ಟಿಕೊಂಡವು. ಅನೇಕ ರಾಜರು, ರಾಣಿಯರು ಕಾಲಕಾಲಕ್ಕೆ ಈ ತೋಟಗಳನ್ನು ಬೆಳೆಸಿ ಅಲಂಕರಿಸಿದ್ದಾರೆ.

ಲಂಡನ್ನಿಗೆ ಬಂದ ಮೇಲೆ ಹಿಲ್ಟನ್ ಹೋಟೆಲ್, ಪೋಸ್ಟ ಆಫೀಸ್ ಟಾವರ್ ತೋರಿಸುವದೇ ಬೇಡ. ಅವು ತಮ್ಮನ್ನು ತಾವೇ ತೋರಿಸಿಕೊಳ್ಳುತ್ತವೆ. ೩೦-೩೫ ಅಂತಸ್ತುಗಳ ಅವುಗಳ ನವನಿರ್ಮಾಣದ ಕೌಶಲ ಮೆಚ್ಚುವಂತಹದು. ಹಿಲ್ಟನ್ ಹೋಟೆಲ್ಲು ನೇರವಾಗಿ ಕೊಳವೆಯಾಕೃತಿಯಲ್ಲಿ ಮೇಲೆದ್ದು, ಶಿಖರದಲ್ಲಿ ಸುಮಾರು ಇಪ್ಪತ್ತು ಅಂತಸ್ತುಗಳು ಬಳೆಯ ಆಕೃತಿಯಲ್ಲಿ ತಿರುಗುತ್ತವೆ. ಇದನ್ನು ನೋಡಿದರೆ ನಮ್ಮ ಪೂಜೆಯ ಧೂಪಾರತಿ ನೆನಪಾಗುತ್ತದೆ. ಪೋಸ್ಟ ಆಫೀಸ್ ಟಾವರ್ ೬೨೦ ಫೂಟು ಎತ್ತರವಿದ್ದು, ೫೨೦ ಫೂಟು ಎತ್ತರದಲ್ಲಿ ತಿರುಗುತ್ತಿರುವ ಹೋಟೆಲ್ಲು ಉಂಟು.

## ಮಾಂತ್ರಿಕ ಕಲಾವಿದೆ ಶ್ರೀಮತಿ ಟ್ಯೂಶೇಡ್

ಲಂಡನ್ನಿಗೆ ಬಂದ ಪ್ರವಾಸಿಗಳಿಗೆ ಇನ್ನೊಂದು ಆಕರ್ಷಣೆ: ಶ್ರೀಮತಿ ಟ್ಯೂಶೇಡ್

(Madame Tussaud)ಳ ಕಲಾ ಸೌಧ, ಪ್ರವಾಸಿಗರನ್ನು ಸೆರೆಹಿಡಿಯುವ ಕಲಾಬೀಡು, ಇಲ್ಲಿ ನೂರಾರು ಜನ ಅರಮನೆಯವರು, ಕವಿಗಳು, ಕಲಾವಿದರು, ನಟರು, ವಿಜ್ಞಾನಿಗಳು ಇವರ ಮೂರ್ತಿಗಳನ್ನು ಕಾಣಬಹುದು. ಅವೆಲ್ಲವೂ ತದ್ರೂಪ ಜೀವಂತವಾಗಿ ನಿಂತಂತಿವೆ. ನಮ್ಮೊಂದಿಗೆ ನಗುತ್ತವೆ, ಅಳುತ್ತವೆ, ಮಾತನಾಡುತ್ತವೆ. ಇದೊಂದು ಜೀವಂತ ಕಲೆಯ ಅಗಾಧ ಸಂಗ್ರಹ. ನಮಗೆ ೮ನೆಯ ಹೆನ್ರಿ, ಆತನ ಆರು ಮಡದಿಯರು, ೧ನೆಯ ಎಲಿಝಾಬೆತ್, ವಿಲಿಯಂ ಮತ್ತು ಮೇರಿ, ವಿಕ್ಟೋರಿಯಾ ಮಹಾರಾಣಿ, ೩ನೆಯ ಜಾರ್ಜ, ಜನರಲ್ ಡಿಗಾಲೆ, ಪ್ರೆಸಿಡೆಂಟ್ ಕೆನಡಿ, ಪೋಪ್ ಜಾನ್, ಅಗಥಾ ಕ್ರಿಸ್ಟಾಯಿನ್, ರಾಣಿ ಎಲಿಝಾಬೆತ್, ಡ್ಯೂಕ ಆಫ್ ಎಡಿನ್‌ಬರೊ ಈ ಮೂರ್ತಿ ಶಿಲ್ಪಗಳು ಬಹು ಮನೋಹರವಾಗಿ ತೋರಿದವು. ಇಲ್ಲಿ ಜೀವಂತ ನಿಲುವು ಸಂಪೂರ್ಣ ಸಹಜತೆ ಉಂಟು. ಅನೇಕ ಸಲ ಇವು ಮೂರ್ತಿ ಅಲ್ಲವೆಂದೇ ಅನಿಸುತ್ತದೆ.

## ವೈದಿಕ ಸೊಸಾಯಿಟಿಯಲ್ಲಿ ಭಾಷಣ

ದಿನಾಂಕ ೬ ರಂದು ಸೌಥ್ ಆ್ಯಂಪ್ಟನ್ನಿನ "ವೈದಿಕ ಸೊಸೈಟಿ"ಯಲ್ಲಿ ನಮ್ಮ ಭಾಷಣ ವಿತ್ತು. ಭಾರತೀಯ ವಿದ್ಯಾಭವನದ ರಜಿಸ್ಟ್ರಾರರಾದ ಮತ್ತೂರ ಕೃಷ್ಣಮೂರ್ತಿ ಕರೆದುಕೊಂಡು ಹೋದರು. ಸೊಸಾಯಿಟಿಯ ಪ್ರಗತಿ ಅದ್ಭುತವಾದುದು. ಪ್ರಾರ್ಥನಾಮಂದಿರ ಬಹಳ ಸುಂದರ. ಶಾಂತ, ಸಾಗರೋತ್ತರ ರಾಷ್ಟ್ರಗಳಲ್ಲಿ ವೈದಿಕ ಸೊಸೈಟಿ ಸಾಧಿಸಿದ ಭಾರತೀಯ ಸಂಸ್ಕೃತಿ ಪ್ರಚಾರ ಅದ್ಭುತವಾದುದು. ಅಲ್ಲಿಯ ಸನ್ಯಾಸಿಗಳು ಹಾಗೂ ಪಂಜಾಬಿ ಜನರು ನಮ್ಮನ್ನು ಹಾರ್ದಿಕವಾಗಿ ಬರಮಾಡಿಕೊಂಡರು. ಅಲ್ಲಿ ಶ್ರೀ ಆರ್.ಆರ್. ದಿವಾಕರರ ಹಾಗೂ ನಮ್ಮ ಕಾರ್ಯಕ್ರಮಗಳಾದವು. ಶ್ರೀ ದಿವಾಕರರ ವೈದಿಕ ಸಂಸ್ಕೃತಿಯ ಬಗ್ಗೆ ಭಾಷಣವು ಉದ್ಬೋಧಕವಾಗಿತ್ತು. ವಿದೇಶದ ಹಿನ್ನೆಲೆಯಲ್ಲಿ ಈ ವೈದಿಕ ಸೊಸೈಟಿ ಸಾಧಿಸಿದ ಸಾಧನೆ ಮೆಚ್ಚುವಂತಹದು. ಭಾರತದ ಉಪನಿಷತ್ತುಗಳು, ಧರ್ಮ, ಸಂಸ್ಕೃತಿ, ಕಲೆ, ಸಾಹಿತ್ಯಗಳ ಪ್ರಚಾರವನ್ನು ಈ ಸಂಘವು ಒಳ್ಳೆಯ ಆಸ್ಥೆಯಿಂದ ಕೈಕೊಂಡಿದೆ.

## ಮಹಾಕವಿ ಶೇಕ್ಸಪೀಯರನ ಜನ್ಮಸ್ಥಳ

ಡಾ. ಮೂರ್ತಿಯವರು ೪–೫ ದಿನ ನಮಗಾಗಿಯೇ ಬಿಡುವು ಮಾಡಿಕೊಂಡು, ತಮ್ಮ ಕಾರಿನಲ್ಲಿ ಲಂಡನ್ ದರ್ಶನ ಮಾಡಿಸಿದರು. ನಾವು ಲಂಡನ್ ಬಿಡುವ ಮುನ್ನಾದಿನ, ದಿ. ೮ ರಂದು ಆಕ್ಸಫರ್ಡ (Oxford) ವಿಶ್ವವಿದ್ಯಾಲಯ, ಶೇಕ್ಸಪೀಯರ ಜನಿಸಿದ ಸ್ಟ್ರ್ಯಾಟ್‌ಫರ್ಡ ನೋಡಿಕೊಂಡು ಬಂದೆವು. ಆಕ್ಸಫರ್ಡ ವಿಶ್ವವಿದ್ಯಾಲಯ ಆಶ್ಚರ್ಯಕರ ಜ್ಞಾನಸಾಧನೆಯ ಕೇಂದ್ರಭೂಮಿ. ಇದನ್ನು ನೋಡಿದರೆ ತೀರ ಸಾದಾ ಸರಳ. ಹೇಳಿಕೊಳ್ಳುವಂತಹ ಕಟ್ಟಡಗಳೇನೂ ಇಲ್ಲ. ಆದರೆ ಇದರ ಜ್ಞಾನಸಿದ್ಧಿ ಅದ್ಭುತವಾದುದೆಂದು ಇತಿಹಾಸವೇ ತೋರಿಸಿಕೊಡುತ್ತದೆ. ಶೇಕ್ಸಪೀಯರ ಜನ್ಮ ಸ್ಥಾನವನ್ನು ಕಂಡು ಮಂತ್ರ ಮುಗ್ಧರಾದೆವು. ಅದೊಂದು ಚಿಕ್ಕಹಳ್ಳಿ. ಚಿಕ್ಕಹಳ್ಳಿಯಾಗಿದ್ದರೂ, ಬಹಳ ಸುಂದರವಾಗಿದೆ.

ಅದು ಈಗ ವ್ಯಾಪಾರಕೇಂದ್ರವಾಗಿದ್ದು, ಜನರನ್ನು ಆಕರ್ಷಣ ಮಾಡಿಕೊಂಡಿದೆ. ಶೇಕ್ಸಪೀಯರನ ಹೆಸರಿನಿಂದ ಒಂದು ಸಂಸ್ಥೆಯು ಹುಟ್ಟಿ, ಅದರ ವತಿಯಿಂದ ಶೇಕ್ಸ ಪೀಯರನ ಸಾಹಿತ್ಯಗಳನ್ನು ಸಂಗ್ರಹಿಸಿಟ್ಟು, ಮಹಾಕವಿಯ ಕೀರ್ತಿಯು ನಿರಂತರ ಉಳಿಯುವಂತೆ ಮಾಡಿದ್ದಾರೆ. ಆತನ ಹಾಗೂ ಆತನ ಹೆಂಡತಿಯ ಸಮಾಧಿಯೂ ಅಲ್ಲಿರುತ್ತದೆ. ಶೇಕ್ಸಪೀಯರನ ಮಗಳ ಮನೆ, ಮಹಾಕವಿಯು ಉಪಯೋಗಿಸುವ ಮೇಜು ಮುಂತಾದ ವಸ್ತುಗಳನ್ನು, ಸಂಗ್ರಹಿಸಿಟ್ಟಿದ್ದಾರೆ. ಒಬ್ಬ ಮಹಾಕವಿಗೆ ಸರ್ವೋಚ್ಚ ಮನ್ನಣೆ. ಅವನ ಹೆಸರಿನಿಂದ ಅವನ ನಾಟಕಗಳನ್ನು ಆಡಲು ಅಲ್ಲಿ ಭವ್ಯ ನಾಟ್ಯ ಮಂದಿರ ಗಳನ್ನು ಕಟ್ಟಿಸಿದ್ದಾರೆ. ಶೇಕ್ಸಪೀಯರನ ಮನೆಯ ಅಡಿಗಲ್ಲಿನ ಕಲ್ಲುಗಳನ್ನು ಕೂಡ ಎಚ್ಚರಿಕೆಯಿಂದ ಸಂರಕ್ಷಿಸಿದ್ದಾರೆ. ರಾಷ್ಟ್ರ ಕವಿಗಳಿಗೆ ಅವರು ತೋರುವ ಮನ್ನಣೆ, ಸನ್ಮಾನ ಅಗಾಧವಾದುದು. ನಮ್ಮ ಪಂಪ, ಕುಮಾರವ್ಯಾಸ, ರನ್ನ, ಹರಿಹರ, ರಾಘವಾಂಕ, ಬಸವ, ಅಕ್ಕಮಹಾದೇವಿ, ಷಡಕ್ಷರಿ, ನಿಜಗುಣ ಶಿವಯೋಗಿಗಳಿಗಾಗಿ ನಾವೇನು ಮಾಡಿ ದ್ದೇವೆ? ರಾಘವಾಂಕನ ಸಮಾಧಿ ತಿಪ್ಪೆಯಲ್ಲಿದೆ. ಬಸವಣ್ಣನವರ ಮಹಾಮನೆ ಇದ್ದ ಸ್ಥಳದಲ್ಲಿ ಇಂದು ಮುಳ್ಳುಕಂಟಿ ಬೆಳೆಯುತ್ತಿದೆ. ಶೇಕ್ಸಪೀಯರನ ಜನ್ಮಸ್ಥಳ ಸ್ಟ್ರಾಟ್ ಫೋರ್ಡ್ ನೋಡಿದ ಮೇಲೆ ಯಾರಿಗಾದರೂ ಭಾರತೀಯರಾದವರಿಗೆ ತಮ್ಮ ತಪ್ಪುಗಳ ಪರಿಚಯವಾಗುವದು ತೀರ ಸಹಜ.

ಡಾ. ಮೂರ್ತಿಯವರ ಮನೆಯಲ್ಲಿ ೪–೫ ದಿನ ಆನಂದದಿಂದ ಕಳೆದೆವು. ಸಾಕಷ್ಟು ಆಲೋಚನೆಗೆ ಸಮಯ ದೊರೆಯಿತು. ಅಲ್ಲದೆ ನಮ್ಮ ವಿಶ್ವಶಾಂತಿ ಪರಿಷತ್ತಿನ ಬಹು ಮುಖ್ಯ ಅಂಶಗಳ ಬಗ್ಗೆ ನೋಟ್ಸ ಮಾಡಿಕೊಂಡೆವು. ಅಲ್ಲದೆ ಭಾರತಕ್ಕೆ, ನಮ್ಮ ಅತ್ಯಂತ ಆತ್ಮೀಯರಾದ, ಇಲಕಲ್ಲ ಶ್ರೀಗಳಿಗೆ, ಚಿಂಚಣಿ ಹಾಗೂ ಕೆಳದಿ ಶ್ರೀಗಳಿಗೆ, ಪ್ರೊ. ಜಿ. ಎಚ್. ಹನ್ನೆರಡುಮಠ ಅವರಿಗೆ ನಮ್ಮ ಪ್ರವಾಸದ ವಿವರಗಳನ್ನು ತಿಳಿಸಿ ಪತ್ರ ಬರೆದೆವು. ಲಂಡನ್ನಿನ ಅನುಭವ ನಮ್ಮಲ್ಲಿ ಅಚ್ಚಳಿಯದೆ ಉಳಿಯುವಂತಾಯಿತು.

## ಭೋಗ-ಐಶ್ವರ್ಯಗಳ ಬೀಡು 'ಪ್ಯಾರೀಸ್'

ದಿನಾಂಕ ೧೦ ರಂದು ಲಂಡನ್ನಿನಿಂದ ಪ್ಯಾರಿಸ್ಸಿಗೆ ವಿಮಾನದಿಂದ ಬಂದಿಳಿದೆವು. ವಿಮಾನ ನಿಲ್ದಾಣದಲ್ಲಿ ಪ್ಯಾರೀಸಿನಲ್ಲಿಯ ಇಂಡಿಯಾ ಅಂಬೆಸಿಯವರು ನಮ್ಮನ್ನು ಸ್ವಾಗತಿಸಿ; ನಮಗಾಗಿ ಮೊಸಲಾದ ಹೋಟೆಲ್ ಸೆಕ್ಯುರೇಟಗೆ ಕರೆದೊಯ್ದು ಇಳಿಸಿದರು. ಅಲ್ಲಿ ನಮ್ಮ ಪೂಜೆ ಪ್ರಸಾದಗಳಿಗೆ ತುಂಬ ಅನುಕೂಲಕರ ವಾತಾವರಣವಿತ್ತು.

### ಯುರೋಪಿನ ಸುಂದರ ನಗರ

ಪ್ಯಾರೀಸ್ ನಗರ ನಾವು ಯುರೋಪ ಖಂಡದಲ್ಲಿ ನೋಡಿದ ನಗರಗಳಲ್ಲೇ ಅತ್ಯಂತ ಸುಂದರವಾಗಿ ತೋರಿತು. ಇಲ್ಲಿಯ ಜನರು ಸುಂದರರು. ಸ್ವಾತಂತ್ರ್ಯ

ಪ್ರಿಯರು. ಆದರೆ ಅಷ್ಟೇ ಸ್ವೇಚ್ಛಾಪರರು. ಇಲ್ಲಿಯ ದಾರಿಗಳು, ಗಗನಚುಂಬಿತ ಕಟ್ಟಡಗಳು ಎಲ್ಲವೂ ಓರಣ, ಅಚ್ಚುಕಟ್ಟು, ಒಂದೇ ಶೈಲಿ. ಇಡೀ ಪಟ್ಟಣವೇ ಒಂದು ಜಾಗರೂಕ ವೈಜ್ಞಾನಿಕ ಯೋಜನೆಯ ಮೇಲೆ ಕುಳಿತಂತಿದೆ. ಅಲ್ಲಲ್ಲಿ ಸ್ತ್ರೀಪುರುಷರ ನಗ್ನ ವಿಗ್ರಹಗಳು ಬಹಳ. ವಿಲಾಸದಲ್ಲಿ; ಲಂಡನ್ನಿಗಿಂತ ಪ್ಯಾರೀಸು, ಮುಂದುವರಿದ ನಗರವೆಂದು ಹೇಳುವದೇ ಬೇಡ. ಭಾರತೀಯ ಸ್ವಯಂಪೂರ್ಣ ಸಂಸ್ಕೃತಿಯನ್ನು ಇಲ್ಲಿ ಕಾಣಲಾರೆವು. ಇವರಿಗೆ ತಮ್ಮದೇ ಆದ ಜೀವನ ಮೌಲ್ಯಗಳಿವೆ. ವಿಲಾಸವೇ ತತ್ವಜ್ಞಾನ. ಇಲ್ಲಿಯ ಹುಡುಗಿಯರಿಗೆ ಯಾವತ್ತೂ ಸಿಗರೇಟು ಬೇಕು. ಗಂಡಸರಂತೆಯೇ ಪೋಷಾಕು ತೊಡುತ್ತಾರೆ. ವ್ಯಕ್ತಿಯಿಂದ ವ್ಯಕ್ತಿಗೆ ಫ್ಯಾಶನ್ನಿನ ಪ್ರಕಾರಗಳು ಭಿನ್ನಭಿನ್ನವಾಗಿ ತೋರುತ್ತವೆ. ಅಂತೆಯೇ ಇದು ಜಗತ್ತಿನ ಫ್ಯಾಶನ್ನುಗಳ ಜನ್ಮಸ್ಥಳ. ಗಾಳಿ ಬಿಟ್ಟಂತೆ ವಿಹರಿಸುವ ಇವರ ಜೀವನ ವಿಲಾಸಕ್ಕೆ; ಭಾರತೀಯ ದರ್ಶನವಾಣಿ, ಶರಣರ ಅನುಭವವಾಣಿ ಕನಸಿನಲ್ಲೂ ಗೋಚರವಾಗದು. ಅವರ ಬಹಿರಂಗ ಸ್ಥಿತಿ ಕಂಡೇ ನಮಗೆ ಅಯ್ಯೋ ಅನ್ನಿಸಿತು. ಮರುಕ್ಷಣದಲ್ಲಿ ಭವಿಷ್ಯದಲ್ಲಿ ಈ ಸಂಸ್ಕೃತಿ ಭಾರತಕ್ಕೆ ಹರಿದು ಬಂದರೆ ಮುಂದೇನು ಗತಿ?" ಎಂದು ಕಳವಳದ ಪ್ರಶ್ನೆ ಮೂಡಿತು. ಚಿತ್ರವಿಚಿತ್ರ ಬಣ್ಣದ ಬಟ್ಟೆಗಳು, ಅರೆನಗ್ನ ಉಡುಪುಗಳು, ನಾನಾವಿಧ ಕೇಶಾಲಂಕಾರ ಇವನ್ನು ದಾರಿಯಲ್ಲಿ ಕಂಡಾಗ; ಇಲ್ಲಿ ಭೋಗವಿಲಾಸದಲ್ಲಿ ಹೆಚ್ಚು ಮನಸ್ಸು ಹಾಕುತ್ತಿರಬಹುದೆಂದು ನಮಗನ್ನಿಸಿತು. ಸಂಯಮದ ಚಲುವು ಇವರಿಗೆ ಭಾರತೀಯರಿಗೆ ಅರ್ಥವಾದಂತೆ ಅರ್ಥವಾಗದು. ಐಂದ್ರಿಕ ಪಿಪಾಸೆಗಳನ್ನು ಬಿಡುಗಡೆ ಮಾಡುವಲ್ಲಿ ದೊರೆಯುವ ಆನಂದಕ್ಕಿಂತ; ಅವುಗಳನ್ನು ದಿಗ್ಬಂಧಿಸುವಲ್ಲಿ ಅಧಿಕ ಆನಂದ ಅಡಗಿದೆ. ಆದರೆ ಈ ಗುಟ್ಟು ಪ್ಯಾರೀಸ್‌ನವರಿಗೆ ಅರ್ಥವಾಗುವದೆಂತು?

### ನೋಟ್ರೇ-ಡೇಮ್ (Notre-dame)

ಈ ದೇವಾಲಯವನ್ನು ಪ್ಯಾರೀಸಿನಲ್ಲಿ ಕ್ರಿ. ಶ. ೧೧೬೩ ರಿಂದ ೧೨೪೫ರ ವರೆಗೆ ಕಟ್ಟಲಾಯಿತು. ಮುಂದೆ ಮತ್ತೆ ಒಂದು ನೂರು ವರ್ಷಗಳವರೆಗೆ (ಕ್ರಿ. ಶ. ೧೩೪೫) ಈ ಚರ್ಚಿನ ಪಾರ್ಶ್ವಭಾಗಗಳನ್ನು ಕಟ್ಟಲಾಯಿತಂತೆ. ಮುಂದ ೫೦೦ ವರ್ಷಗಳವರೆಗೆ (ಕ್ರಿ. ಶ. ೧೮೬೪) ಈ ಚರ್ಚು ಅನೇಕ ಯುದ್ಧಗಳಿಂದ ಹಾನಿಗೀಡಾಗುತ್ತ ಬದಲಾವಣೆಗಳನ್ನು ಸಹಿಸಿಯೂ ಬಾಳಿತು. ಈ ದೇವಾಲಯದ ಮುಂಭಾಗ ಭವ್ಯಾದ್ಭುತವಾಗಿದ್ದು; ಪ್ರವಾಸಿಯು ಇದರ ಕೆಳಗೆ ನಿಂತರೆ ಪರ್ವತದ ಕೆಳಗೆ ನಿಂತಂತಾಗುತ್ತದೆ. ಮೂರು ಬೃಹದಾಕಾರದ ಕಮಾನುಬಾಗಿಲುಗಳು ಪ್ರವೇಶಬಾಗಿಲಲ್ಲಿದ್ದು, ಇವುಗಳ ಮೇಲೆ ಭಾರೀ ಪ್ರಮಾಣದ ಎಂಟು ಕಿಡಕಿಗಳು. ಇದರಲ್ಲಿಯ ಚಕ್ರಾಕಾರದ ಕಿಡಕಿಯೇ ೩೩ ಫೂಟು ವ್ಯಾಸ್ ಉಳ್ಳದ್ದಾಗಿದೆ. ಅದರ ಹಿಂದೆ ರಾಜರ ಗ್ಯಾಲರಿ ಇದ್ದು, ಅನೇಕ ಫ್ರೆಂಚ್ ರಾಜರ ಮೂರ್ತಿಗಳ ಸಂಗ್ರಹವಿದೆ. ಈ ಮಧ್ಯ ಭಾಗದ ಮೇಲೆ ಎರಡು ಭಾರೀ ಪ್ರಮಾಣದ ಚೌಕುಗೋಪುರಗಳಿದ್ದು, ಇತಿಹಾಸ ಕಾಲದಿಂದ ಇಂದಿನವರೆಗೆ ಅವು ಎಂದಿಗೂ

ಪೂರ್ಣವಾಗಿಲ್ಲವಂತೆ! ಅರ್ಧಕ್ಕೆ ಉಳಿದರೂ ಪೂರ್ಣತೆಯ ವಿಶಿಷ್ಟ ಚೆಲುವನ್ನು ಮೈದಾಳಿವೆ.

ಈ ದೇವಾಲಯದ ಮೇಲಂಕಣದ ಗೋಡೆಯಲ್ಲಿ ಕೊನೆಯ ನಿರ್ಣಯ (the Last Judgement), ಪೆರಡೈಸ್ ಮತ್ತು ಹೆಲ್ (Paradise and Hell), ಸೇಂಟ್ ಜಾನ್, ಪುನರುತ್ಥಾನ (Resurrection), ಸೇಂಟ್ ಆನೆ (St. Anne), ಸೇಂಟ್ ಮಾರ್ಸೆಲ್ (St. Marcel), ಪಾದ್ರಿ ಮೋರಿಸ್ (Bishop Maurice), ಕಿಂಗ್ ಲ್ಯೂಯಿಸ್ (King Luis II), ಮಡೊನಾ ಹಾಗೂ ಮಗು (Madonna and Child) ಶಿಲ್ಪಗಳು ಸುಂದರವಾಗಿವೆ. ಇವುಗಳಿಗೆ ಬಳಸಿದ ಶಿಲೆಯು ಸೂಕ್ಷ್ಮ ಕೆತ್ತನೆಗೂ ಸ್ಪಷ್ಟ ಅಂತರಗಳನ್ನು ಮೂರ್ತಿಗಳ ಮಧ್ಯದಲ್ಲಿ ತೋರಿಸಲಿಕ್ಕೂ ಅನುಕೂಲವಾಗಿವೆ.

ಈ ಚರ್ಚಿನ ಒಳಗೆ ಪ್ರವೇಶಿಸಿದರೆ ಇದರ ಗಾತ್ರ ಪಾತ್ರಗಳಿಗೆ ಎದೆ ಝಲ್ಲೆನ್ನುತ್ತದೆ. ೪೨೭ ಫೂಟು ಉದ್ದವೂ, ೧೬೪ ಫೂಟು ಅಗಲವೂ, ೧೧೫ ಫೂಟು ಎತ್ತರವೂ ಆದ ಈ ಚರ್ಚಿನಲ್ಲಿ ಏಕಕಾಲಕ್ಕೆ ೯೦೦೦ ಜನರಿಗೆ ಸ್ಥಳಾವಕಾಶ ಇದೆ. ೧೬ ಫೂಟು ಪರೀಘ ಉಳ್ಳ ವರ್ತುಲಗಂಬಗಳು ಈ ದೇವಾಲಯುವನ್ನು ಐದು ಪಾರ್ಶ್ವಗಳಾಗಿ (aisles) ವಿಭಾಗಿಸಿವೆ. ಮೇಲ್ಛಾವಣಿಯಲ್ಲಿರುವ ದೈತ್ಯಾಕಾರದ ಗಾಜಿನ ಕಿಡಕಿಗಳಿಂದ ಈ ದೇವಾಲಯದಲ್ಲಿ ಪ್ರಸನ್ನ ಪ್ರಕಾಶವು ಹರಡಿದೆ. ಈ ಕಂಬಗಳ ಕಮಾನು ನಕ್ಷೆಯಲ್ಲಿ ೧೭ ಹಾಗೂ ೧೮ನೆಯ ಶತಮಾನದ ಸೂಕ್ಷ್ಮ ಸುಳಿವುಗಳು ಇವೆ. ಗಾಜಿನ ವರ್ಣಮಯ ಕಿಡಕಿಗಳು ೧೧ ಹಾಗೂ ೧೨ನೆಯು ಶತಮಾನದ ಕೆಲಸಗಳಾಗಿವೆ. ಅವುಗಳ ಪ್ರಸನ್ನ ಪರಿಶುಭ್ರ ಪ್ರಕಾಶದಲ್ಲಿ ನೋಟ್ರೇ ಡೇಮ್–ಡಿ ಪ್ಯಾರೀಸ್ (Notre Dame-de Paris)ಳ ಪ್ರಖ್ಯಾತ ಸುಂದರ ಮೂರ್ತಿ ಕಂಗೊಳಿಸುತ್ತಿದೆ. ಈ ದೇವಾಲಯದ ಬಲಿ ಪೀಠದ ಮೇಲೆ, ಪಾರ್ಶ್ವ ಅಂಕಣ ಗಳಲ್ಲಿ, ಛಾವಣಿ ಕಮಾನುಗಳ ಮೇಲೆ ಬೈಬಲ್ ಚಿತ್ರಗಳು ರಮಣೀಯವಾಗಿವೆ. ಈ ದೇವಾಲಯದ ವೈವಿಧ್ಯಪೂರ್ಣ ಚೆಲುವನ್ನು ವರ್ಣಿಸಲು ಒಂದು ಪುಸ್ತಕವೇ ಬೇಕಾದೀತು. ಬೃಹತ್ ಕಟ್ಟಡದ ಅಗಾಧವಾದ ಇಂಜಿನೀಯರಿಂಗ್ ತಂತ್ರಜ್ಞಾನ, ವಿಸ್ಮಯಕಾರಕ ಕಲಾ ವೈವಿಧ್ಯ ವರ್ಣಾಲಂಕಾರ ಶಿಲ್ಪಾಲಂಕಾರ ವಿಶಿಷ್ಟ ಸಾಂಗತ್ಯ, ಪ್ರಕೃತಿಯ ಪ್ರಕಾಶದ ಕಲಾ ಯುತವಾದ ಗಾಜಿನ ಕಿಡಕಿಗಳಿಂದ ಬಳಕೆ, ಹೀಗೆ ಯಾವ ಮುಖದಿಂದ ನೋಡಿದರೂ ಈ ದೇವಾಲಯ ಶಬ್ದ ಚಿತ್ರಕ್ಕೆ ಅತೀತವಾಗುತ್ತದೆ. ಆದ್ದರಿಂದ ಇದರ ಬಣ್ಣನೆಯನ್ನು ಇಷ್ಟಕ್ಕೆ ಬಿಡುವದೇ ಕ್ಷೇಮಕರ.

## ಲೋವ್ರೇ ಮ್ಯುಜಿಯಂ (Louvre Museum)

ಲೋವ್ರೇ ಜೋಡುಗಂಬಗಳ ಮಹಾ ಸೌಧದ (Louvre the Collonnade) ಆವರಣದಲ್ಲಿ ಇರುವ; ಲೋವ್ರೇ ಕಲಾಸಂಗ್ರಹಾಲಯದಲ್ಲಿ (Louvre Museum) ಅಮೌಲ್ಯ ಕಲಾಕೃತಿಗಳನ್ನು ನಾವು ಕಾಣಬಹುದು. ಇದರಲ್ಲಿ ಕ್ರಿ. ಶ. ಪೂರ್ವ ೨ನೆಯ ಶತ

ಮಾನದ ಹೆಲಿನ್ ಯುಗದ (Hellenistic Age) ೬ ಫೂಟು ಎತ್ತರದ ಪ್ರಾಚೀನ ಗ್ರೀಕ ತರುಣಿಯ ವಿಗ್ರಹ ಜಗನ್ಮೋಹಕವಾಗಿದೆ. ಅರೆನಗ್ನತೆಯಿಂದ ಎದ್ದುಬರುವಂತಿರುವ ಈ ಕಲಾಕೃತಿಯ ಎರಡು ತೋಳುಗಳು ಸಂಪೂರ್ಣ ಮುರಿದುಹೋಗಿದ್ದರೂ ಇದರ ನೈಸರ್ಗಿಕ ಚೆಲುವಿಗೆ ಏನೂ ಬಾಧೆ ಇಲ್ಲ. ೧೮೨೦ ರಲ್ಲಿ ಮಿಲೊ (Milo) ನಡುಗಡ್ಡೆಯಲ್ಲಿ ಒಬ್ಬ ಒಕ್ಕಲಿಗನಿಗೆ ಇದು ಭೂಮಿಯಲ್ಲಿ ದೊರೆಯಿತಂತೆ.

ಇನ್ನೊಂದು ಸ್ತ್ರೀ ದೇವತೆಯ ಸುಂದರ ವಿಗ್ರಹ (Nike of Samothrace), ಬಹುಶಃ ಕ್ರಿ. ಶ. ಪೂರ್ವ ೧೯೦ರ ಹೆಲಿನ್ ಕಲಾಯುಗಕ್ಕೆ ಸಂಬಂಧಿಸಿದ್ದು, ಇದರ ಎರಡೂ ತೋಳುಗಳು ಹಾಗೂ ರುಂಡ ಕೂಡ ಎಂದೋ ಕಡಿದು ಹೋಗಿವೆ. ಉಳಿದ ಈ ಭಗ್ನಾವಶೇಷದಲ್ಲಿಯೇ ಇವಳು ಬಿರುಗಾಳಿಯಂತೆ ಎದೆಯೊಡ್ಡಿ ನಿಂತ ಸಮುದ್ರ ಯುದ್ಧದ ವಿಜಯಿದೇವತೆಯೆಂದು ನಿಲುವಿನ ಗೆಲುವಿನಲ್ಲಿ ತಾನೇ ಗೋಚರಿಸುತ್ತದೆ. ೯ ಫೂಟು ಎತ್ತರದ ಈ ಅಮೃತಶಿಲಾ ಮೂರ್ತಿ (Parian marble) ನಿಶ್ಚಿತವಾಗಿಯೂ ಹೆಲಿನ್ ಯುಗದ ಶ್ರೇಷ್ಠಕಲಾಕೃತಿ. ಇದು ೧೮೬೩ ರಲ್ಲಿ ಸ್ಯಾಮೋಥ್ರೇಸ್ (Samothrace) ದಲ್ಲಿ ದೊರೆಯಿತು.

ಈ ಕಲಾಸೌಧದಲ್ಲಿರುವ ಯೂಜೀನ್ ಡೆಲಾಕ್ರೋಕ್ಸನ (Eugene Delacroix) ೧೮ನೆಯ ಶತಮಾನದ ಕ್ಯಾನ್ವಾಸ್ ತೈಲ ಚಿತ್ರವು ಜಗತ್ಪ್ರಸಿದ್ಧವಾಗಿದೆ. ಇದು "ಸರ್ ಡ್ಯಾನೆಪ್ಲೋಸ್ ರಾಜನ ಮರಣ (Death of Sardanapalos) ಇದನ್ನು ನೋಡಿದರೆ ದಿಗ್ಭ್ರಮೆ ಹುಟ್ಟಿಸುವಂತಹ ಚಿತ್ತಕ್ಷೋಭಕಾರಕ ಪರಿಣಾಮ ಮನಸ್ಸಿನ ಮೇಲೆ ಉಂಟಾಗುತ್ತದೆ. ಇಲ್ಲಿ, ಯುದ್ಧದಲ್ಲಿ ಸೋತ ಸರ್‌ಡ್ಯಾನೆಪ್ಲೋಸ್ ರಾಜನು, ತನ್ನ ಪ್ರೀತಿಯ ರಾಣಿವಾಸದ ಜಗನ್ಮೋಹಿನಿ ತರುಣಿಯರು ವೈರಿಗಳ ಅತ್ಯಾಚಾರಕ್ಕೆ ತುತ್ತಾಗಬಾರದೆಂದು, ತನ್ನ ಆಳುಗಳ ಕಡೆಯಿಂದ ಆ ನಗ್ನರಾಣಿಯರನ್ನು ಕೊಲೆಮಾಡಿಸುತ್ತಾನೆ. ಅಂತಃಪುರದ ಚೆಲುವಿಯರಾದ ರಾಣಿಯರ ಸಾಮೂಹಿಕ ಕೊಲೆಯನ್ನೇ ಘನಘೋರವಾಗಿಯೂ ಕಣ್ಣಿಗೆ ಪ್ರತ್ಯಕ್ಷ ಕಟ್ಟುವಂತೆಯೂ ಚಿತ್ರಿಸಿದ ಈ ತೈಲಚಿತ್ರ ಎಂಥ ಕ್ರೂರಿಗಳನ್ನೂ ನಡುಗಿಸುವಂತಿದೆ.

ಇದಲ್ಲದೇ ಈ ಮ್ಯೂಜಿಯಮ್ಮಿನಲ್ಲಿರುವ ಇಬ್ಬರು ನಗ್ನ ರಾಜ ತರುಣಿಯರ ಸ್ನಾನದ ದೃಶ್ಯ,ಅಂಟೋನಿ ವ್ಯಾಟೂ(Antoine Watteau)ಕಲಾವಿದನ ಇಟಾಲಿಯನ್ ಕಾಮೇಡಿಯನ್ ಚಿತ್ರ, ಜಾಕ್ಯೂಸ್–ಲ್ಯೂಯಿಸ್ ಬರೆದ (Jacques-Louis David) ನೆಪೋಲಿಯನ್–೧ನ ಸಿಂಹಾಸನಾರೋಹಣ ಚಿತ್ರ, ಲಿಯೊನಾರ್ಡೋ ಡಾ ವಿನ್ಸೀಯ (Leonardo da Vinci) ಗವಿಕನ್ಯೆಯ ಚಿತ್ರ(The Virgin of the Rocks), ಇದೇ ಕಲಾವಿದನ ಮೋನಾ ಲೀಸಾ (Mona Lisa)ಳ ಚಿತ್ರ, ಯೂಜೀನ್ ಡಿಲ್ಯಾಕ್ರೋಕ್ಸ (Eugene Delacroix)ನ ಸ್ವಾತಂತ್ರ್ಯ ದೇವತೆಯ (Liberty Leading the people) ಚಿತ್ರ, ಕ್ವೆಂಟಿನ್ ಮೆಟ್ಸೀ (Quentin Metsys)ಯ ಸಿರಿವಂತನ (The banker and

his wife) ದಾಂಪತ್ಯ ಚಿತ್ರಗಳು ಪ್ರವಾಸಿಕರ ಕಣ್ಣಿಗೆ ಅತ್ಯಂತ ಗಮನಾರ್ಹವಾಗಿದೆ. ನಾವು ಕಂಡ ಈ ಮ್ಯುಜಿಯಮ್ಮಿನ ಶಿಲಾಮೂರ್ತಿಗಳೂ ಹಾಗೂ ವರ್ಣ ಕಲೆಗಾರಿಕೆಯ ಚಿತ್ರಗಳಲ್ಲಿ ರಾಜಾಡಂಬರ, ಪೌರುಷ, ಸ್ತ್ರೀಭೋಗ, ಕ್ರೌರ್ಯಗಳ ಅಭಿವ್ಯಕ್ತಿಯೇ ಅಧಿಕ. ದೇವಭಕ್ತಿ, ಆತ್ಮ ಸಮರ್ಪಣೆ, ಭಗವಂತನ ಎದುರು ಭಕ್ತ ಅರ್ಪಿಸುವ ಕಂಬನಿಯುಳ್ಳ ಚಿತ್ರಗಳೇನಾದರೂ ಇವೆಯೋ ಎಂದು ಹುಡುಕಿದೆವು. ದೊರೆಯಲಿಲ್ಲ. ಆದರೆ ಬೈಬಲ್ ಚಿತ್ರಗಳಲ್ಲಿ ಭವ್ಯತೆ ರಮ್ಯತೆ ಅದ್ಭುತ ಪವಾಡಸ್ಥಿತಿಗಳನ್ನು ಗಮನಿಸಬಹುದು.

**ಐಫಿಲ್ ಗೋಪುರ (Eiffel Tower)**

"ರೋಮವು ವರ್ತುಲಸೌಧಕ್ಕೆ ಪ್ರಸಿದ್ಧವಾಗಿದ್ದರೆ ಪ್ಯಾರೀಸು ಐಫಿಲ್ ಟಾವರಿಗೆ ಪ್ರಖ್ಯಾತವಾಗಿದೆ. ಇವೆರಡೂ ನಿರ್ಮಾಣಗಳು ತಮ್ಮ ಯೋಜನೆ ಸಂಯೋಜನೆಗೆ ಅತ್ಯಗಾಧವಾಗಿವೆ. ಎರಡೂ ತಮ್ಮ ಅತ್ಯದ್ಭುತ ಗಾತ್ರಗಳಿಂದ ನೋಡುಗರನ್ನು ದಿಗ್ಭ್ರಮಗೊಳಿಸುತ್ತವೆ" (If the Symbol of Rome is the Closseum, then Paris's Symbol is without doubt the Eiffel Tower: both are monuments unique in plnannig and construction, both stir admiration by their extraordinary dimensions) ಎಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಇದನ್ನು ೧೮೮೯ರ ವಿಶ್ವಕೂಟ (World Fair)ದ ಸಂಸ್ಮರಣೆಯಲ್ಲಿ ಕಟ್ಟಲಾಯಿತು. ಇದನ್ನು ಕಟ್ಟುವ ಇಂಜಿನೀಯರರು ಶಿಲ್ಪಜ್ಞರೂ ಆಗಿದ್ದಾರೆ. ಇದನ್ನು ವೈವಿಧ್ಯಪೂರ್ಣವಾಗಿಯೂ, ಅತ್ಯಾಧುನಿಕವಾಗಿಯೂ, ಅಷ್ಟೇ ಹಗುರವಾಗುವಂತೆಯೂ ನಿರ್ಮಿಸಿದ್ದಾರೆ. ಇದರ ಇಂಜಿನಿಯರರನೇ ಗಸ್ಟೆವ್ ಐಫಿಲ್ (Gustave Eiffel.)

ಈ ಗೋಪುರವು ೧೦೫೦ ಫೂಟು ಎತ್ತರವಾಗಿದ್ದು, ೧೫,೦೦೦ ಕಬ್ಬಿಣ ತುಂಡುಗಳಿಂದೊಡಗೂಡಿ; ೭೦೦೦ ಟನ್ನು ಭಾರವಾಗಿದೆ. ಇದರ ಮೇಲೆ ನಿಂತರೆ ೪೫ ಮೈಲುದೂರದ ಸುತ್ತಳತೆ ಕಾಣುತ್ತದೆ. ಇದರಲ್ಲಿ ಮೂರು ಹಂತಗಳಿದ್ದು, ಮೊದಲನೇ ಅಂತಸ್ತು ೧೮೭ ಫೂಟಿಗೂ, ಎರಡನೆಯದು ೩೭೭ ಫೂಟಿಗೂ, ಹಾಗೂ ಮೂರನೆಯದು ೮೯೯ ಫೂಟಿಗೂ ಇವೆ. ಈ ಮೂರು ಅಂತಸ್ತುಗಳಲ್ಲಿ ಯಾತ್ರಿಕರಿಗಾಗಿ ಚಹಾಪಾನದ, ಮದ್ಯಪಾನದ ಅಂಗಡಿಗಳುಂಟು. ಈಗ ಇದು ವಿಶ್ವವಿಖ್ಯಾತ ಹೂದೋಟಗಳ ಮಧ್ಯದಲ್ಲಿದ್ದು, ಅನೇಕ ಅಂತರ್‍ರಾಷ್ಟ್ರೀಯ ಮೋಜಿನ ಮೇಳಗಳೂ ಇಲ್ಲಿ ನೆರವೇರುತ್ತವೆ.

ಐಫಿಲ್ ಟಾವರನ್ನು ನಾವು ಕೆಳಗಿನಿಂದಲೇ ನೋಡಿ ಆನಂದಿಸಿದೆವು. ಮೇಲಕ್ಕೆ ಹೋಗಲು ಲಿಫ್ಟುಗಳುಂಟು. ಬುದ್ಧಿ ಶಕ್ತಿ ಹಾಗೂ ಕಲ್ಪನಾ ಶಕ್ತಿಗಳ ಮಧುರ ಸಂಗಮವೇ ಈ ಗೋಪುರವೆಂದು ನಮಗೆ ಅನಿಸಿತು. ಇದರ ಎತ್ತರ ಬಿತ್ತರಗಳನ್ನು ನೋಡುವಾಗ; ಹುಬ್ಬಳ್ಳಿಯಲ್ಲಿ ಲಕ್ಷ ರೂಪಾಯಿಯಿಂದ, ಕಟ್ಟಿಸಿದ ಮೂರುಸಾವಿರಮಠದ ಪಟ್ಸ್ಥಲ ಗಡಿಯಾರ ಗೋಪುರ ನೆನಪಾಗಿ ರೋಮಾಂಚನವೂ ಆನಂದವೂ ಏಕಕಾಲಕ್ಕೆ ಉಂಟಾದವು.

ಇದಲ್ಲದೆ ಇಲ್ಲಿಯ ಲ್ಯೂರ್ ಅರಮನೆ (Louvre Palace) ವ್ಹರ್ಸೆಲ್ಲೀಸ್ ಅರಮನೆ (Palace of Versailles), ಫೌಂಟೇನ್‌ಬ್ಲೂ ಅರಮನೆ (Fountaine blue) ಗಳು ನೋಡುವಂತಹವು.

## ಭಾರತೀಯ ವಿದ್ಯಾರ್ಥಿ ಸೊಸೈಟಿ

ಇದೇ ದಿನ ಇಲ್ಲಿಯ "ಭಾರತೀಯ ವಿದ್ಯಾರ್ಥಿ ಸೊಸೈಟಿ"ಯಲ್ಲಿ ಶ್ರೀರಂಗನಾಥ ದಿವಾಕರ ಹಾಗೂ ನಮ್ಮ ಭಾಷಣಗಳಾದವು. ಕರ್ನಾಟಕ, ಬಂಗಾಲ, ಗುಜರಾಥಗಳ ವಿದ್ಯಾರ್ಥಿಗಳು ಆಗಮಿಸಿದ್ದರು. ದಿವಾಕರರು ಭಾರತೀಯ ಉಜ್ವಲ ಸಂಸ್ಕೃತಿ ಪರಂಪರೆಯ ಬಗ್ಗೆ ಮಾತನಾಡಿದರು. ನಮಗೆ ಅಲ್ಲಿಯ ಧರ್ಮ-ತತ್ತ್ವ-ದೇವರುಗಳ ಬಗ್ಗೆ ವಿದ್ಯಾರ್ಥಿಗಳ ಅನೇಕ ಪ್ರಶ್ನೆಗಳಿಗೆ ಸೂಕ್ತವಾಗಿ ಉತ್ತರಿಸಿದೆವು. ಈ ವಿದ್ಯಾರ್ಥಿ ಸಂಘ ಸುವ್ಯವಸ್ಥಿತವೂ ಭಾರತೀಯ ಸಂಸ್ಕೃತಿಯ ಅಭಿವ್ಯಕ್ತಿಗೆ ಮಾರ್ಗದರ್ಶಿಯಾಗಿ ನಿಂತುದು ಸಂತಸದ ಸಂಗತಿ.

ಪ್ಯಾರೀಸಿನಲ್ಲಿ ಇಂಡಿಯಾ ಅಂಬೆಸಿಯ ಶ್ರೀ ಎಂ. ಕಟಪಲಿಯಾ ಮತ್ತು ಉಮಾ ದೇವಿ ರಾವ್ ನಮ್ಮನ್ನು ತುಂಬಾ ಉಪಚರಿಸಿದರು. ಅವರಿಂದ ಅನೇಕ ಸಂಗತಿಗಳು ತಿಳಿದು ಬಂದವು. ಪ್ಯಾರೀಸಿನ ಸರಕಾರ ಸ್ವಚ್ಛತೆ, ಶಿಸ್ತು, ಅಚ್ಚುಕಟ್ಟುತನಗಳ ಬಗ್ಗೆ ಆದ್ಯಗಮನ ನೀಡುತ್ತದೆಯಂತೆ. ಪ್ಯಾರೀಸಿನ ದಾರಿಯಲ್ಲಿ ಎಡವಿ ಇಲ್ಲವೆ ಜಾರಿ ಬಿದ್ದರೆ ಸರಕಾರದ ವಿರುದ್ಧ ಕೋರ್ಟಿಗೆ ಹೋಗಿ ದಂಡಪಡೆಯಬಹುದಂತೆ! ಈ ಕಾಯಿದೆ ಭಾರತಕ್ಕೆ ಬಂದರೆ ಏನು ಗತಿ? ಅಲ್ಲದ ಯಾರಾದರೂ ಮನೆಗಳು ಹೊಲಸು ಇದ್ದರೆ ಸರಕಾರ ಅವರಿಗೆ ತಕ್ಷಣವೇ ದಂಡ ವಿಧಿಸುತ್ತದೆ. ಶಿಸ್ತು-ಸ್ವಚ್ಛತೆ-ಅಚ್ಚುಕಟ್ಟು-ಓರಣಗಳ ಬಗೆಗೆ ಇಲ್ಲಿ ಆದ್ಯ ಗಮನವಿರುವದರಿಂದ ಇಲ್ಲಿ ಹುಳಗಳ ಸುಳಿವೇ ಕಾಣುವದಿಲ್ಲ.

ಇಲ್ಲಿಯ ಚರ್ಚುಗಳು ಕಲಾತ್ಮಕ. ಇಂಜಿನಿಯರಿಂಗ ಪ್ಲ್ಯಾನು ಮೆಚ್ಚತಕ್ಕದ್ದು. ಇಲ್ಲಿ ಎಲ್ಲರೂ ಫ್ರೆಂಚ್ ಭಾಷೆ ಕಲಿಯಲೇ ಬೇಕು. ಭಾಷಾಭಿಮಾನ ಇಲ್ಲಿ ಲಂಡನ್ನಿಗಿಂತಲೂ ಅಧಿಕ. ಪ್ಯಾರಿಸೀನವರು ಲಂಡನ್ನದವರನ್ನು ತಮಗಿಂತ ಕನಿಷ್ಠ ಎಂದು ಕಾಣುತ್ತಾರೆ! ಇವರ ಆಹಾರದಲ್ಲಿ ನಿತ್ಯ ಅಕ್ಕಿ, ಮಾಂಸ, ಮದ್ಯ, ಹಣ್ಣುಗಳು ಇರಲೇಬೇಕು.

ದಿನಾಂಕ ೧೧ ರಂದು ಪ್ಯಾರೀಸಿನಿಂದ "ರಾಮಕೃಷ್ಣ ವೇದಾಂತ ಸೆಂಟರಿ"ಗೆ ಹೋದೆವು. ನಂತರ ರಾಯಭಾರಿ ಕಚೇರಿಯಲ್ಲಿ ದಿವಾಕರರ ಭಾಷಣ ಏರ್ಪಡಿಸಲಾಗಿತ್ತು. ಇಂಡಿಯಾ ಅಂಬೆಸಿ ಆಫೀಸಿನ ಎಸ್. ಎನ್. ಚಟರ್ಜಿ ಕಟಪಲಿಯಾ, ಉಮಾರಾವ್ ಅವರೆಲ್ಲ ನಮ್ಮನ್ನು ಅತ್ಯಂತ ಹಾರ್ದಿಕವಾಗಿ ಉಪಚರಿಸಿದರು. ಪ್ಯಾರಿಸ್ ಯಾತ್ರೆಯಲ್ಲಿ ಅವರ ನೆನಹು ಮರೆಯುವಂತಿಲ್ಲ ಇಲ್ಲಿಯ 'ರಾಮಕೃಷ್ಣ ವೇದಾಂತ ಸೆಂಟರು' ಅಜಮಾಸು ೧೫-೨೦ ಎಕರೆ ವಿಸ್ತಾರವಾಗಿದ್ದು, ನಿಸರ್ಗ ಸೌಂದರ್ಯವುಳ್ಳದ್ದಾಗಿದೆ. ಪ್ಯಾರಿಸ್ ಬಿಟ್ಟು ೩೦-೩೫ ಮೈಲು ದೂರದಲ್ಲಿದೆ. ಭಾರತೀಯರಾದ ಇವರು ಪಾಶ್ಚಿಮಾತ್ಯ ಪ್ರಪಂಚದಲ್ಲಿ

ನಮ್ಮ ಋಷಿಗಳ ದರ್ಶನವಾಣಿಯನ್ನು ಪ್ರಸಾರಪಡಿಸಿ, ಸತ್ಯ ಸಂಶೋಧನೆಗೆ ಕೈಕೊಂಡುದು ಮೆಚ್ಚತಕ್ಕಂತಹ ಸಂಗತಿ.

## ದುರ್ದೈವದ ನಗರ 'ಬರ್ಲಿನ್'

ದಿ. ೧೨ ರಂದು ಪ್ಯಾರೀಸಿನಿಂದ ಬರ್ಲಿನ್ನಿಗೆ ವಿಮಾನದಲ್ಲಿ ಪ್ರಯಾಣಿಸಿದೆವು. ಅಲ್ಲಿ ರಾಯಭಾರಿ ಆಫೀಸಿನವರು ನಮ್ಮನ್ನು ಸ್ವಾಗತಿಸಿದರು. ಶ್ರೀಮತಿ ಮೋರಿಝು (Mrs. Morteze) ಇವರ ಸುಂದರವಾದ ಮನೆಯಲ್ಲಿ ನಮ್ಮನ್ನು ಇಳಿಸಿದರು. ಈ ಗೃಹಿಣಿ ಕೆಲ ಕಾಲ ಭಾರತದಲ್ಲಿದ್ದಳಂತೆ. ಆದ್ದರಿಂದ ಆಸ್ಥೆಯಿಂದ ನಮ್ಮನ್ನು ಉಪಚರಿಸಿದಳು. ಅದೇ ಸಂಜೆ ಭಾರತೀಯ ಮಜಿಲೀಸ್ ಸಂಘದಲ್ಲಿ ನಮ್ಮ ಭಾಷಣ ಕಾರ್ಯಕ್ರಮಗಳಾದವು. ಅಲ್ಲಿ ನಮ್ಮೊಂದಿಗೆ ಒಲುಮೆಯಿಂದ ಸಹಕರಿಸಿದ ರಾಯಭಾರಿಗಳು ಶ್ರೀ ಎಸ್. ಎಲ್. ಕೌಲ ಹಾಗೂ ಅವರ ಪುತ್ರ ಅನಿಲ ಹಾಗೂ ಅವರ ಧರ್ಮಪತ್ನಿಯವರಿಗೆ ಧ್ಯಾನ ಹಾಗೂ ಆಸನಗಳ ಪರಿಚಯ ಹೇಳಿಕೊಟ್ಟೆವು. ರಾಯಭಾರಿ ಕೌಲ ಅವರು ಅತ್ಯಂತ ಭಕ್ತಿವಂತರು. ನಮ್ಮನ್ನು ಆದರದಿಂದ ಉಪಚರಿಸಿದರು. ಸ್ವತಃ ಅವರೇ ಬರ್ಲಿನ್ನಿನ ಪ್ರತಿಯೊಂದು ಸ್ಥಾನ ತೋರಿಸಿದರು. ಇವರು ಜವಹರಲಾಲ ನೆಹರೂರವರ ಸಮೀಪ ಸಂಬಂಧಿಕರು. ಸರಳ ಜೀವನ. ಹಾರ್ದಿಕ ಗುಣ. ಇದು ಇವರ ಮನೋಧರ್ಮ.

ಬರ್ಲಿನದಲ್ಲಿ ಮುದುಕರೇ ಹೆಚ್ಚು. ಏಕೆಂದು ಕೇಳಲಾಗಿ ಯುದ್ಧದಲ್ಲಿ ತರುಣರೆಲ್ಲ ಮಡಿದಿದ್ದಾರೆಂದು ಉತ್ತರ ಬಂತು. ಬರ್ಲಿನ್ ಇದು ದುರ್ದೈವದ ನಗರ ಇಬ್ಭಾಗವಾಗಿದೆ. 'ಪೂರ್ವ ಬರ್ಲಿನ್' 'ಪಶ್ಚಿಮ ಬರ್ಲಿನ್' ಎಂದು ಎರಡು ಹೋಳಾಗಿದೆ. ಒಂದರಿಂದ ಒಂದಕ್ಕೆ ಹೋಗಬೇಕಾದರೆ ಪಾಸ್‌ಪೋರ್ಟ ಬೇಕು. ಪಶ್ಚಿಮ ಬರ್ಲಿನ್‌ದಲ್ಲಿ ವಿಶಾಲವಾದ ನಗರ ಸೌಂದರ್ಯವನ್ನು ಬಿಟ್ಟರೆ ಪ್ರೇಕ್ಷಣೀಯ ಸ್ಥಳಗಳು ಕಡಿಮೆಯೆಂದು ಹೇಳಬಹುದು. ಅವುಗಳಲ್ಲಿ ೨ನೆಯ ಮಹಾಯುದ್ಧದ ಬಿಸಿಯಿಂದ ಬಹುಭಾಗಗಳು ನಾಶವಾದುದನ್ನು ಇಂದಿಗೂ ಗಮನಿಸಬಹುದು. ಇಲ್ಲಿಯ ಬಳುಕು ದಾರಿಗಳು, ಫ್ರ್ಯಾಂಕಲಿನ್ ಕನ್ವೆನ್‌ಶನ್‌ಹಾಲ್, ಬೆಲ್ಲೆವ್ಯೂ ಅರಮನೆ, ಯುರೋಪ ಸೆಂಟರಿನಲ್ಲಿ ಬಾಂಬಿನಿಂದ ಜರ್ಝರಿತವಾದ ಮುಗಿಲೆತ್ತರದ ವಿಲ್‌ಹೆಲ್ಮ ಮೆಮೋರಿಯಲ್ ಚರ್ಚು, ವಿಕ್ಟೋರಿಯ ವಿಜಯಸ್ತಂಭ, ಚಾರ್ಲ್ಲಟನ್‌ಬರ್ಗ್ ಅರಮನೆ, ಒಲೆಂಪಿಕ್ ಸ್ಟೇಡಿಯಂ ಮುಂತಾದವು ದರ್ಶನೀಯಗಳಾದರೂ ಪ್ಯಾರೀಸಿನ ಅನುಭವವನ್ನು ತರಲಾರವು.

## ಗೋಡೆಯ ಆಚೆಗೆ 'ಈಸ್ಟ ಬರ್ಲಿನ್'

ಇಲ್ಲಿಯ ಪದ್ಧತಿಯಲ್ಲಿ ರಶಿಯಾದೇಶದ ಪ್ರಭಾವವಿದೆ. ರಾಯಭಾರಿಗಳಾದ ಕೌಲ ಅವರು ತಮ್ಮ ಕಾರಿನಲ್ಲಿ ನಮ್ಮನ್ನೊಯ್ದು ತೋರಿಸಿದರು. ಇಲ್ಲಿಯ ೩೭ ಅಂತಸ್ತಿನ 'ನ್ಯೂ ಬರ್ಲಿನ್ ಹೋಟೆಲ'ನ್ನು ಲಿಫ್ಟಿನಲ್ಲಿ ಕೇವಲ ೨೨ ಸೆಕೆಂಡಿನಲ್ಲಿ ಏರಿದೆವು. ಇಲ್ಲೆಲ್ಲ ಪೋಲೀಸರ ಶಿಸ್ತು ನೋಡುವಂಥದು. ಇಲ್ಲಿಯ ಬರ್ಲಿನ್ ಡೋಮ್ ವಾಸ್ತುಶಿಲ್ಪದಲ್ಲಿ

ಭಾರತೀಯ ಗೋಪ್ಪರ ಶೈಲಿಯಂತೆ ಸುಂದರವಾಗಿದೆ. ದಿಲ್ಲಿಯ ಕೆಂಪುಕೋಟೆ ನೋಡಿದವರಿಗೆ ಇಲ್ಲಿಯ ರೆಡ್‌ಸಿಟಿ ಹಾಲ್ ಸಾದಾ ಎಂದು ತೋರುತ್ತದೆ. ಇಲ್ಲಿಯ ಫೇರಿಟೇಲ ಫೌಂಟೇನ್, ಬ್ರ್ಯಾಂಡನ್ ಬರ್ಗಗೇಟ್, ಮಿನಿಸ್ಟ್ರಿಹಾಲ್ ಕಾರ್ಲಮಾರ್ಕ್ಸ್ ನೆನಹಿನ ನಿಲಯು, ಸ್ಟ್ಯಾಲಿನ್ ಸ್ಮಾರಕ, ಲಿಂಡನ್ ಹೋಟೆಲ್, ನ್ಯೂ ಫೌಂಟೇನ್ ಸ್ಕ್ವೇರ್, ಗಾರ್ಡಹೌಸ, ಕಾಂಗ್ರೆಸ್ ಹಾಲ್, ಫ್ರೆಂಚ್ ಡೋಮ, ರಶಿಯನ್ ಮೆಮೋರಿಯಲ್ ಟ್ರೆಪ್‌ಟೋವ್ ಮುಂತಾದವು ಪ್ರೇಕ್ಷಣೀಯವಾಗಿದೆ. ಇವೆಲ್ಲ ಪ್ಯಾರಿಸ್‌ನ ಕಟ್ಟಡಗಳ ಪ್ರಭಾವ. ಇಂಗ್ಲೆಂಡಿನ ತೋಟದ ಪ್ರಭಾವ ಕಾಣಬಹುದು. ಆದರೆ ರಶಿಯದ ಕಮ್ಯುನಿಸ್ಟ್ ಪ್ರಭಾವ ಮಾತ್ರ ಸಾಂಧ್ರವಾಗಿದೆ. ಒಂದು ಪಟ್ಟಣ ಎರಡು ಹೋಳಾಗಿ; ಒಂದು ಬಂಡವಳ ಶಾಹಿ ದೇಶವಾದರೆ, ಇನ್ನೊಂದು ಕಮ್ಯುನಿಸ್ಟ್ ರಾಷ್ಟ್ರವಾಗಿದೆ. ಊರಿನ ಮಧ್ಯೆ ಇಬ್ಭಾಗ ಮಾಡಿದ ಗೋಡೆ. ಅನೇಕ ಕಡೆಗೆ ಒಂದೊಂದು ಮನೆಯನ್ನೇ ಇಬ್ಭಾಗ ಮಾಡಿ, ಕೆಲ ಅಂಕಣಗಳನ್ನು ಪೂರ್ವ ಬರ್ಲಿನ್ನಿಗೆ ಹಾಗೂ ಕೆಲ ಅಂಕಣಗಳನ್ನು ಪಶ್ಚಿಮ ಬರ್ಲಿನ್ನಿಗೆ ಕೊಟ್ಟಿದೆ! ಮಾನವ ಮಾನವನನ್ನು ನಂಬದಿರುವಾಗ ಅಶಾಂತಿ ತಾಂಡವವಾಡುತ್ತದೆ. ನಾವು ನಮ್ಮ ಆತ್ಮವನ್ನೇ ವಂಚಿಸಿದಾಗ ಇಂಥ ಪಾಶವೀ ಕೃತ್ಯಗಳು ಜರುಗುತ್ತವೆ. ಆದ್ದರಿಂದ ಲೋಕಶಾಂತಿ ಸ್ಥಾಪಿತವಾಗಬೇಕಾದರೆ ಆತ್ಮಶಾಂತಿ ಅವಶ್ಯ. ಅದೇ ಆತ್ಮ ವಿವೇಕ ತನ್ನತಾನರಿದ ಅರುಹು. ಈ ಅರುಹಿಲ್ಲದಾಗ ಮರಹಿನ ರಾಜ್ಯಗಳು ಏಳುತ್ತವೆ. ಯುದ್ಧದ ಮೊಳಗ್ಗುಗಳು ಕೇಳುತ್ತವೆ. ರಕ್ತಪಾತ, ಅನ್ಯಾಯ, ಅತ್ಯಾಚಾರ, ರಾಕ್ಷಸೀ ಕೃತ್ಯಗಳಿಗೆ ದಾರಿಯಾಗುತ್ತದೆ.

## ಮಹರ್ಷಿ ಮಹೇಶಯೋಗಿಗಳೊಂದಿಗೆ ಸಂದರ್ಶನ

ದಿನಾಂಕ ೧೫ ರಂದು ಬರ್ಲಿನ್‌ದಿಂದ ಜಿನೀವಾಕ್ಕೆ ವಿಮಾನಿನಿಂದ ಪಯಣಿಸಿದೆವು. ಜಿನೀವಾದಲ್ಲಿ ಧ್ಯಾನಯೋಗಮಂದಿರದ ಶ್ರೀಮತಿ ಫ್ಲಾರೆನ್ಸ ಕೈವಾನಿ ಸ್ವಾಗತಿಸಿದರು. ಅವರ ಆತಿಥ್ಯದಲ್ಲಿ ಅವರ ಯೋಗ ಮಂದಿರದಲ್ಲಿ ಅಂದು ತಂಗಿದೆವು. ಮರುದಿನ ಸ್ವಿಝರ್ಲ್ಯಾಂಡಿನ ಆರೋಜಾಕ್ಕೆ ಮಹರ್ಷಿ ಮಹೇಶಯೋಗಿ ಅವರ ಆಮಂತ್ರಣದ ಮೇರೆಗೆ ಪಯಣಿಸಿದೆವು. ದಾರಿಯಲ್ಲಿ ರೈಲಿನ ಯಾತ್ರೆಯಲ್ಲಿ ೨೦–೨೫ ಮೈಲುದ್ದ ಸರೋವರ ದೃಶ್ಯ ನಯನ ಮನೋಹರವಾಗಿತ್ತು. ಆರೋಜಾಕ್ಕೆ ಹೋಗುವಾಗ ನಮ್ಮ ಟ್ರೇನು ೬॥ ಸಾವಿರ ಫೂಟು ಎತ್ತರದ ಪರ್ವತವೇರಿ ಹೋಗುವಾಗ ರೋಮಾಂಚನವಾಯಿತು. ಸ್ವಿಝರ್ಲ್ಯಾಂಡಿನ ಪ್ರಕೃತಿಯ ಚಲುವು ನೋಡುವಂತಹದು. ಹಿಮಬಂಡೆ, ಜಲಪ್ರಪಾತ, ಉದ್ದವಾದ ಮರಸಾಲುಗಳ ಅದ್ಭುತ ದೃಶ್ಯ ಒಂದು ಇಂಚು ಕೂಡಾ ಭೂಮಿ ಇಲ್ಲಿ ವ್ಯರ್ಥವಾಗಿಲ್ಲ. ಎಲ್ಲವೂ ಕೃಷಿಗೆ ಅಳವಟ್ಟಿದೆ.

## ಸ್ವಿಝರ್ಲ್ಯಾಂಡಿನ ಕಾಶ್ಮೀರ

ಆರೋಜಾದ ನಿಸರ್ಗ ಸುಂದರ ಕಾಶ್ಮೀರ ವನಶ್ರೀ ವೈಭವದಲ್ಲಿ ಮಹರ್ಷಿ ಮಹೇಶ ಯೋಗಿಗಳ "ಅಂತರರಾಷ್ಟ್ರೀಯ ಧ್ಯಾನಯೋಗ"ದ ಆಶ್ರಮ. ನಾವು ಆಶ್ರಮದ ಸಭೆಯಲ್ಲಿ ವಿಶ್ವಧರ್ಮಕ್ಕೆ ವೀರಶೈವ ಧರ್ಮದ ಕೊಡುಗೆ ಎಂಬ ವಿಷಯದ ಮೇಲೆ ಹಿಂದಿಯಲ್ಲಿ ಭಾಷಣ ಮಾಡಿದೆವು. ಅದನ್ನು ಮಹರ್ಷಿಗಳು ಆಶ್ರಮ ವಾಸಿಗಳಿಗೆ ಇಂಗ್ಲೀಷಿನಲ್ಲಿ ಅನುವಾದ ಮಾಡಿ ಹೇಳಿದರು. ಡಾ|| ದಿವಾಕರರು ಹಾಗೂ ಪ್ರೊ. ಹಿರೇಮಠರು ಇಂಗ್ಲೀಷಿನಲ್ಲಿ WCRP ವಿಷಯವಾಗಿ ಭಾಷಣಮಾಡಿದರು. ಮಹೇಶಯೋಗಿಗಳಿಗೆ ನಾವು ಲಿಂಗ, ಭಸ್ಮ, ರುದ್ರಾಕ್ಷಿ ಹಾಗೂ ನಮ್ಮ ಗ್ರಂಥಗಳನ್ನು ಕೊಟ್ಟೆವು.

ಇವರ ಆಶ್ರಮಗಳು ಯುರೋಪಿನ ೧೬ ರಾಷ್ಟ್ರಗಳಲ್ಲಿ ಉಂಟು. ಒಟ್ಟು ಐದು ಲಕ್ಷ ಜನರಿಗೆ ಧ್ಯಾನ ಮತ್ತು ಯೋಗದ ಶಿಕ್ಷಣ ನೀಡಿದ್ದಾರೆ. ನಮ್ಮ ಭಾಷಣಕ್ಕೆ ೧೬ ರಾಷ್ಟ್ರಗಳ ಶಿಕ್ಷಕರು ಹಾಜರ ಇದ್ದರು. ಟೆಲಿವ್ಹಿಜನ್ ಮೂಲಕ ಇವರು ಯೋಗ ಪ್ರಚಾರ ಮಾಡುತ್ತಾರೆ. ಅಮೇರಿಕೆಯೊಂದರಲ್ಲೇ ಇವರ ೩೫೦ ಧ್ಯಾನಯೋಗದ ಸೆಂಟರುಗಳು ಇವೆ. ಧ್ಯಾನವನ್ನು ಇವರು ವೈಜ್ಞಾನಿಕ ಹಾಗೂ ಪ್ರಾಯೋಗಿಕ ದೃಷ್ಟಿಯಿಂದ ಬೋಧಿಸುತ್ತಿರುವದರಿಂದ ಪಾಶ್ಚಾತ್ಯ ಪ್ರಪಂಚವನ್ನು ಪ್ರಭಾವಿಸಿದ್ದಾರೆ. ಮಹರ್ಷಿಗಳ ವ್ಯಕ್ತಿತ್ವ, ಕರ್ತೃತ್ವಶಕ್ತಿ ಅಗಾಧವಾದುದು. ಹಿಂದು ಸಂಸ್ಕೃತಿಯ ಸಾರವನ್ನು ಹೇಳಿ ಪಾಶ್ಚಿಮಾತ್ಯರನ್ನು ಆಕರ್ಷಿಸಿದ ಇವರ ಕಾರ್ಯರಂಗ ಕಂಡು ನಾವು ತುಂಬ ಸಂತೋಷಪಟ್ಟೆವು.

## ಆಧುನಿಕ ವಿಶ್ವದ ಆರ್ಷಯೋಗಿಗಳು

ಯುರೋಪದ ರಾಷ್ಟ್ರಗಳಲ್ಲಿ ಮಹರ್ಷಿ ಮಹೇಶಯೋಗಿಗಳು ಧ್ಯಾನಯೋಗದ ಪ್ರಚಾರ ಮಾಡುತ್ತ, ಅದ್ಭುತ ಸಾಹಸದೊಡನೆ ಕಾರ್ಯಗೈಯುತ್ತಿರುವದನ್ನು ನೋಡಿದಾಗ; ಎಂಥವರಿಗೂ ಅಭಿಮಾನ ಉಂಟಾಗದೆ ಇರದು. ಭಾರತೀಯರೊಬ್ಬರು ನಮ್ಮ ಸಂಸ್ಕೃತಿಯನ್ನು ಬಿಡದೆ, ಹಿಂದು ಸಂಸ್ಕೃತಿಯ ಪ್ರಭಾವವನ್ನು ಬೀರುತ್ತ, ಆ ಜನರನ್ನು ಅಂತರ್ಮುಖಿಗಳನ್ನಾಗಿ ಮಾಡುತ್ತಿರುವುದು ಪರಮಾನಂದವನ್ನುಂಟುಮಾಡಿತು. ಮಹರ್ಷಿ ಮಹೇಶಯೋಗಿಗಳು ಜಟಾಧಾರಿಗಳು. ಅರವತ್ತರ ಅರುಹು. ಧ್ಯಾನವನ್ನು ವೈಜ್ಞಾನಿಕ ಯಂತ್ರೋಪಕರಣಗಳ ಮೀಟರುಗಳಿಂದ ಅಳೆಯುತ್ತ, ಚಿತ್ತ ಚಾಂಚಲ್ಯವನ್ನೂ ರಕ್ತದ ಒತ್ತಡವನ್ನೂ ಸಂಚಲನೆಯ ನಿರ್ದೇಶನದ ಮೀಟರುಗಳಲ್ಲಿ ಅಂಕಿಸಂಖ್ಯೆಗಳನ್ನು ರೆಕಾರ್ಡ ಮಾಡುತ್ತ ಪಾಶ್ಚಿಮಾತ್ಯ ವಿಶ್ವವನ್ನು ಆಕರ್ಷಿಸಿದ್ದಾರೆ. ಯೋಗವೂ ಧ್ಯಾನವೂ ಅವರ ಕೈಯಲ್ಲಿ ಸಂಖ್ಯಾಶಾಸ್ತ್ರದ ಮಿತಿಯಲ್ಲಿ ಸಿಕ್ಕಿದೆ. ಹೆಚ್ಚಾಗಿ ಕಾಲೇಜು ಹಾಗೂ ವಿಶ್ವವಿದ್ಯಾಲಯಗಳ ಶಿಕ್ಷಕರಿಗೆ ಧ್ಯಾನ ಹಾಗೂ ಯೋಗದ ತರಬೇತಿಯನ್ನು ನೀಡುತ್ತಿದ್ದಾರೆ. ಆದರಿಂದ ಅನೇಕ ವಿದ್ಯಾರ್ಥಿಗಳು ಸಫಲತೆಯನ್ನು ಪಡೆದಿದ್ದಾರೆಂದು ಅವರೆಲ್ಲರೂ ಹೇಳಿದರು. ನಮಗೆ ಮಹರ್ಷಿ ಮಹೇಶಯೋಗಿಗಳು ಆ ಸಭೆಯಲ್ಲಿ ವೀರಶೈವ ಧರ್ಮದ

ಬಗ್ಗೆಯೇ ಹೇಳಲು ವಿನಂತಿಸಿಕೊಂಡಿದ್ದರಿಂದ, ಆ ವಿಷಯುವನ್ನು ಅಲ್ಲಿ ಮುಕ್ಕಾಲು ಘಂಟೆಯು ವರೆಗೆ ಹಿಂದಿಯಲ್ಲಿ ಭಾಷಣ ಮಾಡಿದೆವು. ಆ ಭಾಷಣವನ್ನು ಇಂಗ್ಲೀಷಿನಲ್ಲಿ ಮಹೇಶಯೋಗಿಗಳೇ ಅನುವಾದಮಾಡಿ, ಅವರೆಲ್ಲರಿಗೆ ತಿಳಿಸಿದ ನಂತರ ಅವರಿಗೆ ಕಿಂಚಿತ್ತಾದರೂ ವೀರಶೈವ ಧರ್ಮದ ವೈಶಿಷ್ಟ್ಯವು ಅರ್ಥವಾದಂತೆ ಕಂಡುಬಂದಿತು.

ಮಹರ್ಷಿ ಮಹೇಶಯೋಗಿಗಳು "ಮಹರ್ಷಿ ಇಂಟರ್‌ನ್ಯಾಶನಲ್ ಯೂನಿವ್ಹರ್ಸಿಟಿ" ಯನ್ನು ಸ್ಥಾಪಿಸಿದ್ದಾರೆ. ಅದರ ಮುಖಾಂತರ "ಅತಿಮಾನಸ ಧ್ಯಾನಯೋಗ"ದ ಮಹತ್ವ ತಿಳಿಸಿ ಜನಜಾಗೃತಿ ಮಾಡುತ್ತಿದ್ದಾರೆ. ಅವರ ಕರ್ತೃತ್ವಶಕ್ತಿ ಅಗಾಧವಾದುದು. ವೇದ, ಪುರಾಣ ಮುಂತಾದ ಸಂಸ್ಕೃತ ಗ್ರಂಥಗಳಲ್ಲಿರುವ ಮಂತ್ರಗಳನ್ನು ಅವರಲ್ಲಿ ತರಬೇತಿ ಪಡೆಯುತ್ತಿರುವವರು ಕಂಠಪಾಠ ಮಾಡಲೇಬೇಕು. ಪ್ರತಿಯೊಬ್ಬರ ಮಾತು ಮಾತಿನಲ್ಲಿಯೂ "ಜಯ ಗುರುದೇವ" ಶಬ್ದ ಹೊರಡುತ್ತಿತ್ತು. ಭಾಷಣಗಳು ಮುಗಿದ ನಂತರ ಪ್ರತಿಯೊಬ್ಬರು ಮಹರ್ಷಿ ಮಹೇಶಯೋಗಿಗಳ ಭಾವಚಿತ್ರಕ್ಕೆ ನಮಿಸುವದು ಪರಂಪರೆಯಾಗಿತ್ತು. ಸಿಗರೇಟು ಸೇದುವದು, ಮದ್ಯಪಾನ, ಮಾಂಸಾಹಾರ ಸರ್ವಸಾಧಕರಿಗೂ ನಿಷಿದ್ಧ–ಹಿಂದೂ ಸಂಸ್ಕೃತಿಯನ್ನು ತಿಳಿಸುತ್ತ ಅವರನ್ನು ಯೋಗದ ಕಡೆಗೆ ಆಕರ್ಷಿಸುತ್ತಿದ್ದಾರೆ. "ಇಷ್ಟೆಲ್ಲಾ ಕಾರ್ಯಕ್ಕೆ ದುಡ್ಡು ಎಲ್ಲಿಂದ ತರುತ್ತೀರಿ?" ಎಂದು ನಾವು ಅವರನ್ನು ಕೇಳಿದ್ದಕ್ಕೆ; 'ಗುರುದೇವನು ನಮಗೆ ಒದಗಿಸಿಕೊಡುತ್ತಾನೆ, ಅದರಿಂದ ನಮಗೇನೂ ತಾಪತ್ರಯಗಳಿಲ್ಲ'ವೆಂದು ಹೇಳಿದರು. ಒಮ್ಮೆ ಅವರು ಗೋಕರ್ಣದ ಬ್ರಹ್ಮರ್ಷಿ ದೈವರಾತರನ್ನು ಕರೆಯಿಸಿ, ವೇದೋಕ್ತ ಮಂತ್ರಗಳನ್ನು ಅವರಿಂದ ಕೇಳಿಕೊಂಡು, ಅವೆಲ್ಲವುಗಳನ್ನು ಟೇಪರಿಕಾರ್ಡ ಮಾಡಿಕೊಂಡು, ಟೆಲಿವ್ಹಿಜನ್ನಿನಲ್ಲಿಯೂ ಅವರ ಸಂದರ್ಶನ ಮಾಡಿಸಿದರು. ಈ ರೀತಿ ಐರೋಪ್ಯರಿಗೆ ಮಂತ್ರದರ್ಶನ ಮಾಡಿಸುತ್ತಿರುವ ಅರ್ವಾಚೀನ ಪ್ರಪಂಚದ ಮಂತ್ರದ್ರಷ್ಟಾರರಿವರು. ಧ್ಯಾನಯೋಗದ ಬಗ್ಗೆ ಇಂಗ್ಲೀಷಿನಲ್ಲಿ ಉದ್ಗ್ರಂಥ ಬರೆದಿದ್ದಾರೆ. ಭಗವದ್ಗೀತೆಯ ಆರು ಅಧ್ಯಾಯಗಳಿಗೆ ಇಂಗ್ಲೀಷಿನಲ್ಲಿ ಭಾಷ್ಯಬರೆದಿದ್ದಾರೆ.

## ಮನದಲ್ಲೊಂದು ಕೋಲ್ಮಿಂಚು

ಮಹರ್ಷಿ ಮಹೇಶಯೋಗಿಗಳ ಕಾರ್ಯಕಲಾಪಗಳನ್ನು ನೋಡಿ ನಮ್ಮಲ್ಲಿ ಅನೇಕ ಕಲ್ಪನೆಗಳು ಮೂಡಿಬಂದವು. ಭಾರತ ದೇಶಕ್ಕೆ ಹೋದ ಮೇಲೆ ಸಾಮಾಜಿಕ ಕಾರ್ಯದೊಡನೆ ಏನಾದರೂ ಯೋಗ, ಧ್ಯಾನ ಹಾಗೂ ಧಾರ್ಮಿಕ ಕ್ರಾಂತಿಯನ್ನು ಮಾಡಬೇಕು, ಎಲ್ಲ ಜನರನ್ನು ಸಂಘಟಿಸಿ ಸಮಾಜದಲ್ಲಿ ನವಚೈತನ್ಯ ತುಂಬಬೇಕು. ಅನೈಕ್ಯತೆಯನ್ನು ಓಡಿಸಬೇಕು, ಯುರೋಪ ರಾಷ್ಟ್ರಗಳಲ್ಲಿಯಂತೆ ದೇಶಾಭಿಮಾನ ನಮ್ಮ ರಾಷ್ಟ್ರದಲ್ಲೂ ಬೆಳೆಯಿಸಬೇಕು ಎಂಬ ಲವಲವಿಕೆ ನಮ್ಮಲ್ಲಿ ಮೂಡಿತು. ಅನ್ಯರು ಏನಾದರೂ ಒಳ್ಳೆಯ ಕಾರ್ಯಮಾಡಿದರೆ, ಅವರಿಗೆ ಪ್ರೋತ್ಸಾಹ ನೀಡಿ, ಅವರ ವಿಚಾರವನ್ನು ಅನುಸರಿಸಿ, ಕಾರ್ಯರೂಪದಲ್ಲಿ ತರುತ್ತಿರುವದು ಇಲ್ಲಿಯ ಸತ್ಪರಂಪರೆ. ಆದರೇನು? ನಮ್ಮ ದೇಶದಲ್ಲಿ ಕರ್ನಾಟಕದಲ್ಲಿ, ಏನಾದರೂ ಒಳ್ಳೆಯ ಕಾರ್ಯ ಮಾಡತಕ್ಕವರಿಗೆ, ಸಮಾಜವನ್ನು ಸಂಘ

ಟಿಸಬೇಕೆನ್ನುವವರಿಗೆ ಉಪದ್ರವಗಳನ್ನು ನೀಡುವದಲ್ಲದೆ, ಅವರ ಭವಿಷ್ಯವು ಸುಂದರವಾಗದಂತೆ ಬೆಳೆಯುವ ಮುನ್ನವೇ ಕಾಲ್ತೊಡಕು ಹಾಕಿ, ಬೆಳೆಯುಗೊಡದಂತೆ ಮಾಡಿ, ಈರ್ಷಾದ್ವೇಷಗಳಲ್ಲಿ ಮುಳುಗಿ, ಅಲ್ಲಸಲ್ಲದ ಟೀಕೆ ಟಿಪ್ಪಣಿಮಾಡಿ; ತಾವೂ ಮುಂದುವರಿಯರು, ಮತ್ತೊಬ್ಬರನ್ನೂ ಮುಂದುವರಿಯಲು ಬಿಡರು. ಈ ವಿಚಾರದ ಸುರುಳಿಯನ್ನು ತಲೆಯಲ್ಲಿ ಸುತ್ತಿಕೊಂಡು ಒಮ್ಮೊಮ್ಮೆ ಚಿಂತೆಗೊಳಗಾಗುತ್ತಿದ್ದವು. ಪಕ್ಷ ಪಂಗಡಗಳ ಕಸವನ್ನು ಕಿತ್ತುವತನಕ ಸಮಾಜದ ಬುನಾದಿ ಭದ್ರವಾಗಲಾರದು ಎಂಬುದು ಮನಸ್ಸಿನಲ್ಲಿ ಕೋಲ್ಮಿಂಚಿನಂತೆ ಹಾಯ್ದುಹೋಗುತ್ತಿತ್ತು. ತಿಳಿದವರೆನ್ನುವವರೇ ಅಸೂಯೆಯಲ್ಲಿ ಮುಳುಗಿ ಕಷ್ಟಕೊಡುತ್ತಾರಲ್ಲ? ಇವರಿಗೆ ದೇವರೇ ಸದ್ಬುದ್ಧಿಯನ್ನು ದಯಪಾಲಿಸಲೆಂದು ಪ್ರಾರ್ಥಿಸಿ, ಉಸಿರ್ಗರೆದು ಸುಮ್ಮನೆ ಕುಳಿತುಕೊಳ್ಳುತ್ತಿದ್ದೆವು. ಒಮ್ಮೊಮ್ಮೆ ನಿರಾಶರಾಗಿ ದುಃಖದಲ್ಲಿ ತೊಳಲಾಡುತ್ತಿದ್ದೆವು. ಸಮಾಜದ ಹಿರಿಯರು ನಮ್ಮಂತರಂಗದ ವಿಶಾಲ ವಿಚಾರವನ್ನು ತಿಳಿಯದೆ ಸುಮ್ಮನೆ ಪೀಡಿಸುತ್ತಾರಲ್ಲ! ಸಮಾಜದ ಕಾರ್ಯ ಮಾಡಲು ಆಸರೆ ನೀಡಿ, ಸಮಾಜವನ್ನು ಮುಂದೊಯ್ಯುವ ಭಾವನೆ ನಮ್ಮ ಜನಾಂಗಕ್ಕೆ ಏಕೆ ಬರಲೊಲ್ಲದು? ಈ ವಿಚಾರಗಳೇ ಮೇಲಿಂದ ಮೇಲೆ ಬಂದು ಚಿತ್ತವೆಲ್ಲಾ ಮುಸುಕಾಗುತ್ತಿತ್ತು. ಅಂತೂ ಕೊನೆಗೆ ಧೈರ್ಯಮಾಡಿ ನಮ್ಮ ಒಳ್ಳೇ ಕರ್ತವ್ಯವನ್ನು ಮುಂದುವರಿಸಿ, "ನಿಂದಂತು ನೀತಿ ನಿಪುಣಾಃ ಯದಿ ವಾಸ್ತುವಂತು, ನ್ಯಾಯತ್ ಪಥಃ ಪ್ರವಿಚಲಂತಿ ನ ಧೀರಾಃ" ಎಂದು ಧೈರ್ಯ ಮಾಡಿಕೊಂಡು ಶಾಂತರಾಗುತ್ತಿದ್ದೆವು. "ಆರೇನಂದರೂ ಜರಂತಿಪ್ಪುದೇ ಸಮತೆ" ಎನ್ನುವ ಬಸವಣ್ಣನವರ ವಚನವನ್ನು ಸ್ಮರಿಸಿಕೊಂಡು, ಮುಂದಿನ ಹಿರಿಯ ಗುರಿ ಸಾಧನೆ ಬಿಡದೆ, ಜೀವನ ಸಾಗಿಸುವದೇ ಮುಖ್ಯ ಕರ್ತವ್ಯವೆಂದು ಭಾವಿಸಿದೆವು.

ಮಹರ್ಷಿ ಮಹೇಶಯೋಗಿಗಳ ಜೀವನ ಚಿತ್ರ ಎದೆಯ ಪಟಲದಲ್ಲಿ ಮೇಲಿಂದ ಮೇಲೆ ಮೂಡುತ್ತಿತ್ತು. ನಮ್ಮ ಕರ್ತವ್ಯವನ್ನು ನಿಷ್ಠೆಯಿಂದ ಮಾಡುವದೇ ಮಾನವನ ಮುಖ್ಯ ಗುರಿಯಾಗಿರಬೇಕು; ಅಲ್ಲದೆ ಅನೇಕ ಮಹಾ ಶಿವಶರಣ ಶರಣೆಯರು ಸುಖದುಃಖಗಳನ್ನು ಹೇಗೆ ಎದುರಿಸುತ್ತಿದ್ದರೆಂಬುದನ್ನು ಮನಸ್ಸಿನಲ್ಲಿ ಮೆಲಕು ಹಾಕುತ್ತಿದ್ದೆವು. ಮಹರ್ಷಿ ಮಹೇಶಯೋಗಿಗಳಿಗೂ ಮೊದಲಿಗೆ ಬಂದ ಕಷ್ಟಗಳ ವಿವರವೂ ನಮ್ಮ ಮನಸ್ಸಿಗೆ ವೇದ್ಯವಾಗಿತ್ತು. ಈ ಜೀವನವೇ ಹೋರಾಟಮಯವಾದುದು. ಸೋಲು ಗೆಲವು ಇದು ಪ್ರಕೃತಿ ಧರ್ಮ. ಈ ಎಲ್ಲ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡು, ಚಿಂತಿಸುತ್ತ ಕಷ್ಟನಷ್ಟಗಳನ್ನು ಎದುರಿಸಿ ಮುಂದೆ ಸಾಗುವದೇ ಮಾನವನ ಮುಖ್ಯ ಧ್ಯೇಯವೆಂದು ನಿರ್ಧರಿಸಿದೆವು.

## 'ರೋಮ್' ವಿಮಾನ ತಪ್ಪಿತು!

ಮರುದಿನವೇ ವ್ಯಾಟಿಕನ್ನಿನ 'ಪೋಪಪಾಲ'ರೊಂದಿಗೆ ನಮ್ಮ ಸಂದರ್ಶನದ ಸಮಯ ನಿಶ್ಚಿತವಾಗಿತ್ತು. ಆದರೆ, ಆಶ್ರಮದ ಕಾರ್ಯಕ್ರಮಗಳಲ್ಲಿ ಹೆಚ್ಚು ಸಮಯ ಕಳೆದಿದ್ದರಿಂದ ನಮಗೆ ಸಂಜೆ ೬॥ ಗಂಟೆಗೆ ಹೊರಡುವ ರೋಮಿನ ವಿಮಾನ ತಪ್ಪಿ ಹೋಯಿತು.

ನಾವು ೬॥ ಗಂಟೆಯು ವಿಮಾನಿಗೆ ಬರುತ್ತೇವೆಂದು ರೋಮಿನ ಅಂಬೆಸಿಯವರಿಗೆ ತಿಳಿಸಿದ್ದೆವು. ಆ ಪ್ರಕಾರ ಅವರು ಬಂದು, ವಿಮಾನ ನಿಲ್ದಾಣದಲ್ಲಿ ನಮಗಾಗಿ ಕಾದು, ಧ್ವನಿವರ್ಧಕಗಳಲ್ಲಿ ನಮ್ಮ ಹೆಸರು ಕೂಗಿಸಿ, ನಾವು ಬರಲಿಲ್ಲವೆಂದು ರೆಕಾರ್ಡ ಮಾಡಿ ಹೋದ ವಿಷಯ ನಮಗೆ ಹಿಂದಿನಿಂದ ತಿಳಿಯಿತು. ನಾವು ಮತ್ತೊಂದು ವಿಮಾನವನ್ನು ಹತ್ತುವ ಪೂರ್ವ ದಲ್ಲಿ, ರೋಮದ ಅಂಬೆಸಿಯವರಿಗೆ ಬರುವ ವೇಳೆಯನ್ನು ತಿಳಿಸದೇ ಇರುವ ಸ್ವಲ್ಪ ತಪ್ಪಿಗಾಗಿ, ಆ ದಿನ ಬೆಳಗಿನ ೬ ಗಂಟೆಯವರೆಗೆ, ವಿಮಾನ ನಿಲ್ದಾಣದಿಂದ ರೋಮಿನ ರೇಲ್ವೆ ನಿಲ್ದಾಣಕ್ಕೆ ಹೋಗಿ, ಕಾದು ಕುಳಿತುಕೊಳ್ಳಬೇಕಾಯಿತು. ರೋಮದ ರೇಲ್ವೆ ನಿಲ್ದಾಣವು ಪ್ರಪಂಚದಲ್ಲಿ ದೊಡ್ಡದು ಎಂದು ಕೇಳಿದ್ದರಿಂದ ಅದನ್ನು ನೋಡುವ ಸುಯೋಗವು ದೊರೆಯುತ್ತದೆಯೆಂದೂ ಹಾಗೂ ನಮಗೆ ಕುಳಿತುಕೊಳ್ಳಲು ಸ್ಥಳಾವಕಾಶ ದೊರೆಯುತ್ತದೆಯೆಂದೂ ಅಲ್ಲಿಗೆ ಹೋದೆವು. ಆ ನಿಲ್ದಾಣವು ಅತಿದೊಡ್ಡದು. ಅತಿ ಆಕರ್ಷಕವಾಗಿತ್ತು, ಆಧುನಿಕ ರೀತಿಯಲ್ಲಿ ಕಟ್ಟಿದ್ದಾರೆ. ಈ ಕಟ್ಟಡದ ಮುಂಭಾಗವು ಬಹಳ ಸುಂದರವಾಗಿದೆ. ಇದರ ಅಗಲ ಮುನ್ನೂರು ಅಡಿಗಿಂತಲೂ ಹೆಚ್ಚಿದ್ದು, ಉದ್ದವು ಸಾವಿರದ ಐನೂರು ಅಡಿಗಿಂತ ಹೆಚ್ಚು ಇದೆ. ನಡುವೆ ಕಂಬಗಳಿಲ್ಲದೇ ಈ ರೀತಿ ವಿಶಾಲ ಆಚ್ಛಾದನೆ ಮಾಡಿದ್ದು ಆಶ್ಚರ್ಯ. ಇದಕ್ಕೆ ಆಧುನಿಕ ವಿಜ್ಞಾನವೇ ಕಾರಣ. ರೋಮವು ಪ್ರಾಚೀನತೆಯನ್ನು ಎತ್ತಿತೋರಿಸಿದರೆ ಈ ನಿಲ್ದಾಣವು ಆಧುನಿಕತೆಯನ್ನು ಎತ್ತಿತೋರಿಸುತ್ತದೆ. ಅಂತೂ ನಾವೆಲ್ಲರೂ ೭-೮ ತಾಸು ಅಲ್ಲಿ ಇದ್ದು, ೮॥ ಗಂಟೆಗೆ ರೋಮದ ಇಂಡಿಯನ್ ಅಂಬೆಸಿ ಬಂದನಂತರ ಎಲ್ಲ ವ್ಯವಸ್ಥೆಯಾಯಿತು.

ರೋಮದಲ್ಲಿ ಭಾರತೀಯ ರಾಯಭಾರಿಯಾದ ಶ್ರೀ ಎ. ಬಿ. ಪಂತ ಇವರು ನಮ್ಮನ್ನು ಬಹಳ ಚನ್ನಾಗಿ ಉಪಚರಿಸಿದರು. ಅವರು ಡಾ. ರಂಗನಾಥ ದಿವಾಕರರ ನೆಚ್ಚಿನ ಗೆಳೆಯರು. (Air India) ವಿಮಾನದ ಸಿಬ್ಬಂದಿಯವರು ಹರತಾಳ ಮಾಡಿದ ಮೂಲಕ ಒಂದು ದಿನ ಹೆಚ್ಚಿಗೆ ನಾವು ರೋಮದಲ್ಲಿರಬೇಕಾಗಿಬಂತು. ಅಂದಿನ ನಮ್ಮ ವಾಸ್ತವ್ಯದ ವ್ಯವಸ್ಥೆಯನ್ನು ಶ್ರೀ ಎ. ಬಿ. ಪಂತರೇ ವಹಿಸಿಕೊಂಡರು.

ಅಂತೂ ರೋಮಿನ ವಿಮಾನವನ್ನು ನಾವು ಹಿಂದಿನ ದಿನ ತಪ್ಪಿಸಿದ್ದರಿಂದ ವ್ಯಾಟಿಕನ್ನಿನ ಪೋಪಪಾಲರಿಗಿತ್ತ ಭೆಟ್ಟಿಯ ಅವಧಿಯೂ ತಪ್ಪಿ ಹೋಯಿತು. ಅವರ ಭೆಟ್ಟಿ ಈ ರೀತಿ ಸಾಧ್ಯವಾಗದ್ದರಿಂದ ವಿಷಾದವೆನಿಸಿತು.

## ಸಾಮ್ರಾಟರ ಸಾಮ್ರಾಜ್ಯ ಪ್ರಾಚೀನ ರೋಮ

"All Roads Lead To Rome" ಎಂದು ಕೇಳಿದ್ದೆವು. ಇಂದು ಪ್ರತ್ಯಕ್ಷ ಕಾಣುವ ಸುಯೋಗವೊದಗಿತು. ರೋಮ ನೋಡಲು ಹತ್ತು ಕಣ್ಣು ಸಾಲವು. ಈ ನಗರಕ್ಕೆ ಎರಡು ಸಾವಿರಕ್ಕಿಂತಲೂ ಅಧಿಕ ವರ್ಷಗಳ ಇತಿಹಾಸವಿದೆ. ಪ್ರತಿ ಶತಮಾನದ,

ಪ್ರತಿ ದಶಕದ ಕುತೂಹಲಕಾರಕ ಹಳೆಯುಳಿಕೆಗಳಿವೆ. ರೋಮು ನೋಡುವ ಯಾತ್ರಿಕನಿಗೆ ಜಗತ್ತಿನ ಇತಿಹಾಸದ ಪರಿಚಯವಿರಬೇಕು. ಆಗ ಇಲ್ಲಿಯ ಪ್ರತಿ ಕಟ್ಟಡವೂ ಅನೇಕ ರೋಮಾಂಚಕಾರಿ ಯುದ್ಧಗಳ ಸಂಸ್ಕೃತಿಯ ಶಿಖರಗಳ, ಸಂಹಾರಗಳ, ದೇವತಾ ಆರಾಧನೆಗಳ, ವಿಲಾಸ ವೈಭವಗಳ, ಕ್ರೂರತೆ–ಕಾಮತೆ–ಸಂಸ್ಕೃತಿಯ ಪಶುತ್ವಗಳ, ದೇವತ್ವ–ಮಾನವತ್ವ–ರಾಕ್ಷಸತ್ವಗಳ ಕಥೆ ಹೇಳುತ್ತವೆ.

### ಪ್ಲಾಝಾ ವೆನಿಝಿಆ

ರೋಮು ಯಾತ್ರಿಕನಿಗೆ ಮೊದಲು ಬರಮಾಡಿಕೊಳ್ಳುವ ಮಹಾ ಕೂಟ ಸೌಧ ಪ್ಲಾಝಾ ವೆನಿಝಿಆ (Plazza Venezia). ಇಲ್ಲಿಂದಲೇ ರೋಮು ದರ್ಶನ ಆರಂಭ. ಇದು ೧೪೫೫ ರಲ್ಲಿ ಕಾರ್ಡಿನಲ್ ಪಿಟ್ರೊ ಬಾರ್‌ಬೋ (Cardinal Pietro Borbo) ನಿಂದ ನಿರ್ಮಿತವಾದ ಬೃಹತ್ ಸೌಧ. ರಿನೈ ಝಾನ್ಸ ವಾಸ್ತುಶಿಲ್ಪಕ್ಕೆ (Renaissance Architecture) ಇದೊಂದು ಉತ್ಕೃಷ್ಟ ಮಾದರಿ.

ಪ್ಲಾಝಾ ವೆನಿಝಿಆ ಚೌಕದಲ್ಲಿ ನಿಂತರೆ ನಮಗೆ ಕಾಣುವ ಗಗನ ಚುಂಬಿ ಮಹಾ ಸೌಧ "ವಿಕ್ಟೋರ್ ಎಮ್ಯಾನ್ಯುಎಲ್" (Monument to Victor Emmanuel II) ಇದನ್ನು ಇಟಲಿ ದೇಶದ ೫೦ ನೆಯ ವಾರ್ಷಿಕೋತ್ಸವದ ಸವಿನೆನಹಿನಲ್ಲಿ ನಿರ್ಮಿಸಲಾಯಿತಂತೆ ಆಕಾಶದೆತ್ತರದ ಇಪ್ಪತ್ತು ಗೋಲಾಕೃತಿಯ ಕಂಬಗಳ ಮೇಲೆ ನಿಂತ ಈ ಬೃಹತ್ ಸೌಧ ಯಾತ್ರಿಕನ ಕಲ್ಪನಾಲೋಕವನ್ನು ಕೆರಳಿಸುತ್ತದೆ. ಇದು ರೋಮುನಗರದ ಕೇಂದ್ರಸ್ಥಾನ. ಇದರ ತಲಕ್ಷೇತ್ರವೇ ಸುಮಾರು ನಾಲ್ಕಂತಸ್ತಿನ ಎತ್ತರದ ಕಟ್ಟಡವಾಗಿದೆ. ಆದರ ಮೇಲೆ ಕಂಬಗಳು ಅದರ ಮೇಲೆ ಮಂಟಪ. ಈ ಸೌಧದ ತುಟ್ಟತುದಿಯ ಎಡ–ಬಲಗಳಲ್ಲಿ ನಾಲ್ಕು ನಾಲ್ಕು ಕುದುರೆಗಳನ್ನು ಹೂಡಿದ ರಥಗಳು ರೋಮು ನಗರದ ಯಾವ ಭಾಗದಲ್ಲಿ ನಿಂತರೂ ಆಕಾಶದಿಂದ ಭೂಮಿಗೆ ಇಳಿಯುತ್ತಿದ್ದಂತೆ ಸುಂದರವಾಗಿ ಕಾಣುತ್ತವೆ. ಈ ಸೌಧದ ಮುಂದಿನ ಅರ್ಧವರ್ತುಲದಲ್ಲಿ ಎತ್ತರದ ಶಿಲಾಮೂರ್ತಿಗಳು ಪೌರಾಣಿಕ ಚರಿತ್ರೆಯನ್ನು ಸಾರುತ್ತವೆ.

### ಕೆಪಿಟಾಲಿನ್ ಮ್ಯುಜಿಯಂ (Capitoline Museum)

ರೋಮು ನಗರಕ್ಕೆ ಬಂದವರು ಕೆಪಿಟಾಲಿನ್ ಮ್ಯುಜಿಯಂ (The Capitoline Museum) ನೋಡಲು ಮರೆಯುವಂತಿಲ್ಲ. ಇದು ರೋಮುದ ಏಳು ಗುಡ್ಡಗಳಲ್ಲಿ ಒಂದಾದ "ದಿ ಕೆಪಿಟೋಲ್" ಎಂಬ ಪವಿತ್ರ ಗುಡ್ಡದ ದರ್ಶನೀಯ ಕ್ಷೇತ್ರದಲ್ಲಿದೆ. ಇದರ ಕ್ಷೇತ್ರಜ್ಞ, ಶಿಲ್ಪಜ್ಞನಾಗಿ ಕಾರ್ಯ ಮಾಡಿದ ಮಹಾ ಶಿಲ್ಪಿ ಮೈಕಲ್ ಎಂಜಿಲೊ (Michelangelo), ಈತ ೧೫೪೬ ರಿಂದ ೧೫೫೦ರ ಮಧ್ಯದಲ್ಲಿ ಇಲ್ಲಿಯ ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪಗಳ ರಚನಾಕಾರ್ಯವನ್ನು ಮಾಡಿದ್ದಾನೆ. ಇವನು ಕೈ ಆಡಿಸಿದ ಈ ಶಿಲ್ಪಶ್ರೀಯಲ್ಲಿ ದೃಷ್ಟಿತೂರುವವೇ ನಮಗೆ ಸಂತಸವೆನಿಸಿತು. ಈ ದಿಬ್ಬದಲ್ಲಿರುವ

“ಕೆಪಿಟಾಲಿನ್ ಮ್ಯುಜಿಯಂ” ನಮ್ಮನ್ನು ಆಕರ್ಷಿಸಿತು. ಇಲ್ಲಿರುವ ರೋಮನ್ ಸಂಕೇತ “ಹೆಣ್ಣುತೋಳ” (She-wolf) ನೋಡುವಂತಿದೆ. ಅದರ ಮೊಲೆ ಹಾಲು ಕುಡಿಯುತ್ತಿರುವ ಎರಡು ಬೆತ್ತಲೆ ಹುಡುಗರ ವಯ್ಯಾರ ಹೇಳತೀರದಷ್ಟು. ಮಾರ್ಕಸ್ ಅರೇಲಿಯಸ್ (Marcus Aurelius) ನ ಕುದುರೆ ಸವಾರಿ ದೃಶ್ಯ ವೀರ–ವೈಭವಗಳ ಸಮ್ಮೀಲನವೆನ್ನಬಹುದು. ಈ ಮ್ಯುಜಿಯಮ್ಮಿನ ಓರಾರ್‍ಖ ಮತ್ತು ಕ್ಯೂರಾರ್‍ಖ ಎಂಬ ಕೋಣೆಯಲ್ಲಿರುವ ಯುದ್ಧದ ತೈಲ ಚಿತ್ರಗಳು ಎಂಥ ಕಲ್ಲೆದೆಯವನಿಗೂ ಬೆವರು ತರಿಸುತ್ತವೆ. ಯೋಧರ ಯುದ್ಧ, ಮರಣ, ಸಂಬಂಧಿತ ಸ್ತ್ರೀಯರು ಅಳುತ್ತಿರುವದು, ಆ ಸ್ತ್ರೀಯರನ್ನು ಕಂಡು ಅವರ ಗಂಡಂದಿರನ್ನು ಕೊಂದ ವೈರಿಗಳು ಗೇಲಿಮಾಡಿ ನಗುತ್ತಿರುವದು, ಪ್ರೀಯರ ಮೃತ್ಯು ಶರೀರ ಅಪ್ಪಿ ಪ್ರಲಾಪಿಸುವ ಸ್ತ್ರೀಯರು; ಈ ದೃಶ್ಯಗಳು ನೋಡುಗನ ನರನಾಡಿ ಎಳೆದು ಸ್ತಂಭೀಭೂತಗೊಳಿಸುತ್ತವೆ. ಇವುಗಳಲ್ಲಿ ವೀರ–ವೈರ–ಕಾಮು–ರಾಕ್ಷಸೀ ಪ್ರವೃತ್ತಿಗಳ ಸಂಗಮ ಕಾಣಬಹುದು. ಪರ್ಸಿಯನ್ ತರುಣಿಯ ಹಾಗೂ ಇನ್ನೊಬ್ಬ ಸಾತ್ವಿಕ ಸುಂದರಿಯ ತೈಲಚಿತ್ರಗಳು ಅಪೂರ್ವವಾಗಿವೆ. ಕುರುಬ ಮ್ಯಾಟೀಶನ (Shepherd Matius) ಬಂಗಾರ ವರ್ಣದ ಬತ್ತಲೆ ಮೂರ್ತಿ, ಸೇಂಟ ಜಾನ್ ಬ್ಯಾಪ್ಟಿಸ್ಟನ ಬತ್ತಲೆಯ ವಿಗ್ರಹ ಕಲಾವಂತಿಕೆಯಿಂದ ಕೂಡಿವೆ.

### ರೋಮನ್ ವರ್ತುಲ ಸೌಧ (Colosseum)

ವರ್ತುಲ ಸೌಧ (Colosseum) ಎಂದರೇನು? ಇದು ಗ್ರೀಕರ ಅರ್ಧವರ್ತುಲ ಸೌಧವನ್ನು (Amphitheatre) ಪೂರ್ಣಗೊಳಿಸಿದ ರೋಮನ್ ವಾಸ್ತುಶಿಲ್ಪದ ವಿನೋದದ ಕೇಳಿಯ ವಿಹಾರ ಮಂದಿರ. ಇದರ ವರ್ತುಲಾಕೃತಿಯ ನಾಲ್ಕಂತಸ್ತಿನ ಒಳ ಸುತ್ತಿನಲ್ಲಿ ಸುಮಾರು ೫೦ ಸಾವಿರ ಪ್ರೇಕ್ಷಕರು ಅನಾಯಾಸವಾಗಿ ಕುಳಿತು; ತಮ್ಮ ಎದುರಿನ ದೃಶ್ಯಗಳನ್ನು ವೀಕ್ಷಿಸಬಹುದು. ಕ್ರಿ.ಶ. ೭೦ರ ಈ ಕಟ್ಟಡಕ್ಕೆ ೯೦೦ ವರ್ಷಗಳ ಪುರಾತನತೆ ಉಂಟು. ಈಗಲೂ ಇದು ಹಳೆಯದಾದರೂ ಕೆಚ್ಚುಮಾಸಿಲ್ಲ. ಅರ್ಧಭಾಗ ಮಾತ್ರ ಉರುಳಿ ಬಿದ್ದಿದೆ. ಇಲ್ಲಿ ರೋಮನ್ನರು ತಮಗೆ ಯುದ್ಧದಲ್ಲಿ ಸೆರೆ ಸಿಕ್ಕ ಸೆರೆಯಾಳು ಸೈನಿಕರನ್ನು, ಅವರವರಲ್ಲೇ ಯುದ್ಧಕ್ಕೆ ಹಚ್ಚಿಸಿ, ಅವರು ಕರಾಳ ಆಯುಧಗಳಿಂದ ಹೋರಾಡಿ ಸಾಯುವದನ್ನು ನೋಡಿ ಆನಂದಿಸುತ್ತಿದ್ದರು. ಅಲ್ಲದೇ ಸೆರೆಸಿಕ್ಕ ವೈರಿಗಳನ್ನು ಈ ಥೇಟರಿನ ಕೆಳವರ್ತುಲದಲ್ಲಿ ಹುಲಿ ಸಿಂಹಗಳೊಂದಿಗೆ ಹೋರಾಡಲು ನಿಲ್ಲಿಸಿ; ಅವರು ತಮ್ಮ ಕಣ್ಣೆದುರಿಗೇ ಆ ಹಿಂಸ್ರ ಪಶುಗಳಿಗೆ ತುತ್ತಾಗುವದನ್ನು ಕಂಡು ಮನದಣಿಯೇ ಆನಂದಿಸುತ್ತಿದ್ದರು. ಇಲ್ಲಿಯೇ ಅನೇಕ ಕ್ರೈಸ್ತರನ್ನು ಕ್ರೂರ ಹಿಂಸೆಯಿಂದ ಕೊಲ್ಲಿಸಲಾಯಿತು. ಇವರನ್ನು ಕೊಲ್ಲುವದನ್ನು ನೋಡಿ ಅಂದಿನ ರೋಮನ್ನರು ಆನಂದಿಸುತ್ತಿದ್ದರಂತೆ! ಹೀಗೆ ಇದು ಪುರಾತನ ರೋಮನ್ನರ ಸಂಸ್ಕೃತಿಯನ್ನು ಆಧುನಿಕ ವಿಶ್ವಕ್ಕೆ ಸಾರುವ ಅದ್ಭುತ ವಾಸ್ತುಶಿಲ್ಪ ನಿರ್ಮಿತಿ!

**ಸೇಂಟ ಪೀಟರ್ ಚರ್ಚ್**

ರೋಮದ ಆಧುನಿಕ ಬೃಹನ್ಮಂದಿರಗಳನ್ನು ದಾಟಿಯಾದ ಮೇಲೆ; ನಮ್ಮ ಗಮನಕ್ಕೆ ವಿಶೇಷ ಪಾತ್ರವಾದದು ಸೇಂಟ ಪೀಟರ ಚರ್ಚ (Church of San. Pietro in Vincoli). ನಾವು ಇದನ್ನು ಮೆಚ್ಚಲು ಕಾರಣ ಮೈಕಲ್ ಎಂಜಿಲೋನ ಕಲೆ ಇಲ್ಲಿ ಸಾರ್ಥಕತೆ ಪಡೆದುದರಿಂದ ಇಲ್ಲಿರುವ ಪೋಪ ಜ್ಯೂಲಿಯಸನ ಗೋಪುರ (Tomb of Pope Julius II) ಮೈಕಲ್‌ನ ಅಸಾಧಾರಣ ಒಳಗೋಪುರಾಕೃತಿಯ ಕಲಾಜಾಣ್ಮೆ. ಇದರ ಒಳಗುಮ್ಮಟದಲ್ಲಿ ಆತನ ಅಸಾಧಾರಣ ವರ್ಣರಂಜಿತ ಚಿತ್ರಗಳು ಇಂದಿಗೂ ಜೀವಂತವಾಗಿವೆ. ಇಲ್ಲಿ ಸೇಂಟ ಪೀಟರನ ಆಸನ ಹಾಗೂ ಅವನಿಗೆ ತೊಡಿಸಿದ ಕಬ್ಬಿಣದ ಬೇಡಿಗಳು ಇಂದಿಗೂ ಇವೆ. ಇಲ್ಲಿ ಮೈಕಲ್ ಎಂಜಿಲೋನು ಅಮೃತ ಶಿಲೆಯಲ್ಲಿ ನಿರ್ಮಿಸಿದ ಸೇಂಟಪೀಟರ ವಿಗ್ರಹವನ್ನು ಬಣ್ಣಿಸಲು ಅಕ್ಷರಗಳು ಸಾಲವು. ಆತನ ಹುರಿಕಟ್ಟಾದ ಮೈ, ನೀಳಕೇಶ, ಗಡ್ಡಮೀಸೆ, ಆಳಕಣ್ಣು, ಆಲೋಚನಾಯುಕ್ತ ಮುಖಭಾವ ಕಲಾಕಾರನ ಅಮರ ದರ್ಶನ ನೀಡುತ್ತವೆ. ರೋಮದ ಇನ್ನುಳಿದ ಚರ್ಚ ಹಾಗೂ ದೇವಾಲಯಗಳಲ್ಲಿ ಕೂಡ (ಉದಾ: Church of St. Prassede, Basilica of St. Maria Maggiore, Basilica of St. John, Church of Trinita Dei Monti, Castle Sant'angelo ಮುಂತಾದವುಗಳು) ಒಳ ಭಿತ್ತಿಚಿತ್ರಗಳ ಸಂಯೋಜನೆ ರೋಮನ್ ಕಲಾಕೃತಿಗೆ ವೀಳ್ಯವೆತ್ತಿನಿಂತಿವೆ. ಮಾರ್ಗದಲ್ಲಿರುವ ಬೋರ್‌ಗೇಸ್ ಗ್ಯಾಲರಿಯಲ್ಲಿ (The Borghese Gallery) ರೋಮನ್ ಅರಮನೆಯ ವೈಭವದ ವಸ್ತು ಸಂಗ್ರಹಾಲಯುವನ್ನು ಕಾಣಬಹುದು. ಇದರಲ್ಲಿಯ ಗ್ಯಾಲರಿ ಆಫ್ ಎಂಪರರ್ಸ್ ಅಂದಿನ ವಿಚಿತ್ರ ಶೃಂಗಾರ ವಿಲಾಸಗಳ ನಿದರ್ಶನ ನೀಡುತ್ತದೆ. ಇಲ್ಲಿರುವ ಪೌಲೀನ್ ಬೋರ್ಗೇಸ್ (Pauline Borghese) ಳ ಎರಡು ಸುಂದರ ಶಿಲ್ಪಗಳು ವಿಶ್ವರಮಣೀಯವೂ ಅಗಾಧ ಸಮ್ಮೋಹಕವೂ ಆಗಿವೆ. ಇಲ್ಲಿಯ ಅಪೊಲೊ ಹಾಗೂ ಅವನ ಪ್ರೇಯಸಿ, ಡೇವಿಡ್‌ರ ವಿಗ್ರಹಗಳ ನಿಲುವು ಚಲುವು ರೋಮನ್ ವಿಗ್ರಹ ಶೈಲಿಗೆ ಶ್ರೇಷ್ಠಮಾದರಿ.

ನಮ್ಮ ರೋಮ ಸಂದರ್ಶನದಲ್ಲಿ "ಮಾರ್ಕ ಬೆನ್‌ಮೆಯೂರ್" (Marc Ben-mayor) ಅವರನ್ನು ಮರೆಯುವಂತಿಲ್ಲ. ಅವರು ಮೂಲತಃ ಬೆಲ್ಜಿಯಂನವರಿದ್ದು, ರೋಮ ಅಂಬೆಸಿಯಲ್ಲಿ ಹಿರಿಯ ಅಧಿಕಾರಿಗಳಾಗಿದ್ದ ಇವರಿಗೆ ಯೋಗದ ಬಗ್ಗೆ ವಿಶೇಷ ಆಸಕ್ತಿಯೆಂದು ನಮಗೆ ಗೊತ್ತಾಯಿತು. ನಾವಿಳಿದುಕೊಂಡ ನಿವಾಸಕ್ಕೆ ಇವರು ಮೂರು ದಿನ ಸತತ ಬಂದರು. ಆದರೆ ಪೂಜಾನಿರತರಾದ ನಾವು ಅವರಿಗೆ ಪ್ರತಿಸಲವೂ ಅರ್ಧ ತಾಸು ತಡಮಾಡಿ ಇಂಟರ್‌ವ್ಯೂ ಕೊಡುತ್ತಿದ್ದೆವು. ಆದರೂ ಸಹನೆಯಿಂದ ಇವರು ನಮಗಾಗಿ ಕಾದು; ಯೋಗ ಹಾಗೂ ಧ್ಯಾನಗಳ ಬಗ್ಗೆ ಅನೇಕ ಪ್ರಶ್ನೆಗಳನ್ನು ಕೇಳಿ ನಮ್ಮಿಂದ ಉತ್ತರ ಪಡೆದುಕೊಂಡರು. ಯುರೋಪದಲ್ಲಿ ಧ್ಯಾನಯೋಗದ ೪೦ ಸೆಂಟರುಗಳನ್ನು ಸ್ಥಾಪಿಸಿದ ಒಬ್ಬ ಸನ್ಯಾಸಿಗಳನ್ನು ತಮ್ಮೊಂದಿಗೆ ಕರೆತಂದಿದ್ದರು. ಇವರಿಬ್ಬರು

ನಮಗೆ–"ಪೂಜೆಯೆಂದರೇನು?", "ಅದರ ವಿಧಾನಗಳಾವವು?", "ಆಯಾ ವಿಧಾನಗಳ ಹಿನ್ನೆಲೆಯಾಗಿ ನಿಂತ ಸಂಕೇತವೇನು?", "ಲಿಂಗ-ಭಸ್ಮ-ರುದ್ರಾಕ್ಷಿಗಳೆಂದರೇನು?", "ಅವುಗಳ ಆಚಾರ ಹಾಗೂ ತಾತ್ವಿಕ ಸ್ವರೂಪವೇನು?" ಮೊದಲಾಗಿ ನಾನಾ ಪ್ರಶ್ನೆಗಳನ್ನು ಕೇಳಿದರು. ಅವರ ಪ್ರಶ್ನೆಗಳ ಹಿಂದೆ ಅಡಗಿದ್ದ ನಿಶಿತ ವೈಜ್ಞಾನಿಕ ಜಿಜ್ಞಾಸೆಯ ಕಳಕಳಿ ಕಂಡು ನಮಗೆ ತುಂಬ ಸಂತೋಷವಾಯಿತು. ಅವರ ಎಲ್ಲ ಪ್ರಶ್ನೆಗಳಿಗೂ ಸಹನೆಯಿಂದ ಸವಿಸ್ತಾರವಾಗಿ ಉತ್ತರಿಸಿದೆವು. ಬರುವವರ್ಷ ಭಾರತಕ್ಕೆ ಹಾಗೂ ಹುಬ್ಬಳ್ಳಿಗೆ ಬರುವದಾಗಿ ಹೇಳಿದರು.

## ರೋಮನ್ ಕ್ಯಾಥೋಲಿಕ್ ಕೇಂದ್ರ "ವ್ಯಾಟಿಕನ್"

ಇದು ರೋಮನ್ ಕ್ಯಾಥೋಲಿಕ್ ಪಂಥದ ಪ್ರಧಾನ ಗುರು (Pope) ಇರುವ ಪವಿತ್ರಸ್ಥಾನ. ಅನೇಕ ಪವಿತ್ರ ನಿರ್ಮಾಣಗಳಿಂದ ಕಿಕ್ಕಿರಿದು ತುಂಬಿದ ಈ ನಿರ್ಮಿತಿಗಳಲ್ಲಿ; ಶಿನೆಯ ಪೋಪಪಾಲನ ಆಜ್ಞೆಯ ಮೇರೆಗೆ ಮೆಡೆರ್ನೊ (Maderno) ನಿರ್ಮಿಸಿದ ಸೇಂಟ ಪೀಟರ್ಸ ಬಾಸಿಲಿಕಾ (St. Peter's Basilica) ನಮ್ಮ ಮೆಚ್ಚುಗೆಗೆ ಪಾತ್ರವಾಯಿತು. ಗೋಲಾಕೃತಿಯ ವರ್ತುಲಗಂಬಗಳ ಕೂಟವನ್ನು ದಾಟಿದರೆ ಈ ಬೃಹತ್ ಸೌಧ ಮುಗಿಲನ್ನಪ್ಪಿ ನಿಂತಿದೆ. ನೂರಾರು ಮೆಟ್ಟಿಲುಗಳನ್ನು ಏರಿದ ಮೇಲೆ ಇದರ ತಲಪೀಠ ಮುಗಿಯುತ್ತದೆ. ಅದರ ಮೇಲೆ ಅಸಾಧಾರಣ ಎತ್ತರದ ಗುಮ್ಮಟ ಇದರ ಘನತೆಯನ್ನು ಸ್ವರ್ಗಕ್ಕೆ ಮುಟ್ಟಿಸಿದೆ. ಇದರಲ್ಲಿರುವ ಒಳಗುಮ್ಮಟದ ವರ್ಣಚಿತ್ರ ರಚನೆ ಮನೋಹರ. ಸೇಂಟ ಪೀಟರನ ಪೀಠ (St. Peter's Chair) ತನ್ನದೇ ಆದ ಅತಿ ಸೂಕ್ಷ್ಮ ಕಲಾಕುಸುರಿನಿಂದ, ಸುಮಾರು ಹತ್ತು ಫೂಟು ಎತ್ತರವಾಗಿ ರಾರಾಜಿಸುತ್ತದೆ. ಇಲ್ಲಿರುವ ಸೇಂಟ ಪೀಟರ್ಸ ಮರಣಾಂತಿಕ ಅಮೃತ ಶಿಲೆಯ ಆಕೃತಿ ಕರುಣಾಸ್ಫೂರ್ತಿಯನ್ನು ನೀಡುತ್ತಿದ್ದು ಮೈಕಲ್ ಎಂಜಿಲೋನ ಅಮರ ಕೊಡುಗೆಯಾಗಿದೆ. ಈ ಚರ್ಚಿನ ಒಳಗುಮ್ಮಟವು ಹೊಯ್ಸಳರ ದೇವಾಲಯದ ರಂಗದ ಮೇಲ್ಛಾವಣಿಯ ಕಲೆಯಂತೆ ಸೂಕ್ಷ್ಮವೂ ಕಲಾಪರಿಪೂರ್ಣವೂ ಪರಮೋತ್ತುಂಗವೂ ಆಗಿದೆ. ಒಳಗಿನ ಪ್ರತಿಯೊಂದು ಗೋಡೆ, ಕಂಬ, ಕಮಾನುಗಳು ಬೈಬಲ್ ಕಥೆಗಳಿಂದ ವರ್ಣರಂಜಿತವಾಗಿ ಜೀವಂತವಾಗಿ ನಿಂತಿವೆ.

ಇಲ್ಲಿಯೇ ಇರುವ ಸಿಸ್ಟಿನಾ ಚಾಪೆಲ್ (Sistna Chapel) ದಲ್ಲಿ ಇಟಲಿ ದೇಶದ ಕಲೆಯ ಅತ್ಯಂತ ಪರಿಪಕ್ವವಾದ ಮಾನವ ತೈಲಚಿತ್ರಗಳನ್ನು ಕಾಣಬಹುದು. ಬಹುತೇಕ ಇವೆಲ್ಲ ಬೈಬಲ್ ಚಿತ್ರಗಳಾಗಿವೆ. ಕೆಲವು ಕ್ರಿಶ್ಚಿನ್ ಸಂತರ ಜೀವನ ಚಿತ್ರವಾಗಿವೆ. ಇವುಗಳಲ್ಲಿ ದಿ. ಲಾಸ್ಟ ಜಜ್‌ಮೆಂಟ, ದಿ. ಡೆಲ್ಯೂಜ್, ಹೆಣ್ಣಿನ ನಿರ್ಮಾಣ (The Creation of the woman), ಪುರುಷನ ನಿರ್ಮಾಣ (The Creation of the man), ಆ್ಯಡಮ್‌ನ ಸೃಷ್ಟಿ ಈ ಚಿತ್ರಗಳು ಅಮೋಘವಾಗಿವೆ.

**ಮರಳಿ ತಾಯಿ ಭಾರತಿ....ದೇವಿ ಕನ್ನಡತಿ!**

ದಿನಾಂಕ ೨೨ರ ಮಧ್ಯಾಹ್ನ ೩ ಗಂಟೆಗೆ ರೋಮನಗರದ ಲಿಯಾನಾರ್ಡೋ ಡಾ. ವಿನ್ಸಿ (Leonarado Da Vinci) ಇಂಟರ್ ನ್ಯಾಶನಲ್ ಏರ್‌ಪೋರ್ಟದಿಂದ ನಮ್ಮ ವಿಮಾನ ಗಗನಕ್ಕೆ ಹಾರಿ, ದಿನಾಂಕ ೨೩ರ ಮಧ್ಯಾಹ್ನ ೧೧ಕ್ಕೆ ಮುಂಬೈಯ ಸಾಂತಾಕ್ರೂಜ್ ಇಂಟರ್ ನ್ಯಾಶನಲ್ ಏರ್‌ಪೋರ್ಟ ತಲುಪಿತು. ಅಲ್ಲಿ ನಮ್ಮನ್ನು ವ್ಹಿ. ಆರ್. ಹಿರೇಮಠ, ಎಮ್. ಪಿ. ಹೊಸಮನಿ ಹಾಗೂ ಬಸವರಾಜ ಮಿರ್ಜಿ ಸ್ವಾಗತಿಸಿದರು. ಅಂದು ಹೊಸಮನಿ ಅವರ ಮನೆಯಲ್ಲಿ ಪೂಜೆ ವಿಶ್ರಾಂತಿಗಳಾದವು. ಒಂದು ತಿಂಗಳಿನ ಪ್ರವಾಸದ ಶಾಂತಿ ಲಭಿಸಿತು. ಮರುದಿನ ವಿಮಾನದಿಂದ ಗೋವೆಗೆ ಬಂದು ಇಳಿದೆವು. ಕಾರಿನಿಂದ ಹುಬ್ಬಳ್ಳಿಯ ನಮ್ಮ ಶ್ರೀ ಜಗದ್ಗುರು ಮೂರುಸಾವಿರಮಠ ತಲುಪಿದಾಗ; ನಮ್ಮ ಸಾವಿರಾರು ಭಕ್ತರು ಆನಂದ ಬಾಷ್ಪಗಳನ್ನು ಕಣ್ತುಂಬಿ ಸುರಿಸುತ್ತ ಸಾಷ್ಟಾಂಗ ಹಾಕಿ ಸ್ವಾಗತಿಸಿದರು. ಅದೊಂದು ಅನಂತ ಕರುಳಬಳ್ಳಿಯ ಕಂಬನಿಯ ಕುಸುಮಗಳು ಅರಳಿದ ಆನಂದೋತ್ಸಾಹಗಳ ಮಧುರ ಸಂಗಮ. ನಾವು ಹುಬ್ಬಳ್ಳಿ ಬಿಟ್ಟು ಕೆಲವೇ ದಿನವಾದರೂ ಹಲವಾರು ದಿನವಾದಂತೆ ಅವರಿಗೂ ನಮಗೂ ಸಮಭಾವನೆ. ನಾವು ನೇರವಾಗಿ ಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ಗದ್ದುಗೆಯನ್ನು ಸಂದರ್ಶಿಸಿ; ನಮ್ಮ ಸುರಕ್ಷಿತ ಪ್ರವಾಸಕ್ಕೆ ಧನ್ಯತೆ ತುಂಬಿದ ಪ್ರಾರ್ಥನೆಯನ್ನು ಅರ್ಪಿಸಿದೆವು.

**ವಿಶ್ವಶಾಂತಿಗೆ ನಮನ....! ವಿಶ್ವಶಕ್ತಿಗೆ ನಮನ....!!**

ದ್ವಿತೀಯ ವಿಶ್ವಶಾಂತಿ ಪರಿಷತ್ತಿನ ಫಲಶೃತಿಯೇ ಇದು! ಕ್ಯೂಟೋದ ಪ್ರಥಮ ಜಾಗತಿಕ ಶಾಂತಿ ಪರಿಷತ್ತಿಗಿಂತಲೂ; ಲ್ಯೂವನ್ನಿನ ದ್ವಿತೀಯ ಜಾಗತಿಕ ಪರಿಷತ್ತಿನಲ್ಲಿ ನಾವು ಸಾಧಿಸಿದುದು ಇನ್ನೂ ಬಿತ್ತರ, ಮಹತ್ತರ. ಇಲ್ಲಿ ಅಸಂಗತ ಚರ್ಚೆಗಳಿಗೆ ಅವಕಾಶ ವಿಲ್ಲ. ಗಾಳಿಗೆ ತೂರುವ ಉಪನ್ಯಾಸಗಳಿಗೆ ಗಮನವಿಲ್ಲ. ವಿಚಾರವಂತರ ತರ್ಕಶುದ್ಧಿಯ ಕೇಂದ್ರೀಕರಣ ಕಲೆಯನ್ನು ಇಲ್ಲಿ ಸಾಧಿಸಿದೆವು. ಕ್ಯೂಟೋ ಪರಿಷತ್ತು ವೈಚಾರಿಕ ಸಿದ್ಧಿ ಯನ್ನು ಪಡೆದರೆ, ಲ್ಯೂವೆನ್ ಪರಿಷತ್ತು ಆಚಾರ ಶುದ್ಧಿಯನ್ನು ಪಡೆಯಿತು. ಜಾಗತಿಕ ಶಾಂತಿಗೆ ಅತ್ಯವಶ್ಯಕವಾಗಿರುವ, ಉರಿಯುತ್ತಿರುವ ಸಮಸ್ಯೆಗಳನ್ನು ಬೇರೆಬೇರೆ Workshops ಗಳಲ್ಲಿ ನಿಖರವಾಗಿ ಚರ್ಚಿಸಿದೆವು. ಅಲ್ಲದೆ ದಟ್ಟದಾರಿದ್ರ್ಯ, ಅನಾಗರಿಕತೆ, ಅನಾರೋಗ್ಯಗಳಿಂದ ಸಮಸ್ತ ಮಾನವತೆಯನ್ನು ಮೇಲೆತ್ತುವ ಕೋರಿಕೆಯನ್ನು ಎಲ್ಲ ರಾಷ್ಟ್ರಗಳಿಗೂ ಮಾಡಿಕೊಂಡೆವು. ಇಲ್ಲಿ ನಮ್ಮ ವಿಚಾರಗಳನ್ನು ಕಾರ್ಯರಂಗಕ್ಕೆ ತಕ್ಷಣವೇ ಇಳಿಸುವ ಕ್ರಿಯಾ ಸಮಿತಿಗಳು ನಿರ್ಧಾರಿತವಾದವು. ಮಾತಿಗಿಂತ ಕೃತಿ ಮಧುರವೆಂದು ತೋರಿತು.

ಆದ್ದರಿಂದ; ಲ್ಯೂವೆನ್ ಪರಿಷತ್ತಿನ ಫಲಶೃತಿಯೆಂದರೆ ವಿಶ್ವಶಾಂತಿಯನ್ನು ಕ್ಷಿಪ್ರ ದಲ್ಲಿಯೇ ಕಾರ್ಯರಂಗಕ್ಕೆ ಇಳಿಸುವ ಕ್ರಿಯಾ ಸಮಿತಿಗಳ ಶುದ್ಧ ಸಾಹಸವೆಂದು ಒಂದೇ ಮಾತಿನಲ್ಲಿ ವರ್ಣಿಸಬಹುದು.

# ಲ್ಯೂವೆನ್ ಘೋಷಣೆ

(ಬೆಲ್ಜಿಯಮ್ಮಿನ ಲೋವೆನ್‌ದಲ್ಲಿ ೩_೯_೧೯೭೪ರಂದು ಸೇರಿದ್ದ ದ್ವಿತೀಯ
ಜಾಗತಿಕ ಧರ್ಮ ಮತ್ತು ಶಾಂತಿ ಪರಿಷತ್ತಿನಲ್ಲಿ ಅಂಗೀಕೃತವಾದುದು.)

ಲೋವೆನ್ (ಬೆಲ್ಜಿಯಂ) ವಿಶ್ವವಿದ್ಯಾಲಯದಲ್ಲಿ ೧೯೭೪ರ ಗ್ರೀಷ್ಮದಲ್ಲಿ ಸೇರಿದ್ದ ದ್ವಿತೀಯ ಜಾಗತಿಕ ಧರ್ಮ-ಶಾಂತಿ ಪರಿಷತ್ತು ಈ ನಮ್ಮ ಸಂತ್ರಸ್ತ ಪ್ರಪಂಚದ ಸಕಲ ಧಾರ್ಮಿಕ ಸಮಾಜಗಳಿಗೆ ನೇರವಾಗಿ ಕೆಲ ಮಾತುಗಳನ್ನು ಹೇಳ ಬಯಸುತ್ತದೆ.

ನಮ್ಮ ವಿವಿಧ ಆದರಣೀಯ ಧಾರ್ಮಿಕ ಸಂಪ್ರದಾಯಗಳ ಜೀವಾಳವನ್ನು ಪರಿಚಯ ಮಾಡಿಕೊಳ್ಳುವದಕ್ಕಾಗಿ ನಾವು ಇಲ್ಲಿಗೆ ಬೌದ್ಧರನ್ನು, ಕ್ರಿಶ್ಚಿನ್ನರನ್ನು, ಶಿಂಟೋ, ಶೀಖ, ಝುರುತುಷ್ಟ್ರರನ್ನೂ ಮತ್ತಿತರರನ್ನು ಇಲ್ಲಿಗೆ ಆಮಂತ್ರಿಸಿದ್ದೇವೆ. ನಾವು ಯಾವ ಧರ್ಮದವರೇ ಇರಲಿ, ನಾವು ಸಮಗ್ರ ಮಾನವತೆಯೊಂದಿಗೆ ಒಂದಾಗಿದ್ದೇವೆ ಮತ್ತು ಆ ಮಾನವತೆಯ ಸಕಲ ಸಮಸ್ಯೆಗಳೆಲ್ಲ ನಮ್ಮವೇ ಆಗಿವೆ. ಅವುಗಳಿಗೆ ಪರಿಣಾಮಕಾರಿ ಪರಿಹಾರ ಕಂಡು ಹಿಡಿಯಲು ನಮ್ಮ ಶ್ರದ್ಧೆ ನಮ್ಮನ್ನು ಒತ್ತಾಯ ಪಡಿಸುತ್ತಿದೆ. ಮಾನವ ಜನಾಂಗವನ್ನು ಅದರ ನಿವಾಸ ಸ್ಥಾನವಾದ ಈ ಜಗತ್ತನ್ನು ಸದ್ಯ ಹೆದರಿಸುತ್ತಿರುವ ಸಂಕಟ ಪರಂಪರೆಗಳನ್ನು ನಾವು ಒಟ್ಟಾಗಿ ಎದುರಿಸುತ್ತಿದ್ದೇವೆ. ಈ ಜಗತ್ತಿನಲ್ಲಿ ಹೆಚ್ಚುತ್ತಿರುವ ಅವ್ಯವಸ್ಥೆಯ ಪರಿಣಾಮವಾಗಿ, ಮಾನವಿಯತೆಯ ವಿರುದ್ಧ ನಡೆದಿರುವ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಪರಾಧಗಳನ್ನು ಗಮನಿಸಿದ್ದೇವೆ. ಪ್ರತಿಯೊಬ್ಬ ವ್ಯಕ್ತಿಗೂ ಪ್ರತಿಯೊಂದು ಜನಾಂಗಕ್ಕೂ ಶಾಂತಿ, ನ್ಯಾಯ, ಉದಾತ್ತತೆಗಳನ್ನು ನೀಡುವದಕ್ಕಾಗಿ ನಮ್ಮ ಸಮಾಜ ಕೈಕೊಳ್ಳಬೇಕಾದ ನಿರ್ಣಯಗಳ ಬಗ್ಗೆ ಕೂಡ ಪರಿಶ್ರಮಿಸಿದ್ದೇವೆ. ನಮ್ಮ ಅಗಾಧ ಆಧ್ಯಾತ್ಮ ಸಂಪತ್ತಿಯ ಹಿನ್ನೆಲೆಯಲ್ಲಿ ನಮ್ಮಲ್ಲಿಯ ಕವಿವರ್ಯರೊಬ್ಬರು ಹೇಳಿದ ಸತ್ಯವನ್ನು ಅನುಭವಿಸಿದ್ದೇವೆ. ಅದೆಂದರೆ "ನಡೆವ ನಾ ಕಂಟಕಂಗಳಲಿ, ದೃಢವಾಗಿ ಎಂತೊ ಕುಸುಮಂಗಳಲಿ".

ಜಪಾನದಲ್ಲಿ ೧೯೭೦ ರಲ್ಲಿ ಕ್ಯೂಟೋದಲ್ಲಿ ಜರುಗಿದ ಸಂಸ್ಮರಣೀಯ ಪ್ರಥಮ ಜಾಗತಿಕ ಧರ್ಮ–ಶಾಂತಿ ಪರಿಷತ್ತಿಗೆ ನಾವು ಅತ್ಯಂತ ಋಣಿಯಾಗಿದ್ದೇವೆ. ಪ್ರಪಂಚದ ಎಲ್ಲ ಧರ್ಮಗಳಲ್ಲಿ ರಾಷ್ಟ್ರಗಳಲ್ಲಿ ಶಾಂತಿ–ನ್ಯಾಯಗಳನ್ನು ಕಾಪಾಡಿಕೊಂಡು ಬರುವದಕ್ಕಾಗಿ ಉಚ್ಚ ಆದರ್ಶಗಳನ್ನು ಕ್ಯೂಟೋದಲ್ಲಿ ಮಂಡಿಸಲಾಯಿತು ಮತ್ತು ಇಲ್ಲಿ ಲ್ಯೂವೆನ್‌ದಲ್ಲಿ ಆ ಆದರ್ಶಗಳ ಮೂಲಕ ಮುನ್ನಡೆಯಲು ಸಾಧ್ಯವಾಯಿತು. ಕ್ಯೂಟೋದಲ್ಲಿ ನಾವು ಕಲಿತ ಸಂಗತಿಗಳಲೆಲ್ಲ ಒಂದು ಮಾತ್ರ ಮನಸ್ಸಿನ ಮೇಲೆ ಅಚ್ಚೊತ್ತಿದಂತೆ ಉಳಿದಿದೆ. ಅದೆಂದರೆ ಪ್ರತಿಯೊಬ್ಬನು ತನ್ನ ಧಾರ್ಮಿಕ ಸಾಂಪ್ರದಾಯಗಳ ಬಗ್ಗ ಶ್ರದ್ಧಾಯುಕ್ತನಾಗಿ ಉಳಿದರೂ ಆತನು ಇತರ ಧರ್ಮಗಳ ಪ್ರಾರ್ಥನೆ ಶ್ರದ್ಧೆಗಳ ಬಗೆಗೆ ಕೂಡ ಆದರ ತಳೆದಿರ

ಬಲ್ಲನು ಎಂಬುದೇ ಆಗಿದೆ. ನಮ್ಮ ಸಾಂಪ್ರದಾಯಗಳು ದೃಢಪಡಿಸುವ ಪ್ರತಿಯೊಬ್ಬ ಮಾನವನ ಸುಸ್ಪಷ್ಟಪ್ರತಿಷ್ಠೆಯ ಕುರಿತೂ ನಾವೆಲ್ಲ ವಿಚಾರ ಮಾಡಿದ್ದೇವೆ.

ಇಂಥ ಪರಿಷತ್ತುಗಳ ಅಗಾಧ ಅನುಭವ ಹಾಗೂ ಅಧಿಕೃತ ಧಾರ್ಮಿಕ ಸಂಸ್ಥೆಗಳ ನಡುವೆ ನಡೆಸಿದ ವಿಪುಲ ಚರ್ಚೆಗಳ ಪರಿಣಾಮವಾಗಿ ನಮ್ಮಲ್ಲಿಯ ಅಭಿಮಾನಪೂರ್ಣ, ಪೂರ್ವಗ್ರಹದೂಷಿತ ಪ್ರತ್ಯೇಕತೆಯ ಸುದೀರ್ಘ ಕಾಲಾವಧಿಯು ಇಂದು ಇಲ್ಲದಂತಾಗಿದೆ ಎಂದು ನಾವು ನಂಬುತ್ತೇವೆ. **ಪ್ರತಿಯೊಬ್ಬನೂ ತನ್ನ ಆಧ್ಯಾತ್ಮಿಕ ಸಾಂಸ್ಕೃತಿಕ ಹಾಗೂ ಸ್ಥಳಿಕ ಸನ್ನಿವೇಶಗಳಿಗೆ ಅನುಗುಣವಾಗಿ ಇಂದಿನಿಂದ ಮಾನವ ಜನಾಂಗಕ್ಕೆ ಸೇವೆ ಸಲ್ಲಿಸಬೇಕೆಂದು ನಾವು ನಿರ್ಧರಿಸಿದ್ದೇವೆ.**

## ಯುದ್ಧ ನಿವಾರಣೆ ಅಶಕ್ಯ: ನಿಯಂತ್ರಣ ಸಾಧ್ಯ

ಶಾಂತಿ ಈಗ ಸ್ವೇಚ್ಛೆಯಂತೆ ಪುರಸ್ಕರಿಸಬಹುದಾದ ಅಥವಾ ತಿರಸ್ಕರಿಸಬಹುದಾದ ಆದರ್ಶವಾಗಿ ಉಳಿದಿಲ್ಲ. ಮಾನವನು ಇಂದು ತಾರಾಮಂಡಲವನ್ನೇ ಗೆಲ್ಲಬಲ್ಲ ಅಥವಾ ತನ್ನೊಡನೆ ಇಡೀ ಪ್ರಪಂಚವನ್ನೇ ಉಧ್ವಸ್ತಗೊಳಿಸಬಲ್ಲ ಅಪಾರ ಶಕ್ತಿ ಸಂಪಾದಿಸಿದ್ದಾನೆ. ಇಂಥ ಸಂದರ್ಭದಲ್ಲಿ ಶಾಂತಿಯು ಅತ್ಯಗತ್ಯದ ವ್ಯಾವಹಾರಿಕ ಅವಶ್ಯಕತೆ ಆಗಿದೆ. ಆದ್ದರಿಂದ ನಾವು ಯುದ್ಧ ನಿರ್ಮೂಲನಕ್ಕಾಗಿ ದುಡಿಯಲು ಪ್ರತಿಜ್ಞಾಬದ್ಧರಾಗಿದ್ದೇವೆ.

ಜಾಗತಿಕ ಅಣ್ವಸ್ತ್ರ ಯುದ್ಧವನ್ನು ಕೇವಲ ಮುಂದೂಡುವದರಿಂದ ಅಥವಾ ತಾತ್ಪೂರ್ತಿಕವಾಗಿ ತಪ್ಪಿಸುವದರಿಂದ ಮಾನವ ಜನಾಂಗಕ್ಕೆ ಯಾವ ಭವಿತವ್ಯವೂ ಇಲ್ಲ ಎಂಬುದನ್ನು ಎಲ್ಲ ವಿಶ್ವಾಸಿ ಸದ್ಗೃಹಸ್ಥರು ಅರಿತುಕೊಳ್ಳಬೇಕು ಎಂದು ನಾವು ಭಿನ್ನವಿಸಿಕೊಳ್ಳುತ್ತಿದ್ದೇವೆ. ಸದ್ಯದ ಭೀತಿಯ ವಾತಾವರಣವು ಮಹಾರಾಷ್ಟ್ರಗಳಿಗೆ ಮತ್ತು ಅವುಗಳ ಅನುಯಾಯಿಗಳಿಗೆ ಅಣ್ವಸ್ತ್ರ ಶಸ್ತ್ರಾಸ್ತ್ರ ಸ್ಪರ್ಧೆಯನ್ನು ಮುಕ್ತಾಯಗೊಳಿಸುವದಕ್ಕೆ ಕ್ರಮಕೈಕೊಳ್ಳಲು ಅಲ್ಪ ವಿರಾಮವನ್ನಿತ್ತಿದೆ. **ಅಣ್ವಸ್ತ್ರ ರಾಷ್ಟ್ರಗಳು ತಮ್ಮ ಸದ್ಯದ ಎಲ್ಲ ಅಣ್ವಸ್ತ್ರಗಳನ್ನು ನಿರ್ನಾಮ ಮಾಡುವವರೆಗೆ ಹೊಸದಾಗಿ ಅಣ್ವಸ್ತ್ರಗಳನ್ನು ಉತ್ಪಾದಿಸುವದನ್ನು ನಿಲ್ಲಿಸಬೇಕು ಮತ್ತು ಎಲ್ಲ ಅಣ್ವಸ್ತ್ರ ಸಂಗ್ರಹ ತಡೆಹಿಡಿಯಬೇಕು ಎಂದು ನಾವು ಆ ರಾಷ್ಟ್ರಗಳ ಸರಕಾರಗಳಿಗೆ ಆಗ್ರಹಪೂರ್ವಕ ಕೇಳಿ ಕೊಳ್ಳುತ್ತೇವೆ. ಈಗ ಅಣ್ವಸ್ತ್ರ ಕಾರ್ಯಕ್ರಮಗಳನ್ನು ಪ್ರಾರಂಭಿಸಲು ಸಮರ್ಥವಿರುವ ರಾಷ್ಟ್ರಗಳಿಗೂ ಆದನ್ನು ಪ್ರಾರಂಭಿಸದಂತೆ ಧಾರ್ಮಿಕ ಸಂಸ್ಥೆಗಳು ಒತ್ತಾಯ ತರಬೇಕೆಂದೂ ಕೇಳಿಕೊಳ್ಳುತ್ತೇವೆ.**

ಕ್ಯೂಟೋ ಪರಿಷತ್ತಿನ ನಂತರದ ಈ ನಾಲ್ಕು ವರ್ಷಗಳಲ್ಲಿ, ಮರ್ಯಾದಿತ ಸ್ಥಾನಿಕ ಅಥವಾ ಯಾದವೀ ಯುದ್ಧಗಳನ್ನೂ ಕೂಡ ಪ್ರತಿಬಂಧಿಸುವದಕ್ಕೆ ತಮ್ಮ ಪ್ರಭಾವ ಬೀರುವಂತೆ ಧಾರ್ಮಿಕ ಜನರನ್ನು ಹೇಗೆ ಸಂಘಟಿಸಬೇಕು ಎಂಬುದನ್ನು ನಾವು ತಿಳಿದಿಲ್ಲವೆಂಬ ಮಾತನ್ನು ನಾವು ಒಪ್ಪಿಕೊಳ್ಳುತ್ತೇವೆ. ಬಂಗ್ಲಾದೇಶ, ಮಧ್ಯಪೂರ್ವ, ಉತ್ತರ

ಐರ್ಲಂಡ್, ದಕ್ಷಿಣ ಫಿಲಿಪಾಯಿನ್ಸ್, ದಕ್ಷಿಣ ಆಫ್ರಿಕಾ, ಸೈಪ್ರಸ್, ಇಂಡೋಚೀನಾಗಳಲ್ಲಿ ಘರ್ಷಣೆಗಳು ನಡೆದೇ ಇವೆ. ರಾಜಕಾರಣಿಗಳೂ ಧಾರ್ಮಿಕ ಪ್ರತಿನಿಧಿಗಳೂ ಅವುಗಳಲ್ಲಿ ತೊಡಗಿದ್ದಾರೆ.

೧೯೭೩ ಜನೆವರಿಯಲ್ಲಿ ಆದ ಪ್ಯಾರಿಸ್ ಶಾಂತಿ ಒಪ್ಪಂದದ ಪರಿಣಾಮವಾಗಿ ಇಂಡೋಚೀನ ಯುದ್ಧ ಮುಕ್ತಾಯಗೊಳ್ಳಲಿಲ್ಲವೆಂದು ವಿಷಾದಿಸುತ್ತೇವೆ. ಆ ನಿರಾಶಾ ದಾಯಕ 'ಶಾಂತಿ'ಯನ್ನು ಸಾರಲಾದ ನಂತರ ಲಕ್ಷಾವಧಿ ಇಂಡೋ-ಚೀನೀಯರು ಹತರಾದರು. 'ನಿಮ್ಮ ಬಂಧುವಿಗೆ ಗುಂಡಿಕ್ಕ ಬೇಡಿ' ಎಂದು ವ್ಹಿಟನಾಮು ಬೌದ್ಧ ಘೋಷಣೆ ನಮಗೆ ಅರ್ಥವಾಗುತ್ತದೆ, ಅದನ್ನು ಗೌರವಿಸುತ್ತೇವೆ.

ಯುದ್ಧಗಳು ನಡೆದಿರುವಲ್ಲೆಲ್ಲ, ಅಲ್ಲಿಯ ಜನತೆ ಅನುಭವಿಸುತ್ತಿರುವ ಸಾವು ನೋವು ಗಳ ಬಗೆಗೆ ನಮ್ಮ ಅನುತಾಪ ವ್ಯಕ್ತಪಡಿಸುತ್ತೇವೆ. ಅಲ್ಲದೆ ಅಲ್ಲಿಯ ಸರಕಾರಗಳು ಮಾತುಕತೆ ಮಧ್ಯಸ್ಥಿಕೆ ಮುಂತಾದ ಇತರ ಮಾರ್ಗಗಳಿಂದ ಪರಿಹಾರಗಳನ್ನು ಕಂಡು ಕೊಳ್ಳಬೇಕು ಎಂದು ಕೇಳಿಕೊಳ್ಳುತ್ತೇವೆ. ಮಾನವನ ಪ್ರಾಣದ ಬಗೆಗೆ ಗೌರವ ತಾಳಿ, ಆತನ ಭವಿತವ್ಯದ ಕಡೆಗೆ ದೃಷ್ಟಿಯಿಟ್ಟು ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ನೈತಿಕ ಮಾರ್ಪಾಡುಗಳನ್ನು ಯೋಗ್ಯ ಮಾರ್ಗದಿಂದ ಸಾಧಿಸಬೇಕು ಎಂದು ಸೂಚಿಸುತ್ತೇವೆ.

**ಹಿಂಸೆಯ ಉಪಯೋಗದ ವಿಚಾರದಲ್ಲಿ ವಿವೇಕ ಪೂರ್ಣ ಧಾರ್ಮಿಕ ಪ್ರತಿನಿಧಿಗಳು ಏನೇ ನಿರ್ಣಯ ಕೈಕೊಳ್ಳಲಿ, ಪ್ರಪಂಚದಲ್ಲಿ ಎಲ್ಲಡೆಯಲ್ಲಿರುವ ಧಾರ್ಮಿಕ ಮುಖಂಡರು ಮೊದಲನೆಯದಾಗಿ ಎಲ್ಲ ಸಾಮಾಜಿಕ ಹೋರಾಟ ಗಳಲ್ಲಿ ಹಿಂಸೆಯ ಪ್ರಮಾಣ ಕುಗ್ಗಿಸಲು ಹೋರಾಡಬೇಕು ಮತ್ತು ಶಾಂತಿ ಯುತ ಪರಿಹಾರಗಳನ್ನೇ ಕಂಡುಕೊಳ್ಳುವ ಉದ್ದೇಶದಿಂದ ಹಿಂಸೆಯನ್ನು ಅತಿಯಾಗಿ ನಿರ್ಮೂಲನಗೊಳಿಸಬೇಕು ಎಂದು ನಾವು ಅವರನ್ನು ಆಗ್ರಹಪೂರ್ವಕ ಬಿನ್ನವಿಸಿಕೊಳ್ಳುತ್ತೇವೆ. ಹಿಂಸೆಯ ಕಾರಣವನ್ನು ಕಂಡು ಹಿಡಿಯದೆ, ಅದರ ನಿರ್ಮೂಲನಕ್ಕಾಗಿ ಪ್ರಯತ್ನಿಸದೆ ಹಿಂಸೆಯನ್ನು ಹಿಂಸೆಯಿಂದಲೇ ಪ್ರಯತ್ನಿಸು ತ್ತಿದ್ದರೆ ಅದಕ್ಕೆ ಕೊನೆಯೆ ಇಲ್ಲದಂತಾಗಿ ಉಲ್ಬಣಾವಸ್ಥೆಗೇರುವದು.**

ಎಲ್ಲ ವಿಧದ ಹತ್ಯೆಯನ್ನು, ಎಲ್ಲ ಯುದ್ಧಗಳನ್ನು ಆಕ್ಷೇಪಿಸುವ ವಿವೇಕಿಗಳು ಇತ್ತೀಚೆಗೆ ನಮ್ಮ ಅನೇಕ ಧರ್ಮಗಳಲ್ಲಿ ಹೆಚ್ಚು ಹೆಚ್ಚಾಗಿ ಕಂಡು ಬರುತ್ತಿದ್ದಾರೆ. ಇಂಥವರ ಅಸ್ತಿತ್ವವೆಂದರೆ ಮಾನವ ಜನಾಂಗವು ಯುದ್ಧವನ್ನು ಅಂತಿಮವಾಗಿ ನಿರ್ಮೂಲನ ಮಾಡಲೇಬೇಕು. ಇಲ್ಲದಿದ್ದರೆ ಯುದ್ಧವು ಮಾನವ ಜನಾಂಗವನ್ನು ನಿರ್ಮೂಲನಗೊಳಿಸು ತ್ತದೆ ಎಂಬ ಮಾತಿಗೆ ಸಾಕ್ಷಿ ಎಂದು ನಮ್ಮ ಎಲ್ಲ ಅಧಿಕೃತ ಧಾರ್ಮಿಕ ಸಂಸ್ಥೆಗಳು ಪರಿಗಣಿಸ ಬೇಕೆಂದು ನಾವು ವಿನಂತಿಸಿಕೊಳ್ಳಬೇಕು. ಈ ವಿವೇಕಿ ಆಕ್ಷೇಪಣಕಾರರ ಹಕ್ಕುಗಳನ್ನು ಮನ್ನಿಸುವಂತೆ ಸರಕಾರಕ್ಕೆ ಧರ್ಮವು ಪ್ರತಿಪಾದಿಸಬೇಕು.

**ವಿಮುಕ್ತಿ + ಅಭಿವೃದ್ಧಿ = ಶಾಂತಿ**

ಸಕಲ ಧರ್ಮಗಳಿಗೆ ಶಾಂತಿಯು ಅತ್ಯಮೂಲ್ಯವಾದುದು. ಸಕಲ ಆಚಾರ್ಯರೂ ಮಹಾನುಭಾವರೂ ಹೇಳುವಂತೆ ಶಾಂತಿಯು ಘರ್ಷಣೆಯ ಅಭಾವಕ್ಕಿಂತ ಅಮೂಲ್ಯ ವಾಗಿದ್ದು ಸಾಮಾಜಿಕ, ವೈಯಕ್ತಿಕ ಅವಸ್ಥೆಯಾಗಿರುವದು. ನಮ್ಮ ದ್ರಷ್ಟಾರರು ಕಂಡ ಜಗತ್ತು ಸುದೃಢವಾಗಿ, ಸಮಗ್ರವಾಗಿ, ನ್ಯಾಯಮಯವಾಗಿ ವಿಶ್ವಾತ್ಮಕವಾಗಿ ಇರುವದ ರಿಂದಲೇ ಅದು ಯುದ್ಧವಿರಹಿ ಜಗತ್ತು ಆಗಿದೆ. ಕಠೋರವಾದ ಆಧ್ಯಾತ್ಮಿಕ ಶಿಸ್ತಿನಿಂದ ತಮ್ಮ ಚಿತ್ತಕ್ಕೆ, ತಮ್ಮ ಕುಟುಂಬಕ್ಕೆ ತಮ್ಮ ನಗರಗಳಿಗೆ, ತಮ್ಮ ದೇಶಗಳಿಗೆ ಶಾಂತಿ ಲಭಿಸು ವದರಿಂದ, ತಮ್ಮ ರಾಷ್ಟ್ರಗಳಲ್ಲಿ ಶಾಂತಿ ನೆಲಸಬೇಕೆನ್ನುವವರು ಇಂಥ ಕಠೋರ ಆಧ್ಯಾತ್ಮಿಕ ಶಿಸ್ತುಪಾಲನೆಯಿಂದಲೇ ತಮ್ಮ ಪ್ರಯತ್ನಗಳನ್ನು ಆರಂಭಿಸಬೇಕು. ಆತ್ಮ ನಿಗ್ರಹ ಕಲಿಯದೆ, ಉತ್ಸಾಹ ಶಕ್ತಿಯನ್ನು ವಿಧಾಯಕ ಮಾರ್ಗಗಳಲ್ಲಿ ಹರಿಬಿಡದೆ, ದಾಸ್ಯನನ್ನು ಎಂಥ ಸ್ವರೂಪದಲ್ಲಿಯೂ ಅಂಗೀಕರಿಸದೆ ತಮ್ಮ ದೇಶಬಾಂಧವರ ಆದರಂತೆ ತಮ್ಮ ವಿಶ್ವನಾಥನ ಸೇವೆಗೆ ಸ್ತ್ರಿ–ಪುರುಷರೆಲ್ಲರೂ ತಮ್ಮನ್ನು ನೀಡಿಕೊಳ್ಳದಿದ್ದರೆ ಇಂಥ ಶಾಂತಿ ಲಭ್ಯವಾಗ ಲಾರದು.

ಮಾನವ ಸ್ವಾತಂತ್ರ್ಯ, ಆರ್ಥಿಕ ಬೆಳವಣಿಗೆ, ವಿಶ್ವಶಾಂತಿ ಇವು ತ್ರಿವಿಧ ಚೈತನ ಶಕ್ತಿಗಳೆಂಬುದನ್ನು ಕಂಡಿದ್ದೇವೆ. ತಮ್ಮ ಸ್ವಾತಂತ್ರ್ಯ ಸಂಪಾದಿಸುವ ಜನರು ಇತರರಿಗೆ ಸ್ವತಂತ್ರರಾಗಲು ನೆರವಾಗುವದಕ್ಕೆ ಸಮರ್ಥರಾಗುತ್ತಾರೆ. ನಿಜವಾಗಿಯೂ ಸ್ವತಂತ್ರ್ಯ ಜನಾಂಗವು, ತಮ್ಮ ನೆರೆಹೊರೆಯವರಲ್ಲಿ, ಶೋಷಕ ಪ್ರಭು ಎಂದೆನಿಸದೆ ಸಹಕಾರ ಪೂರ್ಣ ರಚನಾತ್ಮಕ ಸಮಾಜವೆನಿಸುತ್ತದೆ. ಇಂಥ ಮೂಲಭೂತ ಸ್ವಾತಂತ್ರ್ಯದತ್ತ, ಇಂಥ ನಿಜವಾದ ಆತ್ಮಾಭಿವೃದ್ಧಿಯತ್ತ, ಇಂಥ ಸಮರಸ ಶಾಂತಿಯುತ ಜಾಗತಿಕ ವ್ಯವಸ್ಥೆಯತ್ತ ಇಂದು ಪ್ರಪಂಚದ ಮಾನವರೆಲ್ಲ ಸಾಗಬೇಕಾಗಿದೆ. ದಬ್ಬಾಳಿಕೆಯ ವ್ಯವಸ್ಥೆಗಳು, ಅಧಿಕಾರಾರೂಢ ಗುಂಪುಗಳು, ರಾಷ್ಟ್ರಾತೀತ ಆರ್ಥಿಕ ಉದ್ದಿಮೆಗಳು–ಖಾಸಗಿ, ಸರಕಾರಿ ಯಾವದೇ ಇದ್ದರೂ–ಜನಸಾಮಾನ್ಯರಿಗೆ ತಮ್ಮ ಭವಿಷ್ಯರೂಪಿಸಿಕೊಳ್ಳುವಲ್ಲಿ ಆತಂಕಕಾರಿ ಆಗುತ್ತವೆ. **ಆದ್ದರಿಂದ ಪ್ರತಿಯೊಬ್ಬರೂ ತಮ್ಮ ಹಾಗೂ ತಮ್ಮ ನೆರೆಹೊರೆಯುವರ ಸಮಗ್ರ ಸ್ವಾತಂತ್ರ್ಯ ಅಭಿವೃದ್ಧಿಗಳನ್ನು ಪಡೆದುಕೊಳ್ಳುವಂತೆ ಪ್ರತಿಯೊಂದು ಧರ್ಮವು ತನ್ನ ಅನುಯಾಯಿಗಳನ್ನು ಎಚ್ಚರಿಸುವಂತೆ ನಾವು ಪ್ರೋತ್ಸಾಹಿಸುತ್ತೇವೆ.** ಸಮೃದ್ಧ ರಾಷ್ಟ್ರಗಳು ತಮ್ಮ ಸರಕಾರದಿಂದ ಅಥವಾ ಆರ್ಥಿಕ, ಸಾಂಸ್ಕೃತಿಕ ಸಂಸ್ಥೆಗಳಿಂದ ಆಫ್ರಿಕಾ, ಏಶಿಯಾ ಮತ್ತು ಲ್ಯಾಟಿನ್ ಅಮೇರಿಕೆಗಳ ಜನತೆಯ ಶೋಷಣೆಯನ್ನು ಪ್ರಭುತ್ವ ನಡೆಸುವದನ್ನು ನಿಲ್ಲಿಸುವಂತೆ ಆ ರಾಷ್ಟ್ರಗಳಲ್ಲಿಯ ಧಾರ್ಮಿಕ ಸಂಸ್ಥೆಗಳು ಧೈರ್ಯದಿಂದ ಕಾರ್ಯಪ್ರವರ್ತವಾಗಬೇಕೆಂದು ನಾವು ವಿಶೇಷ ಆಗ್ರಹಪೂರ್ವಕವಾಗಿ ಕೇಳಿಕೊಳ್ಳುತ್ತೇವೆ. **ಸಮೃದ್ಧ ರಾಷ್ಟ್ರಗಳು ಅಭಿವೃದ್ಧಿಪರ ರಾಷ್ಟ್ರಗಳ ದೌರ್ಬಲ್ಯದ ದುರ್ಲಾಭ ಪಡೆಯುವದನ್ನಾಗಲಿ, ದಕ್ಷಿಣ ಆಫ್ರಿಕೆಯಲ್ಲಿಯಂತೆ ಸಿರಿವಂತ ಬಿಳಿಯರು**

ವರ್ಣದ್ವೇಷದಿಂದ ಬಹುಸಂಖ್ಯಾಕರನ್ನು ಹತ್ತಿಕ್ಕುವದನ್ನಾಗಲಿ ಅಥವಾ ತಮ್ಮ ಅಭಿವೃದ್ಧಿ ಮಾತ್ರ ಕಾಣಲೆಂಬ ದೃಷ್ಟಿಯಿಂದ ವ್ಯಾಪಾರ, ಹಣಹೂಡಿಕೆ, ಆರ್ಥಿಕ, ತಾಂತ್ರಿಕ ಸಹಾಯ ವಿಷಯಗಳಲ್ಲಿ ಸ್ವಾರ್ಥನೀತಿ ಅನುಸರಿಸುವ ದನ್ನಾಗಲಿ ಧರ್ಮಪ್ರತಿನಿಧಿಗಳು ಖಂಡಿಸಬೇಕು ಎಂದು ಆಗ್ರಹಪಡಿಸುತ್ತೇವೆ. ವಿಶ್ವ ಸಂಸ್ಥೆಯ ಸಾಮಾನ್ಯ ಸಭೆಯು ಆರನೇ ವಿಶೇಷಾಧಿವೇಶನವು ಪ್ರತಿಪಾದಿಸಿರುವ ನವೀನ ಅಂತರ್ರಾಷ್ಟ್ರೀಯ ಆರ್ಥಿಕ ವ್ಯವಸ್ಥೆಯನ್ನು ಜಾರಿಯಲ್ಲಿ ತರಬೇಕೆಂದು ಸಕಲ ರಾಷ್ಟ್ರಗಳನ್ನು ನಾವು ವಿಶೇಷವಾಗಿ ಕೇಳಿಕೊಳ್ಳುತ್ತೇವೆ. ಜಗತ್ತಿನ ಆರ್ಥಿಕ ವ್ಯವಸ್ಥೆಯನ್ನು ಹೀಗೆ ಮೂಲಭೂತವಾಗಿ ಪುನಾರಚಿಸುವದರಿಂದಲೇ ಕಚ್ಚಾಮಾಲಿನ, ವ್ಯಾಪಾರ ಹಾಗೂ ವಿತರಣ ಸಾಧಿಸಬಹುದು.

ಪ್ರತಿ ಮಗುವಿಗೂ ಸಂಪೂರ್ಣ ಆದರಾವಕಾಶಗಳನ್ನು ನೀಡಬಲ್ಲಂಥ, ಆ ಮಗುವಿನ ಹಾಗೂ ಮುಂದಿನ ಜನಾಂಗದ ಜೀವನಕ್ಕೆ ಆವಶ್ಯಕವಾದ ವಾತಾವರಣದ ಬಗ್ಗೆ ವಿಶೇಷ ದಕ್ಷತೆ ವಹಿಸುವಂಥ ಸಾಮಾಜಿಕ, ಆರ್ಥಿಕ ಹಾಗೂ ಜನಸಂಖ್ಯಾ ವಿಷಯಕ ಧೋರಣೆ ಗಳನ್ನು ಪ್ರತಿಯೊಂದು ರಾಷ್ಟ್ರವೂ ಅನುಸರಿಸುವಂತೆ ಸಕಲ ಧರ್ಮಗಳೂ ಪರಿಶ್ರಮಿಸ ಬೇಕೆಂದು ನಾವು ಮಾನವ ಜನಾಂಗದ ಪ್ರಮಾಣಬದ್ಧ ಬೆಳವಣಿಗೆ ಧಾರ್ಮಿಕ ಹೊಣೆಗಾರಿಕೆ ಯಾಗಿದೆ ಎಂಬ ವಿಶೇಷ ಪರಿಜ್ಞಾನದಿಂದ ಕೇಳಿಕೊಳ್ಳುತ್ತಿದ್ದೇವೆ.

### ಮಾನವನ ಹಕ್ಕುಗಳು–ಧಾರ್ಮಿಕ ಸ್ವಾತಂತ್ರ್ಯ

ನಿಷ್ಪಕ್ಷಪಾತ ಕಾಯಿದೆಗಳಿಂದ ದೊರೆಯುವ ಅಮರ್ಯಾದಿತ ಅಧಿಕಾರಕ್ಕೊಳಪಟ್ಟಿ ರುವ ಸಮಾಜಗಳಲ್ಲಿಯೇ ನಮಗೆ ಇಷ್ಟವಾಗಿರುವ ಶಾಂತಿಗೆ ಉಂಟಾಗಿರುವಷ್ಟು ಗಂಡಾಂತರ ಬೇರಾವ ಸಮಾಜದಲ್ಲಿಯೂ ಅದಕ್ಕಿಲ್ಲ. ಮಾನವೀಯ ಹಕ್ಕುಬಾಧ್ಯತೆಗಳ ವಿಶ್ವ ಘೋಷಣೆಗೆ ತಿರಸ್ಕಾರವಲ್ಲದಿದ್ದರೂ ಪುರಸ್ಕಾರವೂ ಇಲ್ಲದಿರುವ ಎಡೆಗಳಲ್ಲಿಯೆ ಘರ್ಷಣೆ ಗಳನ್ನು ಪರಿಹರಿಸಿಕೊಳ್ಳದೆ ಹಿಂಸಾತ್ಮಕ ಮಾರ್ಗಗಳಿಂದ ಹತ್ತಿಕ್ಕಲಾಗುತ್ತಿದೆ. ಶಾಂತಿ ಪ್ರೇಮವು ಮಾನವನ ಮೂಲ ಹಕ್ಕು ಬಾಧ್ಯತೆಗಳ ಉಲ್ಲಂಘನೆಗೆ ಹೊಂದಿಕೊಳ್ಳಲಾರ ದೆಂದು ಹೇಳುವ ವಿಶ್ವಸಂಸ್ಥೆಯ ತಾಮ್ರಪಟವು ಉಚ್ಚ ಧಾರ್ಮಿಕ ದರ್ಶನಗಳಿಗೆ ಅನು ಗುಣವಾದದ್ದಾಗಿದೆ.

ಆದ್ದರಿಂದಲೇ, ಮಾನವನ ಆತ್ಮವನ್ನು ಉಲ್ಲಂಘಿಸದೆ, ಆತನ ದೈಹಿಕ, ಸಾಂಸ್ಕೃತಿಕ ಕಲ್ಯಾಣದ ಭರವಸೆ ನೀಡುವ ಧೋರಣೆಗಳನ್ನೇ ಸರಕಾರಗಳು ಅನುಸರಿಸುವಂತೆ ನೋಡಿ ಕೊಳ್ಳಬೇಕೆಂದು ನಾವು ಸಕಲ ಸಮಾಜಗಳ ಧರ್ಮಪ್ರತಿನಿಧಿಗಳಿಗೆ ಪ್ರಾರ್ಥಿಸಿಕೊಳ್ಳುತ್ತೇವೆ. ರಾಜಕೀಯ–ನಾಗರಿಕ ಹಕ್ಕುಗಳಿಲ್ಲದೆ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ನ್ಯಾಯಕ್ಕೂ ಎರವಾಗಿರುವ ಧಾರ್ಮಿಕ ಸಮಾಜಗಳು ತಮ್ಮ ಜನತೆಗಾಗಿ ಸ್ವಾತಂತ್ರ್ಯ ಬೇಡಿಕೆ ಮುಂದಿರಿಸಿ ದರೆ ಅವರಿಗೆ ನಾವು ನಮ್ಮ ಬೆಂಬಲ ಘೋಷಿಸುತ್ತೇವೆ. ಸಂಪೂರ್ಣ ಅಧಿಕಾರವಾಣೆ

ಯಿಂದ ತಮ್ಮ ಸಮಾಜಕ್ಕೆ ಉಪದೇಶ ನೀಡಬಯಸುವ ಧರ್ಮಗಳು,' ಸಕಲ ಭೌತಿಕ ಅಧಿಕಾರಗಳಿಂದ ಮುಕ್ತವಾಗಿ ಕೇವಲ ಸತ್ಯನಿಷ್ಠರಾಗಿರಬೇಕಾದುದು ಅತ್ಯಂತ ಅವಶ್ಯಕ. ಯಾಕೆಂದರೆ ಆ ಸತ್ಯ ಮೂಲಕವೇ ಅವು ಅಧಿಷ್ಠಾನದಲ್ಲಿ ಬಂದವಾಗಿರುತ್ತವೆ. ಆದ್ದರಿಂದ **ಮಾನವ ಜನಾಂಗದ ಸ್ವಾತಂತ್ರ್ಯಕ್ಕಾಗಿ ದುಡಿಯುವಲ್ಲಿ ತಮಗಿರುವ ಸ್ವಾತಂತ್ರ್ಯಕ್ಕೆ ಆತಂಕವಾಗಿರುವ ಬಂಧನಗಳನ್ನೆಲ್ಲ ಕಳಚಿಕೊಂಡು ಸ್ವಂತದ ಸ್ವಾತಂತ್ರ್ಯಕ್ಕಾಗಿ ಎಲ್ಲ ಧಾರ್ಮಿಕ ಸಂಸ್ಥೆಗಳೂ ಪರಿಶ್ರಮಿಸಬೇಕು ಎಂದು ಕೇಳಿ ಕೊಳ್ಳುತ್ತೇವೆ.** ಧಾರ್ಮಿಕ ಸಮಾಜಗಳು ತಮ್ಮ ಸಾಮಾಜಿಕ ಸಂಸ್ಥೆಗಳ ಸಮಗ್ರತೆಯನ್ನು ಕಾಪಾಡಿಕೊಳ್ಳುವದರ ಜೊತೆಗೇ ಸ್ವದೇಶದಲ್ಲಿಯೂ, ಪರದೇಶದಲ್ಲಿಯೂ ನ್ಯಾಯ, ಶಾಂತಿ ಹಾಗೂ ಮಾನವೀಯ ಹಕ್ಕುಬಾಧ್ಯತೆಗಳಿಗಾಗಿ ಹೆಣಗುತ್ತಿರುವವರೊಂದಿಗೆ ತ್ರಿಕರಣಪೂರ್ವಕ ಸಹಕರಿಸಬೇಕು.

ಶಾಂತಿಗಾಗಿ ಮತ್ತು ಅದರ ರಕ್ಷಣೆಗಾಗಿ ನಮ್ಮ ಯುವಜನ ಆಧ್ಯಾತ್ಮಿಕ, ನೈತಿಕ ಶಿಕ್ಷಣ ಪಡೆದಿರಬೇಕಾದುದು ಅತಿ ಮಹತ್ವದ್ದು. ಕಾರಣ ಇಂಥ ಶಿಕ್ಷಣ ನೀಡುವ ಹೊಣೆಗಾರಿಕೆ ಹೊತ್ತಿರುವ ಸಕಲರಿಗೂ ನಮ್ಮ ಧಾರ್ಮಿಕ ಸಂಸ್ಥೆಗಳು, ತಮ್ಮ ಜೀವನದಲ್ಲಿ ಉತ್ತೇಜನ ನೀಡಬೇಕು ಎಂದು ನಾವು ಕಳಕಳಿಯಿಂದ ಪ್ರಾರ್ಥಿಸುತ್ತೇವೆ.

ಮಾನವನ ಪ್ರತಿಷ್ಠೆಯನ್ನು ಸಂರಕ್ಷಿಸಿ ಉನ್ನತಿಸುವದಕ್ಕಾಗಿ ವಿಶ್ವವ್ಯಾಪಿಯಾಗಿ ನಡೆದಿರುವ ಹೋರಾಟದಲ್ಲಿ ವಿಶ್ವಸಂಸ್ಥೆಯೂ ಅದರ ಅನೇಕ ಅಂಗಸಂಸ್ಥೆಗಳೂ ದಿನನಿತ್ಯ ಕೈಕೊಳ್ಳುತ್ತಿರುವ ಕಾರ್ಯಕ್ರಮಗಳಲ್ಲಿ ಅನೇಕವುಗಳನ್ನು ನಮ್ಮ ಧಾರ್ಮಿಕ ದ್ರಷ್ಟಾರರು ಎಂದೋ ಬೋಧಿಸಿದ್ದರು. ಪ್ರಪಂಚದ ನಾನಾ ರಾಷ್ಟ್ರಗಳಿಂದ ಧರ್ಮ ಪ್ರತಿನಿಧಿಗಳು ಈ ಪರಿಷತ್ತಿನಲ್ಲಿ ಭಾಗವಹಿಸಿದ್ದಾರೆ. ಪ್ರಪಂಚದಲ್ಲಿ ವಿಶ್ವಶಾಂತಿಯನ್ನೂ, ಸಮಾನತೆಯನ್ನೂ ಕಾಪಾಡಿಕೊಳ್ಳಲು ವಿಶ್ವಸಂಸ್ಥೆ ನಡೆಸಿರುವ ಕಾರ್ಯದಲ್ಲಿ ಇವರೆಲ್ಲ ಸಹಕರಿಸಬಹುದು.

**ವಿಶ್ವಸಂಸ್ಥೆಯ ನಿರ್ಣಯಗಳನ್ನು ರಾಷ್ಟ್ರ ಜೀವನದಲ್ಲಿ ಕಾರ್ಯಕಾರಿಯಾಗಿಸುವಂಥ ಒಪ್ಪಂದ ಒಡಂಬಡಿಕೆಗಳನ್ನೇ ತಮ್ಮ ಸರಕಾರಗಳು ಮನ್ನಿಸುವಂತೆ ವಿಶ್ವದ ಸಕಲ ಧಾರ್ಮಿಕ ಸಂಸ್ಥೆಗಳು ತಮ್ಮ ಸರ್ಕಾರಗಳ ಮೇಲೆ ಒತ್ತಾಯ ತರಬೇಕು. ವಿಶ್ವಸಂಸ್ಥೆಯನ್ನು ಬಲಪಡಿಸುವದಕ್ಕೆ ತಾವು ತಮ್ಮ ಸರ್ಕಾರಗಳು ಬದ್ಧರಾಗಿರುವಂತೆ ಈ ಧಾರ್ಮಿಕ ಸಂಸ್ಥೆಗಳು ನೋಡಿಕೊಳ್ಳಬೇಕೆಂದು ನಾವು ಕೇಳಿಕೊಳ್ಳುತ್ತೇವೆ.**

### ಬಾಳಬೇಕಾದಷ್ಟು ವಿನಮ್ರ

ಅಣ್ವಸ್ತ್ರಗಳಿಂದ ಮಾನವ ಜೀವನಕ್ಕೆ ಉಂಟಾಗಿದ್ದ ಭೀತಿಯು ಇತ್ತೀಚಿನ ವಿಷಮ ವಾತಾವರಣದ ಮೂಲಕ ಇನ್ನಷ್ಟು ವಿಷಮಿಸಿದೆ. ತಕ್ಷಣ ಪ್ರಳಯದ ಭೀತಿಯ ಜೊತೆಗೆ ಧೂಷಿತ ವಾತಾವರಣ, ಸಾಂಸರ್ಗಿಕ ರೋಗ ರುಜಿನಗಳಿಂದಾಗಿ ಮಾನವ ಜೀವನ ಕ್ರಮೇಣ

ವಿನಾಶಕ್ಕೀಡಾಗಬಹುದಾದ ಅರಿವೂ ಈಗ ಸೇರಿಕೊಂಡಿದೆ. ಶಾಂತಿ ಸಮತೆಗಳಿಗಾಗಿ ನಡೆದಿರುವ ಹೋರಾಟದಲ್ಲಿ ನಿಸರ್ಗ ಮಾನವರಲ್ಲಿ ಸುಯೋಗ್ಯ ಸಂಬಂಧ ಕಲ್ಪಿಸಬೇಕಾದುದೂ ಒಂದು ಅಗತ್ಯವಾದ ಅಂಶ ಎಂಬ ಅರಿವು ಉಂಟಾಗಿರುವದು ಈ ಪರಿಷತ್ತಿನ ಕಾರ್ಯಕ್ಕೆ ಒಂದು ಹೊಸ ಆಯಾಮವನ್ನು ಒದಗಿಸಿದೆ.

ಪ್ರಪಂಚದಲ್ಲಿಯ ಸಕಲ ಚರಾಚರವಸ್ತುಗಳೂ ಪರಸ್ಪರಾವಲಂಬಿಗಳು ಎಂಬ ಧಾರ್ಮಿಕ ಭಾವನೆ ಸಾಕಷ್ಟು ಪುರಾತನವಾದುದು. ಮಾನವ–ನಿಸರ್ಗಗಳ ನಡುವೆ ಘರ್ಷಣೆ ಅಲ್ಲ, ಆತ್ಯಂತಿಕ ಸಾಮರಸ್ಯವಿರಬೇಕು ಎಂಬ ಪರಿಜ್ಞಾನ ಇತ್ತೀಚೆಗೆ ಇನ್ನಷ್ಟು ಆಗಿದೆ. **ಜೀವನ ರಹಸ್ಯಗಳನ್ನು ಭಯ ಭಕ್ತಿಗಳಿಂದ ಕಾಣಬೇಕು ಮತ್ತು ವೈಯಕ್ತಿಕ ಹಾಗೂ ಸಾಮಾಜಿಕ ಜೀವನಗಳಲ್ಲಿ ಸಮಯಕ್ಕಿರುವ ಮಹತ್ವ ಅರಿತುಕೊಳ್ಳಬೇಕು ಎಂಬ ಭಾವನೆಗಳನ್ನುಧಾರ್ಮಿಕ ಸಂಸ್ಥೆಗಳು ತಮ್ಮ ಅನುಯಾಯಿಗಳಲ್ಲಿ ಮತ್ತೆ ಜಾಗ್ರುತಗೊಳಿಸಲಿ.** ಧಾರ್ಮಿಕ ಪ್ರವೃತ್ತಿಯ ಸ್ತ್ರೀ ಪುರುಷರು, ಆದಷ್ಟು ಕಡಿಮೆ ಪರಾವಲಂಬಿಗಳಾಗಿ ಆಧ್ಯಾತ್ಮಿಕ, ಕಲಾತ್ಮಕ, ಸಾಂಸ್ಕೃತಿಕ ಚಟುವಟಿಕೆಗಳಿಂದಲೇ ಆನಂದ ಪಡೆಯುತ್ತ ನಿರಾಡಂಬರ ಜೀವನದ ಉಚ್ಚ ಆದರ್ಶವನ್ನು ಮಾನವ ಜನಾಂಗಕ್ಕೆ ನೀಡಬೇಕು.

ಸುತ್ತು ಮುತ್ತಲೂ ವಿಶ್ವವ್ಯಾಪಿಯಾಗಿರುವ ಗಂಡಾಂತರ ವಿಶ್ವದಾದ್ಯಂತ ತಾಂತ್ರಿಕ ಹಾಗೂ ಧೋರಣಾತ್ಮಕ ಬದಲಾವಣೆಗಳನ್ನು ಬಯಸುತ್ತಿದೆ. ಸಮಸ್ಯೆಗಳೂ ವೈಜ್ಞಾನಿಕ, ಆರ್ಥಿಕ, ರಾಜಕೀಯ ಮತ್ತು ನೈತಿಕ ಸ್ವರೂಪದ್ದಾಗಿವೆ. ನಾವೀಗ ನಮ್ಮ ಸುತ್ತಲಿನ ನೈಸರ್ಗಿಕ ಪರಿಸರವನ್ನಷ್ಟೇ ಅಲ್ಲದ ನಾವಾಗಿಯೇ ಸೃಷ್ಟಿಸಿಕೊಂಡಿರುವ ಕೃತ್ರಿಮ ಪರಿಸರವನ್ನೂ ಆಧ್ಯಾತ್ಮದ ಹಿನ್ನೆಲೆಯಲ್ಲಿ ಪರೀಕ್ಷಿಸಿ ನೋಡಬೇಕಾಗಿದೆ. ನಿಸರ್ಗ ನಿಯಮಗಳನ್ನು ತುಂಬ ಗೌರವಿಸುತ್ತ ಬಾಳುತ್ತಿರುವ ಧಾರ್ಮಿಕರು ವಾತಾವರಣದ ನೀತಿಗಾಗಿ ನವ ಸಾಮಾಜಿಕ ದೃಷ್ಟಿಕೋನ ಬೆಳೆಸಿಕೊಂಡು ಬರುವದಕ್ಕಾಗಿ ನಾಗರಿಕರೆಂದೂ ಕಾರ್ಯಕರ್ತರೆಂದೂ ಪರಿಶ್ರಮಿಸಬೇಕು. ನಿಸರ್ಗವನ್ನು ಸಂರಕ್ಷಿಸಿ ನಮ್ಮ ಸಾಮಾನ್ಯ ಜೀವನದ ಮಟ್ಟವನ್ನು ಎತ್ತರಿಸಬಲ್ಲ ತಂತ್ರವೊಂದನ್ನು ಇಂದಿನ ನಾಗರಿಕತೆಗಾಗಿ ಕಂಡುಹಿಡಿದು ಕಾರ್ಯಕಾರಿಯಾಗಿಸಲು ನಮ್ಮ ಧಾರ್ಮಿಕರು, ತತ್ವಜ್ಞಾನಿಗಳು, ವಿಜ್ಞಾನಿಗಳ, ಸರಕಾರಿ ಯೋಜಕರ, ಉದ್ದಿಮೆದಾರರ ಮತ್ತು ಸಾರ್ವಜನಿಕ ಅಭಿಪ್ರಾಯ ರೂಪಿಸಬಲ್ಲವರ ಸಹಕಾರದಿಂದ ಪ್ರಯತ್ನಿಸಬೇಕು. ಪ್ರಪಂಚದ ಸಮಸ್ತ ಜನತೆಗೆ ನೀಡಬೇಕೆಂದಿರುವ ಸಾಮಾಜಿಕ ನ್ಯಾಯಕ್ಕೆ ನಿಜವಾದ ಅರ್ಥ ನೀಡಬೇಕೆಂದರೆ ಪ್ರತಿಯೊಬ್ಬ ವ್ಯಕ್ತಿಯ, ಪ್ರತಿಯೊಂದು ರಾಷ್ಟ್ರದ ಉತ್ಪಾದಕರ ಸಾಮರ್ಥ್ಯವನ್ನು ಸಂಪೂರ್ಣ ಅರಿತುಕೊಳ್ಳಬೇಕು. ಅಂದರೇನೇ ಈ ಗುರಿ ಸಾಧ್ಯ. **ಮಾನವ ಜನಾಂಗವು ಈ ವಿಶ್ವವನ್ನು ಪ್ರೀತಿಸುತ್ತ, ಗೌರವಿಸುತ್ತ ಹೋದರೆ, ಮಾನವ ಕುಲಕ್ಕೆ ಅಗತ್ಯವಾದ ಆಹಾರಾದಿ ವಸ್ತುಗಳನ್ನು ಅದು**

ಸರಾಗವಾಗಿ ಒದಗಿಸುತ್ತಲೇ ಹೋಗುವದು. ಇಂಥ ಉದಾರಿಗ್ರಹ ಇನ್ನೊಂದಿಲ್ಲ. ಹೀಗೆ ದೊರೆವ ಈ ಜೀವನಾವಶ್ಯಕ ಆಹಾರಾದಿ ವಸ್ತುಗಳನ್ನೆಲ್ಲ ನ್ಯಾಯವಾಗಿ ಹಂಚಿಕೊಳ್ಳುವದಕ್ಕಾಗಿ ಮಾನವರಲ್ಲಿ ವಿಶ್ವನಾಗರಿಕತ್ವದ ಭಾವನೆಯನ್ನು, ಮಾನವೀಯ ಐಕ್ಯದ ಭಾವನೆಯನ್ನು ಧಾರ್ಮಿಕ ಸಂಸ್ಥೆಗಳು ಬಿತ್ತಬೇಕೆಂದು ಕೇಳಿಕೊಳ್ಳುತ್ತೇವೆ.

ನಾವು ಧ್ಯಾನ ಪ್ರಾರ್ಥನೆಗಳತ್ತ ಹೊರಳಿದರೆ ನಮ್ಮಲ್ಲಿ ಹೃದಯ ಪರಿವರ್ತನೆಯಾಗಿ ತ್ಯಾಗ, ನಮ್ರತೆ ಆತ್ಮ ಸಂಯಮಾದಿ ಗುಣಗಳು ಬೆಳೆದು ಬರುತ್ತವೆ; ತತ್ಪರಿಣಾಮವಾಗಿ ನ್ಯಾಯ, ಅಭಿವೃದ್ಧಿ, ವಿಮುಕ್ತಿ, ಶಾಂತಿಗಳು ಲಭ್ಯವಾಗುತ್ತವೆ. ಲೋವೆನ್ ಪರಿಷತ್ತಿನಲ್ಲಿ ನಮ್ಮನ್ನು ಆಶೀರ್ವದಿಸಿದ ಶಕ್ತಿಯೆ ಈ ಘೋಷಣೆಯನ್ನು ಚರ್ಚುಗಳಲ್ಲಿ, ಗುರುದ್ವಾರಗಳಲ್ಲಿ, ಮಸೀದೆಗಳಲ್ಲಿ, ಪಗೋಡಾಗಳಲ್ಲಿ, ದೇವಾಲಯಗಳಲ್ಲಿ ಪಡೆಯುವ ಎಲ್ಲರನ್ನೂ ಆಶೀರ್ವದಿಸಲಿ. ಅವರು ತಮ್ಮ ಜನರನ್ನು ಕುರಿತು ಬೋಧಿಸುವಾಗ ಈ ನಮ್ಮ ಸಂದೇಶ ಅಮರ ಸಂದೇಶವಾಗಲಿ. ಮಾನವ ಜನಾಂಗದ ಸಾರ್ವಜನಿಕ ವ್ಯವಹಾರಗಳಲ್ಲಿ ತಮ್ಮ ಅಧಿಕಾರವನ್ನು ನಡೆಸಬಲ್ಲವರೆಲ್ಲರೂ ಪ್ರತ್ಯಕ್ಷ ಕಾರ್ಯಕ್ಕಾಗಿ ಇತ್ತ 'ಈ ಕರೆಯನ್ನು ಆಲಿಸಿ ಆದರಿಸಲಿ.'

## ಸಾಂಸ್ಕೃತಿಕ ಯಾತ್ರೆ

(ಮೂರುಸಾವಿರ ಮಠದ ಜಗದ್ಗುರುಗಳು ಇತ್ತೀಚೆಗೆ ಲ್ಯೂವೆನದಲ್ಲಿ ಹಾಗೂ ಈ ಮೊದಲು ಕ್ಯೊಟೋದಲ್ಲಿ ಜರುಗಿದ ವಿಶ್ವಧರ್ಮ ಸಮ್ಮೇಳನದಲ್ಲಿ ಭಾರತದ ಪರವಾಗಿ ಭಾಗವಹಿಸಿದರು. ಭಾರತೀಯ ಧರ್ಮ ಹಾಗೂ ಸಂಸ್ಕೃತಿಗಳ ಬಗೆಗೆ ಪಾಶ್ಚಿಮಾತ್ಯರಲ್ಲಿ ಒಳ್ಳೆಯ ಭಾವನೆ–ಗೌರವ ಮೂಡಿಸಿದ್ದಾರೆಂಬುದನ್ನು "ಕರ್ಮವೀರ" ದೀಪಾವಳಿ ಸಂಚಿಕೆಯಲ್ಲಿ ಶ್ರೀ ಶಂಕರ ಪಾಟೀಲರು ಸುದರ್ಶನದಲ್ಲಿ ನಿರೂಪಿಸಿದ್ದನ್ನು ಇಲ್ಲಿ ಎತ್ತಿಕೊಡಲಾಗಿದೆ.)

*** ವಿಶ್ವಧರ್ಮ ಸಮ್ಮೇಳನ ಕ್ಯೊಟೋದಿಂದ ಲ್ಯೂವೆನ್‌ವರೆಗೆ ಸಾಧಿತವಾದುದೇನು?**

ಕ್ಯೊಟೋ ಸಮ್ಮೇಲನಕ್ಕಿಂತ ಲ್ಯೂವನ್ ಪರಿಷತ್ತಿನಲ್ಲಿ ಪರಸ್ಪರ ತಿಳುವಳಿಕೆ, ಧರ್ಮ ಮತ್ತು ಶಾಂತಿ ಸಲುವಾಗಿ ಅಂತಃಕರಣ ಪೂರ್ವಕವಾಗಿ ಮಾನವೀಯ ಕಲ್ಯಾಣ ದೃಷ್ಟಿಯಿಂದ ಅನೇಕ ರಾಷ್ಟ್ರದಿಂದ ಬಂದ ಪ್ರತಿನಿಧಿಗಳು ಪ್ರಾಂಜಲ ಮನಸ್ಸಿನಿಂದ ವಿಚಾರ ಗೋಷ್ಠಿಯಲ್ಲಿ ತಮ್ಮ ವಿಚಾರಗಳನ್ನು ವ್ಯಕ್ತಗೊಳಿಸಿದರು. ಅವರು ನಿಶ್ಯಸ್ತ್ರೀಕರಣ, ಸಮೃದ್ಧರಾಷ್ಟ್ರಗಳು ಉಳಿದರಾಷ್ಟ್ರಗಳಿಗೆ ಸಹಾಯ ನೀಡಬೇಕು. ಇತ್ಯಾದಿ, ಮುಖ್ಯ ವಿಷಯಗಳಿಗೆ ಹೆಚ್ಚು ಮಹತ್ವ ನೀಡಿದ್ದರು. ಪ್ರಶ್ನೋತ್ತರಗಳಿಗೆ ಹೆಚ್ಚು ಪ್ರಾಧಾನ್ಯವಿತ್ತು. ಚರ್ಚಾಗೋಷ್ಠಿಗಳಲ್ಲಿ ಆದ ನಿರ್ಣಯಗಳನ್ನು ಕಾರ್ಯರೂಪದಲ್ಲಿ ತರಬೇಕೆಂಬುದೇ

ಎಲ್ಲರ ಅಭಿಪ್ರಾಯವಾಗಿತ್ತು. ವಿಶ್ವಶಾಂತಿಯುಂಟಾಗಬೇಕಾದರೆ-ದ್ವೇಷಾಸೂಯೆಗಳು ಮೊದಲು ನಿರ್ಮೂಲವಾಗಬೇಕು; ಭೌತಿಕ ಪ್ರಗತಿಯ ಶರವೇಗದಲ್ಲಿ ಜ್ಞಾನದ ತಿರುಳು ಗಳನ್ನು ಮರೆಯಬಾರದು. ಬೌದ್ಧಿಕಶಕ್ತಿಯನ್ನು ಬೆಳೆಸುತ್ತಿದ್ದರೂ, ಹೋರಾಟದಲ್ಲಿಯೇ ಕಾಲ ಕಳೆಯಬಾರದು. ಅಶಾಂತಿಗೆ ಮೂಲವಾದ ಭೂ, ಧನ, ಅಧಿಕಾರದ ವ್ಯಾಪ್ತಿಯ ವಿಸ್ತರಣದ ಆಶೆಗಳನ್ನು ಮಾನವನ ಕಲ್ಯಾಣಕ್ಕಾಗಿ ಪರಿಣಮಿಸಿದರೆ ಮಾತ್ರ ಶಾಶ್ವತವಾದ ಶಾಂತಿ, ಸುಖವು ಸಿಗಬಹುದಾಗಿದೆ. ಎಲ್ಲಕ್ಕೂ ಮಿಗಿಲಾಗಿ ಧಾರ್ಮಿಕ ಭಾವನೆಯು ಪ್ರಪಂಚದ ತುಂಬೆಲ್ಲ ಹಬ್ಬುವಂತೆ, ಲೋಕವೆಲ್ಲ ಭಾವೈಕ್ಯದಿಂದ ಸುಂದರವಾಗುವಂತೆ, ಕಾರ್ಯರೂಪಕ್ಕೆ ತರುವದೇ ಮೊದಲಾದ ವಿಚಾರಗಳು ಅಲ್ಲಿ ವ್ಯಕ್ತವಾದವು. ಸಂತತಿ ನಿಯಮನದ ಬಗ್ಗೆಯೂ ಕೂಲಂಕಷವಾಗಿ ವಿಚಾರ ನಡೆದು, ಅದಕ್ಕಾಗಿ ಭಾರತೀಯ ಸಂಸ್ಕೃತಿಯ ಮಹತ್ವವನ್ನು ಹಾಗೂ ವಾನಪ್ರಸ್ಥದವರೆಗಿರುವ ಆಚಾರ-ವಿಚಾರಗಳನ್ನು, ಶಿವಶರಣರ ಕಾಯಕ ತತ್ವವನ್ನು ನಾವು ವಿವರಿಸಿದೆವು; ಅದಕ್ಕೆ ಜನರ ಮೆಚ್ಚಿಕೆಯೂ ಕಂಡು ಬಂದಿತು.

ಕ್ಯೂಟೋದಕ್ಕಿಂತ ಹೆಚ್ಚು ರಾಷ್ಟ್ರದ ಪ್ರಮುಖ ಪ್ರತಿನಿಧಿಗಳು ಇಲ್ಲಿ ಈ ಸಲ ಕೂಡಿದ್ದರಿಂದ, ಕ್ಯೂಟೋದ ಪ್ರಭಾವವು ಬಿದ್ದಿರಬಹುದೆಂದೆನಿಸುತ್ತದೆ. ಪ್ರತಿಯೊಂದು ರಾಷ್ಟ್ರದವರು ವಿಶ್ವಶಾಂತಿಗಾಗಿ ಪರಿಶ್ರಮ ವಹಿಸಲೇಬೇಕೆಂದು ಈ ಸಮ್ಮೇಳನದಲ್ಲಿ ನಿರ್ಣಯ ತೆಗೆದುಕೊಂಡರಲ್ಲದೇ, ಹುಬ್ಬಳ್ಳಿಯಲ್ಲಿ ೧೯೭೨ ನೆಯ ಇಸ್ವಿಯಲ್ಲಿ ಜರುಗಿದ ಸರ್ವಧರ್ಮ ಸಮ್ಮೇಳನದ ಬಗ್ಗೆ ಮುಕ್ತಾಯ ಸಮಾರಂಭದಲ್ಲಿ ಅಧ್ಯಕ್ಷರು ಮುಕ್ತ ಕಂಠ ದಿಂದ ಪ್ರಶಂಸಿಸಿದರು. ಇದರಿಂದ ಹುಬ್ಬಳ್ಳಿಯ ಸಮ್ಮೇಳನವು ಅವರಿಗೆ ಮೆಚ್ಚಿಗೆಯಾದಂತೆ ಕಂಡು ಬಂದಿತು.

ಕ್ಯೂಟೋದ ಸಭೆಯು ಉಚ್ಚ ಆದರ್ಶಗಳನ್ನು ಮುಂಡಿಸಿದ್ದರೆ, ಲ್ಯೂವೆನ್‌ದಲ್ಲಿ ಆ ಆದರ್ಶಗಳ ಮೂಲಕ ಮುನ್ನಡೆಯಲು ಸಾಧ್ಯವಾಗಿದೆ. ಇಂಥ ಪರಿಷತ್ತುಗಳ ಅಗಾಧ ಅನು ಭವ ಹಾಗೂ ಅಧಿಕೃತ ಧಾರ್ಮಿಕ ಸಂಸ್ಥೆಗಳ ನಡುವೆ ನಡೆಸಿದ ವಿಪುಲ ಚರ್ಚೆಗಳ ಪರಿಣಾಮ ವಾಗಿ, ನಮ್ಮಲ್ಲಿಯ ಅಭಿಮಾನ ಪೂರ್ಣ ಪೂರ್ವ-ಗೃಹದೂಷಿತ ಪ್ರತ್ಯೇಕತೆಯ ಸುದೀರ್ಘ ಕಾಲಾವಧಿಯು ಇಂದು ಇಲ್ಲದಂತಾಗಿದೆ ಎಂದು ನಂಬಬಹುದು. ಈ ಸಲದ ಲ್ಯೂವೆನ್ ಸಭೆಯಲ್ಲಿ "ವಿಶ್ವಸಂಸ್ಥೆಯ ನಿರ್ಣಯುಗಳನ್ನು ರಾಷ್ಟ್ರ ಜೀವನದಲ್ಲಿ ಕಾರ್ಯರೂಪದಲ್ಲಿ ತರು ವಂತೆ, ಒಪ್ಪಂದ ಒಡಂಬಡಿಕೆಗಳನ್ನು ತಮ್ಮ ಸರಕಾರಗಳು ಮನ್ನಿಸುವಂತೆ, ವಿಶ್ವದ ಸಕಲ ಧಾರ್ಮಿಕ ಸಂಸ್ಥೆಗಳು ತಮ್ಮ ಸರ್ಕಾರಗಳ ಮೇಲೆ ಒತ್ತಾಯ ತಂದು, ರಾಷ್ಟ್ರದ ತಮ್ಮ ಅನುಯಾಯಿಗಳನ್ನು ಜಾಗ್ರತಗೊಳಿಸಿ, ವಿಶ್ವಶಾಂತಿಗೆ ಸಹಕಾರ ನೀಡಬೇಕೆಂಬುದೇ ಮುಖ್ಯ ಸಂದೇಶವಾಗಿತ್ತು. ಧರ್ಮ ಮತ್ತು ಜೀವನದ ಗುಣಮಟ್ಟ, ನಿಶ್ಯಸ್ತ್ರೀಕರಣ ಹಾಗೂ ರಕ್ಷಣೆ, ಆರ್ಥಿಕ ಉನ್ನತಿ, ಮಾನವನ ಸ್ವತಂತ್ರತೆಯ ಮುಖ್ಯ ಮೌಲ್ಯಗಳು. ಈ ವಿಷಯ ಗಳ ಬಗ್ಗೆ ಸುದೀರ್ಘ ವಿಚಾರ ವಿನಿಮಯ ಮಾಡಿ, ಮಾನವನ ಕಲ್ಯಾಣವನ್ನು ಸಾಧಿಸುವದೇ ಮುಖ್ಯ ಗುರಿಯಾಗಿತ್ತು.

* ಈ ಸಮ್ಮೇಳನದಲ್ಲಿ ಭಾಗವಹಿಸಿದ ಬಗೆಗೆ ನಿಮಗೇನೆನಿಸುತ್ತದೆ?

ವಿಶ್ವದ ಅನೇಕ ರಾಷ್ಟ್ರಗಳ ಅನೇಕ ಧಾರ್ಮಿಕ ಮುಖಂಡರು ಒಂದೆಡೆ ಕೂಡಿಕೊಂಡು ವಿಚಾರ ವಿನಿಮಯ ಮಾಡಿ, ರಾಜಕೀಯದಿಂದ ಕಲುಷಿತ ವಾತಾವರಣವು ಬೆಳೆಯದಂತೆ ಮಾಡಲು ಮತ್ತು ವಿಶ್ವದಲ್ಲಿ ಶಾಂತಿಯನ್ನು ಪ್ರತಿಸ್ಥಾಪಿಸಲು, ಈ ಸಮ್ಮೇಲನವು ಉತ್ತಮ ವೇದಿಕೆಯಾಗಿತ್ತೆಂಬುದು ನಮ್ಮ ಅಭಿಪ್ರಾಯ. ಮೇಲಿಂದ ಮೇಲೆ, ಈ ರೀತಿ ಪರಸ್ಪರ ವಿಚಾರ ವಿನಿಮಯ ಮಾಡಿ ಕಾರ್ಯಪ್ರವೃತ್ತರಾದರೆ, ವಿಶ್ವದಲ್ಲಿ ಶಾಂತಿ ನೆಲೆಸಲು ಸಹಾಯವಾದೀತು. ಇದರಿಂದ ದ್ವೇಷಾಸೂಯೆಗಳು ನಷ್ಟವಾಗುವವು. ರಾಷ್ಟ್ರ-ರಾಷ್ಟ್ರಗಳಲ್ಲಿರುವ ಅಂತಃಕಲಹಗಳು ದೂರಾಗಬಹುದು. ಭಾವೈಕ್ಯವನ್ನು ಸಾಧಿಸಲು ಇದೊಂದು ದೊಡ್ಡ ಸಾಧನ.

* ಹಿಂದು ಧರ್ಮದ ಬಗೆಗೆ ಅಲ್ಲಿ ತಿಳುವಳಿಕೆ ಹೆಚ್ಚಿಸಲು ಸಾಧ್ಯವಾಯಿತೆ?

ಹಲ ಕೆಲವು ಸಂದರ್ಭಗಳಲ್ಲಿ ನಾವು ಹಿಂದೂ ಧರ್ಮದ ಮಹತಿಯನ್ನು ಪ್ರಸ್ತಾಪಿಸಿದೆವು. ಆದರೆ, ಈ ಸಮ್ಮೇಳನವು ಕೇವಲ ಹಿಂದೂ ಧರ್ಮದ ವಿಚಾರವನ್ನು ಪ್ರಸ್ತಾಪಿಸತಕ್ಕ ವೇದಿಕೆಯಾಗಿದ್ದಿಲ್ಲ ಮತ್ತು ಈ ಸಮ್ಮೇಳನದಲ್ಲಿ ವಿಶ್ವಬಾಂಧವ್ಯ ಮಾನವ ಕುಲದ ಕಲ್ಯಾಣ ಇವೇ ಮುಖ್ಯ ವಿಷಯಗಳಾಗಿದ್ದರೂ, ಪ್ರಾಸಂಗಿಕವಾಗಿ ಹಿಂದು ಧರ್ಮದ ಮುಖಾಂತರ, ವಿಶ್ವಶಾಂತಿ ಸಾಧ್ಯವೆಂದು ಹೇಳಿದೆವಲ್ಲದೆ, ಜೊತೆಗೆ ಸಕಲರಿಗೂ ಲೇಸನೆ ಬಯಸುವ ವೀರಶೈವ ಧರ್ಮದ ವಿಶಾಲತೆಯನ್ನೂ ವಿವರಿಸಿದೆವು.

* ಭಾರತೀಯ ಸಂಸ್ಕೃತಿಯ ಪರಂಪರೆ ಹಾಗೂ ಧಾರ್ಮಿಕ-ಹಿನ್ನೆಲೆಗಳನ್ನು ಅರಿಕೆ ಮಾಡಲು ಸಾಧ್ಯವಾಯಿತೆ?

Religion and Population (ಧರ್ಮ ಮತ್ತು ಜನಸಂಖ್ಯೆ) ಈ ವಿಷಯದ ಚರ್ಚೆ ನಡೆದಾಗ, ಭಾರತೀಯ ವಿಚಾರಗಳನ್ನೂ ಸ್ಪಷ್ಟಪಡಿಸಿದೆವು. ಜನಸಂಖ್ಯೆ ಹೆಚ್ಚದಿರಲು ಭಾರತೀಯ ಸಂಸ್ಕೃತಿಯ ಪ್ರಕಾರ, ಆತ್ಮ ಸಂಯಮವೇ ಮುಖ್ಯ ತಾರಕವೆಂದು ಪ್ರತಿಪಾದಿಸಿದೆವು. ಇದರಷ್ಟು ಹಿತಕಾರಿ ಮತ್ತೊಂದಿಲ್ಲ. ಭಾರತೀಯ ಸಂಸ್ಕೃತಿಯನ್ನೂ, ಧರ್ಮದ ನಡುವಳಿಕೆಯನ್ನೂ ಅರ್ಥ ಮಾಡಿಕೊಂಡು ಅದರಂತೆ ಮನಃಪೂರ್ವಕವಾಗಿ ಕೃತಿಯಲ್ಲಿ ಇಳಿಸಿದರೆ, ಮಾನವ ಜನಾಂಗವನ್ನೇ ಎಚ್ಚರಿಸುವ ಮಹಾಶಕ್ತಿಯಿದೆ ಎಂದು ತಿಳಿಸಿದೆವು.

* ನಿಮ್ಮ ಪೂಜೆ-ಪುನಸ್ಕಾರ, ನಿತ್ಯವಿಧಿ-ನಿಯಮಗಳನ್ನು ಅನುಸರಿಸಲು ಯೋಗ್ಯವಾದ ಅವಕಾಶಗಳು ಲಭ್ಯವಾದವೆ?

ನಮ್ಮ ವಿದೇಶಗಳ ಪ್ರವಾಸದಲ್ಲಿ-ನಮ್ಮ ನಿತ್ಯ-ನಿಯಮ, ಪೂಜಾದಿಗಳಿಗೆ ಯಾವ ಆತಂಕವೂ ಬರಲಿಲ್ಲ. ನಮಗಾಗಿ ಒಂದು ರೂಮು ಪ್ರತ್ಯೇಕವಿರುತ್ತಿದ್ದುದರಿಂದ ನಮ್ಮ ಪೂಜೆಗೆ ಅನುಕೂಲವಾಗುತ್ತಿತ್ತು. ಲ್ಯೂವೆನ್‌ದಲ್ಲಿಯಂತೂ ವಿಶ್ವಶಾಂತಿ ಸಮ್ಮೇಳನದವರೇ

ಈ ವ್ಯವಸ್ಥೆ ಮಾಡಿದ್ದರು. ಇನ್ನುಳಿದ ರಾಷ್ಟ್ರಗಳಲ್ಲಿ, ಆ ಆ ರಾಷ್ಟ್ರದ ಭಾರತದ ರಾಯ ಭಾರಿಗಳು ಸರ್ವರೀತಿಯಿಂದಲೂ ವ್ಯವಸ್ಥೆ ಮಾಡಿದ್ದರಲ್ಲದೇ, ಮತ್ತೊಂದು ರಾಷ್ಟ್ರಕ್ಕೆ ವಿಮಾನ ಹತ್ತುವವರೆಗೂ ನಮ್ಮ ಜತೆಯಲ್ಲಿದ್ದು, ಆ ದೇಶದ ಬಗ್ಗೆ ವಿವರಿಸುತ್ತಿದ್ದರು. ಒಟ್ಟಿನಲ್ಲಿ ಎಲ್ಲಿಯೂ ನಮ್ಮ ಪೂಜೆಗೆ ಚ್ಯುತಿ ಬರಲಿಲ್ಲ. ಪ್ರವಾಸದಲ್ಲಿ ಹಣ್ಣು, ಹಾಲಿನಿಂದಲೇ ನಮ್ಮ ಜೀವನ ಸಾಗಿತ್ತು.

*** ಭಾರತೀಯ ಧರ್ಮಗುರುಗಳ ಬಗೆಗೆ ನೀವು ಪ್ರವಾಸ ಮಾಡಿದ ರಾಷ್ಟ್ರಗಳ ಜನತೆ ಯಾವ ಬಗೆಯ ಪ್ರತಿಕ್ರಿಯೆಯನ್ನು ತೋರಿಸಿದರು?**

ನಮಗೆ ತಿಳಿದ ಹಾಗೆ ಭಾರತೀಯ ಧರ್ಮಗುರುಗಳ ಬಗೆಗೆ ಒಳ್ಳೇ ಸದ್ಭಾವನೆಯನ್ನು ತೋರಿಸುತ್ತಿದ್ದರು. ನಮ್ಮೊಡನೆ ಅನೇಕ ವಿಷಯಗಳ ಬಗೆಗೆ ಪ್ರಸ್ತಾಪ ಮಾಡುತ್ತಿದ್ದರು. ಭಾರತೀಯ ಸಂಸ್ಕೃತಿಯ ಬಗ್ಗೆಯೂ ತುಂಬಾ ಮೆಚ್ಚುಗೆಯನ್ನು ವ್ಯಕ್ತಮಾಡುತ್ತಿದ್ದರು. ಭಾರತೀಯ ವಿವಾಹ ಪದ್ಧತಿಯು ಉತ್ತಮವಾದುದೆಂದು ಪ್ರಶಂಸಿಸುತ್ತಿದ್ದರು. ಮಹಾತ್ಮಾಗಾಂಧೀಯವರ ಅಹಿಂಸಾ ಮಾರ್ಗವು ಕೆಲವರಿಗೆ ತುಂಬಾ ಹಿಡಿಸಿತ್ತು. ಮತ್ತೆ ಕೆಲವರು, ಅಹಿಂಸೆಯೆಂದೆನ್ನುತ್ತ ಕುಳಿತರೆ ರಾಷ್ಟ್ರೋದ್ಧಾರವೆಂತು? ಅನ್ನುವವರೂ ಇದ್ದರು. ಭಾರತೀಯರ ಆಧ್ಯಾತ್ಮಕತೆಯನ್ನು ಮೆಚ್ಚಿಕೊಂಡವರೂ ಇದ್ದರು. ಭಾರತದ ಮಹರ್ಷಿ ಮಹೇಶಯೋಗಿಗಳು, ನಡೆಸುತ್ತಿರುವ ಸಹಸ್ರಾರು ಧ್ಯಾನಯೋಗದ ಕೇಂದ್ರಗಳೇ ಇದಕ್ಕೆ ಸಾಕ್ಷಿ. ಯುರೋಪ ಖಂಡದ ೫ ಲಕ್ಷಕ್ಕಿಂತ ಹೆಚ್ಚು ಜನ ಸುಶಿಕ್ಷಿತರಿಗೆ ಧ್ಯಾನ ಯೋಗದ ಮಹಿಮೆಯನ್ನು ತಿಳಿಸಿ, ಹಿಂದು ಸಂಸ್ಕೃತಿಯ ಹಿರಿಮೆಯನ್ನು ಹೆಚ್ಚಿಸುತ್ತಿರುವದು ಕಂಡು ನಮಗೆ ಅತೀವ ಆನಂದವನ್ನುಂಟು ಮಾಡಿತು. ಅಜಮಾಸು ೨೦-೨೫ ರಾಷ್ಟ್ರಗಳಲ್ಲಿ ಇವರ ಧ್ಯಾನಯೋಗ ಶಕ್ತಿಗೆ ಆಕರ್ಷಿತರಾಗಿದ್ದಾರೆಂದು, ಸ್ವಿಝರ್‌ಲ್ಯಾಂಡದಲ್ಲಿರುವ ಅರೋಜಾದ ಅವರ ಶಿಷ್ಯರು ಹೇಳಿದರು. ಇದರ ಮೇಲಿಂದ ಭಾರತೀಯ ಸಂಸ್ಕೃತಿಯು ಅವರಿಗೆ ಹೆಚ್ಚು ಮೆಚ್ಚಿನದಾಗಿದೆನ್ನಬಹುದು.

*** ಅಲ್ಲಿಯ ಜನರು ಸಾತ್ವಿಕರೆ? ಜನ-ಜೀವನ ಹೇಗಿದ್ದಿತು?**

ವಿದೇಶಿಯರಲ್ಲಿ ಸಾತ್ವಿಕತೆಗಿಂತ ಸಾಹಸಪ್ರಿಯತೆ ಹೆಚ್ಚು ಕಂಡು ಬರುತ್ತಿತ್ತು. ಅದಕ್ಕೆ ಆಹಾರವೂ ಕಾರಣವಾಗಿರಬಹುದು. ಅವರ ಸಭ್ಯತೆ, ಪ್ರಾಮಾಣಿಕತೆ, ಅತಿಥಿ ಸತ್ಕಾರ-ಪ್ರಿಯತೆಗಳು ಎದ್ದು ಕಾಣುತ್ತಿದ್ದವು. ನಾವು ವಿದೇಶಿಯರಲ್ಲಿ ಮೆಚ್ಚಿದ ಗುಣಗಳೆಂದರೆ-ಅವರ ರಾಷ್ಟ್ರಾಭಿಮಾನ, ಭಾಷಾಭಿಮಾನ, ಶಿಸ್ತು, ಕಲಾಭಿರುಚಿ, ವಿಮರ್ಶನಾತ್ಮಕ ಬುದ್ಧಿ ಹಾಗೂ ತಮ್ಮ ಜೀವನದಲ್ಲಿ ಶ್ರದ್ಧೆ ವಿಶ್ವಾಸವಿಟ್ಟುಕೊಂಡು, ವೈಜ್ಞಾನಿಕ ಪ್ರಗತಿಯಲ್ಲಿ ಮುಂದಾಗಿದ್ದಾರೆ. "ಕಾಯಕವೇ ಕೈಲಾಸ" ಈ ನುಡಿಯ ನಡೆ; ವಿದೇಶಗಳಲ್ಲಿಯೆ ಹೆಚ್ಚಿದೆಯೆಂದರೆ ತಪ್ಪಾಗಲಿಕ್ಕಿಲ್ಲ. ಭಾರತದ ವಿವಾಹ ಪದ್ಧತಿಯು ಅಲ್ಲಿ ಕಾಣುವದು ವಿರಳ. ಭಾರತೀಯ ಸಂಸ್ಕೃತಿಯನ್ನು ಅವರು ಮೆಚ್ಚಿಕೊಂಡಂತೆ, ನಾವೆಷ್ಟು

ಮೆಚ್ಚಿಕೊಂಡು ಕೃತಿಗಿಳಿಸಿದ್ದೇವೆಂಬುದು ತಿಳಿಸಲು ಕಠಿಣವಾಗುತ್ತದೆ. ಅವರ ಆ ರಾಷ್ಟ್ರಾಭಿಮಾನ, ಆ ಪ್ರಾಮಾಣಿಕತೆ ಇನ್ನೆಂದು ಇಲ್ಲಿಗೆ ಬರುವದೋ? ಕಾದು ನೋಡಬೇಕು.

*** ವಿದೇಶಗಳಲ್ಲಿ ಧಾರ್ಮಿಕ ಭಾವನೆಗಳು ತೀವ್ರವಾಗಿವೆಯೆ?**

ವಿದೇಶಗಳಲ್ಲಿ ಧಾರ್ಮಿಕ ಶ್ರದ್ಧೆ ಇದೆ ಎಂಬುದು ಗೋಚರವಾಗುತ್ತಿತ್ತು. ಆದರೆ, ಇಲ್ಲಿಯ ಮಡಿವಂತಿಕೆ, ಅಲ್ಲಿ ಕಂಡು ಬರುತ್ತಿದ್ದಿಲ್ಲ. ಪೂಜಾವಿಧಾನ ಮುಂತಾದವುಗಳನ್ನು ಹೇಳಿದರೆ ಆಶ್ಚರ್ಯದಿಂದ ಕೇಳುತ್ತಿದ್ದರು; ಉತ್ಸುಕರಾಗುತ್ತಿದ್ದರು.

*** ಭಾರತೀಯರು ಭಾರತೀಯ ಸಂಸ್ಕೃತಿಯ ಬಗೆಗೆ ನಿಮಗೆ ಕಂಡುಬಂದ ಪ್ರತಿಕ್ರಿಯೆ?**

ಭಾರತೀಯರು ಭಾರತೀಯ ಸಂಸ್ಕೃತಿಯ ಬಗೆಗೆ, ಬೇಕಾದಷ್ಟು ತತ್ವಪೂರ್ಣವಾಗಿ ಹೇಳುತ್ತಾರೆ. ಆದರೆ, ಕೃತಿ ಮಾತ್ರ ಶೂನ್ಯವೆಂಬಂತೆ ಕಾಣುತ್ತದೆ. ಭಾರತಕ್ಕೆ ಇದೀಗ ಬೇಕಾಗಿರುವದು, ತತ್ವಬೋಧನೆಗಿಂತಲೂ ಕೃತಿಯು (ಆಚರಣೆಯು) ಅವಶ್ಯಕವಾಗಿದೆ. ವಿದೇಶಿಯರ ಪ್ರಾಮಾಣಿಕತೆ, ರಾಷ್ಟ್ರಾಭಿಮಾನ ಅವಶ್ಯ ಬೇಕೆನಿಸುತ್ತದೆ.

*** ಬೌದ್ಧಿಕವಾದವನ್ನು ಧಾರ್ಮಿಕ ಜಾಗೃತಿಯಿಂದ ಗೆಲ್ಲಬಹುದೆಂದು ನಿಮಗನಿಸಿತೆ?**

ಬೌದ್ಧಿಕವಾದವನ್ನು ಧಾರ್ಮಿಕ ಜಾಗೃತೆಯಿಂದ ಗೆಲ್ಲುವ ಬದಲು, ಭೌತಿಕತೆ ಹಾಗೂ ಧಾರ್ಮಿಕತೆ ಇವೆರಡನ್ನೂ ಪರಸ್ಪರ ಸಮನ್ವಯ ದೃಷ್ಟಿಯಿಂದ ಕಂಡು, ಕಾರ್ಯರೂಪದಲ್ಲಿ ತಂದರೆ ವಿಶ್ವಶಾಂತಿ ಸಾಧ್ಯ; ಒಂದು ಬಿಟ್ಟು ಒಂದು ಅಸಾಧ್ಯ. ಭೌತಿಕ ಪ್ರಗತಿ ಹಾಗೂ ಆತ್ಮಿಕ ಪ್ರಗತಿ ಎರಡೂ ಪೂರಕವಾಗಿರಬೇಕು. ಇದೀಗ ವಿದೇಶದಲ್ಲಿ ಭೌತಿಕ ಪ್ರಗತಿ ಹೆಚ್ಚಾಗಿದ್ದರಿಂದ ಕೇವಲ ಅದರಿಂದ ಶಾಂತಿ ಸಿಗಲಾರದೆಂದು ತಿಳಿದಿದ್ದರಿಂದ ಧರ್ಮದತ್ತ ಮನವಳಸುತ್ತಿದ್ದಾರೆ.... ವಿದೇಶಗಳಲ್ಲಿ ನಾವು ಸಂಚರಿಸಿದ ಕಡೆ, "ನಿಮಗೆ ಯೋಗಸಾಧನೆಯು ಗೊತ್ತಿದೆಯೆ? ಧ್ಯಾನದ ಅವಸ್ಥೆಗಳು ಏನು? ಧ್ಯಾನದಿಂದ ಶಾಂತಿ ಸಿಕ್ಕೀತೇ? ಆನಂದದ ಮೂಲ ಬೇರು ಧ್ಯಾನಯೋಗವೆ? ಹೇಗೆ?" ಇವೇ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡು ನಮ್ಮ ಹತ್ತರ ಬಂದಾಗ ಕೇಳುತ್ತಿದ್ದರು.

ನಮಗಿಂದು ಭೌತಿಕ ಪ್ರಗತಿಯೂ ಬೇಕು; ಆತ್ಮಿಕ ಪ್ರಗತಿಯೂ ಬೇಕು; ಒಂದು ಬಿಟ್ಟು ಒಂದು ಬೆಳೆಸಿದರೆ ರಾಷ್ಟ್ರವು ಬೆಳೆಯಲಾರದು.

"ಪ್ರತಿಯೊಬ್ಬನೂ ತನ್ನ ಆಧ್ಯಾತ್ಮಿಕ ಸಂಸ್ಕೃತಿ ಹಾಗೂ ಸ್ಥಳೀಯ ಸನ್ನಿವೇಶಗಳಿಗೆ ಅನುಗುಣವಾಗಿ ಮಾನವ ಜನಾಂಗಕ್ಕೆ ಸೇವೆ ಸಲ್ಲಿಸಬೇಕು. ಶಾಂತಿಯು ಈಗ ಸ್ವೇಚ್ಛೆಯಂತೆ ಪುರಸ್ಕರಿಸಬಹುದಾದ ಅಥವಾ ತಿರಸ್ಕರಿಸಬಹುದಾದ ಆದರ್ಶವಾಗಿ ಉಳಿದಿಲ್ಲ.

ಮಾನವನು ಇಂದು ತಾರಾಮಂಡಲವನ್ನೇ ಉಧ್ವಸ್ತಗೊಳಿಸಬಲ್ಲ ಅಪಾರ ಶಕ್ತಿ ಸಂಪಾದಿಸಿದ್ದಾನೆ. ಇಂತಹ ಸಂದರ್ಭದಲ್ಲಿ ಶಾಂತಿಯು ಅತ್ಯಗತ್ಯದ ವ್ಯಾವಹಾರಿಕ ಅವಶ್ಯಕತೆ ಆಗಿದೆ. ಆದ್ದರಿಂದ ಯುದ್ಧ ನಿರ್ಮೂಲನಕ್ಕಾಗಿ ದುಡಿಯಲು ಪ್ರತಿಜ್ಞಾಬದ್ಧರಾಗಿರಬೇಕು. ನಾವು ಧ್ಯಾನ ಪ್ರಾರ್ಥನೆಗಳತ್ತ ಹೊರಳಿದರೆ, ನಮ್ಮಲ್ಲಿ ಹೃದಯ ಪರಿವರ್ತನೆಗಾಗಿ ತ್ಯಾಗ, ನಮ್ರತೆ ಆತ್ಮ ಸಂಯಮಾದಿಗಳು ಬೆಳೆದು ಬರುತ್ತವೆ. ತತ್ಪರಿಣಾಮವಾಗಿ ನ್ಯಾಯ, ಅಭಿವೃದ್ಧಿ, ವಿಮುಕ್ತಿ ಶಾಂತಿಗಳು", ಲ್ಯೂವೆನ್ ಪರಿಷತ್ತಿನಲ್ಲಿ ಚರ್ಚಿಸಿದ ಈ ವಿಚಾರಗಳು ನಮ್ಮೆಲ್ಲರನ್ನೂ ಜಾಗೃತಗೊಳಿಸಿ, ವಿಶ್ವಶಾಂತಿಯ ಕಡೆಗೆ ಕರೆದೊಯ್ಯಲೆಂಬುದೇ ನಮ್ಮ ಹೃದಯದ ಹಾರೈಕೆ.

ಭಾಗ–೩

ಇಂಗ್ಲೀಷ ಭಾಷಣಗಳ
ಕನ್ನಡ ಅವತರಣಿಕೆಗಳು

# ಧರ್ಮ ಮತ್ತು ಶಾಂತಿ

(ಕ್ಯೂಟೋದಲ್ಲಿ ೧೯೭೦ ಆಕ್ಟೋಬರ್ ೧೬–೨೨ ರಂದು ಮಾಡಿದ ಭಾಷಣ.)

ಜಗತ್ತಿನ ರಾಷ್ಟ್ರಗಳಲ್ಲಿ ಜಪಾನವು ಅತ್ಯಂತ ಸುಂದರ ರಾಷ್ಟ್ರವಿದ್ದಂತೆ ಧರ್ಮದ ಬೀಡುಸಹ ಆಗಿದೆ. ಬುದ್ಧನು ಅಹಿಂಸಾತ್ಮಕ ತತ್ವಗಳನ್ನು ಪ್ರಚಾರ ಮಾಡಿದ ಪವಿತ್ರ ದೇಶವಾಗಿದೆ. ಜಪಾನವು ಪ್ರಗತಿಪರ ರಾಷ್ಟ್ರಗಳಲ್ಲಿ ಹೆಚ್ಚು ಹೆಸರು ಪಡೆದಿದೆ. ಜಪಾನಿನ ವಾತಾವರಣವು ಪುನರುಜ್ಜೀವನ ಮತ್ತು ಪುನರ್ನಿರ್ಮಾಣದ ಮಹಾಕಾರ್ಯೋತ್ಸಾಹದಲ್ಲಿ ತುಂಬಿ ತುಳುಕಿದೆ. ಕೈಗಾರಿಕಾ ಪ್ರಗತಿಸಾಧನೆಯೇ ಜಪಾನಿನ ಮೂಲಮಂತ್ರವಾಗಿದೆ. ಉದ್ಯಮ ಹಾಗೂ ಆರ್ಥಿಕ ಪ್ರಗತಿಯಲ್ಲಿ ಜಪಾನಿಯರ ಸಾಹಸ ಮೆಚ್ಚತಕ್ಕದ್ದಾಗಿದೆ. ಕಾಯಕನಿಷ್ಠೆ, ರಾಷ್ಟ್ರೀಯತೆ, ವೈಜ್ಞಾನಿಕ ಮನೋವೃತ್ತಿ, ವಿಶ್ವಬಂಧುತ್ವ ಜಪಾನಿಯರನ್ನು ಮುನ್ನಡೆಯಿಸುತ್ತಿರುವವು, ಜಪಾನದ ಆರ್ಥಿಕ ಪ್ರಗತಿಯ ಇತಿಹಾಸವಂತೂ ಆಶ್ಚರ್ಯಕರ ವಾಗಿದೆ. ಏಶಿಯಾ ಖಂಡದಲ್ಲಿಯೇ ಅತ್ಯಂತ ವೈಭವ ಪೂರ್ಣವಾದ ಪ್ರಗತಿಯನ್ನು ಸಾಧಿಸಿದ್ದು ನೋಡಿದರೆ; ಅನ್ಯ ರಾಷ್ಟ್ರದವರೂ ಸಹ ಅನುಕರಣ ಮಾಡುವಂತೆ ಕಾರ್ಯ ಗೈದಿದ್ದಾರೆ. ಅವರ ಉತ್ಕಟ ದೇಶಾಭಿಮಾನವೇ ಈ ಉದ್ಯಮಶೀಲತೆಗೆ ಕೈಹಾಕಿದೆ. ಜಪಾನೀಯರು ಇಷ್ಟು ಮುಂದುವರಿಯಲು ಅವರ ಶ್ರಮ ಸಹಿಷ್ಣುತೆ, ವೇಳೆಯ ಸದುಪ ಯೋಗ, ಶ್ರದ್ಧಾಪೂರ್ಣ ಸಾಹಸ, ಹಿಡಿದ ಕಾರ್ಯಗಳನ್ನು ಬಿಡದೇ ಮಾಡುವದು ಇವುಗಳೇ ಪ್ರಗತಿಗೆ ಮೂಲ ಕಾರಣ. ಅಂತೆಯೇ ಮೊನ್ನೆಯೇ ಜರುಗಿದ ವಿಶ್ವವನ್ನೇ ಆಕರ್ಷಿಸಿದ ಔದ್ಯೋಗಿಕ ವಿಶ್ವಪ್ರದರ್ಶನವೇ ಸಾಕ್ಷಿ. ಜಪಾನೀಯರು ಆರ್ಥಿಕ ಹಾಗೂ ಔದ್ಯಮಿಕ ಪ್ರಗತಿಗಾಗಿ ಶ್ರಮಪಡುತ್ತಿರುವಂತೆಯೇ ಜಗತ್ತಿನ ಎಲ್ಲ ರಾಷ್ಟ್ರಗಳು ಶಾಂತಿ ಪಡೆದು ಅತ್ಯುನ್ನತ ಆತ್ಮಿಕ ಆನಂದವನ್ನು ಅನುಭವಿಸಿ ಎಲ್ಲ ರಾಷ್ಟ್ರಗಳು ಪರಸ್ಪರ ಸಹಕಾರದೊಡನೆ ಧರ್ಮದ ಪ್ರೋಜ್ವಲ ಶಕ್ತಿಯನ್ನು ವಿಜ್ಞಾನದ ಜೊತೆಗೆ ಅಂಗೀಕರಿಸಿ ಕೊಂಡು ರಾಷ್ಟ್ರೋತ್ಥಾನ ಮಾಡಬೇಕೆಂಬುವ ಸದುದ್ದೇಶದಿಂದ (Kyoto) ಇಂದು ಇಲ್ಲಿ ವಿಶ್ವಧರ್ಮ ಸಮ್ಮೇಲನವನ್ನು ಜಾಗತಿಕ ಶಾಂತಿಗಾಗಿ ಕರೆದು ಜಗತ್ತನ್ನು ಬೆಳಕಿನ ಕಡೆಗೆ ಒಯ್ಯುಬೇಕೆಂಬುವ ಜಪಾನಿಯರ ಮಹತ್ಸಾಧನೆ ಮತ್ತು ಮಹಾಸಾಹಸವನ್ನು ನೋಡಿ ನಮಗಿಂದು ಅತೀವ ಆನಂದವಾಗಿದೆ.

ಎಲ್ಲಿಯವರೆಗೆ ಜಗತ್ತಿನಿಂದ ಅಧರ್ಮ ಅನ್ಯಾಯ ಅನಾಚಾರಗಳು ತೊಲಗುವ ದಿಲ್ಲವೋ, ಎಲ್ಲಿಯವರೆಗೆ ಅಸತ್ಯ ಹಿಂಸೆಗಳು ನಿರ್ನಾಮವಾಗುವದಿಲ್ಲವೋ, ಎಲ್ಲಿಯ

ವರೆಗೆ ಏರಿಳಿತಗಳ ಸಂಕೋಲೆ ಬಿಡುವದಿಲ್ಲವೋ; ಎಲ್ಲಿಯವರೆಗೆ ಪ್ರಪಂಚದ ಧರ್ಮ ಗುರುಗಳು ಒಂದಾಗಿ ಜಗತ್ತೆಂಬ ಬೃಹದಾಕಾಶದಲ್ಲಿ ಕಾರ್ಮೋಡಗಳು ಕವಿಯಲಾರದಂತೆ ನೋಡಿಕೊಳ್ಳುವದಿಲ್ಲವೋ, ಅಲ್ಲಿಯ ವರೆಗೆ ಜಾಗತಿಕ ಶಾಂತಿ ಸಿಗುವದು ದುರ್ಲಭವೆಂದು ಹೇಳಬಹುದು. ಮಾನವಕುಲದ ಭವಿಷ್ಯವನ್ನು ರೂಪಿಸುವಲ್ಲಿ ಧರ್ಮದಷ್ಟು ಪ್ರಬಲವಾದ ಶಕ್ತಿ ಮತ್ತಾವುದೂ ಇರಲಾರದು. ಧರ್ಮವೆಂದಾಕ್ಷಣ ಸಂಕುಚಿತ ಬೇಲಿಯನ್ನು ಹಾಕಿ ಅಷ್ಟಕ್ಕೆ ತೃಪ್ತಿಪಡುವ ಸಾಧನ ಮಾತ್ರವಲ್ಲ. ಧರ್ಮಶಕ್ತಿಯನ್ನು ರಾಷ್ಟ್ರೋತ್ಥಾನಕ್ಕೆ ಪರಿವರ್ತಿಸಿ ಪೂರ್ಣತ್ವವನ್ನು ಪಡೆಯುವ, ಮಹಾವ್ಯಕ್ತಿತ್ವವನ್ನು ಮತ್ತು ದಿವ್ಯತೇಜಸ್ಸನ್ನು ನೀಡುವ ಶಕ್ತಿ ಸ್ಫೂರ್ತಿಯನ್ನು ಸಂಗಳಿಸಿ, ಸಾಧಿಸಿದರೆ ಮಾತ್ರ ಧರ್ಮದ ಸಾರ್ಥಕತೆ.

"ಪತಿತಂ, ಪತಂತಂ, ಪತಿಷ್ಯಂತಂ, ಧರತೀತ ಧಮಃ" ಧಾರಣಾತ್ ಧರ್ಮಃ ವಿನಾಶದತ್ತ ಸಾಗಿರುವ ಜಗತ್ತನ್ನು ಮೇಲಕ್ಕೆತ್ತಿ ಎಚ್ಚರಿಸಿ ಶಕ್ತಿಯನ್ನಿತ್ತು ಸಂರಕ್ಷಿಸುವದೇ ಧರ್ಮದ ಮೂಲಗುರಿ. ವ್ಯಕ್ತಿಯಲ್ಲಿ ಹುದುಗಿರುವ ತಮಸ್ಸನ್ನು ಜಾಗೃತಗೊಳಿಸುವದೇ ಧರ್ಮ.

ಉಪನಿಷತ್ತಿನಲ್ಲಿ ಹೇಳಿದ—

**असतोमा सद्गमय, तमसो मा**
**ज्योतिर्गमय, मृत्योर्मा अमृतं गमयः ॥**

"ಪರಮಾತ್ಮ! ನಮ್ಮನ್ನು ಕೆಡುಕಿನ ತೊಡಕನ್ನು ಬಿಡಿಸಿ ಒಳ್ಳೆಯ ದಾರಿಗೆ ಕರೆದು ಕೊಂಡು ಹೋಗು. ಕತ್ತಲೆಯಿಂದ ಬೆಳಕಿನಕಡೆ ಕರೆದೊಯ್ಯು, ಸಾವಿನಿಂದ ಸಾವಿಲ್ಲದ ಸ್ಥಳಕ್ಕೆ ನಮ್ಮನ್ನು ಸಾಗಿಸು" ಎಂದು ತಿಳಿಸುವ, ಕಲಿಸುವ ಮಂತ್ರವೇ ಧರ್ಮ. ಧರ್ಮ ಎಂದರೆ ಕೇವಲ ತರ್ಕ–ಬುದ್ಧಿಯಿಂದ ಬಂದುದಲ್ಲ ಮತ್ತು ಬರೀ ತತ್ವವಲ್ಲ. ಧರ್ಮ ಎಂದರೆ ಅನುಭವ ಮತ್ತು ಆಚರಣೆ. ದೇವರನ್ನು ನಮ್ಮ ಹೃದಯದಲ್ಲಿ ಕಾಣುವದು ಅದನ್ನು ಪೂಜಿಸಿ ಅನುಭವಿಸುವದೇ ಧರ್ಮ. ವಿವೇಕದ ವರೆಗಲ್ಲಿಗ ತಿಕ್ಕಿನೋಡಿ ಪರೀಕ್ಷೆ ಯಲ್ಲಿ ಉತ್ತೀರ್ಣವಾಗುವಂತಹ ಧರ್ಮವಾದರೆ ಉಪಯೋಗ. ಇಲ್ಲವಾದರೆ ಅದು ಧರ್ಮದ ಸೋಗಾದೀತು. ಬಿದ್ದ ಬಂಡೆಗಲ್ಲಿನಂತೆ ನಿರರ್ಥಕವಾದೀತು.

ಮಹಾತ್ಮಾ ಗಾಂಧಿಯವರು ಒಂದೆಡೆ ಧರ್ಮದ ವಿವರಣೆ ಕುರಿತು ಹೀಗೆ ಹೇಳಿದ್ದಾರೆ:

"ದೀನ ಸೇವೆಯೇ ಧರ್ಮ. ದೀನರ ಮತ್ತು ಪೀಡೆಗೊಂಡವರ ರೂಪದಲ್ಲಿ ದೇವರು ನಮಗೆ ಪ್ರತ್ಯಕ್ಷನಾಗುತ್ತಾನೆ. ಸೇವಾಧರ್ಮದ ಆಚರಣೆಯನ್ನು ಬಿಟ್ಟು ನಾನು ಅಹಿಂಸೆಯನ್ನು ಆಚರಿಸಲಾರೆ" ಅಹಿಂಸಾ ಧರ್ಮವನ್ನು ಆಚರಿಸದೆ ಸತ್ಯವನ್ನು ನಾನು ಕಾಣಲಾರೆ. ಸತ್ಯವಿಲ್ಲದೇ ಬೇರೊಂದು ಧರ್ಮವಿಲ್ಲ ಈ ರೀತಿ ಧರ್ಮದ ಸತ್ಯಾಂಶ ಅರುಹಿದ್ದಾರೆ.

ಪ್ರಪಂಚದಲ್ಲಿ ಹಲವು ಧರ್ಮಗಳು ಉದ್ಭವಿಸಿದ್ದರೂ ದಾರಿಗಳು ಬೇರೆ ಇದ್ದರೂ,

ಮುಟ್ಟುವ ಕೊನೆಯ ಗುರಿ ಮಾತ್ರ ಒಂದೇ ಆಗಿದೆ. ಅದನ್ನು ತಿಳಿದುಕೊಳ್ಳುವ ಮತ್ತು ಅರಗಿಸಿಕೊಳ್ಳುವ ಹೃದಯವಿದ್ದರೆ ಅದು ಅರ್ಥವಾಗುತ್ತದೆ. ಧರ್ಮ ನಿಂತ ನೀರಿನಂತಾಗದೇ ಹರಿಯುವ ತಿಳಿಜಲದಂತೆ ನಿರಂತರ ಹರಿಯುತ್ತಿರಬೇಕು. ಸಮಯಕ್ಕೆ ತಕ್ಕಂತೆ ವಿಕಾಸಗೊಳ್ಳುತ್ತಿದ್ದರೆ ರಾಷ್ಟ್ರದ ಶಕ್ತಿಯನ್ನು ಹೆಚ್ಚಿಸಲು ಅನುಕೂಲವಾಗುತ್ತದೆ. ಧರ್ಮವು ಸಂಸ್ಕೃತಿಯನ್ನು ತೋರಿಸುವ ಪ್ರತಿಬಿಂಬದಂತೆ ಇರಬೇಕಲ್ಲದೆ ಐಶ್ವರ್ಯೋಪಾಸನೆಯ ಮೂಲಕ ಭೋಗದ ಹೆಸರಿನಲ್ಲಿ ಸಾರ್ಥಕತೆಯ ಕಾಳ್ಗಿಚ್ಚಿನಲ್ಲಿ ಬೆಂದು ಹೋಗುವ ಧರ್ಮ ಪ್ರಚಾರ, ಕ್ಷಣಿಕ. ಅಷ್ಟೇ ಅಲ್ಲ ತತ್ವವಿಲ್ಲದ ಧರ್ಮ, ಮೂಢ ಶ್ರದ್ಧೆಯಲ್ಲಿ ಕೊನೆಗೊಂಡು ಒಂದಿಲ್ಲೊಂದು ದಿನ ನಾಶವಾಗಲೇಬೇಕು. ಲೋಕವೇ ನನ್ನ ಮನೆ, ಮಾನವಕುಲವೇ ನನ್ನ ಬಂಧು ವರ್ಗ ಎನ್ನುವ ಸುಮಧುರ ಭಾವನೆ ಬಂದಾಗ ಧರ್ಮದ ಸಾರ್ಥಕತೆ ಉಂಟಾಗುವದು. ಹೀಗೆಂದಾಕ್ಷಣ ಸ್ವಧರ್ಮವನ್ನು ಬಿಡಬೇಕೆ? ಹೇಗೆ? ಯಾವುದೆ ಧರ್ಮದ ತತ್ವದೊಳಗೆ ಬೆಳಕಿಲ್ಲದಿದ್ದರೆ ಭಾವಿಯಲ್ಲಿದ್ದ ಕಪ್ಪೆಯಂತೆ, ಶುಷ್ಕವೃಕ್ಷದಂತೆ, ನಿರರ್ಥಕವಾಗುವದು. ಧರ್ಮದಲ್ಲಿ ಮತಾಂಧತೆ ತುಂಬಿದ್ದರೆ ಸಮುದ್ರದಲ್ಲಿ ಈಸಲು ಕಷ್ಟವಾಗುವದು. ಯಾವಾಗಲೂ ಹಳೆಯದೆ ಸರಿ ಎಂಬ ಪ್ರಾಚೀನ ಪೂಜೆಯ ಮನೋಭಾವ ನಮ್ಮಲ್ಲಿ ಬೆಳೆಯುತ್ತ ಬಂದಿದೆ. ಹೊಸದನ್ನು ಯೋಚಿಸೋಣ ಅನ್ನುವದು ಮರೆತುಹೋಗಿದೆ. ನಾವು ಎಡವಿ ಬೀಳಬಹುದು, ಎಡವಿದಂತೆ ಹೆಚ್ಚು ಸುಧಾರಿಸುತ್ತ ಹೋಗುತ್ತೇವೆ. ಧರ್ಮದಲ್ಲಿ ಸಂಕುಚಿತ ಅಡ್ಡಗೋಡೆಯನ್ನೇ ಹಾಕಿದರೆ ಅದು ಕೊನೆಯವರೆಗೆ ಗೋಡೆಯಾಗಿಯೇ ಉಳಿಯುತ್ತದೆಯೇ ಹೊರತು ಮಾನವನಿಗೆ ಶಾಂತಿ ಸಮಾಧಾನ ದೊರೆಯಲಾರದು. ಮನುಷ್ಯನು ಸುಳ್ಳಾಡುತ್ತಾನೆಂಬುದು ನಿಜ. ಜೊತೆಗೆ ದೇವರೂ ಆಗಬಲ್ಲ ಶಕ್ತಿಯಿದೆ. ಯಾರು ಸ್ವಂತ ಯೋಚಿಸಿ ಪ್ರಕಾಶದ ಕಡೆಗೆ ಧಾರ್ಮಿಕ ಲೋಕದಲ್ಲಿ ಕಾಲಿರಿಸುವದಿಲ್ಲವೋ ಅವರಿಗೆ ಧರ್ಮದ ಅರಿವು ಅರ್ಥವಾಗುವದಿಲ್ಲ. ಧರ್ಮವು ವಿಶಾಲ ತಳಹದಿಯ ಮೇಲಿದ್ದು ಎಲ್ಲರನ್ನು ಒಳಗೊಳ್ಳುವ ವೈಶಾಲ್ಯ ಬಂದರೆ ಭಾವೈಕ್ಯ ಸಾಧ್ಯ. ಆಗ ಸ್ವಧರ್ಮ ನಿಷ್ಠೆ, ಪರಮಧರ್ಮ ಸಹಿಷ್ಣುತೆ ಉಂಟಾಗುತ್ತದೆ. ಹೃದಯವನ್ನು ಮೃದು ಮಾಡುವ ಮಹತ್ಸಾಧನೆಯು ಧರ್ಮವೇ ಹೊರತು ಮತ್ತೊಂದಿಲ್ಲ. ಧರ್ಮದ ಹೆಸರಿನಿಂದ ಘೋರತಮ ಅಸುರೀದ್ವೇಷಗಳು ಉಂಟಾಗಿ, ಮತಭ್ರಾಂತಿ ಹೆಚ್ಚಾಗಿ, ಕೊಲೆ–ಸುಲಿಗೆ ಸಾಕಷ್ಟಾಗಿದ್ದು ಕೇಳಿದ್ದೇವೆ. ಮತಗಳ ಪರಸ್ಪರ ತಿಕ್ಕಾಟದಿಂದ ದ್ವೇಷಾಸೂಯೆಗಳು ಹೆಚ್ಚಾದಾಗ ಮಹಾನ್ ವ್ಯಕ್ತಿಗಳು ಉದ್ಭವಿಸಿ ಶಾಂತಿ ಸೌಹಾರ್ದತೆಯನ್ನು ಜಗತ್ತಿನಲ್ಲಿ ಬೀರಿ ಸಮಾಧಾನ ಮಾಡಿದ್ದಾರೆ. ಧರ್ಮದಿಂದಲೇ ಸುಖ–ದುಃಖಗಳು ಸಂಭವಿಸಿದ್ದು ಇತಿಹಾಸದಿಂದ ನಮಗೆ ತಿಳಿದುಬರುತ್ತದೆ. ಮತಭ್ರಾಂತಿಯು ಬೆಳೆಯುತ್ತ ಹೋದರೆ, ಅರಿದರಿದು ತನ್ನ ತಾನಿರಿದುಕೊಂಬಂತೆ ಆಗುವದು. ಒಂದು ಧರ್ಮವು ಮಾನವಕೋಟಿಯ ಜನಸ್ತೋಮವನ್ನು ತೃಪ್ತಿಗೊಳಿಸಬೇಕಾದರೆ ವಿಭಿನ್ನ ಪ್ರಕೃತಿಯ ಜನರಿಗೆಲ್ಲ ಸಹಾಯವಾಗಬೇಕು. ಸತ್ಯಸಂಪ್ರೀತಿಯನ್ನು ನೀಡಬೇಕು. ಅಂದರೆ ಹೃದಯವನ್ನು ತೆರೆದು, ಸಂಕುಚಿತತನವನ್ನು ತೊರೆದು, ಧರ್ಮವನ್ನು ಪ್ರಚಾರ ಮಾಡಬೇಕು.

ಅದು ತಾತ್ವಿಕವಾಗಿರಬೇಕು. ಭಕ್ತಿಯುಕ್ತವಾಗಿರಬೇಕು. ಯೋಗಸಹಿತವಾಗಿರಬೇಕು. ಕ್ರಿಯೋತ್ತೇಜನಕಾರಿಯಾಗಿರಬೇಕು. ಅಂದರೆ ವಿಶ್ವ ಬಾಂಧವ್ಯ ಸಾಧ್ಯ.

ಧರ್ಮಕ್ಕೆ ನೀತಿಯೇ ಅಂಗ. ಪ್ರತಿಯೊಬ್ಬ ಮಾನವನಿಗೆ ಧರ್ಮವು ದಾರಿ–ದೀವಿಗೆ ಯಾದರೆ ಆಗ ಸುಖ ಶಾಂತಿ. ಈ ಎಲ್ಲ ವಿಚಾರಗಳ ಮೇಲಿಂದ ಅಂತಃಕರುಣ ಪ್ರವೃತ್ತಿ, ಅಂತಜ್ಞಾನ ಮತ್ತು ಅಂತಃಸ್ಫೂರ್ತಿ ಇವುಗಳು ಧರ್ಮಗಳ ಸಾರವೆಂದು ಹೇಳಬಹುದು.

ಪ್ರಪಂಚದಲ್ಲಿ ಹಲವು ಧರ್ಮಗಳು ಜನ್ಮ ತಾಳಿವೆ. ಅದರಲ್ಲಿ ಹೆಚ್ಚಾಗಿ ಹಿಂದು, ಕ್ರೈಸ್ತ, ಬೌದ್ಧ, ಇಸ್ಲಾಮ ಇವುಗಳು ಇದೀಗ ಪ್ರಪಂಚದಲ್ಲಿ ಒಡೆದು ಕಾಣುತ್ತಿವೆ ಮತ್ತು ಅವುಗಳ ಪ್ರಚಾರವೂ ಸಾಕಷ್ಟು ನಡೆದಿದೆ. ಈ ಎಲ್ಲ ಧರ್ಮಗಳಲ್ಲಿಯೂ ಒಳಪಂಗಡಗಳು ಹೆಚ್ಚಾಗಿ ಬೆಳೆಯುತ್ತಲಿವೆ. ಇವೆಲ್ಲವುಗಳ ಅಂತರಂಗವನ್ನು ಪಕ್ಷಿ ನೋಟದಿಂದ ನೋಡಿದರೆ ಅವುಗಳ ಅರ್ಥವು ಸಾಮಾನ್ಯವಾಗಿ ತಿಳಿಯದಿರದು. ಯಾವ ಧರ್ಮವನ್ನು ಒಳಹೊಕ್ಕು ನೋಡಿದರೂ ಸತ್ಯ, ಅಹಿಂಸೆ, ಕರುಣೆ, ಐಕ್ಯತೆ ತುಂಬಿ ತುಳುಕಿವೆ. ಈ ತತ್ವಗಳು ಕೃತಿಯಲ್ಲಿ ಬಂದಾಗ ವಿಶ್ವಕ್ಕೆ ಶಾಂತಿ ಸಿಗಬಹುದು.

ಏಸುವಿನ ಹೃದಯವಾಣಿಯನ್ನು ಆಲಿಸಿದಾಗ ಆ ಧರ್ಮದಲ್ಲಿರುವ ಕರುಣೆ ಅಪಾರವಾಗಿ ಕಂಡು ಬರುವದು. ನಮ್ಮ ಸ್ವಭಾವ ಅಹಂಕಾರದಿಂದಲೋ ದ್ವೇಷದಿಂದಲೋ ಎಷ್ಟೇ ವಿಕೃತಗೊಂಡರೂ ನಮ್ಮಲ್ಲಿರುವ ದಿವ್ಯ ತತ್ವವನ್ನು ತಿಳಿಸಲಾರೆವು ನಾವು ದೇವರನ್ನು ಎಲ್ಲಿಯೂ ಕಾಣದಿದ್ದರೆ ಅವನನ್ನು ನಾವು ಎಲ್ಲಿಯೂ ಕಾಣೆವು.

ಕೆಟ್ಟವರ ಮೇಲೆಯೂ ಒಳ್ಳೆಯವರ ಮೇಲೆಯೂ ಸಮನಾಗಿ, ಸೂರ್ಯ ಹೊಳೆದಂತೆ, ನ್ಯಾಯದ ಮೇಲೂ ಅನ್ಯಾಯದ ಮೇಲೂ ದೇವರು ಸಮನಾಗಿ ತನ್ನ ಮಳೆಯನ್ನು ಅವನು ಕರೆಯುತ್ತಾನೆ.

"Heal the sick, cleanse the lepers, Raise the dead cast out Devils, Freely ye have received, Freely give."

ಈ ನುಡಿಗಳು ಏಸುವಿನ ಮುಖ್ಯ ಸಂದೇಶ. ಸದಾಚಾರವಂತಾಗಿರುವವರನ್ನು ಏಸು ತನ್ನ ಮಿತ್ರರೆಂದು ಭಾವಿಸಿದ್ದಾನೆ. ಇದೇ ಕ್ರಿಸ್ತಮತದ ಸಿದ್ಧಾಂತವೆಂದು ಪ್ರತಿ ಪಾದಿಸಿದರೆ ಇಸ್ಲಾಮ ಧರ್ಮದವರು ಎಲ್ಲರೊಡನೆ ಬಂಧುಗಳಂತೆ ವರ್ತಿಸಿ ಸದಾಚಾರ ವನ್ನು ಪಾಲಿಸಿ ಕಾಯಕಷ್ಟದಿಂದ ದುಡಿದು ಅಲ್ಲಾನನ್ನು ನಂಬಿಕೊಂಡಿರುವುದೇ ಇಸ್ಲಾಮ ಧರ್ಮದ ಒಳಗುಟ್ಟು ಎಂಬುದಾಗಿ ತಿಳಿಸುತ್ತ ಸರ್ವಾರ್ಪಣ ಭಾವನೆಗೆ ಹೆಚ್ಚು ಪ್ರಾಧಾನ್ಯತೆ ನೀಡಿದ್ದಾರಲ್ಲದೆ ಐಕ್ಯತೆಗೂ ಮಹತ್ವ ಕೊಟ್ಟಿದ್ದಾರೆ.

**ಬೌದ್ಧ ಧರ್ಮ**

ಕ್ರಿಶ್ಚಿಯನ್ ಧರ್ಮದಲ್ಲಿ ಏಸುವಿಗೆ ಯಾವ ಸ್ಥಾನವಿದೆಯೋ ಅದೇ ಸ್ಥಾನವು ಬೌದ್ಧ ಧರ್ಮದಲ್ಲಿಯೂ ಬುದ್ಧನಿಗೆ ಮೀಸಲಾಗಿರಿಸಿದೆ. ಬುದ್ಧನು ಸಕಲ ಜೀವರಾಶಿ ಗಳ ದುಃಖವನ್ನು ಕಂಡು ಮರುಗಿ, ಅವರೆಲ್ಲರ ದುಃಖವನ್ನು ನಿವಾರಣೆಮಾಡಿದ ದಯಾ

ಮೂರ್ತಿ. ಸತ್ಯಾರಾಧಕನಾಗಿರುವ ಬುದ್ಧನು ಹಿಂದೂ ಧರ್ಮದಲ್ಲಿರುವ ಅನಂತ ಸತ್ಯಾಂಶಗಳನ್ನು ಬೆಳಕಿಗೆ ತಂದು ಪ್ರಚಾರ ಮಾಡಿದರು. ಭಾರತದ ಪ್ರತಿಭೆ ಎದ್ದು ಕಾಣುವಂತೆ ಮಾಡಿದವರಲ್ಲಿ ಬುದ್ಧನೂ ಸಹ ಅಗ್ರಗಣ್ಯ. ಹಿಂದೂ ಧರ್ಮಕ್ಕೂ ಬೌದ್ಧ ಧರ್ಮಕ್ಕೂ ಬಹಳ ಹೊಂದಾಣಿಕೆಯಾಗಿದೆ. ಬುದ್ಧನು ಸಾಮಾನ್ಯರ ಆತ್ಮವನ್ನು ಜಾಗೃತ ಗೊಳಿಸಿದನು ಸಮಸ್ಯಾತ್ಮಕ ಜೀವನ ಪ್ರವಾಹದಲ್ಲಿ ಸತ್ಯಾನ್ವೇಷಿ ಬುದ್ಧನು ಜ್ಞಾನ ಸಾಗರದಲ್ಲಿ ಧುಮುಕಿ ಅನರ್ಘ್ಯ ಸದ್ಗುಣಗಳೆಂಬ ರತ್ನಗಳನ್ನು ತಂದು ಪ್ರಪಂಚದ ತುಂಬೆಲ್ಲ ಪ್ರಚಾರ ಮಾಡಿದನು. ಭಾರತೀಯರಿಗೆ ಅನುಕೂಲವಾಗುವಂತಹ ಅಹಿಂಸೆ, ಸತ್ಯ ಮುಂತಾದ ಗುರಿಗಳನ್ನು ತನ್ನ ಪಾವಿತ್ರ್ಯ ಚಾರಿತ್ರ್ಯದಿಂದ ಅಳವಡಿಸಿಕೊಂಡಿದ್ದರ ಪರಿಣಾಮವಾಗಿ ಬೌದ್ಧಧರ್ಮದ ಪ್ರಚಾರಕ್ಕೆ ಪ್ರಚಾರಕರು ಹೆಚ್ಚಾಗಿ ಬೌದ್ಧ ಧರ್ಮವು ಯಶಸ್ವಿಯಾಗಲು ಕಾರಣವಾಯ್ತು ಮತ್ತು ವಿವಿಧ ಜನಾಂಗದವರೊಡನೆ ಬೆರೆತು ಕೊಳ್ಳಲು ಅನುಕೂಲವಾಯಿತು. ಈ ರೀತಿ ಬೆರೆತುಕೊಂಡಿರುವದರ ಪರಿಣಾಮವಾಗಿ ಜಗತ್ತಿನ ತುಂಬೆಲ್ಲ ಬೌದ್ಧ ಧರ್ಮವು ಹರಡಿತು. ಸಾಮಾಜಿಕ ಪ್ರಗತಿ, ಧಾರ್ಮಿಕ ಪ್ರಗತಿ, ನೈತಿಕ ಪ್ರಗತಿಯು ಹುಲುಸಾಗಿ ಬೆಳೆದು ಮಾನವ ಕೋಟಿಯನ್ನು ಬೌದ್ಧ ಧರ್ಮವು ಉದ್ಧಾರ ಮಾಡಿತು. ಜಪಾನದಲ್ಲಿರುವ ಸ್ಥಾನಿಕ ಸಂಪ್ರದಾಯಗಳನ್ನು ಬೋಧಿಸತ್ವಗಳೊಡನೆ ಒಂದುಗೂಡಿಸಿ ಪರಸ್ಪರ ಸಹಕಾರವನ್ನು ಬುದ್ಧ ಧರ್ಮವು ಬಿತ್ತಿತು.

ಬುದ್ಧಂ ಸರಣಂ ಗಚ್ಛಾಮಿ
ಧಮ್ಮಂ ಸರಣಂ ಗಚ್ಛಾಮಿ
ಸಂಘಂ ಸರಣಂ ಗಚ್ಛಾಮಿ

ಈ ಮಂತ್ರವೇ ಬೌದ್ಧದೀಕ್ಷೆಗೆ ಮೂಲಕಾರಣವಾದುದು.

ಯೋಚ ಬುದ್ಧಂಚ ಧಮ್ಮಂಚ
ಸಂಘಂಚ ಸರಣಂ ಗತೋ.
ಚತ್ತಾರಿ ಅರಿಯ ಸಚ್ಛಾನಿ ಸಮುಪ್ಪಜ್ಞಾಯ
ಪಸ್ಸತಿ, ಅತ್ತ ದೀಪ ಅತ್ತ ಸರಣಾ ಅನನ್ಯ
ಸರಣಾ ಧರ್ಮದೀಪಾ ಧರ್ಮಸರಣಾ ಹೋತ॥

ಬುದ್ಧ ಧರ್ಮ ಸಂಘಗಳಿಗೆ ಶರಣು ಬಂದ ಮಾನವನು ನಾಲ್ಕು ಆರ್ಯಸತ್ಯಗಳನ್ನು ತಿಳಿದುಕೊಳ್ಳಬೇಕು ಮತ್ತು ಧರ್ಮವನ್ನು ಮಾತೃದೀಪ ಮಾಡಿಕೊಂಡು ಧರ್ಮಕ್ಕೆ ಶರಣು ಹೋಗುವದೇ ಬೌದ್ಧಧರ್ಮದ ಮೂಲ ಸಿದ್ಧಾಂತ ಧ್ಯಾನವು ಮನುಷ್ಯನನ್ನು ಪೂರ್ಣವಾಗಿ ಮಾರ್ಪಾಡಿಸುವ ಧ್ಯೇಯವನ್ನು ಒಂದಾಗಿಸುವ ಶಕ್ತಿಯಾಗಿದೆ ಬೌದ್ಧ ಧರ್ಮ.

**ಹಿಂದೂ ಧರ್ಮ**

ಹಿಂದೂ ಧರ್ಮಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ಬಹು ಪ್ರಾಚೀನ ಕಾಲದಿಂದಲೂ ವೇದಗಳಿಗೆ ಪ್ರಾಧಾನ್ಯತೆಯನ್ನು ನೀಡುತ್ತ ಬಂದಿದೆ. ವೇದಾಗಮ ಉಪನಿಷತ್ತುಗಳೇ ಹಿಂದೂ ಸಂಸ್ಕೃತಿಯ ಬೆಳವಣಿಗೆಗೆ ಮೂಲಾಧಾರ. ಹಿಂದೂಗಳು ತಮ್ಮ ಧರ್ಮವನ್ನು ದಿವ್ಯಜ್ಞಾನದಿಂದ ವೇದಗಳಿಂದ ಪಡೆದಿದ್ದಾರೆ. ಸೃಷ್ಟಿಗೆ ಆದಿ ಅಂತ್ಯವಿಲ್ಲವೆಂದು ವೇದಗಳು ಹೇಳುತ್ತವೆ. ಈಶ್ವರ ಶಕ್ತಿಯಿಂದ ಈ ಸೃಷ್ಟಿಯಾಗುತ್ತದೆ ಮತ್ತು ಲಯವಾಗುತ್ತದೆ: ಇದಕ್ಕೆ ಮೊದಲಿಲ್ಲ ಕೊನೆಯಿಲ್ಲ.

ಭಗವಂತನು ನೀರಿನಲ್ಲಿರುವ ಕಮಲದಂತೆ, ಮನುಷ್ಯನು ಪ್ರಪಂಚದಲ್ಲಿ ಬಾಳ ಬೇಕೆಂದು ಬೋಧಿಸುವ ಸ್ವಾಮಿ ವಿವೇಕಾನಂದರು ಒಂದೆಡೆ,

"ಹಿಂದೂ ಧರ್ಮಕ್ಕೂ ಇತರ ಧರ್ಮಗಳಿಗೂ ಒಂದು ಭಾವನೆಯಲ್ಲಿ ವ್ಯತ್ಯಾಸವಿದೆ. ಯಾವ ಒಂದು ಭಾವನೆಯನ್ನು ವಿವರಿಸುವದಕ್ಕೆ ಹಿಂದೂಗಳು ಸಂಸ್ಕೃತ ಭಾಷೆಯ ಭಾಂಡಾರವನ್ನೇ ಬರಿದು ಮಾಡುವರೋ ಅದೇ ಇದು, ಅಂದರೆ ಮಾನವನು ಈ ಜನ್ಮ ದಲ್ಲಿಯೇ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬುದು."

ದೇವರನ್ನು ಅರಿಯುವುದೆಂದರೆ ದೇವರಾದಂತೆ ಮತ್ತು "ನಾನು ಆತ್ಮವನ್ನೂ ದೇವರನ್ನೂ ನೋಡಿದ್ದೇನೆ" ಎಂಬುದೇ ಹಿಂದೂ ಧರ್ಮ, ಹಿಂದೂ ಧರ್ಮದ ಪ್ರಕಾರ ಮನುಷ್ಯನು ಅಸತ್ಯದಿಂದ ಸತ್ಯದೆಡೆಗೆ ಯಾತ್ರೆ ಮಾಡುತ್ತಿಲ್ಲ. ಒಂದು ಸತ್ಯದಿಂದ ಮತ್ತೊಂದು ಸತ್ಯಕ್ಕೆ ಹೋಗುತ್ತಿದ್ದಾನೆ ಎಂದು ಮುಂತಾಗಿ ಪ್ರತಿಪಾದಿಸಿರುವನು. ಭಾರತೀಯನು ತನ್ನ ದೇಹವನ್ನೇ ದಂಡಿಸಿಕೊಳ್ಳುತ್ತಾನೆಯೇ ಹೊರತು ತನ್ನ ನೆರೆಯವನ ಕುತ್ತಿಗೆಯನ್ನು ಎಂದೂ ಕತ್ತರಿಸುವದಿಲ್ಲ. ಭಾರತವು ಅನ್ಯಧರ್ಮದವರ ಬೆಳವಣಿಗೆಗೆ ಪ್ರೋತ್ಸಾಹವಿತ್ತಿರುವದಲ್ಲದೆ ಅವರ ಪ್ರಚಾರಕ್ಕೆ ಸಹಕಾರಿಯಾಗಿ ಸಹಾಯ ಸಲ್ಲಿಸಿದೆ.

ಪೋಣಿಸಿದ ಮಣಿಗಳ ಮಧ್ಯದಲ್ಲಿರುವ ದಾರದಂತೆ ಎಲ್ಲ ಮತಗಳಲ್ಲಿಯೂ ನಾನಿದ್ದೇನೆ. "ಎಲ್ಲೆಲ್ಲಿ ವಿಭೂತಿಯಿದೆಯೋ ಅಲ್ಲಲ್ಲಿ ನನ್ನ ಅಂಶವೇ ಅದೆ ಎಂದು ತಿಳಿ" ಎಂಬುದಾಗಿ ಭಗವಾನ್ ಶ್ರೀ ಕೃಷ್ಣನು ಹೇಳಿದ್ದಾನೆ. ಹಿಂದೂ ಧರ್ಮವೆಂಬ ಮಹಾವೃಕ್ಷಕ್ಕೆ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶೈವ, ವೀರಶೈವ, ಜೈನ ಮುಂತಾದ ಅನೇಕ ದರ್ಶನಗಳು ಶಾಖೋಪಶಾಖೆಯಾಗಿ ಪಲ್ಲವಿಸಿ ಬೆಳೆಯುತ್ತ ಬಂದು ತಂತಮ್ಮ ಸಿದ್ಧಾಂತವನ್ನು ಪ್ರತಿಪಾದಿಸಿವೆ.

**ವೀರಶೈವ ಧರ್ಮ**

ವೀರಶೈವ ಧರ್ಮವು ಭಾರತೀಯ ಧರ್ಮಗಳಲ್ಲಿ ಗಣ್ಯಸ್ಥಾನ ಪಡೆದಿದೆ ಮತ್ತು ವೇದ, ಶಿವಾಗಮಗಳಿಂದ ಸಿದ್ಧವಾದುದು ಶಿವನನ್ನು ಬಿಟ್ಟು ಶಕ್ತಿಯೂ, ಶಕ್ತಿಯನ್ನು ಬಿಟ್ಟು ಶಿವನೂ ಇರುವದಿಲ್ಲವೆಂದು ಹೇಳುವದೇ ವೀರಶೈವ ಸಿದ್ಧಾಂತದ ಮೂಲಗುರಿ.

ಸಮತೆಯು ವೀರಶೈವರ ಮುಖ್ಯ ಸೂತ್ರ. ಸಹಸ್ರಾರು ವರ್ಷಗಳಿಂದ ಜಗತ್ತಿನ ಜನತೆಯಲ್ಲಿ ಬೇರು ಬಿಟ್ಟಿದ್ದ ಮೇಲು ಕೀಳೆಂಬ ಭಾವನೆಯನ್ನು ವೀರಶೈವವು ತೊಡೆದು

ಹಾಕಿತು. ಅಲ್ಲದೇ ಎಲ್ಲರೂ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಿದ್ಧರಾಗಿರಿ ಎಂದು ಹೇಳಿ ಎಚ್ಚರಿಸಿತು. ವೀರಶೈವ ಸಿದ್ಧಾಂತ. ಜಾಗತಿಕ ಶಾಂತಿಗಾಗಿ ವೀರಶೈವ ಸಿದ್ಧಾಂತದಲ್ಲಿ ಹಲವು ನುಡಿಮುತ್ತುಗಳು ದೊರೆಯುತ್ತವೆ. ವೀರಶೈವವು ಸಂಕುಚಿತ ಮನೋಭೂಮಿಕೆ ಯನ್ನು ತೊಟ್ಟಿಲ್ಲ. ಅದರ ದೃಷ್ಟಿಯಲ್ಲಿ ವಿಶ್ವವೇ ಇರುವದು. ವಿಶ್ವದ ಉದ್ಧಾರವೇ ವೀರಶೈವದ ಗುರಿ. ಪುರುಷರಂತೆ ಸ್ತ್ರೀಯರಿಗೂ ವೀರಶೈವ ಸಿದ್ಧಾಂತದಲ್ಲಿ ಸಮತೆ ಯನ್ನು ಕಲಿಸಿಕೊಟ್ಟಿದೆ. ಹಸಿದ ಜಗತ್ತಿಗೆ ಬೇಕಾಗಿರುವ ಅನ್ನ, ಅರಿವೆ, ಅರಿವುಗಳಿ ಗಾಗಿ ವೀರಶೈವ ಶರಣರು ಅನೇಕ ರೀತಿಯಾಗಿ ದಾರಿಯನ್ನು ತೋರಿಸಿಕೊಟ್ಟಿದ್ದಾರೆ. ಇಂದು ಜಗತ್ತಿಗೆ ಬೇಕಾಗಿರುವ ಉದ್ಯೋಗಪ್ರಿಯತೆ, ಆರ್ಥಿಕ ಸುಧಾರಣೆ ಸಮಾನ ಶೀಲತೆ, ಮುಖ್ಯವಾಗಿ ಆಧ್ಯಾತ್ಮಿಕತೆ ಇವುಗಳ ಬಗೆಗೆ ವೀರಶೈವ ಶರಣರು ತಮ್ಮ ಅನುಭವಪೂರಿತ ವಚನ ಸಾಹಿತ್ಯವನ್ನು ಜಗತ್ತಿಗೆ ನೀಡಿದ್ದಾರೆ. ವೀರಶೈವ ಸಿದ್ಧಾಂತ ವನ್ನು ಪ್ರಗತಿಪರ ರೀತಿಯಲ್ಲಿ ಜನ ಜಾಗೃತಿಗಾಗಿ ಬೆಳಕಿಗೆ ತಂದವರು ವೀರಶೈವ ಸಮಾಜೋದ್ಧಾರಕರಾದ ಮಹಾತ್ಮಾ ಬಸವಣ್ಣನವರು. ಮಹಾತ್ಮಾ ಬಸವಣ್ಣನವರ ವ್ಯಕ್ತಿತ್ವ ಪ್ರಭಾವದಿಂದ "ಶಿವಾನುಭವ ಮಂಟಪವು" ರಚನೆಯಾಗಿ ಅದರ ಮೂಲಕ ಅನೇಕ ಶರಣ ಶರಣೆಯರು ಆತ್ಮೋನ್ನತಿಯನ್ನು ಪಡೆದು ವಚನ ಸಾಹಿತ್ಯವನ್ನು ರಚಿಸಿ ಜನಜಾಗೃತಿ ಮಾಡಿದರು "ಶಿವಾನುಭವ ಮಂಟಪ" ಅಂದರೆ ಈಗಿನ **'Spiritual Academy'** ಎನ್ನಬಹುದು. ಅಲ್ಲಿ ಸಕಲ ಧರ್ಮೀಯರು ಬಂದು ತಮ್ಮ ತತ್ವಗಳನ್ನು ವಿಶದೀಪಡಿಸಿ ಮಾನವಕುಲದ ಉದ್ಧಾರಕ್ಕಾಗಿ ಹೆಣಗುವವೇ ಅದರ ಗುರಿ ಯಾಗಿತ್ತು. ಈ ಅನುಭವ ಮಂಟಪವು ಪ್ರಭುದೇವರ ಅಧ್ಯಕ್ಷತೆಯಲ್ಲಿ ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚರಸ, ಅಕ್ಕಮಹಾದೇವಿ ಮುಂತಾದ ಶರಣ ಶರಣೆಯರ ಸಂಘಟನೆಯಲ್ಲಿ ಧಾರ್ಮಿಕ ಚರ್ಚೆನಡೆಯುತ್ತಿತ್ತು. ಅಲ್ಲಿಯ ಶರಣರು ನುಡಿದಿರುವ ಅಂದಿನ ವಚನಗಳು ಇಂದಿನ ಜಾಗತಿಕ ಶಾಂತಿಗಾಗಿ ತಾರಕಮಂತ್ರಗಳಾಗಿವೆ.

ಮಹಾತ್ಮಾ ಬಸವಣ್ಣನವರು ತಮ್ಮ ವಚನಗಳಲ್ಲಿ ಈ ರೀತಿ ತಿಳಿಸಿದ್ದಾರೆ.

೧. "ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ ತನ್ನ–ಬಣ್ಣಿಸ ಬೇಡ ಇದಿರು ಹಳಿಯಲುಬೇಡ. ಇದೇ ಅಂತರಂಗದ ಶುದ್ಧಿ ಇದೇ ಬಹಿರಂಗಶುದ್ಧಿ ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ.

೨. ದಯವಿಲ್ಲದ ಧರ್ಮವಾವುದಯ್ಯಾ ದಯವಿರಬೇಕು ಸಕಲ ಪ್ರಾಣಿ ಗಳೆಲ್ಲರಲ್ಲಿ.

೩. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು.

೪. ದೇವನೊಬ್ಬ ನಾಮ ಹಲವು, ಪರಮ ಪತಿವ್ರತೆಗೆ ಗಂಡನೊಬ್ಬ ಕಾಣಿರೋ.

೫. ಕಾಯಕವೇ ಕೈಲಾಸ........

೬. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೂಡಲಸಂಗನ ಶರಣರೇ ಕುಲಜರು.

ಈ ಎಲ್ಲ ತತ್ವಗಳು ವೀರಶೈವ ಸಿದ್ಧಾಂತದಲ್ಲಿ ಅಡಗಿಕೊಂಡಿವೆ. ವಿಶ್ವಶಾಂತಿಗೆ ವೀರಶೈವದ ಶ್ರೇಷ್ಠವಾದ ಕೊಡುಗೆ ಅಂದರೆ ಈ "ಕಾಯಕವೇ ಕೈಲಾಸ" (Work is Worship) ಈ ತತ್ವವೆಂದು ಹೇಳಬಹುದು. ವೀರಶೈವರಲ್ಲಿ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಶೋಷಣೆಯಿಂದ ಪೋಷಣೆ ಪಡೆಯಲಾರನು. ಆಲಸ್ಯತನಕ್ಕೆ, ಸೋಮಾರಿತನಕ್ಕೆ ನಿಷ್ಕ್ರಿಯೆ, ನಿಷ್ಕರ್ಮಗಳಿಗೆ ಭಿಕ್ಷೆ ಮುಂತಾದ ವೃತ್ತಿಗಳಿಗೆ ವೀರಶೈವರಲ್ಲಿ ಎಡೆಯೇ ಇಲ್ಲ. "ಬೇಡಿ ಉಣ್ಣುವದು ಪಾಪ, ಮಾಡಿ ಉಣ್ಣುವದು ಪುಣ್ಯ".

ವೀರಶೈವ ಧರ್ಮದಲ್ಲಿ ಒಡೆದು ಕಾಣತಕ್ಕ ತತ್ವಗಳು.

೧ ಪವಿತ್ರ ಭಾವನೆಯಿಂದ ಕೆಲಸ ಮಾಡುವುದೇ ಪ್ರಗತಿಯ ಹಾದಿ.

೨ ಧರ್ಮದ ದೃಷ್ಟಿಯಲ್ಲಿ ಸ್ತ್ರಿ ಪುರುಷರು ಸಮಾನರು.

೩ ಜಾತಿ ಭೇದಗಳು ಜನತೆಯ ಉನ್ನತಿಗೆ ಕಂಟಕ.

೪ ಸಮಾಜದಲ್ಲಿ ಅಸ್ಪೃಶ್ಯತೆ ಇರಬಾರದು.

೫ ತತ್ವಗಳು ಅನುಭವದ ಒರೆಗಲ್ಲಿಗೆ ನಿಲ್ಲಬೇಕು.

೬ ಮನುಷ್ಯನು ಸದಾ ಅಂತರಂಗ ಬಹಿರಂಗ ಶುದ್ಧನಾಗಿ ವರ್ತಿಸಬೇಕು.

೭ ಪ್ರಪಂಚವು ಅಗತ್ಯವೆಂದೂ ದೇಹವು ನಶ್ವರವೆಂದೂ ಉಪೇಕ್ಷಿಸಬಾರದು.

ಶರಣರು ಎಲ್ಲ ಪ್ರಾಣಿಗಳ ಹಿತಸಾಧನೆಗಾಗಿಯೂ ಶ್ರಮಿಸಬೇಕು. ಈ ತೆರನಾಗಿ ವೀರಶೈವ ಶರಣರು ಜಾಗತಿಕ ಶಾಂತಿಗಾಗಿ ತಮ್ಮ ಅಮರ ಜೀವನದಲ್ಲಿಯ ಸಿದ್ಧಾಂತಗಳನ್ನು ಇಟ್ಟಿದ್ದಾರೆ.

## ಶಾಂತಿಯ ಅವಶ್ಯಕತೆ

ಶಾಂತಿಯಿಲ್ಲದ ವ್ಯಕ್ತಿ, ಶಾಂತಿಯಿಲ್ಲದ ರಾಷ್ಟ್ರವು, ಶಾಂತಿಯಿಲ್ಲದ ಜಗತ್ತು ನೀರಿರದ ಕೆರೆಯಂತೆ ವ್ಯರ್ಥವಾಗುವದು. ಶಾಂತಿಯಿಲ್ಲದೆ ಧರ್ಮವಿಲ್ಲ, ಧರ್ಮವಿಲ್ಲದೆ ಶಾಂತಿಯಿಲ್ಲ. ಇವೆರಡೂ ಪರಸ್ಪರ ಪೂರಕಗಳಾಗಿವೆ. ಶಾಂತಿ ಸ್ಥಾಪನೆಗೆ ಮೂಲಭೂತವಾದ ಉಪಾಯವೇ ಕಾಯಕ. ಸಕಲ ಜೀವಾತ್ಮರಿಗೆ ಲೇಸನೇ ಒಮ್ಮನಸ್ಸಿನಿಂದ ಬಯಸಿದರೆ ಶಾಂತಿಯು ಲಭ್ಯವಾಗುವದು. ಧರ್ಮದಲ್ಲಿ ರಾಜಕೀಯ ಸೇರಿದರೆ ಅಶಾಂತಿ. ರಾಜಕೀಯದಲ್ಲಿ ಧರ್ಮ ಸೇರಿದರೆ ಶಾಂತಿ. ಭಾರತದ ಪ್ರಾಚೀನ ರಾಜಕೀಯ ಇತಿಹಾಸವನ್ನು ನೋಡಿದರೆ, ರಾಜಮಹಾರಾಜರ ಗುರುಗಳು ಋಷಿಗಳು ಇರುತ್ತಾರೆ.

ಪ್ರಪಂಚದ ಧರ್ಮಗಳಲ್ಲಿ ಸಮನ್ವಯ ದೃಷ್ಟಿ ಬಂದಾಗ ಶಾಂತಿ ಮತ್ತು ಸಮಾಧಾನ. ಎಲ್ಲ ಧರ್ಮಗಳಲ್ಲಿರುವ ಬೆಳಕನ್ನು ಪ್ರಪಂಚದ ಶಾಂತಿಗಾಗಿ ಪ್ರಯತ್ನಿಸಿದರೆ ಸಾರ್ಥಕತೆ. ಯುದ್ಧದಿಂದ ಎಂದಿಗೂ ಶಾಂತಿ ಸಿಗಲಾರದು. ಯುದ್ಧದಿಂದ ಮತ್ತಷ್ಟು ದ್ವೇಷಜ್ವಾಲೆ

ಗಳು ಉದ್ಭವಿಸುತ್ತವೆಯೇ ಹೊರತು ಶಾಂತಿ ಸಮಾಧಾನಗಳು ದೊರೆಯಲಾರವು. ಈಗಿನ ಮನ್ವಂತರದಲ್ಲಿ ಪ್ರತಿಯೊಂದು ಪ್ರಬಲ ರಾಷ್ಟ್ರಗಳು ರಾಷ್ಟ್ರದ ಸಂಪತ್ತನ್ನು ಯುದ್ಧದ ಸಲುವಾಗಿ ವ್ಯಯಿಸುತ್ತಿರುವದು ಕಂಡುಬರುತ್ತದೆ. ಆದರೆ ಆ ಸಂಪತ್ತನ್ನೇ ರಾಷ್ಟ್ರದ ಶಾಂತಿ ಸ್ಥಾಪನೆಯ ಕಾರ್ಯಗಳಿಗೆ ಉಪಯೋಗಿಸಿದರೆ ಇಡೀ ಪ್ರಪಂಚವೇ ಸಂಪದ್ಭರಿತವೂ ಶಾಂತಿಯುಕ್ತವೂ ಆಗುವದು. ಯುದ್ಧ ಸನ್ನಾಹ ಪೂರ್ವದಲ್ಲಿಯೇ ಶಾಂತಿ ಸ್ಥಾಪನೆಗೆ ಹೋರಾಡಿ ಕಾರ್ಯ ರೂಪದಲ್ಲಿ ತರುವದೇ ಧರ್ಮ. ವ್ಯಷ್ಟಿಯ ಭಾವದಿಂದ ಸಮಷ್ಟಿಯ ಭಾವದೆಡೆಗೆ ಪೋಗುವದೇ ಧರ್ಮ.

ಒಂದೆಡೆ ಸರ್ ರಾಧಾಕೃಷ್ಣನ್ನರು ಹೀಗೆ ಹೇಳಿದ್ದಾರೆ.

**A truely religious man is one who is devoid of any sence of egoism, of any passion, of any hatred of any ill will. Even when you are fighting you are expected to fight without hatred. It is not true to say that we cannot fight unless we hate enemy. It is possible for us to our duty even in fighting without ill will or without any kind of hatred.**

ಮಹಾತ್ಮಾ ಗಾಂಧಿಯವರು ಧರ್ಮದ ಬಗ್ಗೆ ಈ ರೀತಿ ತಿಳಿಸಿದ್ದಾರೆ.

"ಜಗತ್ತಿನ ಇತಿಹಾಸದ ಪುಟಗಳು ಧರ್ಮಸಂಗ್ರಾಮಗಳ ರಕ್ತರಂಜನೆಯಿಂದ ಕಳಂಕಿತವಾಗಿದೆ. ಒಂದು ಧರ್ಮವು ಅದರ ಹಿಂಬಾಲಕರ ಶುಚಿತ್ವ ಸತ್ಕಾರ್ಯಗಳಿಂದ ರಕ್ಷಿಸಲ್ಪಡುವದೇ ವಿನಾ ಅನ್ಯಮತೀಯರೊಡನೆ ಅವರು ಮಾಡುವ ಜಗಳಗಳಿಂದ ಎಂದಿಗೂ ರಕ್ಷಿಸಲ್ಪಡದು".

ಮತ್ತೊಂದೆಡೆ ಈ ರೀತಿ ತಿಳಿಸಿದ್ದಾರೆ.

"ಯಾವ ಧರ್ಮವನ್ನು ಬುದ್ಧಿವಂತರೂ ಸಜ್ಜನರೂ ಸದಾರಾಗದ್ವೇಷದಿಂದ ವಿಮುಕ್ತರೂ ಆದವರು ಆಚರಿಸುವರೋ ಯಾವ ಧರ್ಮವು ಹೃದಯವನ್ನು ಮುಟ್ಟು ವದೋ ಅದೇ ನಿಜವಾದ ಧರ್ಮವೆಂದು ತಿಳಿ".

ಅಧರ್ಮವು ಧರ್ಮದ ಸೋಗಿನಲ್ಲಿ ಮೆರೆಯುತ್ತಿರುವ ಈ ದಿವಸಗಳಲ್ಲಿ ಜಗತ್ತಿನ ವಿವಿಧ ಧರ್ಮಗಳ ಪ್ರತಿಭಾವಂತರ ಭಾವನೆಗಳನ್ನು ಹೇಳಿಕೆಗಳನ್ನು ನಾನು ಜ್ಞಾಪಿಸಿ ಕೊಂಡರೆ ಉತ್ತಮ. ಭಾವಿಯಲ್ಲಿರುವ ಕಪ್ಪೆಯು ತನ್ನ ಭಾವಿಯ ಸುತ್ತಣ ಗೋಡೆಯಿಂದ ಆಚೆ ಬೇರೆ ಪ್ರಪಂಚವೇ ಇಲ್ಲವೆಂದು ಭಾವಿಸುವಂತೆ ನಮ್ಮ ಧರ್ಮವೊಂದೇ ಪರಿಪೂರ್ಣ ಸತ್ಯವನ್ನು ಪ್ರತಿಬಿಂಬಿಸುವದೆಂದೂ ಇತರ ಧರ್ಮಗಳೆಲ್ಲ ಅಸತ್ಯವೆಂದೂ ನಾವು ಭಾವಿಸ ಬಾರದು. ಪೂಜ್ಯಭಾವದಿಂದ ಪ್ರಪಂಚದ ಇತರ ಧರ್ಮಗಳನ್ನು ವ್ಯಾಸಂಗಗೈದರೆ ಎಲ್ಲ ಧರ್ಮಗಳೂ ಅನಿವಾರ್ಯವಾಗಿಯೇ ಅಪರಿಪೂರ್ಣವಾಗಿದ್ದರೂ ಎಲ್ಲವೂ ನಮ್ಮ ಧರ್ಮಕ್ಕೆ ಸಮಾನವಾಗಿಯೇ ಸತ್ಯವೆಂಬುದು ಗೋಚರಿಸುತ್ತದೆಂದು ವಿಚಾರಾತ್ಮಕವಾಗಿ

ವಿವೇಚನಾತ್ಮಕವಾಗಿ ವಿವರಿಸಿದ್ದಾರೆ. ಈ ತರಹದ ಧರ್ಮದೃಷ್ಟಿಯನ್ನು ಪ್ರಪಂಚದ ತುಂಬೆಲ್ಲ ಪ್ರಸಾರ ಮಾಡಿದರೆ ಶಾಂತಿ. ಕೇವಲ ಧರ್ಮಪ್ರತಿಪಾದನೆ ಮಾಡಿದರೆ ಸಾಲದು, ಅದರಂತೆ ಆಚರಿಸಿದರೆ ಅದರ ಉಪಯೋಗ.

ಡಾ. ಸರ್ ರಾಧಾಕೃಷ್ಣನ್ನರು ಧರ್ಮದ ವ್ಯಾಖ್ಯೆ ಮಾಡುತ್ತ ಹೀಗೆ ಹೇಳಿರುವರು.

"Eastern religions, Hinduism, Buddhism and others influenced by them have been looking upon different religious not as rivals but as friendly partners in nourishing the spiritual life of mankind. Their approach to religion has been essention-ally empirical. Religion is an experience".

ಆದಕ್ಕಾಗಿ ಶಾಂತಿಸ್ಥಾಪನೆಗೆ ಧರ್ಮದ ಅವಶ್ಯಕತೆ ಅತ್ಯಂತ ಮಹತ್ವದ್ದು. ವಿಜ್ಞಾನ ಸಂಶೋಧನೆಯಿಂದ ಎಷ್ಟೋ ರಾಷ್ಟ್ರಗಳು ಮುಂದೆ ಹೋಗುತ್ತಿರಬಹುದು. ಆದರೆ ಅದಕ್ಕೆ ಧರ್ಮದ ಭದ್ರಬುನಾದಿಯಿಲ್ಲದೆ ಸಾಗಿದರೆ ಮುಂದೆ ಕಷ್ಟ ಬರದೆ ಇರಲಾರದು. ಯಾವ ಧರ್ಮದಲ್ಲಿ ಮಾನವತೆಯಿಲ್ಲವೋ ಅದು ಧರ್ಮವಾಗಲಾರದು. "ಅಹಿಂಸಾ ಪರಮೋಧರ್ಮಃ" ಅಹಿಂಸಾ ಶಸ್ತ್ರದಿಂದ ಧರ್ಮ ಉಳಿದಷ್ಟು ಹಿಂಸೆಯಿಂದ ಸಾಧ್ಯ ವಾಗದು. ಒಂದೆಡೆ ಮಹಾತ್ಮಾ ಗಾಂಧಿಯವರು.

Non-violence connot be taught to person who fears to die and has no power of resistance.

"Ahnisa is a weapon of mathless potency. It is summum bonum of life Perfect non-violence is the highest bravery". ಈ ರೀತಿಯಾಗಿ ಹಾರ್ದಿಕವಾಗಿ ಅಹಿಂಸೆಯ ವಿವರವನ್ನು ನೀಡಿದ್ದಾರೆ. ಈ ನುಡಿಯ ಭಾವಗಳು ಪ್ರಪಂಚದ ಎಲ್ಲ ಧರ್ಮಗಳಲ್ಲಿಯೂ ತುಂಬಿವೆ. ಆದರೆ ಪ್ರಪಂಚಕ್ಕೆ ಶಾಂತಿ ಮಾತ್ರ ಇಲ್ಲದಾಗಿದೆ. ಧರ್ಮದ ದ್ವೇಷಾಸೂಯೆಗಳನ್ನು ಮೇಲು-ಕೀಳೆಂಬ ಭಾವನೆ ಗಳನ್ನು ಅಹಂಕಾರದ ವಿಷವೃಕ್ಷಗಳನ್ನು ಬೇರು ಸಹಿತ ಕಿತ್ತು ಪರಸ್ಪರ ಪ್ರೇಮಭಾವನೆ ಯಿಂದ ಎಲ್ಲ ರಾಷ್ಟ್ರದವರೂ ನಡೆದುಕೊಂಡರೆ ಮಾತ್ರ ಶಾಂತಿ ಸಾಧ್ಯ. ಇಲ್ಲವಾದರೆ ಧರ್ಮವು ತೋರಿಕೆಯದ್ದಾಗುವದಲ್ಲದ ಸ್ವಪ್ರತಿಷ್ಠೆಯದ್ದಾಗುವದಲ್ಲದೇ ಮಾನವ ಕುಲೋದ್ಧಾರದ್ದಾಗುವದಿಲ್ಲ. ಯಾವುದೇ ಕಾರ್ಯವನ್ನು ಮಾಡುತ್ತಿದ್ದರೂ, ದೇವರನ್ನು ಧರ್ಮವನ್ನು ನೀತಿಯನ್ನು ಮುಂದಿಟ್ಟುಕೊಂಡು ಮಾಡಿದರೆ ಪ್ರಪಂಚಕ್ಕೆ ಶಾಂತಿ. ಮೊದಲು ಆತ್ಮೋನ್ನತಿ ಮಾಡಿಕೊಳ್ಳಲು ಪ್ರಯತ್ನಿಸಿದರೆ ವಿಶಾಲ ಭಾವನೆಯು ಉದಯಿಸಿ ಸರ್ವಧರ್ಮ ಸಮನ್ವಯ ಬುದ್ಧಿಯು ಆಗ ಉಂಟಾಗುವದು. ಸರ್ವಧರ್ಮ ಸಮಭಾವವು ಸರ್ವಧರ್ಮ ಸಮನ್ವಯದ ತಳಹದಿಯು. ಧರ್ಮವಿದ್ದಲ್ಲಿಯೇ ಶಾಶ್ವತ ಶಾಂತಿಯು ಮತ್ತು ಜಯವು ದೊರಕುವದು. "ಯತೋ ಧರ್ಮಸ್ತತೋಜಯಃ" ಈ ನುಡಿಯಲ್ಲಿ

ಇದೇ ಅರ್ಥವು ಗರ್ಭಿತವಾಗಿರುವದು. ನೀತಿ ಎಂಬುದು ಧರ್ಮದಿಂದ ಪ್ರತ್ಯೇಕವಾದ ವಸ್ತುವಲ್ಲ. ಧರ್ಮದ ಆಚರಣೆಯ ತತ್ವಗಳು ಧರ್ಮದ ಪ್ರತ್ಯಕ್ಷ ಆಚರಣೆ, ವ್ಯಕ್ತಿ, ವಸ್ತು, ಸಮಾಜ ಇವುಗಳೊಡನೆ ಮಾನವನು ಇಡತಕ್ಕ ಸಂಬಂಧ ಹಾಗೂ ಅದನ್ನ ನ್ವಯಿಸುವ ನಿಯಮಗಳು ಇವೆಲ್ಲವುಗಳು ಕೂಡಿ ನೀತಿಶಾಸ್ತ್ರವು ಸಿದ್ಧವಾಗುವದು.

ಪ್ರಪಂಚಕ್ಕೆ ಶಾಂತಿ ದೊರೆಯಬೇಕಾದರೆ ನ್ಯಾಯಬದ್ಧವಾದದ್ದು ಇರಬೇಕು ಸತ್ಯ ಸಂಶೋಧನೆಯಿಂದ ತುಂಬಿರಬೇಕು. ನ್ಯಾಯಬದ್ಧವಿಲ್ಲದ ಶಾಂತಿ ಭದ್ರಬುನಾದಿ ಇಲ್ಲದ ಕಟ್ಟಡವಿದ್ದಂತೆ ಆಗುವದು. ಅಹಿಂಸೆಯಿಂದ ಶಾಂತಿ ಬಹುದಿನ ಉಳಿದಷ್ಟು ಹಿಂಸೆಯಿಂದ ಉಳಿಯದು. ಅದೇ ಪ್ರಕಾರ ಹಿಂದುಳಿದ ರಾಷ್ಟ್ರಗಳನ್ನು ಮೇಲಕ್ಕೆತ್ತುವ ಭಾವನೆ ಸಹಕಾರ ಸಹಾಯ ಮಾಡುವ ಭಾವನೆ ಬಂದಾಗ ಸಹಾಯ ತೆಗೆದುಕೊಂಡವರಿಗೂ ಆನಂದ ವಾಗುವದಲ್ಲದೆ ಪರಸ್ಪರ ಪ್ರೇಮವು ಹೆಚ್ಚಿ ಶಾಂತಿ ದೊರಕಿಸಿಕೊಳ್ಳಲು ಸಾಧನವಾಗುವದು. ಪ್ರಪಂಚದ ಜಾಗತಿಕ ಶಾಂತಿಗಾಗಿ ಇದು ನಾಂದಿಯಾಗುತ್ತದೆ.

ಪ್ರಜಾಪ್ರಭುತ್ವದಲ್ಲಿ ಶಾಂತಿನೆಲೆಗೊಳಿಸಬೇಕಾದರೆ ಧರ್ಮವನ್ನು ಅದರ ಜೊತೆಗೆ ಅಂಗವಿಸಿಕೊಳ್ಳಬೇಕು. ಒಂದೆಡೆ ರಾಧಾಕೃಷ್ಣನ್ನರು ಧರ್ಮ ಮತ್ತು Democracy ಬಗ್ಗೆ ವಿಚಾರಪೂರ್ಣ ನುಡಿಯನ್ನು ನುಡಿದಿದ್ದಾರೆ.

"So if today we talk about freedom, democracy and social welfare these are the legitimate consequence of the truely religious sprit. No man who is not a democrate, no man who does not honour freedom, no man who does not work for social welfare and human well being can call himself a truly religious soul. So these ideals of democracy, free-dom and social welfare are bound up with the true spirit of religion. If we want to truely religious we must practice these things in our daily lives.

ಅದಕ್ಕಾಗಿ ಪ್ರಪಂಚದಲ್ಲಿ ಶಾಂತಿ ನೆಲೆಗೊಳಿಸಲು ಧರ್ಮದಷ್ಟು ಮತ್ತಾವುದೂ ಪ್ರಭಾವಕಾರಿಯಾಗುವದಿಲ್ಲ.

God has on favourites. God has no foes. He treats all as equal. There can not be any discrimination for religions, between one man and another.

ಕಾರಣ ಎಲ್ಲ ಧರ್ಮದವರು ಪರಸ್ಪರ ಸಹಕಾರದಿಂದ ವರ್ತಿಸಿದರೆ ಭಾರತೀಯ ಧರ್ಮದ ಉಸಿರಾಗಿರುವ.... ಶಾಂತಿ ಮಂತ್ರವು ವಿಶ್ವಶಾಂತಿಗೆ ಸಾರ್ಥಕವಾಗುವದು.

## ನಮ್ಮ ಕರ್ತವ್ಯ

ನಾವು ಇಲ್ಲಿ ಪ್ರಪಂಚದ ಬೇರೆ ಬೇರೆ ರಾಷ್ಟ್ರದಿಂದ ಬಂದವರಾಗಿದ್ದೇವೆ. ಇಲ್ಲಿ ಧರ್ಮಗುರುಗಳು, ದಾರ್ಶನಿಕರು, ತತ್ವಜ್ಞಾನಿಗಳು, ಸಾಹಿತಿಗಳು ಎಲ್ಲರೂ ಈ ಸಮ್ಮೇಲನದಲ್ಲಿ ಭಾಗವಹಿಸಿದ್ದೇವೆ. ನಮ್ಮ ನಮ್ಮ ವಿಚಾರಗಳನ್ನು ಪ್ರಪಂಚದ ಶಾಂತಿಗಾಗಿ ಬಿತ್ತರಿಸಿದ್ದೇವೆ, ಬಿತ್ತರಿಸುತ್ತೇವೆ. ಕೇವಲ ಇಲ್ಲಿ ಹೇಳಿ ನಮ್ಮ ನಮ್ಮ ರಾಷ್ಟ್ರಕ್ಕೆ ಹೋದರೆ ಏನು ಪ್ರಯೋಜನವಿಲ್ಲ.

"ನಮ್ಮ ಇಂದ್ರಿಯಗಳು ಎತ್ತ ನೋಡಿದರೂ ಮನಸ್ಸು ಯಾವುದನ್ನು ಕಲ್ಪಿಸಿಕೊಂಡರೂ ಅಲ್ಲೆಲ್ಲ ಕ್ರಿಯೆಯ ಮತ್ತು ಪ್ರತಿಕ್ರಿಯೆಯ ಆವಿರ್ಭಾವಗಳನ್ನು ನೋಡುವೆವು. ಅವು ನಾವು ನೋಡುವ ಆಲೋಚಿಸುವ ಮಿಶ್ರದೃಶ್ಯಗಳನ್ನು ಸೃಷ್ಟಿಸುತ್ತವೆ. ಬಾಹ್ಯ ಜಗತ್ತಿನಲ್ಲಿ ಇದು ವ್ಯಕ್ತವಾಗುತ್ತದೆ. ಅಂತರ್ಯದಲ್ಲೂ ಇದು ಪ್ರೀತಿ ದ್ವೇಷ ಒಳ್ಳೆಯದು ಕೆಟ್ಟದ್ದು ಎಂಬ ರೂಪಗಳಲ್ಲಿ ಕಾಣುತ್ತವೆ. ಕೆಲವನ್ನು ಆಕರ್ಷಿಸುವವು. ಕೆಲವನ್ನು ವಿಕರ್ಷಿಸುವವು. ಕೆಲವರಿಂದ ನಾವು ಆಕರ್ಷಿತರಾಗುವೆವು. ಮತ್ತೆ ಕೆಲವರಿಂದ ವಿಕರ್ಷಿತರಾಗುವವು. ಇದು ಎಲ್ಲರಿಗೂ ವೇದ್ಯವಾಗಿದೆ. ಕ್ರಿಯೆ ಮೇಲಿನ ಮಟ್ಟದಲ್ಲಿ ಇದ್ದಷ್ಟು ಈ ವಿರೋಧ ಶಕ್ತಿಗಳ ಪ್ರಭಾವವು ಹೆಚ್ಚು ಪ್ರಬಲವಾಗಿರುವದು. ಹೆಚ್ಚು ಪರಿಣಾಮಕಾರಿಯಾಗಿರುವದು. ಮಾನವ ಜೀವನದಲ್ಲಿ ಅವನ ಭಾವನೆಯ ಅತಿಶ್ರೇಷ್ಠ ಕ್ಷೇತ್ರವೇ ಧರ್ಮ" ಈ ಧರ್ಮದ ಪ್ರಭಾವವನ್ನು ಮಾನವ ಜನಾಂಗದಲ್ಲಿ ಹೇಗೆ ಬೀರಬೇಕು? ಅವರ ಹೃದಯ ಭೂಮಿಯಲ್ಲಿ ಸದ್ಗುಣಗಳೆಂಬ ಬೀಜಗಳನ್ನು ಹೇಗೆ ಬಿತ್ತರಿಸಬೇಕು. ಬೀಜಗಳು ಚಿಗರೊಡೆದು ವೃಕ್ಷವಾಗಿ ಹೂಕಾಯಿ ಹಣ್ಣು ಬಿಟ್ಟು ಪ್ರಪಂಚದ ತುಂಬ ಎಲ್ಲ ಸೌಗಂಧ ಬೀರುವಂತೆ ಹೇಗೆ ಮಾಡಬೇಕು. ಇನ್ನು ಮುಂದೆ ವಿಚಾರಿಸತಕ್ಕ ವಿಷಯವಾಗಿದೆ.

ಮೊದಲು ಧರ್ಮಗುರುಗಳು ಬೇರೆ ಬೇರೆ ಧರ್ಮಗುರುಗಳೊಡನೆ ಹೊಂದಿಕೊಂಡು ಹೋಗುವದನ್ನು ಕಲಿಯಬೇಕು. ತಮ್ಮ ತಮ್ಮ ಧರ್ಮಗಳ ಹೆಚ್ಚಳಕ್ಕೆ ಬಡಿದಾಡುವದನ್ನು ಬಿಡಬೇಕು. ಮಾನವ ಕುಲವನ್ನು ಉದ್ಧಾರ ಮಾಡುವ ಬುದ್ಧಿಯನ್ನು ಕಲಿಯಬೇಕು. ಜನರ ಹೃದಯವನ್ನು ಗೆದ್ದು ಅವರನ್ನು ಉದ್ಧಾರ ಮಾಡುವ ಕಡೆಗೆ ಲಕ್ಷಕೊಡಬೇಕು. ನಮ್ಮ ನಮ್ಮ ರಾಷ್ಟ್ರಕ್ಕೆ ಹೋಗಿ ಅಲ್ಲಿಯ ಜನಾಂಗಕ್ಕೆ ಸತ್ಯ ಅಹಿಂಸೆ ನೀತಿ ಧರ್ಮ ಪ್ರಚಾರ ಮಾಡಿ ಅವರ ಹೃದಯ ಭೂಮಿಯನ್ನು ಹಸನು ಮಾಡಬೇಕು. ತಾಮಸೀಯ ಅಸುರೀದ್ವೇಷಗಳು ಕುಡಿಯೊಡೆಯದಂತೆ ಮೊದಲೇ ನೋಡಿಕೊಳ್ಳಬೇಕು. ಯುದ್ಧದ ಭೀತಿಯನ್ನು ತೊಲಗಿಸಬೇಕು. ಬಲಾಬಲಗಳ ಮುಷ್ಟಿಯುದ್ಧವು ಜನತೆಯಲ್ಲಿ ಬಾರದಂತೆ ನೋಡಿಕೊಳ್ಳಬೇಕು. ಪ್ರಾರಂಭದಲ್ಲಿಯೇ ಒಳ್ಳೆಯ ಸಸಿಯನ್ನು ನೆಟ್ಟರೆ ಯುದ್ಧದ ಭೀತಿಯು ತಪ್ಪುವದು. ರಾಜಕೀಯದಲ್ಲಿಯೂ ತಾಮಸಿಯ ಪ್ರವೃತ್ತಿಯು ಬೆಳೆಯದಂತೆ ನೋಡಿಕೊಳ್ಳಬೇಕು. ಒಂದು ಬೆರಳಿಗೆ ನೋವಾದರೆ ಇಡೀ ದೇಹಕ್ಕೆ ನೋವಾಗದಂತೆ ವ್ಯಕ್ತಿಗೆ ಪ್ರಾರಂಭವಾದ ನೋವು ಸಮಾಜಕ್ಕೆ ರಾಷ್ಟ್ರಕ್ಕೆ, ಮುಟ್ಟುವದಲ್ಲದೆ ಅದು ಮುಂದೆ

ಪ್ರಪಂಚದ ತುಂಬೆಲ್ಲ ಪಸರಿಸದಂತೆ ಮೊದಲೇ ಜಾಗ್ರತರಾಗಬೇಕು. ತಪಃಶಕ್ತಿ ಪ್ರಭಾವವನ್ನು ಜನಸಾಮಾನ್ಯರ ಉದ್ಧಾರಕ್ಕಾಗಿ ಉಪಯೋಗಿಸಬೇಕು, ಅಂದರೆ ವಿಶ್ವಶಾಂತಿ. ಎಲ್ಲ ಧರ್ಮಗಳಲ್ಲಿಯೂ ಒಳಹೊಕ್ಕು ವಿಚಾರಿಸಿದಾಗ ಬೆಳಕು ಎಲ್ಲದರಲ್ಲಿಯೂ ತುಂಬಿದೆ ಎಂಬುದು ಅರ್ಥವಾಗುತ್ತದೆ. ಅಂತಃಸತ್ವವು ಹುದುಗಿದೆ ಎಂಬುದು ಅರಿವಾಗುತ್ತದೆ. ಭಾವಪೂರ್ಣ ಸಾಹಿತ್ಯ ಸಂಕಲನವು ಸಂಗಳಿಸಿದೆ ಎನ್ನುವದು ಗೊತ್ತಾಗುತ್ತದೆ. ಹೀಗೆ ತಿಳಿದೂ ತಿಳಿದು ಅಂಧಕಾರದಲ್ಲಿ ಬಿದ್ದರೆ ರಾಷ್ಟ್ರದ ಶಕ್ತಿಯನ್ನು ಕುಂದಿಸಿದಂತೆ ಆಗುವದು. ನಾ ಹೆಚ್ಚು ನೀ ಹೆಚ್ಚು ಅನ್ನುವ ಹುಚ್ಚು ಜೀವನದಲ್ಲಿ ಪರ್ಯವಸಾನವಾದರೆ ಪ್ರಪಂಚಕ್ಕೆ ಶಾಂತಿ ಎಂದು?

धर्मं यो बाधते धर्मं. न सधर्मः कुधर्मः ।
अयंतु परमोधर्मः यद्योगेन'त्म दर्शनम् ।

ಎಂದು ಯಾಜ್ಞವಲ್ಕ್ಯ ಸ್ಮೃತಿಯು ಹೇಳುತ್ತದೆ.

**Religion is the only instrument which can establish peace in the world.**

ಮಾನವನು ಅಂತರಂಗದ ಸ್ವಭಾವವನ್ನು ಆಲೋಚಿಸಿ, ನಿರೀಕ್ಷಿಸಿ, ಪರೀಕ್ಷಿಸಿ ತನ್ನ ಅಂತರ್ಯದ ಜ್ಞಾನವನ್ನು ಕಂಡುಕೊಳ್ಳಬೇಕು. ಮನಸ್ಸನ್ನು ಆತ್ಮಿಕ ಶಕ್ತಿಯ ಬೆಳವಣಿಗೆಗಾಗಿ ಪರಿಶ್ರಮಿಸಿ ಅದನ್ನು ಹೊರಗಡೆ ಹರಿಯದಂತೆ ನಿಲ್ಲಿಸಿ, ಈ ಎಲ್ಲ ಶಕ್ತಿಯನ್ನು ಕೇಂದ್ರೀಕರಿಸಿ ಆಧ್ಯಾತ್ಮಶಕ್ತಿಯನ್ನು ತನ್ನಂತರಂಗದಲ್ಲಿ ಪ್ರಜ್ವಲಗೊಳಿಸಿದರೆ ಆತ್ಮಕ್ಕೆ ಶಾಂತಿಯಾಗುವದಲ್ಲದೆ ವಿಶ್ವಶಾಂತಿಗೆ ಇದು ಸಹಕಾರಿಯಾದೀತು. ಆತ್ಮೋನ್ನತಿಯ ಪಥವ ಹಿಡಿಯದೇ ವಿಶ್ವಶಾಂತಿ ಮಾಡಬೇಕೆನ್ನುವವರ ಹಂಬಲವು ಭೂಮಿಯನ್ನು ಹಸನು ಮಾಡದೇ ಕಾಳುಗಳನ್ನು ಬಿತ್ತಿದಂತೆ ವ್ಯರ್ಥವಾಗುವದು. ತನುವ ತೋಟವ ಮಾಡಿ, ಮನವ ಗುದ್ದಲಿ ಮಾಡಿ ಭ್ರಾಂತಿ ಎಂಬ ಬೇರನ್ನು ಕಿತ್ತಿದಾಗ ಮತ್ತು ದೇಹದ ಮೇಲೆ ಹತೋಟಿ ಬಂದಾಗ ಮನಸ್ಸನ್ನು ಪಳಗಿಸಬಹುದು. ಇಂತಾದಾಗ ಶಿವಯೋಗ ಸಾಧ್ಯ. ಶಿವನ ಯೋಗ ಸಾಧ್ಯವಾಗುತ್ತ ಹೋದಂತೆ ಪ್ರಪಂಚದಲ್ಲಿ ಶಾಂತಿಕಾಂತಿಯುಂಟಾಗುತ್ತದೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಾದಿ ಅರಿಷಡ್ವರ್ಗಗಳನ್ನು ಗೆದ್ದರೆ, ಬಹಿರಂಗದಲ್ಲಿ ಮತಭ್ರಾಂತಿ, ಅಸಹಕಾರ ಆಂದೋಲನವನ್ನು ತಡೆಗಟ್ಟಬಹುದು. ಇಂತಹ ಕಾರ್ಯ ಸಾಧನೆಗೆ ನಾವೆಲ್ಲರೂ ಪ್ರತಿಜ್ಞಾಬದ್ಧರಾಗಿ ಕಾರ್ಯಪ್ರವೃತ್ತರಾಗಿ ಅತ್ಯಂತ ಸೌಹಾರ್ದತೆಯಿಂದ ದುಡಿದು ವಿಶ್ವಶಾಂತಿಗಾಗಿ ಈ ದೇಹವನ್ನು ಮುಡುಪಿಡೋಣ. ವಿಶ್ವಶಾಂತಿಯ ಸಂವರ್ಧನೆಯ ಸಾಧನೆಗಾಗಿ ಮತ್ತೊಂದು ಮಹಾಕಾರ್ಯಕ್ಕಾಗಿ ಕೆಲವು ಸೂಚನೆಗಳನ್ನು ಮಂಡಿಸುತ್ತೇನೆ. ಆ ವಿಚಾರಗಳು ನಿಮಗೆ ಹಿಡಿಸಬಹುದೆಂದು ಆಶಿಸಲಾಗಿದೆ.

೧. **(World Religions Parliament)** ಜಗತ್ತಿನ ಎಲ್ಲ ಧರ್ಮಗಳ

ಪ್ರತಿನಿಧಿಗಳ ಜಾಗತಿಕ ಧಾರ್ಮಿಕ ವಿಶ್ವಸಂಸ್ಥೆಯೊಂದು ನಿರ್ಮಾಣವಾಗಬೇಕು.

೨. ರಾಷ್ಟ್ರಕ್ಕೊಂದರಂತೆ ಅದರ ಶಾಖೆ ಇರಬೇಕು.

೩. ಇದಕ್ಕಾಗಿ ಒಂದು ದೊಡ್ಡ ನಿಧಿಯನ್ನು ಇಡಬೇಕು.

೪. ತಿಂಗಳಿಗೊಮ್ಮೆ ಪ್ರತಿಯೊಂದು ರಾಷ್ಟ್ರಧರ್ಮ ಸಂಸ್ಥೆಯ ಸದಸ್ಯರು ತಂತಮ್ಮ ದೇಶದಲ್ಲಿ ಮಾಡಿರುವ ಪ್ರಗತಿಯ ಬಗ್ಗೆ ನಿರ್ಣಯ ತೆಗೆದುಕೊಂಡು ಮುಖ್ಯ ಆಫೀಸಾದ ಧಾರ್ಮಿಕ ವಿಶ್ವಸಂಸ್ಥೆಗೆ ತಿಳಿಸುತ್ತಿರಬೇಕು.

೫. ಧಾರ್ಮಿಕ ವಿಶ್ವಸಂಸ್ಥೆಯ ಮುಖ್ಯ ಕಚೇರಿಯು ಎಲ್ಲ ಧರ್ಮ ಪ್ರತಿನಿಧಿಗಳ ಹೆಚ್ಚಿನ ಅನುಮೋದನದಂತೆ ಸ್ಥಾಪಿಸಬೇಕು.

೬. ಆ ಧಾರ್ಮಿಕ ವಿಶ್ವಸಂಸ್ಥೆಯವರು ಎಲ್ಲ ರಾಷ್ಟ್ರದ ಧರ್ಮಗುರುಗಳಿಗೆ ತಮ್ಮ ನಿರ್ಣಯವನ್ನು ತಿಳಿಸುತ್ತಿರಬೇಕು. ರಾಷ್ಟ್ರದಲ್ಲಿಯ ಮತ್ತು ಪ್ರಾಂತದಲ್ಲಿಯ ಧರ್ಮ ಗುರುಗಳೊಡನೆಯೂ ಸಂಬಂಧ ಹಚ್ಚಿಕೊಂಡಿರಬೇಕು.

೭. ವಿಶ್ವದಲ್ಲಿರುವ ಎಲ್ಲ ಧರ್ಮ ಗುರುಗಳ ಪ್ರತಿನಿಧಿಗಳ ಅಂಕಿ ಸಂಖ್ಯೆಯನ್ನು ಕಂಡು ಹಿಡಿಯಬೇಕು.

೮. ನೈತಿಕದಲ್ಲಿ ಅಧೋಗತಿಗಿಳಿದ ಜನಾಂಗವನ್ನು ಮೇಲಕ್ಕೆತ್ತಿ ಬೆಳಕನ್ನು ನೀಡಿ ಪ್ರೋತ್ಸಾಹವನ್ನು ನೀಡುವದೇ ಮುಖ್ಯ ಉದ್ದೇಶವಾಗಿರಬೇಕು.

೯. ಆ ಆ ರಾಷ್ಟ್ರದಲ್ಲಿರುವ ಧರ್ಮಗುರುಗಳು ತಮ್ಮ ದೇಶದಲ್ಲಿ ವಿಶ್ವಬಾಂಧವ್ಯ ಬೆಳೆಯುವಂತೆ ಆ ಪ್ರಾಂತದ ಜನರನ್ನು ಧರ್ಮದ ಕಡೆಗೆ ಬರುವಂತೆ ಪರಿವರ್ತಿಸಬೇಕು, ಪ್ರಚಾರ ಮಾಡಬೇಕು, ಆಯಾ ರಾಷ್ಟ್ರದ ಸರಕಾರದ ಸಹಾಯವನ್ನು ಪಡೆಯಬೇಕು.

೧೦. ಇಂತಹ ಜಾಗತಿಕ ವಿಶ್ವಧರ್ಮ ಸಮ್ಮೇಲನಗಳು ಬೇರೆ ಬೇರೆ ರಾಷ್ಟ್ರಗಳಲ್ಲಿ ಇಂದು Kyoto (Japan) ದಲ್ಲಿ ಜರುಗಿದಂತೆ ಈ ವಿಶ್ವಧರ್ಮ ಸಂಸ್ಥೆಯಿಂದ ಏರ್ಪಾಡಾಗು ವಂತೆ ಪ್ರಯತ್ನಿಸಬೇಕು.

## ಕೊನೆಯ ಮಾತು

ಇಲ್ಲಿ ನೆರೆದ ಜಾಗತಿಕ ವಿಶ್ವಧರ್ಮ ಸಮ್ಮೇಲನದಿಂದ ನಾವು ಕಲಿತುಕೊಳ್ಳ ಬೇಕಾದದ್ದು ಏನೆಂದರೆ ಸರ್ವ ಧರ್ಮದವರಲ್ಲಿ ಪರಸ್ಪರ ಹಾರ್ದಿಕ ಬಾಂಧವ್ಯ ಬೆಳೆದು ಆ ಆ ಧರ್ಮಗಳಲ್ಲಿರುವ ಬೆಳಕನ್ನು ಒಬ್ಬರಿಗೊಬ್ಬರು ಸ್ವೀಕರಿಸುವಂತಾಗಿ ಕೃತಿಯಲ್ಲಿ ತಂದರೆ ಭಾವೈಕ್ಯದ ಬೀಜವನ್ನು ಹೃದಯದಲ್ಲಿ ಬಿತ್ತಿದಂತೆ ಆಗುವದು. ಇದೆಲ್ಲಕ್ಕೂ ಯಶಸ್ಸು ದೊರೆಯಲು ಆತ್ಮ ವಿಶ್ವಾಸ, ದೃಢ ನಿರ್ಧಾರ, ಪಾವಿತ್ರ, ಪರಿಶುದ್ಧತೆ, ಔದಾರ್ಯ, ಕಾಯಕ ನಿಷ್ಠೆ ಇವುಗಳೇ ಇಂದು ಅತ್ಯಾವಶ್ಯಕ. ಈ ಸದ್ಗುಣಗಳನ್ನು ಜೀರ್ಣಿಸಿಕೊಂಡಷ್ಟು ರಾಷ್ಟ್ರಕ್ಕೆ ಹಿತ, ವಿಶ್ವಕ್ಕೆ ಶಾಂತಿ.

ಈ ಪ್ರಸಂಗದಲ್ಲಿ ಶ್ರೀ ಪುಷ್ಪದತ್ತರು ಬರೆದ ಶಿವಮಹಿಮ್ನ ಸ್ತೋತ್ರದ ಶ್ಲೋಕ ಒಂದನ್ನು ಹೇಳಿ ವಿವರಿಸುತ್ತೇನೆ.

त्रयी सांख्यं योगः पशुपतिमतं वैष्णव इति ।
प्रभिन्ने प्रस्थाने परमिदमदः पथ्यमिती च ॥
रुचीनां वैचित्र्यात् रुजुकुटिल नाना पथजुषां ।
नृणामेको गम्यस्त्वमसि पयसां अर्णवइव ॥

ಅಂದರೆ ಅನೇಕ ಸ್ಥಳಗಳಲ್ಲಿ ಹುಟ್ಟಿದ ಅನೇಕಾನೇಕ ನದಿಗಳು ಕೊನೆಗೆ ಯಾವ ಪ್ರಕಾರ ಸಾಗರವನ್ನು ಸೇರುವವೋ ಅದೇ ಪ್ರಕಾರ ಓ ಪರಮೇಶ್ವರನೇ ಅನೇಕ ದಾರ್ಶನಿಕರು ಅನೇಕ ರೀತಿಯಾಗಿ ತತ್ವಗಳನ್ನು ಪ್ರತಿಪಾದಿಸಿದರೂ ಅವರೆಲ್ಲರೂ ಅಂತ್ಯದಲ್ಲಿ ನಿನ್ನನ್ನೇ ಸೇರುತ್ತಾರೆ.

ಈ ಉಕ್ತಿ ನಮ್ಮೆಲ್ಲರನ್ನೂ ಬಡಿದೆಬ್ಬಿಸಲಿ. ಆ ದೇವರು ನಮ್ಮೆಲ್ಲರಿಗೆ ನಿರಂತರ ಜಾಗೃತರನ್ನಾಗಿ ಮಾಡಲಿ.

ॐ सहनाववतु सहनौ भुनक्तु सहवीर्यं करवावहै
तेजस्विनावधीतमस्तु मा विद्विषावहै
ॐ शांतिः शांतिः शांतिः

ದೇವರು ನಮ್ಮೆಲ್ಲರನ್ನು ರಕ್ಷಣೆ ಮಾಡಲಿ. ನಮ್ಮೆಲ್ಲರನ್ನು ತೃಪ್ತಿಗೊಳಿಸಲಿ. ನಾವೆಲ್ಲರೂ ಪ್ರಗತಿ ಪಥದಲ್ಲಿ ಸಾಗೋಣ. ನಾವೆಲ್ಲರೂ ತೇಜಸ್ವಿಗಳಾಗೋಣ. ನಾವೆಲ್ಲರೂ ಜಾಣರಾಗಿ ಶಾಂತಿಯನ್ನು ಪಡೆದು ನಿತ್ಯ ತೃಪ್ತರಾಗೋಣ.

ಇಂತು ದೇವರು ಅನುಗ್ರಹಿಸಲೆಂದು ಹಾರೈಸುತ್ತೇವೆ.

सत्यं शिवं सुन्दरम

ಗ್ರಂಥಋಣ: ಸ್ವಾಮಿ ವಿವೇಕಾನಂದರ, ಡಾ|| ಸರ್ ಎಸ್. ರಾಧಾಕೃಷ್ಣನ್‌ರ ಗ್ರಂಥಗಳು. ಮಹಾತ್ಮಾ ಗಾಂಧಿಯವರ ಸತ್ಯ, ಅಹಿಂಸೆ ಮಹಾತ್ಮಾ ಬಸವಣ್ಣನವರ ವಚನಗಳು.

## ವಿಶ್ವಶಾಂತಿಗೆ ಧರ್ಮಗುರುಗಳ ಕೊಡುಗೆ

(ಲೋವೆನ್‌ದಲ್ಲಿ ೧೯೭೪ಳ ಸಪ್ಟಂಬರ ೩. ರಂದು ಮಾಡಿದ ಭಾಷಣ)

ವಿಶ್ವದ ಚರಿತ್ರೆಯಲ್ಲಿ ಇತ್ತೀಚಿನ ವರುಷಗಳಲ್ಲಿ ಮೊದಲಬಾರಿಗೆ ಕ್ಯೂಟೋದಲ್ಲಿ ಸೇರಿದ ಮೊದಲ ವಿಶ್ವಧರ್ಮ ಮತ್ತು ಶಾಂತಿ ಪರಿಷತ್ತಿನಲ್ಲಿ ಸಂಧಿಸಿದ ನಾಲ್ಕು ವರ್ಷಗಳ

ನಂತರ ಮತ್ತೆ ನಿಮ್ಮ ಮಧ್ಯದಲ್ಲಿ ಕಾಣಿಸಿಕೊಳ್ಳುತ್ತಿರುವದಕ್ಕೆ ತುಂಬ ಸಂತೋಷವೆನಿಸುತ್ತದೆ. ಆ ಸಂದರ್ಭದಲ್ಲಿ ಯುದ್ಧ ಅಸ್ತ್ರಗಳು, ಅಣುಬಾಂಬುಗಳು ಮತ್ತು ಇತರ ಅರ್ವಾಚೀನ ಅಸ್ತ್ರಗಳ ಹೆಚ್ಚಳ-ಸಂಗ್ರಹವು ಮಾನವ ಕುಲಕ್ಕೆ ಶಾಂತಿ ತರುವದಿಲ್ಲವೆಂಬುದನ್ನು ವಿಶ್ವದ ರಾಜಕಾರಣ ಪಟುಗಳಿಗೆ ಬಿಂಬಿಸಿ ಯುಗ-ಯುಗಾಂತರದ ಧರ್ಮದ ಆದರ್ಶಗಳತ್ತ ವಿಶ್ವದ ಗಮನವನ್ನು ಸೆಳೆಯಲು ನಾವು ಹವಣಿಸಿದೆವು. ಆ ಫಲಪ್ರದ ಕಾರ್ಯಕ್ರಮಗಳ ಫಲಶ್ರುತಿಯು, ಇತಿಹಾಸ ಪ್ರಸಿದ್ಧವಾದ ಈ ಲೋವೆನ್ ನಗರದಲ್ಲಿ ಸೇರಿರುವ ಈ ಎರಡನೆಯ ಪರಿಷತ್ತಾಗಿರುವದು. ವಿಶ್ವದ ಎದುರು ನಾವು ಇರಿಸಿದ ಆದರ್ಶಗಳು ಮೂರ್ತಿ ಸ್ವರೂಪ ತಾಳುತ್ತಿರುವದನ್ನು ನೋಡಿದ ಯಾರ ಹೃದಯ ಉಕ್ಕಿ ಬರುವದಿಲ್ಲ?

ನಮ್ಮ ಪರಿಷತ್ತಿನೆದುರು ಇರುವ ಮುಖ್ಯ ವಿಷಯ ಧರ್ಮ ಮತ್ತು ಜೀವನ ಮಾರ್ಗ ಇದರೊಂದಿಗೆ (೧) ನಿಶ್ಶಸ್ತ್ರೀಕರಣ ಮತ್ತು ಭದ್ರತೆ (೨) ಆರ್ಥಿಕ ಅಭಿವೃದ್ಧಿ ಮತ್ತು ಮಾನವೀಯ ವಿಮೋಚನೆ (೩) ಮಾನವೀಯ ಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳು (೪) ಪರಿಸರ ಮತ್ತು ಬಾಳ್ವೆ ಈ ವಿಷಯಗಳನ್ನು ನಾವು ಚರ್ಚಿಸಬೇಕಾಗಿದೆ. ವಿಶ್ವಶಾಂತಿಗಾಗಿ ನಾವು ಪರಿಶ್ರಮಿಸುವಾಗ ನಾವು ನಮ್ಮ ಸುತ್ತುಮುತ್ತು ವಿಶ್ವವನ್ನು ಇಂದು ಆವರಿಸಿರುವ ಬಹು ಮುಖ ಸಮಸ್ಯೆಗಳನ್ನು ಗಮನಿಸಬೇಕೆಂಬುದೇ ಇದರ ಅರ್ಥ.

ನಮ್ಮದು ತರ್ಕ ಮತ್ತು ವಿಜ್ಞಾನಗಳ ಯುಗ. ಪಂಚೇಂದ್ರಿಯಗಳಿಂದ ವಿಶ್ವದ ಖಚಿತವಾದ ಜ್ಞಾನ ಪಡೆಯುವದು ವಿಜ್ಞಾನದ ಗುರಿ. ಅದು ಆಧ್ಯಾತ್ಮಿಕ ಇಲ್ಲವೇ ಇಂದ್ರಿಯಾತೀತ ಜ್ಞಾನವಾಗಿರಲಿಕ್ಕಿಲ್ಲ. ಆದರೆ ಅದು ಆಧ್ಯಾತ್ಮಿಕ ಜ್ಞಾನಕ್ಕಿಂತ ಕಡಿಮೆ ಮಹತ್ವದ್ದೇನೂ ಅಲ್ಲ ಎಂಬುದನ್ನು ನಾನು ನೆನಪಿನಲ್ಲಿರಿಸಿಕೊಳ್ಳಬೇಕು. ನಿಸರ್ಗದ ರಹಸ್ಯಗಳನ್ನು ಭೇದಿಸಿ, ಮಾನವೀಯ ಅಗತ್ಯಗಳನ್ನು ಈಡೇರಿಸುವಂತೆ ಆಗ್ರಹಪಡಿಸುವಂತೆ ಮಾಡುವದಕ್ಕೆ ಒಂದು ಸಂಬಂಧಿಸಿದ್ದರೆ, ಇನ್ನೊಂದು ವಿಜ್ಞಾನದ ಅಡಿಪಾಯವೆನಿಸಿದ ಆ ಸತ್ಯದ ದೈವಾನುಭವಕ್ಕೆ ಸಂಬಂಧಿಸಿರುವುದು ನೊರೆ-ಬುರುಗು ಸಾಗರದ ಪೂರ್ಣ ಅರ್ಥವಲ್ಲ. ನಾವು ಅದರ ಆಳದಲ್ಲಿ ಮುಳುಗಿದಾಗ ಆ ಆಳದಲ್ಲಿ ಅಮೂಲ್ಯ ರತ್ನಗಳು ಲಭಿಸುವವು.

ವೈಜ್ಞಾನಿಕ ಜ್ಞಾನ ಮತ್ತು ತಾಂತ್ರಿಕತೆಯ ಸಾಧನೆಯಲ್ಲಿ ಕೇವಲ ಬೌದ್ಧಿಕ ವಿಕಾಸಕ್ಕೆ ಮಾತ್ರ ನಾವು ವಿಶೇಷ ಆಸ್ಥೆವಹಿಸಿದ್ದೇವೆ. ಜ್ಞಾನದ ತಿರುಳನ್ನು ಸಂಪೂರ್ಣವಾಗಿ ಮರೆತಿದ್ದೇವೆ. ಇದರ ಪರಿಣಾಮವಾಗಿ ಕೊನೆಯಿಲ್ಲದ ಅಧಿಕಾರ ಸ್ಪರ್ಧೆಯಲ್ಲಿ ನಮ್ಮ ಸಮಯ-ಶಕ್ತಿಗಳನ್ನು ಹಾಳು ಮಾಡಿಕೊಂಡಿದ್ದೇವೆ.

ಅಶಾಂತಿಯ ಮೂಲವು ಭೂಮಿ, ಸಂಪತ್ತು ಹಾಗೂ ಅಧಿಕಾರಗಳ ಅನವಶ್ಯಕ ದಾಹದಲ್ಲಿ ಅಡಕವಾಗಿದೆಯೆಂದು ಧರ್ಮವು ವಿದಿತ ಪಡಿಸುತ್ತದೆ. ಈ ಮೂಬಗೆಯ

ಹುಚ್ಚಿನಿಂದಾಗಿ ನಮ್ಮಲ್ಲಿಯ ಮಾನವೀಯ ಭಾವವು ಅಳಿಯುತ್ತದೆ ಇಲ್ಲವೆ ಸಂಪೂರ್ಣ ಮಸಳಿಸಿ ಹೋಗಿದೆ; ನಿರರ್ಥಕವಾಗಿ ನಮ್ಮಲ್ಲಿ ಕಚ್ಚಾಡತೊಡಗಿದ್ದೇವೆ; ಅದಕ್ಕೆ ಕೊನೆಯೆಂಬುದೇ ಇಲ್ಲವಾಗಿದೆ. ನಮ್ಮ ಭೌತಿಕ ಆಸಕ್ತಿಗಳು ಮಿತಿ ಮೀರಿ ಬೆಳೆದು ನಮ್ಮ ಉಚ್ಚ ಮೌಲ್ಯಗಳು ಕುಸಿದಿವೆ. ಧರ್ಮವು ಕೇವಲ ಬಾಹ್ಯ ಆಚರಣೆಗಳಿಗೆ ಇಳಿದು ನಿಂತಿದೆ. ಅಭಿವೃದ್ಧಿ ಹೊಂದುವ ರಾಷ್ಟ್ರಗಳ ಆರ್ಥಿಕ ಬಡತನ ಮತ್ತು ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಭಾವನೆ ಪ್ರಗತಿ ಮತ್ತು ಸಂಪತ್ತು ಈ ಬಗೆಯ ಪರಿಸ್ಥಿತಿಗೆ ಕಾರಣ ವಾಗಿವೆ. ವಿಜ್ಞಾನ ಹಾಗೂ ತಾಂತ್ರಿಕತೆಯ ಅಗಾಧ ಪ್ರಗತಿ ಸಂಪ್ರದಾಯಕ ಜಾತಿ ಭೇದ ಇಲ್ಲವೆ ವರ್ಣ ಭೇದಗಳನ್ನು ಆಧರಿಸಿದ ಸಾಮಾಜಿಕ ಪದ್ಧತಿಯ ಅಡಿಪಾಯ ವನ್ನೇ ಅಲುಗಾಡಿಸಿದೆ. ಆರ್ಥಿಕ ಪ್ರಗತಿ ಮತ್ತು ಔದ್ಯಮಿಕರಣಗಳು, ಸುಖ-ಸೌಲಭ್ಯ ಗಳನ್ನು ಸಾಕಷ್ಟು ಹೆಚ್ಚಿಸಿವೆಯಾದರೆ, ಮಾನವ ಮಾನವನಲ್ಲಿಯ ಭೇದವನ್ನು ಅಳಿಸಿ ಹಾಕಿವೆ. ಅದೇ ಕಾಲಕ್ಕೆ ಹೊಸ ಸಾಮಾಜಿಕ ರಾಜಕೀಯ ವಿಚಾರಧಾರೆ ಸಂಪೂರ್ಣ ಸಮಾನತೆಯ ಪಥದಲ್ಲಿರುವದು.

ನಮ್ಮ ಮಾತು, ಕೃತಿ ವಿಚಾರಗಳು ಎಷ್ಟರಮಟ್ಟಿಗೆ ಶಾಶ್ವತ ಸತ್ಯಗಳಿಂದ ಫಲಿತ ವಾಗಿರುವವು ಎಂಬುದು ಗಂಭೀರವಾಗಿ ವಿಚಾರಿಸಬೇಕಾದ ಪ್ರಶ್ನೆಯಾಗಿದೆ; ಶಾಶ್ವತ ಸತ್ಯಗಳು ನಮ್ಮ ವಿಚಾರ ಮತ್ತು ವರ್ತನೆಗಳ ಮೇಲೆ ಮಾಡುವ ಪರಿಣಾಮ ಅಷ್ಟೇ ಇಲ್ಲ ವೆಂಬುದು ಬೇರೆ ಮಾತು ಇಂಥ ದುಸ್ಥಿತಿಗೆ ಮಾನವನ ಅಜ್ಞಾನ ಇಲ್ಲವೇ ಮತಿಹೀನತೆಯೇ ಕಾರಣವು. ಯಾವುದೇ ವಿಶಿಷ್ಟ ಸಮಯದಲ್ಲಿ, ಇಲ್ಲವೆ ವಿಶಿಷ್ಟ ರಾಷ್ಟ್ರದಲ್ಲಿ ಧರ್ಮವು ಅವನತಿಗೊಂಡಿದೆಯೆಂದು ನಾವು ದೂರಿದರೆ ಧರ್ಮವೇ ಕುಸಿದಿದೆಯೆಂದು ಅರ್ಥ ಮಾಡಲಾಗದು; ಅದರ ಅರ್ಥ ಇಷ್ಟೇ ಅವರ ಧಾರ್ಮಿಕ ಆದರ್ಶಗಳು ಮತ್ತು ಅದರ ವೈಯಕ್ತಿಕ ಜೀವನದಲ್ಲಿ ಸಾಮರಸ್ಯ ಇಲ್ಲ. ವೈಯಕ್ತಿಕ ಆಸಕ್ತಿ ಹಾಗೂ ವಿಶ್ವ ಕಲ್ಯಾಣಗಳ ನಡುವೆ ಯಾವುದೋ ಸಂಕುಚಿತ ಸ್ವಾರ್ಥ ಮನೋಭಾವ ತಲೆದೋರಿ ನಮ್ಮಲ್ಲಿ ಹುದುಗಿದ ಒಳ್ಳೆತನ, ಉದಾರತೆ ಹಾಗೂ ಸೋದರ ಭಾವನೆಗಳನ್ನು ಕರಗಿಸುವುದು ನಮ್ಮ ಜೀವನದಲ್ಲಿ ಸದ್ಗುಣ ಹಾಗೂ ಮಾನವೀಯ ಗೌರವಗಳು ಮೂಡಬೇಕಾದರೆ ಧಾರ್ಮಿಕ ಆದರ್ಶಗಳಿಂದ ಅದು ಯುಕ್ತವಾಗಿರಬೇಕು. ವಿಶಾಲ ದೃಷ್ಟಿಕೋನ, ವಿಶ್ವ ಸಂತುಷ್ಟಿಗಾಗಿ ವರ್ಣ ಜಾತಿ ಪಂಥಗಳ ಭೇದವಿಲ್ಲದೆ ಕಳವಳ, ಸೋದರ ಭಾವ, ಪ್ರಾಣ ದಯ, ಆತ್ಮಸಂಯಮತೆ ಇವುಗಳಿಂದ ಜೀವನವು ಉದಾತ್ತವಾಗಬೇಕು. ಧರ್ಮ- ಸತ್ಯಗಳ ಆಂತರಿಕ ಸಂದೇಶವು ಬಾಹ್ಯದ ರೂಢಿಗಳಿಗೆ ಹೊಂದಿಕೊಳ್ಳಬೇಕು. ವಸ್ತು ಗಳನ್ನು ಪೂರ್ಣದೃಷ್ಟಿಯಿಂದ ನೋಡಲು ನಾವು ಸಮರ್ಥರಾದಾಗ ನಮ್ಮಲ್ಲಿ ನಿಜವಾದ ಸಂಸ್ಕೃತಿ ಕಂಡು ಬರುವುದು ಉದಾರ ಮನಸ್ಸು ಮತ್ತು ಹೃದಯಗಳಿಂದ ಹೊರ ಹೊಮ್ಮುವ ವಿಚಾರ ಭಾವನೆಗಳು ನಡತೆ, ಗುಣ ವರ್ತನೆಗಳಲ್ಲಿ ವೃತ್ತವಾಗುವವು, ಸಮಾಜದಲ್ಲಿಯ ಪರಿವರ್ತನೆಗಳಿಗೆ ಎರಡು ಮುಖಗಳು ಉದಾರ ಕೃತಿಗಳು .ಹೃದಯ

ಶುದ್ಧಿಯು ಕೃತಿಯನ್ನು ಉದಾರಗೊಳಿಸುವಂತೆ, ಹೃದಯವನ್ನು ಶುದ್ಧಿಗೊಳಿಸುವವು. ಸತ್ಯ ಪ್ರೇಮವು ಇನ್ನೊಂದು ವಿಶ್ವದಲ್ಲಿ ಸುಖ ಅರಸುವದರಿಂದ ನಮ್ಮನ್ನು ಪರಾವರ್ತ ಗೊಳಿಸುವದು, ಈ ಭೂಮಿಯ ಮೇಲೆ ಅಮರತ್ವವನ್ನು ಹೇಗೆ ಕಂಡು ಹಿಡಿಯ ಬೇಕೆಂಬುದನ್ನು ತೋರಿಸುವುದು. ವಿಶ್ವಕಲ್ಯಾಣಕ್ಕಾಗಿ ನಮ್ಮ ಆಸಕ್ತಿಗಳಲ್ಲಿ ಕೇಂದ್ರೀಕೃತ ವಾದ ನಮ್ಮ ಅಂತಃ ಪ್ರಜೆ ಜಾಗೃತಗೊಳ್ಳುವುದು, ಅಂತಿಮ ಸತ್ಯದ ಸ್ವರೂಪದರ್ಶನ ಮೂಡಿಸುವುದು, ನಮ್ಮ ಜೀವನದ ನಿಜವಾದ ಅರ್ಥ–ಉದ್ದೇಶಗಳ ಅರಿಕೆ ಮೂಡಿ ಸುವುದು.

ಧರ್ಮ ಮತ್ತು ಜೀವನಗಳ ಸಂಯೋಜನೆಯು ಅತಿ ಸಣ್ಣ ಯತ್ನವೂ ಅತ್ಯುನ್ನತ ಹಿಮಾಲಯ ಶಿಖರವನ್ನು ಗುರುತಿಸುವ ಯತ್ನಕ್ಕಿಂತ ಹೆಚ್ಚುಪರಿಶ್ರಮವೂ ಖಚಿತ ವಾದುದೂ ಆಗಿರುವದು ಇಂಥ ಸಂಗ್ರಾಹ್ಯ ದೃಷ್ಟಿಕೋನ ಬೆಳೆಸಿಕೊಂಡು ನಮ್ಮ ದೈನಿಕ ಜೀವನದಲ್ಲಿ ಅನುಸರಿಸಿದರೆ ವಿಶ್ವಶಾಂತಿಯು ನಮಗೆ ಸಮೀಪವಾಗುವುದು. ಈ ಭೂಮಿಯ ಮೇಲಿನ ಜೀವನವು ಸ್ವರ್ಗದ ಜೀವನವಾಗಬೇಕಾದರೆ ಎಲ್ಲ ಮೂಲ ಆಂದೋ ಲನಗಳು, ಕಲಹ, ವೈರಗಳು ಜಗಳಗಳು ಮತ್ತು ಇಂಥ ಇತರ ಅನಿಷ್ಟ ರೂಢಿಗಳು, ಅಶಾಂತಿಗೆ ಕಾರಣವಾಗುವ ಗದ್ದಲಗಳು ದೂರವಾಗಬೇಕು. ಪ್ರತಿಯೊಬ್ಬ ಸ್ತ್ರೀಪುರುಷರು ಸುವಿಚಾರ ಮತ್ತು ಕೃತಿಗಳಿಗೆ ಆಧೀನವಾದ ಜೀವನವನ್ನು ನಡೆಸಬೇಕು.

ಮಾನವ ಜೀವನವು ಹಿರಿಮೆಯನ್ನು ಸಾಧಿಸಬೇಕಾದರೆ ಪ್ರತಿಯೊಬ್ಬ ವ್ಯಕ್ತಿಯ ಜೀವನವೂ ತರಬೇತಿಯ ಕೇಂದ್ರವಾಗಿರಬೇಕು. ಸಮೂಹ ವಿಚಾರವು ಬಹು ಬಗೆಯದು ಇಲ್ಲಿ ಬಹುಮುಖವಾದುದು. ವ್ಯಕ್ತಿಯು ಆದರ ಸೌಕರ್ಯಗಳಲ್ಲಿ ಪಾಲುಗೊಳ್ಳಬೇಕಾದರೆ ಅವನ್ನು ತಮ್ಮ ಜೀವನದ ಮುಸಿಯಲ್ಲಿ ಹಾಕಿ ನೂರ್ಪಡಿಗೊಳಿಸಬೇಕು. ನಾವು ನಮ್ಮ ಜೀವನವನ್ನು ಇನ್ನೊಬ್ಬರ ಗುರಿ–ಆಕಾಂಕ್ಷೆಗಳ ನರಳಿನಲ್ಲಿ ಸಾಗಿಸಬಯುಸಿದರೆ ಅದು ಬಾಡಿಗೆಯ ಮನೆಯಲ್ಲಿದ್ದಂತೆ ಮಾನವ ಪ್ರೇಮ ಮತ್ತು ಮಾನವೀಯ ಮೌಲ್ಯಗಳ ಗೌರವ ಪ್ರತಿಯೊಬ್ಬ ವ್ಯಕ್ತಿಯ ಹೃದಯದಲ್ಲಿಯೂ ಜಾಗೃತವಾಗಿರಬೇಕು. ನಮ್ಮ ಪ್ರಾಚೀನ ಋಷಿಗಳು ಇದನ್ನೇ ಆಧ್ಯಾತ್ಮಿಕ ಬುದ್ಧಿ ಮತ್ತು ಇಲ್ಲವೇ ಆತ್ಮರಕ್ಷಣೆ ಎಂದು ಕರೆದಿರುವರು ಆದು ಬಲವತ್ತರವಾಗಿ ಗಟ್ಟಿಯಾಗಿ ಬೆಳೆದಷ್ಟು ವಿಶ್ವಶಾಂತಿ ಅಷ್ಟು ದೃಢ ವಾಗಿ ಸ್ಥಾಪಿತವಾಗುವದು. ವಿಶ್ವಶಾಂತಿಯು ನಮ್ಮಲ್ಲಿ ಹುದುಗಿದ ಶಾಂತಿಯ ಕೇವಲ ಪ್ರತಿಬಿಂಬವಾಗಿರುವುದು.

ನಾವು ವಿಶ್ವದ ವಿಹಂಗಮ ಅವಲೋಕನ ಮಾಡಿದಾಗ ಪ್ರತಿಯೊಂದು ರಾಷ್ಟ್ರವೂ ತನ್ನ ಭೌತಿಕ ಸಂಪತ್ತನ್ನು ವರ್ಧಿಸಿಗೊಳ್ಳುವ ಆ ಮೂಲಕ ಸೈನಿಕ ಬಲವನ್ನು ಬೆಳಿಸಿ ಕೊಂಡು ರಕ್ಷಣೆಯ ಸಿದ್ಧತೆಯನ್ನು ಬಲವತ್ತರಗೊಳಿಸಿಕೊಳ್ಳಲು ಮುಂದಾಗಿರುವದನ್ನು ಕಾಣುತ್ತೇವೆ. ಅವರು ಬಹುಮಟ್ಟಿಗೆ ಧರ್ಮದ ಆದರ್ಶಗಳನ್ನು ಮರೆತಿರುವರು, ಮೂಲಭೂತ ಸ್ವಾತಂತ್ರ್ಯಗಳಿಗೆ ಪ್ರಾಶಸ್ತ್ಯ ಕೊಡುವ ಬದಲು ಪ್ರತಿಯೊಂದು

ಇನ್ನೊಬ್ಬರ ಪರಿವೆ ಇಲ್ಲದೆ ತಮ್ಮ ಹಿತವನ್ನು ಸಾಧಿಸುತ್ತ ವಿಶೇಷ ಗಮನ ನೀಡಿರುವುದು ಇದರರ್ಥ ತಂತಮ್ಮ ದೇಶವನ್ನು ಪ್ರೀತಿಸಬಾರದೆಂದಾಗಲಿ, ಅದರ ಕಲ್ಯಾಣ–ಬೆಳವಣಿಗೆ ಯನ್ನು ಅಪೇಕ್ಷಿಸಬಾರದೆಂದಾಗಲಿ ಅಲ್ಲ, ತನ್ನ ರಾಷ್ಟ್ರವನ್ನು ಪ್ರೀತಿಸುವಾಗ ಇನ್ನೊಬ್ಬ ರನ್ನು ದ್ವೇಷಿಸುವದಾಗಲಿ, ಅಲ್ಲಗಳೆಯುವುದಾಗಲಿ ತರವಲ್ಲ ಎಂದಿಷ್ಟೆ ತಿಳಿಯಬೇಕು. ಪ್ರತಿಯೊಂದು ಅಭಿವೃದ್ಧಿ ರಾಷ್ಟ್ರವು ಆರ್ಥಿಕವಾಗಿ ಹಿಂದುಳಿದ ಪ್ರತಿಯೊಂದು ರಾಷ್ಟ್ರದ ಪ್ರಗತಿ ಹಾಗೂ ಅಭಿವೃದ್ಧಿಗಾಗಿ ತನ್ನದೇ ಎನ್ನುವಂತೆ ಆಸಕ್ತಿವಹಿಸಿದರೆ ಮಾತ್ರ ನಿಜವಾಗಿ ಮಾನವೀಯ ಹಾಗೂ ವಿಶ್ವ ಕಲ್ಯಾಣ ಬಯಸಿದಲ್ಲಿ, ವಿಶ್ವವು ಶಾಂತಿಯುತ್ತ ನಿಶ್ಚಯ ವಾಗಿಯೂ ಕ್ರಮಿಸುವುದು. ತದ್ವಿರುದ್ಧವಾಗಿ ರಾಷ್ಟ್ರಗಳು ಪರಸ್ಪರ ವೈಮನಸ್ಸಿನಲ್ಲಿ ತೊಡಗಿದರೆ ವಿಶ್ವಶಾಂತಿಯು ಕನ್ನಡಿಯೊಳಗಿನ ಗಂಟಾಗುವುದು. ಮೃಗಜಲವೆನಿಸುವುದು. ತನ್ನ ಜಾತಿ ಮತ ವರ್ಗಗಳ ಬಗೆಗೆ ಪ್ರೀತಿ, ಇನ್ನಿತರರ ಬಗೆಗೆ ದ್ವೇಷ. ಅವುಗಳ ಸ್ವಾಭಾ ವಿಕ ಶಿಶುವೆನಿಸಿದ ಯುದ್ಧದ ಹುಚ್ಚು ನಮ್ಮ ವಿಶ್ವವನ್ನು ಆವರಿಸುವುದು. ಹೀಗಾಗಿ ವಿಶ್ವ ದಲ್ಲಿ ದ್ವೇಷಾಸೂಯೆ–ಹಿಂಸೆಗಳು ತುಂಬಿದ್ದು ಆಗಾಗ ರಕ್ತಪಾತಕ್ಕೆ ಆಸ್ಪದ ನೀಡುತ್ತವೆ. ಸ್ವಾಮಿ ವಿವೇಕಾನಂದರು ಅಮೇರಿಕೆಯಲ್ಲಿರುವಾಗ ಈ ಸಂಬಂಧವಾಗಿ ಹೇಳಿದ ಕಥೆಯೊಂದು ಇಲ್ಲಿ ನನಗೆ ನೆನಪಾಗುವುದು.

"ಒಂದು ಬಾವಿಯಲ್ಲಿ ಒಂದು ಕಪ್ಪೆ ಇತ್ತು. ಸಾಗರದಿಂದ ಬಂದ ಇನ್ನೊಂದು ಕಪ್ಪೆ ಯನ್ನು ಕೇಳಿತು. 'ನೀನು ಎಲ್ಲಿಂದ ಬಂದೆ?' ಅದು ಹೇಳಿತು. "ಸಾಗರದಿಂದ ಬಂದೆ" "ಅದು ನಮ್ಮ ಈ ಬಾವಿಗಿಂತ ದೊಡ್ಡದಾಗಿರುವುದು?" ಮೊದಲಿನ ಕಪ್ಪೆ ಕೇಳಿತು. "ಬಾವಿಗೂ ಸಾಗರಕ್ಕೂ ಎಲ್ಲಿಯ ಹೋಲಿಕೆ?" ಎರಡನೆ ಕಪ್ಪೆ ಉದ್ಗರಿಸಿತು. "ನೀನು ಸುಳ್ಳು ಹೇಳುತ್ತಿರುವಿ ನನ್ನ ಈ ಬಾವಿಗಿಂತ ದೊಡ್ಡದಾವುದೂ ಇರಲು ಸಾಧ್ಯವಿಲ್ಲ. ಮೂರ್ಖನೆ ಇಲ್ಲಿಂದ ಹೊರಡು" ಮೊದಲಿನ ಕಪ್ಪೆ ಹೇಳಿತು.

ನಮ್ಮ ಇಂದಿನ ಸ್ಥಿತಿಯಾದರೂ ದೂರದೃಷ್ಟಿಯಿಲ್ಲದ, ಅಹಂಭಾವನೆ ಆ ಬಾವಿ ಯಲ್ಲಿಯ ಕಪ್ಪೆಯಂತೆಯೇ ಆಗಿರುವುದು ನಾವು ಈ ನಿರರ್ಥಕವಾದ ಜೂಜಿನಲ್ಲಿ ಹಣ್ಣಾಗು ತ್ತಿದ್ದೇವೆ. ಇನ್ನೊಬ್ಬರಿಗಿಂತ ನಾವು ದೊಡ್ಡವರಾಗಬೇಕೆಂದು ಪ್ರತಿಯೊಬ್ಬರೂ ಹಂಬಲಿಸು ತ್ತಿದ್ದಾರೆ. ಈ ಅಹಂಭಾವಕ್ಕೆ ಇತಿಶ್ರೀ ಹಾಡದೇ ಹೋದರೆ ಆ ವರೆಗೂ ವಿಶ್ವದಲ್ಲೆಲ್ಲ ಅಶಾಂತಿ, ಘರ್ಷಣೆ ಉಳಿದೇ ಉಳಿಯುವುದು. ಈ ಕಾರಣದಿಂದಾಗಿ ವಿವಿಧ ರಾಷ್ಟ್ರಗಳಲ್ಲಿ ಜಾಗತಿಕ ಶಾಂತಿಗೆ ಬಂಧಕವಾಗಿರುವ ಅಡೆತಡೆಗಳನ್ನು ನಿವಾರಿಸಿ ಅನುಕೂಲ ಪರಿಸರವನ್ನು ನಿರ್ಮಿಸುವ ಆಸೆಯಿಂದ ತಮ್ಮ ಅಧಿವೇಶನಗಳನ್ನು ನೆರವೇರಿಸುತ್ತಿರುವ ವಿಶ್ವಧರ್ಮ ಮತ್ತು ಶಾಂತಿ ಪರಿಷತ್ತಿನ ಸಂಚಾಲಕರಿಗೆ ನಮ್ಮ ಕೃತಜ್ಞತೆಗಳನ್ನು ಅರ್ಪಿಸಬೇಕು.

ಈ ಸಂದರ್ಭದಲ್ಲಿ ಭಾರತೀಯ ತತ್ವಜ್ಞಾನ ಕುರಿತು ಶೊಪನ್‌ಹಾವರ್ ಹೇಳಿರು ವದು ನೆನಪಿಗೆ ಬರುತ್ತದೆ. "ಅಂಧ ಯುಗಗಳ ನಂತರ ಗ್ರೀಕ–ಲ್ಯಾಟಿನ್ ಸಂಸ್ಕೃತಿಗಳ ಪುನ ರುತ್ಥಾನದಿಂದ ಉಂಟಾದ ವೈಶಿಷ್ಟ್ಯಪೂರ್ಣ ಮತ್ತು ಅಭೂತ ಪೂರ್ವ ಕ್ರಾಂತಿಯು

ಯುರೋಪಿನಲ್ಲಿ ಮತ್ತೆ ಸಂಭವಿಸಬಹುದು" ಆ ಕ್ರಾಂತಿಯ ಮುನ್ಸೂಚನೆಯಾಗಿ ಈ ಬಗೆಯ ಪರಿಷತ್ತು ಇಲ್ಲಿ ಸೇರಿರುವದು ಎಲ್ಲ ಧರ್ಮಗಳೂ ಒಂದೇ ಸತ್ಯದ ಹಲವು ಮುಖ ಗಳು. ವಿವಿಧ ಮನಸುಗಳ ಅಗತ್ಯಗಳನ್ನು ಈಡೇರಿಸಲು ಸತ್ಯದ ಕೇಂದ್ರ ಬಿಂದುವಿನ ಹಲವು ಅವಸ್ಥೆಗಳು. ವಿವಿಧ ಧರ್ಮಗಳಿಗಾಗಿ ರೂಪುಗೊಂಡಿರುವವು. ಆ ಸತ್ಯಕೇಂದ್ರ ಬಿಂದುವೇ ದಿವ್ಯವಾಗಿದ್ದು ನಮ್ಮೆಲ್ಲರಲ್ಲಿಯೂ ಹುದುಗಿರುವುದು ಅದು ಅವ್ಯಕ್ತವಾಗಿದ್ದು ಅಂತರ್ಗತವಾಗಿರುವುದು ಅದು ಸಾಮಾಜಿಕ ಇಲ್ಲವೇ ರಾಜಕೀಯ ಪ್ರಶ್ನೆ ಇರಲಿ, ಪ್ರತಿ ಯೊಂದು ಪ್ರಶ್ನೆಯ ಕೇಂದ್ರಬಿಂದು ಮಾನವನಿರುವನು ವಿಶ್ವದ ಮತ್ತು ಮಾನವ ಕುಲದ ಭವಿತವ್ಯವು ಅಂತಿಮವಾಗಿ ಮಾನವನನ್ನು ಆಧಾರಿತವಾಗಿರುವುದು ಯಾವುದೇ ರಾಷ್ಟ್ರವು ಅದರ ಸಂಪತ್ತು ದೊಡ್ಡದಾದ ಮಾತ್ರಕ್ಕೆ ಯಾವ ಗೊತ್ತುವಳಿಗಳನ್ನು ಅಂಗೀಕರಿಸಿದ ಮಾತ್ರಕ್ಕೆ ದೊಡ್ಡದಾಗುವದಿಲ್ಲ. ಕೇವಲ ಅದರ ಜನತೆಯ ಹಿರಿಮೆ, ಔದಾರ್ಯಗಳಿಂದ ಅದು ಹಿರಿಯ ರಾಷ್ಟ್ರವೆನಿಸುವುದು. ಶಾಂತಿಯ ಹಂಬಲವು ಆಂತರಿಕವಾಗಿ ತೋರಿಬಂದು ಸಾವಕಾಶವಾಗಿ ವಿಸ್ತರಿಸಿದಂತೆ ವಿಶ್ವಶಾಂತಿ ವಾಸ್ತವಿಕ ಅಂಶವಾಗುವುದು.

ಭಾರತೀಯ ಸಂಸ್ಕೃತಿಯ ಒಲವು ಕೂಡ ವಿಶ್ವಶಾಂತಿಗೆ ಅನುಕೂಲವಾಗಿರುವುದು. 'ನಾನು' ಮತ್ತು 'ನನ್ನದು' ಎಂಬೆರಡುಭಾವಗಳು ಪ್ರತಿಯೊಬ್ಬ ಸ್ತ್ರೀ-ಪುರುಷರಲ್ಲಿ ಹುದು ಗಿರುವವು. ಆದರೆ ಅದು ಸೀಮಿತ ಮಿತಿಯನ್ನು ಮೀರಿದಾಗ ಶಾಂತಿಗೆ ಮಾರಕವಾಗಿ ಅಶಾಂತಿಗೆ ಕಾರಣೀಭೂತವಾಗುವುದು. ಭಾರತೀಯ ಸಂಸ್ಕೃತಿ ಮಾನವನಿಗೆ ತಿಳಿಸಿದ ಮೊದಲ ಪಾಠವೆಂದರೆ ವಿಶ್ವವು ಶಿವನಿಗೆ ಇಲ್ಲವೇ ದೇವರಿಗೆ ಸೇರಿದ್ದೇ ಎಂದೂ, ಎಲ್ಲ ಸ್ತ್ರೀ-ಪುರುಷರು ಅವನ ಮಕ್ಕಳು; ಅವರೆಲ್ಲರೂ ಸೋದರ-ಸೋದರಿಯರಂತೆ ಬಾಳಬೇಕು.

ಮಾತಾಚ ಪಾರ್ವತಿದೇವಿ ಪಿತಾದೇವೊ ಮಹೇಶ್ವರಂ
ಬಾಂಧವಾ: ಶಿವಭಕ್ತಶ್ಚ ಸ್ವದೇಶೊ ಭುವನತ್ತ್ರವಮ್

ಈ ಅಮರ್ತ್ಯ ಕರೆಯು ಭಾರತೀಯ ಸಂಸ್ಕೃತಿಯ ಜೀವಾಳವಾಗಿರುವುದು ಇದರ ಸಾರವು ವೀರಶೈವ ಧರ್ಮ ಹಾಗೂ ತತ್ವಜ್ಞಾನಗಳಲ್ಲಿ ಅಡಕವಾಗಿರುವುದು. ವೀರಶೈವ ನೀತಿಗಳು ಸಂಸ್ಕೃತದಲ್ಲಿ-"ತೇ ವೀರಶೈವ, ಲಕ್ಷಣಮ್ ನಿತ್ಯಮ್ ಕ್ಷೇಮಾಭಿಲಾಷಿನಃ" ಎಂದು ಹೇಳಿರುವನು. ಹನ್ನೆರಡನೆಯ ಶತಮಾನದ ವೀರಶೈವ ಶರಣರು, ಸಕಲರ ಲೇಸನೆ ಬಯಸುವವೇ ತಮ್ಮ ಧರ್ಮದ ತಿರುಳು ಎಂದು ಹೇಳಿರುವದು. ಇದು ಎಲ್ಲ ಧರ್ಮಗಳ ನೀತಿಸೂತ್ರವಾಗಿದೆ. ಸಂಪೂರ್ಣ ಮಾನವಕುಲದ ಎಲ್ಲ ರೀತಿಯ ಏಳ್ಗೆ ವೀರಶೈವ ಧರ್ಮದ ಅಂತಿಮ ಗುರಿಯಾಗಿದೆ. ಮಾನವನನ್ನು ದೈವತ್ವಕ್ಕೇರಿಸುವ ಖಚಿತವಾದ ಮಾರ್ಗವಿದೆನಿ ಸಿದೆ ಅಂತಿಮ ಈ ಮರ್ತ್ಯಲೋಕವನ್ನು ದುಃಖಗಳ ಆಗರ. ದೇಹವು ತುಚ್ಛ ಮಾಂಸದ ಮುದ್ದೆ. ಹೆಣ್ಣು-ಹೊನ್ನು-ಮಣ್ಣುಗಳು ನರಕಕ್ಕೆಮೃತ ಹಿಂಗದ ಆಸನಗಳೆಂದೂ ಸಾಮಾನ್ಯವಾಗಿ ಹೀನಗಳೆಯಲಾಗುತ್ತದೆ. ಆದರೆ ವೀರಶೈವ ಶರಣರು ಇದಕ್ಕೆ ಪ್ರತಿಯಾಗಿ ಈ ವಿಶ್ವವು ದೇವರ ದೇಗುಲವೆಂದೂ ಮಾನವ ದೇಹವು ದೇವತಾಕಾರ್ಯವನ್ನು ಈಡೇರಿಸು

ವದಕ್ಕೆ ಅನುಗ್ರಹಿತವಾದುದೆಂದೂ, ಅದಕ್ಕಾಗಿ ಅದನ್ನು ನಿರರ್ಥಕಗೊಳಿಸಬಾರದೆಂದೂ ಪ್ರತಿಯೊಬ್ಬರೂ ಜೀವನಕ್ಕಾಗಿ ಕಾಯಕವೊಂದನ್ನು ನಡೆಸಬೇಕೆಂದೂ, ಇಲ್ಲಿಯೂ ಅಲ್ಲಿಯೂ ಸಲ್ಲುವಂತೆ ಜೀವಿಸಬೇಕೆಂದೂ ಹೇಳಿರುವದು ಸಾಮಾಜಿಕವಾಗಿಯೂ ಸಮಗ್ರದ ಯಾವ ಭಾಗವಾಗಿ ಮಾನವ ಕುಲದ ಕಲ್ಯಾಣಕ್ಕಾಗಿ ತಂತಮ್ಮ ಪಾತ್ರವನ್ನು ಪ್ರಾಮಾಣಿಕ ವಾಗಿ ಪ್ರತಿಯೊಬ್ಬರೂ ನಿರ್ವಹಿಸಬೇಕು. ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲೂ, ಅಂಧಶ್ರದ್ಧೆ ಹಾಗೂ ಜಡ ಸಂಪ್ರದಾಯಗಳಿಂದ ಭರಿತವಾದ ಸಮಾಜವನ್ನು ಬಡಿದೆಬ್ಬಿಸಿ ಮಾನವೀಯತೆ, ಮಾನವೀಯ ಗೌರವಗಳು ಭಾವವನ್ನು ತುಂಬಿದವರು ಮಹಾತ್ಮಾ ಬಸ ವೇಶ್ವರರು. ವಿಶ್ವ ಶಾಂತಿಗಾಗಿ ಅವಶ್ಯವಾದ ಉದಾರ ತತ್ವಗಳನ್ನು ಅವರು ಬೋಧಿಸಿದ ರಲ್ಲದೆ ಪ್ರಾಮಾಣಿಕವಾಗಿ ತಮ್ಮ ಜೀವನದಲ್ಲಿ ಆಚರಣೆಯಲ್ಲಿಯೂ ತಂದರು, ತನ್ನ ಇತರ ಶರಣರನ್ನು ಅವುಗಳಿಗೆ ಪ್ರಸಾರವಾಗಿ ಜೀವಿಸುವಂತೆ ಸ್ಫೂರ್ತಿ ನೀಡಿದರು. ಮಾನವ ಜೀವನದಲ್ಲಿ ಹೊಸ ಚೈತನ್ಯವನ್ನು ಸಿರಿವಂತಿಕೆಯನ್ನು ಅವರು ತುಂಬಿದರು.

ಜಾಗತಿಕ ಶಾಂತಿಗೆ ವೀರಶೈವ ಧರ್ಮವು ನೀಡಿದ ಮಹಾಕಾಣಿಕೆಯೆಂದು ಪರಿಗಣಿಸ ಬಹುದಾದ 'ಕಾಯಕವೇ ಕೈಲಾಸ' ಎಂಬ ಸಿದ್ಧಾಂತ ಜನಕರು ಇವರು ಎಂದು ಹೇಳ ಬಹುದು. ಪರಾವಲಂಬನ ಹೀನ ಅಪರಾಧವೆಂದು ಸಾರಿ ಇನ್ನೊಬ್ಬರ ಶೋಷಣೆಯ ರೂಢಿಯನ್ನು ಅದು ಖಂಡಿಸಿತು. ಕಾರ್ಯ ಇಲ್ಲವೆ ಪ್ರಾಮಾಣಿಕ ಪರಿಶ್ರಮವು ದೇವಪೂಜೆ ಯಷ್ಟೇ ಉನ್ನತವಾದುದು ಎಂದು ಪರಿಗಣಿತವಾಯಿತು. ಅದೇ ದೇವ ಸ್ವರೂಪವೆನಿಸಿ ತೆಂದು ಹೇಳಿದರೆ ಹೆಚ್ಚು ಖಚಿತವೆನಿಸೀತು ವೀರಶೈವ ಧರ್ಮವು ಸ್ವಾತಂತ್ರ್ಯ ಸಮತೆ, ಬಾಂಧವ್ಯಗಳ ತತ್ವವನ್ನು ದಿಟ್ಟತನದಿಂದ ಎತ್ತಿ ಹಿಡಿದು ವಿಶ್ವ ಶಾಂತಿ ಹಾಗೂ ಮಾನವೀಯ ಸುಖಕ್ಕೆ ಸರಿಯಾದ ಮಾರ್ಗವನ್ನು ಕಲ್ಪಿಸಿರುವುದು ಸ್ತ್ರೀ-ಪುರುಷರಿಗೆ ಯಾವ ದೃಷ್ಟಿಯಲ್ಲಿ ಕಡಿಮೆಯಿಲ್ಲ; ಆಧ್ಯಾತ್ಮಿಕ ರಂಗದಲ್ಲೂ ಅದೆ ಎಂಬುದನ್ನು ಅದು ತೋರಿಸಿತು. ಅಸ್ಪೃಶ್ಯ ತೆಯ ವಿರುದ್ಧ ಸಾಮಾಜಿಕ ಸಮತೆಯನ್ನು ಬೋಧಿಸಿದ್ದ ಮಾತ್ರದಲ್ಲಿ, ಅದನ್ನು ಆಚರಿ ಸಿತು. ಅದಕ್ಕಾಗಿ ಮೇಲ್ವರ್ಗದವರೊಂದಿಗೆ ಹೋರಾಡಿತೆಂಬುದು ಅದರ ಇನ್ನೊಂದು ಹಿರಿಮೆ. ದೇಣಿಗೆ ಮಾಡಿದ ಕೇವಲ ಪ್ರವೃತ್ತಿನ ಮೋಕ್ಷಸಾಧನೆಗೆ ಇಲ್ಲವೇ ಮಹಾ ಘೋಷಣೆಗಳಿಂದ ಪಾಂಡಿತ್ಯ ಪ್ರದರ್ಶಿಸಬೇಕೆಂದು ಅದು ಉದಯಿಸಲಿಲ್ಲ. ಅದು ಎಲ್ಲರೂ ಯಾವುದೇ ಪ್ರಭೇದವಿಲ್ಲದೆ, ದೇವರ ಕರುಣೆಯನ್ನು ಎಲ್ಲರೂ ಪಡೆಯುವಂತೆ ಮಾಡಲು ಮತ್ತೆ ಎಲ್ಲರೂ ದೇವರ ಯಾವ ಮಕ್ಕಳಾಗಿ ಒಂದೇ ಕುಟುಂಬದವರಂತೆ ಜೀವಿಸ ಬೇಕೆಂದು ಅದು ಹಂಬಲಿಸಿತು. ಈ ಮರ್ತ್ಯ ಲೋಕವು ಕರ್ತಾರನ ಕಮ್ಮಟವೆಂದು ಅದು ಬಗೆಯಿತಲ್ಲದೆ, ಕೀಳು ಮೇಲು ಎಣಿಸದೆ, ಪರಸ್ಪರ ಪೂರಕವೆಂದು ಪರಿಗಣಿಸುವಂತೆ ಅದು ಬೋಧಿಸಿತು. ಹೀಗೆ ವೀರಶೈವ ಧರ್ಮವು ವಿಶ್ವಶಾಂತಿಗೆ ದಾರಿದೀಪಮಾಡಿ, ಜೀವನ ಸಿದ್ಧಿ ಮಾಡುವಂತೆ ಪ್ರೇರಕವಾಯಿತು. ನಿಷ್ಪಕ್ಷಪಾತವಾಗಿ ನಾವು ವಿಚಾರಿಸಿದರೆ ಇದು ಎಲ್ಲ ಧರ್ಮ ಗಳ ತಿರುಳೂ ಆಗಿರುವುದು. ಅರಿಕೆಯಾಗುವುದು ಆದರೆ ನಾವು ವೃಥಾ ಅಭಿಮಾನ

ಹಾಗೂ ಮಿಥ್ಯಾ ಪ್ರತಿಷ್ಠೆ ಭಾವನೆಗಳಿಂದ ನಿಜ ಧರ್ಮದ ತಿರುಳನ್ನು ಮುಸಲಿಸಲು ಮುಂದಾಗುತ್ತೇವೆ.

**ನಮ್ಮ ಪ್ರತಿಜ್ಞೆ**

ಇಂದು ಮೂರನೇ ಜಾಗತಿಕ ಮಹಾಯುದ್ಧದ ಕಾರ್ಮೋಡಗಳು ಕವಿದಿವೆ. ಒಂದು ರಾಷ್ಟ್ರವು ಇನ್ನೊಂದನ್ನು ಬಗ್ಗುಬಡಿಯಲು ಅವಕಾಶಕ್ಕಾಗಿ ಕಾದಿರುವಾಗ (ಬಹುಶಃ ಎಲ್ಲ ರಾಷ್ಟ್ರಗಳೂ ತುಸು ಹೆಚ್ಚು ಕಡಿಮೆ ಇದೇ ರೀತಿಯಲ್ಲಿರುವವು) ಇಂಥ ಕ್ರೌರ್ಯ ಮನೋ ಭಾವವು ಎಲ್ಲೆಡೆಗೂ ಕಂಡು ಬರುವಾಗ ಎಲ್ಲ ಧರ್ಮಗಳ ವರಿಷ್ಠರು ಮತ್ತು ಆಧ್ಯಾತ್ಮಿಕ ವಾದಿಗಳು ಒಂದೆಡೆ ಸೇರಿ ವಿಶ್ವಶಾಂತಿಗಾಗಿ ಹೆಣಗುವುದು ಅವಶ್ಯಕವಾಗಿರುವುದು. ವಿಚಾರ ವಾದಿಗಳು; ಸತ್ಯ ಪ್ರತಿಪಾದಕರು (ಈಗ ನಾವು ಸೇರಿದಂತೆ) ಆಗಾಗ ಸೇರಬೇಕು ಧರ್ಮದ ಸಂದೇಶವನ್ನು ಪ್ರಸಾರಮಾಡಬೇಕು. ದ್ವೇಷಾಸೂಯಗಳ ದಳ್ಳುರಿ ಮದ, ಮಾತ್ಸರ್ಯ ವನ್ನು ಅಂಶಿತಃವಾದರೂ ವಿಚಾರಿಸಲು ಸಾಧ್ಯವಾಗಬಹುದು. ಅಷ್ಟರ ಮಟ್ಟಿಗೆ ವಿಶ್ವದಲ್ಲಿ ಶಾಂತಿಯು ಕಾಣಿಸಿಕೊಳ್ಳುವುದು. ಆಧ್ಯಾತ್ಮಿಕ ಕಿರಣಗಳು ವಿಶ್ವದ ಯಾವ ಮಾನವನಲ್ಲಿ ಪಸರಿಸಿ ಅಜ್ಞಾನ–ಜಡತ್ವಗಳನ್ನು ತೊಳಗಿ ಬೆಳಗಿ, ರಾಜಕೀಯ ರಂಗದಲ್ಲಿ ಕಾಣಿಸಿಕೊಳ್ಳು ತ್ತಿರುವ ಮತ–ಭೇದಗಳನ್ನು ವಿಚಾರಿಸಿ ವಿಶ್ವದ ರಾಜಕಾರಣಿಗಳನ್ನು ಕಾಡುತ್ತಿರುವ ಸಮಸ್ಯೆ ಗಳಿಗೆ ಪರಿಹಾರವನ್ನು ಕಂಡು ಹಿಡಿಯಲು ಸಹಾಯಕವಾಗಬಹುದು; ಧರ್ಮಗಳ ಕುರು ಹಾಗಿ ನಾವು ಮಾನವರ ಜೀವನ ಸ್ಥಿತಿಮಟ್ಟ ಸಮಾಜ ಸುಧಾರಕನಾಗಿ, ವಿಶ್ವಶಾಂತಿಯುನ್ನು ಕಾಪಾಡಲು, ರಾಷ್ಟ್ರ ರಾಷ್ಟ್ರಗಳಲ್ಲಿ ಸ್ನೇಹ ತಿಳುವಳಿಕೆಗಳನ್ನು, ವರ್ಧಿಸಲು ಮಾನವನ ಮೂಲ ಭೂತ ಹಕ್ಕುಗಳನ್ನು ಕಾಪಾಡಲು, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಶೈಕ್ಷಣಿಕ, ವೈಯಕ್ತಿಕ ರಂಗಗಳಲ್ಲಿ ಅಂತಾರಾಷ್ಟ್ರೀಯ ಸಹಕಾರ ವಾತಾವರಣ ನಿರ್ಮಿಸಲು, ಎಲ್ಲಕ್ಕಿಂತ ಮಿಗಿಲಾಗಿ ವಿಶ್ವದಲ್ಲೆಲ್ಲ ಧರ್ಮದ ಚೈತನ್ಯವನ್ನು ಪಸರಿಸಲು, ಎಲ್ಲರೂ ಸುಖವಾಗಿ ಈ ವಿಶ್ವದಲ್ಲಿ ನೆಲಿಸುವಂತೆ ಮಾಡಲು ಕಾರ್ಯ ಮಾಡುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ದೇವರು ಇದೆಲ್ಲವನ್ನು ಕರುಣಿಸಲಿ ಎಂದು ಪ್ರಾರ್ಥಿಸುವ.

**ಸತ್ಯಂ ಶಿವಂ ಸುಂದರಂ**

Speeches delivered in English
on Various occasions

# RELIGION AND PEACE

I am very happy to be here in your midst in Japan, the Land of the Rising Sun, as also the Land of Beauty and the Home of Religion.

We have learnt to admire your country since the soul of Japan was laid bare to the World more than half a century ago by her distinguished Son, Okakura in his classic, "The Ideals of the East". It is the consecrated land which received Buddha's message of non-violence. Japan is counted among the most progressive nations. The spirit of revival and reconstruction is every-where in the atmosphere of this country. The development of industry and handicrafts has been the consistent policy of Japan. Your industrial and economic enterprise are commendable. Diligence, nationalism, a scientific attitude to life, and a sense of world-brotherhood have led the Japanese to the front. The economic progress of Japan is almost legendary. Her splendid achievement of primacy in Asia evokes our admiration and inspires us to imitate her ways. It is their ardent patriotism that has impelled them to this activity. Capacity for endurance, right use of time, a spirit of adventure, and persistence in the task under-taken– these lie at the root of their prosperity. The recent Expo which attracted the attention of the world is a witness to the genius of this nation. It is the same spirit extending to the field of religion which we see in the Conference of the World Religions organized today at Kyoto to promote world peace.

## RELIGION

As long as irreligion, injustice and crookedness prevail, as long as untruth and violence remain, as long as conditions

fluctuate, as long as the spiritual heads of the world do not come together and work to clear the atmosphere darkened today with the stench and smoke of war and violence, so long will world peace remain a pious wish. There can be no force greater than religion in shaping the future of mankind. 'Dharma' or religion should not be understood as narrow-minded bigotry. Religion will justify itself only when it becomes an instrument of national regeneration making men aspire for perfection, dignity of personality, and a divine degree of power and inspiration.

पतितं पतंतं पतिष्यंतं, धरतीति धर्मः, "धारणात् धर्मः ।"

"Patitam, Patantam, Patishyantam, Dharateeti Dharmaha, Dharanat, Dharmaha"

To save the world which is heading to destruction, to rouse it, to give it strength and so protect it is the fundamental object of Dharma. To strike at the roots of inertia in the individual and make him active is 'Dharma'. The Upanishad says:

असतो मा सद्गमय तमसो मा ज्योतिर्गमय मृत्योर्मा अमृतं गमय ।

"Save us from evil and lead us along the path of good. Lead us from darkness to light, from mortality to immortality".

These lofty precepts are the essence of 'Dharma' 'Dharma' is not mere logical deduction; it is not mere dogma 'Dharma' is essentially experience and conduct of life. To see God deep within ourselves dwelling in the heart, to worship Him and enjoy the bliss of communion is 'Dharma'. 'Dharma' must answer the test of reason if it is to serve any purpose. Otherwise, it is the travesty of 'Dharma', of little use like a boulder stone.

Interpreting 'Dharma', Mahatma Gandhi says:

"Service of the poor and the suffering is 'Dharma'. God will manifest Himself to us in the form of the poor and the afflicted. Abandoning the duty of service, I cannot be

true to the law of non-violence. I cannot realize truth without the practice of non-violence. There is no 'Dharma' other then Truth".

Thus does Gandhiji stress the element of Truth in 'Dharma'.

Many religions have sprung up in the course of ages in the history of the world. The paths are many; but the ultimate aim of them all is the same. This becomes obvious to every one who can grasp and digest it. 'Dharma' is not a stagnant pool of water but an ever flowing limpid stream. If it adapts itself to changing conditions, it becomes a source of national strength. 'Dharma' which does not reflect culture but worships, wealth and immolates itself in self-indulgence is but transient. What is more, Religion without philosophy will degenerate into blind superstition and sooner or later must disappear. 'Dharma' will justify itself when it is animated by the noble feeling: The world is my home Manind is my kith and kin. Does this mean that one has to repudiate one's own religion. 'Swadharma'? Dharma without the core of light is like a frog in the well, like a tree which bears no flowers or fruit. Religion filled with pride and vanity cannot venture upon the high seas. The glorification of the past has become a habit with us.

Experiment and adventure are a lost art with us. We may stumble, but we learn by stumbling. On the other hand, if in narrow minded spirit we set up barriers in religion, they will remain barriers till the end and bring no peace or solace to mankind. Men speak false, no doubt, but at the same time they have the capacity to become divine. They can never understand the meaning of Dharma who do not independently enquire and advance in the direction of Light. If the foundations of Dharma are broad and deep and if it takes into its embrace one and all, emotional integration will be possible. Loyalty to one's religion can co-exist with tolerance of other religions. There is no other discipline than Dharma which makes the heart supple and sensitive. We have heard of great crimes and follies, slaughter and loot committed in the name of

religion. When, owing to the clash of rival faiths, hatred and jealousy reached their limit, great men appeared on the scence to heal the differences and antagonisms and bring solace to the world by sowing peace and good-will among the nations. To allow blind bigotry to increase is deliberately to court suicide. Any single religion can appease humanity only when it is capable of meeting the diverse needs of men of diverse natures. It should foster love of truth. That is to say, it should open the heart, shed to narrowmindedness, and propagate Dharma. It should be grounded in philosophy, infused with the favour of devotion, with the spirit of *YOGA*, and spiritual discipline and it should be dynamic. Then will world fellowship be accomplished.

Ethics is a branch of religion. If the torch of religions lights up the path for each man, peace and happiness are assured. From this enquiry, it emerges that ripeness of heart, intution and inner guidance are the quintessence of Dharma.

## OUTSTANDING RELIGIONS OF THE WORLD

Among the outstanding religions in the world to-day, are Hinduism, Christianity, Budhism and Islam. They are all being propagated with zeal enough. In the bosom of each one of them have grown up sects and schisms. A bird's eye view of all these religions will easily enable one to grasp their significance, Scrutinise any one of them and you will discover that Truth, Nonviolence, Compassion and Unity pervade it through and through in common with the rest. When these are translated into action, the world will secure peace.

When we listen to the soulful worlds of Christ, boundless compassion shows itself to be the very spirit of Christianity. However distorted our nature may be by egoism and hatred, the indwelling divinity cannot be extinguished. If we do not see God every where, we can see Him nowhere. As the Sun shines impartially on the good and the bad, so does the Divine shower His mercy on the just and the unjust alike.

"Heal the sick, cleanse the lepers, raise the dead, cast out thevils. Freely ye have received, freely give". These words are an epitome of Chrits's message.

If this be the Christian doctrine, followers of Islamempha size the unity of all, practise virtue, live by the sweat of their brow, swear by Allah and especially commend surrender to the Divine and universal brotherhood.

*Buddhism*: The status that is accorded to Christ in Christianity is accorded to Buddha in Buddhism. He is the compassionate one who was struck by the suffering of all living creatures, who sacrificed a kingdom and did penance to find a way to end all suffering. Buddha, the apostle of truth, brought to light innumerable elements of truth embedded in Hinduism. He his conspicious among those who have made India an honoured land. There is harmony between Hinduism and Buddhism, Buddha awakened the soul of the common man. Buddha, the interpaid truths seeker, plunged into the depths of sorrow and suffering and brought up precious pearls of wisdom for the edification of the world. The missionaries of Buddhism nourished on non-violence and Truth succeeded in spreading the gospel far and wide. Buddhism brought into one fold men of different nations. In consequence, it became a world religion Buddhism rendered service to the world by a comprehensive social, religious and economic programme. By fusing Buddhist tentes with the local customs and traditions of Japan. Buddhism set an example in mutual tolerance.

बुध्धं सरणं गच्छामि, संघं सरणं गच्छामि, धम्मं सरणं गच्छामि।

"Buddham Saranam Gachhami, Sangham Saranam Gachhami, Dhammam Saranam Gachhami".

This 'mantra' is the formula of Buddhist initiation.

यो च बुध्धंच, धम्मंच, संघंच सरणं गतो चित्तारि अरिय सच्चानि सम्मप्पज्जाय पश्यति। अत्तदीप अत्तसरणा अनन्य सरणा धर्मदीपा धर्म शरणा होत्।

"Yo Cha Buddhamcha, Dhammamcha, Sanghamcha Saran amgato Chittari ariya Sachchani Sammappajjaya Pasyati–

Atta Depa Atta Sarana Ananya Sarana Dharmadepa Dharma Sarana Hota"

He who adopts Buddhist Dharma and 'Sangha' has to subscribe to four cardinal truths and make Dharma "the master light of all his seeing". Meditation has the power to transform an individual wholly and unifying or integrating his ideal.

## HINDU DHARMA

HINDUISM has a history stretching over thousands of years. The Vedas have claimed the veneration of antiquity. The Vedagamas and Upanishads are the foundations of Indian culture. Hindus derive their faith from the infellible scripture of the Vedas. Creation has no beginning, no end, says the Veda. By the action of "*Ishwar Shakti*", creation comes into existence as well as lapses into Nihil. This cyclic movement is without beginning or end.

Like the lotus in the lake man should live in the world, said Swami Vivekananda. He further says:

> "In one respect there is a difference between Hinduism and other religions. The one idea to expound which the Hindus exhaust the whole vocabulary of Sanskrit is this: Man must Realize God In This Life Only"

One should be able to say, "I have realized the self and God"— that is Hinduism in a sentence. According to the Hindu faith, man does not progress from faleshood to truth but from truth lower to truth higher. The Indian would rather mortify his own flesh than clutch at the throat of his neighbour. India has sheltered within its borders alien faiths. Nay, it has helped their spread.

"Like the thread running through a garland of beads, I am present in every religion. Wherever is greatness, there is my element, recognise" says Shri Krishna. Hinduism is a huge banyan tree which has put forth innumerable offshoots in

Dwaita, Adwaita, Visishtadwaita, Shaiva, Veerashaiva, Jaina and other philosophies each with its own theories.

Veerashaivism: Veershaivism has a place its own among the religions of India. Its truths have been corroborated in the Vedas and Sivagamas. To Posit that Siva without Shakti, and Shakti without Siva cannot exist, is the whole heart of Veerashaiva Philosophy.

Equality of all is the bedrock of Veerashaivism. Veerashaivism struck a mortal blow at the notion of superior and inferior which had taken root in the consciousness of man kind for centuries. All should strive for the realization of God, so declared Veerashaivism and wokeup the slumbering spirit in man. There are not a few golden utterances on the subject of world peace in the Veerashaiva Philosophy. Far from being narrow-minded, Veerashaivism has a cosmic breadth of vision. Nothing less than the redemption of the world is its grandiose aim. It upholds equality as between men and women. Veerashaiva Saints, by precept and example, have shown half a dozen ways of satisfying the primary needs of man, how to feed the hungry, how to cloth the naked, and how to bring Light to the ignorant. The Sharanas have enshrined their experiences in sayings which may well be regarded as contribution to world wisdom on themes of interest to modern man like love of occupation and activity, economic reform, equality, and above all spirituality. It was the great reformer, Mahatma Basaveshwar who brought the Veerashaiva Philosophy to the door of the common man and achieved a social and spiritual revolution.

The "*Anubhava Mantapa*:" a spiritual academy, was his creation, the triumph of his personality. Through it many initiates,– Sharanas and Sharanis, (Monks and Nuns) attained the full heights of their spiritual stature and recorded their experience for the benefit of others. Men of all faiths converged to this centre and expounded their own philosophies. Service of man was the single impelling motive of them all. At this

spiritual assembly presided over by— Allama Prabhu Deva and organized by Basavanna, Channa Basavanna. Siddarama. Madivala Macharasa, Akka-Mahadevi and other Sharanas and Sharanis, free and unfettered spiritual discussions were staged. The sayings uttered by these chastened men and women of that date may well prove to be a Gospel of Peace to the world to-day.

MAHATMA BASAVANNA SAYS:

"Steal not; slay not; do not speak false; do not praise yourself; do not censure others. This is purity internal, and this is purity external and this is the way to please our Kudala Sangama Deva".

"Where is Dharma (Religion) without compassion? We should have compassion not only for man but for all living creatures".

"What is earth or the world of men but the mint of the creator?"

"Who is eligible here on earth is eligible there in haven too. Who is not eligible here, is not eligible there"

"God is one, many are his names. To the supremely chaste woman, know ye, husband is but one".

"Work is worship".

All these principles are an integral part of the Veerashaiva philosophy. The doctrine,— 'Work is worship' is the greatest contribution of Veerashaivism to a world groping for peace. In the Veerashaiva vision no individual can thrive at the expense of another; there is no room for laziness or idleness, inaction, inertia in the Veerashaiva scheme. "It is a sin to eat by begging; it is virtue to earn your bread, to work for it".

**ESSENTIAL POINTS IN VEERASHAIVISM:**

1 To work in a dedicated spirit is the path to progress:
2 Spiritually, men and women are equal.
3 Caste differences are an obstacle to the uplift of society.
4 There should be no untouchability in society.

5 Doctrines or principles must be attested by experience;
6 Man should constantly strive for purity, inward and outward.
7 The world must not be rejected as transient nor the body despised or neglected as perishable.
8 Sharanas (Monks) must strive for the well-being of all living creatures.

This is the wisdom the Sharanas have bequeathed to us and this we should utilize for establishing peace in the world.

## NEED OF PEACE

An individual without peace, a country without peace the world without peace are a waste like a tank without water. There is no religion without peace, no peace without religion. Peace and religion are complementary to each other. Work is a necessary means for the establishment of peace. If only the good of all is desired with an undivided mind, peace will be ours. Where politics enters religion, the result is unrest; but if religion enters politics, the result is peace. The past history of India shows kings and potentates being counselled by sages and preceptors.

When the religions of the world develop a synthetic vision, peace and solace can be guaranteed. The light that we find in every religion must be focussed towards this end, and that is its only justification. Peace through war is a delusion. War will only feed hatred and jealousy, and never bring peace and security. We find today every dominant country in the world spending all the resources of the country on military equipment for wars of defence and aggression. If the same funds are diverted to constructive peaceful ends, the world will be the home of peace and plenty for all, a paradise on earth. It is the task of Dharma to take things well in hand before hostiliries break out and arbitrate for peace Dharma must extend its view to the collectivity, not be restricted to the individual.

SIR S. RADHAKRISHNAN says:

"A truly religious man is one who is devoid of any sense of egoism, of any ill-will Even when you are fighting, you are expected to fight without hatred. It is not true to say that we cannot fight unless we hate the enemy, it is possible for us to do our duty even in fighting without ill-will or without any kind of hatred"——————

Gandhiji expresses his view on Dharma in the following terms:

"The pages of the history of the world are stained with the blood of religious wars. A religion will be protected by the purity and good deeds of its adherents and never by disputes with the adherents of other religions."

In another context he says.

"Only that religion is true which is practised by the wise and the good who are ever free from likes and dislikes, and which appeals to the heart."

At a time when irreligion is masquerading as religion, it is well that we call to our minds the sayings and precepts of the shining exemplars of the different faiths of the world. Like the frog in the well denying that there can be any world outside and beyond the well, we should not dogmatise that our religion alone reflects truth in its entirety and that all other religions are false.

A reverent study of other religions will disclose that inevitably imperfect as all religions are, every other religion is equally true with the religion we profess. It is this impartial view of religion that will ensure peace Mere preaching is no good; practice is vital.

SIR S. RADHAKRISHNAN has this to say on Dharma:

"Estern Religions, Hinduism and Buddhism and others influenced by them have been looking upon different religions not as rivals but as friendly partners in nourishing

ಸಹಿಸಿಕೊಳ್ಳುವ ಗುಣವಿಲ್ಲ. ಒಬ್ಬರದು ಹೆಚ್ಚು; ಇನ್ನೊಬ್ಬರದು ಕೀಳು ಎಂಬ ಬಡಿದಾಟದಲ್ಲಿಯೇ ಕಾಲ ಕಳೆಯುತ್ತಿದ್ದೇವೆ. ಸಂಕುಚಿತತೆ ಇಲ್ಲವೆ ಸಣ್ಣತನದ ಅಡ್ಡಗೋಡೆಗಳನ್ನು ಕಟ್ಟುತ್ತಿದ್ದೇವೆ. ಪರಸ್ಪರವಾಗಿ ಹೆಚ್ಚಿನ ಹೆಚ್ಚಳವರಿಯದೆ, ಅಹಂಕಾರದ ಕಿಚ್ಚಿನಲ್ಲಿ ಬಿದ್ದು ಸಾಯುತ್ತಲಿದ್ದೇವೆ. ರಾಷ್ಟ್ರಾಭಿಮಾನವನ್ನು ಕಡೆಗಣಿಸಿ, ವೈಯಕ್ತಿಕ ಸ್ವಾರ್ಥಕ್ಕೆ ಬಡಿದಾಡುತ್ತಿದ್ದೇವೆ. ವಿಶಾಲಭಾವನೆಯುಳ್ಳವರನ್ನು ಮೂಲೆಗೊತ್ತಲು ಪ್ರಯತ್ನಿಸಿದರೆ ನಾವು ನಾಡಿಗೆ, ರಾಷ್ಟ್ರಕ್ಕೆ ಅಹಿತ ಬಯಸಿದಂತಾಗುತ್ತದೆ. ಅಲ್ಲದೆ ರಾಷ್ಟ್ರದ್ರೋಹ ಬಗೆದಂತಾಗುವದು.

ನಾವೆಲ್ಲರು ಒಂದೇ ತಾಯಿಯ ಮಕ್ಕಳು. ಅವರವರ ಬೆಳವಣಿಗೆಗೆ ಪೋಷಕರಾಗುವದನ್ನು ಬಿಟ್ಟು ಶೋಷಕರಾದರೆ ಆ ಭಾವಿಯ ಕಪ್ಪೆಯಂತೆ ಅಲ್ಲಿಯೇ ಇರಬೇಕಾಗುತ್ತದೆ. ಸಮಾಜದಲ್ಲಿ ನಾಡಿನಲ್ಲಿ ನವಚೈತನ್ಯ ಬರಬೇಕಾದರೆ ನಮ್ಮೆಲ್ಲರ ವಿಶಾಲ ಭಾವನೆ ಸಹೋದರತ್ವದ ಮಧುರ ಬಾಂಧವ್ಯ ಬೆಳೆದುಬರಬೇಕು. ಅದರಿಂದ ಬಾಳಿನ ಬೆಳಕಿನ ಕಿರಣಗಳು ಸುತ್ತೆಲ್ಲ ಪ್ರಕಾಶಿಸುವವು.

**ಮಾತೆಂಬುದು ಜ್ಯೋತಿರ್ಲಿಂಗ**

ಮಾತು ಮತಿಯ ಕೆಡಿಸಿತ್ತು.
ಮಾತು ಧೃತಿಯ ಕೆಡಿಸಿತ್ತು.
ಮಾತು ಕತೆಯ ಕೆಡಿಸಿತ್ತು.
ಮಾತು ಜೊತೆಯ ಕೆಡಿಸಿತ್ತು.
ಇಂತಪ್ಪ ಮಾತು ಮುತ್ತಾದರೆ,
ಕಲಹ ಎಲ್ಲಿಂದ ಬಪ್ಪುದಯ್ಯಾ!
ಮಾತರಿಯದವನು ಜಗಳ ತರುವಂತೆ,
ಮಾತು ಬಲ್ಲವ ಮಾಣಿಕ್ಯ ತರುವನಯ್ಯಾ,
ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

ಮಾತು ಮಾನವನ ಅಂತರಂಗವನ್ನು ಅಳೆಯುವ ಮೈಲುಗಲ್ಲು. ಮಾತಿನಿಂದ ಜೀವನದಲ್ಲಿ ಸಾರ್ಥಕತೆಯನ್ನು ಪಡೆಯಬಹುದು. ಅದೇ ಮಾತು ವ್ಯತ್ಯಾಸಗೊಂಡರೆ, ಬಾಳೆಲ್ಲವನ್ನು ಹಾಳುಮಾಡಿಕೊಳ್ಳಬಹುದು.

ಮಾತಿನಲೊಂದು, ಮನದಲೊಂದು ಬಗೆದರೆ ಅದು ನಂಬಿದ ವ್ಯಕ್ತಿಗಳ ಶಿರವನ್ನು ಕೊರೆದಂತಾಗುವದು. ವ್ಯಕ್ತಿತ್ವಕ್ಕೆ ಕುಂದು ತಂದಂತಾಗುವದು. ಮಾತು, ಹಿತ ಮಿತವಾಗಿದ್ದರೆ, ಸತ್ಯವಿದ್ದು, ಸತ್ವಯುತ ಆಗಿದ್ದರೆ ಆ ಮಾತೇ ಮುತ್ತಾಗುವದು; ಮಾಣಿಕ್ಯವಾಗುವದು. ಮಾತು ಕೃತಿ ಒಂದಾಗಿದ್ದರೆ, ಅದರ ಸೊಬಗೇ ಬೇರೆ. ಕೃತಿ ಮಾತಾದಾಗ

ಆ ಮಾತಿಗೆ ಬೆಲೆ ಹಾಗೂ ಬಲ ಬರುವದು. ಆಗ ಮಾತು ಬೆಳ್ಳಿಯಾಗುವದು. ಒಂದೆಡೆ ಅರವಿಂದರು 'ಈ ವಿಶ್ವದಲ್ಲಿ ಮೌನ ಮತ್ತು ಮಾತು ಇವೆರಡು ಮಹಾಶಕ್ತಿಗಳು. ಮೌನವು ಸಿದ್ಧತೆ ಮಾಡುವದು; ಮಾತು ಸೃಷ್ಟಿಮಾಡುವದು. ಮೌನವು ಕಾರ್ಯಮಾಡುತ್ತದೆ ಮತ್ತು ಕಾರ್ಯಕ್ಕೆ ಪ್ರೇರಣೆ ನೀಡುತ್ತದೆ. ಮೌನವು ಒತ್ತಾಯ ಮಾಡುತ್ತದೆ; ಮಾತು ಮನ ಒಲಿಸುತ್ತದೆ' ಎಂದು ಮಾತಿನ ವಿಶಾಲ ದೃಷ್ಟಿಯ ವಿವರವನ್ನು ಅರ್ಥ ಪೂರ್ಣವಾಗುವಂತೆ ಸುಂದರವಾಗಿ ನಿರೂಪಿಸಿದ್ದಾರೆ.

ಮಾತು ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿಯಾಗಿರಬೇಕು. ಅಧರಕ್ಕೆ ಸಿಹಿ ಇದ್ದು ಉದರಕ್ಕೆ ಕಹಿಯಾಗಿದ್ದರೆ, ಆ ಮಾತೆಲ್ಲ ಜೊಳ್ಳು ಕೊಳ್ಳಕ್ಕೆ ಹಾಕಿದಂತೆ. ಒಳ ಹೊರಗೂ ಒಂದಾಗಿ ಮೈಮನಗಳು ಶುದ್ಧಿಯಿರುವ ಮಾತಿಗೆ ಬಲು ಕಿಮ್ಮತ್ತು ಇಲ್ಲದಿದ್ದರೆ ಜೀವಕ್ಕೆ ಕುತ್ತು.

ಸುಂದರ ಜೀವನ ಸಾಗಿಸಬೇಕೆನ್ನುವವರು ಮಾತಿನಂತೆ ಕೃತಿಗೆ ಬಹಳ ಮಹತ್ವ ನೀಡುತ್ತಾರೆ. ಆಡುವ ಮಾತಿನಲ್ಲಿ ಶಕ್ತಿ ಇರದೆ ಬರಿ ಯುಕ್ತಿಯು ತುಂಬಿದ್ದರೆ ದೇವನೊಲಿಯ ಲಾರ. ಹಾಡಿನಲ್ಲಿ ಹೃದಯ ಕೂಡಿದ್ದರೆ, ಭಕ್ತಿರಸ ಉಕ್ಕಿದ್ದರೆ ದೇವರೇ ಬಂದು ಎತ್ತಿ ಕೊಳ್ಳುತ್ತಾನೆ. ಈ ರೀತಿ ಹೃದಯ ಶುದ್ಧಿಯುಳ್ಳವರ ಮಾತು ಜ್ಯೋತಿರ್ಲಿಂಗವಾಗುವದು.

## ಮಾನವಜನ್ಮ ದೊಡ್ಡದು

'ಮಾನವ ಜನ್ಮ ದೊಡ್ಡದು; ಇದಕ್ಕೆ ಹಾನಿ ಮಾಡಬೇಡಿ ಹುಚ್ಚಪ್ಪಗಳಿರಾ!' ಎಂಬು ದಾಗಿ ದಾಸರು ಸರಳ ಭಾಷೆಯ ತಿಳುಗನ್ನಡದಲ್ಲಿ ಅನುಭವಾಮೃತವನ್ನು ಸುರಿದಿದ್ದಾರೆ. ವಿಶ್ವದ ಎಲ್ಲ ಪ್ರಾಣಿಗಳಿಗಿಂತಲೂ ಬುದ್ಧಿಯಲ್ಲಿ ಮಾನವನೇ ಹೆಚ್ಚಿನವನು. ತನ್ನ ಬುದ್ಧಿಯ ಬಲದಿಂದ, ಕ್ರೂರಪ್ರಾಣಿಗಳನ್ನು ಹಾಗೂ ಶಕ್ತಿಯುತ ಪ್ರಾಣಿಗಳನ್ನು ತನ್ನ ವಶದಲ್ಲಿಟ್ಟು ಕೊಳ್ಳುವ ಕಲೆ, ಜ್ಞಾನವು ಮನುಷ್ಯನಿಗಷ್ಟೇ ಸೀಮಿತವಾಗಿರುವದು. ಮನುಷ್ಯನಿಗೆ ಬುದ್ಧಿಯ ಜೊತೆಗೆ ಯೋಚನೆ, ಯೋಜನೆ ಮಾಡುವ ಶಕ್ತಿಯು ತುಂಬಿಕೊಂಡಿರುತ್ತದೆ. ಪ್ರತಿ ಯೊಂದರಲ್ಲಿಯೂ ಹೊಂದಿಕೊಳ್ಳುವ ಚಾಣಾಕ್ಷತನ ಮಾನವನಿಗಿದೆ. ವಿದ್ಯೆ, ತಪಸ್ಸು, ದಾನ, ಜ್ಞಾನ, ಶೀಲಗುಣ, ಧರ್ಮ ಇವೆಲ್ಲವುಗಳು ಮನುಷ್ಯನಲ್ಲಿರುವದರಿಂದ ಅವನಿಗೆ ಹಿರಿದಾದ ಬೆಲೆ ಬಂದಿದೆ. ಅಂತೆಯೇ ಖಲೀಲ ಜಿಬ್ರಾನ (Secrets of the heart) ಎಂಬ ತನ್ನ ಗ್ರಂಥದಲ್ಲಿ "ವಿಶ್ವವೆನ್ನುವ ಗ್ರಂಥದಲ್ಲಿ ಮಾನವನೊಂದು ಜೀವಂತಪುಟ" ಎಂದುಸುರಿದ್ದಾನೆ. ಇಂತಹ ಮಾನವಜನ್ಮವನ್ನು ಹಾಳು ಮಾಡದಿರುವುದರಲ್ಲಿಯೇ ಸಾರ್ಥಕತೆ ಇದೆ. ದೇವರು ನಮಗೆ ಕಿವಿ ಕಣ್ಣು ಕೈ ಮೂಗು ತಲೆ ಮುಂತಾದವುಗಳನ್ನು ನೀಡಿದ್ದಾನೆ. ಅವುಗಳ ಸದುಪಯೋಗಮಾಡಿಕೊಳ್ಳದಿದ್ದರೆ, ಮಾನವಜನ್ಮ ತಾಳಿದ್ದಕ್ಕೂ ಸಾರ್ಥಕವಾಗಲಾರದು. ಎಲ್ಲ ಅವಯವಗಳನ್ನು ಪರೋಪಕಾರಕ್ಕಾಗಿಯೇ ಉಪಯೋಗಿಸ ಬೇಕೇ ವಿನಃ ದುರುಪಯೋಗ ಮಾಡಿಕೊಳ್ಳಬಾರದು. ಪ್ರಸಾದ ಕಾಯಕವನ್ನು ಕಡೆಗಣಿಸ

ಬಾರದು. ಈ ಶರೀರವು ಧರ್ಮ–ಸಾಧನೆಗೆ ಹುಟ್ಟಿರುವುದೆಂದರಿದು ನಡೆದರೆ ಮೃಡ ನಡಿಯ ಪಿಡಿಯಲು ಸುಗಮವಾಗುವದು. ಅದೆಲ್ಲವನ್ನು ಬಿಟ್ಟು ಕ್ರೂರ ಕುಹಕ ಭಾಷೆಯಲ್ಲಿ ಮನವಿರಿಸಿ ನೀತಿಗೆ ವಿರುದ್ಧವಾದ ಧಾರ್ಮಿಕ ತತ್ವವನ್ನು ತಳ್ಳಿ, ಮನಬಂದಂತೆ ನಡೆದರೆ ಬಹುಪುಣ್ಯವಿಶೇಷದಿಂದ ದೊರೆತ ಮಾನವಜನ್ಮವನ್ನು ನಾವೇ ನಿರರ್ಥಕಮಾಡಿಕೊಂಡು ಸಿಕ್ಕ ಫಲವನ್ನು ಕೆರೆಗೆಸೆದಂತೆ ನಿಷ್ಫಲವಾಗುವದು.

ಮನುಷ್ಯನಾಗಿ ಪಶು–ವೃತ್ತಿ ಬೆಳೆದರೆ, ಇದ್ದು ಇಲ್ಲದವನಾಗಿ, ರಾಕ್ಷಸನಂತೆ ಬಾಳ ಬೇಕಾಗುತ್ತದೆ. ಅದಕ್ಕಾಗಿ ಮನುಷ್ಯನಾದವನು ತನ್ನ ಸಮರ್ಥತೆಯ ಆಳವನ್ನು ಕಂಡು ಬುದ್ಧಿ ಮತ್ತೆಯಿಂದ ನಡೆದುಕೊಂಡರೆ ಮಾತ್ರ ಮಾನವಜನ್ಮವತ್ಯಧಿಕ; ಇಲ್ಲದಿದ್ದರೆ ದಾರಿ ಯಲ್ಲಿ ತಿರುಗುವ ಹುಚ್ಚನಂತೆ ನಿರರ್ಥಕ ಜೀವನ ಸಾಗಿಸಬೇಕಾಗುತ್ತದೆ.

## ವೃತ್ತಿಯು ಜಾಲ ಚಿಂತೆಯ ಮೂಲ

ವೃತ್ತಿಯು ಪ್ರವೃತ್ತಿ ನಿವೃತ್ತಿ ಎಂಬುದಾಗಿ ಎರಡು ತೆರ. ಪ್ರವೃತ್ತಿಯು ಪರಮಾರ್ಥಕ್ಕೆ ದೂರ, ನಿವೃತ್ತಿಯು ನಿಧಿಧ್ಯಾಸಕ್ಕೆ ಪೂರಕ. ಪ್ರವೃತ್ತಿಯಿಂದ ದುಃಖ; ನಿವೃತ್ತಿಯಿಂದ ಸುಖ. ಎಳೆಗಳು ಕೂಡಿದಂತೆ ಗಟ್ಟಿಯಾದ ಹಗ್ಗವಾಗಿ ಪರಿಣಮಿಸುವದು. ಎಳೆಗಳು ಹರಿದು ಹಂಚಿದರೆ, ಸಂಚಿತ ಶಕ್ತಿಯು ಕಳೆದುಹೋಗುವದು.

ಭವಬಂಧನದಲ್ಲಿ ಸಿಕ್ಕವನು ತೊಳಲಿ ಬಳಲಿ ಚಿಂತಾ ಜಲಧಿಯಲ್ಲಿ ಮುಳುಗಿರ ಬೇಕಾಗುತ್ತದೆ. ಬಿಟ್ಟೆನೆಂದರೂ ಬಿಡದು. ಆಗ ಮಾಯಾಜಾಲವನ್ನು ಬಿಡಿಸಿಕೊಳ್ಳುವದು, ಅಸಾಧ್ಯವಾಗುವದು. ಮಾಯೆಯು ಧಾರೆಯು ಮನುಷ್ಯನನ್ನು ಅಧೋಮುಖದತ್ತ ಎಳೆ ದೊಯ್ದು ಚಿಂತೆಯ ಕೊರಕಲದಲ್ಲಿ ನೂಕಿಬಿಡುತ್ತದೆ; ಭವಪಾಶದಲ್ಲಿ ಕಟ್ಟಿಹಾಕುತ್ತದೆ. ತಾಪತ್ರಯಗಳ ಚಿಂತೆಯಲ್ಲಿ ಬಿದ್ದ ವ್ಯಕ್ತಿಯ ವ್ಯಕ್ತಿತ್ವ–ವಿಕಾಸವು ಅವನಿಗೆ ಕನಸಿನ ಗಂಟಾಗುತ್ತದೆ. ಮನಸ್ಸು ವ್ಯಾಕುಲಗೊಂಡು ಅತ್ತಿಂದಿತ್ತ ಇತ್ತಿಂದತ್ತ ತಿರುಗುತ್ತದೆ.

ವೃತ್ತಿಯು ಜಾಲದಲ್ಲಿ ಸಿಕ್ಕು ಪಂಜರದೊಳಗಿದ್ದ ಹುಲಿಯಂತೆ ಅವರ ಜೀವನವಾಗು ತ್ತದೆ. ಜ್ಞಾನ ಶೂನ್ಯವಾಗುತ್ತದೆ. ಧ್ಯಾನವು ನಿಲ್ಲದಾಗುತ್ತದೆ. ಸುಬುದ್ಧಿ ಹೋಗಿ ದುರ್ಬುದ್ಧಿ ಬರುತ್ತದೆ. ಒಮ್ಮೆ ಪ್ರಬಲ ಶಕ್ತಿಯುಳ್ಳ ಪಂಚೇಂದ್ರಿಯಗಳ ಜಾಲದಲ್ಲಿ ಸಿಕ್ಕ ಮೇಲೆ ಅದರಿಂದ ಪಾರಾಗುವದು ಕಠಿಣವಾಗುತ್ತದ. ಒಂದೆಡೆ ವೈರಾಗ್ಯ ಶಿಖಾಮಣಿ ಅಕ್ಕ ಮಹಾದೇವಿಯು "ತೆರಣಿಯ ಹುಳು ತನ್ನ ನೂಲುಸುತ್ತಿ ಸಾವತೆರನಂತೆ ಮನ ಬಂದುದ ಬಯಸಿ ಬೇಯುತ್ತಿರುವನಯ್ಯ! ಆ ಮನದ ದುರಾಸೆಯ ಮಾಡಿಸಿ ನಿಮ್ಮತ್ತ ತೋರಾ ಚನ್ನಮಲ್ಲಿಕಾರ್ಜುನಾ!" ಎಂಬುದಾಗಿ ದೇವರನ್ನೇ ಮೊರೆಹೊಕ್ಕಿದ್ದಾಳೆ.

ಆಕಾಶದಲ್ಲಿ ಹಾರಾಡುವ ಮನಸ್ಸೆಂಬ ಪಕ್ಷಿಯನ್ನು ಹಿಡಿದು ತರಲು ಪ್ರಾರ್ಥನೆ ಹಾಗೂ ಸತ್‌ಸಹವಾಸವೇ ದಿವ್ಯೌಷಧ. ಸಾಧನಗಳಿದ್ದಂತೆ ಚಿಂತಾಜ್ವರವು ಮನುಷ್ಯನ ಶಕ್ತಿಯನ್ನು ನಷ್ಟ ಮಾಡುವದಲ್ಲದೆ ವ್ಯಕ್ತಿಗತ ಅಂತಸ್ಸತ್ವವನ್ನು ಹೀರಿಬಿಡುತ್ತದೆ.

ಅಂತೆಯೇ ಲಿಂಗೈಕ್ಯ ಹಾನಗಲ್ಲ ಕುಮಾರ ಶಿವಯೋಗಿಗಳು ತಮ್ಮದೊಂದು ಪದ್ಯದಲ್ಲಿ 'ವೃತ್ತಿಯು ಜಾಲ, ಚಿಂತೆಯು ಮೂಲ' ವೆಂದು ಹಾಡಿದ್ದಾರೆ

**ಅರಿತು ಮಾಡುವದೊಳಿತು**

ಒಂದೂರಲ್ಲಿ ಒಬ್ಬ ಹಾವಾಡಿಗನಿದ್ದ. ಅವನು ಒಂದು ದಿನ ಮತ್ತೊಂದೂರಿಗೆ ಹೋಗುವಾಗ ದಾರಿಯಲ್ಲಿ ಹಡಪಿಗನು ಸಿಕ್ಕನು. ಆವರೀರ್ವರೂ ಕೂಡಿಕೊಂಡು ಮುಂದೆ ಸಾಗುತ್ತಿರುವಾಗ ಆ ದಾರಿಯಲ್ಲಿ ದೊಡ್ಡ ಘಟಸರ್ಪವು ಕಾಣಿಸಿತು. ಹಾವಾಡಿಗನು ಅದನ್ನು ನೋಡಿದೊಡನೆಯೇ ತನ್ನ ಮಂತ್ರಶಕ್ತಿಯಿಂದ ಅದನ್ನು ಹಿಡಿದು, ಅದರ ಹೆಡೆ ಯೊಳಗಿರುವ ರತ್ನವನ್ನು ತಕ್ಕೊಂಡನು.

ಹೀಗೆ ಮಾಡಿದ್ದನ್ನು ನೋಡಿದ-ಹಡಪಿಗನು 'ನಾನೂ ಈ ಹಾವಾಡಿಗನಂತೆ ಮಾಡುತ್ತಹೋದರೆ, ಕೆಲವೇ ದಿನಗಳಲ್ಲಿ ನಾನು ಸಹ ಧನವಂತನಾಗುವೆನು ಎಂದು ಕೊಂಡು, ಕ್ಷೌರ ಮಾಡುವ ತನ್ನ ಕಾರ್ಯವನ್ನು ಬಿಟ್ಟು, ಅಂಥ ನಾಗರಹಾವನ್ನು ಹುಡುಕುತ್ತ ಅರಣ್ಯದತ್ತ ಹೊರಟನು. ಹಾಗೆಯೇ ಹುಡುಕುತ್ತಿರುವಾಗ ದೊಡ್ಡ ನಾಗರ ಹಾವೊಂದು ಆ ಹಡಪಿಗನ ಕಣ್ಣಿಗೆ ಬಿತ್ತು. ಕೂಡಲೆ ಅವನು ಬಹಳ ಆನಂದವುಳ್ಳವನಾಗಿ, ಆ ಹಾವಾಡಿಗನು ಮೊದಲನೆಯ ದಿನ ಮಾಡಿದಂತೆಯೇ ತಾನೂ ರತ್ನ ಪಡೆಯುವ ಆಶೆ ಯಿಂದ ಹಾವಿನ ಕುತ್ತಿಗೆಗೆ ಕೈ ಹಾಕುವಷ್ಟರಲ್ಲಿಯೇ ಅವನ ಬೆರಳಿಗೆ ಆ ಹಾವು ಕಚ್ಚಿಬಿಟ್ಟಿತು! ಅದರಿಂದ ಆ ಹಡಪಿಗನಿಗೆ ಹಾವಿನ ವಿಷ ಏರಿ ಸತ್ತುಹೋದನು.

ಅರಿಯದೆ ಮಾಡಿದ ಇಂತಹುದನ್ನು ಅನುಭವಿಸಬೇಕಾಗುವದು. ಅನುಕರಣ ಮಾಡುವದು ಒಳಿತಾಗಿದ್ದರೂ ಅದರದರ ಒಳಗಿನ ಇಂಗಿತವನ್ನರಿಯದಿದ್ದರೆ, ಹುಲಿಯ ಬಣ್ಣವನ್ನು ಬಡಿದುಕೊಂಡ ನರಿಯಂತೆ ವ್ಯರ್ಥವಾಗುವದು.

ತನ್ನ ತಾನರಿಯದಿದ್ದರೆ ಇತರರನ್ನು ಅರಿತುಕೊಳ್ಳುವದು ಕಠಿಣವಾಗುವದು. ಅರಿ ವಿಲ್ಲದೆ ಮಾಡುವವನು ಸಂಕಟ ಕೊಳಚೆಯಲ್ಲಿ ಬಿದ್ದು ಎಚ್ಚರವಿಲ್ಲದಂತಾಗುವದು! ಕೆಡುಕಿನ ದಾರಿಯತ್ತ ಸಾಗಿ, ಹಿರಿಗುರಿಯನ್ನು ಮರೆಯುವನು.

ಅದಕ್ಕಾಗಿ, ಪ್ರತಿಯೊಬ್ಬ ಮಾನವನು ಅನುಕರಣ ಮಾಡುವಾಗ, ಸಂಪೂರ್ಣ ವಿವೇಚಿಸಿ ವಿಚಾರಿಸಿ, ಸಜ್ಜನರ ಸಹವಾಸ ಮಾಡಿ, ಅವರ ಸೇವೆಗೈದು ಅವರ ಅನುಭವ ತೆಗೆದುಕೊಂಡರೆ ಮಾತ್ರ ಇಷ್ಟಾರ್ಥ ಸಿದ್ಧಿ; ಇಲ್ಲದಿದ್ದರೆ ಅಜ್ಞಾನದ ತಿರುಗಣಿ ಮಡುವಿನಲ್ಲಿ ಬಿದ್ದವರ ಜೀವನದಂತಾಗುವದು.

**ಚಿತ್ತದ ರಾಗ ಭ್ರಾಂತಿಯ ಪೂಗ**

ಈ ಸಂಸಾರವು ಭ್ರಮಾತ್ಮಕವಾದುದು. ರಾಗ-ಮೋಹ-ರೋಗ-ರುಜಿನಗಳಿಂದ ಕೂಡಿದುದು. ವ್ಯಾಮೋಹದ ಮನೆಯಲ್ಲಿದ್ದು, ವ್ಯಕ್ತಿಗತ ಅಂತಸ್ಸತ್ವವನ್ನು, ಅಂತಃ

ಸ್ಫೂರ್ತಿಯನ್ನು ಕಳೆದುಕೊಂಡ ಮಾನವನು ಜನನ-ಮರಣದ ಒಳಬಾಧೆಗೆ ಸಿಲುಕುವ ನಲ್ಲದೆ, ಅವನಿಗೆ ಈಶ್ವರ ಸಾಕ್ಷಾತ್ಕಾರವು ಇಲ್ಲದಂತಾಗುವದು.

ಚಿತ್ತದ ರಾಗ ಪರಂಪರೆಯಲ್ಲಿ ಬಿದ್ದವನು ಭ್ರಾಂತಿಯಲ್ಲಿಯೇ ತೊಳಲಾಡುತ್ತಿ ರುವನು.

ಮನುಷ್ಯನ ಚಿತ್ತದಲ್ಲಿ ಯಾವುದೋ ಒಂದು ವಿಲಕ್ಷಣ ಹಾಗೂ ಚಿತ್ರ ವಿಚಿತ್ರ ಜಗತ್ತು ಕಲ್ಪಿತವಾಗಿ ಸ್ಥಾಪಿತವಾಗುತ್ತದೆ. ಅದರಲ್ಲಿ ಒಂದುಕಡೆ ಮೃದುವಾದ ಗುಲಾಬಿ ಹೂಗಳಿಂದ ಹರಡಿರುವ ಆಕರ್ಷಕ ಉದ್ಯಾನವನವಿದೆ; ಆ ವನದಲ್ಲಿ ಮೃತ್ಯುವಿನಂತೆ ಅಂಧಕಾರವುಳ್ಳ ನಿರಾಶೆಯ ಭಯಾನಕ ಭಾವಿಗಳಿವೆ; ಅವುಗಳ ಆಳವನ್ನು ನೋಡುತ್ತಲೆ ಹೃದಯ ಕಂಪಿಸುತ್ತದೆ! ಅದೇ ಉದ್ಯಾನವನದಲ್ಲಿ ಮತ್ತೊಂದೆಡೆಗೆ ತ್ಯಾಗ ಮತ್ತು ಸಹಾನುಭೂತಿ ಮುಂತಾದವುಗಳಿಂದ ತುಂಬಿ ಹರಿಯುತ್ತಿರುವ ಪ್ರೇಮದ ಹಳ್ಳಗಳಿದ್ದರೆ, ಇನ್ನೊಂದೆಡೆಗೆ ಅಸತ್ಯ, ದುರಭಿಮಾನ, ಇಂದ್ರಿಯ ಲೋಲುಪತೆಯ ಜ್ವಾಲೆ ಇತ್ಯಾದಿ ಗಳಿಂದ ತುಂಬಿರುವ ನರಕವೂ ಇದೆ. ಅದರಂತೆಯೇ ಮಗುದೊಂದೆಡೆಗೆ ಸತ್ಯ, ಸಂತೋಷ, ಭಕ್ತಿ ಹಾಗೂ ನಮ್ರತೆಯ ಸ್ವರ್ಗವೂ ಪ್ರಕಾಶಿಸುತ್ತಿರುತ್ತದೆ.

ಮನುಷ್ಯನ ಇಂಥ ಚಿತ್ತದಲ್ಲಿ ಎಲ್ಲವೂ ಇದ್ದು, ಕೆಟ್ಟದ್ದನ್ನು ಬಿಟ್ಟು, ಒಳ್ಳೆಯ ದನ್ನು ಹಿಡಿಯುವದರಲ್ಲಿ ಅವನಿಗೆ ಜಾಣ್ಮೆಯಿರಬೇಕು. ತಾಳ್ಮೆಯಿರಬೇಕು. ಅಂತೆಯೇ ಹಿರಿಯರು: 'ಒಂದು ಬಿಟ್ಟು ಒಂದು ಹಿಡಿ' ಎಂದು ಅನುಭವವಾಣಿಯನ್ನು ಸುರಿದ್ದಾರೆ

ಅದಕ್ಕಾಗಿ ಚಿತ್ತ ಚಾಂಚಲ್ಯವನ್ನು ದೂರ ಮಾಡಿದರೆ, ಭ್ರಾಂತಿಯು ತನ್ನಿಂದ ತಾನೇ ತೊಲಗುತ್ತದೆ. "ಒಡೆದ ಮನಸ್ಸು ಒಡೆಯುದ ಹಾಲಿನಂತೆ" ಎಂಬುವ ಗಾದೆ ಯುಂಟು; ಚಿತ್ತವನ್ನು ಆ ಮಟ್ಟಕ್ಕೊಯ್ಯದಂತೆ ನೋಡಿಕೊಳ್ಳುವದೇ ಸಾಧಕನ ಮುಖ್ಯ ಗುರಿ.

ಸುಖ-ದುಃಖಗಳಿಗೆ ಚಿತ್ತವೇ ಮೂಲಕಾರಣವಾಗಿರುವದರಿಂದ ಚಿತ್ತ-ವೃತ್ತಿ-ನಿರೋಧವು ಆತ್ಮಾನಂದಕ್ಕೆ ಸಹಾಯಕವಾಗುವದು. ಶಾರೀರಿಕ ನೋವಿಗಿಂತಲೂ ಮಾನಸಿಕ ನೋವು ಬಲು ಅಪಾಯಕಾರಿ! ಅಂತೆಯೇ ಲಿಂ. ಹಾನಗಲ್ಲ ಕುಮಾರ ಶಿವಯೋಗಿ ಗಳು ಸಾಧಕರ ಕಲ್ಯಾಣಕ್ಕಾಗಿ "ಚಿತ್ತದ ರಾಗ; ಭ್ರಾಂತಿಯ ಪೂಗ" ಎಂದು ತಿಳಿ ಹೇಳಿದ್ದಾರೆ.

**ಬಿಟ್ಟೆನೆಂದರೆ ಬಿಡದೀ ಮಾಯೆ**

ನದಿಯೊಂದು ಭೋರ್ಗರೆದು ಹರಿಯುತ್ತಿತ್ತು. ಆ ನದಿಯ ತಟದಲ್ಲಿ ಅಂಬಿಗ ರಿಬ್ಬರು ನಿಂತುಕೊಂಡು ತುಂಬಿ ಹರಿಯುತ್ತಿರುವ ಆ ಹೊಳೆಯ ದೃಶ್ಯವನ್ನು ನೋಡಿ ನಲಿಯುತ್ತಿದ್ದರು. ಅಷ್ಟರಲ್ಲಿಯೇ ಕರಡಿಯೊಂದು ಕೆಳಮುಖಮಾಡಿ ಪ್ರವಾಹದಲ್ಲಿ ಹರಿದು ಹೋಗುತ್ತಿತ್ತು. ಅದನ್ನು ಕಂಡ ಆ ಅಂಬಿಗರಿಗೆ ಅದು ಕರೇ ಕಂಬಳಿಯ ಗಂಟಿನಂತೆ ಭಾಸವಾಯಿತು. ಅವರಲ್ಲೊಬ್ಬನು ಆ ಕಂಬಳಿಯನ್ನು ತಗೆದುಕೊಂಡು ಬರ

ಬೇಕೆಂಬಾಸೆಯಿಂದ ನದಿಯಲ್ಲಿ ಜಿಗಿದು, ಈಸಿ-ಈಸಿ ಆ ಕಂಬಳಿಯ ಗಂಟಿನ ಹಾಗೆ ಇದ್ದ ಕರಡಿಯ ಹತ್ತಿರ ಹೋದ; ಶ್ರಮವಹಿಸಿ ಅದನ್ನು ಒತ್ತಿ ಹಿಡಿದುಕೊಂಡ.

ಈಸಿ-ಈಸಿ ಬೇಸತ್ತು, ಆಸರೆಯನ್ನೇ ಬಯಸುತ್ತಿದ್ದ ಆ ಕರಡಿಯು ಅವನನ್ನು ಹಿಡಿದುಕೊಂಡು ಬಿಟ್ಟಿತು. ಕಂಬಳಿಯ ಆಸೆಗಾಗಿ ಹೋದ ಅಂಬಿಗನು ಕರಡಿಯ ಕೈಯಲ್ಲಿ ಸಿಕ್ಕು ಒದ್ದಾಡಲಿಕ್ಕೆ ಹತ್ತಿದನು. ನದಿಯ ತಟದ ಮೇಲೆ ನಿಂತಿದ್ದ ಅಂಬಿಗನು ಏರುವ ಹೊಳೆಯನ್ನು ನೋಡಿ ಹೆದರಿಹೊಳೆಯಲ್ಲಿರುವ ಅಂಬಿಗನನ್ನು ಕುರಿತು, ಬೇಗ ಬಾ! ಆ ಕಂಬಳಿ ಗಂಟನ್ನು ಅಲ್ಲೇ ಬಿಟ್ಟಾದರೂ ಬಂದು ಬಿಡು!! ಎಂದು ಕರೆಯ ಹತ್ತಿದನು. ಅದಕ್ಕವನು ಅಯ್ಯೋ ಮಹಾರಾಯ!! ನಿನ್ನ ಹತ್ತಿರ ದಂಡೆಗೆ ಬರಬೇಕೆಂದರೆ ಈ ಕರಡಿ ನನ್ನನ್ನು ಗಟ್ಟಿಯಾಗಿ ಹಿಡಿದುಕೊಂಡಿದೆ. ಬಿಟ್ಟೇನೆಂದರೂ ಬಿಡಲೊಲ್ಲದಾಗಿದೆ. ಕಂಬಳಿಯೆಂದು ಭ್ರಮಿಸಿ ಬಂದೆನು. ಆದರೆ, ಇದು ಕಂಬಳಿಯಲ್ಲ; ಜೀವಂತ ಕರಡಿಯಾಗಿದೆ. ನಾನೀಗ ಕೆಸರಿನಲ್ಲಿ ಸಿಕ್ಕ ಪಶುವಿನಂತೆ ಆಗಿದ್ದೇನೆ!! ಅಯ್ಯಯ್ಯೋ!!! ಎಂದು ಜೋರಿನಿಂದ ತನ್ನ ಗೆಳೆಯನಿಗೆ ಕೂಗಿಹೇಳಿದನು.

ಅದರಂತೆ ಈ ಪ್ರಪಂಚ ಪ್ರವಾಹದಲ್ಲಿ ಒಮ್ಮೆ ಮಾಯೆಯ ಮೋಹದ ಬಲೆಯಲ್ಲಿ ಸಿಕ್ಕಮೇಲೆ ನಮ್ಮದೂ ಸಹ, ಕಂಬಳಿಯಾಸೆಗಾಗಿ ಹೋಗಿ ಸಿಕ್ಕ ಅಂಬಿಗನಂತೆಯೇ ಜೀವನ ವ್ಯರ್ಥವಾಗುವದು. ಏನು ಮಾಡಿದರೂ ಮಾಯೆಯ ಸೆಳೆತವು ಬಿಡಲಾರದು. ವ್ಯಕ್ತಿ-ವ್ಯಕ್ತಿಗೆ ಮಾಯೆಯ ವ್ಯಾಮೋಹದಿಂದಾದಷ್ಟು ಅನಾಹುತವು ಮತ್ತೊಂದರಿಂದಾಗದು. ಮಾಯೆಯ ಸೆಳುವಿನಲ್ಲಿ ಸಿಕ್ಕವರು ಮೃತ್ಯುವಶರಾದಂತೆಯೇ. ಅಂತೆಯೇ ಬಿಟ್ಟೆನೆಂದರೆ, ಬಿಡದೀ ಮಾಯೆ; ಬಿಡದಿದ್ದರೆ ಬೆಂಬತ್ತಿತ್ತು ಮಾಯೆ ಎಂದ ಅಕ್ಕ ಮಹಾದೇವಿಯು "ಹರಿಯ ನುಂಗಿತ್ತು ಮಾಯೆ, ಅಜನ ನುಂಗಿತ್ತು ಮಾಯೆ, ಇಂದ್ರನ ನುಂಗಿತ್ತು ಮಾಯೆ, ಚಂದ್ರನ ನುಂಗಿತ್ತು ಮಾಯೆ, ಬಲ್ಲೆನೆಂಬ ಬಲು ಗಯ್ಯಾರ ನುಂಗಿತ್ತು ಮಾಯೆ, ಅರಿಯೆನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ, ಈರೇಳು ಭುವನವನಾರಡಿಗೊಂಡಿತ್ತು ಮಾಯೆ ಚನ್ನಮಲ್ಲಿಕಾರ್ಜುನಯ್ಯಾ, ಎನ್ನ ಮಾಯೆಯ ಕರುಣಿಸಾ ಕರುಣಿ!" ಎಂದುದಾಗಿ ಮಾಯೆಯ ಬಗೆಗೆ ಹೇಳಿರುವ ಈ ಅನುಭವದ ಮಾತು ನಿತ್ಯ ಸತ್ಯವಾದುದಾಗಿದೆ.

ಆದುದರಿಂದ ಕೆಸರಿನಲ್ಲಿದ್ದರೂ ಕೆಸರನ್ನು ಹತ್ತಿಸಿಕೊಳ್ಳದ ಕುಂಬಾರಹುಳದಂತೆ, ಸಂಸಾರದ ವ್ಯಾಮೋಹದ ಮಾಯೆಯನ್ನು ಹತ್ತಿಸಿಕೊಳ್ಳದೆ ಇದ್ದು ಜೀವಿಸಿ, ಆತ್ಮ ಸುಖವನ್ನು ಪಡೆಯುವದೇ ಮಾನವನ ಪರಮಗುರಿ.

## ಕರ್ತಾರನ ಕಮ್ಮಟ

ಈ ಪ್ರಪಂಚವೆಂಬುದು ಕರ್ತಾರನ ಕಮ್ಮಟ. ಇಲ್ಲಿ ಕಾಣುತ್ತಿಹುದು ಸುಖ ದುಃಖಗಳ ತಾಕಲಾಟ; ಎತ್ತ ನೋಡಿದರೂ ಹೋರಾಟ, ಈ ಟಂಕಸಾಲೆಯಲ್ಲಿ ಖೊಟ್ಟಿ ನಾಣ್ಯಗಳಾಗದಂತೆ ಜೀವನವಿರಿಸಿಕೊಂಡು ನಡೆದು ಮೃಡನಡಿಯ ಪಿಡಿಯುವದೇ

ಮನುಷ್ಯನ ಮುಖ್ಯ ಕರ್ತವ್ಯ ಪವಿತ್ರವಾಗಿದ್ದು ಸಾರ್ಥಕ ಜೀವನ ಮಾಡಿಕೊಳ್ಳಬೇಕಾಗಿದೆ. ಇಲ್ಲಿಯೂ ಸಲ್ಲಿ ದೇವರಲ್ಲಿಯೂ ಸಲ್ಲಬೇಕಾಗಿದೆ. ಮೃತ್ಯುಲೋಕಕ್ಕೆ ಬಂದ ಬಳಿಕ, ಸತ್ಕಾರ್ಯದಲ್ಲಿ ನಿರತರಾಗಿ ಉದಾತ್ತ ಭಾವನೆಯನ್ನು ಅಂಗವಿಸಿಕೊಂಡು ಕಾಯಕ ಪಥದತ್ತ ಸಾಗುವದೇ ಜೀವನದ ಮುಂಗುರಿ. ಜೀವವು ಪರಿಶುದ್ಧವಾಗಲು ಅಹೋರಾತ್ರಿ ಪರಿಶ್ರಮಿಸಬೇಕಾಗುತ್ತದೆ. ಸತ್ಯ ಶುದ್ಧ ಕಾಯಕದಿಂದ ಬಾಳೆಲ್ಲವನ್ನು ಹಸನು ಮಾಡಿ ಕೊಳ್ಳಬೇಕಾಗುತ್ತದೆ. ಆಚಾರ ವಿಚಾರಗಳಿಂದ ಪೂತಾತ್ಮರಾಗಬೇಕಾಗುತ್ತದೆ. ವ್ಯಕ್ತಿತ್ವ ವಿಕಾಸಮಾಡಿಕೊಂಡು ಶಕ್ತಿಯನ್ನು ಗಳಿಸಿಕೊಂಡರೆ ಬಾಳೆಲ್ಲವೂ ಬಂಗಾರವಾಗುತ್ತದೆ. ಅಹಂಕಾರ, ಅಜ್ಞಾನ, ಅಶುದ್ಧ ಭಾವನೆ, ಅನಿಶ್ಚಯ ಬುದ್ಧಿ, ಅಸ್ಥಿರ ಚಿತ್ತಗಳನ್ನು ದೂರೀ ಕರಿಸಿದರೆ ಮಾತ್ರ ನಿರಹಂಕಾರ ಶುದ್ಧ ಬುದ್ಧಿ ನಿಶ್ಚಿತಾತ್ಮಕ ಜ್ಞಾನ ಜೀವನ ಸಿದ್ಧಿ ಅಲ್ಲಿ ಕಾಣುವದು. ಇವುಗಳನ್ನು ಸಾಧಿಸಲಿಕ್ಕೆ ಕಮ್ಮಟದಲ್ಲಿ ದುಡಿದು ವಿವೇಚನಾತ್ಮಕ ವಿವೇಕ ವನ್ನು ಪಡೆದು ಮಲತ್ರಯಗಳನ್ನು ಹರಿದೊಗೆದು ಅಂತರಂಗ ಬಹಿರಂಗಗಳೆರಡನ್ನು ಶುದ್ಧೀಕರಿಸಿಕೊಂಡಾಗ ಆತ್ಮಶಕ್ತಿ ಬೆಳೆದು ಇಹ ಪರಜೀವನಗಳೆರಡರ ಅಭಿವೃದ್ಧಿಗೊಳಿಸಲು ಸಾಧ್ಯವಾಗುತ್ತದೆ. ಅಂತಾದಾಗ ವ್ಯಕ್ತಿಯು ದೇವಮಾನವನಾಗಿ ಪರಿಪೂರ್ಣನಾಗ್ತು ತ್ತಾನೆ. ಭವರೋಗದಿಂದ ದೂರಾಗುತ್ತಾನೆ. ಮೃತ್ಯುಲೋಕದಲ್ಲಿದ್ದರೂ ಆತ್ಮಸುಖದ ಸವಿಯನುಂಡು ಆನಂದಸಾಗರದಲ್ಲಿ ತೇಲಾಡುತ್ತಾನೆ. ಎದುರುಬರುವ ಕಂಟಕಗಳನ್ನು ಎದುರಿಸಿ ಮುಂದೆ ಸಾಗಿದರೇನೆ ಈ ಟಂಕಸಾಲೆಯಲ್ಲಿ ಇದ್ದುದಕ್ಕೂ ಸಾರ್ಥಕ.

**ಶಿಸ್ತು ಸಂಯಮ**

ಶಿಸ್ತು ಸಂಯಮಗಳು ಮಾನವನಿಗೆ ಆತ್ಮೋದ್ಧಾರ ಮಾಡಿಕೊಳ್ಳಲು ಮೈಲುಗಲ್ಲು ಗಳಿದ್ದಂತೆ, ಕಡು ದರ್ಪವೇರಿದ ಒಡಲೆಂಬ ಬಂಡಿಗೆ ಕಡೆಗೀಲುಗಳಿದ್ದಂತೆ. ಆತ್ಮಶಕ್ತಿ ಯನ್ನು ಸಂಪುಷ್ಟಿಗೊಳಿಸಿಕೊಳ್ಳಲು ಆತ್ಮಸಂಯಮವೇ ತಾಯಿ ಬೇರು. ಜ್ಞಾನ ವೃಕ್ಷವು ಚಿಗುರೊಡೆದು ಸಮೃದ್ಧಿಯಾಗಲು ಶಿಸ್ತು ಸಂಯಮಗಳೆಂಬ ನೀರು ಗೊಬ್ಬರಗಳನ್ನು ಹಾಕಿದಾಗ ರಸವತ್ತಾದ ಫಲಗಳನ್ನು ನೀಡುವದು. ಲೌಕಿಕರಿಗೂ ಆಧ್ಯಾತ್ಮ ಸಾಧಕರಿಗೂ ಶಿಸ್ತು ಸಂಯಮಗಳು ಅತ್ಯವಶ್ಯಬೇಕು. ಇವುಗಳಿಲ್ಲದೆ ಜೀವನಕ್ಕೆ ಶಾಂತಿ ಸಿಗಲಾರದು, ಭಾವಶುದ್ಧಿಯಾಗಲಾರದು, ಚಿತ್ತವು ನಿಲ್ಲಲಾರದು. ಆತ್ಮಸಂಯಮವಿಲ್ಲದ ಜೀವನ ಕಡಿವಾಣ ವಿಲ್ಲದ ಕುದುರೆಯಂತೆ ನಿರರ್ಥಕ. ಆತ್ಮಸಂಯಮನದಿಂದ ಆತ್ಮಕ್ಕೆ ಆನಂದ ದೊರೆಯುವ ದಲ್ಲದೆ ಮನಸ್ಸಿನಲ್ಲಿ ದೃಢ ನಿರ್ಧಾರವುಂಟಾಗುವದು. ಆತ್ಮಸಂಯಮನವೆಂಬ ಆಣೆ ಕಟ್ಟನ್ನು ಕಟ್ಟದಿದ್ದರೆ ಶರೀರವೆಂಬ ಹೊಲದಲ್ಲಿ ಕಾಮಕ್ರೋಧಾದಿ ದುರ್ಗುಣಗಳೆಂಬ ಕಸ ಕಡ್ಡಿಗಳು ಹುಟ್ಟಿ, ಕ್ರಮಬದ್ಧ ನಿಯಮಗಳಿರುವ ಆಚಾರ ವಿಚಾರಗಳು ನಿರ್ನಾಮವಾಗಿ ನಿರಂತರ ದುಃಖಕ್ಕೀಡಾಗುವದಲ್ಲದೆ, ಇಹಪರ ಸುಖವನ್ನು ಪಡೆಯಲಾರದು. ನೀರನ್ನು ಬಿಟ್ಟ ಮೀನಿನಂತೆ ಅವಗತಿಯಾಗುವದು. ಸಂಯಮ ಶೂನ್ಯ ಜೀವನ ಮತ್ತು ಅಶಿಸ್ತು

ಮನುಷ್ಯನ ಭವಿಷ್ಯ ನಿರ್ಮಾಣಕ್ಕೆ ತೊಂದರೆಯುಂಟಾಗುವದಲ್ಲದೆ ಗಾಳಿಗೊಡ್ಡಿದ ಸೊಡರಿನಂತೆ ಜೀವನವಾಗುವದು.

ಜೀವನದಲ್ಲಿ ಜಯ ಪಡೆದು ಸುಖಸಾಗರದಲ್ಲಿ ತೇಲಬೇಕಾದರೆ ಶಿಸ್ತು ಸಂಯಮಗಳೇ ಮುತ್ತುರತ್ನಗಳು. ಆತ್ಮಸೌಂದರ್ಯವನ್ನು ಪಡೆದು ಆತ್ಮಜ್ಯೋತಿಯಲ್ಲಿ ಬೆಳಗಬೇಕಾದರೆ ಆತ್ಮಸಂಯಮವೇ ದಾರಿದೀಪ ಶಿಸ್ತಿನಿಂದಿರುವದೇ ಜೀವನದ ಭದ್ರಬುನಾದಿ.

## ಸತತೋದ್ಯೋಗ

ಕಲಂಕವಿಲ್ಲದಂತೆ, ಪರಿಶುದ್ಧವಾಗಿರುವಂತೆ ಜೀವನ ಸಾಗಿಸುವ ಮುಖ್ಯ ಸಾಧನವೇ ಸತತೋದ್ಯೋಗ. ಕಾಮ ವಿಕಾರಗಳನ್ನೂ, ಚಿತ್ತ ಚಾಂಚಲ್ಯವನ್ನೂ ದೂರ ಮಾಡುವ ದಿವ್ಯೌಷಧ, ದೇವನೆಡೆಗೆ ಕರೆದೊಯ್ಯುವ ದಾರಿದೀಪ. ಸತತೋದ್ಯೋಗದಿಂದ ಎಂತಹ ಕಾಯಕವನ್ನಾದರೂ ಸಾಧಿಸಿ ಮುಂದುವರಿಯಬಹುದು. ಅಂತಸ್ಸತ್ವವನ್ನು ಪಡೆದು ಭ್ರಮೆಗಳನ್ನು ನಿರಸನಮಾಡಬಹುದು. ಈಶ್ವರನು ಕೃತಿಯನ್ನು ನೋಡಿ ಮೆಚ್ಚುತ್ತಾನೆಯೇ ಹೊರತು ಸೋಮಾರಿಯನ್ನು ಮೆಚ್ಚಲಾರನು. ಕಷ್ಟಗಳು ಬರುವದು ಸಹಜ; ಅವುಗಳನ್ನು ಎದುರಿಸುವದೇ ಮನುಷ್ಯನ ಮುಖ್ಯ ಕರ್ತವ್ಯ. ಅದರಲ್ಲಿಯೇ ಶಕ್ತಿ ಸಾಹಸ ಧೈರ್ಯ ತುಂಬಿರುತ್ತದೆ. ಶ್ರದ್ಧಾಪೂರ್ಣವಾದ ಕಾರ್ಯದಲ್ಲಿ ನಿರಂತರವಾಗಿ ತೊಡಗಿರುವವನಿಗೆ ಆನಂದ ಲಭ್ಯವಾಗಿರುತ್ತದೆಯೇ ಹೊರತು ಕುಳಿತವರಿಗೆ ಸಾಧ್ಯವಾಗದು. ನಡೆಯುವವರು ಎಡಹುವರಲ್ಲದೆ ಕುಳಿತವರು ಎಡಹುವರೆ? ದುಡಿದಂತೆ ದೂರಹುದು ಮೆತ್ತಿರುವ ಮನ ಕೊಳಕು, ದುಡಿಯಲಾರದ ವ್ಯಕ್ತಿ ಬಿದ್ದಿರುವ ಹೆಣದಂತೆ ವ್ಯರ್ಥ.

ಗೋಡೆಗೆ ಸರಿಹೊಂದುವ ಕಲ್ಲು ದಾರಿಯಲ್ಲಿ ಹಾಗೆಯೇ ಬಿದ್ದಿರಲಾರದು, ಪ್ರಯತ್ನಪೂರ್ವಕ ಹುಡುಕಿ ತರಬೇಕಾಗುತ್ತದೆ. ಅರ್ಹತೆಯನ್ನು ಸಂಪಾದಿಸಲು ದುಡಿದು ಹಣ್ಣಾಗಬೇಕಾಗುತ್ತದೆ. ದೀಪವುರಿಯುತ್ತಿದ್ದರೆ ಕತ್ತಲೆ ನಶಿಸುತ್ತದೆ. ನಿರ್ಮಲವಾದ ಚಿಲುಮೆ ಪುಟಿಯುತ್ತಿದ್ದರೆ ಜನರು ತಾವಾಗಿಯೇ ಬಂದು ಅದರ ಉಪಯೋಗ ತಕ್ಕೊಳ್ಳುತ್ತಾರೆ. ಸಕ್ಕರೆಯಿದ್ದಲ್ಲಿ ಇರುವೆಗಳು ಮುತ್ತುತ್ತವೆ. ಚಂದ್ರೋದಯವಾದರೆ ಸಾಕು, ಆ ಬೆಳ್ದಿಂಗಳಲ್ಲಿ ಆನಂದ ಪಡೆಯಲು ಅನುಕೂಲವಾಗುತ್ತದೆ. ಹಾಗೆಯೇ ಮಾನವನು ದುಡಿಯುತ್ತ ಹೋದಂತೆ ಸಿದ್ಧಿಯಾಗಿ ನಿಜಾತ್ಮನ ಪರಮ ಸತ್ಯತೆಯನ್ನು ಕಂಡು ಸುಖವನ್ನು ಪಡೆಯುತ್ತಾರೆ. ಏಸು ಕ್ರಿಸ್ತನು ಬದುಕಿರುವವರೆಗೂ ಸತ್ಯಕ್ಕಾಗಿ ಹೆಣಗಾಡಿ ದುಡಿದ. ಇದ್ದಾಗ ಜನರು ಗೌರವಿಸಲಿಲ್ಲ. ಶಿಲುಬೆಗೆ ಏರಿಸಿದ ನಂತರ ಕ್ರಿಸ್ತನ ಅಂತರಂಗವನ್ನು ಅರ್ಥ ಮಾಡಿಕೊಂಡರು. ನಂತರ ಪೂಜಿಸಹತ್ತಿದರು. ಇದು ಲೋಕದ ರೂಢಿ. ನೆಲಕ್ಕೆ ತುಳಿದ ಸತ್ಯ ಪುನಃ ಪುಟಿದೇಳಲೇಬೇಕು. ಅದಕ್ಕಾಗಿ ಜೀವವಿರುವತನಕ ದುಡಿಯಲೇಬೇಕಾಗುತ್ತದೆ.

## ದೇವನೊಬ್ಬ ನಾಮ ಹಲವು

ಒಂದು ಸಲ ಉಪಾಧ್ಯಾಯರೊಬ್ಬರು ಮೂರು ಜನ ಬಾಲಕರಿಗೆ ದುಡ್ಡುಕೊಟ್ಟು

ಮೂವರೂ ಸಮಾನವಾಗಿ ಹಂಚಿಕೊಂಡು ಇಷ್ಟವಾದದ್ದು ಅಂಗಡಿಯಲ್ಲಿ ತೆಗೆದುಕೊಳ್ಳಲು ತಿಳಿಸಿದರು. ಆ ರೀತಿ ಮೂವರು ತೀರ್ಮಾನಿಸಿದರು. ಅವರಲ್ಲಿ ಒಬ್ಬ ಆಂಗ್ಲದವನು, ಮತ್ತೊಬ್ಬ ಫಾರ್ಸಿಯು, ಮಗುದೊಬ್ಬ ಹಿಂದು. ಹೀಗಿದ್ದರೂ ಇನ್ನೊಬ್ಬರ ಭಾಷೆ ತಿಳಿಯುತ್ತಿದ್ದಿಲ್ಲ. ಈ ಮೂವರಲ್ಲಿ ಗೊಂದಲ ಪ್ರಾರಂಭವಾಯ್ತು. "ಆಂಗ್ಲ ಬಾಲಕನಿಗೆ ವಾಟರ್ ಮೆಲನ್ ಬೇಕೆಂದು ಹಿಂದು ಬಾಲಕನು ಅದನ್ನು ಅಲ್ಲಗಳೆದು ಹಿಂಡ್ವನೆ ಬೇಕೆಂದು ಫಾರ್ಶಿ ಬಾಲಕನು ಟಾರಭೂಜ ಬೇಕೆಂ"ದು ಸಾಧಿಸುತ್ತ ಒಮ್ಮತಕ್ಕೆ ಒರಲಾರದೇ ಬೀದಿಯಲ್ಲಿ ಜಗಳವಾಡುತ್ತ ನಿಂತರು. ಮೂರೂ ಭಾಷೆಬಲ್ಲ ಒಬ್ಬ ಹಾದಿಕಾರನು ಈ ಮೂವರ ಕಲಹವನ್ನು ನೋಡಿ, ನಕ್ಕು, ನಿಮ್ಮೆಲ್ಲರ ಸಮಸ್ಯೆಯನ್ನು ಬಗೆಹರಿಸುವೆನೆಂದು ಹೇಳಿ ಅವರೆಲ್ಲರ ಕಡೆಯಿಂದ ಹಣವನ್ನು ಇಸಿದುಕೊಂಡು ಹಣ್ಣಿನ ಅಂಗಡಿಗೆ ಹೋಗಿ ಅವರೆಲ್ಲರಿಗೆ ಬೇಕಾದ ಪದಾರ್ಥವನ್ನು ತಂದು ಮುಚ್ಚಿಟ್ಟು ಒಬ್ಬೊಬ್ಬ ಬಾಲಕನನ್ನು ಕರೆದು ಆ ಹಣ್ಣನ್ನು ಸಮಭಾಗ ಮಾಡಿ, ಮಿಕ್ಕ ಭಾಗವನ್ನು ತೋರಿಸದೆ. ಮೊದಲು ಆಂಗ್ಲ ಬಾಲಕನಿಗೆ ಕೊಟ್ಟೊಡನೆಯೇ ಓಹೋ ನನಗೆ ಬೇಕಾದ ಹಣ್ಣನ್ನು ತಂದುಕೊಟ್ಟನೆಂದು ಸಂತೋಷ ಭರಿತನಾದನು. ಅದರಂತೆಯೇ ಅದೇ ಹಣ್ಣಿನ ತುಣುಕುಗಳನ್ನು ಇನ್ನಿಬ್ಬರಿಗೂ ಕೊಟ್ಟ ನಂತರ ಅವರೂ ಸಹ ತಮಗಿಷ್ಟವಾದದ್ದು ಸಿಕ್ಕಿತೆಂದು ಹರ್ಷೋತ್ಸಾಹದಲ್ಲಿ ನಲಿದರು. ಇಲ್ಲಿ ಆ ಬಾಲಕರಿಗೆ ಮೊದಲು ಅಸಮಾಧಾನವಾಗಿ ಕಲಹ ಮಾಡಲು ಬರಿ ಹೆಸರುಗಳೇ ಹೊರತು ಬೇರೇನೂ ಅಲ್ಲ. ವಾಟರ್ ಮೆಲನ್, ಹಿಂಡ್ವನೆ, ಟಾರಬೂಜ, ಈ ಹೆಸರುಗಳ ಅರ್ಥ ಒಂದೇ ಎಂಬುದು ಬಾಲಕರಿಗೆ ಅರಿವಾಗಿದ್ದಿಲ್ಲ. ಭಾಷೆ ಹಲವಾಗಿದ್ದರೂ ಹಣ್ಣು ಮಾತ್ರ ಒಂದೇ ಆಗಿತ್ತು. ಹಾಗೆಯೇ ನಮ್ಮಲ್ಲಿ ಒಂದೇ ವಸ್ತುವಿಗಾಗಿ ದ್ವೇಷಾಸೂಯೆಗಳಿಂದ ವಾದ ಭೇದಗಳನ್ನೆಬ್ಬಿಸಿ ಆ ಹೆಸರುಗಳ ತೆರೆಯ ಹಿಂದಿರುವ ವಸ್ತುವನ್ನು ನೋಡದಿರುವದಕ್ಕಾಗಿ ಕಲಹ ಕದನಗಳು ಹೆಚ್ಚಾಗುತ್ತಲಿವೆ. ಬೇರೆ ಬೇರೆ ಮತ ಧರ್ಮಗಳಿರುವ ಭೇದ ಪ್ರಭೇದಗಳಿಂದ ಮುಖ್ಯ ವಸ್ತುವನ್ನು ಮರೆತಿದ್ದೇವೆ. ಆ ಮೂವರು ಬಾಲಕರು ಒಂದೇ ಕಲ್ಲಂಗಡಿ ಹಣ್ಣಿಗೆ ತಿಳಿಯದೆ ಬಡಿದಾಡುವಂತೆ ಒಬ್ಬರು ಮತ್ತೊಬ್ಬರನ್ನು ಮತ್ತೊಂದು ಧರ್ಮವನ್ನು ಹೀಯಾಳಿಸುತ್ತಿದ್ದೇವೆ. "ಹೆಸರುಗಳ ಪರದೆಯನ್ನು ಹರಿದೊಗೆದು ನಾಮಗಳ ಮಾಯಾಪಟಲವನ್ನು ತೂರಿ ಆಚೆಗೆ ನೋಡಿದರೆ ಅಲ್ಲಿ ಯಾವ ಭೇದವೂ ಇಲ್ಲ" ಅಲ್ಲಿ ಕಾಣುವದು ಒಂದೇ ವಸ್ತು. ಅದಕ್ಕಾಗಿ ಮಹಾತ್ಮಾ ಬಸವಣ್ಣನವರು– "ದೇವನೊಬ್ಬ ನಾಮ ಹಲವು" ಎಂದಿದ್ದಾರೆ.

**ಕಾರ್ಯ ನಿರ್ವಹಣೆ**

ವಹಿಸಿದ ಕಾರ್ಯವನ್ನು ಪೂರ್ತಿಗೊಳಿಸುವದರಲ್ಲಿಯೇ ಜಾಣ್ಮೆಯಿದೆ. ತಾಳ್ಮೆಯಿದೆ. ಅದಕ್ಕೆ ದಕ್ಷ ಆಡಳಿತ ಬೇಕು. ಕರ್ತೃತ್ವ ಶಕ್ತಿ ಬೇಕು. ಸತ್ಯ ಹಾಗೂ ಸತ್ವಪೂರ್ಣ ಶಕ್ತಿ ಬೇಕು. ಬೆಳಕಿನ ವೈಭವವು ಸ್ವಾಭಾವಿಕವಾಗಿ ತೋರಬೇಕಾದರೆ ಬರಿ ಬತ್ತಿಯಿದ್ದರೆ ಸಾಲದು. ಎಣ್ಣೆಯೂ ಬೇಕು. ಆರದಂತೆ ನೋಡಿಕೊಳ್ಳುವ ಕಾರ್ಯ ಧುರಂಧರತೆಯೂ

ಬೇಕಾಗುತ್ತದೆ. ಕ್ರಿಯಾಶೂನ್ಯತೆ ಮರಣವಾಗಿ ಪರಿಣಮಿಸಿದರೆ ಕ್ರಿಯಾಶೀಲತೆ ಅಮೃತತ್ವದೆಡೆಗೆ ಸಾಗುತ್ತದೆ. ಕ್ರಿಯಾಶೂನ್ಯತೆಯಲ್ಲಿ ಮೋಹಪರವಶತೆ ಎದ್ದುಕಾಣುತ್ತದೆ. ಕ್ರಿಯಾಶಕ್ತಿಗೆ ಬುದ್ಧಿಶಕ್ತಿಯು ಸಹಕಾರಿಯಾಗುತ್ತದೆ. ಜುಳು ಜುಳು ಹರಿಯುವ ಹೊಳೆಯಲ್ಲಿ ನಿರ್ಮಲವಾದ ನೀರು ಆಕರ್ಷಕವಾಗಿರುವಂತೆ ಸತ್ಯಶುದ್ಧ ಕಾಯಕದಿಂದೊಡಗೂಡಿದ ಕಾರ್ಯನಿರ್ವಹಣೆಯಲ್ಲಿ ಒಂದು ಅದ್ಭುತ ಶಕ್ತಿ ಮಿಂಚಿ ಆನಂದವನ್ನು ನೀಡುತ್ತದೆ. ಭಾವಶುದ್ಧಿಯುಂಟಾಗುತ್ತದೆ. ಹಿಡಿದ ನೇಮವ ಬಿಡದಂತೆ ಕಾಯಕ ನಿರ್ವಹಿಸಿದರೆ ಆನಂದದ ಬುತ್ತಿ ಕಟ್ಟಿಟ್ಟಂತೆ. ಇಷ್ಟಾರ್ಥ ಸಿದ್ಧಿಯನ್ನು ಪಡೆದು ಯಶಸ್ವಿಯಾಗಲು ಕ್ರಿಯಾಶೀಲತೆಯೇ ಮೂಲ ಸಾಧನ. ಕ್ರಿಯಾಶೂನ್ಯ ವ್ಯಕ್ತಿಯ ಜೀವನ ಮಲೆತು ನಿಂತ ಹೊಂಡದ ಕೊಳೆತ ನೀರಿನಂತೆ ವ್ಯರ್ಥವಾಗುವದು. ಮಾಡುವ ಕರ್ತವ್ಯವನ್ನು ಅಂತಃಕರಣ ಪೂರ್ವಕ ಮಾಡುತ್ತಿರಬೇಕು. ಫಲಾಪೇಕ್ಷೆಯಿಂದ ಮಾಡಿದುದು ಕಾರ್ಯಸಿದ್ಧಿಗೆ ಆತಂಕವಾಗುವದಲ್ಲದೆ ಆತ್ಮೋನ್ನತಿಯೂ ಸಾಧಿಸದು. ಕರ್ತವ್ಯ ಭಾರದ ಹೊಣೆಯಿಂದ ಕುಗ್ಗಿ ಕುಸಿಯದಂತೆ ನಡೆಯುವಲ್ಲಿಯೇ ಗೆಲುವಿನ ಗುಟ್ಟು ಅವಿತುಕೊಂಡಿದೆ. ಅಲ್ಲಿ ಮೋಕ್ಷದ ಕಿರಣವು ಪ್ರಕಾಶಿಸುತ್ತದೆ. ನಿರಂತರವಾದ ಕಾರ್ಯನಿರ್ವಹಣೆಯೇ ಪ್ರಮುಖವಾದ ಪ್ರೇರಕಶಕ್ತಿಯನ್ನು ನೀಡುತ್ತದೆ. ಕ್ರಿಯೆಯಿಂದ ಪ್ರಗತಿಗೇರಿ ಆತ್ಮದರ್ಶನವಾಗುತ್ತದೆ.

## ಸ್ವಾರ್ಥ ತ್ಯಾಗ

ಒಮ್ಮೆ ನದಿಗೆ ಸರೋವರಕ್ಕೆ ಜಗಳವಾಯ್ತು. ನದಿಯನ್ನು ಕುರಿತು ಸರೋವರವು, ಓ ನದಿ ನಿನ್ನ ಎಲ್ಲ ನೀರನ್ನು ಸಂಪತ್ತನ್ನು ಸಮುದ್ರಕ್ಕೆ ಕೊಟ್ಟರೆ ಪ್ರಯೋಜನವೇನು? ಕೃತಜ್ಞತೆ ಇಲ್ಲದ ಸಮುದ್ರಕ್ಕೆ ನೀರು ಕೊಟ್ಟಲ್ಲಿ ಆ ಜಲವನ್ನು ಉಪ್ಪನ್ನಾಗಿ ಮಾಡಿಬಿಡುತ್ತದೆ. ಆದಕ್ಕಾಗಿ ನಿನ್ನ ನೀರನ್ನು ನಿನ್ನಲ್ಲಿಯೇ ಇಟ್ಟುಕೋ ಎಂದು ಹೇಳಿತು. ಅದಕ್ಕೆ ನದಿಯು "ಇಲ್ಲ, ಫಲವಾಗಲಿ ಪರಿಣಾಮವಾಗಲಿ ನನಗೆ ಮುಖ್ಯವಲ್ಲ. ಸೋಲು ಗೆಲವುಗಳು ನನಗೆ ಕ್ಷುಲ್ಲಕವಾದವುಗಳು. ಕೆಲಸವನ್ನು ನಾನು ಪ್ರೀತಿಸುತ್ತೇನೆ. ಆದ್ದರಿಂದ ನಾನು ಕೆಲಸ ಮಾಡಬೇಕು. ಕಾರ್ಯ ಮಾಡುವದೇ ನನ್ನಧ್ಯೇಯ. ಫಲಾಪೇಕ್ಷೆ ನನಗಿಲ್ಲ. ಅಂತಹ ಸ್ವಾರ್ಥ ನನಗೆ ಬೇಕಾಗಿಲ್ಲ" ಎಂದು ಹೇಳಿ ನದಿಯು ಹಾಗೇ ಹರಿಯುತ್ತಲಿತ್ತು. ಲೋಭಿಯಾದ ಸರೋವರವು ಕೆಲವು ದಿನಗಳಲ್ಲಿ ಬತ್ತಿಹೋಯ್ತು. ನದಿಯು ಬತ್ತಲೇ ಇಲ್ಲ. ನದಿಯ ಉಗಮಸ್ಥಾನಗಳನ್ನು ಮತ್ತೆ ಭರ್ತಿ ಮಾಡಲು ಗಾಳಿಗಳು ಸಾಗರದ ನೀರನ್ನು ಮೇಲಕ್ಕೆ ಸಾಗಿಸಿ ನದಿಯ ಮೂಲವನ್ನು ಎಂದೆಂದಿಗೂ ನವ್ಯವಾಗಿಯೂ ಅಕ್ಷಯವಾಗಿ ಇಟ್ಟದ್ದರ ಪರಿಣಾಮವಾಗಿ ಪ್ರಪಂಚಕ್ಕೆ ಸುಖ ಸಮೃದ್ಧಿಯಾಗುತ್ತದೆ. ಸ್ವಾರ್ಥಪರ ಕೃಪಣ ಸರೋವರದ ಮಾತು ಕೇಳಿದ್ದರೆ ಪ್ರಪಂಚಕ್ಕೆ ದುರ್ಗತಿಯು ಬರುತ್ತಿತ್ತು. ಅದಕ್ಕಾಗಿ ಸ್ವಾರ್ಥ ತ್ಯಾಗ ಮನುಷ್ಯನಲ್ಲಿದ್ದರೆ ನದಿಯಂತೆ ಒಮ್ಮೆ ಅದರ ಸದುಪಯೋಗವಾಗುವದರಲ್ಲಿ ಸಂದೇಹವಿಲ್ಲ. ಸ್ವಾರ್ಥ ಪರಾರ್ಥ ಎರಡು ತರ. ಒಂದು ತನಗಾಗಿರುವದು ಮತ್ತೊಂದು ಪರರಿಗಾಗಿರುವದು. ಪ್ರತಿಯೊಬ್ಬ

ರಿಗೂ ಸ್ವಾರ್ಥವಿದ್ದೇ ಇರುವದು. ಕೇವಲ ಸ್ವಾರ್ಥಕ್ಕಾಗಿ ಜೀವನವಿರಬಾರದು. ಸ್ವಹಿತ ಮಾಡಿಕೊಂಡು ಪರಹಿತಕ್ಕಾಗಿ ಪರಿಶ್ರಮಿಸುವದೇ ಮನುಷ್ಯನ ಮೂಲ ಗುರಿಯಾಗಿರಬೇಕು. ಪರರಿಗೆ ನೋವು ನೀಡಿ ಹಿತಾಸಕ್ತಿಗಳಿಗೆ ಧಕ್ಕೆ ತರುವದೇ ಸ್ವಾರ್ಥ. ಸ್ವಾರ್ಥ ಭಾವನೆಯಿಂದ ಮಾಡಿದ ಕಾರ್ಯ ಹಾಗೂ ಶಕ್ತಿಹಳ್ಳಕೂಡಿ ಹೋಗುವವು. ಸ್ವಾರ್ಥಪರವಾದ ಉದ್ದೇಶದಿಂದ ಮನುಷ್ಯನು ಹಾಳಾಗುವನಲ್ಲದೆ ಅಸುರೀಶಕ್ತಿಯಲ್ಲಿ ಮುಳುಗಿ ಆತ್ಮ ಸಂಪತ್ತನ್ನು ನಷ್ಟ ಮಾಡಿಕೊಳ್ಳುತ್ತಾನೆ. ಪರಹಿತ ಮಾಡಲು ಅವನಿಗೆ ಬೇಸರವಾಗುತ್ತದೆ. ನಿಸ್ವಾರ್ಥಿ ನಿರಂತರವೂ ನಿಶ್ಚಿಂತನಿರುತ್ತಾನೆ. ಸ್ವಾರ್ಥಿ ಸದಾ ಚಿಂತೆಯ ಮಡುವಿನಲ್ಲಿ ಬಿದ್ದು ಪರರನ್ನು ದುಃಖಕ್ಕೀಡು ಮಾಡುತ್ತಾನೆ. ನಿಸ್ವಾರ್ಥ ಸೇವೆಯೇ ನಿಜವಾದ ಸ್ವಾರ್ಥ ತ್ಯಾಗ. ಕೃತಘ್ನನಾದವನು ಸ್ವಾರ್ಥಿ. ಸತ್ಯಾರ್ಥಿಯಾದವನು ನಿಸ್ವಾರ್ಥಿ.

## ಭಾವೈಕ್ಯ

(Unity in diversity) ಅಂದರೆ ವಿವಿಧತೆಯಲ್ಲಿ ಏಕತ್ವ ಕಾಣುವದೇ ಭಾವೈಕ್ಯ. ಭಾವೈಕ್ಯವು ಭಾವಗಳ ಸುಮಧುರ ಬಾಂಧವ್ಯವನ್ನು ಎತ್ತಿ ತೋರಿಸುತ್ತದೆ. ಭಾವಗಳಲ್ಲಿ ನೂತನ ಚೇತನ ತುಂಬಿಕೊಂಡಿದ್ದರೆ ಸಾಮರಸ್ಯಕ್ಕೆ ಸಹಕಾರಿಯಾಗುತ್ತದೆ. ಹಾರ್ದಿಕತೆಯಿಲ್ಲದ ಭಾವೈಕ್ಯ ನೀರಿಲ್ಲದ ತಟಾಕದಂತೆ ವ್ಯರ್ಥ. ಭಾವೈಕ್ಯ ಕೇವಲ ಮಾತಿನ ಮಾಲೆಯಾದರೆ ಅದು ಪ್ರಯೋಜನವಾಗದು. ಹೃದಯದಿಂದ ಮೂಡಿಬಂದಿರಬೇಕು. ಸೌಹಾರ್ದತೆ ಕೃತ್ರಿಮವಾದರೆ ಅದು ನೀರಸ. ವಾಸ್ತವಿಕತೆ ನಿರಂತರವೂ ಫಲ ನೀಡುತ್ತದೆ. ಬೆಳಕು ತರುತ್ತದೆ. ಭಾವಜೀವಿಯಾಗಿ ಏಕತ್ವ ಪಡೆಯದೆ ವ್ಯಕ್ತಿಗೆ ಶಕ್ತಿ ಬರಲು ಅಸಾಧ್ಯ. ಇಂದು ಭಾವೈಕ್ಯದ ಅಭಾವದಿಂದಾಗಿ ಪ್ರಪಂಚದ ತುಂಬೆಲ್ಲ ಒಂದಿಲ್ಲೊಂದು ಅನಾಹುತ ಸಂಭವಿಸಿ ಕಷ್ಟ ಪರಂಪರೆಗೆ ಗುರಿಯಾಗುತ್ತಿರುವದು ಕಾಣುತ್ತಿದ್ದೇವೆ. ಸತ್ಯ ಹೃದಯದಿಂದ ಹೃದಯಬಾಗಿಲ ತೆರೆದರೆ ಅಲ್ಲಿ ಕಾಣುವದು ಭಾವೈಕ್ಯ. ಭಾವೈಕ್ಯವು ಒಮ್ಮೊಮ್ಮೆ ಧರ್ಮಾಂಧತೆಯಲ್ಲಿ ಪರಿಣಮಿಸಿದರೆ ರಾಷ್ಟ್ರಕ್ಕೂ ಹಾಗೂ ಆತ್ಮ ಪ್ರಗತಿಗೂ ಅಡ್ಡಿಯಾಗುತ್ತದೆ. ಒಂದೆಡೆ ಮಹಾತ್ಮಾ ಬಸವಣ್ಣನವರು ಭಾವೈಕ್ಯವಿಲ್ಲದ ಜೀವನ ಕಾಗೆ ಕೋಳಿಗಳಿಗಿಂತ ಕಷ್ಟಕರವೆಂದು ತಮ್ಮ ಅನುಭವ ವಾಣಿಯಲ್ಲಿ ಅರುಹಿದ್ದಾರೆ.

"ಕಾಗೆ ಒಂದಗಳು ಕಂಡರೆ ಕರೆಯದೆ ತನ್ನ ಬಳಗವನ್ನು ? ಕೋಳಿಯೊಂದು ಗುಟುಕು ಕಂಡರೆ ಕರೆಯದೆ ತನ್ನ ಕುಲವನೆಲ್ಲವನ್ನು ? ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಆ ಕಾಗೆ ಕೋಳಿಗಳಿಗಿಂತ ಕಷ್ಟಕರ ಕೂಡಲಸಂಗಮದೇವಾ" ಭಾವ ಭೂಮಿಯ ಮೇಲೆ ಏಕತೆಯ ಕಾಳುಗಳನ್ನು ಬಿತ್ತಿ ಪ್ರೇಮ ಎಂಬ ಸಿಹಿನೀರನ್ನು ಹಾಕಿ ಬೆಳೆದರೆ ರಾಷ್ಟ್ರದ ಶಕ್ತಿ ನೂರ್ಮಡಿ ಹೆಚ್ಚಾಗಿ ಪ್ರತಿಯೊಬ್ಬರ ಭಾವಕುಸುಮಗಳು ವಿಕಸನಗೊಂಡು ಸೌಗಂಧ ಬೀರಬಲ್ಲವು. ರಾಷ್ಟ್ರೀಯ ಭಾವನೆಗಳ ಬೆಳವಣಿಗೆಗೆ ಅಡ್ಡ ಗೋಡೆಯಾಗಿರುವ ಜಾತಿಯತೆಗಳ ತಿಕ್ಕಾಟ, ಭಾಷಾ ಸಮಸ್ಯೆಗಳ ಕಚ್ಚಾಟ, ನಾ ಹೆಚ್ಚು ನೀ ಹೆಚ್ಚು ಎನ್ನುವ ಹುಚ್ಚಾಟ ಇವೆಲ್ಲವುಗಳು ನಿವಾರಣೆಯಾಗಿ ಸೌಹಾರ್ದತೆಯು ಬೆಳೆದು ನಾವೆಲ್ಲರೂ ಭಾರತಮಾತೆಯ ಮಕ್ಕಳೆಂಬುವ

ಭಾವನೆಯು ಬೇರೂರಿದರೆ ಭಾರತಮಾತೆಗೆ ಸಂತಸ. ಆದಕ್ಕಾಗಿ ನಮಗಿಂದು ಭಾವೈಕ್ಯವು ನರನಾಡಿಯಲ್ಲಿ ಹರಿದುಬರಬೇಕಾಗಿದೆ.

## ಏಕಾಗ್ರತೆ

ಪ್ರತಿಯೊಂದು ಕಾರ್ಯಗಳನ್ನು ಸಫಲಗೊಳಿಸಬೇಕಾದರೆ ಏಕಾಗ್ರತೆಯೇ ಮೊದಲ ಮೆಟ್ಟಲು. ಏಕಾಗ್ರತೆಯಿಲ್ಲದೆ ಯಾವ ಕಾರ್ಯವೂ ಸಾಧಿಸದು, ಸಿದ್ಧಿಸದು. ಎಲ್ಲ ಜ್ಞಾನಗಳ ಸಾರವೇ ಏಕಾಗ್ರತೆ. ಏಕಾಗ್ರತೆಯಿಂದಿರಲು ಅಂತರ್ಮುಖಿಯಾಗಿರಬೇಕಾಗುತ್ತದೆ. ವಾಯು ವೇಗದಂತೆ ಹರಿದುಹೋಗುತ್ತಿರುವ ಮನಸ್ಸನ್ನು ನಿಲ್ಲಿಸಬೇಕಾಗುತ್ತದೆ. ಆತ್ಮ ನಿರೀಕ್ಷಣೆ ಮಾಡಿಕೊಂಡು ಚಿತ್ಸುಖ ಪಡೆಯಲು ಏಕಾಗ್ರತೆಯು ಅತ್ಯವಶ್ಯ. ಏಕಾಗ್ರತೆಯನ್ನು ಬಯಸಲಾರದ ವ್ಯಕ್ತಿ ಇದ್ದೂ ಇಲ್ಲದಂತೆ ವ್ಯರ್ಥವಾಗುವದು.

ಏಕಾಗ್ರತೆಗೆ ಏಕಾಂತ ಬೇಕು. ಏಕಾಂತದಲ್ಲಿದ್ದು ಲೋಕಾಂತದ ವಿಚಾರಗಳು ತುಂಬಿ ಕೊಂಡಿದ್ದರೆ ಹೊಳೆಯಲ್ಲಿ ಹುಣಸಿಹಣ್ಣು ತೊಳೆದಂತೆ. ಏಕಾಂತದಲ್ಲಿದ್ದು ಹೃದಯವಿಶಾಲತೆ ಚಿತ್ತವೃತ್ತಿ ನಿರೋಧವನ್ನು ಪಡೆಯದಿದ್ದರೆ ಏಕಾಂತದ ಮಾಧುರ್ಯ ಏಕಾಗ್ರತೆಯ ಬಂಧುರತೆ ಹಾಗೂ ಭಾವಗಳ ಸೌಂದರ್ಯವನ್ನು ಕಾಣಬಹುದು. ಬಾಹ್ಯ ದೃಷ್ಟಿ ನಿವಾರಣೆಯಾದರೆ ಮಾತ್ರ ಸಚ್ಚಿದಾನಂದದ ಸವಿಸುಖ ಸಿಕ್ಕು ಪರರಿಗೆ ಹಿತವಾಗುತ್ತದೆ. ಏಕಾಗ್ರತೆಯಿರದೆ ಒಬ್ಬಂಟಿಗರಾಗಿ ಪರ್ವತದ ತುದಿಯಲ್ಲಿ ಹಾಗೂ ಗುಹೆಯಲ್ಲಿ ಕುಳಿತರೂ ಸುಖ ಸಿಗದು. ಏಕಾಂತದಲ್ಲಿದ್ದು ಏಕಾಗ್ರತೆಯ ನಟನೆ ಮಾಡಿದರೆ ಆತ್ಮದ್ರೋಹ ಮಾಡಿಕೊಂಡಂತೆ. ಜನರಲ್ಲಿ ಬೆರೆತು ಸದ್ವಿಚಾರ ಸತ್ಕಾರ್ಯದಲ್ಲಿ ತೊಡಗಿದ್ದರೆ ಇದಕ್ಕಿಂತಲೂ ಹೆಚ್ಚಿನ ಫಲ ದೊರೆಯುವದು. ವಿಷಯಲಾಲಸೆಯನ್ನು ತೊಡೆದುಹಾಕುವ ಗುರಿಯನ್ನಿರಿಸಿದವರಿಗೆ ಏಕಾಂತದ ಪ್ರಯೋಜನ ವಾಗುವದು ಸಹಜ. ಏಕಾಗ್ರತೆಗೆ ವಿವೇಕ, ವಿವೇಚನೆ, ಸಹನಶೀಲತೆ, ಸತತಾಭ್ಯಾಸ, ದೂರ ದೃಷ್ಟಿ, ಸತ್ಸಂಗ ಇವೆಲ್ಲವುಗಳೂ ಅವಶ್ಯಕವಿರುವಂತೆ ಯಮ, ನಿಯಮ, ಆಸನ, ಪ್ರಾಣಾ ಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ,ಸಮಾಧಿ ಇವೂ ಸಹ ಪ್ರಾಮುಖ್ಯವುಳ್ಳವುಗಳಾಗಿವೆ. ಸಮಾಧಿಯಲ್ಲಿದ್ದಾಗ ದೇಹ ಭಾವನೆಯೆಲ್ಲ ಅಳಿದು ಏಕಾಗ್ರತೆಯ ಸಿದ್ಧಿಯುಂಟಾಗಿರುತ್ತದೆ. ಮನಸ್ಸಿನಲ್ಲಿರುವ ಹಲವು ಪದರಗಳನ್ನು ಸರಿಸಿದಾಗ ಭಗವಂತನ ಸಾಕ್ಷಾತ್ಕಾರವಾಗುತ್ತದೆ. ಅಪ್ರಜ್ಞೆ (Unconcious) ಮತ್ತು ಅತಿಪ್ರಜ್ಞೆ (Super concious) ಇವೆರಡೂ ಒಂದೇ ತೆರನಾಗಿ ಕಂಡರೂ ಗ್ಲಾಸಿನ ಚೂರಿಗೂ ವಜ್ರಕ್ಕೂ ಅಂತರವಿರುವಂತೆ ಇವೆರಡ ರಲ್ಲೂ ಅಂತರ ಕಾಣುತ್ತೇವೆ. ಆದಕ್ಕಾಗಿ ಏಕಾಗ್ರತೆಯಿಂದ ಅತಿಪ್ರಜ್ಞೆಯ ಅವಸ್ಥೆ ಯನ್ನು ಮುಟ್ಟಲು ಸಾಧ್ಯವಾಗಬಹುದು.

## ಸುಖ–ದುಃಖ

ಸುಖ ದುಃಖಗಳು ತಿರುಗುವ ಚಕ್ರಗಳಿದ್ದಂತೆ, ರಾತ್ರಿ ಹಗಲುಗಳಿದ್ದಂತೆ. ಏರಿಳಿತ ಗಳು ಮನುಷ್ಯನಿಗೆ ಬರುವದು ಸ್ವಾಭಾವಿಕ. ಸುಖದ ನಂತರ ದುಃಖ, ದುಃಖದ ನಂತರ

ಸುಖ. ಇದು ಸೃಷ್ಟಿಯ ನಿಯಮ. ಋತುಗಳ ಬದಲಾವಣೆಯಾದಂತೆ ಈ ಜೀವನವಿರುತ್ತದೆ. ಸುಖ ದುಃಖಗಳ ಮಧ್ಯದಲ್ಲಿಯೇ ಜೀವನ ಸಾಗಿಸಿ ತೃಪ್ತಿಯನ್ನು ಪಡೆಯುವದೇ ಮನುಷ್ಯನ ಮೂಲ ಧ್ಯೇಯವಾಗಿರಬೇಕು. ಸುಖ ಬಂದಾಗ ಹಿಗ್ಗುವದು; ದುಃಖ ಬಂದಾಗ ಕುಗ್ಗುವದು ಇವೆರಡನ್ನು ಸಹಿಸುವ ಶಕ್ತಿ ಬಂದರೆ ಜೀವನದಲ್ಲಿ ಸಫಲತೆ ಪಡೆದಂತೆ. ಬರಿ ಸುಖವಿದ್ದರೆ ಮನುಷ್ಯನು ಜೀವಿಸಲಾರ; ದುಃಖವಿದ್ದರೂ ಜೀವಿಸಲಾರ. ಎರಡರ ಅನುಭವವಾಗುತ್ತಿದ್ದರೆ ಮಾನವತೆಯ ಕಲ್ಪನೆ ಬರುತ್ತದೆ. ದುಡಿಯದೆ, ಬೆವರು ಸುರಿಸದೆ ಲಾಭಗಳಿಸಿದರೆ ಅದು ಲಾಭವಾಗಲಾರದು. ನಿಜವಾದ ಸುಖವು ದೊರೆಯಬೇಕಾದಲ್ಲಿ ತ್ಯಾಗದ ಬಲವಿದ್ದರೆ ಸಾಧ್ಯ. "ಸುಖಕ್ಕಾಗಿ ದುಃಖದ ಸಹನೆ" ಮಾಡಬೇಕಾಗುವದೆಂದು ಯೋಗಿ ಅರವಿಂದರು ಅರುಹಿದ್ದಾರೆ. ದುಃಖದಿಂದ ಜೀವನ ಅನುಭವವಾದಷ್ಟು ಸುಖದಿಂದ ದೊರೆಯದು. ತಿಕ್ಕಿದಂತೆ ಪಾತ್ರೆ ಸ್ವಚ್ಛವಾದೀತೇ ಹೊರತು ಹಾಗೆಯೇ ಬಿಟ್ಟರೆ ಮಲಿನವಾಗುವದು ಸಹಜ. ಕವಿದ ಕತ್ತಲೆ ದೂರ ಸರಿದರೆ ಅಲ್ಲಿ ಬೆಳಕು ಕಾಣುವದು. ಕಷ್ಟಪಟ್ಟು ದುಡಿಯುತಕ್ಕವರಿಗೆ ಸುಖದ ಕಲ್ಪನೆಯಾಗುತ್ತದೆ. ಸೋಮಾರಿಗಳಿಗೆ ಸುಖ ಸಿಗುವದು ಕಷ್ಟಸಾಧ್ಯ.

ಆಶೆ ದುಃಖ ನೀಡಿದರೆ ನಿರಾಶೆ ಸುಖವನ್ನೀಯುತ್ತದೆ. ಇದ್ದುದರಲ್ಲಿಯೇ ತೃಪ್ತಿಯನ್ನು ಪಡೆಯುವದೇ ಗುರಿಯಾಗಿ ಇಟ್ಟುಕೊಂಡವರು ಸುಖದ ಕನಸನ್ನು ಕಾಣುತ್ತಾರೆ. ಈ ಜೀವನ ಸಾಗರದಲ್ಲಿ ಈಸುವಾಗ ಅಡ್ಡಿ ಆತಂಕಗಳು ಬಂದರೆ ಮನೋಧೈರ್ಯ ಸಹನಶೀಲತೆಯ ಹುಟ್ಟನ್ನು ಹಾಕಿದರೆ ಎದುರು ಬರುವ ತೆರೆಗಳು ಸರಿದು ಆ ತೀರ ಮುಟ್ಟಬಹುದು. ಅದಕ್ಕಾಗಿ ಹೃದಯ ದೌರ್ಬಲ್ಯವನ್ನು ಕಿತ್ತೊಗೆದು ಸಾಹಸಮಯ ಜೀವನದಲ್ಲಿ ಮುಂದಡಿಯಿಟ್ಟು ಸಾಗುವದೇ ನಿಜವಾದ ದಾರಿದೀಪ.

## ಆತ್ಮಶ್ರೀ

ಸಂಪತ್ತೆಂಬುದು ಆಪತ್ತು ನೋಡಾ, ಸಂಪತ್ತು ಹೆಚ್ಚಿದಂತೆ ಕಾಯುವ ಚಿಂತೆ ಹೆಚ್ಚಾಗುವದಯ್ಯಾ! ಸಂಪತ್ತು ಹೆಚ್ಚಿದಂತೆ ಶಾಂತಿಯ ಬಾಗಿಲು ಮುಚ್ಚುವದಯ್ಯಾ!! ಸಂಪತ್ತು ಅವಗುಣಕ್ಕೆ ಆಹ್ವಾನ ನೋಡಾ. ಅದುಕಾರಣ ಭೌತಿಕ ಸಂಪತ್ತಿಗೆ ಬಾಯ್ದೆರೆಯದೆ. ಆತ್ಮಸಂಪತ್ತನ್ನು ಅರ್ಜಿಸಿಕೊಂಡರೆ ಕಾಡುವ ವೈರಿಗಳ ಕಾಟ ತಪ್ಪುವದಯ್ಯಾ ಭೂಲತಾಪುರೀಶ ಕರ್ತೃಜಗದ್ಗುರು ಗುರು ಸಿದ್ಧೇಶ್ವರಾ.

ಆತ್ಮಶ್ರೀ ಇಲ್ಲದ ಜೀವನ ರಸವಿಲ್ಲದ ಹಣ್ಣಿನಂತೆ, ಒಣಗಿರ್ಪ ತರುವಿನಂತೆ, ಜಲವಿಲ್ಲದ ತಟಾಕದಂತೆ. ಆತ್ಮಶ್ರೀ ಸಮನ್ವಿತ ಜೀವನ ಬೆಳಕಿನ ಅರಮನೆಯಂತೆ, ಸುವರ್ಣ ಘಟದಂತೆ ಶೋಭಿಸುತ್ತದೆ. ಭೌತಿಕ ಸಂಪತ್ತಿನಿಂದ ಮಾನಸಿಕ ಶಾಂತಿ ಸಿಗದು. ಕೋಲ್ಮಿಂಚಿನಂತೆ ತೋರಿ ಕಣ್ಮರೆಯಾಗುತ್ತದೆ. ಬಹಿರ್ಮುಖ ಜೀವನವೇ ಅದರ ಜೀವಾಳ. ಬಹಿರ್ಮುಖತೆಯ ಅಂತಃಸತ್ವವನ್ನು ಹೀರಿದರೆ ಅಂತರ್ಮುಖತೆಯ ಅಂತಃ

ಸತ್ವವನ್ನು ಹೆಚ್ಚಿಸುತ್ತದೆ. ಆತ್ಮ ಸಂಪತ್ತನ್ನು ಸಂಗಳಿಸಲು ಸಹಕಾರಿಯಾಗುತ್ತದೆ. ಆತ್ಮಶ್ರೀ ವೈಭವದ ಮುಂದೆ ಹೊರಗಿನ ಯಾವ ವೈಭವವೂ ಅದರ ಸರಿಬರಲಾರವು. ಆತ್ಮಶ್ರೀಯು ಆತ್ಮಶಾಂತಿಯನ್ನು ನೀಡುತ್ತದೆ. ಧೈರ್ಯ ಗಾಂಭೀರ್ಯ ತೇಜಸ್ಸು ಬಲವನ್ನು ಕೊಡುತ್ತದೆ. ಜನ ಜಾಗೃತಿಯನ್ನು ಮಾಡುವ ಮಹಾಶಕ್ತಿಯು ಅದರಲ್ಲಿ ತುಂಬಿರುತ್ತದೆ. ಆತ್ಮಶ್ರೀಯಿಂದ ಆತ್ಮ ಸ್ವಾತಂತ್ರ್ಯ ದೊರೆತು ಅಮೃತತ್ವ ಪಡೆಯುತ್ತಾನೆ. ಆತ್ಮಶ್ರೀ ಸಮನ್ವಿತನಾದವನಿಗೆ ಜಗತ್ತಿನ ಸಮಸ್ತ ವಸ್ತುಗಳು ತುಚ್ಛವಾಗುತ್ತವೆ. ರತ್ನವನ್ನು ಹುಡುಕುವವನು ಕಲ್ಲು ಚೂರುಗಳನ್ನೆಂದೆಗೂ ಅಪೇಕ್ಷಿಸನು. ಆತನಿಗೆ ಅಶಕ್ತರಲ್ಲಿ ಶಕ್ತಿಯನ್ನು ತುಂಬುವ ಸಾಮರ್ಥ್ಯ ಬಂದಿರುತ್ತದೆ. ಆತ್ಮಶಕ್ತಿಯಿಲ್ಲದ ಬುದ್ಧಿಶಕ್ತಿ ಹಾಗೂ ನಾಯಕತ್ವ ಮತ್ತು ಮನೋನಿಗ್ರಹವಿಲ್ಲದ ತಪಸ್ಸು ನೀರಿನಲ್ಲಿ ಹೋಮಮಾಡಿದಂತೆ ವ್ಯರ್ಥ. ಆತ್ಮಶ್ರೀ ಇಲ್ಲದ ವಿದ್ಯೆ ಬುದ್ಧಿಗಳು ಒಮ್ಮೆ ಮಣ್ಣುಪಾಲಾಗಬಹುದು. ಆದರೆ ಆತ್ಮಸಂಪತ್ತನ್ನು ಗಳಿಸಿದ ಮಹಾತ್ಮರು ಚಿರಂಜೀವಿಗಳಾಗಿ ಅನ್ಯರಿಗೆ ಮಾರ್ಗದರ್ಶಕರಾಗುತ್ತಾರೆ. ಆತ್ಮಶ್ರೀ ವಿಶ್ವಪ್ರೇಮ ಸಂವರ್ಧನೆಗೆ ಭದ್ರಬುನಾದಿ.

## ಕ್ಷಮೆ

ಭಾವಶುದ್ಧಿಗೆ ಕ್ಷಮೆಯೇ ಮೂಲಾಧಾರವು. ಕ್ಷಮೆಯೆಂದರೆ ಮಾನವನಲ್ಲಿರುವ ಸಹನಶಕ್ತಿಯು ಮಹೋನ್ನತ ಗುಣವಾಗಿದೆ. ಕ್ಷಮಾಗುಣವಿಲ್ಲದವನು ನಿಶ್ಚಿಂತನಾಗಿರಲಾರ. ಕ್ಷಮೆಯಿಲ್ಲದ, ದುಡುಕುವ ಸ್ವಭಾವದ, ಕೇವಲ ವೈರಭಾವದ ಮನುಷ್ಯನು ಎಷ್ಟೇ ಸಮರ್ಥ ಬಲಶಾಲಿಯಾಗಿದ್ದರೂ ಅವನ ಚಿತ್ತಸ್ಥೈರ್ಯವು ವ್ಯತ್ಯಸ್ತವಾಗುತ್ತದೆ.

ತಾಳಿದವನು ಬಾಳಿಯಾನು ಎಂಬಂತೆ ಕ್ಷಮಿಸುವ ಅರ್ಥವುಳ್ಳ ತಾಳ್ಮೆಯಿಂದ ಅವನ ಬಾಳು ತಾಳಗೆಡಲಾರದು. ತಾಳ್ಮೆಯಿಂದ ನಿರ್ದಿಷ್ಟವಾಗಿ ಒಂದು ಗೊತ್ತಿರುವ ತಾಳಗಳಂತೆ ಪರಸ್ಪರರಲ್ಲಿ ತಾಳ್ಮೆಯಿರಬೇಕು.

ಹುಟ್ಟಿದವನಿಗೆ ಕಷ್ಟ ಬರುವುದು ಕಟ್ಟಿಟ್ಟ ಮಾತು. ಆ ಕಷ್ಟಗಳನ್ನು ಸಹಿಸಿ ಕಷ್ಟ ಕೊಡುವವರ ಬಗ್ಗೆ ಕ್ಷಮೆ ತೋರುವುದೇ ಮಹಿಮರ ಮಹಾಗುಣವಾಗಿದೆ.

ಈ ಗುಣಗಳನ್ನು ಬೆಳೆಸಿಕೊಳ್ಳಬೇಕಾದರೆ, ಮಾನವನು ನಿಜವಾಗಿ ಮಾನವನಾಗಬೇಕಾದರೆ, ಕ್ಷಮೆಯ ಕ್ಷಮತೆಯನ್ನು ಅರಿತಿರಬೇಕು. ತನ್ನ ಸಾಧನೆಯ ಬಲದಿಂದ ತಾನು ಆದರ್ಶವ್ಯಕ್ತಿತ್ವವನ್ನು ಚಿರಂತನವಾಗಿ ಉಳಿಸಿ ಬೆಳೆಯಿಸಿಕೊಳ್ಳಬಲ್ಲವನು ತನ್ನ ಕ್ಷಮಾಗುಣದಿಂದ ಇದರಿಂದ ಬಾಹ್ಯಶಕ್ತಿ ಮಾತ್ರವಲ್ಲ, ಆಂತರಿಕ ಶಕ್ತಿಸಂವರ್ಧನೆಯೂ ಅಭಿವೃದ್ಧಿಹೊಂದುತ್ತದೆ.

ಕ್ಷಮೆಯಿರದ ಬಾಹ್ಯಶಕ್ತಿಯು ವ್ಯರ್ಥ. ಶಕ್ತಿಯಿದ್ದವರು ನಿಃಶಕ್ತರನ್ನು ಕನಿಕರದಿಂದ ಕಂಡು ಉದ್ಧರಿಸುವದೊಂದು ದೊಡ್ಡ ಗುಣವಾಗಿದ್ದಂತೆ ಆ ನಿಶ್ಶಕ್ತರನ್ನು ಸಹ ಸಶಕ್ತರನ್ನಾಗಿ ಮಾಡಲು ಪ್ರಯತ್ನಿಸುವುದೂ ಒಂದು ಮಹಾಗುಣ.

ಕ್ಷಮಾಪಣೆಯು, ಕ್ಷಮಾಪಣೆ ಮಾಡುವ ವ್ಯಕ್ತಿಗೆ ಮೊದ ಮೊದಲು ತನ್ನ ವೀರ ತನಕ್ಕೆ ಯೋಗ್ಯವಲ್ಲವೆಂದು ಅನ್ನಿಸಿದಂತಾದರೂ ಆ ಅವನ ಕ್ಷಮಾಗುಣವು ಅವನನ್ನು ದೇವತ್ವಕ್ಕೇರಿಸುತ್ತದೆ.

ಕ್ಷಮ್ಯ ವ್ಯಕ್ತಿಯ ಗುಣಾವಗುಣಗಳನ್ನು ತಿಳಿದು ಸಮಯೋಚಿತವಾಗಿ ಕ್ಷಮಿಸಿದರೆ ಮಾತ್ರ ಇಬ್ಬರಿಗೂ ಹಿತವಾಗುತ್ತದೆ.

ದಲಿತನಾದ ಕ್ಷಮ್ಯ ವ್ಯಕ್ತಿಗೆ ಹಿತವಾಗುವಂತಿದ್ದರೆ, ಕ್ಷಮಿಸಲ್ಪಡುವವನು ದುಷ್ಟ ಪ್ರವೃತ್ತಿಯಿಂದ ಸುಧಾರಿಸುವಂತಿದ್ದರೆ, ಕ್ಷಮಿಸುವುದರ ಹೊರತಾಗಿ ಬೇರೆ ಸರಳಮಾರ್ಗವೇ ಇಲ್ಲವೆನ್ನಬಹುದು.

ಕಾರಣ ತಾನು ಬಲಶಾಲಿಯಾಗಿದ್ದರೂ ನಿರ್ಬಲರನ್ನೂ ಕ್ಷಮಿಸುವದರಿಂದಾಗಿ ತನ್ನ ಆತ್ಮ ಶಕ್ತಿಯನ್ನು ಹೆಚ್ಚಿಗೆ ಬೆಳೆಯಿಸಿಕೊಳ್ಳಬೇಕು.

## ಹುಸಿಯ ನುಡಿಯಲುಬೇಡ

ಹುಸಿಯ ನುಡಿಯಲುಬೇಡ ಎನ್ನುವ ನೀತಿಯ ಮಾತು ಮಹಾತ್ಮಾ ಬಸವಣ್ಣನವ ರಿಂದ ನಿರೂಪಿತವಾಗಿದೆ. ಹುಸಿ ಎಂದರೆ, ಅಸತ್ಯ. ಸತ್ಯಕ್ಕೆ ವಿರುದ್ಧವಾದದ್ದು ಮಿಥ್ಯ. ಸತ್ಯವಲ್ಲದ ಮಾತು.

ಸತ್ಯವಲ್ಲದಂತಹ ಮಾತು ಕೆಲವೊಂದು ಸಲ ಭ್ರಾಂತಿಮದ್ ಅಲಂಕಾರವೇ ಮೊದ ಲಾದ ಸಾಹಿತ್ಯಕ ಕವಿ ಪದ್ಧತಿಯಂತೆ ಕಾವ್ಯಗಳಲ್ಲಿ ಅಲಂಕಾರವೆನಿಸಬಹುದು.

ವಾಸ್ತವಿಕ ಪ್ರಪಂಚದಲ್ಲಿ ವ್ಯವಹಾರದಲ್ಲಿ ಎಲ್ಲರೂ ಯಾವಾಗಲೂ ಸತ್ಯವನ್ನೇ ನುಡಿಯಬೇಕು. ಅಂದರೆ ಹುಸಿಯನ್ನು ನುಡಿಯಲೇಬಾರದು.

ಇನ್ನೊಂದು ಅರ್ಥದಲ್ಲಿ ಹುಸಿನುಡಿಯುವುದೆಂದರೆ ಹುಸಿಗುಂಡು ಹಾರಿಸಿದಂತೆ ವ್ಯರ್ಥ.

ನುಡಿದ ಮಾತು ಹುಸಿಯಾಗಬಾರದು. ನುಡಿದದ್ದೆಲ್ಲ ಸತ್ಯವಾಗಿರಬೇಕು. ಅಂದರೆ ಸತ್ಯವನ್ನಾಗಿ ಕಾರ್ಯರೂಪದಲ್ಲಿ ಅನುಭವಕ್ಕೆ ಬರುವದನ್ನು ಮಾತ್ರ ನುಡಿಯಬೇಕು. ಅಸತ್ಯ ವನ್ನೆಂದಿಗೂ ನುಡಿಯಲುಬಾರದು. ಏಕೆಂದರೆ ಸತ್ಯವ ನುಡಿಯುವುದೇ ದೇವಲೋಕ; ಮಿಥ್ಯವ ನುಡಿಯುವುದೇ ಮೃತ್ಯುಲೋಕ.

"ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಮ್ ಅಪ್ರಿಯಮ್" ಅರ್ಥಾತ್ ಸತ್ಯವಿದ್ದರೂ ಸುಖಕರವಿದ್ದರೆ ಮಾತ್ರ ಅದನ್ನು ಪ್ರಕಟಿಸ ಬೇಕು. ದುಃಖಕರವಾದ ಸತ್ಯವನ್ನು ಎಷ್ಟು ಸಾಧ್ಯವೋ, ಅಷ್ಟನ್ನು ತಡೆಯಬೇಕು. ಸತ್ಯದ ಮಿತಭಾಷಣ ಆಗಬೇಕು.

ಸತ್ಯ ನುಡಿಯುವುದೆಂದರೆ ತಾನು ಅನುಭವಿಸಿದುದನ್ನೇ ಅನುಭವಿಸಿದಂತೆಯೇ ಯಥಾವತ್ತಾಗಿ ನಿರ್ವಂಚನೆಯಿಂದ ತಿಳಿಸುವದು.

ಹುಸಿಯ ನುಡಿಯುವುದು ಸರಳ ಅಂದರೆ ಸುಳ್ಳನ್ನು ನುಡಿಯದಿರುವುದು ಬಲು ಕಷ್ಟ. ಕಷ್ಟವಾದರೂ ಇದು ಆತ್ಮ ಸಂಯಮದಿಂದ ಸಾಧ್ಯವಾಗುತ್ತದೆ. ಸತ್ಯವನ್ನು ಹರಿಶ್ಚಂದ್ರ ಮುಂತಾದವರು ಸಾಧಿಸಿ ತೋರಿಸಿದ್ದಾರೆ.

ಸತ್ಯಮೇವ ಜಯತೆ ನಾನೃತಮ್ ಎಂಬುದನ್ನು ವಿಲಂಬವಾದರೂ ಸಹ ನಾವು ಅನುಭವದಿಂದ ಸತ್ಯಕ್ಕೆ ಸಾವಿಲ್ಲ ಸುಳ್ಳಿಗೆ ಸುಖವಿಲ್ಲ ಎಂಬುದನ್ನು ಒಪ್ಪಲೇಬೇಕಾಗುತ್ತದೆ. ಅಂತೆಯೇ "ಸಾಂಚಬಿನಾ ಸುಮಿರನ ನಹೀ" ಎನ್ನುವುದರ ಜೊತೆಗೆ ಸತ್ಯದ ಮಹಿಮಾತಿಶಯದಿಂದ **(Truth is god)** ಎಂದು ಒಪ್ಪಿದ್ದಾರೆ ನೀತಿ ಬೋಧಕ ಮಹಿಮರು.

ಹುಸಿಯ ನುಡಿಯುವವನಿಗೆ ಎಂದಿಗೂ ಮನಸ್ಸಿಗೆ ಸಮಾಧಾನವಿರುವುದಿಲ್ಲ. ಅವನು ನುಡಿದ ತನ್ನ ಆ ಮೊದಲ ಹುಸಿಯನ್ನು ಹುಸಿ ಅಲ್ಲವೆಂದು ತೋರಿಸಲು ಮತ್ತೊಂದು ಇನ್ನೊಂದು ಇನ್ನೂ ಒಂದು ಹಲವಾರು ಹುಸಿ ನುಡಿಗಳನ್ನಾಡ ಬೇಕಾಗುತ್ತದೆ.

ಕಾರಣ ಹುಸಿಯ ಮಾತು ಯಾವಾಗಲೂ ಕೊನೆಗೆ ಹುಸಿಯಾಗಿಯೇ ಹೋಗುತ್ತದೆ ಯಾದ್ದರಿಂದ ಹುಸಿಯ ನುಡಿಯಲುಬೇಡ!

## ಕೃತಘ್ನತೆ

ಉಪಕಾರಗೇಡಿಗೆ "ಕೃತಘ್ನ" ನೆನ್ನುತ್ತೇವೆ. ಕೃತಘ್ನತೆ ಎಂದರೆ ಮಾಡಿದ ಉಪಕಾರವನ್ನು ಬೇಕೆಂತಲೇ ಮರೆತು ದುಡುಕನ್ನು ಮಾಡುತ್ತಿರುವಿಕೆ.

ಕೆಡಕನ್ನು ಮಾಡುತ್ತಿರುವುದು ದುಷ್ಟರ ಸಹಜ ಸ್ವಭಾವವಾದರೂ ತನಗೆ ಮಾಡಿದ ಉಪಕಾರದಿಂದ ತಾನು ಲಾಭ ಹೊಂದಿದ್ದ ನೆನಪಿದ್ದರೂ ಅದನ್ನು ಲಕ್ಷಕ್ಕೆ ತಾರದೆ ಯಾರಿಂದ ಉಪಕೃತನಾದನೋ ಅಂಥವರಿಗೇ ಕೆಡಕನ್ನುಂಟು ಮಾಡುವವನೇ ಕೃತಘ್ನನು (ಕೃತಂಹನ್ತಿ ಇತಿ ಕೃತಘ್ನ).

ಕೃತಘ್ನನು ದುಷ್ಟರಿಗಿಂತ ದುಷ್ಟನು. ಅದನ್ನುಂಟುಮಾಡುವಂಥವನು ದುಷ್ಟನು. ತಿಳಿದೂ ತಿಳಿದೂ ಮಾಡುವವನು ಕೃತಘ್ನನು.

ದುಷ್ಟನನ್ನು ಅವನ ತಪ್ಪಿನ ಪ್ರಾಯಶ್ಚಿತ್ತ ಅವನನ್ನು ಕ್ಷಮಿಸಬಹುದು. ಕೃತಘ್ನನ ಬಗ್ಗೆ ಕ್ಷಮಾಪಣೆಯು ಆಕ್ಷೇಪಣಾರ್ಹವಾಗಿದೆ. ಬ್ರಹ್ಮಹತ್ಯೆ ಮಾಡಿದ ಪಾಪಿಯನ್ನೂ ಸುರಾಪಾನ ಮಾಡಿದ ದುರಾಚಾರಿಯನ್ನೂ ಕಳ್ಳತನ ಮಾಡಿದ ಸ್ವಾರ್ಥಿಯನ್ನೂ ಕರ್ತವ್ಯ ಕರ್ಮದ-ಚ್ಯುತಿಗೊಂಡ ತಪ್ಪಿತಸ್ಥನನ್ನೂ ನಿರ್ಜೀವವಾದ ಶವಲ್ಲಿ ಬಗ್ಗೆಯೂ ತಪ್ಪುಗಳನ್ನೆಲ್ಲ ಕ್ಷಮಿಸಿ ಸತ್‌ಪುರುಷದ ಅವರನ್ನು ಉದ್ಧಾರ ಮಾಡಬಲ್ಲರು. ಆದರೆ ಕೃತಘ್ನರನ್ನು ಕ್ಷಮಿಸುವುದು ಸಮಂಜಸವಲ್ಲವೆನ್ನುತ್ತಾರೆ ಸುಭಾಷಿತ್ನುಕಾರರು.

"ಬ್ರಹ್ಮಘ್ನೇಚ ಸುರಾಪೇಚ ಚೋರೇ ಭಗ್ನವ್ರತೇ ಶವೇ ನಿಷ್ಕೃತರ್ವಿಹಿತಾಸಬ್ಬಿ

ಕೃತಘ್ನೆ ನಾಸ್ತಿನಿಷಿತಃ ಕೃತಘ್ನತೆಯು ಗುಣವಿದ್ದರೆ ಅಂಥವನಿಗೆ ಮನಸ್ಸಿಗೆ ನೆಮ್ಮದಿ ದೊರೆಯಲಾರದು. ಅವನು ಸಹೃದಯಿಯನಾಗಿರಲಾರ. ಅವನ ಭವಿಷ್ಯತ್ತು ಒಳ್ಳೆಯ ದಾಗಲಾರದು. ಅವನು ಬೇರೊಬ್ಬರ ಬಗ್ಗೆ ಕೃತಘ್ನನಾದಂತೆ ಅವನ ಬಗ್ಗೆ ಬೇರೆ ಯವರೂ ಕೃತಘ್ನರಾಗುವ ಸಂಭವವಿರುತ್ತದೆ. ಮನಸ್ಸಿನಂತೆ ಮಹಾದೇವ ಎಂಬ ಮಾತು ಕೃತಘ್ನರ ಬಗ್ಗೆಯೂ ಪೂರಾ ಅನ್ವಯಿಸುತ್ತದೆ.

ಕಾರಣ ಕೃತಘ್ನತೆಯು ಬಳಗವಾದ ಅಹಂಕಾರ, ಅಸೂಯೆ, ವಂಚನೆ ಮುಂತಾದವು ಗಳಿಂದ ದೂರವಿದ್ದು ನಿತ್ಯ ಸುಖಿಯಾಗಿರಬೇಕಾದರೆ ಕೃತಘ್ನನಾಗಲಾರದೆ ಕೃತಜ್ಞ ನಾಗಿರಬೇಕು.

## ಕರುಣವಿರಲಿ ಜೀವರೊಳು

ಕರುಣೆ, ಕೃಪೆ, ದಯೆ, ಪ್ರೇಮ, ವಾತ್ಸಲ್ಯಗಳು ಇನ್ನೊಬ್ಬರಿಗೆ ಶುಭವನ್ನು ಕೋರು ವುದರ ಪ್ರತೀಕಗಳು. ಮಹಿಮರ ಕರುಣೆಯಿಲ್ಲದೆ ದೀನ ದಲಿತರ ಉದ್ಧಾರವಾಗಲಾರದು. ಗುರು ಕೃಪೆಯಿಲ್ಲದೆ ಶಿಷ್ಯನ ಸಾಧನೆ ಬಲಿಯದು. ದೇವರ ದಯೆ ಇಲ್ಲದೆ ನೆಮ್ಮದಿಯ ಜೀವನ ಸಿಗಲಾರದು. ಪ್ರೇಮವಿಲ್ಲದೆ ಸಹಕಾರ ಸಹಾನುಭೂತಿ ಒದಗದು. ವಾತ್ಸಲ್ಯ ವಿಲ್ಲದೆ ಮಗುವು ಬೆಳೆಯಲಾರದು.

ಮಾನವನು ನಿಜವಾಗಿ ಮಾನವನಾಗಬೇಕಾದರೆ ಕರುಣೆವುಳ್ಳವನಾಗಬೇಕು. ಗುರು ಹಿರಿಯರು ತನಗೆ ಕರುಣೆ ತೋರಿದಂತೆ ತಾನೂ ಇತರರ ಬಗ್ಗೆ ಕರುಣಾಳು ಆಗಿರಬೇಕು. ಕರುಣಾಳು ಹಾಲಯ್ಯನಂತವರಾಗಲು ಸತತ ಪ್ರಯತ್ನಿಸಬೇಕು.

ಸ್ವಾರ್ಥ ಸಾಧನೆಗಾಗಿ ಮಾಡುವ ತನ್ನ ಕ್ರೂರತನ ಕುಟಿಲತನ ಕುಹಕತನಗಳು ತನಗೇ ಚುಚ್ಚಿದ ಕಂಟಕಗಳಾಗುತ್ತವೆಂಬುದನ್ನು ಮನಗಾಣಬೇಕು.

ಸರ್ವರ ದುಃಖ ನಿವಾರಣೆಗೆ ಕರುಣೆಯೆಂಬುದೊಂದು ಸಂಜೀವಿನಿ ಇದ್ದಂತೆ. ಎಲ್ಲರೂ ಬಯಸುವುದು; ದುಃಖ ನಿವಾರಣೆ ಅಂದರೆ ಸುಖಾನುಭೂತಿಯ ಶೇಖರಣೆ ಸುಖದ ನಂತರ ದುಃಖ, ದುಃಖದ ನಂತರ ಸುಖ. ಇವೆರಡೂ ಸಕ್ರಮವಾಗಿ ಬರುವುದು ಸ್ವಾಭಾವಿಕವಾದರು ಕರುಣೆಯೊಂದಿದ್ದರೆ ದುಃಖದ ಬೇಗುದಿ ಪರಿತಾಪವು ಅಧಿಕವನ್ನಿಸದೆ ಶಾಂತವಾಗಿ ತೋರುವದು.

ಶ್ರಮವಹಿಸಿ ದುಡಿದವನಿಗೆ ಮೆಚ್ಚುಗೆಯ ಮಾತನ್ನಾಡಿದರೆ ಸನ್ಮಾನಿಸಿದರೆ ಅವನ ದಣಿವು ಕಡಿಮೆಯಾದಂತೆ ಅನ್ನಿಸುವುದು. ಕರುಣಾ ಕಟಾಕ್ಷಕ್ಕೆ ಪಾತ್ರನಾದ ವ್ಯಕ್ತಿಯ ಸರ್ವ ಸಂಕಷ್ಟಗಳೂ ದೂರವಾದಂತಾಗಿ ಅವನು ಸುಖವಾಗಿ ಬಾಳುವನು.

ಕಾರಣ ಕರುಣೆಯಿಂದ ಬೆಳೆದು ಕರುಣಾಳುವಾದ ನಿನ್ನ ಕರುಣವಿರಲಿ ಜೀವರೊಳು.

# ಚಿತ್ರೀಕರಣ

ಸಾಹಿತ್ಯ ಪ್ರಕಾರ : ಲಘು ಲೇಖನಗಳು
ಮೊದಲ ಮುದ್ರಣ : ೧೯೮೧
ರಚನೆಯ ವಯಸ್ಸು : ೫೧
ರಚನಾಸ್ಥಳ : ಹುಬ್ಬಳ್ಳಿ

ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ ನಂ. ೧೨೨

# ಚಿತ್-ಕಿರಣ

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು,
ಮೂರುಸಾವಿರಮಠ, ಹುಬ್ಬಳ್ಳಿ

ಪ್ರಕಾಶಕರು:
ಶ್ರೀಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ
ಮೂರುಸಾವಿರಮಠ, ಹುಬ್ಬಳ್ಳಿ
೧೯೮೧

# CHIT-KIRAN

Written by Sri Mujagum, Published by J. G. Mandal
Murusavir Math, Hubli

ಗ್ರಂಥದಾನಿಗಳು:
ಶ್ರೀ ಗುರುಸಿದ್ಧಪ್ಪನವರು ಮುರಿಗೆಪ್ಪನವರು ಆಜೂರು
ಮುಕ್ಕಾಮು : ಬಿಸನಳ್ಳಿ



ಬೆಲೆ : ರೂ. ೮–೦೦
ಪ್ರತಿಗಳು : ೧೦೦೦

ಕಲೆ :
ಕೆ. ಬಿ. ಕುಲಕರ್ಣಿ

ಮುದ್ರಕರು :
ಸಂಯುಕ್ತ ಕರ್ನಾಟಕ (ಜಾಬ) ಪ್ರೆಸ್, ಹುಬ್ಬಳ್ಳಿ–೨೦.

# ಮುನ್ನುಡಿ

ಶ್ರೀ 'ಮೂಜಗಂ' ಅವರ ಈ "ಚಿತ್-ಕಿರಣ" ಪುಸ್ತಕಕ್ಕೆ ನಾನು ಮುನ್ನುಡಿಯನ್ನು ಬರೆಯಬೇಕು ಎಂದು ಸ್ವತಃ ಶ್ರೀ ಜಗದ್ಗುರುಗಳವರು ಅಪ್ಪಣೆ ಕೊಡಿಸಿದಾಗ ಒಪ್ಪಿಕೊಳ್ಳದೆ ಗತ್ಯಂತರವಿಲ್ಲದಾಯಿತು. ಅಲ್ಲದೆ **"ಚಿತ್-ಕಿರಣ"ದಂಥ** ಒಂದು ಒಳ್ಳೆಯ ಕೃತಿಯ ಕುರಿತು ನಾಲ್ಕು ಮಾತುಗಳನ್ನು ಬರೆಯುವ ಒಂದು ಅವಕಾಶ ದೊರೆಯುವದೂ ಒಂದು **ಸುಯೋಗ** ಎಂದೆಂದುಕೊಂಡು ನಾನು ಸಂತೋಷದಿಂದ ಸಮ್ಮತಿಸಿದೆ.

ಶ್ರೀ 'ಮೂಜಗಂ' ಅವರನ್ನು **ಸಮೀಪದಿಂದ ಕಾಣುವ** ಅವಕಾಶ ನನಗೆ ಕಳೆದ ಒಂದು ಕಾಲುಶತಮಾನದಿಂದ ದೊರಕಿದೆ. ಅವರ ಬಹುಮುಖ ಪ್ರತಿಭೆ ಮೆಚ್ಚಬೇಕಾದುದೇ. ಒಂದು ಧಾರ್ಮಿಕ ಪೀಠದ ಅಧಿಪತಿಗಳಾಗಿದ್ದುಕೊಂಡು ಅವರು ತಮ್ಮ ಪೀಠದ ಕರ್ತ್ತವ್ಯದ ನಿರ್ವಹಣೆಯ ಜೊತೆಗೆ ಲೋಕಸಂಗ್ರಹ ಕಾರ್ಯವನ್ನೂ ನಡೆಸಿಕೊಂಡು ಬಂದಿರುವದು ಅವರನ್ನು ಜನಪ್ರಿಯರನ್ನಾಗಿಸಿದೆ. ಧರ್ಮ ಪ್ರಸಾರದ ಜೊತೆಗೆ ಶಿಕ್ಷಣ ಪ್ರಸಾರವನ್ನೂ ತಮ್ಮ ಕರ್ತ್ತವ್ಯದಂತೆಯೆ ನೆರವೇರಿಸುತ್ತ ಬಂದಿದ್ದಾರೆ. ಹಲವಾರು ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಪೋಷಿಸಿ ಬೆಳೆಸಿಕೊಂಡು ಬಂದಿದ್ದಾರೆ. ಅವುಗಳಿಗೆ ಅಗತ್ಯವೆನಿಸಿದ ಆಧುನಿಕ ಭವ್ಯಕಟ್ಟಡಗಳನ್ನೂ ನಿರ್ಮಿಸಿದ್ದಾರೆ. ಒಂದು ತಪಕ್ಕಿಂತಲೂ ಹೆಚ್ಚು ಕಾಲ ಈ ಕಾರ್ಯ ನಡೆಸಿಕೊಂಡು ಬಂದ ನಂತರ ಶ್ರೀ ಜಗದ್ಗುರುಗಳು ಇತ್ತೀಚೆಗೆ **"ಇನ್ನು ಸಿದ್ಧರಾಮನ ಈ ಕಾರ್ಯ ಸಾಕು, ಸಾಹಿತ್ಯದತ್ತ ಗಮನಹರಿಸಬೇಕು"** ಎಂದು ಹೇಳುತ್ತ ಬಂದಿದ್ದಾರೆ. ತತ್ಪರಿಣಾಮವಾಗಿ ಕಳೆದ ಎರಡು ವರ್ಷಗಳಲ್ಲಿ ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳದ ಪರವಾಗಿ ವಿಪುಲ ಗ್ರಂಥಗಳ ಪ್ರಕಟಣೆ ನಡೆದಿದೆ. ಬರುವ ಶಿವರಾತ್ರಿಯಂದಂತೂ ೩೬ ಗ್ರಂಥಗಳನ್ನು ಏಕ ಕಾಲಕ್ಕೆ ಪ್ರಕಟಿಸುವ ಯೋಜನೆಯೊಂದನ್ನು ಶ್ರೀ ಜಗದ್ಗುರುಗಳು ಹಾಕಿಕೊಂಡಿದ್ದಾರೆ. ಆ ಗ್ರಂಥಗಳಲ್ಲಿ ಈ ಚಿತ್-ಕಿರಣ ಒಂದು.

**ಚಿತ್-ಕಿರಣ ಗ್ರಂಥದ ರಚನೆಯು ವೈಶಿಷ್ಟ್ಯಪೂರ್ಣವಾಗಿದೆ. ಪರಂ-ಜ್ಯೋತಿ ಮಾಸಪತ್ರಿಕೆಯಲ್ಲಿ ನಿಯಮಿತವಾಗಿ** ಪ್ರಕಟವಾಗುತ್ತಿರುವ ತಮ್ಮ ಆಶೀರ್ವಾಣಿಗಳಲ್ಲಿ **ಸುಮಾರು ಇನ್ನೂರರಷ್ಟನ್ನು ಆಯ್ದು ಶ್ರೀ 'ಮೂಜಗಂ' ಅವರು ಈ ಒಂದು ಪುಸ್ತಕ ರೂಪದಲ್ಲಿ "ಚಿತ್-ಕಿರಣ"** ಎಂಬ ಹೆಸರಿನಿಂದ ನೀಡಿದ್ದಾರೆ. ಮಾನವನ ಮರವೆಯನ್ನು ನಿವಾರಿಸಿ, ಅರಿವಿನ ಬೆಳಕನ್ನು ಮೂಡಿಸಲೆಂದು ಬಂದ ಈ ಚಿತ್-ಕಿರಣ ಸಕಲರ ಬಾಳಬಟ್ಟೆಗೆ ದಾರಿದೀಪವಾಗಿದೆ ಎಂದು ಧಾರಾಳವಾಗಿ ಹೇಳಬೇಕಾಗಿದೆ. ಅಂದ ಮಾತ್ರಕ್ಕೆ ಇದೊಂದು ನೀತಿ ಬೋಧೆಯ ನೀರಸ ಪುಸ್ತಕವೆಂದು

ಭಾವಿಸಬೇಕಾಗಿಲ್ಲ. ಸಮಾಜದಲ್ಲಿ ಎಷ್ಟು ವ್ಯಕ್ತಿಗಳೊ ಅಷ್ಟು ಸಮಸ್ಯೆಗಳು. ಅವು ಧಾರ್ಮಿಕ, ರಾಜಕೀಯ, ಆರ್ಥಿಕ ಹೀಗೆ ಯಾವ ಸ್ವರೂಪದ್ದೂ ಇರಬಲ್ಲವು. ಅವುಗಳಿಗೆ ಪರಿಹಾರ ಬೇಕು, ಅಂಥ ಪರಿಹಾರವನ್ನು ಕಂಡು ಹಿಡಿಯಲು ಇಲ್ಲಿ ಪ್ರಯತ್ನ ನಡೆದಿದೆ. ಸಮಾಜದ ಲೋಪದೋಷಗಳನ್ನು ಕೂಡ ಎತ್ತಿ ಅವುಗಳ ನಿವಾರಣೆಗೆ ದಾರಿ ತೋರುವ ಕಾರ್ಯ ಕೂಡ ಈ ಚಿತ್-ಕಿರಣಗಳು ಮಾಡುತ್ತಿವೆ. ಓರ್ವ ಸುಸಂಸ್ಕೃತ ವಿಚಾರಶೀಲ ಚಿಂತನಶೀಲ ಚಿತ್ತಿನಿಂದ ಮೂಡಿ ಬಂದ ಕಿರಣಗಳು ಬೆಳಕನ್ನೇ ತೋರಬಲ್ಲವು.

ಇಲ್ಲಿ ಶ್ರೀ 'ಮೂಜಗಂ' ಅವರು ಒಂದೊಂದು ಸಮಸ್ಯೆಯನ್ನು ಸೂತ್ರ ರೂಪದಲ್ಲಿ ಎಂಬಂತೆ ಶೀರ್ಷಿಕೆಯಲ್ಲಿ ಸೂಚಿಸಿ ನಂತರ ಅದರ ಸಾಧಕ ಬಾಧಕ ರೂಪಗಳನ್ನು ಪರಾಮರ್ಶಿಸಿ ಕೊನೆಯಲ್ಲಿ ಪರಿಹಾರ ಮಾರ್ಗವನ್ನು ಸೂಚಿಸಿದ್ದಾರೆ. ಈ ಸಮಸ್ಯೆಗಳನ್ನು, ಈ ಲೋಪದೋಷಗಳನ್ನು ನಿರ್ದಾಕ್ಷಿಣ್ಯವಾಗಿ ನಿವೇದಿಸುವಲ್ಲಿ ಶ್ರೀ ಮೂಜಗಂ ಅವರು ಆಳವಾದ ಅನುಭವವನ್ನೂ ಸೂಕ್ಷ್ಮ ನಿರೀಕ್ಷಣ ಶಕ್ತಿಯನ್ನೂ ಪ್ರದರ್ಶಿಸಿದ್ದಾರೆ. ಸಮಾಜದ ಅಂಕು ಡೊಂಕುಗಳನ್ನು ಕಂಡು ಅವರ ಮನಸ್ಸು ಕಳವಳಗೊಂಡಿದೆ. ಅಹಂಮನ್ಯ ವ್ಯಕ್ತಿಗಳ ಬಗ್ಗೆ ಅವರಲ್ಲಿ **ಕೋಪದ ಬದಲು ಅನುಕಂಪ** ಇದೆ. ಇವೆಲ್ಲವನ್ನೂ ಹೇಗೆ ಸರಿಪಡಿಸಬೇಕು, ಸಮಾಜವನ್ನು ಹೇಗೆ ಸರಿಯಾದ ಧರ್ಮ-ನೀತಿ ಮಾರ್ಗದಲ್ಲಿ ಕೊಂಡೊಯ್ಯಬೇಕು ಎಂಬ ಬಗ್ಗೆ ಗಾಢವಾಗಿ ಚಿಂತಿಸಿ, ಆ ದಿಶೆಯಲ್ಲಿ ಮಾರ್ಗದರ್ಶನ ನೀಡುವದಕ್ಕಾಗಿ ಈ ಚಿತ್-ಕಿರಣ ಮೂಲಕ ಮುಂದಾಗಿದ್ದಾರೆ. ಶ್ರೀ 'ಮೂಜಗಂ' ಅವರ ಈ ಕಿರಣಗಳ ಬೆಳಕಿನಲ್ಲಿ ವಾಚಕರ ಭ್ರಮೆ ದೂರಾಗಿ ಲೋಕಾನುಭವ ಹೆಚ್ಚಿ, ಸರಿಯಾದ ಅರಿವು ಮೂಡಿ ಜೀವನಮಾರ್ಗ ಸುಗಮವಾಗಬಲ್ಲದು. ಸಾಕಷ್ಟು ಸಾಧಾರವಾಗಿ ಆದರೂ **ಲಲಿತವಹ ಕನ್ನಡದಲ್ಲಿ ಮೂಡಿ ಬಂದಿರುವ ಚಿತ್-ಕಿರಣ ಕನ್ನಡಿಗರನ್ನು ಒಳ್ಳೆಯ ದಾರಿಯಲ್ಲಿ** ನಡೆಸಿಕೊಂಡು ಹೋಗಲು ಬಂದಿರುವ ಸುಂದರ ಕೃತಿ. ಇಂಥ ಒಂದು ಉತ್ತಮ ಕೃತಿಗಾಗಿ ನಾವೆಲ್ಲ ಶ್ರೀ 'ಮೂಜಗಂ' ಅವರಿಗೆ ಋಣಿಯಾಗಿರಬೇಕಾಗಿದೆ. ಅವರ ಸಾಹಿತ್ಯ ಕೃಷಿ ಹೆಚ್ಚಿದಷ್ಟು ನಾಡಿಗೆ ಕ್ಷೇಮ. ಅವರ ಈ ಕೃತಿಯನ್ನು ಕನ್ನಡಿಗರು ಸಂತೋಷದಿಂದ ಸ್ವಾಗತಿಸದಿರಲಾರರು.

ಹುಬ್ಬಳ್ಳಿ
೮-೧೧-೮೧

**—ದ. ಲ. ಕೆರೂರ**

# ಪ್ರಕಾಶಕರ ಮಾತು

"ಚಿತ್-ಕಿರಣ" ಇದೊಂದು ಮೂರುಸಾವಿರಮಠದ ಶ್ರೀ ಜಗದ್ಗುರುಗಳವರ ಅನುಭವ ಹಾಗೂ ವಿಚಾರ ಪೂರ್ಣ ನುಡಿಮುತ್ತುಗಳ ಸಂಗ್ರಹವಾಗಿದೆ. ಲೋಕದ ಕ್ಷೇಮ ಪಾಲನೆಗೆ ಬೇಕಾಗಿರುವ, ಹೃದಯ ಮುಟ್ಟುವ ವಿಚಾರ ವೀಚಿಗಳು ಈ ಪುಸ್ತಕದಲ್ಲಿ ತುಂಬಿವೆ. "ಪರಂಜ್ಯೋತಿ" ಮಾಸಿಕದಲ್ಲಿ ಪ್ರತಿ ತಿಂಗಳವೂ ಆಶೀರ್ವಾಣ ರೂಪದಲ್ಲಿ ಹರಿದು ಬಂದ ಬೆಳಕಿನ ಕಿರಣಗಳಿವು. ಈ ಚಿತ್-ಕಿರಣದಲ್ಲಿ ಶ್ರೀ ಜಗದ್ಗುರುಗಳವರ ಜೀವನಾನುಭವ, ಸಾಧನೆ, ತ್ಯಾಗ, ಸಾಹಸಗಳಿಂದ ಕೂಡಿದ ಹೊಂಗಿರಣಗಳು ಹರಡಿವೆ. ರಾಷ್ಟ್ರಪ್ರೇಮ, ಸತ್ಯ, ಅಹಿಂಸೆ, ಪ್ರಾಮಾಣಿಕತೆ, ಕೃತಜ್ಞತೆ, ಕವಿಜೀವನದ ರೂಪ ದರ್ಶನ, ಆತ್ಮಸಂದರ್ಶನ, ಅಂತರಂಗದ ವಿಶ್ವರೂಪದರ್ಶನ, ವೀರಶೈವದರ್ಶನ, ಭಾವೈಕ್ಯತೆ ಮುಂತಾದ ಮಾನವೀಯ ಮೌಲ್ಯಗಳೊಡನೆ, ಚಿಕ್ಕ ಚಿಕ್ಕ ನುಡಿಗಳಿಂದ ಕೂಡಿದ ಈ ಚಿತ್-ಕಿರಣವು ಸಾಹಿತ್ಯಾರಾಧಕರಿಗೆ ಕೈಗನ್ನಡಿಯಾಗಿದೆ.

ಅಂತರಂಗ ವಿಕಾಸಕ್ಕೆ, ಭಾವ ಸೌಂದರ್ಯಕ್ಕೆ ಪ್ರಕಾಶವನ್ನು ನೀಡುವ ಈ ಚಿತ್-ಕಿರಣವನ್ನು ಮೂರುಸಾವಿರಮಠ ಶ್ರೀ ಜಗದ್ಗುರುಗಳು ನಾಡಿಗೆ ನೀಡಿ ಮಹದುಪಕಾರ ಮಾಡಿದ್ದಾರೆ.

ಶ್ರೀ ಜಗದ್ಗುರುಗಳು ಸತತವೂ ಸಾಮಾಜಿಕ ರಂಗದಲ್ಲಿ ಕಾಲಕಳೆಯುತ್ತಿದ್ದರೂ, ಅದರಲ್ಲಿಯೇ ಬಿಡುವು ಮಾಡಿಕೊಂಡು, ಸಾಮಾಜಿಕ, ಶೈಕ್ಷಣಿಕ, ಹಾಗೂ ಅಧ್ಯಾತ್ಮಿಕ ವಿಚಾರಗಳನ್ನು ಸಾಹಿತ್ಯಕ ರೂಪದಲ್ಲಿ ಸ್ವಾನುಭವದೊಡನೆ ಬರೆದು ಜನಜಾಗ್ರತಿ ಮಾಡಿದ್ದಾರೆ. ಅವರ ನುಡಿಗಳು "ಅಧರಕ್ಕೆ ಕಹಿ, ಉದರಕ್ಕೆ ಸಿಹಿ" ಯಂತಿವೆ. ಕಷ್ಟ ಕಾರ್ಪಣ್ಯ ಸುಖದುಃಖ ಸ್ತುತಿನಿಂದನೆಗಳ ಅನುಭವವನ್ನು ಸರಸ ಶೈಲಿಯಲ್ಲಿ ಹೃದಯಂಗಮವಾಗಿ ವಿವರಿಸಿದ್ದಾರೆ.

ಈ ಚಿತ್-ಕಿರಣವು ಶ್ರೀ ಸನ್ನಿಧಿಯವರ ಜೀವನದ ಉಸಿರಾಗಿದ್ದು, ದೀರ್ಘ ಕಾಲದ ಚಿಂತನದಿಂದ ಹೊರಬಂದ, ಚಿತ್ತಪಸ್ಸಿನ ಫಲದಂತಿದೆ. ಶ್ರೀ ಜಗದ್ಗುರು ಮಹಾ ಸನ್ನಿಧಿಯವರಿಂದ ಇಂತಹ ಕೃತಿಗಳು ಹಲವಾರು ಬಂದು ನಾಡಿಗೆ ಶಕ್ತಿಯನ್ನು ನೀಡಲಿ. ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳದ ರಜತಮಹೋತ್ಸವದ ಸವಿ ನೆನಹಿಗಾಗಿ ಈ ಕೃತಿಯು ಹೊರ ಬರುತ್ತಿರುವದು ನಮಗೆಲ್ಲ ಸಂತಸವನ್ನುಂಟು ಮಾಡಿದೆ.

ಈ ಕೃತಿ ಪ್ರಕಟವಾಗಲು ಶ್ರೀ ಗುರುಸಿದ್ಧಪ್ಪನವರು ಮುರಿಗೆಪ್ಪನವರು ಆಜೂರು ಮುಕ್ಕಾಂ ಬಿಸನಳ್ಳಿ ಇವರು ಕಾರಣರಾಗಿದ್ದಾರೆ. ಇವರು "ಪರಂಜ್ಯೋತಿ"ಯನ್ನು ಓದಿ ಸ್ವಯಂ ಪ್ರೇರಿತರಾಗಿ ಶ್ರೀ ನಿ. ಪ್ರ. ಸಚ್ಚಿದಾನಂದ ಸ್ವಾಮಿಗಳು ಹೊಸಪೇಟೆ ಹಾಗೂ

ಹುಬ್ಬಳ್ಳಿಯ ಶಿರಹಟ್ಟಿಮಠ ವಕೀಲರ ಸಲಹೆ ಸಹಕಾರ ತೆಗೆದುಕೊಂಡು ಶ್ರೀ ಜಗದ್ಗುರು ಮಹಾ ಸನ್ನಿಧಿಯವರನ್ನು ಬಿಸನಳ್ಳಿಗೆ ಕರೆಯಿಸಿಕೊಂಡು ತಮ್ಮ ಮನೆಯಲ್ಲಿ ಪೂಜೆ ಮಾಡಿಸಿ ಈ ಕೃತಿ ಪ್ರಕಟನೆಗೆ ರೂ. ೨೦೦೦/– ಎರಡು ಸಾವಿರ ರೂಪಾಯಿಗಳನ್ನು ನೀಡಿ ಕೃತಾರ್ಥರಾಗಿದ್ದಾರೆ. ಇವರು ಗುರುಲಿಂಗ ಜಂಗಮ ಪ್ರೇಮಿಗಳು. ಸಾತ್ವಿಕ ವ್ಯಕ್ತಿಗಳು. ಶ್ರದ್ಧಾವಂತ ಸದ್ಭಕ್ತರು. ತಮ್ಮ ಊರಲ್ಲಿ ಇರುವ ಕಲ್ಮೇಶ್ವರ ಗುಡಿಯನ್ನು ಕಟ್ಟಿಸಿ, ಆ ಊರಿಗೆ ಕಳೆಯನ್ನು ತಂದಿದ್ದಾರೆ. ಅನಾಥರಿಗೆ, ಧರ್ಮಜಾಗ್ರತಿಗೆ ದಾನ ಧರ್ಮಮಾಡಿ ಜೀವನವನ್ನು ಸಾರ್ಥಕ ಮಾಡಿಕೊಂಡಿದ್ದಾರೆ. ಇವರಿಗೆ ಕರ್ತೃಜಗದ್ಗುರು ಗುರುಸಿದ್ಧೇಶ್ವರನು ಆಯುರಾರೋಗ್ಯಭಾಗ್ಯಗಳನ್ನಿತ್ತು ಸನ್ಮಂಗಳವನ್ನುಂಟು ಮಾಡಲೆಂದು ಪ್ರಾರ್ಥಿಸುತ್ತೇವೆ. ಅನುಭವಿಕರೂ ಮೃದುಹೃದಯಸಂಪನ್ನರೂ ಮಾಜಿ ಕಸ್ತೂರಿ ಸಂಪಾದಕರಾಗಿದ್ದ ದ. ಲ. ಕೆರೂರ ಅವರು ಸುಂದರವಾದ ಮುನ್ನುಡಿಯನ್ನು ಬರೆದು ಈ ಗ್ರಂಥಕ್ಕೆ ಕಳೆ ನೀಡಿದ್ದಾರೆ. ಇವರು ಬರೆದ ಕವನ ಲೇಖನಗಳು ನಾಡಿನಲ್ಲಿ ಜನ ಪ್ರಿಯವೆನಿಸಿವೆ. ಇವರ ಶೈಲಿ ರಸಮಯವಾದುದು, ಇವರ ಭಾಷೆ ತೂಕಬದ್ಧವಾದುದು. ಇವರಿಗೂ ಪರಮಾತ್ಮನು ಅನುಗ್ರಹಿಸಲಿ. ವೇಳೆಗೆ ಸರಿಯಾಗಿ ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟ "ಸಂಯುಕ್ತ ಕರ್ನಾಟಕ" ಜಾಬ ವಿಭಾಗದವರಿಗೂ ದೇವರು ಕರುಣಿಸಲಿ.

ಪ್ರಕಾಶಕರು:
ಜೆ. ಜಿ. ಮಂಡಳ
ಮೂರುಸಾವಿರಮಠ
ಹುಬ್ಬಳ್ಳಿ

ದೀಪಾವಳಿ
೧೯೮೧

# ಚಿತ್–ಕಿರಣ

## ಸಮಯ ಏವ ಕರೋತಿ ಬಲಾಬಲಂ

ಏರಿಳಿತಗಳು ಮನುಷ್ಯನಿಗೆ ಬರುವದು ಸಹಜ. ಏರಿಳಿತಗಳು ಬರದೆ ಶಕ್ತಿ ಸಂವರ್ಧನೆಯಾಗುವದು ಕಷ್ಟ. ಶಕ್ತಿಯು ವ್ಯಕ್ತಿಗೆ ಒಮ್ಮೊಮ್ಮೆ ವ್ಯಕ್ತಿತ್ವದ ಅರಿವು ನೀಡಿದರೆ, ತಾಮಸೀಯ ಶಕ್ತಿಯು ಅಧಃಪತನಕ್ಕಿಳಿಯುವ ದಾರಿ ತೋರಿಸುತ್ತದೆ. ಬಲವೂ ಬರಬಹುದು, ದುರ್ಬಲತೆಯೂ ಆವರಿಸಬಹುದು. ಇದೆಲ್ಲವೂ ಸಮಯದ ಪರಿಣಾಮ ವೆಂದು ಕವಿಗಳು ಹೇಳುತ್ತಿದ್ದಾರೆ. ಇದೆಲ್ಲವನ್ನು ಲೆಕ್ಕಿಸದೆ, ಸುಖ–ದುಃಖಗಳನ್ನು ಮನಸ್ಸಿನಲ್ಲಿಡದೆ, ಬೆಳಕಿನತ್ತ ಸಾಗುವದೇ ಮಾನವನ ಪರಮ ಗುರಿ. ಧ್ಯೇಯ ಸಾಧನೆ ಯನ್ನು ಎಡಬಿಡದೆ ಮಾಡಿ ಮೃಡನನೊಲಿಸುವದೇ ಚರಮ ಗುರಿ. ಸತ್ಯಶಾಲಿಯಾದ ವರಿಗೆ ಇದೇ ಸುಮಧುರ ಆಹಾರ. "ಸಂಪತ್ತು ಬಂದಲ್ಲಿ ಕುಸುಮದಂತೆ ಮೃದು ಹೃದಯ ದವನಾಗಿರಬೇಕು. ವಿಪತ್ತಡಸಿದಲ್ಲಿ ಶಿಲೆಯಂತೆ ಕಠಿಣ ಚಿತ್ತನಾಗಿರಬೇಕು" "ಸರ್ವವೂ ದೈವಾಧೀನಮೆಂದಲಸಭಾವದಿಂದಿರದೇ ಪುರುಷ ಪ್ರಯತ್ನದಿಂದ ಉದ್ಯೋಗಂ ಗೈಯ್ಯ ಬೇಕು". ಶ್ರೀಮನ್ನಿಜಗುಣ ಶಿವಯೋಗಿಗಳ ಈ ಸೂಕ್ತಿಸುಧೆ ನಮ್ಮ ನೆನಹಿನಂಗಳದಲ್ಲಿ ಸೇರಿ, ಹೃದಯಮಂದಿರ ಮುಟ್ಟಿ, ಬಂಧುರ ಭಾವವನ್ನು ನೀಡಿ ಜಾಗ್ರತ ಮಾಡುವದಲ್ಲದೆ ಧೈರ್ಯಕ್ಕೆಡೆಮಾಡುತ್ತದೆ. ಹೃದಯ ದೌರ್ಬಲ್ಯವುಳ್ಳ ವ್ಯಕ್ತಿಗೆ ಸಮಯದ ಸದುಪ ಯೋಗ ಮಾಡಿಕೊಳ್ಳಲು ತಿಳಿಹೇಳುತ್ತದೆ. ಮತ್ತೊಂದೆಡೆ ನಿಜಗುಣ ಶಿವಯೋಗಿಗಳು "ಕಾಲಕರ್ಮ ಮಾಯೆಯೆಂಬವನು ಗೆಲಲಹುದು, ವಿಶಾಲ ಮತಿಗಳು ಶಿವಭಕ್ತಿಯುಕ್ತ ರಾಗಿರೆ" ಎಂದುದಾಗಿ ತಮ್ಮ ಕೈವಲ್ಯ ಪದ್ಧತಿಯಲ್ಲಿ ವಿಶಾಲ ಮತಿಗಳ ವಿವರವನ್ನು ಸ್ಪಷ್ಟೀ ಕರಿಸಿದ್ದಾರೆ. ಪುಣ್ಯ ಸಾಧನೆಯ ಹಂಬಲವುಳ್ಳವರು ಮಾಯಾ ಮೋಹವನ್ನು, ಪ್ರಾರಬ್ಧ ಭೋಗವನ್ನು, ಮಹದ್ಭಾವಗಳ ಚಿಂತನೆಯಿಂದ ಮತ್ತು ಶಿವಭಕ್ತಿಯಿಂದ ಅನಾಯಾಸವಾಗಿ ದೂರೀಕರಿಸಿ ಗೆಲ್ಲಬಲ್ಲರೆಂಬುದನ್ನು ಉಲ್ಲೇಖಿಸಿದ್ದಾರೆ. ಬಲಾಬಲಗಳು, ಜಯಾಪಜಯ ಗಳು ಎದುರು ಬಂದಾಗ ಆ ಸಮಯದಲ್ಲಿ ಸುವಿಚಾರದ ವಜ್ರಕವಚವನ್ನು ಧರಿಸಿದರೆ ಎಂಥ ವ್ಯಕ್ತಿಯೂ ಸಹ ಮಾಯಾಬಂಧನದಿಂದ ಪಾರಾಗಬಲ್ಲ. ದುರ್ದೈವಕ್ಕೆ ಬೆಚ್ಚದೆ, ಸಮಯಕ್ಕೆ ಬಂದೊದಗಿದ ವಿಪತ್ತನ್ನು ಧೀರೋದಾತ್ತ ಹೃದಯದಿಂದ ಪ್ರಸನ್ನ ಗಂಭೀರತೆ ಯೊಡನೆ ಎದುರಿಸಿದರೆ ದುರ್ದೈವವು ತೊಲಗಿ ದೈವೀ ಶಕ್ತಿಯು ಬೆಳೆಯುವದಲ್ಲದೆ, ಬಾಳಿನ ಗೆಲುವಿಗೆ ಮೂಲ ಕಾರಣವಾಗುವದು. ಸಮಯದ ಬಲಾಬಲವನ್ನರಿತು, ಮುನ್ನುಗ್ಗಿ ಮುಂಗುರಿಯನ್ನೂ, ಮುಧೋರಣೆಯನ್ನೂ ಸಾಧಿಸಿದರೆ ಆತ್ಮಕ್ಕೆ ಶಾಂತಿ, ಕಾಂತಿ.

**ಸಮತ್ವಂ ಯೋಗಂ ಉಚ್ಯತೇ**

ಇಂದು ನಮಗಿರುವ ಹಸಿವು, ಸಮತ್ವ, ಸಮದೃಷ್ಟಿ, ಸಮ್ಯಕ್ ದೃಷ್ಟಿ, ಇತ್ಯಿತ್ಯಾಗಿ ಇದನ್ನು ಎಲ್ಲರೂ ಹೇಳುತ್ತಾರೆ. ಇದು ಮತಿಯಲ್ಲಿ ಮೂಡಿ, ಕೃತಿಯಲ್ಲಿಳಿದರೆ, ಸ್ಫೂರ್ತಿಯ ಸೆಲೆಯೊಡೆಯುವದು ನಿಜ. ಸರಿಸಮಾನತೆ ಕೇವಲ ಆಸನಾದಿಗಳಲ್ಲಿ ಸೀಮಿತವಾಗಿರಬಾರದು. ಅಂತಃಕರಣದ ಕಾರಂಜಿ ಪುಟಿಯುತ್ತಿರಬೇಕು. ಅದು ಭಾವೈಕ್ಯದೊಡನೆ ಹೊಂದಿಕೊಂಡಿರಬೇಕು. ಕೃತಿ, ಕೃತ್ರಿಮವಾದರೆ ಅದು ಕೇವಲ ಹೊರನೋಟ. ಹೊರನೋಟ ಕೋಲ್ಮಿಂಚಿನಂತೆ; ಭಾವೈಕ್ಯವಿಲ್ಲದ ಸರಿಸಮಾನತೆ ಭದ್ರವಿಲ್ಲದ ಬುನಾದಿ, ಕಡೆಗೀಲಿಲ್ಲದ ಬಂಡಿ, ಶುದ್ಧಿಯಾಗದ ಲಿಂಗವಿದ್ದಂತೆ. ಆತ್ಮಬಾಂಧವ್ಯಕ್ಕೆ ಅಡ್ಡಗೋಡೆ. ಭಾವವೈಭವಕ್ಕೆ ಒಡೆದ ಕನ್ನಡಿ. ಸಮಾಜದ ರಥವನ್ನೆಳೆಯಲು ಎಲ್ಲರ ಕೈಗಳು ಒಂದುಗೂಡಬೇಕು. ಒಂದುಗೂಡುವಿಕೆ ಹೃದಯದಿಂದ ಬಂದಿರಬೇಕು. ಸಮಾಜದ ಕಳಕಳಿ ನಾಡಿನಾಡಿಯಲ್ಲಿ ಪ್ರವಹಿಸಬೇಕು. ಭಿನ್ನತೆ ಬಹುದಿನ ಉಳಿದರೆ ಬದುಕು ಬಂಗಾರವಾಗದು. ಅಷ್ಟೇ ಅಲ್ಲ, ಸಮಾಜಕ್ಕೆ ದ್ರೋಹ ಬಗೆದಂತೆ. ಶೀಲ ಸಂಸ್ಕೃತಿಗೆ ಮಣ್ಣೆರಚಿದಂತೆ. ಸಮಾಜೋನ್ನತಿಗೆ ಮತ್ತು ಅವನತಿಗೆ 'ನಾ'ವೆನ್ನುವವರು ಕಾರಣರು. "ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವರಿಪುರಾತ್ಮನಃ" ನಮ್ಮ ಮಿತ್ರರೂ ನಾವೇ, ಶತ್ರುಗಳು ನಾವೇ. ಈ ಗೀತೋಕ್ತಿಯನ್ನು ಚಿತ್ತಭಿತ್ತಿಯಲ್ಲಿ ಚಿತ್ರಿಸಿಕೊಂಡಾಗ ಸಾರ್ಥಕತೆ, ಇಲ್ಲದಿದ್ದರೆ ಉರಿವ ಬೆಂಕಿಗೆ ತುಪ್ಪ ಹಾಕಿದಂತೆ; ಬುದ್ಧಿ ಬೆಳೆದಂತೆ ಅಂಧತೆ ದೂರಾಗಿದ್ದರೆ ಮಾತ್ರ ಬೆಳೆದ ಬುದ್ಧಿಗೆ ಇದುವೆ ನಿದರ್ಶನ. ಇದುವೆ ನಮ್ಮ ಕಾಯಕದ ದರ್ಶನ. ನಮ್ಮಲ್ಲಿರುವ ಒಳಗಿನ ಅಪಾಯಗಳನ್ನು ನಾವೇ ಕಂಡು ಹಿಡಿಯಬೇಕು. ಅದಕ್ಕೆ ತಕ್ಕ ಉಪಾಯ ಹುಡುಕಬೇಕು. ವರುಷಗಳುರುಳುತ್ತ ಹೋದಂತೆ ಕರುಳಿನಲ್ಲಿ ಕರುಣೆ ತುಂಬಬೇಕು. ಮಿದುಳಿನಲ್ಲಿ ಮಾರ್ದವತೆ ಉದಯಿಸಬೇಕು. ಈ ತೆರನಾಗಿ ಭಾವೈಕ್ಯತೆಯ ಹರುಷ ಉಕ್ಕೇರುತ್ತಿದ್ದರೆ ಭವಿಷ್ಯ ರೂಪಗೊಳ್ಳುವದು. ಸಮತ್ವದ ಚೈತನ್ಯಪೂರ್ಣ ಮುಖಕಮಲವರಳಿ ಪರಿಶೋಭಿಸುವದು. ಭಾವನೆಗಳು ವಿಶಾಲವಾದರೆ ಸಮಾಜ ಉಳಿಯುತ್ತದೆ. ಬೆಳೆಯುತ್ತದೆ. ಬೆಳಗುತ್ತದೆ. ತಲೆಗೊಬ್ಬರಂತೆ ಪಕ್ಷ ಪಂಗಡಗಳೆಂಬ ಕಸದ ಬೀಜವನ್ನು ಬಿತ್ತಿದರೆ ಸಮಾಜದ ವೃಕ್ಷವು ಒಣಗಲವಕಾಶ ನೀಡಿದಂತೆ, ಇದರ ನಿವಾರಣೆಯಾಗಿ ಭಾವೈಕ್ಯ ಬೆಳೆದರೆ ಇದುವೆ ಯೋಗ. ಇಂತಹ ಸಮತ್ವಯೋಗ ನಮಗಿಂದು ಬೇಕಾಗಿದೆ. ಅಂದು, ಸಮಾಜದ ಸಮೃದ್ಧಿ ಭಾವೈಕ್ಯದ ಸಂಸಿದ್ಧಿ. ಇಂತಾದಾಗ "ಸಮತ್ವಂ ಯೋಗಮುಚ್ಯತೇ".

**ಸರ್ವೇ ಮಾನವಾಃ ಸಹೋದರಾಃ**

ನಾವೆಲ್ಲರೂ ಒಂಧು ಬಾಂಧವರು, ನಮ್ಮ ನಡೆನುಡಿ ಭಾವವೆಲ್ಲವೂ ಜೀವನದಲ್ಲಿ ಹಾಸು ಹೊಕ್ಕಾಗಿ, ಪವಿತ್ರಮಯ ವಾತಾವರಣವನ್ನು ರೂಪಿಸಿಕೊಂಡರೆ, ಮಧುರ ಬಾಂಧವ್ಯ ಬೆಳೆದು ಬೆಳಗಿದರೆ ಮಾನವ ಕುಲಕ್ಕೆ ಶಾಂತಿ. ಈ ಶಾಂತಿಯು ಪ್ರತಿಯೊಬ್ಬ

ರಲ್ಲಿ ಒಡಮೂಡಬೇಕಾದರೆ ಹೃದಯ ವೈಶಾಲ್ಯವನ್ನು ಮೊದಲು ಅಳವಡಿಸಿಕೊಳ್ಳಬೇಕಾಗುತ್ತದೆ. ಪರರ ನೋವು ತಮ್ಮ ನೋವೆಂದು ಬಗೆಯಬೇಕಾಗುತ್ತದೆ. ಅಂತರಂಗ ಬಹಿರಂಗ ಶುದ್ಧಿಯನ್ನು ಮಾಡಿಕೊಳ್ಳಬೇಕಾಗುತ್ತದೆ. ಮಾನವೀಯತೆಯ ಮೌಲ್ಯಗಳನ್ನು ಅರಿತುಕೊಂಡು ನಡೆಯಬೇಕಾಗುತ್ತದೆ. ಅಂದಾಗ ಸಹೋದರತ್ವದ ಕಲ್ಪನೆ ಮನದಲ್ಲಿ ಮೂಡಿ ಭಾವೈಕ್ಯಕ್ಕೆ ದಾರಿಯಾಗುತ್ತದೆ. ಧರ್ಮಗಳ ದಾರಿ ಬೇರೆ ಬೇರೆಯಾಗಿರಬಹುದು. ನೀತಿಯ ನೆಲಗಟ್ಟು ಮಾತ್ರ ಎಲ್ಲ ಧರ್ಮಗಳಿಗೂ ಭದ್ರಬುನಾದಿಯಾಗಿರಬೇಕಾಗುತ್ತದೆ. ನೀತಿಯಿಲ್ಲದೆ ಮಾನವೀಯತೆಯು ಬರಲಾರದು. ಭಾವಶುದ್ಧಿಯಾಗದು. ಜಾತೀಯತೆಗಳ ಹೋರಾಟ ನಡೆಸಿದರೆ, ವ್ಯಕ್ತಿಗತ ಅಂತಃಸತ್ವವನ್ನು ಕಳೆದುಕೊಂಡರೆ, ವಿಶ್ವಶಾಂತಿಗೆ ಇವೆಲ್ಲವುಗಳೂ ಆತಂಕಗಳಾಗಿ ಅಡ್ಡಗೋಡೆಗಳಂತೆ ನಿಲ್ಲುತ್ತವೆ. ಅವರವರ ಧರ್ಮದಂತೆ ನಡೆದು ಎಲ್ಲರೊಡನೆ ಸಹಕರಿಸಿಕೊಂಡು ಬಾಳಿದರೆ ಬಾಳು ಬಂಗಾರವಾಗುವದಲ್ಲದೆ ವಿಶ್ವಶಾಂತಿಗೆ ದಾರಿದೀಪವಾಗುವದು. ಅಶಾಂತಿಯೆಂಬುದು ನಿರ್ನಾಮವಾಗಿ, ಕತ್ತಲೆಯು ದೂರಸರಿದು ಬೆಳಕಿನ ರಾಜ್ಯದಲ್ಲಿ ಸುಖಪಡೆಯಬಹುದು. ಮದಮತ್ಸರಗಳನ್ನು ಬೆಳೆಯಗೊಟ್ಟರೆ, ಕರಗಸದಂತೆ ಹೋಗುತ್ತ ಬರುತ್ತ ಕೊಯ್ಯುವದನ್ನೇ ನೋಡಬೇಕಾಗುತ್ತದೆ. ಸುಖವು ಕನಸಿನ ಗಂಟಾಗುತ್ತದೆ. ಮನೋದೌರ್ಬಲ್ಯವುಂಟಾಗಿ ಕಂಟಕ ಜೀವನದಲ್ಲಿ ಸಾಗಬೇಕಾಗುತ್ತದೆ. ಸೌಹಾರ್ದತೆಯು ಕೃತ್ರಿಮವಾಗದೆ ವಾಸ್ತವಿಕತೆಯಿಂದೊಡಗೂಡಿದರೆ ಮಾತ್ರ ಅದರ ಸ್ವಾರಸ್ಯ ಪಕ್ವಹಣ್ಣಿನಂತೆ ರುಚಿಕರವಾಗುವದು. ಮಾನವ ಕುಲದ ಅಪಾರ ಪ್ರೇಮವೇ ವಿಶ್ವಶಾಂತಿಗೆ ನಾಂದಿ. ಮಸಕು ಮಸಕಾಗಿರುವ ವಿಭಿನ್ನ ವಿಚಾರಗಳ ಏಕತೆಯೇ ಸಹೋದರತ್ವದ ಬೆಳವಣಿಗೆಗೆ ಕಾರಣವಾಗುವದು. ಆಗ "ಮನುಷ್ಯಧರ್ಮ ಏಕ ಹೈ" ಎಂಬುವ ಸುಪ್ರಸಿದ್ಧ ಹಿಂದಿ ಮಹಾಕವಿ ಸುಮಿತ್ರಾನಂದ ಪಂಥರ ಈ ಕವಿತೆಯು ನೆನಹಿನಂಗಳದಲ್ಲಿ ಬಂದು ಕೂಡ್ರುತ್ತದೆ. "ಲೋಕವೇ ನನ್ನ ಮನೆ. ಮಾನವ ಕುಲವೇ ನನ್ನ ಕುಟುಂಬ" ಎನ್ನುವ ಭಾವನೆ ಪ್ರತಿಯೊಬ್ಬರಲ್ಲಿ ಬಂದು ಕೃತಿಯಲ್ಲಿಳಿದರೆ ಸಹೋದರತ್ವದ ಭಾವನೆ ಬಂಧುರವಾಗಿ ರಾಷ್ಟ್ರೋತ್ಥಾನಕ್ಕೆ ಸಹಕಾರಿಯಾಗುತ್ತದೆ. ಬುದ್ಧಿ ಬೆಳೆದಂತೆ ಹೃದಯ ಪುಷ್ಪವು ಅರಳಬೇಕಾಗಿದೆ. ಹೃದಯ ಹೃದಯಗಳ ಸಂಗಮವಾಗಿ ಸಹಜತೆಯಲ್ಲಿ ಪರಿವರ್ತನೆಗೊಂಡು ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಮಹಾತ್ಮಾ ಬಸವಣ್ಣನವರ ಈ ನುಡಿಯು ನಡೆಯಲ್ಲಿ ಬಂದರೆ ಸರ್ವ ಮಾನವರು ಸಹೋದರರಾಗಿರಲು ಸಾಧ್ಯ.

## ಭವಿತ್ಯವಂ ಭವತ್ಯೇವ

ವಿಧಿಲಿಖಿತ ತಪ್ಪಿಸುವದು ಅದಾರಿಗೂ ಆಗದು. ಆಗುವದು ಆಗದಿರದು. ಬಾರದು ಬಪ್ಪದು, ಬಪ್ಪುದು ತಪ್ಪದು, ಇದು ವಿಧಿಯ ನಿಯಮ "ಕೂಡಲಸಂಗಮದೇವ ಬರೆದ ಬರಹ ತಪ್ಪಿಸುವರೆ ಹರಿಹರ ಬ್ರಹ್ಮಾದಿಗಳಳವಲ್ಲ" ಅಡ್ಡಿ ಆತಂಕಗಳು ಬೆಟ್ಟದಷ್ಟು

ಬಂದೊದಗಿದರೂ, ಭಾವಶುದ್ಧಿಯಿಲ್ಲದೆ ಮಾನವರು ಮತ್ತೊಬ್ಬರ ಶ್ರೇಯಸ್ಸಿಗೆ ವಿಘ್ನಗಳನ್ನು ತಂದೊಡ್ಡಿ ಮಣ್ಣೆರಚಿದರೂ ಸಹ ಈಶ್ವರಾನುಗ್ರಹವಿದ್ದರೆ ಅವೆಲ್ಲವೂ ನಿವಾರಣೆಯಾಗಿ ನಿರ್ನಾಮವಾಗಿ, ಕಾರ್ಯಾಚರಣೆಯಲ್ಲಿ ಬಂದು ಸೂರ್ಯನ ಕಾಂತಿಯಂತೆ ಪರಿಶೋಭಿಸುವದು, ಯಶೋದುಂದುಭಿ ಮೊಳಗುವದು.

"ಆಯುಷ್ಯ ತೀರಿದಲ್ಲದೆ ಮರಣವಿಲ್ಲ, ಭಾಷೆ ತೀರಿದಲ್ಲದೆ ದಾರಿದ್ರ್ಯವಿಲ್ಲ...."

"ಅಂಜಿದರಾಗದು, ಅಳುಕಿದರಾಗದು! ವಜ್ರಪಂಜರದೊಳಗಿದ್ದರಾಗದು! ತಪ್ಪದೆಲವೋ ಲಲಾಟಲಿಖಿತ!" ಎಂದು ಬಸವಣ್ಣನವರು "ಭವಿತವ್ಯಂ ಭವತ್ಯೇವ" ಎಂಬ ದೇವರಾಣೆಯ ಸಾರವನ್ನೇ ಸಂಗ್ರಹಿಸಿದ್ದಾರೆ. ಆದರೂ ದೇವಾನುಗ್ರಹವಿದ್ದರೆ ವಿಷ ಅಮೃತವಾಗುತ್ತದೆ. ಕೊರಡು ಕೊನರುತ್ತದೆ. ಬರಡು ಹಯನಾಗುತ್ತದೆ. ಇಚ್ಛೆಯಾದದ್ದು ಕೈಗೂಡುತ್ತದೆ. ವಿಘ್ನಗಳು ದೂರ ಸರಿಯುತ್ತವೆ. ಬೇಡವೆಂದರೂ ಶ್ರೇಯಸ್ಸು ಎದುರಿಗೆ ಬಂದು ನಿಲ್ಲುತ್ತದೆ. ವ್ಯಕ್ತಿತ್ವದ ಅಂತಸ್ಸತ್ವಕ್ಕೆ ಕೈದೀವಿಗೆಯಾಗುತ್ತದೆ.

ಜಯಶ್ರೀ ಮಾಲೆ ಬರಬಾರದೆಂಬುದೇ ವಿಧಿಲಿಖಿತವಿದ್ದರೆ ಬೆವರು ಸುರಿಸಿ ದುಡಿದರೂ ಅಹೋರಾತ್ರಿ ಪ್ರಯತ್ನಪಟ್ಟರೂ ಅನೇಕ ಸಲಕರಣೆಗಳನ್ನು ಒದಗಿಸಿಕೊಂಡರೂ ಸಾಧ್ಯವಾಗದು. ದುಡಿತದಿಂದ ಸುಖ ಸಿಗುತ್ತದೆಂಬುವ ಹಿರಿಯರ ಮಾತು ಒಪ್ಪತಕ್ಕದ್ದಾಗಿದ್ದರೂ ಆ ದುಡಿತದಲ್ಲಿ ಮೃಡನನೊಲಿಸುವ ಭಾವನೆ ಇರದಿದ್ದರೆ ಅದೆಲ್ಲವೂ ನಿರರ್ಥಕ. ದುಡಿದಂತೆ ದೈವಾನುಗ್ರಹವಿದ್ದರೆ ಸಾರ್ಥಕ. ದೇವರ ಕೃಪೆ ದೊರೆಯುವವರೆಗೂ ದುಡಿಯಬೇಕು. ಮಣ್ಣು ಮಾಡುವವನು, ಮಸಿಯು ಮಾಡುವವನು, ದಯೆ ದೋರಿದೊಡನೆಯೇ ತನ್ನಂತೆ ಮಾಡಿಕೊಳ್ಳುವನು. ಆದಕ್ಕಾಗಿ ಮನಸ್ಸಿನಲ್ಲಿ ಕಳವಳ ಪಡದೆ ಮುಂದೆ ಸಾಗಿ ಲೋಕದಲ್ಲಿ ವ್ಯವಹರಿಸುತ್ತಿರಬೇಕು.

ಒಂದೆಡೆ ಸರ್ಪಭೂಷಣ ಶಿವಯೋಗಿಗಳು– "ನರರು ಪ್ರಾರಬ್ಧವನೆ ಗೆಲ್ಲಬಲ್ಲರೆ? ದೈವಪುರುಷರಿಗಳವಿಲ್ಲದೊಳಗಾದರೆನಲು" ಪ್ರಾರಬ್ಧ ಕರ್ಮವನ್ನು ಅನುಭವಿಸುವದು ಮಹಾವ್ಯಕ್ತಿಗಳಿಗೆ ಬಿಟ್ಟಿಲ್ಲವೆಂದಾಗ ಇನ್ನುಳಿದ ಮನುಷ್ಯರ ಪಾಡೇನು?" ಎಂದು ಮುಂತಾಗಿ ತಮ್ಮ ಪದ್ಯದಲ್ಲಿ ತಿಳಿಸಿ, ಪ್ರಾರಬ್ಧ ಕರ್ಮವನ್ನು ಅನುಭವಿಸೇತೀರಬೇಕೆಂದು ವಿವರಿಸಿದ್ದಾರೆ. ಪ್ರಾರಬ್ಧ ಕರ್ಮವು ಮನುಷ್ಯನನ್ನು ಬಿಡದು. ಅದೇ ತೆರನಾಗಿ ಹೋಗಬೇಕಾಗುತ್ತದ ಆ ರೀತಿ ಮಾಡಿಸುತ್ತದೆ.

ಆದರೂ ಸಹ "ಭವಿತ್ಯೇವ" ಎಂಬುವ ನುಡಿಯನ್ನೇ ಮನದಲ್ಲಿ ತಂದು ಸುಮ್ಮನೆ ಕಾಲಕಳೆಯದೆ ನಮ್ಮ ನಿಜಗುಣವನ್ನು ತಿಳಿಯಬೇಕು, ಅವಗುಣಗಳನ್ನು ಅಳಿಯಬೇಕು. ಭಾವ ಶುದ್ಧಿ, ಸತತೋದ್ಯೋಗ, ಪರರ ಹಿತಚಿಂತನೆ ಇವುಗಳು ಒಳ್ಳೇ ಭವಿತವ್ಯಕ್ಕೆ ನಾಂದಿ. ಒಳ್ಳೆಯ ಭವಿತವ್ಯವನ್ನು ಪಡೆಯಲು ಸತ್ಯಶೀಲಾಚರಣೆಯೇ ಮೈಲುಗಲ್ಲು.

## "ಕಾಯಕ" ಏವ ಕೈಲಾಸಃ

ಕಾಯಕವು ಮಾನವನಿಗೆ ದಾರಿದೀಪ. ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು, ಕವಿದ ಕತ್ತಲೆಯನ್ನು ಕಳೆದುಕೊಳ್ಳಲು ಹಾಗೂ ಭಾವವನ್ನು ಎತ್ತರಿಸಲು ಕಾಯಕವು ಅದೊಂದು ದೊಡ್ಡ ಸಾಧನ. ಸತ್ಯ ಶುದ್ಧ ಕಾಯಕದಿಂದ ಸಾಮಾಜಿಕ ಸುಧಾರಣೆಯಾಗುವದಲ್ಲದೆ, ದೇವಭಾವವು ಬರುತ್ತದೆ. ಬೆಳಕಿಗೆಡೆಮಾಡುತ್ತದೆ. ಕಾಯಕದಿಂದ ಕಷ್ಟ ಕಾರ್ಪಣ್ಯಗಳು ದೂರ ಸರಿದು ನವಚೈತನ್ಯ ಉಂಟಾಗುತ್ತದ. ಕಾಯಕದ ಕ್ರಿಯಾಶಕ್ತಿಯಿಂದ ಬೇಡಿ ದಿಷ್ಟಾರ್ಥವನ್ನೂ ಸಹ ಪಡೆಯಬಹುದು. ಕಾಯಕದ ಬಲದಿಂದ ಶರಣರು ಅಸಾಧಾರಣ ಶಕ್ತಿಯನ್ನು ಸಂಗಳಿಸಿದ್ದಾರೆ. ಒಣಗಿದ ಕಟ್ಟಿಗೆಯಲ್ಲಿಯೂ ಶಕ್ತಿಯನ್ನು ತೋರಿಸಿ ಕಾಯಕದ ಮಹಿಮೆಯನ್ನು ಅರುಹಿದ್ದಾರೆ. ಭೌತಿಕ ಪ್ರಗತಿಗಿಂತಲೂ ಆತ್ಮಿಕ ಪ್ರಗತಿ ಯನ್ನು ಕಾಣುವದೇ ಕಾಯಕದ ಮುಖ್ಯಗುರಿ. ಪ್ರವೃತ್ತಿಯಿಂದ ನಿವೃತ್ತಿಯ ಕಡೆಗೆ ಸಾಗುವದೇ ಪರಮ ಗುರಿ. ಈ ಗುರಿಸಾಧನೆಗೆ ಕಾಯ ಕಷ್ಟ ಸಹಿಸಬೇಕು. ಬೆವರು ಸುರಿಸಬೇಕು. ತನುವ ದಂಡಿಸಬೇಕು. ದೇವನಲ್ಲಿ ಮೊರೆಯಿಡಬೇಕು. ಆಗ ಸಂತೃಪ್ತಿ, ಸಮಾಧಾನ. ಇಂತಹ ಕಾಯಕವನ್ನು ಮಾಡಲು ಜಾತಿಭೇದಗಳ ಸೆಣಸಾಟವಿಲ್ಲ. ಮೇಲು ಕೀಳೆಂಬ ಭಾವನೆ ಬೇಕಾಗಿಲ್ಲ. ಯಾರು ಸತ್ಯ ಶುದ್ಧ ಮನಸ್ಸಿನಿಂದ ದುಡಿಯುತ್ತಾರೋ ಅವರಿಗೆ ಫಲವು ಕಟ್ಟಿಟ್ಟ ಬುತ್ತಿ. ಶಿವಶರಣರ ನುಡಿಯಲ್ಲಿಯೇ ಕಾಯಕದ ಅರಿವನ್ನು ಅರಿತುಕೊಂಡರೆ ಮತ್ತಿಷ್ಟು ಸ್ಪಷ್ಟವಾಗುತ್ತದೆ.

"ಗುರುವಾದಡೂ ಕಾಯಕದಿಂದಲೇ ಜೀವನ್ಮುಕ್ತಿ, ಲಿಂಗವಾದಡೂ ಕಾಯಕದಿಂದಲೇ ಶಿಲೆಯ ಕುಲ ಹರಿವುದು. ಜಂಗಮವಾದಡೂ ಕಾಯಕದಿಂದಲೇ ವೇಷದ ಪಾಶವು ಹರಿವುದು ಇದು ಚನ್ನಬಸವಣ್ಣಪ್ರಿಯ ಚಂದೇಶ್ವರ ಲಿಂಗದ ಅರಿವು" ಎಂಬುದಾಗಿ ಕ್ರಿಯೆಯ ಮಹಾ ಶಕ್ತಿಯನ್ನು ನಿರೂಪಿಸಿದ್ದಾರೆ. ಕೇವಲ ಬುದ್ಧಿ ಬೆಳೆದರೆ ಜ್ಞಾನ ದೊರೆಯದು. ಜೊತೆಗೆ ಸತ್ಕ್ರಿಯಾ ಜ್ಞಾನ ಕೂಡಿದರೆ ಮಾತ್ರ ಸಿದ್ಧಿ. ಅಂತರಂಗಕ್ಕೆ ಜ್ಞಾನ, ಬಹಿರಂಗಕ್ಕೆ ಕ್ರಿಯೆ ಇವೆರಡೂ ಕೂಡಿದರೆ ಪರಿಪೂರ್ಣ ಮನುಷ್ಯನಾಗಲು ಸಾಧ್ಯ. ಹಕ್ಕಿಗೆ ರೆಕ್ಕೆಗಳೆರಡಿದ್ದಂತೆ. ಬಂಡಿಗ ಗಾಲಿಗಳೆರಡು ಬೇಕಾದಂತೆ. ರಾಷ್ಟ್ರ ಸಮೃದ್ಧಿಗೊಂಡು ಬಲಶಾಲಿಯಾಗಲು ಈ ರೀತಿಯ ಕಾಯಕದ ಕೊರತೆಯಾಗದಂತೆ ನೋಡಿಕೊಂಡರೆ ಸಾರ್ಥಕ. ಜಗತ್ತಿಗೆ ಇಂದು ಬೇಕಾಗಿರುವದು ಇಂತಹ ಕಾಯಕ. ಈ "ಕಾಯಕ" ಕಾರ್ಯಾಚರಣೆಯಲ್ಲಿ ಬಂದು ಸಫಲಗೊಂಡರೆ ಅದುವೇ ಕೈಲಾಸ.

## ಸಂಗಾತ್ ಸಂಜಾಯತೇ ಕಾಮಃ

ಸಂಗದಿಂದ ಅಗ್ನಿ ಹುಟ್ಟುವಂತೆ, ಬೀಜ ಮೊಳೆದೋರುವಂತೆ ಸಂಗದಿಂದ ಕಾಮವು ಹುಟ್ಟುವದು ಸಹಜ. ಸಂಗದಲ್ಲಿಯೂ ಎರಡು ವಿಧ. ಒಂದು ಸತ್ಸಂಗ, ಇನ್ನೊಂದು

ದುಸ್ಸಂಗ. ಕಾಮದಲ್ಲಿಯೂ ಎರಡು ವಿಧ. ಒಂದು ಸಕಾಮ. ಮತ್ತೊಂದು ನಿಷ್ಕಾಮ. ಒಂದು ಬಹಿರ್ಮುಖ. ಮತ್ತೊಂದು ಅಂತರ್ಮುಖ. ಒಂದರಿಂದ ಆತ್ಮವಿನಾಶ ಮತ್ತೊಂದ ರಿಂದ ಆತ್ಮವಿಕಾಸ. ಅಂಗವಿಕಾರಕ್ಕೆಡೆಯಾಗುವದು ಒಂದು; ಅಂಗಜಾರಿಯ ವಿಚಾರಕ್ಕೆಡೆ ಯಾಗುವದು ಬೇರೊಂದು. ಒಂದೆಡೆ ತಮಸ್ಸು, ಮತ್ತೊಂದೆಡೆ ಸಾತ್ವಿಕ. ಕಾಮವು ಸೋಮಧರನ ಪೂಜೆಗೆ ಅಣಿಯಾದರೆ ಅದು ಪವಿತ್ರವೆನಿಸುತ್ತದೆ. ಅದೇ ಕಾಮವೆ ಅಂಗ ದಿಚ್ಛೆಗೆ ಮನಸೋತರೆ ಪಾಪವೆನಿಸುತ್ತದೆ. ಕಾಮ ಒಂದೆಯಾದರೂ ಸಹ ಭಾವ ಬೇರೆ, ಕೃತಿ ಬೇರೆ. ಭಾವ ಗಟ್ಟಿಗೊಂಡರೆ ಸರಸ. ಭಾವ ಬಿಟ್ಟುಹೋದರೆ ವಿರಸ. "ಸಂಸರ್ಗಜಾ ದೋಷಗುಣಾ ಭವಂತಿ" ಇದು ಪ್ರಕೃತಿ ನಿಯಮ. ಈ ಜೀವನ ಸುಖದುಃಖಗಳ ತೂಗುಯ್ಯಾಲೆಯಿದ್ದಂತೆ. ಸಂಗದ ಅರ್ಥವನ್ನು ಇನ್ನಷ್ಟು ವಿಶದೀಕರಿಸಿದರೆ ಸ್ಪಷ್ಟ ವಾದೀತು. ವ್ಯಕ್ತಿಗತ ಅಂತರಂಗ ಅರಿಯಲು ಅವರವರ ಸಹವಾಸದಿಂದ ಕಂಡುಹಿಡಿಯ ಬಹುದು. ಸತ್ಸಂಗವು ಮಾನವನನ್ನು ಸದ್ಗತಿಯತ್ತ ಒಯ್ಯುವ ದಾರಿದೀಪ. ದುಸ್ಸಂಗವು ದುರ್ಗತಿಯತ್ತ ಧಾವಿಸುವ ಬಚ್ಚಲ ನೀರಿದ್ದಂತೆ. ಭಾವ ಪರಿಶುದ್ಧವಿಲ್ಲದವರ ಸಂಗವು ಅಧೋಗತಿಯನ್ನು ನೀಡಿ ಜೀವನವನ್ನು ನಶಿಸುವದಲ್ಲದೆ, ಉಜ್ವಲ ಭವಿಷ್ಯವನ್ನು ಕತ್ತರಿ ಸುತ್ತದೆ. ಜೀವನವನ್ನೂ ಹಾಳುಕೊಂಪೆಯನ್ನಾಗಿ ಮಾಡುತ್ತದೆ. ದುಃಖಸಾಗರದಲ್ಲಿ ಮುಳುಗಿಸುತ್ತದೆ. ಮಹದ್ಭಾವದ ಕುಸುಮಗಳು ಬಾಡಿ ಕಸವಾಗುತ್ತವೆ. ಜೀವನವೆಲ್ಲವೂ ರಸಹೀನವಾಗುತ್ತದೆ. ದುರ್ಜನರ ಸಂಗದಿಂದ ಉದ್ಭವಿಸಿದ ಕಾಮವು ಕ್ರೋಧಕ್ಕೆಡೆಮಾಡಿ ಕೊಡುತ್ತದೆ. ಜಾಗ್ರತ ಚೈತನ್ಯವನ್ನು ಕಳೆಗುಂದಿಸುತ್ತದೆ. ಅಂತೆಯೇ "ಸಂಗವೆರಡುಂಟು ಒಂದು ಬಿಟ್ಟು ಒಂದು ಹಿಡಿ" ಅನ್ನುವ ಈ ಮಾತಿನಲ್ಲಿ ಬಲು ಸ್ವಾರಸ್ಯ ತುಂಬಿದೆ. ಅಷ್ಟೇ ಅಲ್ಲ, ಸತ್ಸಹವಾಸದಿಂದ ವ್ಯಕ್ತಿಗೆ ಅದ್ಭುತ ಶಕ್ತಿಯು ದೊರೆತು ಜೀವನವೇ ಪಾವಿತ್ರ್ಯ ವುಳ್ಳದ್ದಾಗುತ್ತದೆ. ಪವಿತ್ರ ಭಾವನೆಯಿಂದ ಹುಟ್ಟಿದ ಕಾಮವು ಮನಬುದ್ಧಿಗೆ ಅಂತಃಸತ್ವ ವನ್ನೀಯುತ್ತದೆ. ಒಮ್ಮೆ ಕಾಮವು ನೇಮವನ್ನು ತಪ್ಪಿಸುತ್ತದೆ. ಮತ್ತೊಮ್ಮೆ ಪರಂಧಾಮ ದತ್ತ ಎಳೆದೊಯ್ಯುತ್ತದೆ. ನಿಷ್ಕಾಮವು ಬೆಳಕಿನ ದಾರಿಯನ್ನು ತೋರಿಸಿದರೆ ಸಕಾಮವು ಆಶೆಯನ್ನು ಬಲಪಡಿಸುತ್ತದೆ. ನಿಷ್ಕಾಮವು ಸೂಕ್ಷ್ಮವನ್ನರುಹಿದರೆ ಸಕಾಮವು ಸ್ಥೂಲಾ ಚರಣೆಯನ್ನು ತೋರಿಸುತ್ತದೆ. ಸದ್ಭಾವನೆಗಳ ಸಂಗಮವಾದಾಗ ಕೂಡಲಸಂಗನ ಸಾನ್ನಿಧ್ಯ ತಾನೇ ತಾನಾಗಿ ದೊರೆತು ಆತ್ಮಾನಂದಕ್ಕೆ ದಾರಿ ತೋರುತ್ತದೆ. "ಆರಳಿದು ಮೂರಾಗಿ ಮೂರಳಿದು ಎರಡಾಗಿ ಎರಡಳಿದು, ಒಂದಾಗಬೇಕಾದರೆ" ಅನುಭವಿಗಳ ಸಂಗಕ್ಕೆ ಹಾತೊ ರೆದು ಪರಿಪರಿಯಾಗಿ ದೇವನನ್ನು ಮೊರೆಯಿಡಬೇಕಾಗುತ್ತದೆ. ಅಂತಾದಾಗ ಮೊಸರು ಕಡೆದು ಬೆಣ್ಣೆಯನ್ನು ತೆಗೆದುಕೊಂಬಂತೆ ಸಾರ್ಥಕವಾಗುತ್ತದೆ.

### ಕಾಮಾತ್ ಕ್ರೋಧೋಽಭಿಜಾಯತೇ

ಕಾಮದಿಂದ ಹುಟ್ಟುವದು ಕೋಪ. ಕೋಪವೆಂಬುದು ತಾಪದ ಸೆರೆಮನೆ. ಸ್ವಾರ್ಥತೆಯು ಸರ್ಪ ಹೆಡೆಯೆತ್ತಿದಾಗ, ಕಾಮತೃಪ್ತಿಗೆ ಭಂಗವಾದಾಗ ಕೋಪಜ್ವಾಲೆಯು

ಭುಗಿಲ್ಲೆಂದು ಎದ್ದು ಸದ್ಗುಣ ಬೀಜಗಳನ್ನು ಸುಟ್ಟು ಭಸ್ಮಮಾಡಿ ಬಿಡುವದು. ಕೋಪದ ಯಾತನೆಯು ವ್ಯಕ್ತಿಯ ಅಂತಃಸತ್ವವನ್ನು ಹೀರಿಬಿಡುತ್ತದೆ. ಯೋಚನೆ ಯೋಜನೆ ಎಲ್ಲವೂ ನಿರ್ನಾಮವಾಗಿ ಪೋಟುಮರದಂತೆ ಜೀವನವಾಗುತ್ತದೆ. ತಾಪತ್ರಯಗಳು ಎದುರು ಬಂದು ಕಾಡುತ್ತವೆ. ದಿಕ್ಕುತೋಚದಂತಾಗಿ ಅಲ್ಲದ ಕಾರ್ಯವೆಸಗಲು ಹಿಂಜರಿಯದೆ ಮುನ್ನುಗ್ಗುತ್ತಾನೆ. ಕೋಪ ತುಂಬಿ ಬಂದ ಮಾನವನು ಕಣ್ಣಿದ್ದು ಕುರುಡನಾಗುತ್ತಾನೆ. ಶಕ್ತಿಯು ಕಳೆಗುಂದಿ ನಿಸ್ತೇಜನಾಗುತ್ತಾನೆ. ವ್ಯಕ್ತಿತ್ವಕ್ಕೆ ಭಂಗ ತಂದುಕೊಳ್ಳುತ್ತಾನೆ. ಒಮ್ಮೊಮ್ಮೆ ಈ ಕ್ರೋಧವು ಮಿತಿಮೀರಿದಾಗ ಹೃದಯ ವಿಕಾರವು ಸಹ ಸಂಭವಿಸುತ್ತದೆ. ಅಷ್ಟೇ ಅಲ್ಲ, ಮರಣಾಧೀನನಾಗುವ ಸಂಭವ ಬರಬಹುದು. ಕೋಪತಪ್ತನಾದಾಗ ದಿಕ್ಕು ಕಾಣದಂತವನಾಗಿ, ಹಿರಿಯರ ಮೃದು ಮಾತುಗಳನ್ನು ಧಿಕ್ಕರಿಸುತ್ತಾನೆ. ಬುದ್ಧಿವಂತನಾಗಿದ್ದರೂ ಸಿಟ್ಟಿನ ಭರದಲ್ಲಿ ಬುದ್ಧಿಯನ್ನು ಕಳೆದುಕೊಂಡು ಹೃದಯಶೂನ್ಯನಾಗುತ್ತಾನೆ. ಮೂರ್ಖತನದಲ್ಲಿ ಮೊಳಕೆಯೊಡೆದ ಸಿಟ್ಟು ಪಲ್ಲವಿಸಿ, ಜೀವನ ವೃಕ್ಷವನ್ನೇ ಕಿತ್ತು ಹಾಕಲು ಹಿಂದುಮುಂದೆ ನೋಡುವದಿಲ್ಲ. ಕಾಮಕೋಪವೆರಡು ಕೂಡಿದರೆ ಮಂಗನಿಗೆ ಸೆರೆಕುಡಿಸಿದಂತಾಗುವದು. ಅತ್ತಿತ್ತ ಸುತ್ತಾಡಿ ಮೃತ್ಯುವಿನ ಬಾಯಿಗೆ ತುತ್ತಾಗುವಂತೆ ಅವನ ಗತಿಯಾಗುತ್ತದೆ. ಕ್ರೋಧದಲ್ಲಿ ಸತ್ಯವು ನಶಿಸಿ ಮಿಥ್ಯೆಯ ಪ್ರಭಾವವೇ ಅಲ್ಲಿ ಹೆಚ್ಚು ಒಡೆದು ಕಾಣುತ್ತದೆ. ಚಿತ್ತಶುದ್ಧಿಯು ದೂರಾಗುತ್ತದೆ. ಶುದ್ಧ ಸಾತ್ವಿಕ ಜೀವನಕ್ಕೆ ಮಣ್ಣು ರಚಿದಂತಾಗುತ್ತದೆ! ಕ್ರೋಧದ ದಾವಾನಲದಲ್ಲಿ ಬೆಂದವರು ಹಿರಿಯರ ವ್ಯಕ್ತಿತ್ವವನ್ನು ಭಂಗಗೊಳಿಸಲು ವಿಚಾರ ಮಾಡದಿರಲಾರರು. ಸ್ವಾರ್ಥತೆಯು ಕಾಳ್ಗಿಚ್ಚು ಮನುಷ್ಯನನ್ನು ಮಣ್ಣು ಮಾಡುತ್ತದಲ್ಲದೆ, ಸಮಾಜವನ್ನು ಹಾಳುಮಾಡುತ್ತದೆ. ನೈತಿಕಜೀವನದ ಪರಿಶುದ್ಧತೆಗೆ ಅಡ್ಡಗೋಡೆಯಾಗುತ್ತದೆ. ಪಾಪಕೂಪದಲ್ಲಿ ಉರುಳಾಡುವದಾದರೂ ಕೋಪವೇ ಮೂಲ ಕಾರಣವಾಗುತ್ತದೆ. ಈ ಕೋಪದಿಂದ ಸಂಮೋಹವುಂಟಾಗಿ ಜೀವನವೆಲ್ಲವೂ ಕಸತುಂಬಿದ ಭೂಮಿಯಾಗುತ್ತದೆ.

'ಕೋಪವೆಂಬುದು ಪಾಪದ ನೆಲಗಟ್ಟು ನೋಡಯ್ಯ
ಕೋಪವು ಪಂಕ ತುಂಬಿದ ಕೂಪ ನೋಡಯ್ಯ
ಕೋಪವೆಂಬುದು ಮುಕ್ತಿ ಕಂಠಾಭರಣಕೆ ಕಂಟಕ ಕಾಣಯ್ಯ
ಭ್ರೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ!
ಬೆಳೆಯುತಿರುವ ಕೋಪಾಗ್ನಿಯಾರಿಸಿ
ಶಾಂತಿಸುಧೆ ಸುರಿಸಿ, ಕೃಪೆ ತೋರಾ'

ಜ್ಞಾನದ ಬಲದಿಂದ ಕೋಪಾಗ್ನಿಯನ್ನು ಸಹಜವಾಗಿ ಆರಿಸಬಹುದು. ಕೋಪಕ್ಕೆ ಜ್ಞಾನೋದಯವೇ ಅಸ್ತ್ರ. ತಾಪತ್ರಯಗಳನ್ನು ದೂರಮಾಡಲು, ಭಕ್ತಿರಸವ ದಣಿಯೆ ಮೇಯಿಸಿ, ಸುಬುದ್ಧಿಯೆಂಬ ಉದಕವನೆರೆದು ನೋಡಿ ಸಲಹೆಂದು ಕೂಡಲಸಂಗನನ್ನು ಬೇಡಿಕೊಳ್ಳುವದೇ ನಮಗಿಂದು ಬೇಕಾಗಿರುವ ಮಂತ್ರ.

**ಕ್ರೋಧಾದ್ಭವತಿ ಸಂಮೋಹಃ**

ಮೋಹವು ಮಾನವರನ್ನು ಕಟ್ಟಿಹಾಕುವ ಪಾಶ. ಕರುಳು ಕೊರೆಯುವ ಹುಳ. ಮರಳುಗೊಳಿಸುವ ಊಸರುಳ್ಳಿ. ಅಷ್ಟೇ ಅಲ್ಲ, ಅಂತಃಸತ್ವವನ್ನು ಹೀರುವ ಜಿಗಳೆ. ಮೋಹವಶರಾದವರು ಕಣ್ಣಿದ್ದು ಕುರುಡರಾಗುತ್ತಾರೆ. ಮತಿಯಿದ್ದು ಗತಿಹೀನರಾಗುತ್ತಾರೆ. ಕ್ರೋಧದಿಂದ ಉದ್ಭವಿಸಿದ ದುರ್ಮೋಹವು ಆತ್ಮಪತನಕ್ಕೆ ಹೆದ್ದಾರಿಯಾಗುತ್ತದೆ. ನೂತನ ಚೈತನ್ಯಕ್ಕೆ ಕಂಟಕಕಾರಿಯಾಗುತ್ತದೆ. ತಮಸ್ಸಿನಿಂದ ಮೋಹ ಹುಟ್ಟುತ್ತದೆ. ಆತ್ಮಶಕ್ತಿಗೆ ಪೆಟ್ಟು ತಗಲುತ್ತದೆ. ಜೀವನ ವೃಕ್ಷವು ಚಿಗುರೊಡೆದು ಹೂ ಬಿಡಲು ದುರ್ಮೋಹ ಮದ ಮತ್ಸರಗಳೆಂಬ ಕಸಕಡ್ಡಿಗಳನ್ನು ಕಿತ್ತಬೇಕಾಗುತ್ತದೆ. ಮೋಹವೃಕ್ಷವನ್ನೇ ಬೆಳೆಸಹೊರಟರೆ ಫಲಪುಷ್ಪಗಳೆಲ್ಲ ಕೊಳೆತುನಾರುತ್ತವೆ. ಭವಿಷ್ಯವೆಲ್ಲವೂ ಹಾಳಾಗಿ ಹಾಳು ದೇಗುಲದಂತೆ ಜೀವನವಾಗುತ್ತದೆ. ಮೋಹವ್ಯಾಧಿಯು ಮಾನವನನ್ನು ನಿಶ್ಚೇಷ್ಟಿತನನ್ನಾಗಿ ಮಾಡುತ್ತದಲ್ಲದೆ ತಾಪತ್ರಯಗಳ ದಾಹವು ದಿನದಿನವೂ ಹೆಚ್ಚುತ್ತ ಹೋಗುತ್ತದೆ. ಭಾವಶುದ್ಧಿ ನೀರ್ತೆರೆಯುಂತಾಗುತ್ತದೆ. ಆತ್ಮಸಿದ್ಧಿ ಗಗನಕುಸುಮದಂತಾಗುತ್ತದೆ. ಜೀವನವೆಲ್ಲವೂ ಬೇಸರವಾಗಿ ತನ್ನ ತಾನರಿಯುವ ಶಕ್ತಿಯನ್ನು ಕಳೆದುಕೊಳ್ಳುತ್ತಾನೆ. ನಿಸ್ತೇಜನಾಗುತ್ತಾನೆ. ಆತ್ಮಬಲ ಕುಗ್ಗುತ್ತದೆ. ಧೀವಿವೇಚನಗಳು ಮಣ್ಣುಪಾಲಾಗುತ್ತವೆ. ಬಂಧುಬಾಂಧವರೆಲ್ಲರೂ ದೂರಾಗುತ್ತಾರೆ. ಮಧುರ ಬಾಂಧವ್ಯ ಕನಸಾಗುತ್ತದೆ. ತಿಳಿವಳಿಕೆಯ ಬೆಳಕು ಕಾಣದಂತಾಗುತ್ತದೆ. ಭಾವಪುಷ್ಪ ಒಣಗುತ್ತದೆ. ಹೀಗಾಗಿ ಸುತ್ತೆಲ್ಲ ಮೋಹದ ಸುಂಟರಗಾಳಿ ಬಡಿದು ಮನುಷ್ಯನು ಹಣ್ಣಾಗುತ್ತಾನೆ, ಸಣ್ಣಾಗುತ್ತಾನೆ. ಇದೇ ಭಾವವನ್ನು ಕಬೀರದಾಸರು ತಮ್ಮದೊಂದು ವಚನದಲ್ಲಿ ಸುಂದರವಾಗಿ ಚಿತ್ರಿಸಿದ್ದಾರೆ.

ಸಲಿಲ ಮೋಹಕೀಧಾರಮೇ ಬಹಿಗಯೇ ಗಹಿರಗಂಭೀರ್|
ಸುಚ್ಛಮ ಮಛರೀಸುರತೀಹೈ ಚಢತೀ ಉಲ್‌ಟೇ ನೀರ್||

'ವಿಚಾರವಂತರಾದ ಮಹಾವ್ಯಕ್ತಿಗಳೂ ಸಹ ಒಮ್ಮೊಮ್ಮೆ ಮೋಹವೆಂಬ ನದಿಯಲ್ಲಿ ಕೊಚ್ಚಿ ಹೋಗುತ್ತಾರೆ. ಅದಕ್ಕಾಗಿ ನೀರಿನಲ್ಲಿದ್ದ ಮೀನು, ನೀರನ್ನು ಭೇದಿಸಿ ಇರುವಂತೆ, ಬ್ರಹ್ಮನಲ್ಲಿ ತಲ್ಲೀನರಾಗಿರಬೇಕೆ'ಂದು ಸುಲಲಿತ ಉಪಮೆಯೊಡನೆ ಅವರು ನಿರೂಪಿಸಿದ್ದಾರೆ. ಮಾನವನು ಮಾನವನಾಗಿ ಉಳಿಯಬೇಕಾದರೆ ಮೋಹಾಂಧಾಕರದಿಂದ ದೂರ ಸರಿಯಬೇಕಾಗುತ್ತದೆ. ಮೋಹದಲ್ಲಿದ್ದಂತಿದ್ದರೂ ಕುಂಬಾರ ಹುಳದಂತೆ ಕೆಸರನ್ನು ಅಂಟಿಸಿಕೊಳ್ಳದಂತಿದ್ದರೆ ಮಾತ್ರ ಶಿವಸುಖದ ಮೆರಗು. ಇದಕ್ಕೆ ಧೈರ್ಯ ಸಂಯಮ ಜೀವನ, ಪ್ರಾರ್ಥನೆಗಳು ಮುಪ್ಪುರಿಗೊಂಡಿರಬೇಕು. ಅಂದರೆ ಸಾಧ್ಯ. ಬೆಳೆಯುತ್ತಿರುವ ಮೋಹಕ್ಕೆ ಜ್ಞಾನವೇ ಮುದ್ಗರ, ಶಿವಧ್ಯಾನವೇ ಆಸರ.

ಮೋಹದಳ್ಳುರಿಯುಲಿ ಬಿದ್ದು
ಪಂಚೇಂದ್ರಿಯಂಗಳು ಘಾಸಿಯಾಗುತ್ತಿಹವು ನೋಡಾ,

ಮೋಹಭೂತವು ಬೆನ್ನುಹತ್ತಿ
ಕಾಡಾರಣ್ಯದೊಳು ಕಳುಹುತ್ತಿಹುದು ನೋಡಾ,
ಮೋಹಶಾರ್ದೂಲವು
ಬಾಯ್ದೆರೆದು ನಿಂತಿಹುದು ನೋಡಾ,
ಇದು ಕಾರಣ, ಬಂದ ಕ್ಲೇಶಗಳನಳಿಸಿ
ಎನ್ನನುಳುಹಿಕೊಳ್ಳಾ ಭ್ರೂಲತಾಪುರೀಶ
ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ

**ಸಂಮೋಹಾತ್ ಸ್ಮೃತಿವಿಭ್ರಮಃ**

ಮೋಹ ಬೆಳೆದು ಮರವಾದಾಗ, ಸ್ಮೃತಿವಿಭ್ರಮವಾಗಿ ಕಾಲಿಲ್ಲದ ಕುಂಟನಂತೆ ಮಾನವನ ಗತಿಯಾಗುತ್ತದೆ. ಶಕ್ತಿ ಹೀನನಾಗಿ ದಿಕ್ಕುಗಾಣದವನಂತಾಗುತ್ತಾನೆ. ಮುಕ್ಕಣ್ಣ ನೊಲುಮೆ ತೊಲಗಿ, ಹುಚ್ಚನಂತೆ ತಿರುಗುತ್ತಾನೆ. ತನ್ನ ಕರ್ತವ್ಯದ ಸ್ಮರಣೆ ಮರೆತು ವಿಷಯಾಸಕ್ತನಾಗಿ ಸ್ವೇಚ್ಛಾಚಾರಿಯಾಗಿ ವರ್ತಿಸುತ್ತಾನೆ. ಗುರುಹಿರಿಯರ ಹಿತೋಕ್ತಿ ವಿಷದಂತಾಗುತ್ತದೆ. ವಿಷಮ ಸಂಸಾರವು ಸುಖಮಯವಾಗಿ ಪರಿಣಮಿಸುತ್ತದೆ. ಸದ್ಭಾವನೆಗಳಿಂದ ದೂರಾಗುತ್ತಾನೆ. ದುಷ್ಟರ ಸಹವಾಸ ಹಿತವಾಗುತ್ತದೆ. ತಲೆತಿರುಕನಂತೆ ತಿರುತಿರುಗಿ ಜೀವನವನ್ನು ವಿನಾಶದತ್ತ ಎಳೆದೊಯ್ಯುತ್ತಾನೆ. ಸ್ಮೃತಿವಿಭ್ರಮವಾದಾಗ ತಾನಾರೆಂಬುದರಿಯದೆ, ತನ್ನ ಮುಂದಿನ ಹೆಜ್ಜೆಯನ್ನು ನೋಡದೆ ಭ್ರಮಾತ್ಮಕ ಸಂಸಾರದಲ್ಲಿ ತನ್ನ ದೃಷ್ಟಿಯನ್ನಿರಿಸುವದೇ ಅವನ ಗುರಿಯಾಗುತ್ತದೆ. ಅರಿವಿನ ಹೆಬ್ಬಾಗಿಲಿನಲ್ಲಿ ಪ್ರವೇಶಿಸಲು ಹೆದರುತ್ತಾನೆ. ಜ್ಞಾನದಾಹವು ಕಾಳ್ಗಿಚ್ಚಾಗುತ್ತದೆ. ಆ ಕಾಳ್ಗಿಚ್ಚಿನಲ್ಲಿ ಬೇಯುತ್ತಿದ್ದರೂ ಆ ಮೋಹದ ಬೆಂಕಿಯಿಂದ ಹೊರಬರಲು ಪ್ರಯತ್ನಿಸಲಾರ. ಜೀವನ ಜಂಜಾಟ ಹೋರಾಟವೇ ಚನ್ನಾಟವಾದಂತಾಗುತ್ತದೆ. ಮದ್ಯ ಕುಡಿದ ಮಂಗವು ಅತ್ತಿತ್ತ ಚಲಿಸಿ ಚಲ್ಲಾಟವಾಡುವಂತೆ ಅವನ ಮತಿಯಾಗುತ್ತದೆ. ಅಜ್ಞಾನಾಂಧಕಾರವು ಅವನನ್ನು ಆವರಿಸಿ ಕಣ್ದೆರೆಯದಂತೆ ಮಾಡಿ ಬಿಡುತ್ತದೆ. ತೆರಣಿಯ ಹುಳು ತನ್ನ ನೂಲು ಸುತ್ತಿ ಸಾವತೆರನಂತೆ ಮನಸ್ಥಿತಿಯಾಗುತ್ತದೆ. ದುರಾಶೆ ಹೆಚ್ಚಾಗುತ್ತದೆ. ನಿರಾಶೆ ತಲೆದೋರುತ್ತದೆ. ಬುದ್ಧಿಭ್ರಾಂತಿಗೊಳಗಾಗಿ ತನ್ನ ಜೀವನ ಪುಷ್ಪವನ್ನು ಬಾಡಿಸಿಕೊಂಡು ಕಡು ಕಷ್ಟಕ್ಕೀಡಾಗುತ್ತಾನೆ. ವಿಭ್ರಮ ವಿಕಾಸಗೊಂಡು ವಿಯೋಗದಲ್ಲಿ ತೊಳಲಬೇಕಾಗುತ್ತದೆ. ಅಹಂಕಾರ, ಮಮಕಾರಗಳು ಬೇರ್ಬಿಟ್ಟು, ವ್ಯಾಮೋಹ ಬಲಿತಾಗ, ವಿಜಯಶಾಲಿಯೆಂಬುದು ಕನಸಾಗುತ್ತದೆ. ಮೂಢ ಮನಸ್ಸು ಗೂಢ ವಿಷಯುಗಳನ್ನರಿಯದೆ ಮರವೆಯ ಗಾಢನಿದ್ರೆಯಲ್ಲಿ ಕಾಲಕಳೆಯಬೇಕೆಂದು ಹವಣಿಸಿ ವಿಷಯುಗಳ ಮಾಲೆ ಕಟ್ಟುತ್ತಿರುತ್ತದೆ. ಬಿರುಗಾಳಿಗೆ ಸಿಕ್ಕ ಹಡಗ ಬಿರುಗಾಳಿಯೊಡನೆ ಧಾವಿಸಿ ಹೋಗುವಂತೆ ಇಂದ್ರಿಯ ವಶನಾದವನ ಮನಸ್ಸು ವಿಷಯುಗಳ ಕಡೆ ಹೋಗುವದು ಸ್ವಾಭಾವಿಕ. ಅದಕ್ಕಾಗಿ ಯೋಗಿಗಳು,

ತ್ಯಾಗಿಗಳು, ಶಿವಶರಣ ಶರಣೆಯರು ಮಾಯಾ ಬಂಧನದಿಂದ ದೂರಿದ್ದು ಸೊಗಸಿನ ಬಾಳಿನತ್ತ ಸಾಗಲು ಪ್ರಯತ್ನಿಸಿ, ದೇವರಲ್ಲಿ ಮೊರೆಹೊಕ್ಕಿದ್ದಾರೆ. ವಿಷಭರಿತ ಸರ್ಪಗಳಂತೆ ಘೂತ್ಕರಿಸುತ್ತಿರುವ ವಿಷಯೇಂದ್ರಿಗಳನ್ನು ದಮನ ಮಾಡಿದ್ದಾರೆ. ಆತ್ಮಶಾಂತಿ ಪಡೆದಿದ್ದಾರೆ. ಮೋಹದಿಂದ ಅರಿವಿನ ಮರವೆಯಾಗಿ ಮರವೆಯಿಂದ ಬುದ್ಧಿ ವಿಭ್ರಮವಾಗಿ ಕೊನೆಗೆ ಬುದ್ಧಿನಾಶವಾಗುತ್ತದೆ. ಸ್ಮೃತಿವಿಭ್ರಮವು ದೂರವಾಗಲು ಹೃದಯ ಶುದ್ಧಿಯೇ ಮೂಲಾಧಾರ. ಇದುವೇ ಆತ್ಮೋದ್ಧಾರ.

ಮೋಹದಿಂದ ಮೇಲೆ ಆವರಿಸಿ,
ಸ್ಮೃತಿವಿಭ್ರಮವುಂಟಾಗುವದಲ್ಲವೆ
ಅರೆ ಹುಚ್ಚರಂತೆ ಅವರ ಗತಿಯಾಗುವದಯ್ಯ
ತಾನಾರೆಂಬುದು ಮರೆತು
ವಿಷಮ ಸಂಸಾರದಲ್ಲಿ ಬೆರೆತು
ದೀಪದ ಹುಳುಗಳಂತೆ ಸಾಯುತ್ತಿಹರು ನೋಡಯ್ಯ
ಭ್ರೂಲತಾಪುರೀಶಕರ್ತೃ, ಜಗದ್ಗುರು ಗುರುಸಿದ್ಧೇಶ್ವರಾ.

## ಸ್ಮೃತಿಭ್ರಂಶಾತ್ ಬುದ್ಧಿನಾಶಃ

ಹೃದಯಶುದ್ಧಿ ಆತ್ಮಶುದ್ಧಿಗೆ ಮೈಲುಗಲ್ಲು. ಶುದ್ಧವಾಗದ ಬುದ್ಧಿ ಕಲ್ಮಷ. ಹೃದಯ ಭೂಮಿಯಲ್ಲಿ ಬಿಟ್ಟಿರುವ ಕೊರಕಲುಗಳು. ವಿಷಯಾಸಕ್ತಿಯಿಂದ ಹುಟ್ಟಿದ ಕಾಮವು ಬೆಳೆದು ಮಹಾಮರವಾಗಿ, ಶಾಖೋಪಶಾಖೆಗಳು ಶಿಥಿಲಗೊಂಡು, ರಸಹೀನವಾಗಿ ನಿಸ್ಸತ್ವವಾಗಿಬಿಡುತ್ತದೆ. ಚಿತ್ತ ಪ್ರಸನ್ನತೆ ಕನಸಾಗುತ್ತದೆ. 'ಸ್ಮೃತಿವಿಭ್ರಮ' ವುಂಟಾಗಿ ಬುದ್ಧಿ ನಾಶವಾಗುತ್ತದೆ. ವಿವೇಕ ವಿವೇಚನಗಳು ದೂರಾಗಿ ಕಸತುಂಬಿದ ಹೊಲದಂತಾಗುತ್ತದೆ. ಅಲ್ಲದೆ ರಾಗದ್ವೇಷಗಳು ಹೆಚ್ಚಾಗುತ್ತವೆ. ಸ್ಮೃತಿವಿಭ್ರಮದಿಂದ ಗತಿಮತಿಯಿಲ್ಲದಂತೆ ತಿರುಗುತ್ತಾನೆ. ತಲೆಕೆಟ್ಟ ಹುಚ್ಚನಂತೆ ಅವನ ಸ್ಥಿತಿಯಾಗುತ್ತದೆ. ನೀರಿನಲ್ಲಿ ನಾವೆಯನ್ನು ಎಳೆದೊಯ್ಯುವ ಗಾಳಿಯಂತಾಗುತ್ತದೆ. ಬುದ್ಧಿಸ್ಥಿರತೆ ಉಳಿಯದೆ ಅತ್ತಿತ್ತ ಅಲೆದಾಡುವ ಝರಿಯಂತೆ ಚಿತ್ತವಾಗುತ್ತದೆ. ಕಂಡದ್ದೆಲ್ಲ ಬೇಕೆನಿಸುತ್ತದೆ. ಮಾಡಿದ್ದೆಲ್ಲ ತನ್ನದೆ ಒಳಿತೆಂದು ಬಗೆಯುತ್ತಾನೆ. ಒಪ್ಪಿರಲಿ ತಪ್ಪಿರಲಿ ಅದು ಅವನ ನಿರ್ಣಯವಾಗುತ್ತದೆ. ಹೀಗಾಗಿ ಅವನ ಬುದ್ಧಿಯು ಮದ್ಯಕುಡಿದ ಮಂಗನಂತಾಗುತ್ತದೆ. ಸ್ಮೃತಿಭ್ರಂಶವಾದವನಿಗೆ ಸುಬುದ್ಧಿ ಹುಟ್ಟುವದು ತುಂಬಾ ಜಡವಾಗುತ್ತದೆ. ಜಗದ ಜಂಜಡವೇ ಅವನಿಗೆ ಸುಖವಾಗುತ್ತದೆ. ಹಿರಿಯರ ಉಪದೇಶ ಬುದ್ಧಿನಾಶಮಾಡಿಕೊಂಡ ವ್ಯಕ್ತಿಗೆ ನಾಟಲಾರದು. ಹೇಳಿದ ಹಿತಮಾತು ವಿಷವಾಗಿ ಪರಿಣಮಿಸುತ್ತದೆ. ಒಂದೆಡೆ ಕಬೀರನು ತನ್ನ ವಚನಾಮೃತದಲ್ಲಿ ಇಂಥವರನ್ನು ಕಂಡು ಮರುಗಿ ಈ ರೀತಿ ಹೇಳಿದ್ದಾನೆ.

"ಮೂರಖಕೋ ಸಮಝಾವತೇ ಜ್ಞಾನ ಗಾಂಠಿಕೋಜಾಯ್|
ಕೋಯಿಲಾ ಹೋಯಿ ನ ಊಜರೋ ನೌ ಮನ ಸಾಬುನ ಲಾಯ್||"

ಬುದ್ಧಿಯನ್ನು ಕಳೆದುಕೊಂಡ ಮನುಷ್ಯನಿಗೆ ಬುದ್ಧಿ ಹೇಳಿ ತಿಳುವಳಿಕೆ ತರುವದರೊಳಗಾಗಿ ಬುದ್ಧಿ ಹೇಳುವವನ ಜ್ಞಾನದ ಗಂಟೆಲ್ಲ ಖರ್ಚಾಗುತ್ತದೆ. ವಿವೇಕವು ಅವನಿಗೆ ಒಡಮೂಡವದು ಕಷ್ಟಸಾಧ್ಯವಾಗುತ್ತದೆ. ಕಲ್ಲಿನ ಮೇಲೆ ಬಾಣ ಹೊಡೆದಂತೆ ವ್ಯರ್ಥವಾಗುತ್ತದೆ. ಒಂಬತ್ತು ಮಣ ಸಬಕಾರ ಹಾಕಿ ಕಲ್ಲಿದ್ದಲು ತೊಳೆದರೆ ಅದೆಂದಾದರೂ ಬೆಳ್ಳಗಾದೀತೇ? ಎಂದುದಾಗಿ ಕಬೀರನು ಪ್ರಶ್ನಿಸುತ್ತಾನೆ. ಅದಕ್ಕಾಗಿ ಬುದ್ಧಿ ನಷ್ಟಮಾಡಿಕೊಂಡವರನ್ನು ತಿದ್ದಲು, ಸತ್ಸಹವಾಸವನ್ನು ನೀಡಿ ಭಕ್ತಿಯ ಕಡೆಗೆ ಎಳೆದೊಯ್ಯುವದೇ ಪರಮೋಪಾಯ. ವಜ್ರದಂತಹ ಅಮೂಲ್ಯ ಜನ್ಮವನ್ನು ಕಳೆದುಕೊಳ್ಳುವವರಿಗೆ ಜ್ಞಾನವೇ ವಜ್ರವೈಢೂರ್ಯ. ಒಂದೆಡೆ ಷಣ್ಮುಖ ಶಿವಯೋಗಿಗಳು ತಮ್ಮ ಗುರುಗಳನ್ನು ಕುರಿತು....

"ಹುಲಿಯ ಬಾಯಲ್ಲಿ ಸಿಲ್ಕಿದ ಹುಲ್ಲೆಯಂತೆ,
ಸರ್ಪನ ಬಾಯಲ್ಲಿ ಸಿಲ್ಕಿದ ಕಪ್ಪೆಯಂತೆ
ಸಕಲ ಲೋಕಾದಿಲೋಕಂಗಳು ಮಾಯೆ ಬಲೆಯಲ್ಲಿ ಸಿಲ್ಕಿ
ಸೆರೆ ಹೋಗುವದು ಕಂಡು
ನಾನಂಜಿ ನಿಮ್ಮ ಮೊರೆ ಹೊಕ್ಕೆ ಕಾಯಯ್ಯಾ
ಕಾರುಣ್ಯಸಿಧಿಯೇ, ಅಖಂಡೇಶ್ವರಾ."

ಈ ರೀತಿಯಾಗಿ ಮಾಯೆಯ ಬಲೆಯಲ್ಲಿ ಸಿಲುಕಿದಂತಿರಿಸಲು ಅಂಗಲಾಚಿ ಬೇಡಿಕೊಂಡಿದ್ದಾರೆ.

"ಅರಿವು ಆಚಾರಕ್ಕಿಳಿದರೆ, ಮರಹು ನಷ್ಟವಾಗುವದಲ್ಲದೆ,
ಆತ್ಮಕ್ಕೆ ಶಾಂತಿಯಾಗಿ ನಿಜಸುಖ ದೊರೆಯುವದಯ್ಯ.
ಆಚಾರವಿಲ್ಲದ ಅರಿವು ತೊಳೆಯಲಾರದ ಪಾತ್ರೆಯಂತೆ ವ್ಯರ್ಥ ಕಾಣಯ್ಯ,
ಭೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ.
ಬುದ್ಧಿಭ್ರಂಶವಂದಾಗಲ್
ನಿರ್ಧರತಪ್ಪುದವಗೆ ಶರಣಸುಮಾರ್ಗಂ|
ಶುದ್ಧಸ್ವಾತ್ಮಜ್ಞಾನಂ
ಸಿದ್ಧಿಸದಜ್ಞಾನಿಯಾಗಿ ಬಳಲುವನಲ್ತೆ||"

## ಸತ್ಯಂ ವದ ಧರ್ಮಂ ಚರ

ಎತ್ತ ನೋಡಿದತ್ತ ಬರಗಾಲದ ಭೀಕರ ಪರಿಸ್ಥಿತಿಯು ಕಂಡುಬರುತ್ತದೆ. ಹಸಿವಿನಿಂದ ತತ್ತರಿಸುತ್ತಿದ್ದಾರೆ. ಸಾವು-ನೋವುಗಳು ಹೆಚ್ಚಾಗಿ, ವ್ಯಕ್ತಿಯಲ್ಲಿ ಅಂತಸ್ಸತ್ವವೇ ಹೀರಿದಂತಾಗಿದೆ. ಹಸಿವಿನ ಬರಗಾಲದ ಜೊತೆಗೆ ಸತ್ಯದ ಬರಗಾಲವೂ ಬರತೊಡಗಿದೆ.

ಸತ್ಯವು ಮಾತಿನ ಮಾಲೆಯಾಗಿದೆ. ಧರ್ಮವು ಜಾತಿ ವಿಜಾತಿಗಳ ಕೈಗೊಂಬೆಯಾಗಿದೆ. ಹೀಗಾಗಿ ಸುಖವು ಕನಸಿನ ಗಂಟಾಗಿದೆ. ಮಾತು ಬೇರೆ, ಕೃತಿ ಬೇರೆ, ಭಾವೈಕ್ಯವೆಲ್ಲಿ? ಭಾಷೆ ಭಾವ ಒಂದಾದಲ್ಲಿ, ಅದು ನಡೆಯಲ್ಲಿ ಬಂದರೆ ಸತ್ಯ ಎದ್ದು ಕಾಣುತ್ತದೆ. ದಿಟವು ಸಟೆಯಾದರೆ, ಸಟೆಯು ದಿಟವಾದರೆ ಪ್ರಪಂಚವು ಬಾಳುವುದೆಂತು? ಬೆಳಗುವದೆಂತು? ಸತ್ಯವನ್ನರಿಯಬೇಕಾದರೆ ಒಳಗಣ್ಣು ತೆರೆಯಬೇಕಾಗುತ್ತದೆ. ಸಣ್ಣತನದ ಕ್ಷುದ್ರ ವಿಚಾರಗಳನ್ನು ತೊರೆಯಬೇಕಾಗುತ್ತದೆ. ಮುಚ್ಚುಮರೆಯ ತೆರೆಯನ್ನು ಸರಿಸಬೇಕಾಗುತ್ತದೆ. ದೇವರನ್ನು ಕುರಿತು ಮೊರೆಯಿಡಬೇಕಾಗುತ್ತದೆ. ಆಗ ಸತ್ಯ ಸಾಧನೆ ಸಿದ್ಧಿಸುತ್ತದೆ. ಅದುವೆ ಸತ್ಯಾರಾಧನೆಯಾಗುತ್ತದೆ. ಸತ್ಯವನ್ನು ಅರಸುತ್ತ ಹೋದಂತೆ ಕಪಿದ ಕತ್ತಲೆ ದೂರಾಗಬೇಕು. ಸತ್ಯವೇ ದೇವರೆಂದು ಅರಿವಾಗಬೇಕು. ಅಂತರಂಗ ಹಿತವಾಗಬೇಕು. ಅಂತಾದಾಗ ಆತ್ಮಾನುಭೂತಿಯ ಅನುಭವವು ದೊರೆಯುತ್ತದೆ. ಸತ್ಯದೊಡನೆ ಹೋರಾಡಿದಷ್ಟು ಹೊಳೆಯುತ್ತದೆ. ಸತ್ಯವಿದ್ದಲ್ಲಿ ಧೈರ್ಯವು ಸಹಜವಾಗಿಯೇ ಮನೆಮಾಡಿಕೊಂಡಿರುತ್ತದೆ. ಕಾಡುವವರು ತುಂಬಿದ್ದರೂ ಕೆಲವು ದಿನಗಳ ನಂತರ ಸತ್ಯತೆಯು ಹೊರಬಿದ್ದಾಗ ಅರ್ಥವಾಗಿ ಪಶ್ಚಾತ್ತಾಪ ಪಡುವ ಪ್ರಸಂಗವೂ ಬರಬಹುದು. ಸತ್ಯಸಂಶೋಧನೆಯಿಂದ ಮಾನವನು ಬೇಕಾದ ಕಾರ್ಯ ಮಾಡಬಲ್ಲ. ಅಜ್ಞಾನ, ಅಹಂಕಾರ, ಮೋಸ, ಮತ್ತು ಭ್ರಾಂತಿಯನ್ನು ದೂರಮಾಡಲು ಸತ್ಯದಂತಹ ಶಸ್ತ್ರವು ಮತ್ತೊಂದಿಲ್ಲ. ಸತ್ಯ ಸೃಷ್ಟಿಯಲ್ಲಿ ಇಳಿದಂತೆ ಉಚ್ಚತಮ ಆದರ್ಶಗಳು ಕಣ್ಣಿಗೆ ಕಾಣುತ್ತವೆ. ಸತ್ಯದ ಬೆಳಕಿನಲ್ಲಿ ಹೋದಂತೆ ಧರ್ಮವು ಥಳಥಳ ಹೊಳೆಯುವದು.ಸತ್ಯ ಮತ್ತು ಧರ್ಮಕ್ಕೂ ನಿಕಟ ಸಂಬಂಧವಿರುತ್ತದೆ, ಸತ್ಯದಿಂದ ಆಚರಿಸುವದೇ ಧರ್ಮ. ಧರ್ಮಾಚರಣೆಯಲ್ಲಿ ಸತ್ಯವು ಅವಿತುಕೊಂಡಿರುತ್ತದೆ. ಸುಳ್ಳು ಹೇಳುವದು ಸುಲಭ, ಸತ್ಯ ನುಡಿಯುವದು ಕಡುತರ ಕಷ್ಟ. ನುಡಿದಂತೆ ನಡೆದರೆ ಅದೇ ಜನ್ಮ ಕಡೆ ಈ ನುಡಿಯು ನಡೆಯಲ್ಲಿ ಬಂದಾಗ ನಿಜವಾದ ಸತ್ಯ ಸಾಧನೆ ಮಾಡಿದಂತೆ. ಧರ್ಮ ಮತ್ತು ಸತ್ಯಸಾಧನೆಗೆ ನಿಸ್ಪೃಹವಾದ ಶೀಲ, ಸದ್ವಿಚಾರಗಳ ಚಿಂತನ ಬೆಳೆದಾಗ ಸತ್ಯ ಸಂಸಿದ್ಧಿ, ಧರ್ಮವೃದ್ಧಿ.

**ಸಮಯ ಏವ ಕರೋತಿ ಬಲಾಬಲಂ—೨**

"ಸಮಯ ಏವ ಕರೋತಿ ಬಲಾ ಬಲಂ" ಮಾಘ ಮಹಾಕವಿಯ ಈ ಮಾತು ನಿಜಕ್ಕೂ ಸತ್ಯ. ಜಲ, ನೆಲ, ಅನಿಲ, ಅನಲ ಪ್ರಕಾಶ ಮುಂತಾದವುಗಳನ್ನು ನಮಗೆ ಪರಮೇಶ್ವರನು ಕರುಣಿಸಿದಂತೆ ಸಮಯವನ್ನು ಸಹ ನೀಡಿದ್ದಾನೆ. ಮಹಾವ್ಯಕ್ತಿತ್ವವನ್ನು ಪಡೆದುಕೊಳ್ಳಲು ಸಮಯವೇ ಪರಮ ಸಾಧನ. ಸಮಯವನ್ನು ಸದುಪಯೋಗ ಮಾಡಿಕೊಂಡರೆ ಸಮಾಜವನ್ನು ಕಟ್ಟಬಹುದು. ರಾಷ್ಟ್ರವನ್ನು ಭದ್ರಮಾಡಬಹುದು. ವಿಶ್ವದಲ್ಲಿ ಶಾಂತಿಯನ್ನು ತರಬಹುದು. ಅಮೂಲ್ಯ ವೇಳೆಯನ್ನು ದುರುಪಯೋಗ ಮಾಡಿಕೊಂಡಲ್ಲಿ ನಮ್ಮ ಕಾಲ ಮೇಲೆ ನಾವೇ ಕಲ್ಲು ಹಾಕಿಕೊಂಡಂತೆ.

ತನ್ನ ತಾನರಿತುಕೊಳ್ಳಲು ವೇಳೆಯ ಸದುಪಯೋಗವು ದೇವನಿತ್ತ ವರ. ವೇಳೆಗೆ ಮಹತ್ವ ನೀಡಿದ ಮಹಾತ್ಮಾ ಗಾಂಧೀಜಿ, ಅಬ್ರಾಹಂ ಲಿಂಕನ್, ಈಶ್ವರಚಂದ್ರ ವಿದ್ಯಾ ಸಾಗರ, ಮೋಕ್ಷಗೊಂಡಂ ವಿಶ್ವೇಶ್ವರಯ್ಯ, ಸ್ವಾಮಿ ವಿವೇಕಾನಂದ, ಹಾನಗಲ್ಲ ಕುಮಾರ ಶಿವಯೋಗಿವರೇಣ್ಯರು ಮೊದಲಾದ ಮಹಾಪುರುಷರು ಬಾಳಿದರು, ಬೆಳಗಿದರು. ರಾಷ್ಟ್ರ ರಥವನ್ನು ಮುನ್ನಡೆಯಿಸಿದರು. ಸಮಯದ ಸದುಪಯೋಗದಿಂದ ಅವರಲ್ಲಿ ಅದ್ಭುತ ಶಕ್ತಿ ತಲೆದೋರಿ, ರಾಷ್ಟ್ರೀಯತೆಯನ್ನು ಜಾಗ್ರತಗೊಳಿಸುವ ಮಹಾಸಾಹಸ ಉಂಟಾಗಿ ಫಲಕಾರಿ ಯಾಗಿದೆ. ಅಂತೆಯೇ ಅವರ ಜೀವನ ಚರಿತ್ರೆ ಆದರ್ಶವಾಗಿದೆ.

ಪಾಶ್ಚಿಮಾತ್ಯರು ವೇಳೆಯ ಮಹತಿಯನ್ನರಿತು ನಿತ್ಯ ಜೀವನ ಸಾಗಿಸುತ್ತಿರುವದರಿಂದ ಅವರಲ್ಲಿ ಶಿಸ್ತು, ಸಂಘಟನೆ ಕಾರ್ಯನಿರ್ವಾಹಕ ಶಕ್ತಿಯನ್ನು ಕಾಣುತ್ತಿದ್ದೇವೆ. ವರ್ಷಗಳು ಉರುಳಿದಂತೆ ಜೀವನದಲ್ಲಿ ಶಕ್ತಿ ತುಂಬಿದರೆ ಸಾರ್ಥಕ; ಇಲ್ಲದಿದ್ದರೆ ಸುಮ್ಮನೆ ಕಾಲಹರಣ ಮಾಡಿದರೆ ಬಾಳೆಲ್ಲವೂ ಹಾಳು. **''Time and Tide wait for none''** ವೇಳೆ ಮತ್ತು ತೆರೆಗಳು ಯಾರಿಗಾಗಿಯೂ ನಿಲ್ಲುವದಿಲ್ಲ. ಈ ಅರಿವಿದ್ದೂ ಮರೆತರೆ ಕಾಲನ ದವಡೆಯಲ್ಲಿ ಸಿಕ್ಕಂತೆ. ಬಾಳಮಡಿಕೆಗೆ ನಾವೇ ರಂಧ್ರ ಕೊರೆದರೆ ಮುಚ್ಚುವ ಪರಿಯಂತು? ಹಿರಿಯರು **''Time is God''** ಎಂದಿದ್ದಾರೆ. ಯೌಗಿಕಶಕ್ತಿ ಹಾಗೂ ಶರಣತ್ವದ ಅರಿವು ಅರಿಯ ಬೇಕಾದರೂ ವೇಳೆಯ ಸದುಪಯೋಗವೇ ಮೂಲ ಕಾರಣ. ನಾಶವಾಗುವ ಆಯುಷ್ಯ ವನ್ನು ಯೌವನವನ್ನು ಒಳ್ಳೆಯ ರೀತಿಯಲ್ಲಿ ದೇವರು ಮೆಚ್ಚುವಂತೆ ಉಪಯೋಗಿಸಿದರೆ ಭಾಗ್ಯದ ಮಳೆಯನ್ನೇ ತಂದುಕೊಡಂತಾಗುವದು. ಜೀವನವೆಂಬುದೇ ಕ್ಷಣಿಕ. ಇಂತಹದರಲ್ಲಿ ಸಮಯ ಹಾಳುಮಾಡಿಕೊಂಡರೆ ಇದ್ದ ಸ್ವಲ್ಪ ಜೀವನವನ್ನು ಸುಮ್ಮನೆ ವ್ಯರ್ಥ ಮಾಡಿ ಕೊಂಡು ಕೆಸರಿನಲ್ಲಿ ಬಿದ್ದ ಪಶುವಿನಂತೆ ಗತಿಮತಿ ಇಲ್ಲದಂತಾಗುತ್ತದೆ.

ಇದೀಗ ನಮ್ಮ ರಾಷ್ಟ್ರವೂ ಅನೇಕ ಜಟಿಲ ಸಮಸ್ಯೆಗಳ ಸುರುಳಿಯಲ್ಲಿ ಸುತ್ತಿಕೊಂಡಿದೆ. ಅದರಲ್ಲಿ ದುರ್ಭಿಕ್ಷೆಯೂ ಒಂದು. ಬಡತನದ ಭವಣೆಯಲ್ಲಿ ಎನಿತೋ ಜನರು ನರಳುತ್ತಿ ದ್ದಾರೆ. ಇದೆಲ್ಲವನ್ನು ಕಣ್ಣಾರೆ ಕಂಡು ತಿಳಿವಿಲ್ಲದಂತೆ ಸಾಗಿ ಮುನ್ನಡೆದರೆ ಸಮಯದ ದುರುಪಯೋಗ ಮಾಡಿಕೊಂಡಂತೆ, ಹಣವಿದ್ದವರು ಹಸಿದವರಿಗೆ ಅನ್ನ ನೀಡುವದು, ಬಾಯಾರಿದವರಿಗೆ ನೀರೆರೆಯುವದು ಕಡುಕಷ್ಟದಲ್ಲಿದ್ದವರಿಗೆ ವಸ್ತ್ರ ಮುಂತಾದವುಗಳನ್ನು ದಾನಮಾಡುವದು ಇದುವೇ ಸಮಯದ ಸದುಪಯೋಗ. ಹೊಸ ದಿನದ ಹೊಸ ಬಾಳಿನ ಹೊಸ್ತಿಲದಲ್ಲಿ ಅಡಿಯನ್ನಿರಿಸುವವರು ಸಮಯದ ಸದುಪಯೋಗ ಮಾಡಿಕೊಳ್ಳುತ್ತಿದ್ದರೆ ಅವರ ಜೀವನವೆಲ್ಲ ಪಾವನ; ಸೌಭಾಗ್ಯವನ್ನು ಮನೆಗೆ ಕರೆದುಕೊಂಡಂತೆ. ಇದುವೇ ನಿಜ ವಾದ ಪೂಜೆ, ಇದುವೆ ಆತ್ಮೋದ್ಧಾರ. ಇದರಿಂದಲೇ ರಾಷ್ಟ್ರಕಲ್ಯಾಣ ಹಾಗೂ ವಿಶ್ವ ಶಾಂತಿ.

## ದರಿದ್ರದೇವೋಭವ

ಮಾತೃದೇವೋಭವ, ಪಿತೃದೇವೋಭವ ಎಂಬುದಾಗಿ ಉಪನಿಷತ್ತಿನ ವಾಕ್ಯವಾದರೆ ನಾವಿಂದು "ದರಿದ್ರದೇವೋಭವ" ಎಂದು ತಿಳಿದುಕೊಂಡು ನಡೆಯಬೇಕಾಗಿದೆ. ಇದುವೆ ಇಂದಿನ ನಿಜವಾದ ಧರ್ಮ. ಮಾನವೀಯತೆಯ ಕುರುಹು. ಧರ್ಮವು ಪ್ರೇಮದಲ್ಲಿರುವದೇ ಹೊರತು ಕೇವಲ ಬಾಹ್ಯ ಆಚಾರ, ವಿಚಾರ ಕೃತ್ರಿಮತೆಯಲ್ಲಿಲ್ಲ. ಅನಾಥರು, ದುರ್ಬಲರು ಸಾವಿನ ದವಡೆಯಲ್ಲಿ ಸಿಕ್ಕು ನರಳುತ್ತಿರುವಾಗ ಅವರ ಕಷ್ಟವನ್ನು ಕಂಡು ದೂರೀಕರಿಸಲು ಪ್ರಯತ್ನಿಸದಿದ್ದರೆ ನಮ್ಮ ಸಹೋದರರಿಗೆ ನಾವೇ ದ್ರೋಹ ಬಗೆದಂತೆ, ದರಿದ್ರರನ್ನು ದೇವರೆಂದು ತಿಳಿದು ಅವರ ಸೇವೆ ಮಾಡಿದರೆ ಅವರಲ್ಲಿಯೇ ದೈವೀ ಶಕ್ತಿ ತುಂಬಿರುವದೆಂದು ಹಿರಿಯರ ನುಡಿಯಿದೆ. ಕುಲಗೋತ್ರಗಳನ್ನು ನೋಡದೆ ದುರ್ಬಲರ ಸೇವೆ ಮಾಡಿ ಸಂರಕ್ಷಿಸಿ ದರೆ ನಿಜವಾದ ಪೂಜೆ ಮಾಡಿದಂತಾಗುತ್ತದೆ. ಇದರಿಂದ ಹೊರಗಿನ ಪೂಜೆಗಿಂತ ನೂರು ಪಟ್ಟು ಅಧಿಕ ಆತ್ಮ-ಶಕ್ತಿಗಳಿಸುವನಲ್ಲದೆ, ಈಶ್ವರ ಪ್ರೇಮವು ದೊರೆಯುವದು. ದರಿದ್ರರ ಸೇವೆಯಲ್ಲಿ ಮಾತ್ರ ನಿಜವಾದ ಕಳಕಳಿಯಿರಬೇಕು; ತೋರಿಕೆಯ ಸಾಮಾಜಿಕ ಪ್ರೇಮ ಸಲ್ಲದು; ನಿಲ್ಲದು. ಭಾವದಲ್ಲಿ ಹಗಲಿರುಳು ಚಿಂತನವಿದ್ದು ಸಾಧ್ಯವಿದ್ದಷ್ಟು ಸೇವೆ ಮಾಡು ವದೇ ಮಾನವನ ನಿಜವಾದ ಗುರಿ; ಮುಖ್ಯ ಕರ್ತವ್ಯ.

ಒಂದೆಡೆ ಸ್ವಾಮಿ ವಿವೇಕಾನಂದರು........

"ಪರೋಪಕಾರ ಮಾಡುವದೇ ಸತ್ಕರ್ಮ; ಇದರಿಂದ ಚಿತ್ತಶುದ್ಧಿಯಾಗುತ್ತದೆ. ಆಗ ಎಲ್ಲರಲ್ಲೂ ಶಿವನೇ ತೋರುವನು. ತದ್ವಿರುದ್ಧವಾಗಿರುವ ಸ್ವಾರ್ಥವೇ ಮಹಾಪಾಪ. ನಿಃಸ್ವಾರ್ಥತೆಯನ್ನು ತಿಳಿದಾಚರಿಸುವದೇ ಧರ್ಮದ ಹೆಗ್ಗುರುತು. ಯಾರು ನಿಃಸ್ವಾರ್ಥಿ ಗಳೋ ಅವರೇ ಆಧ್ಯಾತ್ಮಿಗಳು; ಅವರೇ ದೇವರ ಸಮೀಪದಲ್ಲಿರುವವರು" ಎಂದು ಮುಂತಾಗಿ ಕಳಕಳಿಯ ಸಂದೇಶವನ್ನು ರಾಷ್ಟ್ರಕ್ಕೆ ನೀಡಿದ್ದಾರೆ. ಇಂದಿನ ದುರ್ಭರ ಪ್ರಸಂಗ ದಲ್ಲಿ ಅರ್ಥಹೀನ ವಿಚಾರಗಳ ಸುರುಳಿಯನ್ನು ಸುತ್ತಿ ಸಮಯ ಹಾಳುಮಾಡುತ್ತ ಹೋದಲ್ಲಿ ಕರ್ತವ್ಯಕ್ಕೆ ಭಂಗತಂದಂತಾಗುವದು. ಗುಡ್ಡಕ್ಕೆ ಬೆಂಕಿ ಹತ್ತಿದಾಗ ತತ್ವ ಹೇಳುತ್ತ ಕುಳಿತಲ್ಲಿ ಆದರಿಂದ ಏನೂ ಪ್ರಯೋಜನವಾಗಲಾರದು. ಬಡವರ ಸ್ಥಿತಿ ಚಿಂತಾಜನಕವಾಗುತ್ತಿರುವಾಗ ಸಹಕಾರದ ಸಿಹಿನೀರನೆರೆಯದೆ ಹೋದರೆ ನೀರಿನಲ್ಲಿ ಹೋಮ ಮಾಡಿದಂತೆ ವ್ಯರ್ಥವಾಗು ವದು. ಇದೀಗ ಬೇಕಾಗಿರುವದು ಮೊದಲು ಅನ್ನ, ನಂತರ ತತ್ವ. ದೀನರಿಗಾಗಿ ಹೆಣಗಾಡು ವದು ಮರೆತು ಸ್ವಾರ್ಥಕ್ಕಾಗಿ, ಪರರ ವಂಚಿಸುವದಕ್ಕಾಗಿ ಸಮಯವನ್ನು ಕಳೆದರೆ ನಮ್ಮ ಕಾಲಮೇಲೆ ನಾವೇ ಕಲ್ಲುಹಾಕಿಕೊಂಡಂತಾಗುವದು. "ಅನ್ನವನು ನೀಡುವದು, ನನ್ನಿ ಯನು ನುಡಿಯುವದು ತನ್ನಂತೆ ಪರರ ಬಗೆದೊಡೆ ಕೈಲಾಸವೇ ಬಿನ್ನಾಣವಕ್ಕು ಸರ್ವಜ್ಞ" ಈ ನುಡಿಯು ಪ್ರತಿಯೊಬ್ಬರ ಹೃದಯ ಸೇರಿ, ಕೃತಿಯಲ್ಲಿಳಿದರೆ ದೇವರೇ ಹತ್ತಿರಬಂದು ತನ್ನತ್ತ ಕರೆದುಕೊಳ್ಳುತ್ತಾನೆ; ನಿಜಸುಖ ನೀಡುತ್ತಾನೆ.

**ಸಂಪೂಜಯುತ್ಯಂಗ ಸ ವೀರಶೈವಃ**

ವೀರಶೈವ ಧರ್ಮವು ಬಹು ಪ್ರಾಚೀನ ಕಾಲದಿಂದ ಬಂದುದು. ವೀರಶೈವ ಧರ್ಮ ದಲ್ಲಿ ವೀರಶ್ರೀ ತುಂಬಿರುವದಲ್ಲದೆ ವಿಶ್ವಧರ್ಮಗಳನ್ನೊಳಗೊಂಡಿದೆ. ಇದು ವಿಶಾಲ ತಳ ಹದಿಯ ಮೇಲೆ ರೂಪುಗೊಂಡಿದೆ; ವಿಶ್ವಶಕ್ತಿಗೆ ಸಹಾಯಕವಾಗಿದೆ; ಸರ್ವಧರ್ಮಗಳಿಗೆ ಸಹಕಾರಿಯಾಗಿದೆ; "ಕಾಯಕವೇ ಕೈಲಾಸ"ವೆಂಬುದನ್ನು ಸಾರಿ ಹೇಳುತ್ತಿದೆ.

ಆತ್ಮಶಕ್ತಿಯನ್ನು ಪಡೆದು, ಶಿವಸಾಕ್ಷಾತ್ಕಾರವನ್ನು ಪಡೆಯಲು ಈ ವೀರಶೈವ ಧರ್ಮದಲ್ಲಿ ಸಾಕಷ್ಟು ಸಾಧನೆಗಳಿವೆ: ಇದರಲ್ಲಿ ಅಷ್ಟಾವರಣ, ಪಂಚಾಚಾರಗಳನ್ನೊಳ ಗೊಂಡು ಷಟ್‌ಸ್ಥಲ ಸಿದ್ಧಾಂತ ರಹಸ್ಯವು ಮತ್ತು ಅವುಗಳ ಸಾರ ರೂಪದ ನೂರೊಂದು ನೆಲೆಯ ನಿಲುವನ್ನರಿಯುವ ತತ್ತ್ವವು ತುಂಬಿ ತುಳುಕಿದೆ. ಶಕ್ತಿವಿಶಿಷ್ಟಾದ್ವೈತ ಅಥವಾ ಶಿವಾದ್ವೈತ ಸಿದ್ಧಾಂತದ ಶಿಖರವನ್ನೇರಲು ವೀರಶೈವ ಧರ್ಮವು ದಾರಿದೀಪವಾಗಿದೆ. ನಿತ್ಯ ಸತ್ಯ ಮಾರ್ಗವಾಗಿದೆ.

ಮಾನವರಿಗೆ ಅಥವಾ ಭಕ್ತರಾದವರಿಗೆ ಸ್ವರ್ಗಲೋಕವನ್ನು ಅದರಂತೆ ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ ಮತ್ತು ಸಾಯುಜ್ಯ ಪದಪಿಯನ್ನು ಪಡೆಯುವದು ಮಾತ್ರ ವೀರ ಶೈವ ತತ್ವಜ್ಞಾನದ ಗುರಿಯಲ್ಲ. ಬಯಲಿನಲ್ಲಿ ಬಯಲು ಬೆರೆತಂತೆ, ಹಾಲಿನಲ್ಲಿ ಹಾಲು ಬೆರೆತಂತೆ, ನೀರಿನಲ್ಲಿ ನೀರು ಬೆರೆತಂತೆಯೇ ಲಿಂಗಾಂಗ ಸಾಮರಸ್ಯವನ್ನು ಅರ್ಥಾತ್ ಶಿವ ಜೀವೈಕ್ಯವನ್ನು ಪಡೆಯುವುದೇ ವೀರಶೈವ ಧರ್ಮದ ಮೂಲ ಗುರಿಯಾಗಿದೆ.

ಶರಣ-ಶರಣೆಯರ ವಚನ ಸಾಹಿತ್ಯ ಸಾಗರದಲ್ಲಿ ಈಸಿದರೆ ವೀರಶೈವ ಧರ್ಮದ ಪೂರ್ತಿ ಪಾಠವು ಚನ್ನಾಗಿ ಅರಿವಾಗುತ್ತದೆ. ವಚನ ವಾಙ್ಮಯದಲ್ಲಿ ನಿರೂಪಿತವಾಗಿರುವ ಶರಣರ ಅನುಭವಗಳನ್ನು ಅರಿತುಕೊಂಡು, ಅರಗಿಸಿಕೊಂಡರೆ ವೀರಶೈವ ವಿಜ್ಞಾನವು ತಿಳಿ ಯುತ್ತದೆ.

ಇಂದಿನ ವಿಜ್ಞಾನ ಯುಗದಲ್ಲಿ ವೀರಶೈವ ಸಮಾಜದ ಎಲ್ಲ ಒಳಪಂಗಡಗಳು ಒಂದಾ ದರೆ ವೀರಶೈವ ಧರ್ಮದ ಧ್ವಜವು ಗಗನದೆತ್ತರಕ್ಕೆ ಹಾರಬಲ್ಲದು.

ವೀರಶೈವ ಸಿದ್ಧಾಂತದ ಮೂಲ ಅರ್ಥವೇ "ವೀರಶೈವ" ಶಬ್ದದಲ್ಲಿ ತುಂಬಿದೆ ಎಂದು ಅರಿಯಲು ಈ ಶ್ಲೋಕಗಳೆರಡು ಸಾಕು.

"ವಿಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿನೀ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾ ಇತಿ ಸ್ಮೃತಾಃ॥"

"ಯೋ ಹಸ್ತಪೀಠೇ ನಿಜಮಿಷ್ಟಲಿಂಗಂ
ವಿನ್ಯಸ್ಯ ತಲ್ಲೀನ ಮನಃ ಪ್ರಸಾದಃ।
ಬಾಹ್ಯಕ್ರಿಯಾ ಸಂಕುಲ ನಿಃಸ್ಪೃಹಾತ್ಮಾ
ಸಂಪೂಜಯುತ್ಯಂಗ ಸ ವೀರಶೈವಃ॥"

## ಏಕೋ ರಸಃ ಕರುಣ ಏವ

ಕಾರುಣ್ಯ ಕಿರಣವು ಬಾಳ್ಬೆಳಕಿಗೆ ಮೂಲ ಕಾರಣ. ಆತ್ಮಸಂವರ್ಧನೆಗೆ ಪರಮ ಸಾಧನ. ಕರುಣಾರಸ ಪರಿಪೂರ್ಣ ಜೀವನ ನಂದನವನವಿದ್ದಂತೆ. ಕರುಣೆ ಪಡೆಯದ ಮಾನವ ಮಾನವನಾಗಲಾರ ಬದುಕಲಾರ. ಬಾಳಿನಲ್ಲಿ ನವಚೈತನ್ಯವನ್ನು ಹೊಂದಲಾರ. ದುಃಖ ನಿರ್ವಾರಣೆಗೆ ಕರುಣೆ ಆದೊಂದು ಅಮೃತ ಬಿಂದು. ಜೀವನವು ಪರಿವರ್ತನವಾಗಿ ಆತ್ಮಸುಖವನ್ನು ಸವಿಯಲು ಕರುಣೆಯೇ ಕೈಗನ್ನಡಿ. ಜೀವನದ ಜಟಿಲ ಸಮಸ್ಯೆಗಳನ್ನು ಕರುಣಾ ಬಲದಿಂದ ಬಗೆಹರಿಸಬಹುದು. ಮಾತೆಯ ಕರುಣೆಯಿರದಿದ್ದರೆ ಶಿಶುವು ಬೆಳೆಯಲಾರದು. ಗುರುಕೃಪೆಯಿರದಿದ್ದರೆ ಶಿಷ್ಯನ ಬುದ್ಧಿ ಬೆಳೆದು ಪ್ರಗತಿಪಥದತ್ತ ಸಾಗಲಾರದು. ಕರುಣೆಯಿರದಿದ್ದರೆ ಮೊಗ್ಗೆಯರಳದು; ಮಣ್ಣು ಮಡಿಕೆಯಾಗದು; ಚಿನ್ನ ಆಭರಣವಾಗದು; ಕಲ್ಲು ದೇವರಾಗದು. ಅಂತಃಕರುಣ ಪರಿಪೂರ್ಣ ಕರುಣೆಯಿಂದ ನಿರ್ಜೀವವನ್ನು ಸಜೀವವುಳ್ಳದ್ದನ್ನಾಗಿ ಮಾಡಿದ ಉದಾಹರಣೆಗಳುಂಟು. ಕಂಟಕಗಳು ಸಹಜವಾಗಿ ನಿರ್ಮೂಲವಾಗಿದ್ದುಂಟು. ಕರುಣಾಜಲದಿಂದ ಮತ್ಸರಾಗ್ನಿ ಆರುತ್ತದೆ. ಜಾತಿ ದ್ವೇಷಗಳು ದೂರಾಗುತ್ತವೆ. ಭಾವೈಕ್ಯವು ಬಂಧುರವಾಗುತ್ತದೆ. ಮಧುರ ಬಾಂಧವ್ಯ ಬೆಳೆದು ಆತ್ಮಶಾಂತಿ ಲಭಿಸುತ್ತದೆ. ಜೀವನವನದಲ್ಲಿ ಬೆಳೆದಿರುವ ಕಸಕಡ್ಡಿಗಳು ಹಸನಾಗಿ, ಸ್ನೇಹ ತರುವು ಚಿಗುರೊಡೆದು ಫಲವನ್ನೀಯುತ್ತದೆ. ಇನಿತೇ ಏಕೆ? ನಾನೆಂಬುದು ಹೋಗಿ ನೀನೆಂಬುದು ಉಳಿಯುತ್ತದೆ; ಬೆಳಗುತ್ತದೆ.

ಕರುಣಾಹೃದಯವು ಅರಳಿದಲರವಿದ್ದಂತೆ, ಮರವೆಯನ್ನಳಿಸಲು ಇಂಥ ಕರುಣೆಯೇ ಜ್ಞಾನ ಜ್ಯೋತಿ. ಕರುಣೆಯು ಒಳಗಿನಿಂದ ಇಳಿದುಬಂದರೆ ಜನಜೀವನಕ್ಕೆ ಚೇತೋಹಾರಿ. ಮಾತಿನಲ್ಲಿ ಕರುಣೆ ತೋರಿ, ಹೃದಯವು ಕಲ್ಲಾಗಿದ್ದರೆ, ಸಲ್ಲಲಿತ ಜೀವನ ವೃಕ್ಷಕ್ಕೆ ಕಾದ ಕಬ್ಬಿಣವಿಟ್ಟಂತೆ. ಭಾವಶುದ್ಧಿಯಿದ್ದಲ್ಲಿ ಕರುಣೆ ಬರುತ್ತದೆ. ಮನಸ್ಸು ಕನಿಕರಪಡುತ್ತದೆ; ಕರಳು ಕೊರಗುತ್ತದೆ; ಜನರ ಕೊರಗುಗಳನ್ನು ಕರಗಿಸುತ್ತದೆ. ಕರುಣೆಯುಳ್ಳವನು ಅಬಲರನ್ನು ಸಬಲರನ್ನಾಗಿ ಮಾಡುತ್ತಾನೆ. ಅವನಲ್ಲಿ ಪ್ರೀತಿ ಮನೆಮಾಡಿಕೊಂಡಿರುತ್ತದೆ. ಕರುಣಾರಸದಿಂದ ವಿರಸವು ಸರಸವಾಗುತ್ತದೆ. ವಿಯೋಗವು ಸಂಯೋಗವಾಗುತ್ತದೆ.

ಸರ್ವರಸಗಳಲ್ಲಿ ಕರುಣಾರಸವೇ ಹೆಚ್ಚಿನದು. ಅಂತೆಯೇ ಮಹಾ ಕವಿ ಭವಭೂತಿಯು "ಏಕೋ ರಸಃ ಕರುಣ ಏವ" ಎಂದು ಅದಕ್ಕೆ ಪ್ರಾಧಾನ್ಯ ನೀಡಿದ್ದಾನೆ. ರಸವಿದ್ದ ಹಣ್ಣು ಸುಂದರವಿದ್ದಂತೆ, ಕರುಣಾರಸಭರಿತ ಜೀವನ ಸುಂದರ ಹಾಗೂ ಬಂಧುರವಿರುತ್ತದೆ.

"ಕರುಣವಿರಲಿ ಜೀವರೊಳು" ಎನ್ನುವ ನಿಜಗುಣಶಿವಯೋಗಿಗಳವರ ನುಡಿಯಲ್ಲಿ ಅಂತಃಸತ್ತ್ವವು ಮೈಗೂಡಿಕೊಂಡಿದೆ.

ಏನಾದರೆಯೂ ಸಾಧಿಸಬಹುದು!
ಮತ್ತೇನಾದರೆಯೂ ಸಾಧಿಸಬಹುದು!!

ತಾನಾರೆಂಬುದ ಸಾಧಿಸಲಾಗದು
ಕೂಡಲಸಂಗನ ಕರುಣೆ ಉಳ್ಳವಂಗಲ್ಲದೆ.

ಮಹಾತ್ಮಾ ಬಸವಣ್ಣನವರ ಈ ನುಡಿಮುತ್ತು ಮುಮುಕ್ಷುಗಳಿಗೆ ಮಾಣಿಕ್ಯದ ದೀಪ್ತಿ.

## ಕೃತಘ್ನೇ ನಾಸ್ತಿ ನಿಷ್ಕೃತಿಃ

ಕೃತಜ್ಞತೆ ಬೇರೆ, ಕೃತಘ್ನತೆ ಬೇರೆ. ಕೃತಂ ಜಾನಾತಿ ಇತಿ ಕೃತಜ್ಞಃ (Grateful) ಅಂದರೆ ಉಪಕಾರ ಮಾಡಿದ್ದನ್ನು ತಿಳಿದುಕೊಳ್ಳುವವರು. ಕೃತಂ ಹಂತಿ ಇತಿ ಕೃತಘ್ನಃ (ungrateful) ಮಾಡಿದುಪಕಾರವನ್ನು ಮರೆಯುತಕ್ಕವರು. ಕೃತಜ್ಞತೆಯು ಅಂತ ರಂಗವನ್ನು ಅರಳಿಸಿದರೆ, ಕೃತಘ್ನತೆಯು ಅಂತರಂಗವನ್ನು ಕೊರೆಯುತ್ತದೆ. ಕೃತಜ್ಞತೆ ಯಲ್ಲಿ ಸಹಜತೆಯು ತುಂಬಿರುತ್ತದೆ. ಕೃತಘ್ನತೆಯಲ್ಲಿ ಕೃತ್ರಿಮತೆಯು ಮನೆಮಾಡಿಕೊಂಡಿ ರುತ್ತದೆ. ಕೃತಜ್ಞತೆಯಲ್ಲಿ ಮಾನವನ ಮನಸ್ಸಾನ್ನಾಕರ್ಷಿಸುವ ಶಕ್ತಿಯಿರುತ್ತದೆ. ಕೃತಘ್ನತೆಯು ಹೃದಯ ದೌರ್ಬಲ್ಯವನ್ನು ಎತ್ತಿತೋರಿಸುತ್ತದೆ. ಅಸೂಯೆಯ ಕಿಚ್ಚು ಉರಿಯುತ್ತಲಿರುತ್ತದೆ. ಅಹಂಕಾರವು ಆವಿರ್ಭವಿಸಿರುತ್ತದೆ. ಅರಿವು ಹೋಗಿ, ಮರೆವು ಬಂದು ಉಪಕಾರ ಸ್ಮರಣೆ ಮಾತಿನ ಮಾಲೆಯಾಗುತ್ತದೆ.

ಒಂದೆಡೆ ಸ್ಯಾಮುಅಲ್ ಜಾನ್ಸನ್ ಅವರು "ಕೃತಜ್ಞತೆ ಉದಾತ್ತ ಸಂಸ್ಕಾರದ ಫಲ; ಕುಸಂಸ್ಕೃತರಲ್ಲಿ ಅದನ್ನು ನಿರೀಕ್ಷಿಸುವದು ನಿಷ್ಪ್ರಯೋಜಕ" ಎಂಬುದಾಗಿ ತಿಳಿಸಿ ದ್ದಾರೆ. ಕೃತಘ್ನತೆಯಲ್ಲಿ ಅಜ್ಞಾನ ಆವರಿಸಿದ್ದರೆ, ಕೃತಜ್ಞತೆಯಲ್ಲಿ ಪ್ರಜ್ಞೆಯು ಒಡ ಮೂಡಿರುತ್ತದೆ. ಕೃತಘ್ನನು ಸ್ವಾರ್ಥ ಸಾಧಿಸಿದ ನಂತರ ಎಲ್ಲವನ್ನು ಮರೆಯುತ್ತಾನೆ. ಅಷ್ಟೇ ಅಲ್ಲ, ಅಹಂಕಾರದ ಶಿಖರವೇರುತ್ತಾನೆ. ದುರಭಿಮಾನದ ಕೆಸರಿನಲ್ಲಿ ಬೀಳುತ್ತಾನೆ. ಬಿದ್ದವರನ್ನು ಮೇಲಕ್ಕೆತ್ತುವದು ಪ್ರಕೃತಿಯ ಗುಣ. ಮೇಲಕ್ಕೆತ್ತಿದವರನ್ನು ತಿಳಿದು ಕೊಳ್ಳದಿರುವದು ರಾಕ್ಷಸೀಯ ಗುಣ. ಮೇಲಕ್ಕೆತ್ತಿದವರನ್ನು ಅರಿತುಕೊಂಡು, ಮರೆಯ ದಿರುವದು ಮಾನವೀಯ ಗುಣ. ಉಪಕಾರ ಗೈದವರು ಇದು ತಮ್ಮ ಕರ್ತವ್ಯವೆಂದು ಬಗೆಯುವದು ಹಾಗೂ ಫಲಾಪೇಕ್ಷೆಯನ್ನು ಬಯಸದಿರುವದೇ ದೇವಗುಣ. ದೇವಗುಣ ವಿದ್ದಲ್ಲಿ ವಿಕೃತಿಗೆ ಸ್ಥಾನವಿರಲಾರದು. ಬೆಳಕಿನ ದಾರಿಯಲ್ಲಿ ಕರೆದೊಯ್ಯುವದೇ ಸಂಸ್ಕೃತಿ. ಸಂಸ್ಕೃತಿಯನ್ನು ಕಾಪಾಡಿಕೊಳ್ಳುವದೇ ಕೃತಜ್ಞತೆಯ ಲಕ್ಷಣ. ಇಸೋಪನು ಸಹ "ಕೃತ ಜ್ಞತೆಯು ಕುಲೀನತೆಯ ಕುರುಹೆಂ"ದು ತಿಳಿಹೇಳಿದ್ದಾನೆ.

ಕೃತಜ್ಞತೆಯು ಕಲಿಸಿದರೆ ಬರತಕ್ಕದಲ್ಲ; ವಿಕಸಿತ ಪುಷ್ಪವು ಸುಗಂಧ ಬೀರುವಂತೆ, ಹೃದಯದಿಂದ ಹೊರಬರಬೇಕು. ಭಾವನೆ ವಿಶಾಲವಾಗಬೇಕು. ದುರ್ಭಾವನೆಯ ಬೀಜವು ಮೊಳಕೆಯೊಡೆಯದಂತಿರಬೇಕು. ಸದ್ಭಾವನೆಯು ಮೈಗೂಡಿರಬೇಕು. ಚಿತ್ತವರ ಳಿಸಿರಬೇಕು. ನಿಷ್ಠೆ ಬಲಗೊಂಡಿರಬೇಕು. ಆಗ ಅದರ ಸಫಲತೆ ಮತ್ತು ಮಹತಿ.

ಗಾಢವಾದ ನಿದ್ರೆಯಲ್ಲಿದ್ದವರನ್ನು ಎಚ್ಚರಿಸಬಹುದು. ನಿದ್ರೆ ಹತ್ತಿದವನಂತೆ

ನಟಿಸುವವನನ್ನು ಎಚ್ಚರಿಸುವದು ಜಟಿಲ ಸಮಸ್ಯೆ. ಹಾಗೆ ಹೊರಗಿನ ವೈರಿಗಳನ್ನು ಅರಿತುಕೊಳ್ಳಬಹುದು; ಕೃತಘ್ನರಾದ ಅಂತಃಶತ್ರುಗಳನ್ನು ಅರಿತುಕೊಳ್ಳುವದು ಕಡು ಕಷ್ಟ. ಅದಕ್ಕಾಗಿ ಇಂತಹ ಸ್ವಭಾವದವರನ್ನು ಕಂಡು ಈ ಶ್ಲೋಕ ಬರೆದಂತಿದೆ.

"ಬ್ರಹ್ಮಘ್ನೇಚ ಸುರಾಪೇಚ ಚೋರೇಭಗ್ನವ್ರತೇಶವೇ।
ನಿಷ್ಕೃತಿರ್ವಿಹಿತಾಸದ್ಭಿಃ ಕೃತಘ್ನೇನಾಸ್ತಿ ನಿಷ್ಕೃತಿಃ॥

**ಯಥಾ ರಾಜಾ ತಥಾ ಪ್ರಜಾ**

ರಾಜರಿದ್ದಂತೆ ಪ್ರಜರು, ಪ್ರಜರಿದ್ದಂತೆ ರಾಜರು. ತಂದೆಯಂತೆ ಮಕ್ಕಳು, ಗುರುವಿನಂತೆ ಶಿಷ್ಯರು, ಶಿಕ್ಷಕರಿದ್ದಂತೆ ವಿದ್ಯಾರ್ಥಿಗಳು ಹೀಗೆ ಹೇಳುವದು ಲೋಕರೂಢಿಯಾಗಿದೆ. ಇಂದು ರಾಜಕೀಯ ರಂಗದಲ್ಲಿಯಾಗಲಿ, ಧಾರ್ಮಿಕ ರಂಗದಲ್ಲಿಯಾಗಲಿ, ಸಾಮಾಜಿಕ ರಂಗದಲ್ಲಿಯಾಗಲಿ, ಎಲ್ಲಿಯೂ ಸುಖಕ್ಕೆಡೆಯಿಲ್ಲದಾಗಿದೆ. ಭಾವೈಕ್ಯವು ಕನಸಿನ ಗಂಟಾಗಿದೆ. ಹಿರಿಯರು ಮಾಡತಕ್ಕ ಕರ್ತವ್ಯ, ಕಿರಿಯರು ಮಾಡತಕ್ಕ ಕರ್ತವ್ಯ ಅರಿಯದಂತಾಗಿದೆ. ಹಿರಿಯರು ಕಿರಿಯರನ್ನು ತೆಗಳಿದರೆ, ಕಿರಿಯರು ಹಿರಿಯರನ್ನು ತೆಗಳುತ್ತಿದ್ದಾರೆ. ಒಡೆಯದ ಒಗಟಾದಂತಾಗಿದೆ. ಧಾರ್ಮಿಕರಂಗವನ್ನು ನಿರೀಕ್ಷಿಸಿದಾಗ ತಾಳಮೇಳವಿಲ್ಲದಂತಾಗಿದೆ. ಗುರು–ವಿರಕ್ತರಲ್ಲಿ ಸಹಕಾರವಿಲ್ಲದಾಗಿದೆ. ವಿರಕ್ತ–ವಿರಕ್ತರಲ್ಲಿ ಮೇಳವಿಲ್ಲದಾಗಿದೆ. ಗುರು–ಭಕ್ತರಲ್ಲಿ ಸಮರಸವಿಲ್ಲದಾಗಿದೆ. ಶ್ರದ್ಧೆ ವಿಶ್ವಾಸ ನಶಿಸಿ ಹೋಗುತ್ತಲಿದೆ. ಭಕ್ತರಲ್ಲಿ ಒಳಪಂಗಡಗಳು ಹೆಚ್ಚಾಗುತ್ತಲಿವೆ. ಸಹಕಾರ ಸೌಹಾರ್ದಗಳು ಮಾತಿನ ಮಾಲೆಯಾಗಿವೆ. ಹಿರಿಕಿರಿಯ ಭೇದಭಾವವು ಒಡಮೂಡಿ ಸಂಗಡಿಗನಂತೆ ಸುಳಿಯುತ್ತಲಿದೆ. ಸ್ವಾರ್ಥದ ಬಲ್ಗಿಚ್ಚು ಎದ್ದು ಉರಿಯುತ್ತಲಿದೆ. ಮಾತಿನಲ್ಲಿ ಮಾನವತೆ, ಹೃದಯದಲ್ಲಿ ಜಾತೀಯತೆ ತುಂಬಿದೆ. ರಾಷ್ಟ್ರ ಮೊದಲು ಮಾಡಿಕೊಂಡು ಮನೆಯವರೆಗೂ ಅನೈಕ್ಯತೆಯೇ ಎದ್ದು ಕಾಣುತ್ತದೆ. ಅನೇಕ ಧರ್ಮಗಳ ಜಂಜಾಟ, ಹಿಂಸಾತ್ಮಕ ಧಾರ್ಮಿಕ ಆಚರಣೆಗಳ ತಿಕ್ಕಾಟ, ಜಾತೀಯತೆಯ ಸುಂಕರೋಗದ ಅಲೆದಾಟ, ಜಗತ್ತಿನಲ್ಲಿಯೇ ಇವುಗಳ ಜೂಜಾಟ ನಡೆದುಬಿಟ್ಟಿದೆ. ಜೀವನದಲ್ಲಿಯ ಅನೇಕ ಬಗೆಯ ಕಾದಾಟ ಬೆಳೆದು ಬೇರ್ಪಟ್ಟಿದೆ. ಎತ್ತನೋಡಿದತ್ತ ಕಾಳರಾತ್ರಿಯ ಕತ್ತಲು ಕವಿದಿದೆ. ವ್ಯಕ್ತಿಗೆ ಶಕ್ತಿಯಿಲ್ಲ, ಶಕ್ತಿಯನ್ನು ಗಳಿಸುವ ಮುಂಧೋರಣೆಯಿಲ್ಲ. ಶಕ್ತಿಯಿದ್ದರೂ ಬುದ್ಧಿಯಿಲ್ಲ, ಬುದ್ಧಿಯಿದ್ದರೆ ಹೃದಯವಿಲ್ಲ, ಹೃದಯವಿದ್ದರೆ ಕೇಳುವವರಿಲ್ಲ. ನಾ ಹೆಚ್ಚು, ನೀ ಹೆಚ್ಚೆನ್ನುವ ಕೂಗಾಟವೇ ಹೆಚ್ಚಾಗಿದೆ. ಹೆಚ್ಚಿನ ಹೆಚ್ಚಳದ ಅಂತಸ್ಸಾಮರ್ಥ್ಯವು ಇಲ್ಲದಂತಾಗಿ ಬೂರುಗದ ಅರಳೆಯಂತೆ ಜೀವನವು ನಿಸ್ಸತ್ವವಾಗಿದೆ. ಆತ್ಮಿಕ ಸೌಂದರ್ಯವು ನಶಿಸಿ, ಬಹಿರಂಗದಾಡಂಬರವು ಹೆಚ್ಚಾಗಿದೆ. ರಾಷ್ಟ್ರಾಭಿಮಾನವು ತೋರಿಕೆಯದಾಗಿದೆ. ಅಂತರಂಗ ಬಹಿರಂಗ ಶುದ್ಧಿಗಳು ಹಳ್ಳಕೂಡಿಹೋಗಿಬಿಟ್ಟಿವೆ. ಎಲ್ಲಿ ನೋಡಿದಡೆಯೂ ಕೃತ್ರಿಮತೆ ಮನೆಮಾಡಿದೆ. ಕೆಲವರು ಲೋಕದ ಮನರಂಜನೆಗಾಗಿ ದೇಹವನ್ನು ಹಣ್ಣು ಮಾಡುತ್ತಿದ್ದಾರೆ. ಸಮಯವನ್ನು ಹಾಳುಮಾಡುತ್ತಿದ್ದಾರೆ,

ಶಕ್ತಿಹೀನರಾಗುತ್ತಿದ್ದಾರೆ. ಹೀಗಾಗುತ್ತ ನಡೆದರೆ ನಾಡು ನುಡಿಯು ಬೆಳೆಯುವದೆಂತು? ಪ್ರಜಾಪ್ರಭುತ್ವ ಯುಗದಲ್ಲಿ ಪ್ರಜಾಶಕ್ತಿ ಬೆಳಗುವದೆಂತು? ನಾವಿಂದು ಎಚ್ಚರರಾಗಿರ ಬೇಕಾಗಿದೆ. ಅಂತಃಸತ್ವವನ್ನು ಮೈ ಮನಗಳಲ್ಲಿ ಒಡಮೂಡಿಸಿಕೊಂಡು, ಹೃದಯ ದೌರ್ಬಲ್ಯವನ್ನು ಕಳೆದುಕೊಂಡು, ಅಧೋಮುಖದತ್ತ ಸಾಗಿರುವ ಸಮಾಜವನ್ನು ಸುಸಂಘ ಟಿತ ರೀತಿಯಿಂದ ವ್ಯವಸ್ಥಿತಗೊಳಿಸಬೇಕಾಗಿದೆ. ಇದಕ್ಕಾಗಿ ಎಲ್ಲರ ಅಂತಃಕರಣ ಪೂರ್ವಕ ಸಹಕಾರ ಬೇಕೆಂಬುದು ಬೇರೆ ಹೇಳಬೇಕಾಗಿಲ್ಲ.

## ಅಹೋಭಾಗ್ಯಂ ಕರ್ನಾಟಕಜನಸ್ಯ

ಇಂದು ನಾಡಿನ ಭಾಗ್ಯೋದಯ, ಮೈಸೂರ ರಾಜ್ಯವು "ಕರ್ನಾಟಕ" ಎಂದು ಹೆಸರು ಪಡೆದ ದಿನ. ಕನ್ನಡಿಗರ ಬಹುದಿನದ ಕನಸು ನನಸಾದ ಶುಭದಿನ. ಸಾರ್ಥಕ ನಾಮಕರಣದ ಮಂಗಲ ದಿನ. "ಕರ್ನಾಟಕ" ಹೆಸರು ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ಕಾಣುತ್ತೇವೆ. ಇದಕ್ಕೊಂದು ಭವ್ಯ ಪರಂಪರೆಯಿದೆ. ಸಂಸ್ಕೃತಿಯಿದೆ. "ಕರ್ನಾಟಕ" ವೆಂಬುದು ಸುಂದರವಾದ ಹೆಸರು. ಮತ್ತದುವೆ ಜೀವನದ ಉಸಿರು, ಹೆಸರಿದ್ದರೆ ಬಾಳೆ ಲ್ಲವೂ ಹಸಿರು. ಹೆಸರಿಗಾಗಿ ಅಹೋರಾತ್ರಿ ಪರಿಶ್ರಮಿಸಬೇಕಾಗುತ್ತದೆ; ಬೆವರು ಸುರಿಸ ಬೇಕಾಗುತ್ತದೆ. ಕರ್ತವ್ಯ ನಿಷ್ಠೆಯಿಂದ, ಪ್ರಾಮಾಣಿಕತನದಿಂದ ದುಡಿದ ಬೆವರ ಹನಿಯು ಕರ್ನಾಟಕದ ನೆಲದಲ್ಲಿಳಿದರೆ ಕರ್ನಾಟಕ ಮಾತೆಗೆ ತುಷ್ಟಿ, ಪುಷ್ಟಿ, ಯೋಗಿಯಿರಲಿ, ತ್ಯಾಗಿ ಯಿರಲಿ ಹೆಸರನ್ನು ಬಯಸದವರು ತುಂಬಾ ವಿರಳ. ಮನೆ, ಮಠ, ನಾಡು ಬೆಳೆದು ಬೆಳಗಬೇಕೆಂದು ಪ್ರತಿಯೊಬ್ಬರಲ್ಲಿಯೂ ಆಶೆಯಿರುವದು ಸ್ವಾಭಾವಿಕ; ಇಂತಹ ಹಿರಿಯಾಸೆ ಅತ್ಯವಶ್ಯಬೇಕು. ಅಭಿಮಾನಶೂನ್ಯರಾದರೆ ನಾಡು ಬೆಳೆಯದು, ಬೆಳಗದು. ಭುವನೇ ಶ್ವರಿಯು ಒಲಿಯಳು. ಮಾತೆಯಲ್ಲಿ ಮಮತೆ ಹುಟ್ಟಲು ಮಾತೆಯ ಅಭಿಮಾನ ಬೇಡವೆ? ಭಕ್ತಿ-ಶ್ರದ್ಧೆ ಬೇಡವೆ? ಸೇವಾಭಾವನೆ ಬೇಡವೆ? ಮಾತೆಗಾಗಿ ಬಲಿದಾನ ಮಾಡಲೂ ಸಹ ಸಿದ್ಧರಾದರೆ, ಆ ಮಾತೆ ನಮ್ಮನ್ನು ಮೇಲಕ್ಕೆತ್ತದೆ ಬಿಡಳೆ? ಹುಟ್ಟಿದ ನಾಡಿಗೆ, ತಾಯಿ ಭಾವನೆಯ ಕಲ್ಪನೆಯನ್ನು ತಾರದಿದ್ದ ವ್ಯಕ್ತಿಯ ಹೃದಯವು ಪ್ರಾಣವಿಲ್ಲದ ಶರೀರ ದಂತೆ ಅವನ ಸ್ಥಿತಿಗತಿಯಾಗುವದು; ಭಾವಶೂನ್ಯವಾಗುವದು; ಇದ್ದು ಇಲ್ಲದ ಜೀವನ ವಾಗುತ್ತದೆ. ಯಾವ ನಾಡಿನ ನೆಲದ ಮೇಲೆ ತಿರುಗಾಡಿ, ಜಲವಾಯುಗಳನ್ನು ಸೇವಿಸಿ, ಅನ್ನದಿಂದ ಶರೀರ ವಿಕಾಸ ಮಾಡಿಕೊಂಡ ನಾವುಗಳು, ಜನ್ಮಭೂಮಿ ಪ್ರೇಮವನ್ನು ಮಾಡದೆ ಹೋದರೆ, ಈ ಭಾವನೆ ಬಾರದೆ ಹೋದರೆ ಪಶು-ಪಕ್ಷಿಗಳಿಗಿಂತಲೂ ಕಡೆ ಎಂದು ಹೇಳಬಹುದು. ಸ್ವರ್ಗಕ್ಕಿಂತಲೂ ಹೆಚ್ಚಿನದು ಜನ್ಮಭೂಮಿ, ಅಂತೆಯೇ ಕರು ನಾಡಿಗಾಗಿ ಅಭಿಮಾನೋತ್ಸಾಹ ತುಂಬಿ ತುಳುಕುತ್ತದೆ.

ಕನ್ನಡನಾಡು ಪವಿತ್ರವಾದುದು, ಪ್ರಕೃತಿ ಸೌಂದರ್ಯದಿಂದೊಡಗೂಡಿ, ಕಲಾ ಪೂರ್ಣವಾದುದು, ಸುಜನ ಸಂಕುಲವನ್ನು ಪಡೆದಿಹ ನಾಡು, ವರಕವಿಪುಂಗವರಿಂದ

ಭಜಿಸಿಗೊಂಡಿಹ ನಾಡು, ಯತಿವರೇಣ್ಯರು ಆಧ್ಯಾತ್ಮ ಶಕ್ತಿಯನ್ನು ಸಂಗಗೊಳಿಸಿದ ನಾಡು, ರಾಜಮಹಾರಾಜರು ಬಾಳಿ ಬೆಳಗಿದ ಬೀಡು, ಭಾರತ ಸ್ವಾತಂತ್ರ್ಯಕ್ಕೆ ವೀರ ಪುತ್ರರಿತ್ತಿಹ ನಾಡು, ಶಿವಶರಣರ ಹಾಗೂ ದಾಸರ ಸಮೃದ್ಧ ಸಾಹಿತ್ಯದಿಂದೊಡಗೂಡಿದ ನಾಡು, ಲಲಿತಹ ನಮ್ಮ ಈ ಚಿನ್ನದ ಕನ್ನಡನಾಡಿನ ಜನತೆಯು ನುಡಿಯಲ್ಲಿ, ನಡೆಯಲ್ಲಿ, ಭಾವೈಕ್ಯತೆಯಲ್ಲಿ ಇನ್ನುಳಿದ ರಾಜ್ಯಕ್ಕಿಂತಲೂ ಮುಂದುವರಿದು ವಿಶಾಲ ಮನೋಭಾವನೆಯನ್ನು ತೋರಿಸಿ ಮೆರೆದಿಹ ನಾಡು.

ಇಂತಿರುವ ನಾಡಿಗೆ, ಭಾಗ್ಯದರುಣೋದಯವಾಗಿ, ಕರ್ನಾಟಕದ ಗತವೈಭವವನ್ನು ಮತ್ತೆ ಗಗನದೆತ್ತರಕ್ಕೆತ್ತಿ ಕೀರ್ತಿಪತಾಕೆಯನ್ನು ಹಾರಿಸಲು ನಾಡಿನ ಮುಖಂಡರು ಅನುಕೂಲ ಮಾಡಿಕೊಟ್ಟಿದ್ದಾರೆ. ಆ ವೈಭವ ನೋಡಲು ಸಮಯ ಸನ್ನಿಹಿತವಾಗಿದೆ. ಅಂದಿನ ಸುಸ್ಕೃತಿ, ಕಲೆ, ಸಾಹಿತ್ಯ ಪುನರುತ್ಥಾನವಾಗಬೇಕಾಗಿದೆ. ಕನ್ನಡ ಸಾಹಿತ್ಯದ ಮೇರುಕೃತಿಗಳು ಬೇರೆ ಬೇರೆ ಭಾಷೆಯಲ್ಲಿ ಅನುವಾದವಾಗಿ, ಕನ್ನಡ ಸಾಹಿತ್ಯದ ಹೆಗ್ಗಳಿಕೆಯನ್ನು ಹಿಗ್ಗಿಸಬೇಕಾಗಿದೆ. ಕರ್ನಾಟಕದ ವನಶ್ರೀ, ಆತ್ಮಶ್ರೀ, ಭಾವಶ್ರೀ ಇವೆಲ್ಲವುಗಳನ್ನು ಹೆಚ್ಚಿಸಬೇಕಾಗಿದೆ. ಅದಕ್ಕಾಗಿ, ಕರ್ನಾಟಕ ಬೆಳೆಸುವ ಮಂತ್ರದೀಕ್ಷೆಯನ್ನು ತೊಡಬೇಕಾಗಿದೆ. ಸಿರಿಗನ್ನಡದೇಳಿಗೆಯ ನೋಡಿ, ಕನ್ನಡ ತಾಯಿಯ ಸೇವೆ ಮಾಡಬೇಕಾಗಿದೆ; ಕನ್ನಡ ಡಿಂಡಿಮ ಬಾರಿಸಬೇಕಾಗಿದೆ. ರಾಷ್ಟ್ರಕವಿ ಕುವೆಂಪು, ದ. ರಾ. ಬೇಂದ್ರೆ ಹಾಗೂ ಇನ್ನುಳಿದ ಕವಿಗಳ ಮನೀಷೆ ಈಡೇರಿಸಬೇಕಾಗಿದೆ. ಇಂತಾದಾಗ ಕರ್ನಾಟಕದ ಶಕ್ತಿ–ಸೌಂದರ್ಯಗಳು ಹೆಚ್ಚುತ್ತವೆ.

ಕರ್ನಾಟಕವನ್ನು ಭಾರತದ ಆದರ್ಶ ರಾಜ್ಯವನ್ನಾಗಿ ಮಾಡುವ ಹೊಣೆ ನಮ್ಮದಾಗಿದ್ದು ಅದಕ್ಕಾಗಿ, ಭಾವೈಕ್ಯದ ಬಂಧುರತೆಯನ್ನು ಬೆಳೆಸಿಕೊಂಡು, ಅಂತಃಕರಣ ಪೂರ್ವಕವಾಗಿ ದುಡಿದ ಕರ್ನಾಟಕ ಮಾತೆಯ ಕೃಪೆಯನ್ನು ಪಡೆದರೆ ರಾಜ್ಯೋತ್ಸವವನ್ನು ವೈಭವಪೂರ್ಣವಾಗಿ ಆಚರಿಸಿದ್ದಕ್ಕೂ ಸಾರ್ಥಕವಾದಂತಾಗುವದು.

### ಮಾತೃದೇವೋಭವ

ಮಾತೃಶಕ್ತಿ ಮಾನವನಿಗೆ ಮಹತ್ತರವಾದುದು; ಪ್ರಭಾವ ಪೂರ್ಣವಾದುದು. ಆ ಶಕ್ತಿಯ ಪ್ರಭಾವದಿಂದ ಮನುಷ್ಯನು ಉಳಿದಿದ್ದಾನೆ; ಬೆಳೆದಿದ್ದಾನೆ. ಮಾನವನ ಸರ್ವಾಂ-ಗೀಣ ಉನ್ನತಿಗೆ ಮಾತೆಯೇ ಮೂಲ ಕಾರಣ. ಮಾತೆಯ ಮಮತೆಯೇ ಮಗುವನ್ನು ಬಲಗೊಳಿಸಿ ಚೇತನವನ್ನು ನೀಡುತ್ತದೆ; ತ್ಯಾಗದ ಪ್ರತೀಕವೇ ಮಾತೆ. ಮಕ್ಕಳ ಹಿತ ಚಿಂತನೆಗಾಗಿ ಮಾತೆಯು ಏನನ್ನಾದರೂ ತ್ಯಾಗ ಮಾಡಲು ಸಮರ್ಥಳು. ಮಾತೆಯಿಲ್ಲದ ಜೀವನ ಸುಂದರವಾಗದು; ಬಂಧುರವಾಗದು. ಮಾತೆ ಮಹಾ ಚೈತನ್ಯಸ್ವರೂಪಿಣಿ, ಭವಭಯಹಾರಿಣಿ, ವ್ಯಕ್ತಿಗೆ ಅಂತಸ್ಸತ್ವವನ್ನಿತ್ತು ಸಂರಕ್ಷಿಸುವ ಸಂಜೀವಿನಿ. ಮಾತೆಯ ಮಹಿಮೆ ಅಗಾಧವಾದುದು; ಅನುಪಮವಾದುದು. ಯೋಗಿಗಳಾಗಲು, ತ್ಯಾಗಿಗಳಾಗಲು, ಮೇಧಾವಿಗಳಾಗಲು, ಮಹಾ ರಾಜಕಾರಿಣಿಗಳಾಗಲು, ರಾಷ್ಟ್ರಸೇವಕರಾಗಲು,

ತತ್ವಜ್ಞಾನಿಯಾಗಲು, ಮಹಾಕವಿಗಳಾಗಲು ಮಾತೆಯೇ ಪ್ರಪ್ರಥಮ ಗುರು. "ಒಬ್ಬ ಆದರ್ಶ ಮಾತೆ, ನೂರು ಗುರುಗಳಿಗಿಂತ ಶ್ರೇಷ್ಠ"ಳೆಂದು ಬೈಬಲ್ ಹೇಳುತ್ತಿದೆ. ಜ್ಯೋತಿಯನ್ನು ಹೊತ್ತಿಸುವ ಮಕ್ಕಳನ್ನು ಜ್ಯೋತಿಯಂತೆ ಮಾಡುವ ಸಾಮರ್ಥ್ಯ ಮಾತೆಯಲ್ಲಿರುತ್ತದೆ. ಮಾತೆಯು ಅಜ್ಞಾನಾಂಧಕಾರದಲ್ಲಿ ತಿರುಗುವವರಿಗೆ ಜ್ಞಾನದೀವಿಗೆಯನ್ನೀಯುತ್ತಾಳೆ. ಮನುಷ್ಯರಿಗೆ ಮಾನವೀಯತೆಯ ಮೌಲ್ಯಗಳ ಪೌಷ್ಟಿಕಾಹಾರವನ್ನು ನೀಡುತ್ತಾಳೆ. ಸಮಾಜ ಸುಧಾರಕರನ್ನಾಗಿ ಪರಿವರ್ತಿಸುತ್ತಾಳೆ. ಪ್ರೀತಿಯ ಸೂತ್ರವನ್ನು ತೋರಿಸುತ್ತಾಳೆ. ದೈವೀಶಕ್ತಿಯನ್ನು ಹೃನ್ಮಂದಿರದಲ್ಲಿ ತುಂಬುತ್ತಾಳೆ. ಧರ್ಮದ ದಾರಿಗೆ ಹಚ್ಚುತ್ತಾಳೆ. ಮಕ್ಕಳ ಮನೋಭೂಮಿಕೆಯ ಮೇಲೆ ಸದ್ಗುಣ ಬೀಜಗಳನ್ನು ಬಿತ್ತಿ ಅವುಗಳು ಹುಟ್ಟಿ ಬೆಳೆದು ಫಲಿಸುವಂತೆ ಶ್ರಮವಹಿಸುತ್ತಾಳೆ. ಮಕ್ಕಳ ಕೋಪತಾಪವನ್ನು ಸಹಿಸಿ ಕಾಪಾಡುವಂತಹ ಮಹಾಶಕ್ತಿ ಮಾತೆಗಿರುವಷ್ಟು ಮತ್ತಾರಿಗೂ ಇರಲಾರದು. ಮಕ್ಕಳಿಗಾಗಿ ಅಳುತ್ತಾಳೆ, ಬೆವರು ಸುರಿಸುತ್ತಾಳೆ, ದೇವರ ಧ್ಯಾನ ಮಾಡುತ್ತಾಳೆ. ಮಕ್ಕಳಿಗಾಗಿ ದೇಹವನ್ನು ದಂಡಿಸಿ, ಉಪವಾಸ ವ್ರತಗಳನ್ನು ಪರಿಪಾಲಿಸಿ, ಅವರ ಶ್ರೇಯೋಭಿವೃದ್ಧಿಗಾಗಿ ಅಹೋ ರಾತ್ರಿ ಪರಿಶ್ರಮಿಸುತ್ತಾಳೆ. ತಾಳುವ ಶಕ್ತಿ ತಾಯಿಗಿರುವಷ್ಟು ಪಿತನಿಗೆ ಬರದು. ಮೊಟ್ಟಮೊದಲಿಗೆ ಶೀಲ ಸಂಸ್ಕೃತಿಯ ಸಿಹಿನೀರನ್ನೆರೆಯತಕ್ಕವಳೇ ಮಾತೆ. ಅಂತೆಯೇ "ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ" ಎನ್ನುವ ಗಾದೆಯೊಂದಿದೆ. ಮಾತೃ ಹೃದಯವು ಕರುಣಾತಿಶಯದಿಂದ ಕೂಡಿಕೊಂಡಿರುವದರಿಂದ ಪ್ರತಿಯೊಬ್ಬನಿಗೆ "ತಾಯಿ" ಈ ಶಬ್ದವು ಚಿತ್ತಾಕರ್ಷಕವಾಗಿ, ಪೂಜ್ಯ ಭಾವನೆಯನ್ನುಂಟು ಮಾಡುತ್ತದೆ; ಭಕ್ತಿ-ಶ್ರದ್ಧೆಯನ್ನು ಹುಟ್ಟಿಸುತ್ತದೆ. ಮಹಾಯೋಗಿ ಅರವಿಂದರ ದೃಷ್ಟಿಯಲ್ಲಿ "ಮಾತೆಯು ಸಾಧಕನನ್ನು ಪರಮಾತ್ಮನತ್ತ ಕರೆದೊಯ್ಯುವ ಚಿಚ್ಛಕ್ತಿ" ಯಾಗಿದೆ. ಮಾತೆಯ ನಾಲ್ಕು ಮುಖಗಳನ್ನು ಅರವಿಂದರು ಈ ರೀತಿ ವಿಂಗಡಿಸಿದ್ದಾರೆ: (೧) ಮಹಾಕಾಲಿಯು ಅದ್ಭುತ ಶಕ್ತಿಯ ಪ್ರತೀಕ. (೨) ಮಹಾಲಕ್ಷ್ಮಿಯು ಸೌಂದರ್ಯ ಸಾಮರಸ್ಯಗಳ ಸಂಕೇತ. (೩) ಮಹಾಸರಸ್ವತಿಯು ಸಕಲ ಜ್ಞಾನದ ಮೂರ್ತಿ. (೪) ಮಹೇಶ್ವರಿಯು ಪರಮ ಪೂಜ್ಯ ಘನತೆಯ ಮೂರ್ತಿ. ಹೀಗೆ ನಾಲ್ಕು ಬಗೆಯ ಶಕ್ತಿಯಿಂದ ಸಮನ್ವಿತೆಯಾದಾಕೆಯೇ ಮಾತೆ. ಅವಳು ಪರಾರ್ಥಕ್ಕಾಗಿ ಸ್ವಾರ್ಥವನ್ನು ತ್ಯಜಿಸುವ ದಿವ್ಯಮೂರ್ತಿ; ಸರ್ವಶಕ್ತಿ ಸಂಪನ್ನೆ. ದೈವೀಶಕ್ತಿಯು ಮಾತೆಯು ಮೂಲಕವೇ ಸಾಧ್ಯ.

"ಮಾತೆಯ ಸ್ವರೂಪವು ವ್ಯಕ್ತಿಗತ, ವಿಶ್ವಭರಿತ, ಪರಾತ್ಪರ" ಎಂದು ಮೂರು ತೆರನಾಗಿದೆ. ಈ ಮೂರು ಶಕ್ತಿಗಳನ್ನು ತಾಯಿಯಿಂದ ಅರಿತುಕೊಂಡು, ಪೂರ್ಣಯೋಗದ ಗುರಿಯನ್ನು ಅರವಿಂದರು ಅರುಹಿದ್ದಾರೆ: ಮತ್ತು ಪೂರ್ಣ ಯೋಗಕ್ಕೆ ಜೀವಾಳವೇ ಆಗಿರುವ ಸರ್ವಸಮರ್ಪಣವನ್ನು ತಮಗೆ ಮೊದಲ ಪಾಠವಾಗಿ ಶ್ರೀ ತಾಯಿಯವರೇ ನಡೆದು

ಕಲಿಸಿದರೆಂದು ಹೇಳಿದ್ದಾರೆ. "ಏಕಮೇವ ಪರಾತ್ಪರ ಪುರುಷನ ಚಿತ್‌ಶಕ್ತಿಯೇ ಸಕಲ ಸೃಷ್ಟಿಯ ಮಾತೆ." ಅದಕ್ಕಾಗಿಯೇ ಉಪನಿಷತ್ತು "ಮಾತೃದೇವೋ ಭವ" ಎಂದುಸುರಿದೆ.

**ಭಾಷಾಸೌಹಾರ್ದಭಾವೇನ ಭಾರತಸ್ಯೋನ್ನತಿರ್ಧ್ರುವಾ**

ನಮಗಿಂದು ಭಾಷಾಬಾಂಧವ್ಯ ಅತ್ಯವಶ್ಯಕ. ಅವರವರ ದೃಷ್ಟಿಯಲ್ಲಿ ಅವರವರ ಭಾಷೆ ಬೆಳೆದಷ್ಟು ಹಿತಕರ. ಭಾಷೆ ಸಾಹಿತ್ಯ ಬೆಳೆದಂತೆ ಅಂತಃಸತ್ತ್ವವೂ ಬೆಳಗುತ್ತ ಹೋಗುವದು. ಭಾಷೆಯಲ್ಲಿ ಬಹುಪಾಲು ವಿಶಾಲ ಮನೋಭಾವನೆ ತುಂಬಿ ತುಳುಕುತ್ತಿರ ಬೇಕು. ಒಬ್ಬರು ಮತ್ತೊಬ್ಬರ ಭಾಷೆಯ ಅವಹೇಳನಕ್ಕೆಡೆಗೊಡದಂತೆ ನಡೆದರೆ ಭಾರತ ಮಾತೆಗೆ ಸಂತಸ. ಭಾಷಾ ದ್ವೇಷದಿಂದ ಸಾಹಿತ್ಯ ವೃಕ್ಷವು ಚಿಗುರೊಡೆಯುವದು ಕಷ್ಟವಾಗು ವದು; ದೇಶಕ್ಕೆ ನಷ್ಟವಾಗುವದು. ಭಾಷಾ ದ್ವೇಷವು ಬೆಳೆಯಗೊಡದಂತೆ ನೋಡಿಕೊಳ್ಳು ವದು ಪ್ರಮುಖ ನಾಯಕರ ಆದ್ಯ ಕರ್ತವ್ಯ. ನಿಷ್ಪಕ್ಷಪಾತ ದೃಷ್ಟಿಯಿರಿಸಿ ವರ್ತಿಸುವದೇ ಹಿರಿಯರ ಮುಂಗುರಿಯಾಗಿರಬೇಕು. ಅಂತಾದಾಗ, ಭಾಷಾ ಬಾಂಧವ್ಯದ ಬಂಧುರತೆ ಎದ್ದು ಕಾಣುವದು. ಸಾವಿರಾರು ವರ್ಷಗಳ ಇತಿಹಾಸವನ್ನು ಪಡೆದ ಭಾರತ ದೇಶ ದಲ್ಲಿಯೂ ಸಾಕಷ್ಟು ಭಾಷೆಗಳು ನೆಲಸಿವೆ; ತಮ್ಮ ಶಕ್ತಿಯನ್ನು ಬೆಳೆಸಿಕೊಂಡಿವೆ. ತಮ್ಮ ಶುದ್ಧಿಯನ್ನು, ಪ್ರಬುದ್ಧತೆಯನ್ನು ಮತ್ತು ಅತ್ಯುತ್ತಮ ಭಾವವನ್ನು ಪಡೆದುಕೊಂಡಿವೆ. ಹೀಗಿದ್ದರೂ ಭಾಷೆಗಳ ತಿಕ್ಕಾಟ ಹಾಗೆಯೇ ನಡೆದೇ ಬಿಟ್ಟಿದೆ. ಭಾಷೆಯ ಬಲದಿಂದ ಅಂತಃಶುದ್ಧಿಯನ್ನು ಮಾಡಿಕೊಳ್ಳುವದರ ಬದಲು, ತಾಮಸೀಯ ವೃತ್ತಿಗಿಳಿದರೆ ಅದು ಶೋಚನೀಯ. ಮೊದಲು ಒಬ್ಬರು ಹೊತ್ತಿಸಿದ ಬೆಂಕಿಯನ್ನು ಶಾಂತ ಮಾಡುವಷ್ಟ ರಲ್ಲಿಯೇ ಎನಿತೋ ಹಾಳಾಗಿ, ಭಾವೈಕ್ಯತೆಗೆ ಕೊಡಲಿಯ ಪೆಟ್ಟು ಬೀಳುತ್ತದೆ. ಆತ್ಮಶುದ್ಧಿ ಕನಸಿನ ಗಂಟಾಗುತ್ತದೆ. ಪ್ರತಿಯೊಂದು ಮಾತೃ ಭಾಷೆಯ ನಾಡಿನವರೂ ತಮ್ಮ ನಾಡಿ ನಲ್ಲಿರುವ ಶಾಲೆ-ಕಾಲೇಜುಗಳಲ್ಲಿ ಬೇರೆ ಪ್ರಾಂತದ ಭಾಷೆಯ ಬಗೆಗೆ ಆದರವಿತ್ತು, ವಿದ್ಯಾರ್ಥಿಗಳಿಗೆ ನೆರೆಹೊರೆಯ ಭಾಷೆಯ ಶಿಕ್ಷಣವನ್ನು ನೀಡಬೇಕು. ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯುವದರಿಂದ ಬುದ್ಧಿ ವಿಕಾಸವಾಗುವದಲ್ಲದೆ ಸಾಹಿತ್ಯವು ಸಮೃದ್ಧಿ ಯಾಗುವದು. ಇದರಿಂದ ಪರಸ್ಪರ ಪ್ರೇಮ ಸಹಕಾರದೊಡನೆ ಇರಲು ಅನುಕೂಲವಾಗು ವದು. ವೈಯಕ್ತಿಕತೆ ಕಡಿಮೆಯಾಗಿ, ಶಾಶ್ವತವಾದ ಭಾಷಾ ಬಾಂಧವ್ಯಕ್ಕೆ ಅನುವು ದೊರೆತಂತಾಗುವದು. ಇದರ ಮೇಲಿಂದ ಸ್ವಭಾಷಾಭಿಮಾನ ಬಿಡಬೇಕೆಂದರ್ಥವಲ್ಲ. ಭಾಷಾಭಿಮಾನವನ್ನು ಸಂಪೂರ್ಣ ಮನದಲ್ಲಿಟ್ಟುಕೊಂಡು ಬೇರೊಬ್ಬರಿಗೆ ನೋವಾಗದಂತೆ ನಡೆಯುವದನ್ನೇ ಹಿರಿ ಗುರಿಯನ್ನಾಗಿಟ್ಟುಕೊಂಡಿರಬೇಕು. ಈ ದೃಷ್ಟಿಯಲ್ಲಿ ಕರ್ನಾಟಕವು ಸಂಸ್ಮರಣಾರ್ಹವಾದುದು. ತಾಳ್ಮೆಯಲ್ಲಿ ತನ್ನತನ ಬಿಡದಿರುವದರಲ್ಲಿ, ಅನ್ಯರೊಡನೆ ಸಹಕರಿಸುವದರಲ್ಲಿ ಕರ್ನಾಟಕವು ಎತ್ತಿದ ಕೈ ಎಂದುಸುರಿದರೆ ಅತಿಶಯೋಕ್ತಿಯಾಗಲಾರದು. ಭಾಷೆ ಭಾಷೆಗಳ ಕಲಹದಿಂದ ಐಕ್ಯತೆಗೆ ಅಡ್ಡಿಯಾಗಿ ಧಾರ್ಮಿಕ ಸಾಮಾಜಿಕ ಹಾಗೂ

ರಾಜಕೀಯ ಉನ್ನತಿಗೆ ಆಘಾತವುಂಟಾಗುವದು. ಬೆರಳಿಗೆ ಆದ ನೋವು ಸಂಪೂರ್ಣ ಶರೀರವನ್ನೇ ಆವರಿಸುವಂತೆ, ಭಾಷೆ ಭಾಷೆಗಳ ಹೋರಾಟವು ರಾಷ್ಟ್ರವನ್ನೇ ವ್ಯಾಪಿಸಿ, ರಾಷ್ಟ್ರೀಯ ಅಭಿವೃದ್ಧಿಗೆ ಹಾಗೂ ಆತ್ಮಶಾಂತಿಗೆ ಆತಂಕ ಒಡ್ಡಿದಂತಾಗುವದು. ಭಾಷಾ ಬಾಂಧವ್ಯವನ್ನು ಬೆಳೆಸಲು ನಿರ್ವಿಕಾರ ಮನಸ್ಸಿನಿಂದ ರಾಷ್ಟ್ರ ಭಾಷೆಯುವರೂ ಸಹ, ಪ್ರಾದೇಶಿಕ ಭಾಷೆಗಳ ಬೆಳವಣಿಗೆಗೆ ಬೆಳಕನ್ನು ನೀಡಿದರೆ, ಅದರಿಂದ ರಾಷ್ಟ್ರದಲ್ಲಿಯೂ ಐಕ್ಯತೆಯುಂಟಾಗುವದು ಸಹಜ.

## ದುಃಖಸ್ಯಾನಂತರಂ ಸುಖಂ

ಸುಖ ದುಃಖಗಳು ಜೀವನಕ್ಕೆ ರಥದ ಗಾಲಿಗಳಿದ್ದಂತೆ. ಬಿಸಿಲು ನೆರಳು ತೋರುವದು ಇದು ಪ್ರಕೃತಿ ನಿಯಮ. ಜೋಕಾಲಿಯಾಡುವವರು ಮೇಲೊಮ್ಮೆ ಕೆಳಗೊಮ್ಮೆ ಹೋಗಿ ಬರಬೇಕಾಗುತ್ತದೆ. ಆಶೆ ದುಃಖದ ಮೂಲವಾದರೆ ನಿರಾಶೆ ಸುಖದ ಮೂಲ. ಹುಟ್ಟಿದ ಮನುಷ್ಯನು ಸಿಹಿ ಕಹಿಗಳನ್ನು ಅನುಭವಿಸಿದರೆ ಅದು ಜೀವನವೆಂದೆನಿಸಿಕೊಳ್ಳುತ್ತದೆ. ಜ್ಞಾನವಿದ್ದಲ್ಲಿ ಸುಖ, ಅಜ್ಞಾನವಿದ್ದಲ್ಲಿ ದುಃಖವು ಮನೆಮಾಡಿಕೊಂಡಿರುತ್ತದೆ. ಭಾವ ಪಕ್ವವಾದರೆ ಸುಖದ ರಸಾಮೃತ ಸೇವಿಸಿದಂತೆ. ಸುಖ ದುಃಖ ಒಮ್ಮೆಲೇ ಬರಲಾರವು. ಸುಖದಿಂದಿರುವೆವೆಂದು ಹೇಳುವವರಲ್ಲಿ ಸುಖ ಸಿಗುವದು ಕಷ್ಟವಾಗುತ್ತದೆ. ಅದು ತನ್ನಲ್ಲಿಯೇ ತಾನೆ ಆನಂದಪಡುವಂತಹದು. ಬಾಯಾರಿಕೆಯಾಗುವದು ಪ್ರಕೃತಿ ಧರ್ಮ, ಬಾಯಾರಿಕೆ ಕಳೆದುಕೊಳ್ಳುವದು ನಮ್ಮ ಧರ್ಮ. ಸುಖ ದುಃಖಗಳ ಸಂಗಮವೇ ಸಮರಸ ಜೀವನ. ನ್ಯಾಯ, ನೀತಿ, ಪ್ರಾಮಾಣಿಕತೆ, ಉದಾರತೆ ಇವುಗಳೇ ಸುಖದ ಸಾಧನಗಳು. ವಿವೇಕವಿಲ್ಲದ ತೋರಿಕೆಯ ಸುಖವು ನಿಜಸುಖವೆನಿಸಲಾರದು. ಸುಖವು ಚಿನ್ನದ ಸಂಕೋಲೆಯಾದರೆ ದುಃಖವು ಕಬ್ಬಿಣದ ಸಂಕೋಲೆ. ಅವೆರಡಕ್ಕೂ ಬಂಧನದ ಬಿಗಿತ ವಿದ್ದದ್ದೇ ಕಂಡುಬರುತ್ತದೆ. ಸುಖದಲ್ಲಿಯೂ ಅಂತರಂಗ, ಬಹಿರಂಗ ಎರಡು ತೆರ. ಒಂದು ಭೌತಿಕ, ಮತ್ತೊಂದು ಆಧ್ಯಾತ್ಮಿಕ. ಸುಖ ದುಃಖಗಳಿಗೆ ನಾವೇ ಕಾರಣರು. ನಮ್ಮ ಕರ್ಮದಂತೆ ಫಲ ದೊರಕೊಂಬುದು ರೂಢಿ ಮಾತಾಗಿದೆ. ಎಡವಿದ ನಂತರ ಕಷ್ಟದ ಅನುಭವವಾಗಿ ಸುಖಬೇಕೆಂದು ಬಯಸುವದು ಈ ಮನ. ಎಡವಿದ ಘಾಯವು ಮಾಯಲು ವಿವೇಕವೆಂಬ ದಿವ್ಯೌಷಧ ಹಚ್ಚಿ, ಮತ್ತೆ ಎಡಹದಿರುವಂತೆ ನೋಡಿಕೊಳ್ಳುವದೇ ಪರಮೋಪಾಯ. ಯಾರಿಗೂ ನಿರುತರ ದುಃಖವೂ ಬರಲಾರದು, ಸುಖವೂ ಬರಲಾರದು. ದುಃಖವಿಲ್ಲದೆ ಸುಖದ ಅನುಭವವೂ ಆಗಲಾರದು. ದುಃಖದ ಹೊರೆ ಮೈಮೇಲೆ ಬಿದ್ದಾಗ, ಸುಮ್ಮನೆ ಕುಳಿತುಕೊಳ್ಳುವದು ಮಾನವನ ಧರ್ಮವಾಗಲಾರದು. ಅಂತಹ ಸಮಯದಲ್ಲಿಯೇ ಧೈರ್ಯದಿಂದ ಎದ್ದು ಕಾರ್ಯಪ್ರವೃತ್ತರಾದರೆ ಸುಖದ ಬುತ್ತಿ ಕಟ್ಟಿಟ್ಟಂತೆ. ಸೋಮಾರಿಗೆ ಸುಖದಿರವು ಅರ್ಥವಾಗದು. ಕಷ್ಟ ಸಹಿಸುವವರು ಏನನ್ನಾದರೂ ಸಾಧಿಸಬಲ್ಲರು. ಅಗಿಯದ ಬಾವಿಯಲ್ಲಿ ನೀರು ಬರದು. ನೀರು ಹಾಕದೆ ತರುಗಳು

ಬೆಳೆಯಲಾರವು. ಮನೆ ಕಟ್ಟದೆ ನೆರಳು ದೊರೆಯದು. ಅಂತೆಯೇ ಮನಸ್ಸನ್ನು ಕಟ್ಟಿದಿದ್ದರೆ ಆತ್ಮಾನುಭೂತಿಯು ನಿಜಸುಖವು ಸಿಗದು. ಭೌತಿಕ ಸುಖ ಕೋಲ್ಮಿಂಚಾದರೆ ಆತ್ಮಾನುಸುಖ ಚಂದಿರನಂತೆ ತಂಪು ಹಾಗು ದಿವ್ಯದೀಪ್ತಿ.

ಬದುಕಬೇಕೆಂಬುದು ಪ್ರತಿಯೊಬ್ಬರೂ ಬಯಸುವ ಆಶೆ. ಆ ಬದುಕು ವನ್ಯ ಪ್ರಾಣಿಗಳಂತಾದರೆ, ಸತ್ವ ಶೂನ್ಯವಾದರೆ ಅದರಲ್ಲಿ ಅರ್ಥವಿಲ್ಲ, ಭವಿಷ್ಯವಿಲ್ಲ. ಅದು ಕೇವಲ ನಿರರ್ಥಕ ಬಾಳು, ಕಾಡು ಹರಟೆ, ದುಃಖದ ಮಡುವಿನಲ್ಲಿ ಬಿದ್ದಂತೆ. ಒಂದೆಡೆ ಬೈಬಲ್ಲಿನಲ್ಲಿದೆ "Man shall not live by bread alone" ಮನುಷ್ಯನು ರೊಟ್ಟಿಯೊಂದರಿಂದಲೇ ಬದುಕಲಾರ, ಹವೆ, ನೀರು ಬೇಕಾಗುತ್ತದೆ. ಉಂಡದ್ದನ್ನು ಜೀರ್ಣಿಸಿಕೊಂಡರೆ ಸುಖ ಪ್ರಾಪ್ತಿ. ಅಂತೆಯೇ ಹೊರಗಿನ ಸುಖದಿಂದ ಸುಖ ಸಿಗಲಾರದು. ಆಂತರಿಕ ಸೌಂದರ್ಯಾಭಿವೃದ್ಧಿಯೇ ಸುಖ. "ದುಃಖ ಶಾಶ್ವತವಾದದ್ದೆಂದು ನಂಬಬಾರದು. ಜಗತ್ತಿನ ಮನಃಶಕ್ತಿ ಸಂಕಲ್ಪಶಕ್ತಿ ಅದರೊಡನೆ ಹೆಣಗಾಡುತ್ತವೆ" ಇದು ರವೀಂದ್ರನಾಥ ಠಾಕೂರರ ಅನುಭವದುಸಿರು. ನಾವಿಂದು ಕ್ಷಣ ಕ್ಷಣದಲ್ಲಿಯೂ ಸುಖ ದುಃಖಗಳನ್ನು ಅನುಭವಿಸುತ್ತಿದ್ದೇವೆ. ಸುಖ ಬಂದಾಗ ಹಿಗ್ಗುವದು, ದುಃಖ ಬಂದಾಗ ಕುಗ್ಗುವದು ಇದು ಪ್ರಪಂಚದಲ್ಲಿ ಕಂಡುಬರುವ ವ್ಯಾವಹಾರಿಕ ನಿಯಮ. ಆದರೆ ಅವೆರಡನ್ನೂ ತಿಳಿವಳಿಕೆಯ ದಾರಿಯಲ್ಲಿ ಕೊಂಡೊಯ್ದು ಸಮನಾಗಿ ಹಂಚಿಕೊಂಡರೆ ಮಾನವನಿಗೆ ನಿಜಸುಖದ ಗುಟ್ಟು ಅರಿವಾದೀತು. ಅದಕ್ಕಾಗಿ ಭಗವಾನ್ ಶ್ರೀಕೃಷ್ಣನು "ಸುಖ ದುಃಖೇ ಸಮೇಕೃತ್ವಾ ಲಾಭಾಲಾಭೇ ಜಯಾ ಜಯೌ| ತತೋಯುದ್ಧಾಯ ಯಜ್ಯಸ್ವ ನೈವಂ ಪಾಪಮವಾಪ್ಸ್ಯಸಿ|| ಎಂದು ಅರ್ಜುನನಿಗೆ ಹೇಳಿದ ಅಮರವಾಣಿ ನೆನಹಿನಂಗಳದಲ್ಲಿ ಕುಳಿತುಕೊಳ್ಳುತ್ತದೆ.

## ಸತ್ಯಂ ವದ

"ಹುಸಿಯ ನುಡಿಯಲು ಬೇಡ" ಇದು ಮಹಾತ್ಮಾ ಬಸವಣ್ಣನವರ ಹಿತ ನುಡಿ. ಹುಸಿಯು ಮಾನವನ ಹೃದಯದ ದೌರ್ಬಲ್ಯವನ್ನು ಎತ್ತಿ ತೋರಿಸುತ್ತದೆ; ಅಧೋಗತಿಗಿಳಿಸುತ್ತದೆ. ಇದರಿಂದ ವ್ಯಕ್ತಿಯು ತನ್ನ ಅಂತಃಸತ್ತ್ವವನ್ನು ಕಳೆದುಕೊಳ್ಳುತ್ತಾನೆ; ಆತ್ಮವಂಚನೆ ಮಾಡಿಕೊಳ್ಳುತ್ತಾನೆ.

ತಾನು ಅನುಭವಿಸಿದುದನ್ನು ಅನುಭವಿಸಿದಂತೆಯೇ ಯಥಾವತ್ತಾಗಿ ನಿರ್ವಂಚನೆಯಿಂದ ತಿಳಿಸುವದು ಸತ್ಯ; ಆದಕ್ಕೆ ವ್ಯತಿರಿಕ್ತವಾಗಿ ಕೃತ್ರಿಮತೆಯಿಂದ ಹೇಳುವದು ಅಸತ್ಯ, ಸುಳ್ಳು, ಹುಸಿ.

ಸುಳ್ಳು ಹೇಳುವದು ಸರಳ; ಸತ್ಯ ನುಡಿಯುವದು ಕಡು ಕಷ್ಟ. ಸತ್ಯದ ನಿಷ್ಠೆಗೆ ಪೂರ್ವಸಂಸ್ಕಾರ ಬೇಕಾಗುತ್ತದೆ; ಸಾಧನೆ ಬೇಕಾಗುತ್ತದೆ. ಸುಳ್ಳು ಹೇಳಿ ಮತ್ತೊಬ್ಬರ ಮನ ನೋಯಿಸುವುದು ಮಹಾ ಪಾಪ. ಸುಳ್ಳು ಹೇಳುವವನ ಅಸೂಯೆಯು ಒಡೆದು ಕಾಣುತ್ತದೆ.

ಸುಳ್ಳು ಹೇಳುವವನಿಗೆ ಎಂದಿಗೂ ಮನಸ್ಸಿಗೆ ಸಮಾಧಾನವಿರುವದಿಲ್ಲ. ನಿರಂತರವೂ ಮತ್ತೊಬ್ಬರ ಅಹಿತ ಚಿಂತನೆಯೇ ಅವನ ಗುರಿಯಾಗಿರುತ್ತದೆ. ಅವನಿಗೆ ತನಗಿಂತ ಮುಂದು ವರಿದವರನ್ನು ಕಂಡರೆ ಸಹಿಸುವ ಗುಣ ಬರಲಾರದು. ಹೇಗಾದರೂ ಮಾಡಿ ಏನಾದರೂ ಮಾಡಿ ಸುಳ್ಳಿನ ಪ್ರಚಾರ ಮಾಡಿ ಮುಂದುವರಿದವರನ್ನು ಹಿಂದೆ ಜಗ್ಗುವ ಪ್ರಯತ್ನದಲ್ಲಿಯೇ ಅವನ ಮನಸ್ಸು ಓಡುತ್ತಿರುತ್ತದೆ. ಇಂಥ ಕುಹಕ ಸುಳ್ಳಿನಿಂದ ಅವನ ಕಾರ್ಯ ಸಾಧಿಸಿದರೆ ಅದೇ ಅವನಿಗೆ ತೃಪ್ತಿ, ಸಮಾಧಾನ.

"ಸತ್ಯಮೇವ ಜಯತೆ" ಅಂದರೆ ಕೆಲವು ದಿನಗಳ ನಂತರ ಸತ್ಯವು ಸತ್ಯವಾಗಿಯೇ ಉಳಿಯುತ್ತದೆಂಬುದರ ಅರಿವು ಇಲ್ಲದೆ ಸತ್ಯವನ್ನು ತುಳಿದು ಕ್ರೌರ್ಯವನ್ನು ತೋರುವದು ಮಂದಮತಿಯ ಲಕ್ಷಣ.

ಸತ್ಯದ ಹೆದ್ದಾರಿಯಲ್ಲಿ ನಡೆಯುವವರಿಗೆ ಕಷ್ಟ ಪರಂಪರೆಗಳು, ಅಡ್ಡಿ ಆತಂಕಗಳು ಸಾಕಷ್ಟು ಬಂದರೂ ಸಹ ಅಂಜದೇ ಅಳುಕದೇ ಅಸತ್ಯದ ಧೂಳು ಮುತ್ತದಂತೆ ನೋಡಿ ಕೊಂಡು ದಾರಿಯನ್ನು ಸಾಗಿಸಿದರೆ "ಸತ್ಯವೇ ದೇವರು" ಎಂಬುದು ಮನಸ್ಸಿನೊಳು ಒಡ ಮೂಡಿ ಪರಮ ಶ್ರೇಯಸ್ಸು ದೊರೆಯುತ್ತದೆ.

ಸತ್ಯ ಸಂಶೋಧನೆಗೆ ಭಾವಶುದ್ಧಿಯು ಅತ್ಯವಶ್ಯ ಬೇಕಾಗುತ್ತದೆ. ಸತ್ಯವು ಮೊದ ಮೊದಲು ಕಹಿಯಾದಂತಿದ್ದರೂ ಕೊನೆಯಲ್ಲಿ ತನ್ನ ಶಾಶ್ವತ ಮಧುರ ರುಚಿ ತೋರಿಸುತ್ತದೆ. "ಸತ್ಯವು ಯಾವಾಗಲೂ ವಿಚಿತ್ರವಾಗಿರುತ್ತದೆ. ಅದು ಕೆಲವು ಸಂದರ್ಭಗಳಲ್ಲಿ ಕಟ್ಟು ಕಥೆಗಳಿಗಿಂತಲೂ ವಿಚಿತ್ರವಾಗಿರುತ್ತದೆ"ಯೆಂದು ಬೈರವನು ಹೇಳುತ್ತಾನೆ. ಅದರಂತೆ,

ಸಾಂಚ ಬಿನಾ ಸುಮಿರನ್ ನಹೀಂ, ಭಯಬಿನು ಭಕುತಿ ನ ಹೋಯ್।
ಪಾರಸಮೇಂ ಪರದಾ ರಹೈ ಕಂಚನ ಕೇ ಹಿ ಬಿಧಿ ಹೋಯ್॥

(ಸತ್ಯವಿಲ್ಲದೆ ಸ್ಮರಣೆ ಅಸಂಭವ; ಈಶ್ವರ ಭಯವಿಲ್ಲದೆ ಭಕ್ತಿ ಬಾರದು. ಪರುಷ ಮಣಿಯನ್ನು ಪರದೆ ಆಚ್ಛಾದಿಸಿದಾಗ ಅದರಿಂದ ಬಂಗಾರ ಹೇಗೆ ಉಂಟಾದೀತು?) ಮನಃ ಶುದ್ಧಿಯಿಲ್ಲದೆ ಏನೂ ಫಲಿಸಲಾರದು; ಸತ್ಯದಿಂದಲೇ ಮನಃಶುದ್ಧಿ ಎಂದು ಕಬೀರದಾಸನು ತಿಳಿಸಿದ್ದಾನೆ.

ನಮಗೆಲ್ಲರಿಗೂ ಬೇಕಾಗುವುದು ಸತ್ಯ; ಅಸತ್ಯವಲ್ಲ! ಅಸತ್ಯದಿಂದ ವ್ಯಕ್ತಿಗೆ ಹಾಗೂ ಸಮಾಜಕ್ಕೆ ಕೆಡಕಾಗುತ್ತದೆ.

ಅಂತರಂಗ ಬಹಿರಂಗ ಶುದ್ಧಿಯಾಗಲು ಸತ್ಯದ ಸಾಧನೆಯೇ ಸಂಪೂರ್ಣ ಅರಿವಿನ ಸಾಧನೆಯಾಗಿದೆ. "ಸೌಂದರ್ಯವೇ ಸತ್ಯ; ಸತ್ಯವೇ ಸೌಂದರ್ಯ"ವೆಂದು ಕೀಟ್ಸನು ನುಡಿದಿದ್ದಾನೆ. ಪೂರ್ಣವಾಗಿ ಸತ್ಯವನ್ನು ತಿಳಿಪಡಿಸಲು ಸಮಯ ಬೇಕಾಗುತ್ತದೆ; ವಿಶಾಲವಾದ ಮನೋಭಾವನೆಯೂ ಒಡಮೂಡಬೇಕಾಗುತ್ತದೆ.

ದಿಟವ ನುಡಿದು ಸದ್ವಿಚಾರದಲ್ಲಿ ಮನಸ್ಸನ್ನು ತೊಡಗಿಸಿದರೆ ಸಾರ್ಥಕತೆ; ಇಲ್ಲ ವಾದರೆ ಜೀವವಿದ್ದೂ ಶವವಾದಂತೆ ವ್ಯರ್ಥ. ಅಂತೆಯೇ ಮಹಾತ್ಮಾ ಬಸವಣ್ಣನವರು "ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ"ವೆಂದು ನಿರೂಪಿಸಿದ್ದಾರೆ.

**ಧರ್ಮಂ ಚರ**

ನಮಗಿಂದು ನೀತಿಯಿಂದ ಪ್ರತ್ಯೇಕಿಸಲಾರದ ನಿಜವಾದ ಧರ್ಮ ಬೇಕಾಗಿದೆ. ಧರ್ಮವು ಮಾನವನ ಬಾಳ್ವೆಳಕಿಗೆ ದಾರಿದೀಪವಾಗಿದೆ. ಧರ್ಮದ ಅನುಷ್ಠಾನದಿಂದ ಆತ್ಮಶಕ್ತಿಯು ಬಲಿಯುವದಲ್ಲದೆ ಆತ್ಮಶಾಂತಿಯೂ ದೊರೆಯುತ್ತದೆ. ಧರ್ಮದಿಂದ ವ್ಯಕ್ತಿಗೆ ಶಕ್ತಿ ಬರುತ್ತದೆ; ಸ್ಫೂರ್ತಿಯು ಸೆಲೆಯೊಡೆಯುತ್ತದೆ; ಭಾವಜೀವಿಯಾಗಿ ಅಂತರ್ಮುಖಿಯಾಗುತ್ತಾನೆ. ಅಭ್ಯುದಯ ಸಾಧನೆಗೆ ಧರ್ಮವೇ ಮೂಲಾಧಾರ. ಬಾಹ್ಯಾಡಂಬರದ ಧರ್ಮವು ಮಾನವನ ಮಹೋನ್ನತಿಗೆ ಮಾರ್ಗದರ್ಶನ ನೀಡಲಾರದು. "ಪತಿತಂ ಪತಂತಂ ಪತಿಷ್ಯಂತಂ ಧರತೀತಿ ಧರ್ಮಃ" "ಧಾರಣಾತ್ ಧರ್ಮಃ" ವಿನಾಶದತ್ತ ಸಾಗಿರುವ ಜಗತ್ತನ್ನು ಮೇಲಕ್ಕೆತ್ತಿ, ಎಚ್ಚರಿಸಿ, ಶಕ್ತಿಯನ್ನಿತ್ತು ಸಂರಕ್ಷಿಸುವದೇ ಧರ್ಮದ ಮೂಲ ಗುರಿ ಮತ್ತು ಅದರ ಅರ್ಥವೆಂದು ಹೇಳಬಹುದು. ವ್ಯಕ್ತಿಯಲ್ಲಿ ಹುದುಗಿರುವ ತಮಸ್ಸನ್ನು ನಾಶಿಸಿ, ಆತ್ಮಶಕ್ತಿಯ ದಿವ್ಯದೀಪ್ತಿಯನ್ನು ಜಾಗ್ರತಗೊಳಿಸುವದೇ ಧರ್ಮ.

"ಪರಮಾತ್ಮ! ನಮ್ಮನ್ನು ಕೆಡುಕಿನ ತೊಡಕಿನಿಂದ ಬಿಡಿಸಿ ಒಳ್ಳೆಯದಾರಿಗೆ ಕರೆದುಕೊಂಡು ಹೋಗು, ಕತ್ತಲೆಯಿಂದ ಬೆಳಕಿನೆಡೆಗೆ ಕರೆದೊಯ್ಯು, ಸಾವಿನಿಂದ ಸಾವಿಲ್ಲದ ಎಡೆಗೆ ನಮ್ಮನ್ನು ಸಾಗಿಸು," ಎಂದು ತಿಳಿಸುವ, ಕಲಿಸುವ ಮಂತ್ರವೇ ಧರ್ಮ, ಯಾವುದರಿಂದ ಆತ್ಮಕ್ಕೆ ನಿಜವಾದ ಸಂತೋಷ ಆಗುತ್ತದೆಯೊ ಅದು ಧರ್ಮದ ಒರೆಗಲ್ಲು, ಧರ್ಮಾಚರಣೆಯಿಂದ ಸಿಕ್ಕಷ್ಟು ಸುಖ ಬಹಿರ್ಪ್ರವೃತ್ತಿಯಿಂದ ದೊರೆಯಲಾರದು. ಕುಶಲನಾದವನು ಸಾಧನೆ ಮಾಡಿ, ಅನೇಕ ಬಗೆಯ ವ್ರತನಿಯಮಗಳನ್ನು ಸತ್ಯನಿಷ್ಠೆಯಿಂದ ಸಾಧಿಸಿ, ದೇಹವನ್ನು ದಂಡಿಸಿ, ಪ್ರಾಮಾಣಿಕತನದಿಂದ ಕಾಯಕ ಮಾಡಿ, ದುಡಿದು ಧರ್ಮವನ್ನು ಗಳಿಸಿ, ತತ್‌ಫಲವಾಗಿ ಬೆಳಕನ್ನು ಕಂಡು ಪುನೀತನಾಗುತ್ತಾನೆ. ದರ್ಶನಶಾಸ್ತ್ರದಲ್ಲಿಯೂ ಸಹ—

"ಯತೋಽಭ್ಯುದಯ ನಿಃಶ್ರೇಯಸಃ ಸಿದ್ಧಿಃ ಸಧರ್ಮಃ"

ಪ್ರಪಂಚದಲ್ಲಿ ಉನ್ನತಿ, ಮೋಕ್ಷ ಪ್ರಾಪ್ತಿ ಎರಡನ್ನೂ ಕೊಡುವದು ಧರ್ಮವೆಂದು ಮುಂತಾಗಿ ಹೇಳಿದೆ. ಇಂತು ವಿಶಾಲವಾದ ಅರ್ಥವುಳ್ಳ ಧರ್ಮಕ್ಕೆ ಸಂಕುಚಿತ ಕವಚವನ್ನು ತೊಡಿಸಿದರೆ ಮಾನವ ಧರ್ಮದ ವೈಶಿಷ್ಟ್ಯವನ್ನು, ಅದರ ಮಹತಿಯನ್ನು ಕಳೆಗುಂದಿಸಿದಂತೆ!! ಎಲ್ಲ ಧರ್ಮಗಳು ಮುಟ್ಟುವ ಕೊನೆಯ ಗುರಿ ಒಂದೇ ಆಗಿದೆ; ಅದನ್ನು ತಿಳಿದುಕೊಳ್ಳುವ, ಅರಗಿಸಿಕೊಳ್ಳುವ ವಿಶಾಲ ಹೃದಯ ಮಾತ್ರ ಬೇಕಾಗುತ್ತದೆ. ಮಹಾತ್ಮಾ ಗಾಂಧಿಯವರೂ ಸಹ—"ಧರ್ಮರಹಿತವಾದ ರಾಜಕಾರಣ, ಬಲವಿಲ್ಲದ ರೋಗಿಯಂತೆ,

ಸತ್ತ್ವವಿಲ್ಲ ವಿದಹಣ್ಣಿನಂತೆ" ಎಂದು ತಿಳಿಸಿ, ಪ್ರತಿಯೊಂದನ್ನು ಧರ್ಮವನ್ನು ಭದ್ರಬುನಾದಿಯ ಮೇಲೆ ಕಟ್ಟಿದರೆ ಬಹುದಿನ ಬದುಕಿ, ಬೆಳಗುವದೆಂದು ಉಸುರಿದ್ದಾರೆ. ಧರ್ಮವೂ ಸಹ ನಿಂತ ನೀರಿನಂತಾಗದೆ, ಹರಿಯುವ ತಿಳಿ ಜಲದಂತೆ ಸದಾ ಹರಿಯುತ್ತಿರಬೇಕು. ಕೃತಕತೆ ತೊಲಗಿ, ಹೃದಯವಂತಿಕೆ ಬರಬೇಕು. ಧರ್ಮವು ಸಂಸ್ಕೃತಿಯನ್ನು ತೋರಿಸುವ ಪ್ರತಿಬಿಂಬ ದಂತೆ ಇರಬೇಕು. ಇಂತಾಚರಿಸಿದಾಗ ಸತ್ಯ ಧರ್ಮದ ಅರಿವಾದೀತು.

## ಧ್ಯಾನೇ ಮೌನಂ

ಧ್ಯಾನವಿಲ್ಲದ ಮೌನ, ಮೌನವಿಲ್ಲದ ಧ್ಯಾನ ನಿರರ್ಥಕ. ಮಾನವತೆಯಿರದ ಮೌನ, ಸ್ವಾರ್ಥಪರ ಧ್ಯಾನ; ಅದು ಬಕಪಕ್ಷಿಯ ಧ್ಯಾನ. ಧ್ಯಾನ, ಮೌನ ಇವೆರಡೂ ಮಾನವನ ಅಂತಃಸಾಧನೆಗೆ ದಾರಿದೀಪಗಳು. ಚಿತ್ತದ ಏಕಾಗ್ರತೆಯೇ—ಇಚ್ಛಾಶಕ್ತಿಯ ನಿಗ್ರಹವೇ ಧ್ಯಾನ. ಮನಸ್ಸು ಚಂಚಲವಾಗಿದ್ದು ಕ್ಷಣಕ್ಷಣಕ್ಕೂ ಉಯ್ಯಾಲೆಯಾಡುತ್ತದೆ; ಅದು ಸ್ಥಿರ ವಲ್ಲ. ಸದಾ ಕಾಲವೂ ಹೊಯ್ದಾಡುತ್ತದೆ; ಅದನ್ನು ಅಂಕಿತದಲ್ಲಿಡುವದರಿಂದ ಮಾನಸಿಕ ಪಾವಿತ್ರ್ಯತೆಯೂ ಆತ್ಮದ ಪ್ರಶಾಂತತೆಯೂ ನೆಲಸುತ್ತದೆ. ಜ್ಞಾನದಿಂದ ನಮ್ಮ ಅರಿವು ಜಾಗ್ರತವಾದಾಗ ಮನಸ್ಸು ಅನಂತ ಶಾಂತಿಯನ್ನು ಸಮಾಧಾನವನ್ನು ಹೊಂದುತ್ತದೆ. ಅನಂತರ ಭೌತಿಕ ಪಿಪಾಸೆ ಹಾಗೂ ಆಸಕ್ತಿಗಳು ಕಾಣದಾಗುತ್ತವೆ. ಆಳವಾದ ಧ್ಯಾನದಿಂದ ಅರಿವಿನ ಜಾಗ್ರತಿಯಾಗುತ್ತದೆ. ಅದು ಆಶಾವಿರಹಿತವಾಗುತ್ತದೆ. ಔಚಿತ್ಯಪೂರ್ಣ ಧ್ಯಾನವು ಮನಸ್ಸನ್ನು ಸಮತೋಲನದಲ್ಲಿ ಇರಿಸುತ್ತದೆ. ದೃಢಚಿತ್ತ ಹಾಗೂ ಸಂಕಲ್ಪಗಳುಳ್ಳ ಮಾನ ವನು ಧ್ಯಾನಮಗ್ನನಾಗಬಲ್ಲನು. ಧ್ಯಾನಕ್ಕೆ ಮೌನವು ತುಂಬ ಸಹಾಯಕಾರಿಯಾಗುತ್ತದೆ. ಮನಸ್ಸು ದೇಹ ಹಾಗೂ ಇಂದ್ರಿಯಗಳ ಸಂಯಮನವೇ ಧ್ಯಾನಕ್ಕೆ ಅಡಿಗಲ್ಲು. ಪ್ರತಿಜ್ಞಾ ಬದ್ಧನಾದ, ಉಕ್ಕಿನ ಸಂಕಲ್ಪವುಳ್ಳ ಧ್ಯಾನ ಯೋಗಿಯು ಚಿನ್ನ, ಬೆಳ್ಳಿ ಮೊದಲಾದ ಲೌಕಿಕ ಆಮಿಷಗಳಿಂದ ಅನಾಸಕ್ತನಾಗಿರುತ್ತಾನೆ. ಅವನು ಬಹಿರ್ಮುಖಿಯಾಗದೆ ಅಂತರ್ಮುಖಿ ಯಾಗುತ್ತಾನೆ. ಮೌನದಿಂದಿದ್ದು ಆಧ್ಯಾತ್ಮಿಕ ಸಾಧನೆಯಲ್ಲಿ ನಿರತನಾಗುತ್ತಾನೆ. "ಮೌನವು ಅಜ್ಞತೆಯನ್ನು ಮರೆಮಾಡುವ ಬ್ರಹ್ಮನಿರ್ಮಿತವಾದ ಹೊದಿಕೆ"ಯೆಂದು ಭರ್ತೃಹರಿ ಹೇಳಿದ್ದಾನೆ. ಮೌನದಿಂದ ಧ್ಯಾನ ಸಾಧಿಸಿದಷ್ಟು ಬಹಿರ್ಮುಖ ಜೀವನದಿಂದ ಸಾಧಿಸದು. ಆದರೆ ಮೌನದಲ್ಲಿ ಹೃದಯಶುದ್ಧಿ ತುಂಬಿಕೊಂಡಿದ್ದರೆ ಅದು ಪ್ರಯೋಜನ ನೀಡುವದು. ಮೌನ ಧ್ಯಾನ ಇವು ಪಕ್ಷಿಗೆ ರೆಕ್ಕೆಗಳೆರಡಿದ್ದಂತೆ; ಒಂದು ಬಿಟ್ಟು ಒಂದು ಸಾಧಿಸಲಾಗದು. ಧ್ಯಾನವನ್ನು ನಿಬಿಡವಾದ ಏಕಾಂತದ ಅನಂತ ಶಾಂತಿಯ ಆವರಣದಲ್ಲಿ ಕ್ಷೋಭೆಗಳಿಂದ ಪರಿತ್ಯಕ್ತವಾದ ಪ್ರಶಾಂತ ಪರಿಸರದಲ್ಲಿ ಆತ್ಮೀಕರಿಸಿಕೊಂಡರೆ, ಧ್ಯಾನ ಬಲಿತು ನಿಶ್ಚಿಂತರಾಗ ಬಹುದು. ಧ್ಯಾನಕ್ಕೆ ಆಶಾವಿರಹಿತತೆಯೇ ಬೇರು. ಪರಮಾತ್ಮನ ನೆನಹಿನಲ್ಲಿ ಮನಸ್ಸು ತಲ್ಲೀನವಾದಾಗ ಶಾಂತಿ ಇಳಿದುಬರುತ್ತದೆ; ಭಾವಸೌಂದರ್ಯವು ಹೆಚ್ಚುತ್ತದೆ. ಈಶ್ವರನಿಗೆ ಸರ್ವಾರ್ಪಣೆಯನ್ನು ಗೈಯುವದರಿಂದ ಮೋಕ್ಷದ ದಾರಿ ಹತ್ತಿರವಾಗುತ್ತದೆ. ನಿಜಸುಖದ ಅರಿವಾಗುತ್ತದೆ. ತನ್ಮಯನಾಗಿ ಶಿವನೆ ತಾನಾಗುತ್ತಾನೆ. ಇದಕ್ಕಾಗಿ ಬಹುದಿನದ ತಪಸ್ಸು

ಶ್ರದ್ಧೆ, ವಿಶ್ವಾಸ, ಅಂತಃಶುದ್ಧಿ ಇವೆಲ್ಲವುಗಳನ್ನು ಪಡೆದರೆ ಪರಮಾತ್ಮನನ್ನು ಕಾಣುವದು ಸುಲಭ ಸಾಧ್ಯ.

**ಕ್ಷಮಾ ಶಕ್ತಿ**

ಕ್ಷಮೆ ಮಾನವನ ಮಹೋನ್ನತ ಗುಣ. ತಾಳ್ಮೆಯು ಅರಿವು ಮೂಡಿಸುತ್ತದೆ. ಬೆಳಕು ನೀಡುತ್ತದೆ. ಭಾವಶುದ್ಧಿಗೆ ಕ್ಷಮೆಯೇ ಮೂಲಾಧಾರ. ದುಡುಕಿದಂತೆ ಚಿತ್ತವು ಒಡೆದ ಗಡಿಗೆಯಂತಾಗುವದಲ್ಲದೆ, ಮನೋಧೈರ್ಯವುಂಟಾಗಲಾರದು. ಹುಟ್ಟಿದ ಮೇಲೆ ಕಷ್ಟ ಬರುವದು ಸಹಜ; ಅದನ್ನು ಸಹಿಸಿ ಮುಂದಡಿಯಿಡುವದೇ ಧೀರತೆ. ಕಡು ಕಠಿಣ ಪ್ರಸಂಗದಲ್ಲಿಯೇ ತಾಳಿದರೆ ಈ ಭವಸಾಗರವನ್ನು ದಾಟಬಹುದು. ವ್ಯಕ್ತಿಯಲ್ಲಿ ಶಕ್ತಿ ಬರಲು ಸಹಿಸುವ ಶಕ್ತಿಯಿದ್ದರೆ ಸಾಧ್ಯ. ಶಕ್ತಿಯುತರಾದವರಿಗೆ ಕ್ಷಮೆಯೂ ಇದ್ದರೆ, ಅವರು ಉನ್ನತ ಪದವಿಗೇರುವರಲ್ಲದೆ ಪ್ರಪಂಚವು ಅವರಿಗೆ ಬಾಗುತ್ತದೆ. ಅವರನ್ನು ಮನ್ನಿಸುತ್ತದೆ. ಅವರ ಆದರ್ಶ ವ್ಯಕ್ತಿತ್ವವು ಜನತೆಗೆ ಚೇತನವನ್ನು ನೀಡುತ್ತದೆ. ತಪ್ಪುವದು ಮನುಷ್ಯನ ಸ್ವಭಾವವಾದರೆ, ಕ್ಷಮಿಸುವದು ದೈವೀಗುಣ. ಕ್ಷಮೆಯಿರದ ಬಾಹ್ಯಶಕ್ತಿ ಬೂರಗದ ಅರಳೆಯಂತೆ, ಭದ್ರವಿಲ್ಲದ ಬುನಾದಿಯಂತೆ ವ್ಯರ್ಥ. ಅಂತಃಶಕ್ತಿಯನ್ನು ಗಳಿಸಿದರೆ ಕ್ಷಮಾಪಣೆ ಸಾಧ್ಯ. ಬಾಹ್ಯಶಕ್ತಿಯಿದ್ದವರು ಬಿದ್ದವರನ್ನು ಮತ್ತಿಷ್ಟು ಒತ್ತಿದರೆ ಪಾಪಕೂಪದಲ್ಲಿ ಬಿದ್ದು ಬಳಲುವರಲ್ಲದೆ, ಅವರ ಜೀವನ ತೋರಿಕೆಯದಾಗಿ ಶಿವನಡಿ ಪಿಡಿಯಲು ಅಸಮರ್ಥವಾಗುವದು. ಬಾಹ್ಯಶಕ್ತಿ ಕ್ಷಣಿಕ; ಆತ್ಮಶಕ್ತಿ ನಿರಂತರ; ಚೇತನವನ್ನು ನೀಡುವಂತಹದು. ಕಳಕಳಿಯ ಹೃದಯ ಅಲ್ಲಿ ಮನೆ ಮಾಡಿರುತ್ತದೆ; ಭಗವಂತನ ದಯೆ ಅವರ ಮೇಲಿರುತ್ತದೆ. ತಾಮಸೀಯ ಶಕ್ತಿಯಿಂದ ಆಗುವಷ್ಟು ಹಾನಿ ಮತ್ತಾವದರಿಂದಲೂ ಆಗದು. ತಾಮಸೀಯ ಶಕ್ತಿಯಿಂದ ಬುದ್ಧಿ ವಿಭ್ರಮವಾಗಿ ಕೊನೆಗೆ ಬುದ್ಧಿನಾಶವಾಗಿ, ತಲೆ ಕೆಟ್ಟ ಹುಚ್ಚನಂತೆ ತಿರುಗುತ್ತಾನೆ. "ಪಾಪವನ್ನು ಕ್ಷಮಿಸಬೇಕು; ಆದರೆ ಪಾಪಿಯನ್ನಲ್ಲ" ಎಂದು ಗಾಂಧೀಜಿ ನುಡಿದಿದ್ದಾರೆ. ನಿರಂತರ ಪಾಪದ ಮಡುವಿನಲ್ಲಿ ಬಿದ್ದವರಿಗೆ ಅಲ್ಲಿ ಕ್ಷಮಾಪಣೆ ಸಲ್ಲದು. ಕ್ಷಮಿಸುವದು ವೀರತನದ ಗುಣವಾದರೂ ಅದಕ್ಕೂ ಮಿತಿಯುಂಟು. ಕ್ಷಮಿಸುವದರಿಂದ ಆ ವ್ಯಕ್ತಿಗೆ ಹಿತವಾಗುವಂತಿದ್ದರೆ, ಆಗ ಅವನು ಹಿರಿಯರ ಮಾತುಗಳನ್ನು ಪರಿಪಾಲನೆ ಮಾಡುವಂತಿದ್ದರೆ ಅವನಿಗೆ ಪ್ರಯೋಜನವಾಗಿ ಕಲ್ಯಾಣವಾಗುವದು. ಅವರವರ ಸ್ವಭಾವವನ್ನು ಪರೀಕ್ಷಿಸಿ, ಕ್ಷಮಿಸಿ, ತಿದ್ದುವದೇ ಹಿರಿಯರ ಗುರಿಯಾಗಿರಬೇಕು. ಅಸೂಯೆಗೆ ಆಸ್ಪದವಿರಕೂಡದು. ಕ್ಷಮಾಪಣೆ ಮೊದ ಮೊದಲು ಕಹಿ ಕಂಡರೂ ಮುಂದೆ ಅದು ಸುಮಧುರ ಫಲವಾಗಿ ಪರಿಣಮಿಸುತ್ತದೆ. ಮಹಾತ್ಮಾ ಬಸವಣ್ಣನವರೂ ಸಹ "ದಯವೇ ಧರ್ಮದ ಮೂಲವಯ್ಯಾ" ಎಂದು ನುಡಿದು ಧರ್ಮಸಾರವನ್ನೇ ಆ ವಚನದಲ್ಲಿ ತುಂಬಿದ್ದಾರೆ. ಇದೇ ಭಾವವನ್ನು ಸಂತ ಕಬೀರದಾಸರು—

"ಜಹಾಂ ದಯಾ ತಹಂ ಧರ್ಮ ಹೈ ಜಹಾಂ ಲೋಭ ತಹಂ ಪಾಪ್।
ಜಹಾಂ ಕ್ರೋಧ ತಹಂ ಕಾಲ ಹೈ ಜಹಾ ಛಿಮಾ ತಹಂ ಆಪ್॥"

ದಯೆಯಿದ್ದಲ್ಲಿ ಧರ್ಮ, ಲೋಭವಿದ್ದಲ್ಲಿ ಪಾಪ, ಕ್ರೋಧವಿದ್ದಲ್ಲಿ ಸಾವು, ಕ್ಷಮೆಯಿದ್ದಲ್ಲಿ ಭಗವಂತನ ವಾಸವಿರುತ್ತದೆಂದು ತಿಳಿಸಿದ್ದಾರೆ.

ತಾಳಿದವನು ಬಾಳುತ್ತಾನೆಂದುಸುರುವ ಹಿರಿಯರ ಅನುಭವ ವಾಣಿಯು ಬಾಳ್ವೆಳಕಿಗೆ ಕೈದೀವಿಗೆ. ಅಂತೆಯೇ ಮಹಾಕವಿ ಕಾಳಿದಾಸನು "ಕ್ಷಮಾ ಶಕ್ತಿ" ಎಂದು ನುಡಿದಿದ್ದಾನೆ.

**ತ್ಯಾಗೇ ಶ್ಲಾಘಾ-ವಿಪರ್ಯಯಃ**

ತ್ಯಾಗ ಅಂದೊಂದು ದೈವೀಗುಣ. ಮಾನವನ ಸುಖಪ್ರಾಪ್ತಿಗೆ ತ್ಯಾಗವು ಆಭರಣವಿದ್ದಂತೆ. ಸತ್ಕಾರ್ಯವನ್ನು ಮಾಡಲು ಮೊದಲು ತ್ಯಾಗವು ಬೇಕಾಗುತ್ತದೆ. ವಿಶಾಲತೆಯ್ಯ ಕುರುಹೇ ತ್ಯಾಗ. ಹೃದಯದ ಶುದ್ಧಿಯಲ್ಲಿ ತ್ಯಾಗವು ಹೆಚ್ಚುತ್ತದೆ. ಪರರ ನೋವನ್ನು ಅಳಿಸುತ್ತದೆ. ಅವರಿಗೆ ಶಾಂತಿಯನ್ನು ನೀಡುತ್ತದೆ. ತ್ಯಾಗದಿಂದಲೇ ವೈರಾಗ್ಯ ಲಭಿಸುತ್ತದೆ. ತ್ಯಾಗದಿಂದ ಸಿಗುವಷ್ಟು ಸುಖ ಮತ್ತಾವದರಿಂದಲೂ ಸಾಧ್ಯವಾಗದು. ತ್ಯಾಗ ಮನೋಧರ್ಮ ಆತ್ಮಸಿದ್ಧಿಗೂ ದಾರಿದೀಪವಾಗುತ್ತದೆ. ಭಾವಶುದ್ಧಿಗೆ ತ್ಯಾಗವೇ ಮೊದಲ ಮೆಟ್ಟಲು. ಬಿದ್ದವರನ್ನು ಎತ್ತಿ, ಅವರಿಗೆ ಸಂತೃಪ್ತಿಯ ಸಿಹಿನೀರನ್ನು ನೀಡುವದೇ ನಿಜವಾದ ತ್ಯಾಗ. ಅದು ಪ್ರತ್ಯುಪಕಾರವಿಲ್ಲದ ಕೊಡುಗೆಯಾಗಿರಬೇಕು.

"ಯಾವಾಗಲೂ ಉದಾರವಾಗಿ ದಾನಮಾಡು. ಪ್ರತಿಯಾಗಿ ಏನನ್ನೂ ಆಶಿಸಬೇಡ. ಆಗ ನಿನಗೆ ಪ್ರತಿಫಲ ಹೆಚ್ಚಾಗಿ ಬರುವದು" ಎಂದು ಏಸು ಹೇಳಿದ್ದಾನೆ. ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು ಪರರಿಗೆ! ಕೊಟ್ಟದ್ದು ಕೆಟ್ಟಿತೆನಬೇಡ। ಮುಂದೆ ಕಟ್ಟಿಹುದು ಬುತ್ತಿ ಸರ್ವಜ್ಞ॥ ಎಂದು ತ್ಯಾಗದ ವಿವರಣೆಯನ್ನು ಸರ್ವಜ್ಞನು ವಿವರಿಸಿದ್ದಾನೆ.

ದಾನ ಮತ್ತು ತ್ಯಾಗ ಶಬ್ದ ಬೇರೆಯಾದರೂ ಅವೆರಡರ ಗೂಢಾರ್ಥ ಒಂದೇ. ಅವೆರಡರಿಂದ ಸಮಾಜಕ್ಕೂ, ಪ್ರಾಪಂಚಿಕ ವ್ಯವಹಾರಕ್ಕೂ ಅನುಕೂಲವಾಗುತ್ತದೆ. ತ್ಯಾಗಿಯು ಪ್ರಶಂಸೆಯಿಂದ ಹೊರತಾಗಿದ್ದರೆ ಅದು ಸಾರ್ಥಕ. ಸ್ತುತಿಗೆ ಪ್ರಾಧಾನ್ಯತೆಯನ್ನಿತ್ತು ನೀಡಿದರೆ, ಅಲ್ಪತೃಪ್ತಿಗೆ ಆಶೆ ಮಾಡಿದಂತೆ. ತ್ಯಾಗವಿಲ್ಲದ ಜೀವನ ಬರಡು; ಕೊಡುವದು ಧರ್ಮ; ಕೊಟ್ಟೆನೆಂಬುದು ಮನದಲ್ಲಿ ಹೊಳೆದರೆ, ಏಡಿಸಿ ಕಾಡಿತ್ತು ಶಿವನ ಡಂಗುರ. ಕೊಟ್ಟ ನಂತರ ಮರುಗಿದರೆ ಮತ್ತಿಷ್ಟು ಆತ್ಮಘಾತುಕ ಮಾಡಿಕೊಂಡಂತೆ; ನಿಜ ಸುಖಕ್ಕೆ ಅಪಾಯವನ್ನುಂಟು ಮಾಡಿಕೊಂಡಂತೆ. ಮತ್ತೊಂದೆಡೆ ಸರ್ವಜ್ಞನು-ಸ್ವಾರ್ಥವನ್ನು ಬಯಸಿ, ಧರ್ಮಕ್ಕೆ ಎಳ್ಳಷ್ಟು ನೀಡದೆ ಕಳ್ಳರಿಗೆ, ಸುಳ್ಳರಿಗೆ ಕೊಡತಕ್ಕವರನ್ನು ಕಂಡು, ಮರುಗಿ ಈ ರೀತಿ ನುಡಿದಿದ್ದಾನೆ: "ದಾನವೆಂದರೆ ತಲೆಯ। ಚಾನದಲಿ ಕಡಿದಂತೆ, ತಾನೊಂದು ತಪ್ಪು ಮಾಡಿ ನೂರಾರನು। ಮೌನದಿ ಕೊಡುವ ಸರ್ವಜ್ಞ॥" ಅನುರಾಗಕ್ಕೆ ಮೂಲವಾದ ಆಶೆಯನ್ನೂ ತೊರೆದಾಗ ಅದು ತ್ಯಾಗವೆನಿಸುತ್ತದೆ. ಇಂತಹ ತ್ಯಾಗ ಬರಲು ಬಹುದಿನದ ಪುಣ್ಯ ಬೇಕಾಗುತ್ತದೆ. ಸತ್ಸಂಗ, ಸದ್ವಿಚಾರ ಮನದಲ್ಲಿ ಮನೆಮಾಡಿಕೊಂಡಿದ್ದರೆ ತ್ಯಾಗದ ಅರಿವು ಅರ್ಥವಾಗುತ್ತದೆ.

"ಹಾಥ್ ಬಡಾ ಹರಿ ಭಜನಕರ್, ದ್ರವ್ಯ ಬಡಾ ಕಚ್, ದೇಯ್। ಅಕಲ ಬಡೀ ಉಪಕಾರ ಕರ್, ಜೀವನ ಕಾ ಫಲ ಯೇಹ। ಕೈಗಳು ಬಲಿಷ್ಠವಾಗಿದ್ದಾಗ ಹರಿಭಜನೆ ಮಾಡು. ದ್ರವ್ಯ ಹೆಚ್ಚಿದಾಗ ಏನಾದರೂ ದಾನಮಾಡು. ಬುದ್ಧಿವಂತನಾಗಿದ್ದಲ್ಲಿ ಉಪಕಾರ ಮಾಡು. ಇದೇ ಜೀವನದ ಸಫಲತೆಯೆಂದು ಕಬೀರದಾಸರು ತಮ್ಮ ವಚನಾಮೃತದಲ್ಲಿ ತಿಳಿಸಿದ್ದಾರೆ.

ತ್ಯಾಗವು ದೇವನತ್ತ ಕರೆದೊಯ್ಯುವ ಕೈದೀವಿಗೆ.

## ಗುರುವಿರಕ್ತ ಭಾವೈಕ್ಯಂ ಸಮಾಜೋದ್ಧಾರಕಾರಕಂ

ವೀರಶೈವ ಧರ್ಮವು ಬಹುಪ್ರಾಚೀನ ಕಾಲದಿಂದ ಬಂದುದು. ವೀರಶೈವ ಧರ್ಮದಲ್ಲಿ ವೀರಶ್ರೀ ತುಂಬಿರುವದಲ್ಲದೆ ವಿಶ್ವಧರ್ಮಗಳನ್ನೊಳಗೊಂಡಿದೆ. ವಿಶಾಲ ತಳಹದಿಯ ಮೇಲೆ ರೂಪುಗೊಂಡಿದ; ವಿಶ್ವಶಕ್ತಿಗೆ ಸಹಾಯಕವಾಗಿದೆ; ಸರ್ವಧರ್ಮಗಳಿಗೆ ಸಹಕಾರಿಯಾಗಿದೆ; "ಕಾಯಕವೇ ಕೈಲಾಸ"ವನ್ನು ಸಾರಿಹೇಳುತ್ತಿದೆ. ಆತ್ಮಶಕ್ತಿಯನ್ನು ಪಡೆದು ಶಿವಸಾಕ್ಷಾತ್ಕಾರವನ್ನು ಪಡೆಯಲು ಈ ವೀರಶೈವ ಧರ್ಮದಲ್ಲಿ ಸಾಕಷ್ಟು ಸಾಧನೆಗಳಿವೆ. ವೀರಶೈವ ಧರ್ಮದಲ್ಲಿ ಷಟ್‌ಸ್ಥಲ ಸಿದ್ಧಾಂತ ರಹಸ್ಯವು ಮತ್ತು ನೂರೊಂದು ನೆಲೆಯ್ನಸಿಲವನ್ನರಿಯುವ ತತ್ವವು ತುಂಬಿ ತುಳುಕಿದೆ. ನಿತ್ಯ ಸತ್ಯ ಮಾರ್ಗವಾಗಿದೆ.

ಈ ವೀರಶೈವ ಸಮಾಜದಲ್ಲಿ ಗುರು–ವಿರಕ್ತರು ಕಣ್ಣುಗಳೆರಡಿದ್ದಂತೆ; ಗುರು–ವಿರಕ್ತರೀರ್ವರು ಸಮಾಜದ ಅಭ್ಯುದಯಕ್ಕೆ, ಹಗಲಿರುಳು ಅಂತಃಕರಣಪೂರ್ವಕ ಭಾವೈಕ್ಯದೊಡನೆ ದುಡಿದರೆ ಸಮಾಜಕ್ಕೆ ಕಲ್ಯಾಣ. ಕೇವಲ ವೈಯುಕ್ತಿಕ ಪ್ರತಿಷ್ಠೆಗೆ ಹೆಚ್ಚು ಮಹತ್ವ ನೀಡಿದರೆ ಸಮಾಜದಲ್ಲಿಯ ಅಂತಃಕಲಹಗಳು ಹಾಗೆಯೇ ಉಳಿದು ಬೆಳವಣಿಗೆಗೆ ಅಡ್ಡಿಯುಂಟಾಗುತ್ತದೆ. ನಮ್ಮಲ್ಲಿರುವ ಕಲ್ಪಿತ ಸಂಶಯುಗಳು ಭಾವೈಕ್ಯತೆಗೆ ಅಡ್ಡಗೋಡೆಯಾಗಿವೆ. ಅವೆಲ್ಲವುಗಳು ದೂರಾಗಲು, ಪ್ರತಿಯೊಬ್ಬರಲ್ಲಿ ಪರಿಶುದ್ಧ ವಿಚಾರವಾಹಿನಿ ಪ್ರವಹಿಸಿದರೆ ಸಾಧ್ಯವಾಗುತ್ತದ. ಇಲ್ಲದಿದ್ದರೆ, ದಿನೇ ದಿನೇ ಪಕ್ಷ ಪಂಗಡಗಳೆಂಬ ಕಸ ಬೆಳೆದು, ವೀರಶೈವ ಮಹಾವೃಕ್ಷದ ಅಂತಃಸತ್ವವನ್ನು ಹೀರಿ, ಸಮಾಜದ ಶಾಖೋಪಶಾಖೆಗಳಲ್ಲಿರುವ ರಸಭರಿತ ಹಣ್ಣಿನಲ್ಲಿಯ ಕಸುವು ಹೋಗಿ, ರಸಹೀನವಾಗಿ ಉಳಿಯುವ ಪ್ರಸಂಗ ಬಂದೀತು. ಒಳಪಂಗಡಗಳು ಬೆಳೆದು ಬೇರ್ಬಿಟ್ಟಾಗ, ಸಮಾಜದಲ್ಲಿರುವ ಅನೈಕ್ಯತೆ ಹೆಚ್ಚಾದಾಗ ನಾ ಹೆಚ್ಚು, ನೀ ಹೆಚ್ಚು ಎನ್ನುವ ಒಣ ವಾದದಲ್ಲಿ ಕಾಲಕಳೆದರೆ ವೀರಶೈವ ಸಮಾಜದ ರಥವನ್ನು ಮುನ್ನಡೆಸುವವರಾರು? ಮಹಾತ್ಮಾ ಬಸವಣ್ಣನು ಪರಿಶ್ರಮಿಸಿ ಉಳಿಸಿ; ಉದ್ಧಾರಮಾಡಿದ ವೀರಶೈವ ಸಮಾಜವನ್ನು ನಾವೆಲ್ಲರೂ ಒಂದಾಗಿ ಮೇಲಕ್ಕೆತ್ತಬೇಕು. ನಮ್ಮಲ್ಲಿ ಪರಿಶುದ್ಧ ಬಂಧುತ್ವ ಬೆಳೆದು ಅವರಿವರೆನ್ನುವ ಭೇದ ತೊಲಗಿ, ಪರಸ್ಪರ ಹೃದಯ ಮಿಡಿತದಿಂದ ಹೃದಯ ಕೂಡಿದರೆ ಸಮಾಜವು ಉಳಿದೀತು, ಬೆಳೆದೀತು. ಎಲ್ಲರ ಮುಖಗಳಲ್ಲಿಯೂ ಆದರ್ಶಪ್ರಾಯವಾದ ವಿಚಾರಗಳು ಹೊರಡುತ್ತಲಿರ

ಬೇಕು. ಕೃತಿಗಿಳಿಯಲು ಪರಿಶ್ರಮಿಸುತ್ತಿರಬೇಕು. ಕ್ರಿಯಾತ್ಮಕ ಚಟುವಟಿಕೆ ಸಾಗಿ, ಗುರು ವಿರಕ್ತರ ಸಮ್ಮಿಲನವಾಗಿ, ವೀರಶೈವ ಸಮಾಜದಲ್ಲಿ ಸುವ್ಯವಸ್ಥೆಯುಂಟಾಗಲೆಂಬುದೇ ನಮ್ಮ ಹಿರಿಯಾಶೆ. "ಹೃದಯವೆಂಬ ಹಣತೆಯಲ್ಲಿ ಸಮತೆ ಸಹಕಾರದ ಬತ್ತಿಯನಿರಿಸಿ, ಸೌಹಾರ್ದತೆಯ ಎಣ್ಣೆಯನೆರೆದರೆ, ಭಾವೈಕ್ಯವೆಂಬ ಬೆಳಗಿನಲ್ಲಿ ಸಂಘಟನೆ ಸಂಜನಿಸುವದಯ್ಯ! ಸಮಯ ಕಳೆಯದೆ "ಸಮಯ" ಪರಂಪರೆಗಳೆಲ್ಲವೂ ಕೂಡಿಕೊಂಡರೆ ಸಮಾಜದ ಪುನರ್ಘಟನೆಗೆ ಪುರಸ್ಕಾರ ಸಿಗುವದಯ್ಯ, ಸಮಯ ಭೇದದಲ್ಲಿ ಹುರುಳಿಲ್ಲ, ಗುರು-ವಿರಕ್ತಿ ಭೇದದಲ್ಲಿ ತಿರುಳಿಲ್ಲ, ಒಳಪಂಗಡ ಭೇದದಲ್ಲಿ ಕರುಳಿಲ್ಲ. ಈ ಭೇದತ್ರಯವು ನಿರಸನವಾದಾಗಲೇ ವೀರಶೈವ ಷಟ್‌ಸ್ಥಲ ಧ್ವಜವು ಮರಳಿ ಮರಳಿ ಆಗಸದೆತ್ತರಕೆ ಹಾರಾಡುವದಯ್ಯ ಭ್ರೂಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ".

## ತೇ ವೀರಶೈವಾಃ

"ತೇ ವೀರಶೈವಾ ಲೋಕನಾಂ ನಿತ್ಯಂ ಕ್ಷೇಮಾಭಿಲಾಷಿಣಃ" ಎಂದುದಾಗಿ ಶಾಸ್ತ್ರವು ಹೇಳುತ್ತದೆ. ಇದೇ ಭಾವವನ್ನು ಶಿವಶರಣರು ಸಹ ಸಕಲ ಜೀವಾಳಿಗೆ ಲೇಸನ್ನು ಬಯಸುವದೇ ವೀರಶೈವ ಧರ್ಮದ ತಿರುಳೆಂದು ಬೋಧಿಸಿದ್ದಾರೆ. ಇದುವೆ ಸಮನ್ವಯ ಸಿದ್ಧಾಂತಸಾರ. ಮಾನವ ಲೋಕದ ಉದ್ಧಾರವೇ ವೀರಶೈವ ಧರ್ಮದಲ್ಲಿ ಅಡಗಿದೆ. ವೀರಶೈವವು ಮಾನವನನ್ನು ಮಹೇಶನನ್ನಾಗಿಸುವ ಸಂಜೀವಿನಿ. ಕೆಲವರು ಇಹವನ್ನು ತುಚ್ಛವೆಂದು, ದೇಹವನ್ನು ಹೇಯವೆಂದು ತಿಳಿದು ಹೊನ್ನು ಮಣ್ಣು ಇವುಗಳನ್ನು ತಿರಸ್ಕರಿಸುವುದುಂಟು. ಆದರೆ ವೀರಶೈವ ಶರಣರು ಜಗತ್ತು ಶಿವಸ್ವರೂಪವೆಂದು ಭಾವಿಸಿ ಪ್ರತಿಯೊಬ್ಬನೂ ಸತ್ಯ ಶುದ್ಧ ಕಾಯಕವನ್ನು ಕೈಗೊಂಡು "ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು" ಎಂದು ತೀಳಿ ಹೇಳಿ, ಆ ಹೆದ್ದಾರಿಯನ್ನು ಅನುಸರಿಸಿ ಸಾಮಾಜಿಕವಾಗಿಯೂ, ಆತ್ಮೋದ್ಧಾರ ಲೋಕೋದ್ಧಾರ ಕಾರ್ಯಗಳಲ್ಲಿ ಭಾಗಿಗಳಾಗುತ್ತಾರೆ. ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಮಾನವೀಯತೆಯ ಕಲ್ಪನೆ ನೀಡಿ, ಅಂಧಾಚಾರಗಳಿಂದ ಮಲಗಿದ ಜನಾಂಗವನ್ನು ಎಚ್ಚರಿಸಿದ ಮಹಾಪುರುಷ ಮಹಾತ್ಮಾ ಬಸವಣ್ಣ ವಿಶ್ವಶಾಂತಿಗೆ ಬೇಕಾಗಿರುವ ಎಲ್ಲ ತತ್ವಗಳನ್ನೂ ತಿಳಿಸಿ ಸ್ವತಃ ಆಚರಿಸಿ ಸಮಾಜವನ್ನು ಬೆಳಕಿಗೆ ತಂದ ವಿಶ್ವವಿಭೂತಿ. ಕಾಯಕ ತತ್ವವನ್ನು ಸಮಾಜಕ್ಕೆ ತೋರಿಸಿಕೊಟ್ಟವರೇ ಜಗಜ್ಜ್ಯೋತಿ ಬಸವಣ್ಣನವರು. ವೀರಶೈವವು ಕಾಯಕವೆಂಬ ಮಹಾಮಂತ್ರವನ್ನು ಕಂಡುಕೊಂಡಿತು. ವಿಶ್ವಶಾಂತಿಗೆ ವೀರಶೈವದ ಶ್ರೇಷ್ಠ ಕೊಡುಗೆಯೆಂದರೆ ಈ ಕಾಯಕ ತತ್ವವೆಂದು ಹೇಳಬಹುದು. ವೀರಶೈವ ದರ್ಶನದಲ್ಲಿ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಶೋಷಣೆಯಿಂದ ಪೋಷಣೆಯನ್ನು ಪಡೆಯಲಾರನು. "ಕಾಯಕವೇ ಕೈಲಾಸ" Work is Worship ಎಂಬುದು ವೀರಶೈವದ ಮಹಾ ಪತಾಕೆ. ವೀರಶೈವವು Liberty, Fraternity ಮತ್ತು Equality ಎಂಬ ತ್ರಿಪುಟಿಯನ್ನು ಎತ್ತಿ ಹಿಡಿದು ವಿಶ್ವಶಾಂತಿಗೆ ಹೆದ್ದಾರಿ ಹಾಕಿ

ಕೊಟ್ಟಿದೆ. ಆಧ್ಯಾತ್ಮಿಕ ವಿಷಯದಲ್ಲಿ ಸ್ತ್ರೀಯರು ಪುರುಷರಿಗಿಂತ ಯಾವ ರೀತಿಯಿಂದಲೂ ಕಡಿಮೆಯಿರುವದಿಲ್ಲವೆಂದು ವೀರಶೈವ ಧರ್ಮವು ತೋರಿಸಿಕೊಟ್ಟಿದೆ. ಇದರಿಂದ ಜಗತ್ತಿನ ಸ್ತ್ರೀಯರಿಗೆ ಆತ್ಮೋನ್ನತಿ ಪಡೆಯಲು ಸುಗಮವಾಗಿದೆ. ವೀರಶೈವ ಧರ್ಮವು ಕೇವಲ ವ್ಯಕ್ತಿ ವೈಶಿಷ್ಟ್ಯವನ್ನು ಸಾರುವದಕ್ಕಾಗಲಿ, ವ್ಯಕ್ತಿಯ ವಿಮುಕ್ತಿಯನ್ನು ಸಾಧಿಸು ವದಕ್ಕಾಗಲಿ ಜನ್ಮ ತಾಳಿಲ್ಲ. ಪಾಂಡಿತ್ಯದ ಕಟ್ಟಿನಿಂದ ಒಂದು ಗಹನತತ್ವವನ್ನು ಪ್ರತಿ ಪಾದಿಸಿ ಜನತೆಯನ್ನು ದಂಗುಗೊಳಿಸುವದಕ್ಕೂ ಪ್ರಯತ್ನಿಸಲಿಲ್ಲ. ಆಧ್ಯಾತ್ಮಿಕ ಸಾಧನೆ ಯಿಂದ ಯಾವ ಆನಂದ, ನೈರ್ಮಲ್ಯ, ಶಾಂತಿಗಳು ದೊರಕುವವೋ ಅವುಗಳ ಲಾಭ ಎಲ್ಲರಿಗೂ ದೊರೆಯಬೇಕು ಎಂಬುದಾಗಿದ್ದಿತು. ಇಹ ಪರ ಲೋಕಗಳನ್ನು ಎರಡು ಜಗತ್ತುಗಳನ್ನಾಗಿ ವಿಭಾಗಿಸದೆ ಒಂದು ಮತ್ತೊಂದರ ಪೂರಕವೆಂದು ಭಾವಿಸುವದೇ ವೀರಶೈವ ಧರ್ಮದ ಮೂಲೋದ್ದೇಶಗಳು. ಜಾಗತಿಕ ಶಾಂತಿಗಾಗಿ ಹಾಗೂ ಜೀವನದ ಸಿದ್ಧಿಗಾಗಿ ವೀರಶೈವ ಧರ್ಮವು ದಾರಿದೀಪವಾಗಿದೆ.

**ಧರ್ಮಸಹಕೃತಂ ಕರ್ಮ ಜಗತಃ ಶಾಂತಿದಾಯಕಂ**

ಇಂದು ಜಗತ್ತಿಗೆ ಬೇಕಾಗಿರುವದು ಶಾಂತಿ. ಇದಕ್ಕಾಗಿ ಪ್ರಪಂಚದ ನಾನಾ ಧರ್ಮದ ಗುರುಗಳೂ, ತತ್ವವೇತ್ತರೂ ಏಕತ್ರಿತರಾಗಿ ಪ್ರಯತ್ನಿಸುತ್ತಿದ್ದೇವೆ. ಶಾಂತಿಯು ಒಳಗೂ ಬೇಕು; ಹೊರಗೂ ಬೇಕು. ಒಂದು ಆತ್ಮ ಪ್ರಗತಿ; ಮತ್ತೊಂದು ಭೌತಿಕ ಪ್ರಗತಿ. ಇವೆರಡು ಒಂದಕ್ಕೊಂದು ಪೂರಕವಾಗಿರಬೇಕು. ಒಂದು ಬಿಟ್ಟು ಒಂದು ಮಾಡಿದರೆ ಶಾಂತಿ ಸಿಗದು.

ಅದಕ್ಕಾಗಿ ನಾವಿಂದು ಜಪಾನದಲ್ಲಾದ ಮೊದಲನೆಯ ಸಮ್ಮೇಲನದಲ್ಲಿಯಂತೆ, ಬೆಲ್ಜಿಯಮ್ ದೇಶದಲ್ಲಿರುವ LEUVEN (ಲುವೆನ್) ನಗರದಲ್ಲಿ "ದ್ವಿತೀಯ ಜಾಗತಿಕ ಧರ್ಮ ಮತ್ತು ಶಾಂತಿ ಸಮ್ಮೇಲನ" (W.C.R.P. 2) ದಲ್ಲಿ ಭಾಗವಹಿಸಿ, ಅನೇಕ ಧರ್ಮದ ಐವತ್ತು (೫೦) ರಾಷ್ಟ್ರ ಪ್ರತಿನಿಧಿಗಳೂ ಶಾಂತಿ ಸ್ಥಾಪನೆಗಾಗಿ ವಿಚಾರ ವಿನಿಮಯ ಮಾಡಿದೆವು.

ಈ ಸಲದ ಸಭೆಯಲ್ಲಿ ಪ್ರಶ್ನೋತ್ತರಗಳಿಗೆ ಹೆಚ್ಚು ಪ್ರಾಧಾನ್ಯತೆ ಇತ್ತು. Religion and the quality of Life ಈ ಬಗ್ಗೆ ಸುದೀರ್ಘವಾಗಿ ವಿವೇಚಿಸಿ ನಿರ್ಣಯಗಳನ್ನು ಕೈಕೊಳ್ಳಲಾಯಿತು.

ವಿಶ್ವಶಾಂತಿಗೆ, ಭಾವೈಕ್ಯಕ್ಕೆ ಇವೇ ಮುಖ್ಯ ಸಾಧನಗಳು. ಇವೆಲ್ಲವುಗಳು ಕ್ರಿಯಾ ತ್ಮಕ ರೀತಿಯಲ್ಲಿ ಬರಬೇಕೆಂಬುದೇ ಎಲ್ಲ ಪ್ರತಿನಿಧಿಗಳ ಹೃದಯದ ಹಾರೈಕೆಯಾಗಿತ್ತು.

ಅಂತೆಯೇ ಈ ಸಮ್ಮೇಲನದಲ್ಲಿ ನೋಬೆಲ್ ಪಾರಿತೋಷಕವನ್ನು ಪಡೆದ, ನೋಯಲ್ ಬೇಕರ್ ಅವರು "ವಿಶ್ವಶಾಂತಿ ಸಿಗಬೇಕಾದರೆ ಪರಸ್ಪರ ರಾಷ್ಟ್ರಗಳಲ್ಲಿ ಮಾನ

ವೀಯ ಅನುಕಂಪ, ಸಹಕಾರ ಮನೋಭಾವ, ಆರ್ಥಿಕ ಪ್ರಗತಿ, ನಿಶ್ಶಸ್ತ್ರೀಕರಣ ಮೊದಲಾದವುಗಳು ಅವಶ್ಯ ಬೇಕು" ಎಂಬುದನ್ನು ಒತ್ತಿ ಒತ್ತಿ ಹೇಳಿದರು.

ಅನೇಕ ಜಿಜ್ಞಾಸುಗಳು ಸಹ ಕ್ರಿಯಾ ಸಮಿತಿಯಲ್ಲಿ ಆ ವಿಷಯದ ಬಗ್ಗೆ ಚರ್ಚಿಸುತ್ತ ಇದೇ ಭಾವವನ್ನು ವ್ಯಕ್ತ ಮಾಡಿದರು.

ಅಂದ ಮೇಲೆ, ವಿಶ್ವಶಾಂತಿಯು ದೊರೆಯಲು ದ್ವೇಷಾಸೂಯೆಗಳು ಮೊದಲು ನಿರ್ಮೂಲವಾಗಬೇಕು. ಭೌತಿಕ ಪ್ರಗತಿಯ ಶರವೇಗದಲ್ಲಿ ಜ್ಞಾನದ ತಿರುಳನ್ನು ಮರೆಯಬಾರದು. ಬೌದ್ಧಿಕ ಶಕ್ತಿಯನ್ನು ಬೆಳೆಸುತ್ತಿದ್ದರೂ ಹೋರಾಟದಲ್ಲಿಯೇ ಕಾಲ ಕಳೆಯಬಾರದು. ಅಂದರೆ, ವಿಶ್ವಶಾಂತಿಯು ಮಾತಿನ ಮಾಲೆಯಾಗಬಾರದು, ಕನಸಿನ ಗಂಟಾಗಬಾರದು. ಅಶಾಂತಿಗೆ ಮೂಲವಾದ ಭೂ, ಧನ ಅಧಿಕಾರದ ಪ್ರಾಪ್ತಿಯ ವಿಸ್ತರಣದ ಆಶೆಗಳನ್ನು ಮಾನವ ಕಲ್ಯಾಣಕ್ಕೆ ಪರಿಣಮಿಸಿದರೆ ಮಾತ್ರ ಶಾಶ್ವತವಾದ ಶಾಂತಿ ಸುಖವು ಸಿಗಬಹುದಾಗಿದೆ.

ಇಂದು ಕಂಗಾಲಾದ ಜಗತ್ತಿಗೆ ಬೇಕಾದ ಸರ್ವತೋಮುಖ ಸುಧಾರಣೆಯೆಂದರೆ; ಜಾಗತಿಕ ಶಾಂತಿ ರಕ್ಷಣೆ, ಪ್ರಾಮಾಣಿಕತೆ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ, ಸಾಹಿತ್ಯಿಕ, ವೈದ್ಯಕೀಯ ರಂಗಗಳಲ್ಲಿ ಅಂತರ್ರಾಷ್ಟ್ರೀಯ ಸಹಕಾರ ಸಂಪಾದನೆ; ಎಲ್ಲಕ್ಕೂ ಮಿಗಿಲಾಗಿ ಧಾರ್ಮಿಕ ಭಾವನೆಯು ಪ್ರಪಂಚದ ತುಂಬೆಲ್ಲ ಹಬ್ಬುವಂತೆ ಮಾಡಿ, ಲೋಕವೆಲ್ಲ ಭಾವೈಕ್ಯದಿಂದ ಸುಂದರವಾಗುವಂತೆ ಕಾರ್ಯರೂಪಕ್ಕೆ ತರುವದೇ ನಮ್ಮೆಲ್ಲರ ಕರ್ತವ್ಯವಾಗಬೇಕು; ಜೀವನದ ಉಸಿರಾಗಬೇಕು. ಹೀಗಾದಾಗ ವಿಶ್ವಶಾಂತಿಯ ಹೆದ್ದಾರಿಯಲ್ಲಿ ಅಡಿಯಿಟ್ಟಂತೆ.

## ವೇದಾಹಮೇತಂ ಪುರುಷಂ ಮಹಾಂತಂ

"ಮಹಾಂತ" ಈ ಹೆಸರಿನಲ್ಲಿ ಸತ್ವವಿದೆ; ತತ್ವವಿದೆ. ಗುಣ ಗಾಂಭೀರ್ಯವಿದೆ. ತಮಸ್ಸನ್ನು ಕಳೆಯುವ ಶಕ್ತಿಯಿದೆ. ಮಹಾಂತ ಅಂದರೆ ಮಹಾತ್ಮರು. "ಅಣೋರಣೀಯಾನ್ ಮಹತೋ ಮಹೀಯಾನ್" ಅಣುವಿಗಿಂತ ಅಣುವಾಗಿಯೂ ಮಹತ್ತಿಗಿಂತ ಮಹತ್ತಾಗಿಯೂ ನಡೆನುಡಿಗಳೊಂದಾಗಿ ಬಾಳುತ್ತ ಭಕ್ತರನ್ನುದ್ಧರಿಸುವದೇ ಅವರ ಕರ್ತವ್ಯ. ಇಂದ್ರಿಯುಗಳನ್ನು ಜಯಿಸಿ, ಅಂತರ್ಮುಖಿಗಳಾಗಿ ಆತ್ಮೋನ್ನತಿಯನ್ನು ಪಡೆಯುವದೇ ಅವರ ಧ್ಯೇಯ. ಈ ಮಹಾಶಕ್ತಿಯನ್ನು ಪಡೆದವರೇ ವಿಜಯಮಹಾಂತ ಶಿವಯೋಗಿಗಳು.

ಇವರು ಕಾಲಕರ್ಮರಹಿತರು, ಭವರಹಿತರು, ವೀರವಿರಕ್ತರು, ಅದ್ಭುತಶಕ್ತಿ ಸಂಪನ್ನರು, ನಿರಾಶಾಮೂರ್ತಿಗಳು. ಬೇಕು ಬೇಡವೆಂಬ ಭವಬೀಜಗಳನ್ನು ಹುರಿದವರು. ಆತ್ಮಶಕ್ತಿಯ ದಿವ್ಯಪ್ರತಿಭೆಯಿಂದ ಭಕ್ತೋದ್ಧಾರ ಮಾಡಿದವರು. ಮಾನವನ ಕುಲಕ್ಕೆ ಧ್ಯಾನಯೋಗದ ಮಹಿಮೆಯನ್ನು ತೋರಿದವರು. ಆ ಮಹಾ ವ್ಯಕ್ತಿಯ ತಪಃಪ್ರಭಾವದ ಪ್ರಕಾಶದಲ್ಲಿ ಎನಿತೋ ಜನರು ಇಂದಿಗೂ ಬಾಳಿ ಬೆಳಗುತ್ತಿದ್ದಾರೆ. ಆ ಶಕ್ತಿಸ್ವರೂಪರ

ಸೇವೆಯಲ್ಲಿ ನಿರತರಾಗಿದ್ದಾರೆ. ಲಿಂ. ವಿಜಯಮಹಾಂತ ಶಿವಯೋಗಿಗಳು ಮಳೆಯಿಲ್ಲದ ನಾಡಿಗೆ ಮಳೆ ನೀಡಿದ್ದಾರೆ. ಮಕ್ಕಳಿಲ್ಲದವರಿಗೆ ಮಕ್ಕಳಿತ್ತಿದ್ದಾರೆ. ಮಹಾರೋಗ ಪೀಡಿತರಿಗೆ ಪಾದೋದಕವನ್ನು ನೀಡಿ ರೋಗ ನಿವಾರಣೆ ಮಾಡಿದ್ದಾರೆ. ಅಜ್ಞಾನಾಂಧಾ ಕಾರದಲ್ಲಿ ಮಲಗಿ ಬಳಲಿದ ಎಂತಹ ವ್ಯಕ್ತಿಯೇ ಬರಲಿ, ಅವನನ್ನು "ಚೇತರಿಸಿ" ಜ್ಞಾನ ವನ್ನು ನೀಡಿ ಸನ್ಮಾರ್ಗವನ್ನು ತೋರಿಸಿ ಅವನ ಜೀವವನ್ನೇ ಕಲ್ಯಾಣ ಮಾಡಿದ ಅಘಟಿತ ಘಟನಾ ಸಮರ್ಥರು. ಶ್ರೀ ವಿಜಯಮಹಾಂತ ಶಿವಯೋಗಿಗಳಿಗೆ ದ್ವಿತೀಯ ಶಂಭು ಬಸವಣ್ಣನವರಲ್ಲಿ ಅನುಪಮ ಶ್ರದ್ಧೆ ಇತ್ತಲ್ಲದೆ, ಮಹಾತ್ಮಾ ಬಸವಣ್ಣನವರ ವಚನಗಳಿಗೆ ಅಪ್ಪನ ವಚನವೆಂದು ಕರೆದು, ಆ ವಚನ ಗ್ರಂಥವನ್ನು ನಿರಂತರವೂ ಉಚ್ಚಾಸನದಲ್ಲಿ ಇಟ್ಟು ಪೂಜಿಸುತ್ತಿದ್ದರಂತೆ. ಅನಾಥ ರಕ್ಷಕರಾಗಿದ್ದಂತೆ ಕವಿಗಳಿಗೆ, ಪಂಡಿತರಿಗೆ ಆಧಾರ ಸ್ತಂಭರಾಗಿದ್ದರು. ಅಂತರಂಗದ ಆತ್ಮ ಸೌಂದರ್ಯವನ್ನು ಸಂಗಳಿಸಿಕೊಂಡು ನಿರಂತರವೂ ಧ್ಯಾನತಲ್ಲೀನರಾಗುತ್ತಿದ್ದರು. ಅವರು ನುಡಿದ ನುಡಿಯಲ್ಲಿ ಅಲೌಕಿಕ ಶಕ್ತಿಯು ಇರುತ್ತಿತ್ತು. ವಾಕ್ಸಿದ್ಧಿಯೆಂಬುದು ಅವರಿಗೆ ಸಹಜವಾಗಿತ್ತು. ತಮ್ಮ ಆತ್ಮಶಕ್ತಿಯ ಬಲದಿಂದ ಸಹಸ್ರಾರು ಪವಾಡಗಳನ್ನು ಮಾಡಿ ಮಲಗಿರುವ ಮಾನವಕೋಟಿಯನ್ನು ಎಚ್ಚರಿಸಿ ಬೆಳಕು ನೀಡಿದ್ದಾರೆ. "ತೇನ ವಿನಾ ತೃಣಮಪಿ ನ ಚಲತಿ" ಎಂಬುದನ್ನು ಮನಗಂಡಿದ್ದರು. ಈಗ ನಮ್ಮ ಮುಂದೆ ಕಾಣದಿದ್ದರೂ ಅವರ ಅದ್ಭುತ ಪ್ರತಿಭೆ, ದಿವ್ಯಶಕ್ತಿ ನಾಡಿನಲ್ಲೆಲ್ಲ ಸೂಕ್ಷ್ಮ ರೂಪದಲ್ಲಿ ಸಂಚರಿಸುತ್ತದೆ. ನಾವಿಂದು ನಮ್ಮ ಹೃನ್ಮಂದಿರದಲ್ಲಿ 'ಬಾ ಬೆಳಕೆ' ಎಂದು ಹೃದಯ ತೆರೆದು ಕರೆಯೋಣ.

## ಜ್ಞೇಯಃ ಸ ನಿತ್ಯಸಂನ್ಯಾಸೀ

ಸುಖದುಃಖಗಳನ್ನು ಮೀರಿ, ದ್ವೇಷಾಸೂಯೆಗಳನ್ನು ಕಿತ್ತೊಗೆದು, ಪರಹಿತವೆ ತಮ್ಮ ಹಿತವೆಂದು ಬಗೆದು, ಶಿವಪೂಜಾ ನಿಷ್ಠರಾಗಿ, ಲಿಂಗೋಪಭೋಗಿಗಳಾಗಿ, ಕರ್ಮ ಯೋಗ ಜ್ಞಾನಯೋಗ ಇವೆರಡರ ಅನುಭವವನ್ನು ಪಡೆದು ಅರಿಷಡ್ವರ್ಗಗಳನ್ನು ದೂಡಿ, ನಿತ್ಯ ನಿಜಾನಂದದಲ್ಲಿದ್ದು ಉದಾರಚರಿತರಾದ ಮಹಾತ್ಮರನ್ನೇ ಶಿವಯೋಗಿಗಳೆಂದು, ಸಂನ್ಯಾಸಿಗಳೆಂದು ಕರೆಯುತ್ತಾರೆ. ಅವರ ಜೀವನವು ಸುವರ್ಣ ಘಟದಂತೆ ಪ್ರಕಾಶಮಯ ವಾದುದು; ಅವರು ಮುರುಕು ಗುಡಿಸಲದಲ್ಲಿದ್ದರೂ ಅವರ ವ್ಯಕ್ತಿತ್ವ ಪರಿಪೂರ್ಣ ವಾದುದು. ಸಾತ್ವಿಕ ತೇಜವನ್ನು ನೀಡುವಂತಹದು; ಆತ್ಮಶ್ರೀ ಬೆಳಗಿನಿಂದ ಪ್ರಭಾವ ಪೂರ್ಣವಾದುದು. "ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ" ಇದು ಅವರ ಬಗೆ. ಅವರು ನ್ಯಾಯ ನಿಷ್ಠುರರು, ಸತ್ಯ ಸಂಶೋಧಕರು; ಶರಣರಾರಾರಿಗೂ ಅಂಜುವ ವರಲ್ಲ. ಅವರು ಭಾವ ಜೀವಿಗಳಾಗಿದ್ದು, ಅಂತರ್ಮುಖಿಗಳಾಗಿ ಆಧ್ಯಾತ್ಮಿಕ ಶಕ್ತಿಯನ್ನು ಪಡೆದು ಜೀವನವೆಲ್ಲವನ್ನು ಸುಂದರ ಸುಶೋಭಿತ ಧೂಳ ಮುಸುಕದ ದರ್ಪಣದಂತೆ ಮಾಡಿಕೊಂಡಿರುತ್ತಾರೆ. "ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸ ಪಶ್ಯತಿ" ಈ ಉಪನಿಷತ್ತಿನ ವಾಣಿ ಅಂತಹವರಿಗೆ ಮೀಸಲು. ಸಮದರ್ಶಿತ್ವ ಬುದ್ಧಿ ಸಹಜವಾಗಿ

ಅವರಲ್ಲಿ ಕಂಡುಬರುತ್ತದೆ. ಅವರು ಕೃತ್ರಿಮತೆಯನ್ನು ಎಂದಿಗೂ ಮೆಚ್ಚರು; ಭಾವ ಶುದ್ಧಿಯೇ ಅವರಿಗೆ ಪ್ರಧಾನವಾದುದು. ಶಿವಯೋಗಿಗಳು ಕಣ್ದೆರೆದು ನೋಡಿದರೆ ಸಾಕು, ನೋಡಿದ್ದೆಲ್ಲವೂ ಪುನೀತವಾಗುತ್ತದೆ. ಮಾತಾಡಿದ್ದು ವೇದವಾಕ್ಯವಾಗುತ್ತದೆ. ಅಂತಹ ಕರ್ತೃತ್ವ ಶಕ್ತಿಯನ್ನು ಪಡೆದಿರುವದರಿಂದ ಅವರು ಮಹಾತ್ಮರು. ಮಹಾತ್ಮರ ಮಹತ್ವವನ್ನು ವಿಶ್ವಪ್ರೇಮದಲ್ಲಿ ಕಾಣುತ್ತೇವೆ. ಅವರಿಗೆ ಸತ್ಯಶುದ್ಧ ಕಾಯಕವೇ ನಿತ್ಯದ ದಿನಚರಿ; ಧ್ಯಾನಭೋಗವೇ ಅವರ ಜೀವನದ ಉಸಿರು. ಸಹಜತೆ ಸರಳತೆಯೇ ಭಾವ ದೈಸಿರಿ, ಅವರಿಗೆ ಬಾಹ್ಯದೃಷ್ಟಿ ಬೇಸರ. ಅಂತರ್ ದೃಷ್ಟಿಯೇ ಅವರಿಗೆ ಆಸರ; ಅದುವೆ ಜೀವನಕಾಧಾರ. ಅವರ ಅದ್ಭುತ ಶಕ್ತಿಗೆ ಕ್ರೂರ ಪ್ರಾಣಿಗಳೂ ಅಂಜುತ್ತವೆ; ತಲೆಬಾಗು ತ್ತವೆ. ಅವರಿಗೆ ನಿತ್ಯವೂ ಶಿವರಾತ್ರಿ. "ಅರೆದೆರೆದವೆ ದೃಷ್ಟಿಯು, ನಾಸಿಕಾಗ್ರದಲ್ಲಿರಿಸಿ ನೋಡುತ್ತ, ಹೃದಯದಲ್ಲಿದ್ದ ಅಚಲ ಲಿಂಗವನೊಳಗೆ ಜ್ಞಾನಲೋಚನದಿಂದ ನೋಡುತ್ತ ತನುಮನೇಂದ್ರಿಯ ತರಪರವಾಗಿ ಮನನಿವಾತ ಜ್ಯೋತಿಯಂತೆ ನಿಂದುನಿಜವ ಕೂಡಿದವರ" ನಿಜವಾದ ಶಿವಯೋಗಿಗಳು. ಅವರು ಶಿವಾತ್ಮ ವಿದ್ಯಾನಿಧಿಗಳಾಗಿರುತ್ತಾರೆ; ನಿಜ ಸುಖದ ಸಾಗರರಾಗಿರುತ್ತಾರೆ. ತೋರಿಕೆಗೆ ಮಾನವರಂತೆ ಕಂಡರೂ ಅಂತರಂಗದ ಅದ್ಭುತ ಶಕ್ತಿ ಯನ್ನು ನಿರೀಕ್ಷಿಸಿದಾಗ, ಅವರ ಅಲೌಕಿಕಶಕ್ತಿ ಮೆಚ್ಚುವಂತಹದು. ಮೂರು ಅವಸ್ಥೆ ಗಳನ್ನು ಮೀರಿನಿಂದವರು, ಪಾವನಚರಿತರು, ಸಗುಣ ಭರಿತರು. ಚಿತ್ತವೃತ್ತಿಗಳನ್ನು ನಿರೋಧಿಸಿ, ಯೋಗಸಿದ್ಧಿಯನ್ನು ಹೊಂದಿದವರಾಗಿರುತ್ತಾರೆ. ಅವರು ನಡೆದ ದಾರಿ ಪರಮ ಪವಿತ್ರ ಪುಣ್ಯ ಕ್ಷೇತ್ರ. ಅಂತೆಯೇ ಮೊಗ್ಗೆಯ ಮಾಯಿದೇವರು ಈ ರೀತಿ ವರ್ಣಿಸಿದ್ದಾರೆ.

ಶರಣಂ ಶಾಂಭವ ಯೋಗಿಯಿರ್ದನೆಲವೇ ಕ್ಷೇತ್ರಂ ಪವಿತ್ರಂ ಪರಂ।
ಭರದಿಂದೇರಿದ ಬೆಟ್ಟಮೇ ಘನತರಂ ಶ್ರೀಪರ್ವತಂ ಸ್ವೇಚ್ಛೆಯಿಂ॥
ದಿರದಾ ಕ್ರೀಡಿಸಲೆಂದು ಪೊಕ್ಕ ಜಲಮೇ ತೀರ್ಥಂ ಮಹಾಪಾವನಂ।
ನಿರುತಂ ಲೀಲೆಯೊಳೊಲ್ದು ಮಾಡಿದುದೆ ತಾಂ ದೈವಂ ಶಿವಾವಲ್ಲಭಾ॥

## ಸ ಮಹಾತ್ಮಾ ಸುದುರ್ಲಭಃ

"ಮಹಾನ್ ಆತ್ಮಾಯಸ್ಯ ಸಃ" ಮಹಾತ್ಮಾ ಅಂದರೆ, ಯಾರ ಆತ್ಮವು ಪವಿತ್ರ ವಾಗಿದೆಯೋ ಅವರೇ ಮಹಾತ್ಮರು; ವಿಶಾಲ ಭಾವನೆ ಅವರಿಗೆ ಮೀಸಲು. ಬಹಿರ್ ಪ್ರಪಂಚದಲ್ಲಿದ್ದರೂ ಪ್ರಪಂಚದ ಆವರಣ ಅವರಿಗೆ ಇರದು. ಬೇಕು ಬೇಡೆಂಬ ಭವ ಬೀಜಗಳನ್ನು ಹುರಿದವರು; ಆತ್ಮವಿಶ್ವಾಸ ಮಾಡಿಕೊಂಡವರು; ಆತ್ಮರಕ್ಷಣೆಗಾಗಿ ನಿರಂತರವೂ ಹೋರಾಡಿದವರು. ಮಹಾತ್ಮರಿಗೆ ಇಹಪರಗಳ ಪ್ರಪಂಚದ ಹೊದ್ದಿಕೆ ಹೊದ್ದದು. ಅವರು ಸತ್ಯಸಂಧರು; ನಿತ್ಯ ಮುಕ್ತರು. ಅವರ ಜೀವನ ಪಾವನ; ಜಡ ಸ್ವಭಾವವು ಅವರಿಗೆ ಬರದು. ನ್ಯಾಯ ನಿಷ್ಠುರರು; ವಿಚಾರಪರರು. ಅವರ ಇರುವು,

ಅರಿವು, ನಡೆ ನುಡಿ ಎಲ್ಲವೂ ಶಿವಮಯ. ದೈಹಿಕ ವಿಚಾರ ಅವರಿಗೆ ಸೋಂಕದು. ಅರಿಷಡ್ವರ್ಗವನ್ನು ದೂರಮಾಡಿ, ಅರಿವಿನ ಬೆಳಕಿನ ದಾರಿಯಲ್ಲಿ ನಡೆದವರು. ಅವರ ಬಾಳೆಲ್ಲವೂ ಬಂಗಾರ. ಅವರ ಮಾತು ಮಾಣಿಕ್ಯದ ದೀಪ್ತಿ; ನಿರಾಶೆಯೇ ಅವರ ಜೀವನ ಸತ್ವ. ನುಡಿದಂತೆ ನಡೆಯುವದೇ ಅವರ ತತ್ತ್ವ. ಅವರು ಭವರಹಿತರು; ಕಾಲಕರ್ಮ ವಿರಹಿತರು; ಉಪಮಾತೀತರು; ನಾನೆಂಬುದನ್ನು ಅಳಿದು ಧ್ಯಾನತಲ್ಲೀನರಾದವರು. ಸಾಮಾಜಿಕ ಚಿಂತೆಯೇ ಅವರಿಗೆ ಬೆನ್ನೆಲುಬು. ಅವರು ಸಮಾಜೋದ್ಧಾರಕ್ಕಾಗಿ ದುಡಿಯುತ್ತಾರೆ. ಬೆವರು ಸುರಿಸಿ ದೇಹ ಕೃಶ ಮಾಡಿಕೊಂಡು ಅಜ್ಞಾನಾಂಧಕಾರದಲ್ಲಿದ್ದ ಸಮಾಜವನ್ನು ಎತ್ತಿ ಜಾಗ್ರತಗೊಳಿಸುತ್ತಾರೆ; ಚೈತನ್ಯ ತುಂಬುತ್ತಾರೆ. ಧಾರ್ಮಿಕಾಚರಣೆಗಳಿಲ್ಲದೆ, ಒಣಗಿ ನಿಂತ ಧಾರ್ಮಿಕ ಮರುಭೂಮಿಯ ಮೇಲೆ ಆಧ್ಯಾತ್ಮ ರಸದ ಹೊನಲನ್ನು ಹರಿಸುತ್ತಾರೆ. ಅವಿದ್ಯೆಯೆಂಬ ನೆರಳನ್ನು ನಿವಾರಿಸಿ ವಿದ್ಯಾಕಿರಣಗಳನ್ನು ಹರಡಿ, ಸಂಸ್ಕೃತಿಯ ಸಿಹಿನೀರನ್ನು ಸಾಧಕರಿಗೆ ಧಾರೆಯೆರೆಯುತ್ತಾರೆ. ಬದ್ಧಜೀವಿಗಳನ್ನು ಶುದ್ಧಜೀವಿಗಳನ್ನಾಗಿ ಪರಿವರ್ತಿಸುತ್ತಾರೆ; ದಾನವತೆಯನ್ನು ಕಳೆದು ಮಾನವತೆಯನ್ನು ತುಂಬುತ್ತಾರೆ. ಹೃದಯ ದೌರ್ಬಲ್ಯವನ್ನು ಕಳೆದು ಆತ್ಮಶಕ್ತಿಯ ಪೌಷ್ಟಿಕಾಹಾರವನ್ನು ಕರುಣಿಸುತ್ತಾರೆ. ಬಡವರ ಪವಿತ್ರ ಭಕ್ತಿಗೆ ಮೆಚ್ಚುತ್ತಾರೆ; ಅವರ ಸದಿಚ್ಛೆಯನ್ನು ಪೂರೈಸುತ್ತಾರೆ.

ಇದುವೇ ಅವರ ಜೀವನದ ಮುಖ್ಯ ಗುರಿ! ಅಂತೆಯೇ ಅವರಿಗೆ ಜಗತ್ತು ಬಾಗುತ್ತದೆ; ಅವರ ಮಾತನ್ನು ಕೇಳುತ್ತದೆ. ಅವರ ಹೆದ್ದಾರಿ ಆಸರವಾಗುತ್ತದೆ. ಮಹಾತ್ಮರಿಗೆ ಸರ್ವಧರ್ಮದ ಸಮನ್ವಯ ದೃಷ್ಟಿ. ತೇಜೋಮಯ ದೃಷ್ಟಿ, ಶುದ್ಧಿ, ಸಿದ್ಧಿಗಳು ಕರತಲಾಮಲಕಗಳಾಗಿರುತ್ತವೆ. ಸತ್ತ್ವಹೀನವಾದ, ದುರ್ಬಲವಾದ ಸಾವಿನ ದವಡೆಯಲ್ಲಿ ಸಿಕ್ಕು ಜರ್ಜರಿತವಾಗಿ, ಘನಘೋರ ಕಷ್ಟದಲ್ಲಿ ತಾಮಸೀಯ ವೃತ್ತಿಯಿಂದ ಬೆಂದು ಬಳಲುತ್ತಿದ್ದ ಸಮಾಜವನ್ನು ಚೇತರಿಸುವಂತೆ ಸತ್ತ್ವಯುತ ಹಾಗೂ ಕಾಂತಿಯುತವಾಗುವವರೆಗೂ ಹಗಲಿರಳೆನ್ನದೆ ತಮ್ಮ ದೇಹವನ್ನೇ ಗಂಧದಂತೆ ಸವೆಯಿಸಿ, ಜೀವಂತ ವ್ಯಕ್ತಿಗಳನ್ನು ಮಾಡಿ ಶಕ್ತಿ ನೀಡಿದವರೇ ಮಹಾತ್ಮರು. ಇಂತಹ ಚಿನ್ನದಂತೆ ನಿಷ್ಕಳಂಕವಾದ ಮಹಾತ್ಮರು ದೊರೆಯುವದು ದುರ್ಲಭ. ಅಂತೆಯೇ ಮೊಗ್ಗೆಯ ಮಾಯಿದೇವರ ಈ ನುಡಿ ನೆನಹಿನಂಗಳದಲ್ಲಿ ಸುಳಿದಾಡುತ್ತಿದೆ.

"ನುಡಿವೆಡೆಯಲ್ಲಿ, ನೋಡುವೆಡೆಯಲ್ಲಿ, ರಮಿಪ್ಪೆಡೆಯಲ್ಲಿ, ವಸ್ತುವಂ।
ಪಿಡಿವೆಡೆಯಲ್ಲಿ, ಭೋಗಿಪೆಡೆಯಲ್ಲಿ, ಸುಖಿಂಬಡೆವಲ್ಲಿ, ದೇಹಮಂ॥
ಬಿಡುವೆಡೆಯಲ್ಲಿ ಲಿಂಗಕಳೆ, ಲಿಂಗಗುಣಂ, ಘನಲಿಂಗಯೋಗಮಾ–।
ದೊಡೆ ಬಳಿಕಾ ಮಹಾತ್ಮನನದೇನನ ಬರ್ಪುದದಂ, ಶಿವಾಧವಾ!॥

## ಸ್ತೋತ್ರಂ ಕಸ್ಯ ನ ತುಷ್ಟಯೇ

'ಸ್ತೋತ್ರಂ ಕಸ್ಯ ನ ತುಷ್ಟಯೇ–' ಈ ನುಡಿ ಮಹಾಕವಿ ಕಾಳಿದಾಸನದು. ಸ್ತುತಿಗೆ

ಹಿಗ್ಗದ ವ್ಯಕ್ತಿ ಸಿಗುವದು ದುರ್ಲಭ. ದೇವರೂ ಸಹ ಸ್ತುತಿ ಪ್ರಿಯನೆ. ಭಕ್ತಿಯಿಂದ ಸ್ತೋತ್ರ ಮಾಡಿದ ನಂತರ ದೇವತೆಗಳು ಮೆಚ್ಚುತ್ತಾರೆ; ಭಕ್ತರ ಇಚ್ಛೆಯನ್ನು ಆಗ ಪೂರೈಸುತ್ತಾರೆ; ಅಂತೆಯೇ ಭಕ್ತಿ ಪ್ರಿಯ ದೇವರೆಂದು ಸಂತರು, ಶರಣರು ಸ್ತುತಿಸಿದ್ದಾರೆ. ಮಾನವನ ಪ್ರಗತಿಗೆ ಸ್ತೋತ್ರವೂ ಒಂದು ಸಾಧನ. ಪ್ರಶಂಸೆಯಿಂದ ಹುರುಪು ಉತ್ಸಾಹ ಹುಟ್ಟುತ್ತದೆ. ಪ್ರಶಂಸೆಯು ಪುಟಿಸುವ ಚಂಡಿನಂತೆ, ಪುಟಿಯುವ ಕಾರಂಜಿಯಂತೆ, ವ್ಯಕ್ತಿಯನ್ನು ಹುರಿದುಂಬಿಸುತ್ತದೆ. ವ್ಯಗ್ರಗೊಂಡ ಮನಸ್ಸು ತಣ್ಣಗಾಗುತ್ತದೆ. ಕೃತಜ್ಞತೆಯನ್ನು ಸಲ್ಲಿಸುವ ಜನತೆಯನ್ನು ನೋಡಿ ಹರುಷವುಂಟಾಗಿ, ಭಾವನೆಯಲ್ಲಿ ವಿಶಾಲ ಬುದ್ಧಿಯ ಉದಯವಾಗುತ್ತಿದೆ, ತುಷ್ಟಿ ಪುಷ್ಟಿಯಾಗುತ್ತದೆ. ಚಿತ್ತದ ಕಳವಳವು ನಷ್ಟವಾಗಿ ಸ್ಥಿರತೆಯು ಲಭಿಸುತ್ತದೆ. ಮಾತಿನಲ್ಲಿ ಹೊಗಳಿಕೆ ಬೇಡವೆಂದರೂ ಮನದಲ್ಲಿ ಬೇಕೆಂದೆನಿಸುವದು ಮನುಷ್ಯನ ಸ್ವಭಾವದ ಸಹಜಗುಣವೇನೋ! ನಿಷ್ಠೆಯಿಂದ ಕಾರ್ಯ ಮಾಡುವ ವ್ಯಕ್ತಿಗೆ ಪ್ರಶಂಸೆ ಊರುಗೋಲು ಇದ್ದಂತೆ. ಪ್ರೋತ್ಸಾಹ ನೀಡುವವರನ್ನು ಕಂಡು ಮತ್ತಿಷ್ಟು ಕಾರ್ಯ ಮಾಡುವ ಸಾಹಸವುಂಟಾಗಿ ಜನ ಜಾಗ್ರತಿ ಮಾಡಲು ಚೈತನ್ಯ ಬರುತ್ತದೆ. ಸ್ತುತಿಯು ಶತ್ರುಗಳನ್ನು ಸಹ ತನ್ನತ್ತ ಆಕರ್ಷಿಸಿಕೊಳ್ಳುವ ಸೂಜಿಗಲ್ಲು ಇದ್ದಂತೆ; ಎಂತಹ ವೈರಿಯಿದ್ದರೂ ನಿಷ್ಕಲ್ಮಷದಿಂದ ಕೂಡಿದ ಸ್ತೋತ್ರಕ್ಕೆ ಮೆಚ್ಚಬೇಕಾಗುತ್ತದೆ. ಕ್ಷಮಿಸಿ, ಕರುಣಾ ರಸವನ್ನು ಸಿಂಚಿಸಬೇಕಾಗುತ್ತದೆ. ತೆಗಳಿಕೆಗಿಂತಲೂ ಹೊಗಳಿಕೆಯು ಎನಿತೋ ಮೇಲು; ತೆಗಳಿಕೆಯಿಂದ ಆಗುವ ಕಾರ್ಯವು ಕೆಟ್ಟು ಹೋಗುವದಲ್ಲದೆ, ವೈರತ್ವವನ್ನು ಕಟ್ಟಿಕೊಂಡಂತಾಗುವದು. ಸದ್ಭಾವನೆಗಳು ದೂರಾಗಿ, ದುರ್ಭಾವನೆಗಳು ಅಂಟಿಕೊಂಡು ಜೀವನವೆಲ್ಲವೂ ಕಂಟಕಪ್ರಾಯವಾಗುವದು.

ಆದರೆ, ಸ್ತುತಿಯಿಂದ ಹಿರಿಹಿರಿ ಹಿಗ್ಗಿ, ಅಹಂಕಾರದ ಶಿಖರವನ್ನೇರಿ, ಕರ್ತವ್ಯ ಕರ್ಮವನ್ನು ಮರೆತರೆ, ಮರವನೇರಿ ಕೆಳಗೆ ಬಿದ್ದಂತೆ ವ್ಯರ್ಥವಾಗುತ್ತದೆ; ಅಂತಸ್ಸತ್ತ್ವ ಕಡಿಮೆಯಾಗುತ್ತದೆ. ಸಂಕುಚಿತ ಸಂಕೋಲೆಯಲ್ಲಿ ಸಿಲುಕಿ, ಅರಿವನ್ನು ಮರೆತು, ಮರವೆಯ ಮನೆಯನ್ನು ಸೇರಿದಂತಾಗುತ್ತದೆ. ವ್ಯಕ್ತಿತ್ವವನ್ನು ಹಾಳು ಮಾಡಿಕೊಂಡು ಮನೋದೌರ್ಬಲ್ಯಕ್ಕೆಡೆಕೊಟ್ಟಂತಾಗುತ್ತದೆ. ವಿಶಾಲತೆಯನ್ನು ಮಾತಿನ ಮಾಲೆ ಮಾಡಿಕೊಂಡು ಅಹಂಕಾರದ ಮಡುವಿನಲ್ಲಿ ಮುಳುಗಿದರೆ ಕತ್ತಲೆಯೊಳಿರ್ದು ದೀಪದ ಬಿತ್ತಿರವ ಬಣ್ಣಿಸಿದಂತಾಗುತ್ತದೆ. ನೀರಿನ ಮೇಲಿನ ಗುರುಳಿಯಂತೆ ಸತ್ಕ್ರಿಯೆಗಳು ತೋರಿಕೆಯಂತಾಗುತ್ತವೆ; ವಿಶ್ವಾಸವು ಕನಸಾಗುತ್ತದೆ. ಅಗ್ಗಳಿಕೆಯ ಹೊಗಳಿಕೆಯಿಂದ ಸಣ್ಣದು ದೊಡ್ಡದಾಗಲಾರದು; ತೆಗೆಳಿಕೆಯಿಂದ ದೊಡ್ಡದು ಸಣ್ಣದಾಗಲಾರದು. ಶ್ರೇಷ್ಠ ಸುಧಾರಕರಾಗ ಬಯಸುವವರು ಸ್ತುತಿ ಮಹತ್ತ್ವವರಿದುಕೊಂಡು 'ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,' ಇದರ ಒಳಗುಟ್ಟನ್ನು ಅರ್ಥಮಾಡಿಕೊಂಡು, ತಿಳುವಳಿಕೆಯಿಂದ ಕಾರ್ಯತತ್ಪರರಾದರೆ ಜೀವನದಲ್ಲಿ ಅಂತರಂಗ ಶುದ್ಧಿಯ ಸಿದ್ಧಿಯನ್ನು ಪಡೆದಂತಾಗುವದು. ಇಲ್ಲ

ವಾದರೆ ತನ್ನ ಕಾಲಮೇಲೆ ತಾನೇ ಕಲ್ಲು ಹಾಕಿಕೊಂಡಂತೆ ವ್ಯರ್ಥವಾಗುತ್ತದೆ. ಕುಗ್ಗಿ ಕರ್ತವ್ಯ ಬಿಡದಂತೆ ಹಿಗ್ಗಿ ಹಮ್ಮು ಪಡೆದಂತೆ ಜೀವನ ಸಾಗಿಸುವದೇ ಮಾನವ ಪರಮ ಗುರಿ.

ಪ್ರಶಂಸೆಯೆಂಬುದು ಸುಗಂಧ ಗುಳಿಗೆ ಇದ್ದ ಹಾಗೆ. ಮೂಸಿದರೆ ಸುಖ, ನುಂಗಿದರೆ ವಿಷ, ಇದುವೇ ಹೊಸ ವರ್ಷದ ಶುಭಾಶಯು.

**ಜಗಜ್ಜ್ಯೋತಿಃ ಸ್ವರೂಪೋऽಸೌ ಭಗವಾನ್ ಬಸವೇಶ್ವರಃ**

ಜಗತ್ತಿನ ಧಾರ್ಮಿಕ, ಸಾಮಾಜಿಕ ಮಹಾ ಪುರುಷರಲ್ಲಿ ಮಹಾತ್ಮಾ ಬಸವಣ್ಣ ನವರಿಗೆ ಒಂದು ವೈಶಿಷ್ಟ್ಯಪೂರ್ಣ ಸ್ಥಾನವಿದೆ. ಆ ಮಹಾವ್ಯಕ್ತಿಯ ದಿವ್ಯಶಕ್ತಿಯ ಪ್ರಭಾವದಿಂದಲೇ ನಾಡಿನಲ್ಲಿ ಇನ್ನೂ ಸಂಸ್ಕೃತಿ ಉಳಿದಿದೆ. ವೀರಶೈವ ಧರ್ಮವು ಬಾಳಿ ಬೆಳಗುತ್ತಲಿದೆ. ದ್ವಿತೀಯ ಶಂಭು ಬಸವಣ್ಣನವರು ಅಷ್ಟಾವರಣಗಳಲ್ಲಿ ಚೈತನ್ಯವನ್ನು ಹುಟ್ಟಿಸಿದರು. ಅನುಭವಮಂಟಪವನ್ನು ಸಂಸ್ಥಾಪಿಸಿ ನೀತಿಯ ನೆಲಗಟ್ಟನ್ನು ಭದ್ರ ವಾಗಿರಿಸಿದರು. ವಚನ ವಾಙ್ಮಯವನ್ನು ಪ್ರಚಾರಗೊಳಿಸಿ ಕನ್ನಡ ಸಾಹಿತ್ಯಕ್ಕೆ ಶಕ್ತಿ ನೀಡಿದರು; ಸಾಮ್ಯ ವಾದವನ್ನು ದೃಢಪಡಿಸಿದರು. ಮಹಾತ್ಮಾ ಗಾಂಧಿಯವರು ಮಾಡಿದ ಅಸ್ಪೃಶ್ಯೋದ್ಧಾರವನ್ನು ೧೨ನೆಯ ಶತಮಾನದಲ್ಲಿಯೇ ಬಸವಣ್ಣನವರು ಕೃತಿಗಿಳಿಸಿ, ಸಾಮಾಜಿಕ ಕ್ರಾಂತಿಯ ಅಡಿಗಲ್ಲನಿರಿಸಿದ್ದಾರೆ. "ಕಾಯಕವೇ ಕೈಲಾಸ"ವೆಂದು ಸಾರಿ ಕಾಯಕಕ್ಕೆ ಮಹತ್ತ್ವ ನೀಡಿ, ಜನಜಾಗ್ರತಿ ಮಾಡಿದ್ದಾರೆ. "ನ್ಯಾಯನಿಷ್ಠುರಿ ದಾಕ್ಷಿಣ್ಯಪರ ನಾನಲ್ಲ" ಎಂದು ಹೇಳಿ ಅವರು ಸತ್ಯಸಾರ್ವಭೌಮರೆನಿಸಿದ್ದಾರೆ. ಒಬ್ಬೊಬ್ಬ ಮಹಾತ್ಮರಲ್ಲಿ ಒಂದೊಂದು ವೈಶಿಷ್ಟ್ಯಪೂರ್ಣ ಶಕ್ತಿಯಿದ್ದರೆ ಜಗಜ್ಯೋತಿ ಬಸವಣ್ಣ ನವರೊಬ್ಬರಲ್ಲಿಯೇ ನಿಷ್ಠೆ, ಸತ್ಯ, ಪ್ರೇಮ, ವೈರಾಗ್ಯ, ಭಕ್ತಿ, ದಯೆ, ಅಹಿಂಸೆ ದೀನ ವಾತ್ಸಲ್ಯ, ಅನಾಸಕ್ತಿಯೇಗೆ ಗುಣಗಳು ಮನೆಮಾಡಿಕೊಂಡಿದ್ದವು. ಅಂತೆಯೇ ನೂರಾರು ಜನ ಕವಿಗಳು, ಯೋಗಿಗಳು ಹೃದಯ ತುಂಬಿ ಬಸವ ಮಹಿಮೆಯನ್ನು ಹಾಡಿ ಹರಿಸಿದ್ದಾರೆ. ಪುರಾಣಗಳನ್ನು ವಚನಗಳನ್ನು ಕಾವ್ಯಗಳನ್ನು ಸಂಸ್ಕೃತ, ಕನ್ನಡ, ತೆಲಗು, ಇಂಗ್ಲೀಷ ಭಾಷೆಗಳಲ್ಲಿ ಬರೆದು ಕೃತಾರ್ಥರಾಗಿದ್ದಾರೆ.

"ಬಸವಾ, ನಿನ್ನ ದಯದಿಂದ ವೀರಶೈವ ಧರ್ಮವು ವಿನೂತ್ನ ಯೋಜನೆಯಲ್ಲಿ
ವಿಕಸಿತವಾಗಿ ವಿವರ್ಧನೆಗೊಂಡಿದೆ, ನೋಡಾ!
ಬಸವಾ, ನಿನ್ನ ಕೃಪೆಯಿಂದ ಅಷ್ಟಾವರಣಂಗಳು ಅಂಗವಾಗಿ
ಅಲೌಕಿಕ ಪರಿಣಾಮವ ತೋರುತಿವೆ, ನೋಡಾ!
ಬಸವಾ ನಿನ್ನ ಕರುಣೆಯಿಂದ ಪಂಚಾಚಾರಂಗಳು ಪ್ರಾಣವಾಗಿ
ಪರಮ ಪುರುಷಾರ್ಥಕ್ಕೆ ಕಾರಣವಾಗಿವೆ ನೋಡಾ!
ಬಸವಾ, ನಿನ್ನ ಅನುಗ್ರಹದಿಂದ ಷಟ್‌ಸ್ಥಲಂಗಳು ಆತ್ಮವಾಗಿ

ಷಟ್‌ಸ್ಥಲ ಮಹಿಮೆಯು ಉಗ್ಗಡಿಸುತಿಪೆ, ನೋಡಾ!
ಬಸವಾ, ನಿನ್ನ ಅಂತಃಕರಣದಿಂದ ಗುರು-ಜಂಗಮರು ಸಂಪೂಜ್ಯರಾಗಿ
ಗುಣಾತಿಶಯುವ ಬೀರುತಿಹರು, ನೋಡಾ!
ಬಸವಾ, ನಿನ್ನ ಕಾರುಣ್ಯದಿಂದ ಲಿಂಗವು ಸರ್ವಾಂಗ ಲಿಂಗವಾಗಿ
ಲಿಂಗದ ಕಳೆ ಅಪೂರ್ವವಾಗಿ ಬೆಳಗುತ್ತಿದೆ, ನೋಡಾ!
ಇಂತಪ್ಪ ಕಾರಣಿಕ ಕಾರುಣ್ಯಮೂರ್ತಿ ಬಸವನ ಮರೆತು, ಮೆರೆಯುವವರ ಮೆಚ್ಚ
ನಮ್ಮ ಭ್ರೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ.

## ಅನುಗ್ರಹಾsಧಿಕಾರೌ ದ್ವೌ ಸಮಾಜೋನ್ನತಿಕಾರಕೌ

ಮಾನವನಿಗೆ ಕಣ್ಣುಗಳೆರಡು ಅತ್ಯವಶ್ಯವಿರುವಂತೆ, ಸಾಧಾರಿಗೂ ನಿರಾಧಾರಿಗೂ, ಅನುಗ್ರಹ ಪಟ್ಟಾಭಿಷೇಕಗಳೆರಡು ಬೇಕಾಗುತ್ತವೆ. ಮೊದಲನೆಯದನ್ನು ಬಿಟ್ಟು ಎರಡನೆಯದಾಗದು. ಅನುಗ್ರಹ ಅಧಿಕಾರದಿಂದ ವ್ಯಕ್ತಿಗೆ ಒಂದು ಶಕ್ತಿ ಬಂದು, ಆತ್ಮಶಕ್ತಿಯು ನವಚೈತನ್ಯ ದೊರಕೊಳ್ಳುತ್ತದೆ. ಗುರು ವಿರಕ್ತರಾಗಿ, ತಮ್ಮ ತಮ್ಮ ಕರ್ತವ್ಯದತ್ತ ಮನಸ್ಸು ಶೀಲ ಸಂಸ್ಕೃತಿಯನ್ನು ಸಂಗಳಿಸಿಕೊಂಡು ಧಾರ್ಮಿಕ ಕ್ಷೇತ್ರದಲ್ಲಿ ಸಾಮಾಜಿಕ ಕ್ಷೇತ್ರದಲ್ಲಿ ಅವರವರ ಗುರುಗಳು ಉಪದೇಶಿಸಿದಂತೆ ನಡೆದು ಗುರು ಕರುಣೆಯನ್ನು ಪಡೆದು ಧಾರ್ಮಿಕ ಜಾಗ್ರತಿಯನ್ನು ಮಾಡಬೇಕಾಗುತ್ತದೆ. ಅಂದಾಗ ಗುರು ವಿರಕ್ತರಾಗಿದ್ದಕ್ಕೂ ಸಾರ್ಥಕ. "ಒಂದು ಸ್ಥಾನದ ಮಠಾಧಿಕಾರಿಯಾಗದೆ, ಬೋಧನಾ ಶಕ್ತಿಯ ಹಾಗೂ ಸಾಮಾಜಿಕ ರಂಗದಲ್ಲಿ ಕಾರ್ಯ ಮಾಡಲು ಅಧಿಕಾರ ಬರಲಾರದ"ೆಂದು ಲಿಂ. ಪರಮ ತಪಸ್ವಿ ಹಾನಗಲ್ಲ ಫಕೀರಸ್ವಾಮಿಗಳು ಲಿಂ. ಹಾನಗಲ್ಲ ಕುಮಾರ ಸ್ವಾಮಿಗಳಿಗೆ ನುಡಿದ ಬೋಧೆಯಿದು. ಗುರು ವಿರಕ್ತರಿಗೂ ಸಬೀಜ ನಿರ್ಬೀಜಾತ್ಮಕ ಚಿನ್ಮಯ ದೀಕ್ಷೆ ಅತ್ಯಾವಶ್ಯಕ. ಇದರಿಂದ ಒಂದು ಶಕ್ತಿ ಬಂದು, ಪರಿಪೂರ್ಣ ಮಾನವನಾಗಲು ಅಧಿಕಾರ ದೊರೆಯುತ್ತದೆ. ಮೊದಲು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪಳಗಗೆ ಅದರ ಇಂಗಿತವನರಿಯದೆ ಒಮ್ಮೆಲೆ ಸಾಮಾಜಿಕ ಕ್ಷೇತ್ರದಲ್ಲಿ ಧುಮ್ಮಿಕ್ಕಿದರೆ ಈಸು ಬರದೆ ನದಿಯಲ್ಲಿ ಜಿಗಿದಂತೆ; ಪ್ರಾಥಮಿಕ ಶಾಲೆಯ ಅಭ್ಯಾಸ ಮಾಡದೆ, ಮಾಧ್ಯಮಿಕ ಶಾಲೆಯನ್ನು ಸೇರಿದಂತೆ ವ್ಯರ್ಥವಾಗುತ್ತದೆ. ಆದಕ್ಕಾಗಿ ಕಷ್ಟಪಟ್ಟು ದುಡಿದು ಬೆವರು ಸುರಿಸಬೇಕಾಗುತ್ತದೆ. ಬೆವರು ಸುರಿಸದೆ ಹಸಿವಾಗದು. ಗುರುಗಳು ಹೇಳಿದ ಆಧ್ಯಾತ್ಮಿಕ ಬೋಧೆ ಪೌಷ್ಟಿಕಾಹಾರವಿದ್ದಂತೆ. ಆ ಬೋಧೆಯನ್ನು ಮನನ ಮಾಡಿ ಅರಗಿಸಿಕೊಂಡರೆ ತುಷ್ಟಿ ಪುಷ್ಟಿ ದೊರೆತು, ಆತ್ಮಕ್ಕೆ ಶಾಂತಿ ಸಿಗುವದಲ್ಲದೆ, ತ್ರಿಕರಣ ಶುದ್ಧಿ ತ್ರಿತಾಪಹರಣವಾಗುತ್ತದೆ; ತ್ರಿಮಲಗಳನ್ನು ತೊಳೆದು ಮಹದರಿವನ್ನು ಪಡೆಯಲು ಸಾಧನವಾಗುತ್ತದೆ. ಮಾಂದ್ಯಾದಿ ಗುಣಗಳನ್ನು ಕಳೆದು, ಕ್ರಿಯಾಧಿಕಾರವನ್ನು ಪಡೆಯಲು ಸಮರ್ಥರಾಗುತ್ತಾರೆ. ಪ್ರಸನ್ನತೆಯನ್ನು ತ್ರಿಕರಣಗಳಲ್ಲಿ ತುಂಬುವದೇ ಅನುಗ್ರಹದ ಮುಖ್ಯ ಗುರಿ. ಅನುಗ್ರಹವಿರದೆ ಅಧಿಕಾರ ಪ್ರಾಪ್ತವಾಗದು. ಅನುಗ್ರಹ ಪಡೆಯದೆ ಪ್ರಸಾದಿಯಾಗಲು ಅಸಾಧ್ಯ, ಪ್ರಸಾದಿಯಾಗದೆ

ಪ್ರಾಣಲಿಂಗಿಯಾಗಲು ಅಸಾಧ್ಯ. ಅದೇ ತೆರನಾಗಿ ಶರಣನೆನಿಸಲಾರರು. ಐಕ್ಯತೆಯನ್ನು ಪಡೆಯಲಾರರು. ಭೌತಿಕ ಪ್ರಪಂಚದಲ್ಲಿದ್ದರೂ ಆಧ್ಯಾತ್ಮಿಕ ಶಕ್ತಿಯನ್ನು ಬೆನ್ನೆಲುಬು ಮಾಡಿಕೊಂಡು ಕಾರ್ಯ ಸಾಧಿಸಿದರೆ ಸಿದ್ಧಿ ಕಟ್ಟಿಟ್ಟಬುತ್ತಿ. ದೊರೆತ ಅಧಿಕಾರವನ್ನು ದುರುಪಯೋಗ ಮಾಡಿಕೊಂಡರೆ ಮರನೇರಿ ಕೆಳಗಿಳಿದಂತೆ ವ್ಯರ್ಥ. ಇದಕ್ಕೆ ಭಕ್ತಿ, ಶ್ರದ್ಧೆ, ಕಾಯಕ ನಿಷ್ಠೆಗಳೇ ಮೂಲ ಬೇರುಗಳು, ಶಿವಾನುಭವವು ಬೆಳೆದಂತೆ ಶಿವಸಾನ್ನಿಧ್ಯ ಸಾಧ್ಯ. ಆಚಾರ ವಿಚಾರಗಳಲ್ಲಿ ಸ್ವಾನುಭಾವ ಪರಿಮಳವನ್ನು ತುಂಬಿ ಆತ್ಮಸ್ಫೂರ್ತಿಯನ್ನು ಪಡೆದರೆ ಈ ಅಧಿಕಾರ ಫಲವು ಸಮಾಜಕ್ಕೆ ದೊರೆತು ನವಜಾಗ್ರತಿಯುಂಟಾಗುತ್ತದೆ. ಗುರು ವಿರಕ್ತರೀರ್ವರೂ ತಮ್ಮ ತಮ್ಮ ಕ್ಷೇತ್ರದಲ್ಲಿ ಅತ್ಯದ್ಭುತ ಸಾಹಸದಿಂದ ಕಳಕಳಿಯಿಂದ ದುಡಿಯುವದು ಇಂದು ಅತ್ಯವಶ್ಯ ಬೇಕಾಗಿದೆ. ಇದಕ್ಕಾಗಿಯೇ ಸದ್ಭಕ್ತರ ಪಟ್ಟಾಭಿಷೇಕ ಮಹೋತ್ಸವವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ; ಪಲ್ಲಕ್ಕಿಯಲ್ಲಿ ಮೆರೆಯಿಸುತ್ತಾರೆ. ಗೌರವವನ್ನು ನೀಡುತ್ತಾರೆ. ಇದೆಲ್ಲವನ್ನೂ ಮನಸ್ಸಿನಲ್ಲಿ ಮೆಲಕು ಹಾಕಿ ಜಾಗ್ರತಿಯತ್ತ ಮನಸ್ಸು ಹಾಕಿ, ತಮ್ಮ ತಮ್ಮ ಹೊಣೆಯನ್ನು ಅರಿತು ಕಾರ್ಯ ಪ್ರವರ್ತರಾದರೆ ಅಧಿಕಾರ ಸಂಪ್ರಾಪ್ತವಾದುದು ಸಾರ್ಥಕ.

**ತಮೇವ ಭಾಂತಂ ಅನುಭಾತಿ ಸರ್ವಂ**

ನಮ್ಮ ಪ್ರಜ್ಞೆಯು ಭೌತಿಕ ಪರಿಮಿತಿಯನ್ನು ಮೀರಿ ಅದರಾಚೆಗೆ ಹೋಗಿ, ಸತ್ಯ ಸಾಕ್ಷಾತ್ಕಾರ ಮಾಡಿಕೊಳ್ಳಲು ನಮಗಿಂದು ಬೆಳಕು ಬೇಕು, ಬೆಳಕಿರದ ಜೀವನವು ಅದೊಂದು ಹಾಳು ದೇಗುಲ, ಪ್ರತಿಯೊಂದು ಶಕ್ತಿಯ ಅಭಿವೃದ್ಧಿಗೂ ಬೆಳಕಿರದಿದ್ದರೆ, ಅದರಲ್ಲಿ ನವಚೈತನ್ಯವು ಉದ್ಭವಿಸಲಾರದು. ಆತ್ಮಶಾಂತಿಯು ಸಿಗಲಾರದು. ಸಿದ್ಧಿಯ ವಿದ್ಯುತ್‌ಜ್ಯೋತಿಯು ಹೊರಹೊಮ್ಮಲಾರದು. ಕತ್ತಲೆಯೆಂಬುದು ಅಜ್ಞಾನ, ಬೆಳಕೆಂಬುದು ಸುಜ್ಞಾನ. "ಜ್ಯೋತಿಯ ಬಲದಿಂದ ತಮಂಧದ ಕೇಡಾದರೆ, ಜ್ಞಾನಬಲದಿಂದ ಅಜ್ಞಾನದ ಕೇಡಾಗುವದು" ಸಹಜ. ತಿಳಿವಳಿಕೆ ಬೆಳೆದಂತೆ ಬೆಳಕು ಹೃದಯದೊಳಗೆ ಇಳಿಯುತ್ತದೆ; ಆಗ ಹೃದಯವು ಪವಿತ್ರ ಭಾವನೆಯಿಂದ ನಳನಳಿಸುತ್ತದೆ. ಎಲ್ಲಿಯವರೆಗೆ ಹೃದಯದ ಶುದ್ಧಿಯಾಗುವುದಿಲ್ಲವೋ ಅಲ್ಲಿಯವರೆಗೆ, ಅಜ್ಞಾನದ ಕತ್ತಲೆಯಲ್ಲಿಯೇ ಸುಳಿದಾಡಬೇಕಾಗುತ್ತದೆ. ಮನೋವೇಗವನ್ನು ತಗ್ಗಿಸಿ ಮಾನಸಿಕ ಪ್ರಶಾಂತತೆಯನ್ನು ಅನುಭವಿಸುವದಕ್ಕಿಂತಲೂ ಆಧ್ಯಾತ್ಮಿಕ ಪ್ರಶಾಂತತೆ ಹೆಚ್ಚಿನದು. ಒಂದು ಸ್ಥೂಲವಾದರೆ ಮತ್ತೊಂದು ಸೂಕ್ಷ್ಮ. ನಮ್ಮ ಮನಸ್ಸಿನಲ್ಲಿ ಉನ್ನತವಾದ ಗಾಢ ಪ್ರಜ್ಞೆ ಬೆಳೆದಂತೆ, ಆಗ ನಮಗೆ ಜ್ಞಾನೋದಯವಾಗುವದು. ಅಲೌಕಿಕ ಶಕ್ತಿಯು ಹೆಚ್ಚಿದಂತೆ ಅದು ಪ್ರಭಾವಪೂರ್ಣವಾಗುತ್ತದೆ. ಲೋಕ ವ್ಯಾಪಾರವು ಬೇಸರವೆನಿಸುತ್ತದೆ, ದೈವೀ ಶಕ್ತಿಯು ಆಸರವಾಗುತ್ತದೆ. ಆಗ, ತನ್ನ ಇಷ್ಟ ದೇವರಿಗೆ ಸರ್ವವನ್ನು ಸಮರ್ಪಿಸುವ ಭಾವನೆ ಮನಸ್ಸಿನಲ್ಲಿ ಒಡಮೂಡುತ್ತದೆ.

ಆ ಜ್ಯೋತಿಯೊಡನೆ ಅನುಸರಿಸಬೇಕಾದರೆ, ನಿರಂತರವೂ ಹೋರಾಟ ಸಾಗಬೇಕಾಗುತ್ತದೆ. ಸಾಧಕರಾದವರು ಆತ್ಮಾರ್ಪಣೆ ಮಾಡಿ, ಧ್ಯಾನ ಸಲ್ಲಿಸಿದರೆ ಯೋಗ ಸಿದ್ಧಿ ಸಾಧ್ಯ. ಬಲಾತ್ಕಾರದಿಂದ ಹಾಗೂ ತೋರಿಕೆಗಾಗಿ ಈ ಕಾರ್ಯವನ್ನು ನಿರ್ವಹಿಸಿದರೆ, ಆ ಕಾರುಣ್ಯ ಕಿರಣ ಪ್ರಕಾಶವು ನಮಗೆ ತೋರದು. ದೇಹದ ಅಸ್ವಸ್ಥತೆ, ಬುದ್ಧಿಯ ಚಂಚಲತೆ, ಪ್ರಾಣದ ರಾಜಸಿಕತೆ ನಮ್ಮನ್ನು ಬಂಧಿಸಿದ್ದರೂ ಅವುಗಳಿಂದ ಕ್ಷೋಭೆಗೊಳ್ಳದೆ, ನಿರ್ಲಿಪ್ತ ಸ್ಥಿತಿಯಲ್ಲಿದ್ದು ಜೀವನ ಸಾಗಿಸಿ ಧ್ಯೇಯವನ್ನು ಸಾಧಿಸುವದರಲ್ಲಿ ಜಾಣ್ಮೆಯಿದೆ; ಇದ್ದೂ ಇಲ್ಲದಂತೆ ಇರುವದರಲ್ಲಿಯೇ ಪ್ರಗತಿಯ ವಿಲಕ್ಷಣ ಶಕ್ತಿಯು ಅಂತರ್ಯದಲ್ಲಿ ಅಡಗಿರುತ್ತದೆ. ಒಂದೆಡೆ ಮಹರ್ಷಿ ಅರವಿಂದಯೋಗಿಗಳು—

"ಪ್ರತಿಯೊಂದು ಚಲನೆಯ ಹಿಂದೆಯೂ ಒಂದು ಮೌನವಿದೆ; ಆ ಮೌನಕ್ಕೆ ನೀನು ಸಿದ್ಧವಾಗು. ಆ ಮೌನವನ್ನು ನೀನು ಆಕ್ರಮಿಸಿ, ಹಿಡಿಯುವ ಪ್ರಯತ್ನವನ್ನು ಬಿಟ್ಟು ಅದೇ ನಿನ್ನನ್ನು ಆಕ್ರಮಿಸಲು ನೀನು ಸಿದ್ಧವಾಗು. ಸತ್ಯದಲ್ಲಿ ನಂಬುಗೆ, ನಿನ್ನ ಸಾಮರ್ಥ್ಯದಲ್ಲಿ ನಂಬುಗೆ, ಗುರುವಿನಲ್ಲಿ ನಂಬುಗೆ ಇವುಗಳನ್ನು ಸಾಧಿಸಿಕೊಂಡರೆ, ಶಾಂತಿ, ಶಕ್ತಿ, ಜ್ಯೋತಿ ತಾನೇ ಪ್ರಾಪ್ತವಾಗುವವು" ಎಂದು ಹೃದಯಂಗಮವಾಗಿ ತಿಳಿಸಿದ್ದಾರೆ. ಕತ್ತಲೆಯ ಗರ್ಭದಿಂದಲೇ ಬೆಳಕಿನ ಆರಂಭವಾಗುವದೆಂದು ಸಾಫೋಕ್ಲಿಸ್ ಹೇಳಿದ್ದಾನೆ. ಪ್ರಕಾಶಮಾನವಾದ ಅತಿಮಾನಸ ಸತ್ಯವನ್ನು ಹೃದಯದಲ್ಲಿ ತುಂಬಬೇಕಾದರೆ, ಯೋಗ ಶಕ್ತಿಯ ವಜ್ರ ರಕ್ಷೆಯು ನಿರಂತರವೂ ಬೇಕಾಗುತ್ತದೆ. ಜಡ ಚೇತನವೂ ನಷ್ಟವಾಗಿ ಸಿದ್ಧಿ ಲಾಭಗಳು ದೂರಾದಾಗ, ಹೃದಯವು ಪಕ್ವಗೊಂಡಾಗ, ಆಧ್ಯಾತ್ಮಿಕ ಸೂರ್ಯನ ಬೆಳಕು ಬೇಕೆನಿಸುತ್ತದೆ. ಕೋಟಿ ಸೂರ್ಯನ ಬೆಳಕಿಗಿಂತಲೂ ಮಿಗಿಲಾದ ಆ ಪರಂಜ್ಯೋತಿಯು ನಮ್ಮೆಲ್ಲರನ್ನು ಬೆಳಕಿನ ದಾರಿಯತ್ತ ಕರೆದೊಯ್ದು ಕರುಣಿಸಲಿ.

## ಮಾಮೇಕಂ ಶರಣಂ ವ್ರಜ

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ।
ಅಹಂತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ॥

ಈ ನುಡಿ ಭಗವದ್ಗೀತೆಯದು. ಭಗವಂತನು ಅರ್ಜುನನನ್ನು ಕುರಿತು ದುಃಖಗಳು ಬಂದೊದಗಿದಾಗ ಸರ್ವಧರ್ಮಗಳನ್ನು ಅರ್ಥಾತ್ ಸಂಪೂರ್ಣ ಕರ್ತವ್ಯ ಕರ್ಮಗಳನ್ನು ನನ್ನಲ್ಲಿ ತ್ಯಾಗ ಮಾಡಿ ಶರಣು ಹೊಂದು. ಆಗ, ನಿನ್ನನ್ನು ಸಂಪೂರ್ಣ ಪಾಪಗಳಿಂದ ಮುಕ್ತನನ್ನಾಗಿ ಮಾಡುವನೆಂದು ನುಡಿದಿದ್ದಾನೆ.

ಪರಮಾತ್ಮನ ಕೃಪಾದೃಷ್ಟಿಯನ್ನು ಪಡೆಯಬೇಕಾದರೆ ಶರಣಾಗತಿಯೇ ಕೊನೆಯ ಉಪಾಯ. ಸಮರ್ಪಣಾಭಾವದಲ್ಲಿ ಹೃದಯವನ್ನು ಕರಗಿಸುವ ಮಹಾಶಕ್ತಿಯು ತುಂಬಿರುತ್ತದೆ. ಶರಣಾಗತಿಯು ಕೇವಲ ಶಬ್ದಮಾತ್ರದಿಂದ ಸಿದ್ಧವಾಗಲಾರದು; ಸುಮ್ಮನೆ ಕುಳಿತುಕೊಳ್ಳುವದರಿಂದಲೂ ಅಸಾಧ್ಯ. ಶರಣಾಗತ ವ್ಯಕ್ತಿಯು ಮೊದಲು ಅಹಂಕಾರ

ವನ್ನು ತ್ಯಜಿಸಿರಬೇಕು; ಸೂಕ್ಷ್ಮಕ್ಕಿಂತಲೂ ಸೂಕ್ಷ್ಮವಾದ ಭಾವವನ್ನು ಪರಮಾತ್ಮನಿಗೆ ಅರ್ಪಣ ಮಾಡಬೇಕು. ಅಲ್ಲಿ ತಮೋಗುಣವು ಲವಲೇಶವೂ ಸುಳಿದಾಡಬಾರದು; ಭಾಷ್ಯೈಕ್ಯವೆಂಬುದು ಕೃತ್ರಿಮತೆಯಲ್ಲಿರದ ಸಹಜತೆಯಲ್ಲಿ ಸಹಯೋಗವಾಗಿರಬೇಕು. ಅಹಂಕಾರ ಮಮಕಾರಗಳು ತೊಲಗಿ ಮನ, ಬುದ್ಧಿ, ಇಂದ್ರಿಯ, ಶರೀರದ ಸಮಸ್ತ ಪ್ರಪಂಚದಿಂದೊಡಗೂಡಿದ ಸರ್ವಭಾವದಿಂದ ಸಮರ್ಪಣವಾದರೆ ಮಾತ್ರ ಅದು ಶರಣಾಗತಿಯ ಲಕ್ಷಣ. ಅದಕ್ಕಾಗಿ ಶರೀರ, ವಾಣಿ, ಮನ ಬುದ್ಧಿ ಇವುಗಳನ್ನು ಪರಮಾತ್ಮ ನತ್ತ ನಿರ್ವಿಕಾರ ಮನಸ್ಸಿನಿಂದ ಹೊರಳಿಸಿದರೆ ಸುಖ ಶಾಂತಿ ಸಾಧ್ಯ. ಸೂಕ್ಷ್ಮದೃಷ್ಟಿ ಯಿಂದ ವಿಚಾರ ಮಾಡಿದಾಗ ಸರ್ವಋಷಿಗಳೂ, ಆಚಾರ್ಯರೂ, ಪೈಗಂಬರಾದಿಯಾಗಿ, ಸಕಲರ ದೃಷ್ಟಿಯಲ್ಲಿ ಪ್ರಪಂಚವು ದುಃಖಮಯವಾಗಿ ಕಂಡು, ಕೊನೆಗೆ ಸರ್ವಾರ್ಪಣ ಬುದ್ಧಿ ಬಂದುದು ಕಂಡು ಬರುತ್ತದೆ. ಇದೇ ಚರಮಜೀವನ; ಆತ್ಮಸಿದ್ಧಿ ಮಾಡಿಕೊಳ್ಳಲು ಇದೇ ಹೆದ್ದಾರಿ. ಇದೇ ಪ್ರಕಾರ ಬೌದ್ಧರೂ ಸಹ "ಬುದ್ಧಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ" ಎಂಬುದಾಗಿ ಪ್ರಾರ್ಥಿಸಿದ್ದಾರೆ. ಭಕ್ತರು ಭಕ್ತರನ್ನು ಕಂಡಾಗ ಭಕ್ತ ರೊಡನೆ ಪತ್ರವ್ಯವಹಾರ ಮಾಡುವಾಗ, ಶರಣು ಶರಣಾರ್ಥಿ ಎಂಬುದು ನಮ್ಮ ಕನ್ನಡ ಸಂಸ್ಕೃತಿಯಲ್ಲಿ ಬೆಳೆದು ಬಂದಿದೆ. ಮಹಾಶಿವಯೋಗಿ ನಿಜಗುಣರಾದರೂ, "ಶ್ರೀಗುರುವೆ ನೀನೆ ಶರಣಾಗೆನಗೆ" ಎಂದು ಶ್ರೀಗುರುವನ್ನು ಕುರಿತು ರಕ್ಷಿಸಲು ಬೇಡಿದ್ದಾರೆ. ಮತ್ತೊಬ್ಬರು "ಶಿವನು ಶರಣಾಗತ ರಕ್ಷಕ"ನೆಂದು ಅನನ್ಯಭಾವನೆಯಿಂದ ಮೊರೆಹೊಕ್ಕು ಹಾಡಿದ್ದಾರೆ. 'ಶರಣರ ಗುಣ ಮರಣದಲ್ಲಿ' ಎಂಬ ನಾಣ್ಣುಡಿಯೂ ಉಂಟು. ಹೀಗೆ ಅನೇಕ ಪ್ರಕಾರವಾಗಿ, ಶರಣ ಶಬ್ದದ ಮಹತ್ವವನ್ನು ಹಲವು ರೀತಿಯಲ್ಲಿ ತಿಳಿಯಪಡಿಸಿ ದ್ದಾರೆ. ಶರಣ ಶಬ್ದದ ಅರ್ಥವೇ ಇಷ್ಟು ಮಹತಿಯುಳ್ಳದ್ದಿರುವಾಗ, ಅದನ್ನರಿತು ಅರಗಿಸಿಕೊಂಡರೆ ಅದರ ಸಾರ್ಥಕತೆ ಎಷ್ಟೆಂಬುದು ಹೇಳಲಸಾಧ್ಯ. ಅದಕ್ಕಾಗಿ ಕಾಯಾ ರ್ಪಣ, ಕರುಣಾರ್ಪಣ, ಭಾವಾರ್ಪಣ ಹೀಗೆ ಸರ್ವಾರ್ಪಣಭಾವ ಸಂಪನ್ನರಾದರೆ ಭಗವಂತನ ಕೃಪಾಕಟಾಕ್ಷವನ್ನು ಪಡೆದು ನಿರ್ಭಯ ಮತ್ತು ನಿಶ್ಚಿಂತೆಯಿಂದ ಕಾಲ ಕಳೆಯಬಹುದು.

**ಆಶಾ ಹಿ ಪರಮಂ ದುಃಖಮ್**

ಆಶೆಯು ಅರಿವನ್ನು ಮರೆಯಿಸಿ, ಕತ್ತಲೆಯತ್ತ ಒಯ್ಯುತ್ತದೆ; ನಿರಾಶೆಯು ಬೆಳಕನ್ನು ತೋರಿಸಿ, ನಿತ್ಯ ಸುಖ ನೀಡುತ್ತದೆ. ಆಶೆಯು ಭವಪಾಶದಲ್ಲಿ ಕಟ್ಟಿಹಾಕುತ್ತದೆ; ನಿರಾಶೆಯು ಭವಬಂಧನವನ್ನು ಬಿಡಿಸುತ್ತದೆ. ಆಶೆಯು ಬಂಧುಬಾಂಧವರನ್ನು ಅಗಲಿಸುತ್ತದೆ; ನಿರಾಶೆಯು ಗುರುಹಿರಿಯರನ್ನು ಗೌರವಿಸುತ್ತದೆ. ಆಶೆಯಿಂದ ಸತ್ಯದ ಶೋಷಣೆಯಾಗಿ ಮಿಥ್ಯದ ಪೋಷಣೆಯಾಗುತ್ತದೆ. ನಿರಾಶೆಯಿಂದ ಸತ್ಯದ ಪೋಷಣೆಯಾಗಿ ಸೌಂದರ್ಯವು ವರ್ಧಿಸುತ್ತದೆ. ಆಶೆಯು ಭವದ ಬೀಜವಾದರೆ, ನಿರಾಶೆಯು ಆತ್ಮಪ್ರಕಾಶದ ತೇಜವಾಗುತ್ತದೆ.

ಆಶೆಯು ತನ್ನನ್ನು ತಾನು ಇರಿದುಕೊಳ್ಳುತ್ತದೆ; ನಿರಾಶೆಯು ತನ್ನನ್ನು ತಾನು ಅರಿದುಕೊಳ್ಳುತ್ತದೆ. ಆಶೆಯು ಮೋಹದ ಬಲೆಯಲ್ಲಿ ಬೀಳಿಸುತ್ತದೆ. ನಿರಾಶೆಯು

ಯೋಗಶಕ್ತಿಯನ್ನು ಬೆಳೆಸುತ್ತದೆ. ಆಶೆಯು ಅಧಿಕಾರದ ಅಮಲನ್ನು ಹೆಚ್ಚಿಸುತ್ತದೆ; ನಿರಾಶೆಯು ಆತ್ಮ ಸಾಮರ್ಥ್ಯವನ್ನು ಮೆಚ್ಚುತ್ತದೆ. ಆಶೆಯಿಂದ ಮಾನವನ ನಿಜವಾದ ಸ್ವಭಾವವು ಬಯಲಾಗುತ್ತದೆ; ನಿರಾಶೆಯಿಂದ ಮಾನವತೆಯು ಮಹೋನ್ನತ ದರ್ಶನವಾಗುತ್ತದೆ. ಆಶೆಯಿಂದ ಅಸಹನೆ ಪಕ್ಷಪಾತತನಗಳು ಬೇರುಬಿಡುತ್ತವೆ. ನಿರಾಶೆಯಿಂದ ಸಹನೆ, ನಿಷ್ಪಕ್ಷಪಾತತನ ಕರ್ತವ್ಯದಕ್ಷತೆಗಳು ಬೆಳೆದು ಬೆಳಗುತ್ತವೆ. ಆಶೆ ಆತ್ಮದ್ರೋಹ ಮಾಡುತ್ತದೆ; ನಿರಾಶೆಯು ಆತ್ಮೀಯತೆಯನ್ನು ಆದರಿಸುತ್ತದೆ. ಆಶೆ ಆದರ್ಶ ಸಾಧನೆಗೆ ಅಡ್ಡಿಮಾಡುತ್ತದೆ; ನಿರಾಶೆಯು ಆದರ್ಶ ವ್ಯಕ್ತಿಯನ್ನಾಗಿ ಮಾಡುತ್ತದೆ. ಮೋಸಕ್ಕೆ ಆಶೆಯೇ ಮೂಲವಾದರೆ ಸಂತೋಷಕ್ಕೆ ನಿರಾಶೆಯೇ ಮೂಲ. ಆಶೆಯಿಂದ ದುರ್ಗತಿ, ನಿರಾಶೆಯಿಂದ ಸದ್ಗತಿ. "ಆಶೆಯೇ ದಾಸತ್ವ ನಿರಾಶೆಯೇ ಈಶತ್ವ" ಇದು ದಾಸೋಕ್ತಿ.

ಆಶೆಯಲ್ಲಿಯೂ ಎರಡು ತೆರ; ಒಂದು ದುರಾಶೆ ಮತ್ತೊಂದು ಸದಾಶೆ. ಸದಾಶೆಯು ಮಾನವನನ್ನು ಕಲ್ಯಾಣದತ್ತ ಕರೆದೊಯ್ಯುತ್ತದೆ. ದುರಾಶೆಯು ಕೆಸರಿನಲ್ಲಿ ಸಿಕ್ಕ ಪಶುವನ್ನು ಒಯ್ಯುವಂತೆ ಅಧೋಗತಿಯತ್ತ ಎಳೆದೊಯ್ಯುತ್ತದೆ. ದುರಾಶೆ ಬೆಳೆದಂತೆ ಭ್ರಾಂತಿ ಬಲಿದು ಶಾಂತಿ ನಶಿಸುತ್ತದೆ. ದುರಾಶೆಯಿಂದ ಜೀವನವು ಮುಳ್ಳಾದರೆ, ಸದಾಶೆಯಿಂದ ಜೀವನವು ಹೂವಾಗುತ್ತದೆ; ಸುಗಂಧ ಬೀರುತ್ತದೆ; ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿಯಾಗುತ್ತದೆ. ಸದಾಶೆಯಿಂದ ಸದ್ಭಾವನೆಗಳು ಪುಷ್ಪವಾಗುತ್ತವೆ; ಆತ್ಮ ಸೌಷ್ಠವವು ಬಲಿಯುತ್ತದೆ. ಸದಾಶೆಯಿಂದ ಸುಖವು ದೊರೆತರೆ ದುರಾಶೆಯಿಂದ ದುಃಖಪ್ರಾಪ್ತಿ. ಒಂದೆಡೆ ಮಹಾತ್ಮಾ ಬುದ್ಧನು—

"ಮೋಹಕ್ಕಿಂತ ಸುಡುವ ಬೆಂಕಿಯಿಲ್ಲ; ದ್ವೇಷಕ್ಕಿಂತ ಚುಚ್ಚುವ ಅಲಗಿಲ್ಲ, ಭ್ರಾಂತಿಗಿಂತ ಬೇರೆ ಪಾಶವಿಲ್ಲ, ದುರಾಶೆಗಿಂತ ಬೇರೆ ಶತ್ರುವಿಲ್ಲ" ಎಂದು ಹೇಳಿದರೆ ವಿರತಿ ಶಿಖಾಮಣಿ ಅಕ್ಕಮಹಾದೇವಿಯು "ತೆರಣಿಯ ಹುಳು ತನ್ನ ನೂಲು ಸುತ್ತಿ ಸಾವ ತೆರನಂತೆ ಮನಬಂದುದ ಬಯಸಿ ಬೇಯುತ್ತಿರುವೆನಯ್ಯ; ಆ ಮನದ ದುರಾಶೆಯ ಮಾಣಿಸಿ ನಿಮ್ಮತ್ತ ತೋರಾ ಚನ್ನಮಲ್ಲಿಕಾರ್ಜುನಾ" ಎಂಬುದಾಗಿ ಮಲ್ಲಿಕಾರ್ಜುನನನ್ನು ಕುರಿತು ಹಾಡಿದ್ದಾಳೆ; ಬೇಡಿದ್ದಾಳೆ. ಆಶೆಯನ್ನು ದೂರಮಾಡಿ, ಆತ್ಮಶಾಂತಿಯನ್ನು ಪಡೆದು ಆದರ್ಶ ಮಹಿಳಾಮಣಿಯಾಗಿದ್ದಾಳೆ.

ದೃಷ್ಟಿ ವಿಶಾಲವಾದರೆ, ಮನ ಬುದ್ಧಿಗಳಲ್ಲಿ ಶುದ್ಧಿಯುಂಟಾದರೆ, ನಿರಾಶೆ ಸಾಧ್ಯ. ಭೌತಿಕ ಭೂತವನ್ನು ಬಿಡಿಸಿ ಸದ್ಭಾವನೆಯೆಂಬ ಸುಧೆಯಲ್ಲಿ ನಿಃಸ್ವಾರ್ಥವೆಂಬ ಸಕ್ಕರೆಯನ್ನು ಬೆರೆಸಿ ಸೇವಿಸಲು ನಿರಾಶೆಯು ಪರಮ ಸಾಧನ; ಅದುವೆ ಆಶೆಗೆ ಕಡಿವಾಣ. ಒಟ್ಟಿನಲ್ಲಿ ದುರಾಶೆಯಿಂದ ಆತ್ಮವಿನಾಶ; ಸದಾಶೆಯಿಂದ ಆತ್ಮವಿಕಾಸ.

**ಕರ್ತವ್ಯೋ ಧರ್ಮಸಂಗ್ರಹಃ**

ಕರ್ತವ್ಯ ದಕ್ಷತೆಯು ಸಂಕುಚಿತ ಮನೋಭಾವನೆಯನ್ನು ಕತ್ತರಿಸುತ್ತದೆ; ಉದಾತ್ತತೆ

ಯನ್ನು ಎತ್ತರಿಸುತ್ತದೆ; ಸಮನ್ವಯ ದೃಷ್ಟಿಯನ್ನು ಬಿತ್ತರಿಸುತ್ತದೆ; ವ್ಯಕ್ತಿತ್ವವನ್ನು ರೂಪಿಸುತ್ತದೆ, ಪ್ರಜ್ವಲಿಸುತ್ತದೆ; ಕ್ಷುದ್ರ ಅಹಂಕಾರವನ್ನು ಕಿತ್ತೊಗೆಯುತ್ತದೆ; ಅಜ್ಞಾನ ಕತ್ತಲೆಯನ್ನು ಮುತ್ತದಂತೆ ಮಾಡುತ್ತದೆ; ಮಾನಸಿಕ ಶಕ್ತಿಯನ್ನು ಏಕಾಗ್ರಗೊಳಿಸುತ್ತದೆ; ಸ್ಫೂರ್ತಿಯನ್ನು ನೀಡುತ್ತದೆ; ಭವಬಂಧನವನ್ನು ಬಿಡಿಸುತ್ತದೆ, ಸದ್ಗುಣಾಭರಣಗಳನ್ನು ತೊಡಿಸುತ್ತದೆ; ಮೌಢ್ಯತೆಯನ್ನು ತೆಗೆದುಹಾಕುತ್ತದೆ; ಬಾಹ್ಯ ಪ್ರಪಂಚದ ಚಲನವಲನಗಳು ಮನಸ್ಸಿನಲ್ಲಿ ಮೂಡದಂತೆ, ಕ್ಷೋಭೆಗೊಳಿಸದಂತೆ ಆಧ್ಯಾತ್ಮ ಶಕ್ತಿಗೆ ದಾರಿಮಾಡಿಕೊಡುತ್ತದೆ; ತನ್ನ ಆತ್ಮದ ಅರಿವಿನ ಬೆಳಕನ್ನು ತೋರಿಸುತ್ತದೆ; ಗುರಿ ಸಾಧನೆಯ ಸಿದ್ಧಿಯತ್ತ ಒಯ್ಯುತ್ತದೆ.

ಕರ್ತವ್ಯ ಪ್ರಜ್ಞೆಯು ಪಳಗಿದಂತೆ, ಸಾಮಾಜಿಕ ಪ್ರಜ್ಞೆ, ಧಾರ್ಮಿಕ ಪ್ರಜ್ಞೆಯು ಒಡಮೂಡುತ್ತದೆ; ತನ್ನವರೆಂಬ ಭಾವನೆ ಬಲಿಯುತ್ತದೆ, ವಿಶಾಲತೆಯ ಸುಳುಹು ಸುಳಿಯುತ್ತದೆ. ಕರ್ತವ್ಯನಿಷ್ಠೆಯಿಂದ ಮನುಷ್ಯನಿಗೆ ಆತ್ಮಶಾಂತಿ ಸಿಗುತ್ತದೆ. ಕರ್ತವ್ಯನಿಷ್ಠೆಯಿದ್ದಲ್ಲಿ ಧರ್ಮವು ಉಳಿದು ಬೆಳಗುತ್ತದೆ. ಕರ್ತವ್ಯ ನಿಷ್ಠಾವಂತನು ಹೊಗಳಿಕೆಯ ಕಡೆಗೆ ಲಕ್ಷ್ಯವನ್ನು ಹಾಕಲಾರನು. ಆದರೆ ಕರ್ತವ್ಯವಿಮುಖತೆಯು ಮಾನವನನ್ನು ಅಧೋಗತಿಗೆ ಎಳೆದೊಯ್ಯುತ್ತದೆ. ಅಲ್ಲಿ ಮಾನವೀಯತೆ ಇರಲಾರದು. ಗುರು ಹಿರಿಯರನ್ನು ಗೌರವಿಸುವ ಬುದ್ಧಿ ಬರಲಾರದು. ಕರ್ತವ್ಯವಿಮುಖತೆಯಲ್ಲಿ ಅಸಹಕಾರ, ದುರಭಿಮಾನಗಳು ತಲೆದೋರಿ ಕಿಂಕರ್ತವ್ಯ ವಿಮೂಢನಾಗುತ್ತಾನೆ. ಕರ್ತವ್ಯ ಪಾಲನೆಯನ್ನು ಮಾಡಲಾರದವನು ಸುಳ್ಳು ನೆವಗಳನ್ನು ಹೇಳಿ ವಂಚಿಸುತ್ತಾನೆ; ಒಳಸಂಚು ಮಾಡುವುದರಲ್ಲಿ ಮನಸ್ಸನ್ನು ಹಾಕುತ್ತಾನೆ; ತಾನೊಬ್ಬನಲ್ಲದೆ ಮತ್ತೊಬ್ಬರನ್ನು ಕೆಡಿಸಿ ಹಾಳು ಮಾಡುತ್ತಾನೆ.

ಕರ್ತವ್ಯ ಚ್ಯುತಿಯಿಂದ ಮನುಷ್ಯನು ಹಲವು ಬಗೆಯ ಮಾನಸಿಕ ರೋಗಗಳಿಗೆ ತುತ್ತಾಗಿ ಬಂಧು ಬಾಂಧವರಿಗೆ ಕುತ್ತಾಗಿ ಅತ್ತಿತ್ತ ಅಲೆದಾಡಿ ಸತ್ತುಹೋಗುವದೇ ಅವನ ಗುರಿಯಾಗುತ್ತದೆ. ಭ್ರಮಾತ್ಮಕ ಜೀವನದಲ್ಲಿ ತೊಳಲಾಡಿ ಸತ್ಯಜ್ಞಾನದ ಪ್ರಕಾಶವು ದೊರೆಯದೆ ಮುಂಜಾವಿನ ಮಂಜಿನಂತೆ ಅವನ ಜೀವನವಾಗುವುದು. ಅವನಿಗೆ ಧರ್ಮವೆಂಬುದು ಮೃಗಜಲವಾಗುತ್ತದೆ. ಅದರಲ್ಲಿ ತಿರಸ್ಕಾರಭಾವನೆ ಹುಟ್ಟುತ್ತದೆ. ಹೀಗಾಗಿ ವ್ಯಸನದ ಹೀನ ಕೆಸರಿನಲ್ಲಿ ಅವನು ಕಾಲಕಳೆಯುತ್ತಾನೆ. ಅಂದರೆ ಕರ್ತವ್ಯ ಹೀನನಿಗೆ ಆಲಸ್ಯವು ಆವರಿಸಿ ವಿಷಯದಾಹ ಹೆಚ್ಚಾಗುತ್ತದೆ.

ಭಾಗ್ಯದ ಬದುಕು ಬಯಸುವವರು ಸ್ವಕರ್ತವ್ಯನಿಷ್ಠೆಯಲ್ಲಿ ಕಾರ್ಯತತ್ಪರರಾದರೆ, ಕರ್ತವ್ಯದಿಂದ ಪ್ರಾಮಾಣಿಕತೆಯು ಸಾಧ್ಯ. ನಿಷ್ಠಾಪೂರ್ಣ ಕರ್ತವ್ಯ ಬುದ್ಧಿಯಿಂದ ಸತ್ಯಾರಾಧನೆ ಮಾಡಿದರೆ ಜ್ಞಾನರತ್ನವು ದೊರಕಿ ತನ್ನ ತಾನರಿದು ಶಿವಸುಖ ಪಡೆಯಬಹುದು. ತಮ್ಮ ತಮ್ಮ ಕಾಯಕವನ್ನು ಶ್ರದ್ಧೆ ವಿಶ್ವಾಸದಿಂದ ಮನಃಪೂರ್ವಕ ಮಾಡಿ, ಅರಿವು ಆಚರಣೆ ಜ್ಞಾನ ಕ್ರಿಯೆಗಳ ಸಮುಚ್ಚಯದೊಡನೆ ಕರ್ತವ್ಯ ಪರಿಪಾಲನೆ ಗೈದರೆ

ಅದುವೆ ಧರ್ಮ ಸಂಗ್ರಹವಾಗುವುದು. ಪುಣ್ಯದ ಪುಂಜವಾಗುವುದು. ಅಂತೆಯೇ ಗೀತೆಯುಲ್ಲಿ ಕರ್ತವ್ಯ ರಹಿತ ಹಕ್ಕು ಬಾಧ್ಯತೆಯು ನೆರಳಿಲ್ಲದ ಮನುಷ್ಯನಂತೆ ಎಂದು ಹೇಳಿದೆ.

**ಲೋಕೇsಸ್ಮಿನ್ ಧರ್ಮಸಂಸ್ಕಾರಃ ಸರ್ವೇಷಾಂ ಸುಖದಾಯಕಃ**

ಬಾಳು ಬಂಗಾರವಾಗಲು ಧರ್ಮ-ಸಂಸ್ಕಾರ ಬೇಕು. ಧಾರ್ಮಿಕ ನಿಷ್ಠೆ-ಶ್ರದ್ಧೆಗಳ ಸಂಸ್ಕಾರವಿರದೆ, ಸ್ವಾರ್ಥದ ಕಾಡಿನಲ್ಲಿ ತಿರುಗುವವನಿಗೆ ಈರ್ಷೆ, ದ್ವೇಷ, ವಂಚಕತನ, ಕೃತಘ್ನತೆಗಳೆಂಬ ಕಾಡುಮೃಗಗಳು ಬೆನ್ನು ಹತ್ತಿ, ಮಾನವನನ್ನು ರಸಾತಳಕ್ಕೆ ಎಳೆದೊಯ್ಯುತ್ತವೆ; ಅಂಥವನ ಭಾಗ್ಯ ಜೀವನವು ಕುತ್ತಾಗಿ ಮೃತ್ಯುವಿನತ್ತ ಸಾಗುತ್ತಿರುತ್ತದೆ. ಕೃತಜ್ಞತೆಯಿಲ್ಲದೆ ಕೃತಘ್ನತೆಯು ಕೃತಕಭಾವ ತೋರುವವರು, ಹಾವಿನ ಹಲ್ಲಿನ ವಿಷದಂತೆ ಅಪಾಯಕಾರಿಗಳು. ಅವರ ಜೀವನವು ಪಶುವಿಗಿಂತಲೂ ಕಡೆಯಾಗಿ ಪರಿಣಮಿಸುತ್ತದೆ.

ಇಲ್ಲಿ ಒಂದು ಕಥೆ ನೆನಪಿಗೆ ಬರುತ್ತದೆ: ಅರಣ್ಯದಲ್ಲಿ ಹಸಿದ ಹುಲಿಯೊಂದು ಬೇಟೆಯನ್ನು ಹುಡುಕುತ್ತಿತ್ತು. ಆಗ, ಅಲ್ಲಿ ಮನುಷ್ಯನೊಬ್ಬನನ್ನು ನೋಡಿದ ಅದು ಅವನತ್ತ ಧಾವಿಸಿತು. ಹುಲಿಯನ್ನು ನೋಡಿದ ಆ ಮನುಷ್ಯನು, ತನ್ನ ಜೀವ ಉಳಿಸಿಕೊಳ್ಳಲು ಹತ್ತಿರದಲ್ಲಿದ್ದ ದೊಡ್ಡ ಮರವನ್ನೇರಿದನು. ಆ ಮರದಲ್ಲಿ ಕರಡಿಯೊಂದು ಮೊದಲೇ ಕುಳಿತಿತ್ತು; ಅವನಿಗೆ ಮತ್ತೂ ಅಂಜಿಕೆಯಾಯಿತು. ಮೇಲೆ ಕರಡಿ, ಕೆಳಗೆ ಹುಲಿ! ನನ್ನನ್ನು ಹೇಗಾದರೂ ಮಾಡಿ ರಕ್ಷಿಸಬೇಕೆಂದು ಕರಡಿಯನ್ನು ಕೇಳಿಕೊಂಡನು. ಕರಡಿಯು ಕಾಡು ಪ್ರಾಣಿಯಾದರೂ ತನ್ನಲ್ಲಿ ಅತಿಥಿಯಾಗಿ ಬಂದ ಆ ಮನುಷ್ಯನಿಗೆ ಆಶ್ರಯ ನೀಡಿ, "ಹೆದರದಿರು" ಎಂದು ಹೇಳಿತು. ಕರಡಿಯು ಆ ಹುಲಿಗೆ "ಅತಿಥಿಯಾಗಿ ಬಂದವನನ್ನು ರಕ್ಷಿಸುವುದು ನನ್ನ ಧರ್ಮ; ಆತನನ್ನು, ಕೆಳಗೆ ದೂಡಿ ಅತಿಥಿಗಳಿಗೆ ಕೇಡು ಬಗೆಯಲಾರೆ" ಎಂದು ಉತ್ತರಿಸಿತು. ಆ ಗಿಡದಲ್ಲಿಯೇ ಆ ಮನುಷ್ಯ ಎಚ್ಚೆತ್ತು ಕುಳಿತಾಗ, ಕರಡಿಯು ನಿಶ್ಚಿಂತೆಯಿಂದ ನಿದ್ರಿಸತೊಡಗಿತು, ಆಗ ಮನುಷ್ಯನನ್ನು ಕುರಿತು ಹುಲಿಯು "ನಿದ್ರಿಸುತ್ತಿರುವ ಆ ಕರಡಿಯನ್ನು ನೀನು ಕೆಳಗೆ ದೂಡಿದರೆ ಅದನ್ನು ತಿಂದು ಹೋಗುತ್ತೇನೆ; ನಿನ್ನ ಜೀವ ಉಳಿಯುವುದು" ಎಂದು ಉಪಾಯ ಹೇಳಿತು. ಹುಲಿಯ ಮಾತಿಗೆ ಒಪ್ಪಿದ ಆ ಕೃತಘ್ನ ಮನುಷ್ಯನು ನಿದ್ರಿಸುತ್ತಿದ್ದ ಆ ಕರಡಿಯನ್ನು ದೂಡಿ ಗಿಡದಿಂದ ಕೆಳಗೆ ಬೀಳಿಸಿದನು ಬಿದ್ದ ಕರಡಿಯನ್ನು ಹಿಡಿದ ಹುಲಿಯು— "ಈಗೇನನ್ನುತ್ತಿ?" ಎಂದು ಗರ್ಜಿಸಿತು. ಕರಡಿಯು ಸಮಾಧಾನವಾಗಿಯೇ ಉತ್ತರಿಸಿತು. "ಅತಿಥಿಯನ್ನು ರಕ್ಷಿಸುವುದು ನನ್ನ ಧರ್ಮವೆಂದು ಅವನನ್ನು ರಕ್ಷಿಸಿದ್ದೇನೆ. ಇರಲಿ! ಅವನ ವಂಚಕತನ ಅವನಿಗಿರಲಿ! ಹಸಿದ ನಿನ್ನ ಹಸಿವನ್ನು ಹಿಂಗಿಸುವುದೂ ನನ್ನ ಧರ್ಮವಾಗಿದೆ. ನನ್ನನ್ನು ನೀನು ತಿನ್ನಬಹುದಾದರೂ, ಒಂದು ಮಾತು ಕೇಳು; ನೀನು ಬೆನ್ನಟ್ಟಿಕೊಂಡು ಬಂದ ಮನುಷ್ಯನೇ ನನ್ನ ಬದಲು ನಿನಗೆ ಬೇಕಿದ್ದರೆ, ನನ್ನನ್ನು ಬಿಟ್ಟುಬಿಡು. ನಾನು ಗಿಡದ ಮೇಲೇರಿ, ಅವನನ್ನು

ಕೆಳಗೆ ಬೀಳಿಸಬಲ್ಲೆನೆ"ಂದು ಹೇಳಿ, ಗಿಡವನ್ನೇರಿತು ಕರಡಿ. ಅಲ್ಲಿ ಸಾವಿಗಂಜಿ ತತ್ತರಿಸುತ್ತಿದ್ದ ಮನುಷ್ಯನಿಗೆ– "ನೀನು ನನಗೆ ಮೋಸ ಮಾಡಿದ್ದನ್ನು ತಿಳಿದೂ ತಿಳಿದೂ ನಾನು ಮೋಸ ಮಾಡಲಾರೆ. ಧೈರ್ಯದಿಂದಿರು" ಎಂದು ಹೇಳಿ ಅವನನ್ನು ಹುಲಿಯಿಂದ ರಕ್ಷಿಸಿತಲ್ಲದೆ, ತಾನೂ ರಕ್ಷಣೆ ಹೊಂದಿತು. ಹುಲಿಯು ಹಾಗೆಯೇ ಮರಳಿ ಹೋಯಿತು. ಧರ್ಮದಿಂದ ನಡೆಯುವವನನ್ನು ಧರ್ಮ ರಕ್ಷಿಸುತ್ತದೆ.

ಇದು ಮಕ್ಕಳ ಕಥೆಯಂತೆ ಕಂಡರೂ ಇಲ್ಲಿ ನೀತಿತತ್ತ್ವ ಅಡಗಿದೆ; ರೀತಿಸತ್ವ ತುಂಬಿದೆ. ಮೃತ್ಯು ಹುಲಿಯಿಂದ ಪಾರಾಗಬೇಕಾದರೆ, ಧರ್ಮ–ಕರಡಿಯೊಡನೆ ಸಹಕರಿಸಿ ಬಾಳಬೇಕು.

## ಮಾತ್ಸರ್ಯದೋಷಸಂಯುಕ್ತೋ ಮಾನವೋ ಯಾತಿ ದುರ್ಗತಿಂ

ಕಾಮ–ಕ್ರೋಧಾದಿಗಳೆಂಬ ಆಂತರಿಕ ಷಡ್ ವೈರಿಗಳಲ್ಲಿ ಕೊನೆಯದಾದ ಮತ್ಸರವೆಂಬುದು ಉದರದೊಳಗಿರುವ ಕಿಚ್ಚು. "ಹೊಟ್ಟೆ ಕಿಚ್ಚು". ಈ ಕಿಚ್ಚು ಪ್ರತಿಯೊಬ್ಬ ಮನುಷ್ಯನನ್ನು ಸುಡುವುದಲ್ಲದೆ, ಸಮಗ್ರ ದೇಶವನ್ನೇ ಹಾಳು ಮಾಡಬಹುದು. ಸ್ವಾರ್ಥವು ಮಿತಿ ಮೀರಿ ಹೆಚ್ಚಿದಂತೆ ಮತ್ಸರವು ಹೆಚ್ಚುವುದು; ದ್ವೇಷಕ್ಕೆಡೆಮಾಡಿಕೊಡುವುದು.

ಮತ್ಸರದಿಂದ ಕುತ್ಸಿತ ಭಾವವು ಬೆಳೆದು ಮತ್ತೊಬ್ಬರ ಏಳ್ಗೆಯನ್ನು ಕುಂಠಿತಗೊಳಿಸುವುದು. ಮನಸ್ಸಿನ ದೌರ್ಬಲ್ಯವೇ ಮತ್ಸರ ಅಥವಾ ಮಾತ್ಸರ್ಯ ಎನ್ನಿಸಿಕೊಂಡ ಇದರಿಂದ ಬುದ್ಧಿಯ ನಾಶವಾಗುತ್ತದೆ; ಇದು ಅಧಃಪತನಕ್ಕೆ ದಾರಿ ಮಾಡಿಕೊಡುತ್ತದೆ.

ಮಾತ್ಸರ್ಯದಿಂದ ಅಂದರೆ, ಅಸೂಯೆಯಿಂದ ತುಂಬಿದ ಮನುಷ್ಯನು ಪರರ ಶ್ರೇಯಸ್ಸನ್ನು ಕಂಡು ಸಂಕಟಪಡುತ್ತಾನೆ, ಮಾತ್ರವಲ್ಲ ಸದಾ ಕೇಡನ್ನೇ ಬಗೆಯುತ್ತಾನೆ. ಇದರಿಂದ ಸಮಾಜಕ್ಕೆ ಹಾನಿಯಾಗುತ್ತದೆಂಬುದನ್ನು ಅರಿಯದೆ, ಅವನು ಕೇವಲ ದ್ವೇಷಾಸೂಯೆಯಿಂದ ತನ್ನ ಪ್ರತಿದ್ವಂದ್ವಿಗೆ ಕೆಡುಕನ್ನೇ ಬಯಸುತ್ತಾನೆ.

"ಅಸೂಯಾಗ್ರಸ್ತರ ಬೊಬ್ಬಾಟವು ಹುಚ್ಚು ನಾಯಿಯ ಕಡಿತಕ್ಕಿಂತ ವಿಷಕಾರಿ" ಎಂದು ಶೇಕ್ಸ್‌ಪಿಯರನು ಹೇಳಿದರೆ, ವಿಜಯದಾಸನು "ಗುಣವಿಲ್ಲದವನು ಗುಣವಂತನಿಗೆ ಸಲ್ಲಿಸುವ ವಿಕಾರರೂಪದ ಕಾಣಿಕೆಯೇ ಅಸೂಯೆ" ಎಂದಿದ್ದಾರೆ.

ಇಲ್ಲಿ ಕಥೆಯೊಂದು ನೆನಪಿಗೆ ಬರುತ್ತದೆ: ಒಂದು ಊರಲ್ಲಿ ಪರಸ್ಪರ ದ್ವೇಷಾಸೂಯೆಯ ಮತ್ಸರದಿಂದ ಒಳಲಿದ ಇಬ್ಬರು, ದೇವರಿಂದ ವರ ಪಡೆದು, ತನ್ನ–ತನ್ನ ಎದುರಾಳಿಗೆ ಕೆಡುಕನ್ನು ಮಾಡಿ ತಾನೇ ಹೆಚ್ಚಿನವನೆನ್ನಿಸಿಕೊಳ್ಳಬೇಕೆಂದು ಬೇರೆ ಬೇರೆ ಸ್ಥಾನದಲ್ಲಿ ತಪಸ್ಸಿಗೆ ಕುಳಿತುಕೊಳ್ಳುತ್ತಾರೆ. ತಪಸ್ಸಿಗೆ ಮೆಚ್ಚಿದ ದೇವರು ಮೊದಲನೆಯವನನ್ನು "ಏನು ವರಬೇಕೆ"ಂದು ಕೇಳುತ್ತಾನೆ. ಆ ಮೊದಲನೆಯವನು ಎರಡನೆಯವನಿಗಿಂತ ತನಗೆ ಎರಡು ಪಟ್ಟು ವರಬೇಕೆಂದು ಕೇಳುತ್ತಾನೆ ಅದರಂತೆಯೇ, ಬೇಡಿದವರಿಗೆ ಬೇಡಿದ ವರವನ್ನು ಕೊಡುವ ದೇವರು ಎರಡನೆಯವನನ್ನು ಕೇಳಿದಾಗ ಅವನು ತನಗೆ ಒಂದು

ಲಾಭವಾಗಲೆಂದರೆ ತನ್ನ ವೈರಿಗೆ ಎರಡು ಲಾಭವಾಗುವುದು. ತನಗೆ ಒಂದು ಕೆಡಕಾಗಲೆಂದರೆ ತನ್ನ ವೈರಿಗೆ ಎರಡು ಕೆಡಕಾಗುವುದು. ಆದ್ದರಿಂದ ತನ್ನ ವೈರಿಗೆ ಲಾಭವನ್ನು ಮಾಡಗೊಡದೆ ಕೆಡುಕೇ ಆಗಲೆಂದು ಮತ್ಸರದಿಂದ "ನನ್ನ ಒಂದು ಕಣ್ಣು ಕುರುಡಾಗಲಿ" ಎಂದು ವರವನ್ನು ಬೇಡಿದನು. ಇದರಿಂದ ಮೊದಲನೆಯವನು ಈ ಮೊದಲೇ ಬೇಡಿದ ವರದಂತೆ ಅವನ ಎರಡೂ ಕಣ್ಣುಗಳು ಕುರುಡಾದವು. ಎರಡನೆಯವನದು ಒಂದು ಕಣ್ಣು ಕುರುಡಾಯಿತು. ಒಟ್ಟಿನಲ್ಲಿ ಮತ್ಸರದಿಂದ ಇಬ್ಬರಿಗೂ ಕೆಡುಕಾಯಿತು. ಕಾರಣ ಮತ್ಸರವು ಒಳ್ಳೆಯದಲ್ಲ.

"ಕಾರ್ಯವ ನೋಡಿ ಹರುಷಪಡಬೇಕಲ್ಲದೆ, ಮತ್ಸರಿಸುವದೇಕಯ್ಯಾ!
ಅಲ್ಲದ ಸಲ್ಲದ ನುಡಿಗಳನಾಡಿ ಕುತ್ಸಿತರಾಗುವುದೇತಕಯ್ಯಾ!
ಬೆಂಕಿಯ ಬಾಯಿಗೆ ರವದಿಯ ತುರುಕಿದಂತೆ,
ಮತ್ಸರಾಗ್ನಿಗೆ ಮನವನಿತ್ತರೆ ಆತ್ಮಶಾಂತಿಯೆಲ್ಲಿಯದಯ್ಯಾ!
ಭೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ.

## ಯಾದೃಶೀ ಭಾವನಾ ಯಸ್ಯ ಸಿದ್ಧಿರ್ಭವತಿ ತಾದೃಶೀ

ದೃಷ್ಟಿಯಂತೆ ಸೃಷ್ಟಿ. ಭಾವವಿದ್ದಂತೆ ಸಿದ್ಧಿ. ಹೃದಯ ಶುದ್ಧಿ ತಿಳಿಗಣ್ಣನ್ನು ತೆರೆಯಿಸುವ ಹೊಂಗಿರಣ. ಹೂವಿನಿಂದ ವಾಸನೆಯನ್ನರಿಯುವಂತೆ, ಭಾವನೆಯಿಂದ ಅಂತರಂಗವನ್ನು ಅರ್ಥ ಮಾಡಿಕೊಳ್ಳಬಹುದು. ವಿಶಾಲತೆಯಿದ್ದಲ್ಲಿ ಹೃದಯ ಪಕ್ವತೆಯನ್ನು ಕಾಣಬಹುದು. ವ್ಯಕ್ತಿಯ ಅಂತರಂಗವನ್ನರಿಯಲು ಭಾವವೇ ಮುಖ್ಯ ಸಾಧನ. ಶಿವಪೂಜೆಗೂ ಭಾವವೇ ಮೂಲ ಕಾರಣ; ಭಾವನೆಯಲ್ಲಿ ನಿಷ್ಕಲ್ಮಷವಾದ ಆತ್ಮಶುದ್ಧಿಯೊಡಗೂಡಿದ್ದರೆ ಅದೇ ದೇವರಿಗೆ ಸಮರ್ಪಣ. ಈ ಸಮರ್ಪಣ ಭಾವನೆಯೇ ಮಾನವನನ್ನು ದೇವನತ್ತ ಕರೆದೊಯ್ಯುವ ಅತ್ಯುತ್ತಮ ಸತ್ಪಥ. ಈ ಅರಿವು ಆಚಾರದಲ್ಲಿ ಸಮಾವೇಶವಾದರೆ, ಅಂತರಂಗ ಬಹಿರಂಗವೆಂಬ ಭೇದ ಕಳೆದು ಒಂದುಗೂಡಿಸಿ ಒಂದು ಮಾಡಿದರೆ ಮತ್ತು ಒಳಹೊರಗೆ ಅರಿವು ಅಡಿಯಿಟ್ಟು ಒಂದೆಂಬ ಭಾವನೆಯಲ್ಲಿ ಕೂಡಿಕೊಂಡರೆ ನಿಜಲಿಂಗೈಕ್ಯ ಸಾಧನೆಗೆ ಅಚ್ಚಳಿಯದ ನಿಜಪೂಜೆಯಾಗುವದು. ಭಾವಸಿದ್ಧಿಯಾಗಿ ಅರಿವಿನ ಬೆಳಗು ಅರಿವಾಗಿಯೇ ಬೆಳಗುವದು.

"ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ।
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿಧಧಾಮ್ಯಹಂ॥"

ಭಕ್ತನಾದವನು ಯಾವ ರೀತಿಯಲ್ಲಿ, ಯಾವ ಭಾವನೊಡನೆ ಪೂಜಿಸುವನೋ, ಅದೇ ತೆರನಾಗಿ ಅವನ ಆ ಶ್ರದ್ಧೆಯನ್ನು ಸ್ಥಿರಗೊಳಿಸುವನೆಂಬ ಭಾವನೆಯನ್ನು ತೋರಿಸುವದೇ ಈ ಗೀತೋಕ್ತಿಯ ಒಳಗುಟ್ಟು.

ದುಷ್ಟ ಭಾವನೆಯ ಸೆಳವಿನಲ್ಲಿ ಸಿಕ್ಕಿರುವವನು ಮರವೆಯ ಕತ್ತಲಲ್ಲಿ ತಿರುಗಿ ಸಣ್ಣಾಗಿ ಹೋಗುವನಲ್ಲದೆ, ಮಿತಿ ಮೀರಿ ಬೆಳೆದ ದುರ್ವಾಸನೆಗಳಿಂದ ಅಧೋಗತಿಗೀಡಾಗುವನು. ಸದ್ಭಾವನೆಯೇ ಪ್ರಗತಿಗೆ ದಾರಿ ದೀಪ. ಒಂದೆಡೆ ಮಹಾತ್ಮಾ ಬಸವಣ್ಣನವರು ಸಹ "ಭಾವ ಶುದ್ಧವಾದೊಡೆ ಕೂಡಲ ಸಂಗಮದೇವನೆ ತನ್ನತ್ತ ಕರೆದುಕೊಳ್ಳುವನೆಂದು ಅನುಭವ ಪೂರ್ಣ ನುಡಿಯೊಡನೆ ಬಿತ್ತರಿಸಿದ್ದಾರೆ.

"ಕೆಲಕ್ಕೆ ಶುದ್ಧನಾದನಲ್ಲದೆ, ಮನಕ್ಕೆ ಶುದ್ಧನಾಗೆನಯ್ಯ ಕೈಮುಟ್ಟಿ ಪೂಜಿಸುವೊಡೆ ಕೈ ಶುದ್ಧಿ ಇಲ್ಲವಯ್ಯ, ಮನಮುಟ್ಟಿ ಪೂಜಿಸುವೊಡೆ ಎನ್ನ ಮನ ಶುದ್ಧವಿಲ್ಲವಯ್ಯ ಭಾವ ಶುದ್ಧವಾದೊಡನೆ ಕೂಡಲ ಸಂಗಮ ದೇವಯ್ಯನಿತ್ತ ಬಾ ಎಂದು ಎಂದೆತ್ತಿಕೊಳ್ಳನೇಕಯ್ಯ." ವಿಶ್ವವಿಭೂತಿ ಬಸವಣ್ಣನವರ ಅನುಭಾವದ ಈ ಅಮರವಾಣಿ ಎಲ್ಲರನ್ನು ಬೆಳಕಿನ ಲೋಕಕ್ಕೆ ಎಳೆದೊಯ್ಯುತ್ತದೆ; ಮನ ಮುಟ್ಟಿ ಪೂಜಿಸಲು ಹೇಳುತ್ತದೆ. ಕತ್ತಲೆಯ ಕಾಳಿಕೆಯ ಕಳೆದು ಜ್ಯೋತಿಯ ಸೀಮೆಯನ್ನು ಮುಟ್ಟಿಸುತ್ತದೆ; ಸರ್ವಾತ್ಮತೆಗೆ, ಪರಮಾತ್ಮ ಪರವಶತೆಗೆ ನಿಲುಕಿಸುತ್ತದೆ. ಭಾವಶಕ್ತಿಯ ಹಾಗೂ ಅದರ ಅಂತಃಸತ್ವದ ಬೆಳಕನ್ನು ಎದುರು ಚೆಲ್ಲುತ್ತದ; ಇದೇ ಭಾವಸೌರಭ ಮತ್ತು ಭಾವಲಿಂಗ ಪೂಜೆ.

## ಸ್ವಾರ್ಥರಾಹಿತ್ಯಮೇವಾತ್ರ ಜಗದ್ಧಿತಾಯ ಕಲ್ಪತೇ

ಪ್ರತಿಯೊಬ್ಬನೂ ಕಾರ್ಯಪ್ರವೃತ್ತನಾಗುತ್ತಲೇ ಇರುತ್ತಾನೆ. ಈ ಕಾರ್ಯ ಪ್ರವೃತ್ತನಾಗುವಿಕೆಯು ಎರಡು ವಿಧವಾಗಿದೆ: ಒಂದು ಸ್ವಾರ್ಥ; ಇನ್ನೊಂದು ಪರಾರ್ಥ. ಒಂದನೆಯದರಲ್ಲಿ ತನ್ನ ಹಿತವೇ ಪ್ರಧಾನವಾಗಿದ್ದರೆ, ಇನ್ನೊಂದರಲ್ಲಿ ಪರರ ಹಿತಕ್ಕೇ ಪ್ರಾಧಾನ್ಯತೆಯಿದ್ದು, ತನ್ನ ಹಿತ ಗೌಣವಾಗಿರುತ್ತದೆ.

ಜೀವಿಸುತ್ತಿರುವ ಪ್ರತಿಯೊಬ್ಬ ವ್ಯಕ್ತಿಗೂ ಸ್ವಾರ್ಥವಿದ್ದೇ ಇರುತ್ತದಾದರೂ, ಕೇವಲ ಸ್ವಾರ್ಥಕ್ಕಾಗಿಯೇ ಆ ವ್ಯಕ್ತಿಯ ಜೀವನವಿರಬಾರದು. ಕೇವಲ ಸ್ವಾರ್ಥದ ಕಡೆಗೆ ಗಮನವಿರಿಸಿದರೆ, ಇತರರಿಗೆ ಹಾನಿಯನ್ನಾದರೂ ಮಾಡಿ, ತನ್ನ ಸ್ವಾರ್ಥವನ್ನು ಸಾಧಿಸುವತ್ತ ಸಂಕುಚಿತತನ ಬೆಳೆಯಬಹುದು. ಆದ್ದರಿಂದ, ಸ್ವಹಿತದ ಜೊತೆಗೆ ಪರಕೀಯರ ಹಿತಕ್ಕಾಗಿ ಯಾವಾಗಲೂ ಪರಿಶ್ರಮಿಸುತ್ತಿರುವುದೇ ಮನುಷ್ಯನ ಮೂಲ ಗುರಿಯಾಗಿರಬೇಕು.

ಸ್ವಾರ್ಥಿಯನ್ನು ಕೆರೆಗೂ, ಪರಾರ್ಥಿಯನ್ನು ನದಿಗೂ ಹೋಲಿಸಬಹುದು. 'ಪರೋಪಕಾರಾಯ ವಹನ್ತಿ ನದ್ಯಃ' (ಪರರಿಗೆ ಉಪಕಾರ ಮಾಡುವುದಕ್ಕಾಗಿಯೇ ನದಿಗಳು ಹರಿಯುತ್ತಿರುತ್ತವೆ.) ಎನ್ನುವಂತೆ, ಕೆರೆಗೂ ಸಹ ಕಾಲುವೆಯೆಂಬ ತ್ಯಾಗ–ಗುಣವಿದ್ದರೆ, ಕೆರೆಯಿಂದಲೂ ತಕ್ಕ ಮಟ್ಟಿಗೆ ಇತರರಿಗೆ ಲಾಭ ಆಗಬಹುದು ತ್ಯಾಗ ಇಲ್ಲದಿದ್ದರೆ, ತನ್ನ ಅಸ್ತಿತ್ವಕ್ಕೇನೇ ಹಾನಿ ಒದಗುತ್ತದ.

ಒಮ್ಮೆ ಸ್ವಾರ್ಥಿ–ಕೆರೆಗೂ ಪರಾರ್ಥಿ–ನದಿಗೂ ಮಾತುಕತೆ ನಡೆದಂತಾಯಿತು: ನದಿಗೆ ಕೆರೆ ಹೇಳಿತು– "ಓ ನದಿಯೆ! ನಿನ್ನ ಸಂಪತ್ತಾದ ಎಲ್ಲ ನೀರನ್ನೂ ಸಮುದ್ರಕ್ಕೆ ಕೊಟ್ಟರೆ, ನೀನು ನೀರಿಲ್ಲದೆ ಬಡವಾಗುತ್ತೀಯೆ. ಅದು ಅಲ್ಲದೆ, ನೀನು ಕೊಟ್ಟ ನಿನ್ನ ಸಿಹಿ ನೀರನ್ನೂ ಆ ಸಮುದ್ರವು ಉಪ್ಪು ನೀರನ್ನಾಗಿಸುತ್ತದೆಯಾದ್ದರಿಂದ ನಿನ್ನ ನೀರನ್ನು ನಿನ್ನಲ್ಲಿಯೇ ಇಟ್ಟುಕೋ." ಇದನ್ನು ಕೇಳಿದ ನದಿಯು ಹೀಗೆ ಉತ್ತರಿಸಿತು: "ತ್ಯಾಗ ಮಾಡದೇ ಇರುವುದು ಒಳ್ಳೆಯದಲ್ಲ. ಪರೋಪಕಾರ ಮಾಡುತ್ತಿರುವುದೇ ನನ್ನ ಕರ್ತವ್ಯವು. ಅಂತೆಯೇ 'ನದಿ' ಎನ್ನುತ್ತಾರೆ. ನಾನು ಮಾಡುತ್ತಿರುವ ನನ್ನ ತ್ಯಾಗಗುಣದಿಂದ ನನಗೆ ನೇರವಾಗಿ ಲಾಭ ಆಗಲಿ ಅಥವಾ ಆಗದಿರಲಿ. ಅದು ಮುಖ್ಯವಲ್ಲ. ತ್ಯಾಗದ ಜೊತೆಗೆ ಯೋಗವು ಸಹಜವೇ ಇದೆ. ಭೋಗದಿಂದ ಬೇಗೆ ಉಂಟಾಗುತ್ತದೆ; ತನ್ನನ್ನೂ ದಹಿಸುತ್ತದೆ" ಎಂದು ತನಗೆ ತಿಳಿದಂತೆ ಸಮಾಧಾನವನ್ನು ಹೇಳಿ ನದಿಯು ಹರಿಯುತ್ತಲೇ ಇತ್ತು. ಆ ಹರಿದು ಬಂದ ನದಿಯ ನೀರಿನಿಂದ ಉಪಕೃತವಾದ ಸಮುದ್ರವು ತನ್ನಲ್ಲಿಯ ನೀರಿನಿಂದ ಮೋಡವಾಗಿಸಿ, ನದಿಗೆ ನೀರನ್ನು ತುಂಬುತ್ತಿತ್ತು. ಎರಡರದೂ ಪರಸ್ಪರ ಆದಾನ–ಪ್ರದಾನ ನಡೆದೇ ಇತ್ತು. ಇತ್ತ ಸ್ವಾರ್ಥಿಯೂ ಲೋಭಿಯೂ ಆದ ಕೆರೆಯು ಕೆಲ ದಿನಗಳಲ್ಲಿ ಬತ್ತಿ ಒಣಗಿಯೇ ಹೋಯಿತು.

ಕಾರಣ, ಯಾರೂ ಎಂದಿಗೂ ಸ್ವಾರ್ಥಿಯಾಗಬಾರದು ನಿಃಸ್ವಾರ್ಥಿಯು ಅಂದರೆ ಪರಾರ್ಥಿಯು ನಿರಂತರವೂ ನಿಶ್ಚಿಂತನಾಗಿ ಸಂವೃದ್ಧನಾಗುತ್ತಿರುತ್ತಾನೆ. ಅಂತೆಯೇ ಕೃತಘ್ನನಾದವನಿಗೆ ಸ್ವಾರ್ಥಿಯೆಂದೂ, ನಿಃಸ್ವಾರ್ಥಿಯಾದವನಿಗೆ ಸತ್ಯಾರ್ಥಿಯೆಂದೂ ಹೇಳಲಾಗಿದೆ.

ಒಟ್ಟಿನಲ್ಲಿ, ಸ್ವಾರ್ಥ ಕಡಿಮೆಯಾದರೆ, ಜಗತ್ತಿಗೇ ಒಳ್ಳೆಯದಾಗುತ್ತದೆ.

**ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ**

ಸತ್ಯಶುದ್ಧ ಕಾಯಕದಿಂದೊಡಗೂಡಿದ ಸತತೋದ್ಯೋಗವು ಮಾನವನನ್ನು ಅಧ್ಯಾತ್ಮದತ್ತ ಒಯ್ಯುತ್ತದೆ. ಆತ್ಮವಿಕಾಸ ಮಾಡುತ್ತದೆ. ವ್ಯಕ್ತಿಯಲ್ಲಿ ಅಂತಃಸ್ಫೂರ್ತಿಯನ್ನಿತ್ತು ಬೆಳಕಿಗೆಡೆ ಮಾಡುತ್ತದೆ. ಒಳಹೊರಗಿನ ಸಂಪತ್ತು ಅಭಿವೃದ್ಧಿಯಾಗಿ ದೈವೀ ಶಕ್ತಿಯನ್ನು ಪಡೆಯಲು ಉದ್ಯೋಗವೇ ಕಲ್ಪತರು. ಉತ್ತಮ ಸಂಸ್ಕೃತಿಯನ್ನು ನೀಡಿ, ನಿತ್ಯ ನೂತನ ಚೇತನಶಕ್ತಿಯನ್ನು ಕೊಡುತ್ತಿರುವ ಶಾಂತಿಸಾಗರ. ದಾರಿದ್ರ್ಯವನ್ನು ನಿವಾರಣೆ ಮಾಡುವ ಕಾಮಧೇನು. ಮನದಲ್ಲಿ ಕವಿದ ಕತ್ತಲೆಯನ್ನು ದೂರಮಾಡುವ ಜ್ಞಾನದ ಬೆಳಕನ್ನು ಕೊಡುತ್ತದೆ. ಆದರೆ ಉದ್ಯೋಗದಲ್ಲಿ ಪಾವಿತ್ರ್ಯತೆ, ಪ್ರಾಮಾಣಿಕತೆ ಒಡಮೂಡಿರಬೇಕಾಗುತ್ತದೆ. ಆ ಉದ್ಯೋಗದಲ್ಲಿ ಸ್ವಹಿತ–ಪರಹಿತಗಳು ಕೂಡಿದ್ದರೆ ಮತ್ತಿಷ್ಟು ಹಿತಕಾರಿ. ಇಂತಹ ಉದ್ಯೋಗದಿಂದ ನಾಡು ಬೆಳೆಯುತ್ತದೆ, ಬೆಳಗುತ್ತದೆ. ರಾಷ್ಟ್ರಶಕ್ತಿ ಇಮ್ಮಡಿ ಹೆಚ್ಚಾಗುತ್ತದೆ. ಅದೇಕೆ ನೂರ್ಮಡಿ ಬೆಳೆದು ಪ್ರಪಂಚಕ್ಕೆ ಆದರ್ಶವಾಗುತ್ತದೆ. ಇದೀಗ ನಿರಂತರ ನಡೆಯುತ್ತಿರುವ ತಾಮಸೀಯ ಕಚ್ಚಾಟಗಳು ತಪ್ಪುತ್ತವೆ. ದ್ವಿವಿಧ ಭಾವನೆಗಳಲ್ಲಿ ಒಂದೆಂಬ ಭಾವನೆ ಬರುತ್ತದೆ.

ಆದರೆ ಇಂದು ನಿರುದ್ಯೋಗವೇ ಅಂತಃಶತ್ರುವಾಗಿ ಪರಿಣಮಿಸಿದೆ. ನಿರುದ್ಯೋಗವೇ ಸಮಾಜಕ್ಕೆ ಅಂಟಿಕೊಂಡಿರುವ ಮಹಾರೋಗವಾಗಿದೆ. ನಿರುದ್ಯೋಗಿಯ ಜೀವನ ಹಾಳು ದೇಗುಲವಿದ್ದಂತೆ ನಿರರ್ಥಕ. ನಿರುದ್ಯೋಗದಿಂದ ವ್ಯಕ್ತಿಯು ಹಾನಿಯಾಗುವದಲ್ಲದೇ ದೇಶವೂ ಹಾಳಾಗಿ ಹೋಗುತ್ತದೆ. ಈಗ ಯಾವದೇ ರಾಷ್ಟ್ರವು ಮುಂದುವರಿದಿದ್ದರೆ, ಅದು ಸತತೋದ್ಯೋಗದ ಪ್ರಭಾವದಿಂದ ಎಂದು ಹೇಳಿದರೆ ತಪ್ಪಾಗದು.

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ।

ಶತಾಯುಷಿಯಾಗಬೇಕಾಗಿದ್ದರೆ, ಆತ್ಮಾನಂದದಲ್ಲಿ ನಿಜ ಸುಖವನ್ನು ಪಡೆದು, ಪೂರ್ಣತೆಯನ್ನು ಮೈಗೂಡಿಸಿಕೊಳ್ಳಲು ನಿರಂತರವೂ ಚಿತ್ತ ಶುದ್ಧಿಯಿಂದೊಡಗೂಡಿದ ಪರಿಶ್ರಮವೇ ಪರಮ ಸಂಜೀವಿನಿ.

"ಕಾಯಕವಳಿದ ಠಾವಿನಲ್ಲಿ ಜೀವನದ ಸುಳಿವುಂಟೆ? ದಾಸೋಹವಳಿದ ಠಾವಿನಲ್ಲಿ ದೇವರ ಕೃಪೆಯುಂಟೆ? ಕಾಯಕ ದಾಸೋಹಗಳು ಕೂಡಿದರೆ ಅದೇ ಶಿವಜೀವೈಕ್ಯವು ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗದಲ್ಲಿ" ಎಂದುಸುರುವ ಈ ಸಿರಿನುಡಿ ಕಾಯಕದ ಅಗ್ಗಳಿಕೆಯನ್ನು ಹೆಚ್ಚಿಸಿದೆ, ಶಿವಜೀವೈಕ್ಯ ಸ್ಥಿತಿಗೇರಲು ಕಾಯಕ, ದಾಸೋಹಗಳು ಕೂಡಿದಲ್ಲಿ ಸಾರ್ಥಕವೆಂದು ಸ್ಪಷ್ಟಪಡಿಸಿದ್ದಾರೆ. ಇದೇ ವಚನಕಾರರು ಮತ್ತೊಂದು ವಚನದಲ್ಲಿ "ಕಾಯಕದಲ್ಲಿ ನಿರತರಾದಡೆ ಗುರುದರ್ಶನವಾದರೂ ಮರೆಯಬೇಕು. ಲಿಂಗಪೂಜೆಯಾದರೂ ಮರೆಯಬೇಕು, ಜಂಗಮ ಮುಂದಿದ್ದಡೆಯೂ ಹಂಗು ಹರಿಯಬೇಕು" ಎಂದು ಕಾಯಕದ ಮಹತ್ವವನ್ನು ವಿವರಿಸುತ್ತ "ಕಾಯಕವೇ ಕೈಲಾಸ" ವೆಂದು ತಿಳಿಸಿದ್ದಾರೆ.

"ದುಡಿತವೇ ದುಡ್ಡಿನ ತಾಯಿ" "ಖಾಲಿ ಕೂಡ್ರುವದಕ್ಕಿಂತ ಕೂಲಿ ಮಾಡುವದು ಲೇಸು" ಎನ್ನುವ ನಾಣ್ಣುಡಿಯೇ ಇಂದಿನ ವಾತಾವರಣದಲ್ಲಿ ನಮಗಿಂದು ಅಮೃತ ಬಿಂದು ಮತ್ತು ಆತ್ಮಬಂಧು.

## ಯಾಚನಾ ಗತಗೌರವಾ

ಸಾಮಾಜಿಕ ಜೀವನವು ಅದೊಂದು ಕಷ್ಟಪರಂಪರೆಯ ಜೀವನ. ಗುಹೆಯಲ್ಲಿ ಕುಳಿತು ತಪಸ್ಸು ಮಾಡುವವರಿಗಿಂತಲೂ ಹಿರಿಯದಾದುದು. ಈ ಜೀವನಪ್ರವಾಹದಲ್ಲಿ ಈಸಬೇಕಾಗುತ್ತದೆ. ಇದ್ದು ಜಯಿಸಬೇಕಾಗುತ್ತದೆ. ಅಪವಾದದ ಹೊರೆಗಳನ್ನು ಹೊತ್ತು ಸಹಿಸಬೇಕಾಗುತ್ತದೆ. ಚಿಂತಿಸಿ ಚಿಂತಿಸಿ ದೇಹವನ್ನು ದಹಿಸಬೇಕಾಗುತ್ತದೆ. ಸಾಮಾಜಿಕ ಸಮತೆಯ ದಿವ್ಯೌಷಧಿಯನ್ನು ಕುಡಿಯಬೇಕಾಗುತ್ತದೆ. ಮೇಲು ಕೀಳೆಂಬ ಬೇರನ್ನು ಕಡಿಯಬೇಕಾಗುತ್ತದೆ. ಹೃದಯ ತೃಪ್ತಿಗೆ ದುಡಿಯಬೇಕಾಗುತ್ತದೆ. ಆತ್ಮನ ಪರಿಪೂರ್ಣತೆಗೆ ಉಪಾಸನೆ ಮಾಡಬೇಕಾಗುತ್ತದೆ. ವ್ಯಕ್ತಿತ್ವ ರೂಪಿಸಬೇಕಾಗುತ್ತದೆ. ಕೋಪತಾಪಗಳನ್ನು ನಿವಾರಿಸಬೇಕಾಗುತ್ತದೆ. ಅಂತಸ್ಸತ್ವ ಪಡೆಯಬೇಕಾಗುತ್ತದೆ. ಶಾಶ್ವತ ಸತ್ಯಕ್ಕಾಗಿ ಹೋರಾಡಬೇಕಾಗುತ್ತದೆ. ಜ್ಞಾನಕರ್ಮಗಳೆರಡರಲ್ಲಿ ತೊಡಗಿರಬೇಕಾಗುತ್ತದೆ. ಈ

ಸಾಮಾಜಿಕ ಜೀವನದಲ್ಲಿ ಅಡೆ ತಡೆಗಳು ಬೆನ್ನುಹತ್ತಿ ಬಂದರೂ, ಬೆಚ್ಚದೆ, ಬೆದರದೆ ಹಿರಿ ಗುರಿಯನ್ನು ಸಾಧಿಸುವದೇ ಪರಮಕರ್ತವ್ಯವೆಂದು ಬಗೆಯಬೇಕಾಗುತ್ತದೆ.

ಈ ಸಾಮಾಜಿಕ ಜೀವನರಂಗದಲ್ಲಿದ್ದವರು ಯೋಜನೆಗಳನ್ನು ತಯಾರು ಮಾಡಬೇಕಾಗುತ್ತದೆ. ಅದಕ್ಕಾಗಿ ಮೊದಲು ಯೋಚಿಸಬೇಕಾಗುತ್ತದೆ. ಯೋಜನೆಗೆ ಯೋಚನೆಯೇ ಭದ್ರ ಬುನಾದಿ. ನಂತರ ಅದರ ಕಾರ್ಯಸಿದ್ಧಿಗಾಗಿ ಯಾಚಿಸಬೇಕಾಗುತ್ತದೆ. ಸಮಾಜೋನ್ನತಿ ಹಾಗೂ ಭದ್ರತೆಗಾಗಿ ಯಾಚನೆಯಿಲ್ಲದೆ ನಡೆಯದು. ಈ ಯಾಚನೆಯು ನಿಃಸ್ವಾರ್ಥವಿರಬೇಕು. ಮತ್ತೊಬ್ಬರ ಹಿತವನ್ನು ಬಯಸುವಂತಹದಿರಬೇಕು, ಭೇದಭಾವಗಳನ್ನು ಅಳಿಕಿಸುವಂತಹದಿರಬೇಕು. ಇಂತಹ ಯಾಚನೆಯಿಂದ ಆತ್ಮಗೌರವಕ್ಕೆ ಚ್ಯುತಿ ಬಂದರೂ ಚಿಂತೆ ಮಾಡದೆ, ಮುನ್ನುಗ್ಗಿದರೆ ಹಿಡಿದ ಕಾರ್ಯವು ಸಾಧ್ಯವಾಗುವದು.

ಒಮ್ಮೊಮ್ಮೆ ಈ ಯಾಚನೆಯು ಚಿಂತಾಂಬುಧಿಯಲ್ಲಿ ಮುಳುಗಿಸುತ್ತದೆ. ಹೃದಯವನ್ನು ತಲ್ಲಣಗೊಳಿಸುತ್ತದೆ. ಹೃದ್ಭಾವಗಳು ಎತ್ತರಕ್ಕೆ ಹೋಗದಂತೆ ಮಾಡಿಸುತ್ತದೆ. ಸಾಮಾನ್ಯರಿಗಿಂತ ಸಾಮಾನ್ಯರಾಗಿಯೂ ಹೋಗುವ ಪ್ರಸಂಗ ಬರುತ್ತದೆ. ಬೇಡುವ ಭಾವನೆಯ ಅಂತರಂಗದಿಂಗಿತವು ಕೊಡುವವರಿಗೆ ಅರ್ಥವಾಗದಿದ್ದರೆ ಈ ಯಾಚನೆಯೇ ಸಾಕೆಂದು ಮನಸ್ಸಿನಲ್ಲಿ ಮೂಡುತ್ತದೆ. "ಧರೆಗೆ ಯಾಚನೆಯಿಂದ ಲಘುತರಮುಂಟೆ" ನಿಜಗುಣಶಿವಯೋಗಿಗಳ ಈ ನುಡಿಯು ನೆನಪಿಗೆ ಬಂದು ಬೇಡುವದೇ ಬೇಡವೆಂದು ನಿರುತ್ಸಾಹವುಂಟಾಗುವದು. ಸಹಜ ಯೋಚನೆ ಬುದ್ಧಿಯ ಕೆಲಸವಾದರೆ ಯಾಚನೆ ಹೃದಯದ ಕೆಲಸವಾಗುತ್ತದೆ. ಕಂಡವರನ್ನು ದೀನವಾಣಿಯಿಂದ ಕೇಳುವುದು ಕೀಳುತನದ್ದೆಂದು ತಿಳಿದರೂ ಕೇಳುವದು ಪರಾರ್ಥವಾಗಿದ್ದರೆ, ಮಹೋನ್ನತ ಕಾರ್ಯಸಾಧಕವಾಗಿದ್ದರೆ, ಅದು ಸತ್ಯಶುದ್ಧ ಕಾಯಕವಾಗುತ್ತದೆ. ಯಾಚನೆಗಳಲ್ಲಿಯೂ ಎರಡು ತೆರ. ಒಂದು ಬಹಿರಂಗ ಯಾಚನೆ, ಮತ್ತೊಂದು ಅಂತರಂಗದ ಯಾಚನೆ ಒಂದು ಸಾಮಾಜಿಕ ಉನ್ನತಿಯನ್ನುಂಟು ಮಾಡಿದರೆ ಮತ್ತೊಂದು ಆತ್ಮೋನ್ನತಿಯನ್ನುಂಟು ಮಾಡುತ್ತದೆ. ಒಂದು ಮತ್ತೊಂದಕ್ಕೆ ಪೂರಕವಾಗುವಂತೆ ನಡೆದುಕೊಳ್ಳುವದೇ ಧಾರ್ಮಿಕ ಭಿಕ್ಷುಕನ ಮುಖ್ಯ ಗುರಿಯಾಗಿರಬೇಕು. ಭಾವಶುದ್ಧಿ, ಸಾಮಾಜಿಕ ಕಳಕಳಿ ಆತನ ಕೈದೀವಿಗೆಯಾಗಿರಬೇಕು. ಇದುವೇ ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಪರಿ.

## ಚಕ್ರವತ್ ಪರಿವರ್ತಂತೇ ದುಃಖಾನಿ ಸುಖಾನಿಚ

ಸುಖ-ದುಃಖಗಳು ತಿರುಗುವ ಚಕ್ರಗಳಿದ್ದಂತೆ, ರಾತ್ರಿ-ಹಗಲುಗಳಿದ್ದಂತೆ, ಏರಿಳಿತಗಳು ಮನುಷ್ಯನಿಗೆ ಬರುವದು ಸ್ವಾಭಾವಿಕ. ಸುಖದ ನಂತರ ದುಃಖ, ದುಃಖದ ನಂತರ ಸುಖ ಇದು ಸೃಷ್ಟಿಯ ನಿಯಮ. ಋತುಗಳು ಬದಲಾವಣೆಯಾದಂತೆ ಈ ಜೀವನವಿರುತ್ತದೆ. ಸುಖ ದುಃಖಗಳ ಮಧ್ಯದಲ್ಲಿಯೇ ಜೀವನ ಸಾಗಿಸಿ, ತೃಪ್ತಿಯನ್ನು ಪಡೆಯುವದೇ ಮನುಷ್ಯನ ಮೂಲಧ್ಯೇಯವಾಗಿರಬೇಕು. ಸುಖ ಬಂದಾಗ ಹಿಗ್ಗುವದು, ದುಃಖ ಬಂದಾಗ

ಕುಗ್ಗುವದು, ಇವೆರಡನ್ನು ಸಹಿಸುವ ಶಕ್ತಿ ಬಂದರೆ ಜೀವನದಲ್ಲಿ ಸಫಲತೆ ಪಡೆದಂತೆ. ಬರೀ ಸುಖವಿದ್ದರೆ ಮನುಷ್ಯನು ಜೀವಿಸಲಾರ. ದುಃಖವಿದ್ದರೂ ಜೀವಿಸಲಾರ. ಎರಡರ ಅನುಭವವಾಗುತ್ತಿದ್ದರೆ ಮಾನವತೆಯ ಕಲ್ಪನೆ ಬರುತ್ತದೆ. ದುಡಿಯದೆ, ಬೆವರು ಸುರಿಸದೆ, ಲಾಭ ಗಳಿಸಿದರೆ ಅದು ಲಾಭವಾಗಲಾರದು. ನಿಜವಾದ ಸುಖವು ದೊರೆಯಬೇಕಾದಲ್ಲಿ ತ್ಯಾಗದ ಬಲವಿದ್ದರೆ ಸಾಧ್ಯ. "ಸುಖಕ್ಕಾಗಿ ದುಃಖದ ಸಹನೆ ಮಾಡಬೇಕಾಗುವದೆಂದು" ಯೋಗಿ ಅರವಿಂದರು ಅರುಹಿದ್ದಾರೆ. ದುಃಖದಿಂದ ಜೀವನದ ಅನುಭವವಾದಷ್ಟು ಸುಖದಿಂದ ದೊರೆಯದು. ತಿಕ್ಕಿದಂತೆ ಪಾತ್ರೆ ಸ್ವಚ್ಛವಾದೀತೆ ಹೊರತು, ಹಾಗೆಯೇ ಬಿಟ್ಟರೆ ಮಲಿನವಾಗುವದು ಸಹಜ. ಕವಿದ ಕತ್ತಲೆ ದೂರ ಸರಿದರೆ ಅಲ್ಲಿ ಬೆಳಕು ಕಾಣುವದು. ಕಷ್ಟಪಟ್ಟು ದುಡಿಯತಕ್ಕವರಿಗೆ ಸುಖದ ಕಲ್ಪನೆಯಾಗುತ್ತದೆ; ಸೋಮಾರಿಗಳಿಗೆ ಸುಖ ಸಿಗುವದು ಕಷ್ಟಸಾಧ್ಯ. ಆಶೆ ದುಃಖ ನೀಡಿದರೆ, ನಿರಾಶೆಯು ಸುಖವನ್ನು ನೀಡುತ್ತದೆ. ಇದ್ದುದರಲ್ಲಿಯೇ ತೃಪ್ತಿಯನ್ನು ಪಡೆಯುವ ಗುರಿಯಾಗಿಟ್ಟುಕೊಂಡಿರುವವರು ಸುಖದ ಕನಸನ್ನು ಕಾಣುತ್ತಾರೆ. ಈ ಜೀವನಸಾಗರದಲ್ಲಿ ಈಸುವಾಗ ಅಡ್ಡಿ ಆತಂಕಗಳು ಬಂದರೆ, ಮನೋಧೈರ್ಯ ಸಹನಶೀಲತೆ ಹುಟ್ಟನ್ನು ಹಾಕಿದರೆ, ಎದುರು ಬರುವ ತೆರೆಗಳನ್ನು ಸರಿಸಿ ಆ ತೀರವನ್ನು ಮುಟ್ಟಬಹುದು. "ಸುಖಿಯಾಗಿ ಬಾಳಲು ಬಯಸುವಿಯಾದರೆ ವಿವೇಕಿಯಾಗಿ ಬಾಳು, ನ್ಯಾಯವಾಗಿ ಬಾಳು, ಔದಾರ್ಯದಿಂದ ಬಾಳು" ಎನ್ನುವ ಎಪಿಕ್ಯುರಸ್‌ನ ಮಾತು ನಿಜಕ್ಕೂ ಸತ್ಯ. ಸ್ವರ್ಗವಾಗಲಿ, ನರಕವಾಗಲಿ ನಮ್ಮಲ್ಲಿಯೇ ಇದೆ; ಶಕ್ತಿ, ಸಂತೋಷವೂ ನಮ್ಮಲ್ಲಿಯೇ ಇದೆ. ನಮ್ಮೀ ಭಾವನೆಯಲ್ಲಿ ಸುಖ ಬಂದರೆ ಸುಖವಾಗುತ್ತದೆ; ದುಃಖ ಬಂದರೆ ದುಃಖವಾಗುತ್ತದೆ. ಆದರೆ, ತಾಳ್ಮೆ ಮಾತ್ರ ಬೇಕಾಗುತ್ತದೆ. ಇಲ್ಲಿ ಸಲ್ಲುವಂತೆ ಜೀವನ ಸಾಗಿಸಿದರೆ ಸುಖದ ಗುಟ್ಟು ನಮ್ಮೊಳಗೇನೇ ಇರುತ್ತದೆ. ಅಂತೆಯೇ ಮಹಾತ್ಮಾ ಬಸವಣ್ಣನವರು ಇಂತು ಸಾರಿದ್ದಾರೆ. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ; ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ ಕೂಡಲ ಸಂಗಮದೇವಾ" ಆದಕ್ಕಾಗಿ ನೆರಳನ್ನು ಬೆನ್ನಟ್ಟಿ ಓಡುವದಕ್ಕಿಂತ ತಮ್ಮ ತಲೆಯನ್ನು ಮುಟ್ಟಿಕೊಂಡು, ಅರಿವನ್ನು ಅರಿದುಕೊಂಡು ಅನುಭವಕ್ಕೆ ತಂದುಕೊಂಡರೆ ಸುಖದ ಅಮೃತವನ್ನು ಸವಿಯಬಹುದು. ಸಾಹಸಮಯ ಜೀವನದಲ್ಲಿ ಮುಂದಡಿಯಿಟ್ಟು ಸಾಗುವದೇ ನಿಜ ಸುಖಕ್ಕೆ ದಾರಿದೀಪ.

## ಅವಶ್ಯಮೇವ ಕರ್ತವ್ಯಾ ಮಿತಸಂತಾನ ಯೋಜನಾ

ಮಿತಸಂತಾನವು ರಾಷ್ಟ್ರೋತ್ಥಾನಕ್ಕೆ ನಾಂದಿ. ಅತಿಸಂತಾನ ರಾಷ್ಟ್ರ ಪ್ರಗತಿಗೆ ಬಂಧನ. 'ಹುಟ್ಟಿದರೆ ಒಬ್ಬ ಮಗ ಸಾಕು; ಬೆಳೆದರೆ ಒಂದು ಹೊಲ ಸಾಕು" ಹತ್ತು ಹಡೆಯುವದಕ್ಕಿಂತ ಮುತ್ತಿನಂತಹ ಒಂದು ಹಡೆಯುವುದು ಲೇಸು. ಜನತೆಯು ಸುಖ ಜೀವನವನ್ನು ಪಡೆಯಲು ಕುಟುಂಬ ಯೋಜನೆ ಅತ್ಯಗತ್ಯ. ಮಿತ-ಕುಟುಂಬದ ಕಲ್ಪನೆ ಕೇವಲ ಪಾಶ್ಚಿಮಾತ್ಯರಿಂದ ಬಂದಿದೆ ಎಂದು ತಿಳಿದುಕೊಳ್ಳುವದು ತಪ್ಪು. ಪ್ರಾಚೀನ

ವೇದ ಸೂತ್ರಗಳಲ್ಲಿಯೂ ಕಾಣಬಹುದು. ಋಗ್ವೇದದ ಒಂದು ಮಂತ್ರದಲ್ಲಿ "ಮಾನವ ಜೀವಿಗಳು ನಿರಂತರ ಹುಟ್ಟು-ಸಾವುಗಳ ಪರಿಚಕ್ರದಲ್ಲಿ ಸಿಲುಕಿದ್ದಾರೆ. ಈ ವಿಶ್ವದಲ್ಲಿ ಎಲ್ಲ ದುಃಖಗಳಿಗೂ ಮೂಲಭೂತ ಕಾರಣ ಅತಿ ಸಂಖ್ಯೆಯ ಮಕ್ಕಳು" ಎಂದು ಹೇಳಲಾಗಿದೆ. ಒಬ್ಬ ವ್ಯಕ್ತಿಗೆ ಬಹಳ ಮಕ್ಕಳಾದರೆ, ಅವನ ಜೀವನವು ನಿರಂತರವೂ ಕಷ್ಟದಲ್ಲಿರಬೇಕಾಗುತ್ತದೆ. ಇಂತಹದರಲ್ಲಿಯೇ ಬಡತನದ ಭೂತ ಬೆನ್ನು ಹತ್ತಿತೆಂದರೆ ಜೀವನವೇ ಬೇಸರವಾಗಿ ಸತ್ತು ಹೋಗಿರುವ ಉದಾಹರಣೆಗಳನ್ನು ಕಂಡಿದ್ದೇವೆ. ಇವೆಲ್ಲವನ್ನು ಅರಿತುಕೊಂಡೇ ಭಾರತ ಸರಕಾರದವರು ಕುಟುಂಬ ಯೋಜನೆಗೆ ಮಹತ್ತ್ವ ನೀಡಿದ್ದಾರೆ. ಸಂಯಮ ಜೀವನದಿಂದ ಇದ್ದು, ಸುಖ ಜೀವನವನ್ನು ಸಾಗಿಸುವವರಿಗೆ ಈ ನಿಯಮವಿರಲಾರದು. ಯಾರಿಗೆ ಸಂಯಮ ಜೀವನವನ್ನು ಪಾಲಿಸಲು ಅಸಾಧ್ಯವೋ ಅಂಥವರು ಈ ಕುಟುಂಬ ಯೋಜನೆಯನ್ನು ಅನುಸರಿಸಿದರೆ ಅವರ ಜೀವನವು ಸುಖ-ಸಮೃದ್ಧಿಯಲ್ಲಿರುತ್ತದೆ. ಅತಿ ಸಂತಾನದಿಂದ ಜೀವನಕ್ಕೆ ಭಾರವಾಗುವದಲ್ಲದೆ, ಆ ವ್ಯಕ್ತಿಯು ಚಿಂತೆಯ ಮಡುವಿನಲ್ಲಿ ಬಿದ್ದು, ಆರ್ಥಿಕ ಕೊರತೆಯಲ್ಲಿ ನೊಂದು-ಬೆಂದು, ತಾನು ಮಡಿದು ಹೋಗುವನಲ್ಲದೆ, ಮಕ್ಕಳನ್ನು ನಿರ್ಗತಿಕರನ್ನಾಗಿ ಮಾಡುತ್ತಾನೆ; ಇದರಿಂದ ರಾಷ್ಟ್ರಕ್ಕೆ ಹಿತವಾಗದು. ಈ ಯೋಜನೆ ಕಾರ್ಯರೂಪಕ್ಕೆ ಬರಬೇಕಾದರೆ ಜನತೆಯ ಪೂರ್ಣ ಸಹಕಾರ ಅವಶ್ಯವಾದುದು. ಜನತೆಯು ಇದರಿಂದ ಸುಖವಾಗುತ್ತದೆಂದು ಅರಿತುಕೊಂಡರೆ ಸಾಕು; ಶಂಕಾನಿವಾರಣೆ ಸಾಧ್ಯ. ಪ್ರಾಪಂಚಿಕರು ತಮ್ಮ ಕುಟುಂಬ ಗಾತ್ರವನ್ನು ಮಿತಗೊಳಿಸಿಕೊಂಡರೆ, ತಮ್ಮ ಮಕ್ಕಳಿಗೆ ಯೋಗ್ಯ ಆಹಾರ, ಶಿಕ್ಷಣ ಒದಗಿಸಲು ಅನುಕೂಲವಾಗುತ್ತದೆ. ಪ್ರತಿಯೊಬ್ಬರೂ ದೃಢಕಾಯರಾಗಿ ಜೀವಿಸಬಲ್ಲರು. ಇದರಿಂದ ನಮ್ಮ ಪ್ರಗತಿಯೊಡನೆ ರಾಷ್ಟ್ರ ಪ್ರಗತಿಯೂ ಸಾಧ್ಯ. ರಾಷ್ಟ್ರವು ಸುಖ ಸಮೃದ್ಧಿಯಲ್ಲಿದ್ದು ಪಾಶ್ಚಿಮಾತ್ಯ ರಾಷ್ಟ್ರದಂತೆ ಕಾಯಕನಿಷ್ಠರಾಗಿ ಸುಖವನ್ನು ಪಡೆಯಬಹುದು. ಜನಸಂಖ್ಯಾ ನಿಯಂತ್ರಣದಲ್ಲಿ ನಾವು ಎಷ್ಟರ ಮಟ್ಟಿಗೆ ಯಶಸ್ಸು ಗಳಿಸಬಲ್ಲೆವೋ, ಅಷ್ಟರಮಟ್ಟಿಗೆ ನಮ್ಮ ಸರಕಾರದ ಅಭಿವೃದ್ಧಿ ಯೋಜನೆಗಳ ಫಲ ಪಡೆಯಲು ಸಾಧ್ಯವಾದೀತು: ಮರಣವನ್ನು ಅನೇಕ ರೀತಿಯ ವೈಜ್ಞಾನಿಕ ಸಾಧನಗಳಿಂದ ನಿಯಂತ್ರಿಸಿದ್ದೇವೆ. ಅದೇ ರೀತಿ ಜನನ ಪ್ರಮಾಣವನ್ನು ನಿಯಂತ್ರಿಸುವದೂ ಅತ್ಯವಶ್ಯವಾಗಿದೆ. ಪ್ರಾಚೀನ ಸಂಸ್ಕೃತಿಯನ್ನು ಅಳವಡಿಸಿಕೊಂಡಿದ್ದರೆ ಅತಿ ಜನಸಂಖ್ಯೆಯ ಸಮಸ್ಯೆಯನ್ನು ಎದುರಿಸುವ ಪರಿಸ್ಥಿತಿ ಬರುತ್ತಿದ್ದಿಲ್ಲ. ಅದಕ್ಕಾಗಿ ಕುಟುಂಬ ಯೋಜನೆ ಅತ್ಯಗತ್ಯ, ಅಂತೆಯೇ ಸಂಸ್ಕೃತ ಸುಭಾಷಿತಕಾರರು ಇಂತು ಬರೆದಿದ್ದಾರೆ.

"ವರಮೇಕೋ ಗುಣೀ ಪುತ್ರ। ನ ಚ ಮೂರ್ಖಶತಾನ್ಯಪಿ।
ಏಕಶ್ಚಂದ್ರಸ್ತಮೋ ಹಂತಿ। ನ ಚ ತಾರಾಗಣೋऽಪಿ ಚ॥

**ರಾಷ್ಟ್ರೇ ಹರಿಜನೋದ್ಧಾರಃ ರಾಷ್ಟ್ರಸ್ಯೋನ್ನತಿಕಾರಕಃ**

ಹರಿಜನೋದ್ಧಾರವು ಭಾರತದ ಪ್ರಗತಿಗೆ ಮಹಾ ಸಾಧನವು. ಹರಿಜನೋದ್ಧಾರದಿಂದ ವ್ಯಕ್ತಿಗತ ಅಂತಸ್ಸತ್ವವು ವಿಕಸಿತಗೊಂಡು, ಮೇಲು–ಕೀಳು ದೂರಾಗಿ, ಭಾವೈಕ್ಯವುಂಟಾಗಲು ಮೂಲ ಕಾರಣವಾಗುವದು. ಭಾವನೆ ಉದಾರವಾದರೆ, ಪ್ರೇಮವು ತನ್ನಿಂದ ತಾನೇ ಉದ್ಭವಿಸುವುದು. ಮುಟ್ಟಬೇಕು, ಮುಟ್ಟಬಾರದು ಈ ಸಮಸ್ಯೆ ಪರಿಹಾರವಾಗಲು ಎಲ್ಲರೊಡನೆ ಪ್ರೇಮದಿಂದ ವರ್ತಿಸಿದರೆ ಸಾಧ್ಯ. ಪವಿತ್ರವಾದ ವಸ್ತು ಅಪವಿತ್ರವಾದದ್ದನ್ನು ಮುಚ್ಚಿದರೆ, ತನ್ನ ಪವಿತ್ರತೆಯನ್ನು ಎಂದಿಗೂ ಕಳೆದುಕೊಳ್ಳಲಾರದು. ಹರಿಜನರು ಅವನತಿಯ ಕಂದರದಲ್ಲಿ ಬಿದ್ದು ತೊಳಲುತ್ತಿರುವಾಗ, ಸಂಸ್ಕೃತಿಯ ಸಿಹಿನೀರನ್ನೆರೆದು ಮೇಲಕ್ಕೆತ್ತಿದರೆ ಅವರ ಜೀವನವು ಸುಧಾರಿಸುವುದಲ್ಲದೆ, ಹಿಂದೂ ಸಮಾಜದ ಮೇಲ್ಮೆಯನ್ನು ತೋರಿಸಿದಂತಾಗುವದು; ಹಿಂದೂ ಸಮಾಜದ ಉನ್ನತಿಗೆ ದಾರಿಯಾಗುವುದು. ಜಾತೀಯತೆಯ ಪೆಡಂಭೂತವೇ ಹಿಂದೂ ಧರ್ಮದ ಬೆಳವಣಿಗೆಗೆ ಅಡ್ಡ ಗೋಡೆಯಾಗಿದೆ. ಹಿಂದುಳಿದವರಾರೆಂಬುದನ್ನು ತಿಳಿದುಕೊಳ್ಳಲು ಒಮ್ಮೊಮ್ಮೆ ಕಷ್ಟ ಸಾಧ್ಯವಾದಂತಾಗಿದೆ. ಮಹಾತ್ಮಾ ಬಸವಣ್ಣನವರ ದೃಷ್ಟಿಯಲ್ಲಿ–"ಅಸ್ಪೃಶ್ಯ" ವ್ಯಾಖ್ಯೆಯನ್ನು ವಿವರಿಸಿದರೆ ಮತ್ತಿಷ್ಟು ಅರ್ಥವಾದೀತು. "ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ, ಕುಲವೇನೋ ಅವಂದಿರ ಕುಲವೇನೋ, ನಮ್ಮ ಕೂಡಲ ಸಂಗನ ಶರಣರೇ ಕುಲಜರು" ಎಂಬುದಾಗಿ, ಕುಲಕ್ಕಿಂತ ಗುಣಕ್ಕೆ ಹೆಚ್ಚು ಮಹತ್ವ ನೀಡಿದ್ದಾರೆ. ಸದಾಚಾರ, ನೀತಿ, ನಿಯಮ ಇವುಗಳೇ ಕುಲಜನ ಲಕ್ಷಣಗಳು. ಅನಾಚಾರ, ಅತ್ಯಾಚಾರ, ಹಿಂಸೆಗಳೇ ಅಸ್ಪೃಶ್ಯತೆ. ಇದೀಗ ಮೊದಲು ಅಸ್ಪೃಶ್ಯತೆಯ ಅರ್ಥವನ್ನು ಅರಿತುಕೊಂಡು, ಹರಿಜನೋದ್ಧಾರದ ಕಡೆಗೆ ಗಮನವೀಯುವದು ಸಾಮಾಜಿಕೈಕ್ಯತೆಯ ದೃಷ್ಟಿಯಿಂದ ಹಿತಕರ.

ಜನತೆಯಲ್ಲಿ ಭಾವೈಕ್ಯತೆಯನ್ನು ಸಾಧಿಸುವುದು ಮುಖ್ಯವೆನಿಸಿದರೂ, ಜಾತಿ ಜಾತಿಗಳಲ್ಲಿರುವ ಸಂಕುಚಿತ ಸಂಕೋಲೆ ಮುರಿದಾಗ, ಹರಿಜನೋದ್ಧಾರವನ್ನು ಮಾಡಲು ಅನುಕೂಲವಾಗುವದು. ಜಾತೀಯತೆಯ ವೈಷಮ್ಯ ತೊಲಗಿ ಪರಸ್ಪರರಲ್ಲಿ ಪ್ರೇಮಭಾವನೆ ಇಲ್ಲವಾದರೆ, ಹಿಂದೂ ಸಮಾಜದ ಮಹಾ ವೃಕ್ಷದ ಶಾಖೋಪಶಾಖೆಗಳು ಮುರಿದು ಛಿನ್ನ–ವಿಚ್ಛಿನ್ನವಾದರೆ, ಹಿಂದೂ ಸಮಾಜದ ವೃಕ್ಷಕ್ಕೆ ಧಕ್ಕೆಯುಂಟಾಗುವದಲ್ಲದೆ ಹಿಂದೂ ಸಂಸ್ಕೃತಿಯೇ ಅಳಿಯುತ್ತದೆ. ಅದಕ್ಕಾಗಿ ಹರಿಜನೋದ್ಧಾರ ಇಂದು ಅತ್ಯವಶ್ಯಬೇಕಾಗಿದೆ. ನೀತಿ, ಸಹ ಶಿಕ್ಷಣ, ಸಂಸ್ಕೃತಿ ಇವೆಲ್ಲವುಗಳನ್ನು ಹರಿಜನರ ಹೃದಯಭೂಮಿಕೆಯಲ್ಲಿ ಬಿತ್ತಿದರೆ ಅವರ ಜನ್ಮ ಸಾರ್ಥಕವಾಗುವದಲ್ಲದೆ, ಅವರು ತಮ್ಮ ಬಾಳನ್ನು ಪವಿತ್ರವನ್ನಾಗಿ ಮಾಡಿಕೊಳ್ಳುವರು. ಅದಕ್ಕಾಗಿ ಮಹಾತ್ಮಾ ಗಾಂಧಿಯವರು ಅಹೋರಾತ್ರಿ ಪರಿಶ್ರಮಿಸಿದರು. ಹರಿಜನರ ಹಿತಚಿಂತನೆಯನ್ನು ಮಾಡಿ ಬಹುದಿನದಿಂದ ಹಿಂದೂ ಧರ್ಮಕ್ಕೆ ಅಂಟಿಕೊಂಡಿದ್ದ ಅಳಕಿಸಲಾರದ ಕಲಂಕವನ್ನು ನಿವಾರಣೆ ಮಾಡಲು ಎಂಟು

ನೂರು ವರ್ಷಗಳ ಮುಂಚೆ ಮಹಾತ್ಮಾ ಬಸವಣ್ಣನವರು ಪ್ರಯತ್ನಿಸಿದರು. ಅಸ್ಪೃಶ್ಯತೆ ಯೆಂಬ ಭೂತವನ್ನು ಬಿಡಿಸಿ ಅವರು ಹೀನ–ದೀನರ ಪರಿಸ್ಥಿತಿಗಳನ್ನು ಸುಧಾರಿಸಿದರು. ಹರಿಜನೋದ್ಧಾರಕ್ಕಾಗಿ ಮಹಾತ್ಮಾ ಗಾಂಧಿಯವರು ಉಪವಾಸವನ್ನೂ ಮಾಡಿದರಲ್ಲದೆ, ಸೆರೆಮನೆಯನ್ನು ಸಹ ಸೇರಿದರು. ಅಂತೆಯೇ ಮಹಾತ್ಮಾ ಗಾಂಧಿಯವರ ತಪಸ್ಸು–ಸಾಹಸಗಳ ಫಲವಾಗಿ ಇಂದು ಹರಿಜನರು, ಅನೇಕ ಸಾಮಾಜಿಕ–ಶೈಕ್ಷಣಿಕ ಕಾರ್ಯಕ್ಷೇತ್ರ ಗಳಲ್ಲಿ ಮುಂದುವರಿಯುತ್ತಿದ್ದಾರೆ. ಅಸ್ಪೃಶ್ಯತೆಯೊಳಗಿರುವ ಅಸ್ಪೃಶ್ಯತೆಯೂ ಕಡಿಮೆ ಯಾಗಿ ಕೆಡುಕಿನ ತೊಡಕನ್ನು ಬಿಡಿಸಿಕೊಳ್ಳಬೇಕು. ಪರಸ್ಪರರಲ್ಲಿ ಹಾರ್ದಿಕತೆಯ ಪ್ರೇಮ ಭಾವವು ಅಂಕುರಿಸಿದರೆ, ರಾಷ್ಟ್ರದ ಶಕ್ತಿಯು ನೂರ್ಮಡಿ ಹೆಚ್ಚುವದಲ್ಲದೆ ಪ್ರಪಂಚದಲ್ಲಿ ಆದರ್ಶ ರಾಷ್ಟ್ರ ಸಾಧ್ಯವಾಗುವದು.

## ಮತ್ಸರೋ ಬುದ್ಧಿ ವಿನಾಶಕಃ

ಇಂದು ಸಮಾಜದಲ್ಲಿ ಎತ್ತ ನೋಡಿದರತ್ತ ಮತ್ಸರ ಬುದ್ಧಿ ಹೆಚ್ಚಾಗುತ್ತ ನಡೆದಿದೆ. ಅದೇಕೋ ತಿಳಿಯದಂತಾಗಿದೆ. ಯಾರಾದರೂ ಒಳ್ಳೆಯ ಕಾರ್ಯವನ್ನು ಮಾಡುವದನ್ನು ಕಂಡರೆ ಸಹಕರಿಸುವ ಭಾವನೆ ಇಲ್ಲದಂತಾಗಿದೆ. ವ್ಯಕ್ತಿಯಾಗಲಿ, ಮಠವಾಗಲಿ, ಯಾವದೆ ಸಂಸ್ಥೆಯಾಗಲಿ, ಯಾವದೆ ಸಮಾಜವಾಗಲಿ ಬೆಳೆಯುವದನ್ನು ನೋಡಿ ಅಲ್ಲಗಳೆಯುತ್ತಿದ್ದಾರೆಯೆ ಹೊರತು, ಪ್ರೇಮ ದೃಷ್ಟಿಯಿಂದ ಪ್ರೋತ್ಸಾಹ ನೀಡುವವರು ಕಾಣದಂತಾಗಿದೆ. ಅದರಿಂದ ಸಮಾಜಕ್ಕೂ ರಾಷ್ಟ್ರಕ್ಕೂ ಹಾನಿಯಾಗುತ್ತದೆಂಬುದು ಅವರಿಗೆ ಅರಿವಿಲ್ಲದಾಗಿದೆ. ಹುಟ್ಟಿದ ವ್ಯಕ್ತಿ ಬೆಳೆಯುವದು ಸಹಜ. ಬೆಳೆಯುವ ಸಸಿಗೆ ಸಹಕಾರದ ನೀರನ್ನೆರೆಯದಿದ್ದರೆ ಒಣಗುವದು ಸ್ವಾಭಾವಿಕ. ಹಾಲಿನಲ್ಲಿ ವಿಷ ಬೆರಸಿದರೆ ಹೇಗೆ ಅನರ್ಥವಾದೀತೋ, ಅದೇ ತೆರನಾಗಿ ಮತ್ಸರದಿಂದ ಕೊರಗಿ, ತಮ್ಮ ಮನೋದೌರ್ಬಲ್ಯದಿಂದ ಸಮಾಜದಲ್ಲಿ ಒಡಕು ಹುಟ್ಟಿಸಿದರೆ ಸಮಾಜಕ್ಕೆ ಕೇಡು ಬಗೆದಂತಾಗುತ್ತದೆ. ಅಸೂಯೆ ಅಧಃಪತನಕ್ಕೆ ದಾರಿ ಮಾಡಿ ಕೊಡುತ್ತದೆಂಬುದು ಅವರಿಗೆ ತಿಳಿಯದಂತಾಗಿದೆ. ತಾವು ಮಾಡಲಾರರು, ಮತ್ತೊಬ್ಬರನ್ನು ಮಾಡಿಸಿಕೊಡಲಾರರು. ಇಂತಹವರು ಕೃತಘ್ನರೆಂದು ಪರಿಗಣಿಸಬಹುದು. ಮತ್ಸರ ಬುದ್ಧಿಯು ಎಲ್ಲರನ್ನು ಹಾಳು ಮಾಡುವದಲ್ಲದೆ, ನಾಡನ್ನು ಅಧೋಗತಿಗೀಡು ಮಾಡುತ್ತದೆ. ಯಾರಲ್ಲಿ ವಿಶಾಲ ಮನೋಭಾವನೆಯು ಇರುವದಿಲ್ಲವೋ ಅವರು ಹೊಟ್ಟೆಯ ಕಿಚ್ಚಿನಲ್ಲಿ ತೊಳಲಾಡುತ್ತಾರೆ. ತಮ್ಮಲ್ಲಿಯ ಹೊಟ್ಟೆಯ ಕಿಚ್ಚಿನಿಂದ ತಾವೂ ಸುಡುತ್ತಾರೆ; ಮತ್ತೊಬ್ಬರನ್ನು ಸುಡಲು ಪ್ರಯತ್ನಿಸುತ್ತಾರೆ. ಅಂತೇ ಸಮಾಜ–ಸಮಾಜ ದಲ್ಲಿ ಒಡಕು, ವ್ಯಕ್ತಿ–ವ್ಯಕ್ತಿಯಲ್ಲಿ ಒಡಕು, ಸಂಸ್ಥೆ–ಸಂಸ್ಥೆಗಳಲ್ಲಿ ಒಡಕು ಉಂಟಾಗಿ ದ್ವೇಷಾಸೂಯೆಯು ದಾವಾನಲದಲ್ಲಿ ಬಿದ್ದು ಹೊರಳಾಡುತ್ತಿರುವದನ್ನು ಕಂಡರೆ ಎಂತಹ ರಿಗೂ ನೋವಾಗದಿರದು. ಕೃತಜ್ಞತೆಯೆಂಬುದು ಮತ್ಸರದವರಿಗೆ ಮಾತಿನ ಮಾಲೆಯಾಗಿದೆ. ಇದೇ ರೀತಿ ಮತ್ತೊಬ್ಬರಿಗೆ ಕೆಡುಕು ಮಾಡುವ ದುರ್ಬುದ್ಧಿ ಬೆಳೆದರೆ ಮಾನವೀಯತೆಯನ್ನು ಕಳೆದುಕೊಂಡಂತಾಗುತ್ತದೆ.

ಒಂದೆಡೆ ವಿಜಯದಾಸರು–"ಗುಣವಿಲ್ಲದವನು ಗುಣವಂತನಿಗೆ ಸಲ್ಲಿಸುವ ವಿಕಾರ ರೂಪದ ಕಾಣಿಕೆಯೇ ಅಸೂಯೇ. ಪರರ ಶ್ರೇಯಸ್ಸನ್ನು ನೋಡಿ ಸಂಕಟಪಟ್ಟರೆ, ಗಿರಿಗೆ ಮಸ್ತಕವಿಟ್ಟು ಬಳಲಿ ಬೆಂಡಾದಂತೆ" ಎಂದಿದ್ದಾರೆ.

ಒಳಪಂಗಡಗಳ ದ್ವೇಷದಿಂದಲೂ ಸಮಾಜವು ಕಳಾಹೀನವಾಗುತ್ತಲಿದೆ. ಇಂದು ಪ್ರತಿಯೊಬ್ಬರು ತೆರೆದ ಹೃದಯದಿಂದ ಶುದ್ಧ ಮನಸ್ಸಿನಿಂದ, ವಿಶಾಲ ಭಾವನೆಯಿಂದ ವಿಚಾರಿಸಬೇಕಾಗಿದೆ. ವಿಚಾರಿಸಿ, ಕಾರ್ಯರೂಪಕ್ಕೆ ತಾರದಿದ್ದರೆ ನಮ್ಮ ಕಾಲ ಮೇಲೆ ನಾವೇ ಕಲ್ಲು ಹಾಕಿ ಕೊಂಡಂತಾಗುವದು. ತಿಳಿದವರೆನ್ನುವವರಲ್ಲಿ ನಿಜವಾದ ತಿಳುವಳಿಕೆಯು ಬೆಳಕು ಕಂಡರೆ ಸಮಾಜ ಸುಧಾರಣೆ ಸಾಧ್ಯ. ಅಸೂಯೆ, ಅಹಂಕಾರ ಮುಂತಾದ ದುರ್ಗುಣಗಳಲ್ಲಿ ಮನಸ್ಸು ಹಾಕದೆ ನಿಜವಾದ ಜ್ಞಾನದ ಕಡೆಗೆ ಮನಸ್ಸು ಹಾಕಿ, ಸಮಾಜ ಸೇವೆಯತ್ತ ಕಾರ್ಯಪ್ರವೃತ್ತರಾದರೆ ಒಳಿತು. ಇಲ್ಲವಾದರೆ ಮತ್ಸರಾಗ್ನಿಗೆ ಮನವಿತ್ತರೆ, ಬೆಂಕಿಯ ಬಾಯಿಗೆ ರವದಿಯ ತುರುಕಿದಂತೆ ವ್ಯರ್ಥವಾಗುವದು. ಅಂತೆಯೇ "ಮತ್ಸರವು ನರಕದಿಂದ ಸಿಡಿದು ಬಂದ ಪ್ರಜ್ವಲಿಸುವ ಕಿಡಿಯಾಗಿದೆ" ಎಂದು ಬೇಲಿ ಹೇಳಿದ್ದಾರೆ.

## ಆತ್ಮಶ್ರೀಯಃ ಪ್ರಕಾಶಾಯ ಅವಶ್ಯಂ ಆತ್ಮಸಂಯಮಃ

ಆತ್ಮಶ್ರೀ ಆತ್ಮ ಶಾಂತಿ ನೀಡುತ್ತದೆ. ಭಾವ ಬಂಧುರ ಮಾಡುತ್ತದೆ. ವ್ಯಕ್ತಿತ್ವ ವಿಕಾಸಕ್ಕೆ ದಾರಿದೀಪವಾಗುತ್ತದೆ. ಆತ್ಮ ಸೌಂದರ್ಯ ಹೆಚ್ಚುತ್ತದೆ. ಆತ್ಮಶ್ರೀ ಸಂವರ್ಧಿಸಿ ಕೊಳ್ಳಲು ಆತ್ಮ ಸಂಯಮವೇ ತಾಯಿಬೇರು. ಈ ಸಂಯಮ ಜೀವನವು ತನ್ನ ತಾನರಿದು ಕೊಳ್ಳಲು ದೊಡ್ಡ ಸಾಧನ. ಜ್ಞಾನ ವೃಕ್ಷವು ಚಿಗುರೊಡೆದು ಸಮೃದ್ಧಿಯಾಗಲು ಸಂಯಮದ ಗೊಬ್ಬರವನ್ನು ಹಾಕಿದಾಗ ರಸವತ್ತಾದ ಫಲಪ್ರಾಪ್ತಿ. ಈ ಸಂಯಮ ಆಧ್ಯಾತ್ಮ ಸಾಧಕರಿಗೂ ಬೇಕು, ಲೌಕಿಕರಿಗೂ ಬೇಕು. ಸಂಯಮವಿಲ್ಲದ ಜೀವನ ರಸವಿಲ್ಲದ ಹಣ್ಣಿನಂತೆ, ಒಣಗಿರ್ಪ ಎಲೆಯಂತೆ ನಿಷ್ಪ್ರಯೋಜಕ. ಆತ್ಮ ಸಂಯಮನವೆಂಬ ಆಣೆ ಕಟ್ಟನ್ನು ಕಟ್ಟದಿದ್ದರೆ ಶರೀರವೆಂಬ ಹೊಲದಲ್ಲಿ ಕಾಮ ಕ್ರೋಧಾದಿ ದುರ್ಗುಣಗಳೆಂಬ ಕಸಕಡ್ಡಿಗಳು ಹುಟ್ಟಿ ಕ್ರಮಬದ್ಧ ನಿಯಮಗಳಂತಿರುವ ಆಚಾರ–ವಿಚಾರಗಳು ನಿರ್ನಾಮ ವಾಗಿ ನಿರಂತರ ದುಃಖಕ್ಕೀಡಾಗುವದಲ್ಲದೇ ಇಹಪರ ಸುಖವು ಅಸಾಧ್ಯವಾಗುವದು. ನೀರನ್ನು ಬಿಟ್ಟ ಮೀನಿನಂತೆ ಅವನ ಗತಿಯಾಗುವದು. ಸ್ವಚ್ಛಂದ ಜೀವನದಲ್ಲಿ ತೋರಿಕೆಗೆ ಸುಖವು ಕಂಡಂತೆ ಕಂಡರೂ, ಕೊನೆಗೆ ದುಃಖದ ಕಡಲಿನಲ್ಲಿ ಈಸಬೇಕಾಗುತ್ತದೆ. ಸ್ಫೂರ್ತಿ, ಶಕ್ತಿ ದೊರೆತು, ಆತ್ಮ ಸಂಪತ್ತಿನ ವೈಭವದಲ್ಲಿದ್ದು. ಧರ್ಮ ಸಂಸ್ಕೃತಿ ಜಾಗೃತಿಯಾಗ ಬೇಕಾದರೆ ಆತ್ಮ ಸಂಯಮವೆ, ಭದ್ರಬುನಾದಿ. ವಾಯು ವೇಗದಂತೆ ಬಹಿರ್ಮುಖದತ್ತ ಚಲಿಸುತ್ತಿರುವ ಮನಸ್ಸನ್ನು ನಿಗ್ರಹಿಸುವದೇ ಆತ್ಮ ಸಂಯಮ. ನಿಗ್ರಹವಿಲ್ಲದ ತಪಸ್ಸು, ನಿರರ್ಥಕ, ಮನೋನಿಗ್ರಹಕ್ಕಾಗಿ ಶ್ರಮ ಪಡಬೇಕಾಗುತ್ತದೆ. ಧ್ಯಾನ ಮಾಡಬೇಕಾಗುತ್ತದೆ, ನಿರಂತರವೂ ಕಾರ್ಯ ನಿರತನಾಗಬೇಕಾಗುತ್ತದೆ. ಇದು ಸೋಮಾರಿಗಳಿಗೆ ಕಷ್ಟಸಾಧ್ಯ,

ಯಾರ ಮನಸ್ಸು ಮತ್ತೊಬ್ಬರ ಮನಸ್ಸಿಗಿಂತ ಏಕಾಗ್ರತೆ ಪಡೆದಿದೆಯೋ ಅವರಿಗೆ ಹೆಚ್ಚಿನ ಜ್ಞಾನವು ಲಭ್ಯವಾಗುತ್ತದೆ. ಆತ್ಮ ಸಂಯಮದಿಂದ ಸುಖವಿದೆ ಎಂಬುದು ಅರಿತು ಆಚರಿಸುವವರಿಗೆ ಸುಲಭವಾಗುವದು. ಅಂತಹರು ಬಹಿಃಪ್ರಪಂಚದಲ್ಲಿದ್ದಂತೆ ಕಂಡರೂ, ಅವರ ಜೀವನ ಅಂತರ್ಮುಖದತ್ತ ಇರುವದು. ಸುಖ-ದುಃಖಗಳು ಧಾವಿಸಿ ಎದುರು ಬಂದರೂ ಅವುಗಳನ್ನು ಸಹಿಸುವ ಶಕ್ತಿ ಅವರಿಗೆ ಸಹಜವಾದುದು. "ಆತ್ಮ ಶಕ್ತಿಯಿಂದ ಜಗತ್ತನ್ನು ಗೆಲ್ಲಬಹುದೆಂದು" ಸ್ವಾಮಿ ವಿವೇಕಾನಂದರೂ ಸಹ ಹೇಳಿದ್ದಾರೆ. ಆತ್ಮ ಸಂಯಮವನ್ನು ಸಾಧಿಸಲು ಹಲವು ಸಾಧನಗಳುಂಟು. ಋಷಿಗಳು, ಯೋಗಿಗಳು, ಯಮನಿಯಮ ಆಸನಾದಿಗಳಿಂದ ನಿಗ್ರಹಿಸಿದ ಉದಾಹರಣೆಗಳು ಸಾಕಷ್ಟಿವೆ. ನಿತ್ಯ ಪವಿತ್ರ ಕಾಯಕದಿಂದಲೂ ಹಲವು ಶಿವಶರಣರು ಆತ್ಮ ಸಂಯಮನವನ್ನು ಮಾಡಿಕೊಂಡಿದ್ದಾರೆ. ಆತ್ಮ ಸಂಯಮನದಿಂದ ಆತ್ಮೋದ್ಧಾರ ಹಾಗೂ ಸಮಾಜೋದ್ಧಾರವಾದರೆ ಮಾತ್ರ ಅದು ಫಲಕಾರಿ. ಅಲ್ಲಿಯೂ ಸ್ವಾರ್ಥ, ಸಂಕುಚಿತತನ ತುಂಬಿದರೆ ಸಿದ್ಧಿ ಸಾಧಿಸದು. ಪ್ರತಿಯೊಂದಕ್ಕೂ ಹೃದಯಕಮಲವರಳಿರಬೇಕು. ವಿಶಾಲ ಮನೋಭಾವನೆ ಸಾಧಿಸಿರಬೇಕು. ಆತ್ಮವಿಕಾಸವಿಲ್ಲದ ಆತ್ಮ ಸಂಯಮವೂ, ಒಮ್ಮೊಮ್ಮೆ ಅಹಂಕಾರದಲ್ಲಿ ಪರಿವರ್ತನೆಗೊಂಡು ಹಾಳಾಗುವ ಸಂಭವವೂ ಉಂಟು. ನಿಗ್ರಹದ ಜೊತೆಗೆ ಶುದ್ಧ ಬುದ್ಧಿಯೂ ಬೇಕು. ಒಂದಕ್ಕೊಂದು ಪೂರಕವಾಗಿರಬೇಕು ಅಂದರೆ ಅದು ಆತ್ಮಶ್ರೀ.

ಆತ್ಮಶ್ರೀ ಸಮನ್ವಿತ ಜೀವನ ಬೆಳಕಿನ ಅರಮನೆಯುಂತೆ. ಆತ್ಮಶ್ರೀ, ವಿಶ್ವಪ್ರೇಮ ಸಂವರ್ಧನೆಗೆ ಮೈಲುಗಲ್ಲು.

## ದೀಪಾವಲೀಪ್ರಕಾಶೇಽಸ್ಮಿನ್ ರಾಷ್ಟ್ರಶ್ರೀರಭಿವರ್ಧತಾಂ

"ಜೀವನವ್ಯೋಮದಲ್ಲಿ ಕಾರ್ಮೋಡಗಳು ಕವಿಯುತಿಹವು ನೋಡಯ್ಯ! ಬಗೆ ಬಗೆಯಾಗಿ ಬಂದು ಬೆಳಕಿಗೆ ಅಡ್ಡಿಯಿಸುತಿಹವು ನೋಡಯ್ಯ! ಈ ಅರುಣ ಕಿರಣಂಗಳು ನಿನ್ನನ್ನೇ ಬೆಳಗುವಂತೆ ಕೃಪೆದೋರಾ, ಭೂಲತಾಪುರೀಶ ಕರ್ತೃ ಜಗದ್ಗುರು ಗುರು ಸಿದ್ಧೇಶ್ವರಾ!"

ಕವಿದ ಕತ್ತಲೆ ಕಳೆಯಲು ಬೆಳಕು ಬೇಕು. ಬೆಳಕಿರದ ಜೀವನ ಅದು ಸ್ಮಶಾನ. ಮಾನವನೆದುರಿಗೆ ಕತ್ತಲೆ ಬಂದರೆ ಪ್ರಗತಿ ಅಸಾಧ್ಯ. ಕತ್ತಲೆಯಲ್ಲಿ ನಡೆಯುವವನಿಗೆ ಕಲ್ಲು-ಮುಳ್ಳುಗಳು ಚುಚ್ಚುತ್ತವೆ. ಸಹಿಸಲಾರದ ನೋವಿನ ಬಾಧೆಯುಂಟಾಗುತ್ತದೆ. ಪ್ರಗತಿಯ ವೇಗ ಹೆಚ್ಚಲು ಕೇವಲ ತತ್ವ ತುಂಬಿಕೊಂಡಿದ್ದರೆ ಪರಿಣಾಮಕಾರಿಯಾಗದು. ತತ್ವದ ಜೊತೆಗೆ ಸತ್ಯದ ಬೆಳಕು ಹೃದ್ವ್ಯೋಮದಲ್ಲಿ ಪ್ರಕಾಶಗೊಂಡರೆ ಜೀವನವು ವಿಕಾಸಮಯುವಾಗುವದು. ಜೀವನದಲ್ಲಿರುವ ಅಜ್ಞಾನದ ಅಂಧಕಾರ ತೊಲಗಿ. ಆಶೆ-ಆಮಿಷಂಗಳು ನಷ್ಟಗೊಂಡರೆ ಭಾವಪ್ರಪುಷ್ಟಿಯಾಗಿ, ಹೃದಯವು ಸಂತುಷ್ಟಿಯಾಗುವದು.

ನಮಗಿಂದು ಒಳ-ಹೊರಗೆ ದೀಪಗಳನ್ನು ಹಚ್ಚಿ, ಆ ಸಂಭ್ರಮವನ್ನು ಕಣ್ಣಾರೆ

ಕಂಡು ಆನಂದ ಪಡೆಯುವದು ಅತ್ಯವಶ್ಯ ಬೇಕಾಗಿದೆ. ಹೊರಗಿನ ಕತ್ತಲೆಯ ಮೊತ್ತಕ್ಕೆ ಅಂಜದೆ, ಬೆಳಕಿನ ಕಡೆಗೆ ಧಾವಿಸಲು, ತಿಳಿಸಲು ದೀಪಾವಳಿ ಬರುತ್ತಲಿದೆ. ಈ ದೀಪಾವಳಿ ಯಿಂದ ಮಾನವತೆಯ ಹೊಂಗನಸನ್ನು ಕಾಣಬೇಕಾಗಿದೆ. ಶಿಸ್ತು, ಶ್ರದ್ಧೆ ಕಾರ್ಯ ಗೌರವ ಗಳಲ್ಲಿ ಪ್ರಜ್ಞೆ ಮೂಡಿಸಬೇಕಾಗಿದೆ. ಭಾವನೆಯಲ್ಲಿ ವಿಶಾಲತೆ ತರಬೇಕಾಗಿದೆ. ದ್ವೇಷಾ ಸೂಯೆಗಳನ್ನು ನಿರ್ಮೂಲನ ಮಾಡಿ, ಸಂಕುಚಿತ ಮತ ಭಾವಗಳನ್ನು ಕತ್ತರಿಸಿ, ಸಮನ್ವಯ ದೃಷ್ಟಿಯನ್ನು ಪ್ರಜ್ವಲಿಸಬೇಕಾಗಿದೆ. ಮೋಡಗಳು ಚದುರಿದೊಡನೆ ಸೂರ್ಯನು ಪ್ರಜ್ವಲಿಸುವಂತೆ, ಅಸತ್ಯ, ಅಹಂಕಾರ, ಸ್ವಾರ್ಥ ನಷ್ಟವಾಗಿ ಅಂತರಂಗ-ಬಹಿರಂಗ ಶುದ್ಧಿಯಾದರೆ, ಅಲ್ಲಿ ಆತ್ಮಪ್ರಕಾಶ ಹಾಗೂ ರಾಷ್ಟ್ರ ಸಂವರ್ಧನೆ. ಕತ್ತಲೆಯ ಗರ್ಭದಲ್ಲಿಯೇ ಬೆಳಕನ್ನು ಕಾಣಬೇಕಾಗಿದೆ, ಮಳೆ-ಬೆಳೆ ಹೋಗಿ ಕಳೆಗುಂದಲು ನಮ್ಮಲ್ಲಿಯ ಅಜ್ಞಾನವೇ ಕಾರಣ. ನಮ್ಮ ಮೊರೆ ದೇವರು ಮೆಚ್ಚುವಂತಾದರೆ, ಸಾರ್ಥಕ. ಸ್ವಾರ್ಥದ ಕಾಳ್ಗಿಚ್ಚಿನಲ್ಲಿ ಬಿದ್ದರೆ ತೋರಿಕೆಯಾದರೆ ಈಶ್ವರನು ಮೆಚ್ಚಲಾರ. ಅದಕ್ಕಾಗಿ ಬೆವರು ಸುರಿಸಬೇಕು. ಕಣ್ಣೀರ ಹರಿಸಬೇಕು. ಬೆಳಕನ್ನು ಒಳಗೆ ಬರಮಾಡಿಕೊಳ್ಳಬೇಕು. ಹೃದಯ ಪ್ರಣತೆಯೊಳಗೆ ಸದ್ಭಕ್ತಿ ತೈಲವನು ಹಾಕಬೇಕು. ಸುವಿಚಾರ ಬತ್ತಿಯನು ಹೊಸೆದಿಟ್ಟು ಹಚ್ಚಬೇಕು. ಇಂತಾದಾಗ ಹೃದಯ ಗುಡಿಯೊಳಗೆ ಕುಳಿತಿರುವ ಈಶ್ವರನು "ಪರಂಜ್ಯೋತಿ ಬೆಳಗಿನೊಳು ದರ್ಶನ ಕೊಡಲಾರನೆ?" "ನಂಬಿ ಕರೆದಡೆ ಓ ಎನ್ನನೆ ಶಿವನು?" ಹುಟ್ಟಿಸಿ ದವನು ಹುಲ್ಲು ಮೇಯಿಸುವನೆ?

"ಸಮಸ್ತ ಕತ್ತಲೆಯ ಮುಸುಕವ ಕಳೆದಿಪ್ಪ ಇರವ ನೋಡಯ್ಯ, ಬೆಳಗಿಂಗೆ ಬೆಳಗು ಸಿಂಹಾಸನವಾಗಿ ಬೆಳಗು-ಬೆಳಗು ಕೂಡಿದ ಕೂಟವ ಕೂಡಲಸಂಗಯ್ಯ ತಾನೇ ಬಲ್ಲ" ಈ ಅಮರವಾಣಿಯು ಹೃದಯ ಮುಟ್ಟಿದಾಗ ಶಬ್ದ ಮುಗ್ಧವಾಗುತ್ತದೆ. ಕತ್ತಲೆ, ಬೆಳಗೆಂಬುವ ಭೇದ ಶೂನ್ಯವಾಗುತ್ತದೆ. ದೃಶ್ಯ ದೀಪ್ತಿಗಿಂತಲೂ, ಮಾತು-ಮನಂಗಳಿಂದತ್ತತ್ತ ಮೀರಿದ ಜ್ಯೋತಿಗಳಿಗೆ ಜ್ಯೋತಿಯಾದ ಆ ಪರಂಜ್ಯೋತಿಯ ಮಹಾಬೆಳಗು ನಮ್ಮೆಲ್ಲರನ್ನು ಎಚ್ಚರಿಸಿ, ಬೆಳಕಿನತ್ತ ಕರೆದೊಯ್ಯಲಿ, ರಾಷ್ಟ್ರೋನ್ನತಿಗೆ ದಾರಿದೀಪವಾಗಲಿ.

## ಸಮಾನತಾ ನ ಭೌತಿಕೀ

ಇಂದು ನಮಗಿರುವ, ಹಸಿವು, ಸಮತ್ವ ಸಮದೃಷ್ಟಿ, ಸಮ್ಯಕ್‌ದೃಷ್ಟಿ, ಇತ್ಯಿತ್ತಲಾಗಿ ಇದನ್ನು ಎಲ್ಲರೂ ಹೇಳುತ್ತಾರೆ. ಇದು ಮತಿಯಲ್ಲಿ ಮೂಡಿ, ಕೃತಿಯಲ್ಲಿಳಿದರೆ, ಸ್ಫೂರ್ತಿಯ ಸೆಲೆಯೊಡೆಯುವದು ನಿಜ. ಸರಿಸಮಾನತೆ ಕೇವಲ ಆಸನಾದಿಗಳಲ್ಲಿ ಸೀಮಿತವಾಗಿರ ಬಾರದು. ಆಸನದಲ್ಲಿ ಸಮಾನತೆಯ ಪ್ರಧಾನವಾಗದು. ಅದು ಗೌಣ ಒಮ್ಮೆ ಆಗಬಹುದು, ಆಗದಿರಬಹುದು. ಮೂಲ ಗುರು ಸಾಧನೆಗೆ ತಿಲಾಂಜಲಿ ನೀಡಿ, ಇದಕ್ಕಾಗಿ ತಲೆ ಕೆಡಿಸಿಕೊಂಡರೆ, ಸಾಗರದ ಆಳದಲ್ಲಿರುವ ರತ್ನವನ್ನು ಬಿಟ್ಟು ನೊರೆ ತೆರೆಗಾಗಿ ಪ್ರಯಾಸಪಟ್ಟಂತೆ. ಗುರುವಿನ ಸ್ಥಾನ, ಶಿಷ್ಯನ ಸ್ಥಾನ ಅವರವರೆ ಅರಿತುಕೊಳ್ಳಬೇಕು.

ಸಮಾನತೆಗೆ ಅಂತಃಕರಣದ ಕಾರಂಜಿ ಪುಟಿಯುತ್ತಿರಬೇಕು. ಅದು ಭಾವೈಕ್ಯದೊಡನೆ ಹೊಂದಿಕೊಂಡಿರಬೇಕು. ಕೃತಿ ಕೃತ್ರಿಮವಾದರೆ ಅದು ಕೇವಲ ಹೊರ ನೋಟ, ಹೊರ ನೋಟ ಕೋಲ್ಮಿಂಚಿನಂತೆ. ಭಾವೈಕ್ಯವಿಲ್ಲದ ಸರಿಸಮಾನತೆ, ಭದ್ರವಿಲ್ಲದ ಬುನಾದಿ, ಕಡೆಗೀಲಿಲ್ಲದ ಬಂಡಿ. ಶುದ್ಧಿಯಾಗದೆ ಲಿಂಗವಿದ್ದಂತೆ. ಆತ್ಮ ಬಾಂಧವ್ಯಕ್ಕೆ ಅಡ್ಡಗೋಡೆ. ಭಾವ ವೈಭವಕ್ಕೆ ಒಡೆದ ಕನ್ನಡಿ. ಸಮಾಜದ ರಥವನ್ನೆಳೆಯಲು ಎಲ್ಲರ ಕೈಗಳು ಒಂದುಗೂಡಬೇಕು. ಒಂದುಗೂಡುವಿಕೆ ಹೃದಯದಿಂದ ಬಂದಿರಬೇಕು. ಸಮಾಜದ ಕಳಕಳಿ ನಾಡಿನಾಡಿಯಲ್ಲಿ ಪ್ರವಹಿಸಬೇಕು. ಪಕ್ವವಾಗದ ಹಣ್ಣು ರುಚಿಸದು. ಭಿನ್ನತೆ ಬಹುದಿನ ಉಳಿದರೆ ಬದುಕು ಬಂಗಾರವಾಗದು. ಅಷ್ಟೇ ಅಲ್ಲ, ಸಮಾಜಕ್ಕೆ ದ್ರೋಹಬಗೆದಂತೆ, ಸಂಸ್ಕೃತಿಗೆ ಮಣ್ಣೆರಚಿದಂತೆ. ಸ್ವಾರ್ಥ, ದ್ವೇಷ, ಅಹಂಕಾರ, ಅಸೂಯೆ, ಇವೆಲ್ಲವೂ ಅಧೋಗತಿಗೆ ದಾರಿ ಮಾಡಿಕೊಡುತ್ತವೆ. "ಆತ್ಮೈವಹ್ಯಾತ್ಮನೋ ಬಂಧು ರಾತ್ಮೈವರಿಪುರಾತ್ಮನಃ" ನಮ್ಮ ಮಿತ್ರರೂ ನಾವೇ, ಶತ್ರುಗಳು ನಾವೇ. ಈ ಗೀತೋಕ್ತಿಯನ್ನು ಚಿತ್ತಭಿತ್ತಿಯಲ್ಲಿ ಚಿತ್ರಿಸಿಕೊಂಡಾಗ ಸಾರ್ಥಕತೆ. ಇಲ್ಲದಿದ್ದರೆ ಉರಿವ ಬೆಂಕಿಗೆ ತುಪ್ಪ ಹಾಕಿದಂತೆ; ಬುದ್ಧಿ ಬೆಳೆದಂತೆ, ಅಂಧತೆ ದೂರಾಗಿದ್ದರೆ ಮಾತ್ರ ಬೆಳೆದ ಬುದ್ಧಿಗೆ ಇದುವೆ ನಿದರ್ಶನ. ಇದುವೆ ನಮ್ಮ ಕಾಯಕದ ದರ್ಶನ. ನಮ್ಮಲ್ಲಿರುವ ಒಳಗಿನ ಅಪಾಯಗಳನ್ನು ನಾವೇ ಕಂಡುಹಿಡಿಯಬೇಕು. ಅದಕ್ಕೆ ತಕ್ಕ ಉಪಾಯ ಹುಡುಕಬೇಕು. ವರುಷಗಳುರುಳುತ್ತ ಹೋದಂತೆ ಕರುಳಿನಲಿ ಕರುಣೆ ತುಂಬಬೇಕು. ಮಿದುಳಿನಲ್ಲಿ ಮಾರ್ದವತೆ ಉದಯಿಸಬೇಕು. ಈ ತೆರನಾಗಿ ಭಾವೈಕ್ಯತೆಯು ಹರುಷ ಉಕ್ಕೇರುತ್ತಿದ್ದರೆ ಭವಿಷ್ಯ ರೂಪುಗೊಳ್ಳುವದು. ಆಗ ಸಮತ್ವದ ಚೈತನ್ಯಪೂರ್ಣ ಮುಖ ಕಮಲವರಳಿ ಪರಿಶೋಭಿಸುವದು. ಭಾವನೆಗಳು ವಿಶಾಲವಾದರೆ ಸಮಾಜ ಉಳಿಯುತ್ತದೆ, ಬೆಳೆಯುತ್ತದೆ, ಬೆಳಗುತ್ತದೆ. ತಲೆಗೊಬ್ಬರಂತೆ ಪಕ್ಷ-ಪಂಗಡಗಳೆಂಬ ಕಸದ ಬೀಜವನ್ನು ಬಿತ್ತಿದರೆ ಸಮಾಜದ ವೃಕ್ಷವು ಒಣಗಲವಕಾಶ ಬೀಜದಂತೆ. ಇದರ ನಿವಾರಣೆಯಾಗಿ ಭಾವೈಕ್ಯ ಬೆಳೆದರೆ ಇದುವೇ ಯೋಗ. ಇಂತಹ ಸಮತ್ವಯೋಗ ನಮಗಿಂದು ಬೇಕಾಗಿದೆ. ಆರ್ಥಿಕೋನ್ನತಿಯಲ್ಲಿ ಸರಿಸಮಾನತೆ ಬಂದರೆ ಸಮಾಜದ ಅಭಿವೃದ್ಧಿ, ರಾಷ್ಟ್ರ ಸಮೃದ್ಧಿ, ಅಂದು ಭಾವೈಕ್ಯದ ಸಂಸಿದ್ಧಿ.

## ವಾಗೇವ ಜ್ಯೋತಿರ್ಲಿಂಗಂ

"ಮಾತು ಮತಿಯು ಕೆಡಿಸಿತ್ತು. ಮಾತು ಧೃತಿಯ ಕೆಡಿಸಿತ್ತು. ಮಾತು ಕತೆಯ ಕೆಡಿಸಿತ್ತು. ಮಾತು ಜೊತೆಯ ಕೆಡಿಸಿತ್ತು. ಇಂತಪ್ಪ ಮಾತು ಮುತ್ತಾದರೆ ಕಲಹ ಎಲ್ಲಿಂದ ಬಪ್ಪುದಯ್ಯ! ಮಾತರಿಯದವನು ಕಲಹ ತರುವಂತೆ; ಮಾತು ಬಲ್ಲವ ಮಾಣಿಕ್ಯ ತರುವನಯ್ಯ ಭೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ."

ಮಾತು ಮಾನವನ ಅಂತರಂಗವನ್ನು ಅಳೆಯುವ ಮೈಲುಗಲ್ಲು. ಮಾತಿನಿಂದ

ಜೀವನದಲ್ಲಿ ಸಾರ್ಥಕತೆಯನ್ನು ಪಡೆಯಬಹುದು. ಅದೇ ಮಾತು ವ್ಯತ್ಯಾಸಗೊಂಡರೆ, ಬಾಳೆಲ್ಲವನ್ನೂ ಹಾಳು ಮಾಡಿಕೊಳ್ಳಬಹುದು. ಮಾತಿನಲ್ಲೊಂದು ಮನದಲ್ಲೊಂದು ಬಗೆದರೆ ಅದು ನಂಬಿದ ವ್ಯಕ್ತಿಯ ಶಿರವನ್ನು ಕೊರೆದಂತಾಗುವದು, ವ್ಯಕ್ತಿತ್ವಕ್ಕೆ ಕುಂದು ತಂದಂತಾಗುವದು. ಮಾತು ಹಿತಮಿತವಾಗಿದ್ದರೆ, ಸತ್ಯವಿದ್ದು ಸತ್ವಯುತವಾಗಿದ್ದರೆ ಆ ಮಾತೇ ಮುತ್ತಾಗುವದು, ಮಾಣಿಕ್ಯವಾಗುವದು. ಮಾತು ಕೃತಿ ಒಂದಾಗಿದ್ದರೆ ಅದರ ಸೊಬಗೇ ಬೇರೆ. ಕೃತಿ ಮಾತಾದಾಗ ಆ ಮಾತಿಗೆ ಬೆಲೆ ಹಾಗೂ ಬಲ ಬರುವದು. ಆಗ ಮಾತು ಬೆಳ್ಳಿಯಾಗುವದು. ಒಂದೆಡೆ ಅರವಿಂದರು: "ಈ ವಿಶ್ವದಲ್ಲಿ ಮೌನ ಮತ್ತು ಮಾತು ಇವೆರಡು ಮಹಾಶಕ್ತಿಗಳು. ಮೌನವು ಸಿದ್ಧತೆ ಮಾಡುವದು. ಮಾತು ಸೃಷ್ಟಿ ಮಾಡುವದು. ಮೌನವು ಕಾರ್ಯ ಮಾಡುತ್ತದೆ ಮತ್ತು ಕಾರ್ಯಕ್ಕೆ ಪ್ರೇರಣೆ ನೀಡುತ್ತದೆ. ಮೌನವು ಒತ್ತಾಯ ಮಾಡುತ್ತದೆ. ಮಾತು ಮನ ಒಲಿಸುತ್ತದೆ" ಎಂದುದಾಗಿ ಮಾತಿನ ವಿಶಾಲ ದೃಷ್ಟಿಯ ವಿವರವನ್ನು ಅರ್ಥಪೂರ್ಣವಾಗುವಂತೆ ಸುಂದರವಾಗಿ ನಿರೂಪಿಸಿದ್ದಾರೆ.

ಮಾತು ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿಯಾಗಿರಬೇಕು. ಅಧರಕ್ಕೆ ಸಿಹಿ ಇದ್ದು ಉದರಕ್ಕೆ ಕಹಿಯಾಗಿದ್ದರೆ ಆ ಮಾತೆಲ್ಲ ಜೊಳ್ಳು. ಕೊಳ್ಳಕ್ಕೆ ಹಾಕಿದಂತೆ. ಒಳ ಹೊರಗೂ ಒಂದಾಗಿ ಮೈಮನಗಳು ಶುದ್ಧಿಯಿರುವ ಮಾತಿಗೆ ಬಲು ಕಿಮ್ಮತ್ತು. ಇಲ್ಲದಿದ್ದರೆ ಜೀವಕ್ಕೆ ಕುತ್ತು. ಸುಂದರ ಜೀವನ ಸಾಗಿಸಬೇಕೆನ್ನುವವರು ಮಾತಿನಂತೆ ಕೃತಿಗೆ ಬಹಳ ಮಹತ್ವ ನೀಡುತ್ತಾರೆ. ಆಡುವ ಮಾತಿನಲ್ಲಿ ಶಕ್ತಿ ಇರದೆ ಸತ್ಯವಿರದೆ ಸ್ವಾರ್ಥದ ಬರಿ ಯುಕ್ತಿಯು ತುಂಬಿದ್ದರೆ, ಅವರಿಗೆ ವಂಚಕರೆಂದು ಕರೆಯಬಹುದು. ಮಾತಿನ ದ್ವಂದ್ವಾರ್ಥವು ಮನಸ್ಸಿನ ದೌರ್ಬಲ್ಯ ತೋರುವದಲ್ಲದೆ ಮಾನವತೆಯನ್ನು ನಶಿಸುತ್ತದೆ. "ದಡ್ಡನ ಹೃದಯ ಅವನ ಬಾಯಲ್ಲಿರುತ್ತದೆ, ಬುದ್ಧಿವಂತನ ಬಾಯಿ ಅವನ ಹೃದಯದಲ್ಲಿರುತ್ತದೆ" ಎಂದೆನ್ನುವ ಫ್ರಾಂಕಲಿನ್‌ನ ಮಾತು ನಿಜಕ್ಕೂ ಸತ್ಯ. ನಾವಿಂದು ಮಾತಿನ ಗುಲಾಮರಾಗದ ಕೃತಿಯ ಕಡೆಗೆ ಮನಸ್ಸು ಹಾಕಿದರೆ ಸತ್ಯಾರ್ಥದ ಅರಿವು ತಿಳಿವಳಿಕೆಯಲ್ಲಿ ಒಡಮೂಡುತ್ತದೆ. ಮಾತು ಮಾಟವಾಗದಂತೆ ನೋಡಿಕೊಳ್ಳಬೇಕು. ಅಂತರಂಗದ ಅನುರಾಗದ ಪರಿಗನ್ನು ಪತ್ತಾರು ಕಡೆ ಎಸಳೆಸಳಾಗಿ, ಹೊರಹೊಮ್ಮಿಸುತ್ತ ಆತ್ಮರಸಿಕರು ಒಪ್ಪುವ ಹಾಗೆ ಮಾತನಾಡಿದರೆ ಮಹಾದೇವನು ಮೆಚ್ಚದೆ ಬಿಡಲಾರ. ಭಾವ ಶುದ್ಧಿಯಾದಂತೆ ನುಡಿಯಲ್ಲಿ ನಯ ವಿನಯವಿರುತ್ತದೆ. ಕಳಂಕದ ಸೋಂಕಿಲ್ಲದಂತಾಗುತ್ತದೆ. ಆಗ ಮಾತಿನ ಶಕ್ತಿಯು ದೈವದತ್ತವಾಗಿ ಪರಿಣಮಿಸುತ್ತದೆ. ಮಾತು ಮಾಣಿಕ್ಯದ ದೀಪ್ತಿಯಂತಾಗುತ್ತದೆ. ಅಂತೆಯೆ ಮಹಾತ್ಮಾ ಬಸವಣ್ಣನವರು ಇಂತು ಬೋಧಿಸಿದ್ದಾರೆ.

"ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಮಾಣಿಕ್ಯದ
ದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು,
ನುಡಿದರ ಲಿಂಗ ಮೆಚ್ಚಿ ಅಹುದೆನಬೇಕು, ನುಡಿಯೊಳಗಾಗಿ
ನಡೆಯದಿದ್ದರೆ ಕೂಡಲ ಸಂಗಮದೇವನೆಂತೊಲಿವನಯ್ಯಾ?"

**ಕರ್ತವ್ಯೇನ ಸುಖಪ್ರಾಪ್ತಿಃ**

ರಾಷ್ಟ್ರೋದ್ಧಾರವಾಗಲು ಕರ್ತವ್ಯನಿಷ್ಠೆ ಅತ್ಯಾವಶ್ಯಕ. ಕರ್ತವ್ಯ ಪ್ರಜ್ಞೆಯಿರದೆ ಯಾವ ಕಾರ್ಯವೂ ಸಾಧಿಸದು. ಒಳ್ಳೆಯ ಕಾರ್ಯವನ್ನು ಮಾಡುತ್ತ ಹೋದಂತೆ ಆತ್ಮ ಶುದ್ಧಿಯಾಗಿ ಸುಖ ಸಮೃದ್ಧಿ ಸಂಪ್ರಾಪ್ತವಾಗುತ್ತದೆ. ಪ್ರತಿಯೊಂದು ವ್ಯಕ್ತಿಗೂ ಕರ್ತವ್ಯ ಬೇಕು. ಅದು ಆತ್ಮೋದ್ಧಾರಕ್ಕೆ ಸಹಕಾರಿಯಾಗಿರಬೇಕು. ಸಮಾಜ ಕಲ್ಯಾಣಕ್ಕಾಗಿ ಮೀಸಲಾಗಿರಬೇಕು. ಅಂದರೆ ಅದಕ್ಕೆ ಬಲಬರುತ್ತದೆ, ಬೆಲೆ ಬರುತ್ತದೆ. ನಿತ್ಯವೂ ಕಾರ್ಯ ತತ್ಪರರಾದವರಿಗೆ ಹೊರಗಿನ ಆಶೆ-ಆಮಿಷಗಳು ಆವರಿಸವು. ದೇಹ ಮನಗಳಲ್ಲಿ ನವ ಚೈತನ್ಯ ಹುಟ್ಟುವದಲ್ಲದೆ ಶಕ್ತಿ-ಸಾಮರ್ಥ್ಯಗಳು ಸಹಜವಾಗಿ ಬಂದು ಬಿಡುತ್ತವೆ. ವ್ಯಕ್ತಿತ್ವ ವಿಕಾಸಕ್ಕೆ ಕರ್ತವ್ಯ ನಿಷ್ಠೆಯೇ ದಾರಿದೀಪ. ಕರ್ತವ್ಯ ಪಾಲನೆಗಾಗಿ ಅಹೋರಾತ್ರಿ ಪರಿಶ್ರಮಿಸಿದರೆ ಸಿದ್ಧಿ ಸಾಧ್ಯ. ಕರ್ತವ್ಯ ಬಲ್ಲ ವ್ಯಕ್ತಿಗೆ ಧೈರ್ಯ ಬರುತ್ತದೆ. ಪರೋಪಕಾರ ಭಾವನೆ, ಸಹಿಷ್ಣುತೆ ಮುಂತಾದ ಗುಣಗಳು ಅಳವಟ್ಟಿರುತ್ತವೆ. ಅಂತೆಯೇ ಅವನು ಏನನ್ನಾದರೂ ಸಾಧಿಸಬಲ್ಲನು. ಪ್ರಣತೆಗೆ ಎಣ್ಣೆ ಹಾಕಿದಂತೆ ದೀಪ ಉರಿಯುತ್ತ, ಕತ್ತಲೆ ಕಳೆಯುವಂತೆ ಬದುಕಿನಲ್ಲಿ ಬೆಳಕು ಕಂಡು, ಪಗತಿ ಪಥದತ್ತ ಸಾಗಲು ಕರ್ತವ್ಯ ದಕ್ಷತೆಯೇ ಕೈದೀವಿಗೆ. ಕರ್ತವ್ಯ ಕರ್ಮದಿಂದ ದೇಹಕ್ಕೆ ಅಂಟಿರುವ ರೋಗಾದಿಗಳು ನಷ್ಟವಾಗುವದಲ್ಲದೆ, ಮಾನಸಿಕ ರೋಗಕ್ಕೂ ಇದು ದಿವ್ಯೌಷಧ. "ಕರ್ತವ್ಯ ಪ್ರಜ್ಞೆಯೆಂದರೆ ನಮ್ಮ ನಾಡು ನುಡಿಯ ಹಿತಮಾಡಿಕೊಳ್ಳುವದು ಮತ್ತು ರಾಷ್ಟ್ರದ ಅಭ್ಯುದಯವನ್ನು, ಆಸ್ಥೆ-ಆಸಕ್ತಿಯಿಂದ ಸಾಮಾಜಿಕ ಸುಧಾರಣೆಗಳನ್ನು ಅಳವಡಿಸಿಕೊಳ್ಳುವದು. ಕರ್ತವ್ಯ ಪ್ರಜ್ಞೆಯಿಂದ ಆರ್ಥಿಕ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ, ಧಾರ್ಮಿಕ ಪ್ರಜ್ಞೆ, ರಾಜಕೀಯ ಪ್ರಜ್ಞೆ ಇವೆಲ್ಲವುಗಳು ಒಡಮೂಡುತ್ತವೆ". ಧಾರ್ಮಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳುವದು ಇಂದಿನ ದಿನಮಾನಗಳಲ್ಲಿ ಅತ್ಯಾವಶ್ಯಕವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಮಠ ಮಂದಿರಗಳು ನಾಡಿನ ಜನಮನಕ್ಕೆ ಮಾರ್ಗದರ್ಶನ ಮಾಡುವಲ್ಲಿ ಅವಿಶ್ರಾಂತವಾಗಿ ಶ್ರಮಿಸುತ್ತಿದ್ದವೆಂಬುದನ್ನು ವೇದಕಾಲದಿಂದಲೂ, ಐತಿಹಾಸಿಕ ಆಧಾರದಿಂದಲೂ ಸಿದ್ಧವಾಗುತ್ತಿದೆ. ಇಂದಿನ ಪ್ರಜಾಪ್ರಭುತ್ವ ಯುಗದಲ್ಲಿ ಜನಜೀವನದ ಸುಳುಹು, ಹೊಳವುಗಳನ್ನು, ಜಟಿಲವಾದ ಸಮಸ್ಯೆಗಳನ್ನು ನೈತಿಕ ನಿಯಮ-ನಿಷ್ಠೆಯ ಒರೆಗಲ್ಲಿಗೆ ತಿಕ್ಕಿ, ನಾಗರಿಕ ಜೀವನಕ್ಕೆ ಸರಿಹೊಂದುವಂತೆ ಸಂಸ್ಕೃತವಾದ ರೀತಿಯಲ್ಲಿ ಬಾಳು ಸಾಗಿಸುವಂತೆ ಮಾರ್ಗದರ್ಶನ ಮಾಡಬೇಕು. ಅಂದರೆ ಕರ್ತವ್ಯ ಪರಿಪಾಲನೆಯನ್ನು ಮನಃಪೂರ್ವಕವಾಗಿ ಮಾಡಬೇಕು. ಪ್ರತಿಯೊಂದು ದೃಷ್ಟಿಯಿಂದ ತಮ್ಮ ತಮ್ಮ ವಿಭಾಗಗಳಲ್ಲಿ ಒಳ್ಳೆಯ ಜಿಗುಟತನದಿಂದ ಕಾರ್ಯ ಮಾಡುತ್ತ ಹೋದಲ್ಲಿ ಸಮಾಜವನ್ನು ಸುಭದ್ರಗೊಳಿಸಲು ಸಾಧ್ಯ. ಇದನ್ನು ಮರೆತು ಆಲಸ್ಯವುಳ್ಳವರಾಗಿ ಕರ್ತವ್ಯ ವಿಮುಖರಾದರೆ ಸಮಾಜವನ್ನು ಸಂಸ್ಥೆಗಳನ್ನು ಹಾಳುಗೆಡವಿದಂತಾಗುವದು. ಅದಕ್ಕಾಗಿ ಅಭಿಮಾನಬೇಕು ಜೊತೆಗೆ ಕರ್ತವ್ಯ ಕುಶಲತೆ ಬೇಕು. ಅಂದರೆ ಸಮಾಜ ರಥವನ್ನು ಎಳೆಯಲು ಶಕ್ತಿ ಬರುತ್ತದೆ.

ಲೋಕದ ನಿಂದಾಪಮಾನಗಳನ್ನು ಲೆಕ್ಕಿಸದೆ ಮನುಷ್ಯನು ತನ್ನ "ಕರ್ತವ್ಯಗಳನ್ನು ಪರಿ ಪಾಲಿಸುತ್ತ ಹೋಗಬೇಕು" ಎಂದು ಸ್ವಾಮಿ ವಿವೇಕಾನಂದರು ತಿಳಿ ಹೇಳಿದ್ದಾರೆ. "ಹೂವು ಕೊಯ್ಯುವವರಿಗಂಜಿ ಹೂವು ಎಂದಾದರೂ ತಡಮಾಡಿ ಅರಳಲಾರದೆನ್ನುವ ಮಾತು ಸತ್ಯ ವಾದುದು" ಆದುದರಿಂದ ಜೀವನದಲ್ಲಿ ಎಂತಹ ಅಡೆತಡೆಗಳು ಬಂದೊದಗಿದರೂ ಹಿಡಿದ ಕಾರ್ಯವನ್ನು ಎಡೆಗೊಟ್ಟು ಮಾಡಿದರೆ ಅದುವೆ ನಿಜವಾದ ಆತ್ಮೋನ್ನತಿ ಹಾಗೂ ಸಮಾಜೋನ್ನತಿ.

**ಸರ್ವಾಸು ರಾತ್ರೀಷು ಶ್ರೇಷ್ಠಾ ಶಿವರಾತ್ರಿರಿತೀರ್ಯತೇ**

ವರ್ಷಕೊಮ್ಮೆ ಹಬ್ಬಗಳು ಬರುವದುಂಟು. ಭಾರತೀಯರು ಹೆಚ್ಚಾಗಿ ಈ ಹಬ್ಬ ಗಳಲ್ಲಿ ಉತ್ಸಾಹದಿಂದ ನಲಿಯುವದುಂಟು. ತಮ್ಮ ತಮ್ಮ ಬೇಸರಿಕೆಗಳನ್ನು ಕಳೆಯುವ ದುಂಟು. ಇದು ಪರಂಪರಾಗತವಾಗಿ ಬಂದಿರುವ ರೂಢಿ. ನಿತ್ಯ ಜೀವನದಲ್ಲಿ ಕಷ್ಟ ಕಾರ್ಪಣ್ಯಗಳು ಬೆನ್ನು ಹತ್ತಿ ಜೀವನವನ್ನು ನಷ್ಟಕ್ಕೀಡು ಮಾಡಿದಾಗ ಹಬ್ಬಗಳು ಮನಸ್ಸಿನ ಬೇಸರ ಕಳೆದು ಹೊಸ ಹರುಷ ಉತ್ಸಾಹಗಳನ್ನು ನೀಡುತ್ತವೆ. ಬಾಳನ್ನು ಹಗುರು ಗೊಳಿಸುವದೇ ಹಬ್ಬದ ಮುಖ್ಯ ಕೆಲಸವಾಗಿದೆ. "ಉಬ್ಬು ಹಬ್ಬದ ಪ್ರತಿಬಿಂಬವಾದರೆ ಹಬ್ಬ ಉಬ್ಬಿನ ಪ್ರತಿಭೆ" ವರ್ಷಕ್ಕೊಮ್ಮೆ ಬರುವ ಇಂತಹ ಹಬ್ಬಗಳಲ್ಲಿ ಶಿವರಾತ್ರಿ ಹಬ್ಬವು ಹಿರಿದಾದುದು. ಅಂತೆಯೇ ಸರ್ವಜ್ಞ ಮಹಾಕವಿಯು 'ರಾತ್ರಿಯೊಳು ಶಿವರಾತ್ರಿ' ಎಂದಿದ್ದಾನೆ. ಈ ಹಬ್ಬವನ್ನು ಭಾರತೀಯರೆಲ್ಲರೂ ಮತ, ಧರ್ಮಗಳ ಗೋಜಿಲ್ಲದೆ ಆಚರಿಸುತ್ತಾರೆ. ಪ್ರತಿಯೊಬ್ಬರೂ ನಿಚ್ಚ ಶಿವರಾತ್ರಿಯಾಗಲೆಂದು ಹಾರೈಸುತ್ತಾರೆ. ಉಪವಾಸ, ಶಿವಪೂಜೆ, ಶಿವಕೀರ್ತನೆ, ಶಿವ ಚಿಂತನೆ, ಜಾಗರಣೆ ಇವುಗಳನ್ನು ಎಲ್ಲರೂ ನಿಷ್ಠೆಯಿಂದ ಶಿವರಾತ್ರಿಯ ದಿನ ಮಾಡಿ ಮನಸ್ಸಿನ ಕತ್ತಲೆಯನ್ನು ಕಳೆಯಲು ಪ್ರಯತ್ನಿಸು ತ್ತಾರೆ. ಈ ರಾತ್ರಿ ಎಲ್ಲರನ್ನೂ ಆಧ್ಯಾತ್ಮ ಸಾಧನೆಯತ್ತ ಒಯ್ಯುತ್ತದೆ. ಶಿವನ ಸೇವೆಗೆ, ಶಿವಧ್ಯಾನಕ್ಕೆ, ಕಾಯಕ ನಿಷ್ಠೆಗೆ, ದಾಸೋಹ ಮಾಡಲಿಕ್ಕೆ, ಪುಣ್ಯಗಳಿಸಲಿಕ್ಕೆ, ಯೋಗ ಸಾಧನೆಗೆ ಇದು ಒಳ್ಳೇ ಸುಸಂಧಿ. ಶಿವರಾತ್ರಿಯ ದಿನ ಪುನೀತರಾಗಿ ಜೀವನವನ್ನು ಪರಿ ಶುದ್ಧಮಾಡಿಕೊಳ್ಳುವ ಶುಭ ದಿನವಾಗಿದೆ. ತಿಮಿರವನ್ನು ಸರಿಸಿ, ಬೆಳಕನ್ನು ಒಳಗಿರಿಸಿ ಭಾವ ವೈಭವವನ್ನು ಪಡೆಯುವ ಮಹಾದಿನವಾಗಿದೆ. ಜಾಗರಣೆ ಶಿವರಾತ್ರಿಯ ಮುಖ್ಯ ಲಕ್ಷಣ. ಅಂದ ಮಾತ್ರಕ್ಕೆ ಕೇವಲ ನಿದ್ರೆಯಿಂದ ಎಚ್ಚತ್ತಿರುವದಲ್ಲ. ನಿದ್ರೆಗೂ ಆಚೆ ಗಿರುವ ಎಚ್ಚರಿಕೆ ಬೇಕು, ಅದುವೆ ಜ್ಞಾನ. ಈ ಜ್ಞಾನ ನಮ್ಮಲ್ಲಿ ಅಳವಟ್ಟಾಗ ಬೆಳಕಿನ ಬಯಲು ನಮಗೆ ಕಾಣಿಸಿಕೊಳ್ಳುವದು. ಸದಾ ಕಂಗೊಳಿಸುತ್ತ, ಕತ್ತಲೆಯು ದೂರಾಗಿ ನಿಜಶಾಂತಿ ದೊರೆಯುವದು. "ನಿಚ್ಚಕ್ಕೆ ನಿಚ್ಚನೆನೆವ ಮನದ ಅಂದಂದಿಗೆ ಅತ್ತಲಿತ್ತ ಹರಿವ ಮನವ ಚಿತ್ತದಲ್ಲಿ ನಿಲ್ಲಿಸಬಲ್ಲಡೆ ಬಚ್ಚಬರಿಯ ಬೆಳಗು" ಇದು ಪ್ರಭುವಿನ ವಾಣಿ. ಈ ಬೆಳಗು ಮನದಲ್ಲಿ ಮೂಡಿದಾಗ ಅದುವೆ ಶಿವರಾತ್ರಿ. ಬಹಿರ್ಮುಖದಿಂದ ಅಂತ ರ್ಮುಖದತ್ತ ಸಾಗಿ ಯಥಾರ್ಥತೆಯನ್ನು ಸಾಧಿಸಿಕೊಂಡರೆ ಇಂದಿನ ಕತ್ತಲೆಯ ರಾತ್ರಿ

ಯನ್ನು ಶಿವರಾತ್ರಿಯನ್ನಾಗಿ ಮಾರ್ಪಡಿಸಬಹುದು. "ಗಗನವೇ ಗುಂಡಿಗೆ, ಆಕಾಶವೇ ಅಗ್ಗವಣಿ" ಚಂದ್ರಸೂರ್ಯರಿಬ್ಬರೂ ಪುಷ್ಪ, ಬ್ರಹ್ಮ ಧೂಪ, ವಿಷ್ಣು ದೀಪ, ರುದ್ರ ನೋಗರ ಸುಯಿಧಾನ ನೋಡಾ ಗುಹೇಶ್ವರ ಲಿಂಗಕ್ಕೆ ಪೂಜೆ ನೋಡಾ" ಇವುಗಳೇ ನಿಚ್ಚ ಶಿವರಾತ್ರಿಯನ್ನು ಆಚರಿಸುವ ಸಲಕರಣೆಗಳು. ಇಡಿಯ ಆಯುಷ್ಯದುದ್ದಕ್ಕೂ ಅಂತಃ ಕರಣಪೂರ್ವಕವಾಗಿ ಈ ನಿಯಮಗಳನ್ನು ಆಚರಿಸಿದರೆ ಅದುವೆ ನಿಚ್ಚ ಶಿವರಾತ್ರಿ. ಅದಕ್ಕಾಗಿ ನಾವೆಲ್ಲರೂ ಶಿವರಾತ್ರಿಯ ಶುಭದಿನದಂದು ಎಚ್ಚರಿಕೆ ವಹಿಸಿ ಹೃದಯ ಬಾಗಿಲ ತೆರೆದು ಶಿವಧ್ಯಾನ ಮಾಡಿ ಶಿವಭಾವವನ್ನು ತುಂಬಿಕೊಂಡು ರಾತ್ರಿಯ ಮಹತ್ವವನ್ನು ಅರಿತುಕೊಂಡು ಬಾಳಿನಲ್ಲಿ ಬೆಳಕನ್ನು ಕಾಣುವದೇ ಮುಖ್ಯ ಧ್ಯೇಯವನ್ನಿಟ್ಟುಕೊಂಡಿರ ಬೇಕು.

## ವಿಶ್ವಜ್ಯೋತಿಃ ಸ್ವರೂಪೋಽಯಂ ಕಲ್ಯಾಣಬಸವೇಶ್ವರಃ

"ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು ಆಚಾರವೆಂಬ ಬತ್ತಿ ಗುಂಟ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು, ತೊಳಗಿ ಬೆಳಗುತಿರ್ದಿತಯ್ಯಾ ಶಿವನ ಪ್ರಕಾಶ; ಆ ಪ್ರಕಾಶವೊಳಗೆ ಒಪ್ಪುತಿರ್ದರಯ್ಯಾ ಅಸಂಖ್ಯಾತ ಪ್ರಥಮಗಣಂಗಳು; ಶಿವಭಕ್ತರಿರ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೇ? ಶಿವಭಕ್ತರಿರ್ದ ದೇಶವು ಪರಮಪಾವನೆಂಬುದು ಹುಸಿಯೇ? ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯ ಗುರುಸಂಗನಬಸವಣ್ಣನ ಮಹಿಮೆ ನೋಡಾ ಸಿದ್ಧರಾಮಯ್ಯ".

ವೈರಾಗ್ಯ ವಿಭು ಅಲ್ಲಮಪ್ರಭುಗಳ ಈ ವಚನದಿಂದ ಮಹಾತ್ಮಾ ಬಸವಣ್ಣನವರ ಮಹಾನ್ ವ್ಯಕ್ತಿತ್ವವು ಎನಿತು ಘನತೆಗೇರಿತ್ತೆಂಬುದು ಅರ್ಥವಾಗುತ್ತದೆ. ವಿಶ್ವವಿಭೂತಿ ಬಸವಣ್ಣನವರು ೧೨ನೇ ಶತಮಾನದಲ್ಲಿ ಅನುಭವಮಂಟಪ ರಚಿಸಿ, ಎಲ್ಲ ಶಿವಶರಣರನ್ನು ಒಂದೆಡೆ ಕೂಡಿಸಿ, ಆಧ್ಯಾತ್ಮದ ಸಾಧನಾರಂಗವನ್ನು ಮಾಡಿಕೊಂಡು ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಬೆಳಗಿಸುವ ಜ್ಯೋತಿಯಾಗಿದ್ದರು. ಅಂದು ಮಾನವಕುಲವನ್ನೇ ಜಾಗೃತಗೊಳಿಸಿದರು. ಸಕಲ ಜೀವಾತ್ಮರಿಗೆ ಲೇಸನೆ ಬಯಸುವದೇ ನಿಜವಾದ ಧರ್ಮವೆಂದರು. ಕಾಯಿಕ, ವಾಚಿಕ, ಮಾನಸಿಕ ದೃಷ್ಟಿಯಲ್ಲಿಯೂ ಬೇರೊಬ್ಬರ ಮನನೋಯದಂತೆ ನಡೆದುಕೊಳ್ಳುವದೇ ಕೂಡಲ ಸಂಗನ ಸಾನ್ನಿಧ್ಯ ಪಡೆಯುವ ಮಹತ್ಸಾಧನೆಯೆಂದು ಸಾರಿದರು. ಪುಣ್ಯಪಾಪಗಳ ಮರ್ಮವನ್ನರಿತುಕೊಂಡು ಕಾಯಕ ಮಾಡಿದರೆ ಅದುವೆ ಕೈಲಾಸ, ಅಂತರಂಗ ಬಹಿರಂಗ ಶುದ್ಧಿಗಳಿರದಿದ್ದರೆ ಯಾವ ಸಾಧನೆಯೂ ಸಫಲವಾಗಲಾರದೆಂದರು. ಮಹಾತ್ಮಾ ಗಾಂಧಿಯವರು ಹೇಳಿದ ಅಸ್ಪೃಶ್ಯೋದ್ಧಾರ ಮುಂತಾದ ತತ್ವಗಳು ರಾಷ್ಟ್ರಪ್ರಗತಿಗೆ ಬೇಕೆನ್ನುವ ನುಡಿಗಳನ್ನು ೧೨ನೇ ಶತಮಾನದಲ್ಲಿಯೇ ಕೃತಿಯಲ್ಲಿ ತಂದು ತೋರಿಸಿದರು. ಲೋಕದ ಡೊಂಕು ತಿದ್ದುವ ಮುಂದಾಳುಗಳಿಗೆ "ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ" ಎಂದು ಕಠೋರವಾಗಿ ನುಡಿದರು. ಈ ಮಾತು ತ್ರಿಕಾಲ ಸತ್ಯ.

ನಮ್ಮಲ್ಲಿ ನಮ್ಮ ತಪ್ಪನ್ನಲ್ಲದೇ ಅನ್ಯರ ತಪ್ಪನ್ನು ಕೆದಕಿ ತೀಡುವ ಹವ್ಯಾಸ ಬಹಳ. ಸಮಾಜದ ಈ ಸೂಕ್ಷ್ಮನಾಡಿಯ ಮಿಡಿತವನ್ನು ಮಹಾತ್ಮಾ ಬಸವಣ್ಣನವರು ಚನ್ನಾಗಿ ಅರಿತವರಾಗಿದ್ದರು. ಇನ್ನು ಶರಣ ಮಾರ್ಗದಲ್ಲಾಗಲಿ ಲೋಕ ಮಾರ್ಗದಲ್ಲಾಗಲಿ ಒಳಗೊಂದು ಹೊರಗೊಂದು ಸಲ್ಲದು. ಒಳಗೆ ವಿಷ ಮೇಲೆ ಸಿಹಿ ಮಾತು ಇದು ಸನ್ಮಾರ್ಗಕ್ಕೆ ವಿರೋಧ. ಅವರಿಗೆ ಆತ್ಮಸ್ತುತಿ ಬೇಡ. ಪರನಿಂದೆ ಬೇಡ ಅಂತೆಯೇ "ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯ" ಎಂದಿದ್ದಾರೆ.

ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ ವಿಶ್ವಜ್ಯೋತಿ ಬಸವಣ್ಣನವರ ದಿವ್ಯಪ್ರಭೆ ಪಸರಿಸಿ, ಆ ಪ್ರಭೆಯ ಲೋಹ ಚುಂಬಕಕ್ಕೆ ಅರಸರು, ಶ್ರೀಮಂತರು, ಧೀಮಂತರು ಆಕರ್ಷಿತರಾಗಿ ಆತ್ಮಶ್ರೀ ಸಮನ್ವಿತರಾಗಿ ಶಿವಶರಣರಾದರು. ಬಸವಣ್ಣನವರು ಅನೇಕ ಶಕ್ತಿಗಳ ಕೇಂದ್ರಸ್ಥಾನವಾದ ವ್ಯಕ್ತಿ ಶಕ್ತಿಯಾಗಿದ್ದರು. ಭಾರತ ಇತಿಹಾಸದಲ್ಲಿ ಅನೇಕ ಸಂತ, ಶರಣರ, ದಾಸ, ಸಂನ್ಯಾಸಿ, ಸ್ವಾಮಿಗಳವರ ದಿವ್ಯ ಜೀವನವನ್ನು ಕಂಡಿದ್ದೇವೆ. ಕೆಲವರು ಭಕ್ತಜೀವಿಗಳು, ಕೆಲವರು ಜ್ಞಾನಿಗಳು, ಕೆಲವರು ಯೋಗಿಗಳು, ಕೆಲವರು ಸಮಾಜ ಸುಧಾರಕರು, ಇನ್ನೂ ಕೆಲವರು ಸಾಹಿತಿಗಳು, ಧರ್ಮ ಬೋಧಕರು, ಅನು ಭಾವಿಗಳು, ದಕ್ಷ ಆಡಳಿತಗಾರರು, ಸತ್ಯನಿಷ್ಠರು ಆಗಿದ್ದರೆ ಮಹಾನುಭಾವಿ ಬಸವಣ್ಣ ನವರೊಬ್ಬರಲ್ಲಿಯೇ ಅವೆಲ್ಲ ಶಕ್ತಿಗಳು ವಿಕಸಿತವಾಗಿ ಪರಿಪೂರ್ಣಗೊಂಡಿದ್ದವು. ಅಂತೆಯೇ ಅವರು ಸರ್ವಧರ್ಮ ಸಮಭಾವದಿಂದೊಡಗೂಡಿದ ಸಮನ್ವಯಾಚಾರ್ಯರು.

### ತಪಃ ಸ್ವಧರ್ಮವರ್ತಿತ್ವಮ್

ಸ್ವಧರ್ಮವನ್ನಾಚರಿಸುವದೇ ತಪಸ್ಸು. ತ್ಯಾಗವಿಲ್ಲದ ತಪಸ್ಸು ಜಲವಿಲ್ಲದ ತಟಾಕ ದಂತೆ ಅದು ನಿರರ್ಥಕ. ಅಂತರಂಗ ಬಹಿರಂಗ ಶುದ್ಧಿಗಾಗಿ ತಪಸ್ಸುಬೇಕು. ತೋರಿಕೆ ಗಾಗಿ, ಜನ ಮರುಳು ಮಾಡುವದಕ್ಕಾಗಿ ಮಾಡುವ ತಪಸ್ಸು ತೊಳೆಯದ ಪಾತ್ರೆಯಂತೆ ವ್ಯರ್ಥವಾಗುತ್ತದೆ. ಭಾವಶುದ್ಧಿ, ಅಂತಃಕರುಣೆ, ಕಷ್ಟಸುಖಗಳ ಸಹನೆ, ತ್ಯಾಗ, ವೈರಾಗ್ಯ, ಪರೋಪಕಾರ, ಸಾಮಾಜಿಕ ಬುದ್ಧಿ ಇವೆಲ್ಲವುಗಳು ತಪಸ್ಸಾಧನೆಗೆ ಮೂಲ ಬೇರುಗಳು. ತಪಸ್ಸೆಂದರೆ ಮನೆ ಮಠ ಬಿಟ್ಟು, ಗಡ್ಡೆಗೆಣಸು ಸೇವಿಸಿ, ದೂರ ಹೋಗು ವದಲ್ಲ. ಪ್ರಪಂಚದಲ್ಲಿದ್ದೂ ಇಲ್ಲದಂತೆ, ಹೊರಗಿನ ವ್ಯಾಮೋಹ ಹತ್ತದಂತೆ, ಕುಂಬಾರ ಹುಳದಂತೆ ಇದ್ದುಕೊಂಡು, ಆತ್ಮಾನುಸಂಧಾನದಲ್ಲಿ ತೊಡಗಿದರೆ ಮಾತ್ರ ಸಾರ್ಥಕತೆ. ನಿಜವಾದ ವೈರಾಗ್ಯವು ತಾನಾಗಿಯೇ ಹುಟ್ಟಬೇಕಲ್ಲದೆ ಕಲಿಸಿದರೆ ಬರಲಾರದು. ಅನುಭವ ವಿಲ್ಲದ ವಿರತಿ ಹಾಗೂ ತಪಸ್ಸು ಪಕ್ವವಾಗದ ಹಣ್ಣಿನಂತೆ, ರಾಮಕೃಷ್ಣ ಪರಮಹಂಸರು ಒಂದೆಡೆ "ಪ್ರಾಪಂಚಿಕ ಅನುಭವಗಳಿಂದುಂಟಾದ ವೈರಾಗ್ಯ ಉಚ್ಚತರ ಹಾಗೂ ಸ್ಥಿರ ವಾದುದು" ಎಂದು ಹೇಳಿದ್ದಾರೆ. ಹೃದಯ ಪವಿತ್ರವಾಗುತ್ತ ಹೋದಂತೆ ಅನುಭವ ಹೆಚ್ಚುತ್ತದೆ. ಅನುಭವ ಹೆಚ್ಚಿದಂತೆ ಆತ್ಮಶಕ್ತಿ ವೃದ್ಧಿಯಾಗುತ್ತದೆ. ಆತ್ಮಶಕ್ತಿ

ಹೆಚ್ಚಿದಂತೆ ಸುಖದುಃಖಗಳ ಸಹಿಸುವ ಶಕ್ತಿಉಂಟಾಗುತ್ತದೆ. ಸುಖದುಃಖಗಳ ಸಾಗರದಲ್ಲಿ ಈಸುತ್ತಿದ್ದರೂ ಅವುಗಳ ಲೇಪವಿರದಿದ್ದರೆ ಅಲ್ಲಿ ಸಾಮಾಜಿಕ ಕಳಕಳಿಯು ಉದ್ಭವವಾಗುತ್ತದೆ. ಸಾಮಾಜಿಕ ಸೇವೆಯು ಕೊನೆಗೆ ಅದು ತಪಸ್ಸಾಗಿ ಪರಿಣಮಿಸುತ್ತದೆ. ಸಾಮಾಜಿಕ ಸೇವೆಗಾಗಿ, ತಪೋನುಷ್ಠಾನ ಮುಂತಾದವುಗಳು ಸಾಧನಗಳೇ ಹೊರತು ಪ್ರಾಧಾನ್ಯಗಳಾಗಲಾರವು. ಮಹಾಕಾರ್ಯಗಳು ಫಲಿಸಬೇಕಾದರೆ ಮಹಾತ್ಯಾಗದಿಂದಲೇ ಹೊರತು ಸ್ವಾರ್ಥದಿಂದಲ್ಲ. ಅದುವೆ ತಪಸ್ಸು. ಹೊರಗಿನ ಆಡಂಬರದ ತಪಸ್ಸಿಗಿಂತಲೂ ಕ್ರಿಯಾತ್ಮಕ ಸೇವೆ ಹೆಚ್ಚಿನದು. Faith without work is dead ಕ್ರಿಯೆಯಿಲ್ಲದ ಶ್ರದ್ಧೆ ನಿರ್ಜೀವವಾದುದೆಂದು ನುಡಿದ ಬೈಬಲ್ಲಿನ ಮಾತು ನಿಜಕ್ಕೂ ಸತ್ಯ. ಅದೇ ಬೈಬಲ್ಲಿನಲ್ಲಿರುವ ಮತ್ತೊಂದು ನುಡಿಯನ್ನು ನಮ್ಮ ಹೃದಯದಲ್ಲಿ ಇಳಿಸಿಕೊಂಡರೆ ಮತ್ತಷ್ಟು ಅರ್ಥವಾಗುತ್ತದೆ. Blessed are the pure in heart; For they shall see God ಅಂದರೆ ಪರಿಶುದ್ಧ ಹೃದಯಿಗಳು ಧನ್ಯರು. ಏಕೆಂದರೆ ಪರಮಾತ್ಮನನ್ನು ಅವರು ನಿಶ್ಚಯವಾಗಿ ಕಾಣುವರು. ಅದಕ್ಕಾಗಿ ತಪಸ್ಸನ್ನು ಅಂತರಂಗಶುದ್ಧಿಗಾಗಿ ಸ್ವಧರ್ಮನಿಷ್ಠೆಗಾಗಿ ಆಚರಿಸಬೇಕೇ ಹೊರತು, ಬಾಹ್ಯಾಡಂಬರಕ್ಕಾಗಿ ಅಲ್ಲವೆಂಬುದು ಅರಿತುಕೊಳ್ಳಬೇಕು. ಅಂತರಂಗಶುದ್ಧಿಯಿಲ್ಲದೆ ಅಘೋರತಪವ ಮಾಡಿದರೂ ಹೊಳೆಯಲ್ಲಿ ಹುಣಸೆ ತೊಳೆದಂತೆ ವ್ಯರ್ಥವಾಗುವದು. ಹುತ್ತದೊಳಗಿರುವ ಹಾವನ್ನು ಬಿಟ್ಟು ಹುತ್ತವನ್ನು ಹೊಡೆದಂತಾಗುವದು. ತಾಪತ್ರಯಗಳನ್ನು ಕಳೆಯಲು, ಮದಮತ್ಸರಗಳನ್ನು ತುಳಿಯಲು, ವಿಶಾಲ ಮನೋಭಾವನೆಯನ್ನು ಬೆಳೆಸಲು ಆತ್ಮಜ್ಯೋತಿಯನ್ನು ಬೆಳಗಿಸಲು ಸಮಾಜವನ್ನು ಎಚ್ಚರಿಸಲು ತಪಸ್ಸು ಅತ್ಯಾವಶ್ಯಕ.

## ವ್ಯಾಮೋಹಾತ್ ಮಾನಹಾನಿಃ

ಮೋಹ ವ್ಯಾಮೋಹ ಎರಡು ತೆರನಾಗಿದೆ. ಮೋಹದಿಂದ ಮರವೆ, ವ್ಯಾಮೋಹದಿಂದ ಮಾಯಾಬಂಧನ. ಮೋಹ ಅಜ್ಞಾನಕ್ಕೆ ದಾರಿಮಾಡಿಕೊಡುತ್ತದೆ. ವ್ಯಾಮೋಹವು ಅದರಲ್ಲಿಯೇ ತನ್ಮಯ ಮಾಡಿಬಿಡುತ್ತದೆ. ಅಂಧಕಾರದಿಂದ ಹೊರಬರಲು ಕಷ್ಟವಾಗುತ್ತದೆ. ತನ್ನತನದ ಅರಿವು ಮರವೆಯಲ್ಲಿ ಪರಿಣಮಿಸುತ್ತದೆ. ತಾನಾರೆಂಬುದು ಮರೆತು, ಅಹಂಭಾವದಲ್ಲಿ ಕುಳಿತು, ವಿಷಯವಾಸನೆಗಳಲ್ಲಿ ಬೆರೆತು ಭವಚಕ್ರದಲ್ಲಿ ತಿರುಗಬೇಕಾಗುತ್ತದೆ. ವ್ಯಾಮೋಹದಲ್ಲಿ ಸಿಕ್ಕ ಮಾನವನು ಕಿಚ್ಚಿನಲ್ಲಿ ಬಿದ್ದ ಹುಳದಂತೆ ಸುಡುತ್ತಾನೆ. ವ್ಯಾಮೋಹದಲ್ಲಿರುವವರಿಗೆ ತಂದೆ ತಾಯಿ, ಬಂಧು ಬಳಗ, ಗುರುಹಿರಿಯರು ಕಣ್ಣಿಗೆ ಕಾಣಿಸರು. ಅವರ ಹಿತ ಮಾತು ಅರ್ಥವಾಗದು. ನಿರಂತರವೂ ತಾನು ಮಾಡುವ ದುಷ್ಕೃತಿಯನ್ನೇ ಒಳಿತೆಂದು ತಿರುಗುತ್ತಾರೆ. ವ್ಯಕ್ತಿತ್ವ ಹಾಳಾಗಲು ವ್ಯಾಮೋಹವೇ ಮೂಲ ಕಾರಣ. ಮನೋದೌರ್ಬಲ್ಯಕ್ಕೆ ವ್ಯಾಮೋಹವೇ ಮೂಲ ಬೀಜ. ವ್ಯಾಮೋಹವು ಸುಳ್ಳು ಹೇಳಿಸುತ್ತದೆ. ಕದಿಯಲು ಹೆಚ್ಚುತ್ತದೆ. ದೈಹಿಕ, ಮಾನಸಿಕ, ಅಧ್ಯಾತ್ಮಿಕ ಶಕ್ತಿಯನ್ನು ಕುಂದಿಸುತ್ತದೆ. ಮಾನಹಾನಿ ಮಾಡಿಸುತ್ತದೆ. ಭ್ರಮಾತ್ಮಕ ಸಂಸಾರದಲ್ಲಿ

ತಿರುಗಲು ಹಚ್ಚಿಸುತ್ತದೆ. ಮೋಹಕ್ಕಿಂತಲೂ ವ್ಯಾಮೋಹವು ಅತಿ ಕೆಡುಕನ್ನುಂಟು ಮಾಡುವದು. ಮೋಹಾಂಧಕಾರದಲ್ಲಿದ್ದವರು ಒಮ್ಮೆ ಅದರಿಂದ ದೂರ ಸರಿದು ಜ್ಞಾನದ ಬೆಳಕನ್ನು ಕಾಣಬಹುದು. ಆದರೆ ವ್ಯಾಮೋಹದಲ್ಲಿ ಇದ್ದವರು ಭೋರ್ಗರೆದು ಹರಿಯು ತ್ತಿರುವ ನದಿಯ ಪ್ರವಾಹದ ಸೆಳುವಿನಲ್ಲಿ ಸಿಕ್ಕ ಪಶುವಿನಂತೆ, ಆ ತೀರವನ್ನು ಮುಟ್ಟ ಲಾರರು. ತಿರುಗಣಿ ಮಡುವಿನಲ್ಲಿ ತಿರುಗುತ್ತಿರುವ ಹುಳದಂತೆ, ಅವರ ಜೀವನವಾಗು ತ್ತದೆ. ಅವರಿಗೆ ಅಂತರ್ಮುಖವು ಬೇಸರವಾಗುತ್ತದೆ. ಬಹಿರ್ಮುಖವು ಆಸರವಾಗು ತ್ತದೆ. ಅವರು ಅಶಾಂತಿ, ಅತೃಪ್ತಿ ಚಿತ್ತಕ್ಷೋಭೆಯಲ್ಲಿ ತೊಳಲಾಡುತ್ತಾರೆ. ಅವರಿಗೆ ಮಹಾನ್ ಸತ್ಯ. ಶಕ್ತಿಯ ಸೌಭಾಗ್ಯ ಕನಸಾಗುತ್ತದೆ, ವಿಷವಾಗುತ್ತದೆ. ಅಮೃತವನ್ನು ತೊರೆದು ಹೆಂಡಕುಡಿದ ಮಂಗನಂತೆ ಅತ್ತಿತ್ತ ಸುತ್ತುತ್ತ, ಮರವೆಯ ಕೂಪದಲ್ಲಿ ಬಿದ್ದು ತೊಳಲಾಡುತ್ತಾರೆ. ಅದಕ್ಕಾಗಿ ವ್ಯಾಮೋಹದಲ್ಲಿ ಬೀಳುವ ಪೂರ್ವದಲ್ಲಿಯೇ, ಸತ್ ಸಹವಾಸ, ಸತ್‌ಶ್ರವಣ, ಮನನ, ನಿಧಿಧ್ಯಾಸ, ಶಿವಾರ್ಚನೆ ಮುಂತಾದ ಒಳ್ಳೇ ಕಾರ್ಯದಲ್ಲಿ ಮನಸ್ಸನ್ನು ತೊಡಗಿಸಿ ಚಿತ್ತಶುದ್ಧಿಯನ್ನು ಬುದ್ಧಿಶಕ್ತಿಯೊಡನೆ ಬಲಪಡಿಸಿಕೊಂಡರೆ ಅವರು ಬಾಳಿನಲ್ಲಿ ಬೆಳಕನ್ನು ಕಾಣಬಹುದು. ಅಂತಾದಾಗ ದೃಷ್ಟಿಯಲ್ಲಿ ದಿವ್ಯದೀಪ್ತಿಯನ್ನೂ ಕಾಣುತ್ತೇವೆ. ದುಡಿಮೆಯಲ್ಲಿ ದಿವ್ಯಶಕ್ತಿಯನ್ನು ಅನುಭವಿಸುತ್ತೇವೆ. ಕಾಯಕ ಮಾಡು ವವರಿಗೆ ಇದೇ ಪರಮಗುರಿ, ವ್ಯಾಮೋಹ ನಿವಾರಣೆಗೆ ಸತ್ಯಶುದ್ಧ ಕಾಯಕವೇ ದಿವ್ಯೌಷಧ. ಸಂಸಾರವೆಂಬುದೊಂದು ಗಾಳಿಯ ಸೊಡರಿನ ವ್ಯಾಮೋಹದಲ್ಲಿ ಸಿಲುಕದಿರಲು ಅಂತರಂಗ, ಬಹಿರಂಗಗಳೆರಡರ ಶುದ್ಧಿಯಾದರೆ ಅಲ್ಲಿ ಅಂತಃಸತ್ವವೃದ್ಧಿಯಾಗಿ ಆತ್ಮಶಾಂತಿ ದೊರೆಯುವದು.

**ಆಶಾ ಹಿ ಪರಮಂ ದುಃಖಂ**

ನಮ್ಮ ಜೀವನದಲ್ಲಿ ಆಶೆಯೆಂಬುದು ದೊಡ್ಡ ಅಪಾಯಕಾರಿ. ದುಃಖ ಬರುವದು ಆಶೆಯಿಂದ, ಸ್ವಾರ್ಥ ಬರುವದು ಆಶೆಯಿಂದ: ಅಹಂಕಾರ, ಮಮಕಾರ ಬರುವದು ಆಸೆಯಿಂದ. ಆಶೆಯೆಂಬುದು ಕಟ್ಟಿಗೆ ಕೊರೆಯುವ ಹುಳದಂತೆ ಇರುತ್ತದೆ. ಆಶೆಗೆ ಕೊನೆಯೆಂಬುದು ಇರಲಾರದು. ಆಶೆಯು ಜಪತಪವನ್ನು ಬಿಡಿಸುತ್ತದೆ. ಬಂಧು ಬಾಂಧ ವರನ್ನು ತ್ಯಜಿಸುತ್ತದೆ. ಮೋಹವನ್ನು ಹೆಚ್ಚಿಸುತ್ತದೆ. ಜ್ಞಾನದಿಂದ ದೂರ ಮಾಡು ತ್ತದೆ. ಗುರು ಹಿರಿಯರನ್ನು ಮರೆಸುತ್ತದೆ. ಆಶೆಯು ವಿಷಯದತ್ತ ಕಳಿಸುತ್ತದೆ. ಆಸೆಯ ಬಂಧನದಲ್ಲಿ ಸಿಕ್ಕವನ ಕಣ್ಣಿಗೆ ಏನೂ ಕಾಣಿಸದು. ಆಶೆಯೇ ಭವಕ್ಕೆ ಬೀಜ. ಈ ಆಶೆಯಿಂದಲೇ ಮತ್ತೆ ಜನ್ಮಗಳನ್ನೆತ್ತಬೇಕಾಗುತ್ತದೆ. "ಪರೋಮೋಕ್ಷೋ ವಿತೃಷ್ಣತಾ" ಎಂಬ ನೀತಿ ವಾಕ್ಯದಂತೆ ಆಶೆಯಿಲ್ಲದಿರುವದೇ ಮಹಾಮೋಕ್ಷ. ಪಾಶ್ಚಾತ್ಯ ತತ್ತ್ವಜ್ಞಾನಿ ಗಳಾದರೂ ಆಶೆಯ ಬಗ್ಗೆ **Dark night of the Soul** ಎಂದು ಬಿತ್ತರಿಸಿದ್ದಾರೆ.

ಆಶೆಯಲ್ಲಿಯೂ ಎರಡು ತೆರನಾಗಿರುವದು. ಒಂದು ದುರಾಶೆ ಮತ್ತೊಂದು ಸದಾಶೆ, ದುರಾಶೆಯು ದುರ್ಮಾರ್ಗಕ್ಕೆಳೆದರೆ ಸದಾಶೆಯು ಸನ್ಮಾರ್ಗಕ್ಕೆಳೆ

ಯುತ್ತದೆ. ದುರಾಶೆಯಿಂದ ದುರ್ಗತಿ. ಸದಾಶೆಯಿಂದ ಸದ್ಗತಿ. ದುರಾಶೆಯು ವ್ಯಕ್ತಿತ್ವವನ್ನು ಹಾಳು ಮಾಡಿದರೆ ಸದಾಶೆಯು ವ್ಯಕ್ತಿತ್ವಕ್ಕೆ ದಾರಿದೀಪವಾಗುತ್ತದೆ. ಆಶೆಯು ಮಾನವನ ಕಲ್ಯಾಣಕ್ಕಾಗಿ, ಆತ್ಮ ಚಿಂತನೆಗಾಗಿ ಇದ್ದರೆ, ಸಮಾಜಕ್ಕೂ ತನಗೂ ಹಿತವಾಗುತ್ತದೆ. ನಮ್ಮ ನಮ್ಮ ನೈಜ ಸ್ಥಿತಿಯನ್ನು ಹೆಚ್ಚು ಹೆಚ್ಚು ತಿಳಿದುಕೊಂಡಂತೆ; ಭ್ರಾಂತಿಯು ಮಾಯವಾಗುತ್ತದೆ. ಭೇದಗಳು, ವ್ಯತ್ಯಾಸಗಳು ಕಡಿಮೆಯಾಗಿ ಎಲ್ಲರಿಗೂ ಪರಂಜ್ಯೋತಿಯ ಅವಿರ್ಭಾವ ಎಂಬುದು ವ್ಯಕ್ತವಾಗುತ್ತದೆ. ಸ್ವಾರ್ಥತೆಗೆ ಮೂಲ ಬೀಜವಾದ ಆಶೆಯನ್ನು ಕಿತ್ತೊಗೆದರೆ ನಾನೆಂಬುದಿಲ್ಲವೆಂಬುದು ಗೊತ್ತಾಗುತ್ತದೆ. ಆ ತಿಳುವಳಿಕೆಯೇ ನಮಗೆ ಸುಖವನ್ನು ನೀಡುತ್ತದೆ. ಈ ಸುಖಕ್ಕಾಗಿ ಹಗಲಿರುಳು ಶ್ರಮಿಸಬೇಕಾಗುತ್ತದೆ. ದೇವರನ್ನು ಸ್ಮರಿಸಬೇಕಾಗುತ್ತದೆ. ನಿತ್ಯವೂ ಸತ್ಯಶುದ್ಧ ಕಾಯಕವನ್ನೆಸಗಬೇಕಾಗುತ್ತದೆ.

ಒಂದೆಡೆ ಶ್ರೀ ಷಣ್ಮುಖಸ್ವಾಮಿಗಳು ಸಹ ಆಶೆ ಆಮಿಷದಿಂದ ದೂರಾಗಲು, ತನುಮನದಲ್ಲಿ ಮುಸುಕಿದ ಮಾಯೆಯು ವಾಸನೆಯನ್ನು ಕಳೆದುಕೊಳ್ಳಲು ತಮ್ಮ ಗುರುವಾದ ಶ್ರೀ ಅಖಂಡೇಶ್ವರ ಸ್ವಾಮಿಗಳನ್ನು ಭಕ್ತಿಯ ಲೇಸಿಗಾಗಿ ಪರಿ ಪರಿಯಾಗಿ ಈ ರೀತಿ ಬೇಡಿಕೊಂಡಿದ್ದಾರೆ:

"ಮತಿಗೆಟ್ಟೆನಯ್ಯ ಮನದಾಶೆಯ ಕಚ್ಚಿ; ಧೃತಿಗೆಟ್ಟೆನಯ್ಯ ತನುವಿನಾಸೆಯ ಕಚ್ಚಿ. ಈ ತನು ಮನದಾಶೆಯ ಕೆಡಿಸಿ ನಿಮ್ಮ ಭಕ್ತಿಯ ಲೇಸು ತೋರಿಸಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ."

ಅಂತೆಯೆ "ನಿರಾಶಾ ಹಿ ಪರಮಂ ಸುಖಂ" ಎಂದುದಾಗಿ ನೀತಿ ಶಾಸ್ತ್ರಜ್ಞರು ತಿಳಿಸಿದ್ದಾರೆ.

## ಸ್ವಭಾವವೋ ದುರತಿಕ್ರಮಃ

ಸ್ವಭಾವಗಳಲ್ಲಿ ಹಲವು ಸ್ವಭಾವಗಳುಂಟು. ಒಬ್ಬೊಬ್ಬರಲ್ಲಿ ಒಂದೊಂದು ತೆರನಾಗಿರುವದು. ಅವರವರ ಸ್ವಭಾವವು ಅವರವರಿಗೆ ಸೀಮಿತವಾಗಿ, ಕಾರ್ಯಮಾಡುತ್ತಲಿರುತ್ತದೆ. ವ್ಯಕ್ತಿತ್ವ ವಿಕಾಸ ಮಾಡಿಕೊಳ್ಳಲು ಅವರವರ ಸ್ವಭಾವವೇ ಮೂಲ ಕಾರಣವಾಗಿರುತ್ತದೆ. ಸ್ವಭಾವ ಶಕ್ತಿಗಳು ವಿಚಿತ್ರವಾಗಿರುತ್ತವೆ. ಸ್ವಭಾವವನ್ನನುಸರಿಸಿಯೇ ವಿಚಾರಗಳು ಕೂಡಿಕೊಂಡಿರುತ್ತವೆ. ಒಬ್ಬರಲ್ಲಿ ಸಂಕುಚಿತ ಸ್ವಭಾವವು ಅಡಗಿದ್ದರೆ, ಮತ್ತೊಬ್ಬರಲ್ಲಿ ವಿಶಾಲತೆ ತುಂಬಿರುತ್ತದೆ. ಒಬ್ಬರಿಗೆ ದೋಷವನ್ನು ಹುಡುಕುವದೇ ಸ್ವಭಾವವಾಗಿದ್ದರೆ, ಮತ್ತೊಬ್ಬರಿಗೆ ಗುಣಗ್ರಹಣ ಮಾಡಿಕೊಂಡು, ಒಳ್ಳೆ ಆಚಾರ ವಿಚಾರದಲ್ಲಿ ಸಾಗಬೇಕೆಂಬುವೇ ಸ್ವಭಾವವಾಗಿರುತ್ತದೆ. ದೋಷದೃಷ್ಟಿ ದ್ವೇಷದೃಷ್ಟಿ ಸಂಕುಚಿತತೆಗೆಡೆಮಾಡಿಕೊಂಡಲ್ಲಿ, ಅನರ್ಥಕ್ಕೆ ದಾರಿ ಮಾಡಿಕೊಡುತ್ತದೆ. ದ್ವೇಷದೃಷ್ಟಿಯಿದ್ದಲ್ಲಿ ಅಸೂಯೆ ಹುಟ್ಟಿ ವ್ಯಕ್ತಿಯನ್ನಷ್ಟೇ ಅಲ್ಲದೇ, ಸಮಾಜವನ್ನು ಹಾಳು ಮಾಡುತ್ತದೆ. ದೃಷ್ಟಿಯಂತೆ ಸೃಷ್ಟಿ. ತಮ್ಮ ಕಾರ್ಯ ಸಾಧ್ಯವಾಗದಿದ್ದಲ್ಲಿ ಕೆಟ್ಟ ಸ್ವಭಾವವನ್ನೇ

ವಿಚಾರಿಸಿಕೊಂಡು ವ್ಯಕ್ತಿಯ ಅಪಪ್ರಚಾರ ಮಾಡುತ್ತ ತಮ್ಮ ಶಕ್ತಿಯನ್ನು ಅದಕ್ಕೆ ಉಪಯೋಗಿಸಿಕೊಂಡು, ಸಮಯ ಹಾಳು ಮಾಡುವರಲ್ಲದೆ, ಸಮಾಜಕ್ಕಾಗಿ, ಹಿತಚಿಂತನೆಗಾಗಿ, ಆತ್ಮಶುದ್ಧಿಗಾಗಿ ಅನುಷ್ಠಾನಮಾಡಲಾರರು. ಅಂತಹ ಸ್ವಭಾವವುಳ್ಳವರಿಂದ ಸಮಾಜಕ್ಕೆ ತುಂಬಿ ಬಾರದ ಹಾನಿಯಾಗುತ್ತದೆ. ನೀರುಳ್ಳಿ ಎಲ್ಲಿದ್ದರೂ ಅದು ತನ್ನ ಸ್ವಭಾವ ಬಿಡದು. ಅದೇ ತೆರನಾಗಿಯೇ ದುಸ್ವಭಾವವುಳ್ಳವರಿಗೆ ಏನು ಬುದ್ಧಿ ಹೇಳಿದರೂ ಸಿದ್ಧಿಸದು. ಮತ್ತೊಬ್ಬರಿಗೆ ಕೆಡಕನ್ನುಂಟು ಮಾಡುವದೇ ಅವರ ಸ್ವಭಾವವಾಗಿರುತ್ತದೆ. ಅವರಲ್ಲಿ ಪವಿತ್ರ ಹೃದಯವಿರುವದಿಲ್ಲ. ಬೇರೊಬ್ಬರನ್ನು ಹಿಂದಕ್ಕೆ ಜಗ್ಗುವದೇ ಅವರ ಗುರಿಯಾಗುತ್ತದೆ. ಹಚ್ಚಿದ ಒಂದು ದೀಪದಿಂದ ಸಾವಿರಾರು ದೀಪಗಳನ್ನು ಹಚ್ಚಬಹುದು. ಆದರೆ ಒಳ್ಳೆಯ ಕರ್ಮಗಳನ್ನು ಆರಿಸಿಕೊಂಡವರಿಗೆ ಮಾತ್ರ ಅದು ಸಾಧ್ಯವಾಗುತ್ತದೆ. ಭಾಗ್ಯದ ಬಾಗಿಲು ತೆರೆಯುತ್ತದೆ. ಕೆಟ್ಟ ಕರ್ಮಗಳನ್ನನುಸರಿಸುವವರಿಗೆ ನಿರಂತರ ಕಷ್ಟಜೀವನದಲ್ಲಿರುವ ಪ್ರಸಂಗ ಬರಬಹುದು. ಅವರ ಜೀವನವೂ ಸತತವೂ ಅಶಾಂತಮಯವಾದದ್ದಾಗಿರುತ್ತದೆ. ಅವರು ಮತ್ತೊಬ್ಬರ ವೃದ್ಧಿಯನ್ನು ಸಹಿಸರು. ಅಸೂಯೆಯ ಬೆಂಕಿಯಲ್ಲಿಯೇ ಬೀಳುವದೇ ಅವರ ಸ್ವಭಾವವಾಗಿರುತ್ತದೆ. ಇದಕ್ಕೆಲ್ಲ ಅಂತರಂಗ ಅಶುದ್ಧಿಯೇ ಮೂಲ ಬೇರು. ದೃಷ್ಟಿ ಶುದ್ಧಿಯಿಂದ ಗಾಂಧೀಜಿಯವರು ಮಹಾತ್ಮರಾದರು. ದೃಷ್ಟಿಶುದ್ಧಿಯ ಬಲದಿಂದಲೇ ಅಂದಿನ ಶಿವಶರಣರು ಇಂದಿಗೂ ನಮ್ಮ ಚಿತ್ತಪಟಲದಲ್ಲಿ ಚಿತ್ರಿತರಾಗಿದ್ದಾರೆ, ಇಂದ್ರಿಯಗಳನ್ನು ಎಚ್ಚರಿಸುವದರಲ್ಲಿ ಸ್ವಭಾವಗಳೇ ಪ್ರಧಾನ ಕಾರಣ. ನೋಡುವದು, ಕೇಳುವದು, ಓದುವದು. ಇವೆಲ್ಲ ಸ್ವಭಾವಗಳಾಗಿದ್ದರೂ, ಇವುಗಳೇ ಸತ್ಕಾರ್ಯದಲ್ಲಿ ಪರಿಣಿತಗೊಂಡರೆ ಇವುಗಳ ಲಾಭ ಆಗ ಗೊತ್ತಾಗುತ್ತದೆ. ಇವುಗಳಿಂದಲೇ ಸುಪ್ತ ಶಕ್ತಿಗಳು ಜಾಗ್ರತವಾಗುತ್ತವೆ. ಒಳ್ಳೇ ಸ್ವಭಾವವನ್ನು ಅಂಟಿಸಿಕೊಳ್ಳುವದರಿಂದ ಹಾನಿಯಾಗದೆ ಜೀವನಕ್ಕೆ ಸಂಜೀವಿನಿಯಾಗುತ್ತದೆ. ಕೇಡು ಬಯಸಿದವರಿಗೂ ಒಳ್ಳೇ ಸ್ವಭಾವದವರು ಒಳ್ಳೆಯದನ್ನಾಗಿ ಮಾಡುವದೇ ಅವರ ಸ್ವಭಾವವಾಗಿರುತ್ತದೆ. ಅದೇ ಅವರ ಪರಮ ಗುರಿಯಾಗಿರುತ್ತದೆ. ಕಾರಣ ಒಳ್ಳೆ ಸ್ವಭಾವದವರಾಗಿರಬೇಕು.

**ಭಾರಃ ವಿಶ್ವಾಸಘಾತಕಃ**

ಕಿಂಚಿತ್ಪರ್ವತ ಭಾರಶ್ಚ ನ ಭಾರಾ ಸಪ್ತಸಾಗರಾಃ|
ಸ್ವಾಮಿದ್ರೋಹೀ ಸದಾಭಾರ ಭಾರಃ ವಿಶ್ವಾಸಘಾತಕಃ||

ವಿಶ್ವಾಸವು ಮಾನವನನ್ನು ಮೇಲಕ್ಕೆತ್ತುತ್ತದೆ. ಸಾಹಸಮಯ ಕಾರ್ಯಗಳು ವಿಶ್ವಾಸದಿಂದ ಸಿದ್ಧಿಸುತ್ತವೆ. ವಿಶ್ವಾಸವಿಲ್ಲದೆ ಬದುಕು ಬಂಗಾರವಾಗಲಾರದು ನಿಷ್ಕಲ್ಮಷ ಹೃದಯದಿಂದ ದೇವರನ್ನು ನಂಬಿ ಕರೆದರೆ ಮಾತ್ರ ಮೆಚ್ಚುತ್ತಾನೆ. ಆದರೆ ವಿಶ್ವಾಸದಲ್ಲಿ ಒಳಗೊಂದು ಹೊರಗೊಂದು ಇದ್ದರೆ ಆತ್ಮಘಾತಕತನ ಮಾಡಿದಂತಾಗುವದು. ಆ ವಿಶ್ವಾಸಕ್ಕೆ ಬಲವಿಲ್ಲ ಬೆಲೆಯಿಲ್ಲ. ಅಂತರಂಗ ಬಹಿರಂಗ ಶುದ್ಧಿಯಿದ್ದರೆ ಮಾತ್ರ ಅದು

ವಿಶ್ವಾಸ, ಇಲ್ಲದಿದ್ದರೆ ಜೀವನಕ್ಕೆ ದೊಡ್ಡ ಭಾರ. ಎಲ್ಲ ಭಾರವನ್ನು ತಡೆಯಬಹುದು, ಒಡೆಯರಿಗೆ ದ್ರೋಹ ಬಗೆದು, ವಿಶ್ವಾಸಘಾತವನ್ನು ಮಾಡಿ, ಮಾಡಲಾರದವರಂತೆ ನಟಿಸುವವರನ್ನು ಎಂದಿಗೂ ನಂಬಬಾರದು. ಅಂತಹ ವ್ಯಕ್ತಿಗಳು ಸಮಾಜ ದ್ರೋಹಿಗಳು. ಪ್ರತಿಯೊಬ್ಬ ವ್ಯಕ್ತಿಗೆ ವಿಶ್ವಾಸ ಬೇಕೇ ಬೇಕು. ಅಷ್ಟೇ ಅಲ್ಲ ಪ್ರಾಣಿ ಮಾತ್ರಕ್ಕೂ ಬೇಕು. ಪ್ರಾಣಿಗಳಲ್ಲಿ ಇದ್ದಷ್ಟು ನಂಬಿಗೆ, ಮನುಷ್ಯರಲ್ಲಿ ಒಮ್ಮೊಮ್ಮೆ ಇಲ್ಲದಿರುವದು ಕಂಡು ಬರುತ್ತದೆ. ವಿಶ್ವಾಸವಿಲ್ಲದ ಬಾಳು ಅಂಬಿಗನಿಲ್ಲದ ದೋಣಿಯಂತೆ. ಒಂದೆಡೆ ಕನ್‌ಫ್ಯೂಷಿಯಸ್ ಈ ರೀತಿ ಹೇಳಿದ್ದಾರೆ.

"ಒಂದು ರಾಜ್ಯಕ್ಕೆ ಆಹಾರ, ಸೈನ್ಯ ಹಾಗೂ ವಿಶ್ವಾಸ ಈ ಮೂರು ಬೇಕು. ಒಂದು ಪಕ್ಷ ಆಹಾರ, ಸೈನ್ಯಗಳಿಲ್ಲದಿದ್ದರೂ ದೇಶ ನಡೆದೀತು. ಜನರ ವಿಶ್ವಾಸವಿಲ್ಲದೆ ಖಂಡಿತ ನಡೆಯಲಾರದು."

ವಿಶ್ವಾಸದ ಫಲವು ರುಚಿಯಾದರೆ, ಅವಿಶ್ವಾಸವು ದುಃಖಸಾಗರದಲ್ಲಿ ಮುಳುಗಿಸುತ್ತದೆ. ಶಾಶ್ವತ ಸುಖಕ್ಕೆ ಅಡ್ಡಗೋಡೆಯಾಗಿರುತ್ತದೆ. ಅಲ್ಲಿ ಕೃತ್ರಿಮತೆ ಹೆಚ್ಚಾಗುತ್ತದೆ. ಸ್ವಾರ್ಥ ಬೆಳೆದಂತೆ ಅವಿಶ್ವಾಸದ ಬೇರು ಸಹ ಬೆಳೆಯುತ್ತ ಹೋಗುತ್ತದೆ. ಅವಿಶ್ವಾಸವು ಹುಟ್ಟಲು ಆಶೆಯೇ ಮೂಲ ಕಾರಣವಾಗುತ್ತದೆ. ನಮ್ಮವರೆಂಬ ಭಾವನೆ ದೂರ ಸರಿಯುತ್ತದೆ. ದಯೆಯೆಂಬುದು ತೋರಿಕೆಯದಾಗುತ್ತದೆ. ದುರಾಶೆಯಿಂದ ದುರ್ಬಲನಾಗಿ ಆಶೆ ಆಮಿಷಗಳಿಂದ ತುಂಬಿದವನಾಗಿ, ಗುರು ಹಿರಿಯರಲ್ಲಿ ಶ್ರದ್ಧೆ ವಿಶ್ವಾಸ ಕಡಿಮೆ ಮಾಡಿ ಮೂಢಮತಿಯಂತೆ ವರ್ತಿಸುತ್ತ ಧೂರ್ತನಾಗುತ್ತಾನೆ. ಅಂತಹ ವ್ಯಕ್ತಿಗೆ ಬುದ್ಧಿ, ಮನಸ್ಸು ತನ್ನ ಹಿಡಿತದಲ್ಲಿ ಸಿಕ್ಕುವದು ಕಡುಕಠಿಣವಾಗುತ್ತದೆ. ಅವರಿಗೆ ಯಾರ ಉಪದೇಶವೂ ನಡೆಯದು. ವಿಶ್ವಾಸವು ಹೇಳಿದರೆ ಬರುವದಿಲ್ಲ. ಅದು ಕೃತಿಯಲ್ಲಿ ಕಾಣುವಂತಹದು. ಒಳಗೆ ಕುಟಿಲ, ಹೊರಗೆ ವಿನಯುವಾಗಿದ್ದರೆ ಯಾವ ಮನುಷ್ಯನೂ ಮೆಚ್ಚಲಾರ. ದೇವರಿಗೂ ಅದು ಸಲ್ಲದು. ವ್ಯಕ್ತಿಯಲ್ಲಿ ಶಕ್ತಿ ಬರುವದು ವಿಶ್ವಾಸದಿಂದ, ಭಾವಶುದ್ಧಿಯಿಂದ, ''ವಿಶ್ವಾಸ ಹುಟ್ಟಿಸದ ಆಶ್ವಾಸನೆ ಮರುಭೂಮಿಯುಲ್ಲಿ ತರುವಿಟ್ಟಂತಾಯಿತ್ತಯ್ಯಾ! ಹೃದಯವಂತಿಕೆಯಿಲ್ಲದ ಬುದ್ಧಿ ಬಚ್ಚಲ ನೀರಿನಂತೆ ವ್ಯರ್ಥವಾಯಿತ್ತಯ್ಯಾ! ಭ್ರೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ ನಿನ್ನ ಶಕ್ತಿಯರಿದಾಚರಿಸದ ಜೀವನ ಗುಡ್ಡಕ್ಕೆ ಕಲ್ಲು ಹೊತ್ತಂತಾಯಿತ್ತಯ್ಯ'' ಅದಕ್ಕಾಗಿ ಶಾಶ್ವತ ಜೀವನ ನಡೆಸಲು ವಿಶ್ವಾಸವೇ ಅಡಿಗಲ್ಲು.

## ಪ್ರವಾಸೋ ಜ್ಞಾನಸಾಧನಂ

ಇಂದು ನಮಗೆ ಪ್ರವಾಸ ಬೇಕು. ಪ್ರವಾಸದಿಂದ ಪ್ರಯಾಸ ಕೆಲಮಟ್ಟಿಗೆ ಆದರೂ ಜಿಜ್ಞಾಸೆಗೆ ಧಾರ್ಮಿಕ ಹಾಗೂ ಸಾಮಾಜಿಕ ಸುಧಾರಣೆಗೆ ಇದೊಂದು ಮೈಲುಗಲ್ಲು. ಯಾಂತ್ರಿಕ ಜಗತ್ತು ಬರುವ ಪೂರ್ವದಲ್ಲಿ ಬುದ್ಧ ಶಂಕರಾಚಾರ್ಯ ಮೊದಲಾದವರು

ಪ್ರವಾಸದಲ್ಲಿ ತತ್ತ್ವಸಿದ್ಧಿಯನ್ನು ಸಾಧಿಸಿದರು. ಲೋಕಸಂದೇಶವನ್ನು ನೀಡಿದರು. ಸಂಪರ್ಕ ಪ್ರಧಾನವಾದ ಇಂದಿನ ನವಮನ್ವಂತರದಲ್ಲಂತೂ ಪ್ರವಾಸ ಜೀವನದ ಅವಶ್ಯಕ ಹಾಗೂ ಅನಿವಾರ್ಯ ಅಂಗವೇ ಆಗಿದೆ. ಪ್ರವಾಸದಿಂದ ಅನೇಕ ವಿಭಿನ್ನ ದೇಶಗಳ ವಿಭಿನ್ನ ಪರಂಪರೆಗಳ ಸಂಸ್ಕೃತಿ ಸಂಗಮಕ್ಕೆ ನಾಂದಿಯಾಗುತ್ತದೆ. ಅನುಭವ ಹೆಚ್ಚಾಗಿ ಜೀವನದ ಕಷ್ಟ ಸುಖಗಳ ಪರಿಜ್ಞಾನ ಉಂಟಾಗಿ, ಸಹನಶಕ್ತಿ ದೊರೆತು ಸ್ವಾವಲಂಬನೆ ಶಕ್ತಿ ವರ್ಧಿಸುತ್ತದೆ. ಅಂತೆಯೇ ಪ್ರಪಂಚದ ಪರಿಜ್ಞಾನವೇ ಜ್ಞಾನವಿಕಾಸದ ಅಡಿಗಲ್ಲು. ಪ್ರವಾಸ ದಿಂದ ದೊರೆತ ಜ್ಞಾನಾರ್ಜನೆಯೇ ಬಾಳಿನ ಪರಿಪೂರ್ಣ ವಿಕಾಸಕ್ಕೆ ಪೂರಕವಾಗುತ್ತದೆ. ವಿಲಿಯಂ ಹ್ಯಾಸ್ಲಿಟ್ ಅವರು ಪ್ರವಾಸವನ್ನು ಕುರಿತು (ಪ್ರಪಂಚದ ಹಿತಕರವಾದ ವಿಷಯ ಗಳಲ್ಲಿ ಪ್ರಯಾಣ ಮಾಡುವದು ಒಂದಾಗಿದೆ) ಎಂದು ವರ್ಣಿಸಿದ್ದಾರೆ ಅಲ್ಲದೆ ಯೋಚಿಸುವ ಸ್ವಾತಂತ್ರ್ಯ ಅನುಭವಿಸುವ ಸ್ವಾತಂತ್ರ್ಯ ಇಷ್ಟಬಂದಂತೆ ವ್ಯವಹರಿಸುವ ಸ್ವಾತಂತ್ರ್ಯ ಇಂತಹ ಪೂರ್ಣ ಸ್ವಾತಂತ್ರ್ಯವೇ ಪ್ರಯಾಣದ ಆತ್ಮ ಎಂದಿದ್ದಾರೆ.

ಶರಣ ಸಂಸ್ಕೃತಿಯಲ್ಲಂತೂ "ಜಂಗಮ" ಪದಕ್ಕೆ ಪ್ರವಾಸ ಮಾಡುತ್ತ ಧರ್ಮ ಸಂದೇಶವನ್ನು ಸಾರುವ ನಿರುಜನಯೋಗಿ ಎಂಬ ಅರ್ಥ ಉಂಟು. ಇದನ್ನೇ ಸ್ಥಿರ ಜಂಗಮ ಚರಜಂಗಮ ಎಂದೂ ವೀರಶೈವ ಪಾರಿಭಾಷಿಕ ವಿವೇಚನೆಯಲ್ಲಿ ಪದಪ್ರಯೋಗ ಉಂಟು. ಅಲ್ಲಮ ಪ್ರಭುದೇವರಂತೂ ನಿಂದರೆ ನೆರಳಿಲ್ಲದ, ನಡೆದರೆ ಹೆಜ್ಜೆ ಇಲ್ಲದ ಸಂಚಾರಿ ಜಂಗಮ ಯೋಗಿಯಾಗಿದ್ದ, ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಅವರ ಪ್ರವಾಸದ ಹರವು ಚೆಲ್ಲವರಿದಿತ್ತು. ಕನ್ನಡ ಸಾಹಿತ್ಯದ ಅನುಭವ ಶ್ರೀಮಂತಿಕೆಯನ್ನು ಮುಗಿಲೆತ್ತರಕ್ಕೆ ಮುಟ್ಟಿಸಿದ ಸರ್ವಜ್ಞನಂತೂ ಎಲ್ಲ ದೇಶಗಳನ್ನು ಸುತ್ತಾಡಿ ಎಲ್ಲರೊಳ ಗೊಂದು ನುಡಿಗಲಿತು ವಿದ್ಯೆಯ ಪರ್ವತವೇ ಆದ ಆತನ ವಚನಗಳು ಸಾಹಿತ್ಯ ಹಾಗೂ ಅನುಭಾವ ಸಿದ್ಧಿಯನ್ನೇ ಹೊತ್ತಿರುವ ಉಜ್ವಲ ಪ್ರವಾಸ ಸಾಹಿತ್ಯವೇ ಆಗಿದೆ. ಆಂಗ್ಲ ಭಾಷೆಯಲ್ಲಿ ಪ್ರವಾಸ ಸಾಹಿತ್ಯ ವೈವಿಧ್ಯ ಪೂರ್ಣವಾಗಿ ಸಮೃದ್ಧವಾಗಿ ಮೂಡಿ ಬಂದಿದೆ. ಹೊಸಗನ್ನಡಕ್ಕೆ ಈ ಬಗೆಯ ಸಾಹಿತ್ಯದ ಕೊರತೆ ಬಹಳಷ್ಟಿದೆ.

ಇಂದು ನಮಗೆಲ್ಲರಿಗೂ ಪ್ರವಾಸದ ಅವಶ್ಯಕತೆಯುಂಟು ಆದರೆ ಅದು ಕೇವಲ ವೈಯಕ್ತಿಕವೂ ವ್ಯಾವಹಾರಿಕವೂ ದುಡ್ಡು ಗಳಿಕೆಯ ವ್ಯಾಮೋಹದಿಂದ ಕೂಡಿದ್ದು ಇರ ಕೂಡದು. ಜೀವನ ಪರಿಜ್ಞಾನ, ಕಲಾಕ್ಷೇತ್ರಗಳ ದರ್ಶನ, ಇತಿಹಾಸದ ನೆಲೆ ಕಲೆಗಳ ಸಂದರ್ಶನವಿಲ್ಲದ ಪ್ರವಾಸವು ಪ್ರಯಾಸ ಮಾತ್ರ. ಪ್ರವಾಸದ ಅಗಣಿತ ಸಿದ್ಧಿಯನ್ನು ಪರಿಗಣಿಸಿದ ನಮ್ಮ ಹಿರಿಯರು ಕೋಶ ಓದುವದಕ್ಕಿಂತ ದೇಶ ನೋಡುವದು ಮೇಲು ಎಂದು ಹೇಳಿದ್ದಾರೆ!

**ಅತ್ಯಧಿಕಂ ಖಲು ಮಾನವಜನ್ಮ**

"ಮಾನವ ಜನ್ಮ ದೊಡ್ಡದು, ಇದಕ್ಕೆ ಹಾನಿ ಮಾಡಬೇಡಿ ಹುಚ್ಚಪ್ಪಗಳಿರಾ" ಈ ನುಡಿ ಪುರಂದರದಾಸರದು. ಸರಳ ಭಾಷೆಯ ತಿಳಿಗನ್ನಡದಲ್ಲಿ ಅನುಭವಾಮೃತವನ್ನು ಸುರಿ

ಸಿದ್ದಾರೆ. ವಿಶ್ವದ ಎಲ್ಲ ಪ್ರಾಣಿಗಳಿಗಿಂತಲೂ ಬುದ್ಧಿಯಲ್ಲಿ ಮಾನವನೇ ಹೆಚ್ಚಿನವನು. ತನ್ನ ಬುದ್ಧಿ ಬಲದಿಂದ ಕ್ರೂರ ಪ್ರಾಣಿಗಳನ್ನೂ, ಹಾಗೂ ಶಕ್ತಿಯುತ ಪ್ರಾಣಿಗಳನ್ನೂ ಸಹ ತನ್ನ ವಶದಲ್ಲಿಟ್ಟುಕೊಳ್ಳುವ ಕಲೆ, ಜ್ಞಾನವು ಮನುಷ್ಯನಿಗಷ್ಟೇ ಸೀಮಿತವಾಗಿರುವದು. ಮನುಷ್ಯನಿಗೆ ಬುದ್ಧಿಯ ಜೊತೆಗೆ ಯೋಚನೆ ಯೋಜನೆ, ಮಾಡುವ ಶಕ್ತಿಯು ತುಂಬಿಕೊಂಡಿರುತ್ತದೆ. ಆತನ ಬುದ್ಧಿಯ ಬಲದಿಂದಲೇ ಇಂದು ವೈಜ್ಞಾನಿಕ ಕ್ರಾಂತಿಯು ಆಗುತ್ತಲಿದೆ. ದೊಡ್ಡ ದೊಡ್ಡ ನದಿಗಳಿಗೆ ಆಣೆಕಟ್ಟು ಕಟ್ಟುವದು. ನೀರಿನಲ್ಲಿ, ಆಕಾಶದಲ್ಲಿ ಸಂಚರಿಸುವಂತೆ ವ್ಯವಸ್ಥೆ ಮಾಡುವದು ಇವೆಲ್ಲವೂ, ಮನುಷ್ಯನ ಕುಶಾಗ್ರಬುದ್ಧಿಯಿಂದ ನಡೆದಿವೆ. ನಡೆಯುತ್ತಲಿವೆ. ಪ್ರತಿಯೊಂದರಲ್ಲಿಯೂ ಹೊಂದಿಕೊಳ್ಳುವ ಚಾಣಾಕ್ಷತನ ಮಾನವನಿಗೆ. ವಿದ್ಯೆ ತಪಸ್ಸು, ದಾನ, ಜ್ಞಾನ, ಶೀಲ, ಗುಣ, ಧರ್ಮ ಇವೆಲ್ಲವುಗಳೂ ಮನುಷ್ಯನಲ್ಲಿರುವದರಿಂದ ಅವನಿಗೆ ಹಿರಿದಾದ ಬೆಲೆ ಬಂದಿದೆ. ಮನುಷ್ಯನ ಕಾರ್ಯ ಕಲಾಪಗಳಿಂದ, ಅವನ ವ್ಯಕ್ತಿತ್ವ ಕಂಡು ಬರುತ್ತದೆ. ಅಂತೆಯೇ ಖಲೀಲ್ ಜಿಬ್ರಾನ್ "Secrets of the Heart" ಎಂಬ ತನ್ನ ಗ್ರಂಥದಲ್ಲಿ "ವಿಶ್ವವೆನ್ನುವ ಗ್ರಂಥದಲ್ಲಿ ಮಾನವನೊಂದು ಜೀವಂತ ಪುಟ" ಎಂದು ಸಾರಿದ್ದಾನೆ. ಇಂತಹ ಮಾನವಜನ್ಮವನ್ನು ಹಾಳು ಮಾಡದಿರುವದರಲ್ಲಿಯೇ ಸಾರ್ಥಕತೆಯಿದೆ. ದೇವರು ನಮಗೆ ಕಿವಿ, ಕಣ್ಣು, ಮೂಗು, ತಲೆ ಮುಂತಾದವುಗಳನ್ನು ನೀಡಿದ್ದಾನೆ. ಅವುಗಳ ಸದುಪಯೋಗ ಮಾಡಿಕೊಳ್ಳದಿದ್ದರೆ ಮಾನವ ಜನ್ಮವೇ ವ್ಯರ್ಥವಾದಂತಾಗುವದು. ಪ್ರಸಾದ ಕಾಯವನ್ನು ಕಡೆಗಣಿಸದೆ. ಈ ಶರೀರವು ಧರ್ಮಸಾಧನೆಗೆ ಹುಟ್ಟಿರುವದೆಂದರಿದು, ಆಲಸ್ಯ ರಹಿತವಾಗಿ ಕಾರ್ಯ ಪ್ರವೃತ್ತರಾದರೆ, ಮೃಡನಡಿಯ ಪಡೆಯಲು ಸಾಧನವಾಗುವದಲ್ಲದೆ, ಸಾಮಾಜಿಕ ಸೇವೆಗೈಯಲು ಸುಗಮವಾಗುವದು. ಅದೆಲ್ಲವನ್ನು ಬಿಟ್ಟು ಕ್ರೂರ, ಕುಹಕ, ಭಾಷೆಯಲ್ಲಿ ಮನವಿರಿಸಿ, ನೀತಿಗೆ ವಿರುದ್ಧವಾಗಿ ಧಾರ್ಮಿಕ ತತ್ವವನ್ನು ತಳ್ಳಿ ಮನಬಂದಂತೆ ನಡೆದರೆ, ಬಹುಪುಣ್ಯ ವಿಶೇಷದಿಂದ ದೊರೆತ ಮಾನವ ಜನ್ಮವನ್ನು ನಾವೇ ನಿರರ್ಥಕ ಮಾಡಿಕೊಂಡಂತೆ, ಸಿಕ್ಕ ಫಲವನ್ನು ಕೆರೆಗೆಸೆದಂತೆ ನಿಷ್ಫಲವಾಗುವದು. ಮನುಷ್ಯನಾಗಿ ಪಶುವೃತ್ತಿಯಲ್ಲಿ ಅಡಿಯಿರಿಸಿದರೆ ಇದ್ದು ಇಲ್ಲದವನಾಗಿ ದಾನವರಂತೆ ಬಾಳಬೇಕಾಗುತ್ತದೆ. ''ಮನುಷ್ಯ ಒಂದು ಸೇತುವೆಯೇ ಹೊರತು ಒಂದುಗುರಿಯಲ್ಲ.''ಅದೇ ಅವನ ಹಿರಿಮೆ. ಮಾನವ ಶಕ್ತಿಯನ್ನು ಮಾನವೀಯತೆಗಾಗಿ ಉಪಯೋಗಿಸಿದರೆ ಸಮಾಜದ ಕಲ್ಯಾಣ. ಅದಕ್ಕಾಗಿ ಮನುಷ್ಯನಾದವನು ತನ್ನ ಸಮರ್ಥತೆಯ ಆಳವನ್ನು ಕಂಡು, ಹೃದಯವಂತಿಕೆಯಿಂದ ನಡೆದುಕೊಂಡರೆ ಮಾತ್ರ ಮಾನವಜನ್ಮವತ್ಯಧಿಕ. ಇಲ್ಲದಿರೆ ದಾರಿಯಲ್ಲಿ ತಿರುಗುವ ಹುಚ್ಚರಂತೆ ನಿರರ್ಥಕ.

## ಬುದ್ಧಿರ್ಯಸ್ಯ ಬಲಂತಸ್ಯ

ಆತ್ಮಶುದ್ಧಿಗೆ ಬುದ್ಧಿಯು ತಾಯಿಬೇರಿದ್ದಂತೆ. ಬುದ್ಧಿಯ ಬಲದಿಂದ ಮನುಷ್ಯನು ವಿವೇಕಿಯಾಗುತ್ತಾನೆ. ವ್ಯಕ್ತಿತ್ವ ಬೆಳೆಸಿಕೊಳ್ಳಲು ಸಾಧನವನ್ನಾಗಿ ಮಾಡಿಕೊಳ್ಳುತ್ತಾನೆ. ಬುದ್ಧಿ ಇದ್ದವನು ಮನುಷ್ಯನಾಗುತ್ತಾನೆ. ಬುದ್ಧಿಯನ್ನು ಕಳೆದುಕೊಂಡವನು ದಾನವ

ನಾಗುತ್ತಾನೆ. ಬುದ್ಧಿಯಿದ್ದಲ್ಲಿ ಕಾರ್ಯಸಿದ್ಧಿ, ಭಾವಶುದ್ಧಿ. ಬುದ್ಧಿಯಿದ್ದಲ್ಲಿ ಒಲವು, ಬುದ್ಧಿಯಿದ್ದಲ್ಲಿ ವಿಶ್ವಪ್ರೇಮ; ಸಂತೋಷ, ಆತ್ಮವಿಶ್ವಾಸ ಇವೆಲ್ಲವುಗಳು ಅವನಲ್ಲಿ ಮನೆ ಮಾಡಿರುತ್ತವೆ. ಬುದ್ಧಿಯ ಬಲದಿಂದ ಜ್ಞಾನಪ್ರಕಾಶವನ್ನು ಹೆಚ್ಚು ಹೆಚ್ಚಾಗಿ ವಿತರಣ ಮಾಡಿಕೊಂಡು, ಸತ್ಯ ಬೋಧೆಯನ್ನು ಅರಿತುಕೊಂಡು ಅರವಿನರಮನೆಯು ಸೇರಲು ಸಾಧನ ವಾಗುತ್ತದೆ. ಬಿತ್ತಿದ ಬೀಜವು ಮಹಾವೃಕ್ಷವಾಗಲು ಸುಬುದ್ಧಿಯ ಉದಕವನ್ನೆರೆಯ ಬೇಕಾಗುತ್ತದೆ, ಸಲುಹಬೇಕಾಗುತ್ತದೆ. ಆಗ ಫಲಪ್ರಾಪ್ತಿ, ಕೈಯನ್ನು ಳಿಸಬೇಕಾದರೆ ದೇಹ ವೆಲ್ಲವನ್ನೂ ಪ್ರೇಮಿಸಬೇಕಾಗುತ್ತದೆ. ''ನನ್ನ ಶ್ರಮದ ದುಡಿಮೆಯಿಂದ ಇಡೀ ದೇಹಕ್ಕೆ ಏಕೆ ಲಾಭವಾಗಬೇಕು?'' ಎಂದು ಕೈಯು ಆಲೋಚಿಸಿದರೆ, ತನ್ನನ್ನು ತಾನೇ ಪ್ರತ್ಯೇಕ ಮಾಡಿಕೊಂಡರೆ ಅದು ಸಾಯಲೇ ಬೇಕು. ಅಂತೆಯೇ ಬುದ್ಧಿ ಇಲ್ಲದೆ ಎಲ್ಲವನ್ನೂ ಸಾಧಿ ಸುತ್ತೇನೆಂದು ಛಲವಿದ್ದರೆ ಅದು ನಿರರ್ಥಕ. ಹೃದಯವಿಲ್ಲದ ಬುದ್ಧಿ ಜಲವಿಲ್ಲದ ತಟಾಕದಂತೆ ಬೆಳಕಿರದ ಮನೆಯಂತೆ, ರಸವಿರದ ಹಣ್ಣಿನಂತೆ, ವ್ಯರ್ಥ.

ಬುದ್ಧಿಯಲ್ಲಿಯೂ ಸುಬುದ್ಧಿ ಮತ್ತು ದುರ್ಬುದ್ಧಿ ಎರಡು ತೆರ. ಸುಬುದ್ಧಿಯು ಮಾನವನನ್ನು ಮೇಲಕ್ಕೆತ್ತುತ್ತದೆ. ದುರ್ಬುದ್ಧಿಯು ಕೆಳಗಿಳಿಸುತ್ತದೆ! ಸುಬುದ್ಧಿಯುಳ್ಳವನು ಪರೋಪಕಾರಿಯಾಗಿ, ಪ್ರಾಮಾಣಿಕ ಜೀವನವನ್ನು ಸಾಗಿಸಿದರೆ ದುರ್ಬುದ್ಧಿಯುಳ್ಳವನು, ಕ್ರೂರ, ಕುಹಕ ಕುಭಾಷೆಯಲ್ಲಿ ಮನವಿರಿಸಿ, ಕೃತಘ್ನನಾಗಿ ವಂಚಕತನದಲ್ಲಿಯೇ ಕಾಲ ಕಳೆಯುತ್ತಾನೆ. ಸುಬುದ್ಧಿಯುಳ್ಳವನು ಬುದ್ಧಿಯನ್ನು ಕಳೆದುಕೊಳ್ಳದೆ ಯೋಚಿಸುತ್ತಾನೆ, ವಿವೇಚಿಸುತ್ತಾನೆ. ದುರ್ಬುದ್ಧಿಯುಳ್ಳವನು ದುರ್ವಿಚಾರದಲ್ಲಿ ದುರ್ಮಾರ್ಗದಲ್ಲಿ ಸಾಗಿ, ತಾನೂ ಹಾಳಾಗುತ್ತಾನೆ; ಮತ್ತೊಬ್ಬರನ್ನೂ ಹಾಳು ಮಾಡುತ್ತಾನೆ. ಒಮ್ಮೊಮ್ಮೆ ದುರ್ಬುದ್ಧಿಯಿಂದ ಜಯಗಳಿಸಿಕೊಂಡಂತೆ ಕಂಡರೂ ಅದು ಶಾಶ್ವತವಾಗಲಾರದು. ಇಂದು ಪ್ರಪಂಚಕ್ಕೆ ಬೇಕಾದುದು ಹೃದಯವಂತಿಕೆಯ ಸುಬುದ್ಧಿ. ಬುದ್ಧಿಯಿಲ್ಲದ ಬಲ, ಬಲವಿಲ್ಲದ ಬುದ್ಧಿ ಇವೆರಡೂ ನೀರಿನ ಮೇಲಿನ ಗುರುಳೆಗಳಿದ್ದಂತೆ! ಯಾವದೇ ಸುಧಾರಣೆಯಾಗಲು ಹೃದಯವಂತಿಕೆಯು ಬುದ್ಧಿಯೊಳಗಿಂದ ಬರಬೇಕೇ ಹೊರತು, ಹೊರಗಿನಿಂದ ಅಲ್ಲ. ಬುದ್ಧಿಯ ವಾದ ಸರಳವಾದುದು. ವಾದವು ಅಂತರಂಗದಿಂದ ಹೊರ ಹೊಮ್ಮಿ ಕಳಕಳಿ ಯಿಂದ ಕೂಡಿ ಸಮಾಜ ಸುಧಾರಣೆಗೆ ಅನುಕೂಲವಾದರೆ ಅದು ಸಾರ್ಥಕ. ಒಂದೆಡೆ ಸ್ವಾಮಿ ವಿವೇಕಾನಂದರು ''ಶರೀರ ಬುದ್ಧಿಯ ಕೈಯಲ್ಲಿನ ಸಲಕರಣೆ ಆಗಿರುವಂತೆ ಬುದ್ಧಿ ಆತ್ಮನ ಕೈಯ ಸಲಕರಣೆ'' ಎಂದು ತಮ್ಮ ಗ್ರಂಥದಲ್ಲಿ ವಿವರಿಸಿದ್ದಾರೆ. ಒಟ್ಟಿನಲ್ಲಿ ಆತ್ಮ ಪ್ರಗತಿಗೆ ಬುದ್ಧಿಯೂ ಬೇಕು. ಬಲವು ಬೇಕು, ಹೃದಯವಂತಿಯೂ ಬೇಕು. ಒಂದ ಕ್ಕೊಂದರಸಂಬಂಧ, ಅರಿವೆಗೆ ಎಳೆಗಳ ಸಂಬಂಧವಿದ್ದಂತೆ ಅತ್ಯಾವಶ್ಯಕ.

''ಬುದ್ಧಿ ಬೆಳೆದಂತೆ ಹೃದಯವರಳಬೇಕು ನೋಡಾ! ಆತ್ಮ ಶುದ್ಧಿಯಿಲ್ಲದ ಬುದ್ಧಿ ವ್ಯರ್ಥ ಕಂಡಯ್ಯಾ! ಭಾಂಡವನು ಒಳಗೆ ತೊಳೆಯದೆ ಮೇಲೆ ತಿಕ್ಕಿದರೇನು ಹೇಳಾ? ಕಡಿವಾಣವಿಲ್ಲದ ಕುದುರೆಯಂತೆ ಹೃದಯವಿಲ್ಲದ ಬುದ್ಧಿಯದೇವುದಯ್ಯಾ? ಸಾಕು ಸಾಕು!

ಇಂತಪ್ಪ ಬುದ್ಧಿವಂತಿಕೆಗೆ ಹೃದಯವಂತಿಕೆಯ ಜೋಡಾಗಿಸಯ್ಯಾ, ಭ್ರೂಲತಾಪುರೀಶ ಕರ್ತೃಜಗದ್ಗುರು ಗುರುಸಿದ್ಧೇಶ್ವರಾ.

**ಲಿಂಗಾರ್ಚನಾತ್ ಸುಖಪ್ರಾಪ್ತಿಃ**

ಮನದ ಮೈಲಿಗೆಯ ಕಳೆಯಲು ಶರಣರ ನುಡಿ ಗಡಣವೇ ಮೂಲವಯ್ಯ !
ತನುವಿನ ಮೋಹವನಳಿಸಲು ಅನುಭಾವಿಗಳ ಸಹವಾಸವೇ ಮೂಲವಯ್ಯ!
ಲಿಂಗಾಂಗ ಸಮರಸವನರಿಯಲು ಇಷ್ಟಲಿಂಗಾರ್ಚನೆ ಮೂಲವಯ್ಯ !
ಭ್ರೂಲತಾಪುರೀಶಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ !

"ಇಷ್ಟಲಿಂಗಮಿದಂ ಸಾಕ್ಷಾದನಿಷ್ಟ ಪರಿಹಾರಕಂ" ಲಿಂಗಾರ್ಚನೆಯು ಭವಬಂಧನವನ್ನು ಕಳೆಯುತ್ತದೆ. ಇಷ್ಟಾರ್ಥವನ್ನು ನೀಡುತ್ತದೆ. ಅನಿಷ್ಟಗಳನ್ನು ನಿವಾರಿಸುತ್ತದೆ. ಲಿಂಗ ಪೂಜೆಯ ಬಲದಿಂದ ತಾನಾರೆಂಬುದನ್ನು ಸಾಧಿಸುವ ಶಕ್ತಿ ಬರುತ್ತದೆ. ಆತ್ಮ ಶಕ್ತಿಗೆ ಮೂಲ ಸಾಧನವೆ ಲಿಂಗ ಪೂಜೆ. ಶಿವಲಿಂಗ ಪೂಜೆಯಿಂದ ''ತಪ್ಪುವವು ಅಪಮೃತ್ಯು ಕಾಲ ಕರ್ಮಂಗಳು'' ಅಂತಃ ಕ್ಲೇಶಗಳು ಅಂತ್ಯಗೊಳ್ಳುತ್ತವೆ. ಅಂತರಂಗದ ಜ್ಞಾನಶಕ್ತಿಯು ವೃದ್ಧಿಯಾಗುತ್ತದೆ. ದೃಷ್ಟಿ ಸಿದ್ಧಿಸುತ್ತದೆ. ದೈವದೃಷ್ಟಿ, ದೈವಭಾವ, ದೈವಕ್ರಿಯೆಗಳು ಬೆಳೆಯುತ್ತವೆ; ಬೆಳಗುತ್ತವೆ. ''ಲಿಂಗಧಾರಣ ಮಾತ್ರೇಣ ಶಿವತ್ವ ಪ್ರಾಪ್ತಿರೇವಹಿ'' ಎಂದು ಪಾರಮೇಶ್ವರಾಗಮದಲ್ಲಿ ಹೇಳಿದೆ. ಅಂದರೆ ಕೇವಲ ಲಿಂಗಧಾರಣೆಯಿಂದ ಶಿವತ್ವ ಪ್ರಾಪ್ತಿಯೆಂದ ಮೇಲೆ,ಲಿಂಗಾರ್ಚನೆಯಿಂದ ಮತ್ತಿಷ್ಟು ಹೆಚ್ಚಿನ ಸುಖ ದೊರೆಯುತ್ತದೆ. ಈ ಲಿಂಗವು ಸ್ಥೂಲ–ಸೂಕ್ಷ್ಮ–ಕಾರಣ–ಶರೀರಕ್ಕೆ ಮೂರು ಬಗೆಯಿರುತ್ತದೆ. ಇಷ್ಟಲಿಂಗವೆ ಸ್ಥೂಲಕ್ಕೆ; ಇದು ಬಾಹ್ಯಾಂಗದಲ್ಲಿರುತ್ತದೆ. ಪ್ರಾಣಲಿಂಗವೆ ಸೂಕ್ಷ್ಮಕ್ಕೆ; ಇದು ಭಾವನಾಮಯವಾಗಿರುತ್ತದೆ. ಭಾವಲಿಂಗವೆ ಕಾರಣಕ್ಕೆ; ಇದು ಪರಾತ್ಪರ ತೃಪ್ತಿದಾಯಕವಾಗಿದೆ. ಇಷ್ಟಲಿಂಗವು ನಾಮ ರೂಪು ಕ್ರಿಯಾತ್ಮಕವಾದುದಾದರೆ, ಪ್ರಾಣಲಿಂಗವು ನಾಮರೂಪೋಭಯ ಮಾತ್ರವಾದುದಾಗಿದೆ. ಭಾವಲಿಂಗವು ನಾಮ ಮಾತ್ರ ನಿರ್ದೇಶಿತವಾಗಿದೆ. ಈ ಮೂರೂ ಲಿಂಗಗಳು ಕ್ರಮವಾಗಿ ಸಕಲ, ಸಕಲನಿಷ್ಕಲ, ನಿಷ್ಕಲರೂಪವಾಗಿದ್ದು, ಸತ್‌ಚಿತ್ ಆನಂದರೂಪವಾಗಿವೆ. ಈ ಲಿಂಗಗಳು ಕುರುಹು, ಅರುಹು, ಸುಳುವು, ಹಾಗು ನಾದಬಿಂದು ಕಲಾತ್ಮಕಗಳಾಗಿವೆ. ಇವೇ ಆಚಾರಲಿಂಗಾದಿ ಷಡ್‌ಲಿಂಗವಾಗಿ ನವಲಿಂಗಗಳಾಗಿವೆ. ಈ ತೆರನಾಗಿ ಶಿವಶಕ್ತಿ ಸಂಪುಟದಿಂದ ಸನ್ನಿಹಿತವಾಗಿವೆ.

ಈ ಲಿಂಗಾರ್ಚನೆಯಿಂದ ಸ್ವಸ್ವರೂಪಾನುಸಂಧಾನವಾಗಿ, ತ್ರಿಕರಣಗಳ ವಿಕಾರ ದೂರಾಗುತ್ತದೆ. ಸತ್ಯ ಸಂಕಲ್ಪಗಳು ಸಿದ್ಧಿಸುತ್ತವೆ. ಶ್ರದ್ಧೆಯನ್ನು ಶುದ್ಧೀಕರಿಸುವ ಸತ್ ಕ್ರಿಯೆಯೆ ಲಿಂಗಾರ್ಚನೆ. ಅಂತೆಯೆ ನಿಜಗುಣ ಶಿವಯೋಗಿಗಳು—

"ಪರಂತರ ಶಿವಲಿಂಗವೆಳಸಿ ನಿನಗಾಗಿ ಕರಕಂಜದೊಳು ಕಾಣಿಸಿತು ಯೋಗಿ ಯಜಿಸು" ಎಂದು ಹೇಳಿದರೆ, ಮತ್ತೊಂದೆಡೆ ಮಹಾತ್ಮಾ ಬಸವಣ್ಣನವರು ತಮ್ಮ ವಚನದಲ್ಲಿ "ಅಂಗೈ

ಯೊಳಗಣ ಲಿಂಗವ ನೋಡುತ್ತ ಕಂಗಳು ಕಡೆಗೋಡಿವರಿವುತ್ತ, ಸುರಿವುತ್ತ ಎಂದಿಪ್ಪೆನೋ? ನೋಟವೆ ಪ್ರಾಣವಾಗಿ, ಎಂದಿಪ್ಪೆನೋ? ಕೂಟವೇ ಪ್ರಾಣವಾಗಿ ಎಂದಿಪ್ಪೆನೋ? ಎನ್ನಂಗ ವಿಕಾರದ ಸಂಗವಳಿದು ಕೂಡಲ ಸಂಗಯ್ಯ ಲಿಂಗಯ್ಯ, ಲಿಂಗ ಲಿಂಗ ಲಿಂಗವೆನ್ನುತ?" ಎಂದು ಮುತಾಗಿ ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಮಾನವನಿಗೆ ಸುಖಪ್ರಾಪ್ತಿಯಾಗಬೇಕಾದರೆ, ಕಟ್ಟುನಿಟ್ಟುಗಳು ಅತ್ಯವಶ್ಯ ಬೇಕು. ಇಲ್ಲವಾದರೆ ಸ್ವೈರವೃತ್ತಿಗಳು ಹೆಚ್ಚಾಗಿ, ವಿನಾಶಕ್ಕೆ ಗುರಿಯಾಗಬೇಕಾಗುತ್ತದೆ. ಇವೆಲ್ಲವು ಗಳನ್ನು ತಪ್ಪಿಸಲು ಲಿಂಗಾರ್ಚನೆಯೆ ಪರಮ ಸಾಧನ. ಪದಾರ್ಥಕಾಯ, ಹೋಗಿ, ಪ್ರಸಾದಕಾಯವನ್ನಾಗಿ ಮಾಡುವದೇ ಲಿಂಗಾರ್ಚನೆಯ ಫಲ. ಭವಾಂಬುಧಿಯಲ್ಲಿ ಮುಳುಗಿ ದವರಿಗೆ ಲಿಂಗಾರ್ಚನೆಯೆಂಬುದು ಸುಂದರವಾದ ನೌಕೆಯಿದ್ದಂತೆ. ಲಿಂಗಾರ್ಚನೆಯೆ ಕರಕಂಜದ ಕುಂಜ: ವರಪುಣ್ಯದ ಪುಂಜ.

**ಪ್ರಸಾದಾತ್ ಪ್ರಾಣ-ಸಂಸಿದ್ಧಿಃ**

ಶುದ್ಧ ಸಿದ್ಧ ಪ್ರಸಾದಂಗಳ ಪರಿಯ ಕೇಳಿರೊ!
ಶುದ್ಧ ಪ್ರಸಾದಿಯಾದೊಡೆ ಇಷ್ಟಲಿಂಗಕ್ಕೆ ರೂಪವನರ್ಪಿಸಬೇಕು.
ಸಿದ್ಧ ಪ್ರಸಾದಿಯಾದೊಡೆ ಪ್ರಾಣಲಿಂಗಕ್ಕೆ ರುಚಿಯನರ್ಪಿಸಬೇಕು.
ಪ್ರಸಿದ್ಧ ಪ್ರಸಾದಿಯಾದೊಡೆ ಭಾವಲಿಂಗಕ್ಕೆ ತೃಪ್ತಿಯನರ್ಪಿಸಬೇಕು,
ಇಂತೀ ತ್ರಿವಿಧಪ್ರಸಾದವನು ತ್ರಿವಿಧ ಲಿಂಗಕ್ಕೆ ಅರ್ಪಿಸಿದ ಶಿವಶರಣರು
ನಿತ್ಯ ಮುಕ್ತರಾದರು ನೋಡಾ ಭ್ರೂಲತಾಪುರೀಶ ಕರ್ತೃ ಜಗದ್ಗುರು
ಗುರುಸಿದ್ಧೇಶ್ವರಾ!

ಪ್ರಸಾದ ಮಹಿಮೆ ಅಗಾಧವಾದುದು. ಅನ್ನವನ್ನು ಪ್ರಸಾದ ಭಾವನೆಯಲ್ಲಿ ಸೇವಿಸಿ ಶಿವಚಿಂತನೆಯಲ್ಲಿ ಕಾಲ ಕಳೆದರೆ ಅದು ಸಿದ್ಧಿಯಾಗುವದು. ಅನ್ನವನ್ನು ತಿರಸ್ಕರಿಸಿದರೆ ನಮಗೆ ಸುಖ ಸಿಗುವದು ಕಡು ಕಠಿಣವಾಗುವದು. ಅನ್ನವನ್ನು ಸೇವಿಸುವಾಗ ಭಕ್ತಿ ಯಿಂದ, ಶ್ರದ್ಧೆಯಿಂದ, ಲಿಂಗಕ್ಕೆ ತೋರಿಸಿ ಅವಸರ ಮಾಡದಂತೆ, ಸುತ್ತಲೂ ಚಲ್ಲದಂತೆ ಸೇವಿಸಿದರೆ, ಮನಸ್ಸಿಗೂ ಸಮಾಧಾನ; ಆತ್ಮಕ್ಕೂ ತೃಪ್ತಿ. ಅದಕ್ಕಾಗಿ ಹೃದಯ ಬಟ್ಟಲ ವನ್ನು ತೊಳೆಯಬೇಕಾಗುತ್ತದೆ. ಸುಬುದ್ಧಿಯುದಕವನ್ನು ಎರೆಯಬೇಕಾಗುತ್ತದೆ. ಪದಾರ್ಥ ದಲ್ಲಿ ಪ್ರಸಾದ ಭಾವನೆ ತರಬೇಕಾಗುತ್ತದೆ. ಅಂತಾದಾಗ ಸಿದ್ಧಿ. ಪ್ರಸಾದಿ ಶರಣರಿಗೆ ಅಂತರಂಗ ಬಹಿರಂಗವೆಂಬ ಉಭಯಾಂಗವಿರಲಾರದು. ಆತನು ಆತ್ಮಶುದ್ಧಿಗೆ ಪ್ರಾಧಾನ್ಯತೆ ನೀಡಿ ಸೇವಿಸುತ್ತಾ ಪ್ರಸಾದವನ್ನು ಸಶಾಸ್ತ್ರೀಯವಾಗಿ ಸೇವಿಸಿದರೆ ಆರೋಗ್ಯ ವರ್ಧನೆಗೆ ಹಿತಕಾರಿ. ವ್ಯಕ್ತಿತ್ವ ವಿಕಾಸಕ್ಕೆ ಪ್ರಸಾದವೇ ಭದ್ರಬುನಾದಿ. ಸಂಕಲ್ಪವಿಕಲ್ಪ ವಿರಹಿತ ವಾಗುತ್ತದೆ. ಪ್ರಸಾದದಿಂದ ಸಚ್ಚಿದಾನಂದ ಸಮತ್ವ ಸ್ಥಿತಿಯು ಪ್ರಾಪ್ತಿಯಾಗುತ್ತದೆ. ವಿಕಾರತ್ರಯಂಗಳು ನಿವೃತ್ತಿಯಾಗುತ್ತವೆ. ಮಾಯಾಮರ್ದನಕ್ಕೆ ಪ್ರಸಾದವೇ ಮೂಲ.

ಕಾಯಕವೃದ್ಧಿಗೂ ಪ್ರಸಾದವೇ ಮೂಲ. ತನುತ್ರಯ ತಾಪತ್ರಯುಗಳ ಕಳೆದು ತನ್ನ ತಾನರಿದ್ದು ಕೊಳ್ಳಲು ಪ್ರಸಾದವೇ ಮಹಾಸಾಧನ. ಪ್ರಸಾದಿಗೆ ಅರಿವು ಮರೆವುಗಳಿರಲಾರವು. ಅಖಂಡಿತ ಜ್ಞಾನಿಯಾದ ಪ್ರಸಾದಿಗೆ ಇದು ಕಾಯ, ಇವು ಇಂದ್ರಿಯ, ಇವು ಕರಣ, ಈ ಆತ್ಮ ನಾನು ಎಂಬ ಖಂಡಿತ ಜ್ಞಾನವಿರದು. "ಪರಮ ಪ್ರಸಾದಿಯ ಕಾಯ ಅದು ಕಾಯವಲ್ಲ ಅದು ಪರಕಾಯ".

ತ್ರಿಮಲವ ತಿಕ್ಕಿ ತಿಕ್ಕಿ ಒರಸುತ್ತ ಪ್ರಸಾದವ ಸೇವಿಸುತ್ತ ಹೋದಂತೆ ಆತ್ಮಶುದ್ಧಿಯಾಗಿ ಬೆಳಗು ಕಂಡು, ಅಚ್ಚ ಪ್ರಸಾದಿಯಾಗಲು ಬರುತ್ತದೆ; ಪ್ರಾಣಲಿಂಗಿ ಸ್ಥಲದಲ್ಲಿ ಸುಳಿಯಲು ಬರುತ್ತದೆ.

## ಸಂಘೇ ಶಕ್ತಿಃ ಕಲೌ ಯುಗೇ

ಇಂದು ಸಂಘ ಶಕ್ತಿಯು ಎಲ್ಲ ಕ್ಷೇತ್ರದಲ್ಲಿಯೂ ಅತ್ಯವಶ್ಯಕ. ಸಂಘದಿಂದ ವ್ಯಕ್ತಿ ವ್ಯಕ್ತಿಗಳ ಸಾಮಾಜಿಕ ಸಂಘಟನೆ ಸಮಾಜ ಸುಧಾರಣೆ, ಧಾರ್ಮಿಕ ಜಾಗ್ರತಿ ಶೈಕ್ಷಣಿಕ ಪ್ರಗತಿ ಸಾಧ್ಯ. ಅಂತೆಯೇ ಪೂರ್ವ ಕಾಲದಲ್ಲಿ ಶಿವಶರಣರು, ಯೋಗಿಗಳು, ಸಮಾಜ ಸುಧಾರಕರು ಸಂಘ ಸಂಸ್ಥೆ ಕಟ್ಟಿದರು; ಅನುಭವಮಂಟಪ ರಚಿಸಿದರು. ಇವುಗಳಿಂದ ಅವರು ತ್ಯಾಗ ಯೋಗಗಳನ್ನು ಬೀರಿದರು. ಒಳ್ಳೇ ತತ್ವಗಳನ್ನು ಸಾರಿದರು; ಸದ್ಗುಣ ಬೀಜಗಳನ್ನು ಬಿತ್ತಿದರು, ಶೀಲಸಂಸ್ಕೃತಿಯನ್ನು ಉಳಿಸಿದರು, ಭಕ್ತರಲ್ಲಿ ಭಕ್ತಿಯನ್ನು ಬೆಳೆಸಿದರು.

ವ್ಯಕ್ತಿಯು ಸಮಾಜ ಜೀವಿ. ಸಮಾಜವನ್ನು ಅವಲಂಬಿಸಿಯೇ ಅವನ ಹೃದಯವು ವಿಕಾಸಗೊಳ್ಳಬೇಕಾಗುತ್ತದೆ. ಆ ವಿಕಾಸವು ಪರಿಪೂರ್ಣವಾಗಬೇಕಾದರೆ, ಸಂಘ ಸಂಸ್ಥೆಯು ಬೇಕಾಗುತ್ತದೆ. ಅದುವೆ ಜನಸಾಮಾನ್ಯರ ಸಂಘಟನೆ ಮಂತ್ರ.

ಸಂಘ ಸಂಸ್ಥೆಗಳಲ್ಲಿದ್ದಷ್ಟು ಉದಾತ್ತತೆಯ ಧ್ಯೇಯಧೋರಣೆ. ವಿಶಾಲತೆಯ ಮನೋಭಾವನೆ, ಸಮಾಜ ಸೇವೆಯ ಪ್ರವೃತ್ತಿ, ಭಾವೈಕ್ಯತೆ, ವೈಯಕ್ತಿಕತೆಯಲ್ಲಿ ಬರಲಾರದು; ಅಲ್ಲಿ ಸ್ವಲ್ಪ ಸಂಕುಚಿತತೆಗೆ ಅಹಂಕಾರಕ್ಕೆ ಕಾರಣವಾದರೆ, ಸಾಂಘಿಕ ಸಹಕಾರ ಜೀವನವು ವಿವೇಕೋದಯಕ್ಕೆ ಕಾರಣವಾಗುತ್ತದೆ; ಮನುಷ್ಯನನ್ನಾಗಿ ಮಾಡುತ್ತದೆ; ತನ್ಮೂಲಕ ಯೋಗಿಯನ್ನಾಗಿ ಮಾಡುತ್ತದೆ; ತ್ಯಾಗಿಯನ್ನಾಗಿ ಮಾಡುತ್ತದೆ. ಹೆಚ್ಚಾಗಿ ಸಮಾಜ ಸೇವಕನನ್ನಾಗಿ ರೂಪಿಸುತ್ತದೆ; ಕಾಯಕವನ್ನೇ ಕಲಿಸುತ್ತದೆ.

ಹೀಗಾದಾಗ ಮೇಲು ಕೀಳುಗಳಿಗೆ ಅವಕಾಶವಿರಲಾರದು. ದುಡಿದಂತೆ ಶಕ್ತಿ, ಸ್ಫೂರ್ತಿ ದೊರೆತು ಅದುವ ಸಮಾಜಕ್ಕೆ ದಾರಿದೀಪವಾಗುತ್ತದೆ; ಅಲ್ಲಿ ಸಾಮಾಜಿಕ ಪ್ರಜ್ಞೆ ಮೂಡುತ್ತದೆ; ವ್ಯಕ್ತಿತ್ವ ವಿಕಾಸವಾಗುತ್ತದೆ; ಮಲತ್ರಯಂಗಳು ನಾಶವಾಗುತ್ತವೆ. ಇದರಿಂದಾಗಿ ಸಾಮಾಜಿಕ ಸಂಬಂಧವು ಬಂಧುರವಾಗಿ, ಪರಸ್ಪರ ಸೌಹಾರ್ದ ಸಹನೆ ಗೌರವಗಳು ಅಭಿವೃದ್ಧಿಯಾಗುತ್ತವೆ; ಆತ್ಮನ ಬೆಳಗು ಉಂಟಾಗಿ ಕಾವ್ಯದ ಹೊನಲು ಹರಿಯುತ್ತದೆ.

ಅಂತೆಯೇ ಮರವೆಯ ಕತ್ತಲೆ ದೂರಾಗುತ್ತದೆ; ವಿಶಾಲ ಹೃದಯ ಜೇಂಗೊಡ ಗಳಲ್ಲಿ ಸವಿಜೇನು ಸುರಿಯುತ್ತದೆ. ಶುಚಿಯಂತೆ ರುಚಿ ಎಂಬುದರಿಂದ ಒಳ್ಳೆ ವಿಚಾರ ವೀಚಿಗಳು ಹಂತಹಂತವಾಗಿ ಬೆಳೆಯುತ್ತವೆ.

ಫಲಸ್ವರೂಪವಾಗಿ ಸಾಧಕನ ಸಾಧನೆಯಲ್ಲಿ ಅಂತಃಶಕ್ತಿ ಪ್ರವಹಿಸುತ್ತದೆ; ನವ ಚೈತನ್ಯವುಂಟಾಗಿ ಸಮಾಜವನ್ನು ಎಚ್ಚರಿಸುವ ಶಕ್ತಿ ಪ್ರಬಲಗೊಳ್ಳುತ್ತದೆ.

ಆದುದರಿಂದ, ವಿಶಾಲಭಾವನೆಯ ಸೂರ್ಯೋದಯದಿಂದ ಚೈತನ್ಯದ ಬೆಳಕು ಬರುವಂತೆ ಸಂಘ–ಸಂಸ್ಥೆಗಳ ವ್ಯಕ್ತಿ–ವ್ಯಕ್ತಿಗಳ ಸಹಕಾರ ಜೀವನದಿಂದ ನಾಡಿಗೂ ಹಾಗೂ ರಾಷ್ಟ್ರಕ್ಕೂ ಕಲ್ಯಾಣವಾಗುವಂತಾಗಲೆಂಬುದನ್ನು ಸಂಘೇ ಶಕ್ತಿಃ ಕಲೌ ಯುಗೇ ಎಂಬ ಸೂಕ್ತಿಯು ನೆನಪಿಸುತ್ತಿದೆ.

**ಭಕ್ತಿಭಾಂಡಾರಿರೂಪೇಣ ಸಂಪೂಜ್ಯೋ ಬಸವೇಶ್ವರಃ**

ವಿಶ್ವವಿಭೂತಿ ಬಸವಣ್ಣನು ಕನ್ನಡ ನಾಡಿಗೆ ಅಷ್ಟೇ ಅಲ್ಲ, ಮಾನವ ಕುಲಕ್ಕೆ ಅಣ್ಣ. ಈತನ ವ್ಯಕ್ತಿತ್ವ ಅನುಪಮವಾದುದು; ವೈಶಿಷ್ಟ್ಯಪೂರ್ಣವಾದುದು. ಈತನು ೧೨ನೆಯ ಶತಮಾನದಲ್ಲಿ ಮಹಾಕ್ರಾಂತಿಯನ್ನು ಮಾಡಿದ ಮಹಾತ್ಮ. ಸಕಲರಿಗೆ ಲೇಸನೆ ಬಯಸಿದ ಮಹಾಮಾನವತಾವಾದಿ; ಕಾಯದ ಕತ್ತಲೆಯನ್ನು ಕಳೆದು, ಮಾಯದ ಮದವನ್ನು ಮುರಿದು, ಮಹಾಶಕ್ತಿ ಸಂಪನ್ನನಾಗಿ ಜನಜಾಗ್ರತಿ ಮಾಡಿದ ಮಹಾಶರಣ. ಕನ್ನಡಭಾಷೆ ಸಾಹಿತ್ಯ ಧಾರ್ಮಿಕ ಜೀವನಗಳಿಗೆ ಚೇತನಶಕ್ತಿಯನ್ನು ರೂಪಿಸಿಕೊಟ್ಟು ಈತನು ಮಹಾ ಕ್ರಾಂತಿಯನ್ನೆಸಗಿ, ಮಲಗಿದ ಮಾನವ ಜನಾಂಗವನ್ನು ಎಚ್ಚರಿಸಿ, ದಿವ್ಯಜ್ಯೋತಿಯೆನಿಸಿ ಕೊಂಡನು. ಇಂಥ ಮಹಾತ್ಮಾ ಬಸವಣ್ಣನ ಮಹೋಪಕಾರವು ಸಮಾಜಕ್ಕೆ ಹೇಳತೀರ ದಷ್ಟು ಆಗಿದೆ. ಈತನು ಸರಳಗನ್ನಡದಲ್ಲಿ ಆಧ್ಯಾತ್ಮಿಕ ದಿವ್ಯಜೀವನ ಅನುಭವವನ್ನು ವಚನವಾಙ್ಮಯದಲ್ಲಿ ಭಟ್ಟಿ ಇಳಿಸಿದನು. ವೇದಾಗಮ ಉಪನಿಷತ್ತುಗಳನ್ನು ತಿಳಿದು ಆಚರಿಸಿ ಮತ್ತು ಷಟ್‌ಸ್ಥಲ ಸಿದ್ಧಾಂತ ಅನುಭವಸಾರವನ್ನು ಸುಲಲಿತವಾದ ಕನ್ನಡ ನುಡಿ ಯಲ್ಲಿ ಪ್ರವಾಹರೂಪವಾಗಿ ಹರಿಸಿದ ಕೀರ್ತಿ ಬಸವಣ್ಣನದು.

ಇಂದಿನ ೨೦ನೆಯ ಶತಮಾನದಲ್ಲಿ ರಾಷ್ಟ್ರಪಿತ ಗಾಂಧೀಜಿ ಮಾಡಿದ ಕ್ರಾಂತಿಯನ್ನು ೧೨ನೆಯ ಶತಮಾನದಲ್ಲಿಯೇ ಮಹಾತ್ಮಾ ಬಸವಣ್ಣನು ಮಾಡಿ ಕೀರ್ತಿಕಲಶಪ್ರಾಯ ನಾಗಿದ್ದಾನೆ.

"ಪರಮಾತ್ಮನನ್ನು ಲಿಂಗಸ್ವರೂಪಿಯಾಗಿ ಕಂಡು, ಸುಯೋಗ್ಯ ಅನುಸಂಧಾನದಿಂದ ಲಿಂಗಾಂಗ ಸಾಮರಸ್ಯವನ್ನು ಪಡೆಯಬೇಕು, ಇದಕ್ಕೆ ಭಕ್ತಿಯ ಬೆಳಕು ಕರ್ಮದ ಸುಳಿವು, ಜ್ಞಾನದ ಜ್ಯೋತಿಗಳು ಬೇಕು" ಎಂದು ಮುಂತಾಗಿರುವ ಈ ಸಮನ್ವಯದ ಸಿದ್ಧಾಂತದ ಮಹಾಪುರುಷನಾಗಿ ದೇವದೇವ ಕೂಡಲಸಂಗನ ಕಾರಣಿಕ ಶಿಶುವಾದ ಬಸವಣ್ಣನು "ದೇವ ನೊಬ್ಬ ನಾಮ ಹಲವು" ಎಂದು ನುಡಿದು ಸಕಲ ಧರ್ಮಗಳ ಸಾರವೇ ವೀರಶೈವ ಧರ್ಮ

ದಲ್ಲಿ ಅಡಕವಾಗಿದೆ, ಅಷ್ಟೇ ಏಕೆ, ಆ ಎಲ್ಲ ಧರ್ಮಗಳ ತತ್ವಕ್ಕಿಂತಲೂ ಮಿಗಿಲಾದ ವಿಶಿಷ್ಟ ತತ್ತ್ವಗಳು ವೀರಶೈವ ಧರ್ಮದಲ್ಲಿವೆ" ಎಂಬುದನ್ನು ತನ್ನ ಅನುಭವ ಅಳತೆಗೋಲಿನಿಂದ, ಸಮಾಜ ಜೀವನದ ಅನುಸಂಧಾನದ ಮೂಲಕ ತೋರಿಸಿಕೊಟ್ಟಿದ್ದಾನೆ. ಅಂತೆಯೇ ಅವನ ಮತ್ತು ಶಿವಾನುಭವದ ತಳಹದಿಯು ಮಾತಾಗಿ ಜನಜೀವನಕ್ಕೆ ಜ್ಯೋತಿರ್ಲಿಂಗವಾಗಿ ತೋರುತ್ತಿದೆ. ನಿರ್ಜೀವವಾಗಬಲ್ಲುದಾದ ಸಮಾಜಕ್ಕೆ ಸಂಜೀವಿನೀ ಶಕ್ತಿಯನ್ನು ನೀಡಿ, ಬೆಳೆಸಿ ಅನುಭವಮಂಟಪವನ್ನು ಸ್ಥಾಪಿಸಿ ತನ್ಮೂಲಕ ಪ್ರಚಾರವನ್ನು ಮಾಡಿ ಪಾರಮಾರ್ಥಿಕ ಭಿಕ್ಷೆಯನ್ನು ಬೇಡಿದವರಿಗೆ ಅದು ಆ ಅನುಭವಮಂಟಪದಲ್ಲಿ ದೊರೆಯುವಂತೆ, ವ್ಯವಸ್ಥಿತ ಗೊಳಿಸಿದ್ದನು. ಕಾಯಕವೇ ಕೈಲಾಸವೆಂದು ಸಾರಿ, ಉದ್ಯೋಗ ಶೀಲತೆಯ ಹಿರಿಮೆ ಯನ್ನು ಎತ್ತಿದನು. "ಅರಿದೊಡೆ ಶರಣ ಮರೆದೊಡೆ ಮಾನವ" ಎಂದು ಶರಣ ಜೀವನದ ರಹಸ್ಯವನ್ನು ಸ್ಫೋಟಗೊಳಿಸಿ, ಮಾನವರನ್ನು ಕಾಯಕನಿಷ್ಠರನ್ನಾಗಿ ಮಾಡಿದನು. ಸ್ತ್ರೀ ಜನಾಂಗವನ್ನು ಧಾರ್ಮಿಕ ಸಂಸ್ಕಾರದಿಂದ ಉದ್ಧರಿಸಿ ಮೇಲಕ್ಕೆತ್ತಿದನು. ಅಜ್ಞಾನದ ಮರುಭೂಮಿಯಲ್ಲಿ ತಿರುತಿರುಗಿ ಬಳಲಿ ಬಂದವರಿಗೆ ದಾರಿದೀಪವಾಗಿ ಮಹಾತ್ಮನಾಗಿ ಸಕಲ ಜೀವಾತ್ಮರಿಗೆ ಲೇಸನೇ ಬಯಸಿರುವ ಕಲ್ಯಾಣ ಬಸವಣ್ಣನು ಭಕ್ತಿ ಭಾಂಡಾರಿಯೇ ಆಗಿ ಜಗತ್ತಿಗೆ ಸಂಪೂಜ್ಯನಾಗಿದ್ದಾನೆ.

**ಸದ್ಯಃ ಸಮಾಜಸೇವಾಯಾಃ ಪದ್ಧತಿಃ ಕೀದೃಶೀ ಭವೇತ್?**

ಇಂದು ಸಮಾಜಸೇವೆ ಎಂತು ಮಾಡಬೇಕು? ಹೇಗೆ ಮಾಡಬೇಕು? ಒಡೆಯ ಲಾರದ ಒಗಟಾಗಿದೆ. ಮಾಡಬೇಕೆನ್ನುವವರಿಗೆ ಪ್ರೋತ್ಸಾಹವಿಲ್ಲ. ಮಾಡುವವರನ್ನು ಕಂಡು ಜರಿಯುವವದನ್ನು ಬಿಡುವಂತಿಲ್ಲ. ಸಮಾಜವನ್ನು ಜಾಗ್ರತಮಾಡಿ ಭಾವೈಕ್ಯದ ಹಾದಿಯಲ್ಲಿ ತರಬೇಕೆಂದರೆ, ಕೆಲವರು ಮುಂದೆ ಹೋಗಬೇಕೆನ್ನುವ ಪಥಿಕರ ಎದುರು ಕಲ್ಲು ಮುಳ್ಳುಗಳನ್ನು ಹಾಕಿ ತೊಂದರೆಗೀಡುಮಾಡುತ್ತಾರೆ; ಅಲ್ಲದ ಸಲ್ಲದ ವಿಚಾರಗಳನ್ನು ಪ್ರಚಾರ ಮಾಡಿ ನಿರುತ್ಸಾಹಗೊಳಿಸುತ್ತಾರೆ; ಸಮಾಜ ಸೇವಕರ ಅಂತರಂಗದಿಂಗಿತವನ್ನು ಅರ್ಥ ಮಾಡಿಕೊಳ್ಳದೆ ವ್ಯರ್ಥ ಕಾಲಹರಣ ಮಾಡುತ್ತಲಿದ್ದಾರೆ. ಹೀಗಾದರೆ ಸಮಾಜ ಸುಧಾರಣೆ ಎಂತು? ಎಂದು? ಊಹಿಸಲಸಾಧ್ಯವಾಗಿದೆ. ಸಮಾಜದಲ್ಲಿ ನವಚೈತನ್ಯ ಬಂದು, ಸಂಘಟನೆಯಾಗಿ, ಸಮಾಜದಲ್ಲಿ ಬಂಧುಬಾಂಧವ್ಯ ಬೆಳೆದು ಬೆಳಗಬೇಕೆಂಬುದು ಎಲ್ಲರ ಒಕ್ಕೊರಲಿನ ಅಭಿಪ್ರಾಯ. ಇದು ಒಳ್ಳೆಯದು. ಆದರೆ ಅದು ಕೇವಲ ಮಾತಿ ನಲ್ಲಿದ್ದ, ಕೃತಿಯಲ್ಲಿ ಮಾತ್ರ ಬಾರದಂತಾಗಿದೆ. ಪ್ರತಿಯೊಂದು ವಿಭಾಗದಲ್ಲಿಯೂ ಅಸೂಯೆ ಹೆಚ್ಚಾಗಿದೆ; ನಾ ಹೆಚ್ಚು ನೀ ಹೆಚ್ಚೆನ್ನುವ ಒಣವಾದ ಹೆಚ್ಚಾಗಿದೆ. ಪ್ರತಿಷ್ಠೆ ಬೇಕಾಗಿದೆ, ಕಾರ್ಯಬೇಡಾಗಿದೆ. ಒಬ್ಬರನ್ನು ಹತ್ತಿಕ್ಕುವದಕ್ಕಾಗಿ ಹಾಳು ಮಾಡುವಷ್ಟು ಸಮಯವನ್ನು ಒಳ್ಳೇದಕ್ಕಾಗಿ ಚಿಂತಿಸಿದರೆ, ಅದಷ್ಟೋ ಸಮಾಜಕ್ಕೆ ಹಿತ. ತಪ್ಪು ಆಗುವದು ಮಾನವನ ಸ್ವಭಾವ; ಅದನ್ನು ಬೃಹದಾಕಾರ ಮಾಡಿ ಪ್ರಚುರಗೊಳಿಸುವದು ದಾನವ ಸ್ವಭಾವ.

ತಪ್ಪನ್ನು ತಿದ್ದಿ ಅಪ್ಪಿಕೊಂಡು ಮೇಲಕ್ಕೆತ್ತಿ ಉದ್ಧಾರ ಮಾಡುವದು ದೈವೀಯ ಗುಣ. ನಮಗಿಂದು ಬೇಕಾಗಿರುವದು ಬುದ್ಧಿವಂತಿಕೆಯಲ್ಲ; ಹೃದಯವಂತಿಕೆ. ಒಳ್ಳೆ ಹೃದಯು ಹೊಂದಿದ್ದರೆ ಏನನ್ನಾದರೂ ಸಾಧಿಸಬಹುದು. ಒಳ್ಳೇ ಹೃದಯದಲ್ಲಿ ಸರ್ವಶಕ್ತಿಯು ಸಮ್ಮಿಲಿತವಾಗಿರುತ್ತದೆ. ಅದು ಸಮಾಜ ಸಂವರ್ಧನೆಗೆ ಸಂಜೀವಿನಿಯಾಗುತ್ತದೆ. ವಿಶ್ವ ಶಾಂತಿಗೂ ಇದುವೆ ಬೇಕು. ಈಶ್ವರನಿಗೂ ಸಹ ಇದರಿಂದಲೇ ಮೆಚ್ಚುಗೆ. ಹೃದಯವನ್ನು ಕಳೆದುಕೊಂಡು. ಪಕ್ಷ ಪಂಗಡಗಳಿಗೆ ಹೆಚ್ಚು ಮಹತ್ವ ನೀಡಿ ವೈರತ್ವವನ್ನು ಸಾಧಿಸುತ್ತ ಸಮಾಜಾಭಿಮಾನ ಶೂನ್ಯರಾದರೆ, ಸಮಾಜವು ಒಡೆದ ಗಡಿಗೆಯಂತಾಗುತ್ತದೆ. ಬಲವಿಲ್ಲದ ರೋಗಿಯಂತಾಗುತ್ತದೆ. ತಂತಿಯಿಲ್ಲದ ವೀಣೆಯಂತಾಗುತ್ತದೆ. ಧೂಳು ಮುಸುಕಿದ ಕನ್ನಡಿ ಯಂತಾಗುತ್ತದೆ. ಎತ್ತ ನೋಡಿದತ್ತ ಅವರಿವರೆನ್ನುವ ಭಿನ್ನಭಾವನೆಯೇ ಹೆಚ್ಚುತ್ತಲಿದೆಯೇ ಹೊರತು ಏಕತೆಗೆ ತೊಡಕುಂಟಾಗಿದೆ. ಅದಕ್ಕಾಗಿ ಸಮಾಜಸೇವೆ ಮಾಡತಕ್ಕವರು ಎದೆ ಗುಂದದೆ, ಧೈರ್ಯೋತ್ಸಾಹದೊಡನೆ ಮುನ್ನುಗ್ಗಬೇಕಾಗಿದೆ. ನಮಗಿಂದು ಹಿಂದಿನ ಶಿವ ಶರಣರು ತೋರಿದ ಹೆದ್ದಾರಿ ಕಣ್ಮುಂದೆ ಇರುವಾಗ ಭಯಪಡುವ ಕಾರಣವಿಲ್ಲ. ಆದರೆ, ನಮ್ಮಲ್ಲಿ ಸ್ವಾರ್ಥತ್ಯಾಗ ವಿಶಾಲಮನೋಭಾವನೆ, ಸಮಾಜದ ಬಗ್ಗೆ ಅಂತಃಕರಣ ಪೂರ್ವಕವಾದ ಕಳಕಳಿ, ಒಳ್ಳೆಯ ಧ್ಯೇಯಧೋರಣೆ ಇವೆಲ್ಲವುಗಳು ಮನೆಮಾಡಿಕೊಂಡಿದ್ದರೆ, ಗುರಿ ಸಾಧಿಸಲು ಸಾಧ್ಯವಾಗುತ್ತದೆ. ಉರಿಬರಲಿ ಸಿರಿಬರಲಿ ಸರ್ವಸ್ವವನ್ನು ಸರ್ವಾಂತರ್ಯಾಮಿಗೆ ಸಮರ್ಪಿಸಿ ಸಮಾಜಸೇವಕರೀಗ ಕಾರ್ಯಮಾಡಬೇಕಾಗಿದೆ, ಬೆಳಕಿನತ್ತ ಸಾಗಬೇಕಾಗಿದೆ.

**ಸಂಯಮೀ ಸತತಂ ಶುಚಿಃ**

ಸಂಯಮ ಜೀವನವು ಮಾನವನ ಮಹೋದ್ದೇಶ ಸಾಧನೆಗೆ ಅತ್ಯವಶ್ಯಕವಾದುದು. ಸಂಯಮ ಜೀವನದಿಂದ ವ್ಯಕ್ತಿಗೆ ಶಕ್ತಿ ಬರುತ್ತದೆ. ಆತ್ಮ ಪ್ರಕಾಶಕ್ಕೆ ಪೂರಕವಾಗುತ್ತದೆ. ಭಾವ ಶುದ್ಧಿಯುಂಟಾಗುತ್ತದೆ. ನವಚೈತನ್ಯ ಮೂಡಿ ಸಾಮಾಜಿಕ ಕಾರ್ಯಕ್ಕೆ ಬಲಬರುತ್ತದೆ. ಕಡುದರ್ಪವೇರಿದ ಒಡಲೆಂಬ ಬಂಡಿಗೆ ಸಂಯಮ ಜೀವನವೆ ಕಡೆಗೀಲು. ಆತ್ಮ ಶಕ್ತಿಯನ್ನು ಸಂಪುಷ್ಟಿಗೊಳಿಸಿಕೊಳ್ಳಲು ಆತ್ಮಸಂಯಮವೇ ತಾಯಿಬೇರು. ಜ್ಞಾನವೃಕ್ಷವು ಚಿಗುರೊಡೆದು ಸಮೃದ್ಧಿಯಾಗಲು ಶಿಸ್ತುಸಂಯಮಗಳೆಂಬ ನೀರು ಗೊಬ್ಬರಗಳನ್ನು ಹಾಕಿದಾಗ ರಸವತ್ತಾದ ಫಲವನ್ನು ನೀಡುವದು. ಸಂಯಮವಿರದ ಜೀವನದಲ್ಲಿ ಶಾಂತಿ ಸಿಗಲಾರದು. ಬೆಳಕಿರದ ಗವಿಯಲ್ಲಿ ಹೊಕ್ಕಂತಾಗುವದು. ಆತ್ಮ ಸಂಯಮವಿಲ್ಲದ ಜೀವನ ಕಡಿವಾಣವಿಲ್ಲದ ಕುದುರೆಯಂತೆ ನಿರರ್ಥಕ. ಆತ್ಮ ಸಂಯಮದಿಂದ ಆತ್ಮಕ್ಕೆ ಆನಂದ ದೊರೆಯುವದಲ್ಲದೆ ಮನಸ್ಸಿನಲ್ಲಿ ದೃಢನಿರ್ಧಾರವುಂಟಾಗುವದು. ಆತ್ಮಸಂಯಮವೆಂಬ ಆಣೆಕಟ್ಟನ್ನು ಕಟ್ಟದಿದ್ದರೆ ಶರೀರವೆಂಬ ಹೊಲದಲ್ಲಿ ಕಾಮ ಕ್ರೋಧಾದಿ ದುರ್ಗುಣಗಳೆಂಬ ಕಸಕಡ್ಡಿಗಳು ಹುಟ್ಟಿ ಕ್ರಮಬದ್ಧ ನಿಯಮಗಳಂತಿರುವ ಆಚಾರ ವಿಚಾರಗಳು ನಿರ್ನಾಮವಾಗಿ ನಿರಂತರ ದುಃಖಕ್ಕೀಡಾಗುವದಲ್ಲದೆ ಇಹ ಪರ ಸುಖವನ್ನು ಪಡೆಯಲು ಅಸಾಧ್ಯ. ನೀರನ್ನು

ಬಿಟ್ಟ ಮೀನಿನಂತೆ ಅವರ ಗತಿಯಾಗುವದು. ಸಂಯಮ ಶೂನ್ಯ ಜೀವನ ಮತ್ತು ಅಶಿಸ್ತು ಗಳಿಂದ ಮನುಷ್ಯನ ಭವಿಷ್ಯ ನಿರ್ಮಾಣಕ್ಕೆ ತೊಂದರೆಯುಂಟಾಗುವದಲ್ಲದೆ ಗಾಳಿಗೊಡ್ಡಿದ ಸೊಡರಿನಂತೆ ಜೀವನವಾಗುವದು. ಸುಖ ದುಃಖಗಳಿಗೆ ಚಿತ್ತವೇ ಮೂಲಕಾರಣವಾಗಿರುವದ ರಿಂದ ಚಿತ್ತವೃತ್ತಿ ನಿರೋಧವು ಆತ್ಮಾನಂದಕ್ಕೆ ಸಹಾಯಕವಾಗುವದು. ಸಂಯಮವಿಲ್ಲದ ತಪಸ್ಸು ನೀರಸ, ಸಂಯಮಕ್ಕಾಗಿ ನಿರಂತರ ದುಡಿಯಬೇಕು. ಸತ್ಯ ಶುದ್ಧ ಕಾಯಕವಿದ್ದರೆ ಮಾತ್ರ ಅದು ಸಾಧ್ಯ. "ಒಡೆದ ಮನಸ್ಸು ಒಡೆದ ಹಾಲಿನಂತೆ." ಮನುಷ್ಯನ ಚಿತ್ತದಲ್ಲಿ ಎಲ್ಲವೂ ಇದೆ. ಕೆಟ್ಟದ್ದನ್ನು ಬಿಟ್ಟು ಒಳ್ಳೆಯದನ್ನು ಹಿಡಿಯುವದರಲ್ಲಿ ಜಾಣ್ಮೆಯಿರಬೇಕು ಅಂದರೆ ಈ ಮನುಷ್ಯನು ಭವಸಾಗರದಿಂದ ಪಾರಾಗುತ್ತಾನೆ. ಈಶ್ವರನು ಕೃತಿಯನ್ನು ನೋಡಿ ಮೆಚ್ಚುತ್ತಾನೆಯೆ ಹೊರತು ಸೋಮಾರಿಯನ್ನು ಮೆಚ್ಚಲಾರ. ಕಷ್ಟಗಳು ಬರು ವದು ಸಹಜ ಅವುಗಳನ್ನು ಎದುರಿಸುವದೇ ಮನುಷ್ಯನ ಕರ್ತವ್ಯ. ಎದುರಿಸುವ ಶಕ್ತಿ ಬರಬೇಕಾದರೆ ಆತ್ಮಸಂಯಮವು ಬೇಕಾಗುತ್ತದೆ. ಶ್ರದ್ಧಾಪೂರ್ಣ ಕಾರ್ಯದಲ್ಲಿ ನಿರತರಾದವ ರಿಗೆ ಸಂಯಮ ಜೀವನ ಸಾಧ್ಯ. ಆದಕ್ಕಾಗಿ ಜೀವನದಲ್ಲಿ ಜಯಪಡೆದು ಸುಖಸಾಗರದಲ್ಲಿ ತೇಲಿ, ಆತ್ಮ ಸೌಂದರ್ಯವನ್ನು ಪಡೆದು ಆತ್ಮಜ್ಯೋತಿಯಲ್ಲಿ ಬೆಳಗಬೇಕಾದರೆ ಆತ್ಮ ಸಂಯಮವೇ ದಾರಿದೀಪ. ಅದು ಜೀವನದ ಭದ್ರಬುನಾದಿ.

## ಶೀಲಂ ಸರ್ವತ್ರ ವೈ ಧನಂ

ವಿದೇಶೇಷು ಧನಂ ವಿದ್ಯಾ ವ್ಯಸನೇಷು ಮತಿರ್ಧನಂ।
ಪರಲೋಕೇ ಧನಂ ಧರ್ಮಃ; ಶೀಲಂ ಸರ್ವತ್ರ ವೈ ಧನಂ॥

ಪರದೇಶದಲ್ಲಿದ್ದಾಗ ನಮ್ಮ ವಿದ್ಯೆಯೂ ನಾವು ಯಾವುದೇ ವ್ಯಸನ-ತೊಂದರೆಯಲ್ಲಿ ಸಿಕ್ಕಾಗ ನಮ್ಮ ಸದ್‌ಬುದ್ಧಿಯೂ ಹಾಗೂ ಪರಲೋಕದ ವಿಷಯದಲ್ಲಿ ನಾವು ಮಾಡಿ ರುವ ನಮ್ಮ ಧರ್ಮವೂ ನಮಗೆ ಧನದಂತೆ ಸಹಾಯಕವಾದ ಹಾಗೆ, ನಮ್ಮ ಶೀಲ-ಸದಾಚಾರವು ನಮಗೆ ಸರ್ವತ್ರ ಸಹಕಾರಿಯಾಗಿ ಸಮಾಧಾನ ನೀಡುತ್ತದೆ. ಶೀಲವಿಲ್ಲದ ಜೀವನವು ರಸವಿಲ್ಲದ ಹಣ್ಣಿನಂತೆ, ಒಣಗಿರ್ಪ ತರುವಿನಂತೆ, ಶೀಲವೇ ಸಂಸ್ಕೃತಿಗೆ ಕಣ್ಣು. ಶೀಲವೇ ಧರ್ಮ ಸಂಸ್ಕಾರಕ್ಕೆ ಮೂಲಾಧಾರ. ಶೀಲದಲ್ಲಿ ಶ್ರದ್ಧೆಯುಳ್ಳವರು ಯಾವುದೆ ಹೊರಗಿನ ತಾಮಸ ಶಕ್ತಿಗೆ ಅಂಜಬೇಕಾಗಿಲ್ಲ; ಅಳುಕ ಬೇಕಾಗಿಲ್ಲ. ಶೀಲವಿದ್ದಲ್ಲಿ ಗಾಳಿ ಹಾರಿಸಿದತ್ತ ಹೋಗಲು ಸಾಧ್ಯವಾಗದು. ಉತ್ತಮ ಶೀಲ-ಜೀವನದಿಂದ ಭಾವಪರಿ ಪೂರ್ಣ ಪ್ರಜ್ಞೆಯುಂಟಾಗಿ ಸೊಗಸು ಬಾಳಲು ಕಾರಣವಾಗುತ್ತದೆ. ಹೃದಯವನ್ನು ಗೆಲ್ಲಲು ಶೀಲದಷ್ಟು ಉತ್ತಮ ಸಾಧನ ಬೇರೊಂದಿಲ್ಲ. ಶೀಲವು ಸುಖದ ಏಕಮಾತ್ರ ಸಾಧನವಾಗಿದೆ. ಶೀಲವಂತ ಮನುಷ್ಯನ ಸ್ವಭಾವವು ಸರಳ ಹಾಗೂ ಶಾಂತಮಯವಾಗಿರು ತ್ತದೆ. ಅವನ ಮನ ವಚನ ಮತ್ತು ಕರ್ಮದಲ್ಲಿ ಏಕರೂಪತೆ ಇರುತ್ತದೆ. ಅವನ ಚಿಂತನ, ಮನನ ಮತ್ತು ದರ್ಶನ ವಿಲಕ್ಷಣದ್ದಾಗಿರುತ್ತದೆ.

ಸುಖೀ ಜೀವನಕ್ಕಾಗಿ ವಿದ್ಯೆ, ಬುದ್ಧಿ, ಧನ, ಜನ ಬಲಕ್ಕಿಂತಲೂ, ಉತ್ತಮ ಶೀಲದ ಅಧಿಕ ಆವಶ್ಯಕತೆ ಇರುತ್ತದೆ. ವ್ಯಕ್ತಿತ್ವ ವಿಕಾಸವಾಗಲು ಶೀಲವೇ ಮೂಲ ಕಾರಣ. ಶೀಲ ವಂತನಿಗೆ ಪ್ರಚಾರದಲ್ಲಿ, ಶಪಥದಲ್ಲಿ, ಬಾಹ್ಯಾಡಂಬರದಲ್ಲಿ ವಿಶ್ವಾಸ ವಿರುವುದಿಲ್ಲ. ಅವನು ಲೋಕೈಷಣೆಯ ವಿತ್ತೈಷಣೆಯ ಪರಧಿಗಿಂತಲೂ ಎತ್ತರದಲ್ಲಿದ್ದು, ಸರ್ವಭೂತದಯಾಪರ ನಾಗಿರುತ್ತಾನೆ.

ಸತ್ಯ ಶೀಲವನ್ನು ಆಚರಿಸುವಾಗ ಕಠಿಣ ಪ್ರಸಂಗಗಳು ಬಂದೊದಗಿದರೂ, ಹೆದರದೆ ಬೆಚ್ಚದೆ ಮುಂದೆ ಸಾಗಿದರೆ ಫಲ ಸಿದ್ಧಿಸುತ್ತದೆ. ಔಷಧಿಯ ಸೇವನೆಯು ಕಹಿಯಾದರೂ, ಉದರಕ್ಕೆ ಸಿಹಿಯಾಗುವಂತೆ, ಶೀಲದ ನಡೆನುಡಿಯು ಬಾಳಿನಲ್ಲಿ ಸವಿಯನ್ನು ನೀಡುವ ದಿವ್ಯ ಔಷಧ. ಬರಿ ವಿಚಾರವೇ ಬಾಳಿನಲ್ಲಿ ಸಾಲದು. ಆಚಾರವೂ ಕೃತಿಯಲ್ಲಿ ಇಳಿದಾಗ ಮಾತ್ರ ಪರಿಪೂರ್ಣ ಜೀವನ. ಜ್ಞಾನಕ್ಕಾಗಿ ಇರುವ ಜೀವನವು ಪವಿತ್ರವೆಂಬುದು ನಿಜ ವಿದ್ದರೂ ಕೂಡ, ಆ ಜೀವನದ ಹದವನ್ನು ತಿಳಿಯದ ಜ್ಞಾನವೂ ನಿಷ್ಪ್ರಯೋಜಕ. ಶೀಲ ವಿಲ್ಲದ ಧರ್ಮ ಜೀವವಿಲ್ಲದ ದೇಹವಿದ್ದಂತೆ. ಹೃದಯದ ಶೀಲ ಬೆಳೆದಂತೆ ಧಾರ್ಮಿಕ ಶಕ್ತಿ ಬೆಳೆದು, ಆತ್ಮ ಶಕ್ತಿ ಉಳಿದು, ಪ್ರತಿಭೆಯು ಪ್ರಕಾಶ ಮಾನವಾಗುವದು. ತಪ್ಪು ತಡೆ ಗಳನ್ನು ಹತ್ತಿಕ್ಕಿ ಸದ್ಗುಣರಾಶಿಯನ್ನು ಹೃದಯ ಚೀಲದಲ್ಲಿ ತುಂಬಿಕೊಳ್ಳುವದೇ ಶೀಲ ಸಂಸ್ಕೃತಿಯ ಮುಖ್ಯ ಸಾಧನ.

"ಶೀಲ–ಶೀಲವೆಂದು ದೂರ–ದೂರ ಸರಿಯುತಿಹಿರಿ: ನೀರಿನಿಂದ ಮೈಧೊಳುವುದು ಶೀಲವೆ? ಮನದ ಮಾಲಿನ್ಯವ ತೊಳೆಯದೆ, ತನುವಿಕಾರವ ಕಳೆಯದೆ, ಘನಮಹಿಮನ ಪಡೆವುದೆಂತಯ್ಯ? ಮರವೆಯ ತುಳಿಯದೆ, ಅಹಂಕಾರ ಅಳಿಯದೆ, ಚಿತ್‌ಪ್ರಭೆಯು ಕಾಣುವದೆಂತಯ್ಯ? ಮೈಮಸಂಗಳ ಮಡಿ ಮಾಡಿ ಕಾಮಾದಿಗಳ ಹುಡಿಮಾಡಿ, ಮೈದೊಳೆವ ಮನದೊಳೆವ ಶೀಲವೇ ಶೀಲ ಕಾಣಯ್ಯಾ ಭ್ರೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ."

## ಗುರುದೇವಾತ್ಪರಂ ನಾಸ್ತಿ

"ಶಿವಪಥನವರಿವಡೆ ಗುರುಪಥವೆ ಮೊದಲು," ಇದು ಮಹಾತ್ಮ ಬಸವೇಶ್ವರರ ಅಮರವಾಣಿ. ವ್ಯಕ್ತಿಯಲ್ಲಿ ಶಕ್ತಿ ತುಂಬಲು ಗುರುವು ಬೇಕು. ಗುರುವಿಲ್ಲದ ಸಾಧನೆ, ವಿದ್ಯೆ ಬುದ್ಧಿ ಅದಲ್ಲವೂ ನಿರರ್ಥಕ. ಗುರುವು ತನ್ನ ಶಿಷ್ಯನಿಗೆ ನವಚೈತನ್ಯ ನೀಡುತ್ತಾನೆ. ಭವ ಸಾಗರವನ್ನು ದಾಟಿಸುತ್ತಾನೆ. ತನ್ನ ಆತ್ಮಾನುಭವವನ್ನು ಅವನಿಗೆ ಕೊಟ್ಟು ನಿಜ ಸುಖದ ದಾರಿಯನ್ನು ತೋರಿಸುತ್ತಾನೆ. ಗುರುವಿಲ್ಲದೆ, ಗುರುವಿನ ಅನುಗ್ರಹ ಪಡೆಯದೆ, ವ್ಯವಹಾರಿಕ ಜ್ಞಾನದಲ್ಲಿ ತೊಳಲಿ ಬಳಲಿ, ನಾನೆಂಬುವ ಅಹಂಕಾರದಲ್ಲಿ ಬಿದ್ದವನು, ವೃಕ್ಷ ವನ್ನೇರಿ ಕೆಳಗೆ ಬಿದ್ದಂತೆ ಅವನ ಗತಿಯಾಗುವದು. ಅವನಿಗೆ ಭಾವಶುದ್ಧಿ ಬರದು, ಗುರು ಕರುಣೆ ಸಮನಿಸದು, ಕತ್ತಲೆ ತುಂಬಿದ ಗವಿಯಂತೆ ಅವನ ಮತಿಯಾಗುವದು. ರೋಗಗಳ

ಚಿಕಿತ್ಸೆಗೆ ವೈದ್ಯನಿರುವಂತೆ, ಭವರೋಗಕ್ಕೆ ಗುರುವೆ ವೈದ್ಯನು. ಭಕ್ತರ ಚಿಂತಿತಾರ್ಥವನ್ನು ಕೊಡುವ ಚಿಂತಾಮಣಿ. ಒಂದೆಡೆ ನಿಜಗುಣ ಶಿವಯೋಗಿಗಳು ಗುರುಮಹತಿಯನ್ನು ಈ ರೀತಿ ವರ್ಣಿಸಿದ್ದಾರೆ.

ಶ್ರೀಗುರುವು ಸ್ಮರಣೆಗೈವರ್ಗೆ ಚಿಂತಾಮಣಿಯು|
ಶ್ರೀಗುರುವು ಹರಣದಳಿವಿನೊಳು ಮರುಜೀವಣಿಯು|
ಶ್ರೀಗುರುವು ಶರಣರಂಗದೊಳು ಲಿಂಗದ ಮುಖವ ಕಾಣಿಸುವ ಮುಕುರಮಣಿಯು.
ಶ್ರೀಗುರುವು ವೀರಶೈವೋತ್ತಮ ಕುಲಾಗ್ರಣಿಯು|
ಶ್ರೀಗುರುವು ಸದ್ಭಕ್ತಗಣಕೆ ಪರುಷದ ಕಣಿಯು|
ಶ್ರೀಗುರುವಿನಮಲಪಾವನಚರಿತ ಚಾರುಚರಣವು ನನ್ನ ಹಣೆಗೆ ಹೊಣೆಯು||

ಶಿಷ್ಯನ ಅಂಗೇಂದ್ರಿಯಂಗಳನ್ನು ಲಿಂಗೇಂದ್ರಿಯಗಳನ್ನಾಗಿ ಮಾಡಿ, ಆತನ ವ್ಯಕ್ತಿತ್ವ ರೂಪಿಸುವ ಸಾಮರ್ಥ್ಯ ಗುರುವಿನದು. ಹೊರಗಿನ ಕತ್ತಲೆಯನ್ನು ಸೂರ್ಯ ಚಂದ್ರರು ಕಳೆದರೆ ಒಳಗಿನ ಕತ್ತಲೆಯನ್ನು ಅಂದರೆ ಶಿಷ್ಯನ ಅಜ್ಞಾನ ತಿಮಿರವನ್ನು ಗುರುವು ಕಳೆಯುತ್ತಾನೆ.

"ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿದಾಗ ಸಂಸಾರವೆಂಬ ಸರ್ಪಮುಟ್ಟಿ ಪಂಚೇಂದ್ರಿಯ ವಿಷಯವೆಂಬ ವಿಷದಿಂದ ನಾಶವಾಗುತ್ತಿರುವ ಶಿಷ್ಯನನ್ನು ಕರುಣೆಯಿಂದ ಗುರುವು ಅನುಗ್ರಹಿಸಿ, ಅವನನ್ನು ಭವಪಾಶದಿಂದ ಬಿಡಿಸಿ ಮುಕ್ತನನ್ನಾಗಿ ಮಾಡುತ್ತಾನೆ. ಅದಕ್ಕಾಗಿಯೇ ಗುರುವಿನಂತೆ ಅಧಿಕವಾದುದಿಲ್ಲವೆಂದು ಅಮುನಸ್ಕೋಪನಿಷತ್ತಿನಲ್ಲಿ ಹೇಳಲಾಗಿದೆ.

ಇಂದು ಸಮಾಜದಲ್ಲಿ ಗುರುಶಿಷ್ಯ ಸಂಬಂಧವು ಭಕ್ತಿಯುತವಾಗಿ ಹಾಗೂ ದಯಾಪೂರ್ಣ ಪ್ರೇಮದೊಡನೆ ಹೊಂದಿಕೆಯಾಗದೆ ಹೋಗುತ್ತಿರುವದರಿಂದ ಭಾವೈಕ್ಯ ನಶಿಸುತ್ತಲಿದೆ. ಇಬ್ಬರಲ್ಲಿಯೂ, ಮೃದು ಮಧುರ ಧಾರ್ಮಿಕ ಬಾಂಧವ್ಯವು ಬೆಳೆದಾಗ ಸಮಾಜದಲ್ಲಿ ನವಚೈತನ್ಯವುಂಟಾಗುತ್ತದೆ. ಕೃತ್ರಿಮತೆ ಹಾಗೂ ವ್ಯಾವಹಾರಿಕತೆಯೇ ಹೆಚ್ಚಿದರೆ, ಅಲ್ಲಿ ಶ್ರದ್ಧೆ, ನಿಷ್ಠೆ, ಮಮತೆ, ಪ್ರೇಮ ಬರಲಾರದು. ಸ್ವಾರ್ಥ ಸಾಧಿಸಿದ ನಂತರ ಗುರು-ಹಿರಿಯರನ್ನು ಜರಿಯುವ ಬುದ್ಧಿ ಹೆಚ್ಚಾದಾಗ ಅಲ್ಲಿ ಗುರು-ಶಿಷ್ಯ ಸಂಬಂಧದಲ್ಲಿ ಸಹಜತೆ ಉಳಿಯಲಾರದು. ಅದಕ್ಕಾಗಿ ಉದಾರ ಮನೋಭಾವನೆ, ಭಕ್ತಿಯನ್ನುಂಟು ಮಾಡಲು ಒಳ್ಳೆ ಸಂಸ್ಕಾರದ ಬೀಜಬಿತ್ತಿದಾಗ ಸಫಲತೆ. "ವಿದ್ಯೆ ಕಲಿತಡೆ ಇಲ್ಲ. ಬುದ್ಧಿ ಕಲಿತಡೆ ಇಲ್ಲ. ಉದ್ಯೋಗ ಮಾಡಿದಡೆ ಇಲ್ಲ. ಗುರುಮುಖವು ಇದ್ದಲ್ಲದಿಲ್ಲ ಸರ್ವಜ್ಞ."

## ಲಿಂಗಬಾಹ್ಯಾತ್ ಪರಂ ನಾಸ್ತಿ

ವೀರಶೈವರಾದವರಿಗೆ ಲಿಂಗಧಾರಣೆ ಅತ್ಯವಶ್ಯ. ಲಿಂಗವಿಲ್ಲದೆ ಅವರ ಜೀವನ ಸುಖಕರವಾಗದು; ಭಾವಶುದ್ಧಿಯಾಗದು. ಲಿಂಗವಿಲ್ಲದ ಅವರ ವಕ್ಷಸ್ಥಲ ಜಲವಿಲ್ಲದ

ತಟಾಕವಿದ್ದಂತೆ; ರವಿಯಿರದ ಆಗಸದಂತೆ. ಒಂದೆಡೆ ಚಿತ್ಸುಮನದಲ್ಲಿ ಈ ರೀತಿ ಬಿತ್ತರಿಸ ಲಾಗಿದೆ:

"ಲಿಂಗವ ಧರಿಸದೆ, ಲಿಂಗತತ್ತ್ವವ ತಿಳಿಸಿದರೇನು?
ಗಿಳಿಯೋದಿದ ಪಾಠವನೊಪ್ಪಿಸಿದಂತಲ್ಲವೆ, ಹೇಳಾ?
ತತ್ತ್ವದ ಬುತ್ತಿಯನು ಮಾತಿನಲ್ಲಿ ತುಂಬಿದರೇನು?
ಒಳಗೆ ಶುದ್ಧಿಸವೆ ಘಟವ ಹೊರಗೆ ತೊಳೆದಂತಲ್ಲವೆ?
ಅಂತರಂಗ ಪ್ರಕಾಶವಿಲ್ಲದೆ ಬಹಿರಂಗ ಪ್ರಕಾಶವನೆಷ್ಟು ಪಡೆದರೇನು?
ಗಂಧವಿಲ್ಲದ ಚಂದನದಂತೆ, ತೈಲವಿಲ್ಲದ ತಿಲದಂತೆ ನಿರರ್ಥಕ ಕಾಣಾ
ಭ್ರೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ"

ಎಂದುದು ಲಿಂಗವಿಲ್ಲದೆ ತಿರುಗುತ್ತಿರುವ, ಸುಶಿಕ್ಷಿತರೆಂದುಕೊಳ್ಳುವ ಲಿಂಗಾಯತರಿಗೆ ಕಿವಿಮಾತು ಹೇಳಿದಂತಿದೆ. ಇಂದು ಸುಶಿಕ್ಷಿತರೆನ್ನುವವರಲ್ಲಿ ಲಿಂಗದ ಬಗ್ಗೆ ಶ್ರದ್ಧೆ ನಿಷ್ಠೆ, ಲಿಂಗಧಾರಣೆ ಕ್ರಿಯಾಚರಣೆ ಹೆಚ್ಚಾದರೆ ಮಾತ್ರ ಸಮಾಜಕ್ಕೆ ಹೆಚ್ಚಿನ ಶಕ್ತಿ ಬರುತ್ತದೆ.

ಶಿವಲಿಂಗವನ್ನು ಇಲ್ಲವೇ ಸ್ಥಾವರಲಿಂಗವನ್ನು ಗುಡಿ-ಗುಂಡಾರಗಳಲ್ಲಿರಿಸಿ ಪೂಜಿಸು ವದು ಶೈವಧರ್ಮದ ಹೆಗ್ಗುರುತು. ಆದರೆ ವೀರಶೈವ ಧರ್ಮದ ವೈಶಿಷ್ಟ್ಯವು ಇಷ್ಟಲಿಂಗ ಪೂಜೆಯಲ್ಲಿ ವ್ಯಕ್ತವಾಗುತ್ತದೆ. ದೇಹವನ್ನು ದೇವಾಲಯ ಮಾಡಿ, ಅದರಲ್ಲಿ ದೇವನು ವಾಸಿಸಲು ಅದು ತಕ್ಕುದಾಗಬೇಕೆಂದು ಅನಾದ್ಯನಂತ ಪರಶಿವ ಪ್ರತೀಕವಾದ ಆ ಇಷ್ಟಲಿಂಗ ವನ್ನು ವೀರಶೈವನು ಎಂದೆಂದೂ ಅಗಲದಂತೆ, ತನ್ನ ಅಂಗದ ಮೇಲಿರಿಸಿಕೊಳ್ಳುವನು. ಹೀಗೆ ಧರಿಸಿದ ಇಷ್ಟಲಿಂಗವೆ ಪರಶಿವನು ಸಾಧಕನ ಪಶ್ಚಿಮ ಶಿಖಾ ಚಕ್ರದಲ್ಲಿದ್ದವನು. ದೇಹವೇ ದೇಗುಲವಾಗಬೇಕು, ಅದು ಮಹಾಕಾಯವೆನಿಸಬೇಕು. ಅಷ್ಟೇ ಅಲ್ಲ, ವಿಶ್ವ ಕಾಯ ನಿರ್ಮಾಣದ ಸಿದ್ಧತೆಗೆ ಅದು ಎಡೆಗೊಡಬೇಕು. ಅದರಲ್ಲಿ ಇಡಿಯ ಆಧ್ಯಾತ್ಮ ಜೀವನ ತಿರುಳು ಮೈದೋರಬೇಕು. ಪರಶಿವನಲ್ಲಿ ಬೆರೆಯುಲು ಅಂತರಂಗದ ಅನುಭಾವವು ಆಳವಾಗಿ ಅನುಭವಕ್ಕೆ ಅಳವಡಬೇಕು. ದೇವರು ದಿವ್ಯ ದೃಷ್ಟಿಯಲ್ಲಿ ಚೈತನ್ಯವನ್ನು ಪಡೆಯುವ ವಿಶ್ವಗತಿ ವಿಶ್ವಶಾಂತಿಗೆ ಅನುಭಾವ ಜೀವನವು ನಾಟ್ಯರಂಗವಾಗಿ ಲೀಲಾಭೂಮಿ ಯೆನಿಸಬೇಕು. ಸರ್ವಾಂಗಲಿಂಗವಾಗಬೇಕು ಎಂಬುದೇ ವೀರಶೈವನು ಅಂಗದ ಮೇಲೆ ಇರಿಸಿಕೊಂಡ ಆ ಇಷ್ಟಲಿಂಗ ರಹಸ್ಯ. ಬುದ್ಧಿಜೀವಿಯು ವೇದಾ-ಮಂತ್ರ-ಕ್ರಿಯಾದೀಕ್ಷಾ ತ್ರಯದಿಂದ ಶುದ್ಧನಾಗಿ ಆಣವ, ಕಾರ್ಮಿಕ, ಮಾಯಾಮಲ ವಿಚ್ಛೇದನದಿಂದ ಅಂಗ ಸ್ವರೂಪವನ್ನು ಪಡೆಯುತ್ತಾನೆ. ಅಂಗವೆಂದರೆ ಶುದ್ಧಾಂತಃಕರಣ ಜೀವಿ. ಈ ಅಂಗನು ತನ್ನೊಳಗಿನ ಭಕ್ತಿಯನ್ನು ಸತ್ಕ್ರಿಯೆಯ ಮೂಲಕ ಅರಳಿಸುತ್ತ ಲಿಂಗದೊಳಗಿನ ಶಕ್ತಿಯಲ್ಲಿ ಅದನ್ನು ಸಮರಸಗೊಳಿಸುತ್ತ, ಕೊನೆಗೆ ಲಿಂಗಾಂಗ ಸಾಮರಸ್ಯವನ್ನು ಪಡೆಯುತ್ತಾನೆ. **''Veersaivism is a psychological approach to God''** ಪರಮಾತ್ಮನ ಅಂಶವೇ ತಾನಾದ ಅಂಗನು ತನ್ನ ಸ್ವರೂಪ ಜ್ಞಾನದ ಕುರುಹಾದ ಲಿಂಗವನ್ನು

ಪಾವನಾತ್ಮಕನಾದ ಗುರುವಿನಿಂದ ಪಡೆದು ಅದನ್ನು ಆರಾಧಿಸಿ, ಮೋಕ್ಷ ಪಡೆಯುತ್ತಾನೆ. ಅಂತೆಯೆ ಲಿಂಗವೆ ತಾನಾದ ಶರಣನು 'ಲಿಂಗ ಬಾಹ್ಯಾತ್ ಪರಂ ನಾಸ್ತಿ' ಎಂದು ಅನುಭವಿಸುತ್ತಾನೆ:

"ವಿಶ್ವವನೊಳಕೊಂಡ ಲಿಂಗವು ಕರಸ್ಥಲದಲಿ ಬಂದು ಚುಳುಕಾಗಿಹುದಯ್ಯ!
ಗುರುಕರುಣಿಸಿದ ಲಿಂಗವು ಚಿತ್‌ಕಲಾ ಪರಿಪೂರ್ಣವಾಗಿಹುದಯ್ಯ!
ಮಾಂಸಪಿಂಡ ಹೋಗಿ ಮಂತ್ರ ಪಿಂಡವಾಗಲು ಲಿಂಗವೆ ಮೂಲ ಕಾರಣವಯ್ಯ,
ಭ್ರೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ."

## ಜಗದ್ಭರಿತಸ್ತು ಜಂಗಮಃ

"ಜಂಗಮನ ಸುಳಿವು ವಸಂತ ಗಾಳಿ" ಎಂದು ಪ್ರಭುದೇವರು ನುಡಿದಿದ್ದಾರೆ. ನಿಜ ಜಂಗಮರಾದವರು ಆತ್ಮ ಶುದ್ಧಿಯನ್ನು ಮಾಡಿಕೊಂಡು ನಿಜಾನುಭವವನ್ನು ತಿಳಿದುಕೊಂಡು ತಿಳುವಳಿಕೆಯ ಬೆಳಗಿನಲ್ಲಿ ಬೆಳಗುತ್ತ ಭಕ್ತೋದ್ಧಾರ ಮಾಡುತ್ತ ಚರಿಸುತ್ತಾರೆ. ಜಂಗಮರು ಭಕ್ತರು ನೀಡಿದ ಧನಕನಕಾದಿಗಳನ್ನು, ಭಕ್ತರ ಕಲ್ಯಾಣಕ್ಕಾಗಿಯೇ ಉಪಯೋಗಿಸಬೇಕಾಗುತ್ತದೆ. ವೀರವೈರಾಗ್ಯದಲ್ಲಿ ಕಾಲಕಳೆಯಬೇಕಾಗುತ್ತದ. ವ್ಯಕ್ತಿತ್ವವನ್ನು ವಿಕಾಸ ಮಾಡಿಕೊಳ್ಳಬೇಕಾಗುತ್ತದೆ. ಭವಬಂಧನವನ್ನು ದೂರ ಮಾಡಬೇಕಾಗುತ್ತದೆ. ಪ್ರಪಂಚದಲ್ಲಿದ್ದರೂ ಹೊರಗಿನ ವ್ಯಾಮೋಹಗಳಿಗೆ ಕಟ್ಟು ನಿಟ್ಟುಗಳಿಗೆ ಬಲಿಬೀಳದೆ, ಗುರುದೇವರು ನಿರೂಪಿಸಿದ ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರ, ಸಾಧನ, ಸಾಧ್ಯ ಎಂಬ ಷಡರ್ಥ ಸಂಗ್ರಹದಲ್ಲಿ ಸದಾ ನಿರತರಾಗಿ, ಏಕಲಿಂಗನಿಷ್ಠೆಯುಳ್ಳವರಾಗಿ, ಶಿವಯೋಗ ಸಂಸ್ಕೃತಿಯನ್ನು ಬೆಳೆಸಿಕೊಂಡು, ಅಹಂಕಾರ, ಮಮಕಾರಗಳನ್ನು ನಷ್ಟ ಮಾಡಿ, ಪರಮ ಶಿವಯೋಗಿಯಂತೆ ಜೀವನವನ್ನು ಸಾಗಿಸಬೇಕಾಗುತ್ತದೆ.ಜಂಗಮನಿಗೆ ಸಮಾಜೋದ್ಧಾರವೇ ಮುಖ್ಯ ಗುರಿ. ಭಕ್ತರ ಯೋಗಕ್ಷೇಮವೇ ಆತ್ಮಶಾಂತಿ.

ಮಹಾತ್ಮಾ ಬಸವಣ್ಣನವರು ಜಂಗಮರ ಘನತೆಯನ್ನು ಕುರಿತು ಈ ರೀತಿ ವಿವರಿಸಿದ್ದಾರೆ. "ಅಗ್ನಿಯಾಧಾರದಲ್ಲಿ ಕಬ್ಬಿಣ ನೀರುಂಬುದಯ್ಯ, ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯ. ಜಂಗಮಕ್ಕೆ ಅಪ್ಯಾಯವಾದರೆ ಲಿಂಗಸಂತುಷ್ಟಿಯಹುದಯ್ಯ, ಇದು ಕಾರಣ ಕೂಡಲ ಸಂಗಮದೇವ ಜಂಗಮಕ್ಕಾಪ್ಯಾಯವಾದರೆ ಲಿಂಗ ಸಂತುಷ್ಟಿ." ಜಂಗಮರಲ್ಲಿಯೂ, ಸ್ವಯ, ಚರ, ಪರ ಎಂಬುದಾಗಿ ಮೂರು ಭೇದಗಳಿವೆ, ಸ್ವಸ್ಥಾನದಲ್ಲಿದ್ದು, ಆತ್ಮೋದ್ಧಾರ ಮಾಡಿಕೊಳ್ಳುವವನು ಸ್ವಯಜಂಗಮನು. ತನ್ನ ಸ್ವಾನುಭವವನ್ನು ಸಮಾಜಕ್ಕೆ ನೀಡುತ್ತ ಸಂಚರಿಸುವವನೇ ಚರಜಂಗಮನು. ಶಿವಾದ್ವೈತ ಸಿದ್ಧಾಂತದ ನಿಬ್ಬೆರಗಿನಲ್ಲಿ ಕಾಲ ಕಳೆಯುತ್ತ, ಬಂದ ಭಕ್ತರಿಗೆ, ಸಂದರ್ಶನ ನೀಡಿ, ಶಿವಾನುಭವವನ್ನು ತಿಳಿಹೇಳಿ ಶಿವಾನುಭವಿಗಳನ್ನಾಗಿ ಮಾಡುವವನೆ ಪರ ಜಂಗಮನು.

ಅದಕ್ಕಾಗಿ ಜಂಗಮರಾದವರು ಜಂಗಮತತ್ತ್ವದ ಸಂಪೂರ್ಣ ಅರ್ಥವನ್ನು ಅರಿತು

ಕೊಂಡು ಆಚರಿಸಿದರೆ ಸಮಾಜ ಸುಧಾರಣೆ ಸಾಧ್ಯ. ಅದರಂತೆಯೇ ಭಕ್ತರಾದವರು ಸಹ "ಲಿಂಗದ ಮುಖವೆ ಜಂಗಮ"ವೆಂದರಿತು, ಅವರ ವ್ಯಕ್ತಿತ್ವಕ್ಕೆ ಮಣಿದು, ಭೇದವನ್ನೆಣಿಸದೆ, ಸತ್ಯ ಶುದ್ಧ ಕಾಯಕದೊಡನೆ ನಿಷ್ಕಲ್ಮಷ ಹೃದಯದಿಂದ ಭಕ್ತಿಯಿಂದ ಸೇವೆಗೈದರೆ ಒಳಹೊರಗಿನ ಗುರುಲಿಂಗ ಜಂಗಮರ ಶಕ್ತಿ ಸಾಮರ್ಥ್ಯವು ಅರ್ಥವಾಗಿ ಲೋಕಕಲ್ಯಾಣಕ್ಕೆ ದಾರಿದೀಪವಾಗುತ್ತದೆ.

**ಪಾದೋದಕಾತ್‌ಫಲಪ್ರಾಪ್ತಿಃ**

ಕಲ್ಲಿಗೆ ಸಂಸ್ಕಾರ ಕೊಟ್ಟರೆ ಮೂರ್ತಿಯಾಗುವದು; ಕಬ್ಬಿಣಕ್ಕೆ ಸಂಸ್ಕಾರ ಕೊಟ್ಟರೆ ಗಡಿಯಾರವಾಗುವದು, ಹತ್ತಿಗೆ ಸಂಸ್ಕಾರ ಕೊಟ್ಟರೆ ಸುಂದರ ಬಟ್ಟೆಯಾಗುವದು. ಶಬ್ದಕ್ಕೆ ಸಂಸ್ಕಾರ ಕೊಟ್ಟರೆ ಮಂತ್ರವಾಗುವದು. ಅನ್ನಕ್ಕೆ ಸಂಸ್ಕಾರ ಕೊಟ್ಟರೆ ಪ್ರಸಾದವಾಗುವದು. ಗೋಮಯಕ್ಕೆ ಸುಸ್ಕಾರ ಕೊಟ್ಟರೆ ಭಸ್ಮವಾಗುವದು. ನರನಿಗೆ ಸಂಸ್ಕಾರ ಕೊಟ್ಟರೆ ಹರನಾಗುವನು. ಹಾಗೆಯೆ ಸಾಮಾನ್ಯ ವಾದ ನೀರಿಗೆ ಸಂಸ್ಕಾರ ಕೊಟ್ಟರೆ ಪಾದೋದಕವಾಗುವದು.

ಪಾದೋದಕ ಇದು ಸಂಯುಕ್ತ ಪದ. ಪಾದೋದಕ ಅಷ್ಟಾವರಣದ ಒಂದು ಅಂಗ. ಗುರು–ಲಿಂಗ–ಜಂಗಮರ ಅರ್ಚನೆಯಿಂದ ಸಿಕ್ಕುವ ಫಲ. ಪಾದೋದಕಗಳಲ್ಲಿ ದಶವಿಧ ಪಾದೋದಕಗಳಿವೆ. ಅವುಗಳಲ್ಲಿ ಪ್ರಧಾನವಾದವುಗಳು ಗುರುಪಾದೋದಕ ಲಿಂಗ ಪಾದೋದಕ, ಜಂಗಮ ಪಾದೋದಕಗಳು. ಭಕ್ತನ ವಿನಯಜಲ ಎಂಬ ಬೋರಿಂಗು ಗುರುವಿನ ಕರುಣ (ಅಂತಃಕರುಣ) ಜಲ ಎಂಬ ಭಾವಗರ್ಭದ ಅಂತಃಕರಣ ಜಲವನ್ನು ತರುವದು. ವಿನಯಜಲ ಕರುಣಜಲ ಎರಡೂ ಸೇರಿ ಸಮತಾ (ಭಕ್ತ + ಗುರು ಈರ್ವರೂ ಒಂದೆಂಬ, ಬೇರೆ ಅಲ್ಲ ಎಂಬ) ಜಲವಾಗುವದು. ಇದನ್ನೆ ಪಾದೋದಕ ವೆಂದು ಕರೆಯುವರು.

ವಿನಯ (ಭಕ್ತಿ) ವಿಲ್ಲದೆ ಗುರುಕರುಣೆಯಾಗದು. ಗುರು ಕರುಣೆಯಾಗದೆ ಪಾದೋದಕ ಸಿಗದು. ಪಾದೋದಕವಿಲ್ಲದೆ ಪ್ರಸಾದವಿಲ್ಲ. ಒಂದೆಡೆ ವಚನಕಾರರು "ಗುರುವಿಡಿದು ಲಿಂಗವಕಂಡೆ, ಲಿಂಗವಿಡಿದು ಜಂಗಮರಕಂಡೆ, ಜಂಗಮವಿಡಿದು ಪಾದೋದಕವ ಕಂಡೆ. ಪಾದೋದಕವಿಡಿದು ಪ್ರಸಾದವ ಕಂಡೆ, ಪ್ರಸಾದವಿಡಿದು ಮುಕ್ತನಾದೆನಯ್ಯ" ಎಂದಿರುವರು. ಈ ಸಂಬಂಧ ಒಂದಿಲ್ಲದೆ ಇನ್ನೊಂದಿಲ್ಲ, ಸರಪಳಿಯ ಜೋಡಣೆಯಂತಿದೆ. ತ್ರಿಮೂರ್ತಿಗಳಿಲ್ಲದೆ ಪಾದೋದಕವಿಲ್ಲ.

ಪಾದೋದಕ ಪವಿತ್ರವಾದುದು, ಪರಿಣಾಮ ಉಳ್ಳದ್ದು, ಪವಿತ್ರಗೊಳಿಸುವಂತಹದು. ಪಾದೋದಕ ಮರುಜೀವಣಿ ಇದ್ದಂತೆ ಫಲದಾಯಕ. ಭವ ತಿಮಿರನಾಶಕ. ಸಂಸ್ಕೃತಕಾರರು ಒಂದೆಡೆ–

ಭವಭೂಜ ಕುಠಾರಾಯ ಪಾಪಪಂಕಸ್ಯ ಭಾನವೇ|
ಭವಗಿರಿ ವಜ್ರಾಯ ಪಾದ ತೀರ್ಥಾಯ ತೇ ನಮಃ"

ಎಂದಿರುವರು. ಪಾದೋದಕ ಭವಜೀವಿಗೆ ಕುಠಾರಪ್ರಾಯವಾಗಿದೆ. ಪಾಪನಾಶಕ ವಾಗಿದೆ. ಅಜ್ಞಾನ ಗಿರಿಗೆ ವಜ್ರವಾಗಿದೆ. ಇಂಥ ಪಾದತೀರ್ಥಕ್ಕೆ ನಮಸ್ಕಾರವೆನ್ನುವರು. ಅನುಭಾವಿ ಕವಿ ಮಹಾಲಿಂಗರಂಗರು.

ಪಾದ ಪೂಜೆಯ ಮಾಡಿ ಮುಕ್ತಾದೆ| ಗುರು ಲಿಂಗ ಜಂಗಮ
ಪಾದ ಪೂಜೆಯ ಮಾಡಿ ಮುಕ್ತಾದೆ.

ಎಂದು ಜೀವನಾನುಭವದಿಂದ ಹಾಡಿದವರು. ಬಸವಣ್ಣನವರೂ ಒಂದೆಡೆಗೆ ಪಾದೋದಕ ಪ್ರಸಾದಕ್ಕಾಗಿ ಬಾಯಿ ತೆರೆವೆನಲ್ಲದೆ ಮತ್ತಾವುದಕ್ಕೂ ತೆರೆಯೆನ್ನಯ್ಯ ಎಂದಿರುವರು. ಅಂಥ ಪುಣ್ಯ ಫಲದಾಯಕ, ಶಾಂತಿದಾಯಕ, ಮುಕ್ತಿದಾಯಕ. ಪಾದೋದಕವನ್ನು ಪಡೆಯಬೇಕು ಪುನೀತರಾಗಬೇಕು.

## ಆತ್ಮವಿಕಾಸಕರ್ತವ್ಯೇ ಪಾದಯಾತ್ರಾಽಪಿ ಸಾಧನಂ

ಪಾದಯಾತ್ರೆಯು ಮಾನವಕಲ್ಯಾಣ ಮಾಡಲು ದೊಡ್ಡ ಸಾಧನವಾಗಿದೆ. ಇದ ರಿಂದ ಆತ್ಮ ಕಲ್ಯಾಣವಾಗುವದಲ್ಲದೆ, ಅರಿಷಡ್ ವರ್ಗವನ್ನು ದಮನ ಮಾಡಲು ಧೈರ್ಯ ವುಂಟಾಗುವದು; ಸಹನಶಕ್ತಿ ಹೆಚ್ಚಾಗುವದು; ಜನಸಾಮಾನ್ಯರಲಿ ಬೆರೆತು, ಅವರ ಅಂತ ರಂಗವನ್ನು ಅರಿತು, ಅವರಿಗೆ ಮಾರ್ಗದರ್ಶನಮಾಡಲು ಅನುಕೂಲವಾಗುವದು; ಭಾವನೆ ವಿಶಾಲವಾಗಿ, ತನ್ನತನದ ಅರಿವು ಬಂದು, ಸಮತೆ ಸೈರಣೆ ಸಹಕಾರ ಮನೋವೃತ್ತಿ ಪ್ರಬಲಗೊಳ್ಳುವದು: ನುಡಿ ನಡೆಯಾದಾಗ ಮೃಡನಡಿಯ ಪಿಡಿಯಲು ಜಡವಾಗ ಲಾರದು; ದೇವರ ದಯೆಯುಂಟಾಗುವದು; ಸ್ವಾರ್ಥ ಮನೋವೃತ್ತಿ ನಶಿಸುವದು. ದಾರಿಯುದ್ದಕ್ಕೂ ಎದುರು ಬರುವ ಅನಾನುಕೂಲತೆಯ ಕಲ್ಲು–ಮುಳ್ಳುಗಳನ್ನು ತೆಗೆಯಲು ಶಕ್ತಿ ಬರುವದು.

ಪಾದಯಾತ್ರೆಯಲ್ಲಿ ನಿಸರ್ಗ ಸೌಂದರ್ಯದ ಅನುಭವ ಬಂದು ಆತ್ಮಶಾಂತಿಗೆ ದಾರಿ ದೀಪವಾಗುವದು. ಸುತ್ತಲಿನ ಹಸಿರು ಪರ್ವತ ಶ್ರೇಣಿ ಮನಸ್ಸಿಗೆ ಒಂದು ಬಗೆಯ ಆಹ್ಲಾದ ವನ್ನು ನೀಡುವದು. ನಿಸರ್ಗದತ್ತವಾದ ಅನಂತ ಆನಂದ ಲಭಿಸುತ್ತದೆ; ವ್ಯಕ್ತಿತ್ವ– ವಿಕಾಸ ಮಾಡಿಕೊಳ್ಳಲು ಸುಲಭವಾಗುತ್ತದೆ. ಜನಜೀವನದಲ್ಲಿ ಧರ್ಮಜಾಗ್ರತಿಯುಂಟು ಮಾಡಲು ಪಾದಯಾತ್ರೆಯಿಂದ ಸುಲಭ ಸಾಧ್ಯವಾದಷ್ಟು ಮತ್ತೊಂದರಿಂದ ಅನುಕೂಲ ವಾಗಲಾರದು.

ಇದು ಮನುಷ್ಯನ ಅಂತಃಕರಣವನ್ನು ಗೆಲ್ಲುತ್ತದೆ. ಬೆವರು ಸುರಿಸಿ, ಶರಣ ಧರ್ಮದ ಮಾನವೀಯ ಮೌಲ್ಯಗಳನ್ನು ಪ್ರಚಾರ ಮಾಡಿ ಕಾರ್ಯರೂಪಕ್ಕೆ ತಂದರೆ, ಅದು ಅವರ ಹೃದಯಕ್ಕೆ ಮುಟ್ಟುತ್ತದೆ. ತತ್ತ್ವವು ಕೃತಿಯಲ್ಲಿಳಿದಾಗ ಅಲ್ಲಿ ಸತ್ಯದ ಸೆಲೆ ಚಿಮ್ಮುತ್ತದೆ; ಸತ್ತ್ವವು ಸಂವರ್ಧನೆಯಾಗುತ್ತದೆ.

ಪಾದಯಾತ್ರೆಯು ಆರೋಗ್ಯಕ್ಕೂ ಹಿತಕರ; ಸಾಮಾಜಿಕ ಧಾರ್ಮಿಕ ಬಾಂಧವ್ಯ ಬೆಳೆಸಲು ಸುಮಧುರ.

ನೂರಾರು ವರುಷಗಳ ಹಿಂದೆ ಶಿವಶರಣರು, ಶಿವಯೋಗಿಗಳು ಇದನ್ನು ಸಾಧಿಸಿದರು: "ಹಳ್ಳಿಗೆ ಏಕರಾತ್ರಿ, ಪಟ್ಟಣಕ್ಕೆ ಪಂಚರಾತ್ರಿ"ಯಂತೆ, ಊರೂರಿಗೆ ಸಂಚರಿಸಿದರು; ಮನದ ಮೈಲಿಗೆಯನ್ನು ಕಳೆದರು; ಶರಣ ಸಂಸ್ಕೃತಿಯ ಹಿರಿಮೆಯನ್ನು ಬರೆದಿರುವ ಓಲೆಗರಿಗಳನ್ನು ಹೊತ್ತುಕೊಂಡು ಸುತ್ತಾಡಿ, ಅಲ್ಲಲ್ಲಿ ಅವರವರ ಮನಕ್ಕೆ ಸಂಸ್ಕೃತಿಯನ್ನು ತುಂಬಿದರು; ಕಾಯಕನಿಷ್ಠೆಯನ್ನು ಉಳಿಸಿದರು, ಬೆಳೆಸಿದರು; ದಯವೇ ಧರ್ಮದ ಮೂಲವೆಂದು ಸಾರಿದರು; ಪರರ ಹಿತಚಿಂತನೆ ಮಾಡಿದರು; ಭಾವೈಕ್ಯವನ್ನು ಬಲಿಸಿದರು. ಹರಿಜನೋದ್ಧಾರ ಮಾಡಿದರು; ನಾವೆಲ್ಲರೂ ಒಂದೆಂಬ ಭಾವನೆಯನ್ನು ಬಿತ್ತಿದರು. ಅಲ್ಲಲ್ಲಿ ಮಠಮಂದಿರಗಳನ್ನು, ಅನುಭವ ಮಂಟಪಗಳನ್ನು ಸ್ಥಾಪಿಸಿ, ಅವರವರ ಭವಿಷ್ಯವನ್ನು ಸುಂದರ ಮಾಡಲು ಪರಿಶ್ರಮಿಸಿ ಲಿಂಗನಿಷ್ಠೆಯನ್ನು ಉಳಿಸಿದರು.

ಇದೆಲ್ಲವೂ ಅಂದಿನ ಶರಣರ ಪಾದಯಾತ್ರೆಯಲ್ಲಿ ಸಫಲವಾದಂತೆ ಇತ್ತೀಚೆಗಿನ ಪಾದಯಾತ್ರೆಯಿಂದಲೂ ಜನಮನದಲ್ಲಿ ಸಂಸ್ಕಾರ ಮಾಡಿ, ಸಫಲವಾಗಿದೆ. ಸಕಲರೊಡನೆ ನಿಕಟ ಸಂಬಂಧವಿರಿಸಿ ಹಿರಿದು-ಕಿರಿದು ಭೇದವಿಲ್ಲದೆ ಆತ್ಮೀಯತೆಯಿಂದ ಜ್ಞಾನಬೋಧೆ ಮಾಡಿ, ಕಾರ್ಯೋನ್ಮುಖಗೊಳಿಸುವ ಸುಲಭೋಪಾಯವೇ ಪಾದಯಾತ್ರೆ.

### ಮಾನವಃ ಶಿವಯೋಗೇನ ಶಿವೋ ಭವತಿ ಕೇವಲಂ

ಎಲ್ಲ ಯೋಗಗಳಲ್ಲಿ ಶಿವಯೋಗವೇ ಮಿಗಿಲು. ಶಿವಯೋಗದ ಹೃದಯವೇ ಷಟ್‌ಸ್ಥಲ. ಲಿಂಗತ್ರಯಗಳನ್ನು ಅಂಗವಿಸಿಕೊಂಡು ಲಿಂಗಾಂಗ ಗಾತ್ರತ್ರಯವಳಿದು ಚಿತ್ತದ ಚಿದ್ಬಿಂದು ತೋರಿದಾಗ, ನಾದ ಬ್ರಹ್ಮವ ಶೋಧಿಸಿ, ಸುದೃಢ ಚಿತ್ತನಾದಾಗ ಶಿವಯೋಗ ಸಾಧ್ಯ. ರಾಜಯೋಗವು ಜೀವಶುದ್ಧಿಗೆ ಸಾಧನವಾದರೆ ಶಿವಯೋಗವು ಶಿವಸಾಮರಸ್ಯಕ್ಕೆ ಸುವಿಧಾನ.

"ಬ್ರಹ್ಮರಂಧ್ರದಲ್ಲಿಪ್ಪನಾದ ಚೈತನ್ಯವಪ್ಪ ಪರಮ ಚಿತ್ಕಳೆಯೇ ಭಾವ–ಮನ-ಕರದಲ್ಲಿ ಶ್ರೀ ಗುರು ತಂದು ಸಾಹಿತ್ಯವ ಮಾಡಿದನಾಗಿ, ಭಾವದಲ್ಲಿ ಸತ್‌ಸ್ವರೂಪವಪ್ಪ ಇಷ್ಟಲಿಂಗವೆಂದೆನಿಸಿ, ಒಂದೇ ವಸ್ತು ತನು–ಮನ–ಭಾವಂಗಗಳಲ್ಲಿ ಇಷ್ಟಪ್ರಾಣ ಭಾವವಾದ ಭೇದವನರಿಯದೆ ಇಷ್ಟಲಿಂಗದ ದೃಷ್ಟಿಯಿಂದ ಗ್ರಹಿಸಿ, ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ ತೃಪ್ತಿಲಿಂಗವ ಭಾವಜ್ಞಾನದಿಂದ ಗ್ರಹಿಸಿ ಈ ಲಿಂಗತ್ರಯವಿಡಿದು ಆಚರಿಸಿ, ಲಿಂಗದೊಡನೆ ಕೂಡಿ ಲಿಂಗವೇ ತಾನು ತಾನಾಗಿ ವಿರಾಜಿಸುತಿರ್ಪುದೀಗ ಶಿವಯೋಗ ನೋಡಾ ಮಹಾಲಿಂಗ ಗುರು ಸಿದ್ಧೇಶ್ವರ ಪ್ರಭುವೇ" ಎಂದುದಾಗಿ ಶಿವಯೋಗದ ಸಂಪೂರ್ಣ ವಿವರಣೆಯನ್ನು ಸ್ಪಷ್ಟಪಡಿಸಿದ್ದಾರೆ. ಬಾಹ್ಯವನ್ನು ಸಂಪೂರ್ಣ ಮರೆತು, ತನ್ನ ಹೃದಯ ಕಮಲವನ್ನು ಅರಳಿಸಿಕೊಂಡು, ಜ್ಞಾನತೇಜದ ಇಷ್ಟಲಿಂಗಾನುಸಂಧಾನದಲ್ಲಿ ಬೆರೆತರೆ, ಶಿವಯೋಗ ಸಾಧನೆಯು

ಸಾಫಲ್ಯ ದೊರಕುವುದು. ಅದಕ್ಕಾಗಿ ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತ ಶಿವಾರ್ಚನೆಗಳನ್ನು ನಿಯಮಪೂರ್ವಕವಾಗಿ ನಿಷ್ಠೆಯಿಂದ ಮಾಡಿದರೆ ಸುಳಿದು ಸೂಸುವ ಗಾಳಿಯು ಸ್ಥಿರವಾಗಿ ನಿಲ್ಲುವದಲ್ಲದೆ ಮನಸ್ಸಿನ ಪರಿದಾಟ ಹೋಗಿ ಕಾಲ ಕರ್ಮವ ಗೆದೆಯಲು ಅನುಕೂಲವಾಗುವದು. ನಿರ್ಮಲ ಶರೀರಿಯಾಗಿ ಬೆಳಗಿನೊಳು ಬೆಳಗು ಒಡ ಗೂಡಿದಂತೆ, ಕ್ಷೀರದೊಳು ಕ್ಷೀರ ಕೂಡಿದಂತೆ ತಾನೇತಾನಾಗಿ ಶಿವಮಯವಾಗುವನು.

ಕಾರಣ ಹೃನ್ಮಂದಿರದಲ್ಲಿ ಶಿವಶಕ್ತಿ ಶಿವಭಾವವನ್ನು ಒಳಗಿಳಿಸಿ, ಬೆಳೆಸಿ, ಬೆಳಗಿಸಿ ಕೊಂಡು ತಿಮಿರಾವೃತದಂತಿರುವ ಮರೆವೆಯನ್ನು ಮರೆಯುವುದೇ ಶಿವಯೋಗಸಾಧಕರ ಗುರಿ.

"ಕೀಟೋ ಭ್ರಮರಯೋಗೇನ ಭ್ರಮರೋ ಭವತಿ ಧ್ರುವಂ|
ಮಾನವಃ ಶಿವಯೋಗೇನ ಶಿವೋ ಭವತಿ ಕೇವಲಂ||"

ಮಾನವನು ಈ ರೀತಿ ಅಂತರಂಗ ನಿರೀಕ್ಷೆ ಮಾಡಿ ಸಾಧಿಸಿದಾಗ ಈ ನುಡಿಮುತ್ತು ಸಾರ್ಥಕ; ಬಾಳ್ಬೆಳಕಿಗೆ ತಾರಕ.

## ಬೇಕು ವಿಶಾಲ ಭಾವನೆ ನಮಗೆ

ಸ್ವಾಮಿ ವಿವೇಕಾನಂದರು ಅಮೇರಿಕೆಗೆ ಹೋಗಿದ್ದರು. ಅಲ್ಲಿ ಅವರು ವಿಶ್ವ ಬಂಧುತ್ವದ ಬಗೆಗೆ ಹಲವಾರು ಸಂದರ್ಭಗಳಲ್ಲಿ ಅಮೇರಿಕನ್ನರಿಗೆ ತಿಳಿಸಿ ಹೇಳಿದರು. ಇಂಥ ಒಂದು ಸಂದರ್ಭದಲ್ಲಿ ಅವರು ಕಥೆಯೊಂದನ್ನು ತಮ್ಮ ಶ್ರೋತೃಗಳಿಗೆ ವಿವರಿಸಿ ಹೇಳಿದರು.

"ಬಾವಿಯೊಳಗೊಂದು ಕಪ್ಪೆ ಇತ್ತು. ಸಮುದ್ರದಲ್ಲಿ ಇನ್ನೊಂದು ಕಪ್ಪೆ ವಾಸವಾಗಿತ್ತು. ಒಂದು ದಿನ ಅದಾವುದೋ ಕಾರಣದಿಂದ ಸಮುದ್ರವಾಸಿ ಕಪ್ಪೆಯು ಈ ಕಪ್ಪೆ ಇರುವ ಬಾವಿಗೆ ಬಂದಿತು. ಬಾವಿಯ ಕಪ್ಪೆಗೆ ಈ ಆಗಂತುಕನನ್ನು ಕಂಡಾಗ ಮೊದಲು ಬಿಗುಮಾನ, ಆದರೆ ತಡೆಯಲಾರದಷ್ಟು ಕುತೂಹಲ. ಬಿಗುಮಾನವನ್ನು ಅದು ಬದಿಗಿಟ್ಟು ಆಗಂತುಕ ಕಪ್ಪೆಗೆ "ಏನಯ್ಯಾ ನೀನು ಅದೆಲ್ಲಿಂದ ಇಲ್ಲಿಗೆ ಬಂದೆ?" ಎಂದು ಕೇಳಿತು. ಸಮುದ್ರದ ಕಪ್ಪೆ 'ಸ್ನೇಹಿತ ಸಿಕ್ಕಿದ ಪರವಾ ಇಲ್ಲ' ಎಂದುಕೊಂಡಿತು. ಬೆರಗು ಕಣ್ಣಿನಿಂದ ತನ್ನನ್ನೇ ನೋಡುತ್ತಿದ್ದ ಬಾವಿಯ ಕಪ್ಪೆಗೆ, "ನಾನು ಸಮುದ್ರದಿಂದ ಬಂದೆ ಮಹಾರಾಯಾ" ಎಂದು ತಿಳಿಸಿತು. ಬಾವಿಯ ಕಪ್ಪೆಗೆ ಅದರ ಪರಿಚಯವೇ ಇರಲಿಲ್ಲ. ಹೀಗಾಗಿ ಸಮುದ್ರವೆಂದರೆ ಅದೆಂಥ ಬಾವಿ ಎಂದು ತನ್ನಲ್ಲಿ ಅಂದುಕೊಂಡಿತು. ಆಗಂತುಕ ಕಪ್ಪೆಯನ್ನು ಕೇಳಿ ಸಮಾಧಾನಗೊಳ್ಳಬೇಕೆಂದುಕೊಂಡಿತು. "ಅಯ್ಯಾ ನಿನ್ನ ಆ ಸಮುದ್ರವು ನನ್ನ ಈ ಬಾವಿಯಷ್ಟು ದೊಡ್ಡದಿದೆಯೆ?" ಎಂದು ಅದನ್ನು ಕೇಳಿತು.

ಆಗಂತುಕ ಕಪ್ಪೆಗೆ ನಗೆ ಬಂದಿತು. ಆಹಾ! ಎಲ್ಲಿಯ ಸಾಗರ, ಎಲ್ಲಿಯ ಈ ಬಾವಿ? ಪಾಪ ಈ ಕಪ್ಪೆಗೆ ಮರುಳು ಎಂದುಕೊಂಡಿತು. "ಈ ಭಾವಿ ಆ ಸಾಗರಕ್ಕೆ ಅದೆಂತು ಸಮ

ವಾದೀತು? ಅದು ಸಾಗರವೇ ಸಾಗರ, ಅಪರಂಪಾರ" ಎಂದು ತಿಳಿಸಿತು. ಪಾಪ ಬಾವಿಯ ಕಪ್ಪೆಗೆ ಇದೇನು, ಸುಳ್ಳಿನ ಕಂತೆಯೇ ಸರಿ ಎಂದೆನಿಸಿತು. "ಅಯ್ಯಾ ನೀನೇನೂ ಹೇಳಿದಿ. ನನ್ನೆದುರು ಮಾತಾಡಿದಿರಿ, ಸರಿ. ಸಟೆಯಾಡಬಾರದು ಕಂಡೆಯಾ? ಇಂಥ ದೊಡ್ಡ ಬಾವಿಯನ್ನು ಸಮುದ್ರಕ್ಕೆ ಅದೆಂತು ಹೋಲಿಸಬಹುದು? ಅದು ಸರಿಯೆ? ಇಂಥ ಬಾವಿಗಿಂತ ಇನ್ನೊಂದು ದೊಡ್ಡದು ಇದೆ ಎಂದರೆ ನಾನಂತೂ ಏನೇನೋ ನಂಬಲಾರೆ." ಈಗ ಸಮುದ್ರದ ಕಪ್ಪೆಗೆ ತುಸು ಕೋಪ ಬಂದಿತು. "ನೀನು ನಂಬು ಬಿಡು ಇರುವುದು ಮಾತ್ರ ಹಾಗೆಯೇ ಅದು ಸತ್ಯವಾದ ಮಾತು" ಎಂದು ಹೇಳಿದಾಗ ಬಾವಿಯ ಕಪ್ಪೆಗೆ ಇಂಥ ಹಸಿ ಸುಳ್ಳನ್ನು ಹೇಳುವ ಈ ಸ್ವಾರ್ಥಿಯನ್ನು ನಾನು ಇಲ್ಲಿ ಇರಗೊಡುವುದೇ ತಪ್ಪು ಎಂದೆನಿಸಿತಲ್ಲದೆ ಅದನ್ನು ಆ ಕೂಡಲೇ ಬಾವಿಯಿಂದ ಓಡಿಸಿ ಬಿಡಬೇಕೆಂದೂ ನಿರ್ಧರಿಸಿತು. ಪಾಪ ತಾನೇ ಹೆಚ್ಚಿನವ, ತನ್ನ ಬಾವಿಯೇ ಹಿರಿದು, ದೊಡ್ಡದು ಎನ್ನುವ ಮನೋಭಾವನೆ ಅದರದು.

ಈ ಬಾವಿಯ ಕಪ್ಪೆಯಂತೆಯೇ ನಾವೆಲ್ಲ ಮಾನವರ ಜೀವನವಾಗಿದೆ. ಒಬ್ಬರು ಇನ್ನೊಬ್ಬರನ್ನು ಸಹಿಸಿಕೊಳ್ಳುವದಿಲ್ಲ. ನಾನು ಹೆಚ್ಚು ಅವನು ಕೀಳು ಎಂಬ ಒಂದು ಬಗೆಯ ಬಡಿದಾಟದಲ್ಲಿ ನಾವೆಲ್ಲರೂ ಕಾಲ ಕಳೆಯುತ್ತಿದ್ದೇವೆ; ಸಂಕುಚಿತತೆ ಇಲ್ಲವೇ ಸಣ್ಣತನಗಳು ನಮ್ಮಲ್ಲಿ ಅಡ್ಡಗೋಡೆಗಳನ್ನು ನಿರ್ಮಿಸುತ್ತವೆ. ನಾವು ಪರಸ್ಪರರನ್ನು ಅರಿಯಲು ಮುಂದಾಗುವದಿಲ್ಲ. ಇನ್ನೊಬ್ಬರ ಹೆಚ್ಚುಗಾರಿಕೆ ತಿಳಿಯಲು ಮುಂದಾಗುವದಿಲ್ಲ. ಅಹಂಕಾರದ ಕಿಚ್ಚಿನಲ್ಲಿ ಬಿದ್ದು ಸಾಯುತ್ತೇವೆ ರಾಷ್ಟ್ರಾಭಿಮಾನವನ್ನು ಕಡೆಗಣಿಸಿ ವೈಯಕ್ತಿಕ ಸ್ವಾರ್ಥಕ್ಕೆ ಬಡಿದಾಡುತ್ತಿದ್ದೇವೆ. ವಿಶಾಲ ಭಾವನೆಯುಳ್ಳವರನ್ನು ಮೂಲೆಗೊತ್ತಲು ಪ್ರಯತ್ನಿಸಿದರೆ ನಾವು ನಾಡಿಗೆ ರಾಷ್ಟ್ರಕ್ಕೆ ಅಹಿತ ಬಯಸಿದಂತಾಗುತ್ತದೆ, ಅಲ್ಲದೆ ರಾಷ್ಟ್ರದ್ರೋಹವನ್ನು ಮಾಡಿದಂತಾಗುವದು.

ನಾವೆಲ್ಲರೂ ಒಂದೇ ತಾಯಿಯ ಮಕ್ಕಳು. ಪರಸ್ಪರ ಬೆಳವಣಿಗೆಗೆ ಪೋಷಕರಾಗುವದನ್ನು ಬಿಟ್ಟು ಶೋಷಕರಾದರೆ ಆ ಭಾವಿಯ ಕಪ್ಪೆಯಂತೆ ಇದ್ದಲ್ಲಿಯೇ ಇರಬೇಕಾಗುತ್ತದೆ. ಇದಕ್ಕಾಗಿ ನಾವು ಇಂಥ ಭಾವನೆಗಳಿಂದ ದೂರವಾಗಿರಬೇಕು. ಸಮಾಜದಲ್ಲಿ ನಾಡಿನಲ್ಲಿ ನವಚೈತನ್ಯ ಮೂಡಿ ಬರಬೇಕಾದರೆ ನಮ್ಮೆಲ್ಲರಲ್ಲಿ ವಿಶಾಲ ಭಾವನೆ ಮೂಡಿ ಬರಬೇಕು. ಮಧುರ ಬಾಂಧವ್ಯ ಬೆಳೆಯಬೇಕು. ಇದರಿಂದ ಬಾಳಿನ ಬೆಳಕಿನ ಕಿರಣಗಳು ಸುತ್ತಲೆಲ್ಲ ಪ್ರಕಾಶಿಸುವವು.

### ಸದಾ ಸಮಾಜಸೇವಾಯಾಂ ಸಾಂತ್ವನಂ ಪರಮಂ ಮತಂ

ಸಾಮಾಜಿಕ ಜೀವನ ಸುಖ ದುಃಖಗಳ ಆಗರ. ಸಮಾಜ ಸೇವೆಯಲ್ಲಿ ತೊಡಗಿದಾಗ ಕಷ್ಟಗಳು ಎದುರು ಬರುವದು ಸ್ವಾಭಾವಿಕ. ಇಂತಹ ಪ್ರಸಂಗಗಳಲ್ಲಿ ಜನರು ದ್ವೇಷಾಸೂಯೆಗಳಲ್ಲಿ ಮುಳುಗಿ ಸ್ವಾರ್ಥಸಾಧಿಸದಿದ್ದರೆ ನಿಂದೆ ಮಾಡುತ್ತಾರೆ. ಅಪವಾದ ಕೊಡುತ್ತಾರೆ. ಏನೆಲ್ಲವನ್ನು ಮಾಡಲು ಹಿಂಜರಿಯದೆ, ಅವರ ಭವಿಷ್ಯ ಹಾಳು ಮಾಡಲು

ಅಹೋರಾತ್ರಿ ಪರಿಶ್ರಮ ಪಡುತ್ತಾರೆ. ಅಸೂಯೆಪಡುವವರಿಗೆ ಎಂತಹ ಉಪದೇಶಮಾಡಿದರೂ ನಾಟಲಾರದು. ಸ್ವಾರ್ಥ ಸಾಧನೆಗಾಗಿ ಅಹೋರಾತ್ರಿ ಚಿಂತಿಸುತ್ತಿರುವಾಗ, ಅವರಿಗೆ ಮತ್ತೊಬ್ಬರಿಗೆ ನೋವು ನೀಡುವದೇ ಆನಂದವಾಗಿರುತ್ತದೆ. ಸಮಾಜ ಸೇವಕರ ವ್ಯಕ್ತಿತ್ವದ ಘಟನೆ ಅವರಿಗೆ ತಿಳಿಯದು ನಿಂದಕರಿಗೆ ದೋಷದೃಷ್ಟಿಯೇ ತುಂಬಿರುತ್ತದೆಯೇ ಹೊರತು ವಿಶಾಲದೃಷ್ಟಿ, ಅಂತಃಕರುಣೆ ಅವರಲ್ಲಿ ಸುಳಿಯದು. ಸಾಮಾಜಿಕ ಧರ್ಮದೃಷ್ಟಿ ಬರದು.

ಸಮಾಜ ಸೇವೆಯು, ಕಣ್ಣು ಮುಚ್ಚಿ ಗುಹೆಯಲ್ಲಿ ಕುಳಿತು ತಪಸ್ಸು ಮಾಡುತ್ತಿರುವ ತಪಸ್ಸಿಗಿಂತಲೂ ಹೆಚ್ಚಿನದು. ತಪಸ್ಸಿಗೆ ಆತ್ಮಾನುಸಂಧಾನವೊಂದೇ ಮುಖ್ಯ ಗುರಿಯಾಗಿದ್ದರೆ, ಸಮಾಜ ಸೇವಕರಿಗೆ ಆತ್ಮಾನುಸಂಧಾನ ಸಮಾಜ ಸುಧಾರಣೆ ಎರಡೂ ಮುಖ್ಯ ಗುರಿಯಾಗಿರಬೇಕಾಗುತ್ತದೆ. ಬಂಡಿಗೆ ಗಾಲಿಗಳೆರಡು ಇದ್ದರೆ ಮಾತ್ರ ಮುಂದೆ ಹೋಗಲು ಸಾಧ್ಯ. ಹಾಗೆಯೇ ಸಮಾಜ ಸೇವಕರಿಗೆ ಕರ್ತವ್ಯನಿಷ್ಠೆ, ಸಾಮಾಜಿಕ ಕಳಕಳಿ, ನಿರಾಶೆ, ಸ್ವಾರ್ಥ ತ್ಯಾಗ, ಆತ್ಮ ಸಂಯಮ ಇವೆಲ್ಲವುಗಳು ತುಂಬಿರಬೇಕಾಗುತ್ತದೆ. ಸಾಮಾಜಿಕ ಜೀವನದಲ್ಲಿ ಜನರಿಗೆ ಬಹಿರ್ಮುಖದಂತೆ ಕಂಡರೂ ಅವರು ಅಂತರ್ಮುಖಿಗಳು; ನಿರಂತರ ಅವರಿಗೆ ಸಮಾಜದ ಚಿಂತನೆಯಿರುತ್ತದೆ. ಸಮಾಜ ಚಿಂತನೆಯೇ ಶಿವಪೂಜೆ, ಸದಾ ಕಾಯಕದಲ್ಲಿ ತೊಡಗಿದವರಿಗೆ ಮತ್ತೊಂದು ಕಡೆ ಮನಸ್ಸು ಹರಿಯದು. ಕಾಯಕವಿಲ್ಲದಿದ್ದರೆ, ಆಲಸ್ಯವು ಅಲ್ಲಿ ಆವರಿಸಿ, ಮನುಷ್ಯ ಜೀವನವನ್ನು ಹಾಳು ಮಾಡುತ್ತದೆ. ಕಾಯಕ ನಿಷ್ಠೆಯು ಮನುಷ್ಯನನ್ನು ಮೇಲಕ್ಕೆತ್ತುತ್ತದೆ. ಮೊದಲಿಗೆ ಸ್ವಲ್ಪ ಕಠಿಣ ಕಂಡರೂ ಮುಂದೆ ಸುಖಕ್ಕೆ ದಾರಿದೀಪವಾಗುತ್ತದೆ. ಆದರೆ ಸಮಾಜ ಸೇವೆ ಮಾಡುವವರಿಗೆ ತಾಳ್ಮೆ ಬಹಳಿರಬೇಕಾಗುತ್ತದೆ. ಧೈರ್ಯವು ತುಂಬಿರಬೇಕಾಗುತ್ತದೆ. ಸಮತ್ವ ದೃಷ್ಟಿ, ಸಮ್ಯಕ್ ದೃಷ್ಟಿ ಹಾಗೂ ಬಹುದೂರ ದೃಷ್ಟಿ ಅವರಲ್ಲಿದ್ದರೆ ಮಾತ್ರ ಬೆಲೆ ಮತ್ತು ಬಲ ಬರುತ್ತದೆ. ಅವುಗಳೇ ಅವರನ್ನು ಕಾಯುತ್ತವೆ. ಶಾಂತಿಯನ್ನು ನೀಡುತ್ತವೆ. ವ್ಯಕ್ತಿತ್ವ ವಿಕಾಸವು ಅವುಗಳಿಂದಲೆ ದೊರೆಯುತ್ತದೆ. ಭಾವನೆ ವಿಶಾಲವಾಗುತ್ತ ಹೋದಲ್ಲಿ ಸಂಕುಚಿತತನವು ಅಲ್ಲಿ ಇರದು. ಸಮಾಜ ಸೇವೆಯಲ್ಲಿದ್ದವರಿಗೆ ದೈವೀಶಕ್ತಿ ಪ್ರಾದುರ್ಭವಿಸಿ, ಜನಕಲ್ಯಾಣ ಮಾನವೀಯ ಅನುಕಂಪವೇ ಮೈಯಲ್ಲಿ ಆವರಿಸಿರುತ್ತದೆ. ಅಲ್ಲಿ ಕೃತ್ರಿಮತೆ, ಕೃತಘ್ನತೆ, ತಲೆದೋರದು. ನಿರಾಶೆಯಿಂದ ಸಮಾಜ ಸೇವೆ ಮಾಡುವವರಿಗೆ, ಅರಿಯದ ಜನರು ದೂಷಿಸಿದರೆ, ಅವರು ಅದಕ್ಕೆ ಮನಸ್ಸು ಹಾಕಲಾರರು. ಅವರು ತಮ್ಮ ಗುರಿ ಸಾಧನೆಯತ್ತ, ಕರ್ತವ್ಯನಿಷ್ಠೆಯೊಡನೆ ಮುಂದೆ ಸಾಗುತ್ತಾರೆ, ಸಮಾಜೋದ್ಧಾರಕರಾಗುತ್ತಾರೆ.

**ಜೀವನಂ ರಂಗಭೂಮಿಃ ಸ್ಯಾತ್ ಪ್ರಯತ್ನಸ್ತತ್ರ ಸಾಧನಂ**

ಜೀವನವು ಅದೊಂದು ಸಾಧನರಂಗ. ಈ ರಂಗಭೂಮಿಯಲ್ಲಿ ನಿತ್ಯವೂ ಸಾಧನೆ ಮಾಡಬೇಕಾಗುತ್ತದೆ. ಕಷ್ಟ ಸಹಿಸಬೇಕಾಗುತ್ತದೆ. ಸಾಮಾಜಿಕ ಸಮಸ್ಯೆಗಳು, ಧಾರ್ಮಿಕ

ಸಮಸ್ಯೆಗಳು, ಆಂತರಿಕ ಸಮಸ್ಯೆಗಳು ಇವೆಲ್ಲವುಗಳು ಎದುರು ಬಂದಾಗ ಧೈರ್ಯದಿಂದ ಬಗೆಹರಿಸಬೇಕಾಗುತ್ತದೆ. ಒಂದೊಂದು ಸಮಸ್ಯೆಗೆ ಒಂದೊಂದು ರೀತಿಯ ವಿಚಾರ ಮಾಡಬೇಕಾಗುತ್ತದೆ. ಧ್ಯೇಯಧೋರಣೆ ಒಳ್ಳೆಯದಾಗಿರಬೇಕಾಗುತ್ತದೆ. ಪವಿತ್ರ ಭಾವನೆಯನ್ನು ತುಂಬಿಕೊಂಡಿರಬೇಕಾಗುತ್ತದೆ. ಪಾವಿತ್ರ್ಯತೆಯೇ ಆತ್ಮವಿಕಾಸದ ಅಡಿಗಲ್ಲು, ವ್ಯಕ್ತಿತ್ವ ವಿಕಾಸವಾಗಲು ಆತ್ಮಶಕ್ತಿಯ ಪ್ರತಿಭೆ ಮೂಡಿದಾಗ ಸಾಧ್ಯ. ಸಾಧನೆಯ ಕುಲುಮೆಯಲ್ಲಿ ಬೆಂದಾಗ ಈ ಜೀವನ ಚೊಕ್ಕ ಚಿನ್ನವಾಗುತ್ತದೆ. ವ್ಯಕ್ತಿಗೆ ಶಕ್ತಿ ತುಂಬುತ್ತದೆ. ಮುಕ್ತಿಗೆ ಸಾಧನವಾಗುತ್ತದೆ.

ಈ ಲೋಕದಲ್ಲಿ ಜನಿಸಿದ ಮೇಲೆ ಲೇಸಿನ ಬದುಕಿಗಾಗಿ ಪರಿಶ್ರಮಿಸಬೇಕಾಗುತ್ತದೆ, ಬಾಳೆಲ್ಲವನ್ನು ಬಂಗಾರದಂತೆ ಶುದ್ಧ ಮಾಡಿಕೊಳ್ಳಬೇಕಾಗುತ್ತದೆ. ಒಳ್ಳೆಯದಕ್ಕಾಗಿ ಬದುಕಿ ಆದರ್ಶಮಯ ಜೀವನವನ್ನು ಮಾಡಿಕೊಂಡಾಗ ಸಫಲತೆ. ಅದಕ್ಕಾಗಿ ನಿರ್ದಿಷ್ಟ ಗುರಿಯತ್ತ ಸಾಗಿ, ಜೀವನವನ್ನು ಪಾವನ ಮಾಡಿಕೊಳ್ಳಬೇಕಾಗುತ್ತದೆ.

ಬೀಜವನ್ನು ನೆಲದಲ್ಲಿ ಬಿತ್ತಿದ ಮೇಲೆ ಮಣ್ಣು, ಗಾಳಿ, ನೀರುಗಳ ಸಹಾಯದಿಂದ ಅದು ಸಸಿಯಾಗಲೇ ಬೇಕು; ಮಣ್ಣಾಗಲಾರದು. ಬೆಳವಣಿಗೆಯ ನಿಯಮವನ್ನು ಅನುಸರಿಸಿ, ಬೆಳೆದು ಆ ಸಸಿಯು ಹೆಮ್ಮರವಾಗಿ ಫಲಪುಷ್ಪಗಳನ್ನು ನೀಡುವದು ನಿಸರ್ಗದ ನಿಯಮವಾಗಿದೆ. ಹಾಗೆಯೇ ಈ ಜೀವನದಲ್ಲಿ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕಾದರೆ, ಪ್ರತಿಯೊಬ್ಬರೂ ಮತ್ತೊಬ್ಬರ ಒಳ್ಳೇ ಭಾವವನ್ನು ಚನ್ನಾಗಿ ಅರ್ಥೈಸಿಕೊಂಡು, ಹೀರಿಕೊಂಡು ವ್ಯಕ್ತಿತ್ವವನ್ನು ನಾಶಮಾಡಿಕೊಳ್ಳದೆ ಧಾರ್ಮಿಕ ಹಾಗೂ ಸಾಮಾಜಿಕ ಶಕ್ತಿಯ ಬೆಳವಣಿಗೆಯನ್ನು ಬೆಳೆಸಿಕೊಂಡರೆ ಸಾರ್ಥಕ, ಆದರಿಂದ ಸಾಮಾಜಿಕ ಕಲ್ಯಾಣವಾಗುತ್ತದೆ; ನಮ್ಮ ಜೀವನ ವ್ಯಾಪಾರಗಳಿಗೆಲ್ಲ ಪಾರಮಾರ್ಥಿಕ ವಿಷಯದಲ್ಲಿ ದೃಢಚಿತ್ತನಾದಾಗ ಕ್ಲೇಶಗಳ ನಿವಾರಣೆ. ಕೊರತೆಗಳ ಬಿರುಗಾಳಿ ಬೀಸುತ್ತಿದ್ದರೂ, ಆಧ್ಯಾತ್ಮ ಜ್ಞಾನ ಮಾತ್ರವೇ ಸಮರ್ಥವಾಗಿ ಎದುರು ನಿಂತು, ಕೊರತೆಗಳನ್ನು ಶಾಶ್ವತವಾಗಿ ನಿವಾರಿಸಬಲ್ಲದು. ನಿಜವಾದ ಜೀವನವೇ ಜ್ಞಾನ ಸಂಪಾದನೆ, ಜ್ಞಾನವೇ ಜೀವನ, ಅಜ್ಞಾನವೇ ಮೃತ್ಯು. ಅಜ್ಞಾನದಲ್ಲಿ ಮುಳುಗಿದಾಗ ಸಿಹಿಕಹಿಗಳ ಅನುಭವ. ಈ ಹೋರಾಟದಲ್ಲಿ ಪಾರಾಗಬೇಕಾದರೆ ಧೈರ್ಯ ಸಾಹಸ, ಸತ್ಯ ಮತ್ತು ಪ್ರೇಮದ ಕನಸನ್ನು ಕಾಣಬೇಕಾಗುತ್ತದೆ. ಆಗ ಅದು ಫಲಕಾರಿಯಾಗುತ್ತದೆ. "ಸರ್ವದಾ ಕರ್ಮವನ್ನು ಆಚರಿಸುತ್ತಿರಬೇಕು. ಆದರೆ ಕರ್ಮಕ್ಕಾಗಲಿ, ಫಲಕ್ಕಾಗಲಿ ಕಟ್ಟು ಬೀಳಕೂಡದು" ಇದು ಗೀತೆಯ ಅಮರ ಸಂದೇಶ. ಅದಕ್ಕಾಗಿ ಈ ಜೀವನ ರಂಗಭೂಮಿಯಲ್ಲಿ ಅವರವರ ಕರ್ತವ್ಯ ಕರ್ಮವನ್ನು, ಒಬ್ಬರ ಮನಸ್ಸನ್ನು ನೋಯಿಸದೆ ನಿಷ್ಠೆಯಿಂದ ಮಾಡಿದ್ದಲ್ಲಿ ಸಮಾಜಕ್ಕೂ ರಾಷ್ಟ್ರಕ್ಕೂ ಹಿತ.

**ಸ ಮಹಾತ್ಮಾ ಸುದುರ್ಲಭಃ**

ಸುಖ ದುಃಖಗಳನ್ನು ಮೀರಿ, ದ್ವೇಷಾಸೂಯೆಗಳನ್ನು ತೂರಿ, ಪರಹಿತವೇ ತಮ್ಮ

ಹಿತವೆಂದು ಬಗೆದು, ಶಿವಪೂಜಾ ನಿಷ್ಠರಾಗಿ ಲಿಂಗೋಪಭೋಗಿಗಳಾಗಿ, ಕರ್ಮಯೋಗ, ಜ್ಞಾನಯೋಗಗಳ ಅನುಭವವನ್ನು ಪಡೆದು, ಅರಿಷಡ್ವರ್ಗಗಳನ್ನು ದೂಡಿ, ನಿತ್ಯ ನಿಜಾನಂದದಲ್ಲಿದ್ದು ಉದಾರ ಚರಿತರಾದ ಮಹಾತ್ಮರಿಗೆ ಶಿವಯೋಗಿಗಳೆಂದು ಕರೆಯುತ್ತಾರೆ. ಮಹಾತ್ಮರು ಮಹಾನ್ ವ್ಯಕ್ತಿತ್ವವನ್ನು ಹೊಂದಿ, ಅಂತಸ್ಸತ್ವವನ್ನು ತಳೆದವರಾಗಿ ದೈವೀ ಪ್ರಕಾಶದಲ್ಲಿ ಸತ್ಯವನ್ನು ಕಂಡುಕೊಂಡು ಆ ಸತ್ಯವನ್ನು ಜನ ಜೀವನದಲ್ಲಿ ಮೂಡಿಸಲು ಹೋರಾಡುತ್ತಾರೆ. ತಮ್ಮ ತಪಸ್ಸನ್ನು ಜನ ಕಲ್ಯಾಣಕ್ಕಾಗಿ ಮೀಸಲಾಗಿರಿಸುತ್ತಾರೆ. ಅವರ ಜೀವನ ಸುವರ್ಣ ಘಟದಂತೆ ಪ್ರಕಾಶಮಯವಾದುದು. ತತ್ವಪರಿಪೂರ್ಣವಾದುದು. "ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ" ಇದು ಅವರ ಬಗೆ ಅವರು ಭಾವಜೀವಿಗಳಾಗಿದ್ದು, ಅಂತರ್ಮುಖಿಗಳಾಗಿ ಅನುಸಂಧಾನ ಮಾಡಿ, ಜೀವನವೆಲ್ಲವನ್ನು ಸುಂದರ ಸುಶೋಭಿತ ಧೂಳು ಮುಸುಕದ ದರ್ಪಣದಂತೆ ಮಾಡಿಕೊಂಡಿರುತ್ತಾರೆ. ಸಮದರ್ಶಿತ್ವ ಬುದ್ಧಿ ಸಹಜವಾಗಿ ಅವರಲ್ಲಿ ಕಂಡು ಬರುತ್ತದೆ. ಕೃತಕತೆ ಅವರಲ್ಲಿ ಎನಿತೂ ಕಾಣಲಾರದು. ಯೋಗಿಗಳು ಕಣ್ದೆರೆದು ನೋಡಿದರೆ ಸಾಕು ನೋಡಿದ್ದೆಲ್ಲವೂ ಪುನೀತವಾಗುತ್ತದೆ. ಅಂತಹ ಶಕ್ತಿಯನ್ನು ಪಡೆದುದರಿಂದಲೇ ಅವರು ಮಹಾತ್ಮರು. ಮಹಾತ್ಮರ ಮಹತ್ವವನ್ನು ವಿಶ್ವಪ್ರೇಮದಲ್ಲಿ ಕಾಣುತ್ತೇವೆ. ಅವರಿಗೆ ಸತ್ಯ ಕಾಯಕವೇ ದಿನಚರಿ. ಧ್ಯಾನ ಯೋಗವೇ ಅವರ ಜೀವನದುಸಿರು. ಅವರ ಅದ್ಭುತ ಶಕ್ತಿಗೆ ಕ್ರೂರ ಪ್ರಾಣಿಗಳು ಅಂಜುತ್ತವೆ, ತಲೆಬಾಗುತ್ತವೆ. ಅವರಿಗೆ ಬಾಹ್ಯ ದೃಷ್ಟಿ ಬೇಸರ. ಅಂತರ್ ದೃಷ್ಟಿಯೇ ಅವರಿಗೆ ಆಸರ. ಅವರ ನಿಚ್ಚ ಪೂಜೆಯು ಶಿವರಾತ್ರಿ. ಅವರು ಅವಿದ್ಯೆಯೆಂಬ ನೆರಳನ್ನು ನಿವಾರಿಸಿ, ವಿದ್ಯಾಕಿರಣಗಳನ್ನು ಹರಡಿ ಸಂಸ್ಕೃತಿಯ ಸಿಹಿ ನೀರನ್ನು ಸಮಾಜಕ್ಕೆ ಧಾರೆಯೆರೆಯುತ್ತಾರೆ. ಬುದ್ಧಿ ಜೀವಿಗಳನ್ನು ಶುದ್ಧ ಜೀವಿಗಳನ್ನಾಗಿ ಪರಿವರ್ತಿಸುತ್ತಾರೆ. ದಾನವತೆಯನ್ನು ಕಳೆದು ಮಾನವತೆಯನ್ನು ತುಂಬುತ್ತಾರೆ. ಹೃದಯ ದೌರ್ಬಲ್ಯವುಳ್ಳವರಿಗೆ ಆತ್ಮ ಶಕ್ತಿಯ ಪೌಷ್ಟಿಕಾಹಾರವನ್ನು ಕರುಣಿಸುತ್ತಾರೆ. ಬಡವರ ಪವಿತ್ರ ಭಕ್ತಿಗೆ ಮೆಚ್ಚುತ್ತಾರೆ. ಅವರ ಇಚ್ಛೆಯನ್ನು ಪೂರೈಸುತ್ತಾರೆ. ಇದುವೆ ಅವರ ಜೀವನದ ಮುಖ್ಯ ಗುರಿಯಾಗಿರುತ್ತದೆ. ಅಂತೆಯೇ ಅವರಿಗೆ ಜಗತ್ತು ಬಾಗುತ್ತದೆ. ಅವರ ಮಾತನ್ನು ಕೇಳುತ್ತದೆ. ಮಹಾತ್ಮರಿಗೆ ಸರ್ವ ಧರ್ಮ ಸಮನ್ವಯ ದೃಷ್ಟಿ ಸಹಜವಾಗಿ ಇರುತ್ತದೆ. ಇಂತಹ ಮಹಾನ್ ಶಕ್ತಿಯನ್ನು ತುಂಬಿಕೊಂಡು ರಾರಾಜಿಸುತ್ತಿರುವ ಶಿವಯೋಗಿಗಳಲ್ಲಿ ಮೂರುಸಾವಿರಮಠದ ಮೂಲ ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಮಹಾಶಿವಯೋಗಿಗಳು. ಇವರು ೧೨ನೆಯ ಶತಮಾನದಲ್ಲಿಯೇ, ಸಮಾಜದಲ್ಲಿ ನವ ಚೈತನ್ಯ ತುಂಬಿ, ಬಸವ ತತ್ವವನ್ನು ಕಾರ್ಯರೂಪದಲ್ಲಿರಿಸಿ, ಮೂರುಸಾವಿರ ವಿರಕ್ತರಿಗೆ ಧರ್ಮಬೋಧೆ ಮಾಡಿ, ಜನಜಾಗ್ರತಿಗೈದ ದಿವ್ಯಚೇತನ, ನಿರ್ವಿಕಲ್ಪ ಸಮಾಧಿಯಲ್ಲಿದ್ದು, ಅಂತಃಚಕ್ಷುವಿನಿಂದ ನಿರೀಕ್ಷಿಸಿದ ಬಳಲಿದ ಜೀವಿಗಳಿಗೆ ಶಾಂತಿ ನೀಡಿ, ಅಂತಸ್ಫೂರ್ತಿಯ ಸೆಲೆಯನ್ನು ಪುಟಿಸುತ್ತಿರುವ ಪುಣ್ಯಮೂರ್ತಿ.

## ಕೃಷಿತೋ ನಾಸ್ತಿ ದುರ್ಭಿಕ್ಷಂ

"ಕೋಟಿವಿದ್ಯೆಗಿಂತ ಮೇಟಿ ವಿದ್ಯೆಯೇ ಮೇಲು" ಇದು. ಸರ್ವಜ್ಞನ ನುಡಿ. ಭಾರತವು ಕೃಷಿ ಪ್ರಧಾನ ದೇಶವಾಗಿದೆ. ಕೃಷಿ ಕಾಯಕದಿಂದ ರಾಷ್ಟ್ರವು ಸಮೃದ್ಧಿ ಹೊಂದಲು ಸಾಧ್ಯ. ದುಡಿದಂತೆ ಫಲ. ರೈತರ ಬದುಕಿನ ಜೀವನಾಡಿ ಕೃಷಿ. ಈ ಕೃಷಿ ಕರ್ಮವು ಎಲ್ಲ ಉದ್ಯೋಗಗಳಿಗಿಂತ ಅತಿ ಹೆಚ್ಚಿನದು. ಇದರಿಂದ ಶರೀರಕ್ಕೆ ಪುಷ್ಟಿ ದೊರೆತು ಪೋಷಣೆ ದೊರೆಯುತ್ತದೆ. ಪ್ರತಿಯೊಬ್ಬ ವ್ಯಕ್ತಿಯು ಸ್ವತಂತ್ರ ಜೀವನ ನಡೆಸಲು ಕೃಷಿ ಕಾಯಕವು ದೊಡ್ಡ ಸಾಧನವಾಗಿದೆ. ಈ ಕಾಯಕವು ಮಾನವನನ್ನು ಮೇಲೆಬ್ಬಿಸುತ್ತದೆ, ಉತ್ಸಾಹವನ್ನು ನೀಡುತ್ತದೆ. ಆಲಸ್ಯದಿಂದ ದೂರಾಗಿ, ಆರೋಗ್ಯ ದಿಂದ ಜೀವನ ಸಾಗಿಸಲು ಕೃಷಿ ಕಾಯಕವೇ ಪರಮೋಪಾಯವಾಗಿದೆ. ಅಂತರಂಗ ಬಹಿರಂಗ ಶುದ್ಧಿಗಳುಂಟಾಗಿ ಆತ್ಮಕ್ಕೆ ಚೈತನ್ಯ ದೊರೆಯುತ್ತದೆ. ದುರ್ಭಿಕ್ಷವನ್ನು ನಿವಾರಿಸುತ್ತದೆ!

ಭೂದೇವಿಗಾಗಿ ಅಹೋರಾತ್ರಿ ಪರಿಶ್ರಮಿಸಿದರೆ ಬೇಡಿದ ಇಷ್ಟಾರ್ಥ ಸಿದ್ಧಿಯನ್ನು ನೀಡುವಳು. ಆದಕ್ಕಾಗಿ ಬುದ್ಧಿಶಕ್ತಿ ದ್ರವ್ಯಶಕ್ತಿಯಿಂದ ಶ್ರಮಿಸಿದರೆ ಸಾರ್ಥಕ. ಆಲಸ್ಯ ವುಳ್ಳವರಾಗಿ ದುಶ್ಚಟಗಳಲ್ಲಿ ತನ್ಮಯರಾದರೆ ಮಾತ್ರ ಇದ್ದ ಭೂಸಂಪತ್ತನ್ನು ಕಳೆದು ಕೊಂಡು, ನಿರ್ಗತಿಕರಾಗುವ ಪ್ರಸಂಗ ಬರಬಹುದು. ಕೃಷಿ ಕಾಯಕದಂತಹ ಉದ್ಯೋಗವು ಮತ್ತೆಲ್ಲಿಯೂ ಸಿಗಲಾರದು. ಪರಾಧೀನತೆ, ಸಮಯದ ಬಂಧನವು ಇಲ್ಲಿ ಇರಲಾರದು. ಒಳ್ಳೆ ಒಕ್ಕಲಿಗನಾದವನು ಸೂರ್ಯೋದಯದ ಮುಂಚೆ ಏಳುತ್ತಾನೆ. ತನ್ನ ಆಳು ಮಕ್ಕಳನ್ನು ಎಬ್ಬಿಸಿ ಹೊಲಕ್ಕೆ ಹೋಗಿ, ಬೆವರು ಬರುವಂತೆ ದುಡಿದು ಆನಂದ ಪಡುತ್ತಾನೆ. ಇವನಿಗೆ ಯಾವ ರೋಗಗಳು ಅಂಟಲಾರವು. ಆನಂದದಿಂದ ಯಥೇಚ್ಛವಾಗಿ ಉಣ್ಣು ತ್ತಾನೆ. ಉಂಡಿದ್ದನ್ನು ಕರಗಿಸಿಕೊಂಡು ಸುಖಜೀವನ ಸಾಗಿಸುತ್ತಾನೆ. ಇತ್ತಿತ್ತಲಾಗಿ ವಿದ್ಯಾವಂತರಾದವರು ಕೃಷಿ ಕಾಯಕಕ್ಕೆ ಪ್ರಾಧಾನ್ಯತೆ ನೀಡದೆ ಕೇವಲ ನೌಕರಿಯಾಶೆಗಾಗಿ ಅತ್ತಿತ್ತ ಅಲೆದಾಡುತ್ತ ತಮಗೆ ಬಂದಷ್ಟು ಭೂಮಿಯಲ್ಲಿ ದುಡಿಯದ, ಕಷ್ಟ ಸಹಿಸದೆ ಹೊರಗಿನಾಡಂಬರದಲ್ಲಿ ಕಾಲಕಳೆಯುತ್ತಿರುವದನ್ನು ನೋಡಿದಾಗ ದುಃಖವೆನಿಸದಿರಲಾರದು. ವಿದೇಶದಲ್ಲಿ ಹೆಚ್ಚಾಗಿ ಸುಶಿಕ್ಷಿತರಾದವರೆ ಕೃಷಿ ಕಾಯಕದಲ್ಲಿ ಮಗ್ನರಾಗಿ ಯಶಸ್ಸು ಗಳಿಸು ತ್ತಿದ್ದಾರೆ. ಎಲ್ಲಿಯವರೆಗೆ ನೇಗಿಲಯೋಗಿಗಳಾಗಿ ಕಾರ್ಯನಿರತರಾಗುವದಿಲ್ಲವೋ, ಅಲ್ಲಿಯವರೆಗೆ ಭಾರತವು ಸಮೃದ್ಧಿ ಹೊಂದಲಾರದು. ಭೂಮಿಯನ್ನು ವಿಶ್ವಾಸದಿಂದ ನಂಬಿ, ಅದಕ್ಕಾಗಿ ಮಾಡಿದ ಖರ್ಚು ಹಾಗೂ ಶ್ರಮವು ನಿರರ್ಥಕವಾಗಲಾರದು. ಆದರೆ ಭೂಮಿಯನ್ನು ಪರೀಕ್ಷಿಸಿ, ಹದಮಾಡಿ, ಸಮಯಕ್ಕೆ ಸರಿಯಾಗಿ ಬೀಜಗಳನ್ನು ಬಿತ್ತಿ, ಹೊಲದಲ್ಲಿ ಬೆಳೆದ ಕರಿಕೆಯನ್ನು ಕಿತ್ತಿ ಹಸನಮಾಡಿದರೆ ಇಚ್ಛಿಸಿದಂತೆ ಬೆಳೆಬಂದು, ಗಳಿಕೆ ಯುಂಟಾಗಿ ಸಮಾಧಾನವಾಗುತ್ತದೆ. ಕೃಷಿ ಕಾಯಕದಲ್ಲಿ ಬೇಸರ ಮಾಡಿಕೊಂಡರೆ ಆಳಿನ ಮೇಲೆಯೇ ಕೆಲಸ ಸಾಗಿದರೆ, ಹಣ ಮತ್ತು ಗುಣವೂ ಹೋಗಿ ನಿಷ್ಫಲವಾಗುವದಲ್ಲದೆ

"ಆಳು ಮಾಡಿದ್ದು ಹಾಳು" ಗಾದೆಯು ಮಾತಿನಂತಾಗುವದು. ಒಕ್ಕಲಿಗನಾದವನು ನಾಗಭೂಷಣ ಘನಮಠ ಶಿವಯೋಗಿಗಳವರು ಬರೆದ ಕೃಷಿಜ್ಞಾನ ಪ್ರದೀಪಿಕೆಯನ್ನು ಚನ್ನಾಗಿ ಮನನ ಮಾಡಿಕೊಂಡರೆ ಕೃಷಿ ಕಾರ್ಯಕ್ಕೆ ಬಲ ಹಾಗೂ ಬೆಲೆ ಬಂದು ನವಚೈತನ್ಯ ದೊರೆಯುತ್ತದೆ.

## ಧ್ಯಾನಂ ನಿರ್ವಿಷಯಂ ಮನಃ

ಆತ್ಮವಿಶ್ವಾಸಕ್ಕೆ ಧ್ಯಾನವು ಮುಖ್ಯ ಸಾಧನ; ಮುಕ್ತಿಗೆ ಮೂಲಕಾರಣ. ಮನೋನಿಗ್ರಹಕ್ಕೆ ಆಣೆಕಟ್ಟು ಇದ್ದಂತೆ, ಅಂತರಂಗ ಮತ್ತು ಬಾಹ್ಯಗಳೆರಡನ್ನು ಹತೋಟಿಯಲ್ಲಿಟ್ಟುಕೊಳ್ಳಲು ಧ್ಯಾನವೇ ಹೆದ್ದಾರಿ. ಧ್ಯಾನದ ಬಲದಿಂದ ಜೀವನ ವಿಕಾಸವಾಗುವದಲ್ಲದೆ ವಿಶ್ವಪ್ರಕಾಶಗೊಳಿಸುವ ಮಹಾಬೆಳಗು ಇದರಲ್ಲಿ ತುಂಬಿದೆ. ಕತ್ತಲೆ ದೂರಾಗಿ, ಆತ್ಮಶಕ್ತಿ ಪ್ರಾದುರ್ಭವಿಸಿ ಅಂಗಾಂಗಳೆಲ್ಲೆಲ್ಲ ಚೈತನ್ಯವುಂಟಾಗಿ ಶಾಂತಿಯುಂಟಾಗುತ್ತದೆ. ಶಾಂತಿ ಸಮಾಧಾನಗಳು ದೊರೆತು ಅಂಗ ಆತ್ಮಗಳೆರಡೂ ತುಷ್ಟಿ ಪುಷ್ಟಿಗೊಳ್ಳುತ್ತವೆ. ಭಾವಶುದ್ಧಿಯಾಗಿ, ಆತ್ಮಸಿದ್ಧಿಯಾಗುತ್ತದೆ. ಧ್ಯಾನಯೋಗದಷ್ಟು ಸುಲಭವಾದ ರಾಜಮಾರ್ಗ ಮತ್ತೊಂದಿಲ್ಲ. ಕಟ್ಟಳೆಗಳ ಕಟ್ಟುನಿಟ್ಟುಗಳಿಗಿಂಬಿಲ್ಲ. ಮತಾಚಾರಗಳ ವಿವೇಚನೆಯ ಗೊಂದಲವಿಲ್ಲ. ತೆರೆದ ಹೃದಯ, ನಿರ್ಮಲ ಮನಸ್ಸು, ಅಚಲಶ್ರದ್ಧೆ ಇವುಗಳೇ ಧ್ಯಾನಕ್ಕೆ ಬೇಕಾಗುವ ಸಾಧನೆಗಳು, ವಿಶ್ವಪ್ರೇಮ ಆತ್ಮಸಮರ್ಪಣಕ್ಕೆ ಧ್ಯಾನವೇ ದಾರಿ ಮಾಡಿಕೊಡುತ್ತಲಿದೆ. ಎಂತಹ ಸಂಕಟ ಬಂದರೂ ಧ್ಯಾನಶಕ್ತಿಯ ಬಲದಿಂದ ಪಾರಾಗಬಹುದು. ಪರಮಾತ್ಮನು ಸಾಧಕರ ಸರ್ವಾರ್ಪಣ ಭಾವಕ್ಕೆ ಮೆಚ್ಚಿ ಆನಂದವನ್ನು ನೀಡುವನಲ್ಲದೆ ಪ್ರತ್ಯಕ್ಷನಾಗುವನು. ಇದೇ ಭಾವವನ್ನು ಮಹಾತ್ಮಾ ಬಸವಣ್ಣನವರು "ಭಕ್ತನಾಗಿ ತನ್ನ ಹಿಡಿವೆನೆಂದು ಹೋದರೆ, ನುಗ್ಗು ಮಾಡುವ, ನುಸಿಯ ಮಾಡುವ, ಮಣ್ಣು ಮಾಡುವ, ಮಸಿಯ ಮಾಡುವ ಕೂಡಲ ಸಂಗಮ ದೇವರ ನೆರೆನಂಬಿದನಾದರೆ ಕಡೆಗೆ ತನ್ನಂತೆ ಮಾಡುವ" ಈ ತೆರನಾಗಿ ಸರ್ವಾರ್ಪಣ ಭಾವದ ಮಹತ್ವವನ್ನು ವಿವರಿಸಿದ್ದಾರೆ. ಮುಪ್ಪಿನ ಷಡಕ್ಷರಿ ಸ್ವಾಮಿಗಳು ಧ್ಯಾನ್ಯವನ್ನು ಕರುಣಿಸೆಂದು ಪ್ರಾರ್ಥಿಸಿದ್ದಾರೆ.

"ತಾನೆಂದರಿಯದೆ ಇದಿರೆಂದರಿಯದೆ| ಏನೂ ಇಲ್ಲದೆ ಇರುತಿಹ ಶಿವ ತಾ_||
ನಾನಂದದಿ ವರ ಮೂರುತಿಯಾದನ ಧ್ಯಾನದೊಳೆಂದಿಹನೋ
ಘನಮಹಿಮನ ನೆನೆದಾಕ್ಷಣ ಮಾತ್ರದಿ| ಜನಿಯಿಸಿ ಗತಿಸುತಿರುವ ಬ್ರಹ್ಮಾಂಡಂ|
ವನಜೋದ್ಭವ ವನದಾಕ್ಷರು ಜನಿಸಲು ಕರೆದೆರೊಲುವಿನಲ್ಲಿ|
ವನಜೋದ್ಭವ ನೀ ಸೃಜಯಿಸು ಲೋಕವ| ವನಜಾಕ್ಷನೆ ನೀ ರಕ್ಷಿಸು ಎನುತಲಿ||
ಅನುವಿತ್ತವರಿಂ ವಂದಿಸಿಕೊಂಬನ ಧ್ಯಾನದೊಳೆಂದಿಹೆನೋ||"

ಹೊರಗಿನ ಬಾಗಿಲವನ್ನು ಮುಚ್ಚಿ, ಒಳಗಿನ ಕವಾಟವನ್ನು ತೆರೆಯಲು ಇಂದ್ರಿಯಗಳ ಬಾಹ್ಯ ವ್ಯವಹಾರಗಳನ್ನು ನಿಲ್ಲಿಸಿ ದೇವನಲ್ಲಿ ಮನಸ್ಸಿಡಲು ಧಾನ್ಯವೇ ದಿವ್ಯೌಷಧ.

ಧ್ಯಾನದ ಬಲದಿಂದ ವಿಜಯ ಮಹಾಂತ ಶಿವಯೋಗಿಗಳು ಅರಿಷಡ್ವರ್ಗಗಳನ್ನು ಗೆದ್ದು ಆತ್ಮಶ್ರೀ ವಿಜಯ ಪತಾಕೆಯನ್ನು ಹಾರಿಸಿ ಮಹಾಚೇತನ ಸ್ವರೂಪರಾಗಿದ್ದರು. ಅವರು ಒಮ್ಮೆ ಧ್ಯಾನದಲ್ಲಿ ಕುಳಿತು, ಕಣ್ದೆರೆದು ಭಕ್ತರನ್ನು ನಿರೀಕ್ಷಿಸಿದರೆ ಸಾಕು, ಆ ಭಕ್ತರೆಲ್ಲ ಉದ್ಧಾರವಾಗುತ್ತಿದ್ದರು. ಧ್ಯಾನದ ಶಕ್ತಿಯ ಬಲವೇ ಅಂತಹದು.

ಜ್ಞಾನದಿಂದ ಧ್ಯಾನದಿಂದ ಕರ್ಮಫಲತ್ಯಾಗವೆಂದು ಗೀತಯಲ್ಲಿ ಹೇಳಿದ ಈ ಅಂತ ರ್ವಾಣಿ ಮುಮುಕ್ಷುಗಳಿಗೆ ಕೈದೀವಿಗೆ.

**ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ**

ಮಾತೆಗಿಂತ ಸ್ವರ್ಗಕ್ಕಿಂತ ಸ್ವದೇಶ ಪ್ರೇಮ ಹೆಚ್ಚಿನದು. ಎಂತಹ ಕಡುತರ ಕಷ್ಟ ಸಂಭವಿಸಿದರೂ ಮಾತೃಭೂಮಿಯಲ್ಲಿರುವ ಅಪಾರ ಅಭಿಮಾನ ಯಾರೂ ಬಿಡಲಾರರು. ಮಾತೃಭೂಮಿಯ ನಿಂದೆ ಸಹಿಸಲಾರರು. ಬಲಿದಾನ ಮಾಡಲೂ ಸಹ ಸಿದ್ಧರಿರುತ್ತಾರೆ. ಈ ಸ್ವದೇಶ ಪ್ರೇಮವು ಮಾನವನನ್ನು ಮೇಲಕ್ಕೆತ್ತುತ್ತದಲ್ಲದೆ ವ್ಯಕ್ತಿಗತ ಅಂತಃಶುದ್ಧಿಯನ್ನು ಸಿದ್ಧಿಸುತ್ತದೆ. ಇದೇ ಮಾನವೀಯತೆಯ ಲಕ್ಷಣ. ಮಾತೃಭೂಮಿಯ ಸ್ವಾಧೀನತೆಯ ವಿಚಾರದ ಪ್ರಥಮ ಚರಣವೆಂದು ಸ್ವಾಮಿ ವಿವೇಕಾನಂದರು ನುಡಿದಿದ್ದಾರೆ.

ಸುನೂಂಗೀ ಮಾತಾಕೀ ಆವಾಜ, ರಹೂಂಗೀಮರನೇಕೋ ತಯ್ಯಾರ,<br>
ಕಭೀಭೀ ಉಸ್ ವೇದಿಪರ್ ದೇವ, ನ ಹೋನೇದೂಂಗಿ ಅತ್ಯಾಚಾರ|<br>
ನ ಹೋನೇದೂಂಗೀ ಅತ್ಯಾಚಾರ, ಚಲೋ ಮೈ ಹೋಜಾವೂ ಬಲಿದಾನ,<br>
ಮಾತೃ ಮಂದಿರಮೆ ಹುಯಿ ಪುಕಾರ, ಚಢಾದೋ ಮುಝುಕೋ ಹೇ ಭಗವಾನ್|

ಎಂತಹ ಹೃದಯಸ್ಪರ್ಶಿ ನುಡಿಯಿದು! ಮಾತೃಭೂಮಿಯ ಮೇಲೆ ಅನುಪಮ ಶ್ರದ್ಧೆಯನ್ನು ವ್ಯಕ್ತಮಾಡುತ್ತ, ಕವಯಿತ್ರಿ ಸುಭದ್ರಾಕುಮಾರಿ ಚೌಹಾನರು ಬರೆದ ನುಡಿಗಳು ಮಲಗಿದವರನ್ನು ಎಚ್ಚರಿಸುತ್ತವೆ. ಅಭಿಮಾನ ಶೂನ್ಯರಿಗೆ ಬಲನೀಡುವಂತಹ ಧೀರವಾಣಿ ಈ ಶಬ್ದಗಳಲ್ಲಿ ಅಡಗಿದೆ, ಹುಟ್ಟಿದ ನಾಡಿಗೆ ತಾಯಿ ಭಾವನೆಯ ಕಲ್ಪನೆಯನ್ನು ತಾರದಿದ್ದರೆ ವ್ಯಕ್ತಿಯ ಹೃದಯವು ಕಲ್ಲಿನಂತಿರುವದಲ್ಲದೆ, ಪ್ರಾಣವಿಲ್ಲದ ಶರೀರದಂತೆ ಅವನ ಸ್ಥಿತಿಯಾಗುತ್ತದೆ, ಭಾವಶೂನ್ಯವಾಗುತ್ತದೆ. ಇದ್ದೂ ಇಲ್ಲದ ಜೀವನವಾಗುತ್ತದೆ. ಯಾವ ನಾಡಿನ ನೆಲದ ಮೇಲೆ ತಿರುಗಾಡಿ ಜಲವಾಯುಗಳನ್ನು ಸೇವಿಸಿ ಪ್ರೇಮವನ್ನು ಮಾಡದೆ ಹೋದರೆ, ಈ ಭಾವನೆ ಬಾರದೆ ಹೋದರೆ, ಪಶುಪಕ್ಷಿಗಳಿಗಿಂತಲೂ ಕಡೆ ಎಂದು ಹೇಳಬಹುದು. ರಾಷ್ಟ್ರೋದ್ಧಾರ ಮಾಡಬಯಸುವವರಿಗೆ ಸ್ವಾರ್ಥತ್ಯಾಗದಿಂದ ಒಡಗೂಡಿದ ಸ್ವದೇಶಿ ಪ್ರೇಮವೇ ಮೊದಲ ಹೆಜ್ಜೆ. ಜಪಾನ, ಜರ್ಮನ, ಇಂಗ್ಲಂಡ ಮುಂತಾದ ರಾಷ್ಟ್ರಗಳು ಇಂದು ಪ್ರಪಂಚದಲ್ಲಿ ಸಮೃದ್ಧಿ ಶಿಖರವನ್ನು ಮುಟ್ಟಲು ಸ್ವದೇಶ ಪ್ರೇಮವೇ ಮೂಲಕಾರಣ. ಮಹಾತ್ಮಾ ಗಾಂಧಿ, ಪಂ. ಜವಾಹರಲಾಲ ನೆಹರು, ಬಾಬು ರಾಜೇಂದ್ರ ಪ್ರಸಾದ ಮುಂತಾದವರು ಭಾರತಕ್ಕಾಗಿ ಸರ್ವಸ್ವ ಸಮರ್ಪಣ ಮಾಡಿರುವದರ ಪರಿಣಾಮ

ವಾಗಿಯೇ ನಾವಿಂದು ಸ್ವಾತಂತ್ರ್ಯದ ಬೆಳಕನ್ನು ಕಾಣುತ್ತಿದ್ದೇವೆ. ಎಳೆಯ ಮಕ್ಕಳು ಮೊದಲು ಮಾಡಿ ಹಿರಿಯರೆಲ್ಲರಲ್ಲಿ ದೇಶಪ್ರೇಮದ ತೆರೆಗಳು ಎಳುತ್ತಲಿವೆ.

"ಅಮಾರ್ ಸೋನಾರ್ ಬಾಂಗ್ಲಾ ಆಮಿ, ತೋಮಾರ್ ಬಾಲೋಬಾಸಿ।
ಚಿರದಿನ್ ತೋಮಾರ್ ಆಕಾಶ್, ತೋಮಾರ್ ಬಾತಾಸ್, ಅಮಾರ್ ಪ್ರಾಣೇಬಾ ಜಾಯ್ ಬಾಂಸಿ"।

ಎಂದು ಅಂದು ಕವೀಂದ್ರ ರವೀಂದ್ರರು ಹಾಡಿದ ಭಾವಪೂರ್ಣ ಬಂಗಾಲಿಗೀತೆ ನಮಗಿಂದು ನೆನಪಿಗೆ ಬಂದು ಹೃದಯ ಕರಗುತ್ತದೆ. ರಾಷ್ಟ್ರಪ್ರೇಮಕ್ಕೆ ಆಹ್ವಾನ ನೀಡುತ್ತದೆ. "ಬಂಗಾರದಂತಹ ಬಂಗ್ಲಾ ದೇಶವೆ! ನಿರಂತರವೂ ನನ್ನೆದೆಯಲ್ಲಿ ನುಡಿಸುತಿರುವ ಹೃದ್ವೀಣೆಯಾಗಿರುವೆ" ಎಂಬುದೇ ಈ ಪಲ್ಲವಿಯ ಭಾವ.

ನಾಡು ಸಂಪದ್ಭರಿತವಾಗಿರಲು ಚೈತನ್ಯಪೂರ್ಣ ಪರಿಶುದ್ಧ ನಾಡ ನುಡಿಯ ಸೇವೆಯು ಜೀವನದುಸಿರಾದರೆ ಮಾತ್ರ ಸಾರ್ಥಕ. ನಾಡ ಗುಡಿಯ ಕಟ್ಟಲು ಅನ್ಯರಿಗೆ ನೋವಾಗದಂತೆ ಕೃತಿಯಲ್ಲಿಳಿಸಿದರೆ ಭುವನೇಶ್ವರಿಯ ಕೃಪೆ.

## ದೃಶ್ಯತೇಹಿ ಸಮಾಜೋಽಯಂ ಶರಾವಸ್ತ್ರುಟಿತೋ ಯಥಾ

ಇಂದು ಸಮಾಜವು ಒಡೆದ ಗಡಿಗೆಯಂತಾಗಿದೆ. ಭಿನ್ನ ಭಿನ್ನ ವಿಚಾರಗಳು ಹೆಚ್ಚುತ್ತಲಿವೆ. ವ್ಯಕ್ತಿಗತ ಪ್ರತಿಷ್ಠೆಗಾಗಿ ಸಮಾಜವನ್ನು ದೂರೀಕರಿಸುತ್ತಿದ್ದಾರೆ. ಸಮಾಜದ ಬಗ್ಗೆ ಬೇಕಾದಷ್ಟು ಮಾತನಾಡುತ್ತಾರೆ. ಅಂತರಂಗದಲ್ಲಿ ಮಾತ್ರ ಸ್ವಾರ್ಥ ಸಾಧನೆಗಾಗಿ ಚಿಂತಿಸುತ್ತಾರೆ. ಮಾತಿನಲ್ಲಿ ತತ್ವ, ಕೃತಿಯಲ್ಲಿ ಕುತಂತ್ರ ಹೀಗಾಗಿ ಯಾರನ್ನು ನಂಬಬೇಕು, ನಂಬಬಾರದು ಎಂಬುದು ತಿಳಿಯದಂತಾಗಿದೆ. ಹುಟ್ಟಿದ ಮನುಷ್ಯನಿಗೆ ಭಿನ್ನತೆ ಇರುವದು ಸ್ವಾಭಾವಿಕ. ಭಿನ್ನತೆಯಲ್ಲಿ ಸಮಾಜದ ಹಿತಚಿಂತನೆಯು ತುಂಬಿಕೊಂಡಿದ್ದರೆ ಒಳಿತು. ಸಮಾಜಕ್ಕಾಗಿಯೇ ತನುಮನ ಧನವನ್ನು ಸವೆಸುತ್ತ, ತತ್ವಕ್ಕಾಗಿ ಹೋರಾಡಿದರೆ ಹಿತವಾದೀತು, ಅದಿಲ್ಲದೆ ಕೇವಲ ಒಬ್ಬರೊಬ್ಬರು ದ್ವೇಷಾಸೂಯೆಗಳನ್ನು ಹೆಚ್ಚಿಸುತ್ತ ಅದನ್ನೇ ಸಾದಿಸುತ್ತ ನಡೆದರೆ ಸಮಾಜವನ್ನು ಸುಧಾರಿಸುವ ಬದಲು, ಹಾಳು ಮಾಡಿದಂತಾಗುತ್ತದೆ. ಯಾರೇ ಮಠಾಧಿಪತಿಗಳಾಗಿರಲಿ, ಭಕ್ತರಾಗಿರಲಿ ಒಳ್ಳೇ ಕಾರ್ಯ ಮಾಡುತ್ತಿದ್ದರೆ, ಅದಕ್ಕೆ ದೋಷಾರೋಪಣೆಯ ಭಾವನೆಗಳ ಬೀಜಗಳನ್ನು ಬಿತ್ತಿ, ಅದನ್ನೇ ಬೆಳೆಸಿ, ಸಮಾಜಕ್ಕೆ ತಿಳಿಸಿ, ಮಾಡತಕ್ಕ ಕಾರ್ಯಗಳನ್ನು ಅಳಿಸಿ, ಅಡ್ಡಿ ಮಾಡುವ ದುರ್ಬುದ್ಧಿಯನ್ನು ಹುಟ್ಟಿಸಿಕೊಂಡು, ಮೇಲೆ ಸಮಾಜಾಭಿಮಾನದ ಮುಸುಕನ್ನು ಹಾಕಿಕೊಂಡು ಒಳಗೊಳಗೆ ಕೊಳಕು ವಿಚಾರಗಳನ್ನು ಬೆಳೆಸುತ್ತಿರುವದು ಸಮಾಜಕ್ಕೆ ದ್ರೋಹ ಬಗೆದಂತಾಗುತ್ತದೆ. ಇದೀಗ ಸಮಾಜದಲ್ಲಿಯೂ ಆರ್ಥಿಕ ಪ್ರಗತಿಯು ಕುಂಠಿತವಾಗುತ್ತಲಿದೆ. ಆರ್ಥಿಕ ಭದ್ರತೆಯಾಗದೆ ಸಮಾಜ ಬೆಳೆಯದು, ಬೆಳಗದು, ಕಾರ್ಯ ಮಾಡತಕ್ಕ ಶಕ್ತಿ ನಶಿಸುತ್ತಲಿದೆ. ಆಲಸ್ಯವುಳ್ಳವರಾಗುತ್ತಿದ್ದಾರೆ. ವಿಷಯಾಸಕ್ತರಾಗುತ್ತಿದ್ದಾರೆ. ದುಡಿಯದೆ ಸುಖ ಬೇಕೆಂದೆನ್ನುತ್ತಿದ್ದಾರೆ.

ಎಲ್ಲಿಯೋ ಒಬ್ಬರು ಬೆವರು ಸುರಿಸಿ ಕಾಯಕಷ್ಟದಿಂದ ಆರ್ಥಿಕ ಪ್ರಗತಿಯನ್ನು ಮಾಡಿಕೊಳ್ಳುತ್ತಿದ್ದಾರೆ, ಅಲ್ಲಿಯೂ ಅವರಿಗೆ ಕಷ್ಟ ಕೊಟ್ಟು, ಮೇಲೇಳದಂತೆ ಪ್ರಯತ್ನ ಮಾಡುವದಕ್ಕೆ ಹಗಲಿರುಳು ಚಿಂತಿಸುತ್ತ, ಅದಕ್ಕೆ ಸಮಯವನ್ನು ಹಾಳು ಮಾಡುತ್ತಾರೆಯೇ ಹೊರತು ತಾವು ದುಡಿದು ಮುಂದೆ ಬರುತ್ತಿಲ್ಲ. ಹೀಗಾದರೆ ಸಮಾಜದ ಪ್ರಗತಿಯು ಹೇಗಾದೀತು? ನಮಗಿಂದು ಬೇಕಾಗಿರುವದು ಸಹಜತೆ, ಪ್ರೇಮ ಮನೋಭಾವನೆ. ಅದು ಎಲ್ಲರಲ್ಲಿ ಮೂಡಿದಾಗ ಅದು ಸಾರ್ಥಕತೆ. ಇಲ್ಲದಿದ್ದರೆ ಎನಿತು ಜಪತಪ ಮಾಡಿದರು ನೀರಿನಲ್ಲಿ ಹೋಮ ಮಾಡಿದಂತೆ, ಎಂತಹ ಸಾಮಾಜಿಕ ಸುಧಾರಣೆ ಮಾಡಿದಂತೆ ಕಂಡರೂ ಕಲ್ಲಿನಮೇಲೆ ನೀರೆರೆದಂತೆ. ಕೇವಲ ವೈಯಕ್ತಿಕ ಪ್ರತಿಷ್ಠೆಗೆ ಹೆಚ್ಚು ಮಹತ್ವ ನೀಡಿದರೆ ಸಮಾಜದಲ್ಲಿಯ ಅಂತಃಕಲಹಗಳು ಹಾಗೆಯೇ ಉಳಿಯುತ್ತವೆ. ನಮ್ಮಲ್ಲಿರುವ ಕಲ್ಪಿತ ಸಂಶಯ ಕಲ್ಪನೆಗಳು, ಭಾವೈಕ್ಯತೆಗೆ ಅಡ್ಡಗೋಡೆಯಾಗಿವೆ. ಪ್ರತಿಯೊಬ್ಬರೂ ನಾನೆಂಬುವ ಹಮ್ಮುಗಿಮ್ಮುನ್ನು ಅಳಿಸಿ ಹಾಕಿ ಒಳಪಂಗಡಗಳೆನ್ನುವ ಕಸಗಳನ್ನು ತೆಗೆದು ಪ್ರೇಮ ಜಲವನ್ನು ಸಮಾಜವೆಂಬ ಮಹಾವೃಕ್ಷಕ್ಕೆ ಸುರಿಸಿ ಪರಿಶ್ರಮಿಸಿದರೆ ಸಮಾಜ ಸುಧಾರಣೆ ಸಾಧ್ಯ.

### ಸಮಾಜಸ್ಯ ಸೇವಾ ತು ಶಿವಾರ್ಚನಾತ್ ಸುದುಸ್ತರಾ

ಸಮಾಜ ಸೇವೆಯು ಶಿವಪೂಜೆಗಿಂತಲೂ ಅತಿಕಠಿಣವಾದುದು. ಶಿವಪೂಜೆಯಿಂದ ಅಂತರಂಗ ಶುದ್ಧಿಯಾಗಿ ಆತ್ಮೋದ್ಧಾರವಾಗಬಹುದು. ಆದರೆ ಸಮಾಜ ಸೇವೆಯಿಂದ ಆತ್ಮೋದ್ಧಾರವೂ ಆಗುತ್ತದೆ; ಸಮಾಜೋದ್ಧಾರವೂ ಆಗುತ್ತದೆ. ಸರ್ವಸಂಗ ಪರಿತ್ಯಾಗ ಮಾಡಿ, ಅರಣ್ಯಕ್ಕೆ ಹೋಗಿ, ಗುಹೆಯಲ್ಲಿ ಕುಳಿತು ಶಿವಧ್ಯಾನದಲ್ಲಿ ತಲ್ಲೀನರಾಗಬಹುದು. ಸಮಾಜಸೇವೆ ಮಾಡುವವರಿಗೆ ಸೇವೆಯು ಗುಹೆಯಲ್ಲಿ ಕುಳಿತು ತಪಸ್ಸು ಮಾಡುವವರಿಗಿಂತಲೂ ಹೆಚ್ಚಿಗೆ ಕಠಿಣವಾಗಿರುತ್ತದೆ. ಇಲ್ಲಿ ತಾಳ್ಮೆ ಸಹನಶೀಲತೆ, ಉದಾರ ಮನೋಭಾವನೆ ಪರಸ್ಪರ ತಿಳಿವಳಿಕೆ, ಕಷ್ಟ ಸಹಿಷ್ಣುತೆ, ಸಮಾಜಾಭಿಮಾನ ಇವೆಲ್ಲವೂ ಅಡಕವಾಗಿರಬೇಕಾದರೆ ಎಷ್ಟು ಮನೋಧೈರ್ಯ ಬೇಕಾಗುತ್ತದೆಂಬುದನ್ನು ಊಹಿಸಬಹುದು. ಇಲ್ಲಿ ಸಂಯಮವೂ ಬೇಕು. ಯಾರಿಗೂ ನೋವಾಗದಂತೆ ವರ್ತಿಸುವದೂ ಬೇಕಾಗುತ್ತದೆ. ಸಮಾಜದಲ್ಲಿ ಭಿನ್ನ ವಿಚಾರಗಳ ತುಮುಲ ಯುದ್ಧ ನಡೆದಲ್ಲಿಯೂ, ಅವರು ಅನೇಕ ಅಪವಾದ, ಅಪಪ್ರಚಾರಗಳ ಸುರಿಮಳೆಯನ್ನು ಸುರಿಸಿದರೂ ಶಾಂತಿಯಿಂದಿದ್ದು, ಅದು ಅವರ ದೃಷ್ಟಿ ಎಂದು ಭಾವಿಸಿ, ಅವರಿಗೆ ತಿಳಿವಳಿಕೆ ಬರುವಂತೆ ಭಗವಂತನಲ್ಲಿಯೇ ಪ್ರಾರ್ಥಿಸಿ, ಉದ್ಧಾರ ಮಾಡುವ ಬುದ್ಧಿ ಅಲ್ಲಿ ತುಂಬಿರಬೇಕಾಗುತ್ತದೆ. ಹಳಿ ತಪ್ಪಿ ರೈಲು ಬೀಳುವಂತೆ, ಮನಸ್ಸಿನ ವಿಪರ್ಯಾಸವಾದರೆ ಸಮಾಜವೆಂಬ ರೈಲು ಬಿದ್ದು ಅಧೋಗತಿಗೀಡಾಗಬೇಕಾಗುತ್ತದೆ. ತಪಸ್ವೀ ಜೀವನದಲ್ಲಿ ತನ್ನದೇ ಉದ್ಧಾರದ ಅಪೇಕ್ಷೆಯಿದ್ದರೆ ಸಮಾಜ ಸೇವೆಯು ಜೀವನದಲ್ಲಿ ತನ್ನ ಉದ್ಧಾರಕ್ಕಿಂತಲೂ ಸಮಾಜವು ಬೆಳೆದು ಬೆಳಗಬೇಕು; ನಾಡಿನವರಿಗೆ ಸುಖಶಾಂತಿ ದೊರೆಯಬೇಕು. ಎಂಬುವ ವಿಶಾಲ ಮನೋಭಾವನೆ ಇರಬೇಕಾಗುತ್ತದೆ.

ಪೂಜೆಗೆ ಹೊರಗಿನ ಆವರಣದ ಚಿಂತೆಯಿರುವದಿಲ್ಲ. ಮತ್ತೊಂದಕ್ಕೆ ಹೊರಗಿನ ಹಾಗೂ ಒಳಗಿನ ಚಿಂತೆ ಎರಡೂ ಇರಬೇಕಾಗುತ್ತದೆ. ಇಲ್ಲಿ ತತ್ವಕ್ಕಿಂತಲೂ ಆಚಾರ ವಿಚಾರ ಕ್ಕಿಂತಲೂ ಸತ್ಯ ಶುದ್ಧ ಪರಿಪೂರ್ಣದಿಂದ ಕೂಡಿದ ಹೃದಯ ಬೇಕಾಗುತ್ತದೆ. ಕೃತಿ ಮಾತಾಗಿರಬೇಕಾಗುತ್ತದೆ. ಸಮಾಜ ಸೇವೆ ಮಾಡುವಾಗ ಹಲವು ಬಗೆಯ ಅಡ್ಡಿ ಅಡಚಣೆಗಳೂ ಎದುರು ಬಂದರೂ ಎದೆಗುಂದದೆ ಧೈರ್ಯದಿಂದ ಮುನ್ನಡೆಯಬೇಕಾಗು ತ್ತದೆ. ಸಮಾಜ ಸೇವೆಯನ್ನು ಮಾಡಬೇಕನ್ನುವವರು ಮೊದಲು ಸ್ವಾರ್ಥವನ್ನು ನಿರ್ಮೂಲನ ಮಾಡಿದರೆ, ಅಲ್ಲಿ ಆಕರ್ಷಕ ವ್ಯಕ್ತಿತ್ವ ರೂಪಿಸಿಗೊಳ್ಳುವರು. ಇಲ್ಲದಿದ್ದರೆ ತೌಡು ಕುಟ್ಟಿದಂತೆ ವ್ಯರ್ಥವಾಗುತ್ತದೆ. ನಿಜವಾದ ಸಮಾಜಾಭಿಮಾನಿಗಳಲ್ಲಿ ಮತ್ತೊಬ್ಬ ರಿಗೆ ಕಷ್ಟವನ್ನುಂಟು ಮಾಡುವ ಭಾವನೆ ಇರಲಾರದು, ಇರಬಾರದು. ಅಂದರೆ ಅಲ್ಲಿ ಮಾತ್ರ ಬೆಳಕನ್ನು ಕಾಣಬಹುದು. ಸ್ವಾರ್ಥ ಸ್ವಪ್ರತಿಷ್ಠೆ ಬಿಟ್ಟು ಜನಸೇವೆಯೇ ಈಶಸೇವೆ ಯೆಂದು ಅಂತಃಕರಣದಿಂದ ಭಾವಿಸಿ ದುಡಿದರೆ ಅದು ನಿಜವಾದ ಸಮಾಜ ಸೇವೆ. ಅಲ್ಲಿ ದೇವರೇ ಬಂದು ಕೆಲಸ ಮಾಡಿಸುತ್ತಾನೆ.

## ಸರ್ವಕಷ್ಟ ಸಹಿಷ್ಣುತ್ವಾತ್ ಸಮಾಜಸೇವಕೋ ಮಹಾನ್

ಸಾಮಾಜಿಕ ಜೀವನ, ಅದೊಂದು ಸುಂದರ ಜೀವನ. ಸಮನ್ವಯ ಜೀವನ, ಬಂಧುರ ಜೀವನ, ವೈಯಕ್ತಿಕ ಪ್ರತಿಷ್ಠೆಯನ್ನು ಮರೆತು, ಸಾಮಾಜಿಕ ಸ್ಥಿತಿಗತಿಗಳನ್ನು ಅರಿತು ಬಡತನದ ನಿವಾರಣೆಗಾಗಿ ಹೋರಾಡಿದರೆ ಅದುವೆ ಸಾಮಾಜಿಕ ಜೀವನ. ಸಾಮಾಜಿಕ ರಂಗದಲ್ಲಿ ಧುಮುಕಿದವರಿಗೆ ಸುಖವು ಕನಸಿನ ಗಂಟು. ದುಃಖದಲ್ಲಿಯೇ ಸುಖವನ್ನು ಕಂಡು ಸಂತೈಸುವ ಬುದ್ಧಿ ಅವರಲ್ಲಿರುವದರಿಂದಲೇ ಅವರಿಗೆ ಹೆಚ್ಚು ಮಹತ್ವವಿದೆ. ಅವರು ಸಾಮಾಜಿಕ ನೋವು ನಲಿವುಗಳತ್ತ ಮನವನ್ನು ಹರಿಬಿಡುತ್ತಾರೆ. ಅಲ್ಲಿ ನಿಃಸ್ವಾರ್ಥ ಇರುವದರಿಂದ ಕಷ್ಟವು ಕಣ್ಣಿಗೆ ಕಾಣದು. ಯಾರು ಬಾಳಿನಲ್ಲಿ ಬೆಳಕನ್ನು ಕಂಡು, ಬಾಳಿ ನಿಂದ ಓಡಿಹೋಗದೇ, ಅದರಲ್ಲಿ ಸವಿ ಸುಖವನ್ನನುಭವಿಸಿ, ಎದುರಿಸಿ, ಜೀವನ ಸಾಗಿಸು ತ್ತಾರೆಯೋ ಅವರಿಗೆ ಸಾಮಾಜಿಕ ಜೀವನವು ಹಿಡಿಸುತ್ತದೆ. ಯಾರು ಸುಖ-ದುಃಖಗಳ ತೂಗುಯ್ಯಾಲೆಯಲ್ಲಿ ಆಡಿ, ಪ್ರೇಮವೇ ಬೆಳಕೆಂದು ಭಾವಿಸಿ, ಕತ್ತಲನ್ನು ದ್ವೇಷಿಸಿ ಸಮಾಜದ ಸುಖವೇ ತನ್ನ ಸುಖವೆಂದು ಅನುಭವಿಸಿ, ಕಾರ್ಯ ವ್ಯಾಪ್ತಿಯಲ್ಲಿ ಹಾಗೂ ಕಾಯಕದಲ್ಲಿ ತೊಡಗುತ್ತಾರೆಯೊ ಅವರಿಗೆ ಸಮಾಜ ಸೇವೆಯೇ ಲಿಂಗಪೂಜೆಯಾಗಿ ಪರಿಣಮಿಸುತ್ತದೆ. ಇಂತಹ ಪ್ರಸಂಗದಲ್ಲಿ ಸಮಾಜ ಸೇವೆ ಮಾಡುವವರಿಗೆ, ಅರಿದರಿದು ಅಂತರಂಗದಲ್ಲಿ ಆಘಾತವನ್ನುಂಟು ಮಾಡಿ, ಸಮಾಜದಲ್ಲಿ ಎದ್ದು ಕಾಣದಂತೆ, ತಂತ್ರ ಹೂಡಿ, ಜನರ ಮನೋಭಾವನೆಯಲ್ಲಿ ಅಲ್ಲದ ಸಲ್ಲದ ವಿಚಾರಗಳನ್ನು ಪ್ರಚಾರಮಾಡಿ ಕಲ್ಲನ್ನೆಸೆಯುವ ಜನರಿಗೂ ಸಮಾಜದಲ್ಲಿ ಕೊರತೆಯಿಲ್ಲ. ಅದು ಅವರ ಮನೋದೌರ್ಬಲ್ಯ ವಾಗಿರುತ್ತದೆ. ಅವರು ಮಾತ್ಸರ್ಯದ ಬೆಂಕಿಯಲ್ಲಿ ಬಿದ್ದಿರುವದರಿಂದ ಅವರಿಗೆ ಒಳ್ಳೆಯದು

ಕಾಣಲಾರದು. ಸಮಾಜಸೇವೆ ಮಾಡುವವರ ಗುರಿ, ಸಾಧನೆ, ಮುಂಧೋರಣೆ ಒಳ್ಳೆಯು ದಾಗಿದ್ದರೆ ಅವರು ಹೆದರದೆ ಮುಂದೆ ಸಾಗುತ್ತಾರೆ. ಅವರು ಪ್ರಚಾರ ಪ್ರಿಯರಾಗಿದ್ದರೆ, ಸಮಾಜ ಸೇವೆಯನ್ನು ಸಹಜತೆಯಲ್ಲಿ ಕಂಡು ಕರಳಿನಿಂದ ಕರಗಿಸಿಕೊಳ್ಳದೆ, ಡಂಭಾಚಾರದ ಸೋಗು ಹಾಕಿ, ಜನ ಮರುಳು ಮಾಡುವವರಿದ್ದರೆ ಅವರು ಹಿಂಜರಿಯುತ್ತಾರೆ. ನಿಜವಾಗಿ ಸಮಾಜ ಪ್ರೇಮಿಗಳು ಅದೆಲ್ಲವನ್ನು ಧಿಕ್ಕರಿಸುತ್ತಾರೆ. ತನು ಮನ ಧನವನ್ನು ಗಂಧಕೊರಡಿ ನಂತೆ ಸಮಾಜಕ್ಕಾಗಿ ಸವಿಸಿ, ಮಹಾನ್ ವ್ಯಕ್ತಿ ಎನಿಸಿದ್ದರೂ, ಅವರು ಅರಣ್ಯ ಕುಸುಮ ವಾಗಿದ್ದರೂ, ಅವರು ಸಾಧಿಸಿದ ಪ್ರಗತಿ ಪರ್ವತದಷ್ಟಿದ್ದರೂ ಕೃತಘ್ನ ಸಮಾಜ ಅವರ ನ್ನರಿಯದು. ಮಾತಿನಲ್ಲಿ ಮಾತ್ರ ದೊಡ್ಡ ಭಾವನೆ ತೋರಿಸುತ್ತಾರೆಯೇ ಹೊರತು ಸಹಕಾರ ನೀಡರು. ಕೆಲವರಂತೂ ಜಾತಿ ವರ್ಗ ಭೇದದ ಬಣ್ಣವನ್ನು ಹಾಕಿ ತಿರಸ್ಕರಿಸು ವವರಿದ್ದಾರೆ. ಯಾವ ಮಹಾನ್ ಶಕ್ತಿಯು ಮಾನವೀಯ ಮೌಲ್ಯಗಳನ್ನು ಕಾರ್ಯರೂಪ ದಲ್ಲಿ ತಂದು ಸಮಾಜೋದ್ಧಾರ ಮಾಡಿದ್ದನ್ನು ಅರಿತುಕೊಂಡಿದ್ದರೂ ಆ ಚಿತ್‌ತಪಃಶಕ್ತಿಯ ವ್ಯಕ್ತಿತ್ವ ಪ್ರಭಾವವನ್ನು ಕಂಡುಕೊಂಡಿದ್ದರೂ, ಅವರ ಅಂತಃ ಸ್ಫೂರ್ತಿಯ ಆತ್ಮಶಕ್ತಿ ಯಿಂದ ಸಮಾಜಕ್ಕೆ ಬೆಳಕಾಗಿದೆ ಎಂಬುದು ಹಾಗೂ ಗುರುವಿರಕ್ತರು ಮತ್ತು ಭಕ್ತರು ಸಂಸ್ಕಾರ ಪಡೆದು ಜಾಗ್ರತರಾಗಲು ಆ ಕಾರಣಿಕ ಕುಮಾರಯೋಗಿಯೇ ಕಾರಣವೆಂದು ಮನಸ್ಸಿನಲ್ಲಿ ಮೂಡಿಸಿಕೊಂಡಿದ್ದರೂ ನೆನೆಯರು. ಇದು ಸಮಾಜದ ನೀತಿ. ದುರಭಿಮಾನದ ಕೊರಕಲಿನಲ್ಲಿ ಸಿಕ್ಕಿಕೊಂಡವರಿಗೆ ಸಂಸ್ಮರಣೆಯೆಲ್ಲಿಂದ ಬಂದೀತು? ಹೀಗಾದರೆ ಸಮಾಜದ ಪ್ರಗತಿಯೆಂತಾದೀತು?

**ಸಂಪ್ರದಾಯಸ್ಯ ತತ್ವಾರ್ಥೇ ಮಾನವತ್ವ ಗುಣಾನ್ವಿತಃ**

ಇಂದು ಶೈಕ್ಷಣಿಕ ರಂಗದಲ್ಲಾಗಲಿ, ಸಾಮಾಜಿಕ ರಂಗದಲ್ಲಾಗಲಿ, ಧಾರ್ಮಿಕ ರಂಗ ದಲ್ಲಾಗಲಿ, ಕಾರ್ಯ ಪ್ರವೃತ್ತರಾದಾಗ ಸಮನ್ವಯ ದೃಷ್ಟಿ ಅತ್ಯವಶ್ಯ ಬೇಕಾಗುತ್ತದೆ. ಅದಿಲ್ಲದಿದ್ದರೆ ಸಮಾಜ ಸೇವೆಯಲ್ಲಿ ಭದ್ರತೆ ಉಳಿಯಲಾರದು. ಸಮಾಜಸೇವೆ ಮಾಡುವ ವರಲ್ಲಿ ವೈಚಾರಿಕ ಶಕ್ತಿಗಿಂತಲೂ ಹೃದಯವಂತಿಕೆಯ ಶಕ್ತಿ ತುಂಬಿದ್ದರೆ ಅದರ ಸುವಾಸನೆ ಹಬ್ಬುತ್ತ ಹೋಗುವದು. ಅದು ಕೇವಲ ನಾಟಕವಾಗಿದ್ದರೆ ಕೋಲ್ಮಿಂಚಿನಂತಾಗುವದು.

ಸಮಾಜ ಸುಧಾರಕರಿಗೆ ಕೆಲವರು ಮೂಢನಂಬಿಕೆಗಳ ಪ್ರಚಾರಕರು ಎಂದು ಮೂದ ಲಿಸುತ್ತಾರೆ. ಮೂಢನಂಬಿಕೆಗಳ ಸಂಪ್ರದಾಯವನ್ನೇ ಬೆಳೆಯಿಸಿ ಸಮಾಜವನ್ನು ಹಾಳು ಮಾಡುತ್ತಾರೆಂದು ಕೆಲವರ ಅಭಿಮತ. ಸಂಪ್ರದಾಯಗಳಲ್ಲಿ ಮಾನವೀಯ ಮೌಲ್ಯಗಳು ತುಂಬಿರದಿದ್ದರೆ, ಸತ್ ಸಂಪ್ರದಾಯವಾಗಲಾರವು. ಸಂಪ್ರದಾಯಗಳಲ್ಲಿ ಮೂಢರೂಢಿ ಗಳು ಬರಲಾರವು. ಮನಸ್ಸಿನ ಭಾವನೆಯಲ್ಲಿ ಮೂಢತನ ಆವರಿಸಿದ್ದರೆ, ಅದೇ ಭಾವನೆಯೇ ಮೂಢನಂಬಿಕೆಯಾಗಿ ಪರಿಣಮಿಸುತ್ತದೆ. ಕಟ್ಟಳೆ ಇಲ್ಲದೆ ಹೋದರೆ ಸಮಾಜದಲ್ಲಿ ಸಚೇತನ ಶಕ್ತಿಯೇ ಬರಲಾರದು, ಕುದುರೆಗೆ ಲಗಾಮಿರದಿದ್ದರೆ, ಬಂಡಿಯ ಗಾಲಿಗಳಿಗೆ

ಕೀಲುಗಳಿರದಿದ್ದರೆ ಹೇಗೆ ವ್ಯರ್ಥವೋ ಸಂಪ್ರದಾಯಗಳ ಮೂಢನಂಬಿಕೆ ಎಂದು ಹೇಳಿದರೆ ವ್ಯರ್ಥವಾಗುವದಲ್ಲದೆ ಅನರ್ಥವೂ ಆಗುವದು. ಸಂಪ್ರದಾಯಗಳಲ್ಲಿ ಹೃದಯವಂತಿಕೆ, ಮುಗ್ಧತನವಿರುತ್ತದೆಯೆ ಹೊರತು, ಮೂಢತನವಿರಲಾರದು. ಅಲ್ಲಿ ಸಂಸ್ಕೃತಿ ಮಾನವೀಯತೆ ತುಂಬಿರುತ್ತವೆ. ಆದರೆ ಕೆಲವು ಸಂಪ್ರದಾಯಸ್ಥರು, ಸಂಪ್ರದಾಯದ ಒಳಗುಟ್ಟನ್ನರಿಯದೆ ಕೇವಲ ಪ್ರತಿಷ್ಠೆಗಾಗಿ ಉಪಯೋಗಿಸಿಕೊಂಡಿದ್ದರಿಂದ, ಹಲವು ಜನ ಬುದ್ಧಿವಂತರೆನ್ನುವವರು ಆಕ್ಷೇಪ ಮಾಡುವದು ಸಹಜ. ವೈಚಾರಿಕ ಶಕ್ತಿಯಿದ್ದಲ್ಲಿ, ಹೃದಯವಂತಿಕೆ ಕೂಡಿದ್ದರೆ, ಸಂಪ್ರದಾಯಗಳನ್ನು ಈ ರೀತಿ ತಿರಸ್ಕರಿಸುತ್ತಿದ್ದಿಲ್ಲ. ಇದೀಗ ಚಿಕಿತ್ಸಕ ಬುದ್ಧಿ ಹೆಚ್ಚಾದಾಗ ಮಾನವೀಯತೆ ಅಲ್ಲಿ ಕಾಣಲಾರದು. ಧರ್ಮದ ನಿಜವಾದ ವ್ಯಾಖ್ಯೆ ಬಿದ್ದವರನ್ನು ಎತ್ತುವದೇ ಆಗಿರುತ್ತದೆ. ತೋಟದಲ್ಲಿಯ ಹೂವುಗಳು, ಹಣ್ಣುಗಳು ನಮಗೆ ದೊರೆಯಬೇಕಾದರೆ ಆ ತರುಗಳಿಗೆ ಮೇಲಿಂದ ಮೇಲೆ ಗೊಬ್ಬರ ನೀರು ಹಾಕಬೇಕಾಗುತ್ತದೆ. ಆ ತೋಟಕ್ಕೆ ಬೇಲಿಯನಿಕ್ಕಬೇಕಾಗುತ್ತದೆ. ಅಂದಾಗ ನಮಗೆ ಹಣ್ಣುಗಳು ಸಿಗುತ್ತವೆ. ಸವಿ ಸುಖವನ್ನು ಪಡೆಯುತ್ತೇವೆ. ಅದೇ ಪ್ರಕಾರ ನಿಜವಾದ ಮಾನವನಾಗಬೇಕಾದರೆ, ಸಂಪ್ರದಾಯಗಳ ಬೇಲಿಯಿರದಿದ್ದರೆ, ಮಾನವೀಯತೆ ಬರಲಾರದು. ವೈಜ್ಞಾನಿಕರಾದರೂ ನಂಬುಗೆಯಿಲ್ಲದೆ ಸಿದ್ಧಿಯನ್ನು ಪಡೆಯಲಾರರು. ಸಂಪ್ರದಾಯವೆಂದಾಕ್ಷಣ ಮಡಿ, ಹುಡಿ ಎಂದರೆ ಅದು ತಪ್ಪು. ಅದರ ಅರ್ಥ ಗಹನವಾದುದು. ಸಂಪ್ರದಾಯಗಳಲ್ಲಿ ತಿಳಿವಿನ ಬೆಳಕೇ ಇರುತ್ತದೆಯೋ ಹೊರತು, ಒಬ್ಬರು ಮತ್ತೊಬ್ಬರನ್ನು ದಮನ ಮಾಡುವದು ಇರಲಾರದು. ಚಾರ್ವಾಕ ಮತಗಳಲ್ಲಿ ತಾಮಸೀಯ ಮನೋಭಾವನೆಗಳು ತುಂಬಿರಬಹುದು. ಅವುಗಳಂತೆ ಎಲ್ಲ ಸಂಪ್ರದಾಯಗಳಲ್ಲಿ ಮೂಢನಂಬಿಕೆಗಳು ಅವೆ ಎಂದರೆ ಮೂಢನಂಬಿಕೆಗಳ ಅರ್ಥವನ್ನೇ ಅರಿತಿಲ್ಲವೆಂದಾಗುತ್ತದೆ. ಮಹಾತ್ಮಾ ಬಸವಣ್ಣನವರ ಸಪ್ತಸೂತ್ರಗಳಾದ "ಕಳಬೇಡ...." ಮುಂತಾದವುಗಳೇ ಸಂಪ್ರದಾಯಗಳ ಬೇಲಿ ಇದ್ದಂತೆ. ಇವುಗಳು ಯಾವ ಧರ್ಮಕ್ಕೆ ಬೇಡ?

## ನಿಜಕರ್ತವ್ಯರಾಹಿತ್ಯಾತ್ ಭಾಷಣಂ ದೂಷಣಂ ಭವೇತ್

ನಮಗಿಂದು ಮಾತು ಸಾಕು, ಕೃತಿ ಬೇಕು, ಭಾವಶುದ್ಧಿಯಾಗಲು ಕೃತಿಯೇ ಮೂಲ ಬೇರು. ಅರ್ಥವಿಲ್ಲದ ಮಾತಿನಿಂದ ವೇಳೆಯ ದುರುಪಯೋಗವಾಗುವದಲ್ಲದೆ ಶಕ್ತಿಯನ್ನೂ ಹ್ರಾಸ ಮಾಡಿದಂತಾಗುವದು. ಎತ್ತತ್ತ ನೋಡಿದರೂ ಮಾತಿನ ಮಾಲೆಯೇ ಹಬ್ಬುತ್ತಲಿದೆಯೆ ಹೊರತು ಕೃತಿಯ ಸೊಬಗು ಕಾಣಲಾರದಂತಾಗಿದೆ. ಮಾತಿನಲ್ಲಿ ಸತ್ಯ, ತತ್ವ ತುಂಬಿದ್ದರೆ ಅದು ಸಾರ್ಥಕವಾಗುತ್ತದೆ. ಅದಿಲ್ಲದೆ ಒಳಗೊಂದು ರೀತಿಯನ್ನಿಟ್ಟುಕೊಂಡು ಹೊರಗೆ ಆಡಂಬರದ ಮಾತನ್ನಾಡಿದರೆ ಅದು ಕೇವಲ ಜೊಳ್ಳು. ಹೃದಯದಿಂದ ಬಂದ ಮಾತು ಜನಜಾಗ್ರತಿ ಮಾಡುತ್ತದೆ, ಪ್ರೇಮವನ್ನು ಹುಟ್ಟಿಸುತ್ತದೆ, ಅರಳಿದ ಹೂ ಸುಗಂಧ ಬೀರುವಂತೆ ಮನಸ್ಸಿಗೆ ಸಂತೃಪ್ತಿ ನೀಡುತ್ತದೆ. ತೋರಿಕೆ ಯಾವಾಗಲೂ ಕೋಲ್ಮಿಂಚಿನಂತೆ.

ಅಲ್ಲಿ ಅಂತರಂಗ ಶುದ್ಧಿ ಇರಲಾರದು. "ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ, ರಸಿಕನಲ್ಲದವನ ಬರಿಮಾತು, ಕಿವಿಯೊಳು ಕೂರಸಿಯ ಬಡಿದಂತೆ ಸರ್ವಜ್ಞ", ಸರ್ವಜ್ಞನ ಈ ನುಡಿ ನಿಜಕ್ಕೂ ಸತ್ಯವಾದುದು. ಆಡಿದ ಮಾತಿನಿಂದ ಹೃದಯ ಮುಟ್ಟಬೇಕು, ಅಂತಃಕರುಣ ಅರಳಬೇಕು, ನೊಂದ ನೋವು ಮಾಯುವಾಗಬೇಕು, ವ್ಯಕ್ತಿತ್ವ ವಿಕಾಸವಾಗ ಬೇಕು, ಸಂಕುಚಿತತನ ದೂರಾಗಬೇಕು, ಕರ್ತವ್ಯ ಪ್ರಜ್ಞೆ ಮೂಡಿಸುವಂತಿರಬೇಕು. ಅಂದಾಗ ಮಾತಿಗೆ ಬೆಲೆ ಹಾಗೂ ಬಲ. ಈ ರೀತಿ ಬರಲು, ಸ್ವಾರ್ಥ, ಅಹಂಕಾರ, ವಂಚಕತನ, ಮಾತ್ಸರ್ಯ ಮುಂತಾದವುಗಳನ್ನು ಕಿತ್ತೊಗೆದರೆ ಮಾತ್ರ ಕಾರುಣ್ಯದ ಹೃದಯುವು ಅಲ್ಲಿ ಕಂಗೊಳಿಸುತ್ತದೆ. ಮಾತೆಂಬುದು ಜ್ಯೋತಿರ್ಲಿಂಗವಾಗುತ್ತದೆ, ಮಾಣಿಕ್ಯದ ದೀಪ್ತಿ ಯಾಗುತ್ತದೆ, ಇಲ್ಲದಿದ್ದರೆ ಅದುವೆ ಮಾರಕವಾಗುತ್ತದೆ. ಮತ್ತೊಂದೆಡೆ ಸರ್ವಜ್ಞನು "ಹೊಲಬನರಿಯದ ಮಾತು, ತಲೆಬೇನೆ ಎದ್ದಂತೆ, ಹೊಲಬರಿತು ಒಂದನುಡಿದರೆ ಅದು ದಿವ್ಯ ಫಲಪಕ್ವದಂತೆ ಸರ್ವಜ್ಞ" ಈ ಮಾತಿನಲ್ಲಿ ಅನುಭವಸಾರವೇ ತುಂಬಿದೆ. ಹಾಗಾದರೆ ಮಾತನಾಡುವದೇ ಬೇಡವೆ? ಎಂಬ ಪ್ರಶ್ನೆ ಹುಟ್ಟುತ್ತದೆ. ಮಾತು ಮನಸ್ಸಿನ ಪ್ರತಿಬಿಂಬ ವಾಗಿ, ಆತ್ಮವಿಕಾಸದ ಅಡಿಗಲ್ಲಾಗಿದ್ದು, ಮನಸ್ಸಿನ ಪರಿಶುದ್ಧತೆ ಹೆಚ್ಚಿಸಿ ಸತ್ಯಪೂರ್ಣವಾಗಿ ದ್ದರೆ ಹಿತಕರ. ಆಗ ಮಾತು ಬೆಳ್ಳಿಯಾಗಿ, ಮೌನ ಬಂಗಾರವಾಗುತ್ತದೆ. ಚುಚ್ಚು ಮಾತಿಗಿಂತಲೂ ಬಿಚ್ಚು ಮಾತು ಹೆಚ್ಚು ಪರಿಣಾಮಕಾರಿ. ನುಡಿಯಲ್ಲಿ ಎಚ್ಚತ್ತು, ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗ ಘಟಸರ್ಪವಾಗುತ್ತದೆ. ಮಾತನಾಡುವದು ಸರಳ, ಕೃತಿಯಲ್ಲಿ ತರುವದು ಕಠಿಣ, ಮಾತಿನಂತೆ ಮನವಿದ್ದರೆ ಮೃಡನೊಲುಮೆ ಸಾಧ್ಯ. ಅದಕ್ಕೆ ಸಾಧನೆ ಬೇಕು, ಸಂಯಮ ಬೇಕು, ಪವಿತ್ರಭಾವನೆ ಬೇರೂರಬೇಕಾಗುತ್ತದೆ. ಅಂದಾಗ ಮಾತು ಮಂತ್ರವಾಗುತ್ತದೆ. ಮನಸ್ಸಿನಲ್ಲಿ ಒಳ್ಳಿಹ ಸಂಸ್ಕಾರಗಳು, ನಿಗ್ರಹವು ಬಂದಂತೆ ಮಾತು ಚೊಕ್ಕ ಚಿನ್ನವಾಗುತ್ತದೆ. ಸುವಿಚಾರ, ಸುವಿವೇಕಗಳಿಗೆ ಕನ್ನಡಿಯಾಗುತ್ತದೆ. ಅಂತೆಯೇ "ನುಡಿದಂತೆ ನಡೆದರೆ ಇದೇ ಜನ್ಮ ಕಡೆ" ಎಂದು ಶರಣರು ತಿಳಿಹೇಳಿದ್ದಾರೆ.

**ಸದಭಿಮಾನಿಭಿಃ ಪೌರೈಃ ರಾಷ್ಟ್ರೋನ್ನತಿಃ ಸದಾ ಭವೇತ್**

ಮಾನವನಿಗೆ ಸದಭಿಮಾನ ಹಾಗೂ ದುರಭಿಮಾನ ಅಂಟಿಕೊಂಡಿರುವದು ಸ್ವಾಭಾವಿಕ ವಾಗಿರುತ್ತದೆ. ಅವುಗಳು ಹುಟ್ಟಿನ ಜೊತೆಯಲ್ಲಿಯೆ ಬೆಳೆದು, ಅವರವರ ಭಾವದಂತೆ ವಿಸ್ತಾರಗೊಳ್ಳುತ್ತವೆ. ಸದಭಿಮಾನವು ಮನುಷ್ಯನನ್ನು ಮೇಲಕ್ಕೆತ್ತಿದರೆ ದುರಭಿಮಾನವು ಕೆಳಗಿಳಿಸುತ್ತದೆ. ಒಂದು, ಸತ್ಕಾರ್ಯದಲ್ಲಿ ಪರಿಣಿತಗೊಂಡರೆ ಮತ್ತೊಂದು ಅಹಂಕಾರದಲ್ಲಿ ರೂಪುಗೊಂಡು ಹಾನಿಗೀಡು ಮಾಡುತ್ತದೆ. ವ್ಯಕ್ತಿತ್ವಕ್ಕೆ ಧಕ್ಕೆ ತರುತ್ತದೆ. ಸ್ವಾಭಿಮಾನ ಕ್ಕಿಂತಲೂ ರಾಷ್ಟ್ರಾಭಿಮಾನವು ಹೆಚ್ಚಿನದು. ಅದು ವಿಶಾಲತೆಯ ಮನೋವಿಕಾಸದಲ್ಲಿ ಸಾಗುತ್ತದೆ. ಅಭಿಮಾನವಿಲ್ಲದ ಜೀವನ ಅದು ಜೀವನವೇ ಅಲ್ಲ. ಹಾಗಿದ್ದಲ್ಲಿ ಅದು ಮೃತಜೀವನ, ಸಂಘವಿರಲಿ, ಸಂಸ್ಥೆಯಿರಲಿ, ಸಮಾಜವಿರಲಿ, ಅದಕ್ಕಾಗಿ ಅಹೋರಾತ್ರಿ ಪರಿಶ್ರಮಿಸಿ, ದುಡಿದು ಬೆಳೆಸಿದರೆ ಅದಕ್ಕೆ ಅಭಿಮಾನವೆನ್ನುತ್ತಾರೆ. ಅದಿರದೆ, ತಾವಿದ್ದ

ಸಂಸ್ಥೆಗೆ ಅಹಿತ ಬಯಸುವವರಿದ್ದರೆ ಅದರಷ್ಟು ಮಹಾಪಾತಕ ಮತ್ತೊಂದಿಲ್ಲ. ಅವರು ಸಮಾಜ ದ್ರೋಹಿಗಳು. ನಾವಿಂದು ಅಭಿಮಾನ ಶೂನ್ಯರಾಗಿದ್ದೇವೆ. ವಿಶಾಲತೆಯ ಮನೋಭಾವವಿಲ್ಲ. ಸಂಕುಚಿತ ಸಂಕೋಲೆಯಲ್ಲಿ ಸಿಲುಕಿ ದುರ್ಬಲರಾಗುತ್ತಿದ್ದೇವೆ. ಒಂದು ಸಂಸ್ಥೆಯ ಬೆಳವಣಿಗೆ ಕಂಡು ಅಸೂಯೆಪಡುತ್ತಿದ್ದೇವೆ. ಎಲ್ಲ ದುರ್ಗುಣಗಳಲ್ಲಿ ಕೆಟ್ಟದ್ದು ಅಸೂಯೆ. ನಮ್ಮ ನಾಡಿಗೆ, ಸಂಘ-ಸಂಸ್ಥೆಗಳಿಗೆ ನಾವು ಯಾವಾಗಲೂ ಉಪಕಾರವನ್ನೇ ಮಾಡುತ್ತಿರಬೇಕು. ಉಪಕಾರ ಮಾಡುವದಕ್ಕಿಂತಲೂ ಅಪಕಾರವನ್ನಾದರೂ ಮಾಡದೆ ತಟಸ್ಥ ಇದ್ದರೆ ಅದೆಷ್ಟೋ ಒಳ್ಳೇಯದು. ನಮ್ಮ ಸಮಾಜ, ನಮ್ಮ ನಾಡು, ನಮ್ಮ ರಾಷ್ಟ್ರ ಈ ಭಾವನೆ ಮನಸ್ಸಿನಲ್ಲಿ ಎಲ್ಲಿಯುವರೆಗೆ ಮೂಡುವದಿಲ್ಲವೋ ಕಾರ್ಯರೂಪದಲ್ಲಿ ಬರುವದಿಲ್ಲವೋ ಅಲ್ಲಿಯುವರೆಗೆ ರಾಷ್ಟ್ರದ ಬೆಳವಣಿಗೆಯು ಅಸಾಧ್ಯ. ಇದು ಕೇವಲ ಮಾತಿನಿಂದ ಬರದು. ಶ್ರದ್ಧೆಯಿಂದ ನಿಷ್ಠೆಯಿಂದ ಸ್ವಾರ್ಥ ತ್ಯಾಗದಿಂದ ಬರುತ್ತದೆ. ಜಪಾನ ಮುಂತಾದ ದೇಶಗಳು ಸಮೃದ್ಧಿ ಶಿಖರವನ್ನು ಮುಟ್ಟಲು ರಾಷ್ಟ್ರಾಭಿಮಾನವೇ ಮೂಲ ಕಾರಣ.

ಸರ್ ವಾಲ್ಟರ ಸ್ಕಾಟ್ ಒಂದೆಡೆ ಹೀಗೆ ಹೇಳುತ್ತಾನೆ....ಅದು ಇಂತಿದೆ.

"Breathes there the man, with soul so dead,
Who never to himself hath said,
This is my own, my native land"

ಇದು ನನ್ನ ಮಾತೃಭೂಮಿ ಎಂದು ಹೇಳಲಾರದವನು ಇದ್ದೂ ಇಲ್ಲದಂತೆ. ರಾಷ್ಟ್ರ ಭಾವನೆಯು ಕಲ್ಪನೆಯುನ್ನು ತಾರದಿದ್ದ ವ್ಯಕ್ತಿಯ ಹೃದಯವು ಕಲ್ಲಿನಂತಿರುವದಲ್ಲದೆ, ಪ್ರಾಣವಿಲ್ಲದೆ ಶರೀರದಂತೆ ಅವನ ಸ್ಥಿತಿಗತಿಯಾಗುತ್ತದೆ. ಅದಕ್ಕಾಗಿ ರಾಷ್ಟ್ರಾಭಿಮಾನದ ಮನೋಭಾವನೆಯುನ್ನು ಬೆಳೆಸಿಕೊಂಡು ರಾಷ್ಟ್ರೋನ್ನತಿಗೆ ಕಾರಣರಾಗೋಣ, ಏನೇ ಕಾರ್ಯ ಮಾಡಿದರೂ ರಾಷ್ಟ್ರದ ಹಿತ ಚಿಂತನೆಗೆ ಅದು ಪೂರಕವಾಗಿರಬೇಕು; ಸಮರ್ಪಣೆ ಭಾವನೆಯುನ್ನು ತುಂಬಿಕೊಂಡಿರಬೇಕು. ಅಂದಾಗ ಅದು ಸಾಧ್ಯ.

## ಕರ್ತವ್ಯಪ್ರಜ್ಞಯಾ ಪ್ರಾಜ್ಞಃ ಸಮಾಜೋದ್ಧಾರಕೋ ಭವೇತ್

ನಮಗಿಂದು ಕರ್ತವ್ಯ–ಪ್ರಜ್ಞೆ ಬೇಕು. ಕರ್ತವ್ಯ ಪ್ರಜ್ಞೆಯಿಲ್ಲದೆ. ಆತ್ಮೋದ್ಧಾರವೂ ಆಗದು; ಸಮಾಜವು ಸುಧಾರಿಸದು ಕರ್ತವ್ಯ ಪ್ರಜ್ಞೆ ಅಂದರೆ ತಾನು ವಹಿಸಿಕೊಂಡ ಕಾರ್ಯವನ್ನು ನಿಷ್ಠೆಯಿಂದ ಮನಮುಟ್ಟಿ ಮಾಡಿ, ಮುಗಿಸುವಿಕೆ, ಇದರಿಂದ ಮನಸ್ಸಿಗೆ ನೆಮ್ಮದಿ ಹಾಗೂ ಸಮಾಧಾನ ದೊರೆಯುವದು. ಯಾವದೇ ಕಾಯಕವಿರಲಿ, ಆ ಕಾಯಕ ಮಾಡುವಾಗ ನಿಷ್ಠೆ ಬಲಗೊಂಡಿರಬೇಕಾಗುತ್ತದೆ; ಸತ್ಯ ಧರ್ಮ ನೀತಿಗಳು ತುಂಬಿರಬೇಕಾಗುತ್ತದೆ. ಅಂದರೆ ತನು, ಮನ ಭಾವಂಗಳು ಶುದ್ಧಿಗೊಂಡು, ಆತ್ಮಶಕ್ತಿಯು ಬೆಳೆದು ಬೆಳಗುತ್ತದೆ. ಮಾಡುವ ಕರ್ತವ್ಯದಲ್ಲಿ ಚ್ಯುತಿ ಉಂಟಾದರೆ ತನಗೂ ಹಾನಿಯಾಗು

ವುದಲ್ಲದೆ ಪರರನ್ನು ಕಷ್ಟಕ್ಕೀಡು ಮಾಡಿದಂತಾಗುತ್ತದೆ. ಸಮಾಜವು ಬಲಗೊಂಡು ಅಜ್ಞಾನ, ದಾರಿದ್ರ್ಯ ವೈಷಮ್ಯ ನಿವಾರಣೆಯಾಗಬೇಕಾದರೆ ಕರ್ತವ್ಯ ಪ್ರಜ್ಞೆಯೇ ಮೂಲ ಬೇರು. ಎಲ್ಲಿ ಕರ್ತವ್ಯ ಪ್ರಜ್ಞೆಯು ಒಡಮೂಡಿದೆಯೋ ಅಲ್ಲಿ ಆಲಸ್ಯವು ಬರಲಾರದು. ಆಲಸ್ಯವಿದ್ದಲ್ಲಿ ಸಮಯ ಪ್ರಜ್ಞೆಯು ಅರಿಯದು. ಸಮಯ ಪ್ರಜ್ಞೆಯು ಮನಸ್ಸಿನಲ್ಲಿ ಒಡಮೂಡಿದರೆ, ಶ್ರೇಷ್ಠತಮ ಸತ್ಯಗಳ ಅನುಷ್ಠಾನವು ಸುಲಭ ಸಾಧ್ಯವಾಗುತ್ತದೆ ಇಲ್ಲವಾದರೆ ಸಮಾಜದ ಸ್ವಾಸ್ಥ್ಯವು ದೂರಾಗಿ ಹಾಳು ಕೊಂಪೆಯಂತೆ ಜೀವನವಾಗುತ್ತದೆ. ಕೇವಲ ಕರ್ತವ್ಯ ಪ್ರಜ್ಞೆಯಿಂದ ಕಾರ್ಯ ಮಾಡುತ್ತ ಹೊರಟಲ್ಲಿ ಅದ್ಭುತ ಕಾರ್ಯಗಳು, ಇಷ್ಟಾರ್ಥ ಸಿದ್ಧಿಗಳು ಸರಳವಾಗಿ ಸಾಧಿಸುತ್ತವೆ. ಅಷ್ಟೇ ಅಲ್ಲದೆ, ಆರ್ಥಿಕ ಪ್ರಜ್ಞೆ ಸಾಮಾಜಿಕ ಪ್ರಜ್ಞೆ, ಧಾರ್ಮಿಕ ಪ್ರಜ್ಞೆ, ರಾಜಕೀಯ ಪ್ರಜ್ಞೆಯು ಅರಿವು ಮೂಡಿ, ಅವೆಲ್ಲವುಗಳ ಸುಧಾರಣೆಗೆ ಮನಸ್ಸು ಹಾತೊರೆಯುತ್ತದೆ. ಇವೆಲ್ಲವುಗಳ ಬೆಳವಣಿಗೆಗೆ ಕರ್ತವ್ಯ ಪ್ರಜ್ಞೆಯೇ ಪೂರಕವಾಗುತ್ತದೆ. ನಮಗೆ ದುಃಖ ದುಮ್ಮಾನಗಳು ಕಷ್ಟಕಾರ್ಪಣ್ಯ ಗಳು ಆವರಿಸಿದ್ದರೆ, ನಮ್ಮಲ್ಲಿ ಕರ್ತವ್ಯ ಪ್ರಜ್ಞೆಯು ಒಡಮೂಡಿಲ್ಲವೆಂದೇ ಅರ್ಥ ಮಾಡಿಕೊಳ್ಳಬೇಕು, ಸಿರಿ ಸಂಪತ್ತು, ವಿದ್ಯಾ ಸಂಪತ್ತು ಬರಲು, ಸಾಮಾಜಿಕ ರಂಗದಲ್ಲಿ ಸಂಘಟನೆ ಬರಲು ಕರ್ತವ್ಯ ಪ್ರಜ್ಞೆಯೇ ಮೂಲ ಕಾರಣ. ಮಹಾತ್ಮಾ ಬಸವಣ್ಣನವರು "ಕಾಯಕವೇ ಕೈಲಾಸ"ವೆಂದು ಸಾರಿ, ಈ ಪ್ರಜ್ಞೆಗೆ ಮಹತ್ವ ನೀಡಿರುವದರಿಂದಲೇ ಅನುಭವಮಂಟಪದಿಂದ ಜನಜಾಗ್ರತಿಯುಂಟಾಯ್ತು. ಕಾರಣ ಒಬ್ಬರು ಮತ್ತೊಬ್ಬರನ್ನು ಜರಿಯುವದರಲ್ಲಿಯೇ ಸಮಯವನ್ನು ಹಾಳು ಮಾಡಿಕೊಳ್ಳದೆ, ಕರ್ತವ್ಯ ಪ್ರಜ್ಞೆಯಿಂದ ಕಾಯಕ ಮಾಡಿದರೆ ಸಮಾಜ ಸೇವೆಗೈದರೆ ದೇವನೊಲುಮೆ ಸಾಧ್ಯ.

## ವಚನವಾಙ್ಮಯ ಗ್ರಂಥ ಮುದ್ರಣಂ ಪುಣ್ಯ ಕಾರಣಂ

ಭಾವ ಕುಸುಮವನ್ನು ಅರಳಿಸಲು ವಚನವು ಮಹತ್ಸಾಧನ. ಹೃದಯದಂತರಂಗ ವನ್ನು ಜನಸಾಮಾನ್ಯರಿಗೂ ತಿಳಿಯಪಡಿಸಿ ಮಹದ್ವಿಚಾರವನ್ನು ತಿಳಿಭಾಷೆಯಲ್ಲಿರಿಸಿ ಅಂತರ್ಭಾವಗಳನ್ನು ಆಳವಾಗಿ ವಿಚಾರಿಸಿ, ವಿವೇಚಿಸಿ, ಅನುಭವಿಸಿ ಬರೆಯುವದೇ ವಚನ. ವಚನರಚನೆಗೆ ಹೆಚ್ಚಾಗಿ ಹೃದಯ ಬೇಕಾಗುತ್ತದೆ. ತೆರೆದ ಹೃದಯದಿಂದ ಬರೆಯದ ವಚನ ಬೋರ್ಗಲ್ಲ ಮೇಲೆ ನೀರೆರೆದಂತೆ ವ್ಯರ್ಥ. ಭಾಷೆಗಿಂತಲೂ ಭಾವಕ್ಕೆ ಹೆಚ್ಚು ಮಹತ್ವ ನೀಡಿದರೆ ವಚನಕ್ಕೆ ಸೊಬಗು. ನೋವು ನಲಿವುಗಳನ್ನು ಹಾಗೂ ಸಾಮಾಜಿಕ ಜೀವನದ ಚಿತ್ರವನ್ನು ಚಿತ್ರಿಸಲು ವಚನ ರಚನೆ ಬಹುಮುಖ್ಯವಾದುದು. ಆ ದೃಷ್ಟಿ ಯಿರಿಸಿ ೧೨ನೆಯ ಶತಮಾನದಲ್ಲಿ ಬಸವಾದಿ ಪ್ರಮಥ ಪುಂಗವರು ವಚನ ರಚಿಸಿ ಅನುಭವ ಸಾಹಿತ್ಯವನ್ನು ನಾಡಿಗೆ ನೀಡಿ ಮಹದುಪಕಾರ ಮಾಡಿದ್ದಾರೆ. ಈ ಸಾಹಿತ್ಯ ಸೌರಭವನ್ನು ಸೂಸುತ್ತ ಹೋದಂತೆ ಮನುಷ್ಯನಿಗೆ ಹೊಸಶಕ್ತಿ. ಚೇತನವು ದೊರೆತು, ಆತ್ಮದರ್ಶನ ವಾಗುತ್ತದೆ. "ಅದು ಬೆಳಗಿನೊಳಗಿನ ಮಹಾ ಬೆಳಗಿನ" ಸಾಕ್ಷಾತ್ಕಾರದ ತಿರುಳು. ಇಂತಹ

ಸಾಹಿತ್ಯವೇ ಅಮರ ಸಾಹಿತ್ಯ. ನಿತ್ಯವೂ ಚಿರನೂತನ ದೀಪ್ತಿ. "ಶಿವಶರಣರ ಸಾಹಿತ್ಯ ಸೃಷ್ಟಿ, ಆತ್ಮ ತುಷ್ಟಿಗೆ ಆಹಾರ, ನೋಡಯ್ಯ! ಶಿವಶರಣರ ವಚನಾಮೃತ ಭಾವಪುಷ್ಟಿಗೆ ರಸಪಾಕ, ನೋಡಯ್ಯ! ಶಿವಶರಣರ ಶಿವಸಿದ್ಧಾಂತ ಶಿವೋಪಾಸಕರಿಗೆ ಕಲ್ಪತರು, ನೋಡಾ!! ಶಿವಶರಣರ ಶಿವಾನುಭವ ಸದ್‌ಭಕ್ತರಿಗ ಸದ್‌ದರ್ಪಣ ನೋಡಾ!! ಭ್ರೂಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ, ನಿನ್ನ ಶರಣರು ಒರೆದುದು, ಬರೆದುದು, ಏನಿದ್ದರೂ ಹಾಲ್ ಜೇನು ಸವಿದಂತೆ!" ಇಂತಹ ವಚನ ಸಾಹಿತ್ಯವನ್ನು ಸಂಶೋಧಿಸಿ, ಪರಿಶ್ರಮಿಸಿ, ಪ್ರಕಟಿಸಿ, ನಾಡಿಗೆ ಮತ್ತೆ ಬೆಳಕನ್ನಿತ್ತವರು ಡಾ. ಫ. ಗು. ಹಳಕಟ್ಟಿಯವರು. ಈ ಮಹಾ ಚೇತನ ನಮಗಿಂದು ಪುಣ್ಯ ಮೂರ್ತಿ. ವಚನ ಪಿತಾಮಹರು ಸಮಾಜಕ್ಕೆ ಮಾಡಿದ ಮಹದುಪಕಾರವನ್ನು ಎನಿತು ಸ್ಮರಿಸಿದರೂ ತೀರದು.

### ಆಶಾ ಹಿ ಪರಮಂ ದುಃಖಮ್

ಆಶೆಯು ಅರಿವನ್ನು ಮರೆಯಿಸಿ, ಕತ್ತಲೆಯತ್ತ ಒಯ್ಯುತ್ತದೆ. ನಿರಾಶೆಯು ಬೆಳಕನ್ನು ತೋರಿಸಿ ನಿತ್ಯ ಸುಖ ನೀಡುತ್ತದೆ. ಆಶೆಯು ಭವಪಾಶದಲ್ಲಿ ಕಟ್ಟಿ ಹಾಕುತ್ತದೆ. ನಿರಾಶೆಯು ಭವಬಂಧನವನ್ನು ಬಿಡಿಸುತ್ತದೆ. ಆಶೆಯು ಬಂಧು ಬಾಂಧವರನ್ನು ಅಗಲಿ ಸುತ್ತದೆ. ನಿರಾಶೆಯು ಗುರುಹಿರಿಯರನ್ನು ಗೌರವಿಸುತ್ತದೆ. ಆಶೆಯಿಂದ ಸತ್ಯ ಶೋಷಣೆ ಆಗುತ್ತದೆ. ನಿರಾಶೆಯಿಂದ ಸತ್ಯಪೋಷಣೆಯಾಗುತ್ತದೆ. ಆಶೆಯು ಭವದ ಬೀಜವಾದರೆ, ನಿರಾಶೆಯು ಆತ್ಮ ಸೌಂದರ್ಯದ ತೇಜವಾಗುತ್ತದೆ. ಆಶೆಯು ಮೋಹದ ಬಲೆಯಲ್ಲಿ ಬೀಳಿ ಸುತ್ತಿದೆ. ನಿರಾಶೆಯು ಯೋಗದ ಶಕ್ತಿಯನ್ನು ಸಂವರ್ಧಿಸುತ್ತದೆ. ಆಶೆಯು ಅಧಿಕಾರದ ಅಮಲನ್ನು ಹೆಚ್ಚಿಸುತ್ತದೆ. ನಿರಾಶೆಯು ಆತ್ಮಸಾಮರ್ಥ್ಯವನ್ನು ಸಂಗಳಿಸುತ್ತದೆ. ಆಶೆ ಯಿಂದ ಮಾನವನ ನಿಜವಾದ ಸ್ವಭಾವವು ಬಯಲಾಗುತ್ತದೆ. ನಿರಾಶೆಯಿಂದ ಮಾನವತೆಯ ಮಹೋನ್ನತ ದರ್ಶನವಾಗುತ್ತದೆ. ಆಶೆಯಿದ್ದಲ್ಲಿ ವಂಚಕರ ವಂಚನೆಗೆ ಒಳಗಾಗಬೇಕಾ ಗುತ್ತದೆ. ನಿರಾಶೆಯಿದ್ದಲ್ಲಿ ಸಂಚಿತ ಕರ್ಮವು ನಿವಾರಣೆಯಾಗುತ್ತದೆ. ಆಶೆಯಿಂದ ಅಸಹನೆ ಪಕ್ಷಪಾತತನಗಳು ಬೇರು ಬಿಡುತ್ತವೆ. ನಿರಾಶೆಯಿಂದ ಸಹನೆ ನಿಷ್ಪಕ್ಷಪಾತತನ ಕರ್ತವ್ಯ ದಕ್ಷತೆಗಳು ಬೆಳೆದು ಬೆಳಗುತ್ತವೆ. ಆಶೆ ಆತ್ಮದ್ರೋಹ ಮಾಡುತ್ತದೆ ನಿರಾಶೆ, ಆತ್ಮೀಯತೆ ಬೆಳೆಸುತ್ತದೆ. ಆಶೆಯು ಆದರ್ಶಸಾಧನೆಗೆ ಅಡ್ಡಿ ಮಾಡುತ್ತದೆ. ನಿರಾಶೆಯು ಆದರ್ಶ ವ್ಯಕ್ತಿಯನ್ನಾಗಿ ಮಾಡುತ್ತದೆ. ಆಶೆಯಿಂದ ದುರ್ಗತಿ, ನಿರಾಶೆಯಿಂದ ಸದ್ಗತಿ. "ಆಶೆಯೇ ದಾಸ್ಯತ್ವ ನಿರಾಶೆಯೇ ಈಶತ್ವ" ಇದು ದಾಸೋಕ್ತಿ. ಆತ್ಯಾಶೆ ಗತಿಗೆಡಿಸಿತು, ಇದು ಅನುಭವೋಕ್ತಿ. ಆಶೆಯಲ್ಲಿಯೂ ಎರಡು ತೆರ. ಒಂದು ದುರಾಶೆ, ಮತ್ತೊಂದು ಸದಾಶೆ. ಸದಾಶೆಯು ಮಾನವನನ್ನು ಕಲ್ಯಾಣದತ್ತ ಕರೆದೊಯ್ಯುತ್ತದೆ. ದುರಾಶೆಯು ಕೆಸರಿನಲ್ಲಿ ಸಿಕ್ಕ ಪಶುವಿನಂತೆ ಅಧೋಗತಿಯತ್ತ ಎಳೆದೊಯ್ಯುತ್ತದೆ. ಆಶೆಯು ಪೂಜೆಯನ್ನು ಬಿಡಿಸು ತ್ತದೆ. ನಿರಾಶೆಯು ಪೂಜೆಯನ್ನು ಮೂಡಿಸುತ್ತದೆ. ದುರಾಶೆ ಹೆಚ್ಚಿದಂತೆ ಭ್ರಾಂತಿ ಬೆಳೆದು

ಶಾಂತಿ ನಶಿಸುತ್ತದೆ. ದುರಾಶೆಯಿಂದ ಜೀವನವು ಮುಳ್ಳಾದರೆ ಸದಾಶೆಯಿಂದ ಜೀವನವು ಹೂವಾಗುತ್ತದೆ. ಸೌಗಂಧ ಬೀರುತ್ತದೆ. ಸಾಮಾಜಿಕ, ಧಾರ್ಮಿಕ, ಕ್ರಾಂತಿಯಾಗುತ್ತದೆ. ಸದಾಶೆಯಿಂದ ಸದ್ಭಾವನೆಗಳು ಪುಷ್ಟವಾಗುತ್ತವೆ. ಆತ್ಮ ಸೌಷ್ಠವವು ಬಲಿಯುತ್ತ ದೇವ ನೊಲಿಮೆ ಲಭಿಸುತ್ತದೆ.

ಒಂದೆಡೆ ಮಹಾತ್ಮಾ ಬುದ್ಧನು "ಮೋಹಕ್ಕಿಂತ ಸುಡುವ ಬೆಂಕಿಯಿಲ್ಲ. ದ್ವೇಷಕ್ಕಿಂತ ಚುಚ್ಚುವ ಅಲಗಿಲ್ಲ, ಭ್ರಾಂತಿಗಿಂತ ಬೇರೆ ಪಾಶವಿಲ್ಲ. ದುರಾಶೆಗಿಂತ ಬೇರೆ ಶತ್ರುವಿಲ್ಲ" ವೆಂದು ಹೇಳಿದರೆ ವಿರತಿ ಶಿಖಾಮಣಿ ಅಕ್ಕಮಹಾದೇವಿಯು "ತೆರಣೆಯ ಹುಳು ತನ್ನ ನೂಲು ಸುತ್ತಿ ಸಾವತೆರನಂತೆ ಮನ ಬಂದುದ ಬಯಸಿ ಬೇವುತ್ತಿರುವೆನಯ್ಯ, ಆ ಮನದ ದುರಾಶೆಯ ಮಾಣಿಸಿ ನಿಮ್ಮತ್ತ ತೋರಾ ಚನ್ನಮಲ್ಲಿಕಾರ್ಜುನಾ" ಎಂಬುದಾಗಿ ಮಲ್ಲಿಕಾರ್ಜುನನನ್ನು ಕುರಿತು ಹಾಡಿದ್ದಾಳೆ, ಬೇಡಿದ್ದಾಳೆ. ಆಶೆಯನ್ನು ದೂರ ಮಾಡಿ ಆತ್ಮಶಾಂತಿಯನ್ನು ಪಡೆದು ಆದರ್ಶ ಮಹಿಳಾ ಮಣಿಯಾಗಿದ್ದಾಳೆ. ದೃಷ್ಟಿ ವಿಶಾಲವಾದರೆ ಮನ ಬುದ್ಧಿಗಳಲ್ಲಿ ಶುದ್ಧಿಯುಂಟಾದರೆ ನಿರಾಶೆ ಸಾಧ್ಯ. ಭೌತಿಕ ಭೂತವನ್ನು ಬಿಡಿಸಿ, ಸದ್ಭಾವನೆಯೆಂಬ ಕ್ಷೀರದಲ್ಲಿ ಸಕ್ಕರೆಯನ್ನು ಬೆರೆಸಿ ಸೇವಿಸಲು ನಿರಾಶೆಯೆ ಪರಮಸಾಧನ. ಅದುವೆ ಆಶೆಗೆ ಕಡಿವಾಣ.

## ಯುಸ್ಮದಸ್ಮತ್ ಶುಭಾಕಾಂಕ್ಷಾಪ್ರವೃತ್ತಿಃ ಸಹಕಾರಿತಾ

ಸಹಕಾರವು ಸರ್ವರಿಗೂ ಸಂಜೀವಿನಿ; ಹಾಲ್ಜೇನು ಸವಿದಂತೆ ಮೃದು ಮಧುರ; ಸಂಘ ಸಂಜೀವನಕ್ಕೆ ತಾಯ್ಬೇರು, ಭಾವ ವಿಕಾಸಕ್ಕೆ ಪನ್ನೀರು; ವ್ಯಕ್ತಿತ್ವ ವೃದ್ಧಿಗೆ ಕಲ್ಪತರು. ಬದುಕನ್ನು ಬಂಗಾರ ಮಾಡಿಕೊಳ್ಳಲು ಸಹಕಾರ ತತ್ತ್ವವನ್ನು ಅನುಸರಿಸಿದರೆ ಸಾಧ್ಯ. ಸಹಕಾರವು ಸಿರಿವಂತರಿಗೂ ಬೇಕು, ಬಡವ ಬಲ್ಲಿದವರಿಗೂ ಬೇಕು. ಸಾಮ್ಯವಾದಿ ಗಳಿಗೂ ಬೇಕು. "ಸಹಕಾರ" ಎಂಬುದು ಬೀಜ ಮಂತ್ರವಾದರೆ, ಅದು ಕಾರ್ಯ ರೂಪಕ್ಕೆ ಬಂದರೆ ನಾಡಿಗೆ ಪ್ರಗತಿ. ಜೇನಹನಿ ತಯಾರಾಗಲು ಹಲವು ದುಂಬಿಗಳ ಸಹಕಾರವೇ ಮೂಲ ಕಾರಣ. ಇರುವೆಗಳೂ ಸಹ ಒಂದನ್ನೊಂದು ಬಿಡದಂತೆ ಸಾಲಾಗಿ ಹೋಗಿ ಕೆಲಸ ಮಾಡುತ್ತವೆ. ನಿರಂತರ ಪರಿಶ್ರಮವನ್ನು ಕಲಿಯಬೇಕಾದರೆ ಇರುವೆಗಳದೇ ನಮಗೆ ಪಾಠ. ಅಂತೆಯೇ ಅರಿಸ್ಟಾಟಲನು 'Man is a Social Animal' ಎಂದು ಹೇಳಿದ್ದಾನೆ. ಮನುಷ್ಯನು ಸಂಘಜೀವಿಯಾದರೆ ವಿಶಾಲ ಮನೋಭಾವನೆಯು ಆವಿರ್ಭಾವವುಂಟಾಗು ತ್ತದೆ. ಮೊದಲಿಗೆ ಸಹಕಾರ ಸಸಿಯು ಇಂಗ್ಲಂಡಿನಲ್ಲಿ ಬೆಳೆದು, ಹೆಮ್ಮರವಾಗಿ, ಆರ್ಥಿಕ, ರಾಜಕೀಯ ಸಾಮಾಜಿಕ ಉನ್ನತಿಗೆ ಭದ್ರ ಬುನಾದಿಯಾಯ್ತು. ಇದರಿಂದ ಕೂಲಿಕಾರ ರಲ್ಲಿ ಪರಸ್ಪರ ಸಹಕಾರ ಮನೋಭಾವನೆ ಮೂಡಿ, ನಿರುದ್ಯೋಗಿ ಕಾರ್ಮಿಕರ ಸಂಖ್ಯೆಯು ಕಡಿಮೆಯಾಗಿ, ಪ್ರತಿಯೊಬ್ಬರಿಗೂ ಸಹಕಾರದ ಆವಿಷ್ಕಾರದಿಂದ ಲಾಭ ದೊರೆಯಲು

ಪ್ರಾರಂಭವಾಗಿ, ಅದಕ್ಕೆ ಹೆಚ್ಚು ಮಹತ್ವ ಬಂದಿದ್ದಕ್ಕಾಗಿಯೇ ಇಂದು ಯುರೋಪವು ಸಮೃದ್ಧ ರಾಷ್ಟ್ರವಾಗಿದೆ.

ಸಹಕಾರ ಬಾಳು ಸಹಜೀವನಗಳೇ ಸುಖದ ಮೂಲ. ಇದಿಲ್ಲದಿದ್ದರೆ ಮನುಷ್ಯನಿಗೆ ಸುಖ ಸಿಗದು. "ಸಹಕಾರ" ಒಟ್ಟು ಗೂಡಿದಾಗ ಸಂಘ ಮತ್ತು ಸಂಸ್ಥೆಯಾಗುತ್ತದೆ. ಈ ಸಂಸ್ಥೆಗಳ ಚಟುವಟಿಕೆಗಳು ವ್ಯವಸ್ಥಿತವಾಗಿ ಸಾಗಿದರೆ ಸಹಕಾರ ಮನೋಭಾವನೆಯು ತುಂಬಿ. ಪ್ರಾಮಾಣಿಕತೆಯಿಂದ ಕೂಡಿದ್ದರೆ, ಆ ಸಂಸ್ಥೆಯ ಆರ್ಥಿಕ ಸ್ಥಿತಿ ಭದ್ರತೆಯುಳ್ಳದ್ದಾಗಿರುತ್ತದೆ. ಅದಕ್ಕಾಗಿ ಸಮಾಜವು ಸಹಕಾರಿ ಬ್ಯಾಂಕ, ಸಹಕಾರಿ ದವಾಖಾನೆ, ಸಹಕಾರಿ ಸಂಘ, ಸಹಕಾರಿ ಭಂಡಾರ ಮುಂತಾದವುಗಳನ್ನು ಸ್ಥಾಪಿಸಿ, ಇದರ ಮುಖಾಂತರ ಸಮಾಜ ಕಲ್ಯಾಣ ಕಾರ್ಯಗಳನ್ನು ನೆರವೇರಿಸುತ್ತದೆ. ಎಲ್ಲರ ಹಿತಕ್ಕೆ ಸರಿಯಾಗಿ ವಿನಿಯೋಗವಾದರೆ ಅದುವೆ ಸಹಕಾರ. ಸಹಕಾರ ತತ್ತ್ವದ ಹಿನ್ನಲೆಯಲ್ಲಿ ಅಸಹಕಾರವುಂಟಾದರೆ ಅಲ್ಲಿ ಪ್ರೇಮ, ಕರ್ತವ್ಯನಿಷ್ಠೆ, ಸತ್ಯವು ಹಾಳಾಗಿ, ಕತ್ತಲೆ ತುಂಬಿದ ಗವಿಯಂತಾಗುತ್ತದೆ. ಸಹಕಾರ ಸಸಿಯುಊ ಒಣಗುತ್ತದೆ. ಹೀಗಾಗದಂತೆ ನೋಡಿಕೊಳ್ಳಲು "All for each and each for all" ಎಂಬ ಈ ಸಹಕಾರಿ ಸೂತ್ರದಂತೆ ಒಮ್ಮನಸಿನಿಂದ ನಡೆದುಕೊಂಡರೆ ಸುಖದ ಗಂಟನ್ನು ಕಟ್ಟಿಟ್ಟಂತೆ.

## ಕರ್ತವ್ಯಂ ದೈನ್ಯ ನಿವಾರಣಂ

ಈ ಜೀವನದಲ್ಲಿ ಬಡತನ ಹಾಗೂ ಸಿರಿತನ ಇರುವದು ಸ್ವಾಭಾವಿಕ. ಬಡತನ ಬಂದಾಗ ಕಷ್ಟ, ಸಿರಿತನ ಬಂದಾಗ ಸುಖ ಇದು ಸಾಮಾಜಿಕ ನಿಯಮ. ಸುಖ ದುಃಖ ರಥದ ಗಾಲಿಗಳಿದ್ದಂತೆ, ಬಿಸಿಲು ನೆರಳು ಇದು ಪ್ರಕೃತಿ ನಿಯಮ, ಜೋಕಾಲಿಯಾಡುವವರು ಮೇಲೊಮ್ಮೆ ಬರಲೇ ಬೇಕಾಗುತ್ತದೆ. ಆಶೆ ದುಃಖದ ಮೂಲವಾದರೆ, ನಿರಾಶೆ ಸುಖದ ಮೂಲವಾಗುತ್ತದೆ. ಹುಟ್ಟಿದ ಮನುಷ್ಯನಿಗೆ ಸಿಹಿಕಹಿಗಳನ್ನು ಅನುಭವಿಸಿದರೆ ಜ್ಞಾನೋದಯವಾಗುವದು ಸಹಜ. ಜ್ಞಾನವಿದ್ದಲ್ಲಿ ಸುಖ, ಅಜ್ಞಾನವಿದ್ದಲ್ಲಿ ದುಃಖ. ಸುಖ ದುಃಖ ಒಮ್ಮೆಲೆ ಬರಲಾರವು. ಸುಖದಿಂದ ಇರುವೆವೆಂದು ಹೇಳತಕ್ಕವರಲ್ಲಿಯೂ ದುಃಖ ದುಮ್ಮಾನಗಳು ಅಂಟಿಕೊಂಡಿರುತ್ತವೆ. ಆ ದುಃಖವು ಒಳಗೊಳಗೆ ಹಾಳು ಮಾಡಿ, ಚಿಂತಾಸಾಗರದಲ್ಲಿ ಹಾಕಿ ಬಿಡುತ್ತದೆ. ಬಾಯಾರಿಕೆಯಾಗುವದು ಮನೋಧರ್ಮ: ಬಾಯಾರಿಕೆಯನ್ನು ಕಳೆದುಕೊಳ್ಳುವದು ಮಾನವ ಧರ್ಮ. ಇದಕ್ಕೆ ಸಾಧನೆಯೇ ಕರ್ತವ್ಯ ಪ್ರಜ್ಞೆ. ತಮ್ಮ ತಮ್ಮ ಕರ್ತವ್ಯವನ್ನು ನಿಷ್ಠೆಯಿಂದ ಮಾಡುತ್ತ ಹೋದರೆ, ಬಡತನ ನಿವಾರಣೆಯಾಗಿ ಸುಖವು ದೊರಕುತ್ತದೆ. ಬಡತನವು ಮಾನವನನ್ನು ಹಿಂಡಿ ಹಿಪ್ಪಿಮಾಡಿ ವ್ಯಕ್ತಿತ್ವವನ್ನು ಹಾಳು ಮಾಡುತ್ತದೆ. ಈ ಮಾತನ್ನು ಶಿವಶರಣರು ಒಪ್ಪಲಾರರು. ಬಡತನ ಬರಲು ಆಲಸ್ಯವೂ ಒಂದು ಕಾರಣ. ಒಮ್ಮೆ ಆಲಸ್ಯ ಆವರಿಸಿದರೆ ಸಾಕು, ಜೀವನವೇ ಹಾಳು ಕೊಂಪೆಯಾಗುತ್ತದೆ. ಅವರಿಗೆ ದುಡಿತವೆಂದರೆ ಬೇಸರ. ದುಡಿತ ಕಡಿಮೆಯಾದರೆ

ರೋಗಗಳು ಆವರಿಸುತ್ತವೆ. ಮನಸ್ಸಿನಲ್ಲಿ ನಿರಾಶೆ ಮೂಡುತ್ತದೆ. ಸೋಮಾರಿಗೆ ಸುಖದರಿವು ಅರ್ಥವಾಗದು. ನಮ್ಮ ಕರ್ಮದಂತೆ ಫಲ ದೊರೆಯುತ್ತದೆಂಬುದು ರೂಢಿಮಾತಾಗುತ್ತದೆ. ಈ ಜೀವನವು ಸಾಹಸ, ಸಹನೆ, ನಿರಂತರ ಉದ್ಯೋಗ, ಚೈತನ್ಯ ವಾಹಿನಿಗಳ ಸಂಗಮವು ಎಂಬ ಭಾವನೆ ಅವರಿಗೆ ತೋಚದು. ಅಂತೆಯೇ ದುಃಖದ ಮಡುವಿನಲ್ಲಿ ಬಿದ್ದು ಕಷ್ಟವನ್ನು ಅನುಭವಿಸಬೇಕಾಗುತ್ತದೆ. ದಟ್ಟದಾರಿದ್ರ್ಯವನ್ನು ನಿರ್ಮೂಲ ಮಾಡಲು ಹಗಲಿರುಳು ಶ್ರಮಿಸದೆ ಗತ್ಯಂತರವಿಲ್ಲ. ದುಡಿಯದೆ, ದುಃಖ ಪಡದೆ ಅನ್ನ ದೊರೆಯುಲಾರದು; ದುಃಖದ ಹೊರೆಯನ್ನು ಮೈಮೇಲೆ ಹಾಕಿಕೊಂಡಂತೆ. ಅಂತೆಯೇ ಶಿವಶರಣರು ಕಾಯಕವೇ ಕೈಲಾಸವೆಂದು ತಿಳಿಸಿ, ಆರ್ಥಿಕ ಪ್ರಗತಿಗೆ ದಾರಿ ದೀಪವಾಗಿದ್ದಾರೆ. ಕಷ್ಟ ಸಹಿಸುವವರು ಏನನ್ನಾದರೂ ಸಾಧಿಸಬಹುದು. ಅಗಿಯದೆ ಬಾವಿಯಲ್ಲಿ ನೀರು ಬರದು. ನೀರು ಹಾಕದೆ ತರುಗಳು ಬೆಳೆಯಲಾರವು. ಮನೆ ಕಟ್ಟದೆ ನೆರಳು ದೊರೆಯದು. "ದುಡಿತವೇ ದುಡ್ಡಿನ ತಾಯಿ" ಎಂದು ಹಿರಿಯರು ಹೇಳಿದ್ದಾರೆ. ದುಡಿದಂತೆ ದೊರಕುದು ಮೆತ್ತಿರುವ ಕೊಳಕು. ಎಂತಹ ಕಷ್ಟ ಪ್ರಸಂಗದಲ್ಲಿಯೂ ಧೈರ್ಯದಿಂದ ಎದ್ದು ಕರ್ತವ್ಯ ಪ್ರಜ್ಞೆ ಮೂಡಿಸಿಕೊಂಡು ಕಾರ್ಯಪ್ರವೃತ್ತರಾದರೆ ಸುಖದ ಬುತ್ತಿ ಕಟ್ಟಿಟ್ಟಂತೆ. ದೈನ್ಯ ನಿವಾರಣೆ ಮಾಡಿಕೊಂಡಂತೆ.

**ವಾದೇ ವಾದೇ ಜಾಯತೇ ತತ್ತ್ವ ಬೋಧಃ**

ತತ್ತ್ವ ಬುದ್ಧಿಯ ಸಂವರ್ಧನೆಗೆ ವಾದಬೇಕು. ವಾದ ಬೆಳೆದಂತೆ ಮಾಧುರ್ಯ, ಸೌಂದರ್ಯ, ಅಭಿವೃದ್ಧಿ ಹೊಂದಿ ವಿದ್ವಾಂಸರು ತಲೆದೂಗಬೇಕು. ವಾದದಿಂದ ತತ್ತ್ವ ಬೋಧೆಯಾಗಬೇಕು. ಸತ್ವ ತುಂಬಿರಬೇಕು. ಮಾತ್ಸರ್ಯ ಅಳಿದಿರಬೇಕು. ಭಾವಶುದ್ಧಿಯಾಗಿ ಅನುಭವದ ಪರಿಪಕ್ವತೆಯಾಗಿರಬೇಕು. ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ವಾದವಿದ್ದರೆ ಸಮಾಜಕ್ಕೂ ಸಾಹಿತ್ಯಕ್ಕೂ ಹಿತವಾಗುತ್ತದೆ. ಈ ಗುಣಗಳಿಲ್ಲದ ವಾದ ರಸವಿಲ್ಲದ ಹಣ್ಣಿನಂತೆ. ಕಸ ತುಂಬಿದ ಮಣ್ಣಿನಂತೆ ನಿರರ್ಥಕ. ಸಮಾಜಕ್ಕೆ ಪೋಷಕವಾಗದ ವಾದ ಸಮಾಜಕ್ಕೆ ದ್ರೋಹ ಬಗೆದಂತೆ. ಆತ್ಮವಿಕಾಸಕ್ಕೆ ಹನನ ಮಾಡಿಕೊಂಡಂತೆ. ವಿಶಾಲತೆಗೆ ವಿಷಬೀಜ ಬಿತ್ತಿದಂತೆ. ನಮಗಿಂದು ಒಣಮಾತು ಬೇಡ, ಸಮಾಜದ ಕಳಕಳಿ ಬೇಕು. ಸ್ವಪ್ರತಿಷ್ಠೆಯ ಪೆಡಂಭೂತವನ್ನು ಬೆನ್ನು ಹತ್ತಿಸಿಕೊಂಡರೆ ಸಮಾಜ ಸಂಘಟನೆ ಕನಸಾದೀತು. ವಾದದಿಂದ ಭಾವೈಕ್ಯ ಹುಟ್ಟಬೇಕು. ಸಾಮಾಜಿಕ ಪ್ರಜ್ಞೆಯಿಲ್ಲದೆ, ಎಚ್ಚರದಪ್ಪಿ. ನುಡಿದ ನುಡಿ. ಅದು ಘಟಸರ್ಪವಾಗುವದಲ್ಲದೆ, ಸಮಾಜಕ್ಕೆ ಹಿತವಾಗದು, ಶಾಂತಿ ಸಿಗದು. ತೇಲು ನೋಟ, ತೇಲಿ, ಹೋಗುವಂತೆ. ಬೇಲಿಯಿರದ ತೋಟ ಹಾಳಾಗುವಂತೆ, ಸತ್ವವಿರದ ಸಾಹಿತ್ಯ ಮಾತು ಮಾನವೀಯತೆಯನ್ನು ನಷ್ಟ ಮಾಡುವದಲ್ಲದೆ, ಎಲ್ಲರನ್ನು ಅಂಧಕಾರಕ್ಕೆಡೆ ಮಾಡಿಕೊಡುತ್ತದೆ. ಅದಕ್ಕಾಗಿ ನಾವಿಂದು ಜಾಗ್ರತರಾಗಿರಬೇಕು. ಪೂರ್ವಾಶ್ರಮ ನಿರಸನ ಸ್ಥಲದಲ್ಲಿದ್ದವರಿಗೆ ಯಾವ ತತ್ವವೂ ಅಲ್ಲಿ ನಿಲ್ಲದು. ವಾದವೂ ನಡೆಯದು. ಶಿವಾನುಭವ ಗೋಷ್ಠಿಗಳಲ್ಲಿ ಅನುಭಾವಾಮೃತ ಹೊರಬರಬೇಕಲ್ಲದೆ, ಮನ ನೋಯಿಸುವ

ಸಮಾಜವೆಂಬ ಸರೋವರದ ಹೊಲಸನ್ನುಂಟು ಮಾಡುವ ನೊರೆ ತೆರೆಗಳು ಬರಬಾರದು. ವಾದವು ಮಾರ್ಗದರ್ಶಕವಾಗಿರಬೇಕೆ ಹೊರತು ಮಾರ್ಗ ತಪ್ಪಿಸುವದಾಗಿರಬಾರದು. ಆ ಚರ್ಚೆ ಸಮಾಜಕ್ಕೆ ಪೋಷಣೆಯಾಗಬೇಕೇ ಹೊರತು, ಶೋಷಣೆಯನ್ನುಂಟು ಮಾಡ ಬಾರದು. ಮಹಾಜ್ಞಾನಿಗಳ ಮಹಾನ್ ಶಕ್ತಿಗೆ ಆಘಾತವನ್ನುಂಟು ಮಾಡಬಾರದು. ಅಂದರೆ ಅದು ವಾದ. ಪರಿಶುದ್ಧ ನುಡಿ ಇಲ್ಲದಿದ್ದರೆ ಅದು ವಿವಾದವಾಗಿ ಪರಿಣಮಿಸಿ, ವ್ಯಕ್ತಿತ್ವಕ್ಕೆ ಧಕ್ಕೆ ತರುತ್ತದೆ. ಬರಿ ಬುದ್ಧಿ ಬೆಳೆದರೆ ಸಾಲದು. ಹೃದಯವಂತಿಕೆ ಮೂಡ ಬೇಕು. ವಿಶಾಲ ದೃಷ್ಟಿ ಕೃತಿಯಲ್ಲಿ ಬರಬೇಕು. ಅಹಂಕಾರ ನಿರಸನವಾದಾಗ ತತ್ವಬುದ್ಧಿಯೇ ಸತ್ವ ಶುದ್ಧಿಯಾಗಿ ಆತ್ಮಸಿದ್ಧಿಯಾಗುತ್ತದೆ. ತತ್ವಜ್ಞಾನದ ಜಾಗ್ರತಿಯ ವಾತಾವರಣವು ಮನೋಭೂಮಿಯಲ್ಲಿ ಹರಡಿ ಅದು ಜನತೆಯ ಜೀವನಕ್ಕೆ ಬೆಳಕನ್ನುಂಟು ಮಾಡಿದರೆ ಸಫಲತೆ ದೊರುಕುತ್ತದೆ. ಮಜ್ಜಿಗೆ ಕಡಿದರೆ ಬೆಣ್ಣೆ ಬರುವಂತೆ ತತ್ವ ಮಥನವಾದಂತೆ, ಸತ್ವಶಾಲಿಗಳ ಮಹಾನ್ ವ್ಯಕ್ತಿತ್ವವು ನಮಗೆ ಶಕ್ತಿದಾಯಕವಾಗಬೇಕು. ಆತ್ಮಸಂಶೋಧನೆ ಯಿಲ್ಲದ ತತ್ವಬೋಧ ಗುಡ್ಡಕ್ಕೆ ಕಲ್ಲು ಹೊತ್ತಂತೆ. ಅಂತೆಯೇ ಮಹಾತ್ಮಾ ಬಸವಣ್ಣನವರು ನುಡಿ ಮಹತ್ವವನ್ನು ಈ ರೀತಿ ತಿಳಿಸಿದ್ದಾರೆ. "ನುಡಿದರೆ ಮುತ್ತಿನ ಹಾರದಂತಿರಬೇಕು. ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು. ನುಡಿದರೆ ಲಿಂಗ ಮೆಚ್ಚಿ ಅಹುದಹುದೆನ್ನಬೇಕು ನುಡಿಯೊಳಗಾಗಿ ನಡೆಯದಿದ್ದರೆ ಕೂಡಲ ಸಂಗಮ ದೇವ ನೆಂತೊಲಿವನಯ್ಯ." ಪ್ರಭುದೇವರು "ಮಾತೆಂಬುದು ಜ್ಯೋತಿರ್ಲಿಂಗ" ವೆಂದರು.

### ಸಾಕ್ಷರಾ ವಿಪರೀತಾಶ್ಚೇತ್ ರಾಕ್ಷಸಾ ಏವ ಕೇವಲಂ

ಇತ್ತಿತ್ತಲಾಗಿ ಸಮಾಜದಲ್ಲಿ ನಂಬಲಿಕ್ಕಾಗದಷ್ಟು ವಿಚಿತ್ರ ಘಟನೆ ನಡೆಯುತ್ತಲಿವೆ. ಅವನ್ನು ನೋಡಿದಾಗ ಎಂತಹ ವ್ಯಕ್ತಿಗಳಿಗೂ ಆಶ್ಚರ್ಯವಾಗದಿರದು. ಯಾರು ಯಾವ ಸಂಸ್ಥೆಯಲ್ಲಿ ಪೋಷಣೆ ಪಡೆಯುತ್ತಿರುವರೋ, ಯಾರಿಂದ ಯಾವ ಬಗೆಯಿಂದ ಸ್ಥಾನಮಾನ ಪಡೆದಿರುವರೋ, ಅವರೇ ಇಂದು ದೂಷಿಸುತ್ತಿರುವದನ್ನು ಹಾಗೂ ಕೃತಘ್ನತೆಯ ಜೀವನವನ್ನು ನಡೆಸುತ್ತಿರುವದನ್ನು ಕಂಡಾಗ, ಸಂಸ್ಕೃತಿಯು ಉಳಿದಿದೆಯೋ? ಅಥವಾ ಇಲ್ಲವೋ? ಎಂಬ ಸಂಶಯವನ್ನು ತಾಳಬೇಕಾಗಿದೆ. ಯಾರು, ಯಾರ ಅಭಿವೃದ್ಧಿಗಾಗಿ ನಿರಂತರ ಚಿಂತನೆ ಮಾಡುತ್ತಿರುವ ವರ್ಗಕ್ಕೇ, ಅಹಿತ ಬಯಸುವ ದುರ್ಬುದ್ಧಿಯುಳ್ಳವ ರನ್ನು ನೋಡಿದಾಗ, ಅವರಲ್ಲಿ ಮನುಷ್ಯತ್ವವಿದೆಯೆ? ಇದು ಅವರ ಉಪಕಾರಸ್ಮರಣೆಯೆ?

ಎತ್ತ ನೋಡಿದಡತ್ತ ಸ್ವಾರ್ಥ, ವಂಚನೆ ಹೆಚ್ಚಾಗುತ್ತಲಿದೆ. ಮಾತು ಕೃತಿ ಬೇರೆ ಬೇರೆಯಾಗುತ್ತಲಿದೆ. ಮೇಲಕ್ಕೆತ್ತುವದು ಪ್ರಕೃತಿಯ ಗುಣ. ಮೇಲಕ್ಕೆತ್ತಿದವರನ್ನು ತಿಳಿದು ಕೊಳ್ಳದಿರುವದು ರಾಕ್ಷಸೀಯ ಗುಣ. ಸಾಕ್ಷರರು ರಾಕ್ಷಸರಾಗುತ್ತಿದ್ದಾರೆ. ತಿಳಿವಳಿಕೆಯುಳ್ಳ ವರೇ ಸ್ವಾರ್ಥಸಾಧನೆಗಾಗಿ ಸಮಾಜಕ್ಕೆ ದ್ರೋಹ ಬಗೆಯುತ್ತಿದ್ದಾರೆ. ಅವರ ಸಾಹಿತ್ಯದಲ್ಲಿ ಮುಂಕು ಕವಿಯುತ್ತಲಿದೆ. ಅವರು ತಮ್ಮ ದೃಷ್ಟಿಯಲ್ಲಿ, ಒಳ್ಳೆಯದೆಂದು ಭಾವಿಸಿಕೊಂಡು,

ಸಿಕ್ಕ ಸಿಕ್ಕಂತೆ ಬರೆದು ಹಿತಚಿಂತಕರಿಗೆ ದ್ರೋಹ ಬಗೆಯುತ್ತಿರುವದನ್ನು ಕಂಡಾಗ, ಇವರಲ್ಲಿ ಮಾನವತೆಯ ಲವಲೇಶವು ಇಲ್ಲದಂತಾಗಿ ದಾನವತೆಯು ತಾಂಡವವಾಡುತ್ತಿರುವದನ್ನು ನೋಡಿ ಜನತೆಗೆ ದುಃಖವಾಗದಿರದು. ಬರೆಯಲು ಬರುತ್ತದೆಂದು ತಿಳಿದು, ಮಠಮಾನ್ಯಗಳಿಗೆ ಅವಹೇಳನ ಮಾಡಿದರೆ, ಇದು ಸಮಾಜ ಸುಧಾರಣೆಯೆ? ತನ್ನಂತರಂಗದ ನಿರೀಕ್ಷಣೆಯನ್ನು ಮೊದಲು ಮಾಡಿಕೊಂಡು ಅದರಲ್ಲಿ ಸಂಪೂರ್ಣ ಬಲಸಂವರ್ಧನೆಯಾಗಿಸಿ, ತಿಳಿ ಹೇಳಿದರೆ ಸಮಾಜಕ್ಕೆ ಒಳಿತು. ತಮ್ಮ ಸ್ವಾರ್ಥ ಸಾಧನೆಗಾಗಿ ಮೊದಮೊದಲು ಗುರುಹಿರಿಯರಲ್ಲಿ ನಟನೆ ಮಾಡಿ, ಕಪಟ ನಾಟಕವನ್ನಾಡುತ್ತ, ತಮ್ಮಿಚ್ಛೆ ಪೂರೈಸಿಕೊಂಡು, ನಂತರ ಅವರನ್ನು ಅಲ್ಲಗಳೆಯುವದು, ಇದು ಸಂಸ್ಕೃತಿಯೆ? ಕೃತಜ್ಞತೆಯೆ? ಇದು ಸಾಹಿತ್ಯವೆ? ಹೀಗಾಗುತ್ತ ನಡೆದರೆ ಕಷ್ಟಪಟ್ಟು ಸಂಸ್ಥೆಯನ್ನು ನಡೆಸುವವರ ಮನಸ್ಸಿಗೆ ಎಷ್ಟು ನೋವಾಗಲಿಕ್ಕಿಲ್ಲ? ಹೊಳೆ ದಾಟಿದ ಮೇಲೆ ಎಲ್ಲವನ್ನೂ ಮರೆತು ಬಿಡುವದೆ? ಇದು ಕೃತಘ್ನತೆಯ ಲಕ್ಷಣವಲ್ಲವೆ? ಕಲ್ಪನೆಯ ಕುದುರೆಯನ್ನೇರಿ ಕೃತಕ ಸಾಹಿತ್ಯವನ್ನು ರಚಿಸಿದರೆ, ಆ ಸಾಹಿತ್ಯಕ್ಕೆ ಶಕ್ತಿ ಬರುತ್ತದೆಯೆ? ಹೂ ಅರಳಿ, ಸೌಗಂಧ ಬೀರುವಂತೆ, ಸಾಹಿತ್ಯವಿರಬೇಕು. ಬರೆದ ಬರಹದಲ್ಲಿ ತೂಕವಿದ್ದರೆ, ಅದು ಬಹುದಿನ ಉಳಿಯುವ ಸಾಹಿತ್ಯವಾಗುತ್ತದೆ. ಇಲ್ಲದಿದ್ದರೆ ಕೋಲ್ಮಿಂಚಿನಂತಾಗುತ್ತದೆ. ದ್ವೇಷಾಸೂಯೆಗಳನ್ನು ಕಾರಿ, ಹಟ ಸಾಧಿಸಿದಂತಾಗುತ್ತದೆ. ಇಂದು ಸಾಹಿತಿಗಳು ವಿಶಾಲ ಮನೋಭಾವನೆಯತ್ತ ಮನಸ್ಸು ಹಾಕಿ, ಛಿದ್ರ ವಿಚ್ಛಿದ್ರವಾಗುತ್ತಿರುವ ಸಮಾಜಕ್ಕೆ ಪೋಷಣೆಯಾಗುವಂತಹ ಸಾಹಿತ್ಯ ರಚನೆ ಮಾಡಿದರೆ ಅವರ ಬರಹಕ್ಕೂ ಬೆಲೆ ಹಾಗೂ ಬಲ ಬರುತ್ತದೆ. ನಿದ್ರೆಯಲ್ಲಿದ್ದವರನ್ನು ಎಚ್ಚರಿಸಬಹುದು. ನಿದ್ದೆ ಹತ್ತಿದವರಂತೆ ನಟಿಸುವವರನ್ನು ಎಚ್ಚರಿಸುವದು ಬಲು ಕಷ್ಟ. ಸುಶಿಕ್ಷಿತರು ಸಂಸ್ಕೃತಿಯತ್ತ ಸಾಗದಿದ್ದರೆ ಕಿರಿಯರಿಗೆ ಮಾರ್ಗದರ್ಶನ ನೀಡುವರಾರು?

**....ಕಿಮುತತ್ರ ಚತುಷ್ಟಯಂ?**

"ಯೌವ್ವನಂ ಧನಸಂಪತ್ತಿಃ ಪ್ರಭುತ್ವಮವಿವೇಕತಾ|
ಏಕೈಕಮಪ್ಯನರ್ಥಾಯ ಕಿಮುತತ್ರ ಚತುಷ್ಟಯಮ್||"

ಇದು ವಿಷ್ಣು ಶರ್ಮರ ಪಂಚತಂತ್ರದಲ್ಲಿರುವ ಶ್ಲೋಕ. ವಯಸ್ಕರಿಗೆ ನೀತಿ ಬೋಧಪ್ರದವಾದ ಹಿತ ನುಡಿ. ತಾರುಣ್ಯ, ಐಶ್ವರ್ಯ, ಪ್ರಭುತ್ವ, ಅವಿವೇಕತೆ ಇವು ಒಂದೊಂದೂ ಮನುಷ್ಯನನ್ನು ಅಡ್ಡದಾರಿಗೆ ಒಯ್ಯ ತಕ್ಕವುಗಳು, ಆದರೆ ಇವೆಲ್ಲವು ಒಬ್ಬ ಮನುಷ್ಯನಲ್ಲಿಯೇ ಸಮಾವೇಶವಾದರೆ ಅವನ ಗತಿಯೇನಾದೀತು? ಈ ಪ್ರಶ್ನೆಯನ್ನು ಕೃತಿಕರ್ತರು ಹಾಕಿದ್ದಾರೆ. ದುರ್ಗತಿಯುಂಟಾಗಿ ಅಜ್ಞಾನ ಆವರಿಸಿ, ಅಧೋಗತಿಯತ್ತ ಸಾಗಿ. ಜೀವನ ವೃಕ್ಷವನ್ನು ಹಾಳುಮಾಡಿಕೊಳ್ಳುತ್ತಾನೆಂಬುದೇ ಅದಕ್ಕುತ್ತರ. ಹುಟ್ಟಿದ ಮನುಷ್ಯನು ಬೆಳೆದು ದೊಡ್ಡವನಾಗುತ್ತಾನೆ. ಯೌವನಕ್ಕೆ ಬರುತ್ತಾನೆ. ಇದು ಪ್ರಕೃತಿಯ ಗುಣ. ಈ ಸಂದರ್ಭದಲ್ಲಿ ಒಳ್ಳೇ ವಿಚಾರ, ಗುರುಹಿರಿಯರ ಆಜ್ಞೆ ಪರಿ–

ಪಾಲನೆ, ಸೇವಾ ಮನೋಭಾವನೆ, ಕರ್ತವ್ಯದಕ್ಷತೆ, ಇವುಗಳು ಮನೋಮಂದಿರದಲ್ಲಿ ಮೂಡಿದರೆ, ಸಮಾಜಕ್ಕೂ, ಆ ಮನೆತನಕ್ಕೂ ಹಿತ. ಇದು ಸಂಸ್ಕೃತಿಯ ಲಕ್ಷಣ. ಇವೆಲ್ಲವುಗಳನ್ನೂ ಗಾಳಿಗೆ ತೂರಿ, ಮನಬಂದಂತೆ ವರ್ತಿಸಿ, ಗುರು-ಹಿರಿಯರನ್ನು ಹೀಯಾಳಿಸಿ, ಅಹಂಕಾರದ ಮದಗಜವನ್ನೇರಿದರೆ, ಯೌವ್ವನದ ಸಾರ್ಥಕತೆಯನ್ನು ಹಾಳುಮಾಡಿಕೊಂಡಂತೆ. ಆತ್ಮವಿಕಾಸದ ಬದಲು, ಆತ್ಮವಿನಾಶ ಮಾಡಿಕೊಂಡಂತೆ. ಇದು ವಿಕೃತಿಯ ಲಕ್ಷಣವಾಗುವದಲ್ಲದೆ, ಸ್ವಾರ್ಥ ಸಂಕುಚಿತ ಸ್ವಭಾವದ ರೋಗಕ್ಕೆ ತುತ್ತಾಗಬೇಕಾಗುತ್ತದೆ. ಒಮ್ಮೆ ಯೌವ್ವನದಲ್ಲಿ, ಐಶ್ವರ್ಯ ಅವಿವೇಕ; ಅಧಿಕಾರ ಕೂಡಿಕೊಂಡರೆ ಸಾಕು, ಪಾನಮತ್ತರಂತೆ ಅವರ ಜೀವನವಾಗುತ್ತದೆ. ಯಾರ ತತ್ವ ಬೋಧೆಯೂ ನಾಟದು. ಸಾಧಿಸುವ ಹುಚ್ಚು ಹೆಚ್ಚಾಗುತ್ತದೆ. ಕಂಡವರನ್ನು ಕಚ್ಚು ವಂತಾಗುತ್ತದೆ. ಮನೋಹಾರಿಯಾದ ಹಿತನುಡಿ, ಉದರಕ್ಕೆ ಕಹಿಯಾಗುತ್ತದೆ. ಆಗ ಸಂಸ್ಕೃತಿ ಕೇವಲ ಮಾತಾಗುತ್ತದೆ, ವಿಕೃತಿ ಕೃತಿಯಾಗುತ್ತದೆ. ದೋಷದೃಷ್ಟಿ ಹಿಗ್ಗು ತ್ತದೆ. ಸಾಹಿತ್ಯಶಕ್ತಿ ಕುಗ್ಗುತ್ತದೆ. ತನ್ನರಿವು ಮರೆಯುತ್ತದೆ. ತನ್ನವರೆನ್ನುವವರನ್ನು ಇರಿಯುತ್ತದೆ. ಬಂಧು-ಬಾಂಧವರನ್ನು ತೊರೆಯುತ್ತದೆ. ನಾನೆಂಬುದು ಹೆಚ್ಚಾಗುತ್ತದೆ. ಕರ್ತವ್ಯದಲ್ಲಿ ವಿಮುಖತೆಯಾಗುತ್ತದೆ. ಧರ್ಮ ದಯೆಲೋಪದೋಷವಾಗುತ್ತದೆ. ಅವರ ಜೀವನ ತಂದೆ-ತಾಯಿಂದಿರಿಗೆ ತಾಪ ನೀಡುತ್ತದೆ. ಮಾನವೀಯತೆ ಇಲ್ಲದಾಗುತ್ತದೆ. ಕಾಮದ ಕತ್ತಲೆಯಲ್ಲಿ ತತ್ತರಿಸಬೇಕಾಗುತ್ತದೆ. ಶಿವಪಥ ನಶಿಸುತ್ತದೆ. ಬಾಹ್ಯಾಡಂಬರ ಬೆಳೆಯುತ್ತದೆ. ಅಂತರ್ದೃಷ್ಟಿ ಅಪರೂಪವಾಗುತ್ತದೆ. ಸಂಯಮ ಶೀಲತೆ ಅತ್ಯಲ್ಪ ವಾಗುತ್ತದೆ. ಉಚ್ಛೃಂಖಲವೃತ್ತಿ ಹೆಚ್ಚುತ್ತದೆ. ಕಡಿವಾಣವಿಲ್ಲದಂತಾಗಿ ಜೀವನವೆ ಹಾಳಾಗಿಹೋಗುತ್ತದೆ. ಅದಕ್ಕಾಗಿ ಕಿರಿಯ ವಯಸ್ಸಿನಲ್ಲಿಯೇ ಹಿರಿಯರು ತಮ್ಮ ಜ್ಞಾನದ ವಿದ್ಯುದ್ದೀಪವನ್ನು ಅವರ ಮನೋಮಂದಿರದಲ್ಲಿ ಬೆಳಗಿಸಿದರೆ ಜೀವನದಲ್ಲಿ ಪುನರುತ್ಥಾನದ ಶಕ್ತಿ ಬೆಳೆದು, ಸಂಸ್ಕೃತಿಯು ಉಳಿದೀತು.

**ಅಹಿಂಸಾ ಪರಮೋ ಧರ್ಮಃ**

ಕೊಲ್ಲದಿರ್ಪುದೇ ಮಾನವನ ಧರ್ಮದಮೂಲ ಮಂತ್ರ. ಸಕಲ ಪ್ರಾಣಿಗಳಲ್ಲಿ ಆತ್ಮೀಯ ಭಾವನೆಯಿಂದ ನಡೆದರೆ ಮಾತ್ರ ಆತ್ಮ ಸ್ವಾತಂತ್ರ್ಯ, ಇದೇ ಮಾನವನ ಸಂಸ್ಕೃತಿ; ದೇವನಿಗೆ ಸಂಪ್ರೀತಿ.

ಹಿಂಸಾಚಾರಣೆಯಿಂದ ಮನುಷ್ಯನು ವಿನಾಶದತ್ತ ಸಾಗುವನಲ್ಲದೆ, ಅವನ ತಾಮಸೀ ಪ್ರವೃತ್ತಿಗಳು ಬೆಳೆದು, ಆತ್ಮಶಕ್ತಿಯು ಕುಗ್ಗಿ, ಬೆಳಕಿರದ ಮನೆಯಂತೆ ಅವನ ಜೀವನವಾಗುತ್ತದೆ. ಅಂತಃಸತ್ವವು ನಶಿಸಿ ಅಂತಃಕಲಹಗಳು ಹೆಚ್ಚಾಗುತ್ತವೆ. ಇದರಿಂದ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಅವನು ನಿರಂತರ ಅಂಧಕಾರದಲ್ಲಿ ತಿರುಗಬೇಕಾಗುತ್ತದೆ; ನಿಶ್ಚೇಷ್ಟಿತನಾಗಿ ಇದ್ದಲ್ಲಿಯೇ ಕೊರಗಬೇಕಾಗುತ್ತದೆ. ಹಿಂಸೆಯಿಂದಲೇ ರಾಗದ್ವೇಷಾದಿ ದುರ್ಗುಣಗಳು ಉದ್ಭವಿಸುತ್ತ, ಅದರಿಂದಲೇ ಮನುಷ್ಯನು ದೇವರಿಲ್ಲದ ಹಾಳು ದೇಗುಲ

ದಂತೆ ಹಾಳಾಗುತ್ತಾನೆ. ಅದಕ್ಕಾಗಿ ಅಹಿಂಸೆ ಮುಂತಾದ ದೈವಿ ಗುಣಗಳ ವಿಕಾಸವು ಅತ್ಯಾವಶ್ಯಕ.

ವೇದವು "ಮಾ ಹಿಂಸ್ಯಾತ್ ಸರ್ವಭೂತಾನಿ" ಎಂದು ಹೇಳಿದೆ. ಹಿಂಸೆಯು ಬಾಹ್ಯ ಮತ್ತು ಅಭ್ಯಂತರವೆಂದು ಎರಡು ತೆರನಾಗಿರುತ್ತದೆ. ದೈಹಿಕ ಮತ್ತು ವಾಚಿಕವೆಂಬ ಬಾಹ್ಯಹಿಂಸೆಗಿಂತಲೂ ಮಾನಸಿಕ ಹಿಂಸೆಯು ತುಂಬ ಕೆಟ್ಟದ್ದು. ಮಾನಸಿಕ ಹಿಂಸೆ ಕೊಡುವ ದರಿಂದ ಮನೋರೋಗಕ್ಕೆ ದಾರಿಮಾಡಿದಂತೆ; ತನ್ನತನವನ್ನು ನಷ್ಟ ಮಾಡಿಕೊಂಡು ತನ್ನ ವ್ಯಕ್ತಿತ್ವ ವಿಕಾಸಕ್ಕೆ ತಾನೇ ಕುಠಾರಾಘಾತ ಮಾಡಿಕೊಂಡಂತಾಗುವದು.

"ಆತ್ಮವತ್ ಸರ್ವ ಭೂತಾನಿ ಯಃ ಪಶ್ಯತಿ ಸಃ ಪಶ್ಯತಿ" ಎಂಬ ನುಡಿಯು ಅರ್ಥ ಗರ್ಭಿತವಾದುದು, ಭಾವಪೂರ್ಣವಾದುದು. ಮಹಾತ್ಮಾ ಗಾಂಧಿಯವರು—"Ahimsa is the farthest limit of humanity" ಎಂಬುದಾಗಿ ಅಹಿಂಸೆಯ ಮಹತ್ವ ವನ್ನು ತಿಳಿಸಿದ್ದಾರೆ. ಪತಂಜಲಿಯ ಯೋಗಸೂತ್ರವು "ಅಹಿಂಸಾಪ್ರತಿಷ್ಠಾಯಾಂ ತತ್ ಸನ್ನಿಧೌವೈರತ್ಯಾಗಃ" ಎಂದು ಅಹಿಂಸೆಯ ಲಕ್ಷಣವನ್ನು ಹೇಳಿ, "ವೈರತ್ವವನ್ನು ದೂರೀ ಕರಿಸುವುದೇ ಅಹಿಂಸೆಯ ಮೂಲಗುರಿಯೆಂದು ಸ್ಪಷ್ಟಪಡಿಸಿದೆ. ಕೊಲ್ಲದಿರ್ಪ ಧರ್ಮ ವೆಲ್ಲರಿಗೂ ಸಮ್ಮತವು| ಅಲ್ಲದನು ಮೀರಿ ಕೊಲ್ಲುವನು ನರಕಕ್ಕೆ| ನಿಲ್ಲದಲೆ ಹೋಹ ಸರ್ವಜ್ಞ" ಎಂದು ಮುಂತಾಗಿ ಹೇಳಿ, ಸರ್ವಜ್ಞನು ಹಿಂಸೆ ಮತ್ತು ಅಹಿಂಸೆಯ ಫಲವನ್ನು ಸ್ಪಷ್ಟಗೊಳಿಸಿದ್ದಾನೆ. ಹಿಂಸೆ ಎಲ್ಲ ದೃಷ್ಟಿಯಿಂದಲೂ ತ್ಯಾಜ್ಯವಾದುದು; ಅಹಿಂಸೆ ಮಾತ್ರ ಎಲ್ಲರಿಗೂ ಸಮ್ಮತವು. ಅಂತೆಯೇ ಕಾಯಾ, ವಾಚಾ ಮನಸಾಽಪಿ ಹಿಂಸೆಯಾಗ ದಂತೆ ನಡೆದುಕೊಳ್ಳುವಲ್ಲಿಯೇ ಜಾಗತಿಕಶಾಂತಿ ನೆಲೆಸುತ್ತದೆ. ಜೈನರ ವೈರಾಗ್ಯ ನಿಧಿ ಯಾದ ಬಾಹುಬಲಿಯ ಸಂದೇಶವೂ ಇದೇ ಆಗಿದೆ.

## ಸಮಸ್ಯಾ ಪರಿಹಾರೋ ಭವೇತ್ ಕಾಯಕನಿಷ್ಠಯಾ

ಇಂದು ಎತ್ತ ನೋಡಿದಡತ್ತ ಹಲವು ಸಮಸ್ಯೆಗಳ ಸುರಿಮಳೆಯನ್ನು ಸುರಿಸುತ್ತ ಲಿರುವದನ್ನು ಕಾಣುತ್ತಿದ್ದೇವೆ. ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಶೈಕ್ಷಣಿಕ ರಂಗಗಳಲ್ಲಿಯೂ ಸಹ ದಿನಕ್ಕೊಂದು ತೆರನಂತೆ, ತಲೆಗೊಬ್ಬರಂತೆ ಅನೇಕ ಬಗೆಯ ಸಮಸ್ಯೆಗಳನ್ನೇ ಎತ್ತಿ ತೋರಿಸುತ್ತಲಿರುವದು ಕಂಡುಬರುತ್ತಲಿದೆ. ಯಾವ ರಂಗದಲ್ಲಿ ನಿರುಕಿಸಿದರೂ ಸುಖ ಶಾಂತಿ ದೊರೆಯದಂತಾಗಿದೆ. ತಮ್ಮದೇ ಯೋಗ್ಯವೆಂದು ಪ್ರತಿ ಯೊಬ್ಬನೂ ತನ್ನಷ್ಟಕ್ಕೆ ಪ್ರತಿಪಾದಿಸುತ್ತಲಿದ್ದಾನೆ. ಹಿರಿಯರ ಮಾತು ಕಿರಿಯರು ಕೇಳು ವದು, ಕಿರಿಯರ ಮಾತು ಹಿರಿಯರು ಕೇಳುವದು ಇವೆರಡೂ ಒಡೆಯದ ಒಗಟಾಗಿದೆ, ಕಷ್ಟವಾಗಿದೆ. ಒಬ್ಬರು ಅನುಭವವಿಲ್ಲವೆಂದು ತಿಳಿಸಿದರೆ, ಮತ್ತೊಬ್ಬರು ಹೊಸತನ, ಆಧುನಿಕತೆ ಅವರಿಗಿಲ್ಲವೆಂದು ವಾದಿಸುತ್ತಿದ್ದಾರೆ. ಯಾವದು ಸತ್ಯ, ಯಾವದು ಮಿಥ್ಯ ತಿಳಿಯದಂತಾಗಿದೆ. ಸ್ವಾರ್ಥ ಪದಾರ್ಥಗಳೆರಡರ ಹೋರಾಟವೂ ನಡೆದಿದೆ. ಒಬ್ಬರಿಗೆ

ಸ್ಥಾನ ಬೇಕಾದರೆ, ಮತ್ತೊಬ್ಬರಿಗೆ ಸೇವೆ ಬೇಕಾಗಿದೆ. ಎಲ್ಲರೂ ಹೇಳುವದು ತತ್ವವಾದರೂ, ತತ್ವದಂತೆ ನಡೆಯುವವರು, ಸತ್ಯವನ್ನು ನುಡಿಯುವವರೂ, ಇದೀಗ ಕಾಣುವದು ದುರ್ಲಭ ವಾಗಿದೆ. ಎಲ್ಲ ರಂಗಗಳಲ್ಲಿಯೂ ಸ್ವಾರ್ಥವು ತುಂಬಿ ತುಳುಕುತ್ತಲಿದೆ. ಸಾಮಾಜಿಕ ಕಳಕಳಿ, ರಾಷ್ಟ್ರಾಭಿಮಾನ ಶಿಕ್ಷಣಪ್ರೇಮ ಆಧ್ಯಾತ್ಮಿಕಜೀವನ ಮಾತಿನ ಮಾಲೆಯಾಗಿವೆ. ದ್ವೇಷಾಸೂಯೆಗಳ ಅಗ್ನಿಯ ಕುಡಿಗಳು ಭುಗಿಲ್ಲೆಂದು ಮೇಲೇಳುತ್ತಲಿವೆ. ಒಂದು ಸಮಸ್ಯೆಯು ಬಗೆ ಹರಿಯುವಷ್ಟರಲ್ಲಿ ಮತ್ತೊಂದು ಸಮಸ್ಯೆ ಎದುರು ಬಂದು ಕಾಣುತ್ತ ಲಿದೆ. ಮಧುರ ಬಾಂಧವ್ಯವೆಂಬುದು ಕನಸಿನ ಗಂಟಾಗಿದೆ. ಗುರು-ಹಿರಿಯರಲ್ಲಿಡ ಬೇಕಾದ ಭಕ್ತಿಭಾವ ಶ್ರದ್ಧೆಗಳೆಲ್ಲವೂ ಲೋಪವಾಗಿವೆ. ದಿನ ದಿನವೂ ತಾಪತ್ರಯಗಳು ಹೆಚ್ಚಾಗುತ್ತಲಿವೆ! ಆರ್ಥಿಕ ರಂಗದಲ್ಲಿಯಂತೂ ಬೆಳವಣಿಗೆಗಿಂತ, ಬಲಹೀನರಾಗುವದೇ ಬೆಳೆಯುತ್ತ ನಡೆದು, ನಿರ್ಗತಿಕ ಜೀವನವುಳ್ಳವರಾಗುತ್ತಿದ್ದಾರೆ. ಆಲಸಿಗಳು ಹೆಚ್ಚಾಗು ತ್ತಿದ್ದಾರೆ. ಬೆಲೆಯೇರಿಕೆಯಿಂದ, ಆಹಾರದ ಅಶುದ್ಧತೆಯಿಂದ ನಿಸ್ಸತ್ವವುಳ್ಳವರಾಗುತ್ತಿ ದ್ದಾರೆ. ಹೀಗಾಗಿ ಯಾರಿಗೂ ನೆಮ್ಮದಿಯಿಲ್ಲ. ದುಡಿವವರಿಗೂ ಕಷ್ಟವಾಗಿದೆ, ದುಡಿಸಿ ಕೊಳ್ಳುವವರಿಗೂ ಕಷ್ಟವಾಗಿದೆ. ಇಬ್ಬರಲ್ಲಿಯೂ ಆದರಾಭಿಮಾನವು ಕಡಿಮೆಯಾಗಿ, ಸಂಸ್ಥೆಗಳಿಗೆ ಆಘಾತವುಂಟಾಗುತ್ತಲಿದೆ. ಕಷ್ಟ ಸಹಿಸುವ ಗುಣ ಇಲ್ಲದಾಗಿ, ಕಾರ್ಯ ಮಾಡದೇ ಸುಖಿಸಿಗಬೇಕೆನ್ನುವ ಪ್ರವೃತ್ತಿ ಹೆಚ್ಚಾಗುತ್ತಲಿದೆ. ಇದುವೆ ದಿನ ದಿನವೂ ಬೆಳೆಯುತ್ತ ನಡೆದರೆ ರಾಷ್ಟ್ರಪ್ರಗತಿಗೆ ಅಡ್ಡಿಯಾಗುವದಲ್ಲದೆ, ಆತ್ಮದ್ರೋಹ ಮಾಡಿ ದಂತಾಗುವದು. ಈ ಎಲ್ಲ ಸಮಸ್ಯೆಗಳು ಬಗೆಹರಿಯಲು ಪ್ರತಿಯೊಂದು ರಂಗದಲ್ಲಿ ಒಳ್ಳೆ ಸಂಸ್ಕೃತಿ ಬೆಳೆದರೆ ಮತ್ತು ಸತ್ಯ ಶುದ್ಧ ಕಾಯಕ ನಿಷ್ಠೆಯನ್ನು ಕಾರ್ಯಾಚರಣೆಯಲ್ಲಿ ತಂದರೆ ಅದು ಸಾಧ್ಯ.

## ಬುದ್ಧಿನಾಶಾತ್ ಪ್ರಣಶ್ಯತಿ

ಬುದ್ಧಿಯು ಸದ್ಬುದ್ಧಿಯಲ್ಲಿ ಬೆಳೆದರೆ ಹೃದಯ ಶುದ್ಧಿ. ಬುದ್ಧಿಯು ಬೆಳಗಿದಂತೆ ಭಾವ ಶುದ್ಧಿಯಾದಂತೆ ಆತ್ಮಸಿದ್ಧಿ. ಬುದ್ಧಿವೃದ್ಧಿಯಿಂದ ಬಹಿರಂಗ ಶುದ್ಧಿ ಮತ್ತು ಅಂತರಂಗ ಶುದ್ಧಿಯಾಗುವದು ಸಹಜ. ಆದರೆ ಬುದ್ಧಿಯಲ್ಲಿ ವಿಷಯ ವಿಕಾರಾದಿ ದುರ್ಗುಣಗಳು ತುಂಬಿ, ಅಶುದ್ಧಿಯಾಗಿ ದುರ್ಬುದ್ಧಿ ಬಂದಿದ್ದರೆ ಎನಿತೇ ಬುದ್ಧಿವಂತಿಕೆ ಯಿದ್ದರೂ ಅದೆಲ್ಲವೂ ಕುಂಟನಂತೆ, ಕುರುಡನಂತೆ ವ್ಯರ್ಥ. ಬಾಳೆಲ್ಲವೂ ಕತ್ತಲೆ ತುಂಬಿದ ಮನೆಯಂತೆ ಹಾಳು. ಏನಿದ್ದರೂ ಸೊಗಸುಬಾರದು. ಚೈತನ್ಯವು ಜಾಗ್ರತವಾಗಲಾರದು. ಭವಬಂಧನ ಬಿಡದು. ಹುಟ್ಟುವದು ಸಾಯುವದು ಇದು ನಿಸರ್ಗದ ನಿಯಮ. ನಿಸರ್ಗ ದಂತೆ ಪರಿಪಾಲಿಸುವದು ಪ್ರಕೃತಿ ನಿಯಮ. ಪ್ರಕೃತಿ ನಿಯಮವನ್ನು ತೊರೆದು ವಿಕೃತಿ ಯಲ್ಲಿ ಸಾಗುವದು ಕಿರಾತನ ಬಾಳು. ನುಡಿ ಪುರಾತನದಾಗಿ, ನಡೆ ಕಿರಾತನದಾದರೆ ಕೆಸರು ತುಂಬಿದ ಘಟದಂತೆ ನಿರರ್ಥಕ. ಜೀವನದಲ್ಲಿ ಏನೆಲ್ಲವನ್ನೂ ಗಳಿಸಬಹುದು. ಆದರೆ ಹೃದಯ ಶುದ್ಧಿಯೊಡಗೂಡಿದ ಸದ್ಬುದ್ಧಿಯನ್ನು ಗಳಿಸಿಕೊಳ್ಳುವದು ಕಡು ಕಷ್ಟ.

ಇದಕ್ಕೆ ಪೂರ್ವದ ಪುಣ್ಯ ಬೇಕು. ವಿಶಾಲ ಮನೋಭಾವಬೇಕು, ಅತ್ತಲಿತ್ತ ಚಲಿಸುವ ಮನವನ್ನು ಕಟ್ಟಬೇಕು. ಅರಿಷಡ್ವರ್ಗಗಳನ್ನು ಮೆಟ್ಟಬೇಕು ಅಂದಾಗ ಸಾಧ್ಯ. ಒಮ್ಮೆ ಬುದ್ಧಿ ನಾಶವಾದರೆ ಸರ್ವನಾಶ. ಸಮರಸ ಜೀವನಕ್ಕೆ ಕೊಡಲಿ ಪೆಟ್ಟು ಹಾಕಿಕೊಂಡಂತೆ. ವಿನಾಶದತ್ತ ಸಾಗಿದ ಬುದ್ಧಿಯನ್ನು ತಿದ್ದಲು ಸಾಕಷ್ಟು ಪರಿಶ್ರಮ ವಹಿಸಬೇಕು. ಹರಿದು ಹಂಚಿ ಹೋದ ಎಳೆಗಳನ್ನು ಮೊದಲಿನ ರೂಪಕ್ಕೆ ತರಲು ಬಹು ಪರಿಶ್ರಮದಿಂದ ಸಾಧ್ಯ. ಬುದ್ಧಿಯ ಬಗೆಗೆ ಭಗವದ್ಗೀತೆಯಲ್ಲಿ ಮೂರು ವಿಧವಾಗಿ ವಿಂಗಡಿಸಲಾಗಿದೆ.

"ಪ್ರವೃತ್ತಿಂಚ ನಿವೃತ್ತಿಂಚ ಕಾರ್ಯಾಕಾರ್ಯೇ ಭಯಾಭಯೆ।
ಬಂಧ ಮೋಕ್ಷಂಚ ಯಾವೇತ್ತಿ ಬುದ್ಧಿಸ್ಸಾ ಪಾರ್ಥ ಸಾತ್ವಿಕೇ॥
ಯಯಾಧರ್ಮಮಧರ್ಮಂಚ ಕಾರ್ಯಂಚಾಕಾರ್ಯಮೇವ ಚ।
ಅಯಥಾ ವತ್ಪ್ರಜಾನಾತಿ ಬುದ್ಧಿಸ್ಸಾ ಪಾರ್ಥ ರಾಜಸೀ॥
ಅಧರ್ಮಂ ಧರ್ಮಮಿತಿಯಾ ಮನ್ಯತೇ ತಮಸಾ ವೃತಾ।
ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಸ್ಸಾ ಪಾರ್ಥ ತಾಮಸಿ॥" ಅ. ೧೮

ಅಂದರೆ ।ಪ್ರವೃತ್ತಿ, ನಿವೃತ್ತಿ, ಕಾರ್ಯ, ಅಕಾರ್ಯ, ಭಯ–ಅಭಯ, ಬಂಧ-ಮೋಕ್ಷಗಳ ವ್ಯತ್ಯಾಸವನ್ನು ತಿಳಿಯುವದು ಸಾತ್ವಿಕಬುದ್ಧಿ, ಇವುಗಳ ವಿವೇಚನೆಯನ್ನು ಅನುಚಿತ ರೀತಿಯಿಂದ ತಿಳಿವುದು ರಾಜಸಬುದ್ಧಿ. ಅಧರ್ಮವನ್ನು ಧರ್ಮವೆಂದು ವಿಪರೀತವಾಗಿ ತಿಳಿವುದು ತಾಮಸಬುದ್ಧಿ. ಪ್ರಕೃತಿಯ ಈ ಗುಣಗಳಿಂದ ಮುಕ್ತರಾಗಲು ಅಭ್ಯಾಸ, ವೈರಾಗ್ಯ ಸತದ್ಯೋಗ, ಇವುಗಳೇ ಮೂಲಾಧಾರ. ವಿಷಯಾಸಕ್ತಿಯಿಂದ ಹುಟ್ಟಿದ ಕಾಮವು ಬುದ್ಧಿ ನಾಶವಾಗುವವರೆಗೂ ಬೆಳೆದು ಜೀವನ ವೃಕ್ಷವನ್ನೇ ಕಿತ್ತು ಹಾಕಿಬಿಡುತ್ತದೆ. ನಿಜ ಸುಖವು ಕಾಣದಂತಾಗುತ್ತದೆ. ಶ್ರದ್ಧೆ ಸಮತೆಗಳು ಕನಸಾಗುತ್ತವೆ. ಆತ್ಮಶುದ್ಧಿ ಬರಲು ಜಡವಾಗುತ್ತದೆ. ಹೃದಯ ಬಡವಾಗುತ್ತದೆ. ಮೃಡನಡಿ ಪಿಡಿಯಲು ಕಠಿಣವಾಗುತ್ತದೆ. ಅದಕ್ಕಾಗಿ ಬುದ್ಧಿ ನಶಿಸುವ ಪೂರ್ವದಲ್ಲಿಯೇ ತಿಳಿವಳಿಕೆಯ ಕಣ್ಣುಗಳನ್ನು ತೆರೆದಿಟ್ಟುಕೊಂಡಿರುವದೇ ಪರಮಸಾಧನೆ.

"ವಿಷಯಧ್ಯಾನದಿಂದ ವಿಷಕಂಠನಮರೆತು
ವಿಷಯ ಸಂಸಾರದಲ್ಲಿ ಬೆರೆತು, ದುಸ್ಸಂಗಿಗಳಾಗಿ ತಿರುಗುತ್ತಲಿಹರು
ನೋಡಯ್ಯಾ, ದುಸ್ಸಂಗದಿಂದ ಕಾಮಬೀಜವು ಹುಟ್ಟಿ, ಕಾಮದಿಂದ
ಕ್ರೋಧವು ಚಿಗರೊಡೆದು, ಕ್ರೋಧದಿಂದ ಸಂಮೋಹವು ಬೆಳೆದು,
ಸಂಮೋಹದಿಂದ ಸ್ಮೃತಿಭ್ರಂಶವು ಹಿರಿದಾಗಿ, ಸ್ಮೃತಿಭ್ರಂಶದಿಂದ
ಬುದ್ಧಿಹೀನನಾಗಿ, ಈ ಪರಿ ಕಾಮದ ಮಹಾಮರವು ಫಲಿಸಿರೆ, ಬುದ್ಧಿನಾಶದಿಂದ
ಸರ್ವನಷ್ಟವಾಗಿ, ಗತಿಮತಿಯಿಲ್ಲದಂತೆ ತಲೆಕೆಟ್ಟ ಹುಚ್ಚರಂತೆ, ಮದ್ಯಕುಡಿದ
ಕಪಿಗಳಂತೆ, ತಿರುಗುತ್ತಲಿಹರು ನೋಡಯ್ಯ ಕಾಮವೆಂಬ ವೃಕ್ಷವನು ಜ್ಞಾನವೆಂಬ

ಕೊಡಲಿಯಿಂದ ಕಡಿದೊಗೆದರೆ, ಕಾಲಕರ್ಮಂಗಳು ಬಿಟ್ಟೋಡಿ ಶೂಲಪಾಣಿಯ ಕೃಪೆಯುಂಟಾಗುವದಯ್ಯ ಭ್ರೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ॥"

## ಅನ್ನಂ ಬ್ರಹ್ಮ

ನಮಗಿಂದು ಅನ್ನವೇ ಬ್ರಹ್ಮ. ಇಂದೇಕೆ ಎಂದೆಂದಿಗೂ ಅನ್ನವೇ ಜೀವನಕ್ಕೆ ಆಧಾರ. ಅನ್ನವಿಲ್ಲದೆ ದೇಹ ಪುಷ್ಟವಾಗದು. ಸೌಷ್ಠವ ತೋರದು. ಕಾಂತಿ, ಕಳೆಬರದು. ಅನ್ನವೇ ಒನ್ನವ ಕಳೆಯಲು ಮೊದಲು ಮೆಟ್ಟಲು. ಹಸಿದವನಿಗೆ ಬೇಕಾದಷ್ಟು ತತ್ವ, ವೇದಾಂತ ತಿಳಿ ಹೇಳಿದರೆ ಹೃದಯದೊಳಗೆ ಸೇರದು. ಹಸಿದ ಹೃದಯಕ್ಕೆ ಮೊದಲು ಅನ್ನ ಹೋದ ಮೇಲೆ ಬುದ್ಧಿ ಹಾಗೂ ನವಚೈತನ್ಯವುಂಟಾಗುತ್ತದೆ. ಮೊದಲು ಊಟ, ನಂತರ ಉಪದೇಶ. ಅರ್ಪಣವಿಲ್ಲದ ಅನುಭವ ಆಚರಣೆಯಲ್ಲಿ ಬರಲು ತುಂಬಾ ಕಷ್ಟ. ಆಹಾರ ಚಿಂತೆಯಿದ್ದವರಿಗೆ ಧ್ಯಾನದಲ್ಲಿ ಕುಳ್ಳಿರಲು ತಿಳಿಸಿದರೆ ಬೀಜ ಬಿತ್ತದೆ ನೀರು ಹಾಕಿದಂತೆ ವ್ಯರ್ಥ. ಊಟದಲ್ಲಿ ರುಚಿ ಬಂದ ನಂತರ ಮನಸ್ಸಿನಲ್ಲಿ ಶುಚಿ ಬರುತ್ತದೆ. ಶುಚಿ ಬಂದ ನಂತರ ಶುದ್ಧಾಚರಣೆ ತಲೆದೋರುತ್ತದೆ. ಆಹಾರ ಶುದ್ಧಿಯಿಂದ ಅಂತರಂಗ ಶುದ್ಧಿಯಾಗಿ, ಸ್ಮೃತಿ ಶುದ್ಧಿಯಾಗಿ ರಾಗದ್ವೇಷಗಳು ದೂರಾಗುತ್ತವೆ. ಅನ್ನವಿರದಿದ್ದರೆ ಕಚ್ಚಾಟಗಳು ಪ್ರಾರಂಭವಾಗಿ ಹುಚ್ಚು ಜೀವನ ಸಾಗಿಸಬೇಕಾಗುತ್ತದೆ. ಶುದ್ಧಾನ್ನದಿಂದ ಸಾತ್ವಿಕ ಶಕ್ತಿಯುಂಟಾಗಿ ಆತ್ಮೋನ್ನತಿಗೆ ಅನುಕೂಲವಾಗುತ್ತದೆ. ಅನ್ನವಿಲ್ಲದ ಮನೆ ಅನ್ಯಾಯಗಳ ಆಗರವಾಗುತ್ತದೆ. ಅನ್ಯಾಯ, ಅಸತ್ಯ ಅವ್ಯವಹಾರಗಳು ಕೂಡಿದರೆ ತನ್ನ ಮನ ಪ್ರಸನ್ನವಾಗುವ ಬದಲು ಶರೀರವೆಲ್ಲವೂ ಶೋಷಣವಾಗಿ ಒಣಗಿರ್ಪ ತರುವಿನಂತಾಗುತ್ತದೆ. ಭಾವಶುದ್ಧಿಯಾಗದು. ಧರ್ಮ ಬುದ್ಧಿ ಬರದು, ಎಣ್ಣೆಯಿಂದ ಪ್ರಣತೆಯುಂಟಾಗುತ್ತದೆ. ಸಮಯಕ್ಕೆ ಸರಿಯಾಗಿ ಶರೀರದಲ್ಲಿ ಅನ್ನ ಸೇರದಿದ್ದರೆ ರೋಗಗಳು ಉದ್ಭವಿಸಿ ಶರೀರನಾಶವಾಗುತ್ತದೆ. ಸರ್ವಜ್ಞನು ಒಂದೆಡೆ "ಕೂಳಿಲ್ಲದವ ನೊಡಲು ಹಾಳು ಮನೆಯಂತಕ್ಕು. ಸರ್ವಜ್ಞ॥" ಎಂಬುದಾಗಿ ಹೇಳಿದ್ದಾನೆ. ಅನ್ನವೇ ಧರ್ಮಕ್ಕೆ ಕಾರಣ. ಧರ್ಮವು ಒಳಗಿಳಿಯಲು ಮೊದಲು ಅನ್ನವು ಹೃದಯದಲ್ಲಿ ಸೇರಿದರೆ ಸಾರ್ಥಕ. ಅನ್ನಾಭಾವದಿಂದ ಹೃದಯ ದೌರ್ಬಲ್ಯವುಂಟಾಗಿ ಅಂತಸ್ಸತ್ವವೇ ಕಳೆದು ಬಿಡುತ್ತದೆ. ಅಂತೆಯೇ "ಅನ್ನ ಮತ್ತು ನೀರಿಗೆ ಸಮಾನವಾದ ದಾನವಿಲ್ಲ. ಅಹಿಂಸೆಗೆ ಸರಿಯಾದ ತಪಸ್ಸಿಲ್ಲ" ಎಂಬುದಾಗಿ ಧರ್ಮಶಾಸ್ತ್ರವು ಹೇಳುತ್ತದೆ.

ಹಸಿದವನು ತರ್ಕಕ್ಕೆ ಕಿವಿಗೊಡ, ನ್ಯಾಯಕ್ಕೆ ಬೆಲೆಗೊಡ ಮತ್ತು ಪ್ರಾರ್ಥನೆಗೆ ತಲೆಬಾಗ ಎಂಬ ನೀತಿಯ ಮಾತಿದೆ. ಊಟಕ್ಕಿಲ್ಲದವರು ಕಾಟಕೊಡದೆ ಇರಲಾರರೆ? ಅದಕ್ಕೂ ಹಸಿದ ಜೀವಿಗಳಿಗೆ ಅನ್ನ, ಅರಿವೆ, ನೀರು ದೊರಕಿಸಿಕೊಡುವದೇ ನಿಜವಾದ ಧರ್ಮ, ದಯೆಯಿಲ್ಲದ ಧರ್ಮ ಅದು ಧರ್ಮವಾಗದು.

ಅನ್ನ ದೇವರೆ ಮುಂದೆ। ಇನ್ನೂ ದೇವರು ಉಂಟೆ॥
ಅನ್ನವಿರುವತನಕ ಪ್ರಾಣವೀ ಜಗದೊಳಗೆ॥
ಅನ್ನವೇ ದೈವ ಸರ್ವಜ್ಞ॥
ಉಪನಿಷತ್ತಿನಲ್ಲಿಯೂ ಸಹ "ಅನ್ನಂ ಬ್ರಹ್ಮೇತಿ ಜಾನೀಯಾತ್" ಎಂದಿದೆ.

**ಸಂತಶ್ಚರಿತ್ರಭೂಷಣಾಃ**

ಸಂತರಿಗೆ, ಯೋಗಿಗಳಿಗೆ, ತ್ಯಾಗಿಗಳಿಗೆ ಶೀಲವೇ ಭೂಷಣ. ಶೀಲವು ಆತ್ಮ ಶಕ್ತಿಗೆ ಆಧಾರ. ತಪಸ್ಸು ಹೆಚ್ಚಿದಂತೆ ಶೀಲದ ಬೆಲೆ ಅರಿವಾಗುತ್ತದೆ. ತಪಸ್ಸಿನಿಂದ ಕೋಪ ತಾಪಗಳು ದೂರವಾಗುತ್ತವೆ. ತಪಸ್ಸು ಮಹಾತ್ಮರಿಗೆ ದೊಡ್ಡ ಸಾಧನವಾಗಿರುತ್ತದೆ. ಅಂತ ರಂಗ ಶುದ್ಧಿಗೆ ಜಪತಪಗಳು ಕೈದೀವಿಗೆಗಳಿದ್ದಂತೆ. ಚಾರಿತ್ರ್ಯ ಶುದ್ಧಿಯಿಂದ ಮನಸ್ಸಿಗೆ ಶಾಂತಿ ದೊರೆತು ಸಾಮಾಜಿಕ ಕಾರ್ಯಕ್ಕೂ ಬಲಬರುತ್ತದೆ. "ಶೀಲ ಮತ್ತು ಶ್ರಮಗ ಳಿಂದ ಜಗತ್ತನ್ನೇ ಗೆಲ್ಲಬಹುದೆಂಬುವ" ಲಾವೋತ್ಸೆ ಅವರ ಈ ನುಡಿ ಸತ್ಯಪೂರ್ಣವಾದುದು.

ತಪಸ್ಸು ಎಲ್ಲರಿಗೂ ಬೇಕು. ಆದರೆ ತಪಸ್ಸು ಅಂತರಂಗ ಶುದ್ಧಿಯಿಂದ ಕೂಡಿರ ಬೇಕು. ಬಾಹ್ಯಾಡಂಬರದ ತಪಸ್ಸಿನಿಂದ ಆತ್ಮಸಿದ್ಧಿಯಾಗದು. ದೇವ ಮೆಚ್ಚನು. ಹೊಳೆಯಲ್ಲಿ ಹುಣಸೆ ಹಣ್ಣು ತೊಳೆದಂತೆ ವ್ಯರ್ಥವಾಗುವದು. ಹುತ್ತದೊಳಗಿರುವ ಹಾವನ್ನು ಬಿಟ್ಟು ಹುತ್ತವನ್ನೇ ಹೊಡೆದಂತಾಗುವದು. ಕಾಮ ಕ್ರೋಧಾಗಳನ್ನು ಜಯಿಸಲು ಮದ ಮತ್ಸರಗಳನ್ನು ತೊರೆಯಲು ದಮೆದಯಾ ತಪಸ್ಸೇ ನಿಜವಾದ ತಪಸ್ಸು, ಇಂತಹ ತಪಸ್ಸಿನಿಂದ "ಶಮೆ ವಿವೇಕ ಆತ್ಮವಿದ್ಯೆ, ದಮೆದಯಾ ವಿರಕ್ತಿಯೋಗ" ಸಾಧಿಸಲು ಸಾಧ್ಯವಾಗುವದು. ಅಂತೆಯೇ ಶರಣರು ಈ ರೀತಿಯ ತಪಸ್ಸಿಗಾಗಿ ಅಹೋರಾತ್ರಿ ಪರಿಶ್ರಮಿಸಿ ಆಧ್ಯಾತ್ಮ ಶಕ್ತಿಯನ್ನು ಪಡೆದು ಸಾಧಕರಿಗೆ ಮಾರ್ಗದರ್ಶಕರಾಗಿದ್ದಾರೆ. ನಾವೀಗ ಪ್ರಾಚೀನ ಸಂಸ್ಕೃತಿಯನ್ನು ಬಿಡದೆ, ಅದನ್ನು ಆತ್ಮ ಸೌಷ್ಠವಕ್ಕಾಗಿ ಬಳಸಿ ಕೊಂಡು, ಆಧುನಿಕತೆಯಲ್ಲಿ ಆಧ್ಯಾತ್ಮಿಕತೆಯನ್ನು ಸೇರಿಸಿಕೊಂಡು ಸಾಮಾಜಿಕ ಸೇವೆಯತ್ತ ಸಾಗಿದರೆ ಅದಕ್ಕೊಂದು ಶಕ್ತಿ ಬರುತ್ತದೆ. ರೋಗಿಗೆ ಔಷಧವಿತ್ತು ಚೇತರಿಸಿದಂತೆ ಸುಖಜೀವನವಾಗುತ್ತದೆ. ಮಹಾವ್ಯಕ್ತಿಗಳು ಮಹಾಶಕ್ತಿ ವಾಹಿನಿಯನ್ನು ನಾಡಿನಲ್ಲಿ ಹರಿಯಬಿಟ್ಟು, ಶೀಲ ಸಂಸ್ಕೃತಿಗಳ ಉಳಿಮೆಗೆ ಕಾರಣರಾಗಿದ್ದುದರ ಫಲವೇ ನಾವಿಂದು ಜ್ಞಾನಾಮೃತಪಾನ ಮಾಡುತ್ತ ಸಂಸ್ಕೃತಿಯ ಏಳಿಗೆಯ ಕಡೆ ಧಾವಿಸುವಂತಾಗಿದೆ. ಧರ್ಮ ನಿಷ್ಠ ಪೂತಾತ್ಮರಾಗಿ ಆತ್ಮಜ್ಯೋತಿಯನ್ನು ಬೆಳಗಿಸಬೇಕಾಗಿದೆ.

ಒಂದೆಡೆ ಆಂಗ್ಲ ಸಾಹಿತಿಗಳಾದ ಚಾರ್ಲ್ಸ್‌ರೀಡ್ ಈ ರೀತಿ ಬರೆದಿದ್ದಾರೆ. "Sow an act, and you reap a habit; Sow a habit, and you reap a character; Sow a character and you reap a destiny." ಅಂದರೆ "ಒಂದು ಆಚರಣೆಯನ್ನು ಬಿತ್ತು. ಅದರಿಂದ ನೀನು ಒಂದು ಪ್ರವೃತ್ತಿಯನ್ನು ಬೆಳೆದು ಕೊಳ್ಳುವೆ; ಒಂದು ಪ್ರವೃತ್ತಿಯನ್ನು ಬಿತ್ತು. ಅದರಿಂದ ನಿನ್ನ ಶೀಲವನ್ನು ಬೆಳೆದುಕೊಳ್ಳುವೆ;

ಒಂದು ಶೀಲವನ್ನು ಬಿತ್ತು. ಆದರಿಂದ ನಿನ್ನ ಭವಿತವ್ಯವನ್ನು ಬೆಳೆದುಕೊಳ್ಳುವೆ" ಈ ನುಡಿ ಸತ್ವಪೂರ್ಣವಾದದ್ದಾಗಿದೆ. ಅಂತೆಯೇ ಮಹಾತ್ಮರ ಜೀವನ ಸಾಗರದಂತೆ ಪ್ರಶಾಂತವಾದುದು, ಪ್ರಕಾಶಮಾನವಾದುದು.

**ತಪೋನುಷ್ಠಾನ ಕರ್ತವ್ಯಂ ಸ್ವಾತ್ಮೋದ್ಧಾರಸ್ಯ**

ಆತ್ಮೋದ್ಧಾರಕ್ಕೆ ಅನುಷ್ಠಾನ ಅಡಿಗಲ್ಲು. ಈ ಅಡಿಗಲ್ಲು ಭದ್ರವಿದ್ದರೆ ಗೋಡೆಯು ಸುಭದ್ರವಾಗಿ ಉಳಿದು ನಿಲ್ಲಬಲ್ಲದು; ಸಮಾಜ ಸೇವೆಗೆ ಶಕ್ತಿಯನ್ನು ನೀಡಬಲ್ಲದು. ವ್ಯಕ್ತಿಗೆ ಇದರಿಂದ ಚೇತನ ಜಾಗ್ರತವಾಗಿ ಮನಸ್ಸಿಗೆ ಶಾಂತಿ ಸಮಾಧಾನ ದೊರೆಯುತ್ತದೆ; ಆತ್ಮ ವಿಕಾಸವಾಗಿ ವಿಶ್ವ ಪ್ರಕಾಶನಕ್ಕೂ ಕಾರಣವಾಗುತ್ತದೆ. ಭಾವಶುದ್ಧಿ ಬಲಿತು ಆತ್ಮಾನುಸಂಧಾನಕ್ಕೆ ಜೀವಂತ ದರ್ಪಣವಾಗುತ್ತದೆ. ದರ್ಪಣವನ್ನು ಬೆಳಗುತ್ತ ಹೋದಂತೆ ಮುಖ ಸುಸ್ಪಷ್ಟ ಕಾಣುವಂತೆ ಅನುಷ್ಠಾನ ಬಲಿತಂತೆ ಅಲ್ಲಿ ಆತ್ಮ ಪ್ರಕಾಶ ಸಾಧ್ಯ. ಅದಕ್ಕೆ ಇಷ್ಟಲಿಂಗೋಪಾಸನೆಯೇ ಮುಖ್ಯ ಸಾಧನವಾಗಿದೆ.

ಆತ್ಮಜ್ಯೋತಿ ರೂಪಾದ ಲಿಂಗವು ಆತ್ಮ ಪ್ರಗತಿಯ ಕುರುಹಾಗಿದೆ. ಆತ್ಮೋದ್ಧಾರಕ್ಕೆ ಯಾವ ಯಾವ ಸಾಧನ ಸಂಪತ್ತುಗಳು ಬೇಕೋ ಅವೆಲ್ಲವುಗಳು ಇಷ್ಟಲಿಂಗೋಪಾಸನೆಯಲ್ಲಿ ಅಡಗಿದೆ. ಚೈತನ್ಯ ಬಿಟ್ಟು ವಿಶ್ವವಿಲ್ಲ ವಿಶ್ವವನ್ನು ಬಿಟ್ಟು ಚೈತನ್ಯವಿಲ್ಲ. ಇವೆರಡನ್ನೂ ಒಳಗೊಂಡು ಇಷ್ಟಲಿಂಗವು ರೂಪಿತವಾಗಿದೆ. ಈ ಇಷ್ಟಲಿಂಗದ ಅನುಸಂಧಾನ ಮಾಡುವದರಿಂದ ಮೇಲಿಂದ ಮೇಲೆ ಬರುತ್ತಿರುವ ಅನಿಷ್ಟಗಳನ್ನು ಪರಿಹರಿಸಿಕೊಳ್ಳಬಹುದು. ಇದರ ಸಾರವೇ ಈ ವಚನದಲ್ಲಿ ಅಡಗಿದೆ. "ವಿಶ್ವವನೊಳಕೊಂಡ ಲಿಂಗವು ಕರಸ್ಥಳದಲ್ಲಿ ಬಂದು ಚುಳುಕಾಗಿಹುದಯ್ಯ, ಗುಣ ಕರುಣಿಸಿದ ಲಿಂಗವು ಚಿತ್‌ಕಲಾ ಪರಿಪೂರ್ಣವಾಗಿಹುದಯ್ಯಾ, ಮಾಂಸ ಪಿಂಡವು ಹೋಗಿ, ಮಂತ್ರ ಪಿಂಡವಾಗಲು ಲಿಂಗವೇ ಮೂಲ ಕಾರಣವಯ್ಯಾ, ಭ್ರೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ."

ತಾಮಸೀಯ ಭಾವನೆಯು ಹೆಚ್ಚುತ್ತಿರುವ ಇಂದಿನ ವೈಚಾರಿಕ ಯುಗದಲ್ಲಿ ಲಿಂಗ ಪೂಜಾನುಷ್ಠಾನದ ಸಂಸ್ಕಾರವು ಇಂದು ಅತ್ಯಂತ ಅವಶ್ಯವಾಗಿದೆ. ತಪೋನುಷ್ಠಾನದಿಂದ ಅಂಗ-ಆತ್ಮಗಳೆರಡೂ ಪುಷ್ಟಿಗೊಳ್ಳುತ್ತವೆ; ತುಷ್ಟಿಗೊಳ್ಳುತ್ತವೆ. ಲಿಂಗೋಪಾಸನೆಯಿಂದ ಆ ಆ ಅಂಗಾಂಗಗಳು ತಮ್ಮ ತಮ್ಮ ಕೊರತೆಗಳನ್ನು ಕಳೆದುಕೊಳ್ಳುತ್ತವೆ: ಕಾಂತಿಯುಳ್ಳವಾಗುತ್ತವೆ. ನಿಷ್ಕಲ್ಮಷ ಹೃದಯದಿಂದ ಮಾಡಿದ ಪೂಜಾನುಷ್ಠಾನವು ಅಂತರಂಗದ ಬಾಳಿಗೆ ಅರಿವಿನ ಬೆಳಕು ನೀಡುತ್ತದೆ; ಭವಸಾಗರವನ್ನು ದಾಟಿಸುತ್ತದೆ. ಅಂತೆಯೇ ವೈದ್ಯ ಸಂಗಣ್ಣನೆಂಬ ಮಹಾಶಿವ ಶರಣನು ಈ ರೀತಿ ತಿಳಿಸಿದ್ದಾನೆ "ನಾನಾ ರೋಗಂಗಳು ಬಂದು ದೇಹವ ಹಿಡಿದಲ್ಲಿ ಶಿವಾರ್ಚನೆಯ ಬೇರುಕೊಳ್ಳಿ; ಸಕಲ ಪುಷ್ಪಗಳಿಂದ ಪೂಜೆಯ ಮಾಡಿಕೊಳ್ಳಿ; ಪಂಚಾಕ್ಷರಿಯ ಪ್ರಣವವ ತಪ್ಪದೆ ತ್ರಿಸಂಧಿಯಲ್ಲಿ ನೆನಹುಗೊಳ್ಳಿ. ಇದರಿಂದ ರುಜೆದರ್ಪಂಗೆಡುಗು ಮರುಳ ಶಂಕರ ಪ್ರಿಯ ಸಿದ್ಧರಾಮೇಶ್ವರ ಲಿಂಗಸಾಕ್ಷಿಯಾಗಿ" ಒಟ್ಟಿನಲ್ಲಿ ಮನಃಶಾಂತಿಯನ್ನು ಕಾಯ್ದುಕೊಂಡು ಆರೋಗ್ಯ ರಕ್ಷಣೆಯೊಂದಿಗೆ ಆತ್ಮೋದ್ಧಾರ ಮಾಡಿಕೊಳ್ಳಲು ಶಿವಾರ್ಚನೆಯು ದಿವ್ಯೌಷಧಿಯಾಗಿದೆ.

## ಅಭಿಮಾನಧನೇನೈವ ಸಮಾಜೋದ್ಧಾರಕೋ ಭವೇತ್ (೧)

ನಮಗಿಂದು ಅಭಿಮಾನ ಬೇಕು, ಅಭಿಮಾನವಿರದ ಜೀವನ ನೀರಿಲ್ಲದ ಕೆರೆಯಂತೆ. ಒಣಗಿರ್ಪ ತರುವಿನಂತೆ. ಅಭಿಮಾನವು ಮನುಷ್ಯನನ್ನು ವಿಕಾಸದತ್ತ ಒಯ್ಯುತ್ತದೆ. ಬೆಳಕಿನ ದಾರಿಯನ್ನು ತೋರಿಸುತ್ತದೆ. ವಿಶಾಲತೆಯನ್ನು ಮೂಡಿಸುತ್ತದೆ. ಅಭಿಮಾನ ವಿದ್ದಲ್ಲಿ ಧೈರ್ಯವಿರುತ್ತದೆ. ಶಕ್ತಿಯಿರುತ್ತದೆ. ಆತ್ಮವಿಶ್ವಾಸವು ನೆಲೆಗೊಂಡಿರುತ್ತದೆ. ಮನಸ್ಸು ಮಡಿಯಾಗಿರುತ್ತದೆ. ನಯ ವಿನಯ ತುಂಬಿರುತ್ತವೆ. ಸತ್ಯ ಸಂಸ್ಕೃತಿಯ ಬಳ್ಳಿ ಹಬ್ಬಿರುತ್ತದೆ. ಸ್ವಾವಲಂಬನೆ ಸ್ವಾತಂತ್ರ್ಯವನ್ನು ಗಳಿಸಲು ಮನ ಹಾತೊರೆಯುತ್ತದೆ. ಸುಖ ಶಾಂತಿ ಸಮೃದ್ಧಿ ಸಂವರ್ಧನೆಯಾಗಿರುತ್ತದೆ. ಅಂತರಂಗ ಬಹಿರಂಗಗಳೆರಡರ ಶುದ್ಧಿಯಾಗಿ ಭಾವಸಿದ್ಧಿಯಾಗಿರುತ್ತದೆ. ಅಭಿಮಾನವು ಸಮಾಜವನ್ನು ಎಚ್ಚರಿಸುತ್ತದೆ. ಎತ್ತರಿಸುತ್ತದೆ. ರಾಷ್ಟ್ರದಲ್ಲಿ ಭಾವೈಕ್ಯ ಮೂಡಿಸುತ್ತದೆ. ಸಂಘ–ಸಂಸ್ಥೆಗಳನ್ನು ಬಲ ಪಡಿಸುತ್ತದೆ. ತನ್ನರಿವಿನ ಬೆಳಕನ್ನು ಬೇರೊಬ್ಬರಿಗೆ ತೋರಿಸುತ್ತದೆ. ಅಭಿಮಾನದಲ್ಲಿಯೂ ಹಲವು ಬಗೆಗಳಿವೆ. ಸ್ವಾಭಿಮಾನ, ಸಮಾಜಾಭಿಮಾನ, ರಾಷ್ಟ್ರಾಭಿಮಾನ, ಇವೆಲ್ಲವು ಗಳು ಮನುಷ್ಯನಿಗೆ ಬೇಕು. ಇವುಗಳಿದ್ದರೇನೆ ಮನುಷ್ಯನಿಗೆ ವ್ಯಕ್ತಿತ್ವ. ಯಾವದೇ ಸಂಘ ಸಂಸ್ಥೆಮಠ ಮಂದಿರ ಹಾಗೂ ದೇಶವು ಬೆಳೆಯುತ್ತಿಲ್ಲವೆಂದು ತಿಳಿದರೆ, ಅಲ್ಲಿ ಅಭಿಮಾನವು ಇಲ್ಲವೆಂದೇ ಅರ್ಥವಾಗುತ್ತದೆ. ಸ್ವದೇಶ ಪ್ರೇಮವಿಲ್ಲದ ಜನತೆಯು ತಮ್ಮ ದೇಶವನ್ನೇ ಹಾಳುಮಾಡಿಕೊಂಡಂತೆ. ಒಂದು ನುಡಿ ಇಲ್ಲಿ ಸ್ಮರಣೆಗೆ ಬರುತ್ತದೆ. "ಜೋ ಭರಾ ನಹೀ ಹೈ ಭಾವೋಂಸೇ, ಬಹತೀ ಜಿಸಮೇ ರಸಧಾರ ನಹಿ। ವಹ ಹೃದಯು ನಹೀ ಹೈ ಪತ್ಥರ ಹೈ, ಜಿಸಮೇ ಸ್ವದೇಶ ಕಾ ಪ್ಯಾರ ನಹೀ॥" ರಾಷ್ಟ್ರಾಭಿಮಾನವಿರದ ಮನುಷ್ಯನ ಹೃದಯವು ಕಲ್ಲಿನಂತೆ ಕಠೋರವಾದುದು. ಅವನಿಂದ ಯಾವ ಕಾರ್ಯವೂ ಆಗದು. ಆದರೆ ಮನುಷ್ಯನಿಗೆ ದುರಾಭಿಮಾನ ಬರಬಾರದು. ಅದು ಅವನನ್ನು ಹಾಳು ಮಾಡುವದಲ್ಲದೆ, ಅವನನ್ನು ನಂಬಿದವರನ್ನೂ ಹಾಳು ಮಾಡುತ್ತದೆ. ಸಮಾಜ ವನ್ನು ಹಾಳು ಮಾಡುತ್ತದೆ. ಅವನಿಗೆ ಯಾವ ಪ್ರಜ್ಞೆಯೂ ಬರದು. ಪೋಷಕರನ್ನು ದೂಷಿಸುವ ಬುದ್ಧಿಯು ಅವನಲ್ಲಿ ಮನೆಮಾಡಿಕೊಂಡಿರುತ್ತದೆ. ಅಂತಃಕರುಣೆ ಅದು ಕೇವಲ ನುಡಿಯಾಗಿ ನಟನೆಯಾಗುತ್ತದೆ. ದುರಭಿಮಾನವಿದ್ದವರು ಮತ್ತೊಬ್ಬರ ಪ್ರಶಂಸೆ ಸಹಿಸರು. ತಮ್ಮದೇ ಒಂದು ಕಾರ್ಯ ಸಾಧನೆಯಾದರೆ ಸಾಕು. ದುರ್ಬುದ್ಧಿ, ದುರಾಚಾರ, ದುರ್ನಡತೆಯು ಅವರಿಗೆ ಆಸರವಾಗುತ್ತದೆ. ಸಹಕಾರ ಮನೋವೃತ್ತಿಯು ಬೇಸರವಾಗು ತ್ತದೆ. ಇಂತಹ ಬುದ್ಧಿ ಬಂದರೆ ಸಮಾಜಕ್ಕೆ ನಾಡಿಗೂ ಹಾನಿ. ಸಮಾಜೋನ್ನತಿಯನ್ನು ಬಯಸುವವರು ಇವುಗಳಿಂದ ದೂರಿದ್ದರೆ ಸಮಾಜಕ್ಕೆ ಒಂದು ದೊಡ್ಡ ಶಕ್ತಿಬಂದಂತಾಗು ತ್ತದೆ. ಆದಕ್ಕಾಗಿ ಸಮಾಜವನ್ನು ಬಲಪಡಿಸಲು ಸದಭಿಮಾನದ ಸಂಸ್ಕಾರವನ್ನು ಬಿತ್ತ ಬೇಕಾಗಿದೆ. ಈ ಅಭಿಮಾನವೊಂದಿದ್ದರೆ ಸಾಕು ಸಮಾಜಕ್ಕೆ ಸಮೃದ್ಧಿಯುಂಟಾಗುತ್ತದೆ. ಈ ಅಭಿಮಾನದ ಹಿನ್ನೆಲೆಯಲ್ಲಿ ಎಲ್ಲ ಸದ್ಗುಣಗಳು ತಾವಾಗಿಯೇ ಬರುತ್ತವೆ. ಅಭಿಮಾನವೇ

ಜೀವನಕ್ಕೆ ಅಮೃತ. ಉನ್ನತಿಗೆ ಪ್ರವೇಶದ್ವಾರ. ಅಂತೆಯೇ ಈ ಅಭಿಮಾನಧನವನ್ನು ಬೆಳೆಯಿಸಿಕೊಂಡು ಸಮಾಜೋದ್ಧಾರ ಮಾಡಿದವರೇ ಸಮಾಜೋದ್ಧಾರಕರು.

**ಅಭಿಮಾನಧನೇನೈವ ಸಮಾಜೋದ್ಧಾರಕೋ ಭವೇತ್ (೨)**

"A greater whole-Being, whole-Knowledge whole-Power is needed to weld into greater unity of whole-life" ಈ ನುಡಿ ಅರವಿಂದರದು. ಅಂದರೆ "ಸಮಗ್ರ ಜೀವನವನ್ನು ಘನವಾದ ಏಕತೆಯಲ್ಲಿ ಬೆಸೆಯಬಲ್ಲ ಘನವೂ ಸಮಗ್ರವೂ ಆದ ಇರುವಿಕೆ. ಅರಿವು ಬಲಗಳು ನಮಗೀಗ ಅವಶ್ಯಕವಾಗಿವೆ. ಈ ಅರಿವಿನ ಬೆಳಕಿನಲ್ಲಿ ಸಮಾಜ ಕಟ್ಟಬೇಕಾಗಿದೆ.ಅರಿವು ಅಭಿಮಾನ. ಈ ಎರಡು ಕೂಡಿದರೆ ಸಮಾಜಕ್ಕೆ ದೊಡ್ಡಶಕ್ತಿ ಬರುತ್ತದೆ. ಇದಕ್ಕೆ ಸಮಾಜ ಸೇವೆಯೇ ಬೆನ್ನೆಲುಬು. ಆ ಸೇವೆ ನಿಷ್ಠೆಯುಳ್ಳದ್ದಾಗಿರಬೇಕು. ವಂಚನೆ, ಮೋಸ ಎಳ್ಳನಿತೂ ಕೂಡಿರಬಾರದು. ಸಮಾಜವು ಮುಂದೆ ಬರಬೇಕು. ಸಮಾಜದ ವ್ಯಕ್ತಿಗಳು ಮುಂದೆ ಬರಬೇಕು. ಆ ವ್ಯಕ್ತಿಗಳ ಶಕ್ತಿಯಿಂದ ಸಂಘಟನೆಯಾಗಿ, ಮಾನವೀಯ ಬಾಳನ್ನು ಬೆಳಗಿಸಿ ಸಮಾಜ ರಚನೆಯಾಗಬೇಕು. ಅದು ಕೇವಲ ಭೌತಿಕ ಶಕ್ತಿಯಿಂದ ಕೂಡಿದರೆ ಸಾಲದು. ಆಧ್ಯಾತ್ಮಿಕ ಸಂಪತ್ತಿನಿಂದ ಸಮ್ಮಿಲಿತವಾಗಿದ್ದರೆ, ದೈವೀಯ ಶಕ್ತಿಯುಂಟಾಗಿ, ಆಂತರಿಕ ಉನ್ನತಿ ಹಾಗೂ ಸಾಮಾಜಿಕ ಉನ್ನತಿಯನ್ನು ಸಾಧಿಸಲು ಸಾಧ್ಯವಾಗುತ್ತದೆ. ಈ ಸಾಧನೆಯ ಮಾರ್ಗದಲ್ಲಿದ್ದಾಗ. ಒಬ್ಬರು ಹೆಚ್ಚು ಒಬ್ಬರು ಕಡಿಮೆ, ಈ ಏರಿಳಿತ ಭಾವಗಳನ್ನು ಪ್ರಚುರ ಪಡಿಸುತ್ತ ಹೋದಲ್ಲಿ, ಸಮಾಜ ಸಂಘಟನೆಗೆ ಅಡ್ಡಿಯಾಗುವದಲ್ಲದೆ, ವಾದವಿವಾದಕ್ಕೆ ಆಸ್ಪದ ಕೊಟ್ಟಂತಾಗುವದು. ಯಾವ ಸಂಸ್ಥೆಯ ನೆರಳಿನಲ್ಲಿ ದುಡಿಯುತ್ತಾರೋ ಆ ಸಂಸ್ಥೆಯ ಅಭಿಮಾನ ಅವರಿಗಿರದಿದ್ದರೆ ಸಮಾಜಸೇವೆ ಕನಸಿನ ಗಂಟಾದೀತು. ಸಮಾಜಸೇವೆ ಶಿವಪೂಜೆಗಿಂತಲೂ ಹೆಚ್ಚಿನದು. ಒಂದು ಆತ್ಮೋದ್ಧಾರ, ಮತ್ತೊಂದು ಸಮಾಜೋದ್ಧಾರ, ಸಮಾಜ ಸೇವೆ ಮಾಡುವವರು ವಿಶಾಲ ಮನೋಭಾವನೆಯುಳ್ಳವರಾಗಿರಬೇಕು. ತನ್ನ ಸಂಸ್ಥೆಯ ಅಭಿಮಾನ ಬಿಡದೇ ಅನ್ಯರನ್ನು ಹೀಯಾಳಿಸದೆ, ಇಂದು ಸಮಾಜವನ್ನು ಭದ್ರ ಮಾಡಬೇಕಾಗಿದೆ. ಯಾವದೇ ರಾಷ್ಟ್ರವಾಗಲಿ, ಸಮಾಜವಾಗಲಿ, ಮಠವಾಗಲಿ, ಮುಂದೆ ಬರಬೇಕಾದರೆ, ಅದರ ಅಭಿಮಾನವೇ ಮುಖ್ಯ ಕಾರಣವಾಗಿದೆ. ಆ ಅಭಿಮಾನವು ನಟನೆಯಾಗದೆ, ಸಹಜತೆ ಹಾಗೂ ಸರಳತೆಯಲ್ಲಿ ಕೂಡಿದ್ದರೆ ಅದಕ್ಕೆ ಬಲ ಬರುತ್ತದೆ. ತೋರಿಕೆ ಯಾವಾಗಲೂ ಅದು ಕೋಲ್ಮಿಂಚು. ಆದರಿಂದ ಸಮಾಜೋದ್ಧಾರಕ್ಕೆ ಮತ್ತಿಷ್ಟು ತೊಂದರೆಯಾಗುತ್ತದಲ್ಲದೆ ದೆವ್ವ ಹೊಕ್ಕ ಮನೆಯಂತಾಗುತ್ತದೆ. ಶುದ್ಧಭಾವನೆಯಿರದ ಸಮಾಜಸೇವೆ, ಕರಿಕಿ ತುಂಬಿದ ಹೊಲವಾಗುತ್ತದೆ. ಕರಕಿಯ ಕಳೆ ಕಳೆದರೆ ಸಮಾಜಕ್ಕೆ ಕಳೆ ಬರುತ್ತದೆ. ಸಹಜತೆ ಮಲ್ಲಿಗೆ ಹೂವಾದರೆ ಕೃತಕತೆ ಕೆಸರು ತುಂಬಿದ ಭಾವಿಯಂತೆ ಹಾಗೂ ಊಸರುಳ್ಳಿಯಂತೆ. ಸಮಾಜ ಸೇವೆ ಮಾಡುವವರು ತಳವಿಲ್ಲದ ಗಡಿಗೆಯಂತಾಗದೆ ದೃಢವಿಶ್ವಾಸವೆಂಬ ಜಲವನ್ನು ತುಂಬಿ

ಕೊಂಡು ಚಿನ್ನದ ಘಟದಂತಾಗಬೇಕು. ಕೃತಿ ಕೃತ್ರಿಮವಾಗದೆ ದೇವರು ಮೆಚ್ಚುವಂತಾಗಬೇಕು. ಅಂದರೆ ಅಭಿಮಾನ ಧನವನ್ನು ಬೆಳೆಯಿಸಿಕೊಳ್ಳಬೇಕು. ಸ್ವಾರ್ಥ ಬಿಟ್ಟು ಸಮರ್ಪಣ ಭಾವನೆ ಬೆಳೆಯಿಸಿಕೊಂಡರೆ ಮಾತ್ರ ಸಮಾಜ ಸುಧಾರಣೆ ಸಾಧ್ಯ.

## ಪ್ರೋತ್ಸಾಹಯೇತ್ ಸದಾ ಸರ್ವೇ ಸಮಾಜೋದ್ಧಾರಕಂ ಗುರುವಮ್!

ಈ ಜೀವನದಲ್ಲಿ ತೆಗಳಿಕೆ, ಹೊಗಳಿಕೆ, ಸೋಲು ಗೆಲವು ಬರುವದು ಸ್ವಾಭಾವಿಕ. ತೆಗಳಿಕೆ ಬಂದಾಗ ಕುಗ್ಗುವದು, ಹೊಗಳಿಕೆ ಬಂದಾಗ ಹಿಗ್ಗುವದು. ಇದು ಪ್ರಕೃತಿಯ ಗುಣ. ಬಾಳಬಂಡಿ ಸಾಗಿಸುವಾಗ ಇವೆಲ್ಲವುಗಳು ಇದ್ದರೆ ಬಾಳಿನಲ್ಲಿ ಬೆಳಕು ಕಾಣಬಹುದು. ಅಂತಃಸತ್ವ ಬೆಳೆಯುವದು. ಹೊಗಳಿಕೆಯಲ್ಲಿಯೂ ಒಂದು ತತ್ವವಿದ್ದು, ಸಮಾಜ ಸುಧಾರಿಸುವ ಕಳಕಳಿಯಿದ್ದರೆ ಅದಕ್ಕೆ ಬಲವೂ ಬರುತ್ತದೆ, ಬೆಲೆಯೂ ಬರುತ್ತದೆ. ಕಾರ್ಯ ಮಾಡುವವರಿಗೆ ಮಾಡಿಸುವವರಿಗೆ ಒಂದು ಶಕ್ತಿ ಬಂದಂತಾಗುತ್ತದೆ. ಬುದ್ಧಿ ಹೇಳುವವರು ತಮ್ಮಂತರಂಗದ ಆತ್ಮ ನಿರೀಕ್ಷಣೆ ಮಾಡಿಕೊಂಡು, ಹೃದಯ ಶುದ್ಧಿಯಾಗಿಟ್ಟುಕೊಂಡಿದ್ದರೆ, ಅವರ ವಿಚಾರಕ್ಕೆ ಎಲ್ಲರೂ ಮಣಿದು ಸ್ವಾಗತ ನೀಡಬೇಕಾಗುತ್ತದೆ. ಇತ್ತಿತ್ತಲಾಗಿ ಇದೆಲ್ಲವೂ ಲೋಪವಾಗಿ ದೂಷಿಸುವದೇ ಮುಖ್ಯ ಕರ್ತವ್ಯವಾದಂತಾಗಿದೆ. ಯಾರು ಸಮಾಜದಲ್ಲಿ ಒಳ್ಳೆ ಕಾರ್ಯ ಮಾಡುತ್ತ, ಹಗಲಿರುಳು ಬೆವರು ಸುರಿಸುತ್ತ, ಸಮಾಜಕ್ಕಾಗಿಯೇ ತಮ್ಮ ತನು, ಮನ, ಧನವನ್ನು ಅರ್ಪಿಸಿ, ಸಮಯವನ್ನು ಹಾಳು ಮಾಡದಂತೆ ನಿರಂತರವೂ ಕಾಯಕ ನಿಷ್ಠೆಯುಳ್ಳ ಸ್ವಾಮಿಗಳವರನ್ನು, ಧರ್ಮ ಗುರುಗಳನ್ನು ತೆಗಳುವದೊಂದು ಪರಿಪಾಠವಾದಂತಾಗಿದೆ. ಸತ್ಕಾರ್ಯ ಮಾಡುವವರಿಗೆ ಪ್ರೋತ್ಸಾಹ ನೀಡುವ ಬದಲು ಅಲ್ಲದ ಸಲ್ಲದ ಅಪಪ್ರಚಾರದ ನುಡಿಗಳನ್ನಾಡಿ ತಮ್ಮ ಮಾತೇ ಒಳಿತೆಂದು ಸಾಧಿಸುತ್ತಿರುವ ಕೆಲವು ಜನರನ್ನು ನೋಡಿಕೊಂಡಾಗ ನಗೆಯೂ ಬರುತ್ತದೆ. ದುಃಖವೂ ಆಗುತ್ತದೆ. ಸಂಸ್ಥೆಗಳನ್ನು ಒಳ್ಳೆಯ ರೀತಿಯಿಂದ ನಡೆಸಿಕೊಂಡು ಹೋಗುವವರನ್ನು ನೋಡಿ ತಾಳಲಾರದೆ, ಮಾತ್ಸರ್ಯಾಗ್ನಿಯಲ್ಲಿ ಬೆಂದು, ಈ ರೀತಿ ನುಡಿಯುತ್ತಿರಬಹುದೆಂದು ಭಾಸವಾಗುತ್ತದೆ. ಈ ಭಾವನೆ ಇಟ್ಟುಕೊಂಡವರಿಗೆ ದೇವರೇ ಒಂದು ಬುದ್ಧಿ ಹೇಳಬೇಕು. ಸಮಾಜದ ಹಿತ ಚಿಂತನೆ ಬಯಸುವವರು, ಅಪಪ್ರಚಾರ ಮಾಡಲು ಹೋಗುವದಿಲ್ಲ. ಅಂಥವರು ಕೂಡಿಕೊಂಡು ವಿಚಾರ ವಿನಿಮಯ ಮಾಡಿಕೊಂಡು ಹೆಗಲಿಗೆ ಹೆಗಲು ಕೊಟ್ಟು ದುಡಿಯಲು ಮುಂದೆ ಬರುತ್ತಾರೆ. ಸ್ವಾರ್ಥವನ್ನೇ ಮುಖ್ಯ ಗುರಿಯಾಗಿಟ್ಟುಕೊಂಡವರು ಭೇದೋಪಾಯ ಮಾಡುತ್ತ, ಸಮಾಜದಲ್ಲಿ ಒಡಕು ಹುಟ್ಟಿಸುತ್ತ, ಹಾಲಿನಲ್ಲಿ ಉಪ್ಪು ಹಾಕಿ ಕೆಡಿಸಿ ಬಿಡುತ್ತಾರೆ. ಇವರಿಗೆ ದೋಷದೃಷ್ಟಿಯೊಂದೇ ಕಾಣುತ್ತದೆಯೇ ಹೊರತು ಒಳಿತೆಂಬುದು ಕಾಣುವದಿಲ್ಲ. ಇಂತಹ ದುರ್ಬುದ್ಧಿ ಬೆಳೆಯುತ್ತ ಹೋದರೆ, ಸಮಾಜ ಸಂಘಟನೆಯುಂತಾದೀತು? ಸಮಾಜ ಸಂಘಟನೆಗೆ, ಮೊದಲು ಸ್ವಾರ್ಥ, ದ್ವೇಷ, ಸಿಡುಕು ಮಾತು, ಇವುಗಳು ನಿವಾರಣೆಯಾದರೆ ಸಾಧ್ಯ. ಇಲ್ಲದಿದ್ದರೆ ಸಮಾಜ ಸಂಘಟನೆ ಮಾತಿನಲ್ಲಿ ಉಳಿದೀತು?

"ದುಡಿದಂತೆ ಹೊರಬಹುದು ಮೆತ್ತಿಕೊಂಡ ಕೊಳಕು, ನಂತರ ಬೆಳ್ಳಿ ಬಟ್ಟಲವಾಗಿ ತೂಗು ತೊಟ್ಟಿಲವಾಗಬೇಕು....ಇದುವೆ ಜೀವನ ಕಲೆ, ಇದೇ ಕುಟುಂಬ ಕಲ್ಯಾಣ, ಇದುವೆ ರಾಷ್ಟ್ರ ಕಲ್ಯಾಣ." —ಕುಟುಂಬ ಕಲ್ಯಾಣ(ಆಕಾಶವಾಣಿಯಿಂದ ಮಾಡಿದ ಭಾಷಣಸಾರ)

"ವಿಶ್ವಕ್ಕೆ ಬೇಕಾದುದು ಕಾಯಕಶಕ್ತಿ, ಜೀವನ್ಮುಕ್ತಿ, ಕಾಯಕದಿಂದಲೇ ಶಿಲೆಯ ಕುಲ ಹರಿವುದು ವೇಷದ ಪಾಶ ಹರಿವುದು; ಕಾಯಕದಿಂದ ನಿರುದ್ಯೋಗ ನಿರ್ಮೂಲವಾಗುವುದು"

—ನವನಾಗರಿಕತೆಯಲ್ಲಿ ಕರ್ತವ್ಯ ಪ್ರಜ್ಞೆ

'ಆಶೀರ್ವಾಣಿ'ಯಲ್ಲಿನ ಸುವಿಚಾರಗಳು ಜೀವನ ಸಾರ್ಥಕತೆಗೆ ನೆರವಾಗಬಹುದಾಗಿದೆ. ಅವುಗಳ ನಿರೂಪಣೆಯ ರೀತಿಯಲ್ಲಿ ಸತ್ವವಿದೆ, ಸ್ವಾರಸ್ಯವಿದೆ. ಹಿಂದಿನಿಂದ ಇಳಿದು ಬಂದ ಒಳ್ಳೆಯ ಸಂಸ್ಕೃತಿಯ ಜತೆಗೆ ಇಲ್ಲಿ ಕುಟುಂಬ ಕಲ್ಯಾಣ ಹರಿಜನೋದ್ಧಾರ, ಕರ್ನಾಟಕ ರಾಜ್ಯೋತ್ಸವ ಮೊದಲಾದ ಈಚೆಗಿನ ಹೊಸ ವಿಚಾರಗಳ ವಿವೇಚನೆಗೂ ಗಮನ ದೊರಕಿದುದು ಜಗದ್ಗುರುಗಳವರ ಸರಿಯಾದ ವಿಚಾರ ಪ್ರಧಾನ ಮನೋಭಾವವನ್ನು ವಿಶಾಲ ದೃಷ್ಟಿಯನ್ನು ಎತ್ತಿ ತೋರುವಂತಿದೆ. ಈ ಎಲ್ಲ ವಿಚಾರಾತ್ಮಕ ಲೇಖನಗಳಲ್ಲಿ ಸದ್ಭಾವ ಸದ್ಬುದ್ಧಿಗಳ ಹೃದ್ಯವಾದ ಮೇಳವನ್ನು ನಾವು ಗುರುತಿಸಬಹುದಾಗಿದೆ.

ಇಲ್ಲಿನ ವಿಚಾರ ಕ್ಷೇತ್ರದ ವಿಸ್ತಾರವಂತೂ ಸರಿಯೇ ಸರಿ. ವಿಚಾರಗಳ ನಿರೂಪಣೆಗೆ ಅನುರೂಪವಾದ ಭಾಷಾ ಶೈಲಿ ಇಲ್ಲಿ ಒಡಗೂಡಿ ಬಂದದ್ದು ಒಂದು ವಿಶೇಷ, ವಿಷಯ–ವಿವೇಚನೆಗೆ ತಕ್ಕಂತೆ ಈ 'ಆಶೀರ್ವಾಣಿ'ಯು ಭಾಷಾಶೈಲಿ ಸುಸ್ಪಷ್ಟವೂ ಬಂಧುರವೂ ಆದ ಗುಣವನ್ನೊಳಗೊಂಡಿದೆ. ಸತ್ವಯುಕ್ತವಾಗಿರುವಂತೆ ಸಲ್ಲಲಿತವು ಆಗಿದೆ. ಇಲ್ಲಿಯ ಸುವಿಚಾರಗಳ ಹಾಗೂ ಅವುಗಳ ನಿರೂಪಣೆಯ ಸವಿದನಿಯನ್ನೂ ಶುಚಿ ರುಚಿಯನ್ನೂ ಓದುಗರು ಅನುಭವಿಸಿ ಅರಿಯಬಹುದಾಗಿದೆ.

ಮೊದಲಲ್ಲಿಯೇ ನಾನು ನಿವೇದಿಸಿದಂತೆ ಜಗದ್ಗುರುಗಳ ಆಶೀರ್ವಾಣಿಯಲ್ಲಿ ಇಂತು ನನ್ನ ದನಿಯನ್ನು ಶ್ರುತಿಗೊಳಿಸಿಕೊಳ್ಳಲು ಇಲ್ಲಿ ಅನುವು ದೊರೆತುದು ಒಂದು ಸುದೈವ.

—ಡಿ. ಎಸ್. ಕರ್ಕಿ

# ಸಂಪಾದಕರ ನುಡಿ

ಕನ್ನಡ ನಾಡಿನ ಇತಿಹಾಸ ಪುಟ ತೆರೆದು ಕಣ್ಣೋಡಿಸಿದಾಗ, ಶತಶತಮಾನಗಳ ಹಿಂದಿನಿಂದಲೂ ಮಠಮಾನ್ಯಗಳು ಮಾಡುತ್ತ ಬಂದಿರುವ ಪ್ರಗತಿಶೀಲ ಕಾರ್ಯಗಳ ಅರಿವು ಓದುಗನಿಗಾಗದಿರಲಾರದು. ಸಮಾಜಕ್ಕೆ ಬೆಳಕು ನೀಡುವ ಇಂಥ ಶ್ರೇಷ್ಠ ಸಾಧನೆ ಗೈಯುತ್ತಿರುವ ಮಠ-ಮಾನ್ಯಗಳ ಮಾಲೆಯಲ್ಲಿ 'ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರ ಮಠವು ಎದ್ದು ಕಾಣುತ್ತಿದೆ. ೧೨ನೆಯ ಶತಮಾನದ ಇತಿಹಾಸವುಳ್ಳ ಈ ದಿವ್ಯ ಮಠವು, ಜಾತಿಭೇದಗಳನ್ನೆಣಿಸಿದ, ಸಕಲರಿಗೂ ಲೇಸನ್ನೇ ಬಯಸುವ ಭವ್ಯ ಪರಂಪರೆಯನ್ನು ಹೊಂದಿದ್ದು, ಧರ್ಮಪ್ರಣತಿಗೆ ಮಂಕು ಕವಿದ ಇಂದಿನ ಆಧುನಿಕ ಯುಗದಲ್ಲಿಯೂ ಸಹಿತ, ಮಂಕನ್ನು ಕತ್ತರಿಸಿ ಕತ್ತಲೆಯನ್ನೋಡಿಸುವಂತಹ ಹತ್ತು ಹಲವಾರು ಮಹತ್ತರ ವಿಚಾರಗಳನ್ನು ಕಾರ್ಯಗತಗೊಳಿಸುತ್ತಲಿದೆ.

ಇಂತಹ ಶ್ರೇಷ್ಠ ಮಠದ ಆಧಿಪತ್ಯವನ್ನು ಕ್ರಿ. ಶ. ೧೯೫೮ ರಲ್ಲಿ ವಹಿಸಿಕೊಂಡಿರುವ ಇಂದಿನ ಪರಮ ಪೂಜ್ಯ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು, ಸಮಾಜಪ್ರೇಮಿ ಗುರುಕುಮಾರನ ವರಪ್ರಸಾದದಿಂದ, ಹಾಸನ ಜಿಲ್ಹೆ ಅರಸಿಕೆರೆ ತಾಲೂಕಿನ 'ಸಸಿವಾಳ'ವೆಂಬ ಪುಣ್ಯಗ್ರಾಮದಲ್ಲಿ ವೀರ-ವಿರಾಗಿ ಪರಮ ತಪಸ್ವಿ ವಿಜಯ ಮಹಾಂತ ಶಿವಯೋಗಿಗಳ ಸದ್ವಂಶದಲ್ಲಿ ಜನಿಸಿ, ಶಿವಯೋಗ ಸಾಧನಾಗರಡಿ 'ಶಿವಯೋಗ ಮಂದಿರ'ದಲ್ಲಿ ಪ್ರಾಥಮಿಕ ಶಿಕ್ಷಣ ಗೈದು ಚಿತ್ತರಗಿ ನಿರಂಜನ ಪೀಠದ ಉತ್ತರಾಧಿಕಾರಿಗಳಾಗಿದ್ದುಕೊಂಡು ಕಾಶಿಯಲ್ಲಿ ವಿಶೇಷಾಧ್ಯಯನ ಮಾಡಿದ ವಿದ್ಯಾ-ವಿನಯ ಸಂಪನ್ನರಾಗಿದ್ದಾರೆ. ಸಮಯ ಪ್ರಜ್ಞೆಯನ್ನರಿತು, ಕಾಲಕ್ಕನುಗುಣವಾದ ನೂತನ ವಿಚಾರಗಳನ್ನು ಕ್ರೋಡೀಕರಿಸಿಕೊಂಡು ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ಸಾಂಸ್ಕೃತಿಕ ಕಾರ್ಯಕ್ಷೇತ್ರಗಳಲ್ಲಿ ಮುನ್ನಡೆದು ಜನಮನವನ್ನು ತಿಳಿಗೊಳಿಸುವ ಮಹಾನ್ ಕ್ರಾಂತಿಯನ್ನೆಸಗುತ್ತಿರುವ ಪೂಜ್ಯ ಶ್ರೀ ಜಗದ್ಗುರುಗಳವರು ಸರ್ವಧರ್ಮ ಸಮನ್ವಯಿಗಳು, ಮಾನವೀಯ ಅನುಕಂಪವುಳ್ಳವರು, ತಂದೆಯ ಕರ್ತವ್ಯ ದಕ್ಷತೆ-ಮಾತೆಯ ಮಮತಾ ಹೃದಯವುಳ್ಳವರಾಗಿದ್ದಾರೆ.

ಸಮಾಜದ ಪ್ರಗತಿ ಕಾರ್ಯಕ್ಕೆ ಭದ್ರವಾದ ಆರ್ಥಿಕ ವ್ಯವಸ್ಥೆ ಅವಶ್ಯವೆಂಬುದನ್ನು ಮನಗಂಡ ಶ್ರೀ ಜಗದ್ಗುರು ಮಹಾಸನ್ನಿಧಿಯವರು ಹುಬ್ಬಳ್ಳಿ ಮಹಾಜನಗಳ ಸಹಾಯ ಸಹಕಾರಗಳಿಂದ "ಶ್ರೀ ಗುರುಸಿದ್ಧೇಶ್ವರ ಸಹಕಾರಿ ಬ್ಯಾಂಕ್"ನ್ನು ಸಂಸ್ಥಾಪಿಸಿದ್ದಾರೆ. ಇತ್ತೀಚಿಗಷ್ಟೆ ಆರಂಭಗೊಂಡ ಈ ಬ್ಯಾಂಕು ಮಹತ್ತರ ಸಾಧನೆಗೈಯ್ಯುತ್ತ ತ್ವರಿತ ಗತಿಯಲ್ಲಿ ಪ್ರಗತಿ ಹೊಂದುತ್ತಲಿರುವದು ಅಭಿಮಾನದ ಸಂಗತಿ.

ಸ್ವಭಾವತಃ ಸಾಹಿತಿಗಳಾದ ಶ್ರೀ ಸನ್ನಿಧಿಯವರು ಸಾಧಕಾವಸ್ಥೆಯಲ್ಲಿಯೇ ಅನೇಕ

ಕವನ ಲೇಖನ ಕುಸುಮಗಳನ್ನು ಕನ್ನಡ ಸಾಹಿತ್ಯದೇವಿಯ ಉಡಿ ತುಂಬಿದ್ದಾರೆ; ಪೀಠಾಧಿಕಾರಿಗಳಾದ ಮೇಲೆಯೂ ಸಹಿತ ಎಡೆಬಿಡದ ಕಾರ್ಯಗಳ ನಡುವೆ ಬಿಡುವು ಮಾಡಿಕೊಂಡು ಅನೇಕ ಹಿರಿ-ಕಿರಿಯ ಗ್ರಂಥಗಳನ್ನು ರಚಿಸುವ ಲೇಖನಗಳನ್ನು ಬರೆಯುವ ಮೂಲಕ ಸಾಹಿತ್ಯಾರಾಧನೆ ಗೈಯುತ್ತಲೇ ಇದ್ದಾರೆ. ಉತ್ತಮ ಬೋಧಪ್ರದ ವಿಚಾರಗಳನ್ನೊಳಗೊಂಡ ಇವರ ಲೇಖನಗಳನೇಕ ಆಗಾಗ್ಗೆ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಲಿವೆಯಲ್ಲದೇ ಅನೇಕ ಭಾಷಣಗಳು ಆಕಾಶವಾಣಿಯಿಂದ ಆಗಾಗ್ಗೆ ಬಿತ್ತರಿಸಡುತ್ತವೆ. ಇವರ ಸಾಹಿತ್ಯ ಪ್ರೇಮದ ಸಂಕೇತವೇನೋ ಎಂಬಂತೆ ಶ್ರೀ ಮಠದಲ್ಲಿ ಸ್ಥಾಪಿತವಾಗಿರುವ ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳದ ಶ್ರೀಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆಯಲ್ಲಿ ನೂರಾರು ಗ್ರಂಥ ಕುಸುಮಗಳು ಘಮ ಘಮಿಸುತ್ತ ಸುಮಧುರವಾದ ಧಾರ್ಮಿಕ ಕಂಪನ್ನು ಸೂಸುತ್ತಲಿವೆ. 'ಪುಸ್ತಕಗಳು ಮನುಷ್ಯನ ಆಪ್ತ ಸಂಗಾತಿ' ಎಂಬ ಕವಿವಾಣಿಯನ್ನು ಚೆನ್ನಾಗಿ ಬಲ್ಲ ಪೂಜ್ಯ ಶ್ರೀ ಜಗದ್ಗುರುಗಳು ಇನ್ನೂ ಇಂತಹ ಸಹಸ್ರಾರು ಪುಸ್ತಕಗಳನ್ನು ಪ್ರಕಟಿಸುವ ಯೋಜನೆಯನ್ನು ಹಾಕಿಕೊಂಡಿದ್ದಾರೆ. ಶ್ರೀ ಜ. ಗು. ಧ. ಪ್ರ. ಮಂಡಳದ ಹಲ ಕೆಲವು ಬೃಹದ್ಗ್ರಂಥಗಳು ಪಂಡಿತರಿಗೆ ಮೀಸಲಾದರೆ, 'ಸಾಂಸ್ಕೃತಿಕ ಪ್ರಾಸಾರೋಪನ್ಯಾಸ ಮಾಲೆ' ಯಲ್ಲಿ ಮೂಡಿರುವ ನಾಡಿನ ಹೆಸರಾಂತ ಕವಿಗಳ, ಸಾಹಿತಿಗಳ, ಭಾಷಣಕಾರರ ಉಪನ್ಯಾಸಗಳಿಂದಲೇ ನಿಯಮಿತವಾಗಿ ಹೊರಬರುತ್ತಲಿರುವದು ಹೆಮ್ಮೆಯ ವಿಷಯವಾಗಿದೆ.

ಐರೋಪ್ಯ ರಾಷ್ಟ್ರಗಳಲ್ಲಿ ಜರುಗಿದ, ಜಾಗತಿಕ ಧರ್ಮಶಾಂತಿ ಸಮ್ಮೇಳನಗಳಲ್ಲಿ ಎರಡು ಬಾರಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಿ, "ವಿಶ್ವಶಾಂತಿಗೆ ವೀರಶೈವ ಧರ್ಮದ ಕೊಡುಗೆ" ಎಂಬ ವಿಷಯ ಕುರಿತು ಉತ್ತಮ ಉಪನ್ಯಾಸ ನೀಡಿದ್ದಾರೆ. ಈ ಉಪನ್ಯಾಸಗಳು ಸಕಲರ ಮನ ಮೆಚ್ಚುಗೆ ಪಡೆದವೆಂದು ಬೇರೆ ಹೇಳಬೇಕಾಗಿಲ್ಲ.

೧೯೭೨-೭೩ನೇ ಇಸ್ವಿಯಲ್ಲಿ ಉತ್ತರ ಕರ್ನಾಟಕದಲ್ಲಿ ಭೀಕರ ಬರಗಾಲ ತಲೆದೋರಿ ಜನತೆ ತಲ್ಲಣಿಸಿದಾಗ, ಮಾನವೀಯ ಅನುಕಂಪವುಳ್ಳವರೂ, ಕರುಣಾಮಯಿಗಳೂ ಆಗಿರುವ ಪೂಜ್ಯ ಶ್ರೀ ಜಗದ್ಗುರುಗಳು ಕೊಡುಗೈ ದೊರೆಗಳ ಸಹಾಯ-ಸಹಕಾರಗಳಿಂದ ಹಲವಾರು ಗಂಜೀ ಕೇಂದ್ರಗಳನ್ನು ತೆರೆದು ಬಡಜನತೆಯ ಹಸಿವನ್ನು ಹಿಂಗಿಸಿದ ಪುಣ್ಯಜೀವಿಗಳು ವಸ್ತ್ರದಾನ-ಗೈದುದಲ್ಲದೇ ಉಚಿತ ವೈದ್ಯಕೀಯ ನೆರವನ್ನೇರ್ಪಡಿಸಿ ಬಡ ಜನತೆಯನ್ನು ಸಾವಿನ ದವಡೆಯಿಂದ ಪಾರುಮಾಡಿದ ಪಾವನ ಮೂರ್ತಿಗಳಾಗಿದ್ದಾರೆ.

ಶ್ರೀ ಸನ್ನಿಧಿಯವರು "ಮೂಜಗಂ" ಎಂಬ ಕಾವ್ಯನಾಮದಿಂದ ಕನ್ನಡ ಸಾಹಿತ್ಯ ಲೋಕಕ್ಕೆ ಮೊಗ್ಗೆಯ ಮಾಲೆ, ಪೂಮಾಲೆ, ಪಥಿಕ, ಜೀವನ ವಿಕಾಸ, ಅಮೃತ ಬಿಂದು, ನಾಮಾವಳಿಗಳು, ನಮ್ಮ ವಿದೇಶ ಯಾತ್ರೆ ಮುಂತಾದ ಹಲವಾರು ಗ್ರಂಥಗಳ ಮೂಲಕ ಸುಪರಿಚಿತರಾಗಿದ್ದಾರೆ. ಸಹಸ್ರಾರು ವಚನಗಳನ್ನು ರಚಿಸಿ ಇಪ್ಪತ್ತನೆಯ ಶತಮಾನದ

ವಚನಕಾರರ ಸಾಲಿನಲ್ಲಿ ನಿಂತಿರುವ 'ಮೂಜಗಂ' ಅವರ ವಚನ ಸಂಕಲನ 'ಚಿತ್ಸುಮನ'ವು ನಾಡಿನ ನಾಡಿಯನ್ನು ಬಡಿಯುವಂಥದ್ದಾಗಿದೆ. ಪೂಜ್ಯರು ಆಗಾಗ್ಗೆ ಅಲ್ಲಲ್ಲಿ ಸಭೆ–ಸಮಾರಂಭಗಳಲ್ಲಿ ಆಕಾಶವಾಣಿಯಲ್ಲಿ ನೀಡಿರುವ ಆಶೀರ್ವಚನಗಳನ್ನು ಸಂಪಾದಿಸಿ "ಆಶೀರ್ವಾಣಿ ಭಾಗ–೧" ಪುಸ್ತಕವನ್ನು ಓದುಗರ ಕೈಗಿತ್ತ ಶ್ರೇಯಸ್ಸು ವಿಜಾಪುರ ಜಿಲ್ಹೆಯ ಧರ್ಮ ಸಂಜೀವಿನಿಯಂತಿರುವ ಪೂಜ್ಯ ಚಿತ್ತರಗಿ–ಇಲಕಲ್ಲ ಶ್ರೀ ಮ. ನಿ. ಪ್ರ. ಮಹಾಂತಸ್ವಾಮಿಗಳವರಿಗೆ ಸಲ್ಲುತ್ತದೆ. ಇಂತಹದೇ ಆಗಿರುವ "ಆಶೀರ್ವಾಣಿ ಭಾಗ–೨"ರ ಸಂಪಾದನೆಯು ಹೊಣೆ ಅನನುಭವಿಯಾದ ನನ್ನ ಪಾಲಿನದಾಗಿದೆ. ನಾನದೆಷ್ಟರ ಮಟ್ಟಿಗೆ ನನ್ನ ಕರ್ತವ್ಯವನ್ನು ನಿರ್ವಹಿಸಿರುವೆನೋ ನಾನರಿಯೆ, ಇದೆಲ್ಲವೂ ಪೂಜ್ಯ ಜಗದ್ಗುರು ಮಹಾ ಸನ್ನಿಧಿಯವರ ಕೃಪೆ. ಬಾಲ್ಯದಿಂದಲೂ ನನಗೆ ಅಸನ–ವಸನಗಳನ್ನಿತ್ತು ಸಾಕಿ–ಸಲುಹಿ ಆಶ್ರಯ ನೀಡಿ ನನ್ನನ್ನೀ ಮಟ್ಟಕ್ಕೆ ತಂದಿರುವ ಪೂಜ್ಯ ಸನ್ನಿಧಿಗೆ ನಾನು ಚಿರಋಣಿಯಾಗಿದ್ದೇನೆ. ಈ ಬಗ್ಗೆ ಎಷ್ಟು ಬರೆದರೂ ಕಡಿಮೆಯೆ.

ಸುಂದರ ಮುನ್ನುಡಿಯನ್ನು ಬರೆದುಕೊಟ್ಟ ಖ್ಯಾತ ಸಾಹಿತಿಗಳಾದ ಡಾ|| ಡಿ. ಎಸ್. ಕರ್ಕಿಯವರಿಗೆ, ಈ ಪುಸ್ತಕವನ್ನು ಪ್ರಕಟಿಸಿದ ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿಯ ವ್ಯವಸ್ಥಾಪಕರಿಗೆ, ಈ ಪುಸ್ತಕದ ಮುದ್ರಣ ಪ್ರತಿ ತಿದ್ದುವ ಕಾರ್ಯದಲ್ಲಿ ಸಂಪೂರ್ಣ ಸಹಕರಿಸಿದ ಸಹೃದಯ ಮಿತ್ರರುಗಳಾದ ಶ್ರೀ ವಿಶ್ವನಾಥ ದೇವರು, ರುದ್ರಾಕ್ಷಿಮಠ ಹುಬ್ಬಳ್ಳಿ ಶ್ರೀ ಚರಲಿಂಗದೇವರು ಬೆಟದೂರ ಹಾಗೂ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಸದಸ್ಯರಿಗೆ, ಪರಂಜ್ಯೋತಿ ಮುದ್ರಣಾಲಯದವರಿಗೆ ಧನ್ಯವಾದಗಳು ಈ ಪುಸ್ತಕ ಮುದ್ರಣಕ್ಕೆ ಧನಸಹಾಯ ಮಾಡಿದ ವಿಜಯ ಕುಮಾರ ಬಾಲಕೃಷ್ಣ ಮಾನೆ, ಅರುಣಕುಮಾರ ಮಾನೆ, ಪ್ರಕಾಶಕುಮಾರ ಮಾನೆ, ಹುಬ್ಬಳ್ಳಿ ಇವರಿಗೂ ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರನು ಸನ್ಮಂಗಳವನ್ನು ನೀಡಲಿ.

—ಪ್ರಭುದೇವರು ಚರಂತಿಮಠ
ಬಾಗಲಕೋಟಿ

# ಪರಿವಿಡಿ

ಓಂ

# ವಿಶ್ವಮಾನವನೆಡೆಗೆ

ವಿಶಾಲವಾದ ಹೃದಯವುಳ್ಳ ಮಾನವನು ವಿಶ್ವಮಾನವನಾಗಬಲ್ಲ ವಿವಿಧತೆಯಲ್ಲಿ ಏಕತೆಯನ್ನು ಕಾಣಬಲ್ಲ. ಸಮಗ್ರ ಸೃಷ್ಟಿಯನ್ನು ಒಂದೇ ನೋಟದಲ್ಲಿ ನೋಡಬಲ್ಲ. ಮನಸ್ಸನ್ನು ವಿಶಾಲ ವಿಶ್ವದತ್ತ ಹೊರಳಿಸಿ, ವಿಶ್ವದ ವಿಚಾರಗಳನ್ನು ಹೃದಯದಲ್ಲಿ ಗರ್ಭೀಕರಿಸಿಕೊಂಡು, ಒಳ್ಳೇದನ್ನು ಅರಗಿಸಿಕೊಂಡು ಅನಂತದೊಡನೆ ತೇಲುವದೇ ಮಾನವನ ಮುಖ್ಯ ಗುರಿಯಾಗಬೇಕು. ಮಾನವದೃಷ್ಟಿ ವಿಶಾಲತೆಯಲ್ಲಿ ಸಾಗಬೇಕು. ಮಾನವನು ಮಹೋನ್ನತ ದರ್ಶನವನ್ನು ಪಡೆಯುವದೇ ವಿಶಾಲತೆಯ ಕುರುಹು. ವಿಶ್ವಬಂಧುತ್ವ, ವಿಶ್ವಮೈತ್ರಿ ಬರಬೇಕಾದರೆ ಮನಸ್ಸನ್ನು ಹದಗೊಳಿಸಿ, ಸಕಲರಿಗೆ ಲೇಸನೇ ಬಯಸಿದಾಗ ಆ ಶಕ್ತಿ, ಆ ಭಾವ ಬಂದು ರೂಪಗೊಳ್ಳುವದು, ವ್ಯಕ್ತಿತ್ವದ ಪ್ರಭಾವವು ಪ್ರಬಲಗೊಳ್ಳುವದು. ದೃಷ್ಟಿಯಂತೆ ಸೃಷ್ಟಿ. ಆ ದೃಷ್ಟಿಯಲ್ಲಿ ವಿಶ್ವಮಾನವನಾಗಬಲ್ಲನೆಂಬ ಭಾವನೆ ಬಲಗೊಳಿಸಿದರೆ ಸಂಕುಚಿತತೆ ನಷ್ಟವಾಗುವದು. ಈ ಚೇತನವು "ರೂಪ ರೂಪಗಳನ್ನು ದಾಟಿ, ನಾಮ ಕೋಟಿಗಳನ್ನು ಮೀಟಿ, ಅನಂತತೆಯಲ್ಲಿ ಅಡಗಬೇಕು. ಮತಗಳ ಮೌಢ್ಯಗಳನ್ನು ತೂರಿ, ತತ್ವಗಳ ಎಲ್ಲೆಯನ್ನು ಮೀರಿ ನಿರ್ದಿಗಂತವಾಗಿ ಏರಿದಾಗ ವಿಶ್ವಮಾನವನಾಗಬಲ್ಲನು. ನಿಜವಾದ ವಿದ್ಯೆಯ ದೀಪವು ಎಲ್ಲರ ಹೃದಯಗಳಲ್ಲಿ ಪ್ರಕಾಶಿಸಿದಾಗ ಆ ಶಕ್ತಿಯು ದೊರೆಯಬಲ್ಲದು. ವಿಶ್ವವಿದ್ಯೆಯಿಂದ ವಿಶ್ವಪ್ರಜ್ಞೆ ಮೂಡಿದರೆ ಅದು ಸಾರ್ಥಕ. ವಿದ್ಯೆಯಾದರೂ ವಿಶ್ವಪ್ರಜ್ಞೆಯನ್ನು ಬೆಳಗಿಸಲೋಸುಗ ಇರುತ್ತದೆಯೇ ಹೊರತು, ಅಜ್ಞಾನಾಂಧಕಾರದಲ್ಲಿ ತಿರುಗುವದಕ್ಕಲ್ಲ. ನಮಗೀಗ ಬೇಕಾಗಿರುವದು ವಿಶ್ವಮೈತ್ರಿ, ವಿಶ್ವವನ್ನು ಸುತ್ತುವರಿದರೆ ವಿಶ್ವಪ್ರಜ್ಞೆ, ವಿಶ್ವಬಂಧುತ್ವ ಸಿಕ್ಕಂತಾಗುವದಿಲ್ಲ. ಆ ವಿಶ್ವಬಂಧುತ್ವವನ್ನು, ಹೃದಯದಲ್ಲಿ ತುಂಬಿಕೊಂಡು, ಆಚರಣೆಯಲ್ಲಿ ಅಳವಡಿಸಿಕೊಂಡರೆ ವಿಶ್ವಮಾನವನೆಡೆಗೆ ಹೋದಂತೆ. ವಿದ್ಯೆಯು ಬರಿಯ ನೈವೇದ್ಯವಾಗದೆ, ಅದು ಅಂತರಂಗದಲ್ಲಿ ವೇದ್ಯವಾಗಬೇಕು. ತನ್ನ ಆತ್ಮಶಕ್ತಿಯನ್ನು ವೃದ್ಧಿಗೊಳಿಸಬೇಕು. ಇಂತಹ ವಿದ್ಯೆಯನ್ನು ಹೊರಗಿನಿಂದಲೂ ಪಡೆಯಬಹುದು ಅಥವಾ ಒಳಗಿನಿಂದಲೂ ಪಡೆಯಬಹುದು. ಯಾವದೇ ಪ್ರಜ್ಞೆಯು ಎಲ್ಲಿಯದೇ ಇರಲಿ, ಜಾಗೃತವಿದ್ದರೆ ಸಾಕು ವಿಶ್ವಪ್ರಜ್ಞೆಯಾಗುತ್ತದೆ, ಆ ಅನುಭವ ಪೂರಿತವಾಗಿರಬೇಕು. ಜನಮನವನ್ನು ತಿದ್ದುವಂತಿರಬೇಕು. ಭಾವಗಳನ್ನು ಎತ್ತರಿಸಿ ಚೈತನ್ಯವನ್ನು ನೀಡುವಂತಹದಿರಬೇಕು. ಪ್ರಪಂಚವನ್ನು ಬದುಕಿಸುವ ಶಕ್ತಿ ಸಾಮರ್ಥ್ಯವನ್ನು ಪಡೆದಿರಬೇಕು. ಮನುಷ್ಯನು ಮಹಾಮಾನವನಾಗಿ, ದೇವ ಮಾನವನಾಗಿ, ಆದರ್ಶದ ಮೆಟ್ಟಲುಗಳನ್ನು

ಮುಟ್ಟಲು ಸಾಕಷ್ಟು ತೊಂದರೆಗಳುಂಟಾಗಬಹುದು. ಆದರೆ ವಿಶ್ವಮಾನವನಾಗ ಬಯಸು ವವನು, ಕಷ್ಟ ಪರಂಪರೆಯ ಅಡ್ಡಗಲ್ಲುಗಳನ್ನು ದಾಟಿ, ನಿರಾಶನಾಗದೆ ಮುಂದೆ ಸಾಗು ತ್ತಾನೆ. ತನ್ನ ಗುರಿಯನ್ನು ಸಾಧಿಸುತ್ತಾನೆ. ವಿಶ್ವಾತ್ಮನ ಸಾಮ್ರಾಜ್ಯದಲ್ಲಿ ಮೆರೆಯು ತ್ತಾನೆ. ವಿಶ್ವಾತ್ಮನಾದವನು ಜನ್ಮಜನ್ಮಾಂತರದ ದುಃಖಗಳನ್ನು, ಕಷ್ಟಗಳನ್ನು ಸಿಹಿ ಕಹಿ ಗಳನ್ನು, ಸುಖ ದುಃಖಗಳನ್ನು ಗಾಳಿಗೆ ತೂರಿಬಿಡುತ್ತಾನೆ. ದಿಕ್ಕು ದಿಕ್ಕಾಗಿ ತನ್ನ ಅಂತರಾತ್ಮದ ಬೆಳಕನ್ನು ಬೆಳಗಿಸುತ್ತಾನೆ. ಮಹಾಸಾಗರದ ವಿಶಾಲತೆಯಲ್ಲಿ, ಗಂಭೀರತೆ ಯಲ್ಲಿ, ಅದರ ಆಳದಲ್ಲಿ ಮುಳುಗುತ್ತಾನೆ. ದುರ್ದಮನೀಯ ತೆರೆಗಳು ಎದುರು ಬಂದರೂ ಲೆಕ್ಕಿಸದೆ ಹೋರಾಡಿ, ಸತ್ಯಸಂಧನಾಗುತ್ತಾನೆ. ನಿತ್ಯ ಪರಿಪೂರ್ಣನಾಗುತ್ತಾನೆ. ವಿಶ್ವ ದಲ್ಲಿರುವ ಸತ್ಯವನ್ನು ತನ್ನ ಅಂತರಾತ್ಮದಲ್ಲಿ ಇಳಿಸಿಕೊಳ್ಳುತ್ತಾನೆ. ಬಹಿರಂಗದಲ್ಲಿ ವಿವಿಧತೆಯಂತೆ ಕಂಡರೂ ಅಂತರಂಗದಲ್ಲಿ ಏಕತೆಯಾಗಿ ಪರಿಣಮಿಸುತ್ತದೆ. ಸಂವೇದನೆಗಳು ಅನೇಕವಾಗಿ, ಜ್ಞಾನವು ಒಂದೇ ಇದ್ದಂತೆ ಆಗುತ್ತದೆ. ವಿಶ್ವದ ಕ್ರೀಡಾಂಗಣದಲ್ಲಿ ಆಡು ವವರ ಜೀವನವು ಪುಟಿದೇಳುವಂತೆ ಇರುತ್ತದೆ. ಅಣುರೇಣುಗಳ ಚೆಂಡಿನಾಟದಲ್ಲಿ ಮಗ್ನರಾಗುತ್ತಾರೆ. ಆಡುತ್ತಾರೆ, ಓಡುತ್ತಾರೆ, ಕುಣಿಯುತ್ತಾರೆ, ಕೊನೆಗೆ ಜಯವನ್ನು ದೊರಕಿಸಿಕೊಳ್ಳುತ್ತಾರೆ.

ಅಲ್ಪಶಕ್ತಿಯಿದ್ದರೆ ಅಗಾಧ ಶಕ್ತಿಯನ್ನು ಪಡೆಯಲು ಅಸಾಧ್ಯ. ಅಲ್ಪತೆಯ ಎಲ್ಲೆ ಯನ್ನು ಮೀರಿದಾಗ, ಮಾನವತೆಯು ಆಳವಟ್ಟಾಗ, ಆತ್ಮ ವಿಶ್ವವಾದಾಗ, ವಿಶ್ವ ಜ್ಞಾನ ವನ್ನು ಅರಿದು ಸರ್ವರಿಗೂ ಹಂಚಬೇಕೆಂಬುವ ಹಂಬಲವುಂಟಾದಾಗ ವಿಶ್ವಮೈತ್ರಿ ಸಾಧ್ಯ. ಈ ವಿಶ್ವಮೈತ್ರಿಗೆ ಬುದ್ಧ, ಏಸುಕ್ರಿಸ್ತ, ಮಹಮ್ಮದ, ಬಸವ, ಮಹಾತ್ಮಾಗಾಂಧಿ ಮುಂತಾದ ಯೋಗಿಗಳು, ತ್ಯಾಗಿಗಳು, ಸಂತರು ಹೋರಾಡಿ ವಿಶ್ವಮಾನವರಾದರು. ಜಡವನ್ನು ಗೆದ್ದು, ಚೈತನ್ಯವನ್ನು ಕಂಡು ಆನಂದ ಪಟ್ಟವರು ಅಂಧಕಾರ ಅಳಿಸಿ, ಜ್ಯೋತಿ ಬೆಳಗಿಸಿದವರು. ಅಂತರಾತ್ಮ ವಿಶ್ವಾತ್ಮರ ಮಿಲನದ ರಹಸ್ಯವನ್ನು ಅರಿತು ಬೋಧಿಸಿ ದವರು. ಇವರ ವಿಶ್ವಮಾನವತ್ವದ ವೈಶಿಷ್ಟ್ಯವು, ಕಾಯಕ ಸೃಷ್ಟಿಯಿಂದ ವಿಶ್ವಮಾನವ ದೃಷ್ಟಿಯಿಂದ ಸ್ಫುರಣವಾಗಿ ತತ್ವಪೂರಿತವಾದದು. ಮಾನವೀಯ ವ್ಯಕ್ತಿತ್ವದಿಂದ ಪರಿ ಪೂರ್ಣವಾದುದು. ಈ ಭಾವನೆ ಇದ್ದವರು, ಕೇವಲ ಒಂದು ನಾಡಿನ, ರಾಷ್ಟ್ರದ ವ್ಯಕ್ತಿ ಯಾಗಿರದೆ ವಿಶ್ವವ್ಯಕ್ತಿಯಾಗಿ ವಿಶ್ವಶಕ್ತಿಯಾಗಿ, ವಿಶ್ವವಿಭೂತಿಗಳಾಗಿ ಪರಿಶೋಭಿಸುತ್ತಾರೆ. ಇವರ ಬದುಕು ಸಾವುಗಳು ನಿರರ್ಥಕವಾಗಿರುವದಿಲ್ಲ. ಯುಗಯುಗಗಳುದ್ದಕ್ಕೂ ಅವರ ಜೀವನ ಕಥೆ, ವ್ಯಕ್ತಿತ್ವ ಹೆಣೆದುಕೊಂಡಿರುತ್ತದೆ.

ಮನುಷ್ಯನಿಗೆ ವ್ಯಕ್ತಿತ್ವವೆಲ್ಲಿಂದ ದೊರೆಯುತ್ತವೆಂಬುದನ್ನು ಕೇಳಿದರೆ ಚಾರಿತ್ರ್ಯ ಬಲದಿಂದ ಎಂದು ಹೇಳಬಹುದು. ಮನುಷ್ಯನು ಚಾರಿತ್ರ್ಯ ಬಲದಿಂದ ತನ್ನಲ್ಲಿ ತಾನು ಮನೋಹರ ಪ್ರಕಾಶವನ್ನು ಕಾಣುತ್ತಾನೆ. ಆಗ ಆತನಿಗೆ ಜಗತ್ತಿನ ಸಮಸ್ತ ವಸ್ತುಗಳು ತುಚ್ಛವಾಗುತ್ತವೆ. ರತ್ನವನ್ನು ಹುಡುಕುವವನು ಕಲ್ಲು ಚೂರುಗಳನ್ನೆಂದಿಗೂ ಅಪೇಕ್ಷಿಸನು.

ಸಚ್ಚರಿತ್ರ ಮನುಷ್ಯನು ರಾಷ್ಟ್ರದ ರಚನೆ ಮಾಡಲು ಸಮರ್ಥನಿರುತ್ತಾನೆ. ಹೆಣದಲ್ಲಿ ಜೀವವನ್ನು ಅಶಕ್ತರಲ್ಲಿ ಶಕ್ತಿಯನ್ನು ತಂದುಕೊಡುತ್ತಾನೆ. ಆತನಿಗೆ ಅಗ್ನಿಯು ಶೀತಲ ಜಲವಾಗಬಹುದು. ಸರ್ಪವು ಪೂಮಾಲೆಯಾಗಬಹುದು. ಇಂತಹ ಮನುಷ್ಯರ ಚರಣ ಗಳಲ್ಲಿ ಸಂಸಾರವು ಬಾಗುತ್ತದೆ. ಸಚ್ಚರಿತ್ರ ಮನುಷ್ಯನು ಈ ಶಕ್ತಿಕಣಗಳಿಂದ ಜಗತ್ತನ್ನೇ ಚುಂಬಕದತ್ತ ಎಳೆದುಕೊಳ್ಳುತ್ತಾನೆ.

ಮಾನವನ ವ್ಯಕ್ತಿತ್ವವು ತೋರಿಕೆಯ ಪ್ರವಾಹದ ಜಲವಾಗದೆ, ಅದಕ್ಕೊಂದು ಶಕ್ತಿಯಿದೆ. ವ್ಯಕ್ತಿತ್ವವಿದ್ದಲ್ಲಿ ಅಹಮಹಮಿಕೆಯು ನಷ್ಟವಾಗಿರುತ್ತದೆ. ಆತ್ಮದ ದಿವ್ಯ ದೃಷ್ಟಿಯಲ್ಲಿ ವಿಶ್ವದೊಡನೆ ಬೆರೆತು ಏಕಾಕಾರವಾಗುತ್ತದೆ. ಐಂದ್ರಿಕ ಅನುಭವವು ಅಳಿದು ಜಗತ್ತಿನ ಸಂಪರ್ಕವನ್ನು ಪಡೆದು ಅತಿಮಾನಸ ಶಕ್ತಿಯೊಡನೆ ಕೂಡಿ ಸಾರ್ಥಕತೆಯನ್ನು ಪಡೆಯುತ್ತದೆ. ಇದುವೇ ವ್ಯಕ್ತಿತ್ವದ ಶಿಖರ. ವಿಶ್ವಮಾನವನೆಡೆಗೆ ಸಾಗಲು ಈ ಎಲ್ಲ ಭಾವನೆಗಳು ಮನೆಮಾಡಿಕೊಂಡಿರಬೇಕಾಗುತ್ತದೆ. ವಿಶ್ವದ ಸೌಂದರ್ಯದೊಡನೆ ಒಂದಾಗು ವದರಲ್ಲಿಯೇ ಮುಕ್ತಿಯಿದೆ ಎಂಬ ವಿಶ್ವಕವಿ ರವೀಂದ್ರನಾಥ ಟಾಗೂರರ ಈ ನುಡಿಮುತ್ತು ಅರ್ಥ ಪೂರ್ಣವಾಗಿರುತ್ತದೆ. ರವೀಂದ್ರರು ವಿಶ್ವಸಾಹಿತಿಯಾಗಿ ಆದರ್ಶ ಮಹಾಕವಿ ಯಾಗಲು ಈ ವಿಶಾಲ ಭಾವನೆಯೇ ಮೂಲಸೂತ್ರವಾಗಿದೆ. ವ್ಯಕ್ತಿಯು ಆತ್ಮಶಿಲ್ಪಿ ಯಾಗಿದ್ದರೆ, ಯಾವ ನಾಡಿನವನಾಗಿದ್ದರೂ, ಅವನು ವಿಶ್ವಮಾನವನಾಗುತ್ತಾನೆ. ಆ ವ್ಯಕ್ತಿಯ ಬದುಕು ಪೂರ್ಣ ಶುದ್ಧಿಯೊಡನೆ ಜಾಗೃತವಾಗಿರುತ್ತದೆ. ವ್ಯಕ್ತಿತ್ವವಿಕಾಸ ವಾಗಿರುತ್ತದೆ. ಶಕ್ತಿಶಾಲಿ ವ್ಯಕ್ತಿತ್ವವನ್ನಿಟ್ಟುಕೊಂಡವರು ಕೇವಲ ಸ್ರಷ್ಟಾರರಾಗದೆ ದ್ರಷ್ಟಾರರಾಗುತ್ತಾರೆ ಅವರು ನೋಡುತ್ತಾರೆ, ಕೇಳುತ್ತಾರೆ, ಸೃಷ್ಟಿಯನ್ನು ಮಾಡುತ್ತಾರೆ. ಇಂಥವರೆದುರಿನಲ್ಲಿ ಸಾಧಾರಣ ಮನುಷ್ಯರನ್ನು ತುಲನೆ ಮಾಡಿದರೆ ಭೂಮ್ಯಾಕಾಶದಷ್ಟು ಅಂತರವಾಗುತ್ತದೆ. ಸಾಧಾರಣ ಜನರ ದೃಷ್ಟಿಯಲ್ಲಿ ಇಲ್ಲದಿರುವ ಶಕ್ತಿಯು ಅವರಲ್ಲಿ ಅಡಗಿಗೊಂಡಿರುತ್ತದೆ. ಮಹಾನ್ ವ್ಯಕ್ತಿತ್ವವು ಮನುಷ್ಯನಿಗೆ ಅಮರನಾಗಲು ಅಮೃತ ವನ್ನು ಕುಡಿಸುತ್ತದೆ. ಮಹಾನ್ ವ್ಯಕ್ತಿತ್ವವುಳ್ಳವರು ಮುರುಕು ಗುಡಿಸಲಿನಲ್ಲಿದ್ದರೂ ಅವರ ಆತ್ಮಿಕ ಪ್ರಕಾಶದಿಂದ ಆ ಮುರುಕು ಗುಡಿಸಲು ಸುವರ್ಣ ಮಂದಿರಕ್ಕಿಂತಲೂ ಹೆಚ್ಚಾಗಿ ಸುಂದರವಾಗಿ ಕಾಣಿಸುತ್ತದೆ. ವ್ಯಕ್ತಿತ್ವಶಾಲಿ ಮನುಷ್ಯರು ನಿರಂತರ ನಿರ್ಭೀತ ರಿರುತ್ತಾರೆ. ತಮ್ಮನ್ನು ದ್ವೇಷಿಸುವವರಿದ್ದರೂ ಅವರಿಗೆ ತುಂಬಾ ಆದರವಿತ್ತು ಗೌರವಿಸು ತ್ತಾರೆ. ಮಹಾಮಾನವರಾಗಿ ಬಾಳಿ ಬೆಳಗುತ್ತಾರೆ. ವಿಶ್ವಮಾನವರಾಗಿ ವಿಶ್ವಸಂಪೂಜ್ಯ ರಾಗುತ್ತಾರೆ.

ಇಂದು ಮಾನವನೇನಾಗುತ್ತಿದ್ದಾನೆಂದು ನಮ್ಮನ್ನು ನಾವೇ ಪ್ರಶ್ನಿಸಿಕೊಂಡರೆ, ದಾನವನಾಗುತ್ತಿದ್ದಾನೆಂದು ದುಃಖದಿಂದ ಹೇಳಬೇಕಾಗುತ್ತದೆ. ಅಹಂಕಾರ ಮಮಕಾರ ಗಳ ಮೋಹಜಾಲದಲ್ಲಿ ಸಿಲುಕಿ, ಸ್ವಾರ್ಥದ ದಳ್ಳುರಿಯಲ್ಲಿ ಬಿದ್ದು ಒದ್ದಾಡುತ್ತಿದ್ದಾನೆ. ದ್ವೇಷಾಸೂಯೆಗಳ ಕಾಳ ಸರ್ಪಗಳು ಹೆಡೆಯೆತ್ತಿ ನಾಲಿಗೆ ಚಾಚಿವೆ. ರಾಷ್ಟ್ರ ಮೊದಲು

ಮಾಡಿಕೊಂಡು ಮುನ್ನಡೆಯುವರೆಗೂ ಅನೈಕ್ಯತೆಯೇ ಎದ್ದು ಕಾಣುತ್ತದೆ. ಅನೇಕ ಧರ್ಮಗಳ ಜಂಜಾಟ, ಹಿಂಸಾತ್ಮಕ-ಧಾರ್ಮಿಕ ಆಚರಣೆಗಳ ತಿಕ್ಕಾಟ, ಜಾತೀಯತೆಯ ಸುಂಕ ರೋಗದ ಅಲೆದಾಟ, ಜಗತ್ತಿನಲ್ಲಿಯೇ ಇವುಗಳ ಹೋರಾಟ ನಡೆದು ಅಧೋಮುಖದತ್ತ ಸಾಗಿದ್ದಾರೆ. ಮಾನವೀಯತೆಯೆಂಬುದು ಕನಸಾಗಿ ಬಿಟ್ಟಿದೆ. ನಾವಿಂದು ತತ್ವಸಿದ್ಧಾಂತಗಳ ಕೂಗಾಟ, ಹಾಗೂ ಚರ್ವಿತ ಚರ್ವಣವನ್ನು ಮರೆತು, ಹೃದಯ ವೈಶಾಲ್ಯದತ್ತ ಸಾಗಬೇಕಾಗಿದೆ. ಭಾರತೀಯತೆ, ವಿಶ್ವಮಾನವತೆ, ಬರಲು ಮಾನವೀಯತೆಯೇ ಮೊದಲು ಮೆಟ್ಟಿಲು. ವ್ಯಕ್ತಿಯ ವ್ಯಕ್ತಿತ್ವದಲ್ಲಿ ಅನೇಕ ಮೌಲ್ಯಗಳು ತುಂಬಿಕೊಂಡಿರಬಹುದು. ವಿಶ್ವಪ್ರಜ್ಞೆಯು ಮನದಲ್ಲಿ ಮೂಡಿದಾಗ, ಅವೆಲ್ಲವುಗಳು ದೂರಾಗಿ ವ್ಯಕ್ತಿಯಲ್ಲಿಯೇ ವಿಶ್ವಮಾನವತೆಯು ಪ್ರಾದುರ್ಭಾವವಾಗುತ್ತದೆ. ಬದ್ಧ ಜೀವನ ತೊಲಗಿ ಶುದ್ಧ ಜೀವನವುಳ್ಳವರಾಗಬೇಕು. ಅಂದರೆ ಅವರ ದೃಷ್ಟಿಯಲ್ಲಿ ಹೃದಯ ಪರಿವರ್ತನ ಮಾಡಿಕೊಳ್ಳಬೇಕು. ವ್ಯಕ್ತಿಯಲ್ಲಿ ಹೇಗೋ ಹಾಗೆ ವಿಶ್ವದಲ್ಲಿ ಅಶಾಂತಿ ತಲೆದೋರುವದಕ್ಕೆ ಆಶೆಯೇ ಮೂಲಕಾರಣ. ಆಶೆಯನ್ನಳಿದ ವ್ಯಕ್ತಿ ಎಲ್ಲೆಲ್ಲಿಯೂ ಆನಂದವನ್ನು ಪಡೆಯುವನು. ಆಶೆಯೇ ದುಃಖದ ಮೂಲ ಎಂಬ ಮಾತು ನಿತ್ಯ ಸತ್ಯ. ಆಶೆ, ಆಕಾಂಕ್ಷೆ, ಮಹತ್ವಾಕಾಂಕ್ಷೆಯಾಗಿ ಸ್ವಾರ್ಥದಲ್ಲಿ ಪರಿಣಮಿಸುತ್ತದೆ. ತನಗೆ ಬೇಕೆಂಬ ಭಾವನೆಯಿಂದ ಮಾಡಿದರೆ ಸ್ವಾರ್ಥವಾಗುತ್ತದೆ. ಅಂತಹ ಸ್ವಾರ್ಥವು ಆಸುರೀ ಪ್ರವೃತ್ತಿಯಾಗಿ ಪರಿಣಮಿಸಿ ಜಗತ್ತಿನಲ್ಲಿ ಕೋಲಾಹಲವನ್ನೆಬ್ಬಿಸುತ್ತದೆ. ಈ ಕೋಲಾಹಲವನ್ನು ತಪ್ಪಿಸಲು ಮಹತ್ವಾಕಾಂಕ್ಷೆಯನ್ನು ತೆರೆಯಬೇಕಾಗುತ್ತದೆ. ಅದಕ್ಕಾಗಿ ಬೋಧಿಸಿದ ಶರಣರ ಕಾಯಕ ತತ್ವವನ್ನು ಆಚರಣೆಯಲ್ಲಿ ತರಬೇಕಾಗುತ್ತದೆ. ವಿಶ್ವಕ್ಕೆ ಬೇಕಾದುದು ಕಾಯಕ ಶಕ್ತಿ. ಸತ್ಯ ಶುದ್ಧ ಕಾಯಕದಿಂದ ಕೈಲಾಸವನ್ನೇ ಕಾಣಬಹುದು. ಕಾಯಕದಿಂದಲೇ ಜೀವನ್ಮುಕ್ತಿ, ಕಾಯಕದಿಂದಲೇ ಶಿಲೆಯ ಕುಲ ಹರಿವುದು, ಕಾಯಕದಿಂದಲೇ ವೇಷದ ಪಾಶ ಹರಿವುದು. ಕಾಯಕ ತತ್ವದಿಂದಲೇ ನಿರುದ್ಯೋಗ ನಿರ್ಮೂಲನವಾಗುತ್ತದೆ. ಆತ್ಮಶಕ್ತಿಯನ್ನು ಅಳವಡಿಸಿಕೊಳ್ಳುವದೇ ಕಾಯಕದ ಮುಖ್ಯ ಧ್ಯೇಯವಾಗಿರುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಕಾಯಕವನ್ನು ಮಾಡಲೇಬೇಕು, ಅಂದರೆ ದುಡಿಯಲೇಬೇಕು. ಪ್ರತಿಯೊಬ್ಬನು ದುಡಿದು ತನ್ನ ದುಡಿಮೆಯ ಫಲವನ್ನು ಉಪಭೋಗಿಸಬೇಕು. ವ್ಯಕ್ತಿ ಸಮಾಜಕ್ಕೆ ದುಡಿಯುತ್ತಾನೆ. ಸಮಾಜ ವ್ಯಕ್ತಿಯ ಯೋಗಕ್ಷೇಮ ವಹಿಸುತ್ತದೆ. ಸಮಾಜಕ್ಕೆ ದುಡಿಯುವದು ವ್ಯಕ್ತಿಯ ಹೊಣೆ. ವ್ಯಕ್ತಿ ದುಡಿಯುವದಕ್ಕೆ ಅವಶ್ಯವಿರುವ ಕಾಯಕವನ್ನು ಕಲ್ಪಿಸಿಕೊಡುವದು ಸಮಾಜದ ಹೊಣೆ. ಈ ಭಾವನೆಯಿಂದ ಸಮಾಜವು ನಿರುದ್ಯೋಗ ನಿರುತ್ಸಾಹಗಳಿಗೆ ಬಲಿಯಾಗದೆ ಮುನ್ನಡೆಯಬಲ್ಲುದು. ಆತ್ಮಕಲ್ಯಾಣ ಲೋಕಕಲ್ಯಾಣಗಳೆರಡೂ ಈ ಕಾಯಕದಿಂದ ಸಾಧ್ಯವಾಗುತ್ತದೆ. ಮಾನವನನ್ನು ಜಡತ್ವದಿಂದ ಬೇರ್ಪಡಿಸುತ್ತದೆ ಈ ಕಾಯಕ; ಕಾಲ ಕರ್ಮ-ಮಾಯೆಗಳ ಆವರಣವನ್ನು ನಷ್ಟ

ಮಾಡುತ್ತದೆ ಈ ಕಾಯಕ. ವಿಶ್ವಮಾನವನಾಗುವ ಮಹಾಶಕ್ತಿ ಈ ಕಾಯಕದಲ್ಲಿ ಅಡಗಿದೆ.

ನಾವಿಂದು ಭಾರತದಲ್ಲಿದ್ದು, ಭಾರತೀಯ ಸಂಸ್ಕೃತಿಯನ್ನು ಅಳವಡಿಸಿ ಕೊಳ್ಳದಿದ್ದರೆ ಅನರ್ಥಕ್ಕೆ ಗುರಿಯಾಗುತ್ತಿದ್ದೇವೆ. ನಮ್ಮಲ್ಲಿ ವರ್ಣದ್ವೇಷ, ಜಾತಿದ್ವೇಷ, ಮತದ್ವೇಷ, ವರ್ಗಗಳ ಕಲಹ, ವ್ಯಕ್ತಿದ್ವೇಷ, ಭಾಷಾದ್ವೇಷಗಳಿಗೆ ಆಸ್ಪದವಿಲ್ಲ. ಜೊತೆಗೆ 'ವಸುದೈವ ಕುಟುಂಬಿಕಂ' ಎಂಬ ಭಾವನೆಯುಳ್ಳ, ಲೋಕ ಪೂಜ್ಯರಾದ ಮಹಾಶಕ್ತಿ ಸಂಪನ್ನ ಮಹಾತ್ಮರೂ ಇದ್ದಾರೆ. ಈ ಮನುಷ್ಯ ಚಿತ್ತದಲ್ಲಿ ಎಲ್ಲವೂ ಇದ್ದು, ಕೆಟ್ಟದ್ದನ್ನು ಬಿಟ್ಟು ಒಳ್ಳೆಯದನ್ನು ಹಿಡಿಯುವದರಲ್ಲಿ ಜಾಣ್ಮೆಯಿದೆ. ದ್ವೇಷಾ–ಸೂಯೆಗಳನ್ನು ಮರೆತು, ಎಲ್ಲರೊಡನೆ ಮೈತ್ರಿಯಿಂದ ಬಾಳಲು ಪ್ರಯತ್ನಿಸಿ, ಇವನಾರವ ಇವನಾರವ ಇವನಾರವನೆಂದೆನಿಸದೆ, ಇವ ನಮ್ಮವ ಇವ ನಮ್ಮವನೆಂದೆನಿಸಿದರೆ ಮಾತ್ರ ಅದುವೆ ಭಾರತೀಯ ಸಂಸ್ಕೃತಿ; ಇದುವೇ ವಿಶ್ವಮಾನವತೆ.

ಮಹಾತ್ಮಾ ಬಸವಣ್ಣನು ೧೨ನೆಯ ಶತಮಾನದಲ್ಲಿ ಅನುಭವ ಮಂಟಪ ರಚಿಸಿ, ವಿಶ್ವಮಾನವತೆಯೆಂಬ ಹೂ–ಬಳ್ಳಿಯನ್ನು ಆ ಮಂಟಪದಲ್ಲಿ ಹಬ್ಬಿಸಿ ಜಗತ್ತಿನ ತುಂಬ ಸೌಗಂಧ್ಯ ಬೀರಿಸಿದ. ಅಜ್ಞಾನ, ಮೂಢನಂಬಿಕೆಗಳನ್ನು ಹೊಡೆದೋಡಿಸಿ, ಸುಜ್ಞಾನ ಬೆಳಕನ್ನು ತೋರಿಸಿ, ಸಾರ್ವತ್ರಿಕ ಪರಿಣಾಮವಾಗುವಂತೆ ವಿಶ್ವಮಾನವ ದರ್ಶನವನ್ನು ಜೀವಂತವಾಗಿರುವಂತೆ ವಚನದ ಸಾಹಿತ್ಯ ಕೃಷಿ ಮಾಡಿ, ಮಾನವೀಯ ಸಂಸ್ಕೃತಿಯನ್ನು ಉಳಿಸಿರುವದಕ್ಕಾಗಿಯೇ ನಾವಿಂದು ಅವನಿಗೆ ವಿಶ್ವವಿಭೂತಿಯೆಂದು ಕರೆಯುತ್ತಿದ್ದೇವೆ. ವಿಶ್ವಮಾನವರು ವಿಶ್ವದೊಳಗಿರುವ ಸಾರವನ್ನು ಹೀರಿಕೊಂಡು, ವಿಶ್ವಕ್ಕೆ ತೋರಿಸಿ ಉದ್ಧರಿಸುತ್ತಾರೆ.

ನಾವೀಗ ವಿಶ್ವಮಾನವನೆಡೆಗೆ ಹೋಗಲು ನಮ್ಮ ಜೀವನದಲ್ಲಿ ಜ್ಯೋತಿ ತುಂಬ ಬೇಕಾಗಿದೆ, ಶಕ್ತಿ ಗಳಿಸಬೇಕಾಗಿದೆ, ವ್ಯಕ್ತಿತ್ವವನ್ನು ವ್ಯಕ್ತಮಾಡಬೇಕಾಗಿದೆ. ಅದಕ್ಕಾಗಿ ಕಲುಷಿತ ಭಾವನೆಗಳನ್ನು ಹೊರದೂಡಿದರೆ, ತನ್ನಿಂದ ತಾನೆ ಮನಸ್ಸು ನಿಶ್ಚಿಂತವಾಗುತ್ತದೆ. ಅಲ್ಲದೆ ನಾವು ವಿಶಾಲ ಮನೋಭಾವದವರಾಗಬೇಕು, ಮಾನವನು ಕಣ್ಣು ತೆರೆಯಬೇಕು, ಪ್ರಾಣವನ್ನು ಅರ್ಪಿಸಬೇಕು; ಹೊರಗಿನ ವಿಶಾಲ ವಿಚಾರಗಳನ್ನು ಅರಿತುಕೊಳ್ಳಬೇಕು, ಬದಲಾದ ಜಗತ್ತಿನ ಸಂಗಡ ಸಾಗಬೇಕು, ಹಳೇ ಪದ್ಧತಿಗೆ ಹೊಸ ವಿಚಾರಗಳನ್ನು ಹೊಂದಿಸಬೇಕು. ಆದರೆ ಇದಾವುದು ಆಂತರಿಕ ವಿಚಾರಕ್ಕೆ ಬಾಧೆ ಬರದಂತೆ ನಡೆಯುಬೇಕು; ಪುಣ್ಯ ಪುರುಷರು ತೋರಿಸಿದ ಬೆಳಕಿನ ದಾರಿಯಲ್ಲಿ ಹೊರಟರೆ ಮನುಷ್ಯ ಜೀವನದಲ್ಲಿ ಶಕ್ತಿ ಮತ್ತು ಸ್ಫೂರ್ತಿ ಬರುತ್ತದೆ.

ದೇವನೊಬ್ಬ ನಾಮ ಹಲವು, ಜಗತ್ತಿಗೆ ದೇವನೊಬ್ಬ, ಮುಕ್ತಿ ಮಾತ್ರ ಒಂದು. ಜಗತ್ತಿನಲ್ಲಿ ಅನೇಕ ವ್ಯಕ್ತಿಗಳು, ಅನೇಕ ರುಚಿಗಳು, ಅನೇಕ ಹಾದಿಗಳು ಇರುವಂತೆ ದೇವನನ್ನು ಸೇರುವ ಧರ್ಮಾಚರಣೆಗಳು ಬಹು ಮುಖ್ಯವಾಗಿರುವದಾದರೂ ಇವುಗಳಿಗೆಲ್ಲ

ಪ್ರಬೋಧಕವಾಗಿದ್ದ ಒಂದೇ ನೀತಿ-ಸತ್ಯ ಧರ್ಮವು ಸದಾ ಜಾಗೃತವಾಗಿರುವದು. ನಾವೆಲ್ಲರೂ ಒಬ್ಬ ದೇವ ಮಕ್ಕಳು ಒಂದೇ ಲೋಕದಲ್ಲಿ ಬಾಳುವರು. ಈ ಜಗತ್ತೆಂಬ ರಂಗಭೂಮಿಗೆ ಬಂದ ನಾವೆಲ್ಲರೂ ನಮ್ಮ ನಮ್ಮ ಪಾತ್ರಗಳನ್ನು ಸಹಕಾರದಿಂದ ಸರಿಯಾಗಿ ನಿರ್ವಹಿಸೋಣ. ಭರತ ಖಂಡದ ಕೇಂದ್ರ ಜೀವಗುಣವಾದ ಧರ್ಮದಿಂದ ನಮ್ಮ ಸಕಲ ಜೀವನವನ್ನು ಸುಂದರವಾಗಿ ರೂಪಿಸಿಕೊಳ್ಳೋಣ ಪ್ರತಿಯೊಂದು ಧರ್ಮ ಮತಗಳಲ್ಲಿರುವ ಒಂದು ಬೆಳಕನ್ನು ನಮ್ಮ ಅಂತರಂಗದ ಕಡೆಗೆ ಎಳೆದುಕೊಂಡು ವಿಶ್ವ ಮಾನವರಾಗಲು ಅಹೋರಾತ್ರಿ ಪರಿಶ್ರಮಿಸಲು ಕಾರ್ಯ ಪ್ರವೃತ್ತರಾಗೋಣ.

ಸಹನಾವವತು ಸಹನೌಭುನಕ್ತು
ಸಹವೀರ್ಯಂಕರವಾವಹೈ
ತೇಜಸ್ವಿನಾವಧೀತ ಮಸ್ತು
ಮಾವಿದ್ವಿಷಾವಹೈ
ಓಂ ಶಾಂತಿಃ ಶಾಂತಿಃ ಶಾಂತಿಃ

(ಧಾರವಾಡ ಆಕಾಶವಾಣಿಯಿಂದ ಪ್ರಸಾರವಾದ ಭಾಷಣ)

## ಭಾರತ ಹಾಗೂ ವೈವಿಧ್ಯತೆ

'ಭಾರತವು ವಿವಿಧತೆಯಲ್ಲಿ ಐಕ್ಯತೆ ಪಡೆದಿದೆ ಅಥವಾ ಪಡೆದಿಲ್ಲ' ಎಂಬ ಅಭಿಪ್ರಾಯ ವನ್ನು ನಿರ್ಣಯಿಸುವ ಮುನ್ನ ಅದರ ವಿವಿಧತೆ ಇರುವದು ಯಾವ ಯಾವ ವಸ್ತು ವಿಷಯಗಳಲ್ಲಿ, ಆ ವೈವಿಧ್ಯತೆಯು ಪರಂಪರೆ ಬಂದುದು ಎಂದಿನಿಂದ ಹಾಗೂ ಐಕ್ಯತೆ ಇರುವದು ಎಂಥ ಪರಿಸರದಲ್ಲಿ (ನಿಲುವಿನಲ್ಲಿ) ಎಂಬುದನ್ನು ಮೊದಲು ತಿಳಿದುಕೊಳ್ಳ ಬೇಕು. ಐತಿಹಾಸಿಕ ಹಿನ್ನೆಲೆಯನ್ನು ಪರಿಶೋಧಿಸುವುದಾದರೆ ಕ್ರಿ. ಶ. ಪೂರ್ವ ಸುಮಾರು ೩೦೦೦ ವರ್ಷಗಳಿಂದಲೇ ಭಾರತ, ಆರ್ಯ-ದ್ರಾವಿಡರ ಸಂಪರ್ಕ ಹಾಗೂ ಸಂಕರದಿಂದ ವೈವಿಧ್ಯತೆಯನ್ನು ಪಡೆಯುತ್ತ ಬಂದಿದೆ. ಆದರೆ ಆದಕ್ಕೂ ಪೂರ್ವದಲ್ಲಿ ಭಾರತವು ಕೇವಲ ದ್ರಾವಿಡ ಮೂಲವಾಗಿತ್ತೆಂದು ಮ್ಯಾಕ್ಸಮುಲ್ಲರ, ಡಾ|| ಲ್ಯಾಥಮ್, ಡಾ|| ಗಾಯಿಲ್ಸ್ ಹಾಗೂ ಸರ್‌ಜಾನ್ ಇವ್ಯಾನ್ಸ ಅವರು ಅಭಿಪ್ರಾಯ ಪಡುತ್ತಾರೆ. ಇವರೆಲ್ಲರ ವಿಚಾರದ ಮೇರೆಗೆ ಇದು ದ್ರಾವಿಡ ಮೂಲವೆಂದೂ ಆರ್ಯರು ಆ ಬಳಿಕ ಪಾದಾಕ್ರಾಂತ ಗೈದರೆಂದೂ ಸ್ಥೂಲವಾಗಿ ನಿರ್ಣೀತವಾಗುತ್ತದೆ. ಆ ಮೊದಲು ದ್ರಾವಿಡ ಮೂಲ ಭಾರತದ ಪರಂಪರೆಯಲ್ಲಿ ವಿವಿಧತೆಯ ಒಕ್ಕಟ್ಟು ಇಲ್ಲವೇ ಘರ್ಷಣೆಗೆ ಸ್ಥಾನವೇ ಇರಲಿಲ್ಲ. ಕಾರಣ ಅದು ಏಕಮೂಲವಾಗಿತ್ತು. ಆದರೆ ಆರ್ಯರೊಂದಿಗೆ ಸಂಪರ್ಕ ಬಂದಂದಿನಿಂದ ಈ ವೈವಿಧ್ಯತೆಯ ಮೊದಲ ಕಿರಣ ಆವರಿಸಿಕೊಂಡಿತು. ಇದರಿಂದ ಭಾರತದ ವೈವಿಧ್ಯತೆಗೆ ಎಷ್ಟೊಂದು ಪ್ರಾಚೀನತೆ ಇದೆ ಎಂಬುದು ತಿಳಿದಂತಾಯಿತು. ಬಹುಶಃ ಮೊದಮೊದಲು ಆರ್ಯ ದ್ರಾವಿಡರಲ್ಲಿ ಪ್ರೇಮಕ್ಕಿಂತ ಹೋರಾಟವೇ ರೂಢಮೂಲ

ವಾಯಿತೆಂದು ಕಾಣುತ್ತದೆ. ಆ ಬಳಿಕ ಹಲವಾರು ಶತಮಾನಗಳ ಸೂಕ್ಷ್ಮ ಪ್ರಭಾವಗಳಿಂದ ಆರ್ಯ ದ್ರಾವಿಡರ ಧರ್ಮ ಹಾಗೂ ತತ್ವಜ್ಞಾನ ವಿಚಾರ, ದೇವತ್ವ ಕಲ್ಪನೆ, ಮೂರ್ತಿ ಪೂಜೆ, ಮಾನಸ ಪೂಜೆ, ಕರ್ಮಮಾರ್ಗ, ವ್ಯಾಪಾರ, ಉದ್ಯಮ ಮೊದಲಾದ ರಂಗಗಳಲ್ಲಿ ಆಂತರಿಕ ಸಂಬಂಧ ಏರ್ಪಡತೊಡಗಿತು. ಈ ಸಂಬಂಧವು ಇನ್ನೂ ವ್ಯಾಪಿಸಿ ಒಳ ಬಳಕೆ ಹಾಗೂ ರಕ್ತಸಂಬಂಧಗಳಿಂದ ಒಂದೇ ಎನ್ನುವಷ್ಟು ಐಕ್ಯಮತ್ಯ ಪ್ರಾಪ್ತವಾಯಿತು. ಆದರೂ ಅವರಲ್ಲಿರುವ ದೇವತ್ವ ಕಲ್ಪನೆಯಿಂದ ಆಂತರಿಕ ಹೋರಾಟ ಮಾತ್ರ ನಿಲ್ಲಲಿಲ್ಲ. ಸುಮಾರು ೩೦೦೦ ವರ್ಷಗಳಿಂದ ಸಂಸ್ಕೃತದಲ್ಲಿ ರಚಿತವಾದ ಶಿವಪುರಾಣ, ವಿಷ್ಣುಪುರಾಣ ಹಾಗೂ ಶಕ್ತಿಪುರಾಣಗಳಲ್ಲಿ ಈ ಬಗೆಯ ದೈವತ್ವದ ಹೆಚ್ಚು ಕಡಿಮೆಯೇ ವೆಗ್ಗಳವಾಗಿ ಕಾಣುತ್ತದೆ. ಹೀಗಾಗಿ ಆಯಾ ದೈವಾರಾಧಕರು ತಮ್ಮ ತಮ್ಮ ಕುಲಗಳನ್ನು ನಿರ್ಣಯಿಸಿ ಕೊಂಡ ಮೇಲೆ ಅವರ ಗುರುಪೀಠ ಇಲ್ಲವೇ ಪುಸ್ಥಾನ ಸಂಪ್ರದಾಯಗಳಿಂದ ಗೋತ್ರ, ಉಪಗೋತ್ರ, ಪಕ್ಷ, ಬಣ, ಜಾತಿ ಉಪಜಾತಿಗಳು ಸಹಸ್ರಾರು ಸಂಖ್ಯೆಯಲ್ಲಿ ಭಾರತದ ಮೂಲೆ ಮೂಲೆಯಲ್ಲಿ ತಾಂಡವವಾಡತೊಡಗಿದವು. ಈ ಮಧ್ಯ ಮಹಾವೀರನಿಂದ ಜೈನ ಧರ್ಮವು ಉಗಮಗೊಂಡು ನಿರ್ವಾಣ ತತ್ತ್ವವನ್ನು ಬೋಧಿಸಿದರೆ ಕ್ರಿ. ಶ. ಪೂರ್ವ ೬ನೇ ಶ. ದಲ್ಲಿ ಬುದ್ಧನಿಂದ ಬೌದ್ಧ ಧರ್ಮವು ಉಗಮಗೊಂಡು ಶೂನ್ಯ ತತ್ತ್ವವನ್ನು ಬೋಧಿಸಿತು. ಭಾರತದ ಎಲ್ಲ ವೇದಾಂತವಾದಿಗಳೂ ಈ ಹೊಸ ಧರ್ಮಕ್ರಮಗಳಿಗೆ ನಿರೀಶ್ವರವಾದವೆಂದು ಹೀಗಳೆದರು. ಜೊತೆಗೆ ಬೌದ್ಧ ಧರ್ಮದಲ್ಲಿ ಹೀನಯಾನ ಹಾಗೂ ಮಹಾಯಾನಗಳೂ ಮತ್ತು ಜೈನರಲ್ಲಿ ಶ್ವೇತಾಂಬರ ಮತ್ತು ದಿಗಂಬರ ಪಂಥಗಳೂ ಅಡಿ ಇರಿಸಿದವು. ಇಂಥ ವಿವಿಧ ಸಿದ್ಧಾಂತ, ಧರ್ಮ, ಆಚಾರಗಳಿಂದ ಬಹುಶಃ ಪ್ರಕ್ಷುಬ್ಧ ಗೊಂಡ ಭಾರತದ ಪರಿಸ್ಥಿತಿಯಲ್ಲಿ ಸ್ವಾಭಾವಿಕವಾಗಿ ರಾಜಕೀಯ ವಿಭಾಗಗಳು ಪ್ರಭಾವಿತ ಗೊಂಡು ಆಂತರಿಕ ಕಲಹ ಹಾಗೂ ಯುದ್ಧಗಳಿಗೆ ಬಲಿಯಾದವು. ಹೀಗಾಗಿ ಈ ವಿಷಮ ಪರಿಸ್ಥಿತಿ ರಾಜಕೀಯ ರಂಗದಲ್ಲಿ ನಿಬಿಡವಾಗಿ ಆವರಿಸಿದಾಗ ಅದರ ಅವಕಾಶ ಸಾಧಿಸಿ ಮುಸ್ಲೀಮರು ಸುಮಾರು ೪-೫ನೆಯ ಶತಮಾನದಿಂದ ಭಾರತದ ವಾಯುವ್ಯ ಮಾರ್ಗ ವಾಗಿ ಎಡೆಬಿಡದೇ ಉಗ್ರವಾದ ದಾಳಿ ಪ್ರಾರಂಭಿಸಿದರು. ಹೀಗಾಗಿ ಭಾರತದ ಪ್ರದೇಶ ಗಳು ಸಡಿಲುಗೊಂಡವು. ಕೊನೆಗೆ ೧೪ನೆಯ ಶತಮಾನದ ಪೂರ್ವಾರ್ಧದಲ್ಲಿ ಹೊಯ್ಸಳರ ವಂಶವು-ಮಲೀಕ್ ಕಾಫರನ ಭೀಕರವಾದ ಕುದುರೆ ದಾಳಿಗೆ ಬಲಿಯಾಯಿತು. ದಕ್ಷಿಣ ಭಾರತದಲ್ಲಿಯೂ ಮುಸಲ್ಮಾನರ ಪ್ರಭಾವ ಉಂಟಾಯಿತು. ೩-೪ ನೂರು ವರುಷಗಳ ವರೆಗೆ ಅವರ ಸತತ ಪ್ರಭಾವ ಭಾರತದ ಎಲ್ಲ ರಂಗಗಳಲ್ಲಿಯೂ ಇಳಿದು ಬಂದಿತು. ಅದು ತರುವಾಯ ಮುಂದುವರೆಯಿತು. ಆನಂತರ ಈ ಪ್ರಭಾವಕ್ಕೆ ಆಂಗ್ಲರ ಆಳಿಕೆಯ ದಿಗ್ವಿಜಯಗಳೊಂದಿಗೆ ಪಾಶ್ಚಿಮಾತ್ಯರ ಅತಿರೇಕ ಪ್ರಭಾವವೂ ಕ್ರಿಶ್ಚಿಯನ್ ಧರ್ಮದ ವ್ಯಾಪ್ತಿಯೂ ಉಂಟಾದವು. ಅಲ್ಲದೇ ಇತಿಹಾಸದ ಈ ಮಧ್ಯಂತರದಲ್ಲಿ ಡಚ್ ಮತ್ತು ಪೋರ್ಚುಗೀಜರ ಪ್ರಭಾವವೂ ಉಂಟಾಯಿತು. ಹೀಗಾಗಿ ಭಾರತವು ರಾಜಕೀಯವಾಗಿ,

ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ಭಾಷೆಯಿಕವಾಗಿ, ಸಾಹಿತ್ಯಿಕವಾಗಿ, ಕಲಾತ್ಮಕವಾಗಿ, ಆರ್ಥಿಕವಾಗಿ, ವೈಚಾರಿಕವಾಗಿ, ತಾರ್ಕಿಕವಾಗಿ ಹಾಗೂ ಸಾಮಾಜಿಕವಾಗಿ ಕಲ್ಪನಾತೀತವಾದ ವೈವಿಧ್ಯತೆಯನ್ನು ವಿವಿಧ ಪರಂಪರೆಗಳ ಪ್ರಭಾವವನ್ನೂ ಹಾಗೂ ವಿವಿಧ ಪ್ರಭಾವಗಳ ಮಿಶ್ರಣವನ್ನೂ ಪಡೆಯಿತು. ಬ್ರಿಟನ್ ಹಾಗೂ ಅಮೇರಿಕೆಗಳು ತಮ್ಮವೇ ಆದ ಇಂಗ್ಲೀಷ್ ಸಾಹಿತ್ಯ, ಸಂಸ್ಕೃತಿ, ಧರ್ಮ, ಆಚಾರಗಳನ್ನು ಹೊಂದಿದಂತೆ ಹಾಗೂ ಫ್ರಾನ್ಸ್, ಇಟಲಿ, ಜರ್ಮನಿ, ಹಾಲೆಂಡ, ಈಜಿಪ್ತ, ರಶಿಯ, ಅರಬ ಹಾಗೂ ಪಾಕಿಸ್ತಾನಗಳು ಅನ್ಯ ಪ್ರಭಾವಗಳ ಗಾಢತೆಯಿಲ್ಲದೇ ತಮ್ಮವೇ ಆದ ಭಾಷೆ, ಸಾಹಿತ್ಯ, ಧರ್ಮ, ಸಂಸ್ಕೃತಿ, ಆಚಾರಗಳನ್ನು ಹೊಂದಿಕೊಂಡಂತೆ ಭಾರತವು ದುರ್ದೈವವಶಾತ್ ತನ್ನ ಮೂಲ ಸ್ಥಿತಿಯನ್ನು ಒಂದೇ ಬಗೆಯಾಗಿ ಕಾಯ್ದುಕೊಳ್ಳಲಿಲ್ಲ. ಆದುದರಿಂದ ಆಧುನಿಕ ಭಾರತೀಯ ಸಂಸ್ಕೃತಿಯೆಂದರೆ ಇವೆಲ್ಲ ವೈವಿಧ್ಯತೆಗಳ ಸಮ್ಮಿಶ್ರಣವೆಂದು ಅರ್ಥ ಮಾಡಬೇಕಾಗುತ್ತದೆ. ಹೀಗಾಗಿ ಅನೇಕ ಸಲ ಆಂತರಿಕವಾದ ಧರ್ಮ ವ್ಯಾಜ್ಯಗಳು ಹಾಗೂ ಪರಧರ್ಮ ಹಿಂಸೆಗಳೂ ಮೊದಲಿನಿಂದಲೂ ನಡೆದುಕೊಂಡು ಬಂದಿವೆ. ಅಲ್ಲದೇ ಆಚಾರ ವಿಷಯದಲ್ಲಿ ಅನ್ನ-ಪಾನಾದಿಗಳನ್ನೂ, ರಕ್ತಸಂಬಂಧವನ್ನೂ ಒಂದು ಧರ್ಮದವರು ಇನ್ನೊಂದು ಧರ್ಮದವರಲ್ಲಿ ಮಾಡಬಾರದೆಂಬ ರೂಢಮೂಲವಾದ ಕ್ಲಿಷ್ಟ ಸಂಪ್ರದಾಯವು ಬೆಳೆದುಕೊಂಡು ಬಂದಿದೆ. ಅಲ್ಲದೇ ಚಾತುರ್ವರ್ಣ್ಯದಿಂದ ಹೀನ ಕುಲದವರನ್ನು ಉಚ್ಚಕುಲದವರು ತಮ್ಮ ಯಾವುದೇ ಕಾರ್ಯಗಳಿಂದ ಕಡೆಗಣಿಸಿ ದೂರವಿರಿಸುವ ಪ್ರಸಂಗ ಮೊದಲಿನಿಂದಲೂ ನಡೆದಿದೆ. ಹೀಗಾಗಿ ಪೌರ್ವಾತ್ಯರು ಅಚ್ಚರಿಪಡಬಹುದಾದ ಈ ಮಿಶ್ರಣವು ನಮ್ಮಲ್ಲಿ ಗರ್ಭಿತವಾಗಿದೆ.

ಈ ಸಮೀಕ್ಷೆಯಿಂದ ಭಾರತದ ವೈವಿಧ್ಯತೆ ಅಂದರೇನು? ಅದು ಯಾವ ಯಾವ ಮಟ್ಟಗಳಲ್ಲಿ ಇದೆ? ಹಾಗೂ ಯಾವ ಯಾವ ವಿವಿಧತೆಗಳು ಅಲ್ಲಿ ಕಂಡುಬರುತ್ತವೆಯೆಂಬುದನ್ನು ಸ್ಥೂಲವಾಗಿ ಅವಗಾಹಿಸಿದಂತಾಯಿತು. ಇನ್ನು ನಾವು ಕಾಣುತ್ತಿರುವ ಈ ವಿವಿಧತೆಯು ಆಧುನಿಕ ಭಾರತದಲ್ಲಿ ಐಕ್ಯಮತ್ಯದಲ್ಲಿ ಇದೆಯೋ ಅಥವಾ ಘರ್ಷಣೆಯಲ್ಲಿ ಇದೆಯೋ ಎಂಬುದನ್ನು ತಿಳಿಯಬೇಕು. ಇಂದು ಹಲವಾರು ದಿಶೆಗಳಿಂದ ಕೇಳಿಬರುತ್ತಿರುವ 'ಭಾವೈಕ್ಯತೆ' ಎಂಬ ಕೂಗಿನಿಂದಲೇ ನಮ್ಮಲ್ಲಿ 'ಭಾವೈಕ್ಯತೆ ಕೆಟ್ಟಿದೆ' ಇಲ್ಲವೇ ಅಲ್ಪವಾಗಿದೆ ಎಂದು ಸಿದ್ಧವಾದಂತಾಯಿತು. ಕಾರಣ 'ಭಾವೈಕ್ಯತೆ' ನಿಜವಾಗಿಯೂ ನಮ್ಮಲ್ಲಿ ನೆಲೆಸಿದ್ದರೆ ಇದನ್ನು ಸಾಧಿಸುವ ರಾಷ್ಟ್ರೀಯ ಆಂದೋಲನಕ್ಕೆ ಅವಕಾಶವಾದರೂ ಎಲ್ಲಿ? ಇಂದು ಭಾರತವು ರಾಜಕೀಯವಾಗಿ ಹಾಗೂ ಭಾಷೆಯಿಕವಾಗಿ ತೀರ ವಿಷಮ ವಾತಾವರಣವನ್ನು ಎದುರಿಸುತ್ತಿದೆ. ರಾಜಕೀಯ ರಂಗದಲ್ಲಿ ಭಾರತದ ಭೂಖಂಡವು ಇಭ್ಭಾಗವಾಗಿ ಪಾಕಿಸ್ತಾನಕ್ಕೆ ಒಂದು ಪಾಲು ಹಂಚಿಹೋದುದು ಒಂದು ಕಾರಣವಾದರೆ ಇನ್ನೊಂದು ಕಾರಣದಲ್ಲಿ ನಮ್ಮ ಆಂತರಿಕ ರಾಜಕೀಯದ ಒಳ ಕಲಹಗಳೂ, ಗುಂಪುಗಾರಿಕೆಗಳೂ ಹಾಗೂ ವಿವಿಧ ಪಕ್ಷಗಳ ತಿಕ್ಕಾಟಗಳೂ ಉಂಟಾದುದರಿಂದ ಆಗಿದೆ. ತರುವಾಯ ಭಾಷಾ

ವಾರ ಪ್ರಾಂತ ರಚನೆಯು ಮೇರೆಗೆ ಪ್ರತಿಯೊಂದು ಪ್ರಾಂತಗಳೂ ಒಂದಿಲ್ಲೊಂದು ಆಂತರಿಕ ಗಡಿನ್ಯಾಯಗಳಿಂದ ಅತೃಪ್ತವಾಗಿವೆ. ಇದಕ್ಕೆ ಮಹಾರಾಷ್ಟ್ರ, ಮೈಸೂರ, ಗುಜರಾತ್, ಪಂಜಾಬ, ಬಂಗಾಲ ಹಾಗೂ ಹರಿಯಾನಾ ಮೊದಲಾದವುಗಳನ್ನು ಉದಾಹರಿಸಬಹು ದಾಗಿದೆ. ಇಂಥ ಪರಿಸ್ಥಿತಿಯಲ್ಲಿ ಸರಕಾರವು ಪ್ರೋತ್ಸಾಹಿಸಿದ ಭಾವೈಕ್ಯತೆಯು ಬಹು ಮಟ್ಟಿಗೆ ವಿಡಂಬನಕ್ಕೆ ಗುರಿಯಾಗಿದೆ. ಅಲ್ಲದೇ ಪ್ರಾಂತೀಯ ಸರಕಾರಗಳು ನೀರಾವರಿ ಯೋಜನೆ, ವಿದ್ಯುತ್‌ಶಕ್ತಿ, ಬೃಹತ್ ಪ್ರಮಾಣದ ಕಾರಖಾನೆಗಳೂ ಮುಂತಾದ ಯೋಜನೆ ಗಳನ್ನು ಸ್ಥಾಪಿಸುವಲ್ಲಿ ದೇಶದ ಹಿತದೃಷ್ಟಿಯನ್ನು ಸಾಧಿಸದೇ ಪ್ರಾಂತೀಯ ದೃಷ್ಟಿಕೋನ ವನ್ನೇ ಮುಂದೆಮಾಡಿ ಅವೆಲ್ಲ ತಮ್ಮಲ್ಲಿಯೇ ಇರಲಿ ಎಂದು ಪ್ರಯತ್ನಿಸುತ್ತಿವೆ. ಹೀಗಾಗಿ ರಾಷ್ಟ್ರೀಯ ಒಕ್ಕಟ್ಟು ಈ ಆಂತರಿಕ ಗಲಭೆಗಳಲ್ಲಿ ಮುರಿದು ಬೀಳುವ ಭಯವು ಉಂಟಾಗ ಬಹುದಾಗಿದೆ. ನಮ್ಮಲ್ಲಿ ಮುಖ್ಯವಾಗಿ ಪ್ರಾಂತೀಯತೆಗಿಂತ ರಾಷ್ಟ್ರೀಯತೆಯು ಬೆಳೆದು ಬರಬೇಕು. ರಾಷ್ಟ್ರದ ಪ್ರಗತಿ ಸನ್ನಾಹದಲ್ಲಿ ನಾವು ನಮ್ಮ ಸಂಕುಚಿತ ದೃಷ್ಟಿ ವಿಚಾರ ವನ್ನು ಬಿಟ್ಟುಕೊಟ್ಟು ಹೋರಾಡಬೇಕು. ಇಲ್ಲವಾದರೆ ಜಾಗತಿಕ ಮಟ್ಟದಲ್ಲಿ ನಮ್ಮ ದೊಂದು ಹೆಜ್ಜೆ ಹಿಂದಾಗಬೇಕಾಗುತ್ತದೆ.

ಇನ್ನು ಮುಂದಿನ ವಿವೇಚನೆಯಲ್ಲಿ ರಾಷ್ಟ್ರದ ಐಕ್ಯಮತ್ಯವನ್ನು ಸಾಧಿಸುವದು ಹೇಗೆ ಎಂಬುದನ್ನು ನೋಡಬೇಕು. ಯಾವುದೇ ಬಗೆಯ ಸಾಂಸ್ಕೃತಿಕ, ವೈಜ್ಞಾನಿಕ ಇಲ್ಲವೇ ಶೈಕ್ಷಣಿಕ ಯೋಜನೆಗಳನ್ನು ಕೈಕೊಳ್ಳುವಾಗ ಕೇಂದ್ರವೇ ಇರಲಿ ಅಥವಾ ರಾಜ್ಯ ಸರಕಾರವೇ ಇರಲಿ ನಾವೆಲ್ಲರೂ ಒಂದುತನಕ್ಕಾಗಿ ಹೋರಾಡುತ್ತಿದ್ದೇವೆ ಎಂಬುದನ್ನು ಮರೆಯಕೂಡದು. ಇದಕ್ಕೆ ಎಲ್ಲರಲ್ಲಿರುವ ನೈತಿಕ ಜಿಜ್ಞಾಸೆಯು ಅತ್ಯಂತ ಮಹತ್ವ. ಅದು ವಿಸ್ತಾರವಾದ ದೃಷ್ಟಿಕೋನ ಇರಿಸಿಕೊಳ್ಳುವುದು ಅತ್ಯಗತ್ಯ. ಎಂಥ ಪರಿಸ್ಥಿತಿ ಯಲ್ಲಿಯೂ ನಮ್ಮಲ್ಲಿ ಒಡಕು ಇದೆ, ಭಿನ್ನಭಾವ ಇದೆ ಎಂಬುದನ್ನು ನಾವು ತೋರಿಸಿ ಕೊಡತಕ್ಕದ್ದಲ್ಲ. ಈ ವಿಷಯದಲ್ಲಿ J. S. Mill ಅವರು ಹೀಗೆ ಹೇಳುತ್ತಾರೆ:

"A portion of man kind may be said to constitute a nationality if they are united among themselves by common sympthies-which makes them co-operate with each other, which desire to be under the same Government and desire that it should be Government by themselves."

ಇದರಿಂದ ಮಿಲ್ ಅವರು ರಾಷ್ಟ್ರೀಯ ಐಕ್ಯತೆಗೆ ಭಾವೈಕ್ಯತೆ ಹಾಗೂ ಒಂದೇ ಸರಕಾರದಲ್ಲಿ ನಿಷ್ಠತೆ ಅವಶ್ಯವೆಂಬುದನ್ನು ಎತ್ತಿ ತೋರಿಸಿದ್ದಾರೆ. ಇದಲ್ಲದೇ ಭಾರತ ಈ ಜೀವನ ರಂಗದಲ್ಲಿ ಏಕತ್ವವಿರದೇ ಬಹುತ್ವವಿರುವದು ಒಂದು ರೀತಿಯ ವರದಾನವೇ ಆಗಿದೆ. ಕಾರಣ ಇದರಿಂದ ಹಲವು ಸಂಸ್ಕೃತಿ, ಭಾಷೆ, ಸಾಹಿತ್ಯ, ಆಚಾರ, ವಿನೋದಗಳ ನೈಸರ್ಗಿಕ ಸಂಗಮವಾಗುವುದಕ್ಕೆ ಹೆಚ್ಚು ಅನುಕೂಲವಾಗುತ್ತದೆ. ಇಂಥ ಪ್ರಸಂಗದಲ್ಲಿ

ನಾವು ನಮ್ಮ ಆತ್ಮದ ಎಲ್ಲ ಬಾಗಿಲುಗಳನ್ನೂ ತೆರೆದಿಟ್ಟರೆ ನಮ್ಮ ಜ್ಞಾನ ಪ್ರಕಾಶವು ಇನ್ನೂ ವೃದ್ಧಿಯಾಗಿ ಹಲವು ವಿಚಾರಗಳ ಸಮುದಾಯದಿಂದ ವರ್ಣರಂಜಿತವಾಗುತ್ತದೆ. ಆದುದರಿಂದ ಕೆಲವರು ಆಧುನಿಕರ ಅಭಿಪ್ರಾಯದ ಮೇರೆಗೆ ಭಾರತವು ವೈವಿಧ್ಯಮಯ ವಾಗಿದ್ದರೂ ಸಾರವತ್ತಾಗಿದೆ ಎಂಬ ಮಾತು ಉಚಿತವೆನಿಸುತ್ತದೆ. ಈ ವೈವಿಧ್ಯತೆಯು ವಿಷಮವಾದರೆ ತೀರ ದುಷ್ಪರಿಣಾಮಗಳೂ ಸಮಗೊಂಡರೆ ತೀರ ಉತ್ತಮ ಪರಿಣಾಮ ಗಳೂ ಗೋಚರಿಸುತ್ತವೆ. ಆದುದರಿಂದ ಒಂದೆರಡು ದಶಕಗಳಿಂದ ಉಂಟಾಗಿರುವ ಈ ಆಂತರಿಕ ಗಲಭೆಗಳನ್ನು ಸ್ಥಗಿತಗೊಳಿಸಿ ಪರಸ್ಪರ ಸ್ನೇಹ ಸೌಹಾರ್ದತೆ ಬೆಳೆಯುವಂತೆ ಅನುವು ಮಾಡಿ ಕೊಟ್ಟರೆ ಮಾತ್ರ ನಾವು ನಮ್ಮ ರಾಷ್ಟ್ರೀಯ ಧೋರಣೆಗಳನ್ನು ರೂಪಿಸಲು ಶಕ್ಯವಾಗುತ್ತದೆ. ಇಲ್ಲವಾದರೆ ಅಂತರ್‌ರಾಷ್ಟ್ರೀಯ ಕಾಳಗದಲ್ಲಿ ನಮ್ಮ ಸ್ಥಾನವನ್ನು ಸ್ಥಿರ ಗೊಳಿಸಲು ತುಂಬ ಕಠಿಣವಾಗುವುದು. ಕಾರಣ ಈ ಆಂತರಿಕ ಪರಿಣಾಮಗಳು ಬಾಹ್ಯ ಚಲನೆಗಳ ಮೇಲೂ ನಿಶ್ಚಿತ ಪರಿಣಾಮಗಳನ್ನು ಮಾಡುತ್ತವೆಯೆಂಬುದು ಸರ್ವಸಿದ್ಧವಾದ ಮಾತು. ಆದುದರಿಂದ ಇಂದು ಕೇವಲ ರಾಜಕೀಯ ಮುತ್ಸದ್ದಿಗಳಿಗಿಂತಲೂ, ರಾಜಕೀಯೆ ವೈಚಾರಿಕ ಮುತ್ಸದ್ದಿಗಳ ನೆರವು ಅತ್ಯಗತ್ಯ. ಇದರಿಂದ ಒಡಕುಗೊಂಡ ಭಾರತದಲ್ಲಿ ಒಂದು ತನವನ್ನು ತಂದುಕೊಳ್ಳಲು ಸಾಧ್ಯವಾಗುತ್ತದೆ. ಅಲ್ಲದೇ ಈ ಮೊದಲು ಹೇಳಿದಂತೆ ಈ ಹೊಂದಾಣಿಕೆಯಿಂದ ಭಾರತದಲ್ಲಿರುವ ಹಲವು ಧರ್ಮ, ಭಾಷೆ, ಸಾಹಿತ್ಯ, ಸಂಸ್ಕೃತಿ, ಸಮಾಜಪದ್ಧತಿ, ಕಲೆ, ಕೈಗಾರಿಕೆಗಳು ಪರಸ್ಪರ ಪ್ರಭಾವದಿಂದ ಸಮಗ್ರ ಭಾರತೀಯ ಸಂಸ್ಕೃತಿಗೆ ಕಳೆಯನ್ನು ತಂದುಕೊಡುತ್ತವೆ ಹಾಗೂ ಅಲಂಕಾರವಾಗುತ್ತವೆಯೆಂದು ಮುಂದಾಲೋಚನೆಯಿಂದ ಹೇಳಬಹುದು. ಆಗ ವೈವಿಧ್ಯತೆಯು ಭಾರತದ ವೈಶಿಷ್ಟ್ಯ ವಾಗುವದರೊಂದಿಗೆ ವರದಾನವೂ ಆಗಬಲ್ಲುದೆಂದು ನಾವು ನಮ್ಮ ಅಭಿಪ್ರಾಯವನ್ನು ಹೇಳಬಯಸುತ್ತೇವೆ.

## ನಾವು ಸಾಧಿಸಿದ ಜೀವನ ಮೌಲ್ಯಗಳು

ಮನುಷ್ಯನ "ಬಾಳು" ಬದುಕುವದು ಮಾತ್ರವಲ್ಲ; ಬಾಳುವದು. ಪ್ರಾಥಮಿಕ ಆವಶ್ಯಕತೆಗಳಾದ ಅನ್ನ-ಆಶ್ರಯ-ಅರಿವೆಗಳನ್ನು ಹೊಂದಿ ಕಾಮಾರ್ಥಗಳಿಂದ ಸುಖ ಪಡುವದಕ್ಕೆ "ಬದುಕುವದು" ಎಂಬ ಶಬ್ದ ಪ್ರಯೋಗವುಂಟು. ಆದರೆ "ಬಾಳುವದು" ಎಂಬ ಶಬ್ದದಲ್ಲಿ ಅಪಾರ ಅರ್ಥವುಂಟು, ಎಲ್ಲರೂ ಬದುಕುತ್ತಾರೆ; ಬಾಳುವವರು ಮಾತ್ರ ಕಡಿಮೆ. (ಬಾಳು ಮೌಲ್ಯಗಳಿಂದ ತುಂಬಿದ ಸಂಗೀತ. ವಿಶ್ವದ ಸಮಷ್ಟಿ ಪ್ರಜ್ಞೆಯೊಂದಿಗೆ ಮಾನವನ ವ್ಯಷ್ಟಿ ಪ್ರಜ್ಞೆ ಹದವಾಗಿ ಹೊಂದಿಕೊಂಡ ರಸಕಾವ್ಯ.) ಇಂಗ್ಲೀಷಿನಲ್ಲಿ ಹೇಳುವ "Values" ಎಂಬ ಪದಕ್ಕೆ ಕನ್ನಡದಲ್ಲಿ ಮೌಲ್ಯಗಳೆಂದು ಹೇಳುವದು. ಮಾನವನು ತನಗೆ ನಿಸರ್ಗದತ್ತವಾದ ಸಹಜ ಸುಖ ದುಃಖಗಳನ್ನು ಸಹಿಸಿ, ಪ್ರಾಣಿಗಳಂತೆ ಅವುಗಳ ತೂಗು ತೊಟ್ಟಿಲಲ್ಲೇ ಮುಳುಗಿ ಹೋಗದೆ, ಆ ಸ್ಥಿತಿಯನ್ನು ಮೀರಿ ಉನ್ನತವಾದ ಅರುಹು-ಚಿತನೆ-ಭಾವನೆ-ಕಲ್ಪನೆ ಜಿಜ್ಞಾಸೆ ಸಂಶೋಧನೆಗಳತ್ತ ಸಾಗುವವೇ ಮೌಲ್ಯಗಳ ಮಾಪನ.

ಇಲ್ಲಿಯೇ ವಿಜ್ಞಾನ, ಸಾಹಿತ್ಯ, ಕಲೆ, ಮಾನವಸೇವೆ, ಧರ್ಮಗಳ ಅಸಂಖ್ಯಾತ ಟಿಸಿಲುಗಳು.

ಈ "ಮೌಲ್ಯಗಳ ದಾರಿಯಲ್ಲಿ ನಮ್ಮ ಬಾಳು ಬಿರಿದು ಅರಳಿದುದೆಂತು" ಎಂಬ ಪ್ರಶ್ನೆಗೆ ಪ್ರಾಮಾಣಿಕವಾದ ಉತ್ತರ ನೀಡಲು ಇಲ್ಲಿ ಪ್ರಯತ್ನಿಸುತ್ತಿದ್ದೇವೆ. ಹಾಸನ ಜಿಲ್ಲೆಯ "ಶಶಿವಾಳ" ಗ್ರಾಮದಲ್ಲಿ ನಮ್ಮ ಜನನ. ನಮ್ಮ ಪೂರ್ವಾಶ್ರಯದಲ್ಲಿ ಅಂದರೆ ಮಹಾತಪಸ್ವಿ ಚಿತ್ತರಗಿ ಇಳಕಲ್ಲ ವಿಜಯ ಮಹಾಂತ ಶಿವಯೋಗಿಗಳು ಜನ್ಮವೆತ್ತಿದ ಮನೆಯಲ್ಲಿ, ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳ ವರದಿಂದ (ಆಶೀರ್ವಾದದಿಂದ) ಹುಟ್ಟಿದ್ದೊಂದು ನಮ್ಮ ಹಿರಿದಾದ ಭಾಗ್ಯ. ನಾವು ಕೇವಲ ನಾಲ್ಕು ವರ್ಷದವರಿದ್ದಾಗ, ಲಿಂ. ಕುಮಾರ ಶಿವಯೋಗಿಗಳ ಇಚ್ಛೆಯ ಮೇರೆಗೆ ನಮ್ಮ ಪೂರ್ವಾಶ್ರಯದ ತಾಯಿ ತಂದೆಗಳು ನಮ್ಮನ್ನು, ಕರ್ನಾಟಕದ ಆಧ್ಯಾತ್ಮಿಕ ಕೇಂದ್ರವಾದ ಬದಾಮಿ ತಾಲೂಕಿನಲ್ಲಿರುವ ಶಿವಯೋಗ ಮಂದಿರಕ್ಕೆ ತಂದು ಬಿಟ್ಟರಂತೆ. ಅದೇ ನಾಲ್ಕನೇ ವಯಸ್ಸಿನಲ್ಲಿಯೇ ತಂದೆ ತಾಯಿಗಳು ತೀರಿಕೊಂಡರಂತೆ. ಪೂರ್ವಾಶ್ರಯದ ಅಂದಿನ ಆ ನೆನಹು ನಮಗೆ ತಿಲಮಾತ್ರವೂ ಇಲ್ಲದಾಗಿದೆ. ಶಿವಯೋಗ ಮಂದಿರದ ಅಮೃತ ಸಮುದ್ರ ಪೂರ್ವಾಶ್ರಯವನ್ನೇ ಮರೆಯಿಸಿತೋ ಏನೊ? ಮೌಲ್ಯಗಳು ಕಲಿತು ಬಂದವುಗಳಲ್ಲ; ಸ್ವಾಭಾವಿಕವಾದ ವಿಕಾಸದ ಅಂತಃಪ್ರಭೆಗಳು ಎಂಬುದು ನಿಜವೆಂದು ಕಾಣುತ್ತದೆ. ಕಾರಣ ಆ ಬಾಲ್ಯ ಜೀವನದಲ್ಲಿಯೇ ಮೊಗ್ಗಾಗಿ ತುಂಬಿಕೊಳ್ಳುತ್ತಿತ್ತು ನಮ್ಮ ಸೌಂದರ್ಯ ಪ್ರಜ್ಞೆ. ಮೊಟ್ಟಮೊದಲು ಶಿವಯೋಗ ಮಂದಿರದ ಪ್ರಕೃತಿಯ ಚೆಲುವು ನಮ್ಮಲ್ಲಿ ಭಗವತ್ ಸೌಂದರ್ಯದ ಮೂಲ ಬೀಜವನ್ನು ನೆಟ್ಟರೆ, ಅಲ್ಲಿಯ ಸ್ವಾಮಿಗಳವರ ಸಂಪರ್ಕ, ದರ್ಶನ ಜ್ಞಾನದ ವಿರಕ್ತ ಪ್ರಜ್ಞೆಯನ್ನು ರೂಢಿಸಿತು. ಇದರಿಂದ ಪೂರ್ವಾಶ್ರಯದ ಸ್ಮರಣೆ ಮರೆತುಹೋಯ್ತು. "ಮಗುತನ"ದಲ್ಲಿಯೇ ತಾಯಿ ತಂದೆಗಳನ್ನು ಕಳೆದುಕೊಂಡ ನಮಗೆ, ತಂದೆ ತಾಯಿಗಳಿಗಿಂತಲೂ ಶಿವಯೋಗ ಮಂದಿರ ಸಂಸ್ಥೆ, ಹೆಚ್ಚು ಪೋಷಿಸಿ, ಸಲುಹಿ ಒಳ್ಳೆ ಸಂಸ್ಕಾರ ನೀಡಿತು. ಅಲ್ಲಿಯ ಹಲವು ಹಿರಿಯ ಸಾಧಕರ ಚಟುವಟಿಕೆಗಳು ನಮ್ಮಲ್ಲಿ ಅಡಗಿಕೊಂಡ ಕೆಲವು ಗುಪ್ತ ಶಕ್ತಿಗಳನ್ನು ಅರಳಿಸಲು ಸಾಧನವಾದವು. ಅವುಗಳಲ್ಲಿ ಮುಖ್ಯವಾದವುಗಳು ಎರಡು. ಒಂದು ಚಿತ್ರರಚನೆ, ಇನ್ನೊಂದು ಚಿಕ್ಕ ಚಿಕ್ಕ ಕವನಗಳ ಸಂಯೋಜನೆ. ಚಿತ್ರರಚನೆ ಮೊದಮೊದಲು ನಮ್ಮ ಮನಸ್ಸನ್ನು ಸೂರೆ ಮಾಡಿತು. ಅದರಿಂದ ಅನೇಕ ಜಿಲ್ಲಾ ಮಟ್ಟದ ಬಹುಮಾನಗಳು ಕೂಡ ದೊರೆತವು. ಆದರೇನು? ವರ್ಣಚಿತ್ರ ಸಂಯೋಜನೆಯಲ್ಲಿ ಆ ನಮ್ಮ ಬಾಲ ಪ್ರತಿಭೆ ಶೈಶವವನ್ನು ದಾಟುತ್ತಿರುವ ಸಮಯದಲ್ಲಿ, ಅಧ್ಯಯನದಲ್ಲಿ ಅಲಕ್ಷ್ಯವಾದುದರಿಂದ, ಹಿರಿಯರಿಂದ (ಅಧ್ಯಾಪಕರಿಂದ) ಚಿತ್ರ ತೆಗೆಯುವ ಲಕ್ಷ್ಯವನ್ನು ಕಡಿಮೆ ಮಾಡಿಸಿದರು. ಅಷ್ಟೇ ಅಲ್ಲದೆ ನಾವು ಒಂದು ದಿನ ನದಿಯ ದಂಡೆಯಲ್ಲಿ ಕುಳಿತು ಚಿತ್ರ ತೆಗೆಯುವದನ್ನು ನಮ್ಮ ಶಾಲಾ ಮಾಸ್ತರರು ನೋಡಿ, ಅಭ್ಯಾಸ ಮಾಡದೆ ಕೇವಲ ಚಿತ್ರ ತೆಗೆಯುವದರಲ್ಲಿಯೇ ಕಾಲಕಳೆಯುತ್ತಿರುವದು ಅವರಿಗೆ ಬೇಸರವಾಗಿ, ನಾವು ತೆಗೆದ ಎಲ್ಲ ಚಿತ್ರಗಳನ್ನು ಅದೇ ನದಿಯಲ್ಲಿ ಹರಿದು ಚಲ್ಲಿದರು. ಅದರ ಪರಿಣಾಮವಾಗಿ ಸಾಹಿತ್ಯದ

ಕಡೆಗೆ ಒಲವು ಉಂಟಾಗಿ ಕವನಗಳ ರಚನೆಯಲ್ಲಿ ತೊಡಗಿದೆವು. ಅದು ಜೋಗದ ಜಲ ಪಾತದಂತೆ ಹಿಗ್ಗಿ ಹರಿಯಿತು. ಆದರ ಫಲವಾಗಿ ನಮ್ಮ ೧೭ನೆಯ ವಯಸ್ಸಿನಲ್ಲಿಯೇ "ಮೊಗ್ಗೆಯ ಮಾಲೆ" ಎಂಬ ಚಿಕ್ಕ ಕವನ ಸಂಕಲನ ರಚಿಸಿದ ನಂತರ ಪೂಮಾಲೆ, ಪಥಿಕ, ಶಿವಬಸವೇಶ್ವರ ನಾಮಾವಳಿ, ವಿಜಯ ಮಹಾಂತೇಶ ಲಾವಣಿ, ಅಪ್ಪಯ್ಯ ಶ್ರೀಗಳ ಚರಿತ್ರೆ (ಗದ್ಯ) ಮುಂತಾದ ಕವನ ಸಂಕಲನಗಳು ಹಾಗೂ ಗದ್ಯ ಪುಸ್ತಕಗಳು ಪ್ರಕಟವಾದವು. ಬಾಲ್ಯದಲ್ಲಿ ನಮ್ಮ ಲೇಖನ ಕವನಗಳಿಗೆ "ಶರಣ ಸಂದೇಶ, ಶಿವಾನುಭವ, ಶರಣ ಸಾಹಿತ್ಯ, ಜೀವನ, ಕರ್ಮವೀರ, ಜಯ ಕರ್ನಾಟಕ, ಸಾವಧಾನ, ಸುಕುಮಾರ, ಅಮರವಾಣಿ ಈ ಪತ್ರಿಕೆಗಳ ಸಂಪಾದಕರು ನಮಗೆ ಪ್ರೋತ್ಸಾಹಿಸಿದರು. ಜೊತೆ ಜೊತೆಗೆ ಶಿವಯೋಗ ಮಂದಿರದ ಸಹಜ ಸಂಸ್ಕಾರದಿಂದ ಲಿಂಗಾರ್ಚನೆ ಆಸನಗಳು, ಯೋಗಸಾಧನೆ, ಅನುಷ್ಠಾನ, ತುಂಬಿದ ಮಲಪ್ರಭಾ ನದಿಯಲ್ಲಿ ಈಜುವ ಸಾಹಸ, ಸತತಾಧ್ಯಯನ, ನಿರಂತರವೂ ಗ್ರಂಥಾಲಯದಲ್ಲಿ ಕುಳಿತು ಓದುವ ಹವ್ಯಾಸ, ಮೇಲಿಂದ ಮೇಲೆ ಭಾಷಣ ಸ್ಪರ್ಧೆಗಳಲ್ಲಿ ಆಸಕ್ತಿ ಇವೆಲ್ಲ ನಮ್ಮ ಬಾಳಿನ ಅಂತಃಶಕ್ತಿಗಳನ್ನು ಜಾಗೃತ ಗೊಳಿಸಲು ತುಂಬಾ ಸಹಕಾರಿ ಯಾದವು. ಅಂದಿನ ನಮ್ಮ ಕವನಗಳನ್ನು ಈಗ ತೆರೆದು ನೋಡಿದರೆ ಮಾನವ ಪ್ರೇಮ, ಭಾವೈಕ್ಯತೆ, ದೀನ ದಲಿತರ ಬಗ್ಗೆ ಕರುಣೆ ಕಂಬನಿ, ಭವಿಷ್ಯದ ಯಶಕ್ಕಾಗಿ ಸಾಹಸ, ಪ್ರಯತ್ನ, ಅದಕ್ಕಾಗಿ ಉತ್ಕಟ ಭಗವದ್ ಶಕ್ತಿಗಳು ಎದ್ದು ಕಾಣುತ್ತವೆ. ಇವೆಲ್ಲವೂ "ಮೌಲ್ಯ" ಶಬ್ದವನ್ನು ಅರಿಯದ ಅಂದಿನ ನಮ್ಮಲ್ಲಿ ಬಾಳಿನ ಬಟ್ಟಲ ತುಂಬಿದವು. ಪ್ರಸನ್ನ ವಾಗಿ ಪ್ರಕಾಶ ಬೀರಿದವು. ಚಿತ್ತರಗಿ ಇಲಕಲ್ಲ ವಿಜಯ ಮಹಾಂತೇಶ ಮಠದ ಉತ್ತರಾಧಿ ಕಾರಿಯಾಗಿಯೇ ಅಂದು ಅಧ್ಯಯನ ಮಾಡುತ್ತಿದ್ದೆವು.

ಆ ನಂತರದ ನಮ್ಮ ಬಾಳು: ಕಾಶೀಯಾತ್ರೆ ಅದೊಂದು ದೈವದತ್ತ ಸಾಹಸ ಯಾತ್ರೆ ವಿದ್ವದಭಿಷೇಕ. "ಒಬ್ಬರು ಹಿರಿಯ ಸ್ವಾಮಿಗಳು ನಾವು ಅಲ್ಲಿಹೋದರೆ ಒಳ್ಳೇದಲ್ಲ ಆಚಾರಕ್ಕೆ ಅಡಚಣೆ" ಎಂದು ಹೇಳಿದರು. ಆದರೆ ಬಾಳನ್ನು ವಿಶಾಲಾರ್ಥದಲ್ಲಿ ನಿರೀಕ್ಷಿಸುವ ನಮ್ಮ ಮನೀಷೆ ಅದನ್ನು ಒಪ್ಪಲಿಲ್ಲ. ಧೀಮಂತವಾಗಿ ನುಗ್ಗಿತು. ನಿಜವಾಗಿಯೂ ಕಾಶಿಯ ಹತ್ತು ವರ್ಷಗಳ ಅಧ್ಯಯನ ವಿದ್ವದ್ಗಂಗಾಸ್ನಾನವಾಯ್ತು. ಇದಕ್ಕೆಲ್ಲ ಇಲಕಲ್ಲ ವಿಜಯ ಮಹಾಂತೇಶ ಮಠ ಹಾಗೂ ಇಲಕಲ್ಲ ಮಠದ ಭಕ್ತರ ಸಹಾಯ ಸಹಕಾರ ನಮ್ಮ ಪ್ರತಿಭೆ ಬೆಳೆಯಲಿಕ್ಕೆ ಕಾರಣವಾಯ್ತು. ಕಾಶಿಯಲ್ಲಿ ನಮಗೆ ಸಂಸ್ಕೃತ, ಕಾವ್ಯ, ತರ್ಕ, ವೇದಾಂತ, ವ್ಯಾಕರಣ, ಮೀಮಾಂಸೆಗಳ ಆಳವಾದ ಅಧ್ಯಯನಕ್ಕೆ ಅನುಕೂಲವಾಯ್ತು. ಅನೇಕ ಜನ ಪ್ರಾಚಾರ್ಯರು ನಮ್ಮ ಹಿರಿಯ ಹೊಂಗನಸುಗಳನ್ನು ತುಂಬಿದರು. ಈ ಹತ್ತು ವರ್ಷದಲ್ಲಿ ಕಾವ್ಯತೀರ್ಥ, ಸಾಹಿತ್ಯರತ್ನ, ವೇದಾಂತ ಶಾಸ್ತ್ರಾಚಾರ್ಯ, ಈ ಪರೀಕ್ಷೆಗಳಲ್ಲಿ ಉತ್ತೀರ್ಣ ರಾಗಿ, ಬಿ. ಎ. ಮೊದಲನೆಯ ವರ್ಷದವರೆಗೆ ಅಧ್ಯಯನ ಮಾಡಿದೆವು. ಆದರೆ ಕಾಶಿಯ ಅಧ್ಯಯನದಲ್ಲಿ ಎದುರಿಸಿದ ಗಂಡಾಂತರಕಾರಕ ಆರ್ಥಿಕ ಸ್ಥಿತಿ, ನಮ್ಮನ್ನು ಬಾಳಿನ ಮತ್ತೊಂದು ವಿಧವಾದ ನೋವಿನ ದರ್ಶನ ಮೂಡಿಸಿತು. ಆಗ ವಿಶ್ವವಿದ್ಯಾಲಯದಿಂದ

ದೊರೆತ ಸ್ಕಾಲರ್‌ಶಿಪ್‌ಗಳು, ಭಕ್ತರಿಂದ ಬರುವ ಹಣವು ನಮಗೆ ಸಹಕಾರಿಯಾದವು. ಕಾಶಿಯು ನಮಗೆ ನೀಡಿದ ಪ್ರಸಾದ "ಪಾಂಡಿತ್ಯ" ಮಾತ್ರವಲ್ಲ; .ಪೌರ್ವಾತ್ಯ ಪಾಶ್ಚಿಮಾತ್ಯ ಗಳ ಸಹಜ ಸಂಬಂಧ ಹಾಗೂ ಭಾರತೀಯ ಸಂಸ್ಕೃತಿಯು ಅನೇಕ ಭಾಷಾ ಪ್ರಧಾನ ರಾಜ್ಯಗಳಲ್ಲಿ ಅಂತರ್‌ಮೈತ್ರಿ, ಭಾರತ ಅನೇಕ ಭಾಷೆಗಳ ಘರ್ಷಣೆಯ ಕೇಂದ್ರವಲ್ಲ; ಅನೇಕ ಭಾರತೀಯರ ಹೃದಯ ಪಾಕ ಎಂಬ ಶಾಶ್ವತ ಸತ್ಯ ಗೋಚರವಾಯ್ತು. ಅಂದಿನಿಂದ ಭಾರತೀಯ ಒಳ ರಾಜ್ಯಗಳಲ್ಲಿ ಭಾವೈಕ್ಯತೆ ಲೋಕದೊಂದಿಗೆ ಒಂದೇ ಮಾನವನ ಸಹ ಭಾವನೆಗಳು ನಮಗೆ ಊರುಗೋಲು ಮೌಲ್ಯಗಳಾಗಿ ದೊರೆತವು. ಈ ಮೌಲ್ಯಗಳೇ ಮುಂದಿನ ನಮ್ಮ ದಿಲ್ಲಿ, ಜಪಾನದ "ಕ್ಯೂಟೋ" ಹಾಗೂ "ಬೆಲ್ಜಿಯಮ್"ನ ಲೂವೆನ್ನಿನಲ್ಲಿ ವಿಶ್ವಶಾಂತಿ ಪರಿಷತ್ತಿನಲ್ಲಿ ಸಾರಿಹೇಳುವ ವಿಶ್ವಶಾಂತಿ ಮಂತ್ರಗಳಾದವು. ಜೊತೆಗೆ ಸಹಜ ಸುಗಾತಿಯಾದ ಶರಣರ ವಚನಗಳ ಅಧ್ಯಯನ ನಮ್ಮ ಬಾಳಿನ ಬೆನ್ನಲಬುವಾದವು.

ನಮ್ಮಲ್ಲಿ ಅವಿತುಗೊಂಡ ಇನ್ನೂ ಅನೇಕ ಮೌಲ್ಯಗಳಿಗೆ ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರಮಠದ ಉತ್ತರಾಧಿಕಾರ ಬಹಳ ಉಪಕಾರಿಯಾಯ್ತು ಅದಕ್ಕೆಲ್ಲ ಗುರುಗಳಾದ ಲಿಂ. ಶ್ರೀ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರರ ಕೃಪೆಯೇ ಕಾರಣ. ಈ ಪೀಠವನ್ನು ವಹಿಸಿಕೊಂಡಂದಿನಿಂದ ಶಿಕ್ಷಣ ಪ್ರಸಾರವು ಭರದಿಂದ ನಡೆಯು ವಂತಾಯ್ತು. ಆದರಿಂದ ಮೂರ್ನಾಲ್ಕು ಶಾಲೆ ಕಾಲೇಜುಗಳು ಉದಯವಾದವು. ಅಲ್ಲದೆ ಬಡ ರೋಗಿಗಳ ಶುಶ್ರೂಷಣೆಗೆ ಗುರುಗಳಿಂದ ಸಂಸ್ಥಾಪಿತವಾದ ಘಟಪ್ರಭೆಯ ಜೆ. ಜಿ. ಸಹಕಾರಿ ಆಸ್ಪತ್ರೆಯ ಮೂಲಕ ಸೇವೆ ಸಲ್ಲಿಸುವ ಅವಕಾಶ ದೊರೆಯಿತು. ಅಲ್ಲದೆ ೩-೪ ಆಯುರ್ವೇದ ದವಾಖಾನೆಗಳನ್ನು ತೆರೆಯುವದಕ್ಕೆ ಸಹಾಯ ಮಾಡಲು ಅನುಕೂಲ ವಾಯ್ತು. ಶಿವಯೋಗ ಮಂದಿರದಲ್ಲಿ ಜರುಗಿದ ೧೦ನೇ ಅಖಿಲಭಾರತ ವೀರಶೈವ ಮಹಾ ಸಭೆಯ, ಶಿವಯೋಗಮಂದಿರದ ಸುವರ್ಣ ಮಹೋತ್ಸವದ ಕಾರ್ಯ ಕಲಾಪಗಳಲ್ಲಿ ಭಾಗ ವಹಿಸಿ, ಎಲ್ಲ ಶ್ರೀಗಳ ಹಾಗೂ ಭಕ್ತರ ಸಹಕಾರದಿಂದ ಯಶಸ್ವಿಗೊಳಿಸುವಂತಾಯ್ತು. ಅಂದು ನಾವು ಸಾಧಕರಾಗಿದ್ದಾಗ ಶಿವಯೋಗ ಮಂದಿರದಲ್ಲಿ, ಕೈಬರಹದ "ಸುಕುಮಾರ"ದ ಸಂಪಾದಕರಾಗಿ ಮಾಸಿಕ ಪತ್ರಿಕೆ ನಡೆಸುತ್ತಿದ್ದೆವು. ನಮ್ಮ ಸಾಹಿತ್ಯಾರಾಧನೆಯ ಆ ಎಳೆ ತನದ ಭಾಗ್ಯ ಇಂದು "ಪರಂಜ್ಯೋತಿ" ಮಾಸಿಕ ಪತ್ರಿಕೆಯ ಪ್ರಕಟನೆಯಿಂದ ಹೆಮ್ಮರವಾಗಿ ಅರಳಿತು. ಮಠದ ಹಾಗೂ ಭಕ್ತರ ಸಹಾಯದಿಂದ, ಹತ್ತೆಂಟು ಲಕ್ಷ ರೂಪಾಯಿಗಳಿಂದ ಶ್ರೀ ಪೀಠದ ಜೀರ್ಣೋದ್ಧಾರ, ನೂತನ ಕಟ್ಟಡಗಳ ರಚನೆ ಹಾಗೂ ಶಾಖಾ ಮಠಗಳ ಪ್ರಗತಿ ಮಾಡಲು ಅನುಕೂಲವಾಯ್ತು. ಇದರಿಂದ ಅಧ್ಯಯನ ಹಾಗೂ ಸಾಹಿತ್ಯಾರಾಧನೆಗೆ ಬಹಳ ತೊಂದರೆಯುಂಟಾದರೂ, ಸಾಮಾಜಿಕ ಸೇವೆಯಿಂದ ಮನಸ್ಸಿಗೆ ತೃಪ್ತಿಯಾಗುತ್ತಿದೆ.

ನಮಗೆ ಲೋಕದ ಹಸಿವೆ ಕಂಡರೆ ಕರಳು ಹಿಂಜುತ್ತಿತ್ತು. ಕೊನೆಗೆ ಆ ಸೇವೆಗೆ ಅವಕಾಶವು ಲಭಿಸಿತು. ೧೯೭೨ ರ ಬರಗಾಲದಲ್ಲಿ ಪಾದಯಾತ್ರೆ ಗೈದು ಹತ್ತಾರು ಲಕ್ಷ ಹಣ ಸಂಗ್ರಹಿಸಿ, ಕರ್ನಾಟಕದ ನಾನಾ ಕೇಂದ್ರಗಳಲ್ಲಿ ಉಚಿತ ಗಂಜೀ ಕೇಂದ್ರ ತೆರೆಯುವ

ಲೋಕ ಸೇವೆಯ ಭಾಗ್ಯ ದೊರೆಯಿತು. ದೀನ-ದರಿದ್ರರ ಆ ಪವಿತ್ರ ಸೇವೆಯಿಂದ ನಮ್ಮ ಮನಸ್ಸಿಗೆ ತುಂಬ ತೃಪ್ತಿಯಾಯಿತು.

ಅನಂತರ ವಿಶ್ವಶಾಂತಿ ಪರಿಷತ್ತು ನಮ್ಮನ್ನು ಬಹುವಾಗಿ ಆಕರ್ಷಿಸಿತು. ಅದರ ಪ್ರಧಾನ ಅಧ್ವರ್ಯ ಡಾ|| ಹೊಮರ ಎ. ಜಾಕ್ ಅವರು ನಮ್ಮನ್ನು ಒತ್ತಾಯದಿಂದ ಜಪಾನ ಹಾಗೂ ಬೆಲ್ಜಿಯಮ್‌ಗಳಿಗೆ ಆಮಂತ್ರಿಸಿದರು. ಅಲ್ಲೆಲ್ಲ ನಾವು ಬೆಳೆಸಿಕೊಂಡು ಬಂದ ಭಾವೈಕ್ಯತೆ ಹಾಗೂ 'ವಿಶ್ವಶಾಂತಿ'ಯ ಮೌಲ್ಯಗಳಿಗೆ ಸುಗ್ಗಿಯ ಕಾಲ ಲಭಿಸಿತು. ಆ ಸಾಧನೆಗಳ ತಪೋಯಾತ್ರೆಗೆ ಒಂದು ಸುಂದರ ಫಲಶ್ರುತಿ ಉಂಟಾಯಿತು. ಅಲ್ಲಿಯ ನಮ್ಮ ಪ್ರಾಮಾಣಿಕ ಪ್ರಯತ್ನ ಎಲ್ಲರಿಗೂ ವಿದಿತು. ಪರದೇಶಕ್ಕೆ ಹೋಗಿ ಧರ್ಮ ಜಾಗ್ರತೆ ಮಾಡಬೇಕೆಂಬ ಮಹೋದ್ದೇಶ ಲಿಂ. ಹಾನಗಲ್ಲ ಕುಮಾರಸ್ವಾಮಿಗಳಿಗಿತ್ತು. ಅವರ ಸಂಕಲ್ಪಕ್ಕೆ ಶ್ರೀ ಜಗದ್ಗುರು ಮೂರುಸಾವಿರ ಮಠದಿಂದ ಸೇವೆಗೈಯುವ ಅವಕಾಶ ನಮಗೆ ದೊರೆಯಿತು. ಅಲ್ಲದೆ ನಮ್ಮ ಮಠದ ಸಮಸ್ತ ಭಕ್ತರಿಂದ ಸಹಕಾರ, ಪ್ರೇರಣೆ, ಪ್ರೋತ್ಸಾಹಗಳೆಲ್ಲ ಧಾರಾಳವಾಗಿ ದೊರೆತವು. ಸರ್ವರ ಕಳಕಳಿಯ ಬೆಂಬಲದಿಂದ ನಮಗೆ 'ಜಾಗತಿಕ ಶಾಂತಿ ಪರಿಷತ್ತಿ'ನಲ್ಲಿ ಶರಣ ಸಂದೇಶವನ್ನು ಸಾರಲು ಒಳ್ಳೆಯ ಅವಕಾಶ ಪ್ರಾಪ್ತವಾಯಿತು. ನಮ್ಮ ಮಠವು ವೀರಶೈವ ಧರ್ಮದ ಪೀಠವಾಗಿದ್ದರೂ ಸರ್ವ ಧರ್ಮ ಸಮನ್ವಯ ದೃಷ್ಟಿಯಲ್ಲಿ ಮುಂದುವರಿಯುತ್ತಿರುವುದು ನಮಗೆ ಸಂತೋಷ ವನ್ನುಂಟು ಮಾಡಿದೆ. ಇದುವೆ ಮಾನವತೆಯ ಕುರುಹೆಂದು ಭಾವಿಸಿದ್ದೇವೆ.

ಕೊನೆಯದಾಗಿ ನಮ್ಮ ಬಾಳಿನ ಈ ಮಹಾಮೌಲ್ಯಗಳಿಗೆ ಮೂಲಸೂತ್ರವಾಗಿ ಕೈಚಾಚಿದ ಭಗವದ್ ಶಕ್ತಿಗಳನ್ನು ಮರೆಯುವಂತಿಲ್ಲ. ಲಿಂ.ಹಾನಗಲ್ಲ ಕುಮಾರ ಮಹಾ ಶಿವ ಯೋಗಿಗಳು, ಶ್ರೀ ಜಗದ್ಗುರು ಮೂರುಸಾವಿರಮಠದ ಕರ್ತೃ ಜಗದ್ಗುರು ಗುರು ಸಿದ್ಧೇಶ್ವರರು ಹಾಗೂ ಲಿಂ. ಶ್ರೀ ವಿಜಯಮಹಾಂತ ಶಿವಯೋಗಿಗಳು ಈ ಮೂರು ಮಹಾ ಶಕ್ತಿಗಳ ತ್ರಿವೇಣಿ ಸಂಗಮದಲ್ಲಿ ನಮ್ಮ ಬಾಳು ಮೂಡಿತು, ಅರಳಿತು, ಬಾಳಿತು, ಬೆಳಗುತ್ತಿದೆ, ಅಲ್ಲದೆ ನಮ್ಮ ಗುರುಗಳಾದ ಲಿಂ. ಶ್ರೀ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳವರು ನಮ್ಮನ್ನು ಮಾನವ ಸೇವೆಗಾಗಿ ಕೈ ಎತ್ತಿನಿಂತ ಈ ಮೂರು ಸಾವಿರಮಠಕ್ಕೆ ತಂದು ಪ್ರೋತ್ಸಾಹಿಸಿದರು. ಅದರಿಂದ ಈವರೆಗೆ ೫೦ ಧಾರ್ಮಿಕ ಗ್ರಂಥ ಗಳ ಪ್ರಕಟನೆಯಾಗಿ ಸಾಹಿತ್ಯ ಸೇವೆಯನ್ನು ಮಾಡುವ ಭಾಗ್ಯ ದೊರೆತಿದೆ. ಮಠಾಧಿಕಾರಿ ಗಳನ್ನಾಗಿ ಮಾಡುವ ಹಾನಗಲ್ಲ ಲಿಂ. ಕುಮಾರ ಯೋಗಿಗಳ ತತ್ತ್ವವನ್ನು ಬೀರುವ ಸಂಘ ವೊಂದನ್ನು ಸಂಸ್ಥಾಪಿಸಿದ್ದು, ಅದರ ಪ್ರಯೋಜನವೂ ಸಮಾಜಕ್ಕೆ ಆಗುತ್ತಿರುವುದೂ ನಮಗೆ ಸಂತಸವನ್ನುಂಟುಮಾಡಿದೆ. ಅಲ್ಲದೆ ಧಾರ್ಮಿಕ ದೃಷ್ಟಿಯ ಬೆಳವಣಿಗೆಗಾಗಿ, ಹಾಗೂ ಭಕ್ತೋದ್ಧಾರಕ್ಕಾಗಿ, ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಶಾಶ್ವತ ಪೂಜೆಯನ್ನು ಭಕ್ತರ ಸಹಕಾರದಿಂದ ಪ್ರಾರಂಭಿಸಿದ್ದು ಒಳ್ಳೇ ಸಂಸ್ಕಾರ ನೀಡುವ ಈ ಯೋಜನೆಯನ್ನು

ಸರ್ವ ಧರ್ಮದ ಭಕ್ತರು ಮೆಚ್ಚಿಕೊಂಡದ್ದು ಸಂತೃಪ್ತಿ ನೀಡಿದೆ. "ಕಾಯಕವೇ ಕೈಲಾಸ" ವೆಂಬುದು ನಮ್ಮ ಮುಖ್ಯ ಗುರಿಯಾಗಿದೆ.

ಒಟ್ಟಿನಲ್ಲಿ ಈ ಜೀವನದಲ್ಲಿ ಎಲ್ಲ ಕಾರ್ಯಗಳನ್ನು ಮಾಡುವಾಗ ಅನೇಕ ಕಷ್ಟ–ನಷ್ಟ ಗಳನ್ನು ಅನುಭವಿಸಿದ್ದೇವೆ, ಮರುಗಿದ್ದೇವೆ, ಕೊರಗಿದ್ದೇವೆ. ಚಿಂತೆಯ ಬೆಂಕಿಯಲ್ಲಿ ಸುಟ್ಟಿದ್ದೇವೆ. ಮಾನಾಪಮಾನಗಳು ಸಹ ನಮ್ಮ ಜೀವನದಲ್ಲಿ ಬಂದು ಹೋಗಿವೆ. ನಮ್ಮ ಜೀವನದಲ್ಲಿ ತಾಳ್ಮೆಯೇ ಭದ್ರ ಬೀಗದ ಕೈ ಎಂದು ಭಾವಿಸಿ ಜೀವನ ಸಾಗಿಸುತ್ತಿದ್ದೇವೆ. ಸಾಮಾಜಿಕ ಸೇವೆ ಮಾಡುವವರಿಗೆ ಇದು ಅವಶ್ಯಕ. ಕಷ್ಟ–ನಷ್ಟಗಳನ್ನು ಎದುರಿಸುವದೇ ಮುಖ್ಯ ಗುರಿಯಾಗಿಟ್ಟುಕೊಂಡವರು ಸಮಾಜದಲ್ಲಿ ಪಾರಾಗುತ್ತಾರೆಂಬುದು ನಮ್ಮ ಮತ. ಸಾಮಾಜಿಕ ಧಾರ್ಮಿಕ ಕ್ರಾಂತಿಯಾಗಬೇಕಾದರೆ ಧೈರ್ಯ, ಹಾಗೂ ತಾಳ್ಮೆಯಿಲ್ಲದೆ ಸಾಧ್ಯವಾಗದು. ಅನೇಕ ಜನರು ಈರ್ಷ್ಯಾ ದ್ವೇಷದಿಂದ ಕಾಡುವವರೂ ಈ ಜಗತ್ತಿನಲ್ಲಿ ಇರುತ್ತಾರೆ. ಸಾಮಾಜಿಕ ಸೇವೆಯಲ್ಲಿ ಅಡ್ಡಿ ಅಡಚಣೆ ಗಳು ಬರುವದು ಸ್ವಾಭಾವಿಕ. ದುಃಖ ದುಮ್ಮಾನಗಳನ್ನು ಸಹಿಸಿದರೇನೆ ಆತ್ಮದ ಹಾಗೂ ಸಾಮಾಜಿಕ ಪ್ರಗತಿ. ಆದರೆ ಸಾಮಾಜಿಕ ಸೇವೆ ಮಾಡುವವರಲ್ಲಿ ನಿಸ್ವಾರ್ಥ ಭಾವನೆ ಇದ್ದರೆ ಯಾವುದಕ್ಕೂ, ಯಾವ ಸಮಯಕ್ಕೂ ಹೆದರುವ ಕಾರಣವಿಲ್ಲ. ಮಾನವನು ಭೌತಿಕ ಪ್ರಪಂಚದಲ್ಲಿದ್ದರೂ, ಅದರ ಸಿಹಿ–ಕಹಿಗಳನ್ನು ಅಂಟಿಸಿಕೊಳ್ಳದೆ ಹಿರಿಗುರಿಯತ್ತ ಸಾಗಿ ಧ್ಯೇಯವನ್ನು ಸಾಧಿಸುವದೇ ಮುಖ್ಯ ಕರ್ತವ್ಯವಾಗಬೇಕು. ಅಂದರೆ ಕರ್ಮಜ್ಞಾನ ಗಳೆರಡನ್ನೂ ಸಾಧಿಸಿಕೊಂಡು ಹೋಗುವದರಲ್ಲಿ ಬೆಲೆ ಹಾಗೂ ಬಲವಿದೆ. ಯೋಗಶಕ್ತಿ ಯಿಂದ ಮನುಷ್ಯನಲ್ಲಿ ಪರಿವರ್ತನೆಯಾಗಬಹುದು. ಆದರೆ ಕರ್ಮವನ್ನು ತ್ಯಜಿಸಬೇಕಾ ಗಿಲ್ಲ. ಕರ್ಮದಿಂದ ಜ್ಞಾನೋದಯಕ್ಕೆ, ಹಾಗೂ ಏಕಾಗ್ರತೆಗೆ ಪ್ರಮುಖ ಸಾಧನವಾಗುತ್ತದೆ. ಬಾಳೆಲ್ಲವೂ ಯೋಗವಾಗಬೇಕು. ಜೀವನದ ಮೌಲ್ಯಗಳು ಸಿದ್ಧಿಸಬೇಕಾದರೆ ಕ್ರಿಯಾ ಜ್ಞಾನಗಳ ಸಮನ್ವಯವು ಅವಶ್ಯ ಬೇಕೇಬೇಕು. ಆ ದೃಷ್ಟಿಯಿಂದ ನಡೆಯುವದೇ ಮುಖ್ಯ ಗುರಿಯೆಂದು ಭಾವಿಸಿದ್ದೇವೆ. ಇದಕ್ಕಾಗಿ ಜನಗಳ ಸಹಕಾರವನ್ನು ದೊರಕಿಸಿಕೊಂಡಿದ್ದೇವೆ. ಕೊನೆಯದಾಗಿ ನಮ್ಮ ಬಾಳು ಸಿಹಿ–ಕಹಿಗಳ ಸಮರಸ ಜೀವನ. ಏನೆಲ್ಲ ಮೌಲ್ಯಗಳನ್ನೂ ಸಾಧಿಸಿದ್ದರೆ ಅದೆಲ್ಲವೂ ಶ್ರೀ ಜಗದ್ಗುರು ಗುರುಸಿದ್ಧೇಶ್ವರನ ಕೃಪೆ.

**ರಾಮಚರಿತ–ಮಾನಸವು ಚಿತ್ರಿಸುವ ಸಂಸ್ಕೃತಿ**

"ಜಂಗಮ ತುಲಸೀ ತರುಲಸ್ಯೆ ಆನಂದಕಾನನ ಬೇತ|
ನಾಕೀ ಕವಿತಾ ಮಂಜರೀ ರಾಮ ಭಂವರಸಲೇತ||"

---

* ("The values I have Charished in my life" ಈ ವಿಷಯ ಕುರಿತು ದಿ. ೧೯–೯–೭೫ ರಂದು ಧಾರವಾಡ ಆಕಾಶವಾಣಿ ಕೇಂದ್ರದಿಂದ ಮಾಡಿದ ಇಂಗ್ಲೀಷ ಭಾಷಣದ ಕನ್ನಡ ಅನುವಾದ.

ರಾಶಿಯ ಸುಪ್ರಸಿದ್ಧ ಪಂಡಿತರಾದ ಮಧುಸೂದನ ಸರಸ್ವತಿಯೆಂಬವರು ಸಂತ ಶಿರೋಮಣಿ ಗೋಸ್ವಾಮಿ ತುಲಸೀದಾಸರ ರಾಮಚರಿತ ಮಾನಸವನ್ನು ಓದಿ ಈ ರೀತಿ ನುಡಿದಿದ್ದಾರೆ. ಅಂದರೆ ಕಾಶಿಯೆಂಬ ಆನಂದಕಾನನದಲ್ಲಿ ತುಲಸೀದಾಸರು ಸಂಚರಿಸುವ ತುಲಸೀ ವೃಕ್ಷ. ಆ ವೃಕ್ಷದೊಳಗಿರುವ ಕವಿತಾಪುಷ್ಪ ಗುಚ್ಛಗಳು ಸುಂದರ ಹಾಗೂ ಆಕರ್ಷಕವಾದವುಗಳು. ಅವುಗಳ ಸುತ್ತಲೂ ಶ್ರೀರಾಮನೆಂಬ ಭ್ರಮರವು ನಿರಂತವೂ ಪ್ರದಕ್ಷಣೆಯನ್ನು ಹಾಕುತ್ತಿರುತ್ತದೆಂದು ರಾಮಚರಿತ ಮಾನಸದ ಮಹತ್ವವನ್ನು ವಿವರಿಸಿದ್ದಾರೆ. ಭಾರತೀಯ ಹಿಂದೀ ಸಾಹಿತ್ಯದಲ್ಲಿ "ರಾಮಚರಿತ ಮಾನಸ"ವು ಅದ್ವಿತೀಯ ಗ್ರಂಥವಾಗಿದೆ. ರಾಮಚರಿತ ಮಾನಸವು ಹೊರಬರಲು ಪುಟ್ಟ ಕಥೆಯೊಂದಿದೆ, ಉತ್ತರ ಭಾರತದಲ್ಲಿ ಸುಮಾರು ೧೫ ಅಥವಾ ೧೬ ನೆಯ ಶತಮಾನದ ಕಾಲಾವಧಿಯಲ್ಲಿ ಧರ್ಮ, ಸಂಸ್ಕೃತಿ ಕ್ಷೀಣವಾಗಿ, ಹಿಂದೂ ಜನಾಂಗದ ಭವ್ಯ ಭವಿಷತ್ತಿನ ಆಶೋತ್ತರಗಳಿಗೆ ಕಗ್ಗತ್ತಲು ಆವರಿಸಿ, ಸಾಮಾಜಿಕ, ಧಾರ್ಮಿಕ, ಕ್ಷೇತ್ರಗಳಲ್ಲಿ ನಿರಾಶೆ ತಲೆದೋರಿ ಜೀವನದ ನಾಡಿಯೇ ನಿಂತಾಗ, ಬಾಳಿನ ಉಸಿರೇ ಕಟ್ಟಿದಂತಾದಾಗ, ಕರಾಳ ಕತ್ತಲೆಯಿಂದ ಕೈಹಿಡಿದು ಬೆಳಕಿನತ್ತ ಕರೆದೊಯ್ಯುವ ಮಹಾ ವ್ಯಕ್ತಿಯೊಬ್ಬರು ಬೇಕಾಗಿತ್ತು. ಕಾವ್ಯಶ್ರೀ ಬೆಳಗಬೇಕಾಗಿತ್ತು. ಜನ ಜಾಗ್ರತಿಯನ್ನು ಮಾಡಬೇಕಾಗಿತ್ತು, ಮಲಗಿದವರನ್ನು ಎಚ್ಚರಿಸಬೇಕಾಗಿತ್ತು. ಧರ್ಮ ಸಂದೇಶವನ್ನು ಬೀರಬಲ್ಲ ಮಹಾಶಕ್ತಿ ಸಂಪನ್ನ, ಮಹಾಮಹಿಮನ ಉದಯವಾಗಬೇಕಾಗಿತ್ತು. ಕಲಾಕೌಶಲ್ಯ ಧನ್ವಂತರಿಯ ಆವಶ್ಯಕವಿತ್ತು. ಹಿಂದೂ ಮಹಾವೃಕ್ಷಕ್ಕೆ ಹತ್ತಿದ್ದ ಕೀಡಿ ರೋಗವನ್ನು ಕಂಡು, ಅದನ್ನು ಕಳೆಯಲು ಆ ವೃಕ್ಷದ ಬೇರಿಗೆ ಪರಿಶುದ್ಧ ಜಲವನ್ನೀಡಲು ಮಹಾಕವಿ ಪುಂಗವರಾದ ಗೋಸ್ವಾಮಿ ತುಲಸೀದಾಸರು ಪ್ರಯಾಗದ ಹತ್ತಿರವಿರುವ ಬಾಂದಾ ಜಿಲ್ಲೆಯ ರಾಜಾಪುರ ಗ್ರಾಮದಲ್ಲಿ ಸರಯೂ ಬ್ರಾಹ್ಮಣ ಕುಟುಂಬವೊಂದರಲ್ಲಿ ವಿಕ್ರಮ ಸಂವತ್ಸರ ೧೫೫೪ ಶ್ರಾವಣ ಶುಕ್ಲ ಸಪ್ತಮಿಯ ದಿನದಂದು ಜನ್ಮ ತಾಳಿದರು. ಬಹು ಪರಿಶ್ರಮದಿಂದ ಅಯೋಧ್ಯೆಯಲ್ಲಿ ವಿದ್ಯಾಧ್ಯೆಯನ ಮಾಡಿ, ಶಾಸ್ತ್ರ ಪರಿಣತರಾದರು. ವಿವಾಹವಾದ ಕೆಲವು ದಿನಗಳಲ್ಲಿಯೇ ವೈರಾಗ್ಯವು ತಲೆದೋರಿ ದೇಶ ಪರ್ಯಟನ ಮಾಡಿ, ಹಲವು ಬಗೆಯ ಅನುಭವಗಳನ್ನು ಪಡೆದು ಕಾಶಿಗೆ ಬಂದು ವಾಸಿಸುತ್ತಿರುವಾಗ ಈಶ್ವರನು ಜನಜಾಗ್ರತಿಗಾಗಿ ಜನಭಾಷೆಯಿಂದ ಸುಲಲಿತ ಹಿಂದೀ ಭಾಷೆಯಲ್ಲಿ ಸಾಹಿತ್ಯರಚನೆ ಮಾಡೆಂದು ಕನಸಿನಲ್ಲಿ ಆದೇಶವಾದೊಡನೆಯೇ ಅಯೋಧ್ಯೆಗೆ ಬಂದು "ಶ್ರೀರಾಮಚರಿತ ಮಾನಸ" ಎಂಬ ಬೃಹದ್ಗ್ರಂಥವನ್ನು ಬರೆದು ಕಾಶಿಯ ವಿಶ್ವನಾಥನಿಗೆ ಅರ್ಪಿಸಿದರು. ನಂತರ ಅದಕ್ಕೆ "ಸತ್ಯಂ–ಶಿವಂ–ಸುಂದರಂ" ಎಂದು ವಿಶ್ವನಾಥನು ಅಂಕಿತ ಹಾಕಿದನೆಂದು ಇತಿಹಾಸದಿಂದ ತಿಳಿದುಬರುತ್ತದೆ. ತುಲಸೀದಾಸರು ಬರೆದ ೧೨ ಗ್ರಂಥಗಳಲ್ಲಿ "ರಾಮಚರಿತ ಮಾನಸ"ವು ಸರ್ವೋತ್ಕೃಷ್ಟ ಗ್ರಂಥವಾಗಿದೆ. ಅನುಭವಸಾರವೇ ಹರಿದು ಬಂದಿದೆ. ಹಿಂದೂ ಧರ್ಮದ ಮುನ್ನಡೆಗೆ ರಾಜಮಾರ್ಗವನ್ನು ತೋರಿಸವೆ ವ್ಯಕ್ತಿತ್ವ ವಿಕಾಸಕ್ಕೆ ದಾರಿದೀಪವಾಗಿದೆ. ಅಂತರಂಗ ಬಹಿರಂಗ ಸೌಂದರ್ಯಗಳನ್ನು

ಬೆಳೆಸಿಕೊಳ್ಳಲು ಸಾಧನವಾಗಿದೆ. ರಾಮಚರಿತ ಮಾನಸವು ಹಿಂದೀ ಕಾವ್ಯ ಕಾಸಾರದಲ್ಲಿ ಅನುಪಮ ಕೃತಿರತ್ನವೆನಿಸಿದೆ. ವೇದಾಗಮೋಪನಿಷತ್ತಿನ ಸಾರವನ್ನೇ ಭಟ್ಟಿಯಂತೆ ಇಳಿಸಿದ ಉತ್ತರ ಭಾರತದ ಸ್ಫೂರ್ತಿದಾಯಕ ಗ್ರಂಥವೆನಿಸಿಕೊಂಡಿದೆ.

ತುಲಸೀದಾಸರೇ ಒಂದೆಡೆ ಈ ರೀತಿ ಹೇಳಿದ್ದಾರೆ.

"ನಾನಾ ಪುರಾಣ ನಿಗಮಾಗಮ ಸಮ್ಮತಂ ಯದ್। ರಾಮಾಯಣೇ
ನಿಗದಿತಂ ಕ್ವಚಿದನ್ಯತೋಽಪಿ। ಸ್ವಾಂತಃ ಸುಖಾಯ ತುಲಸೀ
ರಘುನಾಥ ಗಾಥಾ। ಭಾಷಾ ನಿಬಂಧಮತಿ ಮಂಚುಲ ಮಾತನೋತಿ॥"

ರಾಮ ಕಥೆಯನ್ನು ಹೆಚ್ಚಾಗಿ ಸಂಸ್ಕೃತ ವಿದ್ವಾಂಸರು, ಸಂಸ್ಕೃತದಲ್ಲಿಯೇ ಅನೇಕ ಗ್ರಂಥಗಳನ್ನು ಬರೆದು ಕೇವಲ ಸಂಸ್ಕೃತಜ್ಞರಿಗೇ ಉಪಯೋಗವಾಗುತ್ತಿದ್ದರಿಂದ ಅದನ್ನರಿತುಕೊಂಡು ಜನಸಾಮಾನ್ಯರಿಗೂ ತಿಳಿಯುವಂತೆ ಉತ್ತರ ಭಾರತ ಭಾಷೆಯಲ್ಲಿ (ಹಿಂದೀ) ಪ್ರಚಲಿತವಿರುವ, ನಾನಾ ಪುರಾಣ, ನಿಗಮಾಗಮದ ಸಾರವನ್ನೇ ಈ ರಾಮಚರಿತ ಮಾನಸದಲ್ಲಿ ಬರೆದಿದ್ದೇನೆಂದು ತುಲಸೀ ದಾಸರು ತಿಳಿಸಿದ್ದಾರೆ. ರಾಮಚರಿತ ಮಾನಸವನ್ನು "ರಾಮ ಭಗತಿ ಸುರಸರಿ" ಹೇಳಿ ರಾಮಭಕ್ತಿಯ ಅಗಾಧ ಸಿಂಧುವಿನಲ್ಲಿ ಪ್ರವೇಶಿಸುತ್ತಾರೆ. ತುಲಸೀದಾಸರ ಕಾವ್ಯಗಳು ಪ್ರಭೂತ–ಭಾವ ಸಾಮಗ್ರಿ, ಅನುಪಮ ಅಭಿವ್ಯಕ್ತಿ ಪದ್ಧತಿ, ಸಮೃದ್ಧ ಭಾಷಾ ಶೈಲಿ, ಪ್ರಚುರ ಕಲ್ಪನಾ ಸೃಷ್ಟಿ, ಅದ್ಭುತ ವಸ್ತು ವಿನ್ಯಾಸ, ಮತ್ತು ಉತ್ಕೃಷ್ಟ ಕಲಾ ಕೌಶಲ್ಯದಿಂದ ಹಿಂದಿ ಕಾವ್ಯದಲ್ಲಿ ಸರ್ವ ಶ್ರೇಷ್ಠ ಗ್ರಂಥವೆಂದು ಪಂಡಿತರಿಂದ ಪರಿಗಣಿಸಲ್ಪಟ್ಟಿದೆ. ರಾಮಚರಿತ ಮಾನಸದಲ್ಲಿಯಂತೂ ಎಲ್ಲ ದಾರ್ಶನಿಕ ತತ್ತ್ವಗಳ ಪೂರ್ಣತೆಯನ್ನು ಕಾಣುತ್ತೇವೆ. ಜ್ಞಾನ ಭಕ್ತಿಗಳ ಕ್ರಿಯಾಸಾರವಿದೆ. ಭಕ್ತಿ ಪ್ರವಾಹವಂತೂ ನಿರರ್ಗಳವಾಗಿ ಹರಿದಿದೆ. ಭಾಷೆಗಿಂತಲೂ ಭಾವಕ್ಕೆ ಹೆಚ್ಚು ಮಹತ್ವ ನೀಡಿದ್ದಾರೆ. "ಅರ್ಥ ಅಮಿತ ಆಖರ ಅತಿಥೋರೆ" ಎಂದು ತುಳಸೀದಾಸರೇ ತಿಳಿಸಿದ್ದಾರೆ. ಇಲ್ಲಿ ಕಾವ್ಯ ಸೌಂದರ್ಯವನ್ನು ಮನಗಂಡ ರಸಸ್ವಾದನೆಯನ್ನು ಅನುಭವಿಸುತ್ತೇವೆ. ರಾಮಚರಿತ ಮಾನಸದಲ್ಲಿ ಧ್ವನಿ, ವಕ್ರೋಕ್ತಿ, ಅರ್ಥ, ಧರ್ಮ, ರಸ, ಭಾವ, ಭಾಷೆ, ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಶಾಂತ ಮುಂತಾದವುಗಳ ಸಾರ ಸರ್ವಸ್ವ ಅಡಕವಾಗಿದೆ. ರಾಮಚರಿತ ಮಾನಸದ ಕವಿಯ ಧ್ಯಾನವು ಹೆಚ್ಚಾಗಿ ರಾಮನ ಮೇಲೆ ಹರಿದಿದೆ. ರಾಮಚರಿತ್ರೆಯೇ ಇದರ ಕಥಾವಸ್ತುವಾದರೆ, ವಿಮಲ ವೈರಾಗ್ಯ, ಪ್ರಶಾಂತ ಶಾಂತ ರಸವೇ ಇದರ ಪ್ರತಿಪಾದ್ಯವಾಗಿದೆ. ಇಲ್ಲಿ ಚಮತ್ಕಾರ ಪೂರ್ಣ ಸಂಭಾಷಣೆಯ ವೈವಿಧ್ಯವೂ ಸ್ವಾರಸ್ಯಕರವಾಗಿದೆ. ಉಪಮೆ, ಉತ್ಪ್ರೇಕ್ಷೆಗಳನ್ನು ಸಹಜ ಅಲಂಕಾರದೊಡನೆ ಸಮಾವೇಶ ಮಾಡಿದ್ದಾರೆ. ಪ್ರಕೃತಿ ಚಿತ್ರಣದಲ್ಲಿ ಕವಿಯದು ಸಿದ್ಧಹಸ್ತವಾಗಿದೆ. ತುಲಸೀದಾಸರು ನಿಸರ್ಗ ಸಿದ್ಧ ಪ್ರತಿಭಾಪೂರ್ಣ ಕ್ರಾಂತಿದರ್ಶಿ ಕವಿಗಳಾಗಿದ್ದರು. ಹಿಂದೀ ಸಾಹಿತ್ಯ ಗಗನದಲ್ಲಿ ಬೆಳಗುವ ಭಾಸ್ಕರ. ಯಾವ ಸಾಹಿತ್ಯದಿಂದ ದೇಶ, ಜಾತಿ, ಧರ್ಮ ಮತ್ತು ಸಮಾಜದ ಕಲ್ಯಾಣವಾಗುವುದಿಲ್ಲವೋ ಆ ಸಾಹಿತ್ಯ ಇದ್ದೂ ಇಲ್ಲದಂತೆ

ವ್ಯರ್ಥವಾಗುವುದು. ಸಮಯಕ್ಕೆ ತಕ್ಕಂತೆ ದೇಶದ ಉನ್ನತಿಯ ಬಗ್ಗೆ, ಪ್ರಭಾವಪೂರ್ಣ ಸಾಹಿತ್ಯವನ್ನು ರಚಿಸಲಾರದ ಕವಿಯು ಬಲವಿಲ್ಲದ ಶರೀರದಂತೆ ಆ ಸಾಹಿತ್ಯ ನಿರರ್ಥಕ ವಾಗುವುದು. ಚರಿತ್ರ ಚಿತ್ರಣ, ರಸನಿರೂಪಣೆ, ಪ್ರಕೃತಿ ವರ್ಣನ, ಮಾಯಾವಾದ.... ಸ್ಥಾಪನೆ, ಲೋಕ ಸಂರಕ್ಷಣೆ ಆದ್ಯೋಪಾಂತ ಕಥೆಯ ಆಕರ್ಷಕ ಇವೆಲ್ಲವುಗಳು ಮಹಾ ಕಾವ್ಯರಚನೆಗೆ ಬೇಕಾದ ಮುಖ್ಯಾಂಶಗಳು. ರಾಮಚರಿತ ಮಾನಸದಲ್ಲಿ ಈ ಎಲ್ಲ ತತ್ತ್ವ ಗಳ ಪರಿಪೂರ್ಣತೆಯನ್ನು ಕಾಣುತ್ತೇವೆ.

ರಾಮಚರಿತ ಮಾನಸದಲ್ಲಿ ಜೀವನಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳು ಅಡಕ ವಾಗಿವೆ, ಯಾರಿಗೆ ಎಂತಹ ಪ್ರಶ್ನೆಗೆ ತಕ್ಕ ಉತ್ತರ ಬೇಕು, ಅದೆಲ್ಲವೂ ಇದರಲ್ಲಿ ಸಮಾವೇಶಗೊಂಡಿದೆ. ಬಂಧು ಬಾಂಧವರು ಹೇಗಿರಬೇಕು? ಮಕ್ಕಳು ಹೇಗಿರಬೇಕು? ತಂದೆ-ತಾಯಂದಿರು ಹೇಗಿರಬೇಕು? ರಾಜರು ಮತ್ತು ಪ್ರಜರ ಸಂಬಂಧ ಎಂತಿರಬೇಕು? ಶತ್ರು ಹಾಗೂ ಮಿತ್ರರೊಡನೆ ವ್ಯವಹಾರವನ್ನು ಹೇಗಿಟ್ಟಿರಬೇಕು? ಸ್ವಾಮಿ ಮತ್ತು ಸೇವಕರ ಸಂಬಂಧ ಎಂತಿರಬೇಕು? ದಾಂಪತ್ಯ ಜೀವನ ಹಾಗೂ ಪಾರಿವಾರಿಕ ಜೀವನ ವನ್ನು ಯಾವ ತೆರನಾಗಿ ಇಟ್ಟುಕೊಂಡಿರಬೇಕು? ಗುರುಹಿರಿಯರೊಡನೆ ಯಾವ ರೀತಿ ನಡೆಯಬೇಕು? ಇವೆಲ್ಲ ವಿಷಯಗಳನ್ನು ತುಲಸೀದಾಸರು ಸುಮನೋಹರವಾಗಿ ಅರ್ಥ ಗಾಂಭೀರ್ಯದೊಡನೆ ಬಿತ್ತರಿಸಿ, ಜೀವನ ಸಮಸ್ಯೆಗಳನ್ನು ಬಿಡಿಸಿದ್ದಾರೆ. ಜೊತೆಗೆ ಅಂದಿನ ಕಾಲದ ಸಾಮಾಜಿಕ, ಧಾರ್ಮಿಕ, ನೈತಿಕ, ರಾಜಕೀಯ ಜೀವನದ ಎಲ್ಲ ಗಂಭೀರ ಸಮಸ್ಯೆಗಳಿಗೂ ಸಹ ಉತ್ತರ ನೀಡಿದ್ದಾರೆ, ರಾಮಚರಿತ ಮಾನಸವು ಸರ್ವದೇಶಿಕ, ಹಾಗೂ ಸರ್ವಕಾಲಿಕ.

ಲಂಕಾಪುರಿಯಲ್ಲಿ ಒಂದು ಸಲ ರಾಮಲಕ್ಷ್ಮಣ ರಾವಣನೊಡನೆ ಯುದ್ಧ ಪ್ರಾರಂಭ ಮಾಡುವಾಗ ರಾವಣನಲ್ಲಿರುವ ಅಸ್ತ್ರ-ಶಸ್ತ್ರಗಳಿಂದ ಸುಸಜ್ಜಿತ ವಿಶಾಲ ಸೈನ್ಯವನ್ನು ನೋಡಿ ವಿಭೀಷಣನು "ನಾಥ ನರಥ ನಹಿ ತನ ಪವತ್ರಾನಾ। ಕೇಡಿ ಬಿಧಿ ಜಿತಬ ಬೀರಬಲವಾನಾ" ಇಂತು ಸಂದೇಹಾಸ್ಪದ ಮಾತನ್ನಾಡಿದಾಗ ಅವಕ್ಕೆ ರಾಮನು ನಮ್ಮಲ್ಲಿ ಯಾವ ಹೊರಗಿನ ಬಲಗಳಿಲ್ಲದಿದ್ದರೂ ನೈತಿಕ ಬಲವೊಂದಿರುವದರಿಂದ ಹೆದರುವ ಕಾರಣವಿಲ್ಲವೆಂದು ಹೇಳುತ್ತಾನೆ.

"ಸೌರಜ ಧೀರಜ ತೇ ಹಿರಥ ಚಾಕಾ। ಸತ್ಯ ಶೀಲ ದೃಢಧ್ವಜಾ ಪತಾಕಾ।
ಬಲವಿವೇಕ ದಮ ಪರಹಿತ ಘೋರೆ। ಕ್ಷಮಾ ದಯಾ ಸಮತಾರಜು ಜೋರೇ॥
ಈಸ ಭುಜನು ಸಾರಥೀ ಸುಜಾನಾ। ವಿರತಿ ಚರ್ಮ ಸಂತೋಷ ಕೃಪಾನಾ।
ದಾನ ಪರಸ ಬುಧಿ ಸಕ್ತಿ ಪ್ರಚಂಡಾ। ಬರಬಿಗ್ಯಾನ ಕಠಿಣ ಕೋದಂಡಾ।
ಅಮಲ ಅಚಲ ಮನತ್ರೋನ ಸಮಾನ। ಸಮಜಮನೀಯಮ ಸಿಲೀಮು ಖನಾನಾ।
ಕವಚ-ಅಭೇದ ವಿಪ್ರಗುರು ಪೂಜಾ। ಯಹಿಸಮ ವಿಜಯ ಉಪಯನ ದೂಜಾ।
ಸಖಾ, ಧರ್ಮ ಮಯ ಅಸರಥ ಜಾಕೆ ಜೀತನ ಕಹೆ ನಾ ಕಲಹುರಿಪುತಾಕೆ॥"

ಅಂದರೆ ಯಾವ ರಥದಲ್ಲಿ ಶೌರ್ಯ ಮತ್ತು ಧೈರ್ಯದ ಗಾಲಿಗಳನ್ನು ಜೋಡಿಸಿದ್ದಾರೋ ಎಲ್ಲಿ ಸತ್ಯ ಮತ್ತು ಶೀಲದ ಧ್ವಜವು ಹಾರಾಡುತ್ತದೆಯೋ, ಎಲ್ಲಿ ಬಲ, ಜ್ಞಾನ, ಧರ್ಮ ಮತ್ತು ಪರಹಿತದ ಕುದುರೆಗಳನ್ನು ಕ್ಷಮಾ ಮತ್ತು ದಯೆಯ ಹಗ್ಗಗಳಿಂದ ಹಿಡಿದಿದ್ದಾರೋ, ವೈರಾಗ್ಯದ ಢಾಲು, ಸಂತೋಷದ ಕತ್ತಿ, ದಾನದ ಕುಠಾರ, ಬುದ್ಧಿಶಕ್ತಿಯಿಂದ ಕೂಡಿದ ಶ್ರೇಷ್ಠ ವಿಜ್ಞಾನದ ಧನಸ್ಸು, ಸುಯಮ ಮತ್ತು ನಿಯಮಗಳ ಬಾಣ ನಿರ್ಮಲ ಸ್ಥಿರ ಮನಸ್ಸಿನಿಂದ ಗುರುಜನ ಪೂಜಾರೂಪೀ ಅಭೇದ್ಯ ಕವಚದ ನಾನಾ ಅಸ್ತ್ರ-ಶಸ್ತ್ರಗಳಿಂದ ಸುಸಜ್ಜಿತನಾಗಿ ಎಲ್ಲ ಈಶ್ವರ ಭಜನರೂಪಿ ಚತುರ ಸಾರಥಿಯು ಕುಳಿತಿದ್ದಾನೆಯೋ, ಅಂಥವನ ರಥಕ್ಕೆ ಎಂದಿಗೂ ಅಪಾಯ ತಟ್ಟದು. ಅಷ್ಟೇ ಅಲ್ಲ ಈ ಪ್ರಪಂಚದಲ್ಲಿಯೇ ಇವನನ್ನು ಗೆಲ್ಲಲು ಯಾರಿಂದಲೂ ಸಾಧ್ಯವಾಗದು ಎಂದುದಾಗಿ ಅಂತರಂಗ ಶುದ್ಧಿಯ ಕರ್ತೃತ್ವ ಶಕ್ತಿಯ ಮಹಿಮೆಯನ್ನು ರಾಮಚರಿತ ಮಾನಸದಲ್ಲಿ ಸುಂದರವಾಗಿ ವರ್ಣಿತವಾಗಿದೆ. ರಾಮರಾಜ್ಯದ ರಾಜ ನೀತಿಕ ಆದರ್ಶವೂ ಸುಸ್ಪಷ್ಟವಾಗಿ ವಿವರಿಸಲಾಗಿದೆ. ಶೀಲ ಸಹೃದಯತೆ, ಸಚ್ಚಾರಿತ್ರತೆ, ನ್ಯಾಯ ನಿಷ್ಠುರತೆ, ಪ್ರಜರ ದುಃಖವೇ ತನ್ನ ದುಃಖವೆಂದು ಬಗೆದು ಅವರ ಹಿತಚಿಂತನ ಮಾಡುವುದು ಇವುಗಳೇ ರಾಜನಲ್ಲಿರಬೇಕಾದ ಮುಖ್ಯ ಗುಣಗಳು. ಅಂತೆಯೇ ರಾಷ್ಟ್ರಪಿತ ಮಹಾತ್ಮಾ ಗಾಂಧಿಯವರು ಸಹ ಈ ಆದರ್ಶವನ್ನು ಚಾಚೂ ತಪ್ಪದಂತೆ ಪರಿಪಾಲನೆ ಮಾಡಿದ್ದರಿಂದಲೇ ನಮ್ಮೆಲ್ಲರ ನೆನಹಿನಂಗಳದಲ್ಲಿ ಕುಳಿತಿದ್ದಾರೆ. ಬಾಪೂಜಿಯವರ ಹಿಂದೆ-ಸ್ವರಾಜ್ಯದ ಕಲ್ಪನೆಯ ಆಧಾರವು ಇದೇ ಭದ್ರ ಬುನಾದಿಯ ಮೇಲೆ ಸ್ಥಾಪಿತವಾಗಿತ್ತು.

ರಾಮರಾಜದ ಸಾಮಾಜಿಕ-ಆದರ್ಶವನ್ನು ತುಲಸೀದಾಸರು ರಾಮಚರಿತ ಮಾನಸದಲ್ಲಿ ಸುಂದರವಾಗಿ ಹೆಣೆದಿದ್ದಾರೆ. ಯಾವಾಗ ಸ್ವಾರ್ಥತೆ ಮತ್ತು ಅನುಶಾಸನ ಹೀನತೆಯಿಂದ ಸಮಾಜದಲ್ಲಿ ಅವ್ಯವಸ್ಥೆ ಉಂಟಾಗಿ, ಅನ್ಯಾಯ, ಅನಾಚಾರ ಹೆಚ್ಚಾಗಿ ಧರ್ಮ, ಸತ್ಯ, ನ್ಯಾಯದ ಭಾವನೆಗಳು ಶಿಥಿಲವಾಗಿ, ಕರ್ತವ್ಯಚ್ಯುತರಾದಲ್ಲಿ ಅವೆಲ್ಲವುಗಳನ್ನು ಸುಧಾರಿಸಿ ಪುನರುಜೀವಿತ ಮಾಡುವ ಮಹಾ ಕಾರ್ಯವು, ಸಮಾಜದ ಪ್ರಮುಖ ವ್ಯಕ್ತಿಗಳು ಹಾಗೂ ರಾಜಕೀಯ ರಂಗದವರ ಮೇಲೆ ಯಾವ ತೆರನಾಗಿರಬೇಕೆಂದು ನಿಯಮಬದ್ಧದೊಡನೆ ಅರುಹಿದ್ದಾರೆ. ಸಾಮಾಜಿಕ ಜೀವನದಲ್ಲಿ ಅಶಾಂತಿಯು ಉದ್ಭವವಾಗದಂತೆ ನೋಡಿಕೊಳ್ಳುವದೇ ರಾಮಚರಿತ ಮಾನಸದಲ್ಲಿ ಕಾಣುವ ಮೊದಲು ಮೆಟ್ಟಿಲು. ತುಲಸೀದಾಸರು ರಾಮರಾಜ್ಯದ ಆದರ್ಶವನ್ನು ಹೇಳುತ್ತ ನೈತಿಕ ಜೀವನಕ್ಕೆ ಹೆಚ್ಚು ಮಹತ್ವ ನೀಡಿದ್ದಾರೆ ಮಾನವನ ಪ್ರಗತಿಗೆ ನೀತಿಯೇ ಮೈಲುಗಲ್ಲು. ನೀತಿಯಿಲ್ಲದಿರೆ ಸಂಸ್ಕೃತಿಯು ಉಳಿಯಲಾರದು ಸಂಸ್ಕೃತಿಯ ಪುನರುತ್ಥಾನಕ್ಕೆ ನೀತಿಯೇ ಮೂಲಾಧಾರ. ನೀತಿಯು ಜೀವನದಲ್ಲಿ ಹಾಸು ಹೊಕ್ಕಾಗಿರಬೇಕು. ನಡೆ-ನುಡಿಯಲ್ಲಿ ರಾಜ್ಯವಾಳುವಲ್ಲಿ ನೈತಿಕತೆಯ ಬಂಧುರತೆಯು ಚನ್ನಾಗಿದ್ದರೆ ಆ ರಾಜ್ಯ ಸುಖಸಮೃದ್ಧಿಯಿಂದ ಕೂಡಿರುತ್ತದೆ. ರಾಮನ ರಾಜ್ಯ ಆದರ್ಶವಾಗುಳಿಯಬೇಕಾದರೆ ರಾಮನ ಕರ್ತೃತ್ವ ಶಕ್ತಿ, ಆಧ್ಯಾತ್ಮ

ಶಕ್ತಿಯೇ ಮೂಲಕಾರಣವಾಗಿದೆ. ರಾಮನು ೧೪ ವರ್ಷ ವನವಾಸ ಮಾಡಿ ಕಠಿಣ ತಪಸ್ಸನ್ನಾಚರಿಸಿದ್ದುದರ ಪ್ರಭಾವವು ರಾಜ್ಯದ ಬೆಳಕಿಗೆ ಕಾರಣವಾಯಿತು. ಗುರು ಹಿರಿಯರ ವಚನ ಪಾಲನೆಯನ್ನು ಮಾಡಿ ಹೊರಗಿನ ಸಂಪತ್ತಿನ ವೈಭವಕ್ಕಿಂತಲೂ, ಆತ್ಮ ಸಂಪತ್ತಿನ ವೈಭವವು ಎಲ್ಲಕ್ಕಿಂತಲೂ ಮಿಗಿಲೆಂದು ಪ್ರಪಂಚಕ್ಕೆ ತೋರಿಸಿ ಕೊಟ್ಟನು. ರಾಮ ರಾಜ್ಯದ ನೈತಿಕ ಪಕ್ಷವು ಮಾನವೀಯ ಆದರ್ಶದ ಆಧಾರದ ಮೇಲೆ ಮರ್ಯಾದಿತವಾಗಿ ರೂಪಗೊಂಡಿತ್ತು. ಮಾನವ ಧರ್ಮದ ಇಹತಾರ್ಕಿಕ ಪಕ್ಷವೇ ನೀತಿಯೆಂದು ಪರಿಗಣಿಸ ಲ್ಪಟ್ಟಿತ್ತು. ರಾಮನು ಸೀತೆಯನ್ನು ಅಗ್ನಿ ಪರೀಕ್ಷೆಗೆ ಗುರಿ ಮಾಡಿ, ಆಕೆಯ ಸಚ್ಚಾರಿತ್ರ್ಯದ ಮಹಿಮೆಯನ್ನು ತೋರಿಸಿದ. ಮನೋಧೈರ್ಯ ಆತ್ಮಾತ್ಯಾಗದ ಉದಾ ಹರಣೆ, ಸಂಸಾರದ ಇತಿಹಾಸದಲ್ಲಿಯೇ ಅನ್ಯತ್ರ ದೊರೆಯುವದು ವಿರಳವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ತುಲಸೀದಾಸರ ದೃಷ್ಟಿಯಲ್ಲಿ ಸೀತೆಯು ಕೇವಲ ಸಹಧರ್ಮಿಣಿಯಾಗದೆ, ರಾಮನ ಸತ್ಯ ಹಾಗೂ ಸತ್ವಪೂರ್ಣ ಭಕ್ತೆಯಾಗಿದ್ದಳು.

ಪ್ರೀತಿ ರಾಮಸೋ ನೀತಿ ಪಥ, ಚಲಿಯ ರಾಗ ರಸಜೀತ।
ತುಲಸೀ ಸಂತನಕೆ ಮತ್ಯೆ, ಇಹೈ ಭಗತ ಕೀ ರೀತಿ।
ಸುನು ಸೀತಾ ತವನಾಮ ಸುಮಿರಿನಾರಿ ಪ್ರತಿವ್ರತ-ಕರಹಿ॥

ಇಲ್ಲಿ ಅಂದಿನ ನೈತಿಕ ಮೌಲ್ಯದ ಮಾನ್ಯತೆಯ ಮಹತ್ವವನ್ನು ಎತ್ತಿ ಹಿಡಿದಿದೆ. ರಾಮ ಚರಿತ ಮಾನಸ ಸರೋವರದಲ್ಲಿ ಇಂತಹ ನೀತಿಯ ನುಡಿ ಮುತ್ತುಗಳು ಸಾಕಷ್ಟು ತುಂಬಿವೆ.

ಹಿಂದೀ ಸಾಹಿತ್ಯದ ನಭೋ ಮಂಡಲದಲ್ಲಿ ತುಲಸೀದಾಸರಂತೆ ಶೀಲ ನಿರೂಪಣೆ ಮತ್ತು ಚರಿತ್ರ ಚಿತ್ರಣವನ್ನು ಹೃದಯಾಕರ್ಷಕವಾಗುವಂತೆ ರೂಪಿಸುವಲ್ಲಿ ಕಾಣತಕ್ಕವರು ಇಲ್ಲವೆಂದರೂ ಅಡ್ಡಿಯಿಲ್ಲ. ರಾಮಚರಿತ ಮಾನಸದೊಳಗೆ ರಾಮ, ಸೀತೆ, ಲಕ್ಷ್ಮಣ, ಭರತ, ದಶರಥ ಮತ್ತು ರಾವಣ ಮುಂತಾದವರ ಪಾತ್ರಗಳು ಮುಖ್ಯವಾಗಿದ್ದು, ಅವರವರ ವೈಯಕ್ತಿಕ ವೈಶಿಷ್ಟ್ಯದ ಜೊತೆಗೆ ಅವರ ಉಜ್ವಲ ಚರಿತ್ರ, ಅನಂತ ಶಕ್ತಿಯಿಂದೊಡ ಗೂಡಿದ ಧೀರತೆ, ಗಂಭೀರತೆ ಹಾಗೂ ಕೋಮಲತೆ ಇವೆಲ್ಲವುಗಳನ್ನು ಅವರ ಘನತೆಗೆ ಚ್ಯುತಿ ಬಾರದಂತೆ ವರ್ಣಿಸಿದ್ದಾರೆ. ಪ್ರತಿ ಶಬ್ದ ಶಬ್ದದಲ್ಲಿಯೂ, ತತ್ತ್ವ, ಭಾವ, ಹೃದಯವಂತಿಕೆ, ಮಾನವೀಯತೆ ತುಂಬಿ ತುಳುಕಿವೆ ಅಲ್ಲಿ ಚರಿತ್ರ ಸೌಂದರ್ಯದ ಸಾಕ್ಷಾತ್ಕಾರವಾಗುತ್ತದೆ.

ರಾಮಚರಿತ ಮಾನಸದಲ್ಲಿ ಲೋಕಧರ್ಮವನ್ನು ವಿಸ್ತೃತವಾಗಿ ವಿವರಿಸಲಾಗಿದೆ. ಕರ್ಮ, ಜ್ಞಾನ ಮತ್ತು ಉಪಾಸನೆ ಈ ಮೂರು ಲೋಕಧರ್ಮದ ಅವಯವಗಳಿದ್ದಂತೆ. ಮಾನವ ಜೀವನದಲ್ಲಿ ಪೂರ್ಣತೆ ಪಡೆಯಲು ಈ ಮೂರು ಆವಶ್ಯಕ, ಒಂದು ಬಿಟ್ಟು ಒಂದಿರಲು ಅಸಾಧ್ಯ, ಒಂದಕ್ಕೊಂದು ಹೊಂದಿಕೊಂಡು ನಡೆಯಬೇಕಾಗುತ್ತದೆ. ಕರ್ಮಕಾಂಡ, ಜ್ಞಾನಕಾಂಡದ ಬೆಳವಣಿಗೆಗೆ ಒಬ್ಬೊಬ್ಬರು ಕಾರಣರಾದರೆ ಕರ್ಮ, ಜ್ಞಾನ, ಉಪಾಸನೆಗಳೆಲ್ಲವೂ ಜೀವನದ ಸಿದ್ಧಿಗೆ ಬೇಕೆಂಬುವ, ಶಿವಶರಣರ ಸಿದ್ಧಾಂತವನ್ನು,

ತುಲಸೀದಾಸರ ಸಿದ್ಧಾಂತದಲ್ಲಿಯೂ ಕಾಣಬಹುದಾಗಿದೆ. ಒಟ್ಟಿನಲ್ಲಿ ರಾಮಚರಿತ ಮಾನಸವು ಪ್ರಾರಂಭದಿಂದ ಕೊನೆಯವರೆಗೆ ಲೋಕಶಾಸ್ತ್ರದ ಸಮನ್ವಯ, ಗೃಹಸ್ಥ ಹಾಗೂ ವೈರಾಗ್ಯದ ಸಮನ್ವಯ, ಭಕ್ತಿ ಮತ್ತು ಜ್ಞಾನದ ಸಮನ್ವಯ, ಭಾಷೆ ಮತ್ತು ಸಂಸ್ಕೃತಿಯ ಸಮನ್ವಯ, ನಿರ್ಗುಣ ಮತ್ತು ಸಗುಣದ ಸಮನ್ವಯ, ಕಥೆ ಮತ್ತು ತತ್ತ್ವ ಜ್ಞಾನದ ಸಮನ್ವಯ, ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ಸಮನ್ವಯ, ಪಾಂಡಿತ್ಯ ಮತ್ತು ಅಪಾಂಡಿತ್ಯದ ಸಮನ್ವಯ ಇವೆಲ್ಲವುಗಳ ಸಮರಸದಿಂದ ಕೂಡಿದ ಸಮನ್ವಯದ ಮಹಾಕಾವ್ಯವಾಗಿದೆ. ಹೃದಯವಾದ ಒದ್ಧಿವಾದದಿಂದೊಡಗೂಡಿದೆ. ರಸ ನಿರೂಪಣೆ ಯಲ್ಲಿ ರಾಮ ರಸಾಯನ ಪುಷ್ಟೀಕರವಾಗಿದೆ, ತುಷ್ಟೀಕರವಾಗಿದೆ. ವಿವಿಧತೆಯಲ್ಲಿ ಏಕತೆ ಯನ್ನು ಕಾಣುವ ಸಾಹಿತ್ಯ ಸಾಗರವಾಗಿದೆ. ಭಕ್ತಿ, ಜ್ಞಾನ, ಕರ್ಮಗಳ ತ್ರಿವೇಣಿ ಸಂಗಮವಾಗಿದೆ.

ಮಹಾತ್ಮಾ ಗಾಂಧಿಯವರಿಗೆ ಅಸಹಯೋಗ ಅಂದೋಲನದಲ್ಲಿ ನಿರತರಾದಾಗ ರಾಮಚರಿತ ಮಾನಸವು ಅವರಿಗೆ ಸತ್ಪ್ರೇರಣೆ ನೀಡಿರುವದಲ್ಲದೆ ಮಾರ್ಗದರ್ಶನ ಮಾಡಿ ತೆಂದು ಮತ್ತು ವಿಶ್ವಸಾಹಿತ್ಯದ ಉತ್ಕೃಷ್ಟ ಕೃತಿಯೆಂದು, ಪ್ರವಚನದ ಸಮಯದಲ್ಲಿ ಮೇಲಿಂದ ಮೇಲೆ ಹೇಳುತ್ತಿದ್ದರುತೆ.

"ನಹಿ ಸತ್ಯ ಸಮ ಪಾತಕ ಪೂಜಾ ಗಿರಿಸಮ ಹೋಹಿ ಕೋರ್ಟಿ ಗೂಂಜಾ"

"ಗಾಂಧೀಜೀಯವರ ಸತ್ಯ ಸಂಶೋಧನೆಗೆ ತುಲಸೀದಾಸರ ಚೌಪದಿ ತುಂಬಾ ಸಹಕಾರಿಯಾಗಿತ್ತು. ತುಲಸೀದಾಸರು ಶೈವ ಮತ್ತು ವೈಷ್ಣವರಲ್ಲಿದ್ದ ಭಿನ್ನ ಭೇದಗಳನ್ನು ತೊಲಗಿಸಲು ಪ್ರಯತ್ನ ಮಾಡಿ ಅದರಲ್ಲಿ ಸಫಲೀಭೂತರಾಗಿದ್ದ ವಿಷಯ, ಅವರ ಬಗ್ಗೆ ಬರೆದ ಆಧುನಿಕ ವಿಮರ್ಶಾತ್ಮಕ ಗ್ರಂಥಗಳಲ್ಲಿ ಪ್ರತಿಪಾದನ ಮಾಡಿದ್ದಾರೆ. ರಾಮಚರಿತ ಮಾನಸದಲ್ಲಿ ನರತ್ವದಿಂದ ದೇವತ್ವದವರೆಗೆ ಹೋಗುವ ಎಲ್ಲ ವಿಷಯಗಳ ವಿವರವನ್ನು ಚಿತ್ರಿಸಿದೆ. ಸುಸಂಸ್ಕೃತರಾಗಿ ಆತ್ಮಶಕ್ತಿಯನ್ನು ಸಂಗಟಿಸುವ ಬಗೆಯೂ ಚಿತ್ರಿಸಿದೆ. ಮಾನವ ಸ್ವಭಾವದ ಸೂಕ್ಷ್ಮ ಅಧ್ಯಯನದ ಜೊತೆಗೆ ಸಾಮಾಜಿಕ ತತ್ತ್ವಗಳನ್ನು ತಿಳಿಸ ಲಾಗಿದೆ. ಹಿಂದೀ ಸಾಹಿತ್ಯ ಕ್ಷೇತ್ರದಲ್ಲಿ ತುಲಸೀದಾಸರ ಸ್ಥಾನ ಮಹೋನ್ನತವಾಗಿದೆ, ತುಲಸೀ ವಾಣಿಯಲ್ಲಿ ಅದ್ಭುತ ಶಕ್ತಿಯು ಮನೆ ಮಾಡಿಕೊಂಡಿದೆ. ತುಲಸೀದಾಸರ ಶೈಲಿ ಮನಮೋಹಕವಾಗಿದ್ದು, ಪತಿತರನ್ನು ಪಾವನಗೊಳಿಸುತ್ತದೆ. ರಾಮಚರಿತ ಮಾನಸದ ಒಳಗೆ ಭಾವ ವೈಭವ ತುಂಬಿದೆ. ಆತ್ಮ ಪ್ರಕಾಶ ಬೆಳಗಿದೆ. ಹಿಂದೀ ಜನತೆಯ ಹೃದಯದ ಮೇಲೆ ಅಧಿಕ ಅಧಿಕಾರವಿಟ್ಟಿರುವ ಮಹಾಕವಿಯೆಂದರೆ ಭಕ್ತಿ ಚೂಡಾಮಣಿ ಗೊಸ್ವಾಮಿ ತುಲಸೀದಾಸರೊಬ್ಬರೆಂದರೆ ಅತಿಶಯೋಕ್ತಿಯಾಗದು.

ಇದುವೆ ರಾಮಚರಿತ ಮಾನಸವು ಚಿತ್ರಿಸುವ ಸಂಸ್ಕೃತಿ.

---

ಧಾರವಾಡ ಆಕಾಶವಾಣಿ ಕೇಂದ್ರದಿಂದ ದಿ. ೬–೧೧–೭೩ರಂದು ಪ್ರಸಾರವಾದ ಭಾಷಣ.

**ಪರಿತಪಿಸುತ್ತಿರುವ ಜೀವಿಗೆ ಪರಿಹಾರವುಂಟೆ?**

"ಮೋಹದ ಕಾಳ್ಗಿಚ್ಚಿನಲಿ ಬಿದ್ದು, ಪಂಚೇಂದ್ರಿಯಂಗಳು
ಕಳವಳಿಸುತ್ತಿಹವು, ನೋಡಾ! ಸಂಮೋಹ ಭೂತವು ಬೆಂಬತ್ತಿ
ದಟ್ಟಡವಿಗೆ ದಬ್ಬುತ್ತಿಹುದು ನೋಡಾ! ವ್ಯಾಮೋಹ ಶಾರ್ದೂಲವು
ಬಾಯ್-ದೆರೆದು ನಿಂತು ನುಣ್ಣೆನ್ನ ಬಾಳನ್ನು ನುಂಗುತ್ತಿಹುದು ನೋಡಾ!
ಇದು ಕಾರಣ ಬಂದ ಕ್ಲೇಶಂಗಳನಳಿಸಿ ಎನ್ನನುಳುಹಿಕೊಳ್ಳಾ
ಭೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ."

ಸಂಸಾರವೆಂಬುದೊಂದು ಕಾಡಾರಣ್ಯ ಈ ಕಾಡಾರಣ್ಯದಲ್ಲಿದ್ದು ಮೋಹದ ಕಾಳ್ಗಿಚ್ಚಿನಲ್ಲಿ ಬಿದ್ದು ಈ ಜೀವಿಯು ಒದ್ದಾಡುತ್ತಿದ್ದಾನೆ, ನಿಜ ಶಾಂತಿಯನ್ನು ಮರೆತು, ಮದ ಮಾತ್ಸರ್ಯದೊಡನೆ ಬೆರೆತು, ಅಂತಸ್ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಿದ್ದಾನೆ. ಅವಿದ್ಯೆ, ಅಸ್ಮಿತ, ರಾಗ, ದ್ವೇಷ, ಅಭಿನಿವೇಶ, ಈ ಪಂಚಕ್ಲೇಶಗಳಲ್ಲಿ ಹಾಗೂ ಆಧ್ಯಾತ್ಮಿಕ, ಆದಿ ಭೌತಿಕ, ಆದಿ ದೈವಿಕ ಈ ತಾಪತ್ರಯಂಗಳಲ್ಲಿ ಮುಳುಗಿ ನುಣ್ಣನ ಬಾಳನ್ನು ಹಾಳು ಮಾಡಿಕೊಳ್ಳುತ್ತಾನೆ. ಬೆಳಕಿನ ದಾರಿಕಾಣದೆ ಕುರುಡನಂತೆ ಅತ್ತಿಂದಿತ್ತ ಇತ್ತಿಂದತ್ತ ತಿರುಗುವದೇ ಅವನ ಜೀವನವಾಗಿದೆ. ನಿಜ ಸುಖವು ಕನಸಿನ ಗಂಟಾಗಿದೆ. ಈ ಲೋಕದಲ್ಲಿ ಸುಖದ ಹಿಂದೆಯೇ ದುಃಖವು ಅವಿತು ಕೊಂಡಿದೆ. ತಿರುಗುವ ಚಕ್ರಗಳಿದ್ದಂತೆ, ರಾತ್ರಿ ಹಗಲುಗಳಿದ್ದಂತೆ, ಏರಿಳಿತಗಳು ಮನುಷ್ಯನಿಗೆ ಬರುವದು ಸ್ವಾಭಾವಿಕವಾಗಿದೆ. ಸುಖ ದುಃಖಗಳ ಬೆರಕೆಯೇ ಈ ಲೋಕವಾಗಿದೆ. ಸುಖದ ನಂತರ ದುಃಖ, ದುಃಖದ ನಂತರ ಸುಖ, ಇದು ಸೃಷ್ಟಿಯ ನಿಯಮವಾಗಿದೆ. ದುಃಖದ ಮಡುವಿನಲ್ಲಿ ಬಿದ್ದ ಮನುಷ್ಯನಿಗೆ ಅದಾವ ಆದರ್ಶದ ವಿಚಾರಗಳೂ ಅವನ ತಲೆಯಲ್ಲಿ ಸುಳಿಯವು. ಕೆಸರಿನಲ್ಲಿ ಬಿದ್ದ ಪಶುವಿನಂತೆ ಅವನ ಗತಿಯಾಗುವುದು. ಮತಿಭ್ರಂಶನಾಗಿ ಅಜ್ಞಾನದ ಕತ್ತಲೆಯಲ್ಲಿ ಹುಚ್ಚನಂತೆ ತಿರುಗುತ್ತಾನೆ. ಆತನಿಗೆ ನಿಶ್ಚಿಂತೆಯಿಲ್ಲ, ನಿರಾಳವಿಲ್ಲ, ಭಾವಶುದ್ಧಿಯಿಲ್ಲ, ಸಂಸಾರದ ಕಾಳಕೂಟವನ್ನುಂಡು ಪರಿತಪಿಸುತ್ತಿದ್ದಾನೆ. ಈ ಮಾನವನು ಮರವೆಯ ಮನೆಯೊಳಗಿದ್ದು, ಅರಿವನ್ನು ದೂರೀಕರಿಸಿ, ಸಂಸಾರ ಸಾಗರದಲ್ಲಿ ತೇಲಿ, ವಿಷಯ ಸುಖವನ್ನು ಅನುಭವಿಸುತ್ತಾ, ವಿಷಕಂಠನನ್ನು ಮರೆಯುತ್ತಾನೆ. ದೋಷ ದೃಷ್ಟಿಯಲ್ಲಿ, ಜೀವನವನ್ನು ಸಾಗಿಸಿ, ದ್ವೇಷವನ್ನು ಸಾಧಿಸುತ್ತಾನೆ. ವಾಸ್ತವ ಅವಾಸ್ತವಗಳ ಕಲಬೆರಕೆಯಲ್ಲಿದ್ದು ಬಹುದೂರ ವಿಶಾಲ ದೃಷ್ಟಿಯನ್ನು ಬಿಟ್ಟು ಸಂಕುಚಿತ ಸಂಕೋಲೆಯಲ್ಲಿ ಸಿಲುಕಿ, ಬುದ್ಧಿವಂತಿಕೆಯ ಭ್ರಮೆಯಲ್ಲಿ ಬಿದ್ದು, ಅದರಾಚೆಯನ್ನು ನೋಡದೆ, ತೊಳಲಿ ಬಳಲುತ್ತಾನೆ. ಹೆಜ್ಜೆ ಹೆಜ್ಜೆಗೂ ಸ್ವಾರ್ಥಿಯಾಗಿ ಮತ್ತೊಬ್ಬರನ್ನು ತುಳಿಯುತ್ತ, ನಿಸ್ವಾರ್ಥತೆಯ ಕ್ಷೇಮಕಾರಿಯ ಅತೀತ ಶಕ್ತಿಯನ್ನು ಮರೆತು, ಬಾಳೆಲ್ಲವನ್ನು ಗೋಳಿನ ರಾಶಿಯನ್ನಾಗಿ ಮಾಡಿಕೊಳ್ಳುತ್ತಾನೆ. ಈ ಪ್ರಕಾರ ಆಶಾವಾದ, ನಿರಾಶಾವಾದದ ಉಯ್ಯಾಲೆಯಲ್ಲಿ ತೂಗುತ್ತ, ಪರಿತಪಿಸುತ್ತ ಜೀವನ ಸಾಗಿಸುವದೇ ಅವನ ಧ್ಯೇಯವಾಗುತ್ತದೆ. ಸಂಸ್ಕೃತಿಯೆಂಬುದು ಅವನಿಗೆ ವಿಕೃತಿಯಾಗಿ

ಪರಿಣಮಿಸುತ್ತದೆ. ಕಾಮಕ್ರೋಧಾದಿ ಬಿಸಿಲ್ಗುದುರೆಗಳನ್ನು ಬೆನ್ನುಹತ್ತಿ ಈಜಾಡುವದೇ ಅವನ ಧ್ಯೇಯವಾಗುತ್ತದೆ. ಹೀಗಾಗಿ ಜೀವನದಲ್ಲಿ ವಿರೋಧಗಳ ಕಂತೆ ತುಂಬಿಕೊಳ್ಳು ತ್ತಾನೆ. ಜೀವನವೆಲ್ಲವೂ ಬೇಸರವಾಗಿ, ಒಮ್ಮೆಯಾದರೂ ಸುಖವು ಸಿಗುವದೋ ಹೇಗೋ ಎಂಬುದರಲ್ಲಿ ಕಾಲಕಳೆಯುತ್ತಾನೆ. ಒಂದೆಡೆ ನಿಜಗುಣ ಶಿವಯೋಗಿಗಳು ಪರಿಭವದ ಬಾಧೆ ಯನ್ನು ತಾಳಲಾರದೆ ಗುರುಶಂಭುಲಿಂಗನನ್ನು ಕುರಿತು ಮೊರೆಯಿಟ್ಟು ಬೇಡಿಕೊಂಡಿದ್ದಾರೆ.

"ನೋಡು ನೀನೆನ್ನ ಪರಿಭವದ ಬಾಧೆಯನು ಕೃಪೆ। ಮಾಡು ಬೇಗದೊಳ-
ಭಯವಿತ್ತು ಶಂಕರ ॥ ಪ ॥
ಮಾಯೆ ಕರ್ಮದ ಬಾಧೆ। ಕಾಯಕರಣದ ಬಾಧೆ
ವಾಯು ವಿಷಯೇಂದ್ರಿಯದ ಬಾಧೆ ಶಂಕರ।
ಹೇಯವಹ ಜನನ ಮರಣದ ಬಾಧೆ। ತಾಪಸಮು-
ದಾಯದತಿ ಬಾಧೆ ಬಲುಹೆನಗೆ ಶಂಕರ।
ಹಸಿವು ತೃಷೆಗಳ ಬಾಧೆ। ವ್ಯಸನವೇಳರ ಬಾಧೆ।
ದೆಸೆಗೆಡಿಸುವರಿಕುಳದ ಬಾಧೆ ಶಂಕರ। ಕುಸುಮಬಾಣ-
ನ ಬಾಧೆ ಮದ ಶೋಕ ಮೋಹರತಿ-। ವಿಸರ ದುರುಬಾಧೆ।
ಘನವೆನಗೆ ಶಂಕರ। ಬೇರೆ ಬೇರಿನ್ನು ಮೈದೋರಿ ಕಾಡುವ ಬಾಧೆ।
ನೂರು ಸಾಸಿರ ಕೋಟಿಯುಂಟು ಶಂಕರ।
ಮೀರಲರಿದಿವನೆನಗೆ ನೀನೆ ತೊಲಗಿಸಿ ಸುಖದ।
ಸೂರೆಗೊಡು ಗುರುಶಂಭುಲಿಂಗ ಶಂಕರ ॥ ೩ ॥

ಮಹೋನ್ನತ ಪದವಿಯನ್ನು ಪಡೆಯುವ ಮಹಾಸಾಧಕನಿಗೆ ಈ ಬಾಧೆಗಳು ಅಡ್ಡಗೋಡೆ ಗಳಿದ್ದಂತೆ. ಜೀವನವೆಲ್ಲವನ್ನು ಕಸಿವಿಸಿಯನ್ನಾಗಿ ಮಾಡಿಬಿಡುತ್ತವೆ. ಚಿಂತಾಂಬುಧಿಯಲ್ಲಿ ಮುಳುಗಿಸಿ ಶಂಭುಲಿಂಗದರ್ಶನಕ್ಕೆ ಅಡ್ಡಿಯನ್ನುಂಟು ಮಾಡುತ್ತವೆ. ಈ ಬಾಧೆಗಳು ಭವಾರಣ್ಯದತ್ತ ಸಾಗಿಸುತ್ತವೆ. ನಾನೆಂಬುದನ್ನು ಳಿಸಿ, ನೀನೇಂಬುದನ್ನಳಿಸುತ್ತವೆ. ಪಂಜರದ ಗಿಳಿಯು ವನಾಂತರವ ನೆನೆವಂತೆ, ವಿಷಯದ ಕಡೆಗೆ ನಿರಂತರವೂ ಧಾವಿಸುವಂತೆ ಮಾಡು ತ್ತವೆ. ಹೊರಗೆ ಕಳ್ಳರ ಬಾಧೆ. ಒಳಗೆ ಚೇಳಾವು, ಕರಿನಿಕರ ಬಾಧೆಯನು ತಾಳಲಾರದೆ ಮಾನವನು ತತ್ತರಿಸುತ್ತಲಿದ್ದಾನೆ. ಆಶೆ ಆಮಿಷಕ್ಕೆ ಹಾತೊರೆಯುತ್ತಿದ್ದಾನೆ. ಭವಸಾಗರದಲ್ಲಿ ಈಸಿ ಈಸಿ ಬೇಸತ್ತಿದ್ದಾನೆ. ಒಂದು ಕಡೆ ಬಡತನದ ಚಿಂತೆ, ಬೆಲೆ ಏರಿಕೆಯಿಂದಾಗಿ, ಜೀವನ ವನ್ನು ಸುಗಮವಾಗಿ ನಡೆಸುವದೆಂತೆಂಬುದರ ಚಿಂತೆ. ಹೀಗೆ ನಾನಾ ಚಿಂತೆಗಳ ತುಮುಲ ಯುದ್ಧದಲ್ಲಿ ಹಣ್ಣಾಗಿ, ಬಾಧೆಗಳ ತಾಪದಲ್ಲಿ ಬೆಂಡಾಗಿ ಪರಿತಪಿಸುತ್ತಿರುವ ಜೀವಿಗೆ ಪರಿಹಾರವುಂಟೆ? ಎಂಬುದನ್ನು ಪ್ರಶ್ನಿಸಿಕೊಂಡಾಗ ನಿಜವಾಗಿಯೂ ಪರಿಹಾರವುಂಟೆಂದು ಉತ್ತರಿಸಬಹುದು. ಶೋಕವು ಬರುವುದು ಪ್ರಕೃತಿ ಧರ್ಮ, ಶೋಕವನ್ನು ಕಳೆದು,

ಸಂಸ್ಕೃತಿಯತ್ತ ಹೊರಳಿಸುವುದು ಮಾನವಧರ್ಮ. ಒಮ್ಮೆ ಭಗವಾನ್ ಶ್ರೀ ಕೃಷ್ಣನ ಶೋಕ ಸಾಗರದಲ್ಲಿ ಮುಳುಗಿದ ಅರ್ಜುನನನ್ನು ಕುರಿತು—

"ನೀನು ದುಃಖಿಸುವದು ಆತ್ಮನಾಶದ ಬಗ್ಗೆಯೋ ಅಥವಾ ಶರೀರ ನಾಶದ ಬಗ್ಗೆಯೋ? ಆತ್ಮವಿನಾಶದ ವಿಚಾರವಾಗಿಯೇ ಅದು ಇದ್ದರೆ, ನೀನು ಶೋಕ ಮಾಡುವದು ನಿಷ್ಪ್ರಯೋಜನವಾದುದು. ಆತ್ಮವು ನಿತ್ಯವಾದುದು ಅಜರಾಮರವಾದುದು. ಜೀರ್ಣವಾದ ಅಂಗಿ ಅರಿವೆಗಳನ್ನು ಹಾಕಿಕೊಂಡಾಗ ಸಂತಸವಾಗುವದಿಲ್ಲವೆ? "ದೇಹಿನೋಸ್ಮಿನ್ ಯಥಾ ದೇಹೇ ಕೌಮಾರಂ ಯೌವ್ವನಂ ಜರಾತಥಾ ದೇಹಾಂತರ ಪ್ರಾಪ್ತಿರ್ಧೀ ರಸ್ತತ್ರ ನಮುಹ್ಯತಿ" ಎಂದು ಶ್ರೀಕೃಷ್ಣನು ಹೇಳುವಂತೆ ಜನನ, ಮರಣ, ಬಾಲ್ಯ, ಯೌವ್ವನ, ಮುಪ್ಪು, ಇವೆಲ್ಲವುಗಳು ಬರುವದು ಸ್ವಾಭಾವಿಕ. ತೋಟದಲ್ಲಿ ಹಳೇ ಹೂವುಗಳು ಉದುರಿ ಹೊಸ ಕುಸುಮಗಳು ಬರುವಂತೆ ಪ್ರಸನ್ನತೆಯಿಂದ ಜೀವನವನ್ನು ಸಾಗಿಸುವದೇ ಮಾನವನ ಮಹೋದ್ದೇಶವಾಗಿರಬೇಕು. ಅಭಿಮಾನ ತ್ಯಾಗದಿಂದ ಮೋಹ ಮೂಲಕವಾದ ದುಃಖದ ಮೂಲ ಬೇರನ್ನು ಕಿತ್ತೊಗೆದರೆ ಮಾತ್ರ ಸುಖದ ಸಾಮ್ರಾಜ್ಯದಲ್ಲಿ ನಲಿಯಬಹುದು. ಆಗ ವ್ಯಕ್ತಿಯಲ್ಲಿ ಅಂತಃ ಶಕ್ತಿಯು ಪ್ರಾದುರ್ಭವಿಸಿ ನವಚೈತನ್ಯವು ದೊರೆಯುತ್ತದೆ. ಮಾನವನು ಪರಿತಪಿಸಲು ಆಶೆ, ಆಕಾಂಕ್ಷೆ, ಶೋಕ, ಮೋಹಗಳೇ ಮೂಲ ಕಾರಣ. ಅವೆಲ್ಲವುಗಳನ್ನು ದೊರಕಿಸಲು, ಸತ್‌ಸಹವಾಸ, ಸತತೋದ್ಯೋಗ, ಕಾಯಕ ನಿಷ್ಠೆ, ಸದ್ವಿಚಾರ, ನಿಷ್ಕಾಮ ಕರ್ಮ, ಪ್ರಾಮಾಣಿಕತನ- ಇವೇ ಮುಂತಾದ ಸಾಧನೆಗಳು ಅತ್ಯಾವಶ್ಯಕ. "ಕರ್ಮಣ್ಯೆವಾಧಿಕಾರಸ್ತೇ ಮಾಫಲೇಷು ಕದಾಚನ" ಕರ್ಮ ಮಾಡುತ್ತಿರಬೇಕು. ಆದರೆ ಫಲದ ಅಪೇಕ್ಷೆ ಇರಬಾರದು. ಅಂದರೆ ನಿಜಸುಖದ ಅರಿವಾಗುತ್ತದೆ. ನಿಷ್ಕಾಮ ಕರ್ಮದಿಂದ ದೊರೆಯುವ ಸಾತ್ವಿಕ ಆನಂದವು ಮನುಷ್ಯನನ್ನು ಮೇಲಕ್ಕೊಯ್ಯುತ್ತದೆ. ಲೌಕಿಕ ಸುಖವು ಸಿಗಲಿಲ್ಲವೆಂದು ಮರುಗಿದರೆ ಅಂಧಕಾರದಲ್ಲಿಯೇ ಬಿದ್ದು ಹೊರಳಾಡಿದಂತೆ ವ್ಯರ್ಥವಾಗುವದು. ಸ್ವಾರ್ಥ ಸ್ವಹಿತವನ್ನು ನೀಡಿದರೆ ಪರಾರ್ಥವು ಪರಹಿತವನ್ನು ಮಾಡುತ್ತದೆ. ಮನಸ್ಸಿಗೆ ನೆಮ್ಮದಿಯನ್ನು ಕೊಡುತ್ತದೆ. ಸುಖ ದುಃಖಗಳ ಮಧ್ಯದಲ್ಲಿಯೇ ಜೀವನ ಸಾಗಿಸಿ ತೃಪ್ತಿಯನ್ನು ಪಡೆಯುವದೇ ಮನುಷ್ಯನ ಮೂಲಧ್ಯೇಯವಾಗಿರಬೇಕು. ಸುಖ ಬಂದಾಗ ಹಿಗ್ಗುವದು, ದುಃಖ ಬಂದಾಗ ಕುಗ್ಗುವದು, ಇವೆರಡನ್ನು ಸಹಿಸುವ ಶಕ್ತಿ ಬಂದರೆ ಜೀವನದಲ್ಲಿ ಸಫಲತೆ ಪಡೆದಂತೆ, ಬರಿ ಸುಖವಿದ್ದರೆ ಮನುಷ್ಯನು ಜೀವಿಸಲಾರ. ದುಃಖವಿದ್ದರೂ ಜೀವಿಸಲಾರ. ಎರಡರ ಅನುಭವವಾಗುತ್ತಿದ್ದರೆ ಮಾನವತೆಯು ಕಲ್ಪನೆ ಬರುತ್ತದೆ. ದುಡಿಯದೆ ಬೆವರು ಸುರಿಸದೆ ಲಾಭಗಳಿಸಿದರೆ ಅದು ಲಾಭವಾಗಲಾರದು. ನಿಜವಾದ ಸುಖವು ದೊರೆಯಬೇಕಾದಲ್ಲಿ ತ್ಯಾಗದ ಬಲವಿದ್ದರೆ ಸಾಧ್ಯ. "ಸುಖಕ್ಕಾಗಿ ದುಃಖದ ಸಹನೆ" ಮಾಡಬೇಕಾಗುವದೆಂದು ಯೋಗಿ ಅರವಿಂದರು ಅರುಹಿದ್ದಾರೆ. ದುಃಖದಿಂದ ಜೀವನ ಅನುಭವವಾದಷ್ಟು ಸುಖದಿಂದ ದೊರೆಯದು. ತಿಕ್ಕಿದಂತೆ ಪಾತ್ರೆ ಸ್ವಚ್ಛವಾದೀತೆ ಹೊರತು ಹಾಗೆಯೇ ಬಿಟ್ಟರೆ ಮಲೀನವಾಗುವದು ಸಹಜ. ಕವಿದ ಕತ್ತಲೆ ದೂರ ಸರಿದರೆ

ಅಲ್ಲಿ ಬೆಳಕು ಕಾಣುವದು. ಕಷ್ಟಪಟ್ಟು ದುಡಿಯುತಕ್ಕವರಿಗೆ ಸುಖದ ಕಲ್ಪನೆಯಾಗುತ್ತದೆ. ಸೋಮಾರಿಗಳಿಗೆ ಸುಖವು ಸಿಗುವದು ಕಷ್ಟಸಾಧ್ಯ. ಆಶೆ ದುಃಖ ನೀಡಿದರೆ ನಿರಾಶೆ ಸುಖ ವನ್ನೀಯುತ್ತದೆ. ಇದ್ದುದರಲ್ಲಿಯೇ ತೃಪ್ತಿಯನ್ನು ಪಡೆಯುವದೇ ಗುರಿಯಾಗಿ ಇಟ್ಟು ಕೊಂಡವರು ಸುಖದ ಕನಸು ಕಾಣುತ್ತಾರೆ. ಈ ಜೀವನ ಸಾಗರದಲ್ಲಿ ಈಸುವಾಗ ಅಡ್ಡಿ ಆತಂಕಗಳು ಬಂದರೆ ಮನೋಧೈರ್ಯ ಸಹನಶೀಲತೆಯ ಹುಟ್ಟನ್ನು ಹಾಕಿದರೆ ಎದುರು ಬರುವ ತೆರೆಗಳು ಸರಿದುಹೋಗುತ್ತವೆ. ಅದಕ್ಕಾಗಿ ಹೃದಯ ದೌರ್ಬಲ್ಯವನ್ನು ಕಿತ್ತೊಗೆಯ ಬೇಕಾಗುತ್ತದೆ. ಸಾಹಸಮಯ ಜೀವನದಲ್ಲಿ ಮುಂದಡಿ ಇಟ್ಟು ಕಾಯಕ ನಿರತರಾದರೆ, ಪರಿತಪಿಸುವ ಜೀವಿಗೆ ಸುಖ ಸಿಗುತ್ತದೆ. ಮನಸ್ಸನ್ನು ಪೂರ್ಣವಾಗಿ ನಿಗ್ರಹಿಸಬೇಕಾದರೆ, ಪೂರ್ಣವಾಗಿ ನೀತಿವಂತನಾಗಬೇಕು. ನೈತಿಕ ಜೀವನದಲ್ಲಿ ಪರಿಶುದ್ಧವಾದವನು ಮತ್ತೆ ಏನನ್ನು ಮಾಡಬೇಕಾಗಿಲ್ಲ. ಗತಿಹೀನನಾದ ಮಾನವನಿಗೆ ಉದಾತ್ತ ಮಾನವನನ್ನಾಗಿ ಮಾರ್ಪಡಿಸುವ ದಿವ್ಯ ಔಷಧಿಯೇ ನೀತಿ ತತ್ತ್ವದಿಂದೊಡಗೂಡಿದ ಆಧ್ಯಾತ್ಮದ ಅಮರ ಸಂದೇಶ.

ಬೇಡುವೆನಭವ ನಿಮ್ಮನು ಭವಭವದೊಳು।
ಮಾಡೆನಗೊಲಿದು ಸುಗುಣ ಸಂತತಿಯನಿಂತು ॥ ಪ ॥

ಎಡರಡಿಸಿದ ವೇಳೆಯೊಳು ಧೈರ್ಯವನುಸಿರಿ।
ವಡೆದು ಜೀವಿಸುವೆಡೆಯೊಳು ವಿನಯವನು।
ಕಡು ಜವ್ವನದೊಳು ವಿಕೃತಿ ದೊರದಿಹುದನು।
ಪಿಡಿದ ನೇಮವನೆಡೆವಿಡದತಿ ಛಲವನು ॥ ೧ ॥

ಅಸುವಳಿಯಲು ದೇಹಿಯನಲೊಲ್ಲದ ಘಟನು।
ಪುಸಿಯನೆಲ್ಲಿಯು ನುಡಿಯದ ಸತ್ಯವಿದನು।
ಮುಸಳಿಸದಿಹ ಪುಣ್ಯಮಯ ಕೀರ್ತಿಯನು ಶಾಂತ।
ರೊಸೆದಹುದೆಂದು ಬಣ್ಣಿಸುವ ವರ್ತನವನು ॥ ೨ ॥

ವಿತರಣದೊಡನೆ ಭೋಗಿಸುವರ್ಥದೊದವನು।
ಹಿತವಚನವ ತೊಡವೆನಿಪ ದಾನವನು॥
ಶ್ರುತಿ ಬೋಧನೆಯೊಳು ಪರತಿಯಿಲ್ಲದಿಹುದನು।
ನುತಿವೆತ್ತ ಕೈಸಾರುತಿಹ ಮನೋರಥವನು ॥ ೩. ॥

ಕೋಪವಂಟದ ತಪವನು ಪರವಧುವಿನ।
ರೂಪಗೊಂಡೆಳೆಸದ ಕರಣ ವಿಜಯವನು।
ತಾಪವಡರಿರೆಡಿಸದ ಸಾರ ಸುಖವನು।
ಕಾಪಟ್ಯವಿಲ್ಲದಾಶ್ರಮ ಧರ್ಮ ರತಿಯನು ॥ ೪ ॥

ಧರೆಯೊಳತ್ಯಧಿಕವೆನಿಪ ಶಾಂತಿ ಮತವನು।
ಕರುಣ ವಿದ್ಯೆಗಳುಳ್ಳ ಗುರುಭಜನೆಯನು।
ಪರತರ ಮುಕುತಿ ದೋರುವ ಶಾಸ್ತ್ರವನು ಕಂತು।
ಹರಶಂಭುಲಿಂಗ ನಿಮ್ಮಡಿಯ ಭಕ್ತಿಯನು ॥ ೫ ॥

ನಿಜಗುಣರ ಈ ತಿಳಿನುಡಿಗಳು ನೀತಿಯ ದಿಗ್ದರ್ಶನಗಳಾಗಿದ್ದಾವೆ. ವ್ಯಕ್ತಿತ್ವದ ವಿರಾಟ ರೂಪವನ್ನು ದರ್ಶನ ಮಾಡಿಸುತ್ತವೆ. ಭವಬಂಧನದಲ್ಲಿ ಸಿಲಕಿ ಪರಿತಪಿಸುವ ಜೀವಿಗೆ, ಬೆಳಕು ನೀಡುವ ಕೈದೀವಿಗೆಗಳಾಗಿದ್ದಾವೆ. ಆಧ್ಯಾತ್ಮದ ಹಸಿವಿನಲಿದ್ದವನಿಗೆ ಅಮೃತ ಬಿಂದುಗಳಾಗಿದ್ದಾವೆ. ನೈತಿಕ ಶಕ್ತಿಯನ್ನು ನೀಡಬಲ್ಲ ಈ ಸುಗುಣ ಸಂತತಿಗಳು ಮಾನವ ಜೀವನಕ್ಕೆ ಸುಖ ನೀಡುವ ಮೈಲುಗಲ್ಲುಗಳಾಗಿವೆ. ಅಮೋಘವಾದ ಇಂತಹ ಪ್ರಾರ್ಥನೆ ಯಿಂದ ಆತ್ಮಕಲ್ಯಾಣವಾಗುವುದಲ್ಲದೆ, ಅನಂತ ದುಃಖಗಳಿಗೆ ಸಂಜೀವಿನಿಯಾಗಿವೆ. ನಡೆ–ನುಡಿಗಳಲ್ಲಿ ಇವುಗಳನ್ನು ಆಚರಣೆಯಲ್ಲಿ ಬಂದರೆ ಮಾನವನ ಸುಖಕ್ಕೆ ಎಣೆಯೇ ಇಲ್ಲ. ಈ ಸಧರ್ಮದ ತಳಹದಿಯ ಮೇಲೆ ಜೀವನಾನುಭವವನ್ನು ನಿರ್ಮಿಸಿಕೊಂಡು ಸನ್ಮಾರ್ಗ ಸೋಪಾನಗಳನ್ನೇರಿದರೆ, ಅಲ್ಲಿ ಚಿದಾನಂದವು ದೊರೆತು, ಪರಮಾತ್ಮನ ಕೃಪೆ ಯುಂಟಾಗುತ್ತದೆ. ಕಷ್ಟ ಪರಂಪರೆಗಳು ನುಚ್ಚುನೂರಾಗಿ ಬೆಂದೊಡಲಿನಲ್ಲಿ ಹಾಲ್ಜೇನು ಸುರಿದಂತಾಗುತ್ತದೆ. ಶಾಂತಿ, ಪ್ರೀತಿ, ಮೈದೋರುತ್ತದೆ, ವಿವಿಧತೆಯಲ್ಲಿ ಏಕತ್ವ ವುಂಟಾಗುತ್ತದೆ. "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಭಗವಂತನ ಈ ನುಡಿ ನಿಚ್ಚಳವಾಗಿ ಸುಗಮ ದಾರಿಯನ್ನು ತೋರಿಸಿ ಪರಿತಪಿಸುವ ಜೀವಿಗೆ ಪರಿಹಾರ ವನ್ನು ನೀಡುತ್ತದೆ. ಈ ಕಾಯಕವು ದಿವ್ಯ ಜೀವನದ ಹೆಬ್ಬಾಗಿಲು. ಕಾಯಕದಲ್ಲಿ ನಿರತರಾದವರು ಎಂತಹ ಕಷ್ಟಗಳನ್ನು ಮರೆಯಬಲ್ಲರು. ಭಕ್ತಿ, ಜ್ಞಾನಗಳ ಉತ್ತುಂಗ ಶಿಖರವನ್ನೇರಬಲ್ಲರು. ಕಾಯಕವಿಲ್ಲದೆ ಆತ್ಮದ ಹಸಿವನ್ನು ಹಿಂಗಿಸಲು ಅಸಾಧ್ಯ. ಕಾಯಕ ವಿಲ್ಲದ ಜೀವನ ಪಾವನವಾಗಲಾರದು. ಅದು ಕೇವಲ ಶುಷ್ಕ ಜೀವನ. ಭೌತಿಕ ತರ್ಕ ಕ್ಕಿಂತಲೂ, ಕಾಯಕ ಹೆಚ್ಚಿನದು, ಮೆಚ್ಚಿನದು. ಭಾವ ಪರಿಶುದ್ಧತೆಗೆ ಇದು ದಾರೀದೀಪ. ಭಾವೈಕ್ಯತೆಗೆ ನಂದಾದೀಪ. ಪರಿತಪಿಸುವ ಜೀವಿಯು ಕಸಿವಿಸಿಗೊಂಡಾಗ ಕಾಯಕವು ತುಂಬ ಪ್ರಯೋಜನಕಾರಿ. ಅತಿಮಾನವತೆಯ ಶರಣ ಮಾರ್ಗವನ್ನನುಸರಿಸಿ, ಕಾಯಕ ದಂತೆ ದುಃಖ ದೂರಾಗುತ್ತದೆ. ಮಾಯಾ ಮೋಹವಳಿಯುತ್ತದೆ. ಜನರ ಭಾವನೆ ಯಲ್ಲಿ ಪ್ರೇಮ ಉಂಟಾಗುತ್ತದೆ. ಆಧ್ಯಾತ್ಮ ಪ್ರತಿಭೆಯಿಂದ ಬೆಳಗಲು ಕಾಯಕವೇ ಪ್ರಥಮ ಸೋಪಾನ. ಸತ್ಯವನ್ನು ಹುಡುಕಿಕೊಂಡು ನಡೆಯಲು ಕಾಯಕವು ಅದೊಂದು ಚೇತನ ಶಕ್ತಿಯಿದ್ದಂತೆ. ಇಂದು ಭೌತಿಕ ಭಾಗ್ಯಗಳಲ್ಲಿ ಸುಖವಿಲ್ಲ, ಶಾಂತಿಯಿಲ್ಲ; ನಿರಂತರವು ಅತೃಪ್ತಿ. ಕೇವಲ ವಿಜ್ಞಾನದ ಪ್ರಗತಿಯಾದರೆ, ಅದು ಪ್ರಗತಿಯಾದಂತಾಗದು. ವಿಜ್ಞಾನದ ಪ್ರಗತಿ ಕೋಲ್ಮಿಂಚಿನಂತೆ ಅಸ್ಥಿರ. ಒಂದೆಡೆ ಸ್ವಾಮಿ ವಿವೇಕಾನಂದರು:— "ಬಾಹ್ಯ ಪ್ರಪಂಚದಲ್ಲಿ ಮಾಯೆ ಆಕರ್ಷಣೆ ಮತ್ತು ವಿಕರ್ಷಣೆ" ಇವುಗಳ ರೂಪದಲ್ಲಿ

ವ್ಯಕ್ತವಾಗುತ್ತದೆ. ಇಡೀ ವಿಶ್ವದ ಹೊರಗೆ ಹೋಗಲು ಯತ್ನಿಸುತ್ತದೆ. ಪ್ರತಿಯೊಂದು ಕಣವು ತನ್ನ ಕೇಂದ್ರದಿಂದ ಹೊರಗೆ ಹೋಗಲು ಇಚ್ಛಿಸುತ್ತದೆ. ಆಂತರಿಕ ಪ್ರಪಂಚದಲ್ಲಿ ಪ್ರತಿಯೊಂದು ಆಲೋಚನೆಯೂ ನಮ್ಮ ಸ್ವಾಧೀನತೆಗೆ ಬರದೆ ಸ್ವೇಚ್ಛೆಯಿಂದಿರಲು ಯತ್ನಿಸುತ್ತದೆ. ಆದರೆ ಪ್ರಪಂಚದಲ್ಲಿ ಪ್ರತಿಯೊಂದು ವಸ್ತುವನ್ನು ಮತ್ತೊಂದು ಶಕ್ತಿ ತನ್ನ ಕೇಂದ್ರದ ಕಡೆ ಸೆಳೆಯುತ್ತದೆ. ಇದರಂತೆ ಆಲೋಚನಾ ಕ್ಷೇತ್ರದಲ್ಲಿಯೂ ಒಂದು ಕೇಂದ್ರ ಶಕ್ತಿ ಹೊರಗೆ ಹೋಗುತ್ತಿರುವ ಆಲೋಚನೆಗಳನ್ನೆಲ್ಲಾ ತನ್ನೆಡೆಗೆ ಸೆಳೆಯುತ್ತದೆ. ಇಂದ್ರಿಯಕ್ಕೆ ದಾಸರಾಗಿರುವ ಆಸೆಯನ್ನು ನಿಗ್ರಹಿಸಿದಾಗ ಮಾತ್ರ ಮಾನವನ ಹೃದಯದಲ್ಲಿ ಧರ್ಮೋದಯವಾಗುವದು. ಧರ್ಮದ ಗುರಿಯೆಲ್ಲ ಮಾನವ ಇಂದ್ರಿಯ ದಾಸನಾಗದೆ ತನ್ನ ಸ್ವಾತಂತ್ರ್ಯವನ್ನು ವ್ಯಕ್ತಗೊಳಿಸುವಂತೆ ಮಾಡುವದಾಗಿದೆ. ಈ ನಿವೃತ್ತಿಯ ಸ್ವಭಾವವನ್ನೇ ನಾವು ನೀತಿ ಎನ್ನುವದು. ನೀತಿಯ ಗುರಿಯು ನಮ್ಮನ್ನು ಇಂದ್ರಿಯಗಳ ಗುಲಾಮರಾಗದಂತೆ ನೋಡಿಕೊಳ್ಳುವದಾಗಿದೆ ಎಂದು ಮುಂತಾಗಿ ಜೀವನ ವಿಕಾಸದ ಹೋರಾಟವನ್ನು ಮನೋವೈಜ್ಞಾನಿಕದೊಡನೆ ವಿಸ್ತರಿಸಿದ್ದಾರೆ. ಮಾನವನು ಆತ್ಮ ಸಾಮ್ರಾಜ್ಯದಲ್ಲಿ ಸ್ವತಂತ್ರನಾಗಲು ಸಾಧ್ಯಮಾಡಿಕೊಂಡರೆ ಮಾತ್ರ ನೀತಿ ಸಾಧ್ಯ. ಇಂತಹ ನೀತಿ ವ್ಯೆಮನಗಳಲ್ಲಿ ರೂಢಿಮಾಡಿ ವಿಕಾಸಗೊಂಡರೆ ಪರಿತಪಿಸುವ ಜೀವಿಗೆ ಪರಿಹಾರ ಸಾಧ್ಯ.

**"ಕುಟುಂಬ ಕಲ್ಯಾಣ"**

ಜೀವನವು ಒಂದು ಕಲೆ, ಆದರ್ಶ ಕಲೆ, ಸರ್ವ ಕಲೆಗಳಿಗೂ ಮೂಲ ಕಲೆ. ಆದ್ದರಿಂದ ನಮ್ಮ ಬದುಕಿಗೊಂದು ಅರ್ಥ ಬರಬೇಕಾದರೆ ಅದು ಸಾರವತ್ತಾಗಿರಬೇಕು. ಸರ್ವಾಂಗ ಸುಂದರವಾಗಿರಬೇಕು. ಪರಮಾತ್ಮನು ಸರ್ವ ಸೃಷ್ಟಿಯನ್ನು ನಿರ್ಮಾಣ ಮಾಡಿದ ಮೇಲೆ ತನ್ನ ಆತ್ಮ ವಿನೋದಕ್ಕಾಗಿ, ವೈವಿಧ್ಯಪೂರ್ಣ ವಿಕಾಸಕ್ಕಾಗಿ ಮಾನವ ಸೃಷ್ಟಿಯನ್ನು ನಿರ್ಮಾಣ ಮಾಡಿದನಂತೆ. ಆದ್ದರಿಂದ ಈ ಮಾನವಲೋಕ ಪರಮಾತ್ಮನ ಆಡುಂಬೊಲ ಮಾತ್ರವಲ್ಲ, ಅವನ ಅರ್ಥಪೂರ್ಣವಾದ ಪ್ರಯೋಗ ಶಾಲೆ. ಆದ್ದರಿಂದ ದ್ರಷ್ಟಾರರೂ, ಋಷಿಗಳೂ ಈ ಬಾಳನ್ನು ಭೋಗದಿಂದಲೂ ಯೋಗದಿಂದಲೂ ಸಮ ಸಮನಾಗಿ ಹೆಣೆದರು, ಬದುಕಿನಲ್ಲಿ ವಿಚಾರ ಸ್ವಾತಂತ್ರ್ಯ, ಆಚಾರ ಸ್ವಾತಂತ್ರ್ಯಗಳಿಗೆ ಅವಕಾಶ ಕಲ್ಪಿಸಿದರು. ಆದರೆ ಎಲ್ಲಿಯೂ ಸ್ವೈರಾಚಾರ, ವಿಶೃಂಖಲ ಪ್ರವೃತ್ತಿ, ಅಪ್ರಜ್ಞೆಗಳಿಗೆ ಅವಕಾಶ ನೀಡಲಿಲ್ಲ. ಶರಣರು "ಕಾಯಕವೇ ಕೈಲಾಸ"ವೆಂದು ಸಾರಿ, ಕರ್ಮೋದ್ಯೋಗ ಭೂಮಿಯಾದ ಬಾಳಿನ ಶ್ರೀಮಂತಿಕೆಯನ್ನು ಹೆಚ್ಚಿಸಿದರು. ಹೀಗಾಗಿ ಬಾಳು ದುಃಖದ ನೆಲೆಬೀಡಲ್ಲ, ಮಾಯದ ಕೂಪವಲ್ಲ, ಮೃಗ ಜಲವಲ್ಲ; ಇದೊಂದು ಕಾಯಕ ಕ್ಷೇತ್ರ, ಕರ್ತವ್ಯ ಭೂಮಿ, ಸಿದ್ಧಿಯ ನೆಲೆವನೆಯೆಂದು ಸಾರಿದರು.

---

ಧಾರವಾಡ ಬಾನುಲಿಯಲ್ಲಿ ಪ್ರಸಾರವಾದ ಭಾಷಣ.

ಆದರೆ ಅರುಹಿನ ಸೂತ್ರ ತಪ್ಪಿದಾಗ, ನಮ್ಮ ಜೀವನದಲ್ಲಿ, ಹಾಲಾಹಲಗಳೇಳುತ್ತವೆ, ದಾವಾನಲಗಳು ಮೇಲುಕುಹಾಕುತ್ತವೆ. 'ವ್ಯಕ್ತಿ'ಯು ಕುಟುಂಬದ ಘಟಕವಾದರೆ 'ಕುಟುಂಬ'ವು ರಾಷ್ಟ್ರದ ಘಟಕ. 'ವ್ಯಕ್ತಿ' 'ಕುಟುಂಬ' 'ರಾಷ್ಟ್ರ' ಇವು ಮೂರೂ ಪರಸ್ಪರ ಪೂರಕವೂ, ಪ್ರೇರಕವೂ ಆದ ಅನ್ಯೋನ್ಯ ಧರ್ಮಗಳು. ಇವುಗಳ ಕೀಲು ತಪ್ಪಿದಾಗ ಏನೆಲ್ಲ ದುರಂತಗಳೂ ಸಂಭವಿಸಬಹುದು.

ಆದ್ದರಿಂದ ಆಧುನಿಕ-ಸಮಾಜ ವಿಜ್ಞಾನಿಗಳು 'ವ್ಯಕ್ತಿ'ಗೂ 'ರಾಷ್ಟ್ರ'ಕ್ಕೂ ಮಧ್ಯವರ್ತಿಯಾದ ಅತ್ಯಂತ-ಮಹತ್ವದ ಅಂಗವಾದ 'ಕುಟುಂಬ'ಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದಾರೆ. ಕುಟುಂಬ ಕಲ್ಯಾಣವೆಂದರೆ ವ್ಯಕ್ತಿಯ ಕಲ್ಯಾಣವೂ ಹೌದು, ರಾಷ್ಟ್ರದ ಕಲ್ಯಾಣವೂ ಹೌದು. ಆದ್ದರಿಂದ ತಮ್ಮ ತಮ್ಮ ಕುಟುಂಬಗಳನ್ನು ಮಾನವರೆಲ್ಲರೂ ದೇವಾಲಯದ ಗರ್ಭಗುಡಿಯಂತೆಯೇ ಸ್ವಚ್ಛವಾಗಿಯೂ, ಪವಿತ್ರವಾಗಿಯೂ, ಪ್ರಸನ್ನವಾಗಿಯೂ ಇರಿಸಬೇಕು.

ನಮ್ಮ ಕುಟುಂಬಗಳು, ಅತಿಯಾದ ಜನಸಂಖ್ಯೆಯಿಂದ, ಪೌಷ್ಟಿಕ ಆಹಾರದ ಕೊರತೆಯಿಂದ, ನಿರುದ್ಯೋಗಗಳಿಂದ, ಮೂಢನಂಬಿಕೆಗಳಿಂದ, ಅನಕ್ಷರತೆಯಿಂದ, ಸ್ತ್ರೀಯರಿಗಿರುವ ಗೌಣಸ್ಥಾನಗಳಿಂದ, ಸಂಪ್ರದಾಯದ ಜಾಢ್ಯತೆಗಳಿಂದ, ಅತಿಯಾಗಿ ಕೊಳೆಯುತ್ತಿರುವದು ಅತ್ಯಂತ ಶೋಚನೀಯವೂ, ಭವಿಷ್ಯದ ದುರಂತವೂ ಆಗಿದೆ. ನಮ್ಮ ಕಸವನ್ನು ನಾವು ಸ್ವಚ್ಛಮಾಡಿಕೊಳ್ಳದಿದ್ದರೆ ಇನ್ನಾರು ಸ್ವಚ್ಛಮಾಡಬೇಕು. "ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ, ಹೊಸ್ತಿಲಲಿ ಹೊಲಸು ತುಂಬಿ ಮನೆಯೊಳಗೆ ರಜ ತುಂಬಿ, ಮನೆಯೊಳಗೆ ಮನೆಯೊಡೆಯನಿಲ್ಲಾ ಕೂಡಲಸಂಗಮದೇವಾ" ಎಂದಂತಾಗಿದೆ ನಮ್ಮ ಮನೆಯು, ನಮ್ಮ ಕುಟುಂಬದ ಪರಿಸ್ಥಿತಿ. ವಿವೇಕಶೂನ್ಯರಾಗಿ ಬಾಳುವದಕ್ಕಿಂತ ಹೆಚ್ಚಿನ ಅಸ್ವಾತಂತ್ರ್ಯ ಇನ್ನೊಂದಿಲ್ಲ.

ಕ್ರಿಸ್ತಶಕದ ಆದಿಯಲ್ಲಿ ನಮ್ಮ ಇಡೀ ಜಗತ್ತಿನ ಜನಸಂಖ್ಯೆ ೩೦ ಕೋಟಿ ಇತ್ತು. ಆದರೆ ಇಂದು ಆ ಸಂಖ್ಯೆ ೪೦೦ ಕೋಟಿ! ಈ ಶತಮಾನದ ಕೊನೆಗೆ ಈ ಸಂಖ್ಯೆ ೭೨೦ ಕೋಟಿಯಾಗುತ್ತದೆಂದು ಜಾಗತಿಕ ಜನಸಂಖ್ಯಾ ತಜ್ಞರು ಅಂದಾಜು ಮಾಡಿದ್ದಾರೆ. ಈಗಾಗಲೇ ವರ್ಷಕ್ಕೆ ೨೦ ರಿಂದ ೨೫ ಸಾವಿರ ಜನ ಹಸಿವೆಯಿಂದ ಸಾಯುತ್ತಿದ್ದಾರೆ. ಜನಸಂಖ್ಯೆ ಹೆಚ್ಚಾಗುತ್ತ ಹೋದಂತೆ ಆಹಾರದ ಅಭಾವ ಇನ್ನೂ ಪ್ರಕೋಪಕ್ಕೆ ಏರಿ, ಅನ್ನವಿಲ್ಲದೆ ಸಾಯುವವರ ಸಂಖ್ಯೆ ಇನ್ನೂ ಅಧಿಕವಾಗುತ್ತದೆ. ನಾವು ಜನಸಂಖ್ಯೆಯನ್ನು ಬೇಕಾದಷ್ಟು ಬೆಳೆಸಬಹುದು; ಆದರೆ ಜನರಿಗೆ ಅನ್ನ ಹಾಕುವ ಭೂಮಿಯ ವಿಸ್ತಾರವನ್ನು ಬೆಳೆಸಲಿಕ್ಕೆ ಹೇಗೆ ಸಾಧ್ಯ? ಭೂಮಿಯ ಫಲವತ್ತತೆಗೂ ಒಂದು ಮಿತಿ ಇಲ್ಲವೇ? ಹೀಗಾಗಿ ನಾವು ಸಾಧಿಸುತ್ತಿರುವ "ಹಸಿರುಕ್ರಾಂತಿ" ಕೂಡ ಬೆಳೆಯುತ್ತಿರುವ ಸಂಖ್ಯಾದೈತ್ಯನ ಹೊಟ್ಟೆಯನ್ನು ತುಂಬಲಾರದು, ಪ್ರತಿ ವಯಸ್ಕ ವ್ಯಕ್ತಿಗೆ ದಿನಕ್ಕೆ ಸುಮಾರು ೨೪೦೦ ಕ್ಯಾಲೋರಿಗಳಷ್ಟು ಆಹಾರಬೇಕೆಂದು ವಿಶ್ವ ಆರೋಗ್ಯ ಸಂಸ್ಥೆಯು ಅಭಿಪ್ರಾಯಪಟ್ಟಿದೆ. ಆದರೆ

ನಮ್ಮ ದೇಶದಲ್ಲಿ ಮುಕ್ಕಾಲು ಪಾಲು ಜನರಿಗೆ ಸಿಗುತ್ತಿರುವದು ೧೦೦೦ವೋ ಅಥವಾ ಅದಕ್ಕಿಂತ ಶೀರಾ ಕಡಿಮೆಯಾದ ಕ್ಯಾಲೋರಿಯೋ ಆಗಿದೆ. ಈ ಪರಿಣಾಮ ಶೀಘ್ರವಾಗಿ ಸ್ತ್ರೀಯರ ಮೇಲೆ, ಮಕ್ಕಳ ಮೇಲೆ ಉಂಟಾಗಿ ಅವರ ಬೌದ್ಧಿಕ-ದೈಹಿಕ ಬೆಳವಣಿಗೆಗೆ ವಜ್ರಾಘಾತ ಉಂಟಾಗಿ, ಅವರೆಲ್ಲ ಶೋಚನೀಯ ಸ್ಥಿತಿಯನ್ನು ಅನುಭವಿಸಬೇಕಾಗುತ್ತದೆ. ಇಂತಹ ಜೀವಂತ ಹೆಣಗಳನ್ನು ಬೆಳೆಸುವದರಿಂದ ನಾವು ಶಕ್ತಿಶಾಲಿಯಾದ ರಾಷ್ಟ್ರವನ್ನು ಕಟ್ಟುವ ಕನಸನ್ನೂ ಕಾಣಲಾರೆವು. ಅಲ್ಲದೇ ಜನಸಂಖ್ಯೆಯಿಂದ "ಮಾನಸಿಕ ಒತ್ತಡ" (Stress) ಹೆಚ್ಚಾಗಿ, ದಾಸ್ಯಕ್ಕೂ ಸಾವಿಗೂ, ಕಾರಣವಾಗುತ್ತದೆಂದು ವಿಜ್ಞಾನಿಗಳು ಹೇಳುತ್ತಾರೆ. ಕಲ್ಲುಗುಡ್ಡದ ಮೇಲೆ ಬೆಳೆಸಿದ ಹೂವಿನ ಗಿಡ ಒಣಗಿ ಹೋಗದೇ ಏನು ಮಾಡೀತು?

'ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ' ಎಂದು ಮನು ಯಾಕೆ ಹೇಳಿದನೋ ತಿಳಿಯದು. ಆದರೆ ಬಹುಕಾಲದ ಹಿಂದಿನಿಂದಲೇ ನಮ್ಮ ದೇಶದ ಕುಟುಂಬ ಘಟಕದಲ್ಲಿ ಪುರುಷನು ಬಲಾಢ್ಯನಾಗಿ ಸ್ತ್ರೀಯನ್ನು ಆಧ್ಯತೆಯಿಂದ ನಡೆಸಿಕೊಂಡಿದ್ದಾನೆ. ಅಬಲೆಯಾದ ಅವಳು ದಾಸಿಯಾಗಿ, ಗೃಹಜೀವನದ ಸಂಕೋಲೆಯಲ್ಲಿ ಬಂಧಿತಳಾಗಿ, ಸಮಗ್ರ ಜೀವನದ ವೈವಿಧ್ಯ ಪೂರ್ಣ ಸ್ವಾತಂತ್ರ್ಯದಿಂದ ವಂಚಿತಳಾಗಬೇಕಾಯಿತು. "ಹೆಣ್ಣು ಹೆಣ್ಣಲ್ಲ, ಹೆಣ್ಣು ಮಾಯೆಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ" ಎಂದು ಸಾರಿದ ಸಿದ್ಧರಾಮ ಶಿವಯೋಗಿ ಹೆಣ್ಣಿಗೆ ದೈವತ್ವದ ಪಟ್ಟಗಟ್ಟಿದನು, ಶರಣರು ಸ್ತ್ರೀಗೆ ಧಾರ್ಮಿಕ ಸ್ವಾತಂತ್ರ್ಯ, ಸಾಮಾಜಿಕ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯಗಳನ್ನು ನೀಡಿದರು. ಆದರೆ ಇಂದಿಗೂ ಕೂಡ, ವಿದ್ಯಾವಂತ ಜನಾಂಗದಲ್ಲಿಯೂ ಕೂಡ ಹೆಣ್ಣನ್ನು ಗಂಡಿಗಿಂತ ಕಡಿಮೆಯೆಂದೇ ಭಾವಿಸುತ್ತಿರುವದು ಪರಂಪರೆಯ ರೋಗ ಮಾತ್ರ. ಈ ರೋಗ ನಿವಾರಣೆಯಾಗವೇ ನಮ್ಮ ಕುಂಟುಂಬ ಕಲ್ಯಾಣವನ್ನು ಸಾಧಿಸಲಿಕ್ಕಾಗದು. ಕುಟುಂಬಗಳ ಸರ್ವ ಅಂಗಗಳ ಕಲ್ಯಾಣವೇ ಕುಟುಂಬದ ಕಲ್ಯಾಣ, ಇದೇ ರಾಷ್ಟ್ರದ ಕಲ್ಯಾಣ!

ನಮ್ಮ ಮಕ್ಕಳು ಭಾವೀಜನಾಂಗದ ಸಂಸ್ಕೃತಿಯ ಬೀಜಗಳು. ಕಂಡದ್ದನ್ನು ತಿಂದು, ತಿಳಿದಂತೆ ಬೆಳೆಯುವ ಮಕ್ಕಳನ್ನು ನಾವು ಇಂದಿಗೂ ಅಶಿಕ್ಷಿತ ಕುಟುಂಬಗಳಲ್ಲಿ ಕಾಣುತ್ತೇವೆ. ಮಕ್ಕಳ ಪರಿಪಾಲನೆ, ಪೋಷಣೆ, ಬಾಲ್ಯ ಶಿಕ್ಷಣ, ಯೋಗ್ಯ ಆಹಾರ, ಆಟ, ವಿಶ್ರಾಂತಿ, ವಿನೋದ ಇವೆಲ್ಲವೂ ತಾಯಿ ಕೊಡುವ ಚುಂಬನದಷ್ಟೇ ಮಹತ್ವದವುಗಳಾಗಿವೆ. ಮಕ್ಕಳನ್ನು ಮಮತೆಯಿಂದ ಸಾಕುವದರೊಂದಿಗೆ ಎಚ್ಚರಿಕೆಯಿಂದಲೂ ಜೋಪಾನ ಮಾಡಬೇಕು. ತಾಯಿ ದೈವದತ್ತವಾಗಿ ಕೊಡುವ ಎದೆಹಾಲನ್ನು ತಪ್ಪಿಸಿ, ಕೃತ್ರಿಮವಾದ ಕಲಬೆರಕೆಯಿಂದ ಕೂಡಿರಬಹುದಾದ ಡಬ್ಬಿಯ ಹಾಲನ್ನು ಕೊಡುವದು; ನಮ್ಮ ನಮ್ಮ ಮಕ್ಕಳನ್ನು ನಾವೇ ಕೊಂದಂತೆ. ವಿಶ್ವದ ಪ್ರಖ್ಯಾತ ವೈದ್ಯರೆಲ್ಲ ಈ ಕೃತ್ರಿಮ ಹಾಲಿಗೆ ತಮ್ಮ ಪ್ರತಿರೋಧವನ್ನು ವ್ಯಕ್ತಪಡಿಸಿದ್ದಾರೆ. ಆಹಾರದೊಂದಿಗೆ ಮಕ್ಕಳಿಗೆ ಯೋಗ್ಯ

ಶಿಕ್ಷಣವೂ ಅಷ್ಟೇ ಮಹತ್ವ. ಸರಿಯಾದ ಶಿಕ್ಷಣವು ನಮ್ಮನ್ನು ಮೂಢನಂಬಿಕೆಗಳಿಂದ ಅವಿವೇಕದಿಂದ ಮೌಢ್ಯಗಳಿಂದ ದೂರವಿರಿಸುತ್ತದೆ.

ನಾವು ವಾಸಿಸುವ ಮನೆ ನಮ್ಮ ಮನಕ್ಕೆ ಕೈಗನ್ನಡಿ. ಅದು ಶುದ್ಧವೂ, ಸುಂದರವೂ, ಆರೋಗ್ಯಕರವೂ ಆಗಿರಬೇಕು. ಮನದಲ್ಲಿ ಸಮತೂಕ; ಮನೆಯಲ್ಲಿ ಶುಚಿರುಚಿ, ಸಂಖ್ಯೆಯಲ್ಲಿ ಹಿತಮಿತ; ಇದೇ ಸರ್ವಾಂಗೀಣ ಸುಂದರ ಕುಟುಂಬ. ಮಿತ ಸಂತಾನವು ರಾಷ್ಟ್ರೋತ್ಥಾನಕ್ಕೆ ನಾಂದಿ, ಅತಿ ಸಂತಾನವು ರಾಷ್ಟ್ರಪ್ರಗತಿಗೆ ಬಂಧನ. ಹುಟ್ಟಿದರೆ ಒಬ್ಬ ಮಗ ಸಾಕು. ಬೆಳೆದರೆ ಒಂದು ಹೊಲ ಸಾಕು. ಹತ್ತು ಹಡೆಯುವದಕ್ಕಿಂತ ಮುತ್ತಿನಂತಹ ಒಂದು ಹಡೆಯುವದು ಲೇಸು. ಜನತೆಯ ಸುಖಜೀವನವನ್ನು ಪಡೆಯಲು ಕುಟುಂಬ ಕಲ್ಯಾಣ ಅತ್ಯಗತ್ಯ. ಮಿತ ಕುಟುಂಬದ ಕಲ್ಪನೆ ಕೇವಲ ಪಾಶ್ಚಿಮಾತ್ಯರಿಂದ ಬಂದಿದೆ ಎಂದು ತಿಳಿದು ಕೊಳ್ಳುವದು ತಪ್ಪು. ಈ ಬಗ್ಗೆ ಪ್ರಾಚೀನ ವೇದ–ಸೂತ್ರಗಳಲ್ಲಿಯೂ ಕಾಣಬಹುದು. ಋಗ್ವೇದದ ಒಂದು ಮಂತ್ರದಲ್ಲಿ "ಮಾನವ ಜೀವಿಗಳು ಹುಟ್ಟು–ಸಾವುಗಳ ಪರಿಚಕ್ರದಲ್ಲಿ ಸಿಲುಕಿದ್ದಾರೆ. ಈ ವಿಶ್ವದಲ್ಲಿ ಎಲ್ಲ ದುಃಖಗಳಿಗೂ ಮೂಲಭೂತ ಕಾರಣ ಅತಿ ಸಂಖ್ಯೆಯ ಮಕ್ಕಳು" ಎಂದು ಹೇಳಲಾಗಿದೆ. ಒಬ್ಬ ವ್ಯಕ್ತಿಗೆ ಬಹಳ ಮಕ್ಕಳಾದರೆ ಅವನ ಜೀವನವು ನಿರಂತರವೂ ಕಷ್ಟದಲ್ಲಿರಬೇಕಾಗುತ್ತದೆ. ಇಂತಹದರಲ್ಲಿಯೇ ಬಡತನದ ಭೂತ ಬೆನ್ನುಹತ್ತಿತೆಂದರೆ, ಜೀವನವೇ ಬೇಸರವಾಗಿ ಸತ್ತು ಹೋಗಿರುವ ಉದಾಹರಣೆಗಳನ್ನು ಸಾಕಷ್ಟು ಕಂಡಿದ್ದೇವೆ. ಇದೆಲ್ಲವನ್ನು ನೀಡಿದ್ದಾರೆ. ರಾಷ್ಟ್ರದ ಸುಖ ಸಮೃದ್ಧಿಯಲ್ಲಿದ್ದು, ಪಾಶ್ಚಿಮಾತ್ಯರಂತೆ ಕಾಯಕ ನಿಷ್ಠರಾಗಿ, ಕಾರ್ಯ ಪ್ರವೃತ್ತರಾದರೆ ಸುಖವು ಸಾಧ್ಯ. ಜನಸಂಖ್ಯಾ ನಿಯಂತ್ರಣದಲ್ಲಿ ನಾವು ಎಷ್ಟರ ಮಟ್ಟಿಗೆ ಯಶಸ್ಸುಗಳಿಸಬಲ್ಲೆವೋ, ಅಷ್ಟರ ಮಟ್ಟಿಗೆ ನಮ್ಮ ಸರಕಾರದ ಅಭಿವೃದ್ಧಿ ಯೋಜನೆಗಳ ಫಲ ಪಡೆಯಲು ಸಾಧ್ಯವಾದೀತು. ಮರಣವನ್ನು ಅನೇಕ ವೈಜ್ಞಾನಿಕ–ವಿಧಾನದಿಂದ, ವೈದ್ಯಕೀಯ ಬಲದಿಂದ ನಿಯಂತ್ರಿಸಿದಂತೆ, ಜನನ ಪ್ರಮಾಣವನ್ನು ಸಂಯಮ ಜೀವನದಿಂದ ನಿಯಂತ್ರಿಸಿದರೆ, ಪ್ರಾಚೀನ ಸಂಸ್ಕೃತಿಯನ್ನು ಉಳಿಸಿ ಬೆಳೆಸಿ ಕೊಂಡಂತೆ. ಇದರಿಂದ ಕುಟುಂಬ ಕಲ್ಯಾಣ ಸಾಧ್ಯ. ಇದಕ್ಕಾಗಿ ಎಲ್ಲರೂ ಆಲಸ್ಯರಹಿತರಾಗಿ ನಿರಂತರ ಪರಿಶ್ರಮಿಸಬೇಕು. ದುಡಿದಂತೆ ದೂರಹುದು ಮೆತ್ತಿರುವ ಕೊಳಕು. ಸಂಸಾರವು ಬೆಳ್ಳಿ ಬಟ್ಟಲವಾಗಿ ತೂಗು ತೊಟ್ಟಿಲವಾಗಬೇಕು. "ಇಲ್ಲಿಯೂ ಸಲ್ಲುವ ಅಲ್ಲಿಯೂ ಸಲ್ಲುವ" ಸತ್ಯ ಶುದ್ಧ ಕುಟುಂಬವಾಗಬೇಕು. "ನುಡಿದರೆ ಲಿಂಗಮೆಚ್ಚಿ ಅಹುದಹುದೆನ್ನಬೇಕು". "ನುಡಿಯೊಳಗಾಗಿ ನಡೆಯೊಳು ತಪ್ಪದ" ಸ್ಥಿತ–ಪ್ರಜ್ಞೆ ಅರಳಬೇಕು. ಇದುವೇ ಜೀವನ ಕಲೆ, ಇದುವೇ ಕುಟುಂಬ ಕಲೆ; ಇದೇ ಕುಟುಂಬ ಕಲ್ಯಾಣ, ಇದೇ ರಾಷ್ಟ್ರ ಕಲ್ಯಾಣ.

---

ಬೆಂಗಳೂರು ಹಾಗೂ ಧಾರವಾಡ ಬಾನುಲಿಯಲ್ಲಿ, ದಿ. ೧೭–೧೦–೭೮ ರಂದು ಪ್ರಸಾರವಾದ ಭಾಷಣ.

## ವಿಶ್ವಮಾನವ ಬಾಪೂಜಿ

ವಿಶ್ವಮಾನವ ಬಾಪು, ಮಾನವಕೋಟಿಗೆ ಆಧ್ಯಾತ್ಮ ದೀಪ. ಆಧ್ಯಾತ್ಮದ ಹೆದ್ದಾರಿಯಲ್ಲಿ ರಾಜಕೀಯ ರಥವನ್ನು ಎಳೆದು, ಅದಕ್ಕೆ ಪ್ರೋಜ್ವಲ ಶಕ್ತಿಯನ್ನು ನೀಡಿದ ದಿವ್ಯಾತ್ಮ ಲೋಕಮಾನ್ಯ. ಭರತ ಖಂಡದ ಮಹಾ ಬೆಳಕಿಗೆ ಕಾರಣ ಕರ್ತನಾಗಿ, ಪ್ರತಿಯೊಬ್ಬರ ಉಸಿರಿನಲ್ಲಿಯೂ ಹೆಸರುಳಿಸಿಕೊಂಡ ಜಾಗ್ರತ ಚೈತನ್ಯ. ಭಾರತ ಮಾತೆಗಾಗಿ ಹಾಗೂ ಸ್ವಾತಂತ್ರ್ಯಕ್ಕಾಗಿ ಅಹೋರಾತ್ರಿ ದುಡಿದು, ಆತ್ಮ ಸ್ವಾತಂತ್ರ್ಯ ಸೂರ್ಯನ ಬೆಳಕಿನಲ್ಲಿ ಬೆಳಗಿ, ಭಾರತಕ್ಕೆ ಸ್ವಾತಂತ್ರ್ಯ ನೀಡಿದ ರಾಷ್ಟ್ರಪಿತ. ಸ್ವಾತಂತ್ರ್ಯ ಶಿಲ್ಪಿ ಮಹಾತ್ಮಾ ಗಾಂಧಿಯು, ವಿಶ್ವಸೇವಕರ ಪಂಕ್ತಿಯಲ್ಲಿ ನಿಂದು, ನಾಗರಿಕತೆಯ ರಾಜಕೀಯ ಕುಟಿಲ ತಂತ್ರಕ್ಕೆ ಆಧ್ಯಾತ್ಮ ಮಂತ್ರವನ್ನು ಪಠಿಸಿ, ಜನಮನದ ಹಗೆತನವನ್ನು, ಸತ್ಯ ಅಹಿಂಸೆಯ ಬೆಳಕಿನಲ್ಲಿ ಕಳೆದು, ಶಾಂತಿಯ ಹಸರು ಹುಲ್ಲಿನ ಮೇಲೆ ಕುಳ್ಳಿರಿಸಿ, ಮಾನವೀಯತೆಯ ಶಕ್ತಿಯನ್ನು ನೀಡಿದ ದಿವ್ಯಜ್ಯೋತಿ. ಕಾರಾಗೃಹದಲ್ಲಿದ್ದರೂ ಕ್ರೋಧ ಕಾರ್ಪಣ್ಯಗಳನ್ನು ಧಿಕ್ಕರಿಸಿ, ಭಾರತ ಮಾತೆಯ ಹಿತಚಿಂತನೆಯಲ್ಲಿಯೇ ಜೀವನವನ್ನು ಸವಿಸಿ, ಸಣ್ಣಾಗಿ, ಜನಮನೋ ಮಂದಿರದ ಭಾವಗುಡಿಯಲ್ಲಿ ಪೂಜಿಸಿಕೊಳ್ಳುತ್ತಿರುವ ಮಹಾತ್ಮಾ ಗಾಂಧಿಯು ದೀನ ದಲಿತರ ಸೇವೆ ಮಾಡಿ; ಈಶ್ವರ ಕೃಪಾ ಬಲದ ಯಾಚನೆಯ ಸಲುವಾಗಿ ಭೂಮಾತೆ ಕಳುಹಿಸಿದ ದೂತ ಭಿಕ್ಷು. ಅಂತಶ್ಚಕ್ಷುವಿನಿಂದ ಜಗವೆಲ್ಲವನ್ನು ನಿರೀಕ್ಷಿಸಿ, ಭಾರತ ಮಾತೆಯ ಪಾದವನ್ನು ಪ್ರಕ್ಷಾಲನ ಮಾಡಿ; ಭಾರತ ಮಾತೆಯ ಆಶೀರ್ವಾದವನ್ನು ಪಡೆದು ಭಾರತ ಮಾತೆಯನ್ನು ಪರದಾಶ್ಯ ಶೃಂಖಲೆಯಿಂದ ಬಿಡಿಸಿ, ಭರತ ಖಂಡದ ಉಜ್ವಲ ಶಕ್ತಿಯನ್ನು ನೀಡಿದ ಧೀಮಂತ. ಆತ್ಮಶ್ರೀ ಸಮನ್ವಿತ ಶ್ರೀಮಂತ. ಬಡವರ ಬಾಳಿನ ಭಾಗ್ಯ ಬಂಧು. ಜಗತ್ತಿನ ದಿಗ್–ದಿಗಂತದಲ್ಲಿ ಭಾರತದ ಬಾವುಟವನ್ನು ಹಾರಿಸಿ, ಆಧ್ಯಾತ್ಮ ಪ್ರಭಾವದ ಪ್ರಭೆಯನ್ನು ಪ್ರಚುರಗೊಳಿಸಿ, ಭಾರತೀಯರ ಪರಮೋಚ್ಚ ಸಂಸ್ಕೃತಿಯ ಪರಂಪರೆಯನ್ನು ವಿದೇಶಗಳಲ್ಲಿಯೂ ತಿಳಿಸಿ, ರಕ್ತರಹಿತ ಕ್ರಾಂತಿಯ ಮಹಿಮೆಯನ್ನು ತೋರ್ಪಡಿಸಿ, ಬೆರಗುಗೊಳಿಸಿರುವ ಸ್ವಾತಂತ್ರ್ಯ ಸೂರ್ಯ, ಮಹಾತ್ಮಾ ಗಾಂಧೀಜಿ. ಪ್ರತಿಯೊಬ್ಬ ಭಾರತೀಯರ ನಾಡಿ ನಾಡಿಯಲ್ಲಿಯೂ ನವ ಚೈತನ್ಯವನ್ನು ಪ್ರವಹಿಸಿದ್ದಕ್ಕಾಗಿ ಭಾರತದ ಶಕ್ತಿ ದಿನ ದಿನಕ್ಕೂ ಹೆಚ್ಚಾಗುತ್ತಲಿದೆ. ಪೂರ್ಣ ಮನುಷ್ಯತ್ವದ ಸಂಪೂರ್ಣ ವಿಕಾಸವನ್ನು ಪಡೆದು ಭಾರತವನ್ನು ಎಚ್ಚರಿಸಿ ಹೋಗಿದ್ದಾನೆ. ಐಹಿಕ ಸುಖೋಪ ಭೋಗಕ್ಕೆ ತಿಲಾಂಜಲಿಯಿತ್ತು, ರಾಷ್ಟ್ರಸೇವೆ, ಹರಿಜನೋದ್ಧಾರ, ರಾಜಕೀಯ, ಸಾಮಾಜಿಕ, ಆರ್ಥಿಕ, ಪ್ರಗತಿಗಾಗಿ ಹಗಲಿರುಳೂ ಪರಿಶ್ರಮವಹಿಸಿ, ಪರಿಪೂರ್ಣತೆಯನ್ನು ನೀಡಿರುವದರ ಫಲವಾಗಿ ಭಾರತೀಯರು ಸ್ವಾತಂತ್ರ್ಯ ಸುಖವನ್ನು ಅನುಭವಿಸುತ್ತಿದ್ದೇವೆ. ಆನಂದ ತುಂದಿಲರಾಗಿದ್ದೇವೆ.

ಗಾಂಧೀಜಿಯವರ ಜೀವನವೆಂದರೆ ಸತ್ಯ ಅಹಿಂಸೆಗಳ ಮಹಾಮನೆಯಿದ್ದಂತೆ. ಗಾಂಧೀಜಿಯವರ ಸತ್ಯ ಅಹಿಂಸೆಗಳು ಕೇವಲ ವಾಯು ಮಂಡಲದಲ್ಲಿ ಸುಳಿಯದೆ, ಆಚರಣೆ

ಯಲ್ಲಿ ತಂದು, ವಿಚಾರದಲ್ಲಿ ಮಿಂದು, ಸತ್ಯ ಸಂಶೋಧಕರಾಗಿ, ಸತ್ಯ ಅಹಿಂಸಾ ಧರ್ಮದ ಸ್ಮೃತಿಕಾರರಾಗಿದ್ದಾರೆ. ದ್ರಷ್ಟಾಕಾರರಾಗಿದ್ದಾರೆ. ಸತ್ಯ ಅಹಿಂಸೆಗಳ ಮಹಾಬೆಳಕನ್ನು ಕಾಣಬೇಕಾದರೆ, ಮಹಾತ್ಮಾ ಗಾಂಧಿಯವರ ಜೀವನದಲ್ಲಿಯೇ ಕಂಡುಕೊಳ್ಳಬೇಕು. ಕಾಯ ಕೃಶದಂತೆ ಕಂಡರೂ, ಬಿರುಗಾಳಿಯಂತೆ ಬರುವವಲ್ಲ. ಕ್ಲೇಶಗಳನ್ನು ತಮ್ಮ ಅಧ್ಯಾತ್ಮಶಕ್ತಿ ಹಾಗೂ ಸತ್ಯ ಅಹಿಂಸೆಗಳ ಪ್ರಭಾವದಿಂದ ದೂರೀಕರಿಸುತ್ತಿದ್ದರು. ಸನಾತನ ಧರ್ಮದ ಬೀಜ ಮಂತ್ರವಾದ "ಸತ್ಯನ್ನಾಸ್ತಿ ಪರೋ ಧರ್ಮಃ" ಹಾಗೂ ಜೈನ ಸಂಪ್ರದಾಯದ ಬೀಜ ಮಂತ್ರವಾದ "ಅಹಿಂಸಾ ಪರಮೋಧರ್ಮಃ" ಇವುಗಳ ಸಮನ್ವಯವು ಮಹಾತ್ಮಾ ಗಾಂಧಿಯವರ "ಸತ್ಯಾಗ್ರಹ"ದಲ್ಲಿ ಕಂಡು ಬರುತ್ತಿತ್ತು

ಮಹಾತ್ಮಾ ಗಾಂಧಿಯವರು ತಮ್ಮದೊಂದು ಗ್ರಂಥದಲ್ಲಿ ಈ ರೀತಿ ಬರೆದಿದ್ದಾರೆ:

"ಅಹಿಂಸೆ ನನ್ನ ಶ್ರದ್ಧೆಯ ಪ್ರಥಮ ಚರಣ. ನನ್ನ ಸಿದ್ಧಾಂತದ ಕೊನೆಯ ಚರಣವೂ ಅದೇ. ಈ ಸಿದ್ಧಾಂತದ ಪ್ರಸಾರಕ್ಕಾಗಿ ನನ್ನ ಜೀವನ ಮೀಸಲು, ಪ್ರಪಂಚದ ಎಲ್ಲ ಧರ್ಮ ಸಂಸ್ಥಾಪಕರ, ಮಹಾವೀರ, ಡೇನಿಯಲ್, ಏಸು, ಮಹಮ್ಮದ, ನಾನಕ್ ಮುಂತಾದ ಅನೇಕರ ಉಪದೇಶ ವಾಣಿಗಳಲ್ಲಿ ನಾನು ಅದನ್ನು ಕಾಣುತ್ತೇನೆ. ಪ್ರತಿ ವಸ್ತುವಿಗೂ ಅಂಗಗಳು ಎರಡು, ಬಾಹ್ಯ, ಆಂತರಿಕ. ಆದರೆ ನನ್ನ ದೃಷ್ಟಿಯಲ್ಲಿ ಈ ವಿಭಾಗ ಕೇವಲ ತೋರಿಕೆಯ ವಿಷಯ ಮಾತ್ರ. ಬಾಹ್ಯದ ಸತ್ವವಿರುವದು ಆಂತರಿಕಕ್ಕೆ ನೀಡುವ ಸಹಕಾರದಲ್ಲಿ, ಅಸಹಕಾರವನ್ನುಳಿದು ಅದಕ್ಕೆ ಅರ್ಥವಿಲ್ಲ. ಎಲ್ಲ ನಿಜವಾದ ಕಲೆಯೂ ಆತ್ಮದ ಒಂದು ಆವಿಷ್ಕರಣ. ಸತ್ಯವೆಲ್ಲಿದೆಯೋ ಅದು ಪರಮಸುಂದರ. ನಾನು ಸತ್ಯದಲ್ಲಿ ಅಥವಾ ಸತ್ಯದ ಮೂಲಕ ಸೌಂದರ್ಯವನ್ನು ಕಾಣುತ್ತೇನೆ. ಸತ್ಯದ ಸಮ್ಯಕ್ ದರ್ಶನವೇ ಆತ್ಮ ಸಾಕ್ಷಾತ್ಕಾರ. ಅದೇ ಜೀವನದ ಅಂತಿಮ ಗುರಿ. ಅಂದರೆ "ಪರಿಪೂರ್ಣತೆಯ ಸಿದ್ಧಿ" ಎಂದು ಮುಂತಾಗಿ ಅನುಭವ ವಾಣಿಯಿಂದ ಸಾರಿದ್ದಾರೆ.ಗಾಂಧಿಯವರು ಉಪವಾಸ ವ್ರತವನ್ನು ಕೈಕೊಂಡು ಆಚರಿಸುವದಾದರೂ, ಆತ್ಮನಿಗ್ರಹಕ್ಕಾಗಿ, ಸತ್ಯ ಸಂಶೋಧನೆಗಾಗಿ ಮಾಡುತ್ತಿದ್ದರು. ಉಪವಾಸದ ಮಹಾವ್ರತದಿಂದ ಅತ್ಯದ್ಭುತ ಕಾರ್ಯಗಳನ್ನು ಮಾಡಿಸಿ ತೋರಿಸುತ್ತಿದ್ದರು. "ನಿಸ್ವಾರ್ಥ ಪ್ರೇಮ, ಜನಸೇವೆ ಮುಂತಾದ ಸದುದ್ದೇಶಗಳಿಂದ ಇತರರ ಒಳಿತಿಗಾಗಿ ಮಾಡುವ ಉಪವಾಸಗಳೆಂದು ನಿಷ್ಫಲವಾಗುವದಿಲ್ಲ" ವೆಂದು ಗಾಂಧಿಯವರು ಹೇಳುತ್ತಿದ್ದರು. ಮಹಾತ್ಮಾ ಗಾಂಧಿಯವರು ನಮ್ಮನ್ನಗಲಿ ಹೋಗಿದ್ದರೂ, ವಿಚಾರ ಪೂರ್ಣ ತತ್ವಗಳನ್ನು ನಮ್ಮೆದುರು ಇಟ್ಟು ಹೋಗಿದ್ದಾರೆ. ನುಡಿದಂತೆ ನಡೆದು ತೋರಿಸಿದ್ದಾರೆ. ಇಂದಿಗೂ ಭಾರತಕ್ಕಿರುವ ಬೆಳಕು ಅವರದೆ! ಆ ಶಕ್ತಿಯ ಬೆಳಕು ನಮ್ಮನ್ನು ಕೈಹಿಡಿದು, ತನ್ನ ದಾರಿಯತ್ತ ಕರೆದೊಯ್ಯಲೆಂದು ಅಂತಃಕರಣ ಪೂರ್ವಕ ಜಗದೀಶನನ್ನು ಪ್ರಾರ್ಥಿಸೋಣ.

**ಯೋಗ**

ಅಂತರಂಗ ಬಹಿರಂಗ ಶುದ್ಧಿ ಮಾಡಿಕೊಳ್ಳಲು ಯೋಗವು ಅದೊಂದು ದೊಡ್ಡ

ಸಾಧನ. ಯೋಗವು ಮಾನವನಿಗೆ ಬೆಳಕಿನ ದಾರಿಯನ್ನು ತೋರಿಸುವದಲ್ಲದೆ, ಸಂಸಾರ ಸಾಗರವನ್ನು ದಾಟಿಸಿ, ಕರ್ತವ್ಯದ ಅಮೃತ ಫಲವನ್ನು ನೀಡುವ ಕಲ್ಪತರುವಾಗಿದೆ, ಬಂಧ ಮೋಕ್ಷಗಳಿಗೆ ಮೂಲಕಾರಣವಾಗಿರುವ ಮನಸ್ಸಿನ ನಿರೋಧಕ್ಕೆ ಯೋಗಸಾಧನೆಯೇ ಮೊದಲು ಮೆಟ್ಟಲು. ನಿಷ್ಕಾಮ ಕರ್ಮದ ಆಚರಣೆಯೇ ಕರ್ಮದ ಕೌಶಲ್ಯ. ಅದೇ ಕರ್ಮದ ಕಲೆ. ಕರ್ಮ ಮಾಡದೆ ಭವ ಬಂಧನದಿಂದ ದೂರಾಗಲು ಅಸಾಧ್ಯ. ಆದರೆ ಕರ್ಮ ಮಾಡಬೇಕು. ಕರ್ಮ ಮಾಡಿದರೂ ಮಾಡದಂತೆ ಜೀವನ ಸಾಗಿಸಿರಬೇಕು. ಹಲಸಿನ ಹಣ್ಣನ್ನು ತಿಂದರೂ, ಮೇಣವನ್ನು ಅಂಟಿಸಿಕೊಳ್ಳದೆ, ಕೈಗೆ ಜಿಡ್ಡನ್ನು ಹಚ್ಚಿ ಕೊಳ್ಳದೆ ತಿಂದರೆ ಅದರ ತೊಳೆಯ ರುಚಿಯು ಅರ್ಥವಾಗುವದು. ಈ ಯೋಗ ಸಾಧನೆ ಯಿಂದ ಪವಿತ್ರ ಜೀವನ ಮಾಡಿಕೊಳ್ಳಲು ಪರಮಸಾಧನವಾಗುವದಲ್ಲದೆ ದೀರ್ಘಕಾಲದ ವರೆಗೆ ಬದುಕಲು ಹಾಗೂ ಆರೋಗ್ಯದಿಂದ ಇರಲು ಸಹಾಯಕವಾಗುವದು. ಯೋಗ ಶಕ್ತಿಯಿಂದ ಅಣಿಮಾದಿ ಅಷ್ಟ ಸಿದ್ಧಿಗಳ ಸಂಪ್ರಾಪ್ತಿಯಾಗಿ, ಇದಕ್ಕಿಂತಲೂ ಮಿಗಿಲಾಗಿ ಆತ್ಮಾನುಭೂತಿಯಾಗಿ, ಆತ್ಮಾನಂದವನ್ನು ಪಡೆದು ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವ ಮಹಾಶಕ್ತಿ ಈ ಯೋಗ ಶಕ್ತಿಯಲ್ಲಿ ಹುದುಗಿದೆ. ಅಂತೆಯೇ ಭಗವಾನ್ ಶ್ರೀ ಕೃಷ್ಣನು, "ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಂ" ಎಂದುದಾಗಿ ಅವರ ಮಹತಿಯನ್ನು ತಿಳಿಹೇಳಿದ್ದಾನೆ. ಜ್ಞಾನವಿಲ್ಲದ ಯೋಗ, ಯೋಗವಿಲ್ಲದ ಜ್ಞಾನ ಇವೆರಡೂ ನಿಷ್ಪ್ರಯೋಜಕ. ಇವೆರಡರ ಬಲದಿಂದ ಶಿವಯೋಗಿಗಳು ಯೋಗಸಿದ್ಧಿ ಯನ್ನು ಪಡೆಯುವರಲ್ಲದೆ ಚೈತನ್ಯವನ್ನು ಗಟ್ಟಿಗೊಳಿಸುತ್ತಾರೆ. ಶಿವಯೋಗ ಪ್ರದೀಪಿಕೆ ಯಲ್ಲಿ ಇದೇ ವಿಷಯವನ್ನು ಕುರಿತು "ಯೋಗತ್ ಸಂಜಾಯತೆ ಜ್ಞಾನಂ, ಜ್ಞಾನಾತ್ ಯೋಗಃ ಪ್ರವರ್ತತೇ। ದ್ವಯೋಃ ಸಂಸಿದ್ಧಯೇ ಭೂಮೌ ಶರೀರಂ ರಕ್ಷಯೇತ್ ಬಂಧಃ॥" ಎಂದು ಜ್ಞಾನ ಯೋಗಗಳ ಸಂಸಿದ್ಧಿಯನ್ನು ಸ್ಪಷ್ಟೀಕರಿಸಿದ್ದಾರೆ. ಯೋಗದಲ್ಲಿ ಯಮ ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಈ ರೀತಿ ಎಂಟು ತೆರನಾಗಿ ವಿಂಗಡಿಸಿದ್ದಾರೆ. ಈ ಯೋಗಾಂಗಗಳ ಸಾಧನೆಯಿಂದ ದೇಹ ಶುಚಿಯಾಗಿ ಚಿತ್ತ ಚಾಂಚಲ್ಯ ದೂರಾಗಿ, ಜ್ಞಾನೋದಯವಾಗುವದಲ್ಲದೆ, ಆತ್ಮಜ್ಞಾನ ಸ್ಫುರಿಸಿ ಮಹಾ ಘನಸಿದ್ಧಿ ಸಾಧ್ಯವಾಗುವದು. ಯಮ, ನಿಯಮ, ಆಸನ ಇವುಗಳ ಬಾಹ್ಯಾಂಗಗಳನ್ನು ಪವಿತ್ರ ಮಾಡಿದರೆ ಪ್ರಾಣಾಯಾಮ, ಪ್ರತ್ಯಾಹಾರಗಳು ಪಂಚಪ್ರಾಣ ಗಳನ್ನು ಪರಿಶುಭ್ರಗೊಳಿಸುವವು. ಧ್ಯಾನ, ಧಾರಣ, ಸಮಾಧಿ ಅಂತರಂಗ ಶುದ್ಧಿಗೆ ಭದ್ರ ಬುನಾದಿಯಿದ್ದಂತೆ ಶಿವಯೋಗಕ್ಕೆ ಹಠಯೋಗ ಸಾಧನ ಮಾತ್ರವಾಗುವದಲ್ಲದೆ ಪೂರ್ಣ ಸಂಸಿದ್ಧಿಯತ್ತ ಸಾಗಿಸುವ ವಿಧಾನವಾಗಲಾರದು. ಶಿವಯೋಗದ ಚರಮಗುರಿಯೇ ಲಿಂಗಾಂಗ ಸಾಮರಸ್ಯವೆಂದು ವೀರಶೈವ ಸಿದ್ಧಾಂತದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಚಿತ್ತವೃತ್ತಿ ನಿರೋಧವಾಗುತ್ತ ಹೋದಂತೆ ಶಿವನಲ್ಲಿ ಯೋಗವಾಗುವದೇ ಶಿವಯೋಗ. "ಸಮತ್ವಂ ಯೋಗ ಉಚ್ಯತೆ" ಗೀತೆಯ ಈ ನುಡಿಯು ಇದನ್ನೇ ಹೇಳುತ್ತದೆ. ಈ ಸಿದ್ಧ ಸ್ಥಿತಿಗೆ

ಏರಲು ಸಾಧನೆ, ಸಂಯಮ ಜೀವನದಲ್ಲಿರಬೇಕಾದ ಸಾಧಕನ ಮೊದಲ ಕಾರ್ಯ ಹಾಗೂ ಮುಖ್ಯಗುರಿ;ಆಧ್ಯಾತ್ಮಿಕ ಸಾಧನೆ ಮುಂದುವರಿಸಲು ನೀತಿಯೇ ಮುಖ್ಯ ತಳಹದಿ: ಮನಸ್ಸು ಮಲೀನವಾಗಿದ್ದರೆ, ಯೋಗವು ಸಾಧ್ಯವಾಗಲಾರದು; ನೀತಿ ಮತ್ತು ಯೋಗ ಒಂದಕ್ಕೊಂದು ಹೊಂದಿಕೊಂಡಿವೆ. ಯೋಗದರ್ಶನದಲ್ಲಿ ಪಿತರೆಂದು ಹೆಸರು ಪಡೆದ ಪತಂಜಲ ಮಹರ್ಷಿಗಳು ಸಹ ಯೋಗಶಾಸ್ತ್ರವು ಅಣಿಮಾ, ಗರಿಮಾ, ಲಘಿಮಾ, ಮಹಿಮಾ ಮೊದಲಾದ ಅಷ್ಟಸಿದ್ಧಿಗಳನ್ನು ಸಂಪಾದಿಸುವ ವಿದ್ಯೆಯೆಂದು ಪ್ರತಿಪಾದಿಸಿ, ಮುಂದೆ ಈಶ್ವರ ಸಾಕ್ಷಾತ್ಕಾರಕ್ಕೆ ಸಾಧನವಾಗುವದೆಂದು ವಿವರಿಸಿರುವರು. ಭಗವಾನ್ ಬುದ್ಧನೂ ಸಹ ಮೊದಲು ಯೋಗ ಸಾಧನೆಯನ್ನು ಮಾಡಿ, ಸಿದ್ಧಿಯನ್ನು ಪಡೆದು ಕೊಂಡಿದ್ದನೆಂದು ಪ್ರಾಚೀನ ಬೌದ್ಧ ಗ್ರಂಥಗಳಲ್ಲಿ ಕಾಣುತ್ತೇವೆ. ಯೋಗವು ಅದ್ಭುತ ಶಕ್ತಿ ಸಾಮರ್ಥ್ಯವನ್ನು ಗಳಿಸಲು ತುಂಬಾ ಸಹಕಾರಿಯಾಗಿದೆ. ಶರೀರ ಮತ್ತು ಮಾನಸಿಕ ವೃತ್ತಿಗಳನ್ನು ಸಹ ತನ್ನ ಸ್ವಾಧೀನವಿಟ್ಟುಕೊಳ್ಳಲು ಸಾಧ್ಯವಾಗುತ್ತದೆ. ಈ ಯೋಗವನ್ನು ತತ್ತ್ವವೇತ್ತರು ನಾಲ್ಕು ವಿಧವಾಗಿ ವಿಂಗಡಿಸಿದ್ದಾರೆ. "ಮಂತ್ರೋಲಯೋ ಹಠೋರಾಜ ಯೋಗಶ್ಚೇತಿ ಚತುರ್ವಿಧಮ್" ಮಂತ್ರವನ್ನು ಜಪಿಸುವವರಿಗೆ ಮಂತ್ರಯೋಗಿಗಳೆಂದು, ವಾಯುವೇಗದಂತಿರುವ ಮನವನ್ನು ನಿಲ್ಲಿಸಿ ಆತ್ಮ ಚಿಂತನದಲ್ಲಿಯಾಗಲಿ, ನಾದದಲ್ಲಾಗಲಿ, ತಲ್ಲೀನರಾಗುವವರಿಗೆ ಲಯ ಯೋಗಿಗಳೆಂದು, ಅಷ್ಟಾಂಗ ಮಾರ್ಗಗಳಿಂದಲೂ ಮುದ್ರಾ ಕರಣ ಬಂಧುಗಳಿಂದಲೂ ಅಥವಾ ಕುಂಭಕದಿಂದಲೂ ವಾಯುವನ್ನು ಸ್ವಾಧೀನ ಮಾಡಿ ಕೊಂಡವರು ಹಠಯೋಗಿಗಳೆಂದು, ಜ್ಞಾನದಿಂದ ಮನೋವೃತ್ತಿರಹಿತರಾಗಿ ಆ ಬ್ರಹ್ಮ ಸಾಕ್ಷಾತ್ಕಾರ ಪಡೆದವರು ರಾಜಯೋಗಿಗಳೆಂದು ಚನ್ನ ಸದಾಶಿವ ಯೋಗಿಗಳು ಕರೆದಿದ್ದಾರೆ. ಸೂರ್ಯನಿಗೆ ಮೇಘಾಚ್ಛಾದನವಾಗುವಂತೆ, ಆತ್ಮ ಸೂರ್ಯನಿಗೆ, ಬುದ್ಧಿ, ಮನಸ್ಸು, ಅಹಂಕಾರಾದಿ ಅಂತಃಕರಣಗಳು ಅಂಧಕಾರ ಆವರಿಸಿದಾಗ ಯೋಗಾಂಗಗಳ ಸಾಧನೆಯು ಅಗತ್ಯ. ಇಂತಹ ಅಗಾಧ ಯೋಗಶಕ್ತಿಯನ್ನು ಪಡೆದರೆ ಮಾತ್ರ ಆತ್ಮಸಿದ್ಧಿ. ಅಂತೆಯೇ ಮಹಾಯೋಗಿ ಅರವಿಂದರು ಯೋಗಸಾಧನೆಗೆ ಮಹತ್ವ ನೀಡಿದ್ದರು. ಭಗವದ್ಗೀತೆಯಿಂದ ಯೋಗಸಾಧನೆ, ಉಪನಿಷತ್ತಿನಿಂದ ಧ್ಯಾನದ ಮಾರ್ಗದರ್ಶನ, ಪಡೆದೆ ವೆಂದು ತಮ್ಮ ಗ್ರಂಥಗಳಲ್ಲಿ ಬರೆದಿದ್ದಾರೆ. ಪೂರ್ಣತ್ವ ಪಡೆಯುವ ಪ್ರಭಾವಕಾರಿ ಶಕ್ತಿಯೇ ಯೋಗವೆಂದು ಬಗೆದು ಯೋಗ ಸಾಧಿಸಿ ಪೂರ್ಣ ಯೋಗಿಗಳಾದರು. ಸಾಧಕರಿಗೆ ಮಾರ್ಗದರ್ಶಕರಾಗಿದ್ದಾರೆ. ಯೋಗವೆಂದೊಡನೆ ನಾವಿಂದು ಹೆದರಬೇಕಾಗಿಲ್ಲ. ಹೃದಯ ಹೂ ಅರಳಿಸಿ ಆತ್ಮವಿಕಾಸ ಮಾಡಿಕೊಳ್ಳುವ ಚಿಂತನ ಪ್ರಾರಂಭವಾದೊಡನೆಯೇ ಯೋಗ ಬೇಕೆಂದು ಅನ್ನಿಸುತ್ತದೆ. ಹೃದಯ ತೆರೆದು ಕರ್ಮ ಮಾಡುತ್ತಹೋದಲ್ಲಿ ಯೋಗವು ಸಹ ಸರಳವಾಗುತ್ತ ಹೋಗುತ್ತದೆ. "ಪದ್ಮಪತ್ರ ಮಿವಾಂಭಸ" ಜಲರಾಶಿಯ ಮಧ್ಯ ದಲ್ಲಿದ್ದ ಪದ್ಮಪತ್ರಕ್ಕೆ ನೀರು ಹತ್ತದಿರುವಂತೆ ಕರ್ಮಯೋಗಿಯಾದವನು ಸಂಸಾರ ಸಾಗರ ದಲ್ಲಿದ್ದರೂ, ಯೋಗಶಕ್ತಿಯಿಂದ ಸಂಸಾರ ಬಂಧನದಿಂದ ನಿರ್ಲಿಪ್ತನಿರುತ್ತಾನೆ. "ಆಳಿದು

ಕೊಡುವದೊಂದು ಯೋಗ, ಅಳಿಯದೆ ಕೊಡುವದೊಂದು ಯೋಗ, ಈ ಎರಡು ಯೋಗ ದೊಳಗೆ ಅಳಿಯದೆ ಕೊಡುವ ಯೋಗವರಿವುದು ಗುಹೇಶ್ವರಾ" ಪರಶಿವನ ಪ್ರಭೆಯಿಂದ ಒಳಗೆ ಅಂಗಕರಣಗಳನ್ನೆಲ್ಲ ಲಿಂಗ ಕಿರಣಗಳನ್ನಾಗಿ ಮಾಡಿಕೊಂಡು ಎರಡೆಂಬುದಳಿದು ಯೋಗ ರಹಸ್ಯದ ಸೂಕ್ಷ್ಮ ವಿವರಣೆ ತಿಳಿ ಹೇಳಿದ ಅಲ್ಲಮಪ್ರಭುವಿನ ಈ ಅಂತರ್ವಾಣಿ ಯೋಗ ಸಾಧಕರಿಗೆ ದಾರಿದೀಪ.

## ಸಾಧು ಸಂತರ ಸಂದೇಶ

ಭಾರತವು ಸಾಧು ಸಂತರ ಬೀಡು. ಅನೇಕ ಮಹರ್ಷಿಗಳು, ಯೋಗಿಗಳು, ತ್ಯಾಗಿಗಳು ಇಲ್ಲಿ ಜನ್ಮ ತಾಳಿ ತಮ್ಮ ದಿವ್ಯ ಶಕ್ತಿಯ ಪ್ರಭೆಯನ್ನು ಬೆಳಗಿ ಮಾನವ ಕುಲವನ್ನು ಉದ್ಧಾರ ಮಾಡಿದ್ದಾರೆ. ಧರ್ಮ ಧ್ವಜವನ್ನು ಎತ್ತಿ ಹಾರಿಸಿದ್ದಾರೆ. ಬಾಳಿ ನೇಳ್ಗೆಗೆ ದಾರಿದೀಪವಾಗಿದ್ದಾರೆ. ಆಧ್ಯಾತ್ಮದ ಹಸಿವಿನಿಂದ ಬಳಲುತ್ತಿರುವವರಿಗೆ ಜ್ಞಾನದ ಅನ್ನವನ್ನು ನೀಡಿದ್ದಾರೆ. ಅವರು ಅಂದು ನುಡಿದ ದಿವ್ಯ ಸಂದೇಶ ನಮಗಿಂದು ತಾರಕ ಮಂತ್ರಗಳಾಗಿದ್ದಾವೆ. ಭವಬಂಧನವನ್ನು ಬಿಡಿಸುವ ನುಡಿ ಮುತ್ತುಗಳಾಗಿವೆ. ಜಾಗತಿಕ ವಿಶ್ವಶಾಂತಿಗೆ ದಾರಿದೀಪಗಳಾಗಿದ್ದಾವೆ. ಅಂದಿನ ಸಾಧು ಸಂತರು ಅಹೋರಾತ್ರಿ ಕಷ್ಟ ಪಟ್ಟು ದುಡಿದು ದೇವ ಭಾವವನ್ನು ಪಡೆದು, ತಮ್ಮ ಅನುಭವ ರಸ ಪಾಕವನ್ನು, ಬಿಟ್ಟು ಹೋಗಿರುವದರಿಂದ, ನಮಗಿಂದು ಕಷ್ಟ ಪರಂಪರೆಯನ್ನು ನಷ್ಟಮಾಡಿಕೊಳ್ಳಲು ಅನುಕೂಲ ವಾಗಿದೆ. ಭಾವೈಕ್ಯವನ್ನು ಪಡೆಯಲು ಹಾಗೂ ಸುಮಧುರ ಆಧ್ಯಾತ್ಮಿಕ ಬಾಂಧವ್ಯವನ್ನು ಹೆಚ್ಚಿಸಲು ಸುಂದರ ಸುಗಂಧ ಪುಷ್ಪಗಳಂತಿವೆ. ಅಧರಕ್ಕೆ ಕಹಿ ಎನಿಸಿದರೂ ಉದರಕ್ಕೆ ಸಿಹಿ ನೀಡುವ ಅಮೃತ ಬಳ್ಳಿಯಂತಿವೆ. ಸಾಧು ಸಂತರ ದೃಷ್ಟಿಯಲ್ಲಿ ಮಾನವ ಕುಲೋದ್ಧಾರವೇ ಎದುರಿಗೆ ಕಾಣುತ್ತಿದೆ. ಅವರ ಬಳಿಯಲ್ಲಿ ಸಂಕುಚಿತ ವಿಚಾರಗಳು ಸುಳಿಯಲಾರವು. ಎಲ್ಲರೂ ದೇವನೆಡೆಗೆ ಹೋಗುವ ದಾರಿಯನ್ನೇ ತೋರಿಸುತ್ತಾರೆಯೇ ಹೊರತು, ತಾಮಸೀಯ ಪ್ರವೃತ್ತಿಯ ಭಾವನೆಯು ಎಳ್ಳನಿತೂ ಬರಲಾರದು. ಅಲ್ಲಿ ಕಾಣುವದು ಕೇವಲ ತಿಳಿ ಬೆಳಗಿನ ಹೊಂಗಿರಣ, ಮಧುರ ರಸವನ್ನೀಯುವ ಜೇಂಗೊಡ. ಸುತ್ತೆಲ್ಲ ನಿರುಕಿಸಿದರೂ ಅನುಭವಾಮೃತದ ಸಿಹಿ ರಸ. ಸಾಧು ಸಜ್ಜನರಾದವರು ತೋರಿ ಸುವ ದಾರಿ ಒಂದೇ ಬಗೆಯಾಗಿದೆ. ದಾರಿಗಳು ಮುಟ್ಟುವ ಗುರಿ ಒಂದ. ಇದೇ ಭಾವವನ್ನು ಪುಷ್ಪದತ್ತರು ತಮ್ಮದೊಂದು ಗ್ರಂಥದಲ್ಲಿ ಈ ರೀತಿ ವಿವರಿಸಿದ್ದಾರೆ.

ತ್ರಯೀ ಸಾಂಖ್ಯಂ ಯೋಗಃ ಪಶುಪತಿ
ಮತಂ ವೈಷ್ಣವ ಇತಿ|
ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ
ಪಥ್ಯ ಮಿತಿಚ||
ರುಚೀನಾಂ ವೈಚಿತ್ರ್ಯಾತ್ ರುಜು

ಕುಟಿಲ ನಾನಾ ಪಥ ಜು ಷಾಂ।
ನೃಣಾಮೇಕೋ ಗಮ್ಯಸ್ತ್ವಮಸಿ
ಪಯಸಾಂ ಅರ್ಣವ ಇವ॥

ಅಂದರೆ ಅನೇಕ ಸ್ಥಳಗಳಲ್ಲಿ ಹುಟ್ಟಿದ ಅನೇಕಾನೇಕ ನದಿಗಳು ಕೊನೆಗೆ ಯಾವ ಪ್ರಕಾರ ಸಾಗರವನ್ನು ಸೇರುವವೋ ಅದೇ ಪ್ರಕಾರ ಓ ಪರಮೇಶ್ವರನೇ ಅನೇಕ ರೀತಿಯಾಗಿ ತತ್ತ್ವಗಳನ್ನು ಪ್ರತಿಪಾದಿಸಿದ್ದರೂ ಅವರೆಲ್ಲರೂ ಅಂತ್ಯದಲ್ಲಿ ನಿನ್ನನ್ನೇ ಸೇರುತ್ತಾರೆ. ಈ ಉಕ್ತಿ ನಮ್ಮೆಲ್ಲರನ್ನು ಬಡಿದೆಬ್ಬಿಸುವ ತಾರಕ ಮಂತ್ರವಾಗಿದೆ.

ಒಂದೆಡೆ ಮಹಾತ್ಮಾ ಬಸವಣ್ಣನವರು ಸಹ,

"ದೇವನೊಬ್ಬ ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ ಕಾಣಿರೊ"

ಎಂದು ಹೇಳಿದ ವಚನದಲ್ಲಿಯೂ ಇದೇ ಭಾವವು ವ್ಯಕ್ತವಾಗುತ್ತದೆ.

ಮಹಾತ್ಮರ ಕಾರ್ಯಸಿದ್ಧಿಯು ಅವರ ವ್ಯಕ್ತಿತ್ವ ಪ್ರಭಾವದಿಂದ ಹಾಗೂ ಅವರ ಸತ್ತ್ವಬಲದಿಂದ ಆಗುತ್ತದೆ. ಶರಣರ ಅಮರ ಜೀವನವು ನಮಗೆ ಮಾರ್ಗದರ್ಶನ ನೀಡುವ ಮೈಲುಗಲ್ಲುಗಳಾಗಿವೆ. ಮಹಾತ್ಮಾ ಬಸವಣ್ಣ, ವೈರಾಗ್ಯನಿಧಿ ಅಕ್ಕಮಹಾದೇವಿ, ಸರ್ವಜ್ಞ, ಯಾಜ್ಞವಲ್ಕ್ಯ, ವಾಲ್ಮೀಕಿ, ಕಬೀರದಾಸ, ಪುರುದರದಾಸ, ಜಗನ್ನಾಥದಾಸ, ಸ್ವಾಮಿ ವಿವೇಕಾನಂದ, ಅರವಿಂದ ಯೋಗಿಗಳು, ಮಹಾತ್ಮಾ ಗಾಂಧಿ, ಕುಮಾರ ಯೋಗಿಗಳು ಮುಂತಾದವರೆಲ್ಲರೂ ತಮ್ಮ ಪವಿತ್ರ ಜೀವನದಿಂದ ರಾಷ್ಟ್ರಕ್ಕೆ ದಿವ್ಯಶಕ್ತಿಯನ್ನು ನೀಡಿದ ಮಹಾ ಮಹಿಮರು. ಇವರೆಲ್ಲರ ಅನುಭವಸಾಗರದಲ್ಲಿ ಈಜಿದರೂ, ಮುಳುಗಿದರೂ ಸಹ ಕಂಡುಬರುವದು ಒಂದೇ ಗುರಿ, ಒಂದೇ ಜ್ಯೋತಿ. ಕಬೀರರ ಭಾಷೆಯಲ್ಲಿಯೇ ಹೇಳಬೇಕೆಂದರೆ: "ಸಾಹೇಬ ಮೇರಾ ಏಕ ಹೈ, ದುಜ್ಯಕಹಾ ನ ಜಾಯ್। ದೂಜಾ ಸಾಹೇಬ ಜೊ ಕಹೂಂ ಸಾಹೇಬ ಖರಾ ರಿಸಾಯ್।" ಅಂದರೆ ಈಶ್ವರನೊಬ್ಬನೇ ಹೊರತು, ಇಬ್ಬರಿಲ್ಲವೆಂದು ಈ ಶ್ಲೋಕದ ಭಾವ. "ಸಮಝೌ ತೋ ಘರ ಮೇ ರಹೇ ಪರಸಾ ಪಲಕ್ ಲಗಾಯ। ತೆರಾ ಸಾಹೇಬ ತುಝು ಮೆ ಅನತ ಕಹೂಂ ಮತ್ ಜಾಯ್।" ಅಂದರೆ ಈಶ್ವರನು ನಿನ್ನಲ್ಲಿಯೇ ಇರುವನೆಂದು ಮನಗಂಡಲ್ಲಿ ನೀನು ಮನೆಯಲ್ಲಿಯೇ ಇದ್ದು, ಧ್ಯಾನದಿಂದ ಅವನನ್ನು ಅನುಭವಿಸು. ಅನ್ಯತ್ರ ಹೋಗುವ ಅವಶ್ಯಕತೆಯಿಲ್ಲ. ಒಂದೆಡೆ ಜಗನ್ನಾಥದಾಸರು ಮದಮತ್ಸರವ ಬಿಡದ ತನಕ ವಿಧವಿಧದ ಸಾಧನ ಮಾಡಲೇನೋ, ಆಧ್ಯಾತ್ಮಿಕ ಜೀವನವನ್ನು ಸಾಗಿಸಲು ಮದ ಮತ್ಸರಗಳನ್ನು ತೊಲಗಿಸಿದರೆ ಮಾತ್ರ ದೇವನೆಡೆಗೆ ಸಾಗಲು ಮುಕ್ತದ್ವಾರವೆಂದು ತಿಳಿಭಾಷೆಯಲ್ಲಿ ತಿಳಿಸಿದ್ದಾರೆ. "ಜ್ಞಾನವೇ ಶಕ್ತಿ, ಶಕ್ತಿಯೇ ಜೀವನ, ಅಜ್ಞಾನವೇ ದೌರ್ಬಲ್ಯ, ದೌರ್ಬಲ್ಯವೇ ಮರಣವೆಂದು" ರಮಣ ಮಹರ್ಷಿಗಳು ಹೇಳಿದರೆ ಮಹಾತ್ಮಾ ಗಾಂಧಿಯವರು:

Life is greater than all art, I would go even further and declare that than man whose life comes nearest to perfection in the greatest artist. ಸಾಧನೆ ಬಲಿತು ಸಿದ್ಧಿಯತ್ತ ಸಾಗಿ ಪೂರ್ಣತೆಯನ್ನು ಪಡೆಯುವದೇ ಆಧ್ಯಾತ್ಮಿಕ ಜೀವನದ ಪರಮಗುರಿ ಎಂದು ಅರುಹಿದ್ದಾರೆ. "ಚಂದನವ ಕರಗಿಸಲು| ಬೆಂದು ಪರಿಮಳವಕ್ಕು ಸಂದರಿವನರಿದ ಸತ್ಪುರುಷರೆನಿಪವರು| ನೊಂದು ಸೈರಿಪರು ಸರ್ವಜ್ಞ". ಆದಕಾರಣ ವಿಭೂತಿಗಳು ಬಿಟ್ಟುಹೋಗಿರುವ, ಜ್ಞಾನಾಮೃತ ಸಂಪತ್ತಿನಿಂದ ಕೂಡಿರುವ ಜೀವನ ಸಂದೇಶ ನಮ್ಮೆಲ್ಲರ ಬಾಳ್ಬೆಳಕಿಗೆ ಕೈದೀವಿಗೆಯಾಗಲಿ.

## ಭವಿಯು ಭಕ್ತನಾಗುವ ಬಗೆ

"ಭವಿಯು ಭಕ್ತನಾಗುವ ಬಗೆಯೆಂದೊಡೆ
ಕಾಮ ಕ್ರೋಧಂಗಳ ಗೆದ್ದಿರಬೇಕು.
ಮದ ಮತ್ಸರಂಗಳ ಕಳೆದಿರಬೇಕು.
ರಾಗ ದ್ವೇಷಂಗಳ ಸುಟ್ಟಿರಬೇಕು.
ಅಷ್ಟಮದಂಗಳ ಬಿಟ್ಟಿರಬೇಕು.
ದುರ್ಗುಣಂಗಳ ಮೆಟ್ಟಿರಬೇಕು.
ಸದಾಚಾರ ಸದ್ವರ್ತನೆಯುಳ್ಳ ಇಂತಪ್ಪ ಭಕ್ತನಲ್ಲಿ
ಭವಬಂಧನವೆಲ್ಲಿಯದೋ?
ಭ್ಯೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ.

ಭವಬಂಧನದಲ್ಲಿದ್ದು, ಭಾವದಲ್ಲಿ ಭ್ರಾಂತಿಯನ್ನು ತುಂಬಿ, ಕಾಯಕದಲ್ಲಿ ಮಾಯೆಯನ್ನು ತುಂಬಿ, ಮನದಲ್ಲಿ ಮೋಹವನ್ನು ತುಂಬಿಕೊಂಡಿರುವವರೇ ಭವಿಗಳು. ಸತ್ಯ ಸದಾಚಾರ ಸದ್ವರ್ತನೆಯಲ್ಲಿದ್ದು, ಆತ್ಮಶಕ್ತಿಯನ್ನು ಪಡೆದು, ಆತ್ಮಾನುಸಂಧಾನದಲ್ಲಿ ನಿರತರಾಗಿರುವವರೇ ಭಕ್ತರು. ಅಂದರೆ ಮರೆವಿನ ಮಾನವರೇ ಭವಿಗಳು. ಅರಿವಿನ ಶರಣರೇ ಭಕ್ತರು. ಭವಿಯು ಭವಬಾರಿಯಾದರೆ, ಭಕ್ತನು ಭವ ವಿದೂರನಾಗಿರುತ್ತಾನೆ. ಅವನಲ್ಲಿ ಜಾಗೃತ ಚೈತನ್ಯ ಮನೆ ಮಾಡಿಕೊಂಡಿರುತ್ತದೆ. ಭಾವ ಪುಷ್ಪವನ್ನು ವಿಕಸಿತ ಮಾಡಿಕೊಂಡು ಆತ್ಮಪ್ರಭೆಯಲ್ಲಿ ಬೆಳಗುತ್ತಾನೆ. ಆತ್ಮ ಸೌಂದರ್ಯಕ್ಕೆ ಅವನು ಆತುರಪಡುತ್ತಾನೆ. ಬಹಿರಂಗ ಅಂತರಂಗಗಳೆರಡನ್ನು ಶುದ್ಧಿ ಮಾಡಿಕೊಂಡು ಸಿದ್ಧನಾಗಬಯಸುತ್ತಾನೆ. ಮುಕ್ತಿ ದಾರಿಯೇ ಅವನಿಗೆ ಹೆದ್ದಾರಿ. ಸದ್ಗುಣಗಳೇ ಆಭರಣಗಳು. ಶಿವಚಿಂತನವೇ ಅವನಿಗೆ ಹೊದಿಕೆ. ತಾನು ಹೋಗುವ ದಾರಿಯಲ್ಲಿ ಕಲ್ಲು ಮುಳ್ಳುಗಳು, ತೆಗ್ಗು ದಿನ್ನೆಗಳು ಎದುರು ಬಂದರೆ ತುಳಿಯದೆ, ವಿವೇಚನಾತ್ಮಕ ಬುದ್ಧಿಯಿಂದ ಜ್ಞಾನದ ಕೈದೀವಿಗೆಯನ್ನು ಹಿಡಿದುಕೊಂಡು ಆ ಬೆಳಕಿನಲ್ಲಿ ಮುಂದ ಸಾಗುತ್ತಾನೆ. ಕಾಮಕ್ರೋಧಗಳೆಂಬ ಶಾರ್ದೂಲಗಳು ಎದುರು ಬಂದರೂ ಜ್ಞಾನ ಖಡ್ಗದಿಂದ ಕತ್ತರಿಸಿ ನವ ಚೈತನ್ಯವನ್ನು ಪಡೆಯುತ್ತಾನೆ.

ಧೀರತನವನ್ನು ಹೊಂದಿ ಮಾರಾರಿಯು ನೆನೆಸುತ್ತಾನೆ. ಇಂತಪ್ಪ ಭಕ್ತನಿಗೆ, ಭವಿತನವಿಲ್ಲ, ಭಯವಿಲ್ಲ. ಭವಿತನ ಬರುವದೇ ಭಯದಿಂದ, ಮನಸ್ಸಿನ ದೌರ್ಬಲ್ಯದಿಂದ. ಆಶೆ ಆಕಾಂಕ್ಷೆಗಳ ವ್ಯಾಮೋಹದಿಂದ ಯಾರಲ್ಲಿ ವಿಷಯ ತೃಷೆಯಿದೆಯೋ, ಕೋಪವೆಂಬ ಅಸ್ಪೃಶ್ಯತನವು ದೂರಾಗುವದಿಲ್ಲವೋ, ಕ್ರೂರ, ಕುಹಕ, ಕುಭಾಷೆಗಳು ತೊಲಗಲಾರವೋ, ಅವರೇ ಭವಿಗಳು. ಭವಿ, ಭಕ್ತ ಇವೆರಡರಲ್ಲಿ ವ್ಯತ್ಯಾಸವಿಷ್ಟೇ, ಒಬ್ಬರದು ಬಹಿರ್ಮುಖ, ಮತ್ತೊಬ್ಬರದು ಅಂತರ್ಮುಖ.

ಒಂದೆಡೆ ಪ್ರಭುದೇವರು "ಭವಿ" ಪದದ ಬಗ್ಗೆ ಬೆಡಗಿನ ಮಾತೊಂದನ್ನು ತಮ್ಮದೊಂದು ವಚನದಲ್ಲಿ ತಿಳಿಸಿದ್ದಾರೆ.

"ಭವಿಯ ಕಳೆದೆವೆಂಬ ಮರುಳು ಜನಂಗಳು ನೀವು ಕೇಳಿರೇ,
ಭವಿಯಲ್ಲವೇ? ನಿಮ್ಮ ತನು ಗುಣಾದಿಗಳು? ಭವಿಯಲ್ಲವೇ
ನಿಮ್ಮ ಮನ ಗುಣಾದಿಗಳು? ಭವಿಯಲ್ಲವೇ ನಿಮ್ಮ ಪ್ರಾಣ
ಗುಣಾದಿಗಳು? ಇವರೆಲ್ಲರು ಭವಿಗಳ ಹಿಡಿದು ಭವಭಾರಿಗಳಾದರು"

ಈ ಬೆಡಗಿನ ವಚನದಲ್ಲಿ ದ್ವಂದ್ವಾರ್ಥವನ್ನು ಕಾಣುತ್ತೇವೆ. ಮನದಲ್ಲಿಯೇ ಭವಿತನ, ಸಿರಿತನ ಕಾಣಬಹುದೆಂಬುವದನ್ನು ಇಲ್ಲಿ ಮನಗಾಣಬಹುದು. ಭಾವ, ಭಾಷೆ, ಶುದ್ಧಿಯಾದಲ್ಲಿ ಭವಿಯೇ ಭಕ್ತನಾಗುತ್ತಾನೆ. ಇಲ್ಲಿ ಜಾತಿ ಭೇದಗಳಲ್ಲಿ, ವರ್ಣ ಸೂತಕಂಗಳಿಲ್ಲ ಭಕ್ತನಾಗಲು ಹೃದಯ ಶುದ್ಧಿಯೇ ಮೂಲ ಬೀಜ, ಶುದ್ಧಿ ಇರದ ಹೃದಯವು ನಿಷ್ಪ್ರಯೋಜಕ. ಬಚ್ಚಲ ನೀರು ಎಷ್ಟು ತಿಳಿ ಇದ್ದರೇನು? ಅಭಿಷೇಕಕ್ಕೆ ಬರಬಹುದೆ? ಹುಳ ತುಂಬಿದ ಅತ್ತಿ ಹಣ್ಣು ಎನಿತು ಸುಂದರವಿದ್ದರೇನು? ಸವಿಯಲು ಬರುವದೆ? ಹಾಗೆಯೇ ತಿಳಿಮನವಿಲ್ಲದ ಭಕ್ತ ಭವಿಯೇ ಹೊರತು ಭಕ್ತನಾಗಲಾರ. ಈ ಭವಿಗೆ ಒಳ್ಳೇ ಸಂಸ್ಕಾರ ನೀಡಿದರೆ, ಭಕ್ತಿಯ ಬೀಜವನ್ನು ಬಿತ್ತಿದರೆ, ಚಿಗಿತು ಫಲ ಬಿಡುವವರೆಗೂ ಸತ್ಸಂಗದ ಸಿಹಿ ನೀರು ಬಿಡುತ್ತಿದ್ದರೆ ಮಾತ್ರ ಭವಿಯು ಭಕ್ತನಾಗಬಹುದು.

ಭಕ್ತನಾದವನು ಪರಾತ್ಪರ ನಿಜವಸ್ತುವನ್ನು ಪೂಜಿಸುತ್ತ, ಧ್ಯಾನದಲ್ಲಿ ತಲ್ಲೀನನಾಗುತ್ತಾನೆ. ನಡೆನುಡಿ ಒಂದುಮಾಡಿಕೊಂಡು, ಸಹೃದಯತೆ, ಸಭ್ಯತೆ, ಅಂಗವಿಸಿಕೊಂಡು, ಕರ್ತವ್ಯದರಿವಿನ ಬೆಳಕಿನಲ್ಲಿ ಪ್ರಕಾಶಿಸುತ್ತಾನೆ. ಸಂಸ್ಕಾರ ಹೀನ, ಮದೋನ್ಮತ್ತ ಭವಿಗಳ ಭವಿತನ ನೀಗಿಸಲು ಅಹೋರಾತ್ರಿ ಕಷ್ಟಪಟ್ಟು ಶುದ್ಧ ಸಂಸ್ಕಾರವನ್ನು ನೀಡುವದೇ ನಿಜವಾದ ಭಕ್ತನ ಮುಖ್ಯ ಗುರಿ. ಕೆಳಗಿಳಿದವರನ್ನು ಮೇಲೇಳಿಸುವದೇ ಅವನ ಹಿರಿಮೆ ಅಲ್ಲಿ ಒಡೆದು ಕಾಣುತ್ತದೆ. ಭಕ್ತನಾದವನಲ್ಲಿ ಮೈಮಾತು ಮನಂಗಳಲ್ಲಿ ಸದ್ಭಕ್ತಿ ಸದಾಚಾರ ತೋರಿ ಬರಬೇಕು. ಭವಿತನ ಬರುವದು ಕಾಯಸಂಸ್ಕಾರಕ್ಕಿಂತಲೂ ಚಿತ್ತದ ಕುಸಂಸ್ಕಾರದಿಂದ ಉದ್ಭವವಾಗುತ್ತದೆ. ಶಿವಶರಣ ಶರಣೆಯರು ಬಾಹ್ಯಸಂಸ್ಕಾರಕ್ಕಿಂತಲೂ ಅಂತರಂಗದ ಸಂಸ್ಕಾರಕ್ಕೆ ಹೆಚ್ಚು ಪ್ರಾಧಾನ್ಯತೆ ನೀಡಿದ್ದಾರೆ. ಭವಿ-ಭಕ್ತ ಈ ನುಡಿಗಳಲ್ಲಿ

ಎಸೆಳೆಸಲಾಗಿ,ಅದರ ಅಂತರ್ಭಾವದ ಮಕರಂದ ಸೂಸಿದ್ದಾರೆ. ಒಂದು ದುರ್ಗಂಧ ಬೀರಿದರೆ ಮತ್ತೊಂದು ಸೌಗಂಧ ಬೀರುತ್ತದೆಂಬುವ ಭಾವವನ್ನು ತೋರ್ಪಡಿಸುತ್ತ, ಭವಿಯು ಭಕ್ತನಾಗುವ ಸಮತೆಯನ್ನು ಅಂತರ್ ಸೂಳ್ನುಡಿಗಳಿಂದ ತಿಳಿಯ ಪಡಿಸಿದ್ದಾರೆ. ಅಂತ ರಂಗದಲ್ಲಿರುವ ಕಾಮಕ್ರೋಧಾದಿಗಳೆಂಬ ಏಳು ಭವಿಗಳನ್ನು, ನಿರ್ನಾಮಮಾಡಿ ಅರಿ ವನ್ನು ಅಳವಡಿಸಿಕೊಂಡರೆ ಭವಿ ಭಕ್ತನಾಗುತ್ತಾನೆಂದು ಸ್ಪಷ್ಟೀಕರಿಸಿದ್ದಾರೆ.

ಮಾನವೀಯತೆಯ ಮೌಲ್ಯಗಳನ್ನು ಮನದಂದು, ಮೋಹದ ಸೆಳವನ್ನು ಮೀರಿ ನಿಂದು, ಭಾವೈಕ್ಯವನ್ನು ಪಡೆದಾಗ, ಭವಿತನದ ಕೊಳೆ ಕಳೆದಾಗ ಭವಿಯು ಭಕ್ತನಾಗುವ ಬಗೆಯೇ ಈ ಪರಿಯದು ಅರ್ಥವಾಗುತ್ತದೆ.

## ವಿದ್ಯಾರ್ಥಿ ಜೀವನ

ಭಾರತ ದೇಶವು ಶೀಲ–ಸಂಸ್ಕೃತಿಗಳ ನೆಲೆ ಬೀಡಾಗಿದೆ. ಅಂತೆಯೆ ಇದು ಸರ್ವ–ಧರ್ಮ–ಸಹಿಷ್ಣುತೆಯ ನಡೆ–ನುಡಿಯ ಹೃದಯೈಕ್ಯದ ಭಾವ ಶುದ್ಧಿಗಳಿಂದ ಅಧ್ಯಾತ್ಮದ ವಿದ್ಯಾ–ಪ್ರಸಾರದ ಪವಿತ್ರ ನಾಡಾಗಿದೆ. ಪ್ರಾಚೀನ ಕಾಲದಿಂದಲೂ ಇಲ್ಲಿ ಜ್ಞಾನಾಭಿ ವೃದ್ಧಿಯ ವಿದ್ಯಾಕೇಂದ್ರಗಳಾದ ವಿಶ್ವವಿದ್ಯಾನಿಲಯಗಳಿವೆ.

ಈ ವಿಶ್ವವಿದ್ಯಾನಿಲಯಗಳು ವಿದ್ಯಾರ್ಥಿಗಳನ್ನು ಸತ್ಯಾರ್ಥಿಗಳನ್ನಾಗಿ ಮಾಡುತ್ತಿರು ವವಲ್ಲದೆ, ಭಾರತೀಯ ಶೀಲ ಸಂಸ್ಕೃತಿ ತತ್ತ್ವವನ್ನು ಅವರ ಹೃದ್ಭೂಮಿಯಲ್ಲಿ ಬಿತ್ತಿ, ಅವರ ಬುದ್ಧಿ ಶಕ್ತಿಯನ್ನು ಬೆಳೆಸಿ, ಅವರ ಹೃದಯ ಶಕ್ತಿಯೊಂದಿಗೆ ಭಾವೈಕ್ಯ ಶಕ್ತಿಯನ್ನು ವಿಕಸನಗೊಳಿಸುತ್ತಿರುವ ದೇವ–ಮಂದಿರಗಳಾಗಿವೆ.

ಇಲ್ಲಿ ಕಲಿಯುತ್ತಿರುವ ಈಗಿನ ಕೆಲವೊಂದು ವಿದ್ಯಾರ್ಥಿಗಳು ಲೌಕಿಕೋದ್ದೇಶದ ಸಾಧನೆಗೆ ಮಾತ್ರ ಪದವೀ–ವಿಭೂಷಿತರಾಗಿ ತಮ್ಮ ಜೀವನವನ್ನು ಸುಖಮಯವಾದಂತೆ ಮಾಡಿಕೊಳ್ಳುವ ಹಂಬಲ ತುಂಬಿರಬಹುದು! ಆದರೆ, ಇಷ್ಟರಿಂದಲೇ ಅವರ ವಿದ್ಯೆಯ ಗಳಿಕೆಯ ಶ್ರಮವು ಸಾರ್ಥಕವಾಯಿತೆನ್ನಲಾಗದು. ಕೇವಲ ಅನ್ನ–ವಸ್ತ್ರಾದಿ ಭೌತಿಕವನ್ನು ಗಳಿಸಿ, ಮನುಷ್ಯನು ಅವುಗಳಿಂದ ಬದುಕಬಹುದು. ಆ ಬದುಕು ಪಶುವಿನಂತಹ ಬದುಕಾ ದೀತೇ, ಹೊರತು, ನಿಜವಾದ ಮಾನವೀಯತೆಯ ಬದುಕಾಗಲಾರದು. ಶೀಲ–ಸಂಸ್ಕೃತಿ ಬೆಳೆದು ಭಾವಶುದ್ಧಿಯಾಗಬೇಕು.

ನಾಗರಿಕತೆ ಬೆಳೆದಂತೆ, ಅದರೊಂದಿಗೆ ಆಧ್ಯಾತ್ಮಿಕ ಸದ್ಭಾವ ಬೆಳೆದು ಬೆಳಗು ತ್ತಿದ್ದರೆ ಮಾತ್ರ. ಆತ್ಮ ಸಂತೃಪ್ತಿಯಾಗುತ್ತದೆ. ಅಂದರೆ, ಲೌಕಿಕ ವಿದ್ಯೆಯ ಜೊತೆಗೆ ಆಧ್ಯಾತ್ಮಿಕ ವಿದ್ಯೆಯು ಪುಷ್ಟಿಗೊಂಡರೆ ಮಿಗಿಲಾದ ಶಕ್ತಿ ಬರುತ್ತದೆ. ರೋಗಿಗೆ ಔಷಧ ಸೇವನೆಯ ಜೊತೆಗೆ ಪಥ್ಯದ ವಿಧಿ–ವಿಧಾನದಿಂದ ಶಾಂತಿ ನೆಮ್ಮದಿ ದೊರೆಯುತ್ತಿದೆ.

ಶೀಲ ಸಂಸ್ಕೃತಿಯನ್ನು ಬೆಳೆಸುವ ವಿದ್ಯೆಯು ನಮ್ಮನ್ನು ದೇವರ ಹತ್ತಿರ ಕರೆ ದೊಯ್ಯುವ, ದೇವರನ್ನಾಗಿಸುವ ಸಾಧನೆಯಾಗಿದೆ;

"ವಿದ್ಯಾ ದದಾತಿ ವಿನಯಂ; ವಿನಯಾದ್ ಯಾತಿ ಪಾತ್ರತಾಂ|
ಪಾತ್ರತ್ವಾದ್ ಧನಮಾಪ್ನೋತಿ; ಧನಾದ್ ಧರ್ಮಂ, ತತಃಸುಖಮ್||"

ಎಂದು ಸುಭಾಷಿತ ತಿಳಿಸುವಂತೆ, ನಮ್ಮ ಬಾಳ್ ಬೆಳಕಿಗೆ ದಾರಿ ತೋರುವ ವಿದ್ಯೆಯು ವಿನಯಾದಿ ಸದ್‌ಗುಣಗಳ ಶೀಲ ಸಂಸ್ಕೃತಿಗೆ ಪೋಷಕವಾಗಿರಬೇಕು.

ಅಕ್ಷರ ಜ್ಞಾನ ಬೆಳೆದಂತೆ ಅಂತರ್ಜ್ಞಾನವೂ ಬೆಳೆದು, ನಿಜದ ಸ್ವಾವಲಂಬನ ಜೀವನವನ್ನು ಸಾಗಿಸಿ, ನಿತ್ಯ ಸುಖಿಗಳಾಗಬೇಕೆಂದು ವಿದ್ಯಾರ್ಜನೆ ಮಾಡುತ್ತಿರುವ ವಿದ್ಯಾರ್ಥಿಗಳೆಲ್ಲರೂ ಶಕ್ತಿ ಸಂಪನ್ನರಾಗಿ ಲೌಕಿಕ ವಿದ್ಯೆಯೊಂದಿಗೆ ಆತ್ಮಶ್ರೀ ಸಮನ್ವಿತರೂ ಆಗಬೇಕು. ಏನೇನೋ ಕಗ್ಗವನ್ನು, ಹೇಗೆ ಹೇಗೋ ಕಲಿತು, ಅದನ್ನು ಶೀಲ ಸಂಸ್ಕೃತಿಯ ಬೆಳೆವಣಿಗೆಗೆ ಆಚರಿಸಲಾಗದಿದ್ದರೆ, ಅದನ್ನು ಕಲಿತಾದರೂ ಏನು ಪ್ರಯೋಜನ? ಅಂದರೆ, ವಿದ್ಯಾರ್ಥಿಗಳಾದವರು ಕೇವಲ ಪಠ್ಯಪುಸ್ತಕಗಳ ಸಂಕುಚಿತ ವಿದ್ಯೆಯ ಸಂಕಲನದಲ್ಲಿ ಮಗ್ನರಾಗಿರಬಾರದು; ಗುಪ್ತವಾಗಿರುವ ಆ ಸುಪ್ತ ಶಕ್ತಿಯನ್ನು ಪ್ರೋಜ್ವಲಗೊಳಿಸಿಕೊಳ್ಳಲು ಗುರು-ಕರುಣೆಯ ದಿವ್ಯ ಶಕ್ತಿಯನ್ನು ಸಂಗಳಿಸಲು ಪ್ರಯತ್ನಿಸಬೇಕು. ಶೀಲದ ಆಮೂಲಾಗ್ರವನ್ನು ಅರಿತು, ಸಾಹಿತ್ಯ-ತಪೋನುಷ್ಠಾನದಲ್ಲಿ ಸಾಧಿಸಿದ ಆತ್ಮಶಕ್ತಿಯನ್ನು ನಿರಂತರ ಬೆಳೆಸಿಕೊಳ್ಳುತ್ತಿರುವುದೇ ವಿದ್ಯಾರ್ಥಿಯ ದಿವ್ಯ ತಪಸ್ಸು. ಇನ್ನುಳಿದ ತಪಸ್ಸಿಗಿಂತಲೂ ವಿದ್ಯಾರ್ಥಿಗಳ ಈ ತಪಸ್ಸು ಹೆಚ್ಚಿನದು. ಜೀವನ ಹೂದೋಟದಲ್ಲಿ ಹೂಗಳಂತೆ ಅರಳುತ್ತಿರುವ ವಿದ್ಯಾರ್ಥಿಗಳ ಆತ್ಮಪುಷ್ಟಿಗೆ ಸದ್‌ಭಾವಗಳ ಅಮೃತಾಹಾರ ರೂಪದ ಶೀಲ ಸಂಸ್ಕೃತಿಯ ಪೋಷಣೆ ಮಾಡುವ ಹಿರಿದಾದ ಹೊಣೆಯು ಶಿಕ್ಷಕರದಾಗಿದೆ. ಬೀಜಗಳಿದ್ದಂತೆ ಫಲ ನೀಡುವುದು ನಿಸರ್ಗದ ನಿಯಮ.

ವಿದ್ಯಾರ್ಥಿಗಳೆಂಬ ಸಸಿಗಳಿಗೆ ಸದ್‌ಭಾವ ಸಚ್ಚಾರಿತ್ರ್ಯ ರಾಷ್ಟ್ರಭಕ್ತಿ, ಈಶ್ವರಾಸಕ್ತಿ ಮುಂತಾದ ಒಳ್ಳೆನಡೆಗೆ ಒಳ್ಳೆಯ ಆಚರಣೆಯ ಸಂಸ್ಕಾರ ಸ್ಥಿರ ಪಡಿಸುವಂತೆ ಮಾಡಿದರೆ, ಅವರ ಅಂತಃಶಕ್ತಿಯು ಪ್ರಭಾವಶಾಲಿಯಾಗಿ ಅವರಿಗೆ ನಾಡು-ನುಡಿಯ ಸೇವೆಗೆ ಮಾರ್ಗದರ್ಶನ ದೊರೆಯುವುದು.

ದಿನೇ-ದಿನೇ ಬೆಳೆಯುತ್ತಿರುವ ಆಧುನಿಕ ಭೌತಿಕ-ವಿಜ್ಞಾನ ಯುಗದಲ್ಲಿ ಮಾನವೀಯತೆಯ ಧರ್ಮದ ಸತ್ತ್ವವಾದ ಶೀಲಾಚರಣೆಗೆ ಹೆಚ್ಚು ಗಮನ ಕೊಟ್ಟಲ್ಲಿ ಮಾತ್ರ, ನಾಡಿಗೆ, ರಾಷ್ಟ್ರಕ್ಕೆ, ವಿಶ್ವಕ್ಕೆ ಬಲಬರುವುದು. ಆತ್ಮ ಸಾಧನೆಯಿಂದ ಸತ್ತ್ವಯುತ ಸಂಸ್ಕಾರದಿಂದ ಶೀಲ ಸಂಸ್ಕೃತಿ ಬೆಳೆದು ವಿದ್ಯಾರ್ಥಿಗಳ ಜೀವನ ಪಾವನವಾಗುವುದು.

ಕಾರಣ, ಜ್ಞಾನ ಸರಸ್ವತಿಯ ಸಾಹಿತ್ಯಾರಾಧನೆಯನ್ನು ಮಾಡುತ್ತಿರುವ ಶಾಲೆ-ಕಾಲೇಜು-ವಿಶ್ವವಿದ್ಯಾನಿಲಯಗಳ ಆತ್ಮದಂತಿರುವ ವಿದ್ಯಾರ್ಥಿ-ವೃಂದಕ್ಕೆ ಈ ವಿಚಾರ ದೀಪಿಕೆಯ ನುಡಿ-ಮುತ್ತುಗಳು ಶೀಲ-ಸಂಸ್ಕೃತಿಯ ಬೆಳವಣಿಗೆಗೆ ಪೋಷಕವಾಗಿ, ಸಫಲ ಬಾಳಿಗೆ ದಾರಿದೀಪವಾಗಲಿ.

---

ಧಾರವಾಡ ಬಾನುಲಿಯಲ್ಲಿ ಪ್ರಸಾರವಾದ ಭಾಷಣ.

**ಕರುಣವಿರಲಿ ಜೀವರೊಳು**

ಕಾರುಣ್ಯಕಿರಣವು ಬಾಳ್ಬೆಳಕಿಗೆ ಮೂಲಕಾರಣ. ಆತ್ಮ ಸಂವರ್ಧನೆಗೆ ಪರಮ ಸಾಧನ. ಕರುಣಾರಸ ಪರಿಪೂರ್ಣ ಜೀವನ ನಂದನವನವಿದ್ದಂತೆ. ಕರುಣೆ ಪಡೆಯದ ಮಾನವನು ಮಾನವನಾಗಲಾರ, ಬದುಕಲಾರ. ಬಾಳಿನಲ್ಲಿ ನವಚೈತನ್ಯವನ್ನು ಹೊಂದಲಾರ. ದುಃಖ ನಿವಾರಣೆಗೆ ಕರುಣೆ ಅದೊಂದು ಅಮೃತ ಬಿಂದು. ಜೀವನವು ಪರಿವರ್ತನವಾಗಿ ಆತ್ಮ ಸುಖವನ್ನು ಸವಿಯಲು ಕರುಣೆಯೇ ಕೈಗನ್ನಡಿ. ಜೀವನದ ಜಟಿಲ ಸಮಸ್ಯೆಗಳನ್ನು ಕರುಣಾ ಬಲದಿಂದ ಬಗೆಹರಿಸಬಹುದು. ಮಾತೆಯು ಕರುಣೆಯಿರದಿದ್ದರೆ ಶಿಶುವು ಬೆಳೆಯಲಾರದು. ಗುರುಕೃಪೆಯಿರದಿದ್ದರೆ ಶಿಷ್ಯನ ಬುದ್ಧಿ ಬೆಳೆದು ಪ್ರಗತಿಪಥದತ್ತ ಸಾಗಲಾರದು. ಕರುಣೆಯಿರದಿರೆ ಮೊಗ್ಗೆಯರಳದು, ಮಣ್ಣು ಮಡಿಕೆಯಾಗದು, ಚಿನ್ನ ಆಭರಣವಾಗದು, ಕಲ್ಲು ದೇವರಾಗದು. ಅಂತಃಕರಣ ಪರಿಪೂರ್ಣ ಕರುಣೆಯಿಂದ ನಿರ್ಜೀವವನ್ನು ಜೀವವುಳ್ಳದ್ದನ್ನಾಗಿ ಮಾಡಿದ ಉದಾಹರಣೆಗಳುಂಟು. ಕಂಟಕಗಳು ಸಹಜವಾಗಿ ನಿರ್ಮೂಲವಾಗಿದ್ದುಂಟು. ಕರುಣಾ ಜಲದಿಂದ ಮತ್ಸರಾಗ್ನಿ ಆರುತ್ತದೆ. ಜಾತಿ ದ್ವೇಷಗಳು ದೂರಾಗುತ್ತವೆ. ಭಾವೈಕ್ಯವು ಬಂಧುರವಾಗುತ್ತದೆ. ಮಧುರ ಬಾಂಧವ್ಯವು ಬೆಳೆದು ಆತ್ಮಶಾಂತಿ ಲಭಿಸುತ್ತದೆ. ಜೀವನವನದಲ್ಲಿ ಬೆಳೆದಿರುವ ಕಸ ಕಡ್ಡಿಗಳು ಹಸನಾಗಿ ಸ್ನೇಹ ತರುವು ಚಿಗುರೊಡೆದು ಫಲವನ್ನೀಯುತ್ತದೆ. ಇನಿತೇ ಏಕೆ? ನಾನೆಂಬುದು ಹೋಗಿ ನೀನೆಂಬುದು ಉಳಿಯುತ್ತದೆ, ಬೆಳೆಯುತ್ತದೆ, ಬೆಳಗುತ್ತದೆ. ಕರುಣಾ ಹೃದಯವು ಅರಳಿದಲರವಿದ್ದಂತೆ ಮರವೆಯನ್ನಳಿಸಲು ಕರುಣೆಯೇ ಜ್ಞಾನ ಜ್ಯೋತಿ. ಕರುಣೆಯು ಒಳಗಿನಿಂದ ಇಳಿದುಬಂದರೆ ಜನ ಜೀವನಕ್ಕೆ ಚೇತೋಹಾರಿ. ಮಾತಿನಲ್ಲಿ ಕರುಣೆತೋರಿ, ಹೃದಯವು ಕಲ್ಲಾಗಿದ್ದರೆ ಸಲ್ಲಲಿತ ಜೀವನ ವೃಕ್ಷಕ್ಕೆ ಕಾದ ಕಬ್ಬಿಣವಿಟ್ಟಂತೆ ಭಾವ ಶುದ್ಧಿಯಿದ್ದಲ್ಲಿ ಕರುಣೆ ಬರುತ್ತದೆ. ಮನಸ್ಸು ಕನಿಕರ ಪಡುತ್ತದೆ. ಕರುಳು ಕೊರಗುತ್ತದೆ. ಜನರ ಕೊರಗನ್ನು ಕರಗಿಸುತ್ತದೆ. ಕರುಣೆಯುಳ್ಳವನು ಅಬಲರನ್ನು ಸಬಲರನ್ನಾಗಿ ಮಾಡುತ್ತಾನೆ. ಅವನಲ್ಲಿ ಪ್ರೀತಿ ಮನೆಮಾಡಿಕೊಂಡಿರುತ್ತದೆ. ಕರುಣಾರಸದಿಂದ ವಿರಸವು ಸರಸವಾಗುತ್ತದೆ. ವಿಯೋಗವು ಸಂಯೋಗವಾಗುತ್ತದೆ.

"ದುಃಖಕ್ಕೆ ಪ್ರೀತಿ ಮೂಲ. ಭೀತಿಗೆ ಪ್ರೀತಿ ಮೂಲ. ಪ್ರೀತಿಯಿಂದ ವಿಮುಕ್ತಗೊಂಡವನು ಇತರ ಎಲ್ಲ ಮನೋವಿಕಾರಗಳನ್ನು ಜಯಿಸುತ್ತಾನೆ" ಇದು ಮಹಾತ್ಮಾ ಬುದ್ಧನ ಅಮರವಾಣಿ. ಪ್ರೀತಿಯಿದ್ದಲ್ಲಿ ಕರುಣೆ, ಕರುಣೆಯಿದ್ದಲ್ಲಿ ಪ್ರೀತಿ ಇವೆರಡೂ ಅನ್ಯೋನ್ಯ ಸಂಬಂಧವಾಗಿವೆ. ಕಷ್ಟದ ಕಟು ಅನುಭವಗಳನ್ನು ಹಾಗೂ ನಿರಾಶೆಗಳನ್ನು ಅನುಭವಿಸದ ಕರುಣೆಯ ಮಾಧುರ್ಯವು ತಿಳಿಯಲು ಅಸಾಧ್ಯ. ಒಂದೆಡೆ ಮಹಾತ್ಮಾ ಗಾಂಧಿಯವರು "ಕರುಣೆಯು ಸತ್ಯದೊಂದಿಗೆ ಮಾತ್ರ ಸಂತೋಷವಾಗುತ್ತದೆ. ದಯೆ ಏನೆಲ್ಲವನ್ನು ಸಹಿಸುತ್ತದೆ, ಮನ್ನಿಸುತ್ತದೆ, ದಯೆ ಆಶಾಪೂರ್ಣವಾದುದು. ದಯೆಯು

ಎಂದಿಗೂ ನಿಷ್ಫಲವಾಗಲಾರದು. ಪ್ರೀತಿ ದಯೆಗಳಿಂದ ಶಾಂತಿ ಸ್ಥಾಪನೆಯಾಗಬೇಕೆ ಹೊರತು ಖಡ್ಗದ ಬಲದಿಂದಲ್ಲ" ಎಂದು ಪ್ರಪಂಚಕ್ಕೆ ತಿಳಿಹೇಳಿದ್ದಾರೆ. ಧರ್ಮವಿದ್ದಲ್ಲಿ ಕರುಣೆ ತುಂಬಿರುತ್ತದೆ. ಕರುಣೆಯಿದ್ದಲ್ಲಿ ಸದ್ಗುಣ ನೆಲೆಗೊಂಡಿರುತ್ತದೆ. ದಯೆಯಿಲ್ಲದ ಧರ್ಮ ಅದು ಧರ್ಮವಾಗಲಾರದು. ಪಶು ಜೀವನದಂತೆ ನಿರರ್ಥಕವಾದುದು.

"ದಯೆಯಿಂದ ಪಾಪಿಗಳ ಜೀವನ ಪರಿವರ್ತನ ಹೊಂದುತ್ತದೆ. ಉಪದೇಶದಿಂದ ಸಾಧ್ಯವಾಗದು. ದುಃಖ ನಿವಾರಣೆ ಮಾಡುವ ಸಾಮರ್ಥ್ಯವಿಲ್ಲದ ಕರುಣೆ, ಮನುಷ್ಯ ನನ್ನು ಹೆಚ್ಚು ದುಃಖಿಯನ್ನಾಗಿ ಮಾಡುತ್ತದೆಂದು ಡಾಕ್ಟರ್ ಗೋಲ್ಡ್ ಸ್ಮಿಥ್‌ರ ಮಾತು ನಿಜಕ್ಕೂ ಸತ್ಯ. ಹೃದಯದಲ್ಲಿ ಉದ್ಧಾರ ಮಾಡುವ ಬುದ್ಧಿಯಿಲ್ಲದ ಉಪದೇಶ ಬೋರ್ಗಲ್ಲ ಮೇಲೆ ಮಳೆ ಸುರಿದಂತೆ ವ್ಯರ್ಥ.

ಸರ್ವ ರಸಗಳಲ್ಲಿ ಕರುಣಾರಸವೇ ಹೆಚ್ಚಿನದು. ಅಂತೆಯೇ ಮಹಾಕವಿ ಭವ ಭೂತಿಯು "ಏಕೋರಸಃ ಕರುಣ ಏವ" ಎಂದು ಅದಕ್ಕೆ ಪ್ರಾಧಾನ್ಯತೆ ನೀಡಿದ್ದಾನೆ. ರಸ ವಿದ್ದ ಹಣ್ಣು ಸುಂದರವಿದ್ದಂತೆ, ಕರುಣಾರಸ ಭರಿತ ಜೀವನ ಸುಂದರ ಹಾಗೂ ಬಂಧುರ ವಿರುತ್ತದೆ.

"ಕರುಣವಿರಲಿ ಜೀವರೊಳು" ಎನ್ನುವ ನಿಜಗುಣ ಶಿವಯೋಗಿಗಳವರ ನುಡಿಯಲ್ಲಿ ಅಂತಃಸತ್ವವು ಮೈಗೂಡಿಕೊಂಡಿದೆ.

ಏನಾದರೆಯೂ ಸಾಧಿಸಬಹುದು!
ಮತ್ತೇನಾದರೆಯೂ ಸಾಧಿಸಬಹುದು!!
ತಾನಾರೆಂಬುದ ಸಾಧಿಸಲಾಗದು
ಕೂಡಲ ಸಂಗನ ಕರುಣೆ ಉಳ್ಳವಂಗಲ್ಲದೆ

ಮಹಾತ್ಮಾ ಬಸವಣ್ಣನವರ ಈ ನುಡಿಮುತ್ತು ಮುಮುಕ್ಷುಗಳಿಗೆ ಮಾಣಿಕ್ಯದ ದೀಪ್ತಿ. ಕೂಡಲಸಂಗನ ಕರುಣೆಯನ್ನು ಪಡೆಯದೆ ಏನನ್ನೂ ಸಾಧಿಸಲಾರ. ಅದಕ್ಕಾಗಿ ಪ್ರತಿ ಯೊಬ್ಬ ವ್ಯಕ್ತಿಯಲ್ಲಿ ಕರುಣೆ ಒಡಮೂಡಿದ್ದರೆ ಮೃಡನೊಲುಮೆ ಸಾಧ್ಯ. ಅದುವೆ ನಿಜವಾದ ಪರಿಪೂರ್ಣ ಜೀವನ. ಕರುಣೆಯೇ ನಿಸ್ವಾರ್ಥ ಜೀವನದ ಅಡಿಗಲ್ಲು.

## ಶಿವನಾಟದ ಸವಿಗಂಡ ಗುಂಡಯ್ಯ

ಶಿವನಾಟದ ಸಪಿಗಂಡ ಗುಂಡಯ್ಯ ಮಹಾಶಿವಶರಣ. ಇವನು ಬೀದರ ಜಿಲ್ಲೆ ಯವನು. ಶಿವನಾಟದಲ್ಲಿಯೇ ಕಾಲಕಳೆಯುತ್ತಿದ್ದ. ಅವನ ಜೀವನವೆಲ್ಲವೂ ಸವಿ ಜೇನಿ ನಂತೆ ಮಧುರವಾಗಿತ್ತು. ಅವನ ಭಾವವು ಪಕ್ವವಾಗಿತ್ತು. ಅಂತರಂಗ ಬಹಿರಂಗಗಳೆಲ್ಲವೂ ಪವಿತ್ರಮಯವಾಗಿದ್ದವು. ಕಾಯಕವೇ ಕೈಲಾಸವೆಂದು ಬಗೆದು ನಿರಂತರವೂ ಕಾಯಕ ದಲ್ಲಿ ನಿರತನಾಗಿರುತ್ತಿದ್ದ. ಅವನ ಕಾಯಕ ಘಟಕಾಯಕ. ಆತನ ಹೆಸರು ಕುಂಬಾರ ಗುಂಡಯ್ಯ. ಶಿವನ ಲೀಲೆಗಳಲ್ಲಿ ಸತತವೂ ತೊಡಗಿರುತ್ತಿದ್ದರಿಂದ ಶಿವನಾಟದ ಸವಿಗಂಡ

ಗುಂಡಯ್ಯನೆಂದು ಕರೆಯುತ್ತಿದ್ದರು. ಸತಿಯು ಹೆಸರು ಕೋತಲದೇವಿ. ಇವರೀರ್ವರ ದಾಂಪತ್ಯವು ಆದರ್ಶವಾಗಿತ್ತು. ಶಿವ ಮೆಚ್ಚುವಂತೆ ನಡೆಯುತ್ತಿದ್ದರು. ಎಂದಿಗೂ ವಿರಸ ಕಾಣದ ದಾಂಪತ್ಯ. ಸತಿ-ಪತಿಗಳೊಂದಾಗಿ ನಡೆದು ಬಾಳಿನಲ್ಲಿ ಬೆಳಕನ್ನು ಕಂಡಿದ್ದರು. ಇವರ ವೃತ್ತಿ ತತ್ವಮಯವಾಗಿ ಸಾಗಿತ್ತು. ಸವಿಗಂಡ ಗುಂಡಯ್ಯನ ಘಟ ಕಾಯಕವು ಎಂತಹದಿತ್ತೆಂಬುದು ಹರಿಹರನ ಮಾತಿನಲ್ಲಿ ತಿಳಿದುಕೊಂಡರೆ ಅರ್ಥವಾಗದಿರದು. "ಆಧಾರಮೆಯಾಧಾರಮದಾಗಿರೆ, ಮಿಗೆ ಷಟ್ ಚಕ್ರಮೆ ಚಕ್ರಮದಾಗಿರೆ, ಸೊಗಯಿಪ ನಾಭಿಯೆ ನಾಭಿಯದಾಗಿರೆ, ಕನಸಿನ ಕಾಯಂ ಮೃತ್ತಿಕೆಯಾಗಿರೆ, ನೆನಹುಂ ಚಟಿದಾರಂಗಳವಾಗಿರೆ, ನಿಷ್ಠೆಯೆ ತಿರುಗುವ ದಂಡವದಾಗಿರೆ, ಮಾಡುವ ಭಕ್ತಿ ಕಟಾಹಮುದಾಗಲು ಕೂಡಿದ ಕರಣದೆ ಮರ್ದಿಸುತಾಗಲು, ಮಿಗೆ ಶೋಷಣ ದಾತಪದಿಂದಾರಿಸಿ, ಬಗೆ ಮಿಗಲುದರಾಗ್ನಿಗಳಿಂದಹಿಸಿ, ಇಂತೊಳಗಣ ಘಟಕಾಯಕವೊಪ್ಪಲು, ಸಂತತ ಹೊರಗಣ ಮಾಟಮದೊಪ್ಪಲು ಕುಂಬರ ನೆನೆಸಿರ್ಪಂ ಗುಂಡಯ್ಯ". ಈ ಪ್ರಕಾರ ಗುಂಡಯ್ಯನು ಘಟಕಾಯಕವನ್ನು ಮಾಡುತ್ತಿದ್ದನು. ಈ ಘಟಕಾಯಕದಲ್ಲಿ ಅಂತರಂಗ ಬಹಿರಂಗಗಳೆರಡರ ಶುದ್ಧಿಯನ್ನು ಸಾಧಿಸಿದ್ದನು. ಹೊರಗೆ ಚಕ್ರಕ್ಕೆ ಆಧಾರವಾಗಿರುವ ತುಂಡೇ ಅವನಿಗೆ ಆಧಾರ ಚಕ್ರವಾಗಿತ್ತು. ಅದರ ಮೇಲಿನ ತಿಗರಿಯೇ ಷಟ್‌ಚಕ್ರವಾಗಿತ್ತು. ತಿಗರೆಯಲ್ಲಿರುವ ರಂಧ್ರವೇ ಅವನ ನಾಭಿಯಾಗಿತ್ತು. ದೇಹವನ್ನೇ ಮಡಕೆ ಮಾಡುವ ಮಣ್ಣು ಮಾಡಿಕೊಂಡು, ನಿಷ್ಠೆಯನ್ನೇ ದಂಡವನ್ನಾಗಿ ಮಾಡಿ, ಅದರಿಂದ ತಿರುಗಿಸಿ ಮಾಡಿದ ಮಡಕೆ ಗಡಿಗೆಗಳನ್ನು ನೆನೆಹೆಂಬ ದಾರಗಳಿಂದ ಕೊಯ್ದು, ಕರಣಂಗಳಿಂದ ತಿದ್ದಿ ಬಡಿದು, ಭಕ್ತಿ ಎಂಬ ಆವಿಗೆಯಲ್ಲಿ ಹಾಕಿ, ಉದಾರಾಗ್ನಿಗಳಿಂದ ಸುಟ್ಟು ಗಟ್ಟಿ ಮಾಡಿ, ನಂತರ ಆ ಮಡಕೆಗಳನ್ನೇ ಬಾರಿಸುತ್ತ ನಾಗಮಣಿಯಂತೆ ಹೆಡೆಯೆತ್ತಿ ತಡೆ-ತಡೆದು ಹೆಜ್ಜೆ ಹಾಕುತ್ತ ಗುಂಡಯ್ಯನು ನಿತ್ಯವೂ ಈ ರೀತಿ ನೃತ್ಯವನ್ನು ಮಾಡುತ್ತಿದ್ದನು. ಈ ಒಳ ಹೊರಗಿನ ಘಟಕಾಯಕದಿಂದ ಅವನ ಜೀವನ ಪರಿಶುದ್ಧವಾಗಿ ಶೋಭಿಸುತ್ತಿತ್ತು. ಇವನಿಗೆ ಕಾಯಕವೆ ಶಿವಭಕ್ತಿ, ಈ ಕಾಯಕವೆ ಶಿವಭಜನೆಯಾಗಿ ಶಿವಯೋಗದಲ್ಲಿ ವಿಹರಿಸುತ್ತ ಪ್ರಾಣಲಿಂಗ ಪೂಜೆಯಲ್ಲಿ ಮಗ್ನನಾಗಿರುತ್ತಿದ್ದ. "ತೂಗಾಡುತ ಮಡಕೆಗಳಂ ಬಾರಿಸಿ, ಅಡ್ಡ ತ್ರಿಕಟಂ ಬಲಿವುತೆ ತಣಿವುತೆ ಮುದದಿಂ ಬಾರಿಸಿ", ಈ ರೀತಿ ಪರವಶನಾಗಿ ಗುಂಡಯ್ಯನು ಕುಣಿವುದನ್ನು ಕಂಡು ಪರಮೇಶ್ವರನೂ ಸಹ ಪರವಶನಾಗಿ ಕುಣಿಯುತ್ತಿದ್ದನೆಂದು ಮಹಾಕವಿ ಹರಿಹರನು ಹೇಳುತ್ತಾನೆ. ಗುಂಡಯ್ಯನ ಭಕ್ತಿಗೆ ಮೆಚ್ಚಿ ಹರನು ಬೆರಗಾಗಿ, ಗುಂಡಯ್ಯನ ಗುಡಿಸಲ ಬಳಿಬಂದು, ಆತನ ಏಕನಿಷ್ಠೆಯನ್ನು ನೋಡಿ ಪುಲಕಿತ ಗಾತ್ರನಾಗಿ ಅವನ ಮನದ ಲಿಂಗವನ್ನು ತನ್ನೆಡೆಗೆ ಆಕರ್ಷಿಸಿಕೊಂಡು ಅದರೊಳಗೆ ತಾನು ಬೆರೆತು ಗುಂಡಯ್ಯನ ಬಾಗಿಲ ಎದುರಿನಲ್ಲಿಯೇ ಲಿಂಗವಾಗಿ ಮೂಡಿರುವದನ್ನು ಗುಂಡಯ್ಯನು ನೋಡಿ ಅವನ ಆನಂದಕ್ಕೆ ಮಿತಿಯೇ ಇಲ್ಲದಂತಾಗುತ್ತದೆ. ಗುಂಡಯ್ಯನ ಭಕ್ತಿಗೆ ಮೆಚ್ಚಿ ಶಿವನು "ಶಿವಲೋಕದೊಳ್ಳು ನಿನಗೆ ಶಿವಪದವ ಉಣಿಸುವೆನು, ಶಿವಗಣಕೆ ಸಾರಿ ಹೇಳು

ವೆನು, ಗುಂಡಯ್ಯ ಶಿವಶರಣನೆಂದು ನಡೆ ಮೊದಲು" ಎಂದು ನುಡಿದಾಗ, ಅದಕ್ಕೆ ಗುಂಡಯ್ಯನು "ಬೇಡೆನಗೆ ಕೈಲಾಸ ಬಾಡುವದು ಕಾಯಕವು ನೀಡೆನಗೆ ಶಿವನ ಕಾಯಕವ ಕುಣಿದಾಡಿ ನಾಡಹಂದರಕೆ ಹಬ್ಬಿಸುವೆ" ಎಂದು ಮುಂತಾಗಿ ಧೈರ್ಯವಾಗಿ ಹೇಳುವ ನುಡಿಯು ಎಂತಹರನ್ನೂ ಅಚ್ಚರಿಯನ್ನುಂಟು ಮಾಡುತ್ತದೆ. ಕುಂಬಾರ ಗುಂಡಯ್ಯನು ಕಾಯಕವೇ ಕೈಲಾಸವೆಂದು ಬಗೆದು ಕಾಯಕದಲ್ಲಿಯೇ ನಿರತನಾದ ಮಹಾಶಕ್ತಿ. ಸತ್ಯ ಶುದ್ಧ ಕಾಯಕದಿಂದ ಅಪಾರ ಮಹಿಮಾ ಶಾಲಿಯಾಗಿ ದೇವರನ್ನೇ ತನ್ನ ಮನೆಗೆ ಕರೆಯಿಸಿ ಕೊಂಡ ಕಾರುಣ್ಯಮೂರ್ತಿ. ಘಟಕಾಯಕವೇ ಅವನಿಗೆ ಸರ್ವಸ್ವ. "ಗುಂಡ ತಿಗರಿಯ ತಿರುವಿ, ರುಂಡ ಧಾರಿಯು ಕುಣಿದು, ಥಂಡಿ ಬೀಳುತಲಿ ಬೆಳವಲಕೆ–ಕುಂಬಾರಗಿಂಡಿ ರಸಗಾಳಿ ಬೀಸುತಲಿ" ಎಂದು ಮುಂತಾಗಿ ಈಗಲೂ ಹಳ್ಳಿಗರು ಶಿವನಾಟದ ಸವಿಗಂಡ ಕುಂಬಾರ ಗುಂಡಯ್ಯನ ಮಹಿಮೆಯನ್ನು ಹಾಡಿ ಹರಿಸುತ್ತಿದ್ದಾರೆ.

## ನೈತಿಕ ಜೀವನ

ನೈತಿಕ ಜೀವನವೇ ಶರಣ ಜೀವನದ ಅಡಿಗಲ್ಲು. ವ್ಯಕ್ತಿಯ ವ್ಯಕ್ತಿತ್ವದ ಒಳ ಗುಟ್ಟೇ ನೈತಿಕ ಜೀವನ. ನೀತಿಗಿದ್ದ ಬೆಲೆ ಮುತ್ತಿಗೂ ಸಿಗದು. ನೈತಿಕಾಚರಣೆಯನ್ನು ಆಚರಿಸುತ್ತಿರುವ ಸಾಧಕನ ಮನಸ್ಸು ನಿರಂತರ ಶಾಂತಮಯವಿರುವದು. ನೀತಿಯಿಂದಲೇ ವಿಶ್ವವು ಭದ್ರವಾಗುವದನ್ನರಿತ ಜಗದಣ್ಣ ಬಸವಣ್ಣನವರು ತಂದೆಯು ಮಗುವಿಗೆ ತಿಳಿ ನುಡಿ ತಿಳಿಸಿದಂತೆ ಸಮಾಜಕ್ಕೇನೆ ತಿಳಿಭಾಷೆಯಲ್ಲಿ—

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಅನ್ಯರಿಗೆ ಅಸಹ್ಯ ಪಡ ಬೇಡ, ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ; ಇದೇ ಬಹಿರಂಗ ಶುದ್ಧಿ; ಇದೇ ನಮ್ಮ ಕೂಡಲಸಂಗಮದೇವನ ಒಲಿಸುವ ಪರಿ" ಎಂಬುದಾಗಿ ಅಕ್ಕರತೆಯಿಂದ ತಿಳಿಸಿರುವರು. ನೀತಿಯಿಲ್ಲದೆ ಸಚ್ಚಿದಾನಂದವನ್ನು ಪಡೆಯಬೇಕೆಂಬು ವವನು ಬಯಲಿನಲ್ಲಿ ಗೋಡೆ ಕಟ್ಟಿದಂತೆ ವ್ಯರ್ಥ ಪ್ರಯಾಸವಾಗುವದು. ವಿದ್ಯಾ ಬುದ್ಧಿ, ತೇಜಃ ಪ್ರಭಾವ, ಗುಣ ಗೌರವ, ಬಲ, ರೂಪ, ಯೌವನ, ಶ್ರೀ ಇವೆಲ್ಲವೂ ಒಂದು ದಿನ ಹುಡಿಯಾಗಿ ಮಣ್ಣು ಪಾಲಾಗುವವು.

ಕತ್ತಲೆಯೊಳಿರ್ದು ದೀಪದ
ಬಿತ್ತರವಂ ಬಣ್ಣಿಸಲ್ಕೆ ಬೆಳಕಹುದೆಂತೈ।
ಸತ್ಯ ಬ್ರಹ್ಮವ ಬಲು ಹೊಗಳುತ್ತಿರೆ
ಸತ್ಕ್ರಿಯೆಗಳಿಲ್ಲದಿರಲದು ವ್ಯರ್ಥಂ॥ (ಪೂಮಾಲೆ)

ಜೀವನದ ಶಾಂತತೆಗಾಗಿ ಸತ್ಕ್ರಿಯೆಗಳು ಅತ್ಯಾವಶ್ಯಕ. ಅಂತರಂಗ ಶುದ್ಧಿಯನ್ನು ಪಡೆದು ಪರಮಾತ್ಮನನ್ನು ಒಲಿಸಲು ನೀತಿಯೇ ರಾಜಮಾರ್ಗವೆಂದು ಶರಣರ ಮತ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಇವುಗಳೇ ಚಿತ್ತಪಸ್ಸಿಗೆ ಆತಂಕಗಳು.

ಇವೆಲ್ಲವುಗಳನ್ನು ಉಪಾಯದಿಂದ ಹೊರದೂಡಬೇಕಾಗುತ್ತದೆ. ಎಲ್ಲದಕ್ಕೂ ಹೆಚ್ಚಾಗಿ ಆಶೆಯೇ ಭವಕ್ಕೆ ಬೀಜವೆಂದು ಹಿರಿಯರು ಹೇಳಿರುವರು. ಆ ಆಶೆಯಿಂದಲೇ ಜನ್ಮಗಳನೆತ್ತ ಬೇಕಾಗುತ್ತದೆ.

"ಪರೋ ಮೋಕ್ಷೋ ವಿತೃಷ್ಣತಾ"

ಎಂಬ ನೀತಿ ವಾಕ್ಯದಂತೆ ಆಶೆಯಿಲ್ಲದಿರುವುದೇ ಮಹಾ ಮೋಕ್ಷ. ಪಾಶ್ಚಾತ್ಯರ ತತ್ವ ಜ್ಞಾನಿಗಳಾದರೂ Dark night of the soul ಎಂದು ಬಿತ್ತರಿಸಿದ್ದಾರೆ. ಭಾರತ ರಾಷ್ಟ್ರದ ವಸ್ತುಸಂಗ್ರಹಾಲಯದಲ್ಲಿ ಪ್ರಧಾನ ಮಂತ್ರಿ ನೆಹರೂ ಇಡಿಸಿದ ಮೂರು ಮಂಗ ಗಳುಳ್ಳ ವಿಗ್ರಹದಿಂದ ಹೊರಡುವ,

See no evil, Speak no evil, Hear no evil.

ಈ ಮೂರು ಮಾತುಗಳನ್ನು ಮಹಾತ್ಮಾ ಗಾಂಧಿಯವರು ಮೇಲಿಂದ ಮೇಲೆ ತಮ್ಮ ಪ್ರವಚನಗಳಲ್ಲಿ ಹೇಳುತ್ತಿದ್ದರಂತೆ ಇದೇ ಮಾತನ್ನೇ ತಿಳಿಗನ್ನಡದಲ್ಲಿ ಸಾಮಾನ್ಯರಿಗೂ ಅರಿಯುವಂತೆ ಮಹಾಶರಣ ಬಸವಣ್ಣನವರು—

"ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವದೆನ್ನ ಮನವು, ಕೂಡಲ ಸಂಗಮ ದೇವಾ ನಿಮ್ಮ ಚರಣ ಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ.

ಮತ್ತು ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ, ಸುತ್ತ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ, ಮತ್ತೊಂದು ಕೇಳದಂತೆ ಕಿವುಡನ ಮಾಡಯ್ಯಾ ತಂದೆ" ಎಂದು ಮುಂತಾಗಿ ನುಡಿದಿದ್ದಾರೆ. ಮನೆಯಲ್ಲಿ ಕಸಹುಟ್ಟಿ ಹೊಸ್ತಿಲಲ್ಲಿ ಹುಲ್ಲು ಬೆಳೆದಾಗ ಮನೆಯೊಳಗೆ ಯಾರೂ ಇರಲಾರರೆಂಬ ಭಾವನೆ ಹುಟ್ಟು ವದು ಸ್ವಾಭಾವಿಕ. ಅಂತೆಯೇ ಪುಣ್ಯ–ಪಾಪಗಳನ್ನು ತಿಳಿಯದೆ ಇಲ್ಲದಿರುವದು, ಲೋಭಿ ಯಾಗಿರುವದು, ಕಿಂಕರ ಭಾವದಿಂದ ನಡೆಯದಿರುವುದು, ವಿಷಯ ವ್ಯಾಮೋಹದಲ್ಲಿ ಮನಸ್ಸು ಹರಿಯುವುದು ಇವುಗಳು ಕಂಡು ಬಂದಲ್ಲಿ ಆತ್ಮ ಪ್ರಕಾಶ ಇರುವದಿಲ್ಲ. ಕೇವಲ ಕಾರ್ಗತ್ತಲೆ ಕಾಣುವದು ನಿಶ್ಚಯ.

ಸಂತ ತುಲಸೀದಾಸರೂ—

"ನರತನು ಪಾಯಿ ವಿಷಯ ಮನದೇಹಿ
ಪಲ್ಲಟ್ ಸುಧಾತೇ ಸಠ ವಿಷಲೇಹಿ"

ಮಾನವ ದೇಹವನ್ನು ಹೊಂದಿಯೂ ವಿಷಯ ಭೋಗದ ಕಡೆ ಮನಸೆಳೆಸುವದೆಂದರೆ ಅಮೃತವನ್ನು ಬಿಟ್ಟು ವಿಷವನ್ನು ಸೇವಿಸಿದಂತೆ ಎಂದು ಸಾರಿದ್ದಾರೆ. ನೈತಿಕ ಜೀವನವೇ ಮುಕ್ತಿಗೆ ಸಾಧನ, ವಿರಕ್ತಿಗೆ ಸೋಪಾನ.

**ಮೋದಾರ ಕೇತಯ್ಯ**

"ಎನ್ನ ಚಿತ್ತಕ್ಕೆ ಆಚಾರಲಿಂಗವಾದಾತ ಬಸವಣ್ಣ; ಎನ್ನ ಬುದ್ಧಿಗೆ ಗುರುಲಿಂಗವಾದಾತ

ಬಸವಣ್ಣ; ಎನ್ನ ಅಹಂಕಾರಕ್ಕೆ ಶಿವಲಿಂಗವಾದಾತ ಬಸವಣ್ಣ; ಎನ್ನ ಮನಕ್ಕೆ ಜಂಗಮ ಲಿಂಗವಾದಾತ ಬಸವಣ್ಣ; ಎನ್ನ ಜ್ಞಾನಕ್ಕೆ ಪ್ರಸಾದ ಲಿಂಗವಾದಾತ ಬಸವಣ್ಣ; ಎನ್ನ ಭಾವಕ್ಕೆ ಮಹಾಲಿಂಗವಾದಾತ ಬಸವಣ್ಣ; ಎನ್ನ ಸ್ಥೂಲ ತನುವಿಗೆ ಇಷ್ಟಲಿಂಗವಾದಾತ ಬಸವಣ್ಣ; ಎನ್ನ ಸೂಕ್ಷ್ಮ ತನುವಿಗೆ ಪ್ರಾಣಲಿಂಗವಾದಾತ ಬಸವಣ್ಣ; ಎನ್ನ ಕಾರಣ ತನು ವಿಂಗೆ ಭಾವಲಿಂಗವಾದಾತ ಬಸವಣ್ಣ; ಇಂತೆಂದರಿದೆನಾಗಿ ಗೌರೇಶ್ವರ ಲಿಂಗದಲ್ಲಿ ಸುಖಿ ಯಾದೆನು." ಈ ರೀತಿ ಮಹಾತ್ಮಾ ಬಸವಣ್ಣನವರನ್ನು ಕಲ್ಯಾಣದಲ್ಲಿ ಕಂಡು, ಹರುಷ ಗೊಂಡು ಪುಳಕಿತ-ಗಾತ್ರನಾಗಿ ಮೇದಾರ ಕೇತಯ್ಯನು ಹಾಡಿದ ವಚನವಿದು. ಮೇದಾರ ಕೇತಯ್ಯನಿಗೆ ಬಸವಣ್ಣನವರೆಂದರೆ ಪಂಚಪ್ರಾಣ. ಬಸವಣ್ಣನವರನ್ನು ಸ್ಮರಿಸುತ್ತ, ಧನ್ಯತೆಯ ತೂಗುಯ್ಯಾಲೆಯನ್ನಾಡುತ್ತ, ಬಿದಿರು ಕಾಯಕವನ್ನು ಮಾಡಿ ನಿತ್ಯವೂ ದಾಸೋಹವನ್ನು ನಡೆಸುತ್ತಿದ್ದನು. ಮೇದಾರ ಕೇತಯ್ಯನು ಕಾಯಕದಿಂದಲೇ ಜೀವನ್ಮುಕ್ತಿ ಯೆಂದು ಬಗೆದಿದ್ದನು. ನಿತ್ಯವೂ ಕಾಡಿಗೆ ಹೋಗುವದು, ಬಿದಿರುಗಳನ್ನು ಕಡಿದು ತರುವದು, ಅವುಗಳಿಂದ ಮೊರ, ಬುಟ್ಟಿ ಮುಂತಾದವುಗಳನ್ನು ಮಾಡಿ, ಅವುಗಳನ್ನು ಮಾರಿ, ಬಂದ ಹಣದಿಂದ ದಾಸೋಹ ಮಾಡುವದೇ ಸತ್ಯ ಶುದ್ಧ ಕಾಯಕವಾಗಿತ್ತು. ಕೇತಯ್ಯನು ಶಿವ ಶರಣರು ನುಡಿದಂತೆ ನಡೆದು ಕಾಯಕಷ್ಟದಿಂದ ದುಡಿದಿದ್ದನ್ನಷ್ಟೇ ತನ್ನ ಜೀವನವನ್ನು ನಿರ್ವಾಹ ಮಾಡಿಕೊಳ್ಳುತ್ತ ಲಿಂಗೋಪಭೋಗಿಯಾಗಿರುತ್ತಿದ್ದನು. ನಿತ್ಯವೂ ಮಹಾತ್ಮಾ ಬಸವಣ್ಣನವರ ಅನುಭವ ಮಂಟಪಕ್ಕೆ ಹೋಗಿ, ಶಿವಾನುಭವಾಮೃತವನ್ನು ಸೇವಿಸಿ, ಅನು ಭವಸಾರವನ್ನು ತನ್ನಲ್ಲಿ ಅಳವಡಿಸಿಕೊಂಡು ಬೆಳಕಿನರಮನೆಯನ್ನು ಸೇರುತ್ತಿದ್ದನು. ಎಂತಹ ಕಡು ಕಷ್ಟ ಬಂದೊದಗಿದರೂ ಕಾಯಕದಿಂದ ನಿವೃತ್ತನಾಗುತ್ತಿದ್ದಿಲ್ಲ. ಏಕನಿಷ್ಠೆ ಅಚಲ ವಾಗಿತ್ತು. ಕಾಯಕದಿಂದ ಆಧ್ಯಾತ್ಮಶಕ್ತಿ ಸಂಗಳಿಸಿದ್ದನು. ಜೀವಿಗಳನ್ನೇ ರಾಚಿಯನ್ನಾಗಿಸಿ ದ್ದನು. ಕಾಯಕವನ್ನೇ ಕದಿರವನ್ನಾಗಿ ಮಾಡಿದ್ದನು. ದರ್ಶನದ ನೂಲಿನಿಂದ ನೂತ ಬಟ್ಟೆ ಯನ್ನು ಹೊದ್ದುಕೊಂಡು ಆತ್ಮಾನಂದ ಸಾಗರದಲ್ಲಿ ಮುಳುಗಿರುತ್ತಿದ್ದನು. ಶಿವಮತದ ಬೆಳಕನ್ನುಂಡು ನಲಿಯುತ್ತಿದ್ದನು. ಸಾತವ್ವ ಅವನ ಧರ್ಮಪತ್ನಿಯಾಗಿದ್ದು, ನೆರಳಿನಂತೆ ಪತಿಯ ಧ್ಯೇಯ ಧೋರಣೆಗನುಸರಿಸಿ ನಡೆಯುತ್ತಿದ್ದಳು. ಪತಿಗೆ ತಕ್ಕ ಸತಿಯಾಗಿದ್ದಳು. ಕಾಯಕದಿಂದ ತಂದ ಹಣದಿಂದ ಬೇಸರಪಟ್ಟುಕೊಳ್ಳದೆ ದಾಸೋಹ ಮಾಡುತ್ತಿದ್ದಳು. ಅವರೀರ್ವರ ಜೀವನವು ಸವಿಜೇನಿನಂತೆ ಸಿಹಿಯಾಗಿತ್ತು. ಶಿವನ ಪರೀಕ್ಷೆಗೊಳಪಟ್ಟರೂ ಹೆದರದೆ, ಕುಗ್ಗದೆ ಶ್ರಮ ವಹಿಸಿ ಕಾಯಕವನ್ನು ಮಾಡುತ್ತಿದ್ದರು. ಹೀಗಿರುವಾಗ ಕೇತ ಯ್ಯನ ಮಹತ್ವವು ಜಗತ್ತಿಗೆ ಗೊತ್ತಾಗಬೇಕೆಂದು ಪರಮಾತ್ಮನು ಬಯಸಿ ಒಂದು ಉಪಾಯ ವನ್ನು ಹುಡುಕಿದನು. ಕೇತಯ್ಯನು ತನ್ನ ಕಾಯಕ ಮಾಡಲು ಅಡವಿಗೆ ಹೋಗಿ ಬಿದಿರನ್ನು ಕಡಿಯುವಾಗ, ಅದರೊಳಗಿಂದ ಸುವರ್ಣ ಘಟ್ಟಿಗಳು ಬೀಳುವಂತೆ ಮಾಡಿದನು. ಕೇತ ಯ್ಯನು ಅವುಗಳನ್ನು ನೋಡಿದ ಕೂಡಲೇ ಹಿಂದೆ ಸರಿದನಲ್ಲದೆ, ಅವುಗಳನ್ನು ಮುಟ್ಟಲಿಲ್ಲ. ಮತ್ತೊಂದೆಡೆ ಕಡಿಯಲು ಹೋದರೆ ಅದೇ ರೀತಿಯಾಗುತ್ತಿದ್ದನ್ನು ನೋಡಿ ಆ ಸ್ಥಾನವನ್ನೇ

ಬಿಟ್ಟನು. ಕೇತಯ್ಯನು ಇಚ್ಛಿಸಿದ್ದರೆ ಬಂಗಾರದ ಘಟ್ಟಿಗಳನ್ನು ಒಯ್ದು ಅದರಿಂದ ದಾಸೋಹ ಮಾಡಬಹುದಾಗಿತ್ತು. ಬೆವರು ಸುರಿಸಿ, ಕಾಯಕಷ್ಟ ಸಹಿಸಿ, ಮಾಡಿದ ದಾಸೋಹವೇ ಪರಮಾತ್ಮನ ಪ್ರೀತಿಗೆ ಪಾತ್ರವಾಗುವದೆಂಬುದನ್ನರಿತ ಕೇತಯ್ಯನು ಆ ಕಡೆ ಮನಸ್ಸು ಮಾಡಲಿಲ್ಲ. ಅಷ್ಟೇ ಅಲ್ಲ ಕಟ್ಟಿಗೆಯನ್ನು ಕೊರೆಯುವ ಬಂಗಾರದ ಹುಳಗಳೆಂದು ಭಾವಿಸಿದ. ಮತ್ತೊಮ್ಮೆ ಮೇದಾರ ಕೇತಯ್ಯನು ಎತ್ತರವಾದ ಗಿಡವನ್ನು ಹತ್ತಿ ಟೊಂಗೆಯನ್ನು ಕಡಿಯುವಾಗ ಕಾಲು ಜಾರಿ ಕೆಳಗೆ ಬಿದ್ದಕೂಡಲೇ ಪ್ರಾಣ ಹೋದದ್ದನ್ನು ಕಂಡು ಬಸವೇಶ್ವರರು ಗತ ಪ್ರಾಣರಾಗಲು ಅವರ ಬಾಹ್ಯ ಶರೀರವು ಹೊರಗೆ ಕಳಚಿ ಬಿದ್ದಿತು. ಶಿವಾನುಭವ ಮಂಟಪದಲ್ಲಿದ್ದ ಶಿವಶರಣರೆಲ್ಲರೂ ಬೆರಗಾಗಿ ಬಸವೇಶ್ವರರೂ, ಮೇದಾರ ಕೇತಯ್ಯನು ಹೀಗೆ ನಮ್ಮನ್ನು ಬಿಟ್ಟುಹೋದರೆ ಉದ್ಧಾರ ಮಾಡುವರಾರೆಂದು ದುಃಖಿಸುತ್ತಿರುವಾಗ ಮಡಿವಾಳ ಮಾಚಯ್ಯನವರು "ಅವರೀರ್ವರ ಪ್ರಾಣವನ್ನು ಜಾಗ್ರತೆಯಾಗಿ ನೀಡೆಂಬುದನ್ನು ದೇವರನ್ನು ಪ್ರಾರ್ಥಿಸಿಕೊಳ್ಳುವದೇ ಶಿವಶರಣರ ಮುಖ್ಯ ಕರ್ತವ್ಯವೆಂದು ತಿಳಿಸಿದಾಕ್ಷಣ, ಎಲ್ಲ ಶಿವಶರಣರು ಭಕ್ತಿಯ ಉದ್ರೇಕದಿಂದ ದೇವರನ್ನು ಬೇಡಿಕೊಂಡೊಡನೆಯೇ ಬಸವಣ್ಣನವರು ಹಾಗೂ ಮೇದಾರ ಕೇತಯ್ಯನವರು ಶಿವಯೋಗ ನಿದ್ರೆಯಿಂದ ಎಚ್ಚರಾದರೆಂಬ ಕಥೆಯನ್ನು ಕೇಳುತ್ತೇವೆ. ಇದರಿಂದ ಬಸವೇಶ್ವರರ ಕಾಲದಲ್ಲಿ ಶಿವಶರಣರೆಲ್ಲರು ದೇಹ ಬೇರೆಯುಳ್ಳವರಾದರೂ ಅವರ ಪ್ರಾಣ ಒಂದೇ ಆಗಿ ಶಿವಾನುಭವದ ಆಚರಣೆಯಂತೆ ಆಚರಿಸುತ್ತಿದ್ದರೆಂಬುದು ತಿಳಿದು ಬರುತ್ತದೆ.

ಮೇದಾರ ಕೇತಯ್ಯನು ತನ್ನದೊಂದು ವಚನದಲ್ಲಿ "ಭಕ್ತಂಗೆ ಸುಖ ಸರಿ, ದುಃಖವೂ ಸರಿ, ಉರಿಸಿರಿ ಉಭಯವೂ ಸರಿ ಎನ್ನದಿರ್ದಡೆ ಭಕ್ತಿಗದೇ ಹಾನಿ" ಎಂದುದಾಗಿ ಭಕ್ತನ ಭಕ್ತಿಯ ಶಕ್ತಿಯನ್ನು ಅರುಹಿದ್ದಾನೆ.

"ಶರಣ ಶಿವಕಾಯಕವ ಒರೆಗೆ ಹಚ್ಚುವರಾರು?
ಹರಸಹಿತ ಸೋತು ಬದುಕಿಸದ ಮೇದಾರ
ವರಕೇತ ನಿನಗೆ ಸರಿಯಾರು?

ಈ ಜೋಗುಳ ಪದದಿಂದ ಮೇದಾರ ಕೇತಯ್ಯನ ವ್ಯಕ್ತಿತ್ವದ ಪ್ರತಿಭೆ ಬೆಳಗಿದೆ. ಮರಣ ಬಂದರೂ ಸಹ ಶರಣ ಕಾಯಕ ಮುಗಿಸಿ ಹರುಷದಲಿ ಹರಣ ನೀಗಿದ ಶಿವಶರಣ ಶಿರೋಮಣಿ. ಮೇದಾರ ಕೇತಯ್ಯನು ಕಾಯಕದ, ದಾಸೋಹದ ಮಹಿಮೆಯನ್ನು ಗಗನದೆತ್ತರಕ್ಕೆ ಮುಟ್ಟಿಸಿ,ಶಿವಶರಣರ ಶಕ್ತಿಯನ್ನು ಪ್ರಪಂಚಕ್ಕೆ ತೋರಿಸಿಕೊಟ್ಟ ಕಾಯಕಯೋಗಿ.

## ಕರ್ನಾಟಕ ರಾಜ್ಯೋತ್ಸವ

ಕಳೆದ ಎರಡು ದಶಕಗಳಲ್ಲಿ ಕರ್ನಾಟಕವು ಪ್ರಗತಿ ಮುಖದತ್ತ ಸಾಗಿ, ಅನೇಕ ಸಮಸ್ಯೆಗಳನ್ನು ಎದುರಿಸಿ, ತನ್ನ ಗುರಿಯನ್ನು ಸಾಧಿಸಿ ಮುನ್ನಡೆದಿದೆ. ಹಿಂದಿರುಗಿ ನೋಡಿದಾಗ ಇಂದಿನ ಅದ್ಭುತ ಪ್ರಗತಿಯು ಎದುರಿಗೆ ಕಾಣುತ್ತದೆ. ಜನತೆಯ ಜೀವನ ಮಟ್ಟವೂ

ಸಹ ಸುಧಾರಿಸುತ್ತಲಿದೆ. ಕಂಟಕವಾಗಿ ಪರಿಣಮಿಸಿದ್ದ ಏರುಪೇರುಗಳು ನಷ್ಟವಾಗಿ ಬೃಹತ್ ಬದಲಾವಣೆಯಾಗಿದೆ. ಮಾನವೀಯತೆಯನ್ನು ಕಾಪಾಡಿಕೊಂಡು, ಆರ್ಥಿಕ ಬೆಳವಣಿಗೆಯಲ್ಲಿ ಮುಂದಡಿ ಇಡುತ್ತಲಿದೆ. ಇದರ ಭದ್ರ ತಳಹದಿಗಾಗಿ, ಉದ್ದಿಮೆ ಹಾಗೂ ಬೆಳೆಗಳ ಉತ್ಪಾದನೆಗಾಗಿ ಹೆಚ್ಚಿನ ಲಕ್ಷ್ಯವಹಿಸಿ, ರಾಜ್ಯ ಸರಕಾರದವರು ಕಾರ್ಯ ತತ್ಪರರಾಗಿದ್ದಾರೆ. ಭಾವೈಕ್ಯಕ್ಕಾಗಿ ನಿರಂತರವೂ ಹೋರಾಡುತ್ತಿದ್ದಾರೆ. ಹಲವಾರು ಶತಮಾನಗಳಿಂದ ಶೋಷಣೆಗೆ ಗುರಿಯಾಗಿದ್ದ ಹರಿಜನ ಗಿರಿಜನ ಮುಂತಾದ ಹಿಂದುಳಿದ ವರ್ಗದವರ ಏಳಿಗೆಗಾಗಿ, ಅನೇಕ ಉಪಯುಕ್ತ ಕ್ರಮಗಳನ್ನು ತೆಗೆದುಕೊಂಡು ಅವರಿಗೆ ಮನೆಕಟ್ಟಲು ನಿವೇಶನ, ಹಣದ ನೆರವು, ಉದ್ಯೋಗಾವಕಾಶ, ಕೃಷಿಭೂಮಿ ವಿತರಣೆ, ಇವೆಲ್ಲವುಗಳನ್ನು ಜಾರಿಗೆ ತಂದು, ಅವರ ಜೀವನಕ್ಕೆ ಚೇತನ ನೀಡಿದ್ದಾರೆ. ಏರುತ್ತಿರುವ ಜನಸಂಖ್ಯೆಯನ್ನು ತಡೆಯಲು ಅನೇಕ ಉಪಾಯಗಳನ್ನು ಹೂಡಿ ಅವರ ಬಾಳು ಬಂಗಾರವಾಗಿ, ನಿರಂತರವೂ ಸುಖದಿಂದಿರಲು ಸೌಲಭ್ಯವನ್ನು ಕಲ್ಪಿಸಿ ಕೊಟ್ಟಿದ್ದಾರೆ. ಶಿಕ್ಷಣ, ಆರೋಗ್ಯ ಸಮಾಜ ಕಲ್ಯಾಣ ಸೇವೆಗಳಿಗೆ ರಾಜ್ಯ ಸರಕಾರವು ಪ್ರಧಾನ ಪಾತ್ರವಹಿಸಿ ಪ್ರತಿಯೊಂದು ದೃಷ್ಟಿಯಿಂದಲೂ, ಜನಜಾಗೃತಿ ಮಾಡಿದೆ. ಶಿಕ್ಷಣ ಕ್ಷೇತ್ರದಲ್ಲಿಯೂ ಅದ್ಭುತ ಪ್ರಗತಿ ಸಾಧಿಸಿದೆ. ಕುಟುಂಬ ಯೋಜನೆ, ಮಕ್ಕಳಿಗೆ ಪೌಷ್ಟಿಕ ಆಹಾರ ಒದಗಿಸುವ ಕಾರ್ಯಕ್ರಮಗಳನ್ನು ಇಟ್ಟುಕೊಂಡು ಅವರ ಉದ್ಧಾರವನ್ನು ಮಾಡಿದೆ. ರಾಜ್ಯದ ಪ್ರತಿಯೊಂದು ಹಳ್ಳಿಗೆ ಸಾಕಷ್ಟು ನೀರು ಅತ್ಯವಶ್ಯ ಬೇಕೆಂದು ಯೋಚಿಸಿ, ಹಳ್ಳಿಗಳ ಅಭಿವೃದ್ಧಿಗಾಗಿ, ಹಾಗೂ ಅವರ ಜೀವನ ಸುಖಮಯ ಸಾಗಿಸುವದರ ಸಲುವಾಗಿ, ಭಾವಿಗಳನ್ನು ನಿರ್ಮಿಸಿಕೊಟ್ಟಿದ್ದಾರೆ. ಅದಕ್ಕಾಗಿ ಭರದಿಂದ ಪ್ರಗತಿಯನ್ನು ಸಾಧಿಸುತ್ತಿದ್ದಾರೆ. ಆಣೆಕಟ್ಟುಗಳ ಯೋಜನೆಯೂ ತ್ವರಿತ ಗತಿಯಿಂದ ನಡೆದಿದೆ. ಕಾರ್ಮಿಕರ ಯೋಗಕ್ಷೇಮಕ್ಕೆ ಆದ್ಯತೆ ನೀಡಿ; ಹಿಂದೆಂದೂ ಆಗದಷ್ಟು ಗಮನ ನೀಡಿದ್ದಾರೆ. ವೃದ್ಧಾಪ್ಯ ವೇತನ ನೀಡುತ್ತಿದ್ದಾರೆ. ಅವರಿಗೆ ಚೈತನ್ಯ ನೀಡಿದ್ದಾರೆ. ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿ, ಬೆಳವಣಿಗೆಗಾಗಿ ಇತ್ತಿತ್ತಲಾಗಿ ಹೆಚ್ಚು ಲಕ್ಷ್ಯವಹಿಸಿ, ಸಾಹಿತ್ಯ ಸಂವರ್ಧನೆಗೊಳಿಸುತ್ತಿದ್ದಾರೆ. ಕರ್ನಾಟಕದ ಗತವೈಭವವನ್ನು ಮನಸಿನಲ್ಲಿ ಮೂಡಿಸಿಕೊಂಡು ಯಾವ ದೃಷ್ಟಿಯಲ್ಲಿಯೂ ಅಳಿಯದಂತೆ ಬೆಳವಣಿಗೆಯ ದಾರಿಯತ್ತ ಸಾಗಿದ್ದು ನೋಡಿದರೆ ಮನಸ್ಸಿಗೆ ತುಂಬಿದ ಸಂತೋಷವನ್ನುಂಟು ಮಾಡಿದೆ.

ನಮ್ಮೀ ಕರ್ನಾಟಕ ಇತಿಹಾಸವು ಕೆಲವು ಸಾಮ್ರಾಟರ ವೈಭವದ ಕಥೆಯಾಗದೆ, ವಿವಿಧ ಸಂಸ್ಕೃತಿ ಸಾಹಿತ್ಯ ಕಲಾ ಪರಂಪರೆಗಳ ಸಂಗಮ ಕ್ಷೇತ್ರವಾಗಿದೆ. ಈ ನಾಡು ಹಿಂದು, ಜೈನ, ಬೌದ್ಧ, ಮುಸ್ಲಿಂ, ಕ್ರೈಸ್ತ, ಪಂಥಗಳ ಜ್ಞಾನಿಗಳು, ಸಂತಕವಿಗಳು, ಸುಧಾರಕರು, ಕಾಯಕವೇ ಕೈಲಾಸವೆಂದು ಸಾರಿದ ಶಿವಶರಣರ ಕ್ಷೇತ್ರವಾಗಿದೆ. ಇಂದು ಈ ಕ್ಷೇತ್ರವು ದಿನೇ ದಿನೇ ಪ್ರಗತಿಯತ್ತ ಸಾಗಿ ಮಾನವೀಯತೆಯನ್ನು ಪ್ರತಿಯೊಬ್ಬರಿಗೂ ಒಡಮೂಡಿಸುತ್ತ ಜಾಗೃತಿಯ ಪ್ರಚಂಡ ಶಕ್ತಿಯನ್ನು, ಕ್ರಿಯಾತ್ಮಕ ಕಾರ್ಯಕ್ರಮಗಳ ಚೌಕಟ್ಟಿನಲ್ಲಿ

ಪರಿಶ್ರಮಿಸುತ್ತಿರುವದು ಶುಭದಾಯಕವಾಗಿದೆ. ಈ ನಾಡು ಅನಾವೃಷ್ಟಿಯ ಅಗ್ನಿ ಪರೀಕ್ಷೆಯಲ್ಲಿ ಪಾರಾಗಿ ಸತತೋದ್ಯೋಗವನ್ನು ಸಾಮಾನ್ಯರಿಗೆ ಕಲ್ಪಿಸಿಕೊಟ್ಟು ಗಂಭೀರ ಸಮಸ್ಯೆಗಳನ್ನು ನಿವಾರಣೆ ಮಾಡುವದರಲ್ಲಿ ತೊಡಗಿದೆ. ಹಣದುಬ್ಬರ, ಬೆಲೆಯೇರಿಕೆ, ಮತ್ತಿತರ ಬಿಸಿ ಸಮಸ್ಯೆಗಳು ತಲೆ ತಿನ್ನುತ್ತಿದ್ದರೂ, ರಾಜ್ಯದ ಪ್ರಗತಿಗೆ ಕುಂಠಿತವಾದಂತೆ, ಧೈರ್ಯೋತ್ಸಾಹದೊಡನೆ ಮುಂದುವರಿದಿದೆ.

ಪ್ರಾಚೀನ ಇತಿಹಾಸ ನೋಡಿದಾಗ ಈ ನಾಡಿಗೆ ಭವ್ಯ ಪರಂಪರೆಯನ್ನು ಸೂಚಿಸ ತಕ್ಕ, ಕರ್ನಾಟಕವೆಂಬುದು ಇಂದು, ರಾಜಕೀಯ ಜಂಜಾಟದಲ್ಲಿ ಸಿಲುಕಿ ಈ ಹೆಸರನ್ನು ಕಳೆದುಕೊಂಡಿತ್ತು. ೧೯೫೬ರಲ್ಲಿ ಕನ್ನಡ ಮಾತಾಡುವ ಪ್ರದೇಶಗಳು ಒಂದುಗೂಡಿ, ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿದವರು ತಪಸ್ಸು ಫಲಕೊಟ್ಟು ಅಸ್ತಿತ್ವಕ್ಕೆ ಬಂದಿತು. ನಂತರ ನಿಧಾನವಾದರೂ ಚಿಂತೆಯಿಲ್ಲ. ಭಾವಸಾಮರಸ್ಯದಿಂದ, ಪರಂಪರೆಯ ಪರಿಜ್ಞಾನದಿಂದ ೧೯೭೩ನೇ ಇಸವಿ ನವ್ಹಂಬರ ಒಂದನೆಯ ದಿನಾಂಕದಂದು ಮೈಸೂರು ಕರ್ನಾಟಕವಾಗಿ, ಸಾಂಸ್ಕೃತಿಕ ನೆಲಗಟ್ಟು ಭದ್ರವಾಗುಳಿಯಿತು. ಸಾಮಾಜಿಕ ನ್ಯಾಯದ ಮೇಲೆ ಹೊಸ ಪ್ರಗತಿದಾಯಕ ಯುಗವನ್ನು ಪ್ರಾರಂಭಿಸಿತು. ಅಂದಿನಿಂದ ಇಂದಿನವರೆಗೆ ಮತ್ತಿಷ್ಟು ನಾಡು ಸಮೃದ್ಧವಾಗಿ, ಸಂಸ್ಕೃತಿಯ ಜೊತೆಗೆ, ಆರ್ಥಿಕೋನ್ನತಿಯು ಬೆರೆತು, ಕರ್ನಾಟಕಕ್ಕೆ ಹೆಚ್ಚು ಕಸುವು ಬಂದಿದೆ. ರಾಜ್ಯ ಧುರೀಣರು, ಸಾಹಿತಿಗಳು, ವಿದ್ವಾಂಸರು, ಧರ್ಮಗುರುಗಳು, ಕರ್ನಾಟಕಕ್ಕಾಗಿ ಹಗಲಿರುಳು ಪರಿಶ್ರಮಿಸುತ್ತಿದ್ದಾರೆ. ಕರ್ನಾಟಕದ ಅಗಾಧ ನೈಸರ್ಗಿಕ ಸಂಪತ್ತು, ಧಾರ್ಮಿಕ ಸಂಪತ್ತು ಹಾಗೂ ಧವಳಸಾಂಸ್ಕೃತಿಕ ಪರಂಪರೆಯನ್ನು ಉಳಿಸುತ್ತ ಹೆಚ್ಚು ಜವಾಬ್ದಾರಿಯಿಂದ, ಕಾರ್ಯತತ್ಪರರಾಗಿದ್ದಾರೆ. ಜನತೆಯ ಹೃದಯವನ್ನು ಗೆಲ್ಲುತ್ತಿದ್ದಾರೆ, ವ್ಯಕ್ತಿಯ ವೈಚಾರಿಕ ಪ್ರಜ್ಞೆಯ ವಿಕಾಸಕ್ಕೆ ಸಾಹಿತ್ಯ ನಿರ್ಮಾಣ ಮಾಡುತ್ತಿದ್ದಾರೆ. ಕನ್ನಡ ನಿಘಂಟು, ವಿಶ್ವಕೋಶ ಮುಂತಾದ ಬೃಹತ್ ಸಾಹಿತ್ಯ ಕೃತಿಗಳು ಹೊರ ಬಂದು, ನಾಡಿನ ಶಕ್ತಿಗೆ ಸ್ಫೂರ್ತಿ ನೀಡಿ, ಆಶಾದಾಯಕ ಹೆಜ್ಜೆಗಳನ್ನು ಇಡುತ್ತಿರುವದು ಅಭಿಮಾನ ಪಡುವಂತಹದಾಗಿದೆ.

ನಾವೀಗ ಇಷ್ಟರಿಂದಲೇ ತೃಪ್ತಿ ಪಡಬೇಕಾಗಿಲ್ಲ ಇನ್ನೂ ಮಾಡಬೇಕಾದ ಕಾರ್ಯವು ಗುಡ್ಡದಷ್ಟಿದೆ. ಅಜ್ಞಾನದ ಕತ್ತಲೆಯಲ್ಲಿರುವ ಕೋಟಿ ಕೋಟಿ ಜನರಿಗೆ ಬೆಳಕನ್ನು ಚಲ್ಲಬೇಕಾಗಿದೆ. ಕಾಲ್ಪನಿಕ ಆದರ್ಶಗಳಿಗಿಂತ ವಾಸ್ತವಿಕ ಮೌಲ್ಯಗಳನ್ನು ಅರ್ಥ ಮಾಡಿಕೊಂಡು, ದುಡಿಯಬೇಕಾಗಿದೆ. ಆಧುನಿಕ ವೈಜ್ಞಾನಿಕ ಸಂಶೋಧನೆಗಳ ಜೊತೆಗೆ, ಆತ್ಮ ಸಂಶೋಧನೆ ಮಾಡಿಕೊಂಡು, ಭೌತಿಕ ಪ್ರಗತಿಯೊಡನೆ ಆತ್ಮ ನಿರೀಕ್ಷಣೆ ಮಾಡಿಕೊಳ್ಳಬೇಕಾಗಿದೆ. ಭಾವೈಕ್ಯವು ಕಾರ್ಯರೂಪದಲ್ಲಿ ಬರಬೇಕಾಗಿದೆ. ಅನೇಕ ಪಕ್ಷ ಪಂಗಡಗಳು ದೂರಾಗಿ ನಾಡಿನ ಶಕ್ತಿನೂರ್ಮಡಿ ಹೆಚ್ಚಾಗಿ ಬೇಕಾಗಿದೆ. ಹಿರಿಯರು ಕಿರಿಯರು ಒಂದು ಗೂಡಿ ಕಾರ್ಮೋಡದಂತೆ ಎದುರಿಗೆ ಬರುತ್ತಿರುವ ವಿಭಿನ್ನ ವಿಚಾರಗಳನ್ನು ಹೊರದೂಡಿ ಕನ್ನಡಾಭಿ

ಮಾನವನ್ನು ಮೈಗೂಡಿಸಿಕೊಂಡು ಕನ್ನಡ ಸಂಸ್ಕೃತಿ ಧ್ವಜವನ್ನು ವಿಶ್ವದೆತ್ತರಕೆ ಹಾರಿಸ ಬೇಕಾಗಿದೆ. ಅದಕ್ಕಾಗಿ ನಾವಿಂದು ಆಲಸ್ಯರಹಿತರಾಗಿ, ಒಮ್ಮನಸಿನಿಂದ ದುಡಿಯಲು ಪ್ರತಿಜ್ಞೆಗೈಯೋಣ. ಕನ್ನಡಾಂಬೆಯ ಕೃಪೆಯ ಪಡೆದು ಮುಂದೆ ಸಾಗೋಣ, ಜಡ ಜೀವನ, ಜನಜೀವನಕ್ಕೆ ನವಚೇತನ ತುಂಬೋಣ.

## ಪರಮ ಪ್ರಸಾದಿ ಮರುಳಶಂಕರದೇವ

೧೨ನೆಯ ಶತಮಾನ. ಅದೊಂದು ಅದ್ಭುತ ಕ್ರಾಂತಿಯ ಕಾಲ. ಕಾಯಕವೇ ಕೈಲಾಸವೆಂದು ಸಾರಿ, ದ್ವೇಷಾಸೂಯೆಗಳ ಮೀರಿ, ಮೇಲು–ಕೀಳುಗಳನ್ನು ತೂರಿ, ಧರ್ಮದ ಹೆಸರಿನಲ್ಲಿ ನಡೆದ ಶೋಷಕ ಸಂಸ್ಕಾರಗಳನ್ನು ಕಿತ್ತೊಗೆದು, ದಯೆಯೇ ಧರ್ಮದ ಮೂಲವೆಂದು ತಿಳಿಹೇಳಿ ಜನಜಾಗೃತಿ ಮಾಡಿದ ಶತಮಾನ. ೧೨ನೆಯ ಶತಮಾನದ ವೈಚಾರಿಕ ಕ್ರಾಂತಿಯಲ್ಲಿ ಮಹಾತ್ಮಾ ಬಸವಣ್ಣನವರನ್ನು ಅಗ್ರಗಣ್ಯರನ್ನಾಗಿ ಪಡೆದು ವೀರಶೈವ ಸಿದ್ಧಾಂತವು ವಿವೇಕ ಬದ್ಧವಾಗಿ ನಿರ್ಮಾಣಗೊಂಡಿತು. ಇದಕ್ಕೆಲ್ಲ ಮಹಾ ಬಸವಣ್ಣನವರೇ ಮೂಲಕಾರಣ. ಇವರು ಕಲ್ಯಾಣದಲ್ಲಿ ಅನುಭವ ಮಂಟಪ ವನ್ನು ಸ್ಥಾಪಿಸಿ, ಅನೇಕ ಶಕ್ತಿಗಳ ಕೇಂದ್ರಮೂರ್ತಿಯಾಗಿದ್ದರು. ಈ ಅನುಭವ ಮಂಟಪದ ಪ್ರಭಾವವು ದಿಕ್ಕು ದಿಕ್ಕುಗಳಲ್ಲಿ ಪ್ರಸರಿಸಿತು. ಬಸವಣ್ಣನವರ ಸಾಮಾಜಿಕ ಧರ್ಮಕ್ಕೆ ಎಲ್ಲರೂ ತಲೆಬಾಗಿದರು. ಅನುಭವ ಮಂಟಪದ ಕಾಯಕತತ್ತ್ವ, ಪ್ರಸಾದ ಮಹಿಮೆ ಅಫಘಾನಿಸ್ತಾನದವರೆಗೂ ಹಬ್ಬಿತು. ಬರ್ಬರ ದೇಶದಲ್ಲಿರುವ ಮರುಳಶಂಕರದೇವರಿಗೆ ಈ ಅನುಭವ ಮಂಟಪದ ಬಸವಣ್ಣನ ಧಾರ್ಮಿಕ ಕ್ರಾಂತಿ ತುಂಬಾ ಹಿಡಿಸಿ, ತಮ್ಮೂರಾದ ಕಣ್ಣುತ್ತೂರಿನಿಂದ ಕಲ್ಯಾಣಕ್ಕೆ ಬಂದು ಸೇರಿದರು. ಮೊದಲಿನಿಂದಲೆ ವಿರಕ್ತ ಜೀವನವನ್ನು ಪಡೆದ ಮರುಳಶಂಕರದೇವರಿಗೆ ಅನುಭವ ಮಂಟಪದ ಶರಣರ ಸಹವಾಸ ತುಂಬಾ ಹಿಡಿಸಿತು. ಇಲ್ಲಿ ಯಾರಿಗೂ ಅರಿಯದಂತೆ, ಎಲೆಮರೆಯ ಹೂವಿನಂತೆ, ಅನುಭವ ಮಂಟಪದ ಮುಂದಿರುವ ಮಹಾಮನೆಯ ಅಂಗಳದಲ್ಲಿ ಬಿದ್ದ ಶಿವಶರಣರು ಉಂಡುಳಿದ ಪ್ರಸಾದವನ್ನು ಸೇವಿಸುತ್ತ, ಪ್ರಸನ್ನತೆಯಿಂದ ಕಾಲ ಕಳೆಯುತ್ತಿದ್ದರು. ಈ ಸಾಧನೆ ಯಿಂದ ಮರುಳಶಂಕರದೇವರಿಗೆ ಅಂಗಸಿದ್ಧಿ, ಕರುಣಸಿದ್ಧಿ, ಭಾವಸಿದ್ಧಿ, ಲಿಂಗಸಿದ್ಧಿಗಳು ಸಾಧಿಸಿದ್ದವು. ಒಂದು ದಿನ ಪ್ರಭುದೇವರು ಅನುಭವ ಮಂಟಪದ ಸುತ್ತೆಲ್ಲ ಸಂಶೋಧ ನಾರ್ಥವಾಗಿ, ಶರಣರೊಡನೆ ಹೊರಟಾಗ, ಶೇಷಪ್ರಸಾದದಲ್ಲಿ ತನ್ಮಯರಾಗಿದ್ದ ಮರುಳ ಶಂಕರದೇವರನ್ನು ನೋಡಿ ಆಶ್ಚರ್ಯಚಕಿತರಾಗುತ್ತಾರೆ. ದಿವ್ಯ ದೃಷ್ಟಿಯಿಂದ ಇವರನ್ನು ನಿರೀಕ್ಷಿಸಿ, ಪರೀಕ್ಷಿಸಿ ಆನಂದ ಭರಿತರಾಗಿ, ಬಸವಣ್ಣನವರತ್ತ ಹೊರಳಿ ಅವರ ನಿಲುವನ್ನು ಈ ರೀತಿ ತಿಳಿಸುತ್ತಾರೆ.

---

೧೯೭೩ ನವ್ಹಂಬರ್ ಒಂದರಂದು ರಾಜ್ಯಕ್ಕೆ 'ಕರ್ನಾಟಕ'ವೆಂದು ನಾಮಕರಣ ಮಾಡಿದ ನಿಮಿತ್ತ ಧಾರವಾಡ ಬಾನುಲಿಯಲ್ಲಿ ಮಾಡಿದ ಭಾಷಣ.

"ಬೀದಿಯಲ್ಲಿ ಬಿದ್ದ ಮಾಣಿಕ್ಯವ, ಹೂಳಿರ್ದ ನಿಧಾನವನಾರಿಗೂ
ಕಾಣಬಾರದು ನೋಡಾ, ಮರಣವುಳ್ಳವರಿಗೆ ಮರುಜವಣಿ
ಸಿಕ್ಕುವದೆ? ಪಾಪಿಯ ಕಣ್ಣಿಂಗೆ ಪರುಷ ಕಲ್ಲಾಗಿಪ್ಪಂತೆ
ಇಪ್ಪರಯ್ಯ ಶಿವಶರಣರು ನಮ್ಮ ಗುಹೇಶ್ವರನ ಶರಣ
ಮರುಳಶಂಕರ ದೇವರ ನಿಲವನೋಡಾ ಸಂಗನ ಬಸವಣ್ಣಾ"

ಬೀದಿಯಲ್ಲಿ ಬಿದ್ದ ಮಾಣಿಕ್ಯದಂತಿರುವ ಮರುಳಶಂಕರದೇವರು ಪ್ರಸಾದ ಕುಂಡದಿಂದ ಎದ್ದು ಬರುತ್ತಿರುವ ದೃಶ್ಯವನ್ನು ಎಲ್ಲ ಶಿವಶರಣರು ನೋಡಿ ಅವರ ದಿವ್ಯಶಕ್ತಿಗೆ ತಲೆ ಬಾಗುತ್ತಾರೆ, ಅಚ್ಚರಿ ಪಡುತ್ತಾರೆ. ಮರುಳಶಂಕರ ದೇವರ ಇರವೆಲ್ಲ ನಿಜಪ್ರಸಾದ. ಅವರು ಅರ್ಚನ,ಅರ್ಪಣ, ಅನುಭವದಲ್ಲಿ ಬಲ್ಲಿದವರಾಗಿ ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಸಾದಿ ಯಾಗಿದ್ದರು. ಅವರಿಗೆ ಪ್ರಸಾದ ಬಿಟ್ಟು ಪ್ರಾಣವಿಲ್ಲ, ಕಾಯವಿಲ್ಲ, ಜ್ಞಾನವಿಲ್ಲ, ಧ್ಯಾನ ವಿಲ್ಲ ಎಂಬುದೇ ಅವರ ದೃಢವಿಶ್ವಾಸವಾಗಿತ್ತು. ಅವರಿಗೆ ಪ್ರಸಾದವೇ ಸ್ಥಿತಿ, ಗತಿ, ಅದರಲ್ಲಿಯೇ ಸುಖದಿರುವು ನಿಜಾನಂದವನ್ನು ಪಡೆದಿದ್ದರು.

ಮರುಳಶಂಕರದೇವರ ಮಾತೃಭಾಷೆ ಕನ್ನಡವಾಗಿರದಿದ್ದರೂ, ಅನುಭವ ಮಂಟಪ ದಲ್ಲಿ ಬಹುದಿನಗಳವರೆಗಿದ್ದು ಕಲಿತುಕೊಂಡು, ಅನುಭವದೊಡನೆ ವಚನ ರಚಿಸಿದ್ದರು. ಜಡತ್ವವನ್ನು ಪರಮ ಪ್ರಸಾದದಿಂದ ಕಳೆದುಕೊಂಡ ಮಹಾಚೇತನಮೂರ್ತಿಯಾಗಿದ್ದರು. ಮರುಳಶಂಕರದೇವರ ಕಾಯವು ಮಾಯವಿಲ್ಲದ ಕಾಯ. ಲೋಕಕ್ಕೆ ಮರುಳರಂತೆ ಕಂಡರೂ ಆತ್ಮಕ್ಕೆ ಅರಿವಿನ ಕರುಳಾಗಿದ್ದರು. ಆಕಾರದಲ್ಲಿಯೂ ನಿರಾಕಾರತ್ವವನ್ನು ಪಡೆದವರಾಗಿದ್ದರು. ಅಲ್ಲಿದ್ದ ಎಲ್ಲ ಶಿವಶರಣರು ಬಗೆದುಂಬಿ ಬಣ್ಣಿಸಿದ ನಂತರ, ಎಲ್ಲಾ ಶಿವಶರಣರ ಜ್ಞಾನಸ್ವರೂಪವನ್ನು ಮರುಳಶಂಕರದೇವರು ಈ ರೀತಿ ಕೊಂಡಾಡುತ್ತಾರೆ. "ಎನ್ನ ಜ್ಞಾನಾತ್ಮನಚೇತನನಯ್ಯಾ ಪ್ರಭುದೇವರು, ಎನ್ನ ಪರಮಾತ್ಮನ ಚೇತನನಯ್ಯ ಸಿದ್ಧರಾಮದೇವರು, ಎನ್ನ ಚಿನ್ಮಯಾತ್ಮನ ಚೇತನನಯ್ಯಾ ಸಂಗನ ಬಸವಣ್ಣನು, ಎನ್ನ ನಿರ್ಮಳಾತ್ಮನ ಚೇತನನಯ್ಯ ಷಡುಸ್ಥಲ ಬ್ರಹ್ಮ ಚನ್ನಬಸವಣ್ಣನು, ಎನ್ನ ಮಹಾತ್ಮನ ಚೇತನನಯ್ಯಾ ಬಸವಣ್ಣನ ನಿಜಸುಖಿ ಅಪ್ಪಣ್ಣನು, "ಎನ್ನ ಜೀವಾತ್ಮನ ಚೇತನನಯ್ಯಾ ಮಡಿವಾಳ ಮಾಚಯ್ಯನು, ಎನ್ನರಿವಿನ ಚೇತನಾತ್ಮಕನಯ್ಯಾ ಕಿನ್ನರಿ ಬ್ರಹ್ಮನು, ಇಂತಪ್ಪ ಪ್ರಮಥರ ಕರುಣದಿಂದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ, ಶಾಂತಮಲ್ಲಿಕಾರ್ಜುನ ದೇವಯ್ಯ ಬದುಕಿದೆನು ಕಾಣಾ ನಿಮ್ಮ ಧರ್ಮ ನಿಮ್ಮ ಧರ್ಮ. ಈ ಸಪ್ತ ಶಿವಶರಣರ ಆತ್ಮಶಕ್ತಿ ವೃದ್ಧಿಗೆ ಕೈದೀವಿಗೆ ಎಂದು ವರ್ಣಿಸಿದ್ದಾರೆ." ನಾವಿಲ್ಲಿ ಪ್ರಸಾದದ ಪ್ರಭಾವ ದಿಂದ ಏನೆಲ್ಲವನ್ನು ಸಾಧಿಸಬಹುದೆಂಬುದಕ್ಕೆ ಮಹಾಪ್ರಸಾದಿ ಮರುಳ ಶಂಕರದೇವರೆ ನಿದರ್ಶನ. ಅಫಘಾನಿಸ್ತಾನದಿಂದ ಹಸಿದು ಬಂದು, ಹಸನಾದ ಜೀವನ ಸಾಗಿಸಿ ಜ್ಞಾನದ ಹಸಿವನ್ನು ಹಿಂಗಿಸಿಕೊಂಡು ಆದರ್ಶ ಶಿವಶರಣರಾಗಿದ್ದರು. ಅವರ ವಚನಗಳನ್ನು

ಓದಿದಾಗ ಇವರು ಸಂಸ್ಕೃತ ಪಂಡಿತರಿರಬಹುದೆಂದು ಅನ್ನಿಸುತ್ತದೆ. ಇವರ ವಚನಗಳೆಲ್ಲವೂ ಆಧ್ಯಾತ್ಮದ ರಸಘಟ್ಟಿಗಳಂತಿವೆ. ಇನ್ನುಳಿದ ಶರಣರಿಗಿಂತಲೂ ಪ್ರಸಾದದ ಮಹತ್ವವನ್ನು ವಿಲಕ್ಷಣವಾಗಿ ಕಂಡಿದ್ದರು. ಪ್ರಸಾದವೆ ಪರಮಜ್ಞಾನವೆಂದು ಬಗೆದು, ಅದರಲ್ಲಿಯೇ ಶಾಂತಿಯನ್ನು ಕಂಡವರಾಗಿದ್ದರು. ಕಲ್ಯಾಣದನುಭವ ಮಂಟಪದ ಆ ಶಿವಶರಣರಿಗೆ ಶಿರೋಮಣಿಯಾಗಿದ್ದರು. ಇವರ ಜೀವನ ಪ್ರಸಾದಿಕ ಜೀವನ; ಪವಿತ್ರ ಜೀವನ.

"ಹನ್ನೆರಡನೆಯ ಶತಮಾನದ ಮಹಾಚೇತನ ನೋಡಾ ನಮ್ಮ ಮರುಳಶಂಕರದೇವ.

## ಹರಿಜನೋದ್ಧಾರ

ಹರಿಜನೋದ್ಧಾರವು ಭಾರತದ ಪ್ರಗತಿಗೆ ಮಹಾಸಾಧನ. ಹರಿಜನೋದ್ಧಾರದಿಂದ ವ್ಯಕ್ತಿಗತ, ಅಂತಃಸ್ಸತ್ವ ವಿಕಸಿತಗೊಂಡು, ಮೇಲು ಕೀಳು ದೂರಾಗಿ ಭಾವೈಕ್ಯವುಂಟಾಗಲು ಮೂಲಕಾರಣವಾಗುವದು. ಭಾವನೆ ಉದಾರವಾದರೆ ಪ್ರೇಮವು ತನ್ನಿಂದ ತಾನೆ ಉದ್ಭವಿಸುವದು. ಮುಟ್ಟಬೇಕು, ಮುಟ್ಟಬಾರದು ಈ ಸಮಸ್ಯೆ ಪರಿಹಾರವಾಗಲು ಎಲ್ಲರೊಡನೆ ಪ್ರೇಮದಿಂದ ವರ್ತಿಸಿದರೆ ಸಾಧ್ಯ. ಪವಿತ್ರವಾದ ವಸ್ತು ಅಪವಿತ್ರವಾದದ್ದನ್ನು ಮುಟ್ಟಿದರೆ, ತನ್ನ ಪವಿತ್ರತೆಯನ್ನು ಎಂದಿಗೂ ಕಳೆದುಕೊಳ್ಳಲಾರದು. ಸಂಸ್ಕೃತಿಯ ಗಂಧವಿಲ್ಲದ ಹರಿಜನರು, ಅವನತಿಯ ಕಂದರದಲ್ಲಿ ಬಿದ್ದು ತೊಳಲುತ್ತಿರುವಾಗ, ಸಂಸ್ಕೃತಿಯ ಸಿಹಿನೀರನ್ನೆರೆದು ಮೇಲಕ್ಕೆತ್ತಿದರೆ ಅವರ ಜೀವನವು ಸುಧಾರಿಸುವದಲ್ಲದೆ ಹಿಂದೂ ಸಮಾಜದ ಮೇಲ್ಮೆಯನ್ನು ತೋರಿಸಿದಂತಾಗುವದು. ಹಿಂದೂ ಸಮಾಜದ ಉನ್ನತಿಗೆ ದಾರಿಯಾಗುವದು. ಹಿಂದುಳಿದವರನ್ನು ಎಲ್ಲಿಯವರೆಗೆ ತಮ್ಮಂತೆ ಬಗೆಯುವದಿಲ್ಲವೋ, ಅಲ್ಲಿಯವರೆಗೆ ಹಿಂದೂ ಸಮಾಜದ ಸಂಘಟನೆಗೆ ಕಂಟಕವುಂಟಾಗುವದು. ಭಾವೈಕ್ಯ ಕನಸಾಗುವದು. ಜಾತೀಯತೆಯ ಪೆಡಂಭೂತವೇ ಹಿಂದೂ ಧರ್ಮದ ಬೆಳವಣಿಗೆಗೆ ಅಡ್ಡಗೋಡೆಯಾಗಿದೆ. ನಾ ಹೆಚ್ಚು ನೀ ಹೆಚ್ಚು ಎನ್ನುವ ಈ ಒಣವಾದವು ಹಿಂದೂ ಸಮಾಜವನ್ನು ಹಿಂಡಿ ಹಿಪ್ಪೆ ಮಾಡುತ್ತಲಿದೆ. ಹಿಂದುಳಿದವರು ಮುಂದುವರೆಯಲು ಬಂಧನಕಾರಿಯಾಗಿದೆ. ಇದರಿಂದ ಹಿಂದೂ ಸಮಾಜದ ಶಕ್ತಿಯು ಕ್ಷೀಣವಾಗಿ ರಕ್ತವಿಲ್ಲದ ಶರೀರದಂತಾಗಿದೆ. ಹಿಂದುಳಿದವರೆಂಬುದನ್ನು ತಿಳಿದುಕೊಳ್ಳಲು ಒಮ್ಮೊಮ್ಮೆ ಕಷ್ಟಸಾಧ್ಯವಾದಂತಾಗಿದೆ. ಮಹಾತ್ಮಾ ಬಸವಣ್ಣನವರ ದೃಷ್ಟಿಯಲ್ಲಿ ಅಸ್ಪೃಶ್ಯ ವ್ಯಾಖ್ಯೆಯನ್ನು ವಿವರಿಸಿದರೆ ಮತ್ತಿಷ್ಟು ಅರ್ಥವಾದೀತು. "ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ, ಕುಲವೇನೋ ಆವಂದಿರ ಕುಲವೇನೋ ನಮ್ಮ ಕೂಡಲಸಂಗನ ಶರಣರೇ ಕುಲಜರು" ಎಂದುದಾಗಿ ಕುಲಕ್ಕಿಂತಲೂ ಗುಣಕ್ಕೆ ಹೆಚ್ಚು ಮಹತ್ವ ನೀಡಿದ್ದಾರೆ. ಸದಾಚಾರ, ನೀತಿ, ನಿಯಮ ಇವುಗಳೇ ಕುಲಜನ ಲಕ್ಷಣಗಳು, ಅನಾಚಾರ, ಅತ್ಯಾಚಾರ, ಹಿಂಸೆಗಳೇ ಅಸ್ಪೃಶ್ಯತೆ. ಇದೀಗ ಮೊದಲು ಅಸ್ಪೃಶ್ಯತೆಯ ಅರ್ಥವನ್ನು ಅರಿತುಕೊಂಡು ಹರಿಜನೋದ್ಧಾರದ ಕಡೆಗೆ ಗಮನವೀಯುವದು ಸಾಮಾಜಿಕೈಕ್ಯತೆಯ ದೃಷ್ಟಿಯಿಂದ

ಹಿತಕರ. ಜನತೆಯಲ್ಲಿ ಭಾವೈಕ್ಯತೆಯನ್ನು ಸಾಧಿಸುವದು ಮುಖ್ಯ ಎನಿಸಿದರೂ, ಜಾತಿ ಜಾತಿಗಳಲ್ಲಿರುವ ಸಂಕುಚಿತ ಸಂಕೋಲೆ ಮುರಿದಾಗ ಹರಿಜನೋದ್ಧಾರವನ್ನು ಮಾಡಲು ಅನುಕೂಲವಾಗುವದು. ವಿಚಾರಕ್ರಾಂತಿ ವಿಶಾಲವಾಗಿದೆಯಾದರೂ ಸಹ, ಕ್ರಾಂತಿಯಂತೆ ಕೃತಿಯಿಲ್ಲ. ಒಳಗೆ ಶಾಂತಿಯಿಲ್ಲ, ಸಹಜತೆ ಇಲ್ಲ. ಕೃತ್ರಿಮತೆಯು ಸುತ್ತೆಲ್ಲ ತಾಂಡ ವಾಡುತ್ತಲಿದೆ. ಅದು ನಿವಾರಣೆಯಾಗಲು ಜಾತೀಯತೆಯ ವೈಷಮ್ಯ ತೊಲಗಿ, ಪರಸ್ಪರರಲ್ಲಿ ಪ್ರೇಮಭಾವನೆ ಉಂಟಾದರೆ ಸಾಧ್ಯ. ಇಲ್ಲವಾದರೆ ಹಿಂದೂ ಸಮಾಜದ ಮಹಾವೃಕ್ಷದ ಶಾಖೋಪಶಾಖೆಗಳು ಮುರಿದು ಛಿನ್ನ ವಿಚ್ಛಿನ್ನವಾದರೆ ಹಿಂದೂ ಸಮಾಜದ ವೃಕ್ಷಕ್ಕೆ ಧಕ್ಕೆ ಉಂಟಾಗುವದಲ್ಲದೆ, ಹಿಂದೂ ಸಂಸ್ಕೃತಿಯೆ ಅಳಿಯುತ್ತದೆ. ಹಿಂದುಳಿದವ ರೆನ್ನುವವರಲ್ಲಿ ವಿಚಾರವು ಬದಲಾಗಿ ಹಿಂದೂ ಸಮಾಜದಿಂದ ದೂರ ಸರಿವ ಸಂಭವವೂ ಬರಬಹುದು. ಈಗಾಗಲೇ ಅನೇಕ ಹರಿಜನರು ಬೇರೆ ಧರ್ಮವನ್ನು ಸೇರಿಲ್ಲವೆ? ಅದಕ್ಕಾಗಿ ಹರಿಜನೋದ್ಧಾರ ಅತ್ಯಾವಶ್ಯ ಬೇಕಾಗಿದೆ. ನೀತಿ, ಸಹಶಿಕ್ಷಣ, ಸಂಸ್ಕೃತಿ ಇವೆಲ್ಲವುಗಳನ್ನು ಹರಿಜನರ ಹೃದಯ ಭೂಮಿಯಲ್ಲಿ ಬಿತ್ತಿದರೆ; ಅವರ ಜನ್ಮ ಸಾರ್ಥಕವಾಗುವದಲ್ಲದೆ ಅವರು ತಮ್ಮ ಬಾಳನ್ನು ಪವಿತ್ರವನ್ನಾಗಿ ಮಾಡಿಕೊಳ್ಳುವರು. ಅದಕ್ಕಾಗಿ ಮಹಾತ್ಮಾ ಗಾಂಧಿಯವರು ಅಹೋರಾತ್ರಿ ಪರಿಶ್ರಮ ವಹಿಸಿದರು. ಹರಿಜನರ ಹಿತಚಿಂತನೆಯನ್ನು ಮಾಡಿ ಬಹುದಿನದಿಂದ ಹಿಂದೂ ಧರ್ಮಕ್ಕೆ ಅಂಟಿಕೊಂಡಿದ್ದ, ಅಳುಕಿಸಲಾರದ ಕಲಂಕವನ್ನು ನಿವಾರಣೆ ಮಾಡಲು ಪ್ರಯತ್ನಿಸಿದರು. ಅಸ್ಪೃಶ್ಯತೆಯೆಂಬ ಭೂತವನ್ನು ಬಿಡಿಸಿ, ಅವರ ಹೀನದೀನ ಸ್ಥಿತಿಗಳನ್ನು ಸುಧಾರಿಸಿದರು. ಹರಿಜನೋದ್ಧಾರಕ್ಕಾಗಿ ಮಹಾತ್ಮಾಗಾಂಧಿ ಯವರು ಉಪವಾಸವನ್ನು ಮಾಡಿದರಲ್ಲದೆ, ಸೆರೆಮನೆಯನ್ನು ಸಹ ಸೇರಿದರು. ಮಹಾತ್ಮಾ ಗಾಂಧಿಯವರ ತಪಸ್ಸು, ಸಾಹಸಗಳ ಫಲವಾಗಿ ಇಂದು ಹರಿಜನರು ಅನೇಕ ಸಾಮಾಜಿಕ ಶೈಕ್ಷಣಿಕ ಕಾರ್ಯಕ್ಷೇತ್ರಗಳಲ್ಲಿ ಮುಂದುವರಿಯುತ್ತಿದ್ದಾರೆ. ಮುಂದುವರಿಯುತ್ತಿರುವ ಹಿಂದುಳಿದವರಲ್ಲಿ, ಮುಂದುವರಿದ ಜನಾಂಗದವರೊಡನೆ ಅಸಹಕಾರ, ತಮ್ಮದೊಂದೆ ಗುಂಪುಗಾರಿಕೆ, ಇವುಗಳು ತಲೆದೋರಿದರೆ ಇದೂ ಸಹ ಹಿಂದೂ ಸಮಾಜಕ್ಕೆ ದೊಡ್ಡ ಆಘಾತವುಂಟಾಗುವದು ಸಹಜ. ಪರಸ್ಪರರಲ್ಲಿ ಹಾರ್ದಿಕತೆಯ ಪ್ರೇಮಭಾವವು ಅಂಕುರಿ ಸಿದರೆ ರಾಷ್ಟ್ರದ ಶಕ್ತಿಯು ನೂರ್ಮಡಿ ಹೆಚ್ಚುವದಲ್ಲದೆ, ಪ್ರಪಂಚದಲ್ಲಿ ಆದರ್ಶ ರಾಷ್ಟ್ರ ವಾಗುವದು. ಅಸ್ಪೃಶ್ಯರೊಳಗಿರುವ ಅಸ್ಪೃಶ್ಯತೆಯೂ ಕಡಿಮೆಯಾಗಿ ಕೆಡುಕಿನ ತೊಡ ಕನ್ನು ಬಿಡಿಸಿಕೊಳ್ಳಬೇಕು. ಆ ಭಾವನೆ ಬೇರೂರ ಬೇಕಾದರೆ ಸದಾಕಾಲಗಳಲ್ಲಿಯೂ ಎಲ್ಲರೊಡನೆ ಸಹೋದರ ಭಾವನೆಯನ್ನು ತಾಳಿ ಅವರ ಜೀವನ ಶುಚಿಯಾಗುವಂತೆ ಪ್ರಯತ್ನಿಸಿದರೆ, ಮಾತ್ರ ಹರಿಜನೋದ್ಧಾರ. ಅಸ್ಪೃಶ್ಯತೆಯ ಅಂಟುರೋಗವನ್ನು ನಿವಾರಣೆ ಮಾಡಲು ನಿಷ್ಕಲ್ಮಷ ಪ್ರೇಮವೇ ದಿವ್ಯೌಷಧ.

## ದೃಷ್ಟಿಯೋಗ

ಮುಕ್ಕಣ್ಣನೊಲಿಸಲು ಕಣ್ಣು ಮೂಲಕಾರಣ. ಸರ್ವೇಂದ್ರಿಯಗಳಿಗೆ ಕಣ್ಣು ಪ್ರಧಾನ.

ಕಣ್ಣಿನಿಂದಲೇ ಪ್ರಪಂಚಕ್ಕೆ ಪಾರಮಾರ್ಥಿಕ ಶಕ್ತಿ. ಕಣ್ಣಿನಾಟ ನಿಲ್ಲಿಸಿದಂತೆ ಆತ್ಮ ಶಕ್ತಿ ಪ್ರಬಲವಾಗುವದಲ್ಲದೇ ನಿಜಾನಂದ ದೊರೆಯುತ್ತದೆ. ಕಣ್ಣೇ ಸಕಲ ವಿಸ್ತಾರದ ರೂಹು. ಕಣ್ಣು ಪ್ರಗತಿಗೂ ಮೂಲ, ಅವನತಿಗೂ ಮೂಲ. ಒಳ್ಗಣ್ಣು ತೆರೆದರೆ ಬಾಳು ಬೆಳಕಾಗುತ್ತದೆ. ತನ್ನ ತಾನರಿಯಲು ಕಣ್ಣೇ ಪರಮ ಸಾಧನ. ಕಣ್ಣಿದ್ದು ಕುರುಡರಾದರೆ ಆತ್ಮ ಹನನ. ಕಣ್ಣಿನಿಂದಲೆ ಶೋಕ, ಮೋಹ, ಮಮತೆ, ದುಮ್ಮಾನಗಳು ಉದ್ಭವಿಸುತ್ತವೆ. ಕಣ್ಣಿನಿಂದಲೆ ಚಿತ್ಕಳೆ, ಚಿಚ್ಛಕ್ತಿ, ಸತ್-ಚಿತ್ ಆನಂದಗಳು ಉಂಟಾಗುತ್ತವೆ. ಆದರೆ ಇಂತಹ ಚಿದ್ಬೆಳಗು ದೊರೆಯಲು ಹೊರಗಣ್ಣಿನಿಂದ ಅಸಾಧ್ಯ. ಅದಕ್ಕೆ ದೃಷ್ಟಿ ಸಿದ್ಧಿ ಅಂತರ್ಗತವಾಗಿರಬೇಕು, ನೋಡುವ ನೋಟ ಪವಿತ್ರವಾಗಿರಬೇಕು. ಅಂತಃಶ್ಚಕ್ಷುಗಳನ್ನು ತೆರೆದರೆ ಮಾತ್ರ ತನ್ನೆದೆಯೊಳಗಿರುವ ಈಶ್ವರ ಸಾಕ್ಷಾತ್ಕಾರವು ಸಹಜ ಸಾಧ್ಯ. ಆಗ ಸತ್ಯ ಸೌಂದರ್ಯಗಳ ಅನುಭವವನ್ನು ನಿರಾತಂಕವಾಗಿ ಪಡೆಯಬಹುದು. ನೋಟವು ನೆನಹಿಗೆ ಒಳಗಾಗದಿದ್ದರೆ ಲಿಂಗಾನುಭವವು ಸಮನಿಸದು. ನಂಬಿಕೆಯ ನೋಟದಿಂದಲೇ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಪರಬ್ರಹ್ಮ ಇವೆಲ್ಲವುಗಳು ಲಭ್ಯ. ದೃಷ್ಟಿ ಸಂಯಮದಿಂದ ಪವಿತ್ರಜೀವನವಾಗುವದಲ್ಲದೆ, ಕಾಲ-ಕರ್ಮ ಮಾಯೆಗಳನ್ನು ಗೆಲ್ಲುವ ಶಕ್ತಿ ಬರುತ್ತದೆಂದು ಚಾಮರಸ ಕವಿಯು ದೃಷ್ಟಿಯ ಅಖಂಡ ತೇಜವನ್ನು ಬಣ್ಣಿಸಿದ್ದಾನೆ. "ಆಲಿ ನಿಂದೊಡೆ ಸುಳಿದು ಸೂಸುವ| ಗಾಳಿ ನಿಲುವದು ಗಾಳಿ ನಿಲೆ ಮನ| ಮೇಲೆ ನಿಲುವದು ಮನವು ನಿಂದೊಡೆ ಬಿಂದು ನಿಂದಿಹುದು| ಲೀಲೆಯಿಂದಾ ಬಿಂದು ನಿಂದೊಡೆ| ಕಾಲಕರ್ಮವ ಗೆದ್ದು ಮಾಯೆಯ| ಹೇಳ ಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ" ನೇತ್ರದಾಟನಿಂದು, ದೃಷ್ಟಿ ಶುದ್ಧಿ ಪಡೆದರೆ ಆ ಮನದ ಕೊನೆಯಲ್ಲಿ ಘನ ಮಹಾ ಶಿವನನ್ನು ಕಂಡು ಮಾಯೆಯಾಟವನ್ನು ಹೇಳಹೆಸರಿಲ್ಲದಂತೆ ಮಾಡಬಹುದೆಂದು ತಿಳಿಸಿದ್ದಾನೆ. ಈ ಅರ್ಥಪೂರ್ಣ ನುಡಿಯನ್ನು ನಡೆಯಲ್ಲಿ ತಂದವರು ಕಂಗಳ ಮುಂದಣ ಬೆಳಗು ಕಾಣುತ್ತಾರಲ್ಲದೆ ಅಂತರಂಗನ ಆತ್ಮನೊಳಗೆ ನಿಜೈಕ್ಯ ನಿಜ ಸ್ಥಿತಿಯನ್ನು ಪಡೆಯುತ್ತಾರೆ. ಕಂಗಳ ಕೊನೆಯಲ್ಲಿ ಲಿಂಗದ ನೋಟವನ್ನೇ ತಂದುಕೊಳ್ಳುತ್ತಾರೆ, ದೃಷ್ಟಿಯಲ್ಲಿ ದಿವ್ಯ ಶಕ್ತಿಯನ್ನು ಕಾಣುತ್ತಾರೆ. ಒಂದೆಡೆ ಷಣ್ಮುಖ ಶಿವಯೋಗಿಗಳು–

"ನೇತ್ರವೆಂಬ ಸುವರ್ಣ ಕೊಡದಲ್ಲಿ ಪರಿಣಾಮವೆಂಬ ಉದಕವ ತುಂಬಿ ಅಭಿಷೇಕ ಮಾಡುವೆನಯ್ಯಾ ನಿಮಗೆ; ನೇತ್ರವೆಂಬ ದಿವ್ಯ ಪುಷ್ಪದ ಮಾಲೆಯ ಧರಿಸುವೆನಯ್ಯಾ ನಿಮಗೆ, ನೇತ್ರವೆಂಬ ಅರಮನೆಯಲ್ಲಿ ಪಟ್ಟ ಮಂಚದ ಮೇಲೆ ಸುಪ್ಪತ್ತಿಗೆಯ ಹಾಸುಗೆಯ ಮಾಡುವೆನಯ್ಯಾ ನಿಮಗೆ; ನೇತ್ರ ಸೂತ್ರದಿಂದ ಕೂಡುವೆನಯ್ಯಾ ನಿಮ್ಮ ಅಖಂಡೇಶ್ವರಾ" ಎಂದುದಾಗಿ ದೃಷ್ಟಿಯೋಗದ ಮಹತಿಯನ್ನು ಮಾರ್ಮಿಕವಾಗಿ ಸ್ವಾನುಭಾವದೊಡನೆ ವಿವರಿಸಿದ್ದಾರೆ. ದೃಷ್ಟಿಯೋಗದಿಂದ ಅಷ್ಟಮ ಸಿದ್ಧಿಗಳು ಸಾಧ್ಯವಾಗುವದಲ್ಲದೆ; ಇಷ್ಟದಲ್ಲಿ ಅಚ್ಚೊತ್ತಿದ ಚಿತ್ತವು ಮತ್ತೆ ದೃಷ್ಟವ ಕಾಣಲಾರದು. ಉರಿಯೊಳಗಣ ಕರ್ಪುರದಂತೆ, ಶಿಲೆಯುಂಡ ಎಣ್ಣೆಯಂತೆ, ಲಿಂಗವೇ ತಾನಾದ ಶರಣರಿಗೆ, ಹೊರನೋಟ ಅಸಾಧ್ಯ.

"ದೃಷ್ಟಿ ಸಂಯದಿಂದ ಸೂಕ್ಷ್ಮ ದೃಷ್ಟಿ, ದೂರ ದೃಷ್ಟಿ, ದಿವ್ಯ ದೃಷ್ಟಿಗಳು ವಶವಾಗುತ್ತವೆ. ಇಷ್ಟಲಿಂಗದಲ್ಲಿ ದೃಷ್ಟಿ ದೃಢವಾದರೆ ದಿವ್ಯ ಜ್ಞಾನವು ಉದಯವಾಗುತ್ತದೆ. ಪ್ರಾಣಭಾವ ಲಿಂಗದಲ್ಲಿ ಅಂತರ್‌ದೃಷ್ಟಿ ನಿಂತರೆ ಮಹಾಬೆಳಗು ಮೈಗೂಡುತ್ತೆಂದು" ಪ್ರಭುವಿನ ಅಭಯ ವಾಣಿಯಲ್ಲಿ ಕಾಣುತ್ತೇವೆ. ದೃಷ್ಟಿಯಂತೆ ಸೃಷ್ಟಿ, ದೃಷ್ಟಿಯಂತೆ ದರ್ಶನ, ಪ್ರತಿಯೊಂದಕ್ಕೂ ದೃಷ್ಟಿಯೋಗವೇ ಮೂಲಕಾರಣ. ಶಿವಯೋಗ ನಿದ್ರೆಗೂ ದೃಷ್ಟಿಯೇ ಪ್ರಧಾನವಾಗಿದೆ. "ಆತ್ಮಾ ವಾ ಅರೇ ದೃಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿಧಿ ದಾಸಿತವ್ಯಃ" ಆತ್ಮನನ್ನು ನೋಡತಕ್ಕದ್ದು, ಕೇಳತಕ್ಕದ್ದು, ಮನನ ಮಾಡತಕ್ಕದ್ದು, ಏಕಾಗ್ರತೆಯಿಂದ ಧ್ಯಾನ ಮಾಡುವದು ಇವೆಲ್ಲವನ್ನು ಉಪನಿಷತ್ಕಾರರು ತಮ್ಮ ದೃಷ್ಟಿಯಲ್ಲಿ ಕಂಡು, ದೃಷ್ಟಿಯ ಹೆಚ್ಚಳವನ್ನು ಹೆಚ್ಚಿಸಿದ್ದಾರೆ. ದೃಷ್ಟಿಯೋಗದ ಒಳಹೊರಗಿನ ಸೌಂದರ್ಯವನ್ನು ತೋರಿಸಿ ದ್ದಾರೆ. "ನೇತ್ರಂಗಳ ಮುಚ್ಚಿ ರೂಹಿಲ್ಲದ ನಿಲವ ಕಾಣಬೇಕೆಂದು" ಶಿವಶರಣರು ನುಡಿದರೆ, "ಎನ್ನ ನಯನಗಳೆರಡು ಜ್ಯೋತಿ ನಿಮಗೆಂದು" ಮುಪ್ಪಿನ ಷಡಕ್ಷರಿಗಳು ಬಿತ್ತರಿಸಿದ್ದಾರೆ. "ನೇತ್ರ ದೇವೋನ ಚ ಪರಃ" ಎಂದು ಶೃತಿಯೂ ಸಾರುತ್ತದೆ. ನೇತ್ರ ಸೂತ್ರದಲ್ಲಿ ಸಕಲ ವಿಸ್ತಾರವಾದ ರೂಹು, ಹೊಳಹು, ಬೆಳಗು ಎಲ್ಲವನ್ನೂ ಕಾಣಬಹುದು.

"ಹುಬ್ಬಳ್ಳಿ ಪೇಟೆಯೊಳು ಕಬ್ಬಿನ ಕೈ ಮಾರಾಟ ಇಬ್ಬರೊಂದಾಗಿ ಉಬ್ಬಿ ಮಾರಲು ಲಾಭ ಹಬ್ಬಿತ್ತೈ ಶ್ರೀಗುರುವೆ ಕೃಪೆಯಾಗು" ಮೈಲಾರ ಬಸವಲಿಂಗ ಶರಣರು ದೃಷ್ಟಿ ಯೋಗದ ಮಹತಿಯನ್ನು ಶೇಷಾಲಂಕಾರದೊಡನೆ ಗೂಢಾರ್ಥದಲ್ಲಿ ವಿವರಿಸಿದ್ದಾರೆ. ನೇತ್ರದ್ವಂದ್ವಗಳ ದೃಷ್ಟಿ ಏಕಾಗ್ರತೆ ಪಡೆದಾಗ ಪರಿಪೂರ್ಣತೆಯುಂಟಾಗಿ ಅಂತರ್ಲಕ್ಷ್ಯ ಸುಸ್ಥಿರವಾದಲ್ಲಿ ದೃಷ್ಟಿಯಲ್ಲಿ ದಿವ್ಯ ಶಕ್ತಿಯನ್ನು ಕಾಣಬಹುದು. ಆತ್ಮಜ್ಞಾನಿಯಾಗಿ ನಿಜ ಸುಖಿಯಾಗಬಹುದು. ಇದುವೇ ದೃಷ್ಟಿಯೋಗ.

## ಇಂದಿನ ಜಗತ್ತಿಗೆ ಅವಶ್ಯವಿದ್ದ ಧರ್ಮ

ಪತಿತರನ್ನು ಪಾವನಗೊಳಿಸುವ ಧರ್ಮವೇ ಇಂದಿನ ಜಗತ್ತಿನಲ್ಲಿ ಅತ್ಯವಶ್ಯಕವಾಗಿದೆ. ಕುಲ ಜಾತಿ ಪಕ್ಷ ಪಂಗಡಗಳಿಗೆ ಅನುವು ಕೊಡುವ ಧರ್ಮಧರ್ಮವಲ್ಲ. ಜಾತ್ಯಾತೀತ ಸಮಾಜ ರಚನೆಗೆ ಪೂರಕವಾಗಬಲ್ಲ ವಿಶಾಲ ತತ್ವಗಳನ್ನೊಳಗೊಂಡು ಇಡೀ ಮಾನವ ಕೋಟಿಯೇ ಅನುಸರಿಸಲು ಅರ್ಹವಾಗಿರುವ ಧರ್ಮವೇ ಧರ್ಮ. ಪ್ರೇಮ, ಸಹಕಾರ, ದಯೆ, ಅಹಿಂಸೆಗಳ ತಳಹದಿಯ ಮೇಲೆ ಕಟ್ಟಿದ ಧರ್ಮವೇ ಇಂದಿನ ಜಗತ್ತಿಗೆ ಅವಶ್ಯವಿದ್ದ ಧರ್ಮ. ಬಾಹ್ಯ ಆಚಾರ, ಶುಷ್ಕಕರ್ಮಗಳಿಗೆ, ಪ್ರಾಮುಖ್ಯತೆಯಿರದಂತಹ ಸಮಾಜವಾದದ ಸಮಾಜ ರಚನೆಗೆ ಅತ್ಯಂತ ಸಹಾಯಕವಾಗಬಲ್ಲ ತತ್ವಗಳನ್ನೊಳಗೊಂಡಿರುವ ವಿಶ್ವಧರ್ಮವೇ ಇಂದು ಬೇಕಾದ ಧರ್ಮ. ಧರ್ಮಶಕ್ತಿಯು ರಾಷ್ಟ್ರೋತ್ಥಾನಕ್ಕೆ ಪರಿವರ್ತನ ಗೊಂಡರೆ ಪೂರ್ಣತ್ವವನ್ನು ಪಡೆಯುವ ಮಹಾ ವ್ಯಕ್ತಿತ್ವ ಹಾಗೂ ದಿವ್ಯ ತೇಜಸ್ಸನ್ನು ಪಡೆಯಬಹುದು. ಶಕ್ತಿ ಸ್ಫೂರ್ತಿ ಸಂಗಳಿಸಲು ಧರ್ಮ ಅತ್ಯಂತ ಸಹಕಾರಿ. "ಪತಿತಂ

ಪತಂತಂ, ಪತಿಷ್ಯಂತಂ ಧರತೀತಿ ಧರ್ಮಃ, ಧಾರಣಾತ್, ಧರ್ಮಃ" ವಿನಾಶದತ್ತಸಾಗಿರುವ ಜಗತ್ತನ್ನು ಮೇಲಕ್ಕೆತ್ತಿ, ಎಚ್ಚರಿಸಿ ಶಕ್ತಿಯನ್ನಿತ್ತು ಸಂರಕ್ಷಿಸುವದೇ ಧರ್ಮದ ಮೂಲ ಗುರಿ ಮತ್ತು ಅದರ ಅರ್ಥವೆಂದು ಹೇಳಬಹುದು. ವ್ಯಕ್ತಿಯಲ್ಲಿ ಹುದುಗಿರುವ ತಮಸ್ಸನ್ನು ನಶಿಸಿ, ಆತ್ಮ ಶಕ್ತಿಯ ದಿವ್ಯ ದೀಪ್ತಿಯನ್ನು ಜಾಗೃತಗೊಳಿಸುವದೇ ಧರ್ಮ. "ಅಸತೋಮಾ ಸದ್ಗಮಯ ತಮಸೋಮಾ ಜ್ಯೋತಿರ್ಗಮಯ ಮೃತ್ಯೋರ್ಮಾ ಅಮೃತಂಗಮಯ" ಪರಮಾತ್ಮ, ನಮ್ಮ ಕೆಡುಕಿನ ತೊಡಕನ್ನು ಬಿಡಿಸಿ, ಒಳ್ಳೆಯ ದಾರಿಗೆ ಕರೆದುಕೊಂಡು ಹೋಗು! ಕತ್ತಲೆಯಿಂದ ಬೆಳಕಿನೆಡೆಗೆ ಕರೆದೊಯ್ಯು, ಸಾವಿನಿಂದ ಸಾವಿಲ್ಲದ ಎಡೆಗೆ ನಮ್ಮನ್ನು ಸಾಗಿಸು ಎಂದು ತಿಳಿಸುವ, ಕಲಿಸುವ ಮಂತ್ರವೇ ಧರ್ಮ.

"ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ
ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾತ್ ಧರ್ಮಸ್ಯ ಲಕ್ಷಣಂ।"

ವೇದಸ್ಮೃತಿ; ಸದಾಚಾರ, ಯಾವದರಿಂದ ಆತ್ಮಕ್ಕೆ ಸಂತೋಷವಾಗುತ್ತದೆ. ಅದು ಧರ್ಮದ ಒರೆಗಲ್ಲು. ಆತ್ಮಶಾಂತಿಯ ನೀಡುವ ಮೈಲುಗಲ್ಲು. ಧರ್ಮಾಚರಣೆಯಿಂದ ಸಿಕ್ಕಷ್ಟು ಸುಖ ಬಹಿಃ ಪ್ರವೃತ್ತಿಯಿಂದ ದೊರೆಯಲಾಗದು. ಕುಶಲನಾದವನು ಸಾಧನೆಮಾಡಿ ಅನೇಕ ಬಗೆಯ ವ್ರತ ನಿಯಮುಗಳನ್ನು ಸತ್ಯನಿಷ್ಠೆಯಿಂದ ಸಾಧಿಸಿ, ದೇಹವನ್ನು ದಂಡಿಸಿ, ಧರ್ಮವನ್ನು ಗಳಿಸಿ ಬೆಳಕನ್ನು ಕಂಡು ಪುನೀತನಾಗುತ್ತಾನೆ. ಪ್ರಪಂಚದಲ್ಲಿ ಉನ್ನತಿ, ಮೋಕ್ಷ ಪ್ರಾಪ್ತಿ ನೀಡುವದೇ ಧರ್ಮದ ಸಿದ್ಧಿ. ಇಂತು ವಿಶಾಲವಾದ ಅರ್ಥವುಳ್ಳ ಧರ್ಮಕ್ಕೆ ಸಂಕುಚಿತ ಕವಚವನ್ನು ಧರಿಸಿದರೆ ಮಾನವ ಧರ್ಮದ ವೈಶಿಷ್ಟ್ಯವನ್ನು ಅದರ ಮಹತಿಯನ್ನು ಕಳೆಗುಂದಿಸಿದಂತಾದೀತು. ಭರತ ಖಂಡದಲ್ಲಿ ಅನೇಕ ಧರ್ಮಗಳು ಉದ್ಭವಿಸಿದ್ದರೂ, ಮಾರ್ಗಗಳು ಹಲವು ಇದ್ದರೂ ಮುಟ್ಟುವ ಕೊನೆಯ ಗುರಿಯು ಒಂದೇ ಆಗಿದೆ. ಅದನ್ನು ತಿಳಿದುಕೊಳ್ಳುವ ಮತ್ತು ಅರಗಿಸಿಕೊಳ್ಳುವ ವಿಶಾಲ ಹೃದಯ ವಿದ್ದರೆ ಮಾತ್ರ ಅರ್ಥವಾಗುತ್ತದೆ. ನಿಂತ ನೀರಿನಿಂದ ಕೊಳಚೆ ಉಂಟಾಗುವದು ಸಹಜ. ಅಂತೆಯೇ ಧರ್ಮವು ಸಹ ನಿಂತ ನೀರಿನಂತಾಗದೆ ಹರಿಯುವ ತಿಳಿ ಜಲದಂತೆ ಸದಾಹರಿಯು ತ್ತಿರುವದಾಗಬೇಕು. ಕಾಲಕ್ಕೆ ತಕ್ಕಂತೆ ವಿಕಾಸಗೊಳ್ಳುತ್ತಿದ್ದರೆ, ರಾಷ್ಟ್ರದ ಶಕ್ತಿಯನ್ನು ಹೆಚ್ಚಿಸಲು ಅನುಕೂಲವಾಗುತ್ತದೆ. ಭಾವೈಕ್ಯತೆಗೆ ಸಾಧನವಾಗುತ್ತದೆ. ಧರ್ಮವು ಸಂಸ್ಕೃತಿಯನ್ನು ತೋರಿಸುವ ಪ್ರತಿಬಿಂಬದಂತೆ ಇರಬೇಕಲ್ಲದೆ, ಐಶ್ವರ್ಯೋಪಾಸನೆಯ ಮೂಲಕ ಭೋಗದ ಹೆಸರಿನಲ್ಲಿ, ಸ್ವಾರ್ಥತೆಯ ಕಾಳ್ಗಿಚ್ಚಿನಲ್ಲಿ ಬೆಂದುಹೋಗುವ ಧರ್ಮ ಪ್ರಚಾರ ಕ್ಷಣಿಕ ಅಷ್ಟೇ ಅಲ್ಲ, ತತ್ತ್ವವಿಲ್ಲದ ಧರ್ಮ ಮೂಢ ಶ್ರದ್ಧೆಯಲ್ಲಿ ಕೊನೆಗೊಂಡು ಒಂದಿಲ್ಲ ಒಂದು ದಿನ ಅದು ನಾಶವಾಗಲೇಬೇಕು. ಕವಿದ ಕತ್ತಲೆ ದೂರಾಗುವ, ಹಾಗೂ ಸತ್ಯಧರ್ಮದ ಅರಿವಾಗುವ ಧರ್ಮ ಬಹುದಿನ ಬಾಳುತ್ತದೆ, ಬೆಳಗುತ್ತದೆ. ಅದಕ್ಕೆ ಅದಾವ ವಿಘ್ನಗಳು ಬರಲಾರವು. ಅಂತರಂಗ ಶುದ್ಧಿಗೆ ಮೂಲಕಾರಣವಾದ ಧರ್ಮವೋ ಹೃದಯ ದೊಳಗೆ ಇಳಿದು. ಬಾಳ್ಬೆಳಕಿಗೆ ದಾರಿದೀಪವಾಗುತ್ತದೆ. ಕೇವಲ ಧರ್ಮದ ಹೊರಹೊದಿಕೆ

ಕೋಲ್ಮಿಂಚಿನಂತೆ ಕ್ಷಣಿಕ. "Kingdom of God will be around us" ಧರ್ಮ ದೃಷ್ಟಿಬೆಳೆದಂತೆ, ಆತ್ಮಿಕ ಶಕ್ತಿ ಪ್ರಬಲವಾದಂತೆ ರಾಗದ್ವೇಷಗಳು ದೂರಾಗಿ, ಅರಿವಿಲ್ಲದ ಶುಷ್ಕಶಾಸ್ತ್ರ ಪಂಡಿತರ ಮತೀಯವಾದ ವಿವಾದಗಳು ತೊಲಗಿದಾಗ ಧರ್ಮವು ಕೈದೀವಿಗೆ ಯಾಗಿ ಪರಿಣಮಿಸುತ್ತದೆ. ಇಂದಿನ ಜಗತ್ತಿಗೆ ಅವಶ್ಯವಿದ್ದ ಧರ್ಮವು ಇದೇ ಆಗಿರುವದು. ಪ್ರತಿಯೊಂದು ಧರ್ಮದಲ್ಲಿಯೂ ಆಧ್ಯಾತ್ಮಿಕತೆಯ ಏಕತೆಯನ್ನು ಕಾಣಬಹುದು. ಯಾವ ಧರ್ಮವೂ ಆಧ್ಯಾತ್ಮಿಕತೆ ಬಿಟ್ಟು ತೊಲಗಿಲ್ಲ. ಆಧ್ಯಾತ್ಮಿಕತೆ ಇಲ್ಲದ ಧರ್ಮ ಧರ್ಮವಲ್ಲ. ಅದು ಕೇವಲ ಶುಷ್ಕಾಚಾರ. ಶುಷ್ಕ ವಿಚಾರ ಜನರನ್ನು ಮರಳುಗೊಳಿಸುವ ಮೋಡಿಯಾಟ.

ಒಂದೆಡೆ ಮಹಾತ್ಮಾ ಗಾಂಧೀಯವರು–"ನಿಜವಾದ ಧರ್ಮವು ಸಂಕುಚಿತ ಮತ ತತ್ವವಲ್ಲ, ಅದು ಬರಿ ಬಾಹ್ಯಾಚರಣೆಯಲ್ಲ. ಸಮಾಜದಿಂದ ಧರ್ಮವನ್ನು ನಿರ್ಮೂಲ ಮಾಡಲೆತ್ನಿಸುವದು ಕಾಡು ಹರಟೆಯಂತೆ ನಿರರ್ಥಕ. ಒಂದು ವೇಳೆ ಅಂಥ ಪ್ರಯತ್ನ ಯಶಸ್ವಿಯಾಗುವದಾದರೆ ಸಮಾಜವೇ ನಾಶವಾದಂತೆ. ಅವಧಿಯಿಂದ ಅವಧಿಗೆ ಮೂಢ ನಂಬಿಕೆಗಳು, ದುಷ್ಟ ಪದ್ಧತಿಗಳು, ನ್ಯೂನತೆಗಳು ನುಸುಳಿ ಬಂದು ಧರ್ಮವನ್ನು ಮಲಿನ ಮಾಡುತ್ತವೆ. ಅವು ಏಳುತ್ತವೆ, ಬೀಳುತ್ತವೆ. ಧರ್ಮವು ಮಾತ್ರ ಎಂದಿಗೂ ಉಳಿಯು ತ್ತದೆ. ಏತಕ್ಕೆಂದರೆ ವಿಶಾಲವಾದ ಭಾವನೆಯಲ್ಲಿ ಜಗತ್ತು ಧರ್ಮದ ಆಧಾರದ ಮೇಲೆ ನಿಂತಿದೆ. "ವಿಚಾರ ಪರತೆಯನ್ನು ಕೋರದ, ನೀತಿಗೆ ವಿರುದ್ಧವಾದ ಎಂತಹ ಧಾರ್ಮಿಕ ತತ್ವವನ್ನಾಗಲಿ ತಳ್ಳಿಬಿಡುತ್ತೇನೆಂದು" ಧರ್ಮದ ವಿವರಣೆಯನ್ನು, ಹೃದಯಾಂತಃಕರಣಕ್ಕೆ ಮುಟ್ಟುವಂತೆ ತಿಳಿಸಿದ್ದಾರೆ. ಧರ್ಮದ ಪ್ರತಿಯೊಂದು ಸಿದ್ಧಾಂತ ಬುದ್ಧಿ ವಿವೇಚನೆಯ ಪರೀಕ್ಷೆಯಲ್ಲಿ ತೊಡಗುವದಕ್ಕಿಂತ ಜ್ಞಾನೋದಯದ ಬೆಂಬಲದೊಡನೆ, ಹೃದಯವಂತಿಕೆ-ಯೊಡನೆ ಬಾಳಿ ಬೆಳಗಿದರೆ ಮಾತ್ರ ಜಗತ್ತಿಗೆ ಮಹೋಪಕಾರ ಮಾಡುವ ಧರ್ಮವಾಗುತ್ತದೆ. ಇಂದಿನ ಜಗತ್ತಿಗೆ ಅವಶ್ಯವಿದ್ದ ಧರ್ಮವೇ ಇಂತಹದು.

### ವಿದ್ಯೆಗೆ ವಿನಯವೇ ಭೂಷಣ

ವಿದ್ಯೆಗೆ ವಿನಯವೇ ಭೂಷಣ. ಶೀಲ ಸಂಸ್ಕೃತಿಗೆ ವಿದ್ಯೆಯೇ ಪೋಷಣ. ವಿದ್ಯೆಯು ಪವಿತ್ರ ಜೀವನವನ್ನು ಮಾಡುತ್ತದೆ. ವಿನಯವನ್ನು ನೀಡುತ್ತದೆ. ಆತ್ಮಶುದ್ಧಿಗೆ ಸಹಕಾರಿ ಯಾಗುತ್ತದೆ. ಆತ್ಮಶಕ್ತಿಯನ್ನು ಸಂಗೊಳಿಸುತ್ತದೆ. ಬುದ್ಧಿಯನ್ನು ವರ್ಧನಗೈಯು ತ್ತದೆ. ಕಷ್ಟನಷ್ಟಗಳನ್ನು ದೂರ ಮಾಡುತ್ತದೆ. ಶುದ್ಧ ಸತ್ಯವನ್ನು ಕಲಸುತ್ತದೆ. ಜೀವನ ಪ್ರಶ್ನೆಯನ್ನು ಬಿಡಿಸುತ್ತದೆ. ಕುರುಡು ಜೀವನಕ್ಕೆ ಕಣ್ಣು ನೀಡುತ್ತದೆ. ವಿದ್ಯೆಯು ಜೀವೋನ್ನತಿಗೆ ಬೆಳಕಾಗುತ್ತದೆ. ವಿದ್ಯೆಯಿಂದ ಜಡಜೀವನಕ್ಕೆ ಧೃಡಶಕ್ತಿ ದೊರೆಯುತ್ತದೆ. ಭಾವಶುದ್ಧಿಗಳು ಬಲಿತು ಧೀ ವಿವೇಚನೆಗಳು ಬೆಳೆದು ಆತ್ಮಾನಂದ ಕಾಸಾರದಲ್ಲಿ ಈಸಲು ಶಕ್ತಿಯನ್ನು ನೀಡುತ್ತದೆ. ವಿದ್ಯೆಯು ಬುದ್ಧಿಯನ್ನು ವಿಮರ್ಶಿಸಿ ಪರಿಶೋಧಿಸುತ್ತದೆ. ಅಂತಶ್ಶಕ್ತಿಗೆ ಊರುಗೋಲಾಗುತ್ತದೆ. ಚಿತ್ತಸಂಸ್ಕಾರಕ್ಕೆ, ತತ್ವಾನುಸಂಧಾನಕ್ಕೆ, ಆತ

ತ್ಮ

ಚಿಕಿತ್ಸೆಗೆ ಸಾಧನವಾಗುತ್ತದೆ. ಮಹಾನ್ ವ್ಯಕ್ತಿತ್ವವನ್ನು ಪಡೆದು ದೇವ ಮಂದಿರವನ್ನು ಪ್ರವೇಶಿಸಲು ವಿದ್ಯೆಯೇ ಮಹಾದ್ವಾರವಿದ್ದಂತೆ. ವಿದ್ಯೆಯಿಂದ ಆತ್ಮವಿಶ್ವಾಸ, ಆತ್ಮಜ್ಞಾನ, ಆತ್ಮಶುದ್ಧಿ ಆತ್ಮಸಂಯಮ ಇವೆಲ್ಲವುಗಳು ದೊರೆತು ಸಂಕಲ್ಪ ಸಿದ್ಧಿಯಾಗುತ್ತದೆ. ವಿದ್ಯೆಯ ಅಂತರಂಗದ ಅರ್ಥವನ್ನು ಅರಿತುಕೊಂಡು ಆಚರಿಸಿದರೆ ಮಾತ್ರ ಈ ರೀತಿಯ ಆನಂದ ದೊರೆಯುತ್ತದೆ. ಇಲ್ಲದಿದ್ದರೆ ಅವೆಲ್ಲವೂ ಕಬ್ಬಿನ ಸಿಪ್ಪೆಯಂತೆ ರಸಹೀನವಾಗುತ್ತದೆ. ಜೀವವಿದ್ದು ಶವವಾಗುತ್ತದೆ. ಹಾಳೂರು ದೇಗುಲದಂತಾಗುತ್ತದೆ. ಸಕಲ ಗುಣಗಳ ಸಾರವನ್ನು ತನ್ನಂತರಂಗದಲ್ಲಿ ಅರಗಿಸಿಕೊಂಡಾಗ ವಿದ್ಯೆಗೆ ಪ್ರಧಾನತೆ ಬರುತ್ತದೆ. ಹಾಗಾಗ ದಿದ್ದರೆ ರತ್ನ ಖಚಿತ ಮಣಿಯನ್ನು ಹೊತ್ತ ಸರ್ಪದಂತಾಗುತ್ತದೆ. ವಿದ್ಯೆ ಬೆಳೆದಂತೆ, ಅಂತರಂಗ ಶುದ್ಧಿಯಾದರೆ ಸಾರ್ಥಕತೆ ಶುಚಿ ತಾನಾಗದೆ ಸರ್ವಶಾಸ್ತ್ರ ನಿಪುಣರಾದರೂ ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದಂತೆ, ಅದು ನಿರರ್ಥಕ. ವಿದ್ಯೆ ಇದ್ದಾಗ ಅಹಂಕಾರವು ಸುಳಿದರೆ ಮೇಲೇರಿ ತೆಳಗಿಳಿದಂತೆ. ಅಹಂಕಾರದ ಮಡುವಿನಲ್ಲಿ ಮುಳುಗಿದವರಿಗೆ ವಿದ್ಯೆಯ ಪ್ರಕಾಶ ಅರಿವಾಗದು. ಬುದ್ಧಿ ಭ್ರಂಶವುಳ್ಳವರಾಗಿ ಗತಿ ಮತಿ ಹೀನರಾಗುತ್ತಾರೆ. ಜ್ಞಾನ ಶೂನ್ಯರಾಗಿ, ನಾನೆಂಬ ಕಾರ್ಗತ್ತಲೆಯಲ್ಲಿ ತಿರುಗಿ ಕೇವಲ ವಚನ ಬ್ರಹ್ಮರಾಗುತ್ತಾರೆ. ನಮ ಗಿಂದು ಇಂತಹ ವಿದ್ಯೆ ಅನಾವಶ್ಯಕ; ಇಷ್ಟೇ ಅಲ್ಲ ಇಂತಹ ಅವಿದ್ಯೆಯಿಂದ ನಾಡು ಮತ್ತು ಸಮಾಜ ಹಾಳಾಗುವದಲ್ಲದೆ ವ್ಯಕ್ತಿತ್ವಕ್ಕೆ ಕೊಡಲಿ ಏಟು ಬಿದ್ದಂತಾಗುವದು. ಎಲ್ಲಿಯ ವರೆಗೆ ವಿದ್ಯೆ ಒಳಗಿಳಿಯುವದಿಲ್ಲವೋ, ಅದರ ಅನುಭವ ಕಿರಣಗಳು ಹೃದ್ವ್ಯೋಮದಲ್ಲಿ ಪ್ರಕಾಶಿಸುವದಿಲ್ಲವೋ ಅಲ್ಲಿಯವರೆಗೆ ಎಚ್ಚರವಿದ್ದಂತೆ ಕಂಡರೂ ಮಲಗಿದಂತೆ. ಅದಕ್ಕಾಗಿ ಇಂದು ಸಮಾಜಕ್ಕೆ ಬಚ್ಚಿಟ್ಟ ಐಶ್ವರ್ಯದಂತಿರುವ ವಿದ್ಯೆ ಬೇಕಾಗಿದೆ. ಸಾಮಾಜಿಕ ರಂಗದಲ್ಲಿ ಧುಮುಕಿ, ಉತ್ತಮ ಸಂಸ್ಕಾರದ ಸಿಹಿ ನೀರನ್ನೆರೆಯುವಂತಹ ವಿದ್ಯೆ ಬೇಕಾಗಿದೆ. ಅಂತರಂಗದ ಗವಾಕ್ಷಗಳನ್ನು ತೆರೆಯಿಸುವ ವಿದ್ಯೆ ಬೇಕಾಗಿದೆ. ಇತಹ ವಿದ್ಯೆಯೇ ಮಾನವನನ್ನು ಪೂರ್ಣತೆಯತ್ತ ಒಯ್ಯುತ್ತದೆ. ಇಂತಹ ವಿದ್ಯೆಯನ್ನು ಪಡೆದ ವಿದ್ವಾಂಸರು ಸರ್ವತ್ರ ಪೂಜಿಸಿಕೊಳ್ಳುತ್ತಾರೆ. ಇಂತಹ ವಿದ್ಯೆಯೇ ಸರ್ವರಿಗೂ ದಾರಿದೀಪವಾಗುತ್ತದೆ. ವಿದ್ಯೆಯು ಮೊದಲು ಭಾವದಲ್ಲಿ ಒಡಮೂಡಬೇಕು. ನಂತರ ಕೃತಿಯಲ್ಲಿಳಿಯಬೇಕು. ಕೃತಿಯಲ್ಲಿ ಬಾರದ ವಿದ್ಯೆ ಒಣಗಿರುವ ತರುವಿನಂತೆ. ನೀರಿರದ ಕೆರೆಯಂತೆ ವ್ಯರ್ಥವಾಗು ವದು. ವಿದ್ಯೆಯು ಮಾನವೀಯತೆಯನ್ನು ಕಲಿಸುತ್ತದೆ. ಮಾನವನನ್ನಾಗಿ ಮಾಡುತ್ತದೆ. ಸಾಂಸ್ಕೃತಿಕ ಪರಂಪರೆಯ ಭಾಗ್ಯದ ಬಾಗಿಲನ್ನು ತೆರೆಯಿಸುತ್ತದೆ. ಆತ್ಮಕ್ಕೆ ಶಾಂತಿಯನ್ನು ನೀಡುತ್ತದೆ. ಒಂದೆಡೆ ಮಹಾತ್ಮಾಗಾಂಧೀಯವರು "ಆಚರಣೆಗೆ ಬಾರದ ಪುಸ್ತಕ ಪಾಂಡಿತ್ಯ ಸುವಾಸನೆ ಕಟ್ಟಿ ಕಾಪಾಡಿಕೊಂಡ ಬಂದ ಹೆಣದಂತೆ." ನೋಡುವದಕ್ಕೆ ಮುದ್ದಾಗಿರುತ್ತದೆ. ಆದರಲ್ಲಿ ಯಾವ ಪ್ರೇರಣೆಯಾಗಲಿ, ಘನತೆಯಾಗಲಿ ಇರದು ಎಂದುದಾಗಿ ತಿಳಿಸಿದ್ದಾರೆ. ವಿದ್ಯೆಯು ಮಾನವನನ್ನು ಮೇಲಕ್ಕೆತ್ತುತ್ತದೆ. ಅವಿದ್ಯೆ ತೆಳಗೆ ತುಳಿಯುತ್ತದೆ. ವಿದ್ಯೆಯು ಎಚ್ಚರಿಸುತ್ತದೆ. ಅವಿದ್ಯೆಯು ಮಲಗಿಸುತ್ತದೆ. ವಿದ್ಯೆಯು ಕಾಯಕವನ್ನು ಮಾಡಲು

ಹೆಚ್ಚುತ್ತದೆ. ಅವಿದ್ಯೆ ಮಾಯಾ ಮೋಹದತ್ತ ಕಳಿಸುತ್ತದೆ. ವಿದ್ಯೆಯು ಭವಬಂಧನ ವನ್ನು ಬಿಡಿಸುತ್ತದೆ. ಅವಿದ್ಯೆಯು ಭವಸಾಗರದಲ್ಲಿ ನೂಕುತ್ತದೆ. ವಿದ್ಯೆಯು ದೇಹವನ್ನು ದೇಗುಲ ಮಾಡುತ್ತದೆ. ಅವಿದ್ಯೆಯು ದೇಹವನ್ನು ನರಕವನ್ನಾಗಿ ಮಾಡುತ್ತದೆ. ವಿದ್ಯೆ ಯಿಂದ ಜೀವನವೆಲ್ಲವೂ ಪವಿತ್ರವಾದರೆ, ಅವಿದ್ಯೆಯಿಂದ ಅಪವಿತ್ರವಾಗುತ್ತದೆ. ವಿದ್ಯೆಯು ಕೂಡಿಸುತ್ತದೆ. ಅವಿದ್ಯೆಯು ಅಗಲಿಸುತ್ತದೆ. ದೈಹಿಕ, ಮಾನಸಿಕ, ಆಧ್ಯಾತ್ಮಿಕ ಪ್ರಗತಿಗೆ ಅನುಕೂಲವಾಗದ ವಿದ್ಯೆ ಬೂರಗದ ಅರಳೆಯಂತೆ ನಿರರ್ಥಕ. ವಿದ್ಯೆಯು ಬುದ್ಧಿಗೆ ನೆರವು ನೀಡಿದರೆ ಮಾತ್ರ ಸಾರ್ಥಕ. ಆಗ ಆತ್ಮಿಕ ಸಂಪತ್ತನ್ನು, ಶಕ್ತಿಯ ಸಂಪೂರ್ಣತೆಯನ್ನು ಸಂಗಳಿಸಲು ಸಮರ್ಥವಾಗುತ್ತದೆ. ಮತ್ತು ಸುಖದ ಸಾಧನವಾಗುತ್ತದೆ. ಆಂತರಿಕ ಬಾಧೆಯನ್ನು ನೀಗಿಸಲು ಸಹಾಯವಾಗುತ್ತದೆ. ವಿದ್ಯೆಯ ಜೊತೆಗೆ, ಪ್ರಾಮಾಣಿಕತನ, ಸತ್ಯ, ಅಹಿಂಸೆ, ನೀತಿ, ಇವೆಲ್ಲವುಗಳು ಸಮ್ಮಿಲಿತವಾಗದಿದ್ದರೆ, ಭದ್ರವಿಲ್ಲದ ಬುನಾದಿ ಯಿದ್ದಂತೆ, ಹುಳ ಹತ್ತಿದ ಕಟ್ಟಿಗೆಯಂತೆ, ಕಸ ತುಂಬಿದ ಹೊಲವಿದ್ದಂತೆ, ವ್ಯರ್ಥವಾಗು ವದು. ಒಂದೆಡೆ ಸುಭಾಷಿತಕಾರರು—ಅಸಂಖ್ಯಾತ ಸಂಶಯಗಳನ್ನು ಪರಿಹರಿಸುವ, ಕಾಣದ ವಿಷಯಗಳನ್ನು ಕಾಣುವಂತೆ ಮಾಡುವದೇ ವಿದ್ಯೆಯ ಮೂಲ ಗುರಿ, ಇದಿಲ್ಲದವನು ಕಾಡು ಪಶು, ವಿದ್ಯೆಯೇ ಗುರುವಿನ ಗುರು ಎಂದು ಮುಂತಾಗಿ ತಿಳಿಸಿದ್ದಾರೆ. ಕಥಾ ಸರಿತ್ಸಾಗರ ದಲ್ಲಿಯೂ ಸಹ ವಿದ್ಯೆಗೆ ಸಮನಾದ ಬಂಧುವಿಲ್ಲವೆಂದು ಹೇಳಿದೆ. ಶೀಲ ಸಂಸ್ಕೃತಿಯ ಕಲ್ಪವೃಕ್ಷಕ್ಕೆ ವಿದ್ಯೆಯೇ ತಾಯಿಬೇರು ಸೊಗಸು ಬಾಳಿಗೆ ಸಿಹಿ ನೀರು.

**ಶಿವರಾತ್ರಿ**

"ರಾತ್ರಿಯೊಳು ಶಿವರಾತ್ರಿ ಜಾತ್ರೆಯೊಳು ಶ್ರೀಶೈಲ ಕ್ಷೇತ್ರದೊಳಧಿಕ
ಶ್ರೀಕಾಶಿ ಶಿವತತ್ತ್ವ ಸ್ತೋತ್ರದೊಳಧಿಕ ಸರ್ವಜ್ಞ"

ವರ್ಷಕ್ಕೊಮ್ಮೆ ಹಬ್ಬಗಳು ಬರುವದುಂಟು. ಭಾರತೀಯರು ಹೆಚ್ಚಾಗಿ ಈ ಹಬ್ಬ ಗಳಲ್ಲಿ ಉತ್ಸವದಿಂದ ನಲಿವದುಂಟು. ತಮ್ಮ ತಮ್ಮ ಬೇಸರಿಕೆಗಳನ್ನು ಕಳೆಯುವದುಂಟು. ಇದು ಪರಂಪರಾಗತವಾಗಿ ಬಂದಿರುವ ರೂಢಿ. ನಿತ್ಯ ಜೀವನದಲ್ಲಿ ಕಷ್ಟ ಕಾರ್ಪಣ್ಯಗಳು ಬೆನ್ನು ಹತ್ತಿ ಜೀವನವನ್ನು ನಷ್ಟಕ್ಕೀಡು ಮಾಡಿದಾಗ ಹಬ್ಬಗಳು ಮನಸ್ಸಿಗೆ ನಿತ್ಯ ಜೀವನದ ಬೇಸರ ಕಳೆದು ಹೊಸ ಹುರುಪು ಉತ್ಸಾಹಗಳನ್ನು ನೀಡುತ್ತವೆ. ಬಾಳನ್ನು ಹಗುರ ಗೊಳಿಸುವುದೇ ಹಬ್ಬದ ಮುಖ್ಯ ಕೆಲಸವಾಗಿ, ಹಿರಿಯರ ಹಾಗೂ ದೇವರ ಹೆಸರಿನಲ್ಲೂ ಅತ್ಯಂತ ಉತ್ಸಾಹದಿಂದ ಉಲ್ಲಾಸದಿಂದ ಬೇರೊಂದು ವೈಶಿಷ್ಟ್ಯ ಪೂರ್ಣರೀತಿಯಲ್ಲಿ ದಿನ ಗಳೆಯುವದೇ ಹಬ್ಬಗಳ ರಹಸ್ಯ. ಈ ಹಬ್ಬಗಳಲ್ಲಿ ಹೊಸ ಉಡುಪು ಸಿಹಿಯೂಟ ತಮ್ಮ ತಮ್ಮ ಬಂಧುವರ್ಗಗಳೊಡನೆ ಕೂಡಿಕೊಂಡು ಉಂಡು ನಲಿದಾಡಿ ಸಮರಸ ಜೀವನದಲ್ಲಿ ಕಾಲ ಕಳೆದು ನವಚೈತನ್ಯವನ್ನು ತಮ್ಮ ಜೀವನದಲ್ಲಿ ತಂದುಕೊಳ್ಳುವದೇ ಇದರ ಮುಖ್ಯ ಗುರಿ. ಉಬ್ಬು ಹಬ್ಬದ ಪ್ರತಿಬಿಂಬವಾದರೆ ಹಬ್ಬ ಉಬ್ಬಿನ ಪ್ರತಿಭೆ. ವರ್ಷಕ್ಕೊಮ್ಮೆ

ಬರುವ ಇಂತಹ ಹಬ್ಬಗಳಲ್ಲಿ ಶಿವರಾತ್ರಿ ಹಬ್ಬವು ಹಿರಿದಾದುದು. ಈ ಹಬ್ಬವನ್ನು ಭಾರತೀಯರೆಲ್ಲರೂ ತಮ್ಮ ಧರ್ಮಗಳ ಗೋಜಿಲ್ಲದೆ ಆಚರಿಸುತ್ತಾರೆ. ಪ್ರತಿಯೊಬ್ಬರು ನಿತ್ಯ ಶಿವರಾತ್ರಿಯಾಗಲೆಂದು ಹಾರೈಸುತ್ತಾರೆ. "ಉಪವಾಸದ ಶಾಂತಿ ನಿರಾಹಾರದ ಹಗುರತನ ಪೂಜಾಸಲಕರಣೆಗಳ ಸನ್ನಾಹ ಗಡಿಬಿಡಿ ಜಾಗರಣೆಯ ಎಚ್ಚರಿಕೆ ಕತ್ತಲೆಯನ್ನು ಕತ್ತರಿಸುವ ದೀಪೋತ್ಸವದ ಬೆಳಕು ಮರುದಿನ ಹೊತ್ತು ಹೊರಟರೆ ಉಪವಾಸ ಮುರಿಯುವ ನಂಬಿಗೆ ಹಸಿವೆ ಹಿಂಗಿಸುವದಕ್ಕೆ ಸವಿಯೂಟ ಇದೇ ನಿಚ್ಚ ಶಿವರಾತ್ರಿಯನ್ನು ಬಯಸುವ ಶರಣರ ದಿನಚರಿ" ಇದು ಪರಂಪರಾಗತವಾಗಿ ಬಂದಿರುವ ವೈಶಿಷ್ಟ್ಯಪೂರ್ಣ ಶಿವರಾತ್ರಿ ಇಂದು ಈ ರಾತ್ರಿ ಎಲ್ಲರನ್ನು ಆಧ್ಯಾತ್ಮ ಸಾಧನೆಯತ್ತ ಒಯ್ಯುತ್ತದೆ. ಶಿವನ ಸೇವೆಗೆ ಶಿವನ ಧ್ಯಾನಕ್ಕೆ ಕಾಯಕ ನಿಷ್ಠೆಗೆ ದಾಸೋಹ ಮಾಡಲಿಕ್ಕೆ ಪುಣ್ಯಗಳಿಸಲಿಕ್ಕೆ ಆತ್ಮ ಚಿಂತನೆಗೆ ಯೋಗ ಸಾಧನೆಗೆ ಒಳ್ಳೆ ಸುಸಂಧಿ, ಶಿವರಾತ್ರಿಯ ದಿನ ಪುನೀತರಾಗಿ ಜೀವನವನ್ನು ಪರಿಶುದ್ಧ ಮಾಡಿಕೊಳ್ಳುವ ಶುಭ ದಿನವಾಗಿದೆ. ತಿಮಿರವನ್ನು ಸರಿಸಿ ಬೆಳಕನ್ನು ಒಳಗಿರಿಸಿ ಭಾವ ವೈಭವವನ್ನು ಪಡೆಯುವ ಮಹಾದಿನವಾಗಿದೆ.

ಎಚ್ಚರಿಕೆಯೇ ಶಿವರಾತ್ರಿಯ ಮುಖ್ಯಲಕ್ಷಣ ಅಂದಮಾತ್ರಕ್ಕೆ ಕೇವಲ ನಿದ್ರೆಯಿಂದ ಎಚ್ಚತ್ತಿರುವುದಲ್ಲ. ನಿದ್ರೆಗೂ ಆಚೆಗಿರುವ ಎಚ್ಚರಿಕೆ ಬೇಕು ಅದುವೇ ಜ್ಞಾನ. ಆ ಎಚ್ಚರಿಕೆ ನಮ್ಮಲ್ಲಿ ಅಳವಟ್ಟಾಗ ಶಿವರಾತ್ರಿಯ ದೀಪೋತ್ಸವದ ಬೆಳಕಿನ ಬಯಲು ನಮಗೆ ಕಾಣಿಸಿಕೊಳ್ಳುವದು, ನಿತ್ಯವೂ ಕಂಗೊಳಿಸಿಕೊಳ್ಳುವುದು, ಕತ್ತಲೆಯಿಂದ ಬೆಳಕಿನತ್ತ ಸಾಗುವದು "ನಿಚ್ಚಕ್ಕೆ ನಿಚ್ಚ ನೆನೆವ ಮನವ ಅಂದಿಂಗೆ ಅತ್ತಲಿತ್ತ ಹರಿವ ಮನವ ಚಿತ್ತದಲ್ಲಿ ನಿಲ್ಲಿಸ ಬಲ್ಲಡೆ ಬಚ್ಚ ಬರಿಯ ಬೆಳಗು, ಇದು ಪ್ರಭುವಿನ ವಾಣಿ. ಈ ಬೆಳಗು ಮನದಲ್ಲಿ ಮೂಡಿದಾಗ ಅದುವೇ ಶಿವರಾತ್ರಿ. ಅಂತರ್ಮುಖದತ್ತ ಸಾಗಿ ಯತಾರ್ಥತೆಯನ್ನು ಸಾಧಿಸಿಕೊಂಡರೆ ಇಂದಿನ ಕತ್ತಲೆಯ ರಾತ್ರಿಯನ್ನು ಶಿವರಾತ್ರಿಯನ್ನಾಗಿ ಮಾರ್ಪಡಿಸಬಹುದು."

"ಗಗನವೇ ಗುಂಡಿಗೆ, ಆಕಾಶವೇ ಅಗ್ಗವಣಿ, ಚಂದ್ರ ಸೂರ್ಯ
ರಿಬ್ಬರೂ ಪುಷ್ಪ, ಬ್ರಹ್ಮಧೂಪ ವಿಷ್ಣು ದೀಪ, ರುದ್ರನೋಗರ
ಸುಯಿದಾನ ನೋಡಾ ಗುಹೇಶ್ವರ, ಲಿಂಗಕ್ಕೆ ಪೂಜೆ ನೋಡಾ"

ಇವುಗಳೇ ನಿಚ್ಚ ಶಿವರಾತ್ರಿಯನ್ನು ಆಚರಿಸುವ ಸಲಕರಣೆಗಳು ಇಡಿಯ ಆಯುಷ್ಯ ದುದ್ದಕ್ಕೂ ಅಂತಃಕರಣ ಪೂರ್ವಕವಾಗಿ ಆಚರಿಸಿದರೆ ಅದುವೆ ನಿಚ್ಚ ಶಿವರಾತ್ರಿ. ಶಿವ ರಾತ್ರಿಯ ಪೂಜೆಯೆಂದರೆ ಕರಣಂಗಳ ಮೇಲೆ ಲಿಂಗ ಕಿರಣಗಳು ಮುದ್ರೆಯೊತ್ತಿ ದಶವಾಯುಗಳ ಸಂಚು ತಪ್ಪಿದರೆ ಒಳಗೆ ಮಹಾ ಐಕ್ಯಾನುಸಂಧಾನವಾದರೆ ಆ ಜೀವನಕ್ಕೆ ಉತ್ಸಾಹದ ಶೆಲೆ ಉಲ್ಲಾಸದ ನೆಲೆಯುಂಟಾಗಿ ಅಗಾಧ ಆನಂದದ ರಸಬುಗ್ಗೆ ಉಕ್ಕುವದು. ಅದಕ್ಕಾಗಿ ನಾವೆಲ್ಲರೂ ಶಿವರಾತ್ರಿಯ ಶುಭ ದಿನದಂದು ಎಚ್ಚರಿಕೆ ವಹಿಸಿ ಹೃದಯ ಬಾಗಿಲ ತೆರೆದು ಶಿವಧ್ಯಾನ ಮಾಡಿ ಶಿವಭಾವವನ್ನು ತುಂಬಿಕೊಂಡು ರಾತ್ರಿಯ ಮಹತ್ವವನ್ನು ಅರಿತುಕೊಂಡು ಬಾಳಿನಲ್ಲಿ ಬೆಳಕನ್ನು ಕಾಣೋಣ.

## ಆತ್ಮಶ್ರೀ

ಜ್ಞಾನ ದೀಪವು ಅಂಧಕಾರವನ್ನು ಕಳೆಯುತ್ತದೆ. ಅಂತರಾತ್ಮನನ್ನು ತೋರಿಸುತ್ತದೆ. ಆ ಅರಿವಿನ ಬೆಳಗಿನಲ್ಲಿ ಮಿಂದವರು ಪೂತಾತ್ಮರು, ನಿತ್ಯತೃಪ್ತರು ಜ್ಞಾನವಿಲ್ಲದ ಭಕ್ತ ಎಳ್ಳಿಲ್ಲದೆ ಗಾಣವನಾಡಿದಂತೆ ರೆಕ್ಕೆಯಿಲ್ಲದ ಪಕ್ಷಿಯಂತೆ. ವ್ಯಕ್ತಿತ್ವ ವಿಕಾಸವಾಗಬೇಕಾದರೆ ಜ್ಞಾನ ಜ್ಯೋತಿ ಹೃನ್ಮಂದಿರದಲ್ಲಿ ಬೆಳಗಬೇಕಾಗುತ್ತದೆ. ಅಲ್ಪ ವಸ್ತುಗಳನ್ನು ಹೆಚ್ಚು ಹೆಚ್ಚು ಚಿಂತಿಸುತ್ತ ಹೋದಂತೆ ಮೃತ್ಯುವಿನ ಕಡೆಗೆ ಧಾವಿಸಬೇಕಾಗುತ್ತದೆ. ರಜಸ್ಸಿನಿಂದ ಪ್ರವೃತ್ತಿ ತಮಸ್ಸಿನಿಂದ ಮೋಹ ಹುಟ್ಟಿದಂತೆ, ಜ್ಞಾನದಿಂದ ಅಂತಸತ್ವ ಪ್ರಕಾಶಿತವಾಗು ತ್ತದೆ. ಮಂಜು ಮುಚ್ಚಿದಾಗ ಸೂರ್ಯ ಕಾಣನು ಅಂತೆಯೇ ಮರವೇ ಅವಿವೇಕ; ಅಜ್ಞಾನಗಳೆಂಬ ಮಂಜು ಮುತ್ತಿದಾಗ ಹೃದ್ವ್ಯೋಮದಲ್ಲಿರುವ ಈಶ್ವರನು ಕಾಣನು. ಆ ಮಾಯೆಯ ಕಾರ್ಮೋಡಗಳು ಸರಿದಾಗ ಭಾನು ಒಂದೆಡೆ ಕತ್ತಲೆ ಹರಿವಂತೆ ಈಶ್ವರ ಸಾಕ್ಷಾತ್ಕಾರವು ಸಹಜ ಸಾಧ್ಯ. "ಜ್ಞಾನ–ದೀಪ್ತಿಯ ಬೆಳಗುವಡೆ ತೈಲವಾವುದೆಂದೊಡೆ ಶಿವ ಶರಣರ ನುಡಿಗಡಣದ ಒಸರು ಆ ಒಸರಿಂಗಲ್ಲದೆ ಜ್ಞಾನ ಪ್ರಕಾಶವಿಲ್ಲ" ಎಂದು ಷಟ್‌ಸ್ಥಲ ಜ್ಞಾನ ಚಕ್ರವರ್ತಿ ಚನ್ನಬಸವಣ್ಣನವರ ಸಿದ್ಧಾಂತ, ಜ್ಞಾನ ವಿರಹಿತ ಕ್ರಿಯೆ ಕಣ್ಣಿಲ್ಲದವನ ನಡಿಗೆಯಂತೆ ಕ್ರಿಯೆ ಇಲ್ಲದ ಜ್ಞಾನ ಕಾಲಿಲ್ಲದ ಹೆಳವನಂತೆ ಶೋಭಿಸದು. ಜ್ಞಾನದಿಂದಲೆ ಆತ್ಮ ಶಕ್ತಿ ದೊರೆತರೆ ಆತ್ಮಶ್ರೀಯಿಂದ ಆತ್ಮಶಾಂತಿ ದೊರೆಯುತ್ತದೆ. ಭಾವ ಬಂಧುರ ಮಾಡುತ್ತದೆ. ಆತ್ಮ ಸೌಂದರ್ಯ ಹೆಚ್ಚಿಸುತ್ತದೆ. ಆತ್ಮಶ್ರೀ ಸಂವರ್ಧಿಸಿ ಕೊಳ್ಳುವ ಆತ್ಮ ಸಂಯಮವೇ ತಾಯಿ ಬೇರು. ಈ ಸಂಯಮ ಜೀವನವು ತನ್ನ ತಾನರಿದು ಕೊಳ್ಳಲು ದೊಡ್ಡ ಸಾಧನ. ಜ್ಞಾನ ವೃಕ್ಷವು ಚಿಗುರೊಡೆದು ಸಮೃದ್ಧಿಯಾಗಲು ಸಂಯಮದ ಗೊಬ್ಬರವನ್ನು ಹಾಕಿದಾಗ ರಸವತ್ತಾದ ಫಲ ಪ್ರಾಪ್ತಿ. ಈ ಸಂಯಮ ಆಧ್ಯಾತ್ಮ ಸಾಧಕರಿಗೂ ಬೇಕು. ಲೌಕಿಕರಿಗೂ ಬೇಕು. ಸಂಯಮವಿಲ್ಲದ ಜೀವನ ರಸವಿಲ್ಲದ ಹಣ್ಣಿನಂತೆ ಒಣಗಿರ್ಪ ಎಲೆಯಂತೆ ನಿಷ್ಪ್ರಯೋಜಕ. ಆತ್ಮ ಸಂಯಮನ ವೆಂಬ ಆಣೆಕಟ್ಟನ್ನು ಕಟ್ಟಿದರೆ ಶರೀರವೆಂಬ ಹೊಲದಲ್ಲಿ ಕಾಮಕ್ರೋಧಾದಿ ದುರ್ಗುಣ ಗಳೆಂಬ ಕಸಕಡ್ಡಿಗಳು ಹುಟ್ಟಿ ಕ್ರಮಬದ್ಧ ನಿಯಮಗಳಂತಿದ್ದ ಆಚಾರ ವಿಚಾರಗಳ ನಿರ್ಮೂಲವಾಗಿ ನಿರಂತರ ದುಃಖಕ್ಕೀಡಾಗುವದಲ್ಲದೆ ಇಹಪರ ಸುಖವು ಅಸಾಧ್ಯವಾಗು ವದು. ನೀರನ್ನು ಬಿಟ್ಟ ಮೀನಿನಂತೆ ಅವನ ಗತಿಯಾಗುವದು. ಸ್ವಚ್ಛಂದ ಜೀವನದಲ್ಲಿ ತೋರಿಕೆಗೆ ಸುಖ ಕಂಡಂತೆ ಕಂಡರೂ ಕೊನೆಗೆ ದುಃಖದ ಕಡಲಲ್ಲಿ ಈಸ ಬೇಕಾಗುತ್ತದೆ. ಸ್ಫೂರ್ತಿ ಶಕ್ತಿ ದೊರೆತು ಆತ್ಮ ಸಂಪತ್ತಿನ ವೈಭವದಲ್ಲಿದ್ದು ಧರ್ಮ ಸಂಸ್ಕೃತಿ ಜಾಗೃತಿಯಾಗ ಬೇಕಾದರೆ ಆತ್ಮ ಸಂಯಮವೇ ಭದ್ರ ಬುನಾದಿ. ವಾಯು ವೇಗದಂತೆ ಬಹಿರ್ಮುಖದತ್ತ ಚಲಿಸುತ್ತಿರುವ ಮನಸನ್ನು ನಿಗ್ರಹಿಸುವದೇ ಆತ್ಮ ಸಂಯಮ. ನಿಗ್ರಹವಿಲ್ಲದ ತಪಸ್ಸು ನಿರರ್ಥಕ. ಮನೋ ನಿಗ್ರಹಕ್ಕಾಗಿ ಶ್ರಮ ಪಡಬೇಕಾಗುತ್ತದೆ. ಧ್ಯಾನ ಮಾಡಬೇಕಾಗು ತ್ತದೆ. ನಿರಂತರವೂ ಕಾರ್ಯದಲ್ಲಿ ನಿರಂತರರಾಗಿರಬೇಕಾಗುತ್ತದೆ, ಇದು ಸೋಮಾರಿಗಳಿಗೆ ಕಷ್ಟ ಸಾಧ್ಯ. ಯಾರ ಮನಸ್ಸು ಮತ್ತೊಬ್ಬರ ಮನಸ್ಸಿಗಿಂತ ಏಕಾಗ್ರತೆ ಪಡೆದಿರುವದೋ

ಅವರಿಗೆ ಹೆಚ್ಚು ಜ್ಞಾನವು ಲಭ್ಯವಾಗುತ್ತದೆ. ಆತ್ಮಸಂಯಮದಿಂದ ಸುಖವಿದೆ ಎಂಬುದು ಅರಿತು ಆಚರಿಸುವವರಿಗೆ ಸುಲಭವಾಗುವದು ಅಂತಹರು ಬಹಿ ಪ್ರಪಂಚದಲ್ಲಿದ್ದಂತೆ ಕಂಡರೂ ಅವರ ಜೀವನ ಅಂತರ್ಮುಖದತ್ತ ಇರುತ್ತದೆ.

ಸುಖ ದುಃಖಗಳು ಧಾವಿಸಿ ಎದುರು ಬಂದರೂ ಅವುಗಳನ್ನು ಸಹಿಸುವ ಶಕ್ತಿ ಅವರಿಗೆ ಸಹಜವಾದುದು. ಆತ್ಮ ಶಕ್ತಿಯಿಂದ ಜಗತ್ತನ್ನು ಗೆಲ್ಲಬಹುದೆಂದು ಸ್ವಾಮಿ ವಿವೇಕಾನಂದರೂ ಸಹ ಹೇಳಿದ್ದಾರೆ. ಆತ್ಮ ಸಂಯಮನವನ್ನು ಸಾಧಿಸಲು ಹಲವು ಸಾಧನಗಳುಂಟು. ಋಷಿಗಳು ಯೋಗಿಗಳು ಯಮ–ನಿಯಮ ಆಸನಾದಿಗಳಿಂದ ನಿಗ್ರಹಿಸಿದ ಉದಾಹರಣೆಗಳು ಸಾಕಷ್ಟಿವೆ. ನಿತ್ಯ ಪವಿತ್ರ ಕಾಯಕದಿಂದಲೂ ಹಲವು ಶಿವಶರಣರು ಆತ್ಮ ಸಂಯಮನವನ್ನು ಮಾಡಿಕೊಂಡಿದ್ದಾರೆ. ಆತ್ಮ ಸಂಯಮನದಿಂದ ಆತ್ಮೋದ್ಧಾರ ಹಾಗೂ ಸಮಾಜೋದ್ಧಾರವಾದರೆ ಮಾತ್ರ ಅದು ಫಲಕಾರಿ. ಅಲ್ಲಿಯೂ ಸ್ವಾರ್ಥ ಸಂಕುಚಿತತನ ತುಂಬಿದರೆ ಸಿದ್ಧಿ ಸಾಧಿಸದು. ಪ್ರತಿಯೊಂದಕ್ಕೂ ಹೃದಯ ಕಮಲವರಳಿರಬೇಕು. ವಿಶಾಲ ಮನೋಭಾವನೆ ಸಾಧಿಸಿರಬೇಕು. ಆತ್ಮ ವಿಕಾಸವಿಲ್ಲದ ಆತ್ಮ ಸಂಯಮವೂ ಒಮ್ಮೊಮ್ಮ ಅಹಂಕಾರದಲ್ಲಿ ಪರಿವರ್ತನೆಗೊಂಡು ಹಾಳಾಗುವ ಸಂಭವವುಂಟು. ನಿಗ್ರಹದ ಜೊತೆಗೆ ಶುದ್ಧ ಬುದ್ಧಿಯೂ ಬೇಕು. ಒಂದಕ್ಕೊಂದು ಪೂರಕವಾಗಿರಬೇಕು. ಅಂದರೆ ಅದು ಆತ್ಮಶ್ರೀ ಆತ್ಮಶ್ರೀ ಸಮನ್ವಿತ ಜೀವನ ಬೆಳಕಿನ ಅರಮನೆಯಂತೆ ಆತ್ಮಶ್ರೀ ವಿಶ್ವಪ್ರೇಮ ಸಂವರ್ಧನೆಗೆ ಮೈಲುಗಲ್ಲು.

## ಆಶೆಯೇ ದುಃಖಕ್ಕೆ ಕಾರಣ

ನಮ್ಮ ಜೀವನದಲ್ಲಿ ಆಶೆಯೆಂಬುದು ದೊಡ್ಡ ಅಪಾಯಕಾರಿ. ದುಃಖ ಬರುವದು ಆಶೆಯಿಂದ. ಸ್ವಾರ್ಥ ಬರುವದು ಆಶೆಯಿಂದ. ಅಹಂಕಾರ ಮಮಕಾರ ಬರುವದು ಆಶೆಯಿಂದ. ಆಶೆಯೆಂಬುದು ಕಟ್ಟಿಗೆ ಕೊರೆಯುವ ಹುಳದಂತೆ ಇರುತ್ತದೆ. ಆಶೆಗೆ ಕೊನೆಯೆಂಬುದು ಇರಲಾರದು. ಆಶೆಯು ಜಪ ತಪವನ್ನು ಬಿಡಿಸುತ್ತದೆ. ಆಶೆಯು ಜ್ಞಾನದಿಂದ ದೂರ ಮಾಡುತ್ತದೆ. ವಿಷಯದತ್ತ ಕಳಿಸುತ್ತದೆ. ಆಶೆಯು ಬಂಧನದಲ್ಲಿ ಸಿಕ್ಕವನ ಕಣ್ಣಿಗೆ ಏನೂ ಕಾಣಿಸದು. ಈ ಆಶೆಯಿಂದಲೇ ಮತ್ತೆ ಮತ್ತೆ ಜನ್ಮಗಳನ್ನೆತ್ತ ಬೇಕಾಗುತ್ತದೆ. "ಪರೋಮೋಕ್ಷೇ ವಿತೃಷ್ಣತಾ" ಎಂಬ ನೀತಿ ವಾಕ್ಯದಂತೆ ಆಶೆಯಿಲ್ಲ ದಿರುವದೇ ಮಹಾ ಮೋಕ್ಷ. ಪಾಶ್ಚಾತ್ಯ ತತ್ವಜ್ಞಾನಿಗಳಾದರೂ ಆಶೆಯ ಬಗ್ಗೆ "Dark night of the soul" ಎಂದು ಬಿತ್ತರಿಸಿದ್ದಾರೆ.

ಆಶೆಯು ಅರಿವನ್ನು ಮರೆಯಿಸಿ ಕತ್ತಲೆಯತ್ತ ಒಯ್ಯುತ್ತದೆ. ನಿರಾಶೆಯು ಬೆಳಕನ್ನು ತೋರಿಸಿ ನಿತ್ಯ ಸುಖ ನೀಡುತ್ತದೆ. ಆಶೆಯು ಭವ ಪಾಶದಲ್ಲಿ ಕಟ್ಟಿ ಹಾಕುತ್ತದೆ. ನಿರಾಶೆಯು ಭವಬಂಧನವನ್ನು ಬಿಡಿಸುತ್ತದೆ. ಆಶೆಯು ಬಂಧು–ಬಾಂಧವರನ್ನು ಅಗಲಿಸು ತ್ತದೆ. ನಿರಾಶೆಯು ಗುರು ಹಿರಿಯರನ್ನು ಗೌರವಿಸುತ್ತದೆ. ಆಶೆಯಿಂದ ಸತ್ಯ ಶೋಷಣೆ

ಯಾಗುತ್ತದೆ. ನಿರಾಶೆಯಿಂದ ಸತ್ಯ ಪೋಷಣೆಯಾಗುತ್ತದೆ. ಆಶೆಯೇ ಭವದ ಬೀಜವಾದರೆ, ನಿರಾಶೆಯು ಆತ್ಮ ಸೌಂದರ್ಯದ ತೇಜವಾಗುತ್ತದೆ. ಆಶೆಯು ಮೋಹದ ಬಲೆಯಲ್ಲಿ ಬೀಳಿಸುತ್ತದೆ. ನಿರಾಶೆಯು ಯೋಗದ ಶಕ್ತಿಯನ್ನು ಸಂವರ್ಧಿಸುತ್ತದೆ. ಆಶೆಯು ಅಧಿಕಾರದ ಅಮಲವನ್ನು ಹೆಚ್ಚಿಸುತ್ತದೆ. ನಿರಾಶೆಯು ಆತ್ಮಸಾಮರ್ಥ್ಯವನ್ನು ಹೆಚ್ಚಿಸುತ್ತದೆ. ಆಶೆಯಿಂದ ಮಾನವನ ನಿಜವಾದ ಸ್ವಭಾವವು ಬಯಲಾಗುತ್ತದೆ. ನಿರಾಶೆಯಿಂದ ಮಾನವತೆಯು ಮಹೋನ್ನತ ದರ್ಶನವಾಗುತ್ತದೆ. ಆಶೆಯಿಂದ ಅಸಹನೆ ಪಕ್ಷಪಾತ ತನಗಳು ಬೇರು ಬಿಡುತ್ತವೆ. ನಿರಾಶೆಯಿಂದ ಸಹನೆ, ನಿಷ್ಪಕ್ಷಪಾತತನ, ಕರ್ತವ್ಯಾದಕ್ಷತೆಗಳು ಬೆಳೆದು ಬೆಳಗುತ್ತವೆ. ಆಶೆ ಆತ್ಮದ್ರೋಹ ಮಾಡುತ್ತದೆ. ನಿರಾಶೆ ಆತ್ಮೀಯತೆ ಬೆಳೆಸುತ್ತದೆ. ಆಶೆ ಆದರ್ಶ ಸಾಧನೆಗೆ ಅಡ್ಡಿ ಮಾಡುತ್ತದೆ. ನಿರಾಶೆಯು ಆದರ್ಶ ವ್ಯಕ್ತಿಯನ್ನಾಗಿ ಮಾಡುತ್ತದೆ. ಆಶೆಯಿಂದ ದುರ್ಗತಿ, ನಿರಾಶೆಯಿಂದ ಸದ್ಗತಿ. "ಆಶೆಯೇ ದಾಸ್ಯತ್ವ ನಿರಾಶೆಯೇ ಈಶತ್ವ". ಇದು ದಾಸೋಕ್ತಿ. ಆಶೆಯಲ್ಲಿಯೂ ಎರಡು ತೆರ. ಒಂದು ದುರಾಶೆ, ಮತ್ತೊಂದು ಸದಾಶೆ. ಸದಾಶೆಯು ಮಾನವನನ್ನು ಕಲ್ಯಾಣದತ್ತ ಕರೆದೊಯ್ಯುತ್ತದೆ. ದುರಾಶೆಯು ಕೆಸರಿನಲ್ಲಿ ಸಿಕ್ಕ ಪಶುವಿನಂತೆ. ಅಧೋಗತಿಯತ್ತ ಎಳೆದೊಯ್ಯುತ್ತದೆ. ದುರಾಶೆ ಹೆಚ್ಚಿದಂತೆ; ಭ್ರಾಂತಿ ಬೆಳೆದು ಶಾಂತಿ ನಶಿಸುತ್ತದೆ. ದುರಾಶೆಯಿಂದ ಜೀವನವು ಮುಳ್ಳಾದರೆ, ಸದಾಶೆಯಿಂದ ಜೀವನವು ಹೂವಾಗುತ್ತದೆ. ಸೌಗಂಧ್ಯ ಬೀರುತ್ತದೆ. ಸಾಮಾಜಿಕ, ಧಾರ್ಮಿಕ ಕ್ರಾಂತಿಯಾಗುತ್ತದೆ; ಸದಾಶೆಯಿಂದ ಸದ್ಭಾವನೆಗಳು ಪುಷ್ಟವಾಗುತ್ತವೆ. ಆತ್ಮ ಸೌಷ್ಠವವು ಬಲಿಯುತ್ತದೆ. ಸದಾಶೆ ಸುಖವನ್ನು ನೀಡಿದರೆ ದುರಾಶೆ ದುಃಖ ದುಮ್ಮಾನಗಳನ್ನು ದ್ವಿಗುಣಿತಗೊಳಿಸುತ್ತದೆ. ಕೆಲವರಿಗೆ ಕೀರ್ತಿಯ ಮೋಹ, ಪ್ರತಿಷ್ಠೆಯ ಮೋಹ ಬರುವದೂ ಸಹ ಆಶೆಯಿಂದಲೇ. ಗುಹೆಯಲ್ಲಿ ಪರ್ವತದಲ್ಲಿ ತಪಸ್ಸಿಗೆ ಕುಳಿತರೂ ಆಶೆ ಬಿಡದು. ಆಶೆಯು ಭೋಗ ಬುದ್ಧಿಯಿಂದ ಕಾಡಿದರೆ, ನಿರಾಶೆ ತ್ಯಾಗಬುದ್ಧಿಯಿಂದ ತೀಡುತ್ತದೆ. ಸಕಲ ಪಾಪಕ್ಕೆ ಆಶೆಯೇ ತಾಯಿಬೇರು.

ಒಂದೆಡೆ ಬುದ್ಧದೇವನು "ಮೋಹಕ್ಕಿಂತ ಸುಡುವ ಬೆಂಕಿಯಿಲ್ಲ, ದ್ವೇಷಕ್ಕಿಂತ ಚುಚ್ಚುವ ಅಲಗಿಲ್ಲ, ಭ್ರಾಂತಿಗಿಂತ ಬೇರೆ ಪಾಶವಿಲ್ಲ ದುರಾಶೆಗಿಂತ ಬೇರೆ ಶತ್ರುವಿಲ್ಲ"ವೆಂದು ಹೇಳಿದರೆ ವಿರತಿ ಶಿಖಾಮಣಿ ಅಕ್ಕಮಹಾದೇವಿಯು "ತೆರಣಿಯ ಹುಳು ತನ್ನ ನೂಲು ತಾನೆ ಸುತ್ತಿ ಸಾವತೆರನಂತೆ ಮನ ಬಂದುದ ಬಯಸಿ ಬೇಯುತ್ತಿರುವೆನಯ್ಯ, ಆ ಮನದ ದುರಾಶೆಯ ಮಾಣಿಸಿ ನಿಮ್ಮತ್ತ ತೋರಾ ಚನ್ನಮಲ್ಲಿಕಾರ್ಜುನಾ" ಎಂದುದಾಗಿ ಮಲ್ಲಿಕಾರ್ಜುನನನ್ನು ಕುರಿತು ಹಾಡಿದ್ದಾಳೆ, ಬೇಡಿದ್ದಾಳೆ. ಆಶೆಯನ್ನು ದೂರಮಾಡಿ ಆತ್ಮಶಾಂತಿಯನ್ನು ಪಡೆದು ಆದರ್ಶ ಮಹಿಳಾಮಣಿಯಾಗಿದ್ದಾಳೆ, ಆಶೆಯಿಂದ ದೂರಿರಲು ಪ್ರಾರ್ಥನೆ, ಧ್ಯಾನ ಅತ್ಯವಶ್ಯ. ಆಶೆಯಿಂದ ಅಪಜಯವುಂಟಾಗಿ ಅಪಮಾನಕ್ಕೂ ಕಾರಣವಾಗುತ್ತದೆ. ಆಶೆಯ ಚಿಂತೆ ಮಾನವನನ್ನು ಅಧೋಗತಿಗಿಳಿಸಿ ಹಾಳು ಮಾಡಿ

ಬಿಡುತ್ತದೆ. ಆಶೆಯು ಕ್ಷಣಕ್ಕೊಮ್ಮೆ ಬಣ್ಣ ಬದಲಿಸುವ ಊಸರವಳ್ಳಿ ಪ್ರಾಣಿಯಂತೆ ಇರುತ್ತದೆ; ಆದಕಾರಣ ದೃಷ್ಟಿ ವಿಶಾಲವಾದರೆ ಮನ ಬುದ್ಧಿಗಳಲ್ಲಿ ಶುದ್ಧಿಯುಂಟಾದರೆ ನಿರಾಶೆ ಸಾಧ್ಯ. ಭೌತಿಕ ಭೂತವನ್ನು ಬಿಡಿಸಿ ಸದ್ಭಾವನೆಯೆಂಬ ಕ್ಷೀರದಲ್ಲಿ ಸಕ್ಕರೆಯನ್ನು ಬೆರೆಸಿ, ಸೇವಿಸಲು ನಿರಾಶೆಯು ಪರಮಸಾಧನ. ಅದುವೆ ಆಶೆಗೆ ಕಡಿವಾಣ.

## ಕವಿ ಜೀವನ

ಕವಿಯ ನೋವು ನಲಿವು ಕವಿಗೆ ಅರ್ಥವಾದಷ್ಟು ಬೇರೊಬ್ಬರಿಗೆ ಅರ್ಥವಾಗದು. ಬಂಜೆಯು ಬೇನೆಯನರಿಯಳೆಂಬಂತೆ ಅವರ ಸ್ಥಿತಿ. ಕವಿಯು ಅಂತರಂಗದಲ್ಲಿ ಕೊರಗುತ್ತಾನೆ. ಕಾವ್ಯ ಪ್ರವಾಹದಲ್ಲಿ ಆ ಭಾವವನ್ನು ತೇಲಿಸುತ್ತಾನೆ. ಭಾವಜೀವಿಯಾದರೂ ಕಷ್ಟನಷ್ಟಗಳನ್ನು ತೋರಿಸಲು ಹಿಂದು-ಮುಂದು ನೋಡುತ್ತಾನೆ. ಕವಿಯ ಪರಿಶ್ರಮವು ಆನಂದವನ್ನು ನೀಡಿದರೆ ಒಮ್ಮೆ ಅವನಿಗೆ ದುಃಖವನ್ನು ನೀಡುತ್ತದೆ. ಕವಿಯ ಜೀವನವೇ ಹುಚ್ಚು ಜೀವನವಿದ್ದಂತೆ. ಬೇಕಾದಾಗ ಹಾಡಿ ಬಿಡುವ ಶಕ್ತಿ ತುಂಬಿರುತ್ತದೆ. ಸಮುದ್ರ ದಾಳದಲ್ಲಿ ಹೋಗಿ ಮುತ್ತು ರತ್ನಗಳನ್ನು ತರುತ್ತಾನೆ. ದೀಪ್ತಿಯನ್ನು ತೋರಿಸುತ್ತಾನೆ, ದುರ್ಬಲರನ್ನು ಸಬಲರನ್ನಾಗಿ ಮಾಡುತ್ತಾನೆ. ಮಲಗಿದವರನ್ನು ಎಚ್ಚರಿಸುತ್ತಾನೆ. ಚೈತನ್ಯವನ್ನು ಮತ್ತು ಸ್ಫೂರ್ತಿಯನ್ನು ಕೊಡುತ್ತಾನೆ. ಕಲ್ಪನಾ ಲೋಕದಲ್ಲಿ ವಿಹರಿಸುತ್ತಾನೆ. ಕಲ್ಪಿತ ವಸ್ತುಗಳನ್ನು ತೋರಿಸುತ್ತಾನೆ. ಕವಿಯದು ಸಹಜ ಜೀವನ ಮತ್ತು ತಪಸ್ವೀ ಜೀವನ. ಭಾವವನ್ನು ಎತ್ತರಕ್ಕೆ ಒಯ್ದು ಮಹದಾಲೋಚನೆಗಳನ್ನು ಕಲ್ಪನೆಯ ದವಡೆಯಲ್ಲಿ ಸಿಲುಕಿಸಿ, ಆತ್ಮಾನುಭೂತಿಯೊಡನೆ ಬರೆದ ಕಾವ್ಯವು ರಸವತ್ಕಾವ್ಯವಾಗಬಲ್ಲದು. ಕಾವ್ಯಕ್ಕೆ ಕೇವಲ ಶಬ್ದ ಭಾಂಡಾರವಿದ್ದರೆ ಸಾಲದು. ಕಲ್ಪನೆ ಮತ್ತು ಭಾವ ವಿದ್ದರೆ ಮಾತ್ರ ಓದುಗರ ಹೃದಯವನ್ನು ಮುಟ್ಟುತ್ತದೆ. ಅವರ ಆತ್ಮವನ್ನು ಪರಿಶುದ್ಧಗೊಳಿಸುತ್ತದೆ. ಉತ್ತಮ ಕಾವ್ಯವನ್ನು ಬರೆಯಲು ಧ್ಯಾನ ಮತ್ತು ಅನುಷ್ಠಾನ ಅತ್ಯವಶ್ಯಕ. ಕವಿ ಈ ರೀತಿ ಬರೆದು ಹೃದಯ ಪಾವಿತ್ರ್ಯವನ್ನು ಬೆಳೆಸಿಕೊಳ್ಳುತ್ತಾನೆ. ಪಥಿಕರಿಗೆ ದಾರಿ ತೋರಿಸುತ್ತಾನೆ. ಕವಿಗೆ ಕೃತ್ರಿಮತೆ ಸೇರದು. ಕವಿಯು ವಿಲಾಸಿಯೂ ಅಹುದು. ವಿಕಾಸ ವಾದಿಯೂ ಅಹುದು. ಛಾಯಾ ವಾದಿಯೂ ಅಹುದು. ಕವಿಯ ದೃಷ್ಟಿ ವಿಶಾಲವಾದುದು. ಆತನ ಕಾವ್ಯಸೃಷ್ಟಿ ಮನಮೋಹಕವಾದುದು. ಬ್ರಹ್ಮ ಸೃಷ್ಟಿಗಿಂತ ಭಿನ್ನವಾದುದು. ಕವಿಯ ಸೃಷ್ಟಿಯಲ್ಲಿ ಅಮರತ್ವವನ್ನು ಪಡೆಯುವ ಶಕ್ತಿ ತುಂಬಿದೆ. ಈತನದು ಅಳಿಯುವ ಸೃಷ್ಟಿಯಲ್ಲ. ನಿರಂತರ ಚಿರನೂತನವಾಗಿ ಉಳಿಯುವ ಸೃಷ್ಟಿ. ಪಕ್ಷಿಗಳಂತೆ ಗಗನಕ್ಕೆ ಹಾರುತ್ತಾನೆ. ಚುಕ್ಕಿಗಳಂತೆ ಪ್ರಕಾಶಿಸುತ್ತಾನೆ. ಹಸಿದವರಿಗೆ ಅನ್ನವನ್ನು ನೀಡುವ ಶಕ್ತಿಯೂ ಇವನಲ್ಲಿದೆ. ಒಮ್ಮೊಮ್ಮೆ ಭಿಕ್ಷುಕನಾದರೆ ಮತ್ತೊಮ್ಮೆ ಮಹಾರಾಜನಾಗುತ್ತಾನೆ. ಸ್ವಾತಂತ್ರ್ಯ ಇವನ ಜನ್ಮಸಿದ್ಧ ಹಕ್ಕು. ಸ್ವಾತಂತ್ರ್ಯವಿದ್ದರೂ ಆತ್ಮ ಸ್ವಾತಂತ್ರ್ಯಕ್ಕೆ ಚ್ಯುತಿ ತರಲಾರ. ಮೊಗ್ಗೆಯನ್ನು ಅರಳಿಸುತ್ತಾನೆ. ಸುಗಂಧವನ್ನು ಬೀರುತ್ತಾನೆ. ಕಲ್ಲಿನೆದೆಯ ಕರಗಿಸುತ್ತಾನೆ. ಬಲ್ಲವರಿಗೂ ಬುದ್ಧಿ ಹೇಳುತ್ತಾನೆ. ಕವಿ

ಶಕ್ತಿ ಮಹೋನ್ನತವಾದದ್ದು, ಪ್ರಭಾವಕಾರಿಯಾದುದು, ಭಾವಪೂರ್ಣವಾದುದು. ಕವಿಯು ಧ್ಯಾನಬಲದಿಂದಲೂ, ತಪಸ್ಸಿನಿಂದಲೂ, ಬಳ್ಳಿಯಿಂದ ಹೂ ಹೊರ ಬರುವಂತೆ, ಕವಿತೆ ರಚಿಸುತ್ತಾನೆ. "ಕವಿರ್ಮನೀಕ್ಷೀ ಪರಿಭೂಃ ಸ್ವಯಂ ಭೂಃ" ಕವಿ ಅಮರ ಜೀವನ ವನ್ನು ಚಿತ್ರಿಸುವ ಸೃಷ್ಟಿಕರ್ತ. ಯೋಗಿಗಳಿಗೆ, ತ್ಯಾಗಿಗಳಿಗೆ ಆನಂದವನ್ನು ನೀಡುವ ನಲ್ಲದೆ, ಮಸಣದಲ್ಲಿ ರುದ್ರಾಗ್ನಿ ಜ್ವಾಲೆಗಳನ್ನು ಎಬ್ಬಿಸುತ್ತಾನೆ. ಮಾನವಕೋಟಿಗೆ ಸಂಸ್ಕೃತಿಯ ಸಿಹಿ ನೀರನೆರೆಯುತ್ತಾನೆ. ಕವಿಯ ಚಿತ್ತವು ವಸಂತ ವನದಂತೆ. ಹಲವು ಬಗೆಯ ಬಣ್ಣಗಳಿಂದ ಕೂಡಿ ಕೊಂಡಿರುತ್ತದೆ. ಕಲ್ಪನೆಯ ಪಾತ್ರೆಯಲ್ಲಿ ಅನೇಕ ರಸಭರಿತ ಕಾಳುಗಳನ್ನು ತುಂಬುವ ಶಕ್ತಿ ಕವಿಗಿರುತ್ತದೆ. ರಾಷ್ಟ್ರವನ್ನು ಕಟ್ಟುವ ಶಕ್ತಿಯೂ ಕವಿಗಿದೆ. ಅಂತೆಯೇ ಶೆಲ್ಲಿಯು— "Poets are unacknowledge Legislators of the world" ಎಂಬುದಾಗಿ ಕವಿಗಳ ಮಹತ್ವವನ್ನು ತಿಳಿಸಿದ್ದಾನೆ. ಫ್ರಾನ್ಸಿನಲ್ಲಿ ಕ್ರಾಂತಿ ಯುಂಟಾಗಲು ಕವಿಗಳೇ ಕಾರಣರಾದರಂತೆ; ಕವಿಯು ಜಡತನವನ್ನು ನೀಗಿಸಿ ಮೃಡ ಶಕ್ತಿಯು ಬರುವಂತೆ ಪ್ರೇರೇಪಿಸುತ್ತಾನೆ. ಕವಿಯ ರಸ ತಪಸ್ಸಿಗೆ ಜಗತ್ತು ಬಾಗುತ್ತದೆ. ಹೃದಯವಂತಿಕೆಯನ್ನು ಪಡೆಯದ ಬುದ್ಧಿ, ಸೂಕ್ಷ್ಮತೆಯನ್ನರಿಯದ ಪ್ರತಿಭೆಯಿಂದೊಡ ಗೂಡಿದ ಆಲೋಚನೆ ಮತ್ತು ಕಲ್ಪನೆಗಳನ್ನು ಮೆಲಕು ಹಾಕದ ಕವಿಜೀವನ ಹೂಗಳಿಲ್ಲದ ಉದ್ಯಾನವನದಂತೆ ನಿರರ್ಥಕ. ಮಹಾಕವಿಯೆಂಬ ತರುವಿಗೆ ಪ್ರತಿಭೆಯೇ ಬೇರಾಗಬೇಕು. ಗುಣಗಳೇ ಉನ್ನತ ಕಾಂಡಗಳಾಗಬೇಕು. ವಾಕ್ಕೇ ಚೆಂದಳಿರಾಗಬೇಕು. ಆಗ ಯಶಸ್ಸೇ ಅದರ ಕುಸುಮ ಮಂಜರಿ ಇಂತಾದಾಗ, "ಜಯಂತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ" ಭರ್ತೃಹರಿಯ ಈ ಸಿರಿನುಡಿ ಸಾರ್ಥಕ. ಸಾಹಿತ್ಯ ಸಾಧಕರಿಗೆ ಪ್ರೇರಕ.

### ಕಾಲಿದಾಸನ ಉಪಮೆಗಳು

ಸಂಸ್ಕೃತಿಯ ಪುನರುತ್ಥಾನಕ್ಕೆ ಸಂಸ್ಕೃತ ಸಾಹಿತ್ಯವು ಮಹಾಸಾಧನ; ದಿವ್ಯಶಕ್ತಿಗೆ ಚೈತನ್ಯದಾಯಕ; ಸಾಹಿತ್ಯ ಸಂವರ್ಧನೆಗೆ ಸ್ಫೂರ್ತಿದಾಯಕ, ಹಾಗೂ ಪೋಷಕ. ಸಂಸ್ಕೃತ ಭಾಷೆ ದೇವಭಾಷೆ ಅದಕ್ಕೆ ಸಾವಿರಾರು ವರುಷಗಳ ಇತಿಹಾಸವಿದ್ದು, ವಿಶ್ವದ ಮಾನವ ಕುಲಕ್ಕೆ ಮೂಲಭೂತವಾದ ಭಾಷೆಗಳಲ್ಲಿ ಇದು ಅಗ್ರಸ್ಥಾನ ಪಡೆದಿದೆಯೆಂದು ಪಾಶ್ಚಾತ್ಯ ವಿದ್ವಾಂಸರು ಸಿದ್ಧಮಾಡಿದ್ದಾರೆ. ಭಾಷೆಯ ಬಂಧುರತೆ, ಶುದ್ಧತೆ ಮಾಧುರ್ಯಾದಿ ಕಾವ್ಯ ಗುಣಗಳು ಸಂಸ್ಕೃತ ಸಾಹಿತ್ಯದಲ್ಲಿ ಛಂದೋಬದ್ಧವಾಗಿ ಅಂತರ್ಗತವಾದಷ್ಟು ಬೇರೆ ಯಾವ ಭಾಷೆಗಳಲ್ಲಿ ಇರಲಿಕ್ಕಿಲ್ಲವೆಂದು ನಮ್ಮ ಭಾವನೆ. ವಿಜ್ಞಾನದ ವಿಲಕ್ಷಣ ಪ್ರಗತಿಯ ವಿಚಾರ ಕಿರಣಗಳು ಸಹ ಸಂಸ್ಕೃತ್ಯ ನಭೋ ಮಂಡಲದಲ್ಲಿ ತುಂಬಿವೆ. ಸಂಸ್ಕೃತ ಸಾಹಿತ್ಯ ಸಾಗರದಲ್ಲಿ ಮುಳುಗುತ್ತ ಹೋದಂತೆ, ವಜ್ರವೈಢೂರ್ಯಗಳು, ಮುತ್ತು ರತ್ನಗಳು ದೊರೆಯುತ್ತವಲ್ಲದೆ, ಅವರವರ ಶಕ್ತಿ ಸಾಹಸದಂತೆ ಬೆಳಕಿಗೆಡೆ ನೀಡುತ್ತವೆ. ಅಂತಹ ಮಹತ್ ಶಕ್ತ ಪಡೆದು ಸಾಹಿತ್ಯ ಸಿದ್ಧಿಗೇರಿದ ರಸ ಋಷಿಗಳಲ್ಲಿ ಮಹಾಕವಿ ಕಾಲಿದಾಸನು ಅಗ್ರಗಣ್ಯನಾಗಿದ್ದಾನೆ. ಕಾಲಿದಾಸನು ಕಾವ್ಯಶಕ್ತಿಯನ್ನು ಹೃದಯಾಂತರಾಳಕ್ಕೆ ಇಳಿಸಿ

ಮಾನವ ಕುಲೋದ್ಧಾರಕ ಸಾಹಿತ್ಯವನ್ನು ರಚಿಸಿ, ಅತೃಪ್ತ ಜೀವಿಗಳ ಹೃದಯವನ್ನು ಸಂತೃಪ್ತ ಪಡಿಸಿ ಜಾಗ್ರತ ಚೈತನ್ಯವನ್ನು ನೀಡಿದ **ಮಹಾಕವಿ ಕುಲತಿಲಕ** ಕಾವ್ಯಾಕಾಶದಲ್ಲಿ ಭಾರವಿ, ಶ್ರೀಹರ್ಷ, ಮಾಘ, ದಂಡಿ ಮೊದಲಾದ ಕವಿ ಪುಂಗವರು–ಪಾಂಡಿತ್ಯ ಪ್ರತಿಭೆ ಯಿಂದ ಬೆಳಗಿದರೆ; ಕಾಲಿದಾಸನು ಮಾತ್ರ ಕಾವ್ಯಶಕ್ತಿಯ ಹಾಗೂ ಹೃದಯಮಂತಿಕೆಯ ದಿವ್ಯಪ್ರತಿಭೆಯಿಂದ ಬೆಳಗಿದ್ದಾನೆ. ಆತನ ಕಾವ್ಯ ಪ್ರವಾಹದಲ್ಲಿ ಉಪಮೆಗಳು ಸಹಜವಾಗಿ ಸರಳವಾಗಿ ನಿರರ್ಗಳವಾಗಿ ಹರಿದಿವೆ. ಉಪಮೆಗಳಾದರೂ ಸಹ, ಸಹೃದಯದವರನ್ನು ಕೂಡಲೇ ತೃಪ್ತಿಪಡಿಸುವಂತಹವಾಗಿವೆ–ಆತ್ಮ ಸಾಧನೆಯಿಂದ ಕೂಡಿವೆ. ಉಪಮೆ ಯಿಂದಲೇ ಕಾಲಿದಾಸನು ಜನಾನುರಾಗಿಯಾಗಿದ್ದಾನೆ, ಕವಿಕುಲ ಗುರುವಾಗಿದ್ದಾನೆ. ಅಂತೆಯೇ "ಪುರಾಕವಿನಾಂಗಣನಾಕನಿಷ್ಠಿಕಾಧಿಷ್ಟಿತ ಕಾಳಿದಾಸಃ" ಎಂಬುದಾಗಿ ವರ್ಣಿಸಿ ದ್ದಾರೆ.

ಕಾಲಿದಾಸನ ಕಲ್ಪನಾ ವಿಲಾಸವನ್ನೂ, ಉಪಮಾ ಸೌಂದರ್ಯವನ್ನೂ ಅವನು ಬರೆದ ಅಭಿಜ್ಞಾನ ಶಾಕುಂತಲ ನಾಟಕವನ್ನು ಓದಿಯೇ ಆನಂದ ಪಡೆಯಬೇಕು. ಕಾಲಿದಾಸನ ಪದಪ್ರಯೋಗದಲ್ಲಿಯೂ ಒಂದು ಅದ್ಭುತ ಶಕ್ತಿಯಿದೆ. ಆತನು ಶಬ್ದಾ ಡಂಬರದ ಗೋಜಿಗೆ ಹೋಗದೆ, ಭಾವಜೀವಿಯಾಗಿ, ವೀರ ರೌದ್ರಾದಿ ಸನ್ನಿವೇಶ ಗಳಲ್ಲಿಯೂ ಓಜಸ್ವಿಯಾಗಿ ಪರಿಶೋಭಿಸಿದ್ದಾನೆ. ಯೋಗಿಗಳಿಗೆ, ತ್ಯಾಗಿಗಳಿಗೆ, ಭೋಗಿ ಗಳಿಗೆ, ಬಂಧು–ಬಾಂಧವರಿಗೆ ಬೇಕಾಗುವಂತಹ ತಿಳಿ ನುಡಿಗಳು ಸುಮಧುರ ಶೈಲಿಯಲ್ಲಿ ಕಾಲಿದಾಸನ ಕಾವ್ಯದಲ್ಲಿ ಹೆಣೆಯಲ್ಪಟ್ಟಿವೆ. ಕಾಲಿದಾಸನ ಕಾವ್ಯಸೃಷ್ಟಿಯು ನಿರಂತರವೂ ಚಿರನೂತನವೇ! ಆತನ ಕಾವ್ಯ ವೃಷ್ಟಿಯು ಸತತವೂ ಆಲ್ಹಾದಕರವೇ.

ಒಂದೆಡೆ ಮಹಾಕವಿ ಬಾಣನೂ ಸಹ "ನಿರ್ಗತಾಸು ನ ವಾಕಸ್ಯ ಕಾಲಿದಾಸಸ್ಯ ಸೂಕ್ತಿಷು। ಪ್ರೀತಿರ್ಮಧುರ ಸೌಂದ್ರಾಸು ಮಂಜರೀಕ್ಷಿವಜಾಯತೆ॥" ಎಂದು ಉದ್ಗಾರ ತೆಗೆದು ರಸವನ್ನು ತುಂಬಿಕೊಂಡಿರುವ ಕಾಲಿದಾಸನ ಹಿತೋಕ್ತಿಗಳು ಪುಷ್ಪ ಮಂಜರಿಯಂತೆ ಎಲ್ಲರಿಗೂ ಪ್ರೀತಿಯನ್ನುಂಟು ಮಾಡುವವು ಎಂಬುದಾಗಿ ಮುಕ್ತ ಕಂಠದಿಂದ ಹೊಗಳಿ ದ್ದಾನೆ. ಅಭೂತಪೂರ್ವ ರಸಮಯಃ ಜಗತ್ತನ್ನು ಸೃಷ್ಟಿಸಿ, ಮಹಾಕಾವ್ಯದ ಪರಂಪರೆ ಯನ್ನು ಉನ್ನತ ಮಟ್ಟಕ್ಕೆ ಮುಟ್ಟಿಸಿದ ಮಹಾಕೀರ್ತಿ, ಕವಿ–ತಾರ್ಕಿಕ ಚಕ್ರವರ್ತಿ ಕಾಲಿದಾಸನಿಗೆ ಸಲ್ಲುವದು. ಕಾಲಿದಾಸನ ಪ್ರತಿಯೊಂದು ಕೃತಿಯಲ್ಲಿಯೂ, ಪ್ರತಿಭೆ ಎದ್ದು ಕಾಣುತ್ತದೆ. ಅವನು ಮಾನವೀಯತೆಯ ಮೌಲ್ಯಗಳನ್ನು ಮನ ಮೋಹಕವಾಗುವಂತೆ ಚಿತ್ರಿಸಿದ್ದಾನೆ. ಕಾಲಿದಾಸನು ಹದ ಮಾಡಿ ರಚಿಸಿದ ಉಪಮೆ, ರೂಪಕ, ಉತ್ಪ್ರೇಕ್ಷಾದಿ ಅಲಂಕಾರಗಳು ಕಾವ್ಯದ ಸೌಂದರ್ಯ ಸಂವರ್ಧನೆಗೆ ಸಾಧನೆಗಳಾಗಿವೆ. ಕಾಲಿದಾಸನು ಬರೆದ ಏಳು ಕೃತಿಗಳು ಏಳು ರತ್ನಗಳಂತಿವೆ.

ಆತನು ಪ್ರತಿಯೊಂದು ಕಾವ್ಯದಲ್ಲಿಯೂ ನಾಟಕದಲ್ಲಿಯೂ ಜನಜೀವನದ ಚಿತ್ರ ವನ್ನು ಚಿತ್ರಿಸಿ, ಜೀವನಕ್ಕೆ ಬೇಕಾಗುವ ನೀತಿಯ ನೆಲೆ ಕಲೆಗಳನ್ನು ಒದಗಿಸಿದ್ದಾನೆ;

ಆಧ್ಯಾತ್ಮಿಕ ಭಾವನೆಗಳಿಗೆ ಎಲ್ಲಿಯೂ ಬಾಧೆ ಬಾರದಂತೆ ಪ್ರಾಚೀನ ಭಾರತೀಯ ಸಂಸ್ಕೃತಿಯನ್ನು ನಿರೂಪಿಸಿದ್ದಾನೆ. ಕಾಲಿದಾಸನ ಪ್ರಕೃತಿ ವರ್ಣನೆಯು ಕಲ್ಪನಾತೀತವಾದುದಾಗಿದೆ. ಕಾಲಿದಾಸನ ಋತು ಸಂಹಾರದಲ್ಲಿ ಪ್ರಕೃತಿ ಸೌಂದರ್ಯದ ವರ್ಣನೆಯನ್ನು ಕಂಡರೆ, "ಮೇಘದೂತದಲ್ಲಿ" ರಚನಾ ಚಾತುರ್ಯವನ್ನು ಹಾಗೂ ಕಲ್ಪನಾ ವಿಲಾಸವನ್ನೂ ಕಾಣಬಹುದು. ಅಂತೆಯೇ ಮಹಾಕವಿಗಳು ಕೂಡ ಕಾಲಿದಾಸನಿಗೆ ಸರಸ್ವತಿಯ ಅವತಾರವೆಂದು ಬಣ್ಣಿಸಿದ್ದಾರೆ. ಕಾಲಿದಾಸನ ಅದ್ಭುತ ಕಾವ್ಯ ಶಕ್ತಿಯನ್ನು ಪರಿಚಯ ಮಾಡಿ ಕೊಡುವದು ತಾನೆ "ತಿತೀರ್ಷು ದುಸ್ತರಂ ಮೊಹಾದುಡು ಪೇ ನಾಸ್ಮಿ ಸಾಗರಂ" ಎಂದು ಕಾಲಿದಾಸನ ಈ ಉಪಮೆಯ ನುಡಿಗಳಲ್ಲಿಯೇ ಹೇಳಿದರೆ ಸಾರ್ಥಕವಾದೀತು.

"ವಾಗರ್ಥಾವಿವ ಸಂಪೃಕ್ತೌ ವಾಗರ್ಥಃ ಪ್ರತಿಪತ್ತಯೇ। ಜಗತಃ ಪಿತರೌ ಒಂದೇ ಪಾರ್ವತಿ ಪರಮೇಶ್ವರೌ!!" ಶಬ್ದಾರ್ಥಗಳಂತೆ ಕೂಡಿಕೊಂಡಿರುವ ಜಗತ್ತಿನ ತಾಯಿ-ತಂದೆಗಳಾದ ಪಾರ್ವತಿ-ಪರಮೇಶ್ವರರನ್ನು ಶಬ್ದಾರ್ಥ ಸಿದ್ಧಿಗಾಗಿ ಮತ್ತು ಸ್ಫೂರ್ತಿಗಾಗಿ ನಮಸ್ಕರಿಸುವೆನು. ರಘುವಂಶದ ಮೊದಲನೆಯ ಶ್ಲೋಕದಲ್ಲಿಯೂ ನುಡಿದು "ಶಬ್ದಾರ್ಥೌ ಸವಿತೌ ಕಾವ್ಯಂ" ಶಬ್ದಾರ್ಥಗಳಿಂದ ಕೂಡಿದ ಕಾವ್ಯವೇ ಕಾವ್ಯಂ ಈ ತತ್ವಕ್ಕನುಗುಣವಾಗಿ ಕಾವ್ಯವನ್ನು ಬರೆದು ಉದಾತ್ತ ವಿಚಾರಗಳನ್ನು ನೀಡಿ, ಉಪಮಾಲಂಕಾರದ ವೈಶಿಷ್ಟ್ಯವನ್ನು ತೋರಿಸಿದ್ದಾನೆ. ಲೌಕಿಕ ಪಾರಮಾರ್ಥಿಕ ವಿಷಯಗಳನ್ನೊಳಗೊಂಡ ಈ ಶ್ಲೋಕದಿಂದ ಕಾಲಿದಾಸನ ಅದ್ಭುತ ಶಕ್ತಿ ಅರಿಯದಿರದು. ಕಾಲಿದಾಸನ ಕಾವ್ಯ ಪ್ರತಿಭೆಗೆ, ನಿರೂಪಣಾ ಶೈಲಿಗೆ ಇದೊಂದೇ ಸಾಕು. ಉಪಮಾಲಂಕಾರಕ್ಕೆ ಇದೊಂದೇ ಸಾಕ್ಷಿ! ಕಾಲಿದಾಸನ ಸಾಹಿತ್ಯ ಸಮುದ್ರ ಗರ್ಭದಲ್ಲಿ ಇಂತಹವು ಸಹಸ್ರಾರು ತುಂಬಿವೆ.

## ಕರ್ತವ್ಯದಿಂದ ಸುಖಪ್ರಾಪ್ತಿ

ಸತ್ಯ ಶುದ್ಧ ಕಾಯಕದಿಂದೊಡಗೂಡಿದ ಕರ್ತವ್ಯವು ಮಾನವನನ್ನು ಆಧ್ಯಾತ್ಮದತ್ತ ಒಯ್ಯುತ್ತದೆ. ಆತ್ಮವಿಕಾಸ ಮಾಡುತ್ತದೆ. ವ್ಯಕ್ತಿಯಲ್ಲಿ ಅಂತಸ್ಫೂರ್ತಿಯನ್ನಿತ್ತು ಬೆಳಕಿಗೆಡೆ ಮಾಡುತ್ತದೆ. ಒಳ ಹೊರಗಿನ ಸಂಪತ್ತು ಅಭಿವೃದ್ಧಿಯಾಗಿ ದೈವೀ ಶಕ್ತಿಯನ್ನು ಪಡೆಯಲು ಕರ್ತವ್ಯ ಪ್ರಜ್ಞೆಯೇ ಕಲ್ಪತರು. ಉತ್ತಮ ಸಂಸ್ಕೃತಿಯನ್ನು ನೀಡಿ ನಿತ್ಯ ನೂತನ ಚೇತನ ಶಕ್ತಿಯನ್ನು ಕೊಡುತ್ತಿರುವ ಶಾಂತಿಸಾಗರ. ದಾರಿದ್ರ್ಯವನ್ನು ನಿವಾರಣೆ ಮಾಡುವ ಕಾಮಧೇನು, ಮನದ ಕವಿದ ಕತ್ತಲೆಯನ್ನು ದೂರ ಮಾಡಿ ಜ್ಞಾನದ ಬೆಳಕನ್ನು ಕೊಡುತ್ತದೆ. ಆ ಕರ್ತವ್ಯದಿಂದ ಸ್ವಹಿತ ಪರಹಿತಗಳು ಕೂಡಿದ್ದರೆ ಮತ್ತಿಷ್ಟು ಹಿತಕಾರಿ. ಇದರಿಂದ ನಾಡು ಬೆಳೆಯುತ್ತದೆ. ರಾಷ್ಟ್ರಶಕ್ತಿ ಇಮ್ಮಡಿ ಹೆಚ್ಚಾಗುತ್ತದೆ. ಅದೇಕೆ ನೂರ್ಮಡಿ ಬೆಳೆದು ಪ್ರಪಂಚಕ್ಕೆ ಆದರ್ಶವಾಗುತ್ತದೆ. ಇದೀಗ ನಿರಂತರ ನಡೆಯುತ್ತಿರುವ ತಾಮಸೀಯ ಕಚ್ಚಾಟಗಳು ತಪ್ಪುತ್ತವೆ. ದ್ವಿವಿಧ ಭಾವನೆಗಳಲ್ಲಿ ಒಂದೆಂಬ ಭಾವನೆ ಬರುತ್ತದೆ.

ಪ್ರತಿಯೊಂದು ವ್ಯಕ್ತಿಗೂ ಕರ್ತವ್ಯ ಬೇಕು. ಅದು ಆತ್ಮೋದ್ಧಾರಕ್ಕೆ ಸಹಕಾರಿ

ಯಾಗಿರಬೇಕು. ಸಮಾಜ ಕಲ್ಯಾಣಕ್ಕಾಗಿ ಮೀಸಲಾಗಿರಬೇಕು. ಅಂದರೆ ಅದಕ್ಕೆ ಬಲ ಬರುತ್ತದೆ. ಬೆಲೆ ಬರುತ್ತದೆ. ನಿತ್ಯವೂ ಕಾರ್ಯ ತತ್ಪರರಾದವರಿಗೆ ಹೊರಗಿನ ಆಶೆ ಆಮಿಷಗಳು ಆವರಿಸವು. ದೇಹ ಮನಗಳಲ್ಲಿ ನವಚೈತನ್ಯ ಹುಟ್ಟುವದಲ್ಲದೆ, ಶಕ್ತಿ ಸಾಮರ್ಥ್ಯಗಳು ಸಹಜವಾಗಿ ಬಂದು ಬಿಡುತ್ತವೆ. ವ್ಯಕ್ತಿತ್ವ ವಿಕಾಸಕ್ಕೆ ಕರ್ತವ್ಯ ನಿಷ್ಠೆಯೇ ದಾರಿದೀಪ. ಕರ್ತವ್ಯ ಬಲ್ಲ ವ್ಯಕ್ತಿಗೆ ಧೈರ್ಯ ಬರುತ್ತದೆ. ಪರೋಪಕಾರ ಭಾವನೆ, ಸಹಿಷ್ಣುತೆ ಮುಂತಾದ ಗುಣಗಳು ಅವನಲ್ಲಿ ಅಳವಟ್ಟಿರುತ್ತವೆ. ಅಂತೆಯೇ ಅವನು ಏನನ್ನಾದರೂ ಸಾಧಿಸಬಲ್ಲನು. ಪ್ರಣತಿಗೆ ಎಣ್ಣೆ ಹಾಕಿದಂತೆ, ದೀಪ ಉರಿಯುತ್ತ ಕತ್ತಲೆ ಕಳೆಯುವಂತೆ; ಬದುಕಿನಲ್ಲಿ ಬೆಳಕನ್ನು ಕಂಡು ಪ್ರಗತಿಪಥದತ್ತ ಸಾಗಲು ಕರ್ತವ್ಯಾದಕ್ಷತೆಯೇ ಕೈದೀವಿಗೆ ಕರ್ತವ್ಯ ಕರ್ಮದಿಂದ ದೇಹಕ್ಕೆ ಅಂಟಿರುವ ರೋಗಾದಿಗಳು ನಷ್ಟವಾಗುವ ದಲ್ಲದೆ, ಮಾನಸಿಕ ರೋಗಕ್ಕೂ ಇದು ದಿವ್ಯೌಷಧ. "ಕರ್ತವ್ಯ ಪ್ರಜ್ಞೆಯಿಂದ ಆರ್ಥಿಕ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ, ಧಾರ್ಮಿಕ ಪ್ರಜ್ಞೆಯನ್ನು ಬೆಳೆಯಿಸಿಕೊಳ್ಳುವದು ಇಂದಿನ ದಿನಮಾನಗಳಲ್ಲಿ ಅತ್ಯಾವಶ್ಯಕವೆಂಬುದು ಬೇರೆ ಹೇಳಬೇಕಾಗಿಲ್ಲ. ಮಠ ಮಂದಿರಗಳು, ನಾಡಿನ ಜನಮನಕ್ಕೆ ಮಾರ್ಗದರ್ಶನ ಮಾಡುವಲ್ಲಿ ಅವಿಶ್ರಾಂತವಾಗಿ ಶ್ರಮಿಸುತ್ತಿದ್ದವೆಂಬು ದನ್ನು ವೇದಕಾಲದಿಂದಲೂ, ಐತಿಹಾಸಿಕ ಆಧಾರದಿಂದಲೂ ಸಿದ್ಧವಾಗುತ್ತದ. ಇಂದಿನ ಪ್ರಜಾಪ್ರಭುತ್ವ ಯುಗದಲ್ಲಿ ಜನಜೀವನದ ಸುಳುಹು ಹೊಳಹುಗಳ ಜಟಿಲವಾದ ಸಮಸ್ಯೆ ಗಳನ್ನು ನೈತಿಕ ನಿಯಮ ನಿಷ್ಠೆಯ ಒರೆಗಲ್ಲಿಗೆ ತಿಕ್ಕಿ ನಾಗರಿಕ ಜೀವನಕ್ಕೆ ಸರಿ ಹೊಂದು ವಂತೆ ಸುಸಂಸ್ಕೃತವಾದ ರೀತಿಯಲ್ಲಿ ಬಾಳು ಸಾಗಿಸುವಂತೆ, ಮಾರ್ಗದರ್ಶನ ಮಾಡಬೇಕು. ಅಂದರೆ ಕರ್ತವ್ಯ ಪರಿಪಾಲನೆಯನ್ನು ಮನಃಪೂರ್ವಕವಾಗಿ ಮಾಡಬೇಕು. ಪ್ರತಿಯೊಂದು ದೃಷ್ಟಿಯಿಂದ ತಮ್ಮ ತಮ್ಮ ವಿಭಾಗದಲ್ಲಿ ಒಳ್ಳೆಯ ಜಿಗುಟತನದಿಂದ ಕಾರ್ಯ ಮಾಡುತ್ತ ಹೋದಲ್ಲಿ ಸಮಾಜವನ್ನು ಸುಭದ್ರಗೊಳಿಸಲು ಸಾಧ್ಯ. ಇದನ್ನು ಮರೆತು ಆಲಸ್ಯವುಳ್ಳವ ರಾಗಿ, ಕರ್ತವ್ಯ ವಿಮುಖರಾದರೆ, ಸಮಾಜವನ್ನು, ಸಂಸ್ಥೆಗಳನ್ನು ಹಾಳುಗೆಡುವಿದಂತಾಗು ವದು. ಅದಕ್ಕಾಗಿ ಅಭಿಮಾನ ಬೇಕು. ಜೊತೆಗೆ ಕರ್ತವ್ಯ ಕುಶಲತೆಯೂ ಬೇಕು. ಅಂದರೆ ರಾಷ್ಟ್ರ ರಥವನ್ನು ಎಳೆಯಲು ಶಕ್ತಿ ಬರುತ್ತದೆ. ಲೋಕ ನಿಂದಾಪಮಾನಗಳನ್ನು ಲೆಕ್ಕಿಸದೆ ಮನುಷ್ಯನು ತನ್ನ ಕರ್ತವ್ಯಗಳನ್ನು ಪರಿಪಾಲಿಸುತ್ತ ಹೋಗಬೇಕು ಎಂದು ಸ್ವಾಮಿ ವಿವೇಕಾನಂದರು ತಿಳಿಹೇಳಿದ್ದಾರೆ. ಹೂವು ಕೊಯ್ಯುವವರಿಗೆ ಅಂಜಿ ಹೂವು ಎಂದಾದರೂ ತಡಮಾಡಿ ಅರಳಲಾರದೆನ್ನುವ ನುಡಿ ಸತ್ಯವಾದುದು. ಆದುದರಿಂದ ಜೀವನದಲ್ಲಿ ಎಂತಹ ಅಡೆತಡೆಗಳು ಬಂದೊದಗಿದರೂ ಹಿಡಿದ ಕಾರ್ಯ ಎದೆಗೊಟ್ಟು ಮಾಡಿದರೆ ಅದುವೆ ನಿಜವಾದ ಆತ್ಮೋನ್ನತಿ, ರಾಷ್ಟ್ರೋನ್ನತಿ, ಇದುವೆ ಕರ್ತವ್ಯ ಪ್ರಜ್ಞೆ.

**ಅರ್ಥೋ ಹಿ ಕನ್ಯಾ ಪರಕೀಯ ಏವ**

ರಸವಿರಸಗಳ ಸಮರಸವೇ ಪ್ರೇಮದ ಪರಮ ರಹಸ್ಯ. ಸುಖ ದುಃಖ ಇವು ಜೀವ ಗುಣಗಳು. ಚಿತ್ತವೃತ್ತಿಯ ನಿವೃತ್ತಿಯಿಂದ ಸುಖ ದೊರೆತರೆ ಚಿತ್ತವೃತ್ತಿಯ ಪ್ರವೃತ್ತಿ

ಯಿಂದ ದುಃಖವುಂಟಾಗುವದು ಸಹಜ. ಒಂದರಿಂದ ಅಂತರಂಗ ವಿಶುದ್ಧಿ; ಮತ್ತೊಂದ ರಿಂದ ಅಂತರಂಗ ಅಶುದ್ಧಿ. ಸುಖ ದುಃಖಗಳಲ್ಲಿ ನಿಸ್ಪೃಹ ಭಾವಕ್ಕೆ ಬಹುದಿನದ ತಪಸ್ಸು, ಸಾಧನೆ, ಪರಿಶ್ರಮ ಬೇಕು. ಎಂತಹ ಮಹಾನ್ ತಪಸ್ವಿಗಳಿಗೂ, ಯೋಗಿಗಳಿಗೂ, ಮಮತೆ; ಮೋಹಗಳನ್ನು ಒಮ್ಮೊಮ್ಮೆ ಬಿಡುವದು ಕಷ್ಟಸಾಧ್ಯವಾಗುತ್ತದೆ; ಮಮತಾ ವಿಷಯವು ಎದುರಿಗೆ ಬಂದು ಕಾಡುತ್ತಿದೆ, ಭಾವೋದ್ರೇಕಗೊಳಿಸುತ್ತದೆ.

ಹುಟ್ಟಿದೊಡನೆಯೇ ತಾಯಿ-ತಂದೆಗಳನ್ನು ಬಿಟ್ಟು ತಬ್ಬಲಿಯಾದ ಶಕುಂತಲೆಯು ತಪೋಧನರಾದ ಕಣ್ವರ್ಷಿಗಳ ಮಮತೆಯ ಸಾಕುಮಗಳಾಗುತ್ತಾಳೆ. ಆ ಋಷಿಗಳು ತಮ್ಮ ಆಶ್ರಮದಲ್ಲಿ ಶಕುಂತಲೆಯನ್ನು ಮಮತೆಯಿಂದ ಸಾಕಿ ಸಲುಹಿ ದೊಡ್ಡವಳನ್ನಾಗಿ ಮಾಡು ತ್ತಾರೆ. ಋಷ್ಯಾಶ್ರಮದಲ್ಲಿಯೇ ಬೆಳೆದ ಶಕುಂತಲೆಯು ಪತಿಯ ಮನೆಗೆ ಹೋಗಲು ಸಿದ್ಧಳಾದಾಗ ಶಕುಂತಲೆಯನ್ನು ಕುರಿತು ಕಣ್ವರ್ಷಿಗಳು ಪಾತಿವ್ರತ್ಯ ಧರ್ಮವನ್ನು ಕಾಯ್ದು ಕೊಂಡು ಹೋಗಲು ಕೆಲವು ಹಿತವಚನಗಳನ್ನು ಹೇಳುತ್ತಾರೆ;

"ಶುಶ್ರೂಷಸ್ವ ಗುರೂನ್ ಕುರು-ಪ್ರಿಯ ಸಖೀ ವೃತ್ತಿಂ ಸಪತ್ನೀಜನೇ। ಭರ್ತೃರ್ವಿಪ್ರಕೃತಾಪಿ ರೋಷಣತಯಾ ಮಾ ಸ್ಮ ಪ್ರತೀಪಂ ಗಮಃ। ಭೂಯಿಷ್ಠಂ ಭವ ದಕ್ಷಿಣಾ ಪರಿಜನೇ ಭಾಗ್ಯೇಷ್ವನುತ್ಸೇಕಿನೀ। ಯಾಂತ್ಯೇವಂ ಗೃಹಿಣೀ ಪದಂ ಯುವತಯೋ ವಾಮಾಃ ಕುಲಸ್ಯಾಧಯಃ॥"

ಗುರುಹಿರಿಯರನ್ನು ಮನಮುಟ್ಟಿ ಸೇವೆ ಮಾಡು; ಸವತಿಯರಲ್ಲಿ ಪ್ರಿಯ ಸಖಿಯ ರೆಂಬ ಭಾವನೆಯನ್ನು ತಂದುಕೊಳ್ಳು; ಎಷ್ಟು ಕಾಡಿದರೂ ಪತಿಗೆ ಬಿರುನುಡಿಯಾಡಬೇಡ, ತಿರುಗಿ ಬೀಳಬೇಡ. ಪತಿಯ ಮನೋಭಾವನೆ ನೋಡಿಕೊಂಡು ನಡೆ. ಸೇವಕರಲ್ಲಿ ಆದರವಿರಲಿ. ಭಾಗ್ಯ ಬಂದಿದೆ ಎಂದು ಗರ್ವದಲ್ಲಿ ಕುಳಿತುಕೊಳ್ಳಬೇಡ. ಹೀಗಿರುವ ಯುವತಿಯರೇ ಉತ್ತಮ ಗೃಹಿಣಿಯರೆನಿಸುತ್ತಾರೆ. ಇದಕ್ಕೆ ಹೊರತಾದವರು ಕುಲಕ್ಕೆ ಪೀಡೆಗಳೆಂದು ತಿಳಿ. ಇಂತು ಹೇಳಿದ ಕಣ್ವರ್ಷಿಗಳು ತಪೋವನದಿಂದ ಹೊರಹೋಗು ತ್ತಿರುವ ಶಕುಂತಲೆಯನ್ನು ಕಂಡು ಮಮತೆಯ ಬಂಧನದಿಂದ ಬಾಧೆಗೊಳಗಾಗುತ್ತಾರೆ. ಪರ್ಣಶಾಲೆಯ ಬಾಗಿಲಲ್ಲಿ ಶಕುಂತಲೆಯು ಪೂಜಿಸಿಟ್ಟ ಚಿಗಿತ ನವಣೆ ಕಾಳುಗಳನ್ನು ತಿರುಗಿ ನೋಡುತ್ತ, ಅವರ ಜೊತೆಗೆ ಶಕುಂತಲೆಯು ಅಗಲುತ್ತಿರುವದನ್ನು ಕಂಡು ದುಃಖತಪ್ತ ರಾಗಿ ಕಣ್ವರ್ಷಿಗಳು, "ಹೋಗಮ್ಮ ನಿನ್ನ ಪ್ರಯಾಣವು ಸುಖಕರವಾಗಲಿ! ಪತಿಗೆ ಪ್ರೀಯಳಾಗಿ ಚಕ್ರವರ್ತಿಯಾಗಲು ಅರ್ಹನಾದ ಪುತ್ರನನ್ನು ಪಡೆ" ಎಂದು ಹರಸಿ ಆಶೀರ್ವದಿಸಿ ಕಳಿಸಿದ ನಂತರ, ಚಿಂತೆಯಿಂದ ನೋಟವನ್ನು ಜಡಮಾಡಿಕೊಂಡು, ಸುರಿ ಯುವ ಕಣ್ಣೀರನ್ನು ಒತ್ತಿಕೊಂಡು "ಸನ್ಯಾಸಿಗಳಾದ ಹಾಗೂ ಸಂಯಮಧನರಾದ ನಮ್ಮಂಥ ವರಿಗೇ ಮಮತೆಯ ಪರಿಣಾಮದಿಂದ ಇಷ್ಟು ಸಂಕಟವಾಗುತ್ತಿರುವಾಗ, ಮೊದಲು ಬಾರಿ ಹೆಣ್ಣುಮಕ್ಕಳನ್ನು ಪತಿಯ ಮನೆಗೆ ಕಳಿಸುವ ಗೃಹಸ್ಥರಿಗೆ ಎಷ್ಟು ದುಃಖವಾಗುತ್ತಿರಬಹುದು

ದೆಂದು ನಿಟ್ಟುಸಿರೆಳೆದು "ಅರ್ಥೋ ಹಿ ಕನ್ಯಾ ಪರಕೀಯ ಏವ" ಅರ್ಥ ಮತ್ತು ಕನ್ಯೆ-ಇವೆರಡನ್ನು ಎಷ್ಟು ಜೋಪಾನವಾಗಿಟ್ಟುಕೊಂಡರೂ, ಲಾಲನೆ ಪಾಲನೆ ಮಾಡಿದರೂ ಸಹ ಒಂದಾನೊಂದು ದಿನ ಇವುಗಳು ಪರರ ವಶದಲ್ಲಿಯೇ ಇರತಕ್ಕವುಗಳೆಂದು ಭಾವಿಸಿ, ಮುಡಿ ಪಿಟ್ಟ ಒಡವೆಯನ್ನು ತಿರುಗಿ ಮುಟ್ಟಿಸಿದಂತೆ. ಕರ್ತವ್ಯದ ಭಾರವು ಪೂರ್ತಿಯಾಯಿತೆಂದು ಬಗೆದು, ಸುಖ ದುಃಖಗಳ ಭಾರವನ್ನು ಹೊತ್ತ ಮಹರ್ಷಿ ಕಣ್ವರ್ಷಿಗಳು ಪರ್ಣಕುಟೀರಕ್ಕೆ ಪೂಜೆಗೆಂದು ತೆರಳುತ್ತಾರೆ. ಇಲ್ಲಿ ನಾವು ಕಾಣುವದು ಸಿಹಿ-ಕಹಿಗಳ ಸಮರಸ. ದುಃಖಸ್ಯಾನಂತರಂ ಸುಖಂ, ಸುಖಸ್ಯಾನಂತರಂ ದುಃಖಂ" ಈ ಭಾವವು ಇಲ್ಲಿ ವ್ಯಕ್ತವಾಗುತ್ತದೆ. ಸುಖ ದುಃಖಗಳ ದ್ವಂದ್ವವು ಎದ್ದು ಕಾಣುತ್ತದೆ. ಈ ಜೀವನದಲ್ಲಿ ದುಃಖದ ಅನುಭವ ಆಗದ ವಿನಾ ಸುಖದ ಮಹತ್ವ ತಿಳಿಯದು. ಸುಖ ದುಃಖದಲ್ಲಿ ಸಮದೃಷ್ಟಿ ಕಾಣುವದೇ ಜೀವನದ ಸಫಲತೆ. ಜೀವನ ವಿಕಾಸಕ್ಕೂ ಮೊದಲು ಕಷ್ಟ ಸಹಿಸಬೇಕಾಗುತ್ತದೆ. ಮೊಗ್ಗೆಯು ರಳಲು ನೀರೆರೆಯಬೇಕಾಗುತ್ತದೆ. ಅಂಗ ಸೌಷ್ಠವವುಂಟಾಗಲು ಬೆವರು ಸುರಿಸಬೇಕಾಗುತ್ತದೆ. ಅರ್ಥವೂ ಅನರ್ಥಕ್ಕೂ ಕಾರಣ, ಸದ್ಗತಿಗೂ ಕಾರಣ. ನೀರಿಗೆ ನೈದಿಲಿಯೇ ಶೃಂಗಾರವಾಗುವಂತೆ, ಗೃಹಸ್ಥ ಜೀವನದಲ್ಲಿ ಗುಣವುಳ್ಳ ಕನ್ಯೆಯೇ ಅಲಂಕಾರ ಪ್ರಾಯಳು. ಮನೆತನದ ಕೀರ್ತಿಗೂ ಕೂಡ ಆಕೆಯೇ ಮೂಲಕಾರಣ.

ಗೌರವ ಜೀವನ ಸಾಗಿಸಿಕೊಂಡು, ಗುರುಹಿರಿಯರ ಸೇವೆ ಮಾಡಿ, ಸಂಯಮ್ಮ ವಿಚಾರ ಶೀಲತೆ, ಶುದ್ಧ ಪ್ರೇಮಗಳ ಸರೋವರದಲ್ಲಿ ಮಿಂದರೆ, ಮರ್ತ್ಯದಲ್ಲಿಯೇ ಸ್ವರ್ಗೀಯ ಜೀವನವನ್ನು ಕಂಡುಕೊಳ್ಳಬಹುದು. ಲೌಕಿಕದಲ್ಲಿದ್ದರೂ ಆಧ್ಯಾತ್ಮಿಕ ಆನಂದ ವನ್ನು ಪಡೆಯಬಹುದು, ಆತ್ಮಿಕ ಸೌಂದರ್ಯವನ್ನು ಕಾಣಬಹುದು. ಮೊದಮೊದಲು ಶಕುಂತಲೆಯ ಜೀವನ ಪಥದಲ್ಲಿ ಸಾಕಷ್ಟು ಕಷ್ಟ-ಕಾರ್ಪಣ್ಯಗಳು ಬಂದೊದಗಿದರೂ, ಅವೆಲ್ಲವುಗಳನ್ನು ಧೈರ್ಯದಿಂದ ಎದುರಿಸಿ, ತಪಸ್ವಿಗಳಾದ ಗುರು-ಹಿರಿಯರು ಹೇಳಿದ ಹಿತವಚನವನ್ನು ಪಾಲಿಸಿದ ಪರಿಣಾಮವಾಗಿ ಶಕುಂತಲೆಯು ಭಾರತೀಯರಿಗಷ್ಟೇ ಅಲ್ಲ; ಪ್ರಪಂಚಕ್ಕೆ ಆದರ್ಶ ವ್ಯಕ್ತಿಯಾಗಿದ್ದಾಳೆ, "ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ" ಈ ನುಡಿಯನ್ನು ಸಾರ್ಥಕ ಮಾಡಿದ್ದಾಳೆ. ಇಂತಹ ಆದರ್ಶ ವ್ಯಕ್ತಿತ್ವವನ್ನು ಸಂಪಾದಿಸಿ ದರೆ ಮಾತ್ರ "ಧನ್ಯೋಗ್ರಹಸ್ಥಾಶ್ರಮಃ".

**ಕರ್ತೃ ಮೂರುಸಾವಿರಮಠದ ಶ್ರೀ ಜಗದ್ಗುರುಗಳು**

ನೀನಿರುವೆ ಜಗದ್ಗುರು ಸಾರ್ವಭೌಮ।
ನೀನಿರುವೆ ಸಾಧಕರಿಗೆ ಧ್ಯಾನಧಾಮ॥
ನೀನಿರುವೆ ನಿರ್ವಿಕಲ್ಪ ಸಮಾಧಿಸ್ಥ ತಾತ।
ನೀನಿರುವ ಇಷ್ಟಾರ್ಥ ಸಿದ್ಧಿ ಪ್ರದಾತ॥
ನೀನಿರುವೆ ಹುಬ್ಬಳ್ಳಿ ಪುರಕೆ ಅಧಿಪತಿಯು।

ನೀನಿರುವೆ ಸದ್ಭಕ್ತರಿಗೆ ಗತಿಯು ಮತಿಯು॥
ನೀನಿರುವೆ ಚಿತ್‌ಕಲಾ ಪರಿಪೂರ್ಣನು।
ನೀನಿರುವೆ ಶೂನ್ಯ ಸಿಂಹಾಸನಾಧೀಶನು॥
ನೀನಿರುವೆ ಸರ್ವಧರ್ಮದ ಜನಕೆ ಸಂಜೀವನ।
ನೀನಿರುವೆ ಸಮನ್ವಯದ ತತ್ತ್ವಕೆ ಸಂಭಾವನ॥
ನೀನಿರುವೆ ನಮ್ಮ ಪಾಲಿಗೆ ಪರಂಜ್ಯೋತಿ।
ನೀನಿರುವೆ ಶಿವಯೋಗ ಮೆರೆದ ವಿಭೂತಿ॥
ಭ್ರೂಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ॥
ನೀನೆನ್ನ ಹೃದಯ ಸಿಂಹಾಸನದಲ್ಲಿ ಮಂಡಿಸಿರುವ
ಸನ್ಮೂರ್ತಿ! ಚಿನ್ಮೂರ್ತಿ॥

೨

ಕರೆವರು ಕೆಲವರು ನಿನ್ನನು ಹುಚ್ಚನೆಂದು,
ಕರೆವರು ಕೆಲಬರು ನಿನ್ನನು ಸಿದ್ಧನೆಂದು;
ಕರೆವರು ಕೆಲವರು ಸಿದ್ಧಗುರುವೆಂದು,
ಕರೆವರು ಕೆಲಬರು ಗುರುಸಿದ್ಧನೆಂದು;
ನಾ ನಿನ್ನೆಂತು ಕರೆಯಲಿ ಗುರುದೇವಾ!
ಭ್ರೂಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ,
ನಾ ನಿನ್ನ ಕರೆವೆನು;
ಹಗಲಿರುಳು ನನ್ನ ಮನದಲ್ಲಿ ಮನೆಮಾಡಿಕೊಂಡಿರೆಂದು!

—"ಚಿತ್ಸುಮನ" ಗ್ರಂಥದಿಂದ.

ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರ ಮಠವು ಇದೊಂದು ಜಾಗೃತ ಪೀಠ, ಕುಮಾರ ಸಮಯದ ಮೂಲಪೀಠ. ಆಧ್ಯಾತ್ಮ ಸಾಧಕರ ಜೀವನವನ್ನು ಬೆಳಗುವ ನಂದಾದೀಪ ವಿಶ್ವಕಲ್ಯಾಣಕ್ಕೆ ತನ್ನ ಬಾಳನ್ನು ಮೀಸಲಾಗಿರಿಸಿ, ಶೈಕ್ಷಣಿಕ ಕ್ಷೇತ್ರಗಳಲ್ಲಿಯೂ ಅಸಾಧಾರಣವಾದ ಕಾರ್ಯವನ್ನೆಸಗಿ, ಆಧ್ಯಾತ್ಮ ಸಿದ್ಧಿ ಪಡೆದು ಧರ್ಮದ ಬಾವುಟವನ್ನು ಎತ್ತಿ ಹಿಡಿದ ಆದರ್ಶ ಮಹಾಮಠ. ಈ ಪೀಠದ ಕರ್ತೃ ಜಗದ್ಗುರುಗಳು ಸರ್ವಜನರ ಭಕ್ತಿಗೆ ಆಗರವಾಗಿರುವರಲ್ಲದೆ ಅವರ ಸಮಾಧಿಯು ಜಾಗೃತ ಸ್ಥಾನವಾಗಿರುವದು. ಮೂಲ ಕರ್ತೃವಿನ ಐತಿಹಾಸಿನ ಹಿನ್ನೆಲೆ ಬಹು ಪ್ರಾಚೀನವಾದುದು. ಶ್ರೀ ಜಗದ್ಗುರು ಮೂರು ಸಾವಿರಮಠದ ಪ್ರಾಚೀನತೆಯನ್ನು ಶಿರಸಿ ಶಾಸನದ ಆಧಾರದಿಂದ ಹಾಗೂ ತಾಡ ಓಲೆಯ ಪ್ರತಿಯಲ್ಲಿ ಉಲ್ಲೇಖಿತವಾದ ವಿಷಯದಿಂದ ಕಂಡು ಹಿಡಿಯಬಹುದು. ಮೂರು ಸಾವಿರಮಠದ ಪೀಠವನ್ನೇರಿದವರು ಹೆಚ್ಚಾಗಿ ಮಠದ ಪ್ರಾಚೀನತೆಯ ಬಗ್ಗೆ ಬರೆಯದಿರು

ವದು ನಮಗೆ ಸ್ವಲ್ಪ ಕೊರತೆ ಕಂಡರೂ ಭಕ್ತರ ಮನೋ ಭೂಮಿಕೆಯ ಮೇಲೆ ಉಳಿದಿರುವ ಹಾಗೂ ಪರಂಪರಾಗತವಾಗಿ ಭಕ್ತಿ ವಿಶ್ವಾಸದಿಂದ ನಡೆದುಕೊಂಡು ಬಂದಿರುವ ವೃದ್ಧರ ಮಾತಿನಿಂದ ಮೂರುಸಾವಿರಮಠದ ಕರ್ತೃ ಜಗದ್ಗುರುಗಳು ಮಹಾ ವ್ಯಕ್ತಿತ್ವವನ್ನು ಕಂಡು ಕೊಳ್ಳಬಹುದು.

ಆದರೂ ಸಹ ಮೂಲ ಕರ್ತೃಗಳು ಜನಿಸಿದರೆಲ್ಲಿ? ಬೆಳೆದರೆಲ್ಲಿ? ಅಧ್ಯಯನ ವೆಲ್ಲಿಂದಾಯ್ತು? ಎಲ್ಲಿಂದ ಹುಬ್ಬಳ್ಳಿಗೆ ಆಗಮಿಸಿದರು? ಪೂರ್ಣತಿಳಿಯದಂತಾಗಿದೆ.

"ಮೂರುಸಾವಿರಮಠದ ಕರ್ತೃ ಗದ್ದುಗೆಯ ಸಮಾಧಿ ಮಂಟಪವು ಬಹಳ ಬಂಧುರ ವಾಗಿಯೂ, ಸರ್ವಾಂಗ ಸುಂದರವಾಗಿಯೂ, ಅಲಂಕೃತವಾಗಿದ್ದರೂ, ಭಾವುಕರ ದೃಷ್ಟಿಗೆ ಅದು ಹುಬ್ಬಳ್ಳಿಯ ಹೃದಯವೆನಿಸಿ ಸಜೀವವಾಗಿರುವಂತೆ ಸತ್ವಪೂರ್ಣವಾಗಿ ಎದ್ದು ತೋರುತ್ತಿದೆ. ಹಾಗೂ ಮಠದ ಮುಖ್ಯ ಭಾಗವಾಗಿ ಅಂತಃ ಶಕ್ತಿಯಂತೆ ಅವ್ಯಕ್ತ ಮುಕ್ತಿಯಂತೆ ಅಂತರ್ಗತವಾಗಿದೆಯೆಂದು ಹಲವರು ಅಭಿಪ್ರಾಯ ಪಡುತ್ತಿದ್ದಾರೆ. ಇದು ನಿಜಕ್ಕೂ ಸತ್ಯ. ಭಕ್ತರ ಇಷ್ಟಾರ್ಥ ಸಿದ್ಧಿಗಳನ್ನು ಬೇಡಿದವರಿಗೆ ನೀಡಿ ಅವರ ಮನೋ ಬಯಕೆಯನ್ನು ಪೂರ್ತಿಗೊಳಿಸುತ್ತಿದೆ. ಜಾತಿ, ಮತ, ಪಕ್ಷ, ಪಂಗಡಗಳ ತಾರತಮ್ಯವಿಲ್ಲದೆ ಸರ್ವ ಧರ್ಮದವರೂ ಸಹ ಈ ಮೂಲ ಕರ್ತೃ ಜಗದ್ಗುರುಗಳ ಗದ್ದುಗೆಗೆ ಗೌರವಾದರ ಗಳನ್ನು ನೀಡುವದು ಈ ಪೀಠದ ಮತ್ತೊಂದು ವೈಶಿಷ್ಟ್ಯವಾಗಿದೆ. ಮೂಲ ಕರ್ತೃ ಗದ್ದುಗೆಯ ಮಹತಿಯು ದಿನೇ ದಿನೇ ಬೆಳೆಯುತ್ತ ನಡೆದಿದೆ. ಮೂಲ ಕರ್ತೃಗಳ ಹೆಸರು ಜಗದ್ಗುರು ಗುರುಸಿದ್ಧೇಶನೆಂದು, ಹಾಗೂ ಹುಚ್ಚೇಶನೆಂದು ಕರೆಯುವ ವಾಡಿಕೆಯಾಗಿದೆ. ಲೀಲಾ ಮೂರ್ತಿಗಳಂತೆ ತೋರುತ್ತಿರುವದರಿಂದ ಈ ರೀತಿಯ ಹೆಸರು ಬಂದಿದೆ ಎಂದು ಜನರ ಅಭಿಪ್ರಾಯ ಮತ್ತು ಮೂಲಕರ್ತೃ ಜಗದ್ಗುರುಗಳು ನಿರ್ವಿಕಲ್ಪ ಸಮಾಧಿಯನ್ನು ಹೊಂದಿದ್ದಾರೆಂದು, ಅಂತೆಯೇ ಈ ಸಮಾಧಿಯು ಇಷ್ಟು ಜಾಗೃತವಾಗಿದೆಯೆಂದು ವೃದ್ಧ ಭಕ್ತರಿಂದ ತಿಳಿದು ಬಂದಿದೆ. ಸಮಾಧಿಗೆ ಅಹಿತ ಬಯಸಿದವರಿಗೆ ಆ ಕೂಡಲೆ ಅವರಿಗೆ ಅನುಭವ ಬಂದಿದ್ದು ಈಗಲೂ ಅನುಭವಿಸುತ್ತಿರುವದನ್ನು ಕಣ್ಣಾರೆ ಕಾಣಸುತ್ತಿದ್ದೇವೆ. ಕರ್ತೃಗಳು ಚಿತ್ತಶಕ್ತಿಯ ಅಂತಃಕರಣ, ಜನನ ಮರಣಗಳನ್ನು ಹರಣ ಮಾಡುವ ಅಗಾಧ ಶಕ್ತಿಯು ಈ ಗದ್ದುಗೆಯಲ್ಲಿ ಜಾಗೃತವಾಗಿದೆ. ಹುಬ್ಬಳ್ಳಿ ಬೆಳೆದು ಬೆಳಗಲು ಈ ಕರ್ತೃವಿನ ಮಹಾ ಶಕ್ತಿಯಿಂದಲೇ ಎಂದು ಜನರ ಪರಂಪರಾಗತ ವಾಡಿಕೆಯಾಗಿದೆ. ಅಂತೆಯೇ ಹುಬ್ಬಳ್ಳಿಯ ಹಿರೇಪೇಟೆಗೆ ಈಗಲೂ ಹುಚ್ಚನ ಪೇಟೆಯೆಂದು ಕರೆಯುತ್ತಿದ್ದಾರೆ. ಈ ಪೀಠದ ಎಲ್ಲ ಜಗದ್ಗುರುಗಳು ಕರ್ತೃವಿನ ಅಂತಃಪ್ರೇರಣೆಯನ್ನು ಪಡೆದು ಸಮಾಜಸೇವೆ ಯನ್ನು ಧಾರ್ಮಿಕ ಕಾರ್ಯದಲ್ಲಿ ಮುಂದಾಗಿದ್ದಾರೆ. ಮೂಲಕರ್ತೃಗಳು ಅದ್ಭುತ ಶಕ್ತಿಯ ಮಹಾಯೋಗಿವರೇಣ್ಯ ಇಂದಿಗೂ ಭಕ್ತಿಯಿಂದ ಗದ್ದುಗೆಗೆ ನಡೆದುಕೊಂಡವರಿಗೆ ಇಷ್ಟಾರ್ಥ ಸಿದ್ಧಿಯಾಗಲು ಯಾವ ಸಂದೇಹವಿಲ್ಲ. ಜಾಗೃತ ಚೈತನ್ಯವು ಎಚ್ಚರಿಸಿ ದಾರಿ ತೋರಿಸಿ

ದುಃಖ ನಿವಾರಣೆ ಮಾಡುತ್ತಿರುವದೆಂದ ಮೇಲೆ ನಿರ್ವಿಕಲ್ಪ ಸಮಾಧಿಯಿರಬಹುದೆಂದು ಹೇಳುವ ವೃದ್ಧರ ಮಾತು ನಿಜವೆನಿಸಬಹುದು.

೧೨ನೆಯ ಶತಮಾನದಲ್ಲಿ ಮೂರುಸಾವಿರಮಠವು ಧಾರ್ಮಿಕ ಕೇಂದ್ರವಾಗಿದ್ದ ವಿಷಯವು ಪ್ರೊ. ವರದರಾಜ ಉಮರ್ಜಿ M. A. ಅವರು ದಿ. ೧೩–೧೦–೫೭ ರ "ಕರ್ಮವೀರ" ವಾರಪತ್ರಿಕೆಯಲ್ಲಿ ಪ್ರಕಟಿಸಿದ ಊರ ಹೆಸರುಗಳು ಹೇಗೆ ತಲೆ ಎತ್ತಿದವು? ಎಂಬ ಲೇಖನದ ಆಧಾರವಿಡಿದು ಬರೆಯುವದಾದರೆ ಅದು ಇಂತಿದೆ:

"ಹುಬ್ಬಳ್ಳಿ....ಈ ಪಟ್ಟಣದಲ್ಲಿ ಹಳೇಹುಬ್ಬಳ್ಳಿ. ಹೊಸಹುಬ್ಬಳ್ಳಿ ಎಂದು ಎರಡು ಭಾಗಗಳಿವೆ....ಹುಬ್ಬಳ್ಳಿ ಎಂಬುದನ್ನು ಮೂಲ ರೂಪವೆಂದು ಗ್ರಹಿಸಿ ಗ್ಯಾಜಿಟೀಯರದ ವರು "ಪುಬ್" (ಪೂರ್ವದು+ಹಳ್ಳಿ–ಎಂದು ನಿರ್ವಚನವನ್ನು ಕೊಟ್ಟು ಪೂರ್ವದ ಹಳೆಯ ಹಳ್ಳಿ ಎಂದು ಅರ್ಥಮಾಡಿದ್ದಾರೆ. ಆದರೆ ಪ್ರಾಚೀನ ಹೆಸರು "ಪೂವಳ್ಳಿ" ಎಂದು ಕಲಚೂರ್ಯರ ೧೨ನೆಯ ಶತಮಾನದ "ಶಿರಸಿ" ಶಾಸನದಲ್ಲಿ ಉಲ್ಲಿಖಿತವಾಗಿದೆ. ಪೂ + ಹು + ವಳ್ಳಿ–ಪಳ್ಳಿ–ಹಳ್ಳಿ–ಹೂವಿನ ಹಳ್ಳಿ ಎಂದು ಅರ್ಥ. ಪೂವಳ್ಳಿಯು ೧೨ನೆಯ ಶತಮಾನದ ಪೂರ್ವದಲ್ಲಿ ೯ ಇಲ್ಲವೆ ೧೦ನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿ ಇರಬಹುದು. ಹಳೇಯ ಹುಬ್ಬಳ್ಳಿ, ರಾಯರ ಹುಬ್ಬಳ್ಳಿ ಎನ್ನುವದು ವಿಜಯನಗರದ ಸಂಬಂಧವನ್ನು ಸೂಚಿಸುವದು. ಶಿರಸಿ ಶಾಸನದಲ್ಲಿ ಪೂವಳ್ಳಿ ಎಂಬುದು ಮೂರುಸಾವಿರಮಠದ ಸಂಬಂಧ ದಲ್ಲಿ ಉಕ್ತವಾದದ್ದರಿಂದ ಅದು ೧೨ನೆಯ ಶತಮಾನದಿಂದಲೂ ಲಿಂಗಾಯತ ಸಮಾಜದ ಕೇಂದ್ರವಾಗಿತ್ತೆಂದು ಸೂಚಿತವಾಗುವದಿಲ್ಲವೇ? ಪೂವಳ್ಳಿಯು ಈಗಿನಂತೆ ಹುಬ್ಬಳ್ಳಿಯಾಗಿ ರದೆ ಸೃಷ್ಟಿ ಸೌಂದರ್ಯದ ನೆಲವೀಡಾಗಿತ್ತೆಂದು ತೋರುವದು. ಹುಬ್ಬಳ್ಳಿ ಹತ್ತಿರ ಇರುವ ಅದರಗುಂಚಿ (ಅದಿರ್ಗಂಚಿ) ಎಂಬುದು "ವಾಸನ್ತೀ" ಎಂಬ ಹೂ–ಬಳ್ಳಿಯ ಹೆಸರೇ ಆಗಿದೆ. "ಹುಬ್ಬಳ್ಳಿ, ಹೆಬ್ಬಳ್ಳಿ ಹಬ್ಬೀತು ರಸಬಳ್ಳಿ" ಎಂದು ಜೋಗುಳದ ಹಾಡನ್ನು ಕೇಳುತ್ತಿದ್ದೇವೆ.

ಪ್ರೊ. ಉಮರ್ಜಿಯವರ ಬರಹದಿಂದ ಮೂರುಸಾವಿರಮಠವು ಬಹು ಪ್ರಾಚೀನದಿಂದ ಧರ್ಮ ಜಾಗೃತಿ ಮಾಡುತ್ತ ಬರುತ್ತಿರುವದು ಕಂಡು ಬರುತ್ತದ. ಇದರ ಬಗ್ಗೆ ಇನ್ನು ಸಂಶೋಧನೆ ನಡೆಯಬೇಕಾಗಿದೆ.

ಹುಬ್ಬಳ್ಳಿಯು ಈಗಿನಂತೆ ಊರಾಗಿರದೆ ನಿಸರ್ಗದ ಮಡಿಲಲ್ಲಿ ಸೃಷ್ಟಿ ಸೌಂದರ್ಯದ ಒಡಲಲ್ಲಿ ಕೇವಲ ಒಂದು ಧಾರ್ಮಿಕ ಕೇಂದ್ರವಾಗಿದ್ದಿರಬೇಕು. ಕಾಲಾನುಕ್ರಮದಲ್ಲಿ ೧೫ನೇ ಶತಮಾನದೊಳಗೆ ಅದರ ಮಧುರ ಸ್ಮಾರಕವೆಂದು ಅಲ್ಲಿ ಒಂದು ಊರು ಕಟ್ಟಿ ಕೊಂಡಿರಬೇಕು. ಅದೇ ಹೂಬಳ್ಳಿ ಬರಬರುತ್ತ ಹುಬ್ಬಳ್ಳಿ ಆಗಿರಬಹುದು ಎಂದು ಅನೇಕರ ಅಭಿಮತವಾಗಿದೆ.

ಡಾ|| ಡಿ. ಎಲ್. ನರಸಿಂಹಾಚಾರ್ಯರು, M. A. D. ಲಿಟ್. ಅವರು "ಕನ್ನಡ ಗ್ರಂಥ ಸಂಪಾದನೆ" ಎಂಬ ಶಿರೋನಾಮದ ಸಂಶೋಧನಾತ್ಮಕ ಗ್ರಂಥ ಒಂದನ್ನು ೧೯೬೦ಳನೆಯ ಇಸ್ವಿಯಲ್ಲಿ ಮೈಸೂರಿನ ಶಾರದಾ ಮಂದಿರದವರು ಪ್ರಕಟಿಸಿದ್ದಾರೆ.

(ಆ ಗ್ರಂಥವು ಇದೀಗ M.A. ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿದೆ.) ಆ ಗ್ರಂಥ ದಲ್ಲಿ ಮೂರುಸಾವಿರ ಮಠದ ಜಗದ್ಗುರುಗಳ ಹೆಸರು ಉಲ್ಲೇಖವಾಗಿದ್ದು ಪುಟ ೫೦ ರಲ್ಲಿ ಅದು ಇಂತಿದೆ. "ಬಸವ ಪುರಾಣ" (ಭೀಮ ಕವಿ. ಮೈ. ಓ. ಲೈ. ಕಾಗದದ ಪ್ರತಿ.)

ಶ್ರೀ ಶ್ರೀಮನ್ ನೃಪಶಾಲಿವಾಹನ ಶಕಾಬ್ದ ಪರಿಮಿತ ೧೩೫೩ ಮನ್ಮಥನಾಮ ಸಂವತ್ಸರೇ ಫಾಲ್ಗುಣಮಾಸೆ ಉತ್ತರಾಯಣೆ ಶಶಿರಋತೌ ಶುಕ್ಲಪಕ್ಷೆ ೧೨ ಸೋಮವಾಸರೆ, ಪುಷ್ಯ ನಕ್ಷತ್ರ, ಶೋಭನನಾಮಯೋಗೆ, ವೈಯಾಕರಣಕ್ಕೆ || ೦ || ಶ್ರೀ ಬಸವೇಶ್ವರ ಪುರಾಣ ಬರುವದು ಸಂಪೂರ್ಣವಾಯಿತು. ಈ ಪುಸ್ತಕವಂ ಬರಿಸಿದವರು ಆರು ಎಂದರೆ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಶೂನ್ಯ ಸಿಂಹಾಸನಾಧೀಶ್ವರ ಭ್ರೂಪ್ರರದ ಮೂರು ಸಹಸ್ರ ಮಠಾಧಿಕಾರಿಗಳಾದ ಗಂಗಾಧರ ಸ್ವಾಮಿಯವರ ಕರಕಮಲೋದ್ಭವರಾದ ಗುರುಸಿದ್ಧ ಸ್ವಾಮಿಯವರು ಬರೆಸಿದ್ದು ಸಿದ್ಧಾಂತವು "ಶ್ರೀರಸ್ತು" ಜಿಲ್ಲಾ ಧಾರವಾಡ ರಸಬ ಮಂಗಳವಾರ ಪೇಟ ವಿರಕ್ತಮಠದಲ್ಲಿ ಬರೆಸಿದ್ದು ಪ್ರಸಿದ್ಧವೂ "ಶ್ರೀ ಶ್ರೀ ಈ ಪುಸ್ತಕವ ಬರೆದವರು ಆರು ಎಂದರೆ ನಿಡುಮಾಮಿಡಿ ಕರಿಬಸವ ಸ್ವಾಮಿಯವರು ವಂಶ ಪಾರಂಪರಿಯಲ್ಲಿ ಜನಿಸಿದ ಶ್ರೀ ರೇವಣಸಿದ್ಧೇಶ್ವರರ ಸಂಪ್ರದಾಯಕರಾದ ಷಡ್ವಡೀ ಸೂತ್ರದ ಕಿತ್ತೂರ ವೀರೇಶ್ವರ ಗೋತ್ರದ ದೇಶದ ಬೈಲಹೊಂಗಲ ಮಠದ ಶಂಕರಪ್ಪನವರ ಆತ್ಮಜನಾದ ಷಣ್ಮುಖಯ್ಯನಿಂ ಬರೆಯಲ್ಪಟ್ಟಿತು."

ಶಕ ೧೩೫೩ರಲ್ಲಿ ಲಿಖಿತವಾದ ಓಲೆಯ ಪ್ರತಿಯಲ್ಲಿ ಮೂರುಸಾವಿರಮಠದ ಜಗದ್ಗುರುಗಳ ಹೆಸರು ಬಂದಿರುವದರಿಂದ ಅವರೇ ಬಸವ ಪುರಾಣವನ್ನು ಬರೆಸಿರುವದು— ಉಲ್ಲಿಖಿತವಾಗಿರುವದರಿಂದ ಮೂರುಸಾವಿರಮಠದ ಪ್ರಾಚೀನತೆಯು ಸ್ಪಷ್ಟವಾಗಿ ಎದ್ದು ಕಾಣುತ್ತದೆ.

ಅಲ್ಲಮ ಪ್ರಭುದೇವರ ಶೂನ್ಯ ಪೀಠದ ಪರಂಪರೆಯಲ್ಲಿ ಅನೇಕ ಜಗದ್ಗುರುಗಳ ಪೀಠಗಳೂ, ನಿರಂಜನ ಪೀಠಗಳೂ ಕನ್ನಡ ನಾಡಿನಲ್ಲಿ ಮೈದಾಳಿದವು. ಕೊನೆಗೆ ಕಲ್ಯಾಣದ ರಕ್ತಕ್ರಾಂತಿಯಾಯ್ತು. ಆಗ ಅಲ್ಲಿಯ ಮೂರುಸಾವಿರ ಜನ ಭಕ್ತ ಮಾಹೇಶ್ವರರು ಆಶ್ರಯಕ್ಕೆಂದು "ಪೂವಳ್ಳಿ"ಗೆ ಬಂದು, ಇಲ್ಲಿಯ ಪುರಾತನ ಧರ್ಮ ಪೀಠದಲ್ಲಿ ತಂಗಿದರು. ಈ ಐತಿಹಾಸಿಕ ಘಟನೆಯ ಪರಿಣಾಮವಾಗಿ ಇದು ಮೂರುಸಾವಿರಮಠವಾಯಿತೆಂದು ಹಲವರ ಅಭಿಪ್ರಾಯ. ಇನ್ನು ಅನೇಕ ಜನರು ಅನೇಕ ರೀತಿಯಲ್ಲಿ ಕಲ್ಪನೆಗಳನ್ನು ಮಾಡಿದ್ದಾರೆ, ಮಾಡುತ್ತಿದ್ದಾರೆ. ಅದೆಲ್ಲವು ನಿರ್ಣಯಕ್ಕೆ ಬರಲು ಪೂರ್ಣ ಸಂಶೋಧನೆ ಆಗಬೇಕಾಗಿದೆ. ಇದಲ್ಲದೆ ಹುಬ್ಬಳ್ಳಿಯ ಹಿರೇಪೇಟೆಯಲ್ಲಿಯೇ ಓಲೆ ಮಠವೆಂದು

ಮೂರುಸಾವಿರಮಠದ ಶಾಖಾಮಠವಾಗಿ ಈಗಲೂ ಪ್ರಸಿದ್ಧಿ ಪಡೆದಿದೆ. ಮಠವು ಮೂರುಸಾವಿರಮಠದ ಆಕಾರದಂತೆಯೇ ಶೋಭಿಸುತ್ತದೆ. ಕಟ್ಟಿಗೆಯಲ್ಲಿ ಕೆತ್ತಿನ ಕೆಲಸ ನೋಡುವಂತಿದೆ. ಮೊದಲಿನ ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಈ ಮಠದಲ್ಲಿ ತಾಡ ಓಲೆಗಳನ್ನು ಬರೆಯಿಸಿ ಸಂಗ್ರಹಿಸಿ ಇಡುವ ಪರಿಪಾಠವಿದ್ದುದರಿಂದಲೇ ಇದಕ್ಕೆ "ಓಲೆಮಠ"ವೆಂದು ಹೆಸರು ಬಂದಿದೆ ಎಂದು ಅನೇಕ ವೃದ್ಧರು ಹೇಳುತ್ತಿರುವದು. ಇಲ್ಲಿ ಜ್ಞಾಪಿಸಿಕೊಳ್ಳಬೇಕಾಗಿದೆ. ಹುಬ್ಬಳ್ಳಿಯ ಮೂರುಸಾವಿರಮಠದ ಶಾಖಾಮಠಗಳು ಹುಬ್ಬಳ್ಳಿಯಲ್ಲಿಯೇ ೧೦-೧೨ ಅವೆ. ಕೆಲವು ಜೀರ್ಣವಾಗಿವೆ, ಕೆಲವು ವ್ಯವಸ್ಥಿತ ರೀತಿಯಲ್ಲಿವೆ. ಧಾರವಾಡದಲ್ಲಿಯೂ ಹುಬ್ಬಳ್ಳಿಯ ಮೂರುಸಾವಿರಮಠದ ಶಾಖಾ ಮಠವು ಸಹ ಇದ್ದು ಇದೇ ತೆರನಾಗಿ ಕಟ್ಟಿಗೆಯ ಕೆತ್ತನೆಯಲ್ಲಿ ಪರಿಶೋಭಿಸುತ್ತದೆ. ಅಲ್ಲದೆ ಕರ್ನಾಟಕ, ಆಂಧ್ರ, ಮಹಾರಾಷ್ಟ್ರಗಳಲ್ಲಿಯೂ ಸಾಕಷ್ಟು ಮೂರುಸಾವಿರಮಠದ ಶಾಖಾ ಮಠಗಳಿವೆ. ಎನಿತೋ ಮಠಗಳು ಕ್ರಮೇಣ ನಶಿಸಿ ಹೋಗಿರುವದರಿಂದಲೂ ಕೆಲವು ಮಠಗಳು ಬಹಳ ದಿನಗಳಾದ ಮೇಲೆ ಅವರವರ ಸ್ವತ್ತಾಗಿ ಹೋಗಿರುವದರಿಂದ ಸ್ವತಂತ್ರ ಮಠಗಳಾಗಿ ಬಿಟ್ಟಿವೆ. ಪರಧಾಮೀಯುವರ ಆಳಿಕೆಯಲ್ಲಿ ಎಷ್ಟೋ ಮಠಗಳು ಹೋಗಿವೆ, ಹಾಗೂ ಮಠಗಳಲ್ಲಿರುವ ತಾಡ ಓಲೆಗಳು ನಷ್ಟವಾಗಿ ಹೋಗಿರಬಹುದು ವೀರಶೈವ ಮಠಗಳು ಸಾಕಷ್ಟು ಕಾರ್ಯ ಮಾಡಿ ಹೋಗಿದ್ದರೂ ಸಹ ಸಂಸ್ಕೃತಿಯ ಉಳಿವೆಗೆ ತಾಡ ಓಲೆಗಳಾಗಲಿ, ಶಾಸನಗಳಾಗಲಿ, ಸಾಕಷ್ಟು ದೊರೆಯುತ್ತಿಲ್ಲವಾದ್ದರಿಂದ ನಮಗೀಗ ದೊಡ್ಡ ಕೊರತೆ ಉಂಟಾಗಿದೆ. ಎಷ್ಟೋ ಮನೆ, ಮಠಗಳಲ್ಲಿ ತಾಡ ಓಲೆಗಳನ್ನು, ಹಳೆಯ ಕಾಗದ ಪ್ರತಿಗಳನ್ನು ಜಗುಲಿಯ ಮೇಲಿಟ್ಟು ಪೂಜಿಸುತ್ತಾರೆಯೇ ಹೊರತು ಕೇಳಿದರೆ ಕೊಡುವದಿಲ್ಲಾ. ಅಲ್ಲಿಯೇ ನಶಿಸಿ ಹೋದರೂ ಅದರ ಬೆಲೆ, ಮಹತ್ವ ತಿಳಿಯದಂತಾಗಿ ನಾವೀಗ ದುಃಖ ಪಡಬೇಕಾಗಿದೆ. ಸಂಸ್ಕೃತಿಯ ಪುನರುತ್ಥಾನಕ್ಕೆ ಅವೇ ಮೈಲುಗಲ್ಲುಗಳೆಂದು ಅವರಿಗೆ ಕಲ್ಪನೆಯಿಲ್ಲದಾಗಿ ಹೀಗಿಯೇ ಎಷ್ಟೋ ಪ್ರಾಚೀನ ಸಾಹಿತ್ಯ ಕಣ್ಣಿಗೆ ಕಾಣದಂತೆ ಹುಳ ಹತ್ತಿ ಕೊಳೆತು ಹೋಗಿದೆ.

ಪೂಜ್ಯ ಕರ್ತೃ ಮೂರುಸಾವಿರಮಠದ ಜಗದ್ಗುರುಗಳು ಪವಾಡ ಪುರುಷರೂ, ಶಾಪಾನುಗ್ರಹ ಸಮರ್ಥರೂ,-ಭವರೋಗ ವೈದ್ಯರೆಂಬುದು ಸರ್ವರಿಗೂ ವಿದಿತವಾಗಿದೆ. ಈಗಲೂ ಸಹ ಕರ್ತೃ ಗದ್ದುಗೆಗೆ ಬೇಡಿ ಕೊಂಡವರಿಗೆ ಇಷ್ಟಾರ್ಥ ಸಿದ್ಧಿ ಪಡೆದುಕೊಂಡದ್ದನ್ನು ಕಾಣುತ್ತಿದ್ದೇವೆ. ಕರ್ತೃ ಜಗದ್ಗುರುಗಳ ಹೆಸರಿನ ಮೇಲೆ ಕೋರ್ಟು ಕಚೇರಿಗಳಲ್ಲಿ ಆಣೆ ಮಾಡಿದರೆ ನ್ಯಾಯಾಧೀಶರು ಅದೇ ರೀತಿಯ ನಿರ್ಣಯ ನೀಡುವ ಸಂಪ್ರದಾಯವೂ ಇಂದಿಗೂ ನೋಡುತ್ತೇವೆ. ಧಾರವಾಡದ ಬ್ರಾಹ್ಮಣರೊಬ್ಬರಿಗೆ ಮಕ್ಕಳಿಲ್ಲದಾಗ ಕರ್ತೃ ಜಗದ್ಗುರುಗಳ ಸಮಾಧಿಗೆ ನಡೆದುಕೊಂಡ ನಂತರ ಇಷ್ಟಾರ್ಥ ಸಿದ್ಧಿಯಾದದ್ದು ಕೇಳಿದ್ದೇವೆ. ಆ ನೆನಹಿಗಾಗಿಯೇ ಮುಂದಿನ ನಾಲ್ಕು ಕಟ್ಟಿಗೆಯ ದೊಡ್ಡ ಕಂಭಗಳನ್ನು ಕಾಣಿಕೆ ನೀಡಿದ್ದಾರೆಂದು ವದಂತಿ. ಹುಬ್ಬಳ್ಳಿಯಲ್ಲಿ ಇಂತಹ ಘಟನೆಗಳು

ಸಹಸ್ರಾರು ನಡೆದಿವೆ, ನಡೆಯುತ್ತಿವೆ. ಕರ್ತೃ ಗದ್ದುಗೆಯ ತೀರ್ಥವನ್ನು ಸೇವಿಸಿ ಎಷ್ಟೋ ರೋಗಿಗಳು ತಾಪತ್ರಯವನ್ನು ಕಳೆದುಕೊಂಡಿದ್ದಾರೆ. ಈ ಪೀಠವನ್ನೇರಿದ ಜಗದ್ಗುರುಗಳನೇಕರು ಕರ್ತೃವಿನ ಸಂಸ್ಮರಣೆಗಾಗಿ ಧರ್ಮಶಾಲಾ, ಶಾಲೆ ಕಾಲೇಜುಗಳನ್ನು, ಆಸ್ಪತ್ರೆಗಳನ್ನು ಸಂಶೋಧನ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ಕರ್ತೃ ಜಗದ್ಗುರುಗಳ ತಪಃಪ್ರಭಾವದ ಬೆಳಕಿನಲ್ಲಿ ಅದೆಷ್ಟೋಜನ ಜಾಗೃತರಾಗಿದ್ದಾರೆ. ನಾಡಿನ ಬಾಳ್ಬೆಳಕಿಗೆ ದಾರಿದೀಪವಾಗಿದ್ದಾರೆ. ಕರ್ತೃ-ಮೂರುಸಾವಿರಮಠದ ಜಗದ್ಗುರುಗಳವರ ಗದ್ದುಗೆಯು ಎಲ್ಲ ಜಾತಿ, ಮತ, ಪಂಥದವರಿಗೆ ಆತ್ಮಶಕ್ತಿ ಇಷ್ಟಾರ್ಥ ಸಿದ್ಧಿಯನ್ನೀಯುವ ಹೊಂಬೆಳಗು. ಮೂಲ ಕರ್ತೃ ಜಗದ್ಗುರುಗಳು ಶೂನ್ಯ ಸಿಂಹಾಸನವನ್ನೇರಿ, ತನುವಿನಲ್ಲಿ ಹೊರೆಯಿಲ್ಲದೆ ಮನದಲ್ಲಿ ಮಾಲಿನ್ಯವಿಲ್ಲದೆ ವ್ಯಾಕುಲವಿಲ್ಲದೆ ಭಾವದಲ್ಲಿ ಬಯಕೆ ಇಲ್ಲದೆ ತಾನೇ ತಾನಾಗಿ, ಸರ್ವರನು ಉದ್ಧರಿಸುವ ಪರಂಜ್ಯೋತಿ ಸ್ವರೂಪರು, ನಿರ್ವಿಕಲ್ಪ ಸಮಾಧಿಯಲ್ಲಿದ್ದು ಅಂತಶ್ಚಕ್ಷುವಿನಿಂದ ನಿರೀಕ್ಷಿಸಿದ ಬಳಲಿದ ಜೀವಿಗಳಿಗೆ ಶಾಂತಿಯನ್ನೀಡಿ, ಅಂತಃಸ್ಫೂರ್ತಿಯ ಸೆಲೆಯನ್ನು ಪುಟಿಸುತ್ತಿರುವ ಪುಣ್ಯಮೂರ್ತಿ.

ಒಟ್ಟಿನಲ್ಲಿ ಮೂಲ ಕರ್ತೃವಿನ ದೇವಾಲಯದ ಗರ್ಭಗುಡಿ ದಿವ್ಯಶಕ್ತಿಯನ್ನು ಕೊಡುವ ಅದ್ಭುತ ಶಕ್ತಿಯ ಕೇಂದ್ರವೆಂದರೆ ತಪ್ಪಾಗಲಿಕ್ಕಿಲ್ಲ. ಸರ್ವ ಧರ್ಮದವರನ್ನು ಉದ್ಧರಿಸುವ ಪುಣ್ಯಕ್ಷೇತ್ರ ಜೀವನ್ಮೃತರಿಗೆ ಸಂಜೀವಿನಿ.

"ಮಾನವಕೋಟಿಗೆ ನೀನೆ ಕಲ್ಪತರು ನೋಡಾ!
ಭವರೋಗದಿಂದ ಬಳಲುವ ಜನತೆಗೆ
ಭವರೋಗ ವೈದ್ಯನಾಗಿರುವೆ ನೋಡಾ!
ನಿತ್ಯವೂ ನಿನ್ನ ಭಕ್ತಿಯಿಂ ಪೂಜಿಸಿ,
ಚಿತ್ಪ್ರಕಾಶವೆಂಬ ಭಸ್ಮವ ಧರಿಸಿ
ಚಿತ್ ಕರಣಂಗಳೆಂಬ ಸುಮನಂಗಳ
ಸುರಿಸು ತಿಹರಯ್ಯಾ!
ಸುಜ್ಞಾನವೆಂಬ ದೀಪವ ಬೆಳಗಿ
ಓಂಕಾರವೆಂಬ ಘಂಟೆಯ ಬಾರಿಸಿ
ಜ್ಞಾನ ತೀರ್ಥವ ಬಯಸುತಿಹರಯ್ಯಾ"
ಭೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

—"ಚಿತ್ಸುಮನ" ಗ್ರಂಥದಿಂದ

## ಚಿತ್ತರಗಿ ವಿಜಯ ಮಹಾಂತ ಶಿವಯೋಗಿಗಳ ಆಧ್ಯಾತ್ಮಿಕ ಜೀವನ

ಕತ್ತಲೆ ತುಂಬಿದಾಗಲ್ಲವೇ ಸೂರ್ಯೋದಯದ ತವಕ? ನಾಡಿನ ಸಂಸ್ಕೃತಿ, ಧರ್ಮ,

ಸಾಹಿತ್ಯ, ಜನಜೀವನ, ಲೋಕನೀತಿಗಳಿಗೆ ಗಂಡಾಂತರಗಳು ಒದಗಿದಾಗ – ಮಹಾ ಪ್ರಾಜ್ಞರೂ, ತತ್ತ್ವವೇತ್ತಿಗಳೂ, ಮಹರ್ಷಿಗಳೂ ಅವತರಿಸುವದು ದೈವಸಂಕಲ್ಪದ ವ್ಯವಸ್ಥೆಯಾಗಿದೆ. ೧೯ ನೇ ಶತಮಾನದ ಉತ್ತರಾರ್ಧದಲ್ಲಿ ಲಿಂ. ಪೂಜ್ಯ ಶ್ರೀವಿಜಯ ಮಹಾಂತ ಶಿವಯೋಗಿಗಳವರ ಅವತಾರ ಹಾಗೂ ೨೦ನೇ ಶತಮಾನದ ಸ್ವಾತಂತ್ರ್ಯ ಪೂರ್ವದಲ್ಲಿ ಅವರ ಅಸ್ತಿತ್ವವು; ಕನ್ನಡನಾಡಿನ ಇತಿಹಾಸದಲ್ಲಿ ಅರ್ಥಪೂರ್ಣ ಪುಟಗಳನ್ನು ರಚಿಸಿದೆ. ಅಂದಿನ ಬ್ರಿಟಿಶ ಆಳರಸರ ದಬ್ಬಾಳಿಕೆಯಲ್ಲಿ ರುಗ್ಣವಾದ ಶರಣ ಧರ್ಮವು; ಗ್ಲಾನಿಯು ತುತ್ತಿನಲ್ಲಿ ಸಂದಾಯ–ಅದರ ರಕ್ಷಣೆಗೆ ಮಹಾನುಭಾವರೂ, ಉಗ್ರತಪಸ್ವಿಗಳೂ, ಶಿವಪೂಜಾನಿಷ್ಠರೂ ಆದ, ಲಿಂ. ವಿಜಯ ಮಹಾಂತ ಶಿವಯೋಗಿಗಳವರು ತಮ್ಮ ತಪಃ ಪ್ರಭಾವದಿಂದ ಧರ್ಮದ, ನಾಡಿನ ರಕ್ಷಣೆಗೈದುದು ಸಕಾಲಿಕವೇ ಸರಿ.

ವ್ಯಕ್ತಿಯಲ್ಲಿ ಶಕ್ತಿ ತುಂಬಬೇಕಾದರೆ, ಆಧ್ಯಾತ್ಮಿಕ ಅನುಸಂಧಾನ ಆವಶ್ಯಕ. ಧ್ಯಾನವು ಆಧ್ಯಾತ್ಮಿಕ ಪ್ರವೃತ್ತಿ, ಪ್ರಗತಿ, ಪ್ರತಿಫಲಗಳಿಗೆ ಪ್ರಬಲವಾದ ಸಾಧನ. ಧ್ಯಾನವು ಮಾನವನಿಗೆ ಅನಿತ್ಯದ ಅರಿವು ತೋರಿ, ನಿತ್ಯದ ದಾರಿಗೆ ನಡೆಸುತ್ತದೆ; ಅಂತರಾತ್ಮನ ಅರುಹು ವೇದ್ಯವಾಗುತ್ತದೆ. ಧ್ಯಾನದಿಂದಲೇ ಸರ್ವೇಂದ್ರಿಯಗಳ ಬಾಹ್ಯ ಕ್ಷೋಭೆ ಶಾಂತವಾಗಿ, ಅಂತರಾತ್ಮನ ನಿರ್ವಿಷಯುಕ ನಿರ್ವಿಕಲ್ಪ ಸಮಾಧಿ–ಬೋಧೆ ಸಾಧ್ಯವಾಗುತ್ತದೆ. ಭವಸಾಗರವನ್ನು ಉತ್ತರಿಸಲು, ಮಹಾತ್ಮರು ಧ್ಯಾನವೆಂಬ ನೌಕೆಯನ್ನು ಸಂಯೋಜಿಸಿದ್ದಾರೆ. ಹೃದಯ ಪಕ್ವತೆಗೆ, ನಿತ್ಯಾನಂದಕ್ಕೆ, ನಿಜವಾದ ಶಾಂತಿಗೆ ಧ್ಯಾನವೇ ಹೆದ್ದಾರಿ. ಇಂಥ ಧ್ಯಾನಯೋಗವನ್ನೇ ಬಾಳಿನ ಕೈದೀವಿಗೆಯಾಗಿ ಹೊಂದಿದ, ಜೀವನವನ್ನೇ ಧ್ಯಾನ ಯೋಗದ ಸಹಜ ಅನುಸಂಧಾನವಾಗಿಸಿಕೊಂಡ, ಲಿಂ. ವಿಜಯ ಮಹಾಂತ ಶಿವಯೋಗಿಗಳವರ ತಪೋಜೀವನ ಅತ್ಯುಜ್ವಲವೂ, ಪ್ರಕಾಶಮಯವೂ ಆಗಿರುತ್ತದೆ.

ಲಿಂ. ತಪಸ್ವಿ ವಿಜಯ ಮಹಾಂತ ಶಿವಯೋಗಿಗಳವರ ಬಾಳಿಗೂ– ಧ್ಯಾನಕ್ಕೂ ಏಕನಾಡಿ, ಏಕ ಉಸಿರು, ಏಕ ಸೂತ್ರ. ಸಂಪೂರ್ಣ ಧ್ಯಾನಮಯ ಜೀವನವನ್ನೇ ಆಳವಡಿಸಿಕೊಂಡ ಮಹರ್ಷಿಗಳು ಅವರು. ನಿಂತಾಗ, ಕೂತಾಗ, ನಡೆದಾಗ, ನುಡಿದಾಗ, ಪವಡಿಸಿದಾಗ ಅವರ ಉಸಿರಿನ ಒಡನಾಡಿಯಾಗಿ, ಮಹಾಮಂತ್ರ ತುಂಬಿತ್ತು. ಅನೇಕ ಸಲ ಅವರು–ಮಠದ ಪೀಠದ ಮೇಲಾಗಲೀ, ಇಲಕಲ್ಲ ಸಂಗಮದ ತಪೋವನದಲ್ಲಿಯಾಗಲೀ ಪ್ರಶಾಂತವಾಗಿ ಕುಳಿತು, ಧ್ಯಾನಮಗ್ನರಾಗಿರುತ್ತಿದ್ದರು. ಕೆಲ ಕಾಲ ಬಲಗೈಯನ್ನು ಬಲ ಕಪೋಲದ ಮೇಲಿರಿಸಿ, ಮತ್ತೆ ಕೆಲಕಾಲ ಎಡಗೈಯನ್ನು ಎಡ ಕಪೋಲದ ಮೇಲಿರಿಸಿ, ಧ್ಯಾನಮಗ್ನರಾಗಿ ಕೂಡುತ್ತಿದ್ದರು. ಅನೇಕ ಭಕ್ತರು ಬಂದು, ಸಾಷ್ಟಾಂಗ ಹಾಕಿ, ತಾಸು ಗಟ್ಟಲೆ ಎದುರಿಗೆ ಕುಳಿತರೂ ಅವರಿಗೆ ಬಾಹ್ಯಪ್ರಜ್ಞೆ ಇರುತ್ತಿರಲಿಲ್ಲ. ಭಕ್ತರಿಗೂ ಇದು ಗೊತ್ತು! ಶಿವಯೋಗಿಗಳವರ ಧ್ಯಾನಯೋಗ ಜೀವನ ಅವರಿಗೆ ನಿತ್ಯದ ಬುತ್ತಿ; ಅತ್ಯಂತ ಭಯ–ಭಕ್ತಿಯಿಂದ ಕುಳಿತುಕೊಳ್ಳುತ್ತಿದ್ದರು. ಕೆಲಕಾಲದ ನಂತರ, ಶಿವಯೋಗಿಗಳವರು ಕಣ್ತೆರೆದು–"ಯಾವಾಗ ಬಂದ್ರಿಪಾ?" ಎಂದು ಅವರನ್ನು ನೋಡಿ ಕೇಳುತ್ತಿದ್ದರು. ಹೀಗೆ

ಅವರು ಧ್ಯಾನದಿಂದ ಕಣ್ತೆರೆದು, ಶಿವಲಿಂಗಾಕ್ಷಿಗಳಿಂದ ಅವರ ಮೇಲೆ ದೃಷ್ಟಿ ಬೀರಿದಾಗ, ಸಹಜವಾಗಿಯೇ ಆ ಭಕ್ತರ ಜೀವನವೇ ಉದ್ಧಾರವಾಗುತ್ತಿತ್ತು. ಹೀಗಾಗಿ, ಲಿಂ. ವಿಜಯ ಮಹಾಂತ ಶಿವಯೋಗಿಗಳವರು-ಪಂಚಪರುಷಗಳನ್ನು ಹೊಂದಿದ, ಸಹಜ ಸಿದ್ಧರಾಗಿದ್ದರು. ಅವರ ನುಡಿ ಸತ್ಯದ ಕಿಡಿಯಾಗಿತ್ತು; ಆಡಿದ ಮಾತುಗಳು ಎಂದಿಗೂ ಹುಸಿಯಾಗುತ್ತಿರ ಲಿಲ್ಲ; ಸಹಜವಾದ ಮಾತುಗಳೂ ಶಾಪಾನುಗ್ರಹಗಳಾಗುತ್ತಿದ್ದವು; ಅವರವರ ಭಾವದಂತೆ ಅವರಿಗೆ ಪರಿಣಾಮ ದೊರೆಯುತ್ತಿತ್ತು. ಅಂತೆಯೇ, ಭಕ್ತರೆಲ್ಲ ಇವರನ್ನು ಶಾಪಾನುಗ್ರಹ ಸಮರ್ಥರೆಂದು ಹಾಡಿ-ಹಾರೈಸುತ್ತಿದ್ದರು.

ಲಿಂ. ವಿಜಯ ಮಹಾಂತ ಶಿವಯೋಗಿಗಳವರ ಆಧ್ಯಾತ್ಮಿಕ ಬದುಕಿನ ಮುಖಗಳು ಹಲವಂದ. ಸಹಜ ಧ್ಯಾನ, ಉಗ್ರ ಶಿವಾರ್ಚನೆ, ದುಡ್ಡಿನ ನಿರಾಶೆ, ಕೀರ್ತಿಯ ತಾತ್ಸಾರ, ಬಡವರ ಮೇಲೆ ದಯೆ, ಜಂಗಮ ಪ್ರೀತಿ, ಹೆಣ್ಣುಮಕ್ಕಳ ಬಗ್ಗೆ ತಾಯ್ಗರುಳು ಇವೆಲ್ಲ ಮಿಂಚಿನ ಹೊಳೆಗಳು ಅವರ ಬಾಳನ್ನು ತುಂಬಿದ್ದವು. ಮಾತ್ರವಲ್ಲ; ಸದಾವಕಾಲವೂ ಅವರೊಂದಿಗೆ ಬಸವಣ್ಣನವರ ವಚನದ ಕಟ್ಟು ಹೆಗಲ ಮೇಲೆ ಇರುತ್ತಿತ್ತು. ಎಂದೂ ಅವರು "ಬಸವಣ್ಣನವರ ವಚನ" ಅನ್ನುತ್ತಿರಲಿಲ್ಲ; "ಅಪ್ಪನ ವಚನ"ವೆಂದು ಹೇಳುತ್ತಿದ್ದರು. ಅವರ ವಚನಗಳ ನಿತ್ಯಾನುಸಂಧಾನದಿಂದ ಇವರ ಬಾಳಿನಲ್ಲಿ, ಬಸವನ ಬಾಳಿನ ಅಮರ ಸಿದ್ಧಾಂತ ಸಾಕಾರವಾಗಿ ಅಭಿವ್ಯಕ್ತವಾಗಿತ್ತು. "ದಯವೇ ಧರ್ಮದ ಮೂಲ", "ಕಾಯಕವೇ ಕೈಲಾಸ", "ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ", "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ", "ಸಕಲ ಜೀವರಾಶಿಗೆ ಲೇಸನೆ ಬಯಸುವವನೇ ಕುಲಜನು" ಮೊದಲಾದ "ಅಪ್ಪನವರ" ಅಮರವಾಣಿಗಳು ಲಿಂ. ವಿಜಯ ಮಹಾಂತ ಶಿವ ಯೋಗಿಗಳ ಜೀವನದಲ್ಲಿ ಹಾಸುಹೊಕ್ಕಾಗಿದ್ದವು. ಶಿವಶರಣರ ದರ್ಶನ ವಾಣಿಯನ್ನು ಅರಿತು, ಆಚರಿಸಿ, ಬಾಳನ್ನು ತುಂಬಿಸಿಕೊಂಡ ಕೆಲವೇ ಮಹಾತ್ಮರಲ್ಲಿ ಲಿಂ. ವಿಜಯ ಮಹಾಂತ ಶಿವಯೋಗಿಗಳು ಒಬ್ಬರು.

ಲಿಂ. ವಿಜಯ ಮಹಾಂತ ಶಿವಯೋಗಿಗಳವರ ಅಪಾರ ಕರುಣೆಗೆ ಕಡೆ ಇಲ್ಲ; "ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ" ಎಂಬ ಮಾತಿಗೆ, ಅವರ ಜೀವನ ನಿದರ್ಶನವಾಗಿತ್ತು. ಗರ್ಭಿಣೀ ಸ್ತ್ರೀಯರು-ಮಠ ಕಟ್ಟುವ ಕೆಲಸಕ್ಕೆ ಬಂದರೆ, ಅವರಿಗೆ ಅಂದಿನ ಕಾಯಕ (ಪಗಾರ) ಎರಡರಷ್ಟು ಕೊಟ್ಟು, ಕೆಲಸಕ್ಕೆ ಹಚ್ಚದೆ ಹೊರಳಿ ಕಳಿಸುತ್ತಿದ್ದರು. ಬಡ ಜಂಗಮರು, ಚಿಂತಾಜನಕ ಸ್ಥಿತಿಯಲ್ಲಿ ಇದ್ದವರು, ದುರ್ಬಲರು, ರೋಗಿಗಳು ಅವರ ಬಳಿ ಬಂದರೆ-ಅವರಿಗೆ ನಿವಾರಣೆ ನೀಡುತ್ತಿದ್ದರು. ಅನೇಕ ಸಲ ಬಡ ಜಂಗಮರ ಸಾಲಗಳನ್ನು ಇವರು ತಾವೇ ತೀರಿಸಿದ್ದುಂಟು. ಇವರ ಬಳಿ ಭಿಕ್ಷಾರ್ಥಿಯಾಗಿ ವೇಷಗಾರರು, ಆಟಗಾರರು, ಕಲಾವಿದರು, ಸಂಗೀತಗಾರರು, ಸಾಹಿತಿಗಳು ಯಾರೇ ಬರಲಿ, ಅವರಿಗೆ ಇವರ ಶಿವಸಂಚಿಯು ಸಿದ್ಧವಾಗಿರುತ್ತಿತ್ತು. ಇವರಲ್ಲಿದ್ದಷ್ಟು ದುಡ್ಡು ಅವರಿಗೆ ಸಲ್ಲುತ್ತಿತ್ತು.

ಇವರ ತಪಃಪ್ರಭಾವವು ನಾಡಿನ ಮೂಲೆ ಮೂಲೆಗಳಲ್ಲಿ ಶತಸಿದ್ಧವಾಗಿತ್ತು. ಅಂತೆಯೇ, ಲಿಂಗೈಕ್ಯ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳವರು ಬಾಗಲಕೋಟೆಯ ನಾಲ್ಕನೆಯ ವೀರಶೈವ ಮಹಾ ಸಮ್ಮೇಲನದ ನಿರ್ಣಯದ ಮೇರೆಗೆ–ಶಿವಯೋಗ ಮಂದಿರದ ಸ್ಥಳ ನಿರ್ದೇಶನಕ್ಕಾಗಿ ಇವರ ಬಳಿಯೇ ಪ್ರಾರ್ಥಿಸಿ ಬಂದರು. ಇವರು ಮಲಪ್ರಭೆಯ ತೀರದ ಅರಣ್ಯದಲ್ಲಿ ಗುರುತಿಸಿ, ತೋರಿಸಿದ ಸ್ಥಳದಲ್ಲಿಯೇ 'ಶಿವಯೋಗ ಮಂದಿರ'ವನ್ನು ಹಾನಗಲ್ಲ ಕುಮಾರ ಶಿವಯೋಗಿಗಳು ಸ್ಥಾಪಿಸಿದರು. ವಿಜಯ ಮಹಾಂತ ಶಿವಯೋಗಿಗಳೆಂದರೆ–ಕುಮಾರ ಸ್ವಾಮಿಗಳಿಗೆ ತುಂಬಾ ಭಕ್ತಿ. ಹಾನಗಲ್ಲ ಕುಮಾರ ಸ್ವಾಮಿಗಳೆಂದರೆ–ವಿಜಯ ಮಹಾಂತ ಸ್ವಾಮಿಗಳಿಗೆ ತುಂಬಾ ಮಮತೆ. ಹೀಗಿತ್ತು ಇವರೀರ್ವರ ಅನನ್ಯಭಾವ ಚೇತನ ಸಂಬಂಧ.

"ವಿರಕ್ತಸ್ಯ ತೃಣಂ ಜಗತ್" ಎನ್ನುವ ಮಾತನ್ನು ವಿಜಯ ಮಹಾಂತ ಶಿವಯೋಗಿಗಳು ಸಾರ್ಥಕಗೊಳಿಸಿದ್ದರು. ಇವರ ವೈರಾಗ್ಯ ಕಠೋರವಾದುದು; ಅಪ್ರತಿಮವಾದುದು. ಇವರ ವೈರಾಗ್ಯ ಶಕ್ತಿಯನ್ನು ಮೆಚ್ಚಿಕೊಂಡ ಎಷ್ಟೋ ಜನ ಸ್ವಾಮಿಗಳು, ಯೋಗಿಗಳು, ತ್ಯಾಗಿಗಳು ಅಂಜುತ್ತಿದ್ದರು. ಹೀಗಾಗಿ–ಸಹಜಶಕ್ತಿ, ವಾಕ್‌ಸಿದ್ಧಿ, ಅನುಗ್ರಹ ಸಾಮರ್ಥ್ಯಗಳು ಈ ಶಿವಯೋಗಿಗಳನ್ನು ಆಧರಿಸಿ ಬಂದವು. ಮಕ್ಕಳಿಲ್ಲದ ಅನೇಕರಿಗೆ, ಇವರು ಸಂತಾನ ಲಾಭವನ್ನು ಕರುಣಿಸಿದ್ದಾರೆ.

ಒಂದು ಸಲ, ವಿಜಯ ಮಹಾಂತ ಶಿವಯೋಗಿಗಳ ವರಪ್ರಸಾದದ ತುಪ್ಪದಲ್ಲಿ ಬಾರಿ ಬೀಜ ಬಂದಿತಂತೆ, ಅಂದಿನಿಂದ ಅವರು "ಶಿವನಿಚ್ಛೆ ಇಲ್ಲ"ವೆಂದು ಜೀವನ ಪರ್ಯಂತ ತುಪ್ಪವನ್ನೇ ಬಿಟ್ಟುಬಿಟ್ಟರಂತೆ. ನಿತ್ಯ ತಾವೇ ಸ್ವಯಂಪಾಕ ಮಾಡಿಕೊಂಡು ಲಿಂಗಯ್ಯನಿಗೆ ಎಡೆ ಮಾಡುತ್ತಿದ್ದರು. ಇವರ ಪಾಕವೆಂದರೆ–ಜೋಳದ ಹಿಟ್ಟು, ಬೇಳೆ ಮುಂತಾದವನ್ನು ಕೂಡಿಯೇ ಕುದಿಸಿ ಸೇವಿಸುವದು. ಒಂದು ಸಲ, ಇವರು ೨೨ ದಿನಗಳ ಉಪವಾಸ ವ್ರತವನ್ನು ಮಾಡಿದರು. ಒಟ್ಟಿನಲ್ಲಿ ಕಠೋರತೆ ಇವರ ಜೀವನದ ಉಸಿರಾಗಿತ್ತು.

ಇವರ ತಪಃಪ್ರಭಾವವನ್ನು ಕಣ್ಣಾರೆ ಕಂಡು, ಆ ಬೆಳಕಿನಲ್ಲಿ ನಲಿದವರು ಎಷ್ಟೋ ಜನ ಇದ್ದಾರೆ. ಅವರಲ್ಲಿ ಕಾಯಕ ಯೋಗಿಗಳಾದ ಗುರುಬಸವಾರ್ಯ ಮಠ ಮಾಸ್ತರರು ಅಗ್ರಗಣ್ಯರೆಂದರೆ ತಪ್ಪಾಗಲಿಕ್ಕಿಲ್ಲ. ಅವರಿಗೆ ವಿಜಯ ಮಹಾಂತ ಶಿವಯೋಗಿಗಳೆಂದರೆ ಪಂಚಪ್ರಾಣ; ಇವರ ಉಸಿರೇ ವಿಜಯ ಮಹಾಂತನ ನೆನಹು ತಂದುಕೊಡುತ್ತದೆ. ಇವರ ಅಂತರಂಗದಲ್ಲಿ ನಿರಂತರ ವಿಜಯ ಮಹಾಂತ ಶಿವಯೋಗಿ ಕುಳಿತಿದ್ದಾರೆ. ನಿಂತಲ್ಲಿ, ಕುಳಿತಲ್ಲಿ, ಹೋಗುವಲ್ಲಿ ಸರ್ವದಾ ಇವರಿಗೆ ಶಿವಯೋಗಿಯ ಧ್ಯಾನ ಆ ಶಿವಯೋಗಿಯ ದಿವ್ಯ ವ್ಯಕ್ತಿತ್ವವನ್ನು ಹೇಳುವಾಗ, ಸಹಜವಾಗಿ ಇವರ ಕಣ್ಣುಗಳಿಂದ ಕಂಬನಿಗಳು ಹೊರಸೂಸುತ್ತವೆ; ಗದ್ಗದಿತ ಕಂಠದಿಂದ ಅವರ ಜೀವನವನ್ನು ಕಂಡಂತೆ ಹೇಳುತ್ತಾರೆ. "ಇಂಥ ಶಿವಯೋಗಿಯನ್ನು ಮತ್ತೆ ಕಾಣುವದು ಎಂದು?" ಎನ್ನುತ್ತ ಅತ್ತು ಬಿಡುತ್ತಾರೆ.

ಪೂಜ್ಯ ವಿಜಯ ಮಹಾಂತ ಶಿವಯೋಗಿಗಳು ನಮ್ಮಿಂದ ಪಾರ್ಥಿವ ಶರೀರವನ್ನು ಅಗಲಿ ೬೩ ವರ್ಷಗಳು ಗತಿಸಿದವು. ಅವರ ೬೩ನೆಯ "ಪುಣ್ಯತಿಥಿ" ಇದೇ ತಿಂಗಳು ಹುನಗುಂದದಲ್ಲಿ ಬಹಳ ವೈಭವದಿಂದ ನಡೆದಿದೆ. ಇಂದಿನ ಚಿತ್ತರಗಿ ಪೀಠದ ಅಧಿಪತಿಗಳಾದ ಶ್ರೀ ಮ. ನಿ. ಪ್ರ. ಮಹಾಂತಸ್ವಾಮಿಗಳವರು ಎಲ್ಲರಿಂದಲೂ, ವಿಜಯ ಮಹಾಂತ ಶಿವ ಯೋಗಿಗಳ ಆದರ್ಶವನ್ನು ಆತ್ಮೀಕರಿಸಿಕೊಂಡು ಸಾಗಿದ್ದಾರೆ. ಅವರಂತೆ ಶಿವಪೂಜಾ ನಿಷ್ಠರೂ, ಕಾಯಕ ನಿರತರೂ, ಭಕ್ತವತ್ಸಲರೂ ಆಗಿದ್ದಾರೆ. ಶಿವಯೋಗಿಯ ೬೩ನೆಯ ಪುಣ್ಯತಿಥಿಯ ನಿಮಿತ್ತ, ಹುನಗುಂದದಲ್ಲಿ ಸಾಹಿತ್ಯ ಗೋಷ್ಠಿ, ಶಿವಾನುಭವ ಗೋಷ್ಠಿ, ಧಾರ್ಮಿಕ ಸಮ್ಮೇಲನ, ಮಠಾಧಿಪತಿಗಳ ಸಮ್ಮೇಲನ ಮೊದಲಾದವುಗಳು ಹಾಗೂ ೬೩ ಮಂಟಪ ಪೂಜೆಗಳು ನಡೆಯಲಿವೆ. ಇದಕ್ಕೆಲ್ಲ ಕೇಂದ್ರ ಶಕ್ತಿಯಾಗಿ ನಿಂತು, ಕಾರ್ಯಗೈಯ್ಯುತ್ತಿರುವ ಶ್ರೀ ಮ. ನಿ. ಪ್ರ. ಮಹಾಂತ ಸ್ವಾಮಿಗಳವರ ವ್ಯಕ್ತಿತ್ವ ಮೆಚ್ಚುವಂತಹದು. ವಿಜಯ ಮಹಾಂತ ಶಿವಯೋಗಿಯ ದಿವ್ಯ ಜೀವನದ ಸಂದೇಶ ಸರ್ವರಿಗೂ ಮುಟ್ಟಲಿ, ಎಂದು ಇಟ್ಟುಕೊಂಡ ಇವರ ಅಂತರಂಗದ ಕಳಕಳಿಯನ್ನು ಕಂಡು, ನಮಗೆ ನಿಜವಾಗಿಯೂ ಸಂತೋಷವಾಗಿದೆ. ಇವರಿಗೆ ಕರ್ತೃ ಶ್ರೀ ಜಗದ್ಗುರು ಗುರು ಸಿದ್ಧೇಶ್ವರನು ನಿರಂತರವೂ ಮಹಾ ಶಕ್ತಿಯನ್ನು ನೀಡಲಿ; ಆತನ ಚೈತನ್ಯ ಎಲ್ಲರಲ್ಲಿಯೂ ಜನಜಾಗ್ರತಿಯನ್ನುಂಟು ಮಾಡಲಿ.

## ನವನಾಗರಿಕತೆಯ ನಿರ್ಮಿತಿಯಲ್ಲಿ ನಮ್ಮ "ಕರ್ತವ್ಯ ಪ್ರಜ್ಞೆ"

ಸ್ವಾತಂತ್ರ್ಯೋತ್ತರ ಕಾಲದ ಈ ಮೂರು ದಶಕಗಳಲ್ಲಿ ನಮ್ಮ ರಾಷ್ಟ್ರಕ್ಕೆ ವೈಚಾರಿಕ ಸ್ವಾತಂತ್ರ್ಯದ ಶುಕ್ರದೆಸೆ ಪ್ರಾಪ್ತವಾಗಿದೆ. ಮಾನವನು ಉತ್ಕ್ರಾಂತಿ ಹೊಂದಿ ಪೂರ್ಣ ಮಾನವನಾಗಲು ಆತನ ಸಮಷ್ಟಿ ಚೇತನ (Universal Consciousness) ಜಾಗೃತ ವಾಗಬೇಕಷ್ಟೆ? ಒಂದು ಕಾಲಕ್ಕೆ ವ್ಯಷ್ಟಿ ಪ್ರಜ್ಞೆ, ಕುಲ–ಜಾತಿ–ಕುಟುಂಬ ಪ್ರಜ್ಞೆ, ವರ್ಣ ಪ್ರಜ್ಞೆಗಳು ಭಾರತದ ಸಾವಿರಾರು ವರ್ಷಗಳ ಇತಿಹಾಸವನ್ನು ಪ್ರಕ್ಷುಬ್ಧಗೊಳಿಸಿ ನಮಗೆ ಎಂದಿಗೂ ಮರೆಯದ "ಪರದಾಸ್ಯ"ವನ್ನು ಗಳಿಸಿಕೊಟ್ಟವು. ಹೆರವರ ಮನೆಯ ಊಳಿಗದ ಆಳಾಗಿ ಭಾರತದೇವಿ ತನ್ನ ಸನಾತನ ಸಂಸ್ಕೃತಿಯ ಆರ್ಷವಾಙ್ಮಯೇತಿಹಾಸಕ್ಕೆ ಕುಂದು ತಂದುಕೊಂಡಳು. ಒಂದು ಸಾವಿರ ವರ್ಷಕಾಲ ನಮ್ಮ ಧರ್ಮ–ಸಂಸ್ಕೃತಿ–ಸಾಹಿತ್ಯ-ಶೀಲ ಗಳನ್ನು ಬುಡಮೇಲು ಮಾಡಿದ ಈ ದಾರುಣ ಪತನಕ್ಕೆ ಕಾರಣವೇನು? ಇತಿಹಾಸದ ಉತ್ತರ ಸ್ಪಷ್ಟವಾಗಿದೆ, ನಮ್ಮಲ್ಲಿ ಭೀಮ ಬಲವಿತ್ತು, ಕ್ಷಾತ್ರತೇಜಸ್ಸಿತ್ತು, ವೈರಿಗಳನ್ನು ತುಳಿಯಬಲ್ಲ ಸಿಂಹಘರ್ಜನೆ ಇತ್ತು; ಆದರೆ ಒಂದೇ ಒಂದು ಕಾರಣ; ನಮ್ಮ ರಾಜರಲ್ಲಿ "ಕರ್ತವ್ಯ ಪ್ರಜ್ಞೆ" ಶೂನ್ಯವಾಗಿತ್ತು. ಅವರು ತಮ್ಮ ಸ್ವಹಿತಾಶಕ್ತಿಯ ವೈರಮಾತ್ಸರ್ಯ ಗಳಲ್ಲಿ ರಾಷ್ಟ್ರ ಸಂಪತ್ತನ್ನು ಬಲಿದಾನವಾಗಿ ತೆತ್ತರು. ಪ್ರಭುತ್ವಶಕ್ತಿ ಕರ್ತವ್ಯಶೂನ್ಯವಾದರೆ ರಾಷ್ಟ್ರದ ಇತಿಹಾಸವೇ ಶೂನ್ಯವಾಗುತ್ತದೆ.

## ಅರಿವೇ ಗುರು

ತನ್ನ ತಾನರಿದಡೆ ನುಡಿಯಲ್ಲಿ ಪರತತ್ವ, ತನ್ನ ಅರಿವು ತನ್ನ ಗುರು; ಇದು ಶರಣರ ಅಮರ ವಿಚಾರನಾಂದಿ. ನಮ್ಮತನದ ಪರಿಚಯ ನಮಗಿಲ್ಲದಿದ್ದರೆ ನೆಮ್ಮದಿಯನ್ನು ನಾವು ಪಡೆಯಲಾರೆವು. ಆತ್ಮಾವಲೋಕನದ ಸಕೃದ್ದರ್ಶನದಿಂದ ನಮ್ಮ ಕರ್ತವ್ಯ ಪ್ರಜ್ಞೆ ಜಾಗೃತ ವಾಗುತ್ತದೆ. ತನ್ನನ್ನು ತಾನು ಸರಿಯಾಗಿ ಅರ್ಥಮಾಡಿಕೊಂಡ ವ್ಯಕ್ತಿ ತನ್ನ ಕರ್ತವ್ಯ ಪ್ರಜ್ಞೆ ಯಲ್ಲಿ ಕೊಂಚವೂ ತಪ್ಪಲಾರ. ಪ್ರತಿಯೊಬ್ಬ ವ್ಯಕ್ತಿಗೆ ಈ ಆಂತರಿಕ ಜವಾಬ್ದಾರಿ ಅತಿ ಮುಖ್ಯ. ನಾವು ನೀತಿಶಾಸ್ತ್ರವನ್ನು ಹೇಳಲು ಕಲಿಯಬಾರದು; ಹೇಳಿಕೊಳ್ಳಲು ಕಲಿಯ ಬೇಕು. ಆಗ ನಮ್ಮ ಅಂತರಂಗವನ್ನು ಆವರಿಸಿದ ಕತ್ತಲೆ ಹರಿದು ಹೋಗಿ; ಸತ್ಯಶುದ್ಧ ಕಾಯಕ ಜಾಗೃತವಾಗುತ್ತದೆ. ನಾನು ಯಾರು, ನನಗೂ ಕುಟುಂಬಕ್ಕೂ ದೇಶಕ್ಕೂ, ಮಾನ ವತೆಗೂ ಏನು ಸಂಬಂಧ, ನನ್ನ ಕರ್ತವ್ಯವೇನು ಎಂಬ ಸುವಿಚಾರಗಳು ಪ್ರಾಜ್ಞನಲ್ಲಿ ಜಾಗೃತವಾಗುತ್ತವೆ. ಅಪ್ರಾಜ್ಞ ವ್ಯಕ್ತಿಯಲ್ಲಿ ಸಂಕುಚಿತ ಸ್ವಾರ್ಥ್ಯ, ಕೇವಲ ವೈಯಕ್ತಿಕ ಹಿತಾಸಕ್ತಿ, ವಿಷಯಾಂಧತೆಗಳು ಮನೆಮಾಡುತ್ತವೆ. ಆತ ಕರ್ತವ್ಯ ಹೀನನೂ ಮಾನವ ಪಶುವೂ ಆಗುತ್ತಾನೆ. ಆದ್ದರಿಂದ ನಮ್ಮ ಕರ್ತವ್ಯ ಪ್ರಜ್ಞೆ ಮಾನವನನ್ನು ದೇವಮಾನವ ತೆಯ ಕಡೆಗೆ ಕೊಂಡೊಯ್ದರೆ; ನಮ್ಮ ಕರ್ತವ್ಯ ವಿಮುಖತೆ ಮಾನವನನ್ನು ದಾನವತೆಯ ರಸಾತಳಕ್ಕೆ ಜಗ್ಗುತ್ತದೆ. ಮುಖ್ಯವಾಗಿ ಲಂಚ, ಕುಡಿತ, ಕರ್ತವ್ಯ ಪ್ರಜ್ಞೆಯ ಲೋಪ, ಕಲಬೆರಕೆ, ಕಳ್ಳಸಾಗಾಣಿಕೆ ಈ ಪಂಚ ಮಹಾಪಾತಕಗಳಿಂದ ಸಮಾಜ ಹಾಗೂ ರಾಷ್ಟ್ರಕ್ಕೆ ಆಘಾತವಾಗುತ್ತಲಿದೆ.

## ಪೂರ್ಣ ಮಾನವ

ಬದುಕು ಒಂದು ಕಲೆ, ಹುಟ್ಟು ಸಾವುಗಳ ಮಧ್ಯದಲ್ಲಿ; ಹುಟ್ಟಿಗೆ ಹೇಸದೆ, ಮರಣಕ್ಕೆ ಅಂಜದೆ; ಕಲಾತ್ಮಕವಾಗಿ ಜೀವನ ಸಾಗಿಸುವದು ಒಂದು ಅಪೂರ್ವವಾದ ಜೀವನ ಕಲಾ ತಪಸ್ಸು. ಮರಣವನ್ನು ಗೆದ್ದ ಶರಣನಾರಿಗೂ ಅಂಜುವವನಲ್ಲ, ಅವನಿಗೆ ಮರಣವೇ ಮಹಾನವಮಿ. ಆತ ಉರಿಬರಲಿ, ಸಿರಿಬರಲಿ, ಬೇಕು ಬೇಡೆನ್ನ. ಒಂದು ಕಾಣಿಯ ಗೆಲ್ಲಲ್ಲ ಒಂದು ಕಾಣಿಯ ಸೋಲದ ಸತ್ಯಶುದ್ಧಕಾಯಕ ಅವನದಾಗುತ್ತದೆ. ಕೊಲ್ಲುವವನೆ ಮಾದಿಗ, ಹೊಲಸು ತಿಂಬುವವನೇ ಹೊಲೆಯ ಎಂಬುದು ಆತನ ಭರತವಾಕ್ಯ. ದಯವೇ ಧರ್ಮದ ಮೂಲವಯ್ಯಾ ಎಂಬುದು ಆತನ ಹೃದಯದೇಗುಲದ ಕರ್ಪೂರದಾರತಿಯಾಗುತ್ತದೆ. ಕುಲ ವೇನೋ ಆವಂದಿರ ಕುಲವೇನೋ ಸಕಲ ಜೀವಾತ್ಮರಿಗೆ ಲೇಸನೆ ಬಯಸುವದೇ ಆತನ ಸಮತಾವಾದದ ಪ್ರತಿಜ್ಞೆಯಾಗುತ್ತದೆ. ಆದ್ದರಿಂದ ಈ ಕರ್ತವ್ಯ ಪ್ರಜ್ಞೆಯನ್ನು ಅರಳಿಸಿ ಕೊಂಡ ಶರಣ ಪೂರ್ಣ ಮಾನವ, ಯಾವ ಕಾಲಕ್ಕೂ ನವಮಾನವ. ಯಾವ ಯುಗಕ್ಕೂ ಯುಗಮಾನವ.

## ನವನಾಗರಿಕತೆ ಎತ್ತ ಸಾಗಿದೆ?

ಪತ್ತಿಗೆ ಪತ್ತು ಕುತ್ತಾದರೆ ಮಾನವತೆಗೆ ನೂರು ಕುತ್ತು! ೨೧ನೆಯ ಶತಮಾನ

ದಲ್ಲಂತೂ ಮಾನವತೆ ಮಾರಕಾಸ್ತ್ರಗಳ ಹೊಚ್ಚಿನಲ್ಲಿ ತನ್ನ ಉಳಿಮೆಯು ಸಂಶಯಕ್ಕೆ ತಾನೆ ಸಿಲುಕಿದೆ. ವಿಜ್ಞಾನದ ಶೀಘ್ರ ಗಮನ, ರಾಷ್ಟ್ರ ರಾಷ್ಟ್ರಗಳ ಸಂಪರ್ಕ ಸಾನಿಧ್ಯಗಳಿಂದ ಒಳ್ಳೊಳ್ಳೆಯ ವಿಚಾರಗಳೊಂದಿಗೆ ದುರ್ವಿಚಾರಗಳೂ ದುರಾಚಾರಗಳೂ ಹಣೆ ಇಕ್ಕಿವೆ. ಸಾಮಾಜಿಕ ರೋಗಗಳು ಕಾಲಿಟ್ಟಿವೆ ಕಲಬೆರಕೆ, ಲಂಚ, ಮದ್ಯಪಾನ, ಜೂಜಾಟ, ಇಸ್ಪೀಟು, ಅಶ್ಲೀಲ ಚಿತ್ರಗಳು, ಕಳ್ಳಸಾಗಾಣಿಕೆ, ದಿಢೀರನೆ ಶ್ರೀಮಂತನಾಗುವ ಹವ್ಯಾಸ, ಕೃತಕ ನೋಟುಗಳ ಮುದ್ರಣ, ಭೋಗವಸ್ತುಗಳ ಇಂದ್ರಜಾಲ, ಅದ್ಧೂರಿಯ ವಿಲಾಸ. ಇಲ್ಲದವರ ಮೇಲೆ ದಬ್ಬಾಳಿಕೆ, ಮುಗ್ಧರ ವಂಚನೆ, ನೌಕರಿಗಾಗಿ ಪೈಪೋಟಿ, ಅಧಿಕಾರಕ್ಕಾಗಿ ದುರ್ಮಾರ್ಗ ತಂತ್ರ ಇವೆಲ್ಲ ಇಂದಿನ ನಮ್ಮ ನವನಾಗರಿಕತೆಗೆ ಅಂಟಿಕೊಂಡ ಭಯಂಕರವಾದ ಸುಂಕ ರೋಗಗಳಾಗಿವೆ. ಇವುಗಳ ಜಾಲದಲ್ಲಿ ಬಿದ್ದ ನಮ್ಮ ನವತರುಣರು ವಿವೇಕ ಹೀನರಾಗಿ, ಕರ್ತವ್ಯ ಶೂನ್ಯರಾಗಿ ಭವಿಷ್ಯವನ್ನು ಕುಲಗೆಡಿಸುವ, ನಾಗರಿಕತೆಯನ್ನು ಗಂಡಾಂತರಕ್ಕೆ ತಂದೊಡ್ಡುವ ಸಂಕ್ರಾಂತಿಯಲ್ಲಿದ್ದಾರೆ. ಇಂಥ ಸಮಯದಲ್ಲಿ ಭಾರತದ ಲಕ್ಷಾಂತರ ಮಠಾಧೀಶ್ವರರು, ಧರ್ಮಪ್ರವರ್ತಕರು, ಋಷಿಮುನಿಗಳು, ಶರಣ ಸಾಧಕರು ಮೇಲೆದ್ದು ರಾಷ್ಟ್ರವನ್ನು ರಕ್ಷಿಸಬೇಕೆಂದು ಕಳಕಳಿಯಿಂದ ಕೇಳಿಕೊಳ್ಳುತ್ತೇವೆ.

## ಏಳಿರಿ, ಎದ್ದೇಳಿರಿ!

ಇಂದು ವ್ಯಾಪಾರ ಕ್ಷೇತ್ರದಲ್ಲಿ ಅವ್ಯವಹಾರತನ ಹೆಚ್ಚಾಗಿ ಕಂಡು ಬರುತ್ತದೆ. ದುಡ್ಡಿನ ಆಸೆಗಾಗಿ ಮಾನವತೆಯನ್ನು ಇಂದಿನ ವ್ಯಾಪಾರಿಗಳು ಮಾರಿಕೊಳ್ಳುತ್ತಿದ್ದಾರೆ, ಅನ್ನದೇವತೆಯಾದ ಕಾಳಿನಲ್ಲಿ ಕಲ್ಲು ಕೂಡಿಸುವುದು ಸರಿಯಲ್ಲ ಅಂತೆಯೇ ಮರಣದ ಮಂಚದ ಮೇಲೆ ಮಲಗಿದ ರೋಗಿಗಳನ್ನು ಸಂರಕ್ಷಿಸಲೆಂದು ಸಿದ್ಧಪಡಿಸುವ ಔಷಧಿಯಲ್ಲಿಯೂ ಕಲಬೆರಕೆ ಮಾಡಿ ಲಾಭವನ್ನು ಗಿಟ್ಟಿಸುವಲ್ಲಿ ಅವರಿಗೆ ಕರುಣೆ ಇಲ್ಲ. ಕರ್ತವ್ಯ ಪ್ರಜ್ಞೆ ಅಕ್ಷರಶಃ ಶೂನ್ಯವಾಗಿ: ಲಾಭಬಡಕ ಮನೋವೃತ್ತಿ ದಿಢೀರನೆ ಶ್ರೀಮಂತನಾಗುವ ಲಾಲಸೆ, ದುಡ್ಡಿನ ದಾಹಗಳು ಮನುಷ್ಯನನ್ನು ಮೃಗವನ್ನಾಗಿ ಮಾಡುತ್ತಿವೆ. ಹಾಲಿನಲ್ಲಿ ನೀರು, ಕಾಳಿನಲ್ಲಿ ಕಲ್ಲು, ಆಹಾರ-ಖಾದ್ಯ ತೈಲಗಳಲ್ಲಿ ಅಯೋಗ್ಯ ವಸ್ತುಗಳ ಮಿಶ್ರಣ ಸದಾ ನಡೆದಿದೆ. ಶರಣರು ಸಾರಿದ ಸತ್ಯ ಶುದ್ಧ ಕಾಯಕವಲ್ಲಿ? ಈ ಅಸತ್ಯದ ತಾಂಡವವೆಲ್ಲಿ? ಇದು ನಾಗರೀಕತೆಯ ಸೋಗಿನಲ್ಲಿ ತುಂಬಿಕೊಂಡ ಅನಾಗರಿಕತೆ, ಪ್ರಗತಿಯ ಹೆಸರಿನಲ್ಲಿ ಸಾಗಿದ ಅಧಃಪ್ರವೃತ್ತಿ. ಈ ಘೋರ ದುರಂತಗಳನ್ನು ಎದುರಿಸಬಲ್ಲವರಾರು? ನಮ್ಮ ಯುವಶಕ್ತಿಯೇ ಮತ್ತೆ ಮರಳಿ ಜಾಗೃತವಾಗಬೇಕು. ಅವರಲ್ಲಿಯ ನವಶಕ್ತಿ ಆಸ್ಫೋಟಿಸಬೇಕು. ಪೀಠಾಧೀಶ್ವರರು ಎದ್ದೇಳಬೇಕು. ಧರ್ಮ ಪ್ರವರ್ತಕರು ತಮ್ಮ ಕರ್ತವ್ಯವನ್ನು ಅರಿತು ಲೋಕವನ್ನು ಎಚ್ಚರಿಸಬೇಕು. ಇದು ಕ್ರಾಂತಿಗೆ ಫಲವತ್ತಾದ ಭೂಮಿಕೆ. ಇದು ರಕ್ತ ಕ್ರಾಂತಿಯಲ್ಲ, ವಿಚಾರಕ್ರಾಂತಿ, ಆಚಾರಕ್ರಾಂತಿ, ಶಾಂತಿಗಾಗಿ ಕ್ರಾಂತಿ. ಇದೇ ನಿಜವಾದ ಉತ್ಕ್ರಾಂತಿ. ಆದ್ದರಿಂದ, ಏಳಿರಿ, ಎದ್ದೇಳಿರಿ ("Awake, arise and

stop not till the goal is reached") ಎಂದು ಸ್ವಾಮಿ ವಿವೇಕಾನಂದರು ಎಂದೋ ಹೇಳಿದ್ದಾರೆ.

ಲಂಚಾವತಾರ ಆಧುನಿಕ ದಶಾವತಾರಗಳಲ್ಲೊಂದು ೨೦ನೆಯ ಶತಮಾನದ ನವ ನಾಗರಿಕತೆಯ ಆಶ್ರಯದಲ್ಲಿ ಬೃಹದಾಕಾರವಾಗಿ ಬೆಳೆದು ಬಂದ ವಿಷಬಳ್ಳಿ ಇದಾಗಿದೆ. ಸ್ವಾವಲಂಬಿಯಾಗಿ ತನ್ನ ವಂಶಾನುಗತವಾದ ಉದ್ಯೋಗವನ್ನೇ ಮುಂದುವರಿಸಿಕೊಂಡು ನೆಮ್ಮದಿಯಿಂದ ಸಾಗುವ ಕಾಲವೊಂದಿತ್ತು. ಆದರೆ ಇಂದಿನ ಔದ್ಯೋಗೀಕರಣ, ಶಿಕ್ಷಣದಲ್ಲಿ ಧೃತ ಪ್ರಗತಿ, ರಾಷ್ಟ್ರೀಯ ಯೋಜನೆಗಳ ವಿಸ್ತೀರ್ಣದಲ್ಲಿ ವಿಪುಲ ಉದ್ಯೋಗಾವಕಾಶಗಳು ನಿರ್ಮಾಣವಾದವು. ಆದರೆ ಅನೇಕರು ಈ ಉದ್ಯೋಗಗಳನ್ನೇ ದುಡ್ಡು ಮಾಡುವ ವೈಯಕ್ತಿಕ ಟಂಕಶಾಲೆಗಳನ್ನಾಗಿ ಮಾಡಿಕೊಂಡರು. ಹೆಜ್ಜೆ ಹೆಜ್ಜೆಗೂ ಲಂಚದೇವತೆ ಗೆಜ್ಜೆಯ ಕಾಲೂರಿ ಬಂದಳು. ಲಂಚ ತಿನ್ನುವದರಿಂದ ರಾಷ್ಟ್ರಕ್ಕೆ ಎರಡು ಮುಖವಾಗಿ ದ್ರೋಹ ಬಗೆದಂತಾಗುತ್ತದೆ. ಮೊದಲನೆಯದಾಗಿ ಅಧಿಕಾರದ ದುರುಪಯೋಗ ಮಾಡಿಕೊಂಡು ರಾಷ್ಟ್ರೀಯ ಯೋಜನೆಗಳನ್ನು ಬುಡಮೇಲು ಮಾಡುವ ಕೃತ್ಯ, ಎರಡನೆಯದಾಗಿ ಯೋಗ್ಯ ವ್ಯಕ್ತಿಗಳನ್ನು ಕಂಡು ಹಿಡಿಯದಿರುವದು. ಇದು ರಾಷ್ಟ್ರೀಯ ಭವಿಷ್ಯವನ್ನೇ ಮಣ್ಣುಪಾಲು ಮಾಡುವ ಹೀನಕೃತ್ಯ. ಇದರಿಂದ ಅರ್ಹತೆಯುಳ್ಳವರು, ಪ್ರಾಮಾಣಿಕ ಸೇವಾ ಶಕ್ತಿಯುಳ್ಳವರು, ಸಮರ್ಥರು, ಕಾಯಕಯೋಗಿಗಳು ರಾಷ್ಟ್ರ ನಿರ್ಮಾಣದ ಧ್ಯೇಯೋದ್ದೇಶದಿಂದ ವಂಚಿತರಾಗಿ ಕೊಳೆತು ಹೋಗಬೇಕಾಗುತ್ತದೆ. ಇದು ಲಂಚದಿಂದಾಗುವ ಬಹಿರಂಗದ ಕೊಲೆ, ಇನ್ನು ಲಂಚಗುಳಿಯಾದವನು ಎಂದಿಗೂ ದೇವರನ್ನು, ನ್ಯಾಯವನ್ನು, ಸತ್ಯವನ್ನು ನಂಬಲಾರ, ಸಾಮಾಜಿಕ ಶೀಲದ ಕೊಲೆ ಅಲ್ಲಿರುತ್ತದೆ. ಅವನಿಗೆ ಯಾವ ಧರ್ಮದ ಮಹಾತ್ಮರ ಆದರ್ಶಗಳು ರುಚಿಸವು. ಹೀಗಾಗಿ ಅವನ ಅಂತರಂಗದ ಪ್ರವೃತ್ತಿಯಲ್ಲಿ ಸತ್ಯ, ನ್ಯಾಯ, ಶೀಲ, ಕರುಣೆ, ಪ್ರೇಮಗಳಿಗೆ ಗುಲಗಂಜಿಯಷ್ಟೂ ಅವಕಾಶವಿಲ್ಲ. ಇನ್ನು ದುಡಿಯದೆ ದುಃಖಪಡದೆ ಹೇರಳವಾದ ದುಡ್ಡಿನ ಸಂಗ್ರಹವಾಗುವದರಿಂದ ವಾಮ ಮಾರ್ಗಗಳಿಗೆ ಆತ ಒಲಿಯುತ್ತಾನೆ. ಅನ್ಯಾಯದಿಂದ ಬಂದ ದುಡ್ಡು ಅನ್ಯಾಯಕ್ಕೆ ಸಲ್ಲುತ್ತದೆ. ಹಣದುಬ್ಬರದ ಮಬ್ಬಿನಲ್ಲಿ ಹೀನ ವಿಚಾರದ ಕಡೆಗೆ ಮನಸ್ಸು ಹೋಗಿ ಹಾಳಾಗುತ್ತಾನೆ. ಸಂಸ್ಕೃತಿಯ ಅಧಃಪತನ ಶೀಘ್ರವಾಗಿ ಸಾಗುತ್ತದೆ. ಆದ್ದರಿಂದ ಲಂಚವು ದೇಶಕ್ಕೂ ಘಾತುಕ, ವ್ಯಕ್ತಿಗೂ ಘಾತುಕ, ಬಹಿರಂಗದ ಪ್ರಗತಿಗೂ ಮಾರಕ, ಅಂತರಂಗದ ಪ್ರಗತಿಗೂ ಮಾರಕ, ಇದೊಂದು ಹಾಲಾಹಲವಿಷ. ಲಂಚದಿಂದ ಮುಕ್ತವಾದಲ್ಲದೆ ಯಾವ ರಾಷ್ಟ್ರವೂ ಮುನ್ನಡೆ ಸಾಧಿಸಲಾರದು ಯಾವ ವ್ಯಕ್ತಿಗೂ ಸಜ್ಜನನಾಗಿ ಬಾಳಲಾರನು. ಇಂಥ ಭ್ರಷ್ಟಾಚಾರಿಯಾದ ದುರಾತ್ಮನು ತಾನೂ ಕೆಡುತ್ತಾನೆ, ತನ್ನೊಂದಿಗೆ ತನ್ನ ಪರಿಸರವನ್ನೂ ಕೆಡಿಸುತ್ತಾನೆ. ನಿಜವಾಗಿಯೂ ಇದೊಂದು ಪ್ರಗತಿಯ ಪ್ರವೃತ್ತಿಗೆ ಅಂಟಿಕೊಂಡ ಕುಷ್ಟರೋಗ. ಇತ್ತಿತ್ತಲಾಗಿ ಇದಕ್ಕಾಗಿ ಸರಕಾರ ಭೀಕರ ದಂಡ ಶಿಕ್ಷೆಗಳನ್ನು ಅಂಜದೆ ವಿಧಿಸುತ್ತಿರುವದು ಹರ್ಷದಾಯಕವನ್ನುಂಟು

ಮಾಡಿದೆ. ಆದರೆ ಅಷ್ಟರಿಂದಲೂ ಇದು ಪೂರ್ಣ ಶಮನವಾಗದು. ಇದಕ್ಕೆ ವಿವಿಧ ಧರ್ಮಗಳ ನೇತಾರರು, ಸಾಹಿತಿಗಳು, ಕವಿಗಳು ಸಮಾಜೋದ್ಧಾರಕರು, ವಿಚಾರವಾದಿಗಳು ಕೈಕೈ ಹಿಡಿದು ಹೋರಾಟಕ್ಕೆ ಸಿದ್ಧವಾಗಬೇಕು. ಲಂಚ ಪಡೆಯುವವನಿಗಿಂತ ಲಂಚ ಕೊಡುವವರು ವಿವೇಕಶಾಲಿಗಳಾಗಬೇಕು. ಆಗ ಸಮಾಜದಲ್ಲಿ ಶಾಂತಿ, ಸಂಯಮ, ಸಮತೋಲ ಉಂಟಾಗುತ್ತದೆ. ಇಲ್ಲವಾದರೆ ಬೇರನ್ನೇ ಕಡಿದು ಕೊಡಲಿಯ ಕಾವು ಮೂಡಿದಂತಾಗುತ್ತದೆ.

## ಸತ್ಯ ಶುದ್ಧ ಕಾಯಕ

ಋಷಿಗಳು ಸೋಮರಸಪಾನ ಮಾಡುತ್ತಿದ್ದರೆಂದು, ಮದ್ಯಪಾನ ಮಾಡುವ ಜನ ತಮ್ಮನ್ನು ಶ್ಲಾಘಿಸಿಕೊಳ್ಳಬಹುದು. ಆದರೆ ಸೋಮರಸ ಪೇಯಋಷಿಗಳಾದ ಆರ್ಷಮುನಿಗಳು ಯೋಗಸಿದ್ಧಾಂತದ ಶಿಖರದಲ್ಲಿ ವಿಹರಿಸಿದಂತೆ ಇವರೇನು ಸಾಧಿಸಿದ್ದಾರೆ? ಭೋಗಕ್ಕೆ ನೆಪವುಂಟು, ತ್ಯಾಗಕ್ಕೆ ನೆಪವಿಲ್ಲ. ಇಂದು ಮದ್ಯಪಾನ ವ್ಯಸನಿಗಳು ಇಮ್ಮಡಿ ಮುಮ್ಮಡಿಯಾಗಿ ಬೆಳೆಯುತ್ತಿದ್ದಾರೆ. ಶಿಕ್ಷಣ ರಂಗದಲ್ಲಿಯೂ ಈ ವ್ಯಸನ ಹಬ್ಬಿ, ವಿದ್ಯಾರ್ಥಿಗಳು ತಮ್ಮ ಜೀವನವನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ. ಮದ್ಯಪಾನ ವ್ಯಸನಿಗೆ ತನ್ನ ಆತ್ಮಗೌರವ ಸಮಾಜ ಗೌರವ ಸಂಪೂರ್ಣ ನಾಶವಾಗುತ್ತದೆ. ಸಮಾಜವು ಮದ್ಯಪಾನಿಗಳನ್ನು, ಜೂಜಾಟಗಾರರನ್ನು ಇಸ್ಪೀಟ ಆಡುವವರನ್ನು ಅತ್ಯಂತ ಕೀಳಾಗಿ ಕಾಣಬೇಕು. ಇಲ್ಲವಾದರೆ ಅವರ ಹವ್ಯಾಸಗಳೆ ತರುಣರ ದೃಷ್ಟಿಗೆ ಆದರ್ಶಗಳಾಗಿ ಕಂಡು ನವಜನಾಂಗ ಬಲಿಬೀಳಬಹುದಾಗಿದೆ. ಇದರೊಂದಿಗೆ ತಂಬಾಕಿನ ಸೇವನೆ, ಧೂಮ್ರಪಾನ ಇವೆಲ್ಲ ವಾಮಮಾರ್ಗಗಳೇ ಸರಿ. ಆದರೆ ಅವೆಲ್ಲ ಈಗ ಫ್ಯಾಶನ್ನಿನ ಸೋಗಿನಲ್ಲಿ ಆರಾಧ್ಯ ವಸ್ತುಗಳಾಗುತ್ತಿವೆ. ಹಾಗಿದ್ದರೆ ಯಾವುದು ದುಶ್ಚಟ? ಯಾವುದು ಅನಪೇಯ? ಯಾವುದು ಅಭಕ್ಷ್ಯ? ಎಂದು ಪ್ರಶ್ನೆ ಕೇಳಿಬರುತ್ತದೆ. ಇದಕ್ಕೆ ಶರಣ ಸಾಹಿತ್ಯದಲ್ಲಿ ಸರಳ ಉತ್ತರ ಉಂಟು. ಸತ್ಯಶುದ್ಧ ಕಾಯಕದಿಂದ ಬಂದುದೇ ಪ್ರಸಾದ, ಶಿವನಿಗೆ ಶಿವಾರ್ಪಿತವಾಗಬಲ್ಲುದೇ ಪ್ರಸಾದ, ಆದರೆ ಮದ್ಯಪಾನ, ಧೂಮ್ರಪಾನ, ತಂಬಾಕು ಸೇವನೆ, ಅಭಕ್ಷ್ಯಗಳು ಸತ್ಯಶುದ್ಧ ಕಾಯಕದಿಂದ ಬರುವದೂ ಸಾಧ್ಯವಿಲ್ಲ, ಅವು ಶಿವನಿಗೆ ಸಲ್ಲುವದಂತೂ ದೂರವೇ ಉಳಿಯಿತು. ಯಾವುದು ಪ್ರಸಾದವಲ್ಲವೋ ಅದು ವಿಷ. ಚಟಗಳು ಪಂಚೇಂದ್ರಿಯಗಳಿಗೆ ಭೋಗ ವಸ್ತುವಾಗಬಲ್ಲವೇ ಹೊರತು ಮಹಾಲಿಂಗಕ್ಕೆ ಪ್ರಸಾದವಾಗಿ ಅರ್ಪಿತವಾಗಲಾರವು. ಆದ್ದರಿಂದಲೇ ಅವು ತ್ಯಾಜ್ಯ. ಅಹಿಂಸೆಯಿಂದ, ನಿರಪೇಕ್ಷಭಾವನೆಯಿಂದ, ಕರ್ತವ್ಯಪ್ರಜ್ಞೆಯಿಂದ, ಪ್ರೇಮದಿಂದ ಸತ್ಯಶುದ್ಧ ಕಾಯಕವು ಸಿದ್ಧವಾಗುತ್ತದೆ. ಪ್ರಾಣಿಗಳ ಹಿಂಸೆಯಿಂದ; ಸ್ವಾರ್ಥ ಭಾವದಿಂದ, ಕರ್ತವ್ಯ ಶೂನ್ಯತೆಯಿಂದ, ವೈರದಿಂದ ಕಾಯಕವು ಸಿದ್ಧವಾಗುವದಿಲ್ಲ. ಆದ್ದರಿಂದ ವೀರಶೈವರಲ್ಲಿ ಕಾಯಕ ಪ್ರಜ್ಞೆ, ಶಿವಪ್ರಜ್ಞೆಯಾಗಿ ಕಂಗೊಳಿಸುತ್ತದೆ. ಆದ್ದರಿಂದ ಶರಣರು ಕಾಯಕವೇ ಕೈಲಾಸವೆಂದು ಸಾರಿದರು.

ಶರಣರ ದೃಷ್ಟಿಯಲ್ಲಿ ಕಾಯಕ ಕೆಲಸವಲ್ಲ; ಅದೊಂದು ತಪಸ್ಸು. ಶಿವನೊಲಿಮೆಯ ಸಾಹಸ, ಆದ್ದರಿಂದ ಇಂಥ ಕಾಯಕ ಪ್ರಜ್ಞೆಯನ್ನು ಅರಳಿಸಿಕೊಳ್ಳಬೇಕಾದ ವ್ಯಕ್ತಿ ಮೊಟ್ಟ ಮೊದಲು ಮದ್ಯಪಾನ ಮುಂತಾದ ಚಟಗಳಿಂದ ಗಾವುದ ಗಾವುದ ದೂರವಿರಬೇಕು. ಇಲ್ಲ ವಾದರೆ ಅವನು ವ್ಯಸನಾಸಕ್ತನಾದರೆ ಕಾಯಕ ಪ್ರಜ್ಞೆ ಕುಡಿಯಲ್ಲಿಯೇ ಕಮರಿಹೋಗುತ್ತದೆ. ನಮ್ಮೆಲ್ಲರ ಸಾಂಘಿಕವಾದ ಕರ್ತವ್ಯ ನಿಷ್ಠೆಯೆ ರಾಷ್ಟ್ರದ ಬಲ. ಅದು ದುರ್ಬಲವಾದರೆ ರಾಷ್ಟ್ರವು ದುರ್ಬಲ. ಶರಣರು ಸಾರಿದ ಕಾಯಕಮಂತ್ರದ ಈ ಮಹಾಸಂದೇಶವನ್ನು ಸರ್ವರೂ ಆಲಿಸಬೇಕು. ಆಚರಿಸಬೇಕು.

### ಸ್ವದೇಶಿ ಬಳಕೆ

ಹಲವು ವ್ಯಕ್ತಿಗಳ ಬೆವರಿನ ಫಲದಿಂದ ಒಂದು ಕುಟುಂಬ ನಡೆಯುತ್ತದೆ; ಹಾಗೆ ಅಸಂಖ್ಯ ವ್ಯಕ್ತಿಗಳ ಸಂಯುಕ್ತ ಪರಿಶ್ರಮದಿಂದ ಒಂದು ದೇಶ ನಡೆಯುತ್ತದೆ. ಬೇಲಿಯೇ ಎದ್ದು ಹೊಲ ಮೇದಂತೆ ಕುಟುಂಬದ ಕೆಲ ಸದಸ್ಯರು ವರ್ತಿಸಿದರೆ ಅದರ ಸುಖ ಒಡೆದು ನುಚ್ಚುನೂರಾಗುತ್ತದೆ. ಅದೇ ರೀತಿ ದೇಶದ ಸುಭದ್ರತೆಗೂ ಅನೇಕ ವಿಷಕಾರಕ ದುಷ್ಟ ಶಕ್ತಿಗಳು ಗಂಡಾಂತರ ಒಡ್ಡಿ ಸ್ವಾರ್ಥಪಾಲನೆಯಲ್ಲಿ ಉನ್ಮತ್ತರಾಗಿರುತ್ತಾರೆ. ಆದ್ದರಿಂದ ದೇಶದ ಆಸ್ತಿವಾರವೇ ಉರುಳುವ ಸಂಭವ ಉಂಟು. ಈ ದಿಶೆಯಲ್ಲಿ ಕಳ್ಳಸಾಗಾಣಿಕೆ ಯೊಂದು ಅಂತರರಾಷ್ಟ್ರೀಯ ಮಟ್ಟದ ವ್ಯಾಪಕ ರೋಗವಾಗಿದೆ. ರಾಷ್ಟ್ರದ್ರೋಹವೇ ಇದರ ಮೂಲಧನ. ರಾಷ್ಟ್ರದ ಉತ್ಪತ್ತಿಯನ್ನು ನುಂಗಿಹಾಕುವದೇ ಕಳ್ಳಸಾಗಾಣಿಕೆದಾರರ ಚಟುವಟಿಕೆ, ದೇಶದ ಭಾಂಡಾಗಾರಕ್ಕೆ ಸಲ್ಲಬೇಕಾದ ಕರವನ್ನು ತಪ್ಪಿಸಿ ದೇಶಾಂತರಗಳಿಂದ ವಸ್ತು ಒಡವೆಗಳನ್ನು ಜಪ್ಪಿಸಿ ತರುವದೇ ಇವರ ಮುಖ್ಯ ಕಾರ್ಯ, ಕಳ್ಳಸಾಗಾಣಿಕೆಯ ಪ್ರತಿವರ್ಷದ ಅಂದಾಜನ್ನು ಕೇಳಿದರೆ ದಿಗ್ಭ್ರಮೆಯಾಗುತ್ತದೆ. ನೂರಾರು ಕೋಟಿ ರೂಪಾಯಿಗಳನ್ನು ಪ್ರತಿವರ್ಷ ರಾಷ್ಟ್ರದ ಕಿಸೆಯಿಂದ ಕತ್ತರಿಸಿ ಜಾರಿ ಪೋಲಾಗುತ್ತವೆ. ಇದೇನು ಸಾಮಾನ್ಯ ಮೊತ್ತವೇ? ಮಹಾತ್ಮಾ ಗಾಂಧೀಜಿಯವರು ವಿದೇಶಿ ವಸ್ತುಗಳನ್ನು ಬಹಿಷ್ಕರಿಸಿ ಸ್ವದೇಶಿ ವಸ್ತುಗಳ ಉಪಯೋಗವನ್ನು ಸಾರಿದರು. ಕಳ್ಳಸಾಗಾಣಿಕೆಗೆ ಇದೊಂದು ಸಾಮಾಜಿಕ ಪ್ರತಿರೋಧ. ಒಂದು ವೇಳೆ ಅನಿವಾರ್ಯವಾಗಿ ನಾವು ಪರದೇಶದ ವಸ್ತುವೊಂದನ್ನು ಖರೀದಿಸುವದಿದ್ದರೆ ಅಧಿಕೃತ ಪಾವತಿ ಪಡೆಯುವದು ಅವಶ್ಯ. ಆದರೆ ವಿಶ್ವವಿದ್ಯಾಲಯದ ಮಟ್ಟದ ಉನ್ನತ ಶಿಕ್ಷಣ ಪಡೆದವರೇ ಮೊಟ್ಟ ಮೊದಲು ವಿಲಾಯ ತಿಯ ಈ ವಸ್ತುಗಳಿಗಾಗಿ ಆಶೆ ಪಡುತ್ತಿರುವದು ಸೋಜಿಗವೇ ಸರಿ. ಇನ್ನು ಉಳಿದವರ ಮಾತೇನು?

ನಮ್ಮ ಕುಟುಂಬ ಜೀವನದ ಸಂಗೀತದಲ್ಲಿ ಆಗಾಗ ಅಪಸ್ವರಗಳು ಕೇಳುತ್ತಿವೆ. ಕಾರಣ ಸ್ತ್ರೀಗೆ ದೊರೆಯಬೇಕಾದ ಪೂರ್ಣಾವಕಾಶ ಪ್ರಗತಿ ಸ್ವಾತಂತ್ರ್ಯಗಳು ಇಂದಿಗೂ ದೊರೆಯುತ್ತಿಲ್ಲ. ಅವಳು ಅಬಲೆಯಾಗಿ ಹೆಣ್ಣಾಗಿ ಇಂದಿಗೂ ಪರಾಶ್ರಯದಲ್ಲಿ

ಬಾಳುವಂತಾಗಿದೆ. ಇಂಥ ಪರಿಸ್ಥಿತಿಯಲ್ಲಿ "ವರದಕ್ಷಿಣೆ"ಯೊಂದು ಪೆಡಂಭೂತವಾಗಿ ಬಂದು ಹೆತ್ತ ತಂದೆ ತಾಯಿಗಳಿಗೆ ನೀರು ತೋರಿಸುತ್ತಿದೆ. ಇದೊಂದು ಸುಶಿಕ್ಷಿತ ಜನಾಂಗ ಎದುರಿಸುತ್ತಿರುವ ಭೀಕರ ಅನಾಹುತ. ಹೆಣ್ಣು ಗಂಡಿನ ಮದುವೆ ಒಲುಮೆಯ ನಂಟಾಗದೇ ಗಳಿಕೆಯ ಗಂಟಾಗಿದೆ. ಗಂಡಿಗೆ ಲಗ್ನವೂ ಒಂದು ವ್ಯಾಪಾರವಾಗಿದೆ; ಅಥವಾ ಗಂಡೇ ಒಂದು ಅಮೂಲ್ಯವಾದ ವ್ಯಾಪಾರದ ವಸ್ತುವಾಗಿ ಹೆಣ್ಣುಗಳ ಮುಂದೆ ಕುಳಿತಿದೆ. ಪೌರುಷ ಹಿಂಗಿ ಶೋಷಣೆ ಗರಿಬಿಚ್ಚಿದೆ. ಆದ್ದರಿಂದ ಆ ವಿದ್ವನ್ಮಣಿಗಳ ಹಾಗೂ ಮಠಾಧೀಶ್ವರರ ಪ್ರಾಂತೀಯ ಮಟ್ಟದ ಪರಿಷತ್ತು ಈ ನವನಿರ್ಮಾಣದ ವಿಚಾರ ಕ್ರಾಂತಿಯಲ್ಲಿ ಪಾಲ್ಗೊಂಡುದು ಆದರ್ಶವೇ ಸರಿ. ಈ ವಿಚಾರ ಕ್ರಾಂತಿಯ ಕೊಟಕ್ಕೆ ದೇಶದ ಸರ್ವ ವಿಚಾರ ವಾದಿಗಳ, ಸಾಹಿತಿಗಳ, ಕಲಾವಿದರ, ಮುಖಂಡರ ಹಾಗೂ ಪೀಠಾಧೀಶ್ವರರ ಜ್ಞಾನ ಕ್ರಿಯೆಯಲ್ಲಿ ಇಳಿದು ಬಂದು ಲೋಕ ಕ್ರಾಂತಿಯನ್ನು ಮಾಡಲಿ. ಭಾರತವನ್ನು ಉದ್ಧಾರ ಮಾಡುವದು ಮಾತ್ರವಲ್ಲ; ಶ್ರೀ ಅರವಿಂದ ಮಹರ್ಷಿಗಳು ಭವಿಷ್ಯವಾಣಿಯನ್ನು ನುಡಿದಂತೆ; ಭಾರತವನ್ನು ಜಾಗತಿಕ ಕ್ಷೇತ್ರದಲ್ಲಿ ಅಧ್ಯಕ್ಷ ಸ್ಥಾನದಲ್ಲಿ ಪ್ರತಿಷ್ಠಾಪಿಸುವದೇ ನಮ್ಮೆಲ್ಲರ ಹೆಗ್ಗುರಿಯಾಗಿರಬೇಕು.

ಭಾರತ ಭೂಮಿ ಧರ್ಮ ಭೂಮಿ. ಈ ದೇಶದ ಬೆನ್ನೆಲುಬಾಗಿ ಧರ್ಮದ ಕಲ್ಪನೆ ಬೆಳೆದುಬಂದಿದೆ. ಧರ್ಮಶಬ್ದ ಅರ್ಥವ್ಯಾಪ್ತಿಯಲ್ಲಿ ಆಳಹರವಾದುದಾಗಿದೆ. ಧರ್ಮ ವೆಂದರೆ ಮಾತಲ್ಲ, ಸಿದ್ಧಾಂತವಲ್ಲ ಅದು ಸಾಕ್ಷಾತ್ಕಾರ. ಅಂದರೆ ಕಲಿಯುವದಲ್ಲ ಪಡೆಯುವದು. ಪ್ರಕೃತಿಯ ವೈವಿಧ್ಯತೆಯನ್ನು ಕಂಡು ಆನಂದವನ್ನು ಪಡೆಯಲು ಮಾನವನ ಮನಸ್ಸು ಕುತೂಹಲಗೊಂಡಿತು, ಆ ಕುತೂಹಲವೇ ಅವನ ಪ್ರಗತಿಗೆ ಕಾರಣವಾಯಿತು. ಅಂತೂ ಆನಂದದ ಅನ್ವೇಷಣೆಯೇ ಮೂಲ. ಜ್ಞಾನ ಹೆಚ್ಚಿದಂತೆ ಆನಂದದ ವಲಯ ವಿಶಾಲವಾಗುತ್ತ ಬಂದಿತು. ಆ ಆನಂದದ ಅನ್ವೇಷಣೆಯ ಬಗೆ ಬಗೆಯ ಪ್ರಯತ್ನಗಳ ವ್ಯಾಪಕ ಶಕ್ತಿಯೇ ಧರ್ಮವೆಂದು ಹೇಳಬಹುದು.

ಧರ್ಮದ ರೂಢಿಯ ಅರ್ಥವೇನೇ ಇದ್ದರೂ ನಮ್ಮ ಪ್ರಾಚೀನ ಅರ್ವಾಚೀನ ಋಷಿ, ಪುಂಗವರು, ಶರಣರು ಧರ್ಮಕ್ಕೆ ಒಂದು ಹೊಸ ಆಯಾಮವನ್ನು ಹಾಕಿದ್ದಾರೆ; ಜಾಗತಿಕ ಧರ್ಮದ ಕನಸು ಕಂಡಿದ್ದಾರೆ, ಧರ್ಮವೆಂದರೆ ನಿಂತನೀರಿನಂತೆ ಶುಷ್ಕ ಸಂಪ್ರದಾಯದ ಹೊರೆ ಎಂದು ಭಾವಿಸಿದ ಇವತ್ತಿನ ಜನಾಂಗಕ್ಕೆ ಧರ್ಮದ ನೈಜ ಕಲ್ಪನೆ ಮಾಡಿಕೊಡ ಬೇಕಾಗಿದೆ. 'ಧರ್ಮವಿಲ್ಲದ ವಿಜ್ಞಾನ ಕುರುಡ, ವಿಜ್ಞಾನವಿಲ್ಲದ ಧರ್ಮ ಕುಂಟ' ಎಂಬ ಇನ್‌ಸ್ಟೀಸಿನ ಮಾತನ್ನು ಗಮನಿಸಿದಾಗ ಅಂತರಂಗ ಬಹಿರಂಗಗಳೆರಡರ ಸಮನ್ವಯಗಳಿಂದ ಜೀವನ ಸುಗಮವಾಗುವುದೆಂದು ತಿಳಿಯುತ್ತದೆ. ಧರ್ಮವೂ ವಿಜ್ಞಾನದಂತೆ ಹೊಸಹೊಸ ಪ್ರಯೋಗಗಳನ್ನು ಕೈಕೊಂಡಿದೆ. ಹಳೆಯದರ ಅನುಭವದ ಮೇಲೆ ಹೊಸ ಸಿದ್ಧಾಂತಗಳು ಮೂಡಿಬಂದಿವೆ. ಧರ್ಮ ದ್ರಷ್ಟಾರರಾದ ಬುದ್ಧ, ಮಹಾವೀರ, ಏಸುಕ್ರಿಸ್ತ, ಪೈಗಂಬರ,

ಬಸವೇಶ್ವರಾದಿ ಶಿವಶರಣರ ಹೆಸರುಗಳನ್ನು ಮಾಡಿದ ಕ್ರಾಂತಿಯನ್ನು ಸ್ಮರಿಸಿಕೊಳ್ಳ ಬಹುದು.

ಇಂದಿನ ವಿಜ್ಞಾನದ ವಿಕ್ಷಿಪ್ತ ವಾತಾವರಣದಲ್ಲಿ ಧರ್ಮದ ದುರುಪಯೋಗ ಮಾಡಿ ಕೊಳ್ಳುವ ಜನ ತಮಗೆ ಗೊತ್ತಿಲ್ಲದುದನ್ನು ಏನೂ ಗೊತ್ತಿಲ್ಲದ ಜನರಿಗೆ ಅರಿವಾಗದ ಹಾಗೆ ಹೇಳ ಹೊರಟಿದ್ದಾರೆ, ದಾರಿ ಹೋಕರಿಗಿಂತ ದಾರಿಗಳೇ ಹೆಚ್ಚಾಗಿವೆ. ಬಳ್ಳಿಗುರುಡರು ಸೇರಿ ಹಳ್ಳ ಬಿದ್ದಂತೆ ಆಗದೆ, ಧರ್ಮದ ನೈಜ ಕಲ್ಪನೆ ಧರ್ಮ ಸಂಸ್ಥೆಗಳ ಮೂಲಕ ಸಾಮಾನ್ಯ ಜನತೆಗೆ ಮುಟ್ಟಿಸಬೇಕಾಗಿದೆ. ಧರ್ಮ-ಸಂಸ್ಕೃತಿ, ಸಮಾಜದ ಐಕ್ಯತೆಗಾಗಿ ರಾಷ್ಟ್ರದ ಪುನಶ್ಚೇತನಕ್ಕೆ ಧಾರ್ಮಿಕ ಸಂಸ್ಥೆಗಳು ಯಾವ ರೀತಿಯಲ್ಲಿ ಮುನ್ನಡೆಯಬೇಕು ಎಂಬು ದನ್ನು ಅರಿಯಬೇಕು. ಆತ್ಮ ನಿರೀಕ್ಷಣೆಗೆ ಇದು ಸಕಾಲವಾಗಿದೆ.

ಧರ್ಮದ ಇತಿಹಾಸವನ್ನು ನೋಡಿದಾಗ ಗೋಹತ್ಯೆ ಮೊದಲಾದ ಅನಿಷ್ಟ ಪದ್ಧತಿ ಗಳನ್ನು ಪಂಚ ಮಹಾಪಾತಕಗಳೆಂದು ಕರೆದಿದ್ದಾರೆ. ಅವು ಅಂದಿನ ಸಮಾಜದ ಕಾಲ ಮಾನ ಜನಜೀವನಕ್ಕೆ ಹೊಂದುವಂತಿದ್ದವು. ಇಂದಿನ ಸಮಾಜದಲ್ಲಿ ತೀರ ಭಿನ್ನವಾದ ಅತಿ ಭಯಂಕರವಾದ ಜನಜಾಗೃತಿಗೆ ರಾಷ್ಟ್ರಾಭಿವೃದ್ಧಿಗೆ ಕಂಟಕಪ್ರಾಯವಾಗಿರುವ ೧ ಕುಡಿತ ಮೊದಲಾದ ವ್ಯಸನಗಳು ೨ ಲಂಚಖೋರತನ ೩ ಕೆಲಸಗಳ್ಳತನ ೪ ಕಲಬೆರಕೆ ಮತ್ತು ೫ ಕಳ್ಳಸಾಗಾಣಿಕೆ ಈ ಐದು ಮಹಾಪಾತಕಗಳೆಂದು ಹೆಸರಿಸಬಹುದು. ಇವುಗಳ ಬಗ್ಗೆ ಈಗಾಗಲೇ ಸಾಕಷ್ಟು ಹೇಳಿದ್ದಾಗಿದೆ. ಇವುಗಳನ್ನು ಪಂಚಮಹಾಪಾತಕಗಳೆಂದು ಸಾರಿ ಇವುಗಳಿಂದ ಜನತೆ ದೂರ ಸರಿಯುವ ಮನೋಭಾವ ನಿರ್ಮಾಣ ಕಾರ್ಯ ಧರ್ಮ ಸಂಸ್ಥೆ ಗಳಿಂದ ಆಗಬೇಕಾಗಿದೆ. ಧರ್ಮದ ಹೆಸರಿನಲ್ಲಿ ತಲೆಯೆತ್ತಿ ನಿಂತಿರುವ ಇನ್ನೂ ಹಲವಾರು ಅನಿಷ್ಟ ಸಂಪ್ರದಾಯಗಳನ್ನು ತೊಡೆದು ಹಾಕುವ ಹೊಣೆ ಧರ್ಮ ಸಂಸ್ಥೆಗಳ ಮೇಲಿದೆ.

ಧರ್ಮ ಜಾಗೃತಿಯ ಕಾಲ ಇದಾಗಿದೆ. ಆ ಪ್ರಜ್ಞೆ ಸಕಾಲದಲ್ಲಿ ಎಲ್ಲರಲ್ಲಿ ಮೂಡಿದೆ. ಈ ದಿಶೆಯಲ್ಲಿ ಧರ್ಮ ಸಂಸ್ಥೆಗಳು ಮತ್ತು ಸರಕಾರ ಜೊತೆ ಜೊತೆಯಾಗಿ ದುಡಿದರೆ ನಾವು ಬಯಸುವ ಸಮಾಜ ರಾಷ್ಟ್ರ ನಿರ್ಮಾಣವಾಗುವಲ್ಲಿ ಸಂಶಯವಿಲ್ಲ. ಸಾಂಘಿಕ ಶಕ್ತಿಯಿಂದ ಹೋರಾಡಬೇಕಾಗಿದೆ.

ಎಲ್ಲ ವ್ಯಾಪಾರಸ್ಥರೂ ಅಪ್ರಾಮಾಣಿಕರೆಂದು ಅಲ್ಲಗಳೆಯುವಂತಿಲ್ಲ. ಎಷ್ಟೋ ಜನ ವ್ಯಾಪಾಸ್ಥರು, ಪ್ರಾಮಾಣಿಕರೂ, ಕರ್ತವ್ಯ ಪ್ರಜ್ಞೆಯುಳ್ಳವರೂ ಇದ್ದಾರೆ. ಅವರ ಧನಸಹಾಯ ಬಲದಿಂದ ರಾಜ್ಯದಲ್ಲಿ ಎಷ್ಟೋ ಶಿಕ್ಷಣ ಸಂಸ್ಥೆಗಳು, ವಿದ್ಯಾರ್ಥಿ ನಿಲಯಗಳು, ಧಾರ್ಮಿಕ ಸಂಸ್ಥೆಗಳು ಮತ್ತು ಮಠ ಮಂದಿರಗಳು ಪ್ರಬಲವಾಗಿ ಬೆಳೆದು ಬೆಳಗುತ್ತಿರುವದು ನಾವಿಲ್ಲಿ ಸ್ಮರಿಸಬಹುದು. ರಾಷ್ಟ್ರದ ಪ್ರಮುಖ ನಗರಗಳಲ್ಲಿಯೂ ದೊಡ್ಡ ದೊಡ್ಡ ವಿಶ್ವ ವಿದ್ಯಾನಿಲಯಗಳು ತಲೆಯೆತ್ತಿ ಮೆರೆಯುತ್ತಿರುವದು ಸಾಕ್ಷಿಯಾಗಿವೆ. ಅಲ್ಲದೆ ರಾಷ್ಟ್ರೀಯ ಅನೇಕ ಬೃಹದ್ ಯೋಜನೆಗಳಿಗೂ, ಅವರಿಂದ ಅನೇಕ ಸಹಾಯ ಸೌಲಭ್ಯಗಳು ದೊರೆತಿ ರುವದನ್ನು ಎಲ್ಲೆಡೆಯಲ್ಲಿಯೂ ನಾವಿಂದು ಕಾಣಬಹುದು.

ಒಟ್ಟಿನಲ್ಲಿ ಕುಡಿತ, ಲಂಚ, ಕಳ್ಳಸಾಗಾಣಿಕೆ, ಕಲಬೆರಕೆ, ಕರ್ತವ್ಯ ಪ್ರಜ್ಞೆಯಲೋಪ ಈ ಪಂಚ ಮಹಾಪಾತಕಗಳು ರಾಷ್ಟ್ರ ಘಾತಕವಾದವುಗಳು. ಇವುಗಳ ಬೆಳವಣಿಗೆಯಿಂದ ಸಮಾಜವು ಬದುಕದು, ಬೆಳೆಯದು, ಬೆಳಗಲಾರದು. ರಾಷ್ಟ್ರದ ಅಭಿವೃದ್ಧಿಗೆ ಇವು ಕಂಟಕಪ್ರಾಯಗಳು. ಇವೆಲ್ಲವುಗಳು ನಿವಾರಣೆಯಾಗಿ ಕೃತಿಯಲ್ಲಿ ಕರ್ತವ್ಯಪ್ರಜ್ಞೆ ಒಡ ಮೂಡಿದರೆ ಮಾತ್ರ ರಾಷ್ಟ್ರ ಸುಧಾರಣೆ. ಪ್ರತಿಯೊಬ್ಬರಲ್ಲಿಯೂ ತಿಳುವಳಿಕೆಯ ಬೆಳಕು ಉದಯಿಸಬೇಕು. ಈ ಪಂಚ ಮಹಾಪಾತಕಗಳಿಂದ ತನ್ನ ಹಾಗೂ ರಾಷ್ಟ್ರದ ಅವನತಿ ಯೆಂಬುದನ್ನು ಚೆನ್ನಾಗಿ ಅರ್ಥಮಾಡಿಕೊಂಡು, ಒಳ್ಳೆ ಮಾರ್ಗದಲ್ಲಿ ನಡೆದರೆ ಸಾರ್ಥಕ, ಇಲ್ಲವಾದರೆ ರಾಷ್ಟ್ರದ್ರೋಹ ಮಾಡಿದಂತಾಗುವದು. ಅದಕ್ಕಾಗಿಯೇ ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಶ್ರೀ ವೀರೇಂದ್ರ ಹೆಗ್ಗಡೆಯವರು, ಕರ್ನಾಟಕದ ಎಲ್ಲ ಧರ್ಮಾಧಿ ಕಾರಿಗಳನ್ನು ಒಂದುಗೂಡಿಸಿ ಅವರೊಡನೆ ಚಿಂತನ ಮಂಥನ ಮಾಡಿ ಧರ್ಮ ಜಾಗೃತಿ ಸಮ್ಮೇಲನವನ್ನು ಇದೀಗ ಒಳ್ಳೇ ಉತ್ಸಾಹಪೂರ್ಣವಾಗಿ ನಡೆಯಿಸಿದ್ದಾರೆ. ಈ ಸಮ್ಮೇಲ ನವು ಸರಕಾರದವರು ರಾಷ್ಟ್ರ ಸುಧಾರಣೆಗಾಗಿ ರೂಪಿಸಿಕೊಂಡಿರುವ ೨೦ ಅಂಶಗಳ ಕಾರ್ಯ ಕ್ರಮಕ್ಕೆ ಪೂರಕವಾಗಿದೆ. ಇದುವೆ ೧೨ನೆಯ ಶತಮಾನದಲ್ಲಿ ಮಹಾತ್ಮಾ ಬಸವಣ್ಣನವರು ಹೇಳಿದ ಮಹಾತತ್ವವಾಗಿದೆ. ಅದು ಈಗ ಆಚರಣೆಯಲ್ಲಿ ತರಬೇಕಾಗಿದೆ, ಅದಕ್ಕಾಗಿ ಎಲ್ಲ ಧರ್ಮಾಧಿಕಾರಿಗಳ, ವಿದ್ವನ್ಮಣಿಗಳ, ಹಾಗೂ ಸಮಾಜ ಬಾಂಧವರ ಸಹಕಾರ ಅತ್ಯ ಗತ್ಯವೆಂಬುದು ಇಲ್ಲಿ ಮತ್ತೆ ಬೇರೆ ಹೇಳಬೇಕಾಗಿಲ್ಲ.

ಇಂದು ಧರ್ಮಗುಡಿಗಳು ಪೌರಾಧಿಕಾರಿಗಳು, ಸ್ವಾಮಿಗಳು, ಧರ್ಮ ಜಾಗೃತಿಗಾಗಿ, ಸಮಾಜ ಸುಧಾರಣೆಗಾಗಿ, ಕಾಲಕ್ಕೆ ತಕ್ಕಂತೆ ಪರಿವರ್ತನೆಯಾಗಲೇ ಬೇಕಾಗಿದೆ. ಹಳೆಯ ಪರಂಪರೆಯ ವ್ಯಾಮೋಹಗಳನ್ನು ತ್ಯಜಿಸಬೇಕಾಗಿದೆ. ಇಂದು ಯಾವದಕ್ಕೆ ಪ್ರಾಧಾನ್ಯತೆ ನೀಡಬೇಕು. ಯಾವುದರಿಂದ ಜನಾಂಗದ ಸುಧಾರಣೆ, ಸಂಸ್ಕೃತಿಯ ಸಂರಕ್ಷಣೆ ಅದನ್ನು ಅರಿತುಕೊಂಡು ನಡೆದರೆ ಸಮಾಜಕ್ಕೆ ಶಕ್ತಿ ಒರುವದು. ಮಹಾತ್ಮಾ ಬಸವಣ್ಣನವರು ಹೇಳಿದ "ಕಾಯಕವೇ ಕೈಲಾಸ"ಈ ತತ್ವವನ್ನು ಮನಃಪೂರ್ವಕವಾಗಿ ಕೃತಿಯಲ್ಲಿ ತರಬೇಕು. ಆಲಸಿಗಳಾಗದೆ ನಿತ್ಯವೂ ನಿಷ್ಠೆಯಿಂದ, ಸ್ವಕರ್ತವ್ಯ ಪ್ರಜ್ಞೆಯಿಂದ ದುಡಿದರೆ, ಅದುವೆ ಶಿವಪೂಜೆ ಅದು ನಮಗಿಂದು ಬೇಕಾಗಿದೆ. ಇದರಿಂದಲೇ ಭಾವೈಕ್ಯತೆ ಇದು ಕೃತಿಯಲ್ಲಿ ಬಂದರೆ ಧರ್ಮಜಾಗ್ರುತಿ ಸಮ್ಮೇಲನದ ಕನಸು ನನಸಾದಂತೆ.

ಸಹನಾವವತು ಸಹನೌಭುನಕ್ತು ಸಹವೀರ್ಯಂಕರವಾವಹೈ
ತೇಜಸ್ವಿನಾವಧೀತ ಮಸ್ತು ಮಾವಿದ್ವಿಷಾವಹೈ.

**ಕನ್ನಡ ಪತ್ರಿಕೋದ್ಯಮದ ಬೆಳವಣಿಗೆ**

ಶ್ರೀ ಜಗದ್ಗುರು ಮೂರುಸಾವಿರಮಠದ ಪರಂಪರೆ ಭವ್ಯವಾಗಿದ್ದು ಮಾನವೀಯತೆ ಯಿಂದ ಕೂಡಿದುದಾಗಿದೆ. ಪ್ರತಿವರ್ಷವೂ ಶ್ರಾವಣ ಮಾಸದ ಕಾರ್ಯಕ್ರಮದಂಗವಾಗಿ ಕೀರ್ತನ–ಪುರಾಣ–ಪ್ರವಚನಗಳೊಂದಿಗೆ ಧರ್ಮ ಜಾಗೃತಿಯನ್ನು ಮಾಡುತ್ತ, ಮಹಾ

ನಗರದ ಎಲ್ಲ ಗಣ್ಯರನ್ನು ಅಂದರೆ ಒಂದೊಂದು ಸಂಸ್ಥೆಯವರನ್ನು ಒಂದೊಂದು ದಿನ ಶ್ರೀ ಮೂರುಸಾವಿರಮಠಕ್ಕೆ ಬರಮಾಡಿಕೊಂಡು, ಗುರುಸಿದ್ಧೇಶ್ವರನ ಪ್ರಸಾದ ನೀಡಿ, ಹರಸಿ, ಕಲ್ಯಾಣವಾಗಲೆಂದು ಆಶೀರ್ವದಿಸಿ ಕಳಿಸುತ್ತಿರುವ ಸತ್ ಸಂಪ್ರದಾಯವು ತಮ್ಮೆಲ್ಲರಿಗೆ ವಿದಿತವಾದ ವಿಷಯವಾಗಿದೆ. ಪ್ರತಿಯೊಂದು ಓಣಿಯ ದೀನದಲಿತರನ್ನು, ವ್ಯಾಪಾರಸ್ಥರನ್ನು, ಆಚಾರವಂತ ಭಕ್ತ-ಶರಣರನ್ನು ಹಾಗೂ ಸ್ವಾಮಿಗಳನ್ನು, ಕೃಷಿಕಾಯಕ ಯೋಗಿಗಳನ್ನು, ಹಣ್ಣು-ಕಾಯಿಪಲ್ಲೆ ಮುಂತಾದ ಚಿಕ್ಕ ಪುಟ್ಟ ವ್ಯಾಪಾರಿಗಳನ್ನು, ಬಾಗವಾನರನ್ನು, ಎಲ್ಲ ಶಿಕ್ಷಣ ಸಂಸ್ಥೆಗಳ ಅಧ್ಯಾಪಕರನ್ನು, ಕಾಯ್ದೆ ಪಂಡಿತರನ್ನು, ವೈದ್ಯರನ್ನು ಶ್ರೀಮಠಕ್ಕೆ ಒಂದೊಂದು ದಿನ ಬರಮಾಡಿಕೊಂಡು ಸತ್ಕರಿಸಿ ಹಾರೈಸಿ ಕಳಿಸಿದಂತೆ ಇಂದು ಪತ್ರಿಕೋದ್ಯಮಿಗಳಾದ ತಮ್ಮೆಲ್ಲರನ್ನು ಬರಮಾಡಿಕೊಳ್ಳಲಾಗಿದೆ. ಶ್ರೀಮಠದ ಆಮಂತ್ರಣವನ್ನು ಮನ್ನಿಸಿ ತಾವೆಲ್ಲರೂ ಆಗಮಿಸಿ, ಗುರುಸಿದ್ಧೇಶ್ವರನ ಪ್ರಸಾದ ಸ್ವೀಕರಿಸಿದುದು ನಮಗೆ ಅತೀವ ಸಂತಸವನ್ನುಂಟು ಮಾಡಿದೆ.

ಸಂತಸದ ಈ ಸಂದರ್ಭದಲ್ಲಿ, ಕನ್ನಡ ಪತ್ರಿಕಾ ವ್ಯವಸಾಯವು ಹೇಗಿರಬೇಕೆಂಬುದರ ಸೂಕ್ಷ್ಮವಾಗಿ ವಿಚಾರಿಸತಕ್ಕ ವಿಷಯವಾಗಿದೆ. ಇಂದು ವಿಶ್ವದ ಉದ್ಯಮಗಳಲ್ಲಿ ಪತ್ರಿಕೋದ್ಯಮವೂ ಒಂದು ಪ್ರಾಮುಖ್ಯ ಸ್ಥಾನವನ್ನು ಗಳಿಸಿಕೊಂಡಿದೆ. ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕವಾದ ಜನತೆಯ ಬೇಡಿಕೆ ಹಾಗೂ ಅಭಿಪ್ರಾಯಗಳನ್ನು ಪ್ರತಿಬಿಂಬಿಸುವ ಮತ್ತು ಇವೇ ವಿಷಯ ಕುರಿತು ಸಂಸ್ಥೆಗಳ ಹಾಗೂ ಸರ್ಕಾರಗಳ ಕಾರ್ಯಕ್ರಮ ಯೋಜನೆ ಮತ್ತು ನಿರ್ಧಾರಗಳನ್ನು ಜನತೆಗೆ ತಿಳಿಯಪಡಿಸುವ ಮತ್ತು ದಿನಚರಿಯ ಮುಖ್ಯ ಘಟನೆಗಳನ್ನು ಪ್ರಸಿದ್ಧ ಪಡಿಸುವ ಸಂಸ್ಥೆಯೇ ಪತ್ರಿಕೋದ್ಯಮ. ಈ ಪತ್ರಿಕೋದ್ಯಮವು ರಾಷ್ಟ್ರ ಸುಧಾರಿಸುವ ದೊಡ್ಡ ಸಾಧನವಾಗಿದೆ. ಇಂದು ಕನ್ನಡ ಪತ್ರಿಕೋದ್ಯಮದ ಬೆಳವಣಿಗೆ ಸಾಕಷ್ಟು ಆಗುತ್ತಿಲ್ಲ. ಇನ್ನುಳಿದ ರಾಜ್ಯಗಳ ಈ ದೃಷ್ಟಿಯಲ್ಲಿ ನಮ್ಮ ರಾಜ್ಯವನ್ನು ಹೋಲಿಸಿಕೊಂಡಾಗ ನಾವಿನ್ನೂ ಬಹಳ ಹಿಂದುಳಿದಿದ್ದೇವೆ ಎಂಬುದರ ಅರಿವು ಆಗುತ್ತದೆ. ಮಲೆಯಾಳಿ-ತೆಲಗು-ತಮಿಳಿಯರು ಸಾಹಸದಿಂದ ಮುಂದೆ ಹೋಗುತ್ತಲಿದ್ದಾರೆ. ಮೂರು ಕೋಟಿ ಜನಸಂಖ್ಯೆ ಇರುವ ನಮ್ಮ ನಾಡಿನಲ್ಲಿ ಕನ್ನಡ ಪತ್ರಿಕೆಗಳ ಪ್ರಸಾರ ಸಂಖ್ಯೆ ಇನ್ನೂ ೧೨ ಲಕ್ಷದ ಗಡಿ ದಾಟಿಲ್ಲವೆಂಬುದು ಸಂಶೋಧಕರ ನಿರ್ಣಯವಾಗಿದೆ. ಎರಡು ಕೋಟಿ ಜನಸಂಖ್ಯೆ ಇರುವ ಕೇರಳದಲ್ಲಿ ಪತ್ರಿಕೆಗಳ ಪ್ರಸಾರ ಸಂಖ್ಯೆ ೩೦ ಲಕ್ಷ. ನಾಲ್ಕುಕೋಟಿ ಜನಸಂಖ್ಯೆಯ ತಮಿಳುನಾಡಿನಲ್ಲಿ ಪತ್ರಿಕೆಗಳ ಪ್ರಸಾರ ಸಂಖ್ಯೆ ೫೦ ಲಕ್ಷ. ನಮ್ಮ ನಾಡಿನಲ್ಲಿ ಒಟ್ಟು ೩೨೫ ಪತ್ರಿಕೆಗಳು ಹೊರಡುತ್ತವೆಂಬುದು ತಿಳಿದಿದೆಯಾದರೂ ಪ್ರಸಾರ ಸಂಖ್ಯೆ ತೀರಾ ಕಡಿಮೆಯಾಗಿದೆ. ಹೀಗಾಗಲು ಕಾರಣವೇನು? ಜನಸಂಖ್ಯೆಗೇನು ಕಡಿಮೆಯಿಲ್ಲ, ಆದರೆ ನಾವು ಅಭಿಮಾನ ಶೂನ್ಯರಾಗಿದ್ದೇವೆ. ಕನ್ನಡ ಪತ್ರಿಕೆಯ ಬೆಳವಣಿಗೆಯ ಬಗ್ಗೆ ನಿಷ್ಠೆಯಿಲ್ಲ, ದುಡಿಮೆ ಕಡಿಮೆಯಾಗಿದೆ. ಆ ಕೆಚ್ಚು ಆ ಉತ್ಸಾಹ ಇಲ್ಲದಾಗಿದೆ. ಜನರೇ ಅಭಿಮಾನ ಶೂನ್ಯ

ರಾದರೆ ಯಾವ ರಾಜ್ಯವು ಬೆಳೆಯಲಾರದು, ಯಾವ ರಾಷ್ಟ್ರವು ಮುಂದೆ ಬರಲಾರದು. ನಾಡಿನ, ರಾಷ್ಟ್ರದ ಅಭಿಮಾನವನ್ನು ವಿದೇಶಿಯರಲ್ಲಿ ಕಂಡಷ್ಟು ನಾವೆಲ್ಲರಲ್ಲಿ ಕಾಣುತ್ತಿಲ್ಲ. ವ್ಯವಸಾಯಕ್ಕಿಂತ ವ್ಯವಹಾರ ನೀತಿ ಹೆಚ್ಚಾಗಿದೆ. ಒಂದು ದೇಶದ ಹಾಗೂ ಧರ್ಮ-ಸಂಸ್ಕೃತಿಯ ಸಂವರ್ಧನೆಗೆ ಪತ್ರಿಕೋದ್ಯಮವೇ ಮೂಲಕಾರಣ. ಸ್ವಪ್ರತಿಷ್ಠೆಯ ಕಿಚ್ಚು ಹೆಚ್ಚಾಗಿದೆ. ಭಾವೈಕ್ಯ ಮಾತಿನ ಮಾಲೆಯಾಗಿದೆ. ಪ್ರಾಮಾಣಿಕತೆ ಎಂಬುದು ಕನಸಿನ ಮಾತಾಗಿದೆ. ಪತ್ರಿಕೆಗಳು ವರದಿ ನೀಡುವಾಗ ಯಾವದು ಒಳಿತು, ಯಾವದು ಕೆಡಕು ಎಂಬುದನ್ನು ಬಹುದೂರ ದೃಷ್ಟಿಯಿಂದ ವಿಚಾರಿಸಿದ್ದಾದರೆ ನಾಡಿಗೂ, ಸಮಾಜಕ್ಕೂ, ಹಿತ ವಾಗುವದು. ಸುದ್ದಿ ಎಲ್ಲರಿಗೂ ಬೇಕು. ಆದರೆ ಅದು ಸತ್ಯಾಂಶದಿಂದ ಕೂಡಿ ರಾಷ್ಟ್ರಕ್ಕೆ ಹಿತವಾಗುವಂತಿದ್ದರೆ ಎಲ್ಲರಿಗೂ ಪ್ರಿಯವಾಗುವದು; ದೇಷ್ಯಾಸೂಯೆಗಳಿಂದ ಕೂಡಿದ ಸುದ್ದಿಯಾದರೆ ಅದು ಆ ಪತ್ರಿಕೆಯ ಘನತೆ-ಗೌರವಕ್ಕೆ ಕುಂದು. ಇದಕ್ಕೆ ತಕ್ಕ ವಿಚಾರ ಶಕ್ತಿ ಅತ್ಯಾವಶ್ಯಕವಾಗಿದೆ.

ಪತ್ರಿಕಾಧರ್ಮ ಪವಿತ್ರವಾದುದು ಸಮಾಜವನ್ನು ಸಂಘಟಿಸಿ ಜನ ಜಾಗೃತಿ ಮಾಡುವ ಶಕ್ತಿ ಅದರಲ್ಲಿದೆ. ಒಬ್ಬ ಧರ್ಮ-ಗುರುವು ಕೇವಲ ಧಾರ್ಮಿಕ, ಶೈಕ್ಷಣಿಕ-ಸಾಮಾಜಿಕ ಸುಧಾರಣೆಗೈಯ್ಯಲು ಪ್ರಯತ್ನಿಸಿದರೆ, ಪತ್ರಿಕೋದ್ಯಮಿಗಳು ಅದಕ್ಕಿಂತಲೂ ಮುಂದೆ ಹೋಗಿ ರಾಜ್ಯದ, ರಾಷ್ಟ್ರದ ಅಷ್ಟೇ ಏಕೆ? ಇಡೀ ವಿಶ್ವದ ಚುಕ್ಕಾಣಿಯನ್ನು ಹಿಡಿದು ರಾಜ್ಯ-ರಾಷ್ಟ್ರ-ವಿಶ್ವವನ್ನು ಒಳ್ಳೆಯ ದಾರಿಯತ್ತ ಸಾಗಿಸುತ್ತಾರೆ. ಅಂತಹ ಮಹಾಶಕ್ತಿ ಅವರ ಲೇಖನಿಯಲ್ಲಡಗಿರುತ್ತದೆ.

ಪತ್ರಿಕಾವೃತ್ತಿ,ಪಂಡಿತಾವೃತಿ ಪತ್ರಿಕಾಕರ್ತ ಲೋಕಜ್ಞಾನ-ವ್ಯವಹಾರಜ್ಞಾನ ಉಳ್ಳವ. ಅವನು ದೇವರಲ್ಲಿ ನಂಬಿಕೆ ಇಟ್ಟು ಧರ್ಮವನ್ನಾಶ್ರಯಿಸಿ ಪರಹಿತಾರ್ಥಗಮನವನ್ನು ಕಾರ್ಯಗತ ಮಾಡುವದರಲ್ಲಿ ಸದಾನಿರತ. ಆದ ಕಾರಣ ಅವನು ಸೇವಾನಿಷ್ಠ; ಆತ್ಮಗೌರವವುಳ್ಳವ ನಾಗಿ ಗಂಭೀರ ಜೀವನ ನಡೆಸುತ್ತಾನೆ. ಇಂಥವನ ಲೇಖನಿಯಿಂದ ಶಕ್ತಿಯುತ-ಹರಿತ ವಿಚಾರಗಳು ಹೊರ ಬಂದು ಜನರ ಹೃದಯ ಹೊಲವನ್ನು ಹಸನುಗೊಳಿಸುತ್ತವೆ. ಪ್ರತಿ ಕೋದ್ಯಮಿಗಳಾದವರು, ಪತ್ರಿಕೆ ಹುಟ್ಟಿದ್ದು ಜನಸೇವೆಗಾಗಿ, ಜ್ಞಾನ ಪ್ರಸಾರಕ್ಕಾಗಿ ಎಂಬು ದನ್ನು ತಿಳಿದುಕೊಂಡರೆ ಸಾಕು; ಆ ಪತ್ರಿಕೆಯ ಭವಿಷ್ಯ ಹಾಗೂ ನಾಡಿನ ಭವಿಷ್ಯ ಸುಂದರ ವಾಗುವದರಲ್ಲಿ ಸಂದೇಹವಿಲ್ಲ. ಎಂತಹ ಕಠಿಣ ಪ್ರಸಂಗಗಳಲ್ಲಿಯೂ ಸತ್ಯವನ್ನೇ ಬರೆಯ ಬೇಕೆನ್ನುವ ಛಲವಿದ್ದರೆ ಸುಧಾರಣೆ ಸಾಧ್ಯ. ವ್ಯಕ್ತಿ ಪೂಜೆ ನಿಂತು ಅರ್ಥ ಶೂನ್ಯ ವರದಿ ಗಳು ಕಡಿಮೆಯಾದಷ್ಟೂ ಒಳಿತು. ಅದಕ್ಕಾಗಿ ಚಿಂತನೆ ಮಾತ್ರ ಬೇಕಾಗುತ್ತದೆ, ಸಮ ತೋಲನದೃಷ್ಟಿ ಬೇಕಾಗುತ್ತದೆ. ಆಗ ನೈಜ ಭಾವನೆಗಳನ್ನು ಪ್ರಕಟಿಸಲು ಹೃದಯ ಒಪ್ಪುತ್ತದೆ.

"ಭಾರತದ ಒಟ್ಟು ಪತ್ರಿಕಾ ಪ್ರಸಾರದಲ್ಲಿ ಕನ್ನಡ ಪತ್ರಿಕೆಗಳ ಪಾಲು ಬರೀ ಶೇಕಡಾ ಆರು!" ಎಂದು ಸಂಶೋಧಕರೊಬ್ಬರು ಅಭಿಪ್ರಾಯಪಟ್ಟಿದ್ದಾರೆ. ಇಂತಹ ಈ ಕಡಿಮೆ

ಮಟ್ಟದ ಅಂಕಿ-ಸಂಖ್ಯೆಗಳನ್ನು ನೋಡಿದಾಗ ನಮಗೆ ನಾಚಿಕೆ ಎನಿಸುತ್ತದೆ. ಪತ್ರಿಕೆಗಳ ಬೆಳವಣಿಗೆಗಾಗಿ ಹೋರಾಡಲೇಬೇಕು; ಇದಕ್ಕೆ ಜನತೆ ಮತ್ತು ಸರಕಾರ ಸಹಕಾರ ನೀಡಿ ಪ್ರೋತ್ಸಾಹಿಸಬೇಕು. ಪತ್ರಿಕೆ ನಡೆಸುವವರ ಕಷ್ಟ-ನೋವುಗಳು ಪತ್ರಿಕೆಯ ಒಡೆಯರಿಗೆ ಅರ್ಥವಾದಷ್ಟು ಬೇರಾರಿಗೂ ಅರ್ಥವಾಗಲಾರವು. ಎಷ್ಟೋ ಪತ್ರಿಕೆಗಳು ಸಾಲದ ಕೆಸರಿನಲ್ಲಿಯೇ ಬಿದ್ದು ಕೊಳೆಯುತ್ತಲಿವೆ. ಪತ್ರಿಕೆಗಳಿಗೆ ಚಂದಾದಾರರೇ ಆಧಾರ, ಅವರ ಚಂದಾ ಬರದಿದ್ದರೆ ಪತ್ರಿಕೆ ನಡೆಸುವದು ಕಡು ಕಠಿಣವಾಗುತ್ತದೆ. ಹೀಗಾಗಿ ಎಷ್ಟೋ ತಿಪ್ರಕೆಗಳು ನಿಂತು ಹೋಗಿವೆ. ಇಂಥವುಗಳನ್ನು ಬಾಳಿಸಿ ಬೆಳಗಿಸಲು ಜನರು ಮುಂದೆ ಬಂದು ಪ್ರೋತ್ಸಾಹಿಸಬೇಕು. ಕನ್ನಡ ಪತ್ರಿಕೋದ್ಯಮದಲ್ಲಿ ಸಾಕಷ್ಟು ವೈವಿಧ್ಯತೆಯೂ ಬೆಳೆದು ಬರಬೇಕಾಗಿದೆ. ವಿವೇಚನಾತ್ಮಕ ವಿಷಯ ಸಂಗ್ರಹ, ವಿಭಾಗಗಳ ಜೋಡಣೆ, ನಿಸರ್ಗ ಸೌಂದರ್ಯದಿಂದೊಡಗೂಡಿದ ಆಕರ್ಷಕ ಚಿತ್ರ, ವಿವಿಧ ಕಲೆಗಳ ಸಮಾಲೋಚನೆ, ವೈಜ್ಞಾನಿಕ ಹಾಗೂ ಮನೋವೈಜ್ಞಾನಿಕ ಸಂಶೋಧನೆಯ ಲೇಖನಗಳು, ಬಾಲ-ಬಾಲೆಯರಿಗೆ ಸರಳ ಭಾಷೆಯಲ್ಲಿ ಸಹಜತೆಯ ನಿರೂಪಣೆಯೊಡನೆ ಸಂಸ್ಕೃತಿಯ ಪುನರುತ್ಥಾನದ ವಿಚಾರಗಳನ್ನು ಚಿತ್ರಗಳ ಮೂಲಕ ತಿಳಿಸುವದು. ಇವೆಲ್ಲವೂ ಇಂದು ಅವಶ್ಯಕ.

ಪತ್ರಿಕೆಗಳು ಬದುಕನ್ನು ಬಂಗಾರ ಮಾಡುವಂತಹವುಗಳಾಗಿರಬೇಕು. ಭಾಷೆ ಸರಳವಾಗಿದ್ದು ಭಾವ ಎತ್ತರವಾಗಿರಬೇಕು. ರಾಷ್ಟ್ರಾಭಿಮಾನವನ್ನು ಜಾಗೃತಗೊಳಿಸುವಂತಿರಬೇಕು. ಕನ್ನಡತನವನ್ನು ಹೆಚ್ಚಿಸುವಂತಿರಬೇಕು. ಅಂದಾಗ ಪತ್ರಿಕೋದ್ಯಮಕ್ಕೆ ಬಲ ಹಾಗೂ ಬೆಲೆ ಬರುತ್ತದೆ. ನಾವೂ ಸಹ ಪತ್ರಿಕೋದ್ಯಮಿಗಳೆಂದೇ ಭಾವಿಸಿಕೊಂಡು ಕೆಲವು ವಿಚಾರಗಳನ್ನು ತಮ್ಮೆಲ್ಲರ ಮುಂದೆ ಇಟ್ಟಿದ್ದೇವೆ; ಇದು ಕೇವಲ ಪಕ್ಷಿನೋಟ ಮಾತ್ರ.

ಪ್ರತಿವರ್ಷದಂತೆ ಈ ವರ್ಷವೂ ಶ್ರೀ ಮೂರುಸಾವಿರಮಠವು ಗೈದ ಕಾರ್ಯಸಾಧನೆಯ ವರದಿಯನ್ನು ತಿಳಿಯಬಯಸುತ್ತೇವೆ. ಶ್ರೀಮೂರುಸಾವಿರಮಠವು ಸಕಲ ಸಮಾಜದವರನ್ನು ಜಾತಿ ಮತ ಪಂಗಡಗಳ ಭೇದವಿಲ್ಲದೇ ಭಾವೈಕ್ಯದಿಂದ ಕಾಣುತ್ತಿರುವ ವಿಷಯ ನಿಮಗೆಲ್ಲರಿಗೆ ತಿಳಿದದ್ದೇ ಆಗಿದೆ. ಸಾಮಾಜಿಕ ಜೀವನದಲ್ಲಿ ಅನೇಕ ಕಷ್ಟ ನಷ್ಟಗಳು ಬರುವದು ಸಹಜ. ಅವೆಲ್ಲವುಗಳನ್ನು ಎದುರಿಸಿ ಸಮಾಜಕ್ಕೆ ರಾಷ್ಟ್ರಕ್ಕೆ ಹಿತಕಾರಿಯಾಗುವಂತೆ ಪರಿಶ್ರಮಿಸುವದೇ ಮಠಾಧೀಶರ ಮುಖ್ಯ ಕರ್ತವ್ಯವಾಗಿದೆ. ಇಂದು ಮಠಾಧೀಶರು ಎಲ್ಲ ರೀತಿಯಿಂದಲೂ ಜಾಗೃತಗೊಳ್ಳಬೇಕಾಗಿದೆ. ಕಾಯಕವೇ ಕೈಲಾಸವೆಂದು ಬಗೆದು ಜನಸೇವೆ ಮಾಡಬೇಕಾಗಿದೆ, ಕೃತಿಯಲ್ಲಿ ತರಬೇಕಾಗಿದೆ.

ಈಗಾಗಲೇ ಶ್ರೀ ಮೂರುಸಾವಿರಮಠವು ಹಲವಾರು ಯೋಜನೆಗಳನ್ನು ರೂಪಿಸಿಗೊಂಡು ಭಕ್ತರ ಸಹಕಾರದೊಡನೆ ಕಾರ್ಯಗತಗೊಳಿಸಿದೆ. ಅದರಲ್ಲಿ ಮುಖ್ಯವಾಗಿ ಅಂದರೆ-"ಶ್ರೀ ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘದ ಮಹಿಳಾ ಕಾಲೇಜು." ಕಾಲೇಜ ಕಟ್ಟಡ ನಿರ್ಮಾಣ ಈಗ ಮುಕ್ಕಾಲು ಭಾಗ ಮುಗಿದಿದ್ದು ೮೦೦ಕ್ಕೂ

ಹೆಚ್ಚು ವಿದ್ಯಾರ್ಥಿನಿಯರ ವಿದ್ಯಾಭ್ಯಾಸಕ್ಕೆ ಅನುವಾಗಿದೆ. ಈ ಕಟ್ಟಡಕ್ಕೆ ಸದ್ಭಕ್ತರ ಸಹಾಯದಿಂದ ಸುಮಾರು ೧೦ ಲಕ್ಷ ರೂಪಾಯಿಗಳನ್ನು ವ್ಯಯಿಸಲಾಗಿದೆ. ಕಾಲೇಜ-ಗ್ರಂಥಾಲಯ ಕಟ್ಟಡವು ಸುಮಾರು ೪ ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣಗೊಳ್ಳಲಿದೆ. ೩ ಲಕ್ಷ ರೂಪಾಯಿಗಳ ಅಂದಾಜು ವೆಚ್ಚದ ಕಾಲೇಜ-ಸಭಾಗೃಹವೊಂದರ ನಿರ್ಮಾಣವನ್ನು ಯೋಜಿಸಲಾಗಿದೆ. ಕಾಲೇಜ ಕಟ್ಟಡದ ವಿಸ್ತರಣೆಗಾಗಿ ೪ ಲಕ್ಷ ರೂಪಾಯಿಗಳ ಅಂದಾಜು ಪತ್ರಿಕೆ ಸಿದ್ಧವಾಗಿದೆ. ಮಹಿಳಾ ಕಾಲೇಜದ ಈ ನೂತನ ಕಟ್ಟಡದ ಉದ್ಘಾಟನಾ ಸಮಾರಂಭವು ಇನ್ನು ೨-೩ ತಿಂಗಳುಗಳಲ್ಲಿ ಜರುಗಲಿದೆ.

ಎರಡನೆಯದಾಗಿ "ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ." ಇದು ದೇಶವಿದೇಶಗಳಲ್ಲಿ ಬಸವಧರ್ಮ ತತ್ವಪ್ರಚಾರ ಮಾಡಲು ಸಂಸ್ಥಾಪಿತವಾದ ಧರ್ಮ ಸಂಸ್ಥೆ. ಈ ಸಂಸ್ಥೆಯು ಪಬ್ಲಿಕ್ ಟ್ರಸ್ಟ್ ಆ್ಯಕ್ಟ ಪ್ರಕಾರ ರಜಿಸ್ಟರ್ ಆಗಿ ಸದಸ್ಯರೆಲ್ಲರ ಸಹಕಾರದೊಡನೆ ಬೆಳೆಯುತ್ತಲಿದೆ. ಈ ಸಂಸ್ಥೆಯ ಕಾರ್ಯಕಲಾಪಗಳನ್ನು ವಿಶಾಲಗೊಳಿಸುವದಕ್ಕಾಗಿ ೨೫ ಲಕ್ಷ ರೂಪಾಯಿಗಳ ಯೋಜನೆಯ ಬೃಹತ್ ಕಟ್ಟಡವೊಂದು ನಿರ್ಮಾಣಗೊಳ್ಳಲಿದೆ. ಈಗಾಗಲೇ ಸುಮಾರು ೪ ಲಕ್ಷ ರೂಪಾಯಿಗಳ ವೆಚ್ಚದ ಭಾಗಶಃ ಕಟ್ಟಡವು ನಿರ್ಮಾಣಗೊಂಡಿದೆ. ಮೂರು ಅಂತಸ್ತುಗಳನ್ನು ಬಾಡಿಗೆ ರೂಪದಲ್ಲಿ ಕೊಟ್ಟು ನಾಲ್ಕನೆಯ ಅಂತಸ್ತನ್ನು ಸಂಸ್ಥೆಯ ಆಡಳಿತ ವಿಭಾಗಕ್ಕೆ ಮೀಸಲಿರಿಸಲಾಗುವದು. ಈ ಸಂಸ್ಥೆಯಂಗವಾಗಿ ಸಂಸ್ಕೃತಿ ಪ್ರಚಾರೋಪನ್ಯಾಸ ಮಾಲೆಯನ್ನು ಪ್ರಾರಂಭಿಸಿದ್ದು ಈಗಾಗಲೇ ಕರ್ನಾಟಕದಲ್ಲಿ ೧೮ ಮತ್ತು ತಮಿಳುನಾಡಿನಲ್ಲಿ ೧ ಹೀಗೆ ಒಟ್ಟು ೧೯ ಶಿಬಿರಗಳನ್ನು ಜರುಗಿಸಲಾಗಿದೆ. ಈ ಉಪನ್ಯಾಸಗಳೇ ಕಿರಿಯ ಹೊತ್ತಿಗೆಗಳಾಗಿ ಹೊರಬಂದು ತುಂಬಾ ಜನಪ್ರಿಯತೆಯನ್ನು ಗಳಿಸಿವೆ. ಇನ್ನು ಕೆಲವೇ ದಿನಗಳಲ್ಲಿ "ವೀರಶೈವ ಭಾರತಿ" ಗ್ರಂಥಶೀರ್ಷಿಕೆ ಪ್ರಾರಂಭವಾಗಲಿದೆ. ಇದರಲ್ಲಿ ಕಿರಿಯರಿಗೆ ಸತ್‌ಸಂಸ್ಕಾರವನ್ನು ನೀಡಲು ಸರಳ ಭಾಷೆಯಲ್ಲಿ ವೀರಶೈವ ಕವಿಗಳ, ಶರಣರ ಜೀವನ ಚರಿತ್ರೆಗಳನ್ನು ಹೊರತರುವ ಯೋಜನೆಯನ್ನು ರೂಪಿಸಲಾಗಿದೆ. ಈ ಸಂಸ್ಥೆಯ ಇನ್ನೊಂದು ಅಂಗವಾದ ಧಾರ್ಮಿಕ ಮಾಸಿಕ "ಪರಂಜ್ಯೋತಿ"ಯನ್ನು ನವ್ಯ ರೀತಿಯಲ್ಲಿ ರೂಪಿಸಬೇಕೆಂದು ಯೋಚಿಸಲಾಗಿದೆ.

ಇನ್ನು ಮೂರನೆಯದಾಗಿ "ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ." ಇದು, ಸಾಮಾಜಿಕ-ಶೈಕ್ಷಣಿಕ-ಧಾರ್ಮಿಕ ರಂಗದಲ್ಲಿ ಸೇವೆ ಮಾಡಲು ತರಬೇತಿ ನೀಡಿ, ಯೋಗಾಭ್ಯಾಸಿಗಳನ್ನಾಗಿ ಮಾಡಿ, ಶಿಕ್ಷಣವನ್ನು ನೀಡಿ, ಶಿವಯೋಗ ಸಾಧಕರನ್ನು ಸಿದ್ಧಗೊಳಿಸುವ ಸಂಸ್ಥೆ. ಈ ಸಂಸ್ಥೆಯು ದ್ವಾದಶ ವಾರ್ಷಿಕೋತ್ಸವವನ್ನು ಇದೇ ವರ್ಷ ಬಹು ವಿಜೃಂಭಣೆಯಿಂದ ಆಚರಿಸಲಾಯಿತು, ೩೨ ಜನ ಸಾಧಕರು ಸಿದ್ಧರಾಗಿ ಮಠಾಧಿಪತಿಗಳಾಗಿ ಸಮಾಜ ಸೇವೆ ಗೈಯ್ಯುತ್ತಲಿದ್ದಾರೆ.

ಶ್ರೀಮಠದ ಮಹತ್ವದ ಕಾರ್ಯಚಟುವಟಿಕೆಯ ಇನ್ನೊಂದು ಅಂಗವೆಂದರೆ "ಶ್ರೀ ಜಗದ್ಗುರು ಮೂರುಸಾವಿರಮಠದ ಗ್ರಂಥಮಾಲೆ. ಈ ಮಾಲೆಯಲ್ಲಿ ಈಗಾಗಲೇ

೯೮ ಕೃತಿ ಕುಸುಮಗಳು ಅರಳಿವೆ. ಶಿವರಾತ್ರಿಯ ಶುಭಸಂದರ್ಭದಲ್ಲಿ ಈ ಮಾಲೆಯು ಕೃತಿ ಶತಮಾನೋತ್ಸವವನ್ನಾಚರಿಸುವ ಯೋಜನೆ ಇದೆ. ಇದೇ ಕಾಲಕ್ಕೆ ಡಾ|| ಪುಟ್ಟ ರಾಜ ಕವಿಗವಾಯಿಗಳಿಂದ ರಚಿತವಾದ "ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಪುರಾಣ"ವನ್ನು ಸ್ವತಃ ಪುರಾಣ ಕರ್ತರಿಂದಲೇ ಹೇಳಿಸಲು ನಿರ್ಧರಿಸಲಾಗಿದೆ.

"ವೀರಶೈವ ಗ್ರಂಥಾಲಯ"ವು ನಮ್ಮ ಕಾರ್ಯಕ್ಷೇತ್ರದ ಬೇರೊಂದು ಅಂಗ. ಪ್ರಪಂಚದ ಎಲ್ಲ ಭಾಷೆಗಳಲ್ಲಿ ಬರೆಯಲ್ಪಟ್ಟ ವೀರಶೈವ ಧರ್ಮ ಗ್ರಂಥಗಳನ್ನು ಸಂಶೋಧ ಕರಿಗಾಗಿ ಒಂದೆಡೆಯಲ್ಲಿ ಕೂಡಿಸಿಡುವದನ್ನು ನಿಯೋಜಿಸಲಾಗಿದ್ದು. ಈಗಾಗಲೇ ಅದರ ಸಂಗ್ರಹ ಕಾರ್ಯ ನಡೆದಿರುತ್ತದೆ.

ಜಾಗತಿಕ ಧರ್ಮ ಮತ್ತು ಶಾಂತಿ ಸಮ್ಮೇಳನ **(World Conference on religion and peace U.S.A.)** ದ ಧ್ಯೇಯ ಧೋರಣೆಗಳನ್ನು ಕರ್ನಾಟಕದಲ್ಲಿ ಮುಂದುವರಿಸುವದಕ್ಕಾಗಿ ಕ್ರಿ. ಶ. ೧೯೭೭ರಲ್ಲಿ ಶ್ರೀ ಮಠದಲ್ಲಿ ಸಂಸ್ಥಾಪಿತವಾದ "ಅಂತ ರಾಷ್ಟ್ರೀಯ ಧಾರ್ಮಿಕ ಕೇಂದ್ರ"ವು ಈಗಾಗಲೇ ೩ ಸ್ಥಳಗಳಲ್ಲಿ ಪ್ರಚಾರ ಕಾರ್ಯವನ್ನು ನಿರ್ವಹಿಸಿದೆ.

"ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಕೀರ್ತನ ಮಹಾವಿದ್ಯಾಲಯ"ವು ಧರ್ಮ ಬೋಧಕರನ್ನು, ಕೀರ್ತನಕಾರರನ್ನು ತರಬೇತಿಗೊಳಿಸುವ ಸಂಸ್ಥೆ. ಈಗ ೪೦ ಜನ ವಿದ್ಯಾರ್ಥಿಗಳು ಇಲ್ಲಿ ಅಭ್ಯಸಿಸುತ್ತಿದ್ದಾರೆ. ಈ ಸಂಸ್ಥೆಯೂ ಸಹ ಪಬ್ಲಿಕ್ ಟ್ರಸ್ಟ ಆ್ಯಕ್ಟ ಪ್ರಕಾರ ರಜಿಸ್ಟರ್ ಆಗಿದೆ. ಇದರ ಮೂರನೆಯ ವಾರ್ಷಿಕೋತ್ಸವವು ಮುಂದಿನ ತಿಂಗಳಿ ನಲ್ಲಿ ಜರುಗಲಿದೆ.

ಬೆಳಗಾಂವ ಜಿಲ್ಲೆಯ ಘಟಪ್ರಭೆಯಲ್ಲಿ ಮೆರೆಯುತ್ತಿರುವ "ಶ್ರೀ ಜಗದ್ಗುರು ಗುರು ಸಿದ್ಧೇಶ್ವರ ಸಹಕಾರಿ ಆಸ್ಪತ್ರೆ"ಯು ಶ್ರೀ ಮಠದ ಇನ್ನೊಂದು ಪ್ರಮುಖ ಕಾರ್ಯಾಂಗ. ಈ ಸಂಸ್ಥೆಯು ೮೦ ಎಕರೆ ವಿಸ್ತೀರ್ಣದ ನಿಸರ್ಗ ರಮಣೀಯ ಪ್ರಶಸ್ತ ಸ್ಥಳದಲ್ಲಿ ಕಂಗೊಳಿಸುತ್ತಿರುವ ವಿಶಾಲ ಹಾಗೂ ಸುಂದರ ಕಟ್ಟಡದಲ್ಲಿ ನೆಲೆಗೊಂಡಿದೆ. ಭಾರತ ದಲ್ಲಿಯೇ ಮೊಟ್ಟಮೊದಲನೆಯದಾಗಿ ಸಹಕಾರಿ ತಳಹದಿಯ ಮೇಲೆ ಸ್ಥಾಪಿತವಾದ ಈ ಸಹಕಾರಿ ಸಂಸ್ಥೆಯು ಘನವಾದ ಪ್ರಶಂಸನೀಯ ವೈದ್ಯಕೀಯ ಸೇವೆಯನ್ನು ಸಲ್ಲಿಸುತ್ತಲಿದೆ. ಆಸ್ಪತ್ರೆಯ ಪ್ರಮುಖ ವೈದ್ಯರೂ, ಸರ್ಜನ್‌ರೂ ಆದ ಡಾ|| ಬಿ. ಎಲ್. ಪಾಟೀಲರ ಅವಿಶ್ರಾಂತ ನಿಸ್ವಾರ್ಥ ಸೇವೆಯಿಂದ ಹಾಗೂ ಎಲ್ಲ ಸಿಬ್ಬಂದಿಯ ಪ್ರಾಮಾಣಿಕ ಸೇವೆ ಯಿಂದ ಹಾಗೂ ಎಲ್ಲ ಸಿಬ್ಬಂದಿಯ ಪ್ರಾಮಾಣಿಕ ಸೇವೆಯಿಂದ ಬೆಳೆಯುತ್ತ ಸಾಗಿದೆ. ಈ ಸಂಸ್ಥೆಯ ವೃದ್ಧಿಗಾಗಿ ಮತ್ತೆ ೨೫ ಲಕ್ಷ ರೂಪಾಯಿಗಳ ಯೋಜನೆಯನ್ನು ರೂಪಿಸಿದ್ದು ಕಾರ್ಯವು ಪ್ರಾರಂಭವಾಗಿದೆ. ಬಡರೋಗಿಗಳ ಉಚಿತ ಪ್ರಸಾದನಿಲಯಕ್ಕಾಗಿ ಅಂದಾಜು ಮಾಡಿದ ೪ ಲಕ್ಷ ರೂಪಾಯಿಗಳಲ್ಲಿ ಸದ್ಭಕ್ತರ ಸಹಾಯ ಸರಕಾರದ ದ್ಯೋತಕವಾಗಿದೆ.

ಈಗಾಗಲೇ ಒಂದು ಲಕ್ಷ ರೂಪಾಯಿಗಳು ಸಂಗ್ರಹವಾಗಿವೆ. ಮುಂದಿನ ಯೋಜನೆ ಇಂತಿವೆ. ದವಾಖಾನೆಯ ಕಟ್ಟಡ ವಿಸ್ತರಣೆಗಾಗಿ ೧೦ ಲಕ್ಷ, ಧರ್ಮಶಾಲೆಗೆ ೨ ಲಕ್ಷ, ಹೆರಿಗೆ ಆಸ್ಪತ್ರೆಗೆ ೨ ಲಕ್ಷ, ಕ್ಷಯರೋಗ ಚಿಕಿತ್ಸಾಲಯ ಕಟ್ಟಡ ವಿಸ್ತರಣೆ ಅಂದರೆ ಪ್ರತ್ಯೇಕ ವಾಗಿ ೧೦೧ ಚಿಕ್ಕ ಚಿಕ್ಕ ಬಂಗ್ಲೆಗಳನ್ನು ಕಟ್ಟಿಸುವದಕ್ಕಾಗಿ ೫ ಲಕ್ಷ, ಆಸ್ಪತ್ರೆಯ ಶಸ್ತ್ರೋಪ ಕರಣಗಳನ್ನು ಖರೀದಿಸಲು ೪ ಲಕ್ಷ ಹೀಗೆ ಯೋಜನೆಗಳನ್ನು ರೂಪಿಸಲಾಗಿದ್ದು ಈ ಯೋಜನೆಗಳ ಯಶಸ್ವಿಗೆ ಮಹಾಜನಗಳ ಸಹಾಯ ಸಹಕಾರಗಳನ್ನು ಕೋರಲಾಗಿದೆ.

ಇವುಗಳಲ್ಲದೇ ಮೂರುಸಾವಿರಮಠದ ಆವರಣದಲ್ಲಿ ಇನ್ನೂ ಹಲವಾರು ಸಂಘ-ಸಂಸ್ಥೆಗಳು, ಹಾಯಸ್ಕೂಲ್ ಕಾಲೇಜುಗಳು ನಡೆಯುತ್ತವೆ. ಅವೆಲ್ಲವೂ ಸರ್ವಧರ್ಮ ದವರ ಸಹಾಯ ಸಹಕಾರಗಳ ಪ್ರತೀಕ. ಎಲ್ಲ ಸಂಸ್ಥೆಗಳೂ ಪಬ್ಲಿಕ್ ಟ್ರಸ್ಟ್ ಆ್ಯಕ್ಟ ಪ್ರಕಾರ ರಜಿಸ್ಟರ್ ಆಗಿವೆ. ಮೂರುಸಾವಿರಮಠದ ಮಹಾದ್ವಾರ ಸಕಲರಿಗೂ ಮುಕ್ತ ದ್ವಾರವಾಗಿ ತೆರೆದೇ ನಿಂತಿದೆ. ಇಲ್ಲಿ ಸರ್ವರಿಗೂ ಸದಾ ಸುಸ್ವಾಗತವಿದೆ. ಹರಿಜನ-ಗಿರಿ ಜನ ಇತ್ಯಾದಿ ಭಿನ್ನ-ಭೇದ ಇಲ್ಲಿಲ್ಲ. ಇದು ಇಂದಿನದಷ್ಟೇ ಅಲ್ಲ. ಬಹು ಹಿಂದಿನಿಂದಲೂ ಇದೇ ಪರಂಪರೆ ಸಾಗುತ್ತ ಬಂದಿದೆ. ಇಷ್ಟು ಮಾತ್ರ ನಿಜ, ಸಕಲರಿಗೂ ಸುಸಂಸ್ಕಾರ ವನ್ನು ನೀಡಿ ಅವರನ್ನು ನಿಜಮಾನವರನ್ನಾಗಿ ಪರಿವರ್ತಿಸುವದೇ ಈ ಮಠದ ಮುಖ್ಯ ಗುರಿಯಾಗಿದೆ. ಬಸವಧರ್ಮವೂ ಇದನ್ನೇ ಒತ್ತಿ ಹೇಳುತ್ತದೆ. ಯಾರೇ ಇರಲಿ ನಮ್ಮ ಶಕ್ತಿಗೆ ಶಕ್ಯವಾದಷ್ಟು ಬಿದ್ದವರನ್ನು ಎತ್ತುವದೇ ಈ ಮಠದ ಕಾಯಕ. ಬಿದ್ದವರನ್ನು, ಬೀಳುತ್ತಿರುವವರನ್ನು, ಬೀಳುವವರನ್ನು ಎಬ್ಬಿಸುವದೇ ಮಾನವ ಧರ್ಮ. ಇದೇ ಧರ್ಮವನ್ನು ನಿಮ್ಮದೇ ಆದ ಈ ಮಠ ಹಿಂದೆ, ಇಂದು, ಮುಂದೆ, ಪಾಲಿಸಿದುದು, ಪಾಲಿಸುತ್ತಿರುವದು, ಪಾಲಿಸಲಿರುವದು ತಮಗೆಲ್ಲ ತಿಳಿದೇ ಇದೆ. ನಮ್ಮದು ಬಿಡುವಿಲ್ಲದ ಜೀವನ. ಸತ್ಯ-ಶುದ್ಧ ಕಾಯಕವೇ ಶಿವಪೂಜೆಯೆಂದು ಭಾವಿಸಿ ಈ ದಿಶೆಯಲ್ಲಿ ಸಾಗಿ ದ್ದೇವೆ. ಭಕ್ತರ ಸಹಾಯ ಸಹಕಾರಗಳೇ ನಮಗೆ ಆಧಾರ ಸ್ತಂಭ.

ಈ ವರ್ಷ ನವಂಬರ ತಿಂಗಳಲ್ಲಿ ಬೇರೊಂದು ಬಗೆಯಲ್ಲಿ ಸಾಮಾಜಿಕ-ಧಾರ್ಮಿಕ ಕಾಯಕಗಳನ್ನು ನೆರವೇರಿಸಬೇಕೆಂದು ಮನಸ್ಸು ಮಾಡಿದ್ದೇವೆ, ಅದುವೇ ಪಾದಯಾತ್ರೆ. ಹುಬ್ಬಳ್ಳಿಯಿಂದ ಹೊರಟು ಬದಾಮಿ ತಾಲೂಕಿನ ಸುಕುಮಾರನ ಸುಕ್ಷೇತ್ರ ಶಿವಯೋಗ ಮಂದಿರದವರೆಗೆ ಪಾದಯಾತ್ರೆಯನ್ನಿಟ್ಟುಕೊಂಡು, ಮಧ್ಯದಲ್ಲಿ ಹತ್ತುವ ಹಳ್ಳಿ-ಹಳ್ಳಿಗಳಲ್ಲಿ ಸಂಸ್ಕೃತಿ ಪ್ರಚಾರೋಪನ್ಯಾಸ ಶಿಬಿರ, ಧಾರ್ಮಿಕ ಸಭೆ-ಸಮ್ಮೇಲನಗಳು, ಲಿಂಗಧಾರಣ ಮುಂತಾದ ಕಾರ್ಯಗಳನ್ನು ನೆರವೇರಿಸಬೇಕೆಂಬುವ ಬಗ್ಗೆ ಸಿದ್ಧತೆ ನಡೆಸಲಾಗಿದೆ. ನಮ್ಮೊಡನೆ ಕೆಲ ಜನ ಸ್ವಾಮಿಗಳು, ನಮ್ಮ ಶಿವಯೋಗಿ ಸಂಘದ ಸಾಧಕರು ಹಾಗೂ ಭಕ್ತರು ಈ ಪಾದಯಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ.

ಬರುವ ವರ್ಷ ಅಂದರೆ ೧೯೮೬ ಅಗಸ್ಟ ೩೦ ರಿಂದ ೭ ದಿನಗಳವರೆಗೆ ಅಮೇರಿಕೆಯ

ನ್ಯೂಯಾರ್ಕದಲ್ಲಿ ಜರುಗಲಿರುವ ಮೂರನೆಯ ಜಾಗತಿಕ ಧರ್ಮ ಶಾಂತಿ ಸಮ್ಮೇಲನಕ್ಕೆ ಆಮಂತ್ರಣ ಈಗಾಗಲೇ ಬಂದಿದ್ದು ಸದ್ಭಕ್ತರೆಲ್ಲರ ಒಪ್ಪಿಗೆ ದೊರೆತಲ್ಲಿ ಹೋಗುವ ವಿಚಾರ ವನ್ನಿಟ್ಟುಕೊಂಡಿದ್ದೇವೆ.

ಇನ್ನೂ ಹಲವು ಹತ್ತಾರು ಯೋಜನೆಗಳನ್ನು ಹಾಕಿಕೊಂಡಿದ್ದು, ಬೆಂಗಳೂರಿನಲ್ಲಿ ಮೂರುಸಾವಿರಮಠದ ಶಾಖೆಯೊಂದನ್ನು ಸ್ಥಾಪಿಸಿ ಅಲ್ಲಿಯೂ ಧರ್ಮ ಪ್ರಚಾರ ಕಾರ್ಯ ಕೈಕೊಳ್ಳಬೇಕೆಂದು ಮಾಡಿದ್ದೇವೆ. ಶಾಖಾಮಠಗಳ ಜೀರ್ಣೋದ್ಧಾರ ಹಾಗೂ ತಮಿಳು ನಾಡಿನ ಸೇಲಂದಲ್ಲಿ ಹೊಸ ಶಾಖಾಮಠದ ಕಟ್ಟಡ ಕಾರ್ಯಗಳು ನಡೆದಿವೆ. ತಮಿಳು ನಾಡಿನಲ್ಲಿಯೂ ಕೂಡ ಬಸವ ತತ್ತ್ವಪ್ರಚಾರ ಕೈಕೊಳ್ಳಲಿದ್ದೇವೆ.

ಏನೇ ಕಾರ್ಯಗೈಯಲಿ, ಅದೆಲ್ಲವೂ ಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ಕೃಪೆ ಹಾಗೂ ಸದ್ಭಕ್ತರ ಸಹಾಯ-ಸಹಕಾರಗಳ, ದ್ಯೋತಕ. ಇವೆರಡೂ ಚಿಂತಾಮಣಿಯೆಂದು ಭಾವಿಸಿ ಸಾಮಾಜಿಕ ಕಾರ್ಯದಲ್ಲಿ ತೊಡಗಿದ್ದೇವೆ.

## ಪತ್ರಿಕಾ ಕರ್ತರೇ

ಪ್ರತಿವರ್ಷದಂತೆ ಈ ವರ್ಷವೂ ನಮ್ಮ ಕರೆಗೆ ಓಗೊಟ್ಟು ಬಂದಿರುವಿರಿ, ನಮ್ಮ ವಿಚಾರಗಳನ್ನು ಕೇಳಿರುವಿರಿ, ನಮಗೆ ಅತಿ ಸಂತಸವಾಗಿದೆ. ಒಬ್ಬ ಸಾಮಾಜಿಕ ಸೇವಕ ತಾನು ಮಾಡುವ, ಮಾಡಿದ, ಕಾರ್ಯ ಸಾಧನೆಗಳನ್ನು ಜನರಿಗೆ ತಿಳಿಸಿದಾಗ, ಅವರೆಲ್ಲರೂ ಅವುಗಳನ್ನು ಅರ್ಥ ಮಾಡಿಕೊಂಡರೆ ಅದೇ ಅವನಿಗೆ ತೃಪ್ತಿ; ಪ್ರೋತ್ಸಾಹ ನೀಡಿದರೆ ಮತ್ತಷ್ಟು ಬಲ ಬರುವದು. ಅದಕ್ಕಾಗಿ ಈ ವರ್ಷ ಬರವಣಿಗೆ ರೂಪದಲ್ಲಿಯೇ ನಮ್ಮ ವಿಚಾರಗಳನ್ನು ನಿಮ್ಮ ಕೈಗಿತ್ತರೆ ಮತ್ತಷ್ಟು ಯೋಗ್ಯವಾದೀತು ಮತ್ತು ನಿಮಗೆ ಸಲಹೆ ಸೂಚನೆಗಳನ್ನು ನೀಡಲು ಅನುಕೂಲವಾದೀತೆಂದು ಬಗೆದು ಈ ಕಾರ್ಯವೆಸಗಿದ್ದೇವೆ.

ನಿಮ್ಮೆಲ್ಲರ ಸಹಕಾರವು–ನಿಮ್ಮದೇ ಆದ ಶ್ರೀ ಮೂರುಸಾವಿರಮಠಕ್ಕೆ ಸದಾ ದೊರೆಯುತ್ತಿರಲಿ. ಸಾರ್ವಜನಿಕರಿಗೆ ಸುಜ್ಞಾನ–ಒಳ್ಳೆಯ ತಿಳಿವಳಿಕೆಗಳನ್ನು ನೀಡುವ ಪವಿತ್ರವಾದ ನಿಮ್ಮ ಪತ್ರಿಕೋದ್ಯಮವು ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರನ ನಿರಂತರ ಕೃಪೆಯಿಂದ ಉತ್ತರೋತ್ತರ ಅಭಿವೃದ್ಧಿ ಹೊಂದಿ ಬಾಳಿ ಬೆಳಗಲೆಂದು ಅಂತಃ ಕರಣಪೂರ್ವಕ ಹಾರೈಸಿ ವಿರಮಿಸುತ್ತೇವೆ.

## ವಿಶ್ವವಿಭೂತಿ ಬಸವಣ್ಣನವರು

ಮಾನವ ಕುಲವು ನೀತಿಯ ನೆಲೆಯನ್ನು ತಿಳಿಯದೆ, ಕತ್ತಲೆಯಲ್ಲಿ ಮುಳುಗುತ್ತಿರುವ ಪ್ರಸಂಗದಲ್ಲಿ ವಿಶ್ವವಿಭೂತಿಗಳು ಬಯಸುತ್ತಾರೆ. ಅವರು ಸಮಷ್ಟಿ ಶಕ್ತಿ ಮಹಾಪುರುಷನ ರೂಪದಲ್ಲಿ ಬಂದು, ಮಾರ್ಗದರ್ಶನ ನೀಡಿ, ರಾಷ್ಟ್ರಕ್ಕೆ ದಾರಿದೀಪವಾಗುತ್ತಾರೆ. ಮಾನವ ರನ್ನು ನಿಜವಾದ ಮಾನವರನ್ನಾಗಿ ಮಾಡಿ ಅವರ ವ್ಯಕ್ತಿತ್ವವನ್ನು ವಿಕಾಸ ಮಾಡಿ, ದೇವತ್ವ ಕ್ಕೇರಿಸುವ ಶಕ್ತಿ ಮಹಾಪುರುಷರ ಏಕಮಾತ್ರ ಗುರಿಯಾಗಿರುತ್ತದೆ. ವಿಶ್ವವಿಭೂತಿಗಳು

ದೈವೀಪ್ರಕಾಶದಲ್ಲಿ ಸತ್ಯವನ್ನು ಕಂಡುಕೊಂಡು ಸತ್ಯವನ್ನು ಜನತೆಯ ಜೀವನದಲ್ಲಿ ಬಿಂಬಿಸಲು ಹೋರಾಡುತ್ತಾರೆ. ಸತ್ಯಕ್ಕಾಗಿ ಪ್ರಾಣಾರ್ಪಣೆ ಮಾಡಲು ಸಿದ್ಧರಿರುತ್ತಾರೆ. ಅವರ ಆಧ್ಯಾತ್ಮಿಕ ತೇಜಸ್ಸು ಲೋಕ ಕಲ್ಯಾಣಕ್ಕೆ ಆಸರಗಂಭವಾಗುತ್ತದೆ. ಅವರು ಅಂದಿನ ಅಸಹ್ಯ ಪರಿಸ್ಥಿತಿಯನ್ನು ನೋಡಿ, ಮನನೊಂದು, ಅದನ್ನು ಹೊಡೆದೋಡಿಸುತ್ತಾರೆ. ಅದಕ್ಕಾಗಿ ವಿವಿಧ ತೊಂದರೆಗಳನ್ನು ಸಹಿಸುತ್ತಾರೆ. ಅಂತರಂಗ ಶಕ್ತಿಯನ್ನು ಗಳಿಸುತ್ತಾರೆ. ನಿಷ್ಠುರವಾದ ಏಕಾಂತ ಜೀವನ, ಚಿಂತನ, ಧ್ಯಾನದಲ್ಲಿ ಮಗ್ನರಾಗಿ, ಹೊಸ ಬೆಳಕನ್ನು ಕಂಡುಕೊಳ್ಳುತ್ತಾರೆ. ಆತ್ಮಿಕ ತೇಜಸ್ಸನ್ನು ಬೆಳೆಸುತ್ತಾರೆ. ಜಾತಿ-ಭೇದಗಳನ್ನು ತಿರಸ್ಕರಿಸುತ್ತಾರೆ. ಸಾಮಾನ್ಯ ಜನತೆಯಲ್ಲಿ ಸತ್ಯಶುದ್ಧವಾದ ಭಕ್ತಿಯ ಬಳ್ಳಿಯನ್ನು ಹಬ್ಬಿಸುತ್ತಾರೆ.

ಒಂದೆಡೆ ಸ್ವಾಮಿ ವಿವೇಕಾನಂದರು ಈ ರೀತಿ ತಿಳಿಸಿದ್ದಾರೆ—

"They (the Prophets) are all manifestations of the infinite God. They are all pure and unselfish. They struggled and gave up their lives for us poor human beings."

"ವಿಶ್ವವಿಭೂತಿ ಮಹಾತ್ಮರು ಅನಂತನಾದ ಪರಮಾತ್ಮನ ಆವಿಷ್ಕಾರವೇ ಆಗಿದ್ದಾರೆ. ಅವರು ಪವಿತ್ರಾತ್ಮರೂ ಆಗಿದ್ದು, ಸ್ವಾರ್ಥತ್ಯಾಗವನ್ನು ಮಾಡಿದವರಾಗಿರುತ್ತಾರೆ. ಅವರು ನಮಗಾಗಿ, ದೀನ ಮಾನವರ ಕಲ್ಯಾಣಕ್ಕಾಗಿ ಹೋರಾಡಿ, ಪ್ರಾಣಾರ್ಪಣೆ ಮಾಡುತ್ತಾರೆ. ಅವರು ಅಪರಿಮಿತ ಶಕ್ತಿಯುಳ್ಳವರಾಗಿ, ಶಿವನ ರೂಪವೇ ಅವರಾಗಿರುತ್ತಾರೆ."

ಸದ್ವಿಚಾರ, ಸದ್ವಾಣಿ, ಸದಾಚಾರ, ಸತ್ಕೃತಿ, ಸರಿಯಾದ ತಿಳಿವಳಿಕೆ, ಅನ್ಯರನ್ನು ನೋಯಿಸದಿರುವದು, ಸಕಲರಿಗೆ ಲೇಸನೆ ಬಯಸುವದು, ಇವೇ ಅವರ ಮುಖ್ಯ ಸಾಧನಗಳಾಗಿರುತ್ತವೆ. ವಿಶ್ವವಿಭೂತಿಗಳು ನಿತ್ಯವೂ ನ್ಯಾಯ ನಿಷ್ಠುರರು. ಲೋಕ ವಿರೋಧಿ ಶರಣರು ಆರಿಗೂ ಅಂಜುವವರಲ್ಲ. ಭಕ್ತಿ-ಭಾಂಡಾರಿಗಳೂ ಅಹುದು, ವಿನಯ ಭಾಂಡರಿಗಳೂ ಅಹುದು. ದುಷ್ಟ ನಿಗ್ರಹ, ಶಿಷ್ಟ ಪರಿಪಾಲನೆಯೇ ಇವರ ಮುಖ್ಯ ಕರ್ತವ್ಯವಾಗಿರುತ್ತದೆ. ಈ ಬಗೆಯ ಮಹಾಶಕ್ತಿಯನ್ನು, ದಿವ್ಯ ಚೇತವವನ್ನು ಪಡೆದವರು ನಾಡಿನ, ರಾಷ್ಟ್ರದ ಪುಣ್ಯವಿಶೇಷದಿಂದ ಉದಯಿಸುತ್ತಾರೆ. ಇಂತಹ ಪುಣ್ಯಪುರುಷರ ಮಾಲಿಕೆಯಲ್ಲಿ ಮಹಾತ್ಮಾ ಬಸವಣ್ಣನವರು ಅಗ್ರಗಣ್ಯರು. ಈ ದಿವ್ಯಶಕ್ತಿಯ ಪ್ರಭೆಯೇ ನಾಡಿನಲ್ಲಿ ಬೆಳಕನ್ನು ನೀಡಿದೆ, ನೀಡುತ್ತಲಿದೆ.

ಶೈವ ಪ್ರಭೇದಗಳೊಡನೆ ಬೆರೆತು ಬಂದ ವೀರಶೈವವು ಶೈವಾಧಾರಿತವಾದರೂ, ತನ್ನದೇ ಆದ ನವೀನ ದರ್ಶನಗಳ ಗಾಳಿ ಬೆಳಕುಗಳನ್ನು ಉಂಡು ಸಂಪೂರ್ಣ ಸುಸಂಬದ್ಧವೂ ಆಯಿತು. ಇಂಥದೊಂದು ಶೈವಾಂತರಿತ ವೈಚಾರಿಕ ಕ್ರಾಂತಿಯಲ್ಲಿ ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಹಿತ್ಯಕ ಕ್ರಾಂತಿಗಳೂ ಒಳಗೊಂಡು ಮಹಾಕ್ರಾಂತಿಯ ಸ್ವರೂಪವನ್ನು ಹೊಂದಿ, ಆ ಮಹಾಕ್ರಾಂತಿಗೆ ಯುಗಪುರುಷನೂ, ಮಹಾ ಸಾಮರ್ಥ್ಯ ಶಾಲಿಯೂ ಆದಂಥ ಬಸವಣ್ಣನವರನ್ನು ಅಗ್ರಗಣ್ಯರನ್ನಾಗಿ ಪಡೆದು ವೀರಶೈವ

ಸಿದ್ಧಾಂತವು ವಿವೇಕಬದ್ಧವಾಗಿ ನಿರ್ಮಾಣಗೊಂಡಿತು. ಈ ಸಮಗ್ರ ಕ್ರಾಂತಿಯು ನಾಡಿ ನಾಡಿನಲ್ಲಿಯೂ ಪ್ರವಹಿಸಿ ಬಂದ ಚೈತನ್ಯಶಕ್ತಿಯೆಂದರೆ ಬಸವಣ್ಣನವರು. ಅವರೊಬ್ಬರು ವ್ಯಕ್ತಿಗಳಲ್ಲ, ಆದರೆ ಅನೇಕ ಶಕ್ತಿಗಳ ಕೇಂದ್ರ ಮೂರ್ತಿ. ಕಾರಣ ಅವರಲ್ಲಿ ದಯೆ ಯೊಂದಿಗೆ ಕಾರುಣ್ಯ, ಭಾವುಕತೆಯೊಂದಿಗೆ ದಾರ್ಶನಿಕತೆ, ಭಕ್ತಿಯೊಂದಿಗೆ ವಿಮರ್ಶೆ, ಶಾಂತಿಯೊಂದಿಗೆ ಕ್ರಾಂತಿ, ಮುಗ್ಧತೆಯೊಂದಿಗೆ ಪ್ರಬುದ್ಧತೆ, ರಾಜತ್ವದೊಂದಿಗೆ ಕಿಂಕರತ್ವ ಹೀಗೆ ಎಲ್ಲ ಶಕ್ತಿಗಳೂ ಸಮಯೋಚಿತವಾಗಿ ಕಂಡುಬರುತ್ತಿದ್ದವು. ಬಸವಣ್ಣನವರು ತಮ್ಮ ಧರ್ಮವನ್ನು ಯಾವುದೊಂದು ಸಂಕುಚಿತವಾದ ಮನೋವೃತ್ತಿಯಲ್ಲಿ ಕಂಡವರಲ್ಲ.

ಅಲ್ಲಮ ಪ್ರಭುಗಳು ವೈರಾಗ್ಯನಿಷ್ಠರಾಗಿಯೂ, ಚನ್ನಬಸವಣ್ಣನವರು ಜ್ಞಾನ ನಿಷ್ಠರಾಗಿಯೂ ಬೆಳಗಿದಂತೆ, ಬಸವಣ್ಣನವರು ಕ್ರಿಯಾನಿಷ್ಠರಾದ ಭಕ್ತಶ್ರೇಷ್ಠರಾಗಿ ವಿರಾಜಿಸಿದರು. ಅವರಲ್ಲಿ ಭಕ್ತಿಯ ವೆಗ್ಗಳತೆಯೊಂದಿಗೆ ಜ್ಞಾನದ ಅರಿವು, ಅನುಭವದ ಆಳ, ವೈರಾಗ್ಯದ ತಿರುಳುಗಳು ಮುಪ್ಪುರಿಗೊಂಡು ಜಾಜ್ವಲ್ಯಮಾನವಾಗಿವೆ. ಅವರು ತಮ್ಮಲ್ಲಿ ಭಕ್ತಿಯೆಂಬುದು ಸಾಸಿವೆಯ ಷಡ್ಭಾಗದಿನಿತಿಲ್ಲವೆಂದುಕೊಂಡರೂ ಸಾಗರದಷ್ಟು ಭಕ್ತಿಯುಳ್ಳ ಭಕ್ತಿ ಭಾಂಡಾರಿಗಳು, ಸಂಸಾರವೆಂಬ ಮಾಯೆಗೆ ಅಂಜಿದರೂ ಅದನ್ನು ಗೆದ್ದು ಸಿದ್ಧಹಸ್ತರಾದವರು. ಹೀಗೆ ಅವರು ಯಾವಾಗಲೂ ತಮ್ಮನ್ನು ಸಣ್ಣತನ ದಲ್ಲಿಯೂ, ಪರರನ್ನು ದೊಡ್ಡತನದಲ್ಲಿಯೂ ಕಂಡಿದ್ದಾರೆ. ತನಗಿಂತ ಕಿರಿಯರಿಲ್ಲವೆಂದು ಸಾರಿದ್ದಾರೆ. ಈ ಅವರ ಮಾತೇ ಅವರನ್ನು ಎಲ್ಲರಿಗಿಂತಲೂ ಹಿರಿಯರನ್ನಾಗಿ ಮಾಡಿದೆ. ಅವರು ತಮ್ಮ ನವೀನ ಸಿದ್ಧಾಂತವನ್ನು ಬಿತ್ತರಿಸಿದಾಗ ಸಂಪ್ರದಾಯದವರು ಕೆರಳಿದ ಸರ್ಪ ದಂತೆ ಭೋರ್ಗರೆಯುತ್ತ ಎದುರು ಬಂದರು. ಸಹನೆಗೊಳ್ಳದವರು ಅವರ ಈ ಕ್ರಾಂತಿ ಯನ್ನು ಕುಡಿಯಿದ್ದಾಗಲೇ ಚಿವುಟಿ ಒಗೆಯಬೇಕೆಂದು ಯತ್ನಿಸಿದರು. ಆದರೆ, ಅವರ ಸಂಘಟನಾಶಕ್ತಿ ಕುಡಿಯಿದ್ದಂತೆಯೇ ಹೆಮ್ಮರವಾಗಿ ಬಲಿತು ನಿಂತಿತು.

ಕ್ರಾಂತಿ ಪೂರ್ವದ ಕಾಲದಲ್ಲಿ ಧರ್ಮದ ಹೆಸರಿನಿಂದ ಡಂಬಾಚಾರ, ಅಂಧ ಶ್ರದ್ಧೆ, ವೈಚಾರಿಕ ಮೋಸಗಳು, ಅನೇಕ ಬಣಗಳಲ್ಲಿ ನುಚ್ಚುನೂರುಗೊಂಡು ಗುಂಪುಗಾರಿಕೆ ಉಪ ಜಾತಿಗಳ ವಿರಾಟಿಕೆಗಳಿಗೆ ಹೆಚ್ಚು ಆಸ್ಪದ ದೊರೆಯಿತು. ವರ್ಣಾಶ್ರಮವು ತನ್ನ ಮೂಲ ಸ್ಥಿತಿಯಿಂದ ತಪ್ಪಿಹೋಗಿ ಉಚ್ಚ–ನೀಚತ್ವದಲ್ಲಿ ಪರ್ಯವಸಾನಗೊಂಡಿತ್ತು. ಹೀಗಾಗಿ ಸಮಾಜ ಧರ್ಮಗಳ ಈ ಭೀಕರ ಸಾಂಕ್ರಾಮಿಕಗಳ ವಿರುದ್ಧ ಬಸವಣ್ಣನವರು ಕ್ರಾಂತಿಯ ಅಸ್ತ್ರವನ್ನು ಹೂಡಬೇಕಾಯ್ತು, ಅವರು ಆ ಅಸ್ತ್ರವನ್ನು ಹೂಡಿದರು. ಅವರ ಕರೆಗೆ ಅಸಂಖ್ಯಾತ ಶರಣರು ಓಗೊಟ್ಟರು. ಕೂಡಲ ಸಂಗಯ್ಯನು ಅನುಗ್ರಹಿಸಿದ. ಹೀಗಾಗಿ ಅವರ ಶರಣಸ್ತೋಮ ಸಮಾಜದ ಈರ್ಷೆಯಿಂದ ತಾತ್ಕಾಲಿಕವಾದ ಏಟಿನಿಂದ ಛಿನ್ನ ವಿಚ್ಛಿನ್ನವಾದರೂ ಅವರ ಧ್ಯೇಯ ಮಾತ್ರ ಸಚ್ಚಿದಾನಂದ ರೂಪವಾಗಿ ಬೆಳೆಯಿತು. ಸರ್ವರ ಮನ ಮನ ಹೃದಯದಾಳದಲ್ಲಿ ಭದ್ರವಾಗಿ ನೆಲೆಸಿತು.

ಮಹಾತ್ಮಾ ಬಸವಣ್ಣನವರು ಸಮಾಜವನ್ನು ಕಣ್ಣು ತೆರೆದು ನೋಡಿದರು.

ಮಾನವೀಯ ಧರ್ಮದ ಅನುಕಂಪವನ್ನು ಸ್ವತಂತ್ರ ವಿಚಾರಶೀಲತೆಯಿಂದ ಅವಲೋಕಿಸಿದರು. ಅದರ ಉದ್ಧಾರಕ್ಕಾಗಿ ಕಾರ್ಯಕ್ಷೇತ್ರವನ್ನು ರೂಪಿಸಿಕೊಂಡು, ಸಿದ್ಧರಾಗಿ ನಿಂತು ಹೋರಾಡಿದರು.

ಹನ್ನೆರಡನೆಯ ಶತಮಾನದ ಕ್ರಾಂತಿಯು ವೀರಶೈವ ಸಮಾಜದ ಉದ್ಧಾರದ ಮಾರ್ಗವಾಗಿದ್ದಿತು. ಬಸವಣ್ಣನವರ ಕರ್ತೃತ್ವಶಕ್ತಿಗೆ, ಯೋಗಿಗಳೂ, ತ್ಯಾಗಿಗಳೂ, ಸಿದ್ಧಪುರುಷರೂ ತಲೆಬಾಗಬೇಕಾಯ್ತು. ವಿರತಿ ಪುಂಗವ ಅಲ್ಲಮ ಪ್ರಭುಗಳೂ "ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ ಬತ್ತಿವಿಡಿದು ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತಿರ್ದಿತಯ್ಯಾ ಶಿವನ ಪ್ರಕಾಶ; ಆ ಪ್ರಕಾಶದೊಳಗೆ ಒಪ್ಪುತಿರ್ದರಯ್ಯಾ ಅಸಂಖ್ಯಾತ ಪ್ರಮಥ ಮಹಾ ಗಣಂಗಳು. ಶಿವಭಕ್ತರಿದ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೆ? ಶಿವಭಕ್ತರಿದ್ದ ದೇಶ ಪಾವನವೆಂಬುದು ಹುಸಿಯೇ? ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯ ಗುರುಸಂಗನ ಬಸವಣ್ಣನ ಮಹಿಮೆ ನೋಡಾ ಸಿದ್ಧರಾಮಯ್ಯ" ಎಂದು ಮುಂತಾಗಿ ವರ್ಣಿಸಿದ್ದಾರೆ. ಜ್ಯೋತಿರ್ಲಿಂಗ ಪ್ರಭೆಯನ್ನು ಬೆಳಗಿಸುವ ದಿವ್ಯ ಭವ್ಯ ವ್ಯಕ್ತಿತ್ವವುಳ್ಳ ಪುಣ್ಯ ಮೂರ್ತಿಯನ್ನು ಹರಿಸಿ, ಕೊಂಡಾಡಿದ್ದಾರೆ. ಮತ್ತೆ ಮುಂದೆ, "ಅದ್ವೈತವ ನುಡಿದು ಅಹಂಕಾರಿಯಾದನಯ್ಯಾ? ಬ್ರಹ್ಮವ ನುಡಿದು ಭ್ರಮಿತನಾದೆನಯ್ಯಾ, ಶೂನ್ಯವ ನುಡಿದು ಸುಖ ದುಃಖಕ್ಕೆ ಗುರಿಯಾದೆನಯ್ಯಾ ಗುಹೇಶ್ವರಾ ನಿಮ್ಮ ಶರಣ ಸಂಗನ ಬಸವಣ್ಣನ ಸಾನ್ನಿಧ್ಯದಿಂದಾನು ಸದ್ಭಕ್ತನಾದೆನಯ್ಯಾ" ಎನ್ನುವ ಈ ನುಡಿಯಲ್ಲಿ ಎನಿತು ಅರ್ಥವು ತುಂಬಿ ತುಳುಕಿದೆ ಎಂಬುದನ್ನು ನಿರೀಕ್ಷಿಸಬಹುದಾಗಿದೆ. ಪ್ರಭುದೇವರ ದೂರದೃಷ್ಟಿ, ವಿಶಾಲ ಹೃದಯವೂ ಅಲ್ಲದೆ ಮಹಾತ್ಮಾ ಬಸವಣ್ಣನವರ ಮೇಲಿರುವ ಅಪಾರ ಶ್ರದ್ಧೆಯೂ ಎಷ್ಟು ಹಣ್ಣಾಗಿತ್ತು, ಸೌಗಂಧ್ಯ ಬೀರಿತ್ತು ಎಂಬುದು ತಿಳಿಯಬಹುದಾಗಿದೆ. ವಿಶ್ವವಿಭೂತಿ ಬಸವಣ್ಣನವರು ಧಾರ್ಮಿಕ, ಸಾಮಾಜಿಕ, ಆರ್ಥಿಕ ಸುಧಾರಕರು. ವೀರಶೈವ ನಿರ್ಣಯ ಪರಮಾವತಾರಿಗಳು; ಕನ್ನಡ ವಚನಸಾಹಿತ್ಯ ನಿರ್ಮಾಪಕರು; ಪತಿತರನ್ನು ಪಾವನಗೊಳಿಸಿದವರು; ನಿಸ್ತೇಜರಾದವರನ್ನು ಉದ್ದೀಪಿಸಿದವರು; ನಿರಾಶ್ರಿತರನ್ನು ಉತ್ತೇಜಿಸಿದವರು; ಸಮಾಜದ ರಥವನ್ನು ಸುಂದರವಾಗಿ ಎಳೆದವರು; ಭಾವೈಕ್ಯವನ್ನು ತುಂಬಿದವರು; ಸಕಲರಿಗೆ ಲೇಸನೆ ಬಯಸಿ, ಮಾನವಕುಲ ದೀಪಕರಾದವರು; ಅನುಭವಮಂಟಪವನ್ನು ರಚಿಸಿ, ನಾಡನ್ನು ಜಾಗೃತಗೊಳಿಸಿದವರು; ಬಾಳನ್ನು ಬೆಳಗಿಸಿದ ಮಹಾಶಿಲ್ಪಿಗಳು.

ಮಹಾತ್ಮಾ ಬಸವಣ್ಣನವರು ಮಾಡಿದ ಅನೇಕ ಕಾರ್ಯಗಳಲ್ಲಿ ಕನ್ನಡ ಸಾಹಿತ್ಯಕ್ಕೆ ನೀಡಿದ ಉಪಕಾರ ಅಪಾರವಾಗಿದೆ; ಮರೆಯದಂತಾಗಿದೆ; ಸಂಸ್ಮರಣೀಯವಾಗಿದೆ; ಸಾಹಿತ್ಯ ಬೆಳೆಯದೆ ಮಾನವನ ವಿಕಾಸವಾಗಲಾರದು. ಸತ್ವಯುತ ಸಾಹಿತ್ಯ ಸಂಸೃಷ್ಟಿಯಿಂದ ಮನುಷ್ಯನಿಗೆ ಆತ್ಮಶಕ್ತಿ ಪಡೆಯಲು ಸಾಧನವಾಗುತ್ತದೆ. ಸಾಹಿತ್ಯದೇವಿಯಾರಾಧನೆ

ಮಾಡಿದಂತೆ, ಭಾವಕುಸುಮ ಅರಳಿ ಅದರ ಸೌಗಂಧವನ್ನು ಸೇವಿಸಿ ತನ್ಮಯನಾಗಬಹುದು. ಹೃದಯದಿಂದ ಬಂದ ಸಾಹಿತ್ಯವು ಬೇರೊಬ್ಬರ ಹೃದಯವನ್ನು ಮುಟ್ಟಿ ಅವರ ಆತ್ಮೋದ್ಧಾರಕ್ಕೆ ಮಾರ್ಗದರ್ಶನವಾಗುತ್ತದೆ. ಅಂತರ್ಮುಖದಿಂದೊಡಗೂಡಿದ ಅಂತ ರಂಗ ಸೌಂದರ್ಯವನ್ನು ಹೆಚ್ಚಿಸುವ ಸಾಹಿತ್ಯಕ್ಕೆ ಹಿರಿದಾದ ಬೆಲೆ ಮತ್ತು ಬಲಬರುತ್ತದೆ. "ಸತ್ಯಂ ಶಿವಂ ಸುಂದರಂ" ಸತ್ಯವಿದ್ದಲ್ಲಿ ಸೌಂದರ್ಯವು ಪ್ರಕಟವಾಗಿ ಶಿವನೂ ಅಲ್ಲಿ ಕಾಣು ತ್ತಾನೆ. ಸೌಂದರ್ಯವನ್ನು ಹೊರ ನೋಟದ ಅನುಭವದಿಂದ ಪಡೆದರೆ ನಿರರ್ಥಕ; ಅದನ್ನೇ ಆತ್ಮಾನುಭವ ಪಡೆದರೆ ಮಾನವನ ಬಹುಮುಖ ಜೀವನದ ಪ್ರತಿಭೆ ಎದ್ದು ಕಾಣುವದಲ್ಲದೆ, ಆತ್ಮ ಸಂತುಷ್ಟಿಯಾಗಿ ರಸಾನುಭವವನ್ನು ಪಡೆಯುತ್ತಾನೆ. ಆದರೆ ಅದು ಸತ್ಯವೂ, ಶಿವವೂ, ಸೌಂದರ್ಯದ ಮೂಲಕವೇ ಅನುಭವಕ್ಕೆ ಬರಬೇಕು. ಪ್ರಪಂಚದ ವಿವಿಧ ಮತಗಳೂ, ವಿವಿಧ ಯೋಗ ಮಾರ್ಗಗಳೂ ತಮ್ಮ ತಮ್ಮ ಸಾಧಕರನ್ನು ಸತ್ಯದ ನೆಲೆಗೂ, ಶಿವದ ನೆಲೆಗೂ ಕೊಂಡೊಯ್ದಿವೆ. ಲೋಕಾನುಭವವೇ ರಸಾನುಭವಕ್ಕೇರಿ, ಅಂತರಂಗ ಸೌಂದರ್ಯೋಪಾಸನೆಗೆ ಸಾಧನವಾದರೆ ಮಾತ್ರ ರಸಸಿದ್ಧಿ. ರಸದ ಅರ್ಥ ಹಣ್ಣಿನ ರಸದಿಂದ ಹಿಡಿದುಕೊಂಡು ಕಾವ್ಯಾನಂದ, ಬ್ರಹ್ಮಾನಂದ ಕೊನೆಗೆ ಲಿಂಗಾನಂದ ದವರೆಗೆ ತಾದಾತ್ಮ್ಯ ಸ್ಥಿತಿಯಲ್ಲಿ ಮುಟ್ಟುತ್ತದೆ. ಉಪನಿಷತ್ಕಾಲದ ಋಷಿಗಳೊಬ್ಬರು "ಸಏಷ ರಸಾನಾಂ ರಸತಮಃ" ಎಂದು ಹೇಳಿದ್ದಾರೆ. ಉತ್ತಮ ಸಾಹಿತ್ಯಕ್ಕೆ ಜೀವನ ದರ್ಶನವಿರುವಂತೆ, ಭಾವ, ಕಲ್ಪನೆ ಮತ್ತು ಆಲೋಚನೆಗಳ ಸಂಗಮದಿಂದ ಸಂಭವಿಸುವ ಪ್ರತಿಪೂರ್ಣ ಬೆಳಕು ಮತ್ತಿಷ್ಟು ಶಕ್ತಿಯನ್ನೀಡುತ್ತದೆ. ಈ ಬೆಳಕು ದೊರೆಯುವದು ಲಘು ಜೀವನದಿಂದ ಅಸಾಧ್ಯ. ಅದಕ್ಕೆ ತಪಸ್ಸು ಅತ್ಯಗತ್ಯ. ಸಾಹಿತ್ಯವು ಭಾವಗರ್ಭಿತವಿರ ಬೇಕು. ಸಾಹಿತ್ಯಕ್ಕೆ ಬುದ್ಧಿಪ್ರಧಾನತೆಗಿಂತಲೂ ಹೃದಯದ ಆಂತರಿಕ ಸದ್ವಿಚಾರದ ಅನುಭವಕ್ಕೆ ಹೆಚ್ಚು ಘನತೆ ಬರುತ್ತದೆ. ಸುವರ್ಣ ಘಟದಂತೆ ಶೋಭಿಸುತ್ತದೆ. ಜೀವನ ವೃಕ್ಷದ ಶಾಖೋಪಶಾಖೆಗಳು ಪ್ರಾಣರಸ ತುಂಬಿ ಚೇತನಗಳನ್ನೀಡುತ್ತವೆ. ಶುಷ್ಕ ಜೀವನ ದಗ್ಧವಾಗಿ ಭಾವಬಂಧುರವಾಗುತ್ತದೆ.

"Beauty is truth, Truth is beauty"– ಎಂಬ ಅನುಭವ ಬಂದು ಜೀವನವೇ ಶಿವಮಯವಾಗುತ್ತದೆ. ಇಂತಹ ಸತ್ಯ ಸೌಂದರ್ಯ ಸಾಹಿತ್ಯ ಸ್ವಾನುಭವದ ವಚನಾಮೃತವನ್ನು ದ್ವಿತೀಯ ಶಂಭು ಬಸವಣ್ಣನವರು ನೀಡಿದುದರ ಫಲವೇ ನಾವಿಂದು ಎಚ್ಚರಾಗಲು ಸಾಧನವಾಗಿದೆ. ವಚನ ವಾಙ್ಮಯಕ್ಕೆ ಬಸವಣ್ಣನವರೇ ಪುರಸ್ಕರ್ತರು. ಅಥವಾ ವಚನ ವಾಙ್ಮಯಾಚಾರ್ಯರೆಂದರೂ ತಪ್ಪಾಗಲಿಕ್ಕಿಲ್ಲ. ಬಸವಣ್ಣನವರಿಗಿಂತ ಮೊದಲು ಕೆಲವರು ವಚನಗಳನ್ನು ರಚಿಸಿದರೂ, ಬೆಳೆಸಿ, ಬೆಳಗಿಸಿದವರಲ್ಲಿ ಇವರೇ ಮೂಲ ಪುರುಷರು.

ಭಗವಾನ್ ಬುದ್ಧನು ಧರ್ಮಪ್ರಚಾರ ಮಾಡಲಿಕ್ಕೆ ತನ್ನ ಮಾತೃಭಾಷೆಯಾದ ಪಾಲಿಯ ಭಾಷೆಯಲ್ಲಿಯೇ ಧರ್ಮಗ್ರಂಥಗಳನ್ನು ಬರೆದಂತೆ, ಬಸವಣ್ಣನವರೂ ಸಹ

ತಮ್ಮ ಮಾತೃಭಾಷೆಯಾದ ಕನ್ನಡದಲ್ಲಿಯೇ ವಚನಗಳನ್ನು ಬರೆದು ಸಮಾಜಕ್ಕೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದ್ದಾರೆ. ಹೀಗಾಗಿ ಬಸವಣ್ಣನವರಿಗೂ, ಕನ್ನಡ ಸಾಹಿತ್ಯಕ್ಕೂ ನಿಕಟ ಸಂಬಂಧ ಬೆಳೆದು ನಾಡು ಅವರ ವಚನ ಸಾಹಿತ್ಯ ಗಂಗೆಯಿಂದ ಪುನೀತವಾಗಿದೆ. ಗೌರವವನ್ನು ಪಡೆದಿದೆ. ವಚನಗಳೆಲ್ಲವೂ ಹೃದಯದಿಂದ ಹೊರಹೊಮ್ಮಿದುದರಿಂದ ಭಾವಸಂಚಾರಕ ಶಕ್ತಿ ಸಹಜವಾಗಿ ಬಂದು ರಸರಮಣೀಯತೆಯನ್ನು ತಂದಿದೆ.

ಒಂದೆಡೆ ಬಸವಣ್ಣನವರು– "ಆದ್ಯರ ವಚನ ಪರುಷ ಕಂಡಯ್ಯ ನಂಬಲೊಡನೆ ನೀ ವಿಜಯ ಕಂಡಯ್ಯ ಸದಾಶಿವನೆಂಬ ಲಿಂಗವ ನೆರೆನಂಬುವದು, ಅಧರಕ್ಕೆ ಕಹಿ, ಉದರಕ್ಕೆ ಸಿಹಿ ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ".

ಹಾಲತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು ತವರಾಜದ ನೊರೆತೆರೆಯಂತೆ ಆದ್ಯರ ವಚನವಿರಲು ಬೇರೆ ಭಾವಿಯ ತೋಡಿ, ಉಪ್ಪು ನೀರುಂಬುವನ ವಿಧಿಯಂತೆ ಆಯಿತೆನ್ನ ಮತಿ ಕೂಡಲಸಂಗಮದೇವಾ" ಎಂಬ ಈ ವಚನ ರಚನೆಯಲ್ಲಿ ಅದ್ಭುತ ಶಕ್ತಿ ಪ್ರವಾಹ ಹರಿದಿದೆ. ಮನುಷ್ಯನ ಹೃದಯದಲ್ಲಿ ಈಶ್ವರಾಸಕ್ತಿಯ ಒಳ್ಳೇ ವಿಚಾರಗಳನ್ನು ತುಂಬಿ ದೇವದತ್ತ ಕರೆದೊಯ್ಯುವ ಭವ್ಯೋದ್ದೇಶ ತುಂಬಿದೆ.

"ಎನ್ನ ಕಾಯುವ ದಂಡಿಗೆಯ ಮಾಡಯ್ಯ, ಎನ್ನ ಶಿರವ ಸೋರೆಯ ಮಾಡಯ್ಯ, ಎನ್ನ ನರವ ತಂತಿಯ ಮಾಡಯ್ಯ, ಎನ್ನ ಬೆರಳ ಕಡ್ಡಿಯ ಮಾಡಯ್ಯ, ಮೂವತ್ತೆರಡು ರಾಗವ ಹಾಡಯ್ಯ ಉರದಲೊತ್ತಿ ಬಾರಿಸು ಕೂಡಲಸಂಗಮದೇವಾ" ಎನ್ನುವ ಸರ್ವಾರ್ಪಣ ಭಾವದ ನುಡಿ ಅಂಧಕಾರದಲ್ಲಿ ಮಲಗಿದವರನ್ನು ಎಚ್ಚರಿಸುತ್ತದೆ. ಒಂದೊಂದು ನುಡಿಯಲ್ಲಿ ಭಾವಸೌಷ್ಠವ, ಆತ್ಮಶಕ್ತಿಯ ಗಾಂಭೀರ್ಯ, ಕೂಡಲಸಂಗನಲ್ಲಿರುವ ಅಚಲ ನಿಷ್ಠೆ ಎದ್ದು ಕಾಣುತ್ತದೆ. ಕಂಗಳ ಕತ್ತಲೆ ಕಳೆದುಕೊಳ್ಳಲು ಕಾಯದ ಮೋಹವ ದೂಡಲು ಸರ್ವಸ್ವವನ್ನೇ ಸೂರೆಗೊಂಡಂತಿದೆ. ಈ ವಚನದಲ್ಲಿ ಪ್ರತಿಶಬ್ದದಲ್ಲಿಯೂ ಗೂಢವಾದ ಅರ್ಥವು ವ್ಯಕ್ತವಾಗುವಂತೆ ಶಕ್ತಿ ತುಂಬಿದೆ. ಮಹಾತ್ಮಾ ಬಸವಣ್ಣನವರ ವಚನಸಾಹಿತ್ಯದಲ್ಲಿ ಅಂತಃಸತ್ವ ಮತ್ತು ಬಹಿಃರೂಪಗಳೆರಡರಲ್ಲಿಯೂ ವಿಶಿಷ್ಟವಾದುದಾಗಿದೆ. ಜೀವನವನ್ನು ಪೂರ್ಣ ದೃಷ್ಟಿಯಿಂದ ನೋಡಿ ಮಾನವನ ಎಲ್ಲ ಶಕ್ತಿಗಳ ವಿಕಾಸಕ್ಕೆ ಕಾರಣವಾಗುವ ಮಾರ್ಗವನ್ನು ನಿರ್ಮಿಸಲು ಪ್ರಯತ್ನಿಸಿದ್ದಾರೆ. ಅವರ ವಚನಗಳಲ್ಲಿ ಅನೇಕ ರೀತಿಯ ಆಗಿನ ಸಾಮಾಜಿಕ ಸ್ಥಿತಿಗತಿಗಳನ್ನು ಜೀವನದ ಅನುಭವಗಳನ್ನು ನಿರೂಪಿಸಿ, ವಿಶ್ವ ಬಂಧುತ್ವಕ್ಕೆ ದಾರಿ ಮಾಡಿಕೊಟ್ಟಿವೆ. ತಿಳಿ ಭಾಷೆಯಲ್ಲಿಯೇ ಜನಸಾಮಾನ್ಯರನ್ನು ಉದ್ಧರಿಸಲು ಮಾರ್ಗದರ್ಶಕವಾಗಿವೆ. ಸುಖ ದುಃಖಗಳನ್ನೆಲ್ಲ ದೇವನಿಗರ್ಪಿಸಿ ಶಿವ ಸಾಕ್ಷಾತ್ಕಾರ ಪಡೆದ ಕಾರಣಿಕ ಪುರುಷ.

"ಎನ್ನ ಯೋಗಕ್ಷೇಮ ನಿಮ್ಮದಯ್ಯ, ಎನ್ನ ಹಾನಿ ವೃದ್ಧಿ ನಿಮ್ಮದಯ್ಯ, ಬಳ್ಳಿಗೆ ಕಾಯಿ ದಿಮ್ಮಿತ್ತೆ, ಕೂಡಲಸಂಗಮದೇವಾ" ಎಲ್ಲ ಭಾರವನ್ನು ಪರಮಾತ್ಮನಿಗೆ ನೀಡಿ, ಹಿರಿಯ ವ್ಯಕ್ತಿತ್ವ ಪಡೆದ ಮಹಾ ಮಹಿಮ, ಮಹಾವಿಭೂತಿ.

ಇವರ ವ್ಯಕ್ತಿತ್ವ ಮೇರುಶಿಖರ ಸದೃಶವಾದುದು. ಇವರ ಕ್ರಾಂತಿಯನ್ನು ವ್ಯಾಪಕವಾದ ಅರ್ಥದಲ್ಲಿ ನೋಡಿದರೆ ಮತ್ತಿಷ್ಟು ಅರ್ಥವಾಗುತ್ತದೆ. ಕತ್ತರಿಸಿ ಹಾಕುವದಷ್ಟೇ ಕ್ರಾಂತಿಯಲ್ಲ ಅದು ವಿನಾಶಕ್ಕೆ ದಾರಿಯಾಗುವದು. ಬಸವಣ್ಣನವರ ಕ್ರಾಂತಿ ಶಾಂತಿಯುತವಾದುದು. ಅಷ್ಟೇ ಅಲ್ಲ ಪುನರ್‌ಸೃಷ್ಟಿಯ ವಿಧಾಯಕ ಮಾರ್ಗವನ್ನು ಕಂಡುಕೊಳ್ಳುವಂತಹದು. ಅಂದಿನ ಸಾಮಾಜಿಕ ಸಂದರ್ಭವನ್ನು ನಿರೀಕ್ಷಿಸಿದಾಗ, ತಿಳಿವಳಿಕೆಯಲ್ಲಿ ಒಡಮೂಡುತ್ತದೆ.

ನೂರನೋದಿ ನೂರ ಕೇಳಿದರೇನು? ಆಶೆ ಹರಿಯದು ರೋಷ ಬಿಡದು ಮಜ್ಜನಕ್ಕೆರೆದು ಫಲವೇನು? ಹೀಗೆ ಹಲವು ಬಗೆಯ ತತ್ವದೃಷ್ಟಿಯ ವಚನಗಳನ್ನು ಬಸವಣ್ಣನವರ ವಚನ ಸಾಗರದಲ್ಲಿ ಕಾಣಬಹುದು. ಪವಿತ್ರ ವಾಣಿಯಾದ, ಆತ್ಮಸ್ಫುರಣದಿಂದ ಲೋಕ ಕಲ್ಯಾಣಕ್ಕಾಗಿ ನುಡಿದ ವಚನಗಳು ಜೀವನದ ಎಲ್ಲ ಸಮಸ್ಯೆಗಳನ್ನು ಬಗೆಹರಿಸತಕ್ಕವುಗಳೆಂದು ಹೇಳಬಹುದು. ವೇದಾಗಮೋಪನಿಷತ್ತಿನ ಸಾರವನ್ನೇ ಸಲಭವಾದ ಕನ್ನಡ ಭಾಷೆಯಲ್ಲಿ ಹೇಳಿ, ಮಾನವನ ಹೃದಯವು ಕರಗುವಂತೆ ಕಲ್ಯಾಣ ಮಾರ್ಗವನ್ನು ತೋರಿಸುವ ಆಧ್ಯಾತ್ಮಿಕ ಜ್ಯೋತಿಯಾಗಿದ್ದರು. ಬಸವಣ್ಣನವರು ಕೇವಲ ವಚನ ರಚನೆಯಲ್ಲಿ ತೊಡಗದೆ, ಅಂದು ಎಂದೆಂದೂ ಹಸಿದ ಜಗತ್ತಿಗೆ ಅವಶ್ಯಕವಾದ ಸಮಾಜ ಸುಧಾರಣೆ, ಸ್ತ್ರೀ ಸುಧಾರಣೆ, ಅಸ್ಪೃಶ್ಯೋದ್ಧಾರ, ಧಾರ್ಮಿಕ, ಆರ್ಥಿಕ ಸುಧಾರಣೆ ಮುಂತಾದವುಗಳಿಗೆ ಹಗಲಿರುಳೂ ಚಿಂತಿಸಿ, ಕಾರ್ಯರೂಪಕ್ಕೆ ತಂದು ವೈಚಾರಿಕ ಕ್ರಾಂತಿಯನ್ನು ಮಾಡಿದ ವಿಶ್ವ ವಿಭೂತಿಯಾಗಿದ್ದರು. ಬಸವಣ್ಣನವರ ನಿಲುವನ್ನು ನಿಂತು ನೋಡುವಾಗ, ಸಂಪ್ರದಾಯದ ಮತೀಯ ಪರಿಮಿತಿಯು ಕಳಚಿಹೋದ ವ್ಯಾಪಕತೆಯನ್ನು ಅಲ್ಲಿ ಕಾಣುತ್ತೇವೆ. ಅವರು ಆಲೋಚಿಸಿದುದು ವಿಶ್ವಮಾನವರಾಗಿ; ಕಾರ್ಯ ಮಾಡಿದುದು ವಿಶ್ವಮಾನವರಿಗಾಗಿ. ಅಂತೆಯೇ ಅವರು ಆದರ್ಶವಾದಿಗಳು, ಏಕೇಶ್ವರವಾದಿಗಳು; ಈ ಮಣ್ಣಿನಲ್ಲಿ ಬೆಳೆದು ಮಣ್ಣನ್ನೇ ಹೊನ್ನಾಗಿರಿಸಿದ ಮಹಾಚೇತನರು.

"ದೇವನೊಬ್ಬ ನಾಮಹಲವು. ಪರಮ ಪತಿವ್ರತೆಗೆ ಗಂಡನೊಬ್ಬ ಕಾಣಿರೋ, ಮತ್ತೊಂದಕ್ಕೆರಗಿದರೆ ಕಿವಿ ಮೂಗ ಕೊಯ್ಯುವನು ಹಲವು ದೈವದ ಎಂಜಲ ತಿಂಬುವರನೇನೆಂಬೆನಯ್ಯ ಕೂಡಲಸಂಗಮದೇವಾ" ಎಂದು ಕಠೋರವಾಗಿ ಸಾರಿದ್ದಾರೆ. ಕಲ್ಲ ಮೇಲೆ ಸ್ಥಾಪಿತವಾದ ಕಲ್ಲುಲಿಂಗವನ್ನು ಅಲ್ಲಮ ಪ್ರಭುಗಳು ಹಳಿಯುವಂತೆ, "ಅರಗು ತಿಂದು ಕರಗುವ, ಉರಿಯ ಕಂಡರೆ ಮುರುಟುವ, ಅವಸರ ಬಂದರೆ ಮಾರುವ, ಅಂಜಿಕೆಯಾದರೆ ಹೂಳುವ ಸ್ಥಾವರ ಲಿಂಗಪೂಜೆ ಅವರಿಗೆ ಬೇಡ. ಆದ್ದರಿಂದ ಇಬ್ಬರು ಮೂವರು ದೇವರೆಂದು ಉಬ್ಬಿ ನುಡಿಯಬೇಡ" ಎಂದು ಹೇಳಿದ್ದಾರೆ. ಇನ್ನು ಸತ್ಯವ ನುಡಿವುದೇ ದೇವಲೋಕ ಎಂಬಲ್ಲಿ ಸತ್ಯದ ಮಹತ್ವವನ್ನು ತನಗೆ ಮುನಿವರಿಗೆ ತಾ ಮುನಿಯಲೇಕಯ್ಯ? ಮನದ ಕೋಪ ತನ್ನ ಅರುವಿಂಗೆ ಹಾನಿ, ಕಿಚ್ಚು ಮನೆಯ ಸುಡದಲ್ಲದೆ, ನೆರೆಮನೆಯ

ಮನೆಯು ಸುಡದು ಎಂಬಲ್ಲಿ ಸಹನೆಯ ಮಹತ್ವವನ್ನು, ದಯವಿಲ್ಲದ ಧರ್ಮವಾವುದಯ್ಯ, ದಯವೇ ಧರ್ಮದ ಮೂಲವಯ್ಯ ಎಂಬಲ್ಲಿ ಕರುಣೆಯ ಮಹತ್ವವನ್ನೂ, ಉಂಬ ಜಂಗಮ ಬಂದರೆ ನಡೆಯೆಂಬರು, ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ ಹಾಗೂ ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ? ಎಂಬಲ್ಲಿ ದಾನದ ಪರಿಶುದ್ಧತೆಯನ್ನೂ, ಕಳಬೇಡ ಕೊಲಬೇಡ, ವೇದವನೋದಿದವರ ಮುಂದೆ ಅಳು ಕಂಡೆಯಾ ಹಾಗೂ ಕೊಲ್ಲುವವನೇ ಮಾದಿಗ ಹೊಲಸು ತಿಂಬುವವನೇ ಹೊಲೆಯ ಎಂಬಲ್ಲಿ ಅಹಿಂಸೆಯ ತತ್ವವನ್ನೂ ಸಾರಿದ್ದಾರೆ.

ವೀರಶೈವ ಧರ್ಮವು ಕೇವಲ ವ್ಯಕ್ತಿ ವೈಶಿಷ್ಟ್ಯವನ್ನೂ ಸಾರುವದಕ್ಕಾಗಲಿ ಜನ್ಮ ತಾಳಲಿಲ್ಲ. ಪಾಂಡಿತ್ಯದ ಕೆಚ್ಚಿನಿಂದ ಒಂದು ಗಹನ ತತ್ವವನ್ನು ಪ್ರತಿಪಾದಿಸಿ ಜನತೆಯನ್ನು ದಂಗುಗೊಳಿಸುವದಕ್ಕೂ ಪ್ರಯತ್ನಿಸಲಿಲ್ಲ. ಬಸವಣ್ಣನವರೇ ಆದಿಯಾಗಿ ವೀರಶೈವಧರ್ಮ ಪ್ರತಿಪಾದಿತರು ಜನತೆಯಿಂದ ಬಹಳ ಎತ್ತರದಲ್ಲಿ ನಿಂತು ಜನಸಾಮಾನ್ಯರನ್ನು ಕಡೆಗಣ್ಣಿನಿಂದ ಕಾಣುವ ಮಹಾನುಭಾವತ್ವವನ್ನು ಮೆರೆಸಲಿಲ್ಲ. ತಮ್ಮ ಆಧ್ಯಾತ್ಮಿಕ ಸಾಧನೆಯಿಂದ ಯಾವ ಆನಂದ ನೈರ್ಮಲ್ಯ ಶಾಂತಿಗಳನ್ನು ದೊರಕಿಸಿ ಕೊಂಡಿದ್ದರೋ, ಅದರ ಲಾಭ ಎಲ್ಲರಿಗೂ ದೊರೆಯಬೇಕೆಂದು ಬಯಸಿದರು. ತಮ್ಮ ಜೀವನ ಹಸನಾದಂತೆ ನಾಡಿನವರೆಲ್ಲರ ಜೀವನವೂ ಹಸನವಾಗಬೇಕು. ಲೋಕವೆಲ್ಲ ಒಂದು ಧರ್ಮದ ಶ್ವೇತ ಛತ್ರದ ಕೆಳಗೆ ಗೆಳೆಯರಂತೆ, ಸಹೋದರರಂತೆ ಬಾಳಿ ಬದುಕಬೇಕೆಂಬುದೇ ಅವರ ಹಿರಿಯಾಶೆಯಾಗಿತ್ತು. ಬಾಳುವೆಯನ್ನು ಮರೆತು ಸದಾ ಪರಲೋಕ ಚಿಂತೆಯಲ್ಲಿರುವದು ನಿರರ್ಥಕವಾದುದೆಂದು ಬಾಳುವೆಯನ್ನೂ ಮರೆತು ಸದಾ ಪರಲೋಕ ಚಿಂತೆಯಲ್ಲಿರುವದು ನಿರರ್ಥಕವಾದುದೆಂದು ಬಗೆದಿದ್ದರು. ಇಹಪರ ಲೋಕಗಳನ್ನು ಎರಡು ಜಗತ್ತುಗಳನ್ನಾಗಿ ವಿಭಾಗಿಸಿವೆ. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಎಲ್ಲಿಯೂ ಸಲ್ಲರಯ್ಯ" ಎಂದುಸುರಿ ಒಂದು ಮತ್ತೊಂದರ ಪೂರಕವೆಂದು ಭಾವಿಸಿದ್ದರು. ಮುಂದಿನ ಲೋಕಕ್ಕೆ ಹೋಗಿ ಬಾಳುವೆ ಮಾಡುವದೆಂದರೆ ಈ ಲೋಕದ ಮುಂದುವರಿಸದಂತಲ್ಲದೆ ಬೇರೆಯಲ್ಲವೆಂಬುದನ್ನು ಸಾರಿದರು. ಇಹಲೋಕದ ಕುಂದು ಕೊರತೆಗಳನ್ನು ಅಪೂರ್ಣವಾದ ಆಶೆಗಳನ್ನು ಪೂರೈಸುವದಕ್ಕೆ ಮುಂದಿನ ಲೋಕ ಒಂದಿದೆ ಎಂದು ಭಾವಿಸುವ ಮಾಯಾ ನಿರಸನವನ್ನು ಮಾಡಲೆತ್ನಿಸಲು ವೀರಶೈವ ಮತೋದ್ಧಾರಕರಾದ ಮಹಾತ್ಮಾ ಬಸವಣ್ಣನವರು ವೀರಶೈವ ಸಿದ್ಧಾಂತದಲ್ಲಿ ಅಡಗಿದ್ದ ಭಕ್ತಿ, ಜ್ಞಾನ, ವೈರಾಗ್ಯಗಳ ತ್ರಿವೇಣಿ ಸಂಗಮಕ್ಕೆ ಒಂದು ಶಾಶ್ವತ ನಿಲವನ್ನು ಕೊಡಲು ಶಿವಾನುಭವ ಮಂಟಪವನ್ನು ಸ್ಥಾಪಿಸಿದ್ದರು.

ಅಂದು ಶಿವಾನುಭವ ಮಂಟಪ ಸಂಸ್ಥಾಪಿಸಿದ್ದುದರ ಪರಿಣಾಮದಿಂದಲೇ ಇಂದಿಗೂ ಮಾನವ ಕುಲಕ್ಕೆ ಚೇತನಶಕ್ತಿ ನೀಡಿರುವದಲ್ಲದೆ ವೀರಶೈವ ಸಮಾಜದಲ್ಲಿ ಇಷ್ಟಾದರೂ ಶಕ್ತಿ ಚೈತನ್ಯವಿದೆ.

ಷಟಸ್ಥಲ ಸಿದ್ಧಾಂತದ ಮೂಲಕ ಈ ಶಿವಾನುಭವ ಮಂಟಪವು ಕರ್ಮವಾದ ಬೇರುಗಳನ್ನೆಲ್ಲ ಸಡಿಲಿಸಿಬಿಟ್ಟಿತು. ಲಿಂಗದೀಕ್ಷೆಯ ಮೂಲಕವಾಗಿ ತನ್ನ ಧರ್ಮದ್ವಾರವನ್ನು ಎಲ್ಲ ಜಾತಿ ಸ್ತ್ರೀ ಪುರುಷರಿಗೆ ತೆರೆದಿಟ್ಟಿತು. ಅದರಿಂದ ಹಿಂದೂ ಸಮಾಜದ ಜೀವನದಲ್ಲಿ ಅತಿ ದೊಡ್ಡ ಕ್ರಾಂತಿಯನ್ನುಂಟು ಮಾಡಿತೆಂದು ಹೇಳಬಹುದು. ಇದರಿಂದ ಬಂಧು ಭಾವನೆಯು ಭಗಿನಿ ಭಾವನೆಯು ಬೆಳೆಯುವದಲ್ಲದೆ ಸ್ತ್ರೀಯರಿಗೆ ಪುರುಷರಂತೆ ಸಮಾನ ಹಕ್ಕುಗಳು ದೊರೆತವು. ಗಡ್ಡ, ಮೀಸೆ ಬಂದರೆ ಗಂಡೆಂಬರು, ಮೊಲೆ ಮೂಡಿಬಂದರೆ ಹೆಣ್ಣೆಂಬರು ನಡುವೆ ಸುಳಿವಾತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ ಎನ್ನುವ ಸ್ವಾರಸ್ಯಮಯ ವಿಚಾರವನ್ನು ನಿವೇದಿಸಿತು ಮತ್ತು ಧಾರ್ಮಿಕ, ಸಾಮಾಜಿಕ ವಿಷಯಗಳಲ್ಲಿ ಪ್ರತಿಯೊಂದು ವ್ಯಕ್ತಿಗೆ ಸಂಪೂರ್ಣ ಸ್ವಾತಂತ್ರ್ಯ ಸಿಕ್ಕಿತು. ಶಿವಾನುಭವ ಮಂಟಪವು ಒಂದೇ ಜನ್ಮದಲ್ಲಿ ಮುಕ್ತಿಯನ್ನು ಹೊಂದಲು ಶಕ್ಯವಿದೆಯೆಂದು ತೋರಿಸಿಕೊಟ್ಟಿತು. ಪ್ರಾರಬ್ಧ ಕರ್ಮವನ್ನು ಸಹ ಪ್ರಸಾದ ರೂಪವಾಗಿ ಹೇಗೆ ಭೋಗಿಸಬೇಕೆಂಬುದಕ್ಕೆ ಬಸವಣ್ಣನವರ ನುಡಿಗಳಲ್ಲಿಯೇ ಕೇಳೋಣ.

"ಪಂಡಿತನಾಗಲಿ, ಮೂರ್ಖನಾಗಲಿ ಸಂಚಿತ ಕರ್ಮ ಉಂಡಲ್ಲದೆ, ಬಿಡದು, ಪ್ರಾರಬ್ಧ ಭೋಗಿಸಿದಲ್ಲದೆ ಹೋಗದೆಂದು ಶೃತಿ ಸಾರುತ್ತಿದ್ದಾವೆ ನೋಡಾ, ತಾನಾವ ಲೋಕದೊಳಗಿದ್ದೊಡೆಯೂ ಬಿಡದು ಕರ್ಮ, ಕರ್ಮ ಫಲಗೂಡಿ ಕೂಡಲ ಸಂಗಮದೇವರಿಗೆ ಆತ್ಮ ನೈವೇದ್ಯ ಮಾಡಿದಾತನೇ ಧನ್ಯನು. ಆತ್ಮಾನುಭವದ ಅಮರ ಸಂದೇಶವನ್ನು ನೀಡಿದ್ದಾರೆ. ಶಿವಾನುಭವ ಮಂಟಪವು ಆಧ್ಯಾತ್ಮಿಕ ವಿಷಯದಲ್ಲಿ ಸ್ತ್ರೀಯರು ಯಾವ ರೀತಿಯಿಂದಲೂ ಕಡಿಮೆಯುವರಲ್ಲವೆಂಬುದು ತೋರಿಸಿ ಕೊಟ್ಟಿದ್ದಕ್ಕಾಗಿ ಸ್ತ್ರೀಯರ ಉನ್ನತಿ ವಿಲಕ್ಷಣವಾಗಿ ಆಯಿತೆಂದು ಹೇಳಬಹುದು. ಈ ಅನುಭವ ಮಂಟಪದ ವಿದ್ಯುತ್ ಶಕ್ತಿಯ ಆಗರದಲ್ಲಿ ಹುಟ್ಟಿದ ಶಕ್ತಿಯ ಮೂಲಕ ಇಡೀ ಸಮಾಜದಲ್ಲಿ ಒಂದು ತರಹದ ಹೊಸ ಜೀವ, ಹೊಸ ಭಾವ, ಹೊಸ ಬೆಳಕು, ಹೊಸ ತೇಜಸ್ಸು ಮಿಂಚತೊಡಗಿತು. ಇದು ಕನ್ನಡ ನಾಡಿನಲ್ಲಿ ವಿನೂತನ ಜೀವ ಕಳೆಯನ್ನು ತಂದುಕೊಟ್ಟಿತು.

ಪ್ರತಿಯೊಬ್ಬರೂ ಯಾವದಾದರೊಂದು ಕಾಯಕವನ್ನು ಮಾಡಲೇಬೇಕೆಂದು ಕಟ್ಟುನಿಟ್ಟಾಗಿ ಮಾಡಿ, 'ಕಾಯಕವೇ ಕೈಲಾಸ' ಎಂದು ಉದ್ಯೋಗದ ಗೌರವವನ್ನು ಬೆಳೆಯಿಸಿತು. ತೋರಲಿಕ್ಕೆ ಎಷ್ಟು ಕೀಳು ಕೆಲಸವಾದರೂ ಅದು ಈಶ ಸೇವೆ, ಮಾನವ ಸೇವೆಯ ವೃಷ್ಟಿಯಿಂದ ಮಾಡಲ್ಪಡಲಿರುವ ಉದ್ಯೋಗವೆಲ್ಲವೂ ಪವಿತ್ರವೆಂಬ ಭಾವನೆಯನ್ನು ಹುಟ್ಟಿಸಿತು. ಜ್ಞಾನ, ಭಕ್ತಿ ಮತ್ತು ಕರ್ಮ ಈ ಮೂರೊಳಗೆ ಯಾವುದು ಹೆಚ್ಚಿನದೆಂಬುವ ವಾದವನ್ನು ನಿಲ್ಲಿಸಿ ಬಿಟ್ಟಿತು. ಗುರುಲಿಂಗ ಜಂಗಮಗಳೆಂಬುವೇ ಇದರ ಬಾಹ್ಯ ಕುರುಹುಗಳು ಎಂದು ತತ್ವಯುತ ಅನುಭವಪೂರ್ಣ ವಿಚಾರದೊಡನೆ ನಿರ್ಧರಿಸಿತು. ಈ ರೀತಿಯಾಗಿ ವಿವಿಧ ಅನುಭವ ಪುಷ್ಪಗಳಿಂದ ಶೋಭಿಸುವ ಪ್ರದರ್ಶನಮಂದಿರದಂತಿತ್ತು ಈ ಶಿವಾನುಭವ ಮಂಟಪ. ಈ ಹೂದೋಟದಲ್ಲಿ ದೇಶದಲ್ಲಿ ತುಂಬಿರುವ ಸಕಲ ತರಹದ ಅನುಭವದ

ಹೂವಿನ ಗಿಡಗಳು ಸಂಗ್ರಹಿಸಲ್ಪಟ್ಟಿದ್ದವು. ಒಂದೊಂದು ಹೂವಿಗೆ ಒಂದೊಂದುಸೌಂದರ್ಯ, ಒಂದೊಂದು ವಾಸನೆ, ಈ ಅನುಭವ ಮಂಟಪದಲ್ಲಿ ಶಿವಾನುಭವ ಪುಷ್ಪಗಳು ಬಹು ಕಮಾನೀಯವಾಗಿ ಶೋಭಿಸುತ್ತಿದ್ದವೆಂಬುದು ಹೇಳಬಹುದು. ಇಂತು ೮೦೦ ವರ್ಷಗಳ ಪೂರ್ವದಲ್ಲಿಯೇ ಮಹಾತ್ಮಾ ಬಸವಣ್ಣನವರು ಅಸಾಧಾರಣವಾದದ್ದನ್ನು ಸಾಧಿಸಿ, ಅನುಭವ ಮಂಟಪದ ಮೂಲಕ ಮಹಾಕ್ರಾಂತಿಯನ್ನು ಸ್ವಲ್ಪ ದಿವಸಗಳಲ್ಲಿಯೇ ಮಾಡಿದ್ದು ನೋಡಿದರೆ ಅಚ್ಚರಿಯಾಗದು.

## ಡಾ. ಹೋಮರ್ ಎ. ಜಾಕ್, ಅವರೊಡನೆ

Dr. Homer A Jack ಅವರನ್ನು ನಾಲ್ಕು ವರ್ಷಗಳ ಹಿಂದೆ ಅಂದರೆ ಸನ್ ೧೯೭೦ರಲ್ಲಿ ಜಪಾನದ ಕ್ಯೂಟೋದಲ್ಲಿ ಜರುಗಿದ The first World Conference on Religion and peace ಈ ಪರಿಷತ್ತಿನ ಪ್ರಧಾನ ಕಾರ್ಯದರ್ಶಿಗಳಾಗಿ, ಅತ್ಯಂತ ನಿಷ್ಠೆಯಿಂದ ಕಾರ್ಯ ಮಾಡುತ್ತಿರುವ, ನಿರಂತರವೂ ಜಗತ್ತಿಗೆ ಶಾಂತಿ ಸಿಗಬೇಕೆಂದು ಹಂಬಲಿಸುತ್ತ ಕಾಲ ಕಳೆಯುತ್ತಿದ್ದ ಇವರ ಕರ್ತೃತ್ವ ಶಕ್ತಿಯನ್ನು ಕಂಡು ಕ್ಯೂಟೋದಲ್ಲಿ ಇವರನ್ನೊಮ್ಮೆ ಹೀಗೆ ಕೇಳಿದೆವು.

ನೀವೊಮ್ಮೆ ಭಾರತಕ್ಕೆ ಬರುವಿರಾ? Yes. ಅವಶ್ಯವಾಗಿ ಬರುವೆ. ಭಾರತಕ್ಕೆ ಬಂದಾಗ ಕರ್ನಾಟಕದಲ್ಲಿರುವ ಹುಬ್ಬಳ್ಳಿಗೆ ಬರುವಿರಾ? ಎಂದು ಪ್ರಶ್ನಿಸಿದಾಗ ನೋಡೋಣ ವೆಂದು ಅವರಿಂದ ಉತ್ತರ ಬಂದಿತು. ಮುಂದೆ ನಮ್ಮ ಇವರ ಸಂಪರ್ಕ ನಿಕಟವಾಗುತ್ತ ಬಂದಿತು. ಮೇಲಿಂದ ಮೇಲೆ World Conferenceನ ಬಗೆಗೆ ವಿಚಾರ ವಿನಿಮಯ ಮಾಡುವ ಪತ್ರಗಳು ಹಾಗೆಯೇ ಸಮಗೆ ಬರುತ್ತಲಿದ್ದವು. ಹೀಗೆಯೇ ನಾಲ್ಕು ವರ್ಷಗಳು ಸಂದವು. ಇದರ ಸತತೋದ್ಯೋಗ, ಧರ್ಮದ ಮೇಲಿರುವ ಅಭಿಮಾನ ಪ್ರತಿಯೊಂದು ರಾಷ್ಟ್ರದ ಮುಖಂಡರನ್ನು ಧರ್ಮ ಗುರುಗಳನ್ನು ಒಂದೆಡೆ ಕೂಡಿಸಿ ಭಾವೈಕ್ಯ ಹುಟ್ಟಿಸುವ ಇವರ ಮಹದಿಚ್ಛೆಯನ್ನು ಕಂಡು, ಇವರ ವ್ಯಕ್ತಿತ್ವಕ್ಕೆ ಮೆಚ್ಚಿದೆವು. ಯಾವದೇ ವಿಷಯ ವನ್ನು ಪತ್ರವ್ಯವಹಾರ ಮಾಡಲಿ ಸಮರ್ಪಕವಾದ ಉತ್ತರ ನೀಡಿ ಆನಂದ ಗೊಳಿಸುತ್ತಿದ್ದರು. ಒಮ್ಮೊಮ್ಮೆ ನಮ್ಮಿಂದಲೇ ಉತ್ತರದ ಕೊರತೆಯುಂಟಾಗುತ್ತಿತ್ತೇ ಹೊರತು ಅವರಿಂದ ಎಂದಿಗೂ ಆಗಲಿಲ್ಲ. ಇಷ್ಟು ಇಳಿ ವಯಸ್ಸಿನಲ್ಲಿಯೂ ಅವರ ಕಾರ್ಯಚಟುವಟಿಕೆ ಮಲಗಿದವ ರನ್ನು ಬಡಿದೆಬ್ಬಿಸುವಂತಿತ್ತು. ಮತ್ತೊಮ್ಮೆ ಇವರಿಂದ ೧೯೭೪ರ ಆಗಸ್ಟದಲ್ಲಿ ಬೆಲ್ಜಿಯಂ ದೇಶದ Levvenದಲ್ಲಿ ಜರುಗಲಿರುವ The second World Conference on Religion and Peace ಈ ಪರಿಷತ್ತಿಗೆ ನೀವು ಅವಶ್ಯ ಈ ಸಲ ಭಾಗವಹಿಸಬೇಕು. ಶಾಂತಿ ಪ್ರತಿ ಷ್ಠಾಪನೆಗಾಗಿ ನಮ್ಮೊಡನೆ ಸಹಕರಿಸಬೇಕು. ಎಂದುದಾಗಿ ೩-೪ ಸಲ ನಮಗೆ ಪತ್ರ ಬರೆದರು. ಇಲ್ಲಿಯ ಕಾರ್ಯ ಬಾಹುಲ್ಯದ ಮೂಲಕ ಉತ್ತರ ನೀಡದೆ ಮೌನ ತಾಳಿದ್ದೆವು. ಮತ್ತೊಂದು Homer A Jack ನಮಗೆ ಹೀಗೆ ಬರೆದರು. ಈ ಸಲ ಯಾವುದೇ ರೀತಿಯಲ್ಲಿ ತಪ್ಪಿಸಲೇ

ಬಾರದು. ತಪ್ಪಿಸಿದರೆ ನಮಗೆ ಬಹಳ ಮನಸ್ಸಿಗೆ ನೋವಾಗುತ್ತದೆ ಜಗತ್ತಿನ ಸ್ಥಿರಶಾಂತಿ ಸ್ಥಾಪನೆಗೆ ಧರ್ಮ ಹೇಗೆ ನೆರವಾಗಬಲ್ಲುದು? ಎಂಬ ಅನೇಕ ವಿಷಯಗಳ ಬಗ್ಗೆ ಮಹತ್ವ ಪೂರ್ಣ ಚರ್ಚೆ ನಡೆಯುತ್ತದೆ. "ಇವರ ಒತ್ತಾಯದ ಅಭಿಮಾನದ ಪತ್ರವನ್ನು ಓದಿ ನಮ್ಮ ಮನಸ್ಸಿನ ಮೇಲೆ ಪರಿಣಾಮವುಂಟಾಗಿ, ಅವರಲ್ಲಿರುವ ವಿಶ್ವಬಾಂಧವ್ಯ ಬೆಳೆಸುವ ಹೊಂಗನಸನ್ನು ನೋಡಿ ಲುವೆನ್ ಪರಿಷತ್ತಿಗೆ ಬರುತ್ತೇವೆಂದು ಬರೆದಾಕ್ಷಣ ಇಲ್ಲಿಯ ಭಕ್ತ ರಿಚ್ಛೆಯಂತೆ Dr. Homer A Jack ಈ ರೀತಿ ಬರೆದರು.

Dear Mahaswamiji

"It is good to here from you and to know that you will be attending our second World Conference. As I write earlier our Conference Would not be right without you" ಈ ಪತ್ರವನ್ನು ನೋಡಿ ದಾಗ ಅವರಲ್ಲಿರುವ ಭಾರತದ ಧರ್ಮ ಗುರುಗಳ ಮೇಲಿರುವ ಅಭಿಮಾನ ಅದರಲ್ಲಿಯೂ ಹೆಚ್ಚಾಗಿ ನಮ್ಮ ಸಲುವಾಗಿ ಅವರಿಗಿರತಕ್ಕಂಥ ವಿಶಾಲ ಭಾವನೆಯು ಸ್ನೇಹವು ಎದ್ದು ಕಾಣು ತ್ತದೆ. ನಾವು Levven ದಲ್ಲಿ ಜರುಗಿದ Second World Conference on Religion and peace ದಲ್ಲಿ ಭಾಗವಹಿಸಿ Dr. Homer A Jack ಅವರ ಕಾರ್ಯ ದಕ್ಷತೆಯನ್ನು ನೋಡಿ ಅತ್ಯಂತ ಆನಂದವುಳ್ಳವರಾದೆವು. ಲುವೆನದ Second World Conference on Religion and peace ಈ ಪರಿಷತ್ತು ಇಷ್ಟು ಸುವ್ಯವಸ್ಥಿತ ರೀತಿ ಯಿಂದ ಆದರ್ಶಯುತವಾಗಿ ನಡೆದು, ಪ್ರಪಂಚದಲ್ಲಿ ಜನಜಾಗೃತಿ ಮಾಡಲು, ಧರ್ಮಶಕ್ತಿ ಬೆಳೆದು ಶಾಂತಿ ತಲೆದೋರಲು, Dr. Homer A Jack ಹಾಗೂ ಅವರ ಪತ್ನಿ ಇವರಿರ್ವರೂ ಪ್ರಧಾನ ಪಾತ್ರವಹಿಸಿ ದುಡಿಯುತ್ತಿರುವದನ್ನು ಕಣ್ಣಾರೆ ಕಂಡು ಹಿಗ್ಗಿನ ಕಡಲಿನಲ್ಲಿ ಮುಳುಗಿದೆವು. ಇಂತಹ ಶಾಂತಿ ಸಮ್ಮೇಲನಕ್ಕೆ ಪ್ರಧಾನ ಕಾರ್ಯದರ್ಶಿಯಾಗಿ Dr. Homer A Jack ರಂತಹರು ದೊರಕಿದ್ದು ವಿಶ್ವಭಾಗ್ಯವೆಂದು ಇಲ್ಲಿ ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. Dr. Homer A Jack ಅವರ ಸಾಹಸದ ಫಲವಾಗಿ ಜಪಾನದ ಕ್ಯೂಟೋದಲ್ಲಿ ಜರುಗಿದ ವಿಶ್ವಧರ್ಮ ಶಾಂತಿ ಸಮ್ಮೇಲನಕ್ಕಿಂತಲೂ ಬೆಲ್ಜಿಯಂ ದೇಶದ Levven ದಲ್ಲಿ ಜರುಗಿದ ದ್ವಿತೀಯ ಜಾಗತಿಕ ಧರ್ಮ ಮತ್ತು ಶಾಂತಿ ಸಮ್ಮೇಲನವು ಒಳ್ಳೇ ವೈಶಿಷ್ಟ್ಯಪೂರ್ಣವಾಗಿ ಜರುಗಿತು. ಇದಕ್ಕೆ ಇವರ ಕರ್ತೃತ್ವ ಶಕ್ತಿಯೇ ಮೂಲ ಕಾರಣ. ಈ ಸಲ ನಾವು ಅಲ್ಲಿಗೆ ಹೋಗಿ, ತಿರುಗಿ ಬರುವಾಗ, Dr. Homer A Jack ಅವರನ್ನು ಈ ಸಲ ಭಾರತಕ್ಕೆ ಬರುವಿರಾ? ಎಂದು ಮತ್ತೊಮ್ಮೆ ಪ್ರಶ್ನಿಸಿದಾಗ ಭಾರತಕ್ಕೆ ಏಕೆ? ನಿಮ್ಮೂರಿಗೂ, ಅವಶ್ಯ ಬರುವೆ ಎಂದು ನಗುತ್ತ ಕೈಕುಲಕಿ ಹೇಳಿದರು.

ವಿಶ್ವಬಾಂಧವ್ಯಕ್ಕೆ ಹಗಲಿರುಳೂ ದುಡಿಯುತ್ತಿರುವ ಅಂತರ್‌ರಾಷ್ಟ್ರೀಯ ಮಹಾ ವ್ಯಕ್ತಿಗಳಾದ Dr. Homer A Jack ಅವರು ನಮ್ಮೂರಿಗಿಂದು ಬಂದುದು ಸಂತೋಷ ವನ್ನುಂಟು ಮಾಡಿದೆ. ತಾವೊಬ್ಬರಲ್ಲದೆ ತಮ್ಮ ಶ್ರೀಮತಿಯವರನ್ನು ಕರೆದುಕೊಂಡು

ಭಾರತವನ್ನು ತೋರಿಸಿದ್ದಕ್ಕಾಗಿ ಮತ್ತಿಷ್ಟು ಹೆಮ್ಮೆ ಪಡುವಂತಹದಾಗಿದೆ. ಅದರಲ್ಲಿಯೂ ಕರ್ನಾಟಕದ ಎರಡನೆಯ ರಾಜಧಾನಿಯಂತಿರುವ ನಮ್ಮ ಹುಬ್ಬಳ್ಳಿಗೂ ಆಗಮಿಸಿ, ಈ ವಿಶೇಷ ವಿಚಾರ ಸಂಕಿರಣದಲ್ಲಿ ಭಾಗವಹಿಸಿರುವದಂತೂ ಅಭಿಮಾನ ಪಡುವಂತಹದು.

ಧರ್ಮದಿಂದ ಸಾಮಾಜಿಕ ನ್ಯಾಯ ದೊರೆಯಬಹುದೆ? ಎಂಬ ವಿಷಯದ ಬಗ್ಗೆ ಇಂದು ಚರ್ಚಿಸಬೇಕಾಗಿದೆ. ಅನೇಕ ವಿದ್ವನ್ಮಣಿಗಳು ಇದರಲ್ಲಿ ಭಾಗವಹಿಸಿದ್ದಾರೆ.

ಮಾನವರನ್ನು ಚೈತನ್ಯ ಪೂರ್ಣರನ್ನಾಗಿ ಮಾಡುವದೇ ಧರ್ಮ. ವಿನಾಶಕ್ಕೀಡಾದವರನ್ನೂ ಧರ್ಮವು ರಕ್ಷಿಸುತ್ತದೆ. ಧರ್ಮವೆಂದರೆ ತತ್ವದ ರಾಶಿಯಲ್ಲ. ಅದೊಂದು ಅನುಭವ ಜೀವನ ಪದ್ಧತಿ. ಯಾವದೇ ಒರೆಗಲ್ಲಿಗೂ ಅದು ನಿಲ್ಲುವಂತಿರಬೇಕು. ದೀನದಲಿತರ ಸೇವೆಯೇ ಧರ್ಮ. "ಈ ಸೇವಾ ಧರ್ಮವನ್ನು ಕಡೆಗಣಿಸಿ ನಾನು ಅಹಿಂಸಾವಾದಿಯಾಗಲಾರೆ. ಅಹಿಂಸೆಯನ್ನುಳಿದು ಸತ್ಯದ ಸಾಕ್ಷಾತ್ಕಾರವಾಗಲಾರದು. ಇನ್ನು ಈ ಸತ್ಯವನ್ನುಳಿದು ಬೇರೆ ಧರ್ಮವಿಲ್ಲವೆಂದು" ಮಹಾತ್ಮಾ ಗಾಂಧಿಯವರು ಅನ್ನುತ್ತಿದ್ದರು. ವಿಶ್ವದಲ್ಲಿ ಕಾಲ ಕಾಲಕ್ಕೆ ನಾನಾ ಧರ್ಮಗಳು ಹುಟ್ಟಿಕೊಂಡರೂ ಅವೆಲ್ಲವುಗಳ ಗುರಿ ಒಂದೇ ಆಗಿದೆ. ಧರ್ಮವು ನಿಂತು ಮಲೆತ ನೀರಾಗಿರದೆ ಜೀವಂತ ಪ್ರವಾಹವಾಗಿದೆ. ರಾಷ್ಟ್ರದ ಶಕ್ತಿಗೆ ಪ್ರವಾಹವಾಗಿದೆ ರಾಷ್ಟ್ರದ ಶಕ್ತಿಗೆ ಆಗರವಾಗಿದೆ. ಧರ್ಮವು ಸಂಸ್ಕೃತಿಯ ಪ್ರತಿರೂಪವಾಗಿರಬೇಕು. ಧರ್ಮವು ಉದಾತ್ತವಾಗಿರಬೇಕು. ವಿಶ್ವಕುಟುಂಬ ಭಾವಕ್ಕೆ ಪೋಷಕವಾಗಿರಬೇಕು. ಗರ್ವಾಹಂಕಾರಗಳಿಂದ ಕೂಡಿದ ಧರ್ಮವು ವಿಶ್ವದಲ್ಲಿ ಮೆರೆಯಲಾರದು. ಧರ್ಮ ಧರ್ಮಗಳ ನಡುವೆ ಅಡ್ಡಗೋಡೆಗಳನ್ನು ಕಟ್ಟುವದು ಬಿಟ್ಟು ಪರಸ್ಪರ ಹೊಂದಿಕೊಂಡು ವಿಶ್ವಬಾಂಧವ್ಯಕ್ಕೆ ಅನುಕೂಲವಾದರೆ ಸಾರ್ಥಕ. ಧರ್ಮದ ತಳಹದಿ ವಿಶಾಲವಾಗಿದ್ದರೆ ಭಾವೈಕ್ಯ ಸಾಧ್ಯ. ವಿಶಾಲ ಭಾವನೆಯು ಧರ್ಮದಿಂದಲೇ ಸಮಾಜದಲ್ಲಿ ನ್ಯಾಯ ದೊರಕುತ್ತದೆ. ಧರ್ಮದಲ್ಲಿ ಸ್ವಪ್ರತಿಷ್ಠೆಯು ಉದಯಿಸಿದರೆ ಸಾಮಾಜಿಕ ನ್ಯಾಯಕ್ಕೆ ಕಂಟಕ ಪ್ರಾಯವಾಗುವದು. ಪ್ರಪಂಚದ ಧರ್ಮಗಳಲ್ಲಿ ಹಿಂದೂ ಕ್ರಿಶ್ಚಿಯನ್, ಬೌದ್ಧ ಮತ್ತು ಇಸ್ಲಾಂ ಧರ್ಮಗಳು ಪ್ರಮುಖವಾದವುಗಳಾಗಿವೆ. ಪ್ರತಿಯೊಂದು ಧರ್ಮಗಳಲ್ಲಿ ಸತ್ಯ, ಅಹಿಂಸೆ, ದಯೆ, ಏಕತೆ ಇವುಗಳೇ ಇವೆಲ್ಲವುಗಳ ಮೂಲ ಗುರಿಯಾಗಿದೆ.

ಭಾರತದ ಧರ್ಮಗಳಲ್ಲಿ ವೀರಶೈವ ಧರ್ಮಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಶಿವ ಶಕ್ತಿಯರ ಅವಿನಾಭಾವ ಸಂಬಂಧವೇ ವೀರಶೈವ ತತ್ವಜ್ಞಾನದ ತಿರುಳು. ವಿಶಾಲ ವಿಶ್ವ ವ್ಯಾಪಕ ದೃಷ್ಟಿ ಇದರಲ್ಲಿ ತುಂಬಿದೆ. ವೀರಶೈವ ಶರಣ ಶರಣೆಯರು ತಮ್ಮ ಕಾಯಕದಿಂದ ಸಾಮಾಜಿಕ ನ್ಯಾಯವನ್ನು ಬಗೆಹರಿಸಿ, ಅದಕ್ಕೆ ಒಂದು ಶಕ್ತಿಯನ್ನು ಕೊಟ್ಟಿದ್ದಾರೆ. "ಕಾಯಕವೇ ಕೈಲಾಸ"ವೆಂಬ ಮಹಾತತ್ವವನ್ನು ವಿಶ್ವಕ್ಕೆ ನೀಡಿದವರೆ ವೀರಶೈವರು.

ಇಂದು ಜಗತ್ತಿನ ಧರ್ಮಗಳಲ್ಲಿ ಸಾಮರಸ್ಯ ದೃಷ್ಟಿಕೋನ ಬೆಳೆದು ಬಂದಾಗ ಜಗತ್ತಿಗೆ ಸಾಮಾಜಿಕ ರಂಗದಲ್ಲಿ ಆಗುತ್ತಿರುವ ಅಂತಃಕಲಹಗಳಿಗೆ ಧರ್ಮದಿಂದ ನ್ಯಾಯ

ದೊರೆಯುವ ಪರಿಪಾಠವನ್ನು ಪ್ರಾರಂಭಿಸಿದರೆ ಅದರಿಂದ ವ್ಯಕ್ತಿಗೂ, ರಾಷ್ಟ್ರಕ್ಕೂ, ಸಮಾಜಕ್ಕೂ ಅಷ್ಟೇ ಏಕೆ? ಮಾನವ ಕುಲಕ್ಕೆ ಕಲ್ಯಾಣವುಂಟಾಗುವದು.

ಜಗತ್ತಿನಲ್ಲಿಯ ವಿವಿಧ ರಾಷ್ಟ್ರಗಳ ಧರ್ಮ ಪೀಠಾಧಿಪತಿಗಳು, ತತ್ತ್ವಜ್ಞರು, ರಾಜಕಾರಣಿಗಳು, ಸ್ವಪ್ರತಿಷ್ಠೆಯನ್ನು ಮರೆತು ವಿಶ್ವಕಲ್ಯಾಣದ ಗುರಿಯನ್ನೇ ಕಣ್ಮುಂದೆ ಇಟ್ಟುಕೊಂಡು ಪರಸ್ಪರ ಸಂಪರ್ಕ ಬೆಳೆಸಿಕೊಳ್ಳಬೇಕು. ಇವರು ಜನರಿಗೆ ಸರಿಯಾದ ಮಾರ್ಗದರ್ಶನ ನೀಡಬೇಕು. ಸತ್ಯ, ಪ್ರಾಮಾಣಿಕತೆ, ಧರ್ಮ ಬುದ್ಧಿಗಳಿಂದ ಜನ ಮನವನ್ನು ಗೆದ್ದು ಸಮಾಜದಲ್ಲಿ ವಿಘಾತಕ ಶಕ್ತಿಗಳಿಗೆ ತಲೆಯೆತ್ತಲು ಆಸ್ಪದ ಕೊಡಬಾರದು. ಸಮಾಜದಲ್ಲಿ ಹಿಂಸಾಚಾರಕ್ಕೆ ಸ್ಥಾನ ಕಲ್ಪಿಸಬಾರದು. ಧರ್ಮದ ಅಂತಃಸತ್ವದಿಂದ ಜನರನ್ನು ಜಾಗೃತಗೊಳಿಸಬೇಕು. ಆತ್ಮಶಕ್ತಿ ಹೆಚ್ಚಿದಂತೆಲ್ಲ, ಸಮಾಜ ಕಲ್ಯಾಣವು ಸುಲಭ ಸಾಧ್ಯವಾಗುತ್ತದೆ. ಆಗ ವಿಶ್ವಶಾಂತಿಯುಂಟಾಗುತ್ತದೆ. ಅಂತೆಯೇ ಇಂತಹ ವಿಶ್ವಶಾಂತಿ ಸ್ಥಾಪನೆಗಾಗಿ ಜಗತ್ತಿನ ಪ್ರಮುಖ ಧಾರ್ಮಿಕ ಧುರೀಣರು ಕೂಡಿಕೊಂಡು International Committee ರಚಿಸಿಕೊಂಡು, The World Conference on Religion and Peace ಈ ಹೆಸರಿನ ಪರಿಷತ್ತನ್ನು ಮೇಲಿಂದ ಮೇಲೆ, ಬೇರೆ ಬೇರೆ ರಾಷ್ಟ್ರಗಳಲ್ಲಿ ಕರೆದು ಕಾರ್ಯಗತ ಗೊಳಿಸಿ ಜನಜಾಗೃತಿ ಮಾಡುತ್ತಿರುವದು ಯಾರಿಗೆ ತಾನೆ ಆನಂದವಾಗಲಿಕ್ಕಿಲ್ಲ? ಈ ರೀತಿಯ ಪರಿಷತ್ತು ಆಗಿದ್ದು ಪ್ರಪಂಚದ ಇತಿಹಾಸದಲ್ಲಿ ಮೊಟ್ಟ ಮೊದಲನೆಯದು. ಇಂದು ಇದು ಇಷ್ಟು ಸುಸಂಘಟಿತವಾಗಿ ನಡೆದುಕೊಂಡು ಹೋಗಲು Dr. Homer A. Jack ಅವರ ಪರಿಶ್ರಮವೇ ಮುಖ್ಯವಾದುದು. ಈಗಾಗಲೇ ೮, ೧೦ ರಾಷ್ಟ್ರಗಳಿಗೆ ಭೆಟ್ಟಿಕೊಟ್ಟು ಅವರಿಗೆಲ್ಲ ವಿಶ್ವಶಾಂತಿ ಸಂದೇಶ ಬೀರಿ ನಮ್ಮಲ್ಲಿಗೆ ಬಂದಿದ್ದಾರೆ. ಈ ಸಂಸ್ಥೆಗಾಗಿ ಅವರು ಅಹೋರಾತ್ರಿ ಬೆವರು ಸುರಿಸುತ್ತಿರುವದು ಕಂಡರೆ, ಅವರ ಈ ಅಭಿಮಾನ, ದೇವರೂ ಸಹ ಮೆಚ್ಚತಕ್ಕದ್ದಾಗಿದೆ. ಅವರಿಂದಲೇ ಈ ಪರಿಷತ್ತು ಮುಂದುವರಿಯುವದು ಪ್ರಗತಿಯ ದ್ಯೋತಕವಾಗಿದೆ. ಇಂದು ಭಾರತೀಯರಾದ ನಾವೆಲ್ಲರೂ ಪರಸ್ಪರ ವೈಮನಸ್ಸನ್ನು ಬಿಟ್ಟು ವಿಶ್ವಶಾಂತಿಗಾಗಿ ಹೋರಾಡುತ್ತೇವೆಂದು ಪ್ರತಿಜ್ಞೆ ಮಾಡಿ ಮುನ್ನಡೆದರೆ, Dr. Homer A. Jack ಅವರ ಇಚ್ಛೆ ಪೂರೈಸಿದಂತೆ. ಅವರು ಮಾಡತಕ್ಕ ಕಾರ್ಯಗಳಿಗೆ ನಾವೆಲ್ಲರೂ ಬೆಂಬಲಿಗರಾಗೋಣ. ಹೀಗೆ ಮಾಡಿದಲ್ಲಿ ಭಾರತೀಯರಾದ ನಾವುಗಳು ಅವರ ಮನಸ್ಸಿಗೆ ತೃಪ್ತಿ ನೀಡಿದಂತೆ ಆಗುತ್ತದೆ. ಧಾರ್ಮಿಕ ಪ್ರಜ್ಞೆಯಲ್ಲಿ ಮುಂದುವರೆದ ನಾವುಗಳು ಪ್ರೇಮದ ಭಾವೈಕ್ಯದ ರಸದೂಟವನ್ನು ಉಣ್ಣಿಸಿದರೆ, ನಿರಂತರವೂ ಸಹಕಾರಿಗಳಾದರೆ Dr. Homer A. Jack ಅವರ ಆನಂದಕ್ಕೆ ಕೊನೆಯೇ ಇಲ್ಲವೆಂದು ನಾವು ಭಾವಿಸುತ್ತೇವೆ. ಭಾರತೀಯರ ಪ್ರತಿಭೆ ಪರರಾಷ್ಟ್ರಗಳಲ್ಲಿಯೂ ಬೆಳಗುವಂತೆ ಕಾರ್ಯಪ್ರವೃತ್ತರಾಗೋಣ.

ಕೊನೆಯದಾಗಿ Dr. Homer A. Jack ಲುವೆನ್‌ದಲ್ಲಿ ನಮಗೆ ಹೇಳಿದಂತೆ, ನಮ್ಮ ಸ್ಥಾನಕ್ಕೆ ಬಂದುದಕ್ಕೆ ಮಠದ ಪತಿಯಿಂದ, ಊರಿನ ನಮ್ಮ ಭಕ್ತರ ಪತಿಯಿಂದ

ಕೃತಜ್ಞತೆಯನ್ನು ಸಲ್ಲಿಸುವದಲ್ಲದೆ, ೧೨ನೆಯ ಶತಮಾನದಿಂದಲೂ, ಧರ್ಮ ಕ್ರಾಂತಿಯನ್ನು ಮಾಡುತ್ತ, ಸಾಮಾಜಿಕ ಹಾಗೂ ಧರ್ಮೋದ್ಧಾರಕ್ಕಾಗಿ, ಭಾರತ ತುಂಬೆಲ್ಲ ೩೦೦೦ ಮಠಗಳನ್ನು ಸಂಸ್ಥಾಪಿಸಿದ ಮೂಲ ಮಠವಾದ ಹುಬ್ಬಳ್ಳಿ ಶ್ರೀ ಜಗದ್ಗುರು ಮೂರುಸಾವಿರ ಮಠವು ನಿರಂತರವೂ ಇವರ ಕಾರ್ಯಕ್ಕೂ ಸಹ ಸಹಕಾರಿಯಾಗುವದಲ್ಲದೆ ಇಲ್ಲಿಯೂ ಆ ವಿಶ್ವಪರಿಷತ್ತಿನ ತತ್ವವನ್ನು ಪರಿಣಾಮಕಾರಿಯಾಗುವಂತೆ ಪ್ರಚಾರ ಮಾಡುತ್ತೇವೆಂದು ಹೇಳಲು ಆನಂದವೆನಿಸುತ್ತದೆ.

Dr. Homer A. Jack ಅವರು ಭಾರತಕ್ಕೆ ಬಂದಾಗಲೆಲ್ಲ ಧರ್ಮ ಸಂಸ್ಕೃತಿ ಸೌರಭ ಸೂಸುವ ಹೂವಿನ ಬಳ್ಳಿಯಂತಿರುವ ಹುಬ್ಬಳ್ಳಿಗೂ ಬರುತ್ತಿರಲಿ. ಇಲ್ಲಿಗೆ ಬಂದು ಆ ಸಂಸ್ಥೆಯ ಕಾರ್ಯ ವ್ಯಾಪ್ತಿಯನ್ನು ತಿಳಿಸಿ ಇಲ್ಲಿಯವರನ್ನೂ ಎಚ್ಚರಿಸಲಿ. ಅವರಿಗಾಗಿ ಜಗದ್ಗುರು ಗುರುಸಿದ್ಧೇಶ್ವರನಲ್ಲಿ ಇಷ್ಟೇ ಪ್ರಾರ್ಥನೆ.

Dr. Homer A. Jack ಹಾಗೂ ಅವರ ಪತ್ನಿಯ ಆಯುರಾರೋಗ್ಯ ಭಾಗ್ಯ ಹೆಚ್ಚಲಿ. ಇನ್ನು ಅವರಿಂದ ಈ ಪ್ರಪಂಚವು ಹೆಚ್ಚು ಹೆಚ್ಚು ಕಾರ್ಯವನ್ನು ತೆಗೆದುಕೊಂಡು ಮಾನವ ಕುಲಕ್ಕೆ ಕಲ್ಯಾಣವುಂಟು ಮಾಡಲಿ. ಇದುವೆ ನಮ್ಮ ಅಂತಃಕರಣದ ಕಳಕಳಿಯ ಕರೆ.

ಇಲ್ಲಿಗೆ ಆಗಮಿಸಿದ ಸ್ವಾಮೀಜಿಗಳೂ, ಹಾಗೂ ಮಹಾ ಪೌರರಾದ ಮೆಥಾಯಿಸ್ ಮತ್ತು R. R. Diwakar ಭಾಷಣಕಾರರಾದ ವಿದ್ವಾಂಸರು ಮತ್ತು ಭಕ್ತರು ಮೂರುಸಾವಿರಮಠದ ಕರೆಗೆ ಓ ಗೊಟ್ಟು ಸಹಕರಿಸಿ ಬಂದುದಕ್ಕೆ ಅವರೆಲ್ಲರಿಗೂ ನಮ್ಮ ಶುಭಾಶಯಗಳು.

## ಶಿವಯೋಗ ಮಂದಿರದಲ್ಲಿ

ಜನಜೀವನ ಸುಧಾರಿಸಲು ಯೋಗಧ್ಯಾನ ಅವಶ್ಯಕ. ಯೋಗವಿಲ್ಲದೆ ಧ್ಯಾನ ನಿಲ್ಲದು. ಧ್ಯಾನವಿಲ್ಲದೆ ಯೋಗಬರದು. ಯೋಗದಿಂದ ಅನೇಕ ರೋಗಗಳನ್ನು ನಾಶ ಮಾಡಿದ ಉದಾಹರಣೆಗಳುಂಟು. ಮನುಷ್ಯನು ಅಜ್ಞಾನಾಂದಕಾರದಲ್ಲಿ ಬಿದ್ದು ಒದ್ದಾಡುತ್ತಿರುವಾಗ, ಅಂಥವನನ್ನು ಎಚ್ಚರಿಸಲು ಯೋಗ ಪ್ರಾರ್ಥನೆಯೇ ದಿವ್ಯೌಷಧ. ಇದೆಲ್ಲವನ್ನು ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳು ಅರಿತುಕೊಂಡಿದ್ದರು. ಈ ಯೋಗ ಶಕ್ತಿಯಿಂದ ಆತ್ಮಶುದ್ಧಿಯಾಗಿ, ಮನಸ್ಸಿನ ದೌರ್ಬಲ್ಯ ನಷ್ಟವಾಗಿ ಸಮಾಜವನ್ನು ರಾಷ್ಟ್ರವನ್ನು ಸುಧಾರಿಸಲು ಜಗತ್ತಿಗೆ ಶಾಂತಿ ನೀಡಲು ಈ ಯೋಗ ಸಾಧನೆಯು ಮೂಲ ಬೇರೆಂದು ತಿಳಿದು ಹಾನಗಲ್ಲ ಕುಮಾರ ಶಿವಯೋಗಿಗಳು "ಶಿವಯೋಗ ಮಂದಿರ" ಎಂಬ ಹೆಸರಿನ ಸಂಸ್ಥೆಯೊಂದನ್ನು ಸ್ಥಾಪಿಸಿ ದಕ್ಷಿಣ ಭಾರತಕ್ಕೆ ಇದೊಂದು ಮಹದುಪಕಾರ ಮಾಡಿದ್ದಾರೆ. ಈ ಸಂಸ್ಥೆಯಲ್ಲಿ ಸೇರ ಬಯಸುವವರು ೫ ವರ್ಷದಿಂದ ೧೨ ವರ್ಷದ ಒಳಗಿನ ಬಾಲಕರಿರಬೇಕು. ಅಂದರೆ ಒಳ್ಳೆಯ ಸಂಸ್ಕಾರವನ್ನು ನೀಡಲು ಅನುಕೂಲ

ವಾಗುತ್ತದೆ. ತಂದೆ-ತಾಯಿಗಳ ಸಂಪರ್ಕ ಬಿಟ್ಟಿರಬೇಕು. ಪ್ರಾಪಂಚಿಕದ ನೆನಪು ಬಂದಿರಬಾರದು. ಅಂದರೆ ಸಮಾಜ ಸೇವೆಯನ್ನು ನಿಸ್ವಾರ್ಥದಿಂದ ಮಾಡಲು ಅನುಕೂಲ ವಾಗುತ್ತದೆ. ಇಂಥವರನ್ನು ಈ ಸಂಸ್ಥೆಯಲ್ಲಿ ಸೇರಿಸಿಕೊಂಡು ಧಾರ್ಮಿಕ ಹಾಗೂ ಯೋಗ ಶಿಕ್ಷಣವನ್ನು ಈ ಸಂಸ್ಥೆಯು ಕೊಡುತ್ತದೆ. ನಾವಾದರೂ ಸಹ ಇಲ್ಲಿಯೇ ನಾಲ್ಕನೆಯ ವಯಸ್ಸಿನಲ್ಲಿ ಬಂದು ಯೋಗ ಶಿಕ್ಷಣವನ್ನು ಪಡೆದು ಮಠಾಧಿಪತಿಗಳಾಗಿರುವ ಪರಿಣಾಮ ವಾಗಿಯೇ ಸಮಾಜ ಸೇವೆ ಮಾಡುವ ಭಾವನೆ ಬಂದಿದೆ. ಇಲ್ಲಿಂದ ಈಗಾಗಲೇ ಸಾವಿರಾರು ಮಠಾಧಿಪತಿಗಳು ತಯಾರಾಗಿ, ಯೋಗ ಸಾಧನೆಯಲ್ಲಿ ಬಲ್ಲಿದವರಾಗಿ ದಕ್ಷಿಣ ಭಾರತದ ತುಂಬೆಲ್ಲ ಧಾರ್ಮಿಕ ಜಾಗೃತಿಯನ್ನು ಮಾಡುತ್ತ ಸಾಮಾಜಿಕ; ಶೈಕ್ಷಣಿಕ ಕ್ರಾಂತಿಯನ್ನು ಮಾಡಿ ಸಮಾಜದಲ್ಲಿ ಶಾಂತಿಯನ್ನು ತುಂಬುತ್ತಿದ್ದಾರೆ. ಇಲ್ಲಿ ಕುಳಿತಿರುವ ಸಾಧಕರೆಲ್ಲರೂ ಸಾಧನೆ ಮಾಡಿದನಂತರ ಇಲ್ಲಿಂದ ಹೊರಗೆ ಹೋಗಿ, ಸಮಾಜ ಸುಧಾರಣೆ ಮಾಡತಕ್ಕವರೆ. ಈ ಸಂಸ್ಥೆ ನಿರ್ಜನವಿದ್ದು ಮಗ್ಗಲಲ್ಲಿಯೇ ಮಲಪ್ರಭಾ ಹೆಸರಿನ ಹೊಳೆ ಹರಿದಿದೆ. ತಪಸ್ಸು ಮಾಡಲು ಅನುಕೂಲವಾಗಿದೆ. ಎನಿತೋ ಗುಹೆಗಳು ಇಲ್ಲಿ ಅವೆ. ಈ ಸಂಸ್ಥೆಯಿಂದ ಕಲಿತು ಪರದೇಶದಲ್ಲಿ ವೀರಶೈವ ಧರ್ಮ ವಿಶಾಲ ಭಾವನೆಯನ್ನು ಪ್ರಚಾರ ಮಾಡಿ ಮಧುರ ಬಾಂಧವ್ಯವನ್ನು ಬೆಳೆಸಬೇಕೆಂದು ಈ ಸಂಸ್ಥೆಯ ಸಂಸ್ಥಾಪಕರ ಮಹದಿಚ್ಛೆ ಇತ್ತು. ಇಲ್ಲಿ ಕುಳಿತಿರುವ ನಾಗನೂರು ಶಿವಬಸವ ಸ್ವಾಮಿಗಳು ಇವರು ಈ ಸಂಸ್ಥೆಯ ಅಧ್ಯಕ್ಷರಿದ್ದಾರೆ. ಇವರು ಒಳ್ಳೇ ಕಾರ್ಯಕರ್ತರು. ಇಂತಹ ಯೋಗ ಸಂಸ್ಥೆಗೆ Dr. Homer A. Jack ಅವರು ಹಾಗೂ ಅವರ ಹೆಂಡತಿ ಭೆಟ್ಟಿಕೊಟ್ಟಿದ್ದು ನಮ್ಮೆಲ್ಲರಿಗೆ ಅತೀವ ಸಂತೋಷ ವಾಗಿದೆ. ಇಲ್ಲಿಂದ ತಯಾರಾದ ಸಾಧಕರನ್ನು ಪರದೇಶಕ್ಕೆ ಧರ್ಮ ಪ್ರಚಾರಕ್ಕಾಗಿ ಕಳಿಸುವ ಉದ್ದೇಶವೂ ಅದೆ. ಕರ್ನಾಟಕದಲ್ಲಿ ಇಂತಹ ಯೋಗ ಸಂಸ್ಥೆ ಸ್ಥಾಪಿಸಿದ್ದು ಇದು ಇತಿಹಾಸದಲ್ಲಿಯೇ ಮೊದಲು.

ನಿಸರ್ಗ ಸೌಂದರ್ಯದಿಂದೊಡಗೂಡಿದ ಈ ಸಂಸ್ಥೆಯ ಸಂಸ್ಥಾಪಕರು ಮಹಾ ತಪಸ್ವಿಗಳು, ದೂರದೃಷ್ಟಿಯುಳ್ಳವರು, ಸರ್ವಧರ್ಮ ಸಮನ್ವಯ ದೃಷ್ಟಿಯುಳ್ಳವರು. ಈ ಸಂಸ್ಥೆಯವರು ನೀವು ಮಾಡುತ್ತಿರುವ ಕಾರ್ಯವನ್ನು, ಇಲ್ಲಿ ಮುಂದುವರಿಸಿಕೊಂಡು ಹೋಗುತ್ತೇವೆಂದು ಹೇಳಲು ಅಭಿಮಾನವೆನಿಸುತ್ತದೆ. ಈ ಸಂಸ್ಥೆಯ ಮೇಲೆ ನಿಮ್ಮ ಮಮತೆ, ಅಭಿಮಾನ ನಿರಂತರವೂ ಇರಲಿ. Dr. Homer A. Jack ರಂತಹ ಕರ್ತೃತ್ವ ಶಕ್ತಿಯುಳ್ಳ ಅಂತರ್‌ರಾಷ್ಟ್ರೀಯ ಮಹಾ ವ್ಯಕ್ತಿಯು ನಮ್ಮ ಸಂಸ್ಥೆಗೆ ಬಂದುದು ನಮಗೆ ಬಹಳ ಆನಂದವಾಗಿದೆ ಎಂದು ಎಲ್ಲ ಸ್ವಾಮಿಗಳವರ ಪರಿಯಿಂದ ಹಾಗೂ ಇಲ್ಲಿ ಭಕ್ತರ ಪರಿಯಿಂದ ಮತ್ತೊಮ್ಮೆ ಕೃತಜ್ಞತೆಯನ್ನು ಸಲ್ಲಿಸುತ್ತೇವೆ.

## ಘಟಪ್ರಭೆಯಲ್ಲಿ

"ಶರೀರ ಮಾದ್ಯಂ ಖಲು ಧರ್ಮಸಾಧನಂ" ಆರೋಗ್ಯ ಭಾಗ್ಯವು ಎಲ್ಲಕ್ಕಿಂತಲೂ

ಹೆಚ್ಚಿನದು. ಆರೋಗ್ಯವಿಲ್ಲದಿದ್ದರೆ ಯಾವ ಕಾರ್ಯವೂ ಆಗಲಾರದು. ಧಾರ್ಮಿಕ ಜಾಗೃತಿ ಮಾಡಲು, ಸಾಮಾಜಿಕರಲ್ಲಿ ಭಾವೈಕ್ಯ ಹುಟ್ಟಿಸಲು ಆರೋಗ್ಯದಿಂದ ಇದ್ದರೆ, ಆ ಶಕ್ತಿಯ ಬಲದಿಂದ ಸತ್‌ಕಾರ್ಯ ಮಾಡಲು ಬರುವದು. ಆರೋಗ್ಯದಿಂದ ಇದ್ದರೆ ಮನಸ್ಸಿಗೆ ಸಮಾಧಾನ ಹಾಗೂ ಶಾಂತಿ ಸಿಗುತ್ತದೆ. ಶಾರೀರಿಕ ಹಾಗೂ ಮಾನಸಿಕ ಶುದ್ಧಿ ಎರಡನ್ನೂ ಗಮನಿಸುವದು ಮುಖ್ಯ ಕರ್ತವ್ಯ. ಎರಡೂ ಕೂಡಿದರೇನೆ ಮನುಷ್ಯನು ಪರಿಪೂರ್ಣನಾಗುತ್ತಾನೆ. ಆರೋಗ್ಯ ಇರದಿದ್ದರೆ ಕಾಮ, ಕ್ರೋಧ, ಮೋಹ, ಮದ, ಮತ್ಸರಾದಿ ದುರ್ಗುಣಗಳು ಕಾಡಿ ಮನುಷ್ಯನನ್ನು ಕಾಡು ಜೀವನದಲ್ಲಿ ಒಯ್ಯುತ್ತವೆ. ಆರೋಗ್ಯವೇ ಧರ್ಮಕಾರ್ಯಕ್ಕೆ ಪ್ರಥಮ ಸೋಪಾನ. ಇದನ್ನರಿತೇ ನಮ್ಮ ಗುರುಗಳಾದ ಲಿಂ. ಜಗದ್ಗುರು ಶ್ರೀ ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು, "ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆ" ಈ ಹೆಸರಿನಿಂದ ಸಂಸ್ಥಾಪಿಸಿದ್ದಾರೆ. ಈ ದವಾಖಾನೆ ಸಹಕಾರಿ ರಂಗದಲ್ಲಿ ಭಾರತದಲ್ಲಿಯೇ ಪ್ರಪ್ರಥಮ ಸಂಸ್ಥಾಪಿಸಿದ್ದು ಬಡವರ ಉದ್ಧಾರಕ್ಕಾಗಿ ಮುಖ್ಯವಾಗಿಟ್ಟುಕೊಳ್ಳಲಾಗಿದೆ. ಈ ಆಸ್ಪತ್ರೆಯಲ್ಲಿ ಪ್ರತ್ಯೇಕ ಕ್ಷಯರೋಗದ ವಿಭಾಗವನ್ನು ಹೋದ ವರ್ಷದಿಂದ ತೆರೆಯಲಾಗಿದೆ. ಇಲ್ಲಿಯ ಹವೆ, ನೀರು ಒಳ್ಳೇ ಚನ್ನಾಗಿದ್ದು ಆರೋಗ್ಯಕ್ಕೆ ಅನುಕೂಲವಾಗಿವೆ. ಪರದೇಶದಿಂದಲೂ ಅನೇಕ ರೋಗಿಗಳು ಇಲ್ಲಿಗೆ ೩–೪ ತಿಂಗಳು ಇದ್ದು ತಮ್ಮ ಪ್ರಕೃತಿಯನ್ನು ಗುಣ ಮಾಡಿಕೊಂಡು ಹೋಗಿದ್ದಾರೆ. ಈಗಿದ್ದ ತಮ್ಮ ದವಾಖಾನೆಯ ಚಿಫ್ ಮೆಡಿಕಲ್ ಆಫೀಸರರಾದ ಡಾ. ಬಸವರಾಜ ಆಲೂರು F.R.C.S. ಅವರು ಇಂಗ್ಲಂಡ್‌ದಲ್ಲಿಯೇ ಕಲಿತು ಅಲ್ಲಿಯ ಸೇವೆಯ ಅನುಭವವನ್ನು ತೆಗೆದುಕೊಂಡು, ನಮ್ಮಲ್ಲಿಗೆ ಬಂದು ಕಾರ್ಯ ನಿರ್ವಹಿಸಿಕೊಂಡು ಜನಪ್ರಿಯರಾಗಿದ್ದಾರೆ. ಇಂತಹ ನಮ್ಮ ಸಂಸ್ಥೆಗೆ, Dr. Homer A Jack ಅವರು ಬಂದಿದ್ದಕ್ಕಾಗಿ ನಮ್ಮೆಲ್ಲರಿಗೂ ಆನಂದವನ್ನುಂಟುಮಾಡಿದೆ. ಅಲ್ಲಿ ಕ್ರಿಶ್ಚಿಯನ್ ಮಿಶಿನರಿಗಳು ಮಾಡುವಂತೆ ಇಲ್ಲಿಯೂ ಧರ್ಮಗುರುಗಳು ಇಂತಹ ದವಾಖಾನೆಗಳನ್ನು ಸ್ಥಾಪಿಸಿ, ಜನ ಸೇವೆಯೇ ಜಗದೀಶನ ಸೇವೆಯೆಂದು ಭಾವಿಸಿ ಮಾಡಬೇಕೆಂದು ಭಾವನೆ. ಈ ದೃಷ್ಟಿಯಿಂದಲೇ ಈ ದವಾಖಾನೆ ಸೇವೆ ಮಾಡುತ್ತಿದೆ. ಇದಕ್ಕೆ ಎಲ್ಲ ಡಾಕ್ಟರರ, ಸಹಕಾರಿ ವರ್ಗದ ಎಲ್ಲ ಸದಸ್ಯರ, ನಮ್ಮ ಎಲ್ಲ ಸಿಬ್ಬಂದಿಯ ಸೇವೆಯು ಚನ್ನಾಗಿದ್ದು ದವಾಖಾನೆಯು ದಿನೇ ದಿನೇ ಅಭಿವೃದ್ಧಿಯಾಗಲು ಅನುಕೂಲವಾಗಿದೆ.

Dr. Homer A Jack ಅವರು ನಮ್ಮನ್ನು ಮೇಲಿಂದ ಮೇಲೆ ಪರದೇಶಕ್ಕೆ ಕರೆಯಿಸಿಕೊಂಡು, ತಾವು ಮಾಡುತ್ತಿರುವ ಸ್ತುತ್ಯ ಕಾರ್ಯವನ್ನು ತೋರಿಸಿ ವಿಶ್ವಶಾಂತಿಯ ಬಲ ಸಂವರ್ಧನೆಗಾಗಿ ಅಹೋರಾತ್ರಿ ಪರಿಶ್ರಮಿಸಬೇಕೆಂದು ಹೇಳುತ್ತಿರುವದನ್ನು ಇಲ್ಲಿ ಸ್ಮರಿಸಬೇಕಾಗಿದೆ. Dr. Homer A Jack ಅವರು ನಿರಂತರವೂ ಕಾರ್ಯನಿರತರು. ಅವರು ಜಗತ್ತಿಗೆ ಶಾಂತಿ ಸಿಗಬೇಕೆಂದು ಅಹೋರಾತ್ರಿ ಪರಿಶ್ರಮಿಸುತ್ತಿದ್ದಾರೆ. ಜಗತ್ತು

ಅಶಾಂತಮಯವಾಗಬೇಕಾದರೆ, ನಮ್ಮಲ್ಲಿಯ ದ್ವೇಷಾಸೂಯೆಗಳೇ ಕಾರಣ. ಅವೆಲ್ಲವು ಗಳನ್ನು ಬಿಟ್ಟು ಧರ್ಮದತ್ತ ಮನಸ್ಸು ಹಾಕಿದರೆ, ಕಷ್ಟ ಕಾರ್ಪಣ್ಯಗಳು ದೂರಾಗಿ ವಿಶ್ವಶಾಂತಿ ಸಾಧ್ಯವೆಂದು ಹೇಳುತ್ತಿದ್ದಾರೆ. "ಕಾಯಕವೇ ಕೈಲಾಸ"ಕ್ಕೆ ಮೆಚ್ಚಿಕೊಂಡಿದ್ದಾರೆ. Dr. Homer A Jack ಅಂತಹವರ ಕರ್ತವ್ಯ ನಿಷ್ಠೆಯನ್ನು ಪಡೆದುಕೊಂಡು, ಸಾಮಾಜಿಕ ಕ್ರಾಂತಿಗೆ, ಶಾಂತಿಗೆ ಭಾಗಿಗಳಾಗೋಣ ಎಂದುಹೇಳಿ ನಮ್ಮೆರಡು ಮಾತು ಗಳನ್ನು ಮುಗಿಸುತ್ತೇವೆ.

## ಆಧ್ಯಾತ್ಮ ಬಂಧು ಶ್ರೀ ಪೇಜಾವರ ಮಠಾಧೀಶರು

ಹಿಂದು ಸಮಾಜಕ್ಕೆ ಮಾರ್ಗದರ್ಶನ ಮಾಡಿದ ಪೇಜಾವರ ಮಠಾಧೀಶರು ನಮಗೆ ತುಂಬಾ ಸುಪರಿಚಿತರು. ಧರ್ಮ ಜಾಗ್ರತಿ ನಡೆಯುವ ಸಭೆ ಸಮ್ಮೇಲನಗಳಲ್ಲಿ ನಾವೀರ್ವರೂ ಕೂಡುತ್ತಿದ್ದೆವು. ಸಾಮಾಜಿಕ, ಧಾರ್ಮಿಕ ರಂಗದಲ್ಲಿ ಒಳ್ಳೇ ಸಂಸ್ಕಾರ ಕೊಡುವ ಬಗ್ಗೆ ಹಲವು ರೀತಿಯಲ್ಲಿ ಆಪ್ತಾಲೋಚನೆ ಮಾಡುತ್ತಿದ್ದೆವು, ಸಮಾಜೋದ್ಧಾರದ ಬಗ್ಗೆ ಚಿಂತಿಸುತ್ತಿದ್ದೆವು.

ಒಮ್ಮೆ ನಾವು ೧೧೧ ಗುರು ವಿರಕ್ತರನ್ನು ಕರೆದುಕೊಂಡು ಹುಬ್ಬಳ್ಳಿಯಿಂದ ಶಿವಯೋಗ ಮಂದಿರದವರೆಗೆ ಧರ್ಮ ಜಾಗ್ರತಿಗಾಗಿ ಪಾದಯಾತ್ರೆ ಮಾಡುವಾಗ ಮಧ್ಯದಲ್ಲಿ ನಮ್ಮೊಡನೆ ಪಾಲಗೊಂಡು ಸಮಾಜದಲ್ಲಿ ಆಚಾರ ವಿಚಾರ ಬಲಗೊಳ್ಳಲು ಇದು ದೊಡ್ಡ ಸಾಧನೆ ಎಂದು ಹಾರೈಸಿ ಸಹಕರಿಸಿದ ಚೇತನ ವ್ಯಕ್ತಿ. ಇವರು ಒಂದೇ ಧರ್ಮದ ಪ್ರಚಾರದಲ್ಲಿ ತೊಡಗದೆ, ಮಾನವೀಯ ಮೌಲ್ಯಗಳನ್ನು ಜನತೆಯಲ್ಲಿ ಪ್ರಚಾರ ಮಾಡಿದ ಮಹಾನ್‌ಶಕ್ತಿ. ಹಿಂದೂ ಸಮಾಜದ ಸಂಘಟನೆಗಾಗಿ ಹಗಲಿರುಳು ಪರಿಶ್ರಮಿಸಿದ್ದಾರೆ. ಪೂರ್ಣಪ್ರಜ್ಞ ವಿದ್ಯಾಪೀಠವನ್ನು ಸಂಸ್ಕೃತ ಪ್ರಚಾರಕ್ಕಾಗಿ ಸ್ಥಾಪಿಸಿದ್ದಾರೆ. ಅಖಿಲ ಭಾರತ ಮಾಧ್ವ ಮಂಡಳದ ಅಧ್ಯಕ್ಷರಾಗಿ, ಜನಜಾಗ್ರತಿ ಮಾಡಿದ್ದಾರೆ. ಅಸ್ಪೃಶ್ಯಾಚರಣೆಗೆ ಧರ್ಮದ ಆಧಾರವಿಲ್ಲ ಇದು ಹಿಂದೂ ಸಮಾಜಕ್ಕೆ ಒಂದು ಕಂಟಕ ಎಂದು ತಿಳಿಸಿ ಜನತೆಯನ್ನು ಬಡಿದೆಬ್ಬಿಸಿದ್ದಾರೆ. ವಿದ್ಯಾರ್ಥಿಗಳಿಗಾಗಿ ಅಲ್ಲಲ್ಲಿ ವಿದ್ಯಾರ್ಥಿನಿಲಯಗಳನ್ನು ಸಂಸ್ಥಾಪಿಸಿ ಅನಾಥ ವಿದ್ಯಾರ್ಥಿಗಳಿಗಾಗಿ ಆಧಾರ ಸ್ತಂಭರಾಗಿದ್ದಾರೆ. ಉಚಿತ ಚಿಕಿತ್ಸಾಲಯ ಹಾಗೂ ಆಸ್ಪತ್ರೆಗಳನ್ನು ಸ್ಥಾಪಿಸಿ ರೋಗಿಗಳ ಭವಿಷ್ಯವನ್ನು ರೂಪಿಸಿದ್ದಾರೆ. ಅಲ್ಲಲ್ಲಿ ಗೋ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ಬಿರುಗಾಳಿಯಿಂದ ಹಾಳಾದ ಆಂದ್ರ ಕರಾವಳಿಯ ಗ್ರಾಮವೊಂದನ್ನು ಲಕ್ಷಾಂತರ ರೂಪಾಯಿಗಳ ವೆಚ್ಚದಿಂದ ಮನೆಗಳನ್ನು ಕಟ್ಟಿಸಿ ಪುನರ್ವಸತಿ ಕಲ್ಪಿಸಿಕೊಟ್ಟು ಅವರಿಗೆ ಆಶ್ರಯದಾತರಾಗಿದ್ದಾರೆ. ಶ್ರೀಪೇಜಾವರ ಮಠಾಧೀಶರು ಹಿಂದು ಸಂಸ್ಕೃತಿಯ ಪುನರುತ್ಥಾನಕ್ಕಾಗಿ ಹಗಲಿರುಳು ದುಡಿದು ಗಂಧದಂತೆ ಜೀವನ ಸವೆಸಿದ್ದಾರೆ. ವಿಶ್ವಹಿಂದೂ ಪರಿಷತ್ತ ವಿಶ್ವಮಾನ್ಯವಾಗುವಂತೆ ಪರಿಶ್ರಮಿಸಿದ್ದಾರೆ, ಜನಪ್ರಿಯರೆನಿಸಿದ್ದಾರೆ. ಅವರ ವ್ಯಕ್ತಿತ್ವ ಬಹುಮುಖ ಪ್ರತಿಭೆಯಿಂದ ಕೂಡಿದೆ. ಜೀವನದ ಎಲ್ಲ ರಂಗದಲ್ಲಿಯೂ

ಮಾನವೀಯತೆಯನ್ನು ತುಂಬಿದ್ದಾರೆ. ತಾವು ಕೃಶರಾಗಿ ಸಮಾಜವನ್ನು ಎಚ್ಚರಿಸಿದ್ದಾರೆ, ಎತ್ತರಿಸಿದ್ದಾರೆ. ಇಂಥವರು ಇನ್ನೂ ಇರುವರೆಂದೇ ಸಮಾಜದಲ್ಲಿ ಇನ್ನೂ ಧರ್ಮ ಉಳಿದಿದೆ, ಸಂಸ್ಕೃತಿ ಬೆಳೆದಿದೆ. ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಯುವ ಶಕ್ತಿಗೆ ಚೇತನ ನೀಡಿದ್ದಾರೆ. ಬರಗಾಲ ಬಂದಾಗ ಬಡವರ ಹಸಿವು ಹಿಂಗಿಸಿದ್ದಾರೆ. ಎಲ್ಲಕ್ಕಿಂತಲೂ ಅವರ ಸರ್ವಧರ್ಮ ಸಮನ್ವಯ ದೃಷ್ಟಿಯನ್ನು ಮೆಚ್ಚುವಂತಹದು. ಎಲ್ಲರೊಡನೆ ಬೆರೆತು ಅರುವಿನ ಬೆಳಕನ್ನು ತೋರಿಸಿದ್ದಾರೆ. ಅವರ ಹೃದಯ ವೈಶಾಲ್ಯ ಪರಸ್ಪರ ಸಹಕಾರ ಮನೋಭಾವನೆ ಜನರ ಹೃದಯವನ್ನು ಗೆದ್ದಿವೆ. ಜನ-ಮನೋಮಂದಿರದಲ್ಲಿ ಕುಳಿತಿರುವ ಪೇಜಾವರ ಮಠದ ವಿಶ್ವೇಶ್ವರ ತೀರ್ಥರ ಜೀವನ ಪವಿತ್ರ ತೀರ್ಥವಾಗಿದೆ. ಪರಿಸ್ಥಿತಿಗನುಗುಣವಾಗಿ ಧಾರ್ಮಿಕ ರಂಗದಲ್ಲಿಯೂ, ಸಾಮಾಜಿಕ ರಂಗದಲ್ಲಿಯೂ ಪರಿವರ್ತನೆ, ಬದಲಾವಣೆ ಅವಶ್ಯಬೇಕೆಂಬುವ ಧೋರಣೆಯುಳ್ಳವರು ವಿವಿಧತೆಯಲ್ಲಿ ಏಕತೆಯನ್ನು ಹಿಂದೂ ಧರ್ಮವೊಂದರಲ್ಲಿಯೇ ಕಾಣಬಹುದು ಎಂದು ಶ್ರೀಗಳು ತಿಳಿಸುತ್ತಾರೆ. ಆದರೆ "ಮತಾಂತರದ ಬಗ್ಗೆ ಸದಾಚಾರ ಸಂಹಿತೆಯೊಂದನ್ನು ರೂಪಿಸಿಕೊಳ್ಳುವದು ಒಳ್ಳೆದು" ಎಂದೆನ್ನುತ್ತಾರೆ. "ಭಾರತದ ಆಧ್ಯಾತ್ಮಿಕ ಬೆಳಕೇ ವಿಶ್ವಕ್ಕೆ ದಾರಿದೀಪವಾಗಬಲ್ಲದು" ಆದರ್ಶ ಹಿಂದೂ ಸಮಾಜದ ಸಂಘಟನೆಗೆ ಅಭಿಮಾನದೊಡನೆ, ನಿಷ್ಠೆಯೊಡನೆ, ಪರಸ್ಪರ ಸಹಕಾರದೊಡನೆ ಕರ್ತವ್ಯ ಪ್ರಜ್ಞೆಯನ್ನು ಮನಸ್ಸಿಟ್ಟು ಮಾಡಿದರೆ ಅದು ಸಾಧ್ಯವೆಂದು ತಮ್ಮ ಪ್ರವಚನದಲ್ಲಿ ಶ್ರೀಗಳು ಹಲವು ಬಾರಿ ತಿಳಿಸಿ ಜನರನ್ನು ಹಿಂದೂ ಸಂಸ್ಕೃತಿಯತ್ತ ಕರೆದೊಯ್ದು ಉದ್ಧಾರ ಮಾಡಿದ್ದಾರೆ.

ಪೇಜಾವರ ಮಠದ ಶ್ರೀಗಳ ವ್ಯಕ್ತಿತ್ವ ಬಲು ಹಿರಿದು. ಅವರ ಅಗಾಧ ಸಾಧನೆ ಮಾನವೀಯ ಅನುಕಂಪ, ಎಂತಹ ವ್ಯಕ್ತಿಗಳಿಗೂ ಆಶ್ಚರ್ಯ ನೀಡದಿರದು. ಚಿಕ್ಕಂದಿನಿಂದಲೂ ಆಧ್ಯಾತ್ಮಿಕ ಶಕ್ತಿಯನ್ನು ಗಳಿಸಿಕೊಂಡು, ದೈವೀ ಶಕ್ತಿಯನ್ನು ಬೆಳಸಿಕೊಂಡು ಉಡುಪಿಯ ಇತಿಹಾಸದಲ್ಲಿ ನಿರಂತರ ನಿಲ್ಲಬಲ್ಲವರಾದ ಶ್ರೀ ವಿಶ್ವೇಶ್ವರ ತೀರ್ಥ ಪೇಜಾವರ ಮಠದ ಶ್ರೀಗಳು, ಉಡುಪಿಗೆ ಅಷ್ಟೇ ಅಲ್ಲ ಕರ್ನಾಟಕಕ್ಕೆ ಆದರ್ಶ ವ್ಯಕ್ತಿಗಳಾಗಿದ್ದಾರೆ. ಸ್ಫೂರ್ತಿ ನೀಡಿದ್ದಾರೆ, ಶಕ್ತಿಯಾಗಿದ್ದಾರೆ.

ಇವರು ನೂರು ವರುಷ ಬಾಳಲಿ, ಬೆಳಗಲಿ. ಬಾಳಿನುದ್ದಕ್ಕೂ ಸಮಾಜಕ್ಕೆ ಚೈತನ್ಯ ನೀಡುತಿರಲಿ. ನಮ್ಮ ಹಾಗೂ ಪೇಜಾವರಮಠದ ಶ್ರೀಗಳವರ ಆಧ್ಯಾತ್ಮ ಬಾಂಧವ್ಯ ಕೊನೆಯವರೆಗೂ ಸಂವರ್ಧನೆಯಾಗುತ್ತ ನಾಡಿಗೆ, ಭಾರತಕ್ಕೆ ಸಂಸ್ಕೃತಿಸೌರಭ ಹರಡುವಂತಾಗಲೆಂದು, ಅಂತಃಕರಣ ಪೂರ್ವಕ ಹಾರೈಕೆ.

## ಜಾನಪದ ದೀಪ್ತಿ

**ಪುಸ್ತಕ ವಿಮರ್ಶೆ:**

ಕಾವ್ಯ ಪ್ರಯೋಗ ಪರಿಣತ ಮತಿಗಳಾದ, ಭಾರತೀಯ ಸಂಸ್ಕೃತಿಯ ಕನ್ನಡ ನಾಡಿನ ಹಳ್ಳಿಗಾಡಿನವರ ನಡೆ-ನುಡಿಯ ಬಗ್ಗೆ ತಾವೇ ಬರೆದ ಪ್ರಬಂಧ ಸಂಕಲನವಾದ

"ಜಾನಪದ-ದೀಪ್ತಿ"ಯಲ್ಲಿ ಬಿಡುವಿಲ್ಲದ ದುಡಿತದ ಜೀವನದಲ್ಲಿ ಸಂತೋಷವಾಗಿಯೋ ಶ್ರಮ ಪರಿಹಾರಕ್ಕೊ (ಹಳ್ಳಿಗಾಡಿನತರು) ಉಸಿರಾಡಿಸುವದುಂಟು; ಹಾಡುವದುಂಟು; ಹಾಗೆ ಉಸಿರಿದ ನುಡಿಯೆ, ಹಾಡಿದ ಹಾಡೇ ಜನಪದ ಸಾಹಿತ್ಯ ಎನಿಸಿದೆ. (ಪುಟ:೮೬) ಎಂದಿರುವ ಡಾ. ಮಲ್ಲಿಕಾರ್ಜುನ ಲಠ್ಠೆಯವರು 'ನಾಗರಿಕತೆಯ ಗಾಳಿ ಸೋಂಕದೆ ಇದ್ದ ಹಳೆಯ ಸಂಪ್ರದಾಯಗಳ ಸುತ್ತ ಪರಂಪರಾಗತವಾಗಿ ಈ (ಜನಪದ) ಸಾಹಿತ್ಯ ಯಾರ ಯಾರಿಂದಲೋ ಹುಟ್ಟಿಕೊಂಡು ಬಂದಿರುತ್ತದೆ! (ಪುಟ ೩) ಎಂದು ಜನಪದ ಸಾಹಿತ್ಯದ ಜನದ ಬಗ್ಗೆ ಹೇಳಿ, ಇದನ್ನು ರಚಿಸಿರುವ ಕೆಲವು ಕವಿಗಳ ಹೆಸರುಗಳನ್ನೂ ಇಂಥ ಪದ್ಯ ಗಳನ್ನು ಸುಶ್ರಾವ್ಯವಾಗಿ ಹಾಡುವ ಹಲವು ಹಾಡುಗಾರರ ಹೆಸರು ಪಡೆದ ಸಂಗ್ರಹಕಾರರ ಹಾಗೂ ಇವುಗಳ ನಿಷ್ಪಕ್ಷಪಾತ ವಿಮರ್ಶಕರ ಹೆಸರುಗಳನ್ನು (ಪುಟ : ೬-೧೨) ಸಾಧಾರಣ ವಾಗಿ ಹೇಳುತ್ತ "ಜಾನಪದ-ಸಾಹಿತ್ಯ ನಡೆದು ಬಂದ ದಾರಿಯನ್ನು ಗುರುತಿಸಿದ್ದಾರೆ; ಇದು ಇತರರಿಗೂ ಗೊತ್ತಾಗಿ ಗಮ್ಯಸ್ಥಾನದ ಪರಿಜ್ಞಾನವಾಗಲೆಂದು ಅಲ್ಲಲ್ಲಿ ಮೈಲುಗಲ್ಲನ್ನು ನಿಲ್ಲಿಸಿದ್ದಾರೆ. ಇನ್ನು ಮುಂದೆಯೂ ಈ ಜನಪದ ಸಾಹಿತ್ಯ ನಡೆದು ಹೋಗುವದಾರಿ ಇನ್ನೂ ಸುಲಭವಾಗಿ ಜನತೆ ಸುವರ್ಣಯುಗ" ಕಾಣುವಂತಾಗಲೆಂದು (ಪುಟ : ೧೩) ಅಪೇಕ್ಷಿಸಿದ್ದಾರೆ. ಲೇಖಕರಾದ ಶ್ರೀ ಲಠ್ಠೆಯವರು.

ಚಿಕ್ಕವರಿಗಾಗಿ ಹಾಡಿದ ಹಾಡುಗಳೇ ಮಕ್ಕಳ ಪದಗಳೆನಿಸಿವೆ. ಮಕ್ಕಳ ಹಾಡುಗಳ ಲಕ್ಷಣಗಳನ್ನು ಹೀಗೆಯೇ ಎಂದು ಗೆರೆಕೊರೆದು ಹೇಳಲಿಕ್ಕಾಗದು. ಒಂದೊಂದು ಪ್ರದೇಶಕ್ಕೆ ಒಂದೊಂದು ರೀತಿ, ಪದ್ಧತಿ, ಧಾಟಿಗೇಯತೆ ಬರೆಯಲೇ ಬೇಕು. ಪ್ರಾಸ ಇರಲೇಬೇಕು. (ಪುಟ : ೧೬-೧೫) ಆದರೆ ಶಿಸು-ವಿಹಾರಗಳಂಥ ಶಾಲೆ ಗಳನ್ನು ಪ್ರಾರಂಭಿಸಿ ಸಹಜವಾಗಿಯೆ ಆಡುತ್ತ, ಹಾಡುತ್ತ ಬೆಳೆಯುವ ಮಕ್ಕಳನ್ನು ಬಂಧನ ದಲ್ಲಿ ಸಿಲುಕಿಸಿ ಅವರ ಬುದ್ಧಿಯು ಬೆಳವಣಿಗೆಗೆ ಅಡ್ಡಿಯನ್ನೊಡ್ಡುತ್ತಿವೆಯೋ ಏನೋ.... ಸಾಕಷ್ಟು ಹಣತೆತ್ತು ಇನ್ನೊಂದು ದೇಶದ [ಪಾಶ್ಚಿಮಾತ್ಯರ] ಆಡಂಬರದ ಸೆಳವಿಗೆ ಸಿಲುಕಿ ಮಕ್ಕಳನ್ನು ನಮ್ಮ ಸಂಸ್ಕೃತಿ ಬೇಡವೆಂದಂದು ಹೊರದಬ್ಬುತ್ತೇವೆಯೋ ಏನೋ ಎನಿ ಸುತ್ತದೆ. (ಪುಟ ; ೨೪) ಆದ್ದರಿಂದ ತನ್ನ ಭಾರತೀಯ ಸಂಸ್ಕೃತಿಗೆ ತನ್ನ ರಾಷ್ಟ್ರದ ಅಭಿ ಮಾನಕ್ಕೆ ತನ್ನ ಮಾತೃಭಾಷೆಗೆ ತನ್ನ ಪರಿಸರಕ್ಕೆ ತನ್ನ ಸಹಜ ತಿಳುವಳಿಕೆಗೆ, ಹೊರತಾಗಿ 'ಜಾಕ್ ಆ್ಯಂಡ ಜಿಲ್' ಆರ್ 'ಡಿಂಗ್ ಡಾಂಗ್ ಬೆಲ್'ದಂತಹ ಪರಕೀಯತೆಯ ಅಂದರೆ ಭಾರತೀಯ| ತರದ ಹಾಡುಗಳನ್ನು ಹಾಡಲಾರದೆ||ಆನಿಬಂತಆನಿ|| "ಚಂದಪ್ಪ ಚಂದಪ್ಪ ಚಾರಿಕಾಯಿ" ಎನ್ನುವಂತಹ ನಮ್ಮ ಹಾಡುಗಳನ್ನೇ ಮಕ್ಕಳು ಹಾಡಿದರೆ ಆದರಿಂದ ಬಂದ ಕುಂದೇನು? (ಪುಟ : ೨೪) ಎಂದು ಕಳಕಳಿಯಿಂದ ಕೇಳುವ ಜಾನಪದ ದೀಪ್ತಿಯ ಡಾ. ಲಠ್ಠೆಯವರು ಭಾರತದ ಮಕ್ಕಳು ತಮ್ಮ ತಮ್ಮ ಸಹಜಭಾರತೀಯ ಸಂಸ್ಕೃತಿಯ ಮೂಲಕವೇ ತಮ್ಮತನವನ್ನೂ ಕಾಯ್ದುಕೊಳ್ಳುವಂತೆ ಆ ಎಲ್ಲ ಬಾಲಕರ ಪಾಲಕರುಎಚ್ಚರ ವಹಿಸಬೇಕೆಂದಿದ್ದಾರೆ.

"ಜಾನಪದ ಗಾದೆಗಳಲ್ಲಿ ಸಾಮಾಜಿಕ ಮೌಲ್ಯಗಳನ್ನೂ ಅಳೆದಿರುವ ಡಾ॥ ಲಕ್ಕೆಯವರು ಪಂಡಿತರ ಗ್ರಂಥಸ್ಥ ಗಾದೆಗಳನ್ನೂ ಪಾಮರರ ದಿನಬಳಿಕೆಯ ಗಾದೆಗಳನ್ನೂ ವಿವೇಚಿಸಿದ್ದಾರೆ. ಕೆಲಸಕ್ಕ ಕರಿಬ್ಯಾಡ್ರಿ, ಉಟಕ್ಕ ಮರಿಬ್ಯಾಡ್ರಿ; ಕೂತು ಉಣ್ಣಾವಗ ಕುಡಿಕೆ ಹೊನ್ನೂ ಸಾಲ್ದು ಎನ್ನುವ ಗಾದೆಗಳಲ್ಲಿ ಆಲಸ್ಯದಿಂದ ಮನುಷ್ಯ ಹಾಳಾಗುವನೆಂದೂ ದುಡಿಯದೆ ಕೂತು ತಿಂದರೆ ಅದು ಬಹಳ ದಿನ ಸಾಗಲಾರದೆಂದೂ ಅದಕ್ಕಾಗಿ ಮನುಷ್ಯ ಕಾಯಕ ಜೀವಿಯಾಗಿರಬೇಕೆಂದು ಎಚ್ಚರಿಸಿದ್ದಾರೆ.

ಹಂತಿಯ ಹಾಡುಗಳನ್ನು ಹೆಚ್ಚಾಗಿ ಹಂತಿ ಹೊಡೆಯುವವರು ಅನ್ನುವದುಂಟು. ಮೇಟಿಯ ಸುತ್ತಲೂ ಸುತ್ತುವರಿಯುವ ಎತ್ತುಗಳ ಬೆನ್ನು ಹತ್ತಿ ಹಂತಿಯ ಹೊಡೆಯುತ್ತ ಹಾಡು ಹೇಳುತ್ತಾರೆ. (ಪುಟ : ೫೫), ಬೆಳ್ಳನ ಬೆಳಿಯೆತ್ತ। ಬೆಳ್ಳಿಯ ಬಾರಕೋಲು ಬಂಗಾರದ ಹಿಡಿಯ ಬಲಗೈಯ ಹಿಡಕೊಂಡು ಹೊನ್ನಬಿತ್ಯಾರ ಹೊಳಿಸಾಲ.॥ ಎನ್ನುವ ನೂರಾರು (ಹಂತಿ) ಹಾಡುಗಳಲ್ಲಿ ಒಕ್ಕಲಿಗರ ಜೀವನ–ದರ್ಶನವೇ ಅಡಕವಾದಂತಿದೆ. (ಪುಟ : ೪೬)

ಗೊಂಬೆಯಾಟವು ಮರ್ತ್ಯಲೋಕದ ಪ್ರತೀಕ ಎನ್ನುವಂತೆ ಜನಪದ ಜೀವನಾಡಿಯಲ್ಲಿ ಹರಿದು ಬಂದ ಕಲೆ ಎನಿಸಿದೆ. (ಪುಟ : ೫೯) ಈ ಪ್ರಪಂಚದ ಜೀವಿಗಳೆಲ್ಲಾ ಗೊಂಬೆಗಳು ಅವುಗಳನ್ನು ಆಡಿಸುವ ಜಗನ್ನಿಯಾಮಕನಾದ ಶಿವನೇ ಸೂತ್ರಧಾರ ಎನ್ನುವದು ಮಹಾನುಭಾವಗಳ ಆಧ್ಯಾತ್ಮದೃಷ್ಟಿ (ಪುಟ : ೬೧) ಎಂದು ದೃಢವಾಗಿ ನಂಬಿರುವ ತತ್ವಜ್ಞಾನಿ ಡಾ॥ ಲಕ್ಕೆಯವರು ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರಲೊಬ್ಬನಾದ ಗೊಂಬೆಯಾಡಿಸುವ ಶಾಂತಯ್ಯನ ಬಗ್ಗೆಯೂ (ಪುಟ : ೬೩) ತಿಳಿಸುವದರೊಂದಿಗೆ ಈ ಆಟದ ಪ್ರಚಲಿತ ಪ್ರಕಾರಗಳಾದ ಕೈಗೊಂಬೆಯಾಟ, ಸೂತ್ರದ ಗೊಂಬೆಯಾಟ, ತೊಗಲುಗೊಂಬೆಯಾಟ ಹಾಗೂ ಮಿಶ್ರಗೊಂಬೆಯಾಟಗಳ ಅಭಿವೃದ್ಧಿಯನ್ನು ಬಯಸಿದ್ದಾರೆ. ಅಂತೆಯೇ ಈ ಲೇಖಕರು ಕಲೆ ಕಲೆಗಾಗಿ ಎನ್ನುವಂತಾಗಿದೆ. ಅದು ಜೀವನಕ್ಕೂ ಎನ್ನುವಂತಾದಾಗ ಅದಕ್ಕೊಂದು ಬೆಲೆ. (ಪುಟ ; ೬೨) ಎಂಬ ನಿರ್ಧಾರಕ್ಕೆ ಮನ್ನಣೆಯಿತ್ತಿದ್ದಾರೆ.

ಜನತೆಯ ಹೃದಯದಲ್ಲಿ ಬುದ್ಧಿ ಭಾವಗಳು ಬೆಸಕೆಗೊಂಡು ಅನುಭವದ ಕುಲುಮೆಯಲ್ಲಿ ಚಿತ್ರೀಕರಣಗೊಂಡು ಸ್ವಚ್ಛಂದ ವೃತ್ತಿಯಿಂದ ಹೊರಬಂದು....ವಿನೋದದ ಜೊತೆಗೆ ಬುದ್ಧಿಯನ್ನು ಹರಿತಗೊಳಿಸಿದ ಜನಪದ ಸಾಹಿತ್ಯದ ಒಂದಂಗವೆನಿಸಿದೆ. (ಪುಟ : ೬೩–೬೪) "ಕನ್ನಡ ಒಗಟುಗಳು" ಹಾಗೂ ದಂಪತಿಗಳು ಸ್ವಾರಸ್ಯಕರವಾಗಿ ಸಮಾರಂಭಗಳಲ್ಲಿ "ಹೆಸರು ಹೇಳುವ ಒಡಬುಗಳು" ಧಾರ್ಮಿಕ ಸಮಾರಂಭದ ಉತ್ಸವಗಳಲ್ಲಿ ವೀರಾವೇಶದಿಂದ ಪುರವಂತರು ವೀರಭದ್ರನ ಲೀಲಾತ್ಮಕ ಹೆಸರು ಹೇಳುವ ಒಡಬುಗಳು ಮೊದಲಾದ ಜನಪದ ಸಾಹಿತ್ಯದ ಎಲ್ಲ ಪ್ರಕಾರಗಳಿಗೂ, ಇವುಗಳ ಉದಾಹರಣೆಗಳೂ ಹಾಗೂ ಇವುಗಳ ವಿದ್ವತ್ಪೂರ್ಣ ವಿವೇಚನೆಯು ಇವುಗಳನ್ನು ಜೀವಂತವಾಗಿ

ಅಭಿವೃದ್ಧಿಗೊಳಿಸುವ ಮಾರ್ಗದರ್ಶನವೂ ಡಾ|| ಲಕ್ಷ್ಮೆಯವರ "ಜಾನಪದ ದೀಪ್ತಿ"ಯಲ್ಲಿ ಸಂಶೋಧನಾತ್ಮಕವಾಗಿ ಸಮಂಜಸವಾಗಿ ಮೂಡಿಬಂದಿವೆ.

ಇಂಥ ಸರ್ವಾಂಗ ಸುಂದರವಾದ "ಜಾನಪದ ದೀಪ್ತಿ" ಎಂಬ ಆದರ್ಶ ಗ್ರಂಥವನ್ನು ಬರೆದು ಜನ ಸಾಮಾನ್ಯರ ನಿತ್ಯ ಜೀವನದ ಸತ್ಯ ದರ್ಶನವನ್ನು ಮಾಡಿಸುತ್ತಿರುವ ಶರಣ-ಸಾಹಿತಿಗಳಾದ, ಕಲಬುರ್ಗಿಯಲ್ಲಿಯ ಸ್ನಾತಕೋತ್ತರ ಕೇಂದ್ರದ ಪ್ರಾಧ್ಯಾಪಕರಾದ ಡಾ|| ಲಕ್ಷ್ಮೆಯವರ ಶ್ರಮವು ಸಾರ್ಥಕವಾಗಿದೆ. ಇತರರಿಗೂ ನಿಜ ಜೀವನದ ಸಾಹಿತ್ಯದ ಲಾಭ ಉಂಟಾಗಲಿ.

ಒಟ್ಟಿನಲ್ಲಿ, ಹಳ್ಳಿಗಾಡಿನ ಮುಗ್ಧ ಜನರ ಹೃದಯವಾಣಿಯ ಬಗೆಗಿನ ಪ್ರಬಂಧಗಳ ಸಂಕಲನವಾದ ಈ ಜ್ಞಾನಪ್ರದ "ಜಾನಪದ ದೀಪ್ತಿ"ಯನ್ನು ಡಾ|| ಲಕ್ಷ್ಮೆಯವರು ಹೃದಯಂಗಮವಾಗಿ ಬರೆದದ್ದು.

## ವೀರಶೈವ ದರ್ಶನ

ದರ್ಶನ ವಿಚಾರದಲ್ಲಿ ಪಾಶ್ಚಿಮಾತ್ಯ ತತ್ವಜ್ಞಾನಿಗಳು ಭಾರತೀಯರಷ್ಟು ಮುಂದೆ ಹೋಗಿರದಿದ್ದರೂ ಅವರಿಬ್ಬರೂ ಕಂಡು ಕೊಂಡ ಸ್ಥೂಲ ಸಿದ್ಧಾಂತಗಳು ಒಂದೇ ಆಗಿವೆ. ಅವರ ವಿಚಾರದಲ್ಲಿ ನಮ್ಮಂತೆ ತ್ರಿವಿಧ ದರ್ಶನಗಳನ್ನು ಕಾಣಬಹುದು. ಈ ದರ್ಶನಾತ್ಮಕ ಉತ್ಕ್ರಾಂತಿಯೇ ಯೋಗವೆಂಬುದು ಭಾರತೀಯರ ಮತ. ಈ ಆದರೆ ಇವುಗಳ ಸಮನ್ವಯ ಇಲ್ಲವೇ ಅನನ್ವಯದಲ್ಲಿ ಭಾರತೀಯರ ಸಿದ್ಧಾಂತಗಳು ಹಲವು ಕಾಂಡಗಳಲ್ಲಿ ಕವಲು ಗೊಂಡಿವೆ. ಪಾಶ್ಚಿಮಾತ್ಯರು ಚಾಕ್ಷುಷ ದರ್ಶನ, ಬೌದ್ಧಿಕ ದರ್ಶನ ಹಾಗೂ ಅಂತರ್ದರ್ಶನ ಎಂದು ಸ್ಥೂಲವಾಗಿ ವಿಂಗಡಿಸಿದರು. ಇದನ್ನೇ ಶ್ರೀ ಅರವಿಂದರು Earth Consciousness Mind Consciousness ಹಾಗೂ ಸುಪರಮೆಂಟಲ್ ಕಾನ್ಸಿಯಸ್‌ನೆಸ್ ಇಲ್ಲವೇ Higher Consciousness ಎಂದುದಾಗಿ ಮಾಡಿದ್ದಾರೆ. ಈ ಎಲ್ಲ ವಿವೇಚನೆಗಳೂ ೮೦೦ ವರ್ಷಗಳ ಹಿಂದೆಯೇ ವೀರಶೈವರ ಶಿವಯೋಗ ಸಿದ್ಧಾಂತದಲ್ಲಿ ಅತ್ಯಂತ ಸೂಕ್ಷ್ಮಾತಿಶಯವಾಗಿ ತಳ್ಳಂಕಗೊಂಡು ಅಗಾಧ ಸಾಮರ್ಥ್ಯವನ್ನು ಹೊಂದಿದುದನ್ನು ತಿಳಿದುಕೊಂಡರೆ ಯಾರಿಗೆ ತಾನೆ ಅಚ್ಚರಿಯಾಗಲಿಕ್ಕಿಲ್ಲ. ಚಾಕ್ಷುಷ ದರ್ಶನದ ವಿವೇಚನೆಯಲ್ಲಿ ವೀರಶೈವರು ಅಷ್ಟಾವರಣಗಳನ್ನು ಅನುಗೊಳಿಸಿದರು. ಕಾರಣ ಚಾಕ್ಷುಷ ದರ್ಶನದಿಂದ ಲೋಕದ ಸ್ಥಿತ್ಯಂತರಗಳನ್ನೂ, ಚಂಚಲ ಸ್ಪಂದನಗಳನ್ನೂ ಅರಿಯಬಹುದು. ಇವುಗಳಿಂದ ಧರ್ಮದ ಆಂತರಿಕ ಸಿದ್ಧಾಂತವು ಬಹಿರಂಗಭೂಮಿಕೆಯಲ್ಲಿ ವಿಫಲವಾಗುವ ಭಯವೇ ಹೆಚ್ಚು. ಆದುದರಿಂದ ನಮ್ಮ ಬಾಹ್ಯ ಜೀವನವನ್ನು ಸಮಾಜದ ಕಟ್ಟಿನಲ್ಲಿ ಸೂತ್ರಗೊಳಿಸಲು ವೀರಶೈವರು ಅಷ್ಟಾವರಣಗಳನ್ನು ತೊಡಿಸಿದರು. ಇದರಿಂದ ಗುರು, ಲಿಂಗ, ಜಂಗಮಾದಿ ಆಧಾರ ಶಕ್ತಿಗಳು ನಮಗೆ ನಮ್ಮ ಭಕ್ತ ಸ್ಥಲದಲ್ಲಿ ಆದಿ ದೀಪವಾಗಿ ನಿಂತು ಉತ್ಕ್ರಾಂತಿ ಪಥವನ್ನು ತೋರಿಸಿದವು. ಇದೇ ಬಗೆಯ ದರ್ಶನ ವಿವೇಚನೆಯನ್ನು ಬೌದ್ಧಿಕವಾಗಿಯೂ ವೀರಶೈವರು ಸಲುವಾಗಿ ಮಾಡಿರುವುದನ್ನು ನೀವು ಅರಿಯ

ಬಹುದು. ಬೌದ್ಧಿಕ ವಿವೇಚನೆಯು ಮುಖ್ಯವಾಗಿ ಮಾನಸಿಕ ರಂಗದಲ್ಲಿಯೇ ನಡೆಯ ಬೇಕಲ್ಲವೆ? ಹಾಗಿರಲು ಶಿವಶರಣರು ಮನಸ್ಸಿನ ಪರಿಶುದ್ಧಿಗಾಗಿ ಪಂಚಾಚಾರಗಳನ್ನು ಅಣಿಗೊಳಿಸಿದರು. ಇವುಗಳಿಂದ ಧರ್ಮ ಚೈತನ್ಯ-ನಮ್ಮ ಆಚಾರ ಸಂಪತ್ತಿನಲ್ಲಿಯೂ ನಿಗೂಢವಾಗಿಯೂ ನೆಲೆಸುವಂತಾಯ್ತು. ಇದು ಶರಣರ ಅನುಭವವಲ್ಲದೆ ಮತ್ತೇನು? ಇನ್ನು ಬರುವದು ಅಂತರ್ದರ್ಶನ ಇಲ್ಲವೇ ಆತ್ಮ ದರ್ಶನ ಈ ದರ್ಶನವು ಮಾನವ ಸಂದರ್ಶನಕ್ಕಿಂತ ಹೇಗೆ ಭಿನ್ನವೆಂಬುದನ್ನು ಅರವಿಂದರ ಮಾತಿನಲ್ಲಿ ನೋಡಬಹುದು. ಅವರು ಈ ಅವ್ಯಸ್ಥೆಗೆ Super mental Consciousness ಇಲ್ಲವೆ Higher Consciousness ಎಂದು ಹೇಳಿದ್ದಾರೆ. ಭೌತಿಕ ಹಾಗೂ ಮಾನಸಿಕ ಘಟ್ಟಗಳಿಗೆ Lower Consciousness ಎಂದು ಕರೆದಿದ್ದಾರೆ. ಅರಿವಿನ ಅವಿರಳ ಶಕ್ತಿ ಮಹಾ ಪ್ರಕಾಶದಲ್ಲಿ ನೆಲೆಸಿಯೂ ನೆಲೆಸದಂತಿರುತ್ತದೆಂದು ಶಿವಶರಣರು ಹೇಳುತ್ತಾರೆ. ಸಾಧಕನು Lower Consciousness ನಿಂದ Super mental Consciousness ಬದಲಾವಣೆ ಹೊಂದುವದಕ್ಕೆ ಅರವಿಂದರು Transformation ಎಂದು ಕರೆದಿದ್ದಾರೆ. ಇದನ್ನೇ ವೀರಶೈವ ಪರಿವಿಡಿಯಲ್ಲಿ ಲಿಂಗಕ್ರಿಯೆಗಳೆಲ್ಲವೂ ಅಂಗಕ್ರಿಯೆಗಳಾಗುತ್ತವೆಯೆಂದು ಅಲ್ಲಮ ಪ್ರಭುದೇವರು ಹೀಗೆ ಹೇಳಿದ್ದಾರೆ.

ಅಂಗ ಅನಂಗವೆಂಬೆರಡು ಅಳಿದು ನಿಜದಲ್ಲಿ ನಿಂದ ಲಿಂಗೈಕ್ಯನ ಅಂಗದಲುಳ್ಳ ಕ್ರಿಯೆ ಗಳೆಲ್ಲವೂ ಲಿಂಗಕ್ರಿಯೆಗಳು ನೋಡಾ! ಮನೋಲಯವಾಗಿಪ್ಪ ನಿಜಲಿಂಗೈಕ್ಯನ ಅನುಭಾವ ವೆಲ್ಲವೂ ನಿಶ್ಯಬ್ದ ನೋಡಾ! ತನ್ನಲ್ಲಿ ತಾನು ತದ್ಗತನಾಗಿಪ್ಪ ಶಿವಯೋಗಿಗೆ ಭಿನ್ನವಿಲ್ಲ ನೋಡಾ ಗುಹೇಶ್ವರ ಸಾಕ್ಷಿಯಾಗಿ.

ಈ ದರ್ಶನದ ವಿವೇಚನೆಯಲ್ಲಿಯೇ ದ್ವೈತ ಅದ್ವೈತ ವಿಶಿಷ್ಟಾದ್ವೈತ ಹಾಗೂ ಶಕ್ತಿ ವಿಶಿಷ್ಟಾದ್ವೈತಗಳು ರೂಢಮೂಲವಾದವು. ಪಾಶ್ಚಿಮಾತ್ಯರೂ ಇದೇ ವಿಚಾರ ಸರಣಿಯಲ್ಲಿ ತಮ್ಮದೇ ಆದ ಪಂಥಗಳನ್ನೂ ಅನುಸರಿಸಿದವರಾದರೂ ವಾದ ಭೂಮಿಕೆ ಯಲ್ಲಿಯೇ ಉಳಿದಿದ್ದಾರೆ. ಆದರೆ ವೀರಶೈವರ ಶಕ್ತಿ ವಿಶಿಷ್ಟಾದ್ವೈತ ತತ್ವದ ಮೇಲೆ ಆಧಾರಿತವಾದ ಶಿವಯೋಗ ಸಿದ್ಧಾಂತವು ಸಮನ್ವಯ ಯುಕ್ತವಾಗಿದೆ. ದ್ವೈತ ಅದ್ವೈತ ಗಳ ಅತಿರೇಕಗಳನ್ನು ಅಲ್ಲಗಳೆದು ಇದು ದ್ವೈತಾ ದ್ವೈತಗಳ ಸಮನ್ವಯವನ್ನು ಅಂಗೀ ಕರಿಸಿದೆ. ಆದ್ದರಿಂದಲೇ ಇಲ್ಲಿ ಕರ್ಮಿಷ್ಠತೆ ಇಲ್ಲವೆ ಕರ್ಮ ಶೂನ್ಯತೆಗಳು ಸ್ಥಾನವನ್ನು ಹೊಂದಿಲ್ಲ. ಕ್ರಿಯಾಜ್ಞಾನ ಭಕ್ತಿಗಳು ವೈರಾಗ್ಯದಲ್ಲಿ ಅಳವಟ್ಟಿವೆ. ಆದ್ದರಿಂದ ವೀರಶೈವರು ಈ ಅಂತರ್ದರ್ಶನ ಇಲ್ಲವೇ ಆತ್ಮದರ್ಶನವನ್ನು ತಮ್ಮ ಯೋಗ ಕ್ರಮಕ್ಕೆ ಅಳವಡಿಸಿ ಕೊಂಡು ಮಾನಸಶಾಸ್ತ್ರದ ಸೂಕ್ಷ್ಮ ಪರಿವಿಡಿಯಲ್ಲಿ ಷಟ್‌ಸ್ಥಲಗಳ ಸಲುವಳಿಗೊಳಿಸಿದರು.

ಷಟ್‌ಸ್ಥಲಗಳು ಭಕ್ತಸ್ಥಲದಿಂದ ಐಕ್ಯಸ್ಥಲದವರೆಗೆ ಉತ್ಕ್ರಾಂತಿ ಪಥದಲ್ಲಿ ಇದ್ದರೂ ಅನುಲೋಮ ವಿಲೋಮಕ್ರಮದಿಂದ ಸಮ್ಯಕ್ ಸ್ವರೂಪವನ್ನು ಪಡೆದಿವೆ. ಈ ರೀತಿ ವೀರಶೈವರು ತ್ರಿವಿಧದರ್ಶನವನ್ನು ತ್ರಿವಿಧಕ್ರಮಗಳಲ್ಲಿ ಜೋಡಣೆಗೊಳಿಸಿದರು. ಆದ್ದರಿಂದ

ಶಿವಯೋಗ ರಹಸ್ಯವನ್ನು ಶಿವಯೋಗ ಸಿದ್ಧಾಂತವನ್ನೂ ತಿಳಿಯಲಿಚ್ಛಿಸುವ ಸಹೃದಯಿಗಳು ಮೊದಲು ಅಷ್ಟಾವರಣ ಪಂಚಾಚಾರ ಹಾಗೂ ಷಟ್‌ಸ್ಥಲಗಳ ಹೊಂದಾಣಿಕೆಯನ್ನು ಕಂಡುಕೊಳ್ಳಬೇಕು. ಶರಣ ಜೀವಿಗೆ ಅಷ್ಟಾವರಣವು ಅಂಗವಾದರೆ ಪಂಚಾಚಾರ ಹಾಗೂ ಷಟ್‌ಸ್ಥಲಗಳು ಪ್ರಾಣ ಮತ್ತು ಆತ್ಮಗಳಾಗಿವೆ. ಅವೆಲ್ಲವುಗಳ ಸಮನ್ವಯಪರ ಸಿದ್ಧಾಂತಕ್ಕೆ ವೀರಶೈವ ಸಿದ್ಧಾಂತಕ್ಕೆ "ಅನುಭಾವ" ಎಂದು ಹೆಸರು. ಈ ರೀತಿ ಸಜೀವ ಸಿದ್ಧಾಂತ ಪ್ರತಿಪಾದನೆಯು ಮತ್ತೆಲ್ಲಿಯೂ ಕಾಣುವದಿಲ್ಲ. ಆ ಅನುಭಾವದ ಅಗತ್ಯತೆ ಎಷ್ಟೆಂಬುದನ್ನು ಬಸವಣ್ಣನವರು ಹೀಗೆ ಹೇಳಿದ್ದಾರೆ.

"ಅನುಭಾವವಿಲ್ಲದ ಭಕ್ತಿ ಅರಿವಿಂಗೆ ಬಾರದು. ಅನುಭಾವವಿಲ್ಲದ ಸಂಗಸಮರಸ ಸುಖಕ್ಕೆ ನಿಲುಕದು. ಅನುಭಾವವಿಲ್ಲದ ಪ್ರಸಾದ, ಪರಿಣಾಮಕೊಡದು. ಅನುಭಾವವಿಲ್ಲದೆ ಏನೇನೂ ಅರಿಯಬಾರದು. ಕೂಡಲಸಂಗಮದೇವಯ್ಯ ನಿಮ್ಮ ಅನುಭಾವ ಮಾತಿನ ಮಥನವೆಂದು ನುಡಿಯಬಹುದೆ?"

ವಿಶ್ವತತ್ವಗಳನ್ನೆಲ್ಲ ತನ್ನಲ್ಲಿ ಅಂಗವಿಸಿಕೊಂಡು ವೀರಶೈವ ಸಿದ್ಧಾಂತವು ವಿಶ್ವಧರ್ಮವೇ ಆಗಿದೆ ಎಂಬ ಕೂಗನ್ನು ನೀವು ನಾವೆಲ್ಲರೂ ಕೇಳಿದ್ದೇವೆ. ಆದರೆ ಈ ಸ್ವಯಂ ಸಂಪೂರ್ಣವಾದ ಒಂದೇ ಒಂದು ದೊಡ್ಡ ಕೊರತೆ ಇದೆ. ಅದೆಂದರೆ ಈ ಸಿದ್ಧಾಂತವನ್ನು ಜಗತ್ತಿನ ಎಲ್ಲ ಮೂಲೆಗಳಿಗೂ ಹೊತ್ತೊಯ್ಯುವ ಪ್ರಚಾರದ ಕೊರತೆ. ಅಣುಬಾಂಬನ್ನು ಸಿದ್ಧ ಪಡಿಸಿದರೂ ಅದನ್ನು ದೂರಗಾಮಿಯಾಗಿ ಕೊಂಡೊಯ್ಯಬಲ್ಲ ಕ್ಷಿಪಣಿಗಳನ್ನು ಅಣ್ವಸ್ತ್ರ ರಾಷ್ಟ್ರಗಳು ಸಿದ್ಧಪಡಿಸಬೇಕಾಗುತ್ತದೆ. ಅದರಂತೆ ಅಸಾಧ್ಯ ಸಾಮರ್ಥ್ಯವನ್ನೂ ಒಳಗೊಂಡ ಈ ಸಿದ್ಧಾಂತಕ್ಕೆ ಪ್ರಚಾರ ಕ್ಷಿಪಣಿ ಅತ್ಯಗತ್ಯ. ಇಂದು ವಾಣಿಜ್ಯ ಉದ್ಯಮ ರಂಗದಲ್ಲಿ ಪ್ರಚಾರಕ್ಕೆ ಎಷ್ಟೊಂದು ಬೆಲೆ ಇದೆ ಎಂಬುದನ್ನು ನೀವೆಲ್ಲರೂ ಅರಿತಿದ್ದೀರಿ. ಅಲ್ಲದೆ ಕ್ರಿಶ್ಚಿಯನ್ ಧರ್ಮವು ಭಾರತದಲ್ಲಿ ತಳ ಊರಿದುದು ಕೇವಲ ಪ್ರಚಾರ ಸಾಮರ್ಥ್ಯದ ಮೇಲೆಯೇ ಎಂಬುದನ್ನು ಹೇಳಬಹುದು. ಕರ್ನಾಟಕದಲ್ಲಿ ಆಗಾಗ ನಡೆಯುತ್ತಿರುವ ಈ ಶಿವಾನುಭವದ ಸಮ್ಮೇಲನಗಳು ಕೂಡ ಒಂದು ಸಂಸ್ಥೆಯ ರೂಪತಾಳಿ ಶಿವಯೋಗ ತತ್ವ ಪ್ರಸಾರವನ್ನು ಜಗತ್ತಿನ ಎಲ್ಲ ಭಾಷೆಗಳಲ್ಲಿಯೂ ಕೈಕೊಳ್ಳಬೇಕು. ಇಂತಹ ಮಹತ್ಕಾರ್ಯವನ್ನು ಹಾನಗಲ್ಲ ಕುಮಾರ ಯೋಗಿಗಳು ಮೃತ್ಯುಂಜಯಪ್ಪಗಳು ಮಾಡಿಹೋಗಿದ್ದಾರೆ. ಮಠಾಧೀಶರೆಲ್ಲರೂ ಇಂದು ಒಟ್ಟುಗೂಡಿ ಕೆಲವು ಪರಿಣಿತ ತಜ್ಞರನ್ನು ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಕಳುಹಿಸಿ ಅಲ್ಲಿಯೂ ಈ ಪ್ರಸಾರಾಂಗ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕು. ಇಂದಿನ ರಾಜಕೀಯ, ಸಾಮಾಜಿಕ ಹಾಗೂ ವೈಜ್ಞಾನಿಕ ವಾತಾವರಣದಲ್ಲಿ ಉಂಟಾದ ಗಾಢಾಂಧಕಾರವನ್ನು ತೊಲಗಿಸಲು ಇದೊಂದು ಯೋಗ ಉಪಕ್ರಮವಾಗಲೆಂದು ನಾವು ಬಯಸುತ್ತೇವೆ.

ಇಂದಿನ ಉದ್ರಿಕ್ತ ವಾತಾವರಣವು ಮಾನವನ ವಿಚಾರ ಜಘವನ್ನು ಕ್ಲುಪ್ತಗೊಳಿಸಿ ಭೌತಿಕ ಈಪ್ಸಿತಗಳಲ್ಲಿಯೇ ನೊರೆ ಬಿಟ್ಟಿದೆ. ಸ್ವಾರ್ಥ ಚಿಂತನೆಯು ಸ್ವಾರ್ಥ ಪರಂಪರೆಯನ್ನು

ಸ್ಥಾಪಿಸಿದೆ. ಇಂಥ ಧರ್ಮಗ್ಲಾನಿಯು ನಮ್ಮ ಎದುರಿಗೇ ಮಂದಹಾಸ ಬೀರುತ್ತ ನಾಟ್ಯ ಮಾಡುವಾಗ ನಾವೆಲ್ಲರೂ ಸುಮ್ಮನೆ ಕುಳಿತರೆ ನಡೆಯುತ್ತದೆಯೆ? ಮೊದಲು ಇಂದಿನ ಈ ಅಧಿಕಾರ, ಸ್ವಪ್ರತಿಷ್ಠೆ ಹಾಗೂ ಕೀರ್ತಿ ದಾಹಗಳಿಂದುಂಟಾದ ಪರಸ್ಪರ ಸ್ಪರ್ಧೆಯು ಮಠಾಧೀಶರಲ್ಲಿ ಹಾಗೂ ಅವರ ಅನುಯಾಯಿಗಳಲ್ಲಿ ನುಸುಳದಿರಲೆಂದು ನಾವು ಹೇಳ ಬಯಸುತ್ತೇವೆ. ನಮ್ಮಲ್ಲಿ ಇದ್ದುದೆಲ್ಲವೂ ಒಳ್ಳೆಯದೇ ಎಂಬ, ಈ ಮೇಲು ಮುಸುಕನ್ನೂ ಕೂಡ್ರುವ ಕಾಲ ಈಗ ಬಹುದೂರ ಹೋಗಿದೆ. ನಾವು ನಮ್ಮನ್ನು ನಿರ್ದಾಕ್ಷಿಣ್ಯವಾಗಿ ಕಂಡುಕೊಂಡು ಲೋಪ ದೋಷಗಳನ್ನು ತಿದ್ದಿಕೊಳ್ಳದಿದ್ದರೆ ಮುಂದೇನು? ಈ ಪ್ರಯತ್ನಕ್ಕೆ ಅತಿ ಮುಖ್ಯ ಸಾಧನವೆಂದರೆ– ಸಕಲಮಠಾಧೀಶರೂ, ಪೀಠಾಧೀಶರೂ ತಮ್ಮ ಅಂತಸ್ತು ಹಾಗೂ ಗೌರವಗಳನ್ನೇ ನೆಚ್ಚಿ ಕೂಡ್ರದೆ ಒಂದೆಡೆಗೆ ಬಂದು ಕಲೆಯಬೇಕು. ಅದು ತೋರಿಕೆಯದಾಗಬಾರದು. ಹೃದಯ ತೆರೆದು ಕೂಡಬೇಕು ಕೂಡಿ, ಹೋಗುವದಕಲ್ಲ ಕಾರ್ಯೋನ್ಮುಖರಾಗಲು ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು ಅಂದರೆ ಅದು ಸಾರ್ಥಕ ಇಲ್ಲದಿದ್ದರೆ ಹೊಳೆಯಲ್ಲಿ ಹೋಮ ಮಾಡಿದಂತೆ ವ್ಯರ್ಥ. ಪರಸ್ಪರರು ಬಿಚ್ಚು ಮನದಿಂದ ವಿಚಾರ ಮಥನವನ್ನು ಮಾಡಿ ಇಂದಿನ ವಿಷಮ ಪರಿಸ್ಥಿತಿಗೆ ಪರಿಹಾರವನ್ನೂ ಕಂಡುಕೊಳ್ಳ ಬೇಕು. ಕಾರಣಾಂತರಗಳಿಂದ ವೀರಶೈವಧರ್ಮವು ನೂರಾರು ಉಪಪಂಗಡಗಳ ಸಂಕೋಲೆಗೆ ಸಿಲುಕಿಬಿದ್ದು ಶಕ್ತಿಹೀನವಾಗಿದೆ. ಕಾಲಾನಂತರ ಇವೇ ಪಂಗಡಗಳು ತಮ್ಮ ವೀರಶೈವ ತತ್ವವನ್ನೇ ಅಲ್ಲಗಳೆದು ಸರ್ವಾಧಿಕಾರವನ್ನು ಸ್ಥಾಪಿಸಿಕೊಳ್ಳಬಹುದು. ಇಂಥ ಅನೇಕ ಒಳಪಂಗಡಗಳು ಹಲವು ಧರ್ಮ ಸೂಕ್ಷ್ಮವನ್ನು ತಿಳಿಯದ ಉಪದೇಶಕರಿಂದ ಮರುಳು ಗೊಂಡು ತಮ್ಮ ತಮ್ಮಲ್ಲಿಯೇ ಅಂತಃಕಲಹಕ್ಕೆ ನಿಂತುದನ್ನು ಕಾಣುತ್ತಿರುವಿರಿ? ಈ ರೀತಿಯ ಘರ್ಷಣೆಗಳು ಯಾವದೇ ಯೋಚಿತ ಧರ್ಮಶಕ್ತಿಗೆ ಪೂರಕವಾಗದೆ ಕೇವಲ ಮಾರಕವಾಗಿದೆ ಎಂಬುದನ್ನೂ ನೆನಪಿನಲ್ಲಿಡಬೇಕು. ವೀರಶೈವ ತತ್ವಜ್ಞಾನವು ಅದೆಷ್ಟು ವಿಶ್ವ ಸಂಪೂಜಿತವಾದರೂ, ಸರ್ವಾದರಣೀಯವಾದರೂ ಇಂಥ ಸಾಮಾಜಿಕ ಮುಗ್ಗಟ್ಟಿನ ಗೊಂದಲಮಯ ವಾತಾವರಣದಲ್ಲಿ ತಳ ಕೆಟ್ಟ ಚಿನ್ನದ ಪಾತ್ರೆಯಂತೆ ಆಗಿದೆ. ಅದಕ್ಕಾಗಿ ನಾವೆಲ್ಲರೂ ವಿಚಾರ ಮಂಥನ ಮಾಡಿ ಒಂದು ನಿಲುಮೆಗೆ ಬಂದರೆ ಒಳ್ಳೆಯದು. ಒಂದೆಂಬ ಭಾವನೆ ಮಾತಿನಲ್ಲಿರದೆ ಕೃತಿಗಿಳಿದರೆ ವೀರಶೈವ ಸಮಾಜದ ಭಾಗ್ಯವೆಂದು ಭಾವಿಸುತ್ತೇವೆ.

ಮಚ್ಛಿಬಾಚ್ಚಕ್ರ ಸಂಭೂತಃ ನಿರಂಜನ ಗಣೇಶ್ವರಃ।

ಪರಮಾತ್ಮ ಪಾರ್ವತಿಗೆ ಹೇಳಿದ ಸಂಗತಿ

ಮದೂರ್ಧ್ವ ಮುಖಸಂಜಾತೋ ನಿರಂಜನ ಗಣೇಶ್ವರಃ।

ಶೂನ್ಯಪೀಠಾಧಿಕಾರೀಚ ಪಂಚಾಚಾರ್ಯ ಗುರುರ್ವಕಃ॥

ಸ್ವಯಂಭೂವಾಗಮ

## ಕವಿ ಜೀವನ

ಕವಿಜೀವನವೆಂಬುದು ರಸಮಯ ಜೀವನವಿದ್ದಂತೆ, ಅಷ್ಟೇ ಅಲ್ಲ ಅದು ರಸಋಷಿ ಜೀವನ. ಭಾವದಲ್ಲಿ ಭಾಷೆಯನ್ನು ಹೊದಿಸಿ, ಹೊಸರೂಪವನ್ನು ಹಾಗೂ ಹೊಸ ಕಳೆಯನ್ನು ನೀಡುವ ದಿವ್ಯಜೀವನ. ಅಂತರ್ಮುಖಿಯಾಗುತ್ತ ಹೋದಂತೆ, ಕವಿತಾ ಶಕ್ತಿ ಹೂ ಅರಳಿ ಸುಗಂಧ ಬೀರುವಂತೆ ಬೆಳೆಯುತ್ತದೆ, ಬೆಳಗುತ್ತದೆ. ಕಲ್ಪನೆ ಕವಿತಾ ಶಕ್ತಿಗೆ ಸಹಾಯಕವಾದರೆ, ಭಾವ ಭಾಷೆಗಳು ಆಭರಣಗಳಿದ್ದಂತೆ.

ಜೀವನ ವನದಲ್ಲಿ ಸಂಚರಿಸುವ ಮಾನವನಿಗೆ ಕಷ್ಟ ಕಾರ್ಪಣ್ಯಗಳು ತಲೆದೋರಬಹುದು. ಅವುಗಳನ್ನು ಲೆಕ್ಕಿಸದೆ, ಗುರುವಿನಲ್ಲಿ ಭಕ್ತಿ ವಿಶ್ವಾಸವಿಟ್ಟು ಮುನ್ನಡೆದರೆ ಅವೆಲ್ಲವುಗಳು ದೂರಾಗಿ ಇಷ್ಟಾರ್ಥ ಸಿದ್ಧಿಸುವದು ಸಾಧ್ಯ. ಕವನ ಕುಸುಮಗಳು ಹೃದಯ ವರಳಿಸುವ ಸಾಧನಗಳು ಭಾವಜೀವಿಯಾಗಿ, ತಲ್ಲೀನನಾಗಿ ಬರೆಯುತ್ತ ಹೋದಲ್ಲಿ, ಮರವೆಯು ಮರೆತು, ಅರಿವು ಬರುವದಲ್ಲದೆ ಆತ್ಮ ಸುಖ ದೊರೆಯುವದು. ಈ ದೃಷ್ಟಿಯಿರಿಸಿ, ಶ್ರೀಮತಿ ದಾಕ್ಷಾಯಣಿ ಮಠದ ಅವರು, ಸವಿಯಿರುವ ದ್ರಾಕ್ಷೆಯ ಫಲದಂತೆ ರುಚಿ ರುಚಿಯಾಗಿ ಭಾವಪೂರ್ಣ ಶೈಲಿಯಲ್ಲಿ, ಸುಮಧುರ ಭಾಷೆಯೊಡನೆ, ಬರೆದು ಕೃತಾರ್ಥರಾಗಿದ್ದಾರೆ. ಭಾಷೆಯ ಚಟವು ಸಹಜವಾಗಿ ಬಂದು ಭಾವವು ಅತ್ಯಂತ ಆಕರ್ಷಕವಾಗಿದೆ. ಮಾತು ಮಾತಿನಲ್ಲಿಯೂ ಭಕ್ತಿಯ ರಸವುಕ್ಕಿ ಬಂದಂತಿದೆ. ಸಾತ್ವಿಕ ಕಳೆ ಮೈವೆತ್ತಂತಿದೆ.

ಅವರದೇ ಒಂದು ಕವನವನ್ನು ಇಲ್ಲಿ ನೋಡಿದರೆ ಅರ್ಪಣ ಭಾವವು ಅರ್ಥವಾಗುವದು.

"ಓದೇವ ಆವ ದಾರಿಯಲಿ ಹರಿದು
ತಮ್ಮ ಚರಣ ಸೇರಲಿ|
ದೇಹ ಕೊಳೆ ಕಳೆದು ನಿರ್ಮಲ ನದಿಯಾಗಿ
ನಿಮ್ಮ ಮಜ್ಜನಕೆ ಬರಲೇ|
ಅಂಗದ ಅವಗುಣಂಗಳ ಹಿಂಗಿಸಿ ಶುದ್ಧತನದಿ
ನಿಮ್ಮ ಪಾದಕೆ ಪಾವುಡವಾಗಲೇ?
ಪಶ್ಚಾತ್ತಾಪದ ಕುಂಡದಲ್ಲಿ ದೇಹ ದಹಿಸಿ
ಲಲಾಟದಿ ಭಸ್ಮವಾಗಿ ಪೂಸಲೇ"

ಈ ಪರಿಯಾಗಿ ದೇವನಲ್ಲಿ ಮೊರೆಹೊಕ್ಕು ಹಾಡಿದ್ದಾರೆ. ಅರುವಿನ ಜ್ಞಾನ ಬಂದು ಸರ್ವಾಂಗ ಶುದ್ಧವಾಗಲೆಂದು ಗುರುಕರುಣೆ ಬೇಡಿದ್ದಾರೆ. ಇವರ ಎಲ್ಲ ಕವನಗಳನ್ನು ಓದಿ ನೋಡಿದಾಗ ಹೃದಯವಂತಿಕೆ ಎದ್ದು ಕಾಣುತ್ತಿದೆ. ನುಡಿದಳ ಅರಿವಳು, ಸಿದ್ಧಾರೂಢರು ನಾಡ ನಂದಾದೀಪ. ಬಸವಣ್ಣ ಮುಂತಾದ ಮಹಾ ವ್ಯಕ್ತಿಗಳ ವ್ಯಕ್ತಿತ್ವವನ್ನು ತಮ್ಮ ಹೃದಯ ವೀಣೆಯಲ್ಲಿ ಬಾರಿಸಿದ್ದಾರೆ. ದಾಕ್ಷಾಯಣಿ ಮಠದ ಅವರು ಕಮನೀಯ

ಕೋಮಲತೆಯೊಡನೆ 'ಪೆಣ್ಣು' ಈ ಕವನದಲ್ಲಿ "ಪೆಣ್ಣಿನ ನೋವು ನಲಿವು, ಮತ್ತು ಅವರ ಶಕ್ತಿಯ ಪ್ರತಿಭೆಯನ್ನು ಚಿತ್ರಿಸಿದ್ದಾರೆ. ಶ್ರೀಮತಿ ಮಠದವರ ಕವನ ಸಂಕಲನದಲ್ಲಿ ಇಂತಹ ಹಲವು ಬಗೆಯ ಸುಗಂಧ ಬೀರುವ ಪುಷ್ಪಗಳನ್ನು ಕಾಣಬಹುದು. ಹಾಗೂ ಹೆಣ್ಣು ಮಕ್ಕಳಲ್ಲಿಯ ಇಂತಹ ಸಹಜ ಶೈಲಿಯನ್ನು ಕಂಡು ನಮಗೆ ಅತೀವ ಆನಂದ ವಾಗಿದೆ. ಶ್ರೀಮತಿ ದಾಕ್ಷಾಯಣಿಯವರ ಸಾಹಿತ್ಯವು ದಿನೇ ದಿನೇ ಬೆಳೆದು ಸೌರಭ ಸೂಸುತ್ತಿರಲಿ ಅನುಭವವು ಪಕ್ವಗೊಂಡು ಜನ ಜೀವನಕ್ಕೆ ಸುಮಧುರ ಫಲವನ್ನೀಡಲೆಂದು ಹಾರೈಸೋಣವಾಗಿದೆ.

## ಬಿ. ಡಿ. ಜತ್ತಿಯವರೊಡನೆ

ಶ್ರೀ ಬಿ. ಡಿ. ಜತ್ತಿಯವರು ವಕೀಲರಾದರು, ಮಂತ್ರಿಗಳಾದರು, ಮುಖ್ಯಮಂತ್ರಿ ಗಳಾದರು, ಲೆಫ್ಟಿನಂಟ್ ಗೌರ್ನರರಾದರು. ಇದೀಗ ನಿಯೋಜಿತ ರಾಜ್ಯಪಾಲ ರಾಗಿದ್ದಾರೆ. ಎಲ್ಲಕ್ಕಿಂತಲೂ ಮಿಗಿಲಾಗಿ ನಮ್ಮ ಆತ್ಮೀಯ ಭಕ್ತರಾಗಿದ್ದಾರೆ. ಶ್ರೀ ಜತ್ತಿ ಯವರು ಬಡತನದಲ್ಲಿ ಹುಟ್ಟಿದರು. ಬಡತನದಲ್ಲಿ ಬಾಳಿದರು. ಬಾಳಿನಲ್ಲಿ ಸಿಹಿಕಹಿ ಗಳನ್ನುಂಡರು. ಸಹಿಸಿದರು. ಕಾರ್ಯವೆಸಗಿದರು. ಕಾರ್ಯ ಮಾಡುತ್ತಿದ್ದಾರೆ. ರಾಜಕೀಯ ರಂಗದಲ್ಲಿ ಧುಮುಕಿ, ರಾಜಕೀಯತೆಗೆ ಧರ್ಮವನ್ನು ಬೆನ್ನೆಲುಬು ಮಾಡಿ ಕೊಂಡು ದುಡಿದಿದ್ದಾರೆ. ಯಶಸ್ವಿಯಾಗಿದ್ದಾರೆ. ರಾಜಕೀಯತೆಗೆ ಧರ್ಮ ಬೆರೆತರೆ, ಅದರ ಅಂತಸ್ಸತ್ವ ಹೆಚ್ಚುತ್ತದೆ. ಭಾವನೆ ವಿಶಾಲವಾಗುತ್ತದೆ. ಭಾವೈಕ್ಯಕ್ಕೆ ದಾರಿದೀಪ ವಾಗುತ್ತದೆ. ಧರ್ಮವು ರಾಜಕೀಯಕ್ಕೆ ಪೌಷ್ಟಿಕಾಹಾರವಾಗಿ ಪರಿಣಮಿಸಿ ಬಲ ಗೊಳ್ಳುತ್ತದೆ.

ಬಿ. ಡಿ. ಜತ್ತಿಯವರು ಧರ್ಮದರಿವೆಯನ್ನು ಹೊತ್ತುಕೊಂಡು ರಾಜಕೀಯ ರಥ ವನ್ನು ಎಳೆಯುತ್ತ ಹೊರಟಿದ್ದಾರೆ. ಆರುವಿನ ಅರವತ್ತು ಮೀರಿ ನಿಂತಿದ್ದಾರೆ. ಅರುವಿನ ಕುರುಹೇ ಇಂದು ನಡೆದಿರುವ ಸತ್ಕಾರ ಸಮಾರಂಭ.

ಭಕ್ತಿ ಭಾಂಡಾರ ಮಹಾತ್ಮಾ ಬಸವಣ್ಣನವರ ಅಂತಸ್ಸಾಮರ್ಥ್ಯವನ್ನು ನಾಡಿನಲ್ಲಷ್ಟೇ ಅಲ್ಲ, ಭಾರತದ ತುಂಬೆಲ್ಲ ಬೆಳೆಸಿದರು. ಪ್ರಪಂಚದ ಮೂಲೆ ಮೂಲೆಗೂ ಬಸವ ಸಂದೇಶ ಕಳುಹಿದರು. "ಕಾಯಕವೇ ಕೈಲಾಸ"ವೆಂದು ತಿಳಿ ಹೇಳಿದರು. ಮಲಗಿರುವ ಜನತೆ ಯನ್ನು ಎಬ್ಬಿಸಿ, ಬಸವ ಮಹಾತ್ಮೆಯನ್ನು ತಿಳಿಸಿ, ಆ ದಾರಿಯತ್ತ ಸಾಗಲು ಚಾಲನೆ ನೀಡಿದರು. ಇಂದಿಗೂ ನೀಡುತ್ತಿದ್ದಾರೆ. ಬಸವನ ಭಕ್ತಿಬೀಜ ಚಿಗುರಿ, ಮರವಾಗಲು ಪ್ರಯತ್ನಿಸುತ್ತಿದ್ದಾರೆ. ಇಂದಿನ ಧಾರ್ಮಿಕ ಜೀವನದಲ್ಲಿರುವ ವಿಭಿನ್ನ ವಿಚಾರಗಳನ್ನು ಒಂದುಗೂಡಿಸಿ ಭಾವೈಕ್ಯವನ್ನು ಸಾಧಿಸಲು ಆತುರರಾಗಿದ್ದಾರೆ.

ಕ್ರಿಯಾ-ಜ್ಞಾನಗಳೆರಡು ಗಾಲಿಗಳುಳ್ಳ ರಾಜ್ಯದ ರಥವನ್ನು ಏರಿ, ಸುಸೂತ್ರವಾಗಿ ಸಾಗಿಸಲಿ, ಒಡಿಸಾ ರಾಜ್ಯದ ರಾಜ್ಯಪಾಲರಾಗಿ ಜನಮನದ ಮಬ್ಬನ್ನು ಓಡಿಸಲಿ. ಧಾರ್ಮಿಕ

ಸಂಸ್ಕಾರದ ಬಲವನ್ನು ರಾಜಕೀಯ ರಂಗಕ್ಕೆ ಇನ್ನಷ್ಟು ನೀಡಿ ಸಮೃದ್ಧಗೊಳಿಸಲಿ. ಆಯುರಾರೋಗ್ಯ ಬೆಳೆಯಲಿ. ಜತ್ತಿಯವರ ಕೀರ್ತಿಕುಸುಮ ಅರಳಿ ಅಲ್ಲಿಯೂ ಕಂಪು ಬೀರುತ್ತಿರಲಿ. ಓಡಿಸಾದಲ್ಲಿದ್ದರೂ ಬಸವನ ಮಹಾವ್ಯಕ್ತಿತ್ವವನ್ನು ಅಲ್ಲಿಯ ಜನಜೀವನಕ್ಕೆ ತಿಳಿಸಿ ಕರ್ನಾಟಕದ ವೈಭವವು ಅವರಲ್ಲಿ ಒಡಮೂಡುವಂತೆ, ಜಗದ್ಗುರು ಗುರು ಸಿದ್ಧೇಶ್ವರನು ಕರುಣಿಸಲೆಂದು ಹಾರೈಸೋಣವಾಗಿದೆ.

# ಹೂಬಳ್ಳಿ

ಸಾಹಿತ್ಯ ಪ್ರಕಾರ : ಬಿಡಿ ಲೇಖನಗಳು

ಮೊದಲನೆಯ ಮುದ್ರಣ : ೧೯೮೭

ರಚನೆಯ ವಯಸ್ಸು : ೩೭

ರಚನಾಸ್ಥಳ : ಹುಬ್ಬಳ್ಳಿ

ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ ನಂ. ೨೫೬

# ಹೂಬಳ್ಳಿ

ಬರೆದವರು
ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರಮಠ ಹುಬ್ಬಳ್ಳಿ

ಪ್ರಕಾಶಕರು
ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ
ಮೂರುಸಾವಿರಮಠ ಹುಬ್ಬಳ್ಳಿ
೧೯೮೬

# ಹೂಬಳ್ಳಿಯ ಪರಿಮಳ

## ಗ್ರಂಥ ಪರಿಚಯ

'ಹೂಬಳ್ಳಿಯ ಪರಿಮಳ' ಎಂಬ ಈ ಕಿರಿಯ ಪುಸ್ತಕ ಮೂರುಸಾವಿರಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳ ವಿಚಾರವೀಚಿಗಳ ಸಂಕಲನ. ಜೀವನದ ಅನೇಕ ಅನುಭವಗಳ ಸ್ಪಂದನ. ಪೂಜ್ಯರ ಆಶೀರ್ವಚನಗಳು ಕುಡಿವರಿದು ಮಗ ಮಗಿಸಿ ಪರಿಮಳವನ್ನು ಬೀರುತಲಿವೆ.

ಜಗದ್ಗುರುಗಳ ಅಧ್ಯಯನದ ಆಳವನ್ನು ಹೃದಯದ ವಿಶಾಲತೆಯನ್ನು ಸಾಹಿತ್ಯದ ಸುಭಗತೆಯನ್ನು ತತ್ತ್ವಚಿಂತನೆಗಳ ನಿಲುವನ್ನು ಜೀವನದ ಸಾರ್ಥಕತೆಯನ್ನು ಸಂಸ್ಕೃತಿಯ ಮಹತಿಯನ್ನು ಈ ಕಿರುಹೊತ್ತಿಗೆಯಲ್ಲಿ, ಸಂಕ್ಷಿಪ್ತವಾದ ಬರಹದಲ್ಲಿ ವೈಶಿಷ್ಟ್ಯಪೂರ್ಣವಾದ, ವಿಚಾರಪರಿಪ್ಲುತವಾದ ವಿವರಣೆಯಲ್ಲಿ ಕಾಣಬಹುದಾಗಿದ.

ಚಿಂತನಶೀಲರಾದ ಜಗದ್ಗುರುಗಳು ತಮ್ಮ ಚಿತ್ತಭಿತ್ತಿಯಲ್ಲಿ ಮೂಡಿಬಂದ ಅನುಭವ ವೇದ್ಯವಾದ ವಿಚಾರ ತರಂಗಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ. ಇದರಲ್ಲಿ ಮೂಡಿಬಂದ ಹೇಳಿಕೆಗಳು ಕೇವಲ ಹೇಳಿಕೆಗಳಲ್ಲ, ಹೃದಯಾಂತರಾಳದಿಂದ ಹೊರಹೊಮ್ಮಿದ ಭಾವ ಪೂರ್ಣವಾದ ವಿವೇಕ ದೀಧಿತಿಗಳು.

ಈ ಗ್ರಂಥವು 'ಪ್ರತ್ಯಹಂ ಪ್ರತ್ಯವೇಕ್ಷೇತ' ಎಂಬ ಸೂತ್ರರೂಪದ ವಾಕ್ಯದಿಂದ ಪ್ರಾರಂಭವಾಗುವದು ಅತ್ಯಂತ ಯುಕ್ತವೇ ಆಗಿದೆ. ಪ್ರತಿನಿತ್ಯದಲ್ಲಿಯೂ ಪ್ರತಿಯೊಬ್ಬ ವ್ಯಕ್ತಿಯೂ ತಾನು ಗೈದ ಕಾರ್ಯಗಳ ಒಳಿತು ಕೆಡಕುಗಳ ಸಮಾಲೋಚನೆ ಮಾಡಬೇಕು. ಆತ್ಮ ನಿರೀಕ್ಷಣೆ ಮಾಡಿಕೊಳ್ಳಬೇಕು. ಅಪರಿಪೂರ್ಣನಾದ ಮನುಷ್ಯನು ಆಕಸ್ಮಾತ ಏನಾದರೂ ಅನುಚಿತಕಾರ್ಯಗಳನ್ನು ಮಾಡಿದ್ದರೆ, ಮುಂದೆ ಅಂಥವುಗಳನ್ನು ಮಾಡದಂತೆ ಪ್ರತಿಜ್ಞಾಬದ್ಧನಾಗಿ ಸರಿಪಡಿಸಿಕೊಂಡು ಮನಸ್ಸಿನ ಸ್ತಿಮಿತವನ್ನು ಕಳೆದುಕೊಳ್ಳದೆ ಉತ್ತಮ ಕಾರ್ಯಗಳನ್ನು ನೆರವೇರಿಸುತ್ತ ಪೂರ್ಣತೆಯ ಕಡೆಗೆ ಸಾಗಿ ಜೀವನದ ಸಾಫಲ್ಯವನ್ನು ಪಡೆಯಲು ಈ ಆತ್ಮ ನಿರೀಕ್ಷಣೆ, ಈ ನಿತ್ಯ ನಿರೀಕ್ಷಣೆ ಅದ್ಭುತ ಸಾಧನವಾದೀತು. ನಿತ್ಯ ನಿರೀಕ್ಷಣೆಯು ಸರ್ವರಿಗೂ ಸದಾಕಾಲ ಅನ್ವಯವಾಗುವ ನಿತಾಂತ ಸತ್ಯವಾಗಿದೆ. 'ದಶ ಕುಮಾರಚರಿತ'ದಲ್ಲಿ ರಾಜನೀತಿಯನ್ನು ನಿರೂಪಿಸಿರುವ ಸಂದರ್ಭದಲ್ಲಿ ದಂಡಿ ಮಹಾಕವಿಯು ಎಚ್ಚರಿಸಿದ ನೀತಿಯನ್ನು ನೆನಪಿಗೆ ತಂದು ಕೊಡುವಂತಿದೆ.

'ಮಾನವಃ ಶಿವಯೋಗೇನ ಶಿವೋ ಭವತಿ ಕೇವಲಮ್'

ಈ ಉಕ್ತಿಯಲ್ಲಿ ಶಿವಯೋಗದ ಮಹತಿಯನ್ನು ವೀರಶೈವ ಧರ್ಮದ ಪ್ರಕ್ರಿಯೆಗಳಿ ಗನುಗುಣವಾಗಿ ವಿವರಿಸಲಾಗಿದೆ. ಎಲ್ಲ ಯೋಗಗಳಲ್ಲಿ ಶಿವಯೋಗವೇ ಮಿಗಿಲು. ಶಿವ

ಯೋಗದ ಹೃದಯುವೇ ಷಟ್‌ಸ್ಥಲ. ಲಿಂಗತ್ರಯುಗಳನ್ನು ಅಂಗವಿಸಿಕೊಂಡು ಲಿಂಗಾಂಗ ಗಾತ್ರವಳಿದು ಚಿತ್ತದ ಚಿದ್ಬಿಂದು ತೋರಿದಾಗ ನಾದಬ್ರಹ್ಮನ ಶೋಧಿಸಿ ಸದ್ಧೃಢಚಿತ್ತ ನಾದಾಗ ಶಿವಯೋಗ ಸಾಧ್ಯ. ರಾಜಯೋಗವು ಜೀವನಸಿದ್ಧಿಗೆ ಸಾಧನವಾದರೆ ಶಿವ ಯೋಗವು ಶಿವಸಾಮರಸ್ಯಕ್ಕೆ ಸಂವಿಧಾನವೆಂದು ತಿಳಿಸಿದ್ದಾರೆ.

ಪೂರ್ಣತ್ವವನ್ನು, ಪರಿಣತೆಯನ್ನು ಪಡೆಯಬೇಕೆಂಬಾಸೆ ಪ್ರತಿಯೊಬ್ಬರಿಗೂ ಇರುತ್ತದೆ. ಕೆಲವರಿಗೆ ಲೌಕಿಕದಲ್ಲಿ ಸಂಪತ್ಸಮೃದ್ಧಿಯನ್ನು ಪಡೆದು ಆನಂದವನ್ನು ಅನುಭವಿಸ ಬೇಕೆಂಬ ಬಯಕೆ ಇದ್ದರೆ, ಬೇರೆಯವರಿಗೆ ಆಧ್ಯಾತ್ಮಿಕ ರಂಗದಲ್ಲಿ ಅಲೌಕಿಕ ಐಶ್ವರ್ಯವನ್ನು ಹೊಂದಿ ಪರತರಾನಂದದಲ್ಲಿ ತನ್ಮಯರಾಗಬೇಕೆಂಬ ಮನೀಷೆ ಇದ್ದಿರಬಹುದು. ಈ ವಿಷಯ ವನ್ನು ವಿಸ್ತಾರವಾಗಿ 'ಪೂರ್ಣಮೇವಾವಶಿಷ್ಯತೇ' ಎಂಬ ಉಪನಿಷದ್ವಾಕ್ಯದಲ್ಲಿ ವಿವರಿಸಿ ದ್ದಾರೆ.

'ದರಿದ್ರ ದೇವೋಭವ' ಇದು ಆರ್ಷವಾಣಿಯಂತೆ ಹೊರಹೊಮ್ಮಿ ಬಂದಿದೆ. ಈ ನುಡಿಯು ಜಗದ್ಗುರುಗಳವರ ಹೃದಯ ವೈಶಾಲ್ಯವನ್ನು ದೀನದಲಿತರ ಬಗೆಗೆ ಇವರಿಗಿರುವ ಅನುಕಂಪವನ್ನು ಸ್ಪಂದಿಸುತ್ತದೆ. ಅನಾಥರೂ ದುರ್ಬಲರೂ ಸಾಪಿನ ದವಡೆಯಲ್ಲಿ ಸಿಕ್ಕು ನರಳುತ್ತಿರುವಾಗ ಅವರ ಕಷ್ಟಕಾರ್ಪಣ್ಯಗಳನ್ನು ಕಂಡು ಕನಿಕರ ಪಟ್ಟು ಅಂಥ ದೀನದರಿದ್ರರ ಸಂಕಟವನ್ನು ನಿವಾರಿಸಲು ಪ್ರಯತ್ನ ಮಾಡದಿದ್ದರೆ, ನಮ್ಮ ಸಹೋದರರಿಗೆ ನಾವೇ ದ್ರೋಹ ಬಗೆದಂತಾಗುವದು. ನಿಜವಾದ ಧರ್ಮವೆಂದರೆ ದೀನದಲಿತರ ಸೇವೆ. ಇದಿಲ್ಲ ದವನ ಬಾಳು ಹಾಳು, ದರಿದ್ರನೇ ದೇವರೆಂದು ಭಾವಿಸಿ ಸೇವಿಸುವದೇ ಮಾನವತೆ, ಇದು ಅವರು ಕೇವಲ ಹೇಳಿದ ಮಾತಲ್ಲ, ಆಚರಿಸಿ ತೋರಿದ ಮಾರ್ಗ. ಹಿಂದೆ ಈ ನಾಡಿನಲ್ಲಿ ಭೀಕರ ಬರಗಾಲ ಬಿದ್ದಾಗ ಅಲ್ಲಲ್ಲಿ ಪಾದಯಾತ್ರೆ ಮಾಡಿ ಮನೆ ಮನೆಗೆ ಹೋಗಿ ನೀಡಿದ ಭಿಕ್ಷೆಯನ್ನು ಸಂಗ್ರಹಿಸಿ ನೂರಾರು ಗಂಜಿಕೇಂದ್ರಗಳನ್ನು ತೆರೆದು ಬಡವರನ್ನು ಬದುಕಿಸಿದ ವಿಷಯುವನ್ನು ಈ ನಾಡಿನ ಜನರು ಮರೆತಿರಲಿಕ್ಕಿಲ್ಲ.

'ಕಥಂ ಆರ್ಥಿಕಸಮಸ್ಯಾ ಪರಿಹ್ರೀಯತೇ' ಎಂಬಲ್ಲಿ ಸಾಮಾಜಿಕ ಸುಸ್ಥಿತಿಗೆ ಆರ್ಥಿಕ ಭದ್ರತೆಯೇ ಮೂಲ ಕಾರಣವೆಂದು ಪ್ರತಿಪಾದಿಸಿದ್ದಾರೆ. ನಮ್ಮ ಜನ ಸೋಮಾರಿಗಳಾಗಿ ದ್ದಾರೆ. ದುಡಿದುಣ್ಣುವ ಪರಿಪಾಠ ತಪ್ಪಿಹೋಗಿದೆ. ಮೋಸ ವಂಚನೆಗಳಿಂದ ಮನುಷ್ಯ ಎಷ್ಟು ಕಾಲ ಬದುಕಬಲ್ಲ? ಪರಿಶ್ರಮ ಪಡಬೇಕು ಮನಸ್ಸಿನ ಸಮತೆಯನ್ನು ಕಾಯ್ದು ಕೊಳ್ಳಲು ದುಡಿಯಬೇಕು. ಆದುದರಿಂದಲೇ ಮಹಾತ್ಮಾ ಬಸವಣ್ಣನವರು ಆಚರಿಸಿ ತೋರಿದ ಕಾಯಕ ತತ್ವವನ್ನು ನಿಷ್ಠೆಯಿಂದ ಪಾಲಿಸಿ ಆಚರಿಸುವದೇ ಆರ್ಥಿಕ ಮುಗ್ಗಟ್ಟಿಗೆ ಪರಿಹಾರೋಪಾಯವೆಂದು ವಿವೇಚಿಸಿದ್ದಾರೆ.

ವೀರಶೈವ ಸಮಾಜದ ಗುರುವಿರಕ್ತರಲ್ಲಿ ಮತ ಭೇದವಿರುವುದನ್ನು ತಿಳಿದು, ಭಕ್ತ ಭಕ್ತರಲ್ಲಿ ಪಕ್ಷಪಂಗಡಗಳಿರುವುದನ್ನು ನೋಡಿ ಮನನೊಂದು, ವಿಚ್ಛಿದ್ರಕಾರಕ ಪ್ರವೃತ್ತಿಯ

ನಿವಾರಣೆಗೆ ಮತ್ತು ಪರಸ್ಪರ ಸಾಮರಸ್ಯ ಸ್ಥಾಪನೆಗೆ ಬಸವೇಶ್ವರರು ಬೋಧಿಸಿದ ಧರ್ಮ ತತ್ತ್ವಗಳೂ ಮತ್ತು ತದನುಕಾರಿಗಳಾದ ಮಹಾಮಹಿಮರಾದ ಚಿತ್ತರಗಿ-ಇಳಕಲ್ಲ ಮಹಾಂತರು, ಹಾನಗಲ್ಲ ಕುಮಾರ ಶಿವಯೋಗಿವರ್ಯರು, ಅಥಣಿಯ ಶಿವಯೋಗಿಗಳು, ಘನಮಠಾರ್ಯರು ಇವರೇ ಮೊದಲಾದವರು ಬೋಧಿಸಿದ ಆಚರಿಸಿ ತೋರಿದ ಮಾರ್ಗಗಳೇ ತಾರಕವೆಂದು "ಸಮಾಜ ವಿಚ್ಛಿದ್ರಕಾರಿಣೀ ಪ್ರವೃತ್ತಿರ್ನಯೋಗ್ಯಾ" ಎಂಬ ಉಕ್ತಿಯಲ್ಲಿ ಕಳಕಳಿಯಿಂದ ಮನದಳಲನ್ನು ತೋಡಿಕೊಂಡು ಉಪಾಯಗಳನ್ನು ಸೂಚಿಸಿದ್ದಾರೆ. ಗುರು ವಿರಕ್ತರು ವೀರಶೈವ ಸಮಾಜದ ಎರಡು ನೇತ್ರಗಳು. ಪರಸ್ಪರರಲ್ಲಿ ಭಾವೈಕ್ಯತೆ ಬೇರೂರಬೇಕು. ಸ್ವಪ್ರತಿಷ್ಠೆ, ಅಹಂಕಾರ, ಅಸೂಯೆ, ಪರಸ್ಪರರಲ್ಲಿರುವ ತರತಮ ಭಾವ ಇವುಗಳನ್ನು ಆಚೆಗೆ ತಳ್ಳಬೇಕು. 'ಮಾನವ ಕುಲವೇ ಒಂದು' ಎಂಬ ಶರಣ ಸಂಸ್ಕೃತಿಯನ್ನು ಕೃತಿಯಲ್ಲಿ ಅಳವಡಿಸಿಕೊಳ್ಳಬೇಕು. ಸಮಾಜದ ಹಿತಚಿಂತನೆ, ರಕ್ಷಣೆ ಇವರನ್ನೇ ಕೂಡಿವೆ ಎಂಬುದಾಗಿ "ವೀರಶೈವ ಸಮಾಜಸ್ಯ ನೇತ್ರೇ ಗುರುಚಕೌಸ್ಮೃತೌ" ಎಂಬಲ್ಲಿ ವಿವರಿಸಿರುವರು.

'ಶುಚೌ ಚರಿತೇ ಶೀಲಮ್' ಪರಿಶುದ್ಧ ಆಚರಣೆಯಲ್ಲಿ ಶೀಲವಿರುತ್ತದೆ. ಸತ್ಯದಲ್ಲಿ ನಡೆಯುವದು ಶೀಲ, ಸತ್ಯದಲ್ಲಿ ನುಡಿಯುವದು ಶೀಲವೆಂದು ತಿಳಿಸಿ ಸಮಾಜ ಮತ್ತು ರಾಷ್ಟ್ರದ ಅಭ್ಯುದಯಕ್ಕಾಗಿ ಸದ್ವೃತ್ತಿ ಸದಾಚರಣೆಗಳೇ ಮೂಲ ಕಾರಣಗಳೆಂದು ಸರ್ವ ಗ್ರಾಹಿಯಾದ ತತ್ತ್ವವನ್ನು ವಿವರಿಸಿದ್ದಾರೆ.

ಜೀವನವು ಪಾವನವಾಗಬೇಕಾದರೆ ಪರಿಶುದ್ಧ ಆಚರಣೆಯು ಅತ್ಯವಶ್ಯವೆಂದು ತಿಳಿಸಿ ದ್ದಾರೆ, ಆಚರಣೆಯು ಹೊರಗೆ ತೋರಿಕೆಯದಾಗಿ ಒಳಗೆ ಕುಟಿಲ ಕುಹಕತುಂಬಿಕೊಂಡಿರ ಬಾರದು. 'ಅಂತರಂಗ ಬಹಿರಂಗ ಶುದ್ಧವಾಗಿರಬೇಕು' "ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ, ಅನ್ಯರಿಗೆ ಅಸಹ್ಯಪಡಬೇಡ, ಇದಿರುಹಳಿಯಲು ಬೇಡ, ತನ್ನ ಬಣ್ಣಿಸ ಬೇಡ, ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ, ಇದೇ ನಮ್ಮ ಕೂಡಲ ಸಂಗಮ ದೇವನ ಒಲಿಸುವ ಪರಿ" ಎಂಬುದಾಗಿ ಬಸವಣ್ಣನವರ ವಚನವನ್ನುದಾಹರಿಸಿ "ಆಚಾರ ಹೀನಂ ನ ಪುನಂತಿ ವೇದಾಃ" ಎಂಬ ಕೃತಿ ವಾಕ್ಯದಲ್ಲಿ ಸ್ಪಷ್ಟ ಪಡಿಸಿದ್ದಾರೆ.

ಈ ಪುಟ್ಟ ಗ್ರಂಥದಲ್ಲಿ ಮೂಡಿದ ಹಲಕೆಲವು ಆಶೀರ್ವಚನಗಳ ತತ್ತ್ವಚಿಂತನೆಯ ಸಾರಾಂಶವನ್ನು ಇಲ್ಲಿ ಅವಲೋಕಿಸಲಾಗಿದೆ. ಇನ್ನು ಅನೇಕ ವಾಕ್ಯಗಳು ಕಾವ್ಯ-ಶೃತಿ-ಸ್ಮೃತಿಗಳ ಆಕರದಿಂದ ಉದಾಹೃತವಾಗಿವೆ. ಚಿತ್ತಶುದ್ಧಿ, ಸಂಯಮ, ಸತ್ಯ-ಧರ್ಮ-ಶಾಂತಿ-ಸುಖ ಇತ್ಯಾದಿ ವಿಷಯಗಳ ಅನ್ಯೋನ್ಯ ಅನುಬಂಧವನ್ನು ಪೂಜ್ಯರು ಮನಂಬುಗು ವಂತೆ ತಿಳಿಸಿದ್ದಾರೆ. ಸುರಸರಸ್ವತಿಯ ನುಡಿಯಲ್ಲಿ ಮೂಡಿಬಂದ ಜೀವನ ಸಿದ್ಧಾಂತಗಳನ್ನು ತಿಳಿಯಾಗಿ ಸ್ವಲ್ಪ ಓದುಬಲ್ಲವರಿಗೂ ಅರ್ಥವಾಗುವಂತೆ ಸರಳ ಸುಲಭ ರೀತಿಯಲ್ಲಿ ರಚಿಸಿದ್ದಾರೆ.

ಶ್ರೀಗಳವರ ಭಾಷೆ ಅಲಂಕಾರಿಕವಾಗಿದೆ. ಉಪಮಾ, ರೂಪಕ, ದೃಷ್ಟಾಂತ ನಿದರ್ಶನ ಗಳು ಅಲ್ಲಲ್ಲಿ ರೂಪುಗೊಂಡಿವೆ ಪುರಾತನರ ವಚನಗಳು ವಿವೇಚನೆಗೆ ಪೋಷಕವಾಗಿ ಹೆಣೆ

ಯಲ್ಪಟ್ಟಿವೆ. ಸಂಸ್ಕೃತ ಸುಭಾಷಿತಗಳಲ್ಲಿ ಮತ್ತು ಶೃತಿವಾಕ್ಯಗಳಲ್ಲಿ ಹುದುಗಿದ ತಿರುಳನ್ನು ಕವಿಗಳು ಲೇಖಕರು ಆದ ಜಗದ್ಗುರುಗಳು ಕನ್ನಡ ನುಡಿಮುತ್ತುಗಳ ಗುಂಫನದಲ್ಲಿ ಜೋಡಿಸಿ ಕನ್ನಡ ಶಬ್ದಸಂಪತ್ತಿಯನ್ನು ಎತ್ತಿ ತೋರಿಸಿದ್ದಾರೆ.

ಈ ಪುಸ್ತಕದಲ್ಲಿರತಕ್ಕ ವಿಷಯುಗಳು ಜಗದ್ಗುರುಗಳವರ ಸ್ವಯಂ ಅನುಭವ ಮತ್ತು ಅಧ್ಯಯನದ ಬಲದಿಂದ ಆವಿಷ್ಕಾರ ಹೊಂದಿರುವುದರಿಂದ ಹೊಸ ಸ್ಫೂರ್ತಿ ಮತ್ತು ಜಾಗ್ರತೆಯನ್ನುಂಟು ಮಾಡಲು ಸಮರ್ಥವಾಗಿವೆ ಮತ್ತು ಸತ್ವಪೂರ್ಣವಾಗಿವೆ.

'ಸರ್ವೇ ಜನಾಃ ಸುಖಿನೋ ಭವಂತು' ಎಲ್ಲರಿಗೂ ಒಳಿತನ್ನು ಮಾಡುವ ಧೋರಣೆಗಳನ್ನು ಹೊಂದಿವೆ. ಜೀವನದ ಅನೇಕ ಸಮಸ್ಯೆಗಳನ್ನು ವಿಶ್ಲೇಷಿಸಿದ್ದಾರೆ. ಇವರ ಲೇಖನಗಳಲ್ಲಿ ಸಮಾಜೋನ್ನತಿಯ ಬಗ್ಗೆ, ಧಾರ್ಮಿಕ ಸುಧಾರಣೆಗಾಗಿ, ಸಂಸ್ಕೃತಿಯ ರಕ್ಷಣೆಗಾಗಿ ಇವರಿಗಿರುವ ಲವಲವಿಕೆಯನ್ನು ಕಾಣಬಹುದಾಗಿದೆ. ಸಮಾಜ ಸೇವೆಯಲ್ಲಿ ಕಂಡುಬರುವ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸಿ ಮಾರ್ಗದರ್ಶನವನ್ನು ಮಾಡಿದ್ದಾರೆ. ಸ್ವಯಂ ಅನುಭವಜನ್ಯವಾದ ವಿಚಾರ ಸರಣಿಯಿಂದ ವಿಷಯುಗಳನ್ನು ಪ್ರತಿಪಾದಿಸಿದ್ದಾರೆ. ಪ್ರಾಮಾಣಿಕರೂ ದಕ್ಷರೂ ಆದ ಜನರಿಂದ ನಾಡಿನ ಮತ್ತು ರಾಷ್ಟ್ರದ ಭವಿಷ್ಯವು ಉಜ್ವಲವಾಗುವದರಲ್ಲಿ ಸಂದೇಹವಿಲ್ಲ. ನಾವು ಅಂಥ ಜನರನ್ನು ತಯಾರು ಮಾಡಬೇಕು ಎಂಬ ಮಹೋದಾರ ಮನೀಷೆಯನ್ನು ವ್ಯಕ್ತಪಡಿಸಿದ್ದಾರೆ. 'ಪ್ರತ್ಯಹಂ ಪ್ರತ್ಯವೇಕ್ಷೇತ' ಎಂಬುದರಿಂದ ಆರಂಭಿಸಿ 'ಅಶಾಂತಸ್ಯ ಕುತಃ ಸುಖಮ್' ಮನಃಸ್ವಾಸ್ಥ್ಯವಿಲ್ಲದವನಿಗೆ ಸುಖವಿಲ್ಲ, ಎಂಬುವೇ ಮೊದಲಾದ ಮಾನವೀಯ ಮೌಲ್ಯಗಳನ್ನು ಮೇಲೆತ್ತಿ ತೋರಿಸಿದ್ದಾರೆ.

ಈ 'ಹೊಬಳ್ಳಿಯ ಪರಿಮಳ'ದಲ್ಲಿ ಅನೇಕ ವಿಷಯುಗಳ ಕುಸುಮ ಸ್ತಬಕಗಳ ಗುಂಫನವಿದೆ. ವಿವಿಧ ತಾತ್ವಿಕ ಚಿಂತನೆಗಳ ಪುಷ್ಪಪರಾಗವಿದೆ. ಇಂಥ ಪುಷ್ಪ ಪರಿಮಳ ಸಾಹಿತ್ಯೋದ್ಯಾನದಲ್ಲಿ ಸುಭಗತೆಯ ಸಿರಿಯನ್ನು ರಂಜಿಸಿದೆ.

೧೮೩–ವಿಶ್ವೇಶ್ವರನಗರ
ಹುಬ್ಬಳ್ಳಿ–೩೨

—ಪ್ರೊ. ಎ. ಎಲ್. ಹಿರೇಮಠ

# ಮುನ್ನುಡಿ

ಹುಬ್ಬಳ್ಳಿಯ ಮೂರುಸಾವಿರ ಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಧಾರ್ಮಿಕ,ಶೈಕ್ಷಣಿಕ, ಸಾಮಾಜಿಕ ಕಾರ್ಯಕ್ರಮಗಳ ಅದ್ಧೂರಿಯಿಂದ ಹುಬ್ಬಳ್ಳಿಯ ಧವಳ ಕೀರ್ತಿಯು ನಾಡತುಂಬ ಹಬ್ಬುತ್ತಲಿದೆ. ಈಗಿನ ಹುಬ್ಬಳ್ಳಿಯು ಮೊದಲು ಹೂಬಳ್ಳಿ ಎಂಬ ನಾಮದಿಂದ ಒಪ್ಪುತ್ತಿತ್ತೆಂಬುದು ಸಂಶೋಧಕರ ಮತ.

ಈಗ ವಾಚಕರ ಕೈಯೊಳಗೆ ನೆಲದಲ್ಲಿ ಜಲದಿಂದ ಬೆಳೆದ ಬಳ್ಳಿಯ ಹೂಗಳನ್ನು ಕೊಡದೆ, ಜಗದ್ಗುರು ಗಂಗಾಧರ ರಾಜಯೋಗೀಂದ್ರರ ಹದವಾದ ಹೃದಯದಲ್ಲಿ ಹುಲು ಸಾಗಿ ಬೆಳೆದ, ಸಂಸ್ಕೃತಿ ಸೌರಭ ಸೂಸುವ ವಚನಗಳೆಂಬ ನನೆಗಳ ಗೊನೆಯನ್ನು ಕೊಡುವ ಸುವರ್ಣಸಂಧಿಯೊದಗಿದೆ. ಬಾಳುವ, ಬೀಳುವ, ಉದುರಿ ಬಿದ್ದು ಮಣ್ಣುಪಾಲಾಗುವ ಗಿಡಬಳ್ಳಿಗಳ ಹೂಗಳಿಗಿಂತಲೂ ಬಾಡದ, ಬೀಳದ, ಬಿದ್ದವರನ್ನು ಉದ್ಧರಿಸುವ ಈ ವಚನ ಗಳೆಂಬ ಹೂಗಳು ಮಿಗಿಲಾದವು. ಚಿತ್ತದಲ್ಲಿಯ ಕತ್ತಲೆಯನ್ನು ಚದುರಿಸಿ ಚಿತ್ಕಿರಣಗಳನ್ನು ಹರಡಿ, ಚಿಜ್ಯೋತಿಯನ್ನು ಬೆಳಗುವ ಈ ಚೆನ್ನುಡಿಗಳು"ನಂದಾಮಶರದಃಶತಂ," ಎಂಬುಕ್ತಿ ಯಿಂದ ಬಾಳಬಟ್ಟೆಯ ಸುದೀರ್ಘ ಪಯಣಕೈಕೊಂಡ ಮುಮುಕ್ಷುವಿಗೆ ತವನಿಧಿಯಂತೆ ನವ ನಿಧಿಯಂತೆ ಇರುತ್ತದೆ. ಇಂತಹ ಸುಧಾಸೂಕ್ತಿಗಳನ್ನೇ ಶಿವಶರಣರು ಜ್ಯೋತಿರ್ಲಿಂಗ, ಮುತ್ತಿನಹಾರ, ಸ್ಫಟಿಕದ ಶಲಾಕೆ, ಮಾಣಿಕ್ಯದ ದೀಪ್ತಿ ಎಂದು ಕರೆದಿರುವರು.

ಆದಿ ವಚನಕಾರನಾದ ದೇವರ ದಾಸಿಮಯ್ಯನು ಕರಿಯುಬೇಡ, ಸಿರಿಯೂಬೇಡ, ಹಿರಿದಾದ ರಾಜ್ಯವೂಬೇಡ. ನನಗೆ ಅನುಭಾವಿಗಳಾದ ಶರಣರ ಸೂಳ್ನುಡಿಗಳು ಮಾತ್ರ ಬೇಕೆಂದು ಹೇಳಿದಂತೆ. ಶ್ರೀಮನ್ನಿಜಗುಣ ಶಿವಯೋಗಿಗಳು ಪರತರ ಮುಕುತಿದೋರುವ ಶಾಸ್ತ್ರವನು ಕರುಣಿಸು ಎಂದು ಶಿವನಲ್ಲಿ ಮೊರೆಯಿಟ್ಟಿರುವರು.

"ಆತ್ಮಾವಾ ಅರೇದ್ರಷ್ಟವ್ಯಃ," ಎಂಬ ಉಪನಿಷತ್ಕಾರರ ಮತದಂತೆ ಆತ್ಮಸಾಕ್ಷಾತ್ಕಾ ರವೇ ಮಾನವ ಜನ್ಮದ ಚರಮಗುರಿ.

ಭೂಗತ ನಿಕ್ಷೇಪವನ್ನು ಅಂಜನದ ಸಹಾಯದಿಂದ ನೋಡುವಂತೆ, ಈ ಅನುಭಾವದ ನುಡಿಗಳಿಂದ ಆತ್ಮದರ್ಶನ ಮಾಡಿಕೊಳ್ಳಬಹುದು. ತರ್ಕ ವಿತರ್ಕಗಳ ಕೋಟಿಗೆ ಸಿಲುಕದ, ವಾದವಿವಾದಗಳ ಘರ್ಷಣೆಗೆ ನಿಲುಕದ ಅನುಭವದ ಸವಿಜೇನು ಈ ವಚನಗಳ ವಾಕ್ಯಪ್ರತಿ ವಾಕ್ಯಗಳಲ್ಲಿ ತುಂಬಿ ತುಳುಕುತ್ತದೆ.

'ಅನುಭಾವವೆಂಬುದು ಅಂತರಂಗದ ರತ್ನ', 'ಅನುಭಾವವೆಂಬುದು ಆತ್ಮವಿದ್ಯೆ', 'ಅನುಭಾವವೆಂಬುದು ನಿಜನಿವಾಸದಲ್ಲಿರಿಸುವದು' ಎಂಬ ಆದ್ಯರ ವಚನದಂತೆ, ಪಿಂಡಾಂಡ ದಲ್ಲಿಯ ರತ್ನಭಂಡಾರದಂತಿರುವ, ಮರವೆಯ ಕಳೆದು ಅರಿವಿನತ್ತ ಕರೆದೊಯ್ವ ಈ

ಅಮೃತಾನುಭವದ ಅಮರೋಕ್ತಿಗಳು. ಓದುಗರನ್ನು ನಿಜನಿವಾಸದಲ್ಲಿರಿಸುವವು. ಅಂದರೆ ಮೂಲಸ್ವರೂಪವನ್ನು ತಿಳಿಸಿ ಮುಕ್ತರನ್ನಾಗಿ ಮಾಡುವವು.

"ಅನುಭಾವವ ಮಾತಿನ ಮಥನವೆನ್ನಬಹುದೆ?
ಅನುಭಾವವಿಲ್ಲದಲಿಂಗ ಸಮರಸ ಸುಖವನ್ನೀಯದು,
ಅನುಭಾವದಿಂದ ಕರ್ಮಭೇದನವಾಯಿತಯ್ಯ

ಇವೇ ಮೊದಲಾದ ಅನುಭಾವಿಗಳ ಸೂಕ್ತಿಗಳು ಅನುಭಾವದ ಎತ್ತರವನ್ನೇ ಬಿತ್ತರಿಸುತ್ತವೆ.

ನಾಭಿಯಲ್ಲಿ ಸುಗಂಧ ಪರಿಮಳವುಳ್ಳ ಕಸ್ತೂರಿಮೃಗವು ಕಾಡಿನತುಂಬ ಅಲೆದಾಡಿ ಅಲೆದಾಡಿ ಕಾಡನ್ನೆಲ್ಲ ಸುಗಂಧದ ಬೀಡನ್ನಾಗಿ ಮಾಡುವಂತೆ ಶ್ರೀ ಜಗದ್ಗುರುಗಳು ನಾಡತುಂಬ ಸಂಚರಿಸಿ ಸದಾಚಾರದಿಂದ, ಸುವಿಚಾರದಿಂದ, ಸದ್ಗ್ರಂಥಗಳ ಪ್ರಚಾರದಿಂದ ನಾಡನ್ನೆಲ್ಲ ಸಂಸ್ಕೃತಿಯ ಬೀಡನ್ನಾಗಿ ಮಾಡುತ್ತಿರುವರು.

ಸತ್ಪುತ್ರನು ಹೆತ್ತಮ್ಮನ ಅಡಿಗಳಿಗೆ ಹೂವೇರಿಸಿ ಧನ್ಯನಾಗುವಂತೆ, ಮೂರುಸಾವಿರ ಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರರು ಮಾತೆಯಂತಿರುವ ಶಿವಯೋಗ ಮಂದಿರ ಸಂಸ್ಥೆಗೆ ಕೇವಲ ಹೂಗಳನಷ್ಟೇ ಅಲ್ಲ, ಹೂಬಿಡುವ ಬಳ್ಳಿಯನ್ನೆ ಸಮರ್ಪಣ ಮಾಡಿ ಕೃತಜ್ಞತೆ ತೋರಿದ್ದಾರೆ.

ಶಿವನು ಪಂಚವಿಂಶತಿ ಲೀಲೆಗಳನ್ನು ಮಾಡಿ ಭಾರತದಲ್ಲಿ ಮೆರೆದಂತೆ ಜಗದ್ಗುರುಗಳು ಕನ್ನಡ ನಾಡಿನಲ್ಲಿ ಪಂಚವಿಂಶತಿ ಸಾಂಸ್ಕೃತಿಕ ಶಿವಲೀಲೆಗಳನ್ನು ಮಾಡಿ ಮೆರೆದಿದ್ದಾರೆ.

ಪ್ರತಿಭೆಪ್ರಾಂಡಿತ್ಯ ತುಂಬಿದ ಜ್ಞಾನಾಮೃತಧಾರೆಯನ್ನು ಮುಮುಕ್ಷುಗಳ ಹೃದ್ಭೂಮಿಯಲ್ಲಿ ಧಾರಾಳವಾಗಿ ಸುರಿಸಿ ಮುಕ್ತರನ್ನಾಗಿ ಮಾಡಿದ ಶ್ರೀ ಮನ್ನಿಜಗುಣಶಿವಯೋಗಿಗಳ ಶಂಭುಲಿಂಗನ ಬೆಟ್ಟದಿಂದ "ತೇರು ಸಾಗಿತಮ್ಮ ನೋಡಿರೇ ಈ ದೇಹವೆಂಬ ತೇರುಸಾಗಿತಮ್ಮ ನೋಡಿರೇ" ಎಂಬ ಸರ್ಪಭೂಷಣ ಶಿವಯೋಗಿಗಳವರ ಉಕ್ತಿಯಂತೆ ಹೊರಟ ತೇರು.

(ಜಗದ್ಗುರು ಗಂಗಾಧರರಾಜಯೋಗೀಂದ್ರರೆಂಬ ದಿವ್ಯಭವ್ಯ ಮಹಾಚೇತನವು) ಕರ್ನಾಟಕದ ತುಂಬ ವಿಜೃಂಭಣೆಯಿಂದ ಸಾಗಿ ಲಕ್ಷಾಂತರ ಸದ್ಭಕ್ತರ ಕಣ್ಮನಗಳನ್ನು ತಣಿಸಿ, ಜ್ಞಾನಾಮೃತವನ್ನುಣಿಸಿ, ಇಂದು ಶಿವಯೋಗಮಂದಿರ ಸಂಸ್ಥೆಯೆಂಬ ಪಾದಗಟ್ಟೆಗೆ ಬಂದು ನಿಲುವ ಮಹಾಮಂಗಲದಿನ. ಆ ಮಂಗಲ ಮೂರ್ತಿಯ ಅಡಿಮುಡಿಗಳಿಗೆ ಹೂವಿಡೋಣ ಧರ್ಮದ ಏಳ್ಗೆಗಾಗಿ ಮುನ್ನಡೆಯೋಣ ಜಯಭೇರಿ ಹೊಡೆಯೋಣ.

ಒಂದೆಡೆಯಲ್ಲಿ ಪುನ್ನಾಗ, ಪಾರಿಜಾತ, ಮಂದಾರ, ಮುಂತಾದ ಹೂಗಳಿಂದ ಹುಬ್ಬಳ್ಳಿಯು ಹೂಬಳ್ಳಿಯಾಗಿ ಮೆರೆಯುತ್ತಿದ್ದರೆ, ಮತ್ತೊಂದೆಡೆಯಲ್ಲಿ ಪ್ರಾಚೀನ ಗುರುಕುಲದಂತಿರುವ ಶಿವಯೋಗಮಂದಿರ ಸಂಸ್ಥೆಯು ಅಧ್ಯಾತ್ಮದ ಸೌರಭ ಸೂಸುವ ಕುಮಾರಯೋಗಿ, ಶಿವಬಸವಯೋಗಿ ಮೊದಲಾದ ಹೂಗಳು ಅರಳಿ ಭಕ್ತರ ಮನೋ ಮಂದಿರದಲ್ಲಿ ಮೆರೆದು ನಾಡಿನ ಎಲ್ಲ ಭಕ್ತರ ಮನಸ್ಸನ್ನು ಉಲ್ಲಾಸಗೊಳಿಸುತ್ತಿದ್ದವು.

ಶಿವಯೋಗಮಂದಿರವೆಂಬ ರಮ್ಯೋದ್ಯಾನದಲ್ಲಿ ಅರಳಿ ಘಮಘಮಿಸುವ ಹೂವನ್ನೆ ಆಯ್ದುಕೊಂಡು ಹೋಗಿ ನಾಡಿನ ಅನೇಕ ಗಣ್ಯ ಪುಣ್ಯಪುರುಷರು ಹುಬ್ಬಳ್ಳಿ ಮಹಾನಗರದ ಮಧ್ಯದಲ್ಲಿ ಲಕ್ಷಾಂತರ ಭಕ್ತರ ಲಕ್ಷವನ್ನೆಳೆದು ಅಕ್ಷಯ ಸುಖವನ್ನೀಯುವ ಮೂರುಸಾವಿರ ಮಠದ ಜಗದ್ಗುರು ಪೀಠವನ್ನು ಅಲಂಕರಿಸುವಂತೆ ಮಾಡಿದರು.

ಅಧ್ಯಾತ್ಮ ರಸಗಂಗೆಯು ಪುಟಿಯುವ ಕಾರಂಜಿಯಂತಿರುವ ಪುಣ್ಯಾರಣ್ಯ ಶಿವಯೋಗ ಮಂದಿರ ವಾಸ, ನೋಟಮಾತ್ರದಿಂದಲೇ ಭಕ್ತರ ಕೋಟಲೆ ಕಳೆವ ಸಿದ್ಧ ಪುರುಷ ಶ್ರೀ ಕರ್ತೃ ಗುರುಸಿದ್ಧೇಶ್ವರ ಸನ್ನಿಧಿಯ ಆವಾಸ. ಈ ಉಭಯ ಪವಿತ್ರ ಸನ್ನಿವೇಶಗಳ ಸಂಗಮದಿಂದ ಮಂಗಲ ಮೂರ್ತಿಯೆನಿಸಿದ ಜಗದ್ಗುರು ಗಂಗಾಧರರಾಜಯೋಗೀಂದ್ರರು ಅಧ್ಯಾತ್ಮ ಮಾನಸಸರೋವರಗಳಲ್ಲಿ ರಾಜಹಂಸನಂತೆ ಈಜುತ್ತಿರುವರು. ತತ್ತ್ವಾಮೃತದ ತನಿರಸದಿಂದ ತುಂಬಿ ತುಳುಕುವ ತಿಳಿನುಡಿಗಳಿಂದ ಕೂಡಿದ 'ಹೂಬಳ್ಳಿ' ಎಂಬ ಶಿರೋನಾಮದ ಕಿರು ಹೊತ್ತಿಗೆಯನ್ನು ಜಗದ್ಗುರು ಮಹಾಸನ್ನಿಧಿಯವರು ಬರೆದು ಆಧ್ಯಾತ್ಮಿಕ ರಸ ಗಂಗೆಯಲ್ಲಿ ಮಿಂದು ಪುನೀತರಾಗಬೇಕೆಂಬುವವರಿಗೆ ಅನ್ವರ್ಥಕನಾಮವುಳ್ಳ ಮಲಾಪಹಾರಿಣಿ ನದೀ ತೀರದ ಶಿವಯೋಗಮಂದಿರದಲ್ಲಿ ಪೀಠಾರೋಹಣ ಮಾಡಿ ಪಂಚವಿಂಶತಿ-ಸಂವತ್ಸರಗಳು ಕಳೆದ ನಿಮಿತ್ತ ಏರ್ಪಡಿಸಿದ ರಜತ ಮಹೋತ್ಸವದ ಸುಸಂದರ್ಭದಲ್ಲಿ ಪ್ರಕಟಿಸುತ್ತಿರುವದು ಸಮುಚಿತವಾಗಿದೆ. ಇಂತಹ ಅನೇಕಾನೇಕ ಕಿರುಹೊತ್ತಿಗೆಗಳು ಮಹಾಸನ್ನಿಧಿಯವರಿಂದ ಹೊರಬಿದ್ದು ನಾಡಿನವರಿಗೆ ದಿವ್ಯಸ್ಫೂರ್ತಿಯನ್ನೀಯಲೆಂದು ಹಾರೈಸುವೆ.

—ತೆಲಸಂಗ ಬಸವಲಿಂಗ ಪಟ್ಟಾಧ್ಯಕ್ಷರು

# ಪ್ರಕಾಶಕರ ನುಡಿ

ಶ್ರೀ ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಕಾರ್ಯಗಳನ್ನು ಎಡೆಬಿಡದೆ ಮಾಡುತ್ತಿದ್ದರೂ, ಅದರಲ್ಲಿಯೆ ಬಿಡುವು ಮಾಡಿಕೊಂಡು ಅನೇಕ ಪುಸ್ತಕಗಳನ್ನು ಬರೆದು ಸಾಹಿತ್ಯ ಸೇವೆ ಮಾಡಿದ್ದಾರೆ. ಈಗಾಗಲೇ ಶ್ರೀ ಜಗದ್ಗುರು ಸನ್ನಿಧಿಯವರು ೨೫ ಗ್ರಂಥಗಳನ್ನು ಬರೆದಿರುವರೆಂಬುದು ಪ್ರತಿಯೊಬ್ಬರಿಗೂ ಅಚ್ಚರಿಯೆನಿಸದಿರದು. ಅವರು ಹುಟ್ಟುಕವಿಗಳು, ಸಾಹಿತಿಗಳು ಆ ಸಂಸ್ಕಾರವನ್ನು ಬಿಡದೇ ಸಮಾಜ ಸೇವೆಯನ್ನು ಮಾಡುತ್ತಿದ್ದಾರೆ. ಗದ್ಯ ಪದ್ಯಗಳನ್ನು ಬರೆದಿದ್ದಾರೆ. ಪ್ರಾಚೀನ ಕವಿಗಳ ಪರಂಪರೆಯನ್ನು ಬಿಡದೇ ಕಂದಪದ್ಯಗಳನ್ನು ಬರೆದಿದ್ದಾರೆ. ಜೊತೆಗೆ ಆಧುನಿಕ ಕವನಗಳನ್ನು ಬರೆದಿದ್ದಾರೆ, ಭಾವಗೀತೆಗಳನ್ನು ರಚಿಸಿದ್ದಾರೆ. ಅವರಿಗೆ ಕವಿತಾ ಶಕ್ತಿ ಬಂದಿರುವದು ನಿಸರ್ಗ ಸೌಂದರ್ಯದಿಂದೊಡಗೂಡಿದ ಆಧ್ಯಾತ್ಮದಾಗರವಾದ ಶಿವಯೋಗ ಮಂದಿರದ ಪವಿತ್ರ ಪರಿಸರದಲ್ಲಿ ತಮ್ಮ ಹದಿನಾರನೆಯ ವಯಸ್ಸಿನಲ್ಲಿಯೇ ಚಿಕ್ಕ ಚಿಕ್ಕ ಕವನಗಳನ್ನು ಬರೆಯುತ್ತ ಬಂದಿದ್ದಾರೆ. ಜಗದ್ಗುರುಗಳಿಗೆ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಸಮಸ್ಯೆಗಳನ್ನು ಎದುರಿಸುವ ಅಡೆ ತಡೆ ಇರದಿದ್ದರೆ ಸಾಹಿತ್ಯ ಸೇವೆಯೊಂದನ್ನೇ ಮುಖ್ಯ ಗುರಿಯಾಗಿಟ್ಟುಕೊಂಡು ಬರೆದಿದ್ದರೆ ನಾಡಿನ ಸಾಹಿತಿಗಳ ಮಾಲಿಕೆಯಲ್ಲಿ ಅಗ್ರಪಂಕ್ತಿಗೆ ಸೇರುತ್ತಿದ್ದರು. ಆದರೆ ಸಮಾಜಕ್ಕೆ ಶೈಕ್ಷಣಿಕ ಸೇವೆಗೈದು ನಾಡಿಗೆ ಮಹದುಪಕಾರ ಮಾಡಿದ್ದು ಯಾರೂ ಮರೆಯುವಂತಿಲ್ಲ. ಆದರೂ ಇತ್ತಿತ್ತಲಾಗಿ ಅನೇಕ ವಚನಗಳನ್ನು "ಶ್ರೀ ಗುರುಸಿದ್ಧೇಶ್ವರರ" ನಾಮಾಂಕಿತದಲ್ಲಿ ಮತ್ತೂ "ಪೂರ್ಣಜ್ಞ" ಅಂಕಿತದೊಡನೆ ತ್ರಿಪದಿಗಳನ್ನು ಬರೆದು ನಾಡಿಗೆ ಚಿರಪರಿಚಿತರಾಗಿದ್ದಾರೆ. ಅವರ ವಚನಗಳೆಂದರೆ ಹೃದಯಕ್ಕೆ ತಂಪನ್ನು ನೀಡುವಂತಹವು. ಹೆಚ್ಚಾಗಿ ಅವರ ವಚನಗಳಲ್ಲಿ ತಮ್ಮ ಜೀವನದ ನೋವು–ನಲಿವುಗಳ, ಸರಸ–ವಿರಸಗಳ ಸಮರಸವೇ ತುಂಬಿದೆ. ಶ್ರೀ ಜಗದ್ಗುರುಗಳಾದರೂ ದುಃಖವನ್ನು ಸಾಕಷ್ಟು ಸಹಿಸಿದ್ದಾರೆ. ಉಪಕೃತಿ ಪಡೆದವರು ಅನ್ಯಾಯ ಬಗೆದರೂ ಅವೆಲ್ಲವುಗಳನ್ನೂ ಒಳಗೊಳಗೆ ನುಂಗಿಕೊಂಡಿದ್ದಾರೆ. ಅವರ ಜೀವನದ ಅನುಭವ ಸಾರವೇ ಅವರ ಪದ್ಯ–ಗದ್ಯಗಳಲ್ಲಿ ಕಂಡು ಬರುತ್ತದೆ. ಶೋಕದಿಂದ ಕೂಡಿದ ಶ್ಲೋಕಗಳು ಹೃದಯ ಸ್ಪರ್ಶಿಯಾಗುತ್ತವೆ. ರಸಾನುಭವ ನೀಡುತ್ತವೆ. ಅವರ ಸಾಹಿತ್ಯದಲ್ಲಿ ಕೃತಕತೆ ಕಾಣದು. ಸಹಜತೆಯೇ ಮೈವೆತ್ತು ಎದ್ದು ಬಂದಂತಿದೆ. ಅವರು ಭಾವನಾಜೀವಿಗಳು. ಕುಸುಮಕ್ಕಿಂತಲೂ ಮೃದು. ಪ್ರಸಂಗ ಬಂದರೆ ವಜ್ರಕ್ಕಿಂತಲೂ ಕಠಿಣ ಅವರ ಮನಸ್ಸು. ಅಂತೆಯೇ ಈವರೆಗೆ ಸಾಮಾಜಿಕ ರಂಗದಲ್ಲಿ ಧುಮುಕಿ, ಎಡೆಬಿಡದೆ ಎದುರಿಸುತ್ತ ದಾರಿಯಲ್ಲಿ ಬೆಳಕು ಕಾಣುತ್ತ ನಡೆಯುತ್ತಿದ್ದಾರೆ. ಅವರು ಜೀವನದಲ್ಲಿ ಮೂರು ಮಹಾನ್ ಶಕ್ತಿಗಳನ್ನು ಸ್ಮರಿಸುತ್ತಿದ್ದಾರೆ. ಅವರೇ ಶ್ರೀ ಮೂರುಸಾವಿರಮಠದ

ಕರ್ತೃ ಜಗದ್ಗುರು ಗುರುಸಿದ್ಧೇಶ್ವರರು, ಚಿತ್ರದುರ್ಗದ ವಿಜಯ ಮಹಾಂತೇಶ್ವರರು, ಶಿವಯೋಗಮಂದಿರ ಸಂಸ್ಥಾಪಕರಾದ ಶ್ರೀ ಹಾನಗಲ್ಲ ಕುಮಾರೇಶ್ವರರು. ಈ ಮೂವರು ಇವರಿಗೆ ಪಂಚಪ್ರಾಣರಾಗಿದ್ದಾರೆ. ಅಂತೆಯೇ ತಮ್ಮ ಪೀಠಾರೋಹಣ ರಜತ ಮಹೋತ್ಸವದ ಸವಿನೆನಪಿಗಾಗಿ ನಾಡಿನ ಒಂಭತ್ತು ಜಿಲ್ಲೆಗಳಲ್ಲಿ ಶರಣ ಸಾಹಿತ್ಯ ಪ್ರಕಟಿಸುತ್ತ ವಿಧಾಯಕ ಕಾರ್ಯಕ್ರಮಗಳನ್ನು ನೆರವೇರಿಸುತ್ತಿರುವುದು ಎಂಥವರಾದರೂ ಮೆಚ್ಚುವಂತಹದಾಗಿದೆ. ಶ್ರೀ ಜಗದ್ಗುರುಗಳವರು ಈ ಸಾಹಿತ್ಯ ನಿತ್ಯೋತ್ಸವದ ಮುಕ್ತಾಯವು ತಮ್ಮ ಜೀವನದಲ್ಲಿ ಬೆಳಕು ನೀಡಿದ ಆಧ್ಯಾತ್ಮ ಮಂದಿರವಾದ ಶ್ರೀ ಶಿವಯೋಗಮಂದಿರದಲ್ಲಿಯೇ ಮುಕ್ತಾಯಗೊಳಿಸಬೇಕೆಂಬುವ ಸಂಕಲ್ಪ ಅವರದು. ಈ ಸಂದರ್ಭದಲ್ಲಿ ಅವರೇ ಬರೆದ ಈ "ಹೂಬಳ್ಳಿ" ಕಿರುಹೊತ್ತಿಗೆಯು ಬಿಡುಗಡೆಯಾಗುತ್ತಿರುವದು ಅವರ ಮುಂಧೋರಣೆಯ ದ್ಯೋತಕವಾಗಿದೆ. "ಹೂಬಳ್ಳಿ" ಈ ಹೆಸರು ವೈಶಿಷ್ಟ್ಯಪೂರ್ಣವಾದುದು. ಹನ್ನೆರಡನೆಯ ಶತಮಾನದಲ್ಲಿನ "ಪೂವಲ್ಲಿ"ಯೇ ಇಂದು ಹುಬ್ಬಳ್ಳಿಯಾಗಿದೆ. ಅಂದಿನ 'ಪೂವಲ್ಲಿ' ನಿಸರ್ಗ ಸೌಂದರ್ಯದಿಂದ ಕೂಡಿ ಹೂ ಬಳ್ಳಿಗಳಿಂದಲೇ ಸುಶೋಭಿತವಾಗಿತ್ತು. ಆ 'ಪೂವಲ್ಲಿ' ಇಂದು ಹುಬ್ಬಳ್ಳಿಯಾಗಿ ಆಧ್ಯಾತ್ಮದ 'ಜ್ಞಾನದ ಹೂಬಳ್ಳಿ'ಗಳ ಮಧ್ಯದಲ್ಲಿ ವಿರಾಜಮಾನವಾದುದೇ ನಿರ್ವಿಕಲ್ಪ ಸಮಾಧಿಸ್ಥ ಕರ್ತೃ ಜಗದ್ಗುರು ಗುರುಸಿದ್ಧೇಶ್ವರ ಕರ್ತೃಗದ್ದುಗೆಯು ನಾಡಿನ ಭಕ್ತರ ಚಿಂತಾಮಣಿಯಾಗಿ ಇಷ್ಟಾರ್ಥ ಪ್ರದಾತವಾಗಿದ್ದುದು ಸರ್ವರೂ ಅರಿತ ವಿಷಯ. ಇದೇ ರೀತಿ ಶ್ರೀ ಮದ್ವೀರಶೈವ ಶಿವಯೋಗಮಂದಿರವು ೭೫ ವರ್ಷಗಳ ಹಿಂದೆ ಲಿಂಗೈಕ್ಯ ಹಾನಗಲ್ ಶ್ರೀ ಕುಮಾರ ಶಿವಯೋಗಿಗಳಿಂದ ಸಂಸ್ಥಾಪಿತವಾಗಿ ನಿಸರ್ಗದ ಮಡಿಲಲ್ಲಿ ಮಲಪ್ರಭೆಯ ತೀರದಲ್ಲಿ ಹೂಬಳ್ಳಿಗಳಿಂದ ಕಂಗೊಳಿಸುತ್ತ ನಾಡಿನಲ್ಲಿ ಮೆರೆಯುತ್ತಿರುವದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಶಿವಯೋಗಮಂದಿರ ಹಾಗೂ ಶ್ರೀ ಜಗದ್ಗುರು ಮೂರುಸಾವಿರಮಠ ಇವೆರಡೂ ಜ್ಞಾನಾನುಭವಗಳ ಹೂವಿನ ಬಳ್ಳಿಗಳ ಚೆಲುವಿನಿಂದ ಕೂಡಿದುದಕ್ಕಾಗಿಯೇ ಅವೆರಡರ ಗುರಿ ಒಂದೇ ಇರುವದರಿಂದ ಶ್ರೀ ಜಗದ್ಗುರು ಸನ್ನಿಧಿಯವರು ಈ ಪುಟ್ಟ ಪುಸ್ತಕಕ್ಕೆ "ಹೂಬಳ್ಳಿ" ಎಂಬ ಅನ್ವರ್ಥಕ ಶಿರೋನಾಮ ಇಟ್ಟಿರುವದು ಸಾರ್ಥಕವಾಗಿದೆ. ಶ್ರೀ ಜಗದ್ಗುರುಗಳು ಶ್ರೀ ಕುಮಾರೇಶ್ವರರ ಗುರಿಯ ಹಿರಿಮೆಯನ್ನು ಸಂಸ್ಕೃತಿಯನ್ನು ಪ್ರಚಾರಮಾಡುವದಕ್ಕಾಗಿಯೇ ಕುಮಾರೇಶ್ವರ ಶಿವಯೋಗಿ ಸಂಘವನ್ನು ಸ್ಥಾಪಿಸಿ ಅವರ ಧ್ಯೇಯೋದ್ದೇಶಗಳನ್ನು ಸಫಲಗೊಳಿಸಿ, ಚೈತನ್ಯ ಮೂರ್ತಿಗಳನ್ನು ತಯಾರಮಾಡುತ್ತಿರುವ ಸಾಧನೀಭೂತವಾದ ಶ್ರೀ ಜಗದ್ಗುರು ಮೂರುಸಾವಿರಮಠವಿರುವದರಿಂದ ಎಲ್ಲ ದೃಷ್ಟಿಯಿಂದ "ಹೂಬಳ್ಳಿ" ಶೀರ್ಷಿಕೆಯು ಸುಂದರವಾದುದು. ಆಧ್ಯಾತ್ಮದ ಹೂಬಳ್ಳಿಗಳಿಂದ ಕೂಡಿ ಸುಮನೋಹರವಾಗಿದೆ. "ಹೂಬಳ್ಳಿ"ಯಲ್ಲಿ ಶ್ರೀ ಜಗದ್ಗುರು ಸನ್ನಿಧಿಯವರು ಆಗಾಗ "ಪರಂಜ್ಯೋತಿ" ಮಾಸಿಕದಲ್ಲಿ ಪ್ರಕಟವಾದ ಅನುಭವಪೂರ್ಣ "ಆಶೀರ್ವಾಣಿ"ಗಳ ಸಂಕಲನವಿದೆ. ಈ "ಹೂಬಳ್ಳಿ"ಯಲ್ಲಿ ತತ್ವ-ಸತ್ವಪೂರಿತ, ನೀತಿಪೂರ್ಣ ಸೂಳ್ನುಡಿಗಳ

ಸುಮಧುರ ಹೂವುಗಳು ಕಂಗೊಳಿಸುತ್ತಿವೆ. "ಹೂಬಳ್ಳಿ" ಸಾಧಕರಿಗೆ ದಾರಿದೀಪವಾಗಿದೆ. ಶ್ರೀ ಶಿವಯೋಗ ಮಂದಿರದಲ್ಲಿ ಶ್ರೀ ಜಗದ್ಗುರುಗಳವರ ಪೀಠಾರೋಹಣ ರಜತೋತ್ಸವದ ಸವಿನೆನಹಿಗಾಗಿ ಈ ಗ್ರಂಥ ಬಿಡುಗಡೆಯಾಗುತ್ತಿರುವದು ಚಿನ್ನಕ್ಕೆ ಪುಟವಿಟ್ಟಂತಾಗಿದೆ.

ದ್ವಂದ್ವಾರ್ಥದಿಂದೊಡಗೂಡಿದ ಈ "ಹೂಬಳ್ಳಿ" ಪುಟ್ಟ ಪುಸ್ತಕ ನಾಡಿನ ಜನತೆಗೆ ಕೈದೀವಿಗೆಯಾಗಲಿ. ಈ ಪುಸ್ತಕವು ಆಧ್ಯಾತ್ಮ ಶಿರೋಮಣಿಗಳಾದ ಕರ್ತೃ ಜಗದ್ಗುರು ಗುರುಸಿದ್ಧೇಶ್ವರರು ಹಾಗೂ ಹಾನಗಲ್ಲ ಶ್ರೀ ಕುಮಾರೇಶ್ವರರಿಗೆ ಅರ್ಪಣವಾಗಿ ಅವರೀರ್ವರ ದಿವ್ಯ ಶಕ್ತಿಯ ಪ್ರಭೆಯು ನಾಡಿಗೆಲ್ಲ ಬೆಳಕು ನೀಡಿ ಹರಸುವಂತಾಗಲಿ. ಹೀಗಾದಲ್ಲಿ ಅದನ್ನು ಬರೆದವರ ಹಾಗೂ ಪ್ರಕಾಶಕರ ಶ್ರಮ ಸಾರ್ಥಕ! ಇದಕ್ಕೆ ವಾಗ್ಮಿಗಳೂ, ಜ್ಞಾನವೃದ್ಧರೂ, ಪ್ರವಚನ ಪಟುಗಳೂ, ಆದ ಶ್ರೀ ಷ. ಬ್ರ. ಬಸವಲಿಂಗ ಪಟ್ಟಾಧ್ಯಕ್ಷರು ತೆಲಸಂಗ ಅವರ ಸುಲಲಿತ ಹಾಗೂ ಅನುಭವಪೂರ್ಣ ಮುನ್ನುಡಿ ಬರೆದು ಕಳೆ ನೀಡಿದ್ದಾರೆ. ಅವರಿಗೆ ಹಾಗೂ ವೇಳೆಗೆ ಸರಿಯಾಗಿ ಮುದ್ರಿಸಿಕೊಟ್ಟ ಸಂಯುಕ್ತ ಕರ್ನಾಟಕ ಮುದ್ರಣಾಲಯುದ ವ್ಯವಸ್ಥಾಪಕರಿಗೂ ಕರ್ತೃ ಶ್ರೀ ಜಗದ್ಗುರು ಗುರು ಸಿದ್ಧೇಶ್ವರನು ಸನ್ಮಂಗಲವನ್ನುಂಟುಮಾಡಲಿ.

ಪರಂಜ್ಯೋತಿ ಭವನ
ಮೂರುಸಾವಿರಮಠ ಹುಬ್ಬಳ್ಳಿ
೨೪-೧೨-೮೬

—ಪ್ರಕಾಶಕರು

# ಪರಿವಿಡಿ

# ಪ್ರತ್ಯಹಂ ಪ್ರತ್ಯವೇಕ್ಷೇತ

ಪ್ರತಿಯೊಬ್ಬರು ಪ್ರತಿದಿನವೂ ತಾವು ಮಾಡತಕ್ಕ ಕಾರ್ಯದಲ್ಲಿ ಒಳಿತು ಕೆಡಕುಗಳ ವಿವರವು ಎನಿತೆಂಬುದನ್ನು ಸಮಾಲೋಚಿಸುತ್ತ ಹೋದರೆ, ತಮ್ಮ ಜೀವನದ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗಬಹುದು. ಯಾವ ವ್ಯಕ್ತಿಯೂ ಪೂರ್ಣನಿರಲಾರ. ತಪ್ಪು ಮಾಡುವದು ಸಹಜ ಗುಣ, ಅದನ್ನೇ ಒಪ್ಪಿಕೊಳ್ಳುವದು ದೈವೀಯಗುಣ. ವ್ಯಕ್ತಿತ್ವ ವಿಕಾಸವಾಗಲು ನಿತ್ಯ ನಿರೀಕ್ಷಣೆ ಇದೊಂದು ಅದ್ಭುತ ಸಾಧನೆ. ನಿತ್ಯನಿರೀಕ್ಷಣೆಯಿಂದ ಆತ್ಮಸಿದ್ಧಿ, ಭಾವಶುದ್ಧಿಯಾಗುವದಲ್ಲದೆ, ಏನಾದರೂ ತಪ್ಪು ಸಂಭವಿಸಿದ್ದರೆ, ದೇವರನ್ನು ಮೊರೆಹೊಕ್ಕು ಅರಿವಿನ ಬೆಳಕನ್ನು ಪಡೆಯಬಹುದು. ನಡೆಯುವವರು ಎಡಹುವರಲ್ಲದೆ ಕುಳಿತವರು ಎಡಹುವುದಿಲ್ಲ. ಹುಟ್ಟಿದ ಮನುಷ್ಯನು ಪಶು ಜೀವನದಂತೆ ನಡೆದರೆ ಪಶುಪತಿಯಾಗಲಾರ, ಎದುರಿಗೆ ಬರತಕ್ಕ ಅನೇಕ ಸಮಸ್ಯೆಗಳನ್ನು ಸದ್ಭಾವನೆಯಿಂದ, ನಿಶ್ಚಲ ಮನಸ್ಸಿನಿಂದ ಧೈರ್ಯದಿಂದ ಎದುರಿಸಿ ಮುಂದೆ ಸಾಗಿದರೆ ಸಫಲತೆ ಕಟ್ಟಿಟ್ಟ ಬುತ್ತಿ, ವೃಕ್ಷವು ವೃದ್ಧಿಯಾಗಬೇಕಾದರೆ ಒಮ್ಮೆಲೆ ಆಗದು. ಅದಕ್ಕೆ ನಿತ್ಯವೂ ನೀರು ಹಾಕಬೇಕು. ಸುತ್ತಲೂ ಬೆಳೆಯುತ್ತಿರುವ ಕಸವನ್ನು ತೆಗೆಯಬೇಕು. ಗೊಬ್ಬರ ಹಾಕಬೇಕು. ಮಡಿಯನ್ನು ಕಟ್ಟಬೇಕು. ವೃಕ್ಷದ ಪ್ರತಿಯೊಂದು ಶಾಖೋಪಶಾಖೆಗಳನ್ನು ಹುಳ ಹತ್ತದಂತೆ ನೋಡುತ್ತಿರಬೇಕು. ಅಂದಾಗ ವೃಕ್ಷವಿಕಸಿತವಾಗಿ ಫಲಭರಿತವಾಗುತ್ತದೆ. ಆ ವೃಕ್ಷವು ನಮಗೆ ನೆರಳು ನೀಡುತ್ತದೆ. ಫಲಪುಷ್ಪಗಳನ್ನು ಕೊಟ್ಟು ಮನಸ್ಸನ್ನು ಆನಂದಗೊಳಿಸುತ್ತದೆ. ಇದೇ ತೆರನಾಗಿ ನಮ್ಮ ಜೀವನವಿರುತ್ತದೆ. ಈ ಜೀವ ವೃಕ್ಷಕ್ಕೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಹುಳುಗಳು ಮುಟ್ಟದಂತೆ ನಿತ್ಯವೂ ನೋಡುತ್ತಿದ್ದರೆ, ಆ ವೃಕ್ಷವು ಹಸಿರಾಗಿ ಉಳಿಯುತ್ತದೆ. ಬೆಳೆಯುತ್ತದೆ, ವೇಳೆಗೆ ಸರಿಯಾಗಿ ಭಕ್ತಿರಸವದಣೆಯು ಮೇಯಿಸಿ, ಸುಬುದ್ಧಿಯೆಂಬ ಉದಕವನೆರೆದರೆ ವೃಕ್ಷಕ್ಕೆ ಶಕ್ತಿ ಬಂದು ಪುಷ್ಟಿಯಾಗುತ್ತದೆ. ಆಗಾಗ ಬೆಳೆಯುತ್ತಿರುವ, ಅಜ್ಞಾನದ ಕರಿಕಿಗಳನ್ನು ಕೂಡಲೇ ಕಿತ್ತು ಬಿಟ್ಟರೆ, ಆ ವೃಕ್ಷವು ಪ್ರಫುಲ್ಲಿತವಾಗಿ, ವಿಸ್ತಾರವಾಗಿ ಬೆಳೆಯಲು ಸಾಧ್ಯವಾಗುತ್ತದೆ. ಮತ್ತೊಬ್ಬರನ್ನು ತನ್ನ ನೆರಳಿನಲ್ಲಿ ಕೂಡ್ರಿಸಿಕೊಂಡು ಆನಂದಕೊಡುತ್ತದೆ. ಅಂದರೆ ಈ ರೀತಿ ಬೆಳೆದ ವ್ಯಕ್ತಿಯು ತಾನೊಬ್ಬನೇ ಉದ್ಧಾರವಾಗುವನಲ್ಲದೆ, ಮತ್ತೊಬ್ಬರನ್ನು ಉದ್ಧಾರಮಾಡಿ, ಬೆಳಕಿನದಾರಿಯನ್ನು ತೋರಿಸಿ, ಆತ್ಮಶಕ್ತಿಯನ್ನು ಕೊಡುತ್ತಾನೆ. ಅದಕ್ಕಾಗಿ ನಾವು ನಿರಂತರ ದುಡಿದು ನಿತ್ಯ ಆತ್ಮ ನಿರೀಕ್ಷಣೆ ಮಾಡಿಕೊಂಡು ಜೀವನ ಸಾಗಿಸಿದರೆ ಮಾನಸಿಕ ಶಾಂತಿ.

"ಪ್ರತ್ಯಹಂ ಪ್ರತ್ಯವೇಕ್ಷೇತ ನರಶ್ಚರಿತಮಾತ್ಮನಃ ಕಿಂ ನು ಮೇ ಪಶುಭಿ ಸ್ತುಲ್ಯಂ ಕಿಂ ವಾ ಸತ್ಪುರುಷೈರಿತಿ||" ಈ ನುಡಿ ಬಾಳ್ಬೆಳಕಿಗೆ ದಾರಿದೀಪ.

## ಮಾನವಃ ಶಿವಯೋಗೇನ ಶಿವೋಭವತಿ ಕೇವಲಂ

ಎಲ್ಲ ಯೋಗಗಳಲ್ಲಿ ಶಿವಯೋಗವೇ ಮಿಗಿಲು. ಶಿವಯೋಗದ ಹೃದಯವೇ ಷಟ್‌ಸ್ಥಲ ಲಿಂಗತ್ರಯಗಳನ್ನು ಅಂಗವಿಸಿಕೊಂಡು ಲಿಂಗಾಂಗ ಗಾತ್ರತ್ರಯವಳಿದು ಚಿತ್ತದ ಚಿದ್ಬಿಂದು ತೋರಿದಾಗ, ನಾದ ಬ್ರಹ್ಮವ ಶೋಧಿಸಿ, ಸದೃಢ ಚಿತ್ತನಾದಾಗ ಶಿವಯೋಗ ಸಾಧ್ಯ. ರಾಜಯೋಗವು ಜೀವಶುದ್ಧಿಗೆ ಸಾಧನವಾದರೆ ಶಿವಯೋಗವು ಶಿವಸಾಮ ರಸ್ಯಕ್ಕೆ ಸುವಿಧಾನ.

"ಬ್ರಹ್ಮರಂಧ್ರದಲ್ಲಿಪ್ಪನಾದ ಚೈತನ್ಯವಪ್ಪ ಪರಮ ಚಿತ್ಕಳೆಯೇ ಭಾವಮನ–ಕರದಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿದವನಾಗಿ ಭಾವದಲ್ಲಿ ಸತ್ ಸ್ವರೂಪವಪ್ಪ ಇಷ್ಟಲಿಂಗ ವೆನಿಸಿ ಒಂದೇ ವಸ್ತು ತನು–ಮನ–ಭಾವಂಗಳಲ್ಲಿ ಇಷ್ಟಪ್ರಾಣ ಭಾವವಾದ ಭೇದವನರಿ ಯದೆ ಇಷ್ಟಲಿಂಗದ ದೃಷ್ಟಿಯಿಂದ ಗ್ರಹಿಸಿ; ಪ್ರಾಣಲಿಂಗವ ಮನ ಜ್ಞಾನದಿಂದ ಗ್ರಹಿಸಿ, ತೃಪ್ತಿಲಿಂಗವ ಭಾವಜ್ಞಾನದಿಂದ ಗ್ರಹಿಸಿ ಈ ಲಿಂಗತ್ರಯವಿಡಿದು ಆಚರಿಸಿ, ಲಿಂಗದೊಡನೆ ಕೂಡಿ ಲಿಂಗವೀ ತಾನು ತಾನಾಗಿ ವಿರಾಜಿಸುತಿರ್ಪುದೀಗ ಶಿವಯೋಗ ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ" ಎಂದುದಾಗಿ ಶಿವಯೋಗದ ಸಂಪೂರ್ಣ ವಿವರಣೆ ಯನ್ನು ಸ್ಪಷ್ಟಪಡಿಸಿದ್ದಾರೆ. ಬಾಹ್ಯವನ್ನು ಸಂಪೂರ್ಣ ಮರೆತು ತನ್ನ ಹೃದಯದ ಕಮಲ ವನ್ನು ಅರಳಿಸಿಕೊಂಡು ಜ್ಞಾನತೇಜದ ಇಷ್ಟಲಿಂಗಾನು ಸಂಧಾನದಲ್ಲಿ ಬೆರೆತರೆ ಶಿವಯೋಗ ಸಾಧನೆಯು ಸಾಫಲ್ಯ ದೊರಕುವದು ಅದಕ್ಕಾಗಿ ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವ ವ್ರತ ಶಿವಾರ್ಚನೆಗಳನ್ನು ನಿಯಮ ಪೂರ್ವಕವಾಗಿ ನಿಷ್ಠೆಯಿಂದ ಮಾಡಿದರೆ ಸುಳಿದು ಸೂಸುವ ಗಾಳಿಯು ಸ್ಥಿರವಾಗಿ ನಿಲ್ಲುವದಲ್ಲದೆ ಮನಸ್ಸಿನ ಹರಿದಾಟ ಹೋಗಿ ಕಾಲಕರ್ಮವ ಗೆದೆಯಲು ಅನುಕೂಲವಾಗುವದು. ನಿರ್ಮಲ ಶರೀರಿಯಾಗಿ ಬೆಳಗಿನೊಳು ಬೆಳಗು ಒಳಗೂಡಿದಂತೆ, ಕ್ಷೀರದೊಳು ಕ್ಷೀರ ಕೂಡಿದಂತೆ ತಾನೇ ತಾನಾಗಿ ಶಿವಮಯವಾಗುವನು.

ಕಾರಣ ಹೃನ್ಮಂದಿರದಲ್ಲಿ ಶಿವಶಕ್ತಿ ಶಿವಭಾವವನ್ನು ಒಳಗಿಳಿಸಿ, ಬೆಳಗಿಸಿ, ಬೆಳಗಿಸಿ ಕೊಂಡು ತಿಮಿರಾದ ವ್ರತದಂತಿರುವ ಮರವೆಯನ್ನು ಮರೆಯುವದೇ ಶಿವಯೋಗ ಸಾಧಕರ ಗುರಿ.

"ಕೀಟೋ ಭ್ರಮರಯೋಗೇನ ಭ್ರಮರೋ ಭವತಿ ಧ್ರುವಂ|
ಮಾನವಃ ಶಿವಯೋಗೇನ ಶಿವೋ ಭವತಿ ಕೇವಲಂ"

ಮಾನವನು ಈ ರೀತಿ ಅಂತರಂಗ ನಿರೀಕ್ಷೆ ಮಾಡಿ ಸಾಧಿಸಿದಾಗ ಈ ನುಡಿಮುತ್ತು ಸಾರ್ಥಕ; ಬಾಳ್ಬೆಳಕಿಗೆ ತಾರಕ.

**ಪೂರ್ಣಮೇವಾವಶಿಷ್ಯತೇ**

"ತನ್ನರಿವ ಅರಿವು ಬೇರಿಲ್ಲದಿರ್ಪಾಗಿ, ಷಡೂರ್ಮಿಗಳೆಲ್ಲವೂ ನಷ್ಟವಾಗಿ,
ಪ್ರಾಣವು ಪ್ರಣವಾಕಾರವಾಗಿ, ಭಾವದ ನಿಬ್ಬೆರಗಿನೊಳು,
ಆತ್ಮಾನಂದವ ಪಡೆದು,
ಉರಿಕರ್ಪುರದಂತೆ ಪರಂಜ್ಯೋತಿಯ ಬೆಳಗನುಂಡು
ಆ ಬೆಳಗಿನೊಳು ತೊಳಗಿ ಬೆಳಗುವದೇ
ಪೂರ್ಣತ್ವನೋಡಾ ಭ್ರೂಲತಾ ಪುರೀಶ
ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ."

—'ವಚನವಾರಿಧಿ'ಯಿಂದ.

ಪೂರ್ಣತ್ವ ಪಡೆಯಬೇಕೆಂಬಾಶೆ ಪ್ರತಿಯೊಬ್ಬರಿಗೂ ಇರುತ್ತದೆ. ಒಬ್ಬರಿಗೆ ವ್ಯಾವಹಾರಿಕದಲ್ಲಿ ಭೌತಿಕ ಸಂಪತ್ತನ್ನು ಗಳಿಸಿ ಅದರಲ್ಲಿ ಪೂರ್ಣತೆಯನ್ನು ಪಡೆದು ಆನಂದಿಸುವದಿದ್ದರೆ, ಮತ್ತೊಬ್ಬರಿಗೆ ಆಧ್ಯಾತ್ಮಿಕರಂಗದಲ್ಲಿ ಆತ್ಮಶಕ್ತಿಯನ್ನು ಪಡೆದು ನಿಜಾನಂದವನ್ನು ಅನುಭವಿಸುವದಿರುತ್ತದೆ. ಇದು ಶಾಶ್ವತ. ಅದು ಅಶಾಶ್ವತ. ಮಾನವನು ತನ್ನ ಸಹಜ ಪ್ರವೃತ್ತಿಯನ್ನು ದಾಟಿ, ನಿವೃತ್ತಿಮಾರ್ಗದಲ್ಲಿ ಮುನ್ನಡೆದು ತರ್ಕಬುದ್ಧಿಗಿಂತಲೂ ಮಿಗಿಲಾಗಿರುವ ಮಾನಸ ಚೈತನ್ಯದಾನಂದವನ್ನು ಪಡೆದು ಈಶ್ವರನಿಗೆ ತನ್ನ ಇಡಿಯಬಾಳನ್ನು ಸಮರ್ಪಿಸಿದಾಗ ಪೂರ್ಣತ್ವದ ಸಿದ್ಧಿ ಇದಕ್ಕಾಗಿ ಸಾಧನೆಬೇಕು. ಅಹೋರಾತ್ರಿ ಪರಿಶ್ರಮಿಸಬೇಕು. ಪೂರ್ಣತ್ವಸಾಧನೆಯು ಶಾಂತಿಗಾಗಿ ಇದ್ದರೆ, ಅಪೂರ್ಣಭಾವವು ಅಶಾಂತಿಗೆ ಕಾರಣ. ಪೂರ್ಣಪ್ರಜ್ಞೆ ಉಂಟಾದರೆ ಅಲ್ಲಿ ಅಪೂರ್ಣತೆಯ ಭ್ರಾಂತಿ ಇರದು. ಎಲ್ಲಿ ಬಹುಮುಖವಿದೆಯೋ ಅಲ್ಲಿ ಪೂರ್ಣತ್ವವಿಲ್ಲ. ಅನುಭವ ಪರಿಪೂರ್ಣ ಸಿದ್ಧಾಂತವು ದ್ರಾಕ್ಷಾರಸದ ಪರಿಪಾಕವಿದ್ದಂತೆ ಮನಸ್ಸು ಆಲೋಚನೆಯು ದೇವರ ಬೆಳಕಿನಲ್ಲಿ ತಿರುಗಿದರೆ ಏರಿಳಿತಗಳೆಲ್ಲವೂ ದೂರಾಗಿ ಪೂರ್ಣ ಮಾರ್ಗದ ಗುರಿ ಸಾರ್ಥಕವಾಗುವದು.

ಪೂರ್ಣವಿಲ್ಲದ ಬಾಳು ನೀರಸ, ನಿರರ್ಥಕ. "ಪಿಡಿದನೇಮವನೆಡವಿಡದತಿ ಛಲವನು" ನಿಜಗುಣರ ಈ ಉಕ್ತಿಯಂತೆ ಹಿಡಿದ ಕಾರ್ಯಗಳನ್ನು ಬಿಡದೆ ಮುಗಿಸಿದರೆ ಜೀವನದಲ್ಲಿ ಸಾಫಲ್ಯ ದೊರೆತು, ಸಿದ್ಧಿಯಾಗುವದು ಆತ್ಮ ಪರಮಾತ್ಮ ಸಂಧಾನವಾಗಿ ಭವ್ಯದರ್ಶನವುಂಟಾಗುತ್ತದೆ.

ಈ ಪೂರ್ಣತ್ವಸಿದ್ಧಿಗಾಗಿಯೇ ೩೬ ತತ್ವಗಳನ್ನು ಅರಿಯಬೇಕಾಗುತ್ತದೆ. ಷಟ್‌ಸ್ಥಲಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಷಡೂರ್ಮಿಗಳನ್ನು ಸುಡಬೇಕಾಗುತ್ತದೆ. ನಿತ್ಯವೂ ಸತ್ಯ ಪ್ರಜ್ಞೆಯಲ್ಲಿ ಜೀವಿಸಬೇಕಾಗುತ್ತದೆ. ಇದೆಲ್ಲವನ್ನು ಅರ್ಥೈಸಿಕೊಳ್ಳಲು ದುಡಿದರೆ ಸತ್–ಚಿತ್ ಆನಂದದ ಪರಮ ಸುಖವು ದೊರೆತು 'ಪೂರ್ಣ ಮೇವಾವಶಿಷ್ಯತೇ, ಅಂದರೆ ಪೂರ್ಣದಿಂದ ಪೂರ್ಣವು ಪರಿಣಮಿಸುವದು.

**ಜ್ಯೋತಿಷ್ಕರ್ತಾ ಯದುಸ್ಮಸಿ**

"ಗೂಹತಾ ಗುಹ್ಯಂ ತಮೋ ವಿ ಯಾತ ವಿಶ್ವಮತ್ರಿಣಂ। ಜ್ಯೋತಿಷ್ಕರ್ತಾ ಯದುಶ್ಮಸಿ। ಇದು ಋಗ್ವೇದ ವಾಕ್ಯ. ಹೃದ್ಗುಹೆಯಲ್ಲಿಯ ಅಂಧಕಾರವನ್ನು ಕಳೆದು, ರಾಕ್ಷಸೀಯ ದುಷ್ಟ ಶಕ್ತಿಗಳನ್ನು ಹೊಡೆದೋಡಿಸಿದರೆ ದಿವ್ಯಜ್ಯೋತಿಯ ಪ್ರಕಾಶ ಸಾಧ್ಯ. ಇದುವೆ ಇದರ ಸಾರಾಂಶ. ಪ್ರತಿಯೊಬ್ಬ ವ್ಯಕ್ತಿಗೂ ಬೆಳಕುಬೇಕು. ಬೆಳಕಿರದ ಜೀವನ ನಿಷ್ಫಲ. ಈ ಬೆಳಕಿಗಾಗಿಯೇ ಸುತ್ತೆಲ್ಲ ಹೋರಾಟ, ಕೇವಲ ಭೌತಿಕ ಪ್ರಗತಿಯಿಂದ ಶಾಶ್ವತ ಬೆಳಕು ದೊರೆಯಲಾರದು. ಭೌತಿಕ ಪ್ರಜ್ಞೆಯ ಜೊತೆಗೆ ಜ್ಞಾನದ ಬೆಳಕು ಹೊರಚಿಮ್ಮಿದರೆ ಅದು ನಿಷ್ಕಲಂಕವಾಗಿದ್ದರೆ, ಆ ಬೆಳಕು ನಾಡಿಗಷ್ಟೇ ಅಲ್ಲ ರಾಷ್ಟ್ರಕ್ಕೆ ಚೇತನ. ವ್ಯಕ್ತಿಗೆ ಶಕ್ತಿ ಬರಲು ಅಂತಃಶಕ್ತಿಯ ದಿವ್ಯಜ್ಯೋತಿಯೇ ಮೂಲಕಾರಣ. ಇದಿರದ ವ್ಯಾವಹಾರಿಕ ಪ್ರಜ್ಞೆ ಮಾನವೀಯತೆಯನ್ನು ತಂದು ಕೊಡಲಾರದು; ಮನಸ್ಸಿಗೆ ಶಾಂತಿಯನ್ನು ನೀಡಲಾರದು. ಒಳಗಿರುವ ಕೊಳಕು ಕಳೆಯಲು ಜ್ಞಾನದೀಪ ಹಚ್ಚಬೇಕಾಗುತ್ತದೆ, ಭಕ್ತಿ ತೈಲವನ್ನೆರೆಯ ಬೇಕಾಗುತ್ತದೆ. ಕಾಮಕ್ರೋಧಾದಿ ದುರ್ಗುಣಗಳನ್ನು ಹತ್ತಿಬರದಂತೆ ನೋಡಿ ಕೊಳ್ಳಬೇಕಾಗುತ್ತದೆ. ಆಲಸ್ಯ, ನಿರಾಸೆ, ಜಾತಿ, ಮತ ಪಂಥಗಳ ಜಾಡ್ಯವನ್ನು ಬದಿಗೆ ಸರಿಸಬೇಕಾಗುತ್ತದೆ. ಉಸಿರು ಇರುವವರೆಗೂ ಶಾಶ್ವತ ಬೆಳಕಿಗಾಗಿ ಪರಿಶ್ರಮಿಸಿದರೆ ನಿಜಾನಂದ ದೊರೆಯುವದಲ್ಲದೆ ದೈವೀಯ ಶಕ್ತಿಯು ಬೆಳೆಯುತ್ತದೆ, ಬೆಳಗುತ್ತದೆ. ಜಾತೀಯ ಮತೀಯ ಕೊಳಚೆಯು ನಿವಾರಣೆಯಾಗಿ ಭಾವಶುದ್ಧಿ ಒಡಮೂಡುತ್ತದೆ. ಇಂತಹ ಭಾವೈಕ್ಯ ಪರಿಪೂರ್ಣ ದೀಪಾವಳಿಯನ್ನು ಮಾಡಿದರೆ ಮಾತ್ರ ಗರ್ಭಗುಡಿಯು ದೀಪಗಳ ಸಾಲಿನೊಳು ರಾರಾಜಿಸುತ್ತದೆ.

ಯತ್ರ ಜ್ಯೋತಿರಜಸ್ರಂ ಯಸ್ಮಿನ್‌ಲೋಕೇಸ್ವರ್ಹಿತಂ।
ತಸ್ಮಿನ್ ಮಾಂ ಧೇಹಿ ಯ ಪವಮಾನಾಮೃತೇ
ಲೋಕೇ ಅಕ್ಷಿತ ಇಂದ್ರಾಯೇಂದೋ ಪರಿಸ್ರವ॥

ಋಗ್ವೇದದ ಈ ನುಡಿಯು ನಮ್ಮನ್ನು ಶಾಶ್ವತ ಜ್ಯೋತಿಯನ್ನು ನೀಡಿ ಅನಂತ ಆನಂದದ ಸಾಮ್ರಾಜ್ಯದತ್ತ ಕರೆದೊಯ್ಯುತ್ತದೆ. ಅದಕ್ಕಾಗಿ ಆ ಬೆಳಕಿನ ದಾರಿಯತ್ತ ಸಾಗೋಣ.

ದೀಪಗಳು ಒಳಬೆಳಕು ತೋರುತ್ತ ಬೆಳಗಿಸಲಿ
ದೀಪೋತ್ಸವವೆಮಗೆಲ್ಲ ಚಿರಶಾಂತಿ ಹರಡಲಿ
ಜಗದೊಳಗೆ ಹುದುಗಿರ್ಪ ಅಜ್ಞತೆಯನಳಿಸುತ್ತ
ಝಗಝಗಿಸಲೆದೆಯೊಳಗೆ ಶಿವಶಾಂತಿ ಹೊಂಬೆಳಗು.

**ಸರ್ವಕರ್ತಾಚ ಜಂಗಮಃ**

"ಜಂಗಮನ ಸುಳುಹು ವಸಂತಗಾಳಿ" ವಿರಕ್ತ ಶಿಖಾಮಣಿ ಜಂಗಮ ಜ್ಯೋತಿ ಅಲ್ಲಮ ಪ್ರಭುವಿನ ಸಿರಿನುಡಿಯಿದು. ದಾನವೀಯ ದುರ್ಗುಣಗಳನ್ನು ತುಂಬಿಕೊಂಡಿದ್ದ

ಹೀನಮಾನವರ ಮನೋಭೂಮಿಕೆಯ ಮೇಲೆ ಮಾನವೀಯ ಸದ್ಗುಣಗಳನ್ನು ಬಿತ್ತಿ, ಕೃಪಾದೃಷ್ಟಿಯನ್ನು ಜಂಗಮನು ಚೆಲ್ಲುತ್ತಾನೆ. ವಸಂತ ಮಾಸವು ಆಗಮಿಸುತ್ತಲೇ ಬರಡಾಗಿದ್ದ ತರುಲತೆಗಳು ಚಿಗಿತು, ನೂತನ ಚೈತನ್ಯ ನೀಡುವಂತೆ, ಜಂಗಮನು ಚಿತ್ಕಳೆಯನ್ನು ಕೊಡುತ್ತಾನೆ. ನಿಜ ಜಂಗಮನಿಗೆ ಲೋಕ ಕಲ್ಯಾಣದ ಚಿಂತೆಯೇ ಅವನ ಸೊತ್ತಾಗಿರುತ್ತದೆ. "ಲಿಂಗಮರದ ಹಣ್ಣು ಜಂಗಮ" ಎಂದು ಹೇಳುವುದೂ ಉಂಟು.

ಜಂಗಮದಲ್ಲಿ ಮೂರು ತೆರನಾಗಿ ವಿಭಾಗ ಮಾಡಿದ್ದಾರೆ. ಸ್ವಯ, ಚರ, ಪರ, ಈ ಮೂರರ ಅರಿವು ಅರಿತಾಗ ಜಂಗಮಶಕ್ತಿ ಬೆಳೆಯುತ್ತದೆ. ಜಂಗಮ ಈ ಶಬ್ದಕ್ಕೆ ಹೊರ ನೋಟದಿಂದ ಒಂದು ರೀತಿಯಾಗಿದ್ದರೆ, ಒಳನೋಟದಿಂದ ಅವಲೋಕಿಸಿದರೆ ಅದರ ಮಹತ್ವ ಅರ್ಥವಾಗುತ್ತದೆ. ಕ್ರಿಯಾತೀತನಾಗಿ, ನಿರ್ಮೋಹಿಯಾಗಿ, ಶುದ್ಧ ಭಾವದಿಂದ ಕೂಡಿದವನೇ ನಿಜವಾದ ಜಂಗಮನು. ವೈರಾಗ್ಯದಿಂದ ಜೀವಿಸುವವನು ಸ್ವಯ ಜಂಗಮನಾದರೆ, ದೇಶದ ತುಂಬೆಲ್ಲ ಸಂಚರಿಸಿ ತತ್ತ್ವಶಾಸ್ತ್ರ ಬೋಧೆ ಮಾಡಿ, ಜನಜೀವನದಲ್ಲಿ ತುಂಬಿರುವ ಕೊಳೆಯನ್ನು ತೆಗೆದು, ಭಕ್ತಿ-ಶಕ್ತಿಯನ್ನು ನೀಡುತ್ತ ಉದ್ಧಾರ ಮಾಡುವವನೇ ಚರಜಂಗಮನು. ಅಷ್ಟೈಶ್ವರ್ಯಗಳನ್ನು ನಷ್ಟ ಮಾಡಿ, ಸರ್ವ ಧರ್ಮ ಸಮನ್ವಯ ದೃಷ್ಟಿಯಿರಿಸಿ, ವ್ಯಕ್ತಿತ್ವ ವಿಕಾಸ ಮಾಡಿಕೊಂಡು, ಭಕ್ತ-ಕೋಟಿಗೆ ನಿಜದರಿವಿನ ಬೆಳಕನ್ನು ತೋರಿಸುವವನೇ ಪರ ಜಂಗಮನು.

ವಿಚಾರಮಾಡಿ ನೋಡಿದರೆ ಜಂಗಮಶಕ್ತಿ ಅದ್ಭುತವಾದುದು. "ಗುರುಲಿಂಗ ಜಂಗಮ ಇವು ಮೂರೂ ಒಂದೇ ತತ್ತ್ವದ ಮೂರು ರೂಪುಗಳು. ಒಂದೇ ಮೂರಾಗಿ ಮೂರೆ ಒಂದಾಗಿರುವ ವಿಶಿಷ್ಟ ತತ್ತ್ವಗಳಿವು. ಜಂಗಮದಲ್ಲಿ ಗುರು ಲಿಂಗಗಳೆರಡು ಸಮರಸಗೊಂಡಿರುವವು. ಆದಕ್ಕಾಗಿ ಜಂಗಮ ತೃಪ್ತಿಯನ್ನು ಮಾಡಬೇಕು" ಎಂದು ಪಂಡಿತರು ಹೇಳುವ ಮಾತಿನಲ್ಲಿ ಸತ್ಯವಿದೆ. ತತ್ತ್ವವಿದೆ ಸತ್ವವಿದೆ, ಅಂತೆಯೇ ಆಯ್ದಕ್ಕಿ ಮಾರಯ್ಯ, ಮೋಳಿಗೆ ಮಾರಯ್ಯ ಮುಂತಾದ ಶಿವಶರಣರು ಜಂಗಮ ದಾಸೋಹಕ್ಕೆ ಮಹತ್ವ ನೀಡುತ್ತಿದ್ದರು. ಅಂತಹ ಶಕ್ತಿ ಜಂಗಮನು ಪಡೆದುಕೊಂಡಾಗ ಮಾತ್ರ ಜನ ಜೀವನ ಜಾಗೃತವಾಗುತ್ತದೆ. ಸತ್ ಚಿತ್ ಆನಂದ ಸ್ವರೂಪಗಳಾದ ಗುರುಲಿಂಗ ಜಂಗಮಗಳ ಸಮನ್ವಯವೆಂಬುದು ಪರಿಪೂರ್ಣತೆಯ ದ್ಯೋತಕವಾಗಿದೆ. "ಲಿಂಗವೆಂಬ ನಿಧಾನವ ಕಾಣಲು ಜಂಗಮವೇ ಅಂಜನವೆಂದು, ಭಕ್ತಿಯೆಂಬ ಭಾಂಡಕ್ಕೆ ಜಂಗಮವೇ ಸಂಕಿಗನೆಂದು, ಜಂಗಮ ಅಪ್ಯಾಯನವಾದರೆ ಲಿಂಗ ಸಂತುಷ್ಟಿಯೆಂದು ಜಂಗಮ ನಿಂದೆಯ ಸೈರಿಸಕೂಡದೆಂದು ಮಹಾತ್ಮಾ ಬಸವಣ್ಣನವರು ಅರುಹಿದ್ದಾರೆ. ಅಂತೆಯೇ ಸರ್ವಕರ್ತಾಚ ಜಂಗಮಃ.

## 'ಕಾಯಕ' ಏವ ಕೈಲಾಸಃ

ಕಾಯಕವು ಮಾನವನಿಗೆ ದಾರಿದೀಪ. ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು, ಕವಿದ

ಕತ್ತಲೆಯನ್ನು ಕಳೆದುಕೊಳ್ಳಲು ಹಾಗೂ ಭಾವವನ್ನು ಎತ್ತರಿಸಲು ಕಾಯಕವು ಅದೊಂದು ದೊಡ್ಡ ಸಾಧನ. ಸತ್ಯ ಶುದ್ಧ ಕಾಯಕದಿಂದ ಸಾಮಾಜಿಕ ಸುಧಾರಣೆಯಾಗುವುದಲ್ಲದೆ, ದೇವಭಾವವು ಬರುತ್ತದೆ. ಬೆಳಕಿಗೆಡೆ ಮಾಡುತ್ತದೆ. ಕಾಯಕದಿಂದ ಕಷ್ಟ ಕಾರ್ಪಣ್ಯಗಳು ದೂರ ಸರಿದು ನವಚೈತನ್ಯ ಉಂಟಾಗುತ್ತದೆ. ಕಾಯಕದ ಕ್ರಿಯಾ ಶಕ್ತಿಯಿಂದ ಬೇಡಿ ದಿಷ್ಟಾರ್ಥವನ್ನೂ ಸಹ ಕಾಯಕದ ಬಲದಿಂದ ಶರಣರು ಅಸಾಧಾರಣ ಶಕ್ತಿಯನ್ನು ಸಂಗಳಿಸಿದ್ದಾರೆ. ಒಣಗಿದ ಕಟ್ಟಿಗೆಯಲ್ಲಿಯೂ ಶಕ್ತಿಯನ್ನು ತೋರಿಸಿ ಕಾಯಕದ ಮಹಿಮೆ ಯನ್ನು ಅರುಹಿದ್ದಾರೆ. ಭೌತಿಕ ಪ್ರಗತಿಗಿಂತಲೂ ಆತ್ಮಿಕ ಪ್ರಗತಿಯನ್ನು ಕಾಣುವದೇ ಕಾಯಕದ ಮುಖ್ಯ ಗುರಿ. ಪ್ರವೃತ್ತಿಯಿಂದ ನಿವೃತ್ತಿಯ ಕಡೆಗೆ ಸಾಗುವದೇ ಪರಮ ಗುರಿ. ಸಾಧನೆಗೆ ಕಾಯ ಕಷ್ಟ ಸಹಿಸಬೇಕು. ಬೆವರು ಸುರಿಸಬೇಕು. ತನುವ ದಂಡಿಸಬೇಕು. ದೇವನಲ್ಲಿ ಮೊರೆಯಿಡಬೇಕು ಆಗ ಸಂತೃಪ್ತಿ ಸಮಾಧಾನ. ಇಂತಹ ಕಾಯಕವನ್ನು ಮಾಡಲು ಜಾತಿ ಭೇದಗಳ ಸೆಣಸಾಟವಿಲ್ಲ. ಮೇಲು–ಕೀಳೆಂಬ ಭಾವನೆ ಬೇಕಾಗಿಲ್ಲ. ಯಾರು ಸತ್ಯ ಶುದ್ಧ ಮನಸ್ಸಿನಿಂದ ದುಡಿಯುತ್ತಾರೋ ಅವರಿಗೆ ಫಲವು ಕಟ್ಟಿಟ್ಟ ಬುತ್ತಿ. ಶಿವಶರಣರ ನುಡಿಯಲ್ಲಿಯೇ ಕಾಯಕದ ಅರಿವನ್ನು ಅರಿತುಕೊಂಡರೆ ಮತ್ತಿಷ್ಟು ಸ್ಪಷ್ಟ ವಾಗುತ್ತದೆ.

"ಗುರುವಾದಡೂ ಕಾಯಕದಿಂದಲೇ ಜೀವನ್ಮುಕ್ತಿ, ಲಿಂಗವಾದರೂ ಕಾಯಕ ದಿಂದಲೇ ಶಿಲೆಯ ಕುಲ ಹರಿವುದು. ಜಂಗಮವಾದಡೂ ಕಾಯದಿಂದಲೇ ವೇಷದ ಪಾಶವು ಹರಿವುದು ಇದು ಚನ್ನಬಸವಣ್ಣಪ್ರಿಯ ಚಂದೇಶ್ವರ ಲಿಂಗದ ಅರಿವು" ಎಂಬುದಾಗಿ ಕ್ರಿಯೆಯ ಮಹಾ ಶಕ್ತಿಯನ್ನು ನಿರೂಪಿಸಿದ್ದಾರೆ. ಕೇವಲ ಬುದ್ಧಿ ಬೆಳೆದರೆ ಜ್ಞಾನ ದೊರೆ ಯದು. ಜೊತೆಗೆ ಸತ್ಕ್ರಿಯಾ ಜ್ಞಾನ ಕೂಡಿದರೆ ಮಾಡಿದರೆ ಮಾತ್ರ ಸಿದ್ಧಿ ಅಂತರಂಗಕ್ಕೆ ಜ್ಞಾನ, ಬಹಿರಂಗಕ್ಕೆ ಕ್ರಿಯೆ ಇವೆರಡೂ ಕೂಡಿದರೆ ಪರಿಪೂರ್ಣ ಮನುಷ್ಯನಾಗಲು ಸಾಧ್ಯ ಹಕ್ಕಿಗೆ ರೆಕ್ಕೆಗಳೆರಡಿದ್ದಂತೆ. ಬಂಡಿಗೆ ಗಾಲಿಗಳೆರಡು ಬೇಕಾದಂತೆ. ರಾಷ್ಟ್ರ ಸಮೃದ್ಧಿ ಗೊಂಡು ಬಲಶಾಲಿಯಾಗಲು ಈ ರೀತಿಯ ಕಾಯಕ ಕೊರತೆಯಾಗದಂತೆ ನೋಡಿಕೊಂಡರೆ ಸಾರ್ಥಕ. ಜಗತ್ತಿಗೆ ಇಂದು ಬೇಕಾಗಿರುವದು ಇಂತಹ ಕಾಯಕ. ಈ "ಕಾಯಕ" ಕಾರ್ಯಾ ಚರಣೆಯಲ್ಲಿ ಬಂದು ಸಫಲಗೊಂಡರೆ ಅದುವೇ ಕೈಲಾಸ.

## ಭಿನ್ನಾಭಿಪ್ರಾಯ-ರಾಹಿತ್ಯಾತ್-ಸಫಲಾ ಮಾನವೀಯತಾ

ಇಂದು ಎತ್ತ ನೋಡಿದತ್ತ ಭಿನ್ನಾಭಿಪ್ರಾಯಗಳ ಬಳ್ಳಿ ಬೆಳೆಯುತ್ತ ನಡೆದಿದೆ. ಯಾರನ್ನು ಕೇಳಿದರೂ ತಮ್ಮದೇ ಒಂದು ಸಿದ್ಧಾಂತ, ಅದುವೇ ನಿಜವಾದುದು. ಬೇರೊಬ್ಬರೂ ಸತ್ಯಾಂಶದಿಂದ ಕೂಡಿದುದು ಅಲ್ಲವೆಂದೇ ಅವರ ಪ್ರತಿಪಾದನೆ. ಪ್ರತಿ ಯೊಬ್ಬರೂ ಇದೇ ರೀತಿ ಕಾಲ ಕಳೆಯುತ್ತ ಹೋದರೆ ಮುಂದಿನ ಯುವ ಜನಾಂಗಕ್ಕೆ ಏನು ಹೇಳುತ್ತಾರೆಂಬುದು ತಿಳಿಯದಾಗಿದೆ. ಇದುವೆ ಮುಂದುವರಿದರೆ ಯುವಕರು ಬೇರೆ

ಬೇರೆ ಧರ್ಮ, ಸಂಪ್ರದಾಯಗಳಿಗೆ ಸೇರಿ ಜೀವನ ಸಾಗಿಸುವ ಪ್ರಸಂಗ ಬರಬಹುದು. ಸಾವಧಾನವಾಗಿ ಇದೀಗ ಪ್ರಾರಂಭವಾಗಿದೆಯೆಂದೂ ಕೇಳಿದ್ದೇವೆ, ಇದು ಯುವಕರ ತಪ್ಪಲ್ಲ. ಹಿರಿಯರಾದವರು ನಾ ಹೆಚ್ಚು ನೀ ಹೆಚ್ಚು ಎನ್ನುವ ಸ್ವಪ್ರತಿಷ್ಠೆಯ ಪೆಡಂಭೂತದ ಬೆನ್ನು ಹತ್ತಿ ಅಪ್ರತ್ಯಕ್ಷವಾಗಿ ಸಮಾಜದ ಕೊಲೆಯನ್ನೇ ಮಾಡುತ್ತಾರೆಂದರೆ ತಪ್ಪಾಗಲಿಕ್ಕಿಲ್ಲ. ಪ್ರತಿಯೊಬ್ಬರೂ ಮಾನವೀಯತೆಯ ತತ್ವವನ್ನು ಸುಂದರವಾಗಿ ಪ್ರತಿಪಾದಿಸುತ್ತಾರೆ. ಕೃತಿ ನೋಡಿದರೆ ಮಾತ್ರ ನಗೆ ಬರುತ್ತದೆ. ದುಃಖವಾಗುತ್ತದೆ. ಸಮಾಜದ ಅಭಿಮಾನ ಶೂನ್ಯರಾಗಿದ್ದಾರೆ, ಯಾರನ್ನಾದರೂ ಕೇಳಿದರೆ ನಮ್ಮಂತಹ ಅಭಿಮಾನಿಗಳು ಸಿಗುವದು ದುರ್ಲಭವೆಂದೇ ಉಚ್ಚರಿಸುತ್ತ ಅಹಂಕಾರದ ಮಡುವಿನಲ್ಲಿ ಬಿದ್ದು ಇನ್ನಿತರರನ್ನು ಹಾಳು ಮಾಡುತ್ತಿದ್ದಾರೆ. ಅವರೆಲ್ಲರ ಅಂತರಂಗವನ್ನು ಪರೀಕ್ಷಿಸಿ, ನಿರೀಕ್ಷಿಸಿದಾಗ ಅಹಂಕಾರ ಸ್ವಪ್ರತಿಷ್ಠೆ ಇದುವೆ ಎದ್ದು ಕಾಣುತ್ತದೆ. ಭಕ್ತರಾದಿಯಾಗಿ ಜಗದ್ಗುರುಗಳ ತನಕ ನೋಡಿದರೂ ಇದೇ ಹಾಡು. ಜನಸಾಮಾನ್ಯರಿಗಿರುವಷ್ಟು ಮಾನವೀಯತೆ ಇವರಿಗಿಲ್ಲವಲ್ಲವೆಂಬುದೇ ಕನಿಕರ. ಮಾನವೀಯತೆ ಮಾತಿನಿಂದ ಬರುವದಲ್ಲ. ಅದು ಕೃತಿಯಿಂದ ಬರುವಂತಹದು, ಒಳಗೆ ಕುಟಿಲ ಹೊರಗೆ ವಿನಯವೇ ಹೆಚ್ಚಾಗುತ್ತ ನಡೆದಿದೆ. ಹೃದಯವಂತಿಕೆ ಎಂಬುದು ಮಾಯವಾಗಿ, ಕೃತಕತೆ, ಮೋಸ, ವಂಚನೆಗಳ ಪ್ರಚಾರವೇ ಸಹಜತೆ ಎನ್ನುವಷ್ಟರ ಮಟ್ಟಿಗೆ ಹಬ್ಬುತ್ತ ನಡೆದರೆ ತಾತ್ವಿಕ ಶಕ್ತಿಯ ಪ್ರಾದುರ್ಭಾವ ಎಂದು?

ಆಧುನಿಕ ತತ್ತ್ವಶಾಸ್ತ್ರದ ಪ್ರಕಾರ ಯಾವದೊಂದು ವಿಚಾರವನ್ನು ನಾವು ನಿರ್ಣಯಾತ್ಮಕವಾಗಿ ವಿಮರ್ಶಿಸುವ ಮುನ್ನ ಅಲ್ಲಿ ಬಳಸುವ ಪದಗಳ ವ್ಯಾಪ್ತಿ ಹಾಗೂ ಲಕ್ಷಣಗಳನ್ನು ಮೊದಲು ಕಂಡುಕೊಳ್ಳಲು, ಉದಾಹರಣೆಗೆ ಜೀವ, ಜಗತ್ತು ಹಾಗೂ ಈಶ್ವರ ಎಂಬ ಪದಗಳು ತತ್ತ್ವಜ್ಞಾನದ ಉಗಮದೊಂದಿಗೆ ವಿವಾದಾಸ್ಪದವಾಗಿ ಬಂದು ಇಂದಿನವರೆಗೂ ಅನಿರ್ಣೀತವಾಗಿವೆ. ಇವುಗಳ ಸೂಕ್ಷ್ಮ ವಿಚಾರಗಳ ಘಟನೆಯಿಂದ ವಿಕೃತ ಪರಿಣಾಮಗಳಾಗಿ ಹಲವು ಭಿನ್ನ ಪಂಗಡಗಳೂ ಉದ್ಭೂತವಾದವು. ಈಗಲೂ ಸಹ ಹೊಸ ಹೊಸ ಪಂಗಡಗಳು ಹೆಚ್ಚುತ್ತ ನಡೆದಿವೆಯೇ ಹೊರತು ಒಂದು ಸಿದ್ಧಾಂತಕ್ಕೆ ಯಾರೂ ಬರುತ್ತಿಲ್ಲ. ಅದಕ್ಕೆ ಕಾರಣ ಸ್ವಾರ್ಥ, ಢಂಭಾಚಾರ, ಮೇಲು ಕೀಳು ಭಾವಗಳು ಸಮಾಜದಲ್ಲಿ ಭೀಕರವಾಗಿ ದಾಳಿ ಮಾಡಿದಾಗ ಜಗಜ್ಯೋತಿ ಬಸವಣ್ಣನವರು ತಮ್ಮ ಆತ್ಮ ತೇಜದಿಂದ ಅದನ್ನು ಪ್ರತಿಭಟಿಸಿದರೆಂಬುದನ್ನು ನಾವು ವಾಕ್ ಚಾತುರ್ಯದಿಂದ ಬಿತ್ತರಿಸುತ್ತಿದ್ದೇವೆ. ಆದರೆ ಮಹಾತ್ಮಾ ಬಸವಣ್ಣನವರು ಹೇಳಿರುವ ನುಡಿಗಳು ಕಾರ್ಯರೂಪದಲ್ಲಿ ಎಷ್ಟರಮಟ್ಟಿಗೆ ತಂದಿದ್ದೇವೆಂಬುದನ್ನು ವಿಚಾರಿಸತಕ್ಕ ವಿಷಯವಾಗಿದೆ. ಆದಕ್ಕಾಗಿ ಸಂಕುಚಿತ ಭಿನ್ನಾಭಿಪ್ರಾಯಗಳನ್ನು ಮರೆತು ಮಾನವೀಯತೆಯನ್ನು ಅರಿತು ಸಹಜತೆಯೊಡನೆ ನಡೆದರೆ ನಾಡಿಗೂ, ಸಮಾಜಕ್ಕೂ ಹಿತಕರ.

## ಸ್ವಭಾವೋ ದುರತಿಕ್ರಮಃ

ಸ್ವಭಾವಗಳು ಅನೇಕ ಪ್ರಕಾರ, ಒಬ್ಬೊಬ್ಬರಲ್ಲಿ ಒಂದೊಂದು ರೀತಿ. ಒಬ್ಬರದು ಸಹಜ ಸ್ವಭಾವವಿದ್ದರೆ ಮತ್ತೊಬ್ಬರದು ಸಿಟ್ಟಿನ ಸ್ವಭಾವ. ಮಗದೊಬ್ಬರದು ಕೃತಕ ವಾಗಿರುವದಲ್ಲದೆ ಒಳಗೊಂದು ಹೊರಗೊಂದು ರೀತಿಯಾಗಿರುತ್ತದೆ. ಸ್ವಭಾವವನ್ನು ಮೀರಿ ಹೋಗಲಿಕ್ಕೆ ಯಾರಿಗೂ ಆಗಲಾರದು. ಅಲ್ಲಿ ತತ್ತ್ವೋಪದೇಶ ನಡೆಯದು. ಭಾವವನ್ನು ಸ್ವಭಾವವನ್ನಾಗಿರಿಸಿದರೆ ಅಲ್ಲಿ ಶಕ್ತಿ ಬರುತ್ತದೆ. ಸ್ವಭಾವದಲ್ಲಿ ಸಹಜತೆ ಕೂಡಿದರೆ ಸುಸಂಸ್ಕೃತಾಚಾರ ಇವು ಮಾನವನಿಗೆ ಮೈಗೂಡಿ ಬಂದರೆ ಅಲ್ಲಿ ಮಾನವೀಯತೆ ಉಳಿಯುತ್ತದೆ; ಉದ್ದೀಪನಗೊಳ್ಳುತ್ತದೆ. ಸ್ವಭಾವ ನಿಸರ್ಗ ಶೀಲವೆನಿಸಿದರೆ ವ್ಯಕ್ತಿತ್ವ ವಿಕಾಸಕ್ಕೆ ದಾರಿದೀಪವಾಗುತ್ತದೆ.

ಕೇವಲ ಬುದ್ಧಿಯ ಕಸರತ್ತಿನಿಂದ, ಮನದ ಕಲ್ಪನಾ ಚಾತುರ್ಯದಿಂದ ಜೀವನದ ವಿಷಮತೆಯನ್ನು ಬಿಡಿಸಿ ಅದರಲ್ಲೊಂದು ಸುಷಮತೆಯನ್ನು ಸಾಧಿಸುವದು ಕಷ್ಟಸಾಧ್ಯ. ಸ್ವಭಾವದಲ್ಲಿ ಸುಸ್ವಭಾವತೆ, ಸದ್ಗುಣ ಶೀಲತೆ, ಸೌಜನ್ಯಶಾಲಿತೆ ಸದಾಚಾರ ನಿರತತೆ, ಕಾಪಟ್ಯವಿಲ್ಲದಿರುವಿಕೆ ಇವುಗಳು ಇಲ್ಲದಿದ್ದರೆ ಆ ಸ್ವಭಾವಕ್ಕೆ ಒಂದು ಕಾಸಿನ ಬೆಲೆಯೂ ಬರಲಾರದು. ಶಾಂತಿಯು ದೊರೆಯಲಾರದು. ದುಃಸ್ವಭಾವವನ್ನು ತುಂಬಿಕೊಂಡಿದ್ದ ವರಿಗೆ ಯಾರ ಬೋಧೆಯೂ ನಾಟದು. ಅಂತಹ ಸ್ವಭಾದವರಿಗೆ ಕೇವಲ ನಟನೆಯೇ ಅವರಿಗೆ ಜೀವಾಳವಾಗಿರುತ್ತದೆ. ಹೃದಯವು ಹಾಲಾ ಹಲವಾಗಿರುತ್ತದೆ. ನಂಬಿದವರ ಕುತ್ತಿಗೆಯನ್ನು ಯಾವ ರೀತಿಯಲ್ಲಿ ಕೊಯ್ಯುವ ಹೊಂಚು ಹಾಕಿರುತ್ತಾರೆಂಬುದು ತಿಳಿಯಲು ಬರುವಂತಿಲ್ಲ. ಒಮ್ಮೆ ನಿಷ್ಠುರ ಸ್ವಭಾವದವರನ್ನು ನಂಬಬಹುದು. ಕುಟಿಲ ಸ್ವಭಾವದವರನ್ನು ನಂಬುವದು ಬಲು ಕಷ್ಟ. ಅವರದು ಕೇವಲ ನಾಟಕೀಯವಾಗಿರುತ್ತದೆ. ಅವರದು ಮಾತು ಬೇರೆ ಕೃತಿ ಬೇರೆ. ಒಳಗೆ ಕುಟಿಲ ಹೊರಗೆ ವಿನಯವಿದ್ದವರಂತೆ ತೋರಿಸುವವರ ಅಂತರಂಗವನ್ನು ಅರಿತುಕೊಳ್ಳುವದೇ ಜಟಿಲ ಸಮಸ್ಯೆಯಾಗಿ ಬಿಡುತ್ತದೆ. ನಾಡಿನಲ್ಲಿ, ರಾಷ್ಟ್ರದಲ್ಲಿ ಇಂತಹ ಕೃತಕ ಜೀವನ ಹೆಚ್ಚುತ್ತಿರುವದರಿಂದಲೇ ಯಾರಿಗೂ ಶಾಂತಿ ಸಮಾಧಾನಗಳಿಲ್ಲ. ಕಾಯಕನಿಷ್ಟೆ, ಶೀಲಸ್ವಭಾವವಿಲ್ಲದಿರುವದರಿಂದ ಆಚಾರ ವಿಚಾರಗಳ ಕ್ರಮಬದ್ಧತೆ ಹಾಗೂ ಪರಿಶುದ್ಧತೆಯ ಕೊರತೆಯಿರುವದರಿಂದ ರಾಷ್ಟ್ರದಲ್ಲಿ ಅಭಿವೃದ್ಧಿಯ ಸೌಂದರ್ಯವನ್ನು ಕಾಣುವುದು ದುಸ್ತರವಾಗಿರುತ್ತದೆ. ಇಂತಹ ಸ್ವಭಾವ ದವರಿಂದ ಸಮಾಜಕ್ಕೂ, ರಾಷ್ಟ್ರಕ್ಕೂ ಕಂಟಕ.

ಸ್ವಭಾವದ ಶಕ್ತಿಗಳು ವಿಚಿತ್ರವಾಗಿರುತ್ತವೆ. ಸ್ವಭಾವವನ್ನನುಸರಿಸಿಯೇ ವಿಚಾರ ಗಳು ಕೂಡಿಕೊಂಡಿರುತ್ತವೆ. ಇಂದ್ರಿಯಗಳನ್ನು ಎಚ್ಚರಿಸುವುದರಲ್ಲಿ ಸ್ವಭಾವಗಳೇ ಪ್ರಧಾನ ಕಾರಣ. ನೋಡುವದು ಕೇಳುವದು ಓದುವದು ಇವೆಲ್ಲ ಸ್ವಭಾವಗಳಾಗಿ ಇದ್ದರೂ ಇವುಗಳೇ ಸತ್ಕಾರ್ಯದಲ್ಲಿ ಪರರ ಹಿತದಲ್ಲಿ ಪರಿಣತಗೊಂಡರೆ ಇವುಗಳ ಲಾಭ ಆಗ ಗೊತ್ತಾಗುವದು. ಇವುಗಳಿಂದಲೇ ಸುಪ್ತ ಶಕ್ತಿಗಳು ಜಾಗ್ರತವಾಗುತ್ತವೆ. ಒಳ್ಳೇ

ಸ್ವಭಾವವನ್ನು ಅಂಟಿಸಿಕೊಳ್ಳುವದರಿಂದ ಯಾರಿಗೂ ಹಾನಿಯಾಗದೆ, ಸಮಾಜಕ್ಕೆ ಹಿತಕರ ವಾದೀತೆನ್ನುವದರಲ್ಲಿ ಸಂದೇಹವಿಲ್ಲ. ಸುಸ್ವಭಾವವು ಸಕ್ಕರೆಯೊಳಗಿನ ಸಿಹಿಯಂತೆ.

## ಸಮಾಜೋದ್ಧಾರ–ಸೇವಾರ್ಥಂ ಆತ್ಮಶಕ್ತಿಂ ವಿಕಾಸಯೇತ್

ಸಮಾಜೋದ್ಧಾರದ ಸೇವೆ. ಆತ್ಮಶಕ್ತಿಯ ವಿಕಾಸ ಇವೆರಡೂ ಒಂದುಕ್ಕೊಂದು ಸಂಬಂಧವಿರುತ್ತವೆ. ಸಮಾಜ ಸೇವೆ ಮಾಡಬೇಕೆನ್ನುವವರು ಆತ್ಮ ಸಾಧನೆಯ ಕಡೆಗೆ ಲಕ್ಷ ಗೊಡಲೇ ಬೇಕಾಗುತ್ತದೆ. ಆತ್ಮ ಶುದ್ಧಿಯಿಲ್ಲದ ಸಮಾಜ ಸೇವೆ ನೀರೆರೆಯದ ತರುವಿನಂತೆ, ಕಸವ ತೆಗೆಯದ ಹೊಲದಂತೆ ನಿರರ್ಥಕ. ಅವರಿಗೆಂದಿಗೂ ಮನಸ್ಸಿನಲ್ಲಿ ತೃಪ್ತಿಯಿರಲಾರದು. ನಿರಂತರ ಕಳವಳ, ಒಂದು ಗುರಿ, ಧ್ಯೇಯ ಸಾಧಿಸಬೇಕೆನ್ನುವ ಹಂಬಲ ಅವರಿಗಿರದು. ಕೇವಲ ಚಂಚಲ ಪ್ರವೃತ್ತಿ, ವೈಯಕ್ತಿಕ ಪ್ರತಿಷ್ಠೆಗೆ ಮಾರು ಹೋಗುತ್ತಾರೆ. ಸಮಾಜದ ಕಳಕಳಿ ಮಾತಿನಲ್ಲಿ ಬರುತ್ತದೆಯೇ ಹೊರತು ಹೃದಯದಿಂದ ಬರಲಾರದು. ಒಂದು ತತ್ತ್ವಕ್ಕೆ ಅಂಟಿಕೊಂಡು ಅದರ ಸಾಧನೆ ಮಾಡಿ, ಸಿದ್ಧಿಸುವದು ಅವರಿಗಾಗದು. ಕ್ಷಣ ಕ್ಕೊಂದು ವಿಚಾರವನ್ನು ಬದಲಿಸಿ, ಸಮಾಜದಲ್ಲಿ ಗೊಂದಲ ಎಬ್ಬಿಸಿ, ಜನಸಾಮಾನ್ಯರಿಗೂ ತಿಳಿಯದಂತೆ ಮಾಡುತ್ತ ಯಾವ ಮಾರ್ಗವನ್ನು ಹಿಡಿಯುವದೂ ಕಷ್ಟವಾಗುವಂತೆ ಅಂಧ ಕಾರದಲ್ಲಿ ಕೆಡವಿ ಬಿಡುತ್ತಾರೆ. ಹೀಗಾಗಿ ಸಮಾಜದಲ್ಲಿ ಭದ್ರತೆ ಉಳಿಯದಂತೆ ಮಾಡು ತ್ತಾರೆ. ಸಮಾಜಸೇವೆಗೆ ವ್ಯಕ್ತಿತ್ವ ವಿಕಾಸ ಅತ್ಯವಶ್ಯ. ಆದರಿಂದ ಅಂತಃಸ್ಸತ್ವ, ಅಂತಃಶಕ್ತಿ ಬೆಳೆದು ಸಹನ ಶೀಲತೆ ಪ್ರಾಮಾಣಿಕತೆ, ಕೃತಜ್ಞತೆ, ಹೃದಯವಂತಿಕೆ, ವಿಶಾಲ ಮನೋ ಭಾವನೆ, ದೀನೋದ್ಧಾರದ ಕಡೆಗೆ ಲಕ್ಷ್ಯ, ಪರಸ್ಪರ ವಿಚಾರ ವಿನಿಮಯದಲ್ಲಿ ಸಹಕಾರ ಮನೋಭಾವನೆ ಬಂದು ನಿಜವಾದ ಸಮಾಜದ ಹಿತಚಿಂತನ ಮಾಡಲು ಸಾಧ್ಯವಾಗುತ್ತದೆ. ತನುವಿನಲ್ಲಿ ನಿರ್ಮೋಹ, ಮನದಲಿ ನಿರಹಂಕಾರ, ಚಿತ್ತದಲ್ಲಿ ನಿರಪೇಕ್ಷೆ, ಭಾವದಲ್ಲಿ ಬತ್ತಲೆ, ಅಂತರಂಗದಲ್ಲಿ ಅರಿವು ಕರಿಗೊಂಡು ಅವಗುಣದ ಅಸ್ತಿತ್ವವಳಿದರೆ ಅಲ್ಲಿ ಭಕ್ತಿ; ಜ್ಞಾನ, ಕ್ರಿಯೆಗಳ ಅನುಭವವಾಗುತ್ತದೆ. ಆ ಅನುಭವದ ಬಲದಿಂದ ಆತ್ಮಶಕ್ತಿಗೆ ಚೈತನ್ಯ ಸಿಕ್ಕು, ಸಮಾಜ ಸೇವೆಗೆ ದಾರಿದೀಪವಾಗಿ ಪರಿಣಮಿಸುತ್ತದೆ.

"ತನ್ನ ತಾನರಿಯದೆ, ತನ್ನ ತಾ ನೋಡದೆ, ತನ್ನ ತಾ ನುಡಿಯದೆ
ಅನ್ಯರ ಸುದ್ದಿಯ ನುಡಿದಾಡುವ ಕುನ್ನಿಗಳಿಗೆ,
ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ,
ಪಾದೋದಕವಿಲ್ಲ, ಪ್ರಸಾದವಿಲ್ಲ, ಅವನು ಸರ್ವಾಪರಾಧಿ,
ಅವನ ಮುಖವ ನೋಡಲಾಗದು, ಬಸವಪ್ರಿಯ ಕೂಡಲ ಚನ್ನಬಸವಣ್ಣ."

ಎನ್ನುವ ಶರಣರಮಾತು ಇಲ್ಲಿ ನೆನಪಾಗುತ್ತದೆ. ಸ್ವಾರ್ಥಬಿಟ್ಟು ಸಮರ್ಪಣ ಭಾವನೆ ಬೆಳೆಯಿಸಿ ಕೊಂಡರೆ ಮಾತ್ರ ಸಮಾಜೋದ್ಧಾರ ಸಾಧ್ಯ.

ಅಂತೆಯೇ ಯುಗಪುರುಷ ಹಾನಗಲ್ಲ ಲಿಂಗೈಕ್ಯ ಕುಮಾರ ಶಿವಯೋಗಿಗಳು ಸಮಾಜ

ಸೇವೆಗೆ ಆತ್ಮಶಕ್ತಿಯು ಭದ್ರಬುನಾದಿಯಾಗಬೇಕೆಂಬುವ ಮಹೋದ್ದೇಶದಿಂದಲೇ ಶಿವಯೋಗ ಮಂದಿರವನ್ನು ಸಂಸ್ಥಾಪಿಸಿದರು. ಆ ಮಹಾಮಹಿಮರು ತೋರಿದ ಹೆದ್ದಾರಿಯಲ್ಲಿ ಆತ್ಮೋದ್ಧಾರ ಮಾಡಿಕೊಳ್ಳುತ್ತ ನಡೆಯುವದು ನಮ್ಮ ಧರ್ಮವಲ್ಲವೆ?

**ಸದ್ಯಃ ಸಮಾಜ ಸೇವಾಯಾಃ ಪದ್ಧತಿಃ ಕೀದೃಶೀ ಭವೇತ್?**

ಇಂದು ಸಮಾಜಸೇವೆ ಎಂತು ಮಾಡಬೇಕು? ಹೇಗೆ ಮಾಡಬೇಕು? ಒಡೆಯಲಾರದ ಒಗಟಾಗಿದೆ. ಮಾಡಬೇಕೆನ್ನುವವರಿಗೆ ಪ್ರೋತ್ಸಾಹವಿಲ್ಲ. ಮಾಡುವವರನ್ನು ಕಂಡು ಜರಿಯುವದನ್ನು ಬಿಡುವಂತಿಲ್ಲ. ಸಮಾಜವನ್ನು ಜಾಗ್ರತಮಾಡಿ ಭಾವೈಕ್ಯದ ಹಾದಿಯಲ್ಲಿ ತರಬೇಕೆಂದರೆ, ಕೆಲವರು ಮುಂದೆ ಹೋಗಬೇಕೆನ್ನುವ ಪಥಿಕರ ಎದುರು ಕಲ್ಲು ಮುಳ್ಳುಗಳನ್ನು ಹಾಕಿ ತೊಂದರೆಗೀಡುಮಾಡುತ್ತಾ; ಅಲ್ಲದ ಸಲ್ಲದ ವಿಚಾರಗಳನ್ನು ಪ್ರಚಾರಮಾಡಿ ನಿರುತ್ಸಾಹಗೊಳಿಸುತ್ತಾರೆ. ಸಮಾಜ ಸೇವಕರ ಅಂತರಂಗದಿಂಗಿತವನ್ನು ಅರ್ಥಮಾಡಿಕೊಳ್ಳದೆ ವ್ಯರ್ಥ ಕಾಲಹರಣ ಮಾಡುತ್ತಲಿದ್ದಾರೆ. ಹೀಗಾದರೆ ಸಮಾಜ ಸುಧಾರಣೆ ಎಂತು? ಎಂದು? ಊಹಿಸಲಸಾಧ್ಯವಾಗಿದೆ. ಸಮಾಜದಲ್ಲಿ ನವಚೈತನ್ಯ ಬಂದು, ಸಂಘಟನೆಯಾಗಿ, ಸಮಾಜದಲ್ಲಿ ಬಂಧುಬಾಂಧವ್ಯ ಬೆಳೆದು ಬೆಳಗಬೇಕೆಂಬುದು ಎಲ್ಲರ ಒಕ್ಕೊರಲಿನ ಅಭಿಪ್ರಾಯ, ಇದು ಒಳ್ಳೆಯದು. ಆದರೆ ಅದು ಕೇವಲ ಮಾತಿನಲ್ಲಿದೆ. ಕೃತಿಯಲ್ಲಿ ಮಾತ್ರ ಬಾರದಂತಾಗಿದೆ. ಪ್ರತಿಯೊಂದು ವಿಭಾಗದಲ್ಲಿಯೂ ಅಸೂಯೆ ಹೆಚ್ಚಾಗಿದೆ. ನಾ ಹೆಚ್ಚು ನೀ ಹೆಚ್ಚೆನ್ನುವ ಒಣವಾದ ಹೆಚ್ಚಾಗಿದೆ, ಪ್ರತಿಷ್ಠೆ ಬೇಕಾಗಿದೆ. ಕಾರ್ಯ ಬೇಡಾಗಿದೆ. ಒಬ್ಬರನ್ನು ಹತ್ತಿಕ್ಕುವದಕ್ಕಾಗಿ ಹಾಳು ಮಾಡುವಷ್ಟು ಸಮಯವನ್ನು ಒಳ್ಳೇದಕ್ಕಾಗಿ ಚಿಂತಿಸಿದರೆ ಅದೆಷ್ಟೋ ಸಮಾಜಕ್ಕೆ ಹಿತ. ತಪ್ಪು ಆಗುವದು ಮಾನವನ ಸ್ವಭಾವ. ಅದನ್ನು ಬೃಹದಾಕಾರ ಮಾಡಿ ಪ್ರಚುರಗೊಳಿಸುವದು ದಾನವ ಸ್ವಭಾವ ತಪ್ಪನ್ನು ತಿದ್ದಿ ಅಪ್ಪಿಕೊಂಡು ಮೇಲಕ್ಕೆತ್ತಿ ಉದ್ಧಾರ ಮಾಡುವದು ದೈವೀಯ ಗುಣ. ನಮಗಿಂದು ಬೇಕಾಗಿರುವದು ಬುದ್ಧಿವಂತಿಕೆಯಲ್ಲ; ಹೃದಯವಂತಿಕೆ. ಒಳ್ಳೇ ಹೃದಯವೊಂದಿದ್ದರೆ ಏನಾದರೂ ಸಾಧಿಸಬಹುದು. ಒಳ್ಳೇ ಹೃದಯದಲ್ಲಿ ಸರ್ವಶಕ್ತಿಯು ಸಮ್ಮಿಲಿತವಾಗಿರುತ್ತದೆ. ಅದು ಸಮಾಜ ಸಂವರ್ಧನೆಗೆ ಸಂಜೀವಿನಿಯಾಗಿರುತ್ತದೆ, ವಿಶ್ವಶಾಂತಿಗೂ ಇದುವೇ ಬೇಕು. ಈಶ್ವರನಿಗೂ ಸಹ ಇದರಿಂದಲೇ ಮೆಚ್ಚುಗೆ. ಹೃದಯವನ್ನು ಕಳೆದುಕೊಂಡು, ಪಕ್ಷ ಪಂಗಡಗಳಿಗೆ ಹೆಚ್ಚು ಮಹತ್ವ ನೀಡಿ, ವೈರತ್ವವನ್ನು ಸಾಧಿಸುತ್ತ ಸಮಾಜಾಭಿಮಾನ ಶೂನ್ಯರಾದರೆ, ಸಮಾಜವು ಒಡೆದ ಗಡಿಗೆಯಂತಾಗುತ್ತದೆ. ಬಲವಿಲ್ಲದ ರೋಗಿಯಂತಾಗುತ್ತದೆ, ತಂತಿ ಇಲ್ಲದ ವೀಣೆಯಂತಾಗುತ್ತದೆ, ಧೂಳು ಮುಸುಕಿದ ಕನ್ನಡಿಯಂತಾಗುತ್ತದೆ. ಎತ್ತ ನೋಡಿದತ್ತ ಅವರಿವರೆನ್ನುವ ಭಿನ್ನಭಾವನೆಯೇ ಹೆಚ್ಚುತ್ತಲಿದೆಯೋ ಹೊರತು ಏಕತೆಗೆ ತೊಡಕುಂಟಾಗಿದೆ. ಆದಕ್ಕಾಗಿ ಸಮಾಜಸೇವೆ ಮಾಡತಕ್ಕವರು ಎದೆಗುಂದದೆ, ಧೈರ್ಯೋತ್ಸಾಹದೊಡನೆ ಮುನ್ನುಗ್ಗಬೇಕಾಗಿದೆ. ನಮಗಿಂದು ಹಿಂದಿನ ಶಿವಶರಣರು ತೋರಿದ ಹೆದ್ದಾರಿ ಕಣ್ಮುಂದೆ ಇರುವಾಗ ಭಯಪಡುವ ಕಾರಣವಿಲ್ಲ. ಆದರೆ, ನಮ್ಮಲ್ಲಿ ಸ್ವಾರ್ಥ

ತ್ಯಾಗ ವಿಶಾಲ ಮನೋಭಾವನೆ, ಸಮಾಜದ ಬಗ್ಗೆ ಅಂತಃಕರಣಪೂರ್ವಕವಾದ ಕಳಕಳಿ, ಒಳ್ಳೇ ಧ್ಯೇಯಧೋರಣೆ ಇವೆಲ್ಲವುಗಳು ಮನೆಮಾಡಿಕೊಂಡಿದ್ದರೆ, ಗುರಿ ಸಾಧಿಸಲು ಸಾಧ್ಯವಾಗುತ್ತದೆ. ಉರಿಬರಲಿ, ಸಿರಿಬರಲಿ ಸರ್ವಸ್ವವನ್ನು ಸರ್ವಾಂತರ್ಯಾಮಿಗೆ ಸಮರ್ಪಿಸಿ, ಸಮಾಜ ಸೇವಕರೀಗ ಕಾರ್ಯಮಾಡಬೇಕಾಗಿದೆ, ಬೆಳಕಿನತ್ತ ಸಾಗಬೇಕಾಗಿದೆ.

## ಮಠಾಧೀಶ್ವರ ಕರ್ತವ್ಯಂ ಸಾಂಪ್ರತಂ ಕೀದೃಶಂ ಭವೇತ್?

ಮಠಾಧೀಶ್ವರರ ಸಂಘಟನೆ ಎಂದಿಗಿಂತಲೂ ಇಂದು ಅತ್ಯಗತ್ಯ. ಮಠಾಧೀಶ್ವರರಾದವರು ತಮ್ಮ ಹೊಣೆಯನ್ನು ಚೆನ್ನಾಗಿ ಅರ್ಥ ಮಾಡಿಕೊಂಡು ಕರ್ತವ್ಯ, ಪಾಲನೆಯಲ್ಲಿ ನಿರತರಾಗಬೇಕಾಗಿದೆ. ಮಠಾಧೀಶ್ವರರೆಂದ ಮಾತ್ರಕ್ಕೆ ನಮ್ಮಷ್ಟಕ್ಕೆ ನಾವೇ ಸುಮ್ಮನೆ ಕುಳಿತುಕೊಂಡು ಜೀವನ ಸಾಗಿಸುವದು ಇದೀಗ ಸರಿಯೆನಿಸದು ಸ್ವಾಮಿಗಳ ಪಾತ್ರ ಹಿರಿದಾಗಿರುವದಲ್ಲದೆ ತನ್ನತನದ ಅರಿವಿನ ಬೆಳಕನ್ನು ಕಾಣುತ್ತ ಸಾಮಾಜಿಕ ರಂಗದಲ್ಲಿ ಧುಮುಕಿ ಅಲ್ಲಿಯ ನ್ಯೂನತೆಗಳನ್ನು ಕಂಡು ಹಿಡಿದು, ಪರಿಶ್ರಮಿಸಿದರೆ ಮಾತ್ರ ಸಾರ್ಥಕ. ನಾ ಹೆಚ್ಚು ನೀ ಹೆಚ್ಚು ಎನ್ನುವ ಭಿನ್ನ ಮನೋಭಾವನೆ ಮೊದಲು ತೊಲಗಿಸಬೇಕು. ಪರಸ್ಪರರಲ್ಲಿ ಹೊಂದಾಣಿಕೆಯನ್ನು ಮಾಡಿಕೊಂಡು ಜನಜಾಗೃತಿಗಾಗಿ ಹೋರಾಡಬೇಕು. ಗುರು–ವಿರಕ್ತರೀರ್ವರು ಹೊಂದಿಕೊಂಡು ನಡೆಯಬೇಕು. ಒಳಪಂಗಡಗಳ ಭೇದ–ಭಾವನೆಗೆ ಮಹತ್ವ ನೀಡಿದೆ. ನಾವೆಲ್ಲರೂ ವೀರಶೈವರು ಎಂಬುವ ವಿಶಾಲ ಮನೋಭಾವನೆಯನ್ನು ಪ್ರತಿಯೊಬ್ಬರಲ್ಲಿ ಬಿತ್ತಿ, ಅನ್ಯಧರ್ಮದವರೊಡನೆ ಸಹಕರಿಸಿ ನಡೆದರೆ ರಾಷ್ಟ್ರಕ್ಕೆ ಹಿತವಾದೀತು. ಸಂಕುಚಿತ ಭಾವನೆಯ ಬೇರುಗಳನ್ನು ಕಿತ್ತೆಸೆಯಬೇಕು. ಸಂಕುಚಿತ ಚೌಕಟ್ಟಿನಲ್ಲಿ ಇದ್ದುಕೊಂಡಿದ್ದಕ್ಕೆ ನಮಗೆ ಅನೇಕ ಆಘಾತಗಳು ಬಂದೊದಗಿವೆ ಎಂಬುದನ್ನು ಅರ್ಥಮಾಡಿಕೊಳ್ಳಬೇಕು.

ಸ್ವಾಮಿಗಳೇ ಸಮಾಜದ, ರಾಷ್ಟ್ರದ ಜೀವಂತ ದರ್ಶನಗಳು. ಜ್ವಲಂತ ಚೇತನಗಳು. ಅವರ ಸಕ್ರಿಯ ನೈತಿಕ ಸಾಂಸ್ಕೃತಿಕ ಜೀವನ ಮೌಲ್ಯಗಳ ಮೇಲೆ ಸಮಾಜದ ಭವಿಷ್ಯವು ಅವಲಂಬಿಸಿದೆ. ಅವರ ಉದಾರಚರಿತ್ರ, ವಿಶಾಲ ಮನೋಭಾವನೆ ಸರ್ವರಿಗೂ ಮಾರ್ಗದರ್ಶನವಾಗಬೇಕು. ಭಾವೈಕ್ಯತೆ ಬಾರದೆ ಸಾಮಾಜಿಕ ಶಕ್ತಿ ಬಲಗೊಳ್ಳದು. ಭಾವೈಕ್ಯತೆ ಎಂದಾಕ್ಷಣ ಮಾತಿನಲ್ಲಿ ದೊಡ್ಡ ತತ್ತ್ವ ಹೇಳುವದು ಬೇಡಾಗಿದೆ. ಕೃತಿಯಲ್ಲಿ ಅದನ್ನು ತೋರಿಸಿ, ಸಮಾಜದಲ್ಲಿ ಮೂಡಿಸಿ, ಸಂಕಷ್ಟಗಳನ್ನು ಬಗೆಹರಿಸಿ, ಒಂದೆಂಬ ಭಾವನೆಯು ಬರುವಂತೆ ಹೃದಯವಂತಿಕೆಯಿಂದ, ಕಳಕಳಿಯಿಂದ ಕೂಡಿಕೊಂಡು ದುಡಿಯುವದು ಇಂದು ಅತ್ಯಾವಶ್ಯಕವೆಂಬುದು ಬೇರೆ ಹೇಳಬೇಕಾಗಿಲ್ಲ. ಭಾರತದ ಅನೇಕ ರಾಜ್ಯಗಳ ಸ್ವಾಮಿಗಳ ಕರ್ತವ್ಯವನ್ನು ನೋಡಿದಾಗ ಕರ್ನಾಟಕ ರಾಜ್ಯದ ಸ್ವಾಮಿಗಳ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಕ್ಷೇತ್ರಗಳಲ್ಲಿ ಇನ್ನುಳಿದ ರಾಜ್ಯಗಳಿಗಿಂತಲೂ ಹೆಚ್ಚಿನ ರೀತಿಯಲ್ಲಿ ಪ್ರತಿಯೊಬ್ಬರೂ ಮೆಚ್ಚುವಂತೆ, ಒಪ್ಪುವಂತೆ ಕಾರ್ಯ ಮಾಡಿದ್ದಾರೆ, ಮಾಡುತ್ತಿದ್ದಾರೆ. ಆದರೆ ಸಂಘಟನೆ

ಯೊಂದು ಮಾತ್ರ ಇಲ್ಲದಿರುವದೇ ದೊಡ್ಡ ಕೊರತೆಯಾಗಿದೆ. ಒಬ್ಬೊಬ್ಬರು ಒಂದೊಂದು ರೀತಿಯ ಪ್ರಚಾರವನ್ನು ಸಮಾಜದಲ್ಲಿ ಮಾಡುತ್ತ ಹೋಗುವದರಿಂದ ಯಾವದು ನಿಜ ವೆಂಬುದರ ಅರಿವೇ ಭಕ್ತರಿಗಾಗದು. ಹೀಗಾಗಿ ಭಕ್ತರಲ್ಲಿ ಸಂಶಯಕ್ಕೆಡೆಮಾಡಿ ಕೊಟ್ಟಂತಾ ಗುವದು. ಅದಕ್ಕಾಗಿ ನಾವಿಂದು ಒಬ್ಬರನೊಬ್ಬರನ್ನು ತೆಗಳುವದನ್ನು ಬಿಟ್ಟು, ಸ್ವಪ್ರತಿಷ್ಠೆ ಯನ್ನು ಮರೆತು, ಹೊಣೆಗಾರಿಕೆಯನ್ನು ಅರಿತು, ಪ್ರೇಮಭಾವನೆಯನ್ನು ಕಲಿತು, ಎಲ್ಲ ರೊಡನೆ ಬೆರೆತು ದ್ವೇಷಾಸೂಯೆಯನ್ನು ಬದಿಗೊತ್ತಿ ಸಮಾಜ ರಥವನ್ನು ಎಳೆದರೆ ನಿಜಕ್ಕೂ ಸಾಮಾಜಿಕ ಏಳ್ಗೆಯಾದೀತು. ಆ ಒಗ್ಗಟ್ಟು ಎಂದು ಸಾಧಿಸೀತು? ಕಾದು ನೋಡಬೇಕು.

## ಕೃತಕ-ಭಾವನಾ-ಯುಕ್ತಾ ಜನಸೇವಾ ನಿರರ್ಥಕಾ

ಸಾಮಾಜಿಕ ಜೀವನ ಕರುನಾಡಿಗೆ ಚೇತನ, ಜನಸೇವೆಗೆ ಅದೊಂದು ದೊಡ್ಡ ಸಾಧನ. ಸಮತಾಭಾವದಿಂದ ಕೂಡಿಕೊಂಡು ಹೋಗಲು, ಧೈರ್ಯ ಸ್ಥೈರ್ಯಗಳಿಂದ ಮುಂದೆ ಸಾಗಿ, ಸಾಮಾಜಿಕ ಸಮಸ್ಯೆಗಳನ್ನು ಬಿಡಿಸಿ, ತನ್ನತನದ ಅರಿವಿನ ಬೆಳಕನ್ನು ಕಾಣುತ್ತ ಸಮಾಜೋದ್ಧಾರ ಮಾಡುವದೇ ಸಮಾಜ ಸೇವಕರ ಪರಮಗುರಿ. ಈ ಗುರಿ ಸಾಧನೆಗೆ ಅಹೋರಾತ್ರಿ ಪರಿಶ್ರಮ ಪಡಬೇಕಾಗುತ್ತದೆ, ಹೃದಯವಂತಿಕೆಯಿಂದ ನಡೆಯ ಬೇಕಾಗುತ್ತದೆ. ಕಣ್ಣೀರು ಸುರಿಸಬೇಕಾಗುತ್ತದೆ, ಸಹಜತೆಯಿಂದ ಜೀವನವನ್ನು ಸಾಗಿಸ ಬೇಕಾಗುತ್ತದೆ. ಕೃತಕತೆಯು ಅಲ್ಲಿ ತಿಲಮಾತ್ರವೂ ಇರಬಾರದು. ಅದು ಇದ್ದರೆ ಜೀವನ ವೆಲ್ಲವೂ ನಿರರ್ಥಕ. ಕೆಲವರು ಕೃತಕತೆಯನ್ನೇ ಮುಖ್ಯ ಸಾಧನವಾಗಿಟ್ಟುಕೊಂಡು ಸ್ವಾರ್ಥ ಸ್ವಪ್ರತಿಷ್ಠೆಗಳ ಬಲಿಗೆ ಬಿದ್ದು ಮತ್ತೊಬ್ಬರನ್ನು ಅಸೂಯೆಯಿಂದ ಹೀಯಾಳಿಸುತ್ತ ಸಹಜತೆ ಯನ್ನು ಮಣ್ಣುಗೂಡಿಸಿ ತಮ್ಮ ಜೀವನವನ್ನು ಹಾಳುಮಾಡಿಕೊಳ್ಳುವದಲ್ಲದೆ, ಸಮಾಜ ವನ್ನು ಸಹ ಹಾಳು ಮಾಡುತ್ತಿದ್ದಾರೆ. ಅವರಿಗೆ ತಮ್ಮ ಕಾರ್ಯ ಸಾಧನೆಯೊಂದೇ ಮುಖ್ಯ ಗುರಿಯಾಗಿರುತ್ತದೆಯೇ ಹೊರತು ತತ್ತ್ವ, ನೀತಿ ಸಂಸ್ಕೃತಿ ಇವೆಲ್ಲವೂ ಅವರಿಗೆ ಮಾತಿನ ಮಾಲೆ, "ನಡೆಯೊಂದು ಪರಿ, ನುಡಿಯೊಂದು ಪರಿ ಒಳಗೆ ಕುಟಿಲ ಹೊರಗೆ ವಿನಯ" ಈ ರೀತಿಯಾದರೆ ಸಮಾಜವು ಸುಧಾರಿಸುವುದು ಕನಸಾದೀತು. ಬಸವತತ್ತ್ವವು ಮಾತಿ ಗಿಂತಲೂ ಕೃತಿಯಲ್ಲಿ ಆಳವಟ್ಟಾಗ ಅದರ ಸೊಗಸು. ಅದಕ್ಕಾಗಿ ಅಂತರ್ನಿರೀಕ್ಷಣೆ ಮಾಡಿ ಕೊಂಡರೆ ಅದರ ಹೆಚ್ಚಳ ಅರ್ಥವಾದೀತು. ಇತ್ತಿತ್ತಲಾಗಿ ತತ್ತ್ವ ಪ್ರಸಾರ ಮಾಡುತ್ತಿರುವ ವರಲ್ಲಿ ಸಹಜತೆಯ ಕೊರತೆಯುಂಟಾಗಿ, ಸಮಾಜದ ಭದ್ರ ಬುನಾದಿ ಅಲುಗಾಡುತ್ತಲಿದೆ. ಅವರಲ್ಲಿ ಭಾವೈಕ್ಯದೊಡನೆ ಹೋಗಲು ಮನಸ್ಸಿಲ್ಲ. ಒಬ್ಬರು ಒಂದು ಸಾಧಿಸಿದರೆ ಮತ್ತೊಬ್ಬರು ಮತ್ತೊಂದು ಸಾಧಿಸಿ ಪ್ರತಿಷ್ಠೆಯನ್ನೇ ಬೆಳೆಸಿಕೊಳ್ಳಲು ಹವಣಿಸುತ್ತಿದ್ದಾರೆ. ಸಮಾಜದ ಕಳಕಳಿಯಿಲ್ಲದಾಗಿದೆ. ಅಂತರಂಗ ಶುದ್ಧಿ, ಬಹಿರಂಗ ಶುದ್ಧಿ ಎರಡೂ ಗಟ್ಟಿ ಗೊಂಡರೆ ಮಾತ್ರ ಅಲ್ಲಿ ಸಕಲರಿಗೆ ಲೇಸನೆ ಬಯಸುವ ಬುದ್ಧಿ ಬರುತ್ತದೆ. ಇಲ್ಲವಾದರೆ

ಅದೆಲ್ಲವೂ ತೋರಿಕೆಯ ಕೋಲ್ಮಿಂಚು. ಒಬ್ಬರು ಮುಂದೆ ಹೋದರೆ ಮತ್ತೊಬ್ಬರಿಗೆ ಅಸಮಾಧಾನ. ಇದು ಎಲ್ಲ ರಂಗಗಳಲ್ಲಿಯೂ ಕಾಣುತ್ತಿದ್ದೇವೆ. ಹೀಗಾದರೆ ಸಮಾಜದ, ರಾಷ್ಟ್ರದ, ಭವಿಷ್ಯದ ಗತಿ ಏನೆಂಬುದು ಪ್ರತಿಯೊಬ್ಬರೂ ಆಲೋಚಿಸಬೇಕಾಗಿದೆ. ಅಹಂಕಾರದ ಕಾಳ್ಗಿಚ್ಚು ಎಲ್ಲೆಡೆಯೂ ಕಾಣುತ್ತಿದ್ದೇವೆ. ಈ ರೀತಿಯಾಗಬೇಕಾದರೆ ಸಾಮಾಜಿಕ ಜೀವನದಲ್ಲಿ ಆಧ್ಯಾತ್ಮಿಕ ಭಾವನೆ ಸಹಜತೆಯ ಸಮ್ಯಕ್ ಜ್ಞಾನ ಇವುಗಳ ಅರಿವು ಇಲ್ಲದಿರುವುದೇ ಮೂಲ ಕಾರಣವಾಗಿದೆ. "It is not what you say that matters, but what you do. Think, therefore, of the wast opportunities that the world offers to those who are keen of mind. strong of character and fleet of foot." "ಪಂಡಿತ ಜವಾಹರಲಾಲ ನೆಹರು ಅವರ ಈ ನುಡಿ ಎಲ್ಲರಿಗೂ ಕೈದೀವಿಗೆಯಾಗಲಿ.

## ವಿಶ್ವಜ್ಯೋತಿಃ ಸ್ವರೂಪೋಽಯಂ ಕಲ್ಯಾಣಬಸವೇಶ್ವರಃ

"ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ ಬತ್ತಿ ಗುಂಟ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು, ತೊಳಗಿ ಬೆಳಗುತಿರ್ದಿತಯ್ಯಾ ಶಿವನ ಪ್ರಕಾಶ; ಆ ಪ್ರಕಾಶದೊಳಗೆ ಒಪ್ಪುತಿರ್ದರಯ್ಯಾ ಅಸಂಖ್ಯಾತ ಪ್ರಮಥಗಣಂಗಳು; ಶಿವ ಭಕ್ತರಿರ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೇ? ಶಿವಭಕ್ತರಿರ್ದ ದೇಶವು ಪರಮಪಾವನೆಂಬುದು ಹುಸಿಯೆ? ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯ ಗುರು ಸಂಗನಬಸವಣ್ಣನ ಮಹಿಮೆ ನೋಡಾ ಸಿದ್ಧರಾಮಯ್ಯ."

ವೈರಾಗ್ಯ ವಿಭು ಅಲ್ಲಮಪ್ರಭುಗಳ ಈ ವಚನದಿಂದ ಮಹಾತ್ಮಾ ಬಸವಣ್ಣನವರ ಮಹಾನ್ ವ್ಯಕ್ತಿತ್ವವು ಎನಿತು ಘನತೆಗೇರಿತ್ತೆಂಬುದು ಅರ್ಥವಾಗುತ್ತದೆ. ವಿಶ್ವವಿಭೂತಿ ಬಸವಣ್ಣನವರು ೧೨ನೇ ಶತಮಾನದಲ್ಲಿ ಅನುಭವ ಮಂಟಪ ರಚಿಸಿ, ಎಲ್ಲ ಶಿವಶರಣರನ್ನು ಒಂದೆಡೆಗೂಡಿಸಿ, ಆಧ್ಯಾತ್ಮದ ಸಾಧನಾರಂಗವನ್ನು ಮಾಡಿಕೊಂಡು ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಬೆಳಗಿಸುವ ಜ್ಯೋತಿಯಾಗಿದ್ದರು. ಅಂದು ಮಾನವ ಕುಲವನ್ನೇ ಜಾಗೃತಗೊಳಿಸಿದರು. ಸಕಲ ಜೀವಾತ್ಮರಿಗೆ ಲೇಸನೆ ಬಯಸುವದೇ ನಿಜವಾದ ಧರ್ಮವೆಂದರು. ಕಾಯಕ ವಾಚಕ ಮಾನಸಿಕ ದೃಷ್ಟಿಯಲ್ಲಿಯೂ ಬೇರೊಬ್ಬರ ಮನನೋಯದಂತೆ ನಡೆದುಕೊಳ್ಳುವದೇ ಕೂಡಲಸಂಗನ ಸಾನ್ನಿಧ್ಯ ಪಡೆಯುವ ಮಹತ್ಸಾಧನೆಯೆಂದು ಸಾರಿದರು. ಪುಣ್ಯ–ಪಾಪಗಳ ಮರ್ಮವನ್ನರಿತುಕೊಂಡು ಕಾಯಕ ಮಾಡಿದರೆ ಅದುವೇ ಕೈಲಾಸ, ಅಂತರಂಗ ಬಹಿರಂಗಶುದ್ಧಿಗಳಿರದಿದ್ದರೆ ಯಾವ ಸಾಧನೆಯೂ ಸಫಲವಾಗಲಾರದೆಂದರು. ಮಹಾತ್ಮಾ ಗಾಂಧಿಯವರು ಹೇಳಿದ ಅಸ್ಪೃಶ್ಯೋದ್ಧಾರ ಮುಂತಾದ ತತ್ವಗಳು ರಾಷ್ಟ್ರ ಪ್ರಗತಿಗೆ ಬೇಕೆನ್ನುವ ನುಡಿಗಳನ್ನು ೧೨ನೇ ಶತಮಾನದಲ್ಲಿಯೇ ಕೃತಿಯಲ್ಲಿ ತಂದು ತೋರಿಸಿದರು. ಲೋಕದ ಡೊಂಕು ತಿದ್ದುವ ಮುಂದಾಳುಗಳಿಗೆ "ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ" ಎಂದು ಕಠೋರವಾಗಿ ನುಡಿದರು. ಈ ಮಾತು ತ್ರಿಕಾಲಸತ್ಯ. ನಮ್ಮಲ್ಲಿ

ನಮ್ಮ ತಪ್ಪನ್ನಲ್ಲದೇ ಅನ್ಯರ ತಪ್ಪನ್ನು ಕೆದಕಿ ತೀಡುವ ಹವ್ಯಾಸ ಬಹಳ. ಸಮಾಜದ ಈ ಸೂಕ್ಷ್ಮನಾಡಿಯ ಮಿಡಿತವನ್ನು ಮಹಾತ್ಮಾ ಬಸವಣ್ಣನವರು ಚನ್ನಾಗಿ ಅರಿತವರಾಗಿದ್ದರು. ಇನ್ನು ಶರಣ ಮಾರ್ಗದಲ್ಲಾಗಲಿ, ಲೋಕ ಮಾರ್ಗದಲ್ಲಾಗಲಿ ಒಳಗೊಂದು ಹೊರಗೊಂದು ಸಲ್ಲದು. ಒಳಗೆ ವಿಷ ಮೇಲೆ ಸಿಹಿ ಮಾತು ಇದು ಸನ್ಮಾರ್ಗಕ್ಕೆ ವಿರೋಧ. ಅವರಿಗೆ ಆತ್ಮಸ್ತುತಿ ಬೇಡ, ಪರನಿಂದೆ ಬೇಡ, "ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯ" ಎಂದಿದ್ದಾರೆ.

ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ ವಿಶ್ವಜ್ಯೋತಿ ಬಸವಣ್ಣನವರ ದಿವ್ಯ ಪ್ರಭೆ ಪಸರಿಸಿ, ಆ ಪ್ರಭೆಯ ಲೋಹ ಚುಂಬಕಕ್ಕೆ ಅರಸರು, ಶ್ರೀಮಂತರು, ಧೀಮಂತರು ಆಕರ್ಷಿತರಾಗಿ ಆತ್ಮ ಶ್ರೀ ಸಮನ್ವಿತರಾಗಿ ಶಿವಶರಣರಾದರು. ಬಸವಣ್ಣನವರು ಅನೇಕ ಶಕ್ತಿಗಳ ಕೇಂದ್ರ ಸ್ಥಾನವಾದ ವ್ಯಕ್ತಿ ಶಕ್ತಿಯಾಗಿದ್ದರು. ಭಾರತ ಇತಿಹಾಸದಲ್ಲಿ ಅನೇಕ ಸಂತ, ಶರಣರ, ದಾಸ, ಸಂನ್ಯಾಸಿ, ಸ್ವಾಮಿಗಳವರ ದಿವ್ಯ ಜೀವನವನ್ನು ಕಂಡಿದ್ದೇವೆ. ಕೆಲವರು ಭಕ್ತಜೀವಿಗಳು, ಕೆಲವರು ಜ್ಞಾನಿಗಳು, ಕೆಲವರು ಯೋಗಿಗಳು, ಕೆಲವರು ಸಮಾಜ ಸುಧಾರಕರು, ಇನ್ನೂ ಕೆಲವರು ಸಾಹಿತಿಗಳು, ಧರ್ಮ ಬೋಧಕರು, ಅನುಭಾವಿಗಳು ದಕ್ಷ ಆಡಳಿತಗಾರರು, ಸತ್ಯ ನಿಷ್ಠರು ಆಗಿದ್ದರೆ ಮಹಾನುಭಾವಿ ಬಸವಣ್ಣನವರೊಬ್ಬರಲ್ಲಿಯೇ ಅವೆಲ್ಲ ಶಕ್ತಿಗಳು ವಿಕಸಿತವಾಗಿ ಪರಿಪೂರ್ಣಗೊಂಡಿದ್ದವು. ಅಂತೆಯೇ ಅವರು ಸರ್ವಧರ್ಮ ಸಮಭಾವದಿಂದೊಡಗೂಡಿದ ಸಮನ್ವಯಾಚಾರ್ಯರು.

## ಬಸವೇಶ್ವರತತ್ತ್ವಸ್ಯಪ್ರಸಾರಸ್ತು ಕಥಂಭವೇತ್?

ಇತ್ತಿತ್ತಲಾಗಿ ಬಸವತತ್ತ್ವ ಪ್ರಸಾರ ಮಾಡುವ ಅನುಯಾಯಿಗಳು ಬಸವ ಸಂದೇಶವನ್ನು ಸುತ್ತೆಲ್ಲವೂ ಹರಡುವ ಮನೀಷೆಯನ್ನಿಟ್ಟುಕೊಂಡು ಕಾರ್ಯಗೈಯುತ್ತಿರುವದು ಶುಭ ಸಂಕೇತ. ವಿಶಾಲದೃಷ್ಟಿಯಲ್ಲಿ ಆದರೆ ಆದಷ್ಟೂ ಒಳ್ಳೇದು. ಎಲ್ಲರೂ ವಿಶಾಲ ದೃಷ್ಟಿಯಲ್ಲಿಯೇ ನಡೆಯುತ್ತೇವೆಂಬುದೇ ಅವರ ಅಭಿಮತ. ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದರೆ ಎಲ್ಲ ಬಸವತತ್ತ್ವಾನುಯಾಯಿಗಳಲ್ಲಿ ಭಿನ್ನಾಭಿಪ್ರಾಯಗಳ ಸರಮಾಲೆಯೇ ಹೆಣೆದುಕೊಂಡಿದೆ. ತಮ್ಮ ತಮ್ಮ ತಿಳುವಳಿಕೆಯ ಸಿದ್ಧಾಂತವೇ ನಿಜವಾದದ್ದು. ಇನ್ನುಳಿದವರದು ತಾತ್ವಿಕವಲ್ಲ ಹೀಗೆಂದು ಪ್ರತಿಯೊಬ್ಬರೂ ಪ್ರತಿಪಾದಿಸುತ್ತಾರೆ. ಹೀಗಾದರೆ ಸಕಲರಿಗೆ ಲೇಸನೆ ಬಯಸುವ ಮಹಾತ್ಮಾ ಬಸವೇಶ್ವರರ ತತ್ತ್ವಪ್ರಚಾರವು ಎಂದು? ಒಬ್ಬೊಬ್ಬರು ಒಂದೊಂದು ವಿಚಾರ ಹೇಳುತ್ತ ಹೊರಟರೆ ಸಿದ್ಧಾಂತದ ನಿರ್ಣಯವೆಂದು? ಕೂಲಂಕುಷವಾಗಿ ವಿಚಾರ ಮಾಡಿ ನೋಡಿದರೆ ತತ್ತ್ವ ಹೇಳುವ ಬಸವಾನುಯಾಯಿಗಳಲ್ಲಿ ನಿಜವಾದ ಬಸವತತ್ತ್ವದ ನಡೆ ಕಾಣುವದು ಅಸಾಧ್ಯವಾಗಿದೆ. ಕೇವಲ ತತ್ತ್ವ ಹೇಳಿದರೆ ಇಂದು ಪ್ರಯೋಜನವಾಗದು. ಧನಸಂಗ್ರಹ, ಯಾಚಕನೆ ಇಲ್ಲದಿರುವದು, ಅಂದಂದಿನ ಕಾಯಕದಿಂದ ಬಂದ ದುಡ್ಡಿನಲ್ಲಿ ಜೀವನ ನಿರ್ವಹಣೆ ಸಮಾಜ ಸುಧಾರಣೆ ಇವೆಲ್ಲ ಬಸವ

ತತ್ತ್ವದ ನಡೆಗಳು. ಆದರೆ ಕೃತಿಯಲ್ಲಿ ಇಂದು ತಂದವರು ನೂರಕ್ಕೆ ಒಬ್ಬರೂ ಇರಲಿಕ್ಕಿಲ್ಲವೆಂದರೆ ತಪ್ಪಾಗಲಿಕ್ಕಿಲ್ಲ. ಬಸವತತ್ತ್ವದಂತೆ ನಡೆದವರು ನುಲಿಯ ಚಂದಯ್ಯ, ಮೋಳಿಗೆಯ ಮಾರಯ್ಯ ಮುಂತಾದ ಆಗಿನ ಶರಣರೆ ಎದುರು ಕಾಣಸುತ್ತಾರೆ. ಬಸವತತ್ತ್ವದಂತೆ ನಡೆಯುವದು ಮುಳ್ಳಿನ ಹಾಸಿಗೆಯ ಮೇಲೆ ನಡೆದಂತೆ. ಇಂದಿನ ವೈಜ್ಞಾನಿಕ ಯುಗದಲ್ಲಿ ಮಣದಷ್ಟು ನುಡಿಯಲು ಬರವಿಲ್ಲ. ಕೃತಿಗೆ ಮಾತ್ರ ಬರವಿದೆ. ಅದಕ್ಕಾಗಿ ನಾವಿಂದು ಕೇಂದ್ರ ಬಸವ ಸಮಿತಿಯೆಂದು ಒಂದಕ್ಕೆ ಮಹತ್ವ ನೀಡಿ, ಪ್ರತಿಯೊಬ್ಬರೂ ಪರಸ್ಪರ ವಿಚಾರ ವಿನಿಮಯ ಮಾಡಿಕೊಂಡು ಭಾರತದಲ್ಲಿರುವ ಬಸವ ಸಮಿತಿಗಳ ಗುರಿ ಒಂದೇ ಇಟ್ಟುಕೊಂಡು ಈ ರೀತಿ ಅನುಭವಿಗಳೊಡನೆ ನಿರ್ಣಯಿಸಿಕೊಂಡು ಸಾಗಿದರೆ ಮಾತ್ರ ಬಸವತತ್ತ್ವ ಪ್ರಸಾರಕ್ಕೆ ಶಕ್ತಿ ಬಂದೀತು. ತಮಗಿಷ್ಟ ಬಂದಂತೆ ಹೇಳುತ್ತ ಹೋದರೆ ಸಮಾಜದಲ್ಲಿ ನಾವೇ ಒಡಕು ಹುಟ್ಟಿಸಿದಂತೆ ಆಗುವದಲ್ಲದೆ ತಿಳಿಯಾದ ನೀರನ್ನು ಕಲಕು ಮಾಡಿದಂತೆ. ಇದು ಹೆಚ್ಚಾದರೆ ಕೆಲವೇ ದಿನಗಳಲ್ಲಿ ಲಿಂಗವಂತರೇ ಬೇರೆ ಬೇರೆ ಸಂಪ್ರದಾಯಗಳಿಗೆ ಸೇರಿ ಅದರ ಪ್ರಚಾರವನ್ನೂ ನೋಡುವ ಪ್ರಸಂಗ ಬಂದೀತು. ಈಗ ಅದು ನಿಧಾನವಾಗಿ ನಡೆದಿದೆ ಎಂಬುದು ಮರೆಯುವಂತಿಲ್ಲ. ಅನ್ಯಧರ್ಮವನ್ನು ಹೀಯಾಳಿಸದೆ, ನಡೆದುಕೊಂಡು ಹೋಗುವದೇ ವೀರಶೈವ ಧರ್ಮದ ವೈಶಿಷ್ಟ್ಯ. ಆದನ್ನು ಬಿಟ್ಟು ತನ್ನ ತನದ ಅಭಿಮಾನವನ್ನು ಬದಿಗೊತ್ತಿ ನಡೆದರೆ ನಾವೇ ಸಮಾಜ ದ್ರೋಹ ಮಾಡಿದಂತೆ. ಕಾರಣ ನಾಡಿನಾದ್ಯಂತ ತುಂಬಿರುವ ಹಿರಿಯ ಸಾಹಿತಿಗಳ, ವಿದ್ವನ್ಮಣಿಗಳ, ಸ್ವಾಮಿಗಳ, ಅನುಭವ ಗೋಷ್ಠಿಯನ್ನು ಬಸವತತ್ತ್ವ ಸಿದ್ಧಾಂತಕ್ಕಾಗಿ ನಡೆಯಿಸಿ ಒಂದು ನಿರ್ಣಯಕ್ಕೆ ಬಂದು ಪುರಾತನ ಸಿದ್ಧಾಂತಕ್ಕೆ ಚ್ಯುತಿ ಬಾರದಂತೆ ಕಾರ್ಯರೂಪಕ್ಕೆ ತಂದು ಪ್ರಸಾರ ಮಾಡಿದರೆ ಸಾರ್ಥಕವಾದೀತು.

## ಸದಾಸಮಾಜ ಸೇವಾಯಾಂ ಸಾಂತ್ವನಂ ಪರಮಂ ಮತಂ

ಸಾಮಾಜಿಕ ಜೀವನ ಸುಖ–ದುಃಖಗಳ ಆಗರ. ಸಮಾಜ ಸೇವೆಯಲ್ಲಿ ತೊಡಗಿದಾಗ ಕಷ್ಟಗಳು ಎದುರು ಬರುವದು ಸ್ವಾಭಾವಿಕ. ಇಂತಹ ಪ್ರಸಂಗಗಳಲ್ಲಿ ಜನರು ದ್ವೇಷಾಸೂಯೆಗಳಲ್ಲಿ ಮುಳುಗಿ ಸ್ವಾರ್ಥ ಸಾಧಿಸಿಕೊಂಡು ನಿಂದೆ ಮಾಡುತ್ತಾರೆ. ಅಪವಾದ ಕೊಡುತ್ತಾರೆ. ಏನೆಲ್ಲವನ್ನೂ ಮಾಡಲು ಹಿಂಜರಿಯದೆ ಅವರ ಭವಿಷ್ಯ ಹಾಳು ಮಾಡಲು ಅಹೋರಾತ್ರಿ ಪರಿಶ್ರಮಪಡುತ್ತಾರೆ. ಅಸೂಯೆ ಪಡುವವರಿಗೆ ಎಂತಹ ಉಪದೇಶ ಮಾಡಿದರೂ ನಾಟಲಾರದು. ಸ್ವಾರ್ಥ ಸಾಧನೆಗಾಗಿ ಅಹೋರಾತ್ರಿ ಚಿಂತಿಸುತ್ತಿರುವಾಗ, ಅವರಿಗೆ ಮತ್ತೊಬ್ಬರಿಗೆ ನೋವು ನೀಡುವದೇ ಆನಂದವಾಗಿರುತ್ತದೆ. ಸಮಾಜ ಸೇವಕರ ವ್ಯಕ್ತಿತ್ವದ ತಿರುಳು ಅವರಿಗೆ ತಿಳಿಯದು, ನಿಂದಕರಿಗೆ ದೋಷ ದೃಷ್ಟಿಯೇ ತುಂಬಿರುತ್ತದೆಯೇ ಹೊರತು ವಿಶಾಲ ದೃಷ್ಟಿ, ಅಂತಃಕರುಣೆ ಅವರಲ್ಲಿ ಸುಳಿಯದು. ಸಾಮಾಜಿಕ ಧರ್ಮದೃಷ್ಟಿ ಬರದು.

ಸಮಾಜ ಸೇವೆಯು, ಕಣ್ಣುಮುಚ್ಚಿ ಗುಹೆಯಲ್ಲಿ ಕುಳಿತು ತಪಸ್ಸು ಮಾಡುತ್ತಿರುವ ತಪಸ್ಸಿಗಿಂತಲೂ ಹೆಚ್ಚಿನದು. ತಪಸ್ಸಿಗೆ ಆತ್ಮಾನುಸಂಧಾನ, ಒಂದೇ ಮುಖ್ಯ ಗುರಿಯಾಗಿದ್ದರೆ, ಸಮಾಜ ಸೇವಕರಿಗೆ ಆತ್ಮಾನುಸಂಧಾನ ಸಮಾಜ ಸುಧಾರಣೆ ಎರಡೂ ಮುಖ್ಯ ಗುರಿಯಾಗಿರಬೇಕಾಗುತ್ತದೆ. ಬಂಡಿಗೆ ಗಾಲಿಗಳೆರಡು ಇದ್ದರೆ ಮಾತ್ರ ಮುಂದೆ ಹೋಗಲು ಸಾಧ್ಯ. ಹಾಗೆಯೇ ಸಮಾಜ ಸೇವಕರಿಗೆ, ಕರ್ತವ್ಯ ನಿಷ್ಠೆ, ಸಾಮಾಜಿಕ ಕಳಕಳಿ, ನಿರಾಶೆ, ಸ್ವಾರ್ಥತ್ಯಾಗ, ಆತ್ಮಸಂಯಮ, ಕೋಪ ನಿವಾರಣೆ ಇವೆಲ್ಲವುಗಳು ತುಂಬಿರಬೇಕಾಗುತ್ತದೆ. ಸಾಮಾಜಿಕ ಜೀವನದಲ್ಲಿ ಜನರಿಗೆ ಬಹಿರ್ಮುಖದಂತೆ ಕಂಡರೂ ಅವರು ಅಂತರ್ಮುಖಿಗಳು, ನಿರಂತರ ಅವರಿಗೆ ಸಮಾಜದ ಚಿಂತನೆ ಇರುತ್ತದೆ. ಸಮಾಜ ಚಿಂತನೆಯೇ ಶಿವಪೂಜೆ. ಸದಾ ಕಾಯಕದಲ್ಲಿ ತೊಡಗಿದವರಿಗೆ ಮತ್ತೊಂದು ಕಡೆ ಮನಸ್ಸು ಹರಿಯದು. ಕಾಯಕವಿಲ್ಲದಿದ್ದರೆ, ಆಲಸ್ಯವು ಅಲ್ಲಿ ಆವರಿಸಿ, ಮನುಷ್ಯ ಜೀವನವನ್ನು ಹಾಳು ಮಾಡುತ್ತದೆ. ಕಾಯಕ ನಿಷ್ಠೆಯು ಮನುಷ್ಯನನ್ನು ಮೇಲಕ್ಕೆತ್ತುತ್ತದೆ. ಮೊದಲಿಗೆ ಸ್ವಲ್ಪ ಕಠಿಣ ಕಂಡರೂ ಮುಂದೆ ಸುಖಕ್ಕೆ ದಾರಿದೀಪವಾಗುತ್ತದೆ. ಆದರೆ ಸಮಾಜ ಸೇವೆ ಮಾಡುವವರಿಗೆ ತಾಳ್ಮೆ ಬಹಳಿರಬೇಕಾಗುತ್ತದೆ. ಧೈರ್ಯವು ತುಂಬಿರಬೇಕಾಗಿರುತ್ತದೆ. ಸಮತ್ವದೃಷ್ಟಿ ಸಮ್ಯಕ್ ದೃಷ್ಟಿ ಹಾಗೂ ಬಹುದೂರ ದೃಷ್ಟಿ ಅವರಲ್ಲಿದ್ದರೆ ಮಾತ್ರ ಬೆಲೆ ಮತ್ತು ಬಲ ಬರುತ್ತದೆ. ಅವುಗಳೇ ಅವರನ್ನು ಕಾಯುತ್ತವೆ. ಶಾಂತಿಯನ್ನು ನೀಡುತ್ತವೆ. ವ್ಯಕ್ತಿತ್ವ ವಿಕಾಸವು ಅವುಗಳಿಂದಲೇ ದೊರೆಯುತ್ತದೆ. ಭಾವನೆ ವಿಶಾಲವಾಗುತ್ತ ಹೋದಲ್ಲಿ ಸಂಕುಚಿತತನವು ಅಲ್ಲಿ ಇರದು. ಸಮಾಜ ಸೇವೆಯಲ್ಲಿದ್ದವರಿಗೆ ದೈವಶಕ್ತಿ ಪ್ರಾದುರ್ಭವಿಸಿ, ಜನಕಲ್ಯಾಣ ಮಾನವೀಯ ಅನುಕಂಪವೇ ಮೈಯಲ್ಲಿ ಆವರಿಸಿರುತ್ತದೆ. ಅಲ್ಲಿ ಕೃತ್ರಿಮತೆ, ಕೃತಘ್ನತೆ, ತಲೆದೋರದು. ನಿರಾಶೆಯಿಂದ ಸಮಾಜ–ಸೇವೆ ಮಾಡುವವರಿಗೆ, ಅರಿಯದ ಜನರು ದೂಷಿಸಿದರೆ, ಅವರು ಅದಕ್ಕೆ ಮನಸ್ಸು ಹಾಕಲಾರರು. ಅವರು ತಮ್ಮ ಗುರಿ ಸಾಧನೆಯತ್ತ, ಕರ್ತವ್ಯ ನಿಷ್ಠೆ, ಆತ್ಮೋನ್ನತಿಯೊಡನೆ ಮುಂದೆ ಸಾಗುತ್ತಾರೆ, ಸಮಾಜೋದ್ಧಾರಕರಾಗುತ್ತಾರೆ.

## ತೇನ ವಿನಾ ತೃಣಮಪಿ ನ ಚಲತಿ

ಮುಕ್ತಿಯನ್ನು ಪಡೆಯಲು ಶಿವಾನುಗ್ರಹವು ಊರುಗೋಲು. ಜೀವರಥ ಸಾಗಲೂ ಸಹ ಶಿವಾನುಗ್ರಹವೇ ಕಡೆಗೀಲು. ಈಶ್ವರಾನುಗ್ರಹವಿಲ್ಲದೆ ತೃಣವೂ ಸಹ ಚಲಿಸಲಾರದು. ಸಂಪೂರ್ಣ ಸತ್ಯಸಾಧನೆಗೆ, ಆತ್ಮಾನುಭೂತಿಗೆ, ಬಾಳಿನ ಬೆಳಕಿಗೆ ಕೈದೀವಿಗೆಯಿದ್ದಂತೆ. ಆರಲುಗೊಂಡ ಕೆರೆಗೆ ತೊರೆಬರಲು, ಬರಲುಗೊಂಡ ಸಸಿಗೆ ಮಳೆ ಸುರಿಯಲು ದೇವ ಕೃಪೆಯಿಂದಲೇ ಸಾಧ್ಯ. ದೇವನಿರವನರಿಯದವರು ಜಲವತಪ್ಪಿದ ಮತ್ಸ್ಯದಂತೆ ಅವರ ಗತಿಯಾಗುವದು. ಅಂತರಂಗ ಬಹಿರಂಗಗಳೆರಡನ್ನರಿಯದೆ ತೊಳಲಾಡುವವರು, ಅನರ್ಥಗಳಿಗೀಡಾಗುವರು.

ದೇವರನ್ನು ಮರೆತು ಅಹಂಕಾರದ ಅಂಧಕಾರದಲ್ಲಿ ತಿರುಗುವವರನ್ನು ಕುರಿತು ಶ್ರೀ ದೇವರದಾಸಿಮಯ್ಯನವರು ಈ ರೀತಿ ತಿಳಿಸಿದ್ದಾರೆ.—

"ಇಳೆ ನಿಮ್ಮದಾನ, ಬೆಳೆ ನಿಮ್ಮದಾನ ಸುಳಿದು ಬೀಸುವಗಾಳಿ ನಿಮ್ಮದಾನ, ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆನಯ್ಯ ರಾಮನಾಥ" ಈ ಜೀವನದಲ್ಲಿ ಜೀವನ್ಮುಕ್ತಿಯನ್ನು ಹೊಂದಿ, ಇಹಪರ ಸುಖಗಳೆರಡನ್ನು ಅನುಭವಿಸಬೇಕಾದರೆ ಈಶ್ವರ ಕೃಪೆಯೇ ಸಂಜೀವಿನಿ. ಶಿವಸಂಕಲ್ಪವಿಲ್ಲದ ಅದಾವ ಕಾರ್ಯವೂ ಸಾಧ್ಯವಾಗದು. ದೇವ ನೊಲಿದರೆ ಮಾತ್ರ ಕೊರಡು ಕೊನರುವದು, ಬಲು ಬರಡು ಹಯನಾಗುವದಲ್ಲದೆ ವಿಷವೂ ಸಹ ಅಮೃತವಾಗುವದು, ಭೌತಿಕ ಬಾಳು ಸುಂದರವಾಗುವದು. ಅಂತೆಯೇ ವೀರವಿರಾಗಿಣಿ ಅಕ್ಕಮಹಾದೇವಿಯು ಈಶ್ವರಾಸಕ್ತಿಯಲ್ಲಿ ಅಂತಃಕರಣ ಪೂರಿತಳಾಗಿ ಚನ್ನಮಲ್ಲಿಕಾರ್ಜುನನ ಬರುವಿಕೆಯನ್ನೇ ಇಂತು ಹಾಡಿದ್ದಾಳೆ. ಹೃದಯ ಹಂಬಲವನ್ನು ದೇವನಿಗರ್ಪಿಸಿದ್ದಾಳೆ.

"ಬಂದಿಹನೆಂದು ಬಟ್ಟೆಯ ನೋಡಿ, ಬಾರದಿರ್ದೊಡೆ ಕರಗಿ ಕೊರಗಿದೆನವ್ವಾ! ತಡವಾದೊಡೆ ಬಡವಾದೆ ತಾಯೆ, ಚನ್ನಮಲ್ಲಿಕಾರ್ಜುನನ ಒಂದಿರುಳು ಅಗಲಿದೊಡೆ ತೆಕ್ಕೆ ಸಡಲಿದ ಜಕ್ಕವಕ್ಕಿಯಂತಾದೆನವ್ವಾ!" ಮುತ್ತಿನಂತಹ ಈ ನುಡಿಯನ್ನು ನುಡಿದು ತನ್ನಂತ ರಂಗದ ಮಹತ್ಸಾಧನೆಯ ದಿವ್ಯ ಪ್ರಭೆಯನ್ನು ಬೆಳಗಿಸಿದ್ದಾಳೆ. ದೇವರ ಮೇಲೆ ಪೂರ್ಣ ಭಕ್ತಿ ವಿಶ್ವಾಸವಿಟ್ಟರೆ ದೇವರು ತನ್ನಂತೆ ಮಾಡಿಕೊಳ್ಳುವನೆಂಬುವದೇ ಅವಳ ಸತ್ಯ ಸಂಕಲ್ಪ.

ಎಲ್ಲ ಧೈರ್ಯ ಸಾಹಸಗಳಿಗೆ ಮೂಲ ಕಾರಣವಾದ ದೇವರ ನಂಬಿಗೆಯೇ ಕಲ್ಪ ವೃಕ್ಷವೆಂದು ಬಗೆದು "ಅಳಿಸಂಕುಳವೆ, ಮಾಮರವೆ, ಕೋಗಿಲೆಯೆ ನಿಮ್ಮೆಲ್ಲರನು ಒಂದು ಬೇಡುವೆನು ಎನ್ನೊಡೆಯ ಚನ್ನಮಲ್ಲಿಕಾರ್ಜುನ ದೇವರು ಕಂಡರೆ ಕರೆದು ತೋರಿರೆ" ಎಂಬುದಾಗಿ ಪರಿತಪಿಸಿದ್ದಾಳೆ. "ತೇನ ವಿನಾ ತೃಣಮಪಿ ನ ಚಲತಿ" ಎಂಬುದನ್ನು ಮನ ವರಿಕೆ ಮಾಡಿಕೊಟ್ಟಿದ್ದಾಳೆ. ಇದುವೆ ಮಾನವ ಕುಲದ ಜೀವನದ ಸಾರ, ಭಾವೈಕ್ಯತೆಗೆ ಮೂಲಾಧಾರ.

## ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ

"ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ" ಶ್ರೀಕೃಷ್ಣನು ಅರ್ಜುನನ್ನು ಕುರಿತು "ಹೆದರದೆ ಮುಂದೆ ಸಾಗಲು" ತಿಳಿಸಿದ ಹಿತನುಡಿಯಿದು. ಜೀವನದಲ್ಲಿ ಅನೇಕ ವಿಘ್ನಗಳು ಬರುವುದು ಸ್ವಾಭಾವಿಕ. ವಿಘ್ನಗಳನ್ನೆದುರಿಸದೆ ಯಾವ ವ್ಯಕ್ತಿಗೂ ಶಕ್ತಿ ಬರದು. ಧಾರ್ಮಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಮುಂತಾದ ರಂಗಗಳಲ್ಲಿ ಕಾರ್ಯ ಮಾಡ ತಕ್ಕ ವ್ಯಕ್ತಿಗಳಿಗೆ ವಿಘ್ನಗಳು ಬರುತ್ತವೆ. ನಾವು ಮಾಡತಕ್ಕ ಕಾರ್ಯಗಳಲ್ಲಿ ನಿಷ್ಠೆ, ಪರ ಹಿತ ನಿಸ್ವಾರ್ಥಗಳು ತುಂಬಿದ್ದರೆ ವಿಘ್ನಗಳೇನು ಮಾಡಲಾರವು. ತಾತ್ಕಾಲಿಕವಾಗಿ ಬರುತ್ತವೆ. ಕೋಲ್ಮಿಂಚಿನಂತೆ ಹೋಗುತ್ತವೆ. ಆದರೆ ಧೈರ್ಯ ಮಾತ್ರ ಬೇಕಾಗುತ್ತದೆ, ಒಳ್ಳೇ ಕಾರ್ಯ ಮಾಡತಕ್ಕವರಿಗೆ ಹೇಗಾದರೂ ಮಾಡಿ ಅಪಮಾನ ನೀಡಿ, ಅವರ ಮನಸ್ಸು

ನೋಯುವಂತೆ, ಕಷ್ಟ ಕೊಡುತ್ತಾರೆ. ನಿರುತ್ಸಾಹಗೊಳಿಸುತ್ತಾರೆ. ಜೀವನದಲ್ಲಿ ಬೇಸರ ಬರುವಂತೆ ಕುಕಲ್ಪನೆಗಳ ಕಾಡುಗಲ್ಲುಗಳನ್ನು ತಂದೊಡ್ಡುತ್ತಾರೆ. ಸಮಾಜದಲ್ಲಿ ಅಪ ಕೀರ್ತಿ ಹರಡುವಂತೆ ಪ್ರಯತ್ನಿಸುತ್ತಾರೆ, ಅಸೂಯೆಯ ಕಿಲ್ಬಿಷವನ್ನು ಹೊರಚೆಲ್ಲುತ್ತಾರೆ. ಸ್ವಾರ್ಥ ಸಾಧಿಸಲು ಅಹೋರಾತ್ರಿ ಪರಿಶ್ರಮ ಪಡುತ್ತಾರೆ. ಇಂಥ ಪ್ರಸಂಗದಲ್ಲಿ ಬೆಚ್ಚದೆ, ಬೆದರದೆ ಮುಂದುವರಿಯುವದೇ ಮಾನವನ ಕರ್ತವ್ಯವಾದರೆ, ಆಗ ಅವನಿಗೆ ಎಲ್ಲ ರಂಗಗಳಲ್ಲಿಯೂ ಅದ್ಭುತ ಶಕ್ತಿಯುಂಟಾಗಿ ಆತ್ಮ ಶಾಂತಿಯು ದೊರೆಯುತ್ತದೆ.

ಪ್ರಾರಭ್ಯತೇ ನ ಖಲು ವಿಘ್ನ ಭಯೇನ ನೀಚೈಃ
ಪ್ರಾರಭ್ಯ ವಿಘ್ನ ನಿಹತಾ ವಿರಮಂತಿ ಮಧ್ಯಾಃ।
ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯ ಮಾನಾಃ
ಪ್ರಾರಭ್ಯ ಚೋತ್ತಮಜನಾ ನ ಪರಿತ್ಯಜಂತಿ॥

ಅಂದರೆ ಕೆಲವರು ವಿಘ್ನಭಯದಿಂದ ಕಾರ್ಯವನ್ನು ಪ್ರಾರಂಭ ಮಾಡಲಾರರು, ಮತ್ತೆ ಕೆಲವರು ಕಾರ್ಯವನ್ನು ಪ್ರಾರಂಭಿಸಿ ಮಧ್ಯದಲ್ಲಿಯೇ ಹೆದರಿ ಬಿಟ್ಟು ಬಿಡುತ್ತಾರೆ. ಆದರೆ ಉತ್ತಮ ಜನರು ಎಷ್ಟೇ ವಿಘ್ನಗಳು ಎದರು ಬಂದರೂ ಲೆಕ್ಕಿಸದೆ, ಧೈರ್ಯದಿಂದ ಹಿಡಿದ ವ್ರತವನ್ನು ಬಿಡದೆ ಭಗೀರಥ ಪ್ರಯತ್ನದಿಂದ ಪೂರ್ತಿಗೊಳಿಸಿ ಯಶಸ್ಸು ಸಂಪಾದಿಸುತ್ತಾರೆ. ಸಫಲತೆ ದೊರೆಯಲು ಕುಳಿತರೆ ಬರದು. ಚಿಂತಿಸಿದರೆ ಆಗದು. ಬೆವರು ಸುರಿಸಬೇಕಾಗು ತ್ತದೆ. ಕಣ್ಣೀರು ಸುರಿಸಬೇಕಾಗುತ್ತದೆ. ಕಷ್ಟಪಡಬೇಕಾಗುತ್ತದೆ. ಒಂದೆಡೆ ಮಹಾತ್ಮಾ ಬಸವೇಶ್ವರರು—

"ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆ ಮಾರುವೋದೆನೆಂದರೆ,
ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ
ನೀನು, ಧನವನಲ್ಲಾಡಿಸಿ ನೋಡುವೆ ನೀನು ಇವಕ್ಕೆಲ್ಲಕ್ಕಂಜದಿದ್ದರೆ,
ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವ"

ಎಂದು ತಮ್ಮ ದಿವ್ಯ ಸಂದೇಶದಲ್ಲಿ ಧೈರ್ಯವನ್ನಿತ್ತು ಎಚ್ಚರಿಸಿದ್ದಾರೆ. "ಮಣ್ಣು ಮಾಡುವ; ಮಸಿಯ ಮಾಡುವ ಕಡೆಗೆ ತನ್ನಂತೆ ಮಾಡುವ" ಈ ಅಮರವಾಣಿ ನಮ್ಮೆಲ್ಲ ರಿಗೆ ಕೈದೀವಿಗೆಯಾಗಲಿ.

## ಸರ್ವೇ ಮಾನವಾಃ ಸಹೋದರಾಃ

ನಾವೆಲ್ಲರೂ ಬಂಧು ಬಾಂಧವರು, ನಮ್ಮ ನಡೆ ನುಡಿ, ಭಾವವೆಲ್ಲವೂ ಜೀವನದಲ್ಲಿ ಹಾಸು ಹೊಕ್ಕಾಗಿ, ಪವಿತ್ರಮಯ ವಾತಾವರಣವನ್ನು ರೂಪಿಸಿಕೊಂಡರೆ, ಮಧುರ ಬಾಂಧವ್ಯ ಬೆಳೆದು ಬೆಳಗಿದರೆ ಮಾನವ ಕುಲಕ್ಕೆ ಶಾಂತಿ. ಈ ಶಾಂತಿಯು ಪ್ರತಿಯೊಬ್ಬ ರಲ್ಲಿ ಒಡಮೂಡಬೇಕಾದರೆ ಹೃದಯ ವೈಶಾಲ್ಯವನ್ನು ಮೊದಲು ಅಳವಡಿಸಿಕೊಳ್ಳಬೇಕಾ

ಗುತ್ತದೆ. ಪರರ ನೋವು ತಮ್ಮ ನೋವೆಂದು ಬಗೆಯಬೇಕಾಗುತ್ತದೆ. ಅಂತರಂಗ ಬಹಿರಂಗ ಶುದ್ಧಿಯನ್ನು ಮಾಡಿಕೊಳ್ಳಬೇಕಾಗುತ್ತದೆ. ಮಾನವೀಯತೆಯ ಮೌಲ್ಯಗಳನ್ನು ಅರಿತುಕೊಂಡು ನಡೆಯಬೇಕಾಗುತ್ತದೆ. ಅಂದಾಗ ಸಹೋದರತ್ವದ ಕಲ್ಪನೆ ಮನದಲ್ಲಿ ಮೂಡಿ ಭಾವೈಕ್ಯಕ್ಕೆ ದಾರಿಯಾಗುತ್ತದೆ. ಧರ್ಮಗಳ ದಾರಿ ಬೇರೆ ಬೇರೆಯಾಗಿರಬಹುದು. ನೀತಿಯ ನೆಲಗಟ್ಟು ಮಾತ್ರ ಎಲ್ಲ ಧರ್ಮಗಳಿಗೂ ಭದ್ರ ಬುನಾದಿಯಾಗಿರಬೇಕಾಗುತ್ತದೆ, ನೀತಿಯಿಲ್ಲದೆ ಮಾನವೀಯತೆಯು ಬರಲಾರದು. ಭಾವಶುದ್ಧಿಯಾಗದು. ಜಾತೀಯತೆಗಳ ಹೋರಾಟ ನಡೆಸಿದರೆ, ವ್ಯಕ್ತಿಗತ ಅಂತಃಸತ್ವವನ್ನು ಕಳೆದುಕೊಂಡರೆ, ವಿಶ್ವಶಾಂತಿಗೆ ಇವೆಲ್ಲವುಗಳೂ ಆತಂಕಗಳಾಗಿ ಅಡ್ಡಗೋಡೆಗಳಂತೆ ನಿಲ್ಲುತ್ತವೆ. ಅವರವರ ಧರ್ಮದಂತೆ ನಡೆದು ಎಲ್ಲರೊಡನೆ ಸಹಕರಿಸಿಕೊಂಡು ಬಾಳಿದರೆ, ಬಾಳು ಬಂಗಾರವಾಗುವದಲ್ಲದೆ ವಿಶ್ವಶಾಂತಿಗೆ ದಾರಿದೀಪವಾಗುವದು. ಅಶಾಂತಿಯೆಂಬುದು ನಿರ್ನಾಮವಾಗಿ, ಕತ್ತಲೆಯು ದೂರಸರಿದು ಬೆಳಕಿನ ರಾಜ್ಯದಲ್ಲಿ ಸುಖಪಡೆಯಬಹುದು. ಮದಮತ್ಸರಗಳನ್ನು ಬೆಳೆಯಗೊಟ್ಟರೆ ಕರಗಸದಂತೆ ಹೋಗುತ್ತ ಬರುತ್ತ ಕೊಯ್ಯುವದನ್ನೇ ನೋಡಬೇಕಾಗುತ್ತದೆ. ಸುಖವು ಕನಸಿನ ಗಂಟಾಗುತ್ತದೆ. ಮನೋದೌರ್ಬಲ್ಯವುಂಟಾಗಿ ಕಂಟಕ ಜೀವನದಲ್ಲಿ ಸಾಗಬೇಕಾಗುತ್ತದೆ. ಸೌಹಾರ್ದತೆಯು ಕೃತ್ರಿಮವಾಗದೆ ವಾಸ್ತವಿಕತೆಯಿಂದೊಡಗೂಡಿದರೆ ಮಾತ್ರ ಅದರ ಸ್ವಾರಸ್ಯ ಪಕ್ವಹಣ್ಣಿನಂತೆ ರುಚಿಕರವಾಗುವದು. ಮಾನವ ಕುಲದ ಅಪಾರ ಪ್ರೇಮವೇ ವಿಶ್ವಶಾಂತಿಗೆ ನಾಂದಿ. ಮಸಕು ಮಸಕಾಗಿರುವ ವಿಭಿನ್ನ ವಿಚಾರಗಳ ಏಕತೆಯೇ ಸಹೋದರತ್ವದ ಬೆಳವಣಿಗೆಗೆ ಕಾರಣವಾಗುವದು. ಆಗ "ಮನುಷ್ಯ ಧರ್ಮ ಏಕ ಹೈ" ಎಂಬುವ ಸುಪ್ರಸಿದ್ಧ ಹಿಂದಿ ಮಹಾಕವಿ ಸುಮಿತ್ರಾನಂದ ಪಂತರ ಈ ಕವಿತೆಯು ನೆನಹಿನಂಗಳದಲ್ಲಿ ಬಂದು ಕೂಡ್ರುತ್ತದೆ. "ಲೋಕವೇ ನನ್ನ ಮನೆ ಮಾನವ ಕುಲವೇ ನನ್ನ ಕುಟುಂಬ" ಎನ್ನುವ ಭಾವನೆ ಪ್ರತಿಯೊಬ್ಬರಲ್ಲಿ ಬಂದು ಕೃತಿಯಲ್ಲಿಳಿದರೆ ಸಹೋದರತ್ವದ ಭಾವನೆ ಬಂಧುರವಾಗಿ ರಾಷ್ಟ್ರೋತ್ಥಾನಕ್ಕೆ ಸಹಕಾರಿಯಾಗುತ್ತದೆ. ಬುದ್ಧಿ ಬೆಳೆದಂತೆ ಹೃದಯ ಪುಷ್ಪವು ಅರಳಬೇಕಾಗಿದೆ. ಹೃದಯ ಹೃದಯಗಳ ಸಂಗಮವಾಗಿ ಸಹಜತೆಯಲ್ಲಿ ಪರಿವರ್ತನೆಗೊಂಡು ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಮಹಾತ್ಮಾ ಬಸವಣ್ಣನವರ ಈ ನುಡಿಯು ನಡೆಯಲ್ಲಿ ಬಂದರೆ ಸರ್ವ ಮಾನವರು ಸಹೋದರರಾಗಿರಲು ಸಾಧ್ಯ.

## ಚಾರಿತ್ರ್ಯತತ್ಪರೇ-ಣೈವಸರ್ವಭೂತ ಹಿತಾತ್ಮನಾ

ವ್ಯಕ್ತಿಗೆ ಶಕ್ತಿ ಬರಲು ಚಾರಿತ್ರ್ಯವೇ ಮೂಲಬೇರು. ಚಾರಿತ್ರ್ಯಬಲದಿಂದ ಮನುಷ್ಯನು ಏನೆಲ್ಲವನ್ನು ಸಾಧಿಸಬಲ್ಲನು. ಆತ್ಮಕ್ಕೆ ಶಾಂತಿ ದೊರೆಯಬೇಕಾದರೆ ಸದಾಚಾರದ ಸತ್ಪಥದಲ್ಲಿ ನಡೆಯಬೇಕಾಗುತ್ತದೆ. ಧರ್ಮಪೂರ್ವಕ ನಿಯಮಿತ ಆಚರಣೆಯಿಂದ ನಡೆಯುತಕ್ಕವನೇ ನಿಜವಾದ ಚರಿತ್ರವಾನ್ ಎಂದು ಒಬ್ಬರು ಹೇಳಿದರೆ ಮತ್ತೊಬ್ಬರು ಈ

ರೀತಿ ಹೇಳುತ್ತಾರೆ. ''Character is the Governing element of life and is above genius'' ಅಂದರೆ "ಚರಿತ್ರ ಜೀವನದಲ್ಲಿ ಶಾಸನ ಮಾಡತಕ್ಕ ತತ್ವವು ತುಂಬಿರುತ್ತದೆ." ಸಾಮಾಜಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ, ಮುಂತಾದ ಎಲ್ಲರಂಗ ಗಳಲ್ಲಿಯೂ ಚಾರಿತ್ರದ ಬಲವು ತುಂಬಿದ್ದರೆ ಅಲ್ಲಿ ಪ್ರತಿಭೆ ಎದ್ದು ಕಾಣುತ್ತದೆ. ಚಾರಿತ್ರವು ಒಂದು ವೃಕ್ಷದ ಸಮಾನವಿದ್ದಂತೆ. ಅದರ ನೆರಳೇ ಕೀರ್ತಿ. ಚರಿತ್ರ ಜೀವನ ಸಾಗಿಸು ವದೂ ಸಹ ಸುಲಭ ಸಾಧ್ಯವಿಲ್ಲ. ಅನೇಕ ಕಠಿಣ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ತಪಸ್ಸನ್ನು ಮಾಡಬೇಕಾಗುತ್ತದೆ, ಧ್ಯಾನಮಾಡಬೇಕಾಗುತ್ತದೆ. ಆಲಸ್ಯರಹಿತನಾಗಿ ನಿತ್ಯವೂ ಸತ್ಯಶುದ್ಧ ಕಾಯಕ ಮಾಡುತ್ತ, ಚಂಚಲ ಚಿತ್ತವನ್ನು, ದೇವರ ಹತ್ತಿರ ಕರೆ ದೊಯ್ದು ಬೆಳಕಿನ ದಾರಿಯನ್ನು ಹಿಡಿದರೆ ಚಾರಿತ್ರ್ಯದಿಂದ ಇರಲು ಸಾಧ್ಯವಾಗುತ್ತದೆ. ಸಚ್ಚರಿತ್ರವೇ ಮಾನವನ ವಾಸ್ತವಿಕ ಶೃಂಗಾರ. ಆಭರಣಗಳ ಸೌಂದರ್ಯ ಕ್ಷಣಿಕ. ಸದಾ ಚಾರದ ಸೌಂದರ್ಯವು ಶಾಶ್ವತವಾದುದು. ನಿತ್ಯಸತ್ಯಾರಾಧನೆಗೆ ಪೋಷಕ. ಅನುಶಾಸನ, ವಿನಮ್ರತೆ ಪ್ರಾಮಾಣಿಕತನ, ಪರೋಪಕಾರ, ಈ ನಾಲ್ಕು ಚರಿತ್ರ ನಿರ್ಮಾಣದ ಮೂಲ ತತ್ವಗಳು. ಇವುಗಳಿಲ್ಲದಿರೆ ಚಾರಿತ್ರ್ಯ ಜೀವನಕ್ಕೆ ಬೆಲೆ, ಬಲ ಬರಲಾರದು. ಅನು ಶಾಸನವು ಸದ್ಭಾವಗಳ ಪ್ರೇರಕವಾದರೆ, ವಿನಯ, ಪ್ರಾಮಾಣಿಕತೆ ಸದುಹೃದಯದ ಗೆಳೆಯ ನಂತೆ ಶೋಭಿಸುತ್ತವೆ. ಚಾರಿತ್ರ ಮಂದಿರವು ಭದ್ರವಿರಬೇಕಾದರೆ ಇವೆಲ್ಲವುಗಳು ಅತ್ಯಾ ವಶ್ಯಕ. ಒಂದು ಬಿಟ್ಟು ಒಂದಿರಲು ಅಸಾಧ್ಯ. ವಿನಮ್ರತೆ ಮಾನವ ಚರಿತ್ರೆಗೆ ಬೆಳಕು ಇದ್ದಂತೆ, ಅದೇ ರೀತಿ ಪರೋಪಕಾರವೂ ಕೂಡಿಕೊಂಡಿರುತ್ತದೆ. ದೀಪವುರಿಯಲು ಎಣ್ಣೆ ಬೇಕಾದಂತೆ ಚಾರಿತ್ರಶುದ್ಧಿಯ ತೇಜ ಬೆಳಗಲು ಪರೋಪಕಾರವು ಬೇಕಾಗುತ್ತದೆ. ಮನುಷ್ಯನು ಹವೆಯಿಲ್ಲದೆ ಜೀವಿಸಲಾರನು. ಅದೇ ಪ್ರಕಾರ ಚರಿತ್ರವಾನ್ ವ್ಯಕ್ತಿಯು ಧರ್ಮ ಬಿಟ್ಟು ಕ್ಷಣವೂ ಬೇರೆ ದಾರಿಯತ್ತ ನಡೆಯಲಾರ. ಈ ಪ್ರಪಂಚದಲ್ಲಿ ಮಹಾ ಪುರುಷರೆನ್ನುವವರು ಆಕಾಶದಿಂದ ಇಳಿದು ಬರಲಾರರು. ಸಣ್ಣವ್ಯಕ್ತಿಗಳು ಪಾತಾಳ ದಿಂದಲೂ ಬರಲಾರರು. ಅವರವರ ಆಚರಣೆಯಿಂದ, ವ್ಯಕ್ತಿತ್ವ ವಿಕಾಸದಿಂದ ದೊಡ್ಡ ವರು, ಸಣ್ಣವರು ಆಗಲು ಸಮರ್ಥರಾಗುತ್ತಾರೆ. ಚರಿತ್ರವಾನ್ ವ್ಯಕ್ತಿಗಳಲ್ಲಿಯೇ ಸಮಾಜಸೇವಾ ಮನೋಭಾವನೆ ಬರುತ್ತದೆ. ಅವರಲ್ಲಿ ರಾಷ್ಟ್ರಪ್ರೇಮವು ತುಂಬಿತುಳುಕು ತ್ತದೆ. ಅದಕ್ಕಾಗಿ ಅಹೋರಾತ್ರಿ ಪರಿಶ್ರಮ ಪಡುತ್ತಾರೆ, ಅಶಕ್ತರಲ್ಲಿ ಶಕ್ತಿಯನ್ನು ತುಂಬುತ್ತಾರೆ, ರಾಷ್ಟ್ರರಚನೆ ಮಾಡುತ್ತಾರೆ, ಅಂಥ ವ್ಯಕ್ತಿಗಳು ಜಗತ್ತನ್ನೇ ಚುಂಬಕ ದಂತೆ ತಮ್ಮತ್ತ ಎಳೆದುಕೊಳ್ಳುತ್ತಾರೆ.

ರಾಷ್ಟ್ರಶಕ್ತಿ ಸಂವರ್ಧಿಸಲು ನಮಗಿಂದು ಅಂತಹ ಚಾರಿತ್ರ್ಯಶೀಲ ಮಹಾನ್ ವ್ಯಕ್ತಿಗಳು ಬೇಕು.

## ಸಮಸ್ಯಾ ಪರಿಹಾರೋ ಭವೇತ್ ಕಾಯಕ ನಿಷ್ಠಯಾ

ಇಂದು ಎತ್ತ ನೋಡಿದತ್ತ ಹಲವು ಸಮಸ್ಯೆಗಳ ಸುರಿ ಮಳೆಯನ್ನೇ ಸುರಿಸುತ್ತಲಿರುವದನ್ನು ಕಾಣುತ್ತಿದ್ದೇವೆ. ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಶೈಕ್ಷಣಿಕ ರಂಗಗಳಲ್ಲಿಯೂ ಸಹ ದಿನಕ್ಕೊಂದು ತೆರನಂತೆ, ತಲೆಗೊಬ್ಬರಂತೆ ಅನೇಕ ಬಗೆಯ ಸಮಸ್ಯೆಗಳನ್ನೇ ಎತ್ತಿ ತೋರಿಸುತ್ತಲಿರುವದು ಕಂಡು ಬರುತ್ತಲಿದೆ. ಯಾವ ರಂಗದಲ್ಲಿ ನಿರುಕಿಸಿದರೂ ಸುಖ ಶಾಂತಿ ದೊರೆಯದಂತಾಗಿದೆ. ತಮ್ಮದೇ ಯೋಗ್ಯವೆಂದು ಪ್ರತಿಯೊಬ್ಬನೂ ತನ್ನಪಕ್ಷಕ್ಕೆ ಪ್ರತಿಪಾದಿಸುತ್ತಲಿದ್ದಾನೆ. ಹಿರಿಯರ ಮಾತು ಕಿರಿಯರು ಕೇಳುವದು, ಕಿರಿಯರ ಮಾತು ಹಿರಿಯರು ಕೇಳುವದು ಇವೆರಡೂ ಒಡೆಯದ ಒಗಟಾಗಿದೆ, ಕಷ್ಟವಾಗಿದೆ. ಒಬ್ಬರು ಅನುಭವವಿಲ್ಲವೆಂದು ತಿಳಿಸಿದರೆ, ಮತ್ತೊಬ್ಬರು ಹೊಸತನ. ಆಧುನಿಕತೆ ಅವರಿಗಿಲ್ಲವೆಂದು ವಾದಿಸುತ್ತಿದ್ದಾರೆ. ಯಾವದು ಸತ್ಯ, ಯಾವದು ಮಿಥ್ಯ ತಿಳಿಯದಂತಾಗಿದೆ. ಸ್ವಾರ್ಥ ಪರಾರ್ಥಗಳೆರಡರ ಹೋರಾಟವೂ ನಡೆದಿದೆ. ಒಬ್ಬರಿಗೆ ಸ್ಥಾನ ಬೇಕಾದರೆ, ಮತ್ತೊಬ್ಬರಿಗೆ ಸೇವೆ ಬೇಕಾಗಿದೆ. ಎಲ್ಲರೂ ಹೇಳುವದು ತತ್ತ್ವವಾದರೂ, ತತ್ವದಂತೆ ನಡೆಯುವವರೂ ಸತ್ಯವನ್ನು ನುಡಿಯುವವರೂ ಇದೀಗ ಕಾಣುವದು ದುರ್ಲಭವಾಗಿದೆ. ಎಲ್ಲ ರಂಗಗಳಲ್ಲಿಯೂ ಸ್ವಾರ್ಥವು ತುಂಬಿ ತುಳುಕುತ್ತಲಿದೆ. ಸಾಮಾಜಿಕ ಕಳಕಳಿ, ರಾಷ್ಟ್ರಾಭಿಮಾನ, ಶಿಕ್ಷಣಪ್ರೇಮ, ಆಧ್ಯಾತ್ಮಿಕ ಜೀವನ ಮಾತಿನ ಮಾಲೆಯಾಗಿವೆ. ದ್ವೇಷಾಸೂಯೆಗಳ ಅಗ್ನಿಯ ಕುಡಿಗಳು ಭುಗಿಲ್ಲೆಂದು ಮೇಲೇಳುತ್ತವೆ. ಒಂದು ಸಮಸ್ಯೆಯು ಬಗೆಹರಿಯುವಷ್ಟರಲ್ಲಿ ಮತ್ತೊಂದು ಸಮಸ್ಯೆ ಎದುರು ಬಂದು ಕಾಡುತ್ತಲಿದೆ. ಮಧುರ ಬಾಂಧವ್ಯವೆಂಬುದು ಕನಸಿನ ಗಂಟಾಗಿದೆ. ಗುರುಹಿರಿಯರಲ್ಲಿಡಬೇಕಾದ ಭಕ್ತಿಭಾವ ಶ್ರದ್ಧೆಗಳೆಲ್ಲವೂ ಲೋಪವಾಗಿವೆ. ದಿನ ದಿನವೂ ತಾಪತ್ರಯಗಳು ಹೆಚ್ಚಾಗುತ್ತಲಿವೆ! ಆರ್ಥಿಕ ರಂಗದಲ್ಲಿಯಂತೂ ಬೆಳವಣಿಗೆಗಿಂತ, ಬಲಹೀನರಾಗುವವೇ ಬೆಳೆಯುತ್ತ ನಡೆದು, ನಿರ್ಗತಿಕ ಜೀವನವುಳ್ಳವರಾಗುತ್ತಿದ್ದಾರೆ. ಆಲಸಿಗಳು ಹೆಚ್ಚಾಗುತ್ತಿದ್ದಾರೆ. ಬೆಲೆಯೇರಿಕೆಯಿಂದ, ಆಹಾರದ ಅಶುದ್ಧತೆಯಿಂದ ನಿಸ್ಸತ್ವವುಳ್ಳವರಾಗುತ್ತಿದ್ದಾರೆ. ಹೀಗಾಗಿ ಯಾರಿಗೂ ನೆಮ್ಮದಿಯಿಲ್ಲ. ದುಡಿಯುವವರಿಗೂ ಕಷ್ಟವಾಗಿದ. ದುಡಿಸಿಕೊಳ್ಳುವವರಿಗೂ ಕಷ್ಟವಾಗಿದೆ. ಇಬ್ಬರಲ್ಲಿಯೂ ಆದರಾಭಿಮಾನವು ಕಡಿಮೆಯಾಗಿ, ಸಂಸ್ಥೆಗಳಿಗೆ ಆಘಾತವುಂಟಾಗುತ್ತಲಿದೆ. ಕಷ್ಟ ಸಹಿಸುವ ಗುಣ ಇಲ್ಲದಾಗಿ, ಕಾರ್ಯ ಮಾಡದೇ ಸುಖ ಸಿಗಬೇಕೆನ್ನುವ ಪ್ರವೃತ್ತಿ ಹೆಚ್ಚಾಗುತ್ತಲಿದೆ. ಇದುವೆ ದಿನದಿನವೂ ಬೆಳೆಯುತ್ತ ನಡೆದರೆ ರಾಷ್ಟ್ರ ಪ್ರಗತಿಗೆ ಅಡ್ಡಿಯಾಗುವದಲ್ಲದೆ, ಆತ್ಮದ್ರೋಹ ಮಾಡಿದಂತಾಗುವದು. ಈ ಎಲ್ಲ ಸಮಸ್ಯೆಗಳು ಬಗೆಹರಿಯಲು ಪ್ರತಿಯೊಂದು ರಂಗದಲ್ಲಿ ಒಳ್ಳೆ ಸಂಸ್ಕೃತಿ ಬೆಳೆದರೆ, ಮತ್ತು ಸತ್ಯ ಶುದ್ಧ ಕಾಯಕ ನಿಷ್ಠೆಯನ್ನು ಕಾರ್ಯಾಚರಣೆಯಲ್ಲಿ ತಂದರೆ ಅದು ಸಾಧ್ಯ.

## ಅಶಾಂತಸ್ಯ ಕುತಃ ಸುಖಮಂ

ಶಾಂತಿಯು ಪ್ರತಿಯೊಬ್ಬರಿಗೂ ಅವಶ್ಯಕ. ನಾಡು, ರಾಷ್ಟ್ರ, ಪ್ರಪಂಚವು ಶಾಂತಿಯ ಭದ್ರ ಬುನಾದಿಯ ಮೇಲೆ ನಿಂತರೆ ಸುಖ ಸಮೃದ್ಧಿ ಸಾಧ್ಯ. ಇಲ್ಲವಾದರೆ ಪ್ರಪಂಚವೇ ವಿವಂಚನೆಗೀಡಾಗುತ್ತದೆ. ಪ್ರಪಂಚದಲ್ಲಿ ಶಾಂತಿ ನೆಲಸಬೇಕಾದರೆ, ಪರಸ್ಪರ ಸಹಕಾರ, ಸತತೋದ್ಯೋಗ, ಪ್ರಾಮಾಣಿಕತೆ ಇವೆಲ್ಲವುಗಳು ಪ್ರತಿಯೊಬ್ಬರಲ್ಲಿ ಒಡಮೂಡಿದರೆ ಮಾತ್ರ ಶಾಂತಿ. ಶಾಂತಿಯಿಲ್ಲದ ಜೀವನ ಮರುಭೂಮಿಯಂತೆ ನಿರರ್ಥಕ. ಶಾಂತಿಯಿಲ್ಲದ ಬಾಳು ಜಲವಿಲ್ಲದ ತಟಾಕವಿದ್ದಂತೆ, ಗಂಧವಿಲ್ಲದ ಪುಷ್ಪವಿದ್ದಂತೆ ಆಗುವದಲ್ಲದೆ ಬೆಳಕಿರದ ಕತ್ತಲೆಯ ಗವಿಯಂತೆ ವ್ಯರ್ಥವಾಗುವದು. ವ್ಯಕ್ತಿಯಲ್ಲಿ ಶಕ್ತಿಯುಂಟಾಗಿ, ಅಂತಶ್ಚಕ್ಷು ಗಳನ್ನು ತೆರೆದು, ತಾಮಸೀಯ ಬಹಿಃ ಪ್ರವೃತ್ತಿಯ ವಿಚಾರಗಳನ್ನು ತೊರೆದು, ಹೃದಯ ಮುದಿರದ ಬಾಗಿಲನ್ನು ತೆರೆದರೆ ಈಶ್ವರ ಸಾಕ್ಷಾತ್ಕಾರವು ದೊರೆತು ಶಿವಶಾಂತಿ ಸುಖ ವುಂಟಾಗುವದು ಈ ಶಾಂತಿ ಸುಖಕ್ಕಾಗಿಯೇ ಸಂತರು, ಋಷಿ ಪುಂಗವರು, ಯೋಗಿಗಳು, ತ್ಯಾಗಿಗಳು ಮೊದಲಾದ ಮಹದ್ವ್ಯಕ್ತಿಗಳು ಅಹೋರಾತ್ರಿ ಕಷ್ಟಪಡುತ್ತಾರೆ. ಅಂತರಂಗ ಶುದ್ಧಿಯನ್ನು ಮಾಡಿಕೊಳ್ಳುತ್ತಾರೆ. ಅಂತರಂಗ ಶುದ್ಧಿಯೇ ಪ್ರಪಂಚದ ಶಾಂತಿಗೆ ಮೂಲ ಕಾರಣ. ಜನಜೀವನವು ಅಂತರಂಗ ಶುದ್ಧಿಯತ್ತ ಮನಸ್ಸು ಹಾಕಿದರೆ ಪ್ರಪಂಚದ ಶಾಂತಿಗೆ ನಾಂದಿಯಾಗುವದು. ಮನೋಭಾವನೆಗಳು ವಿಕಾರದತ್ತ, ಆಸುರೀ ಪ್ರವೃತ್ತಿಯತ್ತ ಸಾಗು ತ್ತಿದ್ದರೆ ಶಾಂತಿಯು ಕನಸಿನ ಗಂಟಾಗುವದು, ಅನ್ಯರನ್ನು ತನ್ನವರಂತೆ ಕಂಡು, ಅವರ ಸುಖ ದುಃಖಗಳಲ್ಲಿ ಪಾಲುಗೊಂಡು ಸಹಕರಿಸಿದರೆ ದೈವೀಯ ಶಕ್ತಿ ಉದ್ಭವಿಸುತ್ತದೆ. ಆ ದೈವೀಯ ಶಕ್ತಿಯಿಂದ ನಾಡು ಎಚ್ಚರವಾಗುತ್ತದೆ. ನಾಡಿನ, ರಾಷ್ಟ್ರದ ಜನತೆಯ ವಿವೇಕದ ಅರುಣೋದಯದಿಂದ ಪ್ರಪಂಚಕ್ಕೆ ಶಾಂತಿ ಲಭಿಸುತ್ತದೆ. ಎಲ್ಲ ಮತ ಧರ್ಮಗಳ ಅಂತ ರಾಳದಲ್ಲಿ ಶಾಂತಿ ಸಂದೇಶ ತುಂಬಿದ್ದರೂ, ಅದು ಕೃತಿಯಲ್ಲಿ ಬಾರದಿದ್ದರೆ, ಪ್ರಪಂಚದ ಶಾಂತಿಗೆ ಸಹಾಯಕರಾಗದಿದ್ದರೆ, ಅಂತರಂಗ ಶುದ್ಧಿಗೆ ಸಾಧ್ಯವಾಗದಿದ್ದರೆ, ಆತ್ಮ ವಿಕಾಸಕ್ಕೆ ದಾರಿದೀಪವಾಗದಿದ್ದರೆ ಬರೀ ಮೋಡ ಕವಿದ ಆಕಾಶದಂತೆ ವ್ಯರ್ಥವಾಗುವದು. ಇಂತಾ ದಾಗ "ಅಶಾಂತಸ್ಯ ಕುತಃ ಸುಖಮ್" ಈ ಉಕ್ತಿ ಅನುಭವಕ್ಕೆ ಬರುತ್ತದೆ.

## ಅತ್ರಜಾತೀಯತಾಯಾಶ್ಚ ಭಾವೈಕ್ಯಂ ಸರ್ವಸಮ್ಮತಂ

ನಮಗಿಂದು ಶಾಂತಿಸಮಾಧಾನಗಳು ದೊರಕಬೇಕಾದರೆ ಜಾತೀಯತೆಯ ಐಕ್ಯವನ್ನು ಸಾಧಿಸಿದರೆ ಮಾತ್ರ ಸಾಧ್ಯ. ಜಾತೀಯತೆಯಿಂದ ದ್ವೇಷಾದಿ ದುರ್ಗುಣಗಳು ಉದ್ಭವಿಸಿ ಮನುಷ್ಯನು ಹಾಳಾಗಿ ಹೋಗುವನಲ್ಲದೆ, ಮನುಷ್ಯತ್ವವೂ ನಷ್ಟವಾಗುವದು. ಜಾತೀಯತೆಯ ಪೆಡಂಭೂತವನ್ನು ಬೆನ್ನು ಹತ್ತಿದವರು ನಿರಂತರ ಅಂಧಕಾರದಲ್ಲಿ ತಿರುಗಬೇಕಾಗುತ್ತದೆ. ಸತ್‌ಪಥವನ್ನು ದೂರೀಕರಿಸಿದಂತಾಗುತ್ತದೆ. ಅನೇಕ ಶತಮಾನಗಳಿಂದ ಪುಣ್ಯಪುರುಷರು ತೋರಿದ ಭಾವೈಕ್ಯದ ಸತ್ಯಸೌಂದರ್ಯವನ್ನು ನಾವಿಂದು ಕಾಣದಿದ್ದರೆ, ಆ ಹೆದ್ದಾರಿಯಲ್ಲಿ

ನಡೆಯದಿದ್ದರೆ, ಕಣ್ಣಿದ್ದು ಕುರುಡರಾದಂತೆ, ಜೀವವಿದ್ದರೂ ಶವವಿದ್ದಂತೆ. ಮತ ಮತಗಳ, ಧರ್ಮ ಧರ್ಮಗಳ ತಿಕ್ಕಾಟದಲ್ಲಿ ವಿಶ್ವಶಾಂತಿಯು ಕನಸಾಗುತ್ತದೆ. ವೈಮನಸಗಳು ಬಹಿರ್ಮುಖದತ್ತ ಸಾಗಿ ಅಂತರ್ಮುಖತೆಗೆ ಅಡ್ಡಿಯಾಗುತ್ತದೆ. ಅಂತಸ್ಸತ್ವ ಇಲ್ಲದಂತಾಗುತ್ತದೆ, ಅದಕ್ಕಾಗಿ ರಾಷ್ಟ್ರಶಕ್ತಿ ಹೆಚ್ಚಿಸಲು ಜಾತೀಯತೆಯ ಐಕ್ಯಮತ್ಯವೆ, ಭದ್ರಬುನಾದಿ.

ಸರ್ವಜ್ಞನು ಒಂದೆಡೆ–"ಯಾತರದು ಹೂವೇನು ನಾತರದು ಸಾಲದೇ ಜಾತಿವಿಜಾತಿಯೆನಬೇಡ ದೇವನೊಲಿದಾತನೇ ಜಾತ ಸರ್ವಜ್ಞ".

ಹೀಗೆ ಹೇಳುವಲ್ಲಿ ಬಹುದೂರದೃಷ್ಟಿಯು ಎದ್ದು ಕಾಣುತ್ತದೆ. ಭಾವೈಕ್ಯದ ಕುಸುಮವರಳಿ ಪರಿಮಳಿಸಿದಂತಿದೆ. ಜಗತ್ತಿನ ಜನರೆಲ್ಲ ಉಸಿರಾಡಿಸುವ ವಾಯುವು ಒಂದೇ, ನಡೆಯುವ ನೆಲ ಒಂದೇ, ಹೀಗಿರುವಾಗ ನಾವಿಂದು ಜಾತೀಯತೆಯ ದಾವಾನಲದಲ್ಲಿ ಸುಟ್ಟು ಭಸ್ಮೀಭೂತರಾದರೆ ಆ ಆ ಧರ್ಮಗಳಲ್ಲಿರುವ ಸತ್ಯ ದರ್ಶನವನ್ನು ಸಾಕ್ಷಾತ್ಕಾರ ಮಾಡಿಕೊಳ್ಳದೆ ಕೇವಲ ಕಚ್ಚಾಟದಲ್ಲಿಯೇ ನಮ್ಮ ಜೀವನವನ್ನು ಸವೆಸಿದರೆ ಆತ್ಮ ಶಾಂತಿಯೆಂದು? ಇಂದಿನ ದುರ್ಧರ ಪ್ರಸಂಗದಲ್ಲಿ ಅನೈಕ್ಯತೆಯ ಅಶಾಂತಿಯ ಬೀಜಗಳು ಹುಟ್ಟಿ ಬೆಳೆದು ಹೆಮ್ಮರವಾದರೆ ಅಧಃಪತನಕ್ಕೆ ದಾರಿ ಮಾಡಿ ಕೊಟ್ಟಂತೆ. ಭಾರತದಲ್ಲಿರುವವರೆಲ್ಲರೂ ನಾವು ಭಾರತಮಾತೆಯ ಮಕ್ಕಳು. ಈ ಭಾವನೆಯು ಕಲ್ಪನೆಯ ದವಡೆಯೊಳಗೆ ಅರಗಿಸಿಕೊಂಡರೆ ಅರಿವು ಸ್ಥಿರವಾದೀತು. ಅದಕ್ಕಾಗಿ ಭಾರತದ ಎಲ್ಲ ಧರ್ಮದವರೂ ಸ್ನೇಹದಿಂದ ಬಾಳುವದನ್ನು ಕಲಿಯೋಣ ವಿವಿಧತೆಯಲ್ಲಿ ಏಕತೆಯನ್ನು ಕಾಣೋಣ.

ಸರ್ವೇ ಜನಾಃ ಸುಖಿನೋ ಭವಂತು.

## ಜಗಜ್ಜ್ಯೋತಿಃ ಸ್ವರೂಪೋಽಸೌ ಭಗವಾನ್ ಬಸವೇಶ್ವರಃ

ಜಗತ್ತಿನ ಧಾರ್ಮಿಕ, ಸಾಮಾಜಿಕ ಮಹಾಪುರುಷರಲ್ಲಿ ಮಹಾತ್ಮಾ ಬಸವಣ್ಣನವರಿಗೆ ಒಂದು ವೈಶಿಷ್ಟ್ಯಪೂರ್ಣ ಸ್ಥಾನವಿದೆ. ಆ ಮಹಾವ್ಯಕ್ತಿಯ ದಿವ್ಯ ಶಕ್ತಿಯ ಪ್ರಭಾವದಿಂದಲೇ ನಾಡಿನಲ್ಲಿ ಇನ್ನೂ ಸಂಸ್ಕೃತಿ ಉಳಿದಿದೆ. ವೀರಶೈವ ಧರ್ಮವು ಬಾಳಿ ಬೆಳಗುತ್ತಲಿದೆ. ದ್ವಿತೀಯ ಶಂಭು ಬಸವಣ್ಣನವರು ಅಷ್ಟಾವರಣಗಳಲ್ಲಿ ಚೈತನ್ಯವನ್ನು ಬೆಳಗಿಸಿದರು. ಅನುಭವ ಮಂಟಪವನ್ನು ಸಂಸ್ಥಾಪಿಸಿ ನೀತಿಯ ನೆಲೆಗಟ್ಟನ್ನು ಭದ್ರವಾಗಿರಿಸಿದರು. ವಚನ ವಾಙ್ಮಯವನ್ನು ಪ್ರಚಾರಗೊಳಿಸಿ ಕನ್ನಡ ಸಾಹಿತ್ಯಕ್ಕೆ ಶಕ್ತಿ ನೀಡಿದರು. ಸಾಮ್ಯವಾದವನ್ನು ದೃಢಪಡಿಸಿದರು. ಮಹಾತ್ಮಾ ಗಾಂಧಿಯವರು ಮಾಡಿದ ಅಸ್ಪೃಶ್ಯೋದ್ಧಾರವನ್ನು ೧೨ನೆಯ ಶತಮಾನದಲ್ಲಿಯೇ ಬಸವಣ್ಣನವರು ಕೃತಿಗಿಳಿಸಿ, ಸಾಮಾಜಿಕ ಕ್ರಾಂತಿಯ ಅಡಿಗಲ್ಲನ್ನಿರಿಸಿದ್ದಾರೆ. "ಕಾಯಕವೇ ಕೈಲಾಸ"ವೆಂದು ಸಾರಿ ಕಾಯಕಕ್ಕೆ ಮಹತ್ವ ನೀಡಿ, ಜನ ಜಾಗ್ರತಿ ಮಾಡಿದ್ದಾರೆ. "ನ್ಯಾಯನಿಷ್ಠುರಿ ದಾಕ್ಷಿಣ್ಯಪರ ನಾನಲ್ಲ" ಎಂದು ಹೇಳಿ ಅವರು ಸತ್ಯಸಾರ್ವಭೌಮರೆನಿಸಿದ್ದಾರೆ. ಒಬ್ಬೊಬ್ಬ ಮಹಾತ್ಮರಲ್ಲಿ ಒಂದೊಂದು ವೈಶಿಷ್ಟ್ಯಪೂರ್ಣ ಶಕ್ತಿಯಿದ್ದರೆ ಜಗಜ್ಜ್ಯೋತಿ ಬಸವಣ್ಣನವರೊಬ್ಬರಲ್ಲಿಯೇ ನಿಷ್ಠೆ, ಸತ್ಯ, ಪ್ರೇಮ,

ವೈರಾಗ್ಯ, ಭಕ್ತಿ, ದಯೆ, ಅಹಿಂಸೆ, ದೀನವಾತ್ಸಲ್ಯ, ಅನಾಸಕ್ತಿಗಳು, ಗುಣಗಳು ಮನೆ ಮಾಡಿಕೊಂಡಿದ್ದವು. ಅಂತೆಯೇ ನೂರಾರು ಜನ ಕವಿಗಳು, ಯೋಗಿಗಳು ಹೃದಯ ತುಂಬಿ ಬಸವ ಮಹಿಮೆಯನ್ನು ಹಾಡಿಪರಿಸಿದ್ದಾರೆ. ಪುರಾಣಗಳನ್ನು, ವಚನಗಳನ್ನು, ಕಾವ್ಯಗಳನ್ನು ಸಂಸ್ಕೃತ, ಕನ್ನಡ, ತೆಲಗು, ಇಂಗ್ಲೀಷ ಭಾಷೆಗಳಲ್ಲಿ ಬರೆದು ಕೃತಾರ್ಥರಾಗಿದ್ದಾರೆ.

"ಬಸವಾ, ನಿನ್ನ ದಯದಿಂದ ವೀರಶೈವ ಧರ್ಮವು ವಿನೂತ್ನ ಯೋಜನೆಯಲ್ಲಿ
ವಿಕಸಿತವಾಗಿ ವಿವರ್ಧನೆಗೊಂಡಿದೆ, ನೋಡಾ!
ಬಸವಾ ನಿನ್ನ ಕೃಪೆಯಿಂದ ಅಷ್ಟಾವರಣಂಗಳು ಅಂಗವಾಗಿ
ಅಲೌಕಿಕ ಪರಿಣಾಮವ ತೋರುತಿವೆ, ನೋಡಾ!
ಬಸವಾ, ನಿನ್ನ ಕರುಣೆಯಿಂದ ಪಂಚಾಚಾರಂಗಳು ಪ್ರಾಣವಾಗಿ
ಪರಮ ಪ್ರರುಷಾರ್ಥಕ್ಕೆ ಕಾರಣವಾಗಿವೆ, ನೋಡಾ!
ಬಸವಾ, ನಿನ್ನ ಅನುಗ್ರಹದಿಂದ ಷಟ್‌ಸ್ಥಲಂಗಳು ಆತ್ಮವಾಗಿ
ಷಟ್‌ಸ್ಥಲ ಮಹಿಮೆಯ ಉಗ್ಗಡಿಸುತಿವೆ, ನೋಡಾ!
ಬಸವಾ, ನಿನ್ನ ಅಂತಃಕರಣದಿಂದ ಗುರು–ಜಂಗಮರು ಸಂಪೂಜ್ಯರಾಗಿ
ಗುಣಾತಿಶಯವ ಬೀರುತಿಹರು, ನೋಡಾ!
ಬಸವಾ, ನಿನ್ನ ಕಾರುಣ್ಯದಿಂದ ಲಿಂಗವು ಸರ್ವಾಂಗ ಲಿಂಗವಾಗಿ
ಲಿಂಗದ ಕಳೆ ಅಪೂರ್ವವಾಗಿ ಬೆಳೆಯುತ್ತಿದೆ, ನೋಡಾ!
ಇಂತಪ್ಪ ಕಾರಣಿಕ ಕಾರುಣ್ಯಮೂರ್ತಿ ಬಸವನ ಮರೆತು, ಮೆರೆಯುವವರ ಮೆಚ್ಚ
ನಮ್ಮ ಭ್ರೂಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ."

**ರಕ್ತಾಕ್ಷಿ ನಾಮ ವರ್ಷೋಽಯಂ, ಸರ್ವೇಷು ಸ್ನೇಹದೋ ಭವೇತ್**

ಎಲ್ಲಿ ನೋಡಿದಡಲ್ಲಿ ಹಾಹಾಕಾರ, ಅಶಾಂತಮಯ ವಾತಾವರಣ ತುಂಬಿತುಳುಕುತ್ತಲಿದೆ. ದ್ವೇಷದ ದಳ್ಳುರಿಯ ಆರ್ಭಟ. ಮದಮಾತ್ಸರ್ಯಗಳ ತಿಕ್ಕಾಟ, ನಾ ಹೆಚ್ಚು ನೀ ಹೆಚ್ಚು ಎನ್ನುವ ಕೂಗಾಟ, ಅನೇಕ ಧರ್ಮಗಳ ಜಂಜಾಟ, ಹಿಂಸಾತ್ಮಕ ಧಾರ್ಮಿಕ ಆಚರಣೆಗಳ ಕಚ್ಚಾಟ, ಜಾತೀಯತೆಯ ಸುಂಕುರೋಗದ ಅಲೆದಾಟ, ಹೀಗಾಗಿ ಯಾಠ ಮನಸ್ಸಿನಲ್ಲಿಯೂ ನೆಮ್ಮದಿಯಿಲ್ಲ. ಎತ್ತ ನೋಡಿದಡತ್ತ ಕರಾಳ ರಾತ್ರಿಯ ಕತ್ತಲು, ಅಶಾಂತಿಯ ಕೂಗು ಕೇಳಿ ಬರುತ್ತಲಿದೆ. ಭಾವೈಕ್ಯವು ಕನಸಿನ ಮಾತಾಗಿದೆ. ಇದೇ ರೀತಿಯ ತಾಮಸೀ ಪ್ರವೃತ್ತಿಯು ಬೆಳೆಯುತ್ತ ಹೋದರೆ ಮುಂದೇನಾಗುವದೆಂಬ ಭಯದ ಭಾವನೆಯಲ್ಲಿ, ಕಾಲ ಕಳೆಯುವದೇ ಜೀವನದ ಉಸಿರಾಗುವಷ್ಟು ಸನ್ನಿಹಿತವಾಗುತ್ತಲಿದೆ.

ಗತಿಸಿದ ರುಧಿರೋದ್ಗಾರಿ ಸಂವತ್ಸರದಲ್ಲಿ, ಅತೃಪ್ತಿಯ ಬಾಳಿನಲ್ಲಿ, ಬೆಂದು ನೊಂದು ಅದರ ಕಹಿ ಅನುಭವವನ್ನು ಪಡೆದು ಮುಗಿದು ಹೋದ ನಂತರ, ರಕ್ತಾಕ್ಷಿ ಸಂವತ್ಸರವು ಇದೀಗ ಸುಖವನ್ನು ಕೊಟ್ಟೀತು ಅನ್ನುವಷ್ಟರಲ್ಲಿಯೇ "ರಕ್ತಾಕ್ಷಿ"ಯು ತನ್ನ ಹೆಸರನ್ನು ಸಾರ್ಥಕ ಪಡಿಸುವಂತೆ, ಕೆಂಗಣ್ಣು ಕಾರುತ್ತಲಿದೆ. ಪ್ರತಿಯೊಬ್ಬ ವ್ಯಕ್ತಿಯು ಭವಿಷ್ಯ

ಜೀವನದ ಗತಿಯೇನು? ಎಂಬ ಚಿಂತಾಗ್ನಿಯಲ್ಲಿ ಬೇಯುತ್ತಿದ್ದಾನೆ. ನಾವೆಲ್ಲರೂ ಒಬ್ಬ ದೇವರ ಮಕ್ಕಳು ಎನ್ನುವದನ್ನು ಮರೆತಿದ್ದೇವೆ. ದೈವೀಯ ಶಕ್ತಿಯನ್ನು ಕಳೆದುಕೊಂಡಿದ್ದೇವೆ ಆಸುರೀ ಶಕ್ತಿಯ ಕೈಗೊಂಬೆಯಾಗಿ ಕ್ರೂರತನದಿಂದ ಸಾಗಿದ್ದೇವೆ. ಹಗೆಯಾಟ ಹೆಚ್ಚಾಗಿದೆ. ಸತ್ಯಶೀಲ ನಶಿಸುತ್ತಲಿದೆ, ಸ್ವಧರ್ಮ ನಿಷ್ಠೆಯೊಂದಿಗೆ ಪರಧರ್ಮ ಸಹಿಷ್ಣುತೆಯ ಕೊರತೆಯಾಗಿದೆ. ರಾಷ್ಟ್ರಾಭಿಮಾನವು ಇಲ್ಲದಂತಾಗಿದೆ. ರಾಷ್ಟ್ರವು ಬಂಧುರವಾಗಲು ಭಾವೈಕ್ಯವೇ ಮೂಲಬೇರು. ಭಾರತ ಮಾತೆಯು ನಮ್ಮನ್ನು ಎಚ್ಚರಿಸಿ, ಆಶೀರ್ವದಿಸಿ ಸುಖ ಜೀವನದ ಸಿಹಿ ಜಲವನ್ನು ಸಿಂಚಿಸುವಂತೆ ಕರುಣಿಸಲು ಬೇಡುವದೇ ನಮ್ಮೆಲ್ಲರ ಮುಖ್ಯ ಗುರಿಯಾಗಬೇಕು. ಆ ಧ್ಯಾನಶಕ್ತಿ ಬರದಿದ್ದರೆ ಆ ತೀರವನ್ನು ಈ ಜೀವನ ನೌಕೆ ಮುಟ್ಟುವದು ಕಷ್ಟವಾದೀತು. ಅದಕ್ಕಾಗಿ ಮಾನವೀಯತೆಯು ಬಂದು ಪರಸ್ಪರ ಸಹೋದರ ಭಾವನೆಯು ಪ್ರತಿಯೊಬ್ಬರಲ್ಲಿ ಬರಲು ದೇವರನ್ನೇ ಮೊರೆಹೋಗಬೇಕು.

ಓ ದೇವ ಪರಮಾತ್ಮ ಕಾರುಣ್ಯ ನಿಧಿಯೇ
ಅಜ್ಞಾನ ಕಿಚ್ಚಿನಲಿ ಬೇಯುತಿಹ ಮನುಜರನು
ಸುಜ್ಞಾನ ದೀಪ್ತಿಯಿಂ ಕರುಣಿಸೈ ಓ ತಂದೆ
ಅವರವರ ಪಾಪ ಸಂತಾಪವನು ತೊಳೆಯುತ್ತ
ಉರಿಯುತಿಹ ಈ ಲೋಕಕ್ಕೆ ತಂಪನ್ನು ನೀಡುತ್ತ
ಎಚ್ಚರಿಸು ಕೃಪೆದೋರಿ ಉದ್ಧರಿಸು ಓ ಗುರುವೆ!

**"ಸದಾಽಸ್ಮಾಭಿಃ ಕೃತಾ ಸೇವಾ ನಿಷ್ಠಯಾ ಸಹಿತಾ ಭವೇತ್"**

ಸೇವಾಧರ್ಮವು ಎಲ್ಲಕ್ಕಿಂತ ಹೆಚ್ಚಿನದು. ಅಲ್ಲಿ ಸ್ವಾರ್ಥ ಸ್ವಪ್ರತಿಷ್ಠೆ ಕಾಣಿಸದು. ಅಲ್ಲಿ ಸೇವೆಯೇ ಮುಖ್ಯ ಗುರಿ. ಸೇವಾಭಾವನೆಯಿಂದ ಮನುಷ್ಯನಿಗೆ ಆತ್ಮಶಾಂತಿ ದೊರೆಯುತ್ತದೆ. ಸೇವೆಯಿಂದ ಮತ್ತೊಬ್ಬರಿಗೆ ಹಿತವುಂಟಾಗಿ ಸಾಮಾಜಿಕ ಪ್ರಜ್ಞೆ ಒಡಮೂಡುತ್ತದೆ. ಸೇವೆಯಿಂದ ಅಹಂಕಾರ ನಿರಸನವಾಗುತ್ತದೆ. ತನ್ನ ತನದ ಅರಿವಿನ ಬೆಳಕು ಕಾಣಿಸುತ್ತದೆ. ಭಾವನೆಯಲ್ಲಿ ವಿಶಾಲತೆ ಬರಬೇಕಾದರೆ ಪ್ರಥಮತಃ ಸೇವಾ ಮನೋಭಾವನೆಯೇ ದಾರಿದೀಪ. ಸತ್ಯ ಶುದ್ಧ ಕಾಯಕಕ್ಕೆ ಸೇವೆಯೇ ಮೂಲತಂತ್ರ. ಪ್ರೇಮಜ್ಯೋತಿ ಪ್ರಕಾಶಿಸಲು ಸೇವೆಯೇ ದೊಡ್ಡ ಸಾಧನ ಸೇವೆಯಿಂದ ಸಿಟ್ಟು ನಿವಾರಣೆಯಾಗುತ್ತದೆ, ಶತ್ರುಗಳು ಮಿತ್ರರಾಗುತ್ತಾರೆ. ಅಂತಃಕರುಣೆ ಹುಟ್ಟುತ್ತದೆ. ಗುರುಹಿರಿಯರು ಮಾತಾಪಿತೃಗಳು ಸಂತೋಷಪಡುತ್ತಾರೆ. ಕೃಪೆದೋರುತ್ತಾರೆ. ಸೇವೆಯಿಂದ ಜೀವನದಲ್ಲಿ ಒಂದು ಶಕ್ತಿಯುಂಟಾಗಿ ಸಿದ್ಧಿಗೆ ದಾರಿ ಮಾಡಿಕೊಡುತ್ತದೆ. ಸೇವೆ ಮಾಡುತ್ತಾ ಹೋದಂತೆ ಆಲಸ್ಯವು ನಷ್ಟವಾಗಿ ಚೈತನ್ಯವು ದೊರಕಿ, ದೇಹೇಂದ್ರಿಯಗಳಲ್ಲಿ ಬಲವು ಬರುತ್ತದೆ. ನೋವು ನರಳಿಕೆಗಳು ದೂರವಾಗುತ್ತವೆ. ಮನೋದೌರ್ಬಲ್ಯವು

ದೂರಾಗಿ ಚಿತ್ತಸ್ಥಿರವಾಗುತ್ತದೆ. ಜನರಲ್ಲಿ ಆತ್ಮೀಯತೆ ಹುಟ್ಟುತ್ತದೆ. ಆಶೆಯು ನಿರ್ಮೂಲನವಾಗುತ್ತದೆ. ಭಾವ ಶುದ್ಧಿಯಾಗುತ್ತದೆ. ಕರ್ತವ್ಯ ಪ್ರಜ್ಞೆ ಒಡಮೂಡುತ್ತದೆ. ವ್ಯಾವಹಾರಿಕ ರಂಗದಲ್ಲಿಯೂ ಸೇವೆಬೇಕು. ಧಾರ್ಮಿಕ ರಂಗದಲ್ಲಿಯೂ ಸೇವೆಬೇಕು. ಆಶಾರಹಿತ ಸೇವೆಗೆ ಅಲ್ಲಿ ಅದ್ಭುತ ವ್ಯಕ್ತಿತ್ವ ದೊರೆಯುತ್ತದೆ. ಸಮಾಜದಲ್ಲಿ ಬಂಧುರತೆ ಹುಟ್ಟಬೇಕಾದರೆ ನಿಷ್ಕಾಮ ಸೇವೆಯು ಫಲವನ್ನು ನೀಡುತ್ತದೆ. ನಿಷ್ಕಾಮ ಸೇವೆಯಿಂದ ಏನೆಲ್ಲವನ್ನು ಸಾಧಿಸಬಹುದು. ಅಷ್ಟೇ ಏಕೆ ದೇವರು ಸಹ ಒಲಿದು ಆನಂದ ನೀಡುತ್ತಾನೆ. ಸೇವಾಭಾವನೆ ನಷ್ಟವಾದಲ್ಲಿ ಕೃತಜ್ಞತೆಯು ತೊಲಗಿ ಕೃತಕತೆಯು ಹುಟ್ಟುತ್ತದೆ. ತೋರಿಕೆಯ ಸೇವೆಯು ಒಮ್ಮೊಮ್ಮೆ ನಮ್ಮ ಜೀವನವನ್ನು ಹಾಳು ಮಾಡುತ್ತದೆ. ಕಪಟ ರಹಿತ ಸೇವೆ ಆದರ್ಶವಾಗಿ ಪರಿಣಮಿಸಿ, ಆದರ್ಶ ಮಾನವನನ್ನಾಗಿ ಮಾಡುತ್ತದೆ. ಮಾನವೀಯತೆಯನ್ನು ಕಲಿಸುತ್ತದೆ. ಅಜ್ಞಾನವನ್ನು ನಿವಾರಣೆ ಮಾಡುತ್ತದೆ. ಬೆಳಕು ಬಯಸುವವರು ಸೇವಾ ಮಾರ್ಗವನ್ನು ಹಿಡಿಯುತ್ತಾರೆ. ಆಧ್ಯಾತ್ಮಿಕ ವಿಶಾಲತೆಯನ್ನು ಏಕತೆಯನ್ನು ಪಡೆಯುತ್ತಾರೆ. ಹಿಂದಿನ ಹಿರಿಯರು, ಮಹಾತ್ಮರು ಶರಣರು ಸೇವಾಧರ್ಮಕ್ಕೆ ಪ್ರಧಾನತೆಯನ್ನು ನೀಡಿದ್ದಕ್ಕಾಗಿ, ಒಳ್ಳೇ ಸಂಸ್ಕೃತಿ ಉಳಿದು ಬೆಳೆದಿದೆ. ಅದಕ್ಕಾಗಿ ನಮ್ಮ ನಮ್ಮ ಶಕ್ತಿಗನುಗುಣವಾಗಿ ನಿಷ್ಕಲ್ಮಷ ಹೃದಯದಿಂದ ಸೇವೆ ಮಾಡಿದರೆ ರಾಷ್ಟ್ರಕ್ಕೆ ಹಿತ, ಸಮಾಜಕ್ಕೆ ಅದು ಭದ್ರ ಬುನಾದಿ.

## ಜೀವನಂ ರಂಗಭೂಮಿಃ ಸ್ಯಾತ್ ಪ್ರಯತ್ನಸ್ತತ್ರ ಸಾಧನಂ

ಜೀವನವು ಅದೊಂದು ಸಾಧನರಂಗ. ರಂಗಭೂಮಿಯಲ್ಲಿ ನಿತ್ಯವು ಸಾಧನೆ ಮಾಡಬೇಕಾಗುತ್ತದೆ. ಕಷ್ಟ ಸಹಿಸಬೇಕಾಗುತ್ತದೆ. ಸಾಮಾಜಿಕ ಸಮಸ್ಯೆಗಳು, ಧಾರ್ಮಿಕ ಸಮಸ್ಯೆಗಳು, ಆಂತರಿಕ ಸಮಸ್ಯೆಗಳು ಇವೆಲ್ಲವುಗಳು ಎದುರು ಬಂದಾಗ ಧೈರ್ಯದಿಂದ ಬಗೆಹರಿಸಬೇಕಾಗುತ್ತದೆ. ಒಂದೊಂದು ಸಮಸ್ಯೆಗೆ ಒಂದೊಂದು ರೀತಿಯ ವಿಚಾರ ಮಾಡಬೇಕಾಗುತ್ತದೆ. ಧ್ಯೇಯ ಧೋರಣೆ ಒಳ್ಳೆಯದಾಗಿರಬೇಕಾಗುತ್ತದೆ. ಪವಿತ್ರ ಭಾವನೆಯನ್ನು ತುಂಬಿಕೊಂಡಿರಬೇಕಾಗುತ್ತದೆ. ಪಾವಿತ್ರ್ಯತೆಯೇ ಆತ್ಮವಿಕಾಸದ ಅಡಿಗಲ್ಲು. ವ್ಯಕ್ತಿತ್ವ ವಿಕಾಸವಾಗಲು ಆತ್ಮ ಶಕ್ತಿಯ ಪ್ರತಿಭೆ ಮೂಡಿದಾಗ ಸಾಧ್ಯ. ಸಾಧನೆಯೇ ಕುಲುಮೆಯಲ್ಲಿ ಬೆಂದಾಗ ಈ ಜೀವನ ಚೊಕ್ಕ ಚಿನ್ನವಾಗುತ್ತದೆ. ವ್ಯಕ್ತಿಗೆ ಶಕ್ತಿ ತುಂಬುತ್ತದೆ. ಮುಕ್ತಿಗೆ ಸಾಧನವಾಗುತ್ತದೆ.

ಈ ಲೋಕದಲ್ಲಿ ಜನಿಸಿದ ಮೇಲೆ ಬದುಕಿಗಾಗಿ ಪರಿಶ್ರಮಿಸಬೇಕಾಗುತ್ತದೆ. ಬಾಳೆಲ್ಲವನ್ನು ಬಂಗಾರದಂತೆ ಶುದ್ಧ ಮಾಡಿಕೊಳ್ಳಬೇಕಾಗುತ್ತದೆ. ಒಳ್ಳೆಯದಕ್ಕಾಗಿ ಬದುಕಿ ಆದರ್ಶಮಯ ಜೀವನವನ್ನು ಮಾಡಿಕೊಂಡಾಗ ಸಫಲತೆ. ಅದಕ್ಕಾಗಿ ನಿರ್ದಿಷ್ಟ ಗುರಿಯತ್ತ ಸಾಗಿ ಜೀವನವನ್ನು ಪಾವನ ಮಾಡಿಕೊಳ್ಳಬೇಕಾಗುತ್ತದೆ.

ಬೀಜವನ್ನು ನೆಲದಲ್ಲಿ ಬಿತ್ತಿದ ಮೇಲೆ ಮಣ್ಣು, ಗಾಳಿ, ನೀರುಗಳ ಸಹಾಯದಿಂದ ಅದು ಸಸಿಯಾಗಲೇಬೇಕು; ಮಣ್ಣಾಗಲಾರದು. ಬೆಳವಣಿಗೆಯ ನಿಯಮವನ್ನು ಅನುಸರಿಸಿ, ಬೆಳೆದು ಆ ಸಸಿಯು ಹೆಮ್ಮರವಾಗಿ ಫಲ-ಪುಷ್ಪಗಳನ್ನು ನೀಡುವದು ನಿಸರ್ಗದ ನಿಯಮವಾಗಿದೆ. ಹಾಗೆಯೇ ಈ ಜೀವನದಲ್ಲಿ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕಾದರೆ, ಪ್ರತಿಯೊಬ್ಬರೂ ಮತ್ತೊಬ್ಬರ ಒಳ್ಳೇ ಭಾವವನ್ನು ಚೆನ್ನಾಗಿ ಅರ್ಥೈಸಿಕೊಂಡು, ಹೀರಿಕೊಂಡು ವ್ಯಕ್ತಿತ್ವವನ್ನು ನಾಶಮಾಡಿಕೊಳ್ಳದೆ ಧಾರ್ಮಿಕ ಹಾಗೂ ಸಾಮಾಜಿಕ ಶಕ್ತಿಯ ಬೆಳವಣಿಗೆಯನ್ನು ಬೆಳಸಿಕೊಂಡರೆ ಸಾರ್ಥಕ. ಆದರಿಂದ ಸಾಮಾಜಿಕ ಕಲ್ಯಾಣವಾಗುತ್ತದೆ. ನಮ್ಮ ಜೀವನ ವ್ಯಾಪಾರಗಳಿಗೆಲ್ಲ ಪಾರಮಾರ್ಥಿಕ ವಿಷಯದಲ್ಲಿ ದೃಢಚಿತ್ತನಾದಾಗ ಕ್ಲೇಶಗಳ ನಿವಾರಣೆ. ಕೊರತೆಗಳ ಬಿರುಗಾಳಿ ಬೀಸುತ್ತಿದ್ದರೂ ಆಧ್ಯಾತ್ಮ ಜ್ಞಾನಮಾತ್ರವೇ ಸಮರ್ಥವಾಗಿ ಎದುರು ನಿಂತು, ಕೊರತೆಗಳನ್ನು ಶಾಶ್ವತವಾಗಿ ನಿವಾರಿಸಬಲ್ಲದು. ನಿಜವಾದ ಜೀವನವೇ ಜ್ಞಾನ ಸಂಪಾದನೆ 'ಜ್ಞಾನವೇ ಜೀವನ, ಅಜ್ಞಾನವೇ ಮೃತ್ಯು' ಅಜ್ಞಾನದಲ್ಲಿ ಮುಳುಗಿದಾಗ ಸಿಹಿ ಕಹಿಗಳ ಅನುಭವ. ಈ ಹೋರಾಟದಲ್ಲಿ ಪಾರಾಗಬೇಕಾದರೆ, ಧೈರ್ಯ ಸಾಹಸ, ಸತ್ಯ ಮತ್ತು ಪ್ರೇಮದ ಕನಸನ್ನು ಕಾಣಬೇಕಾಗುತ್ತದೆ. ಆಗ ಅದು ಫಲಕಾರಿಯಾಗುತ್ತದೆ. "ಸರ್ವದಾ ಕರ್ಮವನ್ನು ಆಚರಿಸುತ್ತಿರಬೇಕು. ಆದರೆ ಕರ್ಮಕ್ಕಾಗಲಿ, ಫಲಕ್ಕಾಗಲಿ ಕಟ್ಟು ಬೀಳಕೂಡದು" ಇದು ಗೀತೆಯ ಅಮರ ಸಂದೇಶ. ಅದಕ್ಕಾಗಿ ಈ ಜೀವನ ರಂಗಭೂಮಿಯಲ್ಲಿ ಅವರವರ ಕರ್ತವ್ಯ ಕರ್ಮವನ್ನು, ಒಬ್ಬರ ಮನಸ್ಸನ್ನು ನೋಯಿಸದೆ ನಿಷ್ಠೆಯಿಂದ ಮಾಡಿದ್ದಲ್ಲಿ ಸಮಾಜಕ್ಕೂ ರಾಷ್ಟ್ರಕ್ಕೂ ಹಿತ.

**ಸಂಘೇ ಶಕ್ತಿಃ ಕಲೌ ಯುಗೇ**

ಇಂದು ಸಂಘ ಶಕ್ತಿಯು ಎಲ್ಲ ಕ್ಷೇತ್ರದಲ್ಲಿಯೂ ಅತ್ಯವಶ್ಯಕ. ಸಂಘದಿಂದ ವ್ಯಕ್ತಿ ವ್ಯಕ್ತಿಗಳ ಸಾಮಾಜಿಕ ಸಂಘಟನೆ, ಸಮಾಜ ಸುಧಾರಣೆ, ಧಾರ್ಮಿಕ ಜಾಗ್ರತಿ ಶೈಕ್ಷಣಿಕ ಪ್ರಗತಿ ಸಾಧ್ಯ. ಅಂತೆಯೇ ಪೂರ್ವ ಕಾಲದಲ್ಲಿ ಶಿವಶರಣರು, ಯೋಗಿಗಳು, ಸಮಾಜ ಸುಧಾರಕರು ಸಂಘ ಸಂಸ್ಥೆ ಕಟ್ಟಿದರು; ಅನುಭವಮಂಟಪ ರಚಿಸಿದರು. ಇವುಗಳಿಂದ ಅವರು ತ್ಯಾಗ ಯೋಗಗಳನ್ನು ಬೀರಿದರು. ಒಳ್ಳೇ ತತ್ತ್ವಗಳನ್ನು ಸಾರಿದರು; ಸದ್ಗುಣ ಬೀಜಗಳನ್ನು ಬಿತ್ತಿದರು. ಶೀಲ ಸಂಸ್ಕೃತಿಯನ್ನು ಉಳಿಸಿದರು, ಭಕ್ತರಲ್ಲಿ ಭಕ್ತಿಯನ್ನು ಬೆಳೆಸಿದರು.

ವ್ಯಕ್ತಿಯು ಸಮಾಜ ಜೀವಿ. ಸಮಾಜವನ್ನು ಅವಲಂಬಿಸಿಯೇ ಅವನ ಹೃದಯವು ವಿಕಾಸಗೊಳ್ಳಬೇಕಾಗುತ್ತದೆ. ಆ ವಿಕಾಸವು ಪರಿಪೂರ್ಣವಾಗಬೇಕಾದರೆ, ಸಂಘ ಸಂಸ್ಥೆಯು ಬೇಕಾಗುತ್ತದೆ. ಅದುವೆ ಜನಸಾಮಾನ್ಯರ ಸಂಘಟನೆ ಮಂತ್ರ.

ಸಂಘ ಸಂಸ್ಥೆಗಳಲ್ಲಿದ್ದಷ್ಟು ಉದಾತ್ತತೆಯ ಧ್ಯೇಯಧೋರಣೆ, ವಿಶಾಲತೆಯ

ಮನೋಭಾವನೆ, ಸಮಾಜ ಸೇವೆಯ ಪ್ರವೃತ್ತಿ, ಭಾವೈಕ್ಯತೆ, ವೈಯಕ್ತಿಕತೆಯಲ್ಲಿ ಬರಲಾರದು; ಅಲ್ಲಿ ಸ್ವಲ್ಪ ಸಂಕುಚಿತತೆಗೆ ಅಹಂಕಾರಕ್ಕೆ ಕಾರಣವಾದರೆ, ಸಾಂಘಿಕ ಸಹಕಾರ ಜೀವನವು ವಿವೇಕೋದಯಕ್ಕೆ ಕಾರಣವಾಗುತ್ತದೆ; ಮನುಷ್ಯನನ್ನಾಗಿ ಮಾಡುತ್ತದೆ; ತನ್ಮೂಲಕ ಯೋಗಿಯನ್ನಾಗಿ ಮಾಡುತ್ತದೆ; ತ್ಯಾಗಿಯನ್ನಾಗಿ ಮಾಡುತ್ತದೆ. ಹೆಚ್ಚಾಗಿ ಸಮಾಜ ಸೇವಕನನ್ನಾಗಿ ರೂಪಿಸುತ್ತದೆ, ಕಾಯಕವನ್ನೇ ಕಲಿಸುತ್ತದೆ.

ಹೀಗಾದಾಗ ಮೇಲು ಕೀಳುಗಳಿಗೆ ಅವಕಾಶವಿರಲಾರದು. ದುಡಿದಂತೆ ಶಕ್ತಿ, ಸ್ಫೂರ್ತಿ ದೊರೆತು ಅದುವೆ ಸಮಾಜಕ್ಕೆ ದಾರಿದೀಪವಾಗುತ್ತದೆ; ಅಲ್ಲಿ ಸಾಮಾಜಿಕ ಪ್ರಜ್ಞೆ ಮೂಡುತ್ತದೆ; ವ್ಯಕ್ತಿತ್ವ ವಿಕಾಸವಾಗುತ್ತದೆ; ಮಲತ್ರಯಂಗಳು ನಾಶವಾಗುತ್ತವೆ. ಇದರಿಂದಾಗಿ ಸಾಮಾಜಿಕ ಸಂಬಂಧವು ಬಂಧುರವಾಗಿ ಪರಸ್ಪರ ಸೌಹಾರ್ದ ಸಹನೆ ಗೌರವಗಳು ಅಭಿವೃದ್ಧಿಯಾಗುತ್ತವೆ, ಆತ್ಮನ ಬೆಳಗು ಉಂಟಾಗಿ ಕಾವ್ಯದ ಹೊನಲು ಹರಿಯುತ್ತದೆ. ಅಂತೆಯೇ ಮರವೆಯ ಕತ್ತಲೆ ದೂರವಾಗುತ್ತದೆ; ವಿಶಾಲ ಹೃದಯ ಜೇಂಗೊಡಗಳಲ್ಲಿ ಸವಿಜೇನು ಸುರಿಯುತ್ತದೆ. ಶುಚಿಯಂತೆ ರುಚಿ ಎಂಬುದರಿಂದ ಒಳ್ಳೇ ವಿಚಾರವೀಚಿಗಳು ಹಂತಹಂತವಾಗಿ ಬೆಳೆಯುತ್ತವೆ. ಫಲಸ್ವರೂಪವಾಗಿ ಸಾಧಕನ ಸಾಧನೆಯಲ್ಲಿ ಅಂತಃಶಕ್ತಿ ಪ್ರವಹಿಸುತ್ತದೆ; ನವಚೈತನ್ಯವುಂಟಾಗಿ ಸಮಾಜವನ್ನು ಎಚ್ಚರಿಸುವ ಶಕ್ತಿ ಪ್ರಬಲಗೊಳ್ಳುತ್ತದೆ.

ಆದುದರಿಂದ, ವಿಶಾಲಭಾವನೆ ಸೂರ್ಯೋದಯದಿಂದ ಚೈತನ್ಯದ ಬೆಳಕು ಬರುವಂತೆ ಸಂಘ ಸಂಸ್ಥೆಗಳ ವ್ಯಕ್ತಿ-ವ್ಯಕ್ತಿಗಳ ಸಹಕಾರ ಜೀವನದಿಂದ ನಾಡಿಗೂ ಹಾಗೂ ರಾಷ್ಟ್ರಕ್ಕೂ ಕಲ್ಯಾಣವಾಗುವಂತಾಗಲೆಂಬುದನ್ನು ಸಂಘೇ ಶಕ್ತಿಃ ಕಲೌ ಯುಗೇ ಎಂಬ ಸೂಕ್ತಿಯು ನೆನಪಿಸುತ್ತಿದೆ.

## ದೀಪಾವಲೀಪ್ರಕಾಶೇಽಸ್ಮಿನ್ ರಾಷ್ಟ್ರ ಶ್ರೀರಭಿವರ್ಧತಾಂ

"ಜೀವನವ್ಯೋಮದಲ್ಲಿ ಕಾರ್ಮೋಡಗಳು ಕವಿಯುತಿಹವು ನೋಡಯ್ಯ! ಬಗೆಬಗೆಯಾಗಿ ಬಂದು ಬೆಳಕಿಗೆ ಅಡ್ಡಯಿಸುತಿಹವು ನೋಡಯ್ಯ! ಈ ಅರುಣ ಕಿರಣಂಗಳು ನಿನ್ನನ್ನೇ ಬೆಳಗುವಂತೆ ಕೃಪೆದೋರಾ, ಭೂಲತಾ ಪುರೀಶ ಕರ್ತೃ ಜಗದ್ಗುರು ಗುರು ಸಿದ್ಧೇಶ್ವರಾ!"

ಕವಿದ ಕತ್ತಲೆ ಕಳೆಯಲು ಬೆಳಕುಬೇಕು. ಬೆಳಕಿರದ ಜೀವನ ಅದು ಸ್ಮಶಾನ. ಮಾನವನೆದುರಿಗೆ ಕತ್ತಲೆ ಬಂದರೆ ಪ್ರಗತಿ ಅಸಾಧ್ಯ. ಕತ್ತಲೆಯಲ್ಲಿ ನಡೆಯುವವನಿಗೆ ಕಲ್ಲು ಮುಳ್ಳುಗಳು ಚುಚ್ಚುತ್ತವೆ. ಸಹಿಸಲಾರದ ನೋವಿನ ಬಾಧೆಯುಂಟಾಗುತ್ತದೆ. ಪ್ರಗತಿಯ ವೇಗ ಹೆಚ್ಚಲು ಕೇವಲ ತತ್ತ್ವದ ಜೊತೆಗೆ ಸತ್ಯದ ಬೆಳಕು ಹೃದ್ವ್ಯೋಮದಲ್ಲಿ ಪ್ರಕಾಶಗೊಂಡರೆ ಜೀವನವು ವಿಕಾಸಮಯವಾಗುವದು. ಜೀವನದಲ್ಲಿರುವ ಅಜ್ಞಾನದ ಅಂಧಃಕಾರ ತೊಲಗಿ ಆಶೆ-ಆಮಿಷಗಳು ನಷ್ಟಗೊಂಡರೆ ಭಾವಪುಷ್ಟಿಯಾಗಿ, ಹೃದಯವು ಸಂತುಷ್ಟಿಯಾಗುವದು.

ನಮಗಿಂದು ಒಳ-ಹೊರಗೆ ದೀಪಗಳನ್ನು ಹಚ್ಚಿ ಸಂಭ್ರಮವನ್ನು ಕಣ್ಣಾರೆ ಕಂಡು ಆನಂದ ಪಡೆಯುವದು ಅತ್ಯವಶ್ಯಬೇಕಾಗಿದೆ. ಹೊರಗಿನ ಕತ್ತಲೆಯ ಮೊತ್ತಕ್ಕೆ ಅಂಜದೆ ಬೆಳಕಿನ ಕಡೆಗೆ ಧಾವಿಸಲು, ತಿಳಿಸಲು ದೀಪಾವಳಿ ಬರುತ್ತಲಿದೆ. ಶ್ರದ್ಧೆ, ಕಾರ್ಯ ಗೌರವಗಳಲ್ಲಿ ಪ್ರಜ್ಞೆ ಮೂಡಿಸಬೇಕಾಗಿದೆ. ಭಾವನೆಯಲ್ಲಿ ವಿಶಾಲತೆ ತರಬೇಕಾಗಿದೆ. ದ್ವೇಷಾಸೂಯೆಗಳನ್ನು ನಿರ್ಮೂಲನ ಮಾಡಿ ಸಂಕುಚಿತ ಮತಭಾವಗಳನ್ನು ಕತ್ತರಿಸಿ, ಸಮನ್ವಯ ದೃಷ್ಟಿಯನ್ನು ಪ್ರಜ್ವಲಿಸಬೇಕಾಗಿದೆ. ಮೋಡಗಳು ಚದುರಿದೊಡನೆ ಸೂರ್ಯನು ಪ್ರಜ್ವಲಿಸುವಂತೆ, ಅಸತ್ಯ, ಅಹಂಕಾರ, ಸ್ವಾರ್ಥ ನಷ್ಟವಾಗಿ ಅಂತರಂಗ-ಬಹಿ ರಂಗ ಶುದ್ಧಿಯಾದರೆ, ಅಲ್ಲಿ ಆತ್ಮಪ್ರಕಾಶ ಹಾಗೂ ರಾಷ್ಟ್ರ ಸಂವರ್ಧನೆ. ಕತ್ತಲೆಯ ಗರ್ಭದಲ್ಲಿಯೇ ಬೆಳಕನ್ನು ಕಾಣಬೇಕಾಗಿದೆ. ಮಳೆ-ಬೆಳೆ ಹೋಗಿ ಕಳೆಗುಂದಲು ನಮ್ಮಲ್ಲಿಯ ಅಜ್ಞಾನವೇ ಕಾರಣ. ನಮ್ಮ ಮೊರೆ ದೇವರು ಮೆಚ್ಚುವಂತಾದರೆ, ಸಾರ್ಥಕ. ಸ್ವಾರ್ಥದ ಕಾಳ್ಗಿಚ್ಚಿನಲ್ಲಿ ಬಿದ್ದರೆ ತೋರಿಕೆಯಾದರೆ ಈಶ್ವರನು ಮೆಚ್ಚಲಾರ. ಅದಕ್ಕಾಗಿ ಬೆವರು ಸುರಿಸಬೇಕು. ಕಣ್ಣೀರ ಹರಿಸಬೇಕು. ಬೆಳಕನ್ನು ಒಳಗೆ ಬರಮಾಡಿಕೊಳ್ಳ ಬೇಕು. ಹೃದಯ ಪಣತೆಯೊಳಗೆ ಸದ್ಭಕ್ತಿ ತೈಲವನು ಹಾಕಬೇಕು. ಸುವಿಚಾರ ಬತ್ತಿ ಯನ್ನು ಹೊಸೆದಿಟ್ಟು ಹಚ್ಚಬೇಕು. ಇಂತಾದಾಗ ಹೃದಯ ಗುಡಿಯೊಳಗೆ ಕುಳಿತಿರುವ ಈಶ್ವರನು "ಪರಂಜ್ಯೋತಿ ಬೆಳಗಿನೊಳು ದರ್ಶನ ಕೊಡಲಾರನೇ?" 'ನಂಬಿ ಕರೆದಡೆ ಓ ಎನ್ನನೆ ಶಿವನು' ಹುಟ್ಟಿಸಿದವನು ಹುಲ್ಲು ಮೇಯಿಸುವನೆ?

"ಸಮಸ್ತ ಕತ್ತಲೆಯ ಮುಸುಕವ ಕಳೆದಿಪ್ಪ ಇವರ ನೋಡಯ್ಯ, ಬೆಳಗಿಂಗೆ ಬೆಳಗು ಸಿಂಹಾಸನವಾಗಿ ಬೆಳಗು-ಬೆಳಗು ಕೂಡಿದ ಕೂಟವ ಕೂಡಲ ಸಂಗಯ್ಯ ತಾನೆ ಬಲ್ಲ" ಈ ಅಮರವಾಣಿಯು ಹೃದಯುಮುಟ್ಟಿದಾಗ ಶಬ್ದ ಮುಗ್ಧವಾಗುತ್ತದೆ. ಕತ್ತಲೆ, ಬೆಳಗೆಂಬುವ ಭೇದ ಶೂನ್ಯವಾಗುತ್ತದೆ. ದೃಶ್ಯದೀಪ್ತಿಗಿಂತಲೂ, ಮಾತು ಮನಂಗಳತ್ತ ಮೀರಿದ ಜ್ಯೋತಿಗಳಿಗೆ ಜ್ಯೋತಿಯಾದ ಆ ಪರಂಜ್ಯೋತಿಯ ಮಹಾ ಬೆಳಗು ನಮ್ಮೆಲ್ಲರನ್ನು ಎಚ್ಚರಿಸಿ, ಬೆಳಕಿನತ್ತ ಕರೆಯಲಿ, ರಾಷ್ಟ್ರೋನ್ನತಿಗೆ ದಾರಿದೀಪವಾಗಲಿ.

## ಅಭಿಮಾನಧನೇನೈವ ಸಮಾಜೋದ್ಧಾರಕೋ ಭವೇತ್

**"A greater whole-Being,whole-Knowledge whole-Power is needed to weld into greater unity of whole life"** ಈ ನುಡಿ ಅರವಿಂದ ರದು. ಅಂದರೆ "ಸಮಗ್ರ ಜೀವನವನ್ನು ಘನವಾದ ಏಕತೆಯಲ್ಲಿ ಬೆಸೆಯಬಲ್ಲ ಘನವೂ ಸಮಗ್ರವೂ ಆದ ಇರುವಿಕೆ. ಅರಿವು ಬಲಗಳು ನಮಗೀಗ ಅವಶ್ಯಕವಾಗಿವೆ. ಈ ಅರಿವಿನ ಬೆಳಕಿನಲ್ಲಿ ಸಮಾಜ ಕಟ್ಟಬೇಕಾಗಿದೆ, ಅರಿವು ಅಭಿಮಾನ. ಈ ಎರಡೂ ಕೂಡಿ ದರೆ ಸಮಾಜಕ್ಕ ದೊಡ್ಡಶಕ್ತಿ ಬರುತ್ತದೆ. ಇದಕ್ಕೆ ಸಮಾಜ ಸೇವೆಯೇ ಬೆನ್ನೆಲುಬು. ಆ ಸೇವೆ ನಿಷ್ಠೆಯುಳ್ಳದ್ದಾಗಿರಬೇಕು ವಂಚನೆ, ಮೋಸ ಎಳ್ಳನಿತೂ ಕೂಡಿರಬಾರದು.

ಸಮಾಜವು ಮುಂದೆ ಬರಬೇಕು. ಸಮಾಜದ ವ್ಯಕ್ತಿಗಳು ಮುಂದೆ ಬರಬೇಕು. ಆ ವ್ಯಕ್ತಿಗಳ ಶಕ್ತಿಯಿಂದ ಸಂಘಟನೆಯಾಗಿ, ಮಾನವೀಯ ಬಾಳನ್ನು ಬೆಳಗಿಸಿ ಸಮಾಜ ರಚನೆಯಾಗಬೇಕು ಅದು ಕೇವಲ ಭೌತಿಕ ಶಕ್ತಿಯಿಂದ ಕೂಡಿದರೆ ಸಾಲದು. ಆಧ್ಯಾತ್ಮಿಕ ಸಂಪತ್ತಿನಿಂದ ಸಮ್ಮಿಲಿತವಾಗಿದ್ದರೆ, ದೈವೀಯ ಶಕ್ತಿಯುಂಟಾಗಿ ಆಂತರಿಕ ಉನ್ನತಿ ಹಾಗೂ ಸಾಮಾಜಿಕ ಉನ್ನತಿಯನ್ನು ಸಾಧಿಸಲು ಸಾಧ್ಯವಾಗುತ್ತದೆ. ಈ ಸಾಧನೆಯ ಮಾರ್ಗದಲ್ಲಿದ್ದಾಗ, ಒಬ್ಬರು ಹೆಚ್ಚು ಒಬ್ಬರು ಕಡಿಮೆ. ಈ ಪರಿಮಿತ ಭಾವಗಳನ್ನು ಪ್ರಚಾರಪಡಿಸುತ್ತ ಹೋದಲ್ಲಿ, ಸಮಾಜ ಸಂಘಟನೆಗೆ ಅಡ್ಡಿಯಾಗುವದಲ್ಲದೆ, ವಾದವಿವಾದಕ್ಕೆ ಆಸ್ಪದ ಕೊಟ್ಟಂತಾಗುವದು. ಯಾವ ಸಂಸ್ಥೆಯ ನೆರಳಿನಲ್ಲಿ ದುಡಿಯುತ್ತಾರೋ ಆ ಸಂಸ್ಥೆಯ ಅಭಿಮಾನ ಅವರಿಗಿರದಿದ್ದರೆ ಸಮಾಜಸೇವೆ ಕನಸಿನ ಗಂಟಾದೀತು. ಸಮಾಜಸೇವೆ ಶಿವಪೂಜೆಗಿಂತಲೂ ಹೆಚ್ಚಿನದು. ಒಂದು ಆತ್ಮೋದ್ಧಾರ, ಮತ್ತೊಂದು ಸಮಾಜೋದ್ಧಾರ. ಸಮಾಜಸೇವೆ ಮಾಡುವವರು ವಿಶಾಲ ಮನೋಭಾವನೆಯುಳ್ಳವರಾಗಿರಬೇಕು. ತನ್ನ ಸಂಸ್ಥೆಯ ಅಭಿಮಾನ ಬಿಡದೆ, ಅನ್ಯರನ್ನು ಹೀಯಾಳಿಸದೆ, ಇಂದು ಸಮಾಜವನ್ನು ಭದ್ರ ಮಾಡಬೇಕಾಗಿದೆ. ಯಾವುದೇ ರಾಷ್ಟ್ರವಾಗಲಿ, ಸಮಾಜವಾಗಲಿ, ಮತವಾಗಲಿ, ಮುಂದೆ ಬರಬೇಕಾದರೆ, ಅದರ ಅಭಿಮಾನವೇ ಮುಖ್ಯ ಕಾರಣವಾಗಿದೆ. ಆ ಅಭಿಮಾನವು ನಟನೆಯಾಗನೇ, ಸಹಜತೆ ಹಾಗು ಸರಳತೆಯಲ್ಲಿ ಕೂಡಿದ್ದರೆ ಅದಕ್ಕೆ ಬಲ ಬರುತ್ತದೆ. ತೋರಿಕೆ ಯಾವಾಗಲೂ ಅದು ಕೋಲ್ಮಿಂಚು, ಅದರಿಂದ ಸಮಾಜೋದ್ಧಾರಕ್ಕೆ ಮತ್ತಿಷ್ಟು ತೊಂದರೆಯಾಗುತ್ತದೆ. ದೆವ್ವ ಹೊಕ್ಕ ಮನೆಯಂತಾಗುತ್ತದೆ. ಶುದ್ಧಭಾವನೆಯಿರದ ಸಮಾಜಸೇವೆ, ಕರಿಕಿ ತುಂಬಿದ ಹೊಲವಾಗುತ್ತದೆ. ಕರಕಿಯ ಕಳೆ ಕಳೆದರೆ ಸಮಾಜಕ್ಕೆ ಕಳೆ ಬರುತ್ತದೆ. ಸಹಜತೆ ಮಲ್ಲಿಗೆ ಹೂವಾದರೆ ಕೃತಕತೆ ಕೆಸರು ತುಂಬಿದ ಭಾವಿಯಂತೆ ಹಾಗೂ ಊಸರುಳ್ಳಿಯಂತೆ ಸಮಾಜಸೇವೆ ಮಾಡುವವರು ತಳವಿಲ್ಲದ ಗಡಿಗೆಯಂತಾಗದ ದೃಢವಿಶ್ವಾಸವೆಂಬ ಜಲವನ್ನು ತುಂಬಿಕೊಂಡು ಚಿನ್ನದ ಘಟದಂತಾಗಬೇಕು. ಕೃತಿ ಕೃತ್ರಿಮವಾಗದೆ ದೇವರು ಮೆಚ್ಚುವಂತಾಗಬೇಕು ಅಂದರೆ ಅಭಿಮಾನ ಧನವನ್ನು ಬೆಳೆಯಿಸಿಕೊಳ್ಳಬೇಕು ಸ್ವಾರ್ಥ ಬಿಟ್ಟು ಸಮರ್ಪಣ ಭಾವನೆ ಬೆಳೆಯಿಸಿಕೊಂಡರೆ ಮಾತ್ರ ಸಮಾಜ ಸುಧಾರಣೆ ಸಾಧ್ಯ.

## ಸದ್ಗುಣಾದಿ ಸದಾಚಾರ ಮೌಲ್ಯಂ ಹಿ ಮಾನವೀಯತಾ

ಮಾನವೀಯತೆ ಬದುಕಿನಲ್ಲಿ ಒಡಮೂಡಲು ಅದರ ಆಳೆತ್ತರಗಳನ್ನು ಅಳೆಯಲು ಅಲ್ಲಿ ಕಾಣುವ ಪರಮೋಚ್ಚ, ಆಚಾರಬದ್ಧ, ಅನುಕಂಪ ಭರಿತ, ಸಚ್ಚಾರಿತ್ರ್ಯದ ಪರಮ ಶಕ್ತಿಯೇ ಮಾನವೀಯತೆಯ ಮೌಲ್ಯ, ಈ ಮೌಲ್ಯ ಮಾಪನ ಬದುಕಿನ ಯೋಗ್ಯತೆಯನ್ನು ಅವಲಂಬಿಸಿರುತ್ತದೆ. ಮಾನವೀಯತೆ ಇದ್ದಲ್ಲಿ ಅಂತಃಕರಣದ ಕಾರಂಜಿ ಪುಟಿಯುತ್ತಿರುತ್ತದೆ. ವ್ಯಕ್ತಿತ್ವವಿಕಾಸಕ್ಕೆ ಸಾಧನವಾಗಿರುತ್ತದೆ. ಭಾವಜೀವಿಯಾಗಿ ಕರುಣೆ ಕೃಪೆ

ವಾತ್ಸಲ್ಯಗಳು, ಇನ್ನೊಬ್ಬರಿಗೆ ಶುಭಕೋರುವ ಪ್ರತೀಕಗಳು ಕಂಡು ಬರುತ್ತವೆ. ದೀನ ದಲಿತರ ಉದ್ಧಾರವು ಮನೆ ಮಾಡಿಕೊಂಡಿರುತ್ತದೆ. "ಅಯ್ಯಾ ಎಂದಡೆ ಸ್ವರ್ಗ ಎಲವೋ ಅಂದರೆ ನರಕ" ಎಂಬ ಮಹಾತ್ಮಾ ಬಸವೇಶ್ವರರ ವಾಣಿ ಮಾನವೀಯ ಮೌಲ್ಯವನ್ನು ಎತ್ತಿ ಹಿಡಿದಿದೆ. ಜನ ಸಾಮಾನ್ಯರ ಒಳಿತಿಗಾಗಿ ಈ ಜೀವನವನ್ನು ಮೀಸಲಿರಿಸಿದರೆ ಪರಮಾತ್ಮನ ಕೃಪೆಯಾಗುತ್ತದೆ. ಈ ಆತ್ಮ ವಿಕಾಸದ ಪ್ರಬುದ್ಧ ಹಂತವೇ Human dignity. ಈ ವಿಕಾಸದ ಕ್ರಮಗಳನ್ನು ಬದುಕಿನಲ್ಲಿ ಅಳವಡಿಸಿಕೊಳ್ಳಬೇಕು. ಅಂದರೆ ಸಚ್ಚಾರಿತ್ರ್ಯಶೀಲರಾಗಬೇಕು. ಆ ಶಕ್ತಿಶಾಲಿ ವ್ಯಕ್ತಿತ್ವವನ್ನಿಟ್ಟುಕೊಂಡವರು ಕೇವಲ ಸೃಷ್ಟಾರರಾಗದೆ ದ್ರಷ್ಟಾರರಾಗುತ್ತಾರೆ. ಅವರು ನೋಡುತ್ತಾರೆ, ಕೇಳುತ್ತಾರೆ. ಇಂಥವರ ಎದುರಿನಲ್ಲಿ ಸಾಧಾರಣ ಮನುಷ್ಯರನ್ನು ತುಲನೆ ಮಾಡಿದರೆ ಭೂಮ್ಯಾಕಾಶದಷ್ಟು ಅಂತರ ವಾಗುತ್ತದೆ. ಸಾಧಾರಣ ಜನರ ದೃಷ್ಟಿಯಲ್ಲಿ ಇಲ್ಲದಿರುವ ಶಕ್ತಿಯು ಇವರಲ್ಲಿ ಅಡಗಿ ಕೊಂಡಿರುತ್ತದೆ. ಈ ಮಹಾನ್ ವ್ಯಕ್ತಿತ್ವವುಳ್ಳವರು ಮುರುಕು ಗುಡಿಸಲದಲ್ಲಿದ್ದರೂ ಅವರ ಆತ್ಮಿಕ ಪ್ರಕಾಶದಿಂದ ಆ ಮುರುಕು ಗುಡಿಸಲು ಸುವರ್ಣಮಂದಿರಕ್ಕಿಂತಲೂ ಹೆಚ್ಚಾಗಿ ಸುಂದರವಾಗಿ ಕಾಣುತ್ತದೆ. ಮನುಷ್ಯನು ಚಾರಿತ್ರ್ಯ ಬಲದಿಂದ ತನ್ನಲ್ಲಿ ತಾನು ಮನೋಹರ ಪ್ರಕಾಶವನ್ನು ಕಾಣುತ್ತಾನೆ. ಚಾರಿತ್ರ್ಯಬಲ ಹೊರಗಿನ ಪ್ರಚಾರದಿಂದ ಬರುವದಲ್ಲ, ಅದು ಕೇವಲ ತನ್ನಂತರಂಗದ ಶುದ್ಧಿಗಾಗಿ ಪಾವಿತ್ರ್ಯಕ್ಕಾಗಿ ಇರುತ್ತದೆ. ಆಗ ಅವನಿಗೆ ಜಗತ್ತಿನ ಸಮಸ್ತ ವಸ್ತುಗಳು ತುಚ್ಛವೆಂದು ಕಂಡು ಬಂದರೂ, ೧ ಜಗತ್ತಿನ ಮಧ್ಯ ದಲ್ಲಿದ್ದು ಅದಾವ ವಿಕಾರಕ್ಕೊಳಗಾಗದೆ ಜಗತ್ತಿನ ಹಿತಚಿಂತನೆಯನ್ನು ಬಿಡದೆ ಕಾರ್ಯ ಮಾಡುತ್ತಾನೆ. ಸಚ್ಚಾರಿತ್ರ್ಯ ಮನುಷ್ಯನು ರಾಷ್ಟ್ರ ರಚನೆ ಮಾಡಲು ಸಮರ್ಥನಿರುತ್ತಾನೆ. ಹೊಗಳಿಕೆ ತೆಗಳಿಕೆಗೆ ಲಕ್ಷ್ಯಗೊಡಲಾರನು. ಆತನು ಅಶಕ್ತರಲ್ಲಿ ಶಕ್ತಿಯನ್ನು ತುಂಬುಕೊಡು ತ್ತಾನೆ. ತನ್ನ ವ್ಯಕ್ತಿತ್ವ ಪ್ರಭಾವದಿಂದ ಜಗತ್ತನ್ನೇ ಚುಂಬಕದಂತೆ ತನ್ನತ್ತ ಎಳೆದು ಕೊಳ್ಳುತ್ತಾನೆ. ಬಿದ್ದವರನ್ನು ಮೇಲಕ್ಕೆತ್ತುತ್ತಾನೆ. ಇದುವೇ ಮಾನವೀಯತೆ. ಮಾನವೀಯತೆ ಮಾನವನನ್ನು ಉಳಿಸುತ್ತದ, ಬೆಳೆಸುತ್ತದೆ. ಭೂಮಿಯಲ್ಲಿ ಬಿತ್ತಿದ ಬೀಜಕ್ಕೆ ನೀರು ಬೇಕಾದಂತೆ ಹೃದ್ಭೂಮಿಯು ಹಸನಾಗಿ ಸಂಪದ್ಭರಿತವಾಗಬೇಕಾದರೆ ಹೃದಯವಂತಿಕೆ ಮಾನವೀಯತೆಯು ಅತ್ಯಾವಶ್ಯಕ. ಜ್ಞಾನಾನುಭವದ ಹಿರಿಬೆಳಗನ್ನು ಹಚ್ಚಿದರೆ ತಾಮ ಸೀಯ ಆಸುರೀ ಶಕ್ತಿಗಳು ಚದುರಿಹೋಗಿ ಹೃದ್ಗಮನವು ಜ್ಞಾನದೀಪಾವಳಿಯಿಂದ ಬೆಳ ಗುವದು. ಇದುವೆ ನಿಜವಾದ ಧರ್ಮ, ಮಾನವೀಯತೆ.

## ಯೋಚನಾ ಗತಗೌರವಾ

ಸಾಮಾಜಿಕ ಜೀವನವು ಅದೊಂದು ಕಷ್ಟಪರಂಪರೆಯ ಜೀವನ. ಗುಹೆಯಲ್ಲಿ ಕುಳಿತು ತಪಸ್ಸು ಮಾಡುವವರಿಗಿಂತಲೂ ಹಿರಿಯದಾದುದು. ಈ ಜೀವನಪ್ರವಾಹದಲ್ಲಿ ಈಸಬೇಕಾಗುತ್ತದೆ, ಇದ್ದು ಜಯಿಸಬೇಕಾಗುತ್ತದೆ. ಅಪವಾದದ ಹೊರೆಗಳನ್ನು ಹೊತ್ತು

ಸಹಿಸಬೇಕಾಗುತ್ತದೆ. ಚಿಂತಿಸಿ ಚಿಂತಿಸಿ ದೇಹವನ್ನು ದಹಿಸಬೇಕಾಗುತ್ತದೆ. ಸಾಮಾಜಿಕ ಸಮತೆಯ ದಿವ್ಯೌಷಧಿಯನ್ನು ಕುಡಿಯಬೇಕಾಗುತ್ತದೆ. ಮೇಲು ಕೀಳೆಂಬ ಬೇರನ್ನು ಕಡಿಯಬೇಕಾಗುತ್ತದೆ. ಹೃದಯ ತೃಪ್ತಿಗೆ ದುಡಿಯಬೇಕಾಗುತ್ತದೆ. ಆತ್ಮನ ಪರಿಪೂರ್ಣತೆಗೆ ಉಪಾಸನೆ ಮಾಡಬೇಕಾಗುತ್ತದೆ. ವ್ಯಕ್ತಿತ್ವ ರೂಪಿಸಬೇಕಾಗುತ್ತದೆ. ಕೋಪ-ತಾಪಗಳನ್ನು ನಿವಾರಿಸಬೇಕಾಗುತ್ತದೆ. ಅಂತಃಸ್ಸತ್ವ ಪಡೆಯಬೇಕಾಗುತ್ತದೆ. ಶಾಶ್ವತ ಸತ್ಯಕ್ಕಾಗಿ ಹೋರಾಡಬೇಕಾಗುತ್ತದೆ, ಜ್ಞಾನ ಕರ್ಮಗಳೆರಡರಲ್ಲಿ ತೊಡಗಿರಬೇಕಾಗುತ್ತದೆ. ಈ ಸಾಮಾಜಿಕ ಜೀವನದಲ್ಲಿ ಅಡೆತಡೆಗಳು ಬೆನ್ನು ಹತ್ತಿ ಬಂದರೂ, ಬೆಚ್ಚದೆ ಬೆದರದೆ ಹಿರಿ ಗುರಿಯನ್ನು ಸಾಧಿಸುವುದೇ ಪರಮ ಕರ್ತವ್ಯವೆಂದು ಬಗೆಯಬೇಕಾಗುತ್ತದೆ.

ಈ ಸಾಮಾಜಿಕ ಜೀವನರಂಗದಲ್ಲಿದ್ದವರು ಯೋಜನೆಗಳನ್ನು ತಯಾರು ಮಾಡಬೇಕಾಗುತ್ತದೆ. ಅದಕ್ಕಾಗಿ ಮೊದಲು ಯೋಚಿಸಬೇಕಾಗುತ್ತದೆ. ಯೋಜನೆಗೆ ಯೋಚನೆಯೇ ಭದ್ರ ಬುನಾದಿ. ನಂತರ ಅದರ ಕಾರ್ಯಸಿದ್ಧಿಗಾಗಿ ಯಾಚಿಸಬೇಕಾಗುತ್ತದೆ. ಸಮಾಜೋನ್ನತಿ ಹಾಗೂ ಭದ್ರತೆಗಾಗಿ ಯಾಚನೆಯಿಲ್ಲದೆ ನಡೆಯದು. ಈ ಯಾಚನೆಯು ನಿಃಸ್ವಾರ್ಥವಿರಬೇಕು. ಮತ್ತೊಬ್ಬರ ಹಿತವನ್ನು ಬಯಸುವಂತಹದಿರಬೇಕು ಬೇಧ ಭಾವಗಳನ್ನು ಅಳಿಕಿಸುವಂತಹದಿರಬೇಕು. ಇಂತಹ ಯಾಚನೆಯಿಂದ ಆತ್ಮಗೌರವಕ್ಕೆ ಚ್ಯುತಿ ಬಂದರೂ ಚಿಂತೆ ಮಾಡದೆ, ಮುನ್ನುಗ್ಗಿದರೆ ಹಿಡಿದ ಕಾರ್ಯವು ಸಾಧ್ಯವಾಗುವದು.

ಒಮ್ಮೊಮ್ಮೆ ಈ ಯಾಚನೆಯು ಚಿಂತಾಂಬುಧಿಯಲ್ಲಿ ಮುಳುಗಿಸುತ್ತದೆ. ಹೃದಯವನ್ನು ತಲ್ಲಣಗೊಳಿಸುತ್ತದೆ. ಹೃದ್ಭಾವಗಳು ಎತ್ತರಕ್ಕೆ ಹೋಗದಂತೆ ಮಾಡಿಸುತ್ತದೆ. ಸಾಮಾನ್ಯರಿಗಿಂತ ಸಾಮಾನ್ಯರಾಗಿಯೂ ಹೋಗುವ ಪ್ರಸಂಗ ಬರುತ್ತದೆ. ಬೇಡುವ ಭಾವನೆಯ ಅಂತರಂಗದಿಂಗಿತವು ಕೊಡುವವರಿಗೆ ಅರ್ಥವಾಗದಿದ್ದರೆ ಈ ಯಾಚನೆಯೇ ಸಾಕೆಂದು ಮನಸ್ಸಿನಲ್ಲಿ ಮೂಡುತ್ತದೆ. "ಧರೆಗೆ ಯಾಚನೆಯಿಂದ ಲಘುತರಮುಂಟೆ" ನಿಜಗುಣಶಿವಯೋಗಿಗಳ ಈ ನುಡಿಯು ನೆನಪಿಗೆ ಬಂದು ಬೇಡುವದೇ ನಿರುತ್ಸಾಹವುಂಟಾಗುವದು. ಸಹಜ ಯೋಚನೆ ಬುದ್ಧಿಯ ಕೆಲಸವಾದರೆ ಯಾಚನೆ ಹೃದಯದ ಕೆಲಸವಾಗುತ್ತದೆ. ಕಂಡವರನ್ನು ದೀನವಾಣಿಯಿಂದ ಕೇಳುವದು ಕೀಳುತನದ್ದೆಂದು ತಿಳಿದರೂ ಕೇಳುವದು ಪರಾರ್ಥವಾಗಿದ್ದರೆ, ಮಹೋನ್ನತ ಕಾರ್ಯಸಾಧಕವಾಗಿದ್ದರೆ, ಅದು ಸತ್ಯಶುದ್ಧ ಕಾಯಕವಾಗುತ್ತದೆ. ಯಾಚನೆಗಳಲ್ಲಿಯೂ ಎರಡು ತರ. ಒಂದು ಬಹಿರಂಗ ಯಾಚನೆ, ಮತ್ತೊಂದು ಅಂತರಂಗದ ಯಾಚನೆ ಒಂದು ಸಾಮಾಜಿಕ ಉನ್ನತಿಯನ್ನುಂಟು ಮಾಡಿದರೆ ಮತ್ತೊಂದು ಆತ್ಮೋನ್ನತಿಯನ್ನುಂಟು ಮಾಡುತ್ತದೆ. ಒಂದು ಮತ್ತೊಂದಕ್ಕೆ ಪೂರಕವಾಗದಂತೆ ನಡೆದುಕೊಳ್ಳುವುದೇ ಧಾರ್ಮಿಕ ಭಿಕ್ಷುಕನ ಮುಖ್ಯ ಗುರಿಯಾಗಿರಬೇಕು. ಭಾವಶುದ್ಧಿ ಸಾಮಾಜಿಕ ಕಳಕಳಿ ಆತನ ಕೈದೀವಿಗೆಯಾಗಿರಬೇಕು. ಇದುವೇ ಜೀವಾತ್ಮರಿಗೆ ಲೇಸನ್ನೆ ಬಯಸುವ ಪರಿ.

## "ಯದ್ಭಾವಸ್ತದ್ಭವತಿ"

ಭಾವವಿದ್ದಂತೆ ಸಿದ್ಧಿ. ವ್ಯಕ್ತಿಯ ಅಂತರಂಗವನ್ನರಿಯಲು ಭಾವವೇ ಮುಖ್ಯಸಾಧನ. ಶಿವಾರ್ಚನೆಗೂ ಭಾವವೇ ಮೂಲಕಾರಣ. ಭಾವನೆಯಲ್ಲಿ ನಿಷ್ಕಲ್ಮಷವಾದ ಆತ್ಮಶುದ್ಧಿ ಯೊಡಗೂಡಿದ್ದರೆ ಅದೇ ದೇವರಿಗೆ ಸಮರ್ಪಣ ಭಾವನೆಯೇ ಮಾನವನನ್ನು ದೇವನತ್ತ ಒಯ್ಯುವ ಅತ್ಯುತ್ತಮ ಸತ್ಪಥ. ಈ ಅರಿವು ಆಚಾರದಲ್ಲಿ ಸಮಾವೇಶವಾದರೆ, ಅಂತರಂಗ ಬಹಿರಂಗವೆಂಬ ಭೇದಕಳೆದು ಒಂದು ಗೂಡಿಸಿ ಒಂದು ಮಾಡಿದರೆ ಮತ್ತು ಒಳಹೊರಗೆ ಅರಿವು ಅಡಿಯಿಟ್ಟು ಒಂದೆಂಬ ಭಾವನೆಯಲ್ಲಿ ಕೂಡಿಕೊಂಡರೆ ನಿಜಲಿಂಗೈಕ್ಯ ಸಾಧನೆಗೆ ಅಚ್ಚಳಿಯ ನಿಚ್ಚ ಪೂಜೆಯಾಗುವದು. ಭಾವಸಿದ್ಧಿಯಾಗಿ ಅರಿವಿನ ಬೆಳಗು ಅರಿವಾಗಿಯೇ ಬೆಳಗುವದು.

ಇದೇ ಭಾವವನ್ನು ಗೀತೆಯ ಅಂತರ್ವಾಣಿಯಲ್ಲಿ ಕಾಣಬಹುದು.

"ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ|
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿಧಧಾಮ್ಯಹಂ||"

ಭಕ್ತನಾದವನು ಯಾವ ರೀತಿಯಲ್ಲಿ ಯಾವ ಭಾವದೊಡನೆ ಪೂಜಿಸುವನೋ, ಅದೇ ತೆರನಾಗಿ ಅವನ ಆ ಶ್ರದ್ಧೆಯನ್ನು ಸ್ಥಿರಗೊಳಿಸುವನೆಂಬ ಭಾವನೆಯನ್ನು ತೋರಿಸುವದೇ ಈ ಈ ಗೀತೋಕ್ತಿಯ ಒಳಗುಟ್ಟು.

ದುಷ್ಟಭಾವನೆಯ ಸೆಳವಿನಲ್ಲಿ ಸಿಕ್ಕಿರುವವನು ಮರೆಯ ಕತ್ತಲಲ್ಲಿ ತಿರುಗಿ ಸಣ್ಣಾಗಿ ಹೋಗುವನಲ್ಲದೆ, ಮಿತಿಮೀರಿ ಬೆಳೆದ ದುರ್ವಾಸನೆಗಳಿಂದ ಅಧೋಗತಿಗೀಡಾಗುವನು. ನಾಲಗೆಯು ಯಾವ ಯಾವ ಅಕ್ಷರಕ್ಕೆ ಎಲ್ಲೆಲ್ಲಿ ಮುಟ್ಟಬೇಕೋ ಅಲ್ಲಿಗೆ ಮುಟ್ಟಿಸುವ ಪಟುತ್ವವಿಲ್ಲದವರಿಗೆ ಭಾವಶುದ್ಧಿ ಸಾಧ್ಯವಾಗದು. ಸದ್ಭಾವನೆಯೇ ಪ್ರಗತಿಗೆ ದಾರಿದೀಪ.

ಒಂದೆಡೆ ಮಹಾತ್ಮಾ ಬಸವಣ್ಣನವರೂ ಸಹ ಭಾವಶುದ್ಧವಾದೊಡೆ ಕೂಡಲಸಂಗಮದೇವನೆ ತನ್ನತ್ತ ಕರೆದುಕೊಳ್ಳುವನೆಂದು ಅನುಭವಪೂರ್ಣ ನುಡಿಯೊಡನೆ ಬಿತ್ತರಿಸಿದ್ದಾರೆ. ಅಂತೆಯೇ—

"ಯಾದೃಶೀ ಭಾವನಾ ಚೈವ ಸಿದ್ಧಿರ್ಭವತಿ ತಾದೃಶೀ"

ಈ ಉಕ್ತಿಯು ನಮ್ಮ ಕಣ್ಣಮುಂದೆ ನಿಲ್ಲುತ್ತದೆ. ಭಾವಶಕ್ತಿಯ ಹಾಗೂ ಅದರ ಅಂತಃಸತ್ವದ ಬೆಳಕನ್ನು ಎದುರು ಚಲ್ಲುತ್ತದೆ. ಇದೇ ಭಾವಸೌರಭ ಹಾಗೂ ಭಾವಲಿಂಗಪೂಜೆ.

## ಏಕಾಭಿಪ್ರಾಯಸದ್ಭಾವಾತ್ ರಾಷ್ಟ್ರಸ್ಯಪ್ರೋನ್ನತಿರ್ಮತಾ

ಏಕಾಭಿಪ್ರಾಯವು ರಾಜ್ಯ ಹಾಗೂ ರಾಷ್ಟ್ರದುನ್ನತಿಗೆ ದಾರಿದೀಪ. ಏಕಾಭಿಪ್ರಾಯದಲ್ಲಿ ಸದ್ಭಾವನೆ ತುಂಬಿದ್ದರೆ ಮತ್ತಷ್ಟು ಸೊಗಸು. ಧಾರ್ಮಿಕ, ಸಾಮಾಜಿಕ, ರಾಜಕೀಯ ಹಾಗೂ ಶೈಕ್ಷಣಿಕ ರಂಗದಲ್ಲಿ ಕಾರ್ಯ ಮಾಡತಕ್ಕವರಿಗೆ ಭಿನ್ನಾಭಿಪ್ರಾಯವು ತಲೆದೋರು

ವದು ಸ್ವಾಭಾವಿಕ. ಭಿನ್ನಾಭಿಪ್ರಾಯವಿದ್ದಲ್ಲಿ ಸತ್ಯಾಸತ್ಯತೆಗಳ ಅಂತರಂಗವು ಅರ್ಥವಾಗು ವದು ಸಹಜ. ಮಜ್ಜಿಗೆ ಕಡೆದಂತೆ ಬೆಣ್ಣೆ ಹೊರಡುವದು ನಿಸರ್ಗ ನಿಯಮ. ಆದರೆ ಈ ಭಿನ್ನಾಪ್ರಾಯಗಳಲ್ಲಿ ಸ್ವಾರ್ಥ ಸ್ವಪ್ರತಿಷ್ಠೆ ತುಂಬಿದ್ದರೆ ಅದು ಕೆಡಕನ್ನುಂಟುಮಾಡುವದು. ನಮ್ಮಲ್ಲಿ ರಾಜ್ಯವನ್ನಾಗಲಿ, ರಾಷ್ಟ್ರವನ್ನಾಗಲಿ ಪ್ರಗತಿಯತ್ತ ಸಾಗಿಸಬೇಕೆಂಬುವ ಅಭಿಮಾನ ವಿರದಿದ್ದರೆ, ಏನೇ ಮಾಡಿದರೂ ಫಲಕಾರಿಯಾಗಲಾರದು. ಇದೇ ಅಭಿಮಾನವು ದುರಭಿ ಮಾನದಲ್ಲಿ ಪರಿವರ್ತನೆಗೊಂಡರೆ ಬೆನ್ನಿಗೆ ಕಲ್ಲು ಕಟ್ಟಿಕೊಂಡು ಹೊಳೆಯಲ್ಲಿ ಬಿದ್ದಂತಾಗು ವದು ಅಭಿಮಾನವು ಕೇವಲ ಮಾತಿನ ಮಾಲೆಯಾಗದೆ ಕಾರ್ಯೋನ್ಮುಖದೊಡನೆ ಸಹಜತೆ ಯಲ್ಲಿ ಪರಿವರ್ತನೆಗೊಂಡರೆ ಅದಕ್ಕೆ ಬೆಲೆ ಹಾಗೂ ಬಲ ಬರುತ್ತದೆ.ಮಾತಿನಲ್ಲಿ ವಿಶಾಲತೆಯ ಮನೋಭಾವನೆ ತೋರಿ, ಕೃತಿಯಲ್ಲಿ ಕೃತಕತೆ ತುಂಬಿದ್ದರೆ, ಅದರಂತಹ ಹೊಲಸು ಜೀವನ ಮತ್ತೊಂದು ಇರಲಾರದು. ಮನಸ್ಸು ಮೆಚ್ಚುವಂತೆ, ದೇವರು ಮೆಚ್ಚುವಂತೆ, ನುಡಿ ನಡೆ ಯಲ್ಲಿ ಶುದ್ಧಿಯಿಟ್ಟುಕೊಂಡರೆ ನಾಡಿನ ಪ್ರಗತಿಗೆ ಆಸರ ಕಂಭವಾಗುವದು. ಈ ಜೀವನದಲ್ಲಿ ಮನುಷ್ಯನಾದವನು ಸ್ವಪ್ರತಿಷ್ಠೆಗಾಗಿ ಏನೆಲ್ಲವನ್ನು ಮಾಡಲು ಹಿಂಜರಿಯನು. ಗುರುಹಿರಿಯ ರನ್ನೂ ದೂರೀಕರಿಸಲು ಹೆದರಲಾರನು. ಈ ಜೀವನವು ಪಶು ಜೀವನವಾದೀತೇ ಹೊರತು ಮಾನವೀಯತೆಯಲ್ಲಿ ಬರಲಾರದು. ಮಾನವೀಯತೆ ಬರಲು ಹೃದಯವಂತಿಕೆಯು ಮನೆ ಮಾಡಿಕೊಂಡಿದ್ದರೆ ಮಾತ್ರ ಸಫಲತೆ, ಅದುವೇ ನಿಜವಾದ ರಾಷ್ಟ್ರಪ್ರೇಮ. ಬುದ್ಧಿಯೊಡನೆ ಶ್ರದ್ಧೆಯು ಬೆಳೆದರೆ ನಾಡಿಗೆ ಪರಿಣಾಮಕಾರಿ, ಶ್ರದ್ಧೆಯಿಲ್ಲದ ಬುದ್ಧಿ ಕೊಳಕು ಟೆಂಗಿನಕಾಯಿ ಯಿದ್ದಂತೆ. ಇತ್ತಿತ್ತಲಾಗಿ ಎತ್ತ ನೋಡಿದರೂ ಅಶಾಂತಿಯ ತೆರೆಗಳು ಮೇಲೇಳುತ್ತಲಿವೆ. ಅವುಗಳು ಇಲ್ಲದಾಗಬೇಕಾದರೆ ಆಧ್ಯಾತ್ಮಿಕ ಸಂಸ್ಕೃತಿಯ ಪರಂಪರೆಗೆ ಮಹತ್ವ ನೀಡಬೇಕಾ ಗುತ್ತದೆ. ಧಾರ್ಮಿಕ ರಂಗದಲ್ಲಿ ರಾಜಕೀಯವನ್ನು ಸೇರಿಸಿಕೊಳ್ಳದಂತೆ, ನಿಷ್ಠೆಯಿಂದ ಸಮಾಜ ಸೇವೆ ಮಾಡಿದರೆ ಅದು ಸಾಧ್ಯ. ತತ್ವವನ್ನು ಹೇಳುವವರು ತತ್ವದಂತೆ ನಡೆದುಕೊಳ್ಳ ಬೇಕಾಗುತ್ತದೆ. ಇದು ಬರಬೇಕಾದರೆ ಕೇವಲ ಹೊರನೋಟದಿಂದ ಬರಲಾರದು, ತೋರಿಕೆ ಯಾವಾಗಲೂ ಕೋಲ್ಮಿಂಚು, ಹೊರಗಿನ ಮೋಹಕ್ಕೆ ಒಳಗಾದವರಿಗೆ ಸಂಸ್ಕೃತಿ ಬರುವದೂ ಸಹ ಕಠಿಣವಾದೀತು ಅದಕ್ಕಾಗಿ ರಾಷ್ಟ್ರೋನ್ನತಿಯನ್ನು ಮಾಡಬೇಕೆನ್ನುವವರು ಅಂತರಂಗ ಬಹಿರಂಗ ಶುದ್ಧಿ ಮಾಡಿಕೊಂಡು ಏಕಾಭಿಪ್ರಾಯದ ಸದ್ಭಾವನೆಯನ್ನು ಬೆಳೆಸಿಕೊಂಡರೆ ನಾಡಿಗೆ ಹಿತವಾದೀತು.

### ಸರ್ವಃಸ್ವಾರ್ಥಂ ಸಮೀಹತೇ

ಸ್ವಾರ್ಥವು ಸರ್ವರಲ್ಲಿಯೂ ತುಂಬಿರುತ್ತದೆ. ಸ್ವಾರ್ಥವಿಲ್ಲದ ಮಾನವನನ್ನು ಕಾಣು ವದೇ ದುರ್ಲಭ. ಸ್ವಾರ್ಥವು ಎರಡು ತರ: ವ್ಯಷ್ಟಿ ಸ್ವಾರ್ಥ; ಇನ್ನೊಂದು ಸಮಷ್ಟಿ ಸ್ವಾರ್ಥ. ವ್ಯಷ್ಟಿ ಸ್ವಾರ್ಥವು ತಾಮಸೀಯವಾಗಿದ್ದರೆ, ಸಮಷ್ಟಿ ಸ್ವಾರ್ಥವು ಸಾತ್ವಿಕವುಳ್ಳ ದ್ದಾಗಿರುತ್ತದೆ. ವ್ಯಷ್ಟಿಸ್ವಾರ್ಥವು ಸಂಕುಚಿತತನ, ದುರಭಿಮಾನ, ದ್ವೇಷ, ಮದ ಮಾತ್ಸರ್ಯ ವನ್ನು ಹುಟ್ಟಿಸಿದರೆ, ಸಮಷ್ಟಿ ಸ್ವಾರ್ಥವು ಇವೆಲ್ಲವುಗಳನ್ನು ನಿವಾರಿಸಿ, ವಿಶಾಲ ಮನೋ

ಭಾವನೆ, ಸದಭಿಮಾನ, ಕೃತಜ್ಞತೆ, ಸಮಾಜದ ಕಳಕಳಿಯನ್ನು ಬೆಳೆಸುತ್ತದೆ. ಚಿರಂತನ ಸತ್ಯ, ಆನಂದ, ಅಮರತ್ವದೆಡೆಗೆ ಸಾಗುವದನ್ನು ಕಲಿಸುತ್ತದೆ. ವ್ಯಷ್ಟಿ ಸ್ವಾರ್ಥದಿಂದ ವೈಷಮ್ಯದ ಕಹಿಯನ್ನು ಅನುಭವಿಸಬೇಕಾಗುತ್ತದೆ. ಸ್ವಾರ್ಥದದಳ್ಳುರಿಯಲ್ಲಿ ಬಿದ್ದವನು ಯಾರ ಮಾತನ್ನೂ ಲೆಕ್ಕಿಸಲಾರ. ತಾನೂ ಆ ದಳ್ಳುರಿಯಲ್ಲಿ ಬಿದ್ದು ಸಾಯುತ್ತಾನೆ. ಮತ್ತೊಬ್ಬರನ್ನು ಹಾಳು ಮಾಡಿ, ಗೋಳಿಗೀಡು ಮಾಡುತ್ತಾನೆ. ಇಂಥವನು ತನ್ನ ಕಾರ್ಯ ವಾಗುವವರೆಗೆ ನಟನೆ ಮಾಡಿ, ಸ್ವಾರ್ಥಸಾಧನೆಯಾದ ನಂತರ, ಗುರುಗಳನ್ನು, ಹಿರಿಯರನ್ನು ತನ್ನನ್ನು ಮೇಲಕ್ಕೆತ್ತಿದವರನ್ನು ಕಣ್ಣೆತ್ತಿ ನೋಡಲಾರ. ತನ್ನ ಸ್ವಪ್ರತಿಷ್ಠೆಯ ಅಹಂಕಾರ ದಲ್ಲಿ ಬಿದ್ದು, ಕಣ್ಣು ಮುಚ್ಚಿ ಹಾಲು ಕುಡಿದ ಬೆಕ್ಕಿನಂತೆ ಏನೂ ತೋರಿಸದಂತೆ ಜೀವನ ಸಾಗಿಸುತ್ತಾನೆ. ಇಂಥಹ ಸ್ವಾರ್ಥಿಯ ಜೀವನವು ಭಯಾನಕ. ಈತನು ಯಾರನ್ನೂ ನಂಬ ಲಾರ. ಸತತವೂ ತನ್ನ ಸ್ವಾರ್ಥ ಚಿಂತನೆಯೇ ಆವನ ಮುಖ್ಯ ಗುರಿಯಾಗಿರುತ್ತದೆ.

ಇತ್ತಿತ್ತಲಾಗಿ ರಾಜಕೀಯ, ಧಾರ್ಮಿಕ, ಸಾಹಿತ್ಯಿಕ ಈ ಎಲ್ಲ ರಂಗಗಳಲ್ಲಿಯೂ ಇಂತಹ ವ್ಯಷ್ಟಿ ಸ್ವಾರ್ಥವು ಹೆಚ್ಚಾಗಿ, ಸಮಾಜದ ಸ್ವಾಸ್ಥ್ಯವು ಕೆಡುತ್ತಲಿದೆ. ಬಾಳಿನ ವೈಷಮ್ಯದಲ್ಲಿಯೂ ಅದು ಗಾಸಿಗೊಳ್ಳುತ್ತಲಿದೆ. ವ್ಯಕ್ತಿತ್ವಕ್ಕೆ ಧಕ್ಕೆ ತರುತ್ತಲಿದೆ. ಸ್ನೇಹ ಸೌಹಾರ್ದತೆಗಳು ಕನಸಿನ ಗಂಟಾಗಿವೆ. ತೋರಿಕೆ ಹೆಚ್ಚಾಗಿ ಮಾನವೀಯತೆ ನಶಿಸುತ್ತಲಿದೆ. ವ್ಯಷ್ಟಿ ಸ್ವಾರ್ಥದ ಕತ್ತಲೆಯಿಂದ ಈ ಮಾನವ ಜೀವನವು ಕಸ ತುಂಬಿದ ಕಾಡಾರಣ್ಯ ವಾಗಿದೆ. ಹೀಗಾಗಿ ಯಾರಿಗೂ ಶಾಂತಿ ಸಮಾಧಾನಗಳಿಲ್ಲ. ಈ ರೀತಿಯುಂಟಾಗಲು ಒಳ್ಳೇ ಸಂಸ್ಕೃತಿಯ ಕೊರತೆಯೇ ಕಾರಣವಾಗಿದೆ. ಇಂತಹ ಸಂಸ್ಕೃತಿ ಬರಲು ಬುದ್ಧಿವಂತರೆನ್ನುವ ವರಲ್ಲಿ ಹೃದಯವಂತಿಕೆ ವಿಶಾಲ ಮನೋಭಾವನೆ ಬಂದು, ಅದು ಕೃತಿಯಲ್ಲಿಳಿದರೆ, ಸ್ವಾರ್ಥದ ನಿರ್ಮೂಲನೆಯಾಗಿ, ಸಮಾಜಕ್ಕೆ ರಾಷ್ಟ್ರಕ್ಕೆ ಒಂದುಶಕ್ತಿ ಬಂದಂತಾಗುತ್ತದೆ. ಅಂದು ಸಮಾಜ ಸುಧಾರಿಸುತ್ತದೆ.

## ಕರ್ನಾಟಕ ಭಾಷಾಯಾಃ ವಿಜಯೋತ್ಸವಃ

"ಸುಭಟರ್ಕಳ್, ಅತ್ಯುಗ್ರರ್, ಗಭೀರ್‌ಚಿತ್ತರ್, ವಿವೇಕಮತಿಗಳ, ಕುರಿತೋದ ದೆಯುಂ ಕಾವ್ಯ ಪ್ರಯೋಗಪರಿಣತಿಮತಿಗಳ್" ಕನ್ನಡಿಗರ ಸಂಸ್ಕೃತಿಯನ್ನು ಕುರಿತು ನೃಪ ತುಂಗನು ಈ ರೀತಿ ಹೇಳಿ ವರ್ಣಿಸಿ ಮಹತ್ವನೀಡಿದ್ದಾನೆ. ಅವರ ವ್ಯಕ್ತಿತ್ವವನ್ನು ರೂಪಿಸಿ ದ್ದಾನೆ. ಸಹಸ್ರಾರು ವರ್ಷಗಳಿಂದಲೂ ಕನ್ನಡಿಗರು ತಮ್ಮತನದ ಅಂತಃಸತ್ವವನ್ನು ಉಳಿಸಿ ಕೊಳ್ಳಲು ಹೋರಾಡಿದ್ದಾರೆ. ಕಾವ್ಯಶಕ್ತಿಯನ್ನು ಬೆಳೆಸಿದ್ದಾರೆ. ಅಂತೆಯೇ ಇಂದಿಗೂ ಕನ್ನಡವು ಏಕೈಕ ಪ್ರಥಮ ಭಾಷೆಯಾಗಲೂ ಕನ್ನಡಿಗರು ಹೋರಾಡಿ ವಿಜಯಗಳಿಸಿದ್ದಾರೆ. ಇದು ಎಲ್ಲರಿಗೂ ಎಲ್ಲಿಲ್ಲದ ಸಂತಸವಾಗಿದೆ. ರಾಜ್ಯ ಸರಕಾರವು ಮಾಡಿದ ಐತಿಹಾಸಿಕ ನಿರ್ಣಯವಾಗಿದೆ. ಮಾತೃಭಾಷೆ ಯಾರಿಗೆ ಬೇಡ? ಎಲ್ಲರಿಗೂ ಆ ಭಾಷಾ ಜ್ಯೋತಿಯ ಪ್ರಕಾಶವು ಬೇಕೇಬೇಕಾಗುತ್ತದೆ. ಭಾಷೆಯು ಬಲದಿಂದ ಅಂತಃಶುದ್ಧಿಯಾಗುವದಲ್ಲದೆ,

ಪ್ರಾರ್ಥನೆಯನ್ನು ಮಾಡಿ, ದೇವತ್ವವನ್ನು ಪಡೆಯಲು ಮೂಲ ಸಾಧನೆಯಾಗಿದೆ. ಭಾಷೆಯ ಬಲದಿಂದಲೇ ವಾಗ್ದೇವಿಯ ಪರ್ಯಾಯ ನಾಮಗಳು ಜನಿಸಿ, ಆ ನಾಮಗಳ ಅನುಸಂಧಾನ ದಿಂದ ಬೆಳಕನ್ನು ಕಾಣಲು ಕಾರಣವಾಗಿದೆ. ಭಾಷೆಯನ್ನು ಒಳಹೊಕ್ಕು ನೋಡಿದರೂ ಅದರಲ್ಲಿ ಭಾವ ಬೆಳಕು ತುಂಬಿದ್ದು ಕಂಡುಬರುತ್ತದೆ. ಭಾಷಾ ಸೌಂದರ್ಯವನ್ನು ಬೆಳೆಸಲು ಆ ಭಾಷೆಗಾಗಿ ಅನುಸಂಧಾನ ಮಾಡಬೇಕಾಗುತ್ತದೆ. ಅನುಷ್ಠಾನಗೈಯಬೇಕಾಗುತ್ತದೆ! ಸಾಹಿತ್ಯ ಸರೋವರದಲ್ಲಿ ಈಜಿ ಮುಳುಗಿ, ವಜ್ರ ವೈಢೂರ್ಯಗಳನ್ನು ತಂದಿರಿಸಿದಾಗ ಕನ್ನಡಮಾತೆ ಹರಸುತ್ತಾಳೆ. ಅದಕ್ಕಾಗಿ ಬೆವರು ಸುರಿಸಿ, ಪರಿಶ್ರಮಿಸಿದರೆ ಸಾಹಿತ್ಯಶಕ್ತಿ ಹೆಚ್ಚುತ್ತದೆ. ಪಂಪ, ಹರಿಹರ, ರಾಘವಾಂಕ, ಷಡಕ್ಷರಿ, ಆಂಡಯ್ಯ, ನಿಜಗುಣಶಿವಯೋಗಿ ಮುಂತಾದ ಮಹಾ ಕವಿಗಳು ಹೋದ ದಾರಿಯಲ್ಲಿ ಸಾಹಿತ್ಯ ರಚನೆಯಾದರೆ ಕನ್ನಡ ಸಾಹಿತ್ಯಕ್ಕೆ ಮತ್ತಷ್ಟು ಬಲ ಹಾಗೂ ಬೆಲೆ ಬಂದು ಗೌರವಾನ್ವಿತವಾಗುತ್ತದೆ,ಪೂಜಿಸುವಂತಾ ಗುತ್ತದೆ. ಅಂತಹ ಕೃತಿರಚನೆ, ಇಂದು ಅತ್ಯಾವಶ್ಯಕ. ಕೃತಿ ಅಮರವಾಗಬೇಕಾದರೆ ಸಾಧನೆ ಬೇಕು. ಜೊತೆಗೆ ವಿಶಾಲ ಮನೋಭಾವನೆ ತುಂಬಿರಬೇಕಾಗುತ್ತದೆ. ಹೃದಯ ಶುದ್ಧಿಯನ್ನು, ಭಾವಸಿದ್ಧಿಯನ್ನು ನೀಡಬಲ್ಲ ಕೃತಿಯನ್ನು ಹೊರತರಲು ಅಂತರಂಗ ಬಹಿರಂಗ ಶುದ್ಧಿ ಗಳೆರಡನ್ನು ಸಾಧಿಸಬೇಕಾಗುತ್ತದೆ. ಸಂಸ್ಕೃತ ಮುಂತಾದ ಭಾಷೆಗಳನ್ನು ಕನ್ನಡ ಬೆಳವಣಿಗೆ ಗಾಗಿ ಉಪಯೋಗಿಸಿಕೊಂಡು, ತನ್ನತನ ಬಿಡದಂತೆ ತಾಯಿ ನುಡಿಯನ್ನು ಮರೆಯದೇ ಪೊರೆದರೆ ಗುಣ ಗೌರವಕ್ಕೆ ಪ್ರಾಧಾನ್ಯತೆ ನೀಡಿದಂತಾಗುತ್ತದೆ. ಕನ್ನಡವನ್ನು ಕುರಿತು It is the most mellifluous of all the Indian Vernaculars and the richest in capability and force of Expression ಎಂಬುದಾಗಿ ಫ್ಲೀಟರಂತ ಹರೆ ಅಂದು ಇದರ ಬಣ್ಣನೆ ಮಾಡಿದ್ದಾರೆಂದ ಮೇಲೆ, ನಾಡನುಡಿಯ ಬಗೆಗೆ ನಾವೆಷ್ಟು ಪರಿಶ್ರಮ ಪಡಬೇಕೆಂಬುದು ಗಮನಿಸತಕ್ಕ ಸಂಗತಿಯಾಗಿದೆ. ದೊರೆತ ವಿಜಯಶ್ರೀಯನ್ನು ಬಂಧುರ, ಸುಂದರಗೊಳಿಸಬೇಕಾದರೆ ಕನ್ನಡವನ್ನು ಮುನ್ನಡೆಸಿ, ಪ್ರತಿಯೊಂದು ವ್ಯವಹಾರ ದಲ್ಲಿಯೂ ಕನ್ನಡವನ್ನು ಬಳಸಿ, ಆಡಳಿತ ಭಾಷೆಯನ್ನಾಗಿರಿಸಿ, ಪರಭಾಷೆ ಮೋಹವನ್ನು ತೊಲಗಿಸಿ, ಸ್ವಭಾಷೆಯಲ್ಲಿ ಸರಿಯಾದ ಅಭಿಮಾನವಿರಿಸಿ, ಕ್ರಿಯಾತ್ಮಕ ರೀತಿಯಲ್ಲಿ ಜಾಗೃತ ಶಕ್ತಿಯನ್ನು ಬೆಳೆಸಿಕೊಂಡು ಕನ್ನಡವೇ ಕನ್ನಡಿಗರ ತಾರಕ ಮಂತ್ರವಾದಾಗ ಪರಿಶ್ರಮ ಸಾರ್ಥಕವಾದೀತು. "ಸಿರಿಗನ್ನಡಂ ಗೆಲ್ಗೆ."

**'ಹಿತಂ ಮನೋಹಾರಿ ಚ ದುರ್ಲಭಂ ವಚಃ'**

ಇದು ಮಹಾಕವಿ ಭಾರವಿಯ ಹಿತವಚನ ಮಾತಿನಿಂದ ಮಾನವನ ಆತ್ಮವಿಕಾಸದ ಅರಿವು ಅರ್ಥವಾಗುತ್ತದೆ. ಅಂತಃಶಕ್ತಿಯ ಕುರುಹು ತೋರಿಸುತ್ತದೆ. ಆಧ್ಯಾತ್ಮ ಸಾಧನೆಗೆ ದಾರಿ ತೋರಿಸುತ್ತದೆ. ವ್ಯಕ್ತಿಯ ಅಂತರಂಗವನ್ನು ಶುದ್ಧೀಕರಿಸಿ ಮಲಿನತೆಯನ್ನು ದೂರ ಗೊಳಿಸುತ್ತದೆ. ಮಾತು ಭಾವಶುದ್ಧಿಯನ್ನು ಮಾಡಿ, ಆತ್ಮ ಸಿದ್ಧಿಗೇರಿಸಿ, ಅಂತರಾತ್ಮ ನನ್ನು ಪೂತಾತ್ಮನನ್ನಾಗಿ ಮಾಡುವುದಲ್ಲದೆ ದೇವನುಡಿ ಸೇರಿಸುತ್ತದೆ. ಸಂಸ್ಕೃತಿಯ ಕಲ್ಪ

ವೃಕ್ಷಕ್ಕೆ ನಿರ್ಮಲ ಜಲವನ್ನೀಡುತ್ತದೆ. ಆದರೆ ಆ ಮಾತಿನಲ್ಲಿ ಮಾಣಿಕ್ಯದಂತೆ ದೀಪ್ತಿ ಇರಬೇಕು. ಮಹಾಶಕ್ತಿ ಇರಬೇಕು. ಮುತ್ತಿನ ಹಾರದಂತೆ ತಿಳಿಬೆಳಕನ್ನು ತೋರಿಸುತ್ತಿರಬೇಕು. ಲಿಂಗ ಮೆಚ್ಚಿ ಅಹುದಹುದೆನುವಂತೆ ಅಂತರಾತ್ಮನಿಗೆ ತಿಳಿದಿರಬೇಕು. ಮಾತೆಂಬುದು ಜ್ಯೋತಿರ್ಲಿಂಗವೇ ಆಗಿರಬೇಕು. ಅಂದರೆ ಅದರ ಸಾರ್ಥಕತೆ, ಬಾಳ್ಬೆಳಕಿಗೆ ದಾರಿದೀಪ, ಭಾವೋತ್ಕರ್ಷಕ್ಕೆ ನಂದಾದೀಪ, ಮನೋಹಾರಿಯಾದ ಹಿತನುಡಿ ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿಯಾಗುತ್ತದೆ. ಅದರ ಅರ್ಥವಿಲ್ಲದ ಒಡೆದ ಮಾತಿನಿಂದ ಮುತ್ತು ಒಡೆದಂತೆ ಜ್ಞಾನಲತೆ ಕಡಿದಂತೆ ಧ್ಯಾನಶಕ್ತಿಯನ್ನು ಕುಗ್ಗಿಸಿದಂತೆ, ಕೃತಿಯಲ್ಲಿ ಸೊಬಗಿರದ ಮಾತು ನಿರರ್ಥಕ. ಒಳಹೊರಗೂ ಒಂದಾಗಿ, ಮೈಮನಗಳು ಶುದ್ಧಿಯಿರುವ ಮಾತಿನ ಬೆಲೆ ಹೆಚ್ಚುವದಲ್ಲದೆ ಬಲವು ಬೆಳಗುತ್ತದೆ. ಹಿಂದಿನ ಶಿವಶರಣರು ಆ ಹೆದ್ದಾರಿಯಲ್ಲಿ ನಡೆದರು ಮತ್ತು ನುಡಿದರು.

ಸಕಲ ಜಪಂಗಳಿಗೆ ಹಾಗೂ ಸಕಲ ತಪಂಗಳಿಗೆ ಶಕ್ತಿ ಬರಬೇಕಾದರೆ ಸದುವಿನಯದಿಂದೊಡಗೂಡಿದ ಮೃದುವಚನವೇ ಮೂಲಾಧಾರವೆಂದು ಶರಣರು ತಿಳಿಹೇಳಿದ್ದಾರೆ. ಒಂದೆಡೆ ಅರವಿಂದರು—

"ಈ ವಿಶ್ವದಲ್ಲಿ ಮೌನ ಮತ್ತು ಮಾತು ಇವೆರಡು ಮಹಾಶಕ್ತಿಗಳು. ಮೌನವು ಸಿದ್ಧತೆ ಮಾಡುವದು. ಮಾತು ಸೃಷ್ಟಿ ಮಾಡುವದು. ಮೌನವು ಕಾರ್ಯಮಾಡುತ್ತದೆ. ಮಾತು ಕಾರ್ಯಕ್ಕೆ ಪ್ರೇರಣೆ ಕೊಡುತ್ತದೆ. ಮೌನವು ಒತ್ತಾಯ ಮಾಡುತ್ತದೆ. ಮಾತು ಮನವೊಲಿಸುತ್ತದೆ." ಎಂದುದಾಗಿ ಮಾತಿನ ವಿಶಾಲ ದೃಷ್ಟಿಯ ವಿವರವನ್ನು ಸುಂದರವಾಗಿ ನಿರೂಪಿಸಿದ್ದಾರೆ.

"ಮಾತಿನ ಮಾಲೆಯಲ್ಲಿಪ್ಪುದೇ ಭಕ್ತಿ? ಮಾಡೆ ತನುಸವೆಯದನ್ನಕ್ಕ, ಮನಸವೆಯದನ್ನಕ್ಕ, ಧನಸವೆಯುದನ್ನಕ್ಕ, ಅಪ್ಪುದೇ ಭಕ್ತಿ? ಕೂಡಲಸಂಗಮದೇವ ಎಲುದೋರಿ ಸರಸವಾಡುವನು, ಸೈರಿಸದನ್ನಕ್ಕ ಅಪ್ಪುದೇ ಭಕ್ತಿ?" ಎಂದು ಜಗದ್ವಿಭೂತಿ ಬಸವಣ್ಣನವರೂ ಸಹ ಅಂತರಂಗ ಶುದ್ಧಿಯಿಲ್ಲದ ಮಾತಿನ ಮಾಲೆಯಿಂದ ಮಾನವನಿಗೆ ಯಾವ ಘನ ವ್ಯಕ್ತಿತ್ವವೂ ಬರಲಾರದೆಂದು ತಿಳಿಸಿದ್ದಾರೆ. ಮಾತಿನಿಂದಲೇ ನೋವು, ನಲಿವು ಕಾಣಬಹುದು.

ಶುದ್ಧ ಹೃದಯದಲ್ಲಿ ದೇವರ ನಾಮಾಮೃತವನ್ನು ತುಂಬುವುದೇ ಮಾನವನ ಪರಮ ಗುರಿ ಮತ್ತು ಮನೋಹಾರಿ.

## ಮಾತ್ಸರ್ಯದೋಷ ಸಂಯುಕ್ತೋ ಮಾನವೋ ಯಾತಿ ದುರ್ಗತಿಂ

ಕಾಮ-ಕ್ರೋಧಾದಿಗಳೆಂಬ ಆಂತರಿಕ ಷಡ್ ವೈರಿಗಳಲ್ಲಿ ಕೊನೆಯದಾದ ಮತ್ಸರವೆಂಬುದು ಉದರದೊಳಗಿರುವ ಕಿಚ್ಚು "ಹೊಟ್ಟೆ ಕಿಚ್ಚು." ಈ ಕಿಚ್ಚು ಪ್ರತಿಯೊಬ್ಬ

ಮನುಷ್ಯನನ್ನು ಸುಡುವುದಲ್ಲವೆ, ಸಮಗ್ರ ದೇಶವನ್ನೇ ಹಾಳು ಮಾಡಬಹುದು. ಸ್ವಾರ್ಥವು ಮಿತಿಮೀರಿ ಹೆಚ್ಚಿದಂತೆ ಮತ್ಸರವು ಹೆಚ್ಚುದು; ದ್ವೇಷಕ್ಕೆಡೆಮಾಡಿ ಕೊಡುವುದು.

ಮತ್ಸರದಿಂದ ಕುತ್ಸಿತ ಭಾವವು ಬೆಳೆದು ಮತ್ತೊಬ್ಬರ ಏಳ್ಗೆಯನ್ನು ಕುಂಠಿತಗೊಳಿಸುವುದು. ಮನಸ್ಸಿನ ದೌರ್ಬಲ್ಯವೇ ಮತ್ಸರ ಅಥವಾ ಮಾತ್ಸರ್ಯ ಎನ್ನಿಸಿಕೊಂಡು, ಇದರಿಂದ ಬುದ್ಧಿಯು ನಾಶವಾಗುತ್ತದೆ; ಇದು ಅಧಃಪತನಕ್ಕೆ ದಾರಿ ಮಾಡಿಕೊಡುತ್ತದೆ.

ಮತ್ಸರದಿಂದ ಅಂದರೆ, ಅಸೂಯೆಯಿಂದ ತುಂಬಿದ ಮನುಷ್ಯನು ಪರರ ಶ್ರೇಯಸ್ಸನ್ನು ಕಂಡು ಸಂಕಟಪಡುತ್ತಾನೆ, ಮಾತ್ರವಲ್ಲ ಸದಾ ಕೇಡನ್ನೇ ಬಗೆಯುತ್ತಾನೆ. ಇದರಿಂದ ಸಮಾಜಕ್ಕೆ ಹಾನಿಯಾಗುತ್ತದೆಂಬುದನ್ನು ಅರಿಯದೆ, ಅವನು ಕೇವಲ ದ್ವೇಷಾಸೂಯೆಯಿಂದ ತನ್ನ ಪ್ರತಿದ್ವಂದ್ವಿಗೆ ಕೆಡುಕನ್ನೇ ಬಯಸುತ್ತಾನೆ.

"ಅಸೂಯಾಗ್ರಸ್ತರ ಬೊಬ್ಬಾಟವು ಹುಚ್ಚುನಾಯಿಯು ಕಡಿತಕ್ಕಿಂತ ವಿಷಕಾರಿ" ಎಂದು ಶೇಕ್ಸ್‌ಪಿಯರನು ಹೇಳಿದರೆ, ವಿಜಯದಾಸರು "ಗುಣವಿಲ್ಲದವನು ಗುಣವಂತನಿಗೆ ಸಲ್ಲಿಸುವ ವಿಕಾರರೂಪದ ಕಾಣಿಕೆಯೇ ಅಸೂಯೆ" ಎಂದಿದ್ದಾರೆ.

ಇಲ್ಲಿ ಕಥೆಯೊಂದು ನೆನಪಿಗೆ ಬರುತ್ತದೆ: ಒಂದು ಊರಲ್ಲಿ ಪರಸ್ಪರ ದ್ವೇಷಾಸೂಯೆಯ ಮತ್ಸರದಿಂದ ಬಳಲಿದ ಇಬ್ಬರು, ದೇವರಿಂದ ವರಪಡೆದು, ತನ್ನ ತನ್ನ ಎದುರಾಳಿಗೆ ಕೆಡಕನ್ನು ಮಾಡಿ ತಾನೇ ಹೆಚ್ಚಿನವನೆನ್ನಿಸಿಕೊಳ್ಳಬೇಕೆಂದು ಬೇರೆ ಬೇರೆ ಸ್ಥಾನದಲ್ಲಿ ತಪಸ್ಸಿಗೆ ಕುಳಿತುಕೊಳ್ಳುತ್ತಾರೆ. ತಪಸ್ಸಿಗೆ ಮೆಚ್ಚಿದ ದೇವರು ಮೊದಲನೆಯವನನ್ನು "ಏನು ವರಬೇಕೆ"ಂದು ಕೇಳುತ್ತಾನೆ. ಆ ಮೊದಲನೆಯವನು ಎರಡನೆಯವನಿಗಿಂತ ತನಗೆ ಎರಡು ಪಟ್ಟು ವರಬೇಕೆಂದು ಕೇಳುತ್ತಾನೆ. ಅದರಂತೆಯೇ, ಬೇಡಿದ ವರವನ್ನು ಕೊಡುವ ದೇವರು ಎರಡನೆಯವನನ್ನು ಕೇಳಿದಾಗ, ಅವನು ತನಗೆ ಒಂದು ಲಾಭವಾಗಲೆಂದರೆ ತನ್ನ ವೈರಿಗೆ ಎರಡು ಲಾಭವಾಗುವುದು. ಆದ್ದರಿಂದ ತನ್ನ ವೈರಿಗೆ ಲಾಭವನ್ನು ಮಾಡಗೊಡದೆ ಕೆಡಕೇ ಆಗಲೆಂದು ಮತ್ಸರದಿಂದ "ನನ್ನ ಒಂದು ಕಣ್ಣು ಕುರುಡಾಗಲಿ" ಎಂದು ವರವನ್ನು ಬೇಡಿದನು. ಇದರಿಂದ ಮೊದಲನೆಯವನು ಈ ಮೊದಲೇ ಬೇಡಿದ ವರದಂತೆ ಅವನ ಎರಡೂ ಕಣ್ಣುಗಳು ಕುರುಡಾದವು. ಎರಡನೆಯವನದು ಒಂದು ಕಣ್ಣು ಕುರುಡಾಯ್ತು. ಒಟ್ಟಿನಲ್ಲಿ ಮತ್ಸರದಿಂದಿಬ್ಬರಿಗೂ ಕೆಡಕಾಯಿತು. ಕಾರಣ ಮತ್ಸರವು ಒಳ್ಳೆಯದಲ್ಲ.

"ಕಾರ್ಯವನೋಡಿ ಹರುಷಪಡಬೇಕಲ್ಲದೆ, ಮತ್ಸರಿಸುವದೇಕಯ್ಯಾ!
ಅಲ್ಲದ ಸಲ್ಲದ ನುಡಿಗಳನಾಡಿ ಕುತ್ಸಿತರಾಗುವುದೇತಕಯ್ಯಾ!
ಬೆಂಕಿಯ ಬಾಯಿಗೆ ರವದಿಯ ತುರುಕಿದರಂತೆ,
ಮತ್ಸರಾಗ್ನಿಗೆ ಮನವನಿತ್ತರೆ ಆತ್ಮಶಾಂತಿಯೆಲ್ಲಿಯದಯ್ಯಾ!
ಭ್ರೂಲತಾಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ."

## ಅಹಂಕಾರೇಣ ಸರ್ವೇಷಾಂ ಸಾಮರಸ್ಯಂ ನಜಾಯತೇ

ಅಹಂಕಾರವು ಮಾನವನ ಪರಮ ಶತ್ರುವಾಗಿದೆ. ತನ್ನತನದ ಅರಿವನ್ನು ಅರಿಯದಂತೆ ಮರೆಯಿಸುತ್ತದೆ. ವ್ಯಕ್ತಿತ್ವಕ್ಕೆ ಕುಂದು ತರುತ್ತದೆ. ತಮ್ಮವರೆನ್ನುವವರನ್ನು ಅಲ್ಲಗಳೆಯುತ್ತದೆ. ತನಗಿಂತ ಅಧಿಕರು ಈ ಜಗತ್ತಿನಲ್ಲಿ ಯಾರೂ ಇಲ್ಲವೆಂಬುದನ್ನು ಬಿಂಬಿಸುತ್ತದೆ ಗುರುಹಿರಿಯರೆನ್ನುವವರನ್ನು ಅಲ್ಲಗಳೆಯುತ್ತದೆ. ಮದವೇರಿದ ಆನೆಯಂತೆ ಅಹಂಕಾರಿಯ ಜೀವನವಾಗುತ್ತದೆ. ಅಹಂಕಾರಿಯು ಪರರೊಡನೆ ಪ್ರಾಮಾಣಿಕತೆಯಿಂದ ನಡೆದುಕೊಳ್ಳಲು ಇಷ್ಟಪಡಲಾರನು. ಆತ್ಮವಂಚನೆಯೇ ಅವನಿಗೆ ಗತಿಮತಿಯಾಗುವದು. ಆತ್ಮವಂಚಕನ ಬದುಕೆಲ್ಲ ಬರಿದು, ಬಾಳೆಲ್ಲ ಬೆಂಡು. ಜೀವನವೇ ತೋರಿಕೆಯಾಗಿ, ಕೃತಕತೆಯ ಮೂರ್ತಿಯಂತಾಗುತ್ತದೆ. ಅಹಂಕಾರಿಗೆ ಭಾವೈಕ್ಯ ಅಂದರೆ ಆಗದು. ಸಮಾಜ ಸೇವೆ ಮಾಡುವವರು ಮಾತಿಗಿಂತಲೂ ಕೃತಿಗೆ ಹೆಚ್ಚು ಮಹತ್ವ ನೀಡಿದರೆ ಆಗ ಅದಕ್ಕೆ ಬಲು ಸೊಗಸು ಬರುತ್ತದೆ. ಅದಕ್ಕೆ ಮಾನವೀಯತೆ ಅನ್ನುತ್ತಾರೆ. ಮಾನವೀಯತೆ ಇಲ್ಲದ ಎಂತಹ ಅಧಿಕಾರವಿದ್ದರೂ ಅದು ಪಶುಜೀವನ, ರಾಕ್ಷಸೀಯ ವರ್ತನ.

ಇಂದು ಸಮಾಜದಲ್ಲಿ ಸಂಘಟನೆ ಬರಬೇಕಾದರೆ ಕಿಂಕರತ್ವದಿಂದ ಬಂದಷ್ಟು, ಅಹಂಕಾರದಿಂದ ಬರಲಾರದು. ಅದೊಂದು ಸಾರ್ಥಕವಿಲ್ಲದ ಸಾಹಸ, ನಿಜ ಸುಖವಿಲ್ಲದ ನಿರಸ. ಅಹಂಕಾರವನ್ನೇ ಮುಖ್ಯ ಗುರಿಯಾಗಿಟ್ಟುಕೊಂಡವರ ಜೀವನವು ಆತ್ಮ ಪ್ರಗತಿಯಿಲ್ಲದ ಅಂಧಕಾರವಿದ್ದಂತೆ. ಯಾವದೋ ಒಂದು ದಾಕ್ಷಿಣ್ಯದ ಸಂಕೋಲೆಯಲ್ಲಿ ಸಿಕ್ಕು ಬಿದ್ದ ಆಜನ್ಮ ಕಾರಾಗಾರವಿದ್ದಂತೆ. ನಮಗಿಂದು ಪರರ ನೋವಿನ ಬಗ್ಗೆ, ಸಮಾಜದ ಭಾವೈಕ್ಯತೆಯ ಚಿಂತನೆ ಮಾಡುವವರು ಬೇಕಾಗಿದೆ. ಮಿಥ್ಯ ನಿರ್ಮೂಲನವಾಗಿ, ಸತ್ಯದ ಪೋಷಣೆಯಾಗಲು ಅಹಂಕಾರ ನಿರಸನವೇ ಮೂಲ ಬೇರು ಹಾಲನೆರೆದರೆ, ಹಾವಿನ ನಂಜು ಸವಿಯಾಗದು. ಹೊರಗಣ ವಿದ್ಯೆಯಿಂದ, ಹೃದಯಶುದ್ಧಿಯಾಗದು. ಅಧಿಕಾರ ಸ್ಥಾನ ಮಾನಗಳಿಂದ ಭಾವಶುದ್ಧಿಯಾಗದು. ಅಂತರಂಗಶುದ್ಧಿಯಾಗಿ, ಭಾವಸಿದ್ಧಿಯಾಗಿ, ಸಮಾಜಾಭಿವೃದ್ಧಿಯಾಗಲು ಕಿಂಕರತ್ವದಿಂದಲೇ ಅದು ಸಾಧ್ಯ. ಅದಕ್ಕಾಗಿ ವಿಶಾಲ ಮನೋಭಾವನೆ ಮುಂಧೋರಣೆ, ಕರ್ತವ್ಯದಕ್ಷತೆ, ಸಮಾಜದ ಕಳಕಳಿ, ಪರಸ್ಪರ ತಿಳುವಳಿಕೆ, ಕೃತ್ರಿಮತೆಯಿಲ್ಲದ ಭಾವೈಕ್ಯ, ಗುರುಹಿರಿಯರಲ್ಲಿ ನಯ ವಿನಯ, ಸಾಮರಸ್ಯ ಮನೋಭಾವನೆ, ಸತ್ಯ ಸಂಪೂರ್ಣಸಾಧನ, ಧೈರ್ಯ ಸ್ಥೈರ್ಯ, ಸಹಜತೆ ಇವೆಲ್ಲವುಗಳು ನಮಗಿಂದು ಒಡಮೂಡಿ ಕಾರ್ಯರೂಪಕ್ಕಿಳಿದರೆ, ಸಮಾಜಕ್ಕೆ ಸೌಭಾಗ್ಯ ಸಿಕ್ಕಂತಾಗುವದು ರಾಷ್ಟ್ರದ ಪುನರುತ್ಥಾನಕ್ಕೆ ಚೈತನ್ಯ ದೊರೆತಂತಾಗುವದು. ಅಂತರ್ಜ್ಞಾನದ ವಿದ್ಯುದ್ದೀಪಗಳು ಬೆಳಗಿ ಸಂಸ್ಕೃತಿಯನ್ನೂ ಉಳಿಸಿದಂತಾಗುವದು.

## ಆಹಾರ–ಶುದ್ಧೌ ಸತ್ತ್ವ–ಶುದ್ಧಿಃ

ಸತ್ತ್ವ ಶುದ್ಧಿಗೆ ಆಹಾರ ಶುದ್ಧಿಯು ಅತ್ಯಾವಶ್ಯಕ ಆಹಾರವಿದ್ದಂತೆ ಮಾನವನ

ಮನಸ್ಸು ನಿರ್ಮಾಣವಾಗುತ್ತದೆ. ಶಾಸ್ತ್ರೀಯ ಭೋಜನ ವಿಧಾನದ ಪ್ರಧಾನ ಪ್ರಯೋಜನವೇ ಶುದ್ಧಮನದ ಸಂಪಾದನೆಯಾಗಿದೆ. ತಾಮಸೀಯ ಆಹಾರದಿಂದ ಆತ್ಮ ಸಂತೃಪ್ತಿ ಅಸಾಧ್ಯ. ಈಶ್ವರ ಚಿಂತನದಲ್ಲಿ ಮನಸ್ಸು ನಿಲ್ಲಬೇಕಾದರೆ, ಶುದ್ಧ ಆಹಾರವೇ ಮುಖ್ಯ ಕಾರಣ. ದ್ವೇಷಾಸೂಯೆಗಳು, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಇವೆಲ್ಲವುಗಳು ಮನಸ್ಸಿನಲ್ಲಿ ಮೂಡಬೇಕಾದರೆ ತಾಮಸೀಯ ಆಹಾರಗಳೇ ಕಾರಣವಾಗಿ, ಮಾನವೀಯತೆಯನ್ನೇ ಕೊಲೆ ಮಾಡುತ್ತವೆ; ವ್ಯಕ್ತಿತ್ವ ವಿಕಾಸಕ್ಕೆ ಭಂಗ ತರುತ್ತವೆ. ಬುದ್ಧಿ ಶಕ್ತಿಯು ನಷ್ಟವಾಗಿ, ಆಲಸ್ಯಾದಿ ದುರ್ಗುಣಗಳು ಮನೆ ಮಾಡುತ್ತವೆ. ಭಾವನೆಯಲ್ಲಿ ದುರ್ಬುದ್ಧಿಯುಂಟಾಗುತ್ತದಲ್ಲದೆ, ಮತ್ತೊಬ್ಬರನ್ನು ಕೇಡು ಬಯಸುವದರಲ್ಲಿಯೇ ಮನಸ್ಸು ಹಾತೊರೆಯುತ್ತದೆ. ಅವರಿಗೆ ಯಾರ ಉಪದೇಶವೂ ನಾಟದು. ಮದ್ಯಪಾನಾದಿ ಸೇವನೆಗಳಿಂದ ಎಷ್ಟೋ ದೊಡ್ಡ ಮನೆತನದವರು ಹಾಳಾಗಿ ನಿರ್ವೀರ್ಯರಾಗಿ, ತಮ್ಮತನವನ್ನು ಕಳೆದುಕೊಂಡು, ಬೀದಿ ಪಾಲಾಗಿ ಹೋಗಿದ್ದೂ ಕಂಡದ್ದುಂಟು. ಜೀವನದಲ್ಲಿ ಆಹಾರಕ್ಕೂ ಮತ್ತು ವ್ಯಕ್ತಿಗೂ ಬಹಳ ಸಂಬಂಧವುಂಟು. ಅಡಿಗೆ ಮಾಡುವಾಗ, ನೀಡುವಾಗ, ಉಣ್ಣುವಾಗ ಪ್ರತಿಯೊಂದು ಸಮಯದಲ್ಲೂ ಭಾವಶುದ್ಧಿ ಇಟ್ಟುಕೊಂಡು ಕಾರ್ಯಪ್ರವೃತ್ತರಾದರೆ ಮಾತ್ರ ಆತ್ಮ ಶುದ್ಧಿ. ಕೋಪ ತುಂಬಿಕೊಂಡು ಅನ್ನ ಸೇವಿಸಿದರೆ, ಅಂದಿನ ದಿನವೇ ಮನಸ್ಸೆಲ್ಲ ಕೋಪಾಗ್ನಿಯಿಂದ ತುಂಬಿರುತ್ತದೆ. ಶಾಂತಿ ಸಮಾಧಾನಗಳು ಕನಸಾಗುತ್ತವೆ. ಪವಿತ್ರ ಭಾವನೆಯಿಂದ ಉಂಡರೆ ಅಂದಿನ ದಿನವೇ ಆನಂದಮಯವಾಗಿರುತ್ತದೆ. ಅಂತೆಯೇ ಶಿವಶರಣರು ತುತ್ತಿಗೊಮ್ಮೆ ಶಿವನನ್ನು ಸ್ಮರಿಸುತ್ತಿರಬೇಕೆಂದು ತಿಳಿಸಿದ್ದಾರೆ. ಸಮಾಜ ಸೇವಕರಿಗಂತೂ ಆಹಾರ ಶುದ್ಧಿಯಿರದಿದ್ದರೆ, ಸಮಾಜಕ್ಕೆ ನವಚೈತನ್ಯ ಬರಲಾರದು. ಮನುಷ್ಯನಾದವನು, ಅರ್ಥಶುದ್ಧಿ, ಪದಾರ್ಥಶುದ್ಧಿ, ದೇಹಶುದ್ಧಿ, ಕಾಲಶುದ್ಧಿ ಇವೆಲ್ಲವುಗಳನ್ನು ಚೆನ್ನಾಗಿ ಅರಿತುಕೊಂಡು ಜೀವನ ಸಾಗಿಸಿದರೆ ಪರಮಾತ್ಮನಲ್ಲಿ ಆತ್ಮಸಮರ್ಪಣ ಬುದ್ಧಿಯು ಬಂದು, ಬಾಳ್ಬೆಳಕಿಗೆ ದಾರಿದೀಪವಾಗುವದು. ವಿವೇಕವಿರದ ಆಹಾರ ಸೇವನೆಯಿಂದ ಪಶು ಜೀವನಕ್ಕಿಂತಲೂ ಕನಿಷ್ಟವಾಗುವದು ಸಾತ್ತ್ವಿಕ ಆಹಾರದಿಂದಲೇ ಮಾನವ ಜೀವನದ ರಕ್ಷಣೆ. ಶುದ್ಧ ಅನ್ನವೇ ಸತ್ಯ ಸಂಶೋಧನೆ ಪೋಷಕ; ಧರ್ಮಕ್ಕೆ ಅದುವೇ ಮೂಲ ಕಾರಣ.

**ಪರೋಪಿ ಹಿತವಾನ್ ಬಂಧುಃ**

ಈ ಬಾಳಿನಲ್ಲಿ ಬಂಧುಗಳಿರಬೇಕು. ಬಂದುಂಡು ಹೋಗುವವರಾಗದೆ, ಬಂಧನವ ಕಳೆಯುವವರಿದ್ದರೆ ನಿಜವಾದ ಬಂಧುಗಳು. ಅವರೆ ನಿಜವಾದ ಹಿತಚಿಂತಕರು. ಸಾಮಾಜಿಕ ಪ್ರಜ್ಞೆ, ಧಾರ್ಮಿಕಪ್ರಜ್ಞೆ, ಮೂಡಿಸಿಕೊಂಡು, ಪರರ ಹಿತವನ್ನು ಬಯಸುವವರಿದ್ದರೆ ಅಲ್ಲಿ ಬಾಂಧವ್ಯದ ಸೊಬಗು ಹೆಚ್ಚುತ್ತದೆ, ಹೃದಯದ ಹೂವು ದಿನ ದಿನವೂ ಅರಳುತ್ತಿರುತ್ತದೆ. ಹೊಸ ಕಂಪು, ಪೆಂಪು ಹೊರಸೂಸುತ್ತದೆ. ಜಾತಿ ಮತಗಳ ಸಂಕುಚಿತತನವು ಸರಿದು ಹೋಗಿ, ಸ್ವಾರ್ಥ, ಸ್ವಪ್ರತಿಷ್ಠೆಗಳು ಕರಗಿ, ಸೌಹಾರ್ದತೆಗಳು ಬೆಳೆದು ಬಂದರೆ ನಿಜವಾದ

ಬಾಂಧವ್ಯವು ಅಲ್ಲಿ ತೋರುತ್ತದೆ. ಅದರಿಂದ ನಾಡಿಗೆ, ಸಮಾಜಕ್ಕೆ ಸುಖದೊರೆತು, ಭಾವೈಕ್ಯವುಂಟಾಗಿ, ಮಾನವೀಯತೆಯು ಎದ್ದು ಕಾಣುತ್ತದೆ. ಈ ಸಮರಸ ಭಾವನೆಯು ನಿಜವಾದ ಪ್ರೇಮಬಾಂಧ್ಯವಕ್ಕೆ ದಾರಿ ಮಾಡಿಕೊಡುತ್ತದೆ.

ಇಂದಿನ ಕಾಲದಲ್ಲಿ ನಿಜವಾದ ಬಂಧುಗಳನ್ನು ಕಂಡು ಹಿಡಿಯುವದೇ ಕಡುಕಷ್ಟವಾಗಿದೆ. ಸಿರಿಸಂಪತ್ತುಗಳಿದ್ದಾಗ, ಅಧಿಕಾರವಿದ್ದಾಗ ಬಂಧುತ್ವ ಬಯಸಿ ಬಂಧುಗಳಾಗಿ ಬರುತ್ತಾರೆ. ಸಂಪತ್ತಿಲ್ಲದಾಗ ದೂರ ಸರಿಯುವವರೇ ಹೆಚ್ಚು. ಕಾರ್ಯಸಾಧನೆವಾಗುವವರೆಗೆ ಸ್ವಮತ, ಸ್ವಾರ್ಥಸಾಧಿಸಿ, ನಂತರ ಹೀಯಾಳಿಸಿ, ತೆಗಳುವ ಬುದ್ಧಿವಂತ ಜನ ಸಮಾಜದಲ್ಲಿ ಸಾಕಷ್ಟು ತುಂಬಿದ್ದಾರೆ. ಎಲ್ಲಿ ನೋಡಿದಲ್ಲಿಯೂ ಕುಹಕತನ, ಆತ್ಮವಂಚಕ ತನವು ತುಂಬಿ, ತುಳುಕುತ್ತಿರುವಾಗ ಹಿತ ಬಂಧುಗಳು ದೊರೆಯುವದು ಕಡುಕಷ್ಟವಾಗಿದೆ.

ಯಾವದೇ ಜಾತಿಯುವರಿರಲಿ, ಹಿತಬಯಸುವವರಿದ್ದು, ಅಭಿಮಾನ ಪಡುತ್ತಿದ್ದರೆ ಅವರೆ ನಿಜವಾದ ಬಂಧುಗಳು. ನಮ್ಮವರೆನ್ನುವವರು, ಮಾತಿನಲ್ಲಿ ಸವಿ ನುಡಿದು, ಅಭಿಮಾನ ತೋರಿಸಿ, ಒಳಗೆ ಕುಟಿಲ ಕುಹಕತನವನ್ನಿಟ್ಟುಕೊಂಡು, ಆತ್ಮವಂಚನೆ ಮಾಡತಕ್ಕವರಿದ್ದರೆ, ಅವರಂತಹ ಹಿತಶತ್ರುಗಳು ಬೇರೊಬ್ಬರಿಲ್ಲವೆಂದು ಹೇಳಬಹುದು. ಅಂಥ ವ್ಯಕ್ತಿಗಳಿಂದ ಬಹಳ ಜಾಗರೂಕತೆಯಿಂದ ಎಚ್ಚರವಿದ್ದಷ್ಟು ಒಳಿತು. ಅನ್ಯರಿಗಿಂತಲೂ ಇವರು ಅಪಾಯುಕಾರಿ. ಯಾವ ಹೊತ್ತಿನಲ್ಲಿ ಏನು ಮಾಡುತ್ತಾರೆಂಬುದು ತಿಳಿಯುವದು ಬಲು ಕಷ್ಟ. ಪರಹಿತ ಭಾವನೆಯು ಯಾರ ಮನಸ್ಸಿನಲ್ಲಿ ತುಂಬಿರುತ್ತದಯೋ ಅವರಿಂದ ಅಸಾಧ್ಯವಾಗದ ಕಾರ್ಯಗಳು ಜರುಗಿ, ನಾಡಿನ ಕಲ್ಯಾಣವಾಗುತ್ತದೆ. ಮತ್ತೊಬ್ಬರಿಗೆ ಹಿತ ಬಯಸುವದಕ್ಕೂ ಪುಣ್ಯ ಬೇಕಾಗುತ್ತದೆ. ಒಳ್ಳೆಯ ಸಂಸ್ಕಾರವಿರಬೇಕಾಗುತ್ತದ. ಅಸೂಯೆ ಪಡುವವರಿಗೆ ಯಾರು ಹೇಳಿದರೂ ನಡೆಯದು. ಪವಿತ್ರ ಭಾವನೆಯೇ ಅದೊಂದು ತಪಸ್ಸು ಇದ್ದಂತೆ. ಪವಿತ್ರ ಭಾವನೆ ಇಲ್ಲದೆ, ಮಣದಷ್ಟು ತತ್ವವನ್ನು ತಿಳಿಸಿದರೆ, ಬೋರ್‌ಕಲ್ಲ ಮೇಲೆ ನೀರೆರೆದಂತೆ. ಭಂಗಾರವನ್ನು ಬೆಂಕಿಯಲ್ಲಿ ಪರೀಕ್ಷೆ ಮಾಡುವಂತೆ, ಹಿತಚಿಂತಕರೆಂದು ಹೇಳತಕ್ಕವರನ್ನು ಕಷ್ಟಕಾಲದಲ್ಲಿ ಪರೀಕ್ಷಿಸಬೇಕು; ಆಗ ಅರ್ಥವಾಗುತ್ತದೆ. ಒಂದೆಡೆ ಕನಕ ದಾಸರು "ಮುನಿಯುತಿಹ ಮತ್ಸರದ ನೆರೆಯೊಳಿರುವದಕ್ಕಿಂತ ಹಸನವಿಲ್ಲದ ಹಾಳುಗುಡಿ"ಯೇ ಹಿತಕರವೆಂದು ಹೇಳಿದ್ದಾರೆ. ವಿಶ್ವದಲ್ಲಿ ಅಶಾಂತಿ ತೋರಬೇಕಾದರೂ ನಿಜವಾದ ಬಂಧುತ್ವ, ಸಹೋದರತೆಯು ಕೊರತೆಯಿಂದ ಕಾರಣವಾಗಿವೆ. ಅದಕ್ಕಾಗಿ ಮೈಗೆ ಕೈಗಳಂತೆ, ಕಣ್ಣುಗಳಿಗೆ ರೆಪ್ಪೆಗಳಂತೆ, ಯೋಚನೆಯಿಲ್ಲದೆ ಹಿತ ಬಯಸುತ್ತಾರೆಯೋ ಅವರೇ ನಿಜವಾದ ಬಂಧುಗಳು ಇದೇ ಮನೋಭಾವನೆಯೇ ನಿಜ ಬಂಧುತ್ವ.

## ಧರ್ಮಸ್ಯ ಮೂಲಂ ಅರ್ಥಃ

ಧರ್ಮ ಜಾಗತಿಗೆ ಅರ್ಥವಿಕಾಸವು ಅತ್ಯವಶ್ಯಬೇಕೆಂದು ಚಾಣುಕ್ಯ ನೀತಿ ಹೇಳುತ್ತಿದೆ. ಧರ್ಮ, ಅರ್ಥ, ಕಾಮ, ಮೋಕ್ಷ ಈ ಚತುರ್ವಿಧ ಪುರುಷಾರ್ಥಗಳು ಒಂದಕ್ಕೊಂದು

ಹೊಂದಿಕೊಂಡು ಬಂದಿವೆ. ಇವೆಲ್ಲವುಗಳ ಪ್ರಜ್ಞೆ ಮೂಡದಿದ್ದರೆ ಧಾರ್ಮಿಕ, ಹಾಗೂ ಸಾಮಾಜಿಕ ಸುಧಾರಣೆ ಆಗದು. ಹುಟ್ಟಿದ ಸಸಿಯು ಮಹಾವೃಕ್ಷವಾಗಲು, ಗೊಬ್ಬರ, ನೀರು ಹಾಕಿದರೆ ಮಾತ್ರಪುಷ್ಟವಾಗಿ ಬೆಳೆದು ನೆರಳನ್ನು ನೀಡುತ್ತದೆ ಫಲವನ್ನು ಕೊಡುತ್ತದೆ. ಧರ್ಮ ಅರ್ಥಗಳೆರಡೂ ಬಾಳ ಪಯಣಕ್ಕೆ ಭದ್ರಬುನಾದಿ. ಬಾಳಿನಲ್ಲಿ ಬೆಳಕು ಕಾಣಲು ಧರ್ಮದಂತೆ ನಡೆದು ಶೀಲಸಂಸ್ಕೃತಿಯನ್ನುಳಿಸಿದರೆ ಸತ್ಯದ ಹಂಬಲವು ಸಮೀಪಿಸುತ್ತಿದೆ. ಅಂತರಂಗ ಬಹಿರಂಗಗಳೆರಡರಲ್ಲಿಯೂ ಪವಿತ್ರಭಾವನೆ ತುಂಬಿದ್ದರೆ ಆತ್ಮ ಶುದ್ಧಿ ಸಾಧ್ಯ. ಕ್ರಿಯೆಯಿರದ ಜ್ಞಾನ ಸಾರ್ಥಕವಿಲ್ಲದ ಸಾಹಸವಾಗುತ್ತದೆ. ಆತ್ಮವಂಚನೆಯಿಂದ ಗಳಿಸಿದ, ಅರ್ಥ ಪ್ರಾಪ್ತಿಗೆ ಬೆಲೆ ಬರದು, ಸುಖಸಿಗದು. ಕಾಯಕಕಷ್ಟದಿಂದ ದುಡಿದು, ಕಾಯಕ ತತ್ವದಲ್ಲಿ ನಿರತರಾಗಿ ಸಂಗ್ರಹಿಸಿದ ಧನವು ಧರ್ಮಕ್ಕೆ ದಾರಿದೀಪವಾಗುತ್ತದೆ. ದುಡಿದ ದುಡ್ಡು ಧರ್ಮ ಕಾರ್ಯದಲ್ಲಿ ಸೇರಿದರೆ, ಅರ್ಜಿಸಿದ ಧನದ ಸಾರ್ಥಕತೆಯಾಗುತ್ತದೆ. ಹಿಂದಿನ ಶರಣರು ಯಾವುದನ್ನು ಅಲ್ಲಗಳೆದಿಲ್ಲ. ಪ್ರತಿಯೊಂದರಲ್ಲಿ ಸತ್ಯಸಾಕ್ಷಾತ್ಕಾರ ಮಾಡಿಕೊಂಡು, ವ್ಯಕ್ತಿತ್ವದ ಒಳಗುಟ್ಟನ್ನು ಅರಿತುಕೊಂಡು, ಧರ್ಮಾರ್ಥಗಳೆರಡನ್ನು ಸಾಧಿಸಿ, ಸಾಮಾಜಿಕ ಮೌಲ್ಯವನ್ನು ಎತ್ತಿ ಹಿಡಿದಿದ್ದಾರೆ. ಭೌತಿಕ ಬಾಳಿನಲ್ಲಿ ನೈತಿಕ ಶಕ್ತಿಯನ್ನು ಕಂಡ, ಕಾಯಕವೇ ಕೈಲಾಸವೆಂದು ತಿಳಿಸಿ, ಆತ್ಮ ಶಕ್ತಿಯನ್ನು ಸಂಪಾದಿಸಿದ್ದಾರೆ. ಜಾಣನು ಲೌಕಿಕ ಪರಮಾರ್ಥವೆರಡನ್ನು ಮಾಣದೇ ಕೂಡಿ ನಡೆಸುತಿಹನಿಂತು ಎಂದು ಮಹಾದಾರ್ಶನಿಕರಾದ ಶ್ರೀ ನಿಜಗುಣ ಶಿವಯೋಗಿಗಳು ಅರುಹಿದ್ದಾರೆ.

ಧರ್ಮ ಬದುಕಿನ ಬೇರು ಎನಿಸಿದರೆ ಅರ್ಥವು ಚಿಗುರುವ ಹೂವು, ಹಣ್ಣುಕಾಯಿಗಳಿದ್ದಂತೆ. ಧರ್ಮಕಾರ್ಯ ಮಾಡಬೇಕಾದರೂ ಅರ್ಥವಿಲ್ಲದೆ ಅದು ಸಾಧ್ಯವಾಗದು. ಆ ಅರ್ಥವು ಸತ್ಯ ಶುದ್ಧ ಕಾಯಕದಿಂದ ಕೂಡಿಕೊಂಡಿರಬೇಕು. ಹೊರಗೆ ನಡೆಯುವ ಲೌಕಿಕ ಆಚರಣೆಗಳು ಪಾರಲೌಕಿಕವಾಗಿ ಪರಿಣಮಿಸಬೇಕು. ಇದುವೆ ಧರ್ಮದ ಒಳಗುಟ್ಟು, ಕಾಡಿನಲ್ಲಿ ಕುಳಿತು ತಪಸ್ಸು ಮಾಡುವವರಿಗೆ ಆತ್ಮೋದ್ಧಾರದಷ್ಟೇ ಮಿಸಲಾಗಿರುತ್ತದೆ. ಇದು ಒಂದು ಧರ್ಮವಾದರೂ, ಸಾಮಾಜಿಕ ಜೀವನದಲ್ಲಿ ಇವೆರಡನ್ನೂ ಸಾಧಿಸಿಕೊಂಡು ಸಮಾಜೋದ್ಧಾರ ಮಾಡುವದು ಇದಕ್ಕಿಂತ ಹೆಚ್ಚಿನ ಬೆಲೆಯುಳ್ಳದ್ದಿರುವದಲ್ಲದೆ, ಮಾನವೀಯತೆಯಿಂದ ಕೂಡಿದ ಮಾನವಧರ್ಮವೆಂದೆನಿಸುತ್ತದೆ. ಇದು ತಪಸ್ವೀ ಜೀವನಕ್ಕಿಂತಲೂ ಹೆಚ್ಚಿನದು. ಅಂತೆಯೇ ಕಾರಣಿಕ ಪುರುಷರಾದ ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳು ಧರ್ಮಸಂಸ್ಥೆಯನ್ನು ಸ್ಥಾಪಿಸಿ, ಅದು ಬಹುದಿನ ಉಳಿದು ಬೆಳಗಲೆಂಬಾಶೆಯಿಂದ ಸ್ಥಿರಾಸ್ತಿ ಮಾಡಿದ್ದರ ಪರಿಣಾಮವೇ ಇಂದು ಆ ಸಂಸ್ಥೆ ಆದರ್ಶವೆನಿಸಿದೆ. ಜೀವಂತ ಉಳಿದಿದೆ. ಭೌತಿಕದ ತಾಪಕ್ಕೆ ಮನವು ಮಾರುಹೋಗದೆ ವಿಷಯ ವ್ಯಾಮೋಹಕ್ಕೆ ಒಳಗಾಗದೆ ರಜತಮಗಳಿಂದ ಆವೃತರಾಗದೆ, ಅರ್ಜಿಸಿದ ಅರ್ಥವು ಸದ್ವಿನಿಯೋಗಕ್ಕೆ ಸಲ್ಲಿಸಿದರೆ ಶಶಿಕಂಠನ ಕೃಪೆಯು ಸಾಧ್ಯ. ಒಳಹೊರಗಿನ, ಧರ್ಮ, ಅರ್ಥ, ಈ ಉಭಯ ವ್ಯವಸಾಯ ಸಾಗಿದಲ್ಲಿ ಸಮಾಜಕ್ಕೆ ಬಂಧುರತೆ, ಹಾಗೂ ಆತ್ಮಕ್ಕೆ ಶಾಂತಿ.

## ದರಿದ್ರದೇವೋಭವ

ಮಾತೃದೇವೋಭವ, ಪಿತೃದೇವೋಭವ ಎಂಬುದಾಗಿ ಉಪನಿಷತ್ತಿನ ವಾಕ್ಯವಾದರೆ ನಾವಿಂದು "ದರಿದ್ರದೇವೋ ಭವ" ಎಂದು ತಿಳಿದುಕೊಂಡು ನಡೆಯಬೇಕಾಗಿದೆ. ಇದುವೆ ಇಂದಿನ ನಿಜವಾದ ಧರ್ಮ. ಮಾನವೀಯತೆಯ ಕುರುಹು. ಧರ್ಮವು ಪ್ರೇಮದಲ್ಲಿರುವದೇ ಹೊರತು ಕೇವಲ ಬಾಹ್ಯ ಆಚಾರ, ವಿಚಾರ, ಕೃತ್ರಿಮತೆಯಲ್ಲಿಲ್ಲ. ಅನಾಥರು, ದುರ್ಬಲರು ಸಾವಿನ ದವಡೆಯಲ್ಲಿ ಸಿಕ್ಕು ನರಳುತ್ತಿರುವಾಗ ಅವರ ಕಷ್ಟವನ್ನು ಕಂಡು ದೂರೀಕರಿಸಲು ಪ್ರಯತ್ನಿಸದಿದ್ದರೆ ನಮ್ಮ ಸಹೋದರರಿಗೆ ನಾವೇ ದ್ರೋಹ ಬಗೆದಂತೆ. ದರಿದ್ರರನ್ನು ದೇವರೆಂದು ತಿಳಿದು ಅವರ ಸೇವೆ ಮಾಡಿದರೆ ಅವರಲ್ಲಿಯೇ ದೈವೀ ಶಕ್ತಿ ತುಂಬಿರುವದೆಂದು ಹಿರಿಯರ ನುಡಿಯಿದೆ. ಕುಲಗೋತ್ರಗಳನ್ನು ನೋಡದೆ ದುರ್ಬಲರ ಸೇವೆ ಮಾಡಿ ಸಂರಕ್ಷಿಸಿದರೆ ನಿಜವಾದ ಪೂಜೆ ಮಾಡಿದಂತಾಗುತ್ತದೆ. ಇದರಿಂದ ಹೊರಗಿನ ಪೂಜೆಗಿಂತ ನೂರು ಪಟ್ಟು ಅಧಿಕ ಆತ್ಮಶಕ್ತಿಗಳಿಸುವನಲ್ಲದೆ, ಈಶ್ವರ ಪ್ರೇಮವು ದೊರೆಯುವದು. ದರಿದ್ರರ ಸೇವೆಯಲ್ಲಿ ಮಾತ್ರ ನಿಜವಾದ ಕಳಕಳಿಯಿರಬೇಕು; ತೋರಿಕೆಯ ಸಾಮಾಜಿಕ ಪ್ರೇಮ ಸಲ್ಲದು; ನಿಲ್ಲದು. ಭಾವದಲ್ಲಿ ಹಗಲಿರುಳು ಚಿಂತನವಿದ್ದು ಸಾಧ್ಯವಿದ್ದಷ್ಟು ಸೇವೆ ಮಾಡುವುದೇ ಮಾನವನ ನಿಜವಾದ ಗುರಿ; ಮುಖ್ಯ ಕರ್ತವ್ಯ.

ಒಂದೆಡೆ ಸ್ವಾಮಿ ವಿವೇಕಾನಂದರು....

"ಪರೋಪಕಾರ ಮಾಡುವದೇ ಸತ್ಕರ್ಮ; ಇದರಿಂದ ಚಿತ್ತ ಶುದ್ಧಿಯಾಗುತ್ತದೆ. ಆಗ ಎಲ್ಲರಲ್ಲಿಯೂ ಶಿವನೇ ತೋರುವನು, ತದ್ವಿರುದ್ಧವಾಗಿರುವ ಸ್ವಾರ್ಥವೇ ಮಹಾಪಾಪ. ನಿಃಸ್ವಾರ್ಥತೆಯನ್ನು ತಿಳಿದಾಚರಿಸುವದೇ ಧರ್ಮದ ಹೆಗ್ಗುರುತು. ಯಾರು ನಿಃಸ್ವಾರ್ಥಿಗಳೋ ಅವರೇ ಆಧ್ಯಾತ್ಮಿಗಳು; ಅವರೇ ದೇವರ ಸಮೀಪದಲ್ಲಿರುವರು" ಎಂದು ಮುಂತಾಗಿ ಕಳಕಳಿಯ ಸಂದೇಶವನ್ನು ರಾಷ್ಟ್ರಕ್ಕೆ ನೀಡಿದ್ದಾರೆ. ಇಂದಿನ ದುರ್ಭರ ಪ್ರಸಂಗದಲ್ಲಿ ಅರ್ಥಹೀನ ವಿಚಾರಗಳ ಸುರುಳಿಯನ್ನು ಸುತ್ತಿ ಸಮಯ ಹಾಳುಮಾಡುತ್ತ ಹೋದಲ್ಲಿ ಕರ್ತವ್ಯಕ್ಕೆ ಭಂಗತಂದಂತಾಗುವದು. ಗಡ್ಡಕ್ಕೆ ಬೆಂಕಿ ಹತ್ತಿದಾಗ ತತ್ವ ಹೇಳುತ್ತ ಕುಳಿತಲ್ಲಿ ಅದರಿಂದ ಏನು ಪ್ರಯೋಜನವಾಗಲಾರದು. ಬಡವರ ಸ್ಥಿತಿ ಚಿಂತಾಜನಕವಾಗುತ್ತಿರುವಾಗ ಸಹಕಾರದ ಸಿಹಿನೀರನ್ನೆರೆಯದೆ ಹೋದರೆ ನೀರಿನಲ್ಲಿ ಹೋಮಮಾಡಿದಂತೆ ವ್ಯರ್ಥವಾಗುವದು. ಇದೀಗ ಬೇಕಾಗಿರುವದು ಮೊದಲು ಅನ್ನ, ನಂತರ ತತ್ವ. ದೀನರಿಗಾಗಿ ಹೆಣಗಾಡುವದು ಮರೆತು ಸ್ವಾರ್ಥಕ್ಕಾಗಿ, ಪರರ ವಂಚಿಸುವದಕ್ಕಾಗಿ ಸಮಯವನ್ನು ಕಳೆದರೆ ನಮ್ಮ ಕಾಲ ಮೇಲೆ ನಾವೇ ಕಲ್ಲು ಹಾಕಿಕೊಂಡಂತಾಗುವದು. "ಅನ್ನವನ್ನು ನೀಡುವದು, ನನ್ನಿಯನು ನುಡಿಯುವದು ತನ್ನಂತೆ ಪರರ ಬಗೆದೊಡೆ ಕೈಲಾಸವೇ . ಬಿನ್ನಾಣವಕ್ಕು ಸರ್ವಜ್ಞ" ಈ ನುಡಿಯು ಪ್ರತಿಯೊಬ್ಬರ ಹೃದಯ ಸೇರಿ,ಕೃತಿಯಲ್ಲಿಳಿದರೆ ದೇವರೇ ಹತ್ತಿರಬಂದು ತನ್ನತ್ತ ಕರೆದುಕೊಳ್ಳುತ್ತಾನೆ; ನಿಜಸುಖ ನೀಡುತ್ತಾನೆ.

## ಕಥಂ ಆರ್ಥಿಕ ಸಮಸ್ಯಾ ಪರಿಹ್ರೀಯತೇ?

ಇತ್ತಿತ್ತಲಾಗಿ ಎತ್ತ ನೋಡಿದರೂ ಆರ್ಥಿಕ ಸಮಸ್ಯೆಯ ಪರಿಹಾರದ ಬಗ್ಗೆ ಎಲ್ಲರೂ ಚಿಂತಿಸುತ್ತಿದ್ದಾರೆ. ವಿಚಾರಿಸುತ್ತಿದ್ದಾರೆ. ಸಮಾಜಕ್ಕೆ ಇದೊಂದು ದೊಡ್ಡ ತಲೆ ನೋವಾಗಿದೆ. ಅರ್ಥ ವಿಕಾಸವಾಗದೆ ಯಾವ ವ್ಯಕ್ತಿಯೂ ಬದುಕಲಾರ. ಸುಖದಿಂದ ಇರಲಾರನು, ಪ್ರತಿಯೊಬ್ಬರೂ ಪ್ರಯತ್ನಿಸುತ್ತಿದ್ದಾರೆ. ಕೆಲವರಿಗೆ ಸಫಲ ಮತ್ತೆ ಕೆಲವರಿಗೆ ವಿಫಲ. ಇದೇ ರೀತಿಯ ಪರಿಣಾಮಗಳು ಕಂಡು ಬರುತ್ತಲಿವೆ. ಸುಶಿಕ್ಷಿತರಿಗೂ ಹೇಳತೀರದಷ್ಟು ಸಂಕಟ. ನೌಕರಿ ದೊರೆತರೆ ಅವರ ಜೀವನಕ್ಕೆ ನೆಮ್ಮದಿ, ಇಲ್ಲದಿದ್ದರೆ ಓದಿದ್ದೆಲ್ಲ ನಿರರ್ಥಕವೆಂದು ಭಾವಿಸುತ್ತಾರೆ. ತಂದೆ ತಾಯಿಗಳನ್ನು ಸತಿಪತಿಗಳನ್ನು, ಬಂಧುಬಾಂಧವರನ್ನು ಹೇಗೆ ಸಲಹಬೇಕೆಂಬುದೇ ಅವರ ಜೀವನದ ಸಮಸ್ಯೆಯಾಗಿ ದುಃಖ ಸಾಗರದಲ್ಲಿ ಮುಳುಗುತ್ತಾರೆ. 'ನ ಘರ ನ ಘಾಟ ಕಾ' ಎನ್ನುವಂತೆ ಅವರ ಜೀವನವಾಗುತ್ತದೆ. ಅವರ ಮನಸ್ಸು ಕತ್ತಲೆಯ ಗವಿಯಲ್ಲಿ ಹೊಕ್ಕಂತಾಗುತ್ತದೆ. ಮನೆಯಲ್ಲಿಯೂ ಅಶಾಂತಮಯ ವಾತಾವರಣ ತುಂಬುತ್ತದೆ. ನೌಕರಿ ಸಿಗದಿದ್ದರೆ ಗುರುಹಿರಿಯರೂ ನೋವು ಮತ್ತು ಅಪವಾದಗಳನ್ನು ಅನುಭವಿಸಬೇಕಾಗುತ್ತದೆ. ಕಲಿತ ಶಿಕ್ಷಣದಿಂದ ಇಸ್ನುಳಿದ ಉದ್ಯೋಗ ಬರೆದಿರುವದೊಂದು ಪಾಲಕರಿಗೆ ಮತ್ತಷ್ಟು ಕಷ್ಟವಾಗಿ ಜೀವನವೇ ಬೇಸರವಾಗಿ ಬಿಡುತ್ತದೆ. ಕಾನೂನು ಮತ್ತು ಆರ್ಥಿಕ ಸಮಸ್ಯೆಯಲ್ಲಿ ಮಾನವನು ಜರ್ಜರಿತನಾಗುತ್ತಿದ್ದಾನೆ. ಕಾನೂನಿನ ಉಲ್ಲಂಘನೆ ಮಾಡುವದು ಒಂದು ರೀತಿಯ ಕಷ್ಟವಾದರೆ, ಮಾಡದಿರುವದೂ ಸಹ ಮತ್ತೊಂದು ಬಗೆಯ ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಹೀಗಾಗಿ ಈ ದ್ವಂದ್ವಯುದ್ಧದಲ್ಲಿ ಜೀವನವನ್ನು ತೊಳಲಾಡಿಸಬೇಕಾಗುತ್ತದೆ. ಸುಖದುಃಖಗಳು ಜೀವನಕ್ಕೆ ರಥದ ಗಾಲಿಗಳಿದ್ದಂತೆ ಬಿಸಿಲು, ನೆರಳುತೋರುವದು ಇದು ಪ್ರಕೃತಿ ನಿಯಮ. ಅಧೈರ್ಯವು ಮನುಷ್ಯನನ್ನು ಹಾಳುಮಾಡುತ್ತದೆ. ಧೈರ್ಯವು ಸರ್ವಾರ್ಥ ಸಾಧನವಾಗುತ್ತದೆ. ಎಂತಹ ಆರ್ಥಿಕ ಸಮಸ್ಯೆಯು ಎದುರಿಗೆ ಬಂದರೂ ಅಂಜದೆ ಅಳುಕದೆ ಮುನ್ನುಗ್ಗಿ, ಮಹಾತ್ಮಾ ಬಸವಣ್ಣನವರ 'ಕಾಯಕ ತತ್ವ'ವನ್ನು ನಿಷ್ಠೆಯಿಂದ ಪಾಲಿಸಿದರೆ ಆತ್ಮಕ್ಕೆ ಶಾಂತಿ. ಯಾವದೇ ಕಾಯಕ ವಿರಲಿ, ನಿಷ್ಠೆಯಿಂದ ಸತ್ಯಶುದ್ಧ ಜೀವನದೊಡನೆ ನಡೆಯಿಸಿದರೆ ಸಾರ್ಥಕವಾಗುತ್ತದೆ. ಕಾಯಕವು ಮಾನವನಿಗೆ ಆರ್ಥಿಕ ಸಮಸ್ಯೆಯನ್ನು ಪರಿಹಾರ ಮಾಡಲು ದಾರಿದೀಪವಾಗಿದೆ. ಕವಿದ ಕತ್ತಲೆಯನ್ನು ಕಳೆದುಕೊಳ್ಳಲು ದೊಡ್ಡ ಸಾಧನವಾಗಿದೆ.

## ಸಮಾಜ ವಿಚ್ಛಿದ್ರಕಾರಿಣೀ ಪ್ರವೃತ್ತಿರ್ನಯೋಗ್ಯಾ

ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ ಶ್ರೀಮದ್ವೀರಶೈವ ಶಿವಯೋಗ ಮಂದಿರ ಸಂಸ್ಥಾಪಕರಾದ ಯುಗಪುರುಷ ಕಾರಣಿಕ ಹಾನಗಲ್ಲ ಕುಮಾರ ಶಿವಯೋಗಿ ವರೇಣ್ಯರು ಲಿಂಗೈಕ್ಯರಾಗುವಮುನ್ನ "ಬಸವಾದಿ ಪ್ರಮಥರ ನಿಂದೆಯನ್ನು ಯಾರಾದರೂ ಮಾಡಿದರೆ ಅದನ್ನು ಸಹಿಸಬಾರದು. ಅದಕ್ಕೆ ತಕ್ಕ ರೀತಿಯಲ್ಲಿ ಪ್ರತಿಭಟಿಸಬೇಕು" ಎಂದು

ಬಿತ್ತರಿಸಿದ ಕೊನೆಯಾಶೆಯ ಹಿತನುಡಿಯನ್ನು ನಾವಿಂದು ಪ್ರತಿಯೊಬ್ಬರೂ ಸ್ಮರಿಸಿಕೊಳ್ಳ ಬೇಕಾಗಿದೆ.

ಇತ್ತಿತ್ತಲಾಗಿ ಧರ್ಮಗುರುಗಳೆನ್ನುವ ಹಿರಿಯ ಸಾಹಿತಿಗಳೇ ಬಸವ ನಿಂದೆಯನ್ನು ಮಾಡುತ್ತಿರುವದನ್ನು ನೋಡಿದಾಗ ಎಂತಹ ವ್ಯಕ್ತಿಗೂ ದುಃಖವಾಗದಿರದು. ಅವರ ಅಂತರಂಗವು ಎಷ್ಟು ಕೊಳಕು ಆದೆ ಎಂಬುದನ್ನು ಅರ್ಥೈಸಿಕೊಳ್ಳಬೇಕಾಗಿದೆ. ಅವರು ಕುಮಾರೇಶ್ವರನು ಬೋಧಿಸಿದ ಬಸವಧರ್ಮದ ಹಿರಿಮೆಯನ್ನು ಮರೆತಂತೆ ಕಾಣುತ್ತದೆ. ಸ್ವಾರ್ಥ ಸ್ವಪ್ರತಿಷ್ಠೆಯಲ್ಲಿ ಸಿಲುಕಿ, ಅಹಂಕಾರ ಮಮಕಾರಗಳಲ್ಲಿ ಬಿದ್ದು, ಮಾನವೀಯತೆ ಯನ್ನು ತುಳಿದು, ಸಮಾಜದಲ್ಲಿ ಒಡಕು ಹುಟ್ಟಿಸುತ್ತಿರುವದು ಯಾರಿಗೂ ಸಲ್ಲದು. ಮೇಲೇರಿ ಕೆಳಗೆ ಬಿದ್ದಂತೆ, ಇಂದು ರಾಜಕೀಯ ಹಾಗೂ ಸಾಮಾಜಿಕವಾಗಿ ಮಹತ್ತರ ಬದಲಾವಣೆಯಾಗುತ್ತಿರುವ ಇಂದಿನ ವಿಷಮ ಪರಿಸ್ಥಿತಿಯಲ್ಲಿ, ಸಂಕುಚಿತ ವಿಚಾರವನ್ನು ಸಮಾಜದಲ್ಲಿ ಬಿತ್ತಿದರೆ ನಮ್ಮ ಕಾಲಮೇಲೆ ನಾವೇ ಕಲ್ಲು ಹಾಕಿಕೊಂಡಂತೆ. ಗುರು ವಿರಕ್ತರು ಕೂಡಿಕೊಂಡು ಬಸವ ಧರ್ಮವನ್ನು ಬೆಳೆಯಿಸಬೇಕೆಂಬ ಕುಮಾರೇಶನ ಮಹೋ ದ್ದೇಶಕ್ಕೆ ಮಣ್ಣೆರಚಿದಂತಾಗುತ್ತದೆ. ಚಿತ್ತರಗಿ ಇಲಕಲ್ಲ ವಿಜಯ ಮಹಾಂತ ಶಿವಯೋಗಿ ಗಳು, ಅಥಣಿ ಶಿವಯೋಗಿಗಳು, ಘನಮಠ ಶಿವಯೋಗಿಗಳು ಮುಂತಾದ ಪುಣ್ಯ ಪುರುಷರು ಸಮಾಜದ ಸರ್ವಾಂಗೀಣ ಉನ್ನತಿಗೆ ಬೋಧಿಸಿದ ಶರಣರ ಧರ್ಮವನ್ನು ಹಿರಿಯರಾದ ನಮ್ಮವರು ಅರಿಯದಿದ್ದರೆ ಕಿರಿಯರ ಗತಿಯೇನು? ಕಿರಿಯರು ಕೊಡುತ್ತಿರುವ ಗೌರವ ಹಾಗೂ ಶ್ರದ್ಧೆಗೆ ಚ್ಯುತಿತರಲು ಮಾರ್ಗ ಮಾಡಿಕೊಟ್ಟಂತಾಗುವದಿಲ್ಲವೇ? ಯಾವ ಸಂಸ್ಥೆಯ ಆಶ್ರಯದಿಂದ ಬೆಳಕನ್ನು ಕಂಡು ಅದೇ ಸಂಸ್ಥೆಗೆ ಎರಡು ಬಗೆದರೆ ಕೃತಘ್ನತೆಯ ಲಕ್ಷಣವಲ್ಲವೆ? ಆ ಕಾರಣಿಕ ಕುಮಾರಯೋಗಿಗಳ ತತ್ವವನ್ನೂ ಹಾನಿ ಮಾಡಿದಂತಾಗುವ ದಿಲ್ಲವೇ? ಈ ರೀತಿ ಇದೀಗ ಇಂತಹ ಬುದ್ಧಿ ಜೀವಿಗಳು ಹೆಚ್ಚುತ್ತಿರುವದು ಸಮಾಜದ ದುರ್ದೈವ. ಆದಕ್ಕಾಗಿ ಸಮಾಜದಲ್ಲಿ ವಿಚ್ಛಿದ್ರಕಾರಕ ಪ್ರವೃತ್ತಿಯು ಬೆಳೆಯದಂತೆ ನೋಡಿ ಕೊಂಡರೆ ಸರ್ವರಿಗೆ ಸುಖಶಾಂತಿ ಸಿಕ್ಕೀತು. ಇಂದು, ಮಾತು–ಬರಹ ಪೆಚ್ಚಾಗಿ, ಒಳಗೊಂದು ಹೊರಗೊಂದಾದರೆ ಪ್ರಯೋಜನವಿಲ್ಲ. ಸಮಾಜವು ಎಲ್ಲವನ್ನೂ ನಿರೀಕ್ಷಿಸಿ, ಪರೀಕ್ಷಿಸಿ ನಿರ್ಣಯ ಮಾಡುವ ಕಾಲವಿದಾಗಿದೆ. ನಾ ಹೆಚ್ಚು, ನೀ ಹೆಚ್ಚೆನ್ನುವ ಒಣ ವಾದ ಬೇಡಾಗಿದೆ. ನಮಗಿಂದು ಬೇಕಾಗಿರುವದು ಕೇವಲ ಬಸವ ಧರ್ಮ ಚಿಂತನ. ಅಂದಾಗ ರಾಷ್ಟ್ರಕ್ಕೆ ಬಲಬಂದೀತು.

## ವೀರಶೈವ ಸಮಾಜಸ್ಯ ನೇತ್ರೇ ಗುರುಚರೌ ಸ್ಮೃತಾ

ಗುರುವಿರಕ್ತರು ವೀರಶೈವ ಸಮಾಜಕ್ಕೆ ಕಣ್ಣುಗಳೆರಡಿದ್ದಂತೆ. ಸಮಾಜ ಪುರುಷನು ಬಲಶಾಲಿಯಾಗಿ, ತನ್ನ ಅಂತಃಸತ್ವದ ಹಾಗೂ ಸತ್ಯದ ಬೆಳಕನ್ನು ಹರಡಲು ಗುರುವಿರಕ್ತರ ಭಾವೈಕ್ಯ ಅತ್ಯವಶ್ಯ. ಈ ಭಾವೈಕ್ಯ ಹೃದಯದಿಂದ ಕೂಡಿಕೊಂಡು ಪರಿಪೂರ್ಣವಾಗಿರ ಬೇಕು. ಅಲ್ಲಿ ಸ್ವಪ್ರತಿಷ್ಠೆ, ಅಹಂಕಾರ, ಮಮಕಾರ, ತಮ್ಮದೇ ಸಾಧಿಸಬೇಕೆನ್ನುವ

ಛಲ ಇವೆಲ್ಲವುಗಳಿಂದ ದೂರಿದ್ದಾಗ ಅದು ಸಾಧ್ಯವಾಗಬಹುದು. ಯಾವುದೇ ಸಂಶೋಧನೆ ಹೊರಬಂದರೂ, ಆ ಸಂಶೋಧನೆಯು ಕಾರ್ಯದಲ್ಲಿ ಆತ್ಮ-ನಿರೀಕ್ಷಣೆಯು ಕೂಡಿರದಿದ್ದರೆ, ಸತ್ಯಾಂಶವು ಇರದಿದ್ದರೆ ವಿಷಬೀಜ ಬಿತ್ತಿ ನೀರು ಹಣಿಸಿದಂತಾಗುವದು. ಸಂಶೋಧನೆಯು ವ್ಯಾವಹಾರಿಕ ಹಾಗೂ ರಾಜಕೀಯದ್ದಾದರೆ ಅದು ತೋರಿಹೋಗುವ ಕೋಲ್ಮಿಂಚಿನಂತೆ ಅನುಷ್ಠಾನ-ಅನುಸಂಧಾನಗಳು ಸಂಶೋಧನೆಗೆ ಮೂಲ ಬೇರುಗಳು. ನಾ ಹೆಚ್ಚು ನೀ ಹೆಚ್ಚು ಎನ್ನುವ ಹುಚ್ಚಿನ ಕಿಚ್ಚಿನಲ್ಲಿ ಬಿದ್ದುಕೊಂಡು ಸ್ವಾರ್ಥ ಸಾಧಿಸ ಹೊರಟರೆ ಸಮಾಜವು ಎಂದೂ ಸುಧಾರಿಸದು. ಸಮಾಜಾಭಿಮಾನವಿದ್ದವರ ರೀತಿಯೇ ಬೇರೆ, ಮಾತಿನಲ್ಲಿ ದೊಡ್ಡ ದೊಡ್ಡ ಗುಡ್ಡದಂತಹ ಮಾತು ಹೇಳುತ್ತ, ಕೃತಿಯಲ್ಲಿ ಶರಣ ಸಂಸ್ಕೃತಿ ಅವಹೇಳನ ಮಾಡುವ ಛಲವನ್ನು ಸೂಕ್ಷ್ಮವಾಗಿ ಸಾಧಿಸಹೊರಟರೆ, ತಿಳುವಳಿಕೆವುಳ್ಳವರಿಂದಲೇ ಸಮಾಜಕ್ಕೆ ದ್ರೋಹ ಬಗೆದಂತಾಗುವದು. ಹಾಲೆರದವರಿಗೆ ವಿಷವನ್ನು ನೀಡುವದು ವಿಕೃತಿಯಾದೀತೆ ಹೊರತು ಸಂಸ್ಕೃತಿಯಾಗದು. ಮಾನವ ಕುಲವೇ ಒಂದು ಎನ್ನುವ ಇಂದಿನ ವಿಜ್ಞಾನ ಯುಗದಲ್ಲಿ ಕೂಪಮಂಡೂಕ ನ್ಯಾಯದಂತೆ ಜೀವನ ಸಾಗಿದರೆ ಬೇರೆಯವರು ನಗದೇ ಇರುವರೆ? ಸಮಾಜಾಭಿವೃದ್ಧಿಯಾಗಲು ನಿಷ್ಠಾಪೂರ್ಣ ಅಭಿಮಾನ ಬೇಕು. ಮುಂಬರುವ ಯುವ ಪೀಳಿಗೆಯು ಶಪಿಸದಂತೆ ಇರಬೇಕು. ಅವರಿಗೆ ಸಮನ್ವಯ ಮಾರ್ಗವನ್ನು ತೋರಿಸಬೇಕು. ಸಂಘಟನೆ, ದುರ್ಘಟನೆಗೆ ಕಾರಣವಾಗದಂತೆ ನೋಡಿಕೊಳ್ಳಬೇಕು. ಸದ್ಭಾವನೆಯ ಹೂವು ಅರಳುತ್ತ ಹೋದರೆ ಅದರ ಕಂಪನ್ನು ಎಲ್ಲರೂ ಸೇವಿಸ ಬಯಸುತ್ತಾರೆ. ಒಡಕು ಹುಟ್ಟಿಸುವ ಸಾಹಿತ್ಯಸೃಷ್ಟಿಯನ್ನು ಮಾಡಿದರೆ ನಮ್ಮ ಕಾಲ ಮೇಲೆ ನಾವೇ ಕಲ್ಲು ಹಾಕಿಕೊಂಡಂತಾಗುವದು. ಹಿಂದಿನ ಮಹಾತ್ಮರ, ಶರಣರ, ಗುರುವಿರಕ್ತರ ಆದರ್ಶ ಜೀವನವನ್ನು ನಮ್ಮ ಮುಂದಿಟ್ಟುಕೊಂಡರೆ ಯಾವ ಭಿನ್ನ ಭಾವನೆ ಬರಲಾರದು. ಅದಿಲ್ಲದೆ ಬುದ್ಧಿ ವೈಚಾರಿಕತೆಗೆ ಹೆಚ್ಚು ಮಹತ್ವ ನೀಡಿದರೆ ಕಷ್ಟಪರಂಪರೆ ನಷ್ಟವಾಗದು. ಅದಕ್ಕಾಗಿ ಗುರುವಿರಕ್ತರೀರ್ವರು ಕೇವಲ ವೈಯಕ್ತಿಕ ಪ್ರತಿಷ್ಠೆಯ ಕಡೆಗೆ ಗಮನಕೊಡದೆ, ಸಮಾಜದ ಹಿತಚಿಂತನೆಯತ್ತ ವಿಶೇಷ ಲಕ್ಷವಹಿಸಿ ಕಾರ್ಯಗೈದರೆ ಸಮಾಜವು ಬದುಕಿ ಬೆಳಗೀತು.

### ಶುಚೌ ಚ ಚರಿತೇ ಶೀಲಂ

"ಶುಚೌ ಚ ಚರಿತೇ ಶೀಲಂ" ಇದು ಅಮರಕೋಶದಲ್ಲಿ ಹೇಳಿದ ಸೂಕ್ತಿ. ಶೀಲವಿದ್ದವರಲ್ಲಿ ಪವಿತ್ರತೆ, ಚಾರಿತ್ರ್ಯವು ತುಂಬಿಕೊಂಡಿರುತ್ತದೆ. ಶೀಲವು ಮನುಷ್ಯನನ್ನು ಮೇಲಕ್ಕೆತ್ತುತ್ತದೆ. ಆತ್ಮಶುದ್ಧಿ ನೀಡುತ್ತದೆ. ವ್ಯಕ್ತಿತ್ವವಿಕಾಸಕ್ಕೆ ದಾರಿದೀಪವಾಗುತ್ತದೆ. ಮನೋದೌರ್ಬಲ್ಯವು ದೂರಾಗಿ, ಸಾಮಾಜಿಕ ರಂಗದಲ್ಲಿ ಸೇವೆ ಮಾಡಲು ಧೈರ್ಯ ಬರುತ್ತದೆ. ಬಾಳಿನಗುರಿ ನಿಚ್ಚಳವಾಗಿ ಉದಾತ್ತತೆಯು ತಲೆದೋರುತ್ತದೆ. ಶೀಲವು ಮನುಷ್ಯನಿಗೆ ಸುಖ ನೀಡಲು ದೊಡ್ಡಸಾಧನವಾಗಿದೆ. ಶೀಲದ ಬಲದಿಂದ ಜಗತ್ತಿನಲ್ಲಿ ಏನೆಲ್ಲವನ್ನು ಸಾಧಿಸಬಹುದು. ಸ್ವಭಾವದಲ್ಲಿ, ವ್ಯವಹಾರದಲ್ಲಿ ಸಮೀಚಿನತೆ ಬಂದು

ಭಾವ ಬುದ್ಧಿಗಳೆರಡರಲ್ಲಿ ಚೈತನ್ಯವು ತುಂಬಿ ತುಳುಕುತ್ತದೆ. ಸಂಕುಚಿತ ಮನೋಭಾವನೆ ದೂರಾಗಿ, ಸದಾಚಾರ ಸಂಪನ್ನತೆಯು ಅಳವಡುತ್ತದೆ. ತನ್ನತನದ ಅರಿವು ಮೂಡಿ, ಬಾಳಿನಲ್ಲಿ ಬೆಳಕು ಕಾಣಲು ಸಾಧನವಾಗುತ್ತದೆ. ಚಾರಿತ್ರ್ಯ ದೌರ್ಬಲ್ಯ ವ್ಯಾಧಿಯಿಂದ ಪೀಡಿತರಾದವರಿಗೆ ಶೀಲದ ಮಹಿಮೆ ಅರ್ಥವಾಗದು. ಕಾಯಿಕ ವಾಚಿಕ ಏವಂ ಮಾನಸ ಕ್ರಿಯಾ ಕಲಾಪಗಳೇ ಚಾರಿತ್ರವೆಂದೆನಿಸುತ್ತದೆ. ಶೀಲದ ದಾರಿಯಲ್ಲಿದ್ದವರು, ಪ್ರತಿಯೊಂದರಲ್ಲಿಯೂ ಪವಿತ್ರತೆಯನ್ನು ಕಂಡು, ಆತ್ಮಾನುಭೂತಿಯನ್ನು ಪಡೆದು, ಅಂತರಂಗ ಬಹಿರಂಗಗಳೆರಡರಲ್ಲಿಯೂ ಸುಖವನ್ನು ಕಾಣುತ್ತಾರೆ. ಅಂತೆಯೇ ಎಡೆಯೂರು ತೋಂಟದ ಸಿದ್ಧಲಿಂಗಶಿವಯೋಗಿಗಳು "ಸತ್ಯದಲ್ಲಿ ನಡೆಯುವದು ಶೀಲ, ಸತ್ಯದಲ್ಲಿ ನುಡಿಯುವದು ಶೀಲ, ಸಜ್ಜನ ಸದಾಚಾರದಲ್ಲಿ ವರ್ತಿಸಿ, ಸತ್ಯವನ್ನರಿವುದೇ ಶೀಲ ಕಾಣಿರೋ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ" ಎಂದುದಾಗಿ ಶೀಲದ ಮಹಿಮೆಯನ್ನು ಅರುಹಿದ್ದಾರೆ.

ವ್ಯಕ್ತಿಗಳಿಂದ ಸಮಾಜ, ಹಾಗೂ ಸಮಾಜದಿಂದ ರಾಷ್ಟ್ರನಿರ್ಮಾಣವಾಗುತ್ತದೆ. ಉನ್ನತಶೀಲ ರಾಷ್ಟ್ರೋತ್ಥಾನಕ್ಕಾಗಿ ವ್ಯಕ್ತಿಗಳ ಚಾರಿತ್ರ ಶೀಲವೇ ಪರಮೋಪಾಯ. ಯಾವುದೇ ಸಮಾಜವು ಬೆಳವಣಿಗೆಯ ದಾರಿಯತ್ತ ಸಾಗಿದ್ದರೆ, ಅಲ್ಲಿ ಶೀಲ, ಚಾರಿತ್ರ್ಯಗಳು ತುಂಬಿಕೊಂಡಿವೆ ಎಂದು ಅರ್ಥೈಸಿಕೊಳ್ಳಬೇಕು. ಕೇವಲ ಭೌತಿಕ ಬೆಳವಣಿಗೆಯಿಂದ ಉನ್ನತಿಯಾಗದು. ಜೊತೆಗೆ ಆಂತರಿಕ ಶಕ್ತಿಯ ಬಲವು ಅದರಲ್ಲಿ ಸಮಾವೇಶವಾಗಿದ್ದರೆ, ಸಮಾಜವು ಸಮೃದ್ಧಿಗೊಂಡು ಆದರ್ಶವುಳ್ಳದ್ದಾಗುತ್ತದೆ.

ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋಜನಃ
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ (೩/೨೧)

ಎಂಬ ಗೀತೋಕ್ತಿಯಂತೆ ಹಿರಿಯರು, ಶರಣರು ತೋರಿದ ಹೆದ್ದಾರಿಯಲ್ಲಿ ನಡೆದರೆ, ಮದಮಾತ್ಸರ್ಯವಳಿದು, ಶೀಲಸಂಸ್ಕೃತಿಯುಳಿಸಿ, ಮಾನವೀಯತೆ ಪಡೆದು, ಬಾಳಿನಲ್ಲಿ ಬೆಳಕನ್ನು ಕಾಣಲು ಸಾಧ್ಯ.

## ಪ್ರೇಮ ಏವ ಮಹೇಶ್ವರಃ

**Love is God** ಪ್ರೇಮವೇ ದೇವರು. ದೇವರಿಗೆ ಬೇಕಾದುದು ಪ್ರೇಮ. ಪ್ರೇಮದಲ್ಲಿಯೂ ಎರಡು ತೆರ. ಒಂದು ಸಕಾಮ ಮತ್ತೊಂದು ನಿಷ್ಕಾಮ. ಸಕಾಮ ಪ್ರೇಮದಲ್ಲಿ ಸ್ವಾರ್ಥ ತುಂಬಿದ್ದರೆ ನಿಷ್ಕಾಮ ಪ್ರೇಮದಲ್ಲಿ ನಿಸ್ವಾರ್ಥ ಹಾಗೂ ಸಮರ್ಥ ಮನೋಭಾವನೆ ತುಂಬಿರುತ್ತದೆ.

ಪ್ರೇಮ ಮಧುರ ಬಾಳಿನ ಅನುಕಂಪ ವಿಶ್ವಾಸವನ್ನು ಕುದುರಿಸುತ್ತದೆ. ಆತ್ಮೀಯತೆಯನ್ನು ಬೆಳೆಸುತ್ತದೆ. ಬಾಳ್ಬೆಳಕಿಗೆ ದಾರಿದೀಪವಾಗುತ್ತದೆ. ದೇವರಲ್ಲಿ ತೋರುವ ಪ್ರೇಮವೆ ನಿಷ್ಕಾಮ ಪ್ರೇಮ. ತನ್ನ ಬಂಧು ಬಳಗಗಳಲ್ಲಿ ತೋರುವದು ಸಕಾಮ ಪ್ರೇಮವಾಗಿ ಪರಿಣಮಿಸುತ್ತದೆ. ಮಾನವನ ಬದುಕಿನಲ್ಲಿ ಪ್ರೇಮವು ಮೌಲ್ಯವನ್ನು

ಹೆಚ್ಚಿಸುತ್ತದೆ. ಮಾನವೀಯತೆಯ ಮೌಲ್ಯಗಳು ವ್ಯಕ್ತಿ ವಿಕಾಸಗಳು ಪ್ರೇಮದ ಆಧಾರ ದಿಂದಲೇ ಬೆಳೆದು ಬೆಳಗುತ್ತದೆ. ಪ್ರೇಮಕ್ಕಿಂತ ಹಿರಿದಾದ ವಸ್ತು ಬದುಕಿನಲ್ಲಿ ಬೇರೊಂದಿಲ್ಲ. ಪ್ರೇಮವಿದ್ದರೇನೆ ಜಗತ್ತು ಬದುಕಿದೆ. ಪ್ರೇಮವಿರದಿದ್ದರೆ ಯಾರಲ್ಲಿ ಸುಖ ಶಾಂತಿ ನೆಮ್ಮದಿ ಬರಲು ಸಾಧ್ಯವಿಲ್ಲ. ಪ್ರೇಮವಿಲ್ಲದ ಜೀವನ ಬರಡು ಜೀವನ, ಹಾಳುದೇಗುಲದಂತೆ ಅವರ ಭಾವ. ವ್ಯಕ್ತಿಗೆ ಶಕ್ತಿಬರಲು ಪ್ರೇಮವೇ ಮೂಲಕಾರಣ. ಈ ಪ್ರೇಮಯೋಗ ಬದುಕಿನ ಚೆಲುವಿಗೆ ನಿತ್ಯಶಾಂತಿಯ ಒಡನಾಟಕ್ಕೆ ಒಲುವಿನ ಮಾಧು ರ್ಯಕ್ಕೆ ಸಂಸ್ಕೃತಿಯ ಪರಮೋಚ್ಛಶಕ್ತಿಗೆ ಆಕಾರ ರೂಪವೇ ಈ ಪ್ರೇಮ. ಇದೇ ಪ್ರೇಮವು ತಾಮಸೀಯ ಪ್ರವೃತ್ತಿಯಿಂದ ಕೂಡಿದರೆ ಅಲ್ಲಿ ಸೊಗಸು; ಆತ್ಮಿಕ ಶಾಂತಿ ದೊರಕದು. ಆ ಬದುಕು ಜಾಡ್ಯದ ಬದುಕಾಗುತ್ತದೆ. ಅಲ್ಲಿ ಅಂತರಂಗ ಶುದ್ಧ ಇರಲಾರದು. ತಾಮ ಸೀಯ ಪ್ರೇಮದಲ್ಲಿ ಸ್ವಾರ್ಥ, ಸಂಕುಚಿತತನ ತುಂಬಿರುವದರಿಂದ, ಹೊಡೆದಾಟ ಬಡಿ ದಾಟಗಳು ಹೆಚ್ಚಾಗಿ ಮನುಷ್ಯನ ಮನೋದೌರ್ಬಲ್ಯಕ್ಕೆ ಕಾರಣವಾಗುತ್ತದೆ.

ಶುದ್ಧ ಪ್ರೇಮದಿಂದ ಮನುಷ್ಯನು ಮೇಲಕ್ಕೇರುತ್ತಾನೆ. ಪಶು ವೃತ್ತಿಯನ್ನು ಕಳೆದುಕೊಳ್ಳುತ್ತಾನೆ. ದೇಶಪ್ರೇಮವನ್ನು ಮಾಡಿ, ಈಶ್ವರ ಸಾಕ್ಷಾತ್ಕಾರ ಮಾಡಿಕೊಳ್ಳು ತ್ತಾನೆ. ಇಂದು ಜಗತ್ತಿನಲ್ಲಿ ಯಾವುದೇ ರಾಷ್ಟ್ರವು ಮುಂದುವರಿದಿದ್ದರೆ ಅಲ್ಲಿಯ ಜನರ ದೇಶಪ್ರೇಮದಿಂದ, ಸ್ವಾರ್ಥ ತ್ಯಾಗದಿಂದ, ಸ್ವಾರ್ಥಪ್ರೇಮವು ಅಶಾಶ್ವತ, ನಿಸ್ವಾರ್ಥ ಪ್ರೇಮವು ಶಾಶ್ವತ. ಇಂತಹ ಪ್ರೇಮವಿದ್ದಲ್ಲಿ ಭಯವಿಲ್ಲ. ತನ್ನತನದ ಅರಿವಿನ ಬೆಳಕನ್ನು ಮೂಡಿಸಿಕೊಂಡು ಭಗವತ್ ಪ್ರೇಮದಲ್ಲಿ ಲೀನವಾದಾಗ ಮನಸ್ಸಿಗೆ ತೃಪ್ತಿ ಯುಂಟಾಗುತ್ತದೆ. ಅಂತೆಯೇ ಶರಣರು "ನಂಬಿ ಕರೆದರೆ ಓ ಎನ್ನನೇ ಶಿವನು" ಎಂದಿ ದ್ದಾರೆ. ನಿಷ್ಕಾಮ ಪ್ರೇಮದಿಂದ ನಂಬಿ ಕರೆದಾಗ ದೇವರು ಪ್ರತ್ಯಕ್ಷನಾಗಿ ಯೋಗಕ್ಷೇಮ ವನ್ನು ಕೇಳಿ ನಿಜಾನಂದವನ್ನು ನೀಡುವನೆಂದು ಗೀತೆ ಹೇಳುತ್ತದೆ. ದೇವರು ವ್ಯಕ್ತಿಯ ಅಂತರಂಗವನ್ನು ಅರಿದು ನಿರೀಕ್ಷಿಸಿ, ಪರೀಕ್ಷಿಸುವನು, ಸುವರ್ಣದಂತೆ ಒರೆದು ನೋಡು ವನು. ಮಣ್ಣು ಮಾಡುವ, ಮಸಿಯ ಮಾಡುವ, ಚಿನ್ನದಂತೆ ಶುದ್ಧ ಪ್ರೇಮವನ್ನು, ಹೃದಯವನ್ನು ಕಂಡಾಗ ಕೊನೆಗೆ ತನ್ನಂತೆ ಮಾಡಿಕೊಳ್ಳುವನು. ತರ್ಕಜ್ಞಾನಕ್ಕಿಂತಲೂ ತಿಳಿಯಾದ ಶುದ್ಧ ಪ್ರೇಮ ಮಿಗಿಲಾದುದು.

ಪವಿತ್ರ ಪ್ರೇಮವೇ ಅದು ಭಕ್ತಿ ಎನಿಸಿ, ಮುಕ್ತಿಗೆ ಮೂಲ ಕಾರಣವಾಗಿ, ಮುಖ್ಯ ಸಾಧನವಾಗುತ್ತದ. ವ್ಯಕ್ತಿತ್ವವಿಕಾಸಕ್ಕೆ ಕೈಗನ್ನಡಿಯಾಗುತ್ತದೆ.

**ಆಚಾರಹೀನಂ ನ ಪುನಂತಿ ವೇದಾಃ**

ಈ ಜೀವನವು ಪಾವನವಾಗಬೇಕಾದರೆ ಸದಾಚಾರವು ಅತ್ಯವಶ್ಯಬೇಕು. ಸದಾಚಾರ ಶೂನ್ಯ ವ್ಯಕ್ತಿಗೆ ಆತ್ಮಶಕ್ತಿ ಲಭಿಸದು. ಸದಾಚಾರದಿಂದ ಅನಂತ ಪಾಪಗಳು ದೂರಾಗು ತ್ತವೆ. ಸದಾಚಾರದ ಬಲದಿಂದ ಏನೆಲ್ಲವನ್ನು ಸಾಧಿಸಬಹುದು. ಐಹಿಕ ಮತ್ತು ಪಾರ ಲೌಕಿಕ ಸುಖವನ್ನು ಪಡೆಯಬಹುದು. ಆಚಾರವಿರದ ವ್ಯಕ್ತಿಗೆ ಒಳ್ಳೇ ವಿಚಾರವು

ಬರುವದು ಕಷ್ಟವಾಗುತ್ತದೆ. ಆಚಾರವಿದ್ದಲ್ಲಿ ಸದ್ವಿಚಾರ, ಸದ್ಭಾವನೆ ಗುರುಹಿರಿಯರಲ್ಲಿ ಶ್ರದ್ಧೆ ಹುಟ್ಟುತ್ತದೆ. ಆಚಾರದಲ್ಲಿಯೂ ಎರಡು-ತೆರ-ಒಂದು ಅಂತರಂಗ, ಮತ್ತೊಂದು ಬಹಿರಂಗ. ಒಂದು ಬಿಟ್ಟು ಒಂದಿರಲು ಸಾಧ್ಯವಿಲ್ಲ. ಸರಪಳಿಯ ಒಂದು ಕೊಂಡಿ ಬಿಚ್ಚಿದರೆ, ಎಲ್ಲವೂ ಉದುರಿಹೋಗುವಂತೆ; ಬಹಿರಂಗ ಸಾಧನೆಯಲ್ಲಿಯೂ ಆಚಾರಬೇಕು. ಅಂತರಂಗ ಸಾಧನೆಯಲ್ಲಿ ಆಚಾರವು ಬೇಕಾಗುತ್ತದೆ. ಕ್ರಿಯೆಯಿಲ್ಲದ ಜ್ಞಾನ, ಜ್ಞಾನವಿಲ್ಲದ ಕ್ರಿಯೆ ಹೇಗೆ ನಿರರ್ಥಕವೋ ಹಾಗೆಯೇ ಹೊರಗಿನ ಆಚರಣೆಯಲ್ಲಿಯೂ ಶುದ್ಧವಿರ ಬೇಕಾಗುತ್ತದೆ. ಸ್ನಾನ ಪೂಜಾದಿಗಳನ್ನು ನಿತ್ಯ ನೈಮಿತ್ತಕಾದಿಕರ್ಮಗಳನ್ನು ಮಾಡ ಬೇಕಾಗುತ್ತದೆ. ಇವೆಲ್ಲವುಗಳನ್ನು ಅಂತರಂಗ ಶುದ್ಧಿಗಾಗಿ ಮಾಡಿದರೆ ಮಾತ್ರ ಸಫಲ ವಾಗುತ್ತದೆ. ಆಚರಣೆಯು ತೋರಿಕೆಯದಾಗಿ ಒಳಗೆ ಕುಟಿಲ, ಕುಹಕತನ ತುಂಬಿಕೊಂಡಿದ್ದರೆ, ಅದರಷ್ಟು ಅಪಾಯಕಾರಿ ಮತ್ತಾವುದೂ ಇರಲಾರದು, ತೈತ್ತರೀಯೋಪನಿಷತ್ತಿನಲ್ಲಿ ಸದಾಚಾರದ ಸ್ವರೂಪವನ್ನು ಚೆನ್ನಾಗಿ ತಿಳಿಸಿದ್ದಾರೆ. ಸತ್ಯಂ ವದ, ಧರ್ಮಂ ಚರ. ಮಾತೃದೇವೋಭವ, ಪಿತೃದೇವೋಭವ ಮುಂತಾದ ಹಿತನುಡಿಗಳು ಸದಾಚಾರದ ಮೂಲ ಸ್ತಂಭಗಳು. ಇದೇ ಭಾವವನ್ನೇ ಮಹಾತ್ಮಾ ಬಸವಣ್ಣನವರೂ ಸಹ, ಮಗನಿಗೆ ತಂದೆ ಹೇಳುವಂತೆ ಹಿತೋಕ್ತಿಗಳನ್ನು ಹೇಳಿದ್ದಾರೆ. ಕಳಬೇಡ ಕೊಲಬೇಡ, ಹುಸಿಯ ನುಡಿಯಲು ಬೇಡ, ಅನ್ಯರಿಗೆ ಅಸಹ್ಯಪಡಬೇಡ, ಇದಿರು ಹಳಿಯಲು ಬೇಡ, ತನ್ನ ಬಣ್ಣಿಸಬೇಡ, ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗಮದೇವನ ಒಲಿಸುವ ಪರಿ ಎಂದು ಮುಂತಾಗಿ ತಿಳಿಹೇಳಿದ್ದಾರೆ. ಇವೆಲ್ಲವುಗಳನ್ನು ಮನದಲ್ಲಿ ಮೂಡಿಸಿಕೊಂಡು, ದೃಢೀಕರಿಸಿಕೊಳ್ಳಬೇಕಾದರೆ, ಮೈಮನ ತೊಳೆದುಕೊಳ್ಳಬೇಕಾಗುತ್ತದೆ. ಅಂತರಂಗ ಶುದ್ಧಿಯನ್ನು ಕಾಪಾಡಬೇಕಾಗುತ್ತದೆ. ಬಹಿರಂಗ ಶುದ್ಧಿಯಾಗದೇ, ಅಂತರಂಗ ಶುದ್ಧಿಯಾಗದು, ಸಿದ್ಧಿಯಾಗದು. ಚರಿತ್ರದ ಅಂಗವೇ ಸದಾಚಾರವೆಂದು ಧರ್ಮಶಾಸ್ತ್ರಗಳು ಹೇಳುತ್ತವೆ. ದುರಾಚಾರವು ಮನುಷ್ಯನನ್ನು ತೆಳಗಿಳಿಸಿದರೆ, ಸದಾಚಾರವು ಮೇಲೆ ಕೈತ್ತುತ್ತದೆ. ಅನಾಚಾರದಿಂದ ಅನಾಹುತಗಳು ಹೆಚ್ಚಾಗುತ್ತವೆ. ಸದಾಚಾರದಿಂದ ಅನಾಹುತಗಳು ದೂರ ಸರಿಯುತ್ತವೆ. ಅನಾಚಾರದಿಂದ ಅನೈಕ್ಯತೆ, ಸದಾಚಾರದಿಂದ ಅಶಾಂತಿ, ಸದಾಚಾರದಿಂದ ಸುಖಶಾಂತಿ. ದುರಾಚಾರವು ದುರ್ಬುದ್ಧಿ ಹುಟ್ಟಿಸಿದರೆ, ಸದಾಚಾರವು ಸದ್ಬುದ್ಧಿ ಹುಟ್ಟಿಸುತ್ತದೆ. ವಿದ್ಯೆಗೆ ಶಕ್ತಿ ಬರಬೇಕಾದರೆ ಸದಾಚಾರವೇ ಮೂಲ ಕಾರಣ. ಪ್ರತಿಯೊಂದು ರಂಗದಲ್ಲಿಯೂ ಸದಾಚಾರ ಸದ್ವಿಚಾರ ತುಂಬಿದರೆ ಮಾತ್ರ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಆತ್ಮವಿದ್ಯೆಗೆ ಸದಾಚಾರವೇ ದಾರಿದೀಪ.

**ಪ್ರಾರಭ್ಯ ಚೋತ್ತಮಜನಾ ನ ಪರಿತ್ಯಜಂತಿ**

ಪ್ರಾರಭ್ಯತೆ ನ ಖಲು ವಿಘ್ನಭಯೇನ ನೀಚೈಃ
ಪ್ರಾರಭ್ಯ ವಿಘ್ನನಿಹತಾ ವಿರಮಂತಿ ಮಧ್ಯಾಃ।

ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯ ಮಾನಾಃ
ಪ್ರಾರಭ್ಯಚ್ಯೋತ್ತಮಜನಾ ನ ಪರಿತ್ಯಜಂತಿ॥

ಕೆಲವರು ವಿಘ್ನ ಭಯದಿಂದ ಕಾರ್ಯವನ್ನು ಪ್ರಾರಂಭಿಸದೆ ಹಾಗೆಯೇ ಇದ್ದು, ಜೀವನ ಸಾಗಿಸುತ್ತಾರೆ. ಕಾರ್ಯವನ್ನು ಪ್ರಾರಂಭಿಸಿದರೆ ಎಲ್ಲಿ ಕೆಡುತ್ತದೆಯೋ ಏನೋ ಎಂಬುವ ಚಿಂತೆಯಲ್ಲಿ ಮುಳುಗಿ ಆಲಸ್ಯವುಳ್ಳವರಾಗಿ ಕುಳಿತು ಬಿಡುತ್ತಾರೆ. ಮಧ್ಯಮ ಜನರು ಕಾರ್ಯವನ್ನು ಪ್ರಾರಂಭಿಸುತ್ತಾರೆ. ಆದರೆ ಮಧ್ಯದಲ್ಲಿ ಏನಾದರೂ ಅಡೆ-ತಡೆ ಯುಂಟಾದರೆ ಹಾಗೆಯೇ ಬಿಟ್ಟು ಬಿಡುತ್ತಾರೆ. ಮುಂದುವರಿಯುವ ಧೈರ್ಯವು ಅವರಿಗೆ ಇರಲಾರದು. ಉತ್ತಮ ಜನರು ಮಾತ್ರ ಕಾರ್ಯವನ್ನು ಪ್ರಾರಂಭಿಸಿ, ಎನಿತೇ ವಿಘ್ನಗಳು ಎದುರು ಬಂದರೂ ಹಿಡಿದ ಕಾರ್ಯವನ್ನು ಬಿಡಲಾರರು. ಆಲಸ್ಯರಹಿತರಾಗಿ ಧೈರ್ಯ ದಿಂದ ಗಜನಿಕರ ಓಡುವಂತೆ ಮುಂದೆ ಸಾಗುತ್ತಾರೆ. ಇವರಿಗೆ ಗುರಿಯ ಸಾಧನೆಯು ತುಂಬಿ ರುವದರಿಂದ ಹಿಡಿದ ಛಲವನ್ನು ಬಿಡದೆ ಮೃದು ನುಡಿಯ ಪಡೆಯುವವರೆಗೂ ದುಡಿಯು ತ್ತಾರೆ, ಆತ್ಮ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆ. ಚರಿತ್ರ ನಿರ್ಮಾಣವಾಗಬೇಕಾದರೂ, ನಿರುತರ ಪರಿಶ್ರಮದಿಂದ, ದೃಢನಿಶ್ಚಯದಿಂದ, ದೃಢ ಸಂಕಲ್ಪದಿಂದ ಸಾಧ್ಯವಾಗುತ್ತದೆ. ತ್ಯಾಗಿಗಳ, ಯೋಗಿಗಳ, ಶಿವಶರಣರ, ಪಂಡಿತರ, ಮಹಾಕವಿಗಳ ಜೀವನ ಚರಿತ್ರವನ್ನು ನಿರೀಕ್ಷಿಸಿದಾಗ ಅವರ ಸಾಹಸಮಯ ಜೀವನವೇ ನಮ್ಮ ಕಣ್ಣ ಮುಂದೆ ನಿಲ್ಲುತ್ತದೆ. ಅವರು ಹಗಲಿರುಳು ದುಡಿದು ಕಾಯಕವೇ ಕೈಲಾಸವೆಂದು ಬೋಧಿಸಿ, ಆ ರೀತಿ ನಡೆದುದರ ಪರಿಣಾಮವೇ ನಮಗಿಂದು ಮಾರ್ಗದರ್ಶಕರಾಗಿದ್ದಾರೆ. ದಾರಿದೀಪವಾಗಿದ್ದಾರೆ. ಎಷ್ಟೋ ಜನ ಮಹಾತ್ಮರಿಗೆ ಶಾರೀರಿಕ ಕಷ್ಟಗಳು ಎದುರು ಬಂದು, ಅನ್ಯಾಯ, ಅತ್ಯಾಚಾರ, ಅಪಮಾನ ಅವರಿಗೆ ಬಂದೊದಗಿದರೂ ಹಿಡಿದ ವ್ರತವನ್ನು ಬಿಡದೆ ಸಮಾಜ ಸೇವೆ ಮಾಡಿ ಜನಜಾಗೃತಿ ಮಾಡಿದ್ದಾರೆ. ದುಡಿಯುವವರೇ ಎಡಹುವರಲ್ಲದೆ, ಕುಳಿತವರಿಗೆ ಅದು ಸಾಧ್ಯವಾಗದು. ಹುಟ್ಟಿದ ಮನುಷ್ಯನು ಯಾವದೇ ರಂಗದಲ್ಲಿದ್ದರೂ ಧೃತಿಗೆಡದಂತೆ ಜೀವನ ಸಾಗಿಸಬೇಕು. ಒಳ್ಳೇ ಭಾವನೆ, ಒಳ್ಳೇ ವಿಚಾರದಿಂದ ಮುಂದೆ ಹೋಗತಕ್ಕವರಿಗೆ ಮಾತ್ರ ಜನರು ಅಸೂಯೆಯಿಂದ ಹಿಂದೆ ಜಗ್ಗುವದು ಸ್ವಾಭಾವಿಕ.... "ಲಿಂಗದೊಳಗೆ ನೆನಹು ನಟ್ಟು, ದುಷ್ಟ ಮನದ ನಿಲುವು ಸುಟ್ಟು, ತನುಮನೋವಿಕಾರದ ಭೂತದ ಬಲ ವನ್ನಿಟ್ಟು। ಶಿವನ ಕರುಣ। ದೊಲವನ್ನುಟ್ಟು, ವಾಗ್ವಿಲಾಸದುಲುಹುಗೆಟ್ಟು ಪರಮ ಸುಖದಿ- ಬಾಳಬೇಕು" ಗುರುಬಸವ ಕವಿಯ ಈ ನುಡಿಯು ನಮ್ಮೆಲ್ಲರ ಬಾಳಿಗೆ ಕೈಗನ್ನಡಿಯಾಗಲಿ.

**ಅನ್ಯೇಷಾಂ ಚಿಂತಯಾಽಸ್ಮಾಕಂ ಮನಃಶಾಂತಿರ್ನ ಲಭ್ಯತೇ**

"ಪರರ ಚಿಂತೆ ನಮಗೇಕಯ್ಯಾ? ನಮ್ಮ ಚಿಂತೆ ನಮಗೆ ಸಾಲದು?
ಕೂಡಲ ಸಂಗಮದೇವ ಒಲಿಯುವನೋ ಒಲಿಯುವನೋ?
ಎಂಬ ಚಿಂತೆ ಹಾಸಲುಂಟು; ಹೊದೆಯಲುಂಟು"

ಈ ನುಡಿಯು ವಿಶ್ವವಿಭೂತಿ ಮಹಾತ್ಮಾ ಬಸವೇಶ್ವರರ ಅನುಭವ ನುಡಿ. ಕನ್ನಡ ಭಾಷೆ, ಸಾಹಿತ್ಯ, ಧಾರ್ಮಿಕ ಜೀವನಗಳಿಗೆ ಚೇತನಶಕ್ತಿಯನ್ನು ರೂಪಿಸಿಕೊಟ್ಟು, ಮಹಾ ಕ್ರಾಂತಿಯನ್ನೆಸಗಿ, ಮಲಗಿದ ಮಾನವ ಜನಾಂಗವನ್ನು ಎಚ್ಚರಿಸಿ ದಿವ್ಯ ಜ್ಯೋತಿಯೆನಿಸಿದ ಮಹಾತ್ಮ ಬಸವೇಶ್ವರರಿಗೆ "ಪರರ ಚಿಂತೆ" ಬೇಸರವೆನಿಸಿದಂತಿದೆ. ಸ್ವಾರ್ಥಿಗಳ ಕೈವಾಡ ಸಾಕೆನಿಸಿದೆ. ಸಾಮಾಜಿಕ ಸೇವೆ ಮಾಡುವವರಿಗೆ ಹಲವು ಚಿಂತೆಗಳು ಮುತ್ತುವವು ಅದು ಸ್ವಾಭಾವಿಕ. ಆ ಸೇವೆಯಲ್ಲಿ ಸ್ವಾರ್ಥ, ಸ್ವಪ್ರತಿಷ್ಠೆ ಇಲ್ಲದಿದ್ದರೆ ಅಲ್ಲಿ ಯಾವ ತರಹದ ಭಯಪಡಬೇಕಾಗಿಲ್ಲ. ಮಹಾತ್ಮಾ ಬಸವೇಶ್ವರರು ಉದಾತ್ತ ಮನೋಭಾವನೆಯಿಂದ ಮುಂದೆ ಸಾಗಿದರೂ ಅಸೂಯೆ ಪಡುವವರನ್ನು ಕಂಡು ಮನ ಮರುಗಿ ದೇವನನ್ನು ಒಲಿಸಿ ಕೊಂಡು ಜೀವನವನ್ನು ಪವಿತ್ರಗೊಳಿಸಿದರೆ, ಸಾರ್ಥಕವಾದೀತೆಂದು ಬಗೆದು ಅಂತರ್ಮುಖಿ ಗಳಾಗಿ ಈ ವಚನ ಹಾಡಿದಂತೆ ಕಾಣುತ್ತದೆ.

ಚಿಂತೆಗಳಲ್ಲಿ ಹಲವು ತೆರನಾಗಿವೆ. ಕೆಲವರಿಗೆ ಹೊನ್ನು, ಹೆಣ್ಣು, ಮಣ್ಣಿನ ಚಿಂತೆ ಯಿದ್ದರೆ ಮತ್ತೆ ಕೆಲವರಿಗೆ ಮತ್ತೊಬ್ಬರನ್ನು ಹಿಂಸಿಸಿ, ಕಾಡಿಸಿ, ಪೀಡಿಸಿ, ನೋವು, ನೀಡುವದೇ ಅವರ ಗುರಿ ಆದಂತಿರುತ್ತದೆ. ಅಂಥವರು ಬೇರೊಬ್ಬರ ಏಳಿಗೆಯನ್ನು ಸಹಿಸ ಲಾರರು; ಸಮಾಜದಲ್ಲಿ ಬೆಳೆಯದಂತೆ ಯುಕ್ತಿಪ್ರಯುಕ್ತಿಗಳಿಂದ ಅಡ್ಡಗಾಲು ಹಾಕುತ್ತಾ, ತೊಂದರೆಗೀಡು ಮಾಡುವದೇ ಅವರ ಚಿಂತೆಯಾಗಿರುತ್ತದೆ. ಅವರು ತಮ್ಮ ಸ್ವಾರ್ಥ ಸಾಧಿಸುವತನಕ ಸುಮ್ಮನಿದ್ದು ಮುಂದೆ ಅವರು ಯಾರಿಂದ ಉಪಕಾರ ಪಡೆದಿರುತ್ತಾರೋ ಅವರಿಗೆ ಅಪಕಾರ ಅಪಪ್ರಚಾರ, ಅಸಹಕಾರ, ಅವಹೇಳನ ಮಾಡುವದಕ್ಕೆ ಹೇಸಲಾರರು. ಇಂಥವರೇ ಹಿತಶತ್ರುಗಳೆಂದರೆ ತಪ್ಪಾಗಲಿಕ್ಕಿಲ್ಲ. ಅವರಿಗೆ ಯಾರಿಂದ, ಮುಂದೆ ಬಂದೆವು? ದೊಡ್ಡವರಾದೆವು ಎಂಬುದರ ಅರಿವೇ ಇಲ್ಲದಂತಾಗಿ ವ್ಯಕ್ತಿಪ್ರತಿಷ್ಠೆಗೆ ಮಾರುಹೋಗಿ; ತಮ್ಮತನವನ್ನು ಕಳೆದುಕೊಂಡು, ಹೃದಯವಂತಿಕೆಯನ್ನು ಹಾಳುಮಾಡಿ, ಬುದ್ಧಿವಂತಿಕೆ ಸೋಗಿನಲ್ಲಿ ಸಾಗುವ ಜನರನ್ನು ನೋಡಿಯೇ ಮಹಾತ್ಮ ಬಸವಣ್ಣನವರು "ನಮ್ಮ ಚಿಂತೆ ನಮಗೆ ಸಾಲದ?" ಎಂದೆನ್ನುತ್ತಾರೆ. ದೇವನೊಲುಮೆಗೆ ಹಾತೊರೆಯುತ್ತಾರೆ. "ನಂಬಿ ಕರೆದರೆ ಓ ಎನ್ನನೆ ಶಿವನು" ಎಂದು ಮೊರೆ ಇಡುತ್ತಾರೆ. ಸುಖ-ಶಾಂತಿ ಲಭ್ಯವಾಗ ಬೇಕಾದರೆ ದೇವರಲ್ಲಿ ಆತ್ಮಸಮರ್ಪಣ ಮನೋಭಾವನೆ ಅತ್ಯವಶ್ಯಕ. ಜೀವಭಾವ ಅಳಿದು ದೇವಭಾವ ಬರಬೇಕಾದರೆ, ದೇವರಿಗಾಗಿ ತೆರೆದ ಹೃದಯದಿಂದ ಪ್ರಾರ್ಥಿಸಬೇಕಾಗುತ್ತದೆ. ಕಣ್ಣೀರು ಸುರಿಸಬೇಕಾಗುತ್ತದೆ. ಅಂತಾದಾಗ ಪರಮಾತ್ಮನು ತನ್ನತ್ತ ಕರೆದುಕೊಳ್ಳುತ್ತಾನೆ; ಸುಬುದ್ಧಿಯೆಂಬುದಕವನೆರೆದು ತೃಪ್ತಿ, ದೀಪ್ತಿ ನೀಡಿ ಸಲಹುತ್ತಾನೆ; ತನ್ನಂತೆ ಮಾಡಿ ಕೊಳ್ಳುತ್ತಾನೆ.

### ಸಮಾಜ ಸೇವಕೋ ನಿಂಥಾಂ, ಸ್ತುತಿಂಚ ಸಮಮತೇ ಸಮಂ

ಸೇವಾ ಧರ್ಮವು ಎಲ್ಲಕ್ಕಿಂತ-ಹೆಚ್ಚಿನದು, ಸೇವೆಯೇ ಪವಿತ್ರ ಜೀವನದ ಅಡಿಗಲ್ಲು. ಆತ್ಮಶೋಧನೆಗೆ ದಾರಿದೀಪ. ವ್ಯಕ್ತಿತ್ವ ವಿಕಾಸಕ್ಕೆ ಆಸರಕಂಭ. ಬಾಳಿನಲ್ಲಿ ಬೆಳಕನ್ನು

ಕಾಣಲು ಸೇವಾಧರ್ಮ ಪರಮ ಸಾಧನ. ಈ ಸಮಾಜ ಸೇವೆಯು ನಿಸ್ವಾರ್ಥದಿಂದ ಕೂಡಿದ್ದರೆ ಅದಕ್ಕೆ ಬೆಲೆ ಹಾಗೂ ಬಲ ಬರುವದು. ಈ ಸೇವಾಭಾವನೆಯಲ್ಲಿ ತೊಡಗಿದಾಗ ಅಡ್ಡಿ ಅಡಚಣೆಗಳು, ಸ್ತುತಿ ನಿಂದೆಗಳು ಬರಬಹುದು, ಅವೆಲ್ಲವುಗಳನ್ನು ನಿಷ್ಠೆಯಿಂದ ಎದುರಿಸಿ ಕಾರ್ಯ ಮಾಡುವದೇ ನಿಜವಾದ ಸಮಾಜ ಸೇವಕರ ಗುರಿಯಾಗಿದೆ. ನಿಸ್ವಾರ್ಥದಿಂದ ದುಡಿಯುವ ಸಮಾಜ ಸೇವಕರ ಅಂತರಂಗದಿಂಗಿತವೂ ಎನಿತೋ ಜನರಿಗೆ ಅರ್ಥವೂ ಆಗಲಾರದು. ಅರ್ಥಕ್ಕನರ್ಥವನ್ನು ಕಲ್ಪಿಸಿ ಅಸೂಯೆಯ ಕಿಡಿಯನ್ನು ಹೊರಚೆಲ್ಲಿ ಸಮಾಜಕ್ಕೆ ಅಹಿತನ್ನು ಬಗೆಯುತ್ತಾರೆ. ಅವರು ಮಾಡುವ ಕರ್ತವ್ಯ ನಿಷ್ಠೆಗೆ ಭಂಗ ತರಲು ಪ್ರಯತ್ನಿಸುತ್ತಾರೆ. ಸಮಾಜ ಸೇವೆ ಮಾಡುವಾಗ ಭಿನ್ನಾಭಿಪ್ರಾಯಗಳು ತಲೆದೋರುವುದು ಸ್ವಾಭಾವಿಕ. ಭಿನ್ನಾಭಿಪ್ರಾಯಗಳ ಹಿನ್ನೆಲೆಯಲ್ಲಿ ಸ್ವಾರ್ಥ ತುಂಬಿದ್ದರೆ ಅದು ಕೆಡಕನ್ನುಂಟು ಮಾಡುವದು, ಸಮಾಜರೂಪೀ ಮಹಾವೃಕ್ಷವನ್ನು ಬೆಳೆಸಲು ಸರ್ವರ ಸಹಕಾರದ ಸಿಹಿ ನೀರನ್ನೆರದರೆ ಅದು ಸುಂದರವಾಗಿ ಬೆಳೆಯಬಲ್ಲದು. ಬೆಳೆದು ನೆರಳನ್ನು ನೀಡಬಲ್ಲದು. ಒಳ್ಳೆಯ ಕಾರ್ಯವನ್ನು ಮಾಡುವ ಜನರಿಗೆ ಪ್ರೋತ್ಸಾಹ ನೀಡಿದರೆ ಹುರುಪು ಹುಮ್ಮಸ ಬರುವದು ಸಹಜ. ಪ್ರೋತ್ಸಾಹ ಕೊಡುವ ಬದಲು, ಸ್ವಾರ್ಥವನ್ನು ತುಂಬಿಕೊಂಡು, ಕಷ್ಟವನ್ನು ನೀಡುತ್ತಿದ್ದರೆ, ಸಮಾಜಕ್ಕೆ ಹಾನಿಯಾಗುತ್ತದಲ್ಲದೆ, ವ್ಯಕ್ತಿಗಾಗದು. ಸಾಮಾಜಿಕ–ಜೀವನ ಸುಖ–ದುಃಖಗಳ ಆಗರ. ಈ ಜೀವನದಲ್ಲಿ ಸಿಹಿ-ಕಹಿಗಳ ಸಮರಸ ಮಾಡಿಕೊಂಡು ಧೈರ್ಯದಿಂದ ಮುನ್ನುಗ್ಗಿದರೆ ಮಾತ್ರ ಸಮಾಜಕ್ಕೆ ಸುಖ. ಈಗಿನ ವಾತಾವರಣದಲ್ಲಿ ಒಳ್ಳೇದನ್ನು ತೋರುವಂತೆ ನಟಿಸಿ, ಒಳಒಳಗೆ ಸಮಾಜ ಸೇವಕರನ್ನು ಹೇಗೆ ಹತ್ತಿಕ್ಕಬೇಕೆಂಬುದನ್ನು ಚಿಂತಿಸಿದರೆ, ಅದು ಸಮಾಜ ಪ್ರೇಮವಾಗಲಾರದು. ಅಸೂಯೆ ಪಡುವವರಿಗೆ ಎಂತಹ ಉಪದೇಶವೂ ನಾಟಲಾರದು ನಿಂದಕರಿಗೆ ದೋಷ ದೃಷ್ಟಿಯೇ ತುಂಬಿರುತ್ತದೆಯೇ ಹೊರತು, ವಿಶಾಲ ದೃಷ್ಟಿ ಅಂತಃಕರುಣೆ ಅವರಲ್ಲಿ ಸುಳಿಯದು. ನಮಗಿಂದು ಸಂಘಟನೆ, ಭಾವೈಕ್ಯತೆ ಅತ್ಯವಶ್ಯ ಬೇಕು. ಆದರೆ ಅದು ಹೃದಯವಂತಿಕೆಯಿಂದ, ಕಳಕಳಿಯಿಂದ ಕೂಡಿರಬೇಕು. ಕೃತಕತೆಯು ಭಾವೈಕ್ಯತೆಗೆ ಅಡ್ಡಗೋಡೆ. ಸಮಾಜ ಸೇವಕರ ಕಾರ್ಯವನ್ನು ನೋಡಿ ಆನಂದಪಡುವ ಪ್ರವೃತ್ತಿಯು ಎಲ್ಲಿಯವರೆಗೆ ಬರುವದಿಲ್ಲವೋ ಅಲ್ಲಿಯವರೆಗೆ ಸಮಾಜವು ಸುಧಾರಿಸಲಾರದು. ಪಕ್ಷ ಪಂಗಡಗಳ ತಿಕ್ಕಾಟದಲ್ಲಿ ಸಮಾಜ ಶಿಶುವು ಕೊರಗದಂತೆ ನೋಡಿ ಕೊಳ್ಳಬೇಕು. ಅಂದರೆ ಸಮಾಜಕ್ಕೆ ಹಿತ. ಸಮಾಜ ಸುಧಾರಕರಾದವರು ಸ್ತುತಿ–ನಿಂದೆಗಳಿಗೆ ಹಿಗ್ಗದೆ, ಕುಗ್ಗದೆ ಮನದಲ್ಲಿ ಕೋಪವ ತಾಳದೆ ಸಮಾಧಾನದಿಂದ ನಿಷ್ಠೆ ಹಾಗೂ ನಿಸ್ಪೃಹದೊಡನೆ ಮನಮುಚ್ಚುವಂತೆ ಸೇವೆಗೈಯ್ಯಬೇಕು. ಅದುವೇ ಪರಮ ಗುರಿ.

**ಯದ್ಯತ್ಕರೋಮಿ ತತ್ತದಖಿಲಂ ಶಂಭೋತವಾರಾಧನಂ**

ಈ ಜೀವನವು ಸುಖ ದುಃಖಗಳ ಆಗರ. ಸುಖವಿದ್ದರೆ ತೃಪ್ತಿ. ಸುಖವಿರದಿದ್ದರೆ ಅತೃಪ್ತಿ. ಸಂಕಲ್ಪ ವಿಕಲ್ಪಗಳ ಹೊಯ್ದಾಟದಲ್ಲಿ ಮಾನವನು ತತ್ತರಿಸುತ್ತಿದ್ದಾನೆ. ಸುಖ

ಕ್ಕಾಗಿ ಹಾತೊರೆಯುತ್ತಿದ್ದಾನೆ: ಆದರೆ ಆ ಸುಖ ದೊರೆಯಲು ಏನು ಮಾಡಬೇಕೆಂಬು ದನ್ನು ಅರಿಯದೆ ಭವಸಾಗರದಲ್ಲಿ ಬಿದ್ದು ತೊಳಲಾಡುತ್ತಿದ್ದಾನೆ. ದುಃಖವನ್ನು ತುಂಬಿ ಕೊಂಡು ಮಾನಸಿಕ ಅಶಾಂತಿಯನ್ನು ಪಡೆದುಕೊಂಡು ದೇವರನ್ನು ಮರೆತು ಅತ್ತಿಂದಿತ್ತ ಇತ್ತಿಂದತ್ತ ತಿರುಗುವದೇ ಅವನ ಸ್ವಭಾವವಾಗಿ ಬಿಡುತ್ತದೆ. ಯಾವದೇ ಕಾರ್ಯ ಮಾಡಿ ದರೂ ಸಮರ್ಪಣ ಮನೋಭಾವನೆ ಎಲ್ಲಿಯವರೆಗೆ ಬರುವದಿಲ್ಲವೋ ಅಲ್ಲಿಯವರೆಗೆ ಅದು ನಿರರ್ಥಕ; ಸಾಮಾಜಿಕವಾಗಿರಲಿ ಶೈಕ್ಷಣಿಕವಾಗಿರಲಿ, ಲಿಂಗಪೂಜೆಯಾಗಿರಲಿ ಅಲ್ಲಿ ಆತ್ಮ ಸಮರ್ಪಣೆ ಇಲ್ಲದಿದ್ದರೆ, ಸೊಗಸು, ಆತ್ಮಶಕ್ತಿ, ಮನಸ್ಸಿಗೆ ಆನಂದವು ಬರಲಾರದು. ವಿಶ್ವಾಸದ ಅಭಾವವು ಕಂಡರೆ ದೇವರು ಒಲಿಯನು, ಸಾಧಕನಾದವನು ತನ್ನ ಸರ್ವಸ್ವ ವನ್ನು, ಶಕ್ತಿ ಯುಕ್ತಿ ಭಕ್ತಿಗಳನ್ನು, ತನು ಮನ ಭಾವಗಳನ್ನು ದೇವರಿಗೆ ಸಮರ್ಪಿಸಿ, ಆರಾಧಿಸಿದರೆ ಅದುವೆ ಅರ್ಪಣ ಮಾರ್ಗವಾಗುತ್ತದೆ. ಈ ಸಮರ್ಪಣ ಭಾವನೆಯಿಂದ, ಮೆಲ್ಲ ಮೆಲ್ಲನೆ ಅಹಂಕಾರವೆಲ್ಲ ಅಳಿದು, ದೋಷಗಳೆಲ್ಲ ಸುಟ್ಟುಹೋಗಿ, ಈಶ್ವರ ಸಾಕ್ಷಾತ್ಕಾರ ಪಡೆಯಲು ಸಾಧ್ಯವಾಗುತ್ತದೆ. ವ್ಯಕ್ತಿತ್ವ ವಿಕಾಸವಾಗಿ, ಭಕ್ತಿಯೋಗ, ಕರ್ಮಯೋಗ, ಜ್ಞಾನಯೋಗ, ಧ್ಯಾನಯೋಗ, ಈ ಯೋಗಗಳಲ್ಲಿ ತಲ್ಲೀನವಾಗಿ, ಈ ಅನುಭವ ರಸದೂಟವನ್ನುಂಡು ಸುಖವನ್ನು ಅನುಭವಿಸುತ್ತಾನೆ. ಭಕ್ತಿಯ ಸೆಲೆ ಉಕ್ಕಿ ದಾಗ ಹೃದಯ ವಿಕಾಸವಾಗಿ, ಭಾವವು ಅರಳಿ, ಶರಣಾಗತಿಯು ನೆಲೆಗೊಂಡರೆ ಶಿವ ಕಾರುಣ್ಯಪ್ರಾಪ್ತಿ. ಇದು ಸುಲಭದಿಂದ ದೊರೆಯದು ಬಹುದಿನದ ಸಾಧನೆ ಬೇಕಾಗುತ್ತದೆ. ಅರಿವಿನ ಬೆಳಕಿನಲ್ಲಿ ಸಾಗಬೇಕಾಗುತ್ತದೆ. ಕರ್ತವ್ಯದಲ್ಲಿ ನಿಷ್ಠೆಯಿಡಬೇಕಾಗುತ್ತದೆ. ನಿಷ್ಠೆ ಯಲ್ಲಿ ಕ್ಷತ ಕತೆ ಕಂಡರೆ ಗುಡ್ಡಕ್ಕೆ ಕಲ್ಲು ಹೊತ್ತಂತೆ ವ್ಯರ್ಥವಾಗುತ್ತದೆ. ಅದು ಕೇವಲ ಭಾವಶುದ್ಧಿಯಿಲ್ಲದ ಬಯಲು ಭಾಷೆಯಾಗುತ್ತದೆ. "ಹಾಲನೆರೆದಡೇನು? ಹಾವಿನ ನಂಜು ಸವಿಯಾಗಬಲ್ಲುದೇ? ಒಳ್ಳೆಯ ಕರ್ತವ್ಯ ಮಾಡುವಗೆ ಮರ್ತ್ಯವೇ ಕೈಲಾಸವಾಗಿ ಪರಿಣಮಿ ಸುತ್ತದೆ. ಬಾಳಬೇವನ್ನು ಬಗೆಯ ಬೆಲ್ಲದಲ್ಲಿರಿಸಿದರೆ, ಭಕ್ತಿರಸದ ಚಿಲುಮೆಯನ್ನೂ, ಏಕೈಕ ಮನೋಭಾವನೆಯಿಂದ ಚಿಮ್ಮಿಸಿದರೆ, ಮನಮಠಿಗಳಲ್ಲಿ ಮಂತ್ರವೆಂಬ ಜ್ಯೋತಿ ರ್ಲಿಂಗವನ್ನು ಪ್ರತಿಷ್ಠಿಸಿದರೆ, ಭಾವಕ್ಕೆ ಅನುಭಾವದ ಬೆಡಗನ್ನು ಬೆರಿಸಿ, ಎಲ್ಲವನ್ನು ನಿಷ್ಕಾಮ ಭಾವನೆಯಿಂದ ಸಮರ್ಪಿಸಿ ಶಂಭುಲಿಂಗವನ್ನು ಆರಾಧಿಸಿದರೆ ಅದುವೆ ಅನು ಪಮಿದು ಮಾಡುವ ಮಾಟ, ಲಿಂಗ ಜಂಗಮದ ಕೂಟ ಭವಭಂಗದೋಟವಾಗುತ್ತದೆ.

### ಧರ್ಮೇಣ ಹೀನಾಃ ಪಶುಭಿಃ ಸಮಾನಾಃ

ಆತ್ಮಕ್ಕೆ ಶಾಂತಿ ಸುಖ ದೊರೆಯಬೇಕಾದರೆ ಧರ್ಮವು ಅತ್ಯಾವಶ್ಯಕ. ಧರ್ಮವಿರದ ಜೀವನ, ಅದು ಪಶುಜೀವನ. ಧರ್ಮದ ಗುರಿ "ಸತ್ಯಂ ಶಿವಂ ಸುಂದರಂ" ಆಗಿದೆ. ಧರ್ಮವೆಂದಾಕ್ಷಣ ಸಾಂಪ್ರದಾಯಗಳ ಮೂಢನಂಬಿಕೆಯಾಗದು. ಧರ್ಮದ ಮರ್ಮವ

ನ್ನರಿತವರು ಒಣ ಆಡಂಬರಗಳಿಗೆ ಮನಸ್ಸು ಹಾಕರು. ಪವಿತ್ರ ಜೀವನವಿದ್ದಲ್ಲಿ ಧರ್ಮವು ಮನೆಮಾಡಿಕೊಂಡಿರುತ್ತದೆ, ಮಾತಿನಿಂದ ಧರ್ಮಬರದು.

ಕೃತಿಯಿಂದ ಧರ್ಮದ ಶಕ್ತಿಯು ಹೆಚ್ಚುತ್ತದೆ. ಸೌಗಂಧ್ಯ ಬೀರುವ ಹೂವಿನಂತೆ ಬೆಳಕು ತುಂಬಿದ ಮನೆಯಂತೆ ಶೋಭಿಸುತ್ತದೆ. ಧರ್ಮವಿದ್ದಲ್ಲಿ ಮಾತ್ರ ವ್ಯಕ್ತಿತ್ವ ವಿಕಾಸ. ಧರ್ಮದಿಂದ ಪೋಷಣೆಯಾದೀತೆ ಹೊರತು, ಶೋಷಣೆಯಾಗದು.

"ಧರ್ಮೋಽವಿಶ್ವಸ್ಯ ಜಗತಃಪ್ರತಿಷ್ಠಾ" ಎಲ್ಲ ಜನರನ್ನು ಒಗ್ಗೂಡಿಸಿ, ಸಹಕರಿಸುವಂತೆ ಪ್ರೇರೇಪಿಸುತ್ತಿರುವ ತತ್ವವೇ ಧರ್ಮ. "ಯತೋ ಅಭ್ಯುದಯ ನಿಃಶ್ರೇಯಸಃ ಸಿದ್ಧಿಃ ಸ ಧರ್ಮ" ಯಾವುದರಿಂದ ಅಭ್ಯುದಯ ಹಾಗೂ ನಿಶ್ರೇಯಸವು ಸಿದ್ಧಿಸುತ್ತದೆಯೋ ಅದು ಧರ್ಮ ಎಂಬುದಾಗಿ ಧರ್ಮದ ವಿಶಾಲತೆಯನ್ನು ಭಾಷ್ಯಕಾರರು ತಿಳಿ ಹೇಳಿದ್ದಾರೆ.

ದೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ।
ಧೀರ್ವಿದ್ಯಾ ಸತ್ಯಮ ಕ್ರೋಧೋ ದಶಕಂ ಧರ್ಮ ಲಕ್ಷಣಂ॥

ಈ ರೀತಿಯಾಗಿ ಮನುಸ್ಮೃತಿಯಲ್ಲಿ ಧರ್ಮದ ಹತ್ತು ಲಕ್ಷಣಗಳನ್ನು ವಿವರಿಸಿದೆ. ವಿನಾಶದತ್ತ ಸಾಗಿರುವ ಜಗತ್ತನ್ನು ಮೇಲಕ್ಕೆತ್ತಿ, ಎಚ್ಚರಿಸಿ, ಶಕ್ತಿಯನ್ನಿತ್ತು ಸಂರಕ್ಷಿಸುವದೇ ಧರ್ಮದ ಮೂಲಗುರಿಯಾಗಿದೆ. ವ್ಯಕ್ತಿಯಲ್ಲಿ ಹುದುಗಿರುವ ತಮಸ್ಸನ್ನು ನಶಿಸಿ, ಆತ್ಮಶಕ್ತಿಯ ದಿವ್ಯದೀಪ್ತಿಯನ್ನು ನೀಡುವದೇ ಧರ್ಮ. ಧರ್ಮವು ಮಾನವನ ಹೃದಯವನ್ನು ಮೃದು ಮಾಡುವದಲ್ಲದೆ ಬೆಳಕಿನೆಡೆ ಕರೆದೊಯ್ಯುತ್ತದೆ. ಧರ್ಮದ ದೃಷ್ಟಿ ಬೆಳೆದಂತೆ, ಆತ್ಮಿಕ ಶಕ್ತಿ ಪ್ರಬಲವಾದಂತೆ, ರಾಗದ್ವೇಷಗಳು ದೂರಾಗಿ ಅರಿವಿಲ್ಲದ ಶುಷ್ಕವಾದ ವಿವಾದಗಳು ತೊಲಗುತ್ತವೆ. ವೈಚಾರಿಕತೆಯಿಂದ ಬುದ್ಧಿಯು ಬೆಳೆಯುತ್ತದೆಯೇ ಹೊರತು, ಆತ್ಮಶಕ್ತಿ ಹಾಗೂ ಆತ್ಮ ಶಾಂತಿ ದೊರೆಯದು. ಆಚಾರವಿಲ್ಲದ ವಿಚಾರಕ್ಕೆ ಬೆಲೆ ಬರದು. ಧರ್ಮವಿಲ್ಲದ ಮನುಷ್ಯನು ಒಡೆದ ಗಡಗಿಯಂತೆ ಅವನ ಜೀವನವಾಗಿರುತ್ತದೆ. ರಾಜಕೀಯ, ಸಾಮಾಜಿಕ ಹಾಗೂ ಇನ್ನುಳಿದ ಎಲ್ಲ ರಂಗಗಳಲ್ಲಿಯೂ ಆಧ್ಯಾತ್ಮಿಕ ಭದ್ರ ಬುನಾದಿಯು ಧರ್ಮವಿರದಿದ್ದರೆ, ಬಹುದಿನ ಬಾಳದು, ಬೆಳೆಯದು.

ಈ ವಿಶ್ವದಲ್ಲಿ ಕ್ರಿಶ್ಚಿಯನ್, ಹಿಂದೂ, ಬೌದ್ಧ, ಜೈನ, ಸಿಂಟೋಫಾರಸಿ, ಕನ್ ಫ್ಯೂಸಿಯಸ್, ಇಸ್ಲಾಮ್ ಮುಂತಾದ ಧರ್ಮಗಳು ತುಂಬಿಕೊಂಡಿವೆ. ವಿಚಾರ ಮಾಡಿ ನೋಡಿದರೆ ಎಲ್ಲ ಧರ್ಮಗಳ ಗುರಿ ಒಂದೇ ಆಗಿರುತ್ತದೆ. ಎಲ್ಲ ಧರ್ಮಗಳ ಪ್ರತಿಪಾದಕರು, ಸತ್ಯ, ಅಹಿಂಸೆ, ಪ್ರೇಮ, ದಯೆ ಮುಂತಾದ ಮಾನವೀಯ ಮೌಲ್ಯಗಳ ತತ್ವವನ್ನು ಪ್ರತಿಪಾದಿಸಿದ್ದಾರೆ. ಆದರೆ ಎಲ್ಲ ಧರ್ಮಗಳಲ್ಲಿಯೂ ಭಿನ್ನಾಭಿಪ್ರಾಯಗಳು ಸಾಕಷ್ಟಿವೆ. ಕ್ರಿಶ್ಚಿಯನ್‌ರು ಕ್ಯಾಥೊಲಿಕ, ಪ್ರೊಟೆಸ್ಟೆಂಟ್ ಹಾಗೂ ಮುಸ್ಲಿಮರು ಶಿಯಾ, ಸುನ್ನಿ ಮುಂತಾದ ವಿಭಿನ್ನ ಪಂಥಗಳಲ್ಲಿಯೂ ವಿಂಗಡಿಸಿದ್ದಾರೆ. ಹಿಂದೂ ಧರ್ಮದಲ್ಲಿ ವರ್ಣ ಧರ್ಮ; ನಾನಾಜಾತಿ, ಉಪಜಾತಿ, ಶೈವ, ವೈಷ್ಣವ ಎಂಬ ಪಂಥಗಳಲ್ಲಿಯೂ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮತ್ತು ಶಕ್ತಿವಿಶಿಷ್ಟಾದ್ವೈತ ಮುಂತಾದ ಪ್ರಭೇದಗಳನ್ನು

ಕಾಣಬಹುದು. ಹರಿಜನ ಗಿರಿಜನ ಸಮಸ್ಯೆ. ಭಾರತದಲ್ಲಿದ್ದಂತೆ ಜಪಾನ ಯುರೋಪ ರಾಷ್ಟ್ರಗಳಲ್ಲಿ ಹಾಗೂ ಅಮೇರಿಕೆಯಲ್ಲಿ ನಿಗ್ರೋ ಸಮಸ್ಯೆ, ಹೀಗೆ ವರ್ಣ ಭೇದದ ನೀತಿ ಅಂತರರಾಷ್ಟ್ರೀಯ ಸಮಸ್ಯೆಗಳಾಗಿವೆ. ಈ ಸಮಸ್ಯೆಗಳನ್ನು ಬಗೆಹರಿಸಲು ಜಾಗತಿಕ ಶಾಂತಿ ಧರ್ಮ ಪರಿಷತ್ತು World Confernce on Religion and Peace ನ್ಯೂಯಾರ್ಕ ದಲ್ಲಿ ಸ್ಥಾಪಿತವಾಗಿ, ವಿಶ್ವಮಟ್ಟದಲ್ಲಿ ಕಾರ್ಯ ಮಾಡುತ್ತಲಿದೆ. ರಾಜಕೀಯದಲ್ಲಿ ಧರ್ಮ ಸೇರಿ, ಧರ್ಮದಲ್ಲಿ ರಾಜಕೀಯ ಸೇರದಿದ್ದರೆ ವಿಶ್ವಶಾಂತಿಯನ್ನು ನಿರೀಕ್ಷಿಸಬಹುದು.

ಎಲ್ಲಿ ನೋಡಿದಡಲ್ಲಿ ತಾಮಸೀಯ ಹೊಡೆದಾಟ, ಭಿನ್ನಾಭಿಪ್ರಾಯಗಳ ಜಂಜಾಟ ನಾ ಹೆಚ್ಚು ನೀ ಹೆಚ್ಚೆನ್ನುವ ಕೂಗಾಟ, ಹಿಂಸಾತ್ಮಕ ಧಾರ್ಮಿಕ ಆಚರಣೆಗಳ ತಿಕ್ಕಾಟ, ಜಾತೀಯತೆಯ ಸುಂಕರೋಗದ ಅಲೆದಾಟ, ಜಗತ್ತಿನಲ್ಲಿಯೇ ಇವುಗಳ ಜೂಜಾಟ ನಡೆದು ಬಿಟ್ಟಿದೆ. ಜೀವನದಲ್ಲಿಯ ಅನೇಕ ಬಗೆಯ ಕಾದಾಟ ಕಲೆತು ಬೆಳೆದು ಬೇರುಬಿಟ್ಟಿವೆ. ರಾಷ್ಟ್ರ ಮೊದಲು ಮಾಡಿಕೊಂಡು ಮನೆಯವರೆಗೂ ಅನೈಕ್ಯತೆಯೇ ಎದ್ದು ಕಾಣುತ್ತಲಿದೆ. ಇದ ಕ್ಕೆಲ್ಲ ಧರ್ಮದ ಲೋಪವೇ ಮೂಲಕಾರಣವಾಗಿದೆ.

ಧರ್ಮ ಸಂಸ್ಕೃತಿ ಯಾರಿಗೆ ತಾನೆ ಬೇಡ. ಧರ್ಮವಿದ್ದರೆ ಸಂಸ್ಕೃತಿ, ಸಂಸ್ಕೃತಿಯಿದ್ದರೆ ಧರ್ಮ. ಒಂದಕ್ಕೊಂದು ಹೊಂದಿಕೊಂಡಿವೆ. ಇಂದಿನ ವಿಜ್ಞಾನಯುಗದಲ್ಲಿ ಧರ್ಮ ಪ್ರಚಾರದ ಬೆಳವಣಿಗೆಯಾಗುವಂತೆ ಪ್ರೋತ್ಸಾಹಿಸಬೇಕಾಗಿದೆ. ಪ್ರತಿಯೊಬ್ಬ ವ್ಯಕ್ತಿಗೂ ಧರ್ಮದ ಅಂತಃಸತ್ವವನ್ನು ತುಂಬಬೇಕಾಗಿದೆ. ಈ ಧರ್ಮಪ್ರಚಾರ ಕಾರ್ಯದಲ್ಲಿ ವ್ಯಕ್ತಿ ಗತ ಹಾಗೂ ಜಾತೀಯತೆಯ ದ್ವೇಷವನ್ನು ಸಾಧಿಸಿದರೆ ನಮ್ಮ ಕಾಲ ಮೇಲೆ ನಾವೇ ಕಲ್ಲು ಹಾಕಿಕೊಂಡಂತಾಗುವದು. ಧಾರ್ಮಿಕ ಸಂಘಟನೆಯು ಸುಸಂಬದ್ಧವಾಗಿ ನಡೆಯಬೇಕಾ ಗಿದೆ. ಎಲ್ಲರೂ ಒಂದೆಂಬ ಭಾವನೆಯ ಬೀಜವನ್ನು ಬಿತ್ತಿ, ಅದಕ್ಕೇ ಪ್ರೇಮವೆಂಬ ಗೊಬ್ಬರ ವನ್ನು ಹಾಕಿ, ಸಹಕಾರದ ನೀರನ್ನು ಹಾಕುತ್ತಿದ್ದರೆ ಮಾತ್ರ ಸಮಾಜ ಸುಧಾರಣೆ. ಹೇಳು ವದು ಮಾನವತಾವಾದ, ಕೃತಿಯಲ್ಲಿ ಮತ್ತೊಂದಾದರೆ, ಸಮಾಜಕ್ಕೆ ಕೊಡಲಿ ಪೆಟ್ಟು ಹಾಕಿದಂತೆ. ಒಳ ಪಂಗಡಗಳು ಭಾವೈಕ್ಯದಿಂದ ಇರಬೇಕೆನ್ನುವ ಮಾತು ಹೆಚ್ಚಾಗಿದೆ. ಆದರೆ ಪಂಗಡಗಳೇ ಹೆಚ್ಚಾಗುತ್ತ ನಡೆದಿದೆ. ಹೀಗಾದರೆ ಸಮಾಜ ಸುಧಾರಣೆ ಎಂತಾ ದೀತು? ಎಂದಾದೀತು.

ನಮಗಿಂದು ನೀತಿಯಿಂದ ಪ್ರತ್ಯೇಕಿಸಲಾರದ ನಿಜವಾದ ಧರ್ಮಬೇಕಾಗಿದೆ. ಧರ್ಮವು ಮಾನವನ ಬಾಳ್ವೆಳಕಿಗೆ ದಾರಿದೀಪವಾಗಿದೆ, ಧರ್ಮದ ಅನುಷ್ಠಾನದಿಂದ ಆತ್ಮ ಶಕ್ತಿಯು ಬಲಿಯುವದಲ್ಲದೆ, ಭಾವಸಿದ್ಧಿಯೂ ಅಂತರ್ಗತವಾಗುತ್ತದೆ. ಸಮಾಜೋನ್ನತಿಗೆ ಆತ್ಮೋನ್ನತಿಯೇ ಮೂಲಬೇರು. ಒಬ್ಬ ವಿಜ್ಞಾನಿಯು ವಿಜ್ಞಾನದಲ್ಲಿ ಮುಂದುವರಿಯ ಬೇಕಾದರೂ ಏಕನಿಷ್ಠೆಯ ಧರ್ಮವುಬೇಕಾಗುತ್ತದೆ.

ಒಟ್ಟಿನಲ್ಲಿ ಮಾನವನು ಪಾಶವೀಯ ಪ್ರವೃತ್ತಿಯನ್ನು ಬಿಟ್ಟು, ಮಾನವೀಯ ಮೌಲ್ಯ ಗಳಾದ ದಯಾ ಧರ್ಮದ ಕಡೆಗೆ ಮನವಳಿಸಿದರೆ, ತನಗೂ, ಸಮಾಜಕ್ಕೂ ರಾಷ್ಟ್ರಕ್ಕೂ

ಸುಖಕರ ಧರ್ಮವೂ ಸಹ ನಿಂತ ನೀರಿನಂತಾಗದೆ ಹರಿಯುವ ತಿಳಿ ಜಲದಂತೆ ಸದಾ ಹರಿಯುತ್ತಿರಬೇಕು. ಧರ್ಮದಲ್ಲಿ ಕೃತಕತೆ ತೊಲಗಿ, ಹೃದಯವಂತಿಕೆ ಬರಬೇಕು. ಧರ್ಮವು ಸಂಸ್ಕೃತಿಯನ್ನು ತೋರಿಸುವ ಪ್ರತಿಬಿಂಬದಂತೆ ಇರಬೇಕು. ಧಾರ್ಮಿಕ ನಿಷ್ಠೆ ಶ್ರದ್ಧೆಗಳ ಸಂಸ್ಕಾರವಿರದ ಸ್ವಾರ್ಥದ ಕಾಡಿನಲ್ಲಿ ತಿರುಗುವವಗೆ ಈರ್ಷೆ, ದ್ವೇಷ, ವಂಚಕತನ, ಕೃತಘ್ನತೆಗಳೆಂಬ ಕಾಡು ಮೃಗಗಳು ಬೆನ್ನು ಹತ್ತಿ ಮಾನವನನ್ನು ಪಾತಳಕ್ಕೆ ಒಯ್ಯುತ್ತವೆ. ಅದಕ್ಕಾಗಿ ಪಶುಜೀವನದಿಂದ ದೂರಾಗಲು ಬಸವತತ್ವವೇ ನಮಗಿಂದು ಆಸರಕಂಭ

## ವಚನಾಮೃತ

ಪತಿತರನು ಪೊರೆಯುವದೇ ಪರಮ ಧರ್ಮವಯ್ಯಾ,
ಎದೆ ಕರಗಿ ಎತ್ತಿಕೊಳ್ಳುವದೆ ಧರ್ಮದ ಸಾರ ನೋಡಾ
ಬೆಳಕಿನತ್ತ ಕರೆದೊಯ್ಯುವುದೆ
ಧರ್ಮದ ಮರ್ಮ, ನೋಡಾ!
ಆತ್ಮ ದೀಪ್ತಿಯ ಜಾಗೃತಗೊಳಿಸುವುದೆ
ಧರ್ಮದ ಗುಟ್ಟು ನೋಡಾ!
ಇಂತಿ ಧರ್ಮದ ಮರ್ಮವ ತಿಳಿದಾಚರಿಸುವಂತೆ
ಕರುಣೆ ದೋರಾ,
ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ.

— 'ಚಿತ್ಸುಮನ ಗ್ರಂಥದಿಂದ'

# ಶ್ರೀ ಮೂಜಗಂ ಸಾಹಿತ್ಯ ಸಂದರ್ಶನ

"ಶ್ರೀ ಮೂಜಗಂ"
ಅವರ
ವಿವಿಧ ಗ್ರಂಥಗಳ
ಸಹೃದಯಪರ ಸಾರವಿಮರ್ಶೆ

# ಜಗದ್ಗುರು ಗಂಗಾಧರ ಕವಿ

ಡಾ ಡಿ. ಎಸ್. ಕರ್ಕಿ

ಹುಬ್ಬಳ್ಳಿಯ ಮೂರುಸಾವಿರಮಠದ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಕಾವ್ಯರಚನೆಯಲ್ಲಿ ತುಂಬಾ ಅಭಿರುಚಿ ಆಸಕ್ತಿಗಳನ್ನೂ ತಳೆದವರು. ಅವರ ಕಾವ್ಯರಚನೆ ಎಳೆವಯದಲ್ಲಿಯೇ ಆರಂಭವಾಯಿತು. ಶಿವಯೋಗಮಂದಿರದಲ್ಲಿ ವಟುವಾಗಿ ಅಧ್ಯಯನ ಮಾಡುತ್ತಿರುವಾಗಲೇ ಅವರು ಕವಿತೆಯ ರಚನೆಗೆ ತೊಡಗಿದರು. ಆಗ ಅವರು ಬರೆಯುತ್ತಿದ್ದುದು 'ಮಹಾಂತದೇವರು' ಎಂಬ ಹೆಸರಿನಲ್ಲಿ, ಅವರ ಪ್ರಪ್ರಥಮ ಪ್ರಕಟಿತ ಕವಿತೆ 'ಶ್ರೀ ವಿಜಯಮಹಾಂತೇಶ ಲಾವಣಿ'. ಆ ಲಾವಣ್ಯಮಯುವಾದ ಲಾವಣಿಗೆ ಮುನ್ನುಡಿ ಬರೆಯುತ್ತ "ಇವರು ಇಂಥ ಚಿಕ್ಕವಯಸ್ಸಿನಲ್ಲಿ ಇಂಥ ಸಾಹಸ ಮಾಡಿದ್ದು ನೋಡಿದರೆ ಇವರು ಸನಿಹದಲ್ಲಿ ಗಣ್ಯ ಸಾಹಿತಿಗಳಾಗುವರೆಂಬುದು ನಿಸ್ಸಂದೇಹವು" ಎಂದು ಮುನ್ನುಡಿ ಬರೆದವರು ಆಗ ಹೇಳಿದ ಮಾತನ್ನು ಇಲ್ಲಿ ಗಮನಿಸಬೇಕು. ಆ ಮಾತು ಈಗ ಸತ್ಯವಾಗಿ ಪರಿಣಮಿಸಿದೆ. ಆ ಮೊದಲೇ ಉದಯೋನ್ಮುಖ ಕವಿ ಮಹಾಂತದೇವರು ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನ ಮಠದ ಮರಿಗಳಾಗಿದ್ದರೆಂಬುದನ್ನು ಮುನ್ನುಡಿಕಾರರು ಒಂದು ನುಡಿಯಲ್ಲಿ ಸುಳುಹುಗಾಣಿಸಿದ್ದಾರೆ. ಇಲ್ಲಿ ಗಮನಿಸಬೇಕಾದ ಮಾತೆಂದರೆ ಆಗಿನ ಆ ಎಳೆವಯದ ಮಹಾಂತದೇವರ ಹೃದಯದಲ್ಲಿ ವಾಸಮಾಡಿದ್ದ ಆ ಎಳೆ ಕವಿಯ ಬೆಳವಣಿಗೆಗೆ ತಕ್ಕ ಪರಿಸರ ದೊರೆಯಿತೆಂಬುದು. ಬೆಳೆಯುವ ಎಳೆ ಜೀವಕ್ಕೆ ಒಳ್ಳೆಯ ಪರಿಸರದಿಂದ ತುಂಬ ಅನುಕೂಲವಾಗುತ್ತದೆ. ಈ ಕವಿಯ ಚಿತ್ತ ಅರಳಿದುದು ಶಿವಯೋಗಮಂದಿರದ ಶುದ್ಧವೂ ಚೇತೋಹಾರಿಯೂ ಆದ ವಾತಾವರಣದಲ್ಲಿ. ಶಿವಯೋಗಮಂದಿರದ ವಟು ವಿದ್ಯಾರ್ಥಿಯಾಗಿ ಅಧ್ಯಯನ ಮಾಡುವ ಯೋಗ ಅವರಿಗೆ ಒಂದು ಸುಯೋಗವಾಗಿ ಪರಿಣಮಿಸಿತು. ಮಲಯ ಪ್ರಭೆಯ ಸೊಗಸಾದ ತೀರ ಪ್ರದೇಶದಲ್ಲಿ ನೆಲೆಸಿದ ಶಿವಯೋಗಮಂದಿರವು ಪ್ರಕೃತಿ ಸೌಂದರ್ಯದ ನೆಲವೀಡೂ ಆಗಿದೆ. ಹೊಳೆ ಅಲ್ಲಿ ಅಂದವಾಗಿ ಹರಿದಿದೆ; ಸಲಿಲನಿನಾದದೊಡನೆ ಹರಿಯುತ್ತಿದೆ. ತೀರದ ಆಚೆ ಈಚೆ ಹಸಿರು ಮುರಿಯುವ ಪುಟ್ಟ ಗಿಡ ಬಳ್ಳಿಗಳ ಚೆಲುವಾದ ನೋಟವನ್ನೊಳಗೊಂಡ ಮಳೆ ಮಲೆಗಳು ಶಿವಯೋಗಮಂದಿರದ ಕ್ಷೇತ್ರವನ್ನೂ ಸುತ್ತವರಿದು ಮನೋಹರವಾದ ನಿಸರ್ಗದ ದೃಶ್ಯಗಳನ್ನೂ ನಿರ್ಮಿಸಿವೆ. ಸನಿಹದಲ್ಲಿ ಒಂದೆಡೆಗೆ ಪ್ರಕೃತಿರಮ್ಯವಾದ ಮಹಾಕೂಟದ ಪುಣ್ಯಕ್ಷೇತ್ರ. ಇನ್ನೊಂದೆಡೆಗೆ ಬನದಬಿಸದವಂಬಂತಿರುವ ಬನಶಂಕರಿಯ ರಮಣೀಯ ಕ್ಷೇತ್ರ. ಅನತಿದೂರದಲ್ಲಿಯೇ ಬಾದಾಮಿಯ ಸುವಿಖ್ಯಾತ ಗುಹಾದೇವಾಲಯಗಳು. ಅದರಂತೆ ಶಿಲ್ಪಕ್ಕೆ ಪ್ರಸಿದ್ಧವಾದ ಪಟ್ಟದಕಲ್ಲೂ ದೂರವಿಲ್ಲ. ಸುಪ್ತಕಾವ್ಯ ಶಕ್ತಿಯನ್ನು ಜಾಗೃತಗೊಳಿಸಲು ತಕ್ಕ ಸನ್ನಿವೇಶ ಶಿವಯೋಗಮಂದಿರ.

## ಶ್ರೀ ವಿಜಯಮಹಾಂತೇಶ ಲಾವಣಿ

ಸರಿ; ಕಾವ್ಯಶಕ್ತಿ ಜಾಗೃತವಾಯಿತು. ಅದಕ್ಕೆ ಗುರುಭಕ್ತಿ ಕೂಡಿತು. ಶ್ರೀ ವಿಜಯ ಮಹಂತೇಶ ಲಾವಣಿ ರಚನೆಗೊಂಡು ಪ್ರಕಾಶನ ಪಡೆಯಿತು—ಶಿವಯೋಗಮಂದಿರದಲ್ಲಿ ೧೯೪೪ರಲ್ಲಿ. ಈ ಲಾವಣಿ ಮಂದಾನಿಲಯದ ತ್ವರಿತಗತಿಯಲ್ಲಿ ಸರಳ ಶ್ರುತಿ ಗೂಡಿ ಬಂದಿದೆ. ಈ ಲಾವಣಿಯ ಸರಳ ಸಂಗಮ ಛಂದದ ಅಂದವನ್ನು ಅರಿಯಲು ನಾಲ್ಕು ಚರಣಗಳನ್ನು ಉದಾಹರಿಸಿದರೆ ಸಾಕು.

ತರತರ ತರುಗಳ ಲತೆಗಳ ಹಳ್ಳಗಳಂದದಿ ಶೋಭಿಪ ಕರುನಾಡು
ಉರುತರ ಜ್ಞಾನದ ಕಣಿಗಳ ಯತಿಕುಲ ತಿಲಕರ ಹಿರಿನಾಡು

ಕರುನಾಡಿನ ಸಂಬಂಧದಲ್ಲಿ ಸಾಮಾನ್ಯವಾಗಿ ಹೇಳಬಹುದಾದ ಪ್ರಕೃತಿಯ ಚೆಲುವಿನ ಬಗೆಗಿನ ಮಾತುಗಳು ಶಿವಯೋಗಮಂದಿರಕ್ಕೆ ವಿಶಿಷ್ಟವಾಗಿ ಅನ್ವಯಿಸುತ್ತದೆ. ಪ್ರಕೃತಿ ಸೌಂದರ್ಯದ ಪ್ರಜ್ಞೆ, ಕವಿಚಿತ್ತಕ್ಕೆ ಶಿವಯೋಗಮಂದಿರದಲ್ಲಿ ಮೂಡಿಬಂದಂತೆ ಗುರುಕುಲದ ಅನುಭವವೂ ಆಯಿತು. ಕವಿಯ ಅಂದವಾದ ಶೈಲಿಗೆ ಕೆಳಗಣ ಚರಣಗಳು ಕನ್ನಡಿ ಹಿಡಿಯುವಂತಿವೆ,

ಶ್ರೀ ಮರುಳಸಿದ್ಧೇಶ್ವರ ಅಷ್ಟೋತ್ತರಶತನಾಮಾವಳಿ.

ಮುತ್ತುಗಳಿಂದಲಿ ಶೋಭಿಪ ತೊಟ್ಟಿಲ ಮುತ್ತೈದೆಯರಾಗ
ಉತ್ತಮ ಪೂಗಳ ಪಾಸುತ ಕಂದನ ಮಲಗಿಸಿದರು ಬೇಗ
ಸುಂದರ ಮೂರ್ತಿಯೆ ಶರಣರ ಕಂದನೆ ಎನ್ನುತ ಜೋಗುಳಪಾಡಿದರು
ಚಂದಿರ ರೂಪನೆ ಪಾಪವಿನಾಶನೆ ಜೋ ಜೋ ಎನ್ನುತ ತೂಗಿದರು

'ಶ್ರೀ' ವಿಜಯ ಮಹಾಂತೇಶ ಲಾವಣಿ'ಯಲ್ಲಿ ಅಂದಿನ ಉದಯೋನ್ಮುಖ ಕವಿ ಮಹಾಂತ ದೇವರು ತೋರಿದ ಮಂದಾನಿಲ ಗತಿಯ ಸರಳತೆ ಹಾಗೂ ಸುಗಮತೆಗಳನ್ನು ಮುಂದೆ ಅವರು ಮರುಳಸಿದ್ಧೇಶ್ವರ ಅಷ್ಟೋತ್ತರಶತನಾಮಾವಳಿಯಲ್ಲಿ ಹಾಗೂ ಶಿವಬಸವೇಶ್ವರ ಅಷ್ಟೋತ್ತರಶತನಾಮಾವಳಿಯಲ್ಲಿ ಉತ್ಸಾಹಗತಿಯ ಮೂಲಕ ತೋರಿದ್ದುಂಟು. ಅಗುಳಿನ ಮೇಲಿಂದ ಅನ್ನದ ಪರೀಕ್ಷೆ ಮಾಡಬಹುದು.

ಬಾಲಲೀಲೆ ತೋರ್ದು ಜನಕೆ ಮೋದವಿತ್ತೆ ಮರುಳಸಿದ್ಧ
ಫಾಲನಯನ ನೆನಹಿನಲ್ಲಿ ಕಾಲ ಕಳೆದೆ ಮರುಳಸಿದ್ಧ
—ಮರುಳಸಿದ್ಧೇಶ್ವರ ಅ. ಶ.

ದಾರಿ ತಪ್ಪಿ ನಡೆವರನ್ನು ಕಂಡು ನೊಂದೆ ಶಿವನೆ ಬಸವ
ದಾರಿ ತೋರಿ ಬೆಳಕ ನೀಡಿ ಕಳೆಯಿತ್ತೆ ಶಿವನೆ ಬಸವ
—ಶ್ರೀ ಶಿವಬಸವೇಶ್ವರ ಅ. ಶ.

ಮೂರು ಮೂರು ಮಾತ್ರೆಗಳ ಎಂಟೆಂಟು ಗಣಗಳು ಈ ಚರಣಗಳಲ್ಲಿ ಸರಾಗವಾಗಿ ಈ ಉತ್ಸಾಹ ಲಯದಲ್ಲಿ ನುಡಿಯುತ್ತವೆ ಎಂಬುದನ್ನು ಅರಿಯಬಹುದು.

## ಪೂಮಾಲೆ

ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರರವರು ಇಡಿಯಾಗಿ ಕಂದ ಪದ್ಯಗಳಲ್ಲಿ ರಚಿಸಿದ 'ಪೂಮಾಲೆ' ನಿಜಕ್ಕೂ ಅಂದವಾದ ಪೂಮಾಲೆ. ಅದೊಂದು ಭಕ್ತಿಪುಷ್ಪಗಳ ಮಾಲೆ ಎಂದು ಹೇಳಲು ಅಭ್ಯಂತರವಿಲ್ಲ. ಈ ಕಂದ-ಗೀತ ಸಂಗ್ರಹವು ಚಿಕ್ಕದಾದರೂ ಚೊಕ್ಕಟವಾದುದು ಭಕ್ತಿಯನ್ನು ಹೃದಯಂಗಮವಾಗಿ ಕಂದ ಪದ್ಯಗಳಲ್ಲಿ ಅಭಿವ್ಯಕ್ತ ಮಾಡಬಹುದೆಂಬುದನ್ನು ಪೂಮಾಲೆ ಚನ್ನಾಗಿ ಎತ್ತಿ ತೋರಿದೆ. ಕಂದಪದ್ಯ ಜಗದ್ಗುರುಗಳ ಕೈಯಲ್ಲಿ ಹೃದ್ಯವಾಗಿ ನುಡಿದಿದೆ. ಸುಂದರ ಶೈಲಿಯಲ್ಲಿ ಬಂಧುರ ಭಾವ ಅರಳಿದಂತಿದೆ. ಒಂದೊಂದು ಕಂದಪದ್ಯಗಳಲ್ಲಿ ಕಂದದ ಮೇಲೆ ಜಗದ್ಗುರು-ಕವಿಗಳಿಗೆ ನಿಜವಾದ ಪ್ರಭುತ್ವವಿದೆಯೆಂಬುದನ್ನು ಕಂದಪದ್ಯದ ಸೊಗಸನ್ನು ಬಲ್ಲವರು ಸಹಜವಾಗಿ ಅರಿಯಬಲ್ಲರು.

ಕಂದಂಗಳಮೃತಲತಿಕಾ
ಕಂದಂಗಳಮಾನ ಜಾತಿ ವಿಲಸನ್ಮಾ
ಕಂದಂಗಳ್ ತನಿರಸದು
ಕ್ಕಂದಂಗಳ್ ಸೊನಯಿಸಿರ್ಪುವೀನುತ ಕೃತಿಯೊಳ್

ಎಂದು ಹರಿಹರನು ಗಿರಿಜಾ ಕಲ್ಯಾಣದಲ್ಲಿ ಕಂದಪದ್ಯಗಳ ಸೊಬಗನ್ನು ಬಾಯ್ತುಂಬ ಹೊಗಳಿದುದು ನೆನಪಿಗೆ ಬರುತ್ತದೆ. 'ಪೂಮಾಲೆ'ಯ ಕಂದ ಪದ್ಯಗಳನ್ನು ಪರಿಶೀಲಿಸಿದಾಗ ಛಂದ ಹಾಗೂ ಭಾವ ಬಂಧುರವಾಗಿ ಬೆರೆದಿವೆ. ಪೂಮಾಲೆಯ ಕಂದಪದ್ಯಗಳಲ್ಲಿ.

ಪೂಮಾಲೆ ಪ್ರಕಟವಾದುದು ೧೯೫೪ ರಲ್ಲಿ ಶ್ರೀ ಗಂಗಾಧರ ರಾಜಯೋಗೀಂದ್ರರು ಜಗದ್ಗುರುಗಳಾಗುವ ಮುನ್ನ, ಅವರು ಇನ್ನೂ ಚಿತ್ತರಗಿ ಮಹಾಂತದೇವರು ಎಂಬ ಹೆಸರನ್ನು ತಳೆದಾಗ. 'ಸಾಹಿತ್ಯ ರತ್ನ'ರಾಗಿ ಕಾವ್ಯತೀರ್ಥರಾಗಿ ರಚಿಸಿದ ಶ್ರುತಿಸುಭಗವಾದ ಕಾವ್ಯಕೃತಿಯಿದು-೯೪ ಕಂದಪದ್ಯಗಳ ಪೂಮಾಲೆ ಕವಿಯಲ್ಲಿ ಭಕ್ತಿಯನ್ನು ಪ್ರೇರಿಸಿದ ಸುಕುಮಾರಯೋಗಿಗಳಿಗೆ ಶಿವಯೋಗಮಂದಿರವನ್ನು ಸ್ಥಾಪಿಸಿ ಕೀರ್ತಿಶೇಷರಾದ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳವರಿಗೆ ಅರ್ಪಿತವಾಗಿದೆ. 'ಅರ್ಪಣೆ' ಕೂಡ ಒಂದು ಸುಂದರವಾದ ಕಂದಪದ್ಯದಲ್ಲಿ ರೂಪತಾಳಿದೆ.

ನಿನ್ನಡಿಯ ಧ್ಯಾನಿಸುತ್ತ
ನಿನ್ನ ಸುನಾಮವನೆ ಪಾಡಿ ಪರಿಣಮಿಸುತ್ತಂ
ನಿನ್ನ ಕೃಪೆಯಿಂದ ಪೇಳ್ದೀ
ಸನ್ನುತ ಪದ್ಯಗಳ ಪದಕರ್ಪಿಸುವೆಂ

ಪದಗಳು ಪದ್ಯಗಳಲ್ಲಿ ತಾವಾಗಿಯೇ ಸರಳವಾಗಿ ಸುಲಲಿತವಾಗಿ ಹೊಂದಿಕೊಳ್ಳುವುದು ಈ ಕವಿಗಳ ಕವಿತೆಗಳಲ್ಲಿ ಎಂಬುದಕ್ಕೆ ಈ ಕಂದಪದ್ಯ ನಿದರ್ಶನವಾಗಿದೆ. ಹರಿಹರ ದೇವನ ಮಾತಿನಲ್ಲಿ ಹೇಳುವುದಾದರೆ ಪೂಮಾಲೆಯ "ಕಂದಂಗಳ್ ತನಿರಸದುಕ್ಕಂದಂಗಳ್."

ಮೊದಲ ಪದ್ಯದಲ್ಲಿ ಈ ಕವಿಗಳು ತಮಗೆ ಮತಿಯನ್ನು ಪಾಲಿಸಲು ನರವರ ಸುರವರ ಗುರುವರ........ಸುಕುಮಾರಯೋಗಿವರ್ಯರನ್ನು ಪ್ರಾರ್ಥಿಸಿದ್ದಾರೆ. ಯೋಗ ಮಾರ್ಗದಿ ಶಿವಯೋಗಮಾರ್ಗದ ಇರವನ್ನು ಪಾಲಿಸಬೇಕೆಂಬುದು ಅವರ ಪ್ರಾರ್ಥನೆ. ಪೂಮಾಲೆಯನ್ನು ರಚಿಸಿದ ಕವಿಗೆ 'ಸುವಿಚಾರದ ಇರವು' ಮುಖ್ಯವೆಂಬುದನ್ನು ಗಮನಿಸ ಬೇಕು. ಅದರಂತೆಯೇ ಸತ್ಯ ಸುಮಾರ್ಗ ಮುಖ್ಯ. ಗುರುವಾದವನು "ಶಿವಸದ್ಧರ್ಮದ ಹಾದಿಯೊಳರಿಸುವವನು" ಎಂಬುದು ಅವರ ನಂಬಿಗೆ. ಪೂಮಾಲೆಯ ಮೊದಲಿನ ಹದಿನಾರು ಪದ್ಯಗಳು ಗುರುವಿನ ಮಹತಿಯನ್ನು ಕುರಿತು ಗುರುವಿನ ಅಡಿಗೆ ಸಲ್ಲಿಸಿದ ಪದ್ಯಪುಷ್ಪಗಳು. ಮುಂದಣ ಕೆಲವು ಪದ್ಯಗಳು ಲಿಂಗದ ಹಾಗೂ ಜಂಗಮದ ಮಹತಿಗೆ ಮೀಸಲಾಗಿದ್ದ ಬಗೆ ಯನ್ನು ಸದ್ಭಾವದತ್ತ ಸುಳಿಯಿಸುತ್ತದೆ.

ಆರಾಧನೆಯಲ್ಲಿ ಧ್ಯಾನ ಮುಖ್ಯ. ಧ್ಯಾನದ ರೀತಿಯನ್ನು ಸುಳುಹುಗಾಣಿಸುತ್ತ

"ಮನದೊಳ್ ನೆನೆಯುವ ಮನುಜಗೆ ಮನೆಯೇಂ ಮಠವೇಂ?"

ಎಂದು ಹೇಳಿದ ನುಡಿ ಮನಸ್ಸನ್ನು ಹಿಡಿಯದಿರದು.

ಪೂಮಾಲೆಯಲ್ಲಿ ಆ ತರುವಾಯ ಪವಣಿಕೆಗೊಂಡ ಕಂದ ಕುಸುಮಗಳು ನೀತಿ ನೈರ್ಮಲ್ಯಗಳ ಸುವಾಸನೆಯನ್ನು ಸೂಸಿವೆ. ದೇವಾರಾಧನೆಯಲ್ಲಿ ಚಿತ್ತವಂದಾಗುವುದಲ್ಲಿ ಧ್ಯಾನ ಮುಖ್ಯ ಎಂಬುದನ್ನು ಮನಮುಟ್ಟುವಂತೆ ಹೇಳಿದ್ದಾರೆ ಕವಿ.

"ಚಿತ್ತವು ಇಲ್ಲದೆ ದೇವರ ಹತ್ತಿರ ಕುಳ್ಳಿರ್ದು ಹೆಚ್ಚು ಪೂಜೆ ಮಾಡಿದರೆ ಅದು ಕೃತ್ರಿಮ ಪೂಜೆ."

ಬಣ್ಣದ ಮಾತಿನಿಂ ಭಕ್ತಿ ಸಾಧ್ಯವಾಗದು ಎಂಬ ಅಭಿಪ್ರಾಯವು ಕೆಳಗಣ ಕಂದದಲ್ಲಿ ಚನ್ನಾಗಿ ಮನಂಬುಗುವಂತೆ ಅಭಿವ್ಯಕ್ತವಾಗಿದೆ. ಅದು ಒಂದು ಒಳ್ಳೆಯ ಶಬ್ದ ಚಿತ್ರವಾಗಿ ಚಿತ್ತಾಕರ್ಷಕವಾಗಿ ಮೂಡಿದೆ.

ಕಣ್ಣಿನ ಕೊನೆಯೊಳಗಿರುತಿಹ
ಬಣ್ಣದ ಪಕ್ಷಿಯನು ಹಿಡಿದು ಕಟ್ಟುವರಾರೈ
ಅಣ್ಣಗಳೇ ಪೇಳಿರಿ ಬರಿ
ಬಣ್ಣದ ಮಾತಿನೊಳು ಸಾಧ್ಯವಾಗುವದಲ್ಲೆ?

ಇದೋ ಈ ಮುಂದಣ ಪದ್ಯ ಶಾಂತಿ ಸುಖದ ತಿರುಳನ್ನೇ ಚಿತ್ತದ ಮುಂದೆ ಎತ್ತಿ ಹಿಡಿದಂತಿದೆ.

ಮನದೊಳ್ ಸಮತೆಯುದಳವಡೆ
ಮನೆ ಮಾಡಿಹುದಯ್ಯ ಶಾಂತಿ ಸುಖ ಸಂಪದವು
ಘನವಾದ ಸುಧೆಯು ಸೇವನೆ
ಯನುಕೂಲಿಸಿದಂಗೆ ಹಸಿವು ಬಾಧಿಪುದೆಂತೈ

'ಕಂದ'ವೆಂಬುದು ಹಳೆಯ ಛಂದೋಬಂಧ. ಆದರೇನು ಅದನ್ನು ಚೆನ್ನಾಗಿ ಪ್ರಯೋಗಿಸಿದರೆ ಅದು ಯಾವಾಗಲೂ ಹೊಸ ಆನಂದವನ್ನು ನೀಡಬಲ್ಲುದೆಂಬುದಕ್ಕೆ ಮಹಾಂತದೇವ-ಗಂಗಾಧರ ಜಗದ್ಗುರುಗಳ ಪೂಮಾಲೆ ಸಾಕ್ಷಿಯಾಗಿದೆ ಎಂದು ಹೇಳ ಬಹುದು. ಪೂಮಾಲೆಯ ಕಂದ ಪುಷ್ಪಗಳು ಅಷ್ಟೊಂದು ಸೊಗಸಾಗಿವೆ; ಸದ್ಭಾವಯುಕ್ತ ವಾಗಿವೆ; ಸ್ವಾಗತಾರ್ಹವಾಗಿವೆ.

## ಪಥಿಕ

'ಪಥಿಕ' ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಕವಿಗಳ ಇನ್ನೊಂದು ಕವನ ಸಂಗ್ರಹ. ಆಧುನಿಕ ಯುಗದ ಸಂಪೂರ್ಣ ಭಾವಗೀತ ಸಂಪ್ರದಾಯದ ಪಥದಲ್ಲಿ ಶ್ರುತಿಗೂಡಿ ಬಂದಿದೆ. 'ಪಥಿಕ' ಸಜ್ಜೀವನದ ಮಾರ್ಗದಲ್ಲಿ ನಡೆಯಲೆಳಸಿದ ಪಥಿಕನ ಅನುಭವ ಹಾಗೂ ಆದರ್ಶಗಳನ್ನು ಸುಳುಹುಗಾಣಿಸುವಂತಿವೆ. ಈ ಕವನ ಸಂಕಲನದ ಕವಿತೆಗಳು ಸನ್ಮಾರ್ಗ ಗ್ರಂಥಮಾಲೆಯ ೬ನೆಯ ಹೂವಾಗಿ ಅರಳಿ ಬಂದಿತು ಈ ಕವನ ಸಂಗ್ರಹ ೧೯೫೪ ರಲ್ಲಿ. ಅದು ಮೂಡಿ ಬಂದಾಗ ಕವಿ ಇನ್ನೂ ಚಿತ್ತರಗಿಯ ಮಹಾಂತ ದೇವರಾಗಿದ್ದರು. ಅಂದಿನ ಅವರ ಚಿತ್ತರಗಿಯ ಚಿತ್ತವೇ ಚಿತ್ರವಾಗಿ ಮೂಡಿದೆ. 'ಪಥಿಕ'ದ ಕವಿತೆಗಳಲ್ಲಿ-ಎಂದು ಹೇಳಬಹುದು. ಪಥಿಕ ಕವನ ಸಂಗ್ರಹ ಪುಸ್ತಕದ ಮೇಲು ಹೊದಿಕೆ ಪಥಿಕ ಸಾಗಿದ ಪಥವನ್ನು ಅಂದವಾಗಿ ಸುಳುಹುಗಾಣಿಸಿದೆ. 'ಬೆಟ್ಟದ ಮೇಲೆ ಅದೇ ಮೂಡುವ ಸೂರ್ಯ, ದಾರಿಯ ಆಚೆ ಈಚೆಯು ಎತ್ತರದ ಮರಗಳು, ಬೆಟ್ಟ ಬೆಟ್ಟಗಳ ಓರೆ ಏರಿ ಹೋಗುವಂತಹ ದಾರಿ, ಪ್ರಶಾಂತ ವಾತಾವರಣವನ್ನು ಸೂಚಿಸುವ ಪರಿಸರ- ಇವೆಲ್ಲ ಸಮುಚಿತವಾಗಿ ರೇಖೆಗೊಂಡಿವೆ. ಹೊದಿಕೆಯ ಚಿತ್ರದಲ್ಲಿ, ಶ್ರೀ ಜ. ಚ. ನಿ. ಎಂಬ ಹೆಸರಿನಿಂದ ಸುಪ್ರಸಿದ್ಧರಾದ ಸಾಹಿತಿಗಳು 'ಪಥಿಕ' ಕವನ ಸಂಕಲನಕ್ಕೆ ಮುನ್ನುಡಿ ಬರೆದುದು ಯಥಾ ಯೋಗ್ಯವಾಗಿದೆ.

'ಪಥಿಕ'ದ ಕವಿತೆಗಳಲ್ಲಿ ಭಾವಕ್ಕೆ ತಕ್ಕ ಛಂದಸ್ಸು ಹೊಂದಿಕೊಂಡಿದೆ ಎಂಬ ಮಾತನ್ನು ಮೊದಲು ಹೇಳಬಹುದು—'ಲಲಿತ ಪದ'ವನ್ನು ಈ ಕವಿತೆಗಳು ವಿಶೇಷವಾಗಿ ಒಳ ಗೊಂಡಿವೆ. ಮಂದಾನಿಲ ಉತ್ಸಾಹ ಲಯಗಳೂ ಅಲ್ಲಲ್ಲಿ ಸ್ಪಂದಿಸಿವೆ.

'ಪಥಿಕ' ಸಂಗ್ರಹದ ಮೊದಲನೆಯ ಕವನ ಪಥಿಕ. ದಾರಿ ತೋರಲು ಪರಮಾತ್ಮ ನನ್ನು ಕವಿ ಪ್ರಾರ್ಥಿಸಿದ ಪ್ರಾರ್ಥನೆ ಪಥಿಕ-ಎಂಬ ಕವಿತೆಯಲ್ಲಿ ರೂಪತಾಳಿದೆ. ಶೈಲಿ ಸರಳವಾಗಿದ್ದಂತೆ, ಭಾವನೆಯೂ ತಿಳಿಯಾಗಿದೆ. ಪಥಿಕನಿಗೆ ಗುರಿಯೆಂಬುದು ಬೇಕಷ್ಟೇ? ಅಂತಹ ಸರಿಯಾದ ಗುರಿಯತ್ತ-ಬೆಳಕಿನತ್ತ ನಡೆಯುವತನಕವು 'ನಡೆಮುಂದೆ' ಎಂಬ ಕವಿತೆಯಲ್ಲಿ ನುಡಿ ಪಡೆದಿದೆ. ಈ ಕವಿತೆಯಲ್ಲಿ ಕವಿ ತನ್ನನ್ನು ತಾನೇ ಎಚ್ಚರಿಸಿಕೊಂಡಿ ದ್ದಾನೆ; 'ಮುನ್ನಡೆಯಲು ಪ್ರೇರಿಸು-' ಎಂದು ಅಂತರಂಗವನ್ನು ಜಾಗ್ರತಗೊಳಿಸಿ ಕೇಳಿ ಕೊಂಡ ರೀತಿಯಲ್ಲಿ ಸ್ವಾರಸ್ಯವಿದೆ; ಯಾವುದೇ ಅನಾನುಕೂಲತೆಯುಂಟಾದರೂ ಶಿಲ್ಪಿ

ಶಿಲೆಯಲ್ಲಿ ಕಲೆಯನ್ನರಳಿಸದೆ ಬಿಡುವನೇ? ತಾನೂ ಹಾಗೆಯೇ ಜೀವನದಲ್ಲಿ ಉತ್ತಮಿಕೆಯನ್ನು ಸಾಧಿಸಬೇಕೆನ್ನುವ ಹವಣಿಕೆ ಅನುಭವದ ಪಥದಲ್ಲಿದ್ದ 'ಪಥಿಕನಿಗೆ.'

'ಭಿಕ್ಷುಕ'ವೆಂಬ ಕವಿತೆ ಕೂಡ ಅನುಭಾವದ ರೀತಿಯಲ್ಲಿ ಇದೆ. 'ಹೃದಯ'ವೆಂಬುದು ಪ್ರಣತಿ, ಸದ್ಭಕ್ತಿಯೆಂಬುದು ತೈಲ, ಸುವಿಚಾರವೆಂಬುದು ಭಕ್ತಿ, ಈ ಬಗೆಯ ದೀಪ ಮೂಡಿಸಿದರೆ ಹೊಮ್ಮಿದ ಜ್ಯೋತಿಯಲ್ಲಿ ಪರಂಜ್ಯೋತಿಯಾದ ಪರಮಾತ್ಮನು ದರ್ಶನವನ್ನೀಯುವನು ಎಂಬ ಭಾವ ಈ ಕವಿತೆಯ ಜೀವಾಳ. ಅಂತರ್ಯದ ಜ್ಯೋತಿಗಳು ಬೆಳಗಿ ಅಜ್ಞತೆಯ ಅಂಧಕಾರವನ್ನು ಅಳಿಸಿ, ಜಗದಲ್ಲಿ ಶಿವ ಶಾಂತಿ ಕಾಂತಿಗಳನ್ನು ಹರಡಲಿ ಎಂಬುದು ಕವಿಯ ಆಶೆ.

'ಶಿವನ ಪುಟ್ಟಿ' ಎಂಬ ಕವಿತೆ ಹೃದಯಾಕಾಶದಿ ಏರಿಸು ಪುಟ್ಟಿ ಎಂಬ ಪ್ರೇರಣೆಯೊಂದಿಗೆ ಪರಿಣಾಮವನ್ನು ಬೆಳಗುವಂತೆ ಪ್ರಾರಂಭವಾಗಿದೆ. ಆರಂಭವಾದಂತೆ ಅನುಭವವನ್ನು ವಿವರಿಸುತ್ತ ಮುಂದುವರಿದ ಕವಿತೆ ಇದು. ಸ್ಫೂರ್ತಿಗೆ ತಕ್ಕಂತೆ ಧಾವಿಸುವ ಛಂದೋಗತಿಯಿಂದಾಗಿ ಈ ಕವಿತೆ ಭಾವಗೀತದ ರೀತಿಯಲ್ಲ ಮನ ಮೆಚ್ಚುವಂತೆ ರೂಪಗೊಂಡಿದೆ. ಹೃದಯಾಕಾಶದಲ್ಲಿ ಏರಿಸುವ "ಶಿವನ ಪುಟ್ಟಿ"ಯು—

ನಭದಲಿ ಬೆಳಗಲಿ ಚಿನ್ಮಯ ಕಿರಣ
ತುಂಬಲಿ ಪುಟ್ಟಿಯು: ದೇವರ ಸ್ಮರಣ
ಆಗಲಿ ಜನನದ ಮರಣದ ಹರಣ
ಇಂತೇರಿಸು ಶಿವ ಪುಟ್ಟಿಯ ಜಾಣ.

ಎಂಬ ಸಂದೇಶದೊಡನೆ ಮುಗಿಯುತ್ತದೆ. ಈ ಗೀತದ ಛಂದೋಬಂಧ ಉತ್ಸಾಹವನ್ನು ತುಂಬಿಕೊಂಡಿದೆ.

ಈ ಭಾವಗೀತಗಳು ವಿವಿಧ ವಿಷಯಗಳನ್ನೊಳಗೊಂಡಿವೆ. ಸ್ವಾತಂತ್ರ್ಯ ಗೀತ, ವಿಜಯಗೀತ, ಆಹ್ವಾನ, ನಿಶೆಗೆ, ಮೊಟ್ಟೆಹೊಡೆವವ, ಶಿವಯೋಗಮಂದಿರ, ಮರೆಯಾದ ಮಹಾತ್ಮ, ಕವಿ, ನಾವಿಕನನ್ನು ಕುರಿತು, ಸುಕುಮಾರನಿಗೆ, ಕವಿ ಸಮರ್ಪಣ, ಉತ್ತಿಷ್ಠತ, ಪ್ರೇರಣೆಗೆ–ಹೀಗೆ ವಿವಿಧ ವಿಷಯಗಳನ್ನು ಕುರಿತು ಬರೆದ ಕವನಗಳು 'ಪಥಿಕ'ನ ದಾರಿಯಲ್ಲಿ ಕೂಡಿಬಂದಿವೆ. 'ಶಿವಯೋಗ ಮಂದಿರ' ಎಂಬ ಕವಿತೆಯಲ್ಲಿ ಹೃದಯವೆಂಬ ಶಿವಯೋಗ ಮಂದಿರದ ಬಾಗಿಲು ತೆರೆದುದನ್ನು ಕಾಣುತ್ತೇವೆ. 'ನಾವಿಕ' ಎಂಬ ಕವಿತೆಯಲ್ಲಿ ನಾವಿಕನಲ್ಲಿ ನಂಬಿಗೆಯನ್ನು ಇಟ್ಟ ಶರಣನನ್ನು ಕಾಣುತ್ತೇವೆ. 'ಸುಕುಮಾರ'ನಲ್ಲಿ ಸನ್ಮಾರ್ಗದೀಪಕನನ್ನು ಸಂದರ್ಶಿಸುತ್ತೇವೆ. ಕವಿ ಸಮರ್ಪಣದಲ್ಲಿ ಸುಜ್ಞಾನದ ಸುವರ್ಣವನ್ನು ವಿನಿಮಯ ಮಾಡುವ ಸದ್ಭಕ್ತನು ಸುಳುಹು ದೋರಿದ್ದಾನೆ. ಚಂದ್ರನಂತೆ ತಂಪು ತಳೆದು, ಸೂರ್ಯನಂತೆ ದೀಪ್ತಿಪಡೆದು ಸಲಿಲದಂತೆ ಸರಸವಾಗಿ ಕಾಣುವ ಕವಿಯ ದೃಷ್ಟಿ 'ಕವಿ' ಎಂಬ ಕವನದಲ್ಲಿ ಅರಳಿದೆ. ಹೃದಯವೆಂಬ ಬಾವಿಯನ್ನು ಸ್ವಚ್ಛಮಾಡುವ

ನೇಗಿಲಯೋಗಿ ಮೊಟ್ಟೆ ಹೊಡೆವವನಿಗೆ ಎಂಬ ಅನುಭವ ಪರವಾದ ಪದದಲ್ಲಿ ದರ್ಶನ ಕೊಡುತ್ತಾನೆ. "ಬಾಗಿಲನು ತೆರೆದಿರುವೆ ಬಾ ಬೇಗ ಓ! ಗುರುವೆ" ಎಂದು ಮೊದಲಾಗುವ 'ಆಹ್ವಾನ' ಎಂಬ ಕವಿತೆಯಲ್ಲಿ ಭಕ್ತಿಭಾವ ಹುರಿಗೊಂಡು ನಿಂತಿದೆ. ನಂಬಿ ಕರೆವ ಕರೆ ಇಲ್ಲಿ ಸ್ವರವೆತ್ತಿದೆ. ಕವಿ ಇಲ್ಲಿ ಶಿವನನ್ನು ಹೃದಯಮಂಟಪಕ್ಕೆ ಆಹ್ವಾನಿಸಿದ್ದಾನೆ. 'ಬಳಲುತಿಹ ಬಡವರಿಗೆ ಆಹಾರದಾನಂದ 'ದೊರೆತಾಗ ನಿಜವಾದ ಸಂಪೂರ್ಣ ಸ್ವಾತಂತ್ರ್ಯ' ಎಂಬ ಉದ್ಗಾರ 'ಸ್ವಾತಂತ್ರ್ಯ' ಎಂಬ ಕವಿತೆಯಲ್ಲಿ ಕರುಣೆಯೊಂದಿಗೆ ಹೊರ ಹೊಮ್ಮಿದೆ. ಕವಿತೆ ತನಗೆ ಬರೀ ಆನಂದವನ್ನುಂಟು ಮಾಡಿದರೆ ಸಾಲದು ಜನ ಬದುಕಬೇಕೆಂಬ ನಿಸ್ವಾರ್ಥ ಭಾವವು ಮೂಡಿ ಬರಬೇಕು- ಎಂಬುದನ್ನು ಈ ಸಂಗ್ರಹದ ಒಂದೆರಡು ಕವಿತೆಗಳು ಸುಳುಹುಗಾಣಿಸಿವೆ.

ಜಗದ್ಗುರು ಗಂಗಾಧರ ಕವಿಗಳಿಂದ ಹೀಗೆ ಕಾವ್ಯ ಗಂಗಾಧಾರೆ ಹೊನಲಾಗಿ ಹರಿದಿದೆ. ಅನುಭವ, ಅನುಭಾವಗಳೆರಡೂ ಬೆರೆತ ಈ ಕಾವ್ಯ ಸಲಿಲದಲ್ಲಿ ಮಿಂದವರು ಆನಂದವನ್ನು ಹೊಂದಬಲ್ಲರು.

# ಮೊಗ್ಗೆಯ ಮಾಲೆ

ಎ. ಎಸ್. ಹೂಗಾರ

ನಡೆ–ನುಡಿಯೊಂದಾಗಿ ಬೆಳಗಿ ನಾಡವರಿಗೆ ಬೆಳಗನಿತ್ತ ಲಿಂಗೈಕ್ಯ ಶ್ರೀಮ.ನಿ.ಪ್ರ. ಕುಮಾರ ಶಿವಯೋಗಿಗಳು ಹಾನಗಲ್ಲ ಅವರೊಂದು ಪುಷ್ಪವೃಕ್ಷ. ಆ ಪುಷ್ಪ ವೃಕ್ಷದ ಪುಷ್ಪ ಅನಂತ. ಆ ಪುಷ್ಪವೃಕ್ಷದಲ್ಲಿ ಅಷ್ಟಾಂಗಯೋಗವೆಂಬ ಶ್ರೇಷ್ಠ ಸಂಪಿಗೆ ಹೂವಿದೆ. ಇಷ್ಟಲಿಂಗಯೋಗವೆಂಬ ಪುಷ್ಪ ಸೇವಂತಿಗೆ ಹೂವಿದೆ. ಶೀಲಾಚರಣೆಯೆಂಬ ಜಾಜಿ ಮಲ್ಲಿಗೆಯಿದೆ. ಕ್ರಿಯಾಚರಣೆಯೆಂಬ ಸೂಜಿ ಮಲ್ಲಿಗೆಯಿದೆ ಅಂತಃಕರಣಪೂರಿತ ಹೃದಯಕಮಲವಿದೆ. ಭಾವಭರಿತ ಬಕುಲವಿದೆ. ಮನೋಲಯವೆಂಬ ಕಣಗಿಲ ಹೂವಿದೆ. ಮನೀಷವೆಂಬ ನಿರೀಷವಿದೆ. ಗುರು ಸಹಜ ಗುಣಗಳೆಂಬ ಗುಲಾಬಿ ಹೂಗಳಿವೆ. ಸೌಜನ್ಯವೆಂಬ ಸುರಗಿಯಿದೆ. ಚಿರಸ್ಮರಣೆಯೆಂಬ ಸುರಹೊನ್ನೆ ಸುಮವಿದೆ. ಮೌನ ಮುದ್ರೆಯೆಂಬ ಪರಿಮಳದ ಪಾದ್ರಿಯಿದೆ. ಪರಮಾನುಭೂತಿಯೆಂಬ ಪಾರಿಜಾತವಿದೆ. ಪೊಚ್ಚ ಹೊಸ ಹೂವುಗಳಿವೆ. ಹೊನ್ನ ಹೂಗಳಿವೆ.

"ಬನ್ನದಿ ಬಳಲುವ| ಕನ್ನಡ ಕುವರರ
ಅನ್ನವನೀಯುತ ಪೊರೆದಿಯೊ ನೀ|
ಎನ್ನಯ ಭಕುತಿಯ 'ಮೊಗ್ಗೆಯ ಮಾಲೆ'ಯ
ನಿನ್ನಯ ಪಾದಕೆ ಅರ್ಪಿಸುವೆ" —

ಎಂದು ಶಿವಯೋಗಮಂದಿರ[೧] ಮಹಾಂತದೇವರು ಆ ಹೂವುಗಳನ್ನು ಮೊಗ್ಗೆಯ ಮಾಲೆಯಲ್ಲಿ ಪೋಣಿಸಿಕೊಂಡು ಕಾರುಣ್ಯಯೋಗಿ ಶ್ರೀ ಸುಕುಮಾರನಿಗೆ ಅರ್ಪಿಸಲು ಭಕ್ತಿಯಿಂದ ಮುಂದಾಗಿದ್ದಾರೆ. 'ಮೊಗ್ಗೆಯ ಮಾಲೆ'ಯಲ್ಲಿಯ ಹೂಗಳು ಸೋಂಕಿ ಬಾಡಿಲ್ಲ. ಶಿವಲಿಂಗದ ಸಿರಿಮುಡಿಗಾಗಿಯೆ ಮೆಯ್ವೆತ್ತಿವೆ. ಶಿವಶರಣರ ಕಣ್ಮನಗಳ ತಣಿಸಲು ತೋರಿಕೊಂಡಿವೆ; ತೊಳ ತೊಳಗಿ ಅರಳಿಕೊಂಡಿವೆ. ನಳನಳಿಸಿ ನೆರೆದುಕೊಂಡಿವೆ. ಮಘಮಘಿಸಿ ಮರೆಯುತಿವೆ. ಆಹಾ! ಅದೇನು ಆ ಹೂವುಗಳ ನುಣುಪು. ಅದೇನು ಆ ಹೂವುಗಳ ಗುಣ! ಅದೆಂತಹ ಪುಣ್ಯ! ನಿಜಕ್ಕೂ ಅವೇ ಧನ್ಯ.

ಭಕ್ತನ ಭಾವಕ್ಕೆ, ಕವಿಯ ಕಾವ್ಯಕ್ಕೆ ಹೊಸ ಚೇತನ ಕೊಡುವ ಮೊಗ್ಗೆಯ ಮಾಲೆಯ ಸೌಂದರ್ಯ ಮಾಧುರ್ಯಕ್ಕೆ ಮನಸೋತ 'ಒಂದು ಗಿಳಿ' 'ಹಾರುವೆಯೆಲ್ಲಿಗೆ' ಎಂದು ತನ್ನನ್ನೇ ತಾನು ಪ್ರಶ್ನಿಸಿಕೊಂಡು ಪುಷ್ಪವೃಕ್ಷದ 'ಶರಣರ ತೋಟ'ಕ್ಕೆ ಹಾರಿ

೧ ಶಿವಯೋಗಮಂದಿರದ ಮಹಾಂತದೇವರೇ ಇಂದಿನ ಮೂರುಸಾವಿರಮಠದ ಜಗದ್ಗುರುಗಳಾಗಿದ್ದಾರೆ.

ಬಂದಿದೆ. ಕವಿಯ ಜೀವನವೊಂದು ಅಲ್ಲಿ ವಸಂತವಾಗಿದೆಯೆಂಬುದನ್ನು ಕಂಡಾಗ ಇಲ್ಲಿಯೆ 'ಮಲಗು ಸುಮ್ಮನೆ' ಎಂದು ತನ್ನ ತಾನರಿದು ಎಚ್ಚರಿಸಿಕೊಂಡಿದೆ. 'ಅಲರಿನ ವಿರಹ'ದ ಆ ಗಿಳಿ ಕಲ್ಪನಾಕುಸುಮಗಳನರಳಿಸಿಕೊಂಡು ಚಲುವ ಚಿಮ್ಮಿಸಿ ನರುಗಂಪ ಹರಡಿಸಿ ನವ ರಸಗಳೆಂಬ ನವಮಕರಂದದಿಂದ ತುಂಬಿಸಿ ರಸಪೂರ್ಣವಾಗಿರಿಸಿ ಸಕಲವಿಧ ವರ್ಣಗಳಿಂದ ತಾನೇ ರಂಜಿತವಾಗಿದೆ.

"ನೆಲದ ಮರೆಯ ಹೇಮದಂತೆ
ಫಲದ ಮರೆಯ ರುಚಿಯಂತೆ
ತಿಲದ ಮರೆಯ ತೈಲದಂತೆ"
ಜಲದ ಮರೆಯ "ಅನಲದಂತೆ"

ಇರುವ ಕಾರುಣ್ಯಯೋಗಿಯನ್ನು 'ದೇವನೆಂತಿರುವನಂತೆ' ಎಂದು ಪ್ರಶ್ನಿಸಿದೆ.

"ಭವರೋಗ ವೈದ್ಯನೆ
ಭವಬಂಧನದಿ ಬಳಲಿ
ಬೆಂಡಾದ ಮಾನವರ
ನುದ್ಧರಿಸ ಬಾ–ಬಾ"

ಎಂದು ತನ್ನ 'ಪ್ರಾರ್ಥನೆ' ಸಲ್ಲಿಸಿದೆ. ಸುಕುಮಾರ ಈ 'ಕುಮಾರನ ಕರೆ' ಕೇಳಿದನೋ ಇಲ್ಲವೊ ಎಂಬುದನ್ನು ತಿಳಿಯದೆ ಇದ್ದ ಮುಗ್ಧ ಮನಸ್ಸಿನ ಆ ಗಿಳಿ 'ಗುರುವಂದನಂ'ವನ್ನು 'ಭಯ' ಭಕ್ತಿಯಿಂದ ಮುಂದುವರೆಸಿದೆ. 'ಕರುನಾಡ ಗೀತೆ'ಯನ್ನು ಪ್ರಾರಂಭಿಸಿದೆ.

"ಬೆಂದ ಜನಗಳಿಗೆಲ್ಲ ಮುಕ್ತಿನಂತಹ ವಚನ
ಅಂದದಿಂದಲಿ ಪೇಳ್ದ ಸತ್ಯ ಶರಣರ ಬೀಡು
ಚಂದ್ರಶೇಖರನನ್ನು ಬೇಗನೊಲಿಸುವ ನಾಡು
ಕಂದ "ಮಹಂತ"ನು ಬರೆದ ಭಕುತಿಯಿಂದೀ ಪಾಡು"

ಎಂದು ಕನ್ನಡ ತಾಯಿಯ ಹಿರಿಮೆ ಗರಿಮೆಗಳನ್ನು ಸಾರಿ ಲೋಕವನ್ನುದ್ಧರಿಸಿದ ಅಲ್ಲಮ ಪ್ರಭುದೇವ, ಬಸವಣ್ಣ, ವೀರಯೋಗಿ ಕುಮಾರ, ಅಲ್ಲದೆ 'ಕಣ್ಮರೆಯಾದ ಯತಿತಿಲಕ' ರಿಗೆ ತನ್ನ ಮನದಳಲನ್ನು ಅರ್ಪಿಸಿದೆ. ಕನ್ನಡದ ಸತ್ವಯುತ ಸಾಹಿತ್ಯ ಹುಲುಸಾಗಿ ಬರೆದು ಕೊಟ್ಟ 'ಕವಿರತ್ನ' ದ್ಯಾಂಪ್ರರ ಚನ್ನಕವಿಗಳಿಗೆ ಆರ್ತಗೀತೆಯಿಂದ ಭಕ್ತಿಯನ್ನು ಅರ್ಪಿಸಿ ಆತ್ಮಕ್ಕೆ ಶಾಂತಿಕೋರಿದೆ.

ಜೀವಂತ ಕವಿ ಕಾವ್ಯವನದಲ್ಲಿ ತಾನು ಸಂಚರಿಸುತ್ತಿರುವಾಗ ಎಲ್ಲಿ ನೋಡಿದಲ್ಲಿ ಬಸವನೆಂಬ ಬಳ್ಳಿ, ಲಿಂಗವೆಂಬ ಗೊಂಚಲು. ಒತ್ತಿ ಹಿಂಡಿದರೆ ಭಕ್ತಿ ಬರುವದನ್ನು ಕಂಡು ಬಸವನನ್ನು ಕಾಣುವ ಹೆಬ್ಬಯಕೆಯಿಂದ 'ವಚನ' ರಚಿಸಿದೆ. ಹಾಡಿದೆ. ಕುಣಿದಿದೆ. 'ಭಗವಾನ್ ಬಸವ'ನ ಬರವಿಗಾಗಿ, ಬಸವನ ಮಹತಿಯನ್ನು ಕುರಿತು—

"ಬಸವ ನಾಮವೆಮಗೆ ಜಪವು
ಬಸವ ನಾಮವೆಮಗೆ ತಪವು
ಬಸವ ಬಸವನೆಂಬುದದುವೆ
ಅಮೃತ ಧಾರೆಯು
ಬಸವನಾಮ ಮಹಿಮೆಯಿಂದ
ಮುಕ್ತಿ ದೊರೆವುದು"

ಬಗೆದುಂಬಿ ಪಾಡಿದೆ. ಬಸವನ ಬರವು 'ಬಂದಿತಿಂದು' ಎಂದು ತಿಳಿದು ಹಿಗ್ಗಿ 'ಹಿರಿಯತನ' ದಲ್ಲಿ ಆತನನ್ನು 'ಆಶೀರ್ವದಿಸು' ಎಂದು ಕೇಳಿಕೊಂಡಿದೆ. ನಿನ್ನ ಆಶೀರ್ವಾದ 'ಹೀಗೆ ಸಾಗಲಿ' ಎಂದು 'ಮೊಗ್ಗೆಯ ಬೇಡಿಕೆ' ಮುಂದಿಟ್ಟಿದೆ. ಆದರೂ ತೃಪ್ತಿಯಿಲ್ಲ.

"ಹಿಂದಿನ ಶರಣರು
ತನುವಂ ತೋಟವ
ಮನವಂ ಗುದ್ದಲಿ ಮಾಡಿದರು
ಅಗಿದರು ಕಳೆದರು
ಭ್ರಾಂತಿಯ ಬೇರವ
ಒಡೆದರು ಸಂಸಾರದ ಹೆಂಟೆ"

ಎಂದು ಶರಣರನ್ನು ಲಿಂಗಮೆಚ್ಚಿ ಅಹುದೆನ್ನುವಂತೆ ಕೊಂಡಾಡಿದೆ. ನನ್ನನ್ನು 'ಸಲುಹಬಾರದೇ' ಎಂದು ಧೈರ್ಯದಿಂದ ಪ್ರಶ್ನಿಸಿದೆ. ಕಬ್ಬಿಗನ ಕಾವ್ಯಕನ್ನಿಕೆಯ ಚಲುವದೇನೊ?

ಮೊಗ್ಗೆಯ ಮಾಲೆಯಲ್ಲಿ ಹಳಗನ್ನಡ ಶೈಲಿಯಿದೆ. ನವೀನ ಛಂದವಿದೆ, ಶಿಥಿಲ ವಲ್ಲದ ಬಂಧವಿದೆ, ಪರಿಣತ ಪದಪುಂಜವಿದೆ, ಚಿತ್ರವನ್ನು ಆಕರ್ಷಿಸುವ ನಿರೂಪಣೆ ಯಿದೆ. ಹೃದಯಕ್ಕೆ ನಿರ್ಮಲತೆಯನ್ನು ತರುವ ಪ್ರಾಸಾದಿಕತೆಯಿದೆ. ಆ ಚಿದಾನಂದ ವನ್ನು ಚಿತ್ರೀಕರಿಸುವ ಚತುರತೆ ಮಾತಿಗೆ ಮೀರಿದುದಾಗಿದೆ. ಕವಿಯೆ ರಸಋಷಿಯಾಗಿ ಬಾಳುವನು; ಬದುಕುವನು ಕಾವ್ಯಮಯ ತಪವನ್ನಾಚರಿಸುತ್ತ ಎಂಬುದನ್ನು ಕಾಣ ಬೇಕಾದರೆ ಕವಿಯ ಕಾವ್ಯ ಕಲ್ಪನೆಯನ್ನು ಕಂಡುಂಡು ಅನುಭವಿಸಬೇಕಾದರೆ ಈ ಕೃತಿ ಯನ್ನು ಓದಿನೋಡಿಯಾಗಬೇಕು. ಕಾವ್ಯದುದ್ದಕ್ಕೂ ಅನುಭಾವ ರಸಗಂಗೆಯಾಗಿ ಹರಿದಿದೆ. ಭಾವಗೀತ ಮೈಗೂಡಿ ದೈವೀಭಾವಶ್ರುತಿ ಶ್ರಾವ್ಯನಾದ ಜೇಂಕಾರವೊಳಗಿಸಿದೆ.

'ಮೊಗ್ಗೆಯಮಾಲೆ'ಯಲ್ಲಿ ಮಹಾಂತ ದೇವರ ಮೃದು ಮಧುರ ಕಾವ್ಯಶೈಲಿ ಕಂಡುಬರುತ್ತದೆ. ಬೆಡಗಿನ ಭಾಷೆಯಲ್ಲಿ ಹೊಸ ಹೊಸ ಅನುಭವಗಳನ್ನು ಅರಳಿಸಿ ರುತ್ತಾರೆ. ಆ ಪರಮಾರ್ಥನಾದ ಮಧುರಮಯ ಕೊಳಲಗಾನದಂತೆ ಇಂಪಾಗಿರುತ್ತದೆ. ಚಿತ್ರಾಭೆ ಹುಣ್ಣಿಮೆ ಚಂದಿರನ ತಂಬೆಳಗಿನಂತೆ ಇರುತ್ತದೆ. ಶಬ್ದ ಸೌಂದರ್ಯ ಕಲಾಮಯ

ಚಿತ್ರದಂತೆ ಚಲುವಾಗಿರುತ್ತದೆ. ಮಹಾಂತದೇವರ ಕೃತಿಗಳ ಭಾವ ಸ್ಪರ್ಶದಿಂದ ಹೃದಯ ಪುಲಕಿತವಾಗುತ್ತದೆ. ಶ್ರವಣೇಂದ್ರಿಯ ಪುನೀತವಾಗುತ್ತದೆ. ಸದ್ವಾಸನೆ ಸುಗಂಧಮಯ ವಾಗಿ ಸಹೃದಯದಲ್ಲಿ ಸುಳಿಯುತ್ತದೆ.

ವೀರಶೈವ ಸಂಸ್ಕೃತಿಯ ಪ್ರಚಾರಕರಾಗಿ, ಸ್ವಯಂ ಆಚಾರ-ವಿಚಾರ ಅನುಸಾರಕ ರಾಗಿ, ಭಕ್ತಜನಕೋಟಿಯ ಹೃದಯವಾಸಿಗಳಾಗಿರುವ ಮಹಾಂತದೇವರು ಗುರು ಮನೆಯನ್ನು ಸರಸ್ವತಿಯ ಅರಮನೆಯನ್ನಾಗಿ ಮಾಡುವರೆಂಬುದನ್ನು ಈ ಕೃತಿ ಎತ್ತಿ ತೋರಿಸುತ್ತದೆ. ಕನ್ನಡಿಗರಿಗೆ ಕರುಣಾಮೃತವ ಕರುಣಿಸುತ್ತಿರುವ ಶಿವಯೋಗಮಂದಿರದ ಮಹಾಂತದೇವರು ಕನ್ನಡದ ಉತ್ತಮ ಸಾಹಿತಿ ಉನ್ನತ ಕವಿ ಎನ್ನುವದಕ್ಕೆ ನಿದರ್ಶನ ಈ ಕೃತಿ.

# "ಶಿವಬಸವೇಶ್ವರ ನಾಮಾವಳಿ"ಯ ಸ್ಮರಣೆ

**ಪ್ರೊ. ಬಿ. ಎಂ. ತೆಳಗಡಿ**

ಹುಬ್ಬಳ್ಳಿಯ ಮೂರುಸಾವಿರಮಠದ ಜಗದ್ಗುರು ಪೀಠವನ್ನಲಂಕರಿಸಿ, ನಾಡಿನ ಕಲೆ, ಶಿಕ್ಷಣ, ಸಾಹಿತ್ಯ, ಸಂಸ್ಕೃತಿ, ಧರ್ಮಗಳ ಅಭ್ಯುದಯಕ್ಕಾಗಿ ಅವಿಶ್ರಾಂತ ಶ್ರಮಿಸುತ್ತಿರುವ ಶ್ರೀಮನ್ ನಿರಂಜನ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಸ್ವಭಾವತಃ ಸಹಜ ಸಾಹಿತಿಗಳಾಗಿದ್ದಾರೆ. 'ಪೂಮಾಲೆ', 'ಅಮೃತಬಿಂದು', 'ಆಶೀರ್ವಾಣಿ' ಮುಂತಾದ ಅನೇಕ ಸತ್ತ್ವಪೂರ್ಣ ಕೃತಿಗಳನ್ನು ನೀಡಿ, ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ. ಅವರು ಇನ್ನೂ ಬಾಲಯೋಗಿಗಳಾಗಿದ್ದಾಗಲೇ, ಇಲಕಲ್ಲ ಮಹಾಂತದೇವರಾಗಿದ್ದಾಗಲೇ, ಲಿಂಗೈಕ್ಯರಾದ ಹಾವೇರಿ ಶ್ರೀ ಶಿವಬಸವಸ್ವಾಮಿಗಳನ್ನು ಕುರಿತು ರಚಿಸಿದ ಕಿರು ಕೃತಿಯೇ 'ಶ್ರೀ ಶಿವಬಸವೇಶ್ವರ ಅಷ್ಟೋತ್ತರ ಶತನಾಮಾವಳಿ' ಶ್ರೀಗಳವರ ಪಟ್ಟಾಭಿಷೇಕದ ದ್ವಾದಶ ವಾರ್ಷಿಕೋತ್ಸವದ ಪುಣ್ಯ ಸನ್ನಿವೇಶದಲ್ಲಿ, 'ಕಿರಿದರದಲ್ಲಿ ಹಿರಿದನ್ನು ತುಂಬಿದ' ಈ ಕೃತಿಯ ಬಣ್ಣನೆ ನನ್ನ ಭಾಗ್ಯವಾಗಿದೆ.

ಜನಜೀವನ ಅಸತ್ಯ, ಅಶಾಂತಿ, ಅನ್ಯಾಯ, ಅಧರ್ಮಗಳ ಚಕ್ರವ್ಯೂಹದಲ್ಲಿ ಸಿಲುಕಿ, ಅಸ್ತವ್ಯಸ್ತವಾಗಿ; ಅಧಃಪತನಕ್ಕೊಳಗಾದಾಗ, ಮಹಾಪುರುಷರು ಅವತರಿಸಿ ಸತ್ಯ, ಶಾಂತಿ, ನ್ಯಾಯ, ಧರ್ಮಗಳನ್ನು ಪ್ರತಿಷ್ಠಾಪಿಸಿದ ಅನೇಕ ಪ್ರಸಂಗಗಳು, ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಅಚ್ಚಳಿಯದೇ ಉಳಿದಿವೆ. ನಾಡಿನ ಸಮಗ್ರ ಜನತೆಯ ಅನಂತಕಾಲದ ತಪಸ್ಸಿನ ಫಲವಾಗಿ ಕಾಲಕಾಲಕ್ಕೆ ಮಹಾನುಭಾವರು ಉದಿಸಿ, ಬಾಳಿನ ಕೊಳೆಯನ್ನು ತೊಳೆದು, ಜೀವನದ ಜಂಜಡವನ್ನು ಬಿಡಿಸಿ, ಮಾನವತೆಯನ್ನು ಉಳಿಸಿ ಉಪಕರಿಸಿದ್ದಾರೆ. ಉದಾತ್ತ ಶಾಶ್ವತ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದು ಜನತೆಯನ್ನು ಜಾಗೃತಗೊಳಿಸಿದ್ದಾರೆ. ಅಂಥವರ ಶ್ರೇಣಿಯಲ್ಲಿ ಲಿಂಗೈಕ್ಯರಾದ ಹಾವೇರಿ ಶ್ರೀ ಶಿವಬಸವಸ್ವಾಮಿಗಳು ಅಗ್ರಗಣ್ಯರು. ಅವರು ಅಖಂಡ ತಪಸ್ವಿಗಳಾಗಿ, ಆಚಾರ ನಿಷ್ಠರಾಗಿ, ವೈರಾಗ್ಯ ಸಂಪನ್ನರಾಗಿ ಆತ್ಮೋದ್ಧಾರದೊಂದಿಗೆ ಲೋಕೋದ್ಧಾರಗೈದಿದ್ದಾರೆ. ಅವರ ಅಲೌಕಿಕ ವ್ಯಕ್ತಿತ್ವವು ಅನೇಕ ಸಾಧಕರ, ಶರಣರ, ಸಜ್ಜನರ ಅಂತರಂಗದ 'ಪರಂಜ್ಯೋತಿ'ಯನ್ನೂ ಬೆಳಗಿಸಿದೆ. ಅಂತೆಯೇ, ಮಹಾಂತ ದೇವರು ಶಿವಬಸವಸ್ವಾಮಿಗಳ ಅಗಾಧವಾದ ವ್ಯಕ್ತಿ ಪ್ರಭೆಗೆ ಮಾರುಹೋಗಿದ್ದಾರೆ; ಮೈಮರೆತಿದ್ದಾರೆ. ಅವರ ಸಮಗ್ರ ಸಾಧಕ ಜೀವನವನ್ನು ಆರಾಧಿಸಿದ್ದಾರೆ; ಅರಗಿಸಿಕೊಂಡಿದ್ದಾರೆ. ಅಷ್ಟರಿಂದಲೇ ತೃಪ್ತರಾಗದೆ, ತಮ್ಮ ಅಂತರಂಗದಲ್ಲಿ ಮಿಂಚಾಗಿ ಸಂಚರಿಸಿದ ಶಿವಬಸವಸ್ವಾಮಿಗಳ ದಿವ್ಯಸ್ವರೂಪವನ್ನು ಆತ್ಮನಿವೇದನೆಯ ಕಾವ್ಯವಾಗಿ ಆತ್ಮಾನಂದದ 'ನಾಮಾವಳಿ'ಯಾಗಿ ಹೆಣೆದು ತಣಿದಿದ್ದಾರೆ.

ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಪ್ರಮಥರಿಂದ ಸಂಭವಿಸಿದ ಧರ್ಮ ಕ್ರಾಂತಿ ಜೀವನದ ವಿವಿಧ ರಂಗಗಳನ್ನು ವ್ಯಾಪಿಸಿತು. ಕನ್ನಡ ಸಾಹಿತ್ಯದಲ್ಲಂತೂ ಹಿಂದೆಂದೂ ಕಾಣದ ಮಹತ್ವದ ಬದಲಾವಣೆಗಳನ್ನು ತಂದಿತು. ಕಾವ್ಯದ ವಸ್ತು, ಉದ್ದೇಶ, ಛಂದಸ್ಸು, ಭಾಷೆಗಳ ದೃಷ್ಟಿಯಿಂದ ಸಾಹಿತ್ಯ ಹೊಸ ಮಾರ್ಗದಲ್ಲಿ ಕ್ರಮಿಸುವಂತಾಯಿತು. ಕ್ಲಿಷ್ಟವಾದ ಸಂಸ್ಕೃತ ಭೂಯಿಷ್ಠ ಭಾಷೆ ಮಾಯವಾಗಿ, ಸಾಮಾನ್ಯ ಜನತೆಯ ಆಡು ನುಡಿಯೇ ಸಂಸ್ಕಾರಗೊಂಡು ಸಾಹಿತ್ಯದಲ್ಲಿ ಬಳಕೆಯಾಯಿತು. ಸಂಸ್ಕೃತ ಛಂದಸ್ಸಿನ ಸ್ಥಾನವನ್ನು ರಗಳೆ, ಷಟ್ಪದಿ, ಸಾಂಗತ್ಯಗಳು ಆಕ್ರಮಿಸಿದವು. ಈ ಹೊಸ ಸಾಹಿತ್ಯ ಸಂಪ್ರದಾಯಕ್ಕೆ, ವಚನ ಸಾಹಿತ್ಯದಿಂದ ಸ್ಫುರಣಗೊಂಡು, ಕೃತಿ ರಚನೆ ಮಾಡಿದ ಕ್ರಾಂತಿ ಕವಿ ಹರಿಹರನೇ ಗುರುವಾದ. ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ ಪದ್ಯವನ್ನು ರಚಿಸದೆ ಶಿವನನ್ನು, ಶಿವಶರಣರನ್ನು ಕುರಿತು ಕಾವ್ಯ ರಚಿಸುವ, ಸ್ತುತಿಸುವ ಪರಂಪರೆಗೆ ಈತನೇ ಮೊದಲಿಗನಾದ. ಭಗವದ್ಭಕ್ತನಾದ ಹರಿಹರ ಅನೇಕ ನೂತನ ಪುರಾತನ ಶಿವಶರಣರ ಚರಿತ್ರೆಗಳನ್ನು ಉದ್ದಕ್ಕೂ ರಗಳೆಯ ಛಂದಸ್ಸಿನಲ್ಲಿಯೇ ರಚಿಸಿ, ರಗಳೆಯ ಶಕ್ತಿಯನ್ನು ಹೆಚ್ಚಿಸಿದ್ದಾನೆ. ಮುಂದಿನ ಕವಿಗಳು, ವಿಶೇಷವಾಗಿ ವೀರಶೈವ ಕವಿಗಳಂತೂ ಹರಿಹರನುದಿತ ಮಾರ್ಗದಲ್ಲಿಯೇ ನಡೆದು, ಕೃತಿ ರಚನೆ ಮಾಡಿ ಕೃತಾರ್ಥರಾಗಿದ್ದಾರೆ. ಹರಿಹರನ ಕಾವ್ಯ ಪರಂಪರೆಯ ತೀವ್ರ ಪ್ರಭಾವಕ್ಕೆ ಒಳಗಾದ ಅನೇಕರಲ್ಲಿ ಮಹಾಂತದೇವರೂ ಒಬ್ಬರು.

ಬಾಲ್ಯದಿಂದಲೇ ಶಿವಶರಣರ, ಶಿವಕವಿಗಳ ಹಾಗೂ ಶಿವಸಾಹಿತ್ಯದ ಬಗೆಗೆ ಅಪಾರ ಆಸಕ್ತಿ, ಭಕ್ತಿ, ವಿಶ್ವಾಸಗಳನ್ನು ಮಹಾಂತದೇವರು ಬೆಳೆಸಿಕೊಂಡು ಬಂದಿದ್ದಾರೆ. ಅಂತೆಯೇ ದೈವದ ದೇಣಿಗೆಯಾಗಿ ಬಂದ ಕವಿತ್ವ ಶಕ್ತಿಯನ್ನು ಲೌಕಿಕ ಪ್ರಯೋಜನಕ್ಕಾಗಿ ವಿನಿಯೋಗಿಸದೆ, ಶರಣಶ್ರೇಷ್ಠರಾದ ಶಿವಬಸವ ಸ್ವಾಮಿಗಳ ದಿವ್ಯ ವ್ಯಕ್ತಿತ್ವ ನಿರೂಪಣೆಗಾಗಿ ಬಳಸಿದ್ದಾರೆ. ವಸ್ತುವಿನ ಆಯ್ಕೆಯಲ್ಲಿಯೇ ಕೃತಿ ರಚನೆಯ ಉದಾತ್ತ ಉದ್ದೇಶವನ್ನು ವ್ಯಕ್ತಪಡಿಸಿದ್ದಾರೆ. ವಿಷಯವನ್ನು ವಿವರವಾಗಿ, ಸರಾಗವಾಗಿ ನಿರೂಪಿಸಲು ಯೋಗ್ಯವಾದ ರಗಳೆಯ ಸಹಜ ಶಕ್ತಿಯನ್ನು ಅರಿತು, 'ಶಿವಬಸವೇಶ್ವರ ನಾಮಾವಳಿ'ಯ ರಚನೆಯಲ್ಲಿ ಉತ್ಸಾಹ ರಗಳೆಯನ್ನೇ ಉಪಯೋಗಿಸಿ, ಛಂದಸ್ಸಿನ ಆಯ್ಕೆಯಲ್ಲೂ ತಮ್ಮ ರಸಜ್ಞತೆಯನ್ನು ತೋರಿದ್ದಾರೆ. ನೂರಾಯೆಂಟು ರಗಳೆಯ ಸಾಲುಗಳಲ್ಲಿ ಯತಿವರೇಣ್ಯ ಶಿವಬಸವ ಸ್ವಾಮಿಗಳ ಸಮಗ್ರ ವ್ಯಕ್ತಿತ್ವವನ್ನು ಸೆರೆಹಿಡಿದು, ತಮ್ಮ ಕಾವ್ಯ ಪ್ರತಿಭೆಯನ್ನು ಪ್ರಕಟಿಸಿ ಧನ್ಯರಾಗಿದ್ದಾರೆ.

"ಶ್ರೀ ಶಿವಯೋಗಿ ಲಲಾಮನ
ಶ್ರೀ ಶಿವಬಸವನ ಅಷ್ಟೋತ್ತರ ಶತನಾಮಮಂ
ಬೇಸರವಿಲ್ಲದೆ ಪಠಿಪಂ
ಗೀಶಂ ಸುಖಸಿರಿಯನಿತ್ತು ಪೊರೆವಂ ಸತತಂ"

ಪ್ರಾತಃಸ್ಮರಣೀಯರಾದ ಶಿವಬಸವ ಸ್ವಾಮಿಗಳ ನಾಮಸ್ಮರಣೆಯ ಅಗಾಧ ಮಹಿಮೆಯನ್ನು ಕಂಡುಂಡ ಮಹಾಂತದೇವರು, ಕೃತಿಯ ಪ್ರಾರಂಭದ ಈ ಸುಂದರವಾದ ಕಂದದಲ್ಲಿ, ಲೋಕದ ಸಹೃದಯ ಸದ್ಭಕ್ತರಿಗೂ ಅದರ ಪ್ರಯೋಜನವನ್ನು ಮನ ಗಾಣಿಸಿದ್ದಾರೆ.

"ಪನ್ನಗಾಪುರಾಧಿವಾಸ ಭವವಿನಾಶ ಶಿವನೆ ಬಸವ
ಸನ್ನುತಾರ್ಯ ಭಕ್ತ ಸೂರ್ಯ ಶಕ್ತಿಧುರ್ಯ ಶಿವನೆ ಬಸವ
ಜ್ಞಾನನೇತ್ರ ಪುಣ್ಯಗಾತ್ರ ವಿನುತಪಾತ್ರ ಶಿವನೆ ಬಸವ
ಧ್ಯಾನಮೂರ್ತಿ ಧವಲಕೀರ್ತಿ ಪರಂಜ್ಯೋತಿ ಶಿವನೆ ಬಸವ"

ಹಾವೇರಿಯ ಹುಕ್ಕೇರಿ ಮಠದ ಪೀಠಾಧಿಪತಿಗಳಾಗಿದ್ದ ಲಿಂಗೈಕ್ಯ ಶಿವಬಸವ ಸ್ವಾಮಿ ಗಳು ಸಾಮಾನ್ಯರಲ್ಲ. ಲೋಕವಿಚಿತ್ರ ಚರಿತ್ರರಾದ ಅವರ ಜೀವನವೇ ಒಂದು ಮಹಾ ಕಾವ್ಯವಾಗಿದೆ. ಕಾವ್ಯವೇ ಜೀವನವಾಗಿ ಬಾಳಿದ ಮಹಿಮರವರು. ಅದನ್ನು ಅನುಭವಿಸಿದ ಮಹಾಂತ ದೇವರು, ಭಕ್ತಿಭಾವ ನಿರ್ಭರತೆಯಿಂದ ಅವರ 'ನಾಮಾವಳಿ'ಯನ್ನು ಪ್ರಾರಂಭಿಸಿ ದ್ದಾರೆ; ಮನೋಜ್ಞವಾಗಿ ಮುಂದುವರೆಸಿದ್ದಾರೆ.

"ಸಪ್ತ ಶರಧಿಯೆಂಬ ಹಳ್ಳಿಯಲ್ಲಿ ಜನಿಸಿ ಶಿವನೆ ಬಸವ
ಸಪ್ತ ವ್ಯಸನಗಳನು ಅಳಿದು ಬೆಳೆದೆ ನೀನು ಶಿವನೆ ಬಸವ"

ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದ ಅಥಣಿ ತಾಲೂಕಿನ "ಸಪ್ತಸಾಗರ"ವೆಂಬ ಗ್ರಾಮ ದಲ್ಲಿ ಶಿವರಾತ್ರಿಯ ಶುಭಗಳಿಗೆಯಲ್ಲಿ ಶಿವಬಸವಸ್ವಾಮಿಗಳು ಜನಿಸಿದರು. ತಂದೆ ಗಿರಿ ಮಲ್ಲಯ್ಯ; ತಾಯಿ ಶಿವಗಂಗವ್ವ. ಆದರ್ಶದಂಪತಿಗಳ ನಿಸ್ಸೀಮ ಭಗವದ್ಭಕ್ತಿಯ ಫಲವಾಗಿ ಶಿವಕಳೆಯೇ "ಶಿವಬಸವ"ನ ರೂಪದಲ್ಲಿ ಸಾಕಾರವಾಯಿತು. ಬಾಲ್ಯಾವಸ್ಥೆಯಲ್ಲಿಯೇ ಮುಖದ ಮೇಲೆ ಮಹಾಪುರುಷನ ಮಂಗಳ ಸಾತ್ವಿಕ ಕಳೆ ಕಂಗೊಳಿಸಿತು. ಇದರಿಂದ ಆಕರ್ಷಿತರಾದ ಅಥಣಿಯ ಮುರುಳಸಿದ್ಧ ಮಹಾಸ್ವಾಮಿಗಳು ತಮ್ಮ ದಿವ್ಯ ಸನ್ನಿಧಿ ಯಲ್ಲಿಯೇ ಈ ಬಾಲಯೋಗಿಯನ್ನು ಬೆಳೆಸಿದರು. ಪರಕರುಣೆಗೆ ಮೂಲವಾದ ಗುರು ಕರುಣೆ ಪಡೆದ ಶಿವಬಸವಸ್ವಾಮಿಗಳು ಬಳ್ಳಾರಿಯ ಶ್ರೀ ಸಕ್ಕರಿ ಕರಡೆಪ್ಪನವರ ಪಾಠಶಾಲೆ ಯಲ್ಲಿ ಕೆಲಕಾಲ ಅಧ್ಯಯನ ನಡೆಸಿ, ಕಾಶಿಯಲ್ಲಿ ಪ್ರೌಢವ್ಯಾಸಂಗ ಪೂರೈಸಿ ಪಂಡಿತರಾಗಿ ಮರಳಿದರು. ಜೊತೆಗೆ ಆಧ್ಯಾತ್ಮಿಕ ಜೀವನದಲ್ಲೂ ಹೆಚ್ಚಿನ ಏಳ್ಗೆಯನ್ನು ಸಾಧಿಸಿದರು. ಮಹಾನುಭಾವರಾದ ಮುರುಳಸಿದ್ಧರು ತಮ್ಮ ನೆಚ್ಚಿನ ಶಿಷ್ಯರಾದ ಶಿವಬಸವರನ್ನು ಬಿದರಿ ಕುಮಾರ ಶಿವಯೋಗಿಗಳಿಗೆ ಒಪ್ಪಿಸಿ, ಲಿಂಗದಲ್ಲಿ ಲೀನರಾದರು; ಬಿದರಿ ಶಿವಯೋಗಿಗಳ ಕೃಪೆಯ ಬೆಳಗಿನಲ್ಲಿ ಶಿವಬಸವಸ್ವಾಮಿಗಳ ಆಧ್ಯಾತ್ಮಿಕ ಬಾಳು ಇನ್ನೂ ಉಜ್ವಲತೆಯನ್ನು ಪಡೆಯಿತು;

"ಶಿವನ ಯೋಗ ಮಾಡಿ ನಿರುತ ಸುಖವ ಪಡೆದೆ ಶಿವನೆ ಬಸವ
ಯೋಗದಿಂದ ದಿವ್ಯತೇಜನಾಗಿ ಮೆರೆದೆ ಶಿವನೆ ಬಸವ
ತ್ಯಾಗಮೂರ್ತಿ ನಿನ್ನ ಕೀರ್ತಿ ಪೇಳಲಳವೆ ಶಿವನೆ ಬಸವ"

ಹೀಗೆ ತ್ಯಾಗ ಯೋಗಗಳ ಮಹಿಮೆಯುನ್ನು ಅರಿತು, ಅನುಷ್ಠಾನಕ್ಕೆ ತಂದು ಅದ್ಭುತ ಸಿದ್ಧಿಯನ್ನು ಸಾಧಿಸಿ ಶಿವಯೋಗಿಗಳಾಗಿ ಮೆರೆದರು. ಆದ್ದರಿಂದಲೇ, "ನಿನ್ನ ಕೀರ್ತಿ ಪೇಳಲಳವೆ" ಎಂಬ ಉದ್ಗಾರ ಮಹಾಂತದೇವರ ಅಂತರಾಳದಿಂದ ಉದ್ಭವಿಸಿತು. "ಯಮಿ ವಿರಾಜ ದಿವ್ಯತೇಜರಾಗಿ" ರಾರಾಜಿಸಿದ ಶಿವಬಸವಸ್ವಾಮಿಗಳ ಪಾರಮಾರ್ಥಿಕ ಪ್ರಗತಿಯನ್ನು ಗುರುತಿಸಿದ ಹಾನಗಲ್ಲ ಶ್ರೀ ಕುಮಾರಸ್ವಾಮಿಗಳು ಅವರನ್ನು ಹಾವೇರಿಯ ಹುಕ್ಕೇರಿ ಮಠದ ಅಧಿಕಾರಿಗಳನ್ನಾಗಿ ಮಾಡಿದರು. ಶಿವಯೋಗಿ ಶಿವಬಸವ ಸ್ವಾಮಿಗಳ ಆಧ್ಯಾತ್ಮಿಕ ಜೀವನದ ತೇಜಸ್ಸು, ಭಕ್ತಸಮುದಾಯದ ಅಂತರಂಗವನ್ನು ಬೆಳಗುವ ಚೈತನ್ಯವಾಗಿ ಪರಿಣಮಿಸಿತು. ಸ್ವಾಮಿಗಳ ಅನುಪಮ ಕರ್ತೃತ್ವ ಶಕ್ತಿಯನ್ನು ಅರಿತ ಹಾನಗಲ್ಲ ಕುಮಾರ ಸ್ವಾಮಿಗಳು, "ಶಿವಯೋಗ ಮಂದಿರ"ದ ವ್ಯವಸ್ಥೆಯ ಭಾರವನ್ನು ಇವರ ಮೇಲೆ ಹೊರಿಸಿದರು. ಅಂದಿನಿಂದ "ಶಿವಯೋಗ ಮಂದಿರ"ವೇ ಶಿವಬಸವಸ್ವಾಮಿಗಳ ಮಠವಾಯಿತು. ತಮ್ಮ ಭಕ್ತಿ, ತ್ಯಾಗ, ತಪಸ್ಸುಗಳಿಂದ ಶಿವಯೋಗಮಂದಿರವನ್ನು ತಪೋಭೂಮಿಯನ್ನಾಗಿ ಮಾರ್ಪಡಿಸಿದರು. ಹಾನಗಲ್ಲ ಶಿವಯೋಗಿಗಳ ಕನಸನ್ನು ನನಸಾಗಿಸಿದರು. ಅನಂತ ಭಕ್ತ ಕೋಟಿಯ ಮನದ ಮೈಲಿಗೆಯನ್ನು ಕಳೆದು, ಮುಕ್ತಿಯ ಮಾರ್ಗದರ್ಶನ ಮಾಡಿದರು. ತಮ್ಮ ತಪಃಶಕ್ತಿಯ ಮಹಿಮೆಯಿಂದ ಕೊರಡನ್ನು ಕೊನರಿಸಿ, ಬರಡನ್ನು ಹಯನಾಗಿಸಿ ಅನೇಕ ಪವಾಡಗಳನ್ನು ಮೆರೆದು, ಲಿಂಗಲೀಲಾ ವಿನೋದಿಗಳಾಗಿ, ಭಗವಂತನಲ್ಲಿ ಬಯಲಾದ ಶಿವಬಸವಸ್ವಾಮಿಗಳ ಜ್ವಲಂತ ಜೀವನ ಮಹಾಂತದೇವರ ತನು, ಮನಗಳನ್ನು ಆಕರ್ಷಿಸಿದೆ, ಆವರಿಸಿದೆ:

"ಸಲಹು ನಿನ್ನ ಧ್ಯಾನ ನೆನೆವ ಮನವ ನೀಡಿ ಶಿವನೆ ಬಸವ
ತಿಳುಹು ಬೇಗ ಮುಕುತಿದಾರಿ ಆವುದೆನಗೆ ಶಿವನೆ ಬಸವ
ತಾಯಿ ತಂದೆ ಬಂಧು ಬಳಗ ನೀನೆ ಎನಗೆ ಶಿವನೆ ಬಸವ"

ಕೃತಿಕಾರರಾದ ಮಹಾಂತದೇವರು, ಶಿವಬಸವಸ್ವಾಮಿಗಳ ಕೃಪೆಗಾಗಿ ಕಳಕಳಿಯಿಂದ ಹಂಬಲಿಸುವಲ್ಲಿ ತಮ್ಮ ಮನಸ್ಸಿನ ಉದಾತ್ತತೆಯನ್ನು, ಹೃದಯದ ಪರಿಪಕ್ವತೆಯನ್ನು ವ್ಯಕ್ತಪಡಿಸಿದ್ದಾರೆ. ಹೀಗೆ ಉದ್ದಕ್ಕೂ ಹೃದ್ಯವಾಗಿ, ಓತಪ್ರೋತವಾಗಿ ರಗಳೆಯಲ್ಲಿ ಸಾಗಿದ 'ನಾಮಾವಳಿ' ಮನೋಹರದ ಮಂಗಲ ಪದ್ಯದೊಂದಿಗೆ ಮುಕ್ತಾಯವಾಗುತ್ತದೆ.

ಶಿವಬಸವಸ್ವಾಮಿಗಳ ನಿತಾಂತವಾದ ದಿವ್ಯವ್ಯಕ್ತಿತ್ವ, ಸಹಜ ಭಕ್ತರಾದ ಮಹಾಂತ ದೇವರ ಅಂತರಂಗದಲ್ಲಿ ಭಾವತರಂಗಗಳನ್ನು ಎಬ್ಬಿಸಿದೆ. ಆ ಭಾವಶಕ್ತಿ ಕಾವ್ಯಶಕ್ತಿ, ಶರಣ ಭಕ್ತಿಗಳು ಮುಪ್ಪುರಿಗೊಂಡು ಈ 'ನಾಮಮಾಲೆ'ಯಲ್ಲಿ ಸ್ವಾಮಿಗಳ ಭವ್ಯ ಜೀವನ ಮೂಡಿ

ನಿಂತಿದೆ. ಮಹಾಂತದೇವರು, ಅನುಭಾವಿಗಳಾದ ಶಿವಬಸವಸ್ವಾಮಿಗಳ ಆಧ್ಯಾತ್ಮಿಕ ಸಾಧನೆಯ ಎತ್ತರಬಿತ್ತರಗಳೊಂದಿಗೆ, ಅವರ ಜೀವನದ ಸಕಲ ಸನ್ನಿವೇಶಗಳನ್ನು 'ಕರಿಯನ್ನು ಕನ್ನಡಿಯಲ್ಲಿ ತೋರುವಂತೆ' ಕಿರುಕೃತಿಯಾದ 'ನಾಮಾವಳಿ'ಯಲ್ಲಿ ಕಲಾತ್ಮಕವಾಗಿ ಸಮಾವೇಶಗೊಳಿಸಿದ್ದಾರೆ. ಇಲ್ಲಿ ಮಹಾಕವಿಯ ಉಜ್ವಲ ಕಲ್ಪನಾಶಕ್ತಿ, ಉದಾತ್ತ ದರ್ಶನ ಶಕ್ತಿಗಳು ಪ್ರಕಟವಾಗದಿದ್ದರೂ, ಸಹಜ ಕವಿತ್ವ ಕಮನೀಯವಾಗಿ ಕಂಗೊಳಿಸಿದೆ. ಸೊಗಸಾದ ಬಂಧುರ ಶೈಲಿ, ಪ್ರಸಾಧಿಕ ಸರಳ ಭಾಷೆ, ತಾಳಬದ್ಧ ನಾದಮಾಧುರ್ಯ ಈ ಕೃತಿಯ ಕಳೆಯನ್ನು ಹೆಚ್ಚಿಸಿವೆ. ಪ್ರತಿ ಚರಣದ ಕೊನೆಗೆ ಬರುವ 'ಶಿವನೆ ಬಸವ' ಶಬ್ದದ ಪುನರಾವೃತ್ತಿ, ಶ್ರದ್ಧೆಯಿಂದ ಈ 'ನಾಮಾವಳಿ'ಯನ್ನು ಪಠಿಸುವ ಸದ್ಭಕ್ತನ ಕರ್ಣಾನಂದಕ್ಕೆ ಕಾರಣವಾಗಿದೆ. ಮಹಾನುಭಾವಿಯ ಚರಿತ್ರೆ ಹಾಸುಹೊಕ್ಕಾಗಿ ಹೆಣೆದುಕೊಂಡಿರುವುದರಿಂದ ನಾಮಸ್ಮರಣೆಯಲ್ಲಿ ಮಗ್ನನಾದ ಭಕ್ತನ ಮನಃಪಟಲದ ಮೇಲೆ ಶಿವಬಸವ ಸ್ವಾಮಿಗಳಮೂರ್ತಿ ಸ್ವರೂಪ ಮೂಡಿನಿಲ್ಲುತ್ತದೆ. ಮಹಿಮಾಪುರುಷರ ದಿವ್ಯ ವ್ಯಕ್ತಿತ್ವದ ಧ್ಯಾನದಿಂದ ಮನಸ್ಸು ಶಾಂತವಾಗುತ್ತದೆ; ಹೃದಯ ವಿಕಾಸವಾಗುತ್ತದೆ. ಇಲಕಲ್ಲ ಮಹಾಂತದೇವರಾಗಿದ್ದಾಗಲೇ, ಸಹೃದಯದಲ್ಲಿ ಸದಭಿರುಚಿಯನ್ನು ಬೆಳೆಸುವ ಇಂಥ ಕೃತಿಯನ್ನು ದಯಪಾಲಿಸಿದ ಮೂರುಸಾವಿರ ಮಠದ ಜಗದ್ಗುರುಗಳಿಂದ, ಕನ್ನಡ ಸಾಹಿತ್ಯ ಇನ್ನೂ ಉಜ್ವಲ ರಸವತ್ಕೃತಿಗಳನ್ನು ಬಯಸುತ್ತದೆ.

# ಶ್ರೀ ವಿಜಯ ಮಹಾಂತೇಶ ಲಾವಣಿ: ಸಾರ ವಿಮರ್ಶೆ

ಕಂಬಳಿಹಾಳ ಗಿರಿರಾಜ ಹೊಸಮನಿ

ಲಾವಣಿಯು ಜನಪದರು ಅಭಿವ್ಯಕ್ತಿ ಪಡಿಸಿದ ಒಂದು ಕಾವ್ಯ ಕಲೆ. ಅವರು ತಮಗೆ ಅನಿಸಿದ ಅನಿಸಿಕೆಗಳನ್ನು, ಅನುಭವಿಸಿದ ಅನುಭವಗಳನ್ನು ಗ್ರಂಥಸ್ಥ ಭಾಷೆಯ ಪರಿಜ್ಞಾನದ ಚೌಕಟ್ಟಿಲ್ಲದ ತಮ್ಮದೇ ಆದ ಮತ್ತೊಬ್ಬರಿಗೆ ಹೋಗಿ ನೇರವಾಗಿ ಮುಟ್ಟಬಲ್ಲ ತಂತ್ರವನ್ನು ಮಾತ್ರ ಬಳಸಿಕೊಂಡರು ಅಥವಾ ಅವರು ಬಳಸಿದ ಹೇಳುವಿಕೆಯ ತಂತ್ರವೇ ಈ ರೀತಿಯಾಗಿ ಮೂಡಿ ಬಂದಿರಬಹುದು. ಆದ್ದರಿಂದ ಜನಪದರ ಭಾವಾಭಿ ವ್ಯಕ್ತಿಯ ಅಲಿಖಿತ ಸಾಹಿತ್ಯವೆಲ್ಲವೂ ಕಾಲ ಕಾಲದಿಂದಲೂ ಕಾಣೆಯಾಗದೇ ಅದೇಥ ಅಕ್ಷರ ಜ್ಞಾನದ ಕ್ರಾಂತಿಯ ಸುಳಿಗಾಳಿ ಅದರ ಮೇಲೆ ಬೀಸಿದರೂ ಅದು ತನ್ನತನವನ್ನೇನೂ ಕಳೆದು ಕೊಂಡಿಲ್ಲ.

ಲಯ, ತಾಳಗಳನ್ನು ಜನಪದ ಬೇಕೆಂದೇನೂ ಭಾವಿಸಲಿಲ್ಲ. ಹಾಡುವಾಗ ಖುಷಿ ಕೊಡಬೇಕು ಕೇಳುಗನಿಗೆ ಇಂಪಾಗಬೇಕು ಎಂಬುದೇ ಜನಪದ ಉದ್ದೇಶ ಅಂತೇನೇ ಹಾಡಿನ ಪ್ರಾರಂಭದ ಆದಿ ಪ್ರಾಸವನ್ನಾಗಲೀ ಅಥವಾ ಹಾಡಿನ ಕೊನೆಯ ಅಂತ್ಯ ಪ್ರಾಸವಾಗಲೀ 'ಗತ್ತು' ಹಿಡಿದುಕೊಂಡು ಬಂದು ಹೆಚ್ಚಾಗಿ ಅಂತ್ಯ ಪ್ರಾಸಕ್ಕೇನೇ ವಿಶೇಷ ಒತ್ತುಕೊಟ್ಟು ಪ್ರತಿಯೊಂದು ಸಾಲಿಗೂ ನಿರ್ದಿಷ್ಟವಾದ ಅಕ್ಷರಗಳನ್ನು ಬಳಸಿ ಹತ್ತು ಹಲವು ರೀತಿಯಿಂದ ತನ್ನ ಅನಿಸಿಕೆಗಳನ್ನು ಅನ್ಯರೆದುರಿಗೆ ಹಂಚಿಕೊಂಡ. ಅದು ಕಾವ್ಯವಾಗಿ ಬಂತು, ಜನಪದ ವಾಯಿತು. ದುಂದುಮೆಯ ಹಾಡಾಯಿತು; ಕೋಲಿನ ಹಾಡಾಯಿತು; ಬೀಸುವ; ಕುಟ್ಟುವ ಅದರಂತೆ ಹಂತಿಯ ಹಾಡುಗಳಾದವು: ಜೋಗುಳ, ಸೋಬಾನ, ಸುವಾಲೆ ಹಾಡು ಗಳಾದವು; ಲಾವಣಿಗಳಾದವು; ಇನ್ನೂ ಏನೇನೋ ಆಗಿ ಜನಪದರ ಹೃದಯಾಬ್ಧಿಯಿಂದ ಆ ಕಾಲದ ಆ ಪರಿಸ್ಥಿತಿಯ ಆತನ ಬದುಕಿನ ಇಣಕು ನೋಟಗಳಿಗೆ ಅಲಿಖಿತ ಸಾಕ್ಷಿಯಾಗಿ ದಾಖಲೆಯಾಗಿ ಈ ಜನಪದವು ಹುಟ್ಟಿ ಬಂದಿತು. ಬೆಳೆದು ಬಂದಿತು. ಈ ಜನಪದದಲ್ಲಿ ತುಂಬ ಪ್ರಭುತ್ವ ಪೂರ್ಣವಾಗಿ ಮೂಡಿಬಂದು ಒಂದು ಐತಿಹಾಸಿಕತೆಯನ್ನು ಸಾರುವ ತೋರು ಗಂಭದಂತೆ ಇರುವುದು ಕನ್ನಡದಲ್ಲಿ ಲಾವಣಿ ಸಾಹಿತ್ಯ.

ಲಾವಣಿ ಕನ್ನಡ ನಾಡಿನಲ್ಲಿ ಒಂದು ವಿಶೇಷ ಜನಪದ ಬೆಳೆಯಾಗಿ ಬೆಳೆದುಬಂದಿದೆ. ಈ ನಾಡಿನ ವೀರಶ್ರೀ ಪರಂಪರೆ, ಪರಿಸರಗಳನ್ನು ಹೇಳಿಕೊಡುವಲ್ಲಿ ಸಂಸ್ಕೃತಿಯನ್ನು ತಿಳಿಸಿಕೊಡುವಲ್ಲಿ ಲಾವಣಿಗಳು ಪ್ರಮುಖ ಪಾತ್ರವಹಿಸುತ್ತವೆ. 'ಘಟಿಸಿದ ಯುದ್ಧದ ವರ್ಣನೆಯನ್ನು ಕಾಳಗದ ರೋಚಕತೆಯನ್ನು ವಸ್ತು ನಿಷ್ಠವಾಗಿ ನಮ್ಮ ಲಾವಣಗಳು

ವರ್ಣಿಸಿದಂತೆ' ಮತ್ತಾವ ಕವಿಯು ಬಹುಶಃ ವರ್ಣಿಸಲಾರ. ಈ ರೀತಿ ವೀರ ಪರಂಪರೆಯನ್ನು ಎತ್ತಿ ಹೇಳಲು ವೀರನಾಡೆಂದು ಖ್ಯಾತಿವೆತ್ತ ಕಿತ್ತೂರ ನಾಡಿನ ಬಂಡಾಯದ ಸುತ್ತ ಮುತ್ತ ಹಣೆದು ಕೊಂಡಿರುವ ಲಾವಣೆಗಳು ಒಂದಲ್ಲ. ಚನ್ನಮ್ಮನ ಬಗ್ಗೆ, ಸಂಗೊಳ್ಳಿ ರಾಯಣ್ಣನ ಬಗ್ಗೆ ಅದೇ ಪರಿಸರದ ಹಲಗಲಿ ಬೇಡರ ಬಗ್ಗೆ ಮೂಡಿ ಬಂದ ಲಾವಣಿ ಸಾಹಿತ್ಯವನ್ನು ನೋಡಿದಾಗ ಕಿತ್ತೂರ ನಾಡಿನಲ್ಲಿ ಹಾಗೂ ನಾಡಿನವರು ಲಾವಣಿಯನ್ನು ತಮ್ಮ ನಾಡಿನ ವೀರಶ್ರೀಯನ್ನು ವರ್ಣಿಸಲು ಹೇಗೆ ಬಳಿಸಿಕೊಂಡರೆಂಬುದನ್ನು ಗಮನಿಸ ಬಹುದು. ಕೆಲವೊಂದು ಲಾವಣಿಯ ರಚಯಿತರೂ ಯಾರು ಎಂಬುದು ನಮಗೆ ಗೊತ್ತಾಗದಿದ್ದರೂ ಕಾಲನ ದವಡೆಯಲ್ಲಿ ಸಿಕ್ಕು ಇನ್ನೂ ಈ ಲಾವಣಿ ಸಾಹಿತ್ಯ ಬದುಕಿ ಬಂದಿದೆಯಲ್ಲಾ ಅದೇ ದೊಡ್ಡದು. ನಾಡವರ ಕಣ್ಣಿಗೆ ಲಾವಣಿ ಸಾಹಿತ್ಯ ಅಷ್ಟೊಂದು ಹೆಚ್ಚಳಿಕೆಯುಳ್ಳದ್ದು ಎಂದು ಕಂಡು ಬಾರದೆ ಇದ್ದಾಗ ಪಾಶ್ಚಿಮಾತ್ಯ ವಿದ್ವಾಂಸರನೇಕರು ಈ ಲಾವಣಿಯಲ್ಲಿರುವ ಆಯಾ-ಕಾಲದ ಕಾಲಮಾನದ ಸಾಂಸ್ಕೃತಿಕ ಮೌಲ್ಯಗಳನ್ನು ಗುರುತಿಸಿ ಅವುಗಳ ಸಂಗ್ರಹಣೆಯಲ್ಲಿ ತೊಡಗಿದರು. ಉಳಿದವರಿಗೂ ಸಂಗ್ರಹಿಸಲು ಪ್ರೋತ್ಸಾಹಿಸಿದರು. ಅದರ ಅಂಗವಾಗಿಯೆಂಬಂತೆ ಫ್ಲಿಟ್ ಸಾಹೇಬರು ಕಿತ್ತೂರ ಲಾವಣಿಯ ಸಂಗ್ರಹಿಸಿದರು. ಲಾವಣಿ ಎಂದರೆ ಕಿತ್ತೂರು ಎಂಬಷ್ಟೆ ಮಟ್ಟಿಗೆ ಲಾವಣಿಯ ಸಾಹಿತ್ಯಕ್ಕೂ ಕಿತ್ತೂರು ಐತಿಹಾಸಿಕ ಕತೆಗೂ ಸಂಬಂಧ ಬೆಳೆದಿದೆ. ಇತ್ತೀಚೆಗೆ ಲಾವಣಿ ಸಾಹಿತ್ಯ ವಿದ್ವಾಂಸರ ಮನ್ನಣೆಯ ಹಾಗೂ ಸಂಶೋಧಕರ ಸಂಶೋಧನೆಯ ಆಯಾಮವಾಗಿದೆ. ಸಾಹಿತ್ಯದ ಪದರ-ಪದರುಗಳನ್ನು ಹಿಂಜಿ ಆ ಕಾಲದ ಸಾಂಸ್ಕೃತಿಕ ಮೌಲ್ಯಗಳನ್ನು ಗೊತ್ತು ಪಡಿಸಿಕೊಳ್ಳಲು ಅನುಕೂಲವಾಗಿದೆ.

ಉತ್ತರ ಕರ್ನಾಟಕದಲ್ಲಿ ಹಲಸಂಗಿ ಗೆಳೆಯರ ಗುಂಪು ಈ ಜನಪದ ಸಾಹಿತ್ಯ ಸಂಗ್ರಹಕ್ಕೆ ಕೈ ಹಾಕಿದ ಪ್ರಥಮ ಗುಂಪು ಎಂದು ಹೇಳಬಹುದು. ಧೂಲಾ ಸಾಹೇಬರಂಥ ಗ್ರಾಮೀಣ ಬದುಕಿನ ಜನಪದ ವಿದ್ವಾಂಸರು ಸಿಂಪಿ ಲಿಂಗಣ್ಣನವರಂಥ ತರುಣರನ್ನು ಕಟ್ಟಿಕೊಂಡು ಸಂಗ್ರಹಿಸಿದ ಉತ್ತರ ಕರ್ನಾಟಕದ ಸಮಗ್ರ ಜನಪದ ಸಾಹಿತ್ಯದಲ್ಲಿ ಲಾವಣಿಯ ಸಾಹಿತ್ಯವೇ ಮೇಲುಗೈ. ಇದು ಇಲ್ಲಿಗೆ ನಿಲ್ಲಲಿಲ್ಲ. ಇತ್ತೀಚೆಗೆ ಗೂಡದಪ್ಪ ಮಾಸ್ತರರ "ಮೃತ್ಯುಂಜಯ ಲಾವಣಿ" ಒಂದು ಗ್ರಂಥಸ್ಥ ಲಾವಣಿ ಗ್ರಂಥವಾಗಿ ಹೊರಬಂದು ಆಧುನಿಕ ಸಾಹಿತ್ಯದಲ್ಲಿ ಲಾವಣಿ ಸಾಹಿತ್ಯ ತನ್ನ ಬೇರುಗಳನ್ನು ಆಳಗೊಳಿಸಿದೆ ಎಂಬುದಕ್ಕೆ ಸಾಕ್ಷಿಯಾಯಿತು.

ವೀರೋಚಿತ ವರ್ಣನೆ, ಸಮರ ಭೀಕರ ವರದಿ ವಾಚನ, ಸೌಂದರ್ಯದ ವರ್ಣನೆ ವ್ಯಕ್ತಿ ವಿಶೇಷದ ಲಾವಣಿಗಳು ಸವ್ವಾಲಿ ಜವಾಬದ ಲಾವಣಿಗಳು ತುಂಬ ಅರ್ಥವತ್ತಾಗಿದೆ. ಹುಲಕುಂದ ಭೀಮ ಕವಿಯಂಥವರ ಕೈಯಲ್ಲಿ ಮೂಡಿಬಂದ ಬಾಯಲ್ಲಿ ಹಾಡಿಬಂದ ಲಾವಣಿಗಳಿಗೆ ಆದರದೇ ಆದ ಮೌಲ್ಯವಿದೆ, ಅರ್ಥವಿದೆ. ದೇಶ ಸ್ವಾತಂತ್ರ್ಯದ ಹಿಂದೆ ಲಾವಣಿಯು

ಸಾಹಿತ್ಯ: ಲಾವಣಿಯ ಹಾಡುಗಾರ ಮಾಡಿದ ಕ್ರಾಂತಿಯನ್ನು ಇತಿಹಾಸ ಮರೆಯಲಾರದು. ಈ ಎಲ್ಲ ಅವಲೋಕನಗಳಿಂದ ಲಾವಣಿ ಸಾಹಿತ್ಯ ವಸ್ತು,ವಿಷಯ,ವ್ಯಕ್ತಿಯನ್ನು ಹೇಗೆ ಜನ ಮನದಲ್ಲಿ ಸ್ಥಾಯಿಯಾಗಿ ನಿಲ್ಲಿಸಬಲ್ಲದು ಎಂಬುದಕ್ಕೆ ಆಧುನಿಕ ಕನ್ನಡ ಸಾಹಿತ್ಯದ ಈ ಕಾಲ ದಲ್ಲೂ "ಮೂಜಗಂ" ಬರೆದ "ಶ್ರೀ ವಿಜಯ ಮಹಾಂತೇಶ ಲಾವಣಿ" ನೋಡಬಹುದು.

ಇಂದಿನ ಹುಬ್ಬಳ್ಳಿ ಮೂರು ಸಾವಿರ ಮಠದ ಜಗದ್ಗುರುಗಳಾದ ಶ್ರೀ ಮನ್ ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿ ಗಳು (ಮೂ.ಜ.ಗಂ.) ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಬರೆದ ಲಾವಣಿಯ ಗ್ರಂಥ ವಿದು. ಆಗ ಅವರಿನ್ನೂ ಇಲಕಲ್–ಚಿತ್ತರಗಿ ಪೀಠದ ಉತ್ತಾರಾಧಿಕಾರಿಗಳಾಗಿ ಮಹಾಂತ ದೇವರಾಗಿದ್ದಾಗಿನ ಸ್ಥಿತಿ. ಆಗ ಆ ಚಿಕ್ಕ ವಯಸ್ಸಿನಲ್ಲಿಯೇ ಬರೆದ ಈ ಲಾವಣಿಯೊಂದರಿಂದಲೇ ಇಂದು ಅವರು ಬೆಳೆದು ಬಂದಿರುವ ಸಾಹಿತ್ಯ ಕ್ಷೇತ್ರದ ಮೈಲು ಗಲ್ಲುಗಳನ್ನು ಲೆಕ್ಕ ಹಾಕಬಹುದು. ಅಂದು ಈ ಲಾವಣಿಯನ್ನು ನೋಡಿದವರೆಲ್ಲರಿಗೂ ಅನಿಸಿರಬೇಕು: ಈ ದೇವರು ಒಬ್ಬ ಕವಿಯಾಗುತ್ತಾರೆ; ಆಗಬಲ್ಲರೆಂದೂ. ಅದು ಹಾಗೆಯೇ ಆಗಿದೆ.

ವಯೋಮಾನದ ದೃಷ್ಟಿಯಿಂದ ಕವಿ ಸಣ್ಣವರಾಗಿದ್ದರೂ ಕಾವ್ಯ ಪ್ರಬುದ್ಧತೆಯಲ್ಲಿ ಕವಿ ಕವಿಯಾಗಿ ಮಿಂಚಿದ್ದಾರೆ. ಕವಿಗಿರಬೇಕಾದ ಕಾವ್ಯ ಪ್ರಬುದ್ಧತೆ ಆದಾಗಲೇ ಅವರಲ್ಲಿ ಮೂಡಿ ನಿಂತಿತ್ತು. ತಮ್ಮ ಪೀಠದ ಪರಂಪರೆಯ ಮಹಾ ಗುರು ಪೂಜ್ಯ ಲಿಂಗೈಕ್ಯ ಶ್ರೀ ವಿಜಯ ಮಹಾಂತ ಶಿವಯೋಗಿಗಳನ್ನು ಕುರಿತು ಲಾವಣಿಯೊಂದನ್ನು ಏಕೆ ಬರೆಯ ಬಾರದೆಂದು ಅವರ ಮನ ತುಯ್ದಾಡುತ್ತಿತ್ತು. ಆಗ ಸ್ವಾತಂತ್ರ್ಯದ ಚಳಿವಳಿಯ ಕಾವು ಲಾವಣಿ–ಗೀಗಿ ಸಾಹಿತ್ಯಗಳು ಜನಮನವನ್ನು ಬಡಿದೆಬ್ಬಿಸುವಲ್ಲಿ ಆ ಕಾಲದಲ್ಲಿ ವಹಿಸುತ್ತಿದ್ದ ಪಾತ್ರ ಮಹಾಂತ ದೇವರಲ್ಲಿ ಉತ್ಸುಕತೆ ಹುಟ್ಟಿಸಿತು. ಶ್ರೀ ವಿಜಯ ಮಹಾಂತೇಶನನ್ನು ಜನಪ್ರಿಯವಾದ ಇಂಥ ಜನಪದ ಲಾವಣಿಯ ಮಾಧ್ಯಮದಲ್ಲಿಯೇ ಹಿಡಿದಿಡಬೇಕೆಂಬ ಲವ–ಲವಿಕೆ ಮಾಡಿ ಅದು ಕಾವ್ಯವಾಗಿ ಮೈದಾಳಿ ೩೨೫ ಸಾಲುಗಳಲ್ಲಿ ಓತಪ್ರೋತವಾಗಿ ಹರಿದು ಭಕ್ತಿಯ ಪೂರಕವಾಗಿ ಮಡುಗಟ್ಟಿತು; ಅದು ಶ್ರೀ ವಿಜಯ ಮಹಾಂತೇಶ ಲಾವಣಿ ಯಾಯಿತು.

ಇಲಕಲ್–ಚಿತ್ತರಗಿ ಶ್ರೀ ಪೀಠದ ಒಡೆಯರೂ, ಶಿವಯೋಗ ಮಂದಿರ ನಿರ್ಮಾತೃ ರಲ್ಲಿ ಒಬ್ಬರೂ, ಈ ಭಾಗದ ಘನ ವಿರಕ್ತರೆನಿಸಿಕೊಂಡವರೂ ಆದ ಶ್ರೀ ವಿಜಯಮಹಾಂತ ಶಿವಯೋಗಿಗಳ ಜೀವನ ವೃತ್ತಾಂತವೇ ಈ ಲಾವಣಿಯ ಕಥಾ ವಸ್ತು. ಕಥಾ ವಸ್ತು ಹಳೆಯದಾದರೂ ಅದನ್ನು ಧಾರ್ಮಿಕ ಸಂಪ್ರದಾಯದ ಪೌರಾಣಿಕ ಪರಿಭಾಷೆಯಲ್ಲಿ ಹಿಡಿ ದಿಡಲು ಪ್ರಯತ್ನಿಸದೇ ಪೌರಾಣಿಕತೆಯನ್ನು ಜನಪದದಲ್ಲಿ ತಂದು ಜನಪದ ಭಾಷೆಗೆ ಅಳವಡಿಸಿದ್ದನ್ನು ಇಲ್ಲಿ ನೋಡಬಹುದು. ಬಹುಶಃ ಒಂದು ಪೀಠದ ಸ್ವಾಮಿಯೊಬ್ಬರ

ಬಗ್ಗೆ ಲಾವಣಿಯೊಂದು ಈಗ್ಗೆ ೪೦ ವರ್ಷಗಳ ಹಿಂದೆ ಪ್ರಕಟವಾದದ್ದು ಅಪರೂಪ. ಅದರಲ್ಲಿ ಇದೂ ಒಂದು. ಇತ್ತೀಚೆಗೆ ಈ ಲಾವಣಿ ಗ್ರಂಥ ದ್ವಿತೀಯ ಮುದ್ರಣ ಕಂಡಿದೆ.

ಕಾವ್ಯದ ಸೊಗಡಿದೆ; ಭಾವುಕತೆ ಇದೆ;ಪರಂಪರೆಯಿದೆ; ಗೇಯತೆಇದೆ;ಲಾಲಿತ್ಯಯಿದೆ; ಲಯವಿದೆ. ಇನ್ನೂ-ಇನ್ನೂ ಹಾಡಬೇಕೆನಿಸುತ್ತದೆ. ಹೀಗೆಂದ ಮಾತ್ರಕ್ಕೆ ದೋಷಗಳೂ ಇಲ್ಲವೆಂದೇನಿಲ್ಲಾ; ಕೆಲವು ಕಡೆ ಗೇಯತೆ ಲಯಗಳು ಹೋಗುತ್ತವೆ. ಮಾತ್ರೆಗಳು ಹೆಚ್ಚಾ ಗುತ್ತವೆ. ಮೊದಲಿನ ಸಾಲು ದೀರ್ಘವಾಗಿ ಅಂತ್ಯ ಪ್ರಾಸದಲ್ಲಿ ಕೊನೆಗೊಂಡಾಗ ಎರಡ ನೆಯ ಸಾಲು ಒಮ್ಮೊಮ್ಮೆ ಕಿರಿದಾಗಿ ಕುಟುಕಿದಂತಾಗುತ್ತದೆ. ಆದರೆ ಇದೆಲ್ಲವೂ ಗೌಣ. ಕಾರಣ ಬರೆದ ಕವಿ ಪ್ರಬುದ್ಧನಲ್ಲ. ಆದರೂ ವಯಸ್ಸಿಗೆ ಮೀರಿದ ಪ್ರಬುದ್ಧತೆಯನ್ನು ಕವಿ ಹೃದಯ ಮೆರೆದಿದೆ. ಸಾಹಸ ತೋರಿದೆಯೆಂದು ಹೇಳಬೇಕಾಗುತ್ತದೆ. ಪ್ರತಿ ಯೊಂದು ಸಾಲು ನಾಲ್ಕು, ನಾಲ್ಕು, ಮಾತ್ರೆಯ ಆರು ಗಣಗಳು ಮೇಲೆ ಐದೋ ಅಥವಾ ಆರು ಮಾತ್ರೆಯದೋ ಗಣದಂತೆ ಲಾವಣಿ ರಚಿತವಾಗಿದೆ. ಒಂದೊಂದು ಕಡೆ ಒಂದೆರಡು ಮಾತ್ರೆಗಳು ಹೆಚ್ಚು ಕಡಿಮೆಯಾಗಿ ನೇಮ ಮುರಿದಿವೆ.

ಸಸಿವಾಳದಿಂದ-ಬಳ್ಳಾರಿ-ನರೇಗಲ್ಲ್-ಇಲ್ಕಲ್-ಚಿತ್ತರಗಿ ವರೆಗಿನ ಪ್ರಯಾಣ ಶಿವಯೋಗಿ ಮಂದಿರದ ಸ್ಥಾಪನೆ ಅನೇಕ ಪವಾಡಗಳ ರಂಜನೀಯತೆಯಿಂದ ಲಾವಣಿ ಸೊಗಸಾಗಿ ಮೂಡಿ ಬಂದಿದೆ. ರಾಮಪ್ಪ ದೇಸಾಯಿಯುರ ವಿನಂತಿಯಂತೆ ಶರಣ ಸಕ್ಕರಿ ಕರಡೆಪ್ಪನವರು ಶ್ರೀ ವಿಜಯಮಹಾಂತ ಶಿವಯೋಗಿಗಳಿಗೆ ಚಿತ್ತರಗಿ ಪೀಠಕ್ಕೆ ಒಡೆಯ ರಾಗಲು ಹೋಗಿರೆಂದು ಬಿನ್ನವಿಸಿಕೊಂಡಾಗ ಯತಿ ಶ್ರೀ ವಿಜಯಮಹಾಂತೇಶ್ವರರು ಶರಣ ಸಕ್ಕರಿ ಕರಡೆಪ್ಪನವರಿಗೆ ನೀಡುವ ನಿರ್ಭಿಡೆಯ ಉತ್ತರವನ್ನು ಲಾವಣಿಯ ಕವಿ ಮಹಾಂತ ದೇವರು ತಮ್ಮ ಲಾವಣಿಯಲ್ಲಿ,

"ಬೇಡದು ಶರಣನೇ ಅಧಿಕಾರವೆನಗೆ ಶಶಿಧರ ಸೇವೆ ಮಾಡುವಗೆ
ಕಾಡಲು ಬೇಡೈ ನಿಸ್ಸಂಗಿ ಇರುವಗೈ ಹಿರಿಮೆಯ ಸಿರಿಯಿಂ ನಿತ್ಯನಗೆ
ಅನ್ನವನಿತ್ತಿರುವೆಂದನುಗೆನ್ನುತ ಈ ಪರಿ ನುಡಿದೀಯಾ ನೀನಿಂತು
ಅನ್ನುವದಾದರೆ ಇದನೊಂದರಿಯೈ ವಿರತನು ಹಂಗಿನೊಳಿಲ್ಲಿಂತು" ಎಂದು ಸುಂದರ

ವಾಗಿ ವರ್ಣಿಸಿದ್ದಾನೆ. ಅಷ್ಟೇ ಸುಂದರವಾಗಿ ಯೋಗಿಯ ನುಡಿ ಕೇಳಿದ ಶರಣ ಸಕ್ಕರಿ ಕರಡೆಪ್ಪನವರು.

"ಕೇಳಿದ ಕೂಡಲೇ ಇದೆಲ್ಲ ನುಡಿಯನು ಕರಡೆಪ್ಪ ಶರಣರು ತಲೆದೂಗಿ
ಪೇಳಿದ ದುರುತನ ಮೂರ್ತಿಗೆ ಚಿತ್ತದ ಉತ್ತಮ ಬಯಕೆಯ ಪದಕೆರಗಿ"ದರೆಂಬು

ದನ್ನು ಕವಿ ಎರಡು ಸಾಲಿನಲ್ಲಿಯೇ ಅರ್ಥವತ್ತಾಗಿ ಜೀವ ತುಂಬಿದ್ದಾನೆ. ಜೀವ ತುಂಬುವಿಕೆ ಕಾವ್ಯದ ಗುಣ ಹಾಗೂ ಸತ್ವ. ಶ್ರೀಗಳ ಕಾವ್ಯದಲ್ಲಿ ಅದು ಅಲ್ಲಲ್ಲಿ ಮಿಂಚಿ ನಂತೆ ಹರಿದಿದೆ.

"ಬಿಡದಲೆ ಅನುದಿನ ಪಿಡಿದಾ ನಿಯಮವ ಲಿಂಗದೊಳಿರ್ಪಾ ನೆನವನ್ನು
ಮೃಡನೋಳ್ ನೋಟದ ಲಿಂಗದೊಳಾಟವ ಮೂಡಿಸುತಿಹನೆ ಮನವನ್ನು
ಲಿಂಗದ ಧ್ಯಾನದ ಬಲದಿಂ ಲಿಂಗದ ಅದ್ಭುತ ಶಕ್ತಿ ಪಡೆಯುತ್ತ
ಲಿಂಗಾಂಗೈಕ್ಯದ ರೀತಿಯ ಸುಖಮಂ ಭಕ್ತರಿಗದಮಂ ಅರುಹುತ್ತ" ಎಂದು ಹೇಳುವ

ವಿಜಯ ಮಹಾಂತೇಶ್ವರರ ಲಿಂಗ ನಿಷ್ಠೆಯ ನಿಬ್ಬೆರಗತೆಯ ವರ್ಣನೆಯಲ್ಲಿ ಮಹಾಂತ ದೇವರ ಕಾವ್ಯ ಅರಳಿ ನಿಂತಿದೆ.

ವಿಜಯ ಮಹಾಂತ ಶಿವಯೋಗಿಗಳ ಲೀಲೆಗಳನ್ನು ಹೇಳುವಲ್ಲಿ ಲಾವಣಿಯಕಾರ ಕವಿ ಮಹಾಂತ ದೇವರು.

"ಗಣವರರುಂಡಾ ಪತ್ರಾವಳಿಗಳ ತೆಗೆಯುವುದನ್ನು ನೋಡಿದೊಡೆ
ಗಣರೇ ಅವುಗಳ ಸಂಗನೆ ತೆಗೆಸುವ ನಿಮ್ಮ ಗ್ರಾಮಕ್ಕೆ ದಯಮಾಡಿ
ಆಜ್ಞೆಯ ಮೇರೆಗೆ ಗಾಳಿಯು ಬಂದಿತು ಎಲೆಗಳನೊಯ್ದು ನದಿಯೊಳಗೆ
ಆಜ್ಞೆಯ ಪಾಲಿಸಿ ಚೆಲ್ಲಿತು ಹೋಯಿತು ಅಚ್ಚರಿಯಾಗ್ವದು
ಮನದೊಳಗೆ" ಎಂದು ತುಂಬ ಸರಳವಾಗಿ ನಿರೂಪಿಸಿದ್ದಾರೆ.

ಹುನಗುಂದದ ಶ್ರೀಮಂತ ನಾಗರಾಳ ದೊಡ್ಡಪ್ಪನವರಿಗೆ ಸಕ್ಕರಿ ಕರಡೆಪ್ಪನವರ ಪಾಠ ಶಾಲೆಯ ಮಾದರಿಯಲ್ಲಿಯೇ ಹುನುಗುಂದದಲ್ಲಿ ಪಾಠ ಶಾಲೆಯೊಂದನ್ನು ಪ್ರಾರಂಭಿಸಲು ಶ್ರೀ ವಿಜಯ ಮಹಾಂತ ಶಿವಯೋಗಿಗಳು ಸೂಚಿಸಿದುದನ್ನು ಲಾವಣಿಕಾರ ಶ್ರೀ ಮಹಾಂತ ದೇವರು,

"ನೀನಾದರೀಗ ಮಾಡಲುಬರ್ಪದು ಸಂಸ್ಕೃತಿ ಶಾಲೆಯ ತಗೆಯಂಣ
ಊನವು ಇಲ್ಲದ ಪಾಠಕ ವೃಂದದ ರಚಿಸ್ಯ ನೀನು ದೊಡ್ಡಣ್ಣ
ಅನ್ನವ ವಸ್ತ್ರಗಳನ್ನು ನೀಯುತ ಮಮತೆಯಿಂದಲಿ ಸಲುಹಣ್ಣ
ಸನ್ನುತ ಭಕ್ತರ ನೀವಾಪ್ರೂಣಿಯ ಮಾಡಿದರೆಂತದೊ ದೊಡ್ಡಣ್ಣ
ಜಗದೊಳಾ ಧನ್ಯನು, ಮಾನ್ಯನು, ಭಕ್ತನು ಆಗಲು ಭಕ್ತಿಯೂ ಬೇಕಣ್ಣ"

ಎಂಬ ಸುಂದರ ನುಡಿಗಳಲ್ಲಿ ಸೆರೆ ಹಿಡಿದು ಇಡೀ ಲಾವಣಿಯಲ್ಲಿಯೇ ಎದ್ದು ಕಾಣುವಂತೆ ಈ ಪ್ರಸಂಗವನ್ನು ರೂಪಿಸಿದ್ದಾರೆ.

ವಿಜಯಮಹಾಂತ ಶಿವಯೋಗಿಗಳ ಶ್ರೀ ಪೀಠದ ಉತ್ತಾರಾಧಿಕಾರಿಯಾಗಿ, ಶಿವಯೋಗಿ ಮಂದಿರದ ಸಾಧಕ ಜೀವಿಯಾಗಿ, ಅನುಭವದ ಹಸುಳೆಯಾಗಿ, ಮತ್ತೆ ಮೇಲೆ ಕವಿಯಾಗಿ ಬೆಳೆದು ಬಂದ–ಕಾವ್ಯ ರಚಿಸಿದ ಇಂದಿನ ಹುಬ್ಬಳ್ಳಿ ಮೂರುಸಾವಿರ ಮಠದ ಪೂಜ್ಯ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಹದಿನಾರರಲ್ಲಿಯೇ ಕಾವ್ಯ ಕ್ಷೇತ್ರದ ಮೂ.ಜ.ಗಂ. ಎಂದು ಆದಾಗಲೇ ಅವರು ಗುರುತಿಸಿಕೊಂಡಿದ್ದಾರೆ ಈ ಲಾವಣಿಯಿಂದ.

ಲಾವಣಿಯ ಕೊನೆಗೆ ಕವಿ ಹೃದಯ ಸಾಧಕಜೀವಿ, ತನ್ನ ನೆಚ್ಚಿನ ದೈವ ತನ್ನ ವೀರ ಪರಂಪರೆಯ ಅದ್ಭುತ ಚೈತನ್ಯ ಶಕ್ತಿ–ತನ್ನ ಕಾವ್ಯದ ವ್ಯಕ್ತಿ ಶ್ರೀ ವಿಜಯ ಮಹಾಂತ ಶಿವಯೋಗಿಗಳನ್ನು

"ಯೋಗ ಸುಪೀಠದ ಕರ್ತೃವೆ ಶ್ರೀ ಗುರು ಚಿತ್ತರಗೀಶನೇ ನೀ ನನಗೆ
ಯೋಗದ ದಾರಿಯ ಹಿಡಿಯಲು ಜ್ಞಾನವ ನೀಡಲು ಬಾರದೇ ನೀ ನನಗೆ
ಕಿರುನುಡಿಯಿಂದಲಿ ಪೇಳಿದೆ ನಾನೀ ನಿನ್ನಯ ಚರಿತೆಯ ಚಿನ್ಮಾತ್ರ
ಕರುಣೆಯ ನೀಡೈ ಮುದದೋಳ್ ನಿನ್ನಯ ಶ್ರೀ ಮಹಾಂತೇಶನ ನುತಿಪಾತ್ರ
ಪರಶಿವ ಯೋಗಿಯೇ ಯಜಿಪೇನು ಭಜಿಪನು ಜಯ
ಜಯವಾಗಲೀ ಸುಖಭೋಗಿ, ನಿರುತದಿ ಬೇಡುವ ನಿನ್ನಯ ಧ್ಯಾನದ ಬಾಲ
ಮಹಾಂತಸು ಶಿರಬಾಗಿ" ಎಂದು ಮನಂಬುಗುವಂತೆ ನೆನೆನೆನೆದು ಮಂಗಲ

ಗೊಳಿಸುತ್ತದೆ.

ಈ ನಾಡಿನಲ್ಲಿ ಕಿತ್ತೂರ ವೀರ ಪರಂಪರೆಯ ಲಾವಣಿಗಳು, ಶೃಂಗಾರ ರಸಭರಿತ ಲಾವಣಿಗಳು; ಕಟ್ಟಿ ಚನ್ನ–ಸಿಂಧೂರ ಲಕ್ಷ್ಮಣರಂಥ ಸಾಹಸ ಪ್ರಿಯರ ಲಾವಣಿಗಳು ಇತ್ತೀಚೆಗಿನ ಸ್ವಾತಂತ್ರ್ಯದ ಚಳವಳಿಯ ಹೋರಾಟದ ಲಾವಣಿಗಳು ಭೂದಾನ ಯಜ್ಞದ ಸಮಾಜವಾದದ ಲಾವಣಿಗಳು ಹುಟ್ಟಿಬಂದಿವೆ. ಆದರೆ, ಧಾರ್ಮಿಕತೆಯಿಂದೊಡಗೂಡಿದ ವಸ್ತುವೊಂದನ್ನು ಹೊಂದಿ ಧಾರ್ಮಿಕ ವ್ಯಕ್ತಿಯೊಬ್ಬನ ಜೀವನ ಸುತ್ತಹೆಣೆದ ಈ ಲಾವಣಿಗೊಂದು ವಿಶೇಷತೆಯಿದೆ. ಗುರುತಿಸಬಹುದಾದ ಈ ಲಾವಣಿಯನ್ನು ಕನ್ನಡ ಸಾಹಿತ್ಯಕ್ಕೆ ಶ್ರೀ ಜಗದ್ಗುರು ಮಹಾ ಸನ್ನಿಧಿಯವರು ನೀಡಿ ಉಪಕರಿಸಿದ್ದಾರೆ.

# ಶ್ರೀ ಮರುಳಸಿದ್ಧೇಶ್ವರ ನಾಮಾವಳಿಯ ನೆನಹು

ಪ್ರೊ. ಕೆ. ವಿ. ಬನ್ನೆಟ್ಟಿ

"Worship of a Hero is transcendent admiration of a Great man"
—Thomas Carlyle

ಅಂದಿನ ಇಲಕಲ್ಲಿನ ಶ್ರೀ ಮಹಾಂತದೇವರೇ ಇಂದು ಹುಬ್ಬಳ್ಳಿಯ ಮೂರುಸಾವಿರ ಮಠಾಧಿಪತಿಗಳಾಗಿರುವ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು. ಶ್ರೀಗಳು ಶಿವಯೋಗಮಂದಿರದ ಸಂಸ್ಕೃತ ಪಾಠಶಾಲೆಯಲ್ಲಿ ಅಭ್ಯಾಸ ಮಾಡುವ ಸಮಯದಲ್ಲಿ ಹಲವು ಅಷ್ಟೋತ್ತರ ಶತನಾಮಾವಳಿಗಳನ್ನು ಬರೆದರು. ಅವುಗಳಲ್ಲಿ ಅಥಣಿ ಶ್ರೀ ಮರುಳಸಿದ್ಧೇಶ್ವರ ಅಷ್ಟೋತ್ತರ ಶತ–ನಾಮಾವಳಿಯೂ ಒಂದು. ಶ್ರೀಗಳ ದಿವ್ಯ ವ್ಯಕ್ತಿತ್ವದ ವ್ಯಾಪ್ತಿ, ಆಳ, ಘನತೆಗಳನ್ನು ಅರಿತು ಅವರ ಈ ಹೊತ್ತಿಗೆಯ ಪರಿಚಯ ಮಾಡಿಕೊಡುವುದು ನನ್ನಿಂದ ಅಷ್ಟು ಸುಲಭ ಸಾಧ್ಯವಲ್ಲ. ಪೂಜ್ಯರ ಆಶೀರ್ವಾದದ ಬಲದ ಬೆಂಬಲದಿಂದಲೇ ಈ ಕಾರ್ಯದಲ್ಲಿ ತೊಡಗಬಲ್ಲೆ.

ಶ್ರೀ ಮರುಳಸಿದ್ಧೇಶ್ವರ ಮಹಾಸ್ವಾಮಿಗಳು ಬೆಳಗಾವಿ ಜಿಲ್ಲೆಯ ಅಥಣಿಗೆ ಸಮೀಪದ ಗ್ರಾಮವಾದ 'ಯಾದವಾಡ' ಗ್ರಾಮದಲ್ಲಿ ಶಕೆ–೧೭೭೪ ಕಾರ್ತಿಕ ಶು. ೧. ಗುರುವಾರ ಹಿರೇಮಠವೆಂಬ ಕುಟುಂಬದಲ್ಲಿ ಜನಿಸಿದರು. ಈ ಹಳ್ಳಿಗೆ ಅಥಣಿ ರುದ್ರ ಮುನಿಗಳು ತಮ್ಮ ಭಕ್ತರಾದ ಹಿರೇಮಠ ದಂಪತಿಗಳ ಮನೆಗೆ ದಯಮಾಡಿಸಿದರು. ಆಗ ದೈವ ಪ್ರೇರಣೆಯಿಂದ ಅಲೌಕಿಕ ಲಕ್ಷಣಗಳನ್ನು ಹೊಂದಿದ ತಮ್ಮ ಮಗನಾದ ಮರುಳಯ್ಯನನ್ನು ಶ್ರೀಗಳ ಪಾದಕ್ಕೆ ಸಮರ್ಪಿಸಿದರು.

ಗುರುವಿನೊಡನೆ ಅಥಣಿಗೆ ಬಂದ "ಮರುಳಯ್ಯನಾದರೂ ಮುಗ್ಧ ಸಂಗಯ್ಯನಂತಿದ್ದ". "ಗುಣೋತ್ತುಂಗ ಸುಂದರಾಂಗ ಭವವಿಭಂಗ ಮರುಳಸಿದ್ಧ"ನಾದ ಕಾರಣ: "ಗುರುವಿಗಿಂತ–ಹಿರಿಯರಾರು? ಇಲ್ಲ"ವೆಂದು ಅರಿತು ಗುರುಸೇವೆ ಲಿಂಗಪೂಜೆಗೈದು "ರುದ್ರಯತಿಗಳಿಂದನುಗ್ರಹವ" ಪಡೆದನು.

ಹುಟ್ಟೂರಲ್ಲಿ ೪–೬ ತರಗತಿಯವರೆಗೆ ಮಾತ್ರ ಓದಿದ ಮರುಳಸಿದ್ಧಗೆ ಅಥಣಿಗೆ ಕರೆತಂದ ಗುರು ಶರಣರ ವಚನ, ಸಪ್ಪಣ್ಣಾರ್ಯರ ಪದ, ಶಿವಗುಣಾರ್ಯರ ಪದ, ಷಟ್ ಶಾಸ್ತ್ರ ವಿಚಾರ ಸರ್ವವನ್ನು ಪ್ರತಿದಿನ ಬೋಧಿಸಿದರು. ಶ್ರೀ ಮರುಳಸಿದ್ಧನ ಅಪಾರ ಜ್ಞಾನವನ್ನು ಕಂಡು ಮೆಚ್ಚಿ ಶ್ರೀ ರುದ್ರಮುನಿಗಳು ತಮ್ಮ ಉತ್ತರಾಧಿಕಾರಿಯಾದ ಶ್ರೀ ಮರುಳಸಿದ್ಧನಿಗೆ "ಶ್ರೀ ಮ.ನಿ.ಪ್ರ. ಶ್ರೀ ಮರುಳಸಿದ್ಧಸ್ವಾಮಿ"ಯೆಂದು ನಾಮಕರಣ ಮಾಡಿ ಪಟ್ಟಾಭಿಷೇಕಮಾಡಿಸಿದರು.

ಶ್ರೀ ರುದ್ರಮುನಿಗಳು ಲಿಂಗೈಕ್ಯರಾದ ಮೇಲೆ, ಅವರ ಆದೇಶದ ಮೇರೆಗೆ, 'ಮೂರು ತಾಪ'ಗಳನ್ನು, 'ಆರು ವೈರಿಗಳನ್ನು', 'ಕನಕವನ್ನು' ಮತ್ತು "ಪಂಚ ಕ್ಲೇಶ"ಗಳನ್ನು ತುಳಿದು ಧೀರನಾಗಿ ಶಾಂತಿತಳೆದು "ಪಂಚಮುಖನ" ನೆನೆದು ನೆನೆದು ಸಿದ್ಧರಾದರು ಮರುಳಸಿದ್ಧ.

ಶ್ರೀ ಮರುಳಸಿದ್ಧರು 'ಅಥಣಿ ಮಠದ ಸ್ವಾಮಿಯಾಗಿ', 'ಭಕ್ತವೃಂದ ಹೃದಯ ಮಧ್ಯ ಜ್ಯೋತಿ'ಯಾಗಿ "ಭಕ್ತತತಿಗೆ ಶಕ್ತಿ, ಶಾಂತಿ" ಇತ್ತು; "ಶಿವ ಸುಮಾರ್ಗವನ್ನು ತೋರಿ"ದರು. ಜನ ಕಲ್ಯಾಣಕ್ಕಾಗಿ ಶ್ರೀ ಮರುಳಸಿದ್ಧೇಶ್ವರರು ಗೈದ ಪವಾಡಗಳನ್ನು ಕವಿಗಳು ಸಂಕ್ಷೇಪವಾಗಿ ಸೂಚ್ಯವಾಗಿ ಕರಣಾನಂದವಾಗುವಂತೆ ಹಾಡಿದ್ದಾರೆ.

"ಪುತ್ರರಿರದೆ ಮರಗುವವಗೆ ಪುತ್ರರಿತ್ತೆ ಮರುಳಸಿದ್ಧ"
"ವಿತ್ತವಿರದೆ ಬಳಲುವವಗೆ ವಿತ್ತವಿತ್ತೆ ಮರುಳಸಿದ್ಧ"
"ಮಳೆಯು ತಡೆದು ಬೆಳೆಯು ಒಣಗುವಾಗ ನೀನು ಮರುಳಸಿದ್ಧ
ಮಳೆಯನಿತ್ತು ಜನಕೆ ಕಳೆಯು ಬೆಳಗನಿತ್ತೆ ಮರುಳಸಿದ್ಧ"
ಉರಗ ಕಚ್ಚಿ ಸಾಯುವವನ ಉಳಿಸಿದಯ್ಯ ಮರುಳಸಿದ್ಧ.

ದುರ್ಮಾರ್ಗದಲ್ಲಿ ನಡೆಯುವವರಿಗೆ ಶ್ರೀ ಮರುಳಸಿದ್ಧರು ಸರಿಯಾದ ದಾರಿಗೆ ತರಲು ಮಾಡಿದ ಬೋಧೆಯನ್ನು ನೋಡಬಹುದು.

"ನಿಂದೆ ಮಾಡಿದವನ ಕರೆದು ಬುದ್ಧಿ ಪೇಳ್ದೆ ಮರುಳಸಿದ್ಧ
ನಿಂದೆಯಿಂದ ತನಗೆ ಹಾನಿ ಬರುವುದೆಂದೆ ಮರುಳಸಿದ್ಧ
ಧನದ ಗರ್ವ ತುಂಬಿಕೊಂಡು ತಿರುಗುವವಗೆ ಮರುಳಸಿದ್ಧ
ಗುಣದ ಹಿರಿಮೆ ತೋರಿ ನೀಡು ಶುದ್ಧ ಬುದ್ಧಿ ಮರುಳಸಿದ್ಧ"

ಶ್ರೀ ಮರುಳಸಿದ್ಧೇಶ್ವರರು ಸಮಗ್ರ "ವೀರಶೈವ ಧರ್ಮತತ್ವ ಬೆಳೆಸಿ" ವೀರತನದಿಂದ ಆಚರಿಸಿ ಪ್ರಚಾರ ಗೈದಿದ್ದಾರೆ, ಶಿವನ ಪೂಜೆಗಾಗಿ ತನುವ ದಂಡಿಸಿದರು. "ಲಿಂಗ ಸಂಗದಿರವನರಿದು", "ಲಿಂಗನೆನಹಿನಿಂದ ಚಿತ್ಸ್ವರೂಪ"ರಾದರು. "ಲಿಂಗಭೋಗಿಯಾಗಿ ಬ್ರಹ್ಮಜ್ಞಾನಿ"ಯಾದರು. "ಲಿಂಗಪತಿ–ಶರಣಸತಿ" ಎಂಬುದನ್ನು ಆಚರಣೆಯಲ್ಲಿ ಅನುಸರಿಸಿದರು. ಪೂರ್ಣ "ಜ್ಞಾನಯೋಗ ತತ್ವವರುಹಿ" ಭಕ್ತಜನ ಕೋಟಿಯನ್ನು ಪೊರೆದರು. ಈಶನ ಇಷ್ಟದಂತೆ ಶಿವನ ಧ್ಯಾನಿಸುತ್ತ ಲಿಂಗದೊಳಗೆ (ಲಿಂಗೈಕ್ಯ ಶಕೆ ೧೬೮೧ ಭಾದ್ರಪದ ಶು. ೧೪ ಸೋಮವಾರ) ಬೆರೆದು" ಕೊಂಡರು.

ಕೊನೆಯಲ್ಲಿ ಅಭ್ಯರ್ಥಿಯಾಗಿದ್ದ, ಸಾಧಕನಾಗಿದ್ದ ಕವಿವರ್ಯರು, ಬಸವಣ್ಣನವರು ಶ್ರೀ ಸಂಗಮನಾಥನನ್ನು ಕೋರಿಕೊಂಡಂತೆ, ಶ್ರೀ ಮರುಳಸಿದ್ಧೇಶ್ವರರನ್ನು ಕುರಿತು ತಮ್ಮನ್ನು ಕಾಪಾಡಬೇಕೆಂದು ಪ್ರಾರ್ಥಿಸುತ್ತಾರೆ. ಈ ಪ್ರಾರ್ಥನೆಯಲ್ಲಿ ಕವಿವರ್ಯರು ತಮ್ಮ ಮನಸ್ಸಿನಲ್ಲಿ

ನಡೆದ ಲೌಕಿಕ ಹಾಗೂ ಅಲೌಕಿಕ ಮೌಲ್ಯಗಳ ನಡುವಿನ ದ್ವಂದ್ವದಲ್ಲಿ ಸಿಕ್ಕು ದಿಕ್ಕು ತೋಚ ದಂತಾದಾಗ ಮರುಳಸಿದ್ಧನೇ ತಮ್ಮ ಸರ್ವಸ್ವವೆಂದು ಮೊರೆಯಿಡುತ್ತಾರೆ.

"ತಂದೆ ತಾಯಿ ಬಂಧು ಬಳಗ ನೀನೆ ಎನಗೆ ಮರುಳಸಿದ್ಧ" ಎಂದು ಎಪ್ಪತ್ತೇಳನೆಯ ಸಾಲಿನಿಂದ ಅಂತ್ಯದವರೆಗೂ ಶ್ರೀ ಮರುಳಸಿದ್ಧನನ್ನು ಪ್ರಾರ್ಥಿಸುತ್ತಾರೆ. "ಜ್ಞಾನ ಹೀನ ನಾಗಿ ದಾರಿ ತಪ್ಪಿದಾಗ", "ವಿಷಯ ಜಲಧಿಯೊಳಗೆ ಮುಳುಗುವಾಗ", "ಹೀನ ವೃತ್ತಿಯಲ್ಲಿ ಬೆಂದು ನೋಯುವಾಗ", 'ಚಿತ್ತಚಲನೆ'ಯಾದಾಗ, "ದ್ವೇಷ–ದೋಷ ಕ್ಲೇಶಗಳು ಏಳು ವಾಗ", ರೋಷದಿಂದ ಕುದಿಯುವಾಗ", "ಬಡವನಾನು ಒಡೆಯ ನೀನು ನೀಡು ಮತಿಯ ಮರುಳಸಿದ್ಧ" ಎಂದು ಹೇಳುವಲ್ಲಿ ಕವಿಯ ಹೃದಯವನ್ನೇ ತೆರೆದು ಶ್ರೀ ಮರುಳಸಿದ್ಧನ ಮುಂದೆ ತೋರಿಸುತ್ತಾರೆ. ದೀನಭಾವದಿಂದ ಭೃತ್ಯಭಾವದಿಂದ ಕವಿವರ್ಯರು ಗುರುವಾದ ಮರುಳಸಿದ್ಧನನ್ನು ಕೋರಿಕೊಳ್ಳುತ್ತಾರೆ.

ಗದ್ಯದಲ್ಲಿ ಸಾವಿರ ಪುಟಗಳಲ್ಲಿ ಬರೆದಿಡಬಹುದಾದ್ದನ್ನು ಕವಿಯು ಪದ್ಯದಲ್ಲಿ ಸೂಚ್ಯ ವಾಗಿ, ಪ್ರತಿಮೆ, ಸಂಕೇತ, ಧ್ವನಿ, ಅಲಂಕಾರಗಳ ಮುಖಾಂತರ ಸಂಕ್ಷೇಪವಾಗಿ ನೂರಾರೇ ಸಾಲುಗಳಲ್ಲಿ ಬರೆಯಲು ಸಾಧ್ಯ. ಈ ಮಾತಿಗೆ ಶ್ರೀ ಮಹಾಂತದೇವರು ಬರೆದ ಈ ನಾಮಾವಳಿಯೇ ಸಾಕ್ಷಿ.

ಶ್ರೀ ಮರುಳಸಿದ್ಧೇಶ್ವರರ ಬಾಲ್ಯ, ಅಥಣಿ ಮಠದಲ್ಲಿ ವಿದ್ಯಾಭ್ಯಾಸ, ಮಠಾಧಿಪತಿ ಗಳಾಗಿ ಗೈದ ಲೋಕ ಸೇವೆ, ಪವಾಡಗಳು, ಈಶ ಪೂಜೆ, ಧರ್ಮಾಚರಣೆ, ಧರ್ಮ ಸಂದೇಶ ಗಳನ್ನಲ್ಲದೆ ಅವರ ಲಿಂಗೈಕ್ಯದವರೆಗಿನ ಚರಿತ್ರೆಯನ್ನು ಉತ್ಸಾಹ ರಗಳೆಯ ಕೇವಲ ಎಪ್ಪತ್ತಾರು ಸಾಲಿನಲ್ಲಿ ಕವಿವರ್ಯರು ಅಭಿವ್ಯಕ್ತಪಡಿಸಿದ್ದು ಸಾಮಾನ್ಯವೇನಲ್ಲ. ಕೇವಲ ಪ್ರತಿಭಾವಂತ ಕವಿಗೆ ಮಾತ್ರ ಇದು ಸಾಧ್ಯ. ಉಳಿದ ಮೂವತ್ನಾಲ್ಕು ಸಾಲಿನಲ್ಲಿ ಕವಿ ವರ್ಯರು ಶ್ರೀಮರುಳ ಸಿದ್ಧೇಶ್ವರರನ್ನು ಪ್ರಾರ್ಥಿಸಿದ್ದಾರೆ.

ಮುನ್ನುಡಿಯಲ್ಲಿ ಪ್ರೊ. ಉಮಾಪತಿ ಶಾಸ್ತ್ರಿಗಳು ಈ ನಾಮಾವಳಿಯ ಉದ್ದೇಶ ವನ್ನು ಸೂಚಿಸಿದ್ದಾರೆ. "ಇಂತಹ ಮಹಿಮಾನ್ವಿತ ಮಹಾತ್ಮರ ಚರಿತ್ರೆಯನ್ನು ಭಕ್ತಿಯಿಂದ ಶ್ರವಣ ಮತ್ತು ಪಠನ ಮಾಡುವದರಿಂದ ನಮ್ಮ ಮನೋಮಾಲಿನ್ಯವಳಿದು ನಮ್ಮಲ್ಲಿ ಸಾತ್ವಿಕ ಭಾವವು ಮೈದೋರುತ್ತದೆ". ಎಚ್. ಡಬ್ಲ್ಯು. ಲಾಂಗಫೆಲೊ ಕವಿಯು ಕೂಡ, "ಮಹಾತ್ಮರ ಚರಿತೆಗಳು ನಮ್ಮ ಜೀವನವನ್ನು ಹೇಗೆ ಪರಿಪೂರ್ಣ ಸಿದ್ಧಗೊಳಿಸಬೇಕೆಂಬು ದನ್ನು ಕಲಿಸುತ್ತಿವೆ" ಎಂದು ನುಡಿದ್ದಾನೆ. ಅದರಂತೆ ಥಾಮಸ್ ಕಾರ್ಲ್ಲಾಯಿಲ್ ತನ್ನ, "On Heroes and Hero worship" ಎಂಬ ಹೊತ್ತಿಗೆಯಲ್ಲಿ "One comfort is that Great Man, taken up in any way, are Profitable Company. We can not look, however imperfectly, upon a great man, without gaining some thing by him. He is the Living Light fountain, which it is good and pleasant to be near" ಎಂದಿದ್ದಾನೆ.

ಇದಕ್ಕೂ ಹೆಚ್ಚಿಗೆ ಕಾರ್ಲ್ಲಾಯಿಲ್‌ನೇ ಆದೇ ಹೊತ್ತಿಗೆಯಲ್ಲಿ ''Worship of a Hero is transcendent admiration of a Great Man'' ಎಂದು ಸಾರಿದ್ದಾನೆ.

ಇಂತಹ ಸತ್‌ಸಂಗವನ್ನು ಬಾಲಕರಿದ್ದಾಗಿನಿಂದ ಶ್ರೀ ಮಹಾಂತ ದೇವರು, ಬೆಳೆಸಿ ಕೊಂಡುಬಂದು, ಮಹಾತ್ಮರ ಸಂಸ್ಕಾರಹೊಂದಿ ಮಹಾತ್ಮರಾಗಿರಲು ಸಾಕು ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಈ ನಾಮಾವಳಿಯ ಭಾಷಾಶೈಲಿಯನ್ನು ಗಮನಿಸಿದಾಗ, ಬಳ್ಳಿಗೆ ಎಲೆ, ಹೂ, ಕಾಯಿ ಎಷ್ಟು ಸಹಜವಾಗಿ ಮೂಡಿ ಬರುವವೋ ಹಾಗೆ ಶ್ರೀಗಳಿಗೆ ಕಾವ್ಯ ಪ್ರತಿಭೆಯ ಅಭಿವ್ಯಕ್ತಿ ಉದಯವಾಗಿದೆ ಎಂಬುದಕ್ಕೆ ಕೆಳಗಿನ ಸಾಲುಗಳಲ್ಲಿ ಕಂಡುಬರುವುದು:

"ಬಡವ ನಾನು ಒಡೆಯ ನೀನು ನೀಡು ಮತಿಯ ಮರುಳಸಿದ್ಧ"
"ಹೃದಯ ಗೃಹಕೆ ದೀಪವಿರದೆ ಕೊರಗುತಿರುವೆ ಮರುಳಸಿದ್ಧ"
"ಕಾಡಿ ಕಾಡಿ ದೂಡುತಿಹುದು ಮಾಯೆಯೆನ್ನ ಮರುಳಸಿದ್ಧ"
"ಹುಟ್ಟಿ ಹುಟ್ಟಿ ಸಾವುದನ್ನು ತಪ್ಪಿಸೆನಗೆ ಮರುಳಸಿದ್ಧ"

ಅಲ್ಲದೆ, ಹರಿಹರನ ಪರಂಪರೆಯಲ್ಲಿ ನಡೆದ ಇವರ ಉತ್ಸಾಹ ರಗಳೆಯ ಮೂರು ಮಾತ್ರೆಗಳ ಎಂಟು ಗಣಗಳು ಪ್ರತಿಯೊಂದು ಚರಣದಲ್ಲಿಯೂ ಕಂಡುಬರುವವು. ಉತ್ಸಾಹ ರಗಳೆಯಲ್ಲಿ ಶ್ರೀಗಳು ಸಿದ್ಧಹಸ್ತರೆಂಬುದು ಈ ನಾಮಾವಳಿಯನ್ನು ಓದುವಾಗ ಮನದಟ್ಟಾಗು ವುದು. ಮಧುರ ನಾದ, ತಾಳ, ಲಯಗಳನ್ನು ಪ್ರತಿಯೊಂದು ಸಾಲಿನಲ್ಲಿ ಹೊಂದಿರುವುದ ರಿಂದ ಶ್ರವಣಕ್ಕೆ ಪೂಜೆಯ ಕಾಲದಲ್ಲಿ ಪಠನಮಾಡಿದರೆ ಈ ಎಲ್ಲ ಸಾಲುಗಳು ಕರಣಾನಂದ ನೀಡುವದಲ್ಲದೆ, ಪಠಣಮಾಡುವವನ ಮನಸ್ಸಿನಲ್ಲಿ ಭಕ್ತಿ, ಚೈತನ್ಯ, ಏಕಾಗ್ರತೆ ಮೂಡಿ, ಉತ್ಸಾಹ ಚಿಮ್ಮಿ ಮೈಮನಗಳು ಪುಳಕಿತಗೊಂಡು ಆನಂದಹೊಂದಿ ಪೂಜಾನಂತರ ದೀರ್ಘ ಕಾಲ ಮನಸ್ಸಿನಲ್ಲಿ ಶಾಂತಿನೆಲೆಸುವುದು.

ಆಧುನಿಕ ಕಾಲದಲ್ಲಿ ಕನ್ನಡ ಸಾಹಿತ್ಯರಂಗದಲ್ಲಿ ಸಣ್ಣ ಕತೆ, ಭಾವಗೀತೆ, ಏಕಾಂಕ ನಾಟಕ, ನಿಬಂಧ ಸಾಹಿತ್ಯದ ಉಪಪ್ರಕಾರಗಳಾದ ಇವು ಸಾಕಷ್ಟು ಹುಲುಸಾಗಿ ಕೃಷಿ ಹೊಂದಿವೆ. ಇದಕ್ಕೆ ಮುಖ್ಯಕಾರಣ ಬಹು ಸಂಖ್ಯ ಓದುಗರಿಗೆ ವೇಳೆಯ ಅಭಾವವಿರುತ್ತದೆ. ಇಂಥ ಪ್ರಸಂಗದಲ್ಲಿ ಇಂತಹ ಅಷ್ಟೋತ್ತರ ನಾಮಾವಳಿಯು ಸಾಹಿತ್ಯದ ಒಂದು ಪ್ರಸಿದ್ಧ ಉಪಕಾರವಾಗಬಹುದು. ಆದರೆ ಇವುಗಳ ಸಂಖ್ಯೆ ಬಹಳ ಕಡಿಮೆ ಇದೆ. ಪ್ರಕಟವಾದ ಎಲ್ಲ ಕವಿಗಳ ಎಲ್ಲ ನಾಮಾವಳಿಗಳು ಸಾಹಿತ್ಯ ಮೌಲ್ಯಗಳನ್ನು ಹೊಂದಿವೆಯೆಂದು ಹೇಳಲು ಬರುವುದಿಲ್ಲ. ಪೂಜ್ಯ ಜಗದ್ಗುರುಗಳಂತಹ ನಾಲ್ಕೈದು ಜನ ಪ್ರತಿಭಾವಂತ ಕವಿಗಳು ಇದ ರಲ್ಲಿ ಕೃಷಿಗೈದರೆ ನಾಮಾವಳಿ ಪ್ರಕಾರವು ಒಂದು ಶ್ರೇಷ್ಠ ಉಪಪ್ರಕಾರವಾಗಿ ಸಾಹಿತ್ಯ ಸಾಮ್ರಾಜ್ಯದಲ್ಲಿ ಮೆರೆಯಬಹುದು.

# ಶ್ರೀ ಅಪ್ಪಯ್ಯಸ್ವಾಮಿಗಳ ಜೀವನ ಚರಿತ್ರೆ

ಮುದ್ದೇಬಿಹಾಳ ಪ್ರೊ. ಜಿ. ಎಸ್. ಮೂಮನಿ ಎಂ.ಎ

'ಸಾಹಿತ್ಯ ಎಲ್ಲರಿಗೂ ಇಲ್ಲ' ಎಂಬುದು ಸರ್ವಜ್ಞನ ಸತ್ಯವಾಣಿ; ಅನುಭವ ನುಡಿ. ಹದಿನೆಂಟರ ಹರೆಯದಲ್ಲಿ ಸಾಹಿತ್ಯ ರಚಿಸಿದವರು ವಿರಳ. ಅದರಲ್ಲಿ ಚರಿತ್ರೆ ಗ್ರಂಥ ಬರೆದ ವರು ಇನ್ನೂ ವಿರಳ. ಎಳೆವಯಸ್ಸಿನಲ್ಲಿ ಆಧ್ಯಾತ್ಮ ಪ್ರಚುರವಾದ ಹೊತ್ತಗೆ ಹೊರತರು ವವರು ಅತೀ ವಿರಳ. ಈ ವಿರಳರ ಮಾಲಿಕೆಯಲ್ಲಿ ಹಿಂದಿನ ಶ್ರೀ ಮಹಾಂತದೇವರು ಇಲಕಲ್ಲ (ಇಂದಿನ ಮೂರುಸಾವಿರಮಠದ ಶ್ರೀ ಶ್ರೀ ಜಗದ್ಗುರುಗಳು) ಶ್ರೇಷ್ಠರು. ತಮ್ಮ ಚೊಚ್ಚಲು ಚಿಣ್ಣನನ್ನು ಬಾಡದ ಪುಷ್ಪವನ್ನಾಗಿ ಲಿಂಗೈಕ್ಯ ಪೂಜ್ಯ ಕುಮಾರ ಶಿವಯೋಗಿಗಳು ಬಿದರಿಮಠ ಇವರಿಗೆ ಅರ್ಪಿಸಿದ್ದು ಲೇಖಕರ ವಿನಯದ ಕೂಡ ಸಜ್ಜನಿಕೆಯನ್ನು ಸ್ಪಷ್ಟಪಡಿಸುವದು. ಕೋಟಿಗೊಬ್ಬರು ಉಚ್ಚ ಆತ್ಮ ಸಂಸ್ಕಾರವನ್ನು ಪಡೆದು ಅವತರಿಸುವರಂತೆ. ಮೂರುಸಾವಿರಮಠದ ಶ್ರೀ ಜಗದ್ಗುರುಗಳು ಅಂಥವರಲ್ಲಿ ಒಬ್ಬರೆಂದು ಹೊಗಳಿದರೆ ಅತಿಶಯೋಕ್ತಿಯಾಗದು. ಈ ಶ್ರೀ ಅಪ್ಪಯ್ಯಸ್ವಾಮಿಗಳ ಚರಿತ್ರೆಗ್ರಂಥವನ್ನು ಬರೆದು ಕನ್ನಡ ಸಾಹಿತ್ಯದ ಕೊರತೆಯನ್ನು ತುಂಬಿದ್ದಾರೆ. ಚರಿತ್ರೆ, ಪುರಾಣವಾಗಿ ಅಜ್ಞರ ಪಾಲಾಗುವ ಅನಾಹುತವನ್ನು ತಪ್ಪಿಸಿದ್ದಾರೆ. ಆ ಆ ಕಾಲದ ಚರಿತ್ರೆ ಗ್ರಂಥಗಳಿರದ್ದ ಕ್ಕಾಗಿ, ಸಾಹಿತ್ಯದಲ್ಲಿ ಅಲ್ಲದ ಸಲ್ಲದ ಅಭಿಪ್ರಾಯಗಳು ಒಳಸೇರಿ, ಕಾಲಕಾಲಕ್ಕೆ ಜನತೆಯ ನೆಮ್ಮದಿಯನ್ನು ಕದಡುವುದುಂಟು. ಸಾಹಿತ್ಯದ ದುರ್ಗಂಧ ಬಹುಕಾಲ ನಾರುವುದುಂಟು. ಶ್ರೀ ಮಹಾಂತದೇವರು ಮುಂಧೋರಣೆಗಳಾಗಿ, ಮಹಾನ್ ಅನುಭಾವಿಗಳಾಗಿ ಶ್ರೀ ಅಪ್ಪಯ್ಯ ಸ್ವಾಮಿಗಳ ಚರಿತ್ರೆಯನ್ನು ಬರೆದು ಸಾಹಿತ್ಯಕ್ಕೆ, ನಾಡಿಗೆ ಮಹದುಪಕಾರ ಮಾಡಿದ್ದಾರೆ. ಇವರುಗಳ ಆದರ್ಶಮಾರ್ಗ, ಬುದ್ಧಿಜೀವಿಗಳ ರಾಜಮಾರ್ಗವಾದರೆ ಹೆಚ್ಚಿನ ಮಂಗಲ ವಾಗುವದು.

ಚರಿತ್ರೆಯ ಪ್ರಾರಂಭ 'ಅಂಧಃಕಾರ ಕವಿದಿತ್ತು; ಲೋಕ ಸೂರ್ಯೋದಯಕ್ಕಾಗಿ ಕಾಯ್ದಿತ್ತು' ಎಂಬ ವಾಕ್ಯ ಅರ್ಥಪೂರ್ಣವಾದದ್ದು. ಕತ್ತಲೆಗೆ ತುತ್ತಾಗಿ ತತ್ತರಿಸುವ ಜನತೆಯ ಕೂಗು ಎಲ್ಲೆಡೆ ಕೇಳಿಬರುತ್ತಿತ್ತು. ಉತ್ತಮರ ಕೂಗು ವ್ಯರ್ಥವಾಗದೆಂಬಂತೆ ಬೆಳಕಿನ ಪುಂಜದಂತಿದ್ದ ಶ್ರೀ ಅಪ್ಪಯ್ಯಸ್ವಾಮಿಗಳು ಅವತರಿಸಿದರು. ಈ ಸನ್ನಿವೇಶದಲ್ಲಿ ಚಾಣಾಕ್ಷರಾದ ಲೇಖಕರು.

'ಲೋಕೋದ್ಧಾರಕ್ಕೆ ಯತಿಯು ಕಾರಣನತ್ತಿ?' ಎಂದು ಸಮರ್ಥಿಸಿಕೊಂಡಿದ್ದಾರೆ. ಇಲ್ಲಿ ಅವರ ಈ ಚರಿತ್ರೆ ಗ್ರಂಥ ಕೂಡ ಯತಿಯಂತೆ ಉದ್ಧಾರಮಾಡುವಂಥದೆಂದು ನಂಬ ಬೇಕಾಗುತ್ತದೆ.

ಎರಡನೆಯ ಅಧ್ಯಾಯದಲ್ಲಿ ಶ್ರೀ ಅಪ್ಪಯ್ಯಸ್ವಾಮಿಗಳ ಜನನ-ಬಾಲ್ಯದ ವರ್ಣನೆ ಬಂದಿದೆ. ಮುಧೋಳದ ಸ್ವತಂತ್ರ ಮಠದ, ಸಾತ್ವಿಕ ದಂಪತಿಗಳಾದ ಬಸವಲಿಂಗಯ್ಯ ಮತ್ತು ಶಾಂತಲಿಂಗಮ್ಮ ದಂಪತಿಗಳಿಗೆ ಗಂಡುಮಕ್ಕಳಿರಲಿಲ್ಲ. ಈ ಅಳಲಿನಿಂದ ಶಾಂತ ಲಿಂಗಮ್ಮನವರು ಭಕ್ತಿ ಭಾವದಿಂದ ಬಿದರಿ ಶ್ರೀ ಕುಮಾರಸ್ವಾಮಿಗಳ ದರ್ಶನಕ್ಕೆ ಬಂದರು. ದರ್ಶನ ಪಡೆದು ದೈನ್ಯಭಾವದಿಂದ ತಮಗೆ ಗಂಡುಮಗನನ್ನು ಆಶೀರ್ವದಿಸಬೇಕೆಂದು ಬೇಡಿ ಕೊಂಡರು. ನಿಷ್ಠಾವಂತ ಭಕ್ತಳ ಆಶೆಯನ್ನು ಅರಿತು ಶ್ರೀಗಳವರು ಹರ್ಷದಿಂದ 'ತಾಯಿ ನಿನ್ನ ಪವಿತ್ರ ಗರ್ಭದಲ್ಲಿ ಸತ್ಪುತ್ರ ಜನಿಸುವನೆಂದು' ಭವಿಷ್ಯ ನುಡಿದು, ಆ ಮಗನನ್ನು ತಮ್ಮ ಮಠಕ್ಕೆ ಮರಿಯಾಗಿ ಕೊಡಬೇಕೆಂದು ಶಾಂತಲಿಂಗಮ್ಮನವರಿಂದ ಆಶ್ವಾಸನೆ ತೆಗೆದು ಕೊಂಡರು. ಗುರುಗಳ ಶಿವಹರಕೆಯಂತೆ ಶಾಂತಲಿಂಗಮ್ಮನವರು ಶಕೆ ೧೮೧೯ ರಲ್ಲಿ ಜಗತ್ಪುಂಜನಾಗುವ ಮಗನನ್ನು ಹೆತ್ತರು. ಅವನಿಗೆ 'ಮಹಲಿಂಗ' ಎಂದು ಹೆಸರಿಟ್ಟರು. ಮಹಲಿಂಗನು ಎಲ್ಲರ ಕಣ್ಮಣಿಯಾಗಿ, ಸದ್ಗುಣಶೀಲನಾಗಿ, ಲೇಖಕರೇ ಹೇಳಿದಂತೆ 'ಹಣ್ಣಿನ ಗುಣ ಹೀಚಿನಲ್ಲಿ' ಎಂಬಂತೆ ಶಿವನ ಸಿರಿಯಾಗಿ ಬೆಳೆದನು. ಚಂದಿರನಂಥ ಸುಂದರ ಮಗನನ್ನು ಮಠಕ್ಕೆ ಕೊಡುವ ತಾಯಿಯ ವಚನಕ್ಕೆ ಮರವು ಆವರಿಸಿತು. ಆದರೆ ಅರುವಿನ ಸಾಕಾರಮೂರ್ತಿಗಳಾದ ಶ್ರೀ ಬಿದರಿ ಅಪ್ಪಗಳು ಲೋಕಕಲ್ಯಾಣ ದೃಷ್ಟಿಯಿಂದ ಮರೆಯಲಿಲ್ಲ. ಮಹಲಿಂಗರು ೭-೮ ವರ್ಷದವರಾದಾಗ, ಶ್ರೀ ಹಾನಗಲ್ಲ ಶಿವಯೋಗಿ ಗಳನ್ನು ಮುಧೋಳಕ್ಕೆ ಕಳುಹಿಸಿ, ವಚನ ಪಾಲಕಳಾದಂಥ ಶಾಂತಲಿಂಗಮ್ಮನನ್ನು ಒಪ್ಪಿಸಿ, ಮಹಾಲಿಂಗರನ್ನು ಬಿದರಿ-ಸವದತ್ತಿ ಮಠಕ್ಕೆ ಕರೆತರಿಸಿದರು. ಮಹಲಿಂಗರನ್ನು ದಿವ್ಯ ದೃಷ್ಟಿಯಿಂದ ಕಣ್ತುಂಬ ನೋಡಿ, ತಮ್ಮ ಕರಕಮಲ ಸಂಜಾತರನ್ನಾಗಿ ಮಾಡಿಕೊಂಡು 'ಅಪ್ಪಯ್ಯ'ನೆಂದು ಬಿದರಿ ಶ್ರೀಗಳು ಹೆಸರಿಟ್ಟರು. ಪೂರ್ವರ ಲೌಕಿಕ ಸಂಬಂಧದ ಕೊಂಡಿಯನ್ನು ಕಳಚಿದರು. ಲೌಕಿಕ ಸತ್ಪುತ್ರ, ಪಾರಮಾರ್ಥಿಕ ಶಿವಪುತ್ರನಾದ, ಆಧ್ಯಾತ್ಮಿಕ ಪುಷ್ಪದ ಮಕರಂದ ಸವಿಯುವ ಮರಿದುಂಬಿಯಾದ. ನಂತರ ಮಹೇಶ್ವರ ದೀಕ್ಷೆಯಾಯಿತು. 'ಗುರುವಿನಿಂದಧಿಕ ದೇವರಿಲ್ಲೆಂಬಂತೆ' ಶ್ರೀ ಬಿದರಿ ಕುಮಾರಸ್ವಾಮಿಗಳು ಶ್ರೀ ಅಪ್ಪಯ್ಯ ನನ್ನು ಶ್ರೀ ಹಾನಗಲ್ಲ ಕುಮಾರಶಿವಯೋಗಿಗಳ ವಶಕ್ಕೆ ಒಪ್ಪಿಸಿದರು. ಅವರು ಅಪ್ಪಯ್ಯ ನಿಗೆ ಇನ್ನಷ್ಟು-ಬಹಳಷ್ಟು ಗುರುಕೃಪೆ ಸಿಗಲೆಂದು ಹಾವೇರಿ ಶ್ರೀ ಶಿವಬಸವಸ್ವಾಮಿಗಳ ಮಠದ ಪಾಠಶಾಲೆಗೆ ಕಳುಹಿಸಿದರು. ಚಿಕ್ಕವಯದಲ್ಲಿಯೇ ಅಪ್ಪಯ್ಯಗಳ ಹಂಬಲವು ಶಿವಯೋಗದಲ್ಲಿ ತುಂಬಿತ್ತು; ಲಿಂಗಾಂಗ ಸಾಮರಸ್ಯದ ಚಿಂತನೆ ಹಿರಿದಾಗಿತ್ತೆಂದು ಆಧ್ಯಾತ್ಮಿಕ ಅನುಭಾವಿಗಳಾದ ಶ್ರೀ ಮಹಾಂತದೇವರು ಹೇಳಿದ್ದನ್ನು ಹಿಂಜಬೇಕು.

ಶ್ರೀ ಅಪ್ಪಯ್ಯಸ್ವಾಮಿಗಳ ಜನನ-ಬಾಲ್ಯ-ಬೆಳವಣಿಗೆಗಳು ಶ್ರೀ ಶ್ರೀ ಮೂರು ಸಾವಿರಮಠದ ಜಗದ್ಗುರುಗಳ ಜನನ-ಬಾಲ್ಯ-ಬೆಳವಣಿಗೆಗಳನ್ನು ಸರಿಸಮನಾಗಿ ಹೋಲುವ ದರಿಂದ ಭವಿಷ್ಯದಲ್ಲಿ ವೈರಾಗ್ಯ ಚಕ್ರವರ್ತಿಗಳಾಗುವ, ಶಿವಯೋಗಿ ವರೇಣ್ಯರಾಗುವವರ ಬಾಲ್ಯ-ಬೆಳವಣಿಗೆಗಳ ಸ್ಥಿತಿ-ಗತಿಗಳನ್ನು ಸರ್ವಗ್ರಾಹಿಯಾಗುವಂತೆ ಚಿತ್ರಿಸಲಾಗಿದೆ.

ಶ್ರೀ ಅಪ್ಪಯ್ಯಸ್ವಾಮಿಗಳು ಬಿದರಿಮಠದ ಸ್ವಾಮಿ ಶ್ರೇಷ್ಠರಾಗುವಂತೆ, ಬಿದರಿಮಠದ ಶ್ರೀಗಳವರು ಬಯಸಿದಂತೆ, ಶ್ರೀ ಶ್ರೀ ಜಗದ್ಗುರುಗಳನ್ನು, ವೀರಶೈವ ಧರ್ಮದ ಕೀರ್ತಿಕಳಶರಾದ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು ಶಿವಯೋಗಮಂದಿರದ ಸತ್‌ಕಳೆಯಾಗಿ, ಕರುನಾಡ ತುಂಬೆಲ್ಲ ಶಿವಬೆಳಕನ್ನು ಪಸರಿಸುವ ಪಾವನರತ್ನವಾಗುವಂತೆ ಹಂಬಲಿಸಿದರು. ಇಲ್ಲಿ ಬಂದವರೆಲ್ಲ ಹೆಸರಿಗೆ ತಕ್ಕಂತೆ ಸದ್ಗುಣಗಳನ್ನು ಅಳವಡಿಸಿಕೊಂಡ ವಿಷಯವನ್ನು ಅರಿತುಕೊಳ್ಳಬೇಕು.

೩ನೆಯ ಅಧ್ಯಾಯದಲ್ಲಿ ಶ್ರೀ ಅಪ್ಪಯ್ಯಸ್ವಾಮಿಗಳ ಆತ್ಮಸಂಶೋಧನೆ, ಅಂತರಂಗ ಶೋಧನೆಗಳು ಔಚಿತ್ಯಪೂರ್ಣವಾಗಿ, ಮಾರ್ಮಿಕವಾಗಿ, ಯಥಾವತ್ತಾಗಿ ಮತ್ತು ಪ್ರಭಾವವತ್ತಾಗಿ ಮೂಡಿಬಂದಿವೆ. ಸಾಧಕ ಜೀವನದ ಏಳು–ಬೀಳು, ಉನ್ನತಿ–ಅವನತಿ, ಶಾಂತಿ-ಅಶಾಂತಿ, ನೋವು–ನೆಮ್ಮದಿ, ಎಳೆತ–ಸೆಳೆತ, ಬೇಕು–ಬೇಡ, ಸಂಶಯ, ಚಂಚಲತೆ, ಅಧೀರತೆ, ಹೊಯ್ದಾಟ, ಮನದ ತಳಮಳ, ಇಂದ್ರಿಯಂಗಳ ಉಪಟಳ ಮುಂತಾದವುಗಳು ಸಹಜವಾಗಿ ಕಾಣಿಸಿಕೊಂಡಿವೆ. ಸಮರ್ಥ ಸಾಧಕರು ಮತ್ತೊಬ್ಬ ಸಮರ್ಥ ಸಾಧಕರನ್ನು ಕಂಡಂತಿದೆ. ಮಿಂಚಿಗೆ ಮಿಂಚು ಹಳಚಿದಂತಿದೆ. ಶಿವಯೋಗಮಂದಿರದ ಸ್ಥಾನಮಹಿಮೆಯನ್ನರಿತ ಶ್ರೀ ಅಪ್ಪಯ್ಯರು, ಹಾವೇರಿಯ ಶ್ರೀ ಶಿವಬಸವಸ್ವಾಮಿಗಳಿಗೆ, ತಮ್ಮನ್ನು ಶಿವಯೋಗ ಮಂದಿರಕ್ಕೆ ಕಳಿಸಬೇಕೆಂದು ವಿನಂತಿಸಿಕೊಂಡರು. ಅವರು ಶಿವಯೋಗದಲ್ಲಿ ನಿರತರಾಗಿ ಅಪ್ಪಟ ಶಿವಶರಣರಾಗಲು ಬಯಸಿದರು. ಅವರ ಹಂಬಲ ಹಣ್ಣಾಯಿತು. ಹೀಗೆ ಶಿವಯೋಗ ಸಾಗರದಲ್ಲಿ ಮುಳುಗಿದಾಗ, ಒಂದಿನ ಆಗಲಾರದ ಅಪಶಕುನಗಳು ಆದವು. ಲಿಂಗಧ್ಯಾನದಲ್ಲಿ ಅವರ ಮನ ನಿಲ್ಲಲಿಲ್ಲ. ಏನೋ ದುಗುಡ. ಇಷ್ಟು ಸಾಕಾಗದಂತೆ ಪೂಜೆಗೆ ಕುಳಿತಾಗ ವಿಭೂತಿಗಟ್ಟಿ ಒಡೆಯಿತು. ದುಃಖ ಒತ್ತರಿಸಿ ಬಂತು. ಯಾರ ಕೂಡ ಮಾತಾಡದ ಮನಸ್ಸಾಯಿತು. ಇದಾದ ಸ್ವಲ್ಪೇ ಹೊತ್ತಿನಲ್ಲಿ ಶ್ರೀ ಬಿದರಿ ಶಿವಯೋಗಿಗಳ ಅಂತ್ಯಾವಸ್ಥೆಯ ಸಂಕಟ ಸುದ್ದಿ ಬಂತು. ಅತೀ ದುಃಖದಿಂದ ದಿಕ್ಕುಗಾಣದಾದರು. ಏಕಾಂತದಲ್ಲಿ ಅತ್ತರು, ಕರೆದರು. ಇದನ್ನರಿತ ಶ್ರೀ ಹಾನಗಲ್ಲ ಸ್ವಾಮಿಗಳು, ಅಪ್ಪಯ್ಯನವರಿಗೆ, ಶರಣರಿಗೆ ಮರಣವೇ ಮಹಾನವಮಿ. ಅವರಿಗೆ ಮರಣ ಇಲ್ಲವೇ ಇಲ್ಲ. ಲಿಂಗದೊಳಗಾಗುವರು. ಅವರು ದೇಹಾಭಿಮಾನಿಗಳಲ್ಲ; ಆತ್ಮಾಭಿಮಾನಿಗಳು ಎಂದು ಮುಂತಾಗಿ ಸಾಂತ್ವನ ಹೇಳಿ, ಧೈರ್ಯತುಂಬಿದರು. ಅವರನ್ನು ಬಿದರಿಗೆ ಕರೆತಂದರು. ಆಗ ಬಿದರಿ ಶ್ರೀಗಳವರು ತಮ್ಮ ಶಿಷ್ಯರನ್ನು ಕಣ್ತುಂಬ ನೋಡಿ, ಮನದುಂಬಿ ಹರಸಿ ಶ್ರೀ ಅಪ್ಪಯ್ಯನನ್ನು ತಮ್ಮ ಮಠದ ಅಧಿಕಾರಿಯನ್ನಾಗಿ ಮಾಡುವ ಭಾರವನ್ನು ಹಾನಗಲ್ಲ ಶ್ರೀಗಳಿಗೆ ಹೊರಸಿ, ಅವರಿಗೆ ಶ್ರೀ ಅಥಣಿ ಶಿವಯೋಗಿಗಳ ದರ್ಶನ ಮಾಡಿಸುವ ಇಚ್ಛೆಯನ್ನು ಪ್ರಕಟಿಸಿದರು ಮತ್ತು ತಮ್ಮ ಅಂತ್ಯದ ಕಾಣಿಕೆಯೆಂದು ೨೫ ರೂ. ಗಳನ್ನು ಅವರ ಪಾದಕ್ಕೆ ಸಲ್ಲಿಸಲು ಬಯಸಿ, ೧೯೧೧ನೇ ಇಸ್ವಿ ಸೋಮವಾರದಂದು ಶುಭಮುಹೂರ್ತದಲ್ಲಿ ಲಿಂಗದೊಳಗೆ ಸಂದರು.

ಶ್ರೀ ಆತ್ಮ ಶೋಧನೆಯ ಅಧ್ಯಾಯ ಶ್ರೀ ಅಪ್ಪಯ್ಯಸ್ವಾಮಿ ಚರಿತೆಯೆಂಬ ಮಂಗಲ ಮಂದಿರದ ಹೊನ್ನಗಳಸ. ಹೃದಯ ಮಂದಿರ. ಶ್ರೀ ಅಪ್ಪಯ್ಯನವರ ವ್ಯಕ್ತಿತ್ವ ಪೌರ್ಣಿಮೆಯ ಚಂದಿರನಂತೆ ತೊಳಗಿ, ಬೆಳಗಿ, ಅಲ್ಲಿಯ ವಿಷಯ ಸಾಮಗ್ರಿ, ಸಂಗ್ರಹಗಳು ಹುಣ್ಣಿಮೆಯ ಬೆಳದಿಂಗಳಿನಂತೆ ಸಾಧಕರಿಗೆ ಸ್ಫೂರ್ತಿಯನ್ನು ತುಂಬುವದು. ಈ ಅಧ್ಯಾಯ ವಿಸ್ತಾರವಾಗಿ ಬಂದಿದೆ. ಲೇಖಕರಾದ ಶ್ರೀ ಶ್ರೀ ಮೂರುಸಾವಿರಮಠದ ಜಗದ್ಗುರುಗಳ ಅಂದಿನ ಆಳವಾದ ಅಧ್ಯಯನ, ಪ್ರತಿಭೆ, ಪಾಂಡಿತ್ಯಗಳು ಜ್ಞಾನಗಂಗೆಯಾಗಿ ಹರಿದು, ಮಂಗಳವನ್ನು ಸೂರೆಮಾಡಿವೆ. ಅವರ ಸಾಧಕ ಜೀವನದ ಅರಿವು, ಅನುಭವಗಳು ಅರಳಿವೆ. ಯೋಗಾಭ್ಯಾಸ ಗರಿಗೆದರಿ, ಸಿರಿಯಾಗಿ ನರ್ತಿಸಿದೆ. ಅವರು ಗೈದ ತಪಸ್ಸು ತೆರೆತೆರೆಯಾಗಿ ಥಳಥಳಿಸಿ, ಓದುಗರ ಮನವನ್ನು ಮೇಲೆ ಮೇಲೆ ಸೆಳೆದಿದೆ. ಅವರ ಸುಜ್ಞಾನ, ನಿರ್ಮಲಜ್ಞಾನ ಮತ್ತು ಆತ್ಮಜ್ಞಾನಗಳು ಮುಪ್ಪುರಿಗೊಂಡು ಶಿವಜ್ಞಾನಕ್ಕೆ ಪ್ರೇರಣೆಯನ್ನೊದಗಿಸಿವೆ. ಚಿತ್‌ಶಕ್ತಿಯ ಪ್ರಭೆಯಿಂದ, ಸತ್‌ಸಾಕ್ಷಾತ್ಕಾರವಾಗಿ, ಶಿವ ಭಾವನೆಗಳು ಬುಗ್ಗೆಯಾಗಿ ಚಿಮ್ಮಿ ಪರಮಾತ್ಮನ ದರ್ಶನ ಮಾಡಿಸಿರುವವು. ತಮ್ಮ ಕಥಾನಾಯಕರಾದ ಶ್ರೀ ಅಪ್ಪಯ್ಯಗಳ ಹೊನ್ನಪುತ್ಥಳಿ, ಮೆಚ್ಚು, ಮೆರುಗು ಹಾಗೂ ಮಾನ್ಯತೆ ಪಡೆದು ಕೊನೆಯವರೆಗೂ ಉಚ್ಚಪೀಠದಲ್ಲಿ ಕಂಗೊಳಿಸುವಂತೆ ಕೆತ್ತಿದ್ದಾರೆ. ಲೇಖಕರ ಯೋಗ್ಯತೆ ಶ್ರೀ ಅಪ್ಪಯ್ಯನವರ ಯೋಗ್ಯತೆಯಲ್ಲಿ ಹಾಸುಹೊಕ್ಕಾಗಿದೆ. ಮಹಾತ್ಮರಾದವರು ತಮ್ಮನ್ನು ತಾವೇ ತಿದ್ದಿಕೊಳ್ಳುವ, ತಮ್ಮ ಕೂಡ ತಾವೇ ಮಾತನಾಡಿ ಕೊಳ್ಳುವ ಗುಟ್ಟನ್ನು ಬಯಲಿಗಿಟ್ಟಿದ್ದಾರೆ. ಇಲ್ಲಿ ಕೇವಲ ವಿದ್ಯೆ, ಬುದ್ಧಿ, ಜ್ಞಾನಗಳ ಸಂಗಮವಲ್ಲದ ಅನುಭವ ಆಧಿಕ್ಯದ ಮಂಗಲವಿದೆ. ಮೂರುಸಾವಿರಮಠದ ಶ್ರೀ ಜಗದ್ಗುರು ಗಳ, ಕಲ್ಕತ್ತಾ ವಿಶ್ವವಿದ್ಯಾಲಯದ ಕಾವ್ಯತೀರ್ಥ, ಡಾಕಾ ವಿಶ್ವವಿದ್ಯಾಲಯದ ಸಾಹಿತ್ಯರತ್ನ ಮತ್ತು ಕಾಶೀ ವಿಶ್ವವಿದ್ಯಾಲಯದ ವೇದಾಂತಾಚಾರ್ಯ ಪರೀಕ್ಷೆಗಳ ಪ್ರಚಂಡ ಜ್ಞಾನಸಂಗ್ರಹ ಇಲ್ಲಿ ಮಡುವಾಗಿ ನಿಂತಿದೆ. ಅವರ ಕನ್ನಡ–ಹಿಂದಿ–ಇಂಗ್ಲೀಷ ಹಾಗೂ ಸಂಸ್ಕೃತ ಭಾಷೆಗಳ ಮೇಲಿರುವ ಪ್ರಭುತ್ವ ಪ್ರಕಟವಾಗಿದೆ.

ವಚನಸಾಹಿತ್ಯ, ಭಗವದ್ಗೀತೆ, ಕಠೋಪನಿಷತ್ತು, ಈಶೋಪನಿಷತ್ತು, ಕೇನೋಪನಿ ಷತ್ತು, ಶಿವಯೋಗ ಪ್ರದೀಪಿಕೆ ಮುಂತಾದ ಮಹಾನ್ ಗ್ರಂಥಗಳಿಂದ ಉದಾಹರಣೆಯ ಅಣಿಮುತ್ತುಗಳನ್ನು ಹೇರಳವಾಗಿ ಹೆಣೆದಿದ್ದಾರೆ. ಇದಲ್ಲದೆ ಶ್ರೀ ಬಸವೇಶ್ವರ, ಶ್ರೀ ಅಲ್ಲಮ ಪ್ರಭುಗಳ ಹಾಗೂ ಶ್ರೀ ವಿವೇಕಾನಂದರ ಅತ್ಯಮೂಲ್ಯ ವಿಚಾರಗಳನ್ನು ಹೃದಯಕ್ಕೆ ತಟ್ಟುವಂತೆ ಉದಾಹರಣೆಗಳಾಗಿ ಹೇಳಿದ್ದಾರೆ. ಆಧ್ಯಾತ್ಮಿಕ ಮತ್ತು ಪಾರಮಾರ್ಥಿಕ ವಿಷಯಗಳು ಬಂದಾಗ ಅವರ ಗದ್ಯ, ಪದ್ಯವಾಗಿ ಕುಣಿದು ಹೃದ್ಯವಾಗಿದೆ. ಭಾವಗಳು, ಬಂಧುರ ಭಾಷೆಯ ಹಿರಿಗುದುರೆಯನ್ನೇರಿ, ವೈಹಾಳಿಯ ಸೊಬಗು, ಸೌಂದರ್ಯ ಮತ್ತು ಸ್ವಾರಸ್ಯಗಳನ್ನು ಮನಾಕರ್ಷಕವಾಗಿ ಚಿತ್ರಿಸಿವೆ. ಇಲ್ಲಿಯೇ ಲೇಖಕರು ತಮ್ಮ ಹಿರಿಮೆ, ಹೆಗ್ಗಳಿಕೆಗೆ, ಜಾಣ್ಮೆ ಹಾಗೂ ಶ್ರೇಷ್ಠತೆಗಳನ್ನು ಮೆರೆದಿದ್ದಾರೆ.

ನಾಲ್ಕನೆಯ ಅಧ್ಯಾಯದಲ್ಲಿ ತೀರ್ಥಯಾತ್ರೆಗಳ ಮಹತಿಯನ್ನು ಮನಗಾಣಿಸಿದ್ದಾರೆ. ಹಿರಿಯರ ಹಿತೋಪದೇಶದಿಂದ ಶ್ರೀ ಅಪ್ಪಯ್ಯಗಳ ದುಃಖ ದೂರಾಯಿತು. ಶಿವಕಾರ್ಯ ನಿಲ್ಲಬಾರದಲ್ಲ? ಆಗ ಪೂಜ್ಯರಾದ ಹಾನಗಲ್ಲ ಸ್ವಾಮಿಗಳು ತಮ್ಮ ಶಿಷ್ಯವೃಂದಕ್ಕೆ ಎಡೆಯೂರ ಶ್ರೀ ಕ್ಷೇತ್ರದ ದರ್ಶನ ಮಾಡಿಸಿ ಅದರ ಪಾವಿತ್ರ್ಯವನ್ನು ತಿಳಿಸಲು ಶಿವ ಸಂಕಲ್ಪ ಮಾಡಿದರು. ಈ ಅಧ್ಯಾಯದಲ್ಲಿ ಸ್ಥಳ ಮಹಿಮೆ, ವ್ಯಕ್ತಿ ಮಹಿಮೆಗಳು ಸಂದರ್ಶಕರ ಮೇಲೆ ಅಗಾಧವಾದ ಪ್ರಭಾವ ಬೀರುವದನ್ನು ಲೇಖಕರು ಖಚಿತ ಪಡಿಸಿದ್ದಾರೆ. ಇಲ್ಲಿ ಲೇಖಕರ ಶೈಲಿ ಹದಗೊಂಡು, ಹರಿಹರನ ದೇವನ ಕಾವ್ಯ ಶೈಲಿಗೆ ಏರಿರುವದು. ಹಿತ–ಮಿತವಾಗಿ ವರ್ಣನೆಗಳು ಬಂದರೂ, ವರ್ಣನೆಗಳಲ್ಲಿ ಕಾವ್ಯದ ಸೊಬಗು ಸಮ್ಮಿಳಿತವಾಗಿದೆ. ಎಡೆಯೂರ ಸಿದ್ಧಲಿಂಗೇಶನ ದರ್ಶನ ಸ್ಪರ್ಶನಗಳಿಂದ ಪ್ರಭಾವಿತರಾದ ಶ್ರೀ ಅಪ್ಪಯ್ಯನವರು, ಅಲ್ಲಿಯೇ ಅನುಷ್ಠಾನ ಮಾಡಲು ಹಂಬಲಿಸಿದರು. ಅವರ ಹಂಬಲಕ್ಕೆ ಹರ್ಷಗೊಂಡ ಹಾನಗಲ್ಲ ಶ್ರೀಗಳವರು, ಹಾವೇರಿ ಸ್ವಾಮಿಗಳಿಂದ ಅನುಗ್ರಹ ಮಾಡಿಸಿದರು. ಆಗ ಅಪ್ಪಯ್ಯದೇವರು ಶ್ರೀ ಅಪ್ಪಯ್ಯದೇಶಿಕರಾದರು. ಹಾನಗಲ್ಲ ಶ್ರೀ ಶಿವಯೋಗಿಗಳ ಅಪ್ಪಣೆಯಂತೆ ಪಕ್ಕಾಮಡಿಯಿಂದ, ಪಾದಚಾರಿಗಳಾಗಿ, ಶಿವಪೂಜೆ ಗಂಟಿನೊಂದಿಗೆ ಅನುಷ್ಠಾನ ಮಾಡಲು ಎಡೆಯೂರಿಗೆ ಹೋಗುವ ಶಿವಾವಕಾಶ ಸಿಕ್ಕಾಗ ಹಿಗ್ಗಿ ಹಿರಿಹೊಳೆಯಾದರು. ಈ ಪ್ರಸಂಗವನ್ನು ಅನುಕೂಲಮಾಡಿಕೊಂಡು ಶ್ರೀ ಮಹಾಂತ ದೇವರು ಕರ್ತವ್ಯವೇ ಜೀವನ, ಮಮತೆಯು ಮಾತೆ ಮತ್ತು ಸದ್ಗತಿ ಕಾರಣವೆಂದು ಪಾರಮಾರ್ಥಿಕ ಹಾಗೂ ಲೌಕಿಕಗಳನ್ನು ದೃಷ್ಟಿಯಲ್ಲಿಟ್ಟುಕೊಂಡು, ಕರ್ತವ್ಯದ ಸ್ಥಾನ–ಮಾನ ಮತ್ತು ಮಹತಿಗಳನ್ನು ಎತ್ತಿ ಹೇಳಿರುವರು. ದೇಶದ ಕಲ್ಯಾಣ ಕರ್ತವ್ಯ ನಿಷ್ಠೆಯಲ್ಲಡಗಿದೆಯೆಂಬ ಮುತ್ತಿನಂಥ ಮಾತನ್ನು ಹೇಳದ ಬಿಟ್ಟಿಲ್ಲ. ಇದರ ಕೂಡ ಶಿವಪೂಜೆಯೇ ಶರಣರ ಹೆದ್ದಾರಿ; ಲಿಂಗ ಮಧ್ಯಸ್ಥನಾದ ಶಿವಕ್ರಿಯೆ ಇಲ್ಲದೆ ಪ್ರಕಾಶಿಸಲಾರ ಮುಂತಾದ ತತ್ವಗಳ ತಿರುಳನ್ನು ಮನದಟ್ಟಾಗುವಂತೆ ತಿಳಿಸಿದ್ದಾರೆ. ಶ್ರೀ ಅಪ್ಪಯ್ಯದೇಶಿಕರು ಎಡೆಯೂರ ಅನುಷ್ಠಾನವನ್ನು ಯಶಸ್ವಿಗೊಳಿಸಿ, ಶ್ರೀ ಸಿದ್ಧಲಿಂಗೇಶನ ಕೃಪೆಗೆ ಪಾತ್ರರಾಗಿ, ನಂತರ ಅಥಣಿ ಶ್ರೀ ಶಿವಯೋಗಿಗಳ ಆಶೀರ್ವಾದ ಪಡೆದರು. ತಮ್ಮ ಗುರುಗಳು ಕೊಟ್ಟ ೨೫ ರೂ.ಗಳನ್ನು ಪೂಜ್ಯ ಅಥಣಿ ಶ್ರೀಗಳವರ ಪಾದಕ್ಕೆ ಅರ್ಪಿಸಿ ಕರ್ತವ್ಯ ಪ್ರಜ್ಞೆ ತೋರಿಸಿದರು. ಇಷ್ಟಕ್ಕೂ ತೃಪ್ತಿಪಡದ ಶ್ರೀ ಅಪ್ಪಯ್ಯದೇಶಿಕರು, ಇಲಕಲ್ಲ ಸಮೀಪದ ಕೊಡಗಲಿ ಗವಿಯಲ್ಲಿ ಅನುಷ್ಠಾನ ಕೈಕೊಂಡರು. ಒಳ್ಳೆಯ ಕಾರ್ಯಗಳಿಗೆ ವಿಘ್ನಗಳು ಹೆಚ್ಚೆನ್ನುವಂತೆ ಶಿವನು ಅವರನ್ನು ಪರೀಕ್ಷೆಗೆ ಒಳಪಡಿಸಿದ. ಅರೆದು ಕೊರೆದು, ಸಣ್ಣಿಸಿ ನೋಡಿದ. ಅಖಂಡ ಅನುಷ್ಠಾನದ ಕಾರಣ ಅವರಿಗೆ ಅತಿಸಾರದಬಾಧೆ ಹೆಚ್ಚಿತು. ಹರ ಮುನಿದರೆ ಗುರು ಕಾಯುವಂತ ಹಾವೇರಿಯ ಶ್ರೀಗಳವರು ಆಶೀರ್ವದಿಸಿದರು. ಕಾರಣ ಶ್ರೀ ಅಪ್ಪಯ್ಯದೇಶಿಕರ ಜೊತೆಗೆಂದು ಬಂದಿದ್ದ, ಬಸವಲಿಂಗದೇಶಿಕರು, ಕೊಡಗಲಿಯಲ್ಲಿರುವ ಮಹಾಲಿಂಗೇಶ್ವರ ಗದ್ದುಗೆಗೆ ೧೧ ಮಂಟಪಪೂಜೆ ಮಾಡಿಸುವೆನೆಂದು ಹರಿಕೆ ಹೊತ್ತರು. ಬಂದ

ಆಪತ್ತು ದೂರಾಯಿತು. ಆ ಎರಡನೆಯ ಅನುಷ್ಠಾನದಲ್ಲಿ ಜಯಶಾಲಿಗಳಾಗಿ ಶ್ರೀ ಅಪ್ಪಯ್ಯದೇಶಿಕರು ಶಿವಯೋಗಮಂದಿರಕ್ಕೆ ದಯಮಾಡಿಸಿದರು.

ಐದನೆಯ ಅಧ್ಯಾಯದಲ್ಲಿ ಶ್ರೀ ಅಪ್ಪಯ್ಯದೇಶಿಕರು, ಅನುಷ್ಠಾನ ಮತ್ತು ಪುಣ್ಯ ಕ್ಷೇತ್ರಗಳ ದರ್ಶನದಿಂದ ಶಕ್ತಿಯಾದರೆಂಬ ರಹಸ್ಯವನ್ನು ಲೇಖಕರು ತಿಳಿಸಿ ಅಧಿಕಾರ ಗದ್ದುಗೆಗೆ ಅರ್ಹರನ್ನಾಗಿ ಕಂಡಿದ್ದಾರೆ. ಶ್ರೀ ಹಾನಗಲ್ಲ ಸ್ವಾಮಿಗಳು, ಅವರ ಗುರುಗಳ ಅಪ್ಪಣೆಯಂತೆ, ಅವರಿಗೆ ಕಲ್ಮಠದ ಅಧಿಕಾರ ಪಟ್ಟಗಟ್ಟುವ ಮೊದಲು ಸದ್ಭಕ್ತರ ಬಯಕೆ ಯನ್ನು ಅರಿಯಲು ಇಚ್ಛಿಸುತ್ತಾರೆ. ಇದುವೇ ಪ್ರಜಾಪ್ರಭುತ್ವದ ಮೂಲತತ್ವ, ಒರೆಗಲ್ಲೆಂದು ಶ್ರೀ ಜಗದ್ಗುರುಗಳು ಮೂರುಸಾವಿರಮಠ ನಂಬಿದ್ದು, ನಾಡು ಹೆಮ್ಮೆಪಡುವ ಸಂಗತಿ. ಇತ್ತ ಬಿದರಿಗೆ ಬಂದ ಅಪ್ಪಯ್ಯದೇಶಿಕರು, ತ್ವರಿತವಾಗಿ ತಮ್ಮ ಗುರುಗಳ ಗದ್ದಿಗೆಯನ್ನು ಸದ್ಭಕ್ತರ ಸಹಾಯ ಸಹಕಾರಗಳೊಂದಿಗೆ ಕಟ್ಟಿಸಲು ಹಾತೊರೆದರು. ಅದರಲ್ಲಿ ಆಯಶಸ್ವಿ ಯಾದರು. ಅವರ ಸ್ವಭಾವವನ್ನು ಸಮೀಪ ಬಂದು ಕಂಡುಂಡು ತೃಪ್ತಿಗೊಂಡ ಸದ್ಭಕ್ತ ವೃಂದ, ಈ ಬೆಳಕನ್ನು ಕಳಕೊಳ್ಳಬಾರದೆಂದು ದೃಢ ಸಂಕಲ್ಪ ಮಾಡಿದರು. ಈ ಶಿವಬೆಳಕು ನಮ್ಮ ಮನ-ಮನೆ-ನಾಡು ಬೆಳಗಲೆಂದು ಹಿರಿಯಾಶೆ ಇಟ್ಟುಕೊಂಡರು. ಅಲ್ಲಿಯ ಸದ್ಭಕ್ತರು ಒಂದಾಗಿ ಶ್ರೀ ಹಾನಗಲ್ಲ ಸ್ವಾಮಿಗಳ ದರ್ಶನ ಪಡೆದು, ತಮ್ಮ ಬಯಕೆಯನ್ನು ಮುಂದಿಟ್ಟರು. ಆನಂದಭರಿತರಾದ ಹಾನಗಲ್ಲ ಶ್ರೀಗಳು ತಡಮಾಡದೆ ಸಕಲ ಸಂಭ್ರಮ ಗಳಿಂದ, ಅನೇಕ ಶಿವಕಾರ್ಯಗಳನ್ನು ಹಮ್ಮಿಕೊಂಡು, ಎಲ್ಲೆಡೆ ಶಿವಭಕ್ತಿ ಹರಡುವಂತೆ ಮಾಡಿ ೧೯೨೨ರಲ್ಲಿ ಬಿದಿರಿ ಕಲ್ಮಠದ ಅಧಿಕಾರ ಪಟ್ಟಗಟ್ಟಿದರು. ಅಂದಿನಿಂದ ಅಪ್ಪಯ್ಯಸ್ವಾಮಿ ಗಳಾದರು. ಅಲ್ಲಿಯ ಪದ್ಧತಿಯಂತೆ ಶಿವಲಿಂಗ ಸ್ವಾಮಿಗಳಾದರು. ಈ ಸದಾವಕಾಶ ವನ್ನು ಲೇಖಕರಾದ ಮೂರುಸಾವಿರಮಠದ ಶ್ರೀ ಶ್ರೀ ಜಗದ್ಗುರುಗಳು, ಸ್ವಾಮಿತ್ವದ ಪಾವಿತ್ರ್ಯ, ಗುರುತರ ಜವಾಬ್ದಾರಿ ಮತ್ತು ಸ್ವಾಮಿಗಳಾದವರು ಅಡಿಯಿಡುವ ಮುಳ್ಳಿನ ದಾರಿಗಳ ಗಂಡಾಂತರ ಮುಂತಾದ ಎಚ್ಚರಿಕೆಯ ಮಾತುಗಳು ಆದರ್ಶ ಸ್ವಾಮಿಗಳಾಗುವ ಹೆಗ್ಗುರಿ ಇಟ್ಟುಕೊಂಡವರಿಗೆ ದಾರಿದೀಪಗಳಾಗಿವೆ. ಸ್ವಾಮಿಯಾಗಿರುವೆನೆಂದು ಅಡ್ಡದಾರಿ ಹಿಡಿದರೆ ಸ್ವಾಮಿತ್ವಕ್ಕೆ ದೋಷತಂದಂತೆ; ಶಿವವೇಷ ಧರಿಸಿದ ಮೇಲೆ, ಶಿವಗುಣಗಳು ಅಳವಡಬೇಕೆಂಬ ಉಪದೇಶಗಳ ಮರ್ಮ ಮನಗಾಣಬೇಕು. ಇದೇ ಸಮಯಕ್ಕೆ ಹರಕೆ ಹೊತ್ತಂತೆ ಶ್ರೀ ಬಸವಲಿಂಗ ದೇಶಿಕರು ೧೧ ಮಂಟಪ ಪೂಜೆ ಮಾಡಿಸಿದರು.

ಆರನೆಯ ಅಧ್ಯಾಯದಲ್ಲಿ ಶ್ರೀ ಅಪ್ಪಯ್ಯಸ್ವಾಮಿಗಳು ಸತ್ಯ ಶಿವಯೋಗಿಗಳಾಗಿ ತಮ್ಮ ಸದ್ಭಕ್ತರಿಗೆ ಗುರು, ಲಿಂಗ, ಜಂಗಮ, ವಿಭೂತಿ, ಅಷ್ಟಾವರಣ, ಷಟ್‌ಸ್ಥಲ ಮತ್ತು ಪಂಚಾಚಾರಗಳ ಮಹಿಮೆಯನ್ನು ಹೇಳುವಾಗ ವೀರಶೈವ ಧರ್ಮದ ಹಿರಿಮೆ, ಮೇಲ್ಮೆಸಾರ ಹಾಗೂ ತಿರುಳನ್ನು ಅಚ್ಚೊತ್ತುವಂತೆ ತಿಳಿಸಿದ್ದಾರೆ. ಇಲ್ಲಿ ಲೇಖಕರ ವೀರಶೈವ ಧರ್ಮದ ಆಳವಾದ ಅಭ್ಯಾಸವನ್ನು ಅರಿಯಬಹುದಾಗಿದೆ. ಶಿವಯೋಗಿಯ ವೇಳೆ ವ್ಯರ್ಥಸವೆಯ ಬಾರದೆಂದು ಇನ್ನಷ್ಟು ಶಿವಶಕ್ತಿ ಸಾಧಿಸಲು, ಮಲಪ್ರಭೆಯ ಒಡಕು ಹೊಳೆಯ ದಡದ

ಸ್ಥಾನದಲ್ಲಿ ಮೂರನೆಯ ಮಹತ್ವವಾದ ಅನುಷ್ಠಾನವನ್ನು ಶ್ರೀ ಅಪ್ಪಯ್ಯಸ್ವಾಮಿಗಳು ಕೈಕೊಂಡರು. ಆ ಸ್ಥಾನ, ಪೌರಾಣಿಕ ಹಾಗೂ ಧಾರ್ಮಿಕ ದೃಷ್ಟಿಯಿಂದ ಪ್ರಸಿದ್ಧವಾಗಿದೆ; ಪಾವನವಾಗಿದೆ; ಹಾಗೂ ಪ್ರಶಾಂತವಾಗಿದೆ. ಹೀಗೆ ಗುರುಬಲ, ಅನುಷ್ಠಾನಗಳ ಅಗಾಧಶಕ್ತಿ, ಶಿವಪೂಜೆಯ ಫಲ ಮತ್ತು ಲಿಂಗಾನುಭವಗಳಿಂದ ಅವರು ಪವಾಡ ಪುರುಷರಾಗಿ ಹೊಳೆದರು. ಅವರು ಪೂಜೆಗೆ ಕುಳಿತಾಗ, ಪ್ರತಿನಿತ್ಯ ಹುಲಿ ಬಂದು ಅವರೆದುರು ಮಲಗಿ, ಶ್ರೀಗಳವರು ಹೋಗೆಂದಾಗ ಹೋಗುತ್ತಿತ್ತೆಂಬ ನಿಜಸಂಗತಿ ಸತ್ಯಸಾಕ್ಷಿಯಾಗಿದೆ. ಸದಾವಕಾಲ ಶಿವಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಸ್ವಾಮಿ ಶ್ರೇಷ್ಠರ ಸ್ಥಳಗಳು ಪುಣ್ಯ, ಪವಿತ್ರ ಕ್ಷೇತ್ರಗಳಾಗುವವು. ಇಂದಿಗೂ ಆ ಸ್ಥಳದಲ್ಲಿ ಸಂಕ್ರಮಣದ ಹಬ್ಬದಂದು ಜಾತ್ರೆಯಾಗುವದು.

ಸೂರ್ಯೋದಯದಿಂದ ಪ್ರಾರಂಭವಾದ ಚರಿತ್ರೆ ಸೂರ್ಯಾಸ್ತದೊಂದಿಗೆ ಮುಕ್ತಾಯವಾಗುವ ಮರ್ಮವನ್ನು ಅರಿಯಬೇಕು. ಇದೇ ಕೊನೆಯ ಅಧ್ಯಾಯ. ಹಾವೇರಿಯ ಶ್ರೀಗಳವರು ಅರುಹಿನ ಮಹಂತರು. ವಾತಬಾಧೆಯಿಂದ ಸವದತ್ತಿಗೆ ದಯ ಮಾಡಿಸುವ ಪ್ರಸಂಗದಲ್ಲಿ ಗೂಢತೆಗಾಢವಾಗಿತ್ತು. ಈ ಸುದ್ದಿ ತಿಳಿದ ಶ್ರೀ ಅಪ್ಪಯ್ಯ ಸ್ವಾಮಿಗಳು ಗುರುಸೇವೆಯ ಕರ್ತವ್ಯ ಪ್ರಜ್ಞೆಯಿಂದ, ಅನುಷ್ಠಾನ ಬಿಟ್ಟು ಅವರ ದರ್ಶನಕ್ಕಾಗಿ ಸವದತ್ತಿಗೆ ಬಂದರು. ಆದರೆ ಶಿವಕರ್ತವ್ಯ ನಿಷ್ಠರಾದ ಹಾವೇರಿಯ ಸ್ವಾಮಿಗಳು, ನಿಷ್ಠುರರಾಗಿ 'ಅನುಷ್ಠಾನ ಬಿಟ್ಟು ಏಕೆ ಬಂದಿರೆಂದು' ಗದರಿಸಿದರು. ಸೂಕ್ಷ್ಮ ಸ್ವಭಾವದ ಶ್ರೀ ಅಪ್ಪಯ್ಯಸ್ವಾಮಿಗಳು ಮುಖ್ಯ ಕರ್ತವ್ಯದ ಅರುವಿನಿಂದ ಎಚ್ಚರರಾಗಿ ಬಂದಂತೆ ಮಿಂಚಿನಂತೆ ಕತ್ತಲೆಯಲ್ಲಿ ಕಾಣದಾದರು. ಆಗ ರಾತ್ರಿಯಾಗಿತ್ತು. ಕತ್ತಲೆಯಲ್ಲಿಯೇ ಒಬ್ಬೊಂಟಿಗರಾಗಿ ಕಾಲ್ನಡಿಗೆಯಲ್ಲಿ ಅಪ್ಪಯ್ಯಸ್ವಾಮಿಗಳು ಹೋದ ಸುದ್ದಿ ತಿಳಿದು ಶ್ರೀ ಹಾವೇರಿ ಗುರುವರ್ಯರ ಅಂತಃಕರಣ ಅಲುಗಾಡಿತು.

ಅನುಷ್ಠಾನ ನಿರಾಂತಕವಾಗಿ ನಡೆಯುತ್ತಿದ್ದಂತೆ ಶ್ರೀ ಅಪ್ಪಯ್ಯಸ್ವಾಮಿಗಳು ಬಹಳ ಅಶಕ್ತರಾದರು. ಆದರೆ ಅನುಷ್ಠಾನವನ್ನು ನಿಲ್ಲಿಸಲಿಲ್ಲ. ಕಾಯಕನಿಷ್ಠೆ, ಕಾಯಕ ಗೌರವ ವೀರಶೈವ ಧರ್ಮದ ತಳಪಾಯ. ಪೂಜೆಗೆ ಕುಳಿತಾಗ ಶ್ರೀ ಅಪ್ಪಯ್ಯಸ್ವಾಮಿಗಳು ಧರಿಸುವ ಕ್ರಿಯಾಘಟ್ಟಿ ಒಡೆಯಿತು. ತ್ರಿಕಾಲ ಜ್ಞಾನಿಗಳಾದ ಅವರು, ಶಿವನ ಕರೆಬಂದಿದೆ ಎಂಬುದನ್ನು ಅರಿತರು. ತಮ್ಮ ಸದ್ಭಕ್ತ ವೃಂದವನ್ನು ಕರೆಯಿಸಿ, ತಾವು ಲಿಂಗೈಕ್ಯರಾಗುವ ರಹಸ್ಯವನ್ನು ತಿಳಿಸಿದರು. ಭಕ್ತವೃಂದ ಗೊಳೋ ಎಂದು ಅತ್ತುಬಿಟ್ಟರು. ಅವರನ್ನು ಸಮಾಧಾನಪಡಿಸಿ ಶುಚಿರ್ಭೂತರಾಗಿ, ಲಿಂಗ ಪೂಜೆಯಲ್ಲಿ ತೊಡಗಿ, ಲಿಂಗದಲ್ಲಿ ಒಂದಾದರು. ಶರಣರಿಗೆ ಮರಣವೇ ಮಹಾನವಮಿ ಸೂರ್ಯ ಅಸ್ತನಾದನು. ನಮಗಿನ್ನು ಬೆಳಕಿನ ಗತಿಯೇನು? ಎಂದು ಲೌಕಿಕ ಜನ ಹಲಬುತ್ತಿರುವಾಗಲೇ ಶ್ರೀ ಅಪ್ಪಯ್ಯ ಸ್ವಾಮಿಗಳು ಶಿವಲೋಕದ ನಕ್ಷತ್ರವಾಗಿ ಪಾರಮಾರ್ಥಿಕ ಲೋಕವನ್ನು ಬೆಳಗಿದರು. ಶಿವ ಯೋಗಿಗಳಿಗೆ ಮರಣವೆಂಬುದು ಇಲ್ಲವೇ ಇಲ್ಲ. ಅವರು ಲಿಂಗವಾಗುವರು. ಬೆಳಗಿನೊಳಗಿನ ಮಹಾಬೆಳಕಾಗುವರು. ಅವರು ಇದ್ದು ಬಾಳುವದಕ್ಕಿಂತ ಬೆಳಕಾಗಿ ಸಹಸ್ರ-ಸಹಸ್ರ ಸಂವತ್ಸರ ಬಾಳುವವರು. ಈ ಶಿವಪುಷ್ಪ ಇನ್ನಷ್ಟು ಬಹಳಷ್ಟು ಬಿರಿದು ಕಲ್ಯಾಣವೆಂಬ

ಪರಿಮಳವನ್ನು ಲೋಕಕ್ಕೆ ಬೀರುವಾಗಲೇ, ಶಿವ ತನಗೆ ಬೇಕೆಂದು ಎತ್ತಿ ಮುಡಿದು ಕೊಂಡ. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವವರಲ್ಲವೇ? ಒಟ್ಟಾರೆ ಶ್ರೀ ಅಪ್ಪಯ್ಯ ಸ್ವಾಮಿಗಳು, ಗಂಧದ ಕೊರಡಿನಂತೆ ತಮ್ಮ ಜೀವನವನ್ನು ಸವೆಸಿ, ಶಿವಗಂಧ ಹರಡಿದರು.

ಈ ಆಘಾತಕರ ಸುದ್ದಿ ತಿಳಿದ ಹಾನಗಲ್ಲ ಪೂಜ್ಯ ಸ್ವಾಮಿಗಳು, ಅಲ್ಲಿಗೆ ದಯ ಮಾಡಿಸಿ, ಶ್ರೀ ಅಪ್ಪಯ್ಯಸ್ವಾಮಿಗಳ ಹಿರಿಮೆಯುನ್ನು ಅಭಿಮಾನದಿಂದ ಹೊಗಳಿದರು. ಶರಣರ ಹಿರಿಮೆಯನ್ನು ಮರಣದಲ್ಲಿ ಕಂಡಿದ್ದೇವೆ. ಮುಂದಿನ ಮಂಗಲ ಕಾರ್ಯಗಳನ್ನು ನಡೆಸುವುದು. ಸ್ತುತ್ಯಕಾರ್ಯವೆಂದು ಎಲ್ಲರಿಗೂ ತಿಳಿಸಿದರು. ವೀರಶೈವ ಧರ್ಮದ ವಿಧಿ ವಿಧಾನಗಳನ್ನು ಚಾಚೂ ತಪ್ಪದೆ ಪಾಲಿಸಿ ಸಮಾಧಿಮಾಡುವ ಕಾರ್ಯವನ್ನು ನೆರವೇರಿಸಿದರು. ಲೇಖಕರಾದ ಮೂರುಸಾವಿರಮಠದ ಶ್ರೀ ಜಗದ್ಗುರುಗಳು, ಸಾಮಾನ್ಯ ಲೌಕಿಕ ಸದ್ಭಕ್ತರಿಗೆ ಅಪ್ಪಗಳಾಗಿ, ಆಧ್ಯಾತ್ಮಿಕ ಜೀವಿಗಳಿಗೆ ಅಯ್ಯಗಳಾಗಿ, ಶೀಲವಂತ ಸ್ವಾಮಿಗಳಿಗೆ ಸ್ವಾಮಿಗಳಾಗುವಂತೆ ಅವರ ವ್ಯಕ್ತಿತ್ವವನ್ನು ಹಿರಿದುಗೊಳಿಸಿದ್ದಾರೆ.

ಲೇಖಕರ ಶೀಲದಂತೆ ಸಾಹಿತ್ಯ, ಋಷಿಯಲ್ಲದವ ಕವಿ (ಸುಶೀಲ ಸಾಹಿತಿ) ಯಾಗ ಲಾರ; ಕೃತಿಕಾರ ಕೃತಿಯಲ್ಲಿ ಅಡಗಿರುತ್ತಾನೆ ಮತ್ತು ಕಥಾನಾಯಕನ ವ್ಯಕ್ತಿತ್ವ ಕಥೆಗಾರರ ವ್ಯಕ್ತಿತ್ವದ ಪ್ರತಿರೂಪ ಎಂಬ ಸತ್ಯೋಕ್ತಿಗಳ ತಿರುಳನ್ನು ತಿಳಿಯಬೇಕು. ಲೇಖಕರಾದ ಅಂದಿನ ಮಹಾಂತದೇವರು ಅಂದರೆ ಇಂದಿನ ಮೂರುಸಾವಿರಮಠದ ಶ್ರೀಜಗದ್ಗುರುಗಳು ಈ ಚರಿತ್ರೆಯ ಗ್ರಂಥದ ಉದ್ದಕ್ಕೂ ಉದಾತ್ತ ತತ್ವ, ಸದ್ಬೋಧೆ ಹಾಗೂ ಶಿವಕಾರ್ಯ ಗಳನ್ನು ಇಂಬಿಲ್ಲದಂತೆ ತುಂಬಿ ಇದೊಂದು ಅಪರೂಪದ ಚರಿತ್ರೆಯನ್ನಾಗಿ ಮಾಡಿದ್ದಾರೆ. ಅನವಶ್ಯಕವಾದ ಯಾವುದೇ ಶುಷ್ಕ ವಿಷಯ ಎಲ್ಲಿಯೂ ಹಣಿಕಿ ಹಾಕಿಲ್ಲ. ಎಲ್ಲವೂ ಮಂಗಲಮಯವಾಗಿದೆ. ಬೆಲ್ಲದ ಪುತ್ಥಳಿಯನ್ನು ಎಲ್ಲಿ ಚುಂಬಿಸಿದರೂ ಸಿಹಿ ಎಂಬಂತೆ ಶ್ರೀ ಅಪ್ಪಯ್ಯಸ್ವಾಮಿಗಳ ಚರಿತ್ರೆ ಶಿವಮಯವಾಗಿದೆ. ಈ ಚರಿತ್ರೆಯನ್ನು ಗಂಭೀರವಾದ ತುಂಬಿದ ಹೊಳೆಯನ್ನಾಗಿ ಹರಿಸಿ, ಅದು ಮುಟ್ಟಿದ್ದನ್ನು ತಟ್ಟಿದ್ದನ್ನು ಪಾವನಮಾಡುತ್ತ ಶಿವಸಾಗರವನ್ನು ಸೇರಿದಂತಿದೆ. ಹದಿನೆಂಟರ ಹರೆಯದಲ್ಲಿ ಹಸಿ–ಬಿಸಿ ವಿಚಾರ, ದುಡುಕಿನ ಘಟನೆಗಳು ಮತ್ತು ಶೃಂಗಾರ ಬಾಹುಲ್ಯವಾದ ಕೃತಿಗಳೇ ಹೊರಬರುವ ಸಾಧ್ಯತೆ ಹೆಚ್ಚು. ಆದರೆ ಈ ಅಪ್ಪಯ್ಯಸ್ವಾಮಿಗಳ ಚರಿತ್ರೆಯಲ್ಲಿ ಮೂರುಸಾವಿರಮಠದ ಶ್ರೀ ಜಗದ್ಗುರಗಳು ವಯಸ್ಸಿಗೆ ಮೀರಿದ ಪಾಂಡಿತ್ಯ, ಪ್ರತಿಭೆ, ಜಾಣ್ಮೆ, ಅನುಭಾವ ಹಾಗೂ ಹಿರಿತನವನ್ನು ಮೆರೆದು, ಶ್ರೇಷ್ಠ ಸಾಹಿತಿಗಳಾಗಿ ಬೆಳಗಿದ್ದು ನಾಡಿನ ಪುಣ್ಯ.

ಅಂದಿನ ಇಲಕಲ್ಲ ಮಹಾಂತದೇವರು, ಇಂದಿನ ಮೂರುಸಾವಿರಮಠದ ಅತ್ಯುಚ್ಚ ಜಗದ್ಗುರು ಪೀಠವನ್ನು ಅಲಂಕರಿಸಿ, ರಾಷ್ಟ್ರೀಯ ಸ್ವಾಮಿಶ್ರೇಷ್ಠರಾಗಿ, ಜಪಾನದಲ್ಲಿ ನಡೆದ ಅಂತರರಾಷ್ಟ್ರೀಯ ಸರ್ವಧರ್ಮ ಶಾಂತಿ ಪರಿಷತ್ತಿನಲ್ಲಿ ಭಾರತದ ಬೆಳಕನ್ನು ಬೆಳಗಿಸಿದ ಮಹಾನ್ ಮಂಗಲಮೂರ್ತಿ. ಅವರು ವಿಶ್ವಧರ್ಮದ ಹಿರಿಯ ಕೊಡುಗೆ. ಅದ್ವಿತೀಯ ಆಧ್ಯಾತ್ಮಿಕ ಭಾರತದ ದೊಡ್ಡ ಆಸ್ತಿ. ಇವರ ಸಾಹಿತ್ಯ ಕ್ಷೇತ್ರ ಸಮುದ್ರದಂತೆ ಘನವಾಗಲಿ.

# "ಪಥಿಕ"ದ ನೆನಹು

ಸ. ಸ. ಮಾಳವಾಡ

ಹೊಸಗನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಕನ್ನಡ ಕವಿಕೋಕಿಲಗಳ ಕುಕಿಲು ಇನಿದಾಗಿ ಕೇಳಿಬಂದಿತು. ಭಾವಗೀತವಾಹಿನಿಗೆ ಆಗ ಮಹಾಪೂರ ಬಂದಂತಾಯಿತು.

ವ್ಯಕ್ತಿನಿಷ್ಠತೆ, ಸೌಂದರ್ಯಾನುಭವ, ಭಾವಪರತೆ, ನೇಮತೆಗಳು ಭಾವಗೀತೆಯ ಪ್ರಮುಖ ಲಕ್ಷಣಗಳಾಗಿವೆ. ಮನವರಿಕೆಯನ್ನುಂಟುಮಾಡುವ ಕಳಕಳಿಯ ಭಾವ, ಚಿತ್ರಮಯತೆಗಳಿಂದ ಭಾವಗೀತೆಯು ಪರಿಣಾಮಕಾರಿಯಾಗುತ್ತಿದೆ. ವ್ಯಕ್ತಿತ್ವ ನಿರೂಪಣೆಯಲ್ಲಿ ತೊಡಗಿದ ಕವಿಯು ಸಮಷ್ಟಿಯ ಭಾವನೆಗಳನ್ನು ಅಭಿವ್ಯಕ್ತಗೊಳಿಸುತ್ತಾನೆ. ನಿಸರ್ಗದ ಸೊಬಗು, ಮಾನವನ ನಲಿವು-ನೋವುಗಳು ಪ್ರೇಮ ದೇವರು ದೇಶ ಪ್ರೇಮ- ಇತ್ಯಾದಿ ಭಾವಗಳನ್ನು ಭಾವಗೀತೆಯ ಕವಿಗಳು ಅಂದು ಬಳಸಿಕೊಂಡರು. ಪದ ಸೌಂದರ್ಯ, ಲಯ, ಪ್ರಾಸಗಳ ಬಳಕೆಯಿಂದ ಭಾವಗೀತೆಗೆ ಗೇಯತೆಯುಂಟಾಯಿತು. ಕನ್ನಡ ಭಾಷೆಗೆ ಹೊಸ ತಿರುವನ್ನು ಒದಗಿಸಿದ ಕಾಲವದು. ಬಿ. ಎಮ್. ಶ್ರೀ. ರವರ "ಇಂಗ್ಲೀಷ ಗೀತೆಗಳು" ಎಂಬ ಕೃತಿಯು ಅಂದಿನ ಭಾವಗೀತೆಗಳಿಗೆ ಒಂದು ಮಾದರಿಯನ್ನು ಒದಗಿಸಿತು. ಭಾವಪರವಶತೆಯೊಂದಿಗೆ ಆದರ್ಶ ಪ್ರಿಯತೆಯೂ ಮೂಡಿ ಬಂದಿತು. ಆಗ ಭಾವಗೀತೆಯು ತತ್ವಪರತೆಯತ್ತಲೂ ಸಾಗಿತು. ಈ ಬಗೆಯಲ್ಲಿ ಕನ್ನಡ ಭಾವಗೀತೆಯು ೧೯೫೦ ರ ವರೆಗೂ ಸಾಗಿ ಬಂದಿತು. ಈ ಮಧ್ಯ ಕುವೆಂಪು ಅವರ ಕಲ್ಕಿ 'ಅಂಬಿಕಾತನಯ ದತ್ತರ' ತುತ್ತಿನ ಬಲದಂತಹ ಉಗ್ರ, ಕ್ರಾಂತಿಕಾರಕ ಕವನಗಳೂ ಸೃಷ್ಟಿಯಾದವು. ಕೋಗಿಲೆಯ ಇಂಚರವು ಕ್ರಾಂತಿಯ ಕಹಳೆಯಾಗಿ ಮಾರ್ಪಟ್ಟ ಸನ್ನಿವೇಶವದು. ಅಂದಿನ ಪ್ರಗತಿಶೀಲ ಸಾಹಿತಿಗಳ ಆಂದೋಲನವು ಕನ್ನಡ ಕವನರಂಗದಲ್ಲಿ ಪ್ರತಿಬಿಂಬಿತವಾದಂತಿಲ್ಲ. ೧೯೫೦ರ ನಂತರ ನವೋದಯ ಕಾಲದ ಭಾವಗೀತೆಗಳ ಹಾದಿಗಿಂತ ಭಿನ್ನವಾದ ದಿಸೆಯಲ್ಲಿ ಸಾಗುವ ಪ್ರವೃತ್ತಿ ತಲೆದೋರಿದೆ.

'ಪಥಿಕ' ಕವನ ಸಂಕಲನವು ೧೯೫೪ ರಲ್ಲಿ ಪ್ರಕಟವಾಗಿದ್ದರೂ ಅದರಲ್ಲಿಯ ಕವನಗಳ ರಚನೆಯ ಕಾಲ ೧೯೫೦ಕ್ಕೆ ಪೂರ್ವದ್ದೆಂದು ತೋರುತ್ತದೆ. ಅಂತೆಯೇ ಆ ಕವನಗಳಲ್ಲಿ ನವೋದಯ ಕಾಲದ ದೃಷ್ಟಿ ಸ್ಪಷ್ಟವಾಗಿದೆ. ಈ ಸಂಕಲನದಲ್ಲಿ ೪೦ ಕವನಗಳಿವೆ. ಅವು ಚಿಂತನಪರವಾಗಿವೆ.

ಬಾಳಿನಲ್ಲಿ ನಲಿವಿನಂತೆ ನೋವು ಇದೆ. ಚಿಂತನಶೀಲನಾದ ಕವಿಗೆ ಬಾಳು ಹಲವಾರು ತೊಡಕುಗಳನ್ನು, ಸಮಸ್ಯೆಗಳನ್ನು ಒಡ್ಡುತ್ತಿದೆ. ಬಾಳಿನ ಸಮಸ್ಯೆಗಳು ಆಗಾಗ ಆತನ ಮನಸ್ಸನ್ನು ಘಾಸಿಗೊಳಿಸುತ್ತಿವೆ. ಆದರೆ ಶ್ರದ್ಧೆಯಿಂದ ಕೂಡಿದ ಕವಿಯು ದೈವೀ

ಕೃಪೆ, ಗುರುಕರುಣೆಗಳನ್ನು ಹಾರೈಸುತ್ತ ಬಾಳನ್ನು ಒಂದು ಪಯಣವಾಗಿ ಭಾವಿಸಿ ಧೀರ ಪಥಿಕನಂತೆ ಮುಂದೆ ಸಾಗಲು ನಿರ್ಧರಿಸುತ್ತಾನೆ. ಇಂತಹ ನಿಲುವಿನಲ್ಲಿ ಮೂಡಿಬಂದ ಕವನ ಗಳು ಈ ಸಂಕಲನದಲ್ಲಿವೆ.

ಮಾನವನು ಪರಮಸತ್ಯದ ಯಾತ್ರಿಕನೇ ಅಹುದು. **(A Pilgrim of ever lasting truth—Sri Aurobindo)** ಆದರೆ ಈ ದೃಷ್ಟಿಯು ಬಹು ಜನರಿಗೆ ಇಲ್ಲವೆ ಬೇಗನೆ ಮೂಡಿಬರುವುದಿಲ್ಲ. ಅಂತೆಯೇ ಅವರಿಗೆ ಬಾಳು ಗೋಳಿನ ಸಂತೆಯಾಗುವುದು. 'ಪಥಿಕ' ಸಂಕಲನದ ಕವಿಗೆ ಮಾತ್ರ ಚಿಕ್ಕವಯಸ್ಸಿನಲ್ಲಿಯೇ ಈ ದೃಷ್ಟಿ ಮೂಡಿಬಂದಿದೆ. ಅಂದು ಅದು ಬೆಳೆಯುವ ಚೇತನದ ಗುರುತಾಗಿ ಕಂಡುಬಂದಿತು. ಆಗ ಕಂಡುಬಂದ ಗುರುತು ಈಗ ಫಲಪ್ರದವಾಗಿ ಕಾಣುತ್ತಿದೆ. ಅಂದಿನ ಪಥಿಕ ಸಂಕಲನದ ಕವಿ ಚಿತ್ತರಗಿ ಮಹಾಂತದೇವರು ಬನಾರಸದಲ್ಲಿ ವಿದ್ಯಾರ್ಥಿ ಕವನಸಂಕಲನದ ನನ್ನ ನುಡಿಯಲ್ಲಿಯ ಮಾತುಗಳನ್ನು ಗಮನಿಸಬೇಕು.

"ಈ ಪಥಿಕನು ಇನ್ನೂ ಅನನುಭವಿ ವಿದ್ಯಾರ್ಥಿ. ಪ್ರತಿಯೊಬ್ಬ ವ್ಯಕ್ತಿಗೆ ಮುಂದೆ ಸಾಗಲು ಹಿರಿಬಯಕೆಯಿದ್ದಂತೆ ಈತನಿಗೂ ಅದೆ. ಪಥಿಕನು ಕಲ್ಲು ಮುಳ್ಳುಗಳನ್ನು ತುಳಿದರೂ ತಾಳಿ ಮುಂದೆ ಹೋಗಲು ಯತ್ನಿಸಬೇಕೆಂಬುವವನು...."

ಅಂದಿನ "ಪಥಿಕ" ಸಂಕಲನದ ಕವಿಯೇ ಇಂದಿನ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು, ಮೂರುಸಾವಿರಮಠ, ಹುಬ್ಬಳ್ಳಿ. "ಪಥಿಕ" ಸಂಕಲನದ ಕವಿತೆಗಳ ರಚನೆಯ ಕಾಲದಿಂದ ಅವರು ಈಗ ಬಹು ಮುಂದೆ ಸಾಗಿದ್ದಾರೆ. ನಮ್ಮ ನಾಡಿನ 'ಮಹಾಪಥಿಕ' ಆಗಿದ್ದಾರೆ. ಇಡಿಯ ದೇಶದಲ್ಲಿ, ಪರದೇಶಗಳಲ್ಲಿ ಕೂಡ ಕೀರ್ತಿಶಾಲಿಯಾಗಿದ್ದಾರೆ.

'ಪಥಿಕ' ಸಂಕಲನದಲ್ಲಿ ವ್ಯಕ್ತಿನಿಷ್ಠ ಕವನಗಳಿವೆ:

ದಾರಿಗಾಣದೆ ಗುರುವೆ ಕುಳಿತಿರುವೆ
ಚಿಂತಿಸುತ್ತಲಿ ನಿನ್ನಯ
ದಾರಿದೋರುತ ಬೆಳಗು ನೀಡುತ
ಮನೆಯ ಸೇರಿಸು ಎನ್ನನು

ಎಂಬುದಾಗಿ ಈ ಸಂಕಲನದ ಪ್ರಥಮ ಕವನ ಆರಂಭವಾಗುತ್ತಿದೆ. ಗುರುವು ದಾರಿ ದೋರಿ ಬೆಳಕ ನೀಡಿದುದೂ ಆಗಿದೆ. ಅಂತಹ ಗುರುವನ್ನು ಕುರಿತೇ ನಾಲ್ಕಾರು ಕವನ ಗಳು ಇಲ್ಲಿ ಮೂಡಿಬಂದಿವೆ. ಅವು ಕವಿಯ ಗುರುಭಕ್ತಿ ನಿರ್ಭರತೆಯನ್ನು ಸ್ಪಷ್ಟಗೊಳಿಸು ವಂತಿವೆ. ಬಾಲ್ಯದ ಪಾಠಶಾಲೆ ಕೂಡ 'ಶಿವಯೋಗ ಮಂದಿರ'ವನ್ನು ಅಲ್ಲಿಯ ಪತ್ರಿಕೆ 'ಸುಕುಮಾರ'ವನ್ನು ಅಲ್ಲದೆ ಬೇರೊಂದು ಪತ್ರಿಕೆಯನ್ನು ಕುರಿತು ಒಂದೊಂದು ಕವನಗಳಿವೆ. 'ಕವಿ'ಯನ್ನು ಕುರಿತ ಕವನದಲ್ಲಿಯ "ಭಾವಪುಷ್ಪವರಳಿದಾಗ....ಹಾಡಿಬಿಡುವನು" ಎಂಬ

ಉಕ್ತಿಯಂತೆ ಮೂಡಿಬಂದ ಕವನಗಳು ಈ ಸಂಕಲನದಲ್ಲಿವೆ. ೧೫-೮-೪೭ಕ್ಕೆ ದೊರೆತ ಭಾರತ ಸ್ವಾತಂತ್ರ್ಯವನ್ನು ಕುರಿತು ಒಂದೆರಡು, ೩೦-೧-೪೮ಕ್ಕೆ ನಡೆದ ಮಹಾತ್ಮಾ ಗಾಂಧಿಯವರ ಕೊಲೆಯನ್ನು ಕುರಿತು ಒಂದು, "ದೀಪಾವಳಿ" "ಶಮೀ ಸಮರ್ಪಣ" ಗಳನ್ನು ಕುರಿತು ಒಂದೊಂದು "ಬಡವ"ನನ್ನು ಕುರಿತು ಒಂದು ಕವನಗಳಿವೆ. ಕೆಲವು ನೈತಿಕ ಕವನಗಳೂ ಇವೆ. ಉಳಿದ ಕವನಗಳು ವ್ಯಕ್ತಿನಿಷ್ಠವಾಗಿದ್ದು ಪಥಿಕನು ಕೈಕೊಂಡ ಪದಕ್ರಮಣವನ್ನು ಕುರಿತಿವೆ.

ಇಲ್ಲಿಯ ಪ್ರಥಮ ಕವನದ ಹೆಸರೇ **ಪಥಿಕ.** ಜೀವನಪಥದಲ್ಲಿ

ಕಾಳರಾತ್ರಿಯ ಮುಸುಗು ಮುತ್ತಿದೆ
.................................
ಮೇಲೆ ಮೇಘವು ಗುಡುಗುಹಾಕುತ
ಭಯದ ಬೆದರಿಕೆ ಕೊಡುತಿದೆ
.................................
.................................
ಮುಂದೆ ಹೋದಡೆ ತಗ್ಗು ದಿನ್ನೆಯು

ಹೀಗಿದ್ದೂ ಪಥಿಕ ಧೀರತನದಿಂದ ಮುಂದೆ ಸಾಗಬೇಕು.

### ನಡೆ ಮುಂದೆ

ಸೋಲಿನಲಿ ಇರುತಿರಲು ಮುಂದಿನಾ ಹಿರಿಗುರಿಯ
ದಾರಿಯನು ಮರೆಯದಿರೈ
.................................
.................................
ನಡೆ ಮುಂದೆ ದೃಢಮನದಿ

ಪಥಿಕರಿಗೆ ಹಿರಿಯ ಗುರಿಯೊಂದಿರಬೇಕಲ್ಲ! ಆನಂದ ಭಿಕ್ಷೆಯ ಪಡೆಯಲೆಂದು ಬುದ್ಧ ಪಥಿಕನಾದ. ಜ್ಞಾನಭಿಕ್ಷುವಾಗಿ ಸರ್ವಜ್ಞಕವಿ ಪಥಿಕನಾದ. ಈ ಕವಿಯಾದರೊ **'ಶಿವಶಾಂತಿ ಹೊಂಬೆಳಗು'** ಅರಸಲೆಂದು ಪಥಿಕನಾದ. ದೀಪಾವಳಿಯ ಸೊಡರಿನ ಸಾಲುಗಳು ಒಳಬೆಳಕಿಗೆ ಪ್ರಚೋದನೆಯನ್ನಿತ್ತಿವೆ:

ಹೃದಯದೀ ಪ್ರಣತೆಯೊಳು ಸದ್ಭಕ್ತಿ ತೈಲವನು
ಸುವಿಚಾರ ಬತ್ತಿಯನು ಹೊಸೆದಿಟ್ಟು ಹಚ್ಚಿದೊಡನೆ
ಗುಡಿಯೊಳಗೆ ಮರೆಯುತ್ತ ಕುಳಿತಿರುವ ಈಶ್ವರನು
ಕೊಡುತಿಹನು ದರ್ಶನವ ಪರಂಜ್ಯೋತಿ ಬೆಳಗಿನೊಳು

"ಶಮೀ ಸಮರ್ಪಣ" ಹಬ್ಬವು ಕವಿಗೆ ಆತ್ಮಸಿದ್ಧಿಯ ಸಂಕೇತವಾಗುತ್ತಿದೆ. ಅಲ್ಲಿ,

ವಿಜಯ ಪಡೆಯದ ಮನುಜ
ಒಣಗಿರ್ಪ ಎಲೆಯಂತೆ
ಬತ್ತಿರುವ ಕೆರೆಯಂತೆ
ಒಡೆದ ಕನ್ನಡಿಯಂತೆ

ಎಂಬ ಸುಂದರ ಹೋಲಿಕೆಗಳಿವೆ, "ಶಿವಸಪುಟ್ಟಿ"ಯಲ್ಲಿ ಅರ್ಥವತ್ತಾದ ರೂಪಕ ಚಿತ್ರಿತವಾಗಿದೆ:

ಹೃದಯಾಕಾಶದಿ ಏರಿಸು ಪುಟ್ಟಿ
ಅದರೋಳ್ ಸುಜ್ಞಾನ ದೀಪವನಿಟ್ಟು
ಮುತ್ತಿದ ಕತ್ತಲೆ ಮೊತ್ತವನಟ್ಟಿ
ಸುತ್ತುತ ಬರುತಿಹ ಗಾಳಿಯು ಕಟ್ಟಿ
..............................
ನಭದಲಿ ಬೆಳಗಲಿ ಚಿನ್ಮಯಕಿರಣ
ತುಂಬಲಿ ಪುಟ್ಟಿಯು ದೇವರ ಸ್ಮರಣ
ಆಗಲಿ ಜನನದ ಮರಣದ ಹರಣ
ಇಂತೇರಿಸು ಶಿವಪುಟ್ಟಿಯ ಜಾಣ

ಇಲ್ಲಿಯ ಸಲೀಸಾದ ಪದಗಳ ಹೊಂದಾವಣೆಯನ್ನು ಅರ್ಥಗೌರವವನ್ನು ಗಮನಿಸಬೇಕು.

ಮುಟ್ಟೆ ಹೊಡೆಯುವವಗೆ ಎಂಬ ಕವನದಲ್ಲಿಯೂ ಸ್ವಾರಸ್ಯಕರವಾದ ರೂಪಕ ಸೃಷ್ಟಿಯಿದೆ:

ಮಟ್ಟೆ ಹೊಡೆಯೋ ನೀನು ಇಂತು
ಜ್ಞಾನಕರ್ಮ ಎತ್ತುಗಳಿಗೆ
ಧ್ಯಾನವೆಂಬ ನೊಗವ ಹಾಕಿ
ಮಟ್ಟೆ ಹೊಡೆಯೋ
..............................
..............................
..........ಹೃದಯಭಾವಿ ತೊಳೆದು
ಮುಕ್ತನಾಗುವೀ.

ಜೀವನದ ವೃತ್ತಿಗಳನ್ನು ಅಧ್ಯಾತ್ಮಕ್ಕೆ ತಿರುಗಿಸುವ ಹರಿಹರದೇವನ ರಗಳೆಗಳಲ್ಲಿಯ ರೂಪಕ ಸೃಷ್ಟಿಯು ಸುಪ್ರಸಿದ್ಧವಾಗಿದೆ. ಈ ಸಂಕಲನದ 'ನಾವಿಕನನ್ನು ಕುರಿತು' ಎಂಬ ಕವನದಲ್ಲಿಯೂ ರೂಪಕವಿದೆ.

'ಇದಾವುದು' ಎಂಬ ಕವನದಲ್ಲಿ ಸರ್ವಜನರ ಹೃದಯದೊಳಿರುವ ಹಂಬಲವನ್ನು ಹಕ್ಕಿಯಾಗಿ ಭಾವಿಸಲಾಗಿದೆ. "ರೆಕ್ಕೆ ಬಲಿತು ಹಾರಿಹೋದ ಬಯಕೆ ಮೊಳೆತ" ನಂತರವೂ ಹಕ್ಕಿ "ತಿಂದು ತಿಂದು ತೇಗಿ ಹಾರದಿರಲು" ವ್ಯಥೆಯೆನಿಸುವುದು ಸಹಜವೇ. ಪಥಿಕ ನಿಂತಲ್ಲಿಯೇ ನಿಲ್ಲದಾಗದಲ್ಲ! ಆತನು ಗತಿಶೀಲನಾಗಲೇಬೇಕು. ಮುಂದೆ ಸಾಗುವುದೇ ಜೀವಂತತನದ ಲಕ್ಷಣ.

'ಮುಕುತಿಯಟ್ಟವನೇರು
ದೇವನಡಿಯೊಳು ಸೇರು'

ಎಂಬುದಾಗಿ ಕವಿ ಹೃದಯದ ಹಕ್ಕಿಯನ್ನು ಎಚ್ಚರಿಸುತ್ತಾನೆ. ಈ ದಿಸೆಯಲ್ಲಿ "ಶಾಂತಿ–ತಪ" "ವಿರತಿಗಂಧ" "ಭಕುತಿ"ಗಳು ನೆರವಾಗುತ್ತಿವೆ.

ಬಾಳಿನ ಪಯಣದಲ್ಲಿ ನಿಶೆಯ ಅನುಭವವೂ ಅನಿವಾರ್ಯ, ಅಂತಯೆ "ಧ್ಯಾನದ ದೀಪವ ಹಚ್ಚುತ" ಎಚ್ಚರಗೊಂಡು "ಸತ್ಯದ ಬೆಳಕಿನ ಹಾದಿಯ" ಕಂಡುಕೊಳ್ಳುವುದು ಅವಶ್ಯಕವಾಗಿದೆಯೆಂದು **"ನಿಶೆಗೆ"** ಎಂಬ ಕವನದಲ್ಲಿ ನಿರೂಪಿಸಲಾಗಿದೆ.

ಗುರುವಿನ ಆಗಮನವನ್ನು ಕುರಿತ ಉತ್ಕಟ ಭಾವವು "ಆಹ್ವಾನ" ಕವನದಲ್ಲಿ ವ್ಯಕ್ತವಾಗಿದೆ:

ಬಾಗಿಲವ ತೆರೆದಿರುವೆ ಬಾ ಬೇಗ ಗುರುವೆ
ದಾರಿಯನು ನೋಡುತ್ತ ಕುಳಿತಿರುವೆ ಬಾ
.............................................
.............................................
ಹೃದಯ ಮಂಟಪದೆನ್ನ ಚಿಚ್ಚರಣ ಕಿರಣಗಳ
ಹರಡುತ್ತ ಕತ್ತಲೆಯ ನಶಿಸುತ್ತ ಬಾ ಬಾ

ಸಮರ್ಪಣ ಭಾವದಿಂದ ಮನದ ಶಾಂತಿಯನ್ನು ಪಡೆಯುವ ಭಾವ "ಸಮರ್ಪಣ" ಕವನದಲ್ಲಿ ಮೂಡಿಬಂದಿದೆ.

ಬಾಳಿನ ಪಯಣದಲ್ಲಿ ಪ್ರೋತ್ಸಾಹದ ಅವಶ್ಯಕತೆಯಿದೆ. ಅಂತೆಯೇ "ಪ್ರೋತ್ಸಾಹ" ಎಂಬ ಕವನದಲ್ಲಿ

'ಪ್ರೋತ್ಸಾಹವಿಲ್ಲದಲೆ
ವಾಸಿಸುವ ಆ ಬಾಳು
ರಸವಿಕದ ಪಟ್ಟಣಲ್ಲವೆ?'

ಎಂದು ಹೇಳಲಾಗಿದೆ. ಆದರೆ ಗುರಿ ತಲುಪಬೇಕೆಂಬ ನಿರ್ಧಾರ ದೃಢವಾಗಿರುವಾಗ ಪ್ರೋತ್ಸಾಹ ದೊರೆಯದಿದ್ದರೂ ಮುಂದುವರಿಯಬೇಕೆಂಬ ಹುಮ್ಮಸ್ಸು ಕವಿಗಿದೆ. ಅಂತೆಯೇ "ಬಿಡುವನೇಂ" ಎಂಬ ಕವನದಲ್ಲಿ:

ಕಾರ್ಯವನು ಮಾಡುವಗೆ
ಪ್ರೋತ್ಸಾಹ ನೀಡಿದರೆ
ಕಾರ್ಯವನು ಬಿಡುವನೇಂ

ಎಂಬ ಛಲ ವ್ಯಕ್ತವಾಗಿದೆ. ಪಥಿಕನು ಮುನ್ನಡೆಯಲು ಮುಖ್ಯವಾಗಿ ಬೇಕಾದುದು ಪ್ರೇರಣೆ:

ಪ್ರೇರಣೆಯೆ! ಧಾರುಣಿಗೆ ಚೇತನವ ಕೊಡುತಿಹುದು
ಪಥಿಕಂಗೆ ದಾರಿಯನು ತೋರಿ ಸುಖನೀಡುವುದು

(—ಪ್ರೇರಣೆಗೆ)

ಪಥಿಕ ಬಾಳಿನ ಬಡತನವನ್ನು ಗಮನಿಸುವದಿಲ್ಲ:

ಹೃದಯಧನವಿರುತಿರಲು
ಆನಂದ ಪಡೆಯಲ್ಕೆ
ಮತ್ತೇಕೆ ಆಶೆಯದು
ಅಳಿಯುತಿಹ ಹೊರಧನಕೆ
ಭಾವದಾ ಕಿರಣಗಳು
ಬೆಳಗುತ್ತ ಹೋದಂತೆ
ಬಡವನೇ ಚಿರಧನಿಕ
ನಾಗಿ ತಾ ಮೆರೆವವಂ

(—ಬಡವ)

ಹೃದಯ ಸಂಪತ್ತಿರುವಾಗ ಹೊರಗಿನ ಧನದ ಆವಶ್ಯಕತೆಯಿರಬೇಕಾಗಿಲ್ಲ. ಭಾವದಾ ಕಿರಣಗಳು ಬೆಳಗುತ್ತಿದ್ದರೆ ಅಂತಹನೇ ಧನಿಕ ಇಂತಹ ನಿಲುವು ಈ ಕವಿಯದಾಗಿದೆ. ಆತ್ಮ ಜಾಗೃತಿಯೇ ಪಥಿಕನಿಗೆ ಮಹತ್ವದ ಆಸರೆ. ಅಂತೆಯೇ ಕವಿ ಹೇಳುತ್ತಾನೆ.

ಸಾಕಿನ್ನು ಎದ್ದೇಳಿ ಮೋಹನಿದ್ರೆಯ ಬಿಟ್ಟು
ಹೊರಬನ್ನಿ ಭರದಿಂದ ಜ್ಞಾನವಸ್ತ್ರವನುಟ್ಟು
ಮನದೊಳಗೆ ತುಂಬಿರುವ ಕಾಮದಾಶೆಯ ಸುಟ್ಟು
ತನುವಿನೊಳಗೆ ಹೊಕ್ಕಿರುವ ಭ್ರಾಂತಿಯನು ಬಿಟ್ಟು
...........................................................
...........................................................
ತೆರೆಯಿರೈ ಒಳಗಣ್ಣು ಹರಿಯಿರೈ ಹಗ್ಗವನು
ಮುರಿಯಿರೈ ಮದವನ್ನು ತರಿಯಿರೈ ಶೋಕವನು
ಅರಿಯಿರೈ ಮುಂದಿನ ಹಿರಿಗುರಿಯ ದಾರಿಯನು

(—ಉತ್ತಿಷ್ಠತ)

ಅಂತೂ ಪಥಿಕ 'ಹಿರಿಗುರಿಯ ದಾರಿಯನು' ಅರಿತುಕೊಂಡಿದ್ದಾನೆ. ಶ್ರದ್ಧೆಯಿಂದ ಕೂಡಿದ್ದಾನೆ. ಹರ–ಗುರು ಕೃಪೆಗಳ ಆಸರೆಯನ್ನು ಅಪೇಕ್ಷಿಸುತ್ತ ಧೀರತನದಿಂದ ಮುಂದೆ ಸಾಗಲು ನಿರ್ಧರಿಸಿದ್ದಾನೆ. ಕಿರಿಯ ವಯಸ್ಸಿನಲ್ಲಿ ಈ ಬಗೆಯ ನಿಲುವು ಶ್ಲಾಘನೀಯ ವಾಗಿದೆ. ಈ ಬಗೆಯ ನಿಲುವೆಯನ್ನು ಕವನ ರೂಪದಲ್ಲಿ ಇಲ್ಲಿ ಅಭಿವ್ಯಕ್ತಗೊಳಿಸಲಾಗಿದೆ.

ಈ ಸಂಕಲನದ ಕವನಗಳಲ್ಲಿ ಮುಕ್ತಛಂದಸ್ಸು, ಹಾಡಿನಮಟ್ಟು, ಷಟ್ಪದಿ, ಅನುಷ್ಟುಪ್ ಗಳನ್ನು ಬಳಸಿಕೊಳ್ಳಲಾಗಿದೆ. ಭಾಷೆ ಸರಳವೂ ಸ್ಪಷ್ಟವೂ ಆಗಿದೆ. ಆದರೆ ಬಂಧುರತೆ ಯಿಂದ ಕೂಡಿ ಅದಿನ್ನು ಹದಗೊಳ್ಳಬೇಕಾಗಿದೆ. ಈ ಕವನ ಸಂಕಲನ ಕವಿಯ ಪ್ರಥಮ ಪ್ರಯತ್ನ. ಇಲ್ಲಿಯ ಕವನಗಳನ್ನು ಮೊಗ್ಗುಗಳೆಂದು ಹೇಳಬಹುದು. ಆದರೆ ಈ ಮೊಗ್ಗುಗಳಲ್ಲಿಯೂ ಸೌರಭವನ್ನು ಗುರುತಿಸಲು ಸಾಧ್ಯವಿದೆ. ಬಾಳಿನ ಪಯಣವನ್ನು ಕುರಿತ ಈ ಕವಿಯ ದೃಷ್ಟಿಯು ಉನ್ನತವಾದುದೆಂಬ ಮಾತು ಈ ಸಂಕಲನದಿಂದ ತಿಳಿದು ಬರುವಂತಿದೆ. ಕವಿಯಾಗಿ ಹಾಡಿ ಬಾಳಿನ ಸೊಗಸನ್ನು ಹೆಚ್ಚಿಸಿಕೊಳ್ಳುವ ದೃಷ್ಟಿ ಈ ಪಥಿಕನಿಗಿದೆ. ಆ ಸೊಗಸು ಕವಿಗೆ ಮಾತ್ರವಲ್ಲ, ಓದುಗರಿಗೂ ದೊರೆಯುವಂತಿದೆ.

ಬಾಳನ್ನು ಗಂಭೀರವಾಗಿ ಎದುರಿಸುವ ದೃಷ್ಟಿ, ಉದಾತ್ತ ಭಾವಲಹರಿಗಳು ಇಲ್ಲಿ ಕಂಡುಬರುತ್ತಿವೆ.

## "THE YOGIRAJA OF KARNATAKA"
### ಗ್ರಂಥದ ಒಂದು ಒಳಾಂಗಣ

---

ಜೋಯಿಸರ ಹರಳಹಳ್ಳಿ-೫೮೧೨೦೮ **ಶ್ರೀ ಕೊಟ್ರೇಶ ಗು. ಆರಾಧ್ಯಮಠ**
[ಕುಮಾರತನಯ]

ಹುಬ್ಬಳ್ಳಿ ಶ್ರೀ ಜಗದ್ಗುರು ಮೂರುಸಾವಿರಮಠದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಬೇಕಾದ ದಿನಗಳೆಂದರೆ ೧೯೫೭ ರಿಂದೀಚಿನ ದಿನಗಳು. ಈ ಮಠದ ಮಹಾಭಾಗ್ಯವೋ 'ಏನೋ' ಎಂಬಂತೆ ೧೯೫೮ರಲ್ಲಿ ಪಟ್ಟಾಭಿಷಿಕ್ತರಾದ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು, ಈ ಮಠದ ಶ್ರೇಯಸ್ಸಿಗಾಗಿಯೇ ಜನ್ಮತಾಳಿ ಬಂದವರೆನ್ನಬೇಕು. ಪೂಜ್ಯರು ತಾವು ಈ ಮಠಕ್ಕೆ ಬಂದಂದಿನಿಂದ ಹಿಡಿದು ಈವರೆಗೆ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಹಾಗೂ ವೈದ್ಯಕೀಯ ಹೀಗೆ ಹಲವು ಹತ್ತು ಕ್ಷೇತ್ರಗಳಲ್ಲಿ ಅದ್ಭುತ ಕ್ರಾಂತಿ ಮಾಡಿ, ಪಾಶ್ಚಾತ್ಯ ದೇಶಗಳಲ್ಲಿ ವಿಶ್ವಶಾಂತಿ ಸಂದೇಶ ನೀಡಿ, ಜಾತ್ಯಾತೀತ ಕಾರ್ಯಗಳನ್ನು ಅವಿಶ್ರಾಂತವಾಗಿ, ಅನುಕರಣೀಯವಾಗಿ, ಆದರ್ಶಯುತವಾಗಿ ಮಾಡಿ, ಸಮಾಜವನ್ನು ಪರಿಪೂರ್ಣವಾಗಿ ಸಂಪೋಷಿಸುತ್ತ ಧರ್ಮದೀಪ್ತಿ ಬೆಳಗಿಸಿ, ಮಾನವೀಯ ಸೇವೆಗೈದ-ಮಹಾನ್ ಪುರುಷರಿವರು.

ಪೂಜ್ಯರ ಈ ಎಲ್ಲ ಸಾಧನೆಗಳಿಗೆ ಸಾಕ್ಷಿಯಾಗಿ, ಅವರು ನಿರ್ಮಿಸಿದ ಭವ್ಯ ಜ್ಞಾನ-ದೇಗುಲಗಳು, ಆಸ್ಪತ್ರೆ, ಪ್ರಕಟಿಸಿದ ಗ್ರಂಥರಾಶಿ, ಮುಂತಾದವುಗಳೆಲ್ಲ ಇಂದು ನಮ್ಮೆದುರು ಇವೆ. ಎಂದೆಂದಿಗೂ ಈ ಸಮಾಜ ಅವರನ್ನು ಮರೆಯದಂತಹ ಸುಸ್ಮರಣೀಯತೆಗೆ ಕಾರಣವಾಗಿವೆ.

ಪೂಜ್ಯರದು ಬಹುಮುಖ ವ್ಯಕ್ತಿತ್ವ. ಅವರು ವಿದ್ಯಾಸಂಪನ್ನರಾಗಿ, ಸ್ವತಃ ಕವಿಗಳಾಗಿ, ಲೇಖಕರಾಗಿ ಭಾವ ಜೀವಿಗಳಾಗಿ, ಸ್ನೇಹಜೀವಿಗಳಾಗಿ, ಪೂಜಾನಿಷ್ಠರಾಗಿ ಬೆಳೆದಿದ್ದಾರೆ. ಸದ್ಯದ ಅವರ ಬಾಳಿನ ಅರವತ್ತು ವಸಂತಗಳ ಕಾಲ ಅವರ ತುಂಬು ಜೀವನದ ಪ್ರತೀಕ. ಸತತಾಭ್ಯಾಸ, ಉದ್ಯೋಗನಿರತತೆ ಅವರ ಧ್ಯೇಯಗಳು.

ಶ್ರೀ ಜಗದ್ಗುರುಗಳವರು ಚಿಕ್ಕಂದಿನಿಂದಲೂ ಕವಿ ಹೃದಯಿಗಳು. ಅದರೊಂದಿಗೆ ಅವರು ಶ್ರೇಷ್ಠ ಚಿತ್ರಕಲಾಕಾರರೂ ಆಗಿದ್ದರು. ಲಲಿತ ಕಲೆಗಳಲ್ಲಿ ಅವರಿಗೆ ಅಪಾರ ಗೌರವ-ಅಭಿಮಾನ. ಅವರ ಪ್ರಾಣಿದಯೆ- ಅಂತಃಕರುಣಗಳು ಅಪಾರ.

ಪೂಜ್ಯರು ತಮ್ಮ ಚಿಕ್ಕಂದಿನಿಂದಲೇ ನಾಡಿನ ಹೆಮ್ಮೆಯ ಸಂಸ್ಥೆಯಾದ ಶ್ರೀ ಶಿವಯೋಗ ಮಂದಿರದಲ್ಲಿ ಶಿಕ್ಷಣ ಪಡೆದು, ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಕಾಶಿಗೆ ತೆರಳಿದರು.

ವಿದ್ಯಾಭ್ಯಾಸದ ಜೊತೆ ಜೊತೆಗೇ ಅಲ್ಲಿ ಸಣ್ಣ ಕಥೆ, ಕವನ–ಲೇಖನ–ವಿಮರ್ಶೆಗಳನ್ನು ಬರೆಯುವ ಹವ್ಯಾಸವನ್ನಿರಿಸಿಕೊಂಡ ಪೂಜ್ಯರು ಕಾಶಿಯ ಕೆಲವು ಪತ್ರಿಕೆಗಳಲ್ಲಿ ಅವುಗಳನ್ನು ಪ್ರಕಟಿಸುತ್ತಿದ್ದರು.

ಧಾರವಾಡ ಜಿಲ್ಲೆಯ ರಾಣೇಬೆನ್ನೂರ ತಾಲೂಕಿನ ಜೋಯಿಸರಹರಳಹಳ್ಳಿಯ ಕರುಣೆಯ ಕಂದರಾಗಿ ಜನ್ಮತಾಳಿ, ಹಾನಗಲ್ಲಿನ ವಿರಕ್ತಪೀಠವನ್ನಲಂಕರಿಸಿ, ಇಡೀ ವೀರಶೈವ ಸಮಾಜಕ್ಕೆ ಒಂದು ನಿರ್ದಿಷ್ಟ ರೂಪ–ರೇಷೆಗಳನ್ನು ಹಾಕಿಕೊಟ್ಟ ಶ್ರೀ ಮ. ನಿ. ಪ್ರ. ಲಿಂ. ಶ್ರೀ ಕುಮಾರಮಹಾಸ್ವಾಮಿಗಳವರೆಂದರೆ, ಶ್ರೀ ಜಗದ್ಗುರುಗಳಿಗೆ ಅಪಾರ ಭಕ್ತಿ–ಆದರ–ಗೌರವ. ಶ್ರೀ ಕುಮಾರೇಶ್ವರರು ಜಗದ್ಗುರುಗಳವರಿಗೆ ಮಾತೃಹೃದಯ ಸ್ವರೂಪರು.

ಶ್ರೀ ಕುಮಾರೇಶ್ವರರ ಕೃಪಾಶೀರ್ವಾದದಿಂದ ಜನಿಸಿದ ಪೂಜ್ಯ ಜಗದ್ಗುರುಗಳವರು ತಾವು 'ಶ್ರೀ ವಿಜಯ ಮಹಾಂತದೇವರು ಚಿತ್ತರಗಿ' ಎಂದು ಕಾಶಿಯಲ್ಲಿ ಓದುತ್ತಿದ್ದಾಗ ತಮ್ಮ ಆರಾಧ್ಯ ಗುರು ಶ್ರೀ ಕುಮಾರೇಶ್ವರರ ಬಗ್ಗೆ ಚಿಕ್ಕ ಪುಸ್ತಿಕೆಯೊಂದನ್ನು ಅಲ್ಲಿನ ಜನತೆಗೆ ಸರಳವಾಗಿ ತಿಳಿಯುವ ಭಾಷೆಯಲ್ಲಿ ಬರೆಯುವ ಕನಸು ಕಂಡರು. ಅವರ ಈ ಕನಸು "THE YOGIRAJA OF KARNATAKA"– ಎಂಬ ಕಿರು ಕೈಪಿಡಿಯ ಪ್ರಕಟನೆಯೊಂದಿಗೆ ನನಸಾಯಿತು.

ಪೂಜ್ಯ ಜಗದ್ಗುರುಗಳು ಚಿಕ್ಕ ವಯಸ್ಸಿನವರಾಗಿದ್ದಾಗ, ಸಾಧಕರಾಗಿದ್ದುಕೊಂಡು ಇಂಥ ಒಂದು ಮಹತ್ಕಾರ್ಯಕ್ಕೆ ಅಂದು ಹೊರರಾಜ್ಯವೊಂದರಲ್ಲಿ ಈ ಪುಸ್ತಿಕೆಯ ಪ್ರಕಟನೆಗೆ ಕೈಹಾಕಿದ್ದು, ಮಹತ್ಕಾರ್ಯವೇ ಸರಿ! ವೀರಶೈವ ಧರ್ಮದ ಮಹಾಪುರುಷರೊಬ್ಬರನ್ನು ರಾಜ್ಯದ ಹೊರಗಡೆ ಪರಿಚಯಿಸುವ ಇಂತಹ ಪ್ರಕಟನೆ ನಿಜಕ್ಕೂ ಶ್ಲಾಘನೀಯವೆನ್ನಬೇಕು! ತನ್ಮೂಲಕ ತಮ್ಮ ಉನ್ನತಿಗೆ ಕಾರಣರಾದ ತಮ್ಮ ಗುರುಗಳ ಬಗ್ಗೆ ಅತ್ಯಂತ ಅಭಿಮಾನವನ್ನಿರಿಸಿಕೊಂಡು ಅವರ ದಿವ್ಯ ಜೀವನದ ಅಂಶಗಳನ್ನು ಸರಳ–ಸಂಕ್ಷಿಪ್ತ ರೂಪದಲ್ಲಿ ಓದುಗರಿಗೆ ಒದಗಿಸಿ ಕೃತಾರ್ಥರಾಗಿದ್ದಾರೆ.

ಈ ಇಂಗ್ಲೀಷ್ ಕೃತಿ ನೋಡಲು ಚಿಕ್ಕದಾಗಿ ಕಂಡರೂ ಚಿಕ್ಕವಯಸ್ಸಿನ ಲೇಖಕರೊಬ್ಬರ ಅಪಾರ ಸಾಧನೆಯೇ ಸರಿ. ಇಲ್ಲಿ ಲೇಖಕರು [ಶ್ರೀ ವಿಜಯ ಮಹಾಂತದೇವ ಚಿತ್ತರಗಿ,– ಈಗಿನ ಮೂರುಸಾವಿರಮಠದ ಜಗದ್ಗುರುಗಳವರು] Short but Sweet– ಎಂಬಂತೆ "ಕಿರಿದುದರಲ್ಲಿ ಪಿರಿದರ್ಥ" ತುಂಬಿದ್ದಾರೆ.

'THE YOGIRAJA OF KARNATAKA' ಈ ಪುಸ್ತಿಕೆಯು ಕ್ರೌನ್ $\frac{1}{4}$ ಆಕಾರದ 8 ಪುಟಗಳುಳ್ಳ ಒಂದು ಪರಿಚಯಾತ್ಮಕ ಕೃತಿ. ಈ ಕೃತಿಯನ್ನು ಅವಲೋಕಿಸಿದಾಗ ಅಲ್ಲಿನ Plus Point–ಎಂದರೆ, ಇಂಟರ್‌ಮೀಡಿಯಟ್ ವಿದ್ಯಾರ್ಥಿ ಜೀವನದಲ್ಲಿದ್ದ, ಚಿಕ್ಕವಯಸ್ಸಿನ, ಸಾಧಕರಾದ ಶ್ರೀ ಚಿತ್ತರಗಿ ಮಹಾಂತದೇವರು, ಆ

ವಯಸ್ಸಿನಲ್ಲೇ ಇಂಗ್ಲೀಷ್‌ನಂತಹ ಭಾಷೆಯಲ್ಲಿ ಪ್ರೌಢವಾಗಿ ಬರೆದ ಶೈಲಿ! ಅದರೊಂದಿಗೇ ಈ ಚಿಕ್ಕ ಕೃತಿ ಎರಡು ಸಾರೆ ಮುದ್ರಣಗೊಂಡಿದ್ದು!!

India is a land of religions- ಎಂದು ಪ್ರಾರಂಭವಾಗುವ ಈ ಕೃತಿ ಒಂದು ದೊಡ್ಡ ನಿಬಂಧ ರೂಪದಲ್ಲಿದೆ. ಭಾರತ ದೇಶದ ಒಂದು ವಿಶಿಷ್ಟ ಧರ್ಮವಾದ ವೀರಶೈವ ಧರ್ಮದ ಬಗೆಗೆ ಬರೆಯುತ್ತಾ ಲೇಖಕರು ಆ ಧರ್ಮದ ಇತಿಹಾಸಕ್ಕೆ ಸಾಕ್ಷಿಯಾಗಿ 'ಪರಮೇಶ್ವರಾಗಮ' ಹಾಗೂ "ಸಿದ್ಧಾಂತ ಶಿಖಾಮಣಿ" ಗಳನ್ನು ಉದಾ ಹರಿಸಿದ್ದಾರೆ.

ಲೇಖಕರು ನೂರಾರು ವರ್ಷಗಳ ಹಿಂದೆ ವೀರಶೈವ ಧರ್ಮಕ್ಕೊದಗಿದ ಅವನತಿ ಬಗ್ಗೆ ವ್ಯಥೆ ಪಡುತ್ತಾ ಆ ಕಾಲದ ಸಾಹಿತ್ಯಿಕ ಗ್ರಂಥಗಳ ಸತ್ವ ಹೀನತೆಯನ್ನು ಅವುಗಳ ಸಾರ ಸಾಮಾನ್ಯ ಜನತೆಗೆ ತಲುಪದಿದ್ದ ಬಗ್ಗೆ ಈ ಹೊತ್ತಿಗೆಯಲ್ಲಿ ಚಿಂತಿಸಿದ್ದಾರೆ. ನಿಸ್ಸತ್ವ-ನಿರ್ಜೀವಗೊಂಡ ಈ ಧರ್ಮಕ್ಕೆ ಹೊಸ ಕಾಯಕಲ್ಪವೊದಗಿಸಲು ಹಾನಗಲ್ ಶ್ರೀ ಕುಮಾರೇಶ್ವರರು ಜನ್ಮ ತಾಳಿ ಬಂದರೆಂದು, ಅವರು ಈ ಜಗದ ಅಂಧಕಾರ ಅಳಿಯಲೆಂದು ಬಂದರೆಂದು ಲೇಖಕರು ಚಿತ್ರಿಸಿದ್ದಾರೆ.

The river of Malaprabha is flowing smoothly at her own Sweet will and drives away the miscerise of human beings. The natural scene about it generally gives a uniquethrill of pleasure............

ಹೀಗೆ ಲೇಖಕರ ಶಿವಯೋಗಮಂದಿರದ ಪುಣ್ಯ ಪರಿಸರದ ವರ್ಣನೆ ಸಾಗುತ್ತದೆ. ಪ್ರತ್ಯಕ್ಷವಾಗಿ ಲೇಖಕರು ಅಲ್ಲಿನ ನಿಸರ್ಗದೌತಣದ ಸವಿವುಂಡವರಾಗಿದ್ದರಿಂದ ಈ ಸಾಲು ಗಳು ಸುಂದರವಾಗಿ ಮೈದಾಳಿವೆಯೆನ್ನಬಹುದು.

ಲೇಖಕರು ಹಿಂದಿನ ಮೂರುಸಾವಿರಮಠದ ಲಿಂ. ಜಗದ್ಗುರು ಗುರುಸಿದ್ಧರಾಜ ಯೋಗೀಂದ್ರ ಮಹಾಸ್ವಾಮಿಗಳವರಿಗೂ-ಶಿವಯೋಗ ಮಂದಿರಕ್ಕೂ ಇದ್ದ ಮಧುರ ಬಾಂಧವ್ಯವನ್ನು ಇಲ್ಲಿ ಸ್ಮರಿಸುತ್ತಾ ಶಿವಯೋಗಮಂದಿರವು ಸಾಧಕರ ಜೀವನದಲ್ಲಿ ವಹಿಸಿದ ಮಹತ್ವಪೂರ್ಣ ಪಾತ್ರವನ್ನು ಚಿತ್ರಿಸಿದ್ದಾರೆ.

Thousands of Sadhakas being Mathadipatis have spread themselves in South India............So many Sadhakas have become Mathadipatis and about six Poets, Seven famous writers and more than thirty folklore, have come out from this institution................

....ಎಂದು ಲೇಖಕರು ಇಲ್ಲಿ ನಿರೂಪಿಸಿದ್ದಾರೆ.

ಶ್ರೀ ಹಾನಗಲ್ ಕುಮಾರೇಶ್ವರರು ಅಂಧರ ಬಾಳಿನಲ್ಲಿ ಕವಿದ ಅಂಧಕಾರವನ್ನ ಳಿಯಲು ಬಂದ ಪ್ರಜ್ವಲ ಜ್ಯೋತಿಯಾದರು. ಈ ಬಗ್ಗೆ ಲೇಖಕರು ಇಲ್ಲಿ ಪಂಡಿತ

ಪಂಚಾಕ್ಷರಿ ಗವಾಯಿಗಳ ಬಾಳಿಗೆ ಬೆಳಕಾಗಿ ಅವರಿಂದ ಗದುಗಿನ ವೀರೇಶ್ವರ ಪುಣ್ಯಾಶ್ರಮ ಸ್ಥಾಪಿತವಾಗಲು ಕಾರಣರಾದ ಸಂದರ್ಭವನ್ನು ಲೇಖಕರು ಈ ಪುಸ್ತಿಕೆಯಲ್ಲಿ ನಿರೂಪಿಸಿದ್ದಾರೆ.

ಲೇಖಕರು ಗದುಗಿನ ಪ್ರಸ್ತುತ ಈ ಸಂಗೀತ ವಿದ್ಯಾಲಯದ ಬಗ್ಗೆ ಬರೆಯುತ್ತಾ- It is shining day by day. Its director is Puttaraj Gavai who is a famous writer and a poet.

ಧಾರವಾಡ ಜಿಲ್ಲೆಯ ಜೋಯಿಸರಹರಳಹಳ್ಳಿಯ ಬಸವಯ್ಯ-ನೀಲಮ್ಮರ ಪುಣ್ಯ ಗರ್ಭದಲ್ಲಿ ಜನಿಸಿದ ಶ್ರೀ ಕುಮಾರೇಶ್ವರರ ಬಾಲ್ಯದ ಬದುಕನ್ನು ಚಿತ್ರಿಸುತ್ತಾ ಲೇಖಕರು ಅವರ ಭಿಕ್ಷಾಟನ ವೃತ್ತಿ, ಅವರ ತಾಯಿಯಿಂದ ವಿವಾಹಕ್ಕಾಗಿ ಒತ್ತಾಯ, ಅದನ್ನು ತಿರಸ್ಕರಿಸಿ, ಇಡೀ ಸಮಾಜದ ಕಣ್ಣಾಗಲು ಅವರು ಬ್ರಹ್ಮಚರ್ಯವನ್ನು ಆಯ್ದು ಕೊಂಡದ್ದನ್ನು ಸರಳವಾಗಿ ನಿರೂಪಿಸಿದ್ದಾರೆ. ಸ್ವಾರ್ಥದಾಶೆಯ ಸಂಸಾರವನ್ನು ತ್ಯಜಿಸಿ, ಶ್ರೀ ಕುಮಾರೇಶ್ವರರು ತಮ್ಮ ಜ್ಞಾನದಾಹ ತಣಿಸಿಕೊಳ್ಳಲು ಹುಬ್ಬಳ್ಳಿಗೆ ಬರುತ್ತಾರೆ. ಎಳಂದೂರಿನ ಬಸವಲಿಂಗಸ್ವಾಮಿಗಳಿಂದ ವೇದಾಂತಾಧ್ಯಾಯನಗೈದು, ನಂತರದಲ್ಲಿ ಮೈಸೂರು ಪ್ರಾಂತದ ಶಂಭುಲಿಂಗನ ಬೆಟ್ಟದೆಡೆ ಪಯಣಿಸಿದ್ದು, ಜನಾನುರಾಗ ಸಂಪಾದಿಸಿ ಹಾನಗಲ್ ಪೀಠಕ್ಕೆ ಮಠಾಧೀಶರಾಗಿ ನೇಮಕವಾದದ್ದು ನಿರೂಪಿತವಾಗಿದೆ.

ಅಂದಿನಿಂದ ಇಡೀ ಹಿಂದೂ ಧರ್ಮದ ಉನ್ನತಿಗಾಗಿ ಪಣತೊಟ್ಟು ತಮ್ಮ ಪ್ರಜ್ವಲ ತಪಃಶಕ್ತಿಯಿಂದ ಸಮಾಜವನ್ನು ಜಾಗೃತಗೊಳಿಸಲು ಪ್ರಾರಂಭಿಸಿ, ಈ ದಿಶೆಯಲ್ಲಿ ಕೆಲವು ಸಂಘಟನೆಗಳನ್ನು ಕೈಗೊಂಡರು. ಊರೂರು ತಿರುಗಿ ಧನ ಸಂಗ್ರಹಿಸಿ ಅದರಿಂದ ಬಡ ಮಕ್ಕಳ ಉನ್ನತ ವ್ಯಾಸಂಗ, "ಅಖಿಲ ಭಾರತ ವೀರಶೈವ ಮಹಾಸಭೆ" ಯಂತಹ ಸಂಸ್ಥೆ ಸ್ಥಾಪನೆ ಮುಂತಾದ ಉದಾತ್ತ ಕಾರ್ಯಗಳತ್ತ ಕಾರ್ಯೋನ್ಮುಖರಾದರು.

ಲೇಖಕರು ಮುಂದುವರೆಯುತ್ತಾ ಶ್ರೀ ಕುಮಾರ ಶಿವಯೋಗಿಗಳ ಸಂಸ್ಕೃತ ಭಾಷೆಯ ಮೇಲಿದ್ದ ಪ್ರೀತಿ, ಪಾಠಶಾಲೆಗಳ ಸ್ಥಾಪನೆ, ಅವರ ಕವಿಜೀವನ, ಸಾಹಿತ್ಯ ಸಂಶೋಧನೆ ಕಾರ್ಯಗಳ ಬಗ್ಗೆ ಸುಂದರವಾಗಿ ನಿರೂಪಿಸಿದ್ದಾರೆ.

ಲೇಖಕರು ಸ್ವತಃ ಶಿವಯೋಗಮಂದಿರ ಸಂಸ್ಥೆಯಲ್ಲಿದ್ದು ಅಲ್ಲಿನ ಪರಮಪಾವನವಾದ ಮಣ್ಣಿನಲ್ಲಿ ಆಟವಾಡಿ, ನೀರಿನಲ್ಲಿ ಈಜಾಡಿ ಗುಡ್ಡ ಬೆಟ್ಟಗಳಲ್ಲಿ ಬಾಲ್ಯದಲ್ಲಿ ಅಲೆದಾಡಿ ಅಲ್ಲಿನ ನಿಸರ್ಗ ರಮಣೀಯತೆಗೆ ಮನಸೋತವರು. ಅಂತೆಯೇ ಈ ಚಿಕ್ಕ ಪುಸ್ತಿಕೆಯಲ್ಲಿ ಶಿವಯೋಗಮಂದಿರದ ಸ್ಥಾಪನೆ ಅದರ ಧ್ಯೇಯೋದ್ದೇಶಗಳ ಬಗ್ಗೆ ಮೈಮಂಬಿ ವರ್ಣಿಸಿದ್ದಾರೆ. ಅದರೊಂದಿಗೇ ತಮ್ಮ ಬಾಲ್ಯ ಜೀವನದ ಸವಿನೆನಪುಗಳನ್ನು ಸ್ಮರಿಸಿಕೊಂಡು, ಆ ಸಂಸ್ಥೆಗೆ ಕೃತಾರ್ಥಭಾವವನ್ನರ್ಪಿಸಿದ್ದಾರೆ.-"Shivayogamandir is a situated on one of the banks of the river Malaprabha and is enjoying a good progress now a days. It is a very

attractive place. There are so many buildings and caves in which Sadhakas go on with their of mental control. The trees of Bilwa are adding to the beauty of Shivayogamandir. He is also blind. Due to this music college, So many radio stars have sprung up. Nearly eighty percent of them are found in South India"....ಎಂದಿದ್ದಾರೆ.

ಶಿವಯೋಗಮಂದಿರದ ಗ್ರಂಥಾಲಯ, ತಾಡೋಲೆಗಳ ಸಂಗ್ರಹಾಲಯ, ಗೋಶಾಲೆ, ಒಸ್ಮದ ಕಾರ್ಖಾನೆ, ಅಲ್ಲಿಂದ ಪ್ರಕಟವಾಗುವ 'ಸುಕುಮಾರ' ಮಾಸಪತ್ರಿಕೆ ಈ ಎಲ್ಲ ವಿಷಯಗಳ ಬಗ್ಗೆ ಲೇಖಕರಿಲ್ಲಿ ಸ್ಮರಿಸಿದ್ದಾರೆ.

ಈ ಗ್ರಂಥದ ತುಂಬೆಲ್ಲಾ ಶ್ರೀ ಕುಮಾರ ಶಿವಯೋಗಿಗಳ ಬದುಕು–ಬರಹ–ಸಾಧನೆ–ಸಿದ್ಧಿಗಳ ಸಮಗ್ರ ಚಿತ್ರಣವನ್ನು ಸರಳವಾಗಿ–ಸುಲಭವಾಗಿ ಸಂಕ್ಷಿಪ್ತದಲ್ಲಿ ಹಿಡಿದಿಡಲು ಲೇಖಕರು ಶ್ರಮಿಸಿದ್ದು, ಅವರ ಶ್ರಮ ಅಲ್ಲಿ ಸಾರ್ಥಕವಾಗಿ ಅವರು ಭವಿಷ್ಯದಲ್ಲಿ ಉತ್ತಮ ಕವಿ–ಲೇಖಕರಾಗುವ ಮುನ್ಸೂಚನೆ ಕಂಡುಬಂದಿವೆ.

ಲೇಖಕರು ತಮ್ಮ ಪುಸ್ತಿಕೆಯ ಕೊನೆಯ ಪುಟದ ಸಾಲುಗಳಲ್ಲಿ ಶ್ರೀ ಕುಮಾರೇಶ್ವರರ ಸಮಗ್ರ ಜೀವನದ ಚಿತ್ರಣವನ್ನು ಸೆರೆ ಹಿಡಿಯಲು ಪ್ರಯತ್ನಿಸಿ ಸಫಲರಾಗಿದ್ದಾರೆ.

"On Seeing these works of Kumar swamiji one is struck with admiration and is filled with awe and reverence...............

........Kumar Swamiji was not only an ascetic of the highest order, but was a genuine patriot................ His last wish was that Shivayogamandir should become the centre of universal learning and culture................

It is not an exaggeration to say that Shivayogamandir is a great institution of its kind in India." ಇವೇ ಮುಂತಾದ ಅರ್ಥಪೂರ್ಣ ಸಾಲುಗಳು ಈ ಮಾತಿಗೆ ಕೈಗನ್ನಡಿಯಾಗಿವೆ.

ಒಟ್ಟಿನಲ್ಲಿ ಲೇಖಕರಾದ ಚಿತ್ತರಗಿಯ ಶ್ರೀ ವಿಜಯಮಹಾಂತದೇವರು (ಈಗಿನ ಮೂರುಸಾವಿರಮಠದ ಪೂಜ್ಯ ಜಗದ್ಗುರುಗಳವರು) ತಮ್ಮ ಕಿರು ವಯಸ್ಸಿನಲ್ಲಿಯೇ ತಮ್ಮ ಆರಾಧ್ಯದೈವ-ಗುರು ಶ್ರೀ ಕುಮಾರೇಶ್ವರರನ್ನು ವಾರಣಾಸಿ ಭಾಗದ ಜನತೆಗೆ ಪರಿಚಯಿಸಿ, –ತನ್ಮೂಲಕ ವೀರಶೈವ ಧರ್ಮವನ್ನು ಈ ನಾಡಿನ ಹೊರಗೆ ಪಸರಿಸುವ ಮಹತ್ಕಾರ್ಯವನ್ನು ಆ ವಿದ್ಯಾರ್ಥಿ ದಶೆಯಲ್ಲಿಯೇ ಈ ಕಿರು ಪುಸ್ತಿಕೆಯ ಮೂಲಕ ಮಾಡುವ ಸಾಹಸಕ್ಕೆ ಕೈಹಾಕಿದ್ದು, ಶ್ಲಾಘನೀಯ! ಪ್ರಶಂಸನೀಯ!!

ಲೇಖಕರು ತಮ್ಮ ವಿಚಾರಗಳನ್ನು ಇಂಗ್ಲೀಷ್‌ನಲ್ಲಿ ಪ್ರಸ್ತುತಪಡಿಸಿದ್ದು, ಇಲ್ಲಿ ಯೋಚಿಸಬೇಕಾದ ವಿಚಾರ. ಅದು ಲೇಖಕರು ಬಾಲ್ಯದಲ್ಲಿಯೇ ಗಳಿಸಿದ ಇಂಗ್ಲೀಷ್

ಭಾಷಾ ಪ್ರಾವಿಣ್ಯತೆಗೆ ನಿದರ್ಶನ. ಅಲ್ಲಿನ ಪ್ರತಿಯೊಂದು ಸಾಲುಗಳಲ್ಲೂ ಲೇಖಕರಿರಿಸಿದ್ದ ಶ್ರೀ ಕುಮಾರೇಶ್ವರರ ಬಗೆಗೆ ಇದ್ದ ಭಕ್ತಿ ಅಭಿಮಾನಗಳಿಗೆ ಸಾಕ್ಷಿಯಾಗಿರುವಂತಹ ನಿವೇದನೆ ಮೈದಾಳಿದೆ.

ಶ್ರೀ ಕುಮಾರೇಶ್ವರರ ಜನನದಿಂದ ಹಿಡಿದು ಅವರ eternal peace ವರೆಗಿನ ಸಮಗ್ರ ಸಾರ್ಥಕ ಬದುಕಿನ ಒಳ ಹೊರಗಳನ್ನು ಸಮರ್ಥವಾಗಿ ಚಿತ್ರಿಸಿ, ಸಫಲರಾಗಿದ್ದಾರೆ. ಈ ಪ್ರಯತ್ನದಲ್ಲಿ ಅವರು ಅಂದು ಚೆನ್ನಾಗಿ ಯಶಸ್ವಿಯೂ ಆಗಿದ್ದಾರೆ.

ಲೇಖಕರು ಈ yogiraja of Karnataka ಪುಸ್ತಿಕೆಯಲ್ಲಿ ಬಳಸಿದ ಭಾಷೆ ಸರಳ–ಸುಂದರ–ಸುಲಲಿತ. ಅರ್ಥಗರ್ಭಿತ ಚಿಕ್ಕ ಚಿಕ್ಕ ವಾಕ್ಯಗಳು ಓದುಗರ ಮನಸೆಳೆಯುತ್ತವೆ. ಶ್ರೀ ಕುಮಾರೇಶ್ವರರೇ ಅಲ್ಲಿ ಲೇಖಕರ ಮನದುಂಬಿ ಪ್ರತಿಭೆಯಾಗಿ ಕಂಗೊಳಿಸಿದ್ದಾರೇನೋ ಎನಿಸದಿರಲಾರದು.

ಲೇಖಕರ ವಯಸ್ಸಿನ ದೃಷ್ಟಿಯಿಂದ "ಮೂರ್ತಿ ಚಿಕ್ಕದಾದರೂ ಕೀರ್ತಿದೊಡ್ಡದೆಂಬ" ಮಾತಿಗೆ ಈ ಪುಸ್ತಿಕೆ ನಿದರ್ಶನವಾಗಿದೆ.

ಶ್ರೀ ಹಾನಗಲ್ಲ ಕುಮಾರೇಶ್ವರರ ಆದರ್ಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಅವರ ಕನಸುಗಳನ್ನು ನನಸಾಗಿಸುವಲ್ಲಿ, ಈ ಲೇಖಕರು ತಾವು ಶ್ರೀ ಮೂರುಸಾವಿರಮಠಕ್ಕೆ ಜಗದ್ಗುರುಗಳೆಂದು ನೇಮಕವಾದ ನಂತರದಲ್ಲಿ ಬಹುವಾಗಿ ಶ್ರಮಿಸಿದ್ದಾರೆ. ಅದರಲ್ಲಿ ಸಾರ್ಥಕತೆಯನ್ನೂ ಹೊಂದಿದ್ದಾರೆ. ಅದಕ್ಕೆ ಅವರು ಮಾಡಿದ, ಮಾಡುತ್ತಿರುವ ಮಹತ್ಕಾರ್ಯಗಳೇ ಸಾಕ್ಷಿ.

ಈ ಲೇಖಕರು ಇಂದು ಸಾಹಿತ್ಯಿಕವಾಗಿ ಕವಿಗಳಾಗಿ ಲೇಖಕರಾಗಿ ಬಹು ಎತ್ತರಕ್ಕೆ ಬೆಳೆದಿದ್ದಾರೆ. ಇವರ ಇತ್ತೀಚಿನ ರಚನೆಗಳಾದ "ಪೂರ್ಣಜ್ಞನ ವಚನಗಳು" ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅನುಪಮವಾದ ರಚನೆಗಳಾಗಿದ್ದು, ಬಹುಜನಪ್ರಿಯತೆ ಗಳಿಸಿವೆ.

"ಬೆಳೆಯುವ ಸಿರಿ ಮೊಳಕೆಯಲ್ಲಿ" ಎಂಬಂತೆ ಪೂಜ್ಯರು ಅಂದು ವಿದ್ಯಾರ್ಥಿಗಳಾಗಿದ್ದಾಗ ರೂಢಿಸಿಕೊಂಡ ಲೇಖನ ಕಲೆ ಅವರನ್ನು ಒಬ್ಬ ಉದ್ದಾಮ ಸಾಹಿತಿಗಳನ್ನಾಗಿ ಮಾರ್ಪಡಿಸಿದೆ.

ಅರವತ್ತು ವಸಂತಗಳ ಸುಂದರ ಸಾರ್ಥಕ, ಬಹುಮುಖ ವ್ಯಕ್ತಿತ್ವ ಹೊಂದಿದ್ದ ಈ ಕವಿ ಪೂಜ್ಯರು ನೂರ್ಕಾಲ ಬಾಳಿ ಬದುಕಲಿ! ಅವರು ಈ ನಾಡಿನ ಕಣ್ಮಣಿಗಳಾಗಲಿ! ಈ ಹಿರಿಯ ಪೂಜ್ಯ ಜೀವ ಈ ನಾಡಿನ ಮಹಾ ಪುಣ್ಯ! ಅವರನ್ನು ಕಂಡ ನಾವೆಲ್ಲ ಧನ್ಯ!!

ಒಂದು ಸಮೀಕ್ಷೆ

# ಪೂಮಾಲೆ

---

ಪ್ರೊ. ಎಸ್. ಎಂ. ವೃಷಭೇಂದ್ರಸ್ವಾಮಿ, ಎಂ. ಎ.

ಮರದ ಗುಣ ಮೊಳಕೆಯಲ್ಲಿಯೇ ತೋರುವಂತೆ, ಶ್ರೀ ಗಂಗಾಧರ ರಾಜಯೋಗೀಂದ್ರ ಜಗದ್ಗುರುಗಳು, 'ಮುಮುಕ್ಷು'ಗಳಾಗಿರುವಾಗಲೇ, ಶಾಸ್ತ್ರ ಸಮನ್ವಯ ಪ್ರವೃತ್ತಿ ಕಾವ್ಯ ರಚನಾ ಪ್ರತಿಭೆ, ಪ್ರವಚನ ಪ್ರಿಯತೆಯ ಕುರುಹುಗಳನ್ನು ತೋರಿರುವರು. ಕಾವ್ಯತೀರ್ಥ, ಸಾಹಿತ್ಯರತ್ನ, ವೇದಾಂತಾಚಾರ್ಯ ಪದವಿಗಳನ್ನು ಪಡೆದು, ತಮ್ಮಂತರಂಗದ ನಿಗೂಢ ಚೈತನ್ಯವೊಂದರ ಆವಿಷ್ಕಾರಕ್ಕೆ ಸಾಹಸಮಯ ಪ್ರಯತ್ನದಲ್ಲಿ ತೊಡಗಿರುವುದು ತೋರುತ್ತಿದೆ: ಸಂಸ್ಕೃತ, ಕನ್ನಡ, ಇಂಗ್ಲೀಷ ಭಾಷಾ ಸಾಹಿತ್ಯಗಳ ಅಭ್ಯಾಸದಿಂದ, ಮಹಾಪುರುಷರ ವಿಚಾರ, ಭಾವನೆಗಳ ಅಳವಡಿಸುವಿಕೆಯಿಂದ, ಸ್ವಾಧ್ಯಾಯ ಸ್ವಚಿಂತನ, ಸ್ವಯಂಸೃಷ್ಟಿಯ ಪ್ರವೃತ್ತಿಯಿಂದ, ಶ್ರೀಶ್ರೀಗಳ 'ವ್ಯಕ್ತಿತ್ವ' ರೂಪಿತವಾಗಿರುವುದನ್ನು ಗಮನಿಸಬಹುದು. ಅಂತೆಯೇ ಶಿವಯೋಗ ಮಂದಿರದ ಯೋಗಿಪುಂಗವರ ಸೇವೆ, ಸಾನ್ನಿಧ್ಯ, ಆಶೀರ್ವಾದಗಳು ಈ "ವ್ಯಕ್ತಿತ್ವ" ವೃಕ್ಷದ ಬೆಳವಣಿಗೆಗೆ ನೀರು ಸಾರಗಳಾಗಿರುವುದನ್ನು ಪರಿಶೀಲಿಸಿದರೆ, ಈ "ವಟು" ಮುಂದೆ ಧರ್ಮಕ್ಷೇತ್ರದ "ವಟವೃಕ್ಷ"ವಾಗಿ ಬೆಳಗಿದುದರ ಮೂಲ ಅಂಶಗಳನ್ನು ಕಂಡುಕೊಂಡಂತಾಗುವುದು. ಪೂಜ್ಯ ಜಗದ್ಗುರುಗಳವರ ಅಭಿರುಚಿ, ಸಾಧನೆ, ಬೋಧನೆ ಹಾಗೂ ಆತ್ಯಂತಿಕ ಗುರಿಯನ್ನು ಸೂಚಿಸುವ ಕೃತಿ, "ಪೂಮಾಲೆ" ಎಂಬ ಸೂಕ್ತಿ ಕಂದಗಳ ಕೈಪಿಡಿ.

ಇಂದಿನ ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳಿನ್ನೂ ಚಿತ್ತರಗಿಯ ಮಹಾಂತದೇವರಾಗಿದ್ದ ಕಾಲದಲ್ಲಿ ಅಂದರೆ, ೧೯೫೪ರ ಸುಮಾರಿನಲ್ಲಿ ರಚಿಸಿದ ಕೃತಿ, "ಪೂಮಾಲೆ" ಲೇಖಕರೇ ಬಿನ್ನವಿಸಿಕೊಂಡಿರುವಂತೆ ಭಗವದ್ಗೀತೆ ಮತ್ತು ಶರಣರ ವಚನಗಳ ಭಾವವನ್ನು ಕೆಲವು ಅಲರುಗಳಲ್ಲಿ ಮಾತ್ರ ತೆಗೆದುಕೊಂಡು ಈ "ಪೂಮಾಲೆ" ಯನ್ನು ಪೋಣಿಸಿದ್ದಾರೆ. ಈ ನೀತಿ–ಸೂಕ್ತಿಗಳನ್ನು ಕಂದದ ಛಂದದಲ್ಲಿ ಪವಣಿಸಿರುವ ಜಾಣ್ಮೆ ಮೆಚ್ಚುವಂತಿದೆ. ಈ ಪೂಮಾಲೆಯಲ್ಲಿ ಛಂದಸ್ಸು ಬಂಧನವಾಗದೆ, ಭಾವ–ವಿಚಾರಗಳನ್ನು ಸ್ಮರಣ ಯೋಗ್ಯವಾಗುವಂತೆ ಅಳವಡಿಸುವ ಮಂಡನವಾಗಿ ಮೂಡಿದೆ. ಸರಳ ಕನ್ನಡದ ಸೊಗಸು, ಅಲ್ಲಲ್ಲಿ ಮಿನುಗಿರುವ "ದೇಶಿ"ಯ ರಮ್ಯತೆ, ಹಾಗೆಯೇ ಸಂಸ್ಕೃತ ನುಡಿಯ ಹದ, ಈ "ಪೂಮಾಲೆ"ಯ ಶೈಲಿಗೆ ಒಂದು "ಹದವಾದ ಪಾಕ" ವನ್ನೊದಗಿಸಿವೆ. ಧರ್ಮದ ಮರ್ಮ, ನೀತಿಯ ರೀತಿ, ನಡವಳಿಕೆಯ ಮಾರ್ಗದರ್ಶನ ಹಾಗೂ ಮಾನವ ಜನ್ಮದ ಪರಮ ಗುರಿಯನ್ನು ಈ ಪೂಮಾಲೆಯು "ನರುಗಂಪ"ನ ಹರವಿ

ನಲ್ಲಿ ಕಾಣಬಹುದಾಗಿದೆ. ಮುನ್ನುಡಿಕಾರರಾದ ಶ್ರೀ ಜ. ಚ. ನಿ. ಯವರೆಂದಂತೆ, "ಇದನ್ನು ಕಟ್ಟಿದ ಕವಿ ಒಳ್ಳೆಯ ಮಾಲೆಗಾರ....ಮಾಲೆಯನ್ನು ಮಾರಿ ಹಣ ಗಳಿಸುವ ಮಾಲೆಗಾರ ನಲ್ಲ, ತನ್ನ ಗುರುವಿನಲ್ಲಿ ತನಗಿರುವ ಭಕ್ತಿಯನ್ನು ಭಾವವನ್ನು ಈ ಪದ್ಯದ ಮೂಲಕ ಸಾರಿದ್ದಾನೆ" ಈ ಶೈಶವದ ಶಿವಕವಿ ಅಷ್ಟೇ ಅಲ್ಲದೆ, ಜನತೆಗೆ ಮಾರ್ಗದರ್ಶನ ನೀಡಿ, ಸಮಾಜದ ಸಾಮರಸ್ಯಕ್ಕೆ ದಾರಿ ತೋರುವ "ಒಳಬಯಕೆ"ಯೂ ಇಲ್ಲಿ ಧ್ವನಿತವಾಗುತ್ತಿರುವು ದನ್ನು ಸೂಕ್ಷ್ಮ ಓದುಗರು ಗಮನಿಸಬಲ್ಲರು.

"ಪೂಮಾಲೆ"ಯನ್ನು ಕಾರುಣ್ಯಮೂರ್ತಿಯಾದ ಸುಕುಮಾರ ಯೋಗಿಗೆ ಅರ್ಪಿಸಿ, "ಮತಿಯು ಪಾಲಿಸು" "ವರಯೋಗ ಮಾರ್ಗದಿರವಂ ಕರುಣಿಸಿ ಶಿವಸುಖವ ನಿತ್ತು....ಪೊರೆ" ಸುವಿಚಾರದಿರವನಿತು!....ಮೊರೆ...."ಕಾಯುದ ಕತ್ತಲೆಯ ಕಳೆದು....ಮಾಯದ ತೊಡಕನು ಬಿಡಿಸೈ....ನಿಮ್ಮ ಧರ್ಮ" ಎಂದು ಅತಿ ವಿನಯದಿಂದ ಬೇಡಿ ಕೊಂಡಿರುವ ಪದ್ಯಗಳಲ್ಲಿ ಪ್ರಾಂಜಲ ಮನೋಭಾವ ವ್ಯಕ್ತವಾಗಿದೆ. ಹಾಗೆಯೇ

ಸತ್ಯ ಸುಮಾರ್ಗದೆ ನಡೆಯೆಂ।
ಭಕ್ತಿಯ ಮರ್ಮವನೆ ತಿಳಿವ ನಂಬುಗೆಯಿಲ್ಲಂ॥
ಮುಕ್ತಿಯ ಪಥವನ್ನರಿಯದೆ।
ವ್ಯರ್ಥವು ಕೆಡುತಿರ್ಪೆನಯ್ಯ ಪೊರೆಬಿಡದೆನ್ನಂ॥

ಎಂಬ ಕಕ್ಕುಲತೆಯ ನುಡಿಯಾಡಿ, "ಪೊರೆಯೋ ಮೊರೆ ಹೊಕ್ಕಿರುವೆಂ" ಎಂದು ಹಂಬಲಿಸಿ ದ್ದಾರೆ, ಭಕ್ತಿಯು ಗರಿಗೆದರುತ್ತಿರುವ ಕಿರು ಹರೆಯದ ಕವಿ.

ಗುರು ಮಹಿಮೆಯನ್ನು, ಗುರು ಕಾರುಣ್ಯದ ಆಢ್ಯತೆಯನ್ನು ಪೂಮಾಲೆಯ ಮುಂದಿನ ಕೆಲವು ಕಂದಗಳಲ್ಲಿ ಪರಿಪರಿಯಾಗಿ ವರ್ಣಿಸಿದ್ದಾರೆ.

ಗುರುಬೋಧೆಯಿಂದ ಜನನದ।
ಮರಣದ ಬೇರುಗಳು ಕಿತ್ತು ಕಡೆಗಾಗುವವೈ॥
ಗುರುಬೋಧೆಯಿಂದ ದುಃಖಂ।
ಹರಿವುದು ತಚ್ಛಾಂತಿ ಸುಖವು ದೊರೆವುದು ಸಹಜಂ॥

ಅಲ್ಲದೆ, ಸಾಧನೆಯ ಕೀಲಾದ ಲಿಂಗಕ್ಕೆ ಗುರುವಿನಿಂದಲೇ "ಸತ್ಕಳೆ" ಸಮನಿಸುವುದೆಂದೂ, ಗುರುಸೇವೆಯಿಂದ ಅಂಗ ಪರಿಶುದ್ಧಿಯಾಗುವುದೆಂದೂ, ಮುಮುಕ್ಷು ಕವಿ ಕಂಡು, ಈ ಕಂದ ಗಳಲ್ಲಿ ಕಂಡರಿಸಿದ್ದಾರೆ. ಕಾರುಣ್ಯಮೂರ್ತಿಯಾದ ಸದ್ಗುರು ಮುಕ್ತಿ ಪಥದರ್ಶಿ ಎಂದೂ, "ನಗುರೋರಧಿಕಂ" ಎಂಬಂತೆ "ಗುರುವಿಂ ಮಿಗಿಲಹರಿಲ್ಲಿಲ್ಲ ಮೂರು ಲೋಕದೊಳೆಂದುಂ" ಎಂದೂ ಕವಿ ಹಾಡಿದ್ದಾರೆ. ಗುರುಕರುಣದಿಂದಲೇ ಆತ್ಯಂತಿಕ ಸುಖ ಪ್ರಾಪ್ತಿ ಎನ್ನುವುದನ್ನು ಅತ್ಯಂತ ಮನೋಜ್ಞವಾಗಿ ಈ ಕೆಳಗಿನ ಪದ್ಯದಲ್ಲಿ ಬಿಂಬಿಸಲಾಗಿದೆ.

ಗುರುಸೇವೆಯೆ ಸಗುತರ್ತಿಂ।
ಪರತರ ಮೋದವನು ಪಡೆದು ಬಾಳುವದೊಳಿತೈ॥

ಗುರುಕೃಪೆಯಾಗಲ್ ನಿರುತಂ।
ದೊರೆವುದು ಶಿವಯೋಗ ಸೌಖ್ಯ ಸಂಶಯಮಿಲ್ಲಂ॥

ಮುಂದಿನ ಪದ್ಯಗಳಲ್ಲಿ ಜಂಗಮದ ಹಿರಿಮೆ ಗರಿಮೆಗಳನ್ನು ಕವಿ ಬಣ್ಣಿಸಿದ್ದಾರೆ. "ಮರವೆಯ ಮನುಜರ ಬೋಧಿಸಿ। ಪರಿಶುದ್ಧತೆಗೊಯ್ವೊಡವನೆ ಜಂಗಮವರ್ಯಂ" ಎಂದು ನಂಬಿ, ಭಕ್ತಸಂತತಿಯನ್ನು ದಯಾಹೃದಯದಿಂದ, ತಾರತಮ್ಯ ಭೇದವಿಲ್ಲದೆ, ನಿರಪೇಕ್ಷನಾಗಿ ಬೋಧಿಸುವ ಮಹಾತ್ಮನೇ ನಿಜ ಜಂಗಮನೆಂದು ಬೋಧಿಸಿದ್ದಾರೆ.

ಗುರುಜಂಗಮರಿವರೀರ್ವರ್
ಬೆರೆಯುತ ತಮ್ಮೊಳಗೆ ಕಲಹವಿಲ್ಲದೆಯಾಗಳ್॥
ವರವೀರಶೈವ ಧರ್ಮವ।
ದಿರದುದ್ಧರಿಸುವದೆಯವರ ಸತ್ಕರ್ತವ್ಯಂ॥

ಈ ಪದ್ಯದಲ್ಲಿ ಕವಿ, ಸಾಮಾಜಿಕ ವಿಷಮತೆಯನ್ನು ಪರಿಭಾವಿಸಿ, ವೀರಶೈವ ಧರ್ಮ ಗುರುಗಳ ಕರ್ತವ್ಯವನ್ನು ಎಚ್ಚರಿಸಿದ್ದಾರೆ. ಹಾಗೆಯೇ,

ವಿರತಾಗ್ರಗಣೆಗಳೆನಿಸುವ।
ಚರಮೂರ್ತಿಗಳೈದೆ ಸಮಯ ಭೇದಗಳಿಂದಂ॥
ಚರಿಸುತೆ ತಮ್ಮೊಳ್ಕಲಹವ।
ನಿರದಬ್ಬಿಸುತಿರ್ಪುದಿದುವೆ ಶಾಸ್ತ್ರ ವಿರೋಧಂ॥

ಎಂಬ ದಿಟ್ಟ ನುಡಿಯಾಡಿದ್ದಾರೆ. ಕವಿಯ "ವ್ಯಕ್ತಿತ್ವ"ದ ವಿಶಿಷ್ಟತೆ, ಇಲ್ಲಿ ಹೆಡೆಯಾಡಿರುವುದನ್ನು ಗಮನಿಸಬಹುದಾಗಿದೆ.

ಪೂಮಾಲೆಯ ಹೆಚ್ಚಿನ ಭಾಗ, ಲೋಕ ನೀತಿಯನ್ನು ಹೇಳಲು ಮೀಸಲಾಗಿದೆ. ನೈತಿಕ ಜೀವನವೇ ಪರಮ ಶ್ರೇಷ್ಠ, ಶಿವಪೂಜೆ, ಶಿವಧ್ಯಾನ ಹಾಗೂ ಶಿವಯೋಗ ಸಾಧನೆಯ ಮಹತಿಯನ್ನು ಹಲವು ಕಂದಗಳಲ್ಲಿ ವರ್ಣಿಸಿದ್ದಾರೆ, 'ಬಾಯಲಿ ಬೊಮ್ಮವ' ಹೇಳುವರನ್ನು ನಿಂದಿಸಿ, ಪಂಚಕ್ಲೇಶಗಳಲ್ಲಿ ಸಿಲುಕಿದವರನ್ನು ಭಂಗಿಸಿ, ಚಿತ್ತ, ವಿತ್ತಗಳ ವಿಭ್ರಮವನ್ನು ವಿವರಿಸಿ, ಭಕ್ತಿ ಸಾಧನೆಯಲ್ಲಿ ತೊಡಗಿದವರು ಈ ದುರ್ಗುಣಗಳಿಂದ ದೂರವಿರಬೇಕೆಂದು ನುಡಿದಿದ್ದಾರೆ. ಪ್ರಭುದೇವನ ನುಡಿಯನ್ನೆತ್ತಿಕೊಂಡು,

ಕಣ್ಣಿನ ಕೊನೆಯೊಳಗಿರುತಿಹ।
ಬಣ್ಣದ ಪಕ್ಷಿಯನು ಹಿಡಿದು ಕಟ್ಟುವರಾರೈ॥
ಅಣ್ಣಗಳೇ ಪೇಳಿರಿ ಬರಿ।
ಬಣ್ಣದ ಮಾತಿನೊಳು ಸಾಧ್ಯವಾಗುವದಲ್ಲೈ॥

ಎಂದು ಬಿಡುನುಡಿಯಲ್ಲಿ ವಿವರಿಸಿ, "ಕಾಯ ಹಾಗೂ ಜೀವ ಸ್ಥಿರವಲ್ಲ, ಈಗಲೇ ಶಿವಪೂಜೆಯಲ್ಲಿ ತೊಡಗಿ, ಭಕ್ತಿಯ ಮಾರ್ಗದಲ್ಲಿ ನಡೆದು, ನಿಷ್ಠೆ ಬಲಿದು, 'ಭಾವತುಂಬಿ' ಬಾಳಬೇಕೆಂದು" ಮಾರ್ಗದರ್ಶನ ನೀಡಿದ್ದಾರೆ. ನಾನು ಜ್ಞಾನಿ, ನಾನು ಹಿರಿಯ, ಎಂಬ

ಅಹಂಕಾರದ ಎಳೆಗಳನ್ನು ಬಿಡಿಸಿ, "ಸತ್ಯರ ನುಡಿಗಳನಾಲಿಸಿ, ಸತ್ಯರ ನಡತೆಯನೆ ನೋಡಿ ನಡೆವುದೆ ಚಂದಂ" ಎಂದು ನಂಬಿಸಿ, ಅಂತರಂಗದ ಆತ್ಮಶ್ರೀಯನ್ನು ಗಳಿಸಿ, ಮುಕ್ತಿಪಥ ಹಿಡಿಯದಿದ್ದರೆ ಮಾನವ ಜನ್ಮದ ಫಲವೇನು ಎಂದು ಪ್ರಶ್ನಿಸಿದ್ದಾರೆ. ಇಲ್ಲಿ "ಹೊಳೆಯೋಳ್ ಹುಣಿಸೆಯ ಹಣ್ಣು ತೊಳೆದಂತೆ", "ಊರೊಳ್ಪಂದಿಗಳಿರಲಾ ಕೇರಿಯೆ ಪರಿಶುದ್ಧ ವಾಗುವ ತೆರದಿ" ಎಂಬ ದೇಶೀಯ ನುಡಿಗಳನ್ನು ಕಂದದ ಛಂದದಲ್ಲಿ ಅಳವಡಿಸಿರುವ ಕವಿ, "ಸತ್ಯವನಾಡಿದ ಗಾಂಧಿ"ಯ ಹಿರಿಮೆಯನ್ನು ಉದಾಹರಿಸಿದ್ದಾರೆ. ಹಾಗೆಯೇ, ಜೀವನ ಸಾರ್ಥಕತೆಗೆ ಮಾರ್ಗದರ್ಶಕವಾಗುವ ಹಲವಾರು ನೀತಿ-ನೇತಿ-ಇತಿ ನುಡಿಗಳನ್ನು ಈ 'ಪೂಮಾಲೆ'ಯಲ್ಲಿ ಪವಣಿಸಿದ್ದಾರೆ.

ನೀತಿಯೆ ಜಗದೋಳ್ಮಾನ್ಯಂ!
ನೀತಿಯ ನಡೆಯಿಲ್ಲದವನೆ ಕೋತಿಯೆನಿಕ್ಕುಂ||
ನೀತಿಯ ಪೂಗಳ ಜೋಡಿಸಿ|
ಮಾತಿನ ಪೋಣ್ಕೆಯೊಳೆಹೆಣೆದ ಪೂಮಾಲಿಕೆಯಂ||

ಅಲ್ಲದೆ, ಪೂರ್ವಜನ್ಮದ ಪುಣ್ಯ, ಈ ಜೀವದೀಪದ ಎಣ್ಣೆ(ಪದ್ಯ ೬೩)ಯೆಂದೂ ಧರ್ಮವೇ ದಿವ್ಯ ಪಥವೆಂದೂ, "ಭಕ್ತಿಯೇ ಮುಕ್ತಿಯ ನೀವ" ತಾರಕ ಮಂತ್ರವೆಂದೂ ವರ್ಣಿಸಲಾಗಿದೆ. ಅಲ್ಲದೆ,

ಕತ್ತಲೆಯೊಳಿರ್ದು ದೀಪದ|
ಬಿತ್ತರವಂ ಬಣ್ಣಿಸಲ್ಕೆ ಬೆಳಕಹುದೆಂತೈ||
ಸತ್ಯ ಬ್ರಹ್ಮವ ಬಲುಹೊಗ|
ಳುತ್ತಿರೆ ಸತ್ಕ್ರಿಯೆಗಳಿಲ್ಲದಿರಲದು ವ್ಯರ್ಥಂ||

ಎಂಬ ಮಾರ್ಗದರ್ಶಕ ನುಡಿಗಳನ್ನು ಆಡಿ ಈ ಎಲ್ಲ "ಸದಾಚಾರ ನುಡಿಗಡಣ", ತಂದೆ ಮಗನಿಗೆ ಹೇಳಿದ ಮಾತುಗಳೆಂದು ಸೂಚಿಸಿದ್ದಾರೆ. ಇಂದು ಒಂದು ರೀತಿಯಲ್ಲಿ ಇದು ಪಿತೃ ಸಂಮಿತ. ಕವಿಯೇ ತಂದೆ, ಭಕ್ತರೇ ಮಕ್ಕಳು.

ಶಿವಯೋಗಿವರ್ಯನ ಸ್ಮರಣೆಯಿಂದ ಈ 'ಪೂಮಾಲೆ'ಕೊನೆಗೊಂಡಿದೆ. ಪರಿಸಮಾಪ್ತಿಯ ವಾಕ್ಯಗಳಲ್ಲಿ ಮತ್ತೆ ಕವಿಯ ನೈಜ ಭಕ್ತಿಯ ಅಭಿವ್ಯಕ್ತಿಯನ್ನೂ ಕಾಣುತ್ತೇವೆ. ನೀತಿ-ನಡೆಯ ಮಾತುಗಳು ಅಲ್ಲಲ್ಲಿ ಆರಿಸಿದಂತೆ ಕಾಣಿಸಿದರೂ, ಗುರುಭಕ್ತಿ ಲಿಂಗಜಂಗಮ ಮಹಿಮೆ ಹಾಗೂ ಮುಮುಕ್ಷು ಭಾವದ ನುಡಿಗಳಲ್ಲಿ ಕವಿಯ ಸ್ವಂತಿಕೆ ಎದ್ದುಕಾಣುತ್ತಿದೆ. ಬದುಕಿನ ಮಹಾಬೆಳಗನ್ನು ತೋರುವ ಶ್ರೀ ಮಹಾಂತ ಮರಿದೇವರು ಸಂಘಟಿಸಿದ ಈ ಪೂಮಾಲೆ, ಓದುಗರಲ್ಲಿರುವ 'ಸಹೃದಯ ಸದಾಶಿವನ' ಭಾವಕ್ಕೆ ಅರ್ಪಿತವಾಗಿದೆ; ತನ್ನ ಲೋಕೋಕ್ತಿ ಸಂಗ್ರಹದಿಂದ, ಸ್ವಾಭಿವ್ಯಕ್ತಿಯ ಹೊಸತನದಿಂದ ದೇಶಿಯ ಬೆಡಗಿನಿಂದ ಕಂಗೊಳಿಸುತ್ತಿದೆ. 'ವಟು'ವಿನ ಹೃದಯದ ಮೊಗ್ಗೆ ಅರಳಿ, ಈ "ಪೂಮಾಲೆ", ಛಂದ ಗುಂದದ ಕಂದಗಳ "ಕುಂದಮಾಲೆ"ಯಾಗಿದೆ.

# 'ಆಶೀರ್ವಾಣಿ' ಕುರಿತು

**ಶ್ರೀ ಆರ್. ಸಿ. ಹಿರೇಮಠ**

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು, ಮೂರುಸಾವಿರಮಠ, ಹುಬ್ಬಳ್ಳಿ ಮಹಾಸನ್ನಿಧಿಯ ಪಟ್ಟಾಭಿಷೇಕ ಮಹೋತ್ಸವದ ಸ್ಮರಣ ಸಂಚಿಕೆಗಾಗಿ ಮೈದಳೆದ ಕೃತಿ 'ಆಶೀರ್ವಾಣಿ' ಶ್ರೀಗಳವರ ಲೇಖನ ಹಾಗೂ ಅಲ್ಲಲ್ಲಿ ದಯಪಾಲಿಸಿದ ಭಾಷಣಗಳ ಸಂಗ್ರಹ. ಸುಲಲಿತವಾದ ಭಾಷೆ ಯಲ್ಲಿ ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮದರ್ಶನಗಳ ವಿವಿಧ ಸ್ತರ-ವಿಸ್ತರಗಳನ್ನು ಸುಂದರ ವಾಗಿ ಬಿಂಬಿಸಿದೆ. ಈ ಕೃತಿಗೆ ವಿಮರ್ಶೆ ಎನ್ನುವುದಕ್ಕಿಂತ ಮೆಚ್ಚುಗೆಯ ನಾಲ್ಕು ಮಾತು ಬರೆಯುವುದೊಂದು ಭಾಗ್ಯವಿಶೇಷವೆಂದು ಭಾವಿಸಿದ್ದೇನೆ.

ಅರ್ಥಪೂರ್ಣವಾದ ಶಿರೋನಾಮೆಯ ಕೃತಿಯು ಒಳತಿರುಳನ್ನು ನಿರ್ದೇಶಿಸುವಂತೆ, ಸಮಾಜ ಜೀವನದ ಒಳಹೊರಗುಗಳನ್ನು ಬೆಳಗುವ ಇಲ್ಲಿಯ ಲೇಖನಗಳಲ್ಲೆಲ್ಲ ಶ್ರೀಗಳ ಆಳವಾದ ಅಭ್ಯಾಸ, ಅಭ್ಯಾಸದೊಂದಿಗೆ ಪಡೆದುಕೊಂಡ ದಾರ್ಶನಿಕ ನಿಲವು, ಅದನ್ನೇ ಸುಸ್ಪಷ್ಟವಾಗಿ ಪ್ರತಿನಿಧಿಸುವ ಭಾಷೆ, ಇವು ಈ ಕೃತಿಯ ವಿಶೇಷ ವೈಶಿಷ್ಟ್ಯಗಳಾಗಿವೆ. ಅನುಭವ ತನ್ನೆಲ್ಲ ಸಹಜತೆಗಳಿಂದ, ನಾನಾ ರೂಪಗಳಿಂದ ಪ್ರಕಟವಾಗಿದ್ದು, ನೆಲ-ಮುಗಿಲು ಗಳ ಅವ್ಯಕ್ತವಾದ ಅನನ್ಯ ಸಂಬಂಧವನ್ನು ತಿಳಿಸುವುದು ಇಲ್ಲಿಯ ಲೇಖನಗಳ ಆಶಯ. ಇದರ ವ್ಯಾಪ್ತಿ ಇಲ್ಲಿರುವ ಸುಮಾರು ೩೯ ಲೇಖನಗಳವರೆಗೆ ಸತ್ತುವರೆದಿದೆ, ಧರ್ಮ ವಿವೇಚನೆ. ಜೀವನ, ಕಲೆ, ಸೌಂದರ್ಯ, ಮಹಾಮಹಿಮರ ಜೀವನ ಚರಿತೆ ಮುಂತಾದವು ಗಳಿಂದ ವೈವಿಧ್ಯಮಯವಾಗಿ ಸಮೃದ್ಧವಾದ "ಆಶೀರ್ವಾಣಿ" ನಿಜಕ್ಕೂ ಸ್ವಾಗತಾರ್ಹ.

'ಕಾಯಕವೇ ಕೈಲಾಸ'ವೆಂಬ ಶರಣರ ನುಡಿಗಡಣದ ಬೆಳಕಿನಲ್ಲಿಯೆ ಭಕ್ತರನ್ನೂ ಆಶೀರ್ವಾಣಿಯ ಮುಖಾಂತರ ಎಚ್ಚರಗೊಳಿಸಿದ ಶ್ರೀಗಳವರು ಜೀವಿಯ ಜನನದಿಂದ ಮೊದಲ್ಗೊಂಡು ಪೂರ್ಣಾವಸ್ಥೆಯ ವರೆಗಿನ ಸಮಸ್ತ ಪರಿಸರಗಳನ್ನು ಸರ್ವ ಹಂತಗಳಲ್ಲಿ ಸರ್ವ ವಿಧಗಳಿಂದ ವಿವರಿಸಲು ಪ್ರಯತ್ನಿಸಿದ್ದಾರೆ. "ಶೀಲವೆ ಧರ್ಮ" "ಸತ್ಯವೆ ದೇವರು" ಎಂಬ ಪಾಠ ಕಲಿಸಿದ್ದಾರೆ. ಧ್ಯಾನಯೋಗದ ಕಲ್ಪನೆಯನ್ನು ಕೊಟ್ಟು "ಶಿವಾನುಭವದ ಮಹತಿ"ಯನ್ನು ಸುಗಮವಾದ ಸುಸಂಬದ್ಧವಾದ ರೀತಿಯಲ್ಲಿ ಚರ್ಚಿಸಿದ್ದಾರೆ. "ವ್ಯಕ್ತಿತ್ವ ಶಾಲಿಗಳು ನಿರಂತರ ನಿರ್ಭೀತರು, ಅವರಿಗೆ ಬಾಹ್ಯಾಡಂಬರ ಸಲ್ಲದು....ಸಚ್ಚಾರಿತವುಳ್ಳವ ರಾಷ್ಟ್ರದ ರಚನೆಗೆ ಸಮರ್ಥ-ಅವನ ಬೆಲೆ ಅವನ ಚರಿತ್ರ....ಒಳ್ಳೆಯ ಕರ್ಮದಿಂದ ಭಾಗ್ಯದ ಬಾಗಿಲು....ಜೀವನದಲ್ಲಿ ಜ್ಯೋತಿ ತುಂಬ ಬೇಕಾಗಿದೆ. ಹೊರಗಿನ ವಿಶಾಲ ವಿಚಾರಗಳನ್ನು ಅರಿತುಕೊಳ್ಳಬೇಕು. ಬದಲಾದ ಜಗತ್ತಿನ ಕೂಡ ಸಾಗಬೇಕು. ಹಳೆಯ ಪದ್ಧತಿಗಳಿಗೆ ಹೊಸ

ವಿಚಾರಗಳನ್ನು ಅನ್ವಯಿಸಬೇಕು. ಇದಾವುದೂ ಆಂತರಿಕ ವಿಚಾರಕ್ಕೆ ಬಾಧೆ ಬರದಂತೆ ನಡೆಯಬೇಕು."

ಇದು ಶ್ರೀಗಳವರ ಆಶೀರ್ವಾದ. ಮಾನವ ಕೇವಲ ಕುರುಡು ಧರ್ಮದ ಕವಚದಲ್ಲಿ ಸಿಲುಕದೆ ಅದರ ಸತ್ಯಾಸತ್ಯತೆಯನ್ನು ಅರಿತು ತನಗೂ ತನ್ನವರಿಗೂ ಆದರ್ಶಪ್ರಾಯವಾಗಿ ಬಾಳಿದರೆ, ಅವನ ಬಾಳು ಸಫಲ. ಆ ಸಫಲತೆಯತ್ತ ವಿಶಾಲ ಮನೋಭಾವದವರಾಗಿ ಬೆಳೆಯಬೇಕೆನ್ನುವ ಮಾತುಗಳೆಲ್ಲವೂ ಧರ್ಮದೃಷ್ಟಿ ಕಲ್ಮಷಗೊಂಡ ಆಧುನಿಕತೆಗೆ ಸಹಾನುಭೂತಿ ಹೇಳುತ್ತಿವೆ. ಧರ್ಮದ ಸಿದ್ಧಾಂತ ದರ್ಶನಗಳನ್ನೆಲ್ಲ ಆಧುನಿಕ ಯುಗದ ಪರಿಸರಕ್ಕೆ ಹೊಂದಿಸಿ ಹೇಳುವ ಕೆಲಸ ಅತಿ ಮಹತ್ವದ್ದಾಗಿದೆ. ಅಂತೆಯೆ—'ಜಾಗತಿಕ ಶಾಂತಿಗೆ ವೀರಶೈವದರ್ಶನದ ಕೊಡುಗೆ', "ಷಟ್‌ಸ್ಥಲ ವಿವೇಚನೆ", "ಸರ್ವಧರ್ಮ ಸಮನ್ವಯ ದೃಷ್ಟಿ", "ಶಿವಾದ್ವೈತಶಕ್ತಿ", "ಗೀತೆಯ ಒಳಗುಟ್ಟು" ಮುಂತಾದ ಲೇಖನಗಳು ಲೌಕಿಕದಲ್ಲಿಯೆ ಅಲೌಕಿಕವೆನಿಸಿದ ಧರ್ಮ ಹಾಗೂ ಮಾನವನ ನಿಗೂಢವಾದ ಸಂಬಂಧವನ್ನೂ ಮಹತ್ವವನ್ನೂ ಬಿತ್ತರಿಸಲು ಪ್ರಯತ್ನಿಸಿವೆ. ಅಂತೆಯೆ ಶ್ರೀಗಳ ದೃಷ್ಟಿ, ಲೋಕಕ್ಕೆ ಅಮೃತಪ್ರಾಯರಾಗಿ ದೇವತ್ವಕ್ಕೇರಿದ ಮಹಾಮಹಿಮರ ಮಹಾಜೀವನ ದರ್ಶನಗಳ ಕಡೆಗೂ ಹರಿದಿದೆ. 'ಶರಣರ ಅಮರಜೀವನ' ಎಂಬ ಲೇಖನದಲ್ಲಿ ಕಾರ್ಯಾರ್ಪಣ, ಕರಣಾರ್ಪಣ ಭಾವಾರ್ಪಣ ಸಮನ್ವಯ ಸಂಪನ್ನರಾಗಿ ಸರ್ವಾರ್ಪಣ ನಿರತರಾದ ಶರಣರ ಬಾಳೇ ಇಂದಿನ ವಿಜ್ಞಾನಯುಗದ ಅಸ್ತವ್ಯಸ್ತತೆಗೆ ಮಾರ್ಗದರ್ಶನವಾಗುವಂತೆ ಆಶಿಸಿದ್ದಾರೆ. "ನೈತಿಕ ಜೀವನ, ಲೌಕಿಕ ಜೀವನ, ಸಾಹಿತ್ಯಿಕ ಜೀವನ, ಸಾಮಾಜಿಕ ಜೀವನ, ಆಧ್ಯಾತ್ಮಿಕ ಜೀವನ ಇವುಗಳ ಸಾಮರಸ್ಯವೆ ಶರಣರ ಅಮರ ಜೀವನ"-ಎಂದು ಶರಣರ ತುಂಬು ಬಾಳಿನ ಮಹಾಬೆಳಗನ್ನು ಉದಾಹರಣೆಗಳೊಂದಿಗೆ ತೋರಿಸಿದ್ದಾರೆ, 'ಶರಣರ ಸಾಹಿತ್ಯಿಕ ಜೀವನದಿಂದ ನರರಿಗೆ ಆತ್ಮದರ್ಶನ' -ಇದು ಶ್ರೀಗಳ ಅನುಭವದ ಸೂತ್ರಪ್ರಾಯವಾದ ಜಾಣ್ನುಡಿ. ಇವನ್ನೇ ಶ್ರೀಗಳು ಹಲವಂದದಿಂದ ಹದವರಿತು ಲೇಖನಗಳಲ್ಲಿ ಪ್ರಸ್ತಾವಿಸಿ ಕೃತಾರ್ಥರಾಗಿದ್ದಾರೆ.

ವೀರಶೈವ ಧರ್ಮೋದ್ಧಾರಕ ಭಕ್ತಿಭಂಡಾರಿ ಬಸವಣ್ಣನವರ ಅನುಭಾವವೇ ಶ್ರೀಗಳಿಗೆ ಪ್ರೇರಕ. ಅಂತೆಯೇ 'ಬಸವಣ್ಣನವರ ವಚನಗಳಲ್ಲಿ ಧರ್ಮ ಮತ್ತು ಭಕ್ತಿ', 'ಬಸವ ಸಂದೇಶ', 'ಅಣ್ಣನ ಅನುಭಾವ ಕ್ರಾಂತಿ', 'ಕನ್ನಡ ಕಾರಣಪುರುಷ ಬಸವಣ್ಣ' ಹೀಗೆ ಒಟ್ಟು ನಾಲ್ಕು ಲೇಖನಗಳು ಬಸವಣ್ಣನವರ ಜೀವನ ದರ್ಶನ ಘನತೆ ಗೌರವಗಳಿಗಾಗಿ ಮೀಸಲಾಗಿವೆ. ಶ್ರೀಗಳು ಬಸವಣ್ಣನವರು ಸಾಧಿಸಿದ ತತ್ತ್ವಜೀವನ ಸಿದ್ಧಾಂತಗಳೊಂದಿಗೆ ಅವರು ಕ್ರಿಯಾನಿಷ್ಠರಾಗಿಯೂ ಭಕ್ತಶ್ರೇಷ್ಠರಾಗಿಯೂ ವಿರಾಜಿಸಿದುದನ್ನು ಸಮರ್ಪಕವಾಗಿ ರೂಪಿಸಿದ್ದಾರೆ. ಅವರ ವಚನಗಳು 'ದ್ರಾಕ್ಷಾಫಲಗಳಂತೆ ಮತ್ತು ನಾರಿ ಕೇಳದಂತೆ' ಎಂಬ ಹೋಲಿಕೆಯಂತೂ ಅರ್ಥಪೂರ್ಣವಾಗಿದೆ. ಬಸವಣ್ಣನವರಂತೆ ಇನ್ನುಳಿದ ಭಕ್ತಾಗ್ರಣಿಗಳನ್ನೂ ಧರ್ಮಪ್ರವರ್ತಕರನ್ನೂ ಸಮಾಜೋದ್ಧಾರಕರನ್ನೂ ಶ್ರೀಗಳು ಅಷ್ಟೇ ನಮ್ರತೆಯಿಂದ ತಮ್ಮ

ಲೇಖನಗಳಲ್ಲಿ ಜೀವಂತ ಹಿಡಿದಿಟ್ಟಿದ್ದಾರೆ. 'ಭಗವಾನ್ ಬುದ್ಧ, ಚನ್ನಬಸವಣ್ಣ, ಅಕ್ಕ ನಾಗಮ್ಮ, ಗಂಗಾಂಬಿಕೆ, ನಿಜಗುಣ ಶಿವಯೋಗಿ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಮಹಾತ್ಮಾ ಗಾಂಧಿ ಮುಂತಾದ ಮಹಿಮಾನ್ವಿತರ ಜೀವನ ಸಾಧನೆ-ಸಾರ್ಥಕತೆಗಳನ್ನು ಹೃದಯಂಗಮವಾಗಿ ತಿಳಿಸಿ, 'ಶಿವಯೋಗ ಮಂದಿರ'ಕ್ಕೆ ಬೆಳಕಾಗಿ ಮಾನವಕುಲ ದೀಪಕ ಯೋಗಿಕುಮಾರರಾದ ಶ್ರೀ ಹಾನಗಲ್ಲ ಕುಮಾರ ಶಿವಯೋಗಿಗಳ ವ್ಯಕ್ತಿತ್ವಮಹಿಮೆ, ಅವರ ದೂರದೃಷ್ಟಿ, ಅವರ ಶಿಕ್ಷಣ ಪ್ರೇಮ-ಸೇವೆ ಧಾರ್ಮಿಕ ಪ್ರಗತಿಗೆ ದುಡಿದ ಅವರ ನಿಷ್ಕಲ್ಮಷ ಶರಣಜೀವನವನ್ನು ಅನನ್ಯವಾಗಿ ಎರಡು ಲೇಖನಗಳಲ್ಲಿ ತೋರಿಸಿದ್ದಾರೆ.

ಹೀಗೆ ಶ್ರೀಗಳವರು ಕೇವಲ ಒಂದಲ್ಲ ಎರಡಲ್ಲ ಹತ್ತಾರು ವಿಷಯಗಳನ್ನು ಹತ್ತಾರು ವಿಧದಿಂದ ಹೇಳುವಲ್ಲಿ ಧರ್ಮದರ್ಶನಗಳೆರಡನ್ನೂ ಮುಖ್ಯವಾಗಿಟ್ಟುಕೊಂಡಿದ್ದರೂ ಸಹಜವಾದ ನಿರೂಪಣಶೈಲಿ, ಲೇಖನಗಳ ವೈವಿಧ್ಯತೆ ಮನವನ್ನು ಹಗುರುಗೊಳಿಸುತ್ತದೆ. 'ಸಾಹಿತ್ಯ ಮತ್ತು ಮನೋವಿಜ್ಞಾನ', 'ಸೌಂದರ್ಯ ಮತ್ತು ಕಲೆ', 'ಸಾಹಿತ್ಯಧರ್ಮ' ಎಂಬ ಲೇಖನಗಳು ಚಿಂತನಾಂಶಗಳಿಂದ ಸುಂದರವಾಗಿ ಸಮೃದ್ಧಗೊಂಡಿವೆ. ಮನೋಯೋಗ, ಸಾಹಿತ್ಯ, ಮನೋವಿಜ್ಞಾನ ಮುಂತಾದ ವಿಷಯಗಳು ಇಲ್ಲಿ ಸ್ಥಾನಪಡೆದಿದ್ದು "ಸಾಹಿತ್ಯ ಮನೋವಿಜ್ಞಾನಕ್ಕಿಂತ ಮುಂದುವರಿದುದೆಂಬುದನ್ನು" ಚರ್ಚಿಸಲಾಗಿದೆ. "ಸಾಹಿತ್ಯಕಾರ ಅಮರ ಜೀವನ ದರ್ಶನದ ಸೃಷ್ಟಿಕರ್ತ, ಹೊಸ ವಿಶ್ವದ ಅದ್ವಿತೀಯ ವಿಧಾತ....ಸೂಕ್ಷ್ಮದರ್ಶಿ, ತತ್ವದರ್ಶಿ ಮತ್ತು ಸ್ವಯಂಪ್ರಜ್ಞ" ಎಂದು ಕವಿಗುಣಾವಳಿಯನ್ನು ಚಿಕ್ಕ ಮಾತುಗಳಲ್ಲಿ ಹುದುಗಿಸಿಟ್ಟು "ಕವಿಗೆ ರಾಗಾತೀತವೃತ್ತಿ ಆವಶ್ಯಕವೆಂಬ" ಮಾತನ್ನು ಸುಸ್ಪಷ್ಟವಾಗಿ ಅಂತೆಯೆ ಸರಳವಾಗಿ ಹೇಳುವ ಪ್ರಬುದ್ಧವಾಣಿ ಶ್ರೀಗಳದು.

"ಯಾತರದು ಹೂವೇನು ನಾತರದು ಸಾಲದೆ?" ಎಂಬ ಸರ್ವಜ್ಞನ ಲೋಕೋಕ್ತಿಯಂತೆ ಶ್ರೀಗಳು ತಾವು ಕಂಡುಂಡಂತೆ ಸಮಾಜದ ಸಣ್ಣದೃಷ್ಟಿ ಸಂಕುಚಿತ ಮನೋಭಾವಗಳಿಗೆ ತಕ್ಕ ಪರಿಹಾರವನ್ನು ಒದಗಿಸಿದ್ದಾರೆ. "ನೀತಿ ಮತ್ತು ಸಮಾಜ", "ಶಿಸ್ತು ಸಂಯಮ", "ಸ್ವಾತಂತ್ರ್ಯ ರಕ್ಷಣೆ", "ಅವಿಭಕ್ತಂ ವಿಭಕ್ತೇಷು", "ಜಾತೀಯತೆಯ ಐಕ್ಯ", "ಒಳಪಂಗಡಗಳು ಒಂದಾಗಬೇಕು", "ಸ್ತ್ರೀಶಿಕ್ಷಣ" ಹಾಗೂ "ಭಾಷಾಬಾಂಧವ್ಯ"-ಈ ಲೇಖನಗಳು ನಿಜಕ್ಕೂ ವಿಚಾರಾರ್ಹವಾಗಿವೆ. ಇಲ್ಲಿ ಬರುವ ಕ್ರಾಂತಿಕಾರಕ ಸಂದೇಶಗಳು ಶ್ರೀಗಳ ಅದ್ಯತನ ದೃಷ್ಟಿಯನ್ನು ಪ್ರತಿನಿಧಿಸುತ್ತವೆ. ಸಮಾಜದ ಡೊಂಕನ್ನು ತಿದ್ದಲು ಪ್ರಯತ್ನಿಸಿದ ಶಿವಶರಣರಂತೆ ಇಂದಿನ ದಿನಮಾನಗಳಲ್ಲಿಯ ಅಸ್ವಸ್ಥ ಜೀವನಕ್ಕೆ ಈ ಲೇಖನಗಳು ಸಾಂತ್ವನ ಹೇಳುತ್ತವೆ; ಆತ್ಮಶಕ್ತಿಯನ್ನು ಚೇತನಗೊಳಿಸುತ್ತವೆ. ಶ್ರೀಗಳ ದೃಷ್ಟಿ ವೈಯಕ್ತಿಕವಾಗಿರದೆ ಅದು ಸಾರ್ವತ್ರಿಕವಾಗಿದೆ. ವ್ಯಕ್ತಿಯಂತೆ ಪ್ರತಿಯೊಂದು ರಾಷ್ಟ್ರವೂ ಆತ್ಮಸಂಶೋಧನೆ ಮಾಡಿಕೊಳ್ಳದಿದ್ದಲ್ಲಿ, ಅದ್ಭುತವಾದ ವೈಜ್ಞಾನಿಕ ಸಂಶೋಧನೆಗಳಿಗೆ ಬೆಲೆಯಿಲ್ಲ. ರಸವಿಲ್ಲದ ಹಣ್ಣಿನಂತ ನಮ್ಮ ಬಾಳು ನಿಸ್ಸತ್ತ್ವವಾಗಬಾರದೆಂಬುದು ಅವರ ಮತ.

ಹೀಗೆ ಶ್ರೀಗಳವರ "ಆಶೀರ್ವಾಣಿ", ಧರ್ಮ, ಆಧ್ಯಾತ್ಮ, ಸಾಹಿತ್ಯ, ಕಲೆ, ಸಂಸ್ಕೃತಿ, ಸಮಾಜ ಜೀವನ ಮತ್ತು ಹಲವಾರು ಪುಣ್ಯಜೀವಿಗಳ ಜೀವನಾದರ್ಶ ಸಿದ್ಧಿಗಳನ್ನೆಲ್ಲ ಗರ್ಭೀಕರಿಸಿಕೊಂಡು, ತನ್ನದೆ ಆದ ವೈಶಿಷ್ಟ್ಯದಿಂದ ಮೆರೆದಿದೆ. ಧರ್ಮ ಮತ್ತು ಸಾಹಿತ್ಯ ಎರಡನ್ನೂ ಒಂದುಗೂಡಿಸಿಕೊಂಡ ಭಾಷೆ, ಭಾವನೆಗಳನ್ನು ನಿರಾಯಾಸವಾಗಿ ಧ್ವನಿಸುತ್ತದೆ. ಶ್ರೀಗಳ ಅಭ್ಯಾಸ, ಅನುಭವ, ಚಿಂತನ–ಮಂಥನಗಳಿಗೆ ಸಾಕ್ಷಿ ನುಡಿಯುತ್ತಿದೆ ಈ ಗ್ರಂಥ.

## ರಸಜ್ಞತೆ, ದಾರ್ಶನಿಕತೆಗಳ ದಿವ್ಯಸಂಗಮ

# "ಆಶೀರ್ವಾಣಿ"

---

ಬೆಳಗಾವಿ

**ಪ್ರೊ. ಪಿ. ಕೆ. ಭಾಗೋಜಿ**

ಎಮ್. ಎ.

"ಪರಮಾನಂದವೇ ಸಾಹಿತ್ಯದ ಪರಿಪಾಕ. ಈ ಆನಂದವು ಆತ್ಮ ಸಂವೇದ್ಯ ವಾದುದು. ರಸವು ಕಾವ್ಯದ ಆತ್ಮ. ಅಂತೆಯೇ ವಸ್ತುವು ಕಾವ್ಯದ ಶರೀರ. ಭೌತಿಕತೆ ಯಲ್ಲಿಯೂ ಸತ್ಯ–ಸೌಂದರ್ಯಗಳ ದಿವ್ಯ ದರ್ಶನವನ್ನು ಹೊಂದುವದು. ಸಾಹಿತ್ಯದ ಸಂಕಲ್ಪ ಅಮರ ಕಲಾಕಾರನ ಕಲಾಕೃತಿಯಲ್ಲಿ ಐಹಿಕ ಸೌಂದರ್ಯಗಳ ದಿವ್ಯ ದರ್ಶನವನ್ನು ಹೊಂದುವದು ಸಾಹಿತ್ಯದ ಸತ್ಯ ಸಂಕಲ್ಪ."

ಸಾಹಿತ್ಯಶಾಸ್ತ್ರ ವಿವೇಚನೆಯಲ್ಲಿಯೇ ತೊಡಗಿದ ಪಂಡಿತರ ಚರ್ಚೆಯಲ್ಲಿ ಬಂದ ಮಾತುಗಳಲ್ಲ ಇವು! ಹುಬ್ಬಳ್ಳಿಯ ಮೂರುಸಾವಿರಮಠದ ಜಗದ್ಗುರುಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ದಿವ್ಯವಾಣಿ ಇದು! ೧೯೫೮ರಲ್ಲಿ ಶಿವಯೋಗ ಮಂದಿರದಲ್ಲಿ ಜರುಗಿದ ಸಾಹಿತ್ಯಗೋಷ್ಠಿಯಲ್ಲಿ ಅಪ್ಪಣೆ ಕೊಡಿಸಿದ ಆಶೀರ್ವಚನವಿದು.

ಜಗದ್ಗುರುಗಳು ಬೇರೆ ಬೇರೆ ಸಂದರ್ಭಗಳಲ್ಲಿ ಅಪ್ಪಣೆ ಕೊಡಿಸಿದ ಆಶೀರ್ವಚನ ಗಳನ್ನು, ೧೯೫೮ ರಿಂದ ೧೯೭೦ರ ವರೆಗೆ ಕಾಲಕಾಲಕ್ಕೆ ಆಯಾ ಸಂದರ್ಭ–ಸನ್ನಿವೇಶ ಗಳನ್ನು ಪಾವನಗೊಳಿಸಲು ದಯಪಾಲಿಸಿದ ದಿವ್ಯ ನುಡಿಮುತ್ತುಗಳ ಮಾಲೆಗಳನ್ನು ಪೋಣಿಸಿದ ರೂಪವೆ ೩೯ ಭಾಷಣಗಳ ಸಂಗ್ರಹ "ಆಶೀರ್ವಾಣಿ"ಯೆಂಬ ೨೬೨ ಪುಟಗಳ ಗ್ರಂಥ.

ವ್ಯಕ್ತಿತ್ವದ ವಿಕಾಸ ಸಾಹಿತ್ಯ ಮತ್ತು ಮನೋವಿಜ್ಞಾನ, ನೀತಿ ಮತ್ತು ಸಮಾಜ, ಶೀಲವೇ ಧರ್ಮ ಮೊದಲಾದ ಭಾಷಣಗಳಲ್ಲಿ ಮನಃಶಾಸ್ತ್ರ, ನೀತಿ ಶಾಸ್ತ್ರಗಳ ಪರಿಪಕ್ವ ಪಾಂಡಿತ್ಯದ ಹಿನ್ನೆಲೆಯಲ್ಲಿ ಮಾಡಿದ ವಿಚಾರಗಳಿವೆ. ಸೌಂದರ್ಯ ಮತ್ತು ಕಲೆಯಂಥ ಭಾಷಣದಲ್ಲಿ ಸೌಂದರ್ಯಶಾಸ್ತ್ರ, ಕಲಾಭಿಜ್ಞತೆಗಳ ಪರಿಮಳವನ್ನು ಕಾಣುತ್ತೇವೆ.

ಶಿವಾದ್ವೈತ ಶಕ್ತಿ, ಷಟ್‌ಸ್ಥಲ ವಿವೇಚನೆ, ಶಿವಾನುಭವದ ಮಹತಿ, ಬಸವಣ್ಣ ನವರ ವಚನಗಳಲ್ಲಿ ಧರ್ಮ ಮತ್ತು ಭಕ್ತಿ, ಸತ್ಯವೇ ದೇವರು ಮೊದಲಾದವುಗಳಲ್ಲಿ ತತ್ವಜ್ಞಾನದ ವಿಚಾರ ನಿರೂಪಣೆಯಿದೆ. 'ಕನ್ನಡ ನಾಡಿನ ಕಾರಣಪುರುಷ ಬಸವಣ್ಣ ನವರು' 'ರಾಮಕೃಷ್ಣ ಪರಮಹಂಸರು' 'ಚನ್ನಬಸವಣ್ಣನವರು' 'ಅಕ್ಕನಾಗಮ್ಮ' 'ಗಂಗಾಂಬಿಕೆ' 'ಸ್ವಾಮಿ ವಿವೇಕಾನಂದ' 'ಮಹಾತ್ಮಾ ಗಾಂಧೀಜಿ' 'ಭಗವಾನ ಬುದ್ಧ' ಈ ಭಾಷಣಗಳಲ್ಲಿ ಮಹಾ ಮಹಿಮರ ವ್ಯಕ್ತಿದರ್ಶನ ಮಾಡಿಸುವ ದಿವ್ಯ ಪ್ರಕಾಶವನ್ನು ಕಾಣುತ್ತೇವೆ. ಅವಿಭಕ್ತಂ ವಿಭಕ್ತೇಷು ಸರ್ವಧರ್ಮ ಸಮನ್ವಯ ದೃಷ್ಟಿ, ಭಾಷಾಬಾಂಧವ್ಯ

ಜಾತೀಯತೆಯ ಐಕ್ಯ, ಮೊದಲಾದವುಗಳಲ್ಲಿ ಭಾರತ ಸಂಸ್ಕೃತಿಯ ದಿವ್ಯ ದರ್ಶನವನ್ನೇ ಕಂಡರೆ 'ಜಾಗತಿಕ ಶಾಂತಿಗೆ ವೀರಶೈವ ದರ್ಶನದ ಕೊಡುಗೆ' ಎಂಬುದರಲ್ಲಿ ಕನ್ನಡಿಗರ ಸಂಪತ್ತು ಆಧ್ಯಾತ್ಮ ಸಂಪತ್ತು, ದರ್ಶನ ಸಂಪತ್ತು ವಿಶ್ವಕ್ಕೆ ಕೊಟ್ಟ ಕಾಣಿಕೆಯ ತೇಜಃ ಪುಂಜವಾದ ಚಿತ್ರ ಕಣ್ಣು ಕುಕ್ಕಿಸುತ್ತದೆ.

ವಿಷಯದ ವೈವಿಧ್ಯ ಎಷ್ಟು ಅಚ್ಚರಿಯನ್ನುಂಟುಮಾಡಬಹುದೋ ಅಷ್ಟೇ ಮಟ್ಟಿಗೆ ಇಲ್ಲಿಯ ಸುಲಭವಾದ, ಸಹಜವಾದ ನಿರೂಪಣೆಯ ರೀತಿ ಯಾರನ್ನೂ ಮರುಳುಗೊಳಿಸು ವಂತಿದೆ. ಸೂತ್ರರೂಪವಾಗಿ ಬರುವ ಮಾತುಗಳನ್ನಂತೂ ಮೇಲಿಂದ ಮೇಲೆ ಸ್ಮರಿಸಿ ಕೊಳ್ಳಬೇಕು.

"ಮನುಷ್ಯರಿಗೆ ವ್ಯಕ್ತಿತ್ವವೆಲ್ಲಿಂದ ದೊರೆಯುತ್ತದೆಂಬುದನ್ನು ಕೇಳಿದರೆ, ಚಾರಿತ್ರ್ಯ ಬಲದಿಂದ ಎಂದು ಹೇಳಬಹುದು." "ಮನುಷ್ಯನ ಬೆಲೆ ಆವನ ಚರಿತ್ರೆಯಲ್ಲಿದೆ," "ಆಳುಕಿನ ಬಾಳನ್ನು ಸೊಗಯಿಸಿ ಬೆಳಗಿಸಲು ಬುದ್ಧಿಯಿಂದಲೂ ಬಾಹು ಬಲದಿಂದಲೂ ಹೋರಾಡ ಬೇಕು." "ಇಂತಹ ಆತ್ಮಬಲ, ನಿಷ್ಕಾಮಕರ್ಮ, ದೂರದೃಷ್ಟಿಯಿಂದ ಸ್ವಾತಂತ್ರ್ಯ ರಕ್ಷಣೆ ಗೈಯುವದೇ ಧಾರ್ಮಿಕ ಪ್ರಜ್ಞೆಯ ಮೂಲಾಧಾರ."

"ಭಾರತೀಯರೆಲ್ಲರೂ ಭಾರತವೇ ನಮ್ಮ ಅಂತರಾತ್ಮವೆಂದು ಬಗೆದು ಭಾವೈಕ್ಯತೆಯೇ ನಮ್ಮ ಶಕ್ತಿ ಸಾಹಸದ ದ್ಯೋತಕ ಎಂದು ನಾಡಿ ನಾಡಿಯಲ್ಲಿ ಆ ಶಕ್ತಿ ಚಿಮ್ಮುವಂತೆ ನಡೆದು ಕೊಳ್ಳುವ ಹೊಣೆ ಹೊತ್ತುಕೊಳ್ಳಬೇಕು."

ಗ್ರಂಥದ ಉದ್ದಕ್ಕೂ ಇಂತಹ ಮಾತುಗಳನ್ನು ಕಾಣಬಹುದು. ನೂರು ಜನ ಸಮಾಜ ಸುಧಾರಕ ರಾಜಕಾರಣಿಗಳ ಭಾಷಣ ಮಾಲೆಗಳು ಬೀರಲಾರದ ಪ್ರಭಾವವನ್ನು ಈ ಒಂದೊಂದು ಮಾತು ಬೀರುತ್ತವೆ. ಜನ ನಿತ್ಯ ಸ್ಮರಣೆ ಮಾಡಬೇಕಾದ ಮಾತುಗಳವು.

ಈ ಸೂತ್ರ ರೂಪದ ಹೇಳಿಕೆಯ ದಿವ್ಯ ಸೌಂದರ್ಯವೊಂದಾದರೆ, ಅಲಂಕಾರದ ಆವರಣದಲ್ಲಿ ಮೂಡಿದ ಭಾವಗಳ ಸೌಂದರ್ಯವೇ ಇನ್ನೊಂದು.

"ಲೋಕವ್ಯವಹಾರದಲ್ಲಿದ್ದುಕೊಂಡು, ಅಂತರ್ಮುಖತೆಯ ಅಂತಃಶಕ್ತಿಯನ್ನು ಸತ್ಕಾರ್ಯಗಳ ವಿಚಾರದಲ್ಲಿ ಮನಸ್ಸನ್ನು ಕಳುಹಿಸಿ ಸಾಹಿತ್ಯದ ಅಪಾರವಾದ ಸಾಗರದಲ್ಲಿ ಈಸಿ, ಉದ್ದಾಮ ಕಾವ್ಯಗಳ ರಸಾಸ್ವಾದನೆ ಮಾಡಿಕೊಂಡು ರಸಸಿದ್ಧಿ ಪಡೆದುಕೊಳ್ಳು ವುದು, ಪ್ರತಿಭಾಪೂರ್ಣ ವಿದ್ಯಾರ್ಥಿಗೆ ಸಾಧ್ಯವಾದೀತೇ ಹೊರತು, ಅಲ್ಪಾಶೆಯ ಮಳಲಿ ನಲ್ಲಿ ಹೊರಳಾಡುವ ಬಹಿರ್ಮುಖಿ ವಿದ್ಯಾರ್ಥಿಗೆ ಸಾಧ್ಯವಾಗದು."

"ಭಾರತದ ಪ್ರತಿಯೊಂದು ವ್ಯಕ್ತಿಯ ಭಾವಭೂಮಿಯು ಹಸನಾದರೆ ಮಾತ್ರ ವೈಭವದಿಂದ ಫಲವನ್ನು ಪಡೆಯಬಹುದು.

"ದೀಪ ಉರಿಯಲು ಎಣ್ಣೆ ಬೇಕು, ಪಾಕವನ್ನು ತಯಾರು ಮಾಡಲು ಮತ್ತು ಉಣ್ಣಲು ಎಣ್ಣೆ ಬೇಕು. ಎಣ್ಣೆಯಿಲ್ಲದೆ ಜೀವನ ರಥವು ಸಾಗುವುದೇ ಕಷ್ಟ....ಜಗತ್ತಿಗೆ

ಬೇಕಾಗಿರುವ ಇಂತಹ ಎಣ್ಣೆಯ ಕಾಯಕವನ್ನೇ ಪ್ರಾಧಾನ್ಯವಾಗಿಟ್ಟುಕೊಂಡು ಭಕ್ತಿ ತೈಲ ವನ್ನು ಜ್ಞಾನದ ಪಣತೆಯಲ್ಲಿ ಹಾಕಿ ಬೆಳಗುತ್ತಿರುವ 'ಸಜ್ಜನ ಸಮಾಜ'ವೆಂಬ ಹೆಸರಿನ ಅನ್ವರ್ಥಕನಾಮವು ಅರ್ಥಪೂರ್ಣವಾದುದೆಂದು ನಾವು ಬಗೆಯುತ್ತೇವೆ."

"ಜೀವನದಲ್ಲಿ ಜಯಪಡೆದು ಸುಖಸಾಗರದಲ್ಲಿ ತೇಲಬೇಕಾದರೆ ಶಿಸ್ತು ಸಂಯಮ ಗಳೇ ಮುತ್ತುರತ್ನಗಳು. ಆತ್ಮಸೌಂದರ್ಯವನ್ನು ಪಡೆದು ಆತ್ಮಜ್ಯೋತಿಯಲ್ಲಿ ಬೆಳಗ ಬೇಕಾದರೆ ಆತ್ಮಸಂಯಮನವೆ ದಾರಿದೀಪ. ಶಿಸ್ತಿನಿಂದ ಇರುವದೇ ಜೀವನದ ಭದ್ರ ಬುನಾದಿ."

"ಕಲ್ಯಾಣದಿಂದ ಕಲ್ಯಾಣದ ಭೂಮಿಯವರೆಗೂ ಮುಟ್ಟಿಸಿ ಚಿರಶಾಂತಿಯನ್ನೀ ಯುವ ವೃತ್ತಿಯನ್ನು ನಾವು "ದೀಪ್ತಿ" ಎಂದು ಕರೆಯುವದು." "ಸಾಹಿತ್ಯದಲ್ಲಿ ಮನೋ ವಿಜ್ಞಾನವು ಕ್ಷೀರದಲ್ಲಿ ನವನೀತದಂತೆ ಕೂಡಿಕೊಂಡಿದೆ," ಇಂತಹ ಅನೇಕ ಮಾತುಗಳನ್ನು ಎತ್ತಿತೋರಿಸಬಹುದು.

ಧರ್ಮದ ನಿಜಸ್ವರೂಪದರ್ಶನ ಮಾಡಿಸುವ ಭಾಷಣಗಳು ಇಲ್ಲಿ ಪೋಣಿಸಲ್ಪಟ್ಟಿವೆ. ಅಲ್ಲಿ ಆಧುನಿಕ ವಿಜ್ಞಾನ ದೃಷ್ಟಿಯು ಮೆಚ್ಚುವ, ಮೆಚ್ಚಿ ಅಹುದೆನ್ನುವ ಸತ್ಯದರ್ಶನವಿದೆ. ವಿಚಾರಶೀಲತೆ ಕೇಳುಗರ ಮನದಲ್ಲಿ ಸ್ವತಂತ್ರ ವಿಚಾರಶೀಲತೆಯನ್ನು ಬೆಳೆಸುತ್ತದೆ. ಪರಂಪರಾಗತದ ಭಾವವೆಂದು ಅದಕ್ಕೇ ಅಂಟಿಕೊಳ್ಳುವ ರೀತಿಯನ್ನು ದೂರವಿಟ್ಟು, ಆತ್ಮ ನಿರೀಕ್ಷಣೆಯಿಂದ ಆತ್ಮಜಾಗ್ರತಿಯನ್ನುಂಟು ಮಾಡುವ ವಿಚಾರದ ವಿಚಾರ ಪ್ರಗಲ್ಭತೆಯಿದೆ.

ಸಾಮಾಜಿಕ, ಸಾಹಿತ್ಯಿಕ ಶೈಕ್ಷಣಿಕ, ಧಾರ್ಮಿಕ, ರಂಗಗಳಲ್ಲಿ ಅದ್ಭುತ ಕಾರ್ಯವನ್ನು ಮಾಡಿರುವ ಶ್ರೀ ಶ್ರೀ ಜಗದ್ಗುರುಗಳವರು ತಮ್ಮ ಅಧ್ಯಯನ, ಚಿಂತನ ಸಮದೃಷ್ಟಿ, ವಿಶಾಲ ಮನೋಭಾವಗಳಿಂದ ಇಂದಿನ ಸ್ಥಿತಿಗತಿಗಳನ್ನು ಗುರುತಿಸಿ, ಅದಕ್ಕನುಗುಣವಾದ ರೀತಿ ಯಲ್ಲಿ ವ್ಯಕ್ತಿ ಸಮಾಜಗಳ ಜೀವನದಲ್ಲಿ ನೀತಿ–ಧರ್ಮಗಳನ್ನು ರೂಪಿಸಲು ಸಹಾಯ ವಾಗುವ ಸಂದೇಶಗಳನ್ನು ನೀಡಿದ್ದಾರೆ. ಅವರ ಪ್ರತಿಭಾಪೂರ್ಣ ವ್ಯಕ್ತಿತ್ವವು ಧರ್ಮ ಪೀಠದಲ್ಲಿ ಅರಳಿ ಈ 'ಆಶೀರ್ವಾಣಿ'ಯ ರೂಪದ ಪರಿಮಳವನ್ನು ತುಂಬೆಲ್ಲ ಹರಡಿದೆ. ರಸಜ್ಞತೆ, ದಾರ್ಶನಿಕತೆಗಳ ದಿವಸಂಗಮವಿಲ್ಲಿದೆ.

ಅನೇಕ ಜನ್ಮಗಳ ಪುಣ್ಯ ವಿಶೇಷವೇ ಪ್ರತಿಭೆಯಾಗಿ ಮೈದಾಳಿ ಧರ್ಮಪೀಠದಲ್ಲಿ ಕುಳಿತು ನಾಡಿನ ಸರ್ವತೋಮುಖ ಉನ್ನತಿಗಾಗಿ ನುಡಿದ ಆಶೀರ್ವಚನಗಳ ಈ ಸಂಗ್ರಹವು ಮನೆ–ಮನೆಯಲ್ಲಿಯೂ ಪವಿತ್ರ ಸ್ಥಾನವನ್ನಲಂಕರಿಸಿ ಮನಮನಗಳನ್ನು ಪಾವನಗೊಳಿಸು ವಂತಹದು.

ಧಾರವಾಡದ ಆಕಾಶವಾಣಿಯಲ್ಲಿ ಆಗಾಗ ಗಾಳಿಯಲ್ಲಿ ತೇಲಿಬಂದ ದಿವ್ಯ ಸಂದೇಶ ಗಳು ಮುದ್ರಿತವಾಗಿ ಕನ್ನಡಿಗರ ಕೈಗೆ ಬಂದುದು ಮನೆಮನೆಗೂ ಭಾಗ್ಯ ಬಂದಂತೆ. ಈ ಭಾಗ್ಯವನ್ನೊದಗಿಸಿದ ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಲ ಮೂರುಸಾವಿರಮಠ ಹುಬ್ಬಳ್ಳಿ ಇವರಿಗೂ ಭಾಷಣಗಳನ್ನು ಸಂಗ್ರಹಿಸಿದ ಮಹಾಂತ ಸ್ವಾಮಿಗಳು ಚಿತ್ತರಗಿ, ಇಲಕಲ್ಲ ಅವರಿಗೂ ಜನತೆ ಚಿರಋಣಿ.

(ಧಾರವಾಡ ಆಕಾಶವಾಣಿ ಕೃಪೆಯಿಂದ)

# "ಆಶೀರ್ವಾಣಿ"ಯಲ್ಲಿ
# ಶ್ರೀ ಮೃೂಜಗಂ ಅವರ ಮಾನವ ಚಿಂತನ: ವಿಶ್ವಪ್ರೇಮ

---

ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩
**ಡಾ. ಬಿ. ವ್ಹಿ. ಯಕ್ಕುಂಡಿಮಠ**

"ಇವನಾರವ, ಇವನಾರವ, ಇವನಾರವ?"ನೆಂದೆನಿಸದಿರಯ್ಯಾ
"ಇವ ನಮ್ಮವ, ಇವ ನಮ್ಮವ, ಇವ ನಮ್ಮವ"ನೆಂದೆನಿಸಯ್ಯಾ
ಕೂಡಲಸಂಗಮದೇವಾ, ನಿನ್ನ ಮನೆಯ ಮಗನೆನಿಸಯ್ಯಾ.

ಎಂಬ ಬಸವಣ್ಣನವರ ಅಮೃತವಾಣಿಯಂತೆ ಸರ್ವರನ್ನೂ, ಸರ್ವಧರ್ಮೀಯರನ್ನೂ ಸಮಾನ ಭಾವದಿಂದ ಕಾಣುತ್ತ, ಸಮಾಜದ ಶ್ರೇಯೋಭಿವೃದ್ಧಿಗಾಗಿ ತಮ್ಮನ್ನೇ ತಾವೆ ತೊಡಗಿಸಿಕೊಂಡವರಲ್ಲಿ ಶ್ರೀ ಮೂಜಗಂ ಅವರೂ ಒಬ್ಬರು. ಹುಬ್ಬಳ್ಳಿಯ ಶ್ರೀ ಮೂರುಸಾವಿರಮಠದ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ತಮ್ಮ ಭಕ್ತಕೋಟಿ ಬೆಂಬಲದಿಂದ ಧಾರ್ಮಿಕ, ಸಾಹಿತ್ಯಕ, ಶೈಕ್ಷಣಿಕ, ಧರ್ಮ ಪ್ರಸಾರ ಕಾರ್ಯಗಳನ್ನು ಯಶಸ್ವಿಯಾಗಿ ನಡೆಸುತ್ತ ಬಂದಿರುವುದು ಶ್ಲಾಘನೀಯ ವಿಷಯ. ಧರ್ಮಪೀಠಾಧಿಪತಿಗಳಾಗಿ, ಸಾಹಿತಿಗಳಾಗಿ, ಸಮಾಜದ ಗುರುಗಳಾಗಿ ಅಹರ್ನಿಶಿ ಕಾರ್ಯ ನಿರತರಾಗಿರುವುದು ಅವರ ಹೃದಯ ವೈಶಾಲ್ಯತೆಗೆ ಸಾಕ್ಷಿ. ವಾಣಿಜ್ಯ ಕೇಂದ್ರವಾಗಿರುವ ಹುಬ್ಬಳ್ಳಿ ನಗರದ ಜನರಲ್ಲಿ ಧರ್ಮದ ಗಾಳಿಯನ್ನು ಪಸರಿಸಿದವರು ಶ್ರೀಗಳವರು ಎನ್ನುವುದಕ್ಕೆ ವರ್ಷದುದ್ದಕ್ಕೂ ಮಠದಲ್ಲಿ ನಡೆಯುತ್ತಿರುವ ಚಟುವಟಿಕೆಗಳೇ ಕೈಗನ್ನಡಿಯಂತಿವೆ.

ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಷಷ್ಟ್ಯಬ್ದಿ ಮಹಾಸಮಾರಂಭದ ಅಂಗವಾಗಿ ಸಂಸ್ಮರಣ ಅಭಿನಂದನ ಮಹಾಗ್ರಂಥವನ್ನು ಮೂರು ಸಂಪುಟಗಳಲ್ಲಿ ಹೊರತರುತ್ತಿರುವುದು ಸ್ತುತ್ಯಾರ್ಹವಾದುದು. ಮೊದಲನೆಯ ಸಂಪುಟವು ಜಗದ್ಗುರುಗಳವರ ಜೀವನ: ಸಾಧನೆ ಬೋಧನೆಗಳಿಗೆ ಸಂಬಂಧಿಸಿದ ವಿಷಯಗಳಿಗೆ ಸೀಮಿತವಾಗಿದ್ದರೆ; ಎರಡನೆಯ ಸಂಪುಟವು ಶ್ರೀಗಳವರ ಸಮಗ್ರ ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದುದಾಗಿದೆ. ಕೊನೆಯ ಸಂಪುಟವು ಸಮಗ್ರ ವೀರಶೈವ ಸಿದ್ಧಾಂತದ ವಿವೇಚನೆಯನ್ನೊಳಗೊಂಡಿರುತ್ತದೆ.

ಜಗದ್ಗುರುಗಳವರ ಸಾಹಿತ್ಯ ಸೇವೆ ಅನನ್ಯ ಮತ್ತು ಪ್ರಶಂಸನೀಯವಾದುದು. ಶ್ರೀ ಮಠದಿಂದ ನೂರಾರು ಗ್ರಂಥಗಳು ಪ್ರಕಟಗೊಂಡಿವೆಯಲ್ಲದೆ; ಜಗದ್ಗುರುಗಳವರು ಸುಮಾರು ಇಪ್ಪತ್ತೈದಕ್ಕೂ ಮಿಕ್ಕ ಗ್ರಂಥಗಳನ್ನು ರಚಿಸಿದ್ದಾರೆ. ಅನೇಕ ಸಂದರ್ಭಗಳಲ್ಲಿ

ಆಶೀರ್ವಾಣಿ ರೂಪದಲ್ಲಿ ಮಾಡಿದ ಭಾಷಣಗಳು, ಸಂದೇಶಗಳು, ಅನುಗ್ರಹ ನುಡಿಗಳು 'ಆಶೀರ್ವಾಣಿ' ಭಾಗ ೧ ಮತ್ತು ೨ರಲ್ಲಿ ಒಂದೆಡೆ ಸಂಗ್ರಹಿತವಾಗಿವೆ. ಇವರು ಸಂದೇಶ, ಉಪದೇಶ, ಹಿತನುಡಿ, ಹಿತವಚನ, ಆಶೀರ್ವಾಣಿಯನ್ನು ತಮ್ಮ ಚತುರ್ಭಾಷಾ ಮುಖೇನ ವ್ಯಕ್ತಪಡಿಸಿರುವುದು ಅವರ ಆಳವಾದ ಅಧ್ಯಯನ, ಚಿಂತನಗಳನ್ನು ಎತ್ತಿ ತೋರಿಸುತ್ತವೆ.

ಪ್ರಸ್ತುತ 'ಆಶೀರ್ವಾಣಿ' ಸಂಪುಟಗಳೆರಡರಲ್ಲಿ ಬರುವ ಲೇಖನಗಳೆಲ್ಲ ವಿಷಯ ವೈವಿಧ್ಯತೆಗಳನ್ನೊಳಗೊಂಡಿವೆ. ಧರ್ಮದಿಂದ ಸಾಹಿತ್ಯ, ವಿಜ್ಞಾನ ವಿಷಯಗಳವರೆಗೆ ಚಿಂತನ ಪರವಾದ ವಿಚಾರಗಳು ಇಲ್ಲಿ ಮಂಡಿತವಾಗಿವೆ. ಸಮಾಜ, ಸಾಹಿತ್ಯ, ಸಂಸ್ಕೃತಿ, ನೀತಿ, ಸತ್ಯ, ಸೌಂದರ್ಯ ಕುರಿತಂತೆ ಹೇಳಿರುವ ಮಾತುಗಳು ಮನನೀಯವಾಗಿವೆ. ಬಸವಣ್ಣನವರಿಂದ ಹಿಡಿದು ಗಾಂಧೀಜಿಯವರಂಥ ಮಹಾನುಭಾವರ ಜೀವನ ಆದರ್ಶಗಳ ಹಿನ್ನೆಲೆಯಲ್ಲಿ ವಿಚಾರ ಧಾರೆಗಳನ್ನು ಹರಿಸಿರುವರು. ಸುಮಾರು ಎಂಬತ್ತು ಲೇಖನಗಳನ್ನೊಳಗೊಂಡ 'ಆಶೀರ್ವಾಣಿ' ಸಂಪುಟಗಳಲ್ಲಿಯ ವಿಷಯಗಳನ್ನು 'ವೀರಶೈವ ಸಾಹಿತ್ಯ ದರ್ಶನ', 'ಶರಣ ಸಾಹಿತ್ಯ', 'ವ್ಯಕ್ತಿ ಚಿತ್ರಣಗಳು', 'ಸಾಹಿತ್ಯ ಮತ್ತು ಕಲೆ', 'ಸಮಾಜ ದರ್ಶನ' ಎಂಬ ಐದಾರು ವಿಭಾಗಗಳಲ್ಲಿ ವಿಂಗಡಿಸಬಹುದು.

ಮೊದಲನೆಯದಾಗಿ ವೀರಶೈವ ಸಾಹಿತ್ಯ ತತ್ವ ದರ್ಶನಗಳಿಗೆ ಸಂಬಂಧಿಸಿದ 'ವೀರಶೈವ ದರ್ಶನ'; 'ಜಾಗತಿಕ ಶಾಂತಿಗೆ ವೀರಶೈವ ದರ್ಶನದ ಕೊಡುಗೆ'; 'ಶಿವಾದ್ವೈತ ಶಕ್ತಿ'; 'ಷಟ್‌ಸ್ಥಲ ವಿವೇಚನೆ'; 'ಕಾಯಕವೇ ಕೈಲಾಸ'; 'ಶಿವಾನುಭವ ಮಹತಿ' ಎಂಬ ಲೇಖನಗಳಿವೆ. ಈ ಲೇಖನಗಳಲ್ಲಿ ಸಮಗ್ರ ವೀರಶೈವ ಧರ್ಮದ ತಾತ್ವಿಕ ತಿರುಳು, ಆಚಾರಗಳ ನೆಲೆ ಬೆಲೆ, ಸಾಧನೆ ಸಿದ್ಧಿಗಳ ಕ್ರಮ, ಆತ್ಮ ವಿಕಸನದತ್ತ ನಡೆಯುವ ಮಾರ್ಗ, ಕ್ರಮಿಸಬೇಕಾದ ದಾರಿ, ಅನುಸರಿಸಬೇಕಾದ ನಿಯಮಗಳ ಬಗೆಗೆ ಸಾದ್ಯಂತವಾಗಿ ವಿವೇಚಿಸಲ್ಪಟ್ಟಿದೆ. ವೀರಶೈವ ತತ್ವದ ಪ್ರಮುಖ ನೆಲೆಗಟ್ಟಾದ ಷಟ್‌ಸ್ಥಲ ವಿವೇಚನೆಯನ್ನು ಶರಣರ ವಚನ ವಾಹಿನಿಗಳ ಹಿನ್ನೆಲೆಯಲ್ಲಿ ಚರ್ಚಿತಗೊಂಡಿದೆ. 'ಜಾಗತಿಕ ಶಾಂತಿಗೆ ವೀರಶೈವ ದರ್ಶನದ ಕೊಡುಗೆ' ಎಂಬ ಲೇಖನವು ಶ್ರೀಗಳವರ ಆಳವಾದ ಅಧ್ಯಯನಕ್ಕೆ ಸಾಕ್ಷಿ ಎನ್ನುವಂತಿದೆ. ಶೈವ ಧರ್ಮದ ಪ್ರಾಚೀನತೆ, ಶೈವ ಪ್ರಭೇದಗಳ ವಿವೇಚನೆಯೊಂದಿಗೆ ವೀರಶೈವ ಪ್ರಮುಖ ತತ್ವಗಳನ್ನು ಪರಿಚಯಿಸಿಕೊಟ್ಟಿರುವರು. ವೀರಶೈವ ಧರ್ಮಾನುಯಾಯಿಗೆ ಅಷ್ಟಾವರಣವೇ ಅಂಗ, ಪಂಚಾಚಾರವೇ ಪ್ರಾಣ, ಷಟ್‌ಸ್ಥಲವೇ ಆತ್ಮ ಎಂಬ ಮಾತನ್ನು ಸಂಸ್ಕೃತ, ಕನ್ನಡ ವಚನ, ಶ್ಲೋಕಗಳ ಹಿನ್ನೆಲೆಯಲ್ಲಿ ಪ್ರಸ್ತಾಪಿಸಿರುವರು. ಕಾಯಕತತ್ವ, ದಾಸೋಹಂಭಾವ, ಸಮಾನತೆ, ಸ್ವಾತಂತ್ರ್ಯ, ಬಾಂಧವ್ಯ, ಆಚಾರ, ದಯೆ ಮುಂತಾದ ಉದಾತ್ತ ತತ್ವಗಳ ನಿರೂಪಣೆ ಮತ್ತು ತನ್ಮೂಲಕ ಹನ್ನೆರಡನೆಯ ಶತಮಾನದಲ್ಲಿ ಮಹಾನುಭಾವಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಾಮಾಜಿಕ, ಧಾರ್ಮಿಕ ಕ್ರಾಂತಿಗಳು ಮೇಲಿನ ಉದಾತ್ತ ತತ್ವಗಳನ್ನು ಆಚರಣೆಯಲ್ಲಿ ತರಲು ಪ್ರಯತ್ನಿಸಿದವು. ವೀರಶೈವ ದರ್ಶನದಲ್ಲಿ ಕ್ರೈಸ್ತ ಧರ್ಮದ ದಯೆ, ಜೈನ ಧರ್ಮದ ಅಹಿಂಸೆ, ಇಸ್ಲಾಂ

ಧರ್ಮದ ಭ್ರಾತೃತ್ವ ಗುಣಗಳು ಮಿಳಿತಗೊಂಡಿವೆ ಎಂಬುದನ್ನು ತೋರಿಸಿಕೊಟ್ಟಿರುವರು. ಇವು ವಿಶ್ವಮಾನವರಿಗೆಲ್ಲ ಶಾಂತಿ ಮಂತ್ರಗಳಾಗಿವೆ ಮತ್ತು ವೀರಶೈವ ಧರ್ಮ ವಿಶ್ವಧರ್ಮ ವಾಗುವ ಅರ್ಹತೆಯನ್ನು ಪಡೆದಿದೆ ಎಂಬ ಸೂಚನೆಯನ್ನು ಕೊಟ್ಟಿರುವರು. ಇವರ ಪ್ರತಿಯೊಂದು ಲೇಖನದಲ್ಲಿ ಸಮಾಜಪರ ಚಿಂತನೆ, ಮಾನವ ಚಿಂತನೆ, ವಿಶ್ವ ಪ್ರೇಮದ ವಿಚಾರಗಳು ಮೂಡಿಬಂದಿವೆ. ಹೀಗೆ ತಮ್ಮ ಸರಳ ಶೈಲಿಯಲ್ಲಿ ಆಧ್ಯಾತ್ಮದ ರಸದ ಹೊನಲನ್ನು ಹಿತಮಿತವಾಗಿ ಹರಿಸಿದ್ದಾರೆ.

ಕನ್ನಡ ಸಾಹಿತ್ಯದ ಶ್ರೀಮಂತಿಕೆಗೆ ವಚನ ಸಾಹಿತ್ಯ ಮತ್ತು ಶರಣ ಸಾಹಿತ್ಯಗಳ ಕೊಡುಗೆ ಅಪಾರ. ಆಶೀರ್ವಾಣಿಯ ಎರಡೂ ಸಂಪುಟಗಳಲ್ಲಿ ಶರಣರ ಜೀವನ ಚರಿತ್ರೆಯ ಹಿನ್ನೆಲೆಯಲ್ಲಿ ವಚನ ಸಾಹಿತ್ಯದ ಮೌಲಿಕ ಗುಣಗಳನ್ನು ಪ್ರಸ್ತಾಪಿಸಿರುವರು. ಬಸವಣ್ಣ ನವರಿಂದ ಹಿಡಿದು ಹಾನಗಲ್ಲ ಕುಮಾರ ಶಿವಯೋಗಿಗಳ ದಿವ್ಯ ಜೀವನ ಚಿತ್ರಣವನ್ನು ಪರಿಚಯಿಸಿಕೊಟ್ಟಿದ್ದಾರೆ. ಸೂತ್ರರೂಪವಾಗಿರುವ ಬಸವಣ್ಣನವರ

"ಕಳಬೇಡ, ಕೊಲಬೇಡ; ಹುಸಿಯ ನುಡಿಯಲು ಬೇಡ;
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ.
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ!"

ವಚನಗಳಲ್ಲಿ ಮೂಡಿಬಂದ ಆದರ್ಶ ಗುಣಗಳನ್ನೆಲ್ಲ ಮೇಲೆ ಉಲ್ಲೇಖಿಸಿದ ಮಹಾಚೇತನ ಗಳು ಅಳವಡಿಸಿಕೊಂಡು ಪುಣ್ಯ ಜೀವನವನ್ನು ಬಾಳಿ ನಮಗೆಲ್ಲ ಆದರ್ಶರಾಗಿದ್ದಾರೆ ಎಂಬ ವಿಷಯವನ್ನೂ ತಿಳಿಸಲು ಮರೆತಂತಿಲ್ಲ ಶ್ರೀಗಳವರು. ಹೋರಾಟದ ಬದುಕಿ ನುದ್ದಕ್ಕೂ ದಯೆ, ಕರುಣೆ, ಅಹಿಂಸೆ, ಪ್ರೇಮ, ಬಾಂಧವ್ಯ, ಗುಣಗಳನ್ನು ಅಳವಡಿಸಿ ಕೊಂಡು ನಮಗೆಲ್ಲ ಆದರ್ಶಪ್ರಾಯರಾಗಿರುವ ಬಸವಣ್ಣನವರ ವ್ಯಕ್ತಿತ್ವದ ವಿವಿಧ ಮುಖ ಗಳು, ಅವರ ಅನುಭವಪರವಾದ ವಿಚಾರವಾಹಿನಿಗಳು 'ವಿಶ್ವವಿಭೂತಿ ಬಸವಣ್ಣನವರು', 'ಅಣ್ಣನ ಅನುಭಾವ ಕ್ರಾಂತಿ', 'ಬಸವಸಂದೇಶ', 'ಬಸವಣ್ಣನವರ ವಚನಗಳಲ್ಲಿ ಧರ್ಮಭಕ್ತಿ', 'ಕನ್ನಡ ನಾಡಿನ ಕಾರಣ ಪುರುಷ ಬಸವಣ್ಣನವರು' ಎಂಬ ಲೇಖನಗಳಲ್ಲಿ ಮೂಡಿಬಂದಿವೆ. 'ಬಸವಸಂದೇಶ'ವೆಂಬ ಲೇಖನದಲ್ಲಿ ಕಾಯಕದ ಮಹತಿಯ ಬಗೆಗೆ ಒತ್ತಿ ಹೇಳಿದ್ದಾರೆ. ಭಕ್ತಿ ಭಂಡಾರಿ ಎಂದೇ ಪ್ರಸಿದ್ಧರಾಗಿರುವ ಬಸವಣ್ಣನವರ ಭಕ್ತಿಯ ವಿವಿಧ ಮಜಲು ಗಳನ್ನು ಮನಂಬುಗುವಂತೆ ವಿಶ್ಲೇಷಿಸಿದ್ದಾರೆ. 'ದಯವಿಲ್ಲದ ಧರ್ಮವಾವುದಯ್ಯಾ.... ದಯವೇ ಧರ್ಮದ ಮೂಲವಯ್ಯಾ', 'ಅಯ್ಯಾ ಎಂದೊಡೆ ಸ್ವರ್ಗ; ಎಲ್ಲವೋ ಎಂದೊಡೆ ನರಕ', 'ಮನದ ಕೋಪ ತನ್ನ ಅರುಹಿನ ಕೇಡ' ಎಂಬ ಅನುಭಾವ ವಾಣಿಗಳಂತೆ ನಡೆ-ನುಡಿಗಳಲ್ಲಿ ಶುದ್ಧರಾಗಿ ಸಮಾಜದ ಕೊಳೆಯನ್ನು ತೊಳೆಯಬೇಕೆಂಬ ಅಭಿಪ್ರಾಯವನ್ನು

ಜಗದ್ಗುರುಗಳವರು ಮಂಡಿಸಿರುವರು. ಭಕ್ತಿಯ ಸಾಧನೆ ತಿಳಿದಷ್ಟು ಸರಳವಲ್ಲ. ನಮ್ಮಷ್ಟಕ್ಕೆ ನಾವೇ ಶ್ರೀಗಂಧದ ಕೊರಡಿನಂತೆ ತೇಯ್ದುಕೊಳ್ಳಬೇಕು. ಇದನ್ನೇ ಬಸವಣ್ಣನವರ ವಚನದ ಮೂಲಕ ಈ ರೀತಿಯಾಗಿ ಸ್ಪಷ್ಟಪಡಿಸಲಾಗಿದೆ:

"ಭಕ್ತಿಯೆಂಬುದು ಮಾಡಬಾರದು, ಅದು ಕರಗಸದಂತೆ
ಹೋಗುತ್ತ ಕೊಯ್ಯುವದು, ಬರುತ್ತ ಕೊಯ್ಯುವದು
ಘಟಸರ್ಪದಲ್ಲಿ ಕೈ ದುಡುಕಿದರೆ ಹಿಡಿವುದು ಮಾಬುದೇ
ಕೂಡಲಸಂಗಮದೇವಾ"

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಧರ್ಮ ಮತ್ತು ಭಕ್ತಿಗಳೆರಡೂ ಜೀವನದ ಅವಿಭಾಜ್ಯ ಅಂಗಗಳೆಂದು ತಿಳಿದುಕೊಳ್ಳುವುದು ಸೂಕ್ತ.

"ಕಿರಿಯರಾದಡೇನು? ಹಿರಿಯರಾದಡೇನು? ಅರಿವಿಂಗೆ ಹಿರಿದು ಕಿರಿದುಂಟೆ?
ಆದಿ ಅನಾದಿ ಇಲ್ಲದಂದು, ಅಜಾಂಡ ಬ್ರಹ್ಮಾಂಡ ಕೋಟಿಗಳು ದಯವಾಗದಂದು
ಗುಹೇಶ್ವರ ಲಿಂಗದಲ್ಲಿ ನೀನೊಬ್ಬನೆ ಮಹಾಜ್ಞಾನಿ ಕಾಣಬಂದಿತ್ತು
ಕಾಣಾ ಚನ್ನಬಸವಣ್ಣ"

ಎಂಬ ಅಲ್ಲಮಪ್ರಭುದೇವರ ವಚನದ ಮೂಲಕ ವಯಸ್ಸಿನಲ್ಲಿ ಸಣ್ಣವರಾದ, ಬಸವಣ್ಣನವರ ಸೋದರಳಿಯ, ಷಟ್‌ಸ್ಥಲ ಜ್ಞಾನಚಕ್ರವರ್ತಿ ಚನ್ನಬಸವಣ್ಣನವರ ವ್ಯಕ್ತಿತ್ವವನ್ನು ಚಿತ್ರಿಸಿದ್ದಾರೆ. ಚನ್ನಬಸವಣ್ಣನವರ ವಚನಗಳಲ್ಲಿ ಪ್ರತಿಪಾದ ಷಟ್‌ಸ್ಥಲ ವಿವೇಚನೆ, ಅರಿಷಡ್ವರ್ಗಗಳ ವಿಚಾರ ಮುಂತಾದವುಗಳ ಬಗೆಗೂ ವಿಶ್ಲೇಷಿಸಿ ಇವು ಇಂದಿನ ಸಮಾಜಕ್ಕೆ ಅನ್ವಯವಾಗಬಲ್ಲವು ಮತ್ತು ಅನುಕರಣೀಯ ಎಂಬ ವಿಚಾರವನ್ನು ಮಂಡಿಸಿರುವರು.

"ಬೆಟ್ಟದ ಮೇಲೊಂದು ಮನೆಯ ಮಾಡಿ, ಮೃಗಗಳಿಗಂಜಿದಡೆಂತಯ್ಯ,
ಸಮುದ್ರದ ತಡಿಯಲ್ಲಿ ಮನೆಯ ಮಾಡಿ, ನೊರೆ ತೆರೆಗಳಿಗಂಜಿದೊಡೆಂತಯ್ಯ,
ಸಂತೆಯೊಳಗೊಂದು ಮನೆಯ ಮಾಡಿ, ಶಬ್ದಕ್ಕೆ ನಾಚಿದೊಡೆಂತಯ್ಯ?
ಚನ್ನಮಲ್ಲಿಕಾರ್ಜುನದೇವ ಕೇಳಯ್ಯ; ಲೋಕದೊಳಗೆ ಹುಟ್ಟಿರ್ದ ಬಳಿಕ
ಸ್ತುತಿ ನಿಂದೆಗಳು ಬಂದಡೆ, ಮನದಲಿ ಕೋಪವ
ತಾಳದೆ ಸಮಾಧಾನಿಯಾಗಿರಬೇಕು"

ಎಂದು ಹೇಳಿರುವ ಮಹಾದೇವಿಯಕ್ಕ ಜೀವನುದ್ದಕ್ಕೂ ಆ ಬಂದಂಥ ಎಡರು–ತೊಡರುಗಳನ್ನು ಧೈರ್ಯದಿಂದ ಎದುರಿಸಿ, ಆಧ್ಯಾತ್ಮದ ತುತ್ತ ತುದಿಗೇರಿ ಪೂಜನೀಯಳಾಗಿರುವರು. ಸರ್ವರ ಕರುಣೆಯ ಕಂದಳಾಗಿ ಬೆಳೆದ ಅಕ್ಕನ ಜೀವನದ ವಿವಿಧ ಮುಖಗಳ ಪರಿಚಯ ಮಾಡಿಕೊಡುವುದರ ಜೊತೆ ಅಕ್ಕನಂತೆ ನಾವೂ ಸಹನಶೀಲರಾಗಿ, ದಯಾವಂತರಾಗಿ, ದಯಾಭಾವವುಳ್ಳವರಾಗಿ ಸಾರ್ಥಕ ಬದುಕನ್ನು ನಡೆಸಬೇಕೆಂಬ ಕಿವಿಮಾತನ್ನು

ಹೇಳಿರುವರು ಶ್ರೀಗಳವರು. ಇದೇ ಜಾಡಿನಲ್ಲಿ ಬಸವಣ್ಣನವರ ಅಕ್ಕ, ಚನ್ನಬಸವಣ್ಣನವರ ತಾಯಿ ಅಕ್ಕ ನಾಗಮ್ಮನ್ನು ಕುರಿತು ಉಪಲಬ್ಧವಿದ್ದ ಅವಳ ಕೆಲವೇ ವಚನಗಳ ಮೂಲಕ ತಿಳಿಸಿ ಶ್ರೀ ಸಮಾಜದ ಏಳ್ಗೆಗೆ ಹೊಯ್‌ಕೈಯ್ಯಾಗಿ ದುಡಿಯಬಲ್ಲಳು ಎಂಬುದನ್ನು ತೋರಿಸಿ ಕೊಟ್ಟಿದ್ದಾರೆ. ಬಸವಣ್ಣನವರ ಸಹಧರ್ಮಿಣಿ ಗಂಗಾಂಬಿಕೆಯ ಸತ್ಯಶುದ್ಧ ಕಾಯಕ, ದಾಸೋಹ, ಗುರು ಲಿಂಗ ಜಂಗಮ ಆರಾಧನೆ ಮುಂತಾದವುಗಳ ಕುರಿತು ಶ್ರೀ ಮೂಜಗಂ ಅವರು ಹೇಳಿದ ಈ "ಮಹಾತ್ಮ ಬಸವಣ್ಣನವರ ಮನೆಯೊಡತಿಯಾಗಿ, ಮನದೊಡತಿ ಯಾಗಿ, ಪ್ರೇರಕಳಾಗಿ ಪರಿಶುದ್ಧ ಬಾಳಿನಲ್ಲಿ ಬೆಳಗಿದ ನಿಜಶಕ್ತಿ ಸಂಪನ್ನೆ ಗಂಗಾಂಬಿಕೆ"ಮಾತು ಮನನೀಯವಾದುದು. ಈ ತಾಯಿಯ ಗುಣಗಳನ್ನು ಅಳವಡಿಸಿಕೊಂಡು ಹೋದರೆ ಬಾಳು ಸುಂದರಮಯವಾಗುವುದು ಎಂದು ತಿಳಿಸಿರುವರು.

ಇಂದಿನ ಜನಾಂಗಕ್ಕೆ, ಯುವಜನಾಂಗಕ್ಕೆ ಈ ಎಲ್ಲ ಆದರ್ಶಗುಣಗಳು ಅತ್ಯವಶ್ಯಕ. ಕಾಯಕ ಮತ್ತು ದಾಸೋಹಗಳ ಮಹಿಮೆಯನ್ನು ಸಾರಿದ ಶರಣ ಮೇದಾರ ಕೇತಯ್ಯನ ಜೀವನ–ಸಾಧನೆ–ಸಿದ್ಧಿಗಳನ್ನು ಪರಿಚಯಿಸಿಕೊಟ್ಟಿದ್ದಾರೆ. ನಿರ್ಮಲ ಮನಸ್ಸಿನಿಂದ ಮಾಡಿದ ಕಾಯಕ ಶಿವನಿಗೆ ಅರ್ಪಿತವೆಂಬುದಾಗಿ ತಿಳಿದ ಮೇದಾರ ಕೇತಯ್ಯ ಸದಾ ಬಸವಣ್ಣನ ನಾಮಸ್ಮರಣೆಯೊಂದಿಗೆ ಕಾಯಕ ನಿರತನಾಗಿರುತ್ತಿದ್ದ ಎಂಬುದಕ್ಕೆ ಅವನ ವಚನವೇ ಸಾಕ್ಷಿ. "ಎನ್ನ ಚಿತ್ತಕ್ಕೆ ಆಚಾರ ಲಿಂಗವಾದಾತ ಬಸವಣ್ಣ, ಎನ್ನ ಬುದ್ಧಿಗೆ ಗುರು ಲಿಂಗವಾದಾತ ಬಸವಣ್ಣ, ಎನ್ನ ಅಹಂಕಾರಕ್ಕೆ ಶಿವಲಿಂಗವಾದಾತ ಬಸವಣ್ಣ, ಎನ್ನ ಮನಕ್ಕೆ ಜಂಗಮಲಿಂಗವಾದಾತ ಬಸವಣ್ಣ, ಎನ್ನ ಜ್ಞಾನಕ್ಕೆ ಪ್ರಸಾದ ಲಿಂಗವಾದಾತ ಬಸವಣ್ಣ, ಎನ್ನ ಸ್ಥೂಲ ತನುವಿಗೆ ಇಷ್ಟಲಿಂಗವಾದಾತ ಬಸವಣ್ಣ, ಎನ್ನ ಸೂಕ್ಷ್ಮ ತನುವಿಗೆ ಪ್ರಾಣ ಲಿಂಗವಾದಾತ ಬಸವಣ್ಣ, ಎನ್ನ ಕಾರಣ ತನುವಿಂಗೆ ಭಾವಲಿಂಗವಾದಾತ ಬಸವಣ್ಣ; ಇಂತೆಂದರಿದೆನಾಗಿ ಗೌರೇಶ್ವರ ಲಿಂಗದಲ್ಲಿ ಸುಖಿಯಾದನು". ಹೀಗೆ ಪುಣ್ಯ ನಾಮ ಸ್ಮರಣೆಯೊಂದಿಗೆ ಮಾಡಿದ ಕಾಯಕ ಫಲಪ್ರದವಾಗುತ್ತದೆ ಎಂಬುದರ ಬಗೆಗೂ ತಿಳಿಸಿ ದ್ದಾರೆ. ಹೀಗೆ ಬಸವಣ್ಣನವರ ಮುಂದಾಳತ್ವದಲ್ಲಿ ನಡೆದ ಕಲ್ಯಾಣಕ್ರಾಂತಿ ಜಾತ್ಯಾತೀತ ಸಮಾಜವನ್ನು ನಿರ್ಮಿಸಲು ಹೋರಾಡಿತು. ಇಂಥ ಜಾತ್ಯಾತೀತ ಸಮಾಜವನ್ನು ಕಟ್ಟಲು ಕಂಕಣಬದ್ಧರಾಗಬೇಕು. ಮೇಲು–ಕೀಳು ಎಂಬುದು ತೊಲಗಬೇಕು. ಹೀಗಾದರೆ ಮಾತ್ರ ನಮಗೆ ಆದರ್ಶ ಸಮಾಜವನ್ನು ನಿರ್ಮಿಸಲು ಸಾಧ್ಯ ಎಂಬುದರ ಬಗೆಗೂ ತಿಳಿಸಿರುವರು.

ವೈರಾಗ್ಯ ಮತ್ತು ಯೋಗಗಳೆರಡು ಸಹಜವಾಗಿ ಸಾಧಿಸಿದ ನಿಜಗುಣ ಶಿವಯೋಗಿ ಗಳ ಬಗೆಗೆ ಕೆಲವು ಮಾತುಗಳನ್ನು ಹೇಳಿರುವರು. ಒಂದು ಸಾಮ್ರಾಜ್ಯದ ಅರಸೊತ್ತಿಗೆ ಯನ್ನು ತೊರೆದು, ಯೋಗದ ತುತ್ತತುದಿಗೇರಿದ ನಿಜಗುಣರ ಜೀವನ–ಸಾಧನೆ–ಸಿದ್ಧಿಗಳು ಅನುಕರಣೀಯವಾದವುಗಳು. ಯೋಗಸಾಧನೆಯ ಜೊತೆಗೆ ನಿಜಗುಣರು ಕೈವಲ್ಯ ಪದ್ಧತಿ, ವಿವೇಕ ಚಿಂತಾಮಣಿ, ಪರಮಾರ್ಥ ಪ್ರಕಾಶಿಕೆ, ಅನುಭಾವಸಾರ, ಪರಮಾನುಭವ ಬೋಧೆ,

ಪರಮಾರ್ಥ ಎಂಬ ಕೃತಿಗಳನ್ನು ರಚಿಸಿ ಅದ್ವಿತೀಯರೆನಿಸಿಕೊಂಡಿರುವರು. ನಿಜಗುಣರ ಉನ್ನತ ನಿಲವನ್ನು ಕುರಿತು ಜಗದ್ಗುರುಗಳವರು ಹೇಳಿದ "ನಿಜಗುಣರು ಆಧ್ಯಾತ್ಮಿಕ ದಿವ್ಯ ಶಕ್ತಿಯನ್ನು ಗಳಿಸಿ ಬೆಳಗಿದರು, ಅರಮನೆಯಿಂದ ಪೂರ್ಣಮನೆಗೆ ತೆರಳಿದ ಪವಿತ್ರ ಮೂರ್ತಿ, ಅದ್ವೈತವನ್ನು ತಿಳಿದು ಶಿವಯೋಗವನ್ನು ಹೃದಯಾನುಭವ ಮಾಡಿಕೊಂಡ ಶಿವಯೋಗಿ, ಅರಿಷಡ್ವೈರಿಗಳನ್ನು ಜಯಿಸಿದ ಮಹಾವಿರಾಗಿ, ಶಿವಧರ್ಮವೆಂಬ ಕಂಬದ ಮೇಲೆ ಸುವಿವೇಕ ದಿಂದೊಡಗೂಡಿದ ಪ್ರಣತೆಯನ್ನಿಟ್ಟು, ಸಮಯದ ಸದ್ಭಕ್ತಿ ತೈಲವನೆರೆದು, ಪ್ರವಿಮಳ ಕಳೆ ಯೆಂಬ ಬತ್ತಿಹಾಕಿ ಹಚ್ಚಿ, ಅಂತರಾತ್ಮನಿಗೆ ಬೆಳಗಿ ಮೋಕ್ಷ ಚಿಂತಾಮಣಿಯೆನಿಸುವ ಶಂಭು ಲಿಂಗವೆ ತಾನಾದ ದಿವ್ಯಜ್ಯೋತಿ" ಮಾತು ತುಂಬಾ ಅರ್ಥಪೂರ್ಣವಾದುದಾಗಿದೆ.

ಸುಮಾರು ಏಳೆಂಟು ಶತಮಾನಗಳಷ್ಟು ಪ್ರಾಚೀನತೆಯನ್ನು ಹೊಂದಿದ ಹುಬ್ಬಳ್ಳಿಯ ಶ್ರೀ ಮೂರುಸಾವಿರಮಠದ ಕರ್ತೃ ಜಗದ್ಗುರುಗಳವರು ಪವಾಡ ಪುರುಷರೂ, ಶಾಪಾನು ಗ್ರಹ ಸಮರ್ಥರೂ, ಭವರೋಗ ವೈದ್ಯರಾಗಿದ್ದರೆಂಬ ಮಾತನ್ನು ಶ್ರೀಗಳವರು ಹೇಳುತ್ತ ಶ್ರೀಮಠದ ದ್ವಾರವು ಸರ್ವಧರ್ಮೀಯರಿಗೆ ಮುಕ್ತವಿದ್ದು ಪ್ರತಿನಿತ್ಯ ನೂರಾರುಜನ ಭಕ್ತರು ಕರ್ತೃ ಗದ್ದುಗೆಯ ದರ್ಶನವನ್ನು ಪಡೆದು ಕೃತಾರ್ಥರಾಗುತ್ತಿದ್ದಾರೆ ಎಂಬುದಾಗಿ ಹೇಳಿರು ವರು. ಇಂಥ ದಿವ್ಯ ಚೇತನಗಳ ಕೃಪಾಕಟಾಕ್ಷದಿಂದಾಗಿ ಸಮಾಜದಲ್ಲಿ ಇನ್ನೂ ಧರ್ಮ ಬದುಕಿದೆ ಎಂದು ಹೇಳಿದರೆ ತಪ್ಪಾಗಲಾರದು.

ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧ ಮತ್ತು ಈ ಶತಮಾನದ ಆದಿ ಭಾಗ ದಲ್ಲಿ ಬೆಳಗಿ ಹೋದ ಚಿತ್ತರಗಿ ವಿಜಯ ಮಹಾಂತ ಶಿವಯೋಗಿಗಳ ತುಂಬು ಜೀವನವನ್ನು ಸವಿವರವಾಗಿ ತಿಳಿಸುತ್ತ ಆಧ್ಯಾತ್ಮ ಚಿಂತನೆ ಮಾನವನ ಕಲುಷಿತ ಮನಸ್ಸನ್ನು ತಿಳಿಗೊಳಿಸು ತ್ತದೆ ಮತ್ತು ಆತನನ್ನು ಎತ್ತರದ ನಿಲುವಿಗೆ ಒಯ್ಯುತ್ತದೆ ಎಂಬುದನ್ನು ಚಿತ್ತರಗಿ ಶಿವ ಯೋಗಿಗಳ ಜೀವನ ಘಟನೆಗಳ ಆಧಾರಗಳಿಂದ ಸ್ಪಷ್ಟ ಮಾಡಿರುವರು. ಇಂದಿನ ಗೊಂದಲ ಮಯ ಜೀವನ, ಕಲುಷಿತ ವಾತಾವರಣಕ್ಕೆ ಆಧ್ಯಾತ್ಮ ಚಿಂತನ–ಮಂಥನ ಇವು ಸಂಜೀವಿನಿ ಯಾಗಬಲ್ಲವು.

ಶಿವಯೋಗಮಂದಿರವನ್ನು ಆಧ್ಯಾತ್ಮ ಕೇಂದ್ರವನ್ನಾಗಿ ಮಾಡಿದ ಕೀರ್ತಿ ಹಾನುಗಲ್ಲ ಶ್ರೀ ಕುಮಾರ ಶಿವಯೋಗಿಗಳಿಗೆ ಸಲ್ಲುತ್ತದೆ. ಇಂಥ ಆಧ್ಯಾತ್ಮ ಕೇಂದ್ರದ ಆವಶ್ಯಕತೆ ಯನ್ನು ಮನಗಂಡ ಶ್ರೀ ಕುಮಾರ ಶಿವಯೋಗಿಗಳು ಈ ಶತಮಾನದ ಮೊದಲು ದಶಕ ದಲ್ಲಿಯೇ ಪ್ರಶಾಂತ ವಾತಾವರಣದ ಮಧ್ಯ ಶಿವಯೋಗ ಮಂದಿರವನ್ನು ಸ್ಥಾಪಿಸಿದರು. ಈ ಶಿವಯೋಗಮಂದಿರದಿಂದ ಇಲ್ಲಿಯವರೆಗೆ ಲೆಕ್ಕವಿಲ್ಲದಷ್ಟು ಸಾಧಕರು ಆಧ್ಯಾತ್ಮ ವಿದ್ಯಾಲಯದಿಂದ ಹೊರಬಂದು ಧರ್ಮಗುರುಗಳಾಗಿ, ಮಠಾಧೀಶರಾಗಿ, ಸಮಾಜದ ಗುರುಗಳಾಗಿ ಸಮಾಜ ಕಟ್ಟುವ ಕೈಂಕರ್ಯವನ್ನು ತೊಟ್ಟಿರುವರು. ಸಣ್ಣ ಪ್ರಮಾಣದಲ್ಲಿ ಪ್ರಾರಂಭಗೊಂಡ ಶಿವಯೋಗಮಂದಿರ ಇಂದು ಆಧ್ಯಾತ್ಮ ವಿಶ್ವವಿದ್ಯಾಲಯವಾಗಿ ಬೆಳೆದು

ಧರ್ಮಪ್ರಸಾರ, ಶಿಕ್ಷಣ ಪ್ರಸಾರ ಕಾರ್ಯಗಳನ್ನು ಮಾಡುತ್ತಿದೆ. ಇಂಥ ಕೇಂದ್ರಗಳು ನಾಡಿನುದ್ದಗಲಕ್ಕೂ ಸ್ಥಾಪಿತಗೊಂಡರೆ ನಾಡವರನ್ನು ಆಧ್ಯಾತ್ಮ ಚಿಂತನೆಯತ್ತ ತೊಡಗಿಸಲು ಸಾಧ್ಯ.

ನಾಗಾಲೋಟದಿಂದ ಮುನ್ನಡೆಯುತ್ತಿರುವ ವಿಜ್ಞಾನಯುಗದಲ್ಲಿ ಮಾನವ ಆಧ್ಯಾತ್ಮಿಕ ಚಿಂತನೆಯ ಕೊರತೆಯಿಂದ ತೊಳಲಾಡುತ್ತಿರುವನು. ಮಹಾಪುರುಷರ ಜೀವನಾದರ್ಶಗಳು ಅಶಾಂತಿಯ ಮಡುವಿನಲ್ಲಿ ತಿರುಗುವ ಮನಸ್ಸಿಗೆ ನೆಮ್ಮದಿ ಕೊಡಬಲ್ಲವು. ಭಗವಾನ್ ಬುದ್ಧ, ರಾಮಕೃಷ್ಣಪರಮಹಂಸರು, ಸ್ವಾಮಿ ವಿವೇಕಾನಂದರ ರಾಜಯೋಗ, ಗಾಂಧೀಜಿ ದೃಷ್ಟಿಯಲ್ಲಿ ಮಾನವ ಮತ್ತು ಆತನ ಸಂಪತ್ತು ಇವುಗಳ ಸಂಬಂಧ; ವಿಶ್ವಮಾನವ ಬಾಪೂಜಿ ಮುಂತಾದ ಮಹಾಪುರುಷರ ಜೀವನಾದರ್ಶಗಳ ಚಿತ್ರಣದೊಂದಿಗೆ ಜಗದ್ಗುರುಗಳವರು ಇಂಥವರು ನಡೆದು ಹೋದ ದಾರಿಯಲ್ಲಿ ನಾವು ಸಾಗಿದರೆ ಲೌಕಿಕದಲ್ಲಿಯೇ ಪಾರಮಾರ್ಥವನ್ನು ಕಾಣಬಹುದೆಂಬುದನ್ನು ಸವಿವರವಾಗಿ ಈ ರೀತಿಯಾಗಿ ತಿಳಿಸಿರುವರು.

ಬುದ್ಧನ ವಿಚಾರದಲ್ಲಿ ಜೀವನವೇ ದುಃಖದಸಾಗರ; ಜೀವನದುಃಖಕ್ಕೆ ಮೂಲ; ನಿರ್ವಾಣ ಸುಖದಿಂದ ದುಃಖದ ಮುಕ್ತಿ. ಇವುಗಳಿಂದ ಮುಕ್ತಿ ಪಡೆಯುಲು ಸುವಿಚಾರ, ಸದಿಚ್ಛಾ, ಸುಭಾಷಿತಾ, ಸಚ್ಚಾರಿತ್ರ್ಯ, ಸತ್‌ಜೀವನ, ಸುಪ್ರಯತ್ನ, ಸಹೃದಯ, ಸಂತೋಷ ಈ ಎಂಟು ಸತ್ಯಮಾರ್ಗಗಳಲ್ಲಿ ಅಹಿಂಸೆಯಿಂದ ನಡೆಯಬೇಕೆಂದು ಸಾರಿದ್ದಾನೆ ಬುದ್ಧದೇವ. ಬುದ್ಧದೇವ ಹಾಕಿಕೊಟ್ಟ ಮಾರ್ಗವನ್ನು ನಾವೆಲ್ಲ ಅನುಸರಿಸಬೇಕೆಂಬ ಮಾತನ್ನು ಜಗದ್ಗುರುಗಳವರು "ಬುದ್ಧ ಮತ್ತು ಬಸವೇಶ್ವರರ ಸತ್ಯ, ಅಹಿಂಸಾ ಮುಂತಾದ ತತ್ವಗಳಿಂದ ಜನರ ಉದ್ಧಾರವಾಯಿತು. ಇಂದಿಗೂ ಅವರ ವಚನಗಳನ್ನು ಧ್ಯಾನದಿಂದ ಪರಿಪಾಲನೆ ಮಾಡಿದ್ದಾದರೆ ಮಾನವ ಜನಾಂಗ ಕಲ್ಯಾಣವು ಆಗುವುದೆಂದು ನಿಃಸಂಕೋಚವಾಗಿ ಹೇಳಬಹುದು. ಭಾರತವಷ್ಟೆ ಅಲ್ಲ; ಸಂಪೂರ್ಣ ಜಗತ್ತಿನಲ್ಲಿಯೇ ಶಾಂತಿಯ ವಾತಾವರಣವು ಉತ್ಪನ್ನವಾಗಲಿ. ಇಂದು ನಾವು ಒಂದು ವೇಳೆ ವಿಶ್ವಕಲ್ಯಾಣಕ್ಕಾಗಿ ಪ್ರವೃತ್ತರಾಗದಿದ್ದಲ್ಲಿ ಮಾನವ ಜನಾಂಗ ಮತ್ತು ಜಗತ್ತು ಯಾವ ವಿನಾಶದ ಮಡುವಿನ ಕಡೆಗೆ ಹೋಗುವದೆಂಬುದು ಹೇಳಲಾಗದು. ಇಂದು ನಾವೆಲ್ಲರೂ ಕೂಡಿಕೊಂಡು ಜಗತ್ತಿಗೆ ಪ್ರಶಸ್ತವಾದ ಜ್ಞಾನದ ಮಾರ್ಗವನ್ನು ತೋರಿಸೋಣ. ಭಾರತಕ್ಕಷ್ಟೇ ಅಲ್ಲ, ಸಂಪೂರ್ಣ ಜಗತ್ತಿಗೆ ಶಾಂತಿ ದೊರೆಯಲಿ ಮತ್ತು ಮಾನವ ಜನಾಂಗವು ಸುಖಿಯಾಗಲೆಂದು ಈಶ್ವರನಲ್ಲಿ ಪ್ರಾರ್ಥಿಸುತ್ತೇವೆ." ಅತ್ಯಂತ ಕಳಕಳಿಯಿಂದ ಹೇಳಿರುವರು. ಈ ಹಿತನುಡಿಗಳು, ಉಪದೇಶಪರ ಉದ್ಬೋಧಕ ವಿಚಾರಗಳು ಅವರ ವಿಶ್ವಪ್ರೇಮ, ಮಾನವ ಚಿಂತನ, ವಿಶ್ವಶಾಂತಿಯನ್ನು ಪ್ರತಿವ್ಯಕ್ತಪಡಿಸುತ್ತವೆ.

ಆಧ್ಯಾತ್ಮದ ಉತ್ತುಂಗ ಶಿಖರವನ್ನೇರಿದ ಶ್ರೀರಾಮಕೃಷ್ಣ ಪರಮಹಂಸರು ಸ್ವಾಮಿ ವಿವೇಕಾನಂದರಿಗಷ್ಟೇ ಆಧ್ಯಾತ್ಮ ಗುರುಗಳಾಗಿರದೇ ಸರ್ವರಿಗೂ ಗುರುಗಳಾಗಿದ್ದು, ಸತಿ

ಶಾರದಾಮಣಿಯನ್ನು ಮಾತೃ ಸ್ವರೂಪದಲ್ಲಿ ಕಂಡು ಇಹದಲ್ಲಿ ಪರವನ್ನು ಕೊಂಡ ಪುಣ್ಯ ಜೀವಿ ಎಂಬುದನ್ನು ಶ್ರೀಗಳವರು "ಪರಮಹಂಸರು ಲೌಕಿಕದಲ್ಲಿ ಇದ್ದುಕೊಂಡು ಪಾರ ಲೌಕಿಕವನ್ನು ಸಾಧಿಸಿದ ಸಿದ್ಧಿಪುರುಷರು........ಮಾನವನಲ್ಲಿ ಮಲಗಿರುವ ಪೂರ್ಣತೆಯನ್ನು ವಿಕಾಸವಾಗುವಂತೆ ಮಾಡಲಿ" ಎಂದು ಹೇಳಿದ ಮಾತು ಅರ್ಥಪೂರ್ಣವಾಗಿದೆ. ಆಧ್ಯಾತ್ಮ ಚಿಂತನ ಮಾನವನ ಮನಸ್ಸನ್ನು ವಿಕಾರಗೊಳಿಸದೆ ವಿಕಾಸಗೊಳಿಸುತ್ತದೆ ಎಂಬ ವಿಷಯದ ಮತಿತಾರ್ಥವನ್ನು ಅರಿತುಕೊಳ್ಳುವುದು ಉಚಿತ.

ಅತೀ ಚಿಕ್ಕ ವಯಸ್ಸಿನಲ್ಲಿಯೇ ಈ ಇಹಲೋಕದ ವ್ಯಾಪಾರವನ್ನು ಸಮರ್ಥವಾಗಿ ಪೂರೈಸಿ, ಜನಪ್ರಿಯರಾಗಿರುವ ಸ್ವಾಮಿ ವಿವೇಕಾನಂದರ ದೇಶಪ್ರೇಮ, ಆಧ್ಯಾತ್ಮ ಚಿಂತನ ನಿಜಕ್ಕೂ ಬೆರಗುಗೊಳಿಸುವಂತಹವು. ಕೀಳರಿಮೆಯಿಂದ ನಮ್ಮನ್ನು ನೋಡುತ್ತಿದ್ದ ಪಾಶ್ಚಾತ್ಯರ ಕಣ್ಣು ತೆರೆಯಿಸಿದ ಧೀಮಂತ ಪುರುಷ ವಿವೇಕಾನಂದರು. ಇವರ ಅಸ್ಖಲಿತ ವಾಣಿಗೆ ಮಾರು ಹೋದವರು ಅಪಾರ. ಇವರ ಪಾಂಡಿತ್ಯಪೂರ್ಣ, ಅನುಭಾವ ಪೂರ್ಣ ಭಾಷಣಗಳ ಮುಖೇನ ಆಧ್ಯಾತ್ಮವನ್ನು ಅರಿತ ಪಾಶ್ಚಾತ್ಯರು ಇವರ ವಿದ್ವತ್ತಿಗೆ ಮಾರು ಹೋಗಿದ್ದರು. ಇಂಥ ದಿವ್ಯ ಚೇತನದ ಜೀವನ ಚಿತ್ರಣವನ್ನು ಅವರ ಭಾಷಣಗಳ ಪ್ರಮುಖ ಅವತರಣಿಕೆಗಳೊಂದಿಗೆ ಶ್ರೀಗಳವರು ಚಿತ್ರಿಸಿದ್ದಾರೆ. ಸ್ವಾಮಿ ವಿವೇಕಾನಂದರು ಸ್ಥಾಪಿಸಿದ ರಾಮಕೃಷ್ಣಾಶ್ರಮದ ಹಲವಾರು ಶಾಖೆಗಳು ಪ್ರಪಂಚದಾದ್ಯಂತ ತಲೆಎತ್ತಿ ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತವೆ. ಇಂಥ ಆಧ್ಯಾತ್ಮ ಸಂಸ್ಥೆಗಳು ಸಮಾಜವನ್ನು ಸುಖೀ ಸಾಮ್ರಾಜ್ಯವನ್ನಾಗಿ ಮಾಡುವುದರಲ್ಲಿ ಯಾವ ಸಂದೇಹವಿಲ್ಲ.

ಇನ್ನೆರಡು ಅಥವಾ ಮೂರು ಶತಮಾನಗಳ ನಂತರದ ಜನಾಂಗಕ್ಕೆ ಪವಾಡ ಪುರುಷ ರಾಗಿ ಕಾಣುವ ವಿಶ್ವಮಾನವ ಬಾಪೂಜಿ, ಕೇವಲ ಸತ್ಯ ಮತ್ತು ಅಹಿಂಸೆ ಎಂಬ ಮಹಾ ಅಸ್ತ್ರಗಳಿಂದ, ಅನೇಕ ದೇಶ ಪ್ರೇಮಿಗಳ ಬೆಂಬಲದಿಂದ ಭಾರತವನ್ನು ದಾಸ್ಯದಿಂದ ಮುಕ್ತ ಗೊಳಿಸಿದುದು ಒಂದರ್ಥದಲ್ಲಿ ಪವಾಡಸದೃಶ ವಿಷಯುವೇ ಅನ್ನಬಹುದು. "ಮಹಾತ್ಮಾ ಗಾಂಧೀಜಿಯವರ ಅತ್ಯದ್ಭುತ ಸಾಹಸದಿಂದ, ಪರಿಶುದ್ಧ ಸತ್ಯಾಗ್ರಹ ಬಲದಿಂದ ಸತ್ಯ, ಅಹಿಂಸೆ, ಧರ್ಮ, ನೀತಿ, ಪ್ರಾರ್ಥನೆ ಮತ್ತು ಮಹಾತ್ಯಾಗ ಮುಂತಾದ ದೈವೀಶಕ್ತಿಗಳ ಉದ್ದಾನದಿಂದ, ಉಜ್ವಲತರ ಭಗವದ್ದೀಪ್ತಿಯ ಪ್ರಭೆಯಿಂದ ಭಾರತಕ್ಕೆ ಸ್ವಾತಂತ್ರ್ಯ ದೊರಕಿತು........ಗಾಂಧೀಜಿಯವರ ಪಾವನಮಯ ಜೀವನ ರಾಷ್ಟ್ರಕ್ಕೆ ಒಂದು ಮಹಾಶಕ್ತಿ. ಸತ್ಯಾನ್ವೇಷಣದ ಅನುಸಂಧಾನ ಮಾಡಲು ದಿವ್ಯದೀಪ್ತಿ. ಗಾಂಧಿಯವರು ತೋರಿದ ದಾರಿ ಯಲ್ಲಿ ಸಾಗಿದರೆ ಮಾತ್ರ ರಾಷ್ಟ್ರದ ಪ್ರಗತಿ, ವಿಶ್ವಶಾಂತಿ" ಎಂಬ ಶ್ರೀಗಳ ಉದ್ಬೋಧಕ ಮಾತುಗಳು ನಾವು ನಮ್ಮ ನಿತ್ಯ ಜೀವನದಲ್ಲಿ ಅನುಸರಿಸಬೇಕಾದಂಥವುಗಳು. ಇಂದು ಗಾಂಧೀಜಿಯವರ ಪ್ರಿಯ ಅಸ್ತ್ರಗಳಾಗಿದ್ದ ಸತ್ಯ, ಅಹಿಂಸೆ, ಕರುಣೆ, ದಯೆ, ಪ್ರಾರ್ಥನೆ ಇವು ದೂರವಾಗುತ್ತಿರುವುದು ವಿಷಾದದ ಸಂಗತಿ.

ಹೀಗೆ ಆಶೀರ್ವಾಣಿ ಸಂಪುಟಗಳೆರಡರಲ್ಲಿ ಸುಮಾರು ಮೂವತ್ತು ಲೇಖನಗಳಲ್ಲಿ ವೀರಶೈವ ತತ್ವ ದರ್ಶನ, ಶರಣಸಾಹಿತ್ಯ, ಮಹಾಪುರುಷರ ಜೀವನ ಚಿತ್ರಣಗಳು ಚಿತ್ರಿತ ವಾದಂತೆ ಮತ್ತೊಂದು ಘಟ್ಟದಲ್ಲಿ ಸತ್ಯವೇ ದೇವರು, ಗೀತೆಯ ಒಳಗುಟ್ಟು, ಧ್ಯಾನಯೋಗ ರಾಮಚರಿತ ಮಾನಸ ಚಿತ್ರಿಸಿರುವ ಸಂಸ್ಕೃತಿ, ಇಂದಿನ ಜಗತ್ತಿಗೆ ಅವಶ್ಯವಿದ್ದ ಧರ್ಮ, ಸಾಧು ಸಂತರ ಸಂದೇಶ, ಭವಿಯು ಭಕ್ತನಾಗುವ ಬಗೆ ದೃಷ್ಟಿಯೋಗ, ಆತ್ಮಶ್ರೀ ಎಂಬ ಲೇಖನಗಳಲ್ಲಿಯೂ ಶ್ರೀಗಳವರ ಹರಿತವಾದ ವಿಚಾರ ಧಾರೆಗಳು ಓತಪ್ರೋತವಾಗಿ ಹರಿದಿವೆ. ಮೇಲ್ನೋಟಕ್ಕೆ ವಿಷಯದ ಪುನರುಕ್ತಿ ಕಂಡರೂ ವಿಷಯ ನಿರೂಪಣೆ ಭಿನ್ನವಾಗಿದೆ.

ವೇದಗಳ ಸಾರಸಂಗ್ರಹ ರೂಪದಲ್ಲಿರುವ ಭಗವದ್ಗೀತೆಯು ಜೀವನದ ಶಾಶ್ವತ ಮೌಲ್ಯಗಳನ್ನು ತಿಳಿಸುತ್ತದೆ. ಭಕ್ತಿ, ಕಾಯಕ, ಪ್ರಾಮಾಣಿಕತೆಗಳೇ ಜೀವನದ ಯಶಸ್ಸಿನ ಮೂಲ ಚೇತನಗಳು. ಮಾನವ ಕರ್ಮಯೋಗಿಯಾಗಬೇಕು. ಜೀವನವನ್ನು ಧೈರ್ಯದಿಂದ ಎದುರಿಸಬೇಕು ಎಂಬ ವಿಚಾರ ಪ್ರಚೋದಕ ಮಾತುಗಳು ಇಲ್ಲಿ ಮೂಡಿಬಂದಿದೆ.

ಸತ್ಯವೇ ದೇವರು ಎಂಬ ಲೇಖನದಲ್ಲಿ "ದೇವರನ್ನು ಕಾಣಲು ಸತ್ಯಾರಾಧನೆ ಮಹತ್ಸಾಧನೆಯಾಗಿದೆ. ಸತ್ಯಾರಾಧನೆಯಿಂದ ವ್ಯಕ್ತಿಯಲ್ಲಿ ಹುದುಗಿರುವ ತಮಸ್ಸು ನಷ್ಟವಾಗಿ ಅಂತಃಸ್ಫೂರ್ತಿ ಉದಯವಾಗುವದಲ್ಲದೆ ಆತ್ಮಜ್ಯೋತಿ ಬೆಳಗುತ್ತದೆ. ಸತ್ಯವನ್ನರಿಯಬೇಕಾದರೆ ಒಳಗಣ್ಣು ತೆರೆಯಬೇಕಾಗುತ್ತದೆ... ಸತ್ಯವನ್ನರಸುತ್ತ ಹೋದಂತೆ ಕವಿದ ಕತ್ತಲು ದೂರಾಗಿ ಸತ್ಯವೇ ದೇವರೆಂದು ಅರಿವಾಗುತ್ತದೆ." ಎಂಬ ಮಾತಿನಲ್ಲಿ ಸತ್ಯದ ಹಿರಿಮೆ-ಗರಿಮೆ; ಪಾವಿತ್ರ್ಯತೆ ಕುರಿತು ಹೇಳಿರುವರು ಬಸವಣ್ಣನವರ "ದೇವಲೋಕ ಮರ್ತ್ಯಲೋಕ ....ಸತ್ಯವೇ ನುಡಿಯುವುದೇ ದೇವಲೋಕ, ಮಿಥ್ಯವೇ ನುಡಿಯುವುದೇ ಮರ್ತ್ಯಲೋಕ"; ಉಪನಿಷತ್ತಿನ "ಸತ್ಯಂ ವದ; ಧರ್ಮಂ ಚರ ಸತ್ಯಮೇವ ಜಯತೆ ನಾನೃತಂ" ಮತ್ತು ಗಾಂಧಿಜೀಯವರ "Truth is my God....It is my confidence that God is the strength of life and he is truth and illumination" ಎಂಬ ಮುಂತಾದ ವಿಚಾರಗಳು ಶ್ರೀಗಳವರ ಮಾತಿನಲ್ಲಿ ಮಿಳಿತಗೊಂಡಿವೆ.

ಭಾರತ ಸರ್ವಧರ್ಮಗಳ ಜೀಡು; ಸರ್ವಧರ್ಮಗಳ ಸಮನ್ವಯ ದೃಷ್ಟಿಯೇ ಭಾರತೀಯ ಸಂಸ್ಕೃತಿಯ ತಿರುಳು ಎಂಬ ಮಾತನ್ನು ಬುಕ್ಕರ ಮಗನಾದ ಎರಡನೆಯ ಹರಿಹರನ ಕಾಲದ ಶಾಸನದಿಂದ ತಿಳಿಯಬಹುದು.

"ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾನ್ತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯಾಯಿಕಾಃ||
ಅರ್ಹಚ್ಛೇತಿಹ ಜೈನಶಾಸನಮಿತಿ ಕರ್ಮೇತಿ ಮೀಮಾಂಸಕಾಃ
ಸೋಽಯಂ ವೋ ವಿದಧಾತು ವಾಂಛಿತಫಲಂ ಶ್ರೀ ಕೇಶವೇಶಸ್ಸದಾ||"

ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮನೆಂದು, ಬೌದ್ಧರು ಬುದ್ಧನೆಂದು ನೈಯಾಯಿ

ಕರು ಕರ್ತನೆಂದು ಜೈನರು ಅರ್ಹಂತನೆಂದು, ಮೀಮಾಂಸಕರು ಕರ್ಮ ಎಂದು ಕೇಶವನನ್ನು ಆರಾಧಿಸುವರು. ಅಂಥ ಕೇಶವ ಸರ್ವರಿಗೂ ಇಷ್ಟಾರ್ಥಗಳನ್ನು ದಯಪಾಲಿಸಲಿ ಎಂಬ ಭಾವ ಮೇಲಿನ ಶ್ಲೋಕದಲ್ಲಿದೆ. ಹೀಗೆ ವಿವಿಧತೆಯಲ್ಲಿ ಏಕತೆಯನ್ನು ಕಾಣುವ ಹಾಗೆ ಧರ್ಮಗಳ ಆಚರಣೆಯ ರೀತಿ ಭಿನ್ನಭಿನ್ನವಾಗಿದ್ದರೂ ಅಂತಿಮ ಗುರಿ ಒಂದೇ ಮತ್ತು ಭಾರತ ಸರ್ವಧರ್ಮೀಯರಿಗೆ ಆಶ್ರಯವನ್ನಿತ್ತು ಪ್ರೋತ್ಸಾಹಿಸುತ್ತದೆ ಎಂಬುದನ್ನು "ಭಾರತವಿಂದು ಎಲ್ಲ ಧರ್ಮದವರಿಗೂ ಆಶ್ರಯ ನೀಡಿದೆ. ಅವರವರ ಧರ್ಮಪ್ರಚಾರಕ್ಕೂ ಪ್ರೋತ್ಸಾಹವನ್ನಿತ್ತಿದೆ. ತನ್ನ ಉದಾರ ಗುಣವನ್ನು ಕೃತಿಯಲ್ಲಿ ತೋರಿಸಿದೆ. ಇದನ್ನರಿತು ಎಲ್ಲ ಧರ್ಮದವರು ಉದಾರಾಶ್ರಯವನ್ನು ದುರುಪಯೋಗಮಾಡಿಕೊಳ್ಳದೆ, ಸಹಕರಿಸಿ, ಮೇಲಕ್ಕೆತ್ತಿದವರನ್ನು ಅನುಸರಿಸಿ, ಅನುಭವದ ಬೆಳಕನ್ನು ಸರ್ವಧರ್ಮ ಸಮನ್ವಯ ದೃಷ್ಟಿಯಲ್ಲಿ ಹೊರಚೆಲ್ಲಿ ಶ್ರದ್ಧಾಪೂರ್ವಕವಾದ ಕಾರ್ಯದಲ್ಲಿ ಪ್ರವೃತ್ತರಾದರೆ ಮಾತ್ರ ಧರ್ಮ ಪ್ರಕಾಶ. ಇಲ್ಲದಿರೆ ವಿನಾಶದ ಮಾರ್ಗದ ಕಡೆಗೆ ಹೊರಟಂತೆ" ಹೇಳುತ್ತ ಶ್ರದ್ಧಾಪೂರ್ವಕ ಕಾರ್ಯದಲ್ಲಿ ಪ್ರವೃತ್ತರಾದರೆ ಮಾತ್ರ ನಾವು ಬೆಳಕಿನ ಪಥದತ್ತ ಸಾಗಬಲ್ಲೆವು ಎಂಬ ಹಿತ ನುಡಿಯನ್ನಾಡಿರುವರು.

ಸಾಹಿತ್ಯಾರಾಧಕರಾದ ಜಗದ್ಗುರುಗಳವರ 'ಸೌಂದರ್ಯ ಮತ್ತು ಕಲೆ', 'ಸಾಹಿತ್ಯ ಮತ್ತು ಮನೋವಿಜ್ಞಾನ', ಭಾಷಾ ಭಾಂದವ್ಯ, 'ಕಾಲಿದಾಸನ ಉಪಮೆಗಳು', 'ಕವಿ ಜೀವನ', 'ಕನ್ನಡ ಪತ್ರಿಕೋದ್ಯಮದ ಬೆಳವಣಿಗೆ' ಈ ಮುಂತಾದ ಆಶೀರ್ವಾಣಿ ರೂಪದ ಲೇಖನಗಳು ಸಾಹಿತ್ಯಾಭ್ಯಾಸಿಗಳಿಗೆ ಉಪಯುಕ್ತಕರವಾಗಿವೆ. ಸಾಹಿತ್ಯ ಮತ್ತು ಮನೋವಿಜ್ಞಾನ ಲೇಖನದಲ್ಲಿ "ಮನೋವಿಜ್ಞಾನವು ಎಲ್ಲ ಮಾನಸಿಕ ವ್ಯಾಪಾರಗಳ ಸೂಕ್ಷ್ಮಾತಿಸೂಕ್ಷ್ಮ ವಿಶ್ಲೇಷಣಾತ್ಮಕ ವಿವೇಚನೆಯಲ್ಲಿಯೇ, ಪರಿಸಮಾಪ್ತಿಯನ್ನು ಹೊಂದಿದರೆ, ಸಾಹಿತ್ಯವು ಮಾನವನ ಎಲ್ಲ ಚಿತ್ತವೃತ್ತಿಗಳಿಗೆ ನವಚೈತನ್ಯವನ್ನು ಕೊಂಡೊಯ್ಯುವ ಪರಮ ಧ್ಯೇಯವನ್ನು ಸಾಧಿಸಿ ಅಮರವಾಗುತ್ತದ" ಎಂಬ ವಿಚಾರ ಮೂಡಿ ಬಂದಿದೆ. ಸಾಹಿತ್ಯಕ್ಕೂ ಮನೋವಿಜ್ಞಾನಕ್ಕೂ ನೇರ ಸಂಬಂಧವುಂಟು. ಪರಮಾನಂದವನ್ನುಂಟು ಮಾಡುವುದೇ ಸಾಹಿತ್ಯದ ಚರಮಗುರಿ. ಮನಸ್ಸನ್ನು ಹಗುರುಗೊಳಿಸಿ, ಹೃದಯವನ್ನು ತಿಳಿಗೊಳಿಸುವ ಕಾರ್ಯವನ್ನು ಸಾಹಿತ್ಯ ಮಾಡುತ್ತದೆ. ತನ್ಮೂಲಕ ಮಾನವನಲ್ಲಿ ವಿಶಾಲ ಮನೋಭಾವ ಬೆಳೆದು ಸರ್ವಸಮನ್ವಯ ದೃಷ್ಟಿ ಬೆಳೆಯುತ್ತದೆ. 'ಕಾಲಿದಾಸನ ಉಪಮೆಗಳು' ಲೇಖನವು ಶ್ರೀಗಳವರ ಪಾಂಡಿತ್ಯಕ್ಕೆ ಸಾಕ್ಷಿ.

ಆಶೀರ್ವಾಣಿಯ ಸಂಪುಟಗಳೆರಡರಲ್ಲಿ ಚರ್ಚಿತವಾದ ವಿಷಯ ವೈವಿಧ್ಯ, ಸಾಹಿತ್ಯದ ವಿವಿಧ ಮುಖಗಳ ಪರಿಚಯ ಶ್ರೀಗಳವರ ಚಿಂತನ–ಮಂಥನಗಳನ್ನು ಪ್ರತಿಬಿಂಬಿಸುತ್ತವೆ. ಧರ್ಮ–ಸಾಹಿತ್ಯಗಳ ವಿಚಾರಗಳಂತೆ, ದಿನನಿತ್ಯದ ಬದುಕಿಗೆ, ಆಚರಣೆಗೆ ಅತ್ಯವಶ್ಯಕವಾದ ರೂಢಿ ನಿಯಮಾವಳಿಗಳನ್ನು ಸರಳ ಮತ್ತು ಆಕರ್ಷಕ ಶೈಲಿಯಲ್ಲಿ ಸುಮಾರು ಹದಿನೆಂಟು ಲೇಖನಗಳಲ್ಲಿ ಪ್ರಸ್ತಾಪಿಸಿರುವರು. ಇವುಗಳಲ್ಲಿ ಪ್ರಮುಖವಾಗಿ ನಾವು ವ್ಯಕ್ತಿತ್ವದ ವಿಕಾಸ,

ಶೀಲವೇ ಧರ್ಮ, ಕರ್ತವ್ಯದಿಂದ ಸುಖಪ್ರಾಪ್ತಿ, ವಿದ್ಯೆಗೆ ವಿನಯವೇ ಭೂಷಣ, ಹರಿಜನೋದ್ಧಾರ, ಶಿಸ್ತು ಸಂಯಮ, ಸ್ತ್ರೀ ಶಿಕ್ಷಣ, ನೀತಿ ಮತ್ತು ಸಮಾಜ, ನೈತಿಕ ಜೀವನ, ವಿಶ್ವಮಾನವನೆಡೆಗೆ, ಜಾತೀಯತೆಯ ಐಕ್ಯ, ಸ್ವಾತಂತ್ರ್ಯ ರಕ್ಷಣೆ, ಭಾರತ ಹಾಗೂ ವೈವಿಧ್ಯತೆ, ಪರಿತಪಿಸುತ್ತಿರುವ ಜೀವಿಗೆ ಪರಿಹಾರವುಂಟೆ? ಕರುಣವಿರಲಿ ಜೀವರೊಳು, ಕುಟುಂಬ ಕಲ್ಯಾಣ ಮುಂತಾದವುಗಳನ್ನು ಹೆಸರಿಸಬಹುದು.

ಮಾನವ ಮಾನವನಾಗಿ ಬಾಳಬೇಕಾದರೆ ಅವನು ಸದಾ ತನ್ನ ವ್ಯಕ್ತಿತ್ವದ ವಿಕಸನದ ಕಡೆ ಗಮನಕೊಡಬೇಕು. ಸತ್ಯ, ಶುದ್ಧ, ನೀತಿ, ಚಾರಿತ್ರ್ಯವುಳ್ಳ ವ್ಯಕ್ತಿಯ ವ್ಯಕ್ತಿತ್ವವು ತಾನಾಗಿಯೇ ಬೆಳೆಯುತ್ತ ಹೋಗುತ್ತದೆ. ಈ ಕುರಿತು "ಮನುಷ್ಯನಿಗೆ ವ್ಯಕ್ತಿತ್ವವೆಲ್ಲಿಂದ ಬರುತ್ತದೆ? ಚಾರಿತ್ರ್ಯ ಬಲದಿಂದ. ತನ್ನಲ್ಲಿ ತಾನು ಮನೋಹರ ಪ್ರಕಾಶವನ್ನು ಕಾಣುತ್ತಾನೆ. ಸಚ್ಚರಿತ್ರ ಮನುಷ್ಯನು ರಾಷ್ಟ್ರದ ರಚನೆ ಮಾಡಲು ಸಮರ್ಥನಿರುತ್ತಾನೆ. ಆತನಿಗೆ ಅಗ್ನಿಯ ಶೀತಜಲ ಜಲವಾಗಬಹುದು. ಸರ್ಪವೂ ಪೂಮಾಲೆಯಾಗಬಹುದು" ಎಂದು ಹೇಳಿದ ಮಾತುಗಳು ವಿಚಾರಪೂರಿತವಾಗಿವೆ. ಇದೇ ಮಾತನ್ನು ವಿವೇಕಾನಂದರ "You are the creator of your own distance. All the strength and succour you want is within your senses. Therefore make your own future." ಮಾತಿನ ಉದಾಹರಣೆಯೊಂದಿಗೆ ಸ್ಪಷ್ಟಪಡಿಸಿರುವರು.

ಮನುಷ್ಯನಿಗೆ ಸಚ್ಚಾರಿತ್ರ ಮತ್ತು ಶೀಲ ಗುಣಗಳು ಆವಶ್ಯಕ ಎಂಬ ಮಾತನ್ನು "ಶೀಲವೇ ಸಂಸ್ಕೃತಿಗೆ ಕಣ್ಣು. ಶೀಲವೇ ಧರ್ಮಕ್ಕೆ, ಸಂಸ್ಕಾರಕ್ಕೆ ಮೂಲಾಧಾರ. ಶೀಲದಲ್ಲಿ ಶ್ರದ್ಧೆಯುಳ್ಳವರು, ಯಾವುದೇ ಹೊರಗಿನ ತಾಮಸಿಯ ಶಕ್ತಿಗೆ ಅಂಜಬೇಕಾಗಿಲ್ಲ! ಅಳುಕಬೇಕಾಗಿಲ್ಲ....ಶೀಲದ ನಡೆನುಡಿಯು ಬಾಳಿನಲ್ಲಿ ಸವಿಯನ್ನು ನೀಡುವ ದಿವ್ಯೌಷದ.... ಶೀಲವಿಲ್ಲದ ಧರ್ಮ, ಜೀವವಿಲ್ಲದ ದೇಹವಿದ್ದಂತೆ" ಎಂಬ ಹೇಳಿಕೆಯ ಮುಖಾಂತರ ಹೇಳಿರುವರು. ಶೀಲದಂತೆ ಜೀವನದಲ್ಲಿ ಶಿಸ್ತು-ಸಂಯಮ ಅಷ್ಟೇ ಪ್ರಮುಖವಾದವುಗಳು. ಶಿಸ್ತು-ಸಂಯಮಗಳನ್ನು ನಿತ್ಯಾಚರಣೆಯಲ್ಲಿ ಅಳವಡಿಸಿಕೊಂಡಿದ್ದ ಗಾಂಧೀಜಿ, ವಿನೋಭಾ ಭಾವೆ ಮುಂತಾದವರು ಬಾಳಿನಲ್ಲಿ ಯಶಸ್ಸನ್ನು ಗಳಿಸಲು ಸಾಧ್ಯವಾಯಿತೆಂಬ ಮಾತನ್ನು ಮರೆಯುವಂತಿಲ್ಲ. "ಶಿಸ್ತು-ಸಂಯಮಗಳನ್ನು ನಿರಂತರ ಸಾಧಿಸಬೇಕಾದರೆ, ಸತತೋದ್ಯೋಗ, ಕಾಯಕನಿಷ್ಠೆ, ಈಶ್ವರ ಧ್ಯಾನ ಮುಂತಾದವುಗಳನ್ನು ನಿಯಮನಿಷ್ಠೆಯೊಡನೆ ಆಚರಿಸಿದರೆ ಮಾತ್ರ ಸಾಧ್ಯ. ಜೀವನದಲ್ಲಿ ಜಯಪಡೆದು ಸುಖ-ಸಾಗರದಲ್ಲಿ ತೇಲಬೇಕಾದರೆ ಶಿಸ್ತು-ಸಂಯಮಗಳೇ ಮುತ್ತು ರತ್ನಗಳು" ಎಂದು ಹೇಳಿದ ಗುರುಗಳ ಮಾತು ಚೇತೋಹಾರಿಯಾಗಿವೆ.

ಜಾತ್ಯಾತೀತ ಸಮಾಜವನ್ನು ನಿರ್ಮಿಸಲು ಹೊರಟ ನಾವು ಇನ್ನೂ ಪ್ರಾರಂಭದ ಹಂತದಲ್ಲಿರುವವು. ಕಾರಣ ನಾವೆಲ್ಲರೂ ಒಂದೇ ಎಂಬ ಮನೋಭಾವವನ್ನು ತಂದು

ಕೊಂಡಿಲ್ಲ. ಸಂಕುಚಿತ ಮನೋಭಾವದ ತಿರುಗುಣಿಯಲ್ಲಿ ತಿರುಗುತ್ತಿದ್ದೇವೆ. ಬಸವಣ್ಣ ಮಹಾತ್ಮ ಗಾಂಧೀಜಿಯವರೂ ಜಾತ್ಯಾತೀತ ಸಮಾಜದ ಕನಸು ನನಸಾಗಿಲ್ಲ.'ಅಸ್ಪೃಶ್ಯತೆಯ ಅಂಟುರೋಗವನ್ನು ನಿವಾರಣೆ ಮಾಡಲು ನಿಷ್ಕಲ್ಮಷ ಪ್ರೇಮವೇ ದಿವ್ಯೌಷದ' ಎಂಬ ಮಾತು ಗಮನೀಯವಾದುದು. ಮಾನವ ಹುಟ್ಟಿನೊಂದಿಗೆ ಜಾತಿಯ ಪಟ್ಟಿಯನ್ನು ಕಟ್ಟಿಕೊಂಡು ಬಂದಿರುವದಿಲ್ಲ ಹೊರತು ಜಾತಿಯ ಹಣೆಪಟ್ಟಿಯನ್ನು ಹಚ್ಚುವವರು ನಾವೇ. ಬಸವಣ್ಣನವರ "ಕೊಲ್ಲುವವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ ಕುಲವೇನೋ ಆವಂದಿರ ಕುಲವೇನೋ ನಮ್ಮ ಕೂಡಲಸಂಗಮ ಶರಣರು ಕುಲಜರು"ಎಂಬ ಮಾತು ಅರ್ಥಪೂರ್ಣವಾಗಿದೆ. ಜಾತೀಯತೆಯ ಜಾಡ್ಯನ್ನು ತೊರೆದು ಸುಂದರ ಸಮಾಜ ವನ್ನು ನಿರ್ಮಿಸುವ ಗುರುತರ ಹೊಣೆ ನಮ್ಮೆಲ್ಲರ ಮೇಲಿದೆ ಎಂಬ ಎಚ್ಚರಿಕೆಯನ್ನು ಕೊಟ್ಟಿ ರುವವರು ಶ್ರೀಗಳವರು. ವಿಭಿನ್ನ ಸಂಸ್ಕೃತಿಗಳನ್ನೊಳಗೊಂಡ ನಮ್ಮ ರಾಷ್ಟ್ರ ಬೃಹದ್ ರಾಷ್ಟ್ರ ವಾಗಿ ಸರ್ವಾಂದದಿಂದ ಬೆಳೆಯಬೇಕಾದರೆ ಭಾವೈಕ್ಯತೆಯನ್ನು ಸಾಧಿಸಬೇಕೆಂಬುದರ ಬಗೆಗೆ "ಭಾರತದ ಭಾವೈಕ್ಯತೆಯನ್ನು ಸಾಧಿಸುವಲ್ಲಿ ಸರ್ವಧರ್ಮ ಸಮನ್ವಯ ತತ್ವಗಳನ್ನು ಅನು ಸರಿಸಬೇಕು. ವಿಜ್ಞಾನದ ಸಂಶೋಧನೆಗಳು ಜಾಣ್ಮೆಯಿಂದ ಜಿಜ್ಞಾಸುಗಳು ಅನುಭವಾ ಮೃತಕ್ಕೆ ಮಾರು ಹೋಗಬೇಕೆ ವಿನಃ ಸ್ವೈರ ಪ್ರವೃತ್ತಿಗಿಳಿಯಬಾರದು. ನಮ್ಮ ರಾಷ್ಟ್ರದಲ್ಲಿ ತಾಂತ್ರಿಕ ಕ್ರಾಂತಿಯಾಗಬೇಕು. ನಮ್ಮ ವ್ಯಾಪಾರದ್ಯೋಮಗಳು ಬೆಳೆಯಬೇಕು. ಒಕ್ಕಲು ತನ ಉತ್ಪಾದನೆ ಹೆಚ್ಚಬೇಕು....ಇವೆಲ್ಲ ನೀತಿಯ ನೆಲೆಗಟ್ಟಿನ ಮೇಲೆ ನಡೆಯಬೇಕು.... ಭಾರತೀಯರೆಲ್ಲರೂ ಭಾರತವೇ ನಮ್ಮ ಅಂತರಾತ್ಮ ಎಂದು ಬಗೆದು, ಭಾರತದ ಪ್ರಗತಿಯೇ ನಮ್ಮ ಪ್ರಗತಿ, ಭಾವೈಕ್ಯತೆಯೇ ನಮ್ಮ ಶಕ್ತಿ–ಸಾಹಸದ ದ್ಯೋತಕ ಎಂದು ನಾಡಿನಾಡಿ ಯಲ್ಲಿ ಆ ಶಕ್ತಿ ಚಿಮ್ಮುವಂತೆ ನಡೆದುಕೊಳ್ಳುವ ಹೊಣೆ ಹೊತ್ತುಕೊಳ್ಳಬೇಕು" ಹೇಳಿದ ಅನುಭವ ಪೂರ್ಣ ಮಾತುಗಳು ನಮಗೆಲ್ಲ ಮಾರ್ಗದರ್ಶಿಯಾಗಿದೆ. ಇದೇ ರೀತಿ ಪ್ರಾದೇಶಿಕ ಭಾಷೆಯ ಜೊತೆ ಇತರ ಸೋದರ ಭಾಷೆಗಳ ಬಗೆಗೆ ಆದರ ಗೌರವಗಳನ್ನಿಟ್ಟು ಕೊಂಡರೆ ಭಾವೈಕ್ಯದ ಪ್ರಜ್ಞೆ ಬೆಳೆಯಲು ಸಾಧ್ಯ.

'ನ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ' ಎಂಬ ವೇದಕಾಲದ ಮಾತನ್ನು ಒಪ್ಪದ ಬಸವಣ್ಣನ ವರು ಸ್ತ್ರೀಗೆ ಧಾರ್ಮಿಕ, ಸಾಹಿತ್ಯಕ, ರಾಜಕೀಯ,ಸಾಮಾಜಿಕ ರಂಗಗಳಲ್ಲಿ ಸಮಾನತೆಯನ್ನು ಕಲ್ಪಿಸಿ ಕೊಟ್ಟು ಸ್ತ್ರೀಯೂ ಪುರುಷನಷ್ಟೇ ಸಮರ್ಥಳಾಗಿ ಸಮಸ್ಯೆಗಳನ್ನು ಎದುರಿಸಬಲ್ಲಳು; ಮೌಲ್ಯಾಧಾರಿತ ಸಮಾಜವನ್ನು ಕಟ್ಟಬಲ್ಲಳು ಎಂಬುದನ್ನು ತೋರಿಸಿಕೊಟ್ಟರು. ಇದಕ್ಕೆ ಸಾಕ್ಷಿಯೆಂಬಂತೆ ಇತಿಹಾಸದ ಪುಟಗಳನ್ನು ತಿರುವಿದಾಗ ಕಿತ್ತೂರ ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ಝಾಂಸಿ ಲಕ್ಷ್ಮಿಬಾಯಿ ಮುಂತಾದ ವೀರ ಮಹಿಳೆಯರು ಮತ್ತು ಇಹ ದಲ್ಲಿ ಪರವನ್ನು ಗೆದ್ದುಕೊಂಡಂಥ ಅಕ್ಕಮಹಾದೇವಿ ಮೀರಾಬಾಯಿ ಮುಂತಾದವರ ಹೆಸರುಗಳು ಎದ್ದು ಕಾಣುತ್ತವೆ. ಈ ಉನ್ನತ ಪ್ರಗತಿಗೆ ಅವರು ಬೆಳೆದ ಪರಿಸರ, ಸಂಸ್ಕೃತಿ, ಶಿಕ್ಷಣ ಕಾರಣ. ಸ್ತ್ರೀ ಶಿಕ್ಷಣ ಎಂಬ ವಿಷಯದ ವಿವೇಚನೆಯಲ್ಲಿ ಈ ಎಲ್ಲ ಅಂಶಗಳನ್ನು

ತಿಳಿಸುತ್ತಾ ಸ್ವಾಮಿ ವಿವೇಕಾನಂದರು ಸ್ತ್ರೀ ಕುರಿತು ಹೇಳಿದಂಥ "Where women are respected there the Gods delight; and where they are not, there all works and efforts come to naught" ಮಾತಿನೊಂದಿಗೆ ಸ್ತ್ರೀಯನ್ನು ಗೌರವ ಭಾವದಿಂದ ಕಾಣಬೇಕು. ಸಮಾನತೆಯನ್ನು ಕಲ್ಪಿಸಿಕೊಡಬೇಕು ಎಂಬ ಅಂಶ ಗಳನ್ನು ಗಮನಕ್ಕೆ ತಂದಿರುವರು.

ವಿದ್ಯೆಯೇ ವಿಜ್ಞಾನಯುಗದ ಕಣ್ಣು. 'ವಿದ್ಯೆ' ಮಾನವನನ್ನು ಪರಿಪೂರ್ಣದತ್ತ ಸಾಗಿಸುತ್ತದೆ ಎಂಬ ವಿಚಾರವನ್ನು, "ವಿದ್ಯೆಯು ಮಾನವೀಯತೆಯನ್ನು ಕಲಿಸುತ್ತದೆ. ಮಾನವನನ್ನಾಗಿ ಮಾಡುತ್ತದೆ. ಸಾಂಸ್ಕೃತಿಕ ಪರಂಪರೆಯ ಬಾಗಿಲನ್ನು ತೆರೆಯುತ್ತದೆ. ಆತ್ಮಕ್ಕೆ ಶಾಂತಿಯನ್ನು ಒದಗಿಸುತ್ತದೆ" ಶ್ರೀಗಳವರು 'ವಿದ್ಯೆಗೆ ವಿನಯವೇ ಭೂಷಣ, ಲೇಖನದಲ್ಲಿ ಪ್ರಸ್ತಾಪಿಸಿರುವರು. 'ಸದು ವಿನಯವೇ ಸದಾಶಿವನೊಲುಮೆ' ಎಂಬಂತೆ ವಿನಯಪೂರಿತ ವಿದ್ಯೆ, ಅರ್ಥಪೂರ್ಣ ಮತ್ತು ಯಶಸ್ಸನ್ನು ತರಬಲ್ಲದು.

ಸಕಲ ಜೀವಾತ್ಮರಿಗೆ ಲೇಸನೆ ಬಯಸಿದ ಬಸವಣ್ಣ, ಬುದ್ಧ, ಕ್ರೈಸ್ತ, ಗಾಂಧೀಜಿ ಮುಂತಾದ ಮಹಾಪುರುಷರು ದಯೆ, ಕರುಣೆ, ಅನುಕಂಪಗಳ ಸಾಕಾರ ಮೂರ್ತಿಗಳಾಗಿದ್ದರು. ಇಂಥ ಶ್ರೇಷ್ಠಗುಣಗಳನ್ನು ನಾವೆಲ್ಲ ಅಳವಡಿಸಿಕೊಂಡು ಜೀವನವನ್ನು ಸಾಫಲ್ಯಗೊಳಿಸುವಲ್ಲಿ ಪ್ರಯತ್ನಿಸಬೇಕೆಂಬ ಮಾತನ್ನು "ರಸವಿದ್ದ ಹಣ್ಣು, ಸುಂದರ ಅದರಂತೆ ಕರುಣಾಸರ ಭರಿತ ಜೀವನ ಸುಂದರ ಹಾಗೂ ಬಂಧುರ"; "ಕಾರುಣ್ಯಕಿರಣವು ಬಾಳ ಬೆಳಕಿಗೆ ಮೂಲ ಕಿರಣ. ಆತ್ಮ ಸಂವರ್ಧನೆ ಮೂಲ ಸಾಧನ, ದುಃಖ ನಿವಾರಣೆ ಅಮೃತ ಬಿಂದು" ಈ ಉದಾತ್ತ ಹೇಳಿಕೆಯೊಂದಿಗೆ ಎಚ್ಚರಿಸಿದ್ದಾರೆ ಶ್ರೀಗಳವರು. ಇದರಂತೆ ಮಾನವ ವಿಶ್ವಮಾನವನಾಗುವ ಮೊದಲು ಮಾನವೀಯತೆಯ ಅರಿವನ್ನು ಜಾಗ್ರತಗೊಳಿಸಿಕೊಳ್ಳಬೇಕು ಎಂಬುದನ್ನು "ಭಾರತೀಯತೆ, ವಿಶ್ವಮಾನವತೆ ಬರಲು ಮಾನವೀಯತೆಯೇ ಮೊದಲ ಮೆಟ್ಟಿಲು" ಹೇಳಿಕೆಯೊಂದಿಗೆ ಸ್ಪಷ್ಟಪಡಿಸಿರುವರು.

ಮಾನವ ಸೃಷ್ಟಿಯ ರಹಸ್ಯವನ್ನು ಭೇದಿಸಿದ್ದರೂ ಮಾನವ ಮಾನವನಾಗಿ ಬೆಳೆದಿಲ್ಲ; ಮಾನವ ಅಸಮಾಧಾನ, ಅಶಾಂತಿಯಿಂದ ಪರಿತಪಿಸುತ್ತಿರುವನು ಎಂಬ ವಿಷಯವಾಗಿ ಜಗದ್ಗುರುಗಳವರು ಸ್ವತಃ ತಾವೇ ರಚಿಸಿದ ವಚನವೊಂದರಲ್ಲಿ ಹೀಗೆ ನಿರೂಪಿಸಿರುವರು.

"ಮೋಹದ ಕಾಳ್ಗಿಚ್ಚಿನಲ್ಲಿ ಬಿದ್ದು ಪಂಚೇಂದ್ರಿಯಂಗಳು
ಕಳವಳಿಸುತಿಹವು ನೋಡಾ! ಸಂಮೋಹ ಭೂತವು ಬೆಂಬತ್ತಿ
ದಟ್ಟಡವಿಗೆ ದಬ್ಬುತ್ತಿಹುದು ನೋಡಾ! ವ್ಯಾಮೋಹ ಶಾರ್ದೂಲವು
ಬಾಯ್‌ದೆರೆದು ನಿಂತು ನುಣ್ಣನ್ನು ಬಾಳನ್ನು ನುಂಗುತ್ತಿಹುದು ನೋಡಾ!
ಇದು ಕಾರಣ ಬಂದ ಕ್ಲೇಶಂಗಳನಳಿಸಿ ಎನ್ನನುಳುಹಿಕೊಳ್ಳಾ
ಭ್ರೂಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ."

ಕವಿ ಹೃದಯವುಳ್ಳ ಗುರುಗಳವರು ಸೂತ್ರರೂಪವಾಗಿರುವ ಅವರ ವಚನದಲ್ಲಿ ಸಂಸಾರದ

ವಿಷಮತೆಯ ಬಗೆಗೆ ವಿವರಿಸಿ, ಈ ವಿಷಮತೆಯ ಮಡುವಿನಿಂದ ಸರ್ವರನ್ನೂ ಪಾರಾಗಿಸು ವಂತೆ ಆರಾಧ್ಯ ಗುರುವಿನಲ್ಲಿ ಮೊರೆ ಇಟ್ಟಿದ್ದಾರೆ. ನಿಜಗುಣರ

"ಧರೆಯೊಳತ್ಯಧಿಕವೆನಿಪ ಶಾಂತಿ ಮತವನು
ಕರುಣ ವಿದ್ಯೆಗಳುಳ್ಳ ಗುರುಭಜನೆಯನು
ಪರತರ ಮುಕುತಿ ದೋರುವ ಶಾಸ್ತ್ರವನು ಕಂಡು
ಹರಶಂಭುಲಿಂಗ ನಿಮ್ಮಡಿಯ ಭಕ್ತಿಯನು"

ಈ ಶಾಂತಿ ಮಂತ್ರವು ನಮಗೆಲ್ಲ ಬಾಳ್‌ದೀವಿಗೆಯಾಗಬಲ್ಲದು ಎಂಬುದರ ಸೂಚನೆಯನ್ನು ಕೊಟ್ಟಿರುವರು.

ಈ ತೆರನಾಗಿ ಜಗದ್ಗುರುಗಳವರು ಆಶೀರ್ವಾಣಿ ಸಂಪುಟಗಳೆರಡರಲ್ಲಿ ಹಿತನುಡಿ, ಉಪದೇಶ, ಸಂದೇಶಗಳನ್ನೂ ತಮ್ಮ ಚತುರ್ಭಾಷಾ ಪಾಂಡಿತ್ಯದ ಮೂಲಕ ವ್ಯಕ್ತಪಡಿಸಿರುವುದು ಅವರ ಆಳವಾದ ಅಧ್ಯಯನಕ್ಕೆ ಸಾಕ್ಷಿ. ಪ್ರಸ್ತುತ ಆಶೀರ್ವಾಣಿಯು ವಿಚಾರವಾಹಿನಿಯೂ ಅಹುದು ಎಂಬ ಮಾತನ್ನು ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು "ಆಶೀರ್ವಾಣಿ ಸಂಗ್ರಹಗಳೆರಡರಲ್ಲೂ ಜಗದ್ಗುರುಗಳವರ ಉಪನ್ಯಾಸ ವಿಚಾರ ವಿನ್ಯಾಸವನ್ನು ಕಾಣುತ್ತೇವೆ. ನಮ್ಮ ಸನಾತನ ಧರ್ಮದ ಶಕ್ತಿಯುತವಾದ ಶ್ರೀಮಂತ ಪರಂಪರೆಯನ್ನು ಸಕ್ರಿಯಾತ್ಮಕವಾಗಿ ಅರಗಿಸಿಕೊಂಡ ಜಗದ್ಗುರುಗಳವರ ಆಧುನಿಕ ದೃಷ್ಟಿ ಇಂದಿನ-ವಿಚಾರವಂತರನ್ನು ಮುಟ್ಟಬಲ್ಲದು" ಹೇಳಿಕೆಯೊಂದಿಗೆ ಸ್ಪಷ್ಟಪಡಿಸಿರುವರು. ಸನಾತನ ಧರ್ಮ ವಿಚಾರಿಗಳಾದ ಶ್ರೀಗಳವರು ಆಧುನಿಕ ದೃಷ್ಟಿಯನ್ನು ಗಮನದಲ್ಲಿರಿಸಿಕೊಂಡು ಸಮಕಾಲೀನ ಸಮಾಜದ ಅಭ್ಯುದಯದ ಆವಶ್ಯಕತೆಗಳನ್ನು ಅರಿತು ಅನುಭವ ಪೂರ್ಣ ವಿಚಾರಗಳನ್ನು ಮಂಡಿಸಿ ಬದುಕಿಗೆ ಹೊಸ ಆಯಾಮ ಕಲ್ಪಿಸಿಕೊಟ್ಟಿರುವರು. ನಮ್ಮದು ಜಾತ್ಯಾತೀತ ಸಮಾಜ, ಸರ್ವಧರ್ಮಗಳ ಬೀಡು ನಮ್ಮ ಭಾರತ ಎಂಬ ಬರೀ ಒಣ ಮಾತುಗಳನ್ನು ಹೇಳದೆ ಇವುಗಳನ್ನು ಕಾರ್ಯರೂಪದಲ್ಲಿ ತಂದು ವಿಶ್ವಪ್ರೇಮ, ವಿಶ್ವಶಾಂತಿಯನ್ನು ಸ್ಥಾಪಿಸುವಲ್ಲಿ ಪ್ರವೃತ್ತರಾಗಬೇಕೆಂಬ ಕಳಕಳಿಯ ಹಿತನುಡಿಯನಾಡಿರುವರು.

ಜಗದ್ಗುರುಗಳವರ ಷಷ್ಟ್ಯಬ್ದಿ ಸಮಾರಂಭದ ಅಂಗವಾಗಿ ಅವರನ್ನು ಅಭಿನಂದನ ಮಹಾಸಂಪುಟಗಳ ಮುಖೇನ ಭಕ್ತಿ, ನಮನಗಳನ್ನು ಅರ್ಪಿಸುವುದು ನಮ್ಮೆಲ್ಲರ ಪುಣ್ಯ ವಿಶೇಷ. ಈ ಅಭಿನಂದನ ಮೂರು ಮಹಾಸಂಪುಟಗಳ ಸಂಪಾದನೆಯ ಮಹತ್ಕಾರ್ಯವನ್ನು ವಹಿಸಿಕೊಂಡಿರುವ ಪ್ರೊ. ಜಿ. ಎಚ್. ಹನ್ನೆರಡುಮಠ ಅವರು ಅಭಿನಂದನಾರ್ಹರು. ಜಗದ್ಗುರುಗಳವರ ಸಾಹಿತ್ಯ ಸೇವೆ ಅವ್ಯಾಹತವಾಗಿ ಮುಂದುವರೆಯಲಿ ಮತ್ತು ಆ ಜಗದೊಡೆಯ ಶ್ರೀಗಳವರಿಗೆ ಆಯುರಾರೋಗ್ಯ ದಯಪಾಲಿಸಲಿ ಎಂದು ಪ್ರಾರ್ಥಿಸುವೆ.

# "ಆಶೀರ್ವಾಣಿ"ಯಲ್ಲಿ ಮೂಡಿಬಂದ ಮೂಜಗಂ ಅವರ ರಸವಾಣಿ

ನೆಹರೂ ಕಾಲೇಜ ಹುಬ್ಬಳ್ಳಿ

ಪ್ರೊ. ಸಿ. ಪಿ. ಹೇಮಗಿರಿಮಠ

ಕರ್ನಾಟಕದ ಅಗ್ರಗಣ್ಯ ವೀರಶೈವ ಧರ್ಮಪೀಠಗಳಲ್ಲಿ ಒಂದು ಹುಬ್ಬಳ್ಳಿಯ ಶ್ರೀಜಗದ್ಗುರು ಮೂರುಸಾವಿರಮಠ. ಪ್ರಾಚೀನ ಪರಂಪರೆಯ ಈ ಧರ್ಮಪೀಠದ ಧರ್ಮಾಧಿಕಾರಿಗಳಾದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಜ್ಞಾನ, ಕ್ರಿಯೆ ಮತ್ತು ಯೋಗದ ತ್ರಿವೇಣಿ ಸಂಗಮವಾಗಿದ್ದಾರೆ. 'ಶಿವಯೋಗ ಮಂದಿರ' ಮತ್ತು 'ಕಾಶಿ'ಯ ಜ್ಞಾನ ಮಂದಿರಗಳಲ್ಲಿ ಓದಿ ಬಂದಿರುವ ಶ್ರೀಯವರ ಬೌದ್ಧಿಕ ಸ್ತರ ಆಳವಾಗಿದೆ. ದೃಷ್ಟಿ ಬಿತ್ತರವಾಗಿದೆ. ಮುಮುಕ್ಷುಗಳೊಡನಾದ ಒಡನಾಟ ಅವರ ವ್ಯಕ್ತಿತ್ವವನ್ನು ಎತ್ತರವಾಗಿಸಿದೆ. ಅನುಭವ, ಅನುಭಾವ ಗಹನ ಗಂಭೀರವಾಗಿದೆ. ಶ್ರೀಮಂತ ಪರಂಪರೆಯ ಜಂಗಮ ಪೀಠ ಸರ್ವಾಂಗ ಸುಂದರ ವ್ಯಕ್ತಿತ್ವದ ಶ್ರೀಯವರನ್ನು ಪಡೆದು ಧನ್ಯವಾಗಿದೆ. ಸಾಹಿತ್ಯ, ಸಂಗೀತ ಮೊದಲಾದ ಲಲಿತಕಲೆಗಳೇ ಆಗಲಿ ಧರ್ಮ ಜಿಜ್ಞಾಸೆ, ತತ್ವ ಮೀಮಾಂಸೆ ಮೊದಲಾದ ವಿಷಯಗಳೇ ಆಗಲಿ, ಯೋಗಾದಿ ಅನುಷ್ಠಾನಗಳೇ ಏಕಾಗಿರಲಿ ವ್ಯಕ್ತಿತ್ವ ವಿಕಸನಕ್ಕಿರುವ ಹಲವು ಮಾರ್ಗಗಳು. ಇವುಗಳಲ್ಲಿ ಒಂದೊಂದನ್ನೆ ಹಿಡಿದು ಸಾಧಿಸಿ ಸಾರ್ಥಕ್ಯಪಡೆಯುವದೇ ವಿರಳವಾಗಿರುವಾಗ ಎಲ್ಲವನ್ನೂ ಮೇಳೈಸಿಕೊಂಡು ಆತ್ಮೋದ್ಧಾರದ ಜತೆ ಜತೆಗೇ ಲೋಕೋದ್ಧಾರದಂಥ ಮಹತ್ಕಾರ್ಯವನ್ನೂ ಕೈಗೆತ್ತಿಕೊಂಡು ವಿಶ್ವಪ್ರೇಮಿಯಾಗಿ ಸಕಲ ಜೀವಾತ್ಮರಿಗೆ ಲೇಸನೇ ಬಯಸುವವರು ವಿರಳರಲ್ಲಿ ವಿರಳರು, ಅವರಲ್ಲಿ ಸಮ್ಮಿಳಿತರು ಶ್ರೀ ಸನ್ನಿಧಿಯವರು. ಅದಕ್ಕೆ ದೃಷ್ಟಾಂತ ಅವರ 'ಆಶೀರ್ವಾಣಿ' ಸಂದೇಶಗಳ ಎರಡು ಸಂಪುಟಗಳು. ವಿವೇಚನೆ ಲೇಖನದ ಉದ್ದೇಶ.

ಕಾಲಕಾಲಕ್ಕೆ ಸಂದರ್ಭೋಚಿತವಾಗಿ ಶ್ರೀಯವರಿತ್ತ ಭಾಷಣಗಳ ಸಂಕಲನಗಳು ಇವಾಗಿದ್ದರೂ ವಿಷಯ ವೈವಿಧ್ಯತೆ,ಸೂಕ್ಷ್ಮ ಸಂವೇದನಾಶೀಲತೆ, ಅಭ್ಯಾಸ ಶೀಲತೆ, ಚಿಂತನ-ಮಂಥನ ಗಳಿಂದಾಗಿ ಆಧ್ಯಾತ್ಮಿಕ ಹಿನ್ನಲೆ, ವೈಜ್ಞಾನಿಕ ದೃಷ್ಟಿಕೋನ ಮತ್ತು ಸರಳ ಸುಂದರ ನಿರೂಪಣಾ ಶೈಲಿಯಿಂದಾಗಿ; ಮನೋಜ್ಞವಾಗಿವೆ. ನಾನೃಷಿ ಕುರುತೇ ಕಾವ್ಯಂ ಎನ್ನುವ ಆರ್ಷೇಯ ವಾಣಿಯಂತೆ ಶ್ರೀಯವರ ಈ ಆಶೀರ್ವಾಣಿಗಳಲ್ಲಿ ನಾವು, ಅವರು ತಮ್ಮ ದಾರ್ಶನಿಕ ಕವಿದೃಷ್ಟಿಯಲ್ಲಿ ವಿಷಯ ವಿವೇಚನೆ ಮಾಡುವದನ್ನು ನೋಡುತ್ತೇವೆ. ನನ್ನ ಈ ಎಲ್ಲ ಮಾತುಗಳಿಗೂ ನಾನು ಅವರು ತಮ್ಮ ಮಾತು ಜ್ಯೋತಿರ್ಲಿಂಗ ಮಾಡಿ ಮಂಡಿಸಿದ ಭಾಷಣಗಳಿಂದಾಯ್ದು ಮುಂದೆ ಕೊಡಲಿದ್ದೇನೆ. ಇದು ಪೂರ್ವ ಪೀಠಿಕೆ.

ಎರಡು ಭಾಗಗಳಲ್ಲಿ ಸುಮಾರು ನಾಲ್ಕುನೂರು ಪುಟಕ್ಕೂ ಮಿಕ್ಕಿ ಎಂಭತ್ತಕ್ಕೂ ಮಿಕ್ಕಿದ ಶಿರೋನಾಮೆಯ ವಿವಿಧ ವಿಷಯವ್ಯಾಪ್ತಿಯ ನೇರ ನಿರೂಪಣೆಯನ್ನು ಹಿಡಿದಿಡಲಾಗಿರುವ ಈ ಎರಡು ಸಂಕಲಗಳನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿ ತಿಕ್ಕಿ ನೋಡುವ ಕೆಲಸವನ್ನು ನನ್ನ ಪಾಲಿಗಿತ್ತಿದ್ದಾರೆ; ಸಂಪಾದಕರು! ಶ್ರೀಯವರು ಕೇವಲ ಸಾಹಿತಿಗಳಲ್ಲ; ಶರಣ ಸಾಹಿತಿಗಳು. ಶರಣರೊಡನೆ ಸರಸ ಸಲ್ಲದೆನ್ನುತ್ತದೆ ಶರಣಧರ್ಮ. ಆ ಧಾರ್ಮಿಕ ಹಿನ್ನೆಲೆಯಲ್ಲಿ ವೀರಶೈವದ ಪರಿಭಾಷೆಯಲ್ಲಿ ಈ ಆಶೀರ್ವಾಣಿಗಳ ಮೌಲಿಕ ವಿವೇಚನೆ ನಡೆಯಬೇಕಾಗಿದೆ. ಕಾಲದ ಹರಹು ಎರಡು ದಶಕಕ್ಕೂ ಮಿಕ್ಕಿದೆ. ಅದು ಕೂಡ ಇಲ್ಲಿ ಲೆಕ್ಕವಾಗಬೇಕು.

೧೯೫೮ ರಿಂದ ೧೯೭೦ರ ವರೆಗೆ ಶಿವಯೋಗ ಮಂದಿರದ ಸಾಧಕರನ್ನುದ್ದೇಶಿಸಿ ಮಾಡಿದ ಭಾಷಣದಿಂದ ಹಿಡಿದು ವಿವಿಧ ಸಂದರ್ಭಗಳಲ್ಲಿ ಸಾಮಾಜಿಕ, ಧಾರ್ಮಿಕ, ವೈಚಾರಿಕ, ತಾತ್ವಿಕ, ಚಾರಿತ್ರಿಕ ವಿಷಯಗಳನ್ನೆತ್ತಿಕೊಂಡು ಉದಾಹರಣೆಗೆ: ಜಾತೀಯತೆಯ ಐಕ್ಯ, ಸರ್ವಧರ್ಮಸಮನ್ವಯ ದೃಷ್ಟಿ ಷಟ್‌ಸ್ಥಲ ವಿವೇಚನೆ, ಬಸವಣ್ಣನವರ ವಚನಗಳಲ್ಲಿ ಧರ್ಮ ಮತ್ತು ಭಕ್ತಿ, ಗಾಂಧೀಜಿ ದೃಷ್ಟಿಯಲ್ಲಿ ಮಾನವ ಮತ್ತು ಆತನ ಸಂಪತ್ತು ಇವುಗಳ ಸಂಬಂಧ, ಸ್ತ್ರೀಶಿಕ್ಷಣ, ಜಾಗತಿಕ ಶಾಂತಿಗೆ ವೀರಶೈವದ ಕೊಡುಗೆ, ಗೀತೆಯ ಒಳಗುಟ್ಟು, ಶೀಲವೇ ಧರ್ಮ, ರಾಮಕೃಷ್ಣ ಪರಮಹಂಸರು, ಭಗವಾನ್ ಬುದ್ಧ ಮೊದಲಾಗಿ ಶ್ರೀಯವರು ಮಾಡಿದ ಭಾಷಣಗಳು, ರೇಡಿಯೋ ಸಂದೇಶಗಳು, ವಿಚಾರ ದೀಪ್ತಿ, ವಿಶೇಷ ಉಪನ್ಯಾಸಗಳನ್ನು ಸಂಗ್ರಹಿಸಿದ್ದಾರೆ. ಇಳಕಲ್ಲಿನ ಚಿತ್ತರಗಿ ಸಂಸ್ಥಾನ ಮಠಾಧಿಪತಿಗಳಾದ ಶ್ರೀ ಮ. ನಿ. ಪ್ರ. ಸವದಿ ಮಹಾಂತಸ್ವಾಮಿಗಳವರು ಗ್ರಂಥಕ್ಕೆ ಮುನ್ನುಡಿ ಬರೆಯುತ್ತ ಕನ್ನಡನಾಡಿನ ಖ್ಯಾತ ವಿದ್ವಾಂಸರೆನಿಸಿದ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು ವ್ಯಕ್ತಪಡಿಸಿದಂತೆ ಇಲ್ಲಿನ ಭಾಷಣಗಳಲ್ಲಿ ಅಧ್ಯಯನ, ಚಿಂತನ, ನಿರೂಪಣಾ ಸಾಮರ್ಥ್ಯಗಳು ಮುಪ್ಪುರಿಗೊಂಡಿವೆ. ಭಾಷೆ ಸರಳವಾಗಿದೆ; ಅರ್ಥಪೂರ್ಣವಾಗಿದೆ. ನೇರವಾಗಿ ಮನಮುಟ್ಟುವಂತಿದೆ. ಸೂತ್ರರೂಪವಾದ ಅನೇಕ ಮಾತುಗಳು ಮತ್ತೆ ಮತ್ತೆ ಮನನ ಮಾಡುವಂತಿವೆ.

ಶ್ರೀಯವರು ಕನ್ನಡ ಭಾಷೆ ಮಾತ್ರವಲ್ಲದೇ ಸಂಸ್ಕೃತ, ಹಿಂದೀ ಮತ್ತು ಇಂಗ್ಲೀಷ ಭಾಷೆಗಳಲ್ಲಿ ಬಲ್ಲಿದರಾಗಿರುವದೂ ಅವರ ಶೈಲಿಗೆ ಒಂದು ಸೊಗಡು ತಂದಿತ್ತಿದೆ. ತಮ್ಮ ಕನ್ನಡ ಭಾಷಣದಲ್ಲಿ ಸಂಸ್ಕೃತ ಶ್ಲೋಕಗಳನ್ನು ಕಬೀರ, ನಾನಕ ಮತ್ತು ತುಳಸೀದಾಸರಂಥ ಸಂತಶ್ರೇಷ್ಠರ ಹಿಂದೀ, ಉರ್ದು ಮಿಶ್ರಿತ 'ದೋಹೆ'ಗಳನ್ನು ಜಗತ್ ಪ್ರಸಿದ್ಧ ತತ್ವಜ್ಞಾನಿಗಳ, ವೈಚಾರಿಕರ ಇಂಗ್ಲೀಷ ಅವತರಣಿಕೆಗಳನ್ನು ಅಲ್ಲಿಗಲ್ಲಿಗೆ ಸಂದರ್ಭೋಚಿತವಾಗಿ ಉಪಯೋಗಿಸುತ್ತ ನಿರರ್ಗಳವಾಗಿ ಮಾತನಾಡುವ ಭಾಷಣ ವೈಖರಿ ಅವರ ಬಹು ಭಾಷಾ ಪಾಂಡಿತ್ಯಕ್ಕೆ ನಿದರ್ಶನಗಳಾಗಿವೆ. ಅದೇ ರೀತಿಯಲ್ಲಿ ಅವರು ಹಿಂದೀ ಭಾಷೆಯಲ್ಲಿ, ಇಂಗ್ಲೀಷಿನಲ್ಲಿ ಪ್ರತ್ಯೇಕವಾಗಿ ಮಾತನಾಡಿದ ಆಯಾ ಭಾಷೆಗಳ ಭಾಷಣಗಳ ಕನ್ನಡ ಅನುವಾದಗಳನ್ನೂ ಇಲ್ಲಿ ಸೇರಿಸಿ ಸಂಪಾದಕರು ಸುತ್ಯಕಾರ್ಯವನ್ನೇ ಮಾಡಿದ್ದಾರೆ.

ವಿದ್ವತ್‌ಪ್ರಪಂಚವನ್ನು ಎದಿರಿಗಿಟ್ಟುಕೊಂಡು ಭಾಷಣ ಮಾಡುವಾಗ ವಸ್ತು, ವಿಷಯಗಳ ಮಂಡನೆ, ವಿವರಣೆ, ವಿಶ್ಲೇಷಣೆ, ನಿರ್ಣಯ ಇತ್ಯಾದಿಯಾಗಿ ಹಂತ ಹಂತವಾಗಿ ವ್ಯವಸ್ಥಿತ ರೀತಿಯಲ್ಲಿ ಪ್ರಬುದ್ಧ ಭಾಷೆಯಲ್ಲಿ ಒಡಮೂಡಿಬಂದಂತೆ ಶ್ರೀಸಾಮಾನ್ಯರನ್ನು, ಭಕ್ತ ಸಮೂಹವನ್ನು ಉದ್ದೇಶಿಸಿ ಮಾಡಿದ ಭಾಷಣಗಳು ಅಷ್ಟೇ ಸುಲಲಿತವಾಗಿ, ಸರಳ ಸುಂದರ ಶೈಲಿಯಲ್ಲಿ ಲೀಲಾಜಾಲವಾಗಿ ಮೈದಳೆದಿವೆ. ಆಡು ನುಡಿ, ಜಾನಪದದ ಸೊಗಡು ಅಲ್ಲಿಗಲ್ಲಿಗೆ ಶರಣರ ವಚನಗಳು ನುಸುಳಿ ಬಂದಿವೆ. ಸಾಧಕರನ್ನು, ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡುವಾಗ ಉಚ್ಚ ಆದರ್ಶಗಳು, ಧ್ಯೇಯ ಧೋರಣೆಗಳು, ಸಿದ್ಧಾಂತ ಗಳು ವ್ಯಕ್ತಗೊಂಡಿವೆ. ಭಾಷೆ ಕರಾರುವಾಕ್ಕು. ನಾಡವರನ್ನು, ದೇಶಬಾಂಧವರನ್ನು ಕುರಿತು ಸಮಗ್ರ ದೃಷ್ಟಿಕೋನವನ್ನಿಟ್ಟುಕೊಂಡು ಮಾತನಾಡುವಾಗ ದೇಶಭಕ್ತಿ, ರಾಷ್ಟ್ರೀಯ ಭಾವೈಕ್ಯತೆ, ನಾಡು, ನುಡಿ, ಸಂಸ್ಕೃತಿ ಕುರಿತಾದ ಅಭಿಮಾನ, ಸರ್ವಸಮಾನತೆ, ಸ್ವಾತಂತ್ರ್ಯ, ನಾಗರಿಕ ಹಕ್ಕು ಬಾಧ್ಯತೆ, ಕರ್ತವ್ಯಪ್ರಜ್ಞೆ, ವಿಶ್ವಮಾನವತೆ, ವಿಶ್ವಮಾನವತೆಗೆ ಇರಬೇಕಾದ ಧಾರ್ಮಿಕ ತಳಹದಿ ಇತ್ಯಾದಿ ಇತ್ಯಾದಿಯಾಗಿ ಶ್ರೀಗಳ ವಾಗ್ಝರಿ ಪುಂಖಾನು ಪುಂಖವಾಗಿ ಹರಿಯುತ್ತದೆ. ಅವರು ಧಾರವಾಡ, ಬೆಂಗಳೂರು ಮೊದಲಾಗಿ ಆಕಾಶವಾಣಿ ಕೇಂದ್ರಗಳಿಂದ ಮಾಡಿದ ಪ್ರಸಾರ ಭಾಷಣಗಳನ್ನು ವಿಚಾರ ದೀಪಿಕೆಗಳಲ್ಲಿ ಬಾನುಲಿ ಕೇಂದ್ರ ಗಳಿಂದ ವ್ಯಕ್ತಪಡಿಸಿದ ಅಭಿಪ್ರಾಯಗಳಿಗೂ ಅನ್ವಯಿಸಿ ಈ ಮಾತುಗಳನ್ನು ಹೇಳುತ್ತಿ ದ್ದೇನೆ. ಅವರ ನಿರ್ದುಷ್ಟ ವಿಚಾರಸರಣಿ, ಸ್ಪಷ್ಟತೆ, ಖಚಿತತೆ, ನಿಷ್ಠುರತೆ, ಕಳಕಳಿಗಳೆಲ್ಲ ಸುಂದರ ಅಭಿವ್ಯಕ್ತಗೊಂಡಿವೆ. ಚಾರಿತ್ರಿಕ ವ್ಯಕ್ತಿಗಳ, ಧರ್ಮಸಂಸ್ಥಾಪಕರ, ಧರ್ಮೋ ದ್ಧಾರಕರ ಜೀವನ ಚರಿತ್ರೆಗಳನ್ನು ತುಂಬ ವೈಜ್ಞಾನಿಕ ಮನೋಧರ್ಮದಿಂದ, ದೃಷ್ಟಿಕೋನ ದಿಂದ 'ಮೂಜಗಂ' ವಿಶ್ಲೇಷಿಸಿದ್ದಾರೆ. ಅವರ ಜೀವನೋದ್ದೇಶ ಯುಗಮಾನದ ಜನತೆಯ ಆಶೋತ್ತರಗಳಿಗನುಸರಿಸಿ ಹೇಗೆ ರೂಪುಗೊಂಡಿತು; ಅವರ ಸಾಧನೆ, ತಪಸ್ಸು ಯಾವರೀತಿ ಸಿದ್ಧಿಯಲ್ಲಿ ಪರ್ಯವಸಾನಗೊಂಡಿತು; ಅದು ಮುಂದೆ ಹೇಗೆ ಪೂರಕವಾಯಿತು; ಸಾರ್ವಕಾಲಿಕವಾಗಿ ಸರ್ವಮಾನ್ಯವಾಯಿತು ಎಂಬುದರ ವಿವೇಚನೆ ತುಂಬ ಮಾರ್ಮಿಕವಾಗಿ ಅವರು ಮಾಡುತ್ತಾರೆ. ಶ್ರೋತೃಗಳು ಮೆಚ್ಚಿ ತಲೆದೂಗುವಂತೆ ಮಾಡುವ ಮೋಡಿ ಅವರ ಮಾಂತ್ರಿಕವಾದ ಮಾತಿನ ಶೈಲಿಯಲ್ಲಿದೆ. ಕೇವಲ ಭ್ರಮಾಲೋಕದಲ್ಲಿ ವಿಹರಿಸ ಹಚ್ಚದೇ ಕೇಳುಗರನ್ನು ವಾಸ್ತವಿಕ ಪ್ರಜ್ಞೆಗೆ ತಂದಿಳಿಸುವ ಗತ್ತುಗಾರಿಕೆಯೂ ಅವರ ಮಾತಿನಲ್ಲಿದೆ.

ಉದಾಹರಣೆಗೆ ನೋಡಿ ಈ ಕೆಳಗಿನ ಮಾತುಗಳನ್ನು—

"ಮನುಷ್ಯನ ಬೆಲೆ ಅವನ ಚರಿತ್ರದಲ್ಲಿದೆ. ಚರಿತ್ರದಲ್ಲಿಯೇ ಅವನಿಗೆ ಆತ್ಮಬಲದ ಪ್ರಕಾಶ ದೊರಕುತ್ತದೆ."

"ಸಾಹಿತ್ಯಕಾರ ಅಮರ ಜೀವನ ದರ್ಶನದ ಸೃಷ್ಟಿಕರ್ತ. ಅವನು ಸೂಕ್ಷ್ಮದರ್ಶಿ, ತತ್ವದರ್ಶಿ ಮತ್ತು ಸ್ವಯಂ ಪ್ರಜ್ಞೆ."

"ಸೌಂದರ್ಯದರ್ಶನವೇ ಈಶ್ವರನ ಸಾಕ್ಷಾತ್ಕಾರವು. ಅದನ್ನು ಪಡೆಯಲು ಕಲೆಯೊಂದು ಸಾಧನವು". ಕಲೆಗಳು ಸಭ್ಯತೆಗೆ ಮತ್ತು ಸಂಸ್ಕೃತಿಗೆ ಒರೆಗಲ್ಲಾಗಿವೆ.

ನಿಜಗುಣ ಶಿವಯೋಗಿಗಳ ಕುರಿತು ಶ್ರೀಗಳ ವ್ಯಾಖ್ಯಾನ ನೋಡಿ–

"ಆಬಾಲವೃದ್ಧರಿಗಾಯಾಸವಿನಿತಿಲ್ಲದಂತೆ ಸಮ್ಯಕ್‌ಜ್ಞಾನಿಗಳೊಡಂಬಡುವಂತೆ" ಬರೆದ ನಿಜಗುಣರು "ಕಿರಿದರೊಳೆ ಪಿರಿದುಮರ್ಥಮನರಿಯಲ್ ಬಲ್ಲರ್" ಎಂಬ ಯೋಗ್ಯತೆಗೆ ತಕ್ಕಂತೆ ಗದ್ಯ, ಪದ್ಯ, ಗ್ರಂಥ ರಚಿಸಿದರಂತೆ. ಅದಕ್ಕೆಂದು ಅವರನ್ನು ತತ್ವದರ್ಶಿಗಳು, ಮಹಾ ಮೇಧಾವಿಗಳು, ರಸಿಕ ಚಕ್ರವರ್ತಿಗಳು ಎಂದು ಹೃದಯದುಂಬಿ ಕರೆದು ಅರಮನೆಯಿಂದ ಪೂರ್ಣಮನೆಗೆ ತೆರಳಿದ ಪವಿತ್ರ ಮೂರ್ತಿ ಎನ್ನುವಲ್ಲಿ ಏನು ಮೆಚ್ಚಿಗೆಯಿದೆ!

'ಶಿವಾದ್ವೈತ ಶಕ್ತಿ' ಯಂಥ ಗಹನ ಗಂಭೀರ ತತ್ವಚಿಂತನೆ ಮಾಡುತ್ತ—

'ಪರಶಿವ ಬ್ರಹ್ಮವು ಕ್ರಿಯಾಶಕ್ತಿಯಲ್ಲಿ ಬೆರೆತು 'ನಾನು ಸರ್ವಕರ್ತೃವು' ಎಂಬ ಅಭಿಮಾನವನ್ನು ಪಡೆಯಲು 'ಶಕ್ತಿತ್ವ'ವೆನಿಸಿಕೊಳ್ಳುವದು' ಎಂದು ಸೂತ್ರಬದ್ಧಗೊಳಿಸುವದೇ ಆಗಲಿ, ಶಿವಾನುಭವದ ಮಹತಿಯನ್ನು ಕುರಿತು ಮಾತನಾಡುತ್ತ 'ಈ ರೀತಿ ಸಜೀವ ಸಿದ್ಧಾಂತ ಪ್ರತಿಪಾದನೆಯು ಮತ್ತೆಲ್ಲಿಯೂ ಕಾಣುವದಿಲ್ಲ' ಎಂದು ಅನುಭಾವದ ಅಗತ್ಯತೆಗೆ ಒತ್ತು ಕೊಡುವ ಬಸವಣ್ಣನವರ ವಚನವೊಂದನ್ನು ಸಕಾಲಿಕವಾಗಿ ಉದ್ಧರಿಸುವದೇ ಆಗಲಿ, ಅಲ್ಲಿಗಲ್ಲಿಗೆ ಮಾತಿನಲ್ಲಿ ಲೀಲಾಜಾಲವಾಗಿ ನುಸುಳಿ ಬರುವ ಸಂಸ್ಕೃತ ಶ್ಲೋಕಗಳೇ ಆಗಲಿ, ಹಿಂದೀ, ಇಂಗ್ಲೀಷ ಕವಿಗಳು, ತತ್ವವೇತ್ತರು, ದಾರ್ಶನಿಕರು ಮೊದಲಾದವರ ಉದ್ಧರಣೆಗಳಾಗಲಿ ಶ್ರೀಯವರ ಜ್ಞಾನ ಕ್ಷಿತಿಜದ ವಿರಾಟ್‌ದರ್ಶನ ಮಾಡಿಸುತ್ತದೆ.

ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ಚೆನ್ನಬಸವಣ್ಣ, ಮಹಾತ್ಮಾಗಾಂಧೀಜಿ, ಸರ್ವಧರ್ಮಸಮನ್ವಯದೃಷ್ಟಿ, ಧ್ಯಾನಯೋಗ, ಭಗವಾನ್ ಬುದ್ಧ ಮೊದಲಾದ ವೈವಿಧ್ಯಮಯ ವಿಷಯ ಮತ್ತು ವ್ಯಕ್ತಿ, ಶಕ್ತಿ, ತತ್ವಕುರಿತು ಅವರ ನಿರರ್ಗಳ ವಿಚಾರ ಜೋಗದ ಜಲಪಾತದಂತೆ ಧುಮಿಕಿದುದನ್ನು ಕಾಣುತ್ತೇವೆ. ಭಾಷಾ ಪ್ರಬುದ್ಧತೆ, ವೈಚಾರಿಕತೆ ಮತ್ತು ತರ್ಕಬದ್ಧತೆಯನ್ನು ನಾವಲ್ಲಿ ಧಾರಾಳವಾಗಿ ಗುರುತಿಸಬಹುದಾಗಿದೆ. ಸಾಮಾಜಿಕ ಕಳಕಳಿ, ರಾಷ್ಟ್ರೀಯ ಐಕ್ಯತೆ, ವ್ಯಕ್ತಿತ್ವ ವಿಕಾಸ ಕುರಿತಂತೆ ಅಲ್ಲಿಗಲ್ಲಿಗೆ ಸಾಂದರ್ಭಿಕವಾಗಿ ತೆಗೆದ ಉದ್ಗಾರಗಳೂ ವ್ಯಕ್ತಪಡಿಸಿದ ಅಭಿಪ್ರಾಯಗಳೂ ಸ್ಪಷ್ಟವಾಗಿವೆ.

ಬಾಗಲಕೋಟೆಯ ಚರಂತಿಮಠದ ಪ್ರಭುದೇವರು ಸಂಪಾದಿಸಿ ಮೂರುಸಾವಿರ ಮಠದ ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳದಿಂದಲೇ ಪ್ರಕಟಪಡಿಸಿದ ಜಗದ್ಗುರುಗಳ 'ಆಶೀರ್ವಾಣಿ'ಯ ಎರಡನೆಯ ಕಂತು ವಿಷಯ ವ್ಯಾಪ್ತಿಯಲ್ಲಿ, ಅಭಿವ್ಯಕ್ತಿ

ಯಲ್ಲಿ, ಭಾಷಾಪ್ರೌಢಿಮೆಯಲ್ಲಿ ಇನ್ನೂ ಪ್ರಬುದ್ಧವಾಗಿ ಬಂದಿದೆ. ನಾಡಿನ ಖ್ಯಾತ ಕವಿಗಳೂ ವಿದ್ವಾಂಸರೂ ಆಗಿದ್ದ ಡಾ. ಕರ್ಕಿಯವರು ಮುನ್ನುಡಿಯಲ್ಲಿ ಉದ್ಗಾರ ವೆತ್ತಿದಂತೆ—

"ಇಲ್ಲಿನ ವಿಚಾರಕ್ಷೇತ್ರದ ವಿಸ್ತಾರವಂತೂ ಸರಿಯೇ ಸರಿ. ವಿಚಾರಗಳ ನಿರೂಪಣೆಗೆ ಅನುರೂಪವಾದ ಭಾಷಾಶೈಲಿ ಇಲ್ಲಿ ಒಡಗೂಡಿ ಬಂದುದು ಒಂದು ವಿಶೇಷ. ವಿಷಯ ವಿವೇಚನೆಗೆ ತಕ್ಕಂತೆ ಈ ಆಶೀರ್ವಾಣಿಯ ಭಾಷಾಶೈಲಿ ಸುಸ್ಪಷ್ಟವೂ ಬಂಧುರವೂ ಆದ ಗುಣವನೊಳಗೊಂಡಿದೆ. ಸತ್ವಯುಕ್ತವಾಗಿರುವಂತೆ ಸಲ್ಲಲಿತವೂ ಆಗಿದೆ. ಇಲ್ಲಿಯ ಸುವಿಚಾರಗಳ ಹಾಗೂ ಅವುಗಳ ನಿರೂಪಣೆಯ ಸವಿದನಿಯನ್ನೂ ಶುಚಿರುಚಿಯನ್ನೂ ಓದುಗರು ಅನುಭವಿಸಿ ಅರಿಯಬಹುದಾಗಿದೆ."

ಎಂಬ ಮಾತಿಗೆ ನಾನೂ ದನಿಗೂಡಿಸುತ್ತೇನೆ. ನೂರ ಎಪ್ಪತ್ತೊಂದು ಪುಟಗಳ ವ್ಯಾಪ್ತಿಯಲ್ಲಿ ವಿಶ್ವಮಾನವನೆಡೆಗೆ, ಭಾರತ ಹಾಗೂ ವೈವಿಧ್ಯತೆ, ನಾವು ಸಾಧಿಸಿದ ಜೀವನ ಮೌಲ್ಯಗಳು, ರಾಮಚರಿತ ಮಾನಸವು ಚಿತ್ರಿಸುವ ಸಂಸ್ಕೃತಿ, ಪರಿತಪಿಸುತ್ತಿರುವ ಜೀವಿಗೆ ಪರಿಹಾರವುಂಟೇ? ಕುಟುಂಬ ಕಲ್ಯಾಣ, ವಿಶ್ವಮಾನವ ಬಾಪೂಜಿ, ಯೋಗ, ಸಾಧು ಸಂತರ ಸಂದೇಶ, ಭವಿಯು ಭಕ್ತನಾಗುವ ಬಗೆ, ವಿದ್ಯಾರ್ಥಿ ಜೀವನ, ಕರುಣವಿರಲಿ ಜೀವರೊಳು, ಶಿವನಾಟದ ಸವಿಗಂಡ ಗುಂಡಯ್ಯ, ನೈತಿಕ ಜೀವನ, ಮೇದಾರ ಕೇತಯ್ಯ, ಕರ್ನಾಟಕ ರಾಜ್ಯೋತ್ಸವ, ಕಾಲಿದಾಸನ ಉಪಮೆಗಳು, ಅರ್ಥೋಹಿ ಕನ್ಯಾ ಪರಕೀಯ ಏವ, ನವನಾಗರಿಕತೆಯ ನಿರ್ಮಿತಿಯಲ್ಲಿ ನಮ್ಮ ಕರ್ತವ್ಯ ಪ್ರಜ್ಞೆ, ಕನ್ನಡ ಪತ್ರಿಕೋದ್ಯಮದ ಬೆಳವಣಿಗೆ, ಡಾ. ಹೋಮರ್ ಎ. ಜಾಕ್ ಅವರೊಡನೆ, ಜಾನಪದ ದೀಪ್ತಿ ಇತ್ಯಾದಿಯಾಗಿ.

ಮೇಲೆ ಕೇವಲ ಪರಿವಿಡಿ ಎತ್ತಿಡುವ ಕೆಲಸ ಮಾಡಿಲ್ಲ ನಾನು. ಅದು ನನ್ನ ಉದ್ದೇಶವೂ ಅಲ್ಲ. ಶ್ರೀಯವರ ವಾಗ್ವೈಖರಿಗೆ, ಅವರ ಲಾಲಿತ್ಯವೂ ಬಂಧುರವೂ ಆದ ಶೈಲಿಗೆ ವೈಚಾರಿಕ ಪ್ರಖರತೆಗೆ, ವಿಷಯ ಜ್ಞಾನಕ್ಕೆ ಹಿಡಿದ ಕನ್ನಡಿಯೆಂದು ಉದ್ಧರಿಸಿದ್ದೇನಷ್ಟೆ.

ನಿರರ್ಗಳತೆ, ಪಕ್ವತೆ, ನಿರ್ದುಷ್ಟತೆ ಮತ್ತು ಪ್ರಭು ಸಮ್ಮಿತಿ ಇಲ್ಲಿ ಹೆಜ್ಜೆ ಹೆಜ್ಜೆಗೆ ಸುವ್ಯಕ್ತ. ನೇರವಾಗಿ ನಿಷ್ಠುರವಾಗಿ ಸರಳ ಸುಂದರ ಭಾಷೆಯಲ್ಲಿ ಶ್ರೀಗಳು ಇಲ್ಲಿ ತಮ್ಮ ವಿಚಾರಗಳನ್ನು ತೆರೆದಿಡುತ್ತಾರೆ. ಇಲ್ಲಿ ನಾವು ಸಹಜತೆಯನ್ನೂ ಆತ್ಮೀಯತೆಯನ್ನೂ ಅವರ ಕಕ್ಕುಲಾತಿ, ಅಂತಃಕರುಣವನ್ನು ಮಾತು ಮಾತಿಗೆ ಗುರುತಿಸಬಹುದಾಗಿದೆ. ಇಲ್ಲಿ ನೋಡಿ—

"ಹಲವು ವ್ಯಕ್ತಿಗಳ ಬೆವರಿನ ಫಲದಿಂದ ಒಂದು ಕುಟುಂಬ ನಡೆಯುತ್ತದೆ; ಹಾಗೆ ಅಸಂಖ್ಯ ವ್ಯಕ್ತಿಗಳ ಸಂಯುಕ್ತ ಪರಿಶ್ರಮದಿಂದ ಒಂದು ದೇಶ ನಡೆಯುತ್ತದೆ. ಬೇಲಿಯೇ

ಎದ್ದು ಹೊಲ ಮೇದಂತೆ ಕುಟುಂಬದ ಕೆಲ ಸದಸ್ಯರು ವರ್ತಿಸಿದರೆ ಅದರ ಸುಖ ಒಡೆದು ನುಚ್ಚು ನೂರಾಗುತ್ತದೆ. ಆದೇ ರೀತಿ ದೇಶದ ಸುಭದ್ರತೆಗೂ ಅನೇಕ ವಿಷಕಾರಕ ದುಷ್ಟ ಶಕ್ತಿಗಳು ಗಂಡಾಂತರ ಒಡ್ಡಿ ಸ್ವಾರ್ಥಪಾಲನೆಯಲ್ಲಿ ಉನ್ಮತ್ತರಾಗಿರುತ್ತಾರೆ."

"ಪತ್ರಿಕೆಗಳು ಬದುಕನ್ನು ಬಂಗಾರ ಮಾಡುವಂತಹವುಗಳಾಗಿರಬೇಕು. ಭಾಷೆ ಸರಳವಾಗಿದ್ದು ಭಾವ ಎತ್ತರವಾಗಿರಬೇಕು. ರಾಷ್ಟ್ರಾಭಿಮಾನವನ್ನು ಜಾಗೃತಗೊಳಿಸುವಂತಿರಬೇಕು.– ಅಂದಾಗ ಪತ್ರಿಕೋದ್ಯಮಕ್ಕೆ ಬಲ ಹಾಗೂ ಬೆಲೆ ಬರುತ್ತದೆ."

"ಅಸ್ಪೃಶ್ಯತೆಯ ಅಂಟುರೋಗವನ್ನು ನಿವಾರಣೆಮಾಡಲು ನಿಷ್ಕಲ್ಮಷ ಪ್ರೇಮವೇ ದಿವ್ಯೌಷಧ."

"ಜೀವನದ ಶಾಂತತೆಗಾಗಿ ಸಂತ್ಕ್ರಿಯೆಗಳು ಅತ್ಯಾವಶ್ಯಕ. ಅಂತರಂಗಶುದ್ಧಿಯನ್ನು ಪಡೆದು ಪರಮಾತ್ಮನನ್ನು ಒಲಿಸಲು ನೀತಿಯೇ ರಾಜಮಾರ್ಗವೆಂದು ಶರಣರ ಮತ...."

"ಧರ್ಮವು ಸಹ ನಿಂತ ನೀರಿನಂತಾಗದೇ ಹರಿಯುವ ತಿಳಿಜಲದಂತೆ ಸದಾ ಹರಿಯುತ್ತಿರುವದಾಗಬೇಕು. ಕಾಲಕ್ಕೆ ತಕ್ಕಂತೆ ವಿಕಾಸಗೊಳ್ಳುತ್ತಿದ್ದರೆ. ರಾಷ್ಟ್ರದ ಶಕ್ತಿಯನ್ನು ಹೆಚ್ಚಿಸಲು ಅನುಕೂಲವಾಗುತ್ತದೆ. ಭಾವೈಕ್ಯತೆಗೆ ಸಾಧನವಾಗುತ್ತದೆ."

"ತತ್ವವಿಲ್ಲದ ಧರ್ಮ ಮೂಢಶ್ರದ್ಧೆಯಲ್ಲಿ ಕೊನೆಗೊಂಡು, ಒಂದಿಲ್ಲ ಒಂದು ದಿನ ಅದು ನಾಶವಾಗಲೇಬೇಕು."

"ಈ ಸಂಯಮ ಜೀವನವು ತನ್ನ ತಾನರಿದುಕೊಳ್ಳಲು ದೊಡ್ಡ ಸಾಧನ. ಈ ಸಂಯಮ ಆಧ್ಯಾತ್ಮ ಸಾಧಕರಿಗೂ ಬೇಕು; ಲೌಕಿಕರಿಗೂ ಬೇಕು. ಸಂಯಮವಿಲ್ಲದ ಜೀವನ ರಸವಿಲ್ಲದ ಹಣ್ಣಿನಂತೆ, ಒಣಗಿರ್ಪಎಲೆಯಂತೆ............"

"ಧರ್ಮದಿಂದ ಸಾಮಾಜಿಕ ನ್ಯಾಯ ದೊರೆಯುಬಹುದೇ? ಎಂಬ ವಿಷಯದ ಬಗ್ಗೆ ಇಂದು ಚರ್ಚಿಸಬೇಕಾಗಿದ."

"ಕವಿಜೀವನವೆಂಬುದು ರಸಮಯ....ಅದು ರಸಋಷಿ ಜೀವನ"

"ರಾಜಕೀಯತೆಗೆ ಧರ್ಮ ಬೆರೆತರೆ ಅದರ ಅಂತಸ್ಸತ್ವ ಹೆಚ್ಚುತ್ತದೆ. ಭಾವನೆ ವಿಶಾಲವಾಗುತ್ತದೆ. ಭಾವೈಕ್ಯಕ್ಕೆ ದಾರಿದೀಪವಾಗುತ್ತದೆ."

ಹೀಗೆಯೇ ಎಷ್ಟೊಂದು ಆಣಿಮುತ್ತುಗಳನ್ನು ಉದ್ಧರಿಸಬಹುದು.

ಇಷ್ಟೆಲ್ಲ 'ಮೂಜಗಂ'ರವರ 'ಆಶೀರ್ವಾಣಿ' ಭಾಗ–೧ ಮತ್ತು ಭಾಗ–೨ರ ಅಂತರಂಗವನ್ನು ತೆರೆದಿಟ್ಟಮೇಲೆ ಒಟ್ಟಿನಲ್ಲಿ ಈ ಲೇಖನದ ಅಭಿಪ್ರಾಯವನ್ನು ಸುಪ್ರಸಿದ್ಧ ವಿದ್ವಾಂಸ, ವಿಮರ್ಶಕ ಮತ್ತು ಭಾಷಾಕೋವಿದರಾದ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು ಹೇಳುವಂತೆ—

"ನಮ್ಮ ಸನಾತನ ಧರ್ಮದ ಶಕ್ತಿಯುತವಾದ ಶ್ರೀಮಂತ ಪರಂಪರೆಯನ್ನು ಸಕ್ರಿಯಾತ್ಮಕವಾಗಿ ಅರಗಿಸಿಕೊಂಡ ಶ್ರೀ ಜಗದ್ಗುರುಗಳವರ ಆಧುನಿಕ ದೃಷ್ಟಿ ಇಂದಿನ ವಿಚಾರವಂತರನ್ನು ಮುಟ್ಟಬಲ್ಲುದು. ಆದುದರಿಂದಲೇ ಅವರ ಈ 'ಆಶೀರ್ವಾಣಿ' ವಿಚಾರ ವಾಣಿಯೂ ಆಗಿ ಪರಿಣಮಿಸಿದೆ........ಭಾಷಣಗಳಲ್ಲಿ ಅಧ್ಯಯನ, ಚಿಂತನ, ನಿರೂಪಣಾ ಸಾಮರ್ಥ್ಯಗಳು ಮುಪ್ಪುರಿಗೊಂಡಿವೆ."

ಎಂದು ಸಂಗ್ರಹ ರೂಪವಾಗಿ ಯಾವ ವಿಮರ್ಶಕನೂ ಈ ಕುರಿತಂತೆ ತನ್ನ ಅಭಿಪ್ರಾಯಗಳನ್ನು ಕ್ರೋಡೀಕರಿಸಿ ಹೇಳಬಹುದಾಗಿದೆ.

# ಚಿತ್ಸಮನ: ಒಂದು ಭಾವಾಭಿಷೇಕ

ಪ್ರೊ. ಕೆ. ಎಸ್. ಕೌಜಲಗಿ

ಶ್ರೀ ಕಾಡಸಿದ್ಧೇಶ್ವರ ಕಾಲೇಜ, ಹುಬ್ಬಳ್ಳಿ

೧

ಕನ್ನಡವನ್ನು ಎಂಟುನೂರು ವರ್ಷಗಳ ಹಿಂದೆಯೇ ವಿಶ್ವಸಾಹಿತ್ಯದ ಔನ್ನತ್ಯಕ್ಕೇರಿಸಿದ ಸಾಹಿತ್ಯ ಪ್ರಕಾರ ವಚನ. ಕನ್ನಡದಲ್ಲಿ ವಚನಸಾಹಿತ್ಯ ಪ್ರಾಚೀನವಾದುದು. ಹನ್ನೊಂದನೆಯ ಶತಮಾನದ ಹಿಂದೆ ನಾಲ್ಕೈದು ಶತಮಾನಗಳಿಂದ ವಚನ ಕೃಷಿ ನಡೆದಿರಬೇಕೆಂದು ಡಾ. ಆರ್. ಸಿ. ಹಿರೇಮಠ ಅವರು ಭಾಷೆ, ರೂಪಕ ಪರಂಪರೆ ಅನುಭಾವದ ಎತ್ತರ–ಬಿತ್ತರ ಆಳಗಳನ್ನು ಗಮನಿಸಿ ಹೇಳಿದ್ದಾರೆ. ವಚನ ರಚನೆಗೆ ಮೂಲ ಮತ್ತು ಪ್ರೇರಣೆಯನ್ನು ಕೆಲವರು ತಮಿಳು–ಸಂಸ್ಕೃತ–ಕನ್ನಡದಲ್ಲಿ ಹುಡುಕಿದ್ದಾರೆ. ಅದರ ಮೂಲ ಏನೇ ಇದ್ದರೂ ಕನ್ನಡದ ಅಮರ–ಅಮೃತ ಸಾಹಿತ್ಯವದು. ವಿಶ್ವಸಾಹಿತ್ಯಕ್ಕೆ ಕನ್ನಡದ ಕೊಡುಗೆ.

ವಚನ ಕನ್ನಡದ ವಿಶಿಷ್ಟ ರಚನೆ. ವಚನ ಒಂದು ಬಗೆಯ ಗದ್ಯಕಾವ್ಯ. ಅವು ದೊಂದು ಕಾಲ–ದೇಶಗಳಿಗೆ ಪರಿಮಿತವಾದುದಲ್ಲ. ಅದೊಂದು ಸಾಹಿತ್ಯ ಪ್ರಕಾರ–ಅಭಿವ್ಯಕ್ತಿಕ್ರಮ ಎಂದು ಡಾ. ಹಾ. ಮಾ. ನಾಯಕರು ಅಭಿಪ್ರಾಯ ಪಟ್ಟಿದ್ದಾರೆ. "ಅಂಕಿತವನ್ನೊಳಗೊಂಡ ಅನುಭಾವೀ ಗದ್ಯಗೀತೆಗಳು ವಚನಗಳು" ವಚನಕಾರರ ಭಾವನೆಗಳ ಮತ್ತು ಆಧ್ಯಾತ್ಮಿಕ ಅನುಭವಗಳ ಸ್ವತಃ ಪ್ರೇರಿತ ಸ್ಫೋಟನೆಗಳವು. ಮಾನವನು ತನ್ನ ಆತ್ಮಸಾಕ್ಷಾತ್ಕಾರಕ್ಕಾಗಿ ಪಡುವ ಉತ್ಕಟವಾದ ಹಂಬಲ ಹಾಗೂ ಅದಕ್ಕಾಗಿ ನಡೆಸಿದ ಆತ್ಮನ ಹೋರಾಟವನ್ನು ಒಳಗೊಂಡದು. ಬಿಂದುವಿನಲ್ಲಿ ಸಿಂಧು ಸಮಾನ ಅನುಭವವನ್ನು ಹಿಡಿದಿಡುವ ಸುಲಭವಾದ ಮಾಧ್ಯಮ ವಚನ. "ವೈಲಕ್ಷಣ್ಯ, ಸಂಕ್ಷಿಪ್ತತೆ, ಸ್ಪಷ್ಟತೆ ಮತ್ತು ಶಕ್ತಿ ಇವು ವಚನ ಶೈಲಿಯ ಲಕ್ಷಣಗಳು" ಈ ಲಕ್ಷಣವನ್ನೊಳಗೊಂಡಿರುವುದರಿಂದ ಇಂದಿನ ನಮ್ಮ ಅನುಭವಗಳಿಗೂ ಹೊಳಪು ಕೊಟ್ಟು ಕಾಲದೇಶಗಳ ಕಟ್ಟನ್ನು ಒಡೆಯಬಲ್ಲ ಶಕ್ತಿಯ ಕಿಡಿಗಳೆಂದು ದೇ.ಜ.ಗೌ. ವಿವರಿಸಿದ್ದಾರೆ.

ಮುನ್ನಿನ ಪುರಾತನರಿಂದ ಹಿಡಿದು ಇಂದಿನ ಶ್ರೀ ಮೂಜಗಂ ಮೊದಲಾದವರ ವರೆಗೆ ಹರಿದು ಬಂದ ವಚನಗಂಗೆ ಕನ್ನಡದ ಬಹುಮೂಲ್ಯ ಆಸ್ತಿ. ೧೨ನೆಯ ಶತಮಾನದ ನಂತರ ವಚನ ಸಾಹಿತ್ಯ ವಿಪುಲವಾಗಿ ಬೆಳೆದದ್ದು ೨೦ನೆಯ ಶತಮಾನದಲ್ಲಿ. ಡಾ. ಆರ್. ಸಿ. ಹಿರೇಮಠರು ವಚನ ಸಾಹಿತ್ಯದ ಬೆಳವಣಿಗೆಯಲ್ಲಿ ಷಟ್‌ಸ್ಥಲಗಳನ್ನು ಗುರುತಿಸಿದ್ದಾರೆ. ಮೊದಲನೆಯ ಸ್ಥಲ ದೇವರ ದಾಸಿಮಯ್ಯನವರ ಹಿಂದಿನ ಕಾಲವಾದರೆ ಕೊನೆಯ ಸ್ಥಲ ಇಂದಿಗೂ ಮುಂದುವರಿದುಕೊಂಡು ಬಂದ ಪರಂಪರೆ, ಶ್ರೀ ಮೂಜಗಂ, ಡಾ. ಜ.ಚ.ನಿ. ಸಿದ್ಧಯ್ಯ ಪುರಾಣಿಕರ ಕಾಲ.

ವೀರಶೈವ ಧರ್ಮದ ತತ್ವಗಳ, ಆಚರಣೆಗಳ ಚಿತ್ರಣಕ್ಕೆ ಅನುಭಾವ ನಿರೂಪಣೆಗೆ ವಚನಸಾಹಿತ್ಯವನ್ನು ಸೀಮಿತಗೊಳಿಸುವುದು ಖಂಡಿತವಾಗಿಯೂ ಉಚಿತವಲ್ಲ. ವಚನ ರೂಪದಲ್ಲಿ ಬರೆದದ್ದೆಲ್ಲ ವಚನ ಸಾಹಿತ್ಯವೂ ಅಲ್ಲ. ಅನುಭಾವವೇ ವಚನ ಸಾಹಿತ್ಯದ ಅಂತರಂಗ. ಶಿವಾನುಭವ ತಂತಾನೆ ಅರಳಿ ವಚನ ಸಾಹಿತ್ಯವಾಗುತ್ತದೆ. ಆತ್ಮ ಜಾಗ್ರತೆಯೇ ವಚನಕಾರರಿಗೆ ಮಹತ್ವದ ಆಸರೆ.

೨೦ನೆಯ ಶತಮಾನದಲ್ಲಿ ವಚನ ಪ್ರಕಾರದ ವ್ಯಾಪ್ತಿ ವಿಸ್ತಾರಗೊಂಡಿದೆ. ಒಂದು ಸಾರ್ವತ್ರಿಕ ಮಾಧ್ಯಮವಾಗಿ ಗರಿಗೆದರಿ ಹೊಸ ಸಾಧ್ಯತೆಗಳಿಗೆ ಅನುವು ಮಾಡಿಕೊಡುತ್ತಿದೆ. ಇಂದಿನ ವಚನಗಳು ಹಲವಾರು ವಿಧದಲ್ಲಿ ೧೨ನೆಯ ಶತಮಾನದ ವಚನಗಳಿಗೆ ಸಮೀಪ ವಾಗಿದೆ. ಇಂದು ಬೇರೆ ಬೇರೆ ಮನೋಭಾವದ ವಿವಿಧ ಉದ್ದೇಶಗಳ ಹಲವಾರು ಜನರು ವಚನಗಳನ್ನು ಬರೆಯುತ್ತಿದ್ದಾರೆ. ಅವರಲ್ಲಿ ಶ್ರೀ ಎಸ್. ವಿ. ರಂಗಣ್ಣ, ಶ್ರೀ ಎಸ್. ವಿ. ಪರಮೇಶ್ವರ ಭಟ್, ಡಾ. ಜ.ಚ.ನಿ., ಡಾ. ಸಿದ್ಧಯ್ಯ ಪುರಾಣಿಕ, ಶ್ರೀ ಮಹಾದೇವ ಬಣಕಾರ, ಕುವೆಂಪು, ಶ್ರೀ ಮೂಜಗಂ ಮೊದಲಾದವರು ಪ್ರಮುಖರು. ಆದರೆ ಇಂದಿನ ವಚನಗಳು ೧೨ನೆಯ ಶತಮಾನದಂತೆ ಸಾಮೂಹಿಕ ಜನ ಜಾಗೃತಿಗೆ ಕಾರಣವಾದ ಧಾರ್ಮಿಕ ಕಿಡಿಗಳಾಗಿ ಬೆಳಗದೆ ವೈಯಕ್ತಿಕ ಸಾಧನೆಯ ಅಭಿವ್ಯಕ್ತಿ ಮಾಧ್ಯಮವಾಗಿ ಬೆಳೆದು ಬಂದಿವೆ ಎಂದು ಡಾ. ತಿಪ್ಪೇರುದ್ರಸ್ವಾಮಿಗಳು ಅಭಿಪ್ರಾಯ ಪಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಶ್ರೀ ಮೂಜಗಂ ಅವರು ವಚನಕಾರರಾಗಿ ನಿಸ್ಸಂದೇಹವಾಗಿ ನಮ್ಮ ವಚನ ಸಾಹಿತ್ಯದ ಉಜ್ವಲ ಪರಂಪರೆಯಲ್ಲಿ ದೇದಿಪ್ಯಮಾನವಾಗಿ ಬೆಳಗುತ್ತಿದ್ದಾರೆಂದು ಹೇಳ ಬಹುದು.

೨

ಒಂದು ಧಾರ್ಮಿಕ ಪೀಠದ ಅಧೀಶ್ವರರಾಗಿ ತಮ್ಮ ಸಾಹಿತ್ಯ ಪ್ರತಿಭೆಯ ಮಿಂಚಿನ ಗೊಂಚಲದಿಂದ ಆಧುನಿಕ ಕನ್ನಡ ಸಾಹಿತ್ಯವನ್ನು ಬಗೆಬಗೆಯಾಗಿ ಸಿಂಗರಿಸುತ್ತಿರುವವರು ಶ್ರೀ ಮೂಜಗಂ. ಅವರು ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ವೈದ್ಯಕೀಯ ಕಾರ್ಯ ಗಳನ್ನು ಎಡೆಬಿಡದೆ ಮಾಡುತ್ತಿದ್ದರೂ ಅದರಲ್ಲಿಯೇ ಬಿಡುವು ಮಾಡಿಕೊಂಡು ಅನೇಕ ಕೃತಿಗಳನ್ನು ರಚಿಸಿದ್ದಾರೆ. ನಿಸರ್ಗ ಸೌಂದರ್ಯದ ಮಡಿಲಲ್ಲಿರುವ ಆಧ್ಯಾತ್ಮದಾಗರವಾದ ಶಿವಯೋಗ ಮಂದಿರದ ಪವಿತ್ರ ಪರಿಸರದಲ್ಲಿ ಅಂಕುರಿಸಿದ ಅವರ ಸಾಹಿತ್ಯಪುಷ್ಪ ಗದ್ಯ, ಪದ್ಯ, ಕಂದ, ವಚನ, ತ್ರಿಪದಿ, ಜೀವನ ಚರಿತ್ರೆ, ವಿಮರ್ಶೆ ಮೊದಲಾದ ಪ್ರಕಾರಗಳಲ್ಲಿ ಅರಳಿದೆ. ಶಿವಾನುಭವ—ಕಾವ್ಯಾನುಭವ, ಸಮಾಜ ಸೇವೆಗಳ ಸಾಕಾರ ಮೂರ್ತಿ ಶ್ರೀ ಮೂಜಗಂ.

ಶಿವಯೋಗ ಮಂದಿರದ ಬಯಲು ಅವರಿಗೆ ಬೆಳಕಾಯಿತು, ಸಾಧನೆ–ಸಿದ್ಧಿಗಳ ರಂಗ ಮಂದಿರವಾಯಿತು. ಶಿವಯೋಗಮಂದಿರದ ಶಿಲ್ಪಿ ಕುಮಾರಸ್ವಾಮಿಗಳದಾದರೆ, ಮೂಜಗಂ ಅವರ ಬಾಳ ಶಿಲ್ಪಿ ಹಾನಗಲ್ ಕುಮಾರಸ್ವಾಮಿಗಳು. ಶಿವಯೋಗ ಮಂದಿರ ಮತ್ತು

ಹಾನಗಲ್ ಕುಮಾರ ಸ್ವಾಮಿಗಳೆಂದರೆ ಶ್ರೀ ಮೂಜಗಂ ಅವರಿಗೆ ಅಭಿಮಾನ ಮತ್ತು ಗೌರವ.

"ಶಿವಯೋಗ ಮಂದಿರವೆಂಬುದೊಂದು,
ಆಧ್ಯಾತ್ಮ-ಕೇಂದ್ರವಾಗಿಹುದಯ್ಯಾ;
ಹೃದಯಾರವಿಂದವವಸರಳಿಸಿ-ಕೊಳ್ಳರಿಗೆ
ಜ್ಞಾನಭಾನುವಿನಂತಿಹುದು ನೋಡಾ.
ಮನದ ಮಾಲಿನ್ಯವ ಕಳೆದುಕೊಳ್ಳರಿಗೆ
ಧ್ಯಾನಧಾಮವಾಗಿಹುದು ನೋಡಾ;
ತನು ಮೋಹವಳಿದವರಿಗೆ
ಶಿವಯೋಗಮಂದಿರ ವಾಸ ಸಾರ್ಥಕ-ಸಾರ್ಥಕವಯ್ಯಾ"

ಎಂದು ಶಿವಯೋಗಮಂದಿರದಲ್ಲಿ ಮೂರ್ತಿಗೊಂಡ ಶ್ರೀಗಳವರಿಗೆ ಹಾನಗಲ್ ಕುಮಾರ ಸ್ವಾಮಿಗಳೇ ಆದರ್ಶ ಮತ್ತು ಅಭಿಮಾನದ ಮೂರ್ತಿ.

"ನುಡಿಗಲಿಸಿದ ನಮ್ಮ ಕುಮಾರ
ನಡೆಗಲಿಸಿದ ನಮ್ಮ ಕುಮಾರ
ಶೀಲ ಸಂಸ್ಕೃತಿಯನುಳಿಸಿದನು ನಮ್ಮ ಕುಮಾರ
ಶಿವಯೋಗಮಂದಿರವ ಸ್ಥಾಪಿಸಿದನಯ್ಯಾ
ವಿರತಿ ಶಿಖಾಮಣಿ ಸುಕುಮಾರ"

ಪ್ರವೃತ್ತಿಯಿಂದ ಸಾಹಿತಿಗಳಾದ ಶ್ರೀ ಮೂಜಗಂ ಅವರು ವಚನ ಬರೆಯಬೇಕೆಂಬ ಹಂಬಲವನ್ನು ಹೊಂದಿದ್ದರು. ಆದರೆ ಸಾಮಾಜಿಕ ರಂಗದಲ್ಲಿ ಕಾಲ ಕಳೆಯುತ್ತಿರುವ ಕಾರಣ ಬರೆಯಲು ಬಿಡುವು ಸಿಗದೆ ಕಸಿವಿಸಿಗೊಂಡಿದ್ದರು. ಹದಿನಾಲ್ಕು ವರ್ಷಗಳ ನಂತರ ಸಾಹಿತ್ಯ ಸರೋವರದಲ್ಲಿ ಈಸುತ್ತ ಚಿತ್ಸುಮನವನ್ನು ಅರಳಿಸಿದ್ದಾರೆ. ಅವರ ದೃಷ್ಟಿಯಲ್ಲಿ ಭಾವ ಕುಸುಮಗಳನ್ನು ಅರಳಿಸಲು ವಚನವು ಮಹತ್ಸಾಧನೆ. ಹೃದಯಾಂತರಂಗವನ್ನು ಜನ-ಸಾಮಾನ್ಯರಿಗೂ ತಿಳಿಯಪಡಿಸಿ ಮಹದ್ವಿಚಾರವನ್ನು ತಿಳಿಯಾದ ಭಾಷೆಯಲ್ಲಿರಿಸಿ ಅಂತರ್ಭಾವಗಳನ್ನು ಆಳವಾಗಿ ವಿಚಾರಿಸಿ, ವಿವೇಚಿಸಿ, ಅನುಭವಿಸಿ ಬರೆಯುವುದೇ ವಚನ ಸಾಹಿತ್ಯ. ವಚನರಚನೆಗೆ ಹೃದಯ ಬೇಕು. ತೆರೆದ ಹೃದಯದಿಂದ ಬರೆಯದ ವಚನ ಬೋರ್ಗಲ್ಲ ಮೇಲೆ ನೀರೆರೆದಂತೆ ವ್ಯರ್ಥ. ಭಾಷೆಗಿಂತ ಭಾವಕ್ಕೆ ಹೆಚ್ಚು ಮಹತ್ವ ನೀಡಿದರೆ ವಚನಕ್ಕೆ ಸೊಬಗು, ನೋವು, ನಲಿವುಗಳನ್ನು ಹಾಗೂ ಸಾಮಾಜಿಕ ಜೀವನದ ಚಿತ್ರವನ್ನು ಚಿತ್ರಿಸಲು ವಚನ ರಚನೆ ಬಹುಮುಖ್ಯವಾದುದು.

ಕರ್ತೃ ಗುರುಸಿದ್ಧೇಶ್ವರ ನಾಮಾಂಕಿತದಲ್ಲಿ ವಚನಗಳನ್ನು, ಪೂರ್ಣಜ್ಞ ಅಂಕಿತದಲ್ಲಿ ಅನುಭಾವದ ತ್ರಿಪದಿಗಳನ್ನು ರಚಿಸಿ ಶ್ರೀ ಮೂಜಗಂ ನಾಡಿಗೆ ಚಿರಪರಿಚಿತರಾಗಿದ್ದಾರೆ. ಧರ್ಮಜ್ಯೋತಿಯು ಸಾಹಿತ್ಯದ ಮೂಲಕ ಹರಿದುಬಂದು ಜನಮನವನ್ನು ಬೆಳಗ

ಬೇಕೆಂಬುದು ಅವರ ಆಶಯ. ಶ್ರೀ ಮೂಜಗಂ ಅವರು ಸಾಹಿತ್ಯ ಸೃಷ್ಟಿಗಾಗಿ ವಚನ ಬರೆದಿಲ್ಲ. ಬದುಕಿನ ಹೋರಾಟದಲ್ಲಿ ತಾವು ಅನುಭವಿಸಿದ ಅನುಭವಗಳ ಅಮರವಾಣಿಯಾಗಿ ಈ ಚಿತ್ಸುಮನದ ವಚನಗಳು ಅರಳಿವೆ. ತಮ್ಮ ಜೀವನದ ನೋವು ನಲಿವುಗಳ ಸಮರಸವನ್ನು ಸಾಹಿತ್ಯ ಕೃಷಿಯಲ್ಲಿ ಮರೆತು ಬೆರೆತು ಅಭಿವ್ಯಕ್ತಿಸಿ ಮನಸ್ಸನ್ನು ಹಗುರು ಮಾಡಿಕೊಂಡಿದ್ದಾರೆ. ಅವರ ಜೀವನದ ಅನುಭವಸಾರವೇ ಈ ವಚನಗಳು.

೩

ಚಿತ್ಸುಮನದ ವಚನಗಳನ್ನು ಸ್ಥೂಲವಾಗಿ ಆತ್ಮಗತ ಮತ್ತು ಸಾಮಾಜಿಕ ವಚನಗಳೆಂದು ವಿಂಗಡಿಸಬಹುದು. ಆದರೆ ಡಾ. ಆರ್. ಸಿ. ಹಿರೇಮಠ ಅವರು ೧) ಈ ಪ್ರಪಂಚದ ಇರುವು ೨) ಗುರುವಿನ ನೆನಹು ೩) ಸಾಧನೆಯ ಸ್ಥಿತಿ ೪) ಸಿದ್ಧಿಯ ಹಂತ ೫) ವ್ಯಷ್ಟಿ–ಸಮಷ್ಟಿಗಳ ಸಮನ್ವಯ ೬) ಪರಮಾನಂದದ ಸ್ಥಿತಿ-ಎಂದು ವಿಂಗಡಿಸಿದ್ದಾರೆ. ಇನ್ನೊಂದು ರೀತಿಯಲ್ಲಿಯೂ ವಚನಗಳ ವಿಂಗಡನೆ ಸಾಧ್ಯವಿದೆ. ೧) ಆತ್ಮಗತ ೨) ಸಾಹಿತ್ಯ ಕುರಿತು ೩) ವೀರಶೈವ ಸಿದ್ಧಾಂತ ೪) ವೀರಶೈವ ಸಮಾಜ ೫) ನೀತಿ ಮತ್ತು ಸಮಕಾಲೀನ ಸ್ಥಿತಿ ಕುರಿತ ವಚನಗಳು.

ಆತ್ಮಗತ ವಚನಗಳಲ್ಲಿ ಆತ್ಮದ ಹಂಬಲ ಪುಟಿನೆಗೆದು ನಿಂತಿದೆ. ಪ್ರಾರಂಭದ ವಚನಗಳಲ್ಲಿ ಸಾಧಕನ ಪ್ರಥಮ ಹಂತದ ಕೊರಗು ಸ್ಪಷ್ಟವಾಗಿದೆ. ಇರುವಿನ ಬಗೆಗೆ ಅತೃಪ್ತಿ, ಅಸಮಾಧಾನ, ಕೊರತೆಗಳ ಭಾವನೆ, ಸಂವೇದನೆ ಇವು ಉಂಟಾಗದೆ ಹೋದರೆ ಅಲ್ಲಿ ಗತ–ಪ್ರಗತಿಯನ್ನು ಕಾಣಲು ಸಾಧ್ಯವಿಲ್ಲ. ಬಸವಳಿದು ಬಾಯಾರಿ ಕಳವಳಗೊಳ್ಳುತ್ತಲಿದ್ದೇನೆ ಎಂಬಲ್ಲಿ ನಿಜವಾದ ಆರ್ತಧ್ವನಿಯಿದೆ. ಕೊನೆಗೆ ತರಳನ ತಪ್ಪು ಮನ್ನಿಸಿ ತಾತನು ಮೊಮ್ಮಗನನ್ನು ಅಪ್ಪಿಕೊಳ್ಳುವಂತೆ ನನ್ನನ್ನಪ್ಪಿಕೊಳ್ಳು ಎಂದು ಕರ್ತೃ ಗುರು ಸಿದ್ಧೇಶನನ್ನು ಭಕ್ತಿ ಭಾವದಿಂದ ಪ್ರಾರ್ಥಿಸುತ್ತಾರೆ. ಶ್ರೀ ಮೂಜಗಂ ಅವರ ಜೀವನ–ಚಿಂತನ ಅಂತರ್ ಮಂಥನಗಳಿಗೆಲ್ಲಾ ಶ್ರೀ ಗುರುಸಿದ್ಧೇಶ್ವರನೇ ಆಧಾರ.

ಈ ಕಳವಳಕ್ಕೆ ಕಾರಣ ಮೋಹದ ಪಂಜರ; ಮಾಯೆಯ ಬಂಧನ, ಮೋಹ, ಮಾಯೆಗಳು ಯಾರನ್ನೂ ಬಿಟ್ಟಿಲ್ಲ. ಮನದ ಚಂಚಲತೆ, ಅಜ್ಞಾನ, ಆಲಸ್ಯ, ವೇಷ ಭಾಷೆಯ ಮೋಡಿಗೆ ಮೋಸ ಹೋಗುತ್ತದೆ. ಸಂಚು ತಿಳಿಯದೆ ಮಾತಿನ ಮಂಚಿಗೆ ಮರುಳಾಗಿ ದುಃಖಕ್ಕೆ ಈಡಾಗುತ್ತೇವೆ. ಆತ್ಮಗತ ವಚನಗಳಲ್ಲಿ ಶ್ರೀ ಮೂಜಗಂ ಅವರು ತಾವು ಹುಟ್ಟಿ ಬೆಳೆದದ್ದು ಗುರುಗಳು ಹಿರಿಯರು ಕಲಿತದ್ದು–ಪೀಠವನ್ನು ಅಲಂಕರಿಸಿದ ವಿಚಾರಗಳನ್ನು ಹೇಳಿದ್ದರಿಂದ ಒಂದು ರೀತಿಯಲ್ಲಿ ಅವರ ಜೀವನ ಚಿತ್ರಣವೇ ವ್ಯಕ್ತವಾಗಿದೆ ಎಂದು ಹೇಳಬಹುದು.

"ಜನಿಸಿದೆನಯ್ಯಾ ನಾನು
ಹಾನಗಲ್ ಕುಮಾರೇಶನ ವರದಿಂದ;

ವಟುವಾಗಿ ಓದಿದೆನಯ್ಯಾ
ಶ್ರೀಮದ್ ವೀರಶೈವ ಶಿವಯೋಗ ಮಂದಿರದಲಿ
ತ್ರಿಕರಣದಿಂದ;
ಶಿವಪೂಜೆ ಶಿವಾನುಭವದ ಪರಿಯನರಿದುಕೊಂಡೆನಯ್ಯಾ
ಶ್ರೀಮದ್ ವೀರಶೈವ ಶಿವಯೋಗ ಮಂದಿರದ ಯತಿಗಳಿಂದ;
ವಿದ್ಯಾಧ್ಯಯನವ ಬೆಳೆಸಿಕೊಂಡೆನಯ್ಯಾ
ಕಾಶಿ ಕ್ಷೇತ್ರದೊಳು; ವಿಜಯಮಹಾಂತೇಶನ
ಸದ್‌ಭಕ್ತರ ಸಹಾಯದಿಂದ;
ಜಗದ್ಗುರು ಪೀಠವನೇರಿಸುವೆನಯ್ಯಾ
ನಿನ್ನ ಗುರುಸಿದ್ಧ ಕುಮಾರನ ಕರುಣೆಯಿಂದ
ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ
ನಿರಂತರ ಸಮಾಜ ಸೇವೆಯ ಮಾಡುತ್ತಿರುವೆನಯ್ಯಾ
ತವ ಕೃಪಾ ವಿಶೇಷದಿಂದ.

ಶ್ರೀ ಮೂಜಗಂ ಅವರಿಗೆ ಬಸವನೆಂದರೆ ಅಭಿಮಾನ. ಹಾವೇರಿಯ ಶ್ರೀ ಶಿವಬಸವ ಸ್ವಾಮಿಗಳ ಹೆದ್ದಾರಿ ಅವರಿಗೆ ಕೈದೀವಿಗೆ. ಚಿತ್ತರಗಿ ಶ್ರೀಗಳ ಸಿದ್ಧಿ ಅವರಿಗೆ ಮಾರ್ಗ ದರ್ಶನ.

ತ್ರಿಮಲ, ಷಡ್‌ವೈರಿ, ವಿಷಯೇಂದ್ರಿಯಗಳು ಅಷ್ಟಮದ ಮೊದಲಾದವುಗಳಿಂದ ರಕ್ಷಣೆ ಪಡೆಯುವುದನ್ನು ಹೀಗೆ ಹೇಳಿದ್ದಾರೆ.

ವಿವೇಕವೆಂಬ ಬೇಲಿಯ ಹಚ್ಚಿ
ಸುಜ್ಞಾನವೆಂಬ ಚಪ್ಪರ ಹಾಕಿ
ಓಡಿ ಬರುತ್ತಿರುವ ವೈರಿಗಳನೋಡಿಸಿ
ಚಿತ್‌ಸುಮನವನು ಸಂರಕ್ಷಿಸಿ
ಸಲಹುದು ನಿನ್ನ ಧರ್ಮವೆಂದು
ನಿನ್ನನೇ ಮೊರೆ ಹೊಕ್ಕಿರುವೆನಯ್ಯಾ

ಎಂದು ಗುರುಸಿದ್ದೇಶನನ್ನು ಮೊರೆ ಹೊಕ್ಕಿದ್ದಾರೆ.

ಮಾಯೆ, ಮೋಹ, ಕ್ರೋಧ, ಅಹಂಕಾರಕ್ಕೊಳಗಾಗಿ ನಿಜಸುಖವೆಂಬುದು ಕನಸಿನ ಗಂಟಾಗಿದೆ. ತಾಪತ್ರಯದ ತಾಕಲಾಟದಿಂದ ಬಸವಳಿದು ಬಾಯಾರಿ ಕಸಿವಿಸಿಗೊಂಡ ಕಾರಣ ಗುರುಸಿದ್ಧೇಶನ ಅಡಿ ಕಾಣಲು ತೊಡಕಾಗಿರುವುದನ್ನು ಅರಿತು ದುಃಖಿಸಿ ತನ್ನ ತಪ್ಪನ್ನು ಮನ್ನಿಸಿ ತಬ್ಬಿಕೊಂಡು ಆಧ್ಯಾತ್ಮಿಕ ಆಕಾಶದಲ್ಲಿ ಹಾರಾಡುವಂತೆ ಪ್ರೇರೇಪಿಸಯ್ಯಾ

ಎಂದು ಗುರುಸಿದ್ಧೇಶನಿಗೆ ಮೊರೆಯಿಡುತ್ತಾರೆ. ಹೃದಯದ ಹೊಲದಲ್ಲಿ ಸದ್ಗುಣವೆಂಬ ಬೀಜವನ್ನು ಬಿತ್ತಿ ಮನಸ್ಸನ್ನು ನಿಗ್ರಹಿಸಿ ವಿರತಿ ವಿವೇಕಗಳನ್ನಿತ್ತು ಸಲುಹು ಎಂದು ಬೇಡಿ ಕೊಳ್ಳುತ್ತಾರೆ.

ಗೋಪುರಕಟ್ಟಿಸಿದೆನೆಂಬ ಗೌಪ್ಯ ಅಹಂಕಾರ ಸಲ್ಲದು ಎಂದು ಆತ್ಮ ನಿರೀಕ್ಷಣೆ ಮಾಡಿಕೊಳ್ಳುತ್ತಾರೆ. ಈ ಜೀವನ ಮಹಾಸಾಗರದಲ್ಲಿ ಸಕಲ ಸಿಹಿ-ಕಹಿಗಳನ್ನು ಉಂಡು ಈಸಿ ಈಸಿ ಸೋತು ಹಣ್ಣಾಗಿರುವುದನ್ನು ಹೇಳಿ ಸಾಗರದಾಚೆಯ ತೀರವನ್ನು ಮುಟ್ಟಿಸಲು ಗುರುಸಿದ್ಧೇಶನನ್ನು ಸ್ಮರಿಸುತ್ತಾರೆ.

ಪ್ರಪಂಚದ ಕಷ್ಟಗಳನ್ನು ಕಂಡು ವಚನಕಾರರ ಮನನೊಂದು ಬೆಂದಿದೆ. ಜೀವನ ಯಾತ್ರೆಯಲ್ಲಿ ನೊಂದು ಬೆಂದಿರುವೆನಯ್ಯಾ ಎಂದು ಉದ್ಗಾರ ತೆಗೆದಿದ್ದಾರೆ. ದಡ ಮುಟ್ಟಿಸುವವ ಗುರುಸಿದ್ದೇಶನೆಂಬ ಅಂಬಿಗನಿರುವನೆಂದು ನಂಬಿ ಕಷ್ಟ ನಷ್ಟಗಳನ್ನು ಸಹಿಸಿ ಕೊಂಡಿರುವುದನ್ನು ಹೇಳಿದ್ದಾರೆ. ಚಂಚಲವಾದ ಮನಸ್ಸನ್ನು ಹಿಡಿದು ನಿಲ್ಲಿಸಬೇಕು. ಎನ್ನ ಚಿತ್ತಭಿತ್ತಿಯ ಮೇಲೆ ನಿನ್ನ ಚಿತ್ರವನೊತ್ತು ಎಂದಿದ್ದಾರೆ.

ಶಿವಪೂಜೆ ಮಾಡುವೆನಯ್ಯಾ
ಮನ ನಿಲಲೆಂದು
ವಿಷಯ ಗೆಲ್ಲಲೆಂದು;
ಶಿವಪೂಜೆ ಮಾಡುವೆನಯ್ಯಾ
ಭಕ್ತಿ ಬಲಿಯಲೆಂದು
ನೀನೊಲಿಯಲೆಂದು;
ಶಿವಪೂಜೆ ಮಾಡುವೆನಯ್ಯಾ
ಜನ ಏಳಲೆಂದು
ಎದ್ದು ಬಾಳಲೆಂದು.

ಶಿವಪೂಜೆ ಆಡಂಬರಕ್ಕಲ್ಲ; ವಿಷಯ ಗೆಲ್ಲಲು, ಭಕ್ತಿಯ ಬಲಿಸಲು, ಲಿಂಗವನ್ನು ಒಲಿಸಲು, ಮನಸ್ಸನ್ನು ಏಕಾಗ್ರಗೊಳಿಸಲು. ಶಿವಪೂಜೆ ನಿತ್ಯ ಜೀವನದ ಉಸಿರಾಗಬೇಕು. ಅಂತರಂಗದ ಸಾಧನೆ ಹೊಯ್ದಾಟದ ಮನಕ್ಕೆ ಶಾಂತಿಯನ್ನು ತರುತ್ತದೆ. ಈ ಸಾಧನೆಯಿಂದ ಆರಳಿದು ಮೂರು ಕಳೆವ ಧೀರತನ ಬಂದು ಇದ್ದು ಇಲ್ಲದಂತೆ ಇರುವ ನಿಲುವು ಸಾಧ್ಯವಾಗು ತ್ತದೆ. ಹೊಗಳಿಕೆ-ತೆಗಳಿಕೆಯ ಹೊರೆ ಹೊರಲು ಸಿದ್ಧರಾಗುತ್ತೇವೆ. ಭಾವ ಶುದ್ಧಿಯೊಳು ಮಿಂದು, ವಾಯುವೇಗದಂತಿರುವ ಮನವ ನಿಲ್ಲಿಸಿ, ಆತ್ಮ ಪ್ರಕಾಶವ ಪಡೆಯುವುದೇ ವ್ಯಕ್ತಿ ತ್ವದ ಒಳಗುಟ್ಟು. ಮನ ಕಟ್ಟದೆ ಮಠ ಕಟ್ಟಲು ಸಾಧ್ಯವೇ? ಎಂದಿದ್ದಾರೆ. ಮನವ ನಿಲ್ಲಿಸಲು ಮಠವು ಸಾಧನೆಯಾಗಬೇಕು. ವಿಶ್ವಾಸ ಹುಟ್ಟಿಸುವ ತಾಣವಾಗಬೇಕು. ಒಟ್ಟಿನಲ್ಲಿ ಆತ್ಮಗತ ವಚನಗಳಲ್ಲಿ ದೈವೀಕೃಪೆ, ಸರ್ವಾರ್ಪಣೆ, ಆಂತರಿಕ ತೊಳಲಾಟ ತಳಮಳ, ಪ್ರಾರ್ಥನೆ, ಏಕ ನಿಷ್ಠೆಗಳನ್ನು ಕಾಣಬಹುದು.

೪

ಸಾಮಾಜಿಕ ವಚನಗಳಲ್ಲಿ ಲೋಕದ ಏರು-ಪೇರುಗಳು, ಮಾನವ ಸ್ವಭಾವದ ಸಂಕೀರ್ಣತೆ, ಸಾಮಾಜಿಕ ವಿಷಮತೆ, ವಿರಸತೆಗಳು ಮತ್ತು ಅವುಗಳ ಮಧ್ಯದಲ್ಲಿದ್ದುಕೊಂಡೇ ಅವುಗಳನ್ನು ಮೀರುವ ನೈತಿಕ ನಿಷ್ಠೆ, ಆಳ–ಅಗಲ, ಎತ್ತರ–ಬಿತ್ತರಗಳು ಪಡಿಮೂಡಿವೆ. ಬದುಕು ಇರುವುದು ಬೋಧಿಸಲಿಕ್ಕಲ್ಲ, ಸಾಧಿಸಿ ತೋರಿಸಲು ಎಂದಿದ್ದಾರೆ.

ಶಿವಾನುಭವದ ಪರಮಾನಂದದಲ್ಲಿ ಶರಣನು ಸುತ್ತಲಿನ ಸಮಾಜವನ್ನು ನೋಡುತ್ತಾನೆ. ಆಗ ಅಲ್ಲಿ ಕಾಣುವ ಡಾಂಭಿಕತನ, ಶ್ರೀಗಳವರ ಮನಸ್ಸಿಗೆ ವ್ಯಥೆಯನ್ನುಂಟು ಮಾಡಿದ್ದು ಸಾಮಾಜಿಕ ವಚನಗಳಲ್ಲಿ ನಿಚ್ಚಳವಾಗಿ ಕಾಣುತ್ತದೆ. ಶ್ರೀಗಳವರಿಗೆ ಸಮಾಜ ಸೇವೆಯೇ ಲಿಂಗಪೂಜೆ. ಸಮಾಜದೊಳಗಿನ ಕುಂದು ಕೊರತೆಗಳನ್ನು ಕಂಡು ಬಹಳ ನೊಂದಿರುವರು.

"ಸಾಕಾಯ್ತು ಈ ಜೀವನಕೆ,
ಸಮಾಜ ಸೇವೆಯ ಚಿಂತನೆ.
ಬೇಕಾಯ್ತು ನನಗೀಗ,
ನಿನ್ನ ಧ್ಯಾನದಾ ಚಿಂತನ.
ಸರ್ವರ ಸಹಕಾರ ಸ್ನೇಹ ಹಸ್ತವಿಲ್ಲದೆ
ಸಮಾಜ ಸುಧಾರಣೆ ಗೈಯುವುದೆಂತು ಹೇಳಾ"

ಎಂದು ಕೇಳುತ್ತಾರೆ.

ಸಾಮಾಜಿಕ ರಂಗದಲ್ಲಿ ಓಡಾಡಿ, ಸಿಹಿ ಕಹಿಗಳನ್ನು ಅನುಭವಿಸಿ ಆರತ ಕೆರೆಯುಂತಾಗಿದೆ ಅವರ ಮನಸ್ಸು. ಸಹಕಾರ ಸಂಘಟನೆಗಳ ಸವಿ ನೀರಿಲ್ಲದೆ, ಸಮಾಜ ವೃಕ್ಷ ಒಣಗುತ್ತಿರುವುದನ್ನು ಕಂಡು ಮರುಗಿ ಗುರುಸಿದ್ಧೇಶನಿಗೆ "ನಿನ್ನ ಕಾರುಣ್ಯವ ಕರುಣಿಸಿ ಬುದ್ಧಿಯ ಉದಕವ ನೆರೆದು ಸಲುಹುಬಾರದೆ" ಎಂದು ಕೇಳುತ್ತಾರೆ.

ಕೃತ್ರಿಮ ಪ್ರೇಮ ತೋರುವ ಹಿರಿಯರು ಮತ್ಸರಾಗ್ನಿಯಲ್ಲಿ ಬೇಯುತ್ತ ಆತ್ಮೀಯತೆಯ ಕರುಳಿಲ್ಲದ, ಹುರುಳಿಲ್ಲದ ಮಾತು, ನಡು ನೀರಲ್ಲಿ ಕೈ ಬಿಡುವ ಪ್ರವೃತ್ತಿಯ ಜನ ಎಲ್ಲೆಲ್ಲೂ ಕಾಣಸಿಗುತ್ತಾರೆ. ನಮ್ಮ ಸಮಾಜ ವ್ಯವಸ್ಥೆಯೇ ನಮಗೆ ಅಡ್ಡಿಯಾಗಿದೆ. ಧರ್ಮದ ಹೆಸರಿನಲ್ಲಿ ಯಾವ ಮೂಢನಂಬಿಕೆಗಳಿಗೂ ಒಳಗಾಗಬಾರದೆಂಬ ಮತ್ತು ಎಲ್ಲ ತಾತ್ವಿಕ ಸಿದ್ಧಾಂತಗಳನ್ನು ಪೂರ್ಣದೃಷ್ಟಿಯ ವೈಚಾರಿಕತೆಯಿಂದ ವಿಶ್ಲೇಷಿಸಬೇಕೆಂಬ ಶರಣರ ಸ್ವತಂತ್ರದೃಷ್ಟಿಯನ್ನು ಆಲೋಚನೆಯಲ್ಲಿ ಅಳವಡಿಸಿಕೊಳ್ಳಬೇಕೆಂಬ ದೃಷ್ಟಿಯಿದೆ. ಸಮತೆ, ಸ್ವಾತಂತ್ರ್ಯ ಭಾವೈಕ್ಯ, ದಯೆ, ಸತ್ಯ, ಶ್ರಮಗೌರವಗಳಂತಹ ಉದಾತ್ತ ತತ್ವಗಳು ವಚನಗಳಲ್ಲಿ ನಿರೂಪಿತವಾಗಿವೆ. ತುಳಿದು ಬಾಳುವ ಗರ್ವ ಹೋಗಿ ತಿಳಿದು ಬಾಳುವ ಭಾಗ್ಯ ಬರಬೇಕೆಂಬುದು ವಚನಕಾರರ ಆಶಯ. ತಲೆಗೊಂದು ಪಕ್ಷಕಟ್ಟಿ ಸಮಾಜ

ಮಂದಿರವನ್ನು ಸಂಹರಿಸುತ್ತಿರುವ, ಪ್ರತಿಷ್ಠಾಭೂತದ ಬೆನ್ನುಹತ್ತಿ ಶಕ್ತಿ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಿರುವ, ತನ್ನ ತೋಂಟದ ತರುಗಳ ತೊರೆದು ಅನ್ಯರ ತೋಂಟಕೆ ನೀರುಣಿ ಸುತ್ತ ದಿನಕ್ಕೊಂದು ಸಂಪ್ರದಾಯುವ ಸೇರುತ್ತಿರುವದರಿಂದ ಶಿವಸಮಾಜ ಒಡೆದ ಗಡಿಗೆ ಯಂತೆಯಾಗಿ ನಶಿಸುತ್ತಿದೆ. ಹೃದಯವಿಲ್ಲದ ಬುದ್ಧಿ ವ್ಯರ್ಥ, ಅದಕ್ಕಾಗಿ ಆತ್ಮ ನಿರೀಕ್ಷಣೆ ಆತ್ಮ ಶುದ್ಧಿ ಅವಶ್ಯವೆಂದು ಸಮಾಜ ಬಾಂಧವರನ್ನು ಎಚ್ಚರಿಸುತ್ತಾರೆ.

ಶ್ರೀ ಮೂಜಗಂ ಅವರು ವಿಶೇಷವಾಗಿ ವೀರಶೈವ ಸಮಾಜವನ್ನು ಕುರಿತು ವಿವರಿಸಿದ್ದಾರೆ. ವೀರಶೈವ ಸಮಾಜದಲ್ಲಿ ಗುರು-ವಿರಕ್ತರ ಸಮಸ್ಯೆ ಪ್ರಮುಖವಾಗಿದೆ.

"ನಾನು ಹೆಚ್ಚು ನೀ ಹೆಚ್ಚು ಎನ್ನುವುದೆ,
ಗುರು ವಿರಕ್ತರ ಮಂತ್ರವಾಗಬಾರದು ನೋಡಾ,
ಇಚ್ಛೆಗೆ ಬಂದಂತೆ ಮೆರೆವುದೆ,
ತಂತ್ರವಾಗಬಾರದು;
ಆತ್ಮ ಸೌಂದರ್ಯವನು ಗಳಿಸದೆ
ಸಮಾಜ ಹಿತಚಿಂತನೆಗೆಳೆಸದೆ
ಬರೀ ಅಹಂಕಾರದ ಗಿರಿಯನೇರಿ ಕುಳಿತವರನ್ನು ಕಣ್ಣೆತ್ತಿಯೂ

ನೋಡಲಾಗದು" ಎನ್ನುತ್ತಾರೆ.

ಗುರುವಿರಕ್ತರೆಂಬವರು ವೀರಶೈವ ಸಮಾಜ ಪುರುಷನ ಎರಡು ಕಣ್ಣುಗಳಿದ್ದಂತೆ. ಇವರು ಪರೆಬಂದ ಕಣ್ಣುಗಳಂತೆ ವರ್ತಿಸಬಾರದು. ಪರೆ ಹರಿದು ಮಂಗಳ ಭಾವೈಕ್ಯ ವಾದಾಗಲೇ ಸಮಾಜದ ಅಂಗಳ ಬೆಳಗುವದು ಎಂದು ತಿಳಿಸಿ,

"ಅವರವರ ಕರ್ತವ್ಯ ಅವರವರಿಗೆ
ಕ್ರಿಯಾಭಾಗವು ಗುರುಗಳಿಗಾಗಿ
ಜ್ಞಾನಭಾಗವು ಜಂಗಮರಿಗಾಗಿ
ಗುರು-ಜಂಗಮರೀರ್ವರು ಈ ರೀತಿ ನಡೆದರೆ
ಗುರು-ವಿರಕ್ತರ ಸಾಮರಸ್ಯಕ್ಕೆ ನಾಂದಿಯಾಗಿ
ಅಷ್ಟಾವರಣಕ್ರಮ ಸಿದ್ಧಿಪ್ರದು ನೋಡಾ."

ಎಂದು ಸಾಮರಸ್ಯದ ಮಾರ್ಗವನ್ನು ಸೂಚಿಸಿದ್ದಾರೆ. ತಿಳಿದವರು ತಿಳಿಯದವರನ್ನು ತಿಳಿಯದಂತೆ ಮರುಳುಗೊಳಿಸುತ್ತಿದ್ದಾರೆ, ಇದು ತಪ್ಪಬೇಕು. ಸಮಯ-ಭೇದಗಳಲ್ಲಿ ಹುರುಳಿಲ್ಲ, ಗುರು-ವಿರಕ್ತರಲ್ಲಿ ಭೇದವಿಲ್ಲ. ಒಳ ಪಂಗಡಗಳಲ್ಲಿ ಭೇದವಿಲ್ಲ. ಈ ಭೇದ ತ್ರಯ ಹೋದರೆ ವೀರಶೈವ ಷಟ್‌ಸ್ಥಲಧ್ವಜವು ಆಗಸದೆತ್ತರಕ್ಕೆ ಹಾರಲು ಸಾಧ್ಯ. ಮುಕ್ತಿ ಕಂಠಾಭರಣದ ರಾದ್ಧಾಂತ ವೀರಶೈವ ಸಮಾಜದಲ್ಲಿ ಎಬ್ಬಿಸಿದ ಗಲಿಬಿಲಿಯಿಂದ

ಶ್ರೀಗಳು ಬಹಳ ಕಸಿವಿಸಿಗೊಂಡು ಸಮಾಜದ ಸಾಮರಸ್ಯಕ್ಕೆ ಧಕ್ಕೆ ಉಂಟಾದದ್ದಕ್ಕಾಗಿ ಕಳವಳಗೊಂಡಿದ್ದನ್ನು ಕಾಣಬಹುದು.

"ವೀರಶೈವ ಸಮಾಜವೆಂಬ ವೃಕ್ಷವು
ಪಲ್ಲವಿಸಿ ಫಲವ ನೀಡದಂತೆ
ಒಳ ಪಂಗಡಗಳೆಂಬ ಕಸ ಕಡ್ಡಿಗಳು
ಬೆಳೆದು ಬೇರ ಬಿಟ್ಟಿಹವಯ್ಯಾ,
ಸುಧಾರಕರೆಂಬವರು ಪಂಗಡ ಬೆಳೆಸುತ್ತ
ಮರದ ಬೇರಿಂಗೆ ಬಿಸಿನೀರ ಸುರಿಯುತ್ತಿಹರಯ್ಯಾ,
ಮಾತಿನಲಿ ವೃಕ್ಷದಾ ಹರವು ದೋರಿ
ಕೃತಿಯಲ್ಲಿ ಪಂಗಡದ ಬೆಳೆಸುತಿಹ
ಜಾಣ್ಮೆ ತೋರುವರಯ್ಯಾ,
ಇದೆಂತಹ ವಿಶಾಲತೆ, ಇದೆಂತಹ ಸಮಾನತೆ,
ಇದೆಂತಹ ಮಾರ್ಗಾನುಸರಣೆ,
ಇದೆಂತಹ ಸಮಾಜ ಸುಧಾರಣೆ!" ಎಂದು ಅಳಲನ್ನು ತೋಡಿಕೊಂಡಿದ್ದಾರೆ.

ಹೃದಯ ಶುದ್ಧಿಯಿಂದ ಮಾತ್ರ ಭಾವೈಕ್ಯ ಸಾಧ್ಯ. ಧರ್ಮವಿಲ್ಲದೆ ಶಾಂತಿಯಿಲ್ಲ, ಶಾಂತಿಯಿಲ್ಲದೆ ಧರ್ಮವಿಲ್ಲವೆಂಬುದು ಅವರ ನಿಲವು.

೫

ಸಾಹಿತ್ಯ ರಚನೆ–ಉದ್ದೇಶ ವಚನ ಸಾಹಿತ್ಯದ ಹಿರಿಮೆಯನ್ನು ಹೇಳುವಾಗ ಕಾವ್ಯ ಕಲ್ಪನೆ ಆಲೋಚನೆ ಭಾವಗಳ ವಿದ್ಯುದಾಲಿಂಗನದಿಂದ ಕಾವ್ಯ ಕುಸುಮ ಅರಳುತ್ತದೆ ಎಂದಿದ್ದಾರೆ.

ಕವಿತಾಶಕ್ತಿಗೆ ಕಲ್ಪನೆಯೊಂದೇ ಸಾಲದು. ಧ್ಯಾನ, ವಿವೇಚನೆ, ಭಾವಂಗಳು ಕವಿತಾಶಕ್ತಿಗೆ ಪ್ರೇರಕ. ತಪವಿಲ್ಲದ ಕಾವ್ಯ ತೇಜವಿಲ್ಲದ ಗಾಜಿನ ಮಣಿಯಂತೆ. ಋಷಿಯಾಗದವನು ಕವಿಯಾಗಲಾರನೆಂಬುದು ಸತ್ಯ. ಸಾಹಿತ್ಯವೆಂದರೆ ಶಬ್ದದ ಪೋಣಿಕೆಯಲ್ಲ, ಕಲ್ಪನೆಯ ರೆಕ್ಕೆಯಲ್ಲ. ಸಾಹಿತ್ಯವೆಂದರೆ ಸರ್ವರಸ ಪರಿಪೂರ್ಣ, ಸದ್‌ಭಾವ ವಿಸ್ತೀರ್ಣ ಅನುಭವ–ಅನುಭಾವಗಳ ಅಮೃತಪಾಕವಾಗಬೇಕು ಎಂಬ ವಿಚಾರ ಹೊಂದಿದ್ದಾರೆ.

ವಚನ ಸಾಹಿತ್ಯವನ್ನು ಕುರಿತು,

ಶಿವಶರಣರ ಸಾಹಿತ್ಯ ಸೃಷ್ಟಿ ಆತ್ಮತುಷ್ಟಿಗೆ ಆಹಾರ, ಭಾವಪುಷ್ಟಿಗೆ ರಸಪಾಕ, ಶಿವೋಪಾಸಕರಿಗೆ ಕಲ್ಪತರು, ಸದ್‌ಭಕ್ತರಿಗೆ ಸದ್‌ದರ್ಪಣ. "ನಿನ್ನ ಶರಣರು ಒರೆದುದು ಬರೆದುದು ಏನಿದ್ದರೂ ಹಾಲ್‌ಜೇನು ಸವಿದಂತೆ" ಎಂದು ವಿವರಿಸಿದ್ದಾರೆ. ಆತ್ಮ

ಸೌಂದರ್ಯವನ್ನು ಬೆಳೆಸುತ್ತವೆ ಶರಣರ ನುಡಿಗಳು. ಮಹಾನುಭಾವಿಗಳ ವಚನ ಸಾಹಿತ್ಯವೇ ಶ್ರೀ ಮೂಜಗಂ ಅವರಿಗೆ ಮಾರ್ಗದರ್ಶಕವಾಗಿದೆ.

೬

"ಚಿತ್‌ಸುಮನ ವಚನಗಳಲ್ಲಿ ಸಾಮಾಜಿಕ ಜೀವದತ್ತ ದೃಷ್ಟಿಯನ್ನು ಹಾಯಿಸಲಾಗಿದೆ. ಸಾಧ್ಯವಾದಷ್ಟು ಷಟ್‌ಸ್ಥಲ ಸಿದ್ಧಾಂತದ ವಿವರಣೆಯುಳ್ಳ ವಚನಗಳನ್ನು ಅಲ್ಪ ಸ್ವಲ್ಪ ಬರೆಯಲಾಗಿದೆ." ಎಂದಿದ್ದರೂ ಷಟ್‌ಸ್ಥಲ ಸಿದ್ಧಾಂತದ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ವೀರಶೈವದ ಸ್ವರೂಪ, ಶಿವಯೋಗ, ಅಷ್ಟಾವರಣ, ಷಟ್‌ಸ್ಥಲಗಳನ್ನು ಮತ್ತು ವಿಶಾಲ ತತ್ವಗಳನ್ನು ಸಿಂಹಾವಲೋಕನವಾಗಿ ವಿವರಿಸಿದ್ದಾರೆ.

"ಲಿಂಗಾಂಗ ಸಾಮರಸ್ಯವು
ಸುಮ್ಮನೆ ಕುಳಿತು ಲಿಂಗವ ಪೂಜಿಸಿದೊಡೆ
ಬರುವುದೇನಯ್ಯಾ?
ಭಾವ ಭ್ರಮೆಯಡಗದೆ
ಮಾಯೆ ಮೋಹವಳಿಯದೆ
ಸಾಕಾರವಿಲ್ಲದ ಬಯಲಿನೊಳು ಕೂಡುವೆನೆಂದೊಡೆ
ಆಗುವುದೇನಯ್ಯಾ?
ಮಹಾಬಯಲೊಳಗೆ ಬಯಲಾಗಲು
ನಿರ್ಭಯ ಬೇಕಯ್ಯಾ.

೭

ಶ್ರೀ ಮೂಜಗಂ ಅವರ ನೀತಿಯ ವಚನಗಳು ಸಂದೇಶಗಳಂತಿವೆ. ಲೋಕದ ಅನುಭವ ವಚನಗಳಲ್ಲಿ ಚೆನ್ನಾಗಿ ವ್ಯಕ್ತವಾಗಿದೆ. ಒಳ್ಳೆಯದನ್ನು ಮೆಚ್ಚಿಕೊಳ್ಳುವ ಸಲ್ಲದ್ದನ್ನು ವಿವರಿಸಿ ಅದರಿಂದ ದೂರ ಇರುವಂತೆ ತಿಳಿಸುವ ಕಳಕಳಿ ವಿಶೇಷವಾಗಿದೆ. ಸಂಪತ್ತೆಂಬುದು ಆಪತ್ತು. ಅದು ಹೆಚ್ಚಿದಂತೆ ಕಾಯುವ ಚಿಂತೆ ಅತಿಯಾಗಿ ಶಾಂತಿಯ ಬಾಗಿಲು ಮುಚ್ಚುವುದು. ಕಾಯಕಪ್ಪದಿಂದ ಗಳಿಸಿದ ಹಣವು ಹಣವೇ ಅಲ್ಲ, ಅದು ನೀತಿಗೆ ಸಲ್ಲದು. ಲಿಂಗಪೂಜೆಗೂ ಸಲ್ಲದು. ಬಾಳಿನ ಹೂಬಳ್ಳಿಗೆ ಆಳಿಯಾಸೆಯ ಗೆದ್ದಲು ಹತ್ತಿದ್ದರಿಂದ ಸಂಪತ್ತೆಂಬುದು ಅವಗುಣಕ್ಕೆ ಆಹ್ವಾನವಾಗಿದೆ. ಅದಕ್ಕಾಗಿ ಭೌತಿಕ ಸಂಪತ್ತಿಗಿಂತ ಆತ್ಮ ಸಂಪತ್ತನ್ನು ಆರ್ಜಿಸಿಕೊಂಡರೆ ಕಾಡುವ ವೈರಿಗಳ ಕಾಟ ತಪ್ಪುವದು. ಪಾಪದ ಅರಿವು ಮಾನವನಿಗಿದ್ದರೆ ನೀತಿಯ ನೆಲೆಗಟ್ಟು ಭದ್ರವಾಗುವದು. ಹೃದಯ ಕಲ್ಮಷ ನಿವಾರಿಸಲು ನಿಂದಕರು ಇರಬೇಕು ಎಂದಿದ್ದಾರೆ.

ಕರಣಿಕ ಪ್ರಾಮಾಣಿಕನಾಗಿರಬೇಕು. ಪ್ರಾಮಾಣಿಕತೆ ಪೂರ್ವ ಪುಣ್ಯವಿಲ್ಲದೆ ಸಾಧ್ಯವಿಲ್ಲ. ಪ್ರಾಮಾಣಿಕರು ಇಂದು ಸಿಗುವುದು ದುರ್ಲಭ. ಕರ್ತವ್ಯದರಿವೇ ಪ್ರಾಮಾಣಿ

ಕತೆಯ ಒರೆಗಲ್ಲು. ದುಡಿಯುವವರಿಗೆ ಬೆಲೆಕೊಡಬೇಕು. ಪ್ರೋತ್ಸಾಹವಿಲ್ಲದ ದುಡಿಮೆ ಪರಿಮಳವಿಲ್ಲದ ಪುಷ್ಪ, ಸೌಂದರ್ಯವಿಲ್ಲದ ಸೌಧ.

ಮಾತು ಅಪೂರ್ವವಾದುದು. ಮಾತು ಜ್ಯೋತಿರ್ಲಿಂಗ ಯಾವಾಗ್ಗೆ ಅಂದರೆ ಅದು ಹಿತ–ಮಿತ; ಉಚಿತ–ಖಚಿತ; ಸತ್ಯ ಮತ್ತು ಸತ್ವಯುಕ್ತ; ಸ್ವಾರಸ್ಯ ಮತ್ತು ಸ್ವಾನುಭವಯುಕ್ತವಾದಾಗ. ಮಾತು ಒಂದು ಪ್ರೇಮ-ಕ್ರಿಯಾಶೀಲತೆ. ರಾಜ್ಯ-ಸಾಮ್ರಾಜ್ಯ; ನಿತ್ಯ ಸುಖ ಕೆಡಿಸಬಲ್ಲುದು. ಅಗುಳಿನಿಂದ ಅನ್ನದ ಪರೀಕ್ಷೆಯಾದಂತೆ ಮಾತಿನಿಂದ ಮನದ ಪರೀಕ್ಷೆಯಾಗುತ್ತದೆ. ಮಾತಿನಿಂದ ಪ್ರೀತಿ–ಭೀತಿ, ಸ್ಫೂರ್ತಿ–ಕೀರ್ತಿ, ಹಗೆತನ–ಕೆಳೆತನ, ಬಡತನ–ಸಿರಿತನ, ಸುಖ–ದುಃಖ ಲಭ್ಯವೆಂದಿದ್ದಾರೆ.

ಶ್ರೀಗಳವರು ಸಮಕಾಲೀನ ಬದುಕನ್ನು ತೀಕ್ಷ್ಣವಾಗಿ ಗಮನಿಸಿರುವುದು ಅವರ ಚಿಂತನಶೀಲತೆ ಮತ್ತು ಅಧ್ಯಯನದಿಂದ. ವಿದ್ಯಾರ್ಥಿಗಳು ಹೇಗಿರಬೇಕೆಂಬುದನ್ನು ಹೇಳುತ್ತ ಸತ್ಯದ ಹೆದ್ದಾರಿಯಲ್ಲಿ ವಿನಯ, ಒಳ ಹೊರಗಿನ ಸುಧಾರಣೆಯಿಂದ ಸಾಗಬೇಕಲ್ಲದೆ ಅಹಂಕಾರದಿಂದ ಪದವಿ–ಸೇವೆಗಳ ಸಂಪಾದನೆಗಾಗಿ ಸಾಗಿದರೆ ಭಾವವಿಲ್ಲದ ಪದ್ಯದಂತೆ ವ್ಯರ್ಥ ಎಂದಿದ್ದಾರೆ.

ನ್ಯಾಯಾಲಯಗಳು ದೇಗುಲಗಳು; ಸತ್ಯ–ನ್ಯಾಯ–ಪ್ರಾಮಾಣಿಕತೆ, ಮಾನವೀಯತೆ, ರಾಷ್ಟ್ರೀಯತೆಯನ್ನು ಎತ್ತಿ ಹಿಡಿದು ಮಾನವ–ಸಮಾಜದ ಒಳತಿಗೆ, ಸ್ವಾಸ್ಥ್ಯಕ್ಕೆ ಮಾರ್ಗದರ್ಶಕವಾಗಬೇಕು. ಆದರೆ ಇಂದು ಈ ನಿಯಮಗಳಿಗೆ ವ್ಯತಿರಿಕ್ತವಾಗಿರುವುದನ್ನು ಕಾಣಬಹುದು. ನ್ಯಾಯಾಲಯಗಳು ಸತ್ಯಕ್ಕೆ ಜಯ ನೀಡಬೇಕು. ಪ್ರಾಮಾಣಿಕತೆಯ ಒರೆಗಲ್ಲಾಗಬೇಕು. ಸಟೆಗೆ ದಿಟದ ಬಟ್ಟೆಯ ಹೊದಿಸಿ, ದಿಟಕೆ ಸಟೆಯ ವಸ್ತ್ರವ ಹೊದಿಸಿ ಅಯಥಾರ್ಥವನುಕರಿಸಿ ವಿಲಂಬವಾಗಿ ನಿರ್ಣಯ ನೀಡುವ ನ್ಯಾಯಾಲಯಗಳು ನ್ಯಾಯ ನಟನಾ ನಿಲಯಗಳೆಂದು ಅಭಿಪ್ರಾಯ ಪಟ್ಟಿದ್ದಾರೆ. ನ್ಯಾಯಾಧೀಶನು ನ್ಯಾಯನಿಷ್ಠುರಿಯಾಗಿರಬೇಕು. ಅಸತ್ಯ–ಅನ್ಯಾಯಗಳಿಗೆ ಅವಕಾಶ ಇರಬಾರದು. ನಿರ್ಣಯ ಸಾಧಾರದಿಂದ ಕೂಡಿದ್ದು ಸುವರ್ಣಾಕ್ಷರಗಳಲ್ಲಿ ಬರೆಯುವಂತಿರಬೇಕು. ದೇವ ಬಂದರೂ ಅಹುದೆಂದು ಮೆಚ್ಚಬೇಕೆಂದಿದ್ದಾರೆ.

ಆಧುನಿಕ ಬದುಕಿನ ಆಗು–ಹೋಗುಗಳ ಪ್ರತ್ಯಕ್ಷಗೊಳಿಸುವ ಮಾಧ್ಯಮ ಪತ್ರಿಕೆ. ಪ್ರಜಾಪ್ರಭುತ್ವದಲ್ಲಿ ಪತ್ರಿಕೆಗಳ ಸ್ಥಾನ ಹಿರಿದಾದುದು. ಅವು ಜನತಾ ಶಿಕ್ಷಣಾಲಯಗಳು. ಪತ್ರಿಕಾ ಧರ್ಮವನ್ನು ಮರೆತು ಪತ್ರಿಕೆಗಳು ಬೇಕೆಂದಾಗ ಮೇಲೆತ್ತುವುದು ಬೇಡೆಂದಾಗ ನೆಲಕೊತ್ತುವದು ಪತ್ರಿಕಾಧರ್ಮವಲ್ಲ. ಸಮದೃಷ್ಟಿ ಸಮತಾಭಾವ ಕಂಡು ಅರಿದು ಮನಮೆಚ್ಚಿ ಬರೆಯುವುದೇ ನಿಜವಾದ ಪತ್ರಿಕಾಧರ್ಮ ಎಂದು ಹೇಳಿದ್ದಾರೆ.

ಶ್ರೀಗಳವರಿಗೆ ಧರ್ಮಸ್ಥಳ ಪ್ರೀತಿಯ ಪುಣ್ಯಕ್ಷೇತ್ರವಾಗಿದೆ. ಮಂಜುನಾಥ ಭಾವೈಕ್ಯದ ಸಂಕೇತವಾಗಿದ್ದಾನೆ. ಭಕ್ತಿಗೆ ಭೇದವಿಲ್ಲ ಎಂಬುದಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿ

ದ್ದಾನೆ. ಮಂಜುನಾಥ ಶೈವ, ಪೂಜೆಗೆ ತುಳಿಸಿ-ಗಂಧ, ಅರ್ಚಕರು ಮಾಧ್ವರು, ಧರ್ಮಾಧಿಕಾರಿಗಳು ಜೈನರು, ಸರ್ವಧರ್ಮ ಸಮನ್ವಯವನ್ನು ಅನ್ನ ನೀಡುವ ರೀತಿ ಭಕ್ತಿ ಸಂಪದವನ್ನು ನೋಡಿ ಹರ್ಷಗೊಂಡಿದ್ದಾರೆ.

"ಪ್ರಪಂಚವೆಂಬುದೊಂದು ಬೀಸುವ ಕಲ್ಲು,
ಅದರೊಳು ತಿರುಗುವ ಕಾಳುಗಳೆ ಜೀವರಾಶಿ,
ಒಳಗಿರುವ ಕಿರುಗೂಟವೆ ಪರಶಿವ ವಸ್ತು,
ಅಂತಪ್ಪ ಕಿರುಗೂಟದಾಸರೆ ಪಡೆದು
ಬಾಳುತಿಹ ಕಾಳುಗಳೆ ಜೀವನಮುಕ್ತರು ನೋಡಾ."

ಎಂಬ ಪ್ರತಿಮೆಯಲ್ಲಿ ಬಹಳ ಸೊಗಸಾಗಿ ಸಂಸಾರದ ಬಗ್ಗೆ ಹೇಳಿದ್ದಾರೆ.

೮

ಬಾಳಿನ ವಿವಿಧ ಸನ್ನಿವೇಶಗಳು, ಅನುಭವಗಳು ಕವಿಯ ಹೃದಯಾಕಾಶದಲ್ಲಿ ಸೇರಿ ಘನೀಭೂತ ಮೋಡಗಳಂತೆ ಸಂಚರಿಸುತ್ತ ಇರುತ್ತವೆ. ಅನುಕೂಲ ಸಂದರ್ಭಕ್ಕಾಗಿ ಕಾಯುತ್ತವೆ. ಆವುದೊಂದು ಪ್ರಚೋದನೆಯಿಂದ ಆರ್ದ್ರತೆಯೊದಗಿದಾಗ ಕವಿಯ ಅನುಭವದ ಮೋಡ ಮಳೆಗರೆಯುತ್ತಿದೆ. ಹೀಗೆ ಕಾವ್ಯ ಅವತರಿಸುತ್ತದೆ. "ಬಾಳಸಾಗರದಲ್ಲಿ ಮುಳುಗಿ ಎದ್ದು ನೀಡಿದ ರತ್ನಗಳೇ ಚಿತ್ಸುಮನದ ವಚನಗಳು" ಹರ-ಗುರುಗಳ ಕೃಪೆಗಳ ಆಸರೆಯನ್ನು ಹಾರೈಸುತ್ತ ಧೀರತನದಿಂದ 'ಪಥಿಕ'ನಾಗಿ ವಚನಕಾರರು ಮುನ್ನಡೆದಿದ್ದಾರೆ.

ವಚನಕಾರರಿಗೆ ವಿಷಯ-ತತ್ವ ಮೊದಲಾದವುಗಳನ್ನು ಮನವರಿಕೆಯನ್ನುಂಟು ಮಾಡುವ ಕಳಕಳಿಯ ಭಾವವಿದೆ. ನೋವು-ನಲಿವು ದೇವರು-ಮೊದಲಾದ ಭಾವ ವಿಷಯಗಳು ಈ ವಚನಗಳಲ್ಲಿ ವ್ಯಕ್ತಗೊಂಡಿವೆ. ಪ್ರಾಸದ ಕಡೆಗೆ ಒಲವು ಹೆಚ್ಚಾಗಿರುವುದರಿಂದ ವಾಚ್ಯಾರ್ಥ ನುಸುಳಿದೆ. ಆದರೂ ಪದಸೌಂದರ್ಯ-ಪ್ರಾಸ-ಲಯದ ಬಳಕೆಯಿಂದ ವಚನಗಳಿಗೆ ಗೇಯತೆ, ಭಾವಪರತೆ, ಸೌಂದರ್ಯಾನುಭವ ವ್ಯಕ್ತಿನಿಷ್ಠತೆ ಉಂಟಾಗಿದೆ.

ಈ ವಚನಗಳ ಅಂತರ್ಯದಲ್ಲಿ ಪ್ರೀತಿ, ನೀತಿ ಜನತೆ (ಸಮಾಜ) ಆಚಾರದಿಂದ ಒಂದೇ ಧರ್ಮವಿದೆ, ಅದೇ ಮಾನವ ಧರ್ಮ. ಒಂದೇ ಪಥವಿದೆ, ಅದು ಶಿವಪಥ ಎಂಬ ಅಂಶ ಸ್ಥಾಯಿಯಾಗಿದೆ. ಬಸವಳಿದ ಬಾಳಿಗೆ ಆಸೆ, ಭರವಸೆ, ಸ್ವಾಂತನ ನೀಡುತ್ತವೆ ಈ ವಚನಗಳು. ಇಲ್ಲಿ ಆಧ್ಯಾತ್ಮಿಕ ಅಭೀಪ್ಸೆಯಲ್ಲಿ ಸಾಮಾಜಿಕ ಪ್ರಜ್ಞೆಯಿದೆ. ಸಮಕಾಲೀನ ಸಮಸ್ಯೆಗಳನ್ನು ದೌರ್ಬಲ್ಯಗಳನ್ನು ನೋಡುವ ವೈಚಾರಿಕ ದೃಷ್ಟಿಯಲ್ಲಿ ಸಾರ್ವಕಾಲಿಕ ಮೌಲ್ಯಗಳ ಅನುಸಂಧಾನವಿದೆ. ಆಂತರಿಕ ವೀಕ್ಷಣೆ ಸಾಮಾಜಿಕ ವಿವೇಚನೆಯಿದೆ. ತಮ್ಮ ಅನುಭವಕ್ಕೆ ಎಟಕಿದ್ದನ್ನು ಮಾತ್ರ ಹೇಳುವ ಪ್ರಾಮಾಣಿಕತನದ ಹಿರಿಮೆ ಇದೆ

ಅವರ ಜೀವನ-ಚಿಂತನ ಅಂತರ-ಮಂಥನಗಳಿಗೆಲ್ಲಾ ಶ್ರೀ ಗುರುಸಿದ್ಧೇಶನೇ ಆಧಾರವಾಗಿದ್ದಾನೆ.

ಇಲ್ಲಿಯ ವಚನಗಳು ಸಹೃದಯರ ಮನಸ್ಸು ಮುಟ್ಟಿ ಹೃದಯುವನ್ನು ಅರಳಿಸುತ್ತವೆ. ಮೂಲಭೂತವಾದ ಮೌಲ್ಯಗಳು ಅನುಭಾವಿಕ ಸ್ಪರ್ಶದಿಂದ ಇಂದಿನ ಜೀವನದ ಓರೆಕೊರೆಗಳನ್ನು ವಿಕೃತಿ-ವೈಪರೀತ್ಯಗಳನ್ನು ಸನ್ಮಾರ್ಗದ ಶಿವಪಥಕ್ಕೆ ತಿರುಗಿಸುವ ಕಳಕಳಿಯಿದೆ. ಜಡತೆಯನ್ನು ಹೊಡೆದೋಡಿಸಿ ಜೀವನ ಶ್ರದ್ಧೆಯನ್ನು ಮೂಡಿಸುವ ಪ್ರಚೋದಕ ಶಕ್ತಿಯ ಕಿಡಿಗಳಾಗಿವೆ. 'ವನಸುಮ'ದಂತೆ 'ಚಿತ್‌ಸುಮನ'ವು ಅರಳಿ ಸಂಸ್ಕೃತಿಯ ಸೌರಭವನ್ನು ಬೀರಬೇಕೆಂದು ಶ್ರೀಗಳು ಔಚಿತ್ಯಪೂರ್ಣ ಶಿರೋನಾಮೆಯನ್ನು ಕೊಟ್ಟಿದ್ದಾರೆ. ಅಂದರೆ ಚಿತ್‌ದಿಂದ ಚಿತ್‌ಸ್ವಾಸ್ಥ್ಯವನ್ನು ಪಡೆದವರಾಗಬೇಕಾದರೆ ಈ ಚಿತ್‌ಸುಮನದ ವಚನಗಳ ಆಚಾರ-ವಿಚಾರ ಉಳ್ಳವರಾಗಬೇಕು. ಇಲ್ಲಿ ಬುದ್ಧಿಶ್ರೀ ಭಾವಶ್ರೀ ಆತ್ಮಶ್ರೀಗಳು ಸಂಗಮಿಸಿವೆ.

ಒಂದು ಭಾವ, ಒಂದು ಅಭಿಪ್ರಾಯ ಪದೇ ಪದೇ ಬಂದರೂ ಒಂದೊಂದು ಸಲವೂ ಒಂದೊಂದು ರೀತಿಯಾಗಿ ಬಂದ ಕಾರಣ ಪುನರುಕ್ತಿ ದೋಷ ಉಂಟಾಗಿಲ್ಲ. ಇಲ್ಲಿ ವೈರಾಗ್ಯ ವಿಡಂಬನೆಗಳಿಗೆ ಬದಲಾಗಿ ಬೇಡಿಕೆ, ಪ್ರಾರ್ಥನೆಗಳಿವೆ. ಮಾತೃ ವಾತ್ಸಲ್ಯದ ಮುಗ್ಧ ಹೃದಯದ ಶ್ರೀ ಮೂಜಗಂ ಅವರು ವೈಭವಕ್ಕಾಗಿ ವರ್ಣನೆ, ಚಮತ್ಕಾರ, ಬುದ್ಧಿ ಪ್ರದರ್ಶನಕ್ಕೆ ಅವಕಾಶವನ್ನು ಕೊಡುವದಿಲ್ಲ. ಚಿತ್‌ಸುಮನದ ವಚನಗಳಲ್ಲಿ ಬಸವಣ್ಣನವರ ವಚನಗಳಲ್ಲಿಯ ಸರಳತೆ-ವ್ಯವಹಾರಿಕತೆ ಇದೆ. ಮಹಾದೇವಿಯಕ್ಕನ ವಚನಗಳ ಭಾವ-ಸೌಂದರ್ಯ ಕಲಾತ್ಮಕತೆಯಿದೆ. ಅಂಬಿಗರ ಚೌಡಯ್ಯನ ವಚನಗಳ ಖಂಡಿತವಾದಿತ್ವ ಅಲ್ಲಮನ ಅನುಭಾವ ಸಮ್ಮಿಳಿತವಾಗಿರುವುದರಿಂದ ಹೃದಯಕ್ಕೆ ತಂಪನ್ನೀಯುವ ಗುಣಹೊಂದಿವೆ. ಇಲ್ಲಿ ಕೃತ ಕತೆಗೆ ಎಡೆಯಿಲ್ಲದೆ ಸಹಜತೆ ಮೈವೆತ್ತಿದೆ. ಯಾರ ಸ್ತುತಿ ನಿಂದೆ ಹಿಗ್ಗದೆ-ಕುಗ್ಗದೆ ನಿಷ್ಠೆಯಿಂದ ಕಾವ್ಯಾರಾಧನೆಯಲ್ಲಿ ತೊಡಗಿದ್ದಾರೆ.

ಚಿತ್‌ಸುಮನದ ವಚನಗಳು ಜೀವನ ಸತ್ವದ ದೀಪಮಾಲೆಯಾಗಿವೆ. ತತ್ವಚಿಂತನ ಮಾಲೆ ಎನಿಸಿವೆ. ಮಾನವತೆಯ ಬಳ್ಳಿಗರಳಿದ ಮಂದಾರ ಪುಷ್ಪಗಳು; ದೇವತ್ವದ ಹಂದರವನ್ನು ಹತ್ತಿದ ದಿವ್ಯಪುಷ್ಪಗಳು ಈ ವಚನಗಳು.

# "ಚಿತ್ಸುಮನ ಸೌರಭ" : ಸಹೃದಯ ಸಮೀಕ್ಷೆ

ಸಹಾಯಕ ಸಂಪಾದಕರು ಶ್ರೀ ಪ್ರಹ್ಲಾದ ಪಂಢರಿ
ಸಂಯುಕ್ತ ಕರ್ನಾಟಕ ಹುಬ್ಬಳ್ಳಿ

ಕರ್ನಾಟಕದ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನವು ಹೊಸ ಅಧ್ಯಾಯವನ್ನು ತೆರೆಯಿತು. ಆಗ ನಡೆದ ವೀರಶೈವ ಆಂದೋಲನವು ಧಾರ್ಮಿಕ ಸಾಮಾಜಿಕ ರಂಗದಲ್ಲಿ ಮಾಡಿದ ಬದಲಾವಣೆಗಳು ಮಹತ್ತರವಾದವು. ವಚನ ಸಾಹಿತ್ಯದ ಸ್ಫೂರ್ತಿಯ ಸೆಲೆ ಶಿವಶರಣರ ಗಾಢವಾದ ಅನುಭಾವ. ಅಂತೆಯೆ ಇದು ಸಾಹಿತ್ಯದ ಲಕ್ಷಣಗಳೊಂದಿಗೆ ಧಾರ್ಮಿಕ ಸಾಮಾಜಿಕ ಹಾಗೂ ಅನುಭಾವದ ತಿರುಳನ್ನು ತಿಳಿಸುವ ಹೊಸ ಸಾಹಿತ್ಯ ಪರಂಪರೆಯೆನಿಸಿತು. ಬಸವಾದಿ ಪ್ರಮಥರ ಕಾಲದಲ್ಲಿ ತುಂಬಿ ಸೂಸಿದ ಈ ಸಾಹಿತ್ಯ ಭಾಗೀರಥಿಯು ಅನಂತರದ ಕಾಲದಲ್ಲಿ ಗುಪ್ತಶಾಲ್ಮಲೆಯಾಗಿ ಹರಿದಿರುವದುಂಟು. ಇಪ್ಪತ್ತನೆಯ ಶತಮಾನದ ಈ ಮೂರು ನಾಲ್ಕು ದಶಕಗಳಲ್ಲಿ ಅನೇಕ ಬಗೆಯ ವಚನ ಕಾರರು ತಮ್ಮ ಅನುಭವಗಳನ್ನು ವಚನಗಳ ರೂಪದಲ್ಲಿ ನಿರೂಪಿಸಿರುವದು. ಶ್ರೀ ಮೂರುಸಾವಿರಮಠದ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಆಧುನಿಕ ವಚನ ಕಾಲದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ.

ಶ್ರೀಗಳು ಅಲ್ಲಮಪ್ರಭು ಸಂಪ್ರದಾಯದ ಜಗದ್ಗುರು ಪೀಠಾಧಿಪತಿಗಳಾಗಿದ್ದರೂ ಸಕಲ ಸಮಾಜಕ್ಕೆ ವಂದ್ಯರು. ಜಾತೀಯ ಭಾವೈಕ್ಯವನ್ನು ಸಾಧಿಸುವಲ್ಲಿ ಅವರು ವಹಿಸಿದ ಪಾತ್ರ ತುಂಬ ಪ್ರಶಂಸಾರ್ಹ. ಎಲ್ಲ ಕೋಮುಗಳವರು ಅವರಲ್ಲಿಟ್ಟ ವಿಶ್ವಾಸ ಅಗಾಧ. ಶ್ರೀಗಳ ವ್ಯಕ್ತಿತ್ವವೇ ಅಂತಹದು. ವಿದ್ಯಾದಾನ, ಅನ್ನದಾನ, ಪುಸ್ತಕ ಪ್ರಕಟನೆ, ಆರೋಗ್ಯ ಸಂಸ್ಥೆಗಳ ಸ್ಥಾಪನೆ, ಸಮಾಜಸೇವೆ ಹೀಗೆ ಅವರ ಹವ್ಯಾಸ, ಚಟುವಟಿಕೆಗಳು ಬಹು ವಿಧ. ಇಷ್ಟೆಲ್ಲ ಸಾಮಾಜಿಕತೆಯ ನಡುವೆಯು ತಮ್ಮ ಶಿವಪೂಜೆ, ಅನುಷ್ಠಾನಗಳನ್ನು ಮಾಡಿ ಮಠದ ಕಾರ್ಯನಿರ್ವಹಣೆಯನ್ನು ತುಂಬ ಚಾಕಚಕ್ಯತೆಯಿಂದ ಮಾಡುತ್ತಿರುವದು ಯಾರಿಗೂ ಅಚ್ಚರಿಯನ್ನುಂಟು ಮಾಡುತ್ತಿದೆ. ಪಾಂಡಿಚೇರಿಯ ಅರವಿಂದಾಶ್ರಮ ದರ್ಶನ, ವಿಶ್ವಹಿಂದೂ ಸಮ್ಮೇಲನದಲ್ಲಿಯ ಸಕ್ರಿಯ ಪಾತ್ರ-ವಿದೇಶ ಪರ್ಯಟನ ಮೊದಲಾದವು ಅವರ ಕಾರ್ಯವ್ಯಾಪ್ತಿಯ ವೈಶಾಲ್ಯಕ್ಕೆ ನಿದರ್ಶನ. ಹೀಗಿದ್ದರೂ ಅವರು ಅಂತರಂಗದಲ್ಲಿ ಶಿವಭಕ್ತ ಕವಿ. ವಿದ್ಯೆ ವಿನಯಗಳ ತುಂಬಿದ ಕೊಡ ಅವರು.

ಪ್ರಸ್ತುತ ಚಿತ್ಸುಮನವು ಅವರು ಮೊದಲಿಗೆ ಬರೆದ ವಚನಗಳ ಸಂಕಲನವು. ಅವರ ಜೀವನ, ಸಾಧನೆ, ಅನುಭಾವ ಸುತ್ತಲ ಪರಿಸರದ ಬಗೆಗಿನ ಕವಿ ಹೃದಯದ ಸ್ಪಂದನ,

ಸಾಮಾಜಿಕ ಕಳಕಳಿ, ಆಧ್ಯಾತ್ಮಿಕ ಆರ್ತಭಾವ, ವೀರಶೈವ ತತ್ತ್ವಗಳ ಸಹಜ ಸರಳ ನಿರೂಪಣೆ ಮೊದಲಾದವೆಲ್ಲ ಈ ಸಂಕಲನದ ವೈಶಿಷ್ಟ್ಯ.

ಮೊದಲ ವಚನಗಳಲ್ಲಿ ಕರ್ತೃ ಗುರು ಸಿದ್ಧೇಶ್ವರನ, ಬಸವಣ್ಣನವರ ಮಹಿಮೆಯ ಬಣ್ಣನೆ ಇದೆ. ಮೂಜಗಂ ವಚನಗಳಲ್ಲಿ ತಮ್ಮ ಬಾಲ್ಯಜೀವನದ ಬಗೆಗೂ ಹೇಳಿದ್ದಾರೆ. ಅವರು ಹುಟ್ಟಿದುದು ಸಸಿನಾಳದಲ್ಲಿ ಹಾನಗಲ್ ಕುಮಾರೇಶನ ವರಪ್ರಸಾದದಿಂದ. ಚಿತ್ತರಗಿ ಶ್ರೀ ವಿಜಯ ಮಹಾಂತೇಶ ಪೀಠವೇರಿದ ಅವರು ಶಿವಯೋಗಮಂದಿರದಲ್ಲಿ ಪ್ರಾರಂಭಿಕ ಶಿಕ್ಷಣವನ್ನು ಪಡೆದರು. ಅನಂತರ ಕಾಶಿ ಕ್ಷೇತ್ರದಲ್ಲಿ ಅವರ ವಿದ್ಯಾಭ್ಯಾಸ ಮುಂದುವರಿಯಿತು ಆಗಲೇ ಹುಬ್ಬಳ್ಳಿಯ ಮೂರುಸಾವಿರಮಠವು ಅವರನ್ನು ಕೈಬೀಸಿ ಕರೆ ತಂದಿತು. ಅಂದಿನಿಂದ ಸುಮಾರು ಮೂವತ್ತು ವರ್ಷಗಳವರೆಗೆ ಅವರು ಧಾರ್ಮಿಕ ಚಟುವಟಿಕೆಗಳು ಸಮಾಜಸೇವೆ ಇವುಗಳೊಂದಿಗೆ ಸಾಹಿತ್ಯಕೃಷಿ ಮೂರನ್ನು ಒಂದೇ ಸಮನಾಗಿ ಮಾಡುತ್ತ ಬಂದಿರುವರು. ತನುವೆಂಬ ತೋಟದಲ್ಲಿ "ಚಿತ್‌ಸುಮನ" ಅರಳಿ ಹುದು. "ಬಗೆಯ ಹೂಬಳ್ಳಿಯೊಳು ಆತುಮದ ಕೋಗಿಲೆ ಕೂಗುತ್ತಿಹುದು" ಕವಿಯ ಮನಸ್ಸು ಅರಳಿದೆ, ಕೋಗಿಲೆ ಕೂಗಿದೆ. ಅನುಭವದ ಪರಿಪಾಕ. ಧ್ಯಾನಸಾಧನಗಳ ಮಾರ್ಗ ಸಾಧಕನ ಆರ್ತಧ್ವನಿ, ಮೋಹ ನಿರಸನ; ಒಂದೊಂದು ಕವಿ ಹೃದಯದ ಅಂತರಾಳದಿಂದ ಹೊರಚಿಮ್ಮಿವೆ. ಸಾಧಕನನ್ನು ಮೋಹ ಧೃತಿಗೆಡಿಸುತ್ತದೆ, ಜೀವನವ್ಯೋಮದಲ್ಲಿ ಕಾರ್ಮೋಡಗಳು ಕವಿಯುತ್ತವೆ. ಆಗ ಗುರುಕಾರುಣ್ಯವೇ ಮುನ್ನಡೆಸುತ್ತದೆ. "ಓಡುವ ಕುದುರೆಗೆ ಕಡಿವಾಣದಿರದಿರೆ, ಒಡೆಯನ ಮಾತು ಕೇಳಲಾರದು" ಮನಸ್ಸಿನ ಬಣ್ಣನೆಗೆ ಕುದುರೆಯ ಉಪಮೆ ಇಲ್ಲಿವೆ. ಪಂಜರದ ಗಿಳಿಯು ವನಾಂತರವ ನೆನೆದಂತೆ ಮೊದಲಾದ ವೆಲ್ಲ ಮನಃ ಸ್ಥಿತಿಯನ್ನು ಚೆನ್ನಾಗಿ ನಿರೂಪಿಸುತ್ತವೆ.

ಶ್ರೀಗಳ ವಚನಗಳಲ್ಲಿ ಮನಮುಟ್ಟುವ ಉಪದೇಶವಿದೆ. ಉಪಮೆ ರೂಪಕಗಳ ಮೂಲಕ, ಅವರು ಹೇಳುವ ರೀತಿ ಹೃದ್ಯವಾಗಿದೆ "ಮತ್ಸರಾಗ್ನಿಗೆ ಮನವನ್ನಿತ್ತರೆ, ಆತ್ಮಶಾಂತಿಯಿಲ್ಲದಯ್ಯ" "ಸಂಪತ್ತೆಂಬುದು "ಆಪತ್ತು ನೋಡಾ" "ಭಾಂಡವನು ಒಳಗೆ ತೊಳೆಯದೆ, ಮೇಲೆ ತಿಕ್ಕಿದರೇನು?" "ತತ್ತ್ವವು ಮಾತಿನಲಿ ತುಂಬಿದ್ದರೇನು? ಕೃತಿಯೊಳಗೆ ಇಳಿಯದನ್ನಕ್ಕರ?"

ಕಾಡುವವರು ಬೇಡುವವರ ಬಗ್ಗೆ ಅವರಿಗೆ ಲಕ್ಷ್ಯವಿಲ್ಲ ಅವರಿಗೆ ಬೇಕಾಗಿರುವರು ಗುರುವಿನ ಅಡಿಯ ಪಿಡಿಯುವಮೊಂವೆ. "ದೂಷಿಸುವವರು ದೂಷಿಸಲಿ, ಅದು ಅವರ ಕರ್ಮವಯ್ಯಾ" ದೂಷಕರ ಬಗ್ಗೆ ಅವರಿಗೆ ಔದಾಸೀನ್ಯ.

ಶ್ರೀಗಳ ವಚನ ರಚನೆಯ ಹಿಂದೆ ಬಹಳಷ್ಟು ಸಾಹಿತ್ಯಾಭ್ಯಾಸವಿದೆ, ಪ್ರಭಾವವಿದೆ. ತಾತ್ತ್ವಿಕ ಹಿನ್ನೆಲೆ ಇದೆ. ಅದನ್ನೆಲ್ಲ ತಮ್ಮದೇ ಆದ ರೀತಿಯಲ್ಲಿ ನಿರೂಪಿಸುವ ಕಲೆ ಅವರಿಗೆ ಸಾಧಿಸಿದೆ.

ನಡೆಯುವವರೆಡಹದೆ ಕುಳಿತವರೆಡಹುವರೇ ಎಂಬ ರಾಘವಾಂಕನ ಮಾತನ್ನು "ನಡೆವರಿಗೆ ಕಲ್ಲುಮುಳ್ಳು ತಾಗುವದಲ್ಲದೆ ಕುಳಿತವರಿಗೆ ತಾಗುವದೇನಯ್ಯಾ" ಎಂಬ ಶ್ರೀಗಳ ಮಾತಿನೊಂದಿಗೆ ಹೋಲಿಸಬಹುದು. ಅದೇ ರೀತಿ ಮನಬಂದಂತೆ ಕುಣಿವ ಮಂಗನಂತೆ ಎಂಬುದು ಮನವೆಂಬ ಮರ್ಕಟನ ನೆನಪಿಗೆ ತರುತ್ತಿದೆ. "ಮಾತಿನಲ್ಲಿ ಸಿಹಿ ತುಂಬಿ; ಎದೆಯೊಳಗೆ ಕಹಿ ತುಂಬಿ" ಮಧು ತಿಷ್ಠತಿ ಜಿಹ್ವಾಗ್ರೆ ಸುಭಾಷಿತದ ಪ್ರಭಾವವಲ್ಲವೆ?

"ಮಾತು ಮುತ್ತಾದರೆ,
ಮಾತು ಮಾಣಿಕ್ಯವಾದರೆ
ಓಡುಬಂದ ಕತ್ತಲೆ ಸೋತು ಹೋದೀತು
ಆಡುವ ಭಾಷೆ ಜನ ಮೆಚ್ಚುವಂತಿರಬೇಕು"

ಮಾತಿನ ಮಹಿಮೆಯನ್ನು ಶ್ರೀಗಳು ಇಲ್ಲಿ ವಿವರಿಸಿದ್ದಾರೆ. ಇಲ್ಲಿಯ ಕಾವ್ಯದ ಸೆಳೆ ಮಿಂಚು ಮೋಹಕವಾಗಿದೆ. "ಶಿವಪೂಜೆ ಮಾಡುವೆನಯ್ಯಾ ಮನ ನಿಲಲೆಂದು, ವಿಷಯಗೆಲ್ಲಲೆಂದು ಶಿವಪೂಜೆ ಮಾಡುವೆನಯ್ಯಾ"

ಶಿವಪೂಜೆ ಏಕೆ ಮಾಡಬೇಕು ಅದರ ಉದ್ದೇಶವೇನು? ಎಂಬುದಕ್ಕೆ ಶ್ರೀಗಳತ್ತ ವ್ಯಾಖ್ಯೆ ಅದರ ಮಹತ್ವವನ್ನು ಪಂಡಿತ ಪಾಮರರಿಗೆ ತಿಳಿಸುತ್ತದೆ. ಅದೇ ರೀತಿಯಾಗಿ ದಯೆಯೆ ಧರ್ಮದ ಮೂಲವೆಂದು ಬಸವಣ್ಣನವರು ಹೇಳಿದುದನ್ನು ಶ್ರೀಗಳು ತಮ್ಮ ವಚನಗಳಲ್ಲಿ ವಿವರಿಸಿ ವ್ಯಾಖ್ಯಾನ ಮಾಡಿದ್ದಾರೆ. ವಿದ್ಯಾರ್ಥಿ, ಗುರುಜಂಗಮರು ಹೇಗಿರಬೇಕು ಅವರ ಕರ್ತವ್ಯಗಳೇನು ಲಿಂಗವಂತರಾರು ಎಂಬುದಕ್ಕೆ ಇಲ್ಲಿ ವಿವರಣೆ ಇದೆ. ಮೌನದ ಮಹತ್ವವಿದೆ. ಲಿಂಗಮಹಿಮೆ, ಜಂಗಮ, ಪ್ರಸಾದ, ಭಸ್ಮ,ರುದ್ರಾಕ್ಷಿ, ಪಂಚಾಕ್ಷರ, ಭಕ್ತಿ, ಜಪ, ಅರ್ಚನೆ, ಮಾಹೇಶ್ವರ ಮೊದಲಾದ ವೀರಶೈವ ಧರ್ಮದ ಅನೇಕ ಮಹತ್ವದ ತಾತ್ತ್ವಿಕ ವಿಷಯಗಳು ಇಲ್ಲಿ ಸರಳ ಸುಂದರವಾಗಿ ನಿರೂಪಿತವಾಗಿರುವುದಕ್ಕೆ ಕಾರಣ ಶ್ರೀಗಳ ಪಾಂಡಿತ್ಯ, ಸಾಧನೆ, ಸಮಾಜಕ್ಕೆ ದಾರಿ ತೋರಬೇಕೆಂಬ ಕಳಕಳಿ ಎನ್ನಬಹುದು.

ಕವಿ, ಸಾಧಕನ ಸಂವೇದನೆ, ಆರ್ತಧ್ವನಿ ಭಕ್ತಿಭಾವದ ಕರೆಗಳು ಹಲವು ವಚನಗಳ ಸಾರವಾಗಿದ್ದರೆ ಜೀವನ ಯಾತ್ರೆಯಲ್ಲಿ ತಾವು ಮಾಡಿದ ಕಾರ್ಯಗಳ ಪರಿಚಯ ಇನ್ನು ಕೆಲ ವಚನಗಳಲ್ಲಿದೆ. ಅಹಂಕಾರ, ಮನೋವಿಕಾರಗಳನ್ನು ಗುರು ಮತ್ತು ದೇವರಿಗೆ ಶರಣ ಹೋಗುತ್ತಿರುವ ಚಿತ್ರಗಳು ಇಲ್ಲಿ ಸ್ಫುಟವಾಗಿ ಕಾಣುತ್ತಿವೆ. ಶ್ರೀ ಮೂಜಗಂ ಸಮಾಜದಲ್ಲಿಯ ಡಾಂಭಿಕತನವನ್ನು ನೋಡಿ ಕೊರಗಿದ್ದಾರೆ. ತಮ್ಮ ನೋವನ್ನು ಶಬ್ದಗಳಲ್ಲಿ ಮೂಡಿಸಿದ್ದಾರೆ ಪಕ್ಷ ಪಂಗಡ, ಗುರುವಿರಕ್ತರ ಕಲಹ, ಮೊದಲಾದವೆಲ್ಲ ಅವರ ಚಿಂತನೆಯ ವಸ್ತುಗಳಾಗಿವೆ ಅವುಗಳ ಪರಿಹಾರವು ಆ ವಚನಗಳಲ್ಲಿದೆ. "ಗುರುವಿರಕ್ತರೆಂಬವರು ಸಮಾಜ ಪುರುಷಂಗೆ ಕಣ್ಗೆರೆಡು ನೋಡಾ" ಎಂದು ಸ್ಪಷ್ಟವಾದ ಅಭಿಪ್ರಾಯ ನೀಡಿದ್ದಾರೆ. ಹೊಂದಾಣಿಕೆ ಅತ್ಯವಶ್ಯ. ಸಮಾಜವು ಒಡೆಧ ಗಡಿಗೆಯುಂತಾಗಿರುವದು ಅವರಿಗೆ

ನೋವನ್ನು ಮಾಡಿದೆ. "ತಲೆಗೊಂದು ಪಕ್ಷವ ಕಟ್ಟಿ ಸಮಾಜ ಮಂದಿರ ಸಂಹರಿಸುತ್ತಿಹರು, ನೋಡಯ್ಯ" ಸಮಾಜದ ಬಗೆಗಿನ ಅವರ ಕಳಕಳಿ ಇಲ್ಲಿ ಸುವ್ಯಕ್ತವಾಗಿದೆ.

ಚಿತ್ಸುಮನದ ಎರಡುನೂರಾಮೂವತ್ತು ವಚನಗಳು ಸಾಹಿತ್ಯ ವೀರಶೈವ ತತ್ತ್ವ ಪರಿಚಯ, ಸಮಾಜದ ಬಗೆಗಿನ ಶ್ರೀಗಳ ಕಳಕಳಿ ಮೊದಲಾದವುಗಳ ದೃಷ್ಟಿಯಿಂದ ಮಹತ್ವದ್ದಾಗಿವೆ. ವಚನಗಳ ವೈಶಿಷ್ಟ್ಯವು ಮೂಲತಃ ಅನುಭಾವ ಹಾಗೂ ವೀರಶೈವ ಧರ್ಮದ ತಿರುಳನ್ನು ಅವಲಂಬಿಸಿದೆ. ಅಂತೆಯೇ ವಚನ ಸಾಹಿತ್ಯವು ಸಾಹಿತ್ಯಕ ಸೊಬಗಿನೊಂದಿಗೆ ಅನುಭಾವ ಧರ್ಮಗಳ ದಟ್ಟ ಹಿನ್ನೆಲೆಯಿಂದ ಪ್ರಭಾವಿತವಾಗಿದೆ. ಶ್ರೀಗಳವರ ವಚನಗಳಲ್ಲಿ ಸಾಕಷ್ಟು ಸ್ಥಳಗಳಲ್ಲಿ ಕಾವ್ಯದ ಮಿಂಚಿನ ಬಳ್ಳಿ ಜಗಮಗಿಸಿದೆ, ಕಾವ್ಯಶಕ್ತಿ ಅನುಭಾವಗಳ ಕೂಡಲ ಸಂಗಮವಾಗಿರುವ ಈ ವಚನಗಳ ಸಂಕಲನವು ಅವರ ಕಾವ್ಯ ಗಂಗೆಯ ಆಳ ಅಗಲಗಳ ನಿದರ್ಶನವಾಗಿದೆ. ಚಿತ್‌ಸುಮನವು ಅರಳಿ ತನ್ನ ಸೌರಭವನ್ನು ಹೂಬಳ್ಳಿಯ ಮರದಲ್ಲಿ ಬೀರುತ್ತಿದೆ. ಅದರ ಗಮಗಮಿಸುವ ಪರಿಮಳವು ದೇಶದಲ್ಲಷ್ಟೇ ಅಲ್ಲ; ವಿದೇಶಗಳಿಗೂ ಹಬ್ಬಿದೆ. ಅವರ ವಚನಗಳ ಚಿತ್‌ಸುಮನದ ಬೆಳವಣಿಗೆಯು ಅವರ ನಂತರದ ಕೃತಿಗಳಲ್ಲಿ ಇನ್ನಷ್ಟು ಸುಂದರವಾಗಿ ಚಿತ್ರಿತವಾಗಿದೆ.

# ಶ್ರೀ ಮೂಜಗಂ ಅವರ "ಚಿತ್ಸುಮನ":

## ಚಿಂತನ ಚಲುವಿಗೆ ಒಂದು ಔತಣ

ಹಂದಿಗುಂದ ಶ್ರೀ ಶಿವಾನಂದದೇವರು ಸಿದ್ಧೇಶ್ವರಮಠ

ಎಂಟನೆಯ ಶತಮಾನ ವಚನ ಸಾಹಿತ್ಯದ ಉಗಮದ ಕಾಲವೆಂದು೧ ಇತ್ತೀಚಿನ ಸಂಶೋಧಕರು ಊಹೆ ಮಾಡಿದ್ದಾಗಿ ತಿಳಿಯುತ್ತದೆ. ಗದ್ಯ–ಪದ್ಯಗಳ ಜತೆಜತೆಯಾಗಿ ಹರಿದು ಬಂದ ಈ ವಿಶಿಷ್ಟ ಪ್ರಕಾರ ಕನ್ನಡ ಸಾಹಿತ್ಯಕ್ಕೊಂದು ಶಿವಶರಣರ ಹಿರಿಯ ಕೊಡುಗೆ. "ವಚನ ಸಾಹಿತ್ಯವೆಂದರೆ ಕನ್ನಡದ ಬೇಸಾಯಗಾರರ ಬೆವರಿನ ಬೆಳೆ, ಕನ್ನಡದ ಸ್ವಾರ್ಜಿತ ಆಸ್ತಿ ಎಂಬ ಮಾತಿನಲ್ಲಿ ವಾಸ್ತವತೆ ಇದೆ" ಎನ್ನುವದರಲ್ಲಿ ಅನುಮಾನವೇ ಇಲ್ಲ. ೧೨ನೇ ಶತಮಾನದಲ್ಲಿ ವ್ಯಾಪಕವಾಗಿ ಬೆಳೆದ ನಂತರ ಇದೀಗ ವಚನಗಳ ರಚನೆಗೆ ಮರಳಿ ಉಕ್ಕು ಬಂದಿದೆ. ಹಲವರು ಈ ಪ್ರಕಾರವನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಗುರುತಿಸಿಕೊಳ್ಳುತ್ತಿದ್ದು, ಅದರಲ್ಲಿ ಪ್ರಗತಿ ಸಾಧಿಸಿದ ಕೆಲವರಲ್ಲಿ: ಶ್ರೀಮೂಜಗಂ ಅವರೂ ಮುಖ್ಯರು.

ಮೂರುಸಾವಿರಮಠದ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾ ಸ್ವಾಮಿಗಳವರು "ಮೂಜಗಂ" ಕಾವ್ಯನಾಮದೊಂದಿಗೆ ಕನ್ನಡ ಸಾರಸ್ವತಲೋಕಕ್ಕೆ ಪರಿಚಿತ ರಾದವರು. ಅವರ ಕೃತಿಗಳು ಮೌಲ್ಯತೆ, ಸಂಖ್ಯೆ ದೃಷ್ಟಿಯಿಂದಲೂ ಹಿರಿದಾದವುಗಳು. ಸಾಧಕ ಜೀವನದಲ್ಲಿಯೇ ಬರೆಯುವ ಕಲೆಯನ್ನು ರೂಢಿಸಿಕೊಂಡ ಪೂಜ್ಯರು, ಹಲವು ಕವನ ಸಂಕಲನಗಳನ್ನು ಹೊರ ತಂದುದಲ್ಲದೆ ಶರಣಸಾಹಿತ್ಯ, ಮೈಸೂರ ಸ್ವಾರ ಮುಂತಾದ ಪತ್ರಿಕೆಗಳಲ್ಲಿ ಅಂದು ಅಗ್ರಲೇಖನಗಳನ್ನು ಬರೆದುದು ಅವರ ಧೀಮಂತಿಕೆಗೆ ಉಜ್ವಲ ಸಾಕ್ಷಿ. ಒಂದೆಡೆ ಕವಿಗಳಾಗಿ, ಪ್ರಕಾಶಕರಾಗಿ ಸಾಹಿತ್ಯ ಸೇವೆ ಮಾಡಿದರೆ ಮತ್ತೊಂದಡೆ ನಾಡಿನ ಜಗದ್ಗುರುಗಳಾಗಿ, ಅನಾಥರ ಉದ್ಧಾರಕ್ಕಾಗಿ, ಕರ್ಮಯೋಗಿ ಸಿದ್ಧರಾಮರಾಗಿ, ಶಿಕ್ಷಣ ಕ್ಷೇತ್ರದ ಅಧ್ವರ್ಯುಗಳಾಗಿ, ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ಪ್ರವರ್ತಕರಾಗಿ ಜತೆಗೆ ವಿವಿಧ ರಂಗಗಳಲ್ಲಿ ಸಲ್ಲಿಸಿದ ಸೇವೆ ಅಪಾರ. ತಮ್ಮ ಇಳಿವಯದಲ್ಲಿಯೂ ಬರೆಯುವ, ದುಡಿಯುವ ಅವರ ಹುಮ್ಮಸ್ಸು ಯುವಕರನ್ನು ಸಹ ನಾಚಿಸುವಂತಹದ್ದು. ಸತತ ದುಡಿಮೆಯ ಫಲದಿಂದ ಸಮಾಜದ ಸರ್ವಾಂಗೀಣ ಪ್ರಗತಿ ಸಾಧಿಸುತ್ತಿರುವ ಪೂಜ್ಯಶ್ರೀ ಸನ್ನಿಧಿಯವರದು: ಬಹುಮುಖ ವ್ಯಕ್ತಿತ್ವ. "ಚಿತ್ಸುಮನ" ಪೂಜ್ಯರ ಪ್ರಥಮ

೧ ವಚನಸಾಹಿತ್ಯ: ಐಘಟದೂರ ರಾಮೇಶ್ವರರ ವಚನಗಳು
ಪ್ರಕಟನೆ: ಕನ್ನಡ ಸಾಹಿತ್ಯ ಪರಿಷದ್

ವಚನಗಳ ಸಂಕಲನ. ಇದರಲ್ಲಿ ಮೂಡಿಬಂದ ವಚನಗಳು ಕೇವಲ ಯಾರಿಗೋ ಉಪದೇಶ ಮಾಡಲೆಂದೋ ಪಾಂಡಿತ್ಯ ಪ್ರದರ್ಶನಕ್ಕೆಂದೋ ಬರೆದವುಗಳಲ್ಲ. ಅವುಗಳಲ್ಲಿ ಸಾಧನಾ ಮಾರ್ಗದಲ್ಲಿರುವ ಸಾಧಕನ ತೀವ್ರತೆಯು ತುಡಿತವಿದೆ. ಮುಮುಕ್ಷುವಿನ ಹಂಬಲವಿದೆ. ಯೋಗಿಯ ಸ್ಥಿತಪ್ರಜ್ಞತ್ವವಿದೆ. ಸಾಮಾಜಿಕ ಅನಿಷ್ಟಗಳನ್ನು ಸರಿಪಡಿಸುವ ಕ್ರಿಯಾ ಶೀಲತೆಯ ಜತೆಗೆ ಆತ್ಮಾನುಸಂಧಾನತೆಯ ರಹಸ್ಯವಿದೆ. ಹೀಗೆ ಹಲವು ಚಿಂತನಗಳಲ್ಲಿ ಹರಡಿಕೊಂಡ ವಚನಗಳ ರಚನೆಗೆ ತಾವು ಕೈಹಾಕಿದ್ದೇಕೆಂದು ಪೂಜ್ಯರೇ ಈ ರೀತಿ ಹೇಳಿದ್ದಾರೆ—

ವಚನ ಸಾಹಿತ್ಯ ಆತ್ಮಾನಂದಕ್ಕಾಧಾರವೆಂದು
ವಚನ ರಚನಾ ಸಾಗರದಲ್ಲಿ ಧುಮುಕಿರುವೆನಯ್ಯಾ
ವಿಶಾಲವಾಗಿದ್ದರೂ ಈಸುವಾಸೆ ತುಂಬಿಹುದಯ್ಯಾ
ಮುಳುಗೆದ್ದು ರತ್ನಂಗಳ ನೀಡಿ
ಆತ್ಮ ಸೌಂದರ್ಯವ ಬೆಳೆಸುವ ಹಂಬಲವಿದೆಯಯ್ಯಾ
ನನ್ನೀ ವಚನ ರಚನೆಗೆ
ಮಹಾನುಭಾವಿಗಳ ವಚನ ಸಾಹಿತ್ಯವೇ
ಮಾರ್ಗದರ್ಶಿ ಕೇಳಾ
ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ಧೇಶ್ವರಾ. (ಚಿತ್ಸುಮನ ೮೩)

ಎನ್ನುವಲ್ಲಿ ಆತ್ಮಾನಂದ, ಆತ್ಮಸೌಂದರ್ಯದ, ಆತ್ಮಸಾಕ್ಷಾತ್ಕಾರದ ಹಂಬಲವನ್ನು ಕಾಣಬಹುದು. ವಚನ ರಚನೆ ಸಾಗರದಾಳವನ್ನು ಹುಡುಕುವಂತ ಪ್ರಯಾಸದ ಕಾರ್ಯ ವೆಂಬುದನ್ನು ಮನಗಂಡೂ ಪೂರ್ವಭಾವಿ ಮಾನಸಿಕವಾಗಿ ಸನ್ನದ್ಧಗೊಂಡೆ ಸಾಗರದಲ್ಲಿ ಧುಮುಕಿರುವ ವಿಶ್ವಾಸವನ್ನು ಸ್ಪಷ್ಟತೆಯ ಜತೆಗೆ ಮಹಾನುಭಾವಿಗಳ ಮಾರ್ಗದರ್ಶನದ ಪಡಿನೆಳಲಲ್ಲೆ ಸಾಗುವ ಆಶ್ವಾಸನೆಯನ್ನು ನೀಡುತ್ತಾರೆ.

ಹಲವಾರು ಸುಂದರ ಕನಸುಗಳನ್ನು ಕಾಣುತ್ತ ಸಮಾಜದ ಏಳ್ಗೆಗಾಗಿ ದುಡಿದರೂ ಕೆಲವು ದುರ್ಬಲತೆಗಳ ಪ್ರತೀಕವಾಗಿ ಜರ್ಝರಿತವಾಗುತ್ತಿರುವ ಇಂದಿನ ವಿಕೃತ ಸಮಾಜದ ದುರವಸ್ಥೆಯನ್ನು ನೆನೆದು ಹೃದಯುವೇದನೆಯ ನೋವು, ಹತಾಸೆಗಳಿಂದ ಹೊರ ಹೊಮ್ಮಿದೆ ಈ ವಚನ

ಸಮಾಜವು ಒಡೆದ ಗಡಿಗೆಯಂತಾಗಿಹುದಯ್ಯ
ಸಮಾಜವು ಬಲವಿಲ್ಲದ ರೋಗಿಯಂತಾಗಿಹುದಯ್ಯ
ಸಮಾಜವು ತಂತಿಯಿಲ್ಲದ ವೀಣೆಯಂತಾಗಿಹುದಯ್ಯ
ಸಮಾಜವು ಧೂಳು ಮುಸುಕಿದ ಕನ್ನಡಿಯಂತಾಗಿಹುದಯ್ಯ

ಇದು ಕಾರಣ ಒಲವು ಒಗ್ಗಟ್ಟಿಲ್ಲದ ಸಮಾಜವು
ಬರಿ ಮಾತಿಗರ ಮಾಲೆಯಾಗಿಹುದಯ್ಯ. (ಚಿತ್ಸುಮನ ೧೦೨)

ಇಂದಿನ ಆಡಂಬರ ಸೋಗುಗಳನ್ನು ಕಳೆದೊಗೆದ ಸಮಾಜದ ನಗ್ನ ಚಿತ್ರಣ ನಮ್ಮ ಕಣ್ಮುಂದೆ ಬರುತ್ತದೆ. ಒಲವು ಒಗ್ಗಟ್ಟನ್ನು ಬಯಸುವ ಸಂವೇದನಾಶೀಲರಿಗೆ ವಾಸ್ತವತೆಯನ್ನು ಪರಿಚಯಿಸುತ್ತದೆ. ಮೇಲಿನ ವಚನ ಕೇವಲ ಸ್ವಾರ್ಥ, ಅಸೂಯೆ, ಅಧಿಕಾರ ದಾಹದಂಥ ಜಲಮರೀಚಿಕೆಯ ಬೆನ್ನುಹತ್ತಿ ಎಲ್ಲ ತತ್ವಸಂಹಿತೆಗಳನ್ನು ಗಾಳಿಯಲ್ಲಿ ತೂರಿ ಕೇವಲ ಮಾತಿನ ಶೂರರಾಗಿ ಮುಂದುವರಿಯುತ್ತಿರುವ ಇಂದಿನ ಸಮಾಜದ ಶೋಚನೀಯ ಅವಸ್ಥೆಗೆ ಒಡೆದ ಗಡಿಗೆ, ಅಶಕ್ತರೋಗಿ, ತಂತಿಯಿಲ್ಲದ ವೀಣೆ, ಧೂಳು ಮುಸುಕಿದ ಕನ್ನಡಿ ಮುಂತಾದವುಗಳು ಉತ್ತಮ ಉಪಮಾನಗಳಾಗಿವೆ. ಸಮಾಜವನ್ನು ಸಶಕ್ತಗೊಳಿಸುವ ದಿಶೆಯಲ್ಲಿ ಮುನ್ನಡೆಯುತ್ತಿರುವಾಗ ಕಾರ್ಯದ ಮಹತ್ವವನ್ನರಿಯದೆ ಹೃದಯ ವೈಶಾಲ್ಯತೆಯ ತಿಳಿಯದ ಅದು ಹಾಗೆ ಹೀಗೆ ಎಂದು ಹಿಂದಿನಿಂದಲೇ ಟೀಕಾಸ್ತ್ರ ಎಸೆಯುವ ನಿಂದಕರ ಸಮೂಹ ಅವರನ್ನು ಬಾಧಿಸದೆ ಇಲ್ಲದಿಲ್ಲ. ಆ ನೋವು ವಚನಗಳಲ್ಲೂ ಹರಿದದ್ದಿದೆ.

ಅಂತರಂಗವನರಿಯದೆ ದೂಷಿಸುತ್ತಿಹರ ಕಂಡು ಮನ ನೊಂದಿತ್ತಯ್ಯ
(ಚಿತ್ಸುಮನ ೩೮)

ಕಾರ್ಯವ ನೋಡಿ ಹರ್ಷಪಡಬೇಕಲ್ಲದೆ
ಮತ್ಸರಿಸುವದೇಕಯ್ಯ?
ಅಲ್ಲ ಸಲ್ಲದ ನುಡಿಗಳನಾಡಿ
ಕುತ್ಸಿತರಾಗುವದೇಕಯ್ಯ?
ಮತ್ಸರಾಗ್ನಿಗೆ ಮನವನಿತ್ತರೆ
ಬೆಂಕಿಯ ಬಾಯಿಗೆ ಹವದಿಯ ತುರುಕಿದಂತೆ (ಚಿತ್ಸುಮನ ೩೯)

ಹೀಗೆ ತೀಕ್ಷ್ಣವಾದ ಎಚ್ಚರಿಕೆಯನ್ನು ನೀಡುತ್ತಾರೆ. ನಿಂದಕರಿಗೆ ಅದನ್ನರಿಯದೆ ಹೋದಾಗ ತಾವೇ ಎತ್ತರಕ್ಕೇರಿ;

ದೂಷಿಸುವವರು ದೂಷಿಸಲಿ
ಅದು ಅವರ ಕರ್ಮವಯ್ಯ
ಸ್ತುತಿಸುವವರು ಸ್ತುತಿಸಲಿ
ಅದು ಅವರ ಧರ್ಮವಯ್ಯ (ಚಿತ್ಸುಮನ ೪೦)

ಎಂಬ ಸ್ಥಿತಪ್ರಜ್ಞ ನಿಲುವಿನಲ್ಲಿ ಉಳಿಯುತ್ತಾರೆ. ಈ ರೀತಿಯಲ್ಲಿ ಹಲವಾರು ಸ್ವಂತಿಕೆಗಳು ಸಹಜತೆಯಲ್ಲಿ ಮೂರ್ತರೂಪ ತಳೆದಿರುವದನ್ನು ನೋಡಬಹುದು.

ಮೋಹದ ಕಾಳ್ಗಿಚ್ಚಿನಲಿ ಬಿದ್ದು
ಪಂಚೇಂದ್ರಿಯಗಳು ಕಳವಳಿಸುತ್ತಿಹವು ನೋಡಾ (ಚಿತ್ಸುಮನ ೧೩)
ಮೋಹ ಪಂಜರದೊಳು ಸಿಲುಕಿ
ತರಹರಿಸಿ ತಳಮಳಗೊಳ್ಳುತ್ತಿಹೆನಯ್ಯ (ಚಿತ್ಸುಮನ ೧೯)
ಪಂಜರದ ಗಿಳಿಯು ವನಾಂತರ ನೆನೆವಂತೆ
ಮನವಿದು ವಿಷಯದೆಡೆ ವಿಹರಿಸುತ್ತಿರುವದಯ್ಯ (ಚಿತ್ಸುಮನ ೨೮)

ಎನ್ನುವಲ್ಲಿ ಸಾಧಕನ ಸಾಧನೆಯ ಮಾರ್ಗದರ್ಶನವಿದೆ. ಯಾವೊಬ್ಬ ಸಾಧಕನೂ ಪಂಚೇಂದ್ರಿಯಗಳ ಉಪಟಳ ಗೆಲ್ಲದೆ ಸಾಧನೆಯ ಕೊನೆಯ ಹಂತವನ್ನು ತಲುಪಲಾರ. ಬಂಗಾರವು ಚಿನ್ನಕಾರನ ಅಗ್ಗಿಷ್ಟಿಕೆಯಲ್ಲಿ ಬೆಂದಾಗಲೇ ಅದು ಆಭರಣವಾಗಿ ರೂಪುಗೊಳ್ಳುವುದೋ ಹಾಗೆಯೆ ಸಾಧಕನ ಚಿತ್ತ ಸಂಯಮತೆಯನ್ನು ಘಟ್ಟಿಗೊಳಿಸುವ ಪಂಚೇಂದ್ರಿಯಗಳ ಕುಲುಮೆಯಲ್ಲಿ ಶರೀರ ಮನುಭಾವ ಸುಟ್ಟಾಗಲೇ ಮುಕ್ತಿಸಾಧ್ಯ. ಅದನ್ನರಿತು ಮುಂದಿನ ಹಂತದತ್ತ ಮುನ್ನಡೆವ ತೀವ್ರತೆಯನ್ನು ಇಲ್ಲಿ ಗುರುತಿಸಬಹುದು:

ಓಡುವ ಮನಸ್ಸಿಗೆ ಬೇಡಿ ಹಾಕದಿರೆ
ಮನಸಿನ ಮೋಡಿ ತಪ್ಪಲಾರದು ನೋಡಾ
ಓಡುವ ಕುದುರೆಗೆ ಕಡಿವಾಣವಿರದಿರೆ
ಒಡೆಯನ ಮಾತು ಕೇಳದು ನೋಡಾ (ಚಿತ್ಸುಮನ ೨೬)

ಚಂಚಲ ಸ್ವಭಾವದ ಮನಸಿನ ಮೋಡಿಗೆ ಬೇಸತ್ತ ಸಾಧಕ; ಅದಕ್ಕೆ ಒಂದು ಪರಿಹಾರ ಕಂಡುಕೊಳ್ಳುವಲ್ಲಿ ಸಫಲನಾಗಿ ತಡಮಾಡದೆ ಮನವೆಂಬ ಕುದುರೆಗೆ ವಿರತಿ ವಿವೇಕಗಳ ಕಡಿವಾಣ ತೊಡಿಸಿ ಸವಾರಿ ಮಾಡಬಲ್ಲ ಜಾಣ ಸವಾರನಾಗುತ್ತಾನೆ. ಒಂದಕ್ಷರ ಹೆಚ್ಚು ಕಮ್ಮಿಯಾಗದಂತೆ ಒಳ್ಳೆ ಪ್ರಾಸಲಯಬದ್ಧವಾಗಿ ಹೇಳುವ ಚಮತ್ಕಾರ ಇಲ್ಲಿ ಮಿಂಚುತ್ತದೆ.

ಮಾತಿನೊಳು ಮಾಧುರ್ಯ
ಹೊಟ್ಟೆಯೊಳು ಮಾತ್ಸರ್ಯ
ಇದೇತರ ಚಾತುರ್ಯ (ಚಿತ್ಸುಮನ ೮೬)

ಹಾಗೆಯೆ ಮತ್ತೆ

ಮಾತೆಲ್ಲ ಮುತ್ತು
ಮನವೆಲ್ಲ ಕತ್ತಲು
ಹೊರಗೆಲ್ಲ ಬೆಳಕು
ಒಳಗೆಲ್ಲ ಕೊಳಕು (ಚಿತ್ಸುಮನ ೧೩೭)

ಎಷ್ಟು ಹರಿತವಾದ ತಿವಿತವಿದೆ. ನೋಡಿಲ್ಲಿ ನಡೆ ನುಡಿ ಒಂದಾದ ಬದುಕೆ ಸಾರ್ಥಕ ಬದುಕು ಎಂಬ ಮಾತಿಗನುಗುಣವಾಗಿ ಒಳಗೊಂದುಪರಿ ಹೊರಗೊಂದು ಪರಿಯಾದ

ಜೀವನವನ್ನು ನಡೆಸಲಾಗಸಲ್ಲವಾಗಿ ಒಳ ಹೊರಗೊಂದಾಗಿ ಬದುಕಬೇಕೆನ್ನುವ ಪೂಜ್ಯರ ಸಂದೇಶ ನಿಜಕ್ಕೂ ಅರ್ಥಪೂರ್ಣ.

ತ್ರಿದಳವಿಲ್ಲದ ಪತ್ರಿ
ಹಿಡಿಕೆಯಿಲ್ಲದ ಛತ್ರಿ (ಚಿತ್ಸುಮನ ೧೪೮)

ಈ ಮುಂತಾದ ವಚನಗಳು ಓದುಗರನ್ನು ಆಕರ್ಷಿಸುತ್ತವೆ. ಸಾಹಿತ್ಯವನ್ನು ಅಧ್ಯಯನ ಚಿಂತನ ಮನನಗಳೊಂದಿಗೆ ಅರಗಿಸಿಕೊಂಡಾಗ ಅದು ನಮ್ಮ ಬುದ್ಧಿ ವಿಕಾಸಕ್ಕೆ ಪೂರಕವಾಗಬಲ್ಲುದು. ಸಾಹಿತ್ಯ ಅನುಭಾವ ಪೂರ್ಣತ್ವವನು ಸಿದ್ಧಿಗೊಳಿಸುವಂತಾಗಬೇಕು ಎಂಬುದನ್ನು ಅರಿತ ಪೂಜ್ಯರು; ನಿಜವಾದ ಸಾಹಿತ್ಯ ಯಾವುದೆಂಬುದಕ್ಕೆ ಹೊಸ ವ್ಯಾಖ್ಯೆ ನೀಡಿದಂತಿದ ಈ ವಚನ–

ಸಾಹಿತ್ಯವೆಂದರೆ ಶಬ್ದದ ಪೋಣಿಕೆಯಲ್ಲ
ಸಾಹಿತ್ಯವೆಂದರೆ ಕಲ್ಪನೆಯ ರೆಕ್ಕೆಯಲ್ಲ
ಸಾಹಿತ್ಯವೆಂದರೆ ಬರಿಯ ಬುದ್ಧಿಯ ಬುಗ್ಗೆಯಲ್ಲ
ನಿಜವಾದ ಸಾಹಿತ್ಯವೆಂದರೆ
ಸರ್ವರಸ ಪರಿಪೂರ್ಣ
ಸದ್‌ಭಾವ ವಿಸ್ತೀರ್ಣ
ಅನುಭವ–ಅನುಭಾವಗಳ ಅಮೃತಪಾಕ (ಚಿತ್ಸುಮನ ೯೪೨)

ಸಾಹಿತ್ಯವು ಅನುಭವ–ಅನುಭಾವಗಳ ಸಂಗಮವಾಗಿರಬೇಕು. ಎನ್ನುವ ಮಾಗಿದ ಹೃದಯದ ಅನುಭಾವ ಕಂಡುಬರುವದಲ್ಲದೆ, ಸಾಹಿತ್ಯದ ವಿಶ್ವವ್ಯಾಪ್ತಿ ನಮಗೆ ಅರಿವಾಗುತ್ತದೆ. ಧಾರ್ಮಿಕ ವಿಚಾರದಲ್ಲಿನ ಹಲವಾರು ರೂಢಮೂಲ ಪರಂಪರಾಗತ ಅಂಧ ಶ್ರದ್ಧೆಗಳ ಜತೆಗೆ ರಾಜಿಯಾಗುವ ಜಾಯಮಾನವಲ್ಲ ಶ್ರೀಗಳದು; ಸಿದ್ಧಾಂತದಲ್ಲಿನ ನಿಯಮಗಳಿಗೆ ಬೆಲೆ ಬರುವದು ಅವುಗಳನ್ನು ಕ್ರಿಯಾನುಷ್ಠಾನದಲ್ಲಿ ತಂದಾಗಲೆ ಎಂಬುದನರಿತು ನಿಜ ವೀರಶೈವ ತತ್ವ ಪ್ರತಿಪಾದನೆಗೋಸುಗ ಕಂದಾಚಾರವನ್ನು ಹೇಗೆ ಎಚ್ಚರಿಸಿದ್ದಾರೆ ನೋಡಿ:

ಕೋಟಿ ಲಿಂಗಗಳ ಸ್ಥಾಪಿಸಿ
ಕೋಟಲೆಗೊಳಲೇಕೆ?
ಕೋಟಿ ಹೃದಯಂಗಳಿಗೆ ಲಿಂಗವ ಧರಿಸಿ
ಸಂತಸಗೊಂಡರೆ ಸಾಲದೆ? (ಚಿತ್ಸುಮನ ೧೧೧)

ಎಂದು ಪ್ರಶ್ನಿಸುವಲ್ಲಿ ೧೨ನೆ ಶತಮಾನದ ಅಲ್ಲಮ ಪ್ರಭುಗಳ ಕಲ್ಲುಮನೆಯ ಮಾಡಿ ಕಲ್ಲು ದೇವರಮಾಡಿ ಎಂಬ ವಚನಧ್ವನಿ ನೆನಪಾಗುತ್ತದೆ. ಲಿಂಗಸ್ಥಾಪನೆಯಂಥ ಸ್ಥಾವರ ಕಾರ್ಯದ ಬದಲಾಗಿ ಲಿಂಗಧಾರಣೆಯಂಥ ಜಂಗಮ ಕಾರ್ಯವನ್ನು ಬೆಂಬಲಿಸುವ ಸಂತೋಷ ಸಹಜತೆಯಲ್ಲಿನ ಅವರ ಸೈದ್ಧಾಂತಿಕ ಅಚಲನಿಷ್ಠೆ ವ್ಯಕ್ತವಾಗಿದೆ. ಜಗದ್ಗುರುತ್ವದ ಹೊರೆಯಾಗಲಿ,

ಪಲ್ಲಕ್ಕಿಯಲ್ಲಿ ಮೆರೆವ ಚಪಲವಾಗಲಿ ಅವರನ್ನು ಬಾಧಿಸಿಲ್ಲ ಎಂಬುದಕ್ಕೆ ಸಾಕ್ಷಿ ಈ ಕೆಳಗಿನ ವಚನ–

ಮೆರೆವುದ ಮರೆದು
ಧರ್ಮದಾ ನಿಜತತ್ವಮೆರೆಯಿಸಿರೋ
ತಳಕೆಟ್ಟ ಸುವರ್ಣಘಟದಂತೆ
ಧರ್ಮದ ಗತಿಯಾಗಿಪ್ಪುದು ಕೇಳಿರೋ (ಚಿತ್ಸುಮನ ೧೧೨)

ಧರ್ಮತತ್ವದ ಬಗೆಗೆ ಅವರಲ್ಲಿರುವ ಅಭಿಮಾನ ಕಳಕಳಿ ಎಲ್ಲಕ್ಕಿಂತಲೂ ತುಂಬಾ ಹಿರಿದಾದುದು ಎಂಬುದು ವ್ಯಕ್ತವಾಗಿದೆ.

ಅಂದು ಮಠಾಧಿಪತಿಗಳು ಗುರು–ವಿರಕ್ತ ಎಂಬ ಭೇದಭಾವ ಸಮಾಜಕ್ಕೆ ಹಿಡಿದ ಖಗ್ರಾಸ್ ಗ್ರಹಣದಂತಿತ್ತು.[೨] ಲಿಂ|| ಹಾನಗಲ್ ಕುಮಾರ ಮಹಾಶಿವಯೋಗಿಗಳು ಅದರ ವಿರುದ್ಧ ಸಾಕಷ್ಟು ಹೋರಾಡಿದರೂ ಹಾಗೆಯೆ ಅದು ಬೆಳೆಯುತ್ತಿರುವದನ್ನು ಕಂಡು ಮಮ್ಮಲ ಮರುಗಿದರು; ಅದೇ ನೋವು ಪೂಜ್ಯರಲ್ಲಿ ಒಡಮೂಡಿ ಅದರ ಭಯಂಕರತೆಗೆ ಪರಿಹಾರ ಬಯಸಿ–

ನಾ ಹೆಚ್ಚು ನೀ ಹೆಚ್ಚು ಎನ್ನುವದೆ
ಗುರು ವಿರಕ್ತರ ಮಂತ್ರವಾಗಬಾರದು ನೋಡಾ (ಚಿತ್ಸುಮನ ೬೨)

ಎಂದು ಹೇಳುತ್ತ

ಗುರು–ವಿರಕ್ತರೆಂಬುವರು
ಸಮಾಜ ಪುರುಷಂಗೆ ಕಣ್ಣೆರಡು ನೋಡಾ
ಪರೆ ಬಂದ ಕಂಗಳಂತೆ
ಇವರೀರ್ವರ ಪರಿ ಆಗಬಾರದು ನೋಡಾ (ಚಿತ್ಸುಮನ ೬೭)

ಎನ್ನುವಲ್ಲಿ ಅತ್ಯುತ್ತಮ ಉಪಮಾನ ನಮಗೆ ದೊರೆಯುತ್ತದೆ. ವ್ಯಕ್ತಿಗೆ ಕಣ್ಣು ಪ್ರಧಾನ ಇಂದ್ರಿಯ ಅವೆರಡರಲ್ಲಿ ಯಾವುದು ಹೆಚ್ಚು ಕಮ್ಮಿ? ಕಾರ್ಯದ ಹಾಗೂ ಮೌಲ್ಯದ ದೃಷ್ಟಿಯಿಂದಲೂ ಒಂದೇ ಎನ್ನುವಂತೆ ಗುರು–ವಿರಕ್ತರೆಲ್ಲ ಯಾರು ಹೆಚ್ಚು ಕಡಿಮೆಯಲ್ಲ. ಸಮಾನವೆಂಬ ಸರ್ವಸಮ್ಮತ ಸಮತೆಯ ಸೂತ್ರವನ್ನೇ ಹೇಳಿರುವದು ಅವರ ಹೃದಯ ಶ್ರೀಮಂತಿಕೆಗೆ ಸಾಕ್ಷಿ ಎನ್ನಬಹುದು.

ಸಮಾನತೆಯ ಆಡಂಬರದ ಘೋಷಣೆಯಡಿ ಅಸಮಾನತೆಯನ್ನು ಪೋಷಿಸುವ ಡಾಂಭಿಕತೆಯನ್ನು ಬಹಳ ಮಾರ್ಮಿಕವಾಗಿ ವಿಡಂಬಿಸುತ್ತ–

---

೨ ಇಂದು ಅಷ್ಟಾಗಿ ಕಂಡುಬರುತ್ತಿಲ್ಲವಾದರೂ ಪೂರ್ತಿನಾಶವಾಗಿಲ್ಲ. ಆದರೂ ಆಶಾಭಾವನೆ ಮೂಡಿಸಿದ್ದಂತೂ ಖಂಡಿತ. ಮುಂಬರುವ ದಿನಗಳಲಿ ಈ ಭೇದದ ವಿಷಯ ಮೂಲಪೂರ್ತಿ ನಿರ್ನಾಮವಾಗಲಿ ಎಂದೇ ಹಾರೈಸೋಣ.

ಮೇಲು ಕೀಳೆಂಬ ಬೇಲಿಯ ತೆಗೆದು
ಸಂಪ್ರದಾಯವೆಂಬ ಗೋಡೆಯನೊಡೆದು
ಜಾತಿ ವಿಜಾತಿಯ ಕೀಲಿಯ ಮುರಿದು
ಧರ್ಮದ ಬಾಗಿಲು ತೆರೆಯಬೇಕೆಂಬರು ನೋಡಾ ಕೆಲವರು
ಸತ್ಯತೆಯನು ಮಾತಿನಲಿಟ್ಟು
ಜಾತಿಯನು ಮತಿಯೊಳಗಿಟ್ಟು
ಧರ್ಮದಾ ವೇಷವನು ತೊಟ್ಟು
ಮುಗ್ಧ ಜನರ ಮನ ಸೆಳೆವ
ಡಾಂಭಿಕರ ಕಂಡು ನಗುವನಯ್ಯ (ಚಿತ್ಸುಮನ ೧೩೭)

ಹೀಗೆ ಶ್ರೀ ಸಾಮಾನ್ಯ ಧ್ವನಿಯಾಗುವದರ ಜೊತೆಗೆ ಅರ್ಥರಹಿತ ಘೋಷಣೆಗಳು ಎಂದಿಗೂ ಸಮಾಜವನ್ನು ಉದ್ಧರಿಸಲಾರವು. ಜನರನ್ನು ಮೋಸಗೊಳಿಸುವ ಬರೀ ಮಾತಿನ ಮೋಡಿಯ ಸಮಾಜ ಘಾತಕರಿಂದ ಎಂದಿಗೂ ಹೊಸತನ ಮೂಡಲಾರದು. ನಡೆ–ನುಡಿಯೊಂದಾಗಿ ಬಾಳಿದಾಗಲೆ ಸಮಾನತೆಯು ದೊರೆಯುವದೆಂಬ ಹಿತೋಕ್ತಿಯನು ನೀಡುತ್ತಾರೆ. ಹಾಗೆಯೆ ಹಿರಿತನದ ಭೂತ ಬಡಿದುಕೊಂಡವರನು ಹಾಗೆಯೆ ಬಿಟ್ಟಿಲ್ಲ; ಹಿರಿಯತನ, ಪದವಿ, ಅಧಿಕಾರಗಳು ಹಣದಿಂದ ಬರುವದಲ್ಲ ಅದಕ್ಕೆ ಹಿರಿಯ ಜವಾಬ್ದಾರಿ ಇದೆ ಎಂಬುದನು ಮರೆತು ನಡೆದರೆ ಅದೇ ಅಹಮಿಕೆಗೆ ಮೂಲವಾಗುತ್ತದೆ. ಅದು ಯಾರಿಂದಲೂ ಆಗ ಬಾರದು ಎನ್ನುವದು ಪೂಜ್ಯರ ಆಶಯ;

ದೊಡ್ಡ ಮೀನು ಸಣ್ಣ ಮೀನವ ನುಂಗುವಂತೆ
ದೊಡ್ಡವರೆಂದು ಹೇಳಿ ಕೊಳ್ಳುವವರು
ಸಣ್ಣವರನು ನುಗ್ಗುನುಸಿಮಾಡುತಿಹರಯ್ಯ (ಚಿತ್ಸುಮನ ೫೮)
ಹಿರಿಯರು ಹಿರಿಯರೆಂದೆನ್ನುತಿಹರು
ಕಿರಿಯರನು ತುಳಿಯ ತಕ್ಕವರು ಹಿರಿಯರೆ? (ಚಿತ್ಸುಮನ)

ಎಂದು ಪ್ರಶ್ನಿಸಿ ಅವರನ್ನು ಭವಭಾರಿಗಳು ಎಂದು ನಿರ್ಣಯಿಸುವದಲ್ಲದೆ ಎಂದಿನಿಂದಲೂ ಸಮಾಜದಹಲವು ರಂಗಗಳಲ್ಲಿರುವ ಹಿರಿಯರೆಂಬ ಪ್ರತಿಷ್ಠಿತರೇ ಹಲವು ಸಾರೆ ಶ್ರೀ ಸಾಮಾನ್ಯ ರನ್ನು ವಿವಿಧ ಹಂತದಲ್ಲಿ ಶೋಷಣೆಗೊಳಪಡಿಸಿ ಹಿಂಸಿಸುವ ಪ್ರವೃತ್ತಿ ಅನೂಚಾನವಾಗಿ ಬಂದುದು ಈಗ ಇತಿಹಾಸ; ಶೋಷಣೆಯ ನಿರ್ಮೂಲನೆಗೊಳಿಸುವ ಕಳಕಳಿಯ ಜತೆಗೆ ಅದರ ವಿರುದ್ಧ ಸಿಡಿಲಿನಂತೆ ಆರ್ಭಟಿಸಿದ್ದಾರೆ. ಹಿರಿಯತನಕ್ಕೆ ವಯಸೊಂದೇ ಮುಖ್ಯವಲ್ಲ; ಜತೆಗೆ ವಿಚಾರ ಶಕ್ತಿಯು ಬೇಕೆಂದು ಹೇಳುತ್ತ;

ವೃದ್ಧರಾದರೂ ಬುದ್ಧಿ ಬರಲೊಲ್ಲದು ನೋಡಾ
ಕಜ್ಜವೆಸಗದೆ ಯಶವ ಬಯಸುತಿಹರು ನೋಡಾ

ಕಾಯಿ ಹಣ್ಣಾದರೇನು ಸಿಹಿ ಇರದನ್ನಕ್ಕರ?
ಮಳೆತ ತೆಂಗಿನಕಾಯಿಯುಂತಿಪ್ಪವರ ಮೆಚ್ಚ (ಚಿತ್ಸುಮನ ೫೭)

ಕೇವಲ ಹೊರಗಿನ ಮುಪ್ಪು ಒಂದೇ ಅಲ್ಲ; ಒಳಗಿರುವ ಭಾವ ಆಚಾರ ವಿಚಾರಗಳಿಂದ ಮುಪ್ಪುರಿಗೊಂಡಿರಬೇಕು. ಹೊರಗಿನ ಹಣ್ಣುತನ ಒಂದೇ ಅಲ್ಲ; ಒಳಗಿರುವ ಮನಸ್ಸು ಸಿಹಿಯಾಗಿರಬೇಕು. ಇಲ್ಲವಾದಲ್ಲಿ ಅಂಥವರನು ಮಳೆತ ತೆಂಗಿನಕಾಯಿಯುಂತೆ ಎಂದು ಒಳ್ಳೆಯ ಧ್ವನಿಪೂರ್ಣವಾಗಿ ಬಣ್ಣಿಸಿದ್ದಾರೆ. ಹೀಗೆ ಹಲವಾರು ರತ್ನಗಳನ್ನು ವಚನ ಸಾಗರದಾಳದಿಂದ ತಂದು ನೀಡಿದುದಲ್ಲದೆ ತಾವೂ ದಣಿವಾರೆ ಈಸಿದ್ದಾರೆ. 'ಚಿತ್ಸುಮನ'ದಲ್ಲಿನ ವಚನಗಳನ್ನು ಉದಾಹರಿಸುತ್ತ ಹೋದರೆ ಯಾವುದನ್ನು ನೋಡುವದು ಯಾವುದನ್ನು ಬಿಡುವದು, ತುಂಬಾ ಕಷ್ಟದ ಕಾರ್ಯವೇ ಸರಿ! ಕೊನೆಯ ಸುಮಾರು ೬೦ ವಚನಗಳು ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರ ಮುಂತಾದ ವೀರಶೈವ ಸೈದ್ಧಾಂತಿಕ ತತ್ವಗಳ ಪ್ರತಿಪಾದನೆಗೆ ಮೀಸಲಾಗಿವೆ. ಪೂಜ್ಯರ ವಚನಗಳ ಕುರಿತು ಡಾ|| ಆರ್. ಸಿ. ಹಿರೇಮಠ ಅವರು ಹೀಗೆ ಅಭಿಪ್ರಾಯಪಡುತ್ತ "ಚಿತ್ಸುಮನ"ದ ವಚನಗಳು ಸಾಹಿತ್ಯ ದೃಷ್ಟಿಯಿಂದ ಅತ್ಯಂತ ವೈಶಿಷ್ಟ್ಯಪೂರ್ಣವಾಗಿವೆ. ಇಲ್ಲಿ ಆಧ್ಯಾತ್ಮದ ಹೊನಲಿದೆ, ಸಾಹಿತ್ಯದ ಪ್ರವಾಹವಿದೆ, ತತ್ವಜ್ಞಾನದ ಮಡುವಿದೆ. ಸಮಾಜದ ವಿಮರ್ಶೆಯ ಕಣವಿದೆ ಇತ್ಯಾದಿಯಾಗಿ ಬಹು ಮಾರ್ಮಿಕವಾಗಿಯೇ ಬರೆದಿದ್ದಾರೆ. ಈ ಎಲ್ಲ ಮಾತಿನ ಸತ್ಯತೆ ಇಲ್ಲಿ ವಿಹರಿಸಿದವರಿಗೆ ವೇದ್ಯವಾಗದಿರದು.

ಒಟ್ಟಾರೆ ಶ್ರೀ ಮೂಜಗಂ ಅವರ ವಚನಗಳು ವಿಶಿಷ್ಟ ಸಂವಹನಗಳು ಶ್ರೀಗಳವರ ಲೇಖನಿಯಲ್ಲಿ ಕಾಣಿಯು ಸೋಲದ ಅತ್ತಿತ್ತವಾಲದ ಜಾಣತನ ತೂಕವಿದೆ. ಅದು ಹಿಂದಿನ ಇಂದಿನ–ಮುಂದಿನ ಪೀಳಿಗೆಯನ್ನು ಸಹ ಆಕರ್ಷಿಸಬಲ್ಲುದಾಗಿದೆ. 'ಹಳೆಬೇರು ಹೊಸ ಚಿಗುರು ಕೂಡಿರಲು ಮರಸೊಬಗು' ಎಂಬ ಮಾತಿನಂತೆ ಹಳೆಯದಾದ ಧರ್ಮ ಸಂಹಿತೆಯ ಆಚಾರ–ವಿಚಾರಗಳ ಜೊತೆಗೆ ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸುವ ಪ್ರಗತಿಶೀಲತೆಯೂ ಇದೆ.

ಇಲ್ಲಿಯ ವಚನಗಳಲಿ ಸಹಜ ಮುಗ್ಧತೆ ಚಲ್ಲುವರಿದಿದ್ದು ಅಚಲವಾದ ದೈವೀಶ್ರದ್ಧೆ ಜೀವನ ನಿಷ್ಠೆಗಳು ಘಟ್ಟಿಗೊಂಡಿವೆ.

# 'ಅಮೃತಬಿಂದು'ವಿನ ಅವಿಸ್ಮರಣೀಯ ವಿಚಾರಗಳು

ಚನ್ನವೀರ ಕಣವಿ

'ಅಮೃತಬಿಂದು' ಇಪ್ಪತ್ತು ಚಿಕ್ಕ ಲೇಖನಗಳ ಕೈ ಹೊತ್ತಿಗೆ. ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ತಮ್ಮ ಅಭ್ಯಾಸ, ಅನುಭವ ಹಾಗೂ ಚಿಂತನವನ್ನು ಇಲ್ಲಿಯ ಇಪ್ಪತ್ತು ಹಣತೆಗಳಲ್ಲಿ ಬೆಳಗಿಸಿದ್ದಾರೆ. ಇವೆಲ್ಲ ಈ ಮೊದಲೇ ಶ್ರೀಗಳವರೇ ನಡೆಸುತ್ತಿರುವ "ಪರಂಜ್ಯೋತಿ" ಪತ್ರಿಕೆಯಲ್ಲಿ ಬೆಳಕು ಕಂಡವು. ಇಲ್ಲಿಯ ಎಲ್ಲ ಬರವಣಿಗೆಯ ಗುರಿ "ಆತ್ಮವಿಕಾಸ" ಈ ಪದವನ್ನು ಬಹುಶಃ ಇಲ್ಲಿಯ ಎಲ್ಲ ಬರಹಗಳಲ್ಲೂ ಶ್ರೀಗಳವರು ಬಳಸಿದ್ದಾರೆ. ಒಂದೊಂದರಲ್ಲೂ ಒಂದೊಂದು ವಿಚಾರವನ್ನು ಎತ್ತಿಕೊಂಡು ಅದಕ್ಕೆ ಪೋಷಕವಾಗಿ ಹಲವಾರು ಮಹಾನುಭಾವರ ಸೂಕ್ತಿಗಳನ್ನೂ ಸೂಳ್ನುಡಿಗಳನ್ನೂ ಬಳಸಿಕೊಂಡು ಬೆಳೆಸಿಕೊಂಡು ಮುಂದುವರಿಯುತ್ತ "ಪರಂಜ್ಯೋತಿ"ಯ ಪ್ರಕಾಶ ಪ್ರಾಪ್ತಿಯ ಹಂಬಲದಲ್ಲಿ ಅವು ತಮ್ಮ ಗುರಿಯನ್ನು ತಲುಪುತ್ತವೆ. ಹಾಗೆ ನೋಡಿದರೆ ವಿಷಯವನ್ನು ವಿಸ್ತರಿಸಿ ವಿವರಿಸಿ ಹೇಳುವುದಕ್ಕೆ ಇಲ್ಲಿ ಸಾಕಷ್ಟು ಅವಕಾಶ ವಿದೆ. ಆದರೆ ಸಂಕ್ಷಿಪ್ತದಲ್ಲಿ ಸಾರವನ್ನು ಮಾತ್ರ ಹೇಳಿಬಿಡುವ ಧೋರಣೆ ಈ ಬರಹಗಳಲ್ಲಿ ಕಂಡು ಬರುತ್ತದೆ. ಅಂತೆಯೇ ಒಂದೊಂದರ ತಲೆಬರಹವೂ ಒಂದೊಂದು ಸಂಸ್ಕೃತ ಸೂಕ್ತಿಯನ್ನು ಅವಲಂಬಿಸಿದೆ. ಇಲ್ಲಿಯ ವಿಚಾರಗಳು ಹೊಸದೆನಿಸದಿದ್ದರೂ ಅವುಗಳನ್ನು ಸಂಚಯಿಸಿರುವ ಬಗೆ, ಸಂವಿಧಾನ ಹೊಸದು ಎನ್ನುವ ಮಾತನ್ನು ಶ್ರೀ ಜ.ಚ.ನಿ.ಯವರು ಮುನ್ನುಡಿಯಲ್ಲಿ ಹೇಳಿರುವುದು ಸಮರ್ಪಕವಾಗಿದೆ.

ಪರಂಜ್ಯೋತಿ, ಜಾಗತಿಕ ಬಾಂಧವ್ಯ, ಭಕ್ತಿ, ಪರಬ್ರಹ್ಮಸ್ವರೂಪ, ಯೋಗ, ಶಿವ-ಯೋಗ, ಲಿಂಗನಿಜೈಕ್ಯಜ್ಞಾನ, ಬುದ್ಧಿ, ಅಹಿಂಸೆ, ಭಾವೈಕ್ಯ ಧರ್ಮ ಹಿತವಚನ, ಸತ್ಯ. ಭಾವಶುದ್ಧಿ, ದೊಡ್ಡವರ ದಾರಿ, ಧ್ಯಾನ ಜ್ಞಾನ, ಸತತೋದ್ಯೋಗ, ಶರೀರ ಸಂಪತ್ತು ವಿಪರೀತ ಬುದ್ಧಿ—ಹೀಗೆ ಹಲವಾರು ವಿಷಯಗಳ ವಿವೇಚನೆಯನ್ನು ಈ ಬರವಣಿಗೆ ಒಳಗೊಂಡಿದೆ. ಇವು ಪರಸ್ಪರ ಸಂಬಂಧಪಟ್ಟ ವಿಷಯಗಳೇ ಆಗಿರುವುದರಿಂದ ಅಲ್ಲಲ್ಲಿ ಪುನರುಕ್ತಿ ಕಾಣಿಸಿಕೊಂಡಿದ್ದರೆ ಆಶ್ಚರ್ಯವಿಲ್ಲ.

ಚಿಜ್ಜ್ಯೋತಿಯ ಬೆಳಗಿನ ಆನಂದವನ್ನು ಪಡೆಯುವ ರೀತಿ "ತಮಸೋಮಾ ಜ್ಯೋತಿರ್ಗಮಯ"ದಲ್ಲಿ ಮೂಡಿದೆ. ಆತ್ಮವಿಕಾಸಕ್ಕೆ ಅಂತರಂಗಶುದ್ಧಿಯೇ ಪ್ರಥಮ ಸೋಪಾನ. ಜ್ಞಾನಸ್ರಭೆಯಿಂದ ಕಣ್ಣು ತಣಿಸುವ ಆತ್ಮಜ್ಯೋತಿಯನ್ನು ಅಂತಸ್ಸಾಧನೆ, ಸಂಯಮ ಜೀವನ, ನಿರಂತರಧ್ಯಾನಗಳಿಂದ ಅಂತರಂಗದಲ್ಲಿ ಬೆಳಗಿಸಬಹುದು. ಆದಕ್ಕಾಗಿ "ಸಾವಿರಾರು ಶ್ರವಣ, ಮನನ, ನಿದಿಧ್ಯಾಸಾದಿ ಅನುಸಂಧಾನದಿಂದ ಬೆಳಕಿನ ಮನೆಯನ್ನು ಸೇರೋಣ" ಎಂದು ಶ್ರೀಗಳು ಅಪ್ಪಣೆಕೊಡಿಸುತ್ತಾರೆ.

ಜಾಗತಿಕ ಬಾಂಧವ್ಯಕ್ಕೆ ಕೇವಲ ನಾಗರಿಕತೆ ಬೆಳೆದರೆ ಸಾಲದು; ಜೊತೆಯಲ್ಲಿ ಆಧ್ಯಾತ್ಮಿಕತೆ ಬೆಳೆದು ಬರಬೇಕು ಎಂಬ ವಿಚಾರವನ್ನು 'ವಸುದೈವ ಕುಟುಂಬಕಂ'ದಲ್ಲಿ ನಿರೂಪಿಸಲಾಗಿದೆ. 'ಜಾತೀಯತೆಯ ಸಾಮರಸ್ಯ' ಎಂಬ ಪದ ಇಲ್ಲಿ ಸ್ವಲ್ಪ ಗೊಂದಲಕ್ಕೆ ಕಾರಣವಾಗಬಹುದು. ನಮ್ಮ ಅಲ್ಪತ್ವದ ಎಲ್ಲೆಯನ್ನು ದೇವರ ರೂಪವಾಗಿ ಕಲ್ಪಿಸುವದು ಬೇಡ ಎಂಬ ರಾಮಕೃಷ್ಣ ಪರಮಹಂಸರ ನುಡಿಯನ್ನು ಇಲ್ಲಿ ಉದ್ಧರಿಸಿರುವದು ಯೋಗ್ಯ ವಾಗಿದೆ. 'ರೂಪ-ರೂಪದಲ್ಲಿ ಭೇದವಲ್ಲದೆ ಚೈತನ್ಯದಲ್ಲಿ ಭೇದವಿಲ್ಲ ನೋಡಾ' ಎಂಬ ಸಿದ್ಧರಾಮ ಶಿವಯೋಗಿಯ ವಚನಮಾಣಿಕ್ಯ ದೀಪ್ತಿ ಎಲ್ಲರ ಹೃದಯವನ್ನೂ ಬೆಳಗಬೇಕಾ ಗಿದೆ. ಮನುಷ್ಯನಿಗೆ ಬುದ್ಧಿಶಕ್ತಿ, ಭಾವಶಕ್ತಿ, ಹೃದಯಶಕ್ತಿ ಎಲ್ಲವನ್ನೂ ದೇವರು ಕೊಟ್ಟಿದ್ದಾನೆ. ಆದರೆ ಅದು ವಿಕಾಸವಾಗಿ ಭಾವೈಕ್ಯ ಸಂಪದ್ಭರಿತವಾದರೆ ಸಾರ್ಥಕವೆಂಬು ದಾಗಿ ಶ್ರೀಗಳು ಇಲ್ಲಿ ನಿರೂಪಿಸಿದ್ದಾರೆ.

ಭಕ್ತಿಯಷ್ಟು ಸುಲಭಸಾಧ್ಯ ಯೋಗ ಮತ್ತಾವುದರಲ್ಲಿಯೂ ಕಾಣದೆನ್ನುವ ಮಾತನ್ನು 'ಭಕ್ತೇರಸಾಧ್ಯಂ ನಹಿ ಕಿಂಚಿದಸ್ತಿ' ಲೇಖನ ವಿವರಿಸುತ್ತದೆ. ನಿರ್ಮಲ ಭಕ್ತಿ ಬೆಳ ದಿಂಗಳಂತೆ ಕತ್ತಲೆಯನ್ನು ಕಳೆವ ನಿವೃತ್ತಿ ಕಲೆಯೆಂದು ಸೊಗಸಾಗಿ ಹೇಳಿದ್ದಾರೆ. ಭಕ್ತಿಯಲ್ಲಿ ಆತ್ಮಸಮರ್ಪಣ ಭಾವ ಅಡಗಿದೆ. ಅರಿವಿಗೆ ಭಕ್ತಿಯ ಹೂಬಳ್ಳಿಯಿಂದ ಜ್ಞಾನದ ಮಕ ರಂದನ್ನು ಹೀರಿ ಅನುಭವಾಮೃತವನ್ನು ಪಡೆಯಬಹುದಂತೆ 'ಜ್ಯೋತಿಷಾಮಪಿ ತಜ್ಜ್ಯೋತಿಃ' ಬರೆಹದಲ್ಲಿ ಗೀತೆಯ ಅಂತರ್ವಾಣಿ ಮೊಳಗಿದೆ ಸದ್ಭಕ್ತಿ ತೈಲವನ್ನು ಹೃದಯ ಪ್ರಣತಿಯೊಳಗೆ ಹಾಕಿ, ಏಕೋಭಾವವೆಂಬ ಬತ್ತಿಯನ್ನು ಹೊಸೆದಿಟ್ಟು, ಸುವಿ ಚಾರ ಜ್ಯೋತಿಯ ಹಚ್ಚಿದಾಗ ಕಂಗಳ ಮುಂದಣ ಕತ್ತಲೆ ಹರಿದು ಹೋಗುವುದಲ್ಲದೆ ಗರ್ಭ ಗುಡಿಯೊಳಗೆ ಎಲ್ಲ ಜ್ಯೋತಿಗಳಿಗೆ ಜ್ಯೋತಿಯಾಗಿರುವ ಪರಶಿವನ ಸಾಕ್ಷಾತ್ಕಾರವಾಗುವದು ಎಂಬ ಇಲ್ಲಿಯ ಉಕ್ತಿ ನಿಜಗುಣ ಶಿವಯೋಗಿಗಳ ರೂಪಕವನ್ನೇ ಆಧರಿಸಿದೆ.

ಬಂಧಮೋಕ್ಷಗಳಿಗೆ ಮೂಲ ಕಾರಣವಾಗಿರುವ ಮನಸ್ಸಿನ ನಿರೋಧಕ್ಕೆ ಯೋಗ ಸಾಧನೆಯೇ ಮೊದಲಮೆಟ್ಟಿಲಾಗಿರುವ ವಿಚಾರ "ಯೋಗಃಚಿತ್ತವೃತ್ತಿ ನಿರೋಧಃ"ದಲ್ಲಿ ಬಳ್ಳಿವರಿದಿದೆ. ಜ್ಞಾನ-ಯೋಗ ಸಮನ್ವಯದಿಂದ ಶಿವಯೋಗಿಗಳು ಚೈತನ್ಯವನ್ನು ಗಟ್ಟಿ ಗೊಳಿಸುತ್ತಾರೆ ಎಂಬ ಮಾತು ಇಲ್ಲಿ ಚೆನ್ನಾಗಿ ಮೂಡಿದೆ. "ಲಿಂಗಮಧ್ಯೇ ಜಗತ್ಸರ್ವಂ" ದಲ್ಲಿ ವೀರಶೈವರಿಗೆ ಲಿಂಗವೇ ಪಂಚಪ್ರಾಣವಾಗಿರುವುದನ್ನೂ ಆತ್ಮಾನುಸಂಧಾನಕ್ಕೆ ಜೀವಂತ ದರ್ಪಣವಾಗಿರುವುದನ್ನೂ ಮನಂಬುಗುವಂತೆ ನಿರೂಪಿಸಲಾಗಿದೆ. "ಮಾನವಃ ಶಿವ ಯೋಗೇನ ಶಿವೋ ಭವತಿ ಕೇವಲಂ" ಎಂಬ ಉಕ್ತಿಯಿಂದ ಎಲ್ಲ ಯೋಗಗಳಲ್ಲಿ ಶಿವ ಯೋಗವೇ ಮಿಗಿಲಾಗಿರುವುದನ್ನು, ಲಿಂಗತ್ರಯಗಳನ್ನು ಅಂಗವಿಸಿಕೊಂಡು ಲಿಂಗಾಂಗ ಸಾಮರಸ್ಯವನ್ನು ಪಡೆಯುವುದೇ ಶಿವಯೋಗವೆಂದಿದ್ದಾರೆ. ಹರಿದಾಡುತ್ತಿರುವ ಮನಸ್ಸಿನ ಪ್ರವಾಹಕ್ಕೆ ಆತ್ಮಸಂಯಮನದ ಆಣೆಕಟ್ಟನ್ನು ಕಟ್ಟಿದರೆ ಕಾಮದ ಉಲ್ಬಣ ಕಡಿಮೆಯಾಗಿ

ಆತ್ಮಸಾಧನೆಗೆ ಮಾರ್ಗವಾಗುವದನ್ನು "ಬುದ್ಧಿನಾಶಾತ್ ಪ್ರಣಶ್ಯತಿ" ಪ್ರಬಂಧ ಸೂಚಿಸುತ್ತದೆ.

ಸಕಲಪ್ರಾಣಿಗಳಲ್ಲಿ ಆತ್ಮೀಯ ಭಾವನೆಯಿಂದ ನಡೆಯುವುದು ಮಾನವ ಸಂಸ್ಕೃತಿ ಎಂಬುದು "ಅಹಿಂಸಾ ಪರಮೋಧರ್ಮಃ" ಬರೆಹದ ಸಾರವಾಗಿದೆ. ಹಿಂಸಾಚರಣೆಯ ಪರಿಣಾಮವನ್ನು ಇಲ್ಲಿ ಮನದಟ್ಟಾಗುವಂತೆ ನಿರೂಪಿಸಲಾಗಿದೆ. ಕಾಯಾ, ವಾಚಾ, ಮನಸಾ ಹಿಂಸೆಯಾಗದಂತೆ ನಡೆದುಕೊಳ್ಳುವಲ್ಲಿಯೇ ಜಾಗತಿಕ ಶಾಂತಿ ನೆಲೆಸುವದೆಂಬ ನಿಶ್ಚಿತ ಮಾತನ್ನು ಇಲ್ಲಿ ಕಾಣುತ್ತೇವೆ. ಬಸವಣ್ಣನವರ ಹಾಗೂ ಗಾಂಧೀಜಿಯವರ ಸಂದೇಶ "ಸರ್ವೇಜನಾಃ ಸುಖಿನೋಭವಂತು" ಎಂಬುದರಲ್ಲಿದೆಯೆಂದು ಇನ್ನೊಂದು ಬರೆಹ ತಿಳಿಸುತ್ತದೆ. ಧರ್ಮದರ್ಶನವೇ ಆತ್ಮೋನ್ನತಿಗೆ ರಕ್ಷಾಮಂತ್ರವಾಗಿರುವುದನ್ನು "ಧರ್ಮೋ ರಕ್ಷತಿ ರಕ್ಷಿತಃ" ಬರವಣಿಗೆ ಬಿಡಿಸಿ ಹೇಳುತ್ತದೆ. "ಹಿತಂ ಮನೋಹಾರಿ ಚ ದುರ್ಲಭಂ ವಚಃ" ಎಂಬ ಭಾರವೀಯ ಹಿತವಚನದಿಂದ ಪ್ರಾರಂಭವಾದ ಒಕ್ಕಣಿಕೆ ಮಾತಿನಿಂದ ಮಾನವನ ಆತ್ಮವಿಕಾಸದ ಅರಿವು ಅರ್ಥವಾಗುವದನ್ನು ವಿವರಿಸುತ್ತದೆ. ಅಂತರಂಗ ಶುದ್ಧಿಯಿಲ್ಲದ ಮಾತಿನ ಮಾಲೆಯಿಂದ ಮಾನವನಿಗೆ ಯಾವ ಘನ ವ್ಯಕ್ತಿತ್ವವೂ ಬರಲಾರದೆನ್ನುವುದನ್ನು ಶರಣರ ಸೂಳ್ನುಡಿಗಳಿಂದ ಸೂಚಿಸಲಾಗಿದೆ.

ಸತ್ಯವು ಮನುಷ್ಯನನ್ನು ಅಂತರ್ಮುಖದತ್ತ ಒಯ್ಯುತ್ತದೆ ಎನ್ನುವ ಸುಂದರ ವಿಚಾರ ಸರಣಿಯನ್ನು "ಸತ್ಯಮೇವ ಜಯತೆ ನಾನೃತಂ" ಬರಹ ಒಳಗೊಂಡಿದೆ, ನಿತ್ಯವೂ ಪರಿಪೂರ್ಣದ ಕಡೆಗೆ ಸಾಗಲು ಅದರಿಂದ ದಾರಿ ದೊರೆಯುತ್ತದೆ. ಆದರೆ ಅದು ಅಷ್ಟು ಸುಲಭಸಾಧ್ಯವೂ ಅಲ್ಲ. ಅದನ್ನು ತಮ್ಮ ಅತ್ಯಂತ ಸಹಜ ಪ್ರವೃತ್ತಿಯನ್ನಾಗಿ ಮಾಡಿಕೊಂಡಿದ್ದ ಗಾಂಧೀಜಿಯವರ ವಿಚಾರಗಳನ್ನು ಇಲ್ಲಿ ಎತ್ತಿ ಹೇಳಲಾಗಿದೆ. "ಯದ್ಭಾವಸ್ತದ್ಭವತಿ"ಯಲ್ಲಿ ವ್ಯಕ್ತಿಯ ಅಂತರಂಗವನ್ನರಿಯಲು ಬೆರೆಯಲು ಭಾವವೇ ಮುಖ್ಯ ಸಾಧನವಾಗಿರುವುದನ್ನು ನಿರೂಪಿಸಿದೆ. ಜೊತೆಯಲ್ಲಿಯೇ ಭಾವಶುದ್ಧಿಯ ಮಹತ್ವವನ್ನೂ ಮಂಡಿಸಲಾಗಿದ.

ದೊಡ್ಡವರು ನಡೆದು ಬಂದ ದಾರಿ ಮಾನವರಿಗೆ ಕೈದೀವಿಗೆ. ಅವರು ಬಿಟ್ಟು ಹೋಗಿರುವ ಅನುಭವ ಸಂಪತ್ತನ್ನು ಸಂಗಳಿಸಿಕೊಂಡರೆ, ಆ ಹೆದ್ದಾರಿಯಲ್ಲಿ ನಡೆದರೆ ಆಗುವ ಆತ್ಯಂತಿಕ ಆನಂದವನ್ನು "ಮಹಾಜನೋ ಯೇನ ಗತಃ ಸ ಪಂಥಾಃ" ಲೇಖನ ಅರುವಿಗೆ ತಂದು ಕೊಡುತ್ತದೆ. ಧ್ಯಾನಯೋಗದಷ್ಟು ಸುಲಭವಾದ ರಾಜಮಾರ್ಗ ಮತ್ತೊಂದಿಲ್ಲ. ಅದಕ್ಕೆ ಕಟ್ಟಳೆಗಳಿಲ್ಲ. ಮತಾಚಾರದ ಗೊಂದಲವಿಲ್ಲ. ತೆರೆದ ಹೃದಯ, ನಿರ್ಮಲ ಮನಸ್ಸು, ಅಚಲಶ್ರದ್ಧೆ–ಇವುಗಳೇ ಧ್ಯಾನಕ್ಕೆ ಬೇಕಾಗುವ ಸಾಧನೆಗಳು ಎಂಬ ವಿವೇಚನೆ 'ಧ್ಯಾನಂ ನಿರ್ವಿಷಯಂ ಮನಃ' ಎಂಬಲ್ಲಿ ದೊರೆತಿದೆ.

ಜ್ಞಾನಕ್ರಿಯೆಗಳು ಕೂಡಿಕೊಂಡು ಸಾಗಿದರೆ ಮಾತ್ರ ಜೀವನ್ಮುಕ್ತಿ ಎಂಬುದು 'ನಹಿ

ಜ್ಞಾನೇನ ಸದೃಶಂ' ಲೇಖನದ ಸೂತ್ರವಾಗಿದೆ. 'ಅರಿವು ನಿಮ್ಮಲ್ಲಿಯೇ ತದ್ಗತವಾಗಿದೆ' ಎಂಬ ಅಲ್ಲಮ ಪ್ರಭುವಿನ ವಚನ ಹಾಗೂ 'ಜ್ಞಾನದೀಪ್ತಿಯ ಬೆಳಗುವ ತೈಲವಾವು ವೆಂದರೆ ಶಿವಶರಣರ ನುಡಿಗಣದ ಒಸರು; ಆ ಒಸರಿಂಗಲ್ಲದೆ ಜ್ಞಾನಪ್ರಕಾಶವಿಲ್ಲ' ಎಂಬ ಉದಾಹರಣೆಗಳಿಂದ ಅದು ಕಳೆಗೊಂಡಿದೆ.

ನಿರುದ್ಯೋಗ ನಮ್ಮ ಅಂತಃಶತ್ರು; ಸಮಾಜಕ್ಕೆ ಅಂಟಿಕೊಂಡಿರುವ ಮಹಾರೋಗ ಸತ್ಯ ಶುದ್ಧ ಕಾಯಕ ಇದಕ್ಕೆ ಪರಮೌಷಧಿ. ಚಿತ್ತಶುದ್ಧಿಯಿಂದೊಡಗೂಡಿದ ಪರಿಶ್ರಮವೇ ಪರಮ ಸಂಜೀವಿನಿ. 'ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ' ಎಂಬ ಬರೆಹ ಇಂಥ ವಿಚಾರಗಳಿಗೆ ಒಂದು ಮೊನೆಯನ್ನು ತಂದುಕೊಟ್ಟಿದೆ. 'ಶರೀರಮಾದ್ಯಂಖಲುಧರ್ಮ ಸಾಧನಂ' ಎಂಬ ಲೇಖನ ಇದೇ ವಿಚಾರವನ್ನು ಶರೀರಸಂಪತ್ತಿಗನ್ವಯಿಸಿ ಅದು ಮಾನಸಿಕ ಹಾಗೂ ಶಾರೀರಕ ಸೋಮಾರಿತನವನ್ನು ಕಳೆದು ಚೈತನ್ಯವನ್ನು ನೀಡುವ ಬಗೆಯನ್ನು ವಿವ ರಿಸಿದೆ. ಆದರೆ ಬರೀ ಶರೀರ ಬಲ ತಾಮಸಿಕವೆಂದೂ ಆತ್ಮ ಶಕ್ತಿಯಿಂದ ಕೂಡಿದರೆ ಮಾತ್ರ ಅದಕ್ಕೆ ಶ್ರೇಯಸ್ಸೆಂಬ ಮಾತನ್ನೂ ಇಲ್ಲಿ ಹೇಳದೆಯಿಲ್ಲ.

ಈ ಸಂಗ್ರಹದ ಕೊನೆಯ ಲೇಖನ 'ವಿನಾಶಕಾಲೇ ವಿಪರೀತ ಬುದ್ಧಿಃ' ವಿನಾಶ ಕಾಲ ದಲ್ಲಿ ಸದ್ವಿಚಾರವನ್ನು ಯಾರು ತಿಳಿಸಿದರೂ ಅರ್ಥವಾಗದು. ಆದ್ದರಿಂದ ಜೀವನದುದ್ದಕ್ಕೂ ಸತ್‌ಶ್ರವಣ, ಮನನ, ನಿಧಿಧ್ಯಾಸ, ಶಿವಾರ್ಚನೆಗಳಿಂದ ಚಿತ್ತಶುದ್ಧಿಯನ್ನು ಪಡೆದು ಅದನ್ನು ಬುದ್ಧಿಶಕ್ತಿಯೊಡನೆ ಬಲಪಡಿಸಿಕೊಂಡರೆ ಬಾಳಿನಲ್ಲಿ ಬೆಳಕನ್ನು ಕಾಣಬಹುದು ಎಂಬುದನ್ನು ಶ್ರೀಗಳವರು ಇಲ್ಲಿ ಮನಗಾಣಿಸಿದ್ದಾರೆ.

ಹೀಗೆ ಒಳ್ಳೆಯ ಜೀವನವನ್ನು ನಡೆಸಲು ಅವಶ್ಯವಾದ ಅನೇಕ ಮಾರ್ಗದರ್ಶಕ ವಿಚಾರಗಳನ್ನು "ಅಮೃತಬಿಂದು" ಸೂತ್ರರೂಪದಲ್ಲಿ ಒಳಗೊಂಡಿದೆ. ಅನೇಕ ತತ್ವಜ್ಞರ, ಮಹಾನುಭಾವಿಗಳ, ಶರಣ-ಸಂತರ, ಗೀತೆ-ಉಪನಿಷತ್ತುಗಳ ಸೂಕ್ತಿ-ಸುಭಾಷಿತಗಳಿಂದ ಇಲ್ಲಿಯ ಲೇಖನಗಳು ತುಂಬಿ ತುಳುಕುತ್ತಿವೆ. ಧಾರ್ಮಿಕ ಪರಿಭಾಷೆಯ ಪದಗಳನ್ನು ಇಲ್ಲಿ ಧಾರಳವಾಗಿ ಬಳಸಲಾಗಿದೆ. ಅವುಗಳನ್ನು ಬಲ್ಲವರಿಗೆ ಇವು ಸರ್ವಸಾಮಾನ್ಯ ತಿಳಿವಳಿಕೆ ಯನ್ನು ನೀಡಬಲ್ಲವು. ಇವೆಲ್ಲದರ ಮಧ್ಯದಲ್ಲಿ ಲೇಖಕರ ಸ್ವತಂತ್ರ ವಿಚಾರದ ಹೊಳಪನ್ನು ಕ್ವಚಿತ್ತಾಗಿ ಕಾಣುತ್ತೇವೆ. ಪರಂಪರೆಯಿಂದ ಬಂದ ಒಳ್ಳೆಯ ವಿಚಾರಗಳನ್ನು ಇಂದಿನ ಸಂದರ್ಭದಲ್ಲಿ ಪುನರುಜ್ಜೀವನಗೊಳಿಸಿ ಜನತೆಯ ಮನಸ್ಸಿನಲ್ಲಿ ಬಿತ್ತುವ ಸತ್ಕಾರ್ಯಕ್ಕೆ ಈ ಚಿಕ್ಕ ಹೊತ್ತಿಗೆ ಒಂದು ಉತ್ತಮ ಕಾಣಿಕೆಯೆನ್ನಬಹುದು.

# ಅಮೃತಬಿಂದು: ಒಂದು ಅಂತರಂಗದ ಅವಲೋಕನ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

**ಡಾ. ವಸಂತ ಪಾಟೀಲ**
'ರಾಜ್ಯಶಾಸ್ತ್ರ' ವಿಭಾಗ

ಅಮೃತಬಿಂದು ತಾತ್ವಿಕ ಸಿಂಧುವಿನ ಹುಟ್ಟಿನಿಂದ ಹನಿಯುತ್ತಿದೆ. ಒಂದೊಂದು ಹನಿ ಜೀವನ ಸಿದ್ಧಾಂತದ ಖನಿಯಾಗಿದೆ. ಒಂದು ಬಿಂದುವನ್ನು ಹೀಚಿ ಮತ್ತೊಂದಕ್ಕೆ ನಾಲಿಗೆ ಮುಂಚಾಚುತಿದೆ. ಇಲ್ಲಿ ಇಪ್ಪತ್ತು ಬಿಂದುಗಳು ಒಂದರ ನಂತರ ಒಂದು ಬಿದ್ದರೂ ತತ್ತ್ವದ ರುಚಿಯನ್ನುಂಡ ನಾಲಿಗೆ ಇನ್ನೂ ಚಪ್ಪರಿಸುತ್ತಿದೆ-"ಬೇಕು, ಬೇಕು"-ಎಂದು. ಹೆಚ್ಚು ರುಚಿ ಒಮ್ಮೆಗೆ ಸರಿಯಲ್ಲವೆಂಬ ರೀತಿಯಲ್ಲಿ ಈ ಚಿಕ್ಕ ಹೊತ್ತಿಗೆ ಪೂರ್ತಿಯಾಗುತ್ತಿದೆ ಅಲ್ಲಿಗೇ.

ಕಿಸೆಯ ಗಾತ್ರದ ಈ ಪ್ರತಿ ಚಿಕ್ಕಮಕ್ಕಳಿಗೆ ಪೆಪ್ಪರಮೆಂಟ, ಚಾಕಲೇಟ ಎನಿಸಿದರೆ, ಯುವಕ, ಯುವತಿಯರಿಗೆ ಉನ್ಮಾದದ ಚಿಲುಮೆಯಾಗಿದೆ, ಬುಗ್ಗೆಯಾಗಿದೆ. ಜೀವನದ ಸಂಜೆಗಿಳಿದವರಿಗಂತೂ ಮುಂದಿನ ಪಯಣಕೆ ಪರಂಜ್ಯೋತಿಯಾಗಿದೆ. ಒಟ್ಟಿನಲ್ಲಿ ಈ ಕಿರು ಕೃತಿ ಜೀವನದ ಜೇಂಗೊಡವಾಗಿದೆ, ಅಮೃತ ಕಲಶವಾಗಿದೆ. ಮಾನವನಿಗೆ ಮಾರ್ಗದರ್ಶಿಯಾಗಿದೆ. ಒಟ್ಟಿನಲ್ಲಿ ಲೇಖಕರ ಶ್ರಮ ಸಫಲವಾಗಿದೆ. ಇದಕ್ಕಿಂತ ಹೆಚ್ಚಿನ ಪಾರಿತೋಷಕ ಇನ್ನಾವುದಿದೆ ಲೇಖಕರಿಗೆ?

ಹೊರಲಾರದ ಗಾತ್ರದ ಕೃತಿಗಿಂತ ಇಂಥ ಕಿಸೆಯ ಪ್ರತಿ ಹೆಚ್ಚು ಉಪಯುಕ್ತ. "ಗಾಗರ ಮೆ ಸಾಗರ" -ಎಂಬ ಹಿಂದಿಯ ಉಕ್ತಿಯಂತೆ ವೇದ, ಉಪನಿಷತ್, ಭಗವದ್ಗೀತೆ ಮುಂತಾದ ಜಾಗತಿಕ ಮಟ್ಟದ ಸಾಹಿತ್ಯ ಸಿಂಧುವನ್ನು ಚಿಕ್ಕ ಚಿಕ್ಕ ಬಿಂದುಗಳನ್ನಾಗಿ ತುಂಬಿಡಲಾಗಿದೆ ಇಲ್ಲಿ-ಹೃದಯ ಬಟ್ಟಲದಲ್ಲಿ. ಜ್ಞಾನಪಿಪಾಸಿಯು ಅದನ್ನು ಅತ್ಯಾನಂದದಿಂದ ಸ್ವಾದಿಸಬಹುದು, ಈಂಟಬಹುದು. ಒಂದೊಂದು ಬಿಂದು ರಸಪಾಕ. ಕಾರಣ ಇದು ಅಮೃತಬಿಂದು.

ತಿಳಿನೀಲಿಯ ಅನಂತದ ಮಧ್ಯೆ, ಹಚ್ಚ ಹಸುರಿನ ಟೊಂಗೆಗೆ ಜೋತುಬಿದ್ದಿರುವುದು ಕೇಸರಿ ವರ್ಣದ ಜೇಂಗೊಡ. ಅದರಿಂದ ಹನಿಯುತ್ತಿದೆ ಅಮೃತಬಿಂದು. ಜ್ಞಾನಪಿಪಾಸು, ಬೇಗ ಬಾ! ಚಾಚು ಬಲಗೈ. ಊಹುಂ, ನೇರವಾಗಿ ಒಡ್ಡು ಬಾಯಿ!!

ತ್ರಿವರ್ಣದ ಈ ಮುಖಪುಟ ಬಹು ಒಪ್ಪಾಗಿದೆ. ಮಾರ್ಮಿಕವಾಗಿದೆ. ನೀಲಿ ವರ್ಣದ ಹಿನ್ನೆಲೆ 'ಅನಂತ'ತೆಗೆ ಸಾಕ್ಷಿ. ಹಚ್ಚ ಹಸುರಿನ ಟೊಂಗೆ-ಜೀವನದೇಳ್ಗೆಗೆ ಸಾಕ್ಷಿ. ಅದಕ್ಕೆ ಜೋತುಬಿದ್ದ ಜೇಂಗೊಡ ಜ್ಞಾನಭಾಂಡಾರ, ತತ್ತ್ವಜ್ಞಾನ. ಹನಿಯುತ್ತಿರುವ ಬಿಂದು ಜೀವನ ಚೇತನ, ಚಿತ್‌ಶಕ್ತಿ. ಕೊನೆಯಲ್ಲಿ ಅದಕ್ಕೆ ಅನಂತದಲ್ಲಿಯೇ ಮುಕ್ತಿ.

ಅಮೃತಬಿಂದುವಿನ ಇಡೀ ಸತ್ವವನ್ನು ಮುಖಪುಟದ ಕಲಾಕಾರ ಇಲ್ಲಿ ನಿಶ್ಚಯವಾಗಿ ಸೆರೆಹಿಡಿದಿರುವ, ಕಿರುಕೃತಿಗೆ ಇದು ಒಪ್ಪವಾಗಿದೆ, ಅಂದವಾಗಿದೆ, ಕಳೆತಂದಿದೆ.

"ಒಳಗೆ ಬಾ ಓದುಗನೆ" (ರಾಷ್ಟ್ರಕವಿ ಕುವೆಂಪುರವರ ಕ್ಷಮೆ ಕೋರಿ) "ಹೆಪ್ಪೊತ್ತಿಗೆ ಅಲ್ಲವಿದು ಜ್ಞಾನಸಿಂಧು. ಈಂಟು ಒಂದೊಂದಾಗಿ ಅಮೃತಬಿಂದು...."

ಇದೋ ನೋಡು! ಮುನ್ನುಡಿ; ಶ್ರೀ ಜ. ಚ. ನಿ. ಯವರ ಸಿರಿನುಡಿ. ಈ ಗ್ರಂಥದ ಬಗೆಗೆ ಶ್ರೀ ಜ. ಚ. ನಿ. ಈ ರೀತಿ ಬರೆದಿರುವರು: "ಇದೊಂದು ಹೊಸ ಬಗೆಯ ಹೊತ್ತಿಗೆ!.... ಅಮೃತಬಿಂದುಗಳನ್ನು ಸಂಚಯಿಸಿರುವ ಬಗೆ ಹೊಸದು. ಸಂವಿಧಾನ ಹೊಸದು. 'ಪರಂಜ್ಯೋತಿ' ಪತ್ರಿಕೆಗೆ ಪ್ರತಿ ತಿಂಗಳು ಬರೆದ ಒಂದೊಂದು ಬಿಂದುವಿನ ಸಂಚಯನ. ಇದು ಗ್ರಂಥಕರ್ತರಾದ ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರುಗಳವರ ವಿಚಾರಗಳ ಚಿಂತನ. ಅವರ ಅರಿವಿಗೆ ಬರೆಹದ ಉಡಿಗೆಯನ್ನು ಉಡಿಸಿದ್ದಾರೆ. ಸುಂದರ ಶೈಲಿಯ ತೊಡಿಗೆಯನ್ನು ತೊಡಿಸಿದ್ದಾರೆ.... ಮಾನವೀಯ ಉಜ್ಜೀವನದ ಹೊಂಗಿರಣ. ತಿಳಿಗಣ್ಣನ್ನು ತೆರೆಯಿಸುವ ಹೊಂಗಿರಣ; ಚಲುವ ಚಿತ್ಕಿರಣ." ಈ ಗ್ರಂಥದ ಉಪ ಯುಕ್ತತೆಯ ಬಗೆಗೆ ಹೀಗೆ ಬರೆಯುವರು: "ಸ್ವಾರ್ಥ ಸಂಕುಚಿತ ಸ್ವಭಾವದ ರೋಗಕ್ಕೆ ಸಿಕ್ಕದವರು ವಿರಳ. ಸಿಕ್ಕು ಕೃಶರಾದವರು ಬಹಳ. ಕ್ಲೇಶಗೊಂಡವರು ಬಹಳ. ಇಂಥವರಿಗೆ ಈ ಅಮೃತಬಿಂದು ಅವಶ್ಯ. ಇದು ಬೀರುತ್ತದೆ ವಿಶ್ವಕೌಟುಂಬಿಕ ಭಾವನೆಯನ್ನು, ಜೀವನವನ್ನು."

"ಹಿರಿಯ ಬಾಳಿಗೆ" ಈ ಗ್ರಂಥ "ಹೆಬ್ಬೆಳಕು" ನೀಡುವುದು. "ಜ್ಯೋತಿಗಳಿಗೆ ಜ್ಯೋತಿಯಾದ ಪರಂಜ್ಯೋತಿ"ಯಾಗುವುದು, "ಪರಾಶಕ್ತಿ"ಯಾಗುವುದು ಎಂದು ಶ್ರೀ ಜ. ಚ. ನಿ. ಯವರು ಅಭಿಪ್ರಾಯಪಟ್ಟಿರುವರು. ಒಟ್ಟಿನಲ್ಲಿ ಇಲ್ಲಿ ಅನುಭವಾಮೃತ ವಿದೆ. "ಅಮೃತಪಾನಮಾಡಿ ಅಮರರಾಗಬೇಕು" –ಎಂದು ಆಶಿಸಿರುವರು.

ಇಲ್ಲಿ ಒಟ್ಟು ಇಪ್ಪತ್ತು ಅಮೃತಬಿಂದುಗಳಿವೆ. ಸಾಧಕನಿಗೆ ಅತ್ಯುಪಯುಕ್ತವಾದ ಮಾರ್ಗದರ್ಶಿಗಳಿವು. ಸಂಸ್ಕೃತ ಸಾಹಿತ್ಯದ ಉತ್ಕೃಷ್ಟ ಸುಭಾಷಿತಗಳನ್ನು ಇಲ್ಲಿ ರಸವತ್ತಾಗಿ ಸಾಧಕನಿಗೆ ಉಣಬಡಿಸುತ್ತಾರೆ ಲೇಖಕರು.

ಮೊದಲನೆಯದು "ತಮಸೋಮಾ ಜ್ಯೋತಿರ್ಗಮಯ" ಉಪನಿಷತ್ಕಾರನ ಇಂಗಿತ ವನ್ನು ಲೇಖಕರು ಇಲ್ಲಿ ಮನದಟ್ಟಾಗಿಸಿರುವರು. "ಶ್ರವಣ, ಮನನ, ನಿಧಿಧ್ಯಾಸಾದಿ ಅನುಸಂಧಾನದಿಂದ ಬೆಳಕಿನ ಮನೆಯನ್ನು" ಸೇರಲು ಲೇಖಕರು ಪ್ರೇರೇಪಿಸುತ್ತಿರುವರು. "ಬೆಳಗು ಕತ್ತಲೆಯ ನುಂಗಿ", ಅಂತಃಶುದ್ಧಿಯಾಗುವ ಅಲ್ಲಮನ ಇಚ್ಛೆಯನ್ನು ಲೇಖಕರು ಇಲ್ಲಿ ವಿಷದೀಕರಿಸಿರುವರು. ಕತ್ತಲೆಯಿಂದ ಬೆಳಕಿನೆಡೆಗೆ ಜೀವಾತ್ಮನ ಪಯಣ.

ಎರಡನೆಯದು–"ವಸುಧೈವ ಕುಟುಂಬಕಂ" ಇಡೀ ಜಗತ್ತೇ ನನ್ನ ಕುಟುಂಬ ಎಂಬ ಭಾವನೆಗೆ ಒಳ್ಳೆಯ ತಳಪಾಯ ಲೇಖಕರು ಇಲ್ಲಿ ಹಾಕಿರುವರು. "ಜಾಗತಿಕ ಬಾಂಧವ್ಯಕ್ಕೆ

ಕೇವಲ ನಾಗರಿಕತೆ ಬೆಳೆದರೆ ಸಾಲದು. ಅದರ ಜೊತೆಯಲ್ಲಿ ಆಧ್ಯಾತ್ಮಿಕತೆ ಬೆಳೆದು ಬರಬೇಕು" ಎಂದು ಲೇಖಕರು ಅಭಿಪ್ರಾಯಪಡುವರು. ಅಂದರೇನೇ ಧಾರ್ಮಿಕ ಐಕ್ಯತೆ, ವಿಶ್ವಶಾಂತಿ. ವಿವಿಧತೆಯಲ್ಲಿ ಏಕತೆಯ ತತ್ವವನ್ನು ಸಿದ್ಧರಾಮ ಶಿವಯೋಗಿಗಳ ವಚನದಿಂದ ಸ್ಪಷ್ಟೀಕರಿಸಿ ರುವರು. "ಮನದಲ್ಲಿ ಭೇದ, ವಸ್ತುವಿನಲ್ಲಿ ಭೇದವಿಲ್ಲವಯ್ಯ; ಕ್ರಿಯೆ-ಕ್ರಿಯೆಯಲ್ಲಿ ಭೇದವಲ್ಲದೆ ಜ್ಞಾನದಲ್ಲಿ ಭೇದವಿಲ್ಲವಯ್ಯ; ರೂಪ, ರೂಪದಲ್ಲಿ ಭೇದವಲ್ಲದೆ ಚೈತನ್ಯದಲ್ಲಿ ಭೇದ ವಿಲ್ಲ...." "ಸರ್ವೇಜನಾಃ ಸುಖಿನೋಭವಂತು" –ಎಂಬುದೇ ಜಾಗತಿಕ ಕುಟುಂಬದ ಗುರಿ. ಈ ಅಮೃತಬಿಂದುವು ಧಾರವಾಡ ಆಕಾಶವಾಣಿಯಿಂದ ಬಿತ್ತರಗೊಂಡಿದೆ.

ಮೂರನೆಯದು–"ಭಕ್ತೇರಸಾಧ್ಯಂ ನಹಿ ಕಿಂಚಿದಸ್ತಿ" ಭಕ್ತಿಯಿಂದ ಮುಕ್ತಿ. "ತರ್ಕ ಜ್ಞಾನಕ್ಕಿಂತಲೂ ತಿಳಿಯಾದ ಭಕ್ತಿ ಮಿಗಿಲಾದುದು" –ಎಂಬುದು ಲೇಖಕರ ಅಭಿಮತ. "ಭಗವಂತ ಭಕ್ತಿಪ್ರಿಯ" –ಎಂಬುದು ಲೇಖಕರ ಖಚಿತ ಅಭಿಪ್ರಾಯ. ಭಕ್ತರ ಯೋಗ ಕ್ಷೇಮವನ್ನು ಭಗವಂತನೇ ನೋಡಿಕೊಳ್ಳುವನೆಂಬುದು ಗೀತೆಯ ತಾತ್ಪರ್ಯ. ಬಸವಣ್ಣನು ಪ್ರಾರ್ಥಿಸುವುದಾದರೂ ಭಕ್ತಿರಸಕ್ಕಾಗಿಯೇ. ಒಟ್ಟಿನಲ್ಲಿ ಭಕ್ತಿಗೆ ಅಸಾಧ್ಯವಾದುದು ಯಾವುದೂ ಇಲ್ಲ.

ನಾಲ್ಕನೆಯದು–"ಜ್ಯೋತಿಷಾಮಪಿ ತಜ್ಜ್ಯೋತಿಃ" ಲೇಖಕರೇ ಹೇಳುವಂತೆ "ಇದು ಗೀತೆಯ ಅಂತರ್ವಾಣಿ, ಅಮರವಾಣಿ." ಮನದ ಮುಂದಣ ಕತ್ತಲೆಯ ಕಳೆದು, ಜ್ಯೋತಿಗಳ ಜ್ಯೋತಿ ಚಿಜ್ಜ್ಯೋತಿಯನ್ನು ಹೊತ್ತಿಸಿ ಪರಂಜ್ಯೋತಿಯನ್ನು ಕಾಣುವ ಸನ್ನಾಹವಿಲ್ಲಿದೆ. ದೀಪಾವಳಿಯ ಮುನ್ನ ಹನಿಕಿದ ಅಮೃತಬಿಂದುವಿದು.

ಐದನೆಯದು–"ಯೋಗಶ್ಚಿತ್ತ ವೃತ್ತಿನಿರೋಧಃ" ಇಲ್ಲಿ ಯೋಗದ ಮಹತ್ತಿದೆ. ಬಂಧನ ಮುಕ್ತಿಗೆ ಯೋಗ ಸಾಧನ–ಎಂಬ ತತ್ತ್ವ ಇಲ್ಲಿದೆ. ಚಿತ್ತವೃತ್ತಿಗೆ ಮದ್ದು ಯೋಗ ದಲ್ಲಿದೆ. ಲೇಖಕರ ಶೈಲಿ ಇಲ್ಲಿ ಕಾವ್ಯಮಯವಾಗಿ ನರ್ತನವಾಡುವುದು. ಯೋಗ "ಜೀವನಕ್ಕೆ ಕಮನೀಯಕುಡ್ಮಲ. ಮುಮ್ಮಲ ತೊಳೆಯುವ ನಿರ್ಮಲ ಗಂಗಾಜಲ....ಪವಿತ್ರ ಜೀವನಕ್ಕೆ.... ಪರಮಸಾಧನ.... ದೀರ್ಘಕಾಲ ಬದುಕಲು ಹಾಗೂ ಆರೋಗ್ಯದಿಂದಿರಲು ಸಹಾಯಕ.... ಯೋಗಶಕ್ತಿಯಿಂದ ಅಣಿಮಾದಿ ಅಷ್ಟಸಿದ್ಧಿಗಳ ಸಂಪ್ರಾಪ್ತಿ.... ಆತ್ಮಾನು ಭೂತಿ" (ಪು. ೧೪) ಎಂದು ಯೋಗದ ಮಹತ್ವ ಎತ್ತಿ ತೋರಿಸಿರುವರು.

ಶಿವಯೋಗ ಪ್ರದೀಪಿಕಾದ "ಯೋಗಾತ್ ಸಂಜಾಯತೆ ಜ್ಞಾನಂ" (ಪು. ೧೫), ಗೀತೆಯ–"ಸಮತ್ವಂ ಯೋಗ ಉಚ್ಯತೆ" ಮತ್ತು ಶಿವಯೋಗದ "ಲಿಂಗಾಂಗ ಸಾಮರಸ್ಯ" ವನ್ನು ಉದ್ಧರಿಸಿ ಅಲ್ಲಮಪ್ರಭುವಿನ ಮಾತಿನಲ್ಲಿ ಈ ಬಿಂದುವಿನ ಕೊನೆಯ ಸವಿಯನ್ನು ಕಾಣಬಹುದು: "ಅಳಿದು ಕೂಡುವುದೊಂದು ಯೋಗ, ಅಳಿಯದೆ ಕೂಡುವುದೊಂದು ಯೋಗ, ಈ ಎರಡು ಯೋಗದೊಳಗೆ ಅಳಿಯದೆ ಕೂಡುವ ಯೋಗವರಿವುದು ಗುಹೇಶ್ವರಾ." (ಪು. ೧೭).

ಆರನೆಯದು–"ಲಿಂಗಮಧ್ಯೇ ಜಗತ್ಸರ್ವಂ" ಇಲ್ಲಿ ಇಷ್ಟಲಿಂಗದ ಮಹಿಮೆ ಇದೆ. "ವೀರಶೈವರಿಗೆ ಲಿಂಗವೇ ಪಂಚಪ್ರಾಣ." "ಲಿಂಗವಿಲ್ಲದವರನು ಭವಿ ಎಂಬ"ನು ಬಸವಣ್ಣ. ಆತನ ದೃಷ್ಟಿಯಲ್ಲಿ ಲಿಂಗದ ಮಹಿಮೆ "ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ' ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ, ಬ್ರಹ್ಮಾಂಡದಿತ್ತತ್ತ ನಿಮ್ಮ ಶ್ರೀ ಮುಕುಟ, ಅಗಮ್ಯ, ಅಗೋಚರ, ಅಪ್ರತಿಮ."

ಲೇಖಕರು ಹೇಳುವಂತೆ ಇದೇ ಭಾವವು ಸರ್ವಜ್ಞನಲ್ಲಿಯೂ ಇದೆ.

"ಲಿಂಗಕ್ಕೆ ಕಡೆಯೆಲ್ಲಿ? ಲಿಂಗಿಲ್ಲದೆಡೆಯಲ್ಲಿ।
ಲಿಂಗದೊಳು ಜಗವು ಅಡಗಿಹುದು।
ಲಿಂಗವನು ಹಿಂಗಿದವರುಂಟೇ ಸರ್ವಜ್ಞ।"

ಲೇಖಕರು ಶಿವಯೋಗಿ ಶಿವಾಚಾರ್ಯರ ಸಿದ್ಧಾಂತ ಶಿಖಾಮಣಿಯಲ್ಲಿಯ ಇದೇ ಭಾವವನ್ನು ಉದ್ಧರಿಸಿರುವರು:

ಜ್ಯೋತಿರ್ಮಯಂ ಪರಂ ಲಿಂಗ ಶೃತಿರಾಹ ಶಿವಾತ್ಮಕಂ।
ತಸ್ಯಭಾಸಾ ಸರ್ವಮಿದಂ ಪ್ರತಿಭಾತಿ ನ ಸಂಶಯಃ॥

ಒಟ್ಟಿನಲ್ಲಿ ಇಷ್ಟಲಿಂಗವು ವೀರಶೈವರ ಮಹಾಕೊಡುಗೆ. ಇದು ವಿಪ್ರನಿಂದ ಹಿಡಿದು ಅಂತ್ಯಜರನ್ನೆಲ್ಲ–ಒಗ್ಗೂಡಿಸುವುದು. ಸ್ಥಾವರಲಿಂಗದಡೆಗೆ ಹೋಗಲು ಅವಕಾಶ ವಿಲ್ಲದ ಹರಿಜನರಿಗೆ, ಲಿಂಗವೇ ಅವರೆಡೆಗೆ ಹೋಗುವಂತೆ ಮಾಡಿದುದು ಬಸವಣ್ಣನ ಅದ್ಭುತ ಕೊಡುಗೆ–ಅದೂ ಅತಿ ಹಿಂದೆ ಹನ್ನೆರಡನೆಯ ಶತಮಾನದಲ್ಲಿ.

ಏಳನೆಯದು–"ಮಾನವಃ ಶಿವಯೋಗೇನ ಶಿವೋಭವತಿ ಕೇವಲಂ" ಇಲ್ಲಿ ಶಿವ ಯೋಗದ ಮಹಿಮೆ ಇದೆ. "ರಾಜಯೋಗ ಜೀವಶುದ್ಧಿಗೆ ಹಾಗೂ ಶಿವಯೋಗ ಲಿಂಗಾಂಗ ಸಾಮರಸ್ಯಕ್ಕೆ ಸಾಧನ" ಎಂಬುದು ಲೇಖಕರ ವಿಚಾರ. ತೋಂಟದ ಸಿದ್ಧಲಿಂಗ ಯತಿಗಳ ಪ್ರಕಾರ "ಲಿಂಗವೇ ತಾನು ತಾನಾಗಿ ವಿರಾಜಿಸುವುದು."

ಎಂಟನೆಯದು– "ಬುದ್ಧಿನಾಶಾತ್ ಪ್ರಣಶ್ಯತಿ" ಇದು ಭಗವದ್ಗೀತೆಯ ಉಕ್ತಿಯು. "ಸಂಗದಿಂದ ಕಾಮ, ಕಾಮದಿಂದ ಕ್ರೋಧ, ಕ್ರೋಧದಿಂದ ಸಮ್ಮೋಹ, ಸಮ್ಮೋಹದಿಂದ ಬುದ್ಧಿ ಭ್ರಮಣೆ ಮುಂತಾಗಿ ಸರ್ವನಾಶವಾಗುವುದು"– ಎಂದು ಕೃಷ್ಣ ಪರಮಾತ್ಮನು ಅರ್ಜುನನಿಗೆ ಬುದ್ಧಿವಾದ ಹೇಳಿದನು. ಇಲ್ಲಿ ಇಂದ್ರಿಯ ನಿಗ್ರಹದ ಮಹಿಮೆ ಇದೆ. "ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಿಸದಂತಿರಿಸು" ಎಂದು ಬಸವಣ್ಣ ಪ್ರಾರ್ಥಿಸುವ. "ಚಿತ್ತದ ರಾಗವೇ ಚಿಂತೆಯ ಮೂಲ" ವೆಂಬುದು ಹಾನಗಲ್ಲ ಕುಮಾರ ಶಿವಯೋಗಿಗಳ ಅಭಿಪ್ರಾಯ.

ಒಂಬತ್ತನೆಯದು–"ಅಹಿಂಸಾ ಪರಮೋಧರ್ಮಃ" "ಇದು ಮಾನವ ಸಂಸ್ಕೃತಿ ದೇವನಿಗೆ ಸಂಪ್ರೀತಿ" ಎಂಬುದು ಲೇಖಕರ ಮತ. ದೈಹಿಕ ಹಿಂಸೆಗಿಂತ ಮಾನಸಿಕ ಹಿಂಸೆಯು ಹೆಚ್ಚು

ಘಾತುಕ. "ಕೊಲ್ಲದಿರ್ಪ ಧರ್ಮವೆಲ್ಲರಿಗೂ ಸಮ್ಮತವು"—ಎಂದು ಸರ್ವಜ್ಞ ಸ್ಪಷ್ಟ ಪಡಿಸಿರುವನು. ಇಲ್ಲಿ ಜಾಗತಿಕ ಶಾಂತಿಯಿದೆ. "ಸಕಲ ಜೀವಾತ್ಮರಿಗೆ ಲೇಸನೇ ಬಯಸು ವುದು" ಬಸವ ಸಿದ್ಧಾಂತ. "ದಯವಿರಬೇಕು ಸಕಲಪ್ರಾಣಿಗಳಲ್ಲಿ" ಎಂದು ಹೇಳಿ "ದಯವೇ ಧರ್ಮದ ಮೂಲ"—ಎಂದು ಬಸವಣ್ಣ ಧರ್ಮದ ವ್ಯಾಖ್ಯೆ ಕೊಟ್ಟಿರುವನು.

ಹತ್ತನೆಯದು—"ಸರ್ವೇಜನಾಃ ಸುಖಿನೋಭವಂತು" ಇಲ್ಲಿ ಭಾವೈಕ್ಯತೆ ಮತ್ತು ವಿಶ್ವಶಾಂತಿಗೆ ಅವಕಾಶವಿದೆ. ವಿವಿಧತೆಯಲ್ಲಿ ಏಕತೆಯಿದೆ. ಸರ್ವಧರ್ಮ ಸಹಿಷ್ಣುತೆ ಇದೆ. ಇದು ಆಕಾಶವಾಣಿಯಿಂದ ಬಿತ್ತರಿಸಿದ ಅಮೃತಬಿಂದು.

ಹನ್ನೊಂದನೆಯದು—"ಧರ್ಮೋ ರಕ್ಷತಿ ರಕ್ಷಿತಃ" ಧರ್ಮವನ್ನು ರಕ್ಷಿಸಿದರೆ, ಅದು ನಮ್ಮನ್ನು ರಕ್ಷಿಸುವುದು. ಅದಕ್ಕೆ ಧರ್ಮಸಂಗ್ರಹ ಅತ್ಯವಶ್ಯ. ಸದ್ಗುಣಗಳನ್ನು ಬೆಳೆಸಿಕೊಳ್ಳುವುದೇ ಧರ್ಮ. ಮಹಾತ್ಮಾಗಾಂಧಿಯವರ ದೃಷ್ಟಿಯಲ್ಲಿ ಧಾರ್ಮಿಕ ತತ್ವಕ್ಕಿಂತ ನೀತಿ ಮೇಲು. "ಧರ್ಮದರ್ಶನವೇ ಆತ್ಮೋನ್ನತಿಗೆ ರಕ್ಷಾಮಂತ್ರ"— ಎಂಬುದು ಲೇಖಕರ ಮತ.

ಹನ್ನೆರಡನೆಯದು—"ಹಿತಂ ಮನೋಹಾರಿ ಚ ದುರ್ಲಭಂ ವಚಃ" "ಇದು—ಮಹಾ ಕವಿ ಭಾರವೀಯ ಹಿತವಚನ." ಮಾತಿನಿಂದ ಮಾನವನ ಅಂತಸ್ಸತ್ವದ ಅರಿವಾಗುವುದು. "ನುಡಿದರೆ ಮುತ್ತಿನಹಾರದಂತಿರಬೇಕು.... ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು" ಎಂಬುದು ಬಸವಣ್ಣನ ವಿಚಾರ. "ಮೌನ ಮತ್ತು ಮಾತು ಇವೆರಡು ಮಹಾಶಕ್ತಿಗಳು"— ಅರವಿಂದರ ದೃಷ್ಟಿಯಲ್ಲಿ. ಮಾತು ಬಲ್ಲವ ಮಾಣಿಕ್ಯ ತರುವ. ಅದನ್ನು ಅರಿಯದವ ಜಗಳ ತರುವ.

ಹದಿಮೂರನೆಯದು—"ಸತ್ಯಮೇವ ಜಯತೆ ನಾನೃತಂ" ಸತ್ಯಬಿಟ್ಟು ಬೇರೆ ಧರ್ಮವಿಲ್ಲ. ಸತ್ಯಕ್ಕೇ ಜಯ. ಗಾಂಧೀಜಿಯವರ ದೃಷ್ಟಿಯಲ್ಲಿ ಸತ್ಯವೇ ದೇವರು. ಸತ್ಯ ದಿಂದಲೇ ಸೂರ್ಯಚಂದ್ರಾದಿಗಳು ತಮ್ಮ ಧರ್ಮ ಪರಿಪಾಲಿಸುತ್ತಿರುವರು. ಸತ್ಯಮಾರ್ಗ ಮುಳ್ಳಿನಹಾಸಿಗೆ. ಈ ದಾರಿ ಅಸಿಧಾರೆ. ಸತ್ಯದಿಂದ ಗಾಂಧಿ ಮಹಾತ್ಮರಾದರು. "ಭಾರತದ ಸ್ವಾತಂತ್ರ್ಯ ಸತ್ಯದ ಅಂಶ"—ಎಂಬುದು ಲೇಖಕರ ವಿಚಾರ.

ಹದಿನಾಲ್ಕನೆಯದು—"ಯದ್ಭಾವಸ್ತದ್ಭವತಿ" "ಭಾವದಂತೆ ಸಿದ್ಧಿ. ಮನದಂತೆ ಮಾರ್ಗ" "ಸದ್ಭಾವನೆ ಪ್ರಗತಿಗೆ" ಮೂಲ. "ಭಾವಶುದ್ಧವಾದೊಡೆ ಕೂಡಲ ಸಂಗಮ ದೇವ ತನ್ನತ್ತ ಕರೆದುಕೊಳ್ಳುವ" ಎಂಬುದು ಬಸವಣ್ಣನ ಅನುಭವ.

ಹದಿನೈದನೆಯದು—"ಮಹಾಜನೋಯೇನ ಗತಃ ಸಪಂಥಾಃ" ದೊಡ್ಡವರು ನಡೆದುದೇ ದಾರಿ, ಸನ್ಮಾರ್ಗ. ಅದು ಶರಣರ ಮಾರ್ಗ. ಬಹುಭಾಷಾವಿಶಾರದರಾದ ಲೇಖಕರು ಆಂಗ್ಲ ಕವಿ ಲಾಂಗಫೆಲೋನ ಕಾವ್ಯವನ್ನು ಉದ್ಧರಿಸಿ ಈ ಮಾತನ್ನು ಸ್ಪಷ್ಟೀ ಕರಿಸಿರುವರು. "ಶರಣರು ನಡೆದುದೇ ಪಾವನಕಾಣಿರೋ, ಶರಣ ನುಡಿದುದೇ ಶಿವತತ್ವ

ಕಾಣಿರೋ, ಕೂಡಲ ಸಂಗನ ಶರಣರ ಕಾಯವೇ ಕೈಲಾಸ ಕಾಣಿರೋ"– ಎಂದು ಬಸವಣ್ಣ ಹೇಳಿರುವ. ಒಟ್ಟಿನಲ್ಲಿ ಗೀತೆಯ ಉಕ್ತಿಯಂತೆ. "ಶ್ರೇಷ್ಠರು ಆಚರಿಸಿದಂತೆ ಲೋಕದ ಜನರು ಅನುಸರಿಸುವರು."

ಹದಿನಾರನೆಯದು–"ಧ್ಯಾನಂ ನಿರ್ವಿಷಯಂ ಮನಃ" ಇಲ್ಲಿ ಧ್ಯಾನದ ಮಹಿಮೆ ಯಿದೆ. ಧ್ಯಾನ ಮುಕ್ತಿಗೆ ಸೋಪಾನ. ನಿರ್ಮಲ ಮನ, ಅಚಲಶ್ರದ್ಧೆ–ಧ್ಯಾನದ ಅಡಿಪಾಯ. ಧ್ಯಾನವು ವಿಶ್ವಪ್ರೇಮ, ಆತ್ಮಸಮರ್ಪಣೆಗೆ ಎಡೆಮಾಡುವುದು. ಧ್ಯಾನಕ್ಕೆ ಶಿವನೊಲಿವ. "ಕೂಡಲ ಸಂಗಮ ದೇವರ ನೆರೆನಂಬಿದನಾದರೆ ಕಡೆಗೆ ತನ್ನಂತೆ ಮಾಡುವ" ಇದು ಬಸವಣ್ಣನ ಅನುಭವ. "ಜ್ಞಾನಕ್ಕಿಂತ ಧ್ಯಾನ, ಧ್ಯಾನಕ್ಕಿಂತ ಕರ್ಮ ವಿಶಿಷ್ಟವಾದುದು–" ಎಂಬುದು ಗೀತೆಯ ಉಪದೇಶ.

ಹದಿನೇಳನೆಯದು–"ನಹಿ ಜ್ಞಾನೇನ ಸದೃಶಂ" ಇಲ್ಲಿ ಜ್ಞಾನದ ಮಹತ್ತಿದೆ. ಆದರೆ ಇದರ ಮೊದಲಿನ ಅಮೃತ ಬಿಂದು (೧೬ನೆಯದು) ಜ್ಞಾನಕ್ಕಿಂತ ಧ್ಯಾನ ಶ್ರೇಷ್ಠ– ಎಂದು ತೀರ್ಮಾನಿಸಿದೆ. ಜ್ಞಾನ ಧ್ಯಾನಕ್ಕೆ ದಾರಿದೀಪ. ಜ್ಞಾನದ ಪ್ರೇರಣೆಯಿಂದ ಧ್ಯಾನ. "ಜ್ಞಾನದ ಬಲದಿಂದ ಅಜ್ಞಾನದ ಕೇಡು." "ತತ್ತ್ವಮಸಿ" ವೇದವಾಕ್ಯವಾಗಲಿ, "ತನ್ನಲ್ಲಿಯೇ ತನ್ಮಯ ಗುಹೇಶ್ವರ ಲಿಂಗವು" ಎಂದು ಅಲ್ಲಮ ಪ್ರಭುದೇವರು ಹೇಳುವು ದಾಗಲಿ– ಎಲ್ಲವೂ ಜ್ಞಾನದ ಮಹಿಮೆ ಸಾರುವವು. ಅರಿವೇ ಗುರು. "ಜ್ಞಾನದೀಪ್ತಿಗೆ.... ಶಿವಶರಣರ ನುಡಿಯೇ ತೈಲ"ವೆಂಬುದು ಚೆನ್ನಬಸವಣ್ಣನವರ ಅನುಭವ. "ಕೂಡಲ ಸಂಗಮದೇವಾ ನಿಮ್ಮನರಿಯದ ಜ್ಞಾನವಲ್ಲ ಅಜ್ಞಾನ"–ವೆಂಬುದು ಬಸವಣ್ಣನ ಸ್ಪಷ್ಟ ತೀರ್ಮಾನ. ಧ್ಯಾನವೇ ನಿಜ ಜ್ಞಾನ. ಭಕ್ತಿಯಿಂದ ಮುಕ್ತಿ.

ಹದಿನೆಂಟನೆಯದು–"ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ" ಉದ್ಯೋಗ ಪುರುಷ ಲಕ್ಷಣ. ಉದ್ಯೋಗದಿಂದ ಸಂಪತ್ತು. ಇಲ್ಲಿ ಕಾಯಕದ ಹಿರಿಮೆ ಇದೆ. "ಕಾಯಕವೇ ಕೈಲಾಸ" ಇದು ಬಸವಣ್ಣನ ಸಿದ್ಧಾಂತ. "ಕಾಯಕದಲ್ಲಿ ನಿರತರಾದಡೆ ಗುರುದರ್ಶನವಾದರೂ ಮರೆಯಬೇಕು, ಲಿಂಗಪೂಜೆಯಾದರೂ ಮರೆಯಬೇಕು, ಜಂಗಮ ಮುಂದಿದ್ದಡೆಯೂ ಹಂಗು ಹರಿಯಬೇಕು"–ಎಂಬುದು ಬಸವಣ್ಣನ ವಿಚಾರ. ಕಾಯಕವೇ ಲಿಂಗಪೂಜೆ, ಗುರುಸೇವೆ ಎಲ್ಲವೂ. ಉದ್ಯೋಗವು ಸತ್ಯಶುದ್ಧವಾಗಿರಬೇಕೆಂಬುದು ಲೇಖಕರ ಹಿತನುಡಿ. ಇಂದಿನ ನಿರುದ್ಯೋಗದ ಸಮಸ್ಯೆಯನ್ನು ಲೇಖಕರು ಎತ್ತಿರುವರು. "ನಿರುದ್ಯೋಗಿಯ ಜೀವನ ಹಾಳು ದೇಗುಲ"–ನಿಜ. "ಪರಿಶ್ರಮ ಪರಮ ಸಂಜೀವಿನಿ"– ಲೇಖಕರ ಅಭಿಮತ. ಕಾಯಕ ಮತ್ತು ದಾಸೋಹ ಕೂಡಿದರೆ–ಅದುವೇ ಶಿವಜೀವೈಕ್ಯವು. ಇದು ಶರಣರ ಸಿದ್ಧಾಂತ. ಒಟ್ಟಿನಲ್ಲಿ "ಖಾಲಿ ಕೊಡುವುದಕ್ಕಿಂತ ಕೂಲಿ ಮಾಡುವುದು ಲೇಸು." ಲೇಖಕರ ಮತ.

ಹತ್ತೊಂಬತ್ತನೆಯದು–"ಶರೀರಮಾದ್ಯಂಖಲು ಧರ್ಮಸಾಧನಂ" ಇಲ್ಲಿ ದೇಹದ ಮತ್ತು ಅದರ ಸ್ವಾಸ್ಥ್ಯದ ಮಹತ್ತಿದೆ. ಶರೀರ ಧರ್ಮಕ್ಕೆ ಸಾಧನ. ಶರೀರವಿಲ್ಲದೆ

ಧರ್ಮ ಆಚರಿಸಲು ಬರುವುದಿಲ್ಲ. ಆ ಶರೀರ, ಸ್ವಾಸ್ಥ್ಯ, ಶುದ್ಧವಾಗಿರಬೇಕು. "ಶರೀರ ವೆಂತೆಂಬ ಹೊಲವ ಹಸನಮಾಡಿ ಪರತತ್ವ ಬೆಳೆಯನು ಬೆಳೆದುಣ್ಣಿರೊ"–ಎಂದು ಶ್ರೀ ಸರ್ಪಭೂಷಣ ಶಿವಯೋಗಿಗಳವರು ಕಳಕಳಿಯಿಂದ ಉಪದೇಶಿಸಿರುವರು. ದೇಹ ದೇಗುಲವಾಗಬೇಕು ಎಂಬುದು ಲೇಖಕರ ಹಿತನುಡಿ. ಆತ್ಮಸಂಯಮನ ಅಧ್ಯಾತ್ಮಿಕಕ್ಕೆ ಪೌಷ್ಟಿಕ. ಸತ್ವಾಹಾರ ಸಾತ್ವಿಕಸನ್ನಾಗಿ ಮಾಡುವುದು. ಜ್ಯೋತಿಯಿಂದ ಜ್ಯೋತಿ ಬೆಳಗುವಂತೆ, ದೇಹದಿಂದ ದೇಹದ ಜನ್ಮಧಾರಣ. ಆತ್ಮಶಕ್ತಿ ದೇಹಕ್ಕೆ ಪುಷ್ಟಿ.

"What I want is muscles of iron and nerves of steel, inside which dwells a mind of the same material as that of which the thunderbolt is made........

"Strength is life, weakness is death."

—ಇದು ಶ್ರೀ ವಿವೇಕಾನಂದರ ಅಮರವಾಣಿ.

ಇಪ್ಪತ್ತನೆಯದು ಹಾಗೂ ಕೊನೆಯದು–"ವಿನಾಶಕಾಲೇ ವಿಪರೀತಬುದ್ಧಿಃ" (ವಿನಾಶ)ಕಾಲದಿಂದ ವಿಪರೀತ ಬುದ್ಧಿಯಲ್ಲ. ವಿಪರೀತ ಬುದ್ಧಿಯಿಂದ ವಿನಾಶಕಾಲ. ವಿಪರೀತ ಬುದ್ಧಿಗೆ ಸದ್ವಿಚಾರ ಸೇರದು. "ಪರಮಾನಂದವೆಂಬ ಜಲ ಕಾಯವೆಂಬ ಕೆರೆಯಲ್ಲಿ ನಿಲ್ಲದು" ಇಲ್ಲಿ ಲೇಖಕರ ಶೈಲಿಯ ಶ್ರೇಷ್ಠತೆಯನ್ನು ಕಾಣಬಹುದು. ಅಮೃತ ತೊರೆದು ಹೆಂಡವ ಬೇಡುವುದು–ವಿಪರೀತ ಬುದ್ಧಿ. ವಿನಾಶಕಾಲ ಬರುವ ಮೊದಲೇ ಸತ್‌ಶ್ರವಣ, ಮನನ, ನಿಧಿಧ್ಯಾಸ, ಶಿವಾರ್ಚನೆಯಲ್ಲಿ ತೊಡಗಬೇಕೆಂದು ಲೇಖಕರು ಮಾನವನನ್ನು ಎಚ್ಚರಿಸುವರು.

ಒಟ್ಟಿನಲ್ಲಿ ಪ್ರತಿ ಬಿಂದು–ಅಮೃತಬಿಂದು, ಸ್ವತಃ ಸ್ವಾದಿಸಿದವಗೆ ಇದರ ಸಿಹಿ, ಸತ್ವದ ಅರಿವಾಗುವುದು. ಆಗ್ಗೆ ಲೇಖಕರ ಕ್ರಮ ಸಾರ್ಥಕವಾಗುವುದು. ಘನ ಉದ್ದೇಶ ಈಡೇರುವುದು. ಇಲ್ಲಿಯ ಅಮೃತ ಬಿಂದುಗಳು ಮಾನವ ಜೀವನದ ಸಫಲತೆಯತ್ತ ಹನಿಯುತ್ತಿರುವವು.

ಈ ಚಿಕ್ಕ, ಚೊಕ್ಕ ಸಂಗ್ರಹಕ್ಕೆ ಲೇಖಕರ ನುಡಿ, ಅಂದವಾದ ಮುಖಪುಟದ ಕಲಾಕಾರನಿಗೆ ಕೃತಜ್ಞತೆ, ಮುನ್ನುಡಿಯ ಪುಟಗಳಿಗೂ ರೋಮನ್ ಸಂಖ್ಯೆ ಹಾಗೂ ಪ್ರತಿ ಬಿಂದುವಿನ ಹಿಂದೆ ಅನುಕ್ರಮ ಅಂಕಿಬೇಕೆನಿಸುತ್ತದೆ. ಇದೊಂದು ಸರ್ವಾಂಗ ಸುಂದರವಾದ ಕೊಡುಗೆ ಸಾಹಿತ್ಯ ಪ್ರಪಂಚಕ್ಕೆ ಹಾಗೂ ಆಧ್ಯಾತ್ಮಿಕ ಸಂಪತ್ತಿಗೆ.

# ಯುಗಪುರುಷ ಯೋಗಿಕುಮಾರ

## ಒಂದು ರಸವಿಮರ್ಶೆ:

ನಿವೃತ್ತ ಸಹಸಂಪಾದಕರು
ಸಂಯುಕ್ತ ಕರ್ನಾಟಕ: ಹುಬ್ಬಳ್ಳಿ

ದ. ಲ. ಕೆರೂರ

ಶ್ರೀ ಮೂರುಸಾವಿರಮಠದ ಪೀಠಾಧಿಪತಿಗಳಾಗಿರುವ ಪೂಜ್ಯ ಶ್ರೀ 'ಮೂಜಗಂ' ಅವರು ತಮ್ಮ ಸಾವಿರದ ಸಾವಿರದ ಕೆಲಸ ಕಾರ್ಯಗಳ ಮಧ್ಯದಲ್ಲೂ ಸಾಹಿತ್ಯ ಸೇವೆಗೆಂದು ತುಸು ಸಮಯವನ್ನು ಮೀಸಲಾಗಿಟ್ಟುಕೊಂಡಿರುವದು ಕೌತುಕದ ಸಂಗತಿ. ಅವರು ರಚಿಸುವ ಸಾಹಿತ್ಯ ಕೇವಲ ಮನೋರಂಜಕ ಸಾಹಿತ್ಯವಲ್ಲ; ಶಿವಸಾಹಿತ್ಯ ಅವರದು. ಅವರ ಸಾಹಿತ್ಯ ಕೃಷಿ 'ಯಶಸೇ ಅರ್ಥಕೃತೇ' ಅಲ್ಲ. 'ವ್ಯವಹಾರವಿದೇ' ಎಂದು ಹೇಳಬಹುದಾದರೂ ಅದಕ್ಕಿಂತ ಹೆಚ್ಚಾಗಿ 'ಶಿವೇತರ ಕ್ಷತಯೇ' ಎಂಬುದೇ ಖಚಿತ. ಗದ್ಯಪದ್ಯ ಪ್ರಕಾರ ಗಳೆರಡರಲ್ಲೂ ಸಿದ್ಧಹಸ್ತ ಸಾಹಿತಿಗಳಾಗಿರುವ ಅವರ ಅನೇಕಾನೇಕ ಗ್ರಂಥಗಳು ಈಗಾಗಲೇ ಪ್ರಕಟವಾಗಿ ಅವರಿಗೆ ಕೀರ್ತಿಯನ್ನು ತಂದಿತ್ತಿವೆ. ಪೀಠಾಧಿಪತಿಗಳಾಗಿರುವ ಅವರು ವೀರಶೈವ ಸಾಹಿತ್ಯ ಪ್ರಸಾರಕ್ಕಾಗಿ ನಾನಾಮುಖ ಯೋಜನೆಗಳನ್ನು ಹಮ್ಮಿಕೊಂಡಿರುವದರ ಜೊತೆಗೆ ಸಾಹಿತ್ಯಕ್ಕೆ ತಮ್ಮ ಕೊಡುಗೆಯನ್ನು ನೀಡುತ್ತ ನಾಡಿನ ಸಾಹಿತ್ಯ ಪ್ರಪಂಚವನ್ನು ಸಮೃದ್ಧ ಗೊಳಿಸುತ್ತಿದ್ದಾರೆ. ಕಳೆದ ಮೂರು ದಶಕಗಳಿಂದಲೂ ಅವರ ಸಾಹಿತ್ಯ ಕೃಷಿ ಅವಿರತವಾಗಿ ಸಾಗಿ ಬಂದಿದೆ, ಅಖಂಡವಾಗಿ ಚಿರನೂತನವಾಗಿ ಮುಂದುವರೆಯುವದು ಎಂಬುದರಲ್ಲಿ ಸಂದೇಹವಿಲ್ಲ.

ಶ್ರೀ ಜಗದ್ಗುರು ಮೂರುಸಾವಿರಮಠದ ಗ್ರಂಥಮಾಲೆಯ ಅರವತ್ಮೂರನೇ ಪುಷ್ಪವಾಗಿ ಹಾಗೂ ಸಂಸ್ಕೃತಿ ಪ್ರಸಾರೋಪನ್ಯಾಸ ಗ್ರಂಥಮಾಲೆಯ ಪ್ರಥಮ ಕುಸುಮವಾಗಿ ಬೆಳಕು ಕಂಡಿರುವ ಶ್ರೀ ಮೂಜಗಂ ಅವರ 'ಯುಗಪುರುಷ ಯೋಗಿಕುಮಾರ' ಪ್ರಸ್ತುತ ಸಮೀಕ್ಷಾಗ್ರಂಥ. ಜೋಯಿಸರಹರಳಳ್ಳಿಯ ಹಾಲಯ್ಯ ಮುಗ್ಧನಾಗಿ ಬೆಳೆದರೂ ಸದ್ಗುರು ವಿನ ಕರುಣೆಯಿಂದ ಸಾಧನೆಗೈದು ಸಿದ್ಧನಾಗಿ, ಹಾನಗಲ್ಲ ವಿರಕ್ತ ಮಠದ ಅಧಿಪತಿ ಕುಮಾರ ಸ್ವಾಮಿ ಆಗಿ, ತನಗಿಂತ ಸಮಾಜದೊಡ್ಡದು, ಧರ್ಮದೊಡ್ಡದು, ನಾಡುದೊಡ್ಡದು ಎಂದು ಬಗೆಗಂಡು ಆ ದಿಶೆಯಲ್ಲಿ ಕಾರ್ಯಪ್ರವೃತ್ತರಾಗಿ ಒಂದು ಜನಾಂಗವನ್ನೇ ಉದ್ಧರಿಸಿ ಉನ್ನತಮಟ್ಟಕ್ಕೆ ತಂದು ನಿಲ್ಲಿಸಿದ ಯೋಗಿಪುರುಷ ಆದುದು ಎಂತು ಎಂಬುದನ್ನು ಶ್ರೀ ಮೂಜಗಂ ಈ ೧೧೬ ಪುಟಗಳ ಕಿರುಹೊತ್ತಿಗೆಯಲ್ಲಿ ವಿವರಿಸಿರುವ ರೀತಿಯನ್ನು ಓದಿ ಅರಿತು ಆನಂದಿಸಬೇಕು. ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳವರ ಸಮಗ್ರ ಜೀವನ ವೃತ್ತಾಂತದ ಬಗ್ಗೆ ಹೆಬ್ಬೊತ್ತಿಗೆಯನ್ನೇ ಬರೆಯಬಹುದಾಗಿತ್ತು. ಹಾಗೆ ಮಾಡಿದ್ದರೆ ಅದು ಸಾಮಾನ್ಯ ಜನತೆಯನ್ನು ತಲುಪುತ್ತಿರಲಿಲ್ಲ. ಪಂಡಿತ ಮಾನ್ಯ ಗ್ರಂಥವಾಗಿ

ಉಳಿದು ಬಿಡುತ್ತಿತ್ತು. ಶ್ರೀ ಕುಮಾರ ಸ್ವಾಮಿಗಳ ಉಜ್ವಲ ಸಂದೇಶ ಜನತೆಯನ್ನು ಮುಟ್ಟಿ ಎಚ್ಚರಿಸಲು ಸಾಧ್ಯವಾಗುತ್ತಿರಲಿಲ್ಲ. ಇದನ್ನು ಅರಿತುಕೊಂಡೇ ಏನೊ ಶ್ರೀ ಮೂಜಗಂ ಅವರು ಈ ಕಿರು ಹೊತ್ತಿಗೆಯನ್ನು ಬರೆದರು ಎಂದು ಹೇಳಬಹುದು. ಈ ಗ್ರಂಥವು ಜನತೆಯನ್ನು ತಲುಪಿದೆ ಎಂದು ಸಾರಿಹೇಳುವದಕ್ಕೆ, ಇದರ ಹಲವಾರು ಆವೃತ್ತಿಗಳು ಇದುವರೆಗೆ ಪ್ರಕಟವಾಗಿರುವದೇ ಸಾಕ್ಷಿ.

ಯಾವದೇ ಕೃತಿಯನ್ನು ಚನ್ನಾಗಿ ಪ್ರಾರಂಭ ಮಾಡಿದರೆ ಅರ್ಧದಷ್ಟು ಸಾಧಿಸಿದಂತೆಯೆ (**Well began is half done**) ಎಂಬ ನಾಣ್ಣುಡಿ ಇದೆ. ಈ ಗ್ರಂಥದ ಪ್ರಾರಂಭ ವಚನವೊಂದರಿಂದ ಆಗಿದೆ. ತಾವೇ ರಚಿಸಿರುವ ಈ ವಚನದಲ್ಲಿ ಶ್ರೀಕುಮಾರ ಸ್ವಾಮಿಗಳವರ ಚರಿತ್ರೆಯನ್ನು ಸಂಗ್ರಹವಾಗಿ ಹೇಳಿ ಗ್ರಂಥಕ್ಕೆ ಮುಂಬೆಳಗು ನೀಡಿದ್ದಾರೆ. ಉತ್ತಮ ಪ್ರಾರಂಭವೇ ಇದು. ಈ ವಚನದ ಕೊನೆಯ ನುಡಿ ಶ್ರೀ ಕುಮಾರೇಶರ ಪರಿಚಯವನ್ನು ಮಾರ್ಮಿಕವಾಗಿ ಮಾಡಿಕೊಡುತ್ತದೆ. ಅದು ಇಂತಿದೆ:

'ವಿರಕ್ತಿಯಲ್ಲಿ ಅಲ್ಲಮಪ್ರಭುವಾಗಿ ಜ್ಞಾನದಲ್ಲಿ ಚನ್ನಬಸವಣ್ಣನಾಗಿ
ಭಕ್ತಿಯಲ್ಲಿ ಬಸವಣ್ಣನಾಗಿ, ಇಪ್ಪತ್ತನೆಯ ಶತಮಾನದ
ಯುಗಪುರುಷನಾಗಿ ಸಮಾಜವನುದ್ಧರಿಸಿ
ಜನಜಾಗೃತಿ ಗೈದ ದಯಾಮೂರ್ತಿ ತಾನಯ್ಯ
ಇದುವೆ ಹಾನಗಲ್ಲ ಕುಮಾರೇಶನ ಮಹಾಮಹಿಮೆ ಕೇಳಿರಯ್ಯ
ಭೂಲತಾ ಪುರೀಶ ಕರ್ತೃ ಜಗದ್ಗುರು ಗುರುಸಿದ್ಧೇಶ್ವರಾ!'

ತಮ್ಮ ಈ ವಚನವನ್ನು ಶ್ರೀ ಮೂಜಗಂ ಅವರು ಹನ್ನೆರಡನೆಯ ಶತಮಾನದಲ್ಲಿದ್ದ ಮಹಾಶಿವಶರಣ ಘಟ್ಟಿವಾಳಯ್ಯನವರ ಕಾಲ ಜ್ಞಾನದ, ಈ ಕೆಳಗಿನ ಮಾತೊಂದನ್ನು ಹೇಳಿ ಸಮರ್ಥಿಸಿಕೊಂಡಿದ್ದಾರೆ.

"ಗಿಡಮಾಗಡಿ ಎಂಬ ಪುರದಿ ಜಂಗಮದೇವ
ಮೃಡ ಕಣಾ; ಭಿಕ್ಷವ ಬೇಡ್ಯಾನು
ಪೊಡವಿಮೆ ಬಾಗಿ ನೀಡಲು ಆತನು
ದೃಢದಿಂದ ನೀಡಿಸಿಕೊಂಡಾನು
ಮಲಾಪಹಾರಿಯ ತೀರದಿ ವಿರಕ್ತ ಜಂಗಮನೊಬ್ಬ
ಸಲವಿಂದೆ ಹುಚ್ಚನೆನಿಸ್ಯಾನು
ಲೋಲ ಜನಗಳು ಹೆಸರನೆ ಇಟ್ಟಾರು
ಸ್ಥಲದೊಳು ಹೂಳಿಸಿಕೊಂಡಾನು"

ಹೀಗೆ ಘಟ್ಟಿವಾಳಯ್ಯನವರ ಕಾಲಜ್ಞಾನದ ಮಾತು ೮ ಶತಮಾನಗಳ ನಂತರ ೨೦ನೇ ಶತಮಾನದಲ್ಲಿ ಸಾರ್ಥಕಗೊಂಡಿದೆ ಯುಗಪುರುಷ ಯೋಗಿಕುಮಾರನ ಲೀಲೆಯಿಂದ ಎಂದು ಎತ್ತಿತೋರಿದ್ದಾರೆ ಶ್ರೀ ಮೂಜಗಂರು.

ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ

ಎಂದು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಆಶ್ವಾಸನವಿತ್ತಿದ್ದಾನೆ. ಧಾರ್ಮಿಕ ಆಚರಣೆ ಶಿಲವಾಗಿ ಜನರು ಅಧೋಗತಿಗೆ ಇಳಿದಾಗ ಧರ್ಮವನ್ನು ಎತ್ತಿಹಿಡಿಯಲು, ಸಜ್ಜನರನ್ನು ಕಾಪಾಡಲು ಹಾಗೂ ದುರ್ಜನರನ್ನು ಶಿಕ್ಷಿಸಲು ತಾನು ಅವತರಿಸುವೆನು ಎಂದು ಹೇಳಿದ ಆತ. ಜನವೆಲ್ಲ ಧರ್ಮಾಚರಣೆ ಬಿಟ್ಟು ಕಂಗಾಲಾದಾಗ ಪರಮಾತ್ಮನ ಅವತಾರ ಬಂದ ಹಾಗಾಯಿತು. ಮಹಾನುಭಾವ ಬಸವಣ್ಣನವರು ಹುಟ್ಟಿಬಂದಾಗ ಕೂಡ ಸಮಾಜ ಹೀಗೇ ಶಿಲವಾಗಿತ್ತು. ಅಂತೇ ಅವರು ಧಾರ್ಮಿಕ, ಸಾಮಾಜಿಕ, ರಾಜಕೀಯ ಹೀಗೆ ಮೂವಿಧ ಕ್ರಾಂತಿಗಾಗಿ ಕಟಿಬದ್ಧರಾಗಿ, ಗುರಿಯನ್ನು ಸಾಧಿಸಿದರೂ ಅದಕಾಗಿ ಅವರು ತಮ್ಮ ಪ್ರಾಣಾರ್ಪಣೆಗೂ ಹಿಂಜರಿಯಲಿಲ್ಲ. ಕಳೆದ ಶತಮಾನದಲ್ಲಿ ಹಾನಗಲ್ಲ ಶ್ರೀ ಕುಮಾರೇಶ್ವರ ಜನ್ಮಕಾಲದಲ್ಲೂ ಇಂಥದೇ ಪರಿಸ್ಥಿತಿ ತಲೆದೋರಿತ್ತು ಎನ್ನುತ್ತಾರೆ ಶ್ರೀ ಮೂಜಗಂರವರು. ಅಣ್ಣ ಬಸವಣ್ಣನವರ ಕ್ರಾಂತಿಯ ಪ್ರಭಾವ ಐದಾರು ಶತ ಮಾನಗಳ ನಂತರ ನಷ್ಟವಾಗಿತ್ತು. ೧೯ನೆಯ ಶತಮಾನದಲ್ಲಿ ನಾಡಿಗೆ ಅಂಧಕಾರ ಆವರಿಸಿತ್ತು. ಸಮಾಜದಲ್ಲಿಯ ಶಿವಗುಣಗಳೆಲ್ಲ ಅಳಿದುಹೋಗಿ ಅವಗುಣಗಳೇ ತಾಂಡವ ವಾಡಹತ್ತಿದ್ದವು. "ಪಾಶ್ಚಿಮಾತ್ಯ ಶಿಕ್ಷಣದ ಅಂಧಾನುಕರಣದಿಂದ ಭಾರತೀಯ ಗುರುಕುಲ ಪರಂಪರೆಗೆ ಆಘಾತ-ಪ್ರತ್ಯಾಘಾತಗಳು ಒದಗಿ ಇಲ್ಲಿಯ ಯೋಗವಿದ್ಯೆ, ಆಧ್ಯಾತ್ಮಶಾಸ್ತ್ರ, ಸಂಸ್ಕೃತಾಧ್ಯಯನ, ಸಾಹಿತ್ಯ, ಶಿಲ್ಪ, ಸಂಗೀತಾದಿ ಕಲಾರಾಧನೆಗೆ ಪ್ರೇರಣೆ ಪ್ರೋತ್ಸಾಹ ಗಳು ತಪ್ಪಿಹೋಗಿದ್ದವು. ಇದರಿಂದ ಸಮ್ಮತನ ತಪ್ಪಿ ಹೋಗಿ ಹೊಸತನದ ರೂಪದಲ್ಲಿ ಪರಕೀಯತೆ ಕಾಲೂರಿತ್ತು...." ಎಂದು ಅಂದಿನ ಸಾಮಾಜಿಕ ಅವನತಿಯನ್ನು ಮೂರು ಪುಟಗಳಷ್ಟು ದೀರ್ಘವಾಗಿ ಬಣ್ಣಿಸಿದ ಶ್ರೀಮೂಜಗಂ ಅವರು "ಒಟ್ಟಿನಲ್ಲಿ ಸಮಾಜವು ಶವ ದಂತೆ ನಿಸ್ತೇಜವಾಗಿತ್ತು....ರೋಗ ತಗಲಿದ ಮಹಾರೋಗಿಯಂತೆ ಕೃಶವಾಗಿತ್ತು" ಎಂದು ಅನಾಚಾರದ ಭೀಕರತೆ ಕಣ್ಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ನಾಡಿನ ಉದ್ಧಾರ ಎಂತು? ಎಂದು ಜನ ಬಾಯ್‌ಬಾಯ್ಬಿಡತಲಿತ್ತು. ಇಂಥ ಪರಿಸ್ಥಿತಿಯಲ್ಲಿಯೇ ಯುಗಪುರುಷರ ಉದಯವಾಗುವದು. ಅವರು ಜನಿಸಿ ಬಂದು ತಮ್ಮ ಸತ್ವಪೂರ್ಣ ಜೀವನದಿಂದ ಸಮಾಜವನ್ನು ಉದ್ಧರಿಸುತ್ತಾರೆ, ದೇಶವನ್ನು ಎತ್ತಿಹಿಡಿದು ಪ್ರಗತಿ ಪಥದತ್ತ ಕೊಂಡೊಯ್ಯುತ್ತಾರೆ. ಇವರು ಸಾಮಾನ್ಯರಂತೆಯೆ ಜನಿಸಿದರೂ ತಮ್ಮ ಆತ್ಮಶಕ್ತಿಯನ್ನು ಹೆಚ್ಚಿಸಿಕೊಂಡು, ನಾಡಿನಲ್ಲಿ ಹಬ್ಬಿದ ಅಜ್ಞಾನದ ಕಾರ್ಮೋಡಗಳನ್ನೆಲ್ಲ ಚದುರಿಸಿ ಮಾನವ ಜನಾಂಗಕ್ಕೆ ಚೇತನವನ್ನೀಯುತ್ತಾರೆ. ಸಮಾಜಕ್ಕೆ ಹತ್ತಿದ್ದ ರೋಗ ವನ್ನು ಕಂಡು, ಅದನ್ನು ಕಳೆದು ಪುನಶ್ಚೇತನ ನೀಡಿ ನಾಡಿನ ತುಂಬೆಲ್ಲ ಸುಗಂಧವನ್ನು ಬೀರುತ್ತಾರ ಎಂದು ಯುಗಪುರುಷರ ಲಕ್ಷಣಗಳನ್ನು ಹೇಳಿದ ಈ ಲೇಖಕರು ಹಾನಗಲ್ಲ ಶ್ರೀ ಕುಮಾರಸ್ವಾಮಿಗಳೂ ತಮ್ಮ ಜೀವನದುದ್ದಕ್ಕೂ ಈ ಕಾರ್ಯವನ್ನೇ ಸಾಧಿಸಿದರು

ಯುಗಪ್ರುರುಷರಾದರು ಎಂದು ಘೋಷಿಸಿದ್ದಾರೆ ತಮ್ಮ ಈ ಕಿರು ಹೊತ್ತಿಗೆಗೆ ಬರೆದಿರುವ 'ಮುಂಬೆಳಗು' ಪ್ರಕರಣದಲ್ಲಿ. ಇವರ ಈ ಇಂಥ ಪ್ರಸ್ತಾವನೆಯೆ ಪ್ರಸ್ತುತ ಗ್ರಂಥದಲ್ಲಿ ನಿರೂಪಿಸಲ್ಪಡುವ ವಿಷಯದ ಬಗ್ಗೆ ಜನರಲ್ಲಿ ಕುತೂಹಲವನ್ನು ಕೆರಳಿಸುತ್ತದೆ. ಚಿಕ್ಕ ದಾದರೂ ಚೊಕ್ಕವಾಗಿರುವ ಈ ಮುಮ್ಮಾತು ಶ್ರೀ ಮೂಜಗಂ ಅವರ ನಿರೂಪಣಾ ಕೌಶಲ್ಯಕ್ಕೆ ಪ್ರತೀತವಾಗಿದೆ.

**ಉದಯ**—ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧ ಕಳೆದಿದೆ; ಉತ್ತ ರಾರ್ಧವು ಕಾಲಿಕ್ಕಿ ಒಂದೂವರೆ ದಶಕವೂ ಪೂರೈಸಿದೆ. ಧಾರವಾಡ ಜಿಲ್ಲೆಯ ರಾಣೆಬೆನ್ನೂರು ತಾಲೂಕಿನ ಜೋಯಿಸಿರಹರಳಳ್ಳಿಯಲ್ಲಿ ಸಾಲಿಮಠದ ಬಸವಯ್ಯನವರು ತಮ್ಮ ಪತ್ನಿ ನೀಲಮ್ಮನೊಂದಿಗೆ ಧರ್ಮನಿಷ್ಠೆಯಿಂದ ಬಡತನದಲ್ಲಿಯೆ ಸಂಸಾರಸಾಗಿಸಿ ಕೊಂಡು ಇದ್ದರು. ಊರವರಿಗೆಲ್ಲ ತುಂಬಬೇಕಾದವರು. ಇವರಿಗೆ ೧೮೬೭ರಲ್ಲಿ ಮುದ್ದು ಮಗುವೊಂದು ಜನಿಸಿತು. ನೀಲಮ್ಮನಿಗೆ ಕನಸಿನಲ್ಲಿ ಜಂಗಮನೋರ್ವನು ಬಂದು ಹರಸಿದ್ದರಿಂದ, ಅವರು ಈ ಪುತ್ರ ಪ್ರಾಪ್ತಿಯಿಂದ ಸಂತೋಷದಲ್ಲಿದ್ದರು. ಶಿಶುವಿಗೆ ಲಿಂಗ ಧಾರಣೆಯ ದಿನ. ಮನೆಯಲ್ಲಿ ಸಿದ್ಧತೆಗಳೆಲ್ಲವೂ ನಡೆದಿವೆ. ಪವಾಡ ಎಂಬಂತೆ, ಶಕ್ತ ರಿದ್ದವರು ಗುರುತಿಸಬಹುದೆಂಬಂತೆ ಘಟನೆಯೊಂದು ನಡೆಯಿತು. ಒಬ್ಬ ಜಂಗಮ ಬರುತ್ತಾನೆ. 'ತಾಯಿ ಭಿಕ್ಷೆ' ಎಂದು ಕೂಗುತ್ತಾನೆ. ಮನೆಯಲ್ಲಿದ್ದ ಮುದುಕಿಯೊಬ್ಬಳು 'ಮನೆಯಲ್ಲಿ ಹಡೆದಿದ್ದಾರೆ, ಮುಂದೆ ಹೋಗು' ಎಂದು ಗದರಿಸುತ್ತಾಳೆ. ಜಂಗಮ ಕೇಳು ತ್ತಾನೆ. "ಮಗುವು ಗಂಡೋ ಹೆಣ್ಣೋ?" ಎಂದು. ಗಂಡು ಮಗು ಎನ್ನುತ್ತಾಳೆ. 'ಗಂಡು ಮಗುವಾದರೆ ಎಲ್ಲರೂ ಸಕ್ಕರೆ ಹಂಚುತ್ತಾರೆ. ನೀನು ಭಿಕ್ಷೆಕೊಡ ನೀಡದೆ ಹೋಗು ಎನ್ನುವಿಯಲ್ಲ' ಎನ್ನುತ್ತಾನೆ ಜಂಗಮ. 'ನಮ್ಮಂಥ ಬಡವರಿಗೆ ಸಾಕುಸಾಕೆಂದರೂ ಮಕ್ಕಳನ್ನು ನೀಡುವ ದೇವರು ನಾವು ದಾನಧರ್ಮ ಮಾಡಿದರೆ ಇನ್ನಷ್ಟು ಮಕ್ಕಳನ್ನು ಕೊಡಬಹುದಲ್ಲ' ಎಂದು ಮಾಡುತ್ತಾರೆ. 'ನಿಮಗೆ ಮಕ್ಕಳು ಬೇಡವಾದರೆ ನನಗೆ ಕೊಟ್ಟು ಬಿಡಿರಲ್ಲ' ಎಂದು ಕೇಳುತ್ತಾನೆ ಜಂಗಮ. ಹಾಗಾದರೆ ಕರೆದುಕೊಂಡು ಹೋಗಿರಿ ಎಂದು ಎಂದು ಮೂದಲಿಸುತ್ತಾಳೆ ಆ ಮುದುಕಿ. 'ಹಾಗೇ ಆಗಲಿ, ಆತನನ್ನು ಸಮಾಜ ಸೇವೆಗೆ ಅಣಿಗೊಳಿಸಿದರಾಯಿತು' ಎನ್ನುತ್ತ ಜಂಗಮ ಮುಂದಿನ ಮನೆಯ ದಾರಿ ಹಿಡಿಯುತ್ತಾನೆ. ಬೆಳೆಯ ಸಿರಿ ಮೊಳಕೆಯಲ್ಲಿಯೆ ಎಂಬಂತೆ ಶ್ರೀ ಕುಮಾರೇಶನ ಭವ್ಯ ಭವಿಷ್ಯತ್ತಿನ ಈ ಮುನ್ಸೂಚನೆಯನ್ನು ಲೇಖಕರು ಮಾರ್ಮಿಕವಾಗಿ ನಿರೂಪಿಸಿದ್ದಾರೆ. ಮಗುವಿಗೆ ಹಾಲಯ್ಯ ಎಂದು ನಾಮಕರಣವಾಗುತ್ತದೆ. ಎಲ್ಲರಂತೆ ಬೆಳೆದುಮಗು ವಿದ್ಯಾಭ್ಯಾಸಕ್ಕೆ ತೊಡಗುತ್ತದೆ. ಆಸಕ್ತಿಯಿಂದ ಕಲಿಯುತ್ತಿದ್ದ ಹಾಲಯ್ಯನಿಗೆ ಒಂದು ದೊಡ್ಡ ಆಘಾತ. ಸುಮಾರು ಹತ್ತುವರ್ಷದವನಾದಾಗ ತಂದೆ ಬಸವಯ್ಯ ಲಿಂಗೈಕ್ಯರಾಗುತ್ತಾರೆ. ಹಾಲಯ್ಯ ಭಿಕ್ಷೆ ಬೇಡಿತಂದರೇನೆ ಮನೆಯಲ್ಲಿ ಎಲ್ಲರಿಗೆ ಎರಡು ಹೊತ್ತು ಊಟ. ಅಂಥ ಬಡತನ. ಅದನ್ನೆದುರಿಸಲು ಹಾಲಯ್ಯ ಭಿಕ್ಷಾಟನವನ್ನು ಒಪ್ಪಿಕೊಳ್ಳುತ್ತಾನೆ. ಹೀಗೇ ವರ್ಷಗಳು

ಉರುಳಿದಾಗ, ಹಿಂದಿನ ಮುದುಕನೊಬ್ಬ ಭೆಟ್ಟಿಯಾದಾಗ, "ಏನೋ ಅಯ್ಯಪ್ಪ, ಏಸು ದಿನ ಹೀಗೆ ಭಿಕ್ಷೆ ಬೇಡುವದು. ನೀನೇನು ಮುದುಕನೆ? ಈ ಚಿಕ್ಕ ವಯಸ್ಸಿನಲ್ಲಿ ವಿದ್ಯೆ ಕಲಿಯುವದನ್ನು ಬಿಟ್ಟು ಭಿಕ್ಷೆ ಬೇಡಲು ನಾಚಿಕೆಯಾಗುವದಿಲ್ಲವೆ ನಿನಗೆ?" ಎಂದು ಮೂದಲಿಸುತ್ತಾನೆ. ಹಾಲಯ್ಯನ ಸ್ವಾಭಿಮಾನಕ್ಕೆ ಪೆಟ್ಟು ಬಿತ್ತು. ಭಿಕ್ಷೆ ಪೂರೈಸದೇ ಹಾಗೆ ಮನೆಗೆ ಹಿಂತಿರುಗುತ್ತಾನೆ. ವಿದ್ಯಾಭ್ಯಾಸವನ್ನು ಮುಂದುವರಿಸಲು ನಿರ್ಧರಿಸುತ್ತಾನೆ. ಜೋಳಿಗೆಯಲ್ಲಿ ಎಂದಿನಂತೆ ತುಂಬಾ ಕಾಳು ಇರದ್ದರಿಂದ ಅಣ್ಣನು ತನ್ನ ತಾಯಿಗೆ ಹಾಲಯ್ಯನ ವಿರುದ್ಧ ಚಾಡಿ ಹೇಳುತ್ತಾನೆ. ಹೀಗೆ ಮನೆಯಲ್ಲಿ ಮುದುಡಿಕೊಂಡು ಬೀಳದೆ ಹೋಗಿ ಬಟ್ಟೆಗಳನ್ನಾದರೂ ಒಗೆದು ಕೊಂಡು ಬಾ ಎಂದು ಗದರಿಸುತ್ತಾನೆ. 'ಆಗಲಿ' ಎಂದ ಹಾಲಯ್ಯ ಪೈಲಿಗೆ ಬಟ್ಟೆಗಳೊಂದಿಗೆ ಮನೆಬಿಟ್ಟು ಹೊರಟವ, ಅವನ್ನೆಲ್ಲ ಮಡಿ ಮಾಡಿ ಬೇರೊಬ್ಬರ ಜೊತೆಗೆ ತನ್ನ ಮನೆಗೆ ಕಳಿಸಿಕೊಟ್ಟ; ತಾನು ಮಾತ್ರ ಮನೆ ಬಿಟ್ಟುಬಿಟ್ಟ, ವಿದ್ಯಾಭ್ಯಾಸದ ಹಂಬಲದಿಂದಾಗಿ.

**ಗೃಹತ್ಯಾಗ**–ತನ್ನ ಗ್ರಾಮವನ್ನು ತೊರೆದು ಹೊರಟ ಹಾಲಯ್ಯ ಕಜ್ಜರಿ ಗ್ರಾಮಕ್ಕೆ ಬಂದ. ಹಸಿವೆಯಿಂದ ಕಂಗಾಲಾಗಿದ್ದರೂ ಒಂದು ಬೇವಿನಮರದ ಕಟ್ಟೆಯ ಮೇಲೆ ಕುಳಿತ. ತುಸು ಹೊತ್ತಿನ ಮೇಲೆ, ಅದೇ ದಾರಿಯಾಗಿ ಹೊರಟಿದ್ದ ಹಿರೇಮಠದ ರಾಚಯ್ಯ ಎಂಬವರು ಮ್ಲಾನವದನನಾಗಿ ಕುಳಿತಿದ್ದ ಈ ಬಾಲಕನನ್ನು ಕಂಡು, ಬಳಿಸಾರಿ, ಆತನ ಪೂರ್ವೋತ್ತರಗಳನ್ನೆಲ್ಲ ವಿಚಾರಿಸಿ ತಿಳಿದುಕೊಂಡರು. ಆತನನ್ನು ತಮ್ಮ ಮನೆಗೆ ಕರೆದೊಯ್ದು ಆಶ್ರಯವಿತ್ತರು. ಮರುದಿನ ಶಾಲೆಗೆ ಕರೆದೊಯ್ದು ಮುಂದಿನ ಓದಿನ ಬಗ್ಗೆ ಏರ್ಪಾಡೂ ಮಾಡಿದರು. ಹಾಲಯ್ಯನು ನಿಜವಾದ ವಿದ್ಯಾರ್ಥಿಯಂತೆ ಮನಮುಟ್ಟಿ ಅಭ್ಯಾಸ ಮಾಡಿ ಎಲ್ಲರಿಂದ ಹೌದೆನಿಸಿಕೊಂಡನು. ಒಂದು ರೀತಿ ವ್ರತಸ್ಥ ಜೀವನ ನಡೆಸಿದನು.

ಹೀಗೆ ಮನಮುಟ್ಟಿ ಅಭ್ಯಾಸ ಮಾಡಿ, ಧಾರವಾಡದವರೆಗೆ ನಡೆದುಕೊಂಡೇ ಹೋಗಿ ಮುಲ್ಕೀ ಪರೀಕ್ಷೆಗೆ ಬರೆದು ಬಂದ. ಆದರೆ ಆ ಪರೀಕ್ಷೆಯಲ್ಲಿ ಉತ್ತೀರ್ಣನಾಗಲಿಲ್ಲ! ವಿಧಿಯ ಆಟ. ಈ ಅಪಜಯವನ್ನು ಹಾಲಯ್ಯ ತನ್ನ ಮುಂದಿನ ಯಶಸ್ಸಿಗೆ ಸೋಪಾನವನ್ನಾಗಿಸಿಕೊಂಡ. ವಿದ್ಯೆಯದಾಹ ಅವನಲ್ಲಿ ಹೆಚ್ಚುತ್ತಲೇ ಹೋಯಿತು. ಮನೆತನದ ಪರಿಸ್ಥಿತಿಯ ವಿಚಾರವೂ ಸುಳಿಯಿತು. ಹಾಗಾದರೆ ಮಾಡುವದೇನು?

**ಶಿಕ್ಷಕನಾಗಿ**–ಲಿಂಗದಳ್ಳಿಯಲ್ಲಿ ಒಂದು ಖಾಸಗಿ ಶಾಲೆ ಪ್ರಾರಂಭಿಸಿದ ಹಾಲಯ್ಯ ತನ್ನ ವಿದ್ಯಾರ್ಥಿಗಳಿಗೆ ಪಾಠ ಹೇಳುವ ಜೊತೆಗೆ ನೈತಿಕ ಬೋಧೆಯನ್ನು ನೀಡುತ್ತಿದ್ದ. ಅದೇ ಗ್ರಾಮದಲ್ಲಿ ವಾಸವಾಗಿದ್ದ ಸಮಾಜದ ಬಸವಪ್ಪಯ್ಯನವರಲ್ಲಿ ವೇದಾಂತಾಧ್ಯಯನವನ್ನೂ ಸಾಗಿಸಿದ. ಅಧ್ಯಾತ್ಮದತ್ತ ಒಲಿದ ಇವನ ಕೀರ್ತಿ ಸುತ್ತಲೂ ಪರಿಮಳದಂತೆ ಹರಡತೊಡಗಿತು. ಕಸ್ತೂರಿಯನ್ನು ಬಚ್ಚಿಟ್ಟರೆ ಅದರ ಪರಿಮಳ ಹರಡದೆ ಇದ್ದೀತೆ! ಹಾಲಯ್ಯನ ತಾಯಿ ನೀಲಮ್ಮ ಮಗನ ಕೀರ್ತಿಯನ್ನು ಕೇಳಿ ಭೆಟ್ಟಿಗೆಂದು ಬಂದಳು.

ಹಾಲಯ್ಯನು ಪ್ರಾಪ್ತವಯಸ್ಕನಾದ್ದರಿಂದ ಆತನಿಗೊಂದು ಮದುವೆ ಮಾಡಿಬಿಡಬೇಕು ಎಂದು ಆ ತಾಯಿಯ ಆಸೆ. ತಾಯಿ ಮಗ ಭೆಟ್ಟಿ ಆಗುತ್ತಾರೆ. ತಾಯಿ ತನ್ನ ಅಂತಃ ಕರಣವನ್ನು ಮಗನೆದುರು ತೋಡಿಕೊಳ್ಳುತ್ತಾಳೆ. ಮಗ ಕೈಜಾರಿ ಮುಂದೆ ಹೋಗಿ ಬಿಟ್ಟಿದ್ದಾನೆ. ಹಾಲಯ್ಯ ತನ್ನ ಗಳಿಕೆಯಿಂದ ಸಂಗ್ರಹಿಸಿದ ೩೦೦ ರೂ.ಗಳನ್ನು ತಾಯಿಗೆ ಅರ್ಪಿಸಿ ತನ್ನ ಲಗ್ನದ ವಿಚಾರಮಾಡಬೇಡ ಎಂದು ಹೇಳಿ, ತಾನಿನ್ನೂ ಸಾಧಿಸಬೇಕಾದುದು ಬಹಳಷ್ಟಿದೆ ಎಂದೂ ಆಕೆಗೆ ಬಿಂಬಿಸಿ ಹಿಂತಿರುಗಿಸುವನು. ಅರಿವೇ ಗುರು ಎಂದು ಗುರುವನ್ನರಸಿಕೊಂಡು ಹುಬ್ಬಳ್ಳಿಗೆ ಪ್ರಯಾಣಿಸುತ್ತಾನೆ. ಸಂಸಾರಪಾಶವನ್ನು ಕಳಚಿ ಸದ್ಗುರುವಿನ ಶೋಧಕ್ಕಾಗಿ. ಲಿಂಗಪೂಜೆ ಅನುಷ್ಠಾನ, ಧ್ಯಾನಾದಿಗಳ ಚಿನ್ನಿಧಿಯಲ್ಲಿ ಆಸಕ್ತಿ ಹೆಚ್ಚ ತೊಡಗಿದ ಹಾಲಯ್ಯನಿಗೆ ಸಂಸಾರ ಜೀವನ ನಿಸ್ಸಾರವೆನಿಸಿತು. ಆಧ್ಯಾತ್ಮದಲ್ಲಿ ಒಲವು ಹೆಚ್ಚಿ ಮಾರ್ಗದರ್ಶಕರಾದ ಗುರುವನ್ನು ಹುಡುಕಿಕೊಂಡು ಶ್ರೀ ಸಿದ್ಧಾರೂಢರಲ್ಲಿಗೆ ಬಂದನು.

**ಸಿಕ್ಕಾನೆ ಗುರು?**—ಹುಬ್ಬಳ್ಳಿಗೆ ಬಂದು ರುದ್ರಾಕ್ಷಿಮಠದಲ್ಲಿ ಉಳಿದುಕೊಂಡ ಹಾಲಯ್ಯ ನಿತ್ಯವೂ ಶ್ರೀ ಸಿದ್ಧಾರೂಢರಲ್ಲಿಗೆ ಹೋಗಿ, ಪಂಚದಶಿ, ಪರಮಾನುಭವ ಬೋಧೆ, ವಿಚಾರ ಸಾಗರ ಮುಂತಾದ ಗ್ರಂಥಗಳ ಬಗ್ಗೆ ಚರ್ಚಿಸಿ ತನ್ನ ಅರಿವನ್ನು ಹೆಚ್ಚಿಸಿ ಕೊಳ್ಳುತ್ತಿದ್ದನು. ಶ್ರೀ ಸಿದ್ಧಾರೂಢರು ಅದ್ವೈತ ಸಿದ್ಧಾಂತದಲ್ಲಿ ಅದ್ವಿತೀಯರು, ಆರೂಢ (ಅವಧೂತ) ಅವಸ್ಥೆಗೆ ಏರಿದ ಅವರು ಬಾಹ್ಯ ಕ್ರಿಯೆಗಳನ್ನು ಅಷ್ಟಾಗಿ ಪಾಲಿಸುತ್ತಿರಲಿಲ್ಲ. ಹೀಗಾಗಿ ಹಾಲಯ್ಯನಿಗೆ ಪಂಚಾಚಾರ, ಅಷ್ಟಾವರಣಗಳ ಕ್ರಿಯೆಗಳಿಲ್ಲದ ಎಡಬಾಗ ಹತ್ತಿತು. ಆಗ ಎರಡೆತ್ತಿನ ಮಠದ ಶ್ರೀಗಳು "ಹಾಲಯ್ಯ, ನಿನ್ನ ಸಂಶಯ ನಿವಾರಣೆಗಾಗಿ ನೀನು ಎಮ್ಮಿಗನೂರಿನ ಜಡೆ ಸಿದ್ಧರಲ್ಲಿಗೆ ಹೋಗು" ಎಂದು ಸೂಚಿಸಿದರು. ಜಡೆಸಿದ್ಧರೂ ಆರೂಢರಂತೆಯೆ. ಆದರೂ ಹಾಲಯ್ಯನ ಲಿಂಗನಿಷ್ಠೆಯನ್ನು ಅಂತರ್ಜ್ಞಾನದಿಂದ ಅರಿತವರಾದ ಜಡೆಸಿದ್ಧರು ಕೊರಳಲ್ಲಿ ಲಿಂಗಸಜ್ಜೆ ಧರಿಸಿಯೆ ಹಾಲಯ್ಯನನ್ನು ಬರ ಮಾಡಿಕೊಂಡರು. ಹಾಲಯ್ಯ ಅವರ ಪ್ರಭಾವಕ್ಕೆ ಒಳಗಾಗಿ, ಕೆಲದಿನ ಅಲ್ಲಿದ್ದು, ತನ್ನ ಸಂದೇಹಗಳನ್ನು ನಿವಾರಿಸಿಕೊಂಡನು. ಮತ್ತೆಲ್ಲಿಗೆ ಹೋಗಬೇಕು ಎಂಬ ವಿಚಾರಕ್ಕೀಡಾದ. ಕೂಡಲೇ ಜಡೆಸಿದ್ಧರು ಹಾಲಯ್ಯನಿಗೆ 'ಎಲ್ಲಿಂದ ಬಂದೆಯೊ ಅಲ್ಲಿಗೆ ಹೋಗು' ಎಂದು ಹೇಳಿ ಹುಬ್ಬಳ್ಳಿಗೆ ಸಿದ್ಧಾರೂಢರಲ್ಲಿಗೆ ಕಳಿಸಿಕೊಟ್ಟರು.

ಹಾಲಯ್ಯ ಪುನಃ ಶ್ರೀ ಸಿದ್ಧಾರೂಢರಲ್ಲಿಗೆ ಬಂದು ವೇದಾಂತಾಧ್ಯಯನದಲ್ಲಿ ನಿರತನಾದರೂ ಆತನಿಗೆ ಬೇಕಾಗಿದ್ದ ಲಿಂಗಾನುಸಂಧಾನ ಅಲ್ಲಿ ದೊರೆಯದಾಗಿತ್ತು. ಹೀಗೆ ಕೆಲ ದಿನಗಳು ಗತಿಸಲಾಗಿ ಎಳಂದೂರ ಬಸವಲಿಂಗ ಸ್ವಾಮಿಗಳು ಅಲ್ಲಿಗೆ ಆಗಮಿಸಿದರು. ಅವರನ್ನು ಸ್ವಾಗತಿಸಿದ ಶ್ರೀ ಸಿದ್ಧಾರೂಢರು ಅವರ ಆಧ್ಯಾತ್ಮಿಕ ಅನುಭವವನ್ನು ತುಂಬಾ ಮೆಚ್ಚಿಕೊಂಡರು. ತತ್ವ ಮಾತಿನಲ್ಲಿರದೆ ಕೃತಿಯಲ್ಲಿರಬೇಕು ಎಂಬುದು ಎಳಂದೂರ ಸ್ವಾಮಿಗಳವರ ಸಿದ್ಧಾಂತ. ಅವರ ಶಿಷ್ಯತ್ವವಹಿಸಬೇಕೆಂದು ಹಾಲಯ್ಯನಿಗೆ ಮನಸ್ಸಾಯಿತು.

ಧಾರ್ಮಿಕ ಕಟ್ಟುಗಳು ಎಷ್ಟೇ ಕಠಿಣವಾಗಿದ್ದರೂ ಅವನ್ನೆಲ್ಲ ಒಪ್ಪಿಕೊಳ್ಳುತ್ತೇನೆ ಎಂದು ಹಾಲಯ್ಯ ವಚನವಿತ್ತಾಗ ಶ್ರೀ ಬಸವಲಿಂಗ ಸ್ವಾಮಿಗಳು ಆತನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿದರು.

**ದೊರೆತ ಗುರು**— ವಿವೇಕಾನಂದರು ರಾಮಕೃಷ್ಣರಿದ್ದಲ್ಲಿಗೆ ಹುಡುಕಿಕೊಂಡು ಹೋಗಿ ತಮ್ಮ ಗುರುಗಳನ್ನು ಪಡೆದರೆ, ಇಲ್ಲಿ ಎಳಂದೂರ ಸ್ವಾಮಿಗಳವರು ತಮ್ಮ ಶಿಷ್ಯನನ್ನು ಹುಡುಕಿಕೊಂಡು ಬಂದರು ಎನ್ನುತ್ತಾರೆ ಶ್ರೀ ಮೂಜಗಂ ಅವರು. ಅವರು ಎಳಂದೂರುಸ್ವಾಮಿಗಳು ಹಾಲಯ್ಯನಿಗೆ ಯೋಗರಹಸ್ಯವನ್ನು ಉಪದೇಶಿಸುತ್ತ, "ಸದ್ಭಾವ, ಸದ್ಬುದ್ಧಿಗಳ ವೃದ್ಧಿಗೆ ಕ್ರಿಯಾಚರಣೆ ಅತ್ಯವಶ್ಯ. ವೀರಶೈವ ಸಿದ್ಧಾಂತದಲ್ಲಿ ಬ್ರಹ್ಮವೂ ನಿರ್ವಿಶೇಷವಾಗಿರದೆ–ಸವಿಶೇಷವಾಗಿದೆ. ಆದ್ದರಿಂದ ಚರಾಚಾರ ಜಗದುತ್ಪತ್ತಿಗೆ ಕಾರಣೀ ಭೂತ. ಶಕ್ತಿ ವಿಶಿಷ್ಟ ಬ್ರಹ್ಮದಿಂದುತ್ಪನ್ನವಾದ ಜಗತ್ತು ಕೂಡ ಶಕ್ತಿ ವಿಶಿಷ್ಟವಾಗಿದೆ. ಈ ಯೋಗಾನುಷ್ಠಾನ, ಕಾಯಕ, ಜಪ, ಧ್ಯಾನ, ಶಿವಾನುಭವ ಈ ಐದು ವೀರಶೈವ ಪಂಚ ಯಜ್ಞಗಳು ಎಂದು ಶಾಸ್ತ್ರಗಳು ಹೇಳುತ್ತವೆ. ವಿಶ್ವಧರ್ಮವನ್ನೊಳಗೊಂಡ ಶಿವಾದ್ವೈತ ಸಿದ್ಧಾಂತವು ಉನ್ನತೋನ್ನತ ಸಿದ್ಧಿಗೆ ಕೊಂಡೊಯ್ಯುವದಾರಿ. ಶಿವಯೋಗ ರಹಸ್ಯವನ್ನು ತಿಳಿಯಲಿಚ್ಛಿಸುವವರು ಮೊದಲು ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಹೊಂದಾಣಿಕೆಯನ್ನು ಕಂಡುಕೊಳ್ಳಬೇಕು. ಹಿಂದಿನ ಶರಣರು ಇವನ್ನೆಲ್ಲ ವಿವರವಾಗಿ ತಮ್ಮ ವಚನಗಳಲ್ಲಿ ತಿಳಿಸಿದ್ದಾರೆ" ಎಂದು ಮನಂಬುಗುವಂತೆ ನಿರೂಪಿಸಿ ಹಾಲಯ್ಯನ ಚಿತ್ತಕ್ಕೆ ಸಮಾಧಾನ ತಂದುಕೊಡುತ್ತಾರೆ. ಹಾಲಯ್ಯನವರಿಗೆ ದೊರೆತ ಉಪದೇಶ ಈ ಸ್ವರೂಪದಲ್ಲಿತ್ತು ಎಂದು ಹೇಳುತ್ತ ಶ್ರೀ ಮೂಜಗಂ ಅವರು ಬಾಹ್ಯ ಕ್ರಿಯೆಗಳನ್ನು ಬಿಂಬಿಸಿ ಹೇಳಲು, ತಮ್ಮ ಜ್ಞಾನ ಬುದ್ಧಿಗಳನ್ನು ಉಪಯೋಗಿಸಿ ಸಾಕಷ್ಟು ವಿವರವಾಗಿ ನಿರೂಪಣೆಯಿತ್ತಿದ್ದಾರೆ. ಎಳಂದೂರು ಸ್ವಾಮಿಗಳ ಉಪದೇಶ ಶ್ರೀ ಮೂಜಗಂ ಅವರ ಲೇಖನಿಯಿಂದ ಮತ್ತೆ ಮೂಡಿ ಬಂದು ಆವಶ್ಯಕ ಸತ್ಪ್ರಭಾವವನ್ನು ಬೀರುತ್ತದೆ.

ಶ್ರೀ ಬಸವಲಿಂಗ ಸ್ವಾಮಿಗಳು ಹಾಲಯ್ಯನವರನ್ನು ಹಳ್ಳಿಹಳ್ಳಿಗೆ ತಮ್ಮ ಸಂಚಾರ ದಲ್ಲಿ ಕರೆದುಕೊಂಡು ಹೋಗಿ ಅಲ್ಲಿಯ ವಾತಾವರಣವನ್ನು ತೋರಿಸಿ, ಹಳ್ಳಿಗಳನ್ನು ಒಳ್ಳೆಯ ಸಂಸ್ಕೃತಿಯತ್ತ ಒಯ್ಯುವ ಬಗೆಯನ್ನು ಬೋಧಿಸುತ್ತಿದ್ದರು. ಹುಟ್ಟಿ ಬಂದ ಮೇಲೆ, ಸಮಾಜ ಋಣ ತೀರಿಸುವದಕ್ಕಾಗಿ, ಕೇವಲ ವೈಯಕ್ತಿಕ ಆಧ್ಯಾತ್ಮ ಶಕ್ತಿ ಯನ್ನು ಪಡೆಯದೆ, ಅದನ್ನು ಸಮಾಜ ಸೇವೆಗಾಗಿ ಬಳಸಿ ಜನಜಾಗ್ರತಿ ಮಾಡಬೇಕು. ಇದಕ್ಕೆ ಮೊದಲು ಅನುಷ್ಠಾನವನ್ನು ಒಲಿಸಿಕೊಳ್ಳಬೇಕು ಎಂದೂ ತಿಳಿವಳಿಕೆ ನೀಡುತ್ತಿದ್ದರು. ಹೀಗೆ ಗುರು–ಶಿಷ್ಯರ ನಿಕಟ ಅನುಸಂಧಾನ ಹಲವಾರು ವರ್ಷ ನಡೆಯಿತು. ಶ್ರೀ ಬಸವಲಿಂಗ ಸ್ವಾಮಿಗಳು ತಮ್ಮ ಅಂತ್ಯಕಾಲದಲ್ಲಿ ಹಾಲಯ್ಯನವರಿಂದ ಸಮಾಜ ಸೇವೆ ಗೈವ ಆಶ್ವಾಸನೆ ಪಡೆದುಕೊಂಡೇ ಲಿಂಗೈಕ್ಯರಾದರು.

**ಸಾಧಕಾವಸ್ಥೆ**—ಗುರುಗಳ ಮಾತು ಹಾಲಯ್ಯನವರ ಮನಸ್ಸನ್ನೂ ಒಳಗೊಳಗೆ

ಕೊರೆಯುತ್ತಿದ್ದಿತು. ಆತ್ಮಶಕ್ತಿಯನ್ನು ಪಡೆದುಕೊಂಡ ಮೇಲಲ್ಲವೇ ಅದನ್ನು ಸಮಾಜ ಸೇವೆಗೆಂದು ಬಳಸುವದು. ಆತ್ಮಶಕ್ತಿ ಸಂಪಾದಿಸುವದು ಹೇಗೆ? ತಪಸ್ಸಿನಿಂದ. ಹಾಗಾದರೆ ತಪಶ್ಚರ್ಯ ಎಲ್ಲಿ ಕೈಕೊಳ್ಳಬೇಕು? ನಿಜಗುಣ ಶಿವಯೋಗಿಗಳ ಶಂಭುಲಿಂಗನ ಬೆಟ್ಟಕ್ಕಿಂತ ಬೇರೊಂದು ತಕ್ಕತಾಣವಿಲ್ಲ ಎಂದುಕೊಂಡು ಹಾಲಯ್ಯ ಶಂಭುಲಿಂಗನ ಬೆಟ್ಟಕ್ಕೆ ತೆರಳುತ್ತಾರೆ.

ಸಾಧಕಾವಸ್ಥೆಯಲ್ಲಿ ಯಾರು ಜ್ಞಾನ ಭಕ್ತಿ ವೈರಾಗ್ಯಗಳಲ್ಲಿ ಜಯಶೀಲರಾಗಿ, ಮುತ್ತಿದ ಅಜ್ಞಾನ ಕತ್ತಲೆಯನ್ನು ದೂಡಿ, ಅಖಂಡವಾದ ಆತ್ಮಶಕ್ತಿಯನ್ನು ಪಡೆದು ಲಿಂಗಪೂಜೆಯಲ್ಲಿ ತಲ್ಲೀನರಾಗುವರೊ ಅವರ ಜೀವನವು ಸಾರ್ಥಕವಾಗುವದಲ್ಲದೆ ಅವರಿಂದ ಸಮಾಜಕ್ಕೆ ಕಲ್ಯಾಣ ಉಂಟಾಗುವದು ಎಂದು ಹೇಳುವ ಶ್ರೀ ಮೂಜಗಂ ಅವರು ಹಾಲಯ್ಯನವರ, ಹನ್ನೆರಡು ವರ್ಷಗಳ ಅಖಂಡ ಸಾಧನೆಯ ಪರಿಯನ್ನು ವಿವರಿಸಲು ದ್ಯುಕ್ತರಾಗಿ, ಸಾಧನಾ ಮಾರ್ಗವನ್ನೇ ವಿವರವಾಗಿ ದಿಗ್ದರ್ಶಿಸಿ, ಇಂದಿನ ಸಾಧಕರಿಗೂ ಮಾರ್ಗದರ್ಶನ ಮಾಡಿದ್ದಾರೆ. ಹಾಲಯ್ಯನವರಂತೂ ತಮ್ಮ ಈ ಕಠೋರ ಸಾಧನೆಯ ಫಲವಾಗಿ ನಿರ್ವಿಕಲ್ಪ ಸಮಾಧಿಯನ್ನು ಹೊಂದುವವರೆಗೂ ಪ್ರಗತಿ ಸಾಧಿಸಿದರು. ಆಗ ಅವರ ಒಳ ಹೊರಗೂ ಲಿಂಗಪ್ರಭೆಯೇ ವ್ಯಾಪಿಸಿತ್ತು. ಹಾಲಯ್ಯನವರು ಇಷ್ಟಲಿಂಗಾನು ಸಂಧಾನದಲ್ಲಿ ತಲ್ಲೀನರಾಗಿದ್ದರು. ಶಿವಯೋಗದ ಮಹಿಮೆಯನ್ನು ಅರಿತು ಆಚರಿಸು ತ್ತಿದ್ದರು. ಇವರ ತಪೋಜ್ವಾಲೆಯ ಕಿರಣ ಪ್ರಕಾಶವು ಸುತ್ತಲೂ ಹರಡಿ ಭಕ್ತರನ್ನು ಆಕರ್ಷಿಸಹತ್ತಿತು.

**ಶಿವಾನುಭವ ಬೋಧೆ**–ತಮ್ಮ ಕಠೋರ ಸಾಧನೆಯ ಕಾಲದಲ್ಲಿ ಹಾಲಯ್ಯನವರು ನಡೆಸಿದ ವಿಪುಲ ಗ್ರಂಥಾವಲೋಕನದಿಂದಾಗಿ ಜ್ಞಾನ ಸಂಪತ್ತು ಅವರಲ್ಲಿ ತುಂಬಿಕೊಂಡಿತ್ತು. ಮೈಗೂಡಿಸಿಕೊಂಡ ಶಿವಯೋಗದಿಂದಾಗಿ, ಅನುಭವಿಸಿದ ಶಿವಾನುಭವದಿಂದಾಗಿ ಅವರ ಅರಿವಿಗೆ ನಾಲಿಗೆ ಮೂಡಿದಂತಾಗಿತ್ತು. ತಮ್ಮ ದರ್ಶನಕ್ಕಾಗಿ ನಿತ್ಯವೂ ಅರಸಿಕೊಂಡು ಭಕ್ತರಿಗೆಲ್ಲ ಅವರು ಶಿವಾನುಭವದ ಬೋಧೆ ನೀಡುತ್ತಿದ್ದರು. ಹಿಂದಿನ ಶಿವಶರಣೆಯರ–ಶಿವಶರಣರ ಚರಿತ್ರೆಗಳನ್ನು ಅವರಿಗೆ ನಿರೂಪಿಸುತ್ತ ಅವರನ್ನು ತಮೋ ನಿದ್ರೆಯಿಂದ ಎಚ್ಚರಿಸಿ ಚೇತನವನ್ನು ನೀಡುತ್ತಿದ್ದರು. ತಾವು ತಮ್ಮ ಗುರುಗಳಿಂದ ತಿಳಿದುಕೊಂಡ ಶಿವಯೋಗ ರಹಸ್ಯವನ್ನು ಭಕ್ತರಿಗೂ ಬೋಧಿಸಿ ಶಿವಾನುಭವದ ಮಹತ್ವವನ್ನು ಅವರಿಗೆ ಮನಗಾಣಿಸಿ ಕೊಡುತ್ತಿದ್ದರು. ಹಾಲಯ್ಯನವರು ನೀಡಿದ ಉಪದೇಶ ಸಾರವನ್ನು ಶ್ರೀ ಮೂಜಗಂ ಅವರು ಸಂಗ್ರಹಿಸಿರುವ ರೀತಿ ಹೀಗೆ ತುಂಬ ಆಕರ್ಷಕವಾಗಿದೆ. "ಮಾನವನು ಮಾನವನಾಗಿ ಉಳಿಯಬೇಕಾದರೆ ಸುಸಂಸ್ಕೃತನಾಗಿ, ನೈತಿಕ ಜೀವನದಲ್ಲಿ ಅಡಿಯಿಟ್ಟು ಸದ್ಗುಣ ಶಾಲಿಯಾಗಿ ಬಾಳಿದರೆ ಮಾತ್ರ ಸುಖ–ಜೀವಿಯಾಗಬಲ್ಲನು. ಅಹಂಕಾರ–ಮಮಕಾರಗಳನ್ನು ತೊರೆದು, ಕಪಟ–ಮೋಸಗಳನ್ನು ಮರೆದು, ಕಾಯಕವೇ

ಕೈಲಾಸವೆಂದರಿತು, ನಿತ್ಯವೂ ಕ್ರಿಯಾಜ್ಞಾನದಲ್ಲಿ ಮನವಿರಿಸಿ ಕಾರ್ಯತತ್ಪರರಾದರೇ ಬದುಕಿನಲ್ಲಿ ಸತ್ಯತೆಯನ್ನು ಕಾಣಬಹುದು........ಅನುಭಾವವಿಲ್ಲದ ಭಕ್ತಿ ಅರಿವಿಂಗೆ ಬಾರದು. ಅನುಭಾವವಿಲ್ಲದ ಸಂಗ ಸಮರಸ ಸುಖಕ್ಕೆ ಸಿಲುಕದು. ಅನುಭಾವವಿಲ್ಲದ ಪ್ರಸಾದ ಪರಿಣಾಮ ಕೊಡದು. ಅನುಭಾವವಿಲ್ಲದೆ ಏನೇನೂ ಅರಿಯಬಾರದು" ಎಂದು ಶರಣರ ವಚನಗಳ ಆಧಾರದಿಂದ ಹಾಲಯ್ಯನವರು ಭಕ್ತರನ್ನು ಎಚ್ಚರಿಸಿದ ಉಪದೇಶದ ನುಡಿಗಳು ಇಂದಿನವರಿಗೂ ಅಷ್ಟೇ ಗಾಢವಾಗಿ ಅನ್ವಯಿಸುವವು. ಶ್ರೀ ಮೂಜಗಂ ಆ ಉಪದೇಶ ಸಾರವನ್ನು ಉಪಯುಕ್ತ ವಚನಗಳಲ್ಲಿ ಹೇಗೆ ಹೃದಯಂಗಮವಾಗಿ ಸಂಗ್ರಹಿಸಿದ್ದಾರೆ ಅಲ್ಲವೆ!

**ಸಮಾಜ ಸೇವೆ ಸಂಕಲ್ಪ**—ಹೀಗೇ ದಿನಗಳುರುತ್ತಿರುವಾಗ ಗುರುವರ್ಯರ ಅಂತಿಮವಾಗಿ ಅವರ ಮನಸ್ಸಿಗೆ ಹೊಳೆಯಿತು. ಇಲ್ಲಿಯೆ ಬೆಟ್ಟದಲ್ಲಿ ಕುಳಿತಿರಬಾರದು. ಕೆಳಗಿಳಿದು ಸಂಚಾರ ಕೈಕೊಂಡು ಸಮಾಜ ಸೇವೆಯಲ್ಲಿ ತೊಡಗಬೇಕು ಎಂದು ಹಾಲಯ್ಯ ನವರು ಹಳ್ಳಿಗಳನ್ನು ಸಂಚರಿಸುತ್ತ ಸೊರಬಕ್ಕೆ ಬರುತ್ತಾರೆ. ಅಲ್ಲಿಯ ಹಿರಿಯರ ಕೋರಿಕೆ ಯಂತೆ ಮುಂದೆ ಸಾಗಿ ಕೆಳದಿರಾಜರ ಪಂಚಮಠಗಳಲ್ಲೊಂದಾದ ಕ್ಯಾಸನೂರ ಮಠಕ್ಕೆ ಬಂದು ನಿಂತು ಭಕ್ತೋದ್ಧಾರ ಕಾರ್ಯನಿರತರಾಗುತ್ತಾರೆ.

ಹೀಗೆ ಆಧ್ಯಾತ್ಮ ಶಕ್ತಿ ಸಂಪನ್ನರಾದ ಹಾಲಯ್ಯನವರಿಗೆ ಮುಂದಿನ ಸೋಪಾನ ಎಂದರೆ ಪೀಠಾಧಿಪತಿಯಾಗುವದು. ಆದರೆ ಆ ವಿಚಾರವು ಅವರ ಮನಸ್ಸಿನಲ್ಲೂ ಸುಳಿ ಯದು. ಸಮಾಜಸೇವೆ ಅವರ ಗುರಿ. ಆದರೆ ವಿಧಿವಿಲಾಸವೇ ಬೇರೆ! ಇತ್ತ ಹಾನಗಲ್ಲಿನ ವಿರಕ್ತಮಠದ ಶ್ರೀ ಫಕೀರ ಸ್ವಾಮಿಗಳು ತಮಗೆ ವಯಸ್ಸಾದುದರಿಂದ ಮರಿದೇವರ ಶೋಧ ದಲ್ಲಿದ್ದಾರೆ. ಬಂದ ಭಕ್ತರಿಗೆಲ್ಲ ತಮ್ಮ ಮನೀಷೆಯನ್ನು ತಿಳಿಸುತ್ತಾರೆ. ಒಮ್ಮೆ ಉಳವಿ ಗುರುಬಸಯ್ಯ ಹಾಗೂ ಕೆಂಡಪ್ಪಗೌಡರು ಹಾನಗಲ್ಲಿಗೆ ಬಂದಾಗ ಶ್ರೀ ಫಕೀರ ಸ್ವಾಮಿಗಳು ತಮ್ಮ ಇಂಗಿತವನ್ನು ಅವರಿಗೆ ಅರಹುತ್ತಾರೆ. ಈ ಗೃಹಸ್ಥರು ಸ್ವಾಮಿಗಳಿಗೆ ಹಾಲಯ್ಯ ದೇಶಿಕರ ವಿಚಾರ ತಿಳಿಸಿ ಅವರನ್ನು ನೋಡಬಹುದು ಎನ್ನುತ್ತಾರೆ. ತಿರುಗಿಬಂದು ಹಾಲಯ್ಯ ನವರನ್ನು ಕಂಡು, "ನೀವು ಹಾನಗಲ್ಲಿಗೆ ಹೋಗಿ ಅಲ್ಲಿಯ ಶ್ರೀ ಫಕೀರ ಸ್ವಾಮಿಗಳನ್ನು ಕಾಣಿರಿ. ನಿಮಗೆ ಕಲ್ಯಾಣವಾಗುವದು" ಎಂದು ಹೇಳಿ ಅವರನ್ನು ಒಪ್ಪಿಸಿ ಹಾನಗಲ್ಲಿಗೆ ಕಳಿಸುತ್ತಾರೆ. ಹಾಲಯ್ಯನವರು ಸ್ವಾಮಿಗಳನ್ನು ಭೆಟ್ಟಿಯಾಗುತ್ತಾರೆ.

**ಪೀಠಾಧಿಪತಿ**— ಇವರನ್ನು ಕಂಡೊಡನೆ ಪ್ರಸನ್ನರಾದ ಸ್ವಾಮಿಗಳು ತಮ್ಮಲ್ಲಿಯೆ ಇಟ್ಟುಕೊಳ್ಳುತ್ತಾರೆ. ಹಾಲಯ್ಯನವರು ಗುರುಸೇವೆಯುನ್ನು ಜೊತೆಗೆ ಮಠದ ಕೆಲಸಕಾರ್ಯ ಗಳನ್ನು ಮಾಡಿಕೊಂಡಿರುತ್ತಾರೆ. ಮುಂದೆ ಸ್ವಾಮಿಗಳು ಒಂದಿನ ಹಾಲಯ್ಯನವರನ್ನು ಕರೆದು ತಮ್ಮ ಮನದಾಶೆಯನ್ನು ತಿಳಿಯಪಡಿಸುತ್ತಾರೆ. ಹಾಲಯ್ಯ ಪೀಠಾಧಿಪತಿಯಾಗಲು ಒಲ್ಲೆ, ಸಮಾಜ ಸೇವೆಯೇ ತನ್ನ ಗುರಿ ಎಂದು ಹೇಳಿದಾಗ ಸ್ವಾಮಿಗಳು [illegible]ನಿನಗೊಂದು

ಅಧಿಕಾರವಿದ್ದರೆ ನಿನ್ನ ಸೇವೆಗೆ ಬೆಲೆ ಬರುತ್ತದೆ ಎಂದು ತಿಳಿಹೇಳಿ ಆತನನ್ನು ಒಪ್ಪಿಸುತ್ತಾರೆ. ಮುಂದೆ ಹಾಲಯ್ಯ ಭಿಕ್ಷೆ ಎತ್ತಲೆಂದು ಹಳ್ಳಿಗಳಿಗೆ ಹೋಗಿದ್ದಾಗ ಫಕೀರ ಸ್ವಾಮಿಗಳು ಲಿಂಗ ದೊಳಗಾಗುತ್ತಾರೆ. ಅವರ ಅಂತಿಮ ಇಚ್ಛೆಯಂತೆ ಬಿದರಿ ಕುಮಾರ ಸ್ವಾಮಿಗಳನ್ನು ಹಾನಗಲ್ಲ ವಿರಕ್ತ ಮಠಕ್ಕೆ ಹಾಲಯ್ಯನವರನ್ನು ಪಟ್ಟಗಟ್ಟಿ ಶ್ರೀ ಸದಾಶಿವ ಸ್ವಾಮಿಗಳು ಎಂದು ನಾಮಕರಣ ಮಾಡುತ್ತಾರೆ. ಈ ಸದಾಶಿವ ಸ್ವಾಮಿಗಳೇ ಕುಮಾರ ಸ್ವಾಮಿಗಳು ಎಂಬ ಅಭಿಧಾನದಿಂದ ಮಠದ ಕಾರ್ಯಕಲಾಪಗಳನ್ನು ನಿರ್ವಹಿಸುತ್ತಿರುತ್ತಾರೆ. ತುಂಬ ಸರಳ ಜೀವನ. ಹೆಚ್ಚಾಗಿ ಮೌನದಲ್ಲಿದ್ದು ಪ್ರವಚನಾದಿ ಕಾಲದಲ್ಲಿ ತಮ್ಮ ರಸಾಲವಾಣಿ ಯಿಂದ ಭಕ್ತಾದಿಗಳನ್ನು ತಣಿಸುತ್ತಿರುತ್ತಾರೆ. ಆದರೂ ಸಮಾಜ ಸೇವೆಯ ವಿಚಾರ ಅವರ ಅಂತರಂಗದಲ್ಲಿ ಕೊರೆಯುತ್ತಲೇ ಇರುತ್ತದೆ. ಜನ ಜಾಗ್ರತಿ ಹೇಗಾದರೆ ಹೆಚ್ಚೀತು? ಸಂಘಟನೆ ಯನ್ನೆಂತು ಮಾಡಬೇಕು ಎಂಬಂಥ ವಿಚಾರಗಳಲ್ಲಿಯೆ ಮಗ್ನರಾಗಿರುವಾಗ ಒಂದಿನ ಧ್ಯಾನ ದಲ್ಲಿರುವಾಗ ಏನೋ ಒಂದು ವಿಚಾರ ಪಕ್ಕನೆ ಹೊಳೆದಂತಾಯಿತು.

**ಅ.ಭಾ. ವೀರಶೈವ ಸಭೆ**— ಹೌದು! ನಮ್ಮ ಸಮಾಜ ಮುಂದುವರಿಯಬೇಕಾ ದರೆ ಅದಕ್ಕೆ ಪಾಶ್ಚಾತ್ಯ ಶಿಕ್ಷಣ ದೊರೆಯಬೇಕು. ಜನರಿಗೆ ಇಂಥ ಶಿಕ್ಷಣ ನೀಡುವದಕ್ಕಾಗಿ ಒಂದು ಸಂಘಟನೆ ಬೇಕು. ಅದರ ವ್ಯವಹಾರಗಳು ಸುಸೂತ್ರಸಾಗಬೇಕಾದರೆ ಧನಬಲ ಬೇಕು. ಈ ಹಣವನ್ನಾರು ನೀಡಬೇಕು? ಜನರೇ ನೀಡಬೇಕಲ್ಲವೆ? ಎಂದು ಚಿಂತಿಸಿದ ಶ್ರೀ ಕುಮಾರ ಸ್ವಾಮಿಗಳು ಹಳ್ಳಿಗಳಿಂದ ಸಂಚಾರ ಪ್ರಾರಂಭಿಸಿ ಹಣಕೂಡಿಸ ಹತ್ತಿದರು. ತಾನಾಗಿ ಬಳಿ ಸಾರಿಬಂದ ಚಿತ್ರದುರ್ಗದ ಜಗದ್ಗುರು ಪೀಠವನ್ನು ನಿರಾಕರಿಸಿ ತಮ್ಮ ಗುರಿಯತ್ತ ಮುನ್ನಡೆ ದರು. ಧಾರವಾಡಕ್ಕೆ ಬಂದರು. ಅಂದಿನ ಕಾಲದಲ್ಲಿ ಸಮಾಜದಲ್ಲಿ ಧುರೀಣರೆನಿಸಿದವರನ್ನೆಲ್ಲ ಕಂಡು, ಅವರೆದುರು ತಮ್ಮ ಕನಸ್ಸನ್ನು ಮಂಡಿಸಿ, ಅವರನ್ನು ಆಕರ್ಷಿಸಿ, ಅವರೆಲ್ಲರ ಸಹಾಯ ಸಹಕಾರಗಳಿಂದ ಅಖಿಲಭಾರತ ವೀರಶೈವ ಮಹಾಸಭೆಯನ್ನು ೧೯೦೪ರಲ್ಲಿ ಸ್ಥಾಪಿಸಿದರು. ಸಿರಸಂಗಿಯ ಶ್ರೀಮಂತ ಲಿಂಗರಾಜ ದೇಸಾಯರು ಈ ಕಾರ್ಯದಲ್ಲಿ ವಿಶೇಷ ವಾಗಿ ಸಹಕರಿಸಿದ್ದಲ್ಲದೆ ತಮ್ಮ ಆಸ್ತಿಯನ್ನೇ ಸಮಾಜ ಕಾರ್ಯಕ್ಕೆ ಧಾರೆಯೆರೆದರು. ಈ ವೀರಶೈವ ಮಹಾಸಭೆಯ ಚಟುವಟಿಕೆಗಳ ಪರಿಣಾಮವಾಗಿ ಕೆ. ಎಲ್. ಈ ಸೊಸಾಯಿಟಿ ಜನ್ಮತಾಳಿತು. ಅನೇಕಾನೇಕ ವಿದ್ಯಾಸಂಸ್ಥೆಗಳೂ ವಿದ್ಯಾರ್ಥಿ ನಿಲಯಗಳೂ ಹುಟ್ಟಿಕೊಂಡು ಶಿಕ್ಷಣ ಕಾರ್ಯವನ್ನು ಮುಂದುವರೆಸಿಕೊಂಡು ಬಂದವು. ಇಂದಿಗೂ ಕಾರ್ಯಪ್ರವೃತ್ತವಾಗಿವೆ. ಅಲ್ಲದೆ ಸಾಹಿತ್ಯ ಸಂಗೀತಾದಿ ಕಲೆಗಳಿಗೂ ಪ್ರೋತ್ಸಾಹ ದೊರೆತು ಪಂಚಾಕ್ಷರಿ ಗವಾಯಿಗಳು ಡಾ. ಫ. ಗು. ಹಳಕಟ್ಟಿ ಅವರಂಥವರು ಉಜ್ವಲವಾಗಿ ಪ್ರಕಾಶಿಸುವಂತಾಯ್ತು. ಶ್ರೀಕುಮಾರ ಸ್ವಾಮಿಗಳು ಇರುವವರೆಗೂ ಉತ್ಕರ್ಷ ಹೊಂದುತ್ತಲೇ ನಡೆದವು.

**ಶಿವಯೋಗಮಂದಿರ**— ಶ್ರೀ ಕುಮಾರ ಸ್ವಾಮಿಗಳಿಗೆ ಇಷ್ಟರಿಂದ ತೃಪ್ತಿ ಇಲ್ಲ. ಸಮಾಜದಲ್ಲಿ ಶಿಕ್ಷಣ ಪ್ರಸಾರಕ್ಕೆ ನಾಂದಿ ಹಾಡಿದಂತಾಯಿತು. ಇನ್ನು ಇದರ ಪ್ರಯೋಜನ ಪಡೆಯಬೇಕಾದರೆ ಸಾಮಾಜಿಕರು ಸದಾಚಾರ ಸಂಪನ್ನರಾಗಿರಬೇಕು, ವಿದ್ಯಾರ್ಜನೆಯಲ್ಲಿ

ಆಸಕ್ತಿ ಬೆಳೆಸಿಕೊಳ್ಳಬೇಕು. 'ವಿದ್ಯಾ ವಿವಾದಾಯ ಧನಂ ಮದಾಯ ಶಕ್ತಿಃ ಪರೇಷಾಂ ಪರಿಪೀಡನಾಯ' ಎಂದಾಗದೆ ಜ್ಞಾನಾಯ ದಾನಾಯ ಚರಕ್ಷಣಾಯ ಎಂದಾಗಬೇಕು ಎಂಬುದು ಶ್ರೀ ಕುಮಾರ ಸ್ವಾಮಿಗಳ ಮನೀಷೆ. ಅಸ್ತವ್ಯಸ್ತವಾಗಿದ್ದ ಸಮಾಜವನ್ನು ತಿದ್ದುವ ಕೆಲಸ ತಮ್ಮೊಬ್ಬರಿಂದಾಗದು. ನಾಡಿನ ಮಠಗಳೆಲ್ಲ ಈ ಕಾರ್ಯಕ್ಕಾಗಿ ಟೊಂಕಕಟ್ಟಿ ನಿಲ್ಲಬೇಕು. ಹಿಂದೊಮ್ಮೆ ಮಠಗಳು ಮಠಾಧಿಪತಿಗಳು ಸಮಾಜ ಜಾಗ್ರತಿ ಕಾರ್ಯವನ್ನು ಪ್ರಭಾವಿ ರೀತಿಯಿಂದ ನಡೆಸಿದ್ದವಾದರೂ ಈಗ ಆ ಪರಂಪರೆ ಉಳಿದಿಲ್ಲ, ಅವನತಿಗೀಡಾಗಿವೆ. ಭಕ್ತರೂ ಧರ್ಮಾಚರಣೆಯನ್ನು ಮರೆತಿದ್ದಾರೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿ. ಇವರಲ್ಲಿ ಸ್ವಧರ್ಮಜಾಗ್ರತಿ ಮಾಡಿ, ಇವರೆಲ್ಲ ಇಷ್ಟಲಿಂಗವನ್ನು ಮೈಮೇಲೆ ಧರಿಸಿ ಪೂಜೆಮಾಡುವ ಸತ್ವಶಾಲಿ ವೀರಶೈವರಾಗಬೇಕಾದರೆ ಮಠಗಳು ಇವರನ್ನು ತಿದ್ದಬೇಕು. ಅಂದರೆ ಮಠಗಳ ಸುಧಾರಣೆ ಆಗಬೇಕು. ಪೀಠಾಧಿಪತಿಗಳು ಸತ್ವಸಂಪನ್ನರಾಗಿರಬೇಕು. ಸದಾಚಾರಪರಾಯಣರಾಗಿ ಭಕ್ತೋದ್ಧಾರಕ್ಕೆ ಕಟಿಬದ್ಧರಾಗಬೇಕು. ಈ ಮಠಗಳಿಗೆ ಇಂಥ ಸಚ್ಚಾರಿತ್ರ ಸಂಪನ್ನ ಅಧಿಪತಿಗಳನ್ನು ಒದಗಿಸುವ ಒಂದು ಸಂಸ್ಥೆ ದೇಶದಲ್ಲಿ, ನಮ್ಮ ನಾಡಿನಲ್ಲಿ, ಜನ್ಮತಾಳಬೇಕು ಎಂದೆಲ್ಲ ವಿಚಾರಮಗ್ನರಾಗಿ ಶ್ರೀ ಕುಮಾರ ಸ್ವಾಮಿಗಳು ಧ್ಯಾನ ತತ್ಪರರಾಗಿರುತ್ತಿದ್ದರು. ಒಂದಿನ ಬಾಗಲಕೋಟೆಯ ಮಲ್ಲಣಾರ್ಯರು ಬಂದು ಶ್ರೀಕುಮಾರ ಸ್ವಾಮಿಗಳನ್ನು ಕಂಡು, "ಇಂದು ಧಾರ್ಮಿಕ ಕ್ರಾಂತಿ ಆಗಬೇಕಾಗಿದೆ. ಇದಕ್ಕಾಗಿ ತಪಸ್ಸು ಅಗತ್ಯ. ನೀವು ಶಿವಯೋಗ ಶಿಕ್ಷಣವನ್ನು ನೀಡುವ ಒಂದು ಯೋಗಸಂಸ್ಥೆ ಸ್ಥಾಪಿಸಿ, ಸಮಾಜಸೇವೆ ಮಾಡುವ ಶಿವಯೋಗದ ಬೀಜ ಬಿತ್ತಿ ಯೋಗ ಸಂಸ್ಕೃತಿ ಉಳಿಸುವ ಸಂಕಲ್ಪ ಮಾಡಿರಿ" ಎಂದು ಎಚ್ಚರಿಸಿದರು. ಆಗ ಶ್ರೀ ಕುಮಾರ ಸ್ವಾಮಿಗಳು ತಮ್ಮ ಧ್ಯಾನದಲ್ಲಿಯೂ ತಮಗೆ ಇದೇ ವಿಚಾರ ಹೊಳೆದುದಾಗಿ ಹೇಳಿ, ಸಮಾಜೋದ್ಧಾರ ಕಾರ್ಯಕ್ಕಾಗಿ ಹಾನಗಲ್ಲ ಬಿಟ್ಟು ಸಂಚಾರ ಹೊರಟು ಬಾಗಲಕೋಟೆಗೆ ಬಂದರು.

ಅ.ಭಾ. ವೀರಶೈವ ಮಹಾಸಭೆಯ ನಾಲ್ಕನೆಯ ಅಧಿವೇಶನವನ್ನು ಶ್ರೀ ಕುಮಾರ ಸ್ವಾಮಿಗಳು ಬಾಗಲಕೋಟೆಯಲ್ಲಿ ಸೇರಿಸಿ, ಅಲ್ಲಿ ಆಗಮಿಸಿದ ಮುಂದಾಳುಗಳೆದುರಿಗೆ, ಭಕ್ತರೆದುರಿಗೆ ತಮ್ಮ ಶಿವಯೋಗ ಮಂದಿರದ ವಿಚಾರವನ್ನು ಮಂಡಿಸಿ ಅದರ ಸ್ಥಾಪನೆಗೆ ಸಭೆಯ ಅನುಮತಿ ಪಡೆದುಕೊಂಡರು. ಶಿವಯೋಗ ಮಂದಿರವನ್ನು ಎಲ್ಲಿ ಸ್ಥಾಪಿಸಬೇಕು ಎಂಬ ವಿಚಾರದಲ್ಲಿ ಚಿತ್ತರಗಿಯ ಚಿಜ್ಜ್ಯೋತಿ ಶ್ರೀ ವಿಜಯ ಮಹಾಂತೇಶ ಸ್ವಾಮಿಗಳ ಮಾರ್ಗದರ್ಶನ ಪಡೆಯಬೇಕು ಎಂದಾಯಿತು. ಇಳಕಲ್ಲಿಗೆ ಶಿಷ್ಯರೊಂದಿಗೆ ಹೋಗಿ ಶ್ರೀ ಕುಮಾರ ಸ್ವಾಮಿಗಳು ಶ್ರೀ ವಿಜಯ ಮಹಾಂತೇಶ ಸ್ವಾಮಿಗಳವರನ್ನು ಕಂಡು ತಮ್ಮ ಮನೋಗತವನ್ನು ನಿವೇದಿಸಿ, ಶಿವಯೋಗಮಂದಿರ ಸ್ಥಾಪನೆಗೆ ಸ್ಥಳ ನಿರ್ದೇಶನ ಮಾಡಬೇಕೆಂದು ಪ್ರಾರ್ಥಿಸಿದರು. ಶ್ರೀ ವಿಜಯ ಮಹಾಂತೇಶರು ಒಪ್ಪಿಕೊಂಡುಬಂದು ನಿರ್ದೇಶ ಮಾಡಿದ ಸ್ಥಳದಲ್ಲೇ ಶಿವಯೋಗ ಮಂದಿರವನ್ನು ಸ್ಥಾಪಿಸಲಾಗಿದೆ. ಅಂದಿನಿಂದ ಇಂದಿನವರೆಗಿನ ಐದಾರು ದಶಕಗಳ ಅವಧಿಯಲ್ಲಿ ಸಾವಿರಾರು ವಿದ್ಯಾರ್ಥಿಗಳು ಶಿವಯೋಗ

ಮಂದಿರದಲ್ಲಿ ಶಿಕ್ಷಣ ಪೂರೈಸಿ ಹೊರಬಿದ್ದಿದ್ದಾರೆ. ಇಂದಿನ ಮಠಾಧಿಪತಿಗಳೆಲ್ಲ ಶಿವಯೋಗ ಮಂದಿರದಲ್ಲಿ ಶಿಕ್ಷಣ ಪಡೆದವರೇ ಆಗಿದ್ದಾರೆ. ಒಬ್ಬಿಬ್ಬರು ಜಗದ್ಗುರುಗಳೂ ಆಗಿದ್ದಾರೆ. ಸ್ವತಃ ಶ್ರೀ ಮೂಜಗಂ ತಾವು ೧೫ ವರ್ಷಕಾಲ ಶಿವಯೋಗಮಂದಿರದ ವಿದ್ಯಾರ್ಥಿ ಆಗಿದ್ದುದನ್ನು ನೆನೆಸಿಕೊಳ್ಳುತ್ತಾರೆ.

**ಪ್ರಶಾಂತ ದಿವ್ಯಾಶ್ರಮ**—ಮಲಾಪಹಾರಿ ತೀರದಲ್ಲಿ ಪ್ರಶಾಂತ ವಾತಾವರಣದಲ್ಲಿ ಮಂಡಿಸಿರುವ ಶಿವಯೋಗ ಮಂದಿರದಲ್ಲಿ ಯೋಗ, ಶಿವಾನುಭವಗಳ ಸಂಪೂರ್ಣ ಶಿಕ್ಷಣ ನೀಡಲಾಗುತ್ತಿದೆ. ಶುದ್ಧ ಸಾತ್ವಿಕ ಆಹಾರ, ಸದಾಚಾರ ಪೂರ್ವಕವಾದ ಶಿಕ್ಷಣಗಳಿಂದಾಗಿ ಈ ಸಂಸ್ಥೆಯು ನಾಡಿನ ಹೆಮ್ಮೆಯ ಸಂಸ್ಥೆಯಾಗಿ ಹೆಮ್ಮರದಂತೆ ಬೆಳೆಯುತ್ತಲೇ ಇದೆ. ಇದರ ವೆಚ್ಚ ಭರಿಸುವದಕ್ಕಾಗಿ ಶ್ರೀ ಕುಮಾರ ಸ್ವಾಮಿಗಳು ಸ್ವತಃ ಜೋಳಿಗೆ ಹಾಕಿ ನಿಧಿ ಸಂಗ್ರಹಿಸಿದರು. ಇದರ ಸುವ್ಯವಸ್ಥಿತ ಆಡಳಿತಕ್ಕೆ ತಕ್ಕ ಏರ್ಪಡನ್ನೂ ಮಾಡಿದರು. ಎಲ್ಲ ವಿವರಗಳನ್ನು ಶ್ರೀ ಮೂಜಗಂ ಇಲ್ಲಿ ಚೊಕ್ಕಾಗಿ ವಿವರಿಸಿದ್ದಾರೆ.

**ಬಹುಮುಖಕಾರ್ಯ**— ಶ್ರೀ ಕುಮಾರ ಸ್ವಾಮಿಗಳು ಮಹಿಳೆಯರ ಉದ್ಧಾರ ಕಾರ್ಯವನ್ನು ಕೈಗೆತ್ತಿಕೊಂಡರು. ಸಾಹಿತ್ಯದಲ್ಲಿ ಆಸಕ್ತಿ ಇದ್ದ ಇವರು ತಾಡೋಲೆ ಗ್ರಂಥಗಳನ್ನು ಮುತವರ್ಜಿಯಿಂದ ಸಂಗ್ರಹಿಸುತ್ತಿದ್ದರು. ಸಾಹಿತಿಗಳು, ಕಲಾವಿದರು, ಕೀರ್ತನಕಾರರು, ಪಂಡಿತರುಗಳಿಗೆ ಆಶ್ರಯ ನೀಡುತ್ತಿದ್ದರು. ಇವರಿಗೆ ಆಯುರ್ವೇದದಲ್ಲಿಯೂ ಪರಿಶ್ರಮ ಇದ್ದಿತು. ಹೀಗಾಗಿ ಇವರು ತಮ್ಮ ಬಹುಮುಖ ಚಟುವಟಿಕೆಗಳಿಂದ ಸಮಾಜ ಜಾಗ್ರತಿ ಮಾಡುತ್ತಲೇ ಇದ್ದರು. ತಮ್ಮ ೬೩ ನೇ ವಯಸ್ಸಿನಲ್ಲಿ ಕಾಲ ಸನ್ನಿಹಿತನಾಗಿದ್ದು ತಿಳಿದಕೂಡಲೆ, ಮುದೇನೂರಲ್ಲಿದ್ದ ಅವರು ತಮ್ಮನ್ನು ಶಿವಯೋಗಮಂದಿರಕ್ಕೆ ಕರೆದೊಯ್ಯಲು ಭಕ್ತರಿಗೆ ತಿಳಿಸಿದರು. ತಮ್ಮ ನೆಚ್ಚಿನ ಸಂಸ್ಥೆಯಾದ ಶಿವಯೋಗಮಂದಿರ ದಲ್ಲಿಯೆ ಲಿಂಗೈಕ್ಯರಾಗುವ ತಮ್ಮ ನಿರ್ಧಾರವನ್ನು ಅವರು ಈಡೇರಿಸಿಕೊಂಡರು ಎಂದು ಶ್ರೀ ಮೂಜಗಂ ಒಕ್ಕಣಿಸಿದ್ದಾರೆ. ಶ್ರೀಕುಮಾರ ಸ್ವಾಮಿಗಳು ಜೀವನದುದ್ದಕ್ಕೂ ನಡೆಸಿದ ಕಾಯಕಗಳ ಫಲವನ್ನು ಇಂದು ನಿಂತು ನೋಡಿದಾಗ, ಖಂಡಿತವಾಗಿ ಅವರೊಬ್ಬ ಯುಗ ಪುರುಷರು ಎಂಬುದು ಯಾರಿಗಾದರೂ ಸ್ಪಷ್ಟವಾಗದಿರದು. ಈ ಗ್ರಂಥದಲ್ಲಿ ಶ್ರೀಮೂಜಗಂ ಹೇಳಬಯಸಿದ್ದುದೂ ಇದೇ.

**ನಿರೂಪಣಾ ಕೌಶಲ್ಯ**— ಇದೇನು, ಶ್ರೀ ಕುಮಾರೇಶ್ವರ ಚರಿತ್ರೆ ಆಯಿತಲ್ಲ ಎಂದರೆ ಹೌದು ಎಂದೇ ಉತ್ತರಿಸಬೇಕಾಗುತ್ತದೆ. ಆದರೆ ಇದು ಶ್ರೀ ಮೂಜಗಂ ಅವರು ನೂರಕ್ಕೂ ಮಿಕ್ಕಿದ ಪುಟಗಳಲ್ಲಿ ವಿವರಿಸಿದ ಚರಿತ್ರೆಯ ಸಾರ ಇದು ಎಂದೂ ಹೇಳಬೇಕಾಗುತ್ತದೆ. ಈ ಚರಿತ್ರೆ ನಿರೂಪಣೆಯಲ್ಲಿ ಶ್ರೀ ಮೂಜಗಂ ಅವರು ತೋರಿದ ಕೌಶಲ್ಯವನ್ನು ಅಲ್ಲಲ್ಲಿ ಎತ್ತಿ ತೋರಿಸುವ ಪ್ರಯತ್ನವನ್ನು ಇಲ್ಲಿಯ ವರೆಗೆ ಮಾಡಲಾಗಿದೆ. ಸುಲಿದ ಬಾಳೆಯ ಹಣ್ಣಿನಂದದಿ ಲಲಿತವಹ ಕನ್ನಡದಲ್ಲಿ ಶ್ರೀ 'ಮೂಜಗಂ'ರು

ಶ್ರೀ ಕುಮಾರೇಶನ ಬಾಳನ್ನು ಚಿತ್ರಿಸಿದ್ದಾರೆ. ಅಂದರೆ ಜನಸಾಮಾನ್ಯರೂ ಸುಲಭದಲ್ಲಿ ಅರಿತು ಆನಂದಿಸುವಂತಾಗಬೇಕು ಎಂಬುದೇ ಇವರ ಉದ್ದೇಶ. ಸ್ಥಿತಿ-ಗತಿಗಳನ್ನೂ ಪರಿಸರ ಪ್ರಸಂಗಗಳನ್ನೂ ಕಣ್ಣೆದುರಿಗೆ ಕಟ್ಟುವಂತೆ ಯಥಾವತ್ತಾಗಿ ಚಿತ್ರಿಸುವಲ್ಲಿ ಶ್ರೀ ಮೂಜಗಂ ಎತ್ತಿದ ಕೈ. ಒಂದು ಮಾತನ್ನು ಬಿಡಿಬಿಡಿಸಿ ಹತ್ತು ಮಾತುಗಳಿಂದ ಬಿಂಬಿಸಿ ಹೇಳುವ ಕೌಶಲ ಇವರಿಗೆ ಕರಗತ. ಈ ಗ್ರಂಥದಲ್ಲಿ ಬರುವ ಅಂಥ ಕೆಲವು ಉದಾಹರಣೆಗಳೆಂದರೆ– ಗ್ರಂಥಾರಂಭದಲ್ಲಿ 'ಸತ್ತ ವೀರಶೈವ ಸಮಾಜ'ವನ್ನು ಚಿತ್ರಿಸಿದ ಬಗೆ, ಬಾಲಕ ಹಾಲಯ್ಯನ ಮನೋನಿರ್ಧಾರ, ಸಿದ್ಧಾರೂಢರು– ಬಸವಲಿಂಗ ಸ್ವಾಮಿಗಳಲ್ಲಿ ವಿದ್ಯಾರ್ಜನೆ, ಫಕೀರ ಸ್ವಾಮಿ–ಹಾಲಯ್ಯನವರಲ್ಲಿ ಪೀಠ ಸ್ವೀಕಾರದ ಬಗೆಗೆ ನಡೆದ ಪ್ರಸಂಗ, ಶಿವಯೋಗ ಮಂದಿರದ ಬಗೆಗೆ ಚಿಂತನ ಮುಂತಾದ ಹಲವಾರು ಪ್ರಸಂಗ ಮುಂತಾದವುಗಳನ್ನು ಎತ್ತಿ ತೋರಿಸಬಹುದು. ಶಂಭುಲಿಂಗನ ಬೆಟ್ಟದಲ್ಲಿ ಸಾಕ್ಷಾತ್ಕಾರ ಪಡೆವ ನಿರ್ಧಾರದಿಂದ ಹಾಲಯ್ಯ ನಡೆಸಿದ ತೀವ್ರ ಕಠೋರ ತಪಸ್ಸಿನ ಬಣ್ಣನೆಯಂತೂ ಆಧ್ಯಾತ್ಮವಿದ್ಯಾಸಾಧಕ ರಿಗೆ ಕೈದೀವಿಗೆಯಂತಿದೆ. ಶಿವಯೋಗ ಮಂದಿರದ ಕಾರ್ಯಸಾಧನೆಯನ್ನು ತನ್ಮಯತೆಯಿಂದ ನಿರೂಪಿಸಿದ್ದಾರೆ. ಅಲ್ಲಿನ ನಿತ್ಯ ದಿನಚರಿ, ನಡೆವ ವಿದ್ಯಾಭ್ಯಾಸ, ಅಲ್ಲಿಯ ವಿದ್ಯಾರ್ಥಿ ಗಳು, ಅಲ್ಲಿಯ ಇತರ ಚಟುವಟಿಕೆಗಳು ಎಲ್ಲ ಕಣ್ಮುಂದೆ ನಿಲ್ಲುವಂತೆ ಬಣ್ಣಿಸಿದ್ದಾರೆ ಶ್ರೀ ಮೂಜಗಂ. ಗುರುಬಸವಲಿಂಗ ಸ್ವಾಮಿಗಳವರಿಂದ ಆಜ್ಞಪ್ತರಾಗಿ ಸಮಾಜ ಸೇವೆಗೆ ತಮ್ಮ ಬಾಳನ್ನು ಮುಡಿಪಾಗಿರಿಸಿದ ಶ್ರೀ ಕುಮಾರೇಶ್ವರ ಜೀವನವನ್ನು ತದೇಕ ದೃಷ್ಟಿ ಯಿಂದ ಚಿತ್ರಿಸಿ, ಅದಕ್ಕೊಂದು ಸುಂದರವಾದ ಹಿನ್ನೆಲೆಯನ್ನೂ ರೂಪಿಸಿ ಶ್ರೀ ಕುಮಾರ ಸ್ವಾಮಿಯವರ ಸಾಧನೆ–ಸಿದ್ಧಿಗಳು ಸುಸ್ಪಷ್ಟವಾಗುವಂತೆ ತೋರಿಸಲೆಂದು ಬರೆದಿರುವ ಈ ಹೊತ್ತಿಗೆ ಶ್ರೀ ಮೂಜಗಂ ಅವರ ಕೃತಿಗಳಲ್ಲಿ ವೈಶಿಷ್ಟ್ಯಪೂರ್ಣವಾದದ್ದಾಗಿದೆ. ಇದಕ್ಕೆ ಅವರಿತ್ತಿರುವ ಶೀರ್ಷಿಕೆ 'ಯುಗಪುರುಷ ಯೋಗಿಕುಮಾರ' ಎಂಬುದಂತೂ ತೀರ ಸಮರ್ಪಕವಾಗಿದೆ.

ಪದ್ಯ ಪ್ರಕಾರದಲ್ಲಿ ಶ್ರೀ ಮೂಜಗಂ ಅವರ ಸಾಧನೆ ಕುರಿತು ಒಂದು ಮಾತನ್ನು ಹೇಳಬೇಕು. ಅವರ ಸತ್ವಪೂರ್ಣ ಕವನಗಳಂತೂ ಇದ್ದೇ ಇವೆ. ಇತ್ತೀಚೆಗೆ ಅವರು ಪ್ರಾರಂಭಿಸಿರುವ 'ಪೂರ್ಣಜ್ಞ'ನ ವಚನಗಳು ತಮ್ಮ ವೈಶಿಷ್ಟ್ಯದಿಂದ ಗಮನಾರ್ಹ ವಾಗಿವೆ. ತ್ರಿಪದಿ ರಚನೆಯಲ್ಲಿ ಗುಣಗಾತ್ರಗಳೆರಡರಲ್ಲೂ ಸರ್ವಜ್ಞನನ್ನು ಮೀರಿಸುವಂತಿದೆ ಅದು.

**ಶತಂ ಜೀವ** – ವೀರಶೈವ ಧರ್ಮವು ವಿಶ್ವಧರ್ಮವಾಗಬಲ್ಲ ಅರ್ಹತೆ ಪಡೆದಿದೆ. ಶಿವಯೋಗಮಂದಿರದಲ್ಲಿ ಕಲಿತು ಹೊರಬೀಳುವ ಶಿಷ್ಯರು ವೀರಶೈವ ಧರ್ಮ ಪ್ರಸಾರ ವನ್ನು ವಿದೇಶಗಳಲ್ಲಿಯೂ ಮಾಡಬೇಕು ಎಂದು ಶ್ರೀ ಕುಮಾರ ಸ್ವಾಮಿಗಳು ಇಟ್ಟು ಕೊಂಡಿದ್ದ ಹಂಬಲವನ್ನು ಶ್ರೀ ಮೂಜಗಂ ಅವರು ಈಡೇರಿಸಿಕೊಟ್ಟಿದ್ದಾರೆ. ಆದರೆ ಈ ವಿಚಾರವನ್ನು ಅವರು ವಿನಯದಿಂದ ಅಡಿಟಿಪ್ಪಣಿಯಲ್ಲಿ ಕಾಣಿಸಿರುವದು ಅವರ ಸೌಜನ್ಯದ

ಪ್ರತೀಕ.ಸಂವತ್ಸರ ಚಕ್ರವನ್ನು ತಿರುಗಿಸಿ ಮುನ್ನಡೆದಿರುವ ಅವರ ಷಷ್ಟ್ಯಬ್ದಿ ಮಹೋತ್ಸವ ಅವರ ೬೩ನೇವರ್ಷದಲ್ಲಿ ಜರುಗುತ್ತಿದೆ. ತ್ರಿಷಷ್ಟಿ ಪುರಾತನರಿಂದಾಗಿ ವೀರಶೈವ ಧರ್ಮದಲ್ಲಿ ೬೩ಕ್ಕೆ ವಿಶೇಷ ಮಹತ್ವ. ಅಂತೆ ಅವರ ೬೩ನೇ ವರ್ಷದಲ್ಲಿ ಈ ಉತ್ಸವ ನಡೆಯುತ್ತಿರುವದು ಯಥೋಚಿತ. ಶ್ರೀ ಮೂಜಗಂ ಅವರು ತಮ್ಮ ಬಾಳಿನುದ್ದಕ್ಕೂ ಶಿವಸಾಹಿತ್ಯ ಸೇವೆಯಿಂದ ಸಮಾಜಜಾಗ್ರತಿ, ಭಕ್ತೋದ್ಧಾರ ಕಾರ್ಯಗಳನ್ನು ಸಾಧಿಸಿದ್ದಾರೆ. ಇವರು ಶತಾಯುಷಿಗಳಾಗಿ ತಮ್ಮ ಉದಾತ್ತ ಕೃತಿಗಳಿಂದ ಸಾರಸ್ವತ ಸಂಪತ್ತನ್ನು ಇನ್ನಷ್ಟು ಹೆಚ್ಚಿಸಲಿ, ಲೋಕಸೇವಾಕಾರ್ಯವನ್ನು ಅಧಿಕಾಧಿಕವಾಗಿ ಸಾಗಿಸಲಿ ಎಂದು ಆ ಪರಶಿವನಲ್ಲಿ ಪರಿಪರಿಯ ಪ್ರಾರ್ಥನೆ.

# ಹೃದಯ ಪುಷ್ಪಗಳು: ಒಂದು ಹತ್ತಿರದ ನೋಟ

ಡಾ. ಸಿ.ಪಿ. ಕೃಷ್ಣಕುಮಾರ

ಕನ್ನಡ ಅಧ್ಯಯನ ಪೀಠ:
ಮಾನಸ ಗಂಗೋತ್ರಿ ಮೈಸೂರು–೬

೧

ಹುಬ್ಬಳ್ಳಿಯ ಮೂರುಸಾವಿರ ಮಠದ ಶ್ರೀ ಮನ್‌ಮಹಾರಾಜನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮೀಜಿ ಅವರ 'ಹೃದಯ ಪುಷ್ಪಗಳು, ('Heart's Blossoms') ಎಂಬ ಆಂಗ್ಲ ಕೃತಿ ಇನ್ನೂರ ಮೂವತ್ತು ವಚನಗಳ ಸಂಕಲನ. (ಇದು ಕನ್ನಡದಿಂದ ಇಂಗ್ಲಿಷಿಗೆ ಭಾಷಾಂತರಗೊಂಡದ್ದು).

ಇದೊಂದು ಪುಷ್ಪೋದ್ಯಾನ; ಇಲ್ಲಿನ ಕೆಲವು ಕುಸುಮಗಳು ತಮ್ಮ ಸುವಾಸನೆಯಿಂದ, ಮತ್ತೆ ಕೆಲವು ತಮ್ಮ ಬಣ್ಣದಿಂದ ನಮ್ಮನ್ನು ಆಕರ್ಷಿಸುತ್ತವೆ. ಇವುಗಳಲ್ಲಿ ಆತ್ಮ ನಿವೇದನೆಯಿದೆ, ನೀತಿಬೋಧನೆಯಿದೆ, ಸಮಾಜದ ಅನ್ಯಾಯ ವಿಷಮತೆಗಳನ್ನು ಕುರಿತ ವೇದನೆಯಿದೆ, ಕುಂದುಕೊರತೆ ಕೊಳಕು ಥಳುಕುಗಳ ಬಗೆಗೆ ವಿಡಂಬನೆಯಿದೆ— ಏನು ತಾನೆ ಇಲ್ಲ? ಈ ಹೃದಯ ಪುಷ್ಪೋಪಹಾರದ ವೈವಿಧ್ಯ ಹೃದ್ಯವಾದುದು. "ಸ್ವೋಪಜ್ಞತೆಗಿಂತ ಮಿಗಿಲಾಗಿ ವ್ಯಾಪಕತೆ" ಇದರ ವೈಶಿಷ್ಟ್ಯ ಎನ್ನಬಹುದು.

ಸ್ವಾಮೀಜಿ ಅವರ ದೃಷ್ಟಿ ಈವಚನರಚನೆಯಲ್ಲಿ ಮುಖ್ಯವಾಗಿ ಸಾಹಿತ್ಯಕವಾದುದು೧ ಆದರೆ ಸಾಹಿತ್ಯಕ್ಕಾಗಿ ಸಾಹಿತ್ಯವಲ್ಲ; ಸತ್ಯಕ್ಕಾಗಿ ಸಾಹಿತ್ಯ, ಶಿವಕ್ಕಾಗಿ ಸಾಹಿತ್ಯ, ಒಟ್ಟಿನಲ್ಲಿ ಜೀವನಕ್ಕಾಗಿ ಸಾಹಿತ್ಯ. ಇಲ್ಲಿ ಸಾಹಿತ್ಯ ಎನ್ನುವುದು ಅಕ್ಷರಶಃ ಸಾರ್ಥಕವಾಗುವ ಪ್ರಕ್ರಿಯೆಯಿದೆ. (ಹಿತದಿಂದ ಕೂಡಿದ್ದು ತಾನೆ 'ಸಾಹಿತ್ಯ') "ಮೋಹವನ್ನು ಗೆದ್ದವನು, ಶರೀರ ಮನಸ್ಸುಗಳನ್ನು ನಿಗ್ರಹಿಸಿದವನು, ಒಳ್ಳೆಯ ಆಲೋಚನೆಯುನ್ನು ಸತ್ಕಾರ್ಯ

---

೧ 'ಹೃದಯ ಪುಷ್ಪ'ಗಳ ಮೇಲೆ ಹಿಂದಿನ ವಚನಸಾಹಿತ್ಯದ ಪ್ರಭಾವ ದಟ್ಟವಾಗಿದೆ. ಇದು ಅನುಕರಣವಲ್ಲ, ವಚನ ವಾಙ್ಮಯದ ಗಾಢಾನುಶೀಲನ. ಅವಗಾಹನಗಳ ಅಪ್ರಜ್ಞಾಪೂರ್ವಕ ಪರಿಣಾಮ. ಆದರೆ ಪ್ರಾಚೀನ ವಚನಗಳು ಸಾಹಿತ್ಯಕ ಧೋರಣೆಯಿಂದ ಹುಟ್ಟಿದವಲ್ಲ ಎಂಬುದು ಇಲ್ಲಿ ನೆನೆಯಬೇಕಾದ ಸ್ವಾರಸ್ಯದ ಸಂಗತಿ. ಶರಣರ ವಚನಗಳು ಮಾತ್ರವಲ್ಲ, ಸರ್ವಜ್ಞನ ವಚನಗಳೂ 'ಹೃದಯಪುಷ್ಪ'ಗಳಲ್ಲಿ ಪ್ರತಿಧ್ವನಿಸುತ್ತಿವ್ವೆ ಎಂಬುದು ಗಮನಾರ್ಹ. ಅಲ್ಲದೆ, ಸಾಹಿತ್ಯಕ ವರ್ಚಸ್ಸಿಲ್ಲದ, ಸಾಧಾರಣ ಹೇಳಿಕೆಗಳ ಮಟ್ಟದಲ್ಲೇ ವಿರಮಿಸುವ ವಚನಗಳೂ ಇಲ್ಲಿ ಬಹಳಷ್ಟಿವೆ ಎಂಬುದನ್ನೂ ಸೂಚಿಸಬೇಕು. ಆದರೆ ಅವು ಕೂಡ ಸಾಮಾಜಿಕವಾಗಿ ಉಪಯುಕ್ತವೇ. ಎಷ್ಟೋ ವಚನಗಳು ಅಷ್ಟಾವರಣಗಳ ಮಹಿಮೆಯ ಉದ್ಘೋಷಣೆಗೆ ಮೀಸಲಾಗಿವೆ, ವೀರಶೈವಧರ್ಮದ ಹಿನ್ನೆಲೆ, ಪರಿಭಾಷೆ ಇಲ್ಲದ್ದರೂ ಅದು ಭಾರವಾಗಿಲ್ಲ.

ರೂಪಕ್ಕೆ ತಂದವನು, ಶಿವ ಸೌಂದರ್ಯಗಳನ್ನು ಸತ್ಯಕ್ಕೆ ತಿರುಗಿಸಿದವನು ಮಹೇಶ್ವರ" ಎನ್ನುತ್ತದೆ, ಒಂದು ವಚನ (೨೦೬). "ಶೀಲವಿಲ್ಲದ ಹೆಣ್ಣು, ಕಿಡಿಯಿಲ್ಲದ ಕವಿ ಎಂತಿರ ಬಲ್ಲರು?" ಎಂದು ಕೇಳುತ್ತದೆ ಇನ್ನೊಂದು ವಚನ (೧೫೧). ಆದ್ದರಿಂದ ಇಲ್ಲಿ ಮಿಡಿಯುತ್ತಿರುವುದು ಮಾಹೇಶ್ವರ ಪ್ರಜ್ಞೆ; ಆದರಿಂದ ಸ್ಫುರಿಸಿದ ವಿಸ್ಫುಲಿಂಗಗಳು ಇಲ್ಲಿನ ವಚನಗಳು. "ಲಿಂಗ ಮೆಚ್ಚಿ ಅಹುದೆನಬೇಕು" ಎಂಬ ಮಾನದಂಡಕ್ಕೆ ಇವು ತಮ್ಮನ್ನು ಸ್ವಲ್ಪಮಟ್ಟಿಗಾದರೂ ಒಡ್ಡಿಕೊಂಡು ಉತ್ತೀರ್ಣವಾಗುತ್ತವೆ.

ಸ್ವಾಮೀಜಿ ನಿರ್ಮಿಸಬಯಸುವುದು ಕಲ್ಲುಮಣ್ಣುಗಳ ದೇವಾಲಯವನ್ನಲ್ಲ; ಸಾಹಿತ್ಯ ದೇವಾಲಯವನ್ನು (೧೨). ಹೃದಯ ನಿಧಿಯಿಂದ ಅದರ ನಿರ್ಮಾಣ. ಅವರ ಮನ ದೊಲವು ಶಿಲಾಭವನಗಳತ್ತ ಅಲ್ಲ, ಸಾಹಿತ್ಯ ಸೌಧಗಳತ್ತ (೨೧). ಆದರೆ ಆಧ್ಯಾತ್ಮಿಕತೆ ಯಿಲ್ಲದ ಸಾಹಿತ್ಯ ಅವರ ಪಾಲಿಗೆ ಉಸಿರಿಲ್ಲದ ದೇಹದಂತೆ (೭೦). ಲೇಖಕನಾದವನು ತನ್ನ ಬರವಣಿಗೆಯಲ್ಲಿ ತನ್ನ ಹೃದಯವನ್ನೇ ಇಟ್ಟಿರಬೇಕು, ಇಲ್ಲದಿದ್ದರೆ ಏನು ಲಾಭ ಎಂದು ಕೇಳುತ್ತಾರೆ, ಸ್ವಾಮೀಜಿ (೭೧). ಹಾಗೆಯೆ, ತಪಸ್ಸಿಲ್ಲದ ಕಾವ್ಯ ಕೇವಲ ಗಾಜಿನ ಮಣಿಯಂತೆ (88).

'ಹೃದಯ ಪುಷ್ಪ'ಗಳಲ್ಲಿ ವ್ಯಕ್ತಿ–ನಿಷ್ಠ–ಅಥವಾ ಇನ್ನೂ ನಿಖರವಾಗಿ ಹೇಳಬೇಕಾ ದರೆ ಆತ್ಮನಿಷ್ಠ–ಹಾಗೂ ಸಮಾಜಪರ ಎಂಬ ಎರಡು ಬಗೆಯ ರಚನೆಗಳೂ ಉಂಟು; ಅನುಭಾವ, ಭವ ಎರಡಕ್ಕೂ ಇವು ಸಂಬಂಧಿಸಿವೆ. ಸ್ವಾಮೀಜಿಯವರ ಪೂರ್ಣ ದೃಷ್ಟಿ ಇಲ್ಲಿ ಅನುಭವಕ್ಕೆ ಬರುತ್ತದೆ; ಅದು ಆರೋಗ್ಯ ಪೂರ್ಣವೂ ಆರೋಗ್ಯಕರವೂ ಆದುದು. ಇಲ್ಲಿ ಅದು ಮಾಡಿರುವ ವಾಗ್ರೂಪದ ದಿವ್ಯ ವ್ಯವಸಾಯವನ್ನು ಸ್ಥೂಲವಾಗಿ ಪರಿಚಯ ಮಾಡಿಕೊಳ್ಳೋಣ. ಅದು ಕೆಲವೊಮ್ಮೆ ನಿರಾಡಂಬರ ಸ್ವಭಾವೋಕ್ತಿಯಾಗಿ, ಕೆಲವೊಮ್ಮೆ ಹಳೆಯ, ಹೊಸ ಉಪಮಾ ರೂಪಕಗಳಿಂದ ಭೂಷಿತವಾಗಿ ಕ್ರಿಯಾಶೀಲವಾಗಿದೆ.

೨

ತಮ್ಮ ಜೀವನ ಧ್ಯೇಯವನ್ನು ಅನೇಕ ವಚನಗಳಲ್ಲಿ ಸ್ವಾಮೀಜಿ ಪ್ರಸ್ತಾಪಿಸಿದ್ದಾರೆ. ತಮಗೆ ಸಮಾಜ ಸೇವೆಯ ದಂದುಗಕ್ಕಿಂತ ಭಗವದನು ಸಂಧಾನ ಮುಖ್ಯವೆಂದು ಅವರು ಒಂದೆಡೆ ಹೇಳುತ್ತಾರೆ (೧೫). ಸಮಾಜ ಸೇವೆಯ ಶಕ್ತಿ, ಅರ್ಹತೆಗಳು ಬರುವುದೇ ಆಧ್ಯಾತ್ಮಿಕ ಸಾಧನೆಯಿಂದ. ಅದು ಎಲ್ಲಕ್ಕಿಂತ ಮುಖ್ಯ; ಲೋಕ ಹಿತಾಸಕ್ತಿ ಆಮೇಲೆ. ಸಮಾಜದ ಯೋಗಕ್ಷೇಮವನ್ನು ಸ್ವಾಮೀಜಿ ಮರೆತಿಲ್ಲ; ಅದಕ್ಕೆ ಮುಗ್ಧ ವೈಯಕ್ತಿಕ ಸಿದ್ಧಿಯ ಅಭೀಪ್ಸೆಯನ್ನು ವ್ಯಕ್ತಪಡಿಸುತ್ತಾರೆ.

'ನಾನು' ಎನ್ನುವುದು ದೇಹ ಗುಣ, 'ನೀನು' ಎನ್ನುವುದು ದೇವಗುಣ: 'ನಾನು' ಸತ್ತು 'ನೀನು' ಆಗಬೇಕೆಂಬ ಹಂಬಲ ಒಂದು ವಚನದಲ್ಲಿದೆ (೨೯). ಆತ್ಮ ಸೌಂದರ್ಯ ವನ್ನು ವರ್ಧಿಸಿಕೊಳ್ಳುವ ಅಪೇಕ್ಷೆ ಇನ್ನೊಂದೆಡೆ ವ್ಯಕ್ತವಾಗಿದೆ (೮೩). ಅನುರಕ್ತಿಗಳಲ್ಲೆಲ್ಲ

ಶಿವಾನುಶಕ್ತಿಯೆ ಶ್ರೇಷ್ಠವಾದುದೆಂಬ ನಿಲುವು ಮತ್ತೊಂದೆಡೆ ಪ್ರಕಟವಾಗಿದೆ (೧೨೭). ಬಾಹ್ಯ ಜಗತ್ತಿಗೆ ವಿಮುಖವಾಗುವುದು ಅತ್ಯುತ್ತಮ ವಿಧಾನವೆಂದು ಮಗುದೊಂದೆಡೆ ಹೇಳಲಾಗಿದೆ (೧೪೨).

ಆದರೆ ಧ್ಯೇಯ ಸಾಧನೆ ಸುಲಭವಲ್ಲ. ಸಾಧಕನನ್ನು ಹಲವಾರು ಪ್ರಲೋಭನೆಗಳು ಕಾಡುತ್ತವೆ; ಮಾಯಾ ಮೋಹಗಳು ಮುತ್ತುತ್ತವೆ; ಭ್ರಮೆಗಳು ಬಾಧಿಸುತ್ತವೆ. ಇದೊಂದು 'ಆತ್ಮದ ಕಾಳರಾತ್ರಿ'ಯ ಅವಸ್ಥೆ. ಎಲ್ಲ ಸಾಧಕರಂತೆ ಸ್ವಾಮೀಜಿ ಕೂಡ ಅದನ್ನು ಹಾದು ಬಂದವರು. ಆತ್ಮದ ತುಮುಲ ತಳಮಳ ತೊಳಲಾಟಗಳ ದಾಖಲೆಗಳಾಗಿವೆ, ಅವರ ಅನೇಕ ವಚನಗಳು.

ದೇಹ ನಂದನದಲ್ಲಿ ಪ್ರಜ್ಞಾಪುಷ್ಪ ಅರಳುತ್ತದೆ; ಆದರೆ ಪಂಚೇಂದ್ರಿಯಗಳೆಂಬ ದುಂಬಿಗಳು ಅದರ ಮಧುಪಾನಕ್ಕೆಳಸುತ್ತವೆ; ಅಷ್ಟಮದಗಳೆಂಬ ಕಾಡುಕೋಣಗಳು ತೋಟವನ್ನು ತುಳಿದು ಹಾಕಲು ಹಾತೊರೆಯುತ್ತವೆ (೧೦). ಮೋಹದ ಬೆಂಕಿ ಇಂದ್ರಿಯಗಳನ್ನು ಸುಡುತ್ತದೆ, ಭ್ರಮೆಗಳ ಭೂತ ಬೆನ್ನಟ್ಟಿ ಕಾಡಿಗೋಡಿಸುತ್ತದೆ, ಕಾಮದ ಹುಲಿ ಬಾಯಿ ತೆರೆದು ನಿಲ್ಲುತ್ತದೆ (೧೩). ಬದುಕಿನ ದಿಗಂತದಲ್ಲಿ ಕಾರ್ಮೋಡಗಳು ಕವಿಯುತ್ತವೆ (೧೬). ತಾಪತ್ರಯಗಳು, ಅರಿಷಡ್ವರ್ಗ ಚೇತನವನ್ನು ದಹಿಸುತ್ತವೆ (೧೭). ಸಿಹಿ, ಕಹಿಗಳೆರಡನ್ನೂ ಅನುಭವಿಸುತ್ತ, ಮನಸ್ಸೊಂದು ಬತ್ತಿದ ಕೆರೆಯಾಗಿದೆ (೧೮). ಈ ಮಾಯಾ ಪಂಜರದಿಂದ ಪಾರು ಮಾಡಿ, ಪಾರಮಾರ್ಥಿಕ ಆಕಾಶಕ್ಕೆ ಹಾರಿ ಹೋಗಲು ಅನುವು ಮಾಡಿಕೊಡುವಂತೆ ಭಗವಂತನನ್ನು ಪ್ರಾರ್ಥಿಸುತ್ತದೆ, ಆತ್ಮ ಪಕ್ಷಿ (೧೯). ಒಮ್ಮೊಮ್ಮೆ ಆಧ್ಯಾತ್ಮಿಕ ಆನಂದವೆಂಬುದು ಕನಸಿನ ಗಂಟು ಎನಿಸುತ್ತದೆ; ಆಗ "ನನ್ನ ಬಲವಳಿಯುತ್ತಿದೆ, ನನ್ನ ತುಟಿಗಳು ಒಣಗುತ್ತಿವೆ" ಎಂಬ ಆರ್ತನಾದ ಹೊಮ್ಮುತ್ತದೆ (೨೪). ಮನಸ್ಸು ಕಾಡಿನತ್ತ ಕಾತರಿಸುವ ಗಿಳಿಯಂತೆ ಇಂದ್ರಿಯ ವಿಷಯಗಳತ್ತ ಹರಿಯುತ್ತದೆ (೨೮). ಹೃದಯ ಸರೋವರವನ್ನು ಆಸೆಗಳೆಂಬ ಮೀನುಗಳು ಕಲಕುತ್ತವೆ (೩೦). ಆಚೆಯ ದಡಕ್ಕೊಯ್ಯಬೇಕಾದ ಅಂಬಿಗ ನಡುನೀರಿನಲ್ಲಿ ಕೈಬಿಟ್ಟು ಹೋಗಿದ್ದಾನೆ (33). ಆರು ಬಣ್ಣಗಳ ಹಕ್ಕಿ ಹಾರುತ್ತಿದೆ (35). ದುರಾಶಾಪಿಶಾಚ ಧ್ಯಾನಕ್ಕೆ ಅಡ್ಡಿಯಾಗುತ್ತದೆ (೩೬). ದಟ್ಟವಾಗಿ ಹಿಮ ಬೀಳುವ ಬೆಳಗಿನಂತೆ ಮನಸ್ಸು ಮಂಜಾಗಿದೆ (೩೭). ಬದುಕಿನ ಬಳ್ಳಿಗೆ ದುರಾಶೆಯ ಗೆದ್ದಲು ಹತ್ತುತ್ತದೆ (೫೩). [ಮಂಜಿನ, ಗೆದ್ದಲಿನ ಈ ರೂಪಕಗಳು ಚೆನ್ನಾಗಿವೆ]. ಬಾಳಿನ ಮಹಾಸಾಗರದಲ್ಲಿ ಅಲೆಗಳು ಬಂದು ಅಪ್ಪಳಿಸುತ್ತವೆ (೩೪). ಈ ಎಲ್ಲ ಬವಣೆಯಿಂದ ತನ್ನನ್ನು ಬಿಡುಗಡೆಗೊಳಿಸುವಂತೆ ಭಗವಂತನಿಗೆ ಮೊರೆಯಿಡುತ್ತಾರೆ, ಸ್ವಾಮೀಜಿ; "ನಿತ್ಯವೂ ನಿನ್ನ ಪಾದಾವಲಂಬನ ನನ್ನ ಪಾಲಿಗಿರಲಿ" ಎಂದು ಪ್ರಾರ್ಥಿಸುತ್ತಾರೆ (೪೨). ಈ ಸಮರ್ಪಣ ಭಾವ 'ಹೃದಯಪುಷ್ಪ'ಗಳ ಸ್ಥಾಯಿ; ಉಳಿದದ್ದೆಲ್ಲ ಸಂಚಾರಿ ಮತ್ತು ಸಹಚಾರಿ. ಸ್ಥಾಯಿ, ಸಂಚಾರಿಗಳು ಪರಸ್ಪರ ಪೂರಕ, ಪೋಷಕ. ಅಂತೂ ತಮ್ಮ

ಒಳಕೋಟೆಯನ್ನು ತೋಡಿಕೊಳ್ಳುವಲ್ಲಿ ಸ್ವಾಮೀಜಿ ಕೆಲವು ಪರಿಭಾವನೀಯವಾದ ಚಿತ್ರಗಳನ್ನು ಕೊಟ್ಟಿದ್ದಾರೆ.

ಮತ ಧರ್ಮಗಳು ಮನುಷ್ಯನನ್ನು ಉದ್ಧರಿಸುವ ಶಕ್ತಿಯಾಗಬೇಕೆ ವಿನಾ ಅವನನ್ನು ದಾರಿ ತಪ್ಪಿಸುವ ಅನಿಷ್ಟಗಳಾಗಬಾರದು ಎಂಬ ಸ್ವಸ್ಥವಾದ ಅರಿವು ಸ್ವಾಮೀಜಿ ಅವರಿಗಿದೆ. ಅನುಕಂಪಪೂರಿತ ಹೃದಯದಿಂದ ಪತಿತರನ್ನು ಮೇಲೆತ್ತುವುದು ಧರ್ಮದ ತಿರುಳು (೧೦೦). ಆದರೆ ಇಂದು ಧರ್ಮದ ಸ್ಥಿತಿ ಶೋಚನೀಯವಾಗಿದೆ. ತಳ ಬಿರಿದು ಹೋದ ಚಿನ್ನದ ಪಾತ್ರೆಗೆ ಅದನ್ನು ಸರಿಯಾಗಿ ಹೋಲಿಸಲಾಗಿದೆ (೧೧೨). ಧರ್ಮದ ಹೆಸರಿನಲ್ಲಿ ಇಂದು ರಾಜಕೀಯವೂ ನಡೆಯುತ್ತಿದೆ; ಅದನ್ನು ಸ್ವಾಮೀಜಿ ಖಂಡಿಸುತ್ತಾರೆ. ಧರ್ಮಗುರುಗಳೆಲ್ಲ ರಾಜಕೀಯವನ್ನು ಪ್ರವೇಶಿಸಿದರೆ, ಧರ್ಮವೆಂತು ಸ್ವಚ್ಛವಾಗಿ ಉಳಿದೀತು ಎಂಬುದು ಅವರ ಪ್ರಶ್ನೆ (೧೫೦). ಮಾನವೀಯತೆ ಧರ್ಮದ ಸಾರ; ಶುಷ್ಕ ನಿಯಮ, ವ್ರತಗಳಿಂದ ಪ್ರಯೋಜನವಿಲ್ಲ, ಎಂತಲೇ, ಮಾನವೀಯತೆಯಿಲ್ಲದ ಬ್ರಹ್ಮಚರ್ಯ ಕಾಡು ಹೂವಿನಂತೆ ವಿಫಲ (೯೫). ಕರುಣವಿಲ್ಲದ ಧರ್ಮ ಕಡಾಣೆಯಿಲ್ಲದ ಬಂಡಿಯಂತೆ (೧೦೧). ಪೂಜೆ ಎನ್ನುವುದು ಜನಜಾಗ್ರತಿಯ ಸಾಧನವಾಗಬೇಕು (೪೮). ಭಗವತ್ಸೇವೆ 'ಕಾಯಕವೆ ಕೈಲಾಸ'ವೆಂಬ ನಂಬಿಕೆಯಿಂದ ನಡೆಯಬೇಕು (೪೯). ಮಠ ಕಟ್ಟುವುದಕ್ಕೆ ಮೊದಲು ಮನ ಕಟ್ಟಬೇಕು ಎಂದು ಅರ್ಥವತ್ತಾಗಿ ಹೇಳುತ್ತಾರೆ, ಸ್ವಾಮೀಜಿ (೭೭). ಅವರು ಮತಕ್ಕಿಂತ ಮತಿಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಾರೆ ಎಂಬುದಕ್ಕೆ ಇದು ಸುಸಾಕ್ಷಿ, ಸ್ಪಂದಿಸುವ ಹೃದಯವಿಲ್ಲದಿದ್ದರೆ ಬುದ್ಧಿಯೂ ನಿಷ್ಫಲವೆ (೭೮).

ಗುರಿ ಮುಟ್ಟಬೇಕಾದರೆ ಗುರುವಿನ ಮಾರ್ಗದರ್ಶನ ಬೇಕಷ್ಟೆ. ಅವನು ಅಜ್ಞಾನದ ಅಂಧಕಾರವನ್ನು ಕಳೆಯುವ ಅರಿವಿನ ರವಿ, ಭವಸಾಗರವನ್ನು ದಾಟಿಸುವ ನಾವಿಕ ಎನ್ನಲಾಗಿದೆ (೧೭೦). ಗುರು, ವಿರಕ್ತರು ಸಮಾಜದ ಎರಡು ಕಣ್ಣುಗಳು. ಅಷ್ಟಾವರಣಗಳು ಆಧ್ಯಾತ್ಮಿಕ ಪಥಕ್ರಮಣಕ್ಕೆ ಅವಶ್ಯ. ಅವುಗಳಲ್ಲಿ ಒಂದಾದ ವಿಭೂತಿಯ ಮಹತ್ವವನ್ನು ಹೀಗೆ ಸೊಗಸಾಗಿ ಕೊಂಡಾಡಲಾಗಿದೆ: ಹಣೆಗೆ ಅದನ್ನು ಹಚ್ಚಿಕೊಂಡರೆ, ಹಣೆಬರಹದ ಅಕ್ಷರಗಳು ಅಳಿಸಿಹೋಗುತ್ತವೆ (೧೮೯). ವಿಧಿ ಲಿಖಿತ, ಕರ್ಮಫಲ ಮುಂತಾದ ಮೂಢ ನಂಬಿಕೆಗಳನ್ನು ಅಲ್ಲಗಳೆಯುವ ವೈಚಾರಿಕ ನಿಲುವಿನ ಹೊಳಹು ಇಲ್ಲಿದೆ.

೩

ಲೋಕದ ಬಗೆಬಗೆಯ ಡೊಂಕು ಸ್ವಾಮೀಜಿಯವರ ಹಲವಾರು ವಚನಗಳಲ್ಲಿ ತೀವ್ರ ಪ್ರತಿಕ್ರಿಯೆಗಳನ್ನು ಪಡೆದುಕೊಂಡಿದೆ. [ಮಾತು, ಕೃತಿಗಳ ನಡುವೆ ಸಾಮರಸ್ಯವಿಲ್ಲದಿರುವುದು ಒಂದು ದೊಡ್ಡ ಕೊರತೆ. ಇದನ್ನು ಅನೇಕ ವಚನಗಳು ವಿಡಂಬನಾತ್ಮಕವಾಗಿ ಎತ್ತಿ ತೋರುತ್ತವೆ; ಅಷ್ಟೆ ಅಲ್ಲ, ಮಾತು ಹೇಗಿರಬೇಕು ಎಂಬುದನ್ನು ತಿಳಿಸಿಕೊಡುತ್ತವೆ. ಎಲ್ಲೆಲ್ಲಿಯೂ ಮಾತಿನ ಕಸರತ್ತು ನಡೆದಿದೆ; ಆದರೆ ಸಹಾನುಭೂತಿಯಿಲ್ಲದಿದ್ದರೆ ಸಾವಿರ

ಮಾತುಗಳೂ ವ್ಯರ್ಥ; ಅವು ಬೀಜವಿಲ್ಲದ ಸಿಪ್ಪೆ ಮಾತ್ರ (೨೩). ಅರ್ಥಹೀನವಾದ ಮಾತು ಮತ್ತು ಬಂಜರು ಭೂಮಿ ಒಂದೇ; ನೀರಿಲ್ಲದ ಕೆರೆ ಮತ್ತು ಮದ್ದಿಲ್ಲದ ಪಟಾಕಿ ಒಂದೇ (೬೫). ಮಾತುಗಳಲ್ಲಿ ತತ್ತ್ವಗಳು ತುಂಬಿದ್ದರೂ ಅವು ಅನುಷ್ಠಾನಕ್ಕೆ ಬರದಿದ್ದರೆ ಏನು ಫಲ? ಮಾತು, ಕೃತಿ ಒಂದಾದಾಗ ಕುಂದಣಕ್ಕೆ ಹರಳಿಟ್ಟಂತಾಗುತ್ತದೆ (೭೨). ಆಡಿದ ಮಾತಿನಂತೆ ಬದುಕಿದರೆ ಅದೇ ಕಡೆಯ ಜನ್ಮ (೮೯). ಆಲೋಚನೆ ಕ್ರಿಯೆ ಎರಡೂ ಒಟ್ಟಿಗೇ ಹೋಗಬೇಕು, ಇಲ್ಲವಾದರೆ ಭದ್ರ ತಳಹದಿಯಿಲ್ಲದೆ ಮನೆ ಕಟ್ಟಿದಂತಾಗುತ್ತದೆ (೬೬).

ಎಷ್ಟೆಷ್ಟೋ ನ್ಯೂನತೆ, ದೋಷಗಳಿಂದ ತುಂಬಿರುವ ಸಮಾಜ ಒಡೆದ ಮಡಕೆಯಂತಿದೆ, ತಂತಿಯಿಲ್ಲದ ವೀಣೆಯಂತಿದೆ, ದೂಳು ಮೆತ್ತಿದ ಕನ್ನಡಿಯಂತಿದೆ (೧೨). ಈ ದೋಷ, ದೌರ್ಬಲ್ಯಗಳ ಪರಿಹಾರಕ್ಕಾಗಿ, ಸಮಾಜ ಸುಧಾರಣೆಗಾಗಿ ಸ್ವಾಮೀಜಿ ಎಷ್ಟೋ ವೇಳೆ ವಿಡಂಬನೆಯ ಆಯುಧವನ್ನು ಝಳಪಿಸುತ್ತಾರೆ.

ಅನುಕಂಪದ ಮೂರ್ತಿಯಾದ, ಯುಗಪ್ರವರ್ತಕನಾದ ಬಸವಣ್ಣನನ್ನು ಮರೆತು ಸ್ವಪ್ರದರ್ಶನದಲ್ಲಿ ತೊಡಗಿದವರನ್ನು ಮೊದಲೇ ಟೀಕಿಸುತ್ತಾರೆ, ಸ್ವಾಮೀಜಿ; ಅವರನ್ನು ದೇವರು ಮೆಚ್ಚುವುದಿಲ್ಲವೆನ್ನುತ್ತಾರೆ (೪). ಕೆಲವರು ಹಣ್ಣಿನ ಬಣ್ಣವನ್ನು ನೋಡುತ್ತಾರೆ, ರುಚಿ ನೋಡುವುದಿಲ್ಲ (೩೮). ಕಲ್ಲು ಮುಳ್ಳುಗಳು ನಡೆಯುವವರನ್ನು ಬಾಧಿಸುತ್ತವೆ, ಸುಮ್ಮನೆ ಕುಳಿತವರನ್ನಲ್ಲ (೪೫). ವಯಸ್ಸಾದ ಮಾತ್ರಕ್ಕೆ ಬುದ್ಧಿ ಬರುವುದಿಲ್ಲ; ಸಿಹಿಯಿಲ್ಲದಿದ್ದರೆ ಹಣ್ಣು ಪಕ್ವವಾಗಿ ಏನು ಪ್ರಯೋಜನ? (೫೬). ಗುಂಪುಗಾರಿಕೆಯಲ್ಲಿ ಪ್ರತಿಯೊಬ್ಬರೂ ನಿರತರು; ಆದರಿಂದ ಸಮಾಜ ನಾಶವಾಗುತ್ತದಷ್ಟೆ (೫೭). ಶೀಲವಿಲ್ಲದ ವ್ರತಕ್ಕೆ ಅರ್ಥವಿಲ್ಲ (೫೯). ಆಲೋಚನೆಯಿಲ್ಲದ ಅಧ್ಯಯನ ಕಡೆಯಲಾಗದ ಮೊಸರಿನಂತೆ (೬೪). ಎಲ್ಲರೂ ಸಮಾನತೆಯ ಬಗ್ಗೆ ಮಾತನಾಡುವವರೇ; ಆದರೆ ಅದು ಹೃದಯದಿಂದ ಹೊಮ್ಮಬೇಕು–ಮೊಗ್ಗು ಹೂವಾಗಿ ಅರಳುವಂತೆ (೩೨). ಎಲ್ಲರೂ ಮೋಹವಶರೇ, ಆದರೆ ಭಗವಂತನ ಮೋಹ ಯಾರಿಗೂ ಇಲ್ಲ (೧೪೩). ಆತ್ಮಶುದ್ಧಿಯಿಲ್ಲದ ಮೌನ ವ್ರತ ಬಕ ಧ್ಯಾನದಂತೆ (೧೪೫). ಮಾತುಗಳೆಲ್ಲ ಮುತ್ತುಗಳೇ, ಆದರೆ ಮನಸ್ಸುಗಳಲ್ಲಿ ಕತ್ತಲು; ಹೊರಗೆ ಥಳುಕು, ಒಳಗೆ ಹುಳುಕು (೧೪೮). ದೊಡ್ಡ ಮೀನು ಸಣ್ಣ ಮೀನನ್ನು ನುಂಗುವ ಹಾಗೆ ದೊಡ್ಡವರೆನಿಸಿಕೊಂಡವರು ಸಣ್ಣವರನ್ನು ನುಂಗುತ್ತಾರೆ; ಅಂಥವರ ಬಾಯಿಗೆ ದೇವರು ಮಣ್ಣು ಹಾಕದಿರುವುದಿಲ್ಲ (೧೫೮). ಭಕ್ತಿಯಿಲ್ಲದ ಭಕ್ತ ಜೇನಿಲ್ಲದ ಜೇನುಗೂಡಿನಂತೆ (೨೦೦). ಇವೆಲ್ಲ ವಿಡಂಬನದ ಸಾಂದ್ರ ಅಥವಾ ಕ್ಷೀಣ ಛಾಯೆಯುಳ್ಳ ವಚನಗಳು.

ಜನತೆಗೆ ಉಪಾದೇಯವಾಗುವ ಉಪದೇಶ ಮಧುವೂ ಉಂಟು, 'ಹೃದಯಪುಷ್ಪ'ಗಳಲ್ಲಿ. ಕುದುರೆಗೆ ಕಡಿವಾಣ ಹಾಕುವಂತೆ ಮನಸ್ಸಿಗೂ ಹಾಕಬೇಕು (೨೬). ಅಸೂಯೆಗೆ

ಮನಸ್ಸು ಕೊಟ್ಟರೆ, ಬೆಂಕಿಯ ನಾಲಗೆಗೆ ತರಗೆಲೆಗಳನ್ನು ಕೊಟ್ಟಂತೆ (೩೯). ಐಶ್ವರ್ಯ ಬೆಳೆದಂತೆ ಶಾಂತಿಯ ಬಾಗಿಲು ಮುಚ್ಚುತ್ತದೆ (೪೧). ಗಂಧದಮರ ಪರಿಮಳವನ್ನು ಸೂಸುವಂತೆ ವ್ಯಕ್ತಿ ಸದ್ಭಾವನೆ ಸೌಹಾರ್ದಗಳನ್ನು ಹೊರ ಸೂಸಬೇಕು. (೫೪). ಕೋಪ ವೊಂದು ಪಾಪಹೇತು; ಹೂಳು ತುಂಬಿದ ಬಾವಿ (೫೫). ದೇಹವೊಂದು ತೋಟ; ದುರ್ಗುಣಗಳೆಂಬ ಇದರ ಕಳೆಗಳನ್ನು ಕಿತ್ತು ಬಿಸುಡಬೇಕು (೬೯). ನ್ಯಾಯಾಲಯ ನ್ಯಾಯವನ್ನು ಎತ್ತಿ ಹಿಡಿಯಬೇಕು; ಪ್ರಾಮಾಣಿಕತೆಯು ಒರೆಗಲ್ಲಾಗಿರಬೇಕು (೧೩೦). ಪಾಂಡಿತ್ಯವಿದ್ದಲ್ಲಿ ವಿನಯವಿರಬೇಕು; ಇಲ್ಲವಾದರೆ ಒಣಮರವನ್ನು ಹತ್ತಿದಂತಾಗುತ್ತದೆ. (೧೪೭). ಸತ್ಯನಿಷ್ಠೆಯಿಂದ ನಡೆದುಕೊಳ್ಳುವುದೇ ಅತ್ಯುತ್ತಮ ತಪಸ್ಸು (೧೯೬).

ಅನೇಕ ಕಡೆ ಸಂಕ್ಷಿಪ್ತ ಸೂಕ್ತಿಗಳನ್ನು, ನಾಡುನುಡಿಗಳನ್ನು ಎದುರುಗೊಳ್ಳುತ್ತೇವೆ. 'ಭಕ್ತಿ ಭೇದಗಳನ್ನರಿಯದು' (೧೬೫); ಹೃದಯ ಹೃದಯವನ್ನು ಸಂಧಿಸಿದಾಗ ದಳ್ಳಾಳಿಯ ಅಗತ್ಯವೇನು? (೧೭೬); 'ದೇಹ, ಮನಸ್ಸುಗಳ ಶುಚಿಗೆ ಮಾತು ಕೀಲಿಕೈ' (೧೩೩)– ಇತ್ಯಾದಿ. ಜಗಚ್ಚಕ್ರವನ್ನು ಬೀಸುವ ಕಲ್ಲಿಗೆ ಹೋಲಿಸಿರುವುದು ಗಮನಾರ್ಹ (೧೬೮).

ಮುತ್ತು, ರತ್ನ, ವಜ್ರಗಳನ್ನು ಕೊಳ್ಳಲು ತಾವು ಹುಬ್ಬಳ್ಳಿಯ ಬಜಾರಿಗೆ ಬಂದಿರುವು ದಾಗಿ ಹೇಳಿ ಕೊಂಡಿದ್ದಾರೆ, ಸ್ವಾಮೀಜಿ (೧೨). ಅವರ ಪ್ರಯತ್ನ ತಕ್ಕಮಟ್ಟಿಗೆ ಯಶಸ್ವಿ ಯಾಗಿದೆ. ಅವುಗಳನ್ನು ಅವರು ಕೊಂಡಿದ್ದಾರೆ ಮಾತ್ರವಲ್ಲ ಕೊಟ್ಟಿದ್ದಾರೆ.

'ಹೃದಯ ಪುಷ್ಪಗಳು' ಮೊತ್ತದಲ್ಲಿ ಮಾನವೀಯವಾಗಿವೆ; ಮನನೀಯವಾಗಿವೆ ಮತ್ತು ಮಾನ್ಯವಾಗಿವೆ.

# ನಮ್ಮ ವಿದೇಶಯಾತ್ರೆ
## (ಕೃತಿ ಪರಿಚಯ)

ಡಾ. ಎಚ್. ತಿಪ್ಪೇರುದ್ರಸ್ವಾಮಿ

ಕನ್ನಡ ಅಧ್ಯಯನ ಪೀಠ:
ಮಾನಸ ಗಂಗೋತ್ರಿ ಮೈಸೂರ

ಹುಬ್ಬಳ್ಳಿಯ ಮೂರುಸಾವಿರಮಠ ಜಗದ್ಗುರು ಪೂಜ್ಯ ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಕಾರ್ಯಸಾಧನೆ ಆಶ್ಚರ್ಯಕರವಾದುದು. ಅವರು ಸಾಮಾಜಿಕವಾಗಿ, ಧಾರ್ಮಿಕವಾಗಿ ಕಟ್ಟಿಕೊಂಡಿರುವ ಕೆಲಸ ಕಾರ್ಯಗಳು, ಹುಟ್ಟು ಹಾಕಿ ಬೆಳಸುತ್ತಿರುವ ಸಂಘ–ಸಂಸ್ಥೆಗಳು ನೂರಾರು ಬಿಡುವಿಲ್ಲದ ಕಾರ್ಯಕ್ರಮುಗಳಲ್ಲಿ ಅವರು ತಮ್ಮನ್ನು ನಿರಂತರವಾಗಿ ತೊಡಗಿಸಿಕೊಂಡಿದ್ದರೂ ಅಂತರ್ಯದಲ್ಲಿ ಅವರದು, ಇವುಗಳಿಗೆ ಅತೀತವಾದ ಸೃಜನಾತ್ಮಕ ಶಕ್ತಿಯುಳ್ಳ ಕವಿ ಮನೋಧರ್ಮ ಮತ್ತು ಪಾಂಡಿತ್ಯವನ್ನು ಮೀರಿದ ಸಾಧಕ ಚೈತನ್ಯ. ಈ ಎರಡರ ಪ್ರಭಾವವನ್ನು ಅವರ ಎಲ್ಲ ಕೃತಿಗಳಲ್ಲೂ ಕಾಣಬಹುದು. 'ಚಿತ್ಸುಮನ' ಎಂಬ ಅವರ ವಚನ ಸಂಕಲನವಾಗಲೀ, ಈಗ ರಚನೆ ಯಾಗುತ್ತಲೇ ಪ್ರಕಟವಾಗುತ್ತಿರುವ "ಪೂರ್ಣಜ್ಞ ವಚನ"ಗಳಾಗಲೀ ಇದಕ್ಕೆ ಒಳ್ಳೆಯ ಉದಾಹರಣೆಗಳಾಗಿವೆ. 'ಮೂಜಗಂ' ಎಂಬ ಕಾವ್ಯನಾಮದಿಂದ ಅನೇಕ ಕೃತಿಗಳನ್ನು ಅವರು ರಚಿಸಿದ್ದಾರೆ. ಅವರ ಎಲ್ಲ ಕೃತಿಗಳನ್ನು ವಿವೇಚಿಸುವ ವ್ಯಾಪಕವಾದ ಸಾಹಸಕ್ಕೆ ಇಲ್ಲಿ ಹೋಗದೆ, ಅವರ ಪ್ರವಾಸ ಕಥನವಾದ 'ನಮ್ಮ ವಿದೇಶಯಾತ್ರೆ' ಎಂಬ ಗ್ರಂಥ ವನ್ನು ಕುರಿತು ಕೆಲವು ಮಾತುಗಳನ್ನು ಹೇಳಲು ಮಾತ್ರ ಇಲ್ಲಿ ಉದ್ದೇಶಿಸಲಾಗಿದೆ.

ಕನ್ನಡದಲ್ಲಿ ಪ್ರವಾಸ ಸಾಹಿತ್ಯ ತಕ್ಕಮಟ್ಟಿಗೆ ವಿಪುಲವಾಗಿಯೇ ಬೆಳೆದಿದೆ. ಅದರಲ್ಲಿ 'ಮೂಜಗಂ'ರವರ ಈ ಕೃತಿ ಒಂದು ವಿಶಿಷ್ಟ ಸ್ಥಾನವನ್ನು ಪಡೆಯುತ್ತದೆ. ಸಾಮಾನ್ಯವಾಗಿ ಇದುವರೆಗಿನ ನಮ್ಮ ಪ್ರವಾಸ ಸಾಹಿತ್ಯದಲ್ಲಿ ಬಹುಪಾಲು, ಅಳಿಯನ ಇಲ್ಲವೇ ಮಗನ ಮನೆಯಲ್ಲಿ ಕುಳಿತು, ಆಯಾ ದೇಶದ ಯಾವುದೋ ಒಂದು ಸ್ತರವನ್ನು ದೂರ ನಿಂತು ನೋಡಿದುದರ ವರದಿ. ಅಧ್ಯಯನಕ್ಕಾಗಿ ಹೋದವರ ಅಥವಾ ವಿಶೇಷ ಆಹ್ವಾನಿತರಾಗಿ ಪ್ರವಾಸವನ್ನು ಕೈಕೊಂಡವರ ಅನುಭವದ ನಿರೂಪಣೆಗಳೂ ಇವೆ. ಅಲ್ಲಿನ ಸಮಾಜ ದೊಡನೆ ಬೆರೆತು ಅಲ್ಲಿನ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಕೆಲಸ ಮಾಡಿದವರ ಅನುಭವ ಗಳೂ ಇಲ್ಲದಿಲ್ಲ. ಆದರೆ ಇಲ್ಲಿ ಮೂಜಗಂ ಅವರ ವಿದೇಶಯಾತ್ರೆಯ ಉದ್ದೇಶ. ಇವೆಲ್ಲವು ಗಳಿಂದ ಹೊರತಾದುದು, ಬೇರೆಯಾದುದು, ವಿಶಿಷ್ಟವಾದುದು.

ಜಾಗತಿಕ ಶಾಂತಿ ಪರಿಷತ್ತು ಜಪಾನಿನ ಕ್ಯೋಟೋ ನಗರದಲ್ಲಿ ೧೯೭೦ನೇ ಅಕ್ಟೋಬರ್ ತಿಂಗಳಿನಲ್ಲಿ ಪ್ರಪ್ರಥಮವಾಗಿ ಸಮಾವೇಶಗೊಂಡಿತು. ಆಧುನಿಕ ವಿಜ್ಞಾನ ಜಗತ್ತಿನ ಪ್ರಕ್ಷುಬ್ಧತೆಯ ಮಧ್ಯದಲ್ಲಿ ಶಾಂತಿಯನ್ನು ಕಾಣಬಯಸುವ ಹಲವಾರು ರಾಷ್ಟ್ರಗಳ

ಸಾಮೂಹಿಕ ಪ್ರಯತ್ನ ಆ ರೂಪದಲ್ಲಿ ಸಾಕಾರಗೊಂಡಿತ್ತು. ಅದರಲ್ಲಿ ಭಾಗವಹಿಸಿ ಹಿಂದೂ ಧರ್ಮದ ಮತ್ತು ಅದರ ಸತ್ವವನ್ನು ಅರಗಿಸಿಕೊಂಡು ವಿಶ್ವಧರ್ಮದ ಎತ್ತರಕ್ಕೆ ಬೆಳೆದ ವೀರಶೈವದ ಶಾಂತಿ ಸಂದೇಶವನ್ನು ಬಿತ್ತರಿಸುವ ಮಹತ್ಕಾರ್ಯಕ್ಕಾಗಿ ಇವರು ವಿದೇಶ ಪ್ರವಾಸವನ್ನು ಕೈಕೊಳ್ಳಬೇಕಾಗುತ್ತದೆ. ಜಗದ್ಗುರುಗಳೊಬ್ಬರು ಹೀಗೆ ವಿದೇಶ ಪ್ರವಾಸವನ್ನು ಕೈಕೊಂಡುದು ಬಹುಶಃ ಇದೇ ಪ್ರಪ್ರಥಮವೆಂದು ತೋರುತ್ತದೆ. ಇದಾದನಂತರ ಇನ್ನು ಕೆಲವು ಜಗದ್ಗುರುಗಳು ವಿದೇಶಗಳಿಗೆ ಹೋಗಿ ಬಂದ ಉದಾಹರಣೆಗಳಿವೆ. ಧರ್ಮ ಪೀಠಾಧಿಪತಿಗಳು ಇಂತಹ ಪ್ರವಾಸವನ್ನು ಕೈಕೊಂಡಾಗ ಬರಬಹುದಾದ ಪ್ರತಿಕ್ರಿಯೆಯನ್ನು ನೆನೆದು ಮೂರುಸಾವಿರ ಜಗದ್ಗುರುಗಳ ಮನಸ್ಸು ಸಹಜವಾಗಿಯೇ ಅಳುಕುತ್ತದೆ. ಕೆಲವು ನಿಯಮಗಳಿಗೆ ಬದ್ಧವಾದ ನೈಷ್ಟಿಕ ಜೀವನ ವಿಧಾನ, ವಿದೇಶ ಪ್ರವಾಸದ ಸಂದರ್ಭದಲ್ಲಿ ಸಾಧ್ಯವೆ? ಕಟ್ಟುನಿಟ್ಟಾದ ಧಾರ್ಮಿಕ ವಿಧಿಗಳಿಗೆ, ಪೂಜಾ ವಿಧಾನಗಳಿಗೆ, ಆಚಾರ-ವಿಚಾರ ಗಳಿಗೆ ಅಲ್ಲಿ ತೊಂದರೆಯಾಗಬಹುದೆಂಬ ಭಯ ಅವರನ್ನು ಬಾಧಿಸುತ್ತದೆ. ಪ್ರಾರಂಭದ ಅವರ ಮಾತುಗಳಲ್ಲಿ ಇದನ್ನು ಸ್ಪಷ್ಟವಾಗಿ ಕಾಣುತ್ತೇವೆ. ಆದರೆ ಇಂತಹ ಅವಕಾಶವನ್ನು ಕಳೆದುಕೊಳ್ಳಬಾರದೆಂಬ ಆಂತರಿಕ ಅಭೀಪ್ಸೆಯೂ ತುಡಿಯುತ್ತದೆ. ಈ ಒಳತೋಟಿಗೆ ಒಳಗಾದರೂ ಕೊನೆಯಲ್ಲಿ ಭಕ್ತರ ಮತ್ತು ಹಿತೈಷಿಗಳ ಒತ್ತಾಯದಿಂದ ಆಹ್ವಾನವನ್ನು ಅಂಗೀಕರಿಸುತ್ತಾರೆ. ಅಲ್ಲಿ ದೊರೆಯುವ ಪೂಜಾರಿ ಸೌಲಭ್ಯಗಳನ್ನು ಖಚಿತಪಡಿಸಿಕೊಂಡು ಮತ್ತು ಅದಕ್ಕೆ ನೆರವಾಗುವ ಸಂಗಾತಿಯೊಬ್ಬನನ್ನು ಜೊತೆಯಲ್ಲಿ ಕರೆದೊಯ್ಯಲು ಒಪ್ಪಿಗೆ ಯನ್ನು ಪಡೆದು ತಮ್ಮ ಅಂತಿಮ ನಿರ್ಧಾರವನ್ನು ತಿಳಿಸುತ್ತಾರೆ.

ಶ್ರೀ ಜಗದ್ಗುರುಗಳು ವಿದೇಶ ಪ್ರವಾಸವನ್ನು ಕೈಕೊಂಡುದನ್ನು ತಿಳಿದು ಭಕ್ತ ವಲಯದಲ್ಲಿ ಸಂತೋಷದ ತೆರೆಗಳು ಉಕ್ಕೇರುತ್ತವೆ. ಅಂದು ಅವರು ಹೊರಟ ದಿನ ಎಂದೆಂದೂ ಮರೆಯಲಾಗದ ದಿನವಾಗುತ್ತದೆ. ಮಠವನ್ನು ಬಿಡುವುದರಿಂದ ಹಿಡಿದು ಬೆಳಗಾವಿನಲ್ಲಿ ವಿಮಾನವನ್ನೇರುವವರೆಗೂ ಉಕ್ಕಿಹರಿದ ಭಕ್ತಿ ಪ್ರವಾಹವನ್ನು ತುಂಬಿದ ಹೃದಯದಿಂದ ಸ್ಮರಿಸಿಕೊಂಡಿದ್ದಾರೆ. ಧಾರ್ಮಿಕ ಮತ್ತು ಸಾಂಸ್ಕೃತಿಕ ರಾಯಭಾರಿಗಳಾಗಿ ಹೋಗುತ್ತಿರುವ ತಮ್ಮ ಹೊಣೆಯನ್ನು ನೆನೆದು ಅವರ ಹೃದಯ ಆ ಧಾರ್ಮಿಕ ಪರಿ ಭಾವನೆಯಿಂದ ತನ್ಮಯವಾಗುತ್ತದೆ. ಸಾಗರದ ಮೇಲೆ ಅವರ ವಿಮಾನ ಜಪಾನ್ ಕಡೆಗೆ ಹಾರುತ್ತಿರುವಾಗ ಅವರ ಮನಸ್ಸಿನಲ್ಲಿನ ಭಾವನೆಗಳು ಹೀಗೆ ಗರಿಗೆದರುತ್ತವೆ: "ನಮ್ಮಿಂದ ತೀರ ಕೆಳಗೆ ನೀಲ ಸಮುದ್ರ ಮೇಲೆ ನೀಲ ಗಗನ. ಮುಗಿಲು ಕಡಲುಗಳೆರಡನ್ನೂ ಭೇದಿಸಿ ಹಾರುತ್ತಿರುವ ನಮ್ಮ ವಿಮಾನವು ಸಾಧಕರ ಸಿದ್ಧರ ಶರಣರ ಸಂದೇಶವನ್ನು ಅನಂತತೆಗೂ ಮುಟ್ಟಿಸಲೆಂದು ಹಾರುತ್ತಿದೆಯೋ ಎಂಬಂತೆ ನಮಗೆ ಭಾಸವಾಯಿತು" ಎಂಬ ಈ ಮಾತಿನಲ್ಲಿ ಸೌಂದರ್ಯದಷ್ಟು, ದಾರ್ಶನಿಕ ಪರಿಭಾವನೆಗಳೆರಡೂ ತುಂಬಿಬಂದಿರುವುದನ್ನು ಕಾಣಬಹುದು.

ಕ್ಯೋಟೋದಲ್ಲಿ ನಡೆದ ಜಾಗತಿಕ ಶಾಂತಿ ಸಮ್ಮೇಳನದ ನಿರೂಪಣೆ ತುಂಬಾ ಚೆನ್ನಾಗಿ ಮೂಡಿ ಬಂದಿದೆ. ಅದು ಕೇವಲ ಕುತೂಹಲದ ಕಣ್ಣಿನಿಂದ ನೋಡಿದುದಲ್ಲ. ಜಗತ್ತಿನಲ್ಲಿ ಶಾಂತಿ, ಧರ್ಮಗಳಿಗಾಗಿ ಹಾತೊರೆಯುವ ದೇಶದಿಂದ ಹೋದ ಶಾಂತಿದೂತರೊಬ್ಬರ, ಸಾಧಕ ಚೇತನವೊಂದರ, ಆಂತರಿಕ ಕಳಕಳಿಯನ್ನು ಅಲ್ಲಿ ಉದ್ದಕ್ಕೂ ಕಾಣುತ್ತೇವೆ. ಪ್ರಪಂಚದ ನಲವತ್ತು ರಾಷ್ಟ್ರಗಳಿಂದ ಬಂದಿದ್ದ ಮೂರುನೂರಕ್ಕೂ ಹೆಚ್ಚು ಪ್ರತಿನಿಧಿಗಳು, ವಿವಿಧ ಧರ್ಮ–ಪಂಥ–ಪಂಗಡಗಳವರು ಸೇರಿ ಶಾಂತಿ ಧರ್ಮಗಳಿಗಾಗಿ ಪ್ರಾರ್ಥಿಸಿದ ಆ ಸಮ್ಮೇಳನ ಮಾನವ ಜನಾಂಗದ ಉಜ್ವಲ ಭವಿಷ್ಯದ ಸಂಕೇತವಾಗಿ ಕಾಣುತ್ತದೆ. ಅದ್ಭುತವಾಗಿ ನಿರ್ಮಿತವಾದ 'ಅಂತರರಾಷ್ಟ್ರೀಯ ಸಮ್ಮೇಳನ ಮಂದಿರ'ದಲ್ಲಿ ಅದ್ಧೂರಿಯಿಂದ ನಡೆದ ಆ ಸಮ್ಮೇಳನ: "ಜ್ಞಾನ ವಿಜ್ಞಾನ ಐಶ್ವರ್ಯಗಳು ಧರ್ಮ ಪರಿಷತ್ತಿನ ಸೇವೆಗಾಗಿ ಒಗ್ಗೂಡಿ" ನಿಂತಂತೆ ಅವರಿಗೆ ಅನಿಸುತ್ತದೆ. ಆ ಸಮ್ಮೇಳನ ಬಹುಮುಖ್ಯವಾದ ಕಾರ್ಯಕ್ರಮ ಬಹಿರಂಗಾಧಿವೇಶನ. ಭಾರತದಿಂದ ಬಂದ ಪ್ರತಿನಿಧಿಗಳಲ್ಲಿ ಒಬ್ಬರಿಗೆ ಮಾತ್ರ ಅಲ್ಲಿ ಮಾತನಾಡಲು ಅವಕಾಶ. ಭಾರತದ ಅನೇಕ ರಾಜ್ಯಗಳಿಂದ ಮಹಾಮೇಧಾವಿಗಳು, ಪ್ರಾಧ್ಯಾಪಕರು, ತತ್ವವೇತ್ತರು, ವಿಶ್ವವಿದ್ಯಾನಿಲಯಗಳ ಕುಲಪತಿಗಳೂ ಪ್ರತಿನಿಧಿಗಳಾಗಿ ಬಂದಿರುವಾಗ, ಆ ಅವಕಾಶ ಯಾರಿಗೆ ಸಿಕ್ಕುತ್ತದೆಯೋ ಎಂಬ ಆತಂಕ' "ಬಹುದೂರ ಬಂದು ನಮ್ಮ ಕಾರ್ಯ ಸಫಲವಾಗದಿದ್ದರೆ ಹೇಗೆ? ನಾವು ಮುಖ್ಯವಾಗಿ ಬಂದದ್ದು ದೇಶ ನೋಡಲಿಕ್ಕಲ್ಲ; ಭಾರತೀಯ ಸಂಸ್ಕೃತಿಯ ಸತ್ವವನ್ನು ಬಿತ್ತರಿಸಲಿಕ್ಕೆ ಎಂಬುದು ಮನಸ್ಸಿನಲ್ಲಿ ಕೊರೆಯುತ್ತಿತ್ತು. ಚಿಂತೆಯ ಸಾಗರದಲ್ಲಿ ಮುಳುಗಿದೆವು"–ಈ ಮುಂತಾದ ಮಾತುಗಳಲ್ಲಿ ಅದು ಕಾಣುತ್ತದೆ. ಈ ಆಂತರಿಕ ಅಭೀಪ್ಸೆ ಮತ್ತು ಸಾಧನೆಯ ಸತ್ವ ಫಲಿಸುತ್ತದೆ. ಬಹಿರಂಗ ಅಧಿವೇಶನದಲ್ಲಿ ಭಾರತದ ಪರವಾಗಿ ಶಾಂತಿ ಸಂದೇಶವನ್ನು ಮಂಡಿಸಲು ಆ ಜಗದ್ಗುರುಗಳಿಗೆ ಅವಕಾಶ ಲಭಿಸುತ್ತದೆ.

ಅದೊಂದು ಮಹತ್ತರವಾದ ಮೈಲುಗಲ್ಲು. ಶ್ರೀಮಂತ ಧಾರ್ಮಿಕ ಪರಂಪರೆಯನ್ನುಳ್ಳ ಭಾರತದ ಶಾಂತಿ ಸಂದೇಶವನ್ನು ಆ ಜಾಗತಿಕ ಸಮ್ಮೇಳನದ ಬಹಿರಂಗಾಧಿವೇಶನದಲ್ಲಿ ಘೋಷಿಸುವ ಅತ್ಯಂತ ಮಹತ್ವಪೂರ್ಣವಾದ ಸನ್ನಿವೇಶ! ಕಾಷಾಯಾಂಬರ ವಿಭೂತಿ ಧರಿಸಿ ಕೈಯ್ಯಲ್ಲಿ ಯೋಗದಂಡ ಹಿಡಿದ ಈ ಗಂಭೀರಾಕೃತಿ ವೇದಿಕೆಯನ್ನೇರುತ್ತಿದ್ದಂತೆಯೇ ಪ್ರತಿನಿಧಿಗಳೆಲ್ಲರ ದೀರ್ಘಕರತಾಡನ ಹರ್ಷೋದ್ಗಾರಗಳೆ— ಉತ್ಸಾಹದ ಸ್ವಾಗತ ಲಭಿಸಿತು. ಅಲ್ಲಿನ ಪ್ರಚಂಡ ಪ್ರಕಾಶಗಳ ಸುರಿಮಳೆಯಲ್ಲಿ "ಒಂದು ನಿಮಿಷ ಮೌನವಾಗಿ ನಿಂತು ಅಂತರಂಗದಲ್ಲಿ ಪರಮಾತ್ಮನನ್ನು ಧ್ಯಾನಿಸಿದೆವು. ಪ್ರಭುಶಕ್ತಿ ತಾನೇ ತಾನಾಗಿ ಮಿಂಚಿನಿಂದ ಧುಮುಕಿಬಂದಿತು; ಮಹಾಪ್ರೇರಣೆಯನ್ನು ನೀಡಿತು"— ಎಂದು ಆ ಕ್ಷಣದ ತಮ್ಮ ಮನಸ್ಥಿತಿಯನ್ನು ವ್ಯಕ್ತಪಡಿಸಿದ್ದಾರೆ. ಅನಂತರ ಇಂಗ್ಲೀಷಿನಲ್ಲಿ ಸಿದ್ಧಪಡಿಸಿದ ಅವರ ವ್ಯಾಖ್ಯಾನ ನಿರರ್ಗಳವಾಗಿ ಹೊರಹೊಮ್ಮಿ ಆ ಬೃಹತ್‌ವಿದ್ವತ್‌ಸಭೆಯ ಮೇಲೆ ಗಾಢವಾದ ಪರಿಣಾಮವನ್ನು ಬೀರಿತು. ಶಾಂತಿ ಮತ್ತು ಧರ್ಮಗಳನ್ನು ಕುರಿತ ಅತ್ಯಂತ

ಆಧುನಿಕ ದೃಷ್ಟಿಯ ಆ ನಿರೂಪಣೆಯಲ್ಲಿ ಶರಣರು ಸಾರಿದ ಕಾಯಕ, ಸ್ತ್ರೀ ಸ್ವಾತಂತ್ರ್ಯ, ಜಾತ್ಯತೀತ ಭಾವನೆ, ಕ್ರಿಯಾ ಜ್ಞಾನಗಳ ಸಾಮರಸ್ಯ, ಅಂತರಂಗ ಬಹಿರಂಗ ಶುದ್ಧಿ, ಮೊದಲಾದ ಮೂಲಭೂತ ತತ್ವಗಳನ್ನು ಎತ್ತಿ ಹೇಳಿದುದು ಗಮನಾರ್ಹವಾಗಿದೆ, ಔಚಿತ್ಯ ಪೂರ್ಣವಾಗಿದೆ. (ಆ ಭಾಷಣದ ಪೂರ್ಣ ಪಾಠವನ್ನು ಗ್ರಂಥದ ಕೊನೆಗೆ ಅನುಬಂಧದಲ್ಲಿ ಕೊಡಲಾಗಿದೆ) ಮತ್ತು ತಮ್ಮ ಉಪನ್ಯಾಸದ ಕೊನೆಯಲ್ಲಿ ಈ ವಿಶ್ವಪರಿಷತ್ತಿನ ರಚನಾತ್ಮ ಕತೆಯ ಬಗೆಗೆ ಮಂಡಿಸಿದ ಹತ್ತು ಸೂತ್ರಗಳೂ ಮಹತ್ವಪೂರ್ಣವಾಗಿವೆ. ಈ ಭಾಷಣ ದಿಂದಾದ ಪರಿಣಾಮ, ಜಗದ್ಗುರುಗಳವರಿಗೆ ತಮ್ಮ ಈ ಕಾರ್ಯದಲ್ಲಿ ಸಾರ್ಥಕತೆಯನ್ನು ಕಂಡ ಅನುಭವವನ್ನು ತಂದುಕೊಟ್ಟಿತು. ಇವರ ವ್ಯಕ್ತಿತ್ವದ ಪ್ರಭಾವ ಸುತ್ತಲೂ ಹರಡಿತು. ಅನೇಕರು ವೀರಶೈವ ಧಾರ್ಮಿಕ ತತ್ವಗಳ ಬಗೆಗೆ ಆಸಕ್ತಿವಹಿಸಿದುದಲ್ಲದೆ, ಲಿಂಗ ವಿಭೂತಿಗಳನ್ನು ಜಗದ್ಗುರುಗಳವರಿಂದ ಸ್ವೀಕರಿಸುವಷ್ಟರ ಮಟ್ಟಿಗೆ ಮಾರು ಹೋದುದು, ಇವರು ಆ ಜನರಮೇಲೆ ಬೀರಿದ ಪ್ರಭಾವಕ್ಕೆ ಸಾಕ್ಷಿಯಾಗಿದೆ. ಇವರ ಸಂದರ್ಶನಗಳು ಅಲ್ಲಿನ ಅನೇಕ ಪತ್ರಿಕೆಗಳಲ್ಲಿ ಮುಖಪುಟದ ಪ್ರಾಮುಖ್ಯವನ್ನು ಪಡೆದು ಪ್ರಕಟಗೊಂಡುದು ಸ್ಮರಣೀಯವಾಗಿದೆ.

ಹೀಗೆ ಶಾಂತಿ ಪರಿಷತ್ತು ತನ್ನ ಉದ್ದೇಶಿತ ಪರಿಣಾಮದೊಡನೆ ಮುಕ್ತಾಯಗೊಂಡ ನಂತರ ಪರಿಷತ್ತಿನ ಸಂಯೋಜಕರು ಏರ್ಪಡಿಸಿದ್ದಂತೆ ಜಪಾನಿನ ಕೆಲವು ಪ್ರಮುಖ ನಗರಗಳ ಮತ್ತು ಇತರ ಕೆಲವು ದೇಶಗಳ ಪ್ರವಾಸವನ್ನು ಜಗದ್ಗುರುಗಳು ಕೈಕೊಳ್ಳುತ್ತಾರೆ. ಸಮ್ಮೇಳನ ನಡೆದ ಕ್ಯೋಟೋ (Kyoto) ನಗರದ ಪ್ರಮುಖ ಸ್ಥಳಗಳನ್ನು ಮೊದಲು ಸಂದರ್ಶಿಸುತ್ತಾರೆ. ತನ್ನದೇ ಆದ ನಿಸರ್ಗರಮಣೀಯತೆಯಿಂದ ಕೂಡಿ ಹಸಿರು ಪರ್ವತ ಶ್ರೇಣಿಯ ಮಧ್ಯದಲ್ಲಿ ಮಲಗಿರುವ ಈ ಪಟ್ಟಣದ ವರ್ಣನೆಯನ್ನು ಕೆಲವೇ ಮಾತುಗಳಲ್ಲಿ ಕಣ್ಣಿಗೆ ಕಟ್ಟುವಂತೆ ವರ್ಣಿಸಿರುವ ರೀತಿ ಅವರ ಕವಿ ಮನೋಧರ್ಮಕ್ಕೆ ಸಾಕ್ಷಿಯಾಗಿದೆ. ಅಲ್ಲಿರುವ ಹೆ ಇನ್ ಮಂದಿರ, ಚಿಯಾನ್ ಇನ್ ದೇವಾಲಯ ಮತ್ತು ಇತರ ಕೆಲವು ಬೌದ್ಧದೇವಾಲಯಗಳ ವರ್ಣನೆಯಲ್ಲಿ ಕಲಾವಿದನ ದೃಷ್ಟಿ ಒಡಮೂಡಿದೆ. ಇವುಗಳಿಗೆ ಹಿನ್ನೆಲೆಯಾಗಿ ಐತಿಹಾಸಿಕ ದೃಷ್ಟಿ ಹಾಸುಹೊಕ್ಕಾಗಿದೆ. ಇತಿಹಾಸಕಾರ, ಕಲಾವಿದ, ಕವಿ ಈ ಮೂವರ ಏಕತ್ರ ಸಂಗಮ ಇಲ್ಲಿನ ಎಲ್ಲ ನಿರೂಪಣೆಯಲ್ಲಿಯೂ ಅಭಿವ್ಯಕ್ತಗೊಂಡಿದೆ.

ಕ್ಯೋಟೋದಿಂದ ನಾರಾ ನಗರಕ್ಕೆ ಹೋಗುತ್ತಾರೆ. ಇದನ್ನು 'ಪ್ರವಾಸಿಗರ ನಂದನ ವನ' ಎಂದು ಕರೆಯಲಾಗಿದೆ. ಬೌದ್ಧಧರ್ಮದ ಅತಿ ಪುರಾತನ ಮಠಗಳನ್ನುಳ್ಳ ಇದು ಧಾರ್ಮಿಕ ಶ್ರದ್ಧೆಯ ತವರೂರು ಆಗಿದೆ. ಹಿಂದೊಮ್ಮೆ ಜಪಾನಿನ ರಾಜಧಾನಿಯಾಗಿದ್ದ ಗಾಂಭೀರ್ಯವೂ ಇದಕ್ಕಿದೆ. ಇಲ್ಲಿರುವ ಅನೇಕ ದೇವಾಲಯಗಳ ವರ್ಣನೆ ಮತ್ತು ಅಲ್ಲಿನ ಧಾರ್ಮಿಕ ಪರಿಸರ ಸುಂದರವಾಗಿ ಮೂಡಿಬಂದಿದೆ. ಇಲ್ಲಿ ಜಪಾನಿನ ಮಹಿಳೆಯು ಭಾರತ ಪ್ರೇಮವನ್ನು ಕಂಡ ಪ್ರಕರಣ ಒಂದನ್ನು ಪೂಜ್ಯ ಶ್ರೀಗಳವರು ಉಲ್ಲೇಖಿಸಿದ್ದಾರೆ.

ಒಸಾಕಾ ನಗರದ ಬ್ಯಾಂಕಿನ ಮೇನೇಜರ್ ಆದ ಜಪಾನಿ ಮಹಿಳೆಯೊಬ್ಬಳು ಬ್ಯಾಂಕಿನ ನಿಯಮಗಳನ್ನು ಮೀರಿ ಜಗದ್ಗುರುಗಳವರ ಚೆಕ್ಕಿಗೆ ಆ ಕೂಡಲೇ ಹಣವನ್ನು ಕೊಟ್ಟ ಆ ಘಟನೆ ಚಿಕ್ಕದಾದರೂ ಗಮನಾರ್ಹವಾದುದು. ಆಕೆ ಹೇಳುವ ಈ ಮಾತನ್ನು ಗಮನಿಸಬೇಕು. "ಭಾರತ ಬುದ್ಧ ದೇವನ ಜನ್ಮಭೂಮಿ, ನೀವು ಪುಣ್ಯ ರಾಷ್ಟ್ರದ ಜನ. ಸ್ವಾಮೀಜಿಯವರು ಯೋಗಿಗಳಾಗಿದ್ದಾರೆ. ನೀವು ಕೊಟ್ಟ ಚೆಕ್ ಒಂದು ವೇಳೆ ಮೋಸ ದ್ದಿದ್ದರೆ ನಾನು ಕೇವಲ ಹಣವನ್ನು ಕಳೆದುಕೊಳ್ಳಬಹುದು. ಆದರೇನಂತೆ? ನಿಮ್ಮನ್ನು ಮಾತ್ರ ಖಂಡಿತ ಕಳೆದುಕೊಳ್ಳಲಾರೆ" ಎಂಬ ಈ ಮಾತುಗಳು ಸ್ಮರಣೀಯವಾದುವು. ಭಾರತದ ಹಿರಿಮೆಯ ಜೊತೆಗೆ ಆ ಜನರ ಸಂಸ್ಕಾರಕ್ಕೂ ಇವು ಕಿಟಕಿಯನ್ನು ತೆರೆಯುತ್ತವೆ.

ಅನಂತರ ಸ್ವಾಮೀಜಿಯವರು ಟೋಕಿಯೋ ನಗರಕ್ಕೆ ಹೋಗುತ್ತಾರೆ. ಅದನು ಜಪಾನಿನ ಇಂದ್ರಲೋಕ, ಸೌಂದರ್ಯದ ಅಧಿದೇವತೆ ಎಂದು ಮುಂತಾಗಿ ವರ್ಣಿಸಿದ್ದಾರೆ. ಇದು ಇಡೀ ಪ್ರಪಂಚದಲ್ಲೇ ಅತ್ಯಂತ ಸುಂದರ ಹಾಗೂ ದೊಡ್ಡನಗರಗಳಲ್ಲೊಂದೆಂದು ಪ್ರಸಿದ್ಧವಾಗಿದೆ. ಒಂದು ಕೋಟಿಗಿಂತಲೂ ಹೆಚ್ಚು ಜನಸಂಖ್ಯೆಯನ್ನುಳ್ಳ, ೫೦-೬೦ ಅಂತಸ್ತುಗಳವರೆಗೂ ಬೆಳೆದ ಮುಗಿಲೆತ್ತರದ ಮನೆಗಳಿಂದ ಕೂಡಿದ ಈ ಬೃಹತ್‌ನಗರದ ಸ್ವಚ್ಛ, ಶುಭ್ರ, ನಿರ್ಮಲವಾದ ಪರಿಸರ ಸ್ವರ್ಗೀಯ ಕಲ್ಪನಾಲೋಕವನ್ನು ಮೀರಿಸು ವಂತಹದು. ಭೂಕಂಪದ ಪ್ರಕೃತಿ ವಿಕೋಪವನ್ನೂ, ಮಾನವ ನಿರ್ಮಿತ ಬಾಂಬುಗಳ ಧಾಳಿಯನ್ನು ಮೆಟ್ಟಿ ಆ ವಿನಾಶದ ಅವಶೇಷವೂ ಉಳಿಯದಂತೆ ಮತ್ತೆ ಇದು ಹೀಗೆ ತಲೆಯೆತ್ತಿನಿಂತಿರುವುದು ಜಪಾನೀಯರ ಕರ್ತೃತ್ವಶಕ್ತಿಯ ಮತ್ತು ಸಾಹಸ ಪ್ರವೃತ್ತಿಯ ಸಂಕೇತವಾಗಿದೆ. ಇದನ್ನೆಲ್ಲಾ ನೆನೆಸಿಕೊಂಡ ಜಗದ್ಗುರುಗಳವರು ಆ ನಗರದ ಒಟ್ಟು ಚಿತ್ರವನ್ನು ಕೆಲವೇ ಮಾತುಗಳಲ್ಲಿ ಹಿಡಿದಿಟ್ಟಿದ್ದಾರೆ.

ಇಲ್ಲಿನ ಈ ಕೆಲವು ಪ್ರಮುಖ ನಗರಗಳನ್ನು ಅವುಗಳಲ್ಲಿ ಕಾಣುವ ಜಪಾನೀಯರ ಬಹುಮುಖ ಸಾಧನೆಯನ್ನು ನೋಡಿದರೆ ಅದು ಮುಂದುವರಿದ ರಾಷ್ಟ್ರವಾಗಿರುವುದರ ರಹಸ್ಯ ಮನದಟ್ಟಾಗುತ್ತದೆ. ಜಪಾನ್ ಗಾತ್ರದಲ್ಲಿ ಕಿರಿದಾದದ್ದು. ಚಿಕ್ಕ ಚಿಕ್ಕ ದ್ವೀಪ ಗಳಿಂದ ಕೂಡಿದ ರಾಷ್ಟ್ರ ಮತ್ತು ಜಾಗತಿಕ ಯುದ್ಧಗಳಲ್ಲಿ ಹಿರಿದಾದ ನೋವನ್ನು ಅನು ಭವಿಸಿದ ದೇಶ. ಆದರೂ ಅದೆಲ್ಲವನ್ನೂ ಎದುರಿಸಿ, ದಿಟ್ಟತನದಿಂದ ಮೇಲೆದ್ದು ಇಡೀ ಜಗತ್ತಿನಲ್ಲೇ ಅತ್ಯಂತ ಮುಂದುವರಿದ ಸಮೃದ್ಧ ರಾಷ್ಟ್ರವಾಗಿರುವುದಕ್ಕೆ ಆ ಜನರ ಸತ ತೋದ್ಯೋಗ ಶೀಲತೆ, ಕರ್ತವ್ಯ ನಿಷ್ಠೆ ಮತ್ತು ಪ್ರಮಾಣಿಕತೆಗಳೇ ಮುಖ್ಯ ಕಾರಣವೆಂಬು ದನ್ನು ಸ್ವಾಮೀಜಿಯವರು ಸರಿಯಾಗಿಯೇ ಗುರುತಿಸಿದ್ದಾರೆ. "ಕರ್ತವ್ಯದಕ್ಷತೆ, ಪ್ರಮಾಣಿ ಕತೆ, ಅಚ್ಚುಕಟ್ಟುತನ, ಉದ್ಯೋಗಶೀಲತೆ, ಪರಸ್ಪರ ಸಹಕಾರ, ಸಮಯ ಪರಿಪಾಲನೆ, ಉತ್ಸಾಹ, ಸಾಹಸ, ಸ್ವಚ್ಛತೆ, ಶಿಸ್ತು....ಇವೇ ಗಾತ್ರದಲ್ಲಿ ಕಿರಿದಾದ ಜಪಾನ ದೇಶವನ್ನು ಪಾತ್ರದಲ್ಲಿ ಹಿರಿದಾಗಿ ಮಾಡಿದ ಸದ್ಗುಣಗಳು" ಎಂದು ಅವರು ಹೇಳುತ್ತಾರೆ. ಇವಾವೂ

ನಮಗೆ ಹೊಸವಲ್ಲ. ಆದರೆ ಇವೆಲ್ಲವನ್ನೂ ನಾವು ತಾತ್ವಿಕವಾಗಿ ಒಪ್ಪಿ ಬೋಧಿಸುತ್ತೇವೆಯೇ ಹೊರತು ವ್ಯಾವಹಾರಿಕವಾಗಿ ಆಚರಣೆಯಲ್ಲಿ ಸಾಧಿಸುವುದಿಲ್ಲ. ನಮ್ಮ ದೇಶದಲ್ಲಿಯೂ ಇವು ಕೃತಿಯಲ್ಲಿ ಬಂದರೆ, ನಮ್ಮ ದೇಶ ಸರ್ವವಿಧದಿಂದಲೂ ಪ್ರಗತಿಯನ್ನು ಸಾಧಿಸಬಹುದೆಂಬ ಭಾವನೆಯನ್ನು ಮೆಲುಕು ಹಾಕುತ್ತಾರೆ. ಈ ಅತೃಪ್ತಿ ಉದ್ವಕ್ಕೂ ಕಾಣುತ್ತದೆ.

ಜಪಾನಿನ ಮಹಿಳೆ ಪ್ರತಿಯೊಂದು ಸಾಮಾಜಿಕ ರಂಗದಲ್ಲಿಯೂ ಪುರುಷನಿಗೆ ಸರಿಸಾಟಿಯಾಗಿ ನಿಂತು ಕಾರ್ಯ ಪ್ರವೃತ್ತಳಾಗಿರುವುದನ್ನು ಕಂಡು ಅಚ್ಚರಿಯನ್ನು, ಅಲ್ಲಿಯ ಜನ ಅತಿಥಿ ಸತ್ಕಾರದಲ್ಲಿ ತೋರುವ ಸೌಜನ್ಯವನ್ನು, ಮುಖ್ಯವಾಗಿ ಭಾರತೀಯರ ಮೇಲೆ ತೋರುವ ಪ್ರೇಮವನ್ನು ಕಂಡು ಮೆಚ್ಚುಗೆಯನ್ನು, ಅಲ್ಲಿನ ಉಲ್ಲಾಸ ಪೂರ್ಣ ಜನರ ಆರೋಗ್ಯ ಉತ್ಸಾಹದ ಕಲಾಪ್ರೇಮಗಳನ್ನು ಕಂಡು ಸಂತೋಷವನ್ನು ಸ್ವಾಮೀಜಿಯವರು ತುಂಬು ಹೃದಯದಿಂದ ವ್ಯಕ್ತಪಡಿಸಿದ್ದಾರೆ. ಅಂತೆಯೇ ಸಮೃದ್ಧಿ ಶ್ರೀಮಂತಿಕೆಗಳು ತರುವ ವಿಲಾಸ ಜೀವನದ ಅಪಾಯವನ್ನು ಅದರಲ್ಲೂ ಮುಖ್ಯವಾಗಿ ಟೋಕಿಯೋ ನಗರದಲ್ಲಿ ಬೆಳೆಯುತ್ತಿರುವ ನೈಟ್ ಕ್ಲಬ್ಬುಗಳು, ಶೃಂಗಾರಕ್ಕೆ ಪೂರಕವಾದ ಹೋಟೆಲ್ಲುಗಳು ವಿಲಾಸದ ಮೇಜವಾನಿಗಳು, ನರ್ತನ ಕೇಳಿಗಳು ಮೈಯಿಕ್ಕಿರುವುದನ್ನು ಕೇಳಿ ಆತಂಕಗೊಂಡಿದ್ದಾರೆ. ಇದು ಒಳಿತನ್ನು ಮೆಚ್ಚುವಂತೆಯೇ ದೌರ್ಬಲ್ಯವನ್ನು ಕಂಡು ಮರುಗುವ ಅವರ ಪೂರ್ಣದೃಷ್ಟಿಯನ್ನು ವ್ಯಕ್ತಪಡಿಸುತ್ತದೆ.

ಜಪಾನಿನಿಂದ ಹೊರಟ ಅವರು ಭಾರತಕ್ಕೆ ಮರಳುವ ಮುನ್ನ ಇನ್ನು ಕೆಲವು ದೇಶಗಳನ್ನು ನೋಡಿಕೊಂಡು ಬರುವ ಏರ್ಪಾಡು ಆಗಿರುತ್ತದೆ. ಜಪಾನಿನಿಂದ ಮೊದಲು ಹಾಂಗ್‌ಕಾಂಗ್‌ಗೆ ಬಂದು ಅಲ್ಲಿ ಒಂದು ದಿನ ಕಳೆಯುತ್ತಾರೆ. ಆ ಅಲ್ಪಕಾಲದಲ್ಲಿಯೇ ಜಗತ್ತಿನ ಅತಿ ಸುಂದರವಾದ ಆ ಬಂದರನ್ನು ಮತ್ತು ಹಾಂಗ್‌ಕಾಂಗ್ ನಗರವನ್ನು ನೋಡಿ ಮರುದಿನವೆ ಅಲ್ಲಿಂದ ಇಂಡೋನೇಶಿಯಾಕ್ಕೆ ಬರುತ್ತಾರೆ.ಇದರ ರಾಜಧಾನಿಜಕಾರ್ತ,ಪಟ್ಟಣ ಮತ್ತು ಅದರ ಸುಂದರವಾದ ಪರಿಸರದ ಪರಿಚಯವನ್ನು ಕೆಲವೇ ಮಾತುಗಳಲ್ಲಿ ಹಿಡಿದಿಟ್ಟಿದ್ದಾರೆ. ಅಲ್ಲಿಂದ ಸಿಂಗಾಪುರ ಕೌಲಾಲಂಪುರಗಳನ್ನು ನೋಡಿ ಥೈಲ್ಯಾಂಡಿಗೆ ಬರುತ್ತಾರೆ. ಬೌದ್ಧ ಧರ್ಮದ ನೆಲೆವೀಡಾದ ಅಲ್ಲಿ ಎರಡು ದಿನಗಳನ್ನು ಕಳೆದು ಮರಳಿ ತಾಯ್ನಾಡಿಗೆ ಹಿಂದಿರುಗುತ್ತಾರೆ. ಕಲ್ಕತ್ತಾದ ಮೂಲಕ ಬೊಂಬಾಯಿಗೆ ಬಂದು ಅಲ್ಲಿಂದ ಬೆಳಗಾವಿಯ ವಿಮಾನ ನಿಲ್ದಾಣದಲ್ಲಿ ಬಂದಿಳಿದಾಗ ಅಲ್ಲಿ ಸಾವಿರಾರು ಭಕ್ತರು ಅವರನ್ನು ಸಂಭ್ರಮದಿಂದ ಸ್ವಾಗತಿಸುತ್ತಾರೆ.

ಸುಮಾರು ಇಪ್ಪತ್ತು ದಿನಗಳ ಕಾಲ ವಿದೇಶಗಳಲ್ಲಿ ಅವರು ಕೈಕೊಂಡ ಈ ಯಾತ್ರೆ ಅವರ ಬಹುಮುಖವಾದ ಕಾರ್ಯಕ್ಷೇತ್ರಕ್ಕೆ ಹೊಸತೊಂದು ಆಯಾಮವನ್ನು ತಂದುಕೊಟ್ಟಿತೆಂದೇ ಹೇಳಬೇಕು. ಸ್ವಾಮಿಗಳೊಬ್ಬರು ವಿದೇಶಗಳಿಗೆ ಹೋಗಿ ತಮ್ಮ ಧಾರ್ಮಿಕವಾದ, ಯಾವ ಆಚಾರಕ್ಕೂ ಅಣು ಮಾತ್ರವಾದರೂ ಕುಂದಾಗದಂತೆ ಅವನ್ನು ಪರಿಪಾಲಿಸಿಕೊಂಡು

ಬಂದರು. ಅಷ್ಟೆ ಅಲ್ಲದೆ ಆದರಿಂದ ವಿದೇಶಗಳ ಮೇಲೂ ಪ್ರಭಾವವನ್ನು ಬೀರಿ ಬಂದುದು ಅವರ ಸಾತ್ವಿಕ ನಿಷ್ಠೆಗೆ ಸಾಕ್ಷಿಯಾಗಿದೆ. ಅನೇಕ ಕಡೆಗಳಲ್ಲಿ ವಿದೇಶೀಯರು ಶ್ರೀ ಜಗದ್ಗುರುಗಳ ಪ್ರಸಾದ ನಿಷ್ಠೆಯನ್ನೂ ಧಾರ್ಮಿಕ ಆಚಾರಗಳನ್ನೂ ಕಂಡು ತಲೆ ಬಾಗಿದ ಸನ್ನಿವೇಶಗಳನ್ನು ಅಲ್ಲಲ್ಲಿ ಉಲ್ಲೇಖಿಸಿದ್ದಾರೆ. ನಮ್ಮಲ್ಲಿ ನಿಷ್ಠೆ ಬಲವತ್ತರ ವಾಗಿದ್ದರೆ ಎಂತಹ ಪರಿಸರವೂ ಪರಿವರ್ತನೆಯಾಗುತ್ತದೆ ಎಂಬುದನ್ನು ಪೂಜ್ಯ ಶ್ರೀಗಳವರ ವಿದೇಶ ಯಾತ್ರೆಯಿಂದ ಕಂಡುಕೊಳ್ಳಬಹುದು.

ಇನ್ನೊಂದು ಬಹಳ ಮುಖ್ಯವಾದ ಅಂಶವೆಂದರೆ ಅವರ ಕಾರ್ಯಕ್ಷೇತ್ರ ಧಾರ್ಮಿಕ ವಲಯಕ್ಕೆ ಪರಿಮಿತವಾಗಿದ್ದರೂ ಅವರ ದೃಷ್ಟಿ ವಲಯ ವಿಸ್ತಾರವಾಗಿ ಆಯಾದೇಶದ ಇಡೀ ಸಾಮಾಜಿಕ ಪರಿಸರವನ್ನೆಲ್ಲಾ ಒಳಗೊಂಡುದು; ಮತ್ತು ಅಡಕವಾದ ನಾಲ್ಕೇ ಮಾತುಗಳಲ್ಲಿ ಅದರ ತಿರುಳನ್ನೆಲ್ಲಾ ಹಿಡಿದಿಡುವ ನಿರೂಪಣಾ ಸಾಮರ್ಥ್ಯವನ್ನು ಅವರ ಶೈಲಿ ಪಡೆದಿರುವುದು. ಇದರ ಜೊತೆಗೆ ನಿರಂತರ ಆತ್ಮವೀಕ್ಷಣೆ ಮತ್ತು ಆತ್ಮ ವಿಮರ್ಶೆಯೂ ಸೇರಿ ಅದಕ್ಕೊಂದು ಆತ್ಮೀಯತೆಯನ್ನು ತಂದುಕೊಟ್ಟಿದೆ. ಶಾಂತಿ ಪರಿ ಷತ್ತಿನ ಫಲಶ್ರುತಿಯಲ್ಲಿ ಅನುಭವಮಂಟಪದ ಪ್ರತಿಧ್ವನಿಯನ್ನು ಕಾಣುವ ಆಂತರಿಕ ಪರಿ ಭಾವನೆಯಲ್ಲಿ ಇದರ ತುತ್ತತುದಿಯನ್ನು ಕಾಣಬಹುದು. ಇಲ್ಲಿಗೆ ಅವರ ವಿದೇಶ ಯಾತ್ರೆಯ ಮೊದಲ ಭಾಗ ಮುಕ್ತಾಯವಾಗುತ್ತದೆ.

ಶಾಂತಿ ಪರಿಷತ್ತಿನ ಮೊದಲನೆಯ ಅಧಿವೇಶನದಲ್ಲಿ ಶ್ರೀ ಜಗದ್ಗುರುಗಳು ಬೀರಿದ ಪ್ರಭಾವದಿಂದ ಅಲ್ಲಿ ಇವರು ಪ್ರಮುಖ ಸ್ಥಾನವನ್ನು ಪಡೆಯುವಂತಾಯಿತು. ಪರಿಷತ್ತಿನ ಕಾರ್ಯಕಾರೀ ಮಂಡಲಿಯ ಸದಸ್ಯರನ್ನಾಗಿಯೂ ಇವರನ್ನು ತೆಗೆದುಕೊಳ್ಳಲಾಯಿತು. ಆ ಮಂಡಲಿಯ ಸಭೆಗಳಿಗೆ ಅಮೇರಿಕಾಕ್ಕೆ ಇವರು ಹೋಗಬೇಕಾಗಿತ್ತು. ಆದರೆ ಇಲ್ಲಿ ತಮ್ಮ ಮಠದಲ್ಲಿ ಹಮ್ಮಿಕೊಂಡ ವಿಶೇಷ ಕಾರ್ಯಕ್ರಮಗಳ ಒತ್ತಡದಿಂದ ಅಲ್ಲಿಗೆ ಹೋಗಲಿಲ್ಲ. ಈ ಮಧ್ಯದಲ್ಲಿ ಜಾಗತಿಕ ಧರ್ಮಗಳ ಶಾಂತಿ ಪರಿಷತ್ತು ತನ್ನ ದ್ವಿತೀಯ ಸಮ್ಮೇಳನವನ್ನು ಬೆಲ್ಜಿಯಂ ದೇಶದ ಲ್ಯೂವೆನ್ ನಗರದಲ್ಲಿ ೧೯೭೪ರಲ್ಲಿ ನಡೆಸುವ ನಿರ್ಧಾರವನ್ನು ಕೈಕೊಂಡಿತು. ಅದಕ್ಕೆ ಜಗದ್ಗುರುಗಳನ್ನು ಆಹ್ವಾನಿಸಿದುದು ಮಾತ್ರವಲ್ಲದೆ, ಇವರನ್ನು ಬರಮಾಡಿಕೊಳ್ಳಲೇಬೇಕೆಂಬ ತೀವ್ರವಾದ ಪ್ರಯತ್ನ ಹೋಮರ್ ಎ. ಜಾಕ್ ಅವರಿಂದ ನಡೆದುದನ್ನು ಸ್ವಾಮಿಗಳವರು ವಿವರವಾಗಿಯೇ ಹೇಳಿದ್ದಾರೆ. ಮಿತ್ರರೆಲ್ಲರ ಒತ್ತಾಯವನ್ನು ನಿರಾಕರಿಸಲಾಗದೆ ಆ ಆಹ್ವಾನವನ್ನು ಅಂಗೀಕರಿಸಲೇಬೇಕಾಯಿತು. ಅಲ್ಲದೆ ಈ ಸಾರಿ ಐರೋಪ್ಯದೇಶಗಳ ಅನುಭವವನ್ನು ಪಡೆಯುವ ಅವಕಾಶ ಲಭಿಸಿದ್ದುದೂ ಅದಕ್ಕೆ ಕಾರಣ ವಾಗಿತ್ತು.

ಮೊದಲನೆಯ ಸಾರಿಯಂತೆ ಈ ಬಾರಿಯೂ ಎಲ್ಲ ಸಿದ್ಧತೆಗಳೂ ನಡೆದು ಭಕ್ತರಿಂದ ಬೀಳ್ಕೊಂಡು ಜಗದ್ಗುರುಗಳು ಐರೋಪ್ಯ ರಾಷ್ಟ್ರಗಳ ಕಡೆಗೆ ಹೊರಟರು. ಸಮ್ಮೇಳನದ ಆತಿಥೇಯ ರಾಷ್ಟ್ರ ಬೆಲ್ಜಿಯಂ ಪುಟ್ಟ ರಾಷ್ಟ್ರವಾದ ಅದರ ಪರಿಚಯವನ್ನು ಒಂದೆರಡು

ಮಾತುಗಳಲ್ಲಿಯೇ ಮನಮುಟ್ಟುವಂತೆ ಮಾಡಿಕೊಟ್ಟಿದ್ದಾರೆ. ಅದರ ರಾಜಧಾನಿ ಬ್ರುಸೆಲ್ಸ್. ಆದರೆ ಪರಿಷತ್ತು ಸೇರಬೇಕಾಗಿದ್ದುದು ಲ್ಯುವೆನ್ ನಗರದಲ್ಲಿ. ಅದನ್ನು 'ಸೌಂದರ್ಯದ ರಾಣಿ' ಎಂದು ಕರೆದು ಅದರ ಪ್ರಾಚೀನತೆ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಿನ್ನೆಲೆಯನ್ನು ಮೊದಲು ಪರಿಚಯ ಮಾಡಿಕೊಟ್ಟಿದ್ದಾರೆ. ಇಲ್ಲಿಯೂ ಅವರು ಮುಖ್ಯವಾಗಿ ಕಂಡದ್ದು ಶಿಸ್ತು, ಪ್ರಾಮಾಣಿಕತೆ, ದುಡಿಮೆ. "ದುಡಿಮೆಯೇ ದೇವರು" ಎಂಬ ಸೂತ್ರ ಅಲ್ಲಿ ತತ್ವವಾಗಿ ಉಳಿದಿಲ್ಲ; ಆಚರಣೆಯಲ್ಲಿ ಅಳವಟ್ಟಿದೆ-ಎಂಬುದನ್ನು ಕಂಡುಕೊಳ್ಳುತ್ತಾರೆ. ಅಂತೆಯೇ ಅಲ್ಲಿನ ಜನರ ವಿಶ್ವಾಸದ ಆತಿಥ್ಯದಲ್ಲಿ "ಅತಿಥಿದೇವೋಭವ" ಎಂಬ ಮಾತಿನ ಸಾರ್ಥಕತೆಯನ್ನು ಕಾಣುವಂತಹ ಅನುಭವ ಉಂಟಾದುದನ್ನು ನಿರೂಪಿಸಿದ್ದಾರೆ. ಆದರೆ ನಮ್ಮ ಭಾರತೀಯರೇ ತೋರಿದ ಅಪಚಾರ ಕಟುವರ್ತನೆಗಳು ಅಲ್ಲಿಯೂ 'ಭಾರತೀಯತ್ವ' ವನ್ನು ಮೆರೆದ ಕಟು ಅನುಭವವನ್ನು ಸ್ಮರಿಸಿಕೊಂಡಿದ್ದಾರೆ.

೧೯೭೭ರ ಆಗಸ್ಟ್ ೨೮ ರಂದು ಲ್ಯೂವೆನ್ನಿನಲ್ಲಿ ಪ್ರಾರಂಭವಾಗಿ ಒಂದು ವಾರಕಾಲ ನಡೆಯಿತು. ಹಿಂದಿನ ಅನುಭವದಿಂದ ಇನ್ನೂ ಹೆಚ್ಚಿನ ವ್ಯಾಪ್ತಿಯನ್ನು ಪಡೆದು ಅತ್ಯಂತ ಸುವ್ಯವಸ್ಥಿತವಾಗಿ ನಡೆದ ಈ ಸಮ್ಮೇಳದ ವಿವಿಧ ವಿಭಾಗಗಳ ಕಾರ್ಯಕ್ರಮಗಳನ್ನು ವಿವರವಾಗಿ ಇಲ್ಲಿ ಪರಿಚಯಮಾಡಿಕೊಟ್ಟಿದ್ದಾರೆ. ಆ ಜನಗಳ ಪ್ರಬುದ್ಧತೆ ಮತ್ತು ಪರಿಣತಿಗಳನ್ನು ಮೆಚ್ಚಿಕೊಂಡಿದ್ದಾರೆ. ಭಾವುಕವಾದ ದೀರ್ಘ ಭಾಷಣಗಳಿಗೆ ಮಾರು ಹೋಗದೆ ರಚನಾತ್ಮಕವಾದ ಲಘು ಚರ್ಚೆಗಳು ಮತ್ತು ಅವುಗಳನ್ನು ಕಾರ್ಯಗತಗೊಳಿಸುವ ವಿಧಿವಿಧಾನಗಳನ್ನು ರೂಪಿಸಿದುದು ಇಲ್ಲಿ ನಡೆದ ಚಿಕ್ಕ ಚಿಕ್ಕ ಚರ್ಚಾಗೋಷ್ಠಿಗಳ ಹಿರಿಮೆ ಯೆಂಬುದನ್ನು ಮನಗಂಡು ಅದನ್ನು ಶರಣರ ಕಾಯಕ ನಿಷ್ಠೆಯ ಅನುಭವ ಮಂಟಪದ ಹಿನ್ನೆಲೆಯಲ್ಲಿ ಪರಿಭಾವಿಸಿರುವುದು ಅರ್ಥವತ್ತಾಗಿದೆ. ಇಲ್ಲಿನ ಗೋಷ್ಠಿಗಳಲ್ಲಿ ಅವರು ಕೊಟ್ಟ ಸಲಹೆಗಳು, ಬಹಿರಂಗ ಸಭೆಯಲ್ಲಿ ಮಾಡಿದ ಭಾಷಣ ಇಡೀ ಸಮ್ಮೇಳನದ ಗಮನ ವನ್ನು ಸೆಳೆದುದಲ್ಲದೆ ಎಲ್ಲರ ವಿಶೇಷ ಗೌರವಕ್ಕೆ ಅವರನ್ನು ಪಾತ್ರರನ್ನಾಗಿಸಿತು. ಈ ಸಂದರ್ಭದಲ್ಲಿ ಅವರು ಮಾಡಿದ ಭಾಷಣವನ್ನು ಪುಸ್ತಕದ ಕೊನೆಯಲ್ಲಿ ಕೊಡಲಾಗಿದೆ. ಅನೇಕ ವೈಚಾರಿಕ ಅಂಶಗಳು ಅಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿರುವುದನ್ನು ಕಾಣಬಹುದು.

ಈ ಸಮಾವೇಶದ ಸಂದರ್ಭದಲ್ಲಿ ಜಗದ್ಗುರುಗಳವರ ಕನ್ನಡ ವಚನ ಸಂಕಲನ ಗ್ರಂಥ ಚಿತ್‌ಸುಮನದ ಇಂಗ್ಲಿಷ್ ಭಾಷಾಂತರ ಕೃತಿ ಬಿಡುಗಡೆಯಾದುದು ಒಂದು ಮಹತ್ವ ಪೂರ್ಣ ಸಮಾರಂಭವಾಗಿ ಪರಿಣಮಿಸಿತು. 'Heart Blossoms' ಎಂಬ ಶೀರ್ಷಿಕೆಯ ಈ ಇಂಗ್ಲಿಷ್ ಅವತರಣಿಕೆಯನ್ನು ಅಲ್ಲಿ ಬಿಡುಗಡೆ ಮಾಡಿದವರು ಡಾ. ಹೋಮರ್ ಎ. ಜಾಕ್ ತಮ್ಮ ಬಹುಮುಖ ಕಾರ್ಯಕ್ಷೇತ್ರದ ನಾನಾ ಅನುಭವಗಳನ್ನು ಅನಿಸಿಕೆಗಳನ್ನು ಪರಿಪಕ್ವ ಪರಿಭಾವನೆಯಿಂದ ಅಭಿವ್ಯಕ್ತಗೊಳಿಸಿರುವ ಕನ್ನಡ ವಚನಗಳು ಇಂಗ್ಲಿಷ್ ಭಾಷೆ ಯಲ್ಲಿ ಬಂದು ವ್ಯಾಪಕವಾದ ಸಾಹಿತ್ಯ ವಲಯವನ್ನು ಪ್ರವೇಶಿಸುವಂತಾದುದು ಲ್ಯೂವೆನ್ನಿನ ಜಾಗತಿಕ ವೇದಿಕೆಯ ಒಂದು ಸಾಧನೆಯಾಗಿ ಪರಿಣಮಿಸುವಂತಾಯಿತು. ಈ ವಚನಗಳ

ಬಗೆಗೆ ಡಾ. ಹೋಮರ್ ಎ. ಜಾಕ್ ಮತ್ತು ಅಂದಿನ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಡಾ. ಡಾನಾ ಮ್ಯಾಕ್ಲಿನ್ ಗ್ರೀಲ್ ಅವರು ಹಾರ್ದಿಕವಾಗಿ ಮಾತನಾಡಿದುದಲ್ಲದೆ ಉನ್ನತವಾದ ಅಭಿಪ್ರಾಯಗಳನ್ನು ಅವುಗಳ ಬಗೆಗೆ ವ್ಯಕ್ತಪಡಿಸಿದ್ದಾರೆ. ಡಾ. ಗ್ರೀಲೆ ಅವರು ನೀಡಿದ ಅಭಿಪ್ರಾಯವನ್ನು ಇಲ್ಲಿ ಗಮನಿಸಬಹುದು.

"A very beautiful and inspiring book with real spiritual sensitivity is the new volume titled 'Heart Blossoms' ".

ಹಾಗೆಯೇ ಅಂದಿನ ಆ ಸಮಾರಂಭದಲ್ಲಿ ಉಪಸ್ಥಿತರಿದ್ದ ಕರಾಚಿ ವಿಶ್ವವಿದ್ಯಾಲಯದ ಉಪಕುಲಪತಿ ಮೊಹಮ್ಮದ ಹುಸೇನ ಅವರು ಕೊಟ್ಟ ಅಭಿಪ್ರಾಯವೂ ಗಮನಾರ್ಹವಾಗಿದೆ. ಅದರ ಒಂದು ವಾಕ್ಯ ಹೀಗಿದೆ:

"I found in this beautiful book not only sweet specimen of excellent poetry but also many a word of wisdom which could only come from a person who could give deep thoughts to problems of life and morality."

ಈ ಮಾತುಗಳು ಶ್ರೀ ಜಗದ್ಗುರುಗಳವರ ವಚನ ಸೌಂದರ್ಯಕ್ಕೆ ಅವರ ಲೋಕಾನುಭವ ಧಾರ್ಮಿಕ ಸಾಧನೆಗಳ ಅಭಿವ್ಯಕ್ತಿಯ ಪರಿಣತಿಗೆ ಸಾಕ್ಷಿಯಾಗಿವೆ.

ಸೆಪ್ಟೆಂಬರ್ ೩ನೇ ತಾರೀಖು (೧೯೭೪) ವಿಶ್ವಧರ್ಮಗಳ ಶಾಂತಿಪರಿಷತ್ತಿನ ಸಮಾರೋಪ ನೆರವೇರಿ ಅನೇಕ ಗೊತ್ತುವಳಿಗಳನ್ನು ಸ್ವೀಕರಿಸಲಾಯಿತು. ಇದೇ ಸಂದರ್ಭದಲ್ಲಿ ವಿಶ್ವಧರ್ಮಗಳ ಅಂತರರಾಷ್ಟ್ರೀಯ ಶಾಂತಿಸಮ್ಮೇಳನದ ಸಂಸ್ಥೆಯ "ಸೆಂಟ್ರಲ್ ಫೈನಾನ್ಸ್ ಕಮಿಟಿ"ಗೆ ಸ್ವಾಮೀಜಿಯವರನ್ನು ಒಬ್ಬ ಸದಸ್ಯರನ್ನಾಗಿ ಎಲ್ಲರೂ ಒಮ್ಮತದಿಂದ ಆಯ್ಕೆಮಾಡಿದರು. ಇದರಿಂದ ಅವರು ಅಲ್ಲಿ ವಹಿಸಿದ ಮಹತ್ವದ ಪಾತ್ರವನ್ನು ಊಹಿಸಬಹುದು. ಹುಬ್ಬಳ್ಳಿಯ ಮೂರುಸಾವಿರಮಠದಲ್ಲಿ ಜಗದ್ಗುರುಗಳು ಏರ್ಪಡಿಸಿದ್ದ ಭಾರತೀಯ ಮಟ್ಟದ ಶಾಂತಿಪರಿಷತ್ತಿನ ಸಾಧನೆಯನ್ನು ಅಲ್ಲಿ ಎತ್ತಿಹೇಳಲಾಯಿತು; ಮತ್ತು ಇತರರಿಗೆ ಇದು ಮಾರ್ಗದರ್ಶನವಾಗಬೇಕೆಂಬ ಅಭಿಪ್ರಾಯವನ್ನು ಪಡಲಾಯಿತು. ಹೀಗೆ ತುಂಬಾ ಯಶಸ್ವಿಯಾಗಿ ಸಮ್ಮೇಳನ ಮುಕ್ತಾಯಗೊಂಡ ಮೇಲೆ ಅಲ್ಲಿಂದ ಹೊರಡುವಾಗ ರಾಜಧಾನಿ ಬ್ರುಸೆಲ್ಸ್ ನಗರಕ್ಕೆ ಬಂದು ಅಲ್ಲಿನ ಪ್ರಮುಖ ಸ್ಥಳಗಳನ್ನು ಸಂದರ್ಶಿಸಿದರು. ಅದಕ್ಕೆ ಮೊದಲೇ ಹಿಟ್ಲರನ ಅಮಾನುಷ ಹತ್ಯಾಕಾಂಡದ ಕೇಂದ್ರವಾದ ಬ್ರೀಡಾಕ್ ಸ್ಥಳವನ್ನು ನೋಡಿ, ಅಂದು ನಡೆದ ಆ ರಾಕ್ಷಸೀ ಕೃತ್ಯದ ಕರಾಳತೆಯಿಂದ ಬೆಲ್ಜಿಯಂ ನರಳಿದುದನ್ನು ಸ್ಮರಿಸಿಕೊಂಡು ಅಲ್ಲಿ ವಿಶ್ವಶಾಂತಿಗಾಗಿ ಪ್ರಾರ್ಥನೆ ಸಲ್ಲಿಸಿದುದನ್ನು ಹೇಳಿದ್ದಾರೆ.

ಈ ಪರಿಷತ್ತಿನ ಕಾರ್ಯ ಮುಗಿದ ಮೇಲೆ ಕೆಲವು ಐರೋಪ್ಯ ದೇಶಗಳ ಸಂಚಾರಕ್ಕೂ ಏರ್ಪಾಡುಗಳು ನಡೆದಿದ್ದುವು. ಬ್ರುಸೆಲ್ಸ್‌ನಿಂದ ಮೊದಲು ಲಂಡನ್ನಿಗೆ ಹೋಗುತ್ತಾರೆ. ಅಲ್ಲಿ ಕರ್ನಾಟಕದ ಅನೇಕ ಆತ್ಮೀಯರೂ ಇದ್ದುದರಿಂದ ಎಲ್ಲ ವ್ಯವಸ್ಥೆಗಳೂ ಸುಗಮ

ವಾಗಿ ನಡೆಯುತ್ತವೆ. ಲಂಡನ್ ನಗರದ ವರ್ಣನೆ ತಕ್ಕಮಟ್ಟಿಗೆ ದೀರ್ಘವಾಗಿಯೇ ಬಂದಿದೆ; ಹೃದಯ ತುಂಬಿ ಮೂಡಿ ಬಂದಿದೆ. "ಲಂಡನ್ ಕಣ್ಣಿಗೆ ಹಬ್ಬ, ಬಣ್ಣಮಯ ಚಲುವು, ಪಟ್ಟಣದಲ್ಲೂ ಮೋಹಕ ಪ್ರಕೃತಿ. ರಾಜಠೀವಿಯ ಸೌಂದರ್ಯ. ಎಲ್ಲೆಲ್ಲೂ ಶ್ರೀಮಂತಿಕೆ ಸಹಜವಾಗಿದೆ. ಬ್ರುಸೆಲ್ಸ್ ನೋಡಿ ಮುಂಬಯಿ ಮರೆತಿದ್ದೆವು. ಈಗ ಲಂಡನ್ ನೋಡಿ ಬ್ರುಸೆಲ್ಸ್ ಮರೆತೆವು." ಹೀಗೆ ವರ್ಣನೆ ನಿರರ್ಗಳವಾಗಿ ಹರಿಯುತ್ತದೆ. ಸರಳವಾದ ನೇರವಾದ ಚಿಕ್ಕ ಚಿಕ್ಕ ವಾಕ್ಯಗಳು, ಆದರೆ ತುಂಬಿಬಂದ ಅನುಭವ. ಗದ್ಯವೂ ಪದ್ಯಗ್ರಂಥಿ ಯಾಗಿ ಬಿಡುತ್ತದೆ. ಜಗದ್ಗುರುಗಳವರ ಈ ಶೈಲಿಯ ಮೋಹಕತೆಯನ್ನು ಈ ಗ್ರಂಥದಲ್ಲಿ ಉದ್ದಕ್ಕೂ ಕಾಣಬಹುದು. ಲಂಡನ್ ವರ್ಣನೆಯಲ್ಲಿಯಂತೂ ಅದು ಎದ್ದುಕಾಣುತ್ತದೆ. ಥೇಮ್ಸ್ ನದಿ, ಸೇಂಟ್ ಪಾಲ್ ಕೆಥೆಡ್ರೆಲ್, ಟ್ರಫಾಲ್ಗರ್ ಸ್ಕ್ವೇರ್, ಬಕಿಂಗ್‌ಹ್ಯಾಮ್ ಅರಮನೆ–ಈ ಮೊದಲಾದವುಗಳ ವರ್ಣನೆ ಸುಂದರವಾಗಿ ಕಣ್ಣಿಗೆ ಕಟ್ಟುವಂತೆ ಮೂಡಿ ಬಂದಿದೆ. ವೈದಿಕ ಸೊಸೈಟಿಯಲ್ಲಿ ಭಾಷಣ, ಷೇಕ್ಸ್‌ಪಿಯರನ ಜನ್ಮಸ್ಥಳ ಸ್ಟ್ರಾಟ್‌ಫರ್ಡ್ ಗಳ ಸಂದರ್ಶನಗಳೂ ಸ್ಮರಣೀಯ ಘಟನೆಗಳು.

ಹೀಗೆ ಲಂಡನ್ನಿನಲ್ಲಿ ನಾಲ್ಕಾರು ದಿನಗಳನ್ನು ಕಳೆದು ಅಲ್ಲಿಂದ ಪ್ಯಾರಿಸ್‌ಗೆ ಬರು ತ್ತಾರೆ. ಲಂಡನ್ ಒಂದು ಬಗೆಯಾದರೆ ಪ್ಯಾರಿಸ್ ಇನ್ನೊಂದು ಬಗೆ. ಪ್ಯಾರಿಸ್ ಅತ್ಯಂತ ಸುಂದರ ನಗರವೇನೋ ಹೌದು. ಆದರೆ ವಿಶೇಷವಾಗಿ ವಿಲಾಸ ಜೀವನಕ್ಕೆ ಮಾರು ಹೋದದ್ದು. "ಭೋಗ–ಐಶ್ವರಗಳ ಬೀಡು" ಎಂದೇ ಇಲ್ಲಿ ಅದನ್ನು ಕರೆದಿದ್ದಾರೆ. "ವಿಲಾಸವೇ ತತ್ವಜ್ಞಾನ" ಎಂದು ಅದನ್ನು ಅರ್ಥಪೂರ್ಣವಾದ ಒಂದೇ ಮಾತಿನಲ್ಲಿ ಅಡಕಗೊಳಿಸಿದ್ದಾರೆ. "ಗಾಳಿ ಬಿಟ್ಟಂತೆ ವಿಹರಿಸುವ ಇವರ ಜೀವನ ವಿಲಾಸಕ್ಕೆ, ಭಾರತೀಯ ದರ್ಶನವಾಣಿ, ಶರಣರ ಅನುಭಾವವಾಣಿ ಕನಸಿನಲ್ಲೂ ಗೋಚರವಾಗದು. ಅವರ ಬಹಿರಂಗ ಸ್ಥಿತಿ ಕಂಡೇ ನಮಗೆ ಅಯ್ಯೋ ಅನ್ನಿಸಿತು. ಮರುಕ್ಷಣದಲ್ಲಿ, ಭವಿಷ್ಯದಲ್ಲಿ ಈ ಸಂಸ್ಕೃತಿ ಭಾರತಕ್ಕೆ ಹರಿದುಬಂದರೆ ಮುಂದೇನು ಗತಿ?" ಎಂದು ಪೂಜ್ಯ ಸ್ವಾಮೀಜಿ ಯವರು ಕಳವಳಗೊಳ್ಳುತ್ತಾರೆ. ಈ ಭಾವನೆಯನ್ನು ಮೆಲುಕು ಹಾಕುತ್ತಲೇ ಪ್ಯಾರಿಸ್ಸಿನ ಪ್ರಮುಖ ಸ್ಥಳಗಳನ್ನು ದರ್ಶಿಸುತ್ತಾರೆ. 'ನೋಟ್ರೆ-ಡೇಮ್' ದೇವಾಲಯ, ಲೋವ್ರೆ ಮ್ಯೂಸಿಯಮ್, ಐಫಿಲ್ ಗೋಪುರ ಮೊದಲಾದವುಗಳನ್ನು ಕೆಲವೇ ಮಾತುಗಳಲ್ಲಿ ಅವುಗಳ ವೈಶಿಷ್ಟ್ಯ ಮನದಟ್ಟಾಗುವಂತೆ ವರ್ಣಿಸಿದ್ದಾರೆ. ಅಲ್ಲಿನ "ಭಾರತೀಯ ವಿದ್ಯಾರ್ಥಿ ಸೊಸೈಟಿ" ಮತ್ತು "ರಾಮಕೃಷ್ಣ ವೇದಾಂತ ಸೆಂಟರ್"ಗಳಲ್ಲಿ ನಡೆದ ಕಾರ್ಯಕ್ರಮಗಳಲ್ಲಿ ಲಭಿಸಿದ ಹಾರ್ದಿಕ ಸ್ವಾಗತ ಮತ್ತು ಆತ್ಮೀಯ ಉಪಚಾರಗಳನ್ನು ಸ್ಮರಿಸಿಕೊಂಡಿದ್ದಾರೆ.

ಪ್ಯಾರಿಸ್‌ನಿಂದ ಬರ್ಲಿನ್ ನಗರಕ್ಕೆ ಹೋಗುತ್ತಾರೆ. ಒಂದೇ ನಗರ ಪೂರ್ವ ಮತ್ತು ಪಶ್ಚಿಮ ಬರ್ಲಿನ್‌ಗಳೆಂದು ಎರಡು ಹೋಳಾಗಿ ಒಡೆದಿರುವ ದುರಂತವನ್ನು ಕಣ್ಣಾರೆ ಕಂಡಾಗ ಅವರ ಮನಸ್ಸು ತೀವ್ರವಾದ ಪರಿಭಾವನೆಗೆ ಒಳಗಾಗುತ್ತದೆ. "ಒಂದು ಪಟ್ಟಣ ಎರಡು ಹೋಳಾಗಿ, ಒಂದು ಬಂಡವಾಳಶಾಹಿ ದೇಶವಾದರೆ, ಇನ್ನೊಂದು

ಕಮ್ಯುನಿಸ್ಟ್ ರಾಷ್ಟ್ರವಾಗಿದೆ. ಊರಿನ ಮಧ್ಯೆ ಇಬ್ಭಾಗ ಮಾಡಿದ ಗೋಡೆ. ಅನೇಕ ಕಡೆ ಒಂದೊಂದು ಮನೆಯನ್ನೇ ಇಬ್ಭಾಗ ಮಾಡಿ, ಕೆಲ ಅಂಕಣಗಳನ್ನು ಪೂರ್ವ ಬರ್ಲಿನ್ನಿಗೆ ಹಾಗೂ ಕೆಲ ಅಂಕಣಗಳನ್ನು ಪಶ್ಚಿಮ ಬರ್ಲಿನ್ನಿಗೆ ಕೊಟ್ಟಿದೆ" ಎಂದು ಹೇಳುತ್ತ ಸ್ವಾಮೀಜಿಯವರು, ಮಾನವ ಮಾನವನನ್ನು ನಂಬದಿರುವಾಗ ಮೂಡುವ ಅಶಾಂತಿ, ಪಾಶವ್ ಕೃತ್ಯಗಳನ್ನು ಚಿಂತಿಸುತ್ತಾರೆ. ಮಾನವ ಇದನ್ನು ಮೀರಿ ನಿಲ್ಲುವುದಕ್ಕೆ ಆತ್ಮ ಶಾಂತಿಯೇ ಮದ್ದೆಂಬುದನ್ನು ಕಂಡುಕೊಳ್ಳುತ್ತಾರೆ.

ಬರ್ಲಿನ್ನಿನಿಂದ ಜಗದ್ಗುರುಗಳವರ ಪಯಣ ಜಿನೀವಾಕ್ಕೆ. ಅಲ್ಲಿನ ಧ್ಯಾನಯೋಗ ಮಂದಿರದಲ್ಲಿ ಆತಿಥ್ಯವನ್ನು ಪಡೆದು ಮರುದಿನ ಸ್ವಿಟ್ಝರ್‌ಲ್ಯಾಂಡಿನ ಆರೋಜಕ್ಕೆ ಬರುತ್ತಾರೆ. ಅದು ಮಹರ್ಷಿ ಮಹೇಶ ಯೋಗಿಗಳ "ಅಂತರ್‌ರಾಷ್ಟ್ರೀಯ ಧ್ಯಾನಯೋಗ"ದ ಆಶ್ರಮ ಇರುವ ಸ್ಥಳ. ಮಹೇಶ ಯೋಗಿಗಳು ಇವರನ್ನು ತಮ್ಮ ಆಶ್ರಮಕ್ಕೆ ಆಮಂತ್ರಿಸಿದ್ದರು. ಅತ್ಯಂತ ಸುಂದರವಾದ ಪ್ರಕೃತಿ ಸೌಂದರ್ಯದ ಮಧ್ಯದಲ್ಲಿ ನಿರ್ಮಿತವಾದ ಆ ಆಶ್ರಮಕ್ಕೆ ಹೋಗುವುದೇ ಒಂದು ರೋಮಾಂಚಕಾರಿಯಾದ ಅನುಭವ. ಅಲ್ಲಿ ಜಗದ್ಗುರುಗಳು ವೀರಶೈವ ಧರ್ಮದ ಬಗೆಗೆ ಹಿಂದಿಯಲ್ಲಿ ಮಾಡಿದ ಭಾಷಣವನ್ನು ಸ್ವತಃ ಮಹೇಶ ಯೋಗಿಗಳೇ ಇಂಗ್ಲಿಷಿನಲ್ಲಿ ಅನುವಾದ ಮಾಡಿದುದು ಸ್ಮರಣೀಯ ಘಟನೆಯಾಯಿತು. ಮಹರ್ಷಿಗಳು ಸ್ಥಾಪಿಸಿದ ಆ ಆಶ್ರಮದ ವರ್ಣನೆಯನ್ನು ಮತ್ತು ಅವರ ಸಾಧನೆಯ ಮಹತ್ವವನ್ನು ಸ್ವಾಮೀಜಿಯವರು ಮನದುಂಬಿ ವರ್ಣಿಸಿದ್ದಾರೆ. ಅಷ್ಟೇ ಅಲ್ಲ ನಮ್ಮ ದೇಶದಲ್ಲಿಯೂ ಮಾಡಬಹುದಾದ ಮತ್ತು ಮಾಡಬೇಕಾದ ಇಂತಹ ಕಾರ್ಯಗಳಿಗೆ ಇದು ಪ್ರಚೋದಕವಾದುದಲ್ಲದೆ ಮನದಲ್ಲಿ ಕೋಲ್ಮಿಂಚಿನಂತೆ ಹೊಳೆದು ಅದು ಅಚ್ಚಳಿಯದ ಪ್ರಭಾವವನ್ನು ಮೂಡಿಸುತ್ತದೆ.

ಅಲ್ಲಿಂದ ಮುಂದೆ ಅವರ ಪ್ರಯಾಣ ರೋಮ್‌ಗೆ. ಅಲ್ಲಿ ವ್ಯಾಟಿಕನ್ನಿನಲ್ಲಿ ಪೋಪ್ ಪಾಲ್ ಅವರೊಡನೆ ಸಂದರ್ಶನ ನಿಶ್ಚಿತವಾಗಿತ್ತು. ಆದರೆ ಆಶ್ರಮದ ಕಾರ್ಯಕ್ರಮಗಳಲ್ಲಿ ಹೆಚ್ಚಿನ ಸಮಯ ಕಳೆದು ರೋಮ್‌ಗೆ ಹೋಗಬೇಕಾದ ವಿಮಾನ ತಪ್ಪಿಹೋಗುತ್ತದೆ. ಅದರಿಂದ ಪ್ರಯಾಣ ಅಸ್ತವ್ಯಸ್ತವಾಗಿ ಪೋಪ್‌ಪಾಲರ ಭೆಟ್ಟಿ ಸಾಧ್ಯವಾಗದೇ ಹೋದದ್ದು ಒಂದು ವಿಷಾದದ ಘಟನೆಯಾಗಿ ಪರಿಣಮಿಸುತ್ತದೆ. ರೋಮ್‌ನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಸಾಧನೆಯನ್ನು ಮೆಲುಕುಹಾಕುತ್ತಾ ಅದರ ಪ್ರತ್ಯಕ್ಷ ಪರಿಚಯವನ್ನು ಮಾಡಿಕೊಳ್ಳುತ್ತಾರೆ ಜಗದ್ಗುರುಗಳು. "ರೋಮ್ ನೋಡುವ ಯಾತ್ರಿಕನಿಗೆ ಜಗತ್ತಿನ ಇತಿಹಾಸದ ಪರಿಚಯವಿರಬೇಕು. ಆಗ ಇಲ್ಲಿಯ ಪ್ರತಿ ಕಟ್ಟಡವೂ ಅನೇಕ ರೋಮಾಂಚಕಾರಿ ಯುದ್ಧಗಳ, ಸಂಸ್ಕೃತಿಯ ಶಿಖರಗಳ, ಸಂಹಾರಗಳ, ದೇವತಾ ಆರಾಧನೆಗಳ, ವಿಲಾಸ ವೈಭವಗಳ, ಕ್ರೂರತೆ-ಕಾಮತೆ-ಸಂಸ್ಕೃತಿಯ ಪಶುತ್ವಗಳ, ದೇವತ್ವ ಮಾನವತ್ವ ರಾಕ್ಷಸತ್ವಗಳ ಕಥೆ ಹೇಳುತ್ತವೆ" ಎಂಬ ಅವರ ಮಾತು ಆ ಇತಿಹಾಸದ ಪರಿಭಾವನೆಯಿಂದ ಮೂಡಿ ಬಂದಿದೆ.

ಯಾತ್ರಿಕರನ್ನು ಮೊದಲು ಬರಮಾಡಿಕೊಳ್ಳುವ "ಪ್ಲಾಝಾ ವೆನಿಝಿಯಾ" ಎಂಬ ಬೃಹತ್ ಸೌಧದ ದರ್ಶನದಿಂದಲೇ ಸ್ವಾಮೀಜಿಯವರ ರೋಮ್ ಯಾತ್ರೆ ಪ್ರಾರಂಭ ವಾಗುತ್ತದ. 'ಕೆಪಿಟಾಲಿನ್ ಮ್ಯೂಜಿಯಂ' ರೋಮನ್ ವರ್ತುಲ ಸೌಧ. ಸೇಂಟ್ ಪೀಟರ್ ಚರ್ಚ್, ವ್ಯಾಟಿಕನ್‌ನಲ್ಲಿರುವ ಸೇಂಟ್ ಪೀಟರ್ ಬಾಸಿಲಿಕಾ ಮೊದಲಾದುವು ಗಳನ್ನು ಅತ್ಯಂತ ಕುತೂಹಲದಿಂದ ವೀಕ್ಷಿಸಿ ಅವುಗಳ ಭವ್ಯತೆಗೆ ಮಾರುಹೋಗಿದ್ದಾರೆ. ಮನದುಂಬಿ ಅವುಗಳನ್ನು ವರ್ಣಿಸಿದ್ದಾರೆ. ಇದು ಅವರ ಈ ಎರಡನೆಯ ವಿದೇಶ ಪ್ರವಾಸದ ಕೊನೆಯ ಹಂತ. ಇಲ್ಲಿಂದ ನೇರವಾಗಿ ಭಾರತಕ್ಕೆ ಹಿಂದಿರುಗಿ ೨೩ರ ಮಧ್ಯಾಹ್ನದ ವೇಳೆಗೆ ಮುಂಬೈ ನಗರವನ್ನು ತಲುಪುತ್ತಾರೆ. ಅಲ್ಲಿಂದ ಮರುದಿನ ಗೋವೆ. ಅಲ್ಲಿಂದ ಕಾರಿನಲ್ಲಿ ಹುಬ್ಬಳ್ಳಿ ತಲುಪಿ ಭಕ್ತರ ಆನಂದಭಾಷ್ಪಗಳಲ್ಲಿ ಭಾಗಿಯಾಗುತ್ತಾರೆ.

ಹೀಗೆ ಶ್ರೀ ಜಗದ್ಗುರುಗಳು ಜಾಗತಿಕ ಧರ್ಮ ಮತ್ತು ಶಾಂತಿ ಪರಿಷತ್ತಿನ ಕಾರಣ ದಿಂದ ಎರಡು ಬಾರಿ ವಿದೇಶ ಪ್ರವಾಸವನ್ನು ಕೈಕೊಳ್ಳುವಂತಾದುದು ಮಹತ್ವದ ಘಟನೆ ಯೆಂದೇ ಹೇಳಬೇಕು. ಅದರ ಫಲಶ್ರುತಿಯನ್ನು ಕುರಿತು ಕೊನೆಯಲ್ಲಿ ವೈಚಾರಿಕ ಪರಿಭಾವನೆಯನ್ನು ಹರಿಯಬಿಟ್ಟಿದ್ದಾರೆ. ಧರ್ಮ ತನ್ನ ವಿಪುಲ ವೈವಿಧ್ಯಗಳ ಮಧ್ಯ ದಲ್ಲಿಯೂ ಮಾನವನನ್ನು ಒಗ್ಗೂಡಿಸಬಲ್ಲ ಪ್ರಬಲಶಕ್ತಿಯಾಗಿ ಪರಿಣಮಿಸಬಲ್ಲುದೆಂಬು ದನ್ನು ಈ ಪರಿಷತ್ತಿನ ಎರಡು ಸಮ್ಮೇಳನಗಳು ಸಾಧಿಸಿ ತೋರಿಸಿದುದನ್ನು ಸ್ಮರಿಸಿಕೊಳ್ಳು ತ್ತಾರೆ. ಇಂತಹ ಮುಕ್ತ ಚರ್ಚೆಯಿಂದ ಮಾನವ ಜನಾಂಗ ಹೆಚ್ಚು ಹತ್ತಿರಕ್ಕೆ ಬರಬಲ್ಲು ದೆಂಬುದನ್ನು ಕಂಡುಕೊಂಡಿದ್ದಾರೆ. "ಪ್ರತಿಯೊಬ್ಬನೂ ತನ್ನ ಆಧ್ಯಾತ್ಮಿಕ ಸಾಂಸ್ಕೃತಿಕ ಹಾಗೂ ಸ್ಥಳಿಕ ಸನ್ನಿವೇಶಗಳಿಗೆ ಅನುಗುಣವಾಗಿ ಇಂದಿನಿಂದ ಮಾನವ ಜನಾಂಗಕ್ಕೆ ಸೇವೆ ಸಲ್ಲಿಸಬೇಕೆಂದು ನಾವು ನಿರ್ಧರಿಸಿದ್ದೇವೆ" ಎಂದು ಹೇಳುವ ಮಾತು ಮನನೀಯ ವಾಗಿದೆ.

ಈ ಜಾಗತಿಕ ಧರ್ಮ ಮತ್ತು ಶಾಂತಿಸಮ್ಮೇಳನಗಳು ಮಾನವನ ಇಂದಿನ ತುರ್ತು ಅಗತ್ಯವಾದ ಶಾಂತಿಸಾಧನೆಗಾಗಿ ಕೆಲವು ಮೂಲಭೂತವಾದ ಘೋಷಣೆಗಳನ್ನು ಸಾರಿದು ದಲ್ಲದ ಅವನ್ನು ಕಾರ್ಯಗತಗೊಳಿಸುವತ್ತಲೂ ಆಸಕ್ತಿಯನ್ನು ವಹಿಸಿದುದು ಗಮನಾರ್ಹ ವಾಗಿದೆ. ಈ ಅಂಶವನ್ನು ಜಗದ್ಗುರುಗಳವರು ಕೊನೆಯಲ್ಲಿ ಎತ್ತಿ ಹೇಳಿ ಅದರಲ್ಲಿ ತಾವು ಭಾಗವಹಿಸುವಂತಾದುದಕ್ಕಾಗಿ ಸಮಾಧಾನವನ್ನು ವ್ಯಕ್ತಪಡಿಸಿದ್ದಾರೆ. ಈ ವಿಶ್ವಧರ್ಮ ಸಮ್ಮೇಳನ ಕ್ಯೋಟೋದಿಂದ ಲ್ಯುವೆನ್‌ವರೆಗೆ ಸಾಧಿಸಿದುದೇನೆಂಬುದನ್ನು ಪರಿಭಾವಿಸಿದ್ದಾರೆ. ಭಾವೈಕ್ಯವನ್ನು ಸಾಧಿಸಲು ಇದೊಂದು ದೊಡ್ಡ ಸಾಧನವೆಂಬುದನ್ನು ಕಂಡುಕೊಂಡಿ ದ್ದಾರೆ. ಈ ಎರಡೂ ಸಮ್ಮೇಳನಗಳಲ್ಲಿ ಅವರು ಮಾಡಿದ ಭಾಷಣಗಳನ್ನು ಈ ಗ್ರಂಥದ ಮೂರನೇ ಭಾಗದಲ್ಲಿ ಕೊಟ್ಟಿರುವುದು ತುಂಬಾ ಉಪಯುಕ್ತವಾಗಿದೆ. ಒಟ್ಟಿನಲ್ಲಿ 'ನಮ್ಮ ವಿದೇಶ ಯಾತ್ರೆ' ಎಂಬ ಕೃತಿ ಮನರಂಜನೆಗಾಗಿ ಕೈಕೊಂಡ ಪ್ರವಾಸ ಸಾಹಿತ್ಯಗಳ ಗುಂಪಿಗೆ ಸೇರುವಂತಹುದಲ್ಲ. ಜಾಗತಿಕವಾದ ಮಹತ್ವದ ಉದ್ದೇಶದಿಂದ ದೀಪ್ತವಾದ ಕಾರ್ಯದಲ್ಲಿ

ತೊಡಗುವುದಕ್ಕಾಗಿ ಧರ್ಮಗುರುಗಳೊಬ್ಬರು ಕೈಕೊಂಡ ಅತಿ ವಿಶಿಷ್ಟವಾದ ಯಾತ್ರೆಯ ಕಥನ ಈ ಕೃತಿ. ಅತ್ಯಂತ ವೈಚಾರಿಕವಾದ ವೀರಶೈವ ಧರ್ಮದ ಹಿನ್ನೆಲೆಯನ್ನುಳ್ಳ, ಪ್ರಬುದ್ಧ ಮನಸ್ಸಿನ ಪರಿಪಕ್ವ ಸಾಧಕರಾದ ಮತ್ತು ಸಾಮಾಜಿಕ ಮಹಾ ಕಾರ್ಯಕರ್ತರಾದ 'ಮೂಜಗಂ' ಅವರು ಇದನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಅವರ ಸೃಜನಾತ್ಮಕ ಶಕ್ತಿಯೂ ಇದರಲ್ಲಿ ಮೇಳವಿಸಿರುವುದರಿಂದ ಇದೊಂದು ಸಾಹಿತ್ಯ ಕೃತಿಯೂ ಆಗಿ ಕನ್ನಡ ಪ್ರವಾಸ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯಾಗಿ ಪರಿಣಮಿಸಿದೆ.

## ಪೂಜ್ಯ ಜಗದ್ಗುರುಗಳ ಪ್ರವಾಸಸಾಹಿತ್ಯ:

# 'ನಮ್ಮ ವಿದೇಶ ಯಾತ್ರೆ'–ಒಂದು ಅಪರೂಪದ ಕೃತಿ

ಶ್ರೀ ಎನ್. ಕೆ. ಕುಲಕರ್ಣಿ "ಎನ್ಕೆ"
ಧಾರವಾಡ

ಪೂಜ್ಯ ಜಗದ್ಗುರುಗಳ 'ನಮ್ಮ ವಿದೇಶ ಯಾತ್ರೆ' ಒಂದು ವಿಜಯ ಯಾತ್ರೆ. 'ಸತ್ಯಂ ಶಿವಂ ಸುಂದರಂ' ಎಂಬ ಪರಮ ತತ್ವವನ್ನು ವಿದೇಶಗಳಲ್ಲಿ ವಿಸ್ತರಿಸಿ ಬಂದ ಧರ್ಮ ವೈಜಯಂತಿ ಈ ಪ್ರವಾಸ ಗುರುಗ್ರಂಥ. ಇತಿಹಾಸ ಕಾಲದಲ್ಲಿ ವಿದೇಶೀಯರು ಭಾರತಕ್ಕೆ, ಕರ್ನಾಟಕಕ್ಕೆ ತಮ್ಮ ಶೌರ್ಯದ ಶತಕೃತ್ಯ ಮೆರೆಯಲು ಬಂದು ಹೋಗಿರ ಬಹುದು. ಫಾ–ಹಿಯಾನ್, ಹುಎನ್‌ತ್ಸಾಂಗ, ಪೇಜ್, ಅಬ್ದುಲ್‌ರಜಾಕ್, ನಿಕೊಲೊ ಕೊಂಟಿ ಮೊದಲಾದ ಯಾತ್ರಿಕರು ನಮ್ಮ ನಾಡಿನಲ್ಲಿ ಅಲೆದಾಡಿ ಇಲ್ಲಿಯ ಸಂಸ್ಕೃತಿ ಶಿಲ್ಪವನ್ನು, ಜೀವನಕಲೆಯನ್ನು ಕೊಂಡಾಡಿದ್ದಾರೆ. ಈ ವಿದೇಶೀಯ ಯಾತ್ರಿಕರ ಟಿಪ್ಪಣಿ, ದಿನಚರಿಗಳು ಸಹ ಇತಿಹಾಸವಾಗಿ ಗತಕಾಲದ ಸಂಪುಟದಲ್ಲಿ ಸೇರಿಹೋಗಿವೆ.

ಆದರೆ ಹುಬ್ಬಳ್ಳಿಯ ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ರಾಜ ಯೋಗೀಂದ್ರ ಮಹಾಸ್ವಾಮಿಗಳು ೧೯೭೦ ರಲ್ಲಿ ಮತ್ತು ೧೯೭೪ ರಲ್ಲಿ ಕೈಕೊಂಡ ವಿದೇಶ ಯಾತ್ರೆಯೆಂದರೆ ವಿಶ್ವಶಾಂತಿಯ ವಿಜಯ ಯಾತ್ರೆ; ಜನತಾ ಜಗದ್ಗುರುವಿನ ಚೈತ್ರಯಾತ್ರೆ! ಅಂತೆಯೆ ಅವರು ಬರೆದಿರುವ ಈ ಐತಿಹಾಸಿಕ ಯಾತ್ರೆಯ ದಾಖಲೆ ಮುಂದಿನ ತಲೆಮಾರು ಗಳಿಗೆ ಒಂದು ದೀಪಸ್ತಂಭ. ಧರ್ಮಪೀಠದ ಒಬ್ಬ ಜಗದ್ಗುರುಗಳು ವಿಮಾನ ಯಾತ್ರೆ ಕೈಕೊಂಡು ವಿದೇಶದ ವಿಶ್ವವೇದಿಕೆಯಿಂದ ಧರ್ಮಬೋಧೆ, ಶಾಂತಿಪಾಠವನ್ನು ಘೋಷಿಸಿರು ವುದು ಆಧುನಿಕ ಯುಗದಲ್ಲಿ ಇದೇ ಪ್ರಥಮವೆಂದು ತೋರುತ್ತದೆ.

'ನಮ್ಮ ವಿದೇಶಯಾತ್ರೆ' ಜಗದ್ಗುರುಗಳ ಶಾಂತಿಸಂದೇಶ, ವಿಶ್ವಬಂಧುತ್ವ ಘೋಷಣೆ ಗಾಗಿ ಮಾತ್ರವೆ ಅಲ್ಲದೆ ಪ್ರವಾಸ ಸಾಹಿತ್ಯದಲ್ಲಿರಬೇಕಾದ ಸಕಲ ಸರಸಗುಣಗುಳು ಅದರಲ್ಲಿ ಸಮಾವೇಶವಾಗುವುದರಿಂದ ಈ ಗ್ರಂಥದ ಮೌಲ್ಯ ಇನ್ನಷ್ಟು ಹೆಚ್ಚುತ್ತದೆ; ಅದರ ಆಯಾಮ ಇನ್ನಷ್ಟು ಅಧಿಕಗೊಳ್ಳುತ್ತದೆ.

"ಪ್ರವಾಸ ಸಾಹಿತ್ಯವು ಕಾವ್ಯವಾದಾಗ ಅದರಲ್ಲಿ ಆವೇಶ ತುಂಬಿ, ಭಾವ ಇಲ್ಲವೆ ದರ್ಶನದ ಪ್ರಾಧಾನ್ಯ ಅಲ್ಲಿ ಸಂಭವಿಸುವುದುಂಟು. ಪ್ರವಾಸಸಾಹಿತ್ಯವು ಗದ್ಯವಾದಾಗ ವ್ಯಕ್ತಿಗಳ ಸ್ನೇಹವರ್ತುಲ, ಕಂಡ ದೇಶದ ಸಾಮಾಜಿಕ ಹಾಗೂ ನೈತಿಕ ಪರಿಸ್ಥಿತಿ; ವ್ಯಕ್ತಿ– ವ್ಯಕ್ತಿಗಳ ಸಂದರ್ಶನದಲ್ಲಾದ ಚಮತ್ಕಾರ ಇಲ್ಲವೆ ಮೋಜಿನ ಪ್ರಸಂಗಗಳು–" ಇವೆಲ್ಲದರ ಕಡೆಗೆ ಲೇಖಕನ ಗಮನ ಹರಿಯುತ್ತದೆಂದು ನುಡಿಯುತ್ತ ಡಾ. ವಿ. ಕೃ. ಗೋಕಾಕರು—

"ಗದ್ಯವೇ ಆಗಲಿ, ಪದ್ಯವೇ ಆಗಲಿ ಅದು ನಾವು ಕಂಡ ದೇಶದ ಹಾಗೂ ಜನತೆಯ ಹೃದಯವನ್ನು ಬಿಚ್ಚಿ ತೋರಿಸಬೇಕು. ಇದ್ದಂತೆ ಅದನ್ನು ಜನರೆದುರಿಗೆ ತೆರೆದಿಡಬೇಕು. ಹೃದಯಕ್ಕೆ ಹೃದಯ ಸಾಂಗತ್ಯವಿರದೆ ಪ್ರವಾಸ ಸಾಹಿತ್ಯವೆಲ್ಲಿಂದ ಬಂತು?" ಎಂದು ಪ್ರಶ್ನಿಸಿದ್ದಾರೆ. (ಸಮಗ್ರ ವಿನಾಯಕ ವಾಙ್ಮಯ-೭ ಪ್ರವಾಸ ಸಾಹಿತ್ಯ-ಮುನ್ನುಡಿ) ಈ ಪ್ರಶ್ನೆಗೆ 'ನಮ್ಮ ವಿದೇಶಯಾತ್ರೆ' ಸಮರ್ಪಕ ಉತ್ತರವುಳ್ಳದ್ದಾಗಿದೆ. ದೇಶ ವಿದೇಶಗಳನ್ನು ಸ್ನೇಹ, ತಿಳುವಳಿಕೆಗಳಿಂದ ಬೆಸೆಯುವ ಬಂಧನ ದ್ರವ್ಯ ಈ ಪ್ರವಾಸ ಸಾಹಿತ್ಯದಲ್ಲಿ ಪ್ರಭೂತವಾಗಿದೆ. ಡಾ. ವಿ. ಕೃ. ಗೋಕಾಕರು ಪ್ರವಾಸ ಸಾಹಿತ್ಯವೆಂದರೇನು ಎಂದು ವಿಶ್ಲೇಷಿಸುತ್ತ ಇನ್ನೂ ಹೇಳುತ್ತಾರೆ:

"(ಪ್ರವಾಸ ಸಾಹಿತ್ಯವೆಂದರೆ) ಬರಿ ಜನತೆ ಅಲ್ಲ, ಅಲ್ಲಿಯ ನಿಸರ್ಗದ ರಮಣೀಯ ದೃಶ್ಯಗಳು, ಅಲ್ಲಿಯ ಸಾಮಾಜಿಕ ಪ್ರಗತಿಯನ್ನು ಅಳೆದು ತೋರಿಸುವ ಸಂಸ್ಥೆಗಳು, ಪರಂಪರೆಯನ್ನು ರಕ್ಷಿಸಿಕೊಂಡು ಬಂದ ಅಲ್ಲಿಯ ದೇವಾಲಯಗಳು ಇಲ್ಲವೆ ಭವ್ಯ ಮಂದಿರಗಳು: ಇವೆಲ್ಲ ಓದುಗನ ಮನಸ್ಸಿನಲ್ಲಿ ಅಳಿಸಲಾಗದ ಚಿತ್ರದಂತೆ ಮೂಡಿರಬೇಕು."

ಈ ಸೂತ್ರಗಳಂತೂ ಜಗದ್ಗುರುಗಳ ಪ್ರಸ್ತುತ ಪ್ರವಾಸ ಸಾಹಿತ್ಯಕ್ಕೆ ಅಚ್ಚುಳಿಯದೆ ಅನ್ವಯಿಸುತ್ತವೆ. 'ಮೂಜಗಂ' ಅವರ ಮಹತ್ವಪೂರ್ಣ ವಿದೇಶಯಾತ್ರೆಯ ಅನುಭವ ದರ್ಪಣವಾದ ಈ ಗ್ರಂಥವು ಬೋಧಕವೂ ಆಗಿದೆ, ಮೋದಕವೂ ಆಗಿದೆ. ಸರ್ವಧರ್ಮ ಸಮನ್ವಯ ಸೂತ್ರವೊಂದನ್ನು ಹುಡುಕುವಂತೆ, ವಿಶ್ವಶಾಂತಿಗೆ ಪೂರ್ವಭಾವಿಯಾಗಬೇಕಾಗುವ ಸ್ನೇಹ, ಸಹಿಷ್ಣುತೆಗಳ ಆವಶ್ಯಕತೆಯನ್ನೂ ಮನಗಾಣಿಸುವಂತೆ ಹೇಳುತ್ತದೆ.

ಈ ಹೃದ್ಯವಾದ ಗ್ರಂಥದಲ್ಲಿ ನಾಲ್ಕು ಭಾಗಗಳಿದ್ದು ಪ್ರತಿಯೊಂದು ಭಾಗವೂ ಅದರ ಸಾಹಿತ್ಯಾಸ್ವಾದನೆಗಾಗಿ ಅಷ್ಟೇ ಮಹತ್ವದ್ದಾಗಿದೆ. ಮೊದಲನೆಯ ಭಾಗವು ಜಪಾನಿನ ಕ್ಯೂಟೋದಲ್ಲಿ ಜರುಗಿದ 'ಜಾಗತಿಕ ಧರ್ಮ ಮತ್ತು ಶಾಂತಿ ಪರಿಷತ್ತಿ'ನಲ್ಲಿ ಭಾಗವಹಿಸಲು, ೧೯೭೦ ಅಕ್ಟೋಬರ ೧೨ ರಂದು ಸೋಮವಾರ ಬೆಳಗಾವಿಯಿಂದ ಭಕ್ತಸ್ತೋಮದ ಹಾರ್ದಿಕ ಬೀಳ್ಕೊಳ್ಳುವಿಕೆಯಿಂದ ಮೊದಲಾಗುವ ಜಗದ್ಗುರುಗಳ ಪವನ ಪಯಣವು ಚೈತ್ರಯಾತ್ರೆಯೆನಿಸಿ ಕಲಕತ್ತಾ, ಹಾಂಗ್‌ಕಾಂಗ್ ಮಾರ್ಗವಾಗಿ ಜಪಾನಿನ ಕ್ಯೂಟೊಕ್ಕೆ ಪಾದಗಟ್ಟೆಯನ್ನು ತಲುಪುವವರೆಗಿನ ವರ್ಣನೆಯನ್ನು ಒಳಗೊಳ್ಳುತ್ತದೆ. ಎರಡನೆಯ ಭಾಗದಲ್ಲಿ ೧೯೭೪ರಲ್ಲಿ ಅಗಸ್ಟ ಕೊನೆಗೆ ಬೆಲ್ಜಿಯಮ್‌ನ 'ಲೂವೆನ್'ನಲ್ಲಿ ಜರುಗಿದ ವಿಶ್ವ ಧರ್ಮಗಳ ಶಾಂತಿ ಪರಿಷತ್ತಿಗೆ ತೆರಳಿ ಅಲ್ಲಿಯ ಬಹಿರಂಗ ಸಭೆಯ ನಂತರ ಮುಂದೆ ಯುರೋಪದ ಸಾಂಸ್ಕೃತಿಕ ಯಾತ್ರೆ ವರ್ಣಿತವಾಗುತ್ತದೆ. ಬಹಿರಂಗ ಸಭೆಯಲ್ಲಿ ಜಗದ್ಗುರುಗಳ ಭಾಷಣ ಇಂಗ್ಲೆಂಡ್, ಪ್ಯಾರಿಸ್, ರೋಮುಗಳಿಗೆ ಭೆಟ್ಟಿಗಳು. ಮೂರನೆಯ ಭಾಗದಲ್ಲಿ ಪೂಜ್ಯಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಕ್ಯೂಟೋದಲ್ಲಿ ಅಪ್ಪಣೆ ಕೊಡಿಸಿದ 'ಧರ್ಮ ಮತ್ತು ಶಾಂತಿ' ಸಂದೇಶಹಾಗೂ 'ಲೂವೆನ್'

ನಲ್ಲಿಯ 'ವಿಶ್ವಶಾಂತಿಗೆ ಧರ್ಮ ಗುರುಗಳ ಕೊಡುಗೆ' ಎಂಬ ಸಂದೇಶಗಳ ಕನ್ನಡ ಅವತಾರ ಗಳಿದ್ದರೆ ನಾಲ್ಕನೆಯ ಹಾಗೂ ಕೊನೆಯ ಭಾಗದಲ್ಲಿ ಜಗದ್ಗುರುಗಳು ನೀಡಿದ ಮೂಲ ಇಂಗ್ಲೀಷ್ ಉಪನ್ಯಾಸಗಳು: ೧) Religion and peace ೨) Under developed countries and peace. ೩) Contribution of Religions Heads to world peace ಎಂಬ ಶೀರ್ಷಿಕೆಗಳಲ್ಲಿ.

ಅಲ್ಲಲ್ಲಿಗೆ ಉಚಿತ ಛಾಯಾ ಚಿತ್ರಗಳು ಮುದ್ರಿತವಾಗಿರುವುದು ಗ್ರಂಥಕ್ಕೆ ಚಾಕ್ಷುಷ ಚೆಲುವಿನ ಆಯಾಮವೂ ಬಂದಿದೆ. ಇದರಲ್ಲಿ ನಿಸರ್ಗ ರಮಣೀಯತೆಯ ಚಿತ್ರಗಳಂತೂ ವಿಶೇಷ ರಮ್ಯವಾಗಿವೆ. ಅವು ವರ್ಣರಂಜಿತವಾಗಿದ್ದರೆ ಗ್ರಂಥ ಇನ್ನೂ ನಯನಾಕರ್ಷ ಣೀಯವಾಗಬಹುದಿತ್ತು. ಇದಿಲ್ಲದೆಯೂ ಗ್ರಂಥಾಂತರಂಗವು ತನ್ನ ಸತ್ವದ ತಿರುಳಿನಿಂದ ತತ್ವದ ಹುರುಳಿನಿಂದ, ಮೌಲಿಕ ಮಹಾಸೌಂದರ್ಯವನ್ನು ಪಡೆದೇ ಇದೆ. ಪ್ರವಾಸ ಸಾಹಿತ್ಯದ ಒಲವು ಚೆಲುವುಗಳಿಂದ ರಸಭರಿತವಾದ ಈ ಗ್ರಂಥದ ಬೆಡಗಿನ ಎಡೆಗಳನ್ನು ಗುರುತಿಸಿ ಆಸ್ವಾದಿಸುವುದೀಗ ನಮ್ಮ ಗುರಿ. ಈ ಗ್ರಂಥದ ರಸ ವಿಮರ್ಶೆಯಲ್ಲಿ ಎತ್ತಿ ತೋರಿಸಬಹುದಾದ ಸೀಮಿತಗಳೇನೂ ಕಾಣುತ್ತಿರುವುದಿಲ್ಲ. ಪ್ರಥಮ ಭಾಗದ ಶೀರ್ಷಿಕೆ 'ವಿಶ್ವಶಾಂತಿಗೆ ಚೈತ್ರಯಾತ್ರೆ' ಎಂದಿರುವುದು 'ವಿಶ್ವಶಾಂತಿಗೆ ಚೈತ್ರಯಾತ್ರೆ' ಎಂದಿರ ಬೇಕಿತ್ತು ಎನಿಸುತ್ತದೆ; ಏಕೆಂದರೆ ಅದು ವಿಜಯಯಾತ್ರೆ ಎಂಬರ್ಥವನ್ನು ಉದ್ದೇಶಿಸಿದೆ. 'ಚೈತ್ರಯಾತ್ರೆ' ಎಂದರೆ ವಿಶ್ವ ಸ್ನೇಹವನ್ನು ಪಲ್ಲವಿಸುವ ಯಾತ್ರೆ ಎಂಬರ್ಥದ ರೂಪಕ ಚಿತ್ರವನ್ನೂ ಕಲ್ಪಿಸಬಹುದಾಗಿದೆ.

ಈ ಚೈತ್ರಯಾತ್ರೆಯ ಪ್ರಥಮ ಭಾಗದ ಹಿನ್ನೆಲೆ ಗಾಂಧೀ ಶಾಂತಿ ಪ್ರತಿಷ್ಠಾನದ ಶ್ರೀ ರಂಗರಾವ ದಿವಾಕರರ ಪ್ರೇರಣೆಯೇ ತಮ್ಮನ್ನು ಜಪಾನಯಾತ್ರೆಗೆ ಮುಖ್ಯ ಒಂದು ಕಾರಣ ಎಂಬಂಶವನ್ನು ಎತ್ತಿ ತೋರುತ್ತದೆ. ಭಕ್ತರ ಕೋರಿಕೆ–ಕಳಕಳಿ, ಸಹ ಮಹಾ ಸ್ವಾಮಿಗಳವರ ಕ್ಷೇಮ ಚಿಂತನೆಯನ್ನು ತಮ್ಮ ರಕ್ಷೆಗಾಗಿ ಕಟ್ಟಿಕೊಂಡು ಗುರುಗಳ ಲಿಂ. ಹಾನಗಲ್ಲ ಕುಮಾರಸ್ವಾಮಿಗಳ, ಶ್ರೀ ಗುರುಸಿದ್ಧೇಶ್ವರನ ಕೃಪೆಯನ್ನು ತಲೆಯ ಮೇಲಿಟ್ಟುಕೊಂಡು ಕಾಷಾಯ ತೊಟ್ಟು ಆವುಗೆಗಳನ್ನು ಮೆಟ್ಟಿಕೊಂಡು ಈ ಶತಮಾನದ ಎಪ್ಪತ್ತರ ದಶಕದ ಈ ತರುಣ ವೀರಶೈವ ವಿವೇಕಾನಂದರು ತಮ್ಮ ಶಾಂತಿ ಸಂದೇಶವನ್ನು ಎದೆಯ ಬಟ್ಟಲಲ್ಲಿ ತುಂಬಿಕೊಂಡು ವಿದೇಶಗಳ ವೈಜ್ಞಾನಿಕ ದೃತಗತಿಯ ಪ್ರಗತಿಯನ್ನು ಕಾಣುವ ಸದಿಚ್ಛೆಯನ್ನೂ ತಳೆದು ೧೯೭೦ ಆಕ್ಟೋಬರ ೧೨ ರಂದು ಸೋಮವಾರದಂದು ಪ್ರಸ್ಥಾನ ಬೆಳೆಸುತ್ತಾರೆ. ೮–೧೦ ಸಾವಿರ ಭಕ್ತ–ಭಕ್ತೆಯರ ವಿದಾಯ ಕೇಳಿಕೊಂಡು ಮೂರುಸಾವಿರಮಠದಿಂದ ಹೊರಟು, ನೂರಾರು ಕಾರುಗಳ ಹಿಂಬಲ ಮುಂಬಲ ಬೆಂಬಲ ಗಳಿಂದ ಆವೃತರಾಗಿ ಜಗದ್ಗುರುಗಳು ಬೆಳಗಾವಿ ವಿಮಾನ ನಿಲ್ದಾಣದಿಂದ ತಮ್ಮ ಆಪ್ತ ಕಾರ್ಯದರ್ಶಿಗಳಾದ ಬಹುಶ್ರುತ ಬುದ್ಧಿ ಜೀವಿ ಶ್ರೀ ಎ. ಎಲ್. ಹಿರೇಮಠ, ಮಾನ್ಯ ದೇಶನಾಯಕ, ಶ್ರೀ ರಂಗರಾವ ದಿವಾಕರ ಅವರನ್ನು ಕೂಡಿಕೊಂಡು, ಭಕ್ತರ ಹಿಗ್ಗಿನ

ಹೊನಲಿನಲ್ಲಿ ಮಿಂದು ಅವರ ವಂದನಾಭಿಲಾಷೆಗಳನ್ನು, ಹೂ ಹಾರಗಳೊಡನೆ ಹರ್ಷ ಹಾರೈಕೆಗಳ ಭಾರವನ್ನು ಪ್ರಯಾಸ ಪೂರ್ವಕವಾಗಿ ಹೊತ್ತುಕೊಂಡು ವಿಮಾನವೇರಿ ದಿಲ್ಲಿಯ ತಲುಪಿದ ವರ್ಣನೆ ಆಸಕ್ತ ಓದುಗನಲ್ಲಿ ರೋಮಹರ್ಷದ ಅನುಭವವನ್ನುಂಟು ಮಾಡುತ್ತದೆ. ಮುಂದೆ ದಿಲ್ಲಿಯಿಂದ ಕಲಕತ್ತೆ ತಲುಪಿ ಅಲ್ಲಿ ಇನಕಂಟ್ಯಾಕ್ಸ ಕಮೀಶನರ ರಾದ ಶ್ರೀ ಹೊಸಮನಿಯವರ ಮನೆಯಲ್ಲಿ ತಂಗುತ್ತಾರೆ.

ಹೀಗೆ ಪಯಣದುದ್ದಕ್ಕೂ ಭಕ್ತರು, ಮಿತ್ರರು, ರಾಯಭಾರಿಗಳು ಆತಿಥೇಯರಾಗಿ ದೊರಕುತ್ತಾರೆ. ಮಹಾಸ್ವಾಮಿಗಳ ಲಿಂಗಾರ್ಚನೆ, ಯೋಗ–ಧ್ಯಾನಗಳಿಗೆ ಯೋಗ್ಯ ಅನುವು ಮಾಡಿಕೊಡುತ್ತಾರೆ. ಮುಂದೆ ಯುರೋಪಯಾತ್ರೆಯಲ್ಲಿ ಹೋಟೆಲ್‌ನಲ್ಲಿ ತಂಗುವ ಪ್ರಸಂಗ ಬಂದಾಗಲೂ ಅಲ್ಲಿ ತಮ್ಮ ನಿತ್ಯಾನುಷ್ಠಾನಕ್ಕೆ ಅನುಕೂಲ ವಾತಾವರಣ ವಿದ್ದು ಧ್ಯಾನಾರ್ಚನೆಗಳ ನಿತ್ಯ ನೈಮಿತ್ತಿಕಗಳನ್ನು ಅನುಸರಿಸಿಕೊಂಡು ಹೋಗುವ ನಿಷ್ಠಾ ವಂತಿಕೆಯ ನಿದರ್ಶನ ಪಡೆಯುತ್ತೇವೆ. ಒಮ್ಮೊಮ್ಮೆ ಸ್ನಾನ, ಧ್ಯಾನ, ಜಪಗಳಿಗೆ ಯೋಗ್ಯ ಜಲ–ಸ್ಥಲಗಳ ಅನುಕೂಲ್ಯವದಗದಿದ್ದಾಗ ದಿನಗಟ್ಟಲೆ ಉಪವಾಸ; ಸ್ನಾನ ಧ್ಯಾನಕ್ಕೆ ಅನುಕೂಲವಾಗಿ ಆರೋಗಣೆಗೆ ಯೋಗ್ಯ ಆಹಾರ ಸಾಧ್ಯತೆ ಇಲ್ಲದಾಗ ಎಂಟು- ಹತ್ತು ದಿನ ಬರಿ ಹಣ್ಣು ಹಾಲಿನ ಮೇಲೆಯೆ ಉದರಯಾತ್ರೆ ನಡೆಸುವ ಜಗದ್ಗುರುಗಳ ಕಠಿಣ ನೇಮ ವ್ರತಗಳನ್ನು ನೆನೆದು ಅಗಾಧ ಪಡುತ್ತೇವೆ. ಒಂದು ಸಂದರ್ಭದಲ್ಲಿ ಜಗದ್ಗುರುಗಳು ಮಡಿಮನದಿಂದ ಏಕಾಂತಸಕ್ತರಾಗಿ ಚಿತ್ತೈಕಾಗ್ರತೆಯ ಲಿಂಗಾರ್ಚನೆಯಲ್ಲಿ ದ್ದಾಗ ಒಬ್ಬ ಅತಿಥಿ ದುಡುಮ್ಮನೆ ಒಳಗೆ ಪ್ರವೇಶ ಮಾಡಿಬಿಟ್ಟಾಗ ಗುರುಗಳು ಕ್ಷಣ ಹೊತ್ತು ಒಳಗಿನ ಬೇಸರವನ್ನು ತಳೆದರೂ ಅದನ್ನು ನಿಗ್ರಹಿಸಿಕೊಂಡು ವಿಶಾಲ ಮನೋ ಭಾವ ತೋರಿದಾಗ ಆ ಆಗಂತುಕರು ತಮ್ಮ ಅಧಿಕ ಪ್ರಸಂಗಕ್ಕೆ ತಾನೇ ಪಶ್ಚಾತ್ತಾಪ ಪಡುವಂತಾಗುತ್ತದೆ. ಇಂತಹ ವರ್ಣನೆಗಳು ಉದ್ದಕ್ಕೂ ರಾಜಯೋಗಿಗಳ ಚರ್ಯೆಯಲ್ಲಿ ಹಲವಾರು. ವಿದೇಶ ಮಹಿಳೆಯರು, ಮಹನೀಯರು, ಪತ್ರಕರ್ತರು, ಪ್ರತಿನಿಧಿಗಳು, ವಿದೇಶೀಯ ಧರ್ಮ ಗುರುಗಳು ಜಗದ್ಗುರುಗಳ ಕಾಷಾಯ ವೇಷ, ಹಿಂದೀ ಭಾಷೆ, ಮುಖದ ಒಂದು ಅಲೌಕಿಕ ಕಳೆ ನೋಡಿ ತಮ್ಮ ಬೆರಗು, ಕೌತುಕ ಭಾವಗಳನ್ನು ವ್ಯಕ್ತ ಪಡಿಸಿ ಅವರ ವಾಗ್ಮಿಯತೆಗೆ,ವೈಚಾರಿಕತೆಗೆ ಮುಗ್ಧರಾಗಿ ಹೋದಉದಾಹರಣೆಗಳು ಎಷ್ಟೋ! ವಿಶ್ವಶಾಂತಿಸಭೆಗಳಲ್ಲಿ ಹಲವಾರರಲ್ಲಿ ಕೆಲವರನ್ನೇ ಆಯ್ಕೆ ಮಾಡುವ ಸಂದರ್ಭದಲ್ಲಿ ಸ್ಟಿಯರಿಂಗ್ ಕಮೀಟಿಯವರು ನಮ್ಮ 'ಮೂಜಗಂ' ಅವರನ್ನೇ ಆರಿಸುತ್ತಿರುವುದು ಸೋಜಿಗದಷ್ಟೇ ಹೆಮ್ಮೆಯನ್ನು ತರುತ್ತದೆ.

ಜಗದ್ಗುರುಗಳು ಕಲಕತ್ತೆಯನ್ನು ತಲುಪಿದರಷ್ಟೆ? ಅಲ್ಲಿಂದ ೧೪ ರಂದು (ಅಕ್ಟೋಬರ ೧೯೭೦) ಮುಂಜಾನೆ ಏರ್ ಇಂಡಿಯಾ ಇಂಟರ ನ್ಯಾಶನಲ್ ಸರ್ವೀಸಿನ ಬೋಯಿಂಗ್ ವಿಮಾನವನ್ನೇರಿ ಶ್ರೀ ದಿವಾಕರ ಮತ್ತು ಶ್ರೀ ಹಿರೇಮಠ ಸಮೇತರಾಗಿ ಹಾಂಗ್‌ಕಾಂಗ್ ಮಾರ್ಗವಾಗಿ ೧೫ಕ್ಕೆ ಜಪಾನಿನ ಕ್ಯೋಟೋ ತಲ್ಲುಪುತ್ತಾರೆ. "ಪ್ರವಾಸ

ಮಧ್ಯದಲ್ಲಿ ನಮ್ಮ ಪೂಜಾವಿಧಿಗೆ ಯಾವ ತೊಂದರೆಯೂ ಉಂಟಾಗಲಿಲ್ಲ" ಎಂಬ ಸಮಾಧಾನ ದೊಡ್ಡದು ನಮ್ಮ ಯತಿಯಾತ್ರಿಕರಿಗೆ. ಇದಕ್ಕಾಗಿ ಹಾಂಗ್‌ಕಾಂಗ್‌ನಲ್ಲಿ ಏರ್ ಇಂಡಿಯಾದವರು ವ್ಯವಸ್ಥೆ ಮಾಡಿದ್ದ ನಿವಾಸದಲ್ಲಿ ತಂಪಾಗಿ ತಂಗಿದ ನಿಮಿಷಗಳನ್ನು ಲೇಖಕರು ಲವಲವಿಕೆಯಿಂದ ನೆನೆಯುತ್ತಾರೆ.

ಕ್ಯೂಟೋದಲ್ಲಿ ಅಕ್ಟೋಬರ ದಿ. ೧೬ ಶುಕ್ರವಾರ ಬೆಳಿಗ್ಗೆ ೯-೩೦ಕ್ಕೆ ಆರಂಭವಾದ 'ವಿಶ್ವಧರ್ಮ ಮತ್ತು ಶಾಂತಿ ಪರಿಷತ್ತಿ'ನ ಬಹಿರಂಗ ಅಧಿವೇಶನಕ್ಕೆ ನಾಲ್ವತ್ತು ರಾಷ್ಟ್ರಗಳಿಂದ, ಮೂರುನೂರಕ್ಕೂ ಮೇಲ್ಪಟ್ಟು ಪ್ರತಿನಿಧಿಗಳು ಭಾಗವಹಿಸಿದ್ದರೆಂದು ತಿಳಿಸುತ್ತ ಲೇಖಕರು, ಈ ಪ್ರತಿನಿಧಿಗಳು ಹಿಂದೂ, ಜೈನ, ಸೀಖ, ಬೌದ್ಧ, ಕ್ರಿಶ್ಚಿಯನ್, ಮುಸ್ಲಿಂ, ಬಿಹಾಯಿ, ಮುಹಮ್ಮದೀಯ, ಫಾರಸಿ, ಸಿಂಟೋ, ಕನ್‌ಫ್ಯೂಶಿಯನ್, ಜ್ಯೂ ಮುಂತಾದ ಭಿನ್ನ ಭಿನ್ನ ಧರ್ಮದವರು ತಮ್ಮ ಪ್ರಭೇದಗಳನ್ನು ಮರೆತು, ಮಾನವ ಧರ್ಮದ ಸರ್ವೋತ್ತಮ ಧ್ಯೇಯವನ್ನು ಚರ್ಚಿಸಿ ಶಾಂತಿಯನ್ನು ಪ್ರಸ್ತಾಪಿಸಲು ಒಂದೆಡೆ ಸೇರಿದ ಈ ಅಪ್ರತಿಮ ಸಮ್ಮೇಳನ ಇದಾಗಿದ್ದಿತು—ಎಂದು ಮನಮುಟ್ಟುವಂತೆ ಹೇಳಿರುವ ಮಾತು ಪ್ರಸ್ತುತದಲ್ಲಿ ವಿಶೇಷ ಮೌಲಿಕ: "ಈ ಮಾನವ್ಯ ಸ್ತೋಮ ೧) ಮಾನವೀಯ ಹಕ್ಕು ಬಾಧ್ಯತೆಗಳ ಸಂರಕ್ಷಣೆಯಿಂದ ಕೂಡಿದ ಶಾಂತಿ ೨) ಆರ್ಥಿಕ ಸಾಮಾಜಿಕ ದೃಷ್ಟಿಯಿಂದ ಹಿಂದುಳಿದ ರಾಷ್ಟ್ರಗಳ ಪ್ರಗತಿಪರವಾದ ಶಾಂತಿ ೩) ಮಾರಕ ಶಸ್ತ್ರಾಸ್ತ್ರಗಳ ಸನ್ಯಾಸ ಯುಕ್ತವಾದ ಶಾಂತಿ— ಈ ತ್ರಿವಿಧ ಶಾಂತಿ ಸ್ಥಾಪನೆಯೇ ಈ ಮಹಾಸಭೆಯ ಕೇಂದ್ರೋದ್ದೇಶ. (ಪು. ೧೨.) ಹಿಂದೂ ಧರ್ಮದ ಉಪಸಮಿತಿಯಲ್ಲಿ ಜಗದ್ಗುರುಗಳು 'ಹಿಂದೂ ಧರ್ಮದಲ್ಲಿ ವೀರಶೈವ ಧರ್ಮವು ವಿಶ್ವಧರ್ಮವಾಗಬಲ್ಲ ಮೌಲ್ಯಗಳನ್ನು ಹೊಂದಿದೆ'ಎಂಬ ವಿಷಯವನ್ನು ದಾರ್ಶನಿಕವಾಗಿ ಸಿದ್ಧ ಮಾಡಿ ತೋರಿಸಿದಾಗ ಉಪಸಮಿತಿ ಅದನ್ನು ಗೌರವದಿಂದ ಸ್ವೀಕರಿಸಿತು. (ಪು. ೧೫.)

ಅಂದು ಸಂಜೆ ಜಪಾನ ಧಾರ್ಮಿಕ ಸಂಸ್ಥೆ ಏರ್ಪಡಿಸಿದ್ದ ವಿನೋದಾವಳಿಯ ಅಂಗವಾಗಿ ಜಪಾನ ದೇಶದ ಜಾನಪದ ಶೈಲಿಯ ಸಂಗೀತ ನರ್ತನಗಳ ಜೋಡಣೆ, ದೇಶೀಯ ವಿವಿಧಾಲಂಕಾರಗಳ ಉಡುಪು, ಅವರ ವಾದ್ಯವೃಂದಗಳ ಸ್ವರ ಸಂಸೃಷ್ಟಿ ನಿರ್ಮಿಸಿದ ಅಗಾಧ ಪರಿಣಾಮವನ್ನು ಇಲ್ಲಿ ಕಲೈಕ ದೃಷ್ಟಿಯಿಂದ ಮೆಚ್ಚುವ ಇವರ ವಿಶಾಲ ಮನೋಭಾವವನ್ನು ನೀವು ಮೆಚ್ಚಬೇಕು.

ಅಕ್ಟೋಬರ ೧೭ ರಂದು ನಮ್ಮ ಪೂಜ್ಯ ಜಗದ್ಗುರುಗಳು ಸರ್ವಧರ್ಮ ಸಮ್ಮೇಳನವನ್ನುದ್ದೇಶಿಸಿ ಇಂಗ್ಲೀಷ್‌ನಲ್ಲೇ ಮಾತನಾಡಿದರು. ಈ ದಿನವೆಂದರೆ ಜಗದ್ಗುರುಗಳ ಸಾಧು ಜೀವನದಲ್ಲಿಯೇ ಒಂದು 'ಮೈಲುಗಲ್ಲು' ಎನಿಸಿಕೊಂಡಿತು. ಆ ದಿನ ನಸುಕು ಹರಿಯುವುದರೊಳಗಾಗಿ ಎದ್ದು ಸ್ನಾನ ಪೂಜಾದಿಗಳನ್ನು ಪೂರೈಸಿದ ಹೊತ್ತಿಗೆ ಮೂಡಣ ಬೆಟ್ಟದಲ್ಲಿ ನೇಸರು ಥಳಥಳಿಸಿದ. "ಓ, ಇಂದು ನಮ್ಮ ಸರದಿ. ನಾವು ಕನ್ನಡಿಗರಿಂದ

ಹೊತ್ತು ತಂದ ಕರ್ತವ್ಯ–ಭಾರವನ್ನು ನೀಗಿಸಬೇಕಾದ ಸುಸಂಧಿ" ಎಂಬ ಜಗದ್ಗುರು ಪೀಠದ ಜಾಗತಿಕ ಕಲ್ಯಾಣ ಪ್ರಜ್ಞೆಯಿಂದ ಜಾಗರಗೊಂಡು ಸನ್ನದ್ಧರಾದರು.

ಸಭಾಸದರ ಹರ್ಷೋದ್ಗಾರದ ಕರತಾಡನ ಮಧ್ಯದಲ್ಲಿ ವೇಳೆಗೆ ಸರಿಯಾಗಿ ಸಭಾ ಮಂದಿರದ ಭವ್ಯ ವೇದಿಕೆಯನ್ನೇರಿದರು ನಮ್ಮ ರಾಜಯೋಗೀಂದ್ರರು. "ನಾವು ಧರಿಸಿದ್ದ ಕಾಷಾಯಾಂಬರ, ವಿಭೂತಿ, ಕೈಯಲ್ಲಿ ಹಿಡಿದ ಯೋಗದಂಡ ಇವು ಅವರ ಕರತಾಡನಕ್ಕೆ ಮೂಲ ಪ್ರೇರಣೆಯೆಂಬದು ನಮಗೆ ತಿಳಿದು ತುಂಬ ಸಂತೋಷವಾಯಿತು. ವೇದಿಕೆಯ ಮೇಲೆ ಟೆಲಿವಿಜನ್, ಚಲನಚಿತ್ರ, ದೇಶವಿದೇಶದ ಪತ್ರಿಕೆಗಳ ಛಾಯಾಗ್ರಾಹಕರ ಪ್ರಚಂಡ ಫ್ಲ್ಯಾಶ್‌ಗನ್ ಪ್ರಕಾಶಗಳ ಸುರಿಮಳೆಯಲ್ಲಿ ನಾವು ಒಂದು ನಿಮಿಷ ಮೌನವಾಗಿ ನಿಂತು ಅಂತರಂಗದಲ್ಲಿ ಪರಮಾತ್ಮನನ್ನು ಧ್ಯಾನಿಸಿದೆವು. ಪ್ರಭು ಶಕ್ತಿ ತಾನೇ ತಾನಾಗಿ ಮಿಂಚಿನಿಂದ ಧುಮುಕಿ ಬಂದಿತು" ಎಂಬ ಲೇಖಕರ ಈ ಸಾಲುಗಳನ್ನು ಗಮನಿಸಬೇಕು. ಮರುಕ್ಷಣ ಮಹಾಸ್ವಾಮಿಗಳ ಭಾಷಣ ಇಂಗ್ಲಿಷ್‌ನಲ್ಲಿ ಮೊದಲಾಯಿತು. "Fellow Seekers of Peace" ಎಂದು ಮಹಾಜನ ಸಮುದಾಯವನ್ನುದ್ದೇಶಿಸಿದಾಗ ಸಭಾ ಮಂದಿರವು ಹರ್ಷೋದ್ಗಾರಗೈದು ಮುಂದೆ ತದೇಕಚಿತ್ತದಿಂದ ಅವರ ಸುಂದರ ಶೈಲಿಯ ಭಾಷಣವನ್ನು ಕಿವಿಯಾರೆ ಕೇಳತೊಡಗಿತು. ಧರ್ಮ ಮತ್ತು ಶಾಂತಿಯನ್ನು ಕುರಿತ ಈ ಐತಿಹಾಸಿಕ ಭಾಷಣವನ್ನು ಜಗದ್ಗುರುಗಳು ಕಾವ್ಯಮಯವಾಗಿ ಪ್ರಾರಂಭಿಸಿದರು:

"I am very happy to be here in your midst in Japan, the Land of the Rising Sun, as also the Land of Beauty and the Home of Religion."

ಬುದ್ಧನ ಅಹಿಂಸಾ ಬೋಧದಿಂದ ಪ್ರಬುದ್ಧವಾದ ಜಪಾನ ಅಣುಬಾಂಬಿಗೆ ತನ್ನ ಸಂಸ್ಕೃತಿಸಹಿತವಾಗಿ ಭಸ್ಮವಾಗಿ ಹೋಯಿತೇನೋ ಎಂಬ ಭಯುವುಂಟಾದಾಗ ಮತ್ತೆ ಆ ಬೂದಿಯ ರಾಶಿಯಲ್ಲಿಯೆ ಬಂಗಾರದಂತಹ ದೇಶ ತಲೆಯೆತ್ತಿರುವುದು ಆ ದೇಶದ ಅದ್ಭುತ ಪೌರುಷದ ಪವಾಡವಾಗಿದೆ. ಪುನರುತ್ಥಾನ, ಪ್ರಗತಿ, ಔದ್ಯೋಗಿಕ ಕೈಗಾರಿಕಾಭಿವೃದ್ಧಿಗಳ ಧೋರಣೆಯನ್ನೇ ತನ್ನ ಜೀವದುಸಿರಾಗಿ ಮಾಡಿಕೊಂಡು ಅದು ಸಾಂಸ್ಕೃತಿಕವಾಗಿ ದ್ರುತಗತಿಯಲ್ಲಿ ಬೆಳೆದು ಬಂದ ರೀತಿಯನ್ನು ಲೇಖಕರು ತುಂಬ ಮೆಚ್ಚಿಕೊಂಡು ಜಪಾನ್ ಜನತೆಯ ಕಷ್ಟಸಹಿಷ್ಣುತೆ, ಧರ್ಮಸಹಿಷ್ಣುತೆ, ಅರ್ಪಣ ಭಾವಗಳನ್ನು ಎತ್ತಿ ಹಿಡಿದು ಮಾತನಾಡಿದರು. "ಧರ್ಮ ಮತ್ತು ಶಾಂತಿ ವಿಚಾರವನ್ನು ಕುರಿತು ವೀರಶೈವ ಧರ್ಮವು ವಿಶ್ವಧರ್ಮಕ್ಕೆ ಪೂರಕವಾಗಿದೆ" ಎಂಬ ಹೊಸ ವಿಚಾರವನ್ನು ವಿಸ್ತರಿಸುತ್ತ "ಶರಣರು ಸಾರಿದ ಸ್ತ್ರೀ ಸ್ವಾತಂತ್ರ್ಯ, ಜಾತ್ಯಾತೀತ ಭಾವನೆ, ಉಪ ಜಾತಿಗಳ ನಿರಸನ, ಕ್ರಿಯಾ ಜ್ಞಾನಗಳ ಸಾಮರಸ್ಯ, ಅಂತರಂಗ ಬಹಿರಂಗ ಶುದ್ಧಿ, ಸಕಲ ಜೀವರಾಶಿಯ ಮುಕ್ತ ಸೇವೆ—" ಈ ತತ್ವಗಳನ್ನು ಸಾಧಾರಪೂರ್ವಕವಾಗಿ ವಿವೇಚಿಸಿದರು. ವೀರಶೈವ ಧರ್ಮವು ಸಮಗ್ರ ಮಾನವ ಧರ್ಮದ ತತ್ವಗಳನ್ನು, ತಿರುಳು–ಹುರುಳುಗಳನ್ನು ಅಳವಡಿಸಿ

ಕೊಂಡಿರುವುದನ್ನು ಅರ್ಥೈಸಿ ಹೇಳುತ್ತ "ಧರ್ಮದಲ್ಲಿ ರಾಜಕಾರಣ ಸೇರಬಾರದು, ರಾಜ ಕಾರಣದಲ್ಲಿ ಧರ್ಮ ಸೇರಬೇಕು" ಎಂದು ಘೋಷಿಸಿದಾಗ ಆ ಮಿಂಚಿನ ಮಾತಿಗೆ ಹರ್ಷೋದ್ಗಾರದ ಸ್ವಾಗತ! ಜಗದ್ಗುರುಗಳು ತಮ್ಮ ಪ್ರಬೋಧಕ, ಪ್ರಾಸಾದಿಕ ಭಾಷಣ ಮುಗಿದಾಗ ಪತ್ರಿಕಾಕರ್ತರು, ಪ್ರತಿನಿಧಿಗಳು ಇತರ ಅಭಿಮಾನಿಗಳು ಅವರನ್ನು ಸುತ್ತುಗಟ್ಟಿದರು. ಯಾರು ಛಾಯಾ ಚಿತ್ರಗಳನ್ನು ತೆಗೆದರು, ಯಾರು ವೀರಶೈವ ಧರ್ಮ ಅದರ ಆಚರಣೆಗಳ ಬಗ್ಗೆ ಜಿಜ್ಞಾಸಾತ್ಮಕ ಪ್ರಶ್ನೋತ್ತರಗಳನ್ನು ನಡೆಸಿದರು, ಯಾರು ವಿಭೂತೀ ರುದ್ರಾಕ್ಷಿಗಳನ್ನು ಸ್ವೀಕರಿಸಿದರು, ಯಾರು ಲಿಂಗ ಪೂಜಾ ಪದ್ಧತಿಯನ್ನು ತಿಳಿದುಕೊಂಡರು.

ಶಾಂತಿ ಪರಿಷತ್ತಿನ ಮುಕ್ತಾಯವಾದ ಮೇಲೆ ಅದರ ಸಂಯೋಜಕರು ಪ್ರಸಿದ್ಧ ಪಟ್ಟಣಗಳ ಸಂದರ್ಶನ ಏರ್ಪಡಿಸಿದ್ದರು. ೧೧ ಅಕ್ಟೋಬರ್ ೧೯೭೦ ರಂದು ಏರ್ಪಡಿಸಲಾಗಿದ್ದ ಐತಿಹಾಸಿಕ ಸ್ಥಳಗಳಾದ ಕ್ಯೂಟೊ, ನಾರಾ ಮತ್ತು ಟೇರಾಗಳ ಪ್ರವಾಸ, ಸಂದರ್ಶನಗಳಲ್ಲಿ ಕ್ಯೂಟೋದ ನಿಸರ್ಗ ರಮಣೀಯತೆ ಲೇಖಕರ ಕವಿ ಹೃದಯವನ್ನು ವಿಶೇಷವಾಗಿ ಆಕರ್ಷಿಸಿದೆ. 'ಅದರ ಮೂರು ದಿಕ್ಕುಗಳನ್ನು ಹಸಿರು ಪರ್ವತ ಶ್ರೇಣಿ ಆವರಿಸಿದ್ದರಿಂದ ತಾಯ ಮಡಿಲಲ್ಲಿ ಮಗು ಸೊಂಪಾಗಿ ನಿದ್ರಿಸಿದಂತೆ ಆ ಪಟ್ಟಣವು ತೋರುತ್ತದೆ' ಎಂದು ತಾಯಿಮಗುವಿನ ಸುಂದರ ಪ್ರತಿಮೆಯಿಂದ ವರ್ಣಿಸುತ್ತಾರೆ. ಐತಿಹಾಸಿಕ ಹೆ ಇನ್ ಮಂದಿರ ಚಕ್ರವರ್ತಿ ಕಾಮು (ಕ್ರಿ.ಶ. ೭೮೪)ನ ೧೧೦೦ ನೆಯ ವರ್ಷದ ಸ್ಮಾರಕವಾಗಿ ನಿರ್ಮಿತವಾದದ್ದು. 'ಪ್ರಕೃತಿಯ ಹೊಂಬಣ್ಣಗಳೊಂದಿಗೆ ಮಾನವ ನಿರ್ಮಿತ ಈ ಕಲಾಸೌಧವು ಹಸಿರು ವೃಕ್ಷಗಳ' ಲಲಿತವಾದ ಪುಷ್ಪಿತ ವನಶ್ರೀಯ ಶ್ರೇಣಿ ಮಧ್ಯದ ತಿಳಿನೀರಿನ ಹೊಂಡಗಳು, ಅದಕ್ಕೆ ಹೊಂದಿದ ಉದ್ಯಾನವನಗಳು ಕಾವ್ಯಮಯವಾಗಿ ಶಬ್ದದ್ವಾರಾ ಚಿತ್ರಿತವಾಗಿವೆ. ಮುಂದೆ ಜೋಡೋ ಸಂಪ್ರದಾಯಕ್ಕೆ ಸೇರಿದ ಶ್ರೇಷ್ಠ ಜಪಾನೀ ಮಾದರಿಯ ಚಿಯಾನ್-ಇನ್ ದೇವಾಲಯ, ೧೯೫೫ರಲ್ಲಿ ರ್‍ಯೋಝೆನ್ ಕ್ಯೂನಾನ್‌ದಲ್ಲಿ ನಿರ್ಮಿತವಾದ ಕರುಣಾಳು ದೇವತೆ (Godess of Mercy) ೧೫ ಫೂಟು ಎತ್ತರದ ಭವ್ಯ ಮೂರ್ತಿಯಾಗಿದ್ದು ಅದನ್ನು ಸಂದರ್ಶಿಸಲು 'ಕಂಬನಿಯಮಾಲೆಯನ್ನು ಎದೆಯ ಬಟ್ಟಲೊಳಿಟ್ಟು ನಾವಿಲ್ಲಿ ಬರಬೇಕು' ಎಂದು ಲೇಖಕರು ಹೃದಯ ಸ್ಪರ್ಶಿಯಾಗಿ ನುಡಿದಿದ್ದಾರೆ. ದ್ವಿತೀಯ ಮಹಾ ಯುದ್ಧದಲ್ಲಿ ಕೊನೆಯ ಹಂತದಲ್ಲಿ ಹಿರೋಶಿಮಾ, ನಾಗಾಸಾಕಿ ಪಟ್ಟಣಗಳು ಆ್ಯಟಂಬಾಂಬ್‌ಗೆ ಆಹುತಿಯಾಗಿ ಲಕ್ಷಾವಧಿ ಜನರು ಮೃತ್ಯು ದೇವತೆಗೆ ಬಲಿಯಾದ ಕರುಣ ಕಥೆಯನ್ನು ಹೇಳುವಂತಿದೆ ಈ ಕರಣಾಳು ದೇವತೆ.

ಮುಂದೆ ಕೆಲವು ಬೌದ್ಧ ದೇವಾಲಯಗಳ ದರ್ಶನ ತೆಗೆದುಕೊಂಡಾಗ ಜಗದ್ಗುರುಗಳ ಹೃದಯದಲ್ಲಿ ಮೂಡಿ ಬಂದ ಭಾವನೆಗಳಿವು: "ಕ್ಯೂಟೋದ ಬೌದ್ಧ ಮಂದಿರಗಳಲ್ಲಿ ವ್ಯವಸ್ಥೆ, ಶಿಸ್ತು, ಸಂಘಟನೆ ಬಂದವರನ್ನು ಹಾರ್ದಿಕವಾಗಿ ಸ್ವಾಗತಿಸುವ ವಿಧಾನ ನಮ್ಮನ್ನು ಬೆರಗುಗೊಳಿಸಿದವು. ಆಯಾ ದೇವಾಲಯಗಳಲ್ಲಿ ಬಹಿರಂಗದ ಶಾಂತಿ, ಶಿಸ್ತು, ಪರಿಪಾ

ಲನೆಯ ವಾತಾವರಣದಲ್ಲಿಯೇ ಭಕ್ತಿಯು ತಾನಾಗಿ ಪ್ರಕಟವಾಗುವಂತೆ ಅವರು ವ್ಯವಸ್ಥೆ ಮಾಡಿದ್ದರು." ನಮ್ಮಲ್ಲಿಯ ಹಾಗೆ ಅಲ್ಲಿ ದೇವಾಲಯಗಳ ಸುತ್ತ ಭಿಕ್ಷುಕರಾಗಲಿ ಬಿಡಾಡಿ ನಾಯಿಗಳಂಥ ಕೀಳು ಪ್ರಾಣಿಗಳಾಗಲಿ, ತಿಪ್ಪೆ, ಎಂಜಲು, ಹೊಲಸಾಗಲಿ ಎಲ್ಲಿಯೂ ಕಾಣಲಿಲ್ಲ – ಆ ಎಲ್ಲ ದೇವಾಲಯಗಳು ನಿಜವಾಗಿ 'ದೇವರ–ಆಲಯ'ಗಳಾಗಿದ್ದವು ಎಂದು ಉದ್ಗಾರ ತೆಗೆದಿದ್ದಾರೆ.

ಪ್ರವಾಸಿಗರ ನಂದನವನವೆನಿಸಿದ 'ನಾರಾ' ವನವೃಕ್ಷ ರಾಜಿಯಿಂದ ಸುತ್ತುವರಿಯಲ್ಪಟ್ಟು ಇಲ್ಲಿ ಓಕ ಮರಗಳು ಬೆಳೆದು ಅವುಗಳ ಹಸಿರಿನಿಂದ ಪಟ್ಟಣದ ಬೆಡಗು ಇಮ್ಮಡಿಸಿದೆಯೆಂದು ಲೇಖಕರು ವಿವರಿಸುತ್ತ 'ಜಪಾನಿಗರ ಧಾರ್ಮಿಕ ಶ್ರದ್ಧೆಗೆ ಇದು ತವರೂರು' ಎಂದು ನುಡಿದಿದ್ದಾರೆ. ಎಂಟು ಶತಮಾನಗಳ ಪೂರ್ವದ ಬೌದ್ಧ ಸನ್ಯಾಸಿ ಮಠಗಳು ಈ ಪಟ್ಟಣದ ಪ್ರಾಚೀನತೆಗೆ ಸಾಕ್ಷಿಯಾಗಿವೆ. ಒಂದು ಕಾಲಕ್ಕೆ ಜಪಾನಿನ ರಾಜಧಾನಿಯಾಗಿದ್ದ ಈ 'ನಾರಾ'ದ ಬೌದ್ಧ ವಿಹಾರಗಳು, ಮಂದಿರಗಳು ಇನ್ನೂ ಅಚ್ಚಳಿಯದೆ ಅಂದವಾಗಿ ಮೆರೆಯುತ್ತಿವೆ– ಈ ನಗರದ ಸಂಖ್ಯೆ ಒಂದೂವರೆ ಲಕ್ಷದಷ್ಟಿದ್ದರೂ ಅದರ ವನ್ಯ ಸೌಂದರ್ಯಕ್ಕೆ ಬಾಧೆಯುಂಟಾಗಿಲ್ಲವೆಂದು ಹೇಳುತ್ತಾರೆ.

ಟೆನ್ರಿಕ್ಯೊ ಎಂಬ ಪೀಠ ಟೆನ್ರಿ ಎಂಬ ನಗರದಲ್ಲಿದ್ದು ಅಲ್ಲಿ ಶಿಶು ವಿಹಾರದಿಂದ ಹಿಡಿದು ವಿಶ್ವವಿದ್ಯಾಲಯದವರೆಗೆ ಧಾರ್ಮಿಕ ಶಿಕ್ಷಣವನ್ನೂ, ಧಾರ್ಮಿಕ ಅಧ್ಯಯನವನ್ನೂ ನೀಡಲಾಗುತ್ತಿದೆ. ಇಲ್ಲಿಯ ವೈದ್ಯಕೀಯ ವಿದ್ಯಾ ಮಂದಿರಗಳಲ್ಲಿ ಔಷಧಿಯೊಂದಿಗೆ ಆಧ್ಯಾತ್ಮಿಕ ಶಿಸ್ತನ್ನೂ ಕಲಿಸಲಾಗುತ್ತಿರುವುದು ವೈಶಿಷ್ಟ್ಯಪೂರ್ಣವಾಗಿದೆ ಎಂಬ ಜಗದ್ಗುರುಗಳ ಅಭಿಪ್ರಾಯ ಅರ್ಥಪೂರ್ಣವಾಗಿದೆ.

ಓಸಾಕಾದಲ್ಲಿಯ 'ದಿ ನ್ಯಾಶನಲ್ ಬ್ಯಾಂಕ್ ಆಫ್ ಅಮೇರಿಕಾ'ಕ್ಕೆ ಬೆಟ್ಟಿ ನೀಡಬೇಕಾದ ಪ್ರಸಂಗ. ಆ ಸಂದರ್ಭದಲ್ಲಿ ಲೇಖಕರಿಗೆ ಕಂಡು ಬಂದ ಒಬ್ಬ ಸಾಮಾನ್ಯ ಟ್ಯಾಕ್ಸಿ ಡ್ರೈವರನ ಪ್ರಾಮಾಣಿಕತೆ, ಬ್ಯಾಂಕಿನ ಮ್ಯಾನೇಜರ ಆಗಿದ್ದ ಮಹಿಳೆಯೋರ್ವಳು ಭಾರತೀಯರ ಬಗ್ಗೆ ಅದರಲ್ಲೂ ಜಗದ್ಗುರುಗಳ ಬಗ್ಗೆ ತೋರಿದ ವಿಶ್ವಾಸ, ಆದರಗಳ ಉಲ್ಲೇಖ ವಾಚಕರಲ್ಲಿ ಅಭಿಮಾನವನ್ನು ಸ್ಫುರಿಸುವಂತಹವು.

ಟೋಕಿಯೋ ಅಂತೂ ಜಪಾನಿನ ರಾಜಧಾನಿ ಅಷ್ಟೇ ಅಲ್ಲ ಅದೊಂದು 'ಇಂದ್ರ ಲೋಕ' ಎಂದು ಜಗದ್ಗುರುಗಳು ಭಾವಪರವಶರಾಗಿ ಬಣ್ಣಿಸಿದ್ದಾರೆ! ಜಗತ್ತಿನಲ್ಲಿಯೆ ಅತಿ ಹೆಚ್ಚು ವೇಗದ್ದಾದ 'ಬುಲೆಟ್ ಟ್ರೇನ್'ನಲ್ಲಿ ಪ್ರಯಾಣ ಬೆಳೆಸಿದ ಒಂದು ಸಂತೋಷವನ್ನು ಕವಿ ಹೃದಯ ಅಭಿವ್ಯಕ್ತಿಸುತ್ತದೆ. ಅದರ ವೇಗ ಗಂಟೆಗೆ ೧೨೦ ಮೈಲು! ಆ ರೈಲಿನಲ್ಲಿ ಕಂಡು ಬಂದ ಶಿಸ್ತು, ಅಚ್ಚುಕಟ್ಟುತನ, ಪ್ರಾಮಾಣಿಕತೆ, ಸಭ್ಯತೆಗಳನ್ನು ಮನಸಾರೆ ಮೆಚ್ಚಿಕೊಂಡು 'ಈ ಸ್ಥಿತಿ ನಮ್ಮ ಭಾರತದ ರೈಲುಗಳಿಗೆ ಎಂದು ಬರುವುದೋ' ಎಂದು ವಿಷಾದೋದ್ಗಾರ ತೆಗೆದಿರುವುದು ಸಹಜವಾಗಿದೆ.

ಪ್ರಪಂಚದಲ್ಲಿಯ ಸುಂದರ ಪಟ್ಟಣಗಳಲ್ಲೊಂದಾದ ಟೋಕಿಯೋ ನಗರದ

ನೈರ್ಮಲ್ಯ, ೫೦–೬೦ ಅಂತಸ್ತುಗಳಿರುವ ಸುಂದರ ಮನೆಗಳು, ಕಲ್ಪನಾಲೋಕವೆಂಬಂತೆ ಮೆರೆಯುವ ಅದರ ದಕ್ಷಪಾಲನೆ, ಸಭ್ಯತಾ ಪ್ರಜ್ಞೆಗಳನ್ನು ಮೆಚ್ಚಿಕೊಂಡು ಬರೆದಿದ್ದಾರೆ. 'ಟೋಕಿಯೋ ರಾಜಕೀಯವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಜಗತ್ತಿನ ಗಮನ ಸೆಳೆದ ಅತ್ಯಾಧುನಿಕ ಮಾದರಿಯ ಪಟ್ಟಣ'ವೆಂದು ಕೌತುಕತಾಳಿ, ಅಲ್ಲಿಯ ರಾಷ್ಟ್ರೀಯ ವಸ್ತು ಸಂಗ್ರಹಾಲಯ, ಆಧುನಿಕ ಕಲಾ ವಸ್ತು ಸಂಗ್ರಹಾಲಯ, ಕುಶಲ ಕಲೆಗಳ ಸಂಗ್ರ ಹಾಲಯ, ವೈಜ್ಞಾನಿಕ ಪ್ರದರ್ಶನ ಮೊದಲಾದವುಗಳನ್ನೆಲ್ಲಾ ಅಲ್ಪ ವೇಳೆಯಲ್ಲಿ ಸಂದ ರ್ಶಿಸಿದರೂ ಅವುಗಳಿಂದ ವಿಶೇಷ ಪ್ರಭಾವಿತರಾಗಿ ಬರೆದಿದ್ದಾರೆ. ಆರ್ಟಗ್ಯಾಲರಿ, ಗ್ರಂಥಾಲಯ, ಟಿ. ವಿ. ಟಾವರ್ ಇವೇ ಮೊದಲಾದವುಗಳನ್ನು ನೋಡಿದ ಚಿಂತನೆಯಲ್ಲಿ 'ಟೋಕಿಯೋ ಆಧುನಿಕ ಸುಂದರ ನಗರ. ಅದಕ್ಕೆ ಇನ್ನೂ ಭವಿಷ್ಯವಿದೆ. ಬೆಳವಣಿಗೆಗೆ ಅವಕಾಶವಿದೆ' ಎಂದು ಉದ್ಗಾರ ತೆಗೆದಿರುವುದು ಲೇಖಕರ ವಿಶಾಲ ಆಲೋಚನಾ ಪ್ರವೃತ್ತಿಗೊಂದು ನಿದರ್ಶನವಾಗಿದೆ.

ಕ್ಯೂಟೋದಲ್ಲಾಗಲಿ, ಟೋಕಿಯೋದಲ್ಲಾಗಲಿ ತಮ್ಮನ್ನಿಳಿಸಿದ ರೂಮುಗಳು ಅತ್ಯಾಧುನಿಕ ವೈಜ್ಞಾನಿಕ ರೀತಿಯ ಸಜ್ಜಿಕೆಗಳಿಂದ ಕೂಡಿದ್ದವೆಂಬುದನ್ನು ಮೆಚ್ಚಿ, ವಾಚಕ ನಿಗೂ ಮೆಚ್ಚಿಗೆಯಾಗುವಂತೆ ವರ್ಣಿಸಿದ್ದಾರೆ. ಟೋಕಿಯೋದಲ್ಲಿ ಬೌದ್ಧ ಸಂಘದವರು ಜಗದ್ಗುರುಗಳನ್ನು ಇಳಿಸಿದ ರೋಮಿನ ಬಾಗಿಲುಗಳು ವಿದ್ಯುತ್ತಿನಿಂದ ಜೋಡಿಸಲ್ಪಟ್ಟಿದ್ದು ಕೋಣೆಯ ಪ್ರವೇಶದ ಕಾಲಕ್ಕೆ ತಂತಾನೆ ಥಕ್ಕನೆ ತೆರೆದು ಒಳಗೆ ಹೋದ ಕೂಡಲೆ ತಾವೇ ಮುಚ್ಚಿಕೊಳ್ಳುತ್ತಿದ್ದವು ಎಂದು ವರ್ಣಿಸುವಲ್ಲಿ ಬರಿ ಮೋಜಿನ ಸೂಚನೆಯಲ್ಲ ನಮ್ಮ ಇಂಡಿಯಾದಲ್ಲಿ ಈ ಬಗೆಯ ಪ್ರಗತಿ ಇನ್ನೂ ಎಂದಿಗೋ ಏನೋ ಎಂಬ ಒಂದು ಮಾರ್ಮಿಕ ಧ್ವನಿಯೂ ಇದೆ! ಕಸಗುಡಿಸುವ ಯಂತ್ರ ಸಾಧನವನ್ನೂ ಸೂಕ್ಷ್ಮ ನಿರೀಕ್ಷಣೆ ಯಿಂದ ವರ್ಣಿಸಿರುವುದು ಸೊಗಸಾಗಿದೆ.

ಟೋಕಿಯೋದಲ್ಲಿ ಜಗದ್ಗುರುಗಳಿಗೆ ನಡೆದ ಸತ್ಕಾರದಲ್ಲಿ ಎಂಟು–ಹತ್ತು ಸಾವಿರ ಜನ ಭಾರತದ ಬಗ್ಗೆ, ಭಾರತೀಯರ ಬಗ್ಗೆ ಎಲ್ಲಿಲ್ಲದ ಪ್ರೇಮ, ಅಭಿಮಾನ ತೋರುತ್ತಿದ್ದ ರೆಂದು ವಾಚಕರ ಅಭಿಮಾನ ಉಕ್ಕುವಂತೆ ವರ್ಣಿಸಿದ್ದಾರೆ. "ಭಾರತವೆಂದರೆ ಧರ್ಮ, ಆಧ್ಯಾತ್ಮ, ಯೋಗಗಳ ಕೇಂದ್ರಭೂಮಿಯೆಂಬ ಗೌರವ ಅವರಲ್ಲಿ ಮನೆಮಾಡಿಕೊಂಡಿದೆ" ಎಂದಿದ್ದಾರೆ. (ಪು. ೩೭) "ಅಲ್ಲಿಯ ಸಾವಿರಾರು ಸ್ತ್ರೀ ಪುರುಷರು ತಮ್ಮ ಜಪಾನೀ ಪದ್ಧತಿಯ ನಮಸ್ಕಾರ ಮಾಡುತ್ತ, ನಮ್ಮ ಬಟ್ಟೆಯನ್ನು ಹಿಡಿದು ಮೈಯನ್ನು ತಟ್ಟಿ ಕೈ ಕುಲಕಿಸುತ್ತ ವಂದಿಸುವ ದೃಶ್ಯ ತುಂಬ ಆತ್ಮೀಯವಾಗಿತ್ತು. ಜಪಾನೀ ಸ್ತ್ರೀಯರಲ್ಲಿ ನಾಚುಗೆ, ಅಂಜಿಕೊಳ್ಳುವ ಇಲ್ಲವೆ ಮುದುಡಿಕೊಳ್ಳುವ ಸ್ವಭಾವ ಎಲ್ಲಿಯೂ ಕಾಣಲಿಲ್ಲ. ಅವರು ಬಿಚ್ಚು ಮನಸ್ಸಿನಿಂದ ತಾವಾಗಿ ಬಂದು ಕೈಕುಲುಕಿಸಿ, ವಂದನೆ ಅರ್ಪಿಸಿ, ಧನ್ಯವಾದ ಗಳನ್ನು ಹೇಳುವಾಗ ಅವರ ಪರಿಶುದ್ಧ ನಿರ್ಮಲಭಾವ ತಾನೇತಾನಾಗಿ ನಮಗೆ ವ್ಯಕ್ತ ವಾಗುತ್ತಿತ್ತು. ಪ್ರಾಮಾಣಿಕತೆಗೆ ಜಪಾನ ದೇಶ ಮುಂದುವರೆದ ದೇಶವೆಂದು ಹಿರಿಯರು ಹೇಳಿದ ನುಡಿ ಪ್ರತ್ಯಕ್ಷ ನೋಡಿ ಮನಸ್ಸಿಗೆ ಸಮಾಧಾನವಾಯಿತು. ಇವರಲ್ಲಿಯ

ರಾಷ್ಟ್ರಾಭಿಮಾನವೂ ಅದೇ ರೀತಿಯಾಗಿ ಕಂಗೊಳಿಸುತ್ತಿತ್ತು" ಎಂಬೆಲ್ಲ ನುಡಿಗಳು ಪ್ರವಾಸಿಗನ ಬರವಣಿಗೆಯ ನಿಜವಾದ ಲಕ್ಷಣಗಳನ್ನು ಎತ್ತಿ ತೋರಿಸುತ್ತವೆ. ಮುಂದಿನ ಪ್ರಕರಣದಲ್ಲಿ 'ಜಪಾನು ಮುಂದುವರಿದ ರಾಷ್ಟ್ರವೇಕೆ?, ಎಂಬುದರ ಬಗ್ಗೆ ಪ್ರವಾಸಿಯ ದೃಷ್ಟಿಯಲ್ಲಿ ಕಂಡು ಬರುವ ಸಾಹಿತ್ಯಕ, ಸಾಂಸ್ಕೃತಿಕ ನಿದರ್ಶನಗಳನ್ನು ನೀಡುತ್ತ ಅಲ್ಲಿಯ ಆತಿಥ್ಯ ವೈಭವ, ಸರಸ ಸಜ್ಜನಿಕೆ, ಸಭ್ಯತೆ, ಉಲ್ಲಾಸಪೂರ್ಣ ಆರೋಗ್ಯಸಿರಿ, ಅಚ್ಚುಕಟ್ಟುತನಗಳನ್ನು ಬಣ್ಣಿಸುತ್ತ ಇತ್ತೀಚೆಗೆ ಜಪಾನೀಯರಲ್ಲಿ ವಿಲಾಸ ಜೀವನವೂ ಬೆಳೆಯುತ್ತಿರುವುದನ್ನು ಗುರುತಿಸದೆ ಹೋಗಿಲ್ಲ ಜಗದ್ಗುರುಗಳು.

ಅಕ್ಟೋಬರ್ ದಿ. ೨೪, ೧೯೭೦, ಶನಿವಾರ ರಾತ್ರಿ ಟೋಕಿಯೋದಿಂದ ಭಾರತಕ್ಕೆ ಮರಳುವ ದಾರಿಯಲ್ಲಿ ಹಾಂಗ್‌ಕಾಂಗ್‌ನಲ್ಲಿ ಎರಡುದಿನ ತಂಗಿದರು. ಭಾರತದ ರಾಯಭಾರಿಗಳು ಸ್ವಾಗತಿಸಿ ಜಗದ್ಗುರುಗಳನ್ನು ಭಾರತ ಮಂದಿರದಲ್ಲಿ ಇಳಿಸಿದರು. ಜೊತೆಗೆ ಶ್ರೀ ದಿವಾಕರರೂ, ಜಗದ್ಗುರುಗಳ ಆಪ್ತ ಕಾರ್ಯದರ್ಶಿ ಪ್ರೊ. ಎ.ಎಮ್. ಹೀರೇಮಠರೂ ಇದ್ದರು.

'ಹ್ಯಾಪಿ ವ್ಯಾಲಿ' ಎಂಬಲ್ಲಿರುವ ಹಿಂದೂ ದೇವಾಲಯಕ್ಕೆ ಭೆಟ್ಟಿಕೊಟ್ಟರು. ಮೈಸೂರಿನವರೇ ಆದ ಶ್ರೀ ಸಿದ್ಧಾರ್ಥಾಚಾರಿ ಎಂಬ ಭಾರತದ ಹೈಕಮೀಶನರರ ಆತ್ಮೀಯ ಆತಿಥ್ಯ ಎಲ್ಲರಿಗೂ ಆಪ್ಯಾಯಮಾನವೆನಿಸಿತು.

ಹಾಂಗ್‌ಕಾಂಗ್‌ನಿಂದ ಇಂಡೋನೇಶಿಯಾದ ಜಕರ್ತಾಕ್ಕೆ ಭೆಟ್ಟಿಕೊಟ್ಟರು. (೨೬-೧೦-೭೭) ಅಲ್ಲಿಯ ಜನರಿಗಲ್ಲದೆ ಅನೇಕ ಹೋಟೆಲ್ ಮತ್ತು ಸಿನಿಮಾಮಂದಿರಗಳಿಗೆ ಸಹ ಮಹಾಭಾರತ, ರಾಮಾಯಣದ ಹೆಸರುಗಳಿರುವುದು ಒಂದು ವೈಶಿಷ್ಟ್ಯ. ಅಲ್ಲಿಯ ಸಾರ್ವಜನಿಕ ಸಂಪರ್ಕಾಧಿಕಾರಿಗಳು ಗುರುಗಳನ್ನೂ ಅವರ ಸಂಗಡಿಗರನ್ನೂ 'ಪ್ರೀತಂ ಸಿಂಗ್' ಎಂಬ ಪಂಜಾಬಿ ಶ್ರೀಮಂತರ ಮನೆಯಲ್ಲಿ ಇಳಿಸಿದರು. ಅಲ್ಲಿಯ ಅತಿಥಿಗಳಿಗೆಲ್ಲ ದೀಪಾವಳಿ ಹಬ್ಬ! ಅವರ ಅಂಗಡಿಯಲ್ಲಿ ಲಕ್ಷ್ಮೀ-ಸರಸ್ವತಿ ಪೂಜೆ ನಡೆಯಿತಂತೆ. "ಇವರ (ಪ್ರೀತಂಸಿಂಗ್‌ರ) ಮನೆಯಲ್ಲಿ ನಾವು ಭಾರತದ ದೇಶವನ್ನು ಬಿಟ್ಟು ೧೨ ದಿವಸಗಳಾದ ಮೇಲೆ ಅನ್ನಪ್ರಸಾದವನ್ನು ಸ್ವೀಕರಿಸಿದೆವು. ಈವರೆಗೆ ಹೆಚ್ಚಾಗಿ ಹಾಲುಹಣ್ಣಿನ ಮೇಲೆಯೆ ಇದ್ದವು" ಎಂದು ಲೇಖಕರು ಹೇಳುತ್ತಾರೆ.

ಅಕ್ಟೋಬರ್ ದಿನಾಂಕ ೨೯ ಗುರುವಾರ ವಿಮಾನ ಮಾರ್ಗವಾಗಿ ಜಕಾರ್ತಾದಿಂದ ಹೊರಟು ಅಂತರ್ರಾಷ್ಟ್ರೀಯ ವ್ಯಾಪಾರ ಕೇಂದ್ರವಾದ ಸಿಂಗಾಪೂರ ತಲುಪಿದರು. ಇಪ್ಪತ್ತುಲಕ್ಷಕ್ಕೂ ಮಿಕ್ಕಿ ಜನವಸತಿಯುಳ್ಳ "ಈ ಸುಂದರ ನಗರ ಅಂತರ್ರಾಷ್ಟ್ರೀಯ ಬಾಂಧವ್ಯದ ನಗರ" ಎಂದು ಲೇಖಕರು ಕರೆದಿರುವುದು ಆ ನಗರದ ಮಹತ್ವವನ್ನು ವ್ಯಕ್ತಪಡಿಸುತ್ತದೆ. ಜಗದ್ಗುರುಗಳು ಅಲ್ಲಿಯ ಪ್ರಶಾಂತವಾದ ಶ್ರೀ ರಾಮಕೃಷ್ಣಾಶ್ರಮದಲ್ಲಿ ಇಳಿದುಕೊಳ್ಳುವ ವ್ಯವಸ್ಥೆ ಮಾಡಲಾಗಿತ್ತು. ಭಾರತೀಯ ಧಾರ್ಮಿಕ ಸಂಸ್ಕೃತಿಯನ್ನು,

ವೈದಿಕ ಸಂದೇಶವನ್ನು ಪಾಶ್ಚಾತ್ಯ ದಿಗಂತಗಳಲ್ಲಿ ಅನುಕರಣೆಸುವಂತೆ ಮಾಡಿದ ಸ್ವಾಮಿ ವಿವೇಕಾನಂದರಿಂದ ಸ್ಥಾಪಿಸಲ್ಪಟ್ಟ 'ಶಾಂತಿಧಾಮ'ವಿದು ಎಂದು ಲೇಖಕರು ಉತ್ಸಾಹದಿಂದ ವರ್ಣಿಸಿದ್ದಾರೆ.

ಸಿಂಗಾಪ್ರರದಿಂದ ಮಲೇಶಿಯಾದ ರಾಜಧಾನಿ ಕೋಲಾಲಂಪೂರಕ್ಕೆ ಭೆಟ್ಟಿಕೊಟ್ಟು ಅಲ್ಲಿಯ 'ಬಟುಗವಿಗಳು', ಆಧುನಿಕ ಶೈಲಿಯ 'ಮಸ್ಜೀದ ನೇಜರ್', ಅಲ್ಲಿಯ ವಸ್ತು ಸಂಗ್ರಹಾಲಯುಗಳಿಗೆ ಭೆಟ್ಟಿಕೊಟ್ಟರು. ಚಂದ್ರಲೋಕದಿಂದ ತಂದ ಚಂದ್ರಶಿಲೆಯು ಒಂದು ತುಣುಕನ್ನು ಕಂಡು ಅದು 'ಕಾಜಿನ ಗುಂಡಿನಂತೆ ಹೊಳಪುಳ್ಳದ್ದಾಗಿದೆ' ಎಂದಿದ್ದಾರೆ.

ನವೆಂಬರ ೩ ರಂದು ಜಗದ್ಗುರುಗಳು ಬೌದ್ಧ ಧರ್ಮದ ಮತ್ತೊಂದು ಕೇಂದ್ರವಾದ ಥೈಲ್ಯಾಂಡಿನ ರಾಜಧಾನಿ ಬ್ಯಾಂಕಾಕ್ ತಲುಪಿದರು. ಅಲ್ಲಿ ಬೌದ್ಧ ಸನ್ಯಾಸಿಗಳ ವಿಶ್ವ ವಿದ್ಯಾಲಯ ಲೇಖಕರ ಕುತೂಹಲವನ್ನು ಕೆರಳಿಸಿತು. ಎರಡು ಸಾವಿರಕ್ಕೂ ಮೇಲ್ಪಟ್ಟ ಸನ್ಯಾಸಿಗಳು, ಬ್ರಹ್ಮಚಾರಿಗಳು! ಇಲ್ಲಿಯ ವಾತರಾಜಿ ಪ್ರದಿಸ್ಥ ದೇವಾಲಯದ ಬುದ್ಧನ ಬಂಗಾರದ ಮೂರ್ತಿ ಎಷ್ಟು ಅನರ್ಘ್ಯವೊ ಅಷ್ಟೇ ನಯನ ಮನೋಹರ. ೧೯೭೦, ನವೆಂಬರ್ ೫ ರಂದು ಬ್ಯಾಂಕಾಕ್‌ದಿಂದ ಹೊರಟು ಬಂಗಾಲ ಉಪಸಾಗರದ ಆಕಾಶ ಪಥ ವನ್ನು ಪ್ರವೇಶಿಸಿದಾಗ ಭಾರತಮಾತೆಯ ಪುಣ್ಯಭೂಮಿ ಕೈಮಾಡಿ ಕರೆಯಿತೆಂದು ಭಾವ ಪರವಶರಾಗಿ ಲೇಖಕರು ವರ್ಣಿಸಿದ್ದಾರೆ. ಕಲಕತ್ತೆಯ ಸ್ವಾಗತ, ಸತ್ಕಾರಗಳನ್ನು ಪೂರೈಸಿ ಕೊಂಡು ದಿನಾಂಕ ೧೦ ರಂದು ಮುಂಬಯಿ, ದಿನಾಂಕ ೧೧ ಬೆಳಗಾಂವಿಗೆ ವಿಮಾನ ಬಂದಿಳಿ ಯಲು, ಅಲ್ಲಿಂದ ಕಾರಿನಲ್ಲಿ ಹೊರಟು ಹುಬ್ಬಳ್ಳಿ-ಧಾರವಾಡಗಳ ಸಾವಿರಾರು ಭಕ್ತರ ಜಯ ಜಯಕಾರದ ಘೋಷಣೆಯ ಮಧ್ಯದಲ್ಲಿ ತಮ್ಮ ಮೂರುಸಾವಿರಮಠ ಪ್ರವೇಶ! ಬಂದೊಡ ನೆಯ ತಮ್ಮ ಮಠದ ಆನೆ 'ಗಣೇಶ' ಕಣ್ಮರೆಯಾದ ಸುದ್ದಿಯನ್ನು ಮೊದಲೆ ಕೇಳಿ ವಿಷಾದ ಗೊಂಡಿದ್ದ ಜಗದ್ಗುರುಗಳು ಅದರ ಬಗ್ಗೆ ವಿಚಾರಣೆ ಮಾಡಿದರು. ಸಮೀಪದ ಆಪ್ತಬಂಧುವನ್ನು ಅಗಲಿದ ವ್ಯಥೆ ಜಗದ್ಗುರುಗಳಿಗೆ!

ಮುಂದಿನ ಪ್ರಕರಣದಲ್ಲಿ ಕವಿ-ಲೇಖಕರರಾದ ಜಗದ್ಗುರುಗಳು ೧೯೭೪ ರಲ್ಲಿ ಬೆಲ್ಜಿಯಂನ ಲೋವೆನ್‌ನಲ್ಲಿ ಜರುಗಿದ ದ್ವಿತೀಯ ಜಾಗತಿಕ ಸಮ್ಮೇಳನಕ್ಕೆ ತೆರಳಿ ಯುರೋಪ ಪ್ರವಾಸ ಮಾಡಿಬಂದ ಐತಿಹಾಸಿಕ ವರ್ಣನೆ ಬರುತ್ತದೆ. ನಮ್ಮ ದೇಶದ ಒಂದು ಪ್ರಾಂತ ಕ್ಕಿಂತಲೂ ಕಿರಿದಾದ ಈ ಬೆಲ್ಜಿಯಂ ದೇಶ ವಿಶ್ವದ ಉಕ್ಕಿನ ಉತ್ಪಾದನೆಯ ಸುಮಾರು ಒಂದು ಕಾಲಿನಷ್ಟು ಭಾಗದ ಉಕ್ಕಿನ ಯಂತ್ರಗಳನ್ನು ಜಗತ್ತಿನ ಮಾರುಕಟ್ಟೆಗೆ ಒದಗಿಸುತ್ತಿದೆ ಎಂಬುದು ಅಚ್ಚರಿ ಪಡುವ ಸಾಧನೆಯಲ್ಲವೆ? ಇಷ್ಟೊಂದು ಮಹಾಪ್ರಮಾಣದ ಯಂತ್ರೋಪ ಕರಣಗಳನ್ನು ತಯಾರಿಸುತ್ತ ಕೃಷಿ ಉತ್ಪಾದನೆಯಲ್ಲೂ ಮುಂದೆ ಇದೆ.

ಚೆಲುವಿನ ರಾಣಿ ಎನಿಸಿದ ಲ್ಯೂವೆನ್ ನಗರವೆ ಒಂದು ಪ್ರಾಚೀನ ವಿಶ್ವವಿದ್ಯಾಲಯ ವಾಗಿದ್ದು ಅಲ್ಲಿ ೧೫೦೦ ಅಧ್ಯಾಪಕರು, ೧೬೦೦೦ ವಿದ್ಯಾರ್ಥಿಗಳು! ಇನ್ನೂ ಪಯಣಿಗರಿಗೊ

ಇದೊಂದು 'ಸ್ವರ್ಗೀಯ ಸುಂದರ ಧಾಮ'ವಾಗಿದೆ ಎಂದು ಲೇಖಕರು ಉದ್ಗಾರ ತೆಗೆದಿದ್ದಾರೆ. ದುಡಿತವೆ ಇಲ್ಲಿಯ ದೇವರು, ಪ್ರಾಮಾಣಿಕತೆಯೆ ಇವರ ಸಮಾಜ ಧರ್ಮ ಎಂದು ಹೇಳುತ್ತ– 'ಭಾರತೀಯರು ಧರ್ಮವನ್ನು ಹೇಳುತ್ತಾರೆ, ಇವರು (ಬೆಲ್ಜಂ ದೇಶದ ನಾಗರಿಕರು) ಅದನ್ನು ಆಚರಿಸುತ್ತಾರೆ' ಎಂದು ಜಗದ್ಗುರುಗಳು ನುಡಿದಿರುವ ವ್ಯಂಗ್ಯ ಹರಿತವಾಗಿದೆ.

೧೯೭೪ ಆಗಸ್ಟ್ ೨೮, ಮುಂಜಾನೆ ೯ ಘಂಟೆ! ಲ್ಯೂವೆನ್ 'ಮರಿಯಾ ಥೆರೆಸಿ ಆ' ಕಾಲೇಜಿನ ಸಭಾಂಗಣದಲ್ಲಿ ಸುಸಜ್ಜಿತ ವೇದಿಕೆಯ ಮೇಲೆ ೫೦ ರಾಷ್ಟ್ರಗಳ ೧೭೭ ಪ್ರತಿನಿಧಿಗಳು ಆಸೀನರಾಗಿದ್ದುದೆ. ಒಂದು ಅಪೂರ್ವ ದೃಶ್ಯ! ಇಷ್ಟು ಜನರ ಭಾಷಣಗಳನ್ನು ಕೇಳುವ ಸಭಿಕರ ತಾಳ್ಮೆ? ಇಲ್ಲ, ತಾಳ್ಮೆಯ ಪರೀಕ್ಷೆಯ ಪ್ರಸಂಗವೇ ಇಲ್ಲ. ಒಬ್ಬೊಬ್ಬರಿಗೆ ಮೂರು ನಿಮಿಷಗಳು ಮಾತ್ರ! ಮುಂದೆ ಪ್ರಶ್ನೋತ್ತರಗಳು– ಇದರಲ್ಲಿ ಸಭಿಕರು ಪಾಲ್ಗೊಳ್ಳುವುದು. ಚರ್ಚೆಯ ವಿಷಯುಗಳೆಂದರೆ– ನಿಶ್ಯಸ್ತ್ರೀ ಕರಣ, ಮಾನವೀಯ ಹಕ್ಕು ಬಾಧ್ಯತೆಗಳು, ಪರಿಸರ ಮತ್ತು ಬಾಳುವೆ (Environment and Survival) ಹಿಂಸೆ-ಅಹಿಂಸೆ, ಆಕ್ರಮಣ–ಅನಾಕ್ರಮಣ, ಶಾಂತಿಗಾಗಿ ಶಿಕ್ಷಣ ಇವೇ ಮೊದಲಾದ ಜಾಗತಿಕ ನೆಮ್ಮದಿಯ ಜೀವನದ ಜೀವಾಳದ ಪ್ರಶ್ನೆಗಳು ಚರ್ಚಿಸಲ್ಪಟ್ಟುದು ಮಹತ್ವದ ಮಾತು.

ಈ ಸಂದರ್ಭದಲ್ಲಿ ಜಗದ್ಗುರುಗಳು ಅಪ್ಪಣೆ ಕೊಡಿಸಿದ ಸಂದೇಶಾತ್ಮಕ ಇಂಗ್ಲೀಷ ಭಾಷಣದ ಕನ್ನಡದ ಸಾರಾಂಶ ಇದು:

"ನಾವು ಪರಸ್ಪರ ಸಹಾಯ–ಸಹಕಾರಗಳ ಸಿದ್ಧಾಂತಗಳನ್ನು ಮರೆತು ಬಿಟ್ಟಿದ್ದೇವೆ. ಸಮಗ್ರ ಪೃಥ್ವಿಯೆ ನಮ್ಮ ಮನೆ ಹಾಗೂ ಮಾನವಮಾತ್ರರೆಲ್ಲರೂ ಸಹೋದರ ಸಹೋದರಿಯರು–ಎಂಬ ಮೂಲ ತತ್ವವನ್ನೆ ನಾವು ನಿರ್ಲಕ್ಷಿಸಿದ್ದೇವೆ....ನೈಸರ್ಗಿಕ ಸಂಪನ್ಮೂಲಗಳಿಗೂ ಮತ್ತು ಜನ ಸಂಖ್ಯೆಗೂ ಮಧ್ಯಂತರದಲ್ಲಿ ಉಂಟಾದ ಅಸಮತೋಲನದ ಸ್ಥಿತಿಯು ದೇಶವನ್ನು ಬಡತನಕ್ಕಾಗಲಿ, ಸಿರಿತನಕ್ಕಾಗಲಿ ಕೊಂಡೊಯ್ಯುತ್ತಿದೆ. ಜನಸಂಖ್ಯಾ ಸ್ಫೋಟದ ಒತ್ತಡದೆದುರು ನೈಸರ್ಗಿಕ ಸಂಪನ್ಮೂಲಗಳು ಹಿಂದೇಟು ಹಾಕಿದರೆ ರಾಷ್ಟ್ರವು ದಟ್ಟ ದಾರಿದ್ರ್ಯದಿಂದ ಬಳಲುವುದು ಖಂಡಿತ."

ಎಂದ ಮೇಲೆ ಇದಕ್ಕೆ ಉಪಾಯ? ಇದನ್ನೂ ಜಗದ್ಗುರುಗಳು ಪ್ರಭಾವೀ ಭಾಷೆಯಲ್ಲಿ ಘೋಷಿಸಿದರು. "ಜಾಗತಿಕ ಸಂಯುಕ್ತ ಸಂಸ್ಥೆಯು 'ಜಾಗತಿಕ ಸಂಯುಕ್ತ ರಾಷ್ಟ್ರ'ವಾಗಿ ಪರಿವರ್ತಿತವಾಗಬೇಕು." ಜೈಜಗತ್ ಎಂಬ ಮಂತ್ರ ರಹಸ್ಯವನ್ನು ಬೋಧಿಸುತ್ತ ಜಾಗತಿಕ ಸಕಲ ಸಂಪನ್ಮೂಲಗಳನ್ನು ಸಮಗ್ರ ವಿಶ್ವೋನ್ನತಿಗಾಗಿ ಪರಿವರ್ತಿಸಬೇಕು! 'ಸಮಸ್ತ ಮಾನವತೆಯ ಸಾಮಾಜಿಕ ಪುರೋಭಿ ವೃದ್ಧಿಗೂ ಹಾಗೂ ಜೀವನದ ಸಾಂಪತ್ತಿಕ ಸ್ವಾಸ್ಥ್ಯಕ್ಕೂ ಆದ್ಯ ಗಮನ ನೀಡಬೇಕು.' ಅವರ ಭಾಷಣದ ಕೊನೆಯಕನೆ ಮಾತು ಕಾವ್ಯಮಯವಾಗಿ ಹೃದ್ಯವಾಗಿ ಮುಕ್ತಾಯವಾಗುತ್ತದೆ. "The fruit of the welfare of the humanity comes out of the flower of international

peace'' ('ಮಾನವೀಯ ನೆಮ್ಮದಿಯ ಫಲವು ವಿಶ್ವಶಾಂತಿಯು ಕುಸುಮದಿಂದ ಫಲಿಸುತ್ತದೆ.')

ಭಾಷಣದ ಮರುದಿನ ಬೆಲ್ಜಿಯಂದೇಶದ ಸುಪ್ರಸಿದ್ಧ ದಿನಪತ್ರಿಕೆ 'ಲಾಲಿಬರಾ ಬೆಲ್ಜಿಕ್' ಪೂರ್ಣಾಕಾರದ ಫೋಟೋದೊಂದಿಗೆ ವಿಸ್ತಾರವಾದ ಭಾಷಣ ವರದಿಯನ್ನು ಪ್ರಥಮ ಪುಟದ ಮೇಲೆ ಪ್ರಕಟಿಸಿತ್ತು.

ಈ ಭಾಷಣದ ನಂತರ ಗುರುಗಳಿಂದ ರಚಿತವಾದ ವಿವಿಧ ಗ್ರಂಥಗಳ ಇಂಗ್ಲೀಷ್ ಅನುವಾದ ಪುಸ್ತಕಗಳ ಬಿಡುಗಡೆಗಳು ನಡೆದುವು. 'Thus spoke Basava', 'Heart's Blossoms' ಇವೇ ಮೊದಲಾದುವು. ಮುಂದೆ ಯುರೋಪದ ಅನೇಕ ಕಡೆಗಳಿಂದ ಬಂದ ಆಮಂತ್ರಣಗಳ ಮೇರೆಗೆ ವಿವಿಧ ಸ್ಥಳಗಳ ಸಂದರ್ಶನಗಳ ಜೊತೆಗೆ ಭಾಷಣಗಳೂ ಏರ್ಪಟ್ಟವು. ಇಂತಹ ಮುಖ್ಯ ಇಂಗ್ಲೀಷ್ ಭಾಷಣಗಳನ್ನು ಸಂಗ್ರಹಿಸಿ ಈ ಗ್ರಂಥದ ಕೊನೆಗೆ ಕೊಟ್ಟಿರುವುದು ಉಪಯುಕ್ತವಾಗಿದೆ. ಲ್ಯೂವೆನ್‌ನಲ್ಲಾಗಲಿ ಉಳಿದ ಕಡೆಗಳಲ್ಲಾಗಲಿ ಜನರು "ನಮ್ಮ ಪೀಠದ ಪರಂಪರಾಗತ ಘನತೆ ಗೌರವಗಳಿಗೆ ಸರಿಯಾಗಿ ನಮ್ಮೊಂದಿಗೆ ನಡೆದುಕೊಂಡಿರುವುದು ಶ್ರೀಕರ್ತೃ ಜಗದ್ಗುರು ಗುರುಸಿದ್ಧೇಶ್ವರನ ಕೃಪೆ" ಎಂದು ಪೂಜ್ಯ ಜಗದ್ಗುರುಗಳು ಉದ್ಗಾರ ತೆಗೆದಿದ್ದಾರೆ.

ಜಗದ್ಗುರುಗಳು ಸಂದರ್ಶಿಸಿದ ಪ್ರಥಮ ಸ್ಥಳ ಬೆಲ್ಜಿಯಂನ ಬ್ರಿಂಡಾಕ್ ಅಲ್ಲಿ ಹಿಟ್ಲರ್‌ನ ಆಸುರೀ ಕೃತ್ಯಕ್ಕೆ ೬೦,೦೦೦ ಜನ ಆಹುತಿಯಾದರು! ಈ ಮರಣ ಹೋಮ ಹೇಗೆ ನಡೆಯಿತೆಂದು ಆ ಹತ್ಯಾಕಾಂಡದಿಂದ ಹೇಗೋ ಪಾರಾದ ೭೫ ವಯಸ್ಸಿನ ವೃದ್ಧನೊಬ್ಬ ವರ್ಣಿಸಿ ಹೇಳಿದಾಗ ಲೇಖಕರು ಕಂಪಿತರಾಗಿ ಅದೇ ಸ್ಥಳದಲ್ಲೇ ವಿಶ್ವಶಾಂತಿಗಾಗಿ ಭಗವಂತನನ್ನು ಪ್ರಾರ್ಥಿಸುತ್ತಾರೆ.

ಅಲ್ಲಿಂದ ಬೆಲ್ಜಿಯಂ ರಾಜಧಾನಿ ಬ್ರುಸೆಲ್ಸ್‌ಗೆ ಭೆಟ್ಟಿ ಅಲ್ಲಿ ಹುತಾತ್ಮರ ಗೋಸ್ರ್, ಪುರಾತನ ಚರ್ಚು, ಗ್ರ್ಯಾಂಡ್ ಸ್ಕ್ವೇರ್ ಮೊದಲಾದವುಗಳನ್ನು ಕಂಡು ಬಂದು– "ಬೆಲ್ಜಿಯಂ ದೇಶ ವೈಜ್ಞಾನಿಕ ಯಂತ್ರ ಸಾಮರ್ಥ್ಯವನ್ನೂ ಪ್ರಾಕೃತಿಕ ಹಸಿರು ಸೌಂದರ್ಯವನ್ನೂ ಸಮಪ್ರಜ್ಞೆಯಿಂದ ಅರಳಿಸಿದ ಪುಟ್ಟನಾಡು" ಎಂದು ಲೇಖಕರು ಉದ್ಗಾಗ ತೆಗೆಯುತ್ತಾರೆ.

ಆಮೇಲೆ ಆರಂಭ ಯುರೋಪ ದೇಶಗಳ ಸಂಚಾರ. ಬ್ರುಸೆಲ್ಸ್‌ನಿಂದ ಲಂಡನ್ ೪೫ ನಿಮಿಷಗಳ ದಾರಿ! "ಯುರೋಪಿನ ದೇಶಗಳನ್ನೂ ದಾಟುವುದೆಂದರೆ ನಮ್ಮ ದೇಶದ ಪ್ರಾಂತಗಳನ್ನು ಕೆಲವು ಸಲ ಜಿಲ್ಲೆಗಳನ್ನು ದಾಟಿದಂತೆ! ಆದರೆ ಅವುಗಳ ವೈಜ್ಞಾನಿಕ ಸಾಧನೆ ಬೃಹದ್ಭಾರತವನ್ನು ದಿಗ್ಭ್ರಮೆಗೊಳಿಸುವಷ್ಟು ಕಲ್ಪನಾತೀತ" (ಪು. ೯೭) ಎಷ್ಟು ಕಲ್ಪನಾತೀತ? ಎಷ್ಟು ಪವಾಡಾತ್ಮಕ? "ಇಲ್ಲಿಯ ಒಂದು ಪುಟ್ಟ ದೇಶವೂ ನಮಗೆ ಸಾಲ ಇಲ್ಲವೆ ನೆರವು ಕೊಡಬಲ್ಲದು." ಭಾರತಕ್ಕೆ man power ಬಳಸಿಕೊಳ್ಳುವ ಬುದ್ಧಿಯೇ ಇಲ್ಲವೇನೊ! ಶ್ರೀ ದಿವಾಕರ ಮತ್ತು ಹಿರೇಮಠ ಅವರು ಜಗದ್ಗುರುಗಳೊಡನೆಯೆ ಈ

ಯುರೋಪ ಯಾತ್ರೆಯಲ್ಲಿ ಸಹ ಸಂಚಾರ ಮಾಡಿದರು. "ಸೂರ್ಯ ಮುಳುಗದ ದೇಶ" ಎನಿಸಿಕೊಂಡ ಈ ದೇಶದ ಕಟ್ಟಡ ಕಟ್ಟಡದಲ್ಲಿ, ಜನತೆಯ ಮುಖಭಾವದಲ್ಲಿ ರಾಜಠೀವಿ ರಾರಾಜಿಸುತ್ತಿದೆ ಎಂದು ಜಗದ್ಗುರುಗಳ ಉದ್ಗಾರ! ಲಂಡನ್‌ನ ಯುಗಾಂತರ ಬೆಳೆವಣಿಗೆಗೆ ಏಕೈಕ ಸಾಕ್ಷಿ 'ಥೇಮ್ಸ ನದಿ'. ಸೆಂಟ್‌ಪಾಲ್‌ಚರ್ಚ್, ಟ್ರ್ಯಾಫಲ್‌ಗರ್ ಸ್ಕ್ವೇರ್, ಬಕಿಂಗ್ ಹ್ಯಾಂ ಅರಮನೆ, ಹೂದೋಟಗಳ ವರ್ಣಪೂರ್ಣ ನಗರ ಹೈಡ್‌ಪಾರ್ಕ್, ಮಹಾಕವಿ ಶೆಕ್ಸ್‌ಪಿಯರನ ಜನ್ಮಸ್ಥಳ– ಮಹಾಕವಿ ಪತ್ನೀಸಮೇತ ಸಮಾಧಿಸ್ಥನಾದ ಸ್ಥಳ! ಇದನ್ನೆಲ್ಲ ನೋಡಿದ ಲೇಖಕರಲ್ಲಿ ನಮ್ಮ ಪಂಪ, ಕುಮಾರವ್ಯಾಸ, ಹರಿಹರ, ರಾಘವಾಂಕರನ್ನು ನಾವು ಎಷ್ಟರಮಟ್ಟಿಗೆ ಉಳಿಸಿಕೊಂಡು ಬಂದಿದ್ದೇವೆ ಎಂದು ಉದ್ಗಾರ ತೆಗೆಯುತ್ತಾರೆ! ಅಲ್ಲಿಯ ವೈದಿಕ ಸೊಸೈಟಿಯಲ್ಲಿ ದಿವಾಕರರೂ ಜಗದ್ಗುರುಗಳೂ ಭಾಷಣ ಮಾಡಿದರು.

ಆಮೇಲೆ ಭೋಗೈಶ್ವರ್ಯದ ಬೀಡಾದ ಫ್ಯಾರೀಸ್‌ದರ್ಶನ! ಈ ಸೌಂದರ್ಯ ಶ್ರೇಷ್ಠ ನಗರಿಯಲ್ಲಿ 'ವಿಲಾಸವೇ ತತ್ವಜ್ಞಾನ'! ಎರಡು ಶಬ್ದಗಳಲ್ಲಿ ಪ್ಯಾರಿಸ್‌ನ ಶ್ಯಾಸೋಚ್ಛ್ವಾಸವನೆ ಹಿಡಿದಿದ್ದಾರೆ. ಇಲ್ಲಿಯ ಫ್ಯಾಶನ್‌ಗೆ, ವಿಲಾಸ ಪ್ರಿಯತೆಗೆ ಭಾರತೀಯ ದರ್ಶನ ವಾಣಿ, ಶರಣರ ಅನುಭಾವ ಕನಸಿನಲ್ಲೂ ಗೋಚರಿಸದು—ಎಂದು ಜಗದ್ಗುರುಗಳು ಉದ್ಗಾರ ತೆಗೆಯುತ್ತ ಈ ಪ್ರವಾಹ ಭಾರತಕ್ಕೂ ಹರಿದುಬಂದರೆ ಮುಂದೇನುಗತಿ–ಎಂದು ಭಯವನ್ನು ಅಭಿವ್ಯಕ್ತಿಸಿದ್ದಾರೆ. ಪ್ಯಾರಿಸ್‌ನಲ್ಲಿ ನಡೆಯುವ ದಾರಿಗಳ ನಯ, ನುಣ್ಪು ಎಷ್ಟೆಂದರೆ ಇಲ್ಲಿಯ ದಾರಿ ಹೋಕರು ಎಡವಿಬಿದ್ದರೆ ಸರಕಾರದ ವಿರುದ್ಧ ಕೋರ್ಟಿಗೆ ಹೋಗ ಬಹುದಂತೆ! ಈ ಕಾಯಿದೆ ಭಾರತಕ್ಕೆ ಬಂದರೆ ಏನು ಗತಿ?–ಎಂಬ ಭಯ ಲೇಖಕರಿಗೆ! ಸರಕಾರವೇ ಭ್ರಷ್ಟಾಚಾರ ಮಾರ್ಗದಲ್ಲಿ ಎಡ ಎಡವಿ ಬೀಳುತ್ತಿರುವಾಗ ಆ ಭಯಕ್ಕೆ ಆಸ್ಪದವಿಲ್ಲ.

ಎರಡನೆಯ ಮಹಾಯುದ್ಧದ ಗರಗಸಕ್ಕೆ ಸಿಕ್ಕು ಜರಾಸಂಧನಂತೆ ಎರಡು ಹೋಳಾದ ಜರ್ಮನಿ, ಬರ್ಲಿನ್‌ಗಳ ದುರ್ದೈವವನ್ನು ನೆನೆದು ಪೂಜ್ಯಗುರುಗಳು ಕಂಪಿತರಾಗಿದ್ದಾರೆ.

ಮುಂದೆ ಬರ್ಲಿನ್‌ನಿಂದ ಜಿನೀವಾಕ್ಕೆ ಪ್ರಯಾಣ. ಸ್ವಿಝರ್ಲ್ಯಾಂಡಿನ ಮಹರ್ಷಿ ಮಹೇಶಯೋಗಿಗಳ ಆಮಂತ್ರಣದ ಮೇರೆಗೆ ಅವರ ಭೆಟ್ಟಿ, ಸಂದರ್ಶನಗಳಿಂದ ಮನಸ್ಸಿನ ಮೇಲಾದ ವಿಶೇಷ ಪರಿಣಾಮ. 'ಆರೋರಾಜಾಕ್ಕೆ (ಯೋಗಿಗಳ ಆಶ್ರಮವಿದ್ದ ಸ್ಥಳ) ಹೋಗುವಾಗ ನಮ್ಮ ಟ್ರೇನು ೬॥ ಸಾವಿರ ಫೂಟು ಎತ್ತರದ ಪರ್ವತವೇರಿ ಹೋಗುವಾಗ ರೋಮಾಂಚನವಾಯಿತು' ಎಂದು ಬರೆಯುತ್ತಾರೆ.

ಆದರ ತರುವಾಯ ರೋಂ ದರ್ಶನ! ರೋಮ ದರ್ಶನದಿಂದ ರೋಮರೋಮವೂ ರೋಮಹರ್ಷಣೀಯ ಅನುಭವ ನೀಡಿದ ರೋಮಾಂಚಕಾರಿಯಾದ ಸಂವೇದನೆಗಳು! ಅಲ್ಲಿಂದ ರೋಮ ನಗರದ ಲಿಯಾ ನಾರ್ಡೋ ಡಾ ವಿನ್ಸಿ ಇಂಟರ ನ್ಯಾಶನಲ್ ಏರ್‌ಪೋರ್ಟ್ ನಿಂದ ಹಾರಿ ಮರುದಿನ ಮಧ್ಯಾನ ಮುಂಬಯಿ ಸಾಂತಾಕ್ರೂಜ್! ಮರುದಿನ ವಿಮಾನ ದಿಂದ ಗೋವೆಗೆ ತಲುಪಿ, ಅಲ್ಲಿಂದ ಕಾರಿನ ಮೂಲಕ ಹುಬ್ಬಳ್ಳಿಯ ಶ್ರೀ ಜಗದ್ಗುರು

ಮೂರುಸಾವಿರಮಠ ತಲುಪಿದಾಗ ಸಾವಿರಾರು ಭಕ್ತರು ಆನಂದ ಬಾಷ್ಪಗಳಿಂದ ಅಭಿಷೇಕ ಮಾಡುತ್ತ ಸಾಷ್ಟಾಂಗವೆರಗಿದಾಗ ಜಗದ್ಗುರುಗಳ ಕೋಮಲ ಹೃದಯದಲ್ಲಿ ಮಿಶ್ರಭಾವನೆಗಳ ಕಲ್ಲೋಲ!

"ದ್ವಿತೀಯ ಶಾಂತಿ ಪರಿಷತ್ತಿನ ಫಲಶ್ರುತಿಯೇ ಇದು! ಕ್ಯೂಟೋದ ಪ್ರಥಮ ಶಾಂತಿ ಪರಿಷತ್ತಿಗಿಂತಲೂ; ಲ್ಯೂವೆನ್‌ನ ದ್ವಿತೀಯ ಜಾಗತಿಕ ಪರಿಷತ್ತಿನಲ್ಲಿ ನಾವು ಸಾಧಿಸಿದುದು ಇನ್ನೂ ಬಿತ್ತರ, ಮಹತ್ತರ" ಎಂದು ವಿವರಿಸುತ್ತ "ಲ್ಯೂವೆನ್ ಪರಿಷತ್ತಿನ ಫಲಶ್ರುತಿಯೆಂದರೆ ವಿಶ್ವಶಾಂತಿಯನ್ನು ಕ್ಷಿಪ್ರದಲ್ಲಿಯೆ ಕಾರ್ಯರಂಗಕ್ಕೆ ಇಳಿಸುವ ಕ್ರಿಯಾ ಸಮಿತಿಗಳ ಶುದ್ಧ ಸಾಹಸವೆಂದು ಒಂದೇ ಮಾತಿನಲ್ಲಿ ವರ್ಣಿಸಬಹುದು" ಎಂಬ ಸಮಾಧಾನದ ಶಬ್ದಗಳಿಂದ ಈ ಪ್ರವಾಸ ಸಾಹಿತ್ಯಕ್ಕೆ ದಿವ್ಯಮುಕ್ತಾಯ!

ಕೊನೆಯ ಭಾಗದಲ್ಲಿ ಲ್ಯೂವೆನ್ ಘೋಷಣೆ, ಕ್ಯೂಟೋ ಭಾಷಣ, ಇತರ ವೇದಿಕೆಗಳಿಂದ ಅಪ್ಪಣೆಕೊಡಿಸಿದ ಸಂದೇಶಗಳು ಇಂಗ್ಲೀಷ್‌ನಲ್ಲಿಯೆ ಸಂಗ್ರಹಿಸಲ್ಪಟ್ಟಿದ್ದು ಬಹುಜನವಾಚಕರಿಗೆ, ವಿಶಾಲ ಅಭಿರುಚಿಗೆ ಶುಚಿಯಾದ ಎಡೆ ನೀಡಿದಂತಿದೆ.

'ನಮ್ಮ ವಿದೇಶಯಾತ್ರೆ' ಒಂದು ಸುಂದರ ಗದ್ಯಕಾವ್ಯ. ಇದರಲ್ಲಿ ಭಾಷಾಶೈಲಿಯ, ವರ್ಣನೆಗಳ ಬೆಡಗಿನೊಂದಿಗೆ ಆತ್ಮೀಯತೆಯ ವ್ಯಕ್ತಿಗತ ಭಾವಗೀತಾತ್ಮಕತೆಯಿದೆ. ಯೋಗಿಯ ತಾತ್ವಿಕ ಸಂದೇಶವಿದೆ, ವಿದೇಶಯಾನದ ವರ್ಣಕ ವಸ್ತುಕ ನಿರೂಪಣೆಗಳ ವೈವಿಧ್ಯತೆಯ ನೈವೇದ್ಯವಿದೆ. ಮತ್ತೆ ಮನೆಗೆ ಮರಳುವುದೆ ಪ್ರವಾಸದ ಗುರಿ ಎಂದು ಹೇಳುತ್ತಾರೆ. ಜಾಗತಿಕ ಸಂಚಾರ ಹೊರಟು ವಿಶ್ವಶಾಂತಿಯ ಎರಡು ಪರಿಷತ್ತುಗಳಲ್ಲಿ ತಮ್ಮ ವಾಕ್ಕೊಡುಗೆಗಳನ್ನು, ವೈಚಾರಿಕ ಕಾಣಿಕೆಗಳನ್ನು ನೀಡಿ ತಮ್ಮ ತವರುಪೀಠಕ್ಕೆ ಹಿಂತಿರುಗಿದ ಭವ್ಯ ಪ್ರವಾಸ ಸಾಹಿತ್ಯದ ರಸಭರಿತ ಸಮೀಚೀನ ಭೋಜನವಾಗಿದೆ ಈ ಗ್ರಂಥವಾಚನ. ಇಂದಿನ ಕನ್ನಡ ಪ್ರವಾಸ ಸಾಹಿತ್ಯಕ್ಕೆ ಇದೊಂದು ವಿಶಿಷ್ಟಕೊಡುಗೆ.

# ಜೇನಹನಿ: ಒಂದು ಅಂತರಂಗದ ಅವಲೋಕನ

"ಬೆಳಕು" ಹುನಗುಂದ **ಪ್ರೊ. ಮಲ್ಲಿಕಾರ್ಜುನ ಹಿರೇಮಠ**

ಕರ್ಮವೀರ ವಾರಪತ್ರಿಕೆಯ 'ಚಿಂತನ ಮಂಥನ' ವಿಭಾಗದಲ್ಲಿ ಪ್ರಕಟಗೊಂಡ ನೀತಿ ಬೋಧಕ ಕಿರು ಬರಹಗಳ ಸಂಗ್ರಹ 'ಜೇನಹನಿ', 'ಮೂಜಗಂ' ಅವರು ಇಲ್ಲಿ ಜನ ಸಾಮಾನ್ಯರನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಂಡು ಅವರ ಮನಸ್ಸನ್ನು ಸಂಸ್ಕರಿಸ ಬೇಕೆನ್ನುವ ಹಂಬಲದಿಂದ ಬದುಕಿನ ಮೌಲ್ಯಗಳನ್ನು ದೃಷ್ಟಾಂತ ಹಾಗೂ ನಿದರ್ಶನಗಳ ಮೂಲಕ ಸರಳವಾಗಿ ಸಂಕ್ಷಿಪ್ತವಾಗಿ ಪ್ರತಿಪಾದಿಸಿದ್ದಾರೆ. ಈ ಕಿರುಗ್ರಂಥ ಜನಸಾಮಾನ್ಯರಿಗೆ ಸುಲಭವಾಗಿ ಕೈಗೆಟುಕಬಲ್ಲ ರೀತಿಯಲ್ಲಿ ಪ್ರಕಟಗೊಂಡಿದೆ.

ಒಂದು ವಾರಪತ್ರಿಕೆಯ ಸಣ್ಣ 'ಕಾಲಂ'ದಲ್ಲಿ ಪ್ರಕಟಗೊಂಡ ಈ ಬರಹಗಳಿಗೆ ಮಿತಿ ಇರುವುದು ಸ್ವಾಭಾವಿಕ. ಆದರೆ ತಮಗಿದ್ದ ಮಿತಿಯಲ್ಲೇ ಈ ಬರಹಗಳು ನಿಶ್ಚಿತ ಉದ್ದೇಶದೆಡೆಗೆ ನಮ್ಮನ್ನು ಕೊಂಡೊಯ್ಯುತ್ತವೆ. ಪೂಜ್ಯ ಜಗದ್ಗುರುಗಳವರು ತಮ್ಮ ಅಭಿಪ್ರಾಯಗಳನ್ನು ಹೇಳಲು ವಚನಗಳು, ಸುಭಾಷಿತಗಳನ್ನು ಉದ್ಧರಿಸುತ್ತಾರೆ; ಆದರೆ ಇವುಗಳನ್ನು ತಮ್ಮ ಪಾಂಡಿತ್ಯ ಮೆರೆಯಿಸುವುದಕ್ಕಾಗಿ ಎಂಬಂತೆ ಎಲ್ಲೂ ಅವಲಂಬಿಸುವು ದಿಲ್ಲ. ಇವು ಸಹಜವಾಗಿ ವಿಚಾರಗಳ ಪ್ರತಿಪಾದನೆಯ ಅಗತ್ಯವಾಗಿ ಬರುತ್ತವೆ.

ವ್ಯಕ್ತಿತ್ವ ವಿಕಾಸಕ್ಕೆ ಬೇಕಾಗಿರುವ ಅಂಶಗಳು, ಬದುಕಿನಲ್ಲಿ ಅಗತ್ಯವಾಗಿರಬೇಕಾದ ನೀತಿ ನಿಯಮಗಳು ಹಾಗೂ ಆದರ್ಶಗಳನ್ನು ಕುರಿತು 'ಮೂಜಗಂ' ಇಲ್ಲಿ ಚಿಂತನ ನಡೆಯಿಸಿ ದ್ದಾರೆ. 'ಆತ್ಮ ಸಂಶೋಧನೆ' ಎಂಬ ಮೊದಲ ಬರಹದಲ್ಲಿ 'ಮಜ್ಜಿಗೆ ಕಡೆದಂತೆ ಬೆಣ್ಣೆ ಹೊರಡುವಂತೆ ಚಿಂತನ ಮಂಥನಗೈದರೆ ತತ್ವದ ಬೆಣ್ಣೆ ಹೊರಟು ವಿಚಾರ ಶಕ್ತಿ ಜಾಗೃತ ವಾಗುವುದು' ಎನ್ನುತ್ತ ಇದು ಆಚಾರಕ್ಕೆ ಪ್ರೇರಕವಾಗಬೇಕು ಎಂದು ಅಭಿಪ್ರಾಯಪಡು ತ್ತಾರೆ. ಇದಕ್ಕಾಗಿ ಶ್ರವಣ, ಮನನ, ನಿಧಿಧ್ಯಾಸ ಅಗತ್ಯ ಎಂಬ ನಿಲುವು ತಳೆಯುತ್ತಾರೆ. 'ಕಾಯಕವೇ ಕೈಲಾಸ'ದಲ್ಲಿ 'ಕಾಯಕದಲ್ಲಿ ನಿರತನಾದೊಡೆ ಗುರುದರ್ಶನವಾದರೂ ಮರೆಯ ಬೇಕು' ಎಂಬ ಶರಣರ ನಿಲುವನ್ನು ಬಲವಾಗಿ ಸಮರ್ಥಿಸುತ್ತಾರೆ. 'ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ?' ಎಂಬುದರಲ್ಲಿ ಅಂತರಂಗ ಶುದ್ಧಿಯ ಅವಶ್ಯಕತೆಯನ್ನು ಒಂದು ದೃಷ್ಟಾಂತದ ಮೂಲಕ ವಿವೇಚಿಸಿದ್ದಾರೆ. 'ಕರುಣವಿರಲಿ ಜೀವರೊಳು' 'ಕ್ಷಮೆ' ಬರಹ ಗಳಲ್ಲಿ ಈ ಎರಡೂ ಮೌಲ್ಯಗಳು ಮಾನವನನ್ನು ದೇವತ್ವಕ್ಕೆ ಒಯ್ಯುವಂಥವು ಬದುಕನ್ನು ಸಹ್ಯ ಹಾಗೂ ಮಾರ್ದವಗೊಳಿಸುವಂಥವು ಎಂಬುದಾಗಿ ವಿವರಿಸಿದ್ದಾರೆ. ಈ ಬಗೆಯ ಬರಹಗಳು ಆತ್ಮ ವಿಕಾಸ ಹಾಗೂ ವ್ಯಕ್ತಿತ್ವ ಬೆಳವಣಿಗೆ ಕುರಿತು ಇವೆ.

'ದೇವನೊಬ್ಬ ನಾಮ ಹಲವು' 'ಭಾವೈಕ್ಯ' 'ವಿಶಾಲ ಭಾವನೆ' ಇಂಥ ಬರಹಗಳು ರಾಷ್ಟ್ರೀಯ ಪ್ರಜ್ಞೆ ಹಾಗೂ ಏಕತೆಯನ್ನು ಪ್ರತಿಪಾದಿಸುತ್ತವೆ. 'ದೇವನೊಬ್ಬ ನಾಮ ಹಲವು'ದಲ್ಲಿ ಮೂವರು ಬಾಲಕರು ಒಂದು ಕಲ್ಲಂಗಡಿ ಹಣ್ಣಿನ ಹೆಸರಿಗಾಗಿ ಜಗಳಾಡುವುದರ ನಿದರ್ಶನ ಕೊಡುತ್ತ ಒಬ್ಬ ದೇವನ ಸಲುವಾಗಿ ಅವನ ಹೆಸರಿನಲ್ಲಿ ನಡೆಯುವ ಅರ್ಥಹೀನ ಕಚ್ಚಾಟದ ಬಗ್ಗೆ ಲೇಖಕರು ಮನನೀಯವಾಗಿ ವಿವೇಚಿಸಿದ್ದಾರೆ.

ಈ ಎಲ್ಲ ಬರಹಗಳ ಹಿಂದಿರುವ ಶ್ರೀಗಳವರ ಸುಸಂಸ್ಕೃತ ಮನಸ್ಸು ಅವರ ಅನುಭವ ಹಾಗೂ ಅನುಭಾವ ಕೂಡ ನಮ್ಮ ಅರಿವಿಗೆ ಬರುತ್ತವೆ. ಅವರ ವಿಶಾಲ ಮನೋಭಾವ, ರಾಷ್ಟ್ರೀಯ ಸಮಗ್ರತೆಯ ಕಲ್ಪನೆ, ಧರ್ಮದ ಅಂತಃಸತ್ವದ ಅರಿವು ಇಲ್ಲಿ ಗಮನ ಸೆಳೆಯುತ್ತವೆ.

'ಶಿಸ್ತು ಸಂಯಮಗಳೆಂಬ ನೀರು ಗೊಬ್ಬರಗಳನ್ನು ಹಾಕಿದಾಗ (ಜ್ಞಾನ ವೃಕ್ಷವು) ರಸವತ್ತಾದ ಫಲಗಳನ್ನು ನೀಡುವುದು'. 'ಚಿತ್ತದ ವನದಲ್ಲಿ ತ್ಯಾಗ ಮತ್ತು ಸಹಾನುಭೂತಿ ಮುಂತಾದವುಗಳಿಂದ ತುಂಬಿ ಹರಿಯುತ್ತಿರುವ ಪ್ರೇಮದ ಹಳ್ಳಗಳು'–ಇಂಥ ಮಾತುಗಳಲ್ಲಿ ಶ್ರೀಗಳವರ ಕವಿ ಹೃದಯ ಮತ್ತು ಕಾವ್ಯಭಾಷೆ ಪ್ರಕಟವಾಗುತ್ತವೆ. ಈ ಪುಸ್ತಿಕೆಗೆ 'ಜೇನಹನಿ' ಎಂಬ ಶೀರ್ಷಿಕೆ ಕೊಡುವಲ್ಲಿ ಕೂಡ ಅವರ ಸೃಜನತೆಯ ಸ್ಪರ್ಶವಿದೆ.

ಕಿರಿದರಲ್ಲಿ ಹಿರಿದಾದುದನ್ನು ಹಿಡಿವ ತವಕ ಇಲ್ಲಿದೆ, ಸುಲಭವಾಗಿ ಅತ್ಯಂತ ಸಾಮಾನ್ಯ ಓದುಗನಿಗೆ ಗ್ರಾಹ್ಯವಾಗಬೇಕೆಂಬ ಧೋರಣೆ ಇದೆ. ಧರ್ಮ, ಸಂಸ್ಕೃತಿ ಹಾಗೂ ಜೀವನ ಮೌಲ್ಯಗಳ ಬಗ್ಗೆ ಒಂದು ಹಿರಿಯ ಜೀವದ ಕಳಕಳಿ ವೇದ್ಯವಾಗುತ್ತದೆ. ನಮ್ಮ ಬಾಳಿಗೆ ಬೆಳಕಾಗಬಲ್ಲ ನುಡಿಮುತ್ತುಗಳನ್ನು ಈ ಪುಸ್ತಿಕೆ ಒಳಗೊಂಡಿದೆ.

# "ವಿವಿಧತಾ ಮೆ ಏಕತಾ"

## ಸಹೃದಯಪೂರ್ಣ ಸಾರ ವಿಮರ್ಶೆ

ಹುನಗುಂದ ಡಾ|| ಬಿ.ಎಫ್. ಹಸರಾಣಿ

'ವಿವಿಧತಾ ಮೆ ಏಕತಾ' ಎಂಬ ಹಿಂದಿ ಗ್ರಂಥ ಶ್ರೀಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳದ ಬೆಳ್ಳಿ ಹಬ್ಬದ ಸ್ಮರಣಾರ್ಥವಾಗಿ ಹೊರತಂದ ನಾಲ್ವತ್ತು ಕೃತಿರತ್ನಗಳಲ್ಲೊಂದು, ಪರಮಪೂಜ್ಯ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾದರ ರಾಜಯೋಗೀಂದ್ರ ಮಹಾಸ್ವಾಮಿಗಳು ಮೂರುಸಾವಿರ ಮಠ ಹುಬ್ಬಳ್ಳಿ ಅವರು ಅನೇಕ ರಾಷ್ಟ್ರೀಯ ಅಂತರ್ರಾಷ್ಟ್ರೀಯ ಮಟ್ಟದ ಸರ್ವಧರ್ಮ ಸಮ್ಮೇಲನಗಳಲ್ಲಿ, ಅಧಿವೇಶನಗಳಲ್ಲಿ ಭಾಗವಹಿಸಿ ಹಿಂದಿಯಲ್ಲಿ ಹಲವಾರು ವಿದ್ವತ್ಪೂರ್ಣವಾದ, ಉದ್ಬೋಧಕವಾದ ಉಪನ್ಯಾಸಗಳನ್ನು ನೀಡಿ ವಿಚಾರ-ಕ್ರಾಂತಿಯ ಕಹಳೆಯನ್ನೂದಿದ್ದಾರೆ. ಪೂಜ್ಯಶ್ರೀಗಳವರ ಇಂತಹ ಎಂಟು ಪ್ರಾತಿನಿಧಿಕ ಉಪನ್ಯಾಸಗಳ ಸಂಗ್ರಹ ಈ ಗ್ರಂಥ. ಅವುಗಳಲ್ಲಿ ಮೂಡಿ ಬಂದಿರುವ ರಾಷ್ಟ್ರೀಯ ಏಕತೆ, ಸಾಮಾಜಿಕ ಜೀವನದಲ್ಲಿ ಧರ್ಮದ ಪಾತ್ರ, ಸರ್ವ ಧರ್ಮ ಸಮನ್ವಯ, ವಿಶ್ವಶಾಂತಿ ಮತ್ತು ವಿಶ್ವಕಲ್ಯಾಣಕ್ಕೆ ಜೈನ, ಬೌದ್ಧ, ವೀರಶೈವ ಧರ್ಮ ಹಾಗೂ ದರ್ಶನಗಳ ಕೊಡುಗೆ; ಕನ್ನಡ ನಾಡು-ನುಡಿ, ಕರ್ನಾಟಕದ ಸಂಸ್ಕೃತಿ-ಸಭ್ಯತೆ, ಶರಣ ಸಾಹಿತ್ಯ-ಸಂಸ್ಕೃತಿಗಳ ಹಿರಿಮೆ-ಗರಿಮೆ, ಶರಣ ಶರಣೆಯರ, ಜೈನ ಆಚಾರ್ಯರ ವಿಶುದ್ಧ ಜೀವನ-ದರ್ಶನ, ಮಹಾತ್ಮಾ ಗಾಂಧಿಜಿ, ವಿನೋಬಾ ಭಾವೆ, ದಲಾಯಿಲಾಮಾರಂತಹರ ಜೀವನ-ಯಜ್ಞ ಮುಂತಾದ ವಿವಿಧ ವಿಷಯಗಳ ಸಿಂಹಾವಲೋಕನ ಪ್ರಸ್ತುತ ಲೇಖನದ ಪ್ರತಿಪಾದ್ಯ ವಿಷಯ. ಇವುಗಳ ಸಹೃದಯ ಪೂರ್ಣ ಸಾರ ವಿಮರ್ಶೆ ಇಲ್ಲಿದೆ:

### ವಿವಿಧತಾ ಮೆ ಏಕತಾ

ಆರ್ಯ ದ್ರಾವಿಡರಲ್ಲಿ ಹುಟ್ಟಿಕೊಂಡ ಮತಭೇದ, ಜೈನ ಬೌದ್ಧರ ಕಾಲದ ಧಾರ್ಮಿಕ ಅಸಮತೋಲ, ಭಯಾನಕ ಯುದ್ಧಗಳು, ವಿದೇಶೀಯರ ಆಗಮನ, ಪರ ಧರ್ಮಗಳ ಪ್ರಚಾರ, ಪಶ್ಚಿಮೀ ಪ್ರಭಾವದಿಂದ ಭಾರತೀಯ ಸಂಸ್ಕೃತಿಯ ಅಧೋಗತಿ ಮುಂತಾದ ಅಘಟಿತ ಘಟನೆಗಳಿಂದ ಭಾರತದಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಿಕ, ಕಲಾತ್ಮಕ, ವೈಚಾರಿಕ ಹಾಗೂ ಭಾಷಾ ಕ್ಷೇತ್ರಗಳಲ್ಲಿ ಕಲ್ಪನಾತೀತವಾದ ವಿವಿಧತೆ ಉಂಟಾಗುವದು ಸಹಜ. ಭಾರತದಲ್ಲಿ ಯಾವ ವಿಷಯದಲ್ಲಿಯೂ ತನ್ನದೇ ಆದ ಏಕೈಕ ಮಾರ್ಗವಿಲ್ಲ. ಹಲವು ಹದಿನೆಂಟು ಮಾರ್ಗಗಳು. ವ್ಯಕ್ತಿ-

ವ್ಯಕ್ತಿಯಲ್ಲಿ, ಧರ್ಮಗಳಲ್ಲಿ ಪರಸ್ಪರ ಅಂತಃಕಲಹ, ಭಿನ್ನ ಭಿನ್ನ ಧರ್ಮಾಚರಣೆಗಳು, ತಿನ್ನುಣ್ಣುವದರಲ್ಲಿ ಅನೈಕ್ಯತೆ, ವರ್ಗಭೇದ, ಶೋಷಣೆ ಇವು ವಿವಿಧತೆಯ ಮೂಲ ಕಾರಣಗಳು.

ಈ ವಿವಿಧತೆಯ ಕುದುರೆಗೆ ಏಕತೆಯ ಕಡಿವಾಣ ಹಾಕಿ ನಿಯಂತ್ರಣದಲ್ಲಿಟ್ಟುಕೊಂಡು ಭಾರತದ ಅಖಂಡತೆಯನ್ನು ಭದ್ರವಾಗಿಟ್ಟುಕೊಳ್ಳುವ ಸಂಕಲ್ಪ ಮಾಡಲಾಗಿದೆ. ಈ ಕಾರ್ಯಸಾಧನೆಗೆ ಭಾವೈಕ್ಯತೆ ಪರಮೋಪಾಯವೆಂದು ಬಗೆದು ಅದನ್ನು ವಿವಿಧ ಮೂಲ ಗಳಿಂದ ಬಲಪಡಿಸಲು ರಾಷ್ಟ್ರಮಟ್ಟದಲ್ಲಿ ನಿರಂತರ ಪ್ರಯತ್ನ ನಡೆದಿದೆ. ಇಂದಿನ ಸ್ವಾರ್ಥ ಲೋಲುಪ ರಾಜಕೀಯ ಸಂಘರ್ಷ, ಬಹುಕಾಲದಿಂದಲೂ ಪರಿಹಾರ ಕಾಣದೆ ಉಳಿದು ಕೊಂಡು ಬಂದಿರುವ ರಾಷ್ಟ್ರೀಯ ಕ್ಲಿಷ್ಟ ಸಮಸ್ಯೆಗಳು. ಪ್ರಾಂತೀಯತೆಯ ದುರಭಿಮಾನ ಮತ್ತು ಪಕ್ಷಪಾತ ಧೋರಣೆಯ ಪರಿಣಾಮವಾಗಿ ರಾಷ್ಟ್ರೀಯ ಏಕತೆಯ ಸಾಧನೆ ಕನ್ನಡಿಯ ಗಂಟಿನಂತಾಗಿದೆ. ಸಮಸ್ತ ದೇಶವನ್ನು ಒಂದು ಘಟಕವನ್ನಾಗಿ ಮಾಡಿ ರಾಷ್ಟ್ರೀಯ ಅಭಿವೃದ್ಧಿ ಕಾರ್ಯದಲ್ಲಿ ತೊಡಗಿಸಿದರೆ ಜನರ ಮನಸ್ಸಿನಿಂದ ಪ್ರಾಂತೀಯತೆಯ ಭಾವನೆಯೇ ಹೊರಟು ಹೋಗಿ ರಾಷ್ಟ್ರೀಯ ಏಕತಾ ಭಾವನೆ ಹುಲುಸಾಗಿ ಬೆಳೆಯುತ್ತ ನಡೆಯುವದು. ಯಾವುದೇ ವೈಜ್ಞಾನಿಕ, ಶೈಕ್ಷಣಿಕ, ಸಾಂಸ್ಕೃತಿಕ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ನಿರತರಾದ ಭಾರತೀಯರು ರಾಷ್ಟ್ರದ ಏಕತೆಗಾಗಿ ಹೋರಾಡುತ್ತಿದ್ದಾರೆಂಬ ಬಗ್ಗೆ ಕೇಂದ್ರ ರಾಜ್ಯ ಸರಕಾರಗಳು ಯಾವ ಪೂರ್ವಾಗ್ರಹಕ್ಕೊಳಗಾಗದೆ ವಸ್ತುನಿಷ್ಠವಾಗಿ ವಿಚಾರಿಸಿ ಅವರಲ್ಲಿ ಸಂಪೂರ್ಣ ವಿಶ್ವಾಸವಿರಿಸಬೇಕು. ಹೀಗೆ ಶಾಸಕ ಶಾಸಿತರಿಬ್ಬರಲ್ಲಿಯೂ ಈ ಬಗೆಯ ನೈತಿಕ ಹೊಣೆಗಾರಿಕೆಯ ಅರಿವು ಉಂಟಾದಾಗ ಮಾತ್ರ ಭಾರತದಲ್ಲಿ ರಾಷ್ಟ್ರೀಯ ಏಕತೆಯ ಸಾಧನೆಗೆ ಒಂದು ಅರ್ಥ ಬರುತ್ತದೆ. ಆದರೆ ಇಂದಿನ ಮೌಲ್ಯರಹಿತ ರಾಜಕೀಯದಿಂದ ರಾಷ್ಟ್ರೀಯ ಏಕತೆಯ ಸಾಧನೆಗೆ ವಜ್ರಾಘಾತ ವಾಗುತ್ತಲಿದೆ. ಭಾರತದ ವಿವಿಧ ಭಾಷೆಗಳು ಸಾಹಿತ್ಯ ಕಲೆ ಸಂಸ್ಕೃತಿ ವಿವಿಧ ಸಮಾಜ–ಪದ್ಧತಿಗಳ ಪ್ರಭಾವದಿಂದ ಭಾರತೀಯ ಸಂಸ್ಕೃತಿಯ ಸೌಷ್ಠವ ಉತ್ತರೋ ತ್ತರ ವಿಕಾಸ ಹೊಂದುವಂತಾದರೆ ಭಾರತದ ವಿವಿಧತೆ ಒಂದು ವರದಾನವಾಗಿ ಪರಿಣಮಿಸುವ ದೆಂದು ಹೇಳುತ್ತ ಪೂಜ್ಯಶ್ರೀಗಳವರು ಭಾರತದ ವಿವಿಧತೆಯಲ್ಲಿ ಏಕತೆಯನ್ನು ಸಾಧಿಸುವ ಕಷ್ಟಸಾಧ್ಯ ಕಾರ್ಯದಲ್ಲಿ ಯಶಸ್ಸುಗಳಿಸಲು ತಮ್ಮವೇ ಆದ ವೈಧಾನಿಕ ವಿಚಾರಗಳ ಪ್ರಸಾದ ನೀಡಿ ತಮ್ಮ ಅತ್ಯುಚ್ಚ ವಿಚಾರವಂತಿಕೆ ಹಾಗೂ ಚಿಂತನ-ಶಕ್ತಿಯನ್ನು ಪ್ರಮಾಣೀ ಕರಿಸಿದ್ದಾರೆ.

## ಸಾಮಾಜಿಕ ಜೀವನವೇ ಧರ್ಮಕಾ ಮಹತ್ವ

ಸತ್ಯ ಶಾಂತಿ ದಯೆ ಪ್ರೇಮ ಅಹಿಂಸೆಗಳ ಅನುಷ್ಠಾನವೇ ಧರ್ಮ. ಬಿದ್ದವರನ್ನು, ಬೀಳಲಿರುವವರನ್ನು, ಬೀಳುವವರನ್ನು ಮೇಲೆತ್ತುವುದೇ ಧರ್ಮ. ಧರ್ಮವೆಂದರೆ ಬದುಕಿನ ಸಫಲತೆ, ಸಾರ್ಥಕತೆ, ಸುಖ–ಶಾಂತಿ, ಸಮೃದ್ಧಿಯ ಉದ್ಗಮ, ಸಂಯಮ.

ಪರೋಪಕಾರ, ಹಿರಿಯರ ಬಗ್ಗೆ ಪೂಜ್ಯ ಭಾವನೆ, ಸ್ವಾವಲಂಬನೆಗಳ ಸಂಗಮ. ಧರ್ಮದ ಅರ್ಥ ಮತ್ತು ಉದ್ದೇಶ ಒಂದೇ. ಈ ಸಂಗತಿಯನ್ನು ವರ್ತಮಾನ ಸಮಾಜ ಮನ ಗಂಡಷ್ಟೂ ಸಮಾಜ-ಜೀವನ ಸುಖಮಯ ಸುರಕ್ಷಿತ. ವ್ಯಕ್ತಿ ಮತ್ತು ಸಮಾಜ-ಕಲ್ಯಾಣ ಕಾರ್ಯದಲ್ಲಿ ಧರ್ಮದ ಪಾತ್ರ ಹಿರಿದು. ಧರ್ಮ ಭ್ರಷ್ಟರು ಸುರರೇ ಆಗಿದ್ದರೂ ಅವರ ಪತನ ದಿಟ. ಧರ್ಮನಿಷ್ಠರು ಮಾನವರಾಗಿದ್ದರೂ ಅವರ ಜೀವನ ಪಾವನ. ಧರ್ಮ ವನ್ನು ಗೌರವಿಸುವವ ವಂದ್ಯ, ಕಡೆಗಣಿಸುವವ ನಿಂದ್ಯ. ಧರ್ಮದ ದೃಷ್ಟಿಯಲ್ಲಿ ದೇವ-ಮಾನವರೀರ್ವರೂ ಸಮಾನರು. ಅಧರ್ಮಿಗಳಾಗಿ ಭೋಗವಿಲಾಸದಲ್ಲಿ ತೊಡಗಿದ ಸುರರು ಜಗತ್ಪ್ರಳಯ ಕಾಲದಲ್ಲಿ ನಾಮಶೇಷಗೊಂಡರು. ವಿಶುದ್ಧ ಧರ್ಮಾಚರಣೆಯಿಂದ ಮಹಾಮಾನವ ಮನು ಕೀರ್ತಿಶೇಷನಾದ. ಮನುನಿರ್ಮಿತ ಮಾನವ-ಸಮಾಜ ಅದೇ ಧರ್ಮವನ್ನು ಅಂಗೀಕರಿಸಿ ಆಚರಿಸುತ್ತ ಬಂದು ಸುಖಶಾಂತಿಯ ನೆಲವೀಡಾಯಿತು ಎಂದು ಮುಂತಾಗಿ ಪೂಜ್ಯಶ್ರೀಗಳವರು ಧರ್ಮದ ಮಹತಿಯ ಬಗ್ಗೆ ಬಹು ಸೊಗಸಾಗಿ ಪ್ರಸ್ತುತ ಪಡಿಸಿದ್ದಾರೆ. ಸಾಮಾಜಿಕ ಜೀವನದಲ್ಲಿ ಬರುವ ಶೈಕ್ಷಣಿಕ ರಾಜಕೀಯ ಆರ್ಥಿಕ ಔದ್ಯೋಗಿಕ ರಂಗಗಳ ಪೋಷಕ ಶಕ್ತಿ ಧರ್ಮ. ಶಿಕ್ಷಣ ಮತ್ತು ಧರ್ಮ ಪರಸ್ಪರಾವಲಂಬಿಗಳು. ಯುವ ಪೀಳಿಗೆಯನ್ನು ಸುಸಂಸ್ಕೃತಗೊಳಿಸಿ ಸುಂದರ, ಸ್ವಸ್ಥ ಸಮಾಜ ನಿರ್ಮಿಸಲು ಧರ್ಮ ಅತ್ಯವಶ್ಯ. ದಯೆ ಧರ್ಮದ ಮೂಲ. ಕಳ್ಳತನ ಮಾಡಬೇಡ, ವಧೆ ಮಾಡಬೇಡ, ಸುಳ್ಳು ನುಡಿಯಬೇಡ, ಮುನಿಯಬೇಡ, ಅನ್ಯರನ್ನು ನಿಂದಿಸಬೇಡ, ಆತ್ಮಸ್ತುತಿ ಮಾಡಿ ಕೊಳ್ಳಬೇಡ, ಕಾಯಕವೇ ಕೈಲಾಸ ಮುಂತಾದ ಧರ್ಮದ ಉಚ್ಚ ಮೌಲ್ಯಗಳನ್ನು ತಮ್ಮ ವಚನ-ವಾಹಿನಿಯ ಮೂಲಕ ಬಸವಣ್ಣನವರು ಶ್ರುತಪಡಿಸಿದ್ದಾರೆ.

ಧರ್ಮದೊಡನೆ ಕರ್ಮದ ಬೆರೆತದಿಂದ ಜೀವನ ಜೇನು ಸಕ್ಕರೆಯಾಗುತ್ತದೆ. ಇಹವೇ ಸ್ವರ್ಗವಾಗುತ್ತದೆ. ಇಲ್ಲಿಯೇ ಸ್ವರ್ಗಸುಖ ಲಭಿಸುತ್ತದೆ. ಪ್ರತಿಯೊಂದು ಉದ್ಯೋಗ ಧರ್ಮವನ್ನಾಧರಿಸಬೇಕು. ಫಲತಃ ಸಮಾಜದಲ್ಲಿ ಸುಖಶಾಂತಿ ನೆಲೆಸುವದು. ಧರ್ಮವನ್ನು ಆಧರಿಸದ ಉದ್ಯೋಗ ಪತನೋನ್ಮುಖವಾಗುವದು. ಉದ್ಯೋಗ-ವ್ಯವಸಾಯಗಳಿಗೆ ಧರ್ಮ ಆಪ್ಯಾಯಮಾನ. ವರ್ತಮಾನ ಸಮಾಜ-ಜೀವನದಲ್ಲಿ ಬಡತನ, ನಿರುದ್ಯೋಗ, ಶೋಷಣೆ, ರೋಗ-ರುಜಿನಗಳಿಂದುಂಟಾಗುವ ಕಷ್ಟ-ಕಾರ್ಪಣ್ಯ, ಅಶಾಂತಿ-ಅತೃಪ್ತಿ, ದುಃಖ ದುಮ್ಮಾನಗಳಿಗೆ ಧರ್ಮದ ಬಗ್ಗೆ ಇರುವ ಅನಾಸಕ್ತಿಯೇ ಮುಖ್ಯ ಕಾರಣವೆಂದು ಹೇಳಿ ಸಕಲ ಶ್ರೇಯೋಭಿವೃದ್ಧಿ ಪಡೆದ ಸರ್ವಾಂಗ ಸುಂದರ ಬದುಕಿಗೆ ಧರ್ಮವೇ ದಾರಿದೀಪವೆಂಬ ಮಾತನ್ನು ಪೂಜ್ಯ ಶ್ರೀಗಳವರು ಮನಂಬುಗುವಂತೆ ವಿವರಿಸಿದ್ದಾರೆ.

ಪಶ್ಚಿಮೀ ಸಂಸ್ಕೃತಿ-ಸಭ್ಯತೆಯ ಪ್ರಭಾವಕ್ಕೊಳಗಾದ ಇಂದಿನ ಶಿಕ್ಷಣಕ್ಕೆ ಧರ್ಮದ ಸಖ್ಯ ಬೇಡವಾಗಿದೆ. ಇದರಿಂದಾಗಿ ಇಂದಿನ ಶಿಕ್ಷಣ ಜೀವನ-ಮೌಲ್ಯಗಳನ್ನು ಬೇಕು-ಬೇಡ ಗಳನ್ನು ಗುರುತಿಸಿ, ಪೋಷಿಸಿ, ಪೂರೈಸುವಲ್ಲಿ ನಿಷ್ಕ್ರಿಯವಾಗಿದೆ. ಸಂತ ಕಬೀರದಾಸ ತುಲಸೀದಾಸ, ಸೂರದಾಸ, ಕನಕದಾಸ, ಪುರಂದರದಾಸ, ಬಸವಣ್ಣನವರಂತಹ ಮಹಾತ್ಮರ

ಜೀವನ ಧಾರ್ಮಿಕ ಶಿಕ್ಷಣ ಹಾಗೂ ಸಾಮಾಜಿಕ ಧರ್ಮದಿಂದ ವಿಭೂಷಿತಗೊಂಡಿತ್ತು. ಈ ಈ ಧರ್ಮದೃಷ್ಟಿಯಿಂದಲೇ ಅವರು ಅಂದಿನ ಸಮಾಜದಲ್ಲಿ ಬೇರೂರಿದ ಅನ್ಯಾಯ, ಅವ್ಯವಸ್ಥೆ, ಅಧರ್ಮವನ್ನು ತೊಡೆದು ಹಾಕಲು ಶಕ್ತರಾದರು. ತಮ್ಮ ಅರ್ಥಪೂರ್ಣ ಅಮೃತೋಕ್ತಿಗಳಿಂದ ಅಂದಿನ ಹದಗೆಟ್ಟ ಸಮಾಜಕ್ಕೆ, ಜನತೆಗೆ ಸದ್ಧರ್ಮದ ಮಾರ್ಗ ತೋರಿದರು. ಯಾರು ಧರ್ಮವನ್ನು ರಕ್ಷಿಸುತ್ತಾರೋ ಧರ್ಮ ಅವರನ್ನು ರಕ್ಷಿಸುತ್ತದೆ.

ಧರ್ಮದಂತೆ ನಡೆದವರಿಗೆ ಸಮಾಜದಲ್ಲಿ ಉಚ್ಚ ಸ್ಥಾನ-ಮಾನವಿದೆ. ಮಾನವನನ್ನು ಸತ್ಪಥದ ಮೇಲೆ ಕೊಂಡೊಯ್ಯುವ ಧರ್ಮ ಶ್ರೇಷ್ಠಧರ್ಮ. ಪ್ರತಿಯೊಂದು ವರ್ಗ ಮತ್ತು ಸಮಾಜಕ್ಕೆ ಧರ್ಮದ ಭದ್ರ ತಳಹದಿ ಇರಬೇಕು. ತನ್ಮೂಲಕ ವ್ಯಕ್ತಿಸುಖ-ಶಾಂತಿಯಿಂದ ನೀತಿಪ್ರದ ಜೀವನ ಕಳೆಯುವಂತಾಗಬೇಕು. ಪ್ರಾಚೀನ ಕಾಲದಲ್ಲಿ ಧರ್ಮ ಯುದ್ಧಗಳಾಗುತ್ತಿದ್ದವು. ಆದರೆ ಅಧರ್ಮವೇ ಆಧುನಿಕ ಯುದ್ಧನೀತಿಯಾಗಿರುವದರಿಂದ ಮಾನವನ ಮಾರಣ ಹೋಮವೇ ನಡೆದು ವಿಶ್ವ ವಿನಾಶದೆಡೆ ಸಾಗುತ್ತಿದೆ. ಆದ್ದರಿಂದ ಆಧುನಿಕ ಮಾನವ ಧರ್ಮ-ಮಾರ್ಗದ ಮೇಲೆ ಬಿಡದೆ ನಡೆದು ವ್ಯಕ್ತಿ, ಸಮಾಜ, ರಾಷ್ಟ್ರದ ಕಲ್ಯಾಣಕ್ಕೆ ನಾಂದಿ ಹಾಡಬೇಕು-ಎಂದು ಆಶೀರ್ವದಿಸುತ್ತ ಪೂಜ್ಯಶ್ರೀಗಳವರು ಮಾನವನ ಉತ್ಥಾನ-ಪತನ, ಸುಖ-ದುಃಖ, ಅಳಿವು-ಉಳಿವು ಧರ್ಮದಲ್ಲಿ ಅವನಿಗಿರುವ ಆಸಕ್ತಿ, ಅನಾಸಕ್ತಿಯನ್ನೇ ಅವಲಂಬಿಸಿರುವದರಿಂದ ಮಾನವನ ಪ್ರತಿಯೊಂದು ಕಾರ್ಯ-ಕಲಾಪಕ್ಕೆ, ವಿಶ್ವ-ವ್ಯವಹಾರಗಳಿಗೆ ಧರ್ಮವೇ ಮಾನದಂಡವಾಗಿರಬೇಕೆಂದು ಎಚ್ಚರಿಸಿದ್ದಾರೆ. ಧರ್ಮದ ಅದ್ಭುತ ಶಕ್ತಿ. ಅದಮ್ಯ ಚೇತನದ ಬಗ್ಗೆ ತಮ್ಮ ಜ್ಞಾನ-ಕೋಶವನ್ನು ತೆರೆದು ಹೇಳುವಾಗ ಧರ್ಮದ ವಿರಾಟಸ್ವರೂಪ ಹಾಗೂ ವಿಶ್ವವ್ಯಾಪಕತ್ವದ ಬಗ್ಗೆ ಅವರಿಗಿರುವ ಅಗಾಧ ಪಾಂಡಿತ್ಯ, ನಿಷ್ಠೆ, ಕಳಕಳಿ ಜಾಹಿರಗೊಂಡಿವೆ.

## ವಿಶ್ವಶಾಂತಿ ಮೆ ವೀರಶೈವ ಧರ್ಮ ಕೀ ದೇನ

ಅಗೋಚರನಾದ ಪರಮಾತ್ಮನು ದೇಹದ ಕಣ-ಕಣದಲ್ಲಿ ಅಡಗಿರುವದರಿಂದ ದೇಹವನ್ನೇ ದೇವಾಲಯವನ್ನಾಗಿ ಮಾಡಿ, ಅದನ್ನು ಅಧ್ಯಾತ್ಮ ನಿಧಿಯಿಂದ ಶುಚಿರ್ಭೂತಗೊಳಿಸಿ ಮಹಾಕಾಯ ಮತ್ತು ಶಿವಕಾಯವಾಗುವಂತೆ ಮಾಡಿ ಪರಶಿವನ ಆವಾಸಕ್ಕೆ ಭೂಷಣಪ್ರಾಯವಾಗುವಂತೆ ಸಿದ್ಧಪಡಿಸಬೇಕು. ·ಆಳವಾದ ಆತ್ಮಾನುಭವ ಪಡೆದು ಪರಮಾತ್ಮನೊಡನೆ ತಾದಾತ್ಮ ಹೊಂದಬೇಕು. ಈ ಆತ್ಮಾನುಭವ ವಿಶ್ವಶಾಂತಿಗೆ ಪ್ರೇರಕ ಶಕ್ತಿಯಾಗುವುದೇ ಇಷ್ಟಲಿಂಗ ರಹಸ್ಯ.

ಭವ-ಬಂಧನದಿಂದ ಬೇಸತ್ತ ಮಾನವನಿಗೆ ಪ್ರಪಂಚದಿಂದ ಪಲಾಯನ ಮಾಡಬೇಕೆಂದೆನಿಸಿದಾಗ ನೀರಿನಲ್ಲಿ ಅಡಗಿದ ವಡವಾಗ್ನಿಯಂತೆ, ಸಸ್ಯದಲ್ಲಿ ಅಡಗಿದ ರಸರುಚಿಯಂತೆ, ಪುಷ್ಪದಲ್ಲಿ ಅಡಗಿದ ಸೌರಭದಂತೆ ತನ್ನೊಳಗೆ ನೆಲೆಸಿದ ಪರಮಾತ್ಮನ ಅರಿವು ಉಂಟಾಗುತ್ತದೆ. ಅವನ ಮೊರೆ ಹೋಗುತ್ತಾನೆ. ಈ ಸ್ಥಿತಿಯಲ್ಲಿ ಸದ್ಗುರು ಭಕ್ತ

ಜೀವಾತ್ಮನಿಗೆ ಇಷ್ಟಲಿಂಗವನ್ನು ಕರುಣಿಸಿ ಆಶೀರ್ವದಿಸುತ್ತಾನೆ. ಇಷ್ಟಲಿಂಗವು ಭಕ್ತ ಜೀವಾತ್ಮನ ಹೃದಯದಲ್ಲಿ ಆವಿರ್ಭವಿಸಿದ ಪರಮಾತ್ಮನ ಅಲೌಕಿಕ ಶಕ್ತಿಯ ದ್ಯೋತಕ• ಈ ಶಕ್ತಿ ಸಂವರ್ಧಿತಗೊಂಡು ತನ್ನ ಮೂಲ ರೂಪವನ್ನು ಹೊಂದುವಂತೆ ಮಾಡುವದು ವೀರಶೈವದ ಗುರಿ. ಬಸವಾದಿ ಪ್ರಮಥರು ಒಹುದೇವರ ಪೂಜೆಗೆ ಬದಲಾಗಿ ಶಿವಪೂಜೆ ಅಥವಾ ಇಷ್ಟಲಿಂಗ ಪೂಜೆಯನ್ನು ಪ್ರಚುರ ಪಡಿಸಿದರು. ವೀರಶೈವ ಧರ್ಮ ಹೇಳುವಂತೆ ಇಷ್ಟಲಿಂಗಪೂಜೆ ಮೂರ್ತಿಪೂಜೆಯೆನ್ನಿಸದು. ವೀರಶೈವ ಧರ್ಮವು ಇಷ್ಟಲಿಂಗ ಪೂಜೆಯ ಮಾಧ್ಯಮದಿಂದ ಜಗತ್ತಿನ ಎಲ್ಲ ಸ್ತ್ರೀ-ಪುರುಷರಿಗೆ ತನ್ನಲ್ಲಿ ಸ್ಥಾನಕೊಟ್ಟಿದೆ. ಇಷ್ಟ ಲಿಂಗವು ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸುವ ಒಂದು ಸಾಧನ. ಭಕ್ತಿ ಜ್ಞಾನ ಕ್ರಿಯೆಯಲ್ಲಿ ಸಾಮರಸ್ಯ ಉಂಟಾಗಬೇಕು. ತತ್ಪರಿಣಾಮವಾಗಿ ಶಕ್ತಿ-ಭಕ್ತಿಯ ಸಾಮರಸ್ಯ, ಲಿಂಗಾಂಗ ಸಾಮರಸ್ಯ ಉಂಟಾಗುತ್ತದೆ. ಲಿಂಗಾಂಗ ಸಾಮರಸ್ಯದ ಫಲವೇ ಮೋಕ್ಷ. ಅದೇ ಪರಮ ಪುರುಷಾರ್ಥ. ಭಕ್ತಿ-ಶಕ್ತಿಯಾಗುತ್ತದೆ. ಪದಾರ್ಥಕಾಯ ಪ್ರಸಾದಕಾಯವಾಗುತ್ತದೆ. ಇದೇ ಷಟ್‌ಸ್ಥಲ ಸಿದ್ಧಾಂತ.

ಜಾತಿ ವರ್ಗ ಮೇಲು-ಕೀಳು ಎಂಬ ಭೇದವನ್ನೆಣಿಸದೆ ಪ್ರತಿಯೊಬ್ಬ ಲಿಂಗಧಾರಿ ವೀರಶೈವನು ಅಹಂಕಾರ ತೊರೆದು ತನಗೆ ಪ್ರಿಯವಾದ ಯಾವುದಾದರೊಂದು ಸತ್ಯ ಶುದ್ಧ ಕಾಯಕದಲ್ಲಿ ನಿತ್ಯ ನಿರತನಾಗಿರಬೇಕೆಂಬ ಮತ್ತು ದುಡಿದೇ ಉಣ್ಣಬೇಕೆಂಬ ವೀರಶೈವ ಧರ್ಮದ ಕಟ್ಟಾಜ್ಞೆಯಿಂದ ಶ್ರದ್ಧಾಳುಗಳಲ್ಲಿ ಕಾಯಕ ನಿಷ್ಠೆ ಹೆಚ್ಚಿತು. ಸಮಾಜ ಎಲ್ಲರಿಗೂ ಉದ್ಯೋಗಾವಕಾಶಗಳನ್ನು ಒದಗಿಸಿ ಕೊಡಬೇಕು. ಮಾಡುವ ಕಾಯಕ ಯಾವುದೇ ಇದ್ದರೂ ಅದು ಶಿವನಿಗೇ ಸಲ್ಲುತ್ತದೆ. ಲಿಂಗಧರಿಸಿದವನು ಯಾವ ಜಾತಿಯವನೇ ಇರಲಿ, ಯಾವ ಕಾಯಕವನ್ನೇ ಮಾಡಲಿ ಅವನು ಶಿವಭಕ್ತನು. ಕಾಯಕ ನಿರತರಾದ ವರಿಗೆ ಸ್ವರ್ಗಸುಖ, ಅಲೌಕಿಕ ಆನಂದ ಲಭಿಸುತ್ತದೆ. ಲಿಂಗಪೂಜೆಯೂ ಒಂದು ಕಾಯಕವು. ಕಾಯಕವೇ ಕೈಲಾಸ. ಕಾಯಕದಿಂದ ಅಧಿಕ ಸಂಗ್ರಹ ನಿಷಿದ್ಧ. ಕಾಯಕದಲ್ಲಿ ತೊಡಗಿದವರು ಗುರುಲಿಂಗ ಜಂಗಮರನ್ನೂ ಮರೆಯಬೇಕು. ಗುರು ಲಿಂಗ ಜಂಗಮಕ್ಕೆ ತನು ಮನ ಧನವನ್ನು ಸಮರ್ಪಿಸಿ ಸಮರ್ಪಣ ಭಾವದಿಂದ ಕಾಯಕ ಮಾಡಬೇಕು-ಎಂದು ಬಸವಣ್ಣ ಬೋಧಿಸಿದ ಕಾಯಕ ತತ್ವದ ಉಚ್ಚಾದರ್ಶಗಳ ಪ್ರಭಾವಕ್ಕೊಳಗಾದ ವ್ಯಕ್ತಿ, ಸಮಾಜ ರಾಷ್ಟ್ರಗಳು ಈ ಉಚ್ಚಾದರ್ಶಗಳಲ್ಲಿ ಅಡಗಿರುವ ನೈತಿಕ ಮೌಲ್ಯಗಳಿಗೆ ತಲೆಬಾಗಿ ಯಾವುದೇ ಅನೀತಿ ಅತ್ಯಾಚಾರಕ್ಕಿಳಿಯಲಾರವು. ಇದರಿಂದ ಸುಖಶಾಂತಿಯ ಹೊಸ ಆಯಾಮ ಬೆಳೆದು ಬರುವದು. ವಿಶ್ವದ ಪ್ರತಿಯೊಂದು ರಾಷ್ಟ್ರದಲ್ಲಿ ಪ್ರಸ್ತುತ ಕಾಯಕ ತತ್ವ ಕಾರ್ಯಾಚರಣೆಯಲ್ಲಿ ಬಂದದ್ದಾದರೆ ದೇಶದ ಆರ್ಥಿಕ ಸ್ಥಿತಿಯಲ್ಲಿ ಗಣನೀಯ ಸುಧಾರಣೆ ಉಂಟಾಗಿ ಬಡತನ, ನಿರುದ್ಯೋಗ ಹೇಳಹೆಸರಿಲ್ಲದಂತಾಗುವವು. ವಿಶ್ವ ಕಲ್ಯಾಣ, ವಿಶ್ವಶಾಂತಿಯ ಕನಸು ನನಸಾಗುವದು- ಎಂದು ಪೂಜ್ಯ ಶ್ರೀಗಳವರು ವರ್ತ

ಮಾನ ಸಮಾಜ ವ್ಯವಸ್ಥೆಯಲ್ಲಿ ಕಾಯಕ ತತ್ವದ ಮಹತ್ವದ ಪಾತ್ರವನ್ನು ಕುರಿತು ಮನಂಬುಗುವಂತೆ ವಿವರಿಸಿದ್ದಾರೆ.

ಅಂಗದ ಮೇಲೆ ಲಿಂಗ ಧರಿಸಿದ ಕುಲೀನರಿಂದ ಹಿಡಿದು ಶೂದ್ರರವರೆಗೆ ಯಾವುದೇ ಜಾತಿ ಉದ್ಯೋಗದವರಿದ್ದರೂ ಎಲ್ಲರೂ ಸಮಾನರು, ಸ್ತ್ರೀ-ಪುರುಷ ಲಿಂಗಭೇದ ನಿವಾರಣೆ, ಆತ್ಮೋದ್ಧಾರಕ್ಕಾಗಿ ಸ್ತ್ರೀಗೆ ಸ್ವಾತಂತ್ರ್ಯ ಮತ್ತು ಸಮಾನತೆಯ ಕೊಡುಗೆ, ಎಲ್ಲ ಶಿವಭಕ್ತರಲ್ಲಿ ಸತ್ಯ ಅಹಿಂಸೆ ಸದಾಚಾರ ಪ್ರೇಮ ದಯೆ ಬಂಧುತ್ವ, ನಡೆ-ನುಡಿಯಲ್ಲಿ ಸಾಮರಸ್ಯ, ಧರ್ಮ ಮತ್ತು ರಾಜಕೀಯದಲ್ಲಿ ಸಮನ್ವಯ ಮುಂತಾದ ವೀರಶೈವ ಧರ್ಮದ ಎಲ್ಲ ತತ್ವಗಳ ತವನಿಧಿಯಿಂದ ವಿಶ್ವಶಾಂತಿ, ವಿಶ್ವಕಲ್ಯಾಣ ಶತಃಸಿದ್ಧವೆಂಬ ಮಾತಿನಲ್ಲಿ ತಮ್ಮ ಸಂಪೂರ್ಣ ವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ. ಬಸವಾದಿ ಪ್ರಮಥರು ನಿರ್ಮಿಸಿದ ಅನುಭವಮಂಟಪ ವೀರಶೈವ ಧರ್ಮದ ಇವೆಲ್ಲ ರಚನಾತ್ಮಕ ಯೋಜನೆಗಳನ್ನು ಕಾರ್ಯ ರೂಪಕ್ಕೆ ತರಲು ಶಿವಶರಣ-ಶರಣೆಯರಿಗೆ ದೈಹಿಕ, ಮಾನಸಿಕ, ಬೌದ್ಧಿಕ ತರಬೇತಿ ನೀಡಿದ ಒಂದು ಸತ್ವಶಾಲಿ ತರಬೇತಿ ಕೇಂದ್ರ. ಅವರನ್ನು ಆ ರೀತಿ ನಡೆಯಲು ತೊಡಗಿಸಿದ ಪ್ರಯೋಗಶಾಲೆ. ವೀರಶೈವ ಧರ್ಮ ಗೃಹಸ್ಥಾಶ್ರಮ ಮತ್ತು ಪ್ರವೃತ್ತಿ ಮಾರ್ಗವನ್ನು ಅಂಗೀಕರಿಸಿತು. ಸಂಸಾರಿಯೂ ಸನ್ಯಾಸಿಯಂತೆ ಮೋಕ್ಷ ಪಡೆಯಲು ಅಧಿಕಾರಿಯಾಗಿದ್ದಾನೆಂದು ಘೋಷಿಸಿತು. ವೀರಶೈವ ಧರ್ಮ ಸಮಸ್ತ ವಿಶ್ವವನ್ನೇ ತನ್ನ ದೃಷ್ಟಿಯಲ್ಲಿರಿಸಿಕೊಂಡ ಬಹುದೊಡ್ಡ ಧರ್ಮ. ಎಲ್ಲರೂ ಜಾತಿಭೇದ, ಲಿಂಗಭೇದ, ವರ್ಗಭೇದ, ವರ್ಣಭೇದವನ್ನು ಮರೆತು ಆತ್ಮೋನ್ನತಿ ಪಡೆದು ಶಿವಸಾನ್ನಿಧ್ಯ ಹೊಂದಬೇಕೆಂಬುದು ವೀರಶೈವ ಧರ್ಮದ ಮಹನೀಯ ಸಂದೇಶ. ವೀರಶೈವ ಧರ್ಮದ ಚರಿತ್ರಾರ್ಹ ಸಾಧನೆಯನ್ನು ಪೂಜ್ಯ ಶ್ರೀಗಳವರು ತಮ್ಮ ಸೊಗಸಾದ ಶೈಲಿಯಲ್ಲಿ ಸೆರೆ ಹಿಡಿದಿದ್ದಾರೆ.

## ಅಣುವ್ರತ ಆಂದೋಲನ

ಆಚಾರ್ಯ ತುಲಸಿಯವರು ಜೈನಧರ್ಮದಲ್ಲಿ ಜನ್ಮಿಸಿದ 'ತೆರಾಪಂಥ'ದ ಆದ್ಯ ಪ್ರವರ್ತಕರು. ನಾಡಿನಲ್ಲಿ ನೀತಿಯ ಜ್ಯೋತಿ ಬೆಳಗಿಸುವ ಹೊಣೆ ಹೊತ್ತವರು. ಅಣುವ್ರತ ಆಂದೋಲನ ನಡೆಸಿ ನೈತಿಕ ಉತ್ಥಾನಕ್ಕಾಗಿ ಅಹರ್ನಿಶಿ ದುಡಿದವರು. ವ್ಯಾಪಾರಸ್ಥರಲ್ಲಿ ಸತ್ಯಶುದ್ಧ ಕಾಯಕ ನಿಷ್ಠೆ, ನಿಷ್ಕಳಂಕಿತ ಜೀವನ-ಚೈತನ್ಯ ಉಂಟು ಮಾಡಿದವರು. ವಿಶ್ವಶಾಂತಿಯ ಸಂದೇಶವನ್ನು ಬೋಧಿಸಿದವರು. ಅವರ ಸೇವೆ ದೇಶದ ಉತ್ತಮ ಆರೋಗ್ಯಕ್ಕೆ ಪುಷ್ಟಿದಾಯಕ. ಬದುಕಿನ ಬಹಿರಂತರಗಳಲ್ಲಿ ಸಾಮರಸ್ಯ, ಸಂಸ್ಕೃತಿಯ ಹೆಸರಿನಲ್ಲಿ ನಡೆಯುವ ಕುಕೃತ್ಯಗಳ ಮತ್ತು ಅಂಧ ವಿಶ್ವಾಸಗಳ ನಿರ್ಮೂಲನೆ, ಪ್ರಗತಿವಾದದ ಹೆಸರಿನಲ್ಲಿ ನಡೆಯುವ ಗರ್ಹಿತ ಆಚರಣೆಗಳ ಉಚ್ಚಾಟನೆ ಮುಂತಾದ ಕಾರ್ಯ

ಕ್ರಮಗಳನ್ನು ತಮ್ಮ ಅಣುವ್ರತ ಆಂದೋಲನದ ಅಂಗವಾಗಿ ಹಮ್ಮಿಕೊಂಡಿದ್ದಾರೆ. ಲೋಕಜೀವನ ಶುದ್ಧ ಸ್ವಸ್ಥ ಹಾಗೂ ಚೈತನ್ಯಪೂರ್ಣವಾಗಿರಬೇಕೆಂಬುದೇ ಈ ಆಂದೋಲನದ ಗುರಿ.

ಯುದ್ಧ–ಸ್ಪರ್ಧೆ ನಡೆದಿರುವ ವರ್ತಮಾನ ಯುಗದಲ್ಲಿ ಅಣುಶಕ್ತಿ ಮಹಾನಾಶದ ಮಾಧ್ಯಮವಾಗಿದ್ದರೆ ಆಚಾರ್ಯ ತುಲಸೀಜಿಯವರ ಅಣುವ್ರತವು ಮಾತ್ರ ನೈತಿಕ ಪುನರುತ್ಥಾನಕ್ಕೆ ಸುವರ್ಣಾವಕಾಶ ಕಲ್ಪಿಸಿ ಕೊಟ್ಟಿದೆ. ಆಧುನಿಕ ವ್ಯಸ್ತ ಜೀವನದಲ್ಲಿ ನವ ಚೇತನವಾಗಿ, ಹೊಸ ಆಶಾಕಿರಣವಾಗಿ ಪರಿಣಮಿಸಿ ಸತ್ಯ ಪ್ರೇಮ ಶಾಂತಿ ಅಹಿಂಸೆ ಹಾಗೂ ನೈತಿಕತೆಯ ಜ್ಯೋತಿ ಬೆಳಗಿಸುವಲ್ಲಿ ಯಶಸ್ವಿಯಾಗಿದೆ. ಅಹಿಂಸೆ ಸತ್ಯ ಅಚೌರ್ಯ ಬ್ರಹ್ಮಚರ್ಯ ಅಪರಿಗ್ರಹ ಇವು ಅಣುವ್ರತದ ಪಂಚಶೀಲಗಳು. ವೀರಶೈವ ಧರ್ಮದ ಲಿಂಗಾಚಾರ ಸದಾಚಾರ ಶಿವಾಚಾರ ಭೃತ್ಯಾಚಾರ ಗಣಾಚಾರಗಳು ಅಣುವ್ರತದ ಪಂಚಶೀಲಗಳಿಗೆ ಹೋಲುತ್ತವೆ. ವೀರಶೈವ ಧರ್ಮದಂತೆ ಜೈನಧರ್ಮದ ಅಣುವ್ರತ ಆಂದೋಲನವೂ ಸಹ ವಿಶ್ವಶಾಂತಿಗಾಗಿ ಅನೇಕ ರಚನಾತ್ಮಕ ಯೋಜನೆಗಳನ್ನು ಹಾಕಿಕೊಂಡು ನಿಷ್ಠೆಯಿಂದ ಪ್ರಯತ್ನಿಸುತ್ತಲಿದೆಯೆಂದು ಹೃದಯಾರೆ ಹೇಳುವ ಪೂಜ್ಯ ಶ್ರೀಗಳವರ ಮಾತುಗಳಲ್ಲಿ ಪರಧರ್ಮ ಸಹಿಷ್ಣುತೆಯ ಪವಿತ್ರ ಮನೋಧರ್ಮ ಅಭಿವ್ಯಕ್ತಗೊಂಡಿದೆ.

## ಬುದ್ಧ ಔರ ಬಸವ

ಶೋಷಣೆ, ಅಜ್ಞಾನದಿಂದ ದೆಸೆಗಾಣದ ಜನತೆಗೆ ಭಗವಾನ ಬುದ್ಧನು ಧರ್ಮ ಜ್ಞಾನ ಸತ್ಯ ಅಹಿಂಸೆ ದಯೆ ಪ್ರೇಮ ಇವೇ ಮುಂತಾದ ತತ್ವಗಳನ್ನು ಬೋಧಿಸಿ ಬದುಕಿನಲ್ಲಿ ಸುಖ–ಶಾಂತಿಯ ಆಶಾಕಿರಣ ಮೂಡಿಸಿದನು ಮತ್ತು ವಿಶ್ವಶಾಂತಿ ಸ್ಥಾಪಿಸಲು ಪ್ರಯತ್ನಿಸಿದನು. ನೈತಿಕ ಜೀವನದಲ್ಲಿ ಸತ್ಯಕ್ಕೆ ಸರ್ವೋಚ್ಚ ಸ್ಥಾನವಿದೆ. ಸತ್ಯ ಅನಶ್ವರ. ನ್ಯಾಯ ಪರೋಪಕಾರ ಸಮಾನತೆಗಳನ್ನು ಎತ್ತಿ ಹಿಡಿಯುವಲ್ಲಿ, ಭೇದಭಾವ ಅಳಿಸಿಹಾಕಿ ಬಂಧುತ್ವ ಬೆಳೆಸುವಲ್ಲಿ ಹಿರಿದಾದ ಪಾತ್ರ ವಹಿಸುವ ಸತ್ಯದಿಂದ ವ್ಯಕ್ತಿ ಸುಖಿಯಾಗಿರಬಲ್ಲನು. ಸತ್ಯ ಸಂಧನು ನಿರ್ಭಯನಾಗಿದ್ದು ಯಾವುದೇ ಪವಿತ್ರ ಕಾರ್ಯ ಕೈಕೊಳ್ಳಬಲ್ಲನು. ದಯೆ ಧರ್ಮದ ಮೂಲ. ಪ್ರತಿಯೊಂದು ಧರ್ಮದಲ್ಲಿ ದಯೆಗೆ ಸ್ಥಾನವಿದೆ. ದಯೆಯಿಂದ ಮಾನವನ ನೈತಿಕ ಚಾರಿತ್ರ್ಯ ಪ್ರೋಜ್ವಲಗೊಳ್ಳುತ್ತದೆ. ಪ್ರೇಮ ಅಸಾಧ್ಯವಾದುದನ್ನು ಸಾಧ್ಯಗೊಳಿಸುತ್ತದೆ. ಮಾನವರಲ್ಲಿ ಬಂಧುತ್ವ ಭಾವವನ್ನು ಬೆಳೆಸುತ್ತದೆ. ಭಕ್ತ ಕುಲ ತಿಲಕ ಬಸವಣ್ಣನವರ ವಚನಗಳಲ್ಲಿಯೂ ಈ ತತ್ವಗಳು ಹೆಪ್ಪುಗಟ್ಟಿ ನಿಂತಿವೆ. ಸದ್ಯದ ಪರಿಸ್ಥಿತಿಯಲ್ಲಿ ಈ ತತ್ವಗಳನ್ನು ಕಾರ್ಯಾಚರಣೆಯಲ್ಲಿ ತಂದದ್ದಾದರೆ ಲೋಕೋದ್ಧಾರ, ಮಾನವಕಲ್ಯಾಣ, ನೈತಿಕ ಆಧ್ಯಾತ್ಮಿಕ ಉತ್ಕರ್ಷ ಸಾಧ್ಯ. ಜೀವನ ದುಃಖದಾಗರ. ಧರ್ಮ ದುಃಖ–ವಿಮೋಚನೆಯ ಪ್ರಸಾಧನ. ನಿರ್ವಾಣ, ನಿರಹಂಕಾರ,

ನಿಸ್ವಾರ್ಥಬುದ್ಧಿ, ತ್ಯಾಗಭಾವನೆ ದುಃಖವಿಮೋಚನೆಯ ಸೋಪಾನಗಳು. ಬಸವಣ್ಣ ನಂತೆ ಭಗವಾನ ಬುದ್ಧನೂ ಸಹ ಮಾನವರಲ್ಲಿ ಮೇಲು-ಕೀಳೆಂಬುದಿಲ್ಲ, ಎಲ್ಲರೂ ಸಮಾನರು, ಸ್ತ್ರೀ-ಪುರುಷರಿಬ್ಬರಿಗೂ ಆಧ್ಯಾತ್ಮಿಕ ಚರ್ಚೆಗಳಲ್ಲಿ ಭಾಗವಹಿಸುವ ಸಮಾನ ಅಧಿಕಾರವಿದೆಯೆಂದು ಬೋಧಿಸುತ್ತ ಎಲ್ಲರಿಗೂ ನಿರ್ವಾಣದ ಬಾಗಿಲು ತೆರೆದನು. ಅಸಂಖ್ಯ ಅವಾಂತರಗಳಿಂದ ವಿಷಮಿಸಿದ ಇಂದಿನ ವಿಷಾಕ್ತ ವಾತಾವರಣದಲ್ಲಿ ಕಂಗೆಟ್ಟ ಮಾನವನನ್ನು ಸನ್ಮಾರ್ಗದ ಮೇಲೆ ಕೈಹಿಡಿದು ಕರೆತರಲು ಬುದ್ಧ-ಸಂದೇಶ ಅತ್ಯುಪಯುಕ್ತಮಾರ್ಗ.

ಸಮಸ್ತ ವಿಶ್ವ ಭಾರತದ ಮಾರ್ಗದರ್ಶನಕ್ಕಾಗಿ ಹಾತೊರೆದು ನಮ್ಮ ಕಡೆಗೆ ಕಣ್ಣರಳಿಸಿ ನೋಡುತ್ತಿದೆ, ಕೈಮಾಡಿ ಕರೆಯುತ್ತಿದೆ. ಹೀಗೆ ವಿಶ್ವದ ಉಳಿವಿಗಾಗಿ ಭಾರತದ ಮಾರ್ಗದರ್ಶನ ಅತ್ಯವಶ್ಯವೆಂಬುದು ಜಾಗತಿಕ ಒಟ್ಟಾಭಿಪ್ರಾಯದಿಂದ ಕಂಡು ಬಂದ ಸಂಗತಿ. ಕಾರಣ ನಾವು ಭಾರತೀಯರು ಈ ನಿಟ್ಟಿನಲ್ಲಿ ನಮ್ಮ ಮಹತ್ತರವಾದ ಹೊಣೆಗಾರಿಕೆಯನ್ನು ಚನ್ನಾಗಿ ಅರ್ಥೈಸಿಕೊಂಡು ಪ್ರಪಂಚ ನಮ್ಮ ಮಾರ್ಗದರ್ಶನದ ಬೆಳಕಿನಲ್ಲಿ ಆತ್ಮೋದ್ಧಾರ ಮಾಡಿಕೊಂಡು ಸುಖ-ಶಾಂತಿಯಿಂದಿರುವಂತೆ ನಮ್ಮ-ನಮ್ಮ ಕರ್ತವ್ಯ ನಿರ್ವಹಿಸಿ ಪುಣ್ಯಭಾಜನರಾಗೋಣ ಎಂದು ಹಾರೈಸುತ್ತ ಪೂಜ್ಯ ಶ್ರೀಗಳವರು ವ್ಯಷ್ಟಿ-ಸಮಷ್ಟಿ ಕಲ್ಯಾಣದ ಬಗ್ಗೆ ತಮಗಿರುವ ಅತೀವ ಕಳಕಳಿಯನ್ನು ವ್ಯಕ್ತಪಡಿಸಿ ಈ ದಿಶೆಯಲ್ಲಿ ದಲಾಯಿಲಾಮಾ ಅವರು ಮಾಡಲಿರುವ ಉತ್ತಮ ಕಾರ್ಯವನ್ನು ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ.

## ಬಸವೇಶ್ವರ ಔರ ಅಕ್ಕಮಹಾದೇವಿ

ಈ ಮಾನವ ಶರೀರ ಶ್ರದ್ಧೆಯಿಂದ ಜನತಾ ಜನಾರ್ಧನನ ಸೇವೆಗೈಯುತ್ತಿದ್ದರೆ ಮಾತ್ರ ನಿರ್ಮಲವಾಗಿರಬಲ್ಲದೆಂಬ ಬಸವಣ್ಣನ ನುಡಿ ಮುತ್ತು ಸಂತ ವಿನೋಬಾರವರಿಂದ ಜೀವಂತಿಕೆ ಪಡೆದಿದೆಯೆಂಬ ಮೆಚ್ಚುಗೆಯ ಮಾತು ಹೇಳಿ ಪೂಜ್ಯ ಶ್ರೀಗಳವರು ಶರಣವಾಣಿಯಲ್ಲಿ ಪ್ರಸ್ಥಿತ ಸಮಷ್ಟಿ ತತ್ವ ನಿಷ್ಠೆಯನ್ನು ಪ್ರತಿಪಾದಿಸಿದ್ದಾರೆ. ಕ್ರಾಂತದರ್ಶಿ ಬಸವಣ್ಣನ ಕರ್ಮಕಾಂಡದಲ್ಲಿ ಸಕ್ರಿಯ ಸಹಕಾರ ನೀಡಿದವರಲ್ಲಿ 'ಕರ್ನಾಟಕದ ಮೀರಾ' ಎಂದು ಖ್ಯಾತನಾಮರಾದ ಶಿವಶರಣೆ ಅಕ್ಕಮಹಾದೇವಿ ಅಗ್ರಗಣ್ಯರು. ಆಧ್ಯಾತ್ಮ, ವೈರಾಗ್ಯ, ವಿಚಾರ-ಕ್ರಾಂತಿ ಅಕ್ಕಮಹಾದೇವಿಯ ಚೇತೋಹಾರಿ ಬದುಕಿನ ಮುಪ್ಪುರಿಗಳು. ಮಾಧುರ್ಯ ಭಾವದ ರಸಗಟ್ಟಿಗಳಂತಿರುವ ಅವರ ವಚನಗಳು ಜಗತ್ತಿನ ಯಾವುದೇ ರಹಸ್ಯವಾದಿ ಭಾವಗೀತೆಗಳಿಗೆ ಯಾವ ವಿಧದಲ್ಲೂ ಕಡಿಮೆ ಇಲ್ಲ. ಅವರು ಐಹಿಕ ಸುಖ ಭೋಗವನ್ನು ಮತ್ತು ರಾಜಭೋಗವನ್ನು ತ್ಯಜಿಸಿ, ಕಲ್ಯಾಣ ನಗರಕ್ಕೆ ಆಗಮಿಸಿ, ಅನುಭವ ಮಂಟಪದ ಧ್ರುವತಾರೆಯಾದರು. ಅದರ ಕೀರ್ತಿಗೆ ಕಲಶಪ್ರಾಯರಾದರು. ಅಕ್ಕ ಮಹಾದೇವಿಯ ವಚನಗಳಲ್ಲಿ ಸರ್ವೋದಯ ತತ್ವಗಳು ಭಾಸಮಾನಗೊಂಡಿವೆ. ಶರಣವಾಣಿ ಹಾಗೂ ಸರ್ವೋದಯ ತತ್ವಗಳಲ್ಲಿ ಸಮಾನತೆ ಇದೆಯೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಮಾನವನು ಕಾಯಾ ವಾಚಾ ಮನಸಾ ತ್ರಿಕರಣ ಶುದ್ಧಿಯಿಂದಿರಬೇಕೆಂಬುದು ಅಕ್ಕ ಮಹಾದೇವಿಯ ಅಭಿಮತ. ಅವರು ನುಡಿದಂತೆ ನಡೆದರು. ಇಂದಿನ ಮಹಿಳೆಯರು, ವಿದ್ಯಾರ್ಥಿನಿಯರು ಅಕ್ಕಮಹಾದೇವಿ ಕಸ್ತೂರಬಾ ಸರೋಜಿನಿ ನಾಯಡು ಅವರಂತಹ ವೀರ ವಿದುಷಿ ರಾಷ್ಟ್ರ ಮಾತೆಯರ ದಿವ್ಯ ಜೀವನದಿಂದ ಪ್ರೇರಿತರಾಗಿ ಆದರ್ಶ ಭಾರತೀಯ ಮಹಿಳೆಯರಾಗಿ ತಮ್ಮ ಬದುಕನ್ನು ಸಾರ್ಥಕ ಪಡಿಸಿಕೊಳ್ಳಬೇಕೆಂದು ಪೂಜ್ಯ ಶ್ರೀಗಳವರು ಅವರಿಗೆ ಶುಭ ಹಾರೈಸಿದ್ದಾರೆ. ವರ್ತಮಾನ ಸ್ತ್ರೀ-ಸಮಾಜಕ್ಕೆ ಇಂತಹ ಮಾನಸಿಕ ಸಂಸ್ಕಾರ ಹಾಗೂ ಆಂತರಿಕ ಪ್ರೇರಣೆ ರಾಷ್ಟ್ರ-ನಿರ್ಮಾಣದಂತಹ ಇಂದಿನ ಮಹತ್ಕಾರ್ಯ ದಲ್ಲಿ ಅಪೇಕ್ಷಣೀಯ. ಸ್ತ್ರೀಯರು ಪುರುಷರಿಗೆ ಸಮಾನವಾಗಿ ಅತ್ಯಂತ ಮಹತ್ವದ ಭೂಮಿಕೆಯನ್ನು ನಿರ್ವಹಿಸಬೇಕಾಗಿ ಬಂದಿರುವದರಿಂದ ಅವರು ದೈಹಿಕವಾಗಿ, ಮಾನಸಿಕ ವಾಗಿ, ಬೌದ್ಧಿಕವಾಗಿ ಸಿದ್ಧರಾಗಿ ಈ ಆಹ್ವಾನವನ್ನು ಸಮರ್ಥವಾದ ರೀತಿಯಲ್ಲಿ ಚರಿತಾರ್ಥ ಗೊಳಿಸಬೇಕಾಗಿದೆ. ಈ ಸಂಧಿಕಾಲದಲ್ಲಿ ಪೂಜ್ಯ ಶ್ರೀಗಳವರ ಪ್ರಸ್ತುತ ಆಶೀರ್ವಚನ ಅತ್ಯಂತ ಸಮಯೋಚಿತ.

**ಸರ್ವಧರ್ಮ ಸಮನ್ವಯ ದೃಷ್ಟಿ**

ಕರ್ನಾಟಕ ಪ್ರಾಚೀನ ಕಾಲದಿಂದಲೂ ಜೈನ ಬೌದ್ಧ ಮುಂತಾದ ಅನ್ಯಧರ್ಮಗಳಿಗೆ ಆಶ್ರಯ ಕೊಡುತ್ತ ಬಂದಿದೆ. ಇಲ್ಲಿಯ ರಾಜ ಮಹಾರಾಜರು ಪ್ರಜೆಗಳು ಸ್ವಭಾವತಃ ಧರ್ಮನಿಷ್ಠರು. ಇಂದಿಗೂ ಅವರ ವಂಶಜರಲ್ಲಿ ಧರ್ಮನಿಷ್ಠೆ ಯಥಾಪೂರ್ವ ಬೆಳೆದು ಕೊಂಡು ಬಂದಿದೆ. ಕರ್ನಾಟಕದ ಸಂಸ್ಕೃತಿ ಭಾರತದ ಸಮನ್ವಯ ಪ್ರವೃತ್ತಿಯನ್ನು ಸಮರ್ಥಿ ಸುತ್ತ ಬಂದಿದೆ. ಅಂತೆಯೇ ಇಲ್ಲಿ ಹೊರ ಧರ್ಮಗಳು ನೆಲೆ-ಬೆಲೆ ಕಂಡಿವೆ. ಹಿಂದೂ ಜೈನ ಬೌದ್ಧ ಧರ್ಮಗಳು ಭಾರತೀಯ ಸಂಸ್ಕೃತಿಯೆಂಬ ದೊಡ್ಡ ಗಿಡದ ವಿವಿಧ ಶಾಖೆ ಗಳು. ಅವು ಸಹಜ ಮತ್ತು ಸಮಭಾವದಿಂದ ಚಿಗುರಿದರೆ ಭಾರತದಲ್ಲಿ ರಾಷ್ಟ್ರೀಯ ಏಕತೆಯ ಕನಸು ನನಸಾಗುವದು. ಕರ್ನಾಟಕದಲ್ಲಿ ದ್ವೈತಾದ್ವೈತ, ಶಕ್ತಿ ವಿಶಿಷ್ಟಾದ್ವೈತಗಳ ಪ್ರವರ್ತಕರಿಗೆ, ಆಚಾರ್ಯರಿಗೆ ಆಶ್ರಯ ದೊರೆಯಿತು. ಕನ್ನಡ ಸಾಹಿತ್ಯ ಕೃಷಿಗೆ ಜೈನ ವೀರಶೈವ ಹಾಗೂ ವೈಷ್ಣವ ಸಂತ ಶಿವಶರಣ ದಾಸರ ಕೊಡುಗೆ ಅವಿಸ್ಮರಣೀಯ. ಶಿವ ಶರಣರ ಹಾಗೂ ದಾಸರ ಭಕ್ತಿಭಾವನೆ ಕನ್ನಡದ ವಚನಗಳಲ್ಲಿ ಹಾಗೂ ಪದಗಳಲ್ಲಿ ಮಡುಗಟ್ಟಿದೆ.

ಲೋಕ ಕಲ್ಯಾಣಾರ್ಥವಾಗಿ ಮಹಾತ್ಮರು ಸಂತರು ಧರ್ಮದ ಮೊರೆ ಹೊಕ್ಕರು. ಬುದ್ಧ ಮಹಾವೀರ ಶಂಕರಾಚಾರ್ಯ ಬಸವೇಶ್ವರ ಗುರುನಾನಕ ಮಹಮ್ಮದ ಪೈಗಂಬರ ಏಸುಕ್ರಿಸ್ತ ಮಹಾತ್ಮಾಗಾಂಧೀಜಿ ಮುಂತಾದ ಸಂತರು ಮಹಾತ್ಮರು ಧರ್ಮ ಧುರೀಣರು ಕಾಲಕಾಲಕ್ಕೆ ಅವತರಿಸಿ ಜನತೆಗೆ ಸನ್ಮಾರ್ಗ ಹಿಡಿಯಲು ಪ್ರೇರಣೆ ನೀಡಿದರು. ಅವರೆಲ್ಲರೂ ಪ್ರೇಮಪೂರ್ಣ ಧರ್ಮವನ್ನು ಪ್ರತಿಪಾದಿಸಿದ್ದಾರೆ, ಇದು ಧರ್ಮ ಸಮನ್ವಯದ ದ್ಯೋತಕ. ಜಗತ್ತಿನಾದ್ಯಂತ ಎಲ್ಲ ಧರ್ಮಾಚಾರ್ಯರು ಏಕತೆಯ ಛತ್ರ ಚಾಮರವಿಡಿ

ಯಲ್ಲಿ ಸದ್ಭಾವದಿಂದ ಒಂದು ಗೂಡಿ ವಿಶ್ವಶಾಂತಿಗಾಗಿ ಮಾನವಕಲ್ಯಾಣಕ್ಕಾಗಿ ಪ್ರತಿಜ್ಞಾ ಬದ್ಧರಾಗಬೇಕು. ಇದಕ್ಕಾಗಿ ಅವರೆಲ್ಲರಲ್ಲಿ ಪರಸ್ಪರ ಸ್ನೇಹ-ಸೌಹಾರ್ದಪೂರ್ಣ ಸಂಬಂಧ ಬೆಳೆದು ಬರಬೇಕು. ಧರ್ಮದ ಬೆಳಕು ನಮಗೆ ಯಾವುದೇ ಮಾರ್ಗದಿಂದ ದೊರೆತರೂ ಅದನ್ನು ಉದಾರ ಮನಸ್ಸಿನಿಂದ ಸ್ವೀಕರಿಸಬೇಕು-ಎಂದು ಮುಂತಾಗಿ ಸರ್ವ ಧರ್ಮ ಸಮನ್ವಯದ ಇಂಗಿತವನ್ನು ಪೂಜ್ಯ ಶ್ರೀ ಗಳವರು ಮನಮುಟ್ಟುವಂತೆ ಅರುಹಿದ್ದಾರೆ.

### ಹಿಂದಿ ಕೀ ಆವಶ್ಯಕತಾ

ಹಿಂದಿ ಅತ್ಯಂತ ಸರಳ ಭಾಷೆ. ಅಹಿಂದಿ ಪ್ರದೇಶಗಳ ಬಹುಸಂಖ್ಯ ಜನರಿಗೆ ಹಿಂದಿ ಚನ್ನಾಗಿ ತಿಳಿಯುತ್ತದೆ. ಇಂಗ್ಲೀಷಿಗಿಂತಲೂ ಹಿಂದಿಯು ಇತರ ಭಾರತೀಯ ಭಾಷೆಗಳೊಡನೆ ಬಹು ಬೇಗನೇ ಹೊಂದಿಕೊಳ್ಳುತ್ತದೆ. ಸಮಗ್ರ ಭಾರತದಲ್ಲಿ ಹಿಂದಿ ಪ್ರಚಾರ ಕಾರ್ಯ ಅತ್ಯಂತ ರಭಸದಿಂದ ನಡೆಯಬೇಕು. ಉತ್ತರ ದಕ್ಷಿಣ ಭಾರತದಲ್ಲಿ ಹಿಂದಿ ಪ್ರಚಾರ ಕಾರ್ಯದಲ್ಲಿ ತೊಡಗಿದ ಹಿಂದಿ ಪ್ರಚಾರ ಸಂಸ್ಥೆಗಳಲ್ಲಿ ಸಹಕಾರ ಏರ್ಪಡಬೇಕು ಅಖಂಡ ಭಾರತಕ್ಕೆ ಆಗತ್ಯವಿರುವ ಏಕಮೇವ ರಾಷ್ಟ್ರ ಭಾಷೆಯ ಸ್ಥಾನಕ್ಕೆ ಹಿಂದಿಯು ಬರಬೇಕು. ಕಾಲಕ್ರಮೇಣ ಇಂಗ್ಲೀಷಿಗೆ ಬದಲು ಹಿಂದಿಯನ್ನು ಉಪಯೋಗಿಸಬೇಕು. ಕೇಂದ್ರ ಸರಕಾರ ಪ್ರಾದೇಶಿಕ ಭಾಷೆಗಳ ಸಹಾಯ ಸಹಕಾರ ಪಡೆದು ಹಿಂದಿ ಭಾಷೆಯನ್ನು ಬಲಪಡಿಸಲು ಶ್ರಮಿಸಬೇಕು-ಎಂದು ಹೇಳುತ್ತ ಪೂಜ್ಯ ಶ್ರೀ ಗಳವರು ಭಾರತದ ರಾಷ್ಟ್ರ ಭಾಷೆ ಹಿಂದಿಯ ಬೆಳವಣಿಗೆಯ ಬಗ್ಗೆ ತಮಗಿರುವ ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ.

ಒಟ್ಟಿನಲ್ಲಿ 'ವಿವಿಧತಾ ಮೆ ಏಕತಾ' ಗ್ರಂಥ ರಚನೆ ಮಾನವನ ದುಃಖ ವಿಮೋಚನೆ, ವಿಶ್ವಶಾಂತಿ, ವಿಶ್ವ ಕಲ್ಯಾಣದ ಮಾರ್ಗೋಪಾಯಗಳನ್ನು ಕಂಡುಕೊಳ್ಳುವ ಒಂದು ಸಾತ್ವಿಕ ಪ್ರಯತ್ನವಾಗಿದೆ. ಈ ಬಗ್ಗೆ ಪೂಜ್ಯ ಶ್ರೀ ಗಳವರು ಅತ್ಯಂತ ಕಳಕಳಿಯಿಂದ ವಿಶ್ವದ ಧರ್ಮ ಗುರುಗಳಿಗೆ ಸೂಕ್ತ ಸಲಹೆ-ಸೂಚನೆಗಳನ್ನಿತ್ತು ಎಚ್ಚರಿಸಿದ್ದಾರೆ—ಇಂದು ಜಗತ್ತಿನಾದ್ಯಂತ ಯುದ್ಧರಕ್ಕಸ ರಕ್ತದಾಹದಿಂದ ಕುಣಿದು ಕುಪ್ಪಳಿಸುತ್ತ ತನ್ನ ಕದಂಭ ಬಾಹುಗಳಿಂದ ಮನುಕುಲವನ್ನೇ ಸಂಹರಿಸಿ ಕುಚೇಷ್ಟೆ ಮಾಡುತ್ತಿರುವಾಗ ವಿಶ್ವದ ಧರ್ಮ ಗುರುಗಳು ನಿಷ್ಕ್ರಿಯರಾಗಿ ಕುಳಿತುಕೊಳ್ಳದೆ ಒಂದೆಡೆ ಸೇರಬೇಕು. ಅಂತರ್‌ರಾಷ್ಟ್ರೀಯ ಸರ್ವಧರ್ಮ ಸಮ್ಮೇಲನಗಳ ವೇದಿಕೆಯ ಮೇಲೆ ಮಾನವನ ದುಃಖ-ವಿಮೋಚನೆ, ವಿಶ್ವಶಾಂತಿ, ವಿಶ್ವ ಕಲ್ಯಾಣದ ಬಗ್ಗೆ ಆಳವಾಗಿ ಚರ್ಚಿಸಿ ಸೂಕ್ತ ಪರಿಹಾರೋಪಾಯಗಳನ್ನು, ಸುಖ-ಶಾಂತಿಯ ಸಂದೇಶಗಳನ್ನು ಧರ್ಮ-ಜ್ಞಾನದ ಜ್ಯೋತಿ ಬೆಳಗುವದರ ಮೂಲಕ ವಿಶ್ವದ ಮೂಲೆ ಮೂಲೆಗೂ ಮುಟ್ಟಿಸಬೇಕು. ಧಾರ್ಮಿಕ ಆಧ್ಯಾತ್ಮಿಕ ಜ್ಞಾನ-ಜ್ಯೋತಿಯ ಬೆಳಕಿನಲ್ಲಿ ವ್ಯಕ್ತಿ ಸಮಾಜ ರಾಷ್ಟ್ರ ಹಾಗೂ ವಿಶ್ವಶಾಂತಿ-ಸಮಾಧಾನದ ಉಸಿರು ಬಿಡುವಂತಾಗಬೇಕು ಎಂದು ಸಮಸ್ತ ವಿಶ್ವಕ್ಕೆ ಕರೆಕೊಡುತ್ತ ಪೂಜ್ಯ ಶ್ರೀ ಗಳವರು ಭಾರತದ 'ವಸುದೈವ ಕುಟುಂಬಕಮ್' ಎಂಬ ಸಮಷ್ಟಿ ತತ್ವವನ್ನು ಪುನರುಚ್ಚರಿಸಿದ್ದಾರೆ.

# ಹೂಬಳ್ಳಿ : ಸಹಜ ಸ್ಪಂದನ

ಪ್ರಾಚಾರ್ಯರು, ಎಸ್.ಬಿ.ಸಿ. ಕಲಾ ಮತ್ತು ಎಸ್.ವ್ಹಿ. ವಾಣಿಜ್ಯ ಮಹಾವಿದ್ಯಾಲಯ, ಹುಮನಾಬಾದ. **ಪ್ರಾ. ಬಸವಯ್ಯಾ ಶಿರೋಳ**

ಹನ್ನೆರಡನೆಯ ಶತಮಾನದಲ್ಲಿ ಶ್ರೀ ಬಸವೇಶ್ವರರು ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ ಸಮಾಜವನ್ನು ಕಟ್ಟಿದರು. ಧರ್ಮದ ಸಾಮಾಜೀಕರಣಗೈಯ್ದರು. ಜನ ಸಾಮಾನ್ಯರ ಭಾಷೆಯಾದ ಕನ್ನಡದಲ್ಲಿ ವಚನಗಳನ್ನು ರಚಿಸಿ, ಧರ್ಮಪ್ರಚಾರ ಕೈಕೊಂಡಿದ್ದರು. ನಂತರ ಹತ್ತೊಂಭತ್ತನೆಯ ಶತಮಾನದಲ್ಲಿ ಹಾನಗಲ್ಲಿನ ಶ್ರೀ ಕುಮಾರಸ್ವಾಮಿಗಳವರು ವೀರಶೈವ ಧರ್ಮದಲ್ಲಿ ಮಗದೊಮ್ಮೆ ಕ್ರಾಂತಿಯನ್ನುಂಟು ಮಾಡಿದರು. ಅವರು ಸಂಸ್ಥಾಪಿಸಿದ ಶಿವಯೋಗ ಮಂದಿರ ಹಾಗೂ ಅಖಿಲಭಾರತ ವೀರಶೈವ ಮಹಾಸಭೆಗಳು ಅವರ ಕ್ರಿಯಾಶಕ್ತಿಯ ಎರಡು ಕಣ್ಣುಗಳು. ಆ ಕಣ್ಬೆಳಕಿನಲ್ಲಿ ಸಾಗಿ ಬಂದ ಚಿತ್ರುಭೆಗಳಲ್ಲಿ ಶ್ರೀ ಮ. ನಿ. ಜ. ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು, ಮೂರು ಸಾವಿರಮಠ, ಹುಬ್ಬಳ್ಳಿ ಅವರು ಅಗ್ರಗಣ್ಯರು. ಅವರಲ್ಲಿ ಕ್ರಿಯಾ, ಜ್ಞಾನ ಹಾಗೂ ಅನುಭವಗಳ ತ್ರಿವೇಣಿಸಂಗಮವಿದೆ. ಶ್ರೀ ಬಸವೇಶ್ವರರವರು ಕಲ್ಯಾಣದಲ್ಲಿದ್ದು ಮಾಡಿದ ಧರ್ಮಕಾರ್ಯವನ್ನು ಶ್ರೀ ಜಗದ್ಗುರುಗಳವರು ಹುಬ್ಬಳ್ಳಿಯಲ್ಲಿದ್ದು ಸದ್ಯದ ವೈಜ್ಞಾನಿಕ ಯುಗದ ಸ್ಪಂದನಗಳಿಗೆ ಯೋಗ್ಯವಾಗುವಂತೆ, ಸ್ವಧರ್ಮ ನಿಷ್ಠೆ–ಪರಧರ್ಮ ಸಹಿಷ್ಣುತೆಯ ಆಧಾರದ ಮೇಲೆ ಲೌಕಿಕ–ಪಾರಮಾರ್ಥಿಕತೆಗಳ ಸುಂದರ ಸಮನ್ವಯವನ್ನು ಪ್ರಯೋಗಿಸಿದ್ದಾರೆ. ಅವರು ಭಕ್ತ ಜೀವಿಗಳು, ಸತ್ಯನಿಷ್ಠರು, ಕಾಯಕನಿರತರು, ದಕ್ಷ ಆಡಳಿತಗಾರರು ಸಾಹಿತಿಗಳು, ವಾಗ್ಮಿಗಳು, ವಚನಕಾರರು, ಸಾಂಸ್ಕೃತಿಕ ರಾಯಭಾರಿಗಳು, ಅಲ್ಲದೆ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳ ಸೇವೆಯ ಲಿಂಗಪೂಜೆಯೆಂದು ಬಗೆದವರು ಆದ ಅವರ ವ್ಯಕ್ತಿತ್ವದಲ್ಲಿ ಸರ್ವಶಕ್ತಿಗಳು ಪರಿಪೂರ್ಣಾವಸ್ಥೆ ಪಡೆದಿವೆ. ಸರ್ವಧರ್ಮ ಸಮನ್ವಯಾಚಾರ್ಯರಾದ ಅವರು ಇಂದಿಗೂ ಹಿಂದೂ–ಲಿಂಗಾಯತ ಜೈನ–ವೈಷ್ಣವ–ವೈಶ್ಯ–ಮುಸ್ಲಿಂ–ಕ್ರೈಸ್ತ–ಸೀಖ ಧರ್ಮದವರ ಸಂಪರ್ಕವಿಟ್ಟು, ಅವರೆಲ್ಲರಲ್ಲಿ ಪರಸ್ಪರ ಬಾಂಧವ್ಯ–ಸಮಭಾವಗಳನ್ನುಂಟು ಮಾಡಿ, ಅವರೆಲ್ಲರ ಹೃದಯ ಸಿಂಹಾಸನಾಧೀಶ್ವರರಾಗಿದ್ದಾರೆ. ಹೀಗೆ ಅವರು ವ್ಯಕ್ತಿಯಾಗಿಲ್ಲ. ಸಮೂಹಶಕ್ತಿ ಕೇಂದ್ರಸ್ಥಾನದಲ್ಲಿದ್ದಾರೆ. ಇವೆಲ್ಲವುಗಳನ್ನು ಗಮನಿಸಿ, **ನನ್ನ ದೃಷ್ಟಿಯಲ್ಲಿ ಪೂಜ್ಯ 'ಶ್ರೀ ಮೂಜಗಂ' ರು ಇಪ್ಪತ್ತನೆಯ ಶತಮಾನದ ದ್ವಿತೀಯ ಬಸವೇಶ್ವರರವರು.**

'ಹೂಬಳ್ಳಿ'ಯು ಶ್ರೀ ಜಗದ್ಗುರು ಸನ್ನಿಧಿಯವರ ಸ್ವಾನುಭವಪೂರ್ಣ 'ಆಶೀರ್ವಾಣಿ'ಗಳ ಸಂಕಲನ. ಈ ಬಳ್ಳಿಯಲ್ಲಿ ಐವತ್ತೂರು ಆಶೀರ್ವಾಣಿಗಳು–ಪ್ರಬಂಧ

ಗಳು–ಲೇಖನಗಳು ಒಂದುನೂರಾ ಎಂಟು ಪುಟಗಳಲ್ಲಿವೆ. ಸುಮಾರು ಒಂದಕ್ಕೆ ಕೇವಲ ಒಂದೂವರೆ ಪುಟಗಳು ಮಾತ್ರ. ಎಲ್ಲವುಗಳ ಶೀರ್ಷಿಕೆಗಳು ಸಂಸ್ಕೃತದಲ್ಲಿವೆ. ಆದರೆ ಅವುಗಳ ವಿವರಣೆ–ಸ್ಪಷ್ಟೀಕರಣೆಗಳು ಮಾತ್ರ ಸರಳ ಸುಲಭ. ಲಲಿತವಹ ಕನ್ನಡ ಭಾಷೆ ಯಲ್ಲಿವೆ. ಇವುಗಳಲ್ಲಿ ಸುಸಂಬಂಧತೆ, ಭಾಷಾ ಸೌಂದರ್ಯತೆ, ಅಲಂಕಾರಿಗಳಿವೆ. ಅವರ ವಿಚಾರಗಳು ಪೂರ್ವಗ್ರಹ ದೂಷಿತವಲ್ಲ. ಸ್ಪಷ್ಟ, ನೇರ ಹಾಗೂ ತೀಕ್ಷ್ಣ. ವಿವಿಧ ಪ್ರಕಾರಗಳಲ್ಲಿಯ ಹೂಗಳಲ್ಲಿಯ ಮಕರಂದವನ್ನು ಆಸ್ವಾದಿಸಿದಾಗ ಒಂದು ರೀತಿಯ ಆತ್ಮಾನಂದದರಿವಾಗುವದು. ಹಿಂದಿಯಲ್ಲಿ ಒಂದೆಡೆ ಶ್ರೀ ಜಯಶಂಕರ ಪ್ರಸಾದರವರು "ಆತ್ಮಾನಂದ ಬ್ರಹ್ಮಾನಂದದ ಸಹೋದರ" ಎಂದು ಹೇಳಿದಂತೆ ಬ್ರಹ್ಮಾನಂದ–ಲಿಂಗಾ ನಂದದ ಸಹಜ ಅನುಭವವುಂಟಾಗುವದು. ಸಾತ್ವಿಕತೆಯು ಒಡಮೂಡುವದು. ಮನಕ್ಕೆ ಶಾಂತಿ–ಸಮಾಧಾನಗಳು ದೊರಕುವವು. ಒಮ್ಮೆ ಓದಿದರೆ ಮಗುದೊಮ್ಮೆ ಓದಬೇಕೆನಿಸು ವಷ್ಟು ರುಚಿಕರ, ಆರೋಗ್ಯಕರ, ಆಹ್ಲಾದಕರಗಳನ್ನುಂಟು ಮಾಡುವವು. ವಿಶ್ವವಿದ್ಯಾ ಲಯದ ಶೈಕ್ಷಣಿಕ ಮಟ್ಟದಲ್ಲಿ ಸಾಹಿತ್ಯಿಕಾಭ್ಯಾಸಿಗಳಿಗೆ ಈ ಗ್ರಂಥ ಒಂದು ದಾರಿದೀಪ ವಾಗಿದೆ. 'ಗದ್ಯಂ ಕವೀನಾಂ ನಿಕಷಂ ವದಂತಿ'ಯಂತೆ ಜಗದ್ಗುರುಗಳವರ ಹೃದ್ಯಮಯ ಗದ್ಯಶೈಲಿಯು, ನಿಬಂಧ ರಚನಾ ಕೌಶಲ್ಯಗಳು ಸರ್ವರಿಗೂ ಆದರ್ಶ ಅನುಕರಣೀಯ ಗಳಾಗಿವೆ. ತಲೆಬರಹಗಳಿಗನುಗುಣವಾಗಿ ವಿಷಯ ವೈಶಿಷ್ಟ್ಯತೆಗಳನ್ನೊಳಗೊಂಡಿವೆ. ಇತ್ತೀಚೆಗೆ ಜೀವನ ಮೌಲ್ಯಗಳು ದಿನ ದಿನಕ್ಕೆ ಹ್ರಾಸವಾಗುತ್ತಿರುವಾಗ, ಮಾನವೀಯ, ಧಾರ್ಮಿಕ, ಸಾಮಾಜಿಕ ಮೌಲ್ಯಗಳನ್ನು ಬಿತ್ತರಿಸುವ ಪ್ರಬಂಧಗಳು ಅತ್ಯಾವಶ್ಯಕ ಹಾಗೂ ಅನಿವಾರ್ಯಗಳಾಗಿವೆ. ಹೀಗೆ ನವನವೋನ್ಮೇಷಶಾಲಿನಿ ಪ್ರತಿಭೆಗಳಿಂದ ಕೂಡಿದ ಸಂಕಲನವು ವೈಜ್ಞಾನಿಕ ಯುಗದಲ್ಲಿಯ ಶಾಂತಿಯ ಅನ್ವೇಷಣೆಗೆ ದಾರಿದೀಪವಾಗಿ, ಜೀವನದುದ್ದಕ್ಕೂ ಹಸಿರನ್ನು ಹರಡುತ್ತಲಿದೆ.

ನಿಬಂಧಕಾರ ಬೇಕನ್ನರು ಹೇಳಿದಂತೆ **"There are some books which are to be digested"** ಹೂಬಳ್ಳಿ ಗ್ರಂಥವು ಕೇವಲ ಓದುವದಕ್ಕಲ್ಲ, ಓದಿದ್ದನ್ನು (ಅರಗಿಸಿಕೊಳ್ಳುವಂತಹ) ಪಚನ ಮಾಡಿಕೊಳ್ಳುವಂತಹ ಶ್ರೇಣಿಗೆ ಸೇರಿದುದು. ಕಿರಿಯ ವಾಕ್ಯಗಳಲ್ಲಿ ಹಿರಿದರ್ಥಗಳನ್ನು ತುಂಬಲಾಗಿದೆ. ಸಂಸ್ಕೃತ ಭಾಷೆಯಲ್ಲಿರುವ ಸುಭಾಷಿತ ಗಳಂತೆ, ಕನ್ನಡದಲ್ಲಿ ಸುಭಾಷಿತಗಳ ಸಾಹಿತ್ಯಕ್ಕೆ ನಾಂದಿಯಾಗಿದೆ. ಗ್ರಂಥ ಪಠಿಸಿದಾಗ ಮನದ ಮುಂದೆ ಬಂದು ನಿಲ್ಲುತ್ತಿರುವ ಪೂಜ್ಯ ಶ್ರೀಗಳವರ ಚಿದ್ರೂಪದಲ್ಲಿ ಸಾಮಾಜಿಕ ಕಳಕಳಿ, ರಾಷ್ಟ್ರದ ಹಿತಚಿಂತನೆ, ಮಾನವೀಯತೆಯ ಅನುಕಂಪ, ಚಾರಿತ್ರ್ಯ ಮೌಲ್ಯಗಳ ಅನುಷ್ಠಾನಕ್ಕಾಗಿರುವ ಛಲಗಳು ಸಕಾರಾತ್ಮಕವಾಗಿ ಕಂಡುಬರುತ್ತವೆ. ನುಡಿಗಳನ್ನು ನಡೆ ಯಲ್ಲಿ ತರಲು ಪ್ರಯತ್ನಿಸಿದಾಗ, ಬಂದೊಂದಗಿದ, ಬಂದೊದಗಬಹುದಾದ ತೊಂದರೆ ಗಳನ್ನು ಕಟು ಅನುಭವಗಳನ್ನು ಓರ್ವ ಸಾಧಕರಾದ ಅವರನ್ನು ಕಂಡ ಸಮಾಜ ಹಾಗೂ

ತಾವು ನೋಡಿದ ಸಮಾಜ ದೃಷ್ಟಿಗಳನ್ನು ಸರಿಯಾದ ಪ್ರಮಾಣದಲ್ಲಿ ಅಳವಡಿಸಿಕೊಂಡ ಪರಿಗಳು ಪರಿಣಾಮಕಾರಿಗಳಾಗಿವೆ.

ಷಷ್ಟ್ಯಬ್ದಿ ಸುಸ್ಮರಣಾ ಅಭಿನಂದನ ಮಹಾಸಂಪುಟದ ಸಂಪಾದಕರಾದ ಮಾನ್ಯ ಪ್ರೊ. ಜಿ. ಎಚ್. ಹನ್ನೆರಡುಮಠರವರು ಬಹಳೇ ವಿಚಾರಿಸಿ, ನನಗೆ 'ಹೂಬಳ್ಳಿ' ಪುಸ್ತಕ ವನ್ನು ವಿಮರ್ಶೆಗಾಗಿ ಕಳುಹಿಸಿದಂತೆ ಕಾಣಿಸುತ್ತದೆ. ಪೂಜ್ಯ ಜಗದ್ಗುರುಗಳವರು ಚತುರ್ಭಾಷಾಪ್ರಭುತ್ವವನ್ನು ಮನಗಂಡ ಸಂಪಾದಕರು ಹಾಗೆಯೆ ಅಲ್ಪ ತಿಳಿವಳಿಕೆಯುಳ್ಳ ನನಗೆ ಕಳುಹಿಸಿ, ವಿದ್ಯಾರ್ಥಿ ಜೀವನದಲ್ಲಿ ಅರ್ಜಿಸಿದ ಜ್ಞಾನ, ಪಡೆದ ಜೀವನಾನುಭವ ಗಳಿಗೆ ಹೊಸ ಮೆರಗನ್ನುಂಟುಮಾಡಿದ್ದಾರೆ.

'ಭಾಷಾಸು ಮುಖ್ಯಾ ಮಧುರಾ ದಿವ್ಯಾಗೀರ್ವಾಣ ಭಾರತಿ' ಎಂಬಂತೆ ಎಲ್ಲ ಭಾಷೆ ಗಳಲ್ಲಿ ದೇವಭಾಷೆಯು (ಸಂಸ್ಕೃತವು) ಪ್ರಾಮುಖ್ಯತೆ, ಮಾಧುರ್ಯತೆ ಹಾಗೂ ದಿವ್ಯತೆ ಗಳನ್ನು ಪಡೆದಿದೆ. ಅಂತಹ ಭಾಷೆಯಲ್ಲಿ ಆಶೀರ್ವಾಣಿಗಳ ತಲೆಬರಹಗಳಿವೆ. ಅದರರ್ಥ **ಭಾಷಾ ಪ್ರೌಢಿಮೆಯ ಪ್ರದರ್ಶನವಲ್ಲ. ದೇವಭಾಷೆಯನ್ನು ಜನಸಾಮಾನ್ಯರ, ಪ್ರಸ್ತುತ ಸಮಸ್ಯೆಗಳ ಭಾಷೆಯನ್ನಾಗಿ ಮಾರ್ಪಡಿಸಿದ ನೂತನ ಪ್ರಯತ್ನ ವೆಂಬುದು ಗಮನಾರ್ಹವಾಗಿದೆ.** ಅವರ ಗ್ರಾಂಥಿಕ ಬರೆಹಗಳಲ್ಲಿ ತೈತ್ತರಿಯೋಪ ನಿಷತ್, ಮನುಸ್ಮೃತಿ, ಭಗವದ್ಗೀತೆ, ಅಮರಕೋಶ, ಚಾಣಕ್ಯ, ಭಾರವಿ ಮುಂತಾದವರ ಪ್ರಭಾವಗಳಿವೆ. ಜಗತ್ತಿನ ಜ್ಞಾನದ ಕಿಡಕಿಯಂತಿರುವ ಇಂಗ್ಲೀಷ ಭಾಷೆಯಲ್ಲಿಯ ಶೇಕ್ಸಪಿಯರ್, ಫ್ಲೀಜರ, ವಿವೇಕಾನಂದ, ಮಹಾತ್ಮಾಗಾಂಧಿ, ನೆಹರೂರವರ ಉದ್ಧೃತ ಗಳನ್ನು ಪ್ರಸಂಗಾನುಸಾರ ಉಪಯೋಗಿಸಿದ್ದಾರೆ. ರಾಷ್ಟ್ರಭಾಷೆಯಾದ ಹಿಂದಿಯ ಸುಪ್ರಸಿದ್ಧ ಕವಿ ಶ್ರೀ ಸುಮಿತ್ರಾನಂದನ ಪಂತರ ವಾಕ್ಯಗಳನ್ನು ಸ್ಪರ್ಶಿಸದಿಲ್ಲ. ಮಾತೃ ಭಾಷೆಯಾದ ಕನ್ನಡದಾಭಿಮಾನದ ಬಗ್ಗೆ ಎರಡಿಲ್ಲ. 'ಕರ್ನಾಟಕ ಭಾಷಾಯಾಃ ವಿಜಯೋತ್ಸವಃ' ಎಂಬಲ್ಲಿ ಪ್ರಾರಂಭದಲ್ಲಿ ನೃಪತುಂಗ ಕವಿಯ ಕನ್ನಡಿಗರ ಹಿರಿಮೆಯ ವರ್ಣನೆಯನ್ನಿತ್ತು, ಅವರ ಸಾಂಸ್ಕೃತಿಕ ಮಹತಿಯನ್ನು ಬಿಂಬಿಸಿದ್ದಾರೆ. ರಾಜ್ಯದ ಹೆಸರು ಕರ್ನಾಟಕ, ಶಿಕ್ಷಣ ಮಾಧ್ಯಮ ಕನ್ನಡದಲ್ಲಿ ಎಂಬ ಸರಕಾರದ ಐತಿಹಾಸಿಕ ನಿರ್ಣಯಗಳ ವಿಜಯೋತ್ಸವ ಆಚರಿಸಿದ್ದಾರೆ. 'ಸಿರಿಗನ್ನಡಂ ಗೆಲ್ಗೆ' ಮಂತ್ರದೋಚ್ಚಾರಗೈಯ್ದಿದ್ದಾರೆ. ವಚನಕಾರರಾದ ಅಲ್ಲಮಪ್ರಭು, ಬಸವಣ್ಣ, ಅಕ್ಕಮಹಾದೇವಿ, ಎಡೆಯೂರು ಸಿದ್ಧಲಿಂಗೇಶ್ವರರು, ನಿಜಗುಣ ಶಿವಯೋಗಿ, ಸರ್ವಜ್ಞರು, ದಾಸರಾದ ಕನಕದಾಸ, ವಿಜಯ ದಾಸರ ವಿಚಾರಗಳನ್ನು ತಮ್ಮ ಅನುಭವಗಳ ಪುಷ್ಟಿಗಾಗಿ; ಪೂರಕಕ್ಕಾಗಿ, ಸಂದರ್ಭೋಚಿತ ವಾಗಿ ಉಪಯೋಗಿಸಿದ್ದಾರೆ.

ವಿಷಯಪ್ರಧಾನ ದೃಷ್ಟಿಯಿಂದ ಆಶೀರ್ವಾಣಿಗಳಲ್ಲಿ ಹದಿನೆಂಟು ತಾತ್ವಿಕ, ಹದಿನಾರು ನೈತಿಕ ಹಾಗೂ ಸಾಮಾಜಿಕ, ರಾಷ್ಟ್ರೀಯತೆಗಳಿಗೆ ತಲಾ ಒಂಬತ್ತುಗಳೆಂದು ವಿಭಾಗಿಸ

ಹುದಾಗಿದೆ. ಪ್ರತಿಯೊಂದು ವಿಭಾಗದಲ್ಲಿಯ ಪೂಜ್ಯ ಜಗದ್ಗುರುಗಳವರ ಅನುಭವ ಗಳನ್ನು ಸಾರಸಂಗ್ರಹರೂಪವಾಗಿ ಪರಿಚಯಿಸುವ ಪ್ರಯತ್ನ ಮಾಡಿರುವೆ.

## ತಾತ್ವಿಕ ವಿಭಾಗ

ವೀರಶೈವ ಧರ್ಮದಲ್ಲಿ ಆತ್ಮಸ್ವರೂಪಿ ಷಟ್‌ಸ್ಥಲವು ತಾತ್ವಿಕ ವಿಭಾಗಕ್ಕೆ ಸಂಬಂಧಿಸಿದುದು. 'ಮಾನವಃ ಶಿವಯೋಗೇನ ಶಿವೋಭವತಿ ಕೇವಲಂ" ಮಾನವನು ಶಿವಯೋಗ ದಿಂದ ಕೇವಲ ಶಿವನೇ ಆಗುವನು. ಅಂಗನು ಲಿಂಗವನ್ನು ನೋಡುತ್ತ, ಪೂಜೆ ಮಾಡುತ್ತ, ಅದರೊಂದಿಗೆ ಕೂಡುವನು. ಲಿಂಗಾಂಗಸಾಮರಸ್ಯವೆ ಶಿವಯೋಗ. ಇದಕ್ಕಾಗಿ ಶಿವಜ್ಞಾನ, ಭಕ್ತಿ–ವ್ರತಾಚರಣೆಗಳಲ್ಲಿ ನಿಷ್ಠೆಗಳು ಅತ್ಯಾವಶ್ಯಕ. ಮಾನವನು ತನ್ನ ಸಹಜ ಪ್ರವೃತ್ತಿ ಗಳನ್ನು ಈಶ್ವರನಲ್ಲಿ ಸಮರ್ಪಿಸಿದಾಗ ಪೂರ್ಣತ್ವವನ್ನು ಪಡೆಯುವನು. ಅದರ ಸಿದ್ಧಿ ಗಾಗಿ ಅಹರ್ನಿಶಂ ಪ್ರಜ್ಞೆ, ಪರಿಶ್ರಮ, ಅನುಭವಗಳು ಬೇಕಾಗುವವು. ಪೂರ್ಣತ್ವ ಪಡೆಯದವನ ಬಾಳು ನೀರಸ, ನಿರರ್ಥಕ. 'ಪೂರ್ಣಮೇವಾ ಶಿಷ್ಯತೆ' ಪೂರ್ಣದಿಂದ ಪೂರ್ಣವು ಪರಿಣಮಿಸುವದು. ಇಲ್ಲಿ ಶ್ರೀ ಅರವಿಂದರು ಪೂರ್ಣಯೋಗವನ್ನು ಉದಾಹರಿಸಬಹುದು. ಎಲ್ಲ ಯೋಗಗಳ ರಾಜನಂತಿರುವ ಶಿವಯೋಗವು ಸಾಧಕರಿಗೆ ಅತಿ ಸರಳ ಹಾಗೂ ಸುಲಭ.

'ಜ್ಯೋತಿಷ್ಕರ್ತಾಯದುಸ್ಮಸಿ' ಹೃದ್ಗುಹೆಯಲ್ಲಿಯ ಅಂಧಕಾರವನ್ನು ಕಳೆದು, ರಾಕ್ಷಸೀಯ ದುಷ್ಟ ಶಕ್ತಿಗಳನ್ನು ಹೊಡೆದೋಡಿಸಲು, ವ್ಯಕ್ತಿಗೆ ಶಕ್ತಿ ಬರಲು ಅಂತಃ ಶಕ್ತಿಯ ದಿವ್ಯ ಜ್ಯೋತಿಯೆ ಕಾರಣ. ಬೆಳಕಿರದ ಜೀವನ ಸ್ಮಶಾನ. ನಂಬುಗೆಯು ಶಿವ ನೊಲುಮೆಗೆ ಸಾಧನ. ನಂಬಿ ಕರೆದೊಡೆ ಓ ಎನ್ನನೇ ಶಿವನು? ಗುರು–ಲಿಂಗ–ಜಂಗಮ ರಿಗೆ ತನು, ಮನ, ಧನಗಳನ್ನರ್ಪಿಸುವಲ್ಲಿ ಸರ್ವಸಮರ್ಪಣೆ, ಭಾವಶಕ್ತಿ–ಸೌರಭಗಳು ಹೊರಸೂಸುವವು. 'ಯದ್ಭಾವಸ್ತದ್ಭವತಿ' ಅವರವರ ಭಾವಕ್ಕೆ, ಅವರವರಿಗೆಲ್ಲ ಜ್ಯೋತಿ ಯೊಂದೆ. ಇಲ್ಲಿಯೇ ಭಾವಲಿಂಗಪೂಜೆಯ ಪ್ರಾದುರ್ಭಾವ.

ವೀರಶೈವ ಧರ್ಮದ ಅಂಗಸ್ವರೂಪಿ ಅಷ್ಟಾವರಣಗಳಲ್ಲಿ ಗುರು–ಲಿಂಗ–ಜಂಗಮರು ಒಂದೆ ನಿಃಕಲ ಶಿವತತ್ವದ ವಿವಿಧ ರೂಪಗಳು. ಜಂಗಮನ ಸುಳಿವು ವಸಂತ ಗಾಳಿ ಯಂತಿರುವದು. ಗುರುವಿನ ಹಸ್ತವು ಶಿಷ್ಯನ ಮಸ್ತಕದಿಂದ ಚಿತ್ಕಲೆಯನ್ನು ಇಷ್ಟಲಿಂಗದಲ್ಲಿ ರೂಪಾಂತರಿಸುವನು. ಲಿಂಗಮರದ ಹಣ್ಣು ಜಂಗಮ. "ಸರ್ವಕರ್ತಾ ಜಂಗಮಃ" ಜಂಗಮ ನಿಗೆ ಸ್ವಯ, ಚರ, ಪರಗಳೆಂಬ ಮೂರು ಅವಸ್ಥೆಗಳಿವೆ. ಕ್ರಿಯಾಶೀಲನಾಗಿ, ನಿರ್ಮೋಹಿ ಯಾಗಿ, ಶುದ್ಧಭಾವದಿಂದ ಕೂಡಿದವನೆ ನಿಜವಾದ ಜಂಗಮ.

ಪೂಜ್ಯ ಜಗದ್ಗುರುಗಳವರು ಧರ್ಮಕ್ಕೆ ಸಾರ್ವಜನಿಕ ರೂಪವನ್ನುಂಟುಮಾಡಿ ದ್ದಾರೆ. ಗುರು ವಿರಕ್ತರ ಭೇದ ಭಾವನೆಗಳು ನಶಿಸಿ, ನಾವೆಲ್ಲರು ವೀರಶೈವರೆಂಬ ವಿಶಾಲ ಭಾವನೆ ಬಲಿಯುವಂತೆ ಬಯಸಿದ್ದಾರೆ. ಸ್ವಾಮಿಗಳು ರಾಷ್ಟ್ರದ ಜೀವಂತ ದರ್ಶನಗಳು.

ಜ್ವಲಂತ ಚೇತನಗಳು ಅವರು ನೈತಿಕ, ಸಾಂಸ್ಕೃತಿಕ, ತಾತ್ವಿಕ ಮೌಲ್ಯಗಳ ರಕ್ಷಣೆಗೆ ನಿರಂತರ ಸಕ್ರಿಯ ಸಂಘಟನೆಗಳನ್ನು ಕೈಕೊಳ್ಳಬೇಕಾಗಿರುವದೆಂದು ಸ್ಪಷ್ಟಪಡಿಸಿದ್ದಾರೆ. ಮುಂದು ವರೆದು "ವೀರಶೈವ ಸಮಾಜಸ್ಯ ನೇತ್ರೇ ಗುರುಚರೇ ಸ್ಮೃತಾ" ಗುರು-ವಿರಕ್ತರು ವೀರಶೈವ ಸಮಾಜದೆರಡು ಕಣ್ಣುಗಳು. "ಮಠಾಧೀಶ್ವರ ಕರ್ತವ್ಯಂ ಸಾಂಪ್ರತಂ ಕೀದೃಶಂ ಭವೇತ್?" ಮಠಾಧೀಶ್ವರರು ನಿರ್ವಹಿಸಬಹುದಾದ ಕರ್ತವ್ಯಗಳೇನು? ಹೇಗೆ? ಎಂಬ ಪ್ರಶ್ನೆಗೆ ಉತ್ತರರೂಪವಾಗಿ ಮಾನವ ಕುಲವೊಂದೆಂಬುದನ್ನು ಗ್ರಹಿಸಬೇಕು. ವಿಜ್ಞಾನಯುಗದಲ್ಲಿ ಕೂಪಮಂಡೂಕ ಪ್ರವೃತ್ತಿಗೆ, ವೈಯಕ್ತಿಕ ಪ್ರತಿಷ್ಠೆಗೆ ತಿಲಾಂಜಲಿಯನ್ನೀಯಬೇಕು. ಸಮಾಜದ ಋಣಭಾರವನ್ನು ಕರ್ತವ್ಯಮುಖೇನ ಕಳೆಗಿಳಿಸಬೇಕೆಂದು ಕಿವಿಮಾತುಗಳನ್ನು ಹೇಳಿದ್ದಾರೆ.

ಆತ್ಮಕ್ಕೆ ಶಾಂತಿ ದೊರಕಬೇಕಾದರೆ ಧರ್ಮವಾವಶ್ಯಕ. ಧರ್ಮದ ಗುರಿ ಸತ್ಯಂ, ಶಿವಂ, ಸುಂದರಂ. ಎಲ್ಲ ಜನರನ್ನು ಒಗ್ಗೂಡಿಸಿ ಸಹಕರಿಸುವಂತೆ ಪ್ರೇರೇಪಿಸುವ ತತ್ವವೆ ಧರ್ಮ. ವ್ಯಕ್ತಿಯಲ್ಲಿ ಹುದುಗಿರುವ ಅಜ್ಞಾನದ ಅಂಧಕಾರವನ್ನು ಹೊಡೆದೋಡಿಸಿ ಜ್ಞಾನಜ್ಯೋತಿಯನ್ನು ನೀಡುವದೆ ಧರ್ಮ. ಮಾನವನ ಸರ್ವತೋಮುಖಾಭಿವೃದ್ಧಿಗೆ ಇದುವೆ ಭದ್ರಬುನಾದಿ. "ಧರ್ಮೇಣ ಹೀನಾಃ ಪಶುಭಿಃ ಸಮಾನಾಃ" ಧರ್ಮಹೀನರು ಪಶುಗಳ ಸಮಾನರು. ಜಗತ್ತಿನಲ್ಲಿಯ ಎಲ್ಲ ಧರ್ಮಪ್ರವರ್ತಕರು ಸತ್ಯ, ಅಹಿಂಸೆ, ಪ್ರೇಮ, ದಯೆ ಮುಂತಾದ ಮಾನವೀಯ ಮೌಲ್ಯಗಳ ತತ್ವಗಳನ್ನು ಪ್ರತಿಪಾದಿಸಿದ್ದಾರೆ. ಹಿಂದೂ ಧರ್ಮದಲ್ಲಿ ವರ್ಣಭೇದಗಳಿದ್ದಂತೆ, ವಿಶ್ವದ ಇನ್ನುಳಿದ ಧರ್ಮಗಳಲ್ಲಿಯು ಅನೇಕ ಭೇದಗಳಿವೆ. ಹೀಗೆ ಧರ್ಮದ ಭೇದ-ಪ್ರಭೇದಗಳು ಅಂತರ್‌ರಾಷ್ಟ್ರೀಯ ಸಮಸ್ಯೆಗಳಾಗಿವೆ. ಅವೆಲ್ಲವುಗಳಿಗೆ ಶಾಶ್ವತ ಪರಿಹಾರವನ್ನುಂಟು ಮಾಡುವ ಶಕ್ತಿ ಕೇವಲ ಧಾರ್ಮಿಕ ಸುಸಂಬಂಧ ಸಂಘಟನೆಗಳಲ್ಲಿದೆ. ಧರ್ಮ-ಸಂಸ್ಕೃತಿಗಳೆರಕದಿಂದ ವಿಶ್ವಶಾಂತಿಯ ನಿರೀಕ್ಷೆಯಿದೆ. ಇಂತಹ ಧಾರ್ಮಿಕ ಬದಲಾವಣೆಗೆ ಜಗದ್ಗುರುಗಳವರು ಹೊಸ ರೂಪವೊಂದನ್ನು ಪ್ರಾಯೋಗಿಕವಾಗಿ ತಂದು, ವಿಶ್ವವಂದ್ಯರಾಗಿರುತ್ತಾರೆ. ಪರಂಪರಾಗತಿ, ಸಂಪ್ರದಾಯಕ ಮೌಢ್ಯಗಳನ್ನು ಹೊಡೆದೋಡಿಸಿ, ಅವುಗಳಿಗೆ ಪರ್ಯಾಯವಾಗಿ ವಿನೂತನ ದೃಷ್ಟಿಕೋನ ಗಳನ್ನು ಮಂಡಿಸಿದ್ದಾರೆ.

ಚತುರ್ವಿಧ ಪುರುಷಾರ್ಥಗಳಲ್ಲಿಯ ಧರ್ಮಜಾಗೃತಿಗೆ ಆರ್ಥಿಕ ಪ್ರಗತಿಯು ಅತ್ಯವಶ್ಯವೆಂಬ ಚಾಣಕ್ಯನ ನೀತಿಗೆ ತಮ್ಮದೆ ಆದ ಅರ್ಥವನ್ನು ಕೊಟ್ಟಿದ್ದಾರೆ. "ಧರ್ಮಸ್ಯ ಮೂಲಂ ಅರ್ಥಂ" ಧರ್ಮ ಬದುಕಬೇಕಾದರೆ ಅರ್ಥವು ಚಿಗುರುವ ಹೂ, ಕಾಯಿ, ಹಣ್ಣು ಆಗಿರುವದು. ಜಾಣನು ಲೌಕಿಕ-ಪಾರಮಾರ್ಥಿಕಗಳೆರಡನ್ನು ಮಾಣದೆ ಕೂಡಿ ನಡೆಯು ವನು. ಆರ್ಥಿಕ ಪ್ರಗತಿಯಿಂದ ಧಾರ್ಮಿಕ ಅಭಿವೃದ್ಧಿಯಾಗುವದೆಂಬುದು ಜಗದ್ಗುರು ಗಳವರ ಕಾಲನಿರ್ಣಯ ಮಹತ್ವಪೂರ್ಣವಾಗಿದೆ. ಆ ಹಣ ಗಳಿಕೆಯು ಸತ್ಯ-ಶುದ್ಧ-ಕಾಯಕದಿಂದಲಿರಬೇಕಾದುದು ಅನಿವಾರ್ಯವು.

ಲಿಂ. ಹಾನಗಲ್ಲ ಕುಮಾರಸ್ವಾಮಿಗಳವರೆಲ್ಲ ಧರ್ಮೋದ್ಧಾರದ ಕ್ರಾಂತಿಗಳ ಅಂಶಗಳನ್ನು ಅನೂಚನವಾಗಿ ಮುಂದುವರಿಸಿಕೊಂಡು ಬಂದಿದ್ದಾರೆ. ಅರ್ಜಿಸಿದ ಹಣವು ಸದ್ವಿನಿಯೋಗಕ್ಕೆ ಸಲ್ಲಿಸಿದರೆ ಶಶಿಕಂತನ ಕೃಪೆಯು ಸಾಧ್ಯವೆಂದು ಹೇಳಿದುದು ಅನುಭವ ವೇದ್ಯವಾಗಿದೆ. ಉಪನಿಷತ್ ವಾಕ್ಯಗಳಿಗೆ ಸಂಪ್ರತಿ ಪರಿಸ್ಥಿತಿಗಳ ಗರ್ಭದಿಂದ ಹೊರ ಬಂದ ಆತ್ಮನಿರ್ಭರ ಅಭಿಪ್ರಾಯಗಳಿಗೆ ಕೊರತೆ ಅವರಲ್ಲಿಲ್ಲ. "ದರಿದ್ರದೇವೋಭವ" ವೆಂದು ತಿಳಿದು, ಅವರ ಸೇವೆ ಮಾಡುವದು ನಿಜವಾದ ಶಿವಪೂಜೆಯೆಂಬುದು ಇಪ್ಪತ್ತನೆಯ ಶತಮಾನದ ಸಂದೇಶವು. ರಾಷ್ಟ್ರದಲ್ಲಿ ಬಡವರನ್ನೆ ಮೂಲಘಟಕವಾಗಿರಿಸಿಕೊಂಡು ಅಧಿಕಾರಕ್ಕಾಗಿ ಹಾತೊರೆಯುತ್ತಲಿರುವಾಗ ಅವರ ಅನುಭವದ ನುಡಿಗಳು ರಾಷ್ಟ್ರ-ಧರ್ಮದ ದ್ಯೋತಕಗಳಾಗಿವೆ. ಸರ್ವಂ ಲಿಂಗಮಯಂ ಇದಂ ಜಗತ್ತೆಂಬುದರ ಪ್ರಾಯೋಗಿಕರಣ ವಾಗಿದೆ. ಬಡವರ ಸ್ಥಿತಿ-ಗತಿಗಳನ್ನು ತನ್ನಂತೆ ಪರರ ಬಗೆದೊಡೆ ಕೈಲಾಸವೇ ಬಿನ್ನಾಣ ಮಕ್ಕುವದಂತೆಂಬುದು ಧರ್ಮಕ್ಕೆ ಹಿರಿಮೆಯಾಗಿದೆ. ಬೇಡುವಿಕೆ-ಬೇಡಿಕೆಗಳಿಗೆ ಧಾರ್ಮಿಕ ಸ್ವರೂಪವಿತ್ತಿರುವರು. ಸಾಮಾಜಿಕ ಜೀವನದಲ್ಲಿ ಬೇಡುವದು ಅನಿವಾರ್ಯ. ಅದರಲ್ಲಿಯ ಬಹಿರಂಗ-ಅಂತರಂಗವೆಂಬೆರಡು ರೀತಿಗಳು ಧಾರ್ಮಿಕ ಭಿಕ್ಷುಕನಲ್ಲಿ ಕೂಡಿರಬೇಕಾದುದು ಮಹತ್ವಪೂರ್ಣ ಅಂಶವಾಗಿದೆ. ಹಿಂದೆ ಈ ನಾಡಿನಲ್ಲಿ ಭೀಕರ ಬರಗಾಲ ಬಿದ್ದಾಗ, ಅಲ್ಲಲ್ಲಿ ಜಗದ್ಗುರುಗಳವರು ಪಾದಯಾತ್ರೆ ಕೈಕೊಂಡು, ಮನೆ-ಮನೆಗೆ ಹೋಗಿ, ನೀಡಿದ ಭಿಕ್ಷೆಯನ್ನು ಸಂಗ್ರಹಿಸಿ, ನೂರಾರು ಗಂಜಿ ಕೇಂದ್ರಗಳನ್ನು ತೆರೆದು, ದರಿದ್ರ ದೇವರನ್ನು ಪೂಜಿಸಿದ ವಿಷಯ ಧಾರ್ಮಿಕ ಇತಿಹಾಸದಲ್ಲಿ ಸ್ವರ್ಣಾಕ್ಷರಗಳಿಂದ ಬರೆಯಲಾಗಿದೆ.

ಶ್ರೀ ಬಸವೇಶ್ವರವರು ಜಗದ್ಗುರುಗಳ ದೃಷ್ಟಿಯಲ್ಲಿ ಪರಿಪೂರ್ಣ ಧಾರ್ಮಿಕ ಪುರುಷರು. ವಿಶ್ವಜ್ಯೋತಿ ಸ್ವರೂಪರು. "ವಿಶ್ವಜ್ಯೋತಿಃ ಸ್ವರನಾಪೋಽಯಂ ಕಲ್ಯಾಣ ಬಸವೇಶ್ವರಃ" ಅವರಿಗಾಗಿ ಹೂಬಳ್ಳಿಯಲ್ಲಿ ಹೆಚ್ಚಿನ ಗೌರವ ಸ್ಥಾನವನ್ನು ಕಾಯ್ದಿರಿಸಿದ್ದಾರೆ. ಮಾನವಕುಲದ ಜಾಗೃತಿ, ಅಭಿವೃದ್ಧಿ, ವಿಕಾಸಗಳಿಗೆ ಕಾರಣೀಭೂತವಾದ ಶ್ರೀ ಬಸವೇಶ್ವರರವರ ಕಾಯಕವೇ ಕೈಲಾಸ, ಅಂತರಂಗ ಬಹಿರಂಗ ಶುದ್ಧಿಗಳು, ಅಸ್ಪೃಶ್ಯೋದ್ಧಾರ, ಲೋಕದ ಡೊಂಕನ್ನು ತಿದ್ದುವವರನ್ನು ಕುರಿತು ವಿಡಂಬನೆಗಳು—ಹೀಗೆ ತ್ರಿಕಾಲ ಸತ್ಯವಾದ ತತ್ವಗಳನ್ನು ಬಹಳವಾಗಿ ಮೆಚ್ಚಿದ್ದಾರೆ ಹಾಗೂ ಅವುಗಳನ್ನು ನಡೆ-ನುಡಿಗಳಲ್ಲಿ ತರಲು ಪ್ರಯತ್ನಿಸಿ, ಸಫಲತೆಯನ್ನು ಪಡೆದಿದ್ದಾರೆ. ಬಸವತತ್ವಾನುಯಾಯಿಗಳಲ್ಲಿಯ ಭಿನ್ನಾಭಿಪ್ರಾಯಗಳ ಬಗ್ಗೆ ಸಾಕಷ್ಟು ನೊಂದಿದ್ದಾರೆ. ಅದಕ್ಕಾಗಿ "ಬಸವೇಶ್ವರ ತತ್ವಸ್ಯಪ್ರಸಾರಸ್ತು ಕಥಂ ಭವೇತ್?" ಯಾವ ಪರಿಹಾರವನ್ನು ಕಂಡು ಹಿಡಿಯಬೇಕೆಂದು ಯೋಜಿಸಿದ್ದಾರೆ. ರಾಷ್ಟ್ರದಾದ್ಯಂತ ಅಲ್ಲಲ್ಲಿ ಪಸರಿಸಿದ ಬಸವತತ್ವಪ್ರಸಾರಕ ಸಂಸ್ಥೆಗಳನ್ನು, ವ್ಯಕ್ತಿಗಳನ್ನು ಒಂದೆಡೆಗೆ ಕೂಡಿಸಿ, ಕೇಂದ್ರ ಬಸವಸಮಿತಿಯನ್ನು ಸಂಸ್ಥಾಪಿಸಬೇಕು. ಪರಸ್ಪರ ಮತ ಭೇದಗಳ ಬಗ್ಗೆ ಅಲ್ಲಿಯೇ ಒಮ್ಮತದ ನಿರ್ಣಯಗಳನ್ನು ಸ್ವೀಕರಿಸಿ, ತನ್ಮೂಲಕ ವಿಶ್ವದಾದ್ಯಂತ ತತ್ವಗಳ ಪ್ರಚಾರಕ್ಕಾಗಿ ಪ್ರಯತ್ನಿಸುತ್ತಲಿದ್ದಾರೆ. ನ್ಯಾಯ ನಿಷ್ಠುರರಾಗಿ, ಯಾರ ದಾಕ್ಷಿಣ್ಯಕ್ಕೆ ಒಳಗಾಗದೆ,

ತತ್ವಚಿಂತನೆ, ಪ್ರಚಾರಕಾಯಕದಲ್ಲಿ ತಮ್ಮನ್ನು ತಾವೇ ಅರ್ಪಿಸಿಕೊಂಡಿದ್ದಾರೆ. ಇತ್ತೀಚೆಗೆ ಸಮಾಜದಲ್ಲಿ, ಧಾರ್ಮಿಕ ಹಾಗೂ ಸಾಹಿತ್ಯಿಕ ಕ್ಷೇತ್ರಗಳಲ್ಲಿ ಜರುಗಿದ ಕೆಲವು ಅಹಿತಕರ ಘಟನೆಗಳು, ಅದರಿಂದುಂಟಾದ ಸಮಸ್ಯೆಗಳು, ಪೂಜ್ಯ ಜಗದ್ಗುರುಗಳವರ ದಿಟ್ಟ ನೇತೃತ್ವದ ಫಲವಾಗಿ ಶೀಘ್ರವೆ ಪರಿಣಾಮಕಾರಿಯಾಗಿ ಪರಿಹಾರಕಂಡು ಮೊದಲಿನಂತೆ ಸೌಹಾರ್ದತೆ, ಶಾಂತತೆಗಳು ನೆಲೆಸಿರುವದನ್ನಿಲ್ಲಿ ಸ್ಮರಿಸಬಹುದಾಗಿದೆ.

**ನೈತಿಕ ವಿಭಾಗ**

ಶೀಲವು ಸುಖವನ್ನೀಡುವ ಸಾಧನ. ಶೀಲವಿದ್ದವರಲ್ಲಿ ಪವಿತ್ರತೆ, ಚಾರಿತ್ರ್ಯತೆ, ಪರಹಿತ, ನಿಸ್ವಾರ್ಥಗಳು ತುಂಬಿಕೊಂಡಿರುತ್ತವೆ. "ಸದ್ಗುಣಾದಿ ಸದಾಚಾರ ಮೌಲ್ಯಂ ಹಿ ಮಾನವೀಯತಾ"ದಲ್ಲಿ ಸುಸ್ವಭಾವ, ಸದ್ಗುಣ, ಸೌಜನ್ಯಗಳು, ಆತ್ಮವಿಕಾಸದ ಪ್ರಬುದ್ಧತೆಗಳು, ಕಾಪಟ್ಯವಿಲ್ಲದಿರುವಿಕೆಗಳು ಮಾನವೀಯತೆಯ ಮೌಲ್ಯಗಳೆಂದು ವ್ಯಕ್ತಪಡಿಸಿದ್ದಾರೆ. ಅವು ವ್ಯಕ್ತಿತ್ವವಿಕಾಸಕ್ಕೆ ಕಾರಣೀಭೂತಗಳಾಗಿವೆ. ಸದಾಚಾರದಿಂದ ಅನಂತ ಪಾಪಗಳ ಪರಿಹಾರವಾಗುವದು. 'ಸತ್ಯಂ ವದ, ಧರ್ಮಂ ಚರ'– 'ಕಳಬೇಡ, ಕೊಲಬೇಡ'-ಗಳು ಸದಾಚಾರದ ಸ್ವರೂಪಗಳು. ಚಾರಿತ್ರ್ಯವು ಒಂದು ವೃಕ್ಷದ ಸಮಾನ. "ಚಾರಿತ್ರತತ್ವರೇಣೈವ ಸರ್ವಭೂತ ಹಿತಾತ್ಮನಾ" ಸರ್ವಜೀವಿಗಳ ಹಿತಕ್ಕೆ ಕಾರಣವಾಗಿದೆ. ಅನುಶಾಸನ, ವಿನಮ್ರತೆ, ಪ್ರಾಮಾಣಿಕತನ ಹಾಗೂ ಪರೋಪಕಾರಗಳು, ಚರಿತ್ರನಿರ್ಮಾಣದ ಮೂಲ ತತ್ವಗಳು. ಸಹಕಾರ, ಸತತೋದ್ಯೋಗಗಳು ಶಾಂತಿಯಿಂದ ಜೀವನ ಸಾಗಿಸಲು ಸಹಾಯಕಾರಿಗಳು. 'ಮಾತೆಂಬುದು ಜ್ಯೋತಿರ್ಲಿಂಗ', ಅದು ಅಧರಕ್ಕೆ ಕಹಿ, ಉದರಕ್ಕೆ ಸಿಹಿ. ಮಾತು ಮತ್ತು ಮೌನಗಳು ಮಹಾಶಕ್ತಿಗಳು ಮೃದುವಚನದಲ್ಲಿ ಸಕಲ ಜಪ-ತಪಂಗಳು ಅಡಗಿವೆ.

"ಸರ್ವಂ ಸ್ವಾರ್ಥಂ ಸಮೀಹತೆ" ಸ್ವಾರ್ಥವು ಸರ್ವಾಂತರ್ಯಾಮಿಯಾಗಿದೆ. ಅದರಲ್ಲಿ ಎರಡು ಪ್ರಕಾರಗಳು. ವ್ಯಷ್ಟಿಸ್ವಾರ್ಥವು ತಾಮಸೀಯ, ಸಂಕುಚಿತತನ, ದುರಾಭಿಮಾನ, ದ್ವೇಷ, ಮದ-ಮಾತ್ಸರ್ಯಗಳಲ್ಲಿದೆ. ಸಮಷ್ಟಿಸ್ವಾರ್ಥವು ಸಾತ್ವಿಕತೆ, ವಿಶಾಲತೆ, ಸದಭಿಮಾನ, ಪ್ರೀತಿ–ವಿಶ್ವಾಸಗಳಲ್ಲಿದೆ. ಸ್ವಾರ್ಥಿಯ ಜೀವನವು ಭಯಾನಕಕಾರಿ. ಅವನನ್ನು ಯಾರೂ ನಂಬಲಾರರು. ಅವನಿಗೆ ಸ್ನೇಹ-ಸೌಹಾರ್ದತೆಗಳು ಕನಸಿನ ಗಂಟುಗಳಾಗಿವೆ. ಸ್ವಾರ್ಥಮಯ ಸಮಾಜದಲ್ಲಿ ಕುಹಕತನ, ಆತ್ಮವಂಚಕತನಗಳು ತುಂಬಿರುತ್ತವೆ. ಮಾತ್ಸರ್ಯ ಸಮಗ್ರದೇಶವನ್ನು ಸುಡುವದು. ಮನಸ್ಸಿನ ದೌರ್ಬಲ್ಯವೆ ಮತ್ಸರ. ಅಸೂಯಾಗ್ರಸ್ತರ ಬೊಬ್ಬಾಟವು ಹುಚ್ಚುನಾಯಿಯ ಕಡಿತಕ್ಕಿಂತ ವಿಷಕಾರಿ. ಮತ್ಸರಾಗ್ನಿಗೆ ತುತ್ತಾದವರೆಲ್ಲರು ಅಶಾಂತಿಯತ್ತ ಸಾಗುವರು. ಅಹಂಕಾರವು ಮಾನವನ ಪರಮ ಶತ್ರು ಕಿಂಕರತ್ವದಲ್ಲಿ ಶಂಕರತ್ವ ಅಡಗಿದೆ. ಅಹಂಕಾರ ನಿರಸನವಾಗಿದೆ.

"ಆಹಾರ ಶುದ್ಧೌ ಸತ್ವಶುದ್ಧಿಃ" ಸತ್ವಶುದ್ಧಿಗೆ ಆಹಾರಶುದ್ಧಿಯು ಕಾರಣ. ತಾಮಸೀಯ ಆಹಾರದಿಂದ ಆತ್ಮಸಂತೃಪ್ತಿ ಅಸಾಧ್ಯ. ಸ್ಫೂರ್ತಿಗೊಳ್ಳುವ ಆತ್ಮಶಿವನನ್ನ ಬೇಕು. ಆಹಾರ

ಸೇವನೆಯಲ್ಲಿಯ ಭಾವನೆಗಳು ರಕ್ತರೂಪವಾಗಿ ಮಾರ್ಪಡುವವು. ಮದ್ಯಪಾನಾದಿ ಸೇವನೆಗಳು ಜೀವನಕ್ಕೆ ಮಾರಕ. ಮನುಷ್ಯನನ್ನು ಅತಂತ್ರನನ್ನಾಗಿ, ಅಸಹಾಯಕನನ್ನಾಗಿ ಹಾಗೂ ಬದುಕಿಗೆ ವಿಮುಖವಾಗಿ ಮಾಡುವ ಮಹಾವಿಷವೇ ಕುಡಿತ. ಕುಡಿತ ಮತ್ತು ಇತ್ತೀಚೆಗೆ ವಿಪರೀತವಾಗಿ ಬೆಳೆಯುತ್ತಿರುವ ಅಮಲು ಪದಾರ್ಥ ಸೇವನೆಗಳಿಂದ ತರುಣ ಜನಾಂಗ ಹಾಗೂ ಎಷ್ಟೋ ಕುಟುಂಬಗಳು ಸರ್ವನಾಶ ಆಗಿದೆ, ಆಗುತ್ತ ಇದೆ. ಇದೊಂದು ರಾಷ್ಟ್ರೀಯ ಫ್ಯಾಶನ್‌ಆಗಿದೆ. ಎಲ್ಲ ಕ್ಷೇತ್ರಗಳಲ್ಲಿ ಕುಡಿತ ರಾರಾಜಿಸುತ್ತಿದೆ. ಸಾಮಾಜಿಕ, ರಾಜಕೀಯ, ವೈಚಾರಿಕ ಜೀವನದಲ್ಲಿ ಅಗ್ರಗಣ್ಯ ಪಾತ್ರವಹಿಸಿದ ಕುಡಿತಕ್ಕೆ ಸಮಾಜದಲ್ಲಿ ಪ್ರತಿಷ್ಠಿತ ಸ್ಥಾನ ಪ್ರಾಪ್ತವಾಗಿದೆ. ಇದನ್ನು ತಡೆಯುವ ನೈತಿಕ ಧೈರ್ಯ ಬೆಳೆಯಿಸಿಕೊಳ್ಳಲು ಜಗದ್ಗುರುಗಳು ಸಹಕಾರಿಗಳಾಗಿದ್ದಾರೆ. ಶುದ್ಧಾನ್ನವು ಸತ್ಯಸಂಶೋಧನೆಗೆ ಪೋಷಕ. ಅರ್ಥ, ಪದಾರ್ಥ, ದೇಹ ಹಾಗೂ ಕಾಲ ಶುದ್ಧಿಗಳ ಕಡೆಗೆ ಸರ್ವರನ್ನು ಆಕರ್ಷಿಸಿದ್ದಾರೆ. ಕುಲಗೆಟ್ಟ, ಅಡ್ಡದಾರಿಹಿಡಿದ ಅನೈತಿಕತೆಯನ್ನು, ದೂರದೃಷ್ಟಿಯಿಂದ ತಡೆದು, ಮುಂದೊದಗಬಹುದಾದ ಘೋರ ಪರಿಣಾಮಗಳ ಕಾಳಜಿಯಿಂದ, ಚಾರಿತ್ರ್ಯಹನನದಿಂದ ನಮ್ಮೆಲ್ಲರನ್ನು ಪಾರುಮಾಡಲು, ಜನಜಾಗೃತಿಯನ್ನುಂಟು ಮಾಡಲು ಸತತ ಕ್ರಿಯಾಶೀಲರಾಗಿದ್ದಾರೆ.

**ಸಾಮಾಜಿಕ ವಿಭಾಗ**

ವ್ಯಕ್ತಿ-ವ್ಯಕ್ತಿಗಳ ಸಮೂಹವೇ ಸಮಾಜ. ಅಲ್ಲಿ ವ್ಯಕ್ತಿಯು ಪ್ರಾಮುಖ್ಯ ಘಟಕ. ಯಾವ ವ್ಯಕ್ತಿಯು ಪರಿಪೂರ್ಣನಲ್ಲ. ತಪ್ಪು ಮಾಡುವದು ಮಾನವನ ಸಹಜ ಗುಣ. ಅದನ್ನು ಒಪ್ಪಿಕೊಂಡು ತಿದ್ದಿಕೊಳ್ಳುವದು ವ್ಯಕ್ತಿತ್ವ ವಿಕಾಸದ ಕುರುಹು; ಅದುವೆ ನಿತ್ಯ ನಿರೀಕ್ಷಣೆ. 'ಪ್ರತ್ಯಹಂ ಪ್ರತ್ಯವೇಕ್ಷತ' ಎಂಬ ಸೂತ್ರರೂಪದ ಪ್ರಾರಂಭದ ವಾಕ್ಯದಂತೆ ಪ್ರತಿದಿನವೂ ಪ್ರತಿಯೊಬ್ಬ ವ್ಯಕ್ತಿ ತಾನು ಗೈದ ಕಾರ್ಯಗಳ ಒಳಿತು-ಕೆಡಕುಗಳ ಸಮಾಲೋಚನೆ ಮಾಡಬೇಕು. ಹೀಗೆಯೆ ಸಾಮಾಜಿಕ ಜೀವನದಲ್ಲಿ ಒಳಿತು-ಕೆಡಕುಗಳು, ಸುಖ-ದುಃಖಗಳು ಒಳಗೊಂಡಿವೆ. ಸಮಾಜ ಚಿಂತನೆಯೆ ಲಿಂಗಧ್ಯಾನ. ಅದರ ಸೇವೆಯು ಲಿಂಗಪೂಜೆಯು ಎಂಬ ವಿಚಾರಗಳು ನೂತನ ಸೇವೆ-ಪೂಜೆಗಳ ವ್ಯಾಖ್ಯಾನಗಳಾಗಿವೆ. ಸಮಾಜಸೇವೆಯಲ್ಲಿ ತೊಡಗಿದಾಗ ಕಷ್ಟಗಳು, ನಿಂದೆಗಳು, ಅಪವಾದಗಳು, ಅಸೂಯೆಗಳು ಬರುವದು ಸಹಜ. "ಸದ್ಯಃ ಸಮಾಜಸೇವಾಯಾಃ ಪದ್ಧತಿಃ ಕೀದೃಶಿ ಭವೇತ್" ಈಗ ಸಮಾಜಸೇವಾ ಪದ್ಧತಿಯು ಹೇಗಿರಬೇಕು? ವೈರಾಗ್ಯನಿಧಿ ಅಕ್ಕಮಹಾದೇವಿಯವರು ಹೇಳಿದಂತೆ ಲೋಕದೊಳಗೆ ಹುಟ್ಟಿದ ಬಳಿಕ ಕೋಪವ ತಾಳದೆ, ಸಮಾಧಾನಿಯಾಗಿ, ಆತ್ಮಸಂಯಮವನ್ನು ಅಳವಡಿಸಿಕೊಳ್ಳಬೇಕು. ಸಮಾಜ ಸೇವಕರಿಗೆ ಆತ್ಮಾನುಸಂಧಾನ, ಸಮಾಜ ಸುಧಾರಣೆಗಳೆರಡು ಮುಖ್ಯಗುರಿಗಳು. ಅವರಿಗೆ ಅಂತಃಕರಣ ಪೂರ್ವಕ ಸಾಮಾಜಿಕ ಕಳಕಳಿ, ಕೋಪನಿವಾರಣೆ, ತಾಳ್ಮೆ, ಧೈರ್ಯ, ಸಮತ್ವ, ಸಮ್ಯಕ್ ಹಾಗೂ ಬಹುದೂರ ದೃಷ್ಟಿಗಳಿರಬೇಕಾಗುತ್ತದೆ. ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ,

ಚಿತ್ತದಲ್ಲಿ ನಿರಪೇಕ್ಷೆ, ಭಾವದಲ್ಲಿ ಬತ್ತಲೆ, ಅಂತರಂಗದಲ್ಲಿ ಅರಿವುಕರಿಗೊಂಡು, ಅವಗುಣಗಳು ಅಸ್ತಿತ್ವವಳಿದು, ಭಕ್ತಿ-ಜ್ಞಾನ-ಕ್ರಿಯೆಗಳ ಸಂಗಮವಾಗಬೇಕಾಗುತ್ತದೆ.

ಲಿಂ. ಹಾನಗಲ್ಲ ಕುಮಾರಸ್ವಾಮಿಗಳವರು ಸಮಾಜಸೇವೆ, ಆತ್ಮಶಕ್ತಿವಿಕಾಸಗಳ ಭದ್ರಬುನಾದಿಗಾಗಿ ಶಿವಯೋಗಮಂದಿರವನ್ನು ಸ್ಥಾಪಿಸಿದರು. ಲಿಂಗೈಕ್ಯರಾಗುವ ಮುನ್ನ "ಬಸವಾದಿ ಪ್ರಮಥರ ನಿಂದೆಯನ್ನು ಯಾರಾದರು ಮಾಡಿದರೆ ಅದನ್ನು ಸಹಿಸಬಾರದು, ಅದಕ್ಕೆ ತಕ್ಕ ರೀತಿಯಲ್ಲಿ ಪ್ರತಿಭಟಿಸಬೇಕು" ಎಂಬುದು ಸ್ಮರಣೀಯ ಪಂಚಾಚಾರಗಳಲ್ಲಿ ಒಂದಾದ ಗಣಾಚಾರದ ಪ್ರತಿಪಾದನೆಯಿದೆ. ಸಮಾಜದ ಸ್ಥಿತ್ಯಂತರಗಳ, ಸೂಕ್ಷ್ಮನಾಡಿಗಳ ಮಿಡಿತವಿದೆ, ಸ್ಪಂದನವಿದೆ.

ಸಮಾಜಸೇವೆಯನ್ನು ಎಂತು ಮಾಡಬೇಕು? ಹೇಗೆ ಮಾಡಬೇಕು? ಎಂಬ ಪ್ರಶ್ನೆಗಳಿಗೆ ನಿಶ್ಚಿತ ಉತ್ತರಗಳು ಲಭ್ಯವಿಲ್ಲ. ಯಾಕಂದರೆ ಅದರಲ್ಲಿ ತೊಡಗಿದವರಿಗೆ ಅನೇಕ ತೊಂದರೆಗಳನ್ನು, ಅಪಪ್ರಚಾರಗಳನ್ನು, ಭಿನ್ನಾಭಿಪ್ರಾಯಗಳನ್ನು ತಂದೊಡ್ಡುವರು. ಅವೆಲ್ಲವುಗಳನ್ನು ಉರಿಬರಲಿ, ಸಿರಿಬರಲೆಂದು ಧೈರ್ಯ-ವಿಶ್ವಾಸಗಳಿಂದ ಎದುರಿಸಬೇಕು. ಸರ್ವಸ್ವವನ್ನು ಸರ್ವಾಂತರ್ಯಾಮಿಗೆ ಸಮರ್ಪಿಸಿ ಸೇವೆಗೆ ಸನ್ನದ್ಧರಾಗಬೇಕಾಗಿದೆ. ಅಭಿಮಾನಧನವನ್ನು ಬಂಡವಾಳಾಗಿರಿಸಿಕೊಂಡು ಮುನ್ನುಗ್ಗಬೇಕಾಗಿದೆ. ರಾಜಕೀಯವಾಗಿ, ಸಾಮಾಜಿಕವಾಗಿ ಮಹತ್ತರ ಬದಲಾವಣೆಗಳಾಗುತ್ತಿರುವ ಇಂದಿನ ವಿಷಮ ಪರಿಸ್ಥಿತಿಯಲ್ಲಿ ಸಂಕುಚಿತ ವಿಚಾರವನ್ನು ಬಿತ್ತಬಾರದು. ಸಮಾಜಕ್ಕೆ ಭಾರವಾಗಿರಬಾರದು. "ಸಮಾಜ ವಿಚ್ಛಿದ್ರಕಾರಿಣೀ ಪ್ರವೃತ್ತಿರ್ನಯೋಗ್ಯಾಃ" ನಮ್ಮಿಂದ ರಚನಾತ್ಮಕ ಕ್ರಿಯೆಗಳನ್ನು ಅನುಷ್ಠಾನಗೊಳಿಸಲಾಗದಿದ್ದರೂ ಅಡ್ಡಿಯಿಲ್ಲ. ಆದರೆ ಧ್ವಂಸಾತ್ಮಕ ಪ್ರವೃತ್ತಿಗಳಲ್ಲಿ ತೊಡಗಬಾರದು. ಶಿಕ್ಷಿತರಿಂದ, ಬುದ್ಧಿಜೀವಿಗಳಿಂದ ಸಮಾಜದಲ್ಲಿ ದಿನದಿನಕ್ಕೂ ವಿಚ್ಛಿದ್ರಕಾರಿ ಶಕ್ತಿಗಳು ಪ್ರವರ್ಧಮಾನವಾಗುತ್ತ ಸಾಗಿವೆ. ಇದೊಂದು ದುರಂತ, ದುರ್ದೈವ. ನಡೆಯೊಂದು ಪರಿ, ನುಡಿಯೊಂದು ಪರಿ. ಒಳಗೆ ಕುಟಿಲ ಹೊರಗೆ ವಿನಯವಾದರೆ ಸಮಾಜಸುಧಾರಣೆ ಕನಸಾಗುವದು. ಆಧ್ಯಾತ್ಮಿಕ ಭಾವನೆ, ಸಹಜತೆಯ ಸಮ್ಯಕ್ ಜ್ಞಾನಗಳರಿವು ಮೂಡಿ ಬರಬೇಕಾಗಿದೆ. ಸಮಾಜದ ನಿಷ್ಕಾಮ ಸೇವೆಯಿಂದ ಆತ್ಮಶಾಂತಿ, ಸಾಮಾಜಿಕ ಪ್ರಜ್ಞೆ, ಅರುಹಿನ ಬೆಳಕು, ಮನೋದೌರ್ಬಲ್ಯಗಳ ನಿರಸನ, ಚಿತ್ತಸ್ಥಿರ, ಆತ್ಮೀಯತೆ, ಕರ್ತವ್ಯನಿಷ್ಠೆ, ಭಾವಶುದ್ಧಿ, ಬಾಂಧವ್ಯ, ನಿಷ್ಕಲ್ಮಷಗಳು ತಾವಾಗಿಯೆ ಮೂಡಿಬರುವವು. ಅದರಲ್ಲಿಯೆ ಸಮಾಜದ ಹಿತಗಳಡಗಿವೆ. ಸಮಾಜೋನ್ನತಿಯ ಗತಿಗಳಿವೆ. ಪೂಜ್ಯ ಜಗದ್ಗುರುಗಳವರು ಉಪಕಾರಪಡೆದವರು ಅನ್ಯಾಯ ಬಗೆದರು ಒಳಗೊಳಗೆ ನುಂಗಿದ್ದಾರೆ. ಸಮಾಜಜೀವನದಲ್ಲಿಯ ಕಂಡುಂಡ ಅನುಭವಗಳಲ್ಲಿಯ ಸಹಜತೆಯು ಮೈವೆತ್ತು ಭಾವಮಯರೂಪತಾಳಿವೆ. ಕ್ಷೇತ್ರದಲ್ಲಿ ಧುಮುಕಿ, ಎಡರು-ತೊಡರುಗಳನ್ನು ಹೋಗಲಾಡಿಸುತ್ತ, ಈಸಬೇಕು, ಇದ್ದು ಜೈಸಬೇಕೆಂಬ ಮನೋಸ್ಥೈರ್ಯಗಳಿಂದ ಜೀವನದುದ್ದಕ್ಕೂ ಈಸಿ,

ಜಯವನ್ನು ಪಡೆದಿದ್ದಾರೆ. ನೀಲಕಂಠರಾಗಿದ್ದಾರೆ. ಸಮಾಜೋದ್ಧಾರದ ಆದರ್ಶ ಮಾರ್ಗದರ್ಶಕರಾಗಿದ್ದಾರೆ.

**ರಾಷ್ಟ್ರೀಯ ವಿಭಾಗ**

ರಾಷ್ಟ್ರದ ಹಲವು ರಂಗಗಳಲ್ಲಿಯ ಅನೇಕ ಸಮಸ್ಯೆಗಳಿಗೆಲ್ಲ ಆರ್ಥಿಕಸಮಸ್ಯೆಯು ಮಹತ್ವಪೂರ್ಣವಾಗಿದೆ. ಎಲ್ಲ ಸಮಸ್ಯೆಗಳನ್ನು ಬಗೆಹರಿಸಲು ಬಹಳ ಸಮಯಬೇಕಾಗುವದು. ದೇಶದಲ್ಲಿರುವ ಅನೇಕ ಸಾಮಾಜಿಕ ಬಿಗಿತಗಳು, ಕಾನೂನು ಶಿಸ್ತಿಗೆ ಸಂಬಂಧಿಸಿದ ಸಮಸ್ಯೆಗಳು, ಕೋಮುಗಲಭೆಗಳು ಇತ್ಯಾದಿ ಸಮಸ್ಯೆಗಳಿಗೆ ಮೂಲ ಕಾರಣ ದೇಶದಲ್ಲಿ ಹೆಚ್ಚುತ್ತಿರುವ ನಿರುದ್ಯೋಗ ಮತ್ತು ಅದು ತಂದಿರುವ ಹತಾಶೆ, ಆಲಸ್ಯತನಗಳು, ಅತೃಪ್ತಿಗಳು. ಇವೆಲ್ಲವುಗಳಿಗೆ ಸತ್ಯ ಶುದ್ಧ ಕಾಯಕವೊಂದೆ ಪರಿಹಾರವಾಗಿದೆ. ಪ್ರತಿಯೊಬ್ಬನು ತನ್ನ ಪಾಲಿನ ಕರ್ತವ್ಯಗಳನ್ನು ಪಾಲಿಸಿದಲ್ಲಿ, ರಾಷ್ಟ್ರಶಕ್ತಿ ಹೆಚ್ಚುವದು. ರಾಷ್ಟ್ರ ಸಮೃದ್ಧಿಗೊಂಡು ಇನ್ನುಳಿದ ರಾಷ್ಟ್ರಗಳೊಡನೆ ಸರಿಸಮವಾಗಿರಲು ಸಹಾಯಕವಾಗುವದು. ಕಾಯಕದಿಂದ ರಾಷ್ಟ್ರದಲ್ಲಿಯ ಸಮಸ್ಯೆಗಳಿಗೆ ಅಂತಿಮ ಪರಿಹಾರವೆಂಬುದು ಪ್ರಾಯೋಗಿಕ ರೂಪವಾಗಿ ಕಂಡು ಬಂದ ಸತ್ಯದ ಸ್ವರೂಪ ಕಾಯಕವೆ ದೇವರು. ಸರಕಾರದ ಕೆಲಸ ದೇವರ ಕೆಲಸವೆಂಬುದಾಗಿದೆ. ಜಗದ್ಗುರುಗಳವರು "ಕಾಯಕ ಏವ ಕೈಲಾಸಃ" ಹಾಗೂ "ಸಮಸ್ಯಾ ಪರಿಹಾರೋ ಭವೇತ್ ಕಾಯಕನಿಷ್ಠಯಾ" ಎಂದು ಸ್ಪಷ್ಟವಾಗಿ ರಾಷ್ಟ್ರೀಯ ಸಮಸ್ಯೆಯ ಸೂಕ್ಷ್ಮಾತಿಸೂಕ್ಷ್ಮ ಅಂಶಗಳನ್ನು ವಿಶ್ಲೇಷಿಸಿ, ಚರ್ವಿತಚರ್ವಣಗೈಯ್ದು, ಜನರ ಆವಶ್ಯಕತೆಗಳಿಗೆ ಸ್ಪಂದಿಸಿ, ಸ್ವಚ್ಛ ಹಾಗೂ ಪ್ರಾಮಾಣಿಕತೆಗಳಿಂದ, ಮೂಲಭೂತ ವಿಷಯಗಳನ್ನೆಲ್ಲಾ ಅಭ್ಯಸಿಸಿ, ಸೈದ್ಧಾಂತಿಕ ಚೌಕಟ್ಟಿನ ಮೇಲೆ ಕಾಯಕದಿಂದಲೆ ಎಲ್ಲ ಸಮಸ್ಯೆಗಳು ಪರಿಹಾರವಾಗುವವೆಂದು ಅಭಿವ್ಯಕ್ತಗೊಳಿಸಿದ್ದಾರೆ. ಪ್ರಜೆಗಳಲ್ಲಿ ಭಿನ್ನಾಭಿಪ್ರಾಯಗಳು, ತರತಮ-ಸ್ವಾರ್ಥ ಸಂಕುಚಿತ ಭಾವನೆಗಳು, ಸ್ವಪ್ರತಿಷ್ಠೆಗಳು ಹೆಚ್ಚುತ್ತಲಿವೆ. ತತ್ವಜ್ಞಾನವು ವಿವಾದಾಸ್ಪದಕ್ಕೆ ಒಳಗಾಗಿದೆ. ಜಾತೀಯತೆಯಿಂದ ದ್ವೇಷಾದಿಗುಣಗಳು ಉದ್ಭವಿಸಿ ನಾಶದತ್ತ ರಾಷ್ಟ್ರ ಸಾಗಿದೆ. ಸಂವಿಧಾನಾತ್ಮಕ ಬಿಕ್ಕಟ್ಟುಗಳು ತಲೆದೋರಿವೆ. ಸಮಾನತೆ, ಬಂಧುತ್ವ-ಸಾರ್ವಭೌಮತ್ವಗಳು ಸತ್ವಹೀನವಾಗಿವೆ. ಜಾತೀಯತೆಯ ಅಟ್ಟಹಾಸ, ಧರ್ಮ-ಧರ್ಮಗಳಲ್ಲಿಯ ತಿಕ್ಕಾಟಗಳು ಸಾಂಗವಾಗಿವೆ. ನಾವೆಲ್ಲರೂ ಭಾರತ ಮಾತೆಯ ಮಕ್ಕಳೆಂಬುದು, ಪರಸ್ಪರ ಸ್ನೇಹ ಸೌಹಾರ್ದತೆಗಳಿಂದ ಕೂಡಿಕೊಂಡು ಬಾಳಬೇಕೆಂಬುದು ಮೃಗಜಲವಾಗಿದೆ. ಜೀವನ ನಿರ್ವಹಣೆಯ ಬೆಲೆಯೇರಿಕೆ, ಮಾಲಿನ್ಯತೆಗಳಿಂದ ಕಠಿಣವಾಗಿ ಪರಿಣಮಿಸಿದೆ.

'ವಿವಿಧತೆಗಳಲ್ಲಿ ಐಕ್ಯತೆ'ಯೆಂಬುದು ರಾಷ್ಟ್ರದ ವೈಶಿಷ್ಟ್ಯ. ಜಾತಿ, ವರ್ಗ, ಭಾಷೆ, ಧರ್ಮಗಳೆಲ್ಲವುಗಳಲ್ಲಿ ಭಾವೈಕ್ಯತೆ ಮೂಡಿಬರಬೇಕಾಗಿದೆ. ಸರ್ವೇಜನಾಃ ಸುಖಿನೋಭವಂತು' ಎಂಬುದು ಸರ್ವರ ಮಂತ್ರವಾಗಬೇಕಾಗಿದೆ. "ಸರ್ವೇ ಮಾನವಾಃ ಸಹೋದರಾಃ" ಎಂಬುದರಲ್ಲಿಯೂ ಇದು ಒಳಗೊಂಡಿದೆ. 'ಲೋಕವೇ ನನ್ನ ಮನೆ ಮಾನವ ಕುಲವೆ ನನ್ನ ಕುಟುಂಬ' ಎಂಬ ಕೌಟುಂಬಿಕ ಜೀವನದಲ್ಲಿಯ ಅಪಾರಪ್ರೇಮ-ಮಧುರ ಬಾಂಧವ್ಯಗಳು

ಹಾಸುಹೊಕ್ಕಾಗಲಾಗಬೇಕಾಗಿದೆ. ರುಧಿರೋದ್ಗಾರಿ, ರಕ್ತಾಕ್ಷಿ ಸಂವತ್ಸರಗಳು ನಾಮಸಾರ್ಥಕ್ಯ ಪಡೆದಿವೆ. ದ್ವೇಷದ ದಳ್ಳುರಿಯ ಆರ್ಭಟ, ಮದ-ಮತ್ಸರಗಳ ತಿಕ್ಕಾಟ, ಅನೇಕ ಧರ್ಮಾಚರಣೆಗಳ ಕಚ್ಚಾಟ, ಜಾತೀಯತೆಯ ಸುಂಕುರೋಗದ ಅಲೆದಾಟಗಳು ನಿರ್ಭಯವಾಗಿ ಮುಂದುವರಿಯುತ್ತಲಿವೆ. ಹೀಗೆಲ್ಲ ಹೇಳುವಾಗ ಪೂಜ್ಯ ಜಗದ್ಗುರುಗಳಲ್ಲಿರುವ ಯುಗ ಚೇತನ, ಸಂವತ್ಸರಗಳ ಸಂಸ್ಕಾರಗಳ ಪೂರ್ಣ ಪರಿಣತಿಗಳು ಗೋಚರಿಸುವವು. ರಾಷ್ಟ್ರವು ಸಮಯದ ಕೂಸಾಗಿದೆ. "ಸಂಘೆ ಶಕ್ತಿಃ ಕಲೌಯುಗೆ" ಎಂಬುದು ಸಾಂಘಿಕ ಶಕ್ತಿಯ ಅತ್ಯಾವಶ್ಯಕತೆಯನ್ನು ಎತ್ತಿತೋರಿಸುತ್ತದೆ. ರಾಷ್ಟ್ರಧರ್ಮದ ಸಂಘಟನೆಗಾಗಿ ಸಹಕಾರ, ಧ್ಯೇಯ ಧೋರಣೆಗಳು ರೂಪುಗೊಳ್ಳಬೇಕಾಗಿದೆ. ಬುದ್ಧಿಯೊಡನೆ ಶ್ರದ್ಧೆಯು ಬೆಳೆದಾಗ ರಾಷ್ಟ್ರಕ್ಕೆ ಶ್ರೇಯಸ್ಕರವು, ವೈಯಕ್ತಿಕ ಆರೋಪ, ಪ್ರತ್ಯಾರೋಪ, ಚಾರಿತ್ರ್ಯಹನನ, ರಾಷ್ಟ್ರಪ್ರಗತಿಗೆ ಅಡ್ಡಿಯಾಗುವ ಅಪಾಯಕಾರಿ ಪ್ರವೃತ್ತಿಗಳಿಗೆ ಜಗದ್ಗುರುಗಳವರು ಸುಶಿಕ್ಷಿತವಾದ, ನಾಗರಿಕವಾದ, ಸಾಂಘಿಕವಾದ ಧಾರ್ಮಿಕ ಮನೋಭಾವ ಅತ್ಯಗತ್ಯವೆಂದಿದ್ದಾರೆ. ಅಂತಹ ವೈಜ್ಞಾನಿಕ ಸತ್ಯವುಳ್ಳ, ವಿವೇಚನಾಯುಕ್ತವಾದ ಅರ್ಥವಂತಿಕೆಯಿಂದ ಕೂಡಿದ ಧರ್ಮದ ನೆಲೆಗಟ್ಟಿನ ಮೇಲೆ ಪರಿಶುದ್ಧ ರಾಷ್ಟ್ರೀಯತೆಯ ಬೀಜ ಕೂಡಿ ಬೆರೆತು, ಬೆಳೆದು ಸುಂದರವಾದ ಹೂವನ್ನು, ಘಮ್ಮನೆಯ ಕಂಪನ್ನು, ಸವಿಯಾದ ಹಣ್ಣನ್ನು ನೀಡಲೆಂಬುದು ಪೂಜ್ಯ 'ಮೂಜಗಂ'ರವರ ಶುಭಾಕಾಂಕ್ಷೆ. ಅಂತಹ ಹೂಗಳ ಬಳ್ಳಿಯಂತಿರುವ ಗ್ರಂಥದಲ್ಲಿಯ ಅವರ ಶುಭಾಶೀರ್ವಾಣಿಗಳು ಕಲಿಯುಗದಲ್ಲಿರಬೇಕಾದ ಸಾಂಘಿಕ ಶಕ್ತಿಗಳನ್ನು ಸಂಘಟಿಸುತ್ತವೆಂಬುದು ಸರ್ವರ ಬಯಕೆಯಾಗಿದೆ.

# ಪೂರ್ಣಜ್ಞ ವಚನಗಳು

ಸಾಹಿತ್ಯ ಪ್ರಕಾರ : ತ್ರಿಪದಿ
ಮೊದಲ ಮುದ್ರಣ : ೧೯೯೦
ರಚನೆಯ ವಯಸ್ಸು : ೬೦
ರಚನಾಸ್ಥಳ : ಹುಬ್ಬಳ್ಳಿ

ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ—೩೧೭

# ಪೂರ್ಣಜ್ಞ ವಚನಗಳು

ಕೃತಿಕರ್ತರು

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು
ಮೂರುಸಾವಿರಮಠ, ಹುಬ್ಬಳ್ಳಿ

೧೯೯೧

ಪ್ರಕಾಶಕರು

ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ
ಮೂರುಸಾವಿರಮಠ, ಹುಬ್ಬಳ್ಳಿ

"POORNAJNA VACHANAGALU"
A Collection of Kannada Tripadis, Composed By H. H. Jagadguru Gangadhar Swamiji of Moorusavirmath, Hubli.

Published By:
Jagadguru Gangadhar Dharmapracharak Mandal,
Moorusavirmath HUBLI-28



Cover disign Disign'creaters

Price: 80-00

First Edition: 1991
1000 copies

Printed in
forty days

Printed At:
Near Kumbar Gardi, Gangapur Oni
Twaritha Mudranalaya, GADAG

# ಮುನ್ನುಡಿ

ಕರ್ನಾಟಕದ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಇತಿಹಾಸದಲ್ಲಿ ಹುಬ್ಬಳ್ಳಿಯ ಶ್ರೀ ಮೂರು ಸಾವಿರಮಠದ ಪಾತ್ರ ಮೊದಲಿನಿಂದಲೂ ಗಮನಾರ್ಹವಾದುದು. ಈಗಂತೂ ಅದು ತನ್ನ ಬಹುಮುಖ ಸಾಧನೆಯಿಂದ ಅತ್ಯಂತ ಮಹತ್ವಪೂರ್ಣವಾದ ಸ್ಥಾನವನ್ನು ಪಡೆದಿದೆ. ಇದಕ್ಕೆ ಕಾರಣರಾದವರು ಅದರ ಈಗಿನ ಪೀಠಾಧಿಪತಿಗಳಾದ ಜಗದ್ಗುರು ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು. ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗಿ ಅವರು ಹಮ್ಮಿಕೊಂಡಿರುವ ಹಲವಾರು ಕಾರ್ಯಯೋಜನೆಗಳನ್ನೂ, ಕಟ್ಟಿ ಬೆಳೆಸುತ್ತಿರುವ ಶಾಲಾಕಾಲೇಜುಗಳನ್ನೂ, ಅನೇಕ ಸಂಸ್ಥೆಗಳನ್ನೂ ಗಮನಿಸಿದಾಗ, ಒಂದು ಮಠ ಇಷ್ಟೆಲ್ಲವನ್ನೂ ಸಾಧಿಸುವದು ಸಾಧ್ಯವೇ ಎಂದು ಅಚ್ಚರಿಗೊಳ್ಳುವಂತಾಗುತ್ತದೆ. ಸರ್ವಸಮಾನತೆಯ ಮಾನವೀಯ ಭಾವನೆಯಿಂದ ಕೂಡಿದ ಅವರ ಸಾಮಾಜಿಕ ಕಳಕಳಿ, ಕಾಯಕ ನಿಷ್ಠೆ, ದೂರದೃಷ್ಟಿ, ಕರ್ತೃತ್ವಶಕ್ತಿಗಳಿಂದ ಕರ್ನಾಟಕದ ಆ ಭಾಗದಲ್ಲಿ ಬಹಳ ದೊಡ್ಡ ಕೆಲಸ ನಡೆದಿದೆ; ನಡೆಯುತ್ತಿದೆ. ನೂರಾರು ಪುಸ್ತಕಗಳ ಪ್ರಕಟನೆಯಿಂದ ಹಿಡಿದು ಸಾವಿರಾರು ರೋಗಿಗಳ ನೋವಿಗೆ ಮದ್ದನ್ನೀಯುವ ವ್ಯವಸ್ಥಿತವಾದ ಆಸ್ಪತ್ರೆಯ ನಿರ್ವಹಣೆಯವರೆಗೂ ಅವರ ಕಾರ್ಯವ್ಯಾಪ್ತಿ ಹಬ್ಬಿದೆ.

ಹೀಗೆ ಪೂಜ್ಯ ಜಗದ್ಗುರುಗಳು ಬಿಡುವಿಲ್ಲದ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿ ಕೊಂಡಿದ್ದರೂ ಆಂತರಿಕವಾಗಿ ಅವರದು ಕವಿಹೃದಯ. ಲೌಕಿಕ ಕರ್ತವ್ಯಗಳ ಹಲವಾರು ಹೊಣೆಗಾರಿಕೆಯ ಮಧ್ಯದಲ್ಲಿಯೂ ಅವುಗಳಿಂದ ದೂರ ನಿಂತು ಸಾಕ್ಷೀಭೂತವಾಗಿ ವೀಕ್ಷಿ ಸುವ ಧ್ಯಾನಶೀಲತೆ ಮತ್ತು ಆ ಪರಿಭಾವನೆಯನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತ ಗೊಳಿಸುವ ಪ್ರತಿಭೆ ಅವರಲ್ಲಿದೆ. "ಮೂಜಗಂ" ಎಂಬ ಕಾವ್ಯನಾಮದಿಂದ ಈಗಾಗಲೇ ಅನೇಕ ಕೃತಿಗಳನ್ನು ರಚಿಸಿದ್ದಾರೆ; ಅನೇಕ ವಚನಗಳನ್ನೂ ಬರೆದಿದ್ದಾರೆ. ಅವರ ವಚನ ಗಳ ಸಂಗ್ರಹ, ಗ್ರಂಥರೂಪದಲ್ಲಿ ಪ್ರಕಟವಾಗಿದೆ. ಕೆಲವು ವಚನಗಳು ಆಂಗ್ಲಭಾಷೆಗೂ ಅನುವಾದಗೊಂಡಿವೆ.

ಅವರ ಈ ಸಾಹಿತ್ಯ ಕೃಷಿಗೆ ಕಳಶವಿಟ್ಟಂತೆ ಈಗ ಹೊರಬರುತ್ತಿದೆ. ಈ "ಪೂರ್ಣಜ್ಞ ವಚನಗಳು" ಮಹಾಕೃತಿ. ಮಠದಿಂದ ಪ್ರಕಟವಾಗುವ 'ಪರಂಜ್ಯೋತಿ' ಮಾಸಪತ್ರಿಕೆಯಲ್ಲಿ ಇಲ್ಲಿನ ಅನೇಕ ತ್ರಿಪದಿಗಳು ಈಗಾಗಲೇ ಪ್ರಕಟವಾಗಿ ಓದುಗರ ಗಮನ ವನ್ನು ಸೆಳೆದಿವೆ. ಈ ತ್ರಿಪದಿಗಳ ಸಾಧನೆ ಸಹೃದಯರಲ್ಲಿ ಕುತೂಹಲವನ್ನು ಕೆರಳಿಸಿವೆ. ಹಿಂದೊಮ್ಮೆ ಸರ್ವಜ್ಞ, ತನ್ನ ತ್ರಿಪದಿಗಳಿಂದ ಕನ್ನಡ ಲೋಕದಲ್ಲಿ ಅನುಭವ ತರಂಗಗಳನ್ನು ಹರಿಯಬಿಟ್ಟ. ವಾಮನಾಕಾರವಾಗಿ ಬಂದ ಆತನ ತ್ರಿಪದಿಗಳು ತ್ರಿವಿಕ್ರಮಸ್ವರೂಪವಾಗಿ ಬೆಳೆದು ಜನಮನವನ್ನು ಆಕ್ರಮಿಸಿ ಶ್ರೀಮಂತಗೊಳಿಸಿದವು. ಇಂದಿಗೂ ಆತ ಜನತೆಯ

ಕವಿಯಾಗಿ ಏಕಮೇವಾದ್ವಿತೀಯ ಧ್ರುವತಾರೆಯಾಗಿ ಉಳಿದಿದ್ದಾನೆ. ಬಹುಶಃ ಸರ್ವಜ್ಞನಾದ ಮೇಲೆ ಆ ಪ್ರಮಾಣದಲ್ಲಿ ತ್ರಿಪದಿಗಳನ್ನು ವಿವಿಧ ಲೋಕಾನುಭವವಾಹಕವನ್ನಾಗಿ ಬಳಸಿಕೊಂಡ ಏಕಮೇವ ಉದಾಹರಣೆಯೆಂದರೆ ಪ್ರಕೃತ "ಪೂರ್ಣಜ್ಞ ವಚನಗಳು" ಆಧುನಿಕ ಯುಗದಲ್ಲಿ ತ್ರಿಪದಿಯಲ್ಲಿ ಒಂದು ಮಹಾಕಾವ್ಯವೇ ಬಂದಿದೆ ಎಂಬುದು ನಿಜ. ಆದರೆ ಜಯದೇವಿತಾಯಿ ಲಿಗಾಡೆಯವರ ಮಹಾಕಾವ್ಯದ ಆ ತ್ರಿಪದಿಗಳಿಗೂ ಪೂರ್ಣಜ್ಞ ವಚನದ ತ್ರಿಪದಿಗಳಿಗೂ ಇರುವ ಅಂತರ, ಅವುಗಳ ವೈವಿಧ್ಯ, ವೈಶಾಲ್ಯ ವ್ಯಾಪ್ತಿಗಳನ್ನು ಕುರಿತದ್ದು. ಸಿದ್ಧರಾಮನ ವ್ಯಕ್ತಿತ್ವವನ್ನು ವ್ಯಕ್ತಪಡಿಸುವ ಭಾವುಕ ಮತ್ತು ಅನುಭಾವಿಕ ನಿಲವಿನಲ್ಲಿ ಅಲ್ಲಿ ತ್ರಿಪದಿಗಳು ಮೂಡಿಬಂದರೆ ಇಲ್ಲಿ ಅವು ಲೌಕಿಕ ಕಾರ್ಯಗಳ ಹಲವು ಸ್ತರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಕ್ರಿಯಾಶೀಲ ಸಾಧಕ ಚೇತನದ ಚಿಂತನಶೀಲತೆಯ ಅಭಿವ್ಯಕ್ತಿಯನ್ನು ಕಾಣುತ್ತೇವೆ.

ಇಲ್ಲಿನ ವಚನಗಳ ಹರವು ತುಂಬಾ ವಿಸ್ತಾರವಾದುದು; ಇಡೀ ಜೀವನವನ್ನೇ ವ್ಯಾಪಿಸುವಂತಹುದು. ಈ ಜೀವನ ಸಾಗರದಲ್ಲಿ ಗಂಭೀರವಾದ ಅಲೆಗಳಿರುವಂತೆ, ಆಳದಲ್ಲಿ ಹೊಳೆಯುವ ಮುತ್ತು ರತ್ನಗಳಿರುವಂತೆ, ಮೇಲೆ ಮೇಲೆ ತೇಲುವ ಕಡ್ಡಿಕಸಗಳೂ, ಗೊಳ್ಳೆ ಗೊರಚೆಗಳೂ ಕಪ್ಪೆಚಿಪ್ಪುಗಳೂ ವ್ಯಾಪಿಸಿವೆ. ಸಾರ್ವಜನಿಕ ಕಾರ್ಯಗಳಲ್ಲಿ ತೊಡಗಿರುವವರಿಗೆ ಇದರ ಅನುಭವ ಹೆಜ್ಜೆ ಹೆಜ್ಜೆಗೂ ಒದಗುತ್ತದೆ. ಪೂಜ್ಯ ಜಗದ್ಗುರುಗಳವರು ಇಂತಹ ಜನಹಿತ ಕಾರ್ಯಗಳ ಸಾರ್ವಜನಿಕ ಕ್ಷೇತ್ರದಲ್ಲಿ ನೇರವಾಗಿ ಧುಮುಕಿದವರು. ಅದರ ಆಳ–ಅಗಲ ಎತ್ತರ–ಬಿತ್ತರಗಳನ್ನು ಕಂಡವರು; ಸುಳಿ ಸೆಳವುಗಳ, ಮೀನು ಮೊಸಳೆಗಳ ಪರಿಣಾಮವನ್ನು ಉಂಡವರು. ಇದೆಲ್ಲದರಿಂದ ಪರಿಪಾಕಗೊಂಡ ಅವರ ಅನುಭವ ಇಲ್ಲಿ ತ್ರಿಪದಿಗಳ ರೂಪದಲ್ಲಿ ಹರಿದಿದೆ. ಮಾನವ ಸ್ವಭಾವದ ಒಳಿತು–ಕೆಡಕುಗಳು, ಪ್ರೇಮದ್ವೇಷಗಳು, ಆದರ್ಶ–ದೌರ್ಬಲ್ಯಗಳು, ಜೀವನದ ಏರಿಳಿತಗಳು, ಬೆಳಕು ಕತ್ತಲೆಗಳು, ಮೂಲಭೂತ ಮೌಲ್ಯಗಳು, ಇವುಗಳ ಹಿನ್ನೆಲೆಯಲ್ಲಿ ಬೆಳೆಯಬೇಕಾದ ಸಾಧಕ ಜೀವನ, ಹಾಗೆ ಬೆಳೆದ ಮಹಾಪುರುಷರ ಆದರ್ಶ, ಅದಕ್ಕೆ ಕಾರಣವಾಗುವ ಧರ್ಮ, ಕಲೆ, ಸಂಸ್ಕೃತಿಗಳ ಹಿರಿಮೆ, ಅವುಗಳಿಂದ ಉಂಟಾಗುವ ಇತಿ–ಮಿತಿಗಳು, ನಾಡು–ನುಡಿ, ರಾಷ್ಟ್ರಪ್ರಜ್ಞೆ—ಈ ಮೊದಲಾದ ನೂರಾರು ವಿಷಯಗಳ ಮೇಲೆ ಅನುಭವದ ಕ್ಷ–ಕಿರಣಗಳನ್ನು ಬೀರುತ್ತವೆ ಇಲ್ಲಿನ ತ್ರಿಪದಿಗಳು.

ಶರಣ ತತ್ವದ ಹಿನ್ನೆಲೆಯಲ್ಲಿ ತಮ್ಮ ಆಧ್ಯಾತ್ಮಿಕ ಸಾಧನೆಯನ್ನು ರೂಪಿಸಿಕೊಂಡ ಪೂಜ್ಯ ಜಗದ್ಗುರುಗಳು ಸಹಜವಾಗಿಯೇ ಆ ಧರ್ಮದ ಆಚರಣೆಯ ಸ್ವರೂಪವನ್ನು ತಮ್ಮ ಅನುಭಾವಿಕ ನುಡಿಗಳಿಂದ ನಿರೂಪಿಸಿದ್ದಾರೆ. ಪ್ರಾರಂಭದಲ್ಲಿಯೇ ಬರುವ 'ಶಿವಾದ್ವೈತ ದರ್ಶನ'ದಲ್ಲಿ ಇದನ್ನು ಕಂಡುಕೊಳ್ಳಬಹುದು. ಸುಮಾರು ೭೦೦ ಕ್ಕೂ ಹೆಚ್ಚು ತ್ರಿಪದಿಗಳಿಂದ ಇಲ್ಲಿ ಶಿವಾದ್ವೈತವನ್ನು ಪ್ರತಿಪಾದಿಸಲಾಗಿದೆ. ಹಿಂದಿನಿಂದ ಬಂದ ಶಾಸ್ತ್ರೀಯ ಚೌಕಟ್ಟನ್ನು ಇಲ್ಲಿ ಅವಲಂಬಿಸಿದ್ದರೂ ಅದು ಕೇವಲ ಶಾಸ್ತ್ರಜಡವಾಗಿಲ್ಲ.

ಸಾಧನೆಯ ಆಂತರಿಕ ದರ್ಶನ ಅಲ್ಲಲ್ಲಿ ಸಾಹಿತ್ಯವಾಗಿ ಮಿಂಚಿದೆ. ತ್ರಿಪದಿಗಳ ಕಿರುರೂಪದಲ್ಲಿ ಹಿರಿದಾದ ಅರ್ಥವನ್ನು ಹಿಡಿದಿಟ್ಟಿದೆ. ಅಂತಹ ಕೆಲವು ವಚನಗಳನ್ನು ಮಾದರಿಗಾಗಿ ಇಲ್ಲಿ ನೋಡಬಹುದು. ಷಟ್‌ಸ್ಥಲ ಮಾರ್ಗವನ್ನು ಕುರಿತು ವಿವೇಚಿಸುವಾಗ ಈ ತ್ರಿಪದಿ ಬರುತ್ತದೆ.

"ಜೀವನದಿ ಶಾಂತಿಯನು ಶಿವಜೀವ ಸಮರತಿಯ
ಭಾವದಲಿ ತೋರುವದೆ ಷಟ್‌ಸ್ಥಲ ತತ್ತ್ವ
ಜೀವಾಳವದುವೆ ಪೂರ್ಣಜ್ಞ."

ಎಂದು ಅದರ ಪರಮಗದಿತವ್ಯವನ್ನು ಗುರುತಿಸಿದ್ದಾರೆ. ಈ ನಿಲುವನ್ನು ಸಾಧಿಸುವ ಅಷ್ಟಾವರಣ ಮಾರ್ಗದಲ್ಲಿ ಗುರುವಿಗೆ ಮಹತ್ವದ ಸ್ಥಾನವಿದೆ. ಅಂತಹ ಗುರುವಿನ ಹಿರಿಮೆಯನ್ನು ಹೀಗೆ ಹೇಳಿದ್ದಾರೆ:

"ಸುರತರುವು ತರುವಲ್ಲ; ಸುರಧೇನು ಪಶುವಲ್ಲ.
ಪರುಷ ಪಾಷಾಣದೊಳಗಲ್ಲ, ನೋಡಯ್ಯ
ಗುರುವು ನರನಲ್ಲ ಪೂರ್ಣಜ್ಞ."

ಗುರುವನ್ನು ಸಾಮಾನ್ಯ ಮನುಷ್ಯನೆಂದು ಲಘುವಾಗಿ ಭಾವಿಸಬಾರದೆಂಬುದನ್ನು ಇದು ಹೇಳುತ್ತದೆ. ಇಲ್ಲಿ ಬರುವ ಸಾದೃಶ್ಯಗಳು ಚಿರಪರಿಚಿತವಾದರೂ ಇಲ್ಲಿ ಅವುಗಳನ್ನು ಬಳಸಿಕೊಂಡಿರುವ ರೀತಿ ಅರ್ಥವತ್ತಾಗಿದೆ.

'ಲಿಂಗಧಾರಣ ಸ್ಥಲ'ದಲ್ಲಿ ಇಷ್ಟಲಿಂಗದ ಮಹತ್ವವನ್ನು ಹೇಳುವಾಗ ಬರುವ ಈ ವಚನಗಳನ್ನು ಗಮನಿಸಬೇಕು:

"ಸತ್ತುಚಿತ್ತಾನಂದ ನಿತ್ಯಪರಿಪೂರ್ಣವಹ
ಸತ್ಯ ಪರವಸ್ತು ಕರದೊಳಿದ್ದ ವಂಗೆ
ಕುತ್ತೆಲ್ಲಿಯದು ಪೂರ್ಣಜ್ಞ?"

"ಜ್ಯೋತಿ ಮುಟ್ಟಿದ ಬತ್ತಿ ಜ್ಯೋತಿಯಾಗುವ ತೆರದಿ
ಜ್ಯೋತಿ ಲಿಂಗವದು ಮುಟ್ಟಿರುವ ಅಂಗವಿದು
ಜ್ಯೋತಿಯಾಗುವದು ಪೂರ್ಣಜ್ಞ."

ನೇರವಾದ ಸರಳವಾದ ಸುಪರಿಚಿತವಾದ ಮಾತುಗಳಿಂದಲೇ ಅಪರಿಚಿತ ಅನುಭವವನ್ನು ಧ್ವನಿಸುವ ಶಕ್ತಿಯನ್ನು ಇಂತಹ ವಚನಗಳಲ್ಲಿ ಕಾಣುತ್ತೇವೆ. ಭಕ್ತಸ್ಥಲದಲ್ಲಿ ಭಕ್ತಿಯ ಸ್ವರೂಪ ಮತ್ತು ಅದರ ಅಪೂರ್ವಶಕ್ತಿಯನ್ನು ಅನೇಕ ಮಾತುಗಳಲ್ಲಿ ಹಿಡಿದಿಟ್ಟಿದ್ದಾರೆ ಭಕ್ತ ಆಳವಡಬೇಕಾದರೂ ಅದಕ್ಕೊಂದು ಪೂರ್ವಸಿದ್ಧತೆಯ ಸಂಸ್ಕಾರ ಬೇಕೆಂಬುದನ್ನು ಹೇಳುತ್ತಾ ಈ ವಚನಗಳು ಬರುತ್ತವೆ:

"ಭವರೋಗವಿದ್ದವಗೆ ಶಿವಯೋಗ ಸಮನಿಪುದೆ?
ಭವರಾಗದಲ್ಲಿ ಬಳಲುತ್ತ ತಿರುಗುವಗೆ
ಶಿವಭಕ್ತಿಯೆಲ್ಲಿ ಪೂರ್ಣಾಜ್ಞ?"

"ಮನವೆಂಬ ನೀರೆರೆದು ಅರಿವೆಂಬ ಹೂ ಧರಿಸಿ
ತ್ರಿಣಯನಂ ಪೂಜಿಸುತ ಸೇವೆ ಮಾಡುವವ
ಘನಭಕ್ತನವನು ಪೂರ್ಣಾಜ್ಞ."

ಇತರ ಸ್ಥಲಗಳ ನಿರೂಪಣೆಯಲ್ಲಿಯೂ ಇಂತಹ ಮಾತುಗಳು ಉದ್ದಕ್ಕೂ ಸಹಜವಾಗಿ ಹೊರಹೊಮ್ಮಿರುವದನ್ನು ಗಮನಿಸಬಹುದು. ಪ್ರಾಣಲಿಂಗಿ ಸ್ಥಲದಲ್ಲಿ ಬರುವ:

"ಪ್ರಾಣಕ್ಕೆ ಪ್ರಾಣವಿರೆ ಪ್ರಾಣಲಿಂಗವು ಅದುವೆ
ತ್ರಾಣ ಜೀವಕ್ಕೆ ಸಮರಸವು ಭಾವಕ್ಕೆ
ಕಾಣುವುದು ನೋಡು ಪೂರ್ಣಾಜ್ಞ."

ಎಂಬ ವಚನ ಜೀವಕ್ಕೆ ತ್ರಾಣವನ್ನು ಕೊಡುವ ಪ್ರಾಣ ಲಿಂಗದ ಸ್ವರೂಪವನ್ನು ಧ್ವನಿಸುತ್ತದೆ. ಇಂತಹ ಉದಾಹರಣೆಗಳನ್ನು ಹೆಚ್ಚಾಗಿ ಬೆಳೆಸದೆ ಶರಣ ಐಕ್ಯಸ್ಥಳಗಳಿಂದ ಒಂದೊಂದನ್ನು ಮಾತ್ರ ಇಲ್ಲಿ ನೋಡಬಹುದು.

"ಶರಣ ಶಿವ ಸಂಸಾರಿ, ಶರಣ ವಿಭವ ವಿಹಾರಿ
ಶರಣನದು ಸರ್ವಸ್ವ ಅರ್ಪಣವು ನೋಡು
ಶರಣ ಸುಯಿಧಾನಿ ಪೂರ್ಣಾಜ್ಞ."

"ಒಳಗೆ ನೋಡಲು ಬಯಲು, ಹೊರಗೆ ನೋಡಲು ಬಯಲು,
ಒಳಮನವು ಬಯಲು ಭಾವೆಲ್ಲ ಬಯಲುಂಟು
ಬೆಳಕಿನಲಿ ಬೆಳಕುಂಟು ಪೂರ್ಣಾಜ್ಞ."

ಇಂತಹ ವಚನಗಳಿಂದ ಶಿವಾದ್ವೈತದಂತಹ ತಾತ್ವಿಕ ವಿವೇಚನೆಯೂ ಇಲ್ಲಿ ಶುಷ್ಕವಾಗದೆ ಆಸ್ವಾದ್ಯವಾಗಿದೆ. ಈ ಸಿದ್ಧಾಂತದ ಪಾರಿಭಾಷಿಕ ಶಬ್ದಗಳ ವಿವರಗಳನ್ನು ಕೊನೆಯಲ್ಲಿ ಕೊಟ್ಟಿದ್ದಾರೆ. ಅದು ಅಧ್ಯಯನಕ್ಕೆ ಅನುಕೂಲವಾಗಿದೆ ಎಂಬ ಮಾತು ನಿಜ. ಆದರೆ ಯಾವುದೇ ಸಿದ್ಧಾಂತ ಸಾರ್ಥಕವಾಗುವದು ಅದನ್ನು ಅನುಷ್ಠಾನದಲ್ಲಿ ತಂದು ಸಾಧಿಸಿ ತೋರಿಸಿದ ಆಧ್ಯಾತ್ಮಿಕ ಜೀವಂತಿಕೆಯಿಂದ. ಇಲ್ಲಿನ ಅನೇಕ ವಚನಗಳು ಅಂತಹ ಅನುಭಾವದ ಹೊಳಹನ್ನು ಬೆಳಗುತ್ತಿವೆ ಎಂಬುದಕ್ಕೆ ಈ ಕೆಲವು ವಚನಗಳೇ ಸಾಕ್ಷಿಯಾಗಿವೆ.

ತತ್ವವಿವೇಚನೆಯಲ್ಲಿಯೇ ಇಂತಹ ಆಂತರಿಕ ಅನುಭವದ ಕಾವ್ಯ ಸ್ಪರ್ಶವನ್ನು ಕಂಡರೆ ಇನ್ನೂ ಪ್ರಾರಂಭದಲ್ಲಿಯೇ ಬರುವ 'ಪ್ರಾರ್ಥನೆ' ಮತ್ತು 'ನಿವೇದನೆ'ಗಳಂತಹ ಕಡೆಯಲ್ಲಿ ಅದು ಭೋರ್ಗರೆದು ಹರಿಯುತ್ತದೆ; ಮಡುಗಟ್ಟಿ ನಿಲ್ಲುತ್ತದೆ. ವರ್ಣ ವಿನ್ಯಾಸದಿಂದ ಚಿಮ್ಮುತ್ತದೆ. ಗುಲುಕುತ್ತಿರುವುದು ಪ್ರಾರಂಭವಾಗುವ ಈ ಕೃತಿ ಗುರುಕೃಪೆಯನ್ನು

ಹಾರೈಸುತ್ತಾ ಅಂತರಂಗದ ಆಶಯ, ಅಭೀಪ್ಸೆ, ಆದರ್ಶ ಸಾಧನೆಗಳನ್ನು ತೋಡಿಕೊಳ್ಳುತ್ತದೆ.

"ಪೂರ್ಣಜ್ಞನೆಂದೊಡನೆ ಪೂರ್ಣದರಿವಿನ ನುಡಿಯು
ಪೂರ್ಣ ತುಂಬಿಹುದೆಂದು ಬಗೆಯ ಬೇಡಿರಿದು
ಪೂರ್ಣಕ್ಕೆ ಪಥವು ಪೂರ್ಣಜ್ಞ."

ಎಂಬ ಮಾತು ಇದರ ಮಿತಿ ಮತ್ತು ವ್ಯಾಪ್ತಿಗಳೆರಡನ್ನು ನಮ್ರವಾಗಿ ಸೂಚಿಸುತ್ತದೆ. ಈ ಸಂದರ್ಭದಲ್ಲಿ ಸರ್ವಜ್ಞನ ಮಾತನ್ನು ಸ್ಮರಿಸಿಕೊಂಡು "ಸರ್ವಜ್ಞನಂದದಲಿ ಸರ್ವರೊಳಗೊಂದೊಂದ ಪೂರ್ವ ನುಡಿಗಲಿತು ತ್ರಿಪದಿ ರಚಿಸುವ ಕಾರ್ಯ ನಿರ್ವಿಘ್ನಗೊಳಿಸು"ಎಂದು ಪ್ರಾರ್ಥಿಸುತ್ತಾರೆ. "ನೀನಿರದೆ ಗತಿಯಿಲ್ಲ, ನೀನಿರದೆ ಮತಿಯಿಲ್ಲ" ಎಂದು ಗುರುವಿನ ಮರೆಹೋಗುತ್ತಾರೆ.

ಮುಂದಿನ ಕೆಲವು ವಚನಗಳಲ್ಲಿ ಅಂತರಂಗದ ತಳಮಳ, ಸೃಷ್ಟಿಯ ವಿಷಮತೆಯನ್ನು ಕಂಡ ವಿಷಾದ, ಇದರ ಮಧ್ಯದಲ್ಲಿಯೇ ಸಾಧಕ ಬೆಳೆಯಬೇಕೆಂಬ ಎಚ್ಚರದ ನಡೆ ನಿರ್ಧಾರಗಳು ಕಂಡು ಬರುತ್ತವೆ. "ಸಾಗದಾಗಿದೆ ಹಾದಿ ಹೇಗೋ ಏನೋ ಮುಂದೆ" ಎಂಬ ಆತಂಕ, "ದೊಡ್ಡವರೆನಿಪ ಕೆಲರು ಅಡ್ಡ ಹಾದಿಯೊಳಿಹರು" ಎಂಬ ಆಶ್ಚರ್ಯ, "ಸೂತ್ರಧಾರಿಯು ನೀನು, ಪಾತ್ರಧಾರಿಯು ನಾನು" ಎಂಬ ಸರ್ವ ಸಮರ್ಪಣೆ. "ನೆನೆದಾಗ ನಿನ್ನನ್ನು ಮನದೊಳಗೆ ಮೂಡಯ್ಯ" ಎಂಬ ಹಾರೈಕೆ, ಪ್ರಾರ್ಥನೆ–ಈ ಸಂಕೀರ್ಣ ಭಾವಗಳ ಸುಂದರ ಅಭಿವ್ಯಕ್ತಿ ಈ ಪ್ರಾರ್ಥನೆ ನಿವೇದನೆಗಳಲ್ಲಿ ಕಾಣುತ್ತದೆ. ತಾವು ಕಟ್ಟಿಕೊಂಡಿರುವ ಸಾಮಾಜಿಕ ಮಹತ್ಕಾರ್ಯಗಳ ವ್ಯಾಪಕತೆ, ಅದಕ್ಕಿರುವ ಅಡ್ಡಿ ಆತಂಕಗಳ ಅರಿವು ಅವರಿಗಿದೆ.

"ಜೋಡೆತ್ತು ಹೂಡಿರುವ ಗಾಡಿಯಲಿ ಹೊರಟಿಹೆನು
ಕಾಡಿನಲಿ ಓಡಿ ಬೀಳದಂತೆನ್ನ ಕಾ-
ಪಾಡಯ್ಯ ಗುರುವೆ ಪೂರ್ಣಜ್ಞ."

ಎಂದು ಆತನನ್ನೇ ಮರೆಹೋಗುತ್ತಾರೆ. ಈ ಸಂದರ್ಭದಲ್ಲಿ ಬರುವ ಅನೇಕ ವಚನಗಳು ಆತ್ಮ ನಿವೇದನೆಯ ಭಾವಗೀತೆಗಳಂತೆ ಮೂಡಿಬಂದಿರುವದನ್ನು ಗಮನಿಸಬೇಕು. ಸುತ್ತಲೂ ದುಷ್ಟಶಕ್ತಿಗಳೇ ವಿಜೃಂಭಿಸುವದನ್ನು ಕಂಡು ಅವರ ಮನಸ್ಸು ತಳಮಳಗೊಳ್ಳುತ್ತದೆ.

"ಎಲ್ಲಿ ನೋಡಿದೊಡಲ್ಲಿ ಕ್ಷುಲ್ಲ ರಾಕ್ಷಸ ಲೀಲೆ
ಒಳ್ಳಿತಾದುದಕೆ ಕೊಳ್ಳಿಯಿಡುತಿಹರಯ್ಯ
ಎಲ್ಲಿರುವೆ ದೇವ ಪೂರ್ಣಜ್ಞ."

ಎಂದು ಉದ್ಗಾರ ತೆಗೆಯುತ್ತಾರೆ. "ಮಾನವತೆಯನ್ನು ಮೆಟ್ಟಿದಾನವತೆ ಮೆರೆಯುತಿದೆ"–

ಎಂಬುದನ್ನು ತಮ್ಮ ಕರ್ತವ್ಯ–ನಿರ್ವಹಣೆಯ ಸಂದರ್ಭದಲ್ಲಿ ಅವರು ಕಂಡುಕೊಳ್ಳುತ್ತಾರೆ.

"ಭ್ರಷ್ಟ ದುಷ್ಟರು ಕೂಡಿ ಕಷ್ಟ ಕೊಡುತಿಹರಯ್ಯ
ಶಿಷ್ಟ ಸಭ್ಯರಿಗೆ ಕಷ್ಟವಾಗಿದೆ ಬದುಕು
ದುಷ್ಟತನ ತವಿಸು ಪೂರ್ಣಜ್ಞ."

ಎಂಬುದು ಅವರ ಅನುಭವದ ನುಡಿ; ಇದು ಸಾರ್ವತ್ರಿಕ ಲೋಕ ಸತ್ಯವೂ ಹೌದು.

ಆದರೆ ಇದರಿಂದ ನಾವು ನಿರಾಶರಾಗಬೇಕಾಗಿಲ್ಲ. ಇದರ ಮಧ್ಯದಲ್ಲಿಯೇ ಇದ್ದು ಸಾಧಕನ ಜೀವನ ಬೆಳೆಯಬೇಕಾಗಿದೆ. ಈ ದುಷ್ಟಶಕ್ತಿಗಳಿರುವದರಿಂದಲೇ ಶಿಷ್ಟ ಶಕ್ತಿಗಳ ಸಾಧನೆಯ ಮಹತ್ವ ಮನದಟ್ಟಾಗುತ್ತದೆ. "ಕಲ್ಲು ಕಟೆದರೆ ಮೂರ್ತಿ ಸಲ್ಲಲಿತವಾಗುವದು" ಹಾಗೆ ಕಲ್ಲನ್ನು ಕಟೆಯುವ ಕಮ್ಮಟ ಈ ಜಗತ್ತು. ಇಲ್ಲಿ ನಾವು ತಿನ್ನುವ ಒಂದೊಂದು ಏಟೂ ನಮ್ಮನ್ನು ಸುಂದರ ಮೂರ್ತಿಗೊಳಿಸುವ ಒಂದು ಪ್ರಯತ್ನ ಎಂದು ಭಾವಿಸಬೇಕು. ಈ ಎಲ್ಲ ಪರೀಕ್ಷೆಗಳಿಂದ ಮನಸ್ಸು ಕೊಳೆಯನ್ನು ಕಳೆದುಕೊಳ್ಳುತ್ತದೆ.

ಹೆಣ್ಣು ಮಕ್ಕಳು ಮೊರದಿ ಧಾನ್ಯ ಹಸಮಾಡುವೊಲು
ನನ್ನ ಮನದಿಂದ ಕಸಕಡ್ಡಿ ತೆಗೆದೊಗೆದು
ಚಿನ್ಮಯುಂಗೊಳಿಸು ಪೂರ್ಣಜ್ಞ."

ಎಂಬ ಪ್ರಾರ್ಥನೆ ಅರ್ಥವತ್ತಾಗಿದೆ.

ಆದುದರಿಂದ ಈ ಪ್ರಪಂಚದ ವಿಷಮತೆ ನಮ್ಮನ್ನು ಕುಗ್ಗಿಸಬೇಕಾಗಿಲ್ಲ; ಅದು ನಮ್ಮನ್ನು ಹಿಗ್ಗಿಸುವ ಸಾಧನವಾಗಬೇಕು–ಈ ಭಾವನೆ ಇಡೀ ಈ ವಚನಗೀತೆಯ ಹಿನ್ನೆಲೆಯಲ್ಲಿರುವ ನಿರಂತರ ಶ್ರುತಿಯಾಗಿದೆ. ಈ ಲೋಕದಲ್ಲಿ ಅಸೂಯೆ, ಈರ್ಷೆ, ದುಃಖ ಸಂಕಟಗಳ ಅಗ್ನಿ ಪರೀಕ್ಷೆಗಳು ಬಂದೇ ಬರುತ್ತವೆ. ಆದರೆ ಆಗ ನಾವು ಎದೆಗುಂದದೆ ಅದನ್ನು ಎದುರಿಸಬೇಕು; ಅಂತರಂಗದ ಸತ್‌ಶಕ್ತಿಯ ಪ್ರಾರ್ಥನೆಯಿಂದ ಅದನ್ನು ಗೆಲ್ಲಬೇಕು. ಈ ಪ್ರಾರ್ಥನೆಯೇ ಆತ್ಮನ ಆಹಾರ.

"ಪ್ರಾರ್ಥನೆಯು ಇಲ್ಲದಿರೆ ವ್ಯರ್ಥವಪ್ಪುದು ಬದುಕು
ಪ್ರಾರ್ಥನೆಯು ಅಂತರಂಗದಲಿ ನಿನದಿಸುವ
ಶಾಂತಿ ಸಂಗೀತ ಪೂರ್ಣಜ್ಞ."

ಎಂಬ ಸುಂದರವಾದ ವಚನವನ್ನು ಇಲ್ಲಿ ಗಮನಿಸಬೇಕು. ಪ್ರಾರ್ಥನೆ ಧ್ಯಾನಗಳನ್ನು ಕುರಿತ ಇನ್ನೂ ಅನೇಕ ವಚನಗಳು ಇಲ್ಲಿ–ಬರುತ್ತವೆ. ಉದಾಹರಣೆಗಳನ್ನು ಬೆಳೆಸುವ ಅಗತ್ಯವಿಲ್ಲ.

ಮುಂದೆ "ಆತ್ಮವೃತ್ತಾಂತ" ಎಂಬ ಭಾಗ ಬರುತ್ತದೆ. ಇದು ಸಾಕಷ್ಟು ದೀರ್ಘವಾಗಿದೆ; ಮತ್ತು ಕುತೂಹಲಕಾರಿಯೂ ಆಗಿದೆ. ಶಿಶಿವಾಳದಲ್ಲಿ ವಿಜಯ ಮಹಾಂತೇಶನಾಗಿ ಹುಟ್ಟಿದ ಶಿಶು ನಾಲ್ಕು ವರ್ಷದ ಕಂದನಾಗಿರುವಾಗಲೇ ಮೀಸಲ ಮೊಗ್ಗಾಗಿ

ಶಿವಯೋಗಮಂದಿರದಲ್ಲಿ ಬೆಳೆದು, ಇಲಕಲ್ಲ ಚಿತ್ತರಗಿ ಪೀಠಕ್ಕೆ ಸ್ವಾಮಿಯಾದದ್ದು, ಅನಂತರ ಕಾಶಿಯಲ್ಲಿ ಅರಳಿ ಆಧ್ಯಾತ್ಮ ಕುಸುಮ ಸೌರಭವನ್ನು ಸೂಸುತ್ತ ಜಗದ್ಗುರುಗಳಾಗಿ ಮೂರುಸಾವಿರಮಠಕ್ಕೆ ಬಂದು ಮಹತ್ಕಾರ್ಯಕ್ಕೆ ಹೆಗಲು ಕೊಟ್ಟಿದ್ದು–ಈ ಎಲ್ಲವನ್ನೂ ಸಂಕ್ಷೇಪವಾಗಿ ಆದರೆ ಸ್ಪಷ್ಟವಾಗಿ ಇಲ್ಲಿ ನಿರೂಪಿಸಿರುವದು ಐತಿಹಾಸಿಕ ದಾಖಲೆಯ ದೃಷ್ಟಿಯಿಂದಲೂ ಮಹತ್ವಪೂರ್ಣವಾಗಿದೆ. ಮುಂದೆ ಜಗದ್ಗುರುಗಳಾಗಿ ಕೈಗೊಂಡ ಬಹುಮುಖ ಕಾರ್ಯಗಳ ಸಾರ ಸಂಗ್ರಹ ನಿರೂಪಣೆ ಬಂದಿದೆ. ಅವರ ಆಶೆ ಆಸಕ್ತಿ, ಆಶಯ ಧ್ಯೇಯ ಧೋರಣೆಗಳ ಒಂದು ಪೂರ್ಣ ಚಿತ್ರ ಇಲ್ಲಿ ಸಿಕ್ಕುತ್ತದೆ.

ಇದು ಬಹಿರಂಗದ ಜೀವನ ಚರಿತ್ರೆಯಷ್ಟೇ ಅಲ್ಲದೇ ಅಂತರಂಗದ ಮಾನಸಿಕ ನಿಲುವು–ನೆಲೆಗಳ ಕಥನವೂ ಆಗಿದೆ. ತಾವು ಮಾಡುವ ಕಾರ್ಯಗಳ ಬಗೆಗೆ ಒಂದು ಖಚಿತವಾದ ನಿಲವನ್ನು ತಳೆದು ಇಡೀ ಲೋಕವೇ ವಿರೋಧಿಸಿದರೂ ಅದನ್ನು ಮಾಡಿಯೇ ತೀರುವ ಅಚಲವಾದ ಸಾತ್ವಿಕ ನಿಷ್ಠೆ ಅವರದು.

"ನನ್ನ ದಾರಿಯು ನನಗೆ, ನಿನ್ನ ದಾರಿಯು ನಿನಗೆ
ನನ್ನ ಎತ್ತರದ ಗುರಿಯ ನೀನೇಂ ಬಲ್ಲೆ?
ಕುನ್ನಿಯಂಥವನೆ ಪೂರ್ಣಜ್ಞ."

ಎನ್ನುವ ಅವರ ಮಾತು ಅಹಂಕಾರದಿಂದ ಬಂದದ್ದಲ್ಲ; ಸಾಮಾಜಿಕ ಬದ್ಧತೆಯಿಂದ ಬಂದ ಆತ್ಮವಿಶ್ವಾಸದ ದೃಢತೆಯಿಂದ ಕೂಡಿದ್ದು. ಇಷ್ಟೆಲ್ಲಾ ಸಾರ್ವಜನಿಕ ಕೆಲಸಗಳನ್ನು ಕೈಕೊಂಡಿದ್ದರೂ ನಾನು ಮೊದಲೇ ಹೇಳಿದಂತೆ ಅಂತರಂಗದಲ್ಲಿ ಅವರು ಕವಿಗಳು. "ಕೆಲಸಗಳ ಸಂತೆಯಲಿ ಕುಳಿತು ಬರೆಯುವದೆಂತು?" ಎಂದು ಪರಿತಪಿಸುತ್ತಾರೆ. ಅದರಲ್ಲಿಯೇ ಬಿಡುವು ಮಾಡಿಕೊಂಡು ಬರೆಯುತ್ತಾರೆ.

"ಒಳಮನೆಯ ಗೌಪ್ಯದಲಿ ಕುಳಿತು ಬರೆಯುತಲಿರಲು
ಒಳನುಗ್ಗಿ ಬಹರು ಗೂಳಿಗಳು ಬಂದಂತೆ
ಅಳಿಸುವರು ಸ್ಫೂರ್ತಿ ಪೂರ್ಣಜ್ಞ."

ಎಂಬ ವಚನ ಅದರ ಒಂದು ಒಳ್ಳೆಯ ಚಿತ್ರವನ್ನು ಕೊಡುತ್ತದೆ. ಈ ಮತಿಯಲ್ಲಿಯೇ ಅವರು ಮಾಡಿರುವ ಈ ಬರವಣಿಗೆಯ ಕಾರ್ಯ ಆಶ್ಚರ್ಯಕರವಾದದ್ದು. "ಸಿದ್ಧರಾಮನ ಕಾರ್ಯಬದ್ಧನಾಗಿಯು ನಿತ್ಯ" ಪದ್ಯಗಳನ್ನು ಬರೆದಿದ್ದಾರೆ.–"ಬಿಡುವಿದ್ದ ಸಮಯದೊಳು ಮೃಡನನ್ನು ನೆನೆಯುತ್ತ" ಕಾವ್ಯ ಬರೆದಿದ್ದಾರೆ. ತ್ರಿಪದಿಯ ತಂತಿಗಳನ್ನು ಮೀಟಿದ್ದಾರೆ.

"ಸುಲಿದ ಬಾಳೆಯ ಹಣ್ಣು ಚೆಲುವ ದ್ರಾಕ್ಷಿಯ ಹಣ್ಣು
ಲಲಿತ ಭಾಷೆಯಲಿ ಬರೆದಿಹೆನು ತ್ರಿಪದಿಗಳ
ಸುಲಭ ಶೈಲಿಯಲಿ ಪೂರ್ಣಜ್ಞ."

ಎಂಬ ಹೆಮ್ಮೆಯೂ ಅವರಿಗಿದೆ. ಈ ತ್ರಿಪದಿಗಳನ್ನು ಓದಿದವರಿಗೆ ಇದು ಸಹಜವಾದ ಮತ್ತು ಸಾರ್ಥಕವಾದ ಆತ್ಮವಿಶ್ವಾಸ ಎಂಬುದೂ ಮನದಟ್ಟಾಗುತ್ತದೆ. ಹೀಗೆ ತಾವು ಕೈಕೊಂಡ ಎಲ್ಲ ಕಾರ್ಯಗಳನ್ನು ನಿಷ್ಠೆಯಿಂದ ನಿರ್ವಹಿಸಿದ ಒಂದು ಸುಂದರ ಚಿತ್ರ ಇಲ್ಲಿ ಬಂದಿದೆ. ಅವರ ಆತ್ಮವೃತ್ತಾಂತಕ್ಕೆ ಕಳಶಪ್ರಾಯವಾದ. ಈ ಕೆಳಗಿನ ಕೆಲವು ವಚನಗಳನ್ನು ನೋಡಬಹುದು.

"ಆರೇನು ಮಾಡಿದರು ಸಾರುವೆನು ಸತ್ಯವನು
ಧೀರಗುರುವಿತ್ತ ಆಜ್ಞೆಯನು ತಪ್ಪದಲೆ
ಪೂರಗಾಣಿಸುವೆ ಪೂರ್ಣಜ್ಞ."
"ಮನವೆಂಬ ತೋಟದಲಿ ಗುಣ ಪುಷ್ಪಗಳು ಅರಳಿ
ದಿನನಿತ್ಯ ಬದುಕು ಪರಿಮಳಿಸುತಿರಲೆಂದು
ಮನ ಬಯಸುತಿಹುದು ಪೂರ್ಣಜ್ಞ."
"ವನವಾಸಿ ನಾನಲ್ಲ, ಧನಕನಕ ತ್ಯಜಿಸಿಲ್ಲ,
ಜನಹಿತಗೈವ ಸತ್ಕಾರ್ಯ ನಡೆಸಿಹೆನು
ಮನಮುಟ್ಟಿ ನಿರುತ ಪೂರ್ಣಜ್ಞ."

ಒಂದೊಂದು ಮತ್ತೆ ಮತ್ತೆ ಮನನ ಮಾಡಬೇಕಾದಂತಹ ಮಾತುಗಳು. ಈ ಎತ್ತರದ ಮಾನಸಿಕ ಶಿಖರದಿಂದ ಸೆಲೆಯೊಡೆದು ಹರಿದು ಬಂದಿರುವದರಿಂದಲೇ ಪೂರ್ಣಜ್ಞ ವಚನಗಳು ಅವರೇ ಹೇಳಿರುವಂತೆ. "ಮೂರು ಸಾಲೊಳು ಬಾಳ ಸಾರತತ್ತ್ವವ ತುಂಬಿ" ಓದುಗರ ಮನಸ್ಸನ್ನು ತುಂಬಿ ಹರಿಯುತ್ತವೆ.

'ಪೂರ್ಣಜ್ಞ ವಚನ'ಗಳ ವಿಸ್ತಾರ ತುಂಬಾ ವ್ಯಾಪಕವಾದುದು; ವೈವಿಧ್ಯಪೂರ್ಣವಾದುದು; ಜೀವನದ ಎಲ್ಲ ರಂಗಗಳನ್ನು ಒಳಗೊಂಡಂತಹುದು. ಬಹುಶಃ "ಆಡು ಮುಟ್ಟದ ಸೊಪ್ಪಿಲ್ಲ"–ಎನ್ನುವಂತೆ ಈ ವಚನಗಳಿಗೆ ಒಳಗಾಗದ ವಿಷಯುವೇ ಇಲ್ಲವೆನ್ನಬಹುದು. ಗ್ರಂಥದ ಪರಿವಿಡಿಯತ್ತ ಒಮ್ಮೆ ಕಣ್ಣು ಹಾಯಿಸಿದರೆ ಸಾಕು ಅದು ಮನದಟ್ಟಾಗುತ್ತದೆ. ಜಗದ್ಗುರುಗಳಾಗಿ ದಂತದ ಗೋಪುರದಲ್ಲಿ ಕುಳಿತುಕೊಳ್ಳದೆ ಜನಸಾಮಾನ್ಯರೊಡನೆ ಬೆರೆತು ಅವರ ಸುಖ ದುಃಖಗಳಿಗೆ ಮಿಡಿದು ಕ್ರಿಯಾತ್ಮಕವಾದ ರಚನಾತ್ಮಕ ಕಾರ್ಯಗಳಲ್ಲಿ ದುಡಿದು ಮಾಗಿದ ಪರಿಪಕ್ವ ಹೃದಯ ತುಡಿತವನ್ನು ಇಲ್ಲಿ ಕಾಣುತ್ತೇವೆ.

"ಬಿದ್ದವರನೆತ್ತುವದು ಶುದ್ಧ ಮಾನವ ಧರ್ಮ
ತಿದ್ದಿ ಜನಮನವ ಸಂಸ್ಕಾರ ಕೊಡುವವನು
ಸದ್ಧರ್ಮಿಯಯ್ಯ ಪೂರ್ಣಜ್ಞ."

ಎನ್ನುವದೇ 'ಧರ್ಮ ಸಮನ್ವಯ ದರ್ಶನ'ದ ಮೊದಲನೆಯ ಮಾತು. ಇದು ಎಲ್ಲ ಧರ್ಮಗಳ ತಳಹದಿ. ಈ ಹಿನ್ನೆಲೆಯಲ್ಲಿ ವಿವಿಧ ಧರ್ಮ ಜಾತಿಗಳ ತಾರತಮ್ಯ, ಮೇಲು

ಕೀಳುಗಳು ಎಷ್ಟು ಕ್ಷುಲ್ಲಕವಾಗುತ್ತವೆಂಬುದನ್ನು ಇಲ್ಲಿನ ವಚನಗಳು ಪರಿಣಾಮಕಾರಿಯಾಗಿ ಪ್ರತಿಪಾದಿಸಿವೆ. ಜಾತಿಗಾಗಿ ಹೋರಾಡುವವರು ನೀತಿಯನ್ನು ಸಮಾಧಿ ಮಾಡುತ್ತಾರೆ:

"ಜಾತಿ ಜಾತಿಗೆ ಜಗಳ, ಮಾತು ಮಾತಿಗೆ ವೈರ
ಕೋತಿ ಗುಣದವರ ಗದ್ದಲದಿ ನೀತಿ ಹೆಣ
ಜೋತಾಡುತಿಹುದು ಪೂರ್ಣಜ್ಞ."

ಎಂಬ ವಚನ ಧರ್ಮ ದುರಂತವನ್ನು ಚಿತ್ರವತ್ತಾಗಿ ಹಿಡಿದಿಟ್ಟಿದೆ.

ಎಲ್ಲಾ ಧರ್ಮಗಳ ಸಾರ್ಥಕತೆ ಇರುವದು ಮಾನವೀಯ ಮೌಲ್ಯಗಳನ್ನು ಅನುಷ್ಠಾನಗೊಳಿಸುವದರಲ್ಲಿ. ನಮ್ಮ ದೈನಂದಿನ ಜೀವನದ ವಿವಿಧ ಕ್ಷೇತ್ರಗಳಲ್ಲಿ ಅಳವಡಿಸಿ ಕೊಳ್ಳಬೇಕಾದ ಮಾನವೀಯ ಮೌಲ್ಯಗಳನ್ನು ಮನಮುಟ್ಟುವಂತೆ ನಿರೂಪಿಸುತ್ತವೆ— "ಪೂರ್ಣಜ್ಞ ವಚನಗಳು."

"ಅಧಿಕಾರ ಬಂದಾಗ ಹದವರಿತ ನಡೆಯಿರಲಿ
ಮುದದಿ ಬಡವರನು ರಕ್ಷಿಸುವ ಅಧಿಕಾರಿ
ಅಧಿಕಾರಿ ನಿಜದಿ ಪೂರ್ಣಜ್ಞ."

ಎಂಬ ಮಾತು ನಮ್ಮ ಅಧಿಕಾರಿಗಳು ತಮ್ಮ ಅಧಿಕಾರ ಪೀಠದ ಮುಂದೆ ಬರೆದಿಟ್ಟುಕೊಳ್ಳ ಬೇಕಾದ ಮಾತು. ಬರೆದಿಟ್ಟುಕೊಂಡರಷ್ಟೇ ಸಾಲದು. ಇದು ಜೀವನದ ಉಸಿರಾಗ ಬೇಕು. ಅಧಿಕಾರಿಗಳು ಮಾತ್ರವಲ್ಲ ಜೀವನದಲ್ಲಿ ಎಲ್ಲರೂ ಜಪಿಸಬೇಕಾದ ಮಾತು ಈ ಕೆಳಗಿನದು.

"ಸತ್ಯಕ್ಕೆ ಸಾವಿಲ್ಲ, ಮಿಥ್ಯಕ್ಕೆ ಸುಖವಿಲ್ಲ
ಮುತ್ತಿನಂತಿರುವ ಈ ನುಡಿಯು ಬೆಳಕಿನಲಿ
ನಿತ್ಯ ನಡೆಯುತಿರು ಪೂರ್ಣಜ್ಞ."

ಹಾಗೆಯೇ "ಅರಿವು ತುಂಬಿದ ಬಾಳು ತೊರೆ ತುಂಬಿ ಹರಿದಂತೆ", "ಅಂದು ಮಾಳ್ಪುದನಂದೆ ಮುಂದೆ ಹಾಕದೆ ಮುಗಿಸು", "ಸವಿನುಡಿಯು ಮನುಜಂಗೆ ನವಶಕ್ತಿ ನೀಡುವದು", "ಕ್ರಮ ತಪ್ಪಿ ನುಡಿಯದಿರು, ಕ್ರಮತಪ್ಪಿ ನಡೆಯದಿರು", "ದುಡಿದು ತಿನ್ನುವ ಕೈಬಿಡದು ಅಕ್ಷಯ ಪಾತ್ರೆ", "ಸುವಿಚಾರವಿದ್ದವಗೆ ಅವನತಿಯ ಭಯವಿಲ್ಲ"—ಈ ಮೊದಲಾದ ಮಾತುಗಳು ಮಾನವೀಯ ಮೌಲ್ಯದ ಗಣಿಗಳಾಗಿವೆ.

"ಶೀಲ ಚಂದ್ರೋದಯದಿ ಬಾಳು ಬೆಳ್ದಿಂಗಳವು
ಮೇಲಾದ ಸುಗುಣ ಶಾಂತಿ ನಕ್ಷತ್ರಗಳು
ಬಾಳ ಬಾನಿನಲಿ ಪೂರ್ಣಜ್ಞ."

ಎಂದು ಶೀಲ ಸಂಪನ್ನವಾದ ಒಂದು ಸುಂದರವಾದ ಚಿತ್ರವನ್ನು ಕೊಟ್ಟಿದ್ದಾರೆ. ಈ ವಿಭಾಗದಲ್ಲಿ ಬರುವ ಇಂತಹ ಅನೇಕ ವಚನಗಳು ಮತ್ತೆ ಮತ್ತೆ ಮೆಲುಕು ಹಾಕುವಂತಿವೆ.

ರೈತ–ಕೃಷಿ, ಮಹಿಳೆ–ಹೆಣ್ಣು, ಸಾಮಾಜಿಕ ವರ್ತನೆಗಳು, ಮಕ್ಕಳು–ಈ ಮೊದಲಾದ ವಿಭಾಗಗಳಲ್ಲಿ ತೆರೆದ ಕಣ್ಣಿಂದ ಸುತ್ತಲ ಪ್ರಪಂಚವನ್ನು ವೀಕ್ಷಿಸುವ ಸೂಕ್ಷ್ಮ ದೃಷ್ಟಿ ವ್ಯಕ್ತವಾಗುತ್ತದೆ. ಸಂಸಾರಿಗಳೂ ಗುರುತಿಸಲಾಗದ ಬಾಳಿನ ಸರಸ ವಿರಸಗಳನ್ನು ಈ ಜಗದ್ಗುರುಗಳು ಪರಿಭಾವಿಸಿ ಮಾರ್ಗದರ್ಶಕವಾದ ಮನನೀಯ ಮಾತುಗಳನ್ನು ಹೇಳಿದ್ದಾರೆ. ಮಾನವ ಸ್ವಭಾವದ ವಿವಿಧ ಮುಖಗಳು, ಗುಣ–ದೌರ್ಬಲ್ಯಗಳು, ನಿಂದಕರು, ಸ್ವಾರ್ಥಿಗಳು ಈ ಮೊದಲಾದುವನ್ನು ಕುರಿತ ಲೋಕಾನುಭವದ ವಚನಗಳು ಇಲ್ಲಿ ವಿಪುಲವಾಗಿವೆ. ಅವುಗಳನ್ನು ಕಂಡು; ಕೆಲವು ವೇಳೆ ನೇರವಾಗಿ ಅವುಗಳಿಗೆ ಗುರಿಯಾಗಿ ಅವರು ನೊಂದಿದ್ದಾರೆ. ನಿವೇದನೆಯಲ್ಲಿಯೇ ಅದನ್ನು ಪ್ರಸ್ತಾಪಿಸಿದ್ದಾರೆ. ಇಲ್ಲಿ ಅದನ್ನು ಇನ್ನೂ ದೀರ್ಘವಾಗಿ ವ್ಯಾಪಕ ಹಿನ್ನೆಲೆಯಲ್ಲಿ ಪರಿಭಾವಿಸಿದ್ದಾರೆ. ಹೆಚ್ಚಾಗಿ ಉದಾಹರಣೆಗಳನ್ನು ಬೆಳೆಸುವದು ಅಪ್ರಸ್ತುತ. ಒಂದೆರಡನ್ನು ಮಾತ್ರ ನೋಡಬಹುದು:

"ನಂಬಬೇಕೆನಿಸಿದರೆ ನಂಬು ವಿಷಜಂತುಗಳ
ನುಬದಿರು ಮೋಸಗಾರರನು, ಛದ್ಮಿಗಳು
ತುಂಬಿಹರು ಜಗದಿ ಪೂರ್ಣಜ್ಞ."

ಎಂಬ ಮಾತಿನಲ್ಲಿ ಅನುಭವಿಸಿದ ನೋವು ವ್ಯಕ್ತವಾಗವದನ್ನು ಗಮನಿಸಬೇಕು. "ದುಷ್ಟ ಜನಸಂಖ್ಯೆಯದು ಎಷ್ಟೊಂದು ಬೆಳೆಯುತ್ತಿದೆ?" ಎಂದು ಇನ್ನೊಂದು ಕಡೆ ಉದ್ಗಾರ ತೆಗೆಯುತ್ತಾರೆ. ಹಾಗೆ "ಸತ್ಯವನು ತಳಕೊತ್ತಿ ಮಿಥ್ಯೆಯನು ಮೇಲೆತ್ತಿ" ಉತ್ತಮರೆನಿಸಿಕೊಂಡವರು; "ಗಡ್ಡ ಬೆಳೆಸಿದ ಗತ್ತು, ಗುಡ್ಡದಂತಹ ಮಾತು"ಗಳಿಂದ ಅಡ್ಡಹಾದಿಯನ್ನು ಹಿಡಿದವರು, "ಶರಣ ತತ್ವದ ನೆವದಿ, ಬರಿ ಹಣವ ಗಳಿಸುವರು", "ತ್ಯಾಗ ಮಾಡಿರಿ ಎಂದು ಕೂಗಿ ಹೇಳುತಲಿರುವ" ಭೋಗ ಜೀವಿಗಳು ಈ ಮೊದಲಾದವರ ಕುಟಿಲತೆ, ಡಾಂಭಿಕತೆಗಳನ್ನು ಬಯಲಿಗೆಳೆದಿದ್ದಾರೆ.

ಶಿಕ್ಷಣ, ಕಾವ್ಯ, ಸಂಗೀತ, ರಾಜಕೀಯ, ಆರೋಗ್ಯ ಈ ಯಾವುವೂ ಇವರ ಲೇಖನಿಯಿಂದ ಹೊರತಾಗಿಲ್ಲ. ಇಲ್ಲಿ ಕಂಡುಬರುವದು ವಿಷಯ ವಿಂಗಡನೆ ಅಲ್ಲ. ಜೀವನದ ಬಹುಮುಖ ಅನುಭವದ ಅಭಿವ್ಯಕ್ತಿ ಇಲ್ಲಿನ ಆಶಯ. ಆದುದರಿಂದ ತಮಗೆ ಅನಿಸಿದ ಅನುಭವಗಳನ್ನು ಅನಿಸಿದಂತೆ ಬರೆಯುತ್ತಾ ಹೋಗಿದ್ದಾರೆ. ಬರೆಯುವದು ಹೆಚ್ಚಾದಾಗ ಅನುಭವ ಹಿಂಜಿದಂತಾಗಿ ಸಹಜವಾಗಿಯೇ ಪದ್ಯಗಳು ಜಾಳುಜಾಳಾಗುತ್ತವೆ. ಅಂತಹ ವಚನಗಳೂ ಇಲ್ಲವೆಂದಲ್ಲ. ಇಷ್ಟೊಂದು ಸಂಖ್ಯೆಯಲ್ಲಿ ಬರೆಯುವಾಗ ಅದು ಅನಿವಾರ್ಯ. ಆದರೆ ಮನಸ್ಸಿನ ತೀವ್ರವಾದ ಅನುಭವ, ಚಿಂತನ ಶೀಲತೆಯಿಂದ ಗಟ್ಟಿಗೊಂಡು ಹರಳಾದಾಗ ಅಂತಹ ವಚನಗಳು ಹೊಳೆಯುತ್ತವೆ. ಬೆಳಕು ಕೊಡುತ್ತವೆ. ಅಂತಹ ವಚನಗಳು

ಸಾಕಷ್ಟು ಸಂಖ್ಯೆಯಲ್ಲಿ ಇವೆಯೆಂಬುದೇ ಪೂರ್ಣಜ್ಞ ವಚನಗಳ ಹಿರಿಮೆಯಾಗಿದೆ.

"ಈ ವಿಶ್ವ ಶರಧಿಯೊಳು ಜೀವನದ ಚೈತ್ರವನು
ಸಾವಿಗಂಜದಲೆ ಧೈರ್ಯದಿಂ ನಡೆಯಿಸುವ
ಮಾ ವಿದ್ಯೆ ಬೇಕು ಪೂರ್ಣಜ್ಞ."

ಎನ್ನುವ ಈ ವಚನ ವಿದ್ಯೆಯ ವ್ಯಾಪಕವಾದ ಅರ್ಥವನ್ನು ಪರಿಭಾವಿಸಿದಷ್ಟು ಹಿರಿದಾಗಿಸುತ್ತಾ ಹೋಗುತ್ತದೆ:

"ಸಾವು ಬಂದಿರುವಾಗ ಯಾವನೂ ರಕ್ಷಿಸನು
ಭಾವಿಯಲಿ ಹಗ್ಗ ಹರಿದಾಗ ಕೊಡವನ್ನು
ಯಾವ ಹಿಡಿವವನು? ಪೂರ್ಣಜ್ಞ."

ಜೀವನದ ಕೊನೆ ಎಂಬುದು ಭಾವಿಯಲ್ಲಿ ಹಗ್ಗ ಹರಿದಂತೆ ಎಂಬ ಸಾದೃಶ್ಯ ಅರ್ಥವತ್ತಾಗಿದ್ದು ಧ್ವನಿಪೂರ್ಣವಾಗಿದೆ.

"ಮನವು ಕನಕದ ಪಾತ್ರೆ ಅನುದಿನವು ಬೆಳಗದನು
ಚಿನುಮಯಾನಂದರಸ ತುಂಬಿಕೊಳ್ಳಲ್ಕೆ
ಅಣಿಗೊಳಿಸು ಬಿಡದೆ ಪೂರ್ಣಜ್ಞ."

ಇದು ಭಾವಿಯಲ್ಲಿ ಹಗ್ಗ ಹರಿಯುವ ಮೊದಲೇ ನಾವು ಸಾಧಿಸಿಕೊಳ್ಳಬೇಕಾದುದು. ಇಂತಹ ಸಾಧಕ ಜೀವನದ ಅನೇಕ ಮಾತುಗಳು ಮಾನವೀಯ ಮೌಲ್ಯಗಳನ್ನು ಕುರಿತ ವಿವೇಚನೆಯಲ್ಲಿ ಬರುತ್ತವೆ. —ಹೀಗೆ ಇಂತಹ ವಚನಗಳ ಸಂಖ್ಯೆಯನ್ನು ಬೆಳೆಸುತ್ತ ಹೋಗಬಹುದು.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ ತ್ರಿಪದಿಗಳ ರಚನೆಯಲ್ಲಿ ಸಾಧಿಸಿದ ಸಿದ್ಧಿ. ತ್ರಿಪದಿಗಳ ಅಂತರಂಗ–ಬಹಿರಂಗಗಳ ರಹಸ್ಯ ಕರಗತವಾಗಿರುವ ಅಪೂರ್ವ ಶಕ್ತಿಯನ್ನು ಇಲ್ಲಿ ಕಾಣುತ್ತೇವೆ. ವಿಷಯ ಮನಸ್ಸಿನಲ್ಲಿ ಹೊಳೆಯುತ್ತಿದ್ದಂತೆಯೇ ಅದರ ತ್ರಿಪದಿ ರೂಪ ಸಿದ್ಧವಾಗಿ ಉಕ್ಕಿಬರುವಂತೆ ತೋರುತ್ತದೆ. ಇದರಿಂದ ಒಂದು ಗುಣವೂ ಉಂಟು, ದೋಷವೂ ಉಂಟು. ಬರೆಯುವದು–ಸುಲಭವಾಗಿ ಬಿಟ್ಟಾಗ ರಚನೆ ಯಾಂತ್ರಿಕವಾಗಿ ಬಿಡುತ್ತದೆ. ಸಿಕ್ಕಿದ್ದರ ಮೇಲೆಲ್ಲಾ ಪದ್ಯಗಳು ಬೆಳೆದು ಬಿಡುತ್ತವೆ. ಆದರೆ ಹಿಂದೆ ಹೇಳಿದಂತೆ ಅನುಭವದ ತೀವ್ರತೆ, ಚಿಂತನಶೀಲತೆಗಳೊಡನೆ ಆಂತರಿಕ ಸಂವಾದ ಸಂಘರ್ಷಗಳಿಂದ ವಿಷಯ ಮಥನಗೊಂಡಾಗ ರೂಪಧಾರಣೆ ಅದಕ್ಕನುಗುಣವಾಗಿ ವಿಶಿಷ್ಟವಾಗಿಯೇ ಮೂಡಿ ಬರಬೇಕಾಗುತ್ತದೆ. ಅದು ಮೊದಲೇ ಇದ್ದ ಅನುಭವಕ್ಕೆ ಒದಗಿಸುವ ಅಂಗಿಯಾಗುವದಿಲ್ಲ. ಅಂಗದೊಡನೆಯೇ ಅನುಭಾವವೂ ಬೆಳೆಯುತ್ತ ಅವಿನಾಭಾವ ಸಂಬಂಧವನ್ನು ಪಡೆಯುತ್ತದೆ. ಅಂತಹ ವಚನಗಳನ್ನು ಇಲ್ಲಿ ವಿಪುಲವಾಗಿ ಕಾಣಬಹುದೆಂಬುದಕ್ಕೆ

ಇದುವರೆಗೆ ಉದಾಹರಿಸಿರುವ ಅನೇಕ ವಚನಗಳೇ ಸಾಕ್ಷಿಯಾಗಿವೆ. ಇನ್ನೂ ಕೆಲವನ್ನು ಇಲ್ಲಿ ಗಮನಿಸಬಹುದು:

"ಸೊಗಯಿಸುವ ತೋಟದಲಿ ನಗುವಂತೆ ಪುಷ್ಪಗಳು
ಬಗೆಯ ತೋಟದಲಿ ಸುಗುಣ ಸುಮಗಳು ಅರಳಿ
ಮಿಗೆ ಪರಿಮಳಿಸಲಿ ಪೂರ್ಣಜ್ಞ."

"ಗಾಳಿಗೆದುರಾದಲ್ಲಿ ಗಾಳಿ ಪಟವೇರುವದು
ಮೇಲೆ ಏರುವೊಡೆ ಎದುರಿಸು ವಿರೋಧಿಗಳ
ತಾಳಿ ಧೈರ್ಯವನು ಪೂರ್ಣಜ್ಞ."

"ಬಾಳೆ ಹಣ್ಣಿನ ಸಿಪ್ಪೆ ಕಾಲು ಜಾರಿಸಬಹುದು
ಬಾಳ ಬೀದಿಯಲಿ ಜಾರಿಕೆಗಳಿರಬಹುದು
ಬೀಳದಿರು ಜೋಕೆ ಪೂರ್ಣಜ್ಞ."

"ಅಂಗಾರದೊಳಿಡಲು ಬಂಗಾರ ಕಂದುವದೆ
ತುಂಗ ಗುಣವಂತ ಕಷ್ಟಾಗ್ನಿ ಕುಂಡದೊಳು
ಭಂಗಗೊಳದಿರುವ ಪೂರ್ಣಜ್ಞ."

"ನುಡಿಯೆಂಬುದೇ ಮಿಡಿಯು, ನಡೆಯೆಂಬುದೇ ಹಣ್ಣು
ನಡೆಯಿರದ ನುಡಿಯು ಫಲವೀಯದಿಹ ಬಂಜೆ
ಗಿಡವು ಇದ್ದಂತೆ ಪೂರ್ಣಜ್ಞ."

"ಭಾವ ಪಾವಿತ್ರ್ಯವೇ ಕಾವ್ಯಕ್ಕೆ ಜೀವಾಳ
ಭವ್ಯತರ ಕಾವ್ಯ ರಚಿಸುವೊಡೆ ಜೀವಿಸೈ
ಕಾವ್ಯವನು ಮೊದಲು ಪೂರ್ಣಜ್ಞ."

ಹೀಗೆ ಇವುಗಳ ಸಂಖ್ಯೆಯನ್ನು ಸುಲಭವಾಗಿ ಬೆಳೆಸುತ್ತಾ ಹೋಗಬಹುದು. ಕೊನೆಯ ಮಾತನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕು. ಭವ್ಯವಾದ ಕಾವ್ಯವನ್ನು ರಚಿಸಬೇಕಾದರೆ, ಆ ಕಾವ್ಯವನ್ನು ಮೊದಲು ಜೀವಿಸಬೇಕು; ಭಾವ ಪಾವಿತ್ರ್ಯವನ್ನು ಪಡೆಯಬೇಕು. ಈ ವಚನಗಳು ಈ ನಿಲವಿನಿಂದ ಮೂಡಿ ಬಂದವುಗಳು. ಇದರ ಜೊತೆಗೆ ಅಭಿವ್ಯಕ್ತಿಯ ಪ್ರತಿಭಾ ಶಕ್ತಿಯೂ ಅಲ್ಲಲ್ಲಿ ಮಿಂಚಿ ಭಾವ ಪಾವಿತ್ರ್ಯಕ್ಕೆ ಅನುಭವದ ಜೀವಂತಿಕೆಯನ್ನಿತ್ತು ಮಾತುಗಾರಿಕೆಯ ಮೋಡಿಯನ್ನು ಸಾಧಿಸಿದೆ.

ಆದುದರಿಂದಲೇ ಈ ವಚನಗಳು ನೇರವಾಗಿ ಮನಸ್ಸನ್ನು ಮುಟ್ಟುತ್ತವೆ. ಸರಳವಾದ ಮತ್ತು ಅತಿ ಪರಿಚಿತವಾದ ಮಾತುಗಳಲ್ಲಿಯೇ ಆ ಮಾತುಗಳಿಗೆ ಮೀರಿದ

ಅನುಭವದ ಅರ್ಥವನ್ನು ಧ್ವನಿಸುತ್ತವೆ.—ಮತ್ತೆ ಮತ್ತೆ ಅವುಗಳನ್ನು ಮೆಲುಕು ಹಾಕು ವಂತೆ ಮಾಡುತ್ತವೆ. ಇಲ್ಲಿ ಬರುವ ಕೆಲವು ಮಾತುಗಳಂತೂ ಗಾದೆಯ ಮಾತುಗಳ ಹಾಗೆ ಮನವನ್ನು ಮುಟ್ಟಿ ಅನುಭವದ ಆಳಕ್ಕೆ ಇಳಿಯುತ್ತವೆ. ಮಾದರಿಗಾಗಿ ಕೆಲವನ್ನು ಮಾತ್ರ ಇಲ್ಲಿ ಗಮನಿಸಬಹುದು:

"ಕಲ್ಲು ಕಟೆದರೆ ಮೂರ್ತಿ ಸಲ್ಲಲಿತವಾಗುವದು."
"ಬಿದ್ದವರನೆತ್ತುವದು ಶುದ್ಧ ಮಾನವ ಧರ್ಮ."
"ಅಭಿಮಾನವಿಲ್ಲದಿರೆ ಸೊಬಗುಂಟೇ ಬಾಳಿನಲಿ?"
"ಅರಿವು ತುಂಬಿದ ಬಾಳು ತೊರೆ ತುಂಬಿ ಹರಿದಂತೆ."
"ಸಂಗಡಿಗರಂತೆ ಮತಿ, ಸಂಗಡಿಗರಂತೆ ಕೃತಿ."
"ಶೀಲ ಶರಣಗೆ ಸಹಜ ಲೀಲೆಯಂತಿರಬೇಕು."
"ಜಪಮಾಲೆ ಹಿಡಿಯುವಡೆ ಕುಪಿತವನು ಬಿಡು ಮೊದಲು."
"ಬಳಕೆ ಮಾಡದ ದುಡ್ಡು ಹುಳ ತಿಂದು ಹೋದೀತು."
"ರಾಗ ದ್ವೇಷಕೆ ಮೂಲ, ಭೋಗ ರೋಷಕೆ ಮೂಲ."
"ಕರಕಿ ಕಳ್ಳಿಯ ಹಾಗೆ ಭರದಿ ಭ್ರಷ್ಟಾಚಾರ."
"ಆಶೆಯಳಿದರೆ ಮಾತ್ರ ದಾಸತ್ವ ತೊಲಗುವದು."
"ಶಿರಕೆ ಭೂಷಣ ಜ್ಞಾನ, ಕರಕೆ ಭೂಷಣ ದಾನ."
"ದೇಗುಲವೆ ಆಸ್ಪತ್ರೆ, ರೋಗಿಗಳು ಶಿವಗೆ ಸಮ."
"ಕಾವಿ ತೊಟ್ಟವರೆಲ್ಲ ದೇವರನು ಕಾಣುವರೇ?"
"ಸತ್ಯ ಧರ್ಮದ ಹೊರತು ಮತ್ತೆ ಧರ್ಮಗಳಿಲ್ಲ."
"ಸುವಿಚಾರವಿದ್ದವಗೆ ಅವನತಿಯ ಭಯವಿಲ್ಲ."
"ದೊರೆ ಕೆಡಿಸಿಕೊಂಡರೂ ನೆರೆ ಕೆಡಿಸಿಕೊಳ್ಳದಿರು."
"ಮಿತಿಯಿಂದ ಜೀವಿಪ್ಪುದೇ ಹಿತಭರಿತ ಜೀವನವು."
"ವಿಕೃತಿಗೆಡೆಕೊಟ್ಟಲ್ಲಿ ಪ್ರಕೃತಿಯನು ಕೆಡಿಸುವದು."
"ಮೇಲುಕೀಳೆಂಬುದಕೆ ಶೀಲವೇ ಒರೆಗಲ್ಲು."
"ಅಕ್ಷರಸ್ಥರ ಕಲಹ ಭಿಕ್ಷುಕರಿಗಿಂ ಕೀಳು."
"ಜಾತಿ ದ್ವೇಷ ಜ್ವಾಲೆ ನೀತಿಯನು ದಹಿಸುತಿದೆ."
"ಕೆನೆಯಿರದ ಮೊಸರನ್ನು ದಿನವೆಲ್ಲ ಕಡೆದಂತೆ."
"ಗುಣಸಿರಿಯ ಬಲಿಕೊಟ್ಟು ಹಣಗಳಿಸಿ ಫಲವೇನು?"
"ಪಿಸುಣರಾಡುವ ಮಾತು ವಿಷವು ಕಿವಿ ಮನಗಳಿಗೆ."
"ಗಳಿಕೆಯಿಲ್ಲದ ಬದುಕು ಜಲವಿರದ ಕೆರೆಯಂತೆ."
"ಒಳಬೆಳಗು ಇಲ್ಲದಲೆ ಬೆಳಗಲಾರದು ಹೊರಗೆ."

"ಸುಪ್ತಮನದೊಳಗಿಹುದು ಗುಪ್ತ ಚೈತನ್ಯನಿಧಿ."
"ತನ್ನ ತಾನರಿಯದವ ಅನ್ಯರನು ಅರಿಯುವನೆ?"
"ಶಾಂತಿಯೆಂಬುದು ಚಂದ್ರಕಾಂತಿ ಮನದಂಗಳಕೆ."
"ಮನತೃಷೆಯು ನಾಯಕರ ಮತಿಯಲ್ಲಿ ಉರಿಯುತಿರೆ."
"ಚಿಂತೆ ಚಿತ್ತಕೆ ಬೆಂಕಿ, ಚಿಂತನವು ಚೈತನ್ಯ."

ಇಂತಹ ಮಾತುಗಳು ಉದ್ದಕ್ಕೂ ನಕ್ಷತ್ರಗಳಂತೆ ಹೊಳೆಯುತ್ತವೆ; ಓದುಗರ ಮನವನ್ನು ಮುಟ್ಟಿ ಅಲ್ಲಿ ಬೆಳೆಯುತ್ತವೆ; ಬೆಳಗುತ್ತವೆ.

ಒಟ್ಟಿನಲ್ಲಿ "ಪೂರ್ಣಜ್ಞ ವಚನಗಳು" ಕೃತಿ ಆಧುನಿಕ ಕನ್ನಡ ಕಾವ್ಯ ವಲಯಕ್ಕೆ ಒಂದು ವಿಶಿಷ್ಟ ಕೊಡುಗೆಯಾಗಿ ಪರಿಣಮಿಸುವ ಸತ್ವವನ್ನು ಪಡೆದಿದೆ. ಇಲ್ಲಿನ ಛಂದಸ್ಸು ಹಳೆಯದು; ಹಾಗೆಯೇ ಅದರ ಮೂಲಕ ಅಭಿವ್ಯಕ್ತಗೊಂಡ ಆಧ್ಯಾತ್ಮಿಕತೆಯೂ ಹಳೆಯುದೇ. ಆದರೆ ಕವಿಯ ಅನುಭವದ ರಸಚೈತನ್ಯದಿಂದ ಅವು ಹೊಸತನವನ್ನು ಪಡೆದಿವೆ. ಹಳೆಯದೆಲ್ಲವನ್ನು ನಿರಾಕರಿಸಿ ಅದರಿಂದ ಸಂಪೂರ್ಣ ಭಿನ್ನವಾಗಿರುವ ವಿಚಿತ್ರ ಪ್ರಯೋಗ ಶೀಲತೆಯೇ ಹೊಸತೆಂಬ ಭ್ರಮೆಗೆ ಒಳಗಾಗದೆ, ಆಂತರಿಕ ಸಾಧನೆಯ ಪೂರ್ಣ ದರ್ಶನದ ಪುನರನುಭವದಿಂದ ಮೂಡಿದ ಸನಾತನ ಮೌಲ್ಯಗಳ ಪುನರ್ ಸೃಷ್ಟಿಯಲ್ಲಿ ಹೊಸತನ ವನ್ನು ಸಾಧಿಸುವದು ಸುಲಭವಲ್ಲ. ಪ್ರತಿಭೆಯ ಜೊತೆಗೆ ಅಂತರಂಗದ ಅನುಸಂಧಾನವನ್ನೂ ಅಳವಡಿಸಿಕೊಂಡ ದಾರ್ಶನಿಕ ಶಕ್ತಿಗೆ—ಮಾತ್ರ ಅದು ಸಾಧ್ಯ. ಇಲ್ಲಿ ಜಗದ್ಗುರು ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಅಂತಹ ಅನುಭಾವಿ ಕವಿಯಾಗಿ ಬೆಳೆದಿರುವದನ್ನು ಕಾಣಬಹುದು. ಬಹುಮುಖ ಕಾವ್ಯ ಕ್ಷೇತ್ರದ ನಿರಂತರ ದುಡಿಮೆಯಲ್ಲಿ ಅವರು ತೊಡಗಿದ್ದರೂ ಆಂತರ್ಯದಲ್ಲಿ ಬೆಳಗುತ್ತಿರುವ ಅವರ ಆಧ್ಯಾತ್ಮಿಕ ಚೇತನದ ಚಿಂತನ ಶೀಲತೆಯನ್ನು ಇಲ್ಲಿ ಕಾಣುತ್ತೇವೆ. ಇಲ್ಲಿ ತ್ರಿಪದಿಗಳು ಅನುಭವದ ಅಭಿವ್ಯಕ್ತಿಯ ಮಾಧ್ಯಮ ಮಾತ್ರವಾಗದೆ ಅದರ ವಿಕಾಸದ ಸಾಧನವೂ ಆಗಿವೆ. ಒಂದನ್ನೊಂದು ಅವಲಂಬಿಸಿ ಎರಡೂ ಬೆಳೆದು ಬಂದಿವೆ. ಹಾಗಾದಾಗಲೇ ಅದು ನೂತನ ಸೃಷ್ಟಿಯಾಗಿ ಪರಿಣಮಿಸುವದು. ಅಂತಹ ವಿನೂತನ ಸೃಷ್ಟಿಯ ಹೊಸಹುಟ್ಟನ್ನು ಈ 'ಪೂರ್ಣಜ್ಞ ವಚನ'ಗಳಲ್ಲಿ ಕಾಣುತ್ತೇವೆ. ಸಹೃದಯ ಲೋಕ ಇದನ್ನು ಆದರದಿಂದ ಬರಮಾಡಿ ಕೊಳ್ಳಲಿ; ಇದರಿಂದ ಜನಮನದ ಸಮಷ್ಟಿ ಸಂಪತ್ತು ಸಂವರ್ಧಿಸುವಂತಾಗಲಿ ಎಂದು ಹಾರೈಸುತ್ತೇನೆ.

ಸರಸ್ವತಿಪುರಂ, ಮೈಸೂರು, —ಎಚ್. ತಿಪ್ಪೇರುದ್ರಸ್ವಾಮಿ

೮–೪–೧೯೭೧.

# ನಮ್ಮ ನುಡಿ

ನಮಗೆ ಪೂರ್ಣಜ್ಞ ವಚನಗಳನ್ನು ಬರೆಯಲು ಪ್ರಪ್ರಥಮ ಪ್ರೇರಣೆ ನೀಡಿದವರು ಹುಬ್ಬಳ್ಳಿಯ ಸುಪ್ರಭಾತ ಕವಿ ಶ್ರೀ ವಾಲಿ ಗಂಗಪ್ಪನವರು. ವ್ಯಾಪಾರಸ್ಥರಾಗಿದ್ದರೂ ಅವರದು ಕವಿಜೀವನ, ಪ್ರಾಚೀನ ಕನ್ನಡ ಕಾವ್ಯ ಪರಂಪರೆಯನ್ನು ಸ್ವಾಧ್ಯಾಯದಿಂದ ಅರಿತುಕೊಂಡ ಸಮರಸ ಜೀವನ.

೧೯೮೬ ಜೂನ್ ೧೪ರ ಏಡಬಲ! ಅಂದು ಮಧ್ಯಾಹ್ನ ಕವಿ ಗಂಗಪ್ಪನವರು ಮಠಕ್ಕೆ ಬಂದು ವಂದಿಸಿ, ಮಾತು ಮಾತಿನ ಮಧ್ಯದಲ್ಲಿ ಒಂದು ಗಮನಾರ್ಹವಾದ ಸಲಹೆ ಮುಂದಿಟ್ಟರು.—"ನೀವು ಹುಟ್ಟು ಕವಿಗಳು, ನಿಮ್ಮ ಹದಿನಾರನೆಯ ವಯಸ್ಸಿನಿಂದಲೇ ಚಿಕ್ಕ ಕವನಗಳನ್ನು, ಲಾವಣಿಗಳನ್ನು, ನಾಮಾವಳಿಗಳನ್ನು, ವಚನಗಳನ್ನು ಬರೆದು ನಾಡಿಗೆ ಪರಿಚಿತರಾದ ನೀವು, ಮೂರುಸಾವಿರಮಠದ ಪೀಠಾರೋಹಣದ ನಂತರ ಕೆಲವು ವಚನಗಳನ್ನು ಮಾತ್ರ ಬರೆದು ಏಕೆ ಸುಮ್ಮನಾದಿರಿ? ಈ ಇಪ್ಪತ್ತೈದು ವರ್ಷಗಳಿಂದ ಸೃಜನಾತ್ಮಕ ಸಾಹಿತ್ಯವನ್ನು ಏಕೆ ಕೈಬಿಟ್ಟಿರಿ? ನಿಮ್ಮ ವಿಚಾರ ಅನುಭವಗಳಿಗೆ ಕವಿತೆಯ ರೂಪ ಕೊಟ್ಟರೆ ಸಮಾಜಕ್ಕೂ ನಾಡಿಗೂ ಹಿತವಾಗುವದಿಲ್ಲವೇ?"

ಅವರ ಈ ಪ್ರೋತ್ಸಾಹಕರ ನುಡಿ ನಮ್ಮಲ್ಲಿ ಭಾವ ತರಂಗಗಳನ್ನು ಬಡಿದೆಬ್ಬಿಸಿತು. ಕಾರಣ, ಮೂರುಸಾವಿರಮಠದ ಜಗದ್ಗುರು ಸ್ಥಾನದ ಗುರುತರವಾದ ಜವಾಬ್ದಾರಿಗಳನ್ನು ನಿಭಾಯಿಸುವ ಮಧ್ಯದಲ್ಲಿ ಅನೇಕ ಬಾರಿ ನಮಗೆ ನಮ್ಮ ಕಳೆದು ಹೋದ ಕವಿ ಜೀವನದ ನೆನಪಾಗಿ ತುಂಬಾ ನೋವಿನ ಸಂವೇದನೆಗಳಾಗಿದ್ದವು. "ದೇವದತ್ತವಾದ ನಮ್ಮ ಕವಿ-ಕಾವ್ಯ ಜೀವನ ಈ ಕಲ್ಲು-ಮಣ್ಣುಗಳ ಸಿದ್ಧರಾಮನ ಕಾಯಕದಲ್ಲಿ ಕೈತಪ್ಪಿ ಹೋಯಿತೆ!" ಎಂದು ಹಲವು ಹನ್ನೊಂದು ಬಾರಿ ನಾವು ತೀಕ್ಷ್ಣವಾಗಿ ನೊಂದಿದ್ದೆವು. ಆದರೇನು ಮಾಡುವದು....?—ಶಿವಯೋಗಮಂದಿರ, ಇಳಕಲ್, ಕಾಶಿಯ ಆ ತವರುಮನೆಯ ತಾವರೆಯ ಸ್ವತಂತ್ರ ಸುಂದರ ಜೀವನವೆತ್ತ....? ಇಲ್ಲಿ ಈ ಶಾಲಾ ಕಾಲೇಜುಗಳ ಆಸ್ಪತ್ರೆಗಳ ನೂರಾರು ಕಟ್ಟಡಗಳ ಶೈಕ್ಷಣಿಕ ಸಾಮಾಜಿಕ ಧಾರ್ಮಿಕ ರಂಗದ ಉಸಿರಾಡಿಸಲೂ ಬಿಡುವಿಲ್ಲದ ಈ ಗದ್ದಲದ ನೆನಪೆತ್ತ....! ಹಿಂಡನಗಲಿ ಬಂದ ಗಜದಂತೆ....ನಾಡಿನ ಮನೆಯಲ್ಲಿ ಬಂಧಿತವಾದ ಗಿಳಿ-ನವಿಲುಗಳಂತೆ ನಾವು ಅಸಹಾಯಕರಾಗಿ ಅಳಲಿ-ಬಳಲಿದಾಗ, ಕವಿ ಗಂಗಪ್ಪನವರ ಮಾತು ನಮ್ಮ ಮರೆತು ಹೋದ ಆ ಹಸಿರು-ಹೂವು-ನದಿ-ಕಾನನ-ಬಯಲು-ಮುಗಿಲುಗಳ ಭಾವ ತರಂಗಗಳನ್ನು ತೀವ್ರ ತಾಡನಗೊಳಿಸಿತು. ಅವರಿಗೆ ನಮ್ಮ ಇಂದಿನ ದಂದುಗದ, ಗುಡ್ಡದಷ್ಟು ಕೆಲಸ ಕಾರ್ಯಗಳನ್ನು ನಿತ್ತರಿಸುವ ಭಾರದ ಬದುಕಿನ ತೊಳಲಾಟದ ಬಗೆಗೆ ಹೇಳಿದೆವು. ತುಂಬಾ ಸುಕೋಮಲ ಭಾವ ಜೀವಿಯಾದ

ಅವರು ಅಲ್ಲಿಗೇ ನಿಲ್ಲದೇ, "....ಅದೆಲ್ಲವೂ ನಿಜ. ಆದರೆ ಸಾಹಿತ್ಯ ಮಾತ್ರ ಕಾಲ ಕಾಲಕ್ಕೂ ಬಹುದಿನ ಬಾಳಬಲ್ಲುದು. ಬೆಳಗಬಲ್ಲುದು. ಕಾಳಿದಾಸ, ಷಡಕ್ಷರಿ, ಸರ್ವಜ್ಞ, ನಿಜಗುಣ ಶಿವಯೋಗಿಗಳ ಆದರ್ಶ ನಿಮ್ಮೆದುರಿಗಿದೆ. ನೀವು ಕನ್ನಡವನ್ನೂ, ಸಂಸ್ಕೃತವನ್ನೂ ಓದ ಬಲ್ಲಿರಿ. ನೀವೂ ಆ ದಾರಿಯಲ್ಲಿ ನಡೆಯಬಲ್ಲಿರಿ, ಬರೆಯಬಲ್ಲಿರಿ. ನಿಮ್ಮ ಶಕ್ತಿಯನ್ನು ನಿಮ್ಮ ಕೈಯಾರೆ ನೀವೇ ಏಕೆ ಮರೆಮಾಚಿಕೊಳ್ಳುವಿರಿ?" ಎಂದಾಗ, ನಮ್ಮ ಕಣ್ಣೆದುರಿಗೆ ನಮ್ಮ ಅತ್ಯಂತ ಪ್ರೀತಿಯ ಛಂದೋಪ್ರಕಾರಗಳಾದ ಕಂದ, ಲಾವಣಿ, ಭಾವಗೀತ, ಷಟ್ಪದಿಗಳು ಬಂದು ಕುಣಿದಾಡಿದವು, "ಆ ಶೈಲಿ, ಆ ಸಾಮರ್ಥ್ಯ ಮತ್ತೆ ಬರುತ್ತದೆಯೋ ಇಲ್ಲವೋ.... ಏಕೆಂದರೆ ಬರೆಯುವ ಮನಸ್ಸಿಗೆ ಶಾಂತಿ ನೆಮ್ಮದಿಗಳಿರಬೇಕು....ನೂರಾರು ಸಾಮಾಜಿಕ ಸಮಸ್ಯೆಗಳು ನಮ್ಮ ತಲೆತುಂಬಿರುವಾಗ ಬರೆಯುವ ಸಹನೆಯಾದರೂ ಬೇಡವೇ...." ಎಂದಾಗ ಅವರು "....ಈ ನಿಮ್ಮ ಸಾಮಾಜಿಕ ಜೀವನದ ನೂರಾರು ಸಮಸ್ಯೆಗಳನ್ನೇ ಕಾವ್ಯಕ್ಕೆ ಆಕರಮಾಡಿಕೊಳ್ಳಿ....ಈ ಜೀವನಾನುಭವವನ್ನೇ ಕಾವ್ಯಾನುಭವಗೊಳಿಸಿದಾಗ ಅದೇ ಸಾಹಿತ್ಯ ಸಿದ್ಧಿ" ಎಂದು ಇಮ್ಮಡಿ ಮುಮ್ಮಡಿ ಪ್ರೇರಣೆ ನೀಡಿದರು. ಅವರ ಮಾತಿನಲ್ಲಿ ನಾವು ಸತ್ಯದರ್ಶನ ಕಂಡೆವು. ನಮ್ಮ ಅಂತರ್‌ವಾಹಿನಿಯಾದ ಭಾವರಸಗಂಗೆ ಬಹಿರಂಗವಾಹಿನಿಯಾದ ಸಮಗ್ರ ಸಾಮಾಜಿಕ ಸ್ಪಂದನ–ಪ್ರತಿಸ್ಪಂದನಗಳೊಂದಿಗೆ ಮೇಳೈಸಿ ಕಾವ್ಯ ರೂಪದಲ್ಲಿ ಸಿಡಿದು ಬರಲು ಸಿದ್ಧವಾದಾಗ ಯಾವ ಕಾವ್ಯ ಮಾಧ್ಯಮ ವನ್ನು ಆಯ್ದುಕೊಳ್ಳುವದೆಂಬ ಇನ್ನೊಂದು ಸಮಸ್ಯೆ ಉದ್ಭೂತವಾಯಿತು. ನಾವು ಈಗಾ ಗಲೇ 'ಚಿತ್‌ಕಿರಣ, ಹೂಬಳ್ಳಿ, ಆಶೀರ್ವಾಣಿ, ಹೊಂಗೀರಣ' ಎಂಬ ಗದ್ಯಗಳ ಮತ್ತು 'ಚಿತ್ಸುಮನ' ಎಂಬ ವಚನ ಸಂಕಲನವನ್ನು ರಚಿಸಿದ್ದೆವು. ಅದೇ ದಾರಿಯಲ್ಲಿ 'ವಚನ ವಾರಿಧಿ' ಎಂಬ ಇನ್ನೊಂದು ವಿಶಾಲ ವಚನ ಸಂಕಲನ ಹೊರತರೋಣವೇ ಎಂದಾಗ–"....ವಚನಾ ಬರೆಯಿರಿ ...ಬೇಡ ಅನ್ನೂದಿಲ್ಲಾ... ಆದರೆ ಕವಿತಾ ಬರೆಯಿರಿ ಅದರದೇ ಒಂದು ಸೊಗಸು" ಎಂದರು. ಭಾವಗೀತೆ ಬರೆಯೋಣವೇ....ಕಂದ ಪದ್ಯಗಳನ್ನು ಬರೆ ಯೋಣವೇ....ಎಂದು ಒಂದು ತಾಸಿನವರೆಗೆ ಚರ್ಚೆ ನಡೆದಾಗ.... "ಜನತೆಗೆ ಹತ್ತಿರವಾದ ಜಾನಪದ ರೂಪವಾದ ತ್ರಿಪದಿಯಲ್ಲೇ ನಿಮ್ಮ ಅನುಭವಗಳನ್ನು ಎರಕ ಹೊಯ್ಯಿರಿ"— ಎಂದರು. ಅದು ತಕ್ಷಣ ನಮಗೆ ಸ್ವೀಕೃತವಾಯಿತು. ಇನ್ನು ಅಂಕಿತ ಯಾವುದು? ಅದಕ್ಕೂ ವಾಲಿ ಗಂಗಪ್ಪನವರೇ ಸೂಕ್ತ ಸಲಹೆ ಮಾಡಿದರು. ನಮ್ಮ ಪ್ರತಿ ಉಪ ನ್ಯಾಸವನ್ನೂ ನಾವು "ಓಂ ಪೂರ್ಣಮದಃ...." ಸಂಸ್ಕೃತ ಶ್ಲೋಕದಿಂದಲೇ ಆರಂಭಿಸು ವದನ್ನು ಗಮನಿಸಿದ ಅವರು ಆ ನಮ್ಮ ಪ್ರೀತಿಯ ಪದ 'ಪೂರ್ಣತ್ವ'ವನ್ನೇ ತ್ರಿಪದಿಯ ಅಂಕಿತಗೊಳಿಸಿ.... "ಪೂರ್ಣಜ್ಞ" ಈ ಅಂಕಿತವೇ ನಿಮ್ಮ ಸ್ಥಾನಕ್ಕೂ ನಿಮ್ಮ ಹೃದಯಕ್ಕೂ ಮೆಚ್ಚುಗೆಯಾಗಬಲ್ಲುದು." ಎಂದಾಗ ಅದನ್ನೇ ನಮ್ಮ "ಪೂರ್ಣಜ್ಞ ವಚನ"ಗಳ ಅಂಕಿತ ವನ್ನಾಗಿ ಎತ್ತಿಕೊಂಡೆವು. ನಮಗೆ ಅಚ್ಚರಿಯಾಗುವಂತೆ, ನಮ್ಮ ನಿತ್ಯ ಜೀವನದ,

ನೂರಾರು ಬಣ್ಣ ಸುಣ್ಣಗಳ, ಸಾವಿರಾರು ಸಮಸ್ಯೆಗಳ, ಅಸಂಖ್ಯ ಜನರ, ನಿಜವಾದ ನೈಜ ಭಕ್ತಿಯುಳ್ಳವರ, ಜಗದ್ಗುರುಗಳೆಂದು ಕೇವಲ ಕೃತ್ರಿಮ ಭಕ್ತಿಯ ತೋರಿಕೆಯುಳ್ಳವರ, ನಮ್ಮವರಿಂದಲೇ ನಮಗಾದ ಕೆಲ ಕೆಲವು ತೊಂದರೆಗಳ, ಎಲ್ಲ ಧರ್ಮದವರೂ ನಮಗೆ ತೋರಿದ ಮಧುರ ಬಾಂಧವ್ಯಗಳ....ಈ ನೂರಾರು ಭಾವ–ವಿಭಾವಗಳ ರಾಶಿ ರಾಶಿಗಳೇ ಶಬ್ದರೂಪ ತೊಟ್ಟು ಕಾವ್ಯರೂಪಧಾರಣೆಮಾಡಿ ತ್ರಿಪದಿ ಪದಬಂಧದಲ್ಲಿ ಇಳಿದು ಬರುತ್ತಿರುವದು ನಮಗೆ ಕುತೂಹಲ ತಂದಿತು. ಇನ್ನೊಂದು ಆಶ್ಚರ್ಯದ ಸಂಗತಿಯೆಂದರೆ, ಮೊದಲು ನೂರಾ ಒಂದು ನುಡಿಗಳನ್ನು ಬರೆಯಬೇಕೆಂದು ಹೊಳಹು ಹಾಕಿಕೊಂಡು ಬರೆಯತೊಡಗಿದ. ನಮ್ಮಿಂದ ಹೆಚ್ಚು ಹೆಚ್ಚು ಪದ್ಯಗಳು ಧುಮುಕಿ ಬರ ತೊಡಗಿದವು. ಅದೇ ಕಾಲಕ್ಕೆ ಮಠಕ್ಕೆ ಬಂದ ಡಾ|| ತಿಪ್ಪೇರುದ್ರಸ್ವಾಮಿಗಳಿಗೂ ತೋರಿಸಿದೆವು. ಅವರು ನಮ್ಮ ತ್ರಿಪದಿಗಳನ್ನು ಸಾದ್ಯಂತವಾಗಿ ಗಮನಿಸಿ.... "ತ್ರಿಪದಿಗಳ ಬಂಧವೂ ಚೆನ್ನಾಗಿದೆ....ಭಾವವೂ ಸಹಜವಾಗಿ ಮೂಡಿ ಬಂದಿದೆ. ಸಾಧಕ ಜೀವನದ ಅಂತರಂಗದ ತಳಮಳ, ನಿರಂತರ ಕರ್ಮಯೋಗಿಯ ಕಾಯಕ ಜೀವನದ ಕಳವಳ, ಸಾಮಾಜಿಕ ಸೇವೆಯ ಕಳಕಳಿ, ಜಾಗೃತ ಮನಸ್ಸಿನ ನಿರ್ಲಿಪ್ತ ಪ್ರಜ್ಞೆ, ಇಲ್ಲೆಲ್ಲ ಹಾಸು ಹೊಕ್ಕಾಗಿವೆ. ಸಾವಿರದ ತ್ರಿಪದಿಗಳವರೆಗೆ ನಿಮ್ಮ ರಚನೆ ಮುಂದೆ ಸಾಗಲಿ" ಎಂದು ಮೆಚ್ಚಿ ಪ್ರೋತ್ಸಾಹಿಸಿದರು. ಇತ್ತಿತ್ತ ನಮಗೆ ಅರಿವಾಯಿತು..... "ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರನೇ ಈ ವಚನಗಳನ್ನು ನಮ್ಮಿಂದ ಬರೆಸುತ್ತಿದ್ದಾನೆ....ಲಿಪಿಕಾರ ನಾವು.... ಕವಿ ಅವನು....!" ಈ ಅಂತರಂಗದ ಪ್ರೇರಣೆಯಿಂದ ರಚನೆ ನಿರರ್ಗಳವಾಯಿತು. ಪೂಜೆಯಲ್ಲಿ ಕುಳಿತಾಗ, ಅಧ್ಯಯನದಲ್ಲಿ ನಿರತರಾದಾಗ, ರವಿವಾರದ ಮೌನದಲ್ಲಿದ್ದಾಗ, ಮುಂಜಾನೆ ತಿರುಗಾಡಲು ಹೋದಾಗ, ಕಾರ್‌ನಲ್ಲಿ ದೂರದ ಪ್ರವಾಸ ಮಾಡುವಾಗ, ಸಭೆ ಸಮಾರಂಭಗಳಲ್ಲಿ ಕುಳಿತಾಗ, ಕೂಡ....ಪದ್ಯಗಳು ನಿರರ್ಗಳವಾಗಿ ಮೂಡಿ ಬಂದವು. ನೂರರ ಸಂಕಲ್ಪ ಸಾವಿರ ಮುಟ್ಟಿತು! ಸಾವಿರದು ಗುರಿ ಇನ್ನೂ ಮುನ್ನೆಗೆದು ಮೂರು ಸಾವಿರವನ್ನೂ ದಾಟಿತು!! ನಮಗೆ ಗೊತ್ತಾಯಿತು....ಇನ್ನು ನಾವು ಬಿಟ್ಟರೂ ಬಿಡಲಾರದೇ ನಮ್ಮೊಂದಿಗೆ ಒಂದಾಗಿ ಬರುತ್ತಿರುವ ಸಾಹಿತ್ಯವಾಹಿನಿಯಿದು!!! ಎಂದು.

ಜನಪದ ಸಾಹಿತ್ಯ ಒಂದರ್ಥದಲ್ಲಿ ಜನತಾ ವಿಶ್ವವಿದ್ಯಾಲಯ. ಜಾನಪದ ಮನಸ್ಸಿನ ಉಸಿರು ಉಸಿರಿನೊಂದಿಗೆ ಹಸಿರಾಗಿ ಪುಟಿಯುವ ಜೀವಂತ ಕಾರಂಜಿ ಜನಪದರ ಸಾಹಿತ್ಯ. ಇದು ಬತ್ತಲಾರದ ಹಾಲಿನ ತೊರೆ. ನಿಲ್ಲಲಾರದ ಕೋಗಿಲೆಯ ಕೂಜನ. ದಣಿಯಲಾರದ ಜ್ವಲಂತ ಮಹಾಕಾವ್ಯ. ಕೇಳಿದ ತಕ್ಷಣವೇ ಹೃದಯ ಮನಸ್ಸುಗಳನ್ನು ಮುಟ್ಟುವ ಸಾಹಿತ್ಯವೆಂದರೆ ವಿಶ್ವದಲ್ಲಿ ಜನಪದ ಸಾಹಿತ್ಯವೊಂದೇ. ಅಂದು–ಇಂದು–ಎಂದೆಂದಿಗೂ ಈ ಸಾಹಿತ್ಯ ನಿರ್ಮಿತಿಗೆ ಪೂರ್ಣ ವಿರಾಮವಿಲ್ಲ ಎಂಬುದಕ್ಕೆ ನಾವೇ ಸಾಕ್ಷಿ. ಅವ್ಯಕ್ತವಾಗಿ ಹುಟ್ಟಿ ಹರಿದ ಜಾನಪದ ರಸಗಂಗೆ ಇಂದು ಗ್ರಂಥಸ್ಥವಾಗಿ ಮಾನವ ಚಿಂತನದ ಮಹಾಸಾಗರದತ್ತ ಮಿಂಚಿ ಪ್ರವಹಿಸುತ್ತಿದೆಯಲ್ಲವೇ? ಇದು ನಮ್ಮ

ಸಾಹಿತ್ಯ, ನಮ್ಮವರ ಸಾಹಿತ್ಯ, ನಮ್ಮೆಲ್ಲರ ಪ್ರೀತಿ-ಪ್ರೇಮ-ವಾತ್ಸಲ್ಯಗಳನ್ನು ರಾಷ್ಟ್ರೀಯ ಮನಸ್ಸಿನಲ್ಲಿ ಬಿತ್ತಿ-ಬೆಳೆಯಬಲ್ಲ ಜೀವಂತ ಸಾಹಿತ್ಯ!

ಇಲ್ಲಿ ಕಂಡದ್ದನ್ನು ಕಂಡ ಹಾಗೆ ಹಾಡುವ ತವಕ ನಮ್ಮದು. ನಮ್ಮ ಸಾಮಾಜಿಕ ಸೇವೆಯ ಜೀವನದ ಪದರು ಪದರುಗಳಲ್ಲಿ ಹದವರಿತು ಬಿಚ್ಚು ಮಲ್ಲಿಗೆಯಾಗಿ ಅರಳಿ ಬಂದ ಪ್ರಕಾರವಿದು. ಇಲ್ಲಿ ಕವಿ ಬೇರೆ, ಕವಿ ಭಾವ ಬೇರೆ ಆಗಿಲ್ಲ. ಕವಿಯ ಸಮಸ್ತ ಮಾನವ ಸ್ತರಗಳ ದಿಗ್‌ದಿಗಂತಗಳೇ ಇಲ್ಲಿ ಶಬ್ದಾಂಜಲಿ ತೊಟ್ಟು ಮುಕ್ತವಾಗಿ ಮೂಡಿ ಬಂದಿವೆ. ಜೊತೆಗೆ ಪ್ರಕೃತಿ ಪ್ರೇಮ, ಆರೋಗ್ಯ, ಒಕ್ಕಲುತನ, ಕಲೆ, ಕಾವ್ಯ, ಸಾಹಿತ್ಯ, ಭಗವದ್ಭಕ್ತಿ, ಆತ್ಮದರ್ಶನ, ಶಿವದರ್ಶನ, ಚಾರಿತ್ರ್ಯ ನಿರ್ಮಾಣ, ರಾಜಕೀಯದಲ್ಲಿ ಅರಾಜಕತೆ, ದುಂದು-ದಾಂಧಲೆಗಳು, ಶಿಸ್ತು-ಸೇವೆ, ವ್ಯಾಪಾರ ರಂಗದ ಶುದ್ಧಿ, ವಿದ್ಯಾರ್ಥಿ ಜೀವನ, ಮಹಿಳಾ ಜೀವನ, ಬಾಲ್ಯಜೀವನ, ಒಗಟುಗಳು, ಸ್ವಾಮಿಜೀವನ, ವಿಜ್ಞಾನದ ಸಾಧನೆಗಳು, ಜಾಗತಿಕ ಧರ್ಮಗಳ ಮಹತ್ತರವಾದ ಮಾನವೀಯ ಮೌಲ್ಯಗಳು, ವೀರ ಶೈವ ಷಟ್‌ಸ್ಥಲದರ್ಶನ....ಇತ್ಯಾದಿ ಇತ್ಯಾದಿ....ಯಾಗಿ ಮೂಡಿ ಬಂದ ನೂರಾರು ವಿಷಯ ವೈವಿಧ್ಯಗಳನ್ನು ಇಲ್ಲಿ ೩೫ ಶೀರ್ಷಿಕೆಗಳಲ್ಲಿ ಸಂಗ್ರಹಿಸಲಾಗಿದೆ. ಈ ಶೀರ್ಷಿಕೆ ಗಳು ಅಧ್ಯಯನದ ಸೌಲಭ್ಯಕ್ಕಾಗಿ ಮಾತ್ರ ಇವೆ; ಶೀರ್ಷಿಕೆಗಳೇ ಮುಖ್ಯವಲ್ಲ. ಅನೇಕ ವಚನಗಳು ಅನೇಕ ಬಗೆಯ ವಸ್ತು-ವಿಷಯ ವಿನ್ಯಾಸಗಳನ್ನೂ ಸೂಕ್ಷ್ಮ ತಿರುವುಗಳನ್ನೂ ಪಡೆದಿವೆ. ಜೊತೆ ಜೊತೆಗೆ ೧೯-೨೦ ನೆಯ ಶತಮಾನದಲ್ಲಿ ಶೈಕ್ಷಣಿಕ-ಸಾಮಾಜಿಕ-ಧಾರ್ಮಿಕ ಕಾರ್ಯ ಮಾಡಿದ ಮಹಾನ್ ವ್ಯಕ್ತಿಗಳ ಸಾಧನೆ-ಬೋಧನೆಗಳನ್ನು ಗುಣ ಗ್ರಹಣ ಮಾಡಲು ಪ್ರಯತ್ನಿಸಲಾಗಿದೆ. ಸರ್ವಧರ್ಮಗಳ ಹಾಗೂ ಸಕಲ ಧರ್ಮಗಳ ಮಹಾತ್ಮರ ಸಾರದರ್ಶನಗಳನ್ನು ಅಡಕಗೊಳಿಸುವ ಪ್ರಯತ್ನವನ್ನು ಇಲ್ಲಿ ಮಾಡಿದ್ದೇವೆ. ಗ್ರಂಥದ ಮರು ಮುದ್ರಣದಲ್ಲಿ ಇನ್ನಿಷ್ಟು ವ್ಯಕ್ತಿಗಳ-ಶಕ್ತಿಗಳ ಕುರಿತು ಬರೆಯುವ ತವಕ ನಮ್ಮದು. ಶಿವಾದ್ವೈತ ದರ್ಶನ ವಿಭಾಗದಲ್ಲಿ ತಕ್ಕಮಟ್ಟಿಗೆ ವೀರಶೈವ ಸಿದ್ಧಾಂತದ ಸಾರದರ್ಶನವನ್ನೂ, ಶರಣರ-ಶರಣ ಕವಿಗಳ ವಿವೇಕದರ್ಶನವನ್ನೂ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಈ ಗ್ರಂಥಕ್ಕೆ ಮುನ್ನುಡಿಯನ್ನು ನಾಡಿನ ಅಗ್ರಗಣ್ಯ-ಸಾಹಿತಿಗಳಾದ ಸನ್ಮಾನ್ಯ ಡಾ|| ಎಚ್. ತಿಪ್ಪೇರುದ್ರಸ್ವಾಮಿಗಳು ನೀಡಿರುವುದು ನಮಗೆ ಸಂತೋಷ ತಂದಿದೆ. ಅವರ ಮುನ್ನುಡಿ ಈ ಕೃತಿಗೆ ಕಲಶಪ್ರಾಯವಾಗಿದೆ. ತೂಕಬದ್ಧವಾದ, ವಿವೇಚನಾ ಪರಿಪೂರ್ಣವಾಗಿ ವಿಮರ್ಶಿಸಿ ಈ ಗ್ರಂಥಕ್ಕೆ ಕಳೆತಂದಿದ್ದಾರೆ.

ಈ ಕಾವ್ಯ ರಚನೆಯುದ್ದಕ್ಕೂ ಆಗಾಗ ನಮ್ಮ ಎಲ್ಲ ತ್ರಿಪದಿಗಳನ್ನು ಓದಿ, ಸಕಾಲಿಕ ತಿದ್ದುಪಡಿಗಳನ್ನು ಸಮರ್ಪಣಾ ಮನೋಭಾವದಿಂದ ನೀಡಿದ ಕವಿ ಗಂಗಪ್ಪ ವಾಲಿಯವರನ್ನು ನಾವು ಎಂದಿಗೂ ಮರೆಯುವಂತಿಲ್ಲ.

ಇದರಲ್ಲಿರುವ ಶಿವಾದ್ವೈತ ದರ್ಶನವನ್ನು ಸಂಪೂರ್ಣ ಓದಿ, ಮೆಚ್ಚುಗೆ

ನೀಡಿದವರಲ್ಲಿ ಡಾ|| ಜ.ಚ.ನಿ. ಅವರು ಅಗ್ರಗಣ್ಯರು. ಕೆಲವು ತಿದ್ದುಪಡಿಗಳೊಂದಿಗೆ ಸಹಕರಿಸಿದ್ದಾರೆ. ಇದೇ ರೀತಿ ತೆಲಸಂಗದ ಹಿರಿಯಮಠದ ಷ. ಬ್ರ. ಬಸವಲಿಂಗ ಪಟ್ಟಾಧ್ಯಕ್ಷರು, ಮೋರಬದ ಷ. ಬ್ರ. ಗಂಗಾಧರ ಶಿವಾಚಾರ್ಯರು, ಶ್ರೀ ಪಿ. ಬಸವಣ್ಣ, ಪ್ರೊ|| ಜಿ. ಎಚ್. ಹನ್ನೆರಡುಮಠ, ಪ್ರೊ|| ಪರಡ್ಡಿ, ಈ ಕಾವ್ಯ ರಚನೆಯುದ್ದಕ್ಕೂ ಪ್ರೋತ್ಸಾಹಿಸಿದ್ದಾರೆ.

ಮುಖ್ಯವಾಗಿ, ನಮ್ಮ ಜಗದ್ಗುರು ಗಂಗಾಧರ ಹೈಸ್ಕೂಲಿನ ಅಧ್ಯಾಪಕರಾದ ಶ್ರೀ ಕೊಟ್ರೇಶ್ ಆರಾಧ್ಯಮಠ ಅವರು ಆಗಾಗ ನಾವು ಬರೆದ, ಅಲ್ಲಲ್ಲಿ ಚದುರಿಹೋದ ಮೂರು ಸಾವಿರ ತ್ರಿಪದಿಗಳೆಲ್ಲವನ್ನೂ ತುಂಬಾ ಜಾಣ್ಮೆಯಿಂದ ಶ್ರಮವಹಿಸಿ, ವಿಷಯಾನುಸಾರ ವಿಂಗಡಿಸಿ, ಸೂಕ್ತ ಶಿರೋನಾಮೆಗಳೊಂದಿಗೆ ಗುರುತಿಸಿ, ಅಚ್ಚಿಗೆ ಅಣಿಗೊಳಿಸಿದ್ದು ನಮ್ಮ ಬಹುದೊಡ್ಡ ಭಾರವನ್ನು ಹಗುರಗೊಳಿಸಿದಂತಾಗಿದೆ.

ಇದರಲ್ಲಿಯ ಹಲವಾರು ಪದ್ಯಗಳು ಕರ್ಮವೀರ, ವಿಶೇಷಾಂಕ, ಪರಂಜ್ಯೋತಿ, ಕಸ್ತೂರಿ ಮುಂತಾದ ಪತ್ರಿಕೆಗಳಲ್ಲಿ ಪ್ರಕಟಗೊಂಡು ನಮಗೆ ನವಸ್ಫೂರ್ತಿ ನೀಡಿವೆ. ಅವರಿಗೆಲ್ಲ ನೆನಕೆಗಳು.

ಪುಸ್ತಕಗಳನ್ನು ನೀಟಾಗಿ, ಅಷ್ಟೇ ತುರ್ತಾಗಿ ಮುದ್ರಿಸುವಲ್ಲಿ ನಾಡಿಗೇ ಹೆಸರಾದ ತ್ವರಿತ ಮುದ್ರಣಾಲಯದ ಸಮರ್ಥಜೀವ ಫ. ಶಿ. ಭಾಂಡಗೆಯವರ ಕೆಲಸ ಯಾರು ಮೆಚ್ಚುವಂಥದು; ತೀರಾ ಅಲ್ಪಾವಧಿಯಲ್ಲಿ ಈ ಗ್ರಂಥವನ್ನು ಮುದ್ರಿಸಿದ ಅವರ ಜೀವನ ಸುಖಮಯವಾಗಲೆಂದು ಮನಸಾ ಹಾರೈಸುತ್ತೇವೆ.

ಈ ತ್ರಿಪದಿಗಳನ್ನು ಪ್ರೀತಿಯಿಂದ ಓದಿ, ತಮ್ಮ ಅಭಿಪ್ರಾಯಗಳನ್ನು ಸಮಸ್ತ ಕನ್ನಡಿಗರು ನೀಡಿ, ನಮ್ಮ ಮುಂದಿನ ಸಾಹಿತ್ಯ ರಚನಾಕ್ರಿಯೆಗೆ ಕಾರಣರಾಗಲೆಂದು ಹೃದಯಾರೆ ಹಾರೈಸುತ್ತೇವೆ.

ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರರು ಸಕಲರಿಗೂ ಶುಭ ನೀಡಲಿ.

|| ಸತ್ಯಂ ಶಿವಂ ಸುಂದರಂ ||

ಮೂರುಸಾವಿರಮಠ, ಹುಬ್ಬಳ್ಳಿ

— ಶ್ರೀ ಮೂಜಗಂ

# ಪ್ರಕಾಶಕರ ಮಾತು

ಹುಬ್ಬಳ್ಳಿ ಮೂರುಸಾವಿರಮಠದ ಪೂಜ್ಯ ಜಗದ್ಗುರು ಮಹಾಸನ್ನಿಧಿಯವರು ಹುಟ್ಟು ಕವಿಗಳು! ಕಲ್ಬೆಟ್ಟದ ಚೆಲುವು-ಚಿಗುರು-ಹಸಿರು-ಹೂವುಗಳ-ವನಶ್ರೀಯ ಮಡಿಲಲ್ಲಿ ಮಗುವಾಗಿ ಆಡಿ ಬೆಳೆದ ಸಹಜ ಚೇತನ ಅವರು. ಜನ್ಮತಃ ಭಾವಜೀವಿಗಳು. ಮಹಾತಪಸ್ವಿ ಚಿತ್ತರಗಿ ಇಲಕಲ್ ಲಿಂಗೈಕ್ಯ ವಿಜಯಮಹಾಂತ ಸ್ವಾಮಿಗಳವರ ವಂಶಜರಾದ ಇವರ ಉಸಿರು ಉಸಿರಿನಲ್ಲೂ ಅಧ್ಯಾತ್ಮ, ಧರ್ಮ-ಸಿದ್ಧಾಂತಗಳ ಪ್ರೀತಿ ಚಿರನೂತನ ಕಾರಂಜಿಯಾಗಿ ಪುಟಿಯುತ್ತಿರುವದು ಸತ್ಯ.

ಸಸಿವಾಳದ ಈ ಶಿವಲಿಂಗಚೇತನ ಮಲಪ್ರಭಾತೀರದ ಶಿವಯೋಗಮಂದಿರದಲ್ಲೂ, ಗಂಗಾತೀರದ ಪ್ರೌಢ ಅಧ್ಯಯನದಲ್ಲೂ ತನ್ನ ಈ ಮೂಲಧರ್ಮವನ್ನು ಕಳೆದುಕೊಳ್ಳಲಿಲ್ಲ. ಇನ್ನೂ ಮಿಗಿಲುಗೊಳಿಸಿತು. ಆಗಲೇ 'ಮೊಗ್ಗೆಯ ಮಾಲೆ', 'ಪೂಮಾಲೆ', 'ವಿಜಯ ಮಹಾಂತ ಲಾವಣಿ', 'ಪಥಿಕ'—ಮುಂತಾದ ಪ್ರಾರಂಭದ ಕೃತಿಗಳಲ್ಲಿ ಇವರ ಅನೇಕ ಭಾವಗೀತೆಗಳು, ದ್ವಿಪದಿ, ಕಂದಪದ್ಯ, ಚೌಪದಿ, ಷಟ್ಪದಿಗಳಲ್ಲಿ ತೀಡಿಬಂದವು. ಆದರೆ, ಶ್ರೀ ಜಗದ್ಗುರು ಮೂರುಸಾವಿರಮಠದ ಮಹಾನ್ ನೊಗಭಾರ ಬಿದ್ದಾಗ ಆ ಯುವ ಚೇತನದ ಸಾಧನೆಯ ಸೊಗಸಿನ ಪ್ರವಾಹ ಕೆಲಕಾಲ ಅನಿವಾರ್ಯತೆಯಿಂದ ನಿಂತು ಹೋಯಿತು. ಆದರೆ ಗದ್ಯರಚನೆ, ವಚನ ರಚನೆಗಳ ಇನ್ನೊಂದು ಪ್ರಕಾರ ನಿಲ್ಲದೆ, ಮುನ್ನಡಿ ಇಟ್ಟಿತು.

ಹಿರಿಯ ಕವಿಗಳಾದ ಶ್ರೀ ಗಂಗಪ್ಪ ವಾಲಿ ಅವರ ಕಳಕಳಿಯ ಕರೆಯಿಂದ ಪೂಜ್ಯ ಜಗದ್ಗುರು ಸನ್ನಿಧಿಯವರ ಕವಿತಾ ರಚನೆ ಮರುಜನ್ಮ ಪಡೆಯಿತು, ತ್ರಿಪದಿಗಳ ನವೀನ ಆವೇಶದಲ್ಲಿ! ಈ ಹೊಸ ಪ್ರೇರಣೆ ಎನಿತೊಂದು ಪ್ರಭಾವಪೂರ್ಣವಾಗಿತ್ತೆಂದರೆ, ಮೊದಲು ನೂರು ವಚನಗಳನ್ನು ಬರೆವ ಸಂಕಲ್ಪ ಹೊತ್ತು ಬರೆಯಲಾರಂಭಿಸಿದ ಇವರ ರಚನೆ, ನೂರರಿಂದ ಸಾವಿರಕ್ಕೆ, ಸಾವಿರದಿಂದ ಮೂರುಸಾವಿರಕ್ಕೆ ಪವಾಡಸದೃಶವಾಗಿ ಏರಿತು.

ಸರ್ವಜ್ಞ ಕವಿಯ ತ್ರಿಪದಿ ಸಾಹಿತ್ಯದ ನಂತರ ಈ ಬಗೆಯ ವಿಶಿಷ್ಟ ಸಾಹಿತ್ಯ ರಚನೆ ಸಂಪೂರ್ಣ ಸ್ಥಗಿತವಾಗಿತ್ತು. ಇಂದು ೨೦ನೆಯ ಶತಮಾನದ ಈ ಉತ್ತರಾರ್ಧದಲ್ಲಿ ಆ "ಸರ್ವಜ್ಞ ಸಾಹಿತ್ಯ"ವು "ಪೂರ್ಣಜ್ಞ ಸಾಹಿತ್ಯ"ದ ಇನ್ನೊಂದು ಮಜಲಿನಲ್ಲಿ ಏರಿ ನಿಂತಿರುವದನ್ನು ಕಾಣುತ್ತೇವೆ. ಓರ್ವ ಸ್ವಾಮಿಗಳವರಾಗಿ, ಜಗದ್ಗುರುಗಳಾಗಿ ಈ ಬಗೆಯ ಜೀವನದ ನೂರಾರು ಮುಖಗಳನ್ನು ದರ್ಶಿಸುವ, ವಿಮರ್ಶಿಸುವ-ಪರಾಂಬರಿಸುವ ಸಾಹಿತ್ಯ ರಚನೆ ಆರಂಭವಾದುದು, ಕನ್ನಡ ಸಾಹಿತ್ಯದಲ್ಲಿಯೇ ಇದು ಪ್ರಪ್ರಥಮ ಬಾರಿಗೆ. ಈಗಾಗಲೇ ನಾಡಿನ ಅನೇಕ ಘನವಿದ್ವಾಂಸರೂ, ಅಧ್ಯಯನಶೀಲರೂ ಅಲ್ಲಲ್ಲಿ ಪ್ರಕಟವಾದ

ಈ ತ್ರಿಪದಿಗಳನ್ನು ಓದಿ ತುಂಬಾ ತುಂಬಾ ಶ್ಲಾಘಿಸಿ ಬರೆದದ್ದುಂಟು. ಈ ಬಹುಜನರಿಂದ ಬಂದ ಮುಕ್ತ ಸ್ವೀಕೃತಿಯೇ ಈ ಗ್ರಂಥದ ವಿಸ್ತೃತ ವ್ಯಾಪ್ತಿಗೆ ಇನ್ನಿಷ್ಟು ಕಾರಣ.

ಒಂದು ಶ್ರೇಷ್ಠ ಜಗದ್ಗುರು ಪೀಠದಲ್ಲಿದ್ದೂ ಜೀವನದ ನೂರೆಂಟು ಸಮಸ್ಯೆಗಳ ಒಳ–ಹೊರ ಪದರುಗಳನ್ನು ಇಲ್ಲಿ ಕಂಡರಿಸಿದ್ದಾರೆ. ಸಂಸಾರದ ಸರಸ–ವಿರಸಗಳು, ಬದುಕಿನ ನೂಕು–ನುಗ್ಗಲು, ಸಾಮಾಜಿಕ ಜೀವನದ ಅಶಾಂತಿ–ಕ್ಷೋಭೆಗಳು, ಇವುಗಳ ಜೊತೆಗೆ ಸರ್ವಧರ್ಮಗಳ ಸಮಭಾವನೆ, ಮಾನವೀಯ ಚಿಂತನ, ಸಾಹಿತ್ಯ, ಲಲಿತಕಲೆಗಳ ಸಮದೃಷ್ಟಿ, ವರ್ಗ–ವರ್ಣ ವಿಭೇದಗಳು, ಸಿದ್ಧಾಂತ, ತತ್ತ್ವದರ್ಶನ, ವೀರಶೈವ ಮಾತ್ರ ವಲ್ಲದೆ ವಿಶ್ವದ ನಾನಾ ಧರ್ಮಗಳ ಧರ್ಮಪುರುಷರು, ಮಹಾತ್ಮರು, ಪುಣ್ಯಪುರುಷರು ಇಂದಿನ ಕ್ರಿಯಾಶೀಲ ವ್ಯಕ್ತಿಗಳ ಕಾರ್ಯರಂಗ, ಹೀಗೆ ಗತಿ ಶೀಲ–ಪ್ರಗತಿ ಶೀಲ ಸತ್ವ ಪರಂಪರೆಗಳನ್ನೂ ಇಲ್ಲಿ ಬಿಡಿಬಿಡಿಯಾಗಿಯೂ ಇಡಿಯಾಗಿಯೂ ಆಸ್ವಾದಿಸಿದ್ದಾರೆ.

ಇವರ 'ಪೂರ್ಣಜ್ಞ' ವಚನಗಳನ್ನು ಕುರಿತು ಅನೇಕ ವಿದ್ವಾಂಸರ ಸಾರವಿಮರ್ಶೆಯ ಬರಹಗಳನ್ನು ಷಷ್ಟ್ಯಬ್ದಿ 'ಮಹಾಭಿನಂದನ ಸಂಪುಟ'ದ ಎರಡನೆಯ ಸಂಪುಟದಲ್ಲಿ ವಿವರವಾಗಿ ಗಮನಿಸಬಹುದು.

ಸಾಹಿತ್ಯ ಕೃಷಿಯಲ್ಲಿ ವಿಶೇಷ ಒಲವನ್ನಿರಿಸಿಕೊಂಡ ಪರಮಪೂಜ್ಯ ಜಗದ್ಗುರು ಗಳವರ 'ಪೂರ್ಣಜ್ಞ ವಚನಗಳು' ಅವರ ಸಾಹಿತ್ಯ ಬದುಕಿನ ವಿಶಿಷ್ಟ ರಚನೆಗಳು! ತನ್ಮೂಲಕ ಅವರು ಕನ್ನಡ ಸಾಹಿತ್ಯಕ್ಕೆ ಉತ್ತಮ ಕೊಡುಗೆ ನೀಡಿ ಅಭಿನಂದನಾರ್ಹರಾಗಿ ದ್ದಾರೆ. ಇಂತಹ ಉತ್ತಮ, ಹೆಮ್ಮೆಯ ಕೃತಿಯನ್ನು ಪ್ರಕಟಿಸುವ ಮೂಲಕ ನಮ್ಮ ಪ್ರಕಾಶನದ ಸಾಹಿತ್ಯ ಪ್ರಕಟನೆ–ಪ್ರಸಾರಗಳ ಕಿರೀಟಕ್ಕೆ ಒಂದು ಸುಂದರ ಗರಿ ಯನ್ನಿಟ್ಟಂತಾಗಿದೆ!!

ವಾಚಕರು ಈ ಕೃತಿಯನ್ನು ಸಂತಸದಿಂದ ಬರಮಾಡಿಕೊಂಡು ಪ್ರೋತ್ಸಾಹಿಸುವ ರೆಂಬ ನಂಬಿಕೆ ನಮ್ಮದು. ಈ ಗ್ರಂಥದಲ್ಲಿ ಅಕಸ್ಮಾತ್ ಇಣುಕಿದ ತಪ್ಪುಗಳನ್ನು ಮರು ಮುದ್ರಣದಲ್ಲಿ ತಿದ್ದಿಕೊಳ್ಳಲಾಗುವದು. ಈ ಬೃಹತ್ ಗ್ರಂಥವನ್ನು ರಚಿಸಿದ ಪರಮ ಪೂಜ್ಯ ಶ್ರೀ ಸನ್ನಿಧಿಯವರಿಗೆ ನಮ್ಮ ಪ್ರಣಾಮಗಳು ಸಲ್ಲುತ್ತವೆ. ಅದರೊಂದಿಗೇ ಈ ಗ್ರಂಥವನ್ನು ಸಕಾಲಿಕವಾಗಿ, ಸುಂದರವಾಗಿ ಮುದ್ರಿಸಿಕೊಟ್ಟ, ತ್ವರಿತ ಮುದ್ರಣಾಲಯದ ಮಾಲೀಕರಿಗೂ ನಾವು ಅಭಿನಂದಿಸುತ್ತೇವೆ.

ಪ್ರಕಾಶಕರು,

ಹುಬ್ಬಳ್ಳಿ

ದಿ: 2–9–1991

ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ,
ಮೂರುಸಾವಿರಮಠ ಹುಬ್ಬಳ್ಳಿ.

# ಪರಿವಿಡಿ

# ಪ್ರಾರ್ಥನೆ—ನಿವೇದನೆ

ಶ್ರೀ ಗುರುವೆ ಗುರುಸಿದ್ಧ, ಯೋಗಬಲ ಸಮೃದ್ಧ
ಬಾಗುವೆನು ನಿನ್ನಮೆಲ್ಲಡಿಗೆ ಕೃಪೆಯಾಗು
ನೀಗಿಸೈ ಭವವ ಪೂರ್ಣಜ್ಞ.

೨

ಮೂರಳಿದು ಮೂರರಿದು ಸಾರಸತ್ವವ ತಿಳುಹಿ
ಮಾರಮರ್ದನಗೈದ ಗುರುಸಿದ್ಧಯತಿಯೆ
ಪಾರುಮಾಡಯ್ಯ ಪೂರ್ಣಜ್ಞ.

೩

ಸಿದ್ಧರಲಿ ಸಿದ್ಧೇಂದ್ರ, ಶುದ್ಧ ಸದ್ಗುಣ ಸಾಂದ್ರ
ಬಿದ್ದವರನೆತ್ತಿ ಬಿಗಿದಪ್ಪಿ ರಕ್ಷಿಸುವ
ಸಿದ್ಧ ಶ್ರೀ ಗುರುವೆ ಪೂರ್ಣಜ್ಞ.

೪

ಭ್ರೂಲತಾಪುರವಾಸ ಕಾಲಕರ್ಮಾತೀತ
ಬಾಳಲೋಚನ ರೂಪ ಯತಿಪ ಗುರುಸಿದ್ಧ
ಪಾಲಿಸೈ ಮುದದಿ ಪೂರ್ಣಜ್ಞ.

೫

ಹುಬ್ಬಳ್ಳಿಪುರವರದ ಕಬ್ಬಿಗರ ಹೃನ್ಮೂರ್ತಿ
ಶುಭ್ರಜೀವನದ ಸಕಲರಿಗೆ ಚಿನ್ಮೂರ್ತಿ
ಮಬ್ಬು ಕಳೆಯಯ್ಯ ಪೂರ್ಣಜ್ಞ.

೬

ಮೂರುಸಾವಿರಮಠದ ಕಾರಣಪುರುಷ ನೀನು
ಆರು ತತ್ತ್ವಗಳ ತಿಳುಹಿಸಿದ ಚಿದ್ಯೋಗಿ
ಕೋರುವೆನು ಸುಮತಿ ಪೂರ್ಣಜ್ಞ.

೭

ಮೂಜಗದ ಕತ್ತಲೆಯು ತೇಜದಿಂ ಕಳೆಯಲ್ಕೆ
ಓ ಜಗದ್ಗುರುವೆ ಕೃಪೆ ಮಾಡು ಜವದಿಂದ
ಮೂಜಗದ ಓಜ! ಪೂರ್ಣಜ್ಞ.

೮

'ಪೂರ್ಣಜ್ಞ'ನೆಂಬೆನಗೆ ಪೂರ್ಣತ್ವದರಿವು ಪರಿ-
ಪೂರ್ಣವಪ್ಪಂತೆ ಪ್ರಜ್ಞಾಪ್ರಕಾಶವನು
ಪೂರ್ಣತೋರಯ್ಯ ಪೂರ್ಣಜ್ಞ.

೯

'ಪೂರ್ಣಜ್ಞ'ನೆಂದೊಡನೆ ಪೂರ್ಣದರಿವಿನ ನುಡಿಯು
ಪೂರ್ಣ ತುಂಬಿಹುದೆಂದು ಬಗೆಯಬೇಡಿರಿದು
ಪೂರ್ಣಕ್ಕೆ ಪಥವು ಪೂರ್ಣಜ್ಞ.

೧೦

'ಸರ್ವಜ್ಞ'ನಂದದಲಿ ಸರ್ವರೊಳಗೊಂದೊಂದ-
ಪೂರ್ವ ನುಡಿಗಲಿತು ತ್ರಿಪದಿ ರಚಿಸುವ ಕಾರ್ಯ
ನಿರ್ವಿಘ್ನಗೊಳಿಸು ಪೂರ್ಣಜ್ಞ.

೧೧

ನಿರ್ವಿಕಲ್ಪದೊಳಿರ್ದು ಸರ್ವರನು ಸಲಹುತ್ತ
ಉರ್ವಿಯೊಳು ಮೆರೆವ ಗುರುಸಿದ್ಧ ಶಿವಯೋಗಿ
ಸರ್ವಜ್ಞ ನೀನು ಪೂರ್ಣಜ್ಞ.

೧೨

ನೀನಿರವೆ ಗತಿಯಿಲ್ಲ ನೀನಿರದೆ ಮತಿಯಿಲ್ಲ
ನೀನೆ ಜಗಕೆಲ್ಲ ಆಧಾರ ಗುರುವೆ ನಾ
ನಿನ್ನ ಮರೆಹೊಕ್ಕೆ ಪೂರ್ಣಜ್ಞ.

೧೩

ಏನೆಲ್ಲ ಸಾಧನೆಗೆ ಧ್ಯಾನಬಲವೇ ಬಲವು
ಶ್ವಾನನಂತಿರುವ ಮನವ ಬಿಗಿಹಿಡಿದಿಡಲು
ಧ್ಯಾನವೇ ಬೇಕು ಪೂರ್ಣಜ್ಞ.

೧೪

ಪರರ ಚಿಂತೆಯ ಮಾಡಿ ಕೊರಕೊರಗುತಿಹೆನಯ್ಯ
ಗುರುದೇವ ನಿನ್ನ ಚರಣ ಚಿಂತನೆ ಕಲಿಸು
ಕರುಣಾಸಮುದ್ರ ಪೂರ್ಣಜ್ಞ.

೧೫

ಧ್ಯಾನವಿಲ್ಲದ ಮೌನ ಮೌನವಿಲ್ಲದ ಧ್ಯಾನ
ಕೇಣ ತುಂಬಿರುವ ಆ ಧ್ಯಾನ ಬಕಪಕ್ಷಿ
ಧ್ಯಾನದಂತಕ್ಕು ಪೂರ್ಣಜ್ಞ.

೧೬

ಭಾರವನು ಹೊತ್ತಿಹೆನು, ದಾರಿಯಲಿ ನಡೆದಿಹೆನು
ವೀರಶೈವರು ಸಂಘಟಿಪ ಮಣಿಹದಲ್ಲಿ
ಕೋರುವೆನು ಯಶವ ಪೂರ್ಣಜ್ಞ.

೧೭

ಕಲ್ಲುಮುಳ್ಳುಗಳನ್ನು, ಚೆಲ್ಲುವರು ಹಾದಿಯಲಿ
ಕ್ಷುಲ್ಲಕರು ಬರಿದೆ ತಾಪವೀಯುತ್ತಿಹರು
ತಲ್ಲಣವ ತವಿಸು ಪೂರ್ಣಜ್ಞ.

೧೮

ಬರೆವವರು ಬಹಳ ಜನ, ಧರಣಿಯೊಳು ತುಂಬಿಹರು
ಬರಹದಂತಿರುವ ಜನರೆಷ್ಟು ಗುರುದೇವ ?
ಕರುಣೆಸೆಸಗರಿವ ಪೂರ್ಣಜ್ಞ.

೧೯

ನಾನೆಂಬುದೆನಗಿಲ್ಲ, ನೀನೆಂಬುವರಿವಿಲ್ಲ
ನೀನೊಲಿದು ನೀಡೆನಗೆ ಸಮರಸದ ದಿವ್ಯ
ಧ್ಯಾನಲೀನತೆಯ ಪೂರ್ಣಜ್ಞ

೨೦

ತಂದೆ ತಾಯಿಯು ನೀನು, ಬಂಧು ಬಳಗವು ನೀನು
ಸಂದೇಹವನ್ನ ಅಡ್ಡೈಸುತಿರೆ ಬೇಗ
ಬಂದು ಮುನ್ನಡಸು ಪೂರ್ಣಜ್ಞ.

೨೧

ಹಿಂದು ಮುಂದಿಲ್ಲೆನಗೆ, ಮುಂದಿಪ್ಪದರಿಯದೆಯೆ
ಬಂಧನದಿ ಸಿಲುಕಿ ಬಳಲುತ್ತಲಿಹೆನಯ್ಯ
ಬಂಧನವ ಬಿಡಿಸು ಪೂರ್ಣಜ್ಞ.

೨೨

ಸಾಗದಾಗಿದೆ ಹಾದಿ, ಹೇಗೋ ಏನೋ ಮುಂದೆ
ಕೂಗುತಿಹೆನಯ್ಯ ನಿನ್ನ ನೆರವನು ಬಯಸಿ
ಬೇಗ ಬಾ ಗುರುವೆ ಪೂರ್ಣಜ್ಞ.

೨೩

ಭೌತಿಕದ ಬೆಂಬತ್ತಿ, ತಾತ್ವಿಕವ ಮರೆತಿಹೆನು
ಭೌತಿಕದ ಆಶೆ ಬಿಡಿಸಿ, ಆಧ್ಯಾತ್ಮಿಕದ
ಚಿಂತನೆಯ ಕಲಿಸು ಪೂರ್ಣಜ್ಞ.

೨೪

ಜೀವನದ ಸಾಗರದಿ ನೋವುಗಳನನುಭವಿಸಿ
ಸಾವಿಗಂಜದಲೆ ಈಸಿಹೆನು, ಸೋತಿಹೆನು
ದೇವ, ದಯೆದೋರು ಪೂರ್ಣಜ್ಞ.

೨೫

ನಾನನಾಥನು ದೇವ! ದೀನರಕ್ಷಕ ನೀನು
ಜ್ಞಾನನಿಧಿ ಕರುಣೆ ಮನ್ನಿಸೈ ಪಾಲಿಸೈ
ಮೌನಿ ಗುರುಸಿದ್ಧ ಪೂರ್ಣಜ್ಞ.

೨೬

ತಪ್ಪು ಮಾಡಿಹೆನೆಂದು, ಕೋಪಗೊಳ್ಳದಿರಯ್ಯ
ಅಪ್ಪ ಗುರುಸಿದ್ದಪ್ಪ ನಿನ್ನ ಕಂದನನು
ಅಪ್ಪಿಕೋ ತಂದೆ ಪೂರ್ಣಜ್ಞ.

೨೭

ದೊಡ್ಡವರೆನಿಪ ಕೆಲರು, ಅಡ್ಡಹಾದಿಯೊಳಿಹರು,
ಗುಡ್ಡದೊಲು ನುಡಿದು ಜನ ಮರುಳು ಮಾಳ್ಪವರ
ಎಡ್ಡು ಬಿಡಿಸಯ್ಯ ಪೂರ್ಣಜ್ಞ.

೨೮

ಸೂತ್ರಧಾರಿಯು ನೀನು, ಪಾತ್ರಧಾರಿಯು ನಾನು
ಎತ್ತೆತ್ತಲೋ ಹರಿವ ಚಿತ್ತವನು ರಮಿಸಿ
ಶಕ್ತಿ ನೀಡಯ್ಯ ಪೂರ್ಣಜ್ಞ.

೨೯

ಜೋಡೆತ್ತು ಹೂಡಿರುವ ಗಾಡಿಯಲಿ ಹೊರಟಿಹೆನು
ಕಾಡಿನಲಿ ಓಡಿ ಬೀಳದಂತೆನ್ನ ಕಾ–
ಪಾಡಯ್ಯ ಗುರುವೆ ಪೂರ್ಣಜ್ಞ.

೩೦

ಚಿಕ್ಕವರ ತಪ್ಪುಗಳ, ಲೆಕ್ಕಿಸದೆ ಕ್ಷಮಿಸಯ್ಯ
ಕಕ್ಕುಲತೆಯಿಂದ ಮಳೆಬೆಳೆಯ ನೀಡಿ ದು–
ರ್ಭಿಕ್ಷೆ ಕಳೆಯಯ್ಯ ಪೂರ್ಣಜ್ಞ.

೩೧

ಅರಿತರಿತು ಕ್ರಮತಪ್ಪಿ, ತಿರುತಿರುಗಿ ಕ್ಷಮೆ ಬೇಡಿ
ಬರುತಿಹೆನು ನಿನ್ನೆಡೆಗೆ ದೃಢಮತಿಯನೆನಗೆ
ಕರುಣಿಸೈ ಗುರುವೆ ಪೂರ್ಣಜ್ಞ.

೩೨

ಕಾಕುಗುಣತುಂಬಿರುವ, ಲೌಕಿಕರ ಕ್ಷಮಿಸಯ್ಯ
ತೂಕತಪ್ಪದೊಲು ಮಳೆಬೆಳೆಯ ಕರುಣಿಸುವ
ರಕ್ಷಿಸೈ ಜಗವ ಪೂರ್ಣಜ್ಞ.

೩೩

ದೌರ್ಜನ್ಯ ಹೆಚ್ಚಾಗಿ ಪರ್ಜನ್ಯ ಅಡಗುತಿವೆ
ಸಜ್ಜನಿಕೆಯಿತ್ತು ಜಗವನುದ್ಧರಿಸಯ್ಯ
ಅಜ್ಜ ಗುರುಸಿದ್ಧ ಪೂರ್ಣಜ್ಞ.

೩೪

ಮನವನಿಲ್ಲಿಸಲಾಸು ಅನುನಯದಿ ಧ್ಯಾನಿಸುವೆ
ಘನಮಹಿಮ ಗುರುಸಿದ್ಧ ಭವದಾಶೆ ಬಿಡಿಸಿ
ಮನದಳಲ ಕಳೆಯೊ, ಪೂರ್ಣಜ್ಞ.

೩೫

ಕುಕ್ಷಿಯನು ಬಡಕೊಂಡು, ಭಿಕ್ಷುಕನು ಬರುವಂತೆ
ರಕ್ಷಣೆಗೆ ನಿನ್ನೆಡೆಗೆ ಬಂದಿಹೆನು ಜ್ಞಾನ
ಭಿಕ್ಷೆ ನೀಡಯ್ಯ ಪೂರ್ಣಜ್ಞ.

೩೬

ಅಮರಯೋಗಿಯು ನೀನು, ನಮನ ಮಾಳ್ಪೆನು ನಾನು
ಸುಮನ ಸುಮಧರಿಸಿ, ಬೇಡುವೆನು ಗುರುಸಿದ್ಧ
ಸುಮತಿ ನೀಡಯ್ಯ ಪೂರ್ಣಜ್ಞ.

೩೭

ವಿಷಯವಾಸನೆ ಬಿಡಿಸಿ, ವಿಷಕಂಠಧ್ಯಾನಪರ–
ವಶವಾಗುವಂತೆ ಮನಕೆ ಪಾಠವ ಕಲಿಸಿ
ಸಸಿನೆಗೊಳಿಸಯ್ಯ ಪೂರ್ಣಜ್ಞ.

೩೮

ಕಿರಿಯ ಕಿರಿಕಿರಿ ಮನದಿ, ಕಿರಿಕಿರಿಯ ಕಿರಿಚಂತೆ
ಹಿರಿಗುರಿಯಧ್ಯಾನ ಸ್ಥಿರವಪ್ಪುದೆಂತಯ್ಯ
ಗುರುವೆ ತಿಳಿಸೆನಗೆ ಪೂರ್ಣಜ್ಞ.

೩೯

ಉರಿಬಿಸಿಲ ತಾಪದಿಂ, ಮರೆತಿಹೆನು ತವಧ್ಯಾನ
ಪರಿಶುದ್ಧ ಜಲವಿತ್ತು ಶಾಂತಿ ಸುಖನೀಡಿ
ಕರುಣಿಸೈ ಗುರುವೆ ಪೂರ್ಣಜ್ಞ.

೪೦

ಭಕ್ತಿ ಶಕ್ತಿಯ ಮುಂದೆ, ಯುಕ್ತಿ ತಂತ್ರಗಳೇನು ?
ಭಕ್ತಿಜ್ಞಾನ–ಕ್ರಿಯಾ–ಶಕ್ತಿ ನೀಡೆನಗೆ
ಶಕ್ತಿಸಾಗರನೆ ಪೂರ್ಣಜ್ಞ.

೪೧

ಮತಿಯಿಲ್ಲ ಧೃತಿಯಿಲ್ಲ, ಕೃತಿಯಲ್ಲಿ ಬಲವಿಲ್ಲ
ಪೃಥಿವಿಯಲಿ ಲೇಸಿಂಗೆ ದೊಡ್ಡ ಬರಗಾಲ
ಗತಿದೋರು ಗುರುವೆ ಪೂರ್ಣಜ್ಞ.

೪೨

ವೀರವಿರತಿಯಮಣಿಯೆ, ಸಾರಜ್ಞಾನದ ಖಣಿಯೆ
ಭೂರಿಶಕ್ತಿಯನು ಪಡೆದಿರುವ ಪ್ರಭುವೆ
ತೋರಯ್ಯ ಸುಖವ ಪೂರ್ಣಜ್ಞ.

೪೩

ಸಿದ್ಧಾಂತ ತಿಳಿಯದಲೆ ಗುದ್ದಾಡುತಿಹರಯ್ಯ
ರಾದ್ಧಾಂತ ಮಾಳ್ಪ ಕ್ಷುದ್ರ ವಿಚ್ಛಿದ್ರಕರ
ಬುದ್ಧಿ ತಿದ್ದಯ್ಯ ಪೂರ್ಣಜ್ಞ.

೪೪

ಪರರಚಿಂತೆಯ ಮಾಡಿ, ಕೊರಗಿಹೆನು ಸೊರಗಿಹೆನು
ಪರರ ಮೋಸಕ್ಕೆ ಬಲಿ ಬೀಳದಂತೆನ್ನ
ಪೊರೆಯಯ್ಯ ಗುರುವೆ ಪೂರ್ಣಜ್ಞ.

೪೫

ಸದ್ಭಕ್ತ ವೃಂದವದು, ಶುದ್ಧಮನದಿಂ ಮಾಳ್ಪ
ಸದ್ಧರ್ಮಕಾರ್ಯ ಹದಗೆಡಿಸುವಂಥವರ
ಬುದ್ಧಿ ತಿದ್ದಯ್ಯ ಪೂರ್ಣಜ್ಞ.

೪೬

ದೊಡ್ಡವರ ನೇಡಿಸುತ, ದೊಡ್ಡವರ ಕಾಡಿಸುತ
ಅಡ್ಡಂಕಿ ಹಾಕಿ ಅಡ್ಡಯಿಸುವಂಥವರ
ದಡ್ಡತನ ಬಿಡಿಸು ಪೂರ್ಣಜ್ಞ.

೪೭

ಸಿರಿಮದವು ತಲೆಗೇರಿ, ಗರುವವದು ಮಿತಿಮೀರಿ
ಧರೆಯಲ್ಲಿ ನನಗೆ ಸರಿಯಾರು ಎಂಬುವರ
ಸರಿಸಿಬಿಡು ದೂರ ಪೂರ್ಣಜ್ಞ.

೪೮

ಚಿತ್ತಭೂಮಿಯ ಮೇಲೆ, ಬಿತ್ತು ಜ್ಞಾನದ ಬೀಜ
ಮುತ್ತಿರುವ ಅಜ್ಞಾನ ಕಸಕಂಟಿ ಕಿತ್ತಿ
ಕತ್ತಲೆಯ ಕಳಿಯೋ ಪೂರ್ಣಜ್ಞ.

೪೯

ಭ್ರಷ್ಟದುಷ್ಟರು ಕೂಡಿ, ಕಷ್ಟ ಕೊಡುತಿಹರಯ್ಯ
ಶಿಷ್ಟ ಸಭ್ಯರಿಗೆ ಕಷ್ಟವಾಗಿದೆ ಬದುಕು
ದುಷ್ಟತನ ತವಿಸು ಪೂರ್ಣಜ್ಞ.

೫೦

ಸರಳ ಸಜ್ಜನರನ್ನು ನಿರುತ ಗೋಳಾಡಿಸುವ
ದುರುಳ ದುಷ್ಟರಿಗೆ ಕರುಳು ಕಕುಲಾತಿಯನು
ಕರುಣಿಸೈ ಶಿವನೆ ಪೂರ್ಣಜ್ಞ.

೫೧

ಕೇಡು ಮಾಡುವ ಬುದ್ಧಿ ಗೂಡುಗಟ್ಟಿದೆ ಜಗದಿ
ನೀಡಯ್ಯ ಜಗಕೆ ಸತ್ಕಾರ್ಯ ದೀಕ್ಷೆಯನು
ರೂಢಿಗೀಶ್ವರನೆ ಪೂರ್ಣಜ್ಞ.

೫೨

ಹಲವು ಪಾಪಂಗಳಲಿ, ತೊಳಲಿ ಬಳಲಿಹೆನಯ್ಯ
ತಲೆಬಾಗಿ ನಮಿಸಿ ಸೆರಗೊಡ್ಡಿ ಬೇಡುವೆನು
ಸಲಹಯ್ಯ ಕ್ಷಮಿಸಿ ಪೂರ್ಣಜ್ಞ.

೫೩

ಉದ್ಧುರುಟು ದುರ್ಗುಣಕೆ, ಗುದ್ದೊಂದೆ ಮದ್ದೆಂಬ
ಬುದ್ಧಿ ಮಾತೀಗ ಬೇಗ ಕೃತಿಯಲಿ ಬರಲಿ
ತಿದ್ದಲ್ಕೆ ಜಗವ ಪೂರ್ಣಜ್ಞ.

೫೪

ತಪ್ಪು ನನ್ನವು ಕೋಟಿ, ಒಪ್ಪಿಕೊಳ್ಳುವೆ ನಾನು
ಅಪ್ಪಿಕೋ ನಿನ್ನ ನೊಂದಿರುವ ಕಂದನನು
ಅಪ್ಪ ಗುರುದೇವ ಪೂರ್ಣಜ್ಞ.

೫೫

ಹೃದ್ದೇಶದಲಿ ಕೆಟ್ಟ, ಉದ್ದೇಶವುಳ್ಳವರ
ಬುದ್ಧಿಗೇಡಿಗಳ ಬುದ್ಧಿಯನು ತಿದ್ದು ಗುರು-
ಸಿದ್ಧೇಶ ಬೇಗ ಪೂರ್ಣಜ್ಞ.

೫೬

ಪತಿತರನು ಕಾಪಾಡಿ, ಮತಿಮನಗಳನು ತೀಡಿ
ಅತಿ ಪ್ರೀತಿಯಿಂದ ಪೈದಡವಿ ಮಾತಾಡಿ
ಗತಿದೋರವರಿಗೆ ಪೂರ್ಣಜ್ಞ.

೫೭

ಕಲ್ಲು ಕಟೆದರೆ ಮೂರ್ತಿ, ಸಲ್ಲಲಿತವಾಗುವದು
ಕಲ್ಲು ಹೃದಯವನು ಸುಜ್ಞಾನದಿಂ ನೀವಿ
ಸಲ್ಲಲಿತಗೊಳಿಸು ಪೂರ್ಣಜ್ಞ.

೫೮

ಹಸಿಹುಸಿಯ ಭರವಸೆಯ ನಸುನಗುತ ಹೇಳುತ್ತ
ಹೊಸ ಮುಗ್ಧ ಜನರ ವಂಚಿಸುವ ನಾಯಕರ
ವಿಷಬುದ್ಧಿ ತಿದ್ದು ಪೂರ್ಣಜ್ಞ.

೫೯

ಎನ್ನ ತಪ್ಪೊಪ್ಪಗಳ, ನಿನ್ನಡಿಯ ಮುಂದಿಡುವೆ
ಮನ್ನಿಸುತಲೆನಗೆ ಜ್ಞಾನಕ್ರಿಯಾಶಕ್ತಿ-
ಯನ್ನಿತ್ತು ಪೊರೆಯೊ ಪೂರ್ಣಜ್ಞ.

೬೦

ಹೆಣ್ಣುಮಕ್ಕಳು ಮೊರದಿ ಧಾನ್ಯ ಹಸಮಾಡುವೊಲು
ನನ್ನ ಮನದಿಂದ ಕಸಕಡ್ಡಿ ತೆಗೆದೊಗೆದು
ಚಿನ್ಮಯಂಗೊಳಿಸು ಪೂರ್ಣಜ್ಞ.

೬೧

ಮಣಿಯುವೆನು ಚರಣಕ್ಕೆ ಹಣೆಯಿಟ್ಟು ಬೇಡುವೆನು
ಗುಣದ ಘನನಿಧಿಯೆ ಗುರುಸಿದ್ಧ ಶಿವಯೋಗಿ
ಗುಣವ ನೀಡೆನಗೆ ಪೂರ್ಣಜ್ಞ.

೬೨

ಭಕ್ತವೇಷದಿ ಬಂದು, ಮುಕ್ತಕಂಠದಿ ಹೊಗಳಿ
ಯುಕ್ತಿಯಿಂ ಸ್ವಾರ್ಥ ಸಾಧಿಸುವ ತಕ್ಕರಿಂ
ರಕ್ಷಿಸೈ ಗುರುವೆ ಪೂರ್ಣಜ್ಞ.

೬೩

ವೈರಿಗಳ ಮಣಿಸುವದು, ಧಾರುಣಿಯೊಳತಿ ಸುಲಭ
ವೈರಾಗ್ನಿಯುಳಿಗು ಪ್ರೇಮ ಸೇಚನೆಯಿಂದ
ವೈರಿಗಳ ಕ್ಷಮಿಸು ಪೂರ್ಣಜ್ಞ.

೬೪

ಕಂಗಾಣದವರಿಂಗೆ, ಅಂಗ ಶಕ್ತಿಯ ನೀಡಿ
ಭಂಗಗೊಳಿಸುತ್ತ ಚಿತ್ತ ಸಂಶಯವನ್ನು
ಸಂಗನಡಿಳಿಡಿಸು ಪೂರ್ಣಜ್ಞ.

೬೫

ಬಾಲಕರ ನಾಲಗೆಯ, ಲೀಲೆಯಲಿ ತೇಲುತಿಹ
ಮೇಲಾದ ತಿರುಳು ಲಾಲಿಸೈ ಪಾಲಿಸೈ
ಕೀಲಿಸೈಮುದದಿ ಪೂರ್ಣಜ್ಞ.

೬೬

ಕಾಲಕರ್ಮವಗೆದ್ದು | ಫಾಲಲೋಚನನೆದು
ಲೀಲೆಮಾಡಿರುವ ಶಿವಯೋಗಿ ಭವತ್ಯಾಗಿ,
ಪಾಲಿಸೈಗುರುವೆ ಪೂರ್ಣಜ್ಞ.

೬೭

ನೆನೆದಾಗ ನಿನ್ನನ್ನು, ಮನದೊಳಗೆ ಮೂಡಯ್ಯ
ಘನಮಹಿಮ ಗುರುಸಿದ್ಧ ತವಸ್ಮರಣೆಯೊಂದೆ
ಘನರಕ್ಷೆಯೆನಗೆ ಪೂರ್ಣಜ್ಞ.

೬೮

ಕುಜನ ಮುಖಲಕ್ಷಣದ, ಸುಜನಹೃದಯಿಗಳುಂಟು
ರಜತದೊಲು ತೋರ್ಪ ಶುಕ್ತಿಯಿರಬಹುದು ವಿಭ-
ಜಿಸಿ ಪರಕಿಸಯ್ಯ! ಪೂರ್ಣಜ್ಞ.

೬೯

'ದೇಹಿ' ಎಂದವರಿಗೆ, ಏ ಹೋಗು ಎನಬೇಡ
ದಾಹವನು ತಣಿಸಿ 'ದೇಹಿ'ಯನು ಬಿಡೆ
ಸೋಽಹಂ ಪಥ ಪಿಡಿಸು ಪೂರ್ಣಜ್ಞ.

೭೦

ಬದುಕಿನಲಿ ನೊಂದವರ, ಸದುಹೃದಯದಿಂ ಕಂಡು
ಮುದಗೊಳಿಸು ನಿನ್ನ ಅಧಿಕಾರ ಶಕ್ತಿಯನು
ಸದುಪಯೋಗಿಸುತ ಪೂರ್ಣಜ್ಞ.

೭೧

ಪ್ರಾರ್ಥನೆಯು ಇಲ್ಲದಿರೆ, ವ್ಯರ್ಥವಪ್ಪುದು ಬದುಕು
ಪ್ರಾರ್ಥನೆಯು ಅಂತರಂಗದಲಿ ನಿನದಿಸುವ
ಶಾಂತಿ ಸಂಗೀತ ಪೂರ್ಣಾಜ್ಞ.

೭೨

ಧುರಕೆ ಹೊರಡುವ ಮುನ್ನ, ದುರವಸ್ಥೆ ಬಂದಾಗ
ಮರೆಯದಿರು ಹರನ ಪ್ರಾರ್ಥನೆಯ ಮಾಳ್ಪುದನು
ಗುರುಸ್ಮರಣೆಯನ್ನು ಪೂರ್ಣಾಜ್ಞ.

೭೩

ಪ್ರಾರ್ಥನೆಯಗೈವಾಗ, ಸ್ವಾರ್ಥವನು ದೂರವಿಡು
ಪ್ರಾರ್ಥನೆಯು ಶುದ್ಧವಿದ್ದಲ್ಲಿ ಶಿವನೊಲಿದು
ಪ್ರತ್ಯಕ್ಷನಹನು ಪೂರ್ಣಾಜ್ಞ.

೭೪

ಪರದಾಸ್ಯವಳಿದರೂ, ತುರುಗಿಹದು ಒಳದಾಸ್ಯ
ಹಿರಿದಪ್ಪ ಗುರಿಯ ಸಾಧನೆಯು ಕುಂಟುತಿದೆ
ಅರಿವು ಕರುಣಿಸು ಪೂರ್ಣಾಜ್ಞ.

೭೫

ಧ್ಯಾನದಿಂ ತನುಶುದ್ಧಿ, ಧ್ಯಾನದಿಂ ಮನಶುದ್ಧಿ
ಧ್ಯಾನದಿಂ ವಿಷಯದಾಸಕ್ತಿ ಹಿಂಗುವದು
ಧ್ಯಾನದಿಂ ಶಾಂತಿ ಪೂರ್ಣಾಜ್ಞ.

೭೬

ಧ್ಯಾನ ಬಲದಿಂ ಮನುಜ ಜ್ಞಾನಶಕ್ತಿಯ ಪಡೆದು
ಲೀನನಾಗುವನು ಶಿವನಲ್ಲಿ ಎಲ್ಲಕ್ಕು
ಧ್ಯಾನವೇ ಮೂಲ ಪೂರ್ಣಾಜ್ಞ.

೭೭

ಧ್ಯಾನದಿಂ ಸನ್ಮತಿಯು, ಧ್ಯಾನದಿಂ ಸದ್ಗತಿಯು
ಧ್ಯಾನದಿಂ ಸಾಧ್ಯ ಸ್ಫುರಣೆ ಸಮಾಧಾನ
ಧ್ಯಾನಿಸೈ ಮುದದಿ ಪೂರ್ಣಾಜ್ಞ.

೭೮

ಮಾತು ಅರ್ಥಗಳೆರಡು ಓತು ಬೆರೆತಿರುವಂತೆ
ಮಾತೆ ಪಾರ್ವತಿಯು ತಂದೆ ಶಿವನಿವರಡಿಗೆ
ಪ್ರೀತಿಯಿಂ ನಮಿಪೆ ಪೂರ್ಣಜ್ಞ.

೭೯

ರುದ್ರಕೋಮಲಗುಣಗ–ಳಿದ್ದು ಕಾಣುವ ತೆರದಿ
ರುದ್ರಶಿವನೆಂದು ಜಗದಿ ಶೋಭಿಸುವ ಗುರು–
ಸಿದ್ಧನಿಗೆ ನಮನ ಪೂರ್ಣಜ್ಞ.

೮೦

ವ್ಯಕ್ತಸ್ಥಿತಿ ಲಯಗಳಿಗೆ, ಯುಕ್ತನಾಗಿ ವಿಶಿಷ್ಟ
ಶಕ್ತಿಯಾಗಿರ್ಪ ಶಿವಲಿಂಗ ಮೂರುತಿಗೆ
ಭಕ್ತಿಯಿಂ ನಮಿಪೆ ಪೂರ್ಣಜ್ಞ.

೮೧

ಮನವೆಂಬ ಮರ್ಕಟವು, ತನುವೆಂಬ ಮದವೇರಿ,
ಚಣಚಣದಿ ಹಾರುತಿದೆ, ವಿಷಯ ಶಾಖೆಯಲಿ
ಮಣಿಸಯ್ಯ ಮನವ ಪೂರ್ಣಜ್ಞ.

೮೨

ಗುರುಸಿದ್ಧರಾತ್ಮದಲಿ, ಚಿರಶಾಂತಿ ಸೂಸುತಿದೆ
ಗುರುವರರೆ ನಿಮ್ಮ ಕನಸು ನನಸಾಗಿಹುದು
ಹರಸಿರೆನ್ನನು ಪೂರ್ಣಜ್ಞ.

೮೩

ಚಿಂತೆಗಳ ಸಂತೆಯಲಿ, ಶಾಂತಿ ಸಿಗದಾಗಿಹುದು
ಕಂತುಹರ ನಿನ್ನ ಸೇವೆ ಮಾಳ್ಪರನು ನೀ
ನಿಂತಿರಿಸಬೇಕೆ? ಪೂರ್ಣಜ್ಞ.

೮೪

ಬೆಂದಿಹೆನು ಭವದಲ್ಲಿ ಕುಂದಿಹೆನು ವಿಷಯದಲಿ
ಇಂಧುದರ ನಿನ್ನ ಮರೆತು ಕೊರಕೊರಗಿ ನಾ
ಅಂದಗೆಟ್ಟಿಹೆನು ಪೂರ್ಣಜ್ಞ.

೮೫

ತನುರತನ ಪಕ್ಷಿಯೇ, ಮನಸಿಜನ ವನದಿ ನಿಧು
ವನದಿ ದಿನದಿನವು ಕ್ರೀಡಿಸುತ ಸವೆಯದಿರು
ಘನ ವಜ್ರವಾಗು ಪೂರ್ಣಜ್ಞ.

೮೬

೧ಉರಿಹತ್ತಿ ಮನೆ! ಹೊತ್ತಿ, ಭರದಿಂದ ಸುಡುತಿಹುದು
ಹೊರಗೆ ಬರಲಾರದವರನ್ನು ಹೊರಗೆಳೆಯೊ
ಕರಹಿಡಿದು ಗುರುವೆ ಪೂರ್ಣಜ್ಞ.

೮೭

ತಾಪತ್ರಯಾಗ್ನಿಯದು ವ್ಯಾಪಿಸುತ ದಹಿಸುತಿದೆ
ಈ ಪರಿಯ ತಾಪ ಸಹಿಸಲಾರೆನು ತಂದೆ
ತಾಪಗಡತವಿಸು ಪೂರ್ಣಜ್ಞ.

೮೮

ತನ್ನ ಸ್ವಾರ್ಥಕ್ಕಾಗಿ, ನಿನ್ನ ಹೆಸರನು ಬಳಸಿ
ಅನ್ಯಾಯ ಗೈವ ಸ್ವಾರ್ಥಲಂಪಟನರಗೆ
ಸನ್ಮತಿಯ ನೀಡು ಪೂರ್ಣಜ್ಞ.

೮೯

ಸದ್ವಾಣಿ ಸುವಿಚಾರ, ಸದ್ಧರ್ಮವನು ಮರೆತು
ಬುದ್ಧಿ ಕಳಕೊಂಡು ತಿರುಗಾಡುತಿಹ ಜನಕೆ
ಬುದ್ಧಿ ನೀಡಯ್ಯ ಪೂರ್ಣಜ್ಞ.

೯೦

ಹಸನಾಗಿ ನಡೆವುದನು ಹಸನಾಗಿ ನುಡಿವುದನು
ಹಸನಾದ ಭಕ್ತಿ ಶಕ್ತಿಯನು ನೀಡಯ್ಯ
ಬಸವೇಶ ಬೇಗ ಪೂರ್ಣಜ್ಞ.

---

೧ ನಿರ್ಜನವಾದ ಭವಾರಣ್ಯದಲ್ಲಿ ಜೀವನು ಒಂದು ಮನೆ ಕಟ್ಟಿದ್ದಾನೆ. ತಾಪತ್ರಯಂಗಳೆಂಬ ಬೆಂಕಿ ಆವರಿಸಿ, ಸುಡುತ್ತಿಹುದು, ಅದು ಸುಟ್ಟರೂ ಬೂದಿಯಾಗದೆ ಮತ್ತೆ ಬೆಳೆಯು-ತ್ತಿರುವದರಿಂದ ಮನೆಯೊಡೆಯ ಮತ್ತೆ ಅಳುತ್ತ ಅದಕ್ಕಾಗಿ ಗುರುವೆ ಕುರುಣಿಸೆಂದು ಬೇಡುತ್ತಾನೆ.

೯೧

ಮಾನವತೆಯಸು ಮೆಟ್ಟಿ, ದಾನವತೆ ಮೆರೆಯುತಿದೆ
ಏನಿದೇನಿದು ದೇವ ಕಣ್ದೆರೆದು ನೋಡು
ಈ ನಾಶನಿಲಿಸು ಪೂರ್ಣಜ್ಞ.

೯೨

ಎಲ್ಲಿ ನೋಡಿದರಲ್ಲಿ ಕ್ಷುಲ್ಲ ರಾಕ್ಷಸಲೀಲೆ
ಒಳ್ಳಿತಾದುದಕೆ ಕೊಳ್ಳಿಯಿಡುತಿಹರಯ್ಯ
ಎಲ್ಲಿರುವೆದೇವ ಪೂರ್ಣಜ್ಞ.

೯೩

ಭಯವುದಗ್ದುಳಿಯುತಿದೆ, ಲಯವುದಬ್ಬಾಳುತಿದ
ರಯರಭಸದಿಂ ಪ್ರಳಯಹಬ್ಬುತ್ತಲಿಹುದು
ದಯೆದೋರುದೇವ, ಪೂರ್ಣಜ್ಞ.

೯೪

ಚಿತ್ತರಗಿ ಚಿಜ್ಜ್ಯೋತಿ, ಸತ್ಯವಂತರ ಮೂರ್ತಿ
ಮುತ್ತಿರುವ ಕತ್ತಲೆಯ ಹೊಡೆದೋಡಿಸಲೆಂದು
ನಿತ್ಯ ಭಜಿಸುವೆನು ಪೂರ್ಣಜ್ಞ.

೯೫

೧ವಿಜಯಮಹಾಂತೇಶನೆ, ಸುಜನ ಸಂಕುಲಕೆಲ್ಲ
ನಿಜಶಕ್ತಿ ನೀಡು, ಭವತಾಪ ಪರಿಹರಿಸಿ
ನಿಜಸುಖವನೂಡು ಪೂರ್ಣಜ್ಞ.

೯೬

ವೈರಾಗ್ಯ ವಾರಿಧಿಯೆ, ಭೂರಿಶಕ್ತಿಯನಿಧಿಯೆ
ಮಾರಮದದಮನ ಮಾಡಿರುವ ಶಿವಯೋಗಿ
ತೋರೆನಗೆ ಮಾರ್ಗ ಪೂರ್ಣಜ್ಞ,

---

೧ ಊಡು—ಉಣ್ಣಿಸು.

೯೭

ಅಳಿಮನದ ಮನುಜಂಗೆ, ಬಲುಸೊಕ್ಕು ತುಂಬಿಹುದು
ಬಲುದೊಡ್ಡ ಕೀರ್ತಿ ಪಡೆಯಬೇಕೆನ್ನುವನು
ಕಲಿಸು ಬುದ್ಧಿಯನು ಪೂರ್ಣಜ್ಞ.

೯೮

ಗಾಢ ಧ್ಯಾನವ ಮನಕೆ, ರೂಢಿಗೊಳಿಸೈ ಗುರುವೆ
ಮೂಢತೆಯ ತಪಿಸಿ ಧೈರ್ಯ ಸ್ಥೈರ್ಯಂಗಳನು
ಮೂಡಿಸೈ ಮನದಿ ಪೂರ್ಣಜ್ಞ.

೯೯

ಪರರ ಚಿಂತೆಯ ಬಿಟ್ಟು, ಗುರಿಯ ಸಾಧಿಸುತಿರಲು
ಗುರಿಯ ತಪ್ಪಿಸಲು ಹರಟಲ್ಕೆ ಬರುತಿಹರು
ಪೊರೆಯೆನ್ನ ಗುರುವೆ, ಪೂರ್ಣಜ್ಞ.

೧೦೦

ಅಡಿಗಡಿಗೆ ವಂಚಿಸುತ, ಅಡಿಗಡಿಗೆ ಕಾಡುತಿಹ
ತೊಡಕು ಹಾಕುತಿಹ ಕವಡು ಭಕ್ತರನ್ನೆಲ್ಲ
ಇಡು ಬಹಳ ದೂರ ಪೂರ್ಣಜ್ಞ.

೧೦೧

ಮೀಸಲಾತಿಯ ಪ್ರಶ್ನೆ, ದೇಶದೊಳಗೆಲ್ಲರನು
ಘಾಸಿಗೊಳಿಸುತಿದೆ ಓ ದೇವ ಜನಕೆ ನಿಜ
ಲೇಸು ಮತಿನೀಡು ಪೂರ್ಣಜ್ಞ.

೧೦೨

ಎನ್ನವರು ಯಾರಿಲ್ಲ, ನಿನ್ನನ್ನೆ ನಂಬಿಹೆನು
ಕುನ್ನಿ ಮಾನವರ ಕಾಟದಿಂ ಕೊರಗಿಹೆನು
ಎನ್ನ ಪೊರೆ ಗುರುವೆ, ಪೂರ್ಣಜ್ಞ.

೧೦೩

ಬಿಸಿಲ ಬೆನ್ನೇರುತ್ತ । ಹೊಸ ವರುಷ ಬಂತಪ್ಪ ?
ತೃಷೆ ತಣಿಸುವಂಥ ಸತ್ಕಾರ್ಯವೆಸಗಲ್ಕೆ
ಹೊಸ ಕಸುವು ನೀಡು ಪೂರ್ಣಜ್ಞ.

೧೦೪

ಎನ್ನ ನೆತ್ತಿಯ ಮೇಲೆ, ನಿನ್ನ ಪಾದವನೊತ್ತು
ಮನ್ಮನದ ಮದವ ತೊತ್ತುಳದುಳಿದು, ಗುರುವೆ
ಸನ್ಮತಿಯ ಕಲಿಸು ಪೂರ್ಣಜ್ಞ.

೧೦೫

ಪಂಜಾಬದಲಿ ಹಿಂಸೆ, ಹಿಂಜರಿಯದಾಗಿಹುದು
ಅಂಜಿಹುದು ದೇಶ ನಂಜುಂಡನೇ ನೀನೆ
ಭಂಜಕರ ದಮಿಸು ಪೂರ್ಣಜ್ಞ.

೧೦೬

ಯಾರಿಂಗೆ ಯಾರಿಲ್ಲ । ಧಾರುಣಿಯೊಳಗೆ ದೇವ
ದಾರಿಯನು ತಪ್ಪಿ ಬಂದಿಹೆವು ಭವದಲ್ಲಿ
ದಾರಿಯನು ತೋರು ಪೂರ್ಣಜ್ಞ.

೧೦೭

ಇಲ್ಲದಿರೆ ಸಾಧನೆಯು । ನಿಲ್ಲಲಾರದು ಮನವು
ನಿಲ್ಲದಿರೆ ಮನವು ಸಾಧಿಸದು ಯೋಗವದು
ನಿಲ್ಲಿಸೈ ಮನವ ಪೂರ್ಣಜ್ಞ.

೧೦೮

ಎಲ್ಲರಂಗಗಳಲ್ಲಿ । ಖುಲ್ಲ ಮನುಜರು ತುಂಬಿ
ಒಳ್ಳೆಯ ಸಮಾಜ ಕೆಡಿಸುತ್ತಲಿಹರವರ
ಖುಲ್ಲ ಗುಣವಳಿಸು ಪೂರ್ಣಜ್ಞ.

೧೦೯

ಶುದ್ಧ ಮೌನದಲಿಗುರು–ಸಿದ್ಧ ಗುರುವಿನ ಧ್ಯಾನ
ತಿದ್ದುವದು ಮನವ, ಸುವಿಚಾರ ಸದ್ಗುಣ ಸ—
ಮೃದ್ಧವಾಗುವವು ಪೂರ್ಣಜ್ಞ.

೧೧೦

ಶ್ರದ್ಧೆಯಿದ್ದಲ್ಲಿ ಗುರು–ಸಿದ್ದನಿಹನೆಂಬ
ಶುದ್ಧ ನಂಬುಗೆಯು ಇರುವವನ ಕೈಯಲ್ಲಿ
ಸಿದ್ಧಿ ನೆಲೆಸುವದು ಪೂರ್ಣಜ್ಞ.

೧೧೧

ಊರೆಲ್ಲ ಕತ್ತಲೆಯು ದಾರಿ ಕಾಣದು ದೇವ
ಭಾರಿ ಬಿರುಗಾಳಿ ಭೋರ್ಗರೆಯುತಿದೆ ಮನಕೆ
ಧೀರತೆಯ ಸುರಿಸು ಪೂರ್ಣಜ್ಞ.

## ಆತ್ಮವೃತ್ತಾಂತ

೧೧೨

ಶಶಿವಾಳ ನಮ್ಮೂರು, ಹಸಿರು ಲಕ್ಷ್ಮಿಯ ತವರು
ಎಸೆವ ತೆಂಗಿನ ತೋಟ ಕಂಗಳಿಗೆ ಮಾಟ
ಹಸಿರ ಸಗ್ಗವದು ಪೂರ್ಣಜ್ಞ.

೧೧೩

ಹಾಸನ ಜಿಲ್ಲೆಗದು, ಭೂಷಣವು ಪುಟ್ಟೂರು
ಆಶೆಯನು ತೊರೆದ ಶ್ರೀ ವಿಜಯ ಮಹಾಂ-
ತೇಶ ಪುಟ್ಟಿದುದು ಪೂರ್ಣಜ್ಞ.

೧೧೪

ಅಲ್ಲಿಹುದು ಕಲ್ಬೆಟ್ಟ, ಸಲ್ಲಲಿತ ತರುರಾಜ
ಕಲ್ಬಂಡೆ ಹಿಂಡು ನಡುವೆ ಹುಲ್ಲಿನ ಚೆಲ್ವು
ಚೆಲ್ಲವರಿದಿಹುದು, ಪೂರ್ಣಜ್ಞ.

೧೧೫

ತಂದೆ ತಾಯಿಯು ತೊರೆದು, ಬಂಧು ಬಳಗವ ಮರೆತು
ಮಂದಿರಕೆ ಬಂದಾಗ ನಾಲ್ಕು ವರುಷಗಳ
ಕಂದನಾಗಿದ್ದೆ ಪೂರ್ಣಜ್ಞ.

೧೧೬

ನಾನು ಜನಿಸುವ ಮೊದಲು, ಜ್ಞಾನಿಸುಕುಮಾರೇಶ
ಭಾನುಬಂದಂತೆ ಶಶಿವಾಳಕಾಗಮಿಸಿ
ತಾನೆಂದನಿಂತು ಪೂರ್ಣಜ್ಞ.

೧೧೭

ಮುಂದೆ ಜನಿಸುವ ಮಗನ, ಮಂದಿರಕೆ ಕೊಡಿರೆಂದು
ಅಂದು ಸುಕುಮಾರ ಬೆಸಸಿದೊಲು ಜನಿಸಿ ನಾ–
ನಿಂದೆಸಗುತಿಹೆನು ಪೂರ್ಣಜ್ಞ.

೧೧೮

ಶಿವಯೋಗಿ ಸುಕುಮಾರ, ಶಿವಧರ್ಮಮಂದಾರ
ಶಿವಯೋಗ ನಿಲಯ ಸ್ಥಾಪಿಸಿದ ಕೃತಿವೀರ
ಅವಿರತಂ ಮೆರೆವೆ ಪೂರ್ಣಜ್ಞ.

೧೧೯

ನಿನ್ನ ಕೃಪೆಯಿಂ ಜನಿಸಿ, ನಿನ್ನ ಕರುಣೆಯನುಂಡು
ನಿನ್ನ ಆದರ್ಶಪಥವಿಡಿದು ಸಾಗಿಹೆನು
ಮುನ್ನಡೆಸು ಬೇಗ ಪೂರ್ಣಜ್ಞ.

೧೨೦

ಹುಟ್ಟಿದ್ದು ಶಶಿವಾಳ, ಬಿಟ್ಟು ತಾಯ್ತಂದೆಗಳ
ಹುಟ್ಟಿದಾಸ್ಥಳಕೆ ವರುಷ ನಾಲ್ವತ್ತಾಯ್ತು
ದೃಷ್ಟಿಹಾಕಿಲ್ಲ ಪೂರ್ಣಜ್ಞ.

೧೨೧

ಶಿವಮಂದಿರವೆ ತಾಯಿ, ಶಿವಮಂದಿರವೆ ತಂದೆ
ಶಿವಮಂದಿರವೆ ನನಗೆ ಬಾಳ ಬೆಳಕಿತ್ತ
ಶಿವಮಾರ್ಗದರ್ಶಿ ಪೂರ್ಣಜ್ಞ.

೧೨೨

ನಮ್ಮವ್ವ–ಚನ್ನವ್ವ, ನಮ್ಮಯ್ಯ ಮರುಳಯ್ಯ
ನಮ್ಮಜ್ಜ ಮಳಿಯಯ್ಯ[೧] ಜನಕೆ ಗೊತ್ತಿರಲಿ
ನಮ್ಮ ವೃತ್ತಾಂತ ಪೂರ್ಣಜ್ಞ.

---

೧ "ಮಳಿಯಯ್ಯ" ಚಿತ್ತರಗಿ–ಇಳಕಲ್ಲ ವಿಜಯಮಹಾಂತೇಶ್ವರ ಮಹಾಸ್ವಾಮಿಗಳ ಪೂರ್ವದ ಹೆಸರು.

೧೨೩

ಶಿವಯೋಗ ಮಂದಿರದಿ, ಶಿವನಮಕ್ಕಳ ಹಾಗೆ
ಅವಿಚಲಿತನಾಗಿ ಓದುತ್ತ ನಿಷ್ಠೆಯಲಿ
ಶಿವವಿದ್ಯೆ ಪಡೆದೆ ಪೂರ್ಣಜ್ಞ.

೧೨೪

ಕಂದನಾನಿರುವಾಗ, ಚೆಂದದಲಿ ಬೆಳೆಸಿದರು
ಸಿಂದಗಿಯ ಶಾಂತವೀರ ಪಟ್ಟಾಧ್ಯಕ್ಷ-
ರಂದು ಮುದದಿಂದ ಪೂರ್ಣಜ್ಞ.

೧೨೫

ಅಕ್ಷರಾಭ್ಯಾಸಗಳ, ಲಕ್ಷದಿಂದೆಸಗಿದೆನು
ಶಿಕ್ಷಕರು 'ಬಸವ' 'ಶಿವಬಸವ'ರೆಂಬವರು
ಶಿಕ್ಷಕೋತ್ತಮರು ಪೂರ್ಣಜ್ಞ.

೧೨೬

ಜುಳುಜುಳೆನ್ನುತಹರಿವ, ಮಲಪ್ರಭೆಯೊಳೀಸಾಡಿ
ಎಳೆವಟುಗಳೊಡನೆ ಬಾಲ್ಯದಿಂ ನಲಿದಾಡಿ
ಬೆಳೆದಿರುವೆನಿಂತು ಪೂರ್ಣಜ್ಞ.

೧೨೭

ತಂದೆತಾಯಿಯ ಮೋಹ, ಮಂದಿರದಿ ಬಿಡಿಸಿದರು
ತಂದೆ ತಾಯಿಗಳು ಶಿವ-ಶಿವೆಯರೆಂಬುದನು
ಅಂದು ಕಲಿಸಿದರು ಪೂರ್ಣಜ್ಞ.

೧೨೮

ತಂದೆ ತಾಯಿಯ ಮುಖವ'ನೆಂದು ನೋಡದೆ ಇದ್ದೆ
ತಂದೆ ತಾಯಿಯರು "ಶಿವಕುಮಾರನೆ" ನನಗೆ
ಎಂದು ನಂಬಿದೆನು ಪೂರ್ಣಜ್ಞ.

೧೨೯

ತೀಡಿದೆನು ಶಿವಮಂತ್ರ, ಮಾಡಿದೆನು ಪಾಠವನು
ಹಾಡಿದೆನು ಶಿವಗೀತ ಶಿವಮಂದಿರದಲಿ
ಆಡಿಕುಣಿದಾಡಿ! ಪೂರ್ಣಜ್ಞ.

೧೩೦

ಈಸಿದೆನು ನದಿಯಲ್ಲಿ, ಲೇಶವೂ ಭಯ ಪಡದೆ
ಹಿಂಸ್ರ ಪ್ರಾಣಿಗಳ ಲೆಕ್ಕಿಸದೆ ಬಾಲ್ಯದಲಿ
ಈಶಧ್ಯಾನದಲಿ, ಪೂರ್ಣಜ್ಞ.

೧೩೧

ಆಸನಕಲಿಸಿ ಕಾವಿ, ವೇಷವನು ತೊಡಿಸಿದರು
ಆಸನದಿ ನಾನು ಎಲ್ಲರೊಳು ಮುಂದಾದೆ
ಭೇಷ್, ಎಂದರೆನಗೆ ಪೂರ್ಣಜ್ಞ.

೧೩೨

ಹಿರಿಯ ಸಾಧಕರೊಲಿದು, ಅರಿವು ನೀಡಿದರೆನಗೆ
ಪರಿಪರಿಯ ಯೋಗ ಸಾಧನೆಯ ಮಾಡಿಸುತ
ಹರಸಿದರು ಮೆಚ್ಚಿ ಪೂರ್ಣಜ್ಞ.

೧೩೩

ಎಳೆವಯದೊಳಿದ್ದಾಗ, ಬಲುರೋಗಿಯಾಗಿದ್ದೆ
ಎಳೆತನವು ದುಃಖಮಯವಾಗಿತ್ತು ಎನಗೆ
ಬಳಲುತ್ತ ಬೆಳೆದೆ ಪೂರ್ಣಜ್ಞ.

೧೩೪

ಎಳೆವಯದಿ ರೋಗವದು, ಬಲುಉಲ್ಬಣಿಸಿದಾಗ
ಉಳಿಯನಿವನೆಂದು ವೈದ್ಯ ಕೈಬಿಟ್ಟಾಗ
ಉಳಿದೆ, ಶಿವಮಹಿಮೆ ಪೂರ್ಣಜ್ಞ.

೧೩೫

ಬಾಧೆ ಪಡುತಿರೆ ನಾನು, ಸಾಧಕ ಸುಬಂಧುಗಳು
ಮೋದದಿಂದುಪಚರಿಸಿದುಪಕೃತಿಯ ನಾನು
ಆದರದಿ ನೆನೆವೆ ಪೂರ್ಣಜ್ಞ.

೧೩೬

ಚಿಕ್ಕಂದಿನಲಿ ನಾನು, ಉಕ್ಕುವಾನಂದದಲಿ
ಪ್ರೇಕ್ಷಿಸುತ ಬರೆದೆ ನದಿದಂಡೆ ನೋಟಗಳ
ಚಿಕ್ಕ ಚಿತ್ರಗಳ ಪೂರ್ಣಜ್ಞ.

೧೩೭

ಚಿತ್ರ ತೆಗೆಯುವ ಕಲೆಯು, ಸ್ವತಃ ಕಲಿತೆನು ನಾನೆ
ವೃತ್ತ ಪತ್ರಗಳ ಚಿತ್ರಗಳ ನೋಡುತ್ತ
ಚಿತ್ರಿಸುತಲಿದ್ದೆ ಪೂರ್ಣಜ್ಞ.

೧೩೮

ಚಿತ್ರಗಳ ಸ್ಪರ್ಧೆಯಲಿ, ಉತ್ತಮದ ಗುಣಗಳಿಸಿ
ಉತ್ತುಂಗ ಶ್ರೇಣಿಯಲಿ ಬರಲು ನನ್ನ ಹೆಸ-
ರೆತ್ತಿ ಹೊಗಳಿದರು ಪೂರ್ಣಜ್ಞ.

೧೩೯

ಇಳೆಯಲ್ಲಿ ಹೆಸರಾದ, ಇಳಕಲ್ಲ ಚಿತ್ತರಗಿ
ಯೊಳಗಿರುವ ಶ್ರೀಮಠದ ಮರಿದೇವರಾಗಿ
ಬೆಳಗಿದೆನು ಆಗ ಪೂರ್ಣಜ್ಞ.

೧೪೦

ಓದುವದು ಬಿಟ್ಟು ನಾ, ಮೋದದಲಿ ಚಿತ್ರಕಲೆ
ಸಾಧಿಪ್ಪದ ಕಂಡು ಬೋಧಕರು ಬಿಡಿಸಿದರು
ಮೊದಲಿಸಿ ಅದನು ಪೂರ್ಣಜ್ಞ.

೧೪೧

ಚಿತ್ರ ಬರೆಯುವ ಹುಚ್ಚು, ಚಿತ್ತದಿಂ ದೂರಾಗಿ
ಮತ್ತೊಂದು ಹುಚ್ಚು, ಅದು ಪದ್ಯಗಳ ಹುಚ್ಚು
ಮುತ್ತಿತೆನ್ನನ್ನು ಪೂರ್ಣಜ್ಞ.

೧೪೨

ಅತಿ ಚಿಕ್ಕ ಬಾಲ್ಯದಲಿ, ಅತಿಮಧುರ ಕವನಗಳ
ಮಿತಿ ಮೀರಿ ಬರೆದೆ ಲಾವಣಿಗಳನು ಮತ್ತು
"ಸ್ತುತಿ ಕಂದಗಳನು" ಪೂರ್ಣಜ್ಞ.

೧೪೩

ಅಭ್ಯಾಸ ಬಿಟ್ಟುಚಿ-ತ್ರಾಭ್ಯಾಸ, ಪದ್ಯರಚ-
ನಾಭ್ಯಾಸಕಿಳಿದ ನಿದಕಾಗಿ ಶಿಕ್ಷಕರು
ಹುಬ್ಬೇರಿಸಿದರು ಪೂರ್ಣಜ್ಞ.

೧೪೪

ಉಚ್ಚಕವಿಯಿವನೆಂದು, ಮೆಚ್ಚಿದರು ನನ್ನನ್ನು
ಮೆಚ್ಚುಗೆಯು ಫಲಿಸಿ ಪುಸ್ತಕದರೂಪದಲಿ
ಅಚ್ಚಾದುವಂದು ಪೂರ್ಣಜ್ಞ.

೧೪೫

ನೋಡಿನನ್ನಾಭ್ಯಾಸ, ಕಾಡಾಡಿ ಬಾಲಕರು
ಕಾಡಿದರು ಬಹಳ ಅದಕೆ ನಾನೆವೆಗೆಡದೆ
ಓದಿದೆನು ಮುಂದೆ ಪೂರ್ಣಜ್ಞ.

೧೪೬

ಚಿತ್ತರಗಿ ಇಳಕಲ್ಲ, ಉತ್ತಮೋತ್ತಮರೆಲ್ಲ
ಮುತ್ತಿನಂತೆತ್ತಿ ಅಪ್ಪಿದರು ನನ್ನನ್ನು
ವಾತ್ಸಲ್ಯದಿಂದ ಪೂರ್ಣಜ್ಞ.

೧೪೭

ತಿಳಿವಳಿಕೆಯುಳ್ಳವರೆ, ಬಲುಕಾಡಿದರು ನನ್ನ
ಮೆಲುಮಾತನಾಡಿ ಮೈಮರೆಸಿ ಬೆನ್ನಿನಲಿ
ಅಲಗನಿರಿದಿಹರು ಪೂರ್ಣಜ್ಞ.

೧೪೮

ಓದಿದೆನು ಹಠಹಿಡಿದು, ಸಾಧಿಸಿದೆ ಹಿರಿ ಗುರಿಯ
ಕೇಂದ್ರದ ಪರೀಕ್ಷೆಯಲ್ಲಿ ಪ್ರಥಮಸ್ಥಾನವನು
ಮೋದದಿಂ ಪಡೆದೆ ಪೂರ್ಣಜ್ಞ.

೧೪೯

ಮೊದಲು ನಾಹೆದರಿದ್ದೆ, ಸದುಭಕ್ತರೈತಂದು,
ಒದಗಿಸಿದರೆನಗೆ ಸುಸಹಾಯ ಸಹಕಾರ,
ಮುದದಿ ಮುಂದಾದೆ ಪೂರ್ಣಜ್ಞ.

೧೫೦

ಕಾಶಿಯಲಿ ಓದಿದೆನು, ಈಸಿದೆನು ಗಂಗೆಯಲಿ
ಮೋಸಮಾಳ್ಪವರ ಸಂಗ ಮಾಡದಲೆ ಸಂ–
ತೋಷದಿಂದಿದ್ದೆ ಪೂರ್ಣಜ್ಞ.

೧೫೧

ಬುಧವರರು ಮೆಚ್ಚುತ್ತ, ಪದವಿಗಳ ಪಡೆದಿಹೆನು
ಪದೆದು ಓದಿಸಿದ ವಿದ್ಯಾಲಯಕೆ ಯಶವಂ
ಒದಗಿಸಿದೆ ನಾನು ಪೂರ್ಣಜ್ಞ.

೧೫೨

ಸತ್ಯಾರ್ಥಿಯಾಗಿದ್ದೆ, ವಿದ್ಯಾರ್ಥಿ ಜೀವನದಿ
ಕುತ್ತುಗಳನೆಲ್ಲ ಧೈರ್ಯದಿಂದೆದುರಿಸಿದೆ
ಸತ್ಯವನು ಬಿಡದೆ ಪೂರ್ಣಜ್ಞ.

೧೫೩

ಸ್ವಯಂಪಾಕಿಯಾಗಿ ಮಿತ-ವ್ಯಯದಿಂದ ನಾನಿದ್ದೆ
ನಯಭಯಗಳಿಂದ ಕಾಶಿ ಜೀವನದಲ್ಲಿ
ಜಯಶಾಲಿಯಾದೆ ಪೂರ್ಣಜ್ಞ.

೧೫೪

ಹಿಂದಿ, ಇಂಗ್ಲೀಷಿನಲ್ಲಿ, ಸುಂದರ ವಿಚಾರಗಳ
ಬಂಧುರದ ಬರೆಹ ಬರೆದೆ ಪತ್ರಿಕೆಯಲ್ಲಿ
ಕುಂದಿಲ್ಲದಂತೆ ಪೂರ್ಣಜ್ಞ.

೧೫೫

ವಿಶ್ವವಿದ್ಯಾಲಯದ, ಶಿಷ್ಯವೇತನ ಪಡೆದೆ
ವಿಶ್ವಾಸದಿಂದ ಓದಲಿಹ ಬಡವರಿಗೆ
ಲೇಸಾಗಲಿತ್ತೆ ಪೂರ್ಣಜ್ಞ.

೧೫೬

ಉದ್ಧಾಮ ಪಂಡಿತರು, ಶುದ್ಧ ಪದ್ಧತಿಯಿಂದ
ಸದ್ವಿದ್ಯೆ ಕಲಸಿ ನನ್ನ ಮತಿ ಮನಗಳನು
ತಿದ್ದಿ ತೀಡಿದರು ಪೂರ್ಣಜ್ಞ.

೧೫೭

ಇರುವಾಗ ಕಾಶಿಯಲಿ, ಕರೆಯೊಂದು ಬಂತೆನಗೆ
ವರಮೂರುಸಾವಿರ ಮಹಾಮಠಕೆ ಬಾ ಎಂದು
ಗುರುಸಿದ್ಧನಿಂದ ಪೂರ್ಣಜ್ಞ.

೧೫೮

ಚಿತ್ತರಗಿ ಇಳಕಲ್ಲ, ಭಕ್ತರಿಗೆ ಕಡುದುಃಖ
ಒತ್ತರಿಸಿ ಬಂದು ಅವರ ಕಣ್ಣುಗಳಿಂದ
ಮುತ್ತು ಉದುರಿದವು ಪೂರ್ಣಜ್ಞ.

೧೫೯

ಇಳಕಲ್ಲ ಭಕ್ತರಿಗೆ, ಕಳವಳವು ಬಹಳಾಯ್ತು
ಬೆಳೆಸಿದೆವು ನಮ್ಮ ಮಠಕೆಂದು 'ದೇವರನು'
ಫಲ ಪರರಿಗೆಂತು? ಪೂರ್ಣಜ್ಞ.

೧೬೦

ಎಲ್ಲೆಡೆಗೆ ಉಪವಾಸ, ಎಲ್ಲವರು ಮಾಡಿ ಇಳ-
ಕಲ್ಲ ಬಿಡದಂತೆ ಗೋಗರೆದರವರು
ಕಲ್ಲು ಕರಗುವೊಲು ಪೂರ್ಣಜ್ಞ.

೧೬೧

ಸಲುಹಿರುವ ಭಕ್ತರನು, ಕಳೆದುಕೊಳ್ಳಲಿ ಹೇಗೆ ?
ಬೆಳಕು ನೀಡಿರುವ ಮಹಾಂತೇಶ ಮಠವನ್ನು
ಕಳಕೊಳ್ಳಲೆಂತು? ಪೂರ್ಣಜ್ಞ.

೧೬೨

ಬಲುದುಃಖ ಸಾಗರದಿ, ಮುಳುಗಿದ್ದೆ ಕೆಲವು ದಿನ
ಮುಳುಗಿರಲು ನನಗೆ ಮುಂದೆ ಗತಿ ಏನೆಂದು
ತಿಳಿಯದಂತಾಯ್ತು ಪೂರ್ಣಜ್ಞ.

೧೬೩

ಪ್ರತಿವರ್ಷ ಶ್ರಾವಣಕೆ, ಸತತಬಂದಪೆನೆಂಬ
ಹಿತವಚನಕೇಳಿ, ಹುಬ್ಬಳ್ಳಿಗೀಯಲ್ಕೆ
ಅತಿ ಹರ್ಷಿಸಿದರು ಪೂರ್ಣಜ್ಞ.

೧೬೪

ಗುರುಸಿದ್ಧ ಗುರುವರರು, ವರಮಠವೆನೆನಗಿತ್ತು
ವರಮಠದ ಹೊಣೆಯು ನಿರ್ವಹಿಪ ಸೂತ್ರಗಳ
ಅರುಹಿದರು ನನಗೆ ಪೂರ್ಣಜ್ಞ.

೧೬೫

ಮೂರುಸಾವಿರಮಠವು, ಭಾರತದಿ ಹಿರಿಪೀಠ
ಸಾರತರಶಕ್ತಿ ದುಡಿಯಲ್ಕೆ ಕೊಡಲೆಂದು
ಕೋರಿದೆನು ಗುರುವ ಪೂರ್ಣಜ್ಞ.

೧೬೬

ಗುರುಸಿದ್ಧ ಶಕ್ತಿಯಿಂ, ನಿರುತದುಡಿದೆನು ಮಠಕೆ
ಪರದೇಶ ತಿರುಗಿ ಧರ್ಮದೀಪ್ತಿಯ ಬೆಳಗಿ
ಮರಳಿದೆನು ಮಠಕೆ, ಪೂರ್ಣಜ್ಞ.

೧೬೭

ಗುರುವಿರದೆ ಇದ್ದರೂ, ಶಿರದೊಳಗೆ ಗುರುವಾಜ್ಞೆ
ಗುರುವಿಚ್ಛೆಯನು ಬಿಡದೆ ನಡೆಸುತ್ತಿಹೆನು
ಮರೆಯದಲೆ ನಾನು ಪೂರ್ಣಜ್ಞ.

೧೬೮

ಶಾಲೆ ಕಾಲೇಜುಗಳ, ಮಾಲೆಗಳ ಬೆಳೆಸಿಹೆನು
ಗೀಳಾದ ಮಠವ ನೂತನೀಕರಿಸಿಹೆನು
ಲೀಲೆಗುರುವಿನದು ಪೂರ್ಣಜ್ಞ.

೧೬೯

ದಾನ ಸತ್ಕಾರ್ಯಕ್ಕೆ, ದಾನಸತ್ಪಾತ್ರಕ್ಕೆ
ನಾನೀಯುತಿಹೆನು ಮಾನವೀಯತೆಯಿಂದ
ದೀನ ಜನ ಹಿತಕೆ ಪೂರ್ಣಜ್ಞ.

೧೭೦

ಸಾಹಿತ್ಯ ಉಳಿಸಲ್ಕೆ, ಸಾಹಿತ್ಯ ಬೆಳೆಸಲ್ಕೆ
ಸಾಹಿತ್ಯ ಬೆಳಗಿ ತೊಳಗಿಸಲು ಬಳಸಿಹೆನು
ನಾ ಹೆಚ್ಚು ಹಣವ ಪೂರ್ಣಜ್ಞ.

೧೭೧

[೧]ಗುರುಸಿದ್ಧರಾಸ್ಪತ್ರೆ, ಭರದಿಂದ ಬೆಳೆಸಿಹೆನು
ಪರಮ ಆರೋಗ್ಯ ಸೇವೆಯನು ಸಲ್ಲಿಸಲು
ವರವೈದ್ಯರಿಲ್ಲಿ ಪೂರ್ಣಜ್ಞ.

೧೭೨

[೨]ವಟುಗಳು ಸದಾಚಾರ, ಪಟುಗಳಾಗಲಿ ಎಂಬ
ದಿಟಧ್ಯೇಯದಿಂದ "ಶಿವಸಂಘ" ಸ್ಥಾಪಿಸಿಹೆ
ಮಠದ ವಲಯದಲಿ ಪೂರ್ಣಜ್ಞ.

೧೭೩

ಈ ಸಂಘದಲಿ ಬೆಳೆದು, ಭಾಸುರ ಮಠಗಳಲಿ
ಶ್ರೀಸ್ವಾಮಿಗಳು ಎನಿಸಿ ಭೂಷಿಸುತ್ತಿಹರು
ಈಶ ಮೆಚ್ಚುವೊಲು ಪೂರ್ಣಜ್ಞ.

೧೭೪

ಕೋಮು ಸೌಹಾರ್ದಕ್ಕೆ, ಕೋಮುಗಳ ಕ್ಷೇಮಕ್ಕೆ
ಪ್ರೇಮರಸ ಪರೆದೆ ಶಾಂತಿನೆಲೆಸಿತು ಬೇಗ
ಸ್ವಾಮಿಕೃಪೆಯಿಂದ ಪೂರ್ಣಜ್ಞ.

೧೭೫

ಮೂರುನೂರರಸಂಖ್ಯೆ, ಮೀರಿ ಅಚ್ಚಾಗಿಹವು
ಸಾರಗ್ರಂಥಗಳು ಬುಧರ ಸಹಕಾರದಲಿ
ಭಾರಿಸೊಬಗಿನಲಿ ಪೂರ್ಣಜ್ಞ.

---

೧ ಹಿಂದಿನ ಲಿಂಗೈಕ್ಯ ಗುರುಸಿದ್ಧ ಜಗದ್ಗುರುಗಳು ಸ್ಥಾಪಿಸಿದ ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆಯನ್ನು ೧೯೫೯ನೇ ಇಸ್ವಿಯಲ್ಲಿ ಪ್ರಾರಂಭಿಸಿ, ಒಳ್ಳೆ ರೀತಿಯಲ್ಲಿ ಬೆಳೆಯುವಂತೆ ಸಹಕಾರ ಬಂಧುಗಳಿಂದ ಆಶ್ರಯ ಪಡೆದು ವ್ಯವಸ್ಥಿತ ರೀತಿಯಲ್ಲಿ ನಡೆಸಲಾಗಿದೆ. ಸಹಕಾರ ತತ್ವದ ತಳಹದಿಯ ಮೇಲೆ ಪ್ರಾರಂಭವಾದ ಈ ಆಸ್ಪತ್ರೆ ಭಾರತದಲ್ಲಿಯೇ ಮೊದಲು.

೨ "ಶಿವಸಂಘ ಎಂದರೆ" 'ಶ್ರೀ ಕುಮಾರೇಶ್ವರ ಶಿವಯೋಗಿ ಸಂಘ' ಈ ಸಂಘದಿಂದ ೭೦ ಜನ ಸ್ವಾಮಿಗಳು ತಯಾರಾಗಿ ಆಂಧ್ರ, ಮಹಾರಾಷ್ಟ್ರ, ಕರ್ನಾಟಕದಲ್ಲಿ ಮಠಾಧಿಪತಿಗಳಾಗಿದ್ದಾರೆ.

೧೭೬

ಏನಾದರೂ ಬಿಡದೆ, ನಾನು ಪ್ರತಿದಿನ ಬರೆದೆ
ಜ್ಞಾನಿಗಳು ಮೆಚ್ಚಿ ಅಹುದೆನ್ನುವಂತದನು
ಏನು ಬಣ್ಣಿಸಲಿ? ಪೂರ್ಣಜ್ಞ.

೧೭೭

[೧]ಬರಗಾಲ ಬಿದ್ದಿರುವ ಕಿರಿಯೂರುಗಳ ತಿರುಗಿ
ಬರದ ಬೆಂಕಿಯಲಿ ಬೆಂದಬಡವರಿಗನ್ನ
ಅರಿವೆಗಳನಿತ್ತೆ ಪೂರ್ಣಜ್ಞ.

೧೭೮

[೨]ಪಾದಯಾತ್ರೆಯೊಳಾನು, ಬೋಧೆಗೈದುದಕೊಲಿದು
ಮೋದದಿಂ ಭಕ್ತರಿತ್ತುದನು ತಿರುಗಿತ್ತೆ–
ನಾದರದೊಳಲ್ಲಿ ಪೂರ್ಣಜ್ಞ.

೧೭೯

ತ್ಯಾಗಕ್ಕೆ ಬಲಬೇಕು, ತ್ಯಾಗಬಲವೆನಗಿಹುದು,
ಬೀಗಿಲ್ಲ ನಾ ಜಗದ್ಗುರುವೆಂದು, ನನ್ನತನ
ತ್ಯಾಗಗೈದಿಲ್ಲ ಪೂರ್ಣಜ್ಞ.

೧೮೦

[೩]ಬಡರೋಗಿಗಳ ಕಂಡು, ಕಡುಕರುಣೆಯಿಂ ನಾನು
ಅಡಿಗಡಿಗೆ ಅನ್ನವಸ್ತ್ರಗಳ ನಿತ್ತಿಹೆನು
ಮೃಡ ಮೆಚ್ಚುವಂತೆ ಪೂರ್ಣಜ್ಞ.

---

೧ ಉತ್ತರಕರ್ನಾಟಕದಲ್ಲಿ ಬೆಳಗಾಂವ, ವಿಜಾಪೂರ. ಗುಲಬುರ್ಗಾ.

೨ ರಾಯಚೂರು, ಬೀದರ ಜಿಲ್ಲೆಗಳಲ್ಲಿ ಅತಿಭೀಕರ ಬರಗಾಲಬಿದ್ದಾಗ ಹುಬ್ಬಳ್ಳಿ ಹಾಗೂ ಅನೇಕ ಊರುಗಳಲ್ಲಿ ಪಾದಯಾತ್ರೆ ಮಾಡಿ, ೨೦ ಲಕ್ಷ ಧನಸಂಗ್ರಹ ಹಾಗೂ ಸಾವಿರಾರು ಚೀಲ ಧಾನ್ಯ, ೧೦ ಟ್ರಕ್ಕು ಬಟ್ಟೆ, ೫-೬ ನೂರು ಟ್ರಕ್ಕು ಮೇವು ಸಂಗ್ರಹಿಸಿ ನೂರಾರು ಗಂಜಿಕೇಂದ್ರ ತೆಗೆದು ನಿತ್ಯ ೫೦ ಸಾವಿರಕ್ಕಿಂತ ಹೆಚ್ಚು ಬಡಬಗ್ಗರಿಗೆ ೬ ತಿಂಗಳ ತನಕ ಅನ್ನ. ಅರಿವೆ ನೀಡಿದ್ದು ಹುಬ್ಬಳ್ಳಿ ಭಕ್ತರ ಹಾಗೂ ಆರ್. ಎಸ್, ಎಸ್. ಮತ್ತು ವಿಶ್ವಹಿಂದು ಪರಿಷತ್ತಿನವರ ಸಹಕಾರದಿಂದ ವ್ಯವಸ್ಥಿತ ರೀತಿಯಿಂದ ನಡೆಸಿದ್ದು.

೩. ಬಡರೋಗಿಗಳ ಸಲುವಾಗಿ ಘಟಪ್ರಭೆಯಲ್ಲಿ ಒಂದು ಟ್ರಸ್ಟ ರಚಿಸಿ, ಅದಕ್ಕೆ ೪೦ ಎಕರೆ ಭೂಮಿ ಹಾಗು ಕೃತಿಕರ್ತರಿಗೆ ದಾನವಾಗಿ ಬಂದಿರುವ ಒಂದು ದೊಡ್ಡ ಬಂಗ್ಲೆಯನ್ನು ಈ ಸಂಸ್ಥೆಗೆ ಕೊಟ್ಟು ನಿತ್ಯ ಬಡರೋಗಿಗಳಿಗ ಉಚಿತ ಪ್ರಸಾದದ ವ್ಯವಸ್ಥೆ ಮಾಡಲಾಗಿದೆ.

೧೮೧

೧"ನಿವ್ಯಾನೊ" ಎಂದೆಂಬ, ನವ್ಯಜಾಪಾನಸ್ಥ
ಭವ್ಯ ಬಹುಮಾನ ಸಂಸ್ಥೆಗಾನಿಹೆನು ಸಂ-
ಭಾವ್ಯ "ಮೆಂಬರನು" ಪೂರ್ಣಜ್ಞ.

೧೮೨

ಸರುವಜನಹಿತಕಾಗಿ, ಗುರುಸಿದ್ಧನಾಮೆಯಿಂ
ಸ್ಥಿರಬ್ಯಾಂಕು ಸ್ಥಾಪಿಸಿಹೆ, ವ್ಯವಹಾರ ಬಹಳ
ಭರದಿನಡೆಯುತಿದೆ ಪೂರ್ಣಜ್ಞ.

೧೮೩

ಇಳಕಲ್ಲಿನೊಳಗೊಂದು, ಬೆಳಕೀವ ಶಿಕ್ಷಣದ
ಬಲು ದೊಡ್ಡ ಸಂಸ್ಥೆ ಸ್ಥಾಪಿಸಲು ಪ್ರೇರಿಸಿದೆ
ಬೆಳೆದಿರುವದಿಂದು ಪೂರ್ಣಜ್ಞ.

೧೮೪

ಇಳಕಲ್ಲ ನಗರದಲಿ, ಚಲುವಾದ ಶಿಕ್ಷಣದ
ನಿಲಯ ಬೆಳೆಯಲ್ಕೆ "ಗುಡ್ಡಕೊಡಿಸಿದೆನೆಂದು"
ಬೆಳಗುತಿದೆ ನೋಡು ಪೂರ್ಣಜ್ಞ.

೧೮೫

೨ವಿಜಯಮಹಾಂತೇಶನ, ಹೆಸರಿನಲಿ ಬೆಳೆದಿಹುದು
ವಿಜಯ ಸಂಘವದು ಶಿಕ್ಷಣವ ಬೆಳೆಸಿಹುದು
ವಿಜಯ ಪಡೆದಿಹುದು ಪೂರ್ಣಜ್ಞ.

---

೧ **"NIWANO" Peace Foundation.**
ಜಪಾನದ ಟೋಕಿಯೋದಲ್ಲಿರ.ವ ಸಂಸ್ಥೆಯು ವಿಶ್ವದಲ್ಲಿ ದೊಡ್ಡದು. ಇದರ ವತಿಯಿಂದ ವಿಶ್ವದಲ್ಲಿ ಮಾನವೀಯ ಸೇವೆ ಮಾಡಿದವರಿಗೆ ಬಹುಮಾನ ಕೊಡುವ ನೋಬೆಲ್ ಪಾರಿ-ತೋಷಕದಂತೆ 'ನಿವ್ಯಾನೊ ಶಾಂತಿ ಪ್ರತಿಷ್ಠಾನ' ಈ ಸಂಸ್ಥೆಯು ಪ್ರತಿವರ್ಷ ಪಾರಿತೋಷಕ ಕೊಡುತ್ತಿದೆ. ಈ ಸಂಸ್ಥೆಗೆ ಈ ಕೃತಿಕರ್ತರು ಭಾರತದ ವತಿಯಿಂದ ಸದಸ್ಯರಿದ್ದು, ಪ್ರತಿವರ್ಷ ವಿಶ್ವದ ಮಹಾನ್ ವ್ಯಕ್ತಿಗಳೊಬ್ಬರ ಹೆಸರು ನೀಡಿ, ಸಲಹೆ ನೀಡುತ್ತಿದ್ದಾರೆ.

೨ ವಿಜಯಮಹಾಂತೇಶ್ವರ ಕಾಲೇಜುಗಳ ಕಟ್ಟಡಕ್ಕಾಗಿ ಇಳಕಲ್ಲಿನಲ್ಲಿ ಲಿಂ, ಗುರುಮಹಾಂತ ಸ್ವಾಮಿಗಳು ಭಕ್ತರೂಡಗೂಡಿ ಪಾದಯಾತ್ರೆ ಮಾಡುತ್ತಿರುವಾಗ, ರಾಮಣ್ಣ ಕರಡಿಯವರ ಮನೆಗೆ ಹೋದಾಗ ಅಜಮಾಸು ೪೦೦ ಎಕರೆ ಗುಡ್ಡವನ್ನು ದಾನವಾಗಿ ವಿಜಯ:ಮಹಾಂತೇಶ ವಿದ್ಯಾವರ್ಧಕ ಸಂಘಕ್ಕೆ ಕೃತಿ ಕರ್ತರ ಪ್ರೇರಣೆಯಂತೆ ಬರೆದುಕೊಟ್ಟರು. ಆ ಗುಡ್ಡದಿಂದ ಈಗಾಗಲೇ ಕೊಟ್ಯಾಂತರ ಧನವು ವಿದ್ಯಾವರ್ಧಕ ಸಂಘಕ್ಕೆ ಸಂದು, ಕಾಲೇಜುಗಳ ಬೆಳವಣಿಗೆಗೆ ಮುಖ್ಯ ಕಾರಣವಾಗಿದೆ.

೧೮೬

ಮಹಿಳೆಯರ ಉನ್ನತಿಗೆ, ಮಹಿಳಾ ವಿದ್ಯಾಲಯವ
ಬಹುಶ್ರಮದಿಗೈದಿಹೆನು ಹುಬ್ಬಳ್ಳಿ ಜನರ
ಸಹಕಾರದಿಂದ ಪೂರ್ಣಜ್ಞ.

೧೮೭

ಬಡಜನರಹಿತಕಾಗಿ, ಕಡುಕರುಣೆಯಿಂ ನಾನು
ಕಡುಕಷ್ಟದಿಂದ ಕೈಗಾರಿಕೆಯ ಸಂಸ್ಥೆ,
ದೃಢದಿ ಕಟ್ಟಿಹೆನು ಪೂರ್ಣಜ್ಞ.

೧೮೮

"ಪೂಜಾ ಸಂಸ್ಥೆ" ಓಜೆಯಿಂ ಸ್ಥಾಪಿಸಿಹೆ
ಪೂಜೆ ನಡೆದಿಹುದು ವೈಭವದಿ ಗದ್ದುಗೆಯ
ಮೂಜಗದೊಡೆಯನ ಪೂರ್ಣಜ್ಞ.

೧೮೯

೧ಜಾಗತಿಕ ಸಭೆಯಲ್ಲಿ, ಭಾಗವಹಿಸುತ ನಾನು
ಬೇಗದಿಂ ವಿಶ್ವಕ್ಕೆ ಶಾಂತಿಸಿಗಲೆಂದು ಅನು-
ರಾಗದಿಂ ಪೇಳ್ದೆ ಪೂರ್ಣಜ್ಞ.

೧೯೦

ಹತ್ತೆಂಟು ರಾಷ್ಟ್ರಗಳ, ಸುತ್ತಿ ಬಂದಿಹೆನಲ್ಲಿ
ಕತ್ತಲೆಯ ಕಳೆಯೆ ವಿಶ್ವಶಾಂತಿಯ ಬೋಧೆ
ಬಿತ್ತರಿಸಿ ಬಂದೆ ಪೂರ್ಣಜ್ಞ.

---

೧ ಪ್ರಪಂಚದ ಇತಿಹಾಸದಲ್ಲಿಯೇ ಮೊಟ್ಟಮೊದಲು, ಜಪಾನದ ಕ್ಯೂಟೋದಲ್ಲಿ ೪೦ ರಾಷ್ಟ್ರಗಳ ಪ್ರತಿನಿಧಿಗಳಿಂದ ಕೂಡಿದ World Conference of Religion for Peace ವಿಶ್ವಧರ್ಮ ಶಾಂತಿ ಪರಿಷತ್ತಿಗೆ ೧೭–೧೦–೭೦ರಂದು ಭಾರತದ ವತಿಯಿಂದ ಕೃತಿಕರ್ತರು ಭಾಗವಹಿಸಿ ಬಹಿರಂಗ ಸಭೆಯಲ್ಲಿ ಶರಣರು ಸಾರಿದ 'ಕಾಯಕವೇ ಕೈಲಾಸ'ದ ಮಹತ್ವವನ್ನು ವಿವರಿಸಿ, ಇದರಿಂದ ಜಗತ್ತಿಗೆ ಶಾಂತಿ ತರಲು ಸಾಧ್ಯ ಎಂದು ಪ್ರತಿಪಾದಿಸಿದರು, ಈ ಪರಿಷತ್ತಿಗೆ ಕೃತಿಕರ್ತರು ಸದಸ್ಯರಾಗಿದ್ದುದು ಗಮನಿಸಬಹುದು. ವೀರಶೈವ ಧರ್ಮದ ಜಗದ್ಗುರುಗಳು ಹಾಗೂ ಸ್ವಾಮಿಗಳಲ್ಲಿ ಕರ್ನಾಟಕ ಇತಿಹಾಸದಲ್ಲಿಯೇ ಮೊಟ್ಟಮೊದಲು ವಿದೇಶಕ್ಕೆ ತೆರಳಿ, ಕೃತಿಕರ್ತರು ಇನ್ನುಳಿದವರು ಧರ್ಮ ಪ್ರಚಾರಕ್ಕೆ ಹೋಗಲು ದಾರಿ ಮಾಡಿ ಕೊಟ್ಟಿದ್ದಾರೆ.

೧೯೧

ಮಠದ ಏಳಿಗೆಗಾಗಿ, ಕುಟಿಲ ಭಕುತರ ಸಂಗ
ಬಿಟ್ಟು ಬಿಟ್ಟಿಹೆನು ಗುರುಸಿದ್ಧ ಗುರುಪಾದ
ಗಟ್ಟಿ ಹಿಡಿದಿಹೆನು ಪೂರ್ಣಜ್ಞ.

೧೯೨

ಶಿವಯೋಗ ಮಂದಿರಕೆ ಸವೆಸಿಹೆನು ದೇಹವನು
ವಿವಿಧ ರಚನೆಗಳು ಮನದೊಳಗೆ ಕುಳಿತಿಹವು
ಶಿವನೆ ನೀ ನೋಡು, ಪೂರ್ಣಜ್ಞ.

೧೯೩

ಎಷ್ಟೆಷ್ಟೋ ಹೊಂಗನಸು, ಕಟ್ಟಿದ್ದೆ ಮನದಲ್ಲಿ
ದಿಟ್ಟಡಿಯನಿಟ್ಟು ಕೃತಿಗೈಯುವನಿತರಲಿ
ಒಟ್ಟಿದರು ವಿಘ್ನ ಪೂರ್ಣಜ್ಞ.

೧೯೪

ಅಂದಂದು ಮಾಡಿರುವ, ಸೌಂದರ್ಯಭಾವಗಳ
ಮಂದಹಾಸವನು ಚಿತ್ರಿಸುತಲಿಹೆನಿದುವೆ
ಮುಂದಾಗಲೆಂಬೆ ಪೂರ್ಣಜ್ಞ.

೧೯೫

ಲೋಕ ಶಿಕ್ಷಣ ಶಾಲೆ ಲೋಕಾನುಭವವನ್ನು
ಸಾಕನಿತು ಕಲಿಸಿಹುದು ವಚನರಚಿಸಲ್ಕೆ
ಲೋಕ ಜನಹಿತಕೆ ಪೂರ್ಣಜ್ಞ.

೧೯೬

ಕಷ್ಟಗಳ ಸಾಕಷ್ಟು ಕೊಟ್ಟಿಹರು ನಮ್ಮವರು
ನಷ್ಟ ಲೆಕ್ಕಿಸದೆ ಆಶ್ರಯವನಿತ್ತಿಹೆನು
ನಿಷ್ಠೆ ಬಿಡದಿಹೆನು ಪೂರ್ಣಜ್ಞ.

೧೯೭

ಶಿಕ್ಷಣವ ಬೆಳೆಯಿಸಲು, ಶೈಕ್ಷಣಿಕ ಸಂಸ್ಥೆಗಳ
ಕಕ್ಕುಲತೆಯಿಂದ ಕಟ್ಟಿಹೆವು ಗುರುಸಿದ್ಧ,
ಸತ್ಕೃಪೆಯ ಬಲದಿ ಪೂರ್ಣಜ್ಞ.

೧೯೮

ನನ್ನ ದಾರಿಯು ನನಗೆ, ನಿನ್ನ ದಾರಿಯು ನಿನಗೆ
ನನ್ನ ಎತ್ತರದ ಗುರಿಯ ನೀನೇಂ ಬಲ್ಲೆ?
ಕುನ್ನಿಯಂಥವನೆ? ಪೂರ್ಣಜ್ಞ.

೧೯೯

"ನಾನೊಂದು ನೆನೆಯುತಿರೆ, ತಾನೊಂದು ನೆನೆಯುವರು"
ನಾನಿತ್ತ ಲೆಳೆಯ ತಾನತ್ತ ಲೆಳೆಯುವದು
ಏನದೀ ಮನವು ಪೂರ್ಣಜ್ಞ.

೨೦೦

ಕೆಲಸಗಳ ಸಂತೆಯಲಿ, ಕುಳಿತು ಬರೆಯುವದೆಂತು?
ಗಲಿಬಿಲಿಗಳಲ್ಲಿ ಅವಸರದಿ ಗೀಚಿಹೆನು
ಹಲ ಕೆಲವು ವಚನ ಪೂರ್ಣಜ್ಞ.

೨೦೧

ಮಂದಿರಕೆ ಮಾಡಿದ್ದ, ಸುಂದರದ ಯೋಜನೆಗೆ
ಕುಂದು ತಂದಿಹರು ಸ್ವಾರ್ಥಕ್ಕೆ ಬಲಿಬಿದ್ದು
ಮಂದಚೇತನರು ಪೂರ್ಣಜ್ಞ.

೨೦೨

[1]ಮಂದಿರಕೆ ಮಾಡಿಸಿಹೆ, 'ವಿದ್ಯುದ್ದೀಪದ' ಮಾಲೆ
ಅಂದು 'ಮಹಾಸಭೆ' ಮಾಡಿಸಿದ ಆನಂದ
ದಿಂದಿರುವೆನಿಂದು ಪೂರ್ಣಜ್ಞ.

---

೧ (ಶಿವಯೋಗ ಮಂದಿರದ ಅಧ್ಯಕ್ಷರಾಗಿದ್ದಾಗ, ಮಂದಿರಕ್ಕೆ ವಿದ್ಯುದ್ದೀಪಗಳನ್ನು ಸದಸ್ಯರ ಸಹಕಾರ, ಸರಕಾರದ ಸಹಾಯದಿಂದ ಹಾಕಿಸಿದ್ದು; ಶಿವಯೋಗಮಂದಿರದಲ್ಲಿ ವಿದ್ಯುದ್ದೀಪಗಳ ಸುಳಿವೇ ಇದ್ದಿಲ್ಲ. ಕೇವಲ ಕಂದೀಲು ಉಪಯೋಗಿಸುತ್ತಿರುವಾಗ, ಈ ರೀತಿ ಮಾಡಿಸಿದ್ದು ಮತ್ತು ಅಖಿಲಭಾರತ ವೀರಶೈವ ಮಹಾಸಭೆ (೧೭ನೆಯದು) ಅತ್ಯುತ್ತಮ ರೀತಿಯಿಂದ, ಸರ್ವಸ್ವಾಮಿಗಳ ಹಾಗೂ ಸದ್ಭಕ್ತರ ಸಹಾಯ ಸಹಕಾರದಿಂದ ಮಾಡಿಸಿದ್ದು, ಮತ್ತು ಸರಕಾರದಿಂದ ಬನಶಂಕರಿಯಿಂದ ಮಂದಿರದವರೆಗೆ ರೋಡು ಹಾಗೂ ಗೆಸ್ಟ್‌ಹೌಸ್ ಮಾಡಿಸಿದ್ದು, ಭಕ್ತರ ಸಹಾಯದಿಂದ.

೨೦೩

ಕುಮಾರನ ಸೇವೆಯನು, ಒಮ್ಮನದಿ ಮಾಡಲ್ಕೆ
ಚಿಮ್ಮುತಿಹ ಮನವ ಹಿಂದೆಳೆದು ಜಗ್ಗಿಹರು,
ಉಮ್ಮಳಿಸುತಿಹೆನು ಪೂರ್ಣಜ್ಞ.

೨೦೪

ನನ್ನನ್ನು ರೂಪಿಸಿಹ, ಮಾನ್ಯ ಶಿವಮಂದಿರವ
ಉನ್ನತೋನ್ನತಗೈವ ನನ್ನ ಸಂಕಲ್ಪವನು
ಛಿನ್ನಗೈದಿಹರು ಪೂರ್ಣಜ್ಞ.

೨೦೫

ಶ್ರೀ ಮಠದಿ ಸಂಘವನು ಕುಮಾರನ ಹೆಸರಿನಲಿ
ಸಮ್ಮೋದದಿಂದ ಸಂಸ್ಥಾಪಿಸಿದ ದೊಡ್ಡ
ಹೆಮ್ಮೆನನಗಿಹುದು, ಪೂರ್ಣಜ್ಞ.

೨೦೬

ಶಿವಯೋಗ ಮಂದಿರವು, ಶಿವಧರ್ಮ ಬೆಳೆಸುತ್ತ
ಭವತಾಪ ಪರಿಹರಿಸಿ, ಬೆಳಗಿದರೆ ಸಾಕು
ಶಿವಮೆಚ್ಚುವಂತೆ ಪೂರ್ಣಜ್ಞ.

೨೦೭

ಪ್ರೋನ್ನತಿಯ ಪಥದಲ್ಲಿ, ಮುನ್ನುಗ್ಗುವವರನ್ನು
ಮುನ್ನುಗ್ಗದಂತೆ ಕಾಲ್ಜಗ್ಗುವವರಾಟ
ಇನ್ನೆಷ್ಟು ಕಾಲ? ಪೂರ್ಣಜ್ಞ.

೨೦೮

ಅಲ್ಲಿ ಕಟ್ಟಿಹೆನೊಂದು, ಸಲ್ಲಲಿತ 'ಧಾಮವನು'
ಎಲ್ಲ ಸ್ವಾಮಿಗಳ ಸಹಕಾರ ಬಲದಿಂದ
ಚೆಲ್ವಾಗುವಂತೆ ಪೂರ್ಣಜ್ಞ.

೨೦೯

ಸನ್ನುತ ಸಂಯೋಜನೆಗಳನ್ನು ಮುಂದಾಗದೊಲು
ಛಿನ್ನಗೈವವರ ಬಲವು ಬೆಳೆದಿರುವಾಗ
ಇನ್ನೆಲ್ಲಿ ಪ್ರಗತಿ? ಪೂರ್ಣಜ್ಞ.

೨೧೦

ಮನಶಾಂತವಿಲ್ಲದಿರೆ, ಘನಕಾವ್ಯ ಸ್ಫುರಿಸುವದೇ?
ದಿನದ ಲೌಕಿಕದ ಕಾರ್ಯಬಾಹುಲ್ಯದಲಿ
ಎನಿತೋ ಬರೆದಿಹೆನು ಪೂರ್ಣಜ್ಞ.

೨೧೧

ಒಳಮನೆಯ ಗೌಪ್ಯದಲಿ, ಕುಳಿತು ಬರೆಯುತಿರಲು
ಒಳನುಗ್ಗಿ ಬಹರು ಗೂಳಿಗಳು ಬಂದಂತೆ
ಅಳಿಸುವರು ಸ್ಫೂರ್ತಿ ಪೂರ್ಣಜ್ಞ.

೨೧೨

ಚಿತ್ತ ಬಲುನೊಂದಾಗ, ಒತ್ತಿ ಹೊರಹೊಮ್ಮುವವು
ಚಿತ್ಕಿರಣದಂತಹ "ಪೂರ್ಣಜ್ಞ ವಚನಗಳು"
ಸತ್ಯವಿದು ಸತ್ಯ ಪೂರ್ಣಜ್ಞ.

೨೧೩

ಆರೇನು ಮಾಡಿದರು, ಸಾರುವೆನು ಸತ್ಯವನು
ಧೀರ ಗುರುವಿತ್ತ ಆಜ್ಞೆಯನು ತಪ್ಪದಲೆ
ಪೂರಗಾಣಿಸುವೆ ಪೂರ್ಣಜ್ಞ.

೨೧೪

೧ನೂರೊಂದು ಗುರುವಿರಕ್ತ–ಶರಣರನು ಮಂದಿರಕೆ
ಕರಕೊಂಡು ಪಾದಯಾತ್ರೆಗೈದಿಹೆನು ಮುದದಿ
ಧರ್ಮಜಾಗೃತಿಗೆ ಪೂರ್ಣಜ್ಞ.

೨೧೫

ಶಿವಯೋಗ ಮಂದಿರವು, ಶಿವಭಾವ ಮಂದಿರವು
ಶಿವಲೋಕದಿಂದ ನೈಸರ್ಗ ಸೌಂದರ್ಯ
ಅವನಿಗಿಳಿದಿಹುದು ಪೂರ್ಣಜ್ಞ.

---

೧ ಎಡೆಯೂರು ಸಿದ್ಧಲಿಂಗೇಶ್ವರರು ಧರ್ಮಜಾಗೃತಿಗಾಗಿ ಪಾದಯಾತ್ರೆ ಮಾಡಿದ ನಂತರ ೨೦ನೇ ಶತಮಾನದಲ್ಲಿ ಮೊಟ್ಟಮೊದಲು ೧೦೧ ಗುರುವಿರಕ್ತರು ಹಾಗೂ ಸಹಸ್ರಾರು ಶರಣಭಕ್ತರನ್ನು ಕರಕೊಂಡು ಈ ಕೃತಿಕರ್ತರು ಹುಬ್ಬಳ್ಳಿಯಿಂದ ಶಿವಯೋಗ ಮಂದಿರಕ್ಕೆ ಧರ್ಮಜಾಗೃತಿಗಾಗಿ ೨೭–೧೧–೧೯೭೮ ರಿಂದ ೧೨ ದಿನಗಳವರೆಗೆ ಪಾದಯಾತ್ರೆ ಮಾಡಿದ್ದು. ಅಲ್ಲಲ್ಲಿ ಕಲ್ಯಾಣ ಸಂಘಗಳನ್ನು ಸ್ಥಾಪಿಸುತ್ತ ೩೦೦೦ ಜನರಿಗೆ ಲಿಂಗ ದೀಕ್ಷಾ ಮಾಡಿಸಿದ್ದು.

೨೧೬

ಏನೆನೋ ಚರ್ಚಿಸಿದೆ, ಜ್ಞಾನಿ ಸ್ವಾಮಿಗಳೊಡನೆ
ಏನೇನು ತಿಳಿಯದಲೆ ಬರಿದೊ ಬರಿದಾಯ್ತು
ನಾನಾದೆ ಶೂನ್ಯ ಪೂರ್ಣಜ್ಞ.

೨೧೭

ಜನರೆನ್ನ ಮನದೊಲವ, ಅಣುವನಿತು ಅರಿತಿಲ್ಲ
ಜನಕೆನಿತೊ ಒಳಿತೆನೆಸಗಿಹೆನು ಉಪಕೃತಿಯು
ನೆನಹಿಲ್ಲ ಜನಕೆಲ್ಲ ಪೂರ್ಣಜ್ಞ.

೨೧೮

ಥಳಥಳಿಸಿ ಹರಿಯುತಿಹ, ಮಲಪ್ರಭಾ ನದಿಯೆನ್ನ
ಒಳಮನದ ಮನೆಯು ಒಳಹೊಕ್ಕು ಹಸನಾಗಿ
ತೊಳೆದು ಬೆಳಗಿಸಲಿ, ಪೂರ್ಣಜ್ಞ.

೨೧೯

ಬಿಸಿರಕ್ತವಿದ್ದಾಗ, ಕಸುವು ತ.ಂಬಿರುವಾಗ
ವ್ಯಸನವಿರದಾಗ ಸೇವೆ ಮಾಡುವ ಭಾಗ್ಯ
ಹಸಿರು ಕನಸಾಯ್ತು, ಪೂರ್ಣಜ್ಞ.

೨೨೦

ಹಾನಗಲ್ಲ ಸುಕುಮಾರ, ಮೌನದಿಂ ಪ್ರಾರ್ಥಿಪೆನು
ನೀನೀಗ ಮತ್ತೆ ಮಂದಿರವ ಬೆಳೆಸು ಹೊಸ-
ಪ್ರಾಣವನು ತುಂಬಿ ಪೂರ್ಣಜ್ಞ.

೨೨೧

ಸುಲಿದ ಬಾಳೆಯ ಹಣ್ಣು, ಚೆಲುವ ದ್ರಾಕ್ಷಿಯ ಹಣ್ಣು
ಲಲಿತ ಭಾಷೆಯಲಿ ಬರೆದಿಹೆನು ತ್ರಿಪದಿಗಳ
ಸುಲಭ ಶೈಲಿಯಲಿ ಪೂರ್ಣಜ್ಞ.

೨೨೨

೧ಎನಗಾದ ಅನುಭವದ, ಕೆನೆವಾಲುನನುನಯದಿ
ಮನುಕುಲದ ಹಿತಕೆ ನೀಡಿಹೆನದನು ಬಿಡದೆ
ಮನಗಾಣಲೆಂದು ಪೂರ್ಣಜ್ಞ.

೨೨೩

೨ಮಧ್ಯರಾತ್ರಿಯೊಳಾನು ಶುದ್ಧಮಾನಸದಿಂದ
ಮುದ್ದು ಮಕ್ಕಳಿಗೆ ಹಿತ ಬಗೆದು ಬರೆದಿಹೆನು
ಒದ್ದೆ ಮೈಯಲ್ಲಿ ಪೂರ್ಣಜ್ಞ.

೨೨೪

೩ಪ್ರಾಣ ಹಾರುವದೆನಿಸಿ, ತ್ರಾಣವಿರದಿರೆ ಬರೆದೆ
ಧ್ಯಾನಿಸಿದೆ ಬಿಡದೆ ಗುರುಸಿದ್ಧನಡಿಗಳನು
ಪ್ರಾಣ ಉಳಿಸಿದನು ಪೂರ್ಣಜ್ಞ.

೨೨೫

೪ಮೈಯೆಲ್ಲ ಬೆವರ ಝುರಿ, ಕೈಯಲ್ಲ ನಿಃಸಕ್ತ
ಸುಯ್ಯೆಂದು ಗಾಳಿ ಬಂದಂತೆ ಬಂದಿತದು
ಕಾಯ್ದ ಗುರುಸಿದ್ಧ ಪೂರ್ಣಜ್ಞ.

೨೨೬

೫ಎನಿತೆನಿತೊ ಮಾಟಗಳ, ಎನಿತೆನಿತೊ ಕೂಟಗಳ
ಹೆಣೆದಿದ್ದವರೆನ್ನ ಮುಗಿಸಲ್ಕೆ ಆದರೇನ್?
ಘನಗುರುವು ಕಾಯ್ದ ಪೂರ್ಣಜ್ಞ.

೨೨೭

ಮೂರುಸಾವಿರಮಠವು, ವೀರಶಿವಯತಿಗಳಿಗೆ
ದಾರಿ ತೋರಿಹುದು ದೂರದೇಶಕೆ ಧರ್ಮ
ಸಾರಿ ಬರಲೆಂದು ಪೂರ್ಣಜ್ಞ.

---

೧—೫ ದಿನಾಂಕ: ೨೫ ಜುಲೈ ೧೯೮೮ ರಂದು ಅನಾರೋಗ್ಯವಿದ್ದಾಗ, ರಾತ್ರಿ ಒಮ್ಮೆಲೆ ೧೨–೦೦ ಘಂಟೆಗೆ ಮೈಯಲ್ಲಿ ಬೆವರು ಬಂದು, ಉಳಿಯಲಿಕ್ಕಿಲ್ಲವೆಂಬ ಭಯದಿಂದ ಕಷ್ಟವಾಗುತ್ತಿರುವಾಗ ಬರೆದ ಪದ್ಯಗಳಿವು.

೨೨೮

ಭೂರಿ ಧೈರ್ಯದಿಂ ನಾನು. ದೂರದೇಶಕೆ ಹೋಗಿ
ಸಾರಿ ಬಂದಿಹೆನು ಶರಣಧರ್ಮದ ತತ್ವ
ಸಾರ ಸಂದೇಶ ಪೂರ್ಣಜ್ಞ.

೨೨೯

೧"ಅನ್ನದಾನಿ"ಗಳೆನ್ನ ಜೊತೆಗೂಡಿ ಬಂದಿಹರು
ನನ್ನಿಯಿಂ ಸೇವೆ ಮಾಡಿಹರು ನಿಷ್ಠೆಯಲಿ
ಬನ್ನ ಕಳೆದಿಹರು ಪೂರ್ಣಜ್ಞ.

೨೩೦

ಪರದೇಶ ಪಯಣಕ್ಕೆ, ಪರಿಪಾಠ ಹಾಕಿದುದು
ವರ ಮೂರುಸಾವಿರಮಹಾಮಠವು ಮೊದಲು
ತರುಣಯತಿಗಳಿಗೆ ಪೂರ್ಣಜ್ಞ.

೨೩೧

ಗುರುಸಿದ್ಧ ಸುಕುಮಾರ, ಗುರುವಿಜಯಸುಮಹಾಂತ
ಗುರುಮೂವರೆನಗೆ ಅರಿವು ಕೊಟ್ಟಿಹರದನು
ಮರೆಯದಂತಿಹೆನು ಪೂರ್ಣಜ್ಞ.

೨೩೨

ಮೂರುಸಾವಿರಮಠವು, ಸರ್ವಧರ್ಮಗಳನ್ನು
ಗೌರವಿಸಿ, ಶರಣಸಂಸ್ಕೃತಿಯ ಹಿರಿಮೆಯನು
ಸಾರಿಹುದು ಜಗಕೆ, ಪೂರ್ಣಜ್ಞ.

೨೩೩

'ಕಾಯಕವೆ ಕೈಲಾಸ', ಧ್ಯೇಯವಿದು ಮಠಕಿಹುದು
ಮಾಯೆ ಮುಸುಕಿದಗೆ ತೋರಿಹುದು ಶ್ರೀಮಠವು
ನ್ಯಾಯ ಮಾರ್ಗವದು ಪೂರ್ಣಜ್ಞ.

---

೧. "ಅನ್ನದಾನಿ" ಅಂದರೆ ಪ್ರೊ. A. L. ಹಿರೇಮಠ ಅವರು ವಿದೇಶಕ್ಕೆ ನಾವು ಹೋಗುವಾಗ ಆಪ್ತಕಾರ್ಯದರ್ಶಿಗಳಾಗಿ ಬಂದು ಸೇವೆ ಮಾಡಿ ಸಫಲಗೊಳಿಸಿದರು.

೨೩೪

ಯೋಗ ಶಕ್ತಿಯ ಬಲದಿ, ತ್ಯಾಗಶಕ್ತಿಯ ಬಲದಿ
ನೀಗಿಸುತ ಕಷ್ಟಕಾರ್ಪಣ್ಯ ಶ್ರೀಮಠವು
ಸಾಗಿಹುದು ಭರದಿ ಪೂರ್ಣಜ್ಞ.

೨೩೫

ಸಂಘಸಂಸ್ಥೆಗಳನು, ಸಂಘಶಕ್ತಿಯ ಬಲದಿ,
ಭಂಗ ಬರದಂತೆ ಕಟ್ಟಿಹೆನು ಶ್ರಮದಿಂದ
ಲಿಂಗ ಮೆಚ್ಚುವೊಲು ಪೂರ್ಣಜ್ಞ.

೨೩೬

ಕಂಟಕಂಗಳು ಮಠಕೆ, ಅಂಟದಂತೆಸಗಿಹೆನು
ಕಷ್ಟಸುಖಗಳನು ನೋಡದಲೆ ಸಾಗಿಹುದು
ದಿಟ್ಟ ನಮ್ಮ ಮಠ ಪೂರ್ಣಜ್ಞ.

೨೩೭

ಕಂಡದ್ದು ಒಮ್ಮೊಮ್ಮೆ, ಕೆಂಡವಾಗಿರಬಹುದು
ಕೆಂಡ ಬೆಳಕಾಗಿ ಕಣ್ತೆರಸಬಹುದು ಭೂ-
ಮಂಡಲವನೆಲ್ಲ ಪೂರ್ಣಜ್ಞ.

೨೩೮

ಶಿವಶರಣರನುಭವ, ನವರತ್ನದಂತಿರುವ
ಸುವಿಚಾರಗಳನು ಸವಿದು ಹೊಸ ಬಗೆಯಿಂದ
ವಿವರಿಸಿಹೆ ನಾನು ಪೂರ್ಣಜ್ಞ.

೨೩೯

ಇಳೆಯ ವಾಙ್ಮಯದ ಹಲ-ಕೆಲವು ಸೂಕ್ತಿಗಳನ್ನು
ಒಲವಿನಂಗಳಕೆ ಇಳಿದು ಹಕ್ಕಿಗಳಂತೆ
ನಲಿದಾಡುತಿಹವು ಪೂರ್ಣಜ್ಞ.

೨೪೦

ಭಕ್ತರನು ಬಿಟ್ಟಿಲ್ಲ, ಭಕ್ತರಾಟೋಪಕ್ಕೆ
ಸಿಕ್ಕಿಲ್ಲ ನನ್ನದಾದೊಂದು ಮಾರ್ಗದಲಿ
ಯುಕ್ತಿಯಿಂದಿಹೆನು ಪೂರ್ಣಜ್ಞ.

೨೪೧

ಸಿದ್ಧರಾಮನ ಕಾರ್ಯ, ಬದ್ಧನಾಗಿಯು ನಿತ್ಯ
ಸಿದ್ಧ ಗುರುಸಿದ್ಧ ಸೇವೆಯನು ತಪ್ಪಿಸವೆ
ಪದ್ಯ ಬರೆಯುತಿಹೆ ಪೂರ್ಣಜ್ಞ.

೨೪೨

ಬಿಡುವಿದ್ದ ಸಮಯದೊಳು, ಮೃಡನನ್ನು ನೆನೆಯುತ್ತ
ಗಡಗಡನೆ ಕಾವ್ಯ ರಚಿಸಿಹೆನು ಅವಸರದಿ
ಎಡವಿದರೆ ಕ್ಷಮಿಸು ಪೂರ್ಣಜ್ಞ.

೨೪೩

ಜೇನ್ದುಂಬಿಗಳು ಕೂಡಿ, ಜೇನು ಕೂಡಿಸಿದಂತೆ
ಸಾನುರಾಗದಲಿ ತಂದಿಹೆನು ಆ ಶರಣ
ಜ್ಞಾನ ಮಕರಂದ ಪೂರ್ಣಜ್ಞ.

೨೪೪

ಒಳಮನದ ಕಡಲಿನಲಿ ತಳತನಕ ಮುಳು ಮುಳುಗಿ
ಬೆಲೆಬಾಳ್ವ ಮುತ್ತು ಹೊರದೆಗೆಯಬೇಕೆಂಬ
ಬಲುಬಯಕೆ ಎನಗೆ ಪೂರ್ಣಜ್ಞ.

೨೪೫

ಬಸವಾದಿ ಶಿವಶರಣರೊಸೆದು ಪೇಳಿದ ವಚನ
ಕುಶಲದಿಂದೋದಿ ಅನುಭವದ ರಸವುಂಡು
ಹೊಸಶಕ್ತಿ ಪಡೆವೆ ಪೂರ್ಣಜ್ಞ.

೨೪೬

ಮನವೆಂಬ ತೋಟದಲಿ ಗುಣಪುಷ್ಪಗಳು ಅರಳಿ
ದಿನನಿತ್ಯ ಬದುಕು ಪರಿಮಳಿಸುತಿರಲೆಂದು
ಮನಬಯಸುತಿಹುದು ಪೂರ್ಣಜ್ಞ.

೨೪೭

ಕಂಡದ್ದು ಬರೆದಿಹೆನು, ಕೆಂಡವಾಗದಿರೋದಿ
ಭಂಡಜನ ಮಂಡತನ ತೊರೆದು ಸನ್ಮಾರ್ಗ
ಕಂಡುಕೊಳ್ಳಲ್ಕೆ ಪೂರ್ಣಜ್ಞ.

೨೪೮

ಮತ್ಸರವ ಮುಸೆಯುತಿಹ, ಕುತ್ಸಿತವಿಚಾರಗಳ
ಚಿತ್ತದಿಂತೆಗೆದು ಓದಿದರೆ 'ಪೂರ್ಣಜ್ಞ'
ಅರ್ಥವಾಗುವನು ಪೂರ್ಣಜ್ಞ.

೨೪೯

ಸರಳತನ ತೋರಿದರೆ, ದುರುಳರಿಗೆ ಬಲುಮೋಜು
ಮರೆ ಮೋಸಗಳ ಮಾಡಿ, ಬೆನ್ನಲ್ಲಿ ಚೂರಿ
ಇರಿಯಲೆಳಸುವರು ಪೂರ್ಣಜ್ಞ.

೨೫೦

ಜಾನಪದ ಪ್ರೌಢಪದ, ಜಾಣೆನಿಂ ಬೆರೆಸಿ ಸಾ-
ಮಾನ್ಯರಿಗು, ಪ್ರೌಢರಿಗು ತಿಳಿಯುವಂತೆ 'ತ್ರಿಪದಿ'
ವೀಣೆ ನುಡಿಸಿಹೆನು, ಪೂರ್ಣಜ್ಞ.

೨೫೧

ಪ್ರೌಢಾರ್ಥವಿಲ್ಲೆಂದು, ಮಾಡದಿರಿ ತಾತ್ಸಾರ
ಗೂಢಾರ್ಥ ಸರಳಾರ್ಥ ಕೂಡಿ ಆಡುತಿವೆ
ನೋಡಿ ಕರುಳಿಂದ ಪೂರ್ಣಜ್ಞ.

೨೫೨

ದ್ವೇಷಾಭಿಲಾಷೆಯಿಂ, ದೋಷೈಕ-ದೃಷ್ಟಿಯಿಂ
ಈಸ್ವಾನುಭವ ಚಿತ್ರ ಬೀಸಾಡ ಬೇಡಿ,
ಲೇಸಾಗಿ ನೋಡಿ ಪೂರ್ಣಜ್ಞ.

೨೫೩

ಮೂರುಸಾಲೋಳು ಬಾಳ, ಸಾರತತ್ವವ ತುಂಬಿ
ಮೂರುಸಾವಿರತ್ರಿಪದಿ ಬರೆದು ಮುಗಿಸಿಹೆನು
ಮೂರುವರ್ಷದೊಳು ಪೂರ್ಣಜ್ಞ.

೨೫೪

ವನವಾಸಿ ನಾನಲ್ಲ, ಧನಕನಕ ತ್ಯಜಿಸಿಲ್ಲ
ಜನಹಿತಗೈವ ಸತ್ಕಾರ್ಯನಡೆಸಿಹೆನು
ಮನಮುಟ್ಟಿನಿರುತ ಪೂರ್ಣಜ್ಞ.

೨೫೫

ಕೋಟಿ ಹಣ ತೂರುತ್ತ, ಕಟ್ಟಿಹೆನು ಸಂಸ್ಥೆಗಳ
ಏಟೇಟು ತೃಪ್ತಿಸಿಗದೆ 'ತ್ರಿಪದಿ'ಯ ತಂತಿ
ಮೀಟುತಿಹೆನೀಗ ಪೂರ್ಣಜ್ಞ.

೨೫೬

ಹುಚ್ಚು ಹಿಡಿಯಿತು ಮತ್ತೆ, ಸ್ವಚ್ಛ ಕೃತಿ ರಚಯಿಸಲು
ಬಿಚ್ಚುಮನದಿಂದ ನೈಜಾನುಭವರಸದೊ–
ಳಚ್ಚೊತ್ತಿದಂತೆ ಪೂರ್ಣಜ್ಞ.

೨೫೭

೧ಸುವಿಚಾರಿ ಸದ್ಭಕ್ತ, ಕವಿವಾಲಿ 'ಗಂಗಪ್ಪ'
ನವಸ್ಫೂರ್ತಿಯಿತ್ತ "ಪೂರ್ಣಜ್ಞ" ಮುದ್ರಿಕೆಯ
ತ್ರಿವಿಧಿ ಬರೆಯಲ್ಕೆ ಪೂರ್ಣಜ್ಞ.

೨೫೮

೨"ಧರ್ಮಜ್ಞ" "ಸಾರಜ್ಞ", "ಕರ್ಮಜ್ಞ" "ಬ್ರಹ್ಮಜ್ಞ"
"ಮರ್ಮಜ್ಞರೆ"ಂಬ ಪ್ರಾಜ್ಞ ಪಂಕ್ತಿಯ ನೋಡಿ
ಸಂಮೋದಿಸಿಹೆನು ಪೂರ್ಣಜ್ಞ.

೨೫೯

ನನ್ನ ಪ್ರೋನ್ನತ ಗುರಿಯು, ನನ್ನಿಯಿಂ ಕಾಂಬವರು
ನನ್ನ ಅನುಭವದಿ ಬೆರೆಳೆಣಿಕಿಯೊಳಗಿಹರು
ನನ್ನ ಅರಿತವರು ಪೂರ್ಣಜ್ಞ.

೨೬೦

ಬೆಲೆ ಬರದು "ಇರುವಾಗ", ಬೆಲೆಬಹುದು ಹೋದಾಗ
ಅಳಿಮನದವರಿಗೆ 'ಪೂರ್ಣಜ್ಞ' ನಿಂಗಿತವು
ತಿಳಿವುದಸದಳವು ಪೂರ್ಣಜ್ಞ.

---

೧ "ಚಿತ್ಸುಮನ" ವಚನಗ್ರಂಥ ಬರೆದನಂತರ, "ವಚನವಾರಿಧಿ" ಈ ಶಿರೋನಾಮದಲ್ಲಿ ವಚನ ಬರೆಯಬೇಕೆಂದಾಗ, ಕವಿಗಂಗಪ್ಪ ವಾಲಿಯವರು ಚಿಕ್ಕಂದಿನಿಂದಲೂ ಕವಿತೆ ಬರೆಯುತ್ತಿದ್ದೀರಿ, ಈಗ ಅದನ್ನು ಬಿಟ್ಟಿದ್ದೀರಿ. ಮತ್ತೆ ಬರೆಯಲು ಪ್ರಾರಂಭಿಸಿರಿ. ಎಂದು ಹೇಳಿ ತ್ರಿಪದಿ ಬರೆಯಲು ತಿಳಿಸಿ "ಪೂರ್ಣಜ್ಞ" ಮುದ್ರಿಕೆ ನಿಮಗೆ ಒಪ್ಪುತ್ತದೆ ಎಂದು ಹೇಳಿದನಂತರ ತ್ರಿಪದಿ ಬರೆಯಲು ಪ್ರಾರಂಭಿಸಿದೆವು.

೨ "ಧರ್ಮಜ್ಞ, ಸಾರಜ್ಞ, ಕರ್ಮಜ್ಞ, ಬ್ರಹ್ಮಜ್ಞ, ಮರ್ಮಜ್ಞ" ಈ ಶೀರ್ಷಿಕೆಗಳನ್ನಿಟ್ಟುಕೊಂಡು ಕೆಲವರು ತ್ರಿಪದಿಗಳನ್ನು ಬರೆದಿದ್ದಾರೆ.

೨೬೧

ಹಿಂದಿದ್ದ ಹೊಂಗನಸು, ಇಂದೆಮಗೆ ನನಸಾಗಿ
ಸುಂದರದ ಸತ್ಯವಾಗಿ ಮೈದುಂಬುತಿದೆ
ಬಂಧುರತೆಯಿಂದ ಪೂರ್ಣಜ್ಞ.

೨೬೨

ಆರು ಸ್ಥಲಮಹತಿಯನು। ಧಾರುಣೆಗೆ ಬೀರಲ್ಕೆ
ಆರುನೆಲೆದ್ವಾರ ಗೋಪುರವ ಕಟ್ಟಿಸಿಹೆ
ಭೂರಿ ಹರ್ಷದಲಿ! ಪೂರ್ಣಜ್ಞ.

೨೬೩

ಯಾರು ಎಂಥವರೆಂದು। ಮೋರೆ ನೋಡಿದೆ ಕ್ಷಣದಿ
ಮೂರು ಮಾತಿನಲಿ ತಿಳಿವೆನೆನಗಿಹುದಿಂಥ
ಧೀರ ದೃಷ್ಟಿಯು! ಪೂರ್ಣಜ್ಞ.

೨೬೪

ಗುರುಪೇಳ್ದರಿಂತೆನೆಗೆ "ವರಸಮಾಧಿಗೆ ಹೋಗಿ
ಕರಮುಗಿದು ರಾತ್ರಿ ಪವಡಿಸಲು ಸುಖಶಾಂತಿ"
ಮರೆಯೆ ನಾನಿದನು! ಪೂರ್ಣಜ್ಞ.

೨೬೫

ಎಂದೋ ಮುಗಿಯುವ ಕೆಲಸ ಇಂದು ಮುಗಿದಿಹುದಯ್ಯ
ಹಿಂದಡಿಯನಿಡದೆ ಸುಸಮಾಜ ಕಾರ್ಯಕ್ಕೆ
ಮುಂದೆ ಸಾಗಿಹೆನು ಪೂರ್ಣಜ್ಞ.

೨೬೬

ಜಿಡ್ಡು ಕಳೆಯುತಲವರ, ದೊಡ್ಡವರ ಮಾಡಿಹೆನು
ದೊಡ್ಡವರು ಆದೊಡನೆ ಮರೆತಿಹರು ಕೆಲರು
ಗೊಡ್ಡಹಂಕಾರದಿ ಪೂರ್ಣಜ್ಞ.

೨೬೭

ಅವನಿಯಲಿ ಜನರೆಲ್ಲ, ಕುವಿಚಾರ ಕತ್ತಲದಿ
ಭವಬಾಧೆಯಿಂದ ತೊಳಲುತಿರೆ ಕರುಣೆಸಿದೆ
ಸುವಿಚಾರಶಕ್ತಿ ಪೂರ್ಣಜ್ಞ.

೨೬೮

ನೂರಾರು ಮಠಗಳಿಗೆ, ಸಾರ ಸಂಸ್ಕೃತಿ ಯುಕ್ತ
ಧೀರ ಮರಿಗಳನು ನೀಡಿಹೆನು ಅವರಿಂಗೆ
ದಾರಿತೋರಿಹೆನು ಪೂರ್ಣಜ್ಞ.

೨೬೯

ಇಂದು ಬರೆಯುತಲಿಹೆನು, ಅಂದು ಬರೆದಿಹೆನೆಂದು
ಇಂದು ಸುಸಮಾಜ ಸೇವೆಯಲಿ ಬರೆಯಲ್ಕೆ
ಬಂಧನವು ಬಹಳ ಪೂರ್ಣಜ್ಞ.

೨೭೦

ಮಹಿಳಾಮಹೋನ್ನತಿಗೆ, ವಿಹಿತಜ್ಞಾನವನೀವ
ಬಹುದೊಡ್ಡ ವಿಶ್ವವಿದ್ಯಾಲಯುವ ಮಾಳ್ಪ
ಮಹದಾಶೆಯುಂಟು ಪೂರ್ಣಜ್ಞ.

೨೭೧

ರವಿವಾರ ಮೌನದಲಿ ಶಿವನನ್ನು ನೆನೆನೆನೆದು
ನವಸ್ಫೂರ್ತಿ ಪಡೆದು ಅವಿರತಂ ಬರೆದಿಹೆನು
ತ್ರಿವಿಧಿಗಳ ಬಹಳ ಪೂರ್ಣಜ್ಞ.

೨೭೨

ಆರು ವೈರಿಗಳೆನ್ನ ನೀರಿರದೆ ಮುಳುಗಿಸುತ
ಭಾರಿ ಕಷ್ಟವನು ಕೊಡುತಿಹವು ಯುಕ್ತಿಯಿಂ
ಪಾರುಗಾಣುವೆನು ಪೂರ್ಣಜ್ಞ.

೨೭೩

ರಾಷ್ಟ್ರಾಭಿಮಾನವನು, ಹುಟ್ಟಿಸುವ ಶಾಲೆಯನು
ದಿಟ್ಟತನದಲ್ಲಿ ತೆಗೆವಾಶೆ ನನಗುಂಟು
ಬೆಟ್ಟದಷ್ಟಿಹುದು ಪೂರ್ಣಜ್ಞ.

೨೭೪

ವಸತಿಶಾಲೆಯ ತೆಗೆದು, ಹಸನಾದ ಮಕ್ಕಳಿಗೆ
ಕಸುವು ಬರುವಂತೆ ಸಂಸ್ಕಾರ ನೀಡಿದರೆ
ಎಸೆಯುವರು ಜಗದಿ ಪೂರ್ಣಜ್ಞ.

೨೭೫

ಸಾಕಿನ್ನು ಸಂಸ್ಕಾರ, ನೀಡದಿಹ ಶಾಲೆಗಳು
ಬೇಕಿನ್ನು ಗುಣಭರಿತ ಶಾಲೆಗಳು ಜವದಿ
ಲೋಕೇಶ ನೊಲುಮೆ ಪೂರ್ಣಜ್ಞ.

೨೭೬

ಹಗೆತೋರಿದವರನ್ನು, ನಗೆತೋರಿದವರನ್ನು
ತೆಗೆಬಗೆಯುಲಪ್ಪಿಕೊಂಡಿಹೆನು ನಿಜಮನದಿ
ಸೊಗವ ತುಂಬಿಹೆನು ಪೂರ್ಣಜ್ಞ.

೨೭೭

ಎಲ್ಲ ವೃತ್ತಾಂತವನು ಇಲ್ಲಿ ನಾ ಬರೆದಿಲ್ಲ
ಅಲ್ಲಲ್ಲಿ ಸಿಕ್ಕಷ್ಟು ತಿಳಿಸಿರುವೆ ಮುದದಿ
ಬಲ್ಲವರೆ ನೋಡಿ ಪೂರ್ಣಜ್ಞ.

## ವಿಭೂತಿ ಪುರುಷರು

೨೭೮

ಭವಿತನವ ಕಳೆಯಲ್ಕೆ, ಶಿವಯೋಗಿ ಸುಕುಮಾರ
ಶಿವಯೋಗಮಂದಿರವ ಸ್ಥಾಪಿಸಿದನವನು
ಭವರೋಗ ವೈದ್ಯ ಪೂರ್ಣಜ್ಞ.

೨೭೯

ಧರ್ಮಮರ್ಮವ ತಿಳಿದು, ಕರ್ಮಕೋಟಲೆ ಕಳೆದು
ಬ್ರಹ್ಮತೇಜೋಮೂರ್ತಿಯಾದ "ಸುಕುಮಾರ"
ಕರ್ಮವನು ಬಿಡಿಸು ಪೂರ್ಣಜ್ಞ.

೨೮೦

ನಮ್ಮ ನಾಡಿನ ಜ್ಯೋತಿ, ನಮ್ಮ ಷಟ್‌ಸ್ಥಲಚಕ್ರಿ
ಚಿನ್ಮಾರ್ಗ ಜ್ಯೋತಿ ಶ್ರೀ ಚೆನ್ನಬಸವೇಶ
ನಮ್ಮನ್ನು ಸಲಹು ಪೂರ್ಣಜ್ಞ.

೨೮೧

ಚೆನ್ನಾದ ನಡೆಯಿಂದ, ಚೆನ್ನಾದ ನುಡಿಯಿಂದ
ಚೆನ್ನಾದುದನ್ನೆ ಬೋಧಿಸುವ ಚೆನ್ನಬಸ
ವಣ್ಣನಿಗೆ ಶರಣು ಪೂರ್ಣಜ್ಞ.

೨೮೨

ಕುರುಡ ಕುಂಟರಿಗೆಲ್ಲ, ಕರುಣೆಯಿಂ ನೆರವಿತ್ತು
ವರಗಾನ ಕಲಿಸು ಪರಮ ಪಂಚಾಕ್ಷರಿಯ
ಸ್ಮರಣೆಯನು ಮಾಡು ಪೂರ್ಣಜ್ಞ.

೨೮೩

ಕಲ್ಯಾಣದೊಳಗಂದು, ಕೈಲಾಸತೋರಿರುವ
ಬಲ್ಲ ಶರಣರ್ಗೆ ಕಾಯಕವ ತಿಳಿಸಿರ್ದ
ಅಲ್ಲಮನೆ ನೀನು ಪೂರ್ಣಜ್ಞ.

೨೮೪

ತನುವ ತೋಟವ ಮಾಡಿ, ಮನವ ಗುದ್ದಲಿ ಮಾಡಿ
ಅನುದಿನದಿ ಅಗಿದು ಭ್ರಾಂತಿಯನು ಕಳೆದಿರುವ
ಚಿನುಮಯ ಪ್ರಭುವೆ ಪೂರ್ಣಜ್ಞ.

೨೮೫

ಜಗದ ಜಂಜಡ ಕಳೆದು, ಜಗಕೆಲ್ಲ ಪ್ರಭುವಾಗಿ
ಮಿಗೆಲಿಂಗ ನಿಜಸುಖವ ಪಡೆದಿರ್ದ ಯೋಗಿ
ಅಗಣಿತ ಮಹಿಮನೆ ಪೂರ್ಣಜ್ಞ.

೨೮೬

ಶೂನ್ಯ ಶಕ್ತಿಯ ಪಡೆದು, ಶೂನ್ಯ ತತ್ವವ ತಿಳುಹಿ
ಶೂನ್ಯ ಸಿಂಹಾಸನಾಧೀಶನಾಗಿರ್ಪ
ಜ್ಞಾನಜ್ಯೋತಿ ನೀ ಪೂರ್ಣಜ್ಞ.

೨೮೭

ಕಲ್ಯಾಣದೊಳಗಂದು, ಕೈಲಾಸ ನಿರ್ಮಿಸಿದ
ಬಲ್ಲ ಶರಣರನು ಕಾಯಕದಿ ತೊಡಗಿಸಿದ
ಅಲ್ಲಮಗೆ ಶರಣು ಪೂರ್ಣಜ್ಞ.

೨೮೮

ಜಗದ ಜಂಜಡ ಕಳೆದು, ಮಿಗೆಲಿಂಗಪೂಜಿಸುತ
ಬಗೆಯ ತುಂಬೆಲ್ಲ ಬೆಳಕಾದ ಅಲ್ಲಮನ
ಹಗಲಿರುಳು ನೆನೆವೆ ಪೂರ್ಣಜ್ಞ.

೨೮೯

ಶೂನ್ಯ ದರ್ಶನ ಪಡೆದು, ಶೂನ್ಯ ತತ್ವವ ತಿಳುಹಿ
ಶೂನ್ಯ ಸಿಂಹಾಸನದ ಪ್ರಭುವು ನೀನಾದೆ
ಶೂನ್ಯ ದಾರ್ಶನಿಕ ಪೂರ್ಣಜ್ಞ.

೨೯೦

ನೀತಿ ತತ್ವವ ತಿಳಿಸಿ, ಜಾತಿ ಭೇದಗಳಳಿಸಿ
ಪ್ರೀತಿಯಿಂ ಲಿಂಗ ಮತವನುದ್ಧರಿಸಿರುವ
ಜ್ಯೋತಿ ಬಸವಣ್ಣ ಪೂರ್ಣಜ್ಞ.

೨೯೧

ಅನುಭವ ಮಂಟಪವ, ಅನುನಯದಿ ರಚಿಸಿದನು
ಅನುಭವದ ಅಡಿಗೆ ಜಗಕೆಲ್ಲ ನೀಡಿದನು
ಜನಪ್ರೇಮಿ ಬಸವ ಪೂರ್ಣಜ್ಞ.

೨೯೨

ಬಸವಣ್ಣ ತೋರಿರುವ, ಹಸನಾದ ದಾರಿಯಲಿ
ಹೊಸ ಬೆಳಕಿನೆಡೆಗೆ ಸಾಗಿದರೆ ಜಗದಲ್ಲಿ
ವಿಷಮತೆಯು ಅಳಿಗು ಪೂರ್ಣಜ್ಞ.

೨೯೩

ತಂದೆ ಎಂದರೆ ಇಲ್ಲ, ಬಂಧು ಎಂದರೆ ಇಲ್ಲ
ತಂದೆ ಬಸವೇಶ ನಿಜತತ್ವವರಿಯದಲೆ
'ತಂದೆ' ಎಂದರೇಂ? ಪೂರ್ಣಜ್ಞ.

೨೯೪

ಹನ್ನೆರಡನೆಯ ಶತಕ, ಪುಣ್ಯ ಶರಣರಯುಗವು
ಅಣ್ಣ ಬಸವಣ್ಣ ಭಕ್ತಿನಿಧಿ, ಜ್ಞಾನನಿಧಿ
ಚನ್ನಬಸವಣ್ಣ ಪೂರ್ಣಜ್ಞ.

೧೯೫

ದಿವ್ಯ ಶಕ್ತಿಯ ಪಡೆದು, ನವ್ಯ ವಚನವ ರಚಿಸಿ
ಭವ್ಯ ಲಿಂಗದೊಳು ಬೆರೆದಕ್ಕ ಮಹದೇವಿ
ಸೇವ್ಯ ಚಿಚ್ಛಕ್ತಿ ಪೂರ್ಣಾಜ್ಞ.

೧೯೬

ಸಲ್ಲಪತಿ ಶ್ರೀ ಚೆನ್ನಮಲ್ಲಿಕಾರ್ಜುನನೆಂದ
ನಲ್ಲಡೆಯ ಅಕ್ಕಮಹದೇವಿ ಜಗದಲ್ಲಿ
ಎಲ್ಲರಿಗೂ ಅಕ್ಕ ಪೂರ್ಣಾಜ್ಞ.

೧೯೭

ಕಿರಿವಯದಿ ಸುವಿರಕ್ತಿ, ವರಭಕ್ತಿಯನು ಪಡೆದು
ಶರಣ ಸಂಕುಲಕೆ ಮಾನ್ಯಳಾದುಡುತಡಿಯ
ಶರಣೆಗಿದೊ ಶರಣು ಪೂರ್ಣಾಜ್ಞ.

೧೯೮

ನಿರುತಕಾಯಕಗೈದ, ಶರಣಗಣ ಸಂದೇಶ
ಧರೆಯ ಮನುಜರಿಗೆ ಬೇಕೀಗ ಬಹುಬೇಗ
ಪರಮ ಜೀವನಕೆ ಪೂರ್ಣಾಜ್ಞ.

೧೯೯

ಹುಗಿದಿಟ್ಟರತ್ನಗಳ ಹೊಗರುಕುಂದಲುಬಹುದೆ?
ತೆಗಳಿದರೆ ಶರಣರನು ಅವರಾತ್ಮ ಪ್ರಭೆಯ
ಸೊಗಸಳಿಯಬಹುದೆ? ಪೂರ್ಣಾಜ್ಞ.

೨೦೦

ಪರಸತಿಯ ಸಂಗವನು, ಪರಧನದ ಮೋಹವನು
ತೊರೆಯುತ್ತ ನಿರುತ ಪರಹಿತವ ಮಾಳ್ಪವನು
ಶರಣನೈ ನಿಜದಿ ಪೂರ್ಣಾಜ್ಞ.

೨೦೧

ಅಧರತಾಗುವ ರುಚಿಯ ಉದರತಾಗುವ ಸುಖವ
ಮುದದಿ ಲಿಂಗಕ್ಕೆ ಅರ್ಪಿತವ ಮಾಳ್ಪವನೆ
ಸಿದ್ಧ ಶರಣ ನಿಜ ಪೂರ್ಣಾಜ್ಞ.

೩೦೨
ಉದ್ದಾಮ ಕವಿವರ ರ–ವೀಂದ್ರನಾಥನು ರಸ ಸ–
ಮೃದ್ಧ ಕೃತಿ ನೀಡಿ ಪಡೆದ ಘನ ನೋಬೆಲ್ ಪ್ರ–
ಸಿದ್ಧ ಬಹುಮಾನ ಪೂರ್ಣಜ್ಞ.

೩೦೩
ಒಂದರೊಳಗಲ್ಲ, ಪ್ರತಿಯೊಂದು ಸಾಲುಗಳಲ್ಲಿ
ಸೌಂದರ್ಯ ಮಾಡಿ, ಮೋಡಿ ಮಾಡುತ್ತಿದೆ ರ–
ವೀಂದ್ರ ಕವಿ ಸೃಷ್ಟಿ ಪೂರ್ಣಜ್ಞ.

೩೦೪
ಗೀತಾಂಜಲಿಯ ರಚಿಸಿ, ಖ್ಯಾತನಾದ ರವೀಂದ್ರ
ಗೀತಾಂಜಲಿಯದು ಪರಮಾತ್ಮಭಕ್ತಿ ಸಂ–
ಗೀತವಾಗಿಹುದು ಪೂರ್ಣಜ್ಞ.

೩೦೫
ಲಿಂಗಪೂಜೆಯು ಬಲದಿ, ಅಂಗ ಜನ ಮರ್ದಿಸಿದ
ತುಂಗ ಶಿವಯೋಗಿ ಹಾವೇರಿ ಶಿವಬಸವ
ಮಂಗಲವ ನೀಡು ಪೂರ್ಣಜ್ಞ.

೩೦೬
ಭಾರತಕೆ ಚೈತನ್ಯ, ಭಾರತಕ್ಕೆ ಸ್ವಾತಂತ್ರ್ಯ
ಭಾರತಕೆ ಬೆಳಕು ನೀಡಿರುವ ಯುಗಪುರುಷ
ಧೀರಾತ್ಮ ಗಾಂಧಿ ಪೂರ್ಣಜ್ಞ.

೩೦೭
ಗಾಂಧಿ ತಾತನ ನೆನೆದು, ಗಾಂಧಿ ತತ್ವವ ತಿಳಿದು
ಗಾಂಧಿ ನಡೆ ನುಡಿದ ಮಾರ್ಗದಲಿ ನಡೆಯುವದೆ
ಗಾಂಧೀಜಯಂತಿ ಪೂರ್ಣಜ್ಞ.

೩೦೮
ಸೌಂದರ್ಯ ತುಂಬಿರುವ, ಗಾಂಧಿ ತಾತನ ಕನಸ
ನಿಂದು ನನಸಾಗಿ ಮಾಡುವೊಡೆ ನಡೆನುಡಿಯ
ಸುಂದರಿಸು ಮೊದಲು ಪೂರ್ಣಜ್ಞ.

೩೯೯

ಗಾಂಧಿ ಸತ್ಯದ ಸಿಂಧು, ಗಾಂಧಿ ವಿಶ್ವದ ಬಂಧು
ಗಾಂಧಿಯ ಅಹಿಂಸೆ ಲೋಕಕ್ಕೆ ತಾರಕವು
ಗಾಂಧೀಜಿ ವಂದ್ಯ ಪೂರ್ಣಜ್ಞ.

೩೧೦

ಗಾಂಧಿ ತಾತನ ತೆರದಿ, ಬಂಧುರದ ಮಾರ್ಗದಲಿ
ಇಂದು ಭಾರತದ ಪ್ರಗತಿರಥ ನಡೆಯಿಸುವ
ಮುಂದಾಳ್ಗಳಿಲ್ಲ ಪೂರ್ಣಜ್ಞ.

೩೧೧

ವಿಶ್ವಕಾರುಣ್ಯಕ್ಕೆ, ವಿಶ್ವಕಲ್ಯಾಣಕ್ಕೆ
ವಿಶ್ವಸಮತೆಗೆ ಬಸವ ನೀಡಿರುವ ತತ್ವ
ವಿಶ್ವಕ್ಕೆ ಜ್ಯೋತಿ ಪೂರ್ಣಜ್ಞ.

೩೧೨

ಮಾನವ ಜನಾಂಗಕ್ಕೆ ಮಾನವತೆ ನೀಡಿರುವ
ಜ್ಞಾನಿ ಬಸವಣ್ಣ ಮತ್ತೊಮ್ಮೆ ಬಾರಣ್ಣ
ಭಾನು ಬರುವಂತೆ ಪೂರ್ಣಜ್ಞ.

೩೧೩

ಹಿಂದೂ ಧರ್ಮವು ಕ್ಷೀರ, ಸಿಂಧುವಾ ಸಿಂಧುವಿಗೆ
ಚಂದ್ರೋಪಮಂ ವಿವೇಕಾನಂದ ಸ್ವಾಮಿ
ಬಂಧುರ ವಿಭೂತಿ ಪೂರ್ಣಜ್ಞ.

೩೧೪

ರಾಮಕೃಷ್ಣರ ಶಿಷ್ಯ, ಧೀಮಂತ ಸನ್ಯಾಸಿ
ಸಾಮಾನ್ಯನಲ್ಲ ಶ್ರೀ ವಿವೇಕಾನಂದ
ಭೂಮಿಗದ್ಭುತನು ಪೂರ್ಣಜ್ಞ.

೩೧೫

ಜಡತೆಯನು ಕೊಡಹಿದನು, ಮೃಡನೊಲುಮೆ ಪಡೆದಿಹನು
ದೃಢಮತಿಯ ಶ್ರೀ ವಿವೇಕಾನಂದ ಯತಿಯು
ಪೊಡವಿಗಾದರ್ಶ ಪೂರ್ಣಜ್ಞ.

೩೧೬

ವಿಶ್ವವನು ಜಾಗರಿಸಿ, ವಿಶ್ವಕ್ಕೆ ಬೆಳಕಾಗಿ
ವಿಶ್ವದಲಿ ಹಿಂದೂ ಸಂಸ್ಕೃತಿಯ ಬೆಳಗಿಸಿದ
ವಿಶ್ವಜ್ಯೋತಿ ವಿವೇಕ ಪೂರ್ಣಜ್ಞ.

೩೧೭

'ಎಡೆಯೂರು' ಸ್ಥಲವಾಸಿ, ಷಡುಸ್ಥಲದ ಜ್ಞಾನರ್ಷಿ
ಜಡಮತಿಗಳುದ್ಧರಿಸಿ ಮೆರೆವ ಶಿವಯೋಗಿ
ಪೊಡಮಡುವೆ ತ್ಯಾಗಿ ಪೂರ್ಣಜ್ಞ.

೩೧೮

ಕಾವ್ಯರ್ಷಿವಾಲ್ಮೀಕಿ, ಭವ್ಯರಾಮಾಯಣದ
ಕಾವ್ಯಮಂ ರಚಿಸಿ ಲೋಕತ್ರಯದಲಿ ಸಂ
ಭಾವ್ಯನಾಗಿಹನು ಪೂರ್ಣಜ್ಞ.

೩೧೯

ನೀನೊರೆದ ರಾಮಕಥೆ, ಭಾನುಸಾಗರ ಸಮಂ
ಕಾನನದ ಧ್ವಾಂತ ಕಳೆದಂಥ ಕವಿಜ್ಯೋತಿ
ಧ್ಯಾನಿಪೆನು ನಿನ್ನ ಪೂರ್ಣಜ್ಞ.

೩೨೦

ಪಾದಯಾತ್ರೆಯಗೈದು, ಭೂದಾನ ಪ್ರೇರಿಸುತ
ಮೇದಿನಿಗೆ ಸರ್ವ್ವ ದರ್ಶನವಿತ್ತವನ
ಸಾಧುವರ ಭಾವೆ[೧] ಪೂರ್ಣಜ್ಞ.

೩೨೧

'ಜಯಜಗತ್' ಮಂತ್ರವನು, ನಯವಿನಯದಿಂ ಸಾರಿ
ದಯೆ ಧರ್ಮವೆಂದು ಭಾವೆ ಭೋದಿಸಿ ನಡೆದು
ಜಯಶಾಲಿಯಾದ ಪೂರ್ಣಜ್ಞ.

೧ ವಿನೋಬಾ ಭಾವೆ.

೩೨೨

ಹೋದ ಹೋದಲೆಲ್ಲ ಭೂದಾನವನು ಪಡೆದು
ಮೇಧಿನಿಯೊಳೊಂದು ಹೊಸ ಶಾಂತ ಕ್ರಾಂತಿಯನು
ಸಾಧಿಸಿದ ಭಾವೆ ಪೂರ್ಣಜ್ಞ.

೩೨೩

ನೆಲವಿಲ್ಲದವರಿಂಗೆ, ನೆಲವನ್ನು ನೀಡುತ್ತ
ಬಲವನ್ನು ಕೊಟ್ಟು ರಕ್ಷಿಸಿದ ಭಿಕ್ಷುಕನು
ಥಲಬಲದ ಭಾವೆ ಪೂರ್ಣಜ್ಞ.

೩೨೪

ಲಕ್ಷ್ಯವಿಲ್ಲದ ಓದು, ಶುಷ್ಕವಪ್ಪುದು ಮನಕೆ
ಉಕ್ಕುವನುಭವದ ಮೈಲಾರ ತ್ರಿವಿಧಿಗಳ
ಲಕ್ಷ್ಯದಿಂದೋದು ಪೂರ್ಣಜ್ಞ.

೩೨೫

ಹಾವೇರಿ ಪುರವಾಸ। ಸಾವಿರದ ಶಿವಬಸವ
ಕಾವುತ್ತಲಿಹನು ಭಕ್ತರನು ಮುದದಿಂದ
ದೇವ ಶಿವನಂತೆ, ಪೂರ್ಣಜ್ಞ.

೩೨೬

ಪೂರ್ಣಯೋಗದ ಬುದ್ಧ। ಪೂರ್ಣಯೋಗದ ಸಿದ್ಧ
ಪೂರ್ಣತೆಯು ಪೂರ್ಣ ಶರಧಿ ಅರವಿಂದ
ಪೂರ್ಣಜ್ಞ ನೀನು ಪೂರ್ಣಜ್ಞ.

೩೨೭

ಪಾಂಡಿಚೇರಿಯ ಶಕ್ತಿ। ಪಾಂಡಿಚೇರಿಯ ಪ್ರಭೆಯು
ಪಾಂಡಿಚೇರಿಯಲಿ ಸುಸಮಾಧಿಯಲ್ಲಿರುವ
ಚಿದ್ರಸ ಸಮುದ್ರ ಪೂರ್ಣಜ್ಞ.

೩೨೮

ಅರವಿಂದ ಮಾತೆಯರು। ಅರುಹು ನೀಡುತ ಜಗದ
ಮರವೆ ಕಳೆದಿಹರು। ಅರಿವಿನಿಂ ಬೆಳಗಿಹರು
ಕುರುಹು ತೋರಿಹರು ಪೂರ್ಣಜ್ಞ.

೩೭೯

ಪಂಚಪೀಠಾಧಿಪರು, ಪಂಚಕ್ಲೇಶಗಳಳಿದು
ಮುಂಚಾಚೆ ಬೆಳೆಸಿಹರು ಶಿವಧರ್ಮವನ್ನು
ಪಂಚಾಸ್ಯಭವರು ಪೂರ್ಣಜ್ಞ.

೩೩೦

ದೃಡಭಕ್ತಿ ಪಥವಿಡಿದ, ಮಡಿವಾಳ ಮಾಚಯ್ಯ
ದೃಢ ನಿಷ್ಠೆಯುಳ್ಳ ಕಾಯಕದ ನಾಯಕರು
ಪೊಡವಿಗಾದರ್ಶ ಪೂರ್ಣಜ್ಞ.

೩೩೧

ಸಕಲೇಶ ಮಾದರಸ, ಸಕಲ ಪ್ರಪಂಚವನು
ಸಕಲ ರೀತಿಯಲಿ ಸತ್ಯವೆಂದರುಹಿರುವ
ಅಕಳಂಕ ಮೂರ್ತಿ ಪೂರ್ಣಜ್ಞ.

೩೩೨

ಆಯ್ದುಕ್ಕಿ ಮಾರಯ್ಯ, ಕಾಯಕದ ಫಲವಾದ
ಆಯ್ದಕ್ಕಿ ತಂದು ಶರಣರಿಗೆ ನೀಡಿದುದು
ಕಾಯಕದ ಮಹಿಮೆ ಪೂರ್ಣಜ್ಞ.

೩೩೩

ಬಂಧುರದ ಕಾಯಕದಿ, ಅಂದಂದು ಪಡೆದುದನು
ಅಂದೆ ಬಂದಂಥ ಶರಣರಿಗೆ ಅರ್ಪಿಸುತ
ಚೆಂದದಿಂದಿದ್ದ ಪೂರ್ಣಜ್ಞ.

೩೩೪

ಇದುವೆ ಶರಣರತತ್ವ, ಇದುವೆ ಕಾಯಕದಗುರಿ
ಇದುವೆ ನಿಜಧರ್ಮ ಮಾರಯ್ಯನಾದರ್ಶ
ಹದುಳವಿದರೊಳಿದೆ ಪೂರ್ಣಜ್ಞ.

೩೩೫

ಉಡುಪಿಯಲಿ ಶ್ರೀಕೃಷ್ಣ | ಸಡಗರದಿ ಕುಳಿತಿಹನು
ದೃಢಮನದಿ ಜಪಿಸುವಗೆ ಒಲಿಯುವನು ಮುದದಿ
ಕೊಡುತಿಹನು ಶಕ್ತಿ ಪೂರ್ಣಜ್ಞ.

೩೩೭

ವೀರಶಕ್ತಿಯ ಪಡೆದ| ವೀರಭದ್ರನೆ ನೀನು
ಧೀರ, ಶಿವಸುತನೆ, ರುದ್ರನವತಾರಿಯೇ
ವೀರ, ವೀರೇಶ ಪೂರ್ಣಜ್ಞ.

೩೩೭

ಶಿವಲೆಂಕ ಮಂಚಣ್ಣ, ಶಿವಭಕ್ತಿ ರಸಪೂರ್ಣ
ಶಿವಭಾವ ತುಂಬಿ ಶಿವನಧಿಕನೆಂದು
ಭುವಿಗೆ ಘೋಷಿಸದ ಪೂರ್ಣಜ್ಞ.

೩೩೮

ಕಟ್ಟಿಗೆಯಕಾಯಕದಿ, ಗಿಟ್ಟಿಸಿದ ಹಣದಿಂದ
ತುಷ್ಟಿಗೊಳಿಸಿದನು ಮೋಳಿಗೆಯ ಮಾರಯ್ಯ
ಶ್ರೇಷ್ಟಶರಣರನು ಪೂರ್ಣಜ್ಞ.

೩೩೯

ಬಸವರಸ ಕೈಕೊಂಡ, ಹೊಸಧರ್ಮ ಕ್ರಾಂತಿಯಲಿ
ಹೊಸಶಕ್ತಿ ಸ್ಫೂರ್ತಿ ತುಂಬಿದಳು ನೀಲಾಂಬೆ
ಬಸವನರ್ಧಾಂಗಿ ಪೂರ್ಣಜ್ಞ.

೩೪೦

ಮನುಜರಲಿ ಮನುಜತೆಯು, ಅನುನಯದಿ ತುಂಬಿದನು
ಘನಶಕ್ತಿವಂತ ಗಾಂಧೀ ಮಹಾತ್ಮನವ
ವಿನಮಿತನು ಜಗದಿ ಪೂರ್ಣಜ್ಞ.

೩೪೧

ಕಲ್ಲನ್ನು ರೊಟ್ಟಿಯನು, ಹುಲ್ಲನ್ನು ಅಸ್ತ್ರವನು
ಮೆಲ್ಲನವ ಮಾಡಿಲ್ಲ ಮಂತ್ರ ಸಿದ್ಧಿಯಿಂ
ಮಳ್ಳು ಮಾಡಿಲ್ಲ ಪೂರ್ಣಜ್ಞ.

೩೪೨

ಅದ್ಭುತ ಪವಾಡಗಳ, ಸಿದ್ಧಿ ಮೆರೆಯಿಸಲಿಲ್ಲ
ಶುದ್ಧಜೀವನದಿ ಸತ್ಯವನು ಪಾಲಿಸಿದ
ಶುದ್ಧಾತ್ಮಗಾಂಧಿ ಪೂರ್ಣಜ್ಞ.

೩೪೩

ಸರುವಧರ್ಮವ ತಿಳಿಸಿ, ಹರಿಜನರನುದ್ಧರಿಸಿ
ಮೆರೆಯಿಸಿದ ಭಾರತದಿ ಮಾನವೀಯತೆಯ
ಸರಿಸಮಾನತೆಯ ಪೂರ್ಣಜ್ಞ.

೩೪೪

ಬಚ್ಚಬಾಯಿಯ ಮುದಕ, ಉಚ್ಚತತ್ವದ ಪಥಿಕ
ಉತ್ಸಾಹದಿಂದ, ವೃದ್ಧನಾದರು ಯುವಕ
ಸತ್ಯದ ಪ್ರತೀಕ ಪೂರ್ಣಜ್ಞ.

೩೪೫

ಸರಳತೆಯ ಸಾಕಾರ, ಅರಿವಿನ ಮಹಾಪೂರ,
ಅರಪಂಜೆಯುಟ್ಟಂಥ ಶ್ರೀಮಂತಧೀರ,
ಕರುಣೆಯವತಾರ ಪೂರ್ಣಜ್ಞ.

೩೪೬

ಗಾಂಧಿತಾತನ ತೆರದಿ, ಬಂಧುರತೆ ಪಡೆಯದಲೆ
ಗಾಂಧಿ ಹೆಸರನು ಹೇಳುತ್ತ ಮೆರೆಯುವರು
ಒಂದಿರದೆ ಗುಣವ ಪೂರ್ಣಜ್ಞ.

೩೪೭

ಗಾಂಧಿತಾತನ ಸತ್ಯ, ಸಂಧತೆಯ ಹೊಂದುವದು
ಹಿಂದುಳಿದ ಜನರ ಮುಂದೆ ತರುವದು ನಮ್ಮ
ಮುಂದಿರುವ ಮಣಿಹ, ಪೂರ್ಣಜ್ಞ.

೩೪೮

ಜಗವೆಲ್ಲ ಮಲಗಿರಲು, ಜಗವನೆಚ್ಚರಿಸಲ್ಕೆ
ಭಗವಾನ್ ಬುದ್ಧ ಮಧ್ಯರಾತ್ರಿಯೊಳೆದ್ದ
ಜಗದ ಸುಜ್ಞಾನಿ ಪೂರ್ಣಜ್ಞ.

೩೪೯

ಕತ್ತಲೆಯ ಕಳೆದಿಹನು, ಕುತ್ತುಗಳನಳಿದಿಹನು
ಸತ್ಯವನು ತಿಳಿಸುತ್ತ ಕರುಣೆಯನು ತೋರಿ
ನಿತ್ಯ ಬೆಳಗಿಹನು ಪೂರ್ಣಜ್ಞ.

೩೫೦

೧"ಸರದಾರ ವಲ್ಲಭಾಯಿ" ಸರದಾರನಾಗಿದ್ದ
ನಿರುತ ಭಾರತಕೆ ದುಡಿಯುತ್ತ ಬೆಳಗಿದ್ದ
ವರಶಕ್ತಿಯಾಗಿ ಪೂರ್ಣಜ್ಞ.

## ಸರ್ವಧರ್ಮ ಸಮನ್ವಯ ದರ್ಶನ

೩೫೧

ಬಿದ್ದವರನೆತ್ತುವದು, ಶುದ್ಧಮಾನವ ಧರ್ಮ
ತಿದ್ದಿ ಜನಮನವ ಸಂಸ್ಕಾರ ಕೊಡುವವನು
ಸದ್ಧರ್ಮಿಯಯ್ಯ ಪೂರ್ಣಜ್ಞ.

೩೫೨

ಕೊಲ್ಲುವದು ಪಶುಧರ್ಮ, ಬಲ್ಲವರು ಪೇಳಿಪರು
ಕೊಲ್ಲದಲೆ ಇರುವ ಧರ್ಮವದು ನಿಜಧರ್ಮ
ಎಲ್ಲಕ್ಕು ಮಿಗಿಲು ಪೂರ್ಣಜ್ಞ.

೩೫೩

ಹೃದಯವಿಲ್ಲದ ಬುದ್ಧಿ, ಸದಯವಿಲ್ಲದ 'ಧರ್ಮ'
ಬುಧರಿರದ ಸಭೆಯು ನೀರು ಇಲ್ಲದ ಕೆರೆಯು
ಮುದವೀಯಬಹುದೆ? ಪೂರ್ಣಜ್ಞ.

೩೫೪

ತನ್ನ ಧರ್ಮದಿಶ್ರದ್ಧೆ, ತನ್ನ ಧರ್ಮದೊಳೈಕ್ಯ
ತನ್ನ ಧರ್ಮಾಭಿಮಾನದೊಳು ತನ್ನಾತ್ಮ-
ದುನ್ನತಿಯು ನಿಜದಿ ಪೂರ್ಣಜ್ಞ.

೩೫೫

ದೀನರಿಗೆ ದಯೆಯಿರದ, ಪ್ರಾಣಿಗಳ ರಕ್ಷಿಸದ
ಜ್ಞಾನದಾಹಕ್ಕೆ 'ಇಂಬಿರದ ಧರ್ಮವನು
ಮಾನಿಸದು ಜಗವು ಪೂರ್ಣಜ್ಞ.

---

೧ ಸರದಾರ ವಲ್ಲಭಾಯಿ–ಅಂದರೆ, ಸರದಾರ ವಲ್ಲಭಭಾಯಿ ಪಟೇಲ.

೩೫೬

ಜನಹಿತವೆ ಕರ್ತವ್ಯ ಜನಹಿತವೆ ಗಂತವ್ಯ
ಜನಹಿತವೆ ನಮ್ಮ ಭವಿತವ್ಯವೆಂಬುವದೆ
'ಜನಧರ್ಮ' ನಿಜದಿ ಪೂರ್ಣಜ್ಞ.

೩೫೭

ಜಾತ್ಯತೀತರು ಎಂದು, ಜಾತಿಯನು ಬಿಟ್ಟಿಲ್ಲ,
ಜಾತಿ ಜಗಳಗಳು ಉಲ್ಬಣಿಸಿ ಭಾರತಕೆ
ಘಾತವಾಗಿಹುದು ಪೂರ್ಣಜ್ಞ.

೩೫೮

ಮತಬಿಟ್ಟು ಬೇರೊಂದು, ಮತವ ಮೋಹಿಸಿ ಭ್ರಾಂತಿ
ಯುತರಾಗಿ ಚಂಚಲಿಪ ಮುಗ್ಧರಿಗೆ ತಿಳಿಸಿ
ಮತಿದೋರಬೇಕು ಪೂರ್ಣಜ್ಞ.

೩೫೯

ಜಾತಿನಿರಸನಗೈದು, ನೀತಿ ಪರವಶಗೊಳಿಸಿ
ಪ್ರೀತಿರಸವುಣಿಸಿ ಸೌಹಾರ್ದ ಬೆಳೆಸುವದೆ
ಜಾತಿನಿರಪೇಕ್ಷೆ ಪೂರ್ಣಜ್ಞ.

೩೬೦

ನೀತಿಯನು ಕೈಬಿಟ್ಟು ಜಾತಿಗಳ ಬೆಳೆಸಿಟ್ಟು
ಜಾತ್ಯತೀತತೆಯ ಮಾತುಕೊಚ್ಚುವಜನರ
ಗತ್ತು ನೋಡಯ್ಯ ಪೂರ್ಣಜ್ಞ.

೩೬೧

ಜಾತಿಮತ ಜಂಜಡದಿ, ಜೋತಾಡುತಿರಬೇಡ
ನೀತಿ ಪಥವಿಡಿದು ಹಿಂದು ಧರ್ಮದಿ ನಡೆದು
ಜ್ಯೋತಿ ನೀನಾಗು ಪೂರ್ಣಜ್ಞ.

೩೬೨

ಹರಿಹರರು ಒಂದೆಂಬ, ಅರಿವು ಸ್ಥಿರವಾಗಿರಲಿ
ಹರಿಹರರೊಳಿಂದು ಭಿನ್ನತೆಯು ಮೂಡಿದರೆ
ಕರಳು ಕೊರೆದಂತೆ ಪೂರ್ಣಜ್ಞ.

೩೬೩

ನಾವೆಲ್ಲ ಒಂದೆಂಬ, ಭಾವನೆಯ ಬಲದಿಂದ
ಜೀವನವು ಭದ್ರ, ಇಲ್ಲದಿರೆ ವಿಚ್ಛಿದ್ರ!
ಭಾವೈಕ್ಯವಿರಲಿ ಪೂರ್ಣಜ್ಞ.

೩೬೪

ಜಾತಿ ಜಂಜಡದಲ್ಲಿ ನೀತಿಯನು ಬಲಿಗೊಟ್ಟು
ಪ್ರೀತಿಯನು ಸುಟ್ಟು ಗಹಗಹಿಸುತಿರುವವರು
ಘಾತಕರು ಜಗಕೆ ಪೂರ್ಣಜ್ಞ.

೩೬೫

ಜಾತ್ಯತೀತತೆಯೆಂಬ ಜಾತಿಗಾರರ ಆಟ
ಎತ್ತೆತ್ತ ನೋಡಿದರು ಕಾಣುತಿಹ ನೋಟ,
ಪ್ರತ್ಯಕ್ಷ ಪ್ರಕಟ ಪೂರ್ಣಜ್ಞ.

೩೬೬

ಜಾತೀಯತೆಯ ಹಣೆಗೆ ಜಾತ್ಯತೀತತೆ ನಾಮ
ಜಾತ್ಯಂಧತೆಗೆ ಮುದ್ದು, ಗುಣಪ್ರೇಮದಾಳ್ಕೆ
ನೀತಿ ನಿಷ್ಠುರತೆ, ಪೂರ್ಣಜ್ಞ.

೩೬೭

ಬಣಜಿಗರು ಜಂಗಮರು, ನೊಣಬ ಶಿವಶಿಂಪಿಗರು
ಗಾಣಿಗ ಸಾದರರು, ಭಾವೈಕ್ಯ ನುಡಿಯಲ್ಲಿ
ಗೊಣಗುವರು ಬರಿದೆ ಪೂರ್ಣಜ್ಞ.

೩೬೮

ಒಳಪಂಗಡಗಳೆಲ್ಲ ಅಳಿಯಬೇಕೆನ್ನುವರು
ಒಳಪಂಗಡಗಳ ಅಭಿಮಾನ ಬಿಟ್ಟಿಲ್ಲ
ಗಳಪುವರು ಬರಿದೆ, ಪೂರ್ಣಜ್ಞ.

೩೬೯

ಅವರು ಮತಸ್ಥಾಪಕರು ಇವರು ಮತಸ್ಥಾಪಕರು
ಅವರಿವರು ಎಂದು ಬವರಕ್ಕೆ ಇಳಿಯದಿರಿ
ಶಿವನೆ ಸ್ಥಾಪಕನು ಪೂರ್ಣಜ್ಞ.

೩೭೦
ಜಾತಿ ಮತ ಪಂಥಗಳ, ಮಾತಿನಲಿ ಖಂಡಿಸುತ
ಜಾತಿಗಳ ಬೆಳೆಸಿ ಸ್ವಾರ್ಥ ಸಾಧಿಪ ಕುಟಿಲ
ನೀತಿ ಹಬ್ಬುತಿದೆ ಪೂರ್ಣಜ್ಞ.

೩೭೧
ಜಾತಿಜಗಳವ ಬಿಟ್ಟು ನೀತಿ ಮಾರ್ಗದಿ ನಡೆದು
ಸಾತಿಶಯದಿಂದ ಪ್ರೀತಿಯಲಿ ಬಾಳಿದರೆ
ಯಾತರದು ಕಷ್ಟ? ಪೂರ್ಣಜ್ಞ.

೩೭೨
ತುರುಕರೊಕ್ಕಟ್ಟನ್ನು, ಅರಿತು ಮೆಚ್ಚುತ ಬೇಗ
ಪರಿಹರಿಸಿಕೊಳ್ಳಿ ನಿಮ್ಮ ಬಿಕ್ಕಟ್ಟನ್ನು
ಧರೆಯೊಳೆಲ್ಲವರು ಪೂರ್ಣಜ್ಞ.

೩೭೩
ರಮಜಾನ ಹಬ್ಬವದು, ಕರ್ಮಕಳೆಯುವ ಹಬ್ಬ
ವಿಮಲ ಮಾನಸದಿ ಪ್ರೇಮ ಸಂವರ್ಧಿಸುವ
ಸಮ್ಮುದದ ಹಬ್ಬ ಪೂರ್ಣಜ್ಞ.

೩೭೪
ಒಂದು ತಿಂಗಳ ತನಕ, ಬಂಧುರದ ಉಪವಾಸ
ಕುಂದದೆ ಕುರಾನ ಪಠಿಪರು ಮುಸಲ್ಮಾನ
ಬಂಧು ಬಾಂಧವರು ಪೂರ್ಣಜ್ಞ.

೩೭೫
ಮುಸಲಿಮರು ಹಬ್ಬದೊಳಗೆಸಗುವರು ಪ್ರಾರ್ಥನೆಯ
ಹಸಿರು ಜೀವನವ ಸಾಗಿಸುತ ಮುದದಿಂದ
ವ್ಯಸನ ಕಳೆಯುವರು ಪೂರ್ಣಜ್ಞ.

೩೭೬
ಬಂಧುರದ ಸಂಘಟನೆ, ಹಿಂದುಗಳಿದಾಗಿರಲು
ಹಿಂದು ಸಂಸ್ಕೃತಿಯು ಜಗವ ಮುನ್ನಡೆಸಲ್ಕೆ
ಮುಂದಾಗಬೇಕು ಪೂರ್ಣಜ್ಞ.

೩೭೭

ಬೆಳೆಯುತಿಹ ಹೆಮ್ಮರದ, ತಳಕೆ ನೀರುಣಿಸುವೊಲು
ಬೆಳೆಸಿದರೆ ಹಿಂದು–ಧರ್ಮದ ಮಹಾದ್ರುಮವ
ಒಳತಹುದು ಜಗಕೆ ಪೂರ್ಣಜ್ಞ.

೩೭೮

ಹಿಂದುಗಳು ಎಂಬುವರೆ, ಶೂದ್ರ–ವೈಶ್ಯ–ಬ್ರಾಹ್ಮ–
ಣಾದಿ ಮೇಣ್ ಶೈವ ವೀರಶೈವೇತ್ಯಾದಿ–
ಭೇದ ಮಾಡದಿರಿ ಪೂರ್ಣಜ್ಞ.

೩೭೯

ಹಿಂದು ಧರ್ಮದೊಳಿದ್ದು, ಹಿಂದುತ್ವ ಬೆಳೆಸಿದರೆ
ಬಂಧನವಕಡಿದೊಗೆದು ಬಾಳಿದರೆ ಜಗದಿ
ಚೆಂದಾಗಿ ಬೆಳೆವ ಪೂರ್ಣಜ್ಞ.

೩೮೦

ಎಂದೆಂದು ನಾವೆಲ್ಲ, ಹಿಂದುಗಳು ಒಂದೆಂದು
ಚೆಂದಾಗಿ ಬಾಳುತ್ತ ಭೇದಗಳ ಮರೆತು
ಮುಂದಾಗಬೇಕು ಪೂರ್ಣಜ್ಞ.

೩೮೧

ಹಿಂದೂ ಸಮಾಜವದು, ಸುಂದರದ ಹೃದ್ಭೂಜ–
ವೆಂದು ಸಲೆ ತಿಳಿದು ಸುಮತಿಯಿಂ ಚಾಚಿದರೆ
ಹಿಂದುತ್ವದೇಳ್ಗೆ ಪೂರ್ಣಜ್ಞ.

೩೮೨

ಹಿಂದುಗಳುನಾವೆಲ್ಲ, ಬಾಂಧವರು ಎಂದೆನುತ
ಹಿಂದು ಧರ್ಮದಲಿ ನಡೆಯುವಾತನೆ ನೈಜ
ಹಿಂದುವೆನಿಸುವನು ಪೂರ್ಣಜ್ಞ.

೩೮೩

ಹಿಂದುತ್ವದೇಳಿಗೆಗೆ, ಆಧಾರ ಸಹಕಾರ
ಹಿಂದುತ್ವದೇಳಿಗೆಗೆ ಬೇಕು ನಾವೆಲ್ಲ
ಒಂದೆಂಬ ಮಂತ್ರ ಪೂರ್ಣಜ್ಞ.

೩೮೪
ಉಪಜಾತಿ ಜಗಳಗಳು, ವಿಪರೀತವಾಗುತಿವೆ
ಸಫಲರಾಗದೆ ಹಿಂದುಗಳು ಹಿಂದುಳಿಯಲು
ಕುಪಥ ಕಾರಣವು ಪೂರ್ಣಜ್ಞ.

೩೮೫
ಹಿಂದು ಧರ್ಮಿಗಳೆಲ್ಲ, ಒಂದೆಂಬುದನು ಮರೆತು
ಹಿಂದಾಗಬೇಡಿ, ಚೆಂದಾಗಿ ಒಂದಾಗಿ
ಮುಂದಾಗಿ ಬೇಗ, ಪೂರ್ಣಜ್ಞ.

೩೮೬
ಹಿಂದು ಧರ್ಮದ ಮೇಲೆ, ಅಂದು ದುರಾಕ್ರಮಣ
ಇಂದು ಮತಾಂತರದ ಕರಗಸದ ಕೊರೆತ
ಹಿಂದುಗಳೆ ಜೋಕೆ, ಪೂರ್ಣಜ್ಞ.

೩೮೭
ಅಭಿಮಾನರಸವುಣಿಸಿ, ಅಭ್ಯುದಯ ವರ್ಧನೆಗೆ
ಅಭಿಮಾನವಳಿದು 'ಹಿಂದುತ್ವ' ಕೊರಗುತಿದೆ
ಅಭಿಮಾನಿ ಜನರೆ ಪೂರ್ಣಜ್ಞ.

೩೮೮
ಹಿಂದು ಗಿಡದಡಿಯಲ್ಲಿ, ಬಂಧು ಭಾವದಿ ಕುಳಿತು
ಒಂದೆಂಬ ಫಲವ ಸರಿಯಾಗಿ ಸವಿದಲ್ಲಿ
ಚೆಂದವಹುದೆಲ್ಲ ಪೂರ್ಣಜ್ಞ.

೩೮೯
ಹಿಂದೂ ಜನಾಂಗದಲಿ, ಬಾಂಧವ್ಯ ಬಲಬೆಳೆದು
ಒಂದೆ ಮಂತ್ರವನು ಜಪಿಸುತ್ತ ನಡೆವಲ್ಲಿ
ಕುಂದೆಂಬುದುಂಟೆ? ಪೂರ್ಣಜ್ಞ.

೩೯೦
ಹಿಂದುಳಿದ ಹಿಂದುಗಳು, ಮುಂದುವರಿಯುವುದೆಂದು?
ಹಿಂದುಗಳೆ ಆದ ಹರಿಜನರ ಹಿಂದಿಟ್ಟು-
ರೆಂದು ಮುಂದಹರು? ಪೂರ್ಣಜ್ಞ.

೩೯೧

ಹೆಸರಿನಾಶೆಯುಹೊಗೆಯು, ಪಸರಿಸುತ ಮನದಲ್ಲಿ
ಉಸಿರುಗಟ್ಟುತ್ತ ವೀರಶೈವ ಸಮಾಜ
ಉಸಿರಾಡದಿಹುದು ಪೂರ್ಣಜ್ಞ.

೩೯೨

ವೀರಶೈವರೆ ನೀವು, ಸಾರಷಟ್‌ಸ್ಥಲಧ್ವಜವ
ಏರಿಸಿರಿ ಮೇಲೆ ಹಾರಿಸಿರಿ ಗಗನದಲಿ
ಭೂರಿ ಸಂಭ್ರಮದಿ ಪೂರ್ಣಜ್ಞ.

೩೯೩

ಏಸುವಿನ ಉಪದೇಶ, ಏಸು ಜನ ಕೇಳುವರು?
ಆಸುರೀ ಶಕ್ತಿ ತೊರೆದು ನೆನೆಯಿರಿ ದಿವ್ಯ
ಏಸುವಿನ ವಚನ ಪೂರ್ಣಜ್ಞ.

೩೯೪

ಕ್ಷೋಣಿ ತಳದಲಿ ಧರ್ಮ–ಗ್ಲಾನಿಯಾದುದ ಕಂಡು
ಮಾನವ ಕುಲವನು ಉದ್ಧರಿಸಲಾ ಏಸು
ತಾನಿಳಿದ ತಿರೆಗೆ ಪೂರ್ಣಜ್ಞ.

೩೯೫

ಓದ್ವೈತಿಗಳೆ ಕೇಳಿ, ಅದ್ವೈತವಲ್ಲವಿದು
ವೇದ ಗರ್ಭಸ್ಥ ಸತ್ಯವಿದನಾಲಿಸಿರಿ
ಸದ್ಬುದ್ಧಿಯಿಂದ ಪೂರ್ಣಜ್ಞ.

೩೯೬

"ಅದ್ವೈತ" ಮತವಲ್ಲ, ಗುದ್ದಾಡದಿರಿ ಮತ್ತೆ
ವೇದದಿಂ ತಿಳಿದಿರುವ ಸತ್ಯ ತತ್ವವದು
ವಾದ ಬೇಡಿದಕೆ ಪೂರ್ಣಜ್ಞ.

೩೯೭

ಅದ್ವೈತ ನುಡಿವವರು, ಅದ್ವೈತ ತಿಳಿದಿಲ್ಲ,
ಅದ್ವೈತ–ಮುಖಕೆ ದರ್ಪಣವು ಆಚರಣೆ,
ಅದ್ವೈತ ಗಹನ ಪೂರ್ಣಜ್ಞ.

೩೯೮

ಅದ್ವೈತ ಸಿದ್ಧನಿಗೆ, ಸದ್ದು ಗದ್ದಲವಿಲ್ಲ,
ಬದ್ಧತೆಗಳಿಲ್ಲ ಮೋಹಮಾಯೆಗಳಿಲ್ಲ
ಚಿದ್ಯೋಗಿಯವನು, ಪೂರ್ಣಜ್ಞ.

೩೯೯

ಹರಿಜನರ ಕಂಡೊಡನೆ, ಜರಿದು ಹಿಂಜರಿಯದಿರು
ಹರಿಜನರುಗಳಿಗೆ ಸಂಸ್ಕೃತಿಯು ತುಂಬಿದರೆ
ವರ ಜನರೆ ಅವರು ಪೂರ್ಣಜ್ಞ.

೪೦೦

ವಿಜಯದಶಮಿ ದಿನವು, ಪ್ರಜರ ಹರುಷದ ಹಬ್ಬ
ವಿಜಯಕ್ಕೆ ಸ್ಫೂರ್ತಿ ಪ್ರೇರಣೆಯ ಕೊಡುವಂಥ
ಸುಜನ ಸಂಭ್ರಮವು ಪೂರ್ಣಜ್ಞ.

೪೦೧

ನಾಡಹಬ್ಬವು ನಮ್ಮ, ನಾಡಿಗರ ಮೈಮನಕೆ
ನೀಡುವದು ಶಕ್ತಿ, ಸದ್ಭಾವನೆಗಳನ್ನು
ಮೂಡಿಪುದು ನಿಜದಿ ಪೂರ್ಣಜ್ಞ.

೪೦೨

ವಿಜಯನಗರದಿ ಬೆಳೆದ, ವಿಜಯದಶಮಿಯ ಹಬ್ಬ
ವಿಜಯ ಸಂಸ್ಫೂರ್ತಿ ನೀಡಿ ಕನ್ನಡ ಜನರ
ಭುಜ ಚಪ್ಪರಿಪುದು ಪೂರ್ಣಜ್ಞ.

೪೦೩

ಅನ್ಯರಿವರಿವರೆಂಬ, ಭಿನ್ನಬೇಧವ ಮರೆತು
ಬನ್ನಿ ಎಂದೆನುತ ಬನ್ನಿಕೊಡುಕೊಳುವಂಥ
ಬನ್ನಿ ಹಬ್ಬವಿದು ಪೂರ್ಣಜ್ಞ.

೪೦೪

ಕನ್ನಡಿಗರೆಲ್ಲವರು, ಅಣ್ಣ ತಮ್ಮಗಳಂತೆ
ಚೆನ್ನಾಗಿ ಬಾಳಿ ಭಾರತದಿ ನೀವೆಂದು
"ಬನ್ನಿ" ನುಡಿಯುತಿದೆ ಪೂರ್ಣಜ್ಞ.

೪೦೫

'ಬನ್ನಿಯ' ಗಿಡವಿಂದು, ಹೊನ್ನ ರೂಪವ ತಾಳಿ
ಬನ್ನಿ ಕೊಟ್ಟವರು ಒಬ್ಬರಿಗೊಬ್ಬರು
ಹೊನ್ನೆ ಆಗುವರು ಪೂರ್ಣಜ್ಞ.

೪೦೬

ಕನ್ನಡದ ಬಾಂಧವರೆ, ಭಿನ್ನ ಭೇದವ ಬಿಡಿರಿ
ಪ್ರೋನ್ನತಿಯ ಪಡೆದು ಬಾಳಿರೈ ಭಾರತದಿ
ಎನ್ನುತಿದೆ "ಬನ್ನಿ" ಪೂರ್ಣಜ್ಞ.

೪೦೭

ಶಿವರಾತ್ರಿ ಶುಭರಾತ್ರಿ, ಭವರೋಗವನು ಕಳೆದು
ಶಿವಭಕ್ತಿರಸದ ಶಕ್ತಿಯನು ನೀಡುವದು
ಶಿವರಾತ್ರಿ ಮಾಡು ಪೂರ್ಣಜ್ಞ.

೪೦೮

ಶಿವರಾತ್ರಿ ಶುಭದಿನದಿ, ಶಿವಭಾವ ಜಾಗರಿಸಿ
ಶಿವದರ್ಶನವನು ಮಾಡಿಸಲು ಬಂದಿಹುದು
ಶಿವಧ್ಯಾನ ಮಾಡು ಪೂರ್ಣಜ್ಞ.

೪೦೯

ಮಕರಸಂಕ್ರಮಣ ಘನಸುಖವ ನೀಡುವ ಹಬ್ಬ
ಸಂಕ್ರಮಣ ಸ್ನಾನ, ಎಳ್ಳು ಬೆಲ್ಲದ ಮಿಲನ
ಸೌಖ್ಯ ಸಂಕೇತ ಪೂರ್ಣಜ್ಞ.

೪೧೦

ಕುಸುರೆಳ್ಳು ಸವಿಯುತ್ತ, ಖುಷಿಯಾಗಿ ನಲಿಯುತ್ತ
ಹೊಸ ಹುರುಪಿನಿಂದ ಸಮರಸದಿ ಮನಕೆ ಮನ
ಬೆಸೆದುಕೊಳ್ಳುವರು, ಪೂರ್ಣಜ್ಞ.

೪೧೧

ಎಳ್ಳು ಬೆಲ್ಲವ ಸವಿದು, ಎಲ್ಲರೂ ಮುದದಿಂದ
ಎಳ್ಳು ಬೆಲ್ಲದೊಳು ಒಳ್ಳೆಯವರಾಗುವದು
ಒಳ್ಳೆಯದು ಜಗಕೆ ಪೂರ್ಣಜ್ಞ.

೪೧೨
ಬಂದಿಹುದು ಸಂಕ್ರಾಂತಿ, ತಂದಿಹುದು ಸುಖಶಾಂತಿ
ಬಂಧು ಬಾಂಧವರು ಎಳ್ಳುಸಕ್ಕರೆ ಸವಿದು
ಚೆಂದವಾಗಿರಲಿ ಪೂರ್ಣಜ್ಞ.

೪೧೩
ಒಳಪಂಗಡಂಗಳಿವು, ಹುಲದೊಲು ಸಮಾಜವನು
ಬಲುಕ್ಷೀಣಗೊಳಿಸಿ ಸಂಘಟನೆಗಳ ಕೀಲ
ಕಳಚುತ್ತಲಿಹವು ಪೂರ್ಣಜ್ಞ.

೪೧೪
ಜಾತಿ ಜಾತಿಗೆ ಜಗಳ, ಮಾತು ಮಾತಿಗೆ ವೈರ
ಕೋತಿ ಗುಣದವರ ಗದ್ದಲದಿ ನೀತಿ ಹೆಣ
ಜೋತಾಡುತಿಹುದು ಪೂರ್ಣಜ್ಞ.

೪೧೫
ವೀರಶೈವರು ತಾವು, ಯಾರೆಂಬುವರಿವಿಲ್ಲ
ಯಾರಿಗ್ಯಾರೋ ಆಗಿ ಒಡೆದಿರುವ ಹರವಿ
ಚೂರಿನಂತಿಹರು ಪೂರ್ಣಜ್ಞ.

೪೧೬
ಅನ್ಯಾಯ ಹಿಂಸೆಗಳ, ಮನ್ನಿಸದು ಜಿನಧರ್ಮ
ಅನ್ಯರಿಗೆ ಹಿಂಸೆ ಮಾಡದಿರ್ಪುದೆ ಜೈನ
ಸನ್ಮತಾದರ್ಶ ಪೂರ್ಣಜ್ಞ.

೪೧೭
ಜೈನಧರ್ಮದ ಶುದ್ಧಿ, ಜೈನಧರ್ಮಶಕ್ತಿ
ಜೈನ ಧರ್ಮಕ್ಕೆ ಅಡಿಗಲ್ಲು ತ್ಯಾಗಗಳು
ದಾನಶ್ರದ್ಧೆಗಳು ಪೂರ್ಣಜ್ಞ.

೪೧೮
ಶುದ್ಧದಯೆ ತುಂಬುವದೆ ಬುದ್ಧ ಧರ್ಮದ ಗುರಿಯು
ನಿದ್ದೆ ಬಿಟ್ಟೆದ್ದು ಶರಣೆಂದು ಸಾಗುವದೆ
ಬುದ್ಧ ಮತ ತತ್ವ ಪೂರ್ಣಜ್ಞ

೪೧೯

ಸತ್ಯ ಧರ್ಮದ ಹೊರತು, ಮತ್ತೆ ಧರ್ಮಗಳಿಲ್ಲ
ನಿತ್ಯ ಮನಮುಟ್ಟಿ ಸತ್ಯವನು ಪಾಲಿಸಲು
ಕುತ್ತುಗಳೆ ಇಲ್ಲ ಪೂರ್ಣಜ್ಞ.

೪೨೦

ಎಂದು ಧರ್ಮದ ಪತನ, ಅಂದೆ ಲೋಕದ ಪತನ
ಎಂದಿಗೂ ಧರ್ಮ ಬಿಡಬೇಡ, ಧರ್ಮ ಚ್ಯುತಿ–
ಯಿಂದಾತ್ಮಹತಿಯು ಪೂರ್ಣಜ್ಞ.

೪೨೧

ವಿವಿಧ ಸುಮರಸಗಳನು, ಸುವಿಧಿಯಿಂ ಸಂಗ್ರಹಿಸಿ
ನವ ಸೃಷ್ಟಿಗೈವ 'ಭ್ರಮರ ವ್ರತ' ಪದ್ಧತಿಯೆ
ನವಯುಗದ ಧರ್ಮ ಪೂರ್ಣಜ್ಞ.

೪೨೨

ಆ ಜಾತಿ ಈ ಜಾತಿ, ಈ ಜೂಜಿನಾಟದಲಿ
ಮೋಜು ಮಾಡುತಿಹ ಜನಕೆ ಮಾನವ ಸಮತೆ
ಸೌಜನ್ಯ ತಿಳಿಸು ಪೂರ್ಣಜ್ಞ.

೪೨೩

ರಾಮರಥ ಸಾಗಿಹುದು, ರಾಮನ ಅಯೋಧ್ಯಕ್ಕೆ
ರಾಮಮಂದಿರವ ಕಟ್ಟಲ್ಕೆ ಪಣತೊಟ್ಟು
ರಾಮಭಕ್ತಿಯಲಿ ಪೂರ್ಣಜ್ಞ.

೪೨೪

ಹಿಂದು–ಮುಸ್ಲಿಮ, ಕ್ರೈಸ್ತ–ರೆಂದು ವಿಧವಿಧಭೇದ
ಇಂದು ಎದ್ದಿಹುದು, ಆದಿಯಲಿ ಜಾತಿಗಳ
ದಂದುಗವು ಇತ್ತೆ? ಪೂರ್ಣಜ್ಞ.

೪೨೫

ಜಾತಿಪಾತಿಗಳೆಲ್ಲ, ಕೋತಿ ಮನುಜನ ಕೃತಕ
ಸ್ವಾರ್ಥಸಾಧನೆಗೆ ಸ್ವಾರ್ಥಿಗಳು ಮಾಡಿಹರು
ಜಾತಿ ಭೇದಗಳ ಪೂರ್ಣಜ್ಞ.

೪೨೬

ಜಾತಿಮತ ಭೇದಾಗ್ನಿ, ಭೂತದೊಲು ಕುಣಿಯುತಿದೆ
ಪ್ರೀತಿ ವಿಶ್ವಾಸ ಧ್ವಂಸವಾಗುತ್ತಿಹವು
ನೀತಿಸಾಯುತಿದೆ ಪೂರ್ಣಜ್ಞ.

೪೨೭

ನೂರಾರು ಧರ್ಮಗಳು, ಭಾರತದಿ ತುಂಬಿಹವು
ನೂರು ಧರ್ಮಗಳ ಸಾರ ಒಂದೇ ಇಹುದು
ಕಾರುಣ್ಯ ಮಾರ್ಗ ಪೂರ್ಣಜ್ಞ.

೪೨೮

ಶಾಂತಿ ಪರದೆಯು ಹಿಂದೆ, ಕ್ರಾಂತಿಕಿಡಿ ಕಾರುತಿದೆ
ಭ್ರಾಂತಿ ಮೋಹಗಳು ದೇಶಪ್ರೇಮದ ನೆವದಿ
ಭೀತಿ ಹಬ್ಬಿಸಿವೆ ಪೂರ್ಣಜ್ಞ.

೪೨೯

ಕೋಮು ಸೌಹಾರ್ದವನು, ಕಾಮಕ್ರೋಧಾಗ್ನಿಯಲೆ
ಹೋಮಿಸುತಲಿಹರು ಎಲ್ಲೆಡಗು ಸದ್ಗುಣವ
ಕ್ಷಾಮವೇ ಕ್ಷಾಮ ಪೂರ್ಣಜ್ಞ.

೪೩೦

ಪರಿಶಿಷ್ಟ ಜಾತಿಗಳ, ಪೊರೆವುದನ ಮರೆಯದಿರು
ಅರಿವು ನೀಡುತ್ತ ಮೇಲೆತ್ತು ಪತಿತರನು
ಭರದಿಂದ ಸಲುಹಿ ಪೂರ್ಣಜ್ಞ.

೪೩೧

ತಿಳಿವಳಿಕೆ ತುಂಬಿರುವ, ಒಳಿತಾದ ನಡೆನುಡಿಯ
ಒಲುಮೆಯಿಂ ಕಲಿಸಿ ಮೇಲಕ್ಕೆ ಎತ್ತುವದೆ
ದಲಿತರುದ್ಧಾರ ಪೂರ್ಣಜ್ಞ.

೪೩೨

ಹೊಲೆಯೆಂದು ಕೊರಗದಿರಿ, ಹೊಲೆಯೆಂದು ದೂಡದಿರಿ
ಹೊಲೆತನವ ಬಿಟ್ಟು ಕಾಯಕವ ಮಾಡಿದರೆ
ಬೆಳಕುಂಟು ನಿಮಗೆ ಪೂರ್ಣಜ್ಞ.

೪೩೩

ಹೊಲೆಯರಾರೆಂಬುದನು, ತಿಳಿಸಿಹನು ಬಸವಣ್ಣ
ಬಲುಕೆಟ್ಟ ಕೃತ್ಯ ಮಾಡುವವನೇ ಹೊಲೆಯ
ಸಲೆತಿಳಿಯಿರಿದನು ಪೂರ್ಣಜ್ಞ.

೪೩೪

ಹೊಲೆಯನಾರೆಂಬುದನು, ತಿಳಿಸಿದನು ಬಸವಣ್ಣ
ಹೊಲಸು ತಿಂಬುವನು ಹೊಲೆಗೆಲಸ ಮಾಳ್ಪವನು
ಹೊಲೆಯನೆನಿಸುವನು ಪೂರ್ಣಜ್ಞ.

೪೩೫

ದಲಿತರಿಗೆ ದೊರೆವ, ಕಳಕಳಿಯ ಸೌಲಭ್ಯಗಳು
ಒಳಿತಿಂಗೆ ಬಳಕೆಯಪ್ಪಂತೆ ತಿಳಿವಳಿಕೆ
ಸಲೆಬೆಳಗುತಿರಲು ಪೂರ್ಣಜ್ಞ.

೪೩೬

'ಸಹನಾವವತು' ಎಂಬ, ಸಹನೌಭುನಕ್ತೆಂಬ
ಸಹಜಾತಭಾವ ನಡತೆಯಲಿ ಬಂದಲ್ಲಿ
ಬಹು ಸಫಲಬಾಳು ಪೂರ್ಣಜ್ಞ.

೪೩೭

ಜಾತಿಕತ್ತಲೆಯಳಿಯೆ, ಪ್ರೀತಿಜ್ಯೋತಿಸಬೇಕು
ಪ್ರೀತಿಯಿಂ ನಡೆವ ಜೀವನವು ಮಧುರ ಸಂ–
ಗೀತದಂತಕ್ಕು ಪೂರ್ಣಜ್ಞ.

೪೩೮

ಹರಿಜನರ ದೌರ್ಜನ್ಯ, ಸರಿಸಲಿಕೆ ಕಳಕಳಿಯ
ಅರಿವು ಬರಬೇಕು ಅವರೊಡನೆ ಬಾಳುತ್ತ
ಇರಬೇಕು ನಿಜದಿ ಪೂರ್ಣಜ್ಞ.

೪೩೯

ಹರಿಜನರ ಕಲ್ಯಾಣ, ಕರುಣೆಯಿಂತ್ವರಿತದಲಿ
ನೆರವೇರಬೇಕು ದೇಶದಲಿ ಸುಖಶಾಂತಿ
ಸ್ಥಿರವಾಗಬೇಕು ಪೂರ್ಣಜ್ಞ.

೪೪೦

ದಲಿತವರ್ಗದ ಜನರಿ–ಗೊಳಿತುಮಾಡಲು ಸತತ
ಒಳಿತಾದ ವಿದ್ಯೆ ಸಂಸ್ಕೃತಿಯ ಕಲಿಸಿದರೆ
ಒಳಿತು ದೇಶಕ್ಕೆ ಪೂರ್ಣಜ್ಞ.

೪೪೧

ಪರಿಶಿಷ್ಟರನು ದೂರ, ಸರಿಸುವದು ಒಳಿತಲ್ಲ
ಕರೆದು ಹತ್ತಿರಕೆ ವಾತ್ಸಲ್ಯದಿಂ ಶ್ರೇಷ್ಠ
ಗುರಿತೋರಬೇಕು ಪೂರ್ಣಜ್ಞ.

೪೪೨

ಹಿಂದುಳಿದವರ ಬಾಳ, ಕುಂದುಕೊರತೆಗಳೆಲ್ಲ
ಹಿಂದೆ ಸರಿವಂತೆ ನೆರವೀವ ಕರ್ತವ್ಯ
ಮುಂದಿರುವವರದು ಪೂರ್ಣಜ್ಞ.

## ಶಿವಾದ್ವೈತದರ್ಶನ

೪೪೩

ವೀರಶೈವರಿಗೆಲ್ಲ, ವೀರಶಿವ ಸಿದ್ಧಾಂತ
ಸಾರವನು ತತ್ತ್ವದಾ ಗ್ರಂಥಗಳ ನೋದಿ
ಬೀರುವೆನು ಮುದದಿ ಪೂರ್ಣಜ್ಞ.

೪೪೪

ಆರು ತೆರನಾಗಿಹುದು, ವೀರಶೈವದ ಪರಿಯು
ತೋರುವುದು ಪರತತ್ತ್ವ ಲಿಂಗನಿಷ್ಠೆಯನು
ಸಾರಿಹೇಳುವುದು ಪೂರ್ಣಜ್ಞ.

೪೪೫

ವೀರಶೈವಾಚಾರ, ಸಾರಸಂಪತ್ತಿಹುದು
ವೈರಾಗ್ಯ ಭಕ್ತಿ ಜ್ಞಾನಂಗಳಿಲ್ಲುಂಟು
ಮೂರು ತೆರದಲ್ಲಿ ಪೂರ್ಣಜ್ಞ.

೪೪೬

ನೂರೊಂದು ನೆಲೆಗಳಾ, ಸಾರರಿದು ನಡೆವವನು
ವೀರಶೈವನಹ ಪರಿಪೂರ್ಣನೆಂದೆನಿಸಿಹ
ಸಾರಸುಖಿಯಹನು ಪೂರ್ಣಜ್ಞ.

೪೪೭

ವೀರ ಮತ ವೃಕ್ಷದ ಬೇರಹುದು ಕಾಯಕವು
ಸಾರಿಹೇಳುವೆನು, ಹೂವಹುದು ದಾಸೋಹ
ಆರೈದು ನಡೆಯೊ ಪೂರ್ಣಜ್ಞ.

೪೪೮

ಶಿವಾದ್ವೈತಿಗೆ ಮೊದಲು, ದಿವ್ಯದೃಷ್ಟಿಯು ಬೇಕು
ದಿವ್ಯದರ್ಶನಕೆ ಷಟ್‌ಸ್ಥಲದ ಮಾರ್ಗದಾ
ಭವ್ಯತೆಯು ಬೇಕು ಪೂರ್ಣಜ್ಞ.

೪೪೯

ಅಷ್ಟಾವರಣಗಳನ್ನು ನಿಷ್ಠೆಯಿಂ ಆಚರಿಸಿ
ಬಿಟ್ಟು ಬಿಡದಂತೆ ಅನುಭವಿಸಿದಾತಂಗೆ
ಕಷ್ಟಗಳು ದೂರ ಪೂರ್ಣಜ್ಞ.

೪೫೦

ಪಂಚಾಚಾರದಿನರಸು, ಸಂಚರಿಸಿ ನೀತಿಯೊಳು
ಸಂಚಿತವ ಜ್ಞಾನ–ಮಾರ್ಗದೊಳು ಕಳೆಯುತ್ತ
ಮಿಂಚುವನು ಮುದದಿ ಪೂರ್ಣಜ್ಞ.

೪೫೧

ಪರಶಿವಗೆ ಪೆರತಿಲ್ಲ ದಿರುತಿಹುದು ಶಿವಶಕ್ತಿ
ನಿರುತದವಿನಾಭಾವದಿಂಕಂಪುಕುಸುಮದೊಳು
ಬೆರೆದ ಪರಿಯಂತೆ ಪೂರ್ಣಜ್ಞ.

೪೫೨

ನೆಲವನ್ನು ಹದಮಾಡಿ, ಜಲಸುರಿಸಿ ಬೀಜಗಳ
ಬಲುಜೋಕೆಯಿಂದ ಬಿತ್ತಿದರೆ "ಪರತತ್ವ"
ಬೆಳೆಯುಬುಂಟು ನೋಡು ಪೂರ್ಣಜ್ಞ.

೪೫೩

ಅಷ್ಟಾವರಣವೆ ಅಂಗ, ಪಂಚಾಚಾರವೆ ಪ್ರಾಣ
ಷಟ್‌ಸ್ಥಲವೆ ಆತ್ಮವಾಗಿಹುದು ವೀರ–
ಶೈವರಾ ಧರ್ಮಕ್ಕೆ ಪೂರ್ಣಾಜ್ಞ.

**ಶೂನ್ಯಲಿಂಗಸ್ಥಲ**

೪೫೪

ಸತ್ತುಚಿತ್ತಾನಂದ, ನಿತ್ಯಪರಿಪೂರ್ಣದಲಿ,
ಸತ್ವರಜತಮಗಳಿರದಂದು ನೀನೊಬ್ಬ
ನಿತ್ಯ ನಿರಂಜನ, ಪೂರ್ಣಾಜ್ಞ.

೪೫೫

ತನುವಿಲ್ಲದಿರುವಾಗ, ಮನವಿಲ್ಲದಿರುವಾಗ
ಏನೇನು ಇರದಾಗ ಶೂನ್ಯನಾಗಿದ್ದೆ
ನೀನೊಬ್ಬ ವಿಭುವೆ ಪೂರ್ಣಾಜ್ಞ.

೪೫೬

ಅಂಡಜವು ಪಿಂಡಜವು, ಸ್ವೇದಜವು ಉದ್ಭಿಜವು
ಖಂಡನಾದ ಬಿಂದು ಕಲೆಗಳಾವು ಇರದಾಗ
ಇದ್ದೆ ನೀನೊಬ್ಬ ಪೂರ್ಣಾಜ್ಞ.

೪೫೭

ನೀನು ನಿಃಕಲನಯ್ಯ, ನೀನು ನಿರುಪಮ ಬ್ರಹ್ಮ
ನೀನು ಷಟ್ಕಳಿಗೆಲ್ಲ ಮೀರಿದವನಾಗಿರುವೆ
ನೀನೆ ಲಿಂಗಯ್ಯ, ಪೂರ್ಣಾಜ್ಞ.

೪೫೮

ಅರುಹಿಲ್ಲ ಮರಹಿಲ್ಲ, ಕುರುಹಿಲ್ಲ ತೆರಹಿಲ್ಲ
ಪರಿಪೂರ್ಣನಾಗಿರ್ಪ ಮಹಿಮಂಗೆ ನೀನೊಬ್ಬ
ನಿರವಯಲಿಂಗವೆ, ಪೂರ್ಣಾಜ್ಞ.

೪೫೯

ಅಂಗಸ್ಥಲಗಳೆಲ್ಲ, ಲಿಂಗಸ್ಥಲಗಳೆಲ್ಲ
ಮುಂಗಾಣದಂದು ಶಿವತತ್ತ್ವವಾಗಿದ್ದೆ
ಲಿಂಗಯ್ಯ ನೀನೆ, ಪೂರ್ಣಜ್ಞ.

೪೬೦

ವೇದವೇದಾಂತಗಳು, ಮತ್ತೆ ಪುರಾಣಗ–
ಳಾದಿ ಆಗಮ ಶಾಸ್ತ್ರಗಳುದಯವಾಗದಂ–
ದಿದ್ದೆ ನೀನೊಬ್ಬ ಪೂರ್ಣಜ್ಞ.

೪೬೧

ಚಿನ್ನಾದ ಚಿದ್ಬಿಂದು, ಚಿತ್ಕಳೆಯು ತುಂಬಿರುವ
ಚಿನ್ಮಯನ ಹೊಳೆಯೆ ಚತುರ್ವಿಧ ಒಂದಾದ
ಚಿನ್ಮಯವೆ ಲಿಂಗ ಪೂರ್ಣಜ್ಞ.

೪೬೨

ಪರದೀಪ್ತಿ ಭವಮುಕ್ತಿ, ಪರಶಿವನ ಚಿಚ್ಛಕ್ತಿ
ಪರಿಪೂರ್ಣ ಗೋಳಕಾಕಾರ ತುಂಬಿರುವೆ
ಪರಮ ತೇಜ ಲಿಂಗ ಪೂರ್ಣಜ್ಞ.

೪೬೩

ಪಂಚಶಕ್ತಿಯನೆಲ್ಲ, ಪಂಚಕಲೆಗಳನ್ನೆಲ್ಲ
ಪಂಚಾಕ್ಷರಂಗಳ ತುಂಬಿರಿಸಿ ಬೆಳಗುವುದು
ಚಿಚ್ಛಕ್ತಿ ಲಿಂಗ ಪೂರ್ಣಜ್ಞ.

೪೬೪

ಸುಧೆಯೊಳಗೆ ವಿಷವುಂಟೆ? ವಿಧುವಿನಲಿ ಬಿಸಿಯುಂಟೆ?
ಸದ್ವಿವೇಕವನು ಪಡೆದಿರುವ ಶರಣರಿಗೆ
ಕುಂದುಂಟೆ ಜಗದಿ? ಪೂರ್ಣಜ್ಞ.

೪೬೫

ತಿಲದೊಳಗಿರುವ ತೈಲ, ಜಲದೊಳಗಿರುವ ಅಗ್ನಿ
೧ಕಳೆಗುಂದದಿಪ್ಪಂತೆ ಸರ್ವತ್ರ ವಸ್ತುವಿನ
ಕಳೆ ಪರಿಪೂರ್ಣ ಪೂರ್ಣಜ್ಞ.

೪೬೬

ಮಿಂಚಿರುವ ಪ್ರಭೆಯಲ್ಲಿ, ಪಂಚಾನನ ಕಾಣ್ಬೆ
೨ಸಂಚಲವು ಇರದೆ ನೋಡಿದರೆ ಪರಿಹಾರ
ಪಂಚೀಕೃತಿಯು ಪೂರ್ಣಜ್ಞ.

೪೬೭

ನಾದ ಕಾರಣಾಂಗಕೆ, ಬಿಂದು ಸೂಕ್ಷ್ಮಾಂಗಕೆ
ಆಧಾರವಾಗಿ ಕಲೆ ತಾ ಸ್ಥೂಲ ತನುವಿಂಗೆ
ಮೈದೋರತಿಹವು ಪೂರ್ಣಜ್ಞ.

೪೬೮

ಬತ್ತಿಯಿಲ್ಲದೆ ಬೆಳಗು, ಚಿತ್ರವಿಲ್ಲದೆ ಚಲುವು
ಸುತ್ತೆಲ್ಲ ಕಾಣದಂತಿಹುದು ನೋಡಯ್ಯ
ಇಂತಿಹುದು ಕಲೆಯು ಪೂರ್ಣಜ್ಞ.

೪೬೯

ತನುಗುಣಂಗಳ ಕಳೆದು, ಮನದ ಮೈಲಿಗೆ ತೊಳೆದು
ಅನುಭವವು ಬಂದರದು ಶಿವಕಳೆಯ ಬೆಳಕು
ಮನದಿ ಮೂಡುವದು ಪೂರ್ಣಜ್ಞ.

೪೭೦

ಅರುಹಿನ ಕುರುಹೆ ಕಲೆಯು ಕುರುಹಿರದೆ ಕಳೆಯರಹು–
ಬರದು, ಸತ್ಕಲೆಯು ಚಿತ್ಕಳೆಯುದಾಗುವದೆ,
ಪರಿಪೂರ್ಣ ನೋಡು ಪೂರ್ಣಜ್ಞ.

---

೧ ವಸ್ತುವೆಂದರೆ ವಸ್ತುಮಯವಾದ ಪರಬ್ರಹ್ಮ.

೨ ಸಂಚಲವು ಇರದೆ ಅಂದರೆ, ದೇಹ ಕರಣ ಇಂದ್ರಿಯ ವಿಷಯಂಗಳ ಚಪಲತ್ವವಿಲ್ಲದೆ ಪಂಚೀಕೃತಿಯು ಅಂದರೆ ಒಂದೊಂದಕ್ಕೆ ಐದೈದು ಕೃತಿಗಳನು ತಳೆದಿರುವ ಪ್ರಪಂಚು, ಪರಿಹಾರ–ನಷ್ಟ.

೪೭೧

ಅಂಗಸ್ಥಲ ಕಲೆಯಾಗಿ, ಲಿಂಗಸ್ಥಲ ಕಳೆಯಾಗಿ
ಸಂಗಮಿಸಿದರದು ಕಳೆಶಕ್ತಿ, ಕಲೆಭಕ್ತಿ
ಯಾಗುವದು ನೋಡು ಪೂರ್ಣಜ್ಞ.

೪೭೨

[೧]ಕಳೆಯಲ್ಲಿ ಕಲೆಯಿಹುದು, ಕಲೆಯಲ್ಲಿ ಕಳೆಯಿಹುದು
ಕಲೆಯು ಹಾಲಾಗಿ, ಕಳೆಯು ತುಪ್ಪವದಾಗಿ
ಬೆಲೆಬಹುದು ನೋಡು ಪೂರ್ಣಜ್ಞ.

೪೭೩

ಕಳೆಯನ್ನು ಕಲೆಯಾಗಿ, ಬೆಳಗಿದರೆ ಕರದೊಳಗೆ
ಕಳೆಯುಳ್ಳ ಕರಸ್ಥಲದೊಳಗೆ ಕ್ರಿಯೆಯಾ–
ಚಿಲ್ಲಿಂಗವಹುದು ಪೂರ್ಣಜ್ಞ.

೪೭೪

ಶಿವಕಳೆಯು ಒಂದಂಶ, ಶಿವಯೋಗ ಬಲದಿಂದ
ಶಿವವಾಗಿ ನೀಡುವನು ಲಿಂಗದೊಳು ಗುರುವು
ಭವವ ಕಳೆಯಲ್ಕೆ ಪೂರ್ಣಜ್ಞ.

೪೭೫

ಅಕಾರವೆ ನಾದಹುದು, ಉಕಾರವೆ ಬಿಂದಹುದು
ಮಕಾರವೆ ಕಳೆಯು ಇವುಗಳಿಂ ಪರಿಪೂರ್ಣ
ಓಂಕಾರವಯ್ಯ ಪೂರ್ಣಜ್ಞ.

೪೭೬

ಕಳೆಯಿರದೆ ಲಿಂಗಿಲ್ಲ, ಕಳೆಯಿರದೆ ಅಂಗಿಲ್ಲ
ಕಳೆಯ ಬೆಳಕನ್ನು ಪಡೆದವನೆ ನಿಜಕಲಾ–
ಕಳಾಮೂರ್ತಿಯು ಪೂರ್ಣಜ್ಞ.

---

೧ ಇಲ್ಲಿ ಕಳೆ, ಕಲೆ, ಎರಡರ್ಥ.
ಒಂದುಕ್ಷಿಅಂತರಂಗ, ಮತ್ತೊಂದು ಬಹಿರಂಗ.
ಕಳೆ ಅಂತರಂಗ, ಕಲೆ ಬಹಿರಂಗ,
ಒಂದು ಪ್ರವೃತ್ತಿ ಮತ್ತೊಂದು ನಿವೃತ್ತಿ.

## ಷಟ್‌ಸ್ಥಲ ಪ್ರಭೆ

೪೭೭

ಸೌಧವನು ಏರಲ್ಕೆ, ಆದರದಿ ದಿನನಿತ್ಯ
ಸಾಧಕಗೆ ಬೇಕು ಆರು ಹಂತಗಳು
ವೇದ್ಯವಾಗಿರಲಿ ಪೂರ್ಣಜ್ಞ.

೪೭೮

[೧]ಷಟ್‌ಸ್ಥಲದ ಸಾರವನು, ಸ್ಪಷ್ಟ ತಿಳಿಸಲು ನರಗೆ
ಷಟ್‌ಸ್ಥಲಗಳಿರವರಿದ ಗುರುವು-
ತ್ಕೃಷ್ಟನಾಗಿಹನು ಪೂರ್ಣಜ್ಞ.

೪೭೯

ಎಲ್ಲ ಧರ್ಮಗಳಿರವು, ಎಲ್ಲ ಯೋಗಗಳರಿವು
ಎಲ್ಲ ಸತ್ಕರ್ಮಮನ್ವಯ ಷಟ್‌ಸ್ಥಲ-
ದಲ್ಲಿ ಕಾಣುವದು ಪೂರ್ಣಜ್ಞ.

೪೮೦

ನೂರೊಂದು ನೆಲೆಕಲೆಗಳಾರುಸ್ಥಲಗಳಲ್ಲಿ
ವೀರಶೈವದಾ ಪರಿವಿಡಿಯ ತತ್ವಗಳ
ಸಾರ ತೋರುವದು ಪೂರ್ಣಜ್ಞ.

೪೮೧

ಗೂಢಚೇತನವುಳ್ಳ, ಪಿಂಡಾಂಡ ಬ್ರಹ್ಮಾಂಡ-
ಗಾಢಸಂಬಂಧವನ್ನು ತಾ ಮುದದಿ ಮೈ-
ಗೂಡಿಸುವದು ಇಲ್ಲಿ ಪೂರ್ಣಜ್ಞ.

೪೮೨

ಸತ್ಯವಸ್ತುವ ತೋರಿ, ನಿತ್ಯತೃಪ್ತಿಯ ಮಾಡಿ,
ಬಿತ್ತರಿಸುವದೇ ಷಟ್‌ಸ್ಥಲದ ನಿಜಧರ್ಮ
ರತ್ನಭಾಂಡಾರ ಪೂರ್ಣಜ್ಞ.

---

೧ ನಿವೃತ್ತಿಕಲೆ ಸದ್ವಿಚಾರಗಳನ್ನು ಸಂಪಾದಿಸಿ, ಸ್ಥಿರಗೊಳಿಸಿಕೊಳ್ಳುವದೆ, ಪ್ರತಿಷ್ಠಾಕಲೆ, ಪರಾಪರ ಪ್ರಜ್ಞೆಯೆ, ವಿದ್ಯಾಕಲೆ, ಶಾಂತಿಕಲೆ, ಶಾಂತ್ಯತೀತಕಲೆ ಮತ್ತು ಶಾಂತ್ಯತೀತೋತ್ತರಕಲೆ ಹೀಗೆ ಆರು ಪ್ರಸಾದಾರ್ಚನೆ, ಶಾಂತ್ಯತೀತಕಲೆಯ ಕುರುಹಾದರೆ ಪ್ರಸಾದಾರ್ಪಣ, ಪ್ರಸಾದಾನುಭವಾನಂದ, ಶಾಂತ್ಯತೀತೋತ್ತರ ಕಲೆಯ ಕುರುಹು.

೪೮೩

ಜೀವನದ ಸಿದ್ಧಾಂತ, ಭಾವವನು ತೋರುವದು
ಜೀವ-ಶಿವರುಗಳ ಸಮರಸವ ಮಾಡುವದು
ನೋವನಳಿಸುವದು ಪೂರ್ಣಜ್ಞ.

೪೮೪

ವೇದಾಂತ, ಜ್ಞಾನದಾ, ಸಾಧನದ ಕೊನೆಯುಂಟು
ಸಿದ್ಧಾಂತ ಅನುಭವದ ಕೊನೆಯಾಗಿ ತತ್ತ್ವ-
ಸಿದ್ಧಿ ತೋರುವದು ಪೂರ್ಣಜ್ಞ.

೪೮೫

ಬ್ರಹ್ಮಸತ್ಯವದೆಂಬ। ಜಗವು ಮಿಥ್ಯೆಂಬಹಂ-
ಬ್ರಹ್ಮಿ ವಚನವನೊಪ್ಪದಿದೆ ಸಿದ್ಧಾಂತ
ಬ್ರಹ್ಮವದು ಸರ್ವವೈ ಪೂರ್ಣಜ್ಞ.

೪೮೬

ಅನುಭವದ ಸಾರವದು ಅನುಸರಿಸಿಹುದು ಜಗವ
ಅನುಭವದ ಅರಿವೆ ವೀರಶೈವದ ಗುರಿಯು
ಅನುಭವವು ಸತ್ಯ ಪೂರ್ಣಜ್ಞ.

೪೮೭

ಜೀವನದಿ ಶಾಂತಿಯನು, ಶಿವಜೀವ ಸಮರತಿಯ
ಭಾವದಲಿ ತೋರುವದೆ ಷಟ್‌ಸ್ಥಲ ತತ್ತ್ವ
ಜೀವಾಳವದುವೆ ಪೂರ್ಣಜ್ಞ.

೪೮೮

ಜೀವನದ ಜಟಿಲತೆಯು, ನೋವುಗಳ ಕಳೆಯುವದು
ಜೀವನದಿ ತುಂಬಿರುವ ಆರು ವೈರಿಗಳ
ಸಾವಿಲ್ಲಿ ನೋಡು ಪೂರ್ಣಜ್ಞ.

೪೮೯

ಒಂದು ಆರಾಗುವದು, ಆರು ಒಂದಾಗುವದು
ಇದುವೆ ಷಟ್‌ಸ್ಥಲ ನಿಜಲೀಲೆ ನೋಡಯ್ಯ
ಇದುವೆ ಶಿವಧರ್ಮ ಪೂರ್ಣಜ್ಞ.

೪೯೦

ಎಲ್ಲ ಶಕ್ತಿಗಳೆಲ್ಲಿ, ಎಲ್ಲ ವಸ್ತುಗಳಲ್ಲಿ
ಎಲ್ಲ ಸಮರಸತೆ ತೋರುತ್ತ ವಿಕಾಸವಹು
ದಲ್ಲಿ ಪರಿಪೂರ್ಣ ಪೂರ್ಣಜ್ಞ.

೪೯೧

ಶ್ರೀಗುರುವೆ ಘನಗುರುವೆ, ಯೋಗಶಕ್ತಿಯ ನೀಡು
ರಾಗದಿ ಕಲಿಸು ಷಟ್‌ಸ್ಥಲದ ಮರ್ಮವನು
ಬೇಗನೀನೊಲಿದು ಪೂರ್ಣಜ್ಞ.

## ಪಿಂಡಸ್ಥಲ

೪೯೨

ಬೀಜದೊಳು ವೃಕ್ಷವದು– ಸಾಜದಡಗಿದ ತೆರದಿ
ತೇಜಸ್ವಿಲಿಂಗಹುದುಗಿಹುದು ಪಿಂಡದಲಿ
ನೈಜಪಿಂಡಸ್ಥಲ ಪೂರ್ಣಜ್ಞ.

೪೯೩

ಬಲದಿಂದ ಅಂಜನದ, ನೆಲದ ಮರೆಯೊಳಗಿರುವ
ಸಲೆಧನವು ಕಾಣುತಿರುವಂತೆ ಶಿವಜ್ಞಾನ
ದಂಜನದೊಳರಿಗು ಪೂರ್ಣಜ್ಞ.

೪೯೪

ಶಿವಶಕ್ತಿ ಸಂಮಿಲನ, ಶಿವಕಲೆಯು ಬ್ರಹ್ಮಾಂಡ
ಇವುಗಳಾಸೂಕ್ಷ್ಮಾಂಶ ಪಿಂಡಾಂಡವಾಗಿಹುದು
ಶಿವಮಯಂಜಗತ್ ಪೂರ್ಣಜ್ಞ.

೪೯೫

ಪಿಂಡೊಂದು ಪುಷ್ಪವದು, ಪಿಂಡೊಲವು ಮಕರಂದ
ಪಿಂಡಜ್ಞಾನದಿಂ ಚಿತ್ಪಿಂಡದುದಯುವದು
ಪಿಂಡಅವಿಕಾರಿ ಪೂರ್ಣಜ್ಞ.

೪೯೬

ಆಡಬಾರದ ಬಯಲು, ನೋಡಬಾರದು ಬಯಲು
ಒಡಲಿರದ ಬಯಲೊಳಗೆ ಅಡಗಿರ್ದ ಭೇದವಂ
ಜಡರು ತಿಳಿಯರೈ ಪೂರ್ಣಜ್ಞ.

## ಸಂಸಾರ ಹೇಯಸ್ಥಲ

೪೯೭

ಅಂಗನೆಯ ಶೃಂಗಾರ, ಕಂಗಳಿಗೆ ಕತ್ತಲೆಯು
ಲಿಂಗ ನೆನೆಹೆಂಬ ಜ್ಯೋತಿಯನು ನಂದಿಸುತ
ಭಂಗ ಪಡಿಸುವದು ಪೂರ್ಣಜ್ಞ.

೪೯೮

ಲಲ್ಲೆನುಡಿ ನಯಗತಿಯು, ಎಲ್ಲರನು ಕೊರೆಯುತಿದೆ
ಸಲ್ಲಲಿತ ಹೃದಯವ ಸಣ್ಣ ಸುತಲಿಹುದು
ಬಲ್ಲತನವೆಲ್ಲಿ ಪೂರ್ಣಜ್ಞ.

೪೯೯

ಸ್ತ್ರೀಯರಾ ಸಂಗವದು, ಕಾಯಕ್ಕೆ ಕೆಡಕುಂಟು
ಮಾಯೆ ಬಂಧನವು ಮರಳು ಮಾಡುವದಯ್ಯ
ಕಾಯೋ ಗುರುರಾಯ, ಪೂರ್ಣಜ್ಞ.

೫೦೦

ಉರಿಗೆ ತೋರುವ ಬೆಣ್ಣೆ, ಕರಗಿ ಹೋಗುವ ತೆರದಿ
ಮರಳು ಮಾನವರು ವಿಷಯಲಂಪಟರಾಗಿ
ಕೊರಗಿ ಸಾಯುವರು ಪೂರ್ಣಜ್ಞ.

೫೦೧

ಶಶಿಮುಖಿಯ ಸಂಗದಲಿ, ಪಶುಪತಿಯ ಮರೆತಿಹರು
ಪಶುಗಳಾತೆರದಿ ಜೀವನವ ಸಾಗಿಸುತ_
ವಿಷಯದೊಳಿದ್ದಿಹರು ಪೂರ್ಣಜ್ಞ.

೫೦೨

ಪಶುವು ಹಸುರನು ತಿಂದು, ಕಸುವು ತಾ ಪಡೆವಂತೆ
ವಿಷಯ ವಿರಹಿತನ ಮಾಡುತ್ತ ಭಕ್ತಿಯಾ
ರಸವುಣಿಸಿ ಸಲಹು ಪೂರ್ಣಾಜ್ಞ.

೫೦೩

[1]ತುರಿ ಮೇಲೆ ಉಗುರನ್ನು, ಇರಿಸಿದರೆ ಹಿತವಲ್ತೆ?
ಅರಿದರಿದು ವಿಷಯ ಸುಖದಲ್ಲಿ ಬಿದ್ದರವ
ಉರಿಯಪ್ಪಿದಂತೆ ಪೂರ್ಣಾಜ್ಞ.

೫೦೪

ಮಲದೊಡನೆ ಕೈಯಿಕ್ಕಿ, ಹೊಲಸುಗೈದಿರುವಂತೆ
ಕೊಳಕು ಸಂಸಾರದೊಳಗಿದ್ದು ಜೀವಿಪನು
ಮಲವ ಹೊತ್ತಂತೆ ಪೂರ್ಣಾಜ್ಞ.

೫೦೫

ಹೊಲಸು ತಾ ಹೋಗಲ್ಕೆ, ಜಳಕ ಮಾಡಲು ಬೇಕು
ಬೆಳಕು ಬರಲಿಕ್ಕೆ ದೀಪವನು ಹಚ್ಚಿದರೆ
ಬೆಳಕು ಬರದಿಹುದೆ? ಪೂರ್ಣಾಜ್ಞ.

೫೦೬

ಹೊನ್ನನ್ನು ಹೆಣ್ಣನ್ನು, ಮಣ್ಣನ್ನು ಕಚ್ಚಿರುವ
ಅಣ್ಣಗಳು ಶಿವನನ್ನು ಕಾಣುವರೆ? ಇವರು
ಕುನ್ನಿ ಮಾನವರು ಪೂರ್ಣಾಜ್ಞ.

೫೦೭

ವಿಷಯರತಿಯಿರುವಂಗೆ, ವಿಷಕಂಠರತಿಯೆಲ್ಲಿ?
ಮುಸುಕಿರುವ ಮಾಯೆ ಪಟಲವನು ಹರಿಯದಗೆ
ಜಸವೆಲ್ಲಿ? ನೋಡು ಪೂರ್ಣಾಜ್ಞ.

---

೧ ತುರಿ ಎಂದರೆ ಕಜ್ಜಿ.

೫೦೮

ಕಾಮದಿಂ ಕರಗಿರುವೆ, ಕಾಮದಿಂ ಕೊರಗಿರುವೆ
ನೇಮವನು ಬಿಟ್ಟಿರುವೆ ವಿಷಯ ಮೋಹದಿಂ
ಸೋಮಧರ ಪೊರೆಯೊ ಪೂರ್ಣಜ್ಞ.

೫೦೯

ಹಗಲು ಹಸಿವಿನ ಚಿಂತೆ, ಇರುಳು ವಿಷಯದ ಚಿಂತೆ
ಹಗಲಿರುಳು ಶಿವಚಿಂತೆ ಇರದೆ ಬೇದಿಹೆನು
ಸೊಗಸೆಂತು ಎನಗೆ ಪೂರ್ಣಜ್ಞ.

೫೧೦

ಹದ್ದು ಸುಂಗಿದ ಕಾಗೆ, ಬದ್ಧವಾಗಿರುವಂತೆ
ಎದ್ದು ಹಾರಲ್ಕೆ ಬರದಂತೆ ಇಹುದದಕೆ
ಬಿದ್ದಿರುವೆ ಮೋಹದೊಳು ಪೂರ್ಣಜ್ಞ.

೫೧೧

ನಾರಿಯ ವಿಲಾಸವದು, ದಾರಿತಪ್ಪಿಸುವದೈ
ಧೀರತನದಿಂದ ದಾರಿಯಲಿ ನಡೆವವಗೆ
ತೋರುವದು ಸುಖವು ಪೂರ್ಣಜ್ಞ.

೫೧೨

ಮನೆಯ ಕಸವನು ತೆಗೆದು, ಮನವನಿರ್ಮಲಗೈದು
ಧನವ ಸಂಗಳಿಸು ಚಿತ್ಸುಖವ ಪಡೆಯುತ್ತ
ಅನುದಿನವು ಮುದದಿ ಪೂರ್ಣಜ್ಞ.

೫೧೩

[೧]ಉಡುರಸನೆಯೊಳಗೆಲ್ಲ, ಅಡುಗಿಹರು ಹರಿಸುರರು
ಪೊಡವಿಯೊಳು ಬಿದ್ದಿಹರು ತೊಳಲಾಡುತಿಹರು
ಅಡ–ವಿಯೊಳು ನರರು ಪೂರ್ಣಜ್ಞ.

೧ ದುರ್ಭಾವವೆಂಬ ಉಡುವಿನ ನಾಲಗೆಯಲ್ಲಿ. (ಉಡುರಸನೆ–ಅವಿಸವಾಸ)

೫೧೪

[೧]ನೆಲ್ಲುದ್ದ ಮರನೇರಿ, ತಲ್ಲಣಿಸಿದೀಜಗವು
ಅಲ್ಲಿರುವ ಫಲವ ಬಯಸಿಹರು, ಬಿದ್ದಿಹರು
ಹಳ್ಳದಲಿ ನೋಡು ಪೂರ್ಣಜ್ಞ.

೫೧೫

ಕರಣಚೇಷ್ಟೆಯಲಿದ್ದು, ಮರಗಿಮುಳುಗಿಹಜನರು
ಕೊರಗು ನೋಡಿದರೆ ಮತಿಹೀನರಿವರೆಂತು?
ಶರಣರಾಗುವರು, ಪೂರ್ಣಜ್ಞ.

೫೧೬

ಎನ್ನ ಚಿತ್ತವು ಹೊನ್ನು, ಹೆಣ್ಣನ್ನು ಕಾಣುತ್ತ
ಮಣ್ಣ ಬಯಸುತ್ತ ಮುಳುಗಿಹುದು ಭ್ರಮೆಯೊಳು
ನಿನ್ನ ನೆನೆಯದಲೆ ಪೂರ್ಣಜ್ಞ.

೫೧೭

[೨]ಸುರಚಾಪದಂತಿಹುದು, ಅರಿವಿರದ ಈ ತನುವು
ಮರವೆಯಲಿ ಬಿದ್ದು, ಭವತಾಪ ಪಡುತಿಹುದು
ಕರುಣಿಸೈ ಗುರುವೆ, ಪೂರ್ಣಜ್ಞ.

೫೧೮

ಸಣ್ಣತನವ ಹಿಡಿದಿಪ್ಪ ಕುನ್ನಿಮಾನವರಂತೆ
ಬನ್ನದಾ ಸಂಸಾರ ಚಕ್ರದಲ್ಲಿ ಬಿದ್ದು
ನನ್ನಿ ಮರೆತಿಹೆನು ಪೂರ್ಣಜ್ಞ.

೫೧೯

ಮೆತ್ತನೆಯ ಶಯನದಲ್ಲಿ, ಮುತ್ತದಿಂ ಬಿದ್ದಿರುವ
ಹೆತ್ತುಪ್ಪ ಅನ್ನುವನು ತಿಂದು ತೇಗುವಗೆ
ಸತ್ಯ ಸುಖವೆಲ್ಲಿ? ಪೂರ್ಣಜ್ಞ.

---

೧ ಆಶೆಯೆಂಬ ವೃಕ್ಷವನೇರಿ.
೨ ಇಂದ್ರಧನುವಿನ ಹಾಗೆ ತೋರಿ ಅಡಗುವದು.

೫೨೦

ಕರ್ಮಿಬಲ್ಲನೆ ಭಕ್ತಿ? ಚರ್ಮತಿಸ್ನುವ ಸೋಣಗ
ಮರ್ಮವರಿಯುವುದೆ? ಪಾಯಸದ ಸವಿಯನು
ಧರ್ಮವೆಲ್ಲಿಹುದು? ಪೂರ್ಣಜ್ಞ.

೫೨೧

ನಾಲಗೆಯ ಚಪಲಕ್ಕೆ, ಒಳಗಾಗದಿರು ಮತ್ತೆ
ನಾಲಗೆಯ ಹಿಡಿತ ರೋಗಕ್ಕೆ ಔಷಧವು
ಬಾಳಿಂಗೆ ಬೆಳಕು ಪೂರ್ಣಜ್ಞ.

೫೨೨

ಜನರ ವಂಚನೆ ನೋಡಿ, ಮನವು ಕೊರಗಿಹುದಯ್ಯ
ಧನವು ನಶಿಸಿಹುದು ಇದನೋಡಿ ಮರೆಹೊಕ್ಕೆ
ಘನಗುರುವೆ ಸಲಹು ಪೂರ್ಣಜ್ಞ.

## ಗುರುಕಾರುಣ್ಯ ಸ್ಥಲ

(ಅಷ್ಟಾವರಣಗಳು)

೫೨೩

ವೀರಶೈವರು ತಾವು, ವೀರಶಕ್ತಿಯ ಪಡೆದು
ಧೀರತನದಿಂದಷ್ಟಾವರಣದೊಳಗಿರುವ
ಸಾರ ತಿಳಿದಿರಲಿ ಪೂರ್ಣಜ್ಞ.

### ಗುರು

೫೨೪

ಸುರತರುವು ತರುವಲ್ಲ, ಸುರಧೇನು ಪಶುವಲ್ಲ
ಪರುಷ ಪಾಷಾಣದೊಳಗಲ್ಲ ನೋಡಯ್ಯ
ಗುರುವು ನರನಲ್ಲ, ಪೂರ್ಣಜ್ಞ.

೫೨೫

ಒಳಗೆ ಹೊರಗೆಂಬುಭಯು, ಸಂಶಯುವನೆಲ್ಲವನು
ಕಳೆದು, ಗುರುಶಿಷ್ಯ ಸಂಬಂಧ ಬೆಳೆಸಿದರೆ
ತಿಳಿಬೆಳಕು ನೋಡು ಪೂರ್ಣಜ್ಞ.

೫೨೬

ಗುರುವರನ ಪರನೆಂದು, ಅರಿತೊಡವ ನಿಜಶಿಷ್ಯ
ಎರಡೆಂಬ ಭಾವ ತೋರಿದರೆ ಆ ಶಿಷ್ಯ
ನರಾಧಮನಯ್ಯ ಪೂರ್ಣಜ್ಞ.

೫೨೭

ಗುರುವೆನಲು ಕೊರೆಯುವದು, ಜನನಾದಿ ಮೂಲವದು
ಗುರುವೆನಲು ಕಡಿಯುವದು ಭವಮಾಲೆ ನೋಡು
ಗುರು ಧ್ಯಾನ ಮಾಡು ಪೂರ್ಣಜ್ಞ.

೫೨೮

ಗುರುವಿನಿಂದುಪದೇಶ, ಪಡೆದವನು ಬಂಧುಗಳ
ತೊರೆದು ನಿಜ, ಗುರುವೆ, ಜನನಿ–ಜನಕರೆಂದು
ಅರಿಯಬೇಕು ಗಡು ಪೂರ್ಣಜ್ಞ.

೫೨೯

ಗುರುಕರುಣೆ ಪಡೆಯದಲೆ ಅರಿವು ಮೂಡದು ನೋಡು
ಪರಮತದ ತಿರುಳರಿಯದಿಹುದು, ಭವಬಿಡದು
ಗುರುಕರುಣೆ ಬೇಕು ಪೂರ್ಣಜ್ಞ.

೫೩೦

ಅರುಹು ಬಂದಿದೆಎಂದು, ಗುರುವನ್ನು ಜರಿಯದಿರು
ಮರವೆಯೊಳು ನೆರಳುತಿಹ ಭಕ್ತರುದ್ಧರಿಪ
ಗುರುವ ನೆನೆಮನುಜ ಪೂರ್ಣಜ್ಞ.

೫೩೧

ಗುರುವಿರದೆ ಕುರುಹಿಲ್ಲ, ಗುರುವಿರದೆ ಚರನಿಲ್ಲ
ಗುರುವಿರದೆ ಪಾದೋದಕಪ್ರಸಾದಂಗಳ–
ಪರಿಣಾಮವಿಲ್ಲ ಪೂರ್ಣಜ್ಞ.

೫೩೨

ಗುರುವಚನದಿಂದುಂಟು, ಪರಭಕ್ತಿ ವರಮುಕ್ತಿ
ಗುರುವಚನದಿಂದ ಭವಪಾಶ ಹರಿಯುವದು
ಗುರುವಚನ ಬೇಕು ಪೂರ್ಣಜ್ಞ.

೫೩೩

ಗುರುವು ಕರಸ್ಥಲದಲಿ, ಪರಮಶಿವಲಿಂಗವನು
ಕರುಣದಿಂ ನೀಡಿ ಪರಿಭವವ ತಪ್ಪಿಸುತ
ಹರಸುವನು ಮುದದಿ ಪೂರ್ಣಜ್ಞ.

೫೩೪

ಗುರುಚರಣ ಪೂಜಿಸಲು, ಕರಗಳಿಗೆ ಬಲುಶಕ್ತಿ
ಗುರುಚರಣ ನೋಟ ಕಂಗಳಿಗೆ ಶಿವಕಳೆಯು
ಗುರುಚರಣ ನೆನೆಯೊ ಪೂರ್ಣಜ್ಞ.

೫೩೫

[1]ತ್ರಿವಿಧಾದೀಕ್ಷೆಗಳ, ಭವದೂರ ಮಾಡಲ್ಕೆ
ಶಿವಯೋಗಿ ಗುರುವರನು ಮಾಡಿ ಹರಸುವನು
ಭವತಾಪಹಾರಿ ಪೂರ್ಣಜ್ಞ.

೫೩೬

ಗುರುಕೊಟ್ಟ ಲಿಂಗವನು, ಕರದಿಟ್ಟು ಪೂಜಿಸಲು
ಪರಮ ನಿರಂಜನ ಕುರುಹುತೋರುವದಯ್ಯ
ಅರುಹು ಮೂಡುವದು ಪೂರ್ಣಜ್ಞ.

೫೩೭

ಗುರುತಾನು ಪರಿಶುದ್ಧ, ಭರಿತನಾಗಿರಬೇಕು
ಗುರುವಿನೊಳು ನಿಜಭಾವ ನಿಷ್ಕಪಟಗಳಿರಲಾ–
ಗುರುವೆ ನಿಜಗುರುವು ಪೂರ್ಣಜ್ಞ.

೫೩೮

ಗುರುವು ದುರ್ಗುಣಿಯಾಗಿ, ಗುರುವು ವಂಚಕನಾಗಿ
ಧರೆಯೊಳಗೆ ಮೆರೆದು ಜೀವಿಸುವ ಚಟವಿರಲು
ನರಿಗಿಂತ ಕಡೆಯು ಪೂರ್ಣಜ್ಞ.

---

೧ ತ್ರಿವಿಧಾದೀಕ್ಷೆ ಅಂದರೆ: ವೇಧಾ–(ಜ್ಞಾನ), ಮಂತ್ರದೀಕ್ಷೆ, ಕ್ರಿಯಾದೀಕ್ಷೆ, ತ್ರಿವಿಧ ತನುಗಳು, ಸ್ಥೂಲ, ಸೂಕ್ಷ್ಮ, ಕಾರಣ ತನುವಿನಲ್ಲಿ ಮೂಡಿಸುವನು.

## ಲಿಂಗಧಾರಣ ಸ್ಥಲ

೫೩೯

ಲಿಂಗಧಾರಣಮಾಡಿ, ಅಂಗಗುಣಗಳ ಕಳೆದು
ತುಂಗ ಶಕ್ತಿಯನು ಪಡೆಯುವನು ಪೂಜಿಸುತ-
ಲಿಂಗವನು ಮುದದಿ ಪೂರ್ಣಜ್ಞ.

೫೪೦

ಜಗವನೊಳಗೊಂಡಿರುವ, ಶಿವಲಿಂಗ ಕರದೊಳಗೆ
ಸೊಗಸಿನಲಿ ಬಂದಿರಲು ನಿತ್ಯವರ್ಚಿಸುತ
ಅಗಲದಿರಬೇಕು ಪೂರ್ಣಜ್ಞ.

೫೪೧

ಸತ್ತುಚಿತ್ತಾನಂದ, ನಿತ್ಯಪರಿಪೂರ್ಣವಹ
ಸತ್ಯ ಪರವಸ್ತು ಕರದೊಳಗಿದ್ದವಂಗೆ
ಕುತ್ತೆಲ್ಲಿಯದು? ಪೂರ್ಣಜ್ಞ.

೫೪೨

ಲಿಂಗವೆಂಬುದು ಸಚ್ಚಿ-ದಾನಂದ ಪರಿಪೂರ್ಣ-
ವಾಗಿ ಶರಣರಾಹೃದಯದಿ ಬೆಳಗುತಿಹ
ಲಿಂಗ ಜ್ಯೋತಿರ್ಮಯ ಪೂರ್ಣಜ್ಞ.

೫೪೩

ಮಾಡಿದರೆ ತನು ಸವೆದು, ಕೂಡಿದರೆ ಮನವೊಲಿದು
ಹಾಡಿದರೆ ಧನವೊಲಿದು ಲಿಂಗಸ್ತೋತ್ರವ
ಮೂಡುವದು ಲೇಸು ಪೂರ್ಣಜ್ಞ.

೫೪೪

ಲಿಂಗಯ್ಯ ನನ್ನಯ್ಯ, ಮಂಗಗುಣಗಳ ಕಳೆದು
ಕಂಗಳಿಗೆ ಸುಖಶಾಂತಿ ನೀಡಿ ಬದುಕಿಸೈ
ಮಂಗಳಮಯನೆ ಪೂರ್ಣಜ್ಞ.

೫೪೫

ಜ್ಯೋತಿ ಮುಟ್ಟಿದ ಬತ್ತಿ, ಜ್ಯೋತಿಯಾಗುವ ತೆರದಿ
ಜ್ಯೋತಿ ಲಿಂಗವದು ಮುಟ್ಟಿರುವ ಅಂಗವಿದು
ಜ್ಯೋತಿಯಾಗುವದು ಪೂರ್ಣಜ್ಞ.

೫೪೬

ಲಿಂಗಸಂಗದಿ ಶರಣ, ಅಂಗಸಂಗವ ಮರೆದು
ತುಂಗ ನಿಜಭಕ್ತಿಯಿಂ ಪೂಜೆ ಮಾಡುವರೆ
ಲಿಂಗದೊಳು ಬೆರೆವ ಪೂರ್ಣಜ್ಞ.

೫೪೭

ಶಿವಶಿವಾ ಎನ್ನುತ್ತ, ಭವಬೇರುಕಿತ್ತೊಗೆದು
ಶಿವಮೂರ್ತಿ ಪರಬ್ರಹ್ಮಲಿಂಗ ಪೂಜಿಸುತ
ಭವವನೀಗಯ್ಯ ಪೂರ್ಣಜ್ಞ.

೫೪೮

ದೀಕ್ಷೆಗಳು ಮೂರುಂಟು, ಮೋಕ್ಷ ಬಯಸುವಮನುಜ
ದೀಕ್ಷೆಗಳ ಪಡೆದು ಮೂರುಮಲಗಳಳಿಯುತ್ತ
ಮುಕ್ಕಣ್ಣನಪ್ಪ ಪೂರ್ಣಜ್ಞ.

೫೪೯

ಮುಗಿಲುಗಿಂತ ತಾ ಮಿಗಿಯುಗಲವಾಗಿಹುದಯ್ಯ
ಅಗಮ್ಯ ವೆನಿಸಿರ್ಪ ಲಿಂಗವದು ಕರದೊಳಗೆ
ಸೊಗಸಾಗಿಹುದೈ ಪೂರ್ಣಜ್ಞ.

೫೫೦

'ಪ್ರಣವದಾಕಾರದಾ, ಗುಣಮೂರುಮುಟ್ಟದಿಹ'
ಅಣುಮಾತ್ರ ಚಲಿಸದಿಹ ಶಿವಲಿಂಗ ಕರದಿ
ಅಣಿಯಾಗಿಹುದೈ ಪೂರ್ಣಜ್ಞ.

೫೫೧

ಹರಲಿಂಗ ನಿನಗಾಗಿ, ಕರಕಂಜದಲ್ಲಿ ಬಂದು
ಅರುಹು ತೋರಿಹುದು ನಿಜಶಕ್ತಿ ನೀಡಿಹುದು
ಮರಹು ಕಳೆದಿಹುದು ಪೂರ್ಣಜ್ಞ.

## ವಿಭೂತಿ ಸ್ಥಲ

೫೫೨

ಕಾಲನಂ ದಹಿಸುತ್ತ, ಭಾಳನೇತ್ರನ ನೆನೆದು
ಲೀಲೆಯಿಂಭಸ್ಮವನು ಧರಿಸಿದೊಡೆ ಮುಖಕೆ-
ಸೋಲಿಲ್ಲ ನೋಡು ಪೂರ್ಣಜ್ಞ.

೫೫೩

ಧರಿಸಿದೊಡೆ ಭಸ್ಮವನು, ಕರಣಚೇಷ್ಟೆಗಳೆಲ್ಲ
ಪರಿಹಾರವಾಗಿ ಕತ್ತಲೆಯು ಕಳೆಯುವದು
ವರಶಕ್ತಿ ದೊರೆತು ಪೂರ್ಣಜ್ಞ.

೫೫೪

ಭಸಿತವನು ಧರಿಸಿರ್ಪ ಹಸನಾದ ಮುಖದಲ್ಲಿ
ಕಸುವು ತುಂಬುವದು ರೋಗಗಳು ನಶಿಸುವವು
ಮುಸುಕು ಹರಿಯುವುದು ಪೂರ್ಣಜ್ಞ.

೫೫೫

ನಿತ್ಯ ಧರಿಸಲು ಭಸ್ಮ, ಮೃತ್ಯು ಬಾಧೆಯು ತಪ್ಪಿ
ಕುತ್ತುಗಳು ದೂರಾಗಿ ಪಾಪಗಳು ಹೋಗಿ
ಸತ್ಯಸಂಸಿದ್ಧಿ ಪೂರ್ಣಜ್ಞ.

೫೫೬

ಅಸಮಮಹಾಲಿಂಗಕೆ, ಭಸಿತಮಂಧರಿಸಿದೊಡ
ವ್ಯಸನಂಗಳೇಳು ಕಳೆದು ಹೋಗುತ್ತಿಹವು
ಹಸನಹುದು ಹೃದಯ ಪೂರ್ಣಜ್ಞ.

೫೫೭

ಅಡಿಗಡಿಗೆ ಭವಹರನ, ಬಿಡದೆ ನೆನೆಯುತ ಧರಿಸಿ-
ದೊಡೆಭಸ್ಮ, ಭವಹರಿದು ಹೋಗುವದು, ಸುಖವ
ಪಡೆಯುವನುಭರದಿ ಪೂರ್ಣಜ್ಞ.

೫೫೮

ಎಂದೆಂದು ಶಾಶ್ವತವು, ಚಿದ್ಭಸ್ಮಧಾರಣವು
ಬಂಧನವ ಕಳೆಯುವದು, ಆಗುವದು ಮನವು
ಬಂಧುರವು ನೋಡು ಪೂರ್ಣಜ್ಞ.

೫೫೯

ಭಸ್ಮವನು ಧರಿಸಿದೊಡೆ, ಕಶ್ಮಲಂಗಳ ಸುಟ್ಟು
ಭಸ್ಮವಾಗುವವು ಸತ್ವಾದಿಗುಣಮೂರು
ಭಸ್ಮವನುಧರಿಸು ಪೂರ್ಣಜ್ಞ.

೫೬೦

ಚಿದ್ವಿಭೂತಿಯನುಧರಿಸಿ, ಚಿದ್ರೂಪ ನಾಗಯ್ಯ
ಶುದ್ಧ ಭಕ್ತಿಯಿಂ ಲಿಂಗವನು ಪೂಜಿಸುತ–
ಸದ್ಧರ್ಮಿಯಾಗು ಪೂರ್ಣಜ್ಞ.

೫೬೧

ಪ್ರಾರಬ್ಧ ಕರ್ಮಗಳು, ದೂರಪೋಗುವವಿರವೆ,
ಧಾರಣವ ಮಾಡಿದರೆ ಭಸ್ಮವನು ಮುದದೆ
ಸಾರುವದು ಸುಖವು ಪೂರ್ಣಜ್ಞ.

## ರುದ್ರಾಕ್ಷಿ ಸ್ಥಲ

೫೬೨

ರುದ್ರಾಕ್ಷಿಯ ಧರಿಸಿದೊಡೆ, ರುದ್ರ ಶಕ್ತಿಯು ಬಂದಃ
ಛಿದ್ರ ಚಿತ್ತವದು ಪರಿಶುದ್ಧವಾಗುತ್ತ
ಭದ್ರವಾಗುವದು ಪೂರ್ಣಜ್ಞ.

೫೬೩

ಚಿಂತಿತಾರ್ಥವನು, ಚಿಂತಿಸಿದ ಮನುಜರಿಗೆ
ಚಿಂತಾಮಣಿಯಾಗಿಹುದು ರುದ್ರಾಕ್ಷಿ ಜಪವು
ಚಿಂತಿಸುತ ಧರಿಸು ಪೂರ್ಣಜ್ಞ.

೫೬೪

ರುದ್ರಾಕ್ಷವೆಂದರದು, ಚಿದಕ್ಷಿಯಾಗಿಹುದಯ್ಯ
ರುದ್ರಾಕ್ಷ ಧಾರಣೆಯು ಸರ್ವಸಿದ್ಧಿಗದುವೆ
ಭದ್ರಸಾಧನವು ಪೂರ್ಣಜ್ಞ.

೫೬೫

ಭಕ್ತಿ ಸೂತ್ರದೆ ನಿಜದೆ, ಯುಕ್ತಿಯಿಂ ಸರಗೊಳಿಸಿ
ಮುಕ್ತನಾಗಲ್ಕೆ ಧರಿಸಿದರೆ ರುದ್ರಾಕ್ಷಿಯ-
ಶಕ್ತನಾಗುವನು ಪೂರ್ಣಜ್ಞ.

೫೬೬

ರುದ್ರಾಕ್ಷಿಯ ಧರಿಸಿದರೆ, ವ್ಯಾಧಿಗಳುದೂರಾಗಿ
ಬಾಧೆಗಳು ನಶಿಸಿ ಆರೋಗ್ಯ ವರ್ಧನೆಗೆ
ಸಾಧನೆಯು ನೋಡು ಪೂರ್ಣಜ್ಞ.

೫೬೭

ಉರಶಿರದಿ ಧರಿಸುತ್ತ, ಹರನನ್ನು ಸ್ಮರಿಸಿದರೆ
ಮರವೆ ಮರೆಯಾಗಿ ದುರಿತಗಳು ದೂರಾಗಿ
ಅರುಹು ಬರುತಿಹುದು ಪೂರ್ಣಜ್ಞ.

೫೬೮

ರುದ್ರನಯನದಿ ಹುಟ್ಟಿ, "ಬಿದ್ದ ಹನಿಗಳವೆಂದು"
ಶುದ್ಧಾತ್ಮರಂದು ನುಡಿದಿಹರು ರುದಾಕ್ಷಿಗೆ
ಸಿದ್ಧ ಮುನಿಗಳು ಪೂರ್ಣಜ್ಞ.

೫೬೯

ಕೊರಳಲ್ಲಿ ರುದ್ರಾಕ್ಷಿಯು, ಕರದಲ್ಲಿ ರುದ್ರಾಕ್ಷಿಯು
ಉರದಿ ರುದ್ರಾಕ್ಷಿಯ ಧರಿಸುತ್ತ ಜಪಿಸಿದರೆ
ಹರಶಕ್ತಿ ಬರ್ಕು ಪೂರ್ಣಜ್ಞ.

೫೭೦

ಒಂದು ಮುಖ ರುದ್ರಾಕ್ಷಿಯು, ಅಂದದಿಂದರಿಸಿದೊಡೆ
ಬಂಧನವು ಬಯಲಾಗಿ ಸರ್ವಸಿದ್ಧಿಗಳು
ಸಾಧ್ಯವುಂಟೈ ಪೂರ್ಣಜ್ಞ.

೫೭೧

ಹತ್ತು ಮುಖ ಆರು ಮುಖ, ಕತ್ತಿನಲಿ, ಎಂಟು ಮುಖ
ನಿತ್ಯ ಧರಿಸಿದೊಡೆ ಮೂವತ್ತೆರಡು ಮಾಲೆ
ಕುತ್ತು ದೂರಹವು ಪೂರ್ಣಜ್ಞ.

೫೭೨

ಹದಿಮೂರು ಮುಖವಿರುವ, ಹದಿನಾರು ರುದ್ರಾಕ್ಷಿಗಳ
ಮುದದಿ ಮಾಲೆಯನು ಧರಿಸಿದರೆ ತೋಳಿಂಗೆ
ಸದಮಲವು ಸಿದ್ಧಿ ಪೂರ್ಣಜ್ಞ.

೫೭೩

ಮಿತಿಮೀರಿ ಜ್ವರವಿರಲು, ಮೈತುಂಬ ರುದ್ರಾಕ್ಷಿಯು
ಸುತ್ತಿದರೆ ಜ್ವರವೆಲ್ಲ ಹೋಗುವದು ಹೀರಿ
ಸತ್ಯವದು ಸತ್ಯ ಪೂರ್ಣಜ್ಞ.

೫೭೪

ಮರಣದಾ ಕಾಲದೊಳು, ಅರೆದುರುದ್ರಾಕ್ಷಿಯನು
ಬೆರೆಸಿ ನೀರಿನಲಿ ಕುಡಿಸಿದರೆ ಆತನಿಗೆ
ಹರಲೋಕ ಪ್ರಾಪ್ತಿ ಪೂರ್ಣಜ್ಞ.

೫೭೫

ರುದ್ರಾಕ್ಷಧಾರಣೆಯು, ಶುದ್ಧ ಮನುಜರೆಲ್ಲರು
ಶುದ್ಧ ಮನದಿಂ ಧರಿಸಿದರೆ ಸಿದ್ಧಿಪುದು ಪ್ರ
ಬುದ್ಧ ವ್ಯಕ್ತಿತ್ವ ಪೂರ್ಣಜ್ಞ.

೫೭೬

ನೂರೆಂಟು ಸರವುಳ್ಳ, ಸಾರತರ ರುದ್ರಾಕ್ಷಿಯ
ಭೂರಿ ಮಾಲೆಯಿಂ ಜಪಿಸಿದರೆ ಷಡಕ್ಷರವ
ತೋರುವದು ಶಾಂತಿ ಪೂರ್ಣಜ್ಞ.

೫೭೭

ಜಪದಲ್ಲಿ ನೇಮದಲಿ, ತಪದಲ್ಲಿ ಪೂಜೆಯಲಿ
ವಿಪುಲ ನಿಯಮದೊಳು ರುದ್ರಾಕ್ಷಧಾರಣಂ
ಅಪರಿಮಿತ ಶಕ್ತಿ ಪೂರ್ಣಜ್ಞ.

೫೭೮

ಮಂತ್ರದೊಳು ಧರ್ಮದೊಳು, ತಂತ್ರದೊಳು ದಾನದೊಳು
ಯಂತ್ರದೊಳು ಯಾಗದೊಳು ವಿಮಲ ತಾಣದೊಳು
ಇಂತಿರಲಿ ರುದ್ರಾಕ್ಷಿ ಪೂರ್ಣಜ್ಞ.

## ಮಂತ್ರ

೫೭೯

ಮಂತ್ರಶಕ್ತಿಯ ಮುಂದೆ, ತಂತ್ರಗಳಿಗೆಡೆಯಿಲ್ಲ
ತಂತ್ರಕೋಲ್ಮಿಂಚು ಎಲ್ಲಕ್ಕಿಂತ ಬಲುಹಿರಿದು
ಮಂತ್ರ ಮಹಿಮೆಯದು ಪೂರ್ಣಜ್ಞ.

೫೮೦

ಎಲ್ಲ ಮಂತ್ರಗಳಲ್ಲಿ, ಒಲ್ಮೆಯುಪ ಷಡಕ್ಷರವು
ಎಲ್ಲ ಸಿದ್ಧಿಗಳು ಅಡಕವಾಗಿಸವಿಲ್ಲಿ
ಬಲ್ಲವರ ಮಾತು ಪೂರ್ಣಜ್ಞ.

೫೮೧

ಶಿವಮಂತ್ರ ಜಪದಿಂದ, ಶಿವಶಕ್ತಿ ಬೆಳಗುವದು
ಭವವು ದೂರಾಗಿ ಮನವು ಚಿದ್ಘನವಾಗಿ
ಶಿವನೆ ಆಗುವನು ಪೂರ್ಣಜ್ಞ.

೫೮೨

ಶಿವಮಂತ್ರ ಸರಿಯಿರುವ ಆವಮಂತ್ರಗಳಿಲ್ಲ
ಶಿವತತ್ತ್ವಕಿಂತ ಹಿರಿದು ಬೇರೊಂದಿಲ್ಲ
ಶಿವತತ್ತ್ವಮಿಗಿಲು ಪೂರ್ಣಜ್ಞ.

೫೮೩

ಸಪ್ತಕೋಟಿ ಮಂತ್ರಕ್ಕೆ, ಅಪ್ರತಿಮವಾಗಿಹುದು
ಸುಪ್ರಭೆಯ ಕೊಡುತಿರುವ ಷಡಕ್ಷರದಮಂತ್ರ
ಉಪಮಾತೀತವು ಪೂರ್ಣಜ್ಞ.

೫೮೪

ಪರಮ ಪಂಚಾಕ್ಷರವ, ನಿರುತನೆನೆಯುತ್ತಲಿರೆ
ಭರದಿ ಬರುತಿರುವ ಬಿರುಗಾಳಿ ಕಾರ್ಮೋಡ–
ಸರಿಯುವವು ನೋಡು ಪೂರ್ಣಜ್ಞ.

೫೮೫

ಅರಿವು ಆಚಾರಗಳು, ಎರಡು ಒಂದಾಗುವುದೆ
ಪರಮಷಡಕ್ಷರದ ಮಂತ್ರದಾಧ್ಯೇಯವಿದು
ಅರಿದರಿದು ಜಪಿಸು ಪೂರ್ಣಜ್ಞ.

೫೮೬

ಮಂತ್ರವದು ವೇದವೈ, ಮಂತ್ರವದು ಪರಮಸುಧೆ
ಮಂತ್ರದಲಿ ತುಂಬಿಹುದು ಸತ್ಕ್ರಿಯಾಸಿದ್ಧಿ
ಮಂತ್ರವನು ಜಪಿಸು ಪೂರ್ಣಜ್ಞ.

೫೮೭

ಕಿರಿಯಕ್ಕರಂಗಳಲಿ, ಹಿರಿದಾದ ಅರ್ಥವನು
ಪರಮಾರ್ಥವನ್ನು ತೋರುವದು ಸಫಲತೆಯ
ಗುರಿಗೆ ಸಾಧನವು ಪೂರ್ಣಜ್ಞ.

೫೮೮

ಜೀವಭಾವವನಳಿಸಿ, ದೇವಭಾವವನುಳಿಸಿ
ಪಾವನದ ಚಿಚ್ಛಕ್ತಿ ನೀಡುವದು ಮಂತ್ರ
ನೋವು ಕಳೆಯುವದು ಪೂರ್ಣಜ್ಞ.

೫೮೯

ಮಂತ್ರ ಶಬ್ದವದಲ್ಲ, ಮಂತ್ರ ಲಿಂಗ ಪ್ರತೀಕ
ಮಂತ್ರವದು ಪ್ರೇರಕವು ಊರ್ಧ್ವಗಾಮಿಗೆ
ಮಂತ್ರ ಮಧುರಫಲ ಪೂರ್ಣಜ್ಞ.

೫೯೦

ಮಂತ್ರದಿಂ ಷಡೂರ್ಮಿ, ಮಂತ್ರದಿಂ ಷಡ್ವರ್ಗ
ಮಂತ್ರದಿಂ ಷಡ್ಲಿಂಗ ಷಡ್ಭಾವ ಗಳಿಹವು
ಮಂತ್ರಮಹಿಮೆಯದು ಪೂರ್ಣಜ್ಞ.

೫೯೧

ಓಂಕಾರ ಚಿಚ್ಛಕ್ತಿ, ನಕಾರ ಕ್ರಿಯಾಶಕ್ತಿ
ಮಕಾರ ಶಿಕಾರ ಜ್ಞಾನೇಚ್ಛಾ ಶಕ್ತಿಗ-
ಳಾಕಾರವಿಹವು ಪೂರ್ಣಜ್ಞ.

೫೯೨

ವಕಾರವಾದಿಶಕ್ತಿ, ಯಕಾರವೆ ಪರಶಕ್ತಿ
ಅಕ್ಷರಗಳ ಮಹಿಮೆಯಿಂತಿಹುದು ನೋಡಯ್ಯ
ಮೋಕ್ಷಕ್ಕೆ ದಾರಿ ಪೂರ್ಣಜ್ಞ.

೫೯೩

"ಓಂಕಾರ ನಾದಮಯು, ಓಂಕಾರ ಮಂತ್ರಮಯ"
ಓಂಕಾರ ಪರಿಪೂರ್ಣವಾಗಿಹುದು ನೋಡು
ಓಂಕಾರ ಜಪಿಸು ಪೂರ್ಣಜ್ಞ.

೫೯೪

"ಪ್ರಣಮವೆ ಪರಬ್ರಹ್ಮ, ಪ್ರಣವುವೆ ಪರಾವಸ್ತು"
ಪ್ರಣಮವೆ ಪರತತ್ತ್ವ "ಸಿದ್ಧಲಿಂಗ" ನುಡಿಯು
ಪ್ರಣವ ಪರಂಜ್ಯೋತಿ ಪೂರ್ಣಜ್ಞ.

೫೯೫

ಪ್ರಣವ ಮಂತ್ರವ ಜಪಿಸಿ, ಪ್ರಣವ ಪಂಚಾಕ್ಷರವ
ಕ್ಷಣಕ್ಷಣಕು ನೆನೆಸಿದರೆ ಲಭಿಸುವದು ಜವದಿ
ಅಣಿಮಾದಿಸಿದ್ಧಿ ಪೂರ್ಣಜ್ಞ.

೫೯೬

[೧]ಮೂರುತೆರನಾಗಿಹುದು, ಸಾರಷಡಕ್ಷರಜಪವು
ಮಾನಸವು ವಾಚಿಕವು ಉಪಾಂಶುವೆಂದು
ಮಾನಸವೆ ಮುಖ್ಯ ಪೂರ್ಣಜ್ಞ.

---

* ಇತರರೂ ಕೇಳದ ಹಾಗೆ, ತನಗೊಬ್ಬನಿಗೇ ತಿಳಿಯುವಂತೆ ಉಪಾಂಶು ಜಪವು—ತ್ರಿಸಂಧ್ಯಾ ಕಾಲದಲ್ಲಿ ಬಿಟ್ಟುಬಿಡದೆ ಉಚ್ಚರಿಸುವದೇ ಉಪಾಂಶು ಉದಯ ಮಧ್ಯಾಹ್ನ ಸಾಯಂಕಾಲದಲ್ಲಿ.

೫೯೭

ಕಿವಿಯಲ್ಲಿ ಬ್ರಹ್ಮೋಪದೇಶವನು ಪಡೆಯುತ್ತ
ಶಿವಮಂತ್ರ ಜಪಿಸಯ್ಯ ಸದ್ಭಕ್ತಿಯಿಂದ
ಶಿವನೊಲಿವನದಕೆ ಪೂರ್ಣಜ್ಞ.

**ಜಂಗಮ**

೫೯೮

ಜಂಗಮನು ಆದವನು, ಜಗದ ಜಂಜಡವಳಿದು
ತುಂಗ ಶಕ್ತಿಯನು ಪಡೆದವನು ನಿಜವಾದ
ಜಂಗಮನಹನು ಪೂರ್ಣಜ್ಞ.

೫೯೯

ಪಂಚಕ್ಲೇಶಂಗಳನು, ಕೊಂಚವು ಮನದೊಳಿಡದೆ
ಪಂಚ ಮುಖ ಶಿವನ ಜಾನಿಸುತ–ಜೀವಿಸಲು–
ಮಿಂಚುವನು ಜಗದಿ ಪೂರ್ಣಜ್ಞ.

೬೦೦

ಜಂಗಮನೆ ಜಗಭರಿತ, ಜಂಗಮನೆ ಗುಣಭರಿತ
ಜಂಗಮಗೆ ಗುರುವಿನಾಗುರುವು ಎನ್ನುವರು
ಜಂಗಮನೆ ಮೂರ್ತಿ ಪೂರ್ಣಜ್ಞ.

೬೦೧

ಜಿತಕಾಮ ಜಂಗಮರು, ಜಿತಕೋಪವುಳ್ಳವರು
ಜಿತಮೋಹಿ, ನಿರ್ಮಾಯಿ ಸಮವರ್ತಿಯವರು
ಕೃತಶಿವರೂಪರು ಪೂರ್ಣಜ್ಞ.

೬೦೨

ಹೊನ್ನನ್ನು ಹೆಣ್ಣನ್ನು, ಮಣ್ಣನ್ನು ಬಿಟ್ಟಿರುವ
ಮನ್ನಣೆಯ ಪಡೆದಂಥ ಜಂಗಮನ ಇರವು
ಸನ್ನುತಾದರ್ಶ ಪೂರ್ಣಜ್ಞ.

೬೦೩

ಎಲ್ಲರಿಗೆ ಶಿವಜ್ಞಾನ, ಆಳವಡದು ಶಿವಧ್ಯಾನ
ಎಲ್ಲೆಯಿಲ್ಲದವು ಅಳವಟ್ಟವನೆ ಜಂಗಮ
ಎಲ್ಲರರಿದಿರಲಿ ಪೂರ್ಣಜ್ಞ.

೬೦೪

ಜಂಗಮವೆ ಪ್ರಾಣಂದು, ಜಂಗಮವೆ ಜೀವೆಂದು
ಜಂಗಮವೆ ಪುಣ್ಯ ಫಲವೆಂದರಿದವಂಗೆ
ತುಂಗಶಕ್ತಿಯಹುದು ಪೂರ್ಣಜ್ಞ.

೬೦೫

ಲಿಂಗಮುಖ ಜಂಗಮವು, ಜಂಗಮನೆ ಹರನೆಂದು
ಭಂಗತರದಂತೆ ಸರನೆಂದು ಭಾವಿಸದೆ
ಸಂಗರೂಪೆಂದರಿ ಪೂರ್ಣಜ್ಞ.

೬೦೬

ಅರಿವು ಆಚಾರದೊಳು, ಮರೆವತರದಂತಿಹನು
ವರಶಕ್ತಿ ಪಡಕೊಂಡು ಇರುತಿರುವ ಜಂಗಮನು
ಭರಿತಜಂಗಮನು ಪೂರ್ಣಜ್ಞ.

೬೦೭

ಜಂಗಮನು ನಿಜರೂಪು, ಜಂಗಮನು ನಿಜಶಕ್ತಿ
ಜಗಕೆಲ್ಲ ತೋರಿದರೆ ಬೆಳಗುವದು ಭರದಿ
ಜಂಗಮನೆ ಜ್ಯೋತಿ ಪೂರ್ಣಜ್ಞ.

**ಪಾದೋದಕ**

೬೦೮

ಜಂಗಮನ ಪಾದುದಕ, ಭವಗಿರಿಗೆ ವಜ್ರವದು
ಜಂಗಮನ ಪಾದುದಕ ಮನಕೆ ನೀಡುವದು
ತುಂಗಶಕ್ತಿಯನು ಪೂರ್ಣಜ್ಞ.

೭೦೯

ಭಯಭಕ್ತಿಯಿಂದೊಡನೆ, ದಯೆಯುಳ್ಳ ಜಂಗಮನ
ನಿಯಮದಿಂ ಪಾದುದಕ–ಸೇವಿಸಲು ನಿತ್ಯ
ಜಯವುಂಟು ನಿಜದೆ ಪೂರ್ಣಜ್ಞ.

೭೧೦

ಜಂಗಮನ ಪಾದುದಕ, ಲಿಂಗಮುಖದಿಂ ಭಕ್ತ
ನಂಗವನು ಸೇರಿದರೆ ಮುಕ್ತಿಹತ್ತಿರವೆ
ಆಗುವದು ನೋಡು ಪೂರ್ಣಜ್ಞ.

೭೧೧

ಗುರುಪಾದುದಕದಿಂದೆ, ಪರಾತ್ಪರಬೇರಿಲ್ಲ
ವರತೀರ್ಥಂಗಳಿರ್ಪವು ಪರಮರಸಧರಿಸೆ
ಪರಿಣಾಮವಹುದು ಪೂರ್ಣಜ್ಞ.

೭೧೨

ಗುರುಶಿಷ್ಯರೀರ್ವರು, ವಿರಸವಾಗದೆ ತಾವು
ಸರಸದಿಂ ಸಮರಸದಿ ಪಾದುದಕ ಸೇವಿ–
ಸಿರಲು ಸಿದ್ಧಿಯಕ್ಕು ಪೂರ್ಣಜ್ಞ.

೭೧೩

ನೀರೆಂದು ತಿಳಿಯದಿರು, ವರಪಾದುದಕವನು
ನೀರು ಸಂಸ್ಕಾರ ದಿಂದಾಗಿಹುದಯ್ಯ
ಸಾರ ಚಿದ್ರಸವು ಪೂರ್ಣಜ್ಞ.

೭೧೪

*ತ್ರಿವಿಧ ಪಾದುಕದಿಂ, ತ್ರಿವಿಧ ಕರ್ಮಗಳೆಲ್ಲ
ಸವೆದು ಹೋಗುವವು ಜವದಿಂದ ನೋಡಯ್ಯ
ಭವಪಾಶ ನಾಶ ಪೂರ್ಣಜ್ಞ.

---

* ತ್ರಿವಿಧ ಪಾದೋದಕ ಅಂದರೆ, ಗುರುಪಾದೋದಕ, ಲಿಂಗಪಾದೋದಕ, ಜಂಗಮ ಪಾದೋದಕ, ತ್ರಿವಿಧ ಕರ್ಮಗಳೆಂದರೆ ಸಂಚಿತ ಕರ್ಮ, ಪ್ರಾರಬ್ಧಕರ್ಮ, ಆಗಾಮಿ ಕರ್ಮ.

೭೧೫

ಪಾದೋದಕ ಮಹಿಮೆಯು, ಮೇದಿನಿಯೊಳಗೆ ಹರಿದು
ಭೇದ ಭಾವವನು ತೋರಿಸುತ ಬಂಧನವ
ಭೇದಿಪುದು ನೋಡು ಪೂರ್ಣಜ್ಞ.

೭೧೬

ಬಹಿರಂಗ ಪಾದುದಕ, ಸಿದ್ಧಿಸಿದ ಚಿದ್ರಸವು
ಅಂತರಂಗದಾ ಪಾದುದಕ ಉಳಿಯುವದು
ಅಂತರಂಗದೊಳು ಪೂರ್ಣಜ್ಞ.

೭೧೭

ಗುರುಶಿಷ್ಯ ದೀಕ್ಷೆಗಳು, ಹೊರಗಣದು ಇರದಯ್ಯ
ಹೊರವೊಳಗೆ ಎರಕ-ವಾಗುತ್ತ ಆನಂದ-
ದಿರುತಿಪರೊಂದಾಗಿ ಪೂರ್ಣಜ್ಞ.

೭೧೮

ಗುರುಚರಣದಂಗುಲಿಯೊ, ಳಿರುತಿಹವು ತೀರ್ಥಗಳು
ಅರವತ್ತೆಂಟು ಗುರುಪಾದುದಕಿಂತ ಮಿಗಿಲು
ಧರೆಯೊಳಿಲ್ಲವೈ ಪೂರ್ಣಜ್ಞ.

## ಪ್ರಸಾದ

೭೧೯

ಗುರುವಿಂದ ಪಡೆದಿರಲು ಪರಿಶುದ್ಧ ಪ್ರಸಾದ ತಾ-
ನಿರದಾಗುವುದು ಕ್ರಿಯಾಜ್ಞಾನ ಸಂಬಂಧದೆ
ಅರಿತು ಆಚರಿಸು ಪೂರ್ಣಜ್ಞ.

೭೨೦

ಲಿಂಗ ಮುಖದಿಂ ಪಡೆದ ಪ್ರಸಾದವಾಗುವದು
ತುಂಗ "ಸಿದ್ಧಪ್ರಸಾದ" ವಿರದೆ ಅದರಿಂದೆ
ಅಂಗಗುಣನಾಶ ಪೂರ್ಣಜ್ಞ.

೬೨೧

ಜಂಗಮನಿಂ ಪಡೆದಿಹ, ಪ್ರಸಾದವಾಗುವದು
ಮಂಗಲಕರವಪ್ಪಾ "ಪ್ರಸಿದ್ಧ ಪ್ರಸಾದ"
ಸಂಗಸಮರಸದ ಪೂರ್ಣಜ್ಞ.

೬೨೨

ಅನುವರಿತು ಪ್ರಸಾದ–ಸೇವಿಸಲು ತನುಭಾವ
ಮನಂಗಳು ಪರಿಶುದ್ಧಿಯಾಗುತ್ತ ಪ್ರಸಾದ
ಘನವಾಗುವವೈ ಪೂರ್ಣಜ್ಞ.

೬೨೩

ಗುರುಮುಟ್ಟಿ ನೀಡಿರುವ, ವರಸಿದ್ಧಿಯಂತಿರುವ
ವರಪ್ರಸಾದವನು ಲಿಂಗತ್ರಯಕೆ ಕೊಟ್ಟು
ಪರಿಶುದ್ಧನಾಗು ಪೂರ್ಣಜ್ಞ.

೬೨೪

ಪ್ರಸಾದಮೂಲವದು, ವ್ಯಸನವ ಕಳೆಯಲ್ಕೆ
ಹಸನಾಗಿರುಲಿಕೆ ಕಾಯಕವು ಬೆಳೆಯಲ್ಕೆ
ಪ್ರಸಾದ ಮೂಲ ಪೂರ್ಣಜ್ಞ.

೬೨೫

ಧ್ಯಾನವನು ಮಾಡುತ್ತ, ಮೌನವೊಳಗುಂಬುವರು
ಜ್ಞಾನವರ್ಧನೆಯಗೈವುತ್ತ ಜೀವಿಪರು
ಮೌನದಿಂದುಣ್ಣು ಪೂರ್ಣಜ್ಞ.

೬೨೬

ಶುದ್ಧಮನದಿಂದನ್ನ, ಬದ್ಧರಾಗದೆ ಉಂಡು
ಚಿದ್ರಸವ ಪಡೆದು ಚಿತ್ಸುಖಿಯರಾಗುತ್ತ
ಸಿದ್ಧಿಪಡೆಯುವರು ಪೂರ್ಣಜ್ಞ.

೬೨೭

ಬಟ್ಟಲವ ಬೆಳಗದಲೆ, ಖೊಟ್ಟಿಗುಣವ ಬಿಡದೆ
ಬಟ್ಟಲದಿ ಎಡೆಯ ನೀಡಿದರೆ ಶುದ್ಧತೆಯು
ಬಿಟ್ಟು ಹೋಗುವದು ಪೂರ್ಣಜ್ಞ.

೭೨೮

ಹೃದಯದಾಬಟ್ಟಲವ, ಮೊದಲು ತೊಳೆಯದ ಒಳಗೆ
ಉದವಕನು ಮೇಲೆ ಹಾಕಿದರೆ ಬಂತೇನು?
ಹೃದಯ ತೊಳೆಯಯ್ಯ ಪೂರ್ಣಜ್ಞ.

೭೨೯

ಪ್ರಸಾದದಿಂದರಿವು, ಪ್ರಸಾದದಿಂ ಶುದ್ಧಿ
ಪ್ರಸಾದಿ ದೊಳುತವೆ ತ್ರಿಕರಣ ಶುದ್ಧಿಗಳು
ಪ್ರಸಾದಮಹಿಮೆ ಪೂರ್ಣಜ್ಞ.

೭೩೦

ಪೋರೆಯುನು ತೊಳೆಯದಲೆ, ಧರಿಸಿದರೆ ಲಿಂಗವನು
ಆರರಿಯುದಂತೆ ಉಣ್ಣುವ ವಧರೆಯೊಳಗೆ
ಮಾರಿಯುಂತಿಹನು ಪೂರ್ಣಜ್ಞ.

೭೩೧

ಪ್ರಸಾದಿಗಳೆನ್ನುವರು, ಪ್ರಸಾದಮಹಿಮೆಯನು
ಪ್ರಸಾದದಾದಿಯರಿಯದಲಿರುವವರಿಗೆ
ಪ್ರಸಾದ ತರ್ಕ್ಯ ಪೂರ್ಣಜ್ಞ.

೭೩೨

ಅಷ್ಟಮದಗಳ ಕೊರೆದು, ಅಷ್ಟಭೋಗವತೊರೆದು
ಅಷ್ಟಾವಗಣಗಳ ಪೊಂದಿ ಪೂಜಿಸುವದೇ
ಅಷ್ಟವಿಧಾರ್ಚನೆ ಪೂರ್ಣಜ್ಞ.

೭೩೩

ಅಷ್ಟೈಸಿರಿಗಳ ಜರೆದು, ಅಷ್ಟಸಿದ್ಧಿಯ ಮರೆದು
ಕಷ್ಟನಷ್ಟಗಳ ದೂಡಿ ಪೂಜಿಸುವದೇ
ಅಷ್ಟವಿಧ ಪೂಜೆ ಪೂರ್ಣಜ್ಞ.

**ಪಂಚಾಚಾರ**

೬೩೪

ಆಚಾರವಿರಬೇಕು, ಆಚಾರ ಸಂಸ್ಕಾರ
ಆಚಾರ ವೀರಶೈವರಿಗೆಆಧಾರ
ಆಚಾರದೊಳಿರು ಪೂರ್ಣಜ್ಞ.

೬೩೫

ಐದು ಆಚಾರಗಳ, ಸಾಧಿಸಲು ಸುಖವುಂಟು
ಒಂದೊಂದು ಆಚಾರ ಕೊಡುತಿಹುದು ಶಕ್ತಿ
ಅಂದದಿಂ ನಡೆಯೊ ಪೂರ್ಣಜ್ಞ.

**ಲಿಂಗಾಚಾರ**

೬೩೬

ಲಿಂಗಸಿದ್ಧಿಗಿರುವುದು, 'ಲಿಂಗಾಚಾರ'ವು ನೋಡು
ಲಿಂಗೋಪಾಸನೆಯು ಮನುಜನಿಗೆ ನಿಜಸುಖವು
ಲಿಂಗ ಪೂಜಿಸೈ ಪೂರ್ಣಜ್ಞ.

**ಸದಾಚಾರ**

೬೩೭

'ಸದಾಚಾರ' ವತಾನು, ಹದವರಿತು ಮಾಡಿದರೆ
ಸದುವಿನಯ ಬೆಳೆಸಿದರೆ ಉದ್ಯೋಗಿಯಾಗಿ
ಮುದವುಂಟು ಮನಕೆ ಪೂರ್ಣಜ್ಞ.

**ಶಿವಾಚಾರ**

೬೩೮

ಲಿಂಗಾಂಗಿಯಾದವನು, ಲಿಂಗಭೇದವ ಬಿಟ್ಟು
ಲಿಂಗಪೂಜೆಯನು ಗೈವವಗೆ 'ಶಿವಾಚಾರ'
ಸಂಗಳಿಸುವದೈ ಪೂರ್ಣಜ್ಞ.

**ಗಣಾಚಾರ**

೬೩೯

ಶಿವಾಚಾರದ ನಿಂದೆ, ಆವಕಾಲದೊಳಿಂದು
ಕಿವಿಗೆ ಕೇಳದಲಿರಿದಿಹುದೆ ಗಣಾಚಾರ
ಶಿವರೂಪ ತಾಳು ಪೂರ್ಣಜ್ಞ.

**ಭೃತ್ಯಾಚಾರ**

೬೪೦

ಸದುವಿನಯದಿಂದಿದ್ದು, ಮುದದಿ ಸೇವೆಯ ಮಾಡಿ
ಮದವನ್ನು ಕಳೆದು ಭೃತ್ಯಾಚಾರದಿಂದಿರುವವ
ಮುದವ ಪಡೆಯುವನು ಪೂರ್ಣಜ್ಞ.

**ಶಿವಯೋಗ**

೬೪೧

ಶಿವಭಕ್ತಿ, ಶಿವಧ್ಯಾನ, ಶಿವಜ್ಞಾನ, ಶಿವಮಂತ್ರ,
ಶಿವಶಕ್ತಿ ಕೂಡಿರುವ ಲಿಂಗಪೂಜೆಯದು
ಶಿವಯೋಗಗುರಿಯು ಪೂರ್ಣಜ್ಞ.

೬೪೨

ಶಿವನಲ್ಲಿ ಕೂಡುವವ, ಶಿವಯೋಗವಾಗುವದು
ಶಿವಜ್ಞಾನದಿಂದ ಚಿತ್‌ಕಳೆಯು ಚಿತ್‌ಶಕ್ತಿ
ಶಿವಭಕ್ತಿ ಸಾಧ್ಯ ಪೂರ್ಣಜ್ಞ.

**ಶೂನ್ಯ ಸಂಪಾದನೆ**

೬೪೩

ಶೂನ್ಯ ತತ್ವದ ಮುಂದೆ, ಇನ್ನುಂಟೆ ಜಗದೊಳಗೆ
ಶೂನ್ಯವೆಂದರದು ಮಂಗಲದಗಳಿಕೆಯದು
ಸೊನ್ನೆ, ಮಾತ್ರಲ್ಲ ಪೂರ್ಣಜ್ಞ.

೬೪೪

ಶೂನ್ಯ ಸಂಪಾದನೆಯು, ನಿತ್ಯಸತ್ಯದ ಗುರಿಯು
ಆನೆಂಬುದಿಲ್ಲ ಒಳಹೊರಗೆಂಬುದಿಲ್ಲ
ನೀನೆಂಬುದಿಲ್ಲ ಪೂರ್ಣಜ್ಞ.

## ಷಟ್‌ಸ್ಥಲಗಳು

### ಭಕ್ತಸ್ಥಲ

೬೪೫

ಭಕ್ತನಾದೊಡೆ ತಾನು, ಭಕ್ತಿಯಿಂದಿರಬೇಕು
ಭಕ್ತನಾದವನ ನಡೆನುಡಿಯು ಶುದ್ಧವಿರೆ
ಶಕ್ತನಾಗುವನು ಪೂರ್ಣಜ್ಞ.

೬೪೬

ಭಕ್ತನಾದೊಡೆ ಭಯವು, ಯುಕ್ತವಾಗಿರಬೇಕ.
ಭಕ್ತನಾದವನು ಸುವಿಚಾರ ಸತ್ಪಥಾ–
ಸಕ್ತನಿರಬೇಕು ಪೂರ್ಣಜ್ಞ.

೬೪೭

ಭಕ್ತನಿಂತಿರಬೇಕು, ಯುಕ್ತಿಬಿಟ್ಟಿರಬೇಕು
ಭಕ್ತನಾದವನು ತ್ರಿವಿಧ ಭಕ್ತಿಯಲ್ಲಿ
ರಕ್ತನಿರಬೇಕು ಪೂರ್ಣಜ್ಞ.

೬೪೮

ಭಕ್ತಿಯಿಲ್ಲದ ಭಕ್ತ, ಶಕ್ತಿಯಿರದೆ ತಿರುಗುವ
ಭಕ್ತನವ, ಮಧುವಿರದ ಜೇಂಗೊಡದಂತೆ–
ವ್ಯರ್ಥವಾಗುವನು ಪೂರ್ಣಜ್ಞ.

೬೪೯

ಮುಕ್ತಿಪಥ ಪಿಡಿಯದಿಹ, ಭಕ್ತನಾಗುವನೆಂತು?
ವ್ಯಕ್ತನಾಗುವನು ಬೆಳಕಿರದ ಮನೆಯಂತೆ
ಭುಕ್ತನಾಗುವನು ಪೂರ್ಣಜ್ಞ.

೬೫೦
ಕಾಮುವನು ಗೆದ್ದವನು, ನೇಮದಲಿ ಇದ್ದವನು
ಸೋಮಧರನೆನೆದು ಮಾತ್ಸರ್ಯಮುರಿದವನು
ಧೀಮಂತ ಭಕ್ತ ಪೂರ್ಣಜ್ಞ.

೬೫೧
ರಾಗದ್ವೇಷಂಗಳನು, ಭೋಗಮೋಹಂಗಳನು
ಬೇಗದಿಂ ಬಿಟ್ಟು ದುರ್ಗುಣವ ಸುಟ್ಟಿರುವ
ತ್ಯಾಗಿಯಹ ಭಕ್ತ ಪೂರ್ಣಜ್ಞ.

೬೫೨
ಕುಟಿಲ ಭಕುತರ ಕಾಟ, ಪಟುತರವದಾಗಿಹುದು
ಮಟಮಟದ ಮಧ್ಯಾಹ್ನ ಉರಿಬಿಸಿಲಿನಂತೆ
ಕುಟಿಲತನ ಬಿಡಿಸು ಪೂರ್ಣಜ್ಞ.

೬೫೩
ಭಕ್ತನಹ, ಗುರುಲಿಂಗ, ಜಂಗಮುರೊಳಗೆಭೇದ
ಯುಕ್ತಿಯಿಂ ಮಾಡದಿಹ ಭಕ್ತನೇ ನಿಜದ
ಭಕ್ತನಾಗುವನು ಪೂರ್ಣಜ್ಞ.

೬೫೪
ಭಕ್ತಿಯಲಿ ಹಿರಿಕಿರಿದು, ಯುಕ್ತಿಯಲಿ ಮಾಡಿದರೆ
ಭಕ್ತನೆಂತಹನು? ನಿಜನಾದವಂಗೆ
ಭಕ್ತಿಜೀವಾಳ ಪೂರ್ಣಜ್ಞ.

೬೫೫
ಭಕ್ತಿಯಿಂ ನಡೆಯುತಿಹ, ಭಕ್ತನಾ ವಾಸೆಮುಗೆ
ಶಕ್ತಿ ಕೊಡುತಿರುವ ಕೈಲಾಸವಾಗಿಹುದು
ಮುಕ್ತಿಗದು ದಾರಿ ಪೂರ್ಣಜ್ಞ.

೬೫೬
ಭಕ್ತರೇ ಇರುತಿಹರು, ಆತ್ಮಬಂಧುಗಳಂತೆ
ಭಕ್ತರೇ ಸಮಾಜದ ಬೆಳವಣಿಗೆ ಮಾಳ್ಪರೈ
ಭಕ್ತರಾಧಾರ ಪೂರ್ಣಜ್ಞ.

೬೫೭

ಸಟೆಯನಾಡದ ಭಕ್ತ, ಕುಟಿಲವಿರದಿಹ ಭಕ್ತ
ನಿಟಿಲಾಕ್ಷ ಧ್ಯಾನದಲಿ ಸತತವಿರುವವನು
ವಟವೃಕ್ಷದಂತೆ ಪೂರ್ಣಜ್ಞ.

೬೫೮

ಕಪಟ ಭಕುತರನೋಡಿ, ತಪಿಸುತಿದೆಚಿತ್ತವಿದು
ಉಪಕಾರಗೇಡಿ ಭಕ್ತಚಯ ಹೆಚ್ಚಿಹುದು
ಉಪಟಳವ ದೂಡು ಪೂರ್ಣಜ್ಞ.

೬೫೯

ಕುಲಾಕುಲಗಳ ಮಾತು, ಬಲಾಬಲಗಳ ಮಾತು
ಬೆಲೆಯುಳ್ಳ ಭಕ್ತನಾಡಲಾರನೈ
ಸಲುವನು ಸಹಜಕೆ ಪೂರ್ಣಜ್ಞ.

೬೬೦

ಶಿವನಲಾಂಛನಧರಿಸಿ, ಶಿವನದೀಕ್ಷೆಯುಗಳಿಸಿ
ಶಿವನಪೂಜೆಯನು ನಿಷ್ಠೆಯಿಂ ಮಾಡುವವ
ಶಿವಭಕ್ತ ನಿಜದಿ ಪೂರ್ಣಜ್ಞ.

೬೬೧

ಭವಪ್ರೀತಿಯಿರುವವನು, ಭವಭ್ರಾಂತಿ ಬಿಡದವನು
ಶಿವಭಕ್ತನೆಂತು? ಶಿವಶಕ್ತಿ ಪಡೆದವನೆ
ಭವಮುಕ್ತನಹನು ಪೂರ್ಣಜ್ಞ.

೬೬೨

ಭವರೋಗವಿದ್ದವಗೆ, ಶಿವಯೋಗ ಸಮನಿಪುದೆ?
ಭವರಾಗದಲ್ಲಿ ಬಳಲುತ್ತಿರುಗುವಗೆ
ಶಿವಭಕ್ತಿಯೆಲ್ಲಿ? ಪೂರ್ಣಜ್ಞ.

೬೬೩

ಮನವೆಂಬ ನೀರೆರೆದು, ಅರಿವೆಂಬ ಹೂಧರಿಸಿ
ತ್ರಿಣಯನಂ ಪೂಜಿಸುತ ಸೇವೆ ಮಾಡುವವ
ಘನಭಕ್ತನಹನು ಪೂರ್ಣಜ್ಞ.

೬೬೪

ಭಕ್ತನಿಗೆ ಬಡತನವೆ, ನಿತ್ಯನಿಗೆ ಸಾವಿಹುದೆ?
ಭಕ್ತಿಸಾಗರದಿ ಮುಳುಗಿರುವ ಭಕ್ತನಿಗೆ
ಮುಕ್ತಿಕರಗತವು ಪೂರ್ಣಜ್ಞ.

೬೬೫

ಉಂಬಲ್ಲಿ ಉಡುವಲ್ಲಿ, ಕೊಂಬಲ್ಲಿ ಕೊಡುವಲ್ಲಿ
ಜಂಭಕೊಚ್ಚುತ್ತ ಕುಲವನ್ನರಸುವವರು
ಶುಂಭಭಕ್ತರೈ ಪೂರ್ಣಜ್ಞ.

## ಮಾಹೇಶ್ವರ ಸ್ಥಲ

೬೬೬

ಮೋಹವನು ತೊರೆದಾತ, ದಾಹವನು ಕಳೆದಾತ
ಸೋಹಮೆಂಬುದನು ತಿಳಿದಾತ ಸುವಿಚಾರಿ
ಮಾಹೇಶ್ವರನು ಪೂರ್ಣಜ್ಞ.

೬೬೭

ಪರನಾರಿ ನೋಡದೆ ಪರದ್ರವ್ಯ ಬಯಸದಲೆ
ಪರಿಶುದ್ಧನಾಗಿದ್ದು ಲಿಂಗ ನಿಷ್ಠೆಯೊ
ಳಿರುತಿಹನು ನೋಡು ಪೂರ್ಣಜ್ಞ.

೬೬೮

ಹಿಡಿದಿರ್ದವ್ರತಗಳನು, ಬಿಡದೆ ನಡೆಸುವವನು
ಕೆಡುತಿರ್ಪದೇಹವನು ನೆಚ್ಚ ಮನಸಿಂದ
ಕಡುಸುಖದಿರುವನು ಪೂರ್ಣಜ್ಞ.

೬೬೯

ಸಕಲ ಪ್ರಾಣಿಗಳಿಗೆ, ಸೌಖ್ಯಬಯಸುವನಿವನು
ಅಕಳಂಕನಾಗಿದ್ದು ವೀರ ವ್ರತಿಗಳಿಗೆ
ಮುಕುಟಮಣಿಯಾತ ಪೂರ್ಣಜ್ಞ.

೬೭೦

ಮಾಹೇಶ್ವರಾದವನು, ಮೋಹಮಾಯೆಯ ತೊರೆದು
ದೇಹಗುಣಗಳನು ತುಳಿಯುತ್ತ ಕಳೆಯುವನು
ಸಾಹಸದೊಳು ಸಲೆ ಪೂರ್ಣಜ್ಞ.

೬೭೧

ವೀರ ಮಾಹೇಶ್ವರನು, ವೀರವಿರತಿಯಲಿದ್ದು
ಧೀರತನದಿಂದ ಭವಪರನು ತಾನಾಗಿ
ದಾರಿತೋರುವನು ಪೂರ್ಣಜ್ಞ.

೬೭೨

ರಸರೂಪು ಶಬ್ದಗಳ, ವಿಷಯದಾಶೆಯ ಬಿಟ್ಟು
ರಸಕೆರಸವಾದ ಶಿವಸುಖದಿ ಮನವಿಟ್ಟು
ಮಸುಕು ಕಳೆಯುವನು ಪೂರ್ಣಜ್ಞ.

೬೭೩

ಲಿಂಗದರ್ಶನೆ ಧರ್ಮ, ಲಿಂಗದರ್ಶಕ ಧರ್ಮಿ
ಲಿಂಗಾರ್ಚನೆಯು ಮುಂದೆ ಮತ್ತಿಲ್ಲ ಧರ್ಮ
ಲಿಂಗವೇ ಎಲ್ಲ ಪೂರ್ಣಜ್ಞ.

೬೭೪

ಪರದಾರ ಹುಸಿಕಳವು, ಪರಹಿಂಸೆ ಬಿಟ್ಟವನು
ವರಲಿಂಗದಲ್ಲಿ ಮನವಿಟ್ಟು ನಡೆದವನು
ಪರಮಮಾಹೇಶ ಪೂರ್ಣಜ್ಞ.

೬೭೫

ತ್ರಿವಿಧಲಿಂಗಕ್ಕೆ ತವೆ ತ್ರಿವಿಧ ರೀತಿಯಲಿ ತಾ–
ತ್ರಿವಿಧ ಮಲಗಳ ಕಳೆದು ಪೂಜೆಗೈಯ್ಯುವವ
ಶಿವಯೋಗಿಯಾತ ಪೂರ್ಣಜ್ಞ.

೬೭೬

ಶ್ರೀಗಂಧ ಸದ್ಭಕ್ತನಾಗುವನು, ರಸರೂಪ
ನಾಗುವನು ಮಾಹೇಶ ರಸಸಿದ್ಧಿ ಪಡೆದು
ಯೋಗಿಯಾಗುವನು ಪೂರ್ಣಜ್ಞ.

೬೭೭

ಮಿಥ್ಯೆ ಮೋಹವ ಕಳೆದು, ಸತ್ಯತತ್ವವ ತಳೆದು
ತತ್ವಬೆಳೆಯುನ್ನು ಹುಲುಸಾಗಿ ತೆಗೆದು
ನಿತ್ಯಸೇವಿಸುವ ಪೂರ್ಣಜ್ಞ.

೬೭೮

ಮಾಹೇಶ್ವರನ ಮಾತು, ದೇಹಶುದ್ಧಿಗೆ ಸುಧೆಯು
ರಾಹುಹಿಡಿದವಗೆ ಚಿಜ್ಜ್ಯೋತಿಯಾಗುವನು
ಮೋಹ ಮಳಿಸುವನು ಪೂರ್ಣಜ್ಞ.

೬೭೯

ಮೂಢಬುದ್ಧಿಯ ಕಳೆದು, ಗೂಢತತ್ವವ ತಿಳಿದು
ಗಾಢನಿದ್ರೆಯನು ಕಳೆಯುತ್ತ ಬೆಳಗುವನು
ನಾಡಿಗೀಶನಾಗಿ ಪೂರ್ಣಜ್ಞ.

೬೮೦

ನೀಚವೃತ್ತಿಯಲಿದ್ದು, ಆಚಾರ ವಿಹೀನನು
ದೋಚುವವ ಪರರ ದ್ರವಿಣವನು ಯುಕ್ತಿಯಿಂ
ನೀಚನೆನಿಸುವನು ಪೂರ್ಣಜ್ಞ.

೬೮೧

ಲಿಂಗ ಮಾತ್ರವ ಧರಿಸಿ, ಅಂಗಗುಣ ಕಳೆಯದಲೆ
ಜಂಗಮನು ನಾನೆಂದು ಬೀಗಿದರೆ ತಮದಿ-
ಸಂಗನೊಲಿವೆಂತು? ಪೂರ್ಣಜ್ಞ.

೬೮೨

ಲಿಂಗನಿಷ್ಠೆಯಲಿದ್ದು, ಲಿಂಗವೇ ಪ್ರಾಣಾಗಿ
ಲಿಂಗಸುಖದಲ್ಲಿ, ಬೆಳಗುತಿಹ ಮಾಹೇಶನು
ಲಿಂಗಭೋಗಿಯಾತ ಪೂರ್ಣಜ್ಞ.

೬೮೩

ಕುಲಜಾತಿ ನೋಡದಲೆ, ಛಲದಿಂದ ಜೀವನವ
ಬೆಳಕು ತೋರಿಸುತಲಿರುವವನು ಸುಮಹೇಶ
ಒಳಹೊರಗೆನ್ನದೆ ಪೂರ್ಣಜ್ಞ.

೬೮೪

ಅನ್ಯದೇವರಕಡೆಗೆ, ತನ್ನ ಮನವಿಡಲಾರ
ತನ್ನದೆಲ್ಲವನು ಲಿಂಗಯ್ಯಗೊಪ್ಪಿಸುತ–
ಧನ್ಯನಾಗಿಹನು ಪೂರ್ಣಜ್ಞ.

## ಪ್ರಸಾದಿ ಸ್ಥಲ

೬೮೫

ಶಿವನ ಸುಪ್ರಸಾದವನು, ಭವಹರಂಗರ್ಪಿಸುತ
ಶಿವಭಾವ ಪಡೆಯುತ್ತ ಒಡಲಾಸೆ ಬಿಟ್ಟು
ಭವವದೂಡುವನು ಪೂರ್ಣಜ್ಞ.

೬೮೬

ಪ್ರಸಾದಿಯಾದವನು, ಕಸವಿಸಿಯ ಬಿಡಬೇಕು
ಪ್ರಸಾದದ ಭಾವನೆಯು ತುಂಬಿರಲು ಮನದಿ
ಕಸುವು ಕೊಡುತಿಹುದು ಪೂರ್ಣಜ್ಞ.

೬೮೭

ಅನ್ನಶುದ್ಧಿಯ ಬಲದಿ, ಧನ್ಯನಾಗುವನಯ್ಯ
ಅನ್ನ ಜಗಕೆಲ್ಲ ಆಧಾರವಾಗಿಹುದು
ಬನ್ನ ಕಳೆಯುವುದು ಪೂರ್ಣಜ್ಞ.

೬೮೮

ಮುನ್ನ ಮಾಡಿದ ಪಾಪ, ಅನ್ನವದು ಕಳೆಯುವದು
ತನ್ನ ತನವರಿದು ಲಿಂಗಕ್ಕರ್ಪಿಸುತಿಹ
ಅನ್ನ ಬಲುಶುದ್ಧ ಪೂರ್ಣಜ್ಞ.

೬೮೯

ರೋಗ ಹರಣವ ಮಾಡಿ, ರಾಗರಹಿತನ ಮಾಡಿ
ಭೋಗಮೋಕ್ಷಗಳ ನೀಡುವದು ಶುದ್ಧಾನ್ನ
ತ್ಯಾಗವನು ಮುದದಿ ಪೂರ್ಣಜ್ಞ.

೬೯೦

ವಿದ್ಯೆಯನು ವರ್ಧಿಪುದು, ಬುದ್ಧಿಯನು ಬೆಳೆಸುವದು
ಬದ್ಧಜೀವಿಗಳ ಜ್ಞಾನ ಕಳೆಯುವದು
ಶುದ್ಧಪ್ರಸಾದ ಪೂರ್ಣಜ್ಞ.

೬೯೧

ತೊಳಗುವದು ತನುತ್ರಯ, ತೊಳಗುವದು ಕರಣಗಳ
ತೊಳಗಿಬೆಳಗುವದು ಸಿದ್ಧಪ್ರಸಾದದಿಂ
ಬೆಳಕು ಬರುತಿಹುದು ಪೂರ್ಣಜ್ಞ.

೬೯೨

ರುಚಿಯದನು ಪ್ರಾಣದಾ, ಲಿಂಗಕ್ಕೆ ಅರ್ಪಿಸಲು
ಸಿದ್ಧಪ್ರಸಾದಿಯೆನಿಸುವನು ನೋಡಯ್ಯ
ಸಿದ್ಧನೆನಿಸುವನು ಪೂರ್ಣಜ್ಞ.

೬೯೩

ತೃಪ್ತಿ ಭಾವವ ಬಿಡದೆ, ಅರ್ಪಿಸಲು ಲಿಂಗಕ್ಕೆ
ದೀಪ್ತಿ ದೊರೆಯುವದು ಪ್ರಸಿದ್ಧಪ್ರಸಾದದಿ
ಪ್ರಾಪ್ತಿ, ಶಾಂತಿಯದು ಪೂರ್ಣಜ್ಞ.

೬೯೪

ಪ್ರಸಾದಿಯಾದವಗೆ, ಹಸನಾದ ಮನವಿಹುದು
ಪ್ರಸಾದಿಯಾದವಗೆ ಅರಿವು ಚನ್ನಿಹುದು
ಪ್ರಸಾದಿಯು ಮುಕ್ತ ಪೂರ್ಣಜ್ಞ.

೬೯೫

ಒಳಗೆ ತೊಳೆಯುವ ಹೊರಗೆ, ತೊಳೆದುಕುಡಿದರೆ ತನಗೆ
ಕಳವಳವು ಬಿಡದು ಶುದ್ಧಿಯಿರದ ನದಿಯಲಿ
ಮುಳುಗಿದರೇನುಂಟು? ಪೂರ್ಣಜ್ಞ.

೬೯೬

ಹಾಡಿದರೆ ಹಾಡುವೆನು, ನೋಡಿದರೆ ನೋಡುವೆನು
ಬೇಡಿದರೆ ಬೇಡುವೆನು ಪರಮಪ್ರಸಾದವ
ಕೊಡುವೆನು ಅಲ್ಲಿ ಪೂರ್ಣಜ್ಞ.

೬೯೭

ಗರಿಯ ಕಟ್ಟಿದ ಕೋಲು, ಗುರಿಯತಾಗಬಹುದೇ?
ಗುರುಲಿಂಗ ಜಂಗಮ ಪ್ರಸಾದವರಿಯದೆ
ಪರಮನಂಕಾಣ? ಪೂರ್ಣಜ್ಞ.

೬೯೮

ಶಿವನಧ್ಯಾನವ ಮಾಡಿ, ಸೇವಿಸಿದ ಪ್ರಸಾದವು
ಶಿವನ ಪ್ರಸಾದ ವಾಗುವದು ನೋಡಯ್ಯ
ಭವಹರಣವಲ್ಲಿ ಪೂರ್ಣಜ್ಞ.

೬೯೯

ತುತ್ತಿತುತ್ತಿಗೆ ಒಮ್ಮೆ, ನಿತ್ಯನೆನೆಯದೆ ಉಂಡು
ಹೊತ್ತುಗಳೆಯುತ್ತಲಿರುವವನು ಕರ್ಮದಾ-
ಕತ್ತಲೆಯಲಿರುವ ಪೂರ್ಣಜ್ಞ.

## ಪ್ರಾಣಲಿಂಗಿ ಸ್ಥಲ

೭೦೦

ಪ್ರಾಣಲಿಂಗಿಗೆ ಲಿಂಗ, ಪ್ರಾಣವೇ ಆಗಿರಲಿ
ಸ್ವಾನುಭವವಿರಲಿ ಸಚ್ಚಿದಾನಂದ
ಪೂರ್ಣವಾಗಿರಲಿ ಪೂರ್ಣಜ್ಞ.

೭೦೧

ಎರಡಳಿದು ಒಂದಾಗಿ, ಅರುಹಿನಾ ರೂಹುತಾ
ಅರಿದಿರುವ ಪ್ರಾಣಲಿಂಗದಾ ಘನದಲ್ಲಿ
ನಿರತರಿಹರವರು ಪೂರ್ಣಜ್ಞ.

೭೦೨

ಪ್ರಾಣಲಿಂಗಾರ್ಚನದ, ಸ್ಥಲವನರಿಯದೆ ಬರಿದೆ
ಜ್ಞಾನಿರದೆ ಮಾಡಿದರೆ ಪ್ರಾಣಲಿಂಗಿಗಳೆ?
ಧ್ಯಾನಬಲಿಯುವದೆ? ಪೂರ್ಣಜ್ಞ.

೭೦೩

ಪ್ರಾಣಲಿಂಗಿಯು ತಾನು, ಸ್ಥಾವರದ ಲಿಂಗವನು
ಮನದಲ್ಲಿ ತರದೆ ಪೂಜಿಸಲು ಲಿಂಗವನು
ಪ್ರಾಣಲಿಂಗಿಯುಹ ಪೂರ್ಣಜ್ಞ.

೭೦೪

ನಿಜಪ್ರಾಣಲಿಂಗಿಯೂ ತಾ, ನಿಜವರಿದುಲಿಂಗವನು
ಭಜಿಸುತ್ತ ಸಮರಸವ ಪಡೆದಾತನವನೆ
ನಿಜಪ್ರಾಣಲಿಂಗಿ ಪೂರ್ಣಜ್ಞ.

೭೦೫

ಪ್ರಾಣಕ್ಕೆ ಪಾಣವಿರೆ, ಪ್ರಾಣಲಿಂಗವು ಅದುವೆ
ತ್ರಾಣ ಜೀವಕ್ಕೆ ಸಮರಸವು ಭಾವಕ್ಕೆ
ಕಾಣುವದು ನೋಡು ಪೂರ್ಣಜ್ಞ.

೭೦೬

ಬೆಳಗು ಕತ್ತಲೆ ನುಂಗಿ, ಒಳಗೆ ತಾನೊಬ್ಬನೇ
ಉಳಿದು, ಸಂಶಯುವನಳಿಯುತ್ತ ಸಮರಸದಿ
ಬೆಳಗುವನು ಮುಂದದಿ ಪೂರ್ಣಜ್ಞ.

೭೦೭

ದೇಹದೇಗುಲದೊಳಗೆ ಸಿಂಹಾಸನವಮಾಡಿ
ಮೋಹವನು ತೊರೆದು ಚಿಜ್ಞಲದೆ ಮಿಂದವಗೆ
ರೂಹುಕಾಣುವದು ಪೂರ್ಣಜ್ಞ.

೭೦೮

ತನುಲಿಂಗ ವಾಗ್ಲಿಂಗ ಮನಲಿಂಗವಾದವಗೆ
ಘನಭಾವಲಿಂಗವಾಗಿರುವ ಪ್ರಾಣಲಿಂ-
ಗಿನ್ನುಂಟೆ ಪ್ರಳಯು? ಪೂರ್ಣಜ್ಞ.

೭೦೯

ಪ್ರಾಣಲಿಂಗವು ನೋಡು, ಶಿವಶಕ್ತಿಸಂಪುಟವು
ಪ್ರಾಣತ್ರಾಣಗಳ ಸಂಗಡಣ ಜ್ಞಾನಮಯ
ಪ್ರಾಣಲಿಂಗಿಯುವ ಪೂರ್ಣಜ್ಞ.

**ಶರಣಸ್ಥಲ**

೭೧೦

ಹಿಡಿದ ನಿಯಮವಬಿಡನು, ನಡೆನುಡಿಯು ಒಂದಿರುವ
ದೃಢಶಕ್ತಿ ಪಡೆದು ಭವಬಾಧೆಕಳೆದಿರುವ
ಮೃಡರೂಪ ಶರಣ ಪೂರ್ಣಜ್ಞ.

೭೧೧

ನಿಂದಕರ ನುಡಿಗವನು, ಕುಂದುವವನಲ್ಲಯ್ಯ
ಬಂಧುರವ ಜೀವನವ ನಡೆಸುತ್ತ ಶರಣ
ಸಂದೇಹದಿರನು ಪೂರ್ಣಜ್ಞ.

೭೧೨

ಹಣೆಯಲ್ಲಿ ಭಸ್ಮವನು, ಮಣಿಮಾಲೆಕರದಲ್ಲಿ
ಮನದಲ್ಲಿ ಭವಮಾಲೆ ಧರಿಸಿ ತಿರುಗುವವ
ಜನಮೆಚ್ಚರೆಂತು? ಪೂರ್ಣಜ್ಞ.

೭೧೩

ಶರಣನಾದವ ತಾನು, ಪರಿಶುದ್ಧದಿರುತಿಹನು
ಶರಣನೆಂದಿಗೂ ಹಂಗಿಗೊಳಗಿರಲಾರ
ಶರಣನಿರ್ಭಯನು ಪೂರ್ಣಜ್ಞ.

೭೧೪

ಜಗದಾಟದಲ್ಲಿರದೆ, ಜಗದೊಳಗೆ ಮೆರೆಯುವನು
ಅಗಣಿತದ ಸುಖದಲ್ಲಿ ನಿಜಶರಣನಾಗಿ
ಸೊಗವ ಪಡೆಯುವನು ಪೂರ್ಣಜ್ಞ.

೭೧೫

ಶರಣರಿರುತಿಹವಾಸ, ಶರಣರಿರುತಿಹ ಕ್ಷೇತ್ರ—
ಶರಣರಿದ್ದಲ್ಲಿಯೆ ಸಕಲತೀರ್ಥಂಗಳೈ
ಹರುಷಕೊಡುತಿಹರು ಪೂರ್ಣಜ್ಞ.

೭೧೬

ಸತಿ ತನ್ನ ಪತಿಯಲ್ಲಿ, ರಕ್ತಿಯಿಂದಿರುವಂತೆ
ಪತಿಯೆಲಿಂಗೆಂದು ಸತಿತಾನೆನ್ನುತ್ತ ಸಮ-
ರತಿಯಿಂದಿರುವನು ಪೂರ್ಣಜ್ಞ.

೭೧೭

ಅಣುವಾದ ಅಂಗಸುಖ ಕಂಗಲಾಚದೆ ಇರುವ
ತಣವೀವ ಲಿಂಗಾಮೃತವನ್ನು ಕುಡಿದು ಸದ್
ಗುಣಸಿರಿಯು ಪಡೆವ ಪೂರ್ಣಜ್ಞ.

೭೧೮

ಶಿವಕಾಯುವಾದಾತ, ಶಿವಶರಣನಾಗುವನು
ಶಿವಜ್ಞಾನವುಳ್ಳವನೆ ಶಿವಶರಣನಾತ
ಶಿವಭಾವಭರಿತ ಪೂರ್ಣಜ್ಞ.

೭೧೯

ಅಂಗಚಾರಿಯು ಶರಣ, ಲಿಂಗಸುಖದಲ್ಲಿರುವ
ಲಿಂಗ ಪ್ರಸಾದಿ ನಿಜಶರಣನಾಗುತ್ತ
ಸಂಗನೊಳಗಿರುವ ಪೂರ್ಣಜ್ಞ.

೭೨೦

ತನುಶುಚಿಯು ಇರದವರು, ಮನಶುಚಿಯು ಇರದವರು
ಧನಶುಚಿಯು ಇರದೆ ಶರಣರೆಂತಾಗುವರು?
ಜ್ಞಾನವಿರದವರು? ಪೂರ್ಣಜ್ಞ.

೭೨೧

ಶರಣಂಗೆ ನಂದನವು, ಶರಣಂಗೆ ಚೇತನವು
ಶರಣಂಗೆ ಲಿಂಗ ಪೂಜೆಯುದು ಜೀವನವು
ಶರಣಭವಹರಣ ಪೂರ್ಣಜ್ಞ.

೭೨೨

ಶರಣಸತಿ ಲಿಂಗಪತಿ, ಶರಣನಿಗೆ ಜೀವಾಳ
ಶರಣನಾಭಾವ ಬಾಳೆಲ್ಲ ಪರಮಮೇಳ
ಕರುಣಕಾಸಾರ ಪೂರ್ಣಜ್ಞ.

೭೨೩

ಅರಿತು ಜೀವಿಪ ಶರಣ, ಮರೆತು ಇರಲಪಮಾನ
ಶರಣ ನೆನೆಸುವೊಡೆ, ಜನನ ಮರಣದ ಬಾಧೆ
ಸರಿಸಿರುವನವನು ಪೂರ್ಣಜ್ಞ.

೭೨೪

ಶರಣ ಜೀವನವಿಹುದು, ಪರಿಪೂರ್ಣಸಾಧನೆಯು
ಶರಣಜೀವನವು ಆಕಾಶದೆತ್ತರವು
ಶರಣ ನಿಸ್ವಾರ್ಥಿ ಪೂರ್ಣಜ್ಞ.

೭೨೫

ಶರಣನದು ಸಂಪೂರ್ಣ, ಸರಸಮಯ ಜೀವನವು
ಶರಣ ಸಂಸ್ಫುರಣ ಚಿತ್ಕರಣ ನಾಗಿಹನು
ಶರಣಭವಹರಣ ಪೂರ್ಣಜ್ಞ.

೭೨೬

ಶರಣಶಿವ ಸಂಸಾರಿ, ಶರಣ ವಿಭವ ವಿಹಾರಿ
ಶರಣನದು ಸರ್ವಸ್ವ ಅರ್ಪಣವು ನೋಡು
ಶರಣಸುಯಿಧಾನಿ ಪೂರ್ಣಜ್ಞ.

೭೨೭

ತೆರಹಿರದ ನಡೆನುಡಿಯು, ತೆರಹಿರದಸ್ವಾನುಭವ
ತೆರಹಿರದ ಮಹಿಮೆ ತೋರುವದು ಶರಣಂಗೆ
ಪರಮ ಸುವಿರಕ್ತಿ ಪೂರ್ಣಜ್ಞ.

೭೨೮

ಶರಣಾಂಗ ಅದು ಒಂದು, ಅರಮನೆಯು ಇರುತಿಹುದು
ಶರಣಸತಿ ಲಿಂಗಪತಿ ಹೃದಯ ಮಂಟಪವು
ತೆರೆದ ಕಣ್ಗೋಚರ ಪೂರ್ಣಜ್ಞ.

೭೨೯

ನ್ಯಾಯನಿಷ್ಠುರಿ ಶರಣ, ಮಾಯೆಯ ವೈರಿ ಶರಣ
ಕಾಯ ಗುಣಂಗಳ ಸಂಹಾರಿ ನಿಜಶರಣ
ಕಾಯಚಾರಿಯವ ಪೂರ್ಣಜ್ಞ.

೭೩೦
ಕೋಟಿಗೊಬ್ಬನು ಶರಣ, ನಾಟ್ಯವಾಡುತಶಿವನ
ಕೂಟದೊಳು ಬೆರೆದು ಶಿವಜ್ಞಾನಿಯಾಗಿಹನು
ನೋಟಿವನಶುದ್ಧ ಪೂರ್ಣಜ್ಞ.

## ಐಕ್ಯಸ್ಥಲ

೭೩೧
ತಾನೆತಾನಾದವನು, ಮೌನಿಯಾಗಿರುತಿಹನು
ಜ್ಞಾನದೊಳು ಪೂರ್ಣನಾಗಿದ್ದು ಲಿಂಗದೊಳು
ಲೀನನಾಗುವನು ಪೂರ್ಣಜ್ಞ.

೭೩೨
ಲಿಂಗಭಾವವತಳೆದು, ಅಂಗಗುಣಗಳನಳಿದ
ಲಿಂಗೈಕ್ಯ ನಿರಂಜನ ನಾದವಗೆ, ಭೇದ-
ಭಂಗವೆಲ್ಲಿಹುದು ಪೂರ್ಣಜ್ಞ?

೭೩೩
ಉರಿಯಕರ್ಪೂರದಂತೆ, ಭರದಿಲಿಂಗಧಿಕೂಡಿ
ಎರಡಳಿದು ಒಂದಾಗಿ ತಾನೆತಾನಾಗಿ
ಇರುತಿಹನು ನೋಡು ಪೂರ್ಣಜ್ಞ.

೭೩೪
ಲಿಂಗವನು ನೆನೆನೆನೆದು, ಲಿಂಗವೇ ತಾನಾಗಿ
ಮಂಗಳಾತ್ಮಕನಾಗುತ್ತ ನಿಜದ
ಲಿಂಗೈಕ್ಯನಹನು ಪೂರ್ಣಜ್ಞ.

೭೩೫
ಆರುಲಿಂಗಗಳೆಲ್ಲ, ಆರುಸ್ಥಲಗಳೆಲ್ಲ
ಬೇರಿಲ್ಲದಂತೆ ಬೆರೆತಿಹವು ಐಕ್ಯದಿ
ನೀರ ನೀರಂತೆ ಪೂರ್ಣಜ್ಞ.

೭೩೬

ಕಾಯದೊಳಗಣ ಜೀವ, ತೋಯದಂತಿಹುದಯ್ಯ
ಕಾಯವದು ಮಾಯಾಗಿ ಬೆಳಗುತಾ ಬರಲು
ಕಾಯನಿರವಯವು ಪೂರ್ಣಜ್ಞ.

೭೩೭

[೧]ಊರೊಳಗಿರುತಿರುವ, ಆರುಮಂಟಪದಲ್ಲಿ
ಮೂರು ಕೋಣೆಗಳು ಕಟ್ಟಿಹವು ಒಂದಾಗಿ
ಸಾರಲಿಂಗದೊಳು ಪೂರ್ಣಜ್ಞ.

೭೩೮

[೨]ಚಿತ್ತದೊಳಗಣವಸ್ತು, ಮುತ್ತಿನಂತಿಹುದಯ್ಯ
ಚಿತ್ತೆಚಿಪ್ಪಾಗಿ, ಮುತ್ತನ್ನು ಬೆರೆಸಿದರೆ
ನಿತ್ಯತ್ವಪದವು ಪೂರ್ಣಜ್ಞ.

೭೩೯

[೩]ಸಿರಿಯ ಸೀರೆಯನುಟ್ಟು, ತರುಣಿಯೈವರು ಹೋಗಿ
ಉರಿಯಪುರುಷನೊಳು ಸೇರುತ್ತ ಕೂಡಿದರು
ಪರಮಶಿವನೊಳಗೆ ಪೂರ್ಣಜ್ಞ.

೭೪೦

[೪]ಯಾರಿರದ ಮನೆಯಲ್ಲಿ, ಮಾರಾರಿಯೊಬ್ಬಿಹನು
ಬೇರಾಗಿ ಇರದ ಲಿಂಗಸಮರಸದಲ್ಲಿ
ತೋರುವನು ನೋಡು ಪೂರ್ಣಜ್ಞ.

---

೧ ಊರೊಳಗೆ ಅಂದರೆ, ದೇಹದಂತರಂಗದಲ್ಲಿ, ಆರುಮಂಟಪ ಅಂದರೆ, ಷಟ್ಚಕ್ರಗಳಿರುವಂತಹದ್ದನ್ನು—ಮೂರುಕೋಣೆಗಳು ಅಂದರೆ, ತನುತ್ರಯಗಳು.

೨ ವಸ್ತು ಅಂದರೆ, ಪರಬ್ರಹ್ಮ. ಮನಸ್ಸೆಂಬ ಚಿಪ್ಪಿನಲ್ಲಿ ಪರಬ್ರಹ್ಮವೆಂಬ ಮುತ್ತನ್ನು ಬೆರೆಸಿದರೆ.

೩ ಶಿವಜ್ಞಾನ ಸನ್ನಿಹಿತವಾದ ಸತ್ಕ್ರಿಯಾಚಾರವೆಂಬ ಅಂಬರವನು ಉಟ್ಟು, ಐವರು ತರುಣಿಯರು ಅಂದರೆ, ಪಂಚವಿಧ ಶಕ್ತಿಯರು ಉರಿಯ ಪುರುಷನೊಳು ಸೇರುತ್ತ ಅಂದರೆ, ಬೆಂದಾಗ್ನಿ ಸ್ವರೂಪವಾದ ಪ್ರಾಣಲಿಂಗದಲ್ಲಿ ಕೂಡಿದರು ಪರಮಶಿವನೊಳಗೆ.

೪ ನಾದಬಿಂದು ಶಿವಶಕ್ತಿ ಅಷ್ಟತನುಗಳು ಬ್ರಹ್ಮವಿಷ್ಣ್ವಾದಿಗಳು ಇವರಾರೂ ಉಂಟಾಗಿಲ್ಲದ ಮನೆಯಲ್ಲಿ ಮಾರಾರಿಯೊಬ್ಬನೆಂದರೆ, ಮನ್ಮಥಧ್ವಂಸಿಯಾದಂಥ ಪರಶಿವಲಿಂಗವು, ಬೇರಾಗಿ ಇರದನಿರಾಕಾರ ವಸ್ತುವಿನಲ್ಲಿ ಬೇರಾಗಿ ಇರದ, ಅಂಗಲಿಂಗ ಸಮರಸೈಕ್ಯವು ತೋರುವದು ನಿರಾಕಾರ ವಸ್ತುವಿನಲ್ಲಿ ವಸ್ತುವೇ ಅದಾಗಿ ಲಿಂಗಾಂಗ ಸಂಯೋಗವಾಗುವದು.

೭೪೧

೧ಕಾಲಕಾಮರಬಾಧೆ, ಊಳಿಗದ ಉಪಟಳದ
ಕೀಲು ಕಿತ್ತಿಹವು ಲಿಂಗೈಕ್ಯವಾಯಿತ್ತು
ಲೀಲೆಯದು ನೋಡು ಪೂರ್ಣಜ್ಞ.

೭೪೨

೨"ನೋಡೆನೆಂದರೆ ನೋಟ, ಕೂಡೆನೆಂದರೆ ಕೂಟ"
"ನೋಟ ಕೂಟಗಳು ಭಯವಳಿದು ನಿಜದಲ್ಲಿ"
ಆಟ ನೋಡಯ್ಯ ಪೂರ್ಣಜ್ಞ.

೭೪೩

ನೀರು ನೀರನು ಕೂಡಿ, ಕ್ಷೀರಕ್ಷೀರವ ಕೂಡಿ
ಭೂರಿಬಯಲೊಳಗೆ ಬಯಲು ಬೆರೆದಂತಿಹುದು
ಸಾರಲಿಂಗೈಕ್ಯ ಪೂರ್ಣಜ್ಞ.

೭೪೪

ಒಳಗೆ ನೋಡಲು ಬಯಲು, ಹೊರಗೆ ನೋಡಲು ಬಯಲು
ಒಳಮನವು ಬಯಲು ಭಾವೆಲ್ಲ ಬಯಲುಂಟು
ಬೆಳಕಿನಲಿ ಬೆಳಕುಂಟು ಪೂರ್ಣಜ್ಞ.

೭೪೫

ಲಿಂಗಾಂಗ ಸಮರಸಕೆ, ತುಂಗಶಕ್ತಿಯು ಬೇಕು
ಹಿಂಗದಿಹ ಸೊಗದ ಸುಧೆಗಿನ್ನು ಸಮವುಂಟೆ?
ಲಿಂಗೈಕ್ಯ ಮೌಲ್ಯ ಪೂರ್ಣಜ್ಞ.

---

೧ ಕಾಲಕಾಮರಬಾಧೆ ಅಂದರೆ, ಯಮ ಮನ್ಮಥರ ಬಾಧೆ ಉಳಿಗದ ಅಂದರೆ, ಜನನ ಮರಣಗಳ ಉಪದ್ರವವು ಎದ್ದು ಹೋಗಿತ್ತು ರಾಜಸ, ತಾಮಸ, ಸಾತ್ವಿಕಹಂಕಾರಬೇರು ಸಂಹಾರವಾಗಿ, ನಿಜಲಿಂಗೈಕ್ಯ ಸ್ಥಿತಿಯಲ್ಲಿ ಇವಾವ ಭಿನ್ನಭಾವವಿರುವದಿಲ್ಲ. ಜೀವಾತ್ಮನೆಂಬ ಅಂಗ ಪರಮಾತ್ಮನೆಂಬ ಲಿಂಗ ಭೇಧವಿಲ್ಲ.

೨ ನೋಡಿಹೆನೆಂದರೆ, ನಿರೀಕ್ಷಣೆ, ನಿರೀಕ್ಷಣೆ ಮಾಡಿಹೆನೆಂದರೆ ನೋಟ, ನಿರೀಕ್ಷಣೆಯು ಸಮರಸವಾಯಿತ್ತು. ಕೂಟಕೂಡಿಹೆನೆಂದರೆ, ಬೆರದಿಹೆನೆಂದರೆ ಸಮರಸವು ನಿಬ್ಬೆರಗಾಯಿತ್ತು 'ನೋಟಕೂಟಗಳು ನಿರೀಕ್ಷಣೆಗೆ ಸಮರಸವು ನಷ್ಟವಾಗಿ, ನಿಜದಲ್ಲಿ ಅಂದರೆ, ಲಿಂಗದಲ್ಲಿ ಪರಮಾನಂದ ಸುಖದಲ್ಲಿ ಲೋಲಾಡುವದು.

೭೪೭

"ಅರಿಯಲಿಲ್ಲದ ಅರಿವು, ಮರೆಯಲಿಲ್ಲದ ಮರಹು"
ಬೆರಸದಿಹ ಬೆರಗು ನಿಜನಿಂದ ನಿಲವಹುದು
ನಿರುತನಿಜವನರಿ, (ಪರಮಲಿಂಗೈಕ್ಯ) ಪೂರ್ಣಜ್ಞ.

೭೪೮

ಶಿವಜೀವ ಬೇರಲ್ಲ, ಲಿಂಗಾಂಗವೆರಡಲ್ಲಿ
ಭವತಾಪವವಗಿಲ್ಲ ಸದಸತ್ತು ಇಲ್ಲ
ಶಿವನಬೆರೆತವಗೆ ಪೂರ್ಣಜ್ಞ.

೭೪೯

ಶಿವಶಕ್ತಿ ಸುಮಿಲಿತ, ಶಿವಧರ್ಮತತ್ವವನು
ಶಿವಶರಣರಾವಚನ ಓದಿ ಬರೆದಿಹೆನು
ಶಿವನನ್ನು ನೆನೆದು ಪೂರ್ಣಜ್ಞ.

## ಮಾನವೀಯ ಮೌಲ್ಯಗಳು
## ಮಾನವ ಗುಣಗಳು

೭೪೯

ಗುರುಹಿರಿಯರೊಳಗಿರುವ ಪರಮ ವಾತ್ಸಲ್ಯಕ್ಕೆ
ಶಿರಬಾಗು ನಿರುತ ಸೇವೆಯನು ಮಾಡಿದರೆ
ದೊರೆವುದವರ ಕೃಪೆ ಪೂರ್ಣಜ್ಞ.

೭೫೦

ಕೈಂಕರ್ಯ ಹಿರಿಯರಲಿ, ರಂಕರಲಿ ವಾತ್ಸಲ್ಯ
ಸಂಕಟಗ್ರಸ್ತರಿಗೆ ಅಭಯವೀವನೆ
ಶಂಕರಸ್ವರೂಪಿ ಪೂರ್ಣಜ್ಞ.

೭೫೧

ಭಯಬೇಕು ಹಿರಿಯರಲಿ, ನಯಬೇಕು ನಡತೆಯಲಿ
ಜಯಬೇಕು ಕರಣನಿಗ್ರಹದಿ, ದಲಿತರಿಗೆ
ದಯೆತೋರಬೇಕು ಪೂರ್ಣಜ್ಞ.

೭೫೨

ನಿಯಮಪಾಲನೆಯಿಂದ, ನಯುವು ಸಮನಿಸುತಿಹುದು
ಜಯಮೊರೆತು ಕಾರ್ಯದಲಿ ಶಿವಭಾವ ತ
ನ್ಮಯತೆ ಲಭಿಸುತಿದೆ ಪೂರ್ಣಜ್ಞ.

೭೫೩

ದುರ್ಗುಣಂಗಳ ಕಿತ್ತಿ ಸದ್ಗುಣಂಗಳ ಬಿತ್ತಿ
ಹುದ್ಗುಣದ ಸುಗ್ಗಿ ಮಾಡಿದರೆ ಈ ಜನಕೆ
ಸ್ವರ್ಗ ತಾನಕ್ಕು ಪೂರ್ಣಜ್ಞ.

೭೫೪

ಕಣ್ಣುಮನ ನಾಲಿಗೆಯು, ತನ್ನಂಕೆಯೊಳಗಿಟ್ಟು
ತನ್ನ ತಾನರಿದು ನಡೆವವಗೆ ಲೋಕದಲಿ
ಸನ್ಮಾನವುಂಟು ಪೂರ್ಣಜ್ಞ.

೭೫೫

ಬುದ್ಧಿ ಬೆಳೆಯುತ್ತಿರಲಿ, ಸದ್ಗುಣವ ಜೊತೆಗೂಡಿ
ಬುದ್ಧಿಯಲಿ ದುರ್ವಿದ್ಯೆ ಬೆಳೆದಲ್ಲಿ ಜಗದಲ್ಲಿ
ಗುದ್ದಾಟ ನಿಲದು ಪೂರ್ಣಜ್ಞ.

೭೫೬

ಧನದಲ್ಲಿ ಶುಚಿಯಾಗಿ ಮನದಿ ನಿಶ್ಚಲನಾಗಿ
ತನುವಿನೊಳು ನಿರ್ಮೋಹಿಯಾದವನು ಜಗದಿ
ಮುನಿವರ್ಯನೆನಿಪ ಪೂರ್ಣಜ್ಞ.

೭೫೭

ಅನ್ಯರೇಳ್ಗೆಯು ಸ್ವತಃ, ತನ್ನೇಳ್ಗೆಯೆಂಬಂತೆ
ಮನ್ನಿಪುದೆ ದೊಡ್ಡ ಗುಣ, ವಿಘ್ನ ಸಂತೋಷ
ಕುನ್ನಿಗುಣವಯ್ಯ, ಪೂರ್ಣಜ್ಞ.

೭೫೮

ಕಳ್ಳತನ ಮಾಡದಿರು, ಸುಳ್ಳು ಮಾತಾಡದಿರು
ಒಳ್ಳೆಯುವರೊಡನಾಡು, ಇಂತಿದುವೆ ನಿನಗೆ
ಸಲ್ಲ ಸನ್ಮಾರ್ಗ ಪೂರ್ಣಜ್ಞ.

೭೫೯

ಹೊಗಳಿಕೆಗೆ ಮೆಚ್ಚದಿರು, ತೆಗಳಿಕೆಗೆ ಬೆಚ್ಚದಿರು
ಹೊಗಳಿಕೆಯು ತೃಣಕೆ ಸರಿಯೆಂದು ತಿಳಿದುಬಿಡು
ಸೊಗವಕ್ಕು ನಿನಗೆ ಪೂರ್ಣಜ್ಞ.

೭೬೦

ಸಲ್ಲದ ಪ್ರತಿಷ್ಠೆಯನು ಕ್ಷುಲ್ಲಕರಪೇಕ್ಷಿಪರು
ಎಲ್ಲವೂ ತಮಗೆ ಬೇಕೆಂದು ಹಂಬಲಿಸಿ
ಜೊಲ್ಲು ಸುರಿಸುವರು ಪೂರ್ಣಜ್ಞ.

೭೬೧

ಕಾಮವನು ತೊರೆದಾತ, ಹೇಮವನು ತೊರೆದಾತ
ನೇಮದಲಿ ನಡೆವಾತ ನಿಜಯೋಗಿಯಾತ
ಸೋಮಧರನಾತ ಪೂರ್ಣಜ್ಞ.

೭೬೨

ಅಧಿಕಾರ ಬಂದಾಗ, ಹದವರಿತ ನಡೆಯಿರಲಿ
ಮುದದಿ ಬಡವರನು ರಕ್ಷಿಸುವ ಅಧಿಕಾರಿ
ಅಧಿಕಾರಿ ನಿಜದಿ ಪೂರ್ಣಜ್ಞ.

೭೬೩

ವಿನಯವಿದ್ದರೆ ಭಕ್ತಿ, ವಿನಯವಿದ್ದರೆ ವಿದ್ಯೆ
ವಿನಯವದು ಸಕಲಗುಣಗಳಿಗೆ ಮಣಿ ಮುಕುಟ
ವಿನಯಗುಣರಾಜ ಪೂರ್ಣಜ್ಞ.

೭೬೪

ಸತ್ಯಕ್ಕೆ ಸಾವಿಲ್ಲ, ಮಿಥ್ಯಕ್ಕೆ ಸುಖವಿಲ್ಲ
ಮುತ್ತಿನಂತಿರುವ ಈ ನುಡಿಯ ಬೆಳಕಿನಲಿ
ನಿತ್ಯ ನಡೆಯುತಿರು ಪೂರ್ಣಜ್ಞ.

೭೬೫

ಮೆಟ್ಟಿ ಹುಗಿಯುವ ತನುವ ಎಷ್ಟು ಮೋಹಿಸಿ ಏನು?
ಸುಟ್ಟು ದುರ್ಗುಣವ ಸುಷ್ಠು ಪಥವಿಡಿದು ಪಡೆ
ಶ್ರೇಷ್ಠ ಪದವಿಯನು ಪೂರ್ಣಜ್ಞ.

೭೬೬

ಅರಿವು ತುಂಬಿದ ಬಾಳು, ತೊರೆ ತುಂಬಿ ಹರಿದಂತೆ
ಹಿರಿದಾದ ಗುರಿಯು ಬಾಳಿಗೊಂದೈಸಿರಿಯು
ಮರೆಯದಿರು 'ಗುರಿ'ಯ ಪೂರ್ಣಜ್ಞ.

೭೬೭

ಘನಪದವ ಪಡೆಯುವೊಡೆ ತನು ಮೋಹವನು ತ್ಯಜಿಸು
ಧನದಿ ಶುಚಿಯಾಗು, ಮನವ ಸುಸ್ಥಿರಗೊಳಿಸು
ನೆನೆ ನಿರುತ ಶಿವನ ಪೂರ್ಣಜ್ಞ.

೭೬೮

ನಿನ್ನ ದೋಷವ ಮರೆತು, ಅನ್ಯರನು ತೆಗಳಿದರೆ
ನಿನ್ನ ಹಿತವಿಲ್ಲ ಅನ್ಯರ ಹಿತವು ಇಲ್ಲ
ನಿನ್ನ ನೀ ತಿದ್ದು ಪೂರ್ಣಜ್ಞ.

೭೬೯

ಸ್ವೇಚ್ಛೆ ಸ್ವೈರಗಳಳಿದು, ಉಚ್ಚ ಸಂಸ್ಕೃತಿ ಬೆಳೆದು
ಸ್ವಚ್ಛ ಮನದಿಂದ ನಾಗರಿಕರೆಲ್ಲ ಶಿವ
ಮೆಚ್ಚುವಂತಿರಲಿ ಪೂರ್ಣಜ್ಞ.

೭೭೦

ದ್ವೇಷವನು ಪ್ರೀತಿಯಲಿ, ದೌಷ್ಟ್ಯವನು ಸತ್ವದಿಂ
ರೋಷವನು ಸ್ನೇಹ ಬಲದಿಂದ ಗದ್ದವನ
ಈಶನೆನಬಹುದು ಪೂರ್ಣಜ್ಞ.

೭೭೧

ಸಿರಿಯ ಸುಖದೊಳು ಮರೆತು, ಜರಿಯದಿರು ಪರರನ್ನು
ಸಿರಿಹೋದ ಮೇಲೆ ನಿನ್ನಿಂದ ನೊಂದವರು
ಜರಿಯುವರು ನಿನ್ನ ಪೂರ್ಣಜ್ಞ.

೭೭೨

ಸಿಹಿಯೂಟ ಸಿಹಿ ಮಾತು ಸುಹೃದಯಕೆ ಲೇಸಕ್ಕು
ಸಿಹಿಮಾತಿನೊಳಗೆ ಕೃತಕ ಬೆರೆತಿದ್ದರದು
ಕಹಿ–ಕಾಳಕೂಟ ಪೂರ್ಣಜ್ಞ.

೭೭೩

ಮಾತಿನಲಿ ಮಾಧುರ್ಯ, ಕೃತಿಯಲ್ಲಿ ಸೌಂದರ್ಯ
ಖ್ಯಾತಿಯಲಿ ನಿಃಸ್ಪೃಹತೆ ಇರುವ ಮನುಜಂಗೆ
ಯಾತರದು ಭೀತಿ? ಪೂರ್ಣಜ್ಞ.

೭೭೪

ಅಂದು ಮಾಳ್ಪುದನಂದೆ, ಮುಂದೆ ಹಾಕದೆ ಮುಗಿಸು,
ಮುಂದೆ ಹಾಕಿದರೆ ಹೊಸ ಹಲವು, ದಂಡಿನೊಲು
ಬಂದು ನಿಲ್ಲುವವು ಪೂರ್ಣಜ್ಞ.

೭೭೫

ದುರ್ಜನರ ಸವಿಮಾತು, ಸಜ್ಜನಗೆ ಕಹಿಬೇವು
ಸಜ್ಜನರ ಕಟುವಾಕ್ಯ ಬಾಳ್ಗೆ ಬೆಳಕೀವ
ಸುಜ್ಞಾನದೀಪ್ತಿ ಪೂರ್ಣಜ್ಞ.

೭೭೬

ಸವಿ ನುಡಿಯು ಮನುಜಂಗೆ, ನವಶಕ್ತಿ ನೀಡುವದು
ಸವಿ ನುಡಿಗೆ ವೈರ ತೊಲಗುವದು ಪ್ರತಿದಿನವು
ಸವಿ ನುಡಿಯ ಸುರಿಸು ಪೂರ್ಣಜ್ಞ.

೭೭೭

ಮಾತಿನಲಿ ಸಹಕಾರ, ಕೃತಿಯು ಕಪಟಾಚಾರ
ಮಾತಾಡಿದಂತೆ ಕೃತಿಯಿಲ್ಲದಿದ್ದರದು
ಕೋತಿ ಕುಣಿದಂತೆ ಪೂರ್ಣಜ್ಞ.

೭೭೮

ಹೊಳಪಿರಲಿ ಮೈಮನಕೆ, ಹೊಳಪಿರಲಿ ನಡೆನುಡಿಗೆ
ಹೊಳಪಿರಲಿ ಮತಿಗೆ ಹೊಳಪಿಲ್ಲದಿರುವಲ್ಲ
ಕಳಪೆ ಕಾಣಯ್ಯ ಪೂರ್ಣಜ್ಞ.

೭೭೯

ಮಾತನರಿಯದ ಮುಗ್ಧ, ಸೋತು ಹೋಗುವನಯ್ಯ
ಮಾತುಬಲ್ಲವನು ಮಾತಿನೊಳು ಸಿಗದಂತೆ
ಬೇತಿನೊಳಗಿರುವ ಪೂರ್ಣಜ್ಞ.

೭೮೦

ಹೃದಯದಿಂ ಹೊರಬರುವ ಸದುವಾಕ್ಯ ಮಾಣಿಕ್ಯ
ಹದ ಹೊಲಬು ತುಂಬಿ ತುಳುಕುತಿಹ ಮಾತುಗಳು
ವಿಧುಕಿರಣದಂತೆ ಪೂರ್ಣಜ್ಞ.

೭೮೧

ಬಲ್ಲವರು ಧರ್ಮದೊಳು, ಸಲ್ಲೀಲೆಯಿಂ ನಡೆದು
ಕೊಲ್ಲುವರು ಮಾಯೆ ಮದ ಮತ್ಸರಂಗಳನು
ನಲ್ನಡತೆಯಿಂದ ಪೂರ್ಣಜ್ಞ.

೭೮೨

ನುಡಿಯೊಂದು ಪರಿಯಾಗಿ, ನಡೆಯೊಂದು ಪರಿಯಾಗಿ
ಅಡಿಗಡಿಗೆ ಎಡವಿ ಬೀಳುತ್ತಲಿರುವವನು
ಕಡಲ ಬಿದ್ದಂತೆ ಪೂರ್ಣಜ್ಞ.

೭೮೩

ಕ್ರಮತಪ್ಪಿ ನುಡಿಯದಿರು, ಕ್ರಮತಪ್ಪಿ ನಡೆಯದಿರು
ಕ್ರಮವು ಸುವಿಧಾನ, ಕ್ರಮ ತಪ್ಪಿ ನಡೆವವನ
ಶ್ರಮಕಿಲ್ಲ ಫಲವು ಪೂರ್ಣಜ್ಞ.

೭೮೪

ನಗುತ ನಡೆ ನುಡಿವವನು ಮಿಗಿಲು ಸುಖ ಪಡೆಯುವನು
ಹಗೆತನವ ಬೆಳೆಸಿ ಜಗಳಾಡುವದು ಹಾಳು
ಹಗೆಗೆ ಜಗಿದಂತೆ ಪೂರ್ಣಜ್ಞ.

೭೮೫

"ನುಡಿಯಲ್ಲಿ ಎಚ್ಚತ್ತು, ನಡೆಯಲ್ಲಿ ತಪ್ಪಿದರೆ"
ಹಿಡಿದಿರ್ಪ ಲಿಂಗ ಸರ್ಪವೆಂದಿಹ ಬಸವ
ನುಡಿಯು ನೆನಪಿರಲಿ ಪೂರ್ಣಜ್ಞ.

೭೮೬

ನುಡಿಯಲ್ಲಿ ರುಚಿತುಂಬಿ, ನಡೆಯಲ್ಲಿ ಶುಚಿ ತುಂಬಿ
ಬಡವರಿಗೆ ಬಲ ತುಂಬಿ ಕಾರ್ಯಗೈವವರು
ದೃಢ ನಿಷ್ಠೆಯವರು ಪೂರ್ಣಜ್ಞ.

೭೮೭

ಮಾತಿನ ಬೃಹಸ್ಪತಿಗಳೀ ತಿರೆಯಲಿ ತುಂಬಿಹರು
ಆತುವು ಜ್ಞಾನ ಪಡೆಯುದಲೆ ಬರಿಜೊಳ್ಳು
ಮಾತಿನಿಂದೇನು? ಪೂರ್ಣಜ್ಞ.

೭೮೮

ಒಳಗೊಂದು ಹೊರಗೊಂದು, ಒಲವಿರದೆ ನುಡಿವವರ
ಗೆಳೆತನವು ಬೇಡ ಅವರೊಡನೆ ಸರಸವದು
ಕೊಳಚೆಯುಂತಹದು ಪೂರ್ಣಜ್ಞ.

೭೮೯

ಶ್ರೇಷ್ಠ ನೀನಾಗುವೊಡೆ, ಶ್ರೇಷ್ಠ ಜನರೊಡನಾಡು
ದುಷ್ಟ ಸಂಗವದು ಮೃಷ್ಟಾನ್ನ, ಕೊನೆಗೆ
ಕೆಟ್ಟ ವಿಷದನ್ನ ಪೂರ್ಣಜ್ಞ.

೭೯೦

ಸಂಗಡಿಗರಂತೆ ಮತಿ, ಸಂಗಡಿಗರಂತೆ ಕೃತಿ
ಸಂಗಡಿಗರಂತೆ ನುಡೆ ನುಡಿಗಳೆಲ್ಲಕ್ಕು
ಸಂಗವೇ ಮೂಲ ಪೂರ್ಣಜ್ಞ.

೭೯೧

ಸಂಗದಿಂದಲಿ ಜ್ಞಾನ, ಸಂಗದಿಂದಲಿ ನೇಹ
ಸಂಗದಿಂ ಜ್ಯೋತಿ ಬೆಳಗುವದು ಎಲ್ಲಕ್ಕು
ಸಂಗವೇ ಬೇಕು ಪೂರ್ಣಜ್ಞ.

೭೯೨

ಒಳ ಹೊರಗು ಒಂದಾದ, ಗೆಳೆತನವು ಇರಬೇಕು.
ಒಳಗೊಂದು ಹೊರಗೆ ಮತ್ತೊಂದು ತೋರ್ಪವರ
ಗೆಳೆತನವು ಬೇಡ ಪೂರ್ಣಜ್ಞ.

೭೯೩

ಹಣಕಾಸು ವ್ಯವಹಾರ, ಶನಿಕಾಟವಾದೀತು
ಘನಮೈತ್ರಿ ಭಂಗವಾದೀತು ಗೆಳೆತನದಿ
ಹಣದ ರುಣ ಬೇಡ ಪೂರ್ಣಜ್ಞ.

೭೯೪

ಪಣ್ತೆಸೆವ ಮಾಮರವು, ತಣ್ಣೆಳಲು ತನಿವಣ್ಣು
ಕಣ್ಮನಕೆ ಸೊಂಪನೀವಂತೆ 'ಸತ್ಸಂಗ'
ಸನ್ಮೋದಕಾರಿ ಪೂರ್ಣಜ್ಞ.

೭೯೫

ಚಂದನದ ಸಂಗದಲಿ, ಇಂಧನಕೆ ಸೌಗಂಧ
ಕುಂದಿಲ್ಲದವರ ಸಂಗವಿದ್ದವರು ಗುಣ
ಸುಂದರರೆನಿಪರು ಪೂರ್ಣಜ್ಞ.

೭೯೬

ದೊಡ್ಡ ಗುರಿಸಾಧಿಸಲು, ಅಡ್ಡದಾರಿಯ ಬಿಟ್ಟು
ಗೊಡ್ಡು ಗೆಳೆಯರ ಸಂಗ ತ್ಯಜಿಸಿ ಸಾಗಿದರೆ
ಜಿಡ್ಡು ಬಿಟ್ಟಂತೆ ಪೂರ್ಣಜ್ಞ.

೭೯೭

ನೀತಿಯಿಂದ ನಡೆವವರೆ, ಭೀತಿಯೆಂಬುವುದುಂಟೆ?
ನೀತಿಗೆಟ್ಟವನು ಉರಲು ಬಿಗಿಯುತ ಗಿಡಕೆ
ಜೋತು ಬಿದ್ದಂತೆ ಪೂರ್ಣಜ್ಞ.

೭೯೮

ನೀತಿ ಜ್ಯೋತಿಯು ಬೆಳಗಿ! ಜಾತಿತಮವನು ಕಳೆದು
ಪ್ರೀತಿಗಂಗೆಯಲಿ ಮಿಂದೊಡನೆ ಭಾರತದ
ಖ್ಯಾತಿ ಬೆಳೆದಪುದು ಪೂರ್ಣಜ್ಞ.

೭೯೯

ಹೆಂಡವನು ಮುಟ್ಟದಿರು, ಮೊಂಡುತನ ಮಾಡದಿರು
ಕಂಡಕಂಡವರ ಬೈಯುತಂಡಲೆವವರು
ಭಂಡರೆನಿಸುವರು ಪೂರ್ಣಜ್ಞ.

೮೦೦

ಧರ್ಮಬೀಜವ ಬಿತ್ತಿ, ಕರ್ಮಯೋಗದ ಜಲವ
ಮರ್ಮವರಿತೆರೆದು ನೀತಿ ಕೃಷಿಗೈದವಗೆ
ಸನ್ಮುಕ್ತಿ ಫಲವು ಪೂರ್ಣಜ್ಞ.

೬೦೧

ಮಾತ್ಸರ್ಯ ಮೊದಲಾದ, ಕುತ್ಸಿತಂಗಳ ತೊರೆದು
ಸತ್ಸಂಗದಲ್ಲಿ ನೀತಿಯಿಂ ನಡೆವವನು
ಚಿತ್ಸುಖಿಯು ನಿಜದಿ ಪೂರ್ಣಜ್ಞ.

೬೦೨

ಮಾನಸದಿ ದೇಶಾಭಿಮಾನವನು ತುಂಬಿಸಿರಿ
ಜ್ಞಾನ ಗುಣನೀತಿ ಸಂಸ್ಕೃತಿಯ ಬಿಂಬಿಸಿರಿ
ಜಾಣ ಮಕ್ಕಳಲಿ ಪೂರ್ಣಜ್ಞ.

೬೦೩

ಭಾರತಕೆ ಬೇಕೀಗ, ಭಾರತೀಯತೆಯುಳಿಸಿ
ಸಾರಸಜ್ಜನಿಕೆ ಬೆಳೆಯಿಸುವ, ಹೊಳೆಯಿಸುವ
ಧೀರ ಸಾಹಸವು ಪೂರ್ಣಜ್ಞ.

೬೦೪

ನನ್ನ ದೇಶವಿದೆಂಬ, ನನ್ನ ರಾಷ್ಟ್ರವಿದೆಂಬ
ನನ್ನವರು ಭಾರತೀಯರೆನ್ನುವ ಭಾವ–
ತನ್ಮಯನೆ ಧನ್ಯ ಪೂರ್ಣಜ್ಞ.

೬೦೫

ಭಾರತದ ಪ್ರಾಚೀನ, ಸಾರ ತತ್ವವ ಜಗಕೆ
ಸಾರುತಿಹ ನಾವು ಭಾರತ ಸುಧಾರಣೆಗೆ
ತೋರೋಣ ಶೌರ್ಯ ಪೂರ್ಣಜ್ಞ.

೬೦೬

ರಾಷ್ಟ್ರೀಯ ಭಾವಿರದೆ, ರಾಷ್ಟ್ರೀಯ ಸೇವಿರದೆ
ರಾಷ್ಟ್ರೀಯ ಪ್ರಜ್ಞೆಯಿಲ್ಲದಲೆ ದುಡಿಯುತಿರೆ
ರಾಷ್ಟ್ರಕ್ಕೆ ಹಿತವು ಪೂರ್ಣಜ್ಞ.

೬೦೭

ರಾಷ್ಟ್ರೀಯ ಭಾವನೆಯು, ರಾಷ್ಟ್ರೀಯ ಚಿಂತನೆಯು
ರಾಷ್ಟ್ರೀಯ ಶ್ರದ್ಧೆ ಹುರಿಗೊಂಡು ದುಡಿದಲ್ಲಿ
ರಾಷ್ಟ್ರಾಭ್ಯುದಯವು ಪೂರ್ಣಜ್ಞ.

೮೦೮

ದ್ವೇಷಭಾವಗಳಳಿದು, ಆಶೆರೋಷಗಳಳಿದು
ದೇಶ ಭಕ್ತಿರಸ ಜನಮನದಿ ಪುಟಿದಂದು
ದೇಶಾಭ್ಯುದಯವು ಪೂರ್ಣಪ್ರಜ್ಞ.

೮೦೯

ಭಾರತೀಯರು ನಾವು, ಮೀರಲಾರೆವು ತತ್ವ
ಭಾರತೀಯತೆಯ ಉಳಿಸುತ್ತ ಬೆಳೆಸುವೆವು
ಸಾರಸಂಸ್ಕೃತಿಯ ಪೂರ್ಣಪ್ರಜ್ಞ.

೮೧೦

ಭಾರತೀಯರು ನಾವು, ಭೂರಿಶಕ್ತಿಯ ಪಡೆದು
ಧೀರಗುಣದಿಂದ ಭಾರತಾಂಬೆಯ ಕೀರ್ತಿ
ಮೀರಿ ಮೆರೆಸೋಣ ಪೂರ್ಣಪ್ರಜ್ಞ.

೮೧೧

ದಾನಧರ್ಮದ ಮುಂದೆ, ಇನ್ನಾವ ಧರ್ಮಗಳು
ದಾನದಿಂಪುಣ್ಯ ಸಂಪ್ರಾಪ್ತಿ ಲೋಕದಲಿ
ದಾನವೇ ಮಿಗಿಲು ಪೂರ್ಣಪ್ರಜ್ಞ.

೮೧೨

ಊರ ಕೆರೆಯೊಳಗಿರುವ, ನೀರಿನಂತಿರಬೇಕು.
ಭೂರಿಸಂಪತ್ತು ಧಾರುಣಿಯ ಜನಹಿತಕೆ
ತೀರೈಸಬೇಕು ಪೂರ್ಣಪ್ರಜ್ಞ.

೮೧೩

ಶ್ರಮದಿಂದ ಗಳಿಸಿರುವ, ಶ್ರಮದ ಫಲ ಧನವನ್ನು
ಸುಮನದಿಂ ದೀನದಲಿತರಿಗೆ ನೀಡುವಗೆ
ಸಮನಾರು ಜಗದಿ? ಪೂರ್ಣಪ್ರಜ್ಞ.

೮೧೪

ತ್ಯಾಗದಿಂದಲಿ ಭಕ್ತಿ, ತ್ಯಾಗದಿಂದಲಿ ಶಕ್ತಿ
ತ್ಯಾಗವೇ ನರನ ಉನ್ನತಿಗೆ ಕಾರಣವು
ತ್ಯಾಗದಿಂ ಬಾಳು ಪೂರ್ಣಪ್ರಜ್ಞ.

೮೧೫

ಹಸಿದು ಬಂದಿಹ ಜನಕೆ, ಅಶನವನು ನೀಡಿದರೆ
ಕುಶಲವಾಡಿದರೆ ಬಡಜನರ ತಣಿಸಿದರೆ
ಅಸಮಾಕ್ಷನೊಲಿವ ಪೂರ್ಣಾಜ್ಞ.

೮೧೬

ಇದ್ದಾಗ ದಾನವನು ಶುದ್ಧ ಮನದಿಂ ಮಾಡಿ
ಬಿದ್ದವರನೆತ್ತಿ ಬದುಕಿಸುತ ಮುದದಿಂದ
ಉದ್ಧರಿಸಬೇಕು ಪೂರ್ಣಾಜ್ಞ.

೮೧೭

ಹಿಡಿದ ಕೆಲಸವ ಬಿಡದೆ, ಜಡದೇಹವಿರುವಾಗ
ಮೃಡ ಮೆಚ್ಚುವಂತೆ ಹಗಲಿರುಳು ನಿಷ್ಠೆಯಿಂ
ದುಡಿದು ಕೊನೆಗೊಳಿಸು ಪೂರ್ಣಾಜ್ಞ.

೮೧೮

ಮಾನವನ ಮನದಲ್ಲಿ, ದಾನಧರ್ಮದ ಬುದ್ಧಿ
ತಾನಾಗಿ ಬೆಳೆದು ಕೃತಿರೂಪ ತಳೆದರದು
ಸನ್ಮಾನ್ಯವಹುದು ಪೂರ್ಣಾಜ್ಞ.

೮೧೯

ದಾನದಲ್ಲಿ ಸಕಾಮ, ದಾನದಲ್ಲಿ ನಿಷ್ಕಾಮ
ದಾನಂಗಳಲ್ಲಿ ಬಗೆಯೆರಡು, ನಿಷ್ಕಾಮ
ದಾನವೇ ಮಿಗಿಲು ಪೂರ್ಣಾಜ್ಞ.

೮೨೦

ಬಡವರಲಿ ಬಲವಿಲ್ಲ, ಒಡೆಯರಲಿ ಕಳೆಯಿಲ್ಲ
ಕಡುಧನಿಕರಲಿ ದಾನಧರ್ಮಗಳಿಲ್ಲ
ಪೊಡವಿಯಾಟವದು ಪೂರ್ಣಾಜ್ಞ.

೮೨೧

ದುಡಿದಂಥ ದುಡ್ಡನ್ನು, ಕೆಡಿಸದಿರು ದುಂದಿನಲಿ
ಕೊಡು ಅದನು ದಾನಧರ್ಮ ಸತ್ಕಾರ್ಯಕ್ಕೆ
ಮೃಡನೊಲಿವ ನಿನಗೆ ಪೂರ್ಣಾಜ್ಞ.

೮೨೧

ಮಾನವತೆಯಿಲ್ಲದಿಹ, ಸನ್ಯಾಸದಿಂದೇನು?
ದಾನವಿಲ್ಲದಿಹ ಸಿರಿಯಿದ್ದು ಫಲವೇನು?
ನೀನೆ ಬಗೆಯಿದನು ಪೂರ್ಣಜ್ಞ.

೮೨೨

ಇದು ಪೂರ್ಣವದುಪೂರ್ಣ, ಸದಮಲವದುವೆ ಪೂರ್ಣ
ಇದನರಿತು ನಡೆವವನು ಚಿತ್ಸುಖಿಯು ಜಗದಿ
ಮುದವ ಪಡೆಯುವನು ಪೂರ್ಣಜ್ಞ.

೮೨೩

ತತ್ವಮುಸಿಯರ್ಥವದು, ಸತ್ವವರಿದವಗಹುದು
ಸತ್ಯ ಜ್ಞಾನದಲಿ ಮಿಂದವಗೆ ಪರಿಪೂರ್ಣ
ನಿತ್ಯಸಂತೃಪ್ತಿ ಪೂರ್ಣಜ್ಞ.

೮೨೪

ಸತ್ಸಂಗದೊಳು ಬೆರೆದು, ದುಸ್ಸಂಗವನು ತೊರೆದು
ಕುತ್ಸಿತವ ತರಿದು ಸ್ಥಿತಪ್ರಜ್ಞತೆಯೊಳಿಹುದು
ಚಿತ್ಸುಖದ ಸುಧೆಯು ಪೂರ್ಣಜ್ಞ.

೮೨೫

ಜೀವಗುಣಗಳ ಕಳೆದು, ದೇವಭಾವವ ತಳೆದು
ನೋವು ನಲಿವುಗಳನಳಿದರಿದು ಬಾಳುವವ
ದೇವತಾನಕ್ಕು ಪೂರ್ಣಜ್ಞ.

೮೨೬

ಹಿಡಿದ ಕೆಲಸವ ಬಿಡದೆ, ಕಡುಜವದಿ ಮಾಡಿದರೆ
ತೊಡಕುಗಳು ದೂರಹವು, ಸುಖಶಾಂತಿ ದೊರೆತು
ಜಡತೆ ತೊಲಗುವದು ಪೂರ್ಣಜ್ಞ.

೮೨೭

ಸತ್ಯದಿಂ ನುಡಿವವರೆ, ಸತ್ಯದಿಂ ನಡೆವವಗೆ
ಚಿತ್ತಕ್ಕೆ ಶಾಂತಿ, ಆ ಪುಣ್ಯವಂತನಿಗೆ
ನಿತ್ಯ ಸಂತೃಪ್ತಿ ಪೂರ್ಣಜ್ಞ.

೮೨೯

ಕಷ್ಟಪಟ್ಟರೆ ಧನವು, ಕಷ್ಟಪಟ್ಟರೆ ಸುಖವು
ಕಷ್ಟವನು ಲೆಕ್ಕಿಸದೆ ಶ್ರಮಿಪ ಸಾಹಸಿಗೆ
ಇಷ್ಟಾರ್ಥ ಸಿದ್ಧಿ ಪೂರ್ಣಜ್ಞ.

೮೩೦

ಘೋರ ಸಂಕಟಗಳನು, ಸೈರಿಸುತ ಕೆಚ್ಚಿ ನಿಂ
ದೂರವಿಹಗುರಿಯ ಗಿರಿಯೇರುವವಗುಂಟು
ಸಾರಸುಖ ಕೊನೆಗೆ ಪೂರ್ಣಜ್ಞ.

೮೩೧

ಕಿರಿಕುಟೀರದ ವಾಸ, ಅರಿವಿನಾರಾಧನೆಯು
ಹಿರಿಯ ಸಾಧನೆಯು, ಕನಕದರಮನೆಗಿಂತ
ಪರಮಸುಖಕರವು ಪೂರ್ಣಜ್ಞ.

೮೩೨

ಸಂಶಯಿಗೆ ಸಿಕ್ಕಿ ಅವಕಾಶಗಳು ಬರಿದಹವು
ಸಂಶಯಿಯ ಬದುಕು ಸಿಂಬಳದ ನೊಣದಂತೆ
ಕ್ಲೇಶಮಯವಕ್ಕು ಪೂರ್ಣಜ್ಞ.

೮೩೩

ನಿತ್ಯ ನಿಯಮದಿ ನಡೆದು, ಸತ್ಯ ಶಕ್ತಿಯ ಪಡೆದು
ಭೃತ್ಯಾಚರಣೆ ಬಿಡದೆ ನಡೆದುಕೊಳ್ವನು
ನಿತ್ಯದಲಿ ಮುಕ್ತ ಪೂರ್ಣಜ್ಞ.

೮೩೪

ನಾರಿಯರ ರೂಪವನು, ನಾರಿಯರ ಮೋಹವನು
ನಾರಿಯರ ಕೋಪ ಲೆಕ್ಕಿಸದೆ ಜೀವಿಪಗೆ
ಸಾರಸುಖವುಂಟು ಪೂರ್ಣಜ್ಞ.

೮೩೫

ಮಾನವತೆಯೇ ನೈಜ, ಮಾನವನ ಮಾನವದು
ಮಾನವತೆಯಿಲ್ಲದಿಹ ಮಾನವನು ಜಗದಿ
ದಾನವನು ಅಲ್ತೆ ಪೂರ್ಣಜ್ಞ.

೮೩೬

ಅವರವರ ಕರ್ತವ್ಯ, ಅವರವರು ಮಾಡಿದರೆ
ಅವನತಿಗೆ ಅನುವಿಲ್ಲ ಸರ್ವಜನ ಪದಕೆ
ಅವಿರತಂ ಪ್ರಗತಿ ಪೂರ್ಣಜ್ಞ.

೮೩೭

ದುಡಿದು ತಿನ್ನುವನ ಕೈ, ಬಿಡದು ಅಕ್ಷಯಪಾತ್ರೆ
ದುಡಿಯದಾಲಸಿಗನ ಕೈಗೆ ಭಿಕ್ಷಾಪಾತ್ರೆ
ಕಡೆಯುಸಿರಿರುವತನಕ ಪೂರ್ಣಜ್ಞ.

೮೩೮

ತತ್ವ ಸತ್ವವ ಬೆಳೆಸಿ, ಸತ್ಯಸಂಸ್ಕೃತಿಯುಳಿಸಿ
ನಿತ್ಯ ಸಾಹಿತ್ಯ ವೃಕ್ಷಕ್ಕೆ ನೀರೆರೆಯೆ
ಸತ್ಫಲದ ಪ್ರಾಪ್ತಿ ಪೂರ್ಣಜ್ಞ.

೮೩೯

ಅನುಭವಾಮೃತರಸವ, ಅನುಭವಿಯೆ ಉಣಬಲ್ಲ
ಅನುಭವ ಹೀನನಾದವನಿಗೆತ್ತಣದು
ಅನುಭವದ ಸುಖವು ಪೂರ್ಣಜ್ಞ.

೮೪೦

ಕಷ್ಟಪಟ್ಟರೆ ಧನವು, ಕಷ್ಟಪಟ್ಟರೆ ಸುಖವು
ಕಷ್ಟಪಟ್ಟವಗೆ ವಿದ್ಯೆಗಳು ವಶವರ್ತಿ
ಸೃಷ್ಟಿಯಲಿ ಕೀರ್ತಿ ಪೂರ್ಣಜ್ಞ.

೮೪೧

ಮಿಥ್ಯೆ ಮಾಯೆಗಳಳಿದು, ಸತ್ಯರೂಪವ ತಿಳಿದು
ಸತ್ತು ಚಿತ್ತಾನಂದದಲಿ ಸುಖಿಸುವವಗೆ
ಮೃತ್ಯುಭಯವಿಲ್ಲ ಪೂರ್ಣಜ್ಞ.

೮೪೨

ಗಳಿಸಿಡುವ ಧನಕನಕ, ಬಳಸನವ ಕಡೆತನಕ
ಬಲುಕೃಪಣನೆನಿಪ, ಕೊಡುಗೈ ಧಾರಾಳಿ
ಬಲುಕೀರ್ತಿ ಪಡೆವ ಪೂರ್ಣಜ್ಞ.

೮೪೩

ಹಸಿದವಗೆ ಅನ್ನವನು, ಪಶುಗಳಿಗೆ ಹುಲ್ಲನ್ನು
ಪಶುಪತಿಯ ನೆನೆದು ನೀಡುವವ ಪಡೆಯುವನು
ಶಶಿಧರನ ಕೃಪೆಯು ಪೂರ್ಣಜ್ಞ.

೮೪೪

ನಾಯಕನು ಆದವನು, ನ್ಯಾಯ ಬಿಡದಿರಬೇಕು
ನ್ಯಾಯವನು ಬಿಟ್ಟು ಅನ್ಯಾಯಿಯಾದರವ
ನಾಯಿಗಿಂ ಕೀಳು ಪೂರ್ಣಜ್ಞ.

೮೪೫

ಅತಿನಿದ್ರೆ, ಅತಿಕೋಪ, ಅತಿಭಯವು, ಅತಿನಯವು
ಅತಿಯೆಂಬುದೆಲ್ಲ ಗತಿಗೇಡು ನೆನಪಿರಲಿ
ಹಿತಕರವು ಮಿತಿಯು ಪೂರ್ಣಜ್ಞ.

೮೪೬

ಕಷ್ಟವೆಷ್ಟೇ ಬರಲಿ, ನಿಷ್ಠೆಯನು ಬಿಡಬೇಡ
ಕಷ್ಟದಲಿ ಧೈರ್ಯ ತಾಳಿ ಮುನ್ನಡೆದಲ್ಲಿ
ಇಷ್ಟಾರ್ಥ ಸಿದ್ಧಿ ಪೂರ್ಣಜ್ಞ.

೮೪೭

ಕುಂದುವಡೆಯದ ನಡತೆ ಯಿಂದ ತಾಯ್ತಂದೆಯರು
ಕಂದಮ್ಮಗಳಿಗೆ ಒಳಿತನ್ನು ಕಲಿಸಿದರೆ
ಬಂಧುರವು ಬಾಳು ಪೂರ್ಣಜ್ಞ.

೮೪೮

ಗಳಿಸಿಟ್ಟ ಧನವನ್ನು, ಬಳಸಿದರೆ ಜನಹಿತಕೆ
ಜಲವನ್ನು ರಾಷ್ಟ್ರ ವೃಕ್ಷಕ್ಕೆ ಎರೆದಂತೆ,
ಫಲವು ಸರ್ವರಿಗೆ ಪೂರ್ಣಜ್ಞ.

೮೪೯

ಸಂಸ್ಕಾರವುಳ್ಳವರ, ಸಂಸಾರ ಸುಖಸಾರ
ಸಂಸ್ಕಾರಹೀನಸಂಸಾರ ಬಲುಖಾರ
ಸಂಸ್ಕಾರ ಮಧುರ, ಪೂರ್ಣಜ್ಞ.

೮೫೦

ಅತಿಥಿ ಸತ್ಕಾರ ಸಂಸ್ಕೃತಿ ಸುಮದ ಸೌರಭವು
ಅತಿಥಿ ಸತ್ಕಾರವಿರುವಂಥ ಸಿರಿಮನೆಯು
ಕ್ಷಿತಿಯಲ್ಲಿ ಶ್ಲಾಘ್ಯ ಪೂರ್ಣಜ್ಞ.

೮೫೧

ಪ್ರೀತಿ ಪರಿಮಳ ಪುಷ್ಪ, ಪ್ರೀತಿಯದು ಜೇನ್ ತುಪ್ಪ
ಪ್ರೀತಿಯೊಳಗಿರುವ ಸರಸ ಸೌಖ್ಯಾನಂದ
ಪೃಥ್ವಿಯಲಿ ಮಿಗಿಲು ಪೂರ್ಣಜ್ಞ.

೮೫೨

ಅನುಭಾವ ಪಥದಲ್ಲಿ, ಅನುನಯದಿ ಸಾಗಿದರೆ
ಘನಶಕ್ತಿಬಹುದು, ಹಾಲ್ಜೇನು ಸವಿದಂತೆ
ಮನಕೆ ಸಂತೃಪ್ತಿ ಪೂರ್ಣಜ್ಞ.

೮೫೩

ಅನುಭಾವ ರಸದೂಟ, ಅನುಭವಿಸಿ ಸುಖಿಯಾಗು
ಅನುಭವಿಗಳೊಡನೆ ಸರಸವಾಡಿದರೆ ನೀ–
ಘನಮುಕ್ತಿಪಡೆವೆ ಪೂರ್ಣಜ್ಞ.

೮೫೪

ಜೀವನದ ಅನುಭವವು ಭಾವಿಸಲು ಬಲುಮಧುರ
ಭಾವಕೋಗಿಲೆಯ ಕೂಜನವೆ ಝೇಂಕಾರ
ಸಾವಹುದು ದೂರ, ಪೂರ್ಣಜ್ಞ.

೮೫೫

ನಗಬೇಕು ಕಷ್ಟದಲಿ, ನಗಬೇಕು ಇಷ್ಟದಲಿ
ನಗೆಯಿಂದ ಬಾಳು ಸೊಗದು ಸಾಗರವಹುದು
ನಗುತಲಿರುನಿರುತ ಪೂರ್ಣಜ್ಞ.

೮೫೬

ಕಷ್ಟಕೋಟಲೆ ನೀಗಿ ಇಷ್ಟ ಸಿದ್ಧಿಯಪಡೆದು
ನಿಷ್ಠೆಯಿಂ ಶಿವನ ಭಜಿಸುವದೆ ಆತ್ಮನಿಗೆ
ಮೃಷ್ಟಾನ್ನದೂಟ ಪೂರ್ಣಜ್ಞ.

೮೫೭

ತನುಶುದ್ಧಿ, ಮನಶುದ್ಧಿ, ಘನಮುಕ್ತಿಗಾಧಾರ
ಘನಕಠಿಣ ಮೊದಲು, ಸಾಧನೆಯ ತುದಿಯಲ್ಲಿ
ಅನುಪಮಾನಂದ ಪೂರ್ಣಜ್ಞ.

೮೫೮

ನಾವು ಮಾನವರೆಲ್ಲ, ದೇವರಣುಗರು ಎಂದು
ಭಾವಿಸುತ ಬಂಧು ಭಾವದಿಂ ಜೀವಿಸಲು
ಜೀವನವು ಸ್ವರ್ಗ ಪೂರ್ಣಜ್ಞ.

೮೫೯

ಪುಷ್ಪವಾಟಿಕೆಯಿಂದ, ಸಪ್ತವ್ಯಸನಗಳಾಟ
ಗಪ್‌ಚಿಪ್ಪಾಗುತ್ತ ಮೈ ಮನದ ತುಂಬ ಸಂ-
ತೃಪ್ತಿ ತುಂಬುವದು ಪೂರ್ಣಜ್ಞ.

೮೬೦

ಅಂಗವೆಂಬುದು ಭೂಮಿ, ಲಿಂಗತತ್ವವೆ ಬೆಳೆಯು
ತುಂಗಶ್ರದ್ಧೆಯಲಿ ಫಲವುಂಡು ಸುಖಿಯಾಗಿ
ಹಿಂಗು ಭವವನ್ನು ಪೂರ್ಣಜ್ಞ.

೮೬೧

ಕಂಗೆಡದೆ ಕಷ್ಟದೊಳು, ಭಂಗ ಪಡದಿರುವವನು
ತುಂಗಸ್ಥಿತಿಗೇರಿ ಶಾಂತಿ ಸುಖ ಪಡೆಯುವನು
ಲಿಂಗಕೃಪೆಯಿಂದ ಪೂರ್ಣಜ್ಞ.

೮೬೨

ಶಾಂತಿಯಿಲ್ಲದ ಮನವು, ಧ್ವಾಂತ ತುಂಬಿದ ಮನೆಯು
ಕಾಂತಿಗೆಟ್ಟಿರುವ ತನುವು ಕಾಷ್ಠೋಪಮವು
ಶಾಂತಿ ಸೌಭಾಗ್ಯ ಪೂರ್ಣಜ್ಞ.

೮೬೩

ಮನವೆಂಬ ಮರ್ಕಟನು, ಕುಣಿದಂತೆ ಕುಣಿಯದಲೆ
ಮನವ ಶ್ರಮಿಸುತ್ತ ಶಿವಧ್ಯಾನ ಗೈವವನು
ಘನಯೋಗಿಯಹನು ಪೂರ್ಣಜ್ಞ.

೮೬೪

ವಿಪುಲ ಸಾಹಸದಿಂದ, ಸಫಲವಪ್ಪದು ಬಾಳು
ಅಪಜಯವು ಮುಂದೆ ಸೋಪಾನ ವಿಜಯಕ್ಕೆ
ವಿಫಲಕಳುಕದಿರು ಪೂರ್ಣಜ್ಞ.

೮೬೫

ಚಿಂತೆ ಚಿತ್ತಕೆ ಬೆಂಕಿ, ಚಿಂತನವು ಚೈತನ್ಯ
ಚಿಂತೆಯನು ತೊರೆದು ಚಿಂತನವನೆಸಗಿದರೆ
ಶಾಂತಿ ಸಮನಿಪುದು ಪೂರ್ಣಜ್ಞ.

೮೬೬

ಕೋಡಿಯಿದ್ದರೆ ಕೆರೆಯು, ನೀಡುವದು ಜಲರಾಶಿ
ಖೋಡಿಮನ ಕಟ್ಟಿದರೆ ಕೋಡಿ ಕೆರೆಯಂತೆ
ಮೂಡುವದು ಶಾಂತಿ ಪೂರ್ಣಜ್ಞ.

೮೬೭

ಅನುರಾಗ ಹೂವಾಗಿ, ಅನುನಯವು ಕಂಪಾಗಿ
ಮನವೆಲ್ಲ ಬೆಳಕಾಗಿ ದಾರಿ ಸಾಗಿದರೆ
ಕನಕದಂತಿಹನು ಪೂರ್ಣಜ್ಞ.

೮೬೮

ಪೂಜೆಯನು ನೋಡಿದರೆ, ಪೂಜೆಯನು ಮಾಡಿದರೆ
ಪೂಜೆಯಲಿ ಲೀನನಾಗುತಿರೆ ಶಿವಶಾಂತಿ
ರಾಜಿಪುದುಮನದಿ ಪೂರ್ಣಜ್ಞ.

೮೬೯

ಸದ್ದುಗದ್ದಲವಿರದ, ಕ್ಷುದ್ರಮಾನವರಿರದ
ಶುದ್ಧಗವಿಯಲ್ಲಿ ಕುಳಿತು ಧ್ಯಾನಿಸುವವನು
ಸಿದ್ಧತಾನಪ್ಪ ಪೂರ್ಣಜ್ಞ.

೮೭೦

ಪ್ರೇಮವಿದ್ದರೆ ಶಾಂತಿ ಪ್ರೇಮವಿದ್ದರೆ ಕಾಂತಿ
ಪ್ರೇಮವಿದ್ದರೆ ಸತ್ಯಧರ್ಮ ಬೆಳಗುವದು
ಪ್ರೇಮವೇ ಶಿವನು ಪೂರ್ಣಜ್ಞ.

೮೭೧

ಅಂತರಂಗದ ಪ್ರೀತಿ, ಸಂತಸವನೀಯುವದು
ಅಂತರಂಗದ ಕುಹಕ ಬಹಿರಂಗ ಪ್ರೀತಿ
ಕುಂತನೆಟ್ಟಂತೆ, ಪೂರ್ಣಜ್ಞ.

೮೭೨

ಪ್ರೇಮವೆಂಬುದೆ ಭಕ್ತಿ, ಪ್ರೇಮವೆಂಬುದೆ ರಕ್ತಿ
ಪ್ರೇಮವದು ಮಧುರ ಭುಕ್ತಿನರನಾತ್ಮಕ್ಕೆ
ಪ್ರೇಮವೇ ಶಕ್ತಿ ಪೂರ್ಣಜ್ಞ.

೮೭೩

ಅನ್ನವಸ್ತ್ರವ ಕೊಟ್ಟು, ನಿನ್ನ ಪೋಷಿಸಿದವಗೆ
ಬನ್ನ ಕಳೆದವಗೆ ಆಯುಷ್ಯಪರ್ಯಂತ
ನಿನ್ನರ್ತಿಯಿರಲಿ ಪೂರ್ಣಜ್ಞ.

೮೭೪

ಅಭಿಮಾನವಿಲ್ಲದಿರೆ ಸೊಬಗುಂಟೆ ಬಾಳಿನಲಿ?
ನಭದಲ್ಲಿ ಚಂದ್ರನಿಲ್ಲದಿರೆ ಸೊಬಗುಂಟೆ?
ಅಭಿಮಾನ ತಳೆಯೊ ಪೂರ್ಣಜ್ಞ.

೮೭೫

ಧ್ಯಾನದಲಿ ಮನವಿರಿಸಿ, ಮೌನದಲಿ ಉಂಬಲ್ಲಿ
ಹೀನಗುಣವಳಿದು ಶಿವಶಾಂತಿ ಸಮನಿಪುದು
ಜ್ಞಾನಕಿದು ಮಾರ್ಗ ಪೂರ್ಣಜ್ಞ.

೮೭೬

ಮನಮುನಿಸು ಕಿನಿಸುಗಳ, ಮನೆಯುತಾನಾಗಿರಲು
ಎನಿತಯ್ಯ ಮಾನಸ್ವಯವಪ್ಪ ಬಗೆ? ಮೊದಲು
ಮನಸ್ವಚ್ಛಗೊಳಿಸು ಪೂರ್ಣಜ್ಞ.

೮೭೭

ಇಲಿ ಕಂಡು ಬೆಕ್ಕುಗಳು, ಮೊಲ ಕಂಡು ನಾಯಿಗಳು
ಗಳಿಲನೇ ನೆಗೆದು ಹಿಡಿವಂತೆ ವಿಷಯ ಸುಖ
ಕೆಳೆಸುವದು ಮನವು ಪೂರ್ಣಜ್ಞ.

೮೭೮

ಪರಮಾರ್ಥ ಸಾಧನೆಗೆ, ಅರಿವೆಂಬ ಕೃಷಿಯನ್ನು
ನಿರುತ ಮಾಡುತಿರೆ ಪರಮಾನಂದ ಫಲ
ದೊರೆಯುವದು ನಿಜವು ಪೂರ್ಣಜ್ಞ.

೮೭೯

ಮನೆಯು ಕಿರಿದಿದೆಯೆಂದು, ಮನದೊಳಗೆ ಕೊರಗದಿರು
ಮನೆಗಿಂತ ನಿನ್ನ ಮನವು ಕಿರಿದಾಗಿರಲು
ಧನಿಕನಿಗುಮೇಲು ಪೂರ್ಣಜ್ಞ.

೮೮೦

ಗಿಳಿಯೋದು ನಿಷ್ಫಲವು, ಒಳಬೆಳಕ ನೀಡದದು
ತಿಳಿದೋದು ಒಳಗೆ ಬೆಳೆಯುವದು ಹೊಳೆಯುವದು
ತಿಳುವಳಿಕೆ ಬೆಳಕು, ಪೂರ್ಣಜ್ಞ.

೮೮೧

ಬಿರುಸು ಮಾತುಗಳಿಂದ, ವಿರಸಕಿಡಿ ಕಾರುವದು
ಅರಿವೆಲ್ಲ ನಶಿಸಿ ದ್ವೇಷ ಧಗಧಗಿಸುವದು
ಕೊರಗುವದು ಮನವು ಪೂರ್ಣಜ್ಞ.

೮೮೨

ಗೆಲುವಿಲ್ಲದಿರೆ ಮನವು, ನಲಿದಾಡಬಹುದೇನು?
ಗೆಲುವ ಪಡೆಯುವೊಡೆ ಶುದ್ಧಕಾಯಕದಲ್ಲಿ
ನೆಲೆಗೊಳಿಸು ಮನವ ಪೂರ್ಣಜ್ಞ.

೮೮೩

ಮನವು ಮರ್ಕಟನಂತೆ, ಕ್ಷಣ ಕ್ಷಣದಿ ಲಂಘಿಪುದು
ಮನ ಮೋಹಿನಿಯರ ಮೈಮಾಟ ನೋಡುವದು
ಮನವ ನಿಗ್ರಹಿಸು ಪೂರ್ಣಜ್ಞ.

೮೮೪

ಮನವನ್ನು ನಿಲ್ಲಿಸಲು, ತ್ರಿಣಯನನು ಪೂಜಿಸೈ
ಅನುದಿನದಿ ನಿನ್ನ ಕಾಯಕವ ಮಾಡಿದರೆ
ಮನವು ನಿಲ್ಲುವದು ಪೂರ್ಣಜ್ಞ.

೮೮೫

ಅವರವರ ಒಳಗಿನದು, ಅವರವರಿಗೇ ಗೊತ್ತು
ಅವರವರ ಮನವು ಶುದ್ಧವಿದ್ದರೆ ಜಗಕೆ
ಅವಗತಿಯು ಏಕೆ? ಪೂರ್ಣಜ್ಞ.

೮೮೬

ಸೇವೆಯಿಂದಲಿ ಭಕ್ತಿ, ಸೇವೆಯಿಂದಲಿ ಶಕ್ತಿ
ಸೇವೆಯಿಂ ದೇಶದೇಳಿಗೆಯು ಪ್ರೋನ್ನತಿಗೆ
ಸೇವೆಯೇ ಮೂಲ ಪೂರ್ಣಜ್ಞ.

೮೮೭

ಸೇವೆಯಿಂದಲಿ ಭಕ್ತಿ, ಸೇವೆಯಿಂದಲಿ ಮುಕ್ತಿ
ಸೇವೆಯಿಂದಲಿ ಭುಕ್ತಿ ನಾಡ ನೆಮ್ಮದಿಗೆ
ಸೇವೆಯೇ ಶಕ್ತಿ ಪೂರ್ಣಜ್ಞ.

೮೮೮

ಚಿತ್ತವಿಲ್ಲದೆ ಗುಡಿಯು, ಸುತ್ತಿದೊಡೆ ಬಂತೇನು?
ಚಿತ್ತ ಸ್ಥಿರಗೊಳಿಸಿ ಧ್ಯಾನಿಸುವ ಪುರುಷಂಗೆ
ಸತ್ಯ ದರ್ಶನವು ಪೂರ್ಣಜ್ಞ.

೮೮೯

ಸೂರ್ಯಕಿರಣಗಳನ್ನು, ಸಾರತರ ಸತ್ಯವನು
ಯಾರಿಗೂ ಕಾಣದಿಗುವಂತೆ ಬಯ್ತಿಡಲು
ಯಾರಿಂಗೆ ಸಾಧ್ಯ? ಪೂರ್ಣಜ್ಞ.

೮೯೦

ಸತ್ಯ ಸಾಕ್ಷಾತ್ಕರಿಸಿ, ಸತ್ಯ ಬಿತ್ತರಿಸಿದರೆ
ಚಿತ್ತಯಿಸುವವರು ಪೃಥ್ವಿಯೊಳಗೆಷ್ಟು ಜನ?
ಸತ್ಯಕಟುಜಗಕೆ ಪೂರ್ಣಜ್ಞ.

೮೯೧

ಸತ್ಯ ಸಹಿತತೆಯಿಂದ ನಿತ್ಯಶುದ್ಧತೆಯಿಂದ
ಕರ್ತವ್ಯನಿಷ್ಠೆ ಮತಿಕೃತಿಗಳಲಿ ಬರಲು
ಮರ್ತ್ಯವೇ ಸ್ವರ್ಗ ಪೂರ್ಣಜ್ಞ.

೮೯೨

ಸತ್ಯದಿಂ ನಡೆವವಗೆ ಕುತ್ತುಗಳು ಬರಬಹುದು
ನಿತ್ಯ ನಿಷ್ಠೆಯಲಿ ನಡೆಯುತ್ತಿದ್ದರೆ ಕೊನೆಗೆ
ಸತ್ಯಕ್ಕೆ ಜಯವು, ಪೂರ್ಣಜ್ಞ.

೮೯೩

ವ್ಯಕ್ತಿಯ ವಿಕಾಸಕ್ಕೆ, ಶಕ್ತಿ ವರ್ಧಿಸಬೇಕು
ಯುಕ್ತಿಯಿಂ ದುಡಿದು ಪರರನವಲಂಬಿಸದ
ವ್ಯಕ್ತಿ ನೀನಾಗು ಪೂರ್ಣಜ್ಞ.

೮೯೪

ಪರರ ಆಶ್ರಯದಲ್ಲಿ, ಕೊರಗದಿರು ಕೊನೆಯತನಕ
ಮರದ ಮೇಲಿರುವ ಲತೆಯೊಮ್ಮೆ ಬಿರುಗಾಳಿ
ಗುರುಳುವದು ನೆಲಕೆ ಪೂರ್ಣಜ್ಞ.

೮೯೫

ಕ್ರಮತಪ್ಪಿ ನಡೆವವರ, ಕ್ಷಮಿಸುತಿರು ಕೆಲವು ಸಲ
ಭ್ರಮೆಯಳಿದೊಡವರು ಮಾರ್ಗಕ್ಕೆ ಬಂದಪರು
ಕ್ಷಮೆ ದೊಡ್ಡ ಗುರುವು ಪೂರ್ಣಜ್ಞ.

೮೯೬

ಆತ್ಮ ಬಲದಿಂದಿಹವು, ಆತ್ಮ ಬಲದಿಂ ಪರವು
ಆತ್ಮಬಲದಿಂದ ಸಕಲ ಸಿದ್ಧಿಗಳಕ್ಕು
ಆತ್ಮಬಲಗಳಿಸು ಪೂರ್ಣಜ್ಞ.

೮೯೭

ಉಪ್ಪು ಉಂಡಿಹ ಮನೆಗೆ, ಕಪ್ಪು ಬಳಿಯಲು ಬೇಡ
ತುಪ್ಪದಂತಾಡಿ ಅಪ್ಪಿ ಬೆನ್ನಿರಿಯದಿರು
ನೆಪ್ಪಿರಲೀ ನೀತಿ ಪೂರ್ಣಜ್ಞ.

೮೯೮

ಸೋಲು ಬರುವದು ಸಹಜ, ಸೋಲಿಗಂಜದೆ ಸಾಗು
ಸೋಲಿನೇಣಿಯನು ಹಿಡಿದು ಮೇಲೇರುವದು
ಮೇಲುಮೆಯ ಗುಟ್ಟು ಪೂರ್ಣಜ್ಞ.

೯೯

ಸತ್ಯವನು ತಳಕೊತ್ತಿ, ಮಿಥ್ಯೆಯನು ಮೇಲೆತ್ತಿ
ನಿತ್ಯಪ್ರಚಾರ ಮಾಡಿದರು ಕೊನೆಯಲ್ಲಿ
ಸತ್ಯಕ್ಕೆ ಜಯವು ಪೂರ್ಣಜ್ಞ.

೧೦೦

ಜಪತಪವ ಮಾಳ್ಪಂಗೆ, ಅಪದೆಶೆಯು ಬರಲರಿದು
ಅಪಕೀರ್ತಿ ಬರದು, ಸನ್ಮಾನಿಯಾದವಗೆ
ಅಪಶಬ್ದವಿಲ್ಲ ಪೂರ್ಣಜ್ಞ.

೧೦೧

ಒಂದೆ ಗಾಲಿಯ ಮೇಲೆ, ಅಂದ ರಥ ನಿಲ್ಲುವದೆ?
ಬಂಧುರದ ಕಾರ್ಯಕ್ಕೆ ಯತ್ನ ಮಾಡದಿರೆ
ಸುದೈವ ಬಪ್ಪುದೇ? ಪೂರ್ಣಜ್ಞ.

೧೦೨

ಕಟ್ಟಿಕೊಟ್ಟಿಹ ಬುತ್ತಿ, ಎಷ್ಟು ದಿನ ಸಾಲುವದು?
ಕಷ್ಟದಿಂ ತಾನೆ ದುಡಿದು ಪಡೆದದ್ದು ಬಹ-
ಳಷ್ಟು ದಿನ ಬಹುದು ಪೂರ್ಣಜ್ಞ.

೧೦೩

ಕೀರ್ತಿಸೌಧಾಗ್ರವನು, ಹತ್ತುವದು ಹಗುರಲ್ಲ
ಸ್ಫೂರ್ತಿ ಜೊತೆಗೂಡಿ ಹಗಲಿರುಳು ಶ್ರಮಿಸಿದರೆ
ಕೀರ್ತಿ ಲಭಿಸುವದು ಪೂರ್ಣಜ್ಞ.

೧೦೪

ಸ್ವಂತ ತಾನೆಸಗದಿರೆ ಚಿಂತನೆಯು ಫಲಿಸೀತೆ?
ಮಂತ್ರ ಹಾಕಿದರೆ ಬಾಯ್ಗೆ ಮಾವಿನ ಹಣ್ಣು
ತಂತಾನೆ ಬಹುದೆ? ಪೂರ್ಣಜ್ಞ.

೧೦೫

ವ್ಯಕ್ತಿತ್ವ ಸಾಧನೆಗೆ, ಭಕ್ತಿಯದು ದೃಢಮೂಲ
ವ್ಯಕ್ತಿತ್ವ ಬೆಳೆದಂತೆ ಬೆಳಗುವದು ಶಕ್ತಿ
ಮುಕ್ತಿಗದು ಸುಪಥ ಪೂರ್ಣಜ್ಞ.

೯೦೬

ಶೀಲವದು ಸರಳಗುಣ, ಶೀಲವದು ಸರಳಮನ
ಬಾಳೆಂಬ ಪಟವ ಎತ್ತರಕೆ ಏರಿಸಲು
ಶೀಲವೇ ಸೂತ್ರ ಪೂರ್ಣಜ್ಞ.

೯೦೭

ಶೀಲವೇ ಸಂಸ್ಕೃತಿಗೆ, ಮೂಲ ಪೋಷಕ ತತ್ತ್ವ
ಶೀಲಕ್ಕೆ ಭಂಗ ಬಾರದೊಲು ಬಾಳಿದರೆ
ಬಾಳು ಬಂಗಾರ ಪೂರ್ಣಜ್ಞ.

೯೦೮

ಶೀಲ ಚಂದ್ರೋದಯದಿ, ಬಾಳು ಬೆಳ್ದಿಂಗಳವು
ಮೇಲಾದ ಸುಗುಣ ಶಾಂತಿ ನಕ್ಷತ್ರಗಳು
ಬಾಳ ಬಾನಿನಲಿ, ಪೂರ್ಣಜ್ಞ.

೯೦೯

ಶೀಲ ಬಲವುಳ್ಳವನು, ಕಲ್ಯಾಣ ಕಾರ್ಯಗಳ
ಲೀಲೆಯಿಂ ಮಾಡಿ ಲೋಕವನು ತೋಷಿಪನು
ಶೀಲ ಶಿವಶಕ್ತಿ, ಪೂರ್ಣಜ್ಞ.

೯೧೦

ಶೀಲ ಶರಣಗೆ ಸಹಜ, ಲೀಲೆಯುಂತಿರಬೇಕು
ಬಾಲಕರ ಮುಗ್ಧ ಹಸನದಂತಿರಬೇಕು
ಹಾಲಕೆನೆಯಂತೆ ಪೂರ್ಣಜ್ಞ.

೯೧೧

ಶೀಲವಿಲ್ಲದ ಬಾಳು, ಹಾಳು ಮನೆಯಂತಿಕ್ಕು
ಶೀಲವಿಲ್ಲದನ ಮಾತುಕತೆ ಬರಿಜೊಳ್ಳು
ಸೀಳಾದ ಗಡಿಗೆ ಪೂರ್ಣಜ್ಞ.

೯೧೨

ಶೀಲವಿಲ್ಲದ ನುಡಿಯು, ಶೀಲವಿಲ್ಲದ ನಡೆಯು
ಶೀಲವಿರದಿರುವ ಬಾಳಿದ್ದು ಇರದಂತೆ
ಕೋಲು ಮುರಿದಂತೆ ಪೂರ್ಣಜ್ಞ.

೯೧೩

ಶೀಲದಿಂದಲಿ ಕನ್ಯೆ, ಶೀಲದಿಂದಲಿ ಕಾವ್ಯ,
ಶೀಲದಿಂ ಭಕ್ತಿ ಬೆಳಗುವದು ಲೋಕದಲಿ
ಶೀಲ ಬಹು ಮುಖ್ಯ ಪೂರ್ಣಜ್ಞ.

೯೧೪

ಶೀಲವನು ಮೂಬಗೆಯ, ಕಾಲವನು ಕಳೆಯದಲೆ
ಪಾಲಿಸಿದರವನು ಕಾಲನಿಗೆ ಬಹುದೂರ,
ಸೋಲಿಲ್ಲವವಗೆ ಪೂರ್ಣಜ್ಞ.

೯೧೫

ಶೀಲಜಲದಲಿ ಮಿಂದು, ಮೇಲಾದ ತತ್ವಗಳ
ಪಾಲಿಸುತ ಬಾಳ—ಶಿವಪೂಜೆ ಮಾಡುವಗೆ
ಶೀಲವಂತಿಕೆಯು ಪೂರ್ಣಜ್ಞ.

೯೧೬

ಕಾಯಕದೊಳಿರುವವಗೆ, 'ಕಾಯಕವೆ ಕೈಲಾಸ'
ಕಾಯಕವೆ ನರನ ಕಾಕು ಗುಣವಳಿಸಲ್ಕೆ
ಕಾಯಕಲ್ಪವು ಪೂರ್ಣಜ್ಞ.

೯೧೭

ಫಲದಾಶೆ ಮಾಡುವದು, ಒಳಿತಾದ ಕ್ರಿಯೆಯಲ್ಲ,
ಫಲದಾಶೆ ತೊರೆದು ಕಾಯಕವೆ ಸತ್‌ಕ್ರಿಯೆಯು,
ತಿಳಿದು ಆಚರಿಸು ಪೂರ್ಣಜ್ಞ.

೯೧೮

ಕರ್ಮವನು ಮಾಡುತ್ತ, ಧರ್ಮವನು ಬಿಡಬೇಡ
ಕರ್ಮವನು ಮಾಡು—ಬಯಸದಿರು ಪ್ರತಿಫಲವ
ಮರ್ಮವನು ತಿಳಿದು ಪೂರ್ಣಜ್ಞ.

೯೧೯

ಕೆಸರಿನಲಿ ದುಡಿವವಗೆ, ಮೊಸರನ್ನ ದೊರಕೀತು
ಹಸಿಹೆಣದ ಹಾಗೆ ಬಿದ್ದವನ ಹೊಟ್ಟೆಯಲಿ
ಕಸಿವಿಸಿಯು ಕುಣಿತ ಪೂರ್ಣಜ್ಞ.

೬೨೦

ಕಾಯಕದ ಹಣಧರ್ಮ, ಕೀಯುವನ ಕರ್ಮವದು
ಮಾಯವಾದಪುದು ಲಭಿಸುವದು ಆಧ್ಯಾತ್ಮ
ಶ್ರೇಯೋಭಿವೃದ್ಧಿ ಪೂರ್ಣಜ್ಞ.

೬೨೧

ಮೇಲೆ ಭೀಕರ ಗಾಳಿ, ಆಳದಲಿ ನಕ್ರಾಳಿ
ಕಾಲು ಹಿಡಿದಿರಲು ಸಂಸಾರ ಸಾಗರದಿ
ತೇಲುವವ ಧೀರ ಪೂರ್ಣಜ್ಞ.

೬೨೨

ಹೋರಾಡು ಜೀವನದಿ, ಧೀರ ಪಥವನು ಪಿಡಿದು
ದೂರ ಸರಿಯದಿರು ಹೆದರಿ ಹಿಂಜರಿಯದಿರು
ಹೋರಾಟ ಬದುಕು ಪೂರ್ಣಜ್ಞ.

೬೨೩

ವೈರಿಗಳ ಕೂಡ ಪ್ರತಿ ವೈರವನು ಬೆಳೆಸದಿರು
ಆರಿಸಲು ಉರಿಯ ನೀರೆರೆಯುವೊಲು ಮೈತ್ರಿ
ವೈರಕ್ಕೆ ಮದ್ದು ಪೂರ್ಣಜ್ಞ.

೬೨೪

ವೀರಾಧಿವೀರರಿಗೆ ನಾರಿಯರು ಒಲಿವಂತೆ
ಧೀರ ಸಾಹಸಿಯ ಬೆಂಬತ್ತುವಳು ಲಕುಮಿ
ಧೀರಾತ್ಮನಾಗು ಪೂರ್ಣಜ್ಞ.

೬೨೫

ಅಗ್ನಿ ಸ್ನಾನದಿ ಚಿನ್ನ, ಝುಗ್ಗನೇ ಹೊಳೆಯುವದು
ವಿಘ್ನಗಳಿಗಂಜಿ ಬೆಂಗೊಡನು ಧುರ ಧೀರ
ನುಗ್ಗು, ಮುನ್ನುಗ್ಗು ಪೂರ್ಣಜ್ಞ.

೬೨೬

ಕಷ್ಟಗಳು ಬರುತಿರಲು, ಮೆಟ್ಟಿ ಹಾಕುವೆನೆಂಬ
ಗಟ್ಟಿ ಮನವಿರಲಿ ದಿಟ್ಟತನ ಗೆಲವುಗಳ
ಗುಟ್ಟು, ಧೀರನಿಗೆ ಪೂರ್ಣಜ್ಞ.

೯೨೭

ಮೆತ್ತಗಿದ್ದರೆ ನಿನಗೆ, ಲತ್ತೆ ಕೊಡುವವರು ಜನರು
ಧುತ್ತೆಂದು, ನಿಲ್ಲು ಡೊಗ್ಗಿ ಬರುವವರು ತಾವೆ
ತೊತ್ತುಗಳ ಹಾಗೆ ಪೂರ್ಣಜ್ಞ.

೯೨೮

ನೆರೆಬಿಗಿದ ಕಟ್ಟಿಗೆಯು, ಹೊರೆಯಂತೆ ಒಕ್ಕಟ್ಟು
ಹಿರಿದಿಟ್ಟ ಒಂಟಿ ಕಟ್ಟಿಗೆಯು ಕ್ಷಣದಲ್ಲಿ
ಮುರಿಯುವದು ಸುಲಭ ಪೂರ್ಣಜ್ಞ.

೯೨೯

ಸಂದೇಹ ಮನುಜನನು, ಮುಂದೆ ಸಾಗಲು ಬಿಡದು
ಮುಂದೆ ನೀ ಸಾಗು, ನಿನ್ನ ನೆರವಿಗೆ ದೈವ
ಬಂದಪುದು ಕೊನೆಗೆ ಪೂರ್ಣಜ್ಞ.

೯೩೦

ತೋರುತಿಹ ವಸ್ತುಗಳ ಭಾರಿ ಹಾವೆಂದರದು
ಭೂರಿ ಸಂಶಯದಿ ಜರಿಯದಿರು ಅರಿತರದು
ತೋರುವದು ಮಿಥ್ಯ ಪೂರ್ಣಜ್ಞ.

೯೩೧

ಸಂದೇಹ ಬಂದಾಗ, ಸಂದಿಗ್ಧ ಸಮಯದಲಿ
ಎಂದಿಗೂ ಮರೆತು ವಚನವನು ಕೊಡಬೇಡ
ಮುಂದಕ್ಕೆ ಹಾಕು ಪೂರ್ಣಜ್ಞ.

೯೩೨

ಶಂಕೆಗಳು ಸಂಕೋಲೆ, ಸಂಕಲ್ಪ ಸಾಧನೆಗೆ
ಮಂಕಕ್ಕು ಮತಿಯು ಘನಬಲದ ಧೀಗಜಕ್ಕೆ
ಅಂಕುಶದ ಇರಿತ ಪೂರ್ಣಜ್ಞ.

೯೩೩

ಶಂಕಾಸ್ವಭಾವಿಗಾ, ತಂಕಗಳೆ ಕಾಣುವವು
ಶಂಕೆಯದು ಉಭಯ ಸಂಕಟದಿ ನೂಕುವದು
ಶಂಕೆ ತರವಲ್ಲ ಪೂರ್ಣಜ್ಞ.

೯೩೪

ಸಂಧಾನ ಮಾಡುವೊಡೆ, ಸಂದೇಹಗಳನಳಿಸು
ನೊಂದು ತುಂಡಾದ ಮನಗಳನು ಬೆಸೆಯುವದೆ
ಸಂಧಾನವಯ್ಯ ಪೂರ್ಣಜ್ಞ.

೯೩೫

ಶ್ರಮಪಟ್ಟು ದುಡಿವವಗೆ, ಶ್ರಮವಕ್ಕು ಕಲ್ಪತರು
ಶ್ರಮಪಡದ ಮನುಜ ಮೈಗಳ್ಳ ಬಲುಗಳ್ಳ
ಭೂಮಿಗವ ಭಾರ ಪೂರ್ಣಜ್ಞ.

೯೩೬

ಮಾಡುವಗೆ ಸುಖವುಂಟು, ಮಾಡದಲೆ ಇರುವವನು
ಬೇಡುವನು ಭಿಕ್ಷೆ, ಮೈಗಳ್ಳನಾಗುವನು
ಖೋಡಿಯೆನಿಸುವನು ಪೂರ್ಣಜ್ಞ.

೯೩೭

ಹುಟ್ಟಿಸಿದ ಶಿವತಾನೆ, ಕಟ್ಟಿಕೊಡುವನು ಬುತ್ತಿ
ಕಷ್ಟ ಪಡಲೇಕೆ? ಎಂಬ ಮೈಗಳ್ಳನಿಗೆ
ಕಷ್ಟ ಸಾವನಕ ಪೂರ್ಣಜ್ಞ.

೯೩೮

ಬಲವಂತನಿಗೆ ಭೂಮಿ, ಛಲವಂತನಿಗೆ ಹೊನ್ನು
ತಿಳಿಯಬಲ್ಲವಗೆ ದೊರೆಯುವದು ಸುಜ್ಞಾನ
ಬಲವಿರಲು ಗೆಲವು ಪೂರ್ಣಜ್ಞ.

೯೩೯

ದುರಿತ ಕರ್ಮವ ತೊರೆದು, ಪರಮ ತತ್ವವನರಿತು
ಮರೆವೆಯನು ನೀಗಿ ಸ್ಥಿರವಾದ ಅರಿವಿನಲಿ
ಚಿರಮುಕ್ತನಾಗು ಪೂರ್ಣಜ್ಞ.

೯೪೦

ಕಟ್ಟಿ ಕರಣಂಗಳನು, ಮೆಟ್ಟಿ ಷಡ್ರಿಪುಗಳನು
ಸುಟ್ಟು ದುರ್ವ್ಯಸನ ಸಾಧನೆಯ ಶ್ರೀಗಿರಿಯ
ತುಟ್ಟ ತುದಿ ಮುಟ್ಟು ಪೂರ್ಣಜ್ಞ.

೯೪೧

ನಾನೆಂಬಹಂಕೃತಿಯು, ಮೌನಚರ್ಯೆಗೆ ಮೃತಿಯು
ನಾನೆಂಬ ಕಾಡಕೋಣ ಕೋಡಿಂದಿರಿದು
ಧ್ಯಾನ ಭಂಗಿಪುದು ಪೂರ್ಣಜ್ಞ.

೯೪೨

ಅಹಮಿಕೆಯ ದೌರ್ಬಲ್ಯ ಬಹುಮುಖದೊಳಾವರಿಸೆ
ಸಹಜತೆಯ ಮುಖಕೆ ಮಸಿಹಚ್ಚಿದಂತಕ್ಕು
ಅಹಮಿಕೆಯನಳಿಸು ಪೂರ್ಣಜ್ಞ.

೯೪೩

ಗರ್ವದಿಂ ರಾವಣನು, ಗರ್ವದಿಂ ನಹುಷಾದಿ
ಗರ್ವಾಂಧರೆಲ್ಲ ಅಳಿದಿಹರು, ಗರ್ವದಿಂ
ಸರ್ವಸ್ವ ಹಾನಿ ಪೂರ್ಣಜ್ಞ.

೯೪೪

ಅಹಮೆಂಬ ದುರ್ಗುಣವು, ಬಹು ಘೋರ ಹೆಬ್ಬಾವು
ಅಹಮಾತ್ಮ ಬಲವ ನುಂಗಿನೊಣೆಯುದೆ ಬಿಡದು
ದಹಿಸದನು ಮೊದಲು ಪೂರ್ಣಜ್ಞ.

೯೪೫

'ನಾ ಹೆಚ್ಚು ನೀ ಹೆಚ್ಚು' ಈ ಹುಚ್ಚಿನೊಳು ಬಿದ್ದು
ಸೋಹಮೆಂಬುದನು ಮರೆತವಗೆ ಕೀರುತಿಯ
ದಾಹ ಹೆಚ್ಚುವದು ಪೂರ್ಣಜ್ಞ.

೯೪೬

ವಿಧಿ ಲೀಲೆ ತಿಳಿಯುವದು, ಎದೆಗಾರಗಸದಳವು
ಮದದಿ ಕೊಬ್ಬಿರುವ ಧನವಂತ ನೆದೆಗೊಮ್ಮೆ
ವಿಧಿಯೊದೆಯದಿರನು ಪೂರ್ಣಜ್ಞ.

೯೪೭

ಛಲದ ನಿಷ್ಠುರ ಬೇಡ, ಕುಲದ ಹೆಮ್ಮೆಯು ಬೇಡ
ಬಲವಂತನೆಂದು ಹಳಿಯಬೇಡನ್ಯರನು
ಖಲಬುದ್ಧಿ ಬೇಡ ಪೂರ್ಣಜ್ಞ.

೯೪೮

ನಾನೆಂಬ ಹಂತೆಯಳಿ, ಸ್ವಾನುಭವದರ್ಥ ತಿಳಿ
ನಾನು ಯಾರೆಂಬ ಜ್ಞಾನ ಮೂಡಿದ ಮನುಜ
ತಾನೆ ಶಿವಯೋಗಿ ಪೂರ್ಣಜ್ಞ.

೯೪೯

ದೊಡ್ಡ ಸ್ಥಾನಕೆ ಬಂದು, ಅಡ್ಡ ಬಿದ್ದರೆ ತಮ್ಮ
ಗುಡ್ಡದಂಥಘವು ಪೋಪುದೆನ್ನುವ ಜನರಿ
ಗಡ್ಡಿ ಮಾಡುವದೆ? ಪೂರ್ಣಜ್ಞ.

೯೫೦

ತನ್ನ ಬಲವೆ ಬೆಳೆದು, ತನ್ನ ದರ್ಪವೆ ಬೆಳೆದು
ತನ್ನಾಜ್ಞೆಗೆಲ್ಲ ಬಾಗಲೆಂದರೆ ಸಮತೆ
ಎನ್ನುವದು ಎಲ್ಲಿ? ಪೂರ್ಣಜ್ಞ.

೯೫೧

ಬುದ್ಧಿಶಕ್ತಿಯು ನರಗೆ, ಕೃದ್ಧದಾರಿಯ ನಳಿಸಿ
ಶ್ರದ್ಧನನ್ನಾಗಿ ಮಾಡುವದು ಗರ್ವವದು
ಎದ್ದು ಹೋಗುವದು ಪೂರ್ಣಜ್ಞ.

೯೫೨

ದುಡಿಯದಲೆ ಬೇಡಿದರೆ, ಕೊಡುವರೆ ಸಂಬಳವ?
ದುಡಿತ ದುಡ್ಡಿನ ತಾಯಿ ಇದ ಲಕ್ಷಿಸುತ್ತ
ದುಡಿದವನು ಪಡೆವ ಪೂರ್ಣಜ್ಞ.

೯೫೩

ಆಳೆಂದು ಬೀಗದಿರು, ಕೀಳೆಂದು ಬಗೆಯದಿರು
ಆಳು ಮಕ್ಕಳನು ಮನೆಮಕ್ಕಳೊಲು ನೋಡು
ಆಳುಗಳನೊಲಿಸು ಪೂರ್ಣಜ್ಞ.

೯೫೪

ಕೂಲಿಯಾಳೆಂದರಿದು, ಜೋಲು ಮುಖ ಹಾಕದಿರು
ವೇಳೆ ಕಳೆಯದಲೆ ಮೈ ಮುರಿದು ದುಡಿಯುತಿರು,
ಪಾಲಿಸುವನೊಡೆಯ ಪೂರ್ಣಜ್ಞ.

೬೫೫

ಒಡಲೊಳಗೆ ವಂಚಿಸುತ ಒಡೆಯನಿಗೆ ದ್ರೋಹಿಸುತ
ಅಡಿಗಡಿಗೆ ಕೇಡು ಮಾಳ್ಪ ಕಿಂಕರನವನು
ಅಡಗಿರುವ ಸರ್ಪ ಪೂರ್ಣಜ್ಞ.

೬೫೬

ಕುರುಡುನಂಬುಗೆಯು ಮನವ ಕುರುಡುಗೊಳಿಪದು ಜೋಕೆ
ತೊರೆ ಅದನು ಬೇಗ, ಅರಿವೆ ಗುರುವೆಂಬುದನು
ಸ್ಥಿರಗೊಳಿಸು ಮನದಿ ಪೂರ್ಣಜ್ಞ.

೬೫೭

ಅಂಧಶ್ರದ್ಧೆಯು ಬುದ್ಧಿ, ಮಾಂದ್ಯಕ್ಕೆ ಕಾರಣವು
ಮುಂದುವರಿವುದನು ತಡೆಯುವುದು, ಮೊದಲು ಬಿಡು
ಅಂಧ ಶ್ರದ್ಧೆಯನು ಪೂರ್ಣಜ್ಞ.

೬೫೮

ಚಿತ್ಕಿರಣ ಬೆಳಗಿಸುತ, ಹೃತ್ಕಮಲವರಳಿಸುತ
ಸತ್ಕಾರ್ಯದಲ್ಲಿ ತೊಡಗಿರುವ ಮಾನವನು
ಸತ್ಪುರುಷನಕ್ಕು ಪೂರ್ಣಜ್ಞ.

೬೫೯

ದಾನಗುಣಿ ಶ್ರೀಮಂತ, ಜ್ಞಾನಖಣಿ ಧೀಮಂತ
ಮಾನಸದಿ ಶಾಂತರಾದವರು ಜಗಕೆ ಕ
ಲ್ಯಾಣಕಾರಿಗಳು ಪೂರ್ಣಜ್ಞ.

೬೬೦

ನೀರನ್ನು ಮೋಡಗಳು, ಸಾರಫಲವನು ವೃಕ್ಷ
ಧಾರುಣಿಯ ಜನಕೆ ಕೊಡುವಂತೆ ಪರರಿಗುಪ
ಕಾರಿ ಸಜ್ಜನರು ಪೂರ್ಣಜ್ಞ.

೬೬೧

ದುರ್ಜನರ ದೂರವಿಡು, ಸಜ್ಜನರ ಬಳಿಸೇರು
ದುರ್ಜನರು ಹುಚ್ಚು ನಾಯಿಗಳು, ಸಜ್ಜನರು
ಹೆಚ್ಚೀನು ಹಾಲು ಪೂರ್ಣಜ್ಞ.

೬೬೨

ಸುಜ್ಞಾನಿಯಾದವನು, ಹುಣ್ಣಿಮೆಯ ಚಂದರನು
ಅಜ್ಞಾನಿ ಮನವು ಕಗ್ಗತ್ತಲೆಯ ರಾತ್ರಿ
ಸುಜ್ಞಾನಿ ಪೂಜ್ಯ ಪೂರ್ಣಜ್ಞ.

೬೬೩

ನಗೆಗೇಡಿ ಒಡೆದೋಡು, ಕಡವರದ ಪಾತ್ರೆಯೊಲು
ಒಡೆಯುದಲೆ ಬಾಳಿ ಹೊಳೆವಂತೆ ಹೊಳೆಯುವನು
ದೃಢ ನಡೆಯ ಜ್ಞಾನಿ, ಪೂರ್ಣಜ್ಞ.

೬೬೪

ಒಣತರ್ಕ ಕ್ರಕಚದಿಂ, ಮನವ ಕೊರೆ ಕೊರೆಯದಿರು
ಅನುಭವದ ಅಮೃತ ರಸಪಾಕ ನೀನುಂಡು
ಘನಜ್ಞಾನಿಯಾಗು ಪೂರ್ಣಜ್ಞ.

೬೬೫

ಹೆಣ್ಣನ್ನು ಬಿಡಬೇಡ, ಹೊನ್ನನ್ನು ಬಿಡಬೇಡ
ಮಣ್ಣ ಬಿಡಬೇಡ 'ಮನದಾಶೆಯನು' ಬಿಟ್ಟು
ತಣ್ಣಗಿರು ಸುಖದಿ ಪೂರ್ಣಜ್ಞ.

೬೬೬

ಜನರೊಲ್ಮೆಗಾಟಿಸದೆ, ಗುಣ ಕೃಷಿಯ ಮಾಡಿದರೆ
ಜನಜಂಗುಳಿಯದು ನಿನ್ನ ಪಾದಕೆ ಬಗ್ಗಿ
ವಿನಮಿಪುದು ತಾನೆ ಪೂರ್ಣಜ್ಞ.

೬೬೭

ಹಸಿದಿರುವ ಮನುಜರಿಗೆ, ವ್ಯಸನ ವ್ಯಾಕುಲಿಗಳಿಗೆ
ಅಶನವನು ನೀಡಿ ಸಂತೈಸುವನು ಕರುಣ
ರಸಋಷಿಯು ನಿಜದಿ ಪೂರ್ಣಜ್ಞ.

೬೬೮

ಪೂತಾತ್ಮನಾದಂತೆ, ಯಾತರದು ಭಯವಯ್ಯ?
ನೀತಿಯಲ್ಲಿ ನಡೆದು ತೋರುವಂತಹ ಧೀರ
ಈ ತಿರೆಗೆ ಬೇಕು ಪೂರ್ಣಜ್ಞ.

೯೭೯

ಮಾನಸದಿ ನಿರ್ಮಲತೆ, ಧ್ಯಾದಲಿ ತನ್ಮಯತೆ
ಪ್ರಾಣದಯೆ ಸುಗುಣ ಅಳವಟ್ಟ ಸಾಧಕನು
ಮಾನವೋತ್ತಮನು ಪೂರ್ಣಜ್ಞ.

೯೮೦

ತೊರೆದು ಬಿಡು ಚಿಂತೆಯನು, ತೆರೆ ಜ್ಞಾನ ನೇತ್ರವನು
ಸ್ಫುರಿಸುವದು ದಿವ್ಯ ಶಕ್ತಿ ನಿನ್ನಾತ್ಮದಲಿ
ಧುರ ಧೀರನಾಗು ಪೂರ್ಣಜ್ಞ.

೯೮೧

ಶೀತೋಷ್ಣ ಸುಖ ದುಃಖ, ಪ್ರೀತಿಯಿಂ ಸಮಗಂಡು
ನೀತಿಯಿಂ ನಡೆದು ಸ್ಥಿತಪ್ರಜ್ಞನಾದವಗೆ
ಯಾತರದು ಚಿಂತೆ? ಪೂರ್ಣಜ್ಞ.

೯೮೨

ಬಿಟ್ಟು ಹೋಗುವ ಕಾಯಕೆಷ್ಟೊಂದು ಮಮತೆಯದು
ದಿಟ್ಟಡಿಯನ್ನಿಟ್ಟು ನಡೆವವಗೆ ಜಯಮಾಲೆ
ಕಟ್ಟಿಹುದು ಮುಂದೆ ಪೂರ್ಣಜ್ಞ.

೯೮೩

ಸ್ವಂತಶಕ್ತಿಯು ಇರಲು, ತಂತಾನೆ ತೋರುವದು
ಕಸ್ತೂರಿಯನ್ನು ಒಚ್ಚಿಟ್ಟಿರದು ಕಂಪ
ಬಿತ್ತರಿಸದಿಹುದೆ? ಪೂರ್ಣಜ್ಞ.

೯೮೪

ಏಕಸತಿ ವ್ರತದೊಳಗನೇಕ ಲಾಭಗಳುಂಟು
ಬೇಕು ಬೇಡೆಂಬ ಭವಬೀಜ ಹುರಿಯುವದೆ
ಏಕೈಕ ಗುರಿಯು ಪೂರ್ಣಜ್ಞ.

೯೮೫

ಹೇಯಕರ್ಮಗಳನ್ನು ಪಾಯದಿಂದಿದಿರಿಸುತೆ
ಧ್ಯೇಯ ಸಾಧಿಸುತ ಬಾಳುವವ ನಿಜಧರ್ಮಿ
ನ್ಯಾಯ ನೀತಿಯುತ ಪೂರ್ಣಜ್ಞ.

೯೭೭
ದುಷ್ಟದಮನವ ಮಾಳ್ಪ, ಶಿಷ್ಟರಕ್ಷಣೆ ಮಾಳ್ಪ
ಶ್ರೇಷ್ಠ ಸದ್ಗುಣದ ಶಕ್ತಿ ಅವತರಿಸುವದು
ಇಷ್ಟ ಜಗಕಿಂದು ಪೂರ್ಣಜ್ಞ.

೯೭೭
'ಶರಣಂಗೆ ಛಲಬೇಕು, ಪರಧನವನೊಲ್ಲೆಂಬ
ಪರಸತಿಯನೊಲ್ಲೆ' ಎಂಬಂತೆ ನಡೆವ
ನರನು ನಿಜಶರಣ ಪೂರ್ಣಜ್ಞ.

೯೭೮
ನಾನೆಂಬುದನು ಅಳಿದು, ನೀನೆಂಬುದನು ತಿಳಿದು
ಸ್ವಾನುಭಾವದಲಿ ಲೀನನಾಗಿಪ್ಪುದದು
ಜ್ಞಾನಿ ಲಕ್ಷಣವು ಪೂರ್ಣಜ್ಞ.

೯೭೯
ತ್ಯಾಗದಿಂದಲಿ ಭಕ್ತಿ, ತ್ಯಾಗದಿಂದಲಿ ಶಕ್ತಿ
ತ್ಯಾಗವೇ ನರನ ಉನ್ನತಿಗೆ ಕಾರಣವು
ತ್ಯಾಗದಿಂ ಬಾಳು ಪೂರ್ಣಜ್ಞ.

೯೮೦
ಭವತಿಮಿರ ಕಳೆಯಲ್ಕೆ, ಅವಿರತಂ ಸಾಧನೆಯ
ಶಿವಪಥದಿ ನಡೆವ ಸಂಕಲ್ಪ ಸಂಪುಷ್ಟ
ಸುವಿಚಾರಿ ನೀನಾಗು ಪೂರ್ಣಜ್ಞ.

೯೮೧
ಮದಗಜಗಮನೆ ತಾನೆ, ಬೆದೆ ಬಂದುಕರೆಯುತಿರೆ
ಮದನಾರಿಯನ್ನು ನೆನೆದು ವಿಕೃತಿಯನು ತೊರೆ
ವುದೆ ವಿರತಿಯಯ್ಯ ಪೂರ್ಣಜ್ಞ.

೯೮೨
ವ್ಯಕ್ತಿಗತ ಸಾಧನೆಯು, ಶಕ್ತಿಯದು ಬೆಳೆಯಲ್ಕೆ
ಭಕ್ತಿ ಬಲ ಬೇಕು, ಸಾಹಸಕೆ ಧೀರಗುಣ
ಯುಕ್ತ ಮನ ಬೇಕು ಪೂರ್ಣಜ್ಞ.

೯೮೩

ಹೊಸ ಹುರುಪು ಬಾಳಿನಲಿ ಹೊಸ ಶಕ್ತಿ ಪ್ರಕಟಿಸುವದು
ಹೊಸ ದೃಷ್ಟಿ ತಳೆದು ಹೊಸ ಹಾದಿಯಲಿ ಸಾಗು
ಜಸ ಪಡೆವೆ ನೀನು ಪೂರ್ಣಜ್ಞ.

೯೮೪

ಬದುಕಿನಲಿ ನೊಂದವರ ಸದುಹೃದಯದಿಂ ಕಂಡು
ಮುದಗೊಳಿಸು ನಿನ್ನ ಅಧಿಕಾರ ಶಕ್ತಿಯನು
ಸದುಪಯೋಗಿಸುತ ಪೂರ್ಣಜ್ಞ.

೯೮೫

ಜೀವನದಿ ಸಿಹಿಕಹಿಗಳಾವರಿಸಿ ಬರುತಿರಲು
ಭಾವ ಸಮತೆಯನು ಸಾಧಿಸಿದರಾ ಮನುಜ
ದೇವನಾಗುವನು ಪೂರ್ಣಜ್ಞ.

೯೮೬

ಕಡೆದಂತೆ ಬೆಣ್ಣೆಯನು ಗಡಗಡನೆ ಬರುವಂತೆ
ದುಡಿವವನ ಕೈಗೆ ದುಡ್ಡು ಬಂದುಪುದೆಂಬ
ನುಡಿಯು ನೆನಪಿರಲಿ ಪೂರ್ಣಜ್ಞ.

೯೮೭

ಅವರು ಹಾಗೆನ್ನುವರು ಇವರು ಹೀಗೆನ್ನುವರು
ಸುವಿಚಾರಿ ನೀ ನಿನಗೆ ಸುವಿವೇಕ ಗುರುವು
ಶಿವಪಥದಿ ಸಾಗು ಪೂರ್ಣಜ್ಞ.

೯೮೮

ತೋಟದಲಿ ತೊಡಗಿದರೆ, ಊಟ ಸವಿಹತ್ತುವದು
ಕಾಟಕರ ಸಂಗ ತೊಲಗಿ ಸಜ್ಜನರ ಒಡ
ನಾಟ ಬೆಳೆಯುವದು ಪೂರ್ಣಜ್ಞ.

೯೮೯

ಧೈರ್ಯವಿದ್ದರೆ ಶೌರ್ಯ, ಧೈರ್ಯವಿದ್ದರೆ ಕಾರ್ಯ
ಧೈರ್ಯವೇ ಸರ್ವ ಕಾರ್ಯಕ್ಕೆ ಸಾಧನವು
ಧೈರ್ಯವೇ ವೀರ್ಯ ಪೂರ್ಣಜ್ಞ.

೯೯೦

ಹೇಳುತಿಹ ಮಾತನ್ನು, ಆಲಸ್ಯ ಮಾಡದಲೆ
ಕೇಳಿ ನಿತ್ಯದಲಿ ನಿಷ್ಠೆಯಿಂ ದುಡಿವಂಥ
ಆಳುಗಳು ಬೇಕು ಪೂರ್ಣಜ್ಞ.

೯೯೧

ತಿಳಿದದ್ದು ತಿಳಿಸುವದು, ತಿಳಿಸಿದ್ದು ಉಳಿಸುವದು
ಉಳಿಸಿದ್ದು ಬೆಳೆಸುವದು ಬೆಳೆಸಿದ್ದು ಇಳಿದ–
ರೊಳಗೆ ಬೆಳಗುವದು ಪೂರ್ಣಜ್ಞ.

೯೯೨

ಜನನ ಮರಣದ ಗುಟ್ಟು, ಘನಮತಿಗಳಿಗು ಅಂದು
ತನುವಿರುವತನಕ ಘನಕಾರ್ಯವೆಸಗುವದೆ
ನಿನಗಿರುವ ಕಾರ್ಯ ಪೂರ್ಣಜ್ಞ.

೯೯೩

ಬಿದ್ದ ಮಾನವನನ್ನು ಎದ್ದವನು ಎಬ್ಬಿಸಲಿ
ಬಿದ್ದವಗೆ ಶಕ್ತಿ ನೀಡಿದರೆ ಅವನನ್ನು
ಉದ್ಧರಿಸಿದಂತೆ ಪೂರ್ಣಜ್ಞ.

೯೯೪

ಬಲಶಾಲಿಹೊರರಿಪುವ, ಗೆಲಬಹುದು ಹೋರಾಡಿ
ಒಳಗಿರುವ ಹಿತಶತ್ರುಗಳನು ಗೆಲ್ಲುವದು
ಬಲುಕಷ್ಟ, ಕಷ್ಟ ಪೂರ್ಣಜ್ಞ.

೯೯೫

ಅರ್ಥವಿರದಿರೆ ಬದುಕು, ವ್ಯರ್ಥವಾಗುವದಯ್ಯ
ಆರ್ತಜನಹಿತಕೆ ಅರ್ಥವನು ನೀಡಿದರೆ
ಸಾರ್ಥಕವು ಅರ್ಥ ಪೂರ್ಣಜ್ಞ.

೯೯೬

ಕಡುಜವ್ವನದಿ ವಿಕೃತಿ, ಅಡಿಗಡಿಗೆ ಬಂದಪುವು
ಎಡವದಿರು ನೀನು ಎಡಬಿಡದೆ ದೃಢಮನದಿ
ಮೃಡಧ್ಯಾನಮಾಡು ಪೂರ್ಣಜ್ಞ.

೯೯೭

ಜನರೊಲ್ಮೆಗಾಟಿಸದೆ, ಗುಣಕೃಷಿಯ ಮಾಡಿದರೆ
ಜನಜಂಗುಳಿಯದು ನಿನ್ನ ಪಾದಕೆ ಬಗ್ಗಿ
ವಿನಮಿಪುದು ತಾನೆ ಪೂರ್ಣಜ್ಞ.

೯೯೮

ಶುದ್ಧನಗೆ ಮನುಜನಿಗೆ, ಬುದ್ಧಿಯನು ತಿದ್ದುವದು
ಬಿದ್ದ ಮಾನವಗೆ ಒಳಿತಿರುವ 'ಮಾತ್ರೆ'
ಯಿದ್ದಂತೆ ನೋಡು ಪೂರ್ಣಜ್ಞ.

೯೯೯

ಚಂದ್ರಿಕೆಯ ಸೊಬಗಿನಲಿ, ಮಂದಾಕ್ಷಗೇನುಂಟು
ಮಂದಮತಿಗುಂಟೆ ಜ್ಞಾನ ಸುಖ ತತ್ವದಲಿ
ಮಾಂದ್ಯವನು ನೀಗು ಪೂರ್ಣಜ್ಞ.

೧೦೦೦

ದಯವು ಸದ್ಗುಣದರಸ, ನಯವು ನೀತಿಯ ರಾಣಿ
ಭಯ ಮುಖ್ಯ ಮಂತ್ರಿಯಾದಲ್ಲಿ ಆಡಳಿತ
ಜಯಶಾಲಿಯಕ್ಕು ಪೂರ್ಣಜ್ಞ.

೧೦೦೧

ಅರಿದವನು ಪೇಳದಲೆ, ಇರುತಿಹನು ಮೌನದೊಳು
ಅರಿಯದಲೆ ಇರುವವನು ಬರಿ ಜಂಭಕೊಚ್ಚುವನು
ಜರಿದು ನುಡಿಯುವನು ಪೂರ್ಣಜ್ಞ.

೧೦೦೨

ಹಿಡಿದ ಸತ್ಕಾರ್ಯಗಳ, ಬಿಡದೆ ಮುಗಿಸುವ ವ್ರತವ
ಹಿಡಿದವನ ಬಾಳು ಬಂಗಾರವಾಗುವದು
ದೃಢ ನಿಶ್ಚಯವದು, ಪೂರ್ಣಜ್ಞ.

೧೦೦೩

ನಡೆಯುತಿರು ಎಡಗಡೆಗೆ ಗಡಿಬಿಡಿಯ ಮಾಡದಿರು
ಎಡಬಲಕೆ ಹಿಂದೆ ಮುಂದೆ ನೀ ನೋಡುತ್ತ
ನಡೆ ಜೋಕೆಯಿಂದ ಪೂರ್ಣಜ್ಞ.

೧೦೦೪
ನೀರೊಳಗೆ ಆಡುವರ, ದೂರದಲಿ ಕಂಡವರ
ಘೋರಗರ್ವಾಂಧರಾದವರ ನಮಿಸದಿರು
ಸಾರಿ ಹೇಳುವೆನು ಪೂರ್ಣಜ್ಞ.

೧೦೦೫
ಮುಂದೆ ಹಾಕದೆ ಕೆಲಸ, ಇಂದೆ ಮಾಡುವದೊಳಿತು
ಮುಂದೂಡಿ ಮತ್ತೆ ಬೇಸರವ ಮಾಡಿದರೆ
ದಂದುಗವು ಬಿಡದು ಪೂರ್ಣಜ್ಞ.

೧೦೦೬
ನೀನಲ್ಪನೆಂಬನ್ಯೆಚ್ಯಾನು ಸಂಧಾನದಲಿ
ಹಾನಿ ನಿನಗುಂಟು ನಿನ್ನ ಹಿತಚಿಂತಕನು
ನೀನೆಂದು ನಂಬು ಪೂರ್ಣಜ್ಞ.

೧೦೦೭
ಸುವಿಚಾರವಿದ್ದವಗೆ, ಅವನತಿಯ ಭಯವಿಲ್ಲ
ಸುವಿಚಾರ ವೃಕ್ಷ ಜೀವನಕೆ ಫಲದಾಯಿ
ಸುವಿಚಾರ ಬೆಳೆಸು ಪೂರ್ಣಜ್ಞ.

೧೦೦೮
ದಡ್ಡರೊಡನಾಡಿದರೆ, ದಡ್ಡತನ ಬೆಳೆಯುವದು
ದೊಡ್ಡ ಜ್ಞಾನಿಗಳ ಒಡನಾಡಿದರೆ ನೀನು
ದೊಡ್ಡ ಗುಣ ಕಲಿವೆ ಪೂರ್ಣಜ್ಞ.

೧೦೦೯
ಸಂಶೋಧಕಗೆ ಸುಪ್ರ-ಶಂಸಾರ್ಹ ಮತಿಯಿರಲಿ
ಧ್ವಂಸಕ ವಿಚಾರ ಇತಿಹಾಸಕಪಚಾರ
ಸಂಶಯವು ಬೇಡ ಪೂರ್ಣಜ್ಞ.

೧೦೧೦
ದೊಡ್ಡಗುಣವಿಲ್ಲದವ, ದೊಡ್ಡವನೆನಿಸಬಹುದೆ?
ಅಡ್ಡನಾಡಿತನ ಬಿಟ್ಟು ಗುಣಪಡದವನು
ದೊಡ್ಡವನೆನಿಪನು ಪೂರ್ಣಜ್ಞ.

೧೦೧೧

ದೀನದಲಿತರ ಸೇವೆ, ಸಾನುರಾಗದಿ ಮಾಡು
ಮಾನವೀಯತೆಯು ಕಾರುಣ್ಯದಾಚರಣೆ
ಜ್ಞಾನದಾಚರಣೆ ಪೂರ್ಣಜ್ಞ.

೧೦೧೨

ಮನವು ಕನಕದ ಪಾತ್ರೆ, ಅನುದಿನವು ಬೆಳಗದನು
ಚಿನುಮಯಾನಂದರಸ ತುಂಬಿಕೊಳ್ಳಲ್ಕೆ
ಅಣಿಗೊಳಿಸು ಬಿಡದೆ ಪೂರ್ಣಜ್ಞ.

೧೦೧೩

ಸೊಗಯಿಸುವ ತೋಟದಲಿ, ನಗುವಂತೆ ಪುಷ್ಪಗಳು
ಬಗೆಯ ತೋಟದಲಿ ಸುಗುಣ ಸುಮಗಳು ಅರಳಿ
ಮಿಗೆ ಪರಿಮಳಿಸಲಿ ಪೂರ್ಣಜ್ಞ.

೧೦೧೪

ಅಂಧ ಶ್ರದ್ಧೆಯನಳಿಸಿ, ಬಂಧುರಾರ್ಥವ ತಿಳಿಸಿ
ಮುಂದುಗಾಣದಿಹ ಚಿತ್ತಕ್ಕೆ ಗತಿದೋರ್ಪ-
ವಂಧೀರ ಗುರುವು ಪೂರ್ಣಜ್ಞ.

೧೦೧೫

ನಾಳೆ ಎಂಬನ ಬಾಳು, ಹಾಳೆನ್ನುತಿದೆ ಗಾದೆ
ಆಲಸ್ಯ ತೊರೆದು ಇಂದಿನದನಿಂದೆಸಗು
ಏಳು ಕೆಲಸಕ್ಕೆ ಪೂರ್ಣಜ್ಞ.

೧೦೧೬

೧ಐದು ಸರ್ಪಂಗಳಿಗೆ, ಒಂದೆ ದೇಹವಕಂಡೆ
ಈ ದೇಹ ಬಾಧಿಸಲು ಎರಡು ಹಲ್ಲುಗಳು
ಹಾದಿಹವು ಮುಂವೆ ಪೂರ್ಣಜ್ಞ.

---

೧ ಐದು ಸರ್ಪಗಳು ಅಂದರೆ, ಪಂಚೇಂದ್ರಿಯುಂಗಳು. ಇದಕ್ಕೆ ಮನಸ್ಸೆಂಬ ದೇಹ, ಎರಡು ದಂತಗಳು ಅಂದರೆ, ಬೇಕು ಬೇಡೆಂಬೆರಡು ದಂತಗಳು ಬಾಧಿಸುತ್ತವೆ.

೧೦೧೭

ಒಡೆತನದ ಫಲದಲ್ಲಿ, ದೃಢಶಕ್ತಿ ತುಂಬಿಹುದು
ಕಡೆಗಣಿಸದಿದ್ದು ಧೈರ್ಯವ ತಾಳುತ್ತ
ನಡೆಯುವವರು ಮುಂದೆ ಪೂರ್ಣಜ್ಞ.

೧೦೧೮

ಸುಖವು ಬಂದಿರುವಾಗ, ದುಃಖ ಬಂದಿರುವಾಗ
ಸುಖ ದುಃಖಗಳಲಿ ಸಮನಾಗಿ ಇರುವವನು
ಸುಖಿಯು ನಿಜವಾಗಿ ಪೂರ್ಣಜ್ಞ.

೧೦೧೯

ಬೆಳಗಿನೊಳ್ಳೆಯ ಸಮಯ, ಕಳೆದುಕೊಳ್ಳಲು ಬೇಡ
ಬೆಲೆಕೊಟ್ಟರೂ ಸಿಗದು ಬಳಸು ಒಳಿತಿಂಗೆ
ಗೆಲವಿಗಿದುಹಾದಿ ಪೂರ್ಣಜ್ಞ.

೧೦೨೦

ಸಂತೋಷದಿಂದಿರುವ, ಸಂತನು ಸದಾಸುಖಿಯು
ಚಿಂತೆಭ್ರಾಂತಿಗಳು ಬಾಧಿಸವು ಅವನನ್ನು
ಶಾಂತನೇ ಸಂತ ಪೂರ್ಣಜ್ಞ.

೧೦೨೧

ಅಪವಾದ ಕೊಡದಿರು ನಿರಪರಾಧಿಯಾದವಗೆ
ಅಪಚರಿಸಬೇಡ ವಿಭುಧರನು ಮಾನ್ಯರನು,
'ಅಪ'ವನ್ನು ತ್ಯಜಿಸು ಪೂರ್ಣಜ್ಞ.

೧೦೨೨

ವಾದವನು ಮಾಡದಿರು, ಕ್ರೋಧಿಗಳ ಜತೆಯಲ್ಲಿ
ಹಾದಿ ಬಿಟ್ಟಂಥ ದುರ್ವಾದಿಗಳ ಮಾತು
ಬೂದಿ ತಿಂದಂತೆ ಪೂರ್ಣಜ್ಞ.

೧೦೨೩

ಮಾತು ಮೌನಗಳೆರಡು, ಓತಪ್ರೋತವಾಗಿರಲಿ
ಈ ತೆರದಿ ನಾಣ್ಯದಿಕ್ಕೆಲವುಗಳು ಎರಡು
ನೀತಿಯಿಂ ಸಾಗು ಪೂರ್ಣಜ್ಞ.

೧೦೨೪

ಪದವಿಗಳ ಪಡೆದವನು ಸದುವಿನಯಯಾಗಿರಲಿ
ಸದುವಿನಯವೊಂದು ಬಲುದೊಡ್ಡ ಗುಣರತ್ನ
ಪದವಿಗಳ ಪದವಿ ಪೂರ್ಣಜ್ಞ.

೧೦೨೫

ಜಲದ ಗುಳ್ಳೆಗಳಂಥ, ಹುಲು ಮಾತನಾಡದಿರು
ಒಳಿತಾಗಿ ನಡೆದು ಹಿತನುಡಿದು ಸಭ್ಯತೆಯ
ಕಳಸನೀನಾಗು ಪೂರ್ಣಜ್ಞ.

೧೦೨೬

ಕೋಪ ಪಾಪದ ಘೋರ, ಕೂಪಾರ ಕಾಣಯ್ಯ
ಕೋಪವನು ತ್ಯಜಿಸು ಶಾಂತಿರಸನಿಧಿ ಶಿವನ
ಶ್ರೀಪಾದಕೆರಗು ಪೂರ್ಣಜ್ಞ

೧೦೨೭

ತಾಸಾದರೂ ಓದು, ಲೇಸಹುದು ಇಡಿದಿನಕು
ತಾಸೊಂದು ಪ್ರತಿದಿನವು ಓದಿ ಘನ ಜ್ಞಾನ
ಕೋಶ ನೀನಾಗು ಪೂರ್ಣಜ್ಞ.

೧೦೨೮

ಗಾಳಿಗೆದುರಾದಲ್ಲಿ, ಗಾಳಿಪಟವೇರುವದು
ಮೇಲೆ ಏರುವೊಡೆ ಎದುರಿಸು ವಿರೋಧಿಗಳ
ತಾಳಿಧೈರ್ಯವನು ಪೂರ್ಣಜ್ಞ.

೧೦೨೯

ಶಕ್ತಿಯಿರುವನಕ ಆಸಕ್ತಿಯಿಂ ದುಡಿಯುತ್ತ
ಮುಕ್ತನಾಗುವುದೊಳಿತು ದುಡಿದಷ್ಟು ಫಲವು
ಸಿಕ್ಕುವದು ನಿಕ್ಕಿ ಪೂರ್ಣಜ್ಞ.

೧೦೩೦

ನ್ಯಾಯವಾದಿಗಳುಆದಾಯದಾಶೆಗೆ ಬಿದ್ದು,
ನ್ಯಾಯದಲಿ ಪಕ್ಷಗಾರನು ರಕ್ಷಿಸುವ
ಧ್ಯೇಯ ಬಿಡದಿರಲಿ ಪೂರ್ಣಜ್ಞ.

೧೦೩೧

ಕೋಪಪರರನು ಸುಡದು, ಕೋಪಾಗ್ನಿಯದು ಹೊತ್ತಿ
ಕೋಪಿಯನೆ ಮುತ್ತಿ ದಹಿಸುವದು ನೀಬೇಗ
ಕೋಪವನು ತ್ಯಜಿಸು ಪೂರ್ಣಜ್ಞ.

೧೦೩೨

ಸುಧಾರಣೆ ಮಾಡುವರು, ಸದುವಿನಯದಿರಬೇಕು
ಸುಧಾರಣೆ ಬಹಿರಂಗ ರತ್ನ ಇದನರಿತು
ಸದ್ಗುಣಿಯಾಗು ಪೂರ್ಣಜ್ಞ.

೧೦೩೩

ಸುಗಮವಾಗಲು ಬಾಳು, ನಿಗಮಾಗಮವ ನೋದು
ಹಗಲಿರುಳು ಬಿಡದೆ ದುಡಿದಲ್ಲಿ ಬಾಳಿನಲಿ
ಸೊಗವು ತುಂಬುವದು ಪೂರ್ಣಜ್ಞ.

೧೦೩೪

ಸನ್ಮತಿಯ ಸಜ್ಜನನು, ಒಮ್ಮನದೊಳೋದುವನು
ಇಮ್ಮನವು ಅವನ ಬಳಿಸುಳಿಯದಂತಿಹುದು
ಸನ್ಮಾರ್ಗದಲ್ಲಿ ಪೂರ್ಣಜ್ಞ.

೧೦೩೫

ನಂಬಿಗೆಯು ಗಳಿಸುವದು, ನಂಬುಗೆಯು ಉಳಿಸುವದು
ನಂಬಿಕೆಯು ಬೆಳಸುವದು ಬಲುಕಷ್ಟ ಜಗದಿ
ನಂಬುಗೆಯೆ ಶಕ್ತಿ, ಪೂರ್ಣಜ್ಞ.

೧೦೩೬

ನಂಬಿಗೆಯೊಳಿದೆ ಭಕ್ತಿ, ನಂಬುಗೆಯೊಳಿದೆ ಶಕ್ತಿ
ಇಂಬಾದ ಸೃಷ್ಟಿರಚಿಸಿದನು ಆಬೊಮ್ಮ
ನಂಬುಗೆಯ ಬಲದಿ ಪೂರ್ಣಜ್ಞ.

೧೦೩೭

ಕಷ್ಟ ಕಾಲದಿ ಯಾರು ಎಷ್ಟೆಷ್ಟು ಭಯ ಪಡದೆ
ನಿಷ್ಠೆಯಲಿ ತಿಳಿವಳಿಕೆಯಿಂದ ನಡೆವವರು
ಶಿಷ್ಟರವರು ನಿಜ ಪೂರ್ಣಜ್ಞ.

೧೦೩೮

ಮನವಿರದೆ ದಾನವನು, ಒಣಯಶಕೆ ಮಾಡದಿರು
ಧನವ ಸತ್ಪಾತ್ರಕ್ಕೆ ನೀಡಿದರೆ ನಿಜದಿ
ಧನದಾನ ಸಫಲ ಪೂರ್ಣಾಜ್ಞ.

೧೦೩೯

ಪರರ ಪ್ರಗತಿಯ ಕಂಡು ಹಿರಿದಾಗಿ ಹಿಗ್ಗುತಿರು
ಸ್ಫುರಣಗೊಳಲಿ ಮನವು ಸಂತೋಷದಿಂದ
ಪರಮನೀತಿಯಿದು ಪೂರ್ಣಾಜ್ಞ.

೧೦೪೦

ಎಳೆಗಳೊಗ್ಗೂಡಿಕೆಯು, ಬಲವಾದ ಹಗ್ಗದಿಂ
ಬಲವುಳ್ಳ ಮದ್ದಾನೆ ಕಟ್ಟಬಹುದಲ್ತೆ
ಬಲವು ಒಕ್ಕಟ್ಟು ಪೂರ್ಣಾಜ್ಞ.

೧೦೪೧

ಗುಣವಂತರೊಡನಾಡು, ಗುಣಸಾಧನೆಯ ಮಾಡು
ಗುಣಗಳನು ಕಂಡು ಮತ್ಸರಿಸದಿರು ಮನದಿ
ಗುಣಪೂಜೆ ಮಾಡು ಪೂರ್ಣಾಜ್ಞ.

೧೦೪೨

ಆದರ್ಶ ಸಾಧಕಗೆ, ಭೇದ ಭಾವಗಳಿಲ್ಲ
ಆದರ್ಶಗುಣವು ಎಲ್ಲಿದ್ದರೂ ಆದನು
ಆದರಿಪನವನು ಪೂರ್ಣಾಜ್ಞ.

೧೦೪೩

ಮಾಡಿರುವ ತಪ್ಪಿಂಗೆ, ಬೇಡಿಕೊಳ್ಳೈ ಕ್ಷಮೆಯ
ಮಾಡದಿರು ತಪ್ಪ ಮತ್ತೊಮ್ಮೆ ಒಪ್ಪನ್ನು
ರೂಢಿಸಿಕೊ ಬೇಗ ಪೂರ್ಣಾಜ್ಞ.

೧೦೪೪

ಕಡುದ್ವೇಷಮಾರ್ಜನೆಯು ಗಡಿಬಿಡಿಯೊಳಾಗುವದೆ?
ಗಡನೆ ಮಾಯುವದೆ ದೀರ್ಘಕಾಲದ ಘಾಯ
ಹಿಡಿಶಾಂತಿ ಸೂತ್ರ, ಪೂರ್ಣಾಜ್ಞ.

೧೦೪೫

ಯೋಗ್ಯತೆಯು ಇಲ್ಲದಿರೆ, ಯೋಗ್ಯತೆಯ ಪಡೆಯಲ್ಕೆ
ಯೋಗ್ಯ ಮಾರ್ಗದಲಿ ನಡೆವಂಥ ಮಾನವನು
ಯೋಗ್ಯ ಮಾನವನು ಪೂರ್ಣಜ್ಞ.

೧೦೪೬

ಉತ್ಸಾಹ ಭರದಲ್ಲಿ, ಇತ್ತ ವಚನವು ಮುಂದೆ
ಮೃತ್ಯುವಾದೀತು, ಮೊದಲೆ ಯೋಚಿಸಿ ನೋಡು
ಹತ್ತಾರು ಸಾರೆ, ಪೂರ್ಣಜ್ಞ.

೧೦೪೭

ವಿನಯದಿಂ ನಡೆವವನ, ಜನಮೆಚ್ಚಿ ಮಾನಿಪುದು
ಗುಣಶಾಲಿ ಮಾನ್ಯನಾಗುವನು ಗುಣದಿಂದ
ಗುಣಕ್ಕೃಷಿಯ ಮಾಡು ಪೂರ್ಣಜ್ಞ.

೧೦೪೮

ಇಂದು ಗೆದ್ದಿಹೆನೆಂದು, ಚಂದದಿಂ ನಗುತಿರಲು
ಮುಂದೆ ಸೋಲುಂಟು ಎಂದು ಎಚ್ಚರದಿಂದ
ಮುಂದೆ ನೀಸಾಗು, ಪೂರ್ಣಜ್ಞ.

೧೦೪೯

ಬೇಕು ಬೇಡಂಗಳನು, ನೂಕಿ ಬಿಡು ಮಾನವನೆ,
ಏಕಕಾಲಕ್ಕೆ ಕಾಮಾದಿರಿಪು ವಿಜಯ,
ನಾಕ ಸುಖಪ್ರಾಪ್ತಿ ಪೂರ್ಣಜ್ಞ.

೧೦೫೦

ಸೋತಿಹೆನು ನಾನೆಂದು, ಯಾತಕ್ಕೆ ಅಳುತಿರುವೆ
ಸೋತವರು ಮತ್ತೆ ಹೋರಾಟದಲಿ ಗೆದ್ದು
ಖ್ಯಾತಿ ಪಡೆದಿಹರು ಪೂರ್ಣಜ್ಞ.

೧೦೫೧

ಮುಂದೆ ಮಾಡುವದನ್ನು, ಇಂದೆ ಮಾಡುವದೊಳಿತು
ಮುಂದೆ ದೂಡಿದರೆ ಈಗಿರುವ ಅನುಕೂಲ
ಮುಂದೆ ಇರಬಹುದೆ? ಪೂರ್ಣಜ್ಞ.

೧೦೫೨

ತಿಳಿದಿಲ್ಲವೆನ್ನುವವ, ಬಲುಬುದ್ಧಿವಂತನವ
ತಿಳಿದಿರುವದೆನಗೆ ಎಂಬುವನು ಕಡುಮೂರ್ಖ
ತಿಳಿದುನಡೆ ನೀನು ಪೂರ್ಣಜ್ಞ.

೧೦೫೩

ಕಾರಸೇವಕರೆಲ್ಲ, ಧೀರಸಾಹಸದಿಂದ
ಶ್ರೀರಾಮ ಮಂದಿರವ ಕಟ್ಟಲೆಂದವರು
ವೀರಿ ದುಡಿದಿಹರು ಪೂರ್ಣಜ್ಞ.

೧೦೫೪

ಹಾನಿಗೊಳಗಾಗಿಹರು, ಪ್ರಾಣಗಳ ಕೊಟ್ಟಿಹರು
ಜ್ಞಾನಿಯತಿಗಳು ಸಂತಸಾಧುಸಜ್ಜನರು
ಮಾನವತೆ ಬಿಡದೆ ಪೂರ್ಣಜ್ಞ.

೧೦೫೫

ಮನದ ಮಾಲಿನ್ಯವನು, ಅನುದಿನದಿ ತೊಳೆವವನು
ಗುಣಕೃಷಿಯ ಮಾಳ್ಪವನು ಸಿದ್ಧಿ ಶ್ರೀಗಿರಿಯ
ಕೊನೆಯ ಮುಟ್ಟುವನು ಪೂರ್ಣಜ್ಞ.

೧೦೫೬

ಭಾವಗಳು ಹದಿನಾರು, ನೋವುಗಳು ಹಲವಾರು
ಜೀವವಿರುವಾಗ ಸತ್ಕಾರ್ಯಗಳನೆಸಗು
ದೇವನೊಲಿವಂತೆ ಪೂರ್ಣಜ್ಞ.

೧೦೫೭

ದೊರೆಕೆಡಿಸಿಕೊಂಡರೂ, ನೆರೆಕೆಡಿಸಿಕೊಳ್ಳದಿರು
ನೆರೆಯವರು ಕಷ್ಟಕಾಲದಲಿ ನಿನ್ನನ್ನು
ಪರಿ ರಕ್ಷಿಸುವರು, ಪೂರ್ಣಜ್ಞ.

೧೦೫೮

ಬಹಳ ಹೊಗಳುವರಿಂದ, ಬಹಳ ತೆಗಳುವದರಿಂದ
ಬಹಳ ವಿನಯವನು ತೋರುತಿಹ ಜನರಿಂದ
ಬಹಳ ಎಚ್ಚರಿರು ಪೂರ್ಣಜ್ಞ.

೧೦೪೯

ನಾಲಗೆಯು ತಡೆವವನು, ಕಾಳಗವ ಗೆಲುವವನು
ತಾಳಸ್ವರರಾಗರಸ ತುಂಬಿಹಾಡುವವ
ಮೌಲ್ಯವುಳ್ಳವರು ಪೂರ್ಣಜ್ಞ.

೧೦೫೦

ಕಡಲಜಲಸಿಹಿಯಕ್ಕು, ಜಡವು ಚೇತನವಕ್ಕು
ದೃಢಮನದ ಛಲದ ಸಾಧನೆಯ ಬಲದಿಂದ
ಮೃಡನಕೃಪೆಯಿಂದ ಪೂರ್ಣಜ್ಞ.

೧೦೫೧

ರಸಋಷಿಗಳಿಂ ಜಗವು, ರಸಭರಿತವಾಗುವದು
ರಸೆಯಲ್ಲಿ ಸಕಲಕಲೆ ಸಿದ್ಧಿ ಪಡೆದವರೆ
ರಸಋಷಿಗಳಯ್ಯ ಪೂರ್ಣಜ್ಞ.

೧೦೫೨

ಸಹನೆ ಶಾಂತಿಯ ಸೂಕ್ತಿ, ಸಹನೆ ಬಾಳಿಗೆ ಶಕ್ತಿ
ಸಹನೆ ಸಾಧನೆಗೆ ಸುವಿರಕ್ತಿ ಗುಣಗಳಲಿ
ಸಹನೆ ಅಧಿರಾಜ ಪೂರ್ಣಜ್ಞ.

೧೦೫೩

ಮಿತಿಯಿಂದ ಜೀವಿಪ್ಪುದೆ, ಹಿತಭರಿತಜೀವನವು
ಮಿತಿಗೆಟ್ಟ ಬಾಳು ಚೇಳು ಹಾವಿನ ಹುತ್ತ
ಮಿತಿ, ಸುಖದ ಸೂತ್ರ ಪೂರ್ಣಜ್ಞ.

೧೦೫೪

ಬಾಳೆಹಣ್ಣಿನ ಸಿಪ್ಪೆ, ಕಾಲು ಜಾರಿಸಬಹುದು
ಬಾಳ ಬೀದಿಯಲಿ ಜಾರಿಕೆಗಳಿರಬಹುದು
ಬೀಳದಿರು ಜೋಕೆ, ಪೂರ್ಣಜ್ಞ.

೧೦೫೫

ಮರೆಯದಲೆ ಪ್ರತಿನಿತ್ಯ, ಗುರುಕರುಣ ತ್ರಿವಿಧಿಯನು
ಸ್ಥಿರ ಚಿತ್ತದಿಂದ ಪಾರಾಯಣವ ಮಾಡು
ವರಶರಣನಾಗು ಪೂರ್ಣಜ್ಞ.

೧೦೬೬

ಸ್ಪರ್ಧೆಯಿದ್ದರೆ ಪ್ರಗತಿ, ಸ್ಪರ್ಧೆಯಿದ್ದರೆ ಸುಗತಿ
ಸ್ಪರ್ಧೆ ಮಾನವನ ಪ್ರೋನ್ನತಿಗೆ ಪ್ರೋತ್ಸಾಹಿ
ಸ್ಪರ್ಧಿಸಲಿ ಜಗವ ಪೂರ್ಣಜ್ಞ.

೧೦೬೭

ಶುದ್ಧ ಜಲದಂತಿರಲಿ, ಬುದ್ಧಿಯಲಿ ಯೋಚನೆಯು
ಕ್ರುದ್ಧನಾಗದಲೆ ಕೇಡನ್ನು ಬಗೆಯದಲೆ
ಇದ್ದರವಸಿದ್ಧ ಪೂರ್ಣಜ್ಞ.

೧೦೬೮

ಜಾಗತಿಕ ಸುಖಶಾಂತಿ, ಬೇಗಬರಲೆನ್ನುವರು
ಸ್ವಾಗತಿಸಲದನು ಭಾವೈಕ್ಯದಾರತಿಯ
ಬೇಗ ಜ್ಯೋತಿಸಲಿ ಪೂರ್ಣಜ್ಞ.

೧೦೬೯

ತತ್ವ ಚಿಂತನದಿಂದ, ಸತ್ಯಾರ್ಥದರ್ಶನವು
ಮಿಥ್ಯೆ ಮಾಯೆಗಳು ದೂರಾಗಿ ಸತ್ಯಾರ್ಥಿ
ನಿತ್ಯ ಸುಖಿಯಹನು ಪೂರ್ಣಜ್ಞ.

೧೦೭೦

ನಗೆಯು ಬರುತಿದೆ ನೋಡು, ಮಿಗೆ ತತ್ವವರಿಯದಲೆ
ಬಗೆಬಗೆಯ ನುಡಿಯುತಿರೆ ಶಿವಧ್ಯಾನಬಿಟ್ಟು
ಸೊಗಸೆಲ್ಲಿ ಮನಕೆ? ಪೂರ್ಣಜ್ಞ.

೧೦೭೧

ವಿಕೃತಿಗೆಡೆ ಕೊಟ್ಟಲ್ಲಿ ಪ್ರಕೃತಿಯನು ಕೆಡಿಸುವದು
ಸುಕೃತಿಯಲಿ ಸತತ ಮನವಸ್ಥಿರಗೊಳಿಸಿದರೆ
ಸುಕೃತಾತ್ಮ ನೀನು ಪೂರ್ಣಜ್ಞ.

೧೦೭೨

ಗೌರವಾದರದಿಂದ, ಹಾರಾಡಿ ಮೆರೆದಾಡಿ
ಪಾರಮಾರ್ಥವನು ಅರಿಯದಲೆ ಅಲೆವವಗೆ
ಸಾರ ಸುಖವುಂಟೆ? ಪೂರ್ಣಜ್ಞ.

೧೦೭೩
ಅಂಧ ಶ್ರದ್ಧೆಯು ಹಬ್ಬಿ, ಮುಂದುಗೆಡಿಪುದು ಜಗವ
ಬಂಧುರ ವಿಚಾರ ದೀಪ್ತಿಯಿಂ ಬಾಳೆಲ್ಲ
ಸೌಂದರ್ಯಮಯವು ಪೂರ್ಣಜ್ಞ.

೧೦೭೪
ಸ್ವೈರಣೆಯು ಸಾಧಕನು, ಏರುವನು ಮೇಲಕ್ಕೆ
ಸ್ವೈರ ಸ್ವೇಚ್ಛೆಯಲಿ ಅಲೆವವನು ಬೀಳುವನು
ಘೋರ ಕೂಪದಲಿ ಪೂರ್ಣಜ್ಞ.

೧೦೭೫
ಆಶೆ ಆಮಿಷಗಳನು, ರೋಷ ದೋಷಗಳನ್ನು
ಮೋಸಕೃತಿಗಳನು ಬಿಡುವವನೆ ಜಗದಲ್ಲಿ
ಈಶನೆನಿಸುವನು ಪೂರ್ಣಜ್ಞ.

೧೦೭೬
ಆಡದಿರು ತಿಳಿಯದಲೆ, ಆಡಿದರೆ ಮಾಡದನು
ಮಾಡು ಬಲುಬೇಗ ನುಡಿಗಿಂತ ನಡೆಮೇಲು
ಮಾಡು ನುಡಿದುದನು ಪೂರ್ಣಜ್ಞ.

೧೦೭೭
ಅಂಗಾರದೊಳಗಿಡಲು, ಬಂಗಾರ ಕುಂದುವದೆ?
ತುಂಗ ಗುಣವಂತ ಕಷ್ಟಾಗ್ನಿ ಕುಡದೊಳು
ಭಂಗಗೊಳದಿರುವ ಪೂರ್ಣಜ್ಞ.

೧೦೭೮
ನಗಚಾಪನನು ನಿತ್ಯ, ಬಗೆದುಂಬಿ ನೆನೆಯುತ್ತ
ಜಗಕೆ ಹಿತವೀವ ಕಾಯಕವ ಮಾಡಿದರೆ
ಸೊಗವಹುದು ಮನಕೆ ಪೂರ್ಣಜ್ಞ.

೧೦೭೯
ಸ್ವಾರ್ಥವಿರಹಿತವಾದ, ಆರ್ಥಿಕಾಧಾರವೇ
ಉತ್ತಮಾಧಾರ ಮೀಸಲಾತಿಗೆ ಭದ್ರ
ಆಸ್ತಿವಾರ ನಿಜ ಪೂರ್ಣಜ್ಞ.

೧೦೮೦

ದೇಹತ್ರಯದೊಳಿರುವ, ಮೋಹ ತಮವನು ತವಿಸಿ
ಸೋಹವೆಂಬುದರ ಮರ್ಮ ತಿಳಿದರೆ ಭವದ
ದಾಹ ದೂರಕ್ಕು ಪೂರ್ಣಜ್ಞ.

೧೦೮೧

ಆಪತ್ತು ಬಂದಾಗ ನೀ ಪುಕ್ಕನಾಗದಿರು
ವ್ಯಾಪಿತ ನಿರಾಶೆ ತೊಲಗುವದು ಆಶಾ ಪ್ರ–
ದೀಪವನು ಹಚ್ಚು ಪೂರ್ಣಜ್ಞ.

೧೦೮೨

ಬರಲಿರುವ ಹೊಸವರುಷ। ತರಲೆಮಗೆ ಹೊಸಹರುಷ।
ತೊರೆ ನಿರಾಶೆಯನು। ಬರೆ ಭರವಸೆಯ ಚಿತ್ರ
ಧರಿಸು ಧೀಸೂತ್ರ ಪೂರ್ಣಜ್ಞ.

೧೦೮೩

ಕ್ಷಣಕ್ಷಣಕೆ ಹೊಸ ಹಸಿವು। ಬಣಗು ನೀಡುತಲಿಹವು
ಮನವು ಮುಳ್ಳಾಗಿ ಚುಚ್ಚುವವು ದಯವಿರದೆ
ಘನವಂತನಾಗು ಪೂರ್ಣಜ್ಞ.

೧೦೮೪

ಕಸವ ಹೊಡೆದರೆ ಮನೆಯು। ಹಸನವಾಗುವ ತೆರದಿ
ಕಸದಂಥ ಆಶೆ ಆಮಿಷಗಳನು ತೊರೆಯೆ
ಹಸನಹುದು ಮನವು ಪೂರ್ಣಜ್ಞ.

೧೦೮೫

ಶಿಸ್ತಿನಿಂ ಶಿಕ್ಷಣಕೆ। ಸ್ವಸ್ಥತೆಯ ಸಂಪ್ರಾಪ್ತಿ
ಶಿಸ್ತು ಸಂಯಮದ ಕಟ್ಟುನಿಟ್ಟಿನ ನಡತೆ
ಸ್ವಸ್ತಿ ಜೀವನಕೆ ಪೂರ್ಣಜ್ಞ.

೧೦೮೬

ಕೋಳಿ ಕೂಗದ ಮುನ್ನ। ಏಳು ದೇವರ ನೆನೆದು
ಆಲಸ್ಯ ತೊರೆದು ದುಡಿ ನಿನಗೆ ಒಲಿಯುವಳು.
ಶ್ರೀ ಲಕ್ಷ್ಮೀದೇವಿ ಪೂರ್ಣಜ್ಞ.

೧೦೮೭

ಗುರುಗಳಿಗೆ ನಮಿಸುತ್ತ। ವರ ಕಾರ್ಯ ಮಾಡುತ್ತ
ಗುರುಕರುಣೆ ಪಡೆದು ತಾಯ್ತಂದೆಯರ ವಚನ
ಪರಿಪಾಲಿಸುತಿರು ಪೂರ್ಣಜ್ಞ.

೧೦೮೮

"ಅರಿವೆ ಗುರು" ಎಂಬುದನು। ಮರೆಯದಿರು ಕೊರಗದಿರು
ಅರುಹು ಬಂದಂತೆ ಸುಜ್ಞಾನ ಮಾರ್ಗದಲಿ
ನಿರುತ ನಡೆಯುತಿರು! ಪೂರ್ಣಜ್ಞ.

೧೦೮೯

ಸೋಲಿನಲಿ ಗೆಲವಿಹುದು। ಗೆಲುವಿನಲಿ ಸೋಲಿಹುದು
ಸೋಲುಗೆಲವುಗಳ ಸಮನಾಗಿ ಕಂಡವನು
ಮೇಲೆನಿಪ ಜಗದಿ ಪೂರ್ಣಜ್ಞ.

೧೦೯೦

ತಿಳಿಬೆಳಗು ನಲುದನಿಯು। ಒಳಮನದ ಮನೆಯೊಳಿವೆ
ಒಲವಿನಿಂ ಸಾಧನೆಯ ಮಾಡಿದರೆ ಬಲವು
ಬೆಳೆದಪುದು ಬಹಳ ಪೂರ್ಣಜ್ಞ.

೧೦೯೧

ಪರಿಪೂರ್ಣ ಜೀವನಕೆ। ಗುರಿಯಗಿರಿ ಏರುತಿರು
ಪರಿಪೂರ್ಣಕಾಗಿ ಸಾಧನೆಯ ಬಲಿಸಿದರೆ
ಪರಿಪೂರ್ಣನಪ್ಪೆ ಪೂರ್ಣಜ್ಞ.

೧೦೯೨

ಹೊರತೋರಿಕೆಯ ಕಲೆಯು। ಕರಗಿಸದು ಹೃದಯವನು.
ಪರಮಾನುಭವ ಸತ್ಯ-ಸೌಂದರ್ಯ-ಮಿಲನ
ವರಕಲೆಯು ಜನನ ಪೂರ್ಣಜ್ಞ.

೧೦೯೩

ಭೋಗದಾಶೆಯ ಬಿಟ್ಟು। ಯೋಗ ಸಾಧನೆ ಮಾಡು
ತ್ಯಾಗವದು ಚಿತ್ತ ಸ್ಥೈರ್ಯಕ್ಕೆ ಒರೆಗಲ್ಲು
ಯೋಗಿ ನೀನಾಗು ಪೂರ್ಣಜ್ಞ.

೧೯೪

ಕರ್ಮಕತ್ತಲೆ ಕಳೆಯೆ। ಧರ್ಮದೀಪ್ತಿಯು ಬೇಕು;
ಮರ್ಮವನು ತಿಳಿದು ನಡೆಯುವದು ನಿಜಯೋಗ
ಧರ್ಮಿ ನೀನಾಗು ಪೂರ್ಣಜ್ಞ.

೧೯೫

ನಿಯಮದಿಂ ನಡೆವವಗೆ। ಜಯವುಂಟು ಜೀವನದಿ
ಭಯವಿಲ್ಲ ಧೀರಂಗೆ ಅವನ ಸಾಹಸಕೆ
ಲಯವೆಂಬುದಿಲ್ಲ ಪೂರ್ಣಜ್ಞ.

೧೯೬

ತಮ್ಮ ಕಾಯಕದಲ್ಲಿ। ಒಮ್ಮನದಿ ದುಡಿಯುತಿರೆ
ಚಿಮ್ಮುವದು ಸೆಲೆಯು ಆನಂದ ದೊರೆಯುವದು
ಸುಮ್ಮನಿರು ದುಡಿದು ಪೂರ್ಣಜ್ಞ.

೧೯೭

ಜಗವನುದ್ಧರಿಸುವರು। ಹಗಲಿರುಳು ದುಡಿಯುತ್ತ
ಮಿಗೆಶಕ್ತಿ ಪಡೆಯುತ್ತ ಒಡವರನುದ್ಧರಿಸಿ
ಸೊಗಸು ಕಾಣುವರು ಪೂರ್ಣಜ್ಞ.

೧೯೮

ಉತ್ತುಂಗ ಜೀವನಕೆ। ಉತ್ತುಂಗ ಚಿಂತನೆಯು
ಸತ್ಯ ಕಾಯಕವು ಬೇಕು; ಇವು ಇಲ್ಲದಿರೆ
ವ್ಯರ್ಥ ಜೀವನವು ಪೂರ್ಣಜ್ಞ.

೧೯೯

ಬುದ್ಧಿಹೀನತೆ ಬಿಟ್ಟು। ಎದ್ದೇಳಿ ಮೇಲಕ್ಕೆ
ಶುದ್ಧಮನದಿಂದ ಬಿದ್ದವರನೆತ್ತಲ್ಕೆ
ಸಿದ್ಧರಾಗೋಣ। ಪೂರ್ಣಜ್ಞ.

೧೧೦೦

ಭವದ ಕತ್ತಲೆ ಕಳೆವ। ಸುವಿವೇಕವನು ನೀಡು
ಸುವಿಚಾರ ಬೀಜ ಊರು ಮಾನವ ಕುಲಕೆ
ಸವಿಫಲವ ನೀಡು ಪೂರ್ಣಜ್ಞ.

೧೧೦೧

ಯುದ್ಧದಲಿ "ಜಾಪಾನ" ಉಧ್ವಸ್ತವಾಗಿತ್ತು
ಎದ್ದಿಹುದು ತಾನೀಗ ಸೃಜನಸಾಹಸದಿ
ಉದ್ಯಮದ ಮಹಿಮೆ ಪೂರ್ಣಜ್ಞ.

## ರೈತರು – ಕೃಷಿ

೧೧೦೨

ಹಸನಾದ ಹೊಲಗಳಿಗೆ, ಹೊಸ ಬೀಜ ಬಿತ್ತಿರಲಿ
ಶಶಿಧರನ ಕೃಪೆಯು ಮಳೆಯ ರೂಪದಿ ಬರಲಿ
ಕೃಷಿಕ ನಗುತಿರಲಿ ಪೂರ್ಣಜ್ಞ.

೧೧೦೩

ಕೃಷಿಕನಾಗಿರುವವನು, ಕೃಷಿಜ್ಞಾನದೀಪಿಕೆಯ
ಕುಶಲದಿಂದೋದಿ ಕೃಷಿಕಾರ್ಯವೆಸಗಿದರೆ
ವಶವಕ್ಕು ಸಿರಿಯು ಪೂರ್ಣಜ್ಞ.

೧೧೦೪

ಅಕ್ಕರತೆಯಲಿ ಚಿಕ್ಕ, ಮಕ್ಕಳನು ಬೆಳೆಸುವೊಲು
ಮುಕ್ಕಣ್ಣನಂತ ಎತ್ತುಗಳ ಬೆಳೆಸುವವ
ಒಕ್ಕಲಿಗ ನಿಜದಿ ಪೂರ್ಣಜ್ಞ.

೧೧೦೫

ಎತ್ತು ಇಲ್ಲದ ಮನೆಯು, ಎತ್ತರಿದ್ದೇನು ಫಲ?
ಎತ್ತಿರುವ ಮನೆಯೊಳೆಲ್ಲ ಸುಖವಿಹುದಲ್ಲಿ
ಬುತ್ತಿಗಿಲ್ಲ ಬರ ಪೂರ್ಣಜ್ಞ.

೧೧೦೬

ಕಾಲಕಾಲಕ್ಕೆ ಮೈಯ, ಮೇಲೆ ಕೈ ಆಡಿಸುತ
ಲೀಲೆಯಿಂ ಹೊಟ್ಟು ಮೇವಿಕ್ಕಿ ಎತ್ತುಗಳ
ಪಾಲಿಪನೆ ಕೃಷಿಕ ಪೂರ್ಣಜ್ಞ.

೧೧೦೭

ಎತ್ತುಗಳ ಆರೈಕೆ, ನಿತ್ಯವೂ ಮಾಡಿರೈ
ಎತ್ತುಗಳ ಸೇವೆ ಮಾಡಿದರೆ ನಿಮ್ಮುದರ
ತುತ್ತು ಕಾಣುವದು ಪೂರ್ಣಜ್ಞ.

೧೧೦೮

ಮಣ್ಣೊಳಗೆ ತಿರುಗಾಡಿ, ಮಣ್ಣ ವಾಸನೆ ಮೂಸಿ
ಮಣ್ಣನ್ನು ಅಗೆದು ಹದಮಾಡಿ ಬಿತ್ತಿದವ
ಧನ್ಯನಾಗುವನು ಪೂರ್ಣಜ್ಞ.

೧೧೦೯

ಒಕ್ಕಲಿಗರೆಲ್ಲವರು ಚುಕ್ಕಿ ಮುಳುಗದ ಮುನ್ನ
ಚಕ್ಕನೇ ಎದ್ದು ದನಗೆಲಸ ಮಾಡಿದರೆ
ಚೊಕ್ಕವದು ಕವಿತ ಪೂರ್ಣಜ್ಞ.

೧೧೧೦

ಹೊತ್ತುಗಳೆಯುದೆ ವ್ಯರ್ಥ, ನಿತ್ಯವೂ ಹೊಲದಿ ದುಡಿ
ಕಿತ್ತಿ ತೆಗೆ ಕರಿಕೆ ಬಿತ್ತಿ ಬೆಳೆ ಧಾನ್ಯಗಳ
ತುತ್ತಿಕ್ಕು ಜಗಕೆ ಪೂರ್ಣಜ್ಞ.

೧೧೧೧

ಭೂಮಿ ಕೆಲಸಕೆ ಬೇಕು, ಸಾಮಾನುಗಳು ಬಹಳ
ನೇಮ ನಿಷ್ಠೆಯಲಿ ದುಡಿಯಲಿಕೆ 'ನೇಗಿಲುಳಿ'
ಮೇಣ್ಮೆಣೆಯು ಕಣ್ಣೆ ಪೂರ್ಣಜ್ಞ.

೧೧೧೨

ಕೊಡಲಿ, ಗುದ್ದಲಿ, ಕುರುಪೆ, ಕುಡುಗೋಲು ಬಾರ್ಕೋಲು
ಕುಡ ಹಗ್ಗ ಹುರಿ ಮಡಿಕೆ ರಂಟೆ ಬೆಡಗುಗಳು
ಇಡು ಜತನ ಮಾಡಿ ಪೂರ್ಣಜ್ಞ.

೧೧೧೩

ನೆಲ್ಲು ಬಿತ್ತುವ ಸಮಯ, ಒಳ್ಳೆ ರಾಗಿಯ ಬೀಜ
ಎಲ್ಲಿ ಬಿತ್ತಿದರೆ ಒಳಿತೆಂಬ ಗುಟ್ಟನ್ನು
ಬಲ್ಲ ಒಕ್ಕಲಿಗ ಪೂರ್ಣಜ್ಞ.

೧೧೧೪

ಒಕ್ಕಲಿಗ ಮೈಮುರಿದು, ಚೊಕ್ಕಾಗಿ ದುಡಿದಲ್ಲಿ
ರೊಕ್ಕದಾ ಟಂಕಸಾಲೆಯನೆ ಮನೆಯೊಳಗೆ
ಇಕ್ಕಿದಂತಕ್ಕು ಪೂರ್ಣಜ್ಞ.

೧೧೧೫

ಕಸುವಿಂದ ದುಡಿಯುತಿಹ, ಕೃಷಿಕಂಗೆ ದುರ್ಭಿಕ್ಷೆ
ಕೊಸರಿ ಹೋಗುವದು ಅರಗಾಲ, ಬರಗಾಲ
ನಶಿಸುವದು ಜಗದಿ ಪೂರ್ಣಜ್ಞ.

೧೧೧೬

ಹಸನಾದ ಹೊಲದಲ್ಲಿ, ಎಸಗಿ ನೀರಾವರಿಯ
ಕುಶಲದಿಂದುಡಿವ ಕೃಷಿಕರಿಗೆ ಧನಲಕ್ಷ್ಮಿ
ವಶವಾಗಿರುವಳು ಪೂರ್ಣಜ್ಞ.

೧೧೧೭

ತೆಂಗು ಬೆಳೆದಿರುವವನು, ತುಂಗ ಸುಖದುಣ್ಣುವನು
ಹಂಗವನಿಗಿಲ್ಲ ಐಶ್ವರ್ಯ ಅವನ ಮನೆ
ಯಂಗಳದೊಳಿಹುದು ಪೂರ್ಣಜ್ಞ.

೧೧೧೮

ಹಚ್ಚು ತೆಂಗಿನ ಸಸಿಯು, ಮೆಚ್ಚು ಮುದ್ದಿನ ಮನೆಯು
ಇಚ್ಛೈಸು ಶುಭವ ಇಂತಿರ್ಪ ಮನುಜಂಗೆ
ಹೆಚ್ಚಳವು ಸತತ ಪೂರ್ಣಜ್ಞ.

೧೧೧೯

ಬಾಳೆಗಿಡ ಹಚ್ಚಿದವ, ಬಾಳುವನು ಮುದದಿಂದ
ಮೇಳದಿಂ ರಸಬಾಳೆ ತಿನ್ನುತ್ತ ಸುಖದಿ
ತೇಲಾಡುತಿಹನು ಪೂರ್ಣಜ್ಞ.

೧೧೨೦

ಎತ್ತು ಹೂಡದೆ ಹೊಲವ, ಉತ್ತು ಬಿತ್ತಲುಬಹುದೆ?
ಚಿತ್ತುದೆತ್ತಗಳ ಹೂಡದಿರೆ ಸಾಧಿಪುದೆ?
ಔತ್ತಮ್ಯ ಕೃಷಿಯು? ಪೂರ್ಣಜ್ಞ.

೧೧೨೧

ಕಳೆಕರಿಕೆ ಕಸ ತೆಗೆದು, ಗಳೆ ಹೊಡೆದು ಬಿತ್ತಿದರೆ
ಕುಲು ಕುಲು ನಗುತ್ತ ಭೂಮಾತೆ ಕೃಷಿಕರಿಗೆ
ಫಲವ ನೀಡುವಳು ಪೂರ್ಣಜ್ಞ.

೧೧೨೨

ಎತ್ತರದ ಮೋಡಗಳು ಒತ್ತಿಮಳೆಗರೆಯದಿರೆ
ಬಿತ್ತಿರುವ ಬೆಳೆಯು ಸತ್ತು ಬರಗಾಲಕ್ಕೆ
ತುತ್ತಹುದು ಜಗವು ಪೂರ್ಣಜ್ಞ.

೧೧೨೩

ಕೃಷಿಯಿಂದ ಬೆಳೆಯುಂಟು, ಅಶನವಸನಗಳುಂಟು
ಕೃಷಿಯು ತಪ್ಪಿದರೆ ಬರಗಾಲ ಅನುಗಾಲ
ಹಸಿವಿನುರಿಗಾಲ ಪೂರ್ಣಜ್ಞ.

೧೧೨೪

ನಾಗಭೂಷಣಯೋಗಿ ತ್ಯಾಗಯೋಗದ ಬಲದಿ
ಲೋಗರಿಗೆ ತಿಳಿವ ರೀತಿಯಲಿ ಕೃಷಿ ತತ್ವ
ಯೋಗ ತಿಳಿಸಿಹನು ಪೂರ್ಣಜ್ಞ.

೧೧೨೫

ಆಳಿದ್ದರೂ ನಿತ್ಯ, ಹೇಳದಲೆ ಹೊಲದೊಳಗೆ
ವೇಳೆ ತಪ್ಪಿಸುತ ಹೋಗುತ್ತ ನೋಡಿದರೆ
ಗೋಳು ತಪ್ಪುವದು ಪೂರ್ಣಜ್ಞ.

೧೧೨೬

ಆಳನ್ನೇ ನೆಚ್ಚಿದರೆ, ಹಾಳಹುದು ಹೊಲಗೆಲಸ
ಆಳಿದ್ದರೇನು? ಮೇಲೆ ನೀನಿರಬೇಕು
ಆಳನೆಚ್ಚರಿಸು ಪೂರ್ಣಜ್ಞ.

೧೧೨೭

ಬೇಲಿ ಹಾಕದೆ ಹೊಲಕೆ, ಸಾಲು ಗಿಡಗಳ ಬೆಳೆಸಿ
ಲೋಲಾಟದಲ್ಲಿ ತಾನಿರಲು ಆ ಹೊಲವು
ಹಾಳಾಗದಿಹುದೆ? ಪೂರ್ಣಜ್ಞ.

೧೧೨೮

ಕೆಲಸಿಗನು ದೇಹದಾ, ಬಲು ಹೊಲಸು ತೆಗೆವಂತೆ
ಹೊಲಗಳಲಿ ಬೆಳೆದ ಕಸಕಂಟಿ ತೆಗೆದಲ್ಲಿ
ಹುಲುಸಕ್ಕು ಕಾಳು ಪೂರ್ಣಜ್ಞ.

೧೧೨೯

ನಟ್ಟು ಕಡಿಯುತ ಹೊಲದ, ಕೆಟ್ಟ ಕಂಟಿಯ ತೆಗೆದು
ಕುಟ್ಟಿ ಕುಂಟಿಯನು ಹರಗಿದರೆ ಧಾನ್ಯವದು
ಬೆಟ್ಟದಷ್ಟಹುದು ಪೂರ್ಣಜ್ಞ.

೧೧೩೦

ವರುಷ ವರುಷಕ್ಕೊಮ್ಮೆ, ಮರೆಯದಲಿ ಹೊಲವನ್ನು
ಹರಗಿ ಕಸ ತೆಗೆಯೆ ಮೂರು ವರುಷಗಳಲ್ಲಿ
ಕರಿಕೆ ಅಳಿಯುವದು ಪೂರ್ಣಜ್ಞ.

೧೧೩೧

ಕರಕಿ ಇಲ್ಲದ ಹೊಲವು, ಹಿರಿದಾಗಿ ಬೆಳೆಯುವದು
ಕೊರಗನ್ನು ಕಳೆದು ಸಿರಿಸುಖವನೀಯುವದು
ನಿರುತ ಕೃಷಿ ಮಾಡು ಪೂರ್ಣಜ್ಞ.

೧೧೩೨

ಒಡ್ಡು ಹಾಕಿದ ಹೊಲವು ದೊಡ್ಡ ಬೆಳೆ ನೀಡುವದು
ಗೊಡ್ಡು ಭೂಮಿಯದು ಹದಗೊಂಡು ಕೈತುಂಬ
ದುಡ್ಡು ನೀಡುವದು ಪೂರ್ಣಜ್ಞ.

೧೧೩೩

ಎರೆಭೂಮಿಯೊಳಗಲ್ಲಿ, ಗರಸು ಕಾಣುವ ಹಾಗೆ
ಎರೆಮಣ್ಣಿನಿಂದ ಒಡ್ಡನ್ನು ಹಾಕದಿರು
ಗರಸಿನಿಂ ಹಾಕು ಪೂರ್ಣಜ್ಞ.

೧೧೩೪

ಹೊಲದಲ್ಲಿ ಗಿಡಕಂಟಿ, ಕಳೆ ಕಸವು ತುಂಬಿರಲು
ಬೆಳೆಯು ಬಂದೀತೆ? ರೈತರಿದನರಿತು ಕಸ
ಬೆಳೆಸದಿರಬೇಕು ಪೂರ್ಣಜ್ಞ.

೧೧೩೫

ಬಲಶಾಲಿಯಾಗಲ್ಕೆ, ಚೆಲು ಪಾಲು ಪೋಷಕವು
ಹೊಲವು ಕಸುವಾಗಿ ಬೆಳೆವುದಕೆ ಉಣಿಸದಕೆ
ಕಳಿತ ಗೊಬ್ಬರವ ಪೂರ್ಣಜ್ಞ.

೧೧೩೬

ಮೇಟಿ ವಿದ್ಯೆಯು ಬಲದಿ, ಕೋಟಲೆಯು ತಪ್ಪುವದು
ನೀಟಾಗಿ ದುಡಿದು ದುರ್ವ್ಯಸನ ದುಶ್ಚಟಗ–
ಳಾಟವನು ತ್ಯಜಿಸು ಪೂರ್ಣಜ್ಞ.

೧೧೩೭

ಊಳದಿರೆ ಹೊಲವನ್ನು, ಕೇಳದಿರೆ ಸಾಲವನು
ಹಾಳಾಗಿ ಮುಳುಗಿ ಹೋಗುವವು ಬಾಳೆಲ್ಲ
ಕಾಳಗವಿಯುವದು ಪೂರ್ಣಜ್ಞ.

೧೧೩೮

ರೋಹಿಣಿ ಮೃಗಶಿರದೊಳು, ದೇಹವನು ದಂಡಿಸುತೆ
ಸಾಹಸದಿ ಜೋಳ ಸಜ್ಜೆಯನು ಬಿತ್ತಿದವ
ಸಾಹುಕಾರನವ ಪೂರ್ಣಜ್ಞ.

೧೧೩೯

ಉಸುಕು ಭೂಮಿಗಳಲ್ಲಿ, ಕಸುವುಳ್ಳ ಸಜ್ಜೆಯನು
ಹೊಸ ಹುರುಪು ಕೊಡುವ ಹೊಗೆ ಸೊಪ್ಪು ಬಿತ್ತಿದರೆ
ಮಿಸುನಿ ಮನೆ ತುಂಬ ಪೂರ್ಣಜ್ಞ.

೧೧೪೦

ಎರೆಯ ಭೂಮಿಗಳಲ್ಲಿ, ಸರಿಯಾಗಿ ನೀರುಣಿಸಿ
ಬೆರಳಳತೆಗೊಂದು ನೆಲಗಡಲೆ ಬಿತ್ತಿದರೆ
ಸಿರಿದೊರೆಯು ನೀನು ಪೂರ್ಣಜ್ಞ.

೧೧೪೧

ಮುಂಗಾರಿ ಸಮಯದಲಿ ತುಂಗಗುಣದೆರೆ ಹೊಲದಿ
ಹೊಂಗಲದ ಶ್ರೇಷ್ಠ ಬಳ್ಳೊಳ್ಳಿ ಬಿತ್ತಿದರೆ
ಹೊಂಗುವದು ಬೆಳೆಯು ಪೂರ್ಣಜ್ಞ.

೧೧೪೨

ಹಲವು ಬಗೆ ಜೋಳದಲಿ, ಬಿಳಿ ಜೋಳಬಲುರುಚಿಯು
ಬಿಳಿಜೋಳ ಕರಿಯ ಹೊಲಗಳಲಿ ಬಿತ್ತಿದರೆ
ಹುಲುಸಹುದು ಬೆಳೆಯು ಪೂರ್ಣಜ್ಞ.

೧೧೪೩

ಕಾವಲಿ ಸಮೀಪದಲಿ ತೇವವಿರುವಂಥಲ್ಲಿ
ತಾವೆ ಬೆಳೆವಂತೆ ತೆಂಗುಗಳ ಹಚ್ಚಿದರೆ
ಈವುವವು ಫಲವು ಪೂರ್ಣಜ್ಞ.

೧೧೪೪

ಹಳ್ಳಿಗಳ ಮಗ್ಗುಲಲಿ, ಹೊಲವನ್ನು ಮಾಡದಿರು
ಸಾಲವನು ತರಬೇಡ ಸಣ್ಣ ಜನರಲ್ಲಿ
ಗೋಳು ಪಡಬೇಡ ಪೂರ್ಣಜ್ಞ.

೧೧೪೫

ಮುಳ್ಳು ಜಾಲಿಯ ಬೇಲಿ, ಒಳ್ಳೆ ರಕ್ಷಣೆ ಹೊಲಕೆ
ಕಳ್ಳ, ದನ, ಒಳಗೆ ದಗ್ಗುದುಳಿಯದ ಹಾಗೆ
ಒಳ್ಳೆಯ ಉಪಾಯ ಪೂರ್ಣಜ್ಞ.

೧೧೪೬

ಮಲೆನಾಡಿನೊಳು ಅಡಿಕೆ, ಬೆಲೆಯುಳ್ಳ ಯಾಲಕ್ಕಿ
ಬೆಳೆಸುವರು ಬಹಳ ಒಂದೆ ಕೂರಿಗೆಯಲ್ಲಿ
ಗಳಿಕೆ ಬಹಳಷ್ಟು ಪೂರ್ಣಜ್ಞ.

೧೧೪೭

ಕ್ಷೇತ್ರಕೊಪ್ಪುವ ಬೀಜ, ಬಿತ್ತುಯ್ಯ ಹೊಲದಲ್ಲಿ
ಪಾತ್ರವನ್ನು ನೋಡಿ ವಿತರಿಸುವದೇ ವಿಹಿತ
ಸೂತ್ರ ಜೀವನಕೆ ಪೂರ್ಣಜ್ಞ.

೧೧೪೮

ಮಿತಿಮೀರಿದಾವೃಷ್ಟಿ ಗತಿಗೆಡಿಸುವವು ಕೃಷಿಯ
ಹಿತಿಮಿತಿಯ ವೃಷ್ಟಿ ಭೂರಿ ಫಲದಾಯಕವು
ಅತಿಯು ಹತಿ ಜಗಕೆ ಪೂರ್ಣಜ್ಞ.

೧೧೪೯

ಜಲಶಿಲ್ಪಶಾಸ್ತ್ರದಲಿ, ತಿಳಿಸಿರುವ ಬಗೆಯಲ್ಲಿ
ಇಳಿಜಾರು ಭೂಮಿಯಲಿ ಭಾವಿಯನುತೆಗೆಸಿ
ಜಲ ಪಡೆಯಬೇಕು ಪೂರ್ಣಜ್ಞ.

೧೧೫೦

ಗೊಬ್ಬರವ ಹಾಕುತ್ತ, ಉಬ್ಬುಬ್ಬಿ ದುಡಿಯುತ್ತ
ಕಬ್ಬು ಬೆಳೆಯುತ್ತ ಬೆಲ್ಲವನು ಮಾಳ್ಪವನ
ತಬ್ಬುವಳು ಲಕ್ಷ್ಮಿ ಪೂರ್ಣಜ್ಞ.

೧೧೫೧

ಕೃಷಿಕನಲ್ಲದ ನಾನು, ಕೃಷಿತತ್ವಗಳ ಬರೆದೆ
"ಕೃಷಿಜ್ಞಾನ ದೀಪಿಕೆಯ" ಬೆಳಕಿನಲಿ ನಲಿದು
ಹೊಸ ತ್ರಿಪದಿಯಲಿ ಪೂರ್ಣಜ್ಞ.

೧೧೫೨

ಮಣ್ಣು ಮಡಕೆಯ ತಾಯಿ, ಮಣ್ಣು ಚಿನ್ನದ ತಾಯಿ
ಮಣ್ಣಿಂದ ಸಕಲ ಸೃಷ್ಟಿ ಮೈದೋರಿಹುದು
ಮಣ್ಣೇ ಸರ್ವಸ್ವ ಪೂರ್ಣಜ್ಞ.

೧೧೫೩

ಅನ್ನಪೂರ್ಣೆಯ ಮೈಯು, ಮಣ್ಣಲ್ತೆ ಗಣಪತಿಯು
ಮಣ್ಣು ಅದ್ಭುತದ ಶಕ್ತಿಗಳನೊಳಗೊಂಡ
ಪುಣ್ಯ ಗರ್ಭಿಣಿಯು ಪೂರ್ಣಜ್ಞ.

೧೧೫೪

ಭೂಮಿಯಗಿದರೆ ನೀರು ಭೂಮಿಯಗಿದರೆ ಚಿನ್ನ
ಭೂಮಾತೆ ಜಗಕೆ ನೀಡುವಳು ಅನ್ನವನು
ಭೂಮಿ ನಿಜ ಮಾತೆ ಪೂರ್ಣಜ್ಞ.

೧೧೫೫

ಭೂದೇವಿ ನಮ್ಮನ್ನು ಮೋದದಿಂ ಸಲುಹುವಳು
ಭೂದೇವಿ ಕರುಣೆ ತಪ್ಪಿದರೆ ಯಮನೂರ
ಹಾದಿ ಹಿಡಿಯುವೆವು ಪೂರ್ಣಜ್ಞ.

೧೧೫೬

ಭೂದೇವಿಯನು ನೀನು ಸದ್ಭಕ್ತಿಯಿಂ ಭಜಿಸು
ಭೂದೇವಿ ವರದೇವಿ ಭವತಾಪಹಾರಿ
ಶ್ರೀದೇವಿಯವಳು ಪೂರ್ಣಜ್ಞ.

## ಮಹಿಳೆ—ಹೆಣ್ಣು

೧೧೫೭

ಅತಿ ಪ್ರೀತಿರಸವುಣಿಸಿ, ಹಿತದಿಸೇವೆಯ ಮಾಳ್ಪ
ಅತಿಕಷ್ಟದಲ್ಲಿ ಪತಿಗಾಸರವಾಗಿರುವ
ಸತಿಯು ದೇವತೆಯು, ಪೂರ್ಣಜ್ಞ.

೧೧೫೮

"ಹೆಣ್ಣು ಮುನಿದರೆ ಮಾರಿ, ಹೆಣ್ಣು ಒಲಿದರೆ ನಾರಿ"
ಹೆಣ್ಣರಿತುಕೊಂಡಲ್ಲಿ ಪರಮ ಉಪಕಾರಿ
ಬಣ್ಣನೆಗೆ ಮೀರಿ ಪೂರ್ಣಜ್ಞ.

೧೧೫೯

ಹೆಣ್ಣು ಕಾಮದ ಕಣ್ಣು, ಹೆಣ್ಣು ಮೋಹದ ಹಣ್ಣು
ಹೆಣ್ಣು ಹುಣ್ಣೆಂದು ಹೀಗಳೆಯದಿರು ಜಗದಿ
ಹೆಣ್ಣು ಜನಯಿತ್ರಿ ಪೂರ್ಣಜ್ಞ.

೧೧೬೦

ಹೆಣ್ಣು ತೆಕ್ಕೆಗೆ ಸಿಕ್ಕು, ಅಣ್ಣಗಳು ಎಂಬುವರು
ಹೊನ್ನು ಹಣ ಮನೆಮಾರು ಕಳಕೊಂಡು ಕೊನೆಗೆ
ಮಣ್ಣು ಮುಕ್ಕುವರು ಪೂರ್ಣಜ್ಞ.

೧೧೬೧

ಹೆಣ್ಣು ಬಿಟ್ಟಿಹೆನೆಂದು, ಬಣ್ಣಿಸುತಲಿರಬೇಡ
ಹೆಣ್ಣನ್ನು ಮನದೊಳಗೆ ನೆನೆಯದಿದ್ದರದು
ಹೆಣ್ಣು ಬಿಟ್ಟಂತೆ ಪೂರ್ಣಜ್ಞ.

೧೧೬೨

ಹೆಣ್ಣನ್ನು ತೊರೆಯುವೆಲೆ, ಹೆಣ್ಣ ತೊರೆದಿಹೆನೆಂದು
ಬಣ್ಣನೆಯ ಮಾತು ಜಗಿಜಗಿದು ಆಡಿದರೆ
ಸನ್ನಿಯೆನಿಸುವನು ಪೂರ್ಣಜ್ಞ.

೧೧೬೩

ಹೆಣ್ಣು ಶಕ್ತಿಯ ಮುಂದೆ ಇನ್ನಾವ ಶಕ್ತಿಗಳು ?
ಹೆಣ್ಣಿಂದ ಮರುಳಾಗಿ ಕುರುಡಾಗಿ ಜಗವು
ಸಣ್ಣಾಗುತಿಹುದು ಪೂರ್ಣಜ್ಞ.

೧೧೬೪

ಹೆಣ್ಣನಾಳವನರಿತು, ಹೆಣ್ಣನಾಳ್ವನೆ ಜಾಣ
ಹೆಣ್ಣುಗಳ ಮೋಹಕುಂಡದಲಿ ಬಿದ್ದವನು
ಮಣ್ಣು ಮುಕ್ಕುವನು ಪೂರ್ಣಜ್ಞ.

೧೧೬೫

ಹೆಣ್ಣು ಲೋಕದ ಜನನಿ, ಹೆಣ್ಣು ಪ್ರೇಮದ ಭರಣಿ
ಹೆಣ್ಣು ಭವಸಾಗರವ ದಾಟಿಸುವ ತರುಣಿ
ಹೆಣ್ಣನ್ನಪೂರ್ಣೆ ಪೂರ್ಣಜ್ಞ.

೧೧೬೬

"ಹೆಣ್ಣು ಮಾಯೆಯು ಅಲ್ಲ, ಮಣ್ಣು ಮಾಯೆಯು ಅಲ್ಲ"
ಹೆಣ್ಣು ಮಣ್ಣುಗಳಾಶೆ ಮಾಯೆಯೆಂದಿಹನು
ಚಿನ್ಮಯ ಪ್ರಭುವು ಪೂರ್ಣಜ್ಞ.

೧೧೬೭

ಹೆಣ್ಣೆಂದು ಹಳಿಯದಿರಿ, ಹೆಣ್ಣೆಂದು ಮುಳಿಯದಿರಿ
ಹೆಣ್ಣು ಸಂಸ್ಕೃತಿಯ ಶುಭಶಕ್ತಿ ಚಿಚ್ಛಕ್ತಿ
ಹೆಣ್ಮಮಹಿಮೆಯಮಿತ ಪೂರ್ಣಜ್ಞ.

೧೧೬೮

ಮನೆಯ ನಡಿಪಳುನಾರಿ, ಮನೆಯನೊಡೆವಳು ನಾರಿ
ಮನವು ನಾರಿಯದು ತಿಳಿಯಲಸದಳ ಅಮಮ
ಮಣಿಯೊ ಕ್ಷಮೆಕೋರಿ ಪೂರ್ಣಜ್ಞ.

೧೧೬೯

ಅಣ್ಣ ತಮ್ಮರ ನಡುವೆ, ಭಿನ್ನಭೇದವ ಬೆಳೆಸಿ
ಚಿನ್ನರನ್ನದೊಲು ಕೂಡಿರ್ದವರನು ವಿ–
ಚ್ಛಿನ್ನಿಪಳು ನಾರಿ ಪೂರ್ಣಜ್ಞ.

೧೧೭೦

ಹೊನ್ನು ಹಣ ನೋಡಿ ಬಹ, ಹೆಣ್ಣನ್ನು ನೆಚ್ಚದಿರು
ಹೊನ್ನು ಹಣ ಹೋದ ಮರುದಿನವೆ ನಿನ್ನನ್ನು
ಅನ್ಯನೆನ್ನುವಳು ಪೂರ್ಣಜ್ಞ.

೧೧೭೧

ಹೆಣ್ಣೆನಾಟದ ನೆಲೆಯು, ಅಣ್ಣಗಳೆ ಅರಿತಿಹಿರೆ?
ಬಣ್ಣ ಬಣ್ಣಗಳ ನುಡಿಸಟನೆ ಬೀರುತಿಹ
ಹೆಣ್ಣೆಂದ ಜೋಕೆ ಪೂರ್ಣಜ್ಞ.

೧೧೭೨

ಹೆಣ್ಣಿಂಗೆ ಸೋತವರು, ಪ್ರೋನ್ನತಿಯ ಸಾಧಿಸರು
ಹೆಣ್ಣ ಕಾಲ್ದೆಸೆಯ ಹುಡಿಯಲ್ಲಿ ಹೊರಳಾಡಿ
ಮಣ್ಣ ಪಾಲಹರು ಪೂರ್ಣಜ್ಞ.

೧೧೭೩

ಮಡದಿಯುಳಮನದಲ್ಲಿ, ಕೆಡುಕಿನುರಿಹೊತ್ತಿದರೆ
ಸಡಗರದೊಳಿರುವ ಮನೆಯೆಲ್ಲ ಹಾಳಾಗಿ
ಕಡುದುಃಖಹುದು ಪೂರ್ಣಜ್ಞ.

೧೧೭೪

ಹೆಣ್ಣರದೆ ಗತಿಯಿಲ್ಲ. ಹೆಣ್ಣರದೆ ಮತಿಯಿಲ್ಲ,
ಹೆಣ್ಣು ಮನುಜನಲಿ ಚೇತನವ ಚಿಗುರಿಸುವ
ಸನ್ಮೋದಶಕ್ತಿ ಪೂರ್ಣಜ್ಞ.

೧೧೭೫

ಗುಣವುಳ್ಳ ಹೆಣ್ಣಿನೊಳು, ಘನಶಕ್ತಿಧುನಿಯಿಹುದು
ಗುಣವತಿಯುದೇಶಕ್ಕೆ ಸಂಸ್ಕೃತಿಯ ದಿವ್ಯ
ಮಣಿಯಂತಿರುವಳು ಪೂರ್ಣಜ್ಞ.

೧೧೭೬

ಹೆಣ್ಣಿನಿಂದಲಿ ಇಹವು, ಹೆಣ್ಣಿನಿಂದಲಿ ಪರವು
ಹೆಣ್ಣೆ ಸರ್ವಾಧಾರಿ ಹೆಣ್ಣಿಲ್ಲದಿರಲು
ಕಣ್ಣಿಲ್ಲ ಜಗಕೆ ಪೂರ್ಣಜ್ಞ.

೧೧೭೭

ಮನೆತನದ ಮರ್ಯಾದೆ, ಘನತೆ ಗೌರವಗಳನು
ಅನವರತ ರಕ್ಷಿಸುವ ಹೊಣೆಹೊತ್ತು ನಡೆವ
ಗುಣವತಿಯೆ ಸತಿಯು ಪೂರ್ಣಜ್ಞ.

೧೧೭೮

ಪತಿಯು ಬಂದೊಡೆ ಮನೆಗೆ ಸತಿಯು ಸಂಭ್ರಮದಿಂದ
ಹಿತವಪ್ಪ ತೆರದಿ ನಗುಮೊಗದಿ ಸ್ವಾಗತಿಸೆ
ಪತಿಗದುವೆ ಭಾಗ್ಯ ಪೂರ್ಣಜ್ಞ.

೧೧೭೯

ಪತಿಯು ದೊರೆಯಲು ದೈವ, ಸತಿಯು ದೊರೆಯಲು ದೈವ
ಸತಿಪತಿಗಳೊಂದಾಗಿ ಬಾಳಲ್ಕೆ ದೈವ
ಮತಿ ನೀಡಬೇಕು ಪೂರ್ಣಜ್ಞ.

೧೧೮೦

ಪತಿಯ ಧೋರಣೆ ತಿಳಿದು, ಸತಿ ನಡೆಯುತಿರಬೇಕು
ಸತಿಯೊಲಿಯುವಂತೆ ಪತಿ ನಡೆಯುತಿರಬೇಕು
ಹಿತವಿದರೊಳಿಹುದು ಪೂರ್ಣಜ್ಞ.

೧೧೮೧

ಮಾತೃಗರ್ಭದಿ ಜನಿಸಿ, ಮಾತೃವಿನ ಮೊಲೆಯುಂಡು
ಮಾತೃಭೂಮಿಯೊಳು ನಲಿದಾಡುತಿಹ ನಮಗೆ
ಮಾತೃದೇವತೆಯು ಪೂರ್ಣಜ್ಞ.

೧೧೮೨

ಹೆಣ್ಣು ಶಕ್ತಿಯ ಮೂರ್ತಿ, ಹೆಣ್ಣು ಕಾರ್ಯಕೆ ಸ್ಫೂರ್ತಿ
ಹೆಣ್ಣಿಂದ ಮನೆಚೆಂದ, ಮನಕೆ ಆನಂದ
ಹೆಣ್ಣಿಂದಗಾಧ ಪೂರ್ಣಜ್ಞ.

೧೧೮೩
ನಾರಿಯರ ಸೌಂದರ್ಯ, ಹೀರುತ್ತ ಕಣ್ಣಿಂದ
ತೋರಿಕೆಗೆ ಸಭ್ಯರಾಗಿ ಮನಸೋಲದಿಹ
ಧೀರರಾರುಂಟು? ಪೂರ್ಣಜ್ಞ.

೧೧೮೪
ಆಧುನಿಕ ಬೆಡಗಿಯರು, ಸೌಂದರ್ಯ ವರ್ಧಿಸಲು
ಮೇದುರದ ವೇಷಧರಿಸಿ ಸಂಸ್ಕೃತಿ ಮರೆತು
ಮೋದ ಪಡೆಯುವರು ಪೂರ್ಣಜ್ಞ.

೧೧೮೫
ಹೆಣ್ಣು ತ್ಯಾಗದ ಜೀವಿ, ಹೆಣ್ಣು ಸಹನೆಯ ದೇವಿ
ಹೆಣ್ಣು ಮನೆತನದ ಸುಖಶಾಂತಿಯಧಿದೇವಿ
ಹೆಣ್ಣು ಗೃಹಲಕ್ಷ್ಮಿ ಪೂರ್ಣಜ್ಞ.

೧೧೮೬
ಅತ್ತೆ ಕಾಟಕೆ ಸೊಸೆಯು, ಅತ್ತತ್ತು ಕೊರಕೊರಗಿ
ಮೃತ್ಯುವಿಗೆ ತುತ್ತು ಆವಳಾದರಾ ಮನೆಗೆ
ಎತ್ತಣದು ಶಾಂತಿ? ಪೂರ್ಣಜ್ಞ.

೧೧೮೭
ಕ್ಷಣಕ್ಷಣಕೆ ಕೀಟಲೆಯು, ದಿನ ನಿತ್ಯ ಜಗಳಾಟ
ಶನಿಯಂಥ ಅತ್ತೆ ಕತ್ತೆಯೊಲು ದುಡಿವ ಸೊಸೆ
ಕನಿಕರದ ನೋಟ ಪೂರ್ಣಜ್ಞ.

೧೧೮೮
ಮುತ್ತಿನಂತಹ ಅತ್ತೆ, ರತ್ನದಂತಹ ಸೊಸೆಯು
ಸತ್ಪಥದ ಪತಿಯು, ಧರ್ಮನಂತಹ ಮಾವ
ಸ್ತುತ್ಯ ಸಂಸಾರ ಪೂರ್ಣಜ್ಞ.

೧೧೮೯
ಅತ್ತೆಯಾದವಳಲ್ಲಿ, ಪ್ರೀತಿಯುದು ತುಂಬಿರಲು
ಮತ್ತೆ ಸೊಸೆಯನ್ನು ಮಗಳಂತೆ ನೋಡಿದರೆ
ಉತ್ತಮವು ಬದುಕು ಪೂರ್ಣಜ್ಞ.

೧೯೯೦

ಅತ್ತೆ ಅತ್ತಿಗೆಯರಿಗೆ, ತೊತ್ತಾಗಿ ದುಡಿಯುತ್ತ
ಅರ್ತಿಯಿಂ ಪತಿಯ ಸೇವೆಗೈಯುವ ಸೊಸೆಯು
ರತ್ನ ಮನೆತನಕೆ ಪೂರ್ಣಜ್ಞ.

೧೯೯೧

ಕರಿಯ ಹೆಂಡತಿಯೆಂದು ಪರಿತಪಿಸದಿರು ಮನದಿ
ಕರಿದಲ್ತೆ ಕಸ್ತೂರಿ ಗುಣದ ಪರಿಮಳವಿರಲು
ಕರಿದಾದರೇನು? ಪೂರ್ಣಜ್ಞ.

೧೯೯೨

ಕಣ್ಣಿಟ್ಟು ಪ್ರೇಮದಲಿ, ಹೆಣ್ಣೊಮ್ಮೆ ಕೂಡಿದರೆ
ಮಣ್ಣಿಗಿಳಿಯುವತನಕ ಕೈಬಿಡಳು, ಸುರಸುಖಕೆ
ಹೆಣ್ಣು ಖಣಿಯಯ್ಯ ಪೂರ್ಣಜ್ಞ.

೧೯೯೩

ಗುಣರತ್ನ ಭೂಷಿತೆಯು, ಮನವಾರೆ ಮೆಚ್ಚುತ್ತ
ಮನೆ ತುಂಬಿಸಿದರೆ ಧನಧಾನ್ಯ ತನಿಶಾಂತಿ
ಮನೆಯಲ್ಲಿ ಸ್ಥಿರವು ಪೂರ್ಣಜ್ಞ.

೧೯೯೪

ನವಿಲು ನಡಿಗೆಯ ಹುಡುಗಿ ಸುವಿಚಾರ ಪಥ ಬಿಡದೆ
ನವನೃತ್ಯಗಾನ ಸಾಧನೆಯ ಮಾಡಿದರೆ
ಜವದಿ ಸಿದ್ಧಿಪ್ಪುದು ಪೂರ್ಣಜ್ಞ.

೧೯೯೫

ಸತಿಯು ಇದ್ದರೆ ಚಿಂತೆ, ಸತಿಯಿಲ್ಲದಿರೆ ಚಿಂತೆ
ಸತಿಯ ಮತಿ ವಕ್ರವಾಗಿದ್ದರಾ ಪತಿಯ
ಗತಿ ಅಧೋಗತಿಯು ಪೂರ್ಣಜ್ಞ.

೧೯೯೬

ಸತಿ ತಾನು ಮನಮೆಚ್ಚಿ, ಪತಿಯ ಮನಸೆರೆಗೈದು
ಶೃತಿಗೊಂಡ ವೀಣೆಯಂತೆ ನುಡಿದರೆ ಪತಿಯು
ಸತಿಯ ವಶವಕ್ಕು ಪೂರ್ಣಜ್ಞ.

೧೯೭
ಬಾಳುವದು ಹೆಣ್ಣಿಂದ, ಬೀಳುವದು ಹೆಣ್ಣಿಂದ
ಭಾಳಾಕ್ಷ ಕೃಪೆಯು ಪಡೆಯುವದು ಹೆಣ್ಣಿಂದ
ಕೇಳಿರಿದು ನಿಜವು ಪೂರ್ಣಜ್ಞ.

೧೯೮
ತಾಳವದು ಏಳುವದು, ಆಳುವದು ಹೆಣ್ಣಿಂದ
ಬಾಳಿನಲಿ ಹೆಣ್ಣು ಸೌಂದರ್ಯದಧಿದೇವಿ
ಬಾಳಬಲ ಹೆಣ್ಣು ಪೂರ್ಣಜ್ಞ.

೧೯೯
ನಾರಿಯರ ನೆಲೆಯನ್ನು ಯಾರು ತಿಳಿದಿಹರಣ್ಣ?
ವಾರಿಧಿಯ ಮೀನು ಮೊಸಳೆಗಳ ಲೆಕ್ಕವನು
ಯಾರು ಬರೆದಿಹರು? ಪೂರ್ಣಜ್ಞ.

೨೦೦
ನಾರಿಯಂತಸ್ಥವನು, ಪೂರ ತಿಳಿದವರಾರು?
ನಾರಿ ಹರಿಹರರ ನೀರನ್ನೆ ಇಳಿಸಿಹಳು
ನಾರಿಗಾರು ಸರಿ? ಪೂರ್ಣಜ್ಞ.

೨೦೧
ನಂಬಿರುವ ಹೆಣ್ಣನ್ನು ಶುಂಭ ಮನುಜರು ಕಪಟ
ತುಂಬಿರುವ ಮಾತು ಸುರ ಭೋಗಿಸಿ ಕೊನೆಗೆ
ಕೈ ಬಿಡುವರಕಟಾ ಪೂರ್ಣಜ್ಞ.

೨೦೨
ದೇವದಾಸಿಯರೆಂದು, ದೇವಿ ನಿಲಯದೊಳಿರಿಸಿ
ದೇಹ ವಿಕ್ರಯಕೆ ದೂಡುವವರನು ಯಾವ
ದೇವಿಯೊಲಿದಾಳು? ಪೂರ್ಣಜ್ಞ.

೨೦೩
ಅತ್ತೆ ತಾ ಚೆನ್ನಾಗಿರೆ, ಕುತ್ತುಗಳು ಒರದಿಹವು
ಅತ್ತೆಯಲಿ ದುರ್ಭಾವ ಬೆಳೆಯುತಿರೆ ಮನೆಗೆ
ನಿತ್ಯ ಬಲುಕಷ್ಟ ಪೂರ್ಣಜ್ಞ.

೧೨೦೪
ಹಸನಾದ ಮನೆಯಿರಲಿ, ಸೊಸೆಯಲ್ಲಿ ಗುಣವಿರಲಿ,
ಶಶಿ ಕಾಂತಿಯಂಥ ಸಂಸ್ಕೃತಿಯು ಜನರಿರಲಿ
ರಸ ಕಾವ್ಯವಿರಲಿ ಪೂರ್ಣಜ್ಞ.

೧೨೦೫
ಅತ್ತೆ ಕಾಟವ ತಾಳಿ, ಮಾತು ಗಂಡನ ಕೇಳಿ
ನಿತ್ಯ ಮನಮುಟ್ಟಿ ದುಡಿಯುತ್ತ ಸೊಸೆಯಿರಲು
ಕುತ್ತಿಲ್ಲ ಮನೆಗೆ ಪೂರ್ಣಜ್ಞ.

೧೨೦೬
ಉರಿಯೊಳಗೆ ಹೊಗಬಹುದು, ಅರಿಗಳನು ಗೆಲಬಹುದು
ಗರಳವನು ಕುಡಿದು ಇರಬಹುದು ಲಜ್ಜೆಯನು
ತೊರೆದಿರಳು ನಾರಿ ಪೂರ್ಣಜ್ಞ.

೧೨೦೭
ಹಾವು ಹಿಡಿಯಲುಬಹುದು, ಸಾವು ತಡೆಯಲುಬಹುದು
ನೋವು ತಾಳುತ್ತ ಇರಬಹುದು ಲಜ್ಜೆಯುಳಿ–
ದಾವಳೂ ಇರಳು ಪೂರ್ಣಜ್ಞ.

೧೨೦೮
ಕಡು ಕಾಮಿಗಳು ಬರಲು ದೃಢಮನದ ಹೆಣ್ಣುಗಳು
ಸಿಡಿಲೆರಗಿದಂತೆ ಗರ್ಜಿಸುತಲವರನ್ನು
ಇಡುವರತಿ ದೂರ ಪೂರ್ಣಜ್ಞ.

೧೨೦೯
ಕಲಿತ ಸೊಸೆಯರು ಕೆಲರು, ಮಲೆತಿಪರು ಸ್ವೇಚ್ಛೆಯಲಿ
ಎಳೆಯುವರು ಮನೆಯ ಮರ್ಯಾದೆಯನು ಹೊರಗೆ
ಕಲಿಕಾಲ ಮಹಿಮೆ ಪೂರ್ಣಜ್ಞ.

೧೨೧೦
ಅತ್ತೆಯದು ತಪ್ಪೆಂದು, ಅತ್ತು ಗಂಡಗೆ ಹೇಳಿ
ಮತ್ತವನ ಕಿವಿಯೊಳೂದುವರು ಏನೇನೊ
ಕತ್ತಲಾಟದಲಿ ಪೂರ್ಣಜ್ಞ.

೧೨೧೧

ಕುಟಿಲ ಸೊಸೆ ಅತ್ತೆಯನು, ಚಿಟುಕು ಮುಳ್ಳಾಡಿಸುತ
ಕಟುಕು ರೊಟ್ಟಿಯನು ತಂಗುಳವನುಣಲಿಕ್ಕಿ
ಸೆಟೆಸುವಳು ಕೊನೆಗೆ ಪೂರ್ಣಾಜ್ಞ.

೧೨೧೨

ಹಣ ಸೆಳೆವ ಹೊಂಚನ್ನು, ಮನದಿ ಹಣೆಯುತ ಪತಿಯ
ಮನ ಮುಗ್ಧಗೊಳಿಸಿ ಸುಲಿಸುಲಿದು ಕೈಗಂಟು
ಘನ ಮಾಡುತಿಹಳು ಪೂರ್ಣಾಜ್ಞ.

೧೨೧೩

ಚೈನಿಬಾಜಿಯ ಸೊಸೆಯು, ಮಾನವನು ಮಾರುವಳು
ಊನವಿಲ್ಲದಿಹ ಮನೆತನದ ಗೌರವಕೆ
ಊನ ಮಾಡುವಳು ಪೂರ್ಣಾಜ್ಞ.

೧೨೧೪

ಪತಿಭಕ್ತಿಲತೆಯಂಥ, ಸತಿಯಿರಲು ಮನೆಯಲ್ಲಿ
ಕ್ಷಿತಿಗಿಳಿದು ಬಂದ ಪಾರ್ವತಿಯ ಪ್ರತಿರೂಪ
ಅತಿ ಉಕ್ತಿ ಅಲ್ಲ ಪೂರ್ಣಾಜ್ಞ.

೧೨೧೫

ಅರಿವಿರುವ ಗೃಹಿಣಿಯು, ಮರೆತು ಕಡು ಕಷ್ಟದೊಳು
ಬಿರುನುಡಿಯ ಪತಿಗೆ ಆಡದಿರು ಕಡೆತನಕ
ತಿರುಗಿ ಬೀಳದಿರು ಪೂರ್ಣಾಜ್ಞ.

೧೨೧೬

ಗೃಹಿಣಿಯೇ ನೀ ಕೇಳು, ಗಹಗಹಿಸಿ ನಗಬೇಡ
ಅಹಮಿಕೆಯು ಬೇಡ, ಗೌರವಾದರದಿಂದ
ವಿಹರಿಸೌ ಗೃಹದಿ ಪೂರ್ಣಾಜ್ಞ.

೧೨೧೭

ಹೆಣ್ಣು ಚೆಲುವಿನಮೂರ್ತಿ, ಹೆಣ್ಣು ಗೆಲುವಿಗೆ ಸ್ಫೂರ್ತಿ
ಹೆಣ್ಣಲ್ತೆ ಜಗದ ಜೀವರಾಶಿಗೆ ಜನನಿ
ಹೆಣ್ಣು ಶಿವಶಕ್ತಿ ಪೂರ್ಣಾಜ್ಞ.

೧೨೧೮

ಬೆಲೆವೆಣ್ಗಳೊಡನಾಟ, ಬಲು ರುಚಿಯ ವಿಷದೂಟ
ಒಲುಮೆಯನು ತೋರಿ ಸರ್ವಸ್ವವನು ಹೀರಿ
ಕೊಳೆಯಿಪರು ವಿಟರ ಪೂರ್ಣಜ್ಞ.

೧೨೧೯

ಸೂಳೆಯರ ಸಂಗದಲಿ, ಕಾಲವನು ಕಳೆಯದಿರು
ಹಾಳುಭಾವಿಯಲಿ ಬಿದ್ದಿರುವ ಹೆಣದಂತೆ
ಬಾಳೆಲ್ಲ ಗೋಳು ಪೂರ್ಣಜ್ಞ.

೧೨೨೦

ಬೆಲೆವೆಣ್ಣ ಚೆಂದುಟಿಯು, ಬಳುಕುತಿಹ ತೆಳುಕಟಿಯು
ಬಲು ಚೆಂದ ಕಣ್ಗೆ ವಿಟರ ಮೈಮನಗಳಿಗೆ
ಕೊಳರೋಗ ಕೊನೆಗೆ ಪೂರ್ಣಜ್ಞ.

೧೨೨೧

ಹಣಮೆಚ್ಚಿ ಒರುವವಳ, ಕ್ಷಣ ಮಾತ್ರ ನೋಡದಿರು
ಗುಣವತಿಯು ಒಲಿದು ಬಂದರಾಗುಣಮಣಿಯ
ಗುಣಕೆ ಮುದ್ದು ಕೊಡು ಪೂರ್ಣಜ್ಞ.

೧೨೨೨

ಅನ್ಯ ಪುರುಷರ ತನ್ನ ಕಣ್ಣೆತ್ತಿ ನೋಡದಲೆ
ನಿನ್ನನೇ ದೇವನೆಂಬ ಸತಿ ದೊರಕಿದರೆ
ನಿನ್ನ ಪುಣ್ಯವದು ಪೂರ್ಣಜ್ಞ.

೧೨೨೩

ಹಾದಿ ಬಿಟ್ಟಿಹ ಹೆಣ್ಣು, ಮೋದ ನೀಡದ ಗಂಡ–
ಗಾದರದಿ ನೋಡದಲೆ ತಿರುಗುವಳು ಹೊರಗೆ
ಹಾದರದ ಬೊಂಬೆ ಪೂರ್ಣಜ್ಞ,

೧೨೨೪

ತಾನಾಗಿ ಒಲಿದವಳು, ಜೇನು ಹಾಲ್ ಸುರಿಸುವಳು
ನೀನಾಗಿ ಜಗ್ಗಿ ಎಳೆದವಳು ಕಚ್ಚುವಳು
ಜೇನು ಹುಳದಂತೆ ಪೂರ್ಣಜ್ಞ.

೧೨೨೫

ಕೆಂಬವಳದುಟಿಯುಳ್ಳ, ರಂಭೆಯಂತಹ ಸೂಳೆ
ಕುಂಭ ಕುಚ ತೋರಿ ಸೆಳೆಯುವವಳು ಧನಕನಕ
ಹುಂಬ ಜನರಿಂದ ಪೂರ್ಣಜ್ಞ.

೧೨೨೬

ಗಂಡನಂಜಿಕೆ ತೊರೆದು, ಕಂಡ ಕಂಡವರೊಡನೆ
ಮುಂಡಾಡುತಿರುವ ದಿಂಡೆಯರು ರತಿರೋಗ
ಕುಂಡವಾಗಿಹರು ಪೂರ್ಣಜ್ಞ.

೧೨೨೭

ಕಟಿಯನ್ನು ಹೊರಳಿಸುತ, ತುಟಿಗಳನು ಮಿಳಿರಿಸುತ
ಪುಟಿಸಿ ಎದೆ ಚೆಂಡು ಮಿಂಡಿಯರು ಬಲೆ ಬೀಸಿ
ವಿಟರ ಸುಲಿಯುವರು ಪೂರ್ಣಜ್ಞ.

೧೨೨೮

ಹುಡುಗಿಯರು ಬೆಡಗಿನಿಂ, ಹುಡುಗರೊಡನಾಡುತ್ತ
ಎಡವಿದರೆ ಅವರು ನಡತೆ ಗೆಟ್ಟವರೆನಿಸಿ
ಅಡವಿ ಪಾಲಹರು ಪೂರ್ಣಜ್ಞ.

೧೨೨೯

ಗಂಡ ಹೆಂಡಿರ ಬಾಳು, ಗಂಧ ತೀಡಿದ ಹಾಗೆ
ಬಂಡೆಗಪ್ಪಳಿಸದಂತಿರಲಿ, ಸವಿ ಅಂಟಿ
ನುಂಡಿ ತಿಂದಂತೆ ಪೂರ್ಣಜ್ಞ.

೧೨೩೦

ದಾಂಪತ್ಯ ಜೀವನವು, ಕಂಪುಳ್ಳ ರಸಪಾಕ
ಇಂಪುಳ್ಳ ಗಾನದಂತಿರಲಿ ಸೊಂಪಿರಲಿ
ತಂಪು ಮನೆಯಂತೆ ಪೂರ್ಣಜ್ಞ.

೧೨೩೧

ಸತಿಯನ್ನು ಬರಿ ಭೋಗ, ರತಿಯೆಂದು ತಿಳಿಯದಿರು
ಸತಿಯು ಸಖಿಯೆಂದು ಅರಿತವನೆ ಪರಮ ಸುಖಿ
ಸತಿ ಸುಖವ ಶೃತಿಯು ಪೂರ್ಣಜ್ಞ.

೧೨೩೨

ಪ್ರೇಮವಿಲ್ಲದ ಸತಿಯು, ಪ್ರೇಮವಿಲ್ಲದ ಪತಿಯು
ಪ್ರೇಮವಿಲ್ಲದದು ಕಾಮಾಗ್ನಿಯಾಹುತಿಯು
ಪ್ರೇಮ ಸುಖಧಾಮ ಪೂರ್ಣಜ್ಞ.

೧೨೩೩

ಸತಿ ಪತಿಗಳೊಂದಿರಲು, ಹಿತವಪ್ಪುದೀಶ್ವರಗೆ
ಘೃತ ಸಕ್ಕರೆಗಳ ಬೆರೆಸಿ ಸವಿದಂತಹುದು
ಹಿತದ ಸಂಸ್ಕೃತಿಯು ಪೂರ್ಣಜ್ಞ.

೧೨೩೪

ನಿರ್ಮಲ ಪ್ರೇಮಯುತ, ಧರ್ಮಪತ್ನಿಗೆ ತಕ್ಕ
ನಿರ್ಮಲ ಪ್ರೇಮಯುತ ಧರ್ಮಪತಿ ಬೇಕು
ನಿರ್ಮಲ ಬದುಕಿಗೆ ಪೂರ್ಣಜ್ಞ.

೧೨೩೫

ಹೆಣ್ಣುಗಳ ಕುಡಿನೋಟ ಹೆಣ್ಣುಗಳ ಒಡನಾಟ
ಅಣ್ಣಗಳ ವೈಮನಕೆ ಮಸಿ ಬಳಿದು ಕೊನೆಗೆ
ಮಣ್ಣು ಮುಕ್ಕಿಸಿವೆ ಪೂರ್ಣಜ್ಞ.

೧೨೩೬

ಅತ್ತೆಕಾಟಕೆ ಸೊಸೆಯು, ಅತ್ತುತ್ತು ಕೊರಕೂರಗಿ
ಮೃತ್ಯುವಿಗೆ ತುತ್ತು ತಾನಾದರಾ ಮನೆಗೆ
ಎತ್ತಣದು ಶಾಂತಿ ಪೂರ್ಣಜ್ಞ.

೧೨೩೭

ಒಲಿಯದಾ ಹೆಣ್ಣನ್ನು ಎಳೆಯುವದು ಒಳಿತಲ್ಲ
ಬಲವಾದ ಮೂರು ಬೆರಳುಗಳು ಮೂಡುವವು
ಗಲ್ಲಗಳ ಮೇಲೆ ಪೂರ್ಣಜ್ಞ.

೧೨೩೮

ಗಂಡ ಬಂದರೆ ಮನೆಗೆ, ಸಿಂಡರಿಸದಿರು ಮುಖವ
ದುಂಡು ಮಲ್ಲಿಗೆಯು ನಗೆ ಸೂಸಿ ಬರಮಾಡಿ
ಕೊಂಡು ಸತ್ಕರಿಸು ಪೂರ್ಣಜ್ಞ.

೧೨೩೯

ಪತಿಯು ಮನದೊಲವರಿತು, ಸತಿಯು ಅನುಸರಿಸಿದರೆ
ಸತಿಪತಿಗಳ ಪ್ರೇಮ ಆನಂದಗಳು
ಸತತ ಬೆಳೆಯುವುವು ಪೂರ್ಣಜ್ಞ.

೧೨೪೦

ದುಷ್ಟಳಾದರೆ ಸೊಸೆಯು, ಕಷ್ಟ ಕೊಡುವಳತ್ತೆಗೆ
ಎಷ್ಟೆಷ್ಟು ಸುಖವು ಬರದಂತೆ ಮನೆತನವ
ನಷ್ಟ ಮಾಡುವಳು ಪೂರ್ಣಜ್ಞ.

೧೨೪೧

ತಕ್ರದಲಿ ತೇಲುತಿಹ, ಚೊಕ್ಕ ಬೆಣ್ಣೆಯ ಉಂಡೆ
ಚೊಕ್ಕವಾಗಿರುವಂತೆ ಅಂಕಿತದ ಹೆಣ್ಣು
ಚೊಕ್ಕವಾಗಿಹಳು ಪೂರ್ಣಜ್ಞ.

೧೨೪೨

ಮದುವೆಯಾಗುವ ಮೊದಲು, ಮದುವೆ ನಂತರ ಸ್ತ್ರೀಯ
ಹೃದಯವನರಿದು ಕೊಳ್ಳುವದು ಬಲುಕಷ್ಟ
ಇದು 'ಚರ್ಚಿಲ್'ನುಡಿ ಪೂರ್ಣಜ್ಞ.

೧೨೪೩

ಒಬ್ಬ ಗಂಡನ ವರಿಸಿ, ಒಬ್ಬ ಮಿಂಡನ ಮರೆಸಿ
ಒಬ್ಬನನುಸರಿಸಿ ಒಬ್ಬ ಪ್ರಿಯನನು ಕರೆಸಿ
ತಬ್ಬುವಳು ಜಾರೆ ಪೂರ್ಣಜ್ಞ.

೧೨೪೪

ಮುತ್ತೈದೆ ಮಾನಿನಿಗೆ, ಕುತ್ತುಗಳು ಹಲವಾರು
ಸುತ್ತೆಲ್ಲ ನೋಡಿ ಪಾತಿವ್ರತ್ಯ ಪಥದಿ
ನಿತ್ಯ ಜೀವಿಸಲಿ ಪೂರ್ಣಜ್ಞ.

೧೨೪೫

ನೀರಸಳು ಸತಿಯೆಂದು, ದೂರ ಸರಿಯಲು ಬೇಡ
ಬಾರಿ ಬಾರಿಗೆ ಲಲ್ಲೆಗೈದರವಳಾಗುವಳು
ಸಾರ ಸುಖದೊರತೆ ಪೂರ್ಣಜ್ಞ.

೧೨೪೬

ಕ್ರೂರ ಹೆಂಡತಿಯೊಡನೆ, ಸಾರಸುಖ ಸಿಗದಯ್ಯ
ಭಾರ ಹೊತ್ತವಗೆ ಗೊತ್ತುಂಟು ಸಂಸಾರ
ಧೀರದಿಂ ಬಾಳು ಪೂರ್ಣಜ್ಞ.

ದಾಂಪತ್ಯ ಧರ್ಮ

೧೨೪೭

ಆದರ್ಶಪತಿಯಾಗಿ, ಆದರ್ಶಸತಿಯಾಗಿ
ಆದರ್ಶ ಬಾಳು ಸಾಗಿಸುತ ಬಾಳಿದರೆ
ಭೇದವದು ಎಲ್ಲಿ? ಪೂರ್ಣಜ್ಞ.

೧೨೪೮

ಸತಿಪತಿಗಳೊಂದಿರಲು, ಹಿತವುಂಟು ಸರ್ವರಿಗೆ
ಅತಿಮಧುರ ಜೀವನವ ನಡೆಸಿ ಬಾಳಿದರೆ
ಜೊತೆಯಲ್ಲಿ ಶಕ್ತಿ ಪೂರ್ಣಜ್ಞ.

೧೨೪೯

ಪುಣ್ಯವಿದ್ದರೆ ಸುತನು, ಪುಣ್ಯವಿದ್ದರೆ ಸತಿಯು
ಪುಣ್ಯವಿರೆ ವಟುವು ದೊರಕುವರು ಮನೆ–ಮಠಕೆ
ಸನ್ನುತರು, ಹಿತರು ಪೂರ್ಣಜ್ಞ.

೧೨೫೦

ಕಡೆತನಕ ಪತಿಯನ್ನು, ಬಿಡಬೇಡ ನಿಜ ಮನದಿ
ಕಡುಕಷ್ಟ ನೀಡಿದರೆ, ಧೈರ್ಯದಿಂ ಸಹಿಸು
ಇದುವೆ ಸತಿಧರ್ಮ ಪೂರ್ಣಜ್ಞ.

೧೨೫೧

ಪತಿಯಾಗಿ ಸತಿಯನ್ನು, ಅತಿಪ್ರೀತಿ ಕಾಣದಿರೆ
ಸತಿಗೆ ಕಡುಕಷ್ಟ ನೀಡಿದರೆ ಜೀವನದಿ
ಪತಿಧರ್ಮವೆಲ್ಲಿ? ಪೂರ್ಣಜ್ಞ.

೧೨೫೨

ಗಂಡಹೆಂಡಿರ ಬದುಕು, ಗಂಧತೀಡಿದ ಹಾಗೆ
ಬಂಧುರತೆ ತುಂಬಿದರೆ ಆ ಬದುಕು ನಿಜದಿ
ಸುಂದರತೆಯುಂಟು ಪೂರ್ಣಜ್ಞ.

೧೨೫೩

ಕ್ಷಣ ಕ್ಷಣಕೆ ಕಿರುಚಾಟ, ಕ್ಷಣ ಕ್ಷಣಕೆ ಬಡಿದಾಟ,
ಹಣವ ಪಡೆಯಲ್ಕೆ ಸತಿಯನ್ನು ಕಾಡಿದರೆ
ಮನೆಯೆಲ್ಲ ನರಕ ಪೂರ್ಣಜ್ಞ.

೧೨೫೪

ಮನೆ ಬಂದ ಪತಿಯನ್ನು ಮನಸಿನಿಂದಲಿ ನಗುತ
ಮುನಿಸು ಮಾಡದಲೆ ಅಪ್ಪುತ್ತ ಬಾಳಿದರೆ
ಧನವೆಲ್ಲ ಸತಿಗೆ ಪೂರ್ಣಜ್ಞ.

೧೨೫೫

ವರದಕ್ಷಿಣೆಯಾಶಿರಿಸಿ ಪರಿಪರಿಯ ಕಾಡಿದರೆ
ಕರುಳೆಲ್ಲಿ ಬರಬಹುದು? ಬರಿದುಡ್ಡಿಗಾಗಿ
ಕೊರಗುವದೆ ನಿತ್ಯ? ಪೂರ್ಣಜ್ಞ.

೧೨೫೬

ಬೇಡದಿರು ದುಡ್ಡನ್ನು ಕಾಡದಿರು ದಿನನಿತ್ಯ
ಮಾಡದಿರು ಮನೆಯನ್ನು ಬಲುಬೇಗ ಹೊಲಸು
ಕೂಡು ಮನಮುಟ್ಟಿ ಪೂರ್ಣಜ್ಞ.

೧೨೫೭

ಪರರನಾರಿಯರನ್ನು, ಕರಳುಕೊರೆಯುವ ಹಾಗೆ
ಕೊರಗು ನೀಡದಿರು ಬಲುಪಾಪ ನಿನಗುಂಟು
ಹರಶಾಪ ಕೊನೆಗೆ ಪೂರ್ಣಜ್ಞ

೧೨೫೮

ವಾದವನು ಮಾಡದಿರು, ಬಾಧೆಯನು ನೀಡದಿರು
ಮೋದವನು ನೀಡುತ್ತ ಪತಿಗೆ ಸಂತಸವ
ಆದರದಿ ನೀಡು ಪೂರ್ಣಜ್ಞ.

೧೨೫೯

ನವವಧುವ ಕರಕೊಂಡು, ನವನುಡಿಯ ಬೆಡಗಿನಿಂ
ನವಶಕ್ತಿ ಸತಿಗೆ ನೀಡಿದರೆ ಪ್ರೇಮವನು
ನವಬಾಳು ಬೆಳಕು ಪೂರ್ಣಜ್ಞ.

೧೨೬೦

ಗುರುಹಿರಿಯರನು ಮರೆದು, ಜರಿಯದಿರು ಎಂದಿಗೂ
ಅರಿಯದಲೆ ಎದುರು ನುಡಿಯದಿರು ಕ್ರಮತಪ್ಪಿ
ಅರಿದು ನೀ ಬಾಳು ಪೂರ್ಣಜ್ಞ.

೧೨೬೧

ಬಂಧು ಬಾಂಧವರನ್ನು, ನಿಂದಿಸದೆ ಇರಬೇಕು
ಹೊಂದಿಕೊಳ್ಳುತ್ತ ಮನ್ನಣೆಯ ನೀಡುತ್ತ
ಚೆಂದದಿಂ ಬಾಳು ಪೂರ್ಣಜ್ಞ.

೧೨೬೨

ಅತ್ತೆ ಮಾವಂದಿರಲಿ, ಮಿಥ್ಯವನು ನುಡಿಯದಿರು
ನಿತ್ಯ ನಿಷ್ಠೆಯಲಿ ಸೇವೆಯನು ಮಾಡುತ್ತ
ಸತ್ಯದಿಂ ಬಾಳು ಪೂರ್ಣಜ್ಞ.

೧೨೬೩

ಪರರ ಮಗಳೆನ್ನುತ್ತ, ಜರಿಯದಿರು ಹಗಲಿರುಳು
ಮರುಗಿದರೆ ಸೊಸೆಯು ಬಾಳಿಲ್ಲ ಬರಿಗೋಳು
ಅರಿತು ನಡೆ ನೀನು ಪೂರ್ಣಜ್ಞ.

೧೨೬೪

ಮನೆಯನ್ನು ಸ್ವಚ್ಛವಿಡು, ಮನವು ತಾ ಮುದವಿರಲಿ
ಧನದಲ್ಲಿ ಶುಚಿಯಿರಲಿ ಸೊಸೆಗೆ ಇವುಬೇಕು
ಅನುಸರಿಸುದಿ ಬಾಳು ಪೂರ್ಣಜ್ಞ.

೧೨೬೫

ಕಂಡಕಂಡವರೊಡನೆ, ಮೊಂಡುತನ ಮಾಡದಿರು
ಕಂಡಂತೆ ತಿರುಗಾಡದಿರು ಪರರೊಡನೆ ನೀ
ಭಂಡತನ ಬೇಡ ಪೂರ್ಣಜ್ಞ.

೧೨೬೬

ಅಣ್ಣತಮ್ಮಂದಿರಲಿ, ಸಣ್ಣಸೇವಕರಲ್ಲಿ
ಮನ್ನಣೆಯ ನೀಡುತ್ತ ಮುದದಿಂದ ಬಾಳು
ಚಿನ್ನದಂತಾಗು ಪೂರ್ಣಾಜ್ಞ.

೧೨೬೭

ಅತ್ತೆತಾ ತೆಗಳಿದರೆ, ಕತ್ತನ್ನು ಎತ್ತದಿರು
ಎತ್ತಿದರೆ ಎದರು ನುಡಿಯದಿರು, ಕ್ಷಮೆಕೇಳು
ನಿತ್ಯಸುಖಬಾಳು ಪೂರ್ಣಾಜ್ಞ.

೧೨೬೮

ಬಂದಿರುವ ಹೆಣ್ಣನ್ನು, ಅಂದದಿಂದಲಿ ಕಂಡು
ಸುಂದರದ ಬಾಳನ್ನು ಬೆಳಗಿಸಲಿ 'ಅತ್ತೆ'
ಬಂಧುರತೆ ಮುಂದೆ ಪೂರ್ಣಾಜ್ಞ.

೧೨೬೯

ಮನೆಯ ಹಿರಿಯರು ತಾವು, ಮನೆಬಂದ ಸೊಸೆಯನ್ನು
ಮನೆಯ ಮಗಳೆಂದು ಭಾವಿಸುತ ಮುದದಿಂದ
ಮನೆಯ ಬೆಳಗಿಸಲಿ ಪೂರ್ಣಾಜ್ಞ.

೧೨೭೦

ಕೊಟ್ಟಿರುವ ಹೆಣ್ಣನ್ನು, ಕೊಟ್ಟವರು ಆಳಬೇಡಿ
ಹುಟ್ಟಿರುವ ಹೆಣ್ಣು ಬೇರೊಬ್ಬರದಿಹುದೈ
ದಿಟ್ಟತನದೊಳಿರಿ ಪೂರ್ಣಾಜ್ಞ.

೧೨೭೧

ತಾಳಿಯನು ಕಟಗೊಂಡು, ತಾಳಿದರೆ ದುಃಖದಲಿ
ಬಾಳೆಲ್ಲ ಬೆಳಕು ಇಲ್ಲದಿರೆ ಜೀವನದಿ
ಸೋಲುಂಟುನಿತ್ಯ ಪೂರ್ಣಾಜ್ಞ.

## ಸಮಾಜ - ಸಾಮಾಜಿಕ ವರ್ತನೆಗಳು - ಆಚರಣೆಗಳು

೧೨೭೨

ಬಿರುಕು ಬಿಟ್ಟಿಹ ಗೋಡೆ ಸರಿಪಡಿಸದಿರೆ ಬೇಗ
ಉರುಳಿ ಬಿದ್ದೀತು, ಬಿರುಕಿರಲು ಸಮಾಜದಲಿ
ಸರಿಪಡಿಸು ಬೇಗ, ಪೂರ್ಣಜ್ಞ.

೧೨೭೩

ಅಗ್ಗದಲಿ ತಂದ ಸಾಮಗ್ರಿಗಳ ಕಟ್ಟಡವು
ಮುಗ್ಗರಿಸದಿಹುದೆ? ಕಗ್ಗಗುಣದ ಸಮಾಜ
ಒಗ್ಗೂಡಬಹುದೆ? ಪೂರ್ಣಜ್ಞ.

೧೨೭೪

ದಿಕ್ಕಿಗೊಬ್ಬರು ಆಗಿ, ಸಿಕ್ಕಂತೆ ನಡೆದಲ್ಲಿ
ಅಕ್ಕರತೆಯಳಿದು ಸುಂದರ ಸಮಾಜವದು
ಮುಕ್ಕಾಗದಿರದು ಪೂರ್ಣಜ್ಞ.

೧೨೭೫

ವರದಕ್ಷಿಣೆಗಳಲ್ಲಿ, ಕಿರುಕುಳವು ತುಂಬಿಹುದು
ವರದಕ್ಷಿಣೆಗಳ ಕೊಡದಿರಲು ಬೀಗತನ
ಮುರಿದೊಗೆವರಯ್ಯ ಪೂರ್ಣಜ್ಞ.

೧೨೭೬

ಇದ್ದುಳ್ಳ ಮನೆತನದ, ಶುದ್ಧಮೂರ್ಖಗೆ ತಮ್ಮ
ಮುದ್ದು ಮಗಳನ್ನು ಕೊಟ್ಟು ಪೇಚಾಡುತಿಹ
ಪೆದ್ದರನು ನೋಡು ಪೂರ್ಣಜ್ಞ.

೧೨೭೭

ಸಿರಿಗುಣದ ಮಗಳನ್ನು ವರದಕ್ಷಿಣೆಯ ಕೊಟ್ಟು
ದುರುಳ ದುರ್ಗುಣಿಯ ಸೆರೆಮನೆಗೆ ದೂಡುತಿಹ
ಮರುಳರನು ನೋಡು ಪೂರ್ಣಜ್ಞ.

೧೨೭೮

ಮದುವೆ ಎಂಬುದು ಎರಡು, ಹೃದಯಗಳ ಸಂಮಿಲನ
ಹದವರಿತು ಬೆರೆತು ಹೊಣೆಹೊತ್ತು ಸಾಗಿದರೆ
ಆಗುವೆ ಸವಿಬಾಳು ಪೂರ್ಣಜ್ಞ.

೧೨೭೯

ಪತಿಯು ಸತ್ತರೆ ಸತಿಯು ಚಿತಯೇರಬೇಕೆಂಬ
ಅತಿಕ್ರೂರ ನಡತೆ ಸತಿಧರ್ಮವೆಂದೆಂಬ
ಶ್ರುತಿಯ ಚಿತೆಗಿಕ್ಕು ಪೂರ್ಣಜ್ಞ.

೧೨೮೦

ನುತಿವೆತ್ತ ನಮ್ಮ ಸಂಸ್ಕೃತಿಗೆ ಮಸಿಬಳಿವಂಥ
ಸತಿಯು ಸಹಗಮನದಂಥ ಬರ್ಬರತೆಗಳ
ಇತಿಶ್ರೀಯ ಮಾಡು ಪೂರ್ಣಜ್ಞ.

೧೨೮೧

ಸತಿಪದ್ಧತಿಯು ಕ್ರೂರ, ಅತಿ ಕ್ರೂರ ಆಚರಣೆ
ಅತಿ ಕೆಟ್ಟ ಹೆಸರು ತರುತಿಹುದು ಭಾರತಕೆ
ಮತಿಯುತರೆ ನೋಡಿ ಪೂರ್ಣಜ್ಞ.

೧೨೮೨

ತಳಬುಡಗಳಿಲ್ಲದಿಹ, ಅಳಿ ನಂಬುಗೆಗಳನು
ತಳವಿಲ್ಲದಿರುವ ತಗ್ಗಿನಲಿ ಹುಗಿದು ಬಿಡು
ತಳುವದಲೆ ಮೊದಲು ಪೂರ್ಣಜ್ಞ.

೧೨೮೩

ಹಣಕ್ಕಾಗಿ ಹಪಹಪಿಸಿ, ಗುಣ ನೀತಿ ಕಡೆಗಣಿಸಿ
ಮನೆಯ ಸಿರಿಯಂಥ ಸೊಸೆಯ ಕೊರಗಿಸಿ ಕೊಲುವ
ಶನಿಯಂಥ ಮಾವ ಪೂರ್ಣಜ್ಞ.

೧೨೮೪

ಹೋಳಿ ಹಬ್ಬವು ಸಖ್ಯ–ಮೇಳವನು ಕಲಿಸುವದು
ಮೂಲ ತತ್ವವನುತಿಳಿಯದಲೆ ಆಡಿದರೆ
ಹೋಳಿ ಗೋಳಾಟ ಪೂರ್ಣಜ್ಞ.

೧೨೮೫

ಒಲುಮೆನಲುಮೆಗಳನು, ಬೆಳೆಯಿಸುವ ಹಬ್ಬವಿದು,
ಕಲಹದ್ವೇಷಗಳ ಹುಟ್ಟಳಿಸಿ ಶಾಂತಿಯನು
ನೆಲೆಗೊಳಿಪಹಬ್ಬ ಪೂರ್ಣಾಜ್ಞ.

೧೨೮೬

ಸಮಯಕ್ಕೆ ಸರಿಯಾಗಿ, ಕ್ರಮದಿಂದ ಶ್ರಮಿಸುವದು
ಸಮಯವನು ವ್ಯರ್ಥಕಳೆಯದಲೆ ಬಾಳುವದು
ಸಮಯ ಪಾಲನೆಯು ಪೂರ್ಣಾಜ್ಞ.

೧೨೮೭

ಹಾದಿಗಳು ಹಲವಾರು, ಸಾಧಿಸುವ ಗುರಿಯೊಂದೆ
ಮೋಹದಲಿ ನಿತ್ಯ ಎಡೆಬಿಡದೆ ದುಡಿವವನೆ
ಸಾಧಕನು ನಿಜದಿ ಪೂರ್ಣಾಜ್ಞ.

೧೨೮೮

ಕ್ಲಿಷ್ಟ ಚಿಂತೆಗಳನ್ನು, ಅಟ್ಟಬೇಕೆಂಬವರು
ಶ್ರೇಷ್ಠ ಗ್ರಂಥಗಳ ಪಠಣದಲಿ ಮನವನ್ನು
ಗಟ್ಟಿಯಾಗಿಡಲಿ ಪೂರ್ಣಾಜ್ಞ.

೧೨೮೯

ಶ್ರೇಷ್ಠಸಿದ್ಧಾಂತಗಳ, ಎಷ್ಟು ಜನ ಓದಿಹರು?
ಕೆಟ್ಟ ಬೈಗುಳವ ಬೊಗಳುವವರೇ ಬಹಳೆ
ದುಷ್ಟ ರೂಢಿಯದು ಪೂರ್ಣಾಜ್ಞ.

೧೨೯೦

ಸಿದ್ಧಾಂತವದು ಬರಿಯ, ಉದ್ದನ್ನ ಮಾತಲ್ಲ
ಶುದ್ಧಾನುಭವವು ಮನತುಂಬಿ ತುಳುಕಿದರೆ
ಸಿದ್ಧಾಂತ ನಿಜದಿ ಪೂರ್ಣಾಜ್ಞ.

೧೨೯೧

ಬಾಳು ಬೀಳಿಗೆಗಲ್ಲ, ಬಾಳು ಏಳಿಗೆಗಾಗಿ
ಬಾಳಿನಲಿ ಬರಿಯ ಕಲ್ಪನೆಯು ತರವಲ್ಲ
ಬಾಳು ಕೃತಿಗೈದು ಪೂರ್ಣಾಜ್ಞ.

೧೨೯೨

ಇಂದು ಕೆಲ ಯುವಜನರು, ನಿಂದ್ಯ ಪಥವಿಡಿದಿಹರು
ಬಂಧುರದ ನೀತಿ ಮಾರ್ಗದಲಿ ನಡೆದಲ್ಲಿ
ವಂದ್ಯರೆನಿಸುವರು ಪೂರ್ಣಜ್ಞ.

೧೨೯೩

ದೌರ್ಭಾಗ್ಯವನು ಕಳೆವ, ಸೌಭಾಗ್ಯ ಕರುಣಿಸುವ
ದುರ್ಭರದ ಬಾಳ್ಗೆ ಚೈತನ್ಯವೀವ ಸ್ವ-
ಯಂಭು ಶಕ್ತಿಯಿದು ಪೂರ್ಣಜ್ಞ.

೧೨೯೪

ಎಸೆವ ಘಟಪ್ರಭೆಯಲ್ಲಿ, ಮೊಸಳೆ ಇರುವುದನರಿಯ
ಮುಸೆವ ಮತ್ಸರದ ಮೊಸಳೆಗಳು ಬಾಳ್ದೊರೆಯೊ
ಳೆಸೆಯುತಿಹವಯ್ಯ ಪೂರ್ಣಜ್ಞ.

೧೨೯೫

ಹೊರಗೆ ಪುಣ್ಯದ ಬಟ್ಟೆ, ಹೊರಗೆ ನೇಮದ ನಿಷ್ಠೆ
ಗರಳ ಒಳಗಿರಲು ಹೊರತೋರ್ಕೆಗಳ ಕಂಡು
ಹರನೊಲಿಯಬಹುದೆ? ಪೂರ್ಣಜ್ಞ.

೧೨೯೬

ಬಡತನದ ಬಹುರೂಪಿ, ಪಿಡುಗು ತುಂಬಿದೆ ಜಗದಿ
ಬಡಬಡಿಸುತಿಹರು ಯೋಜನೆಗಳನು ಕುರಿತು
ನಡೆಮಾತ್ರ ಶೂನ್ಯ ಪೂರ್ಣಜ್ಞ.

೧೨೯೭

ಅಣುಮಾತ್ರ, ಸುಖಶಾಂತಿ, ಕನಸಿನೊಳಗು ಇಲ್ಲ
ಶನಿ ಹತ್ತಿದಂತೆ ಮಾನವನ ಜೀವನವು
ಒಣಗುತ್ತಲಿಹುದು ಪೂರ್ಣಜ್ಞ.

೧೨೯೮

ಹೊರ ಪ್ರಗತಿ ಶೋಧನೆಯು, ಮರೆತು ಹೋಗುವದೊಮ್ಮೆ
ಅರಿವು ತುಂಬಿರುವ ಅಂತರಂಗದ ಶಕ್ತಿ
ಸ್ಥಿರದಿ ನೆಲೆಸುವದು ಪೂರ್ಣಜ್ಞ.

೧೨೯೯

ಮಸಿಯು ಒಂದೆ ಹನಿಯು, ಕಸವಿಸಿಯು ಮಾಡೀತು
ಕಸುವು ನೀಡೀತು ಲೋಕದಲಿ ಜನಗಣಕೆ
ಮಸಿಮಹಿಮೆ ವಿವಿಧ ಪೂರ್ಣಜ್ಞ.

೧೩೦೦

ಇಳೆಯರಂಗಸ್ಥಳದಿ, ಬೆಳಕು ಕತ್ತಲೆಮಾಟ
ನಲಿವು ನೋವುಗಳನು ಮಾಡಿ ಕುಣಿದಾಡುತಿದೆ
ತಿಳಿಯಿದರ ತಿರುಳ ಪೂರ್ಣಜ್ಞ.

## ಮಕ್ಕಳು

೧೩೦೧

ಮುದ್ದುಮಕ್ಕಳ ಮನವ, ಶುದ್ಧ ಸಂಸ್ಕೃತಿಯಿಂದ
ತಿದ್ದಿ ತೀಡಿದರೆ ಸದಭಿರುಚಿ-ಶುಚಿಗಳಿಂ
ಸದ್ಗುಣಿಗಳಹರು ಪೂರ್ಣಜ್ಞ.

೧೩೦೨

ಮಕ್ಕಳಿಗೆ ಸಾಂಸ್ಕೃತಿಕ, ಶಿಕ್ಷಣವನ್ನಿತ್ತಲ್ಲಿ
ಚೊಕ್ಕ ಬಂಗಾರದೊಲು ಹೊಳೆದು ಜಗಕೆಲ್ಲ
ಸೌಖ್ಯವೀಯುವರು ಪೂರ್ಣಜ್ಞ.

೧೩೦೩

ಮಕ್ಕಳೆಂದರೆ ಜಗಕೆ, ಉಕ್ಕುವದು ಆನಂದ
ಸೊಕ್ಕು ಸಿಡುಕುಗಳು ವಿರಸಗಳು ದೂರಾಗಿ
ಸಿಕ್ಕುವದು ಸುಖವು ಪೂರ್ಣಜ್ಞ.

೧೩೦೪

ಮಕ್ಕಳಿದ್ದರೆ ದೇಶ, ಮಕ್ಕಳಿದ್ದರೆ ಕೋಶ
ಮಕ್ಕಳಿದ್ದಲ್ಲಿ ದುಃಕ್ಕವಳಿವುದು ಮೊಗದಿ
ಉಕ್ಕುವದುನಗೆಯು ಪೂರ್ಣಜ್ಞ.

೧೩೦೫

ಅಕ್ಕಸಾಲಿಗನೊಲಿದು, ಚೊಕ್ಕ ಚಿನ್ನವ ಒಡಿದು
ತಿಕ್ಕಿ ವಡವೆಗಳ ಮಾಡುವೊಲು ಬೆಳೆಯಿಸಿರಿ
ಚಿಕ್ಕ ಮಕ್ಕಳನು ಪೂರ್ಣಜ್ಞ.

೧೩೦೬

ಹೊಳೆವ ಚಿಕ್ಕೆಗಳಂಥ, ಎಳೆಯ ಮಕ್ಕಳ ಬೆಳೆಸಿ
ಒಳಿತಾದ ನೀತಿ-ರೀತಿಗಳ ಕಲಿಸಿದರೆ
ಒಳಿತಕ್ಕು ಜಗಕೆ ಪೂರ್ಣಜ್ಞ.

೧೩೦೭

ಮಳೆಯಿಂದ ಇಳೆಗೆ ಕಳೆ, ಎಳೆಯರಿಂ ಮನೆಗೆ ಕಳೆ
ಅಲಸಿಕೆಯ ತೊರೆದ ಜನರಿಂದ ದೇಶದಲಿ
ಬೆಳೆಯುವದು ಸಿರಿಯು ಪೂರ್ಣಜ್ಞ.

೧೩೦೮

ಚಿಕ್ಕ ಮಕ್ಕಳ ಲೋಲ, ಕಕ್ಕ ಜವಹರಲಾಲ
ಮಕ್ಕಳೊಡಗೂಡಿ ಉತ್ಸಾಹ ಪಡುತಿದ್ದ
ನಕ್ಕು ನಲಿದಾಡಿ ಪೂರ್ಣಜ್ಞ.

೧೩೦೯

ಆ ಜವಾಹರಲಾಲ, ಓಜೆಯಿಂ ಮಕ್ಕಳನು
ತೇಜಃ ಪ್ರಪೂರ್ಣಗೊಳಿಸಿ ಬೆಳೆಸಿದರವರು
ರಾಜಿಪರು ಎಂದ ಪೂರ್ಣಜ್ಞ.

೧೩೧೦

ಕಕ್ಕುಲಾತಿಯ ಹಾಲ, ಅಕ್ಕರೆಯ ಸಕ್ಕರೆಯ
ಮಕ್ಕಳಿಗೆ ಉಣಿಸಿ ನಯನೀತಿ ಕಲಿಸುವದೆ
ಶಿಕ್ಷಣವು ನೋಡ ಪೂರ್ಣಜ್ಞ.

೧೩೧೧

ಮಕ್ಕಳನು ಕೆಡಿಸಿದರೆ, ಮಕ್ಕಳಿಗೆ ಕುಡಿಸಿದರೆ
ಸಕ್ಕರೆಯನೊಗೆದಂತೆ ಹೊಲಸಿನಲ್ಲವರು
ದಕ್ಕುವರೆ? ಮುಂದೆ ಪೂರ್ಣಜ್ಞ.

೧೩೧೨

ಚಿಕ್ಕ ಮಕ್ಕಳ ಮುಂದೆ, ಸಿಕ್ಕಂತೆ ಮಾಡಿದರೆ
ಚೊಕ್ಕ ಕನ್ನಡಿಗೆ ಕಾಡಿಗೆಯು ಬಳಿದಂತೆ
ಮಕ್ಕಳಿಗೆ ಕೇಡು ಪೂರ್ಣಜ್ಞ.

೧೩೧೩

ಶರಣ ಸಂತರ ಪದವ ಕಿರಿಯರಿಗೆ ಕಲಿಸದಲೆ
ವಿರಹ ಪ್ರಣಯಗಳ ಹಾಡುಗಳ ಕಲಿಸಿದರೆ
ಕಿರಿಯರಿಗೆ ಕೇಡು ಪೂರ್ಣಜ್ಞ.

೧೩೧೪

ಮಕ್ಕಳಿದ್ದರೆ ಶಾಂತಿ, ಮಕ್ಕಳಿದ್ದರೆ ಕಾಂತಿ
ಮಕ್ಕಳಿರೆ ಮನೆಗೆ ಮುಂಬೆಳಗಿನೈಸಿರಿಯು
ಮಕ್ಕಳೇ ಭಾಗ್ಯ ಪೂರ್ಣಜ್ಞ.

೧೩೧೫

ರವಿಯು ಗಗನಕೆ ಚೆಂದ ಕವಿಯುನಾಡಿಗೆ ಚೆಂದ
ನವಿಲು ನಂದನಕೆ, ಮನೆಗೆ ಬಲು ಬಲು ಚೆಂದ
ಸವಿನಗೆಯ ಕಂದ ಪೂರ್ಣಜ್ಞ.

೧೩೧೬

ಮಕ್ಕಳನು ಎತ್ತಿದರೆ, ಅಕ್ಕರೆಯು ಉಕ್ಕುವದು
ಮಕ್ಕಳನು ತಿದ್ದಿ, ತೀಡಿದರೆ ಹೊಳೆಯುವರು
ನಕ್ಷತ್ರದಂತೆ ಪೂರ್ಣಜ್ಞ.

೧೩೧೭

ಮಕ್ಕಳಿದ್ದರೆ ಸೌಖ್ಯ, ಮಕ್ಕಳೇ ಮಾಣಿಕ್ಯ
ಮಕ್ಕಳಿದ್ದರೆ ಹರ್ಷ, ಮನೆತನದ ವೃಕ್ಷಕ್ಕೆ
ಮಕ್ಕಳು ಫಲಗಳು ಪೂರ್ಣಜ್ಞ.

೧೩೧೮

ಬೆಳೆಯುವೆಳೆಯರ ಮನದಿ ಒಳಿತನ್ನೆ ಬಿತ್ತಿದರೆ
ಹೊಳೆವ ರವಿಯಂತೆ ನಮ್ಮ ದೇಶ ಭವಿಷ್ಯ
ಹೊಳೆಯುವದು ಸತ್ಯ ಪೂರ್ಣಜ್ಞ.

೧೩೧೯

ವಸತಿಶಾಲೆಗಳಿಂದು, ಶಿಶುಕಿಶೋರರಿಗೆಲ್ಲ
ಹೊಸಜ್ಞಾನ ಕಲೆ ಕಲಿಸಿ ಪಸರಿಸುತಲಿರಲಿ
ರಸಬಳ್ಳಿಯಂತೆ ಪೂರ್ಣಜ್ಞ.

೧೩೨೦

ಚೊಕ್ಕನಯನೀತಿಯುತ, ಶಿಕ್ಷಣವ ಮಕ್ಕಳಿಗೆ
ಅಕ್ಕರತೆಯಿಂದ ನೀಡಿದರೆ ಭಾರತದ
ಶಕ್ತಿ ಬಲಿತೀತು ಪೂರ್ಣಜ್ಞ.

೧೩೨೧

ಮಕ್ಕಳಿಲ್ಲದ ಮನೆಯು, ಒಕ್ಕಲಿಗರಿರದೂರು
ಲೆಕ್ಕ ತಾನಿಂದ ವ್ಯವಹಾರ ನಿಸ್ಸಾರ
ಸೌಖ್ಯಕ್ಕೆ ದೂರ ಪೂರ್ಣಜ್ಞ.

೧೩೨೨

ಮಕ್ಕಳಿಗೆ ಪದ ಪದ್ಯ, ಅಕ್ಕರತೆಯಿಂ ಕಲಿಸಿ
ಶಿಕ್ಷಕರು ಪಾಲಕರು ಶಾಲೆ ಮನೆಗಳಲಿ
ಉಕ್ಕಿಸಲಿ ಹರುಷ ಪೂರ್ಣಜ್ಞ.

೧೩೨೩

ಹೊಸ ಬೆಳಕು ಹೊಸ ಗಾಳಿ, ಶಿಶುಗಳಿಗೆ ಉಣಿಸಿದರೆ
ಹಸನಾದ ಮನದಿ ಹೊಸ ತಿರುಳು ಬಿತ್ತಿದರೆ
ಹೊಸ ತಳಿಗಳುದಯ ಪೂರ್ಣಜ್ಞ.

೧೩೨೪

ಎಳೆಯುಮಕ್ಕಳ ಮನವು, ಹೊಳೆಹೊಳೆವ ಕನ್ನಡಿಯು
ತಿಳಿಸಿಕೊಡು ಜಗದ ಜ್ಞಾನ ವಿಜ್ಞಾನಗಳ
ಬೆಳವಣಿಗೆಗಳನು ಪೂರ್ಣಜ್ಞ.

೧೩೨೫

ಒಳಿತಾಗಿ ಹಾಲುಣಿಸಿ, ಎಳೆಯ ಮಕ್ಕಳ ಬೆಳೆಸು
ಕಲಿಸು ಸದ್ಗುಣವ ಮುಂದವರು ದೇಶಕ್ಕೆ
ಸಲಿಸುವರು ಸೇವೆ ಪೂರ್ಣಜ್ಞ.

೧೩೨೬

ಮಾತು ಮುತಿಗೆ ನಗಿಸಿ, ನೀತಿಕಥೆಗಳ ಹೇಳು
ಪ್ರೀತಿಯಿಂ ಬೆಳೆಸು ಚಿಕ್ಕಮಕ್ಕಳನೆಲ್ಲ
ಖ್ಯಾತರಾಗುವೊಲು ಪೂರ್ಣಜ್ಞ.

## ನಿಂದಕರು, ಸ್ವಾರ್ಥ–ಸ್ವಾರ್ಥಿಗಳು

೧೩೨೭

ಅಪ್ಪಗತಿ ನೀವೆಂದು ಒಪ್ಪುಳ್ಳ ಮಾತಾಡಿ
ಜಪ್ಪಿಸುತ–ನಿಂದು ಬೆನ್ನಿರಿಯುವರು ಜಗದಿ
ಗುಪ್ತ ಶತ್ರುಗಳು ಪೂರ್ಣಜ್ಞ.

೧೩೨೮

ಸ್ವಾರ್ಥಕ್ಕೆ ಕೈಚಾಚಿ, ಮತ್ತಗಾಗಿಯೆ ಬಹರು
ಸ್ವಾರ್ಥ ಸಿಕ್ಕೊಡನೆ ಆ ಧೂರ್ತಸ್ವಾರ್ಥಿಗಳು
ಧುತ್ತೆಂಬರಯ್ಯ ಪೂರ್ಣಜ್ಞ.

೧೩೨೯

ನಡೆನುಡಿಯು ಒಂದಿರದ, ಕಡುಕಷ್ಟ ಕೊಡುತಿರುವ
ಜಡಮತಿಗಳೊಡನೆ ಮಾತು ಮಸೆದಾಡಿದರೆ
ಸಿಡಿಲು ಒಡಿದಂತೆ ಪೂರ್ಣಜ್ಞ.

೧೩೩೦

ಚಿಂತೆ ಜೀವನವ ಚಿತೆಯಂತೆ ಸುಡುತಿರ್ಪುದು ಕು–
ತಂತ್ರಿಗಳು ಹೂಡಬಹುದಾದ ಷಡ್ಯಂತ್ರ
ಎಂತಿಹುದೊ? ಎಂದು ಪೂರ್ಣಜ್ಞ.

೧೩೩೧

ಮೋಸ ಮಾಡುವ ಜನರು ಘಾಸಿ ಮಾಳ್ಪುದ ಕಂಡು
ರೋಷಿ ಹೋಗಿಹೆನು ಹರನೆ ನೀ ಕುಹಕಿಗಳ
ದೋಷ ಪರಿಹರಿಸು ಪೂರ್ಣಜ್ಞ.

೧೩೩೨

ಕಲ್ಯಾಣ ಕಾರ್ಯವನು, ಉಲ್ಲಾಸದಿಂ ಮಾಳ್ಪ
ಒಳ್ಳೆಯ ಜನರ್ಗೆ ಅಡ್ಡಗಾಲಿಕ್ಕುವರು
ಕ್ಷುಲ್ಲಕರು ಜಗದಿ ಪೂರ್ಣಜ್ಞ.

೧೩೩೩

ಉತ್ತಮರ ಮಾತುಗಳ, ಚಿತ್ತವಿಟ್ಟಾಲಿಸದ
ಸ್ವಾರ್ಥಾಂಧರೆಲ್ಲ ಬೀಳುವರು ತೆಗ್ಗಿನಲಿ
ಮತ್ತೇಳದಂತೆ ಪೂರ್ಣಜ್ಞ.

೧೩೩೪

ಕಲ್ಲುಮುಳ್ಳುಗಳನ್ನು ಚೆಲ್ಲುವರು ಹಾದಿಯಲಿ
ಕ್ಷುಲ್ಲಕರು ಬರಿದೆ ತಾಪವೀಯುತ್ತಿಹರು
ತಲ್ಲಣವ ತವಿಸು ಪೂರ್ಣಜ್ಞ.

೧೩೩೫

ಲೌಕಿಕರ ಗದ್ದಲದಿ, ಏಕತೆಗೆ ಅನುವಿಲ್ಲ
ನೂಕುವರು ತಗ್ಗಿನಲಿ ಇವರ ಸಂಗವನು
ಸಾಕು ಮಾಡಯ್ಯ ಪೂರ್ಣಜ್ಞ.

೧೩೩೬

ಸ್ವಾರ್ಥಕ್ಕೆ ಬರುತಿಹರು, ಆರ್ತಿಯನು ನಟಿಸುವರು
ಸ್ವಾರ್ಥವದು ಮುಗಿದ ಮರುದಿನವೆ ದೂರಹರು
ಧೂರ್ತಾಗ್ರಣಿಗಳು ಪೂರ್ಣಜ್ಞ.

೧೩೩೭

ಕೃತಕತೆಯು ನುಡಿಯಲ್ಲಿ, ಕೃತಕತೆಯು ನಡೆಯಲ್ಲಿ
ಕೃತಕತೆಯು ತುಂಬಿ ತುಳುಕುವ ಕೃತಘ್ನರನು
ಅತಿದೂರವಿರಿಸು ಪೂರ್ಣಜ್ಞ.

೧೩೩೮

ಮುಖಸ್ತುತಿಯ ಮಾಡುತ್ತಾ, ಸುಖದೋಚುವವರಿಹರು
ಬಕತಂತ್ರ ನರಿತಂತ್ರ ಪರಿಣತರ ಕಪಟ
ಮುಖ ನೋಡಬೇಡ ಪೂರ್ಣಜ್ಞ.

೧೩೩೯

ಮುಂದಾಗುವರ ಕಂಡು ದಂದುಗವ ಪಡುತಿಹರು
ಹಿಂದೆ ನಿಂದಿಪರು, ಮತ್ಸರದ ಕಿಚ್ಚಿನಲಿ
ಬೆಂದು ಹೋಗುವರು ಪೂರ್ಣಜ್ಞ.

೧೩೪೦

ಹಿರಿಯರೆನಿಸಿಹ ಕೆಲರು, ಕರಿಗುಣವ ಬಿಟ್ಟಿಲ್ಲ
ಉರಗ ಸಾವಿರ ವರುಷ ಬದುಕಲೇಂ ತನ್ನ
ಗರಳ ತೊರದೀತೆ? ಪೂರ್ಣಜ್ಞ.

೧೩೪೧

ಮಾತಿನಲಿ ಬಸವರಸ ರೀತಿಯಲಿ ಬರಿಮೋಸ
ಮಾತಾಡಿದಂತೆ ನಡೆಯದಿಪ ಬೋಧಕರು
ಕೋತಿಗುಣದವರು ಪೂರ್ಣಜ್ಞ.

೧೩೪೨

ಕೀರ್ತಿಯನು ಬಯಸುತಿಹ, ಸ್ವಾರ್ಥಿಗಳು ತುಂಬಿಹರು
ಸ್ವಾರ್ಥ ಮುಗಿದೊಡನೆ, ಬಣ್ಣವದು ಬಯಲಾಗಿ
ಧೂರ್ತರಾಗುವರು ಪೂರ್ಣಜ್ಞ.

೧೩೪೩

ಸ್ವಾರ್ಥ ಸಾಧನೆಗಾಗಿ, ಹತ್ತೆಂಟು ಜಾತಿಗಳ
ಸ್ವಾರ್ಥಿಗಳು ರಚಿಸಿ ಮುಗ್ಧರನು ನೂಕಿಹರು
ಕತ್ತಲೆಯ ಗವಿಗೆ ಪೂರ್ಣಜ್ಞ.

೧೩೪೪

ನುಡಿಯಲ್ಲಿ ಪರಹಿತವು, ನಡೆಯಲ್ಲಿಂದು ಸ್ವಾರ್ಥ,
ಅಡಿಯಿಂದ ಮುಡಿತನಕ ಸ್ವಾರ್ಥ, ಸ್ವಾರ್ಥಿಗಳ
ಬೆಡಗು ನೋಡಯ್ಯ ಪೂರ್ಣಜ್ಞ.

೧೩೪೫

ವ್ಯಕ್ತಿತ್ವ ತಮಗಿಲ್ಲ, ಶಕ್ತಿಯಂತೂ ಇಲ್ಲ
ಕುತ್ತಿಗೆಯ ಕೊಯ್ಯುವರು ಕೂದಲಿಂದೀ ಕು-
ತಂತ್ರ ಕುಶಲಿಗರು ಪೂರ್ಣಜ್ಞ.

೧೩೪೭

ಕೀಳುಬಗೆಯಿಂ ಸ್ವಂತ, ಬೇಳೆ ಬೇಯಿಸಿಕೊಂಬ
ತಾಳಗೇಡಿಗಳು ತುಂಬಿಹ ಸಮಾಜದಲಿ
ಏಳ್ಗೆ ಬರಿ ಕನಸು ಪೂರ್ಣಜ್ಞ.

೧೩೪೭

ಬಲುವಿನಯ ಬಾಹ್ಯದಲಿ, ಖಲ ಯೋಜನೆಯು ಮುದದಿ
ಎಳೆದೊಯ್ದು ಮುಗ್ಧರನು ಯಾವ ಹೊತ್ತಿನಲಿ
ಹೊಳೆಗೆ ನೂಕುವರೋ ಪೂರ್ಣಜ್ಞ.

೧೩೪೮

ಹಿರಿಯರೆಂದೆನ್ನುವರು, ಮರೆತಿಹರು ಧರ್ಮವನು
ಕಿರಿಯರಿಗೆ ಪ್ರೋತ್ಸಾಹ ಕೊಡದೆ ತಾವಿಹರು
ಮರುಭೂಮಿಯಂತೆ ಪೂರ್ಣಜ್ಞ.

೧೩೪೯

ಸಂದಿಗೊಂದಿಯ ಹೊಲಸು, ತಿಂದು ಶುಚಿಗೊಳಿಸಲ್ಕೆ
ಹಂದಿ ಬೇಕಾದಂತೆ ಕುಂದು ತೊಳೆಯಲ್ಕೆ
ನಿಂದಕರು ಬೇಕು ಪೂರ್ಣಜ್ಞ.

೧೩೫೦

ನಿಂದಕರ ಭರ್ತ್ಸನೆಯು, ಕುಂದಿಪುದೆ ಸಜ್ಜನರ
ಕುಂದಣವ ಮಣ್ಣಿನೊಳಗಿಡಲದರ ಕಾಂತಿ
ಕಂದಿ ಕುಂದೀತೆ? ಪೂರ್ಣಜ್ಞ.

೧೩೫೧

ಆಶಾತಿರೇಕದಿಂ, ಮೋಸ ಮಾಡಲು ಬಾಳು
ಮೀಸಲಿಟ್ಟಿರುವಂಥ ಹೇಸಿಗಳ ಕಂಡು
ರೋಸಿಹುದು ಮನವು ಪೂರ್ಣಜ್ಞ.

೧೩೫೨

ಎಲ್ಲಿ ನೋಡಿದಡವಲ್ಲಿ ಕಳ್ಳಕಾಕರ ಗುಂಪು
ಬೆಲ್ಲದೊಲು ನುಡಿದು ಬಾಗಿಲದ ಕದ ತೆಗೆಸಿ
ಕೊಲ್ಲುವರು ಬಡಿದು ಪೂರ್ಣಜ್ಞ.

೧೩೫೩

ಕಪಟದಿಂ ಜೀವಿಪರು, ಅಪರಾಧವೆಸಗುತ್ತ
ಉಪಕಾರಗೇಡಿಗಳು ವಿಷಕಂಟಕಗಳ
ಕ್ಷುಪದಂತೆ ಜಗದಿ ಪೂರ್ಣಜ್ಞ.

೧೩೫೪

ದಡ್ಡ ರಾಡಿದ ಮಾತು ದೊಡ್ಡವರಿಗೇನುಹುದು?
ಗುಡ್ಡವನು ನೋಡಿ ನಾಯಿ ಬೊಗಳಿದರೇನು?
ಹುಡ್ಡಿಲ್ಲವದಕೆ ಪೂರ್ಣಜ್ಞ.

೧೩೫೫

ಕೆಟ್ಟ ಭಾವನೆ ಬಿಡದ, ಸಿಟ್ಟು ಸೇಡನು ಬಿಡದೆ
ಕೆಟ್ಟ ಗುರಿಯಿಟ್ಟು ಮೋಸ ಮಾಡುವ ಕಪಟ
ಪೆಟ್ಟು ತಿನ್ನುವನು ಪೂರ್ಣಜ್ಞ.

೧೩೫೬

ಅಧಿಕಾರ ಗಿಟ್ಟಿಸಲು, ಸದುವಿನಯುವನು ನಟಿಸಿ
ಅಧಿಕಾರ ಬರಲು ಮರೆಯುವರು ಎಲ್ಲರನು
ಮದದಿಂದಕೊಬ್ಬಿ ಪೂರ್ಣಜ್ಞ.

೧೩೫೭

ಅಧಿಕಾರ ದೊರಕಿಸಲು ಹದವರಿತು ಹಣಸುರಿಸಿ
ಅಧಿಕಾರ ದೊರೆತ ಮರುಚಣವೆ ಲಂಚಕ್ಕೆ
ಬೆದಕಾಡುತಿಹರು ಪೂರ್ಣಜ್ಞ.

೧೩೫೮

ಅಧಿಕಾರಮೋಹಿಗಳು, ಅಧಿಕಾರ ದಾಹಿಗಳು
ಮದ ಬಧಿರರಾಗಿ ಕಿವುಡುಗೇಳುತ್ತಿಹರು
ಸದುಪದೇಶವನು ಪೂರ್ಣಜ್ಞ.

೧೩೫೯

ಹಣದ ಸೊಕ್ಕುಳ್ಳವರು, ಗುಣಗಳನು ಲೆಕ್ಕಿಸರು
ಹಣವೆಲ್ಲ ಹೋದ ಮರುದಿನವೆ ಹಾಳೂರ
ಹೆಣಕೆ ಸರಿಯುಹರು ಪೂರ್ಣಜ್ಞ.

೧೩೬೦

ಹಣವು ಇದ್ದರೆ ಸಾಕು, ಗುಣವಂತರೆನಿಸುವರು
ಹಣದ ಹೆಗ್ಗಳಿಕೆಯಿಂದೆದೆಯು ಸೆಟೆಸುವರು
ಒಣಜಂಭದಲ್ಲಿ ಪೂರ್ಣಜ್ಞ.

೧೩೬೧

ಉಪಕೃತಿಯು ಮಾತಾಡಿ, ಅಪಕೃತಿಯ ಮಾಡುವರು
ಸಫಲವಪ್ಪುದನು ವಿಫಲಗೊಳಿಸಲುಬಹರು
ಕಪಟ ಗುರುವರರು ಪೂರ್ಣಜ್ಞ.

೧೩೬೨

ಸದುಭಕುತ ವೃಂದವದು, ಸದುಭಾವನೆಗಳಿಂದ
ಸದುವಿಮಲ ಕಾರ್ಯ ಮಾಡುತಿರೆ ದುರ್ಜನರು
ಹದಗೆಡಿಸುತಿಹರು ಪೂರ್ಣಜ್ಞ.

೧೩೬೩

ಕೆಲಸವಾಗುವತನಕ, ಬಲುವಿನಯಶಾಲಿಗಳು
ಕೆಲಸ ಮುಗಿದೊಡನೆ ಉಪಕಾರಗೇಡಿಗಳು
ಬಲುಸೊಕ್ಕುತಿಹರು ಪೂರ್ಣಜ್ಞ.

೧೩೬೪

ಒಳಗೊಂದು ಹೊರಗೊಂದು, ಖಳತಂತ್ರ ಹೂಡುವರು
ಒಳಿತೆಂಬುದಿವರ ಬಳಿಸುಳಿಯದಿಂಥವರ
ತಲೆಯು ಕುಕ್ಕಯ್ಯ ಪೂರ್ಣಜ್ಞ.

೧೩೬೫

ಉದ್ದುದ್ದ ಮಾತಾಡಿ, ಮುಗ್ಧ ಭಕ್ತರ ಸುಲಿದು
ಇದ್ದಲ್ಪ ಸ್ವಲ್ಪ ಶ್ರದ್ಧೆಗೆರವಾಗವರು
ಬುದ್ಧಿಗೇಡಿಗಳು ಪೂರ್ಣಜ್ಞ.

೧೩೬೬

ಪಾಂಡಿತ್ಯ ಪಡಕೊಂಡು, ಭಂಡರಾಗಿಹ ಕೆಲರು
ಕಂಡ ಕಂಡಂತೆ ವರ್ತಿಸುತ ಕಲಿತಂಥ
ಪುಂಡರೆನಿಸಿಹರು ಪೂರ್ಣಜ್ಞ.

೧೩೬೭

ಚೇಳಿಂಗೆ ಬಾಲದಲಿ, ವ್ಯಾಳಂಗೆ ಹಲ್ಲಿನಲಿ
ಕಾಳ ವಿಷವಿರಲು ಕುಹಕಿಗಳ ಮೈತುಂಬ
ಕ್ಷ್ವೇಳ ತುಂಬಿಹುದು ಪೂರ್ಣಜ್ಞ.

೧೩೬೮

ತೊರೆಯ ದಾಟಿದ ಮೇಲೆ ಹರಿಗೋಲನೊದೆದಂತೆ
ನೆರವಾದವರಿಗೆ ಕೈಕೊಡುವ ಖಳಜನರ
ನೆರಳು ಸಹ ಬೇಡ ಪೂರ್ಣಜ್ಞ.

೧೩೬೯

ಮಾತಿನಲಿ ಸೌಜನ್ಯ, ರೀತಿಯಲಿ ದೌರ್ಜನ್ಯ
ಮಾತು ಕೃತಿಯೆರಡು ಒಂದಾಗದಿದ್ದವರು
ಕೋತಿ ಕುಲದವರು ಪೂರ್ಣಜ್ಞ.

೧೩೭೦

ತತ್ವಗಳ ಕೈಬಿಟ್ಟು, ಸತ್ಯವನು ಬಚ್ಚಿಟ್ಟು
ಮಿಥ್ಯವನೆ ಸತ್ಯವೆಂದು ಪ್ರತಿಪಾದಿಪರು
ಸ್ವಾರ್ಥಸಾಧಕರು ಪೂರ್ಣಜ್ಞ.

೧೩೭೧

ಕಲಿಯುಗದ ಮಹಿಮೆಯಿದು, ಅಳಿಮನದ ಕುಹಕಿಗಳು
ಒಳಿತನ್ನು ಛಿದ್ರಿಸುತ ಸುಸಮಾಜ ಛಿದ್ರಿಸುತ
ಕಳೆಯುವರು ಕಾಲ ಪೂರ್ಣಜ್ಞ.

೧೩೭೨

ಸಂಘ ಸಂಸ್ಥೆಗಳಲ್ಲಿ, ಮಂಗನಾಟವ ನಡೆಸಿ
ಭಂಗ ತರುತಿಹರು ಸ್ವಾರ್ಥಕ್ಕೆ ಬಲಿಬಿದ್ದು
ತುಂಗ ಗುರಿ ತೊರೆದು ಪೂರ್ಣಜ್ಞ.

೧೩೭೩

ಸಂಕುಚಿತ ವೃತ್ತಿಯಿಂ ಶಂಕೆಯಲಿ ತೊಳಲುವರು
ಸಂಕಟದಿ ಸಿಲುಕಿ ನಿಜಧರ್ಮ ಮರೆತಿಹರು
ಕೊಂಕುದಾರಿಯಲಿ ಪೂರ್ಣಜ್ಞ.

೧೩೭೪

ಭಾರತದ ಸಂಸ್ಕೃತಿಯ, ಸಾರ ಸಂದೇಶವನು
ಸಾರಲ್ಕೆ ಬೇರೆ ದೇಶಗಳಿಗೈದಿದರೆ
ಕಾರುವರು ಕೆಂಡ ಪೂರ್ಣಜ್ಞ.

೧೩೭೫

ದುರ್ಮಾರ್ಗಿಗಳು ಹೀನ, ಕರ್ಮಿಗಳು ಒಳಹೊಕ್ಕು
ಧರ್ಮ ಸಂಸ್ಥೆಗಳ ಕೆಡಿಸುವರು, ರಕ್ಷಿಸಿರಿ
ಧರ್ಮ ಸಂಸ್ಥೆಗಳ ಪೂರ್ಣಜ್ಞ.

೧೩೭೬

ಧರ್ಮಮೂರ್ತಿಗಳೆನಿಸಿ, ಧರ್ಮತತ್ವವ ಮರೆತು
ಕರ್ಮಚಕ್ರದಲಿ ಸಿಲುಕಿಕೊಂಡಿಹರಿವರು
ಧರ್ಮಿಷ್ಠರೆಂತು? ಪೂರ್ಣಜ್ಞ.

೧೩೭೭

ಪರದೇಶಗಳಿಗೈದಿ, ಹಿರಿಗುರಿಯ ಸಾಧಿಸುತ
ಅರಿವಿನಿಂದಿದ್ದು ಸಂಸ್ಕೃತಿಯ ಬೆಳೆಸಿದರೆ
ಕರುಬುತಿಹರಯ್ಯ ಪೂರ್ಣಜ್ಞ.

೧೩೭೮

ತನ್ನ ದೇಶದ ಹಿರಿಮೆ, ಅನ್ಯ ದೇಶಕೆ ಬೀರಿ
ಸನ್ಮತಿಯ ನೀಡಿ, ಬಂದವರ ತೆಗಳುವರು
ಕುನ್ನಿ ಮಾನವರು ಪೂರ್ಣಜ್ಞ.

೧೩೭೯

ಎಲ್ಲಿ ನೋಡಿದರಲ್ಲಿ, ಕಳ್ಳಕಾಕರ ದಾಳಿ
ಒಳ್ಳೆಯವರಿಂದು ನಿರ್ಭಯದೊಳಿರುವ ಸ್ಥಿತಿ
ಇಲ್ಲದಾಗಿಹುದು ಪೂರ್ಣಜ್ಞ.

೧೩೮೦

ಏನಕೇನ ಪ್ರಕಾರ, ಸ್ಥಾನ ಮಾನವ ಪಡೆವ
ಹೀನ ಪಥವರ್ತಿ ಸ್ವಾರ್ಥಿಗಳೆ ದೇಶಕ್ಕೆ
ಹಾನಿಕಾರಕರು ಪೂರ್ಣಜ್ಞ.

೧೩೮೧

ಊರಹಿರಿಯರು ಎಂದು, ಸಾರಿಕೊಳ್ಳುತ ತಾವೆ
ಭಾರಿ ಸ್ವಾರ್ಥಕ್ಕೆ ಪಕ್ಷ ಪಂಗಡ ಬೆಳೆಸಿ
ಊರ ಕೆಡಿಸಿಹರು ಪೂರ್ಣಜ್ಞ.

೧೩೮೨

ಮುಗ್ಧ ಜೀವಿಗಳನ್ನು, ದಗ್ಧ ಮಾಡುತ ತಾವು
ಶುದ್ಧಾತ್ಮರೆಂದು ನಟಿಸುವರನಿಡಬೇಕು
ಹದ್ದುಬಸ್ತಿನಲಿ ಪೂರ್ಣಜ್ಞ.

೧೩೮೩

ಕಳವು ಕೊಲೆ ಹಾದರದಿ, ಮುಳುಗೇಳುತಿಹ ಕೇಡಿ
ಗಳು ವಿಷದ ಬಳ್ಳಿಯಂತೆ ಹಬ್ಬಿಹರವರ
ಬಲಿ ಹಾಕು ಬೇಗ ಪೂರ್ಣಜ್ಞ.

೧೩೮೪

ಹೇಸಿಗುಣದವರಲ್ಲಿ ಲೇಸನರಸಿದರುಂಟೆ?
ತಾಸು ತಾಸಿನಲಿ ಬಣ್ಣ ಬದಲಿಪರವರು
ಹೂಸರುಳ್ಳಿಗಳು ಪೂರ್ಣಜ್ಞ.

೧೩೮೫

ಬಾಯಿಂದ ಸವಿಗರೆದು, ಕೈಯಿಂದ ವಿಷಸುರಿದು
ಕಾಯಗುಣ ಬಿಡಿರೆಂದು ತತ್ವಗಳ ಬೊಗಳುವರು
ಮಾಯಾವಿ ಜನರು ಪೂರ್ಣಜ್ಞ.

೧೩೮೬

ಕಹಿ ಬೇವುಗಳ ಬನದಿ, ಸಿಹಿದ್ರಾಕ್ಷಿ ಅರಸುವರೆ?
ಕುಹಕಿ ಖಳರಲ್ಲಿ ಸಂಪನ್ನ ಜನರು ಸಿಗ
ಬಹುದೆ ಹುಡುಕಿದರೆ? ಪೂರ್ಣಜ್ಞ.

೧೩೮೭

ಗಾಳಿಯದು ಬೀಸಿ ಬಿರುಗಾಳಿಯೆಬ್ಬಿಸಿದಂತೆ
ಕೀಳು ಗುಣದವರ ಬಳಗವದು ಬೆಳೆದು ಧರೆ
ಹಾಳಾಗುತಿಹುದು ಪೂರ್ಣಜ್ಞ.

೧೩೮೮

ಗುಣವಿರದ ಹರಟೆಯನು, ಮಣದಷ್ಟು ಕೊಚ್ಚುತ್ತ
ಸೊಣಗನಲೆವಂತೆ ಅಲೆದಾಡುತಿಹ ಭಂಡ
ಜನ ಬೆಳೆಯುತಿರುಹುದು ಪೂರ್ಣಜ್ಞ.

೧೩೮೯

ಒಳಿತಾಗಲೆಂದೆಂಬ, ಕಳಕಳಿಯ ಭಾವದಲಿ
ತಿಳಿಸಿ ಹೇಳಿದರೆ ಬಲುತಪ್ಪು ತಿಳಿಯುವರು
ತಿಳಿಗೇಡಿ ಜನರು ಪೂರ್ಣಜ್ಞ.

೧೩೯೦

ಮೂರುಸಾವಿರಮಠದಿ, ಸಾರತರದಧ್ಯಯನ
ಭೂರಿಸುಖ ಪಡೆದು ಬೆಳೆದವರು ದ್ವೇಷವನು
ಕಾರುವರು ಕೆಲರು ಪೂರ್ಣಜ್ಞ.

೧೩೯೧

ಆಡಂಬರಕೆ ಉದ್ದ ಕೋಡು ಮೂಡುತ್ತಿಹುದು
ಸೇಡು ತೀರಿಸಿಲು ಬಡಿದಾಟಕಿಳಿದಿರುವ
ಕೇಡಿಗಳ ನೋಡು ಪೂರ್ಣಜ್ಞ.

೧೩೯೨

ಗುಣಹೀನ ತತ್ವಗಳ, ಕ್ಷಣ ಕ್ಷಣಕೆ ಗೊಣಗುವರು
ದಿನದಿನಕೆ ವೇಷ ಬದಲಿಪ್ಪುದು ಕೋಡಂಗಿ
ಕುಣಿತಕ್ಕೆ ಸಮವು ಪೂರ್ಣಜ್ಞ.

೧೩೯೩

ಒಳ್ಳೆಕಾರ್ಯವ ಮಾಳ್ಪ, ಒಳ್ಳೆ ಮಾರ್ಗದಿ ನಡೆವ
ಒಳ್ಳೆಯವರನ್ನು ಪೀಡಿಸಲು ಕ್ಷುಲ್ಲಕರು
ಕಲ್ಲು ತೂರುವರು ಪೂರ್ಣಜ್ಞ.

೧೩೯೪

ವ್ಯಾಧಗುಣದವರೊಡನೆ, ವಾದಕಿಳಿಯಲು ಬೇಡ
ಹಾದಿದವ್ವನನು ಕರೆದಿಟ್ಟುಕೊಳ್ಳುವರೆ
ಗೋದಲಿಯ ಒಳಗೆ? ಪೂರ್ಣಜ್ಞ.

೧೩೯೫

ಸ್ವಾರ್ಥ ಬಯಸಿದ ಮನುಜ, ಕೀರ್ತಿಯಾಶೆಯ ಮಾಡಿ
ಸ್ಫೂರ್ತಿ ಕೊಟ್ಟಿರುವ ಗುರು ಹಿರಿಯರನು ಮರೆತು
ಧೂರ್ತನಾಗಿಪನು ಪೂರ್ಣಜ್ಞ.

೧೩೯೬

ನೆರೆನಂಬಿದಂಥವರ, ಕೊರಳ ಕತ್ತರಿಸುವರೆ?
ಹರ ನಿನ್ನ ಪಾಪ ಕ್ಷಮಿಸುವನೆ? ಹತಿಸದಿರು
ನಿರುಪದ್ರವಿಗಳ ಪೂರ್ಣಜ್ಞ.

೧೩೯೭

ಧೂರ್ತಸ್ವಾರ್ಥಿಗಳನ್ನು ಹತ್ತಿರ ಬರಿಸಬೇಡ
ಹೊತ್ತಿಗಾದವರ ಬೆಳಕ ಸೈರಿಸರವರು
ನೆತ್ತಿಕುಕ್ಕುವರು ಪೂರ್ಣಜ್ಞ.

೧೩೯೮

ಅಕ್ಕಿಯಲಿ ಹರಳುಗಳು, ಚೆಕ್ಕೆಪುಡಿ ಸಜ್ಜಕದಿ
ಸಕ್ಕರೆಯೊಳೆಲಬು ಪುಡಿಮಾಡಿ ಬೆರೆಸುವರು
ಮುಕ್ಕಣ್ಣ ನೋಡು! ಪೂರ್ಣಜ್ಞ.

೧೩೯೯

ಹಾಲಿನಲಿ ನೀರನ್ನು, ಜೋಳದಲಿ ಮರಳನ್ನು
ತೈಲದಲಿ ಕೀಳುದ್ರವ ಬೆರೆಸಿ, ಗ್ರಾಹಕರ
ಗೋಳಾಡಿಸುವರು ಪೂರ್ಣಜ್ಞ.

೧೪೦೦

ಅನ್ನದೊಳಗೆ ಸೋಡಾ, ಮಣ್ಣನ್ನು ಹಿಟ್ಟಿನೊಳು
ಬೆಣ್ಣೆಯೊಳು ಮೈದಾ ಹಿಟ್ಟನ್ನು ಹಾಕುತ್ತಾ
ಹೊನ್ನು ಗಳಿಸುವರು ಪೂರ್ಣಜ್ಞ.

೧೪೦೧

ಬೆಲ್ಲದಲಿ ಪಾವುಡರು ಕಳ್ಳತನದಲಿ ಒಗೆದು
ಮಳ್ಳ ಮಾಡಿ ಜನರ ಹಣ ದೋಚುತ್ತ
ಹಾಳು ಮಾಡುವರು ಪೂರ್ಣಜ್ಞ.

೧೪೦೨

ಹಲವು ಹುನ್ನಾರದಲಿ, ಕಲಬೆರಕೆ ಮಾಡುತ್ತ
ಮೆಲು ಮಾತನಾಡಿ ಮುಗ್ಧರನು ವಂಚಿಸುತ
ಸುಲಿಯುವರು ಹಣವ ಪೂರ್ಣಜ್ಞ.

೧೪೦೩

ಭ್ರಷ್ಟ ಧನವನು ಗಳಿಸಿ, ಭ್ರಷ್ಟ ಧನವನು ಬೆಳೆಸಿ
ಭ್ರಷ್ಟ ರೀತಿಯಲಿ ಕೂಡಿಟ್ಟರದು ಮುಂದೆ
ಕಷ್ಟ ನೋಡಯ್ಯ ಪೂರ್ಣಜ್ಞ.

೧೪೦೪

ಕಾರ್ಯ ಮಾಡದಲೆ ಪ್ರಾಚುರ್ಯವನು ಬಯಸುವರು
ಮರ್ಯಾದೆ ಮಾನ ಬೇಡುವರು ನಿಷ್ಕ್ರಿಯರು
ಧೈರ್ಯ ನೋಡಿವರ ಪೂರ್ಣಜ್ಞ.

೧೪೦೫

ಕಾರಪುಡಿ ಕಾಷ್ಠ ಪುಡಿ, ಸೇರಿಸುತ ಪೇಟೆಯಲಿ
ಮಾರಾಟ ಮಾಡಿ ಆರೋಗ್ಯ ಕೆಡಿಸುವದು
ಘೋರಾಪರಾಧ ಪೂರ್ಣಜ್ಞ.

೧೪೦೬

ಸತ್ಯವನು ತಳಕೊತ್ತಿ, ಮಿಥ್ಯೆಯನು ಮೇಲೆತ್ತಿ
ಒತ್ತಿ ನುಡಿಯುತಿಹ ನರಿಗುಣದ ಮಾನವರಿ-
ಗೆತ್ತಣದು ಬುದ್ಧಿ ಪೂರ್ಣಜ್ಞ.

೧೪೦೭

ಎತ್ತ ಹೋದರು ಜಗದಿ, ಮಿಥ್ಯೆ ಮೋಸದ ಜಾಲ
ಕುತ್ತಿಗೆಯ ಕೊಯ್ಪು-ಜತ್ತುಕರಿಗಂಜಿ ಮನ
ತತ್ತರಿಸುತಿಹುದು ಪೂರ್ಣಜ್ಞ.

೧೪೦೮

ಸರಳ ವ್ಯಕ್ತಿಯ ಕಂಡು, ಮರುಳು ಮಾಡುತಲವನ
ಬರಿದೆ ಕಾಡುವರು ವಿಘ್ನ ಸಂತೋಷಿಗಳು
ದುರುಳ ಮಾನವರು ಪೂರ್ಣಜ್ಞ.

೧೪೮೯

ಸಹಜತೆಯು ಸಿಹಿಜೇನು, ಕುಹಕತೆಯು ಕಹಿಬೇವು
ಕುಹಕಿಯಾದವನ ಹೃದಯುವದು ಕೈತವದ
ಕುಹರವಾಗಿಹುದು ಪೂರ್ಣಜ್ಞ.

೧೪೯೦

ಗುಮ್ಮಗುಸುಗರು ಒಳಗೆ, ತಮ್ಮ ಲೆಕ್ಕದೊಳಿಹರು
ಸೊಮ್ಮು ನಿನ್ನದಕೆ ಕಣ್ಣಿಟ್ಟು ಕುಳಿತಿಹರು
ತಮ್ಮ ಬಲು ಜೋಕೆ ಪೂರ್ಣಜ್ಞ.

೧೪೯೧

ಮದಮತ್ತರೆದೆಯಲ್ಲಿ, ಮುದವೀವ ಗುಣವುಂಟೆ?
ಎದೆಸೆಟೆಸಿಕೊಂಡು ಗರ್ವದಿಂದುರಿಯುತ್ತ
ಕುದಿವರೊಳಗೊಳಗೆ ಪೂರ್ಣಜ್ಞ.

೧೪೯೨

ಮಾನವತೆಯುನು ಮೆಟ್ಟಿ, ದಾನವತೆ ಮೆರೆಯುತಿದೆ
ಮಾನವರು ಇಂದು ಹಿಂಸ್ರ ಪಶುಗಳಿಗಿಂತ
ಹೀನರಾಗಿಹರು ಪೂರ್ಣಜ್ಞ.

೧೪೯೩

ಆತ್ಮೀಯರೆನಿಪ ನಿಜ ಆತ್ಮೀಯರೆಲ್ಲಿಹರು?
ಅತ್ಮೀಯರಿಂದು ಸ್ವಾರ್ಥ ಸಾಧನೆಗಾಗಿ
ಆತ್ಮಘಾತಿಪರು ಪೂರ್ಣಜ್ಞ.

೧೪೯೪

ಆತ್ಮವಂಚಕರನ್ನು, ಹತ್ತಿರಕೆ ಬರಿಸದಿರು
ಹೆತ್ತುಪ್ಪದಂತೆ ಮಾತಾಡಿ ಬಳಿ ಬಂದು
ನೆತ್ತಿ ಕುಕ್ಕುವರು ಪೂರ್ಣಜ್ಞ.

೧೪೯೫

ಜತ್ತಕರು ವಿನಯುದಲಿ, ಹತ್ತಿರಕೆ ಬಂದಪರು
ಹೊತ್ತು ಸಾಧಿಸುತ ಕುತ್ತಿಗೆಗೆ ಕೈಹಾಕಿ
ಒತ್ತುವರು ಜೋಕೆ ಪೂರ್ಣಜ್ಞ.

೧೪೧೬

ಮುಳ್ಳುನೆಟ್ಟರೆ ಅಡಿಗೆ, ಮೆಲ್ಲನೆ ತೆಗೆಯಬಹುದು
ಕಳ್ಳ ವಂಚಕರು ಕೊಡುತಿರುವ ನೋವನ್ನು
ತಳ್ಳಿ ಬಿಡಬಹುದೆ? ಪೂರ್ಣಜ್ಞ.

೧೪೧೭

ಮೋಸ ಮಾಡುತ ಜನರ, ಘಾಸಿ ಮಾಳ್ಪುದ ಕಂಡು
ರೋಷವುಕ್ಕುತಿದೆ ಅಳಿವುದೆಂದಿಗೂ ನರರ
ದೋಷ ದೌರ್ಬಲ್ಯ ಪೂರ್ಣಜ್ಞ.

೧೪೧೮

ನಂಬಬೇಕೆನಿಸಿದರೆ, ನಂಬು ವಿಷಜಂತುಗಳ
ನಂಬದಿರು ಮೋಸಗಾರರನು, ಛದ್ಮಿಗಳು
ತುಂಬಿಹರು ಜಗದಿ ಪೂರ್ಣಜ್ಞ.

೧೪೧೯

ಮತಗಳನು ಮನೆಗಳನು, ರಾಷ್ಟ್ರ ರಾಜ್ಯಗಳನ್ನು
ಸ್ಫುಟಣಗೈವವರು ಪರರಲ್ಲ ನಮ್ಮವರು
ಸಟೆಯಲ್ಲ ದಿಟವು ಪೂರ್ಣಜ್ಞ.

೧೪೨೦

ಮುಂದೆ ಮೇಕೆಯು ನೋಡು, ಹಿಂದೆ ಕುದುರೆಯ ನೋಡು
ಕುಂದದಲೆ ನೋಡು ದುಷ್ಟರನು ಸುತ್ತೆಲ್ಲ
ಮಂದನಾಗದಿರು ಪೂರ್ಣಜ್ಞ.

೧೪೨೧

ಬಾಯಲ್ಲಿ ಬೆಣ್ಣೆಯನು, ಕೈಯಲ್ಲಿ ದೊಣ್ಣೆಯನು
ನ್ಯಾಯವಿಲ್ಲದಲೆ ಹಿಡಕೊಂಡು ನುಡಿಯುವರು
ಮಾಯಾವಿ ನರರು ಪೂರ್ಣಜ್ಞ.

೧೪೨೨

ಕೊಲಬಹುದು ಕೇಸರಿಯು, ಕೊಲಬಹುದು ಮದಗಜವ
ತುಳಿವರಾರಿಹರು ಕಂದರ್ಪದರ್ಪವನು
ತಿಳಿದವರು ಪೇಳಿ ಪೂರ್ಣಜ್ಞ.

೧೪೨೩

ಚೇಳು ಕುಟುಕಿದ ನೋವ, ತಾಳಿಕೊಂಡಿರಬಹುದು
ಕಾಳಾಹಿಯಂಥ ಖೂಳ ಖಳರುಪಟಳವ
ತಾಳಲಾಸಲ್ಲ ಪೂರ್ಣಜ್ಞ.

೧೪೨೪

ಚಾಡಿ ಮಾತನು ಕೇಳಿ, ಕೇಡಿಗೊಳಗಾಗದಿರು
ಚಾಡಿಗರು ತಮ್ಮ ಸೇಡು ತೀರಿಸೆ ನಿನ್ನ
ದೂಡುವರು ಬಲೆಗೆ ಪೂರ್ಣಜ್ಞ.

೧೪೨೫

ಅಬ್ಬಬ್ಬ ಒಬ್ಬೊಬ್ಬ-ರುಬ್ಬಿಹರು ಕೊಬ್ಬಿಹರು
ಸಭ್ಯ ಸಂಘವನು ಇಬ್ಭಾಗಿಸುತಲಿಹರು
ಬೊಬ್ಬಿರಿಯುತಿಹರು ಪೂರ್ಣಜ್ಞ.

೧೪೨೬

ಅಲಗಿನಿಂದೀಡಿರಿಯೆ, ಅಳಲುವವೆ ಆಕಾಶ?
ಮಳೆ ಬಿಡದೆ ಹೊಡೆಯೆ ನೆನೆಯುವವೆ ಆಕಾಶ?
ಖಳರಿಗಂಜದಿರು ಪೂರ್ಣಜ್ಞ.

೧೪೨೭

ದುಷ್ಟ ಜನಸಂಖ್ಯೆಯದು, ಎಷ್ಟೊಂದು ಬೆಳೆಯುತಿದೆ?
ದುಷ್ಟರನು ತಿದ್ದಿ ತೀಡುವದು ಬಲು ದೊಡ್ಡ
ಕಷ್ಟ ಕಡುಕಷ್ಟ ಪೂರ್ಣಜ್ಞ.

೧೪೨೮

ಅತಿವಿನಯ ಮರೆವದು-ರ್ಮತಿಗಳ ವಿಷಮಬುದ್ಧಿ
ಮಿತಿಮೀರಿ ಹಬ್ಬಿ ಹರಿದಾಡುತಿಪ ಖಳರ
ಜೊತೆಗೂಡಬೇಡ ಪೂರ್ಣಜ್ಞ.

೧೪೨೯

ಮಠದ ಅನ್ನವನ್ನುಂಡು, ಮಠದ ಗಳವೆಣಿಸುತಿಹ
ಶಠರನ್ನು ಕಂಡು ನೊಂದಿಹುದು ಮನವು, ಈ
ಕುಟಿಲರನು ದಮಿಸು ಪೂರ್ಣಜ್ಞ.

೧೪೩೦

ಒಳಗಿದ್ದು ಮಠದಲ್ಲಿ, ಕಲಕು ಮಾಡುವ ಜನರ
ಹೊಲಸುತನ ನೋಡಿ ಮನವು ಬಲು ನೊಂದಿಹುದು
ತಿಳಿಯಬೇಕವರ್ಗೆ ಪೂರ್ಣಜ್ಞ.

೧೪೩೧

ಯಾರ ನಂಬಲಿ ದೇವ? ಯಾರನ್ನು ನಂಬಿದರು
ತೋರಿಕೆಯ ಭಕ್ತಿ ಬೀರುವರು ಹೊಟ್ಟೆಯಲಿ
ಕಾರವರು ವಿಷವ ಪೂರ್ಣಜ್ಞ.

೧೪೩೨

ಅತಿಪ್ರೇಮವ ನಟಿಸಿ, ಅತಿ ಮೋಸ ಮಾಡಿ ಉಪ–
ಕೃತಿ ತೀರಿಸುವರು–ವಿಶ್ವಾಸ ಘಾತಕರ
ಅತಿದೂರವಿರಿಸು ಪೂರ್ಣಜ್ಞ.

೧೪೩೩

ದೃಢಪಾಯವನ್ನಿಡದೆ, ಗಡನೆ ಮನೆ ಮುಗಿಸುತಿಹ
ಕಡುದುಷ್ಟರಾದ ಕಂತ್ರಾಟಿಗಳು ಲಂಚ
ಬಡಕಣ್ಣಗಳು ಪೂರ್ಣಜ್ಞ.

೧೪೩೪

ಒಬ್ಬೊಬ್ಬರೊಂದೊಂದು, ಉಬ್ಬುಬ್ಬಿ ಹೇಳುವರು
ಮಬ್ಬುಗವಿಸುವರು ಮುಗ್ಧ ಜನರನ್ನು ತ–
ಬ್ಬಿಬ್ಬುಗೊಳಿಸುವರು ಪೂರ್ಣಜ್ಞ.

೧೪೩೫

ಅಸಹಿಷ್ಣುಗಳು ಪರರ, ಕುಶಲ ಸ್ಥಿತಿಗತಿ ನೋಡಿ
ಕಸಿವಿಸಿಗೊಳುತ್ತ ನುಡಿವ ಕೊಂಕಿನ ಮಾತು
ನಸುಗುನ್ನಿಸುಂಕ ಪೂರ್ಣಜ್ಞ.

೧೪೩೬

ನನ್ನರಿವು ನನಗುಂಟು, ನನ್ನ ಆದರ್ಶಗಳ
ಕುನ್ನಿ ಮಾನವರು ತಿಳಿಯದಲೆ ಮತ್ಸರಿಸಿ
ಬನ್ನವೀಯುವರು ಪೂರ್ಣಜ್ಞ.

೧೪೩೭

ಹೆಚ್ಚಳಾದವರನ್ನು, ಮಚ್ಚರದಿ ನೋಡುವರು
ಚುಚ್ಚುವರು ಹಿಂದೆ ಹಚ್ಚುವರು ಬೆಂಕಿಯನು
ಎಚ್ಚರಿರು ಜೋಕೆ ಪೂರ್ಣಜ್ಞ.

೧೪೩೮

ನನ್ನಂತೆ ಮಾತಾಡಿ ನನ್ನ ಒಳಗುಟ್ಟುಗಳ
ಸನ್ನಯದಿ ಪಡೆದು ಹೊತ್ತು ಸಾಧಿಸಿ ನನ್ನ
ಬೆನ್ನಿರಿಯುತಿಹರು ಪೂರ್ಣಜ್ಞ.

೧೪೩೯

ಒಳಗೊಂದು ಹೊರಗೊಂದು, ಖಳಕರ್ಮಿಗಳ ನಡತೆ
ತಲೆಬಾಗಿ ಮುಂದೆ ಹಿಂದಿನಿಂ ಹಲವಾರು
ಬಲೆಬೀಸುತಿಹರು ಪೂರ್ಣಜ್ಞ.

೧೪೪೦

ನಮ್ಮ ಪೀಠದ ಕೀರ್ತಿ, ಹೊಮ್ಮಿರಲು ಕೆಲಜನರು
ತಮ್ಮ ಹೊಟ್ಟೆಯಲಿ ಕಿಚ್ಚು ಸುರಿದಂತಾಗಿ
ಉಮ್ಮಳಿಸುತಿಹರು ಪೂರ್ಣಜ್ಞ.

೧೪೪೧

ಒಳಸಂಚು ಮಾಡುತಿಹ, ಖಳನನ್ನು ನಂಬದಿರು
ಸಲಿಗೆಯನು ಬೆಳೆಸಿ ಬಲೆ ಬೀಸಬಹುದವನು
ಬಲು ಎಚ್ಚರಿರಲಿ ಪೂರ್ಣಜ್ಞ.

೧೪೪೨

ಬಹುಜನರ ವೈರದಿಂ ಇಹದಲ್ಲಿ ಸುಖವಿಲ್ಲ
ಕುಹಕಿಗಳು ಕೇಡನ್ನು ಕೊಡುತಿಹರು ಮುಂದೆ
ಸಹಕರಿಸು ನೋಡಿ ಪೂರ್ಣಜ್ಞ.

೧೪೪೩

ಮುಂದೆ ಹೊಗಳುವರನ್ನು, ಹಿಂದೆ ತೆಗಳುವರನ್ನು
ಎಂದೆಂದು ನೆಚ್ಚದಿರು ನೆಚ್ಚಿದರೆ ಮುಂದೆ
ದಂದುಗದಿ ಬೀಳ್ವೆ ಪೂರ್ಣಜ್ಞ.

೧೪೪೪

ದುಡಿಮೆಯಲಿ ದ್ರೋಹಿಸುತ, ನಡೆನುಡಿಯ ಕೆಡಿಸುತ್ತ
ಕಡು ಭೇದ ಬಿತ್ತಿ ಮನವ ಮುರಿಯುವ ಖಳರ
ಒಡನಾಟ ಬೇಡ ಪೂರ್ಣಜ್ಞ.

೧೪೪೫

ನ್ಯಾಯವಿಲ್ಲದ ನರನು, ರಾಯನಾದೊಡೆ ಏನು?
ಕಾಯದಲಿ ಮೋಹ ತುಂಬಿರುವ ಸಾಧುಗಳು
ಮಾಯಾವಿ ಜನರು ಪೂರ್ಣಜ್ಞ.

೧೪೪೬

ನಾರಿಕೇಳದ ತೆರದಿ, ಸಾರ ಸಜ್ಜನರಿಹರು
ದೂರ ದುರ್ಜನರು ಹೆಬ್ಬಾವಿನಂತಿಹರು
ಕ್ರೂರಾತ್ಮರವರು ಪೂರ್ಣಜ್ಞ.

೧೪೪೭

ನೇತೃತ್ವವಿಲ್ಲದಿಹ ನೇತೃಗಳು ತುಂಬಿಹರು
ಜೋತಾಡುತಿಹರು ಅಧಿಕಾರದಾಶೆಯಲಿ
ಕೋತಿ ಕುಲದವರು ಪೂರ್ಣಜ್ಞ.

೧೪೪೮

ಜಾತಿ ಜಾಲವ ಬೀಸಿ, ಕೋತಿಯಾಟವ ಹೂಡಿ
ಮಾತಿನಲಿ ಸ್ವರ್ಗ ತೋರಿಸುವ ಜನ ದೇಶ
ಘಾತಕರು ನೋಡು ಪೂರ್ಣಜ್ಞ.

೧೪೪೯

ಬಣ್ಣ ಮೀಸೆಗೆ ಬಳಿದ, ಘನ್ನ ಘಾತುಕ ಗಂಡು
ಹೆಣ್ಣನ್ನು ರಮಿಸಿ ತೆವಲು ತೀರಿದ ಮೇಲೆ
ಕಣ್ಣೆತ್ತಿ ನೋಡ ಪೂರ್ಣಜ್ಞ.

೧೪೫೦

ನಿನ್ನ ಕೈಬಿಡೆನೆಂದು, ಹೆಣ್ಣನ್ನು ವಂಚಿಸುತ
ಹೆಣ್ಣ ಶೀಲವನು ಕೆಡಿಸುವರು ಕೇಡಿ ಕಾ-
ಮಣ್ಣಗಳು ನೋಡಿ ಪೂರ್ಣಜ್ಞ.

೧೪೫೧

ಹೀನ ಕಾಮುಕ ಜನರು, ಮಾನಿನಿಯರನ್ನೆಳೆದು
ಕಾನನಕೆ ಒಯ್ದು ಶೀಲ ಕೆಡಿಪರು ಕಾಡು–
ಕೋಣನಂಥವರು ಪೂರ್ಣಜ್ಞ.

೧೪೫೨

ಕಾಮಾಂಧ ದುರ್ಜನರು, ಸೋಮಮುಖಿಯರ ಕಂಡು
ಮೈಮೇಲೆ ನುಗ್ಗಿ ಬಿಗಿದಪ್ಪುವರು ಕಾಮ
ಧೂಮಕೇತುಗಳಃ ಪೂರ್ಣಜ್ಞ.

೧೪೫೩

ಉಂಡಾಡಿ ಕಾಮಿಗಳು, ಕಂಡವರ ಹೆಂಡಿರನು
ಪುಂಡತನದಿಂದ ಕೆಡಿಸುವವರನ್ನೆಳೆದು
ಕೆಂಡದಲಿ ನೂಕು ಪೂರ್ಣಜ್ಞ.

೧೪೫೪

ಏಕ ಪತಿವ್ರತೆಯರನು, ಕಾಕು ಮನುಜರು ಹೊಂಚಿ
ಬೇಕು ಬೇಕಾದ ಹಾಗೆ ಮಾಡುವರವರ
ಹಾಕು ಶೂಲಕ್ಕೆ ಪೂರ್ಣಜ್ಞ.

೧೪೫೫

ಮುಗ್ಧ ಬಾಲೆಯರನ್ನು, ಹದ್ದೆರಗಿದಂತೆರಗಿ
ಕದ್ದೊಯ್ಯುವವರ ಬದ್ದೆ ಮೇಲೊದ್ದೊದ್ದು
ಬುದ್ಧಿಗಲಿಸವರ್ಗೆ ಪೂರ್ಣಜ್ಞ.

೧೪೫೬

ದುಡ್ಡಿನಾಶೆಯನು ಮನ–ದಡ್ಡಗಲದೊಳು ಹೆಣೆದು
ದೊಡ್ಡವರ ಬೈವ ಬೊಡ್ಡಿ ಮಕ್ಕಳನು ಹುಗಿ,
ದೊಡ್ಡ ತೆಗ್ಗಿನಲಿ ಪೂರ್ಣಜ್ಞ.

೧೪೫೭

ಹುಡುಕುವರು ದೋಷಗಳ, ಎಡಬಿಡದ ದುರ್ಜನರು,
ಮಿಡುಕುವರು ಪರರ ದೋಷಕ್ಕೆ ಸಜ್ಜನರು
ಕೆಡುಕಸಗರವರು ಪೂರ್ಣಜ್ಞ.

೧೪೫೮

ಲಗ್ನವಾದೊಡನೆ ಮನೆ, ಭಗ್ನಗೊಳಿಸಲು ಬಯಸಿ
ಮಗ್ನರಾಗುವರು ಕಲಹ ಕೋಲಾಲದಿ
ವಿಘ್ನತೋಷಿಗಳು ಪೂರ್ಣಜ್ಞ.

೧೪೫೯

ಎಲ್ಲ ವ್ಯವಹಾರದಲ್ಲಿ ಸುಳ್ಳು ಮೋಸದ ತಂತ್ರ
ಸುಳ್ಳು ಸೊಗಡಿರದ ಸತ್ಯ ಪ್ರಾಮಾಣಿಕತೆ
ಯುಳ್ಳವರು ಕಡಿಮೆ ಪೂರ್ಣಜ್ಞ.

೧೪೬೦

ಮಾತಿನಲಿ ಸವಿಸುರಿಸಿ, ಬೇತಿನಿಂದಕಡೆಗುಳಿದು
ಜಾತಿಜಾತಿಯಲಿ ಜಗಳ ಹಚ್ಚುವ ಕೆಟ್ಟ
ಘಾತಿಕಿಗಳುಂಟು ಪೂರ್ಣಜ್ಞ.

೧೪೬೧

ಬುಂದೆ ಬೇಸನದುಂಡಿ, ಹಂದಿಗಳಿಗಿಕ್ಕುವರೆ?
ಚೆಂದ ದುಡಿಗೆಗಳ ಕತ್ತೆಗಳಿಗೀಯುವರೆ?
ನಿಂದ್ಯರನು ತ್ಯಜಿಸು ಪೂರ್ಣಜ್ಞ.

೧೪೬೨

ಕತ್ತುರಿಯು ಕಂಪನ್ನು, ಕತ್ತೆಯದು ಬಲ್ಲುದೆ?
ಉತ್ತಮರ ದಿವ್ಯ ಗುಣಗಳನು ಮೆಚ್ಚುವರೆ?
ಸ್ವಾರ್ಥಿದುರ್ಜನರು ಪೂರ್ಣಜ್ಞ.

೧೪೬೩

ಸುತ್ತೆಲ್ಲ ಭ್ರಷ್ಟತೆಯು, ಮುತ್ತಿ ಮುಸುಕುತ್ತಲಿದ
ಆಪ್ತೇಷ್ಟ ಮಿತ್ರ ಬೃತ್ಯರಲ್ಲಿ ಹಬ್ಬುತಿವೆ
ಗತ್ತುಗಾರಿಕೆಯು ಪೂರ್ಣಜ್ಞ.

೧೪೬೪

ಕೃತಿಯಲ್ಲಿ ಭಾವೈಕ್ಯ, ಮತಿಯಲ್ಲಿ ಭಾವೈಕ್ಯ
ಎತ್ತ ಹುಡುಕಿದರೂ ದೊರೆತಿಲ್ಲ ಕೃತಕತೆಯೆ
ಮುತ್ತಿಹುದು ಸುತ್ತ ಪೂರ್ಣಜ್ಞ.

೧೪೬೫

ಅಪಮಾನ ಮಾಡಲ್ಕೆ ಕಪಿ ತಂತ್ರ ಹೂಡಿದರೆ
ಅಪಹಾಸ್ಯ ನಿನ್ನ ಬೆಂಬಿಡದು ಲೋಕದಲ್ಲಿ
ಕಪಟಿ ನೀನೆನಿಪೆ ಪೂರ್ಣಜ್ಞ.

೧೪೬೬

ಕತ್ತೆಯುಮ ಬಲ್ಲುದೇ ಕಸ್ತೂರಿಯ ವಾಸನೆಯ
ಸತ್ಯವಂತರ ಮಹಿಮೆ–ಚಿತ್ತ ಚಂಚಲದ
ಮಿಥ್ಯರರಿಯುವರೆ? ಪೂರ್ಣಜ್ಞ.

೧೪೬೭

ಅತಿವಿನಯ ತೋರುವವ, ಅತಿ ಮೋಸಗಾರನವ
ಅತಿ ಮಾತುಗಾರನಲ್ಲಿರುವದತಿ ಸುಳ್ಳು
ಕ್ಷಿತಿಯಲ್ಲಿ ಜೋಕೆ ಪೂರ್ಣಜ್ಞ.

೧೪೬೮

ಕೊಂದವನು ಹೊಲೆಯಲ್ಲ, ತಿಂದವನು ಹೊಲೆಯಲ್ಲ
ಕೊಂದು ತಿನ್ನೆಂದು ಹೇಳಿದವ ಹಿರಿ ಹೊಲೆಯು
ನೊಂದು ನುಡಿದಿಹೆನು ಪೂರ್ಣಜ್ಞ.

೧೪೬೯

ಜಲದಿಂದ ಬೆಣ್ಣೆಯನು, ಮಳಲಿನಿಂದೆಣ್ಣೆಯನು
ಹಿಳಿದು ಪಡೆದೆಂದು, ಶತಮೂರ್ಖಮನುಜನಿಗೆ
ತಿಳುವಳಿಕೆ ಬಹುದು ಪೂರ್ಣಜ್ಞ.

೧೪೭೦

ದೇಶವನು ಬಿಟ್ಟು ಪರ, ದೇಶಕ್ಕೆ ಹೋಗಿಬರೆ
ರೋಷ ಕಾರುವರ ಕುರುಡುನಂಬುಗೆಯಿಂದ
ಲೇಸಿಲ್ಲ ಜಗಕೆ ಪೂರ್ಣಜ್ಞ.

೧೪೭೧

ಎಲ್ಲ ಗಿಡಗಳ ಹೂವು, ಒಳ್ಳೆ ಕಾಯಾಗುವವೆ?
ಎಲ್ಲ ಮಾನವರು ಒಳ್ಳೆಯರಾಗುವದ–
ನೆಲ್ಲಿಯೂ ಕಾಣೆ ಪೂರ್ಣಜ್ಞ.

೧೪೭೨

ಮೂಢತನ ಬಿಡಿರೆಂದು, ಪ್ರೌಢ ಭಾಷಣ ಬಿಗಿದು
ಗೂಢತತ್ವಗಳ ತಿಳಿಸದಲೆ ಮುಳುಗುವರು
ಗಾಢನಿದ್ರೆಯಲಿ ಪೂರ್ಣಜ್ಞ.

೧೪೭೩

ಸಿರಿಮದವು ತಲೆಗೇರಿ, ಗರುವವದು ಮಿತಿಮೀರಿ
ಧರೆಯಲ್ಲಿ ನನಗೆ ಸರಿಯಾರು ಎಂಬವರ
ಸರಿಸಿ ಬಿಡು ದೂರ ಪೂರ್ಣಜ್ಞ.

೧೪೭೪

ಕೇರಿಶುಚಿಯಾಗಿರಲು ಕಿರಿನಿಕರ ಬೇಕಯ್ಯ
ಸಾರ ಸದ್ಗುಣವ ತಿಳಿಯಲ್ಕೆ ನಿಂದಕರು
ಭೂರಿ ತುಂಬಿರಲಿ ಪೂರ್ಣಜ್ಞ.

೧೪೭೫

ಕೆಲಸ ಸಾಧಿಸುವತನಕ, ಸುಳಿವರು ಸಹಸ್ರ ಸಲ
ಕೆಲಸ ಮುಗಿದೊಡನೆ ಆವನಾರೋ ನಾವಾರೋ?
ಬಳಿ ಸುಳಿಯರವರು ಪೂರ್ಣಜ್ಞ.

೧೪೭೬

ದೇಶಸೇವೆಯು ಬಿಟ್ಟು, ದೋಷಗಳ ಹುಡುಕುತ್ತ
ದ್ವೇಷ ಬೆಳೆಸುತ್ತ ರಾಜಕೀಯ ಜನಕೆ
ಕ್ಲೇಶ ಕೊಡುತಿಹರು ಪೂರ್ಣಜ್ಞ.

೧೪೭೭

ಸ್ವಾರ್ಥಕ್ಕೆ ಬಡಿದಾಟ, ಸ್ವಾರ್ಥಕ್ಕೆ ಕಿರುಚಾಟ
ಸ್ವಾರ್ಥಕ್ಕೆ ಬರಿಮಾತು ಸಾಗಿಹುದು ದೇಶ
ಕತ್ತಲೆಯ ದಾರಿ ಪೂರ್ಣಜ್ಞ.

೧೪೭೮

ಅಲ್ಲಿಯೂ ಸ್ವಾರ್ಥವೇ ಇಲ್ಲಿಯೂ ಸ್ವಾರ್ಥವೇ?
ಕಲ್ಯಾಣ ರಾಜ್ಯದೆಲ್ಲ ಕಡೆಗೂ ಸ್ವಾರ್ಥ
ಭುಲ್ಲವಿಸುತಿಹುದು ಪೂರ್ಣಜ್ಞ.

೧೪೭೯

ಉಂಡ ಮನೆಗಳ ಎಣಿಸಿ, ಕಂಡಂತೆ ಬೊಗಳುತಿಹ
ಪುಂಡ ಪೋಕರಿಗೆ ಮುಂದಿಹವು ಘೋರತರ
ಗಂಡಾಂತರಗಳು ಪೂರ್ಣಜ್ಞ.

೧೪೮೦

ಅವರಿವರು ಎನ್ನುತ್ತ, ಕುವಿಚಾರ ವಿಷಬಿತ್ತಿ
ಜವದಿ ಒಡೆದಾಳ್ವ ದ್ವೇಷ ಸಾಧಕ ಜನರು
ಭುವಿಗೆ ಕಂಟಕರು ಪೂರ್ಣಜ್ಞ.

೧೪೮೧

ಗುರುಗಳನು ತೊರೆಯುವರು, ಗುರುಗಳನು ಜರಿಯುವರು
ಗುರುದ್ರೋಹಗೈದು ಗರ್ವಾಂಧರಾಗುವರು
ನರಿಯಂಥ ನರರು ಪೂರ್ಣಜ್ಞ.

೧೪೮೨

ದವಸಧಾನ್ಯಾದಿಗಳ, ಅವಿತಿಟ್ಟು ಮರೆಯಲ್ಲಿ
ಅವನಿಯಲಿ ಕೃತಕ ಕೊರತೆ ನಿರ್ಮಿಸಿ ಜನಕೆ
ಬವಣೆಯೊಡ್ಡುವರು ಪೂರ್ಣಜ್ಞ.

೧೪೮೩

ಸುಳ್ಳು ಕಾಗದ ಬರೆಸಿ, ಒಳ್ಳೆ ಹೊಲ ಕಬಳಿಸುವ
ಕಳ್ಳಭಕ್ತರನು ನೋಡಿನಗೆ ಬರುತಿಹುದು
ಸುಳ್ಳಿಗಿಲ್ಲ ಸುಖ ಪೂರ್ಣಜ್ಞ.

೧೪೮೪

ಭಕ್ತಿ ಸೋಗನು ಹಾಕಿ, ಮತ್ತೆ ಬರುವರು ಮಠಕೆ–
ಮಿಥ್ಯ ಪಶ್ಚಾತ್ತಾಪ ನಟಿಪ ಸ್ವಾರ್ಥಿಗಳ
ಧೂರ್ತತನ ನೋಡು ಪೂರ್ಣಜ್ಞ.

೧೪೮೫

ಶಕ್ತಿ ತಮಗಿಲ್ಲದೆ ಕು–ಯುಕ್ತಿಯನು ಹೆಣೆಯುವರು
ವ್ಯಕ್ತಿ ಪ್ರತಿಷ್ಠೆಯೆಂಬ ಕಿಚ್ಚಿಗೆ ತಾವೆ
ಭುಕ್ತಿಯಾಗುವರು ಪೂರ್ಣಜ್ಞ.

೧೪೮೬

ಮೋಸ ವಂಚನೆ ಮಿಥ್ಯ, ದೇಶವನು ನಶಿಸುತಿವೆ
ಲೇಶವೂ ಲೇಸಿಲ್ಲ ಕೈತವಗಳಲ್ಲಿ
ಮೋಸದಿಂ ನಾಶ ಪೂರ್ಣಜ್ಞ.

೧೪೮೭

ತನ್ನ ಬೊಕ್ಕಸದಲ್ಲಿ, ಹೊನ್ನನ್ನು ಬಚ್ಚಿಟ್ಟು
ಅನ್ಯರಿಗೆ ದಾನಧರ್ಮವನು ಬೋಧಿಪನ
ಹುನ್ನಾರನೋಡು ಪೂರ್ಣಜ್ಞ.

೧೪೮೮

ಸ್ವಾತಂತ್ರ್ಯವಿಹುದೆಂದು, ಪಾತಕಕೆ ಬಳಸದಿರು
ಸ್ವಾರ್ಥಸಾಧನೆಗೆ ಸಿಕ್ಕಂತೆ ಗೀಚಿದರೆ
ಧೌರ್ತವೆನಿಸುವದು ಪೂರ್ಣಜ್ಞ.

೧೪೮೯

ಕುಹಕಿಗಳ ಕುಹಕತನ, ಬಹಳಷ್ಟು ಬೆಳೆಯುತಿದೆ
ಕುಹಕತನದಿಂದ ಬಾಳು ಹಾಳಾಗುತಿದೆ
ಕುಹಕತನ ಬಿಡಿಸು ಪೂರ್ಣಜ್ಞ.

೧೪೯೦

ಮಾನಸಿಕ, ವೇದನೆಯು, ಮಾಣದಲೆ ಕೊಡುತಿಹರು
ಜ್ಞಾನವಿರಹಿತರು ಧ್ಯಾನವನು ಬಿಡಿಸಿಹರು
ಕೋಣನಂಥವರು ಪೂರ್ಣಜ್ಞ.

೧೪೯೧

ಗುರು ಹಿರಿಯರಾಚರಿಸಿ, ಧರೆಗಿತ್ತು ಆದರ್ಶ
ಮರೆಯಾಗಿ ದುರುಳ ದುಃಸ್ವಾರ್ಥದಾಳಿಕೆಯು
ಮೆರೆದಾಡುತಿಹುದು ಪೂರ್ಣಜ್ಞ.

೧೪೯೨

ಗೇಣುಹೊಟ್ಟೆಯ ಸುಖಕೆ, ಗೋಣು ಮುರಿಯುವ ಜನರು
ಕ್ಷೋಣಿ ತುಂಬೆಲ್ಲ ತುಂಬಿಹರು, ಎಲ್ಲಿಹರು
ಸಾನುರಾಗಿಗಳು? ಪೂರ್ಣಜ್ಞ.

೧೪೯೩

ವ್ಯಕ್ತಿ ಪೂಜೆಯು ಹೆಚ್ಚಿ, ಸೂಕ್ತಕ್ಕೆ ಬೆಲೆಯಿಲ್ಲ
ವ್ಯಕ್ತಿಸ್ವಾರ್ಥಕ್ಕೆ ಜಗವು ಬಲಿಯಾಗುತಿದೆ
ಮುಕ್ತಿಯೆಂದಿದಕೆ? ಪೂರ್ಣಜ್ಞ.

೧೪೯೪

ಕೀರ್ತಿ ಮಾಯಾವಿನಿಗೆ, ಮೂರ್ತಿವಶವಾಗಿಹರು
ತತ್ವಾರ್ಥವಿರದ ಜೊಳ್ಳು ಭಾಷಣ ಬಿಗಿದು
ಸ್ವಾರ್ಥಸಾಧಿಪರು ಪೂರ್ಣಜ್ಞ.

೧೪೯೫

ಪೃಥಿವಿಯಲ್ಲಿ ಬೆಳೆಯುತಿದೆ, ಕೃತಕತೆಯ ಸಾಮ್ರಾಜ್ಯ
ಮತಿವಂತರಿದನು ತವಿಸದಿದ್ದರೆ ಜಗದ
ಗತಿಯು ದುರ್ಗತಿಯು ಪೂರ್ಣಜ್ಞ.

೧೪೯೬

ಉಪಕಾರ ಪಡಕೊಂಡು ಅಪಕಾರ ಮಾಡುವರು
ಉಪಕಾರಗೇಡಿ ಹಾವಿನಂಥವರೀಗ
ವಿಪುಲವಾಗಿಹರು ಪೂರ್ಣಜ್ಞ.

೧೪೯೭

ಗುರುಗಳನು ತೊರೆಯುವರು ಗುರುಗಳನು ಜರಿಯುವರು
ಗುರುದ್ರೋಹಗೈದು ಗರ್ವಾಂಧರಾಗುವರು
ನರಿಯಂಥ ನರರು ಪೂರ್ಣಜ್ಞ.

೧೪೯೮

ಜೊಳ್ಳು ವಚನವ ನೀಡಿ ಕೊಳ್ಳಕ್ಕೆ ಒಗೆವವರ
ತಳ್ಳುವರು ಒಮ್ಮೆ ಜನರೆಲ್ಲ ಕೂಡುತ್ತ
ಮುಳ್ಳು ಕಿತ್ತಂತೆ ಪೂರ್ಣಜ್ಞ.

೧೪೯೯

ಅಂದು ಪರರಾಳ್ಕೆಯಲಿ ಹೊಂದಿಕೆಯು ಹೊಲಬಿತ್ತು
ಇಂದು ನಮ್ಮನೆ ನಾವೆ ಆಳುತಲಿಹೆವು
ಚೆಂದವಾಗಿಹೆವೆ? ಪೂರ್ಣಜ್ಞ.

೧೫೦೦

ಹಿರಿಯರೆನ್ನುತ ಹಿರಿಯು, ಕಿರಿಯರನು ತುಳಿಯುವರೆ?
"ಹಿರಿಯು" ತಾವೆಂದು ದುರ್ಬುದ್ಧಿಯಿದ್ದವರು
ಹಿರಿಯರೆಂತಹರು? ಪೂರ್ಣಜ್ಞ.

೧೫೦೧

ಹುಲ್ಲು ತಿನ್ನುವ ಹಸುವು, ನಲ್ವಾಲು ನೀಡುವದು
ಬೆಲ್ಲವನು ತಿಂದ ಪಾಲ್ಕುಡಿದ ಮಾನವನು
ಖುಲ್ಲನಾಗುವನು ಪೂರ್ಣಜ್ಞ.

೧೫೦೨

ಪಶುವಿಗಿಂತಲು ಕೀಳು, ವಿಷಮ ಬುದ್ಧಿಯ ನರನು
ಪಶು ತನಗೆ ಅನ್ನವಿತ್ತವನ ಕಾಯುವದು
ಪಶು ಪುಣ್ಯ ಜೀವಿ ಪೂರ್ಣಜ್ಞ.

೧೫೦೩

ಒಡಹುಟ್ಟಿದವರಲ್ಲಿ, ಒಡಕು ಹುಟ್ಟಿಸಿ ಮನೆಯ
ಸಡಗರವನೆಲ್ಲ ಹುಡಿಗೈವ ಕೆಟ್ಟವರ
ಒಡನಾಟಬೇಡ ಪೂರ್ಣಜ್ಞ.

೧೫೦೪

ಈ ರಾಜಕೀಯ ಜನ, ಘೋರ ಸ್ವಾರ್ಥಕ್ಕಾಗಿ
ಭಾರತದ ಪ್ರಗತಿ ರಥಕಡ್ಡ ಬರುತಿಹರು
ಮಾರಾರಿ ಕಾಯೊ! ಪೂರ್ಣಜ್ಞ.

೧೫೦೫

ಒಕ್ಕಟ್ಟು ದೂಡುತ್ತ, ಬಿಕ್ಕಟ್ಟು ಹೂಡುತ್ತ
ಸಿಕ್ಕಾಗ ಆಯ್ಕೆ[೧] ಮಾಡಿ ಜನ ಜೀವನಕೆ
ಇಕ್ಕುವರು ಮಣ್ಣು! ಪೂರ್ಣಜ್ಞ.

೧ ಆಯ್ಕೆ=ಚುನಾವಣೆ.

೧೫೦೬

ಬೆಳವಣಿಗೆ ಮಾಡಲ್ಕೆ ಕಳಕಳಿಯು ಕೃತಿಯಿಲ್ಲ.
ತಿಳಿಗೇಡಿ ಜನತೆಯನು ದುಶ್ಚಟಕೆ ದೂಡಿ
ಕೊಲುತಿಹರು ದೇಶ ಪೂರ್ಣಜ್ಞ.

## ಡಾಂಭಿಕತೆ

೧೫೦೭

ಕರದಲ್ಲಿ ಜಪಮಾಲೆ, ಉರದಲ್ಲಿ ಭವಮಾಲೆ
ಸ್ಮರಿಸುತ್ತ ಎಣಿಸಿದರೆ ಗಿಡವೇರಿ ತಾನು
ಧರೆಗೆ ಬಿದ್ದಂತೆ ಪೂರ್ಣಜ್ಞ.

೧೫೦೮

ಸಂಘಟನೆ ಸಭೆಗಳಲಿ, ಸಂಘಟನೆ ಮಾತಿನಲಿ
ಅಗ್ರಮಾನ್ಯತೆಯು ಸ್ವಾರ್ಥಕ್ಕೆ ಇಂತಿರಲು
ಸಂಘಟನೆ—ನಟನೆ ಪೂರ್ಣಜ್ಞ.

೧೫೦೯

"ನಮ್ಮವರು ನಮ್ಮವರು" ನಮ್ಮವರ ನೆಚ್ಚುತ್ತ
ಸುಮ್ಮನೆಯೆ ಕಾಲ ಕಳೆದಾಯ್ತು, ಕೊನೆಗವರ
ಸೊಮ್ಮು ಬಯಲಾಯ್ತು ಪೂರ್ಣಜ್ಞ.

೧೫೧೦

ಜಪಮಾಲೆ ಹಿಡಿಯುವೊಡೆ, ಕುಪಿತವನು ಬಿಡು ಮೊದಲು
ಕುಪಿತಮನ ವಿಪರೀತ, ಶಾಂತಿಯಿಂದ ನಿಜದ
ಜಪವಹುದು ಸಫಲ ಪೂರ್ಣಜ್ಞ.

೧೫೧೧

ಬಿದ್ದವರ ನೆತ್ತದಲೆ, ಶುದ್ಧಮನವಿಲ್ಲದಲೆ
ಉದ್ದುದ್ದ ಮಾತಾಡಿ ಗುದ್ದಾಡುವವರು
ಬುದ್ಧಿಗೇಡಿಗಳು ಪೂರ್ಣಜ್ಞ.

೧೫೧೨

ಆತ್ಮಬಲ ತುಂಬಿರದೆ, ನೀತಿ ನಡತೆಯೊಳಿರದೆ
ತತ್ತ್ವ ಬರಿ ಮಾತಿನಲಿ ಹೇಳಿದರೆ ಜಗವು
ನಿಂತು ನಗದಿಹುದೆ? ಪೂರ್ಣಜ್ಞ.

೧೫೧೩

ಒಡಲಲ್ಲಿ ಹಸಿವೆಂಬ, ಬಡವಾಗ್ನಿ ಸುಡುತಿರಲು
ನುಡಿಗಡಣ ಜಡಿದ ಭಾಷಣದ ದಿಡುಗಿಂದ
ಒಡಲು ತಣಿದೀತೆ? ಪೂರ್ಣಜ್ಞ.

೧೫೧೪

ತನ್ನ ತಪ್ಪನು ಮುಚ್ಚಿ, ಅನ್ಯರದು ತೆರೆದಿಟ್ಟು
ನನ್ನಿಗನು ತಾನು ಎಂಬಂತೆ ನಟಿಸುವನ
ಬಣ್ಣವನು ನೋಡು ಪೂರ್ಣಜ್ಞ.

೧೫೧೫

ಆಶೆಯನು ತೊರೆಯದಗೆ, ವೇಷವನು ತಳೆದವಗೆ
ಮೋಸಕೃತಿ ಬಿಡದವಗೆ ಘೋರದುರ್ಭವದ
ಪಾಶ ಬೆಂಬಿಡದು ಪೂರ್ಣಜ್ಞ.

೫೧೧೬

ಸತ್ಯವನು ತಳಕೊತ್ತಿ, ಮಿಥ್ಯೆಯನು ಮೇಲೆತ್ತಿ
ಉತ್ತಮರೆನಿಸಿಕೊಂಡು ಮೆರೆವವರು ಜಗವ
ಉತ್ತಮಿಸಬಹುದೆ? ಪೂರ್ಣಜ್ಞ.

೧೫೧೭

ಅಧ್ಯಯನ ಮಾಡದಲೆ, ಪದ್ಮಜನ ಬೈವವರು
ವಿದ್ಯೆಗೆರವಾಗಿ ಅಜ್ಞಾನದಲಿ ಬಿದ್ದು
ಪೆದ್ದರೆನಿಸುವರು ಪೂರ್ಣಜ್ಞ.

೧೫೧೮

ಕರಣಗಳ ಕಟ್ಟದಲೆ, ಬರಿಮೌನವಹಿಸಿದರೆ
ಉರದಿ ವಿಷವಿರಲು ಹೊರಗೆ ಸಿಹಿಸುರಿಸಿದರೆ
ಹರಮೆಚ್ಚಬಹುದೆ? ಪೂರ್ಣಜ್ಞ.

೧೫೧೯

ಕೋಟಲೆಯ ಕೀಟಲೆಯು, ಬೂಟಾಟಿಕೆಯು ಜನರು
ಕೋಟಿ ಕೋಟ್ಯವಧಿ ತುಂಬಿಹರು ನಿಜಶರಣ
ಕೋಟಿಗೊಬ್ಬಿಲ್ಲ ಪೂರ್ಣಜ್ಞ.

೧೫೨೦

ಹೆಣ್ಣನ್ನು ಹೊನ್ನನ್ನು, ಮಣ್ಣನ್ನು ಮನದಲ್ಲಿ
ಮನ್ನಿಸುತ ನೆನೆದು ವಿರತನಾನೆಂಬುದದು
ಬಣ್ಣನೆಯ ಮಾತು—ಪೂರ್ಣಜ್ಞ.

೧೫೨೧

ಜನಹಿತವ ನೋಡದಲೆ, ಒಣಮಾತನಾಡಿದರೆ
ಹಣವನ್ನು ತಮ್ಮ ಸ್ವಾರ್ಥಕ್ಕೆ ಬಳಸಿದರೆ
ಜನಮೆಚ್ಚರವರ ಪೂರ್ಣಜ್ಞ.

೧೫೨೨

ಗಡ್ಡ ಬೆಳೆಸಿದ ಗತ್ತು, ಗುಡ್ಡದಂತಹ ಮಾತು
ಅಡ್ಡ ಹಾದಿಯನು ಹಿಡಿದಂಥ ಕಪಟಿಗಳ
ಎಡ್ಡು ಬಿಡಿಸಯ್ಯ ಪೂರ್ಣಜ್ಞ.

೧೫೨೩

ವೃದ್ಧತ್ವವಡಸಿದರು, ಕೃದ್ಧತ್ವ ಬಿಡದಿರುವ
ಬುದ್ಧಿಗೆಟ್ಟಿರುವ ಕುದುರುಗೇಡಿಯು ಹಳೆಯ
ಹದ್ದಿನಂತಕ್ಕು ಪೂರ್ಣಜ್ಞ.

೧೫೨೪

ಆದರ್ಶವೆಂಬುದದು, ಬೋಧಿಸಲು ಬಲು ಸುಲಭ
ಆದರ್ಶ ಶಬ್ದ ಶಬ್ದಕೋಶದ ವಸ್ತು,
ಸಾಧಿಪುದು ಕಷ್ಟ ಪೂರ್ಣಜ್ಞ.

೧೫೨೫

ಎಲ್ಲವರ ನಾಲಗೆಯು ಸೊಲ್ಲಿಪುದು "ಭಾವೈಕ್ಯ"
ಗುಲ್ಲು ಬರಿ ಗುಲ್ಲು, ಕೃತ್ರಿಮದ ಮಾಣಿಕ್ಯ
ಜೊಳ್ಳಾದ ವಾಕ್ಯ ಪೂರ್ಣಜ್ಞ.

೧೫೨೭

ದುಂದು ವೆಚ್ಚವ ಮಾಡಿ, ಅಂದಣವನೇರಿದರೆ
ನಿಂದೆ ಬೆಂಬಿಡದು, ಮೆರವಣಿಗೆ ಹಣ ನಾಡ
ಬಂಧುರತೆಗಿರಲಿ ಪೂರ್ಣಜ್ಞ.

೧೫೨೭

ಬಡತನವ ತೊಲಗಿಸದೆ ಮೃಡಧರ್ಮ ತತ್ವಗಳ
ಬಡಬಡಿಸಿ ಗಳಪಿ ಭಾಷಣವ ಮಾಡಿದರೆ
ಬಡತನವಳಿವುದೆ? ಪೂರ್ಣಜ್ಞ.

೧೫೨೮

ಶರಣ ತತ್ವದ ನೆಪದಿ, ಬರಿ ಹಣವ ಗಳಿಸಿದರೆ
ಮರುಳು ಜನರನ್ನು ವಂಚಿಸಿದರೆಂತೊಲಿವ
ಗುರುಬಸವ ನೋಡು ಪೂರ್ಣಜ್ಞ.

೧೫೨೯

ಗುರುಬಸವ ಹರ ಬಸವ, ಪರಿಯ ರೀತಿಯಲಿ
ಕರುಳಿರದೆ ಭಜಿಸಿ ವಂಚಿಸುವರನು ಬಸವ
ಸರಿಸುವನು ದೂರ ಪೂರ್ಣಜ್ಞ.

೧೫೩೦

ಜಗದ ಗುರುವೆಂಬುವರು, ಜಗದೊಳಗೆ ತುಂಬಿಹರು
ಜಗದ ಗುರುವೆನಿಸಿ ಜಗಕೆ ಬೆಳಕೀಯುವರು
ಜಗದೊಳೆಷ್ಟು ಜನ? ಪೂರ್ಣಜ್ಞ.

೧೫೩೧

ಹಣದ ಹೆಚ್ಚಳದಿಂದ, ಘನ ಜಗದ ಗುರುವೆಂದು
ಒಣ ಹೆಸರಿಗಾಗಿ ಮೆರೆಯುತಿಹ ಬಣಗುಗಳು
ಗಣನೀಯರಹರೆ? ಪೂರ್ಣಜ್ಞ.

೧೫೩೨

ಅರೆಪಂಡಿತರು ಜಗವ, ಮರುಳು ಮಾಡುತಲಿಹರು
ಅರೆಗಡಿಗೆಯಂತೆ ಬರಿ ಮಾತು ತುಳುಕಿಪರು
ಬರಿ ನಟನೆ; ನಟನೆ; ಪೂರ್ಣಜ್ಞ.

೧೫೩೩

ಹಣ ಸುಲಿಗೆ ಮಾಡಲ್ಕೆ, ಬಿನುಗು ಭಾಷಣ ಬಿಗಿದು
ಜನಮನದ ಬಣವೆಗಿಕ್ಕುವರು ಕೊಳ್ಳಿಯನು
ಜನದ್ರೋಹಿ ಖಲರು ಪೂರ್ಣಜ್ಞ.

೧೫೩೪

ಗಡ್ಡ ಬೆಳೆಸಿದರಿಲ್ಲ, ಗುಡ್ಡ ಸೇರಿದರಿಲ್ಲ
ಗೊಡ್ಡ ಗುಣ ಬಿಡದ, ಜಪತಪವ ಮಾಡಿದರೆ
ಹಡ್ಡ ನೀನನಿಪೆ ಪೂರ್ಣಜ್ಞ.

೧೫೩೫

ತ್ಯಾಗ ಮಾಡಿರಿ ಎಂದು ಕೂಗಿ ಹೇಳುತಲಿಹರು
ಭೋಗಜೀವನದಿ ಕಡಿಮೆ ತಾವೇನಿಲ್ಲ,
ಸೋಗು ನೋಡಿವರ ಪೂರ್ಣಜ್ಞ.

೧೫೩೬

ನಾಡಿನಲಿ ಸುತ್ತಿಲ್ಲ, ನೋಡಿದರೆ ನಾಟಕವು
ನಾಡ ಹಿತವಷ್ಟು? ಕೇಡಿಗಳ ಹಿತವೆಷ್ಟು?
ನೋಡಿರೈ ತೂಗಿ ಪೂರ್ಣಜ್ಞ.

೧೫೩೭

ಬುರುಕಿ ಹಾಕುವದೊಳಿತು, ಬುರುಕಿ ಹೊರವೊಳಗೊಂದು
ಎರಡು ತೆರನುಂಟು ಒಳಬುರುಕಿ ಬಲುಲೇಸು
ಹೊರಬುರುಕಿಗಿಂತ ಪೂರ್ಣಜ್ಞ.

೧೫೩೮

ಮುಸುಪ ಹಳೆಗನ್ನಡದ ರಸಸಂಪದವ ಬಿಸುಟು
ಪೊಸತು ಪೊಸತೆಂಬ ಹೆಸರಿನಲಿ ಕಸವೀವ
ಹೊಸತನವು ಸಾಕು ಪೂರ್ಣಜ್ಞ.

೧೫೩೯

ವಾದಿಸುತ ಒಣತತ್ವ, ಬೋಧಿಸಲು ಬಂತೇನು?
ಹಾದಿಯನು ಬಿಟ್ಟು ನಡೆಯುತಿಹ ಜನರಿಂಗೆ
ವೇದಾಂತವೆಂತು? ಪೂರ್ಣಜ್ಞ.

೧೫೪೦

ಬದನೆ ತಿನಬೇಡೆಂದು, ವದನದಿಂ ಬೋಧಿಸುತ
ಅದನೆ ತಿಂಬಂತೆ ಆಷಾಢಭೂತಿಗಳ
ಬದುಕು ನೋಡಯ್ಯ ಪೂರ್ಣಜ್ಞ.

೧೫೪೧

ದೊಡ್ಡ ಸ್ಥಾನಕ್ಕೆ ಬಂದು, ಅಡ್ಡ ಬಿದ್ದರೆ ತಮ್ಮ
ಗುಡ್ಡದಂಥಘವು ಪೋಪುದೆನ್ನುವ ಜನರಿ–
ಗಡ್ಡಿ ಮಾಡುಪುದೆ? ಪೂರ್ಣಜ್ಞ.

೧೫೪೨

ತಿಳಿದವರೆನಿಸಿಕೊಂಡು, ಒಳಿತಾದುದನು ಬಿಟ್ಟು
ಒಳಿತಲ್ಲದುದನು ಸಾಧಿಸುತಲಿಹರಕಟ
ಒಳಿತಿಗಿಂಬೆಲ್ಲಿ? ಪೂರ್ಣಜ್ಞ.

೧೫೪೩

ಲಗ್ನವಾದವರೆಲ್ಲ, ಸದ್ಗೃಹಸ್ಥರೆ ನಿಜದಿ?
ಲಿಂಗಕಂಠಕ್ಕೆ ಕಟ್ಟಿಕೊಂಡಾಕ್ಷಣಕೆ
ಲಿಂಗಾತ್ಮರಹರೆ! ಪೂರ್ಣಜ್ಞ.

೧೫೪೪

ಜನಜಾತ್ರೆ ಕೂಡಿಸುತ, ಹಣವದೋಚುವ ಹೂಟ
ಹಣ ಕಳೆದುಕೊಂಡ ಮುಗ್ಧಜನರಾಗುವರು
ಒಣಹುಲ್ಲಿನಂತೆ! ಪೂರ್ಣಜ್ಞ.

೧೫೪೫

ಅತಿನಕ್ಕು ನುಡಿವವನು, ಅತಿಮೋಸಗಾರನಿವ
ಮತಿಯಲ್ಲಿ ವಿಷತುಂಬಿ ಹಲ್ಕಿರಿದು ನುಡಿದು
ಧೃತಿಗೆಡಿಪನವನು ಪೂರ್ಣಜ್ಞ.

೧೫೪೬

ಗದ್ದುಗೆಯ ಪೂಜಿಪರು, ಬುದ್ಧಿಗೇಡಿಗಳೆಂದು
ಗದ್ದರಿಸುವಂಥ ಪಂಡಿತರಿಗೆತ್ತಣದು
ಮುಗ್ಧ ಭಕ್ತಿಸುಖ? ಪೂರ್ಣಜ್ಞ.

೧೫೪೭

ವ್ಯಸನವನು ಕಳೆಯದಲೆ, ಬಸವರಸ ತತ್ವವನು
ಉಸಿರಿದರೆ ಬಂತೇನು? ತಮವ ತೊರೆಯದಲೆ
ಕಸುವು ಬರುವದೇಂ? ಪೂರ್ಣಜ್ಞ.

೧೫೪೮

ಸಂಗ್ರಹವ ತೊರೆಯದಲೆ, ಸಂಗನಾ ತತ್ವಕ್ಕೆ
ಭಂಗ ತರುತಿಹರು ಶರಣರಿವರೆಂತಿಹರು?
ಢೋಂಗು ಮಾಡುವರು ಪೂರ್ಣಜ್ಞ.

೧೫೪೯

ಒಳಗೆ ಕುಟಿಲತೆ ತುಂಬಿ, ಬೆಳಕು ತೋರಿಸಿ ಹೊರಗೆ
ಮೆಲಕು ಹಾಕುತಿಹ ಈ ಜನಕೆ ಶರಣೆಂದು
ತಿಳಿಸಬಹುದೇನು? ಪೂರ್ಣಜ್ಞ.

೧೫೫೦

ಬಸವಾದಿಗಳ ವಚನ, ರಸನೆಯಲಿ ಸುರಿಸುವರು
ನಸುವಾದರೂ ನೀತಿ ಇಲ್ಲ ನಡತೆಯಲಿ
ಬಸವ, ನೋಡಿದನು ಪೂರ್ಣಜ್ಞ.

೧೫೫೧

ಕೃತಕ ಭಾಷಣ ಬಿಗಿದು, ಮತಿಗೆಡಿಸಿ ಧೃತಿಗೆಡಿಸಿ
ಕೃತಿಕೆಡಿಸಿ ಜನರ ದಿಕ್ಕು ತಪ್ಪಿಸುವರು
ಅತಿ ಬುದ್ಧಿಯುತರು ಪೂರ್ಣಜ್ಞ.

೧೫೫೨

ಜಪಮಾಲೆ ಕೈಯಲ್ಲಿ, ಕಪಟಗುಣ ಮನದಲ್ಲಿ
ಕಪನಿ ಮೈಯಲ್ಲಿ ಇಂತಿಪ್ಪವರ ಕಂಡು
ತಪಿಸುತಿದೆ ಮನವು ಪೂರ್ಣಜ್ಞ.

೧೫೫೩

ನಂಬುಗೆಯು ನಡೆನುಡಿಗೆ, ಇಂಬುಂಟೆ ಈ ಜಗದಿ?
ಶಂಭು ಶಂಕರನೆ ಡಾಂಭಿಕರ ಡವಿಗೆಯಲಿ
ತುಂಬು ಸನ್ಮತಿಯ ಪೂರ್ಣಜ್ಞ.

೧೫೫೪

ಅತಿವಿನಯದತಿನಟನೆ, ಮಿತಿಮೀರಿದುಪಚಾರ
ಕೃತಕತೆಯ ಕೆಸರು ತುಂಬಿರುವ ಹೊಸ ಭಾಂಡ,
ಅತಿವರ್ಜ್ಯವಯ್ಯ ಪೂರ್ಣಜ್ಞ.

೧೫೫೫

ಬಲುಭಕ್ತಿ ನಟಿಸುತ್ತ, ಒಳಗೆ ವಿಷಬಿತ್ತುವರು
ಕಲಹಕಂಟಕರು ಜಗದಲ್ಲಿ ತುಂಬಿಹರು
ಬಲು ಜೋಕೆ ನೀನು ಪೂರ್ಣಜ್ಞ.

೧೫೫೬

ನುಡಿಯೊಂದು ಪರಿಯಾಗಿ, ನಡೆಯೊಂದು ಪರಿಯಾಗಿ
ಕೊಡಹಾಲಿನೊಳಗೆ ವಿಷಬೆರೆಸುವಂತವರ
ಒಡನಾಡಬೇಡ ಪೂರ್ಣಜ್ಞ.

೧೫೫೭

ಉಪದೇಶಗೈಯುವವ, ಅಪಕಾರ ಮಾಡಿದರೆ
ಉಪದೇಶದಂತೆ ನಡೆಯದಿರೆ ಬದುಕವನ
ಕಪಿಯಂತೆ ನೋಡು ಪೂರ್ಣಜ್ಞ.

೧೫೫೮

ಕಾವಿತೊಟ್ಟವರೆಲ್ಲ, ದೇವರನು ಕಾಣುವರೆ?
ಭಾವಶುದ್ಧಿಯಲಿ ಧರ್ಮದಿಂ ನಡೆವರಿಗೆ
ದೇವ ತಾನೊಲಿವ ಪೂರ್ಣಜ್ಞ.

೧೫೫೯

ಲೇಸಿಗರ ವೇಷದಲಿ, ಶೋಷಕರು ಬರುತಿಹರು
ಘಾಸಿ ಮಾಡುವರು ಅಸಹಾಯಕರ ಸುಲಿದು
ದೇಶ ಘಾತುಕರು ಪೂರ್ಣಜ್ಞ.

೧೫೬೦

ಒಬ್ಬ ಒಂದೆಂದರಿ-ನ್ನೊಬ್ಬ ಮತ್ತೊಂದೆಂಬ
ಇಬ್ಬಗೆಯ ಮಾತು ಕೇಳಿ ಶ್ರೀಸಾಮಾನ್ಯ
ಮಬ್ಬಾಗಿಬಿಡುವ ಪೂರ್ಣಜ್ಞ.

೧೫೬೧

ದೇಶಾಭಿಮಾನವನು, ಘೋಷಿಪರು ಮಾತಿನಲಿ
ದ್ವೇಷಾಗ್ನಿಹೋತ್ರಿ ಕುಲದವರು ಇವರೆಂತು
ದೇಶ ರಕ್ಷಿಪರು? ಪೂರ್ಣಜ್ಞ.

೧೫೬೨

ಗಾಂಧಿತತ್ವವ ಹೇಳಿ, ಹಂದಿ ಕೃತಿ ಗೈಯುವರು
ಮಂದ ಮತಿಗಳನು ಮೋಸದಿಂದೊಗೆಯುವರು
ಕಂದಕದ ತಳಕೆ ಪೂರ್ಣಜ್ಞ.

೧೫೬೩

ಹಣದ ಸಂಗ್ರಹ ಮಾಡಿ, ಗುಣಗಳನು ಬದಿಗಿರಿಸಿ
ಮಣದಷ್ಟು ಬರಿತತ್ವವುಸುರಿದರೆ ದೇಶ
ಒಣಗುವದು ನೋಡು ಪೂರ್ಣಜ್ಞ.

೧೫೬೪

ಮೇಲು ಕೀಳೆಂಬುದಕೆ ಶೀಲವೇ ಒರೆಗಲ್ಲು
ಹೇಳುವದು ಶಾಸ್ತ್ರ ಮುಳಗಾಯಿ ತಿನ್ನುವದು
ಮೇಲೆನಿಸಬಹುದೆ? ಪೂರ್ಣಜ್ಞ.

೧೫೬೫

ಕಂಡಕಂಡಲ್ಲೆಲ್ಲ, ಉಂಡಾಡಿ ಗುಂಡರೊಲು
ಅಂಡಲೆಯುವವರು ಗುರುಗಳೇ, ಅವರು ಜಗ
ಭಂಡರೆನಿಸುವರು ಪೂರ್ಣಜ್ಞ.

೧೫೬೬

ಲಿಂಗಕಟ್ಟಿದ ಕ್ಷಣಕೆ, ಲಿಂಗವಂತಿಕೆಬಹುದೆ?
ಜಂಗು ಕಟ್ಟಿದೊಡೆ ಜಂಗಮತೆ ಲಭಿಸುವದೆ?
ಮಂಗತನ ಬಿಡದೆ ಪೂರ್ಣಜ್ಞ.

೧೫೬೭

ನಂಬುಗೆಯು ನಡೆನುಡಿಗೆ, ಇಂಬುಂಟೆ ಈ ಜಗದಿ?
ಶಂಭು ಶಂಕರನೆ ಡಾಂಭಿಕರಡವಿಯುಲಿ
ತುಂಬು ಸನ್ಮತಿಯ ಪೂರ್ಣಜ್ಞ.

೧೫೭೮
ಜಾತಿಗಾರರ ತೆರದಿ, ನೀತಿ ತತ್ವವ ಬೊಗಳಿ
ನೀತಿಯನು ಬಿಟ್ಟು ನಡೆವ ಮೋಸದ ನರರು
ಯಾತಕ್ಕೂ ಬೇಡ ಪೂರ್ಣಜ್ಞ.

೧೫೭೯
ಇರುತಿಹುದು ಕೈಯುಗಲ, ಹರಸುವನು ಕಡಲಗಲ
ಬರಿ ಮೋಸ ಮಾಡುತ್ತ ಕಾಲವನು ಕಳೆದು
ಕೊರಗಿಪನು ಜನರ ಪೂರ್ಣಜ್ಞ.

೧೫೮೦
ಮಡಿಮೈಲಿಗೆಗಳೆಂದು, ಎಡಬಿಡದೆ ಒಡಬಡಿಸಿ
ಒಡಲೊಳಗೆ ಕೆಟ್ಟ ಗುಣಗಳನು ಬೆಳೆಸಿರುವ
ಕಡುದುಷ್ಟರುಂಟು ಪೂರ್ಣಜ್ಞ.

೧೫೮೧
ಭೋಗ ಕರ್ದಮದಲ್ಲಿ ಏಗಳುಂ ಮುಳುಗುವರು
ತ್ಯಾಗಿಗಳು ತಾವೆಂದು ಮೆರೆಯುತ್ತಲಿಹರು
ಸೋಗಿಗಳು ಇವರು! ಪೂರ್ಣಜ್ಞ.

೧೫೮೨
ಕರುಣಗಳ ಜಯಿಸದಲೆ, ಶರಣರೆನಿಸುತಲಿಹರು
ಮರೆಮೋಸ ಕಾಪಟ್ಯ ನಾಟ್ಯ ಪ್ರವೀಣ
ಶರಣರನು ತೊರೆಯೊ ಪೂರ್ಣಜ್ಞ.

೧೫೮೩
ಮೆತ್ತನ್ನ ಮಾತುಗಳು! ಕುತ್ತಿಗೆಗೆ ಕುಡುಗೋಲು
ಸತ್ಯವಂತಿಕೆಯು ಸೋಗು! ಮಿಥ್ಯಾಚರಣೆ
ಸುತ್ತುಮುತ್ತಿಹವು, ಪೂರ್ಣಜ್ಞ.

೧೫೮೪
ಒಳಗೆ ಕುಟಿಲತೆ ಹೊರಗೆ, ಬಲುಹಿತದ ಮಾತುಗಳು
ಖಲಬುದ್ಧಿಯವರು ಜನಜೀವನದಿ ವಿಷದ
ಹುಳ ಬಿತ್ತುತಿಹರು ಪೂರ್ಣಜ್ಞ.

೧೫೭೫

ವೈದಿಕರು ತಾವೆಂದು, ವೇದದರ್ಥದ ಸಾರ
ವೇದ್ಯ ಮಾಡದಲೆ ಹಣಗಳಿಸುವವರಿಂಗೆ
ಬುದ್ಧಿ ಹೇಳುತಿರು ಪೂರ್ಣಜ್ಞ.

೧೫೭೬

ಭಕ್ತಿಯಿಲ್ಲದೆ ಗುಡಿಗೆ, ಯುಕ್ತಿಯಿಂ ಕೈಮುಗಿದು
ಮುಕ್ತಿ ಕೊಡು ಎಂದು ಬರಿನಟನೆ ಮಾಳ್ಪವಗೆ
ಮುಕ್ತಿ ಎತ್ತಣದು? ಪೂರ್ಣಜ್ಞ.

೧೫೭೭

ಹೊರ ಸಂಘಟನೆ ತೋರಿ, ಅರಿದು ಮೋಸವ ಮಾಡಿ
ಜರಿಯುತ್ತ ಒಳಗೊಳಗೆ ಕಲಕು ಮಾಡುತಿಹ
ದುರುಳರನು ತಳ್ಳು ಪೂರ್ಣಜ್ಞ.

## ಶಿಕ್ಷಣ

೧೫೭೮

ವಿದ್ಯಾಪ್ರಸೂನಕ್ಕೆ, ಸದ್ವಿನಯು ಸೌಗಂಧ
ಸದ್ವಿನಯುವಿರಹಿತ ವಿದ್ಯೆಯದು ಹೇಸರದ
ಲದ್ದಿಯಂತಕ್ಕು ಪೂರ್ಣಜ್ಞ.

೧೫೭೯

ಮೆಲ್ಲ ಮೆಲ್ಲನೆ ವಿದ್ಯೆ, ಮೆಲ್ಲ ಮೆಲ್ಲನೆ ಹೊಲಿಗೆ
ಮೆಲ್ಲನಾ ಪಥವು ಸಾಗಿದರೆ ಕಲಿವವಗೆ
ಸಲ್ಲಲಿತ ಪ್ರಗತಿ ಪೂರ್ಣಜ್ಞ.

೧೫೮೦

ರಸವು ಮನಕಿಳಿವಂತೆ, ಒಸೆದೋದು ಪುಸ್ತಕದ
ಆಸವದ[೧] ಓದು ಮಸ್ತಕಕ್ಕೆ ಕಸಕಡ್ಡಿ
ಆಸುವದರೊಳಿಲ್ಲ ಪೂರ್ಣಜ್ಞ.

---

೧. ಆಸವರದ=ಅಂದರೆ, ಅವಸರದ.

೧೫೮೧

ಸದ್ಗುಣದ ಹಂದರಕೆ, ವಿದ್ಯಾಲತೆಯು ಹಬ್ಬಿ
ಸುಜ್ಞಾನ ಪುಷ್ಪ ಸತ್ಕಾರ್ಯ ಫಲ ತಳೆದು
ವರ್ಧಿಸಲು ಸುಖವು ಪೂರ್ಣಜ್ಞ.

೧೫೮೨

ವಿದ್ಯಾರ್ಥಿಯಾದವಗೆ ಶುದ್ಧ ಬುದ್ಧಿಯು ಬೇಕು
ನಿದ್ದೆಯಾಲಸ್ಯ ದುಶ್ಚಟಂಗಳನೆಲ್ಲ
ಒದ್ದು ಬಿಡಬೇಕು ಪೂರ್ಣಜ್ಞ.

೧೫೮೩

ಉದಯಕಾಲದೊಳೆದ್ದು, ಸದುಭಕ್ತಿ ಭಾವದಿಂ
ಸದುಗುರುವ ನೆನೆದು ಓಸೋದೋದುವವರಿಗ-
ಭ್ಯುದಯ ಜಗದಲ್ಲಿ ಪೂರ್ಣಜ್ಞ.

೧೫೮೪

ಸದ್ವಿದ್ಯೆ ಸುವಿಚಾರ, ಸದ್ವಿನಯ ಸುವಿವೇಕ
ಸದ್ಭಕ್ತಿ ಭಾವ ಬೆಳೆಸಿಕೊಂಡವ ಶ್ರೇಷ್ಠ
ವಿದ್ಯಾರ್ಥಿ ಜಗದಿ ಪೂರ್ಣಜ್ಞ.

೧೫೮೫

ತಾವರೆಗೆ ದುಂಬಿಗಳು ಆವರಿಸಿ ಮಕರಂದ
ಸೇವಿಸುವ ಹಾಗೆ ವಿದ್ಯಾರ್ಥಿ ಗ್ರಂಥರಸ
ಸೇವಿಸಲಿ ಮುದದಿ ಪೂರ್ಣಜ್ಞ.

೧೫೮೬

ಪದವಿ ಪಡೆದಿಹ ಕೆಲರು, ಸದುಗುಣಂಗಳ ತೊರೆದು
ಮದಮತ್ತರಾಗಿ ನಡೆಯುತ್ತಲಿಹರವರ
ಹೃದಯ ಕಗ್ಗವಿಯು ಪೂರ್ಣಜ್ಞ.

೧೫೮೭

ಅಧ್ಯಯನ ಮಾಳ್ಪವನ, ಬುದ್ಧಿ ಸಂವರ್ಧಿಪುದು
ಶುದ್ಧಕಾರ್ಯಕ್ಕೆ ಪ್ರೇರಣೆಯು ಸ್ಫುರಿಸುವದು
ಅಧ್ಯಯನ ಮಾಡು ಪೂರ್ಣಜ್ಞ.

೧೩೮೮

ಈ ವಿಶ್ವ ಶರಧಿಯೊಳು, ಜೀವನದ ಭೈತ್ರವನು
ಸಾವಿಗಂಜದಲೆ ಧೈರ್ಯದಿಂ ನಡೆಯಿಸುವ
ಮಾ ವಿದ್ಯೆ ಬೇಕು ಪೂರ್ಣಜ್ಞ.

೧೩೮೯

ಶಿಕ್ಷಣಾರ್ಥಿಗೆ ಶ್ರೇಷ್ಠ ಶಿಕ್ಷಕರು ಗ್ರಂಥಗಳು,
ಸೂಕ್ತಿ ಶಕ್ತಿಯನೀವ ಗ್ರಂಥಾಲಯದಲಿ
ಲಕ್ಷ್ಯವಿಟ್ಟೋದು ಪೂರ್ಣಜ್ಞ.

೧೩೯೦

ಗ್ರಂಥಪಾಲಕರು ತಾವು, ಗ್ರಂಥ ಭಂಡಾರವನು
ಸ್ವಂತಾಸ್ತಿಯಂತೆ ರಕ್ಷಿಸುತ ವಾಚಕಗೆ
ಪ್ರೋತ್ಸಾಹ ಕೊಡಲಿ ಪೂರ್ಣಜ್ಞ.

೧೩೯೧

ಶಿಕ್ಷಕರೆ ಮೊದಲು ನಿಜ, ಶಿಕ್ಷಣ ಪಡೆಯಲುಬೇಕು
ಅಕ್ಷರಾಂತಕರೆ ಶಿಕ್ಷಣ ಕ್ಷೇತ್ರದಲಿ
ಕಿಕ್ಕಿರಿಯುತಿಹರು ಪೂರ್ಣಜ್ಞ.

೧೩೯೨

ಶಿಕ್ಷಣದ ಸಂಸ್ಥೆಗಳು, ಶಿಕ್ಷಣವ ಬಲಿಗೊಟ್ಟು
ಕುಕ್ಷಿ ವ್ಯಾಪಾರ ಕೇಂದ್ರಂಗಳಾಗುತಿವೆ
ರಕ್ಷಿಸುವರಾರು? ಪೂರ್ಣಜ್ಞ.

೧೩೯೩

ಅಕ್ಷರಸ್ಥರ ಕಲಹ, ಭಿಕ್ಷುಕರಿಗಿಂ ಕೀಳು
ಶಿಕ್ಷಣದ ನೀತಿ ತ್ಯಜಿಸಿ ಸಾಕ್ಷರರಿಂದು
ರಾಕ್ಷಸರೊಲಿಹರು ಪೂರ್ಣಜ್ಞ.

೧೩೯೪

ಗುರು–ಶಿಷ್ಯ ಸಂಬಂಧ, ಹರಿದು ಹೋಗಿಹುದಿಂದು
ದುರುನಡತೆ ಸೂತ್ರ ಶಿಕ್ಷಣದ ಕುಣಿತಕ್ಕೆ
ಹರತಾಳತಾಳ ಪೂರ್ಣಜ್ಞ.

೧೩೫೫

ನುಡಿಯೆಂಬುದೇ ಮಿಡಿಯು, ನಡೆಯೆಂಬುದೆ ಹಣ್ಣು
ನಡೆಯಿರದ ನುಡಿಯು ಫಲವೀಯದಿಹ ಬಂಜೆ
ಗಿಡವು ಇದ್ದಂತೆ ಪೂರ್ಣಜ್ಞ.

೧೩೯೬

ವಿದ್ಯೆ ಕಲಿತರೆ ಬುದ್ಧಿ, ವಿದ್ಯೆ ಕಲಿತರೆ ವೃದ್ಧಿ
ವಿದ್ಯೆ ದೀಪ್ತಿಮಯು ವಿದ್ಯೆ ವಿನಯದ ತಾಯಿ
ವಿದ್ಯೆ ಸುಖದಾಯಿ ಪೂರ್ಣಜ್ಞ.

೧೩೯೭

ನೋಡುತ್ತ ತಿಳಿನೀನು, ಮಾಡುತ್ತ ಕಲಿನೀನು
ಕೀಡುತ್ತ ಜ್ಞಾನಪಡೆ ನೀನು ನೀಡುತ್ತ
ಕೊಡುವ ದೊರೆಯಾಗು ಪೂರ್ಣಜ್ಞ.

## ಸಂಗೀತ

೧೩೯೮

ಗಾನ ವಿದ್ಯೆಯು ಮುಂದೆ, ಇನ್ನಾವ ವಿದ್ಯೆಗಳು
ಧ್ಯಾನದಿಂ ತನ್ಮಯನು ಆಗಿ ಪಾಡಿದರೆ
ತಾನೆ ಶಿವನವನು ಪೂರ್ಣಜ್ಞ.

೧೩೯೯

ಮಾನವನ ಮಾನಸಕೆ, ಆನಂದವೀಯುತ್ತ
ಮಾನಸಿಕ ವ್ಯಥೆಯು ದೂರ ಮಾಡುವ ಶಕ್ತಿ
ಗಾನ ಕಲೆಗಿಹುದು ಪೂರ್ಣಜ್ಞ.

೧೬೦೦

ಗಾನಯೋಗಿಯು ತಾನು, ಆನಂದ ಪಡೆಯುವನು
ಆನಂದ ನೀಡಿ ಜಗವನ್ನು ತಣಿಸುವನು
ಗಾನರಸ ಅಮೃತ ಪೂರ್ಣಜ್ಞ.

೧೬೦೧

ಸ್ವರ–ರಾಗ–ಲಯಭಾವ, ವರಶೃತಿ ಮಿಲಿತವಾದ
ವರಭಕ್ತಿ ಸ್ಫುರಿತ ಗೀತ ನಿಜ ಸಂಗೀತ
ಪರನಿಗಿದು ಪ್ರೀತ ಪೂರ್ಣಜ್ಞ.

೧೬೦೨

ಓಂ ನಾದದಲಿ ವಿಶ್ವ, ತಾನುದಯವಾಗಿಹುದು
ಪ್ರಾಣಿಕೋಟಿಗಳು ಗಾನದಾನಂದದಲಿ
ಲೀನವಾಗುವವು ಪೂರ್ಣಜ್ಞ.

೧೬೦೩

ನಾದ ಮಾಧುರ್ಯವದು, ಮೇದಿನಿಗೆ ಸುಖನೀಡಿ
ಆಧ್ಯಾತ್ಮ ಶಕ್ತಿ ತಾನಾಗಿ ಬೆಳೆಯುವದು
ನಾದಶೀಲರಿಗೆ ಪೂರ್ಣಜ್ಞ.

೧೬೦೪

ರಾಗ ಸಾಗರದಲ್ಲಿ, ಬೇಗ ಮುಳುಗಿದ ಮನುಜ
ಭೋಗ ಸುಖ ತೊರೆದು ನಾದಯೋಗದಲಿದ್ದು
ಯೋಗಿಯಾಗುವನು ಪೂರ್ಣಜ್ಞ.

೧೬೦೫

ರಸಭರಿತ ಸಂಗೀತ, ರಸ ಸುಖವನೀಯುವದು
ವ್ಯಸನವನು ಕಳೆದು ತೇಲಿಸುವದಾತ್ಮವನು
ರಸರಾಗದಲ್ಲಿ ಪೂರ್ಣಜ್ಞ.

೧೬೦೬

ಲಲಿತ ಕಲೆಗಳ ರಾಜ್ಯ, ದೊಳೆ ಮಿಗಿಲು "ಸಂಗೀತ"
ಸಲೆ ಸಾಧನೆಯಲಿ ಪಳಗಿರುವ ಗಾಯಕನು
ನಲಿಸುವನು ಜಗವ ಪೂರ್ಣಜ್ಞ.

೧೬೦೭

ರಾಗದರಸಾಲದಲಿ, ಕೂಗುತಿದೆ ಕೋಗಿಲೆಯು
ಬೇಗನೇ ಬನ್ನಿ ಗಾನರಸ ಭೋಜನಕೆ
ಹೋಗೋಣ ಬನ್ನಿ ಪೂರ್ಣಜ್ಞ.

## ವಿಜ್ಞಾನ

೧೬೦೮

ಯಂತ್ರದಬ್ಬರದಲ್ಲಿ, ಮಂತ್ರ ಕೇಳಿಸದೊಲು ಕು
ತಂತ್ರ ಹೂಡಿಹುದು ವಿಜ್ಞಾನ ಬಾಳು ಷ
ಡ್ಯಂತ್ರ ವಾಹಿಹುದು ಪೂರ್ಣಜ್ಞ.

೧೬೦೯

ಮಂತ್ರಯುಗ ಮನುಜನ ಸ್ವ-ತಂತ್ರತೆಯ ನುಂಗುತಿದೆ
ಭ್ರಾಂತಿಯೇ ಭ್ರಾಂತಿ, ಎಲ್ಲಿ ನೋಡಿದಡಲ್ಲಿ
ಧ್ವಾಂತ ತಾಂಡವವು ಪೂರ್ಣಜ್ಞ.

೧೬೧೦

ವಿಜ್ಞಾನ ಶಕ್ತಿಯುದರ, ಜ್ಞಾನಿಗಳ ಆಳಾಗಿ
ಅಜ್ಞ ಜನತೆಯನು ಸುಲಿಗೆ ಮಾಳ್ಪುದ ಕಂಡು
ಪ್ರಾಜ್ಞರಳುತಿಹರು ಪೂರ್ಣಜ್ಞ.

೧೬೧೧

ವಿಜ್ಞಾನ ತಂತ್ರವದು, ಅಜ್ಞಾನದಿಂ ನಡೆದು
ಸುಜ್ಞಾನ ಮರೆತು ಆಯುಮಾತ್ಮಾ ಬ್ರಹ್ಮ
ಪ್ರಜ್ಞೆ ತೊಲಗಿಹುದು ಪೂರ್ಣಜ್ಞ.

೧೬೧೨

ವಿಜ್ಞಾನ ಬೆಳೆದಂತೆ ಸುಜ್ಞಾನ ಬೆಳೆದಿಲ್ಲ
ವಿಜ್ಞಾನ ಸುಜ್ಞಾನ ಮಿಲನದೊಳೆ ಜಗದ
ಉಜ್ವಲ ಭವಿಷ್ಯ ಪೂರ್ಣಜ್ಞ.

೧೬೧೩

ಆಧುನಿಕ ಅಣ್ವಸ್ತ್ರ, ಮೇದಿನಿಯ ತುತ್ತಲಿದೆ
ಸಾಧು ಗುಣ ಬೆಳೆಯದಿರೆ ವಿಜ್ಞಾನದೊಡನೆ
ಮೇದಿನಿಗೆ ಪ್ರಳಯ ಪೂರ್ಣಜ್ಞ.

# ರಾಜಕೀಯ_ರಾಷ್ಟ್ರೀಯ ಪ್ರಜ್ಞೆ

೧೬೧೪

ರಾಜಕೀಯದಿ ಧರ್ಮ ಓಜೆಯಿಂ ಕೂಡಿದರೆ
ರಾಜಕೀಯವದು ಧರ್ಮದೊಳು ಸೇರದಿರೆ
ರಾಜ್ಯಕ್ಕೆ ಹಿತವು ಪೂರ್ಣಜ್ಞ.

೧೬೧೫

ರಾಷ್ಟ್ರಹಿತ ಬಯಸುವೊಡೆ ನಿಷ್ಠರಾಗಿರಬೇಕು
ಕಷ್ಟ ಸಹಿಸುತ್ತ ಮೈಮುರಿದು ದುಡಿವವರೆ
ರಾಷ್ಟ್ರಕಟ್ಟುವರು ಪೂರ್ಣಜ್ಞ.

೧೬೧೬

ಶಾಸಕರು ದೇಶಕ್ಕೆ, ಲೇಸುಗೈಯಲು ಬೇಕು
ಶೋಷಣೆಯ ಬಿಟ್ಟು, ಜನಹಿತದ ಮಣೆಹಕ್ಕೆ
ಮೀಸಲಿರಬೇಕು ಪೂರ್ಣಜ್ಞ.

೧೬೧೭

ಕೆಲಜನರು ನುಡಿಯುವರು ಬಲವಿಹುದು ಸ್ವಾಮಿಗಳ
ತಿಳಿಯದೆಲೆ ಬಿ.ಜೆ.ಪಿ., ಕಾಂಗ್ರೆ, ಜನತಾ ಎಂದು
ಎಲ್ಲ ಬರಿಜೊಳ್ಳು ಪೂರ್ಣಜ್ಞ.

೧೬೧೮

ನಮ್ಮ ಬೀಜೇಪೀಗೆ, ನಮ್ಮ ಕಾಂಗ್ರೆಸ್ಸಾಯ್ಗೆ
ನಮ್ಮ ಜನತಾಕ್ಕೆ ಸ್ವಾಮಿ ಕೃಪೆಯೆನ್ನುವರು
ತಮ್ಮೊಳಗೆ ತಾವೆ, ಪೂರ್ಣಜ್ಞ.

೧೬೧೯

ಎಲ್ಲ ಪಕ್ಷಗಳೆಮಗೆ, ಸಲ್ಲಲಿತವೆನಿಸುತಿವೆ
ಎಲ್ಲವುಗಳಲ್ಲಿ ಒಳ್ಳೆ ಅಂಶಗಳುಂಟು
ಎಲ್ಲರಂತಿರಲಿ ಪೂರ್ಣಜ್ಞ.

೧೬೨೦

ಎಮಗೇಕೆ ಪಕ್ಷಗಳು? ಎಮಗೇಕೆ ಒಳತೋಟಿ
ಎಮಗಿರಲಿ ದೇಶಭಕ್ತಿ ರಸ ಸಾಮ್ರಾಜ್ಯ
ಎಮಗಿದುವೆ ಪ್ರಾಜ್ಯ ಪೂರ್ಣಜ್ಞ.

೧೬೨೧

ರಾಜ್ಯ ಸೂತ್ರವ ಹಿಡಿದು, ರಾಜ್ಯವಾಳುವ ಮಂತ್ರಿ
ರಾಜ್ಯ ಪ್ರಜೆಗಳ ಹಿತವಮಾಡದಿದ್ದರವ
ರಾಜ್ಯಕ್ಕೆ ದ್ರೋಹಿ ಪೂರ್ಣಜ್ಞ.

೧೬೨೨

ರಾಜ್ಯ ಬೆಳೆಯಲು ಬೇಕು, ಪ್ರಜರು ಬೆಳಗಲು ಬೇಕು
ರಾಜ್ಯದಾ ಸಚಿವ ನಿಸ್ವಾರ್ಥಿಯಾಗಿರಲು
ರಾಜ್ಯಕ್ಕೆ ಸುಖವು ಪೂರ್ಣಜ್ಞ.

೧೬೨೩

ಹಣದ ಆಮಿಷ ತೋರಿ, ಗುಣವ ಗಾಳಿಗೆ ತೂರಿ
ಜನತಂತ್ರಕುಳಿವೆಲ್ಲಿ? ಆರಿಸಿದರಿಂತು
ಜನರೊಲಿಮೆಯಲ್ಲಿ ಪೂರ್ಣಜ್ಞ.

೧೬೨೪

ಎಲ್ಲ ಪಕ್ಷಗಳಲ್ಲಿ, ಕ್ಷುಲ್ಲಕರು ತುಂಬಿಹರು
ಹುಲ್ಲ ಮೆದೆಯಲ್ಲಿ ಹುಟ್ಟುವವು ಕಸಬರಿಗೆ
ಒಳ್ಳೆಯವರೆಷ್ಟು? ಪೂರ್ಣಜ್ಞ.

೧೬೨೫

ಎಲ್ಲ ಪಕ್ಷಗಳಲ್ಲಿ, ಖುಲ್ಲ ಸ್ವಾರ್ಥಿಗಳುಂಟು
ಎಲ್ಲವರು ರಾಷ್ಟ್ರಭಕ್ತಿಯಿಂ ದುಡಿದಲ್ಲಿ
ಎಲ್ಲರಿಗು ಹಿತವು ಪೂರ್ಣಜ್ಞ.

೧೬೨೬

ಅಧಿಕಾರವಿರುವಾಗ, ಸದುಪಯೋಗಿಸಿ ಜನರ
ಹೃದಯ ಗೆದ್ದವನು ಮುಂಬರುವ ಆಯ್ಕೆಯಲಿ
ಮುದದಿ ಗೆಲ್ಲುವನು ಪೂರ್ಣಜ್ಞ.

೧೬೨೭

ಒಳಜಗಳದಿರುಕಿನಲಿ, ತೊಳಲಾಡುತಿದೆ ರಾಜ್ಯ
ಒಳಜಗಳದಿಂದ ಸುಖವಿಲ್ಲ ಸಕಲರಿಗು
ತಿಳುವಳಿಕೆ ಬರಲಿ ಪೂರ್ಣಜ್ಞ.

೧೬೨೮

ಪಕ್ಷಗಳ ಬಡಿದಾಟ, ಭಕ್ಷಿಪುದು ನೆಮ್ಮದಿಯು
ದಕ್ಷತೆಯ ದಹಿಸಿ ಕ್ಷೀಣಿಪುದು ಪ್ರಗತಿಯನು
ಪಕ್ಷಗಳನಳಿಸು ಪೂರ್ಣಜ್ಞ.

೧೬೨೯

ಬೇಲಿಯುದು ಹೊಲವನ್ನು, ಪಾಲಿಸದೆ ಮೇಯ್ದಂತೆ
ಕೇಳುವರೆ ಇಲ್ಲ ಕಾಯ್ವವರೆ ಕೊಲುತಿಹರು
ಕಾಲವೆಂತಹದೊ ಪೂರ್ಣಜ್ಞ.

೧೬೩೦

ಓಟುಗಳ ಹುಚ್ಚಾಟ, ನೋಟುಗಳ ಚೆಲ್ಲಾಟ
ಬೂಟಕದ ರಾಜಕೀಯವಿದು ಸ್ವಾರ್ಥಿಗಳ
ಹೂಟ ಕಾಣಯ್ಯ ಪೂರ್ಣಜ್ಞ.

೧೬೩೧

ಹೇಸಿ ಮತದಾರರಿಗೆ, ಕಾಸನ್ನು ನೀಡುತ್ತ
ದೇಶವನು ಆಳುವನು ಪ್ರಜೆಗಳನು ಸುಲಿದು
ದೇಶಘಾತುಕನು ಪೂರ್ಣಜ್ಞ.

೧೬೩೨

ರಾಜಕಾರಣವಿಂದು, ಮೋಜು ಮೋಜಾಗಿಹುದು
ರಾಜ್ಯ ಬೆಳೆಸುವದು ಬಿಟ್ಟು ಶಾಸಕರೆಲ್ಲ
ವ್ಯಾಜ್ಯ ಬೆಳೆಸಿಪರು ಪೂರ್ಣಜ್ಞ.

೧೬೩೩

ರಾಜಕಾರಣದಲ್ಲಿ ಸೌಜನ್ಯ ನಶಿಸಿಹುದು
ರಾಜಕಾರಣಿಗಳಿಂಗಿಲ್ಲ ಅಭಿಮಾನ
ಸೋಜಿಗವು ನೋಡು ಪೂರ್ಣಜ್ಞ.

೧೬೩೪

ಧರ್ಮವೇಷವ ತೊಟ್ಟು, ಕರ್ಮಜೀವನ ಬಿಟ್ಟು
ಧುರ್ಮಾರ್ಗಿಯಾಗಿಹರು ಜಗವ ತುಂಬಿಹರು
ಧರ್ಮವೆಲ್ಲಿಹುದು? ಪೂರ್ಣಜ್ಞ.

೧೬೩೫

ಕ್ಷುದ್ರ ಕಾರಣದಿಂದ, ಕ್ರುದ್ಧರಾಗುತ ಘೋರ
ಯುದ್ಧಕಣಕಿಳಿವ ಹುಂಬರಿಗೆ ಬುಧಜನರು
ಬುದ್ಧಿ ಪೇಳುವರು ಪೂರ್ಣಜ್ಞ.

೧೬೩೬

ಜ್ಯಾತ್ಯತೀತರು ಎಂದು, ಮಾತಿನಲಿ ಬಲು ಪೇಳಿ
ಜೋತು ಬಿದ್ದಿಹರು ಜಾತ್ಯಂಧರಾಗುತ್ತ
ನೀತಿತಾ ಬಿಟ್ಟು ಪೂರ್ಣಜ್ಞ.

೧೬೩೭

ಜಾತ್ಯತೀತತೆಯೆಂಬ, ಮಾತು ಬರಿ ಮಾತಿನಲಿ
ಜಾತೀಯತೆಯದು ನೀತ್ಯತೀತತೆಯೊಡನೆ
ನೃತ್ಯವಾಡುತಿದೆ ಪೂರ್ಣಜ್ಞ.

೧೬೩೮

ಮಾನವತೆ ಮಾತಿನಲ್ಲಿ, ದಾನವತೆ ನಡತೆಯಲಿ
ಹೀನ ದೌರ್ಜನ್ಯ ತಾಂಡವಿಸುತಿಹುದೀಗ
ಕ್ಷೋಣಿರಂಗದಲಿ ಪೂರ್ಣಜ್ಞ.

೧೬೩೯

ಪಕ್ಷ ಪಂಗಡ ಕಟ್ಟಿ, ದಕ್ಷರನು ಹೊರಗಟ್ಟಿ
ಸೊಕ್ಕಿ ಮೆರೆಯುವರು ದುಃಸ್ವಾರ್ಥ ಸಾಧಕ ವಿ
ಚಕ್ಷಣರು ಜಗದಿ ಪೂರ್ಣಜ್ಞ.

೧೬೪೦

ಬೆಳೆಯುವೆಳೆಯುರಮನದಿ ಒಳಿತನ್ನೆ ಬಿತ್ತಿದರೆ
ಹೊಳೆವರವಿಯಂತೆ ನಮ್ಮ ದೇಶ ಭವಿಷ್ಯ
ಹೊಳೆಯುವದು ಸತ್ಯ ಪೂರ್ಣಜ್ಞ.

೧೬೪೧

ದೇಶವದು ಬೆಳೆಯಲ್ಕೆ, ಆಶೆಯನು ಬಿಡಬೇಕು
ಭಾಷೆಕೊಟ್ಟಂತೆ ನಿಷ್ಠೆಯಲಿ ದುಡಿಯುತಿರೆ
ದೇಶಕ್ಕೆ ಸುಖವು ಪೂರ್ಣಜ್ಞ.

೧೬೪೨

ಭಾಷೆಯನು ಕೊಟ್ಟಂತೆ ಶಾಸಕರು ನಡೆದಿಹರೆ?
ಶಾಸಕರೊ ಜೊಳ್ಳು ಘೋಷಕರೊ ಎಂಬುದಕೆ
ದೇಶ–ಸ್ಥಿತಿ ಸಾಕ್ಷಿ ಪೂರ್ಣಜ್ಞ.

೧೬೪೩

ಮಂಡಲಾಯೋಗವದು, ಬಂಡಾಯವೆಬ್ಬಿಸಿದೆ
ಕಂಡಕಂಡಲ್ಲಿ ಹರತಾಳ ಬೇತಾಳ
ತಾಂಡವಸುತಿಹುದು ಪೂರ್ಣಜ್ಞ.

೧೬೪೪

ಜಾತಿದ್ವೇಷ ಜ್ವಾಲೆ, ನೀತಿಯನು ದಹಿಸುತಿದೆ
ಜಾತಿಜಾತಿಗಳ ಜಗಳದಿಂ ದೇಶಕ್ಕೆ
ಘಾತವಾಗುತಿದೆ ಪೂರ್ಣಜ್ಞ.

೧೬೪೫

ರಾಜಕೀಯಾಟದಲಿ, ರಾಜ್ಯಕ್ಕೆ ದ್ರೋಹವನು
ಯೋಜಿಪನು ಸ್ವಾರ್ಥ ಸಾಧಕನು ಘನಪಾಪ
ಭಾಜನನು ಅವನು ಪೂರ್ಣಜ್ಞ.

೧೬೪೬

ನಡೆದಿಹುದಃ ನಾಡಿನಲಿ, ಸಡಗರದ ಚದುರಂಗ
ಕಡುದುಷ್ಟ ರಾಜಕಾರಣಗಳಾಟದಲಿ
ಒಡವ ಬಲಿಬೀಳ್ವ ಪೂರ್ಣಜ್ಞ.

೧೬೪೭

ಸರಕಾರ ಯಾರನೂ, ದರಕಾರ ಮಾಡದಲೆ
ಸ್ಥಿರವಾಗಿ ಸತ್ಯ ನೀತಿಯಲಿ ನಡೆದರದು
ಸರಕಾರ ನಿಜದಿ ಪೂರ್ಣಜ್ಞ.

೧೬೪೮

ಜನಹಿತವ ಕಡೆಗಣಿಸಿ, ಜನರನ್ನು ವಂಚಿಸುತ
ಧನವನ್ನು ಸುಲಿವ ಸರಕಾರದವರು ಜನಕೆ
ಶನಿರಾಜನಂತೆ ಪೂರ್ಣಜ್ಞ.

೧೬೪೯

ಘೋರತರ ಜಾತೀಯ, ವೈರಾಗ್ನಿ ಹೊತ್ತಿಹುದು
ಭಾರತದಿ ಜನರು ಭಯ ಭೀತರಾಗಿ ಹಾ–
ಹಾರಿ ಹೋಗಿಹರು ಪೂರ್ಣಜ್ಞ.

೧೬೫೦

ಆಚರಣೆಗಳವಡದ, ಯೋಚನೆಗಳನು ಬಿಟ್ಟು
ಯೋಚಿಸಿರಿ ದೇಶ ಹಿತಕಾರಿ ಕಾರ್ಯಗಳ
ಯೋಜಿಸಿರಿ ಬೇಗ ಪೂರ್ಣಜ್ಞ.

೧೬೫೧

ಪರರಾಷ್ಟ್ರಗಳ ಪ್ರಗತಿ, ಭರದಿಂದ ನಡೆದಿಹುದು
ಕೊರಗುತ್ತಲಿಹುದು ನಮ್ಮ ಭಾರತ ರಾಷ್ಟ್ರ
ತೊರೆ ಜಾಡ್ಯವನು ಪೂರ್ಣಜ್ಞ.

೧೬೫೨

ನಲವತ್ತು ದಾಟಿರುವ, ಬಲವಂತ ಸ್ವಾತಂತ್ರ್ಯ
ಗಳಿಸಿ ದೊಳಿತೆಷ್ಟು? ಹೊಲ್ಲದ್ದು ಎಷ್ಟೆಂದು
ತಿಳಿದು ತೂಗಯ್ಯ ಪೂರ್ಣಜ್ಞ.

೧೬೫೩

ದೇಶಾಭಿಮಾನವಿಹ, ಶಾಸಕರು ಎಷ್ಟು ಜನ?
ದ್ವೇಷ ಮಾತ್ಸರ್ಯದಗ್ನಿ ಭಕ್ಷಕರಿಂದ
ದೇಶ ಕೊರಗುತಿದೆ ಪೂರ್ಣಜ್ಞ.

೧೬೫೪

ಜಾತಿ ಭೇದವ ಬಿಟ್ಟು, ಜಾತಿ ಮೋಹವಸುಟ್ಟು
ಸ್ವಾರ್ಥ ಬದಿಗಿಟ್ಟು ಆಳಿದರೆ ದೇಶ ತಲೆ
ಯೆತ್ತಿ ಮೆರೆದೀತು ಪೂರ್ಣಜ್ಞ.

೧೬೫೫

ಕಂದಕದ ಅಂಚಿನಲಿ, ಬಂದಿಹುದುದೇಶವಿದು
ಕಂದಕದಿ ಬೀಳದಂತಿರಲಿ ಎಚ್ಚರಿಕೆ
ಯಿಂದಿರಲಿ ಜನರು ಪೂರ್ಣಜ್ಞ.

೧೬೫೬

ಹಿಂದುಳಿದ ವರ್ಗಗಳು, ಮುಂದರಿದ ವರ್ಗಗಳು
ಬಂಧು ಭಾವದಲಿ ಒಂದಾದರೀದೇಶ
ಚೆಂದವಾದೀತು ಪೂರ್ಣಜ್ಞ.

೧೬೫೭

ಭಾರತೀಯರುರು ನಾವು, ಭಾರತಾಭ್ಯುದಯಕ್ಕೆ
ಭೂರಿ ಪರಿಶ್ರಮವೇ ಸೋಪಾನವೆಂದು ಮೇ-
ಲೇರುತಿರಬೇಕು ಪೂರ್ಣಜ್ಞ.

೧೬೫೮

ಅರ್ಪಣದ ಭಾವನೆಯು, ಅರ್ಪಿತವಾದರೆ ದೇಶ
ಒಪ್ಪಿತವು ಜನಕೆ ದೀನರಿಗೆ ಸುಖವುಂಟು
ದರ್ಪದಿಂದೇನು? ಪೂರ್ಣಜ್ಞ.

## ಕವಿಕಾವ್ಯ

೧೬೫೯

ಅನುಭವದ ರಸಸಾರ, ತನಿನುಡಿಗಳಲಿ ಮೂಡಿ
ಮನಸೆಳೆವ ಶೈಲಿಯೊಡಗೂಡಿ ಬಂದರದು
ವಿನುತ ಸತ್ಕಾವ್ಯ ಪೂರ್ಣಜ್ಞ.

೧೬೬೦

ಕಾವ್ಯಶರಧಿಯೊಳೀಸಿ, ಕಾವ್ಯ ಶಕ್ತಿಯ ಪಡೆದು
ಕಾವ್ಯ ಸಾಧನೆಯು ತಪಗೈವ ಕವಿಕಾವ್ಯ
ಸೇವ್ಯ ರಸಿಕರಿಗೆ ಪೂರ್ಣಜ್ಞ.

೧೬೬೧

ಅಧರಕ್ಕೆ ಕಹಿಯಾದ, ಉದರಕ್ಕೆ ಸಿಹಿಯಾದ
ಮೊದಲಿನವರೊರೆದ ವಚನಗಳ ತಿಳಿದೋದು
ಸದುಗತಿಯ ಪೊಂದು ಪೂರ್ಣಜ್ಞ.

೧೬೬೨

ಕಾವ್ಯಾರ್ಥ ರಸದೂಟ, ಭಾವಸಮರಸ ಕೂಟ
ಭಾವ ಪುಷ್ಪಕದಿ ವಿಹರಿಸುವ ಸವಿನೋಟ
ದೇವ ಸಂಸ್ಫೂರ್ತಿ ಪೂರ್ಣಜ್ಞ.

೧೬೬೩

ರವಿಕಿರಣ ಲೋಕಕ್ಕೆ, ನವರುಚಿಯನೀವಂತೆ
ಕವಿಯ ಹೃತ್ಕಿರಣ ನೀಡುವದು ಸಂಸ್ಫುರಣ
ಭುವನ ಜೀವನಕೆ ಪೂರ್ಣಜ್ಞ.

೧೬೬೪

ಕಾವ್ಯದಾಳವನಳೆದು, ಕಾವ್ಯಕಲೆ ಬೆಲೆಗೈವ
ಕಾವ್ಯಾನುಭಾವ ರಸವ ಸವಿದುಂಬುವನು
ಕಾವ್ಯಜ್ಞ ಬಲ್ಲ ಪೂರ್ಣಜ್ಞ.

೧೬೬೫

ನಲುನುಡಿಯ ಸಂಪದದ, ಬಲವುಳ್ಳ ಭಕ್ತನಿಗೆ
ಒಲಿಯುವಳು ತಾಯಿ ವಾಗ್ದೇವಿ, ಸ್ವಾಧ್ಯಯನ
ಫಲವು ಸತ್ಕಾವ್ಯ ಪೂರ್ಣಜ್ಞ.

೧೬೬೬

ವರಕಾವ್ಯ ಬರೆಯುವದು, ಸರಳವೆನ್ನದಿರಣ್ಣ
ಸುರಿಸದಲೆ ಬೆವರ, ಹೊಲವು ಫಲ ಕೊಡಬಹುದೆ?
ಪರಿಪ್ರಯತ್ನ ಮಾಡು ಪೂರ್ಣಜ್ಞ.

೧೬೬೭

ಸಾಹಿತ್ಯ ರಸ ರಹಿತ, ಸಾಹಿತ್ಯ ಹಬ್ಬುತಿದೆ
ರಾಹುಕೇತುಗಳ ಹಾಗಿರುವ ಬರೆಹ ರಸ–
ರಾಹಿತ್ಯವಯ್ಯಾ ಪೂರ್ಣಜ್ಞ.

೧೬೬೮

ಎತ್ತು ತೆಂಗಿನಕಾಯಿ, ಸತ್ವವನು ತಿಳಿದೀತೆ?
ಸತ್ಕಾವ್ಯದರ್ಥ ಹೊಳಿದೀತೆ? ಹೃದಯಗುಣ
ಬತ್ತಿದಂಥವಗೆ ಪೂರ್ಣಜ್ಞ.

೧೬೬೯

ಸಾಹಿತ್ಯ ಸಂಗೀತ ಬಾಹಿರನು ನಿರ್ಜೀವ
ದೇಹಕ್ಕೆ ಸಮನು, ಸಾಹಿತ್ಯವದು ಶಕ್ತಿ
ವಾಹಿನಿಯು ಜಗಕೆ ಪೂರ್ಣಜ್ಞ.

೧೬೭೦

"ದಂಡಿ" ಸಮಸೂರಿಗಳು, ಮಂಡನನ ಸಮವಾದಿ
ಪಂಡಿತರು ಜಗದೊಳಿಂದಿಲ್ಲ ಬರಿಹೆಸರ
ಪಂಡಿತರು ಬಹಳ ಪೂರ್ಣಜ್ಞ.

೧೬೭೧

ಕುವಿಚಾರ ಕುವಿಭಾವ, ಕುವಿಲಾಸ ಕುಣಿಯುತಿಹ
ಅವನಿಜನಗಣಕೆ ಸದ್ಭಾವ ಬಿಂಬಿಪನೆ
ಕವಿಯು ನಿಜ ಕವಿಯು ಪೂರ್ಣಜ್ಞ.

೧೬೭೨

ಕವಿಕುಲಕೆ ಗುರುವಾಗಿ, ಭವತಿಮಿರ ರವಿಯಾಗಿ
ಕವಿಕಾಳಿದಾಸ ಮೆರೆದಿಹನು ಶಾರದೆಯ
ಅವತಾರನೆನೆಸಿ ಪೂರ್ಣಜ್ಞ.

೧೬೭೩

ನಾರಿಕೇಳದ ತೆರದಿ, ಭಾರವಿಯ ಕಾವ್ಯವು
ಭೂರಿ ಸ್ವಾದಿರುವ ದ್ರಾಕ್ಷೆಯೊಲು 'ಕಾಳಿದಾಸ'
ಸಾರ ಕಾವ್ಯಗಳು ಪೂರ್ಣಜ್ಞ.

೧೬೭೪

'ಭಾರವಿ'ಯ ಅರ್ಥವದು, ಗೌರವವು ಕಾವ್ಯಕ್ಕೆ
ಸಾರ ಸಂಸ್ಕೃತದ ಸಾಹಿತ್ಯ ಲೋಕದಲಿ
ಮೇರು ಭಾರವಿಯು ಪೂರ್ಣಜ್ಞ.

೧೬೭೫

ನಾರಿಕೇಳದ ತೆರದಿ, ಭಾರವಿಯು ರಚನೆಗಳು
ಸಾರತರ ದ್ರಾಕ್ಷೆ ಕಾಳಿದಾಸೀಯಗಳು
ಧಾರುಣಿಗೆ ವಂದ್ಯ ಪೂರ್ಣಜ್ಞ.

೧೬೭೬

'ಮಾಘಕವಿ' ರಚನೆಯೊಳ ಮೋಘ ಗುಣ ಸಂಗಮವು
ಸಾಗರೋಪಮದ ಪಾಂಡಿತ್ಯ ಪ್ರತಿಭೆಗಳ
ಯೋಗಿ ಮಾಘಕವಿ ಪೂರ್ಣಜ್ಞ.

೧೬೭೭

ಜೀವನದೊಳೈತರುವ ಬೇವು ಬೆಲ್ಲಗಳನು
ಭಾವಸುಮತೆಯಲಿ ಸವಿದುಂಡ ಕವಿರವಿಯು
ಜೀವನದ ರವಿಯು ಪೂರ್ಣಜ್ಞ.

೧೬೭೮

ಋಷಿಯಲ್ಲದವನಲ್ಲಿ, ರಸಕಾವ್ಯ ಸ್ಫುರಿಸುವದೆ?
ರಸಭಾವಜೀವಿ ಭಾವ ಜೀವನದಿಂದ
ರಸಸೃಷ್ಟಿಗೈವ ಪೂರ್ಣಜ್ಞ.

೧೬೭೯

ಮೇದಿನಿಗೆ ಮೇಲೆನಿಪ, ಮೇಧಾವಿ ಮಂಡಲದಿ
ಆಧುನಿಕ ಕವಿ ಕುವೆಂಪುವಿಗೊಂದು ಉ
ತ್ಸೇಧ[1] ಪೀಠವಿದೆ ಪೂರ್ಣಜ್ಞ.

೧೬೮೦

ನಿಜಗುಣರ ಷಟ್‌ಶಾಸ್ತ್ರ, ನಿಜದರಿವು ನೀಡುವುದು
ನಿಜಮನದಿ "ಕೈವಲ್ಯ ಪದ್ಧತಿ"ಯ ಓದಿ
ನಿಜದಿ ನೀ ಸುಖಿಸು ಪೂರ್ಣಜ್ಞ.

೧೬೮೧

ಭಾವರಸ ಕೃತಿಗಳಿಂ, ಜೀವನಕೆ ಬಲವೀವ
ನೋವು ಸಾವುಗಳ ದುಃಖ ಸಂತೈಸುವನು
ಭೂವಿನುತ ಕವಿಯು ಪೂರ್ಣಜ್ಞ.

---
೧. ಉನ್ನತ.

೧೬೮೨

ಸತ್ಯ ಶಿವಸೌಂದರ್ಯ ನಿತ್ಯ ಕಾಣುತ ಕವಿಯು
ಪ್ರತ್ಯಗಾತ್ಮನೊಳು ಬೆರೆಯುತ್ತ ಪ್ರತಿಭೆಯಿಂ
ಸ್ಫೂರ್ತಿ ಪಡೆಯುವನು ಪೂರ್ಣಜ್ಞ.

೧೬೮೩

ತಳಬುಡಗಳಿಲ್ಲದಿಹ, ಕೊಳಕು ಬರೆಹವ ಬರೆದು
ಹೊಲಸು ಎಬ್ಬಿಸುವ ಕುಹಕಿಗಳ ಕೈಗಳಿಗೆ
ಕೊಳೆರೋಗ ಬರಲಿ ಪೂರ್ಣಜ್ಞ.

೧೬೮೪

ವಿದ್ಯೆಯನು ಕಲಿತು ದುರ್ಬುದ್ಧಿಯನು ತಿದ್ದದಲೆ
ಕ್ಷುದ್ರವನು ಬರೆದು ಸುಸಮಾಜ ಕೆಡಿಸುವರ
ಗುದ್ದಬೇಕಯ್ಯ ಪೂರ್ಣಜ್ಞ.

೧೬೮೫

ಸಾಹಿತ್ಯ ಕ್ಷೇತ್ರದಲಿ, ಬಾಹುಬಲ ಕುಹಕಗುಣ
ಬಾಹುಲ್ಯವೆದ್ದು ಬೊಬ್ಬಿರಿಯುತಿರೆ ಶುದ್ಧ
ಸಾಹಿತ್ಯವೆಲ್ಲಿ? ಪೂರ್ಣಜ್ಞ.

೧೬೮೬

ಭಾವ ಪಾವಿತ್ರ್ಯವೇ, ಕಾವ್ಯಕ್ಕೆ ಜೀವಾಳ
ಭವ್ಯತರ ಕಾವ್ಯ ರಚಿಸುವಡೆ ಜೀವಿಸೈ
ಕಾವ್ಯವನು ಮೊದಲು ಪೂರ್ಣಜ್ಞ.

೧೬೮೭

ರಸದಿಂದಲೇ ಸೃಷ್ಟಿ, ರಸದಿಂದಲೇ ಪುಷ್ಟಿ
ರಸವಿಲ್ಲದುದನು ತುಳಿದು ಹುಗಿವರು ಮೆಟ್ಟಿ
ರಸದುಂಬಿ ಬೆಳೆಯೊ ಪೂರ್ಣಜ್ಞ.

೧೬೮೮

ಗೋವಿರದ ಹಾಲುಂಟೆ ಹೂವಿರದೆ ಜೇನುಂಟೆ?
ಭಾವವಿಲ್ಲದಿರೆ ಕಾವ್ಯಕ್ಕೆ ಬಲವುಂಟೆ?
ಭಾವಬಲಬೆಳೆಸು ಪೂರ್ಣಜ್ಞ.

೧೬೯

ಕವಿತೆಗೊಡುವದು ರಾಗ, ಕವಿತೆಗೊಡುವದು ಭಾವ
ಕವಿತೆಗೊಡುತಿಹುದು ರಸಶಕ್ತಿ ಆತ್ಮಕ್ಕೆ
ಸವಿಸುಖವುಬಹುದು ಪೂರ್ಣಜ್ಞ.

೧೭೦

ಕವಿತೆಯೆಂದರೆ ಏನು? ಕವಿಯು ಹೃದ್-ರಸ ಕಲಶ
ನವರಸದ ರಾಜ ತೇಜವುಳ್ಳವನೆ ಕವಿ
ಕವಿಕಲೆಯ ಬೊಮ್ಮ ಪೂರ್ಣಜ್ಞ.

೧೭೧

ಕಲೆಯು ಸಾಧನೆಯಿಂದ, ಕಲೆವೆಣ್ಣ ನೊಲವಕ್ಕು
ಕಲೆಯು ರಸನಿರುಪಿಯ ಬಗೆಯು ಹಾಲಿನ ಸೆಲೆಯು
ಕಲೆಸೊಗದ ಮಾಲೆ ಪೂರ್ಣಜ್ಞ.

೧೭೨

ಕಲ್ಪನೆಯು ಮೇಣ್‌ಭಾವ, ಇಲ್ಲದಿಹ ಕವನಗಳು
ಅಲ್ಪಬರೆಹಗಳು, ಇವು ಕಪ್ಪೆಗಳ ಹಾಗೆ
ಜಲ್ಪಿಸುತ್ತಿಹವು ಪೂರ್ಣಜ್ಞ.

೧೭೩

ಬಳ್ಳಿಯಲಿ ನಗುನಗುತ, ಉಳ್ಳಲರು ನಲಿವಂತೆ
ಒಳ್ಳೊಳ್ಳೆ ಕವನ ಸ್ಫುರಿಸುತ್ತಲೇ ಇರಲಿ
ಎಲ್ಲ ಕವಿಗಳಲಿ ಪೂರ್ಣಜ್ಞ.

೧೭೪

ನವ್ಯತೆಯು ಶಿಲ್ಪಕ್ಕೆ, ಭವ್ಯತೆಯು ಭವನಕ್ಕೆ
"ದಿವ್ಯ ಕಲ್ಪನೆಯು ಸೌಂದರ್ಯವೀಯುವದು
ಕಾವ್ಯ ರಚಿಸಲ್ಕೆ" ಪೂರ್ಣಜ್ಞ.

೧೭೫

ನೀರಿರದ ಕಾಸಾರ, ಕ್ಷೀರವಿಲ್ಲದ ಗೋವು
ಸಾರ ಶೃಂಗಾರ ರಸ ತುಂಬಿರದ ಕಾವ್ಯ
ಯಾರಿಗೂ ಬೇಡ ಪೂರ್ಣಜ್ಞ.

೧೯೯೬

ಕವಿಯೊಬ್ಬನಿಗೆ ಬೇರೆ, ಕವಿಯೇಳ್ಗೆ ಕಹಿಯಾಗಿ
ಕವಿಕವಿಗಳಲ್ಲಿ ಕಹಿ ಬೆಳೆದರೀ ಜಗವ
ಸವಿಗೊಳಿಪರಾರು? ಪೂರ್ಣಾಜ್ಞ.

೧೯೯೭

ಕವಿವನಿತೆಯರೊಲಿದು, ಸವಿನಗೆಯ ಬೀರಿದರೆ
ಕವಿಯ ಹೃತ್ಕಮಲ ಅರಳಿ, ಪರಿಮಳಿಸುವದು
ನವ ಛವಿಯ ಬೀರಿ ಪೂರ್ಣಾಜ್ಞ.

೧೯೯೮

ಲತೆಯಿಂದ ಹೂವರಳಿ, ಅತಿಕಂಪು ಕೊಡುವಂತೆ
ಮತಿಯಲ್ಲಿ ಕವಿತೆ ತಪದಿಂದ ಬರಬೇಕು
ಅತಿಶಕ್ತಿ ಬಕ್ಕು ಪೂರ್ಣಾಜ್ಞ.

೧೯೯೯

ಉಕ್ತಿನಿಪುಣತೆಯಿರದೆ, ವ್ಯಕ್ತವಾಗದು ಕವಿತೆ
ಶಕ್ತಿಮಾನ್ ಪ್ರತಿಭೆ ತುಂಬಿರುವ ಕಾವ್ಯರಸ
ಉಕ್ಕಿ ಹರಿಯುಬವದು ಪೂರ್ಣಾಜ್ಞ.

೧೨೦೦

ಕಾವ್ಯ ಸೃಷ್ಟಿಯು ಬಾಳ, ಭವ್ಯತೆಗೆ ಕಾರಣವು
ಕಾವ್ಯ ರಸದನುಭವವು ಸಂಸ್ಕೃತಿಗೆ ಬಲವು
ಕಾವ್ಯ ಮಹಿಮೆಯಿದು ಪೂರ್ಣಾಜ್ಞ.

೧೨೦೧

ಶಬ್ದಾರ್ಥ ರಸಭರಿತ, ಕಬ್ಬ ಅಮೃತದ ಕುಂಭ
ಅಬ್ಜಾಬ್ಜ ಜೀವಿಗಳಿಗೆ ಚೇತನದ ಜೀ–
ವ ಧ್ವನಿಯು ಕಾವ್ಯ ಪೂರ್ಣಾಜ್ಞ.

೧೨೦೨

ಲೋಕಾನುಭವದಿಂದ, ಸತ್ಕಾವ್ಯ ಸಂಭವವು
ಬೇಕಾಬಿಟ್ಟಿಯು ಬರಹ ಕಾಕ ಪಿಂಡವದು
ಸಾಕಂಥ ಬರಹ ಪೂರ್ಣಾಜ್ಞ.

೧೭೦೩

ಭೋಜನದ ರುಚಿಯನ್ನು, ಭುಂಜಿಪನು ತಿಳಿಯುವನು
ಈ ಜಗದಿ ಶ್ರೇಷ್ಠ ಕಾವ್ಯವದು ರಸಭೋಜ್ಯ
ಭುಂಜಿಸಲಿ ಜಗವು ಪೂರ್ಣಜ್ಞ.

೧೭೦೪

ಕವಿ, ಕಾವ್ಯ ರಚಿಸುವನು, ಕವಿ ನಿಧನ ಹೊಂದುವನು
ಕವಿಯ ಕಾವ್ಯಕ್ಕೆ ನಿಧನವೆಂಬುದಿಲ್ಲ
ಅವಿನಾಶಿ ಕಾವ್ಯ ಪೂರ್ಣಜ್ಞ.

೧೭೦೫

ಕ್ಷೀರದಲಿ ಕೆನೆಬೆಣ್ಣೆ, ನೀರಿನಲಿ ತಾವರೆಯು
ತೋರುವಂದದಲಿ ಕವಿಗಳಲಿ ತೋರುವದು
ಸಾರತರ ಪ್ರತಿಭೆ ಪೂರ್ಣಜ್ಞ.

೧೭೦೬

ಸಹೃದಯತೆ ಉತ್ಸುಕತೆ, ಸಹನಶೀಲತೆ ಶಾಂತಿ
ಬಹುಶ್ರುತತೆಯುಳ್ಳ ನಿತ್ಯ ಸಾಧನೆಯು ಕವಿ
ಮಹತಿಗೇರುವನು ಪೂರ್ಣಜ್ಞ.

೧೭೦೭

ಭುವಿಯ ಬಾಳಿನ ಮುಗಿಲ, ರವಿಯಂತೆ ಹೊಳೆಯುವನು
ಸವಿಭವಿಯ ಚೆಲುವ ನುಡಿ ಗಾರುಡಿಗನವನು
ಕವಿ ನವ ಬ್ರಹ್ಮ ಪೂರ್ಣಜ್ಞ.

೧೭೦೮

ಹರಿಹರರ ರಗಳೆಗಳು, ಹರಭಕುತಿಯರಳುಗಳು
ಸರಸ ಸಾಹಿತ್ಯ ಸಂಸ್ಕೃತಿಯ ತಿರುಳುಗಳು
ಅರಿವಿನಚ್ಚುಗಳು ಪೂರ್ಣಜ್ಞ.

೧೭೦೯

ಬರೆದಂತೆ ನಡೆವಂಥ, ನರರೆಷ್ಟು ಧರೆಯಲ್ಲಿ?
ಬರೆದಂತೆ ನಡೆಯದಿರುವಂಥವರ ಬದುಕು
ಬರಿ ಬುರುಡೆಯಕ್ಕು ಪೂರ್ಣಜ್ಞ.

೧೭೧೦

ಕನಕದಾಸರ ಪದ್ಯ, ಜನ ಮನಸಿಗೆ ಹೃದ್ಯ
ಜನಹಿತವ ಬಯಸಿ ಬರೆದಿಹರು ಘನಗುಣದ
ಕನಕಸಮ ಕಾವ್ಯ ಪೂರ್ಣಜ್ಞ.

೧೭೧೧

ಜಾನಪದ ಭಾಷೆಯಲಿ, ಧ್ಯಾನಿಸುತ ಬರೆದಿಹರು
ಸ್ವಾನುಭವದಿಂದ ನಯನೀತಿ ಬೋಧಿಸುತ
ಸಾನುರಾಗದಲಿ ಪೂರ್ಣಜ್ಞ.

೧೭೧೨

ಪ್ರಾಣಿಬಲಿ ಖಂಡಿಸುತ, ದೀನರನು ಸಲಹುತ್ತ
ಜ್ಞಾನ ನೀಡುತ್ತ ಬರೆದಿಹನು ಕವಿತೆಗಳ
ಜ್ಞಾನಖಣಿ ಕನಕ ಪೂರ್ಣಜ್ಞ.

೧೭೧೩

ಕಾವ್ಯ ಶಿವಚೇತನದ, ಭಾವ ಸಂವೇದನೆಯು
ಕಾವ್ಯ ರಸಗಂಗೆ ಅಮೃತೋಪಮವು ಮನಕೆ
ಕಾವ್ಯ ಮಹಿಮೆಯಿದು! ಪೂರ್ಣಜ್ಞ.

೧೭೧೪

ಸದಭಿರುಚಿ ಕಲೆಯಿಂದ, ಸದುಹೃದಯ ಅರಳುವದು
ಒದವಿಪುದು ಕಲೆಯು ಮೈಮನಕೆ ಜೀವನಕೆ
ಮುದಭರಿತ ಸ್ಫೂರ್ತಿ ಪೂರ್ಣಜ್ಞ.

೧೭೧೫

ಸುಂದರದ ಕವನಗಳ, ಬೆಂದು ಬರೆದಿಹ "ಬೇಂದ್ರೆ"
ಕುಂದಿಲ್ಲ ನಿನ್ನ ಕಾವ್ಯಕ್ಕೆ ಬಲುಶಕ್ತಿ
ಬಂಧುರತೆ ಬಹಳ ಪೂರ್ಣಜ್ಞ.

೧೭೧೬

ಸೌಂದರ್ಯ–ಸೌಕರ್ಯ–ಬಾಂಧುರ್ಯ–ಚಾತುರ್ಯ
ತುಂದಿಲತೆಯಿಂದ ಇಂದು ಮುಂದೆಂದೆಂದು
'ಬೇಂದ್ರೆ' ಆದರ್ಶ ಪೂರ್ಣಜ್ಞ.

೧೭೧೭

"ಮಂಕುತಿಮ್ಮನ ಕಗ್ಗ[೧]" ಮಂಕುಬಿಡಿಸುತ ಮನದ
ಶಂಕೆ ಪರಿಹರಿಸಿ ಬೋಧಿಪುದು ಮತಿಜ್ಯೋತಿ
ಅಂಕುರಿಸುವಂತೆ, ಪೂರ್ಣಪ್ರಜ್ಞ.

೧೭೧೮

ಬೆಡಗು ವಚನಂಗಳಲಿ, ಮಿಡಿಯುತಿದೆ ಮೈಲಾರ
ಮೃಡಶರಣ ಬಸವಲಿಂಗಾತ್ಮದ ವೀಣೆ
ಪೊಡವಿಜನಹಿತಕೆ ಪೂರ್ಣಪ್ರಜ್ಞ.

೧೭೧೯

ಸಹಜ ಸುಂದರಿಗೇಕೆ, ಬಹುಬಗೆಯ ಆಭರಣ?
ಸಹಜ ಜಾನಪದ ಗೀತಕ್ಕೆ ಯಾತಕ್ಕೆ
ಬಹಳ ಪಾಂಡಿತ್ಯ ಪೂರ್ಣಪ್ರಜ್ಞ.

೧೭೨೦

ಅಲಂಕಾರಿರದಿರುವ, ಕಲೆಗಳಿಗೆ, ಕಾವ್ಯಕ್ಕೆ
ಬೆಲೆಯಿಲ್ಲ, ಅಲ್ಲಿ ಕಾವ್ಯತ್ವಸಿದ್ಧಿಸದು
ಬಲವಿಲ್ಲ ನೋಡು ಪೂರ್ಣಪ್ರಜ್ಞ.

೧೭೨೧

ಕವಿತೆಯುಲಿ ಗುಣವಿರಲು, ಕವಿತೆಗದು ಬಲುಶಕ್ತಿ
ಕವಿತೆ, ಜೀವನಕೆ ಬೆಳಕನ್ನು ನೀಡಿದರೆ
ಭುವಿಗದುವೆ ಸ್ಫೂರ್ತಿ ಪೂರ್ಣಪ್ರಜ್ಞ.

೧೭೨೨

ರಸವಿರದ ಕವಿತೆಯದು, ರಸವಿರದ ಹಣ್ಣಂತೆ
ರಸಭರಿತ ಕಾವ್ಯ ಸುಶ್ರಾವ್ಯ ಅದು ದಿವ್ಯ
ರಸವೆ ಶಿವರೂಪ ಪೂರ್ಣಪ್ರಜ್ಞ.

---

೧. ಡಿ. ವ್ಹಿ. ಜಿ. ಯವರ ಕೃತಿ.

೧೭೨೩

ಶಿವಯೋಗಿ ನಿಜಗುಣನು, 'ಕೈವಲ್ಯ ಗೀತಗಣ'
"ಸುವಿವೇಕ ಚಿಂತಾಮಣಿ" ಗ್ರಂಥ ರಚಿಸಿಹನು
ಶಿವಮೆಚ್ಚುವಂತೆ ಪೂರ್ಣಜ್ಞ.

೧೭೨೪

ಷಟ್‌ತತ್ವ ವಿವರಿಸುತ, ಷಟ್‌ಶಾಸ್ತ್ರ ರಚಿಸಿಹನು
ಷಟ್‌ಕಲೆಯ ತಿರುಳು ಅರಳಿಸಿರುವನು ಸರಸ
ಸುಷ್ಠುಶೈಲಿಯಲಿ ಪೂರ್ಣಜ್ಞ.

೧೭೨೫

ಹತ್ತನೆಯ ಶತಮಾನ, ರತ್ನತ್ರಯರ ಉಗಮ
ಉತ್ತಮೋತ್ತಮ ಗ್ರಂಥ ಉದಿಸಿದವು ಅಂದು
ಸ್ತುತ್ಯ ಅವು ಇಂದು ಪೂರ್ಣಜ್ಞ.

೧೭೨೬

ವಿರುಪಾಕ್ಷಸತ್ಪುತ್ರ, ಹರಿಹರಮಹಾಕವಿಯು
ವರವೀರಶೈವಕ್ಕೆ ಚೈತನ್ಯ ತುಂಬಿ
ಮೆರಗು ನೀಡಿಹನು ಪೂರ್ಣಜ್ಞ.

೧೭೨೭

'ರಗಳೆ' ಕವಿಯಾಗಿಹನು, ಸೊಗಸನ್ನು ನೀಡಿಹನು
ಕೊರಗು ತನ್ಮಯತೆ ಭಕ್ತಿರಸದುತ್ಕಟತೆ
ಸುರಿಸಿಹನು ಅಲ್ಲಿ ಪೂರ್ಣಜ್ಞ.

೧೭೨೮

'ರಗಳೆ' ಛಂದಸ್ಸಿನಲಿ, ಬಗೆ ಮಿಂಚು ತುಂಬಿಹನು
ಬಗೆಬಗೆಯ ಶಿವಶರಣ ಭಕ್ತಿ ಕಥೆ ಹೆಣೆದು
ಝುಗಿಝುಗಿಸುತಿಹನು ಪೂರ್ಣಜ್ಞ.

೧೭೨೯

ರಾಘವಾಂಕನು ಕಾವ್ಯ—ದಾಗಸದನವರವಿಯು
ರಾಘವಗೆ "ಷಟ್ಪದೀಚತುರಾಸ್ಯ" ಬಿರುದು
ಯೋಗ್ಯವಾಗಿಹುದು ಪೂರ್ಣಜ್ಞ.

೧೭೩೦

ಇದ್ದದ್ದು ಬರೆಯುವವನು, ಮೊಡ್ಡುತನ ಬಿಡಿಸುವವನು
ಬುದ್ಧಿ ತಿದ್ದುವವನು ಈ ಚಿಂತನದಿ ಕವಿಗೆ
ನಿದ್ದೆಯೇ ಇಲ್ಲ ಪೂರ್ಣಜ್ಞ.

೧೭೩೧

ಅಭಿಮಾನಿ ಅಂಡಯ್ಯ ರಚಿಸಿಹನು ರಸದಾಳಿ
ಕಬ್ಬಿನಂತಿರುವ ಅಚ್ಚಗನ್ನಡದಲ್ಲಿ
"ಕಬ್ಬಿಗರ ಕಾವ" ಪೂರ್ಣಜ್ಞ.

೧೭೩೨

ನೀತಿಯನು ಬೋಧಿಸುವ, ಭೀತಿಯನು ತೊಲಗಿಸುವ
ಗೀತೆಗಳ ಮಾಲೆಯಲಿ ಶ್ರೀಭಗವದ್ಗೀತೆ
ರತ್ನದಂತಿಹುದು ಪೂರ್ಣಜ್ಞ.

೧೭೩೩

ಸರಸಕನ್ನಡದಲ್ಲಿ, ಬರೆದು ಭಾರತಕಾವ್ಯ
ವರಕವಿ ಕುಮಾರವ್ಯಾಸ ಕವಿಕುಲ ಭೂಪ
ಮೆರೆದ ನಾಡಿನಲಿ ಪೂರ್ಣಜ್ಞ.

೧೭೩೪

ಮಾಯಿದೇವನಶತಕ, ತ್ರಯುಗಳನು ಓದಿದರೆ
ಮಾಯೆದೂರಾಗಿ ಶಿವಭಕ್ತಿ, ಜ್ಞಾನಸು—
ಜ್ಞೇಯವಾಗುವವು ಪೂರ್ಣಜ್ಞ.

೧೭೩೫

ವೇಮನನು ತ್ರಿಪದಿಯಲಿ, ಕೋಮುಸೌಹಾರ್ದತೆಯ
ಪ್ರೇಮಮಾರ್ಗವನು ತೋರಿಹನು ಅವನುನಿ-
ಸ್ಸೀಮತಾತ್ವಿಕನು! ಪೂರ್ಣಜ್ಞ.

೧೭೩೬

ಸೋಮನಾಂಧ್ರ ಕವೀಂದ್ರ, ಪ್ರೇಮದಿಂ ವಿರಚಿಸಿದ
ರಾಮಣೀಯಕ ಕನ್ನಡದಿ ಬಸವಗದ್ಯ
ರೋಮಾಂಚಹೃದ್ಯ ಪೂರ್ಣಜ್ಞ.

೧೭೩೭

ಸೋಮನಾಥನಶಕ್ತಿ, ಸೋಮನಾಥನ ಪದ್ಯ
ಸೋಮನಾಥನದು ಬಲುಪ್ರತಿಭೆ ತೆಲುಗಿನಲಿ
ಸೋಮಧರರೂಪ ಪೂರ್ಣಾಜ್ಞ.

೧೭೩೮

ಜಾನಪದ ಜೀವನವು, ಜಾನಪದ ಗಾಯನವು
ಜಾನಪದ ಅಧ್ಯಯನ ಇವು ನಮ್ಮ ಜೀವ–
ಮಾನಕ್ಕೆ ಸೊಗಸು ಪೂರ್ಣಾಜ್ಞ.

೧೭೩೯

ಭಾಷೆಯಲಿ ಜನಪದವು, ತೋಷವನು ನೀಡುವದು
ಘಾಸಿಗೊಂಡಿರುವ ಚಿತ್ತಕ್ಕೆ ಶಾಂತಿರಸ
ಪ್ರಾಶಉಣಿಸುವದು ಪೂರ್ಣಾಜ್ಞ.

೧೭೪೦

ಜನಪದದಿ ಬದಕುಂಟು, ಜನಪದದಿ ಕಲೆಯುಂಟು
ಜನಪದದಿ ಚೆಲುವುಂಟು ಬೆಳಕುಂಟು ಅಲ್ಲಿ
ಜನಪದದ ತುಂಬ ಪೂರ್ಣಾಜ್ಞ.

೧೭೪೧

ಅನುಭವದ ಹಾಲನ್ನು, ಜನನುಡಿಯ ಬಟ್ಟಲಲಿ
ಕೆನೆಗಟ್ಟಿಸಿಹರು ಹಾಡಿನಲಿ ಜಗಕೆಲ್ಲ
ಉಣಿಸಿ ತಣಿಸಿಹರು ಪೂರ್ಣಾಜ್ಞ.

೧೭೪೨

ಜನಪದದ ಸಂಗೀತ, ತನುಮನಕೆ ಸಂಪ್ರೀತ
ಅನುಭವದ ತಂತಿಗಳು ಕೋಟ್ಯಾನುಕೋಟಿ
ದನಿಗೈಯುತಿಹವು ಪೂರ್ಣಾಜ್ಞ.

೧೭೪೩

ಸಣ್ಣವರು ದೊಡ್ಡವರು, ಕಣ್ಮುಚ್ಚಿ ಕಿವಿದೆರೆದು
ತನ್ಮಯಿತೆಯಿಂದ ಹಳ್ಳಿಹಾಡನು ಕೇಳಿ
ಧನ್ಯರಾಗುವರು ಪೂರ್ಣಾಜ್ಞ.

೧೭೪೪

ಮಣ್ಣಮಕ್ಕಳು ಹರುಷ, ಹೊಮ್ಮಿ ಕುಣಿಕುಣಿದಾಡಿ
ಬಣ್ಣಬಣ್ಣದ ಕೋಲು ಹಿಡಿದು ಹಾಡುವದು
ಕಣ್‌ಕಿವಿಗೆ ಹಬ್ಬ ಪೂರ್ಣಜ್ಞ.

೧೭೪೫

ಜೋಗುಳದ ಪದಹಳ್ಳಿ, ರಾಗಗಳ ಬೀಜುಗಳು
ನೀಗಿಸುತ ತಾಪ ಶಾಂತಿಯನು ನೀಡುವವು
ಬೇಗನೀಕೇಳು ಪೂರ್ಣಜ್ಞ.

೧೭೪೬

ಗ್ರಾಮೀಣ ಜನರಿದನು, ಗ್ರಾಮ್ಯಸರಣಿಗಳಿಂದ
ಸೋಮಧರನನ್ನು ನೆನೆನೆನೆದು ಹಾಡುವರು
ಪ್ರೇಮಭಕ್ತಿಯಲಿ ಪೂರ್ಣಜ್ಞ.

೧೭೪೭

ಕಲಿತಿಲ್ಲ ಶಾಲೆಯಲಿ, ಬಲುಹರಟೆ ಕೊಚ್ಚುತ್ತ
ಕುಳಿತು ಕಲ್ಮಂದೆ ಬೀಸುವರು ನಾರಿಯರು
ನಲಿದು ಹಾಡುವರು ಪೂರ್ಣಜ್ಞ.

೧೭೪೮

ಬಂಡಾಯ ಬರೆಹದಲಿ, ಹೆಂಡಕುಡುಕರ ಹಾಗೆ
ಕಂಡಕಂಡವರ ಕಂಡಂತೆ ಬಯ್ಯುವದು
ಕಂಡುಬರುತಿಹುದು ಪೂರ್ಣಜ್ಞ.

೧೭೪೯

ಶಿವಕವಿ ಷಡಕ್ಷರಿಯು, ಕವಿಗಳ ಮಹಾಕವಿಯು
ಸುವಿರಾಗಿ ಕವಿತಾಕಾಮಿನಿಯ ಕೈಹಿಡಿದ
ಭುವಿಗಿದಾಶ್ಚರ್ಯ ಪೂರ್ಣಜ್ಞ.

೧೭೫೦

ಆಂಗ್ಲಶಾರದೆಯನ್ನು, ರಾಗದಿಂ ಪೂಜಿಸುತ
ಬೆಳಗಿಹರು ಶೆಲ್ಲಿ, ಕೀಟ್ಸ್, ಬೈರನ್ ಅವರು
ಕೊಲರಿಜ್‌ರೆಲ್ಲ ಪೂರ್ಣಜ್ಞ.

೧೭೫೧

ಕವಿಯು ಬದುಕಿನ ರಸವ, ಭುವಿಯೊಳಗೆ ಸುರಿಸುವನು
ಸವಿಬೆರೆಸಿ ಅನುಭವದ ಸಾರವನು ಕೊಡುತ
ನವಸೃಷ್ಟಿಗೈವ ಪೂರ್ಣಜ್ಞ.

೧೭೫೨

ಸಂಸ್ಕೃತವ ಹಳಿದರದು ಸುಸ್ಕೃತಿಯ ಹಳಿದಂತೆ
ಸಂಸ್ಕೃತವು ಸರ್ವಭಾಷೆಗಳ ಜನಯಿತ್ರಿ
ಸಂಸ್ಕೃತವ ಓದಿ ಪೂರ್ಣಜ್ಞ.

## ಕೆಡಕು—ವ್ಯರ್ಥ—ಹಾನಿ

೧೭೫೩

ಶೀಲವಿಲ್ಲದ ನರನು, ಸೀಳು ಬಿಟ್ಟಿಹ ಗಡಿಗೆ
ಮೇಳವಿಲ್ಲದ ಸಂಸ್ಥೆ ಇವು ಮೂರು ಕೆಟ್ಟು
ಹಾಳು ಸುರಿಯುವವು ಪೂರ್ಣಜ್ಞ.

೧೭೫೪

ಹುಸಿನುಡಿಯು ಕಸಭೂಮಿ ರಸವಿರದ ಒಣ ಹಣ್ಣು
ಮೊಸರಿಲ್ಲದೂಟ ಸಂಸಾರಿಗಳಿಗೆ ಇವು
ವ್ಯಸನಕ್ಕೆ ಮೂಲ ಪೂರ್ಣಜ್ಞ.

೧೭೫೫

ವಿನಯವಿಲ್ಲದ ವಿದ್ಯೆ ಗುಣವ ಬೆಳೆಸದ ಬುದ್ಧಿ
ಜನಹಿತಕೆ ಒದಗದಿಹ ಧನವು ಇವು ಸತ್ತ
ಶುನಕನಿಂ ಕೀಳು ಪೂರ್ಣಜ್ಞ.

೧೭೫೬

ಬಳೆಗಳಿಲ್ಲದ ಹೆಣ್ಣು ಜಳಕವಿಲ್ಲದ ದೇಹ
ಎಲೆಗಳಿಲ್ಲದ ಗಿಡವು ಜಲವಿರದ ಭಾವಿ
ಕಳೆಗೇಡಿಗಳಿವು ಪೂರ್ಣಜ್ಞ.

೧೭೫೭

ಶ್ರದ್ಧೆಯಿಲ್ಲದ ಶಿಷ್ಯ, ಬುದ್ಧಿಯಿಲ್ಲದ ಗುರುವು
ಶುದ್ಧವಿಲ್ಲದ ಮತವು ಹಾಳು ಹೆಗ್ಗಣದ
ಗುದ್ದು ಇದ್ದಂತೆ ಪೂರ್ಣಜ್ಞ.

೧೭೫೮

ಬಿಗಿಯಿರದ ಆಡಳಿತ, ಸೊಗವಿರದ ಮನೆತನವು
ಸೊಗವಿರದ ಬಂಡಿ, ನಗೆಸೂಸದಿಹ ಮೊಗವು
ಜಗಕೆ ಬೇಸರವು ಪೂರ್ಣಜ್ಞ.

೧೭೫೯

ಬಳಕೆ ಮಾಡದ ದುಡ್ಡು, ಹುಳ ತಿಂದು ಹೋದೀತು
ಜಲವ ಕುಂಭದಿ ತುಂಬಿ ಬಳಸದಿಹರದು
ಮಲೆತುನಾತಂತೆ ಪೂರ್ಣಜ್ಞ.

೧೭೬೦

ನೌಕರಿಯ ಸಲುವಾಗಿ ಸಾಕಷ್ಟು ಹಣ ಸುರಿಸಿ
ದೂಕಿದರೆ ಸಮಯ, ಹೊಳೆಯಲ್ಲಿ ಹುಣಿಸೆಯನು
ಹಾಕಿದಂತಹುದು ಪೂರ್ಣಜ್ಞ.

೧೭೬೧

ತನ್ನ ಸತಿಯನು ಬಿಟ್ಟು, ಅನ್ಯ ಸತಿಯರ ಕೂಡಿ
ಚಿನ್ನಾಟಗೈವ ಅಣ್ಣಗಳ ಬಾಳೆಲ್ಲ
ಮಣ್ಣು ಪಾಲಹುದು ಪೂರ್ಣಜ್ಞ.

೧೭೬೨

ಅರಿವುಗೇಡಿಯು ಕೈಗೆ ಹಿರಿತನವ ನೀಡಿದರೆ
ಕರಿಕಾಗೆ ಕೈಯಲ್ಲಿ ಕೊಟ್ಟಂತೆ ಕೊನೆಗೆ
ಕೊರಗಹುದು ಮನಕೆ ಪೂರ್ಣಜ್ಞ.

೧೭೬೩

ರೆಕ್ಕೆಯಿಲ್ಲದ ಹಕ್ಕಿ, ರೊಕ್ಕವಿಲ್ಲದ ಗಲ್ಲೆ
ಅಕ್ಕರೆತೆಯಿಲ್ಲದಿರುವಣ್ಣ ತಮ್ಮಗಳು
ಲೆಕ್ಕದೊಳಗಲ್ಲ ಪೂರ್ಣಜ್ಞ.

೧೭೬೪

ಬೆಳಕು ಇಲ್ಲದ ಮನೆಯು ಮೆಲಕು ಹಾಕದ ಎತ್ತು
ಹೊಳಪು ಇಲ್ಲದ ಖಡ್ಗ—ಇವು ಮೂರು ಜಗದಿ
ಬೆಲೆಯು ತರಬಹುದೇ ಪೂರ್ಣಜ್ಞ.

೧೭೬೫

ಉದ್ಯೋಗ ಶ್ರೀಯೋಗ, ಉದ್ಯೋಗ ಧೀ ಯೋಗ
ಉದ್ಯೋಗರಹಿತ ಬಾಳೆಲ್ಲ ಬಡತನದ
ಗೆದ್ದಲಿಯ ಪಾಲು ಪೂರ್ಣಜ್ಞ.

೧೭೬೬

ಹೆಸರೇನೋ ಬೇಕು, ಕೈ ಕೆಸರಾಗುವದು ಬೇಡ
ಹಸಗೇಡಿ ಜನರು, ಮೈತುಂಬ ಆಲಸಿಯ
ನುಸಿಹತ್ತಿದವರು ಪೂರ್ಣಜ್ಞ.

೧೭೬೭

ಭಾವವಿಲ್ಲದ ಕವನ ಜೀವವಿಲ್ಲದ ಕಾಯ
ನಾವಿಕನಿರದ ನಾವೆ ಇವುಗಳಿಂ ಜಗಕೆ
ಯಾವ ಉಪಯೋಗ? ಪೂರ್ಣಜ್ಞ.

೧೭೬೮

ಎಲೆಗಳಿಲ್ಲದ ಮರದಿ, ನೆಳಲನರಸಬಹುದೆ?
ಬಲವಿಲ್ಲದವರಲ್ಲಿ ಧನವ ಬೇಡುವದು
ಕೆಲಸಗೇಡಕ್ಕು ಪೂರ್ಣಜ್ಞ.

೧೭೬೯

ಹಲ್ಲು ಇದ್ದರೆ ಊಟ, ಇಲ್ಲದಿದ್ದರೆ ಕಾಟ
ನೆಲ್ಲು ಬೆಳೆದರೆ ಗದ್ದೆ, ಇಲ್ಲದಿರೆ ಇದ್ದು
ಇಲ್ಲದಂತೆ ಆದು ಪೂರ್ಣಜ್ಞ.

೧೭೭೦

ಮೂಢರನು ತಿದ್ದುವದು, ಕಾಡುದನ ಕಾಯುವದು
ಮೂಢರಿಗೆ ಪಾಠ ಶ್ರಮ, ಸಮಯಗಳ ದೊಡ್ಡ
ಕೇಡು ಕಾಣಯ್ಯ ಪೂರ್ಣಜ್ಞ.

೧೭೭೧

ತಿಳಿಯದಂತಹುದನ್ನು, ತಿಳಿಸಲ್ಕೆ ಮತ್ತೊಂದು
ತಿಳಿಯದಂಥದನು ಪೇಳ್ವ ಪಂಡಿತ ದೊಡ್ಡ
ತಿಳಿಗೇಡಿಯವನು ಪೂರ್ಣಜ್ಞ.

೧೭೭೨

ಮಳೆಗೇಡಿನಿಂದೆಲ್ಲ, ಬೆಳೆಗಳೊಣುಗುತ್ತಿರಲು
ಮೊಲೆವಾಲು ಸಿಗದ ಕೂಸುಗಳ ಕಂಡಂತೆ
ಕಳವಳವು ಮನಕೆ ಪೂರ್ಣಜ್ಞ.

೧೭೭೩

ಮಳೆಯಿಲ್ಲದಿರೆ ಜಗವು, ಕೊಳೆಗೇರಿಯಹುದೆಂದು
ತಿಳಿದು ತಿಳಿದೂ ಜಗವು ಮಳೆಗೇಡು ಮಾಳ್ಪ
ಕೆಲಸ ನಡೆಸುತಿದೆ ಪೂರ್ಣಜ್ಞ.

೧೭೭೪

ಅತಿಯೂಟವತಿನಿದ್ರೆ, ಅತಿರಾಗವತಿಭೋಗ
ಮತಿಯು ಕೆಡಿಸುವದು, ಬಾಳಿನಲಿ ವಿಷ ಬೆರೆಸಿ
ದಂತಪ್ಪುದಯ್ಯ ಪೂರ್ಣಜ್ಞ.

೧೭೭೫

ರಕ್ತದೋಕುಳಿಯಾಟ, ರಾಕ್ಷಸೀಕೃತ್ಯಗಳು
ಸಿಕ್ಕಂತೆ ನಡೆದಿಹವು, ಶಕ್ತಿ ತಾಮಸ ವಿಷದಿ
ಸಿಕ್ತವಾಗಿಹುದು! ಪೂರ್ಣಜ್ಞ.

೧೭೭೬

ಮಾನವತೆ ಅಳಿಯುತಿದೆ, ದಾನವತೆ ಬೆಳೆಯುತಿದೆ
ಸ್ಥಾನ ಮಾನಗಳು ಮಸಿಗೂಡಿ ಸಜ್ಜನರು
ಕ್ಷೀಣರಾಗಿಹರು ಪೂರ್ಣಜ್ಞ.

೧೭೭೭

ವಾಸ್ತವಿಕ ಸತ್ಯವಿದು, ನಾಸ್ತಿಯಾಗುತ್ತಿಹುದು
ಆಸ್ತಿ ನುಂಗಲ್ಕೆ ಮೋಸ ವಂಚನೆಯಾಟ
ಶಿಸ್ತು ಸಾಯುತಿದೆ ಪೂರ್ಣಜ್ಞ.

೧೭೭೮

ನೀತಿ ತತ್ವವ ತುಳಿದು, ಜಾತಿ ತಳಹದಿ ಮೇಲೆ
ಜಾತಿ ಕೆಲವಕ್ಕೆ ಮೀಸಲಾತಿ ಕೊಡೆ ಪಕ್ಷ
ಪಾತವನ್ನಿಸದೆ? ಪೂರ್ಣಜ್ಞ.

೧೭೭೯

ಜ್ವರವಿರುವವನ ಬಾಯ್ಗೆ, ವರಕ್ಷೀರ ಕಹಿಯಕ್ಕು
ದುರುಳಂಗೆ ಸನ್ಮಾರ್ಗ ತೋರಿದರೆ ಅವಗೆ
ಸರಿದೋರಬಹುದೇ? ಪೂರ್ಣಜ್ಞ.

೧೭೮೦

ಹಣ್ಣು ಇಲ್ಲದ ಎಡೆಯು, ಸುಣ್ಣವಿಲ್ಲದ ವೀಳ್ಯ
ಅನ್ನವಿಲ್ಲದಿಹ ಮನೆಯು ಈ ಮೂರನ್ನು
ಮನ್ನಿಸುವರಾರು? ಪೂರ್ಣಜ್ಞ.

೧೭೮೧

ಓದದಲೆ ಆಲವವಗೆ ವಾದದಲಿ ಮುಳುಗುವವಗೆ
ಭೇದ-ಭಿನ್ನತೆಯಿಲ್ಲ ಮೋದಗೊಂಬಂಗೆ
ಕಾಯ್ದಿಹುದು ನಾಶ ಪೂರ್ಣಜ್ಞ.

೧೭೮೨

ಕಲ್ಪನೆಯ ಸೊಗಸಿರದ ಅಲ್ಪ ಬಡನುಡಿಗಬ್ಬ
ಶಿಲ್ಪವಿಲ್ಲದ ಮೂರ್ತಿ ರಸಿಕ ಹೃದಯಕ್ಕೆ
ಒಪ್ಪೆಸಗಬಹುದೆ? ಪೂರ್ಣಜ್ಞ.

೧೭೮೩

ಮಿಗೆ ದುಡಿವ ಸಾಹಸಿಗೆ, ನಗುತ ಒಲಿವಳು ಲಕ್ಷ್ಮೀ
ಹಗಲಿರುಳು ಸುಖದ ಸುಪ್ಪತ್ತಿಗೆಯೊಳಿಹನ
ಆಗಲುವಳು ಲಕ್ಷ್ಮೀ ಪೂರ್ಣಜ್ಞ.

೧೭೮೪

ಪರಸತಿಯರೊಡನಾಟ, ಗರವರೆದ ಸವಿಯೂಟ
ಪರಸತಿಯರಂ ತಡವಿ ಕೀಚಕಾಧಮಗೆ
ದುರುಮರಣವಾಯ್ತು ಪೂರ್ಣಜ್ಞ.

೧೭೮೫

ಗುರಿಯು ಮರೆಯುತೆ ಫಲವ, ಬರಿಬಯಸಿ ತಿರುಗಿದರೆ
ಮರಮರನೆ ಮರುಗಿದರೆ ಮರನೇರಿ ತಿರುಗಿ
ತೆರೆಗೆ ಬಿದ್ದಂತೆ ಪೂರ್ಣಜ್ಞ.

೧೭೮೬

ಪುಸಿ ಗೆಳೆಯರು ಚಿತ್ತವನು ಕೃಶಗೊಳಿಸುತಿಹವಯ್ಯ
ಕಸಕಡ್ಡಿ ಬೆಳೆದ ತೋಟದಲಿ ಗಿಡಬಳ್ಳಿ
ರಸಪುಷ್ಪವಹವೆ? ಪೂರ್ಣಜ್ಞ.

೧೭೮೭

ಮೋಹ ಬೀರದ ಸತಿಯು, ದ್ರೋಹ ಬಗೆಯುವ ಪತಿಯು
ನೇಹದಲಿ ಕಪಟ ಜಾಲವನು ಹೆಣೆವವರ
ಸಹವಾಸ ಕ್ಲೇಶ ಪೂರ್ಣಜ್ಞ.

೧೭೮೮

ಕಾಮಲೀಲೆಯು ಬಯಸಿ, ನೇಮ ನೀತಿಯನಳಿಸಿ
ಕಾಮಲೋಲುಪರಾದ ಕಾಮಾಂಧರನು
ಕಾಮಾರಿ ಮೆಚ್ಚ ಪೂರ್ಣಜ್ಞ.

೧೭೮೯

ಹೊಲಸು ತುಂಬಿಹ ಮನೆಯು, ತಳವಿಲ್ಲದಿಹ ಪಾತ್ರೆ
ಫಲ ಬಿಡದ ವೃಕ್ಷಗಳು ಜಗದೊಳಿವುಗಳಿಗೆ
ಬೆಲೆ ಬಹಳ ಕಡಿಮೆ ಪೂರ್ಣಜ್ಞ.

೧೭೯೦

ಪರವನಿತೆ ಪರಧನವು, ಕರೆಯುದಲೆ ದೊರಕಿದರೂ
ಮರುಳಾಗಬೇಡ ಪೈಮರೆತು ಮುಟ್ಟಿದರೆ
ಕೊರಕಲಕೆ ಬೀಳ್ವೆ ಪೂರ್ಣಜ್ಞ.

೧೭೯೧

ಪರವನಿತೆಯುರ ಮುಟ್ಟಿ, ಕೊರಗಿಪರು ಕಾಮುಕರು
ದುರುಳ ರಾವಣನು ದುರ್ಗತಿಯ ನೈದಿದನು
ಇರಲಿ ಎಚ್ಚರಿಕೆ ಪೂರ್ಣಜ್ಞ.

೧೭೯೨

ಗಂಧವಿಲ್ಲದ ಸುಮದ, ಸೌಂದರ್ಯಕೇನು ಬೆಲೆ?
ಮಂದಮತಿ, ಮೌನವೃತಿಯಾದರೇನಾಯ್ತು?
ಹಂದಿ ಮಿಂದಂತೆ ಪೂರ್ಣಾಜ್ಞ.

೧೭೯೩

ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ
ಇಂದು ಜಗದೊಳಗೆ ನಡೆದಿಹುದು ಅನ್ಯಾಯ
ಬಂದು ನೀನೋಡು ಪೂರ್ಣಾಜ್ಞ.

೧೭೯೪

ಮುಂದೆ ಹೊಗಳುವವರನ್ನು, ಮುಂದೆ ತೆಗಳುವವರನ್ನು
ಎಂದೆಂದು ನೆಚ್ಚದಿರು, ನೆಚ್ಚಿದರೆ ಮುಂದೆ
ದಂದುಗದಿ ಬೀಳ್ವೆ ಪೂರ್ಣಾಜ್ಞ.

೧೭೯೫

ದುರ್ಬುದ್ಧಿಯನು ಬಿಡದೆ, ದುರ್ಭಾವ ದೂರಿಡದೆ
ದಾರಿದ್ರ್ಯ ನಿನ್ನ ಬೆಂಬಿಡದು ಮೊದಲು ನೀ
ದುರ್ವಿಚಾರ ಬಿಡು ಪೂರ್ಣಾಜ್ಞ.

೧೭೯೬

ರಾಗ ದ್ವೇಷಕೆ ಮೂಲ, ಭೋಗ ರೋಷಕೆ ಮೂಲ
ರೋಗಕ್ಕೆ ಮೂಲ ಅತಿಭೋಗಲಾಲಸೆಯು
ನೀಗು ಲೋಲುಪ್ತಿ ಪೂರ್ಣಾಜ್ಞ.

೧೭೯೭

ಸತಿಸುತರು ಹಿತರೆಂದು, ಅತಿ ಮೋಹ ಪಡಬೇಡ
ಮತಿಯು ಕಳಕೊಂಡು ದುಃಖಿಸುತ ಕೊನೆಯಲ್ಲಿ
ಗತಿಗೆಡಲು ಬೇಡ ಪೂರ್ಣಾಜ್ಞ.

೧೭೯೮

ಪಂಜಾಬ ಪ್ರಾಂತದೊಳು, ನಂಜು ತುಂಬಿದ ನೋಡು
ಅಂಜುತ್ತ ಜನರು ನಡುಗುವರು ಎಲ್ಲೆಡೆಗೆ
ಭಂಜಕರ ಭಯವು ಪೂರ್ಣಾಜ್ಞ.

೧೭೯೯

'ಕಂಡದ್ದನಾಡಿದರೆ, ಕೆಂಡದಂತಹ ಕೋಪ'
ಕಂಡದ್ದು ಬಿಟ್ಟು ಕೃತಕವನು ಬರೆದರೆ ಶಿ—
ಖಂಡಿಯಂತಕ್ಕು ಪೂರ್ಣಜ್ಞ.

೧೮೦೦

ಅಧಿಕಾರದರ್ಥವನು, ಹೃದಯದಿಂ ತಿಳಿಯದಲೆ
ಅಧಿಕಾರ ಬಲವ ಸಿಕ್ಕಂತೆ ಬಳಸಿದರೆ
ಅಧಿಕಾರ ದ್ರೋಹ ಪೂರ್ಣಜ್ಞ.

೧೮೦೧

ಕಸವು ತುಂಬಿದ ಮನೆಯು, ಕೆಸರು ತುಂಬಿದ ಕೆರೆಯು
ಕಸುವಿರದ ಕಾಯ ಇವು ಮನವ ಕೊರಗಿಸುವ
ವ್ಯಸನಕ್ಕೆ ಮೂಲ ಪೂರ್ಣಜ್ಞ.

೧೮೦೨

ಶ್ರದ್ಧೆಯಿಲ್ಲದ ಪೂಜೆ, ಬುದ್ಧಿಯಿಲ್ಲದ ವಿದ್ಯೆ
ನಿದ್ದೆಯಿರದಂಥ ಕಣ್ಣುಗಳು ಇವು ಮೂರು
ಇದ್ದು ಇರದಂತೆ ಪೂರ್ಣಜ್ಞ.

೧೮೦೩

ಕಲಹಕಂಟಕಯುತಿಗೆ, ಬೆಲೆಯುಂಟೆ ಜಗದಲ್ಲಿ?
ಬಲವಿರದೆ ಮತ್ಸರಾಗ್ನಿಯಲಿ ಬಿದ್ದವಗೆ
ನೆಲೆಯೆಲ್ಲಿ ಜಗದಿ? ಪೂರ್ಣಜ್ಞ.

೧೮೦೪

ಹಿಂಸೆ ದ್ವೇಷಕೆ ಮೂಲ, ಹಿಂಸೆ ಶಾಂತಿಗೆ ಶೂಲ
ಹಿಂಸೆಯೂ ಬೀಳ ಮೃತ್ಯು ಬೀಸುವ ಜಾಲ
ಹಿಂಸೆಯನು ತವಿಸು ಪೂರ್ಣಜ್ಞ.

೧೮೦೫

ಹಿಂಸೆಯಲಿ ಪಂಜಾಬ, ಧ್ವಂಸವಾಗುತ್ತಿಹುದು
ದ್ವೇಷ ತ್ವೇಷಗಳು ತಾಂಡವಿಸುತಿವೆ ಜಗಕೆ
ಹಿಂಸೆ ಘಾತಕವು ಪೂರ್ಣಜ್ಞ.

೧೮೦೬

ಕಂಪಿರದ ಹೂವುಗಳು, ಇಂಪಿರದ ಗಾಯನವು
ಪೆಂಪಿರದ ಬಾಳು ಮುತ್ತಿಲ್ಲದಿಹ ಬರಿಯ
ಸಿಂಪಿನಂತಿಕ್ಕು ಪೂರ್ಣಜ್ಞ.

೧೮೦೭

ಸಾಲವನು ಮಾಡಿದರೆ ಶೂಲದಲಿ ಸಿಕ್ಕಂತೆ
ಕಾಲು ಜಾರಿಸುವ ಹಾವಸೆಯು ತುಳಿದರದು
ಜೋಲಿ ತಪ್ಪಿಸದೇ? ಪೂರ್ಣಜ್ಞ.

೧೮೦೮

ಸುಳ್ಳು ಕಳವುಗಳಿಂದು, ಎಲ್ಲೆಲ್ಲಿ ನೋಡಿದರು
ಬಲ್ಲಂತೆ ಬೆಳೆದ ಪಾರ್ಥೇನಿಯಮ್ಮಿನೊಲು
ಚಲ್ಲುವರಿದಿಹವು ಪೂರ್ಣಜ್ಞ.

೧೮೦೯

ಒಳಹೊರಗು ಒಂದಿರಲು ತಿಳಿವೆಳಗು ತೊಳಗುವದು
ಒಳಗೊಂದು ಹೊರಗೊಂದು ಮಾಡಿದರೆ ತಾನು
ಮಲವ ಹೊತ್ತಂತೆ ಪೂರ್ಣಜ್ಞ.

೧೮೧೦

ಹೆರರ ಮನೆಯನು ಗುಬ್ಬಿ, ಮರೆತು ತಂದೆಂದಂತೆ
ಧರೆ, ವನಿತೆ, ಧನವು ನಮ್ಮದೆಂದರೆ ಶಿವನು
ಮರೆಯಾಗುತಿಹನು ಪೂರ್ಣಜ್ಞ.

೧೮೧೧

ಮೂಗು ಇಲ್ಲದ ಮುಖಕೆ, ಕೈಗನ್ನಡಿಯು ಏಕೆ?
ಯೋಗ ಸುಜ್ಞಾನ ಭಕ್ತಿರಹಿತರ ಕೈಗೆ
ಲಿಂಗವೇತಕ್ಕೆ? ಪೂರ್ಣಜ್ಞ.

೧೮೧೨

ಕಾಮಪೀಡಿತರಾಗಿ, ನೇಮನಿಷ್ಠೆಯ ಬಿಟ್ಟು
ಕಾಮಿನಿಯರೊಡನೆ ಕೂಡಿ ಸ್ಥಿತಿಗೆಟ್ಟವರ
ಸೋಮಧರ ಮೆಚ್ಚ ಪೂರ್ಣಜ್ಞ.

೧೮೧೩

ಸುಮ್ಮ ಸುಮ್ಮನೆ ಜಗಳ, ದಮ್ಮಿರದೆ ಮೂಡುತಿರೆ
ಎಮ್ಮಿ ಕೋಣಗಳು ಕೆಸರಿನಲಿ ಬಿದ್ದಂತೆ
ಕೆಮ್ಮನೆ ಕೆಟ್ಟಂತೆ ಪೂರ್ಣಜ್ಞ.

೧೮೧೪

ಕರಕಿ ಕಳ್ಳಿಯ ಹಾಗೆ, ಭರದಿ ಭ್ರಷ್ಟಾಚಾರ
ಧರೆಯಲ್ಲಿ ಬೆಳೆದು ಮಾನವತೆ ಮಡಿಯುತಿದೆ
ಪರಿಹಾರವೆಂದು? ಪೂರ್ಣಜ್ಞ.

೧೮೧೫

ಪ್ರಾಮಾಣಿಕತೆಗಿಂದು, ಭೂಮಿಯಲಿ ಬೆಲೆಯಿಲ್ಲ
ನೇಮನಿಷ್ಠೆಗಳು ಮರೆಯಾಗಿ ಬೆಳೆದಿಹುದು
ತಾಮಸದ ಬುದ್ಧಿ ಪೂರ್ಣಜ್ಞ.

೧೮೧೬

ಕಷ್ಟಗೈಯದೆ ದುಡ್ಡು ಎಷ್ಟು ಗಳಿಸಿದರೇನು?
ಮೃಷ್ಟಾನ್ನವುಂಡು ಜೀರ್ಣವಾಗದುದೆಲ್ಲ
ನಷ್ಟ ಕಾಣಯ್ಯ ಪೂರ್ಣಜ್ಞ.

೧೮೧೭

ಒತ್ತೆಯಿಟ್ಟೊಯ್ಯುವದು, ಹೊತ್ತಿಗಾಸರವಹುದು
ಮತ್ತೆ ಹಣ ಮರಳಿ ಕೊಟ್ಟೊಯ್ಯದಿದ್ದರದು
ಕುತ್ತಿಗೆಗೆ ಉರುಲು ಪೂರ್ಣಜ್ಞ.

೧೮೧೮

ಅತಿ ಲಂಚ ತಿಂದವರು, ಮಿತಿ ಮೀರಿ ಬೆಳೆದಿಹರು
ಮತಿ ಭ್ರಷ್ಟರಾಗಿ ತಿರುಗುತ್ತ ಕೊನೆಗವರು
ಗತಿ ಗೇಡಿಯಹರು ಪೂರ್ಣಜ್ಞ.

೧೮೧೯

ಬುಡ ಭದ್ರವಿರದ ಕಟ್ಟಡ ಬಹಳ ಬಾಳೀತೆ?
ಕೆಡುಕು ತಳವಾದ ಬಾಳೆಂಬ ಕಟ್ಟಡವು
ಕೆಡುತಿಹುದು ಬೇಗ ಪೂರ್ಣಜ್ಞ.

೧೮೨೦

ಅಡ್ಡ ಮಾರ್ಗದಿ ಬಂದ, ದೊಡ್ಡ ದುಡ್ಡಿನ ರಾಶಿ
ಗಡ್ಡೆಗಟ್ಟಿರುವ ಬೆನ್ನ ಬೇತಾಳದಿಂ
ದೊಡ್ಡ ಯಮಪಾಶ! ಪೂರ್ಣಜ್ಞ.

೧೮೨೧

ನೀರ ಮೇಲಣ ಗುಳ್ಳೆ, ತೋರುವದು ಕ್ಷಣಕಾಲ
ಆ ರೀತಿ ಕಾಯ ಕರಗಿ ಹೋಗುವದಯ್ಯ
ಮೂರುದಿನವಿದ್ದು ಪೂರ್ಣಜ್ಞ.

೧೮೨೨

ಪರನಿಂದೆ ಮಾಡಲ್ಕೆ, ವರುಷಗಳ ಕಳೀದರೇಂ?
ಪರನಿಂದೆ ನರನ ದುರ್ಗತಿಗೆ ಕಾರಣವು
ಅರಿತು ಆಚರಿಸು ಪೂರ್ಣಜ್ಞ.

೧೮೨೩

ಧನವಿದ್ಯೆಗಳ ಮದವು, ಘನ ಯೌವನದ ಮದವು
ಮನ್ಮಥನವೀರ್ವ ರೂಪ ಮದ ವಿವಿಧ ಮದ
ಕುಣಿಯುತಿವೆ ಜಗದಿ ಪೂರ್ಣಜ್ಞ.

೧೮೨೪

ಸತಿಪತಿಗಳಿಬ್ಬರೂ, ಪ್ರತಿದಿನವು ಸೆಣೆಸುತ್ತ
ಖತಿಗೊಳ್ಳುತಿರಲು ನೆಮ್ಮದಿಯ ಮನೆತನದ
ಕಥೆಯು ವ್ಯಥೆಯಕ್ಕು ಪೂರ್ಣಜ್ಞ.

೧೮೨೫

ಕ್ರೂರ ಕುಹಕಿಗೆ, ನೀತಿ ಸಾರವನು ಪೇಳಿದರೆ
ನೀರಿನಲಿ ಹೋಮ ಮಾಡಿದೊಲು ಕೆಲಸಕ್ಕೆ
ಬಾರದಂತಕ್ಕು ಪೂರ್ಣಜ್ಞ.

೧೮೨೬

ಹೀನಮನದಿಂ ಶಿವನ, ಧ್ಯಾನ ಮಾಡಿದರೇನು?
ಮಾನಮರ್ಯಾದೆ ಬಿಟ್ಟು ಬದುಕಿದರೇನು?
ಹಾನಿ ಜೀವನಕೆ ಪೂರ್ಣಜ್ಞ.

೧೮೨೭

ಹುಂಬಗಾಂಪರ ಸಂಗ, ಕಿಂಬುಗೊಡದಿರಬೇಕು
ಹುಂಬರೊಡಗೂಡಿ ಆಡಿದರೆ ಹಿಡಿದಂತೆ
ಕಂಬಳೀ ಹುಳುವ ಪೂರ್ಣಜ್ಞ.

೧೮೨೮

ಅತಿದ್ವೇಷ ವಿಷಕಾರಿ, ಮತಿಯನ್ನು ಮಸಳಿಪುದು,
ಹಿತಕಾರಿಗಳನು ಜೊತೆಗೊಡಿಪುದಿದು ಜಗಕೆ
ಅತಿಹಾನಿಕಾರಿ ಪೂರ್ಣಜ್ಞ.

೧೮೨೯

ಎದುರು ವಾದಿಸುವಾಳು, ಕದ ಹಣೆಗೆ ಬಡಿದಂತೆ
ಹೃದಯವಿರದಿರುವ ಸತಿಸುತರು, ಬಾಂಧವರು
ಎದುಕು ಬೇಡೆಂದ ಪೂರ್ಣಜ್ಞ.

೧೮೩೦

ಭೇದಗಳನೆಣಿಸದಿರು, ವಾದಗಳ ಮಾಡದಿರು
ಭೇದ ಬಿತ್ತಿದರೆ, ಬಿತ್ತಿದವರನೆ ಮುಂದೆ
ಬಾಧಿಸದೆ ಬಿಡವು ಪೂರ್ಣಜ್ಞ.

೧೮೩೧

ತಾಮಸದೊಳಿರುವವಗೆ, ನೇಮನಿಷ್ಠೆಗಳುಂಟೆ?
ಕಾಮಿನಿಯ ತೋಳ ತೆಕ್ಕೆಯಲಿ ಸಿಕ್ಕವಗೆ
ನೇಮಕೆಡೆಯೆಲ್ಲಿ? ಪೂರ್ಣಜ್ಞ.

೧೮೩೨

ನಿತ್ಯ ಸ್ನಾನವ ಮಾಡಿ, ನಿತ್ಯ ಭಸ್ಮವ ಧರಿಸಿ
ನಿತ್ಯ ಮಿಥ್ಯೆಯನು ನುಡಿವವನು ಪಾಪವನು
ಬಿತ್ತಿ ಬೆಳೆದಂತೆ ಪೂರ್ಣಜ್ಞ.

೧೮೩೩

ಹಂಡಬಂಡರು ಕೂಡಿ, ಬಂಡಾಯ ಹೂಡುವರು
ಕಂಡಕಂಡಂತೆ ಗೀಚುತ್ತ ಸಂಸ್ಕೃತಿ ಸಭ್ಯತೆಯ
ಚಂಡು ಮುರಿಯುವರು ಪೂರ್ಣಜ್ಞ.

೧೮೩೪

ಸಾಸಿವೆಯು ಸುಖಕೆಷ್ಟು, ಘಾಸಿಯಾಗುತಲಿಹುದು
ಮೋಸದಿಂ ಮನವು ಚಲಿಸುತ್ತಲತ್ತಿತ್ತ,
ಈಶನಂ ಮರೆತು ಪೂರ್ಣಜ್ಞ.

೧೮೩೫

ಸಂಘ ಸಂಸ್ಥೆಗಳಿಂದ್ಯು, ತುಂಗ ಸಂಸ್ಕೃತಿ ತೊರೆದು
ಕಂಗೊಳಿಪ ಮೂಲಸ್ಥಾಪಕರ ಹಿರಿಗುರಿಗೆ
ಭಂಗ ತರುತಿಹವು ಪೂರ್ಣಜ್ಞ.

೧೮೩೬

ನೀತಿಯಿಲ್ಲದ ಗುರುವ್ವ, ಭೀತಿಯಿಲ್ಲದ ಆಳು
ಜ್ಯೋತಿ ಬೆಳಗದಿಹ ಮಂದಿರವು ಇವು ಮೂರು
ಯಾತಕ್ಕೂ ಬೇಡ ಪೂರ್ಣಜ್ಞ.

೧೮೩೭

ವಿನಯವಿಲ್ಲದ ತನಯ್ಯ, ಧನವನೀಯದ ಧನಿಕ
ಮನೆತನದ ಮಾನ ಕಾಯದಂತಹ ಸತಿಯು
ತೃಣಕಿಂತ ಹೀನ ಪೂರ್ಣಜ್ಞ.

೧೮೩೮

ಭಕ್ತಿ ಮಾರ್ಗವ ಬಿಟ್ಟು, ಭುಕ್ತಿ ಮಾರ್ಗವ ಪಿಡಿದು
ಯುಕ್ತಿ ತಂತ್ರದಲಿ ಶಕ್ತಿಯನು ಕಳಕೊಂಡು
ಹಿಕ್ಕೆಯಾಗಿಹರು ಪೂರ್ಣಜ್ಞ.

೧೮೩೯

ಆಶೆಯಳಿದರೆ ಮಾತ್ರ, ದಾಸತ್ವ ತೊಲಗುವದು
ಆಶೆಯಳಿದರ ಅದು ಘೋರ ದುರ್ಭವದ
ಪಾಶ ತಾನಕ್ಕು ಪೂರ್ಣಜ್ಞ.

೧೮೪೦

ಇಲಿಕಂಡು ಬೆಕ್ಕುಗಳು, ಮೊಲಕಂಡು ನಾಯಿಗಳು
ಗಳಿಲನೇ ನೆಗೆದು ಹಿಡಿವಂತೆ ವಿಷಯ ಸುಖ
ಕೆಳಸುವದು ಮನವು ಪೂರ್ಣಜ್ಞ.

೧೮೪೧

ದುರಿತ ಪಾರ್ಥೇನಿಯಂ, ಶಿರದ ಮೌಳಿಗೆಯಲ್ಲಿ
ಭರಿತಬೆಳೆದಲ್ಲಿ ಕಾಯವೆಂಬುವ ಹೊಲವು
ಬರಡು ತಾನಕ್ಕು ಪೂರ್ಣಜ್ಞ.

೧೮೪೨

ಹಣ-ಹೆಂಡ, ಹೆಣ್ಣು-ಹೊಲ, ಮನೆ ಸ್ಥಾನ ಸನ್ಮಾನ
ಏನಿತೆನಿತೊ ಆಶೆ ಆಮಿಷಗಳುರುಳಿನಲಿ
ಜನತಂತ್ರ ನಿಧನ ಪೂರ್ಣಜ್ಞ.

೧೮೪೩

ಸಮದರ್ಶಿಯಾಗದಿರೆ, ಸಮಚಿತ್ತನಾಗದಿರೆ
ಸಮನುನುವಯು ಬುದ್ಧಿ, ಸಮನಿಸದೆ ಜಗಕೆಲ್ಲಿ
ಸಮರಸದ ಪ್ರಾಪ್ತಿ? ಪೂರ್ಣಜ್ಞ.

೧೮೪೪

ಪ್ರಾಮಾಣಿಕತೆಯಿರದ, ಸೋಮಾರಿ ಜನರಿಂದ
ಭೂಮಂಡಲದಿ ಕ್ಷಾಮಸ್ಥಿರ ಸೋಮಾರಿ
ಕ್ಷೇಮಾರಿ ಜಗಕೆ ಪೂರ್ಣಜ್ಞ.

೧೮೪೫

ಬೆಲೆಯಿಲ್ಲ ಸುಜನರಿಗೆ, ಬೆಲೆಯುಂಟು ಕುಜನರಿಗೆ
ಕೊಲೆಪಾತಕರಿಗೆ ಬಲವುಂಟು ಲೋಕದಲಿ
ಕಲಿಕಾಲದಾಳ್ಕೆ ಪೂರ್ಣಜ್ಞ.

೧೮೪೬

ಮನೆಯ ದುಃಸ್ಥಿತಿಯನ್ನು, ಮನೆಗೆ ಬಂದವರೆದುರು
ಮನ ಬಂದ ಹಾಗೆ ಹರಟಿದರೆ ಒಳಿತಲ್ಲ
ಮನೆಗೆ ಕೆಡಕುಂಟು ಪೂರ್ಣಜ್ಞ.

೧೮೪೭

ತ್ರಾಣವಿಲ್ಲದ ಎತ್ತು, ಕಾಣಲಾರದ ಕಣ್ಣು
ಪ್ರಾಣ ಕಳಕೊಂಡ ಮನುಜನಿಂ ಲೋಕಕ್ಕೆ
ಏನು ಉಪಯೋಗ? ಪೂರ್ಣಜ್ಞ.

೧೮೪೮

ಉಸುಕಿರುವ ಹೊಲದಲ್ಲಿ, ಹೊಸಭಾವಿ ತೋಡದಿರು
ಉಸುಕು ಕುಸಿಯುವದು ಹಣವು ಹಾಳಾಗುವದು
ಕಸವಿಸಿಯು ಮನಕೆ ಪೂರ್ಣಜ್ಞ.

೧೮೪೯

ಬೇಲಿ ಇಲ್ಲದ ಹೊಲವು, ತಾಳವಿಲ್ಲದ ಭಜನೆ
ಕೂಳಿರದ ಹೊಟ್ಟೆ, ಕಾಳಿರದ ಚೀಲಗಳು
ಹಾಳು ಸುರಿಯುವವು ಪೂರ್ಣಜ್ಞ.

೧೮೫೦

ಕಡುಲೋಭಿಯಾದವಗೆ, ಕಡುಕಷ್ಟ ಕಟ್ಟಿಹುದು
ಕಡುಲೋಭದಂತೆ ಬೇರೆ ದುರ್ಗುಣವಿಲ್ಲ
ಕಡೆಗೆಲ್ಲ ಕೇಡು ಪೂರ್ಣಜ್ಞ.

೧೮೫೧

ಮನುಜಂಗೆ ಸುಖವೀವ, ವನವೆಲ್ಲ ಹಾಳಾಗಿ
ವನಲಕ್ಷ್ಮಿ ಬೋಳಿಯಾದುದಕೆ ಕಾರಣವು
ಮನುಜನ ದುರಾಶೆ ಪೂರ್ಣಜ್ಞ.

೧೮೫೨

ಗರ್ವವೆಂಬುದ ಖರ್ವ, ದುವೃತ್ತಿಗಳ ಗರ್ಭ
ಗರ್ವಗಿರಿಯಂಥ ದೈತ್ಯಶೂಲ ತುತ್ತಾಯ್ತು
ಸರ್ವನಾಶಕ್ಕೆ ಪೂರ್ಣಜ್ಞ.

೧೮೫೩

ಪುತ್ರರಿಲ್ಲದ ಮನೆಯು, ಮಿತ್ರರಿಲ್ಲದ ಊರು
ಭೃತ್ಯರಿಲ್ಲದಿಹ ಮಾಮನೆ, ಮಹಾಸೌಧ
ಕತ್ತಲೆಯ ಪಾಳ್ಯ ಪೂರ್ಣಜ್ಞ.

೧೮೫೪

ವೇದಾಂತ ರಸವದು–ವಾರ್ದಿಗಳಿಗೆರೆಯದಿರು
ಗೋದಲೆಗೆ ಬರಡೆಮ್ಮೆ ಬಿಗಿದಂತವರ್ಗೆ
ಬೋಧೆ ಬರಿದಂತಕ್ಕು ಪೂರ್ಣಜ್ಞ.

೧೮೫೫

ಮದ–ಮೋಹ–ಮಾತ್ಸರ್ಯ, ಕದನ ಕಂಟಕ ಬುದ್ಧಿ
ಮದನ ಚೇಷ್ಟೆಗಳು ಮನದಿ ಮನೆ ಮಾಡಿರಲು
ಎದಗುದಿಯು ಬಿಡದು ಪೂರ್ಣಜ್ಞ.

೧೮೫೬

ಮಾಡುತಿಹ ಕೃತಿಯಲ್ಲಿ, ನೋಡುತಿಹ ದೃಷ್ಟಿಯಲಿ
ಆಡುತಿಹ ವಚನದಲಿ ವಂಚನೆಯು ಬೇಡ
ನೀಡು ಮನದರೆದು ಪೂರ್ಣಜ್ಞ.

೧೮೫೭

ಅಧಿಕಾರ ಐಶ್ವರ್ಯ, ಮುದದಿಂದ ಬಂದಾಗ
ಮದಮತ್ತನಾಗಿ ಮೆರದಾಡುವಂಥವನ
ಬದುಕೆಲ್ಲ ಬರಿದು ಪೂರ್ಣಜ್ಞ.

೧೮೫೮

ದಡದಡನೆ ಹರಿವ ಹೊಳೆ, ಮಡುಗಟ್ಟಿ ನಿಲ್ಲದಲೆ
ನಿಡುಕಾಲ್ವೆಯಾಗಿ ಹೊಲಕೆ ನೀರುಣಿಸದಲೆ
ಕಡಲಿಗ್ಗಿಳಿದರೇನು? ಪೂರ್ಣಜ್ಞ.

೧೮೫೯

ಶೃತಿಯು ಇಲ್ಲದ ಹಾಡು, ಮತಿಯು ಬೆಳಗದ ವಿದ್ಯೆ
ಕೃತಿಯಿಲ್ಲದಂಥ ಬರಿಮಾತು ಜೀವನದ
ಸ್ಥಿತಿಗತಿಗೆ ತೂತು ಪೂರ್ಣಜ್ಞ.

೧೮೬೦

ಪುಸ್ತಕದ ವಿದ್ಯೆಯದು, ಮಸ್ತಕದಿ ಸೇರದಿರೆ
ಕುಸ್ತಿ ಹಿಡಿವವನು ಕಸರತ್ತು ಮಾಡದಿರೆ
ಸುಸ್ತು ಎಲ್ಲೆಡೆಗು ಪೂರ್ಣಜ್ಞ.

೧೮೬೧

ಮಮಕಾರದಲಿ ಮುಳುಗಿ, ಕ್ರಮತಪ್ಪಿ ನಡೆವವಗೆ
ವಿಮಲ ಮಾನಸದ ತೀರ್ಥದಲಿ ಮೀಯದಿರೆ
ಸಮನಿಪುದೆ? ಶಾಂತಿ ಪೂರ್ಣಜ್ಞ.

೧೮೬೨

ಬಲಹೀನರಿಗೆ ವಿರಸ, ಅಳುವದೈ ಮಕ್ಕಳಿಗೆ
ಬಲವಿಹುದು ಕಳ್ಳರಿಗೆ ಸುಳ್ಳು ಹೇಳುವದು
ಬಲು ಬಲವು ನಿತ್ಯ ಪೂರ್ಣಜ್ಞ.

೧೮೬೩

ತಂತಿಯಿಂ ವಿದ್ಯುತ್ತು, ಕಾಂತಿಗೊಳಿಪುದು ಮನೆಯು
ತಂತಿ ಹಿಡಿದವನು ಕಾಣುವನು ಬಾಳ್ಗೊನೆಯು
ತಂತಿಯಿಂ ಜೋಕೆ ಪೂರ್ಣಜ್ಞ.

೧೮೬೪

ಹೊರ ಚೆಲುವಿಕೆಯು ಕಂಡು, ಮುರುಳಾಗಿ ಮನಸೋತು
ದುರುಳ ದುರ್ಗುಣದ ತರುಣಿಯನು ವರಿಸಿದರೆ
ಉರಿಯುಪ್ಪಿದಂತೆ ಪೂರ್ಣಜ್ಞ.

೧೮೬೫

ಕುಡಿದಾಗ ಗಾಡಿಯನು, ನಡೆಸುವದು ಒಳಿತಲ್ಲ
ಕಡುವೇಗದಿಂದ ಗಾಡಿಯನು ನಡೆಸುವದು
ಕೆಡುಕಿಗೌತಣವು ಪೂರ್ಣಜ್ಞ.

೧೮೬೬

ಶುಚಿಯಿರದ ವಸತಿಗಳು, ರುಚಿಯಿರದ ಭಕ್ಷ್ಯಗಳು
ಕುಚವಿರದ ಸುಗುಡಿ ರಸತೃಷೆಯು ರಸಿಕನಿಗೆ
ರುಚಿ ನೀಡಬಹುದೆ? ಪೂರ್ಣಜ್ಞ.

೧೮೬೭

ಶಿವಶಕ್ತಿ ಪಡೆಯದಲೆ, ಭವಿತನವ ಕಳೆಯಲ್ಕೆ
ತವುಡು ಕುಟ್ಟಿದೊಲು ಒಣ ಮಾತಾಡುವದು
ಅವಿವೇಕತನವು ಪೂರ್ಣಜ್ಞ.

೧೮೬೮

ಶೀಲವಿಲ್ಲದ ವಿದ್ಯೆ, ಶೀಲವಿಲ್ಲದ ನಡತೆ
ತಾಳಮೇಳಗಳು ಇಲ್ಲದಿಹ ಭಜನೆ ಇವು
ಹಾಳು ಹಾಳಯ್ಯ ಪೂರ್ಣಜ್ಞ.

೧೮೯೯

ತಾಳವಿಲ್ಲದೆ ಕುಣಿವ, ಮೇಳಗಳು ನಾಡಿನಲಿ
ಗೋಳು ತಂದಿಹವು, ಶರಣ ಸಭೆಯೆಂದೆನುತ
ಜಾಲ ಬೀಸಿಹವು ಪೂರ್ಣಜ್ಞ.

೧೮೭೦

ಚೆಲುವ ಬನಸಿರಿಕೊಲಿದು ಇಳಿಗಿಳಿವ ಮಳೆರಾಜ
ತಲೆ ಬೋಳು ಆದ ಅಡವಿಕರೆದರೆ ಧರೆಗೆ
ಮಳೆಯಿಳಿಯಬಹುದೆ? ಪೂರ್ಣಜ್ಞ.

೧೮೭೧

ಮಾತಿನಲಿ ಶಿವಶರಣ, ನೀತಿಯೋ ವಿಷಕಿರಣ
ಮಾತು ಹಿತವಾಗಿ ಕೃತಿಯಾಗದಿದ್ದರದು
ಕೋತಿ ಕುಣಿದಂತೆ ಪೂರ್ಣಜ್ಞ.

೧೮೭೨

ಹೊರನೋಟ ಹೋರಾಟ, ಅರಿವಿರದ ಕಚ್ಚಾಟ
ಕರಿಕೆಯು ತೆರನಂತೆ ಬೆಳೆಯುತ್ತಲಿದ್ದರೆ
ಪರಿಹಾರವೆಂದು? ಪೂರ್ಣಜ್ಞ.

೧೮೭೩

ನೀತಿಯಿಂ ನಡೆವವಗೆ, ಭೀತಿಯೆಂಬುವುದುಂಟೆ?
ನೀತಿಗೆಟ್ಟವನು ಉರಲು ಬಿಗಿಯುತ ಗಿಡಕೆ
ಜೋತು ಬಿದ್ದಂತೆ ಪೂರ್ಣಜ್ಞ.

೧೮೭೪

ಧನಲೋಭಿಯಾದವಗೆ, ಗುಣಲಾಭ ಲಭಿಸಿತೆ?
ಧನ ಮದಾಂಧನಿಗೆ ಲೋಕಮನ್ನಣೆಯುಂಟೆ
ಧನಲೋಭ ತ್ಯಾಜ್ಯ ಪೂರ್ಣಜ್ಞ.

೧೮೭೫

ಎತ್ತ ಹೋದರು ಜಗದಿ, ಮಿಥ್ಯೆ ಮೋಸದ ಜಾಲ
ಕುತ್ತಿಗೆಯ ಕೊಯ್ವ-ಚಿತ್ತುಕರಿಗಂಜಿ ಮನ
ತತ್ತರಿಸುತಿಹುದು ಪೂರ್ಣಜ್ಞ.

೧೮೭೬

ನಗೆಯೊಂದು ಸೋಜಿಗವು, ನಗೆಯರ್ಥ ನೂರೆಂಟು
ನಗೆಯ ಹಿಂಬದಿಗೆ ಹಗೆ ಹೊಗೆಯುತಿರಬಹುದು
ನಗೆಯ ನಂಬದಿರು ಪೂರ್ಣಜ್ಞ.

೧೮೭೭

ಸತ್ಯವನು ಕಪಟಿಗಳು, ತೊತ್ತಳದುಳಿವರಯ್ಯಾ
ಮಿಥ್ಯೆಯನೆ ಸತ್ಯವೆಂದು ತೋರಿಸಿ ಮನವ
ಕತ್ತಲಿಪರಯ್ಯಾ ಪೂರ್ಣಜ್ಞ.

೧೮೭೮

ಸಾವು ಬಂದಿರುವಾಗ, ಯಾವನೂ ರಕ್ಷಿಸನು
ಭಾವಿಯಲಿ ಹಗ್ಗ ಹರಿದಾಗ ಕೊಡವನ್ನು
ಯಾವ ಹಿಡಿಯುವನು? ಪೂರ್ಣಜ್ಞ.

೧೮೭೯

ದಾರಿಗಳು ನೂರಾರು, ಸಾರತರ ಗುರಿಯೊಂದೆ
ಸಾರಪಥ ಬಿಟ್ಟು ವಾಮಮಾರ್ಗದಿ ನಡೆಯೆ
ಸೇರುವೆಯ ಗುರಿಯ? ಪೂರ್ಣಜ್ಞ.

೧೮೮೦

ಗಳಿಕೆಯಲಿ ಉಳಿಸುತ್ತ, ಬಳಸುವನು ಮತಿವಂತ
ಗಳಿಕೆಯನು ಮೀರಿ ದುಂದುಗೈವವ ಕೊನೆಗೆ
ತೊಳಲಿ ಸಾಯುವನು ಪೂರ್ಣಜ್ಞ.

೧೮೮೧

ಪುಸ್ತಕದ ಜ್ಞಾನವದು, ಮಸ್ತಕದಿ ಮೂಡದಿರೆ
ಹಸ್ತದಲಿ ಶುದ್ಧಿ ಆಡದಿರೆ ಬಾಳು ಪ್ರ
ಶಸ್ತ ವಾದೀತೆ? ಪೂರ್ಣಜ್ಞ.

೧೮೮೨

ತಲೆಬೋಳು ಆದರೇಂ? ಬಲವಿಲ್ಲ ಮದುಳಿನಲಿ
ಹೊಲಬಿಲ್ಲದಂಥ ಮೂಢ ಮೂರ್ಖರ ಬೋಳು
ತಲೆಗೆ ಬೆಲೆಯುಂಟು ಪೂರ್ಣಜ್ಞ.

೧೮೮೩

ಅಂಧಶ್ರದ್ಧೆಯ ತಮದಿ, ಮುಂದುಗಾಣದೆ ಮೂಢ
ಮಂದಾತ್ಮರಿಂದು, ದಂದುಗದಿ ತೊಳಲಾಡಿ
ನೊಂದುಕೊಳುತಿಹರು ಪೂರ್ಣಜ್ಞ.

೧೮೮೪

ಓದದಲೆ ಬರೆಯದಲೆ ವಾದಗಳ ಮಾಡದಲೆ
ವೇದ ವೇದಿಪುದೆ? ಉಣ್ಣದಲೆ ಭೋಜ್ಯಗಳ
ಸ್ವಾದ ತಿಳಿದೀತೆ? ಪೂರ್ಣಜ್ಞ.

೧೮೮೫

ಎತ್ತೆತ್ತ ನೋಡಿದಡತ್ತ, ಕತ್ತಲೆಯು ತುಂಬಿಹುದು
ಸುತ್ತೆಲ್ಲ ಬರಿ ಮೋಸ ಕುಹಕ ತುಂಬಿರಲು
ಎತ್ತಣದು ಶಾಂತಿ ಪೂರ್ಣಜ್ಞ.

೧೮೮೬

ಭೌತತತ್ವವು ಇಂದು, ನೀತಿ ನಡತೆಯ ತೊರೆದು
ಸೋತಿಹುದು, ಜಗದ ಶಾಂತಿ ಪಾತ್ರೆಯ ತಳಕೆ
ತೂತು ಬಿದ್ದಿಹುದು ಪೂರ್ಣಜ್ಞ.

೧೮೮೭

ಕಲಿತವರು ಬಲು ಪೋಲಿಸಿ–ನೊಳು ಮುಳುಗಿ ಕಾಲವನು
ಕಳೆಯುವದ ನೋಡಿ, ನಗೆಯು ಬರುತಿಹುದು, ಇದು
ಕಲಿಯುಗದ ಮಹಿಮೆ ಪೂರ್ಣಜ್ಞ.

೧೮೮೮

ಪರಸತಿಯು ಮೋಹಿಸಿದ, ದುರುಳ ರಾವಣನಂದು
ಎರವಾದ ತನ್ನ ಪ್ರಾಣಕ್ಕೆ ಜನರಿದನು
ಮರೆಯದಂತಿರಲಿ ಪೂರ್ಣಜ್ಞ.

೧೮೮೯

ತನ್ನ ತಾನರಿಯದಲೆ, ಪ್ರೋನ್ನತಾಸನಕಾಗಿ
ಕುನ್ನಿಯಂಥವನು ಹಪಹಪಿಸಿದರೆ ಬಹುದೆ?
ಸನ್ನುತ ಸ್ಥಾನ ಪೂರ್ಣಜ್ಞ.

೧೮೯೦

ಕ್ರಿಯೆಯಿಲ್ಲದಿರುವಿಚ್ಛೆ, ಕ್ರಿಯೆಯಿಲ್ಲದಿಹ ಪೃಚ್ಛೆ
ಕ್ರಿಯೆಯಿರದ ಪ್ರತಿಭೆ ಬಂಜೆಗನಸಿನೊಲು ಹುಸಿ
ಕ್ರಿಯೆ ಸೃಜನಶಕ್ತಿ ಪೂರ್ಣಜ್ಞ.

೧೮೯೧

ಸ್ವಾನುಭವ ಪಡೆಯದಲೆ, ಏನು ಕಲಿತೇನು ಫಲ?
ಕಾನನದಿ ಬಿದ್ದ ಬೆಳ್ದಿಂಗಳಾ ಕಲಿಕೆ
ಸ್ವಾನುಭವಿಯಾಗು ಪೂರ್ಣಜ್ಞ.

೧೮೯೨

ಲಾಂಛನವ ಹಾಕಿದರೆ ಕೆಂಚ ತಾ ಕರಿಕಾಗ
ಲಾಂಛನಕೆ ತಕ್ಕ ಆಚಾರವಿಲ್ಲದವ
ನೀಚನಾಗುವನು ಪೂರ್ಣಜ್ಞ.

೧೮೯೩

ಪ್ರೇಮವಿಲ್ಲದಿಹ ಪತ್ನಿ, ಮಮತೆಯಿಲ್ಲದ ಮಾತೆ
ಧರ್ಮವಿಲ್ಲದಿಹ ಗುರುಗಳಿಹರು ಸಮಾಜ
ಕ್ಷೇಮ ಕಂಟಕರು ಪೂರ್ಣಜ್ಞ.

೧೮೯೪

ಪೂರ್ಣವಿಲ್ಲದ ತ್ಯಾಗ, ಪೂರ್ಣವಿಲ್ಲದ ಯೋಗ
ಪೂರ್ಣ ಹಾಡದ ರಾಗ ನೀಡುವವೆ ಜಗಕೆ
ಪೂರ್ಣ ತೃಪ್ತಿಯನು? ಪೂರ್ಣಜ್ಞ.

೧೮೯೫

ಮಾನವತೆ ಮಾತಿನಲಿ, ದಾನವತೆ ನಡತೆಯಲಿ
ಹೀನ ದೌರ್ಜನ್ಯ ತಾಂಡವಿಸುತಿಹುದೀಗ
ಕ್ಷೋಣಿ ರಂಗದಲಿ ಪೂರ್ಣಜ್ಞ.

೧೮೯೬

ಮೋಸಕ್ಕು ಮಿತಿ ಬೇಕು, ರೋಷಕ್ಕು ಮಿತಿ ಬೇಕು
ಮೋಸ ರೋಷಗಳ ಸಾಗರದಿ ಬಿದ್ದವನು
ನಾಶವಾಗುವನು ಪೂರ್ಣಜ್ಞ.

೧೮೯೭

ಒಂದೊಂದು ವಿಷಯದಲಿ, ಬಂಧನದಿ ಬೀಳುತ್ತ
ಬೆಂದು ಹೋಗುವವು ಪ್ರಾಣಿಗಳು, ನರನೈದು
ಇಂದ್ರಿಯದಿ ಕೆಡುವ ಪೂರ್ಣಜ್ಞ.

೧೮೯೮

ಬಿರುಸು ಮಾತುಗಳಿಂದ, ವಿರಸಕಿಡಿ ಕಾರುವದು
ಅರಿವೆಲ್ಲ ನಶಿಸಿ ದ್ವೇಷ ಧಗಧಗಿಸುವದು
ಕೊರಗುವದು ಮನವು ಪೂರ್ಣಜ್ಞ.

೧೮೯೯

ಪರರ ಆಶ್ರಯದಲ್ಲಿ ಕೊರಗದಿರು ಕೊನೆತನಕ
ಮರದ ಮೇಲಿರುವ ಲತೆಯೊಮ್ಮೆ ಬಿರುಗಾಳಿ
ಗುರುಳುವದು ನೆಲಕೆ ಪೂರ್ಣಜ್ಞ.

೧೯೦೦

ಎಲ್ಲ ವ್ಯವಹಾರದಲಿ, ಸುಳ್ಳು ಮೋಸದ ತಂತ್ರ
ಸುಳ್ಳು ಸೊಗಡಿರದ ಸತ್ಯ ಪ್ರಾಮಾಣಿಕತೆ-
ಯುಳ್ಳವರು ಕಡಿಮೆ, ಪೂರ್ಣಜ್ಞ.

೧೯೦೧

ಸಂಸಾರಿ ತಪ್ಪಿದರೆ, ಸಂಸಾರ ಕೆಡಬಹುದು
ಆಶಾವಿರಹಿತ ಸನ್ಯಾಸಿ ತಪ್ಪಿದರೆ
ನಾಶ ಸುಸಮಾಜ ಪೂರ್ಣಜ್ಞ.

೧೯೦೨

ಹಗ್ಗವಿಲ್ಲದ ತೇರು, ಹುಗ್ಗಿಯಿಲ್ಲದ ಹಬ್ಬ
ಮುಗ್ಧಲಲಿ ಸತಿಯು ಇಲ್ಲದಿಹ ಪಲ್ಲಂಗ
ಹಿಗ್ಗಿಸವು ಮನವ ಪೂರ್ಣಜ್ಞ.

೧೯೦೩

ಒಂಟಿಯಲಿ ಹೆಂಡತಿಯ ಬಿಟ್ಟು ಅಲೆವವ ಹೆಡ್ಡ
ನೆಂಟರಿಗೆ ಸಾಲಕೊಟ್ಟವನು ಹಿಡಿಯುವನು
ಕಂಟಕದ ಹಾದಿ ಪೂರ್ಣಜ್ಞ.

೧೯೦೪

ಸಿಕ್ಕ ಸಿಕ್ಕವರಲ್ಲಿ ಇಕ್ಕದಿರು ನಂಬುಗೆಯ
ಬಕ್ಕಣ ಬಡುಕರು ಕಿಕ್ಕಿರಿದು ತುಂಬಿಹರು
ಕೊಕ್ಕೆ ಹಾಕುವರು ಪೂರ್ಣಜ್ಞ.

೧೯೦೫

ಅತಿಯು ಗತಿಗೆಡಿಸುವದು, ಮತಿಗೆ ಮುಸುಕೆಳೆಯುವದು
ಸ್ಮಿತವದನದಿಂದ ಹಿತವಾಗಿ ವರ್ತಿಸಲು
ಕ್ಷಿತಿಗೊಳ್ಳುತಿಹುದು ಪೂರ್ಣಜ್ಞ.

೧೯೦೬

ಇವರು ಅವರನು ತೆಗಳಿ, ಅವರು ಇವರನು ತೆಗಳಿ
ಸುವಿವೇಕ ಸರಿಸಿ ಆಡಳಿತ ನಡೆಸುವದು
ಅವಿವೇಕದಾಳ್ಕೆ ಪೂರ್ಣಜ್ಞ.

೧೯೦೭

ಗುರುಹಿರಿಯರನು ಬರಿದೆ, ಜರಿಯದಿರು ದುರ್ಮದದಿ
ದುರವಸ್ಥೆ ನಿನಗೆ ಮುಳುವಾಗದೆ ದಿಟವು
ಗುರು ದ್ರೋಹ ಪಾಪ, ಪೂರ್ಣಜ್ಞ.

೧೯೦೮

ಉಪಕಾರ ಪಡೆದು ಪ್ರತಿ, ಅಪಕಾರಗೈವಂಥ
ಕಪಟಿಗಳಕುಲವು ದಿನದಿನಕೆ ಬೆಳೆಯುತಿದೆ
ತಪಿಸುತಿದೆ ಲೋಕ ಪೂರ್ಣಜ್ಞ.

೧೯೦೯

ಹಸಿದು ಮಲಗಿದವಂಗೆ, ವ್ಯಸನಪಡುವರಾರು?
ಉಸಿರು ಹೋಗುವ ಸಮಯದಲಿ ಅಳುವವರು
ವಿಶ್ವದಲಿ ಎಲ್ಲಿ? ಪೂರ್ಣಜ್ಞ.

೧೯೧೦

ಕೆನೆಯಿರದ ಮೊಸರನ್ನು, ದಿನವೆಲ್ಲ ಕಡೆದಂತೆ
ಮನವಿರದ ಕೆಲಸ ಎಳ್ಳು ಇಲ್ಲದ ಗಾಣ-
ವನು ತಿರುವಿದಂತೆ ಪೂರ್ಣಜ್ಞ.

೧೯೧೧

ಗುಣಸಿರಿಯು ಬಲಿಗೊಟ್ಟು, ಹಣಗಳಿಸಿ ಫಲವೇನು?
ಎಣಿಕೆಗಳವಡದ, ಹಣ ಜಗದ ನೆಮ್ಮದಿಯ
ಹೆಣ ಹಾಕುತಿಹುದು ಪೂರ್ಣಜ್ಞ.

೧೯೧೨

ದರ್ಪಸರ್ಪನ ಹೆಡೆಯು, ಅಪ್ಪಳಿಸಿ ಜನರನ್ನು
ತೆಪ್ಪನಾಗಿಸಿದೆ ಸಜ್ಜನರು ಎಡೆಯೊಡೆದು
ಸಪ್ಪನಾಗಿಹರು, ಪೂರ್ಣಜ್ಞ.

೧೯೧೩

ಕುಲವು ಹಿರಿದಾಗಿರಲು, ಶೀಲವಿರದಿರೆ ಜಗದಿ
ಬೆಲೆಯೆಲ್ಲಿ ಕುಲಕೆ? ಪರಿಮಳವು ಇಲ್ಲದಿಹ
ಅಲರಿದ್ದರೇನು? ಪೂರ್ಣಜ್ಞ.

೧೯೧೪

ಉಪಕಾರ ಪಡೆದವರು, ಅಪಕಾರ ಬಯಸಿದರೆ
ವಿಪರೀತ ಭಾವ ಬೆಳೆಸಿದರೆ ಜಗದೊಳಗೆ
ಅಪಮಾನವುಂಟು ಪೂರ್ಣಜ್ಞ.

೧೯೧೫

ನೀತಿವಂತರ ಬಳಗ, ಭೂತಳದಿ ಕರುಗುತಿವೆ
ನೀತಿಗೇಡಿಗಳ ಕೋಡುಗಳು ಸುಜನರನು
ಘಾತಿಗೊಳಿಸುತಿವೆ ಪೂರ್ಣಜ್ಞ.

೧೯೧೬

ಮಿತ್ರತ್ವ ದೊರೆಯುವದು, ಕರ್ತೃತ್ವ ಗಳಿಸುವದು
ಕರ್ತವ್ಯನಿಷ್ಠ ಸೇವಕರು ಲಭಿಸುವದು
ಮರ್ತ್ಯದೊಳು ಕಷ್ಟ ಪೂರ್ಣಜ್ಞ.

೧೯೧೭

ಬದುಕನ್ನು ಹದಗೆಡಿಪ, ಕುದುರುಗೇಡಿಗಳುಂಟು
ಮೃದುಮಾತಿನಿಂದ ದೂರವಿರಿಸವರನ್ನು
ಕದನಕಿಳಿಯದಿರು ಪೂರ್ಣಜ್ಞ.

೧೯೧೮

ಪಿಸುಣರಾಡುವ ಮಾತು, ವಿಷವು ಕಿವಿ ಮನಗಳಿಗೆ
ಪಿಸುಣರೊಡನಾಡದಿರು ನೀನು ಪೈಶುನ್ಯ
ವಶನಾಗಬೇಡ ಪೂರ್ಣಾಜ್ಞ.

೧೯೧೯

ತತ್ವ ತಿಳಿಯದೆ ಜನರು, ಹೊತ್ತುಗಳೆವರು ವ್ಯರ್ಥ
ಸತ್ಯವನು ತೊರೆದು ಮಿಥ್ಯ ಮೆಚ್ಚುವ ಜನರು
ಕತ್ತೆಗಿಂ ಕೀಳು ಪೂರ್ಣಾಜ್ಞ.

೧೯೨೦

ಪಾಪಿಗಳು ಕೋಪಿಗಳು, ರೂಪಿಗಳು ಜಗದಲ್ಲಿ
ತಾಪ ಕೊಡುತಿಹರು ಇದನರಿತು ನೀನು ಇರು
ಜೋಪಾನದಿಂದ ಪೂರ್ಣಾಜ್ಞ.

೧೯೨೧

ಕೀಲವಿಲ್ಲದ ಬಂಡಿ, ಬಾಲವಿಲ್ಲದ ಮಂಗ
ಜೋಲು ಹೊಡೆಯುತಿಹ ಶೆರೆ ಗಾಂಜಿ ವ್ಯಸನಿಗಳ
ಬಾಳೆಲ್ಲ ಹಾಳು ಪೂರ್ಣಾಜ್ಞ.

೧೯೨೨

ಉಂಡೊಡನೆ ಮಲಗದಿರು, ಕಂಡಂತೆ ತಿರುಗದಿರು
ಭಂಡ ಜನರೊಡನೆ ಸಖ್ಯವನು ಬೆಳಸದಿರು
ಕೆಂಡಕಾರದಿರು ಪೂರ್ಣಾಜ್ಞ.

೧೯೨೩

ಶೋಧನೆಯು ಸುವಿಚಾರ, ಶೋಧಿಸಲಿ ಬೋಧಿಸಲಿ
ಶೋಧನೆಯು ಕುಪ್ರಚೋದನೆಯ ಮಾಡಿದರೆ
ವ್ಯಾಧಕೃತಿಯಕ್ಕು ಪೂರ್ಣಾಜ್ಞ.

೧೯೨೪

ಚಕ್ರವಿಲ್ಲದ ರಥವು, ತುಕ್ಕು ಹಿಡಿದಿಹ ಯಂತ್ರ
ಮುಕ್ಕಾದ ಗಡಿಗೆ ಇವು ಲೋಕದಲಿ ಪಳಿಗೆ
ಪಕ್ಕಾಗದಿರವು ಪೂರ್ಣಾಜ್ಞ.

೧೯೨೫

ವಸತಿಯಿಲ್ಲದಿರಿರಲಿ, ವಸನವಿಲ್ಲದಿರಿರಲಿ
ಅಶನವಿಲ್ಲದಿರೆ ಕೃಶನಾಗಿ ಮೃತ್ಯುವಿನ
ವಶವಹನು ಬೇಗ ಪೂರ್ಣಜ್ಞ.

೧೯೨೬

ಅಭ್ಯಾಸಗೈವವಗೆ, ಸಭ್ಯ ಸಂಸ್ಕೃತಿಬಹುದು
ಅಭ್ಯಾಸರಹಿತ ಮೂರ್ಖಮನುಜನ ಮತಿಗೆ
ಮಬ್ಬು ಕವಿಯುವದು ಪೂರ್ಣಜ್ಞ.

೧೯೨೭

ಇರುವೆಗಳು ಕೂಡಿಟ್ಟ, ಅರಳುಗಳು ಕಾಳುಗಳು
ತಿರುಗಿ ಜೇನ್ನೊಣವು ತುಂಬಿಟ್ಟ ಜೇಂಗೊಡವು
ಪರರ ಪಾಲಕ್ಕು ಪೂರ್ಣಜ್ಞ.

೧೯೨೮

ಮೂಢ ಮೂರ್ಖರ ಕೂಟ, ಕಾಡುಕೋಣಗಳಾಟ
ನಾಡಿನಾ ಜನತೆಗಿದು ಬಲು ಕಾಟ ನೋಡು
ಬೇಡ ಲೋಕಕಿದು ಪೂರ್ಣಜ್ಞ.

೧೯೨೯

ವೇಗವಿಲ್ಲದ ಕುದುರೆ, ಯೋಗವಿಲ್ಲದ ಯತಿಯು
ಸಾಗು ಇಲ್ಲದ ಹೊಲವು ಯಾರಿಗೂ ಸದುಪ-
ಯೋಗಕ್ಕೆ ಇಲ್ಲ ಪೂರ್ಣಜ್ಞ.

೧೯೩೦

ಹುಂಬ ದುರ್ನಡತೆಗಳು, ತುಂಬಹಬ್ಬುತಲಿಹವು
ಮುಂಬರುವೆಳೆಯರ ಮೈಮನದಿ ಕೆಟ್ಟಗುಣ
ತುಂಬುವದು ಬೇಡ ಪೂರ್ಣಜ್ಞ.

೧೯೩೧

ತಿಳಿವಳಿಕೆಯಿರದವರು, ಒಳಿತುಕೆಡಕುಗಳನ್ನು
ಕುಳಿತುಯೋಚಿಸದೆ ಪರರನ್ನು ಟೀಕಿಸುತ
ಕುಲುಕುಲು ನಗುವರು ಪೂರ್ಣಜ್ಞ.

೧೯೩೨
ಕೆಲಹೊತ್ತು ಸಂತುಷ್ಟ, ಕೆಲಹೊತ್ತು ಕೋಪಿಷ್ಠ
ನೆಲೆಯಿಲ್ಲದವರ ಬಾಳೆಲ್ಲ ಬಲುಗೋಳು
ತಳವಿರದಗಡಿಗೆ ಪೂರ್ಣಜ್ಞ.

೧೯೩೩
ಸುಗುಣ ಸಂಸ್ಕೃತಿರಹಿತ, ಮಗನಿದ್ದು ಫಲವೇನು?
ನಗೆಯಿರದ ಸಿಡುಕು ಸತಿಯಿದ್ದು ಫಲವೇನು?
ಸೊಗವೀಯರವರು ಪೂರ್ಣಜ್ಞ.

೧೯೩೪
ಮಡಿಮಡಿಯು ಎನ್ನುತ್ತ, ಮಡುವಿನೊಳು ಬೀಳದಿರಿ
ಒಡಲೊಳಗೆ ಹೊಲಸಿಟ್ಟು ನದಿಯ ಮುಳುಗಿದರೆ
ಮೃಡನೊಲಿಯುಬಹುದೆ? ಪೂರ್ಣಜ್ಞ.

೧೯೩೫
ಕನಸಿನಲಿ ಕಂಡದ್ದು, ಮನದೊಳಿಟ್ಟು ಕುಳಿತರೆ
ಕನ್ನಡಿಯುಗಂಟನ್ನು ನೋಡುತ್ತ ಕುಳಿತು
ಕನಕರಿಸಿದಂತೆ ಪೂರ್ಣಜ್ಞ.

೧೯೩೬
ಪಾಕಶಾಸ್ತ್ರವನೋದಿ, ಪಾಕಗೈದುಣ್ಣದಿರೆ
ಲಕ್ಷಗ್ರಂಥಗಳ ಓದಿ ತಿರುಳರಿಯದಿರೆ
ಶುಷ್ಕವಾ ಓದು ಪೂರ್ಣಜ್ಞ.

೧೯೩೭
ನಡೆವವನು ಒಮ್ಮೊಮ್ಮೆ, ಎಡಹುವದು ಸಹಜವದು
ಎಡಹುವದೆ ನಿತ್ಯ ಪರಿಪಾಠವಾದರದು
ಕೆಡುಕಿಗೊಯ್ಯುವದು ಪೂರ್ಣಜ್ಞ.

೧೯೩೮
ಅಗ್ನಿ ಬನಸಿರಿಯನ್ನು, ದಗ್ಧಗೈಯ್ಯುವತೆರದಿ
ದಗ್ಧಗೈಯ್ಯುತಿದೆ ಮತ್ಸರವು ಗುಣಸಿರಿಯ
ತಗ್ಗಿಸೈ ಬೇಗೆ ಪೂರ್ಣಜ್ಞ.

೧೯೪೯

ಬಲು ಮೂಢನಾದವನ, ತಿಳಿಗೇಡಿಯಾದವನ
ಬಳಿಯಲ್ಲಿ ನ್ಯಾಯನಿರ್ಣಯುವ ಬೇಡುವದು
ಬಲುಮೂರ್ಖತನವು ಪೂರ್ಣಜ್ಞ.

೧೯೫೦

ಕರಿಗುಣದ ನರಿನರನು, ಪರಸಿರಿಗೆ ಕರಬುವನು
ಕರುಬುದಲಿ ತನ್ನ ಗುರಿಯು ಗಿರಿ ಏರಿ ಸುಖ
ಸಿರಿ ಪಡೆವುದೊಳಿತು ಪೂರ್ಣಜ್ಞ.

೧೯೫೧

ಮುಳ್ಳುಗಳ ಬಿತ್ತಿದಗೆ, ಒಳ್ಳೆ ದಾರಿಯು ಸಿಗದು
ಕಳ್ಳತನ ಹಾದರದಿ ನಡೆದು ಜೀವಿಪನ
ತಳ್ಳುವರು ಹೊರಗೆ ಪೂರ್ಣಜ್ಞ.

೧೯೫೨

ಕುರುಡರಿಬ್ಬರು ಕೂಡಿ, ಸರಿದಾರಿ ಹುಡುಕಿದರೆ
ಸರಿದಾರಿ ತೋರ ಬಹುದೇನು? ಗುಂಡಿಯಲಿ
ಉರುಳಿಬೀಳುವರು, ಪೂರ್ಣಜ್ಞ.

೧೯೫೩

ಕಾರಣವು ಇಲ್ಲದಲೆ, ಭಾರಿಪಕ್ಷ ಪಾತವನು
ಜೋರಿನಿಂ ಮಾಡಿದರೆ ಬೇಡ ಪ್ರತೀಕಾರ
ಸಾರಿ ಹೇಳುವೆನು ಪೂರ್ಣಜ್ಞ.

೧೯೫೫

ತಮ್ಮ ಪಾಡಿಗೆ ತಾವು, ತಮ್ಮಮನೆಯೊಳಗಿರಲು
ಸುಮ್ಮಸುಮ್ಮನೆಯೆ ಜಗಳ ತೆಗೆಯುವವನೊಬ್ಬ
ಎಮ್ಮೆ ತಮ್ಮಣ್ಣ ಪೂರ್ಣಜ್ಞ.

೧೯೫೬

ಇಂದಿಂಗೆ ನಾಳಿಂಗೆ, ಎಂದು ಕೂಡಿಡಬೇಡ
ಎಂದಿರುವ ಆದ್ಯವಚನದಾಚರಣೆಯದು
ಇಂದಿಗಸದಳವು ಪೂರ್ಣಜ್ಞ.

೧೯೪೬

ಗಡಿಬಡಿಸಿ ನಡೆಯದಿರು, ಗಡಬಡಿಸಿ ನುಡಿಯದಿರು
ಎಡವಿ ಬೀಳಲುಬಪುದು ದುಡುಕಿ ನಡೆವವನು
ದುಡುಕಿನಿಂ ಕೆಡಕು ಪೂರ್ಣಜ್ಞ.

೧೯೪೭

ಮುತ್ತು ಇಲ್ಲದ ಶಿಂಪು, ಎಂಥದಿದ್ದರು ಏನು?
ತತ್ವತಿರುಳಿರದ ಮಾತುಗಳು ಕೃತ್ರಿಮದ
ಮುತ್ತಿನಂತಕ್ಕು ಪೂರ್ಣಜ್ಞ.

೧೯೪೮

ಬಲುನುಡಿದು ಅರಿವಿರದೆ, ಕೆಲಸವನು ಗೈವವರು
ಕಲಿಯುತಕ್ಕವರು ಜೀವನದಿಯುಶವನ್ನು
ಗಳಿಸುವದು ಕಷ್ಟ ಪೂರ್ಣಜ್ಞ.

೧೯೪೯

ಮರುಳು ಮಾನವರೆಲ್ಲ ಪರರದೋಷಗಳೆತ್ತಿ
ಒರಿನುಡಿದು ಕೆದಕುವರು ಅರಿತವರು ನಿಜದ
ಅರಿವು ನೀಡುವರು ಪೂರ್ಣಜ್ಞ.

೧೯೫೦

ನಾಲಗೆಯು ಅದೆಯೊಂದು, ಖೂಳಮನುಜನ ತೆರದಿ
ಕೀಳುಮಾತಿನಲಿ ಕಾಲವನು ಕಳೆದರವ
ಬೀಳುವನು ಕೆಳಗೆ ಪೂರ್ಣಜ್ಞ.

೧೯೫೧

ಸಮಬುದ್ಧಿಯಿದ್ದವರು, ಸುಮನದಿಂ ಸೇರುವರು
ಸಮಬುದ್ಧಿ ಇರದವರು ಕಲಹದಲಿ ನಿತ್ಯ
ಸಮಯ ಕಳೆಯುವರು ಪೂರ್ಣಜ್ಞ.

೧೯೫೨

ತಮ್ಮ ತಮ್ಮೊಳಗೆ ಒಣ, ಹೆಮ್ಮೆಯಿಂಕಾದಾಡಿ
ಸುಮ್ಮನೇ ಹಾಳಾಗಿ ಹೋಗುವರು ಹುಂಬ
ಎಮ್ಮೆ ತಮ್ಮಗಳು ಪೂರ್ಣಜ್ಞ.

೧೯೫೩

ಕ್ಷಾರವನು ಹಾಕಿದರೆ, ಕ್ಷೀರವದು ಕೆಡುವಂತೆ
ಸಾರಸಜ್ಜನರು ದುರ್ಜನರ ಸಂಗದಿಂ
ದಾರಿತಪ್ಪುವರು ಪೂರ್ಣಜ್ಞ.

೧೯೫೪

ಮನುಜಂಗೆ ಮನುಜನೆ, ಘನಶತ್ರುವಾಗಿಹನು
ಮನುಜನಿಂ ಮಿಗಿಲು ಮಿಕ್ಕಿಲ್ಲ ಪ್ರಾಣಿಗಳು
ಮನುಜ ಬಲುದುಷ್ಟ ಪೂರ್ಣಜ್ಞ.

೧೯೫೫

ಗುರುಗಳನು ನಿಂದಿಸುತ, ಹಿರಿಯರನು ಜರಿಯುತ್ತ
ಅರಿವು ಕೊಟ್ಟವರ ಕಡೆಗಣಿಸಿ ಉಪಕಾರ
ಮರೆತಿಹರು ನೋಡು ಪೂರ್ಣಜ್ಞ.

೧೯೫೬

ಕೋಮು ಗಲಭೆಗಳಿಂದು, ಪ್ರೇಮವನು ಸುಟ್ಟುರುಹಿ
ಧಾಮುಗಳ ದಹಿಸಿ, ಧೂಮುವೆಬ್ಬಿಸುತಿಹವು
ರಾಮ ನೀನೋಡು ಪೂರ್ಣಜ್ಞ.

೧೯೫೭

ಕೊಳ್ಳಿ ಹೊಡೆಯುವ ಜನರು, ಕೊಳ್ಳಿಹಚ್ಚುವ ಜನರು
ಎಲ್ಲ ಜಾತಿಗಳಲ್ಲಿ ಚೆಲ್ಲವರಿದಿಹರು
ನಿಲ್ಲಿಸುವರಾರು? ಪೂರ್ಣಜ್ಞ.

೧೯೫೮

ತತ್ವ ಬರಿಮಾತಿನಲಿ, ಕುತ್ತಿಗೆಯ ಕೊಯ್ವುಕೃತಿ
ಉತ್ತಮಿಕೆ ಸತ್ತು ಸುಡಗಾಡ ಕಂಡಿಹುದು
ಹತ್ಯೆ ಹಬ್ಬುತಿವೆ ಪೂರ್ಣಜ್ಞ.

೧೯೫೯

ಶಾಂತಿ ಸಂಧಾನಗಳು, ಭ್ರಾಂತಿಗೊಳ್ಳುತ್ತಿಹವು
ಎಂತೇನೋ ಮುಂದೆ ಎಲ್ಲವರ ಮನದಲ್ಲಿ
ಧ್ವಾಂತವೇ ಧ್ವಾಂತ ಪೂರ್ಣಜ್ಞ.

೧೯೬೦

ರಾಜಕಾರಣಿಗಳಹ, ಮೋಜು ಮಾಡುತ್ತಿಹರು
ರಾಜಿಯಾಗದಲೆ ನಮ್ಮ ದೇಶದ ಕೀರ್ತಿ
ತೇಜಕಳೆದಿಹರು ಪೂರ್ಣಜ್ಞ.

೧೯೬೧

ದೇಶಹಿತ ಕಡೆಗಣಿಸಿ, ಘಾಸಿಮಾಡುತಲಿಹರು
ಮೋಸ ವ್ಯಾಪಾರದಲಿ ಸಿಲುಕಿ ಕೊಂಡಿಹರು
ದೇಶದ್ರೋಹಿಗಳು ಪೂರ್ಣಜ್ಞ.

೧೯೬೨

ಪರಿಸರದ ಮಾಲಿನ್ಯ, ಭರದಿಂದ ಹಬ್ಬುತಿದೆ
ಹೊರಟಿಹುದು ಬಾಳು ಪ್ರಳಯ ಪ್ರಪಾತಕ್ಕೆ
ಅರಿವಿಲ್ಲ ಜನಕೆ ಪೂರ್ಣಜ್ಞ.

೧೯೬೩

ಮಾಯೆಯನು ಗೆಲಬಹುದು, ನ್ಯಾಯವನು ಗೆಲಬಹುದು
ಬಾಯ ಗೆಲಬಹುದು, ಕಾಮಗೆಲುವದುದೇವ-
ರಾಯನಿಗು ಕಷ್ಟ ಪೂರ್ಣಜ್ಞ.

೧೯೬೪

ಅಧಿಕಾರದಭಿಲಾಷೆ, ಅಧಿಕತರ ಧನದಾಶೆ
ಸದುಗುಣಸದಾಚರಣೆ ಸುವಿಚಾರ ಗಳನು
ಸದೆ ಬಡಿಯುತಿಹವು ಪೂರ್ಣಜ್ಞ.

೧೯೬೫

ಗಳಿಕೆಯಿಲ್ಲದ ಬದುಕು, ಜಲವಿರದ ಕೆರೆಯಂತೆ
ಒಳಕಲ್ಲುನೆಕ್ಕಿ ನಾಲಗೆಯು ಸವೆದಂತೆ
ಬಲುವ್ಯರ್ಥವಕ್ಕು ಪೂರ್ಣಜ್ಞ.

೧೯೬೬

ಹುತ್ತಬಡಿದರೆ ಹಾವು, ಸತ್ತುಹೋಗದು ಮನದ
ಕುತ್ತಲಳಿಯದಲೆ ಮಾಡಿದಂಥಹ ತಪಸ್ಸು
ಅರ್ಥವಿಲ್ಲದುದು ಪೂರ್ಣಜ್ಞ.

೧೯೬೭

ನಿಷ್ಠೆಯಿಲ್ಲದ ಭಕ್ತ, ನಟ್ಟಡವಿಯೊಳಗಿರಲು
ಕೆಟ್ಟಗುಣಬಿಡದು, ಜೀವಿಪನು ಕಪಟದೊಳು
ಭ್ರಷ್ಟತನದಿಂದ ಪೂರ್ಣಜ್ಞ.

೧೯೬೮

ಕೆಟ್ಟಬುದ್ಧಿಯ ಗುರುವು, ಭ್ರಷ್ಟನಾಗಿಹ ಮಂತ್ರಿ
ಕೊಟ್ಟದ್ದು ಕೊಡದ ನೆರೆಯವರು ಲೋಕಕ್ಕೆ
ದುಷ್ಟಾಗ್ರಣಿಗಳು ಪೂರ್ಣಜ್ಞ.

೧೯೬೯

ಮಾನವನು ಶ್ವಾನನಿಂ, ಹೀನನಾಗುತಲಿಹನು
ಶ್ವಾನನೊಳಗಿರುವ ನಂಬುಗೆಯು ಗುಣವಿಲ್ಲ
ಮಾನವನ ಮನದಿ ಪೂರ್ಣಜ್ಞ.

೧೯೭೦

ಕೊರಳಿನಲಿ ಸವಿನೀರ, ಹರವಿಯನು ಕಟ್ಟಿದರೆ
ಶಿರದಿ ಶಾಸ್ತ್ರಗಳ ಹೊರೆಗಳನು ಹೊರಿಸಿದರೆ
ದೊರೆತೀತೆ ಸುಖವು? ಪೂರ್ಣಜ್ಞ.

೧೯೭೧

ದುಡಿದಾಗ ದೊರೆಯುವದು, ಪಡಿಜೋಳ ಉಣ್ಣಲಿಕೆ
ದುಡಿಯದಲೆ ಅನ್ನ ಸಿಗಲೆಂಬುವನ ಕೈಗೆ
ಒಡೆದಿರುವ ಗಡಿಗೆ ಪೂರ್ಣಜ್ಞ.

೧೯೭೨

ಕಿರಿದೆಂದು ಕೆಲಸಕ್ಕೆ, ಮುರಿಯದಿರು ಮೂಗನ್ನು
ಹಿರಿಕಿರಿಯ ಭೇದ ಮಾಡಿ ದುಡಿಯದಿರೆ
ತಿರುಪೆಗತಿ ನಿನಗೆ ಪೂರ್ಣಜ್ಞ.

೧೯೭೩

ಬಾಳಿನಲಿ ನೂರೆಂಟು, ಗೋಳುಗಳು ಗೀಳುಗಳು
ಛೀಳಿಡುತ ಬೆನ್ನು ಹತ್ತಿರಲು ಅವುಗಳನು
ಸೋಲಿಪುದು ಕಷ್ಟ ಪೂರ್ಣಜ್ಞ.

೧೯೦೪

ಅರ್ಥವಿಲ್ಲದ ನುಡಿಯು, ಮೂರ್ತಿಯಿಲ್ಲದ ಗುಡಿಯು
ವ್ಯರ್ಥವದು ಎಳ್ಳು ಇಲ್ಲದಂತಹ ಗಾಣ
ಸುತ್ತಿದೊಲು ಕೋಣ ಪೂರ್ಣಜ್ಞ.

೧೯೦೫

ಮಧುರರಸವನಿರಿಸಿದರೆ, ಅಧರದಲಿ ಬಂತೇನು?
ಉದರದೊಳು ಇಳಿಯದಿರೆ, ಕೃತಿಗೈಯ್ಯದಿರೆ
ಕದವ ಬಡಿದಂತೆ ಪೂರ್ಣಜ್ಞ.

೧೯೦೬

ಅಟ್ಟಂಥ ಅಡಿಗೆಯನು, ಹೊಟ್ಟೆ ನೆತ್ತಿಯ ಮೇಲೆ
ಕಟ್ಟಿದರೆ ಬಂತೇನು? ಪಾಳ್ಬಾವಿಯಲ್ಲಿ
ಮೊಟ್ಟೆ ಹೊಡೆದಂತೆ ಪೂರ್ಣಜ್ಞ.

೧೯೦೭

ತಂದೆ ತಾಯಿಯ ಮಾತು, ಒಂದನೂ ಕೇಳದವ
ಹಿಂದೆ ಗುರುವಿನ ನಿಂದೆಗೈವಂಥ ಶಿಷ್ಯ
ಹಂದಿಗಿಂ ಕೀಳು ಪೂರ್ಣಜ್ಞ.

೧೯೦೮

ಶಾಂತಿಯಿಲ್ಲದ ವ್ಯಕ್ತಿ, ಶಾಂತಿಯಿಲ್ಲದ ದೇಶ
ಶಾಂತಿಯಿರದಿರುವ ಧರ್ಮವದು ಜಗವನ್ನು
ಭ್ರಾಂತಿಗೊಳಿಸುವದು ಪೂರ್ಣಜ್ಞ.

೧೯೦೯

ಹಳೆಯ ತಪ್ಪುಗಳನ್ನು, ತಿಳಿತಿಳಿದು ಮಾಡಿದರೆ
ಮಲದ ಪುಟ್ಟಿಯನು ತಲೆ ಮೇಲೆ ಹೊತ್ತಂತೆ
ಹೊಲಬುಗೆಟ್ಟಂತೆ! ಪೂರ್ಣಜ್ಞ.

೧೯೧೦

ಬಾಳೊಂದು ಹೆಗ್ಗಡಲು, ಆಳದಲಿ ಮೊಸಳೆಗಳು
ಜಾಲವನು ಬೀಸಿಹವು ಹುಟ್ಟು ಸಾವುಗಳು
ಗೋಳಿನಾಟಗಳು ಪೂರ್ಣಜ್ಞ.

೧೯೮೧

ಹೊಟ್ಟೆಗಿಲ್ಲದೆ ಅನ್ನ, ನಿಟ್ಟುಸಿರು ಬಿಡುವಾಗ
ಮಟ್ಟಿಗಟ್ಟಲೆ ತತ್ವ ಕುಟ್ಟ ತೊಡಗಿದರೆ
ಹೊಟ್ಟೆತುಂಬೀತೆ? ಪೂರ್ಣಜ್ಞ.

೧೯೮೨

ಕಣ್ಣಿಲ್ಲದಾತನಿಗೆ, ಕನ್ನಡಿಯು ಏತಕ್ಕೆ
ತನ್ನತನ ಇರದವಗೆ ಶಾಸ್ತ್ರಂಗಳೋದು
ಇನ್ನೇಕೆ ಬೇಕು? ಪೂರ್ಣಜ್ಞ.

೧೯೮೩

ಭೌತಿಕದ ಬೆಂಕಿಯಲಿ, ನೀತಿ ಸಂಸ್ಕೃತಿ ಸುಟ್ಟು
ಸಾತ್ವಿಕ ಜನಾಂಗ ಕ್ಷೀಣಿಸಿದೆ ನೈರಾಶ್ಯ
ಭೀತಿ ಬಿತ್ತುತಿದೆ ಪೂರ್ಣಜ್ಞ.

೧೯೮೪

ನಾಸ್ತಿಕ್ಯದಗ್ದುಳಿದು, ಆಸ್ತಿಕ್ಯ ಅಸುವಳಿದು
ಸುಸ್ತಾಗಿ ಬಾಳು ಬೇಲಿಸಿತ್ತು ಬಲಿತು ವಿ-
ಧ್ವಸ್ತವದು ಸ್ವಸ್ತಿ ಪೂರ್ಣಜ್ಞ.

೧೯೮೫

ನೀತಿಯನು ತುಳಿಯುತ್ತ, ಮಾತಿನಲಿ ಮಂಟಪವ
ಭೀತಿರದೆ ಕಟ್ಟುತಿಹ ವಂಚಕರು ಮುಂದೆ
ಸೋತು ಹೋಗುವದು ಪೂರ್ಣಜ್ಞ.

೧೯೮೬

ಗುರಿಯಿರದ ಬಾಳುವೆಯು, ಅರಿವಿರದ ಮಾನಸವು
ಕರುಳಿರದ ಸೇವೆ ಈ ಮೂರರೊಳು ತಿರುಳು
ಹುರುಳೆಂಬುದಿಲ್ಲ ಪೂರ್ಣಜ್ಞ.

೧೯೮೭

ಸುತ್ತೆಲ್ಲ ಕೊಲೆ ಸುಲಿಗೆ, ನಿತ್ಯವೂ ನಡೆದಿಹವು
ಉತ್ತಮರ ಮಾತು ನಡೆಯದಿದೆ, ಮುಂದೆ ಘನ
ಕುತ್ತು ಕಾಯ್ದಿಹುದು ಪೂರ್ಣಜ್ಞ.

**ಕೇಡು**

೧೯೮೮

೧'ಇರುವಿನಿಂದಧಿಕವಹ, ವರಬೋಧೆಯಿನ್ನಿಲ್ಲ
'ಇರುವ' ಬಾಯಿಂದ ಬೋಧಿಪ್ರದೆ' ತತ್ವವನು?
ಇರುವದರ ಬೋಧೆ ಪೂರ್ಣಜ್ಞ.

೧೯೮೯

ಉರಿಯ ನಂದಿಸು ಬೇಗ, ಅರಿವೆಂಬ ನೀರಾಗು
ಉರಿಗೆ ಮತ್ತಷ್ಟು ಉರುವಲವ ಹಾಕಿದರೆ
ಸರುವನಾಶವದು ಪೂರ್ಣಜ್ಞ.

೧೯೯೦

ಶಕ್ತಿಯಿಲ್ಲದ ಬರಿಯ, ವ್ಯಕ್ತಿ ಪ್ರತಿಷ್ಠೆಯಲಿ
ರಕ್ತರಾಗಿಹರು ಮೃಷ್ಟಾನ್ನ ಭೋಜನದ
ಭುಕ್ತರಾಗಿಹರು ಪೂರ್ಣಜ್ಞ.

೧೯೯೧

ಮೋಸದಿಂ ಗಳಿಸುವಭಿ, ಲಾಷೆಯದು ತರವಲ್ಲ
ಪೋಸವದು ಮುಂದೆ ಬಾಳಿನೇಳಿಗೆಗೆಯಮ-
ಪಾಶವಾದೀತು ಪೂರ್ಣಜ್ಞ.

೧೯೯೨

ಒಳಬೆಳಗು ಇಲ್ಲದಲೆ, ಬೆಳಗಲಾರದು ಹೊರಗೆ
ಕಳೆಬಂದು ಕಾಯಕ್ಕೆ ಮನಕಿಲ್ಲಶಾಂತಿ
ಬೆಳೆಯುವದು ಭ್ರಾಂತಿ ಪೂರ್ಣಜ್ಞ.

೧೯೯೩

ಥರ್ಮಾಮೀಟರುಗಳು, ಜ್ವರದೇರಿಳಿವುಗಳನು
ತೋರ್ವಂತೆ ಶಾಸ್ತ್ರ ಜೀವನದ ತಪ್ಪೊಪ್ಪ
ತೋರುವವು ಜಗಕೆ ಪೂರ್ಣಜ್ಞ.

---

೧. ಇರುವೆ ಇದೊಂದು ನಿತ್ಯ ದುಡಿಯುವ ಸಣ್ಣ ಹುಳು.

೧೯೯೪

ಕಾಮ ಕ್ರೋಧಗಳಿಂದು, ನಾಮವನು ಕೆಡಿಸುತಿವೆ
ಧಾಮವನು ತೋರಿಸದೆ ಕೊರಕಲೊಳು ನೂಕಿ
ನೇಮ ನಶಿಸುವವು! ಪೂರ್ಣಜ್ಞ.

೧೯೯೫

ಮಾನವರು ಹೆಚ್ಚಿಹರು, ಮಾನವತೆ ನಶಿಸಿಹುದು
ದಾನವತೆಯಿಂದ ನರಳುತ್ತ ಈ ಜಗವು
ಮ್ಲಾನವಾಗುತಿದೆ ಪೂರ್ಣಜ್ಞ.

೧೯೯೬

ನಿಷ್ಠೆಯಿಲ್ಲದ ಆಳು, ಕೆಟ್ಟ ವಿಷಮಯ ಚೇಳು
ದುಷ್ಟದುರ್ಭಾವಿ ಸೇವಕರು ಶನಿಯಂತೆ
ಕಷ್ಟದಾಯಕರು! ಪೂರ್ಣಜ್ಞ.

೧೯೯೭

ದೇಹಕೋಟೆಯ ಮೇಲೆ, ಅಹಮೆಂಬ ಹೆಬ್ಬಂಡಿ
ದಹಿಸುವದು ಕುಳಿತು, ಮರವೆಯನು ತುಂಬುತ್ತ
ಮಹವ ಕಳೆಯುವದು ಪೂರ್ಣಜ್ಞ.

೧೯೯೮

ದುಡಿಯಲಾರದ ಗಂಡು, ಗಡಿಬಿಡಿಯ ಮಾಡುವನು
ಸಡಗರದಿ ನುಡಿದು ಜನರನ್ನು ಮಾಡುವನು
ಬುಡಮೇಲು ಕೊನೆಗೆ ಪೂರ್ಣಜ್ಞ.

೧೯೯೯

ಅರ್ಥವಿಲ್ಲದ ವಾಣಿ, ತಂತಿಯಿಲ್ಲದ ವೀಣೆ
ಭೃತ್ಯರಿಲ್ಲದಿಹ ಅರಮನೆಯು ಇವು ಮೂರು
ವ್ಯರ್ಥ ಕಾಣಯ್ಯ ಪೂರ್ಣಜ್ಞ.

೨೦೦೦

ವಿದ್ಯುತ್ತಿಲ್ಲದ೧ ಕೃಷಿಯು, ವಿದ್ವತ್ತಿಲ್ಲದ ಋಷಿಯು
ಶುದ್ಧಮನವಿರದ ಸೇವಕರು ಜಗದೊಳಗೆ
ಇದ್ದು ಇರದಂತೆ ಪೂರ್ಣಜ್ಞ.

೨೦೦೧

ಗಳಿಕೆಯಿಲ್ಲದ ಒದುಕು, ಬಳಕೆಯಿಲ್ಲದ ಭಾವಿ
ಮೊಳಕೆಯೊಡೆಯದಿಹ ಬೀಜಗಳು ಇವು ಮೂರು
ಕಳವಳಕೆ ಮೂಲ ಪೂರ್ಣಜ್ಞ.

೨೦೦೨

ಪಕ್ಷೋಪ ಪಕ್ಷದ ಬು–ಬುಕ್ಷಿತರ ಬಡಿದಾಟ
ಭಿಕ್ಷುಕರನು ನಾಚಿಪುದು; ದೇಶದಲಿ ದು–
ರ್ಭಿಕ್ಷೆ ಹಬ್ಬುತಿದೆ ಪೂರ್ಣಜ್ಞ.

೨೦೦೩

ಕಾರಣವು ಇಲ್ಲದಲೆ, ಬೇರೊಬ್ಬರಾ ಮನೆಗೆ
ಸೇರಿದರೆ ಒಳಿತಲ್ಲ ದುಃಖಸಾಗರದಿ
ಜಾರಿ ಬಿದ್ದಂತೆ ಪೂರ್ಣಜ್ಞ.

೨೦೦೪

ವಿನಾಶ ಕಾಲದೊಳು ಒಣಜಂಭ ಬರುತಿಹುದು
ಮನದಲ್ಲಿ ರೋಷ ತುಂಬುವದು, ನಶಿಸುವದು
ವಿನಯ ಸುವಿವೇಕ ಪೂರ್ಣಜ್ಞ.

೨೦೦೫

ತಾಳಿಲ್ಲ ಮೇಳಿಲ್ಲ, ಬಾಳೆಲ್ಲ ಬರಿಗೋಳು
ಕಾಲಯಮದೂತ ರಟ್ಟೆ ಹಿಡಿದೆಳೆವಾಗ
ಹೇಳುವರು ಏನು? ಪೂರ್ಣಜ್ಞ.

---

೧. ವಿದ್ಯುತ್ತಿಲ್ಲದ ಮತ್ತು ವಿದ್ವತ್ತಿಲ್ಲದ ಎಂಬಲ್ಲಿ 'ವಿದ್ಯುತಿಲ್ಲದ', 'ವಿದ್ವತಿಲ್ಲದ' ಎಂದು ಬರೆಯಲಾಗಿದೆ. ಒತ್ತುಕೊಟ್ಟರೆ ಒಂದು ಮಾತ್ರೆ ಹೆಚ್ಚಾಗುತ್ತದೆ. ಒತ್ತು ಬಿಟ್ಟರೆ ತಪ್ಪಾಗದೆನಿಸುತ್ತದೆ. 'ತದ್ಭವ'ವೆಂದೂ ಸ್ವೀಕರಿಸಬಹುದಾಗಿದೆ.

೨೦೦೬
ಗುರುಗಳನು ಹಿರಿಯರನು, ಮರಮರನೆ ಮರುಗಿಸುತ
ಕೊರಗಿಸುತ ಕಾಡುತಿಹ ಶಿಷ್ಯರವನಿಯೊಳು
ಭರದಿ ಬೆಳೆದಿಹರು ಪೂರ್ಣಜ್ಞ.

೨೦೦೭
ಬಂಗಾರ ವರಲೋಹ, ಬಂಗಾರದತಿಮೋಹ
ಭಂಗಗೊಳಿಸುತಿದೆ ಲೋಕವನು ಹಬ್ಬಿಸುತ
ಹಿಂಗದಾಶೆಯನು ಪೂರ್ಣಜ್ಞ.

೨೦೦೮
ಮತಿವಂತನಾದವಗೆ, ಮತಗಳನು ನೀಡಿದರೆ
ಹಿತವು ದೇಶಕ್ಕೆ, ಮತಿಹೀನಗಿತ್ತಲಿ
ವ್ಯತಿರಿಕ್ತವಹುದು! ಪೂರ್ಣಜ್ಞ.

೨೦೦೯
ಕಾಮಾಂಧನಾದವಗೆ, ಸೋಮಾರಿಯಾದವಗೆ
ನೇಮ ನೀತಿಗಳಿಲ್ಲ ಆ ದುಷ್ಟದ್ವಯಕೆ
ಕ್ಷೇಮವೇ ಇಲ್ಲ ಪೂರ್ಣಜ್ಞ.

೨೦೧೦
ಆತುರದಿ ಕಾಮುಕನು, ಹಾತೊರೆವ ಬೆಲೆವೆಣ್ಣೆ
ತೂತಿಗೊಂದೊಂದು ಚಟಕಲಿತು ಹುಳಹತ್ತಿ
ಬಾತು ಸಾಯುವನು ಪೂರ್ಣಜ್ಞ.

೨೦೧೧
ದುಡಿಯದಲೆ ಹಣ ಪಡೆವ, ನಡುರಾತ್ರಿಮನೆಯೊಡೆವ
ಕಡುಕ್ರೌರ್ಯದಿಂದ ಪಯಣಿಗರ ಸುಲಿವಂಥ
ಕೆಡುಕು ಹಬ್ಬುತಿದೆ ಪೂರ್ಣಜ್ಞ.

೨೦೧೨
ಬಹುವೈಭವೋಪೇತ, ಇಹಭೋಗದಭಿಲಾಷೆ
ಸಹಿಸಲಸದಳವು! ಆತ್ಮಶಾಂತಿಗು ಇದಕು
ಬಹುಘೋರ ವೈರ ಪೂರ್ಣಜ್ಞ.

೨೦೧೩

ಆಗಾಗ ಸಂಪತ್ತು, ಆಗೀಗ ಆಪತ್ತು
ಆಗಾಗ ಕ್ರಾಂತಿ ಶಾಂತಿ ಸುಖದುಃಖಗಳ
ಆಗು ಹೋಗುಗಳು ಪೂರ್ಣಜ್ಞ.

೨೦೧೪

ಗುರುವಿರದ ಸಾಧನೆಯು, ಬರೆದಂತೆ ಜಲದಲ್ಲಿ
ಅರಿವಿರದ ಬಾಳೆಲ್ಲ ಮಳಲಲ್ಲಿ ಎಣ್ಣೆ
ಎರೆದಂತೆ ಬರಿದು ಪೂರ್ಣಜ್ಞ.

೨೦೧೫

ಕೊಲೆ ಕಳವು ಅಪಘಾತ, ಸುಲಿಗೆ ಬಣವೆಗೆ ಬೆಂಕಿ
ಹೊಲಸು ಮಾತಿನ ಮಾಲೆ ದೌರ್ಜನ್ಯ ಲೀಲೆ
ಹುಲುಸಾಗುತಿಹವು ಪೂರ್ಣಜ್ಞ.

೨೦೧೬

ದೈತ್ಯ ಝಂಝಾವತ, ಪ್ರತ್ಯಕ್ಷ ಯಮದೂತ
ಸುತ್ತುವರಿದಿಹುದು ಮಣ್ಣು ಮಸುಕು ಧೂಳಿಕಣ
ಮುತ್ತಿಹುದು ಕಣ್ಗೆ ಪೂರ್ಣಜ್ಞ.

೨೦೧೭

ಹೊರಮೈಗೆ ಸಿಂಗಾರ, ಉರದೊಳಗೆ ಅಂಗಾರ
ಅರಿವಿರದ ಬರಿಬಾಳು ಸಾಗಿರುವದಿಂದು
ಮರವೆಯಲಿ ಮಿಂದು ಪೂರ್ಣಜ್ಞ.

೨೦೧೮

ಜಲವು ಬತ್ತಿದ ಭಾವಿ, ತಲೆಯಿರದ ಶಿಕ್ಷಕನು
ಛಲವಿರದ ಮನುಜ ಫಲಕೊಡದ ಗಿಡಬಳ್ಳಿ
ಹುಲುವಸ್ತುಗಳಿವು ಪೂರ್ಣಜ್ಞ.

೨೦೧೯

ಕಲೆಯಿರದ ಜೀವನವು, ತಲೆಯಿರದ ಮಾನವನು
ನೆಲೆಯಿರದ ಬಾಳು ನಿಶೆ ತುಂಬಿರುವ ಮನೆಯು
ಬೆಲೆಯಿಲ್ಲ ಅಲ್ಲಿ ಪೂರ್ಣಜ್ಞ.

೨೦೨೦
ಕುಂದಿದರೆ ದೇಹವದು, ಕೂದಲಗಳಳಿಯುವವು
ಕುಂದದಿರುತಿಹವು ಸಿರಿಮೋಹದಾಶೆಗಳು
ಬಂಧನದಿ ಸಿಕ್ಕು ಪೂರ್ಣಜ್ಞ.

೨೦೨೧
ಮಲೆತುನಿಂತಿಹ ನೀರು, ಹಳಸಿರುವ ಅನ್ನವದು
ಜಳಕ ಮಾಡಿರುವ ತಿಳಿನೀರು ಈ ಜಗದಿ
ಬೆಲೆಯುಂಟೆ ಪೇಳು? ಪೂರ್ಣಜ್ಞ.

೨೦೨೨
ಸಖರಂತೆ ನಟಿಸುತ್ತ, ಮುಖವಾಡ ಹಾಕುತ್ತ
ಪಕ್ಷಕ್ಕೆ ಜಿಗಿಯುತ್ತ ಹೊರಟಿಹರು ನೋಡು
ರೊಕ್ಕವನು ಸುರಿಸಿ ಪೂರ್ಣಜ್ಞ.

೨೦೨೩
ಕೆಟ್ಟ ಹೆಂಡತಿ ಬೇಡ, ಕೆಟ್ಟ ಊಟವು ಬೇಡ
ಕೆಟ್ಟ ಮಗ ಬೇಡ ಕೆಟ್ಟಡೆಂಬುದು ಏನು
ಕೊಟ್ಟರೂ ಬೇಡ ಪೂರ್ಣಜ್ಞ.

೨೦೨೪
ಅಲ್ಲ ಸಲ್ಲದ ಊಹೆ, ಜೊಳ್ಳು ಸುಳ್ಳಿನ ಹಾಹೆ
ಬಲ್ಲವರು ಅದನು ಮೆಚ್ಚಲಾರರು ಇನ್ನು
ಒಳ್ಳೆಯದೆ ರಚಿಸು ಪೂರ್ಣಜ್ಞ.

೨೦೨೫
ಆನೆಯನು ಜಗ್ಗಲ್ಕೆ ಆನೆಯೇ ಬೇಕಲ್ತೆ
ಕಾಣಲ್ಕೆ ದೊಡ್ಡ ಮಾನ್ಯರನು ಸಮದಂಡಿ
ಮಾನಿತರೆ ಬೇಕು ಪೂರ್ಣಜ್ಞ.

೨೦೨೬
ಜ್ವರಬಂದ ಮನುಜಂಗೆ, ನೊರೆವಾಲು ವಿಷವಂತೆ
ಅರಿವಿಲ್ಲದವಗೆ ಸುಜ್ಞಾನ ಸದ್ಬೋಧ
ಗರವು ಬಡಿದಂತೆ ಪೂರ್ಣಜ್ಞ.

೨೦೨೭

ಮುತ್ತಿಗಿಂತಲು ಹೊತ್ತು, ಉತ್ತಮವು ಎಂದೆಂಬ
ಉಕ್ತಿ ಮರೆಯದಿರು ಹೊತ್ತಿನೊಳ್ಳೆಯ ಬಳಕೆ
ಉತ್ತಮೋತ್ತಮವು ಪೂರ್ಣಜ್ಞ.

೨೦೨೮

ಸುಪ್ತ ಮನದೊಳಗಿಹುದು, ಗುಪ್ತ ಚೈತನ್ಯ ನಿಧಿ
ದೀಪ್ತಿ ತೋರುವದು ಕಣ್ದೆರೆದು ನೋಡಿದರೆ
ತೃಪ್ತಿ ಸಂಪ್ರಾಪ್ತಿ ಪೂರ್ಣಜ್ಞ.

೨೦೨೯

ಸಣ್ಣ ಕೆಲಸವಿದೆಂದು, ತಣ್ಣಗೇ ಕೂಡ್ರದಿರು
ನಿನ್ನ ಮುಖಸ್ತುತಿಗೆ ಮರುಳಾಗಿ ಮಲಗದಿರು
ಉನ್ನಿದ್ರನಾಗು ಪೂರ್ಣಜ್ಞ.

೨೦೩೦

ರಸದಿಂದ ಕಸವನ್ನು, ಕಸದಿಂದ ರಸವನ್ನು
ಒಸೆದು ಬೇರ್ಪಡಿಸುವಂತೆ ನೀ ಬಾಳಿದರೆ
ಮಿಸುನಿಯಂತಪ್ಪೆ ಪೂರ್ಣಜ್ಞ.

೨೦೩೧

ಅವಸರದಿ ದುಡುಕದಿರು, ಸುವಿಚಾರದಲಿ ಸಾಗು
ಸುವಿವೇಕ ಸಾವಧಾನಗಳೆ ಸುವಿಧಾನ
ಅವನಿಯಲಿ ಜಯಕೆ ಪೂರ್ಣಜ್ಞ.

೨೦೩೨

ಏಕೈಕ ನಿಷ್ಠೆಯಿಂ, ಏಕಾಗ್ರ ಚಿತ್ತದಿಂ
ಏಕೈಕ ದಿವ್ಯಧ್ಯೇಯಕ್ಕೆ ಜೀವಿಸುತ
ನಾಕ ಸುಖ ಹೊಂದು ಪೂರ್ಣಜ್ಞ.

೨೦೩೩

ಶಕ್ತಿ ಪ್ರತಿಭೆಯ ಮುಂದೆ, ಯುಕ್ತಿಯ ಕುತಂತ್ರಗಳು
ದಿಕ್ಕೆಟ್ಟು ಓಡುವವು ಚಿಚ್ಛಕ್ತಿ ಸಂಚಯಿಸು
ವ್ಯಕ್ತಿತ್ವ ಬೆಳೆಸು ಪೂರ್ಣಜ್ಞ.

೨೦೩೪

ಛಲದಿಂದ ಬಲವುಂಟು, ಬಲದಿಂದ ಛಲವುಂಟು
ಛಲಬಲಗಳೆರಡು ಕೈಹಿಡಿದು ನಡೆದಲ್ಲಿ
ಗೆಲವು ನಿಶ್ಚಿತವು ಪೂರ್ಣಜ್ಞ.

೨೦೩೫

ಸಫಲತೆಯು ಸಾಧನೆಗೆ, ಅಪರಿಮಿತ ಶ್ರಮಬೇಕು
ಶಪಥ ಹಿಡಿಯುದಳೆ ಋಜುಪಥದಿ ನಡೆವವಗೆ
ಸಫಲತೆಯು ಪ್ರಾಪ್ತಿ ಪೂರ್ಣಜ್ಞ.

೨೦೩೬

ಅಂಗಗಳಲಿ ವೈರತ್ವ, ಮರೆತವನು ಬಲುಜಾಣ
ವಿರಸವನು ಮರೆತು ಸರಸಸಖ್ಯದೊಳಿರುವ
ಪರಮ ಗುಣವಂತ ಪೂರ್ಣಜ್ಞ.

೨೦೩೭

ಬುದ್ಧಿವಂತನು ತನಗೆ, ಇದ್ದ ಸಮಯವು ಬಿಡದೆ
ಶುದ್ಧ ಮನದಿಂದ ಸಾಧನೆಯು ಮಾಡಿಸುಸ—
ವೃದ್ಧನಾಗುವನು ಪೂರ್ಣಜ್ಞ.

೨೦೩೮

ಗತವ ಚಿಂತಿಸದೆ ಅದ್ಯತನವನು ಅರೈದು
ಗತಿಗೆಟ್ಟ ಸ್ಥಿತಿಯ ಹಿವಾಗಿ ಮಾರ್ಪಡಿಪ
ಮತಿವಂತನೆನಿಪ ಪೂರ್ಣಜ್ಞ.

೨೦೩೯

ಆಶೆಯಿಂದಲಿ ಬದುಕು, ಆಶೆಯಿಂದಲಿ ಬೆಳಕು
ಆಶೆಯುದು ತಾನು ಕೆಟ್ಟಾಶೆಯಾದಲ್ಲಿ
ನಾಶಕ್ಕೆ ಮೂಲ ಪೂರ್ಣಜ್ಞ.

೨೦೪೦

ಅವಸರವಸರ ಮಾಡಿ, ಬವಣೆಯಲಿ ಬೀಳದಿರು
ಅವಸರದಿ ಕಾರ್ಯ ಮಾಡಿ, ಮುಗಿಸುವ ಚಪಲ
ಅವನತಿಗೆ ಮೂಲ ಪೂರ್ಣಜ್ಞ.

೨೦೪೧

ಎಲ್ಲಂದದಿಂ ಕೆಲಸ, ಮೆಲ್ಲ ಮೆಲ್ಲನೆ ಮಾಡಿ
ದಲ್ಲಿ ದೊರೆಯುವದು ಸುಖಶಾಂತಿ ನೆಮ್ಮದಿಯು
ಒಳ್ಳೆಯದನೆಸಗು ಪೂರ್ಣಜ್ಞ.

೨೦೪೨

ಸಮಯ ಮಹತಿಯನರಿದು, ಶ್ರಮ ಬಿಡದೆ ಬಳಸದನು
ಸಮಯವನು ವ್ಯರ್ಥಗೊಳಿಸದಿರುಕ್ರಮಿಸಿವಿ–
ಕ್ರಮನಾಗು ಮಿತ್ರ ಪೂರ್ಣಜ್ಞ.

೨೦೪೩

ನರಕನಾಕಗಳೆಲ್ಲ, ನರನ ಮಾನಸ ಸೃಷ್ಟಿ
ಅರಿವಿರಲು ನಾಕ ಮರೆತಿರಲು ನರಕ ಇದ
ನರಿತು ನಡೆ ನೀನು ಪೂರ್ಣಜ್ಞ.

೨೦೪೪

ಶಕ್ತಿಯಿದ್ದರೆ ಪ್ರಾಣ, ಶಕ್ತಿಯಿದ್ದರೆ ಜಾಣ
ಶಕ್ತಿ ಇದ್ದವನು ಸನ್ಮಾನ್ಯ ಜೀವನಕೆ
ಶಕ್ತಿಯೇ ಬೆಳಕು ಪೂರ್ಣಜ್ಞ.

೨೦೪೫

ಸಾವು ಇಲ್ಲದ ಶಕ್ತಿ, ನೋವು ಇಲ್ಲದ ಶಕ್ತಿ
ಸಾವು ನೋವುಗಳ ಮೆಟ್ಟಿನಿಂತಿಹ ಶಕ್ತಿ
ಈ ವಿಶ್ವಶಕ್ತಿ ಪೂರ್ಣಜ್ಞ.

೨೦೪೬

ಜಾತಿಮತ ಕುಲಗೋತ್ರ, ಜಾತಿಭೀತಿಯ ಬಿಟ್ಟು
ನೀತಿ ಮಾರ್ಗದಲಿ ಪ್ರೀತಿಯಿಂ ನಡೆವವಗೆ
ಯಾತರದು ಭೀತಿ? ಪೂರ್ಣಜ್ಞ.

೨೦೪೭

ಅನಿಯಮಿತ ಜೀವಿಗಳ, ಮನಕಿಲ್ಲ ನೆಮ್ಮದಿಯು
ಘನ ಜ್ಞಾನ ಶಾಂತಿ ಪಡೆಯಲ್ಕೆ ಸಂಯಮವು
ಅನವರತಬೇಕು ಪೂರ್ಣಜ್ಞ.

೨೦೪೮

ಹುಬ್ಬಳ್ಳಿ ನಗರದಲಿ, ಹೂಬಳ್ಳಿ ತುಂಬಿದರೆ
ಗಬ್ಬಳಿದು ಪುಷ್ಪ ಸೌಂದರ್ಯ ಸೌಗಂಧ
ಹಬ್ಬಿ ಹರ್ಷಿಪುದು ಪೂರ್ಣಜ್ಞ.

೨೦೪೯

ಅಲೆಯಂತೆ ಯೋಚನೆಯು, ಚಲಿಸುವದು ಸಲೆಮಿಂಚಿ
ಕಳವಳವು ಮನದಿ ಮೂಡಿದರೆ ಯೋಚನೆಯು
ತೊಲಗುವದು ಚಣದಿ ಪೂರ್ಣಜ್ಞ.

೨೦೫೦

ಒಳಮನದ ಜಲಧಿಯಲಿ, ಮುಳುಗಿದರೆ ದೊರೆಯುವವು
ಬಲು ಬೆಲೆಯ ಭಾವರತ್ನ ಮೌಕ್ತಿಕರಾಶಿ
ಒಳಮನದಿ ಮುಳುಗು ಪೂರ್ಣಜ್ಞ.

೨೦೫೧

ಅನುಭಾವ ಗೋಷ್ಠಿಯನು, ಅನುರಾಗದಿಂ ಮಥಿಸು
ಅನುಭಾವ ಬೆಣ್ಣೆ ಮೇಲೆ ಬರುವದು ತೇಲಿ
ಅನುಭವಿಸಿ ನೋಡು ಪೂರ್ಣಜ್ಞ.

೨೦೫೨

ವಜ್ರ ಸಂಕಲ್ಪದಿಂ, ಸಜ್ಜಾಗು ಸಾಧನೆಗೆ
ಪ್ರಜ್ವಲಿಸುತಿರಲಿ ಮನದಲ್ಲಿ ಹೆಗ್ಗುರಿಯು
ಹೆಜ್ಜೆ ಮುಂದಿರಲಿ ಪೂರ್ಣಜ್ಞ.

೨೦೫೩

"ಮೂರು ವರುಷದ ಬುದ್ಧಿ, ನೂರು ವರುಷದ ತನಕ"
ಸಾರ ಸೂಕ್ತಿಯಿದು ಶಿಶುಮನಕೆ ಮೂಡಿಸಿರಿ
ಸಾರ ಸಂಸ್ಕಾರ ಪೂರ್ಣಜ್ಞ.

೨೦೫೪

ಮದಮತ್ತನಾಗದಿರು, ವಿಧಿಯನ್ನು ಹಳಿಯದಿರು
ಹುದುಗಿರುವ ಶಕ್ತಿ ಕಳೆಯದಿರು ಶ್ರದ್ಧೆಯಿಂ
ಸದು ವಿನಯಿಯಾಗು ಪೂರ್ಣಜ್ಞ.

೨೦೫೫

ಸಹನೆಯಿಂದಲಿ ಶುದ್ಧಿ, ಸಹನೆಯಿಂದಲಿ ಸಿದ್ಧಿ
ಸಹನೆ ಮಾನವನ ಜೀವನಕೆ ಸಾರಥಿಯು
ಸಹನೆಯನು ಬೆಳೆಸು ಪೂರ್ಣಜ್ಞ.

೨೦೫೬

ನಡೆದಷ್ಟು ದಾರಿಯಿದೆ, ಪಡೆದಷ್ಟು ಭಾಗ್ಯವಿದೆ
ಕಡೆದಷ್ಟು ಬೆಣ್ಣೆ ಬಂದಪುದು ಫಲವುಂಟು
ದುಡಿದಷ್ಟು ನಿನಗೆ ಪೂರ್ಣಜ್ಞ.

೨೦೫೭

ಮಲಗಿ ನಿದ್ರಿಪ ಮುನ್ನ, ತಳ ಸೋಸು ಮನವನ್ನು
ಕಳಪೆಯನು ತೊಳೆದು ತಿಳಿಗೊಳಿಸು, ಬಾಳನಿದು
ಬೆಳಗಿಪುದು ದಿಟದಿ ಪೂರ್ಣಜ್ಞ.

೨೦೫೮

ಮೋಹಕ್ಕೆ ಬಲಿಗೊಡದೆ, ದೇಹವನು ಪಾಲಿಪುದು
ದೇಹದಾಹಕ್ಕೆ ಬಲಿಬಿದ್ದ ಮಾನವನು
ತ್ರಾಹಿಯೆಂದಳುವ ಪೂರ್ಣಜ್ಞ.

೨೦೫೯

ನಿಚ್ಚನಿಚ್ಚವು ತೊಳೆದು, ಸ್ವಚ್ಛವಾಗಿಡು ಮನವ
ಮುಚ್ಚುಮರೆಬೇಡ ಎಚ್ಚರಿರು ಲೋಕದಲಿ
ಇಚ್ಛೆಸೊಳಿತನ್ನೆ ಪೂರ್ಣಜ್ಞ.

೨೦೬೦

ಕೂಪ ಬೀಳುವಗೆ, ದೀಪವಿರೆ ಬಂತೇನು?
ತಾಪ ಕೋಪಗಳ ಕಳೆಯದಲೆ ಜೀವಿಪಗೆ
ಭಾಪುರವು ಏಕೆ? ಪೂರ್ಣಜ್ಞ.

೨೦೬೧

ಬಾಳು 'ಬೇಕುಗಳ' ಘನ, ಜಾಲವನು ಬೀಸಿಹುದು
ವೇಳೆ ಕಳೆಯದಲೆ ಎಡಬಿಡದೆ ದುಡಿವವನ
ಬಾಳೆಲ್ಲ ಸುಖವು ಪೂರ್ಣಜ್ಞ.

೨೦೬೨

ಸುಪ್ತ ಮನದೊಳಗೊಂದು, ಗುಪ್ತನಿಧಿ ನಿನಗುಂಟು
ದೀಪ್ತಿಗೊಳಿಸದನು ನಿತ್ಯ ಸಾಧನೆಯಿಂದ
ತೃಪ್ತಿಯನು ಪಡೆವೆ ಪೂರ್ಣಜ್ಞ.

೨೦೬೩

ವಿಜ್ಞಾನ ಯುಗದಲ್ಲಿ, ಕುಜ್ಞಾನ ಬೆಳೆಯುತಿದೆ
ಅಜ್ಞಜನ ಕೋಟಿ ಅಜ್ಞಾನದಲ್ಲಿ ಸಿಲುಕಿ
ಒದ್ದಾಡುತಿಹುದು ಪೂರ್ಣಜ್ಞ.

೨೦೬೪

ಹಂಗಿಗೊಳಗಾದವನ, ನುಂಗಿಬಿಡುವದು ಭಂಗ
ಹಂಗಡಿಮೆ ಬಲೆಯು, ಹಂಗಿರದ ಬಡತನವೆ
ತುಂಗ ಜೀವನವು ಪೂರ್ಣಜ್ಞ.

೨೦೬೫

ತನುರೋಗ ಸುನಿವಾರ್ಯ ಮನರೋಗ ಕುನಿವಾರ್ಯ
ಹಣದ ಹಂಬಲವು ಅತಿಯಾಗಿ ಇರುವವನ
ತನುಮನಕೆ ಹಾನಿ ಪೂರ್ಣಜ್ಞ.

೨೦೬೬

ಹಿರಿಗುರಿಯ ಚಿಂತಿಸದೆ, ಸಿರಿಗಳಿಸಿ ಫಲವೇನು?
ದುರಭಿಲಾಷೆಯಲಿ ಬಾಳ ಪಾಳ್ಗೈವವಗೆ
ದುರುಗತಿಯೆ ಫಲವು ಪೂರ್ಣಜ್ಞ.

೨೦೬೭

ಅರಿವುಗೇಡಿಯು ತೆರದಿ, ಅರೆಮರುಳನಾಗದಿರು
ಗುರಿತಪ್ಪಿ ನಡೆಯದಿರು ಕೊರಗದಿರು ಜಗದಿ
ವರಪುರುಷನಾಗು ಪೂರ್ಣಜ್ಞ.

೨೦೬೮

ತನ್ನ ತಾನರಿಯದವ, ಅನ್ಯರನು ಅರಿಯುವನೆ?
ತನ್ನ ಚಿತ್ತದಲಿ ಸಮತೆ ಸಾಧಿಸಿದವನ
ಮನ್ನಿಸುವರಾರು? ಪೂರ್ಣಜ್ಞ.

೨೦೬೯

ಶುದ್ಧಿಯಿಂದಲಿ ದೀಪ್ತಿ, ಶುದ್ಧಿಯಿಂದಲಿ ವ್ಯಾಪ್ತಿ
ಶುದ್ಧಿಯಿಂ ತೃಪ್ತಿ, ನಿತ್ಯತ್ವ ಸಂಪ್ರಾಪ್ತಿ
ಶುದ್ಧಿಯಿಂ ಸಿದ್ಧಿ ಪೂರ್ಣಜ್ಞ.

೨೦೭೦

ಸತ್ಕಲೆ ವಿಕಾಸಿಸಲು, ಚಿತ್ಕಲೆ ಪ್ರಕಾಶಿಸಲು
ಉತ್ಕಟಾದರ್ಶ ಸಾಧಿಸಲು ಸತ್ಕಾರ್ಯ
ನಿತ್ಯ ನಡೆದಿರಲಿ ಪೂರ್ಣಜ್ಞ.

೨೦೭೧

ಅನ್ನಶುದ್ಧಿಯು ಜಗಕೆ, ಸನ್ನಿಯನು ನೀಡುವದು
ತನ್ಮಾತ್ರ ಸಿದ್ಧಿ ಸರ್ವಸಿದ್ಧಿಗೆ ಮಾರ್ಗ
ಸನ್ಮತಿಯ ಮಾರ್ಗ ಪೂರ್ಣಜ್ಞ.

೨೦೭೨

ಅತಿಭೋಗವದು ಕೇಡು, ಅತಿತ್ಯಾಗವೂ ಕೇಡು
ಅತಿಯೆಂಬುವೆಲ್ಲ ಜೀವನಕೆ ಬಲುಕೇಡು
ಅತಿಯು ಗತಿಗೇಡು ಪೂರ್ಣಜ್ಞ.

೨೦೭೩

ನಿಷ್ಠೆಯಿಲ್ಲದ ನಿಜವು, ಕಷ್ಟವಿಲ್ಲದೆ ಸುಖವು
ಸೃಷ್ಟಿಯೊಳಗುಂಟೆ? ರಟ್ಟೆಯಿಂ ದುಡಿವವಗೆ
ಇಷ್ಟಾರ್ಥಸಿದ್ಧಿ ಪೂರ್ಣಜ್ಞ.

೨೦೭೪

ಮೈಬರಿದೆ ಬೆಳಸದಿರು, ಮೈಬಗ್ಗಿ ದುಡಿಯುತಿರು
ಮೈಬಲಿತ ಗಂಡು ಬೆತ್ತದಂತಿರಬೇಕು
ಧೀ ಬಲವ ಬೆಳೆಸು ಪೂರ್ಣಜ್ಞ.

೨೦೭೫

ಹಸಿದು ಎಕ್ಕೆಯ ಕಾಯಿ, ಕಸಿದು ತಿನ್ನುವದೊಳಿತೆ?
ವಿಷಕುಡಿಯಬಹುದೆ ನೀರಡಿಕೆಯಾದಾಗ?
ಕುಶಲ ಮತಿಯಾಗು ಪೂರ್ಣಜ್ಞ.

೨೦೭೬
ಬಚ್ಚಲದ ಕೊಳೆನೀರು, ಸ್ವಚ್ಛವಿರೆ ಬಂತೇನು?
ಉಚ್ಚ ಗುಣವಿಲ್ಲದಂಥ ದುರ್ಗುಣಿಗಳನು
ಮೆಚ್ಚನೀಶ್ವರನು ಪೂರ್ಣಜ್ಞ.

೨೦೭೭
ಬಲವು ಇಲ್ಲದ ದೇಹ, ಒಲವು ಇಲ್ಲದ ನೇಹ
ಛಲವಿರದ ಹೇಡಿ ನರಪಶುವಿಗೆಲ್ಲಿಯೂ
ಬೆಲೆಯಿಲ್ಲವಯ್ಯ ಪೂರ್ಣಜ್ಞ.

೨೦೭೮
ಸ್ವರತಿ ಕೆಲವರಿಗುಂಟು, ಸುರತಿಕೆಲವರಿಗುಂಟು
ಕುರತಿ ಬೆಳೆಯುತಿದೆ ಈ ಭ್ರಾಂತಿಯಳಿದು ನಿಜ
ವಿರತಿ ಬೇಕೆಂದು ಪೂರ್ಣಜ್ಞ.

೨೦೭೯
ಫಣೆಗೆ ನಾಲಗೆ ಎರಡು, ಗುಣೆಗೆ ನಾಲಗೆ ಒಂದು
ಫಣೆಯಗುಣ ವಿಷವು, ಗುಣೆಯದಮೃತದರಸವು
ಗುಣವಂತನಾಗು ಪೂರ್ಣಜ್ಞ.

೨೦೮೦
ಸಿಡಿಲೆಂಬ ನರ್ತಕನು, ಗುಡುಗುತ್ತ ಗರ್ಜಿಸುತ
ಬೆಡಗಿನಿಂ ಬೀಸಿ ಮಿಂಚೆಂಬ ಖಡ್ಗವನು
ಸಡಗರದಿ ಕುಣಿವ ಪೂರ್ಣಜ್ಞ.

೨೦೮೧
ಜೂಜಾಟ ಬಲುಕೆಟ್ಟ, ಜೂಜಾಟ ಶನಿಕಾಟ
ಜೂಜಾಡಿ ಪಂಚ ಪಾಂಡವರು ಸೋತಿಹರು
ರಾಜ್ಯವೆಲ್ಲವನು ಪೂರ್ಣಜ್ಞ.

೨೦೮೨
ಅತಿಯಾದ ಉಪಚಾರ, ಮತಿಗೆ ಸಂಶಯಭಾರ
ಅತಿಯಾದ ಸ್ವಾರ್ಥ ಜೀವನಕೆ ವಿಷಗರ್ತ
ಅತಿಯು ಗತಿಗೇಡು ಪೂರ್ಣಜ್ಞ.

೨೦೮೩

ಹಣವು ಮೋಡದ ಹಾಗೆ, ಕ್ಷಣಕ್ಷಣಕೆ ಕರಗುವದು
ಹಣವು ಕೋಲ್ಮಿಂಚು, ಹಣವು ಕ್ಷಣ ಭಂಗುರವು
ಹಣಭ್ರಮೆಯು ಜಗಕೆ ಪೂರ್ಣಜ್ಞ.

೨೦೮೪

ಬತ್ತಗೊಡದಿರು ಶ್ರದ್ಧೆ, ಬತ್ತಗೊಡದಿರು ಬುದ್ಧಿ
ಬತ್ತಗೊಡಬೇಡ ಜ್ಞಾನಾಭಿಲಾಷೆಯನು
ಚಿತ್ತ ಶಾಂತಿಯಸು ಪೂರ್ಣಜ್ಞ.

೨೦೮೫

ವಿಷವನ್ನು ಸುಧೆಗೈವ, ಕಸವನ್ನು ರಸಗೈವ
ಪಶುತನವನಳಿದ ಪಥವಿಡಿದು ಜೀವನದಿ
ಜಸವೆತ್ತು ಬಾಳು ಪೂರ್ಣಜ್ಞ.

೨೦೮೬

ಗುರಿಯ ಕನಸುಗಳಲ್ಲಿ, ಹಿರಿಮೆ ಕಾಣಿಸದಿರಲು
ಅರಿವು ಮೂಡದಿರೆ ನಂಬುಗೆಯು ಜಾರಿದರೆ
ಕರಿಮೋಡದಂತೆ ಪೂರ್ಣಜ್ಞ.

೨೦೮೭

ಗುರಿಯು ಗಿರಿಯಗ್ರದಲಿ, ಸ್ಥಿರಗೊಳಿಸು ಚಿತ್ತವನು,
ಅರಿವಳಿಯದಿರಲಿ, ನಂಬುಗೆಯು ತುಂಬಿರಲಿ
ಮರೆಯಬೇಡಿದನು ಪೂರ್ಣಜ್ಞ.

೨೦೮೮

ತೆರೆಗಳಲಿ ತೇಲಿದರೆ, ಮರವೆಯೆಂಬುದು ಇಲ್ಲ
ಸುರಿಯುವದು ಸುಧೆಯು ಜೀವನದಯಾತ್ರೆಯಲಿ
ಅರಿವು ಬೆಳಗುವದು ಪೂರ್ಣಜ್ಞ.

೨೦೮೯

ನಮ್ಮ ಕೆಲಸದ ಬಗೆಗೆ, ಸುಮ್ಮ ಚಿಂತಿಸದಿರೈ
ದಮ್ಮಿರದ ದುಡುಕಿದರೆ ನಡುನೀರಿನಲ್ಲಿ
ಸುಮ್ಮನೆ ಬಿದ್ದಂತೆ ಪೂರ್ಣಜ್ಞ.

೨೯೦

ಅರಿದರಿದು ನೋಡಿದರೆ, ಅರಿತವರು ಎಷ್ಟು ಜನ?
ಅರಿತಂತೆ ತೋರ್ಪ ಕುರಿಮತಿಗಳೇ ಬಹಳ
ಅರಿತುನಡೆ ನೀನು ಪೂರ್ಣಜ್ಞ.

೨೯೧

ಹೊರೆಯು ತಮ್ಮದು ತಮಗೆ, ಹೊರಲಾರದಷ್ಟಿರಲು
ಬರಿದೆ ನಮ್ಮದಕೆ ನೆರವಾಗ ತಿಳಿಸುವರು
ಮರುಳು ಮಂಗಗಳು ಪೂರ್ಣಜ್ಞ.

೨೯೨

ಆಯುಷ್ಯ ಹೆಚ್ಚಿದರೆ, ದೇವನಾಗನು ಮನುಜ
ಆಯುಷ್ಯ ಬೆಳೆದಂತೆ ಆಶೆ ಹೆಚ್ಚಿದರೆ
ನಾಯಿಗಿಂತ ಕೀಳು ಪೂರ್ಣಜ್ಞ.

೨೯೩

ತೀರ ಹತ್ತಿರದವರು, ದೂರ ತಳ್ಳುವರಯ್ಯ,
ವೈರಿಗಳಿಗಿಂತ ಕ್ರೂರ ಕೊಲೆಪಾತಕರು
ಘೋರ ದ್ರೋಹಿಗಳು ಪೂರ್ಣಜ್ಞ.

೨೯೪

ನ್ಯಾಯವಂತಿಕೆಯಿರದ, ಆಯುಷ್ಯವಿದ್ದೇನು?
ಆಯುಷ್ಯ ದೀರ್ಘವಾದಂತೆ ಹಿರಿದಪ್ಪ
ಧ್ಯೇಯ ನಿನಗಿರಲಿ ಪೂರ್ಣಜ್ಞ.

೨೯೫

ಮುಂಜಾವು ಕೊನೆಗೊಂಡು, ಸಂಜೆ ಬಂದಪ್ಪುದೆಂದು
ಅಂಜಿದರೆ ಎಂತು? ಪ್ರಕೃತಿ ಧರ್ಮವಿದಯ್ಯ
ಅಂಜದಲೆ ಬಾಳು ಪೂರ್ಣಜ್ಞ.

೨೯೬

ಭಕ್ತನಾದರೆ ಸುಗುಣ, ಯುಕ್ತನಾಗಿರಬೇಕು
ಮುಕ್ತಿ ಕಪಟಗಳ ಬಳಿಸುಳಿಯದಿರಬೇಕು
ಭಕ್ತಿ ಶುಭಶಕ್ತಿ ಪೂರ್ಣಜ್ಞ.

೨೯೭

ಕಷ್ಟಕಾಲದೊಳಿರದ, ನಿಷ್ಠೆಯಿಲ್ಲದ ಭಕ್ತ
ಎಷ್ಟು ತತ್ವಗಳ ನುಡಿದರೇ ನಡೆಗೇಡಿ
ಭ್ರಷ್ಟನವನಲ್ತೆ? ಪೂರ್ಣಜ್ಞ.

೨೯೮

ಕ್ಷುದ್ರ ಕಾರಣದಿಂದ, ಕ್ಷುದ್ಧರಾಗುತ ಘೋರ
ಯುದ್ಧ ಕಣಕಿಳಿವ ಹುಂಬರಿಗೆ ಬುಧಜನರು
ಬುದ್ಧಿ ಪೇಳುವರು ಪೂರ್ಣಜ್ಞ.

೨೯೯

ನೀತಿಧರ್ಮವ ಬಿಟ್ಟು, ಜಾತಿ, ಬಣ್ಣವ ಕೊಟ್ಟು
ಕೋತಿ ಗುಣದವರು ಸ್ವಾರ್ಥಸಾಧನೆಗಾಗಿ
ಬೇತು ಹಾಕುವರು ಪೂರ್ಣಜ್ಞ.

೩೦೦೦

ಬೆಲ್ಲವಿಲ್ಲದಿರಿರಲಿ, ಬೆಲ್ಲದಂತಹವೆರಡು
ಒಳ್ಳೆ ಮಾತುಗಳ ಆಡುವವ ಜಗದಲ್ಲಿ
ಎಲ್ಲರಿಗೂ ಬೆಲ್ಲ ಪೂರ್ಣಜ್ಞ.

೩೦೦೧

ಬಿಸಿಲಲ್ಲಿ ಹಸಿದವಗೆ, ಮೊಸರನ್ನವಿತ್ತಂತೆ,
ವ್ಯಸನದಲಿ ಘಾಸಿಗೊಂಡವಗೆ ಹಿತವಚನ
ಹೊಸಪ್ರಾಣದಾನ ಪೂರ್ಣಜ್ಞ.

೩೦೦೨

'ಆರತಿ'ಯು ಬೆಳಗುವದು, ಭಾರತದ ಸಂಸ್ಕೃತಿಯು
"ಆರತಿ"ಯ ಬೆಳಕು ನಿಜಶಾಂತಿ ನೀಡುವದು
ಆರದಂತಿರಲಿ ಪೂರ್ಣಜ್ಞ.

೩೦೦೩

ನಮ್ಮ ಸುಖ ದುಃಖಗಳು, ನಮ್ಮೇಳುಬೀಳುಗಳು
ತಮ್ಮವೆಂದೆನುತ ಕಣ್ಣೀರು ಸುರಿಸುವರು
ನೆಮ್ಮದಿಯೊಳಿರಲಿ ಪೂರ್ಣಜ್ಞ.

೨೧೦೪

ಜನಗಣದ ಹಿತವೊಂದೆ, ಘನಹಿತವು ಭಾರತಕೆ
ವಿನುತ ಜ್ಞಾನವಿದು ಮನಮನದಿ ಮೂಡಿದರೆ
ಮನೆ ಮನೆಗೆ ಶಾಂತಿ ಪೂರ್ಣಜ್ಞ.

೨೧೦೫

ಸ್ವಾರ್ಥವಿರಹಿತವಾದ, ಆರ್ಥಿಕಾಧಾರವೇ
ಉತ್ತಮಾಧಾರ ಮೊಸಲಾತಿಗೆ ಭದ್ರ
ಅಸ್ತಿವಾರ ನಿಜ ಪೂರ್ಣಜ್ಞ.

೨೧೦೬

ಆಸಕ್ತಿಯಿದ್ದವನು ಕೋಶವನು ತಿಳಿದಾನು
ಆಸಕ್ತಿಯಿಲ್ಲದವನೋದು ತಲೆಗೆ ಬಲು
ಘಾಸಿ ತಾನಕ್ಕು ಪೂರ್ಣಜ್ಞ.

೨೧೦೭

ತೆರೆಗಳಲಿ ತೇಲಿದರೆ, ಶರಧಿ ದಾಟಲುಬಹುದು
ತೆರೆಯ ಮೇಲೇರಿ ತಲುಪುವದು ಕಲಿಮೊದಲು
ಬರಿದೆ ಮುಳುಗದಿರು ಪೂರ್ಣಜ್ಞ.

೨೧೦೮

ಹುಂಬ ದುರ್ನಡತೆಗಳು ತುಂಬ ಹಬ್ಬುತಲಿವು
ಮುಂಬರುವಳೆಯರ ಪೈಮನದಿ ಕೆಟ್ಟಗುಣ
ತುಂಬುವದು ಬೇಡ ಪೂರ್ಣಜ್ಞ.

೨೧೦೯

ಮಂಜು ಮುಸುಕಿದೊಡೇನು? ಅಂಜುವದೆ ಪರ್ವತವು
ಸಂಜೆಗಂಜುವದೇ ನಕ್ಷತ್ರ ಪುಂಜವದು?
ಅಂಜದಿರು ಬರಿದೆ ಪೂರ್ಣಜ್ಞ.

೨೧೧೦

ಒಡೆದ ಗಡಿಗೆಯು ಮತ್ತೆ ದೃಢಗೊಳಿಸಬಹುದೇನು?
ಒಡೆದಂಥ ಮನವ ಮತ್ತೆ ಅಂಟಿಸಬಹುದೆ?
ಒಡೆಯುವದು ಬೇಡ ಪೂರ್ಣಜ್ಞ.

೨೧೧೧

ನುಣ್ಗದಪು ಕೆಂದುಟಿಯು ಕಣ್ಗಳಲಿ ಕೋಲ್ಮಿಂಚು
ಪೆಣ್ಗಳಿಯ ಮಾತು ಇವುಗಳಿಗೆ ಮರುಳಾಗಿ
ಮಣ್ಮುಕ್ಕ ಬೇಡ ಪೂರ್ಣಜ್ಞ.

೨೧೧೨

ಕರಿಯ ಮೋಡಗಳಿಂದ ಸುರಿಯುವದು ಹೆಮ್ಮಳೆಯು
ಕರಿದೆಂದು ಕೊರಗದಿರು ಕರಿಯ ಕಸ್ತೂರಿ
ಪರಿಮಳಿಸದಿಹುದೆ? ಪೂರ್ಣಜ್ಞ.

೨೧೧೩

ಎತ್ತರದಿ ಕೂಡ್ರುವದು ಉತ್ತಮಿಕೆ ಬಯಸುವದು
ಸತ್ತಮೇಲವರು ನೆಲದೊಳಗೆ ಕುಳಿತವರಿ–
ಗೆತ್ತರೆಲ್ಲಿಹುದು?ಪೂರ್ಣಜ್ಞ.

೨೧೧೪

ತಪ್ಪುವದು ಮನುಜಗುಣ ತಪ್ಪೊಪ್ಪಿ ಮುಂದೆಯೂ
ತಪ್ಪಾಗದಂತೆ ನಡೆಯುವದು ಶಿವಮೆಚ್ಚಿ
ಅಪ್ಪಿಕೊಂಬ ಗುಣ ಪೂರ್ಣಜ್ಞ.

೨೧೧೫

ದಾರಿಗಳ್ಳರು ಶಾಂತಿ ದೂರ ಮಾಡುತಲಿಹರು
ಧೀರತನದಿಂದ ಎಚ್ಚರಿಕೆ ವಹಿಸಿದರೆ
ಪಾರುಗಾಣುವರು ಪೂರ್ಣಜ್ಞ.

೨೧೧೬

ತೊರೆದು ಬಿಡು ಮರವೆಯನು, ಅರಿವಿನರಮನೆಯಲ್ಲಿ
ಸ್ಥಿರವಾಗಿ ಕುಳಿತು ತಪವನಾಚರಿಸಿದರೆ
ವರಸಿದ್ಧಿ ಸಾಧ್ಯ ಪೂರ್ಣಜ್ಞ.

೨೧೧೭

ದೇಹ ತೇಜಿಯ ಮೇಲೆ ಆತ್ಮ ಪುರುಷನು ಏರಿ
ಮೋಹವನು ತೊರೆದು ವಾಘೆಯನು ಹಿಡಿದಿರಲು
ಬಾಧಿಸದು ಪೂರ್ಣಜ್ಞ.

೨೧೧೮
ಹಿಂಸೆಯುಳಿಯಲಿ, ಗಡನೃಶಂಸಕೃತಿ ಮೃತಿಗೊಳಲಿ
ಪ್ರಾಂಶು ಮನುಜತ್ವ ಮುಟ್ಟಲದು ಮುಗಿಲನ್ನು
ಧ್ವಂಸಿಪುದು ಸಾಕು ಪೂರ್ಣಜ್ಞ.

೨೧೧೯
ಕಿರಿಸೊಸೆಯು ನಿಷ್ಠೆಯಿಂ ಹಿರಿಸೊಸೆಯು ಭಕ್ತಿಯಿಂ
ನೆರಳನ್ನು ನಿನಗೆ ಕೊಟ್ಟಾರು ಎಂದು ನೀ
ನೆರೆನಂಬಬೇಡ ಪೂರ್ಣಜ್ಞ.

೨೧೨೦
ಕಳೆಯುತಿದೆ ಆಯುಷ್ಯ ಅಳಿಯುತಿದೆ ಯೌವನವು
ಕಳೆದಿರುವ ಕಾಲ ಮರಳಿಬಾರದು ಮತ್ತೆ
ಒಳಿತಾಗಿ ಬಾಳು ಪೂರ್ಣಜ್ಞ.

೨೧೨೧
ಗಾಳಿಯುನು ಗುದ್ದಿದರೆ ಗೋಳು ಮೈ ಕೈಗಳಿಗೆ
ಮೇಳವಿಲ್ಲದ ದುಡಿತ ಬರಿ ಹಾಳು ಹಾಳು
ಮೇಳದಿಂ ಬಾಳು ಪೂರ್ಣಜ್ಞ.

೨೧೨೨
ಮನೆತನದ ಕದನಗಳ ಮನದಲ್ಲಿ ಬಚ್ಚಿಟ್ಟು
ಮನೆಯೊಳಗೆ ಬಗೆಹರಿಸಿ ನಡೆದುಕೊಂಡಲ್ಲಿ
ಮನಕೆ ಸುಖಶಾಂತಿ ಪೂರ್ಣಜ್ಞ.

೨೧೨೩
ನಾಟಿರಾಗವು ಕೂಡ ಪಾಠವಿಲ್ಲದೆ ಬರದು
ನೀಟಾಗಿ ಕುಳಿತು ಮನಗೊಟ್ಟು ಓದಿದರೆ
ಸಾಟಿ ನಿನಗಾರು? ಪೂರ್ಣಜ್ಞ.

೨೧೨೪
ಅರಿತುಕೊಂಡವ ಜ್ಞಾನಿ ಅರಿಯದವ ಅಜ್ಞಾನಿ
ಅರಿವು ಮೂಡಿದರೆ ಉಸಿರೆಲ್ಲ ಕಸುವಾಗಿ
ಕುರುಹು ತೋರುವದು ಪೂರ್ಣಜ್ಞ.

೨೧೨೫

ಕೊಲುವಂಗೆ ದಯವಿಲ್ಲ ಕೊಲುವಂಗೆ ಭಯವಿಲ್ಲ
ಕೊಲುವಂಗೆ ಧರ್ಮನೀತಿ ತತ್ವಗಳಿಲ್ಲ
ಒಳಗಿಲ್ಲ ಶಾಂತಿ ಪೂರ್ಣಜ್ಞ.

೨೧೨೬

ಮರುಧರೆಯ ಮೃಗಜಲವು ಸ್ಥಿರವೆನಿಜ ಜಲದಂತೆ?
ಶರದಭ್ರದಂತಿದ್ರ ಚಾಪದೊಲು ಭಂ–
ಗುರ ಭೌತಿಕಗಳು ಪೂರ್ಣಜ್ಞ.

೨೧೨೭

ಘನವಂತನೆನಿಸುವೊಡೆ ಮನದಲ್ಲಿ ನಿಸ್ಪೃಹತೆ
ಧನದಲ್ಲಿ ಶುಚಿತನವು ತುಂಬಿರಲಿ ಬಾಳು
ಪ್ರಣುತವಾಗಿರಲಿ ಪೂರ್ಣಜ್ಞ.

೨೧೨೮

ದುಃಖಸಾಗರ ತಳದಿ ಸುಖಸಾರ ನಿಧಿಯುಂಟು
ಸುಖದುಃಖ ಸಮದೃಷ್ಟಿ ಸಂತುಷ್ಟಿಪ್ರದವು
ಸುಖಿಯು ಸುಜ್ಞಾನಿ ಪೂರ್ಣಜ್ಞ.

೨೧೨೯

ನಮ್ಮ ಏಕತೆಯನ್ನು ಒಮ್ಮನದಿ ಸಾಧಿಸದೆ
ಸುಮ್ಮನೆ ಕಾಲಕಳೆದಲ್ಲಿ ನಮಗುಂಟೆ
ನೆಮ್ಮದಿಯು ಸುಖವು? ಪೂರ್ಣಜ್ಞ.

೨೧೩೦

ಮರೆವಿನಿಂ ವಿಭ್ರಾಂತಿ ಮರೆವಿನಿಂ ವಿಶ್ರಾಂತಿ
ಮರೆವಿರಲು ನಿದ್ರೆ ಕಷ್ಟಗಳ ಕಳೆಯಲ್ಕೆ
ಮರೆವು ಹಿರಿಮದ್ದು ಪೂರ್ಣಜ್ಞ.

೨೧೩೧

ಬಿರುನುಡಿಯನಾಡದಿರು ಬಿರುನುಡಿಗೆ ಬೆದರದಿರು
ಮರು ಮಾತನಾಡಿ ಕಲಹಕ್ಕೆ ಬೀಳದಿರು
ಮರೆಯದಿರು ಗುರಿಯ ಪೂರ್ಣಜ್ಞ.

೨೧೩೨

ನಿನ್ನವರ ಮೇಲ್ಗಟ್ಟಿ ಅನ್ಯರನು ಮೆಟ್ಟದಿರು
ನಿನ್ನವರು ಯಾರುಂಟು ಜಗದೊಳಗೆ ನೋಡು
ನಿನ್ನವನು ನೀನೆ ಪೂರ್ಣಜ್ಞ.

೨೧೩೩

ಸದ್ದಿಲ್ಲದಿರುವಲ್ಲಿ ನಿದ್ದೆಮಾಡುವದೊಳಿತು
ಸದ್ದುಗದ್ದಲದಿ ನಿದ್ದೆಗೈವವನ ಬಾಳು
ತದ್ದು ಹತ್ತಿದೊಲು ಪೂರ್ಣಜ್ಞ.

೨೧೩೪

ಸಿಟ್ಟಿಗೇಳುವದನ್ನು ಗುಟ್ಟುಕೇಳುವದನ್ನು
ಬಿಟ್ಟಾಗ ತಿಳಿದೀತು ನಿನ್ನ ಮೈಮನ ಎಷ್ಟು
ಗಟ್ಟಿ ಎನ್ನುವದು ಪೂರ್ಣಜ್ಞ.

೨೧೩೫

ನಾನು ನಾನೆಂದೆಂಬ ಹೀನ ಬುದ್ಧಿಯ ಬಿಟ್ಟು
ಜ್ಞಾನ ನಿನ್ನದು ಎಷ್ಟು ನೀನಳೆದು ನೋಡು
ತಾನೆ ತಿಳಿಯುವದು ಪೂರ್ಣಜ್ಞ.

೨೧೩೬

ಹಂದಿಮುಂದಿಯ ಸಂಗದಿಂದ ನೀ ಕೆಡಬೇಡ
ಹಂದಿಗಳೊಳಾಡಿ ಹಂದಿಗುಣವಂಟೀತು
ಮುಂದೆ ನಿನಗೊಮ್ಮೆ ಪೂರ್ಣಜ್ಞ.

೨೧೩೭

ಹಣಕಂಡು ಬರುವವರು ಹೆಣಕಂಡು ಬರುವವರು
ನೆಣಕಂಡು ಬರುವವರು ಬಹಳುಂಟು ಜಗದಿ
ಗುಣಕೆ ಬಹರಿಲ್ಲ ಪೂರ್ಣಜ್ಞ.

೨೧೩೮

ಬೇಡದಿರು ಹರೆಯದಲಿ ಈಡಾಗಿ ದುಡಿಯುತಿರು
ನೀಡು ಸತ್ಪಾತ್ರಕ್ಕೆ ಮುಪ್ಪಿಗೊಂದಿಷ್ಟು
ಕೂಡಿಸಿಡು ಧನವ ಪೂರ್ಣಜ್ಞ.

೨೧೩೯

ಹಗೆಯುಳ್ಳ ಬಾಳಿನಲಿ ಸೊಗವಿಲ್ಲ ನಗೆಯಿಲ್ಲ
ಹಗೆಯು ಬಾಳಿನಲಿ ಕಣ್ಣೀರು ಮುನ್ನೀರು
ಹಗೆ ಬೆಳೆಯದಿರಲಿ ಪೂರ್ಣಜ್ಞ.

೨೧೪೦

ದೊಡ್ಡವನು ಆದಂತೆ ದೊಡ್ಡಗುಣ ಬರಬೇಕು
ದೊಡ್ಡಗುಣ ತುಂಬಿದರೆ ಆ ಮನುಜ ಜಗದಿ
ದೊಡ್ಡವನು ನಿಜದಿ ಪೂರ್ಣಜ್ಞ.

೨೧೪೧

'ಸಂಪು' ಹೂಡುತ ಜನರ ಕೊಂಪೆಯಲಿ ದೂಡುವರು
'ಸಂಪು' ನಿಸ್ವಾರ್ಥವಿದ್ದಲ್ಲಿ ಹಿತವುಂಟು
ಪೆಂಪುಂಟು ಜನಕೆ ಪೂರ್ಣಜ್ಞ.

೨೧೪೨

ಶುದ್ಧರಕ್ತವು ಬೇಕು ಶುದ್ಧವಾಯುವು ಬೇಕು
ಶುದ್ಧ ಜೀವನಕೆ ಬೆಳಕು ನೀಡಲು ಬೇಕು
ಶುದ್ಧ ಸುಜ್ಞಾನವು ಪೂರ್ಣಜ್ಞ.

೨೧೪೩

ತಪ್ಪುಗಳ ಮಾಡದಿರು ವಪ್ಪಗಳು ಎಷ್ಟು ಜನ?
ತಪ್ಪೆಸಗಿ ಮತ್ತೆ ತಪ್ಪೆಸಗದಂಥವರೆ
ಒಪ್ಪವರು ಜಗಕೆ ಪೂರ್ಣಜ್ಞ.

೨೧೪೪

ಲಗ್ನಸತ್ಕಾರ್ಯಕ್ಕೆ ವಿಘ್ನಗಳು ಹದಿನೆಂಟು
ವಿಘ್ನಕ್ಕೆ ನೀನು ಅಂಜದಿರು ಕಾಯಲ್ಕೆ
ವಿಘ್ನೇಶನುಂಟು ಪೂರ್ಣಜ್ಞ.

೨೧೪೫

ಅಪರಿಮಿತ ಪರಿಶ್ರಮವು ಸಫಲತೆಗೆ ಸಾಧನವು
ವಿಪರೀತ ನಡೆಯುಳ್ಳ ಮಾನವನ ಬದುಕು
ವಿಫಲತೆಗೆ ಮೂಲ ಪೂರ್ಣಜ್ಞ.

೨೧೪೭

ದುಡ್ಡಿಟ್ಟು ಹೋಗದಿರು, ಬಡ್ಡಿ ಮಕ್ಕಳು ಬಂದು
ಅಡ್ಡ ಹಾದಿಯಲಿ ಹಾಳು ಮಾಡದೆ ಬಿಡರು
ದುಡ್ಡಿಡದೆ ದುಡಿಸು ಪೂರ್ಣಜ್ಞ.

೨೧೪೭

ನಿನ್ನ ಪಾಲಿನ ಕೆಲಸ, ಭಿನ್ನಭೇದವ ಮರೆತು
ಚನ್ನಾಗಿ ಮಾಡು ದೊರೆಯುವದು ಜೀವನದಿ
ಉನ್ನತದ ಶಕ್ತಿ ಪೂರ್ಣಜ್ಞ.

೨೧೪೮

ಆಸ್ಥೆಯಿಂದಲಿ ನೀನು ಸ್ವಸ್ಥ ಕೂಡ್ರದೆ ಶ್ರಮಿಸು
ಶಿಸ್ತು ಸಂಯಮದಿ ಜೀವನದ ಕೊನೆತನಕ
ಸ್ವಸ್ತಿ ನಿನಗಹುದು ಪೂರ್ಣಜ್ಞ.

೨೧೪೯

ಪಡೆಯಲ್ಕೆ ಪ್ರಗತಿಯನು, ಎಡೆಬಿಡದೆ ದುಡಿಯುತಿರು
ಜಡತೆಯನು ಕೊಡಹಿ ತೊಡಗು ಗಡಕಾಯಕದಿ
ತಡವು ತರವಲ್ಲ ಪೂರ್ಣಜ್ಞ.

೨೧೫೦

ಸಾಧನೆಯ ಕಾಲದಲಿ, ಬಾಧೆಯೊಳಗಾಗದಿರು
ಕಾದ ಕಬ್ಬಿಣವ ಹಿಡಿದಂತೆ ಆಗುವದು
ಸಾಧನೆಗೆ ಕೆಡಕು ಪೂರ್ಣಜ್ಞ.

೨೧೫೧

ಸಾಧನೆಯ ಸಮಯದಲಿ, ಮೋದ ಮನದೊಳಗಿರಲಿ
ಮೋದದಿಂ ಸುಗಮ, ಕರಣತ್ರಯಗಳಾಟ
ಮೋದ ಬಲಕಾರಿ ಪೂರ್ಣಜ್ಞ.

೨೧೫೨

ಈಶ್ವರನ ಮರೆತಿಹೆವು, ನಶ್ವರದ ವೈಭವದಿ
ವಿಶ್ವಂಭರನ ನೆನೆಯೆ ಮೂಜಗದ ಪರಮ
ಐಶ್ವರ್ಯ ವಶವು ಪೂರ್ಣಜ್ಞ.

೨೧೫೩

ಕಪ್ಪಲ್ತೆ ಕಸ್ತೂರಿ? ಕಪ್ಪುಕರ್ಣ್‌ಗುಡ್ಡಿಗಳು,
ಕಪ್ಪೇನು? ಬಿಳುಪೇನು? ಒಪ್ಪಿದ್ದರಾಯ್ತು
ನೆಪ್ಪಿರಲಿ ನಿನಗೆ ಪೂರ್ಣಜ್ಞ.

೨೧೫೪

ಕಾಯಕವು ನಿಜಸುಖಪ್ರ–ದಾಯಕವು ಜಗದಿ ಸುವಿ–
ಧಾಯಕವು ಸಕಲ ಮಾನವಕುಲಕೆ ಉಪಾ
ದೇಯುವದು ನಿಜದಿ ಪೂರ್ಣಜ್ಞ.

೨೧೫೫

ಏರಲೇಣಿಯನೇರು, ಏರಿಕೆಯುಹಗುರಹುದು
ತೇರೆಳೆಯುವಾಗ ಪರರ ಕೈ ಹಗ್ಗಗಳು
ಭಾರಿನೆರವಕ್ಕು ಪೂರ್ಣಜ್ಞ.

೨೧೫೬

ರಸ ಋಷಿಗೆ ಜಗವೆಲ್ಲ, ರಸಮಯವೆನಿಸಿದಪುದು
ಕಸದೊಡಲ ಕಸವರವ[೧] ಹೊರದೆಗೆವನವನು
ರಸದಾರ್ಶನಿಕನು ಪೂರ್ಣಜ್ಞ.

೨೧೫೭

ಬುದ್ಧಿಪ್ರಮಾಣತೆಯು, ಹಿಂದೆ ಸರಿಯಲು ಬೇಕು
ಆಧ್ಯಾತ್ಮವಿಲ್ಲದಿರೆ ಬರಿ ಬುದ್ಧಿ ಬೆಳೆದು
ಗುದ್ದಾಟ ನಿಲದು ಪೂರ್ಣಜ್ಞ.

೨೧೫೮

ಬುದ್ಧಿಯೊಂದೇ ಇದ್ದು, ಶ್ರದ್ಧೆಯೊಂದಿಲ್ಲದಿರೆ
ಉದ್ಧಕೃತಿ ಗೈಯುವದು ಅಸದಳವುಜಗದಿ
ಶ್ರದ್ಧೆಯಿಂ ಸಿದ್ಧಿ ಪೂರ್ಣಜ್ಞ.

೨೧೫೯

ಆತ್ಮಪಕ್ಷಿಯರೆಕ್ಕೆ, ಲೆಕ್ಕಕ್ಕೆ ನಿಲುಕದದು
ನಿಂತಿರದೆ ಹಾರುವದು ಪಂಜರದೊಳಿರದು
ಬೇತಿನಿಂದಿರಿಸು ಪೂರ್ಣಜ್ಞ.

---

೧ ಕಸವರ=ಬಂಗಾರ

೨೧೬೦
ಸತ್ಯಸಂಶೋಧನೆಗೆ, ನಿತ್ಯ ಸಾಧನೆ ಬೇಕು
ಅತ್ಯುತ್ತಮವನೆ ಸಾಧಿಸುವ ಪಣಬೇಕು
ಭಕ್ತಿಯೂ ಬೇಕು ಪೂರ್ಣಜ್ಞ.

೨೧೬೧
ಪರಮಾತ್ಮನೆಲ್ಲರಲಿ, ತೆರೆಮನೆಯೊಳಡಗಿಹನು
ಅರಿತವರು ಕಾಣುವರು ಸುಖವ ಪಡೆಯುವರು
ಅರಿವು ಅಮೃತರಸ ಪೂರ್ಣಜ್ಞ.

೨೧೬೨
ಸದಾಚಾರವೆ ಪುಣ್ಯ, ಸದಾಚಾರವೆ ಶಕ್ತಿ
ಸದಾಚಾರದಿಂ ಬಾಳಿದರೆ ಮಾನವಗೆ
ಸದ್ಗತಿಯು ಮುಂದೆ ಪೂರ್ಣಜ್ಞ.

೨೧೬೩
ಪ್ರಜ್ಞೆ ಮೂಡಿದ ನರಗೆ, ಅಜ್ಞತೆಯು ತೊಲಗುವದು
ಪ್ರಜ್ಞೆ ಬಾಳಿಂಗೆ ಕೈದೀಪ ನೋಡಯ್ಯ
ಪ್ರಜ್ಞೆಯಿರಬೇಕು ಪೂರ್ಣಜ್ಞ.

೨೧೬೪
ಆದರ್ಶದಿಂ ಬದುಕು, ಆದರ್ಶದಿಂ ಸುಖವು
ಆದರ್ಶ ಮಾನವಗೆ ಕೊಡುತಿಹುದು ಶಕ್ತಿ
ಆದರ್ಶ ಬೇಕು ಪೂರ್ಣಜ್ಞ.

೨೧೬೫
ಸಾಧಕನ ಸಾಧನೆಗೆ, ಆದರ್ಶವಿರಬೇಕು
ಆದರ್ಶವಿಲ್ಲದಿದ್ದವನ ಜೀವನಕೆ
ಹಾದಿಕಾಣಿಸದು ಪೂರ್ಣಜ್ಞ.

೨೧೬೬
ಅಂತರಂಗದೊಳಿರುವ, ಅಂತರಾತ್ಮನ ಕಂಡು
ಭ್ರಾಂತಿಯನು ನೀಗಿ ಜೀವಿಸುವ ಸಾಧಕಗೆ
ಶಾಂತಿ ಸಂಪ್ರಾಪ್ತಿ ಪೂರ್ಣಜ್ಞ.

೨೧೬೭

ಜೊಲ್ಲು ಸುರಿಸಲುಬೇಡ, ಅಲ್ಲದ್ದು ಆಡದಿರು
ಕಳ್ಳಕಪಟಿಗಳ ಸಹವಾಸ ಮಾಡದಿರು
ಬಲ್ಲವರೊಡನಾಡು ಪೂರ್ಣಜ್ಞ.

೨೧೬೮

ಅಳಿಸುವನು ಅಜ್ಞಾನಿ, ಉಳಿಸುವನು ಸುಜ್ಞಾನಿ
ತಿಳಿಸುವನು ವಿಜ್ಞಾನಿ ಅರಿದು ಹಿತಮಿತದಿ
ಬಳಸುವನು ದಾನಿ ಪೂರ್ಣಜ್ಞ.

೨೧೬೯

ಕತ್ತಲೆಯು ಕಳೆದಾಗ, ಚಿತ್ತಕ್ಕೆ ಬೆಳಕುಂಟು
ಕುತ್ತು ಬಂದಾಗ ಸತ್ಯಕ್ಕೆ ಬೆಲೆಯುಂಟು
ನಿತ್ಯ ಬಲವುಂಟು ಪೂರ್ಣಜ್ಞ.

೨೧೭೦

ದೀನದಲಿತೋದ್ಧಾರ, ಮಾನವನ ಭುಜಭಾರ,
ದೀನದಲಿತರ ಸೇವೆ ಶಿವಪೂಜೆಯೆಂಬ
ಜ್ಞಾನ ಉದಯಿಸಲಿ ಪೂರ್ಣಜ್ಞ.

೨೧೭೧

ಶರಧಿಯಲಿ ಮುಳುಗಿದರೆ, ದೊರೆಯುವವು ಮುತ್ತುಗಳು
ಅರಿವಿರದ ಓದು ಬರಿಯ ತಲೆ ಬುರುಡಿಯೊಳು
ಮರಳು ತುಂಬಿದೊಲು ಪೂರ್ಣಜ್ಞ.

೨೧೭೨

ರತನವನು ಗಳಿಸಲ್ಕೆ, ಜತನದಿಂದಿರಬೇಕು
ಮತಿವಂತ ನಾಗಲ್ಕೆ ಮಿತ ನುಡಿಯಬೇಕು
ಅತಿಯುಗತಿಗೇಡು ಪೂರ್ಣಜ್ಞ.

೨೧೭೩

ತಿಳಿಗೇಡಿ ಧನಿಕರಲಿ, ಗೆಳೆತನವ ಬೆಳೆಸದಿರು
ಕೊಳಕು ತುಂಬಿರುವ ಮನೆಯಲ್ಲಿ ಕೂಡ್ರದಿರು
ಕಲಹ ಮಾಡದಿಗು ಪೂರ್ಣಜ್ಞ.

೨೧೭೪

ಗಳಿಕೆಬಳಕೆಗಳು ನಿಜ, ಗೆಳೆಯರಂತಿರಬೇಕು
ಗಳಿಕೆ ಇಲ್ಲದ ಬಳಕೆ ತಳಕೆ ತೂತಾದ
ಹಳೆಗಡಿಗೆಯಂತೆ ಪೂರ್ಣಜ್ಞ.

೨೧೭೫

ಇದ್ದಷ್ಟು ಗಳಿಕೆಯಲಿ, ಸುದ್ದಾಗಿ ಬಾಳುತಿರು,
ಹದ್ದು ಬಸ್ತಿರಲಿ, ಶಿಸ್ತಿರಲಿ ನಿನ್ನಲ್ಲಿ
ಬುದ್ಧಿ ಬಲವಿರಲಿ ಪೂರ್ಣಜ್ಞ.

೨೧೭೬

ಕಳೆಕರಿಕೆ ಕಿತ್ತಿದರೆ, ಹೊಲದಿ ಬೆಳೆ ಹುಲುಸಕ್ಕು
ಕೊಳೆಗೊಂಡ ಮನವ ತಿಳಿವಳಿಕೆಯಿಂತೊಳೆಯೆ
ಹೊಳೆಯುವದು ಬದುಕು ಪೂರ್ಣಜ್ಞ.

೨೧೭೭

ಪರರದೋಷವನೆತ್ತಿ, ಪರಿವಾದ ಮಾಡದಿರು
ಪರರ ಜೀವಿತವ ಪಾಳ್ಗೆಡವಿದರೆ ಮುಂದೆ
ಕೊರಕೊರಗಿ ಸಾಯ್ವೆ ಪೂರ್ಣಜ್ಞ.

೨೧೭೮

ಪುಣ್ಯವಿದ್ದರೆ ಆಳು, ಪುಣ್ಯವಿದ್ದರೆ ಸತಿಯು
ಪುಣ್ಯವಿರಲಿವರು ಒಳ್ಳೆಜನ ದೊರಕುವರು
ಪುಣ್ಯ ಬಲಬೇಕು ಪೂರ್ಣಜ್ಞ.

೨೧೭೯

ಗುಣಸಿರಿಯ ಬೆಳೆಸುವೊಡೆ, ಕುಲಗಳನು ನೋಡದಿರು,
ಗುಣವೇ ಪ್ರಮಾಣ ಗುಣಗಳಿಗೆ, ಕುಲಗೌಣ,
ಗುಣಪ್ರೇಮಿಯಾಗು ಪೂರ್ಣಜ್ಞ.

೨೧೮೦

ಹಿಂದೆ ಮಾಡಿದ ಕರ್ಮ, ಇಂದು ನೀನುಣಬೇಕು
ಇಂದು ಮಾಡಿದ್ದು ಕಟ್ಟಿಟ್ಟ ಬುತ್ತಿಯದು
ಮುಂದುಣ್ಣಬೇಕು ಪೂರ್ಣಜ್ಞ.

೨೧೮೧

ಕೋಪ ಬಂದಿರುವಾಗ, ತಾಪ ತುಂಬಿರುವಾಗ
ದೀಪ ಮಂಕಾದಾಗ ಬರೆಯದಿರು 'ಪತ್ರ'
ಕೋಪ ಮೊದಲಿಳಿಸು ಪೂರ್ಣಜ್ಞ.

೨೧೮೨

ಕನ್ನಡಕ ಕಳೆದಾಗ, ಕನ್ನಡಕ ಹುಡುಕಲ್ಕೆ
ಕನ್ನಡಕ ಬೇಕು, ನನ್ನಿಯನು ಹುಡುಕಲ್ಕೆ
ನನ್ನಿಯೇ ಬೆಳಕು ಪೂರ್ಣಜ್ಞ.

೨೧೮೩

ಇಳೆಯಸಂಸಾರವಿದು, ಇಲಿಬಲೆಯು ಇದ್ದಂತೆ
ಒಳಗೆ ಬೀಳದಿರು ಬಿದ್ದರೂ ಪಾರಾಗು
ಬಲುಯುಕ್ತಿಯಿಂದ ಪೂರ್ಣಜ್ಞ.

೨೧೮೪

ಆನಂದಕಿಂಬಿರಲಿ, ಆನಂದ ತುಂಬಿರಲಿ
ಆನಂದದಲ್ಲಿ ಸೃಜನಕ್ರಿಯೆ ಬೆಳೆಯುವದು
ಆನಂದ ಬ್ರಹ್ಮ ಪೂರ್ಣಜ್ಞ.

೨೧೮೫

ಮಾಡದಿರು ತಪ್ಪನ್ನು, ಬೇಡದಿರು ದುಡಿಯದಲೆ
ಮಾಡು ಮಾಡುವದನ್ನು, ಮಾಳ್ಪ ಮೊದಲಿಂಗೆ
ನೀಡದಿರು ವಚನ ಪೂರ್ಣಜ್ಞ.

೨೧೮೬

ನೀತಿಯಿದ್ದರೆ ಜಗವು, ನೀತಿಯಿದ್ದರೆ ಸೊಗವು
ನೀತಿ ಬೋಧಿಸದ ಶಾಲೆಯದು ವಿಷಜ್ವಾಲೆ
ನೀತಿ ಶಿವಲೀಲೆ ಪೂರ್ಣಜ್ಞ.

೨೧೮೭

ವೇಷಕ್ಕೆ ತಕ್ಕಂತೆ, ಭಾಷೆ ತಾನಿರಬೇಕು
ಭಾಷೆಯಿರುವಂತೆ ದಿಟದ ನಡೆಯಿರದ
ದೇಶಕಿದು ಲೇಸು ಪೂರ್ಣಜ್ಞ.

೨೧೮೮

ಹದ ನೋಡಿ ಬಿತ್ತಿದರೆ, ಒದಗುವದು ತುಂಬಬೆಳೆ
ಕದನೋಡಿ ಒಳಗೆ ಹೋಗುವದು ಒಳಿತುಂಟು
ನದಿನೋಡಿ ಈಸು ಪೂರ್ಣಜ್ಞ.

೨೧೮೯

ಗುರಿಯಿರದ ಕಾರ್ಯದಲಿ, ನಿರತನಾಗಲು ಬೇಡ
ಗುರುವ ಕಡೆಗೆಣಿಸಿ ಎರವಾಗದಿರು ಫಲಕೆ
ಗುರುವಿನಡಿಗೆರವು ಪೂರ್ಣಜ್ಞ.

೨೧೯೦

ಮತಿಸಂವರ್ಧಿಸಲು, ಮತಿಶಕ್ತಿ ಹೃಚ್ಛಕ್ತಿ
ಜೊತೆಗೂಡಬೇಕು, ಪ್ರತಿಭೆಯೊಂದರ್ಥದಲಿ
ಮತಿಹೃದಯ ಮಿಲನ ಪೂರ್ಣಜ್ಞ.

೨೧೯೧

ಅರ್ಥವಿಲ್ಲದ ಮಾತು, ಧೂರ್ತಸ್ವಾರ್ಥಿಯಬೇತು
ಕೂರ್ತು ಕೂಡದಿಹನೇಹ ಗಡಿಗೆಯ ತೂತು
ವ್ಯರ್ಥ ಬರಿಬೂತು ಪೂರ್ಣಜ್ಞ.

೨೧೯೨

ಸಹಜವಿಲ್ಲದ ಬದುಕು ಕಹಿಯು, ಬಾರದು ಎದಕು
ಮಹತಿ ಸಾಧನೆಯ ಮಾರ್ಗದಲಿ ಬಾಧಕವು
ಸಹಜ ನಿಜಬದುಕು ಪೂರ್ಣಜ್ಞ.

೨೧೯೩

ಸಮದೃಷ್ಟಿ ತೋರದಿರೆ, ಸಮಭಾವ ಬಾರದಿರೆ
ಸಮರಸತೆ ಸೇರದಿರೆ ಬಾಳು ವಿಷಮದಿರೆ
ಸಮನಿಸದು ಸುಖವು ಪೂರ್ಣಜ್ಞ.

೨೧೯೪

ದುಡುಕು ಸಿಡುಕುಗಳೆಲ್ಲ, ಕೆಡುಕಿಗಡಿಪಾಯಗಳು
ಕೆಡುಕೆಂಬುದನ್ನು ಮನವರಿತು ಬಿಡಬೇಕು
ಮೃಡಸಾಕ್ಷಿಯಾಗಿ ಪೂರ್ಣಜ್ಞ.

೨೧೯೫

ಬಣಗುತನ ಮಾಡುತ್ತ, ಹಣಗಳಿಸಿ ಮೆರೆಯದಿರು
ಬಣಗುತನ ಶನಿಯಗುಣ ಒಣಮಾತು ಬೂತು
ಗುಣಗಳಿಸಿ ಬಾಳು ಪೂರ್ಣಜ್ಞ.

೨೧೯೬

'ಅಟ್ಟಕ್ಕೆ ಹಾರದ್ದು ಬೆಟ್ಟಕ್ಕೆ ಹಾರೀತೆ'
ಬಿಟ್ಟು ಬಡದಂತೆ ಕ್ರಮವಿಡಿದು ದುಡಿವವಗೆ
ಇಷ್ಟಾರ್ಥಸಿದ್ಧಿ ಪೂರ್ಣಜ್ಞ.

೨೧೯೭

ಅಳುಕದಿರು ಕಷ್ಟದೊಳು, ಅಳುಕಿದರೆ ಬೆಳೆವುದದು
ತಳೆಧೈರ್ಯವನ್ನು ತುಳಿಧೀರ ಪಥವನ್ನು
ಬೆಳಕಿರಲಿ ಮನದಿ ಪೂರ್ಣಜ್ಞ.

೨೧೯೮

ಅನುಭವಿಯತಲೆಯಲ್ಲಿ, ಚಿನಮಯದರತ್ನವಿದೆ
ಅನನುಭವಿಯಲ್ಲಿ ಅಹಮಿಕೆಯ ಮಿಕವುಂಟು
ಘನತೆಯನು ಗಳಿಸು ಪೂರ್ಣಜ್ಞ.

೨೧೯೯

ನೋವನರಿಯದ ವ್ಯಕ್ತಿ, ಭಾವವಿಲ್ಲದ ಉಕ್ತಿ
ಸೇವೆಗೊದಗದ ಆಳು ಬಾಳಿನಲಿ ಬಲುಕೀಳು
ಯಾವದಕು ಬರದು ಪೂರ್ಣಜ್ಞ.

೨೨೦೦

ಹರಿಹರರು ಒಂದಾದ, ವರತತ್ವ ಹಿತತತ್ವ
ಹರಿಹರರು ಜಾತಿ ಭೇದಗಳ ಬಿತ್ತಿದರೆ
ಧರೆ ಘೋರ ಘುರವು ಪೂರ್ಣಜ್ಞ.

೨೨೦೧

ಯಾವ ದೇವರೆ ಇರಲಿ, ಭಾವನಿರ್ಮಲವಿರಲಿ
ದೇವನೊಬ್ಬನೆ ಜಗಕೆ ಹೆಸರು ಹಲವಾರು
ಭಾವಿಸಿದರೊಂದೆ ಪೂರ್ಣಜ್ಞ.

೧೧೦೨

ಬೆಳಕಿನಲಿ ಭೇದವನು, ತಿಳಿಸುವರೆ? ಈಜಗದಿ
ಬೆಳಕಿನಲಿ ಕತ್ತಲೆಯನರಸುವರೆ ಮೂಢ?
ಬೆಳಕಿಹುದು ಒಂದೆ ಪೂರ್ಣಜ್ಞ.

೧೧೦೩

ಉಳ್ಳವರ ಸಿರಿಮನೆಯು, ಇಲ್ಲದರ ಬರಿಮನೆಯು
ಕಲ್ಬೆಟ್ಟ ಹೂದೋಟವೆಂಬ ತರತಮತೆ
ಇಲ್ಲ ರವಿ ಶಶಿಗೆ ಪೂರ್ಣಜ್ಞ.

೧೧೦೪

ಬೆಳೆಸುವದೆ ನಿಜಧರ್ಮ, ಅಳಿಸುವದೆ ಯುಮಧರ್ಮ
ಗಳಿಸುವದೆ ಗುಣಧರ್ಮ ಸತ್ಕಾರ್ಯಗಳಿಗೆ
ಬಳಸುವನೆ ಧರ್ಮಿ ಪೂರ್ಣಜ್ಞ.

೧೧೦೫

ಅಡ್ಡಗೋಡೆಯು ಮೇಲೆ ಕುಡ್ಡು ದೀಪವನಿಟ್ಟ
ಮಡ್ಡನಂತಾಡಿದರೆ ಬಂತೇನು ಮೂಢ?
ಗೊಡ್ಡುಗುಣ ತ್ಯಜಿಸು ಪೂರ್ಣಜ್ಞ.

೧೧೦೬

ಮದವುತ್ತ ಮನವನ್ನು, ಮೃದುಗೊಳಿಸದಿದ್ದರದು
ಮದಗಜಕೆ ಸರಿಯು ಶಿವಧ್ಯಾನ, ಶಿವಜ್ಞಾನ
ಅದಕೆ ಅಂಕುಶವು ಪೂರ್ಣಜ್ಞ.

೧೧೦೭

ಖಾದಿಧರಿಸಿರಿ ಮುದದಿ, ಖಾದಿಯಿಂದಲಿ ಶಕ್ತಿ
ಖಾದಿ ನೀಡುವದು ದೇಶಾಭಿಮಾನವನು
ಬಾಧೆ ತೊಲಗುವದು ಪೂರ್ಣಜ್ಞ.

೧೧೦೮

ಸ್ವಾತಂತ್ರ್ಯಪಿತ ಗಾಂಧಿ, ಓತುಧರಿಸಿದ ಖಾದಿ
ಸ್ವಾತಂತ್ರ್ಯ ಪ್ರಜ್ಞೆಯನು ಮೂಡಿಸಿತು ಖಾದಿ
ನೀತಿಹಿತಬೋಧಿ ಪೂರ್ಣಜ್ಞ.

೨೨೦೯

ದೊಡ್ಡವರು ದುಃಖಗಳ, ದೊಡ್ಡತನದಿಂ ಸಹಿಸಿ
ದಡ್ಡರಿಗೆ ಬುದ್ಧಿಯನು ಪೇಳಿದರೆ ಆಗ
ದೊಡ್ಡವರು ಅವರು ಪೂರ್ಣಜ್ಞ.

೨೨೧೦

ಅರಲುಗೊಂಡಿಹ ಕೆರೆಗೆ, ತೊರೆಹರಿದು ಬಂದಂತೆ
ಮರೆವು ತುಂಬಿರುವ ಮನುಜನಿಗೆ ಗುರುಕರುಣೆ
ಹರಿಗೋಲಿನಂತೆ ಪೂರ್ಣಜ್ಞ.

೨೨೧೧

ನೀರು ಕ್ಷೀರದ ಭೇದ, ತೋರಿಸುತ "ಹಂಸೆ" ಯದು
ಸಾರತಿಳಿಸುವದು, ಜೀವಹೊಲಿಗೆಯು ಬಿಡಿಸೆ
ಮಾರಾರಿಕರುಣೆ ಪೂರ್ಣಜ್ಞ.

೨೨೧೨

ಕತ್ತಲೆಯ ಕಳೆಯಲ್ಕೆ, ಜ್ಯೋತಿಬೇಕಾದಂತೆ
ಚಿತ್ತಚಾಂಚಲ್ಯ ಕಳೆಯಲ್ಕೆ ನಿನ್ನೊಳಗೆ
ಚಿತ್-ಶಕ್ತಿ ಬೆಳೆಸು ಪೂರ್ಣಜ್ಞ.

೨೨೧೩

ಪರಿಮಳದ ಸುಮದೆಡೆಗೆ, ಬರುವಭ್ರಮರದ ಹಾಗೆ
ಅರಿವು ಮೂಡಿರುವ ಶರಣ ಧಾವಿಸಿಬಹನು
ಗುರುಚರಣದಡೆಗೆ ಪೂರ್ಣಜ್ಞ.

೨೨೧೪

ಬರುವಾಗ ಏನನ್ನು, ತರಲಿಲ್ಲ ಮಾನವನು
ಇರುವಾಗ ಒಳಿತಾಗಿ ಬಾಳಿದರೆ ಕೊನೆಗೆ
ಸ್ಥಿರಕೀರ್ತಿ ಪಡೆವ ಪೂರ್ಣಜ್ಞ.

೨೨೧೫

ಕೂಡಿ ಉಣ್ಣದ ಊಟ, ಕೂಡಿ ಆಡದ ಆಟ
ತೀಡದೋದದಾ ಪಾಠಗಳು ಬದುಕಿಗಿವು
ಕಾಡುಹರಿಪಾಠ ಪೂರ್ಣಜ್ಞ.

೨೨೧೬

ಬೀಜ ಊರಿದ ಭೂಮಿ, ಸೋಜಿಗದಿ ಬೆಳೆವಂತೆ
ಓಜೆಯಿಂ ಮನದಿ ಅರಿವನ್ನು ಊರಿದರೆ
ರಾಜಿಪ್ಪದುತೇಜ ಪೂರ್ಣಜ್ಞ.

೨೨೧೭

ಕೋಪಿಷ್ಠ ಮಾನವನು ಪಾಪಗಳ ಮಾಡುವನು
ತಾಪವೀಯುತ ಅಮಾಯಕರ ಪೀಡಿಪನು
ಕೋಪಿ ಘನಪಾಪಿ ಪೂರ್ಣಜ್ಞ.

೨೨೧೮

ಸಖರಂತೆ ನಟಿಪ ಗೋ-ಮುಖವ್ಯಾಘ್ರ ಜನರುಂಟು,
ಮುಖದೆದುರು ಹಿತವಚನ ಬೆನ್ನಲ್ಲಿ ಚೂರಿ
ಸಖನೆ ಬಲುಜೋಕೆ ಪೂರ್ಣಜ್ಞ.

೨೨೧೯

ನೀನೂ ಚುನಾವಣೆಯ ಮಾನ್ಯ ಹುರಿಯಾಳೇನು?
ನೀನಿಂಥದಕ್ಕೆ ಆಳಲ್ಲ ಇದು ನೀತಿ
ಹೀನರಿಗೆ ಯೋಗ್ಯ ಪೂರ್ಣಜ್ಞ.

೨೨೨೦

ಕಪಟ ಕಾರಸ್ಥಾನ, ವಿಪರೀತವಾಗುತಿದೆ
ಅಪಲಾಪವಾಗಿಹವು ಆಶ್ವಾಸನೆಗಳು
ವಿಫಲ ಮಾತುಗಳು ಪೂರ್ಣಜ್ಞ.

೨೨೨೧

ಏನೀ ಚುನಾವಣೆಯು, ಮಾನವರ ಮುಗ್ಧತೆಯ
ಹೀನದುರ್ಲಾಭ ಸುಲಿವ ಹುನ್ನಾರವಿದು,
ಹಾನಿರಾಷ್ಟ್ರಕ್ಕೆ ಪೂರ್ಣಜ್ಞ.

೨೨೨೨

ಮೋಸವನು ಒಳಗಿಟ್ಟು, ವೇಷಭೂಷಣತೊಟ್ಟು
ಘಾಸಿ ಮಾಡುವರು ಖೊಟ್ಟಿವಚನವ ಕೊಟ್ಟು,
ದೇಶಘಾತಕರು ಪೂರ್ಣಜ್ಞ.

೨೨೨೩

ಒಳಗೆ ಶುದ್ಧಿಯು ಇರದೆ, ಜಳಕವನು ಮಾಡಿದರೆ
ಕೊಳಕು ಗುಣಬಿಡದೆ ಜಪಿಸಿದರೆ ಮಂತ್ರವನು
ಬೆಳಕು ದೊರೆಯುವದೆ? ಪೂರ್ಣಜ್ಞ.

೨೨೨೪

ನಾಯಿ ತಾ ನೆಕ್ಕಿದರೆ, ನಾಯಿತಾ ಕಚ್ಚಿದರೆ
ಘಾಯವಾಗುವದು, ಕೆಡಕುಂಟು ಆ ರೀತಿ
ಭಯವು ದುರಳರಿಂ ಪೂರ್ಣಜ್ಞ.

೨೨೨೫

ಭಿಕ್ಷೆಬೇಡುವ ಚಟವ ತಕ್ಷಣದಿ ಬಿಡಬೇಕು
ಭಿಕ್ಷೆಯದು ಮಾನವನ ದುರ್ಗತಿಗೆ ಶಿಕ್ಷೆ
ದಕ್ಷತೆಗೆ ಶೂಲ ಪೂರ್ಣಜ್ಞ.

೨೨೨೬

ಕಾಯಕವ ಮಾಡುತ್ತ, ನ್ಯಾಯದೊಳು ನಡೆಯುತ್ತ
ಮಾಯೆ ದೂಡುತ್ತ ದುಡಿದಿರುವ ದುಡ್ಡು ಸತ್–
ಧ್ಯೇಯಕ್ಕೆ ನೀಡು ಪೂರ್ಣಜ್ಞ.

೨೨೨೭

ಚಟವನ್ನು ಬಿಡಿರೆಂದು, ಕುಟಿಲತೆಯ ಒಳಗಿಟ್ಟು
ಚಟವ ಬಿಡದಿರುವವನು ನಡುರಾತ್ರಿಯಲಿ
ಅಟವಿ ಹೊಕ್ಕಂತೆ ಪೂರ್ಣಜ್ಞ.

೨೨೨೮

ಮದಮತ್ಸರಗಳನ್ನು ಬಿಡದೆ, ತತ್ವವ ಹೇಳಿ
ಬಡಬಡಿಸಿ ಕೆಟ್ಟಚಟ ಬಿಡಿರೆಂದು ತಿಳಿಸಿ,
ನಡೆಯದಿರೆ ವ್ಯರ್ಥ ಪೂರ್ಣಜ್ಞ.

೨೨೨೯

ಕೋಪತಾಪವ ತೊರೆದು, ರೂಪಮೋಹವ ತರಿದು
ಸಪ್ರೇಮದ ಭಾವವನು ಪೇಳಿದರೆ ಜಗವು
ಒಪ್ಪುವದು ಬೇಗ ಪೂರ್ಣಜ್ಞ.

## ಚೆಂದ,-ಲೇಸು ಪದ್ಧತಿ

೨೨೩೦

ನೀರು ತುಂಬಿದ ಕೆರೆಯು, ನೀರೆಯರಿರುವ ಮನೆಯು
ಸಾರ ಸಜ್ಜನರು ವಾಸಿಸುವ ಗುರುಮಠವು
ಭಾರತಕೆ ಶೋಭೆ ಪೂರ್ಣಜ್ಞ.

೨೨೩೧

ಅರುಹೆಂಬ ಜ್ಯೋತಿಯಿಂ, ಮರಹುಗತ್ತಲೆ ಕಳೆದು
ಕುರುಹಿನಾಚೆಗಿಹ ಬಯಲಿನಲಿ ಬೆರೆಯುವದೆ
ಪರತರಾವಸ್ಥೆ ಪೂರ್ಣಜ್ಞ.

೨೨೩೨

ತನ್ನನು ತಾನರಿತು, ಅನ್ಯವನು ನೆನೆಯದಲೆ
ಕಣ್ಮುಚ್ಚಿ ಚಿನ್ಮಯನ ಧ್ಯಾನಗೈಯುವದೆ
ಚಿನ್ಮಯಾನಂದ ಪೂರ್ಣಜ್ಞ.

೨೨೩೩

ತುಂಬಿರುವ ಕೆರೆ ಲೇಸು, ತುಂಬಿರುವ ಮನೆ ಲೇಸು
ಇಂಬಿರುವ ಸ್ಥಳ ಲೇಸು, ಮೇಣು ದನಗಳಿಗೆ
ಕೊಂಬುಗಳೇ ಲೇಸು ಪೂರ್ಣಜ್ಞ.

೨೨೩೪

ಅಂಬುಳ್ಳ ಬತ್ತಳಿಕೆ, ಸಿಂಬೆ ತಳಕಿಹ ಪಾತ್ರೆ
ನಂಬುಗೆಯ ಆಳು ಲೇಸು ಭಕ್ತಿರಸಕ್ಕೆ
ಸಾಂಬನೇ ಲೇಸು ಪೂರ್ಣಜ್ಞ.

೨೨೩೫

ಪತಿಗೆ ಪತ್ನಿಯು ಲೇಸು, ಕೃತಿಗೆ ಸಹಜತೆ ಲೇಸು
ಮತಿಗೆ ಸ್ಮೃತಿ ಶಕ್ತಿ, ಸುತ ಪಿತರ್ಗೆ ವಾತ್ಸಲ್ಯ-
ವತಿಯಿರಲು ಲೇಸು ಪೂರ್ಣಜ್ಞ.

೨೨೩೭

ನಾರಿಂಗೆ ಗುಣಲೇಸು, ನೀರಿಗಂ ತಿಳಿಲೇಸು
ಚೋರಂಗೆ ಕತ್ತಲೆಯು ಬಲು ಲೇಸು ಕ್ಷಮೆಯು
ಶೂರಂಗೆ ಲೇಸು ಪೂರ್ಣಜ್ಞ.

೨೨೩೭

ಜ್ಞಾನಿಗಂ ನಡೆ–ಲೇಸು, ಧ್ಯಾನಿಗಂ ಗವಿಲೇಸು
ಮೌನಿಗಂ ಲೇಸು ಜನರ ಸುಳಿವಿಲ್ಲದಿಹ
ತಾಣ ಬಲು ಲೇಸು ಪೂರ್ಣಜ್ಞ.

೨೨೩೮

ಹಸಿರುಗದ್ದೆಗೆ ಚೆಂದ, ಭಸಿತಹಣೆಗತಿ ಚೆಂದ
ಕಸತೆಗೆದ ಮನೆ ಚಂದ, ಮುದ್ದು ಮಕ್ಕಳಿಗೆ
ನಸುನಗೆಯು ಚೆಂದ ಪೂರ್ಣಜ್ಞ.

೨೨೩೯

ಗುಡಿಗೆ ಕಳಸವು ಚಂದ, ಮುಡಿ ಚೆಂದ ಮಾನಿನಿಗೆ
ಕುಡಿಮೀಸೆ ಚೆಂದ ಹೊಸಹೋರಿ ಹುಡುಗರಿಗೆ
ಗಿಡಚೆಂದ ವನಕೆ ಪೂರ್ಣಜ್ಞ.

೨೨೪೦

ಎಲೆ ಲೇಸು ಗಿಡಗಳಿಗೆ, ಛಲಲೇಸು ಸಾಹಸಿಗೆ
ಬಲ ಲೇಸು ಜಟ್ಟಿಗಳಿಗೆ ಕೃಷಿಕರಿಗೆ ಹುಲುಸು
ಬೆಳೆಬರಲು ಲೇಸು ಪೂರ್ಣಜ್ಞ.

೨೨೪೧

ಕುಳಿತುಕೊಳ್ಳಲು ಮೊದಲು, ಮಳಿಗೆಯೊಂದಿರಬೇಕು
ಬಳಿಕ ವ್ಯಾಪಾರ ನಿಷ್ಠೆಯಿಂ ನಡೆಸುವಡೆ
ಗಳಿಕೆಗಾಧಾರ ಪೂರ್ಣಜ್ಞ.

೨೨೪೨

ಅತಿಯಾಶೆ ಗತಿಗೇಡು, ಅತಿವಾದ ಮತಿಗೇಡು
ಅತಿಗೆ ಕಡಿವಾಣ ಇಡುವವನೆ ಬಲುಜಾಣ
ಮಿತಿಯು ಹಿತಸೂತ್ರ ಪೂರ್ಣಜ್ಞ.

೨೨೪೩

ಕೆಡುವ ಕಾಯದ ಮೋಹ, ಬಿಡುಬೇಗ ಧೈರ್ಯದಲಿ
ಹಿಡಿ ನೀನು ಸತ್ಸಂಗ ಸನ್ಮಾರ್ಗದಿಂದ
ಪಡೆವೆ ಪರಮುಕ್ತಿ ಪೂರ್ಣಜ್ಞ.

೨೨೪೪

ಆತ್ಮಶಕ್ತಿಯ ಬೆಳೆಸಿ, ಆತ್ಮವೈಸಿರಿ ಗಳಿಸಿ
ಆತ್ಮಾನುಭವವ ವಿವರಿಸೆ ಮುಮುಕ್ಷುಗಳು
ಓತು ಕೇಳುವರು ಪೂರ್ಣಜ್ಞ.

೨೨೪೫

ಬನ್ನಿಯನು ನೀಡುತ್ತ ನನ್ನಿಯನು ನುಡಿಯುತ್ತ
ಬನ್ನವನು ಕಳೆದು ಎಲ್ಲರೊಂದಾದಲ್ಲಿ
ಚಿನ್ನವಾಗುವರು ಪೂರ್ಣಜ್ಞ.

೨೨೪೬

ತಾನೆ ಒಲಿದರೆ ವನಿತೆ, ತಾನೆ ಒಲಿದರೆ ಕವಿತೆ
ತಾನಾಗಿ ಹೃದಯ ತುಂಬಿ ತುಳುಕಿದ ಮಾತು
ಜೇನು ಸವಿದಂತೆ ಪೂರ್ಣಜ್ಞ.

೨೨೪೭

ಹಸನಾದ ಮನೆಯಿರಲಿ, ಸೊಸೆಯಲ್ಲಿ ಗುಣವಿರಲಿ
ಶಶಿಕಾಂತಿಯಂಥ ಸಂಸ್ಕೃತಿಯ ಜನರಿರಲಿ
ರಸಕಾವ್ಯವಿರಲಿ ಪೂರ್ಣಜ್ಞ.

೨೨೪೮

ಹಾಸುಗೆಯು ಇರುವಷ್ಟು, ಲೇಸಾಗಿ ಕಾಲ್ಚಾಚಿ
ಲೇಸೆನಿಸಿಕೊಂಡು ಇದ್ದುದರೊಳೊಳಿತಾಗಿ
ವಾಸಿಪುದೆ ವಾಸಿ ಪೂರ್ಣಜ್ಞ.

೨೨೪೯

ಗುರು–ಹಿರಿಯರೆಸಗಿರುವ, ವರಕಾರ್ಯ ಪಥದಲ್ಲಿ
ತರುಣ ಉತ್ಸಾಹಿಗಳು ಮುಂದೆ ಸಾಗುವದೆ
ವರಪರಂಪರೆಯು ಪೂರ್ಣಜ್ಞ.

೨೨೫೦

ಅಧಿಕಾರಿಯಾದವಗೆ, ಸದುವಿನಯ ಭೂಷಣವು
ಅಧಿಕಾರ ಬಲವ ಸದುಪಯೋಗಿಸುವವರು
ಬುಧ ಮಾನ್ಯರಹರು ಪೂರ್ಣಜ್ಞ.

೨೨೫೧

ಜ್ಞಾನಿಯಾಡುವ ಮಾತು ಮಾಣಿಕದ ಸರದಂತೆ
ಮಾನವಗೆಲ್ಲ ಜ್ಞಾನದಿಂ ತಣಿಸುವದು
ಏನದರ ಬೆಳಗು? ಪೂರ್ಣಜ್ಞ.

೨೨೫೨

ಮಡಿ ಲೇಸು ಅರ್ಚಕಗೆ, ಗುಡಿ ಲೇಸು ಭಕುತರಿಗೆ
ಪಡಿಪದಾರ್ಥಗಳು ಅಡಿಗೆ ಮಾಡಲು ಲೇಸು
ಗಿಡಲೇಸು ಬನಕೆ ಪೂರ್ಣಜ್ಞ.

೨೨೫೩

ರಾಟಿ ನೇಕಾರಂಗೆ ಮೇಟಿ ಒಕ್ಕಲಿಗಂಗೆ
ಕೋಟೆಯೂರಿಂಗೆ ಜಗಕೆ ಶಿವಶರಣರೊಡ-
ನಾಟವದು ಲೇಸು ಪೂರ್ಣಜ್ಞ.

೨೨೫೪

ಮಠಕೆ ಗೋಪುರ ಲೇಸು, ಪಟಕೆ ದಾರವು ಲೇಸು
ನಟಿಗೆ ನೃತ್ಯಕಲೆ ಮಕ್ಕಳಿಗೆ ಪುಸ್ತಕದ
ಚಟವು ಬಲು ಲೇಸು ಪೂರ್ಣಜ್ಞ.

೨೨೫೫

ಶೂದ್ರ ಸಂಸ್ಕೃತಿ ಪಡೆದು, ಶುದ್ಧನಾದರೆ ಮಣ್ಣು
ಮುದ್ದೆಯನು ತಿದ್ದಿ ತೀಡಿಟ್ಟ ಮೂರ್ತಿಯೊಲು
ಮುದ್ದಾಗದಿಹನೆ? ಪೂರ್ಣಜ್ಞ.

೨೨೫೬

ಖಿಲವಾದ ಮನೆಯನ್ನು, ಸಲಿಗಟ್ಟಿಗೊಳಿಸಿದರೆ
ಬಲು ಬವಣೆ ತೊಲಗಿ ಸುಖವಾಸಕನುಕೂಲ
ಬಲಗೊಳಿಸು ಬೇಗ ಪೂರ್ಣಜ್ಞ.

೨೨೫೭
ಸರಳ ಬುದ್ಧಿಗೆ ಬಲವು, ಸರಳ ಕಾರ್ಯಕೆ ಫಲವು
ಸರಳ ನಡೆನುಡಿಗೆ ಗೆಲವು ದೊರಕಿದ ದಿನವೆ
ಧರೆಗೆ ಸಿರಿಗಾಲ ಪೂರ್ಣಜ್ಞ.

೨೨೫೮
ಮನವು ಕೋಟಲೆಗೊಂಡು, ದಣಿದು ಬೇಸತ್ತಾಗ
ಚಿನುಮಯನ ಧ್ಯಾನ ಭಕುತಿಯಿಂದ ಮಾಡಿದರೆ
ಮನಕೆ ತನಿಶಾಂತಿ ಪೂರ್ಣಜ್ಞ.

೨೨೫೯
ನನ್ನ ಗುರಿ, ನಿನ್ನ ಗುರಿ ಉನ್ನತವು ಯಾರ ಗುರಿ?
ಉನ್ನತವು ಯಾರದೆನ್ನುವದು ಹೃದಯಕ್ಕೆ
ನನ್ನಿಯಾಗುವದು ಪೂರ್ಣಜ್ಞ.

೨೨೬೦
ಶಿರಕೆ ಭೂಷಣ ಜ್ಞಾನ, ಕರಕೆ ಭೂಷಣ ದಾನ
ಅರಿವೆಂಬ ದೀಪ ಭೂಷಣವು ಮಾನಸಕೆ
ಅರಿವೆ ಗುರುವಲ್ತೆ ಪೂರ್ಣಜ್ಞ.

೨೨೬೧
ಮೂಡಣದಿ ಮುಂಬೆಳಗು, ಮೂಡಿದರೆ ಬಲು ಚೆಂದ
ಗಾಡಾಂಧಕಾರ ಕವಿದ ಹೃದಯದಿ ಬೆಳಕು
ಮೂಡಿದರೆ ಶಾಂತಿ ಪೂರ್ಣಜ್ಞ.

೨೨೬೨
ಮಂಗಲಪ್ರದವೆನಿಪ, ತುಂಗಭದ್ರಾಸ್ನಾನ
ಸಂಗಡಿಗರೊಡನೆ ಪಟ ಹಾರಿಸುವ ಆಟ
ಕಂಗಳಿಗೆ ಬೇಟ ಪೂರ್ಣಜ್ಞ.

೨೨೬೩
ವೇಶ್ಯೆಯರ ಕುಲದವರ, ದೋಷಗಳ ನಿರ್ಮಲಿಸಿ
ಈಶನನು ನೆನೆದು ಬಾಳಲ್ಕೆ ಕಲಿಸಿದರೆ
ದೇಶಕ್ಕೆ ಲೇಸು ಪೂರ್ಣಜ್ಞ.

೨೨೬೪

ನೋಡಿದರೆ ಹೊಲ ಚೆಂದ, ಮಾಡಿದರೆ ಮನೆ ಚಂದ
ಮೂಡಿದರೆ ಜ್ಞಾನ ಬಲು ಚೆಂದ, ಶಿವಗೀತೆ
ಹಾಡಿದರೆ ಚೆಂದ ಪೂರ್ಣಜ್ಞ.

೨೨೬೫

ಸತಿಗೆ ಪಾತಿವ್ರತ್ಯ, ಯತಿಗಾತ್ಮ ಪಾವಿತ್ರ್ಯ,
ಸುತನಿಗಧ್ಯಯನ ಅಭ್ಯುದಯಕಾರಿಗಳು
ಮತಿವಂತ ಕೇಳು ಪೂರ್ಣಜ್ಞ.

೨೨೬೬

ತೋಟಕ್ಕೆ ಒಂದೆರಡು, ಮಟ್ಟಿ ಭಾವಿಗಳಿರಲಿ
ನಾಟಿರಲಿ ತುಂಬ ಸಸಿ, ಕಂಗಳಿಗೆ ಚೆಂದ
ನೋಟ ಬಲುಚಂದ ಪೂರ್ಣಜ್ಞ.

೨೨೬೭

ವಾಪಿ ತೋಟಕೆ ಚೆಂದ, ನೂಪುರಸತಿಗೆ ಚೆಂದ
ತೇಪೆ ಕೈಯಲ್ಲಿ ಇದ್ದ ರದು ಬಲು ಚೆಂದ
ಉಪ್ಪಾರ ಜನರಿಗೆ ಪೂರ್ಣಜ್ಞ.

೨೨೬೮

ಮನದ ಕೊಳೆಯನು ತೊಳೆಯು, ತನುಮೋಹವನು ಅಳಿಯು
ಅನುಭಾವಿಗಳನು ಮುದದಿಂದ ಅನುಸರಿಸು
ನಿನಗದೇ ಮಾರ್ಗ ಪೂರ್ಣಜ್ಞ.

೨೨೬೯

ಸಂಸ್ಥೆ ಸ್ಥಿರವಾಗಿರಲು, ಆಸ್ಥೆಯಿಂ ದುಡಿಯುತಿರು
ಶಿಸ್ತು ಜೀವನದ ಅಸ್ತಿತ್ವಕಾಧಾರ
ಮಸ್ತಕಕು ಒಳಿತು ಪೂರ್ಣಜ್ಞ.

೨೨೭೦

ಶುದ್ಧಮನದಿಂ ನಗುತ, ಬುದ್ಧಿಯನು ಹೇಳಿದರೆ
ಮುಗ್ಧನಾದವನು ತನ್ನ ಬುದ್ಧಿಯ ತಾನೆ
ತಿದ್ದಿಕೊಳ್ಳುವನು ಪೂರ್ಣಜ್ಞ.

೨೨೮೧

ಶುದ್ಧನಗೆ ಮನುಜನಿಗೆ ಬುದ್ಧಿಯನು ತಿದ್ದುವದು
ಬಿದ್ದಮಾನವಗೆ ಒಳಿತಿರುವ "ಮಾತ್ರೆ"
ಯಿದ್ದಂತೆ ನೋಡು ಪೂರ್ಣಜ್ಞ.

೨೨೮೨

ಜೀವನದ ವನದಲ್ಲಿ, ಭಾವ ಪಕ್ಷಿಯು ನಲಿದು
ಕಾವ್ಯ ಗಾಯನದ ರಸ ಸುರಿಸಿದರೆ ಜಗಕೆ
ದಿವ್ಯ ಆನಂದ ಪೂರ್ಣಜ್ಞ.

೨೨೮೩

ಸೂಜಿಕಣ್ಣೊಳಗಿಂದ, ತೇಜಿಹೊರಬಂದರದು
ಸೋಜಿಗವು ಅಲ್ಲ, ಮೂರ್ಖ ದಾರಿಗೆ ಬರಲು
ಸೋಜಿಗವು ಜಗದಿ, ಪೂರ್ಣಜ್ಞ.

೨೨೮೪

ಪರಿಮಳವ ಬೀರುತಿದೆ, ಅರಳಿರುವ 'ಅರವಿಂದ'
ಕೊರಗಿರುವ ಬಾಳ್ಗೆ ನವಚೇತನವನಿತ್ತು
ಅರಿವು ತುಂಬುತಿದೆ ಪೂರ್ಣಜ್ಞ.

೨೨೮೫

ವೇದ ಸೂತ್ರವ ಹಿಡಿದು, ವಾದ ಮಾಡಲು ಬೇಕು
ಭೇದಮತಿ ಬೇಡ, ಹೊಂದಿಕೊಳ್ಳುವ ಹೊಲಬು
ಸ್ವಾದವೀಯುವದು ಪೂರ್ಣಜ್ಞ.

೨೨೮೬

ಚೆಲುವಿನಿಂ ನಗುತಿರಲಿ, ಬೆಳೆಯುತಿಹ ನಗರಗಳು
ಬೆಳೆಯಿಸುತ ಶಾಂತಿ ಸೌಹಾರ್ದ ಸಂಸ್ಕೃತಿಯ
ಕಲೆಯು ನೆಲೆಯಾಗಿ ಪೂರ್ಣಜ್ಞ.

೨೨೮೭

ಕಪ್ಪು ನಿಜ ಕೋಗಿಲೆಯು, ಕಪ್ಪು ನಿಜ ಕಸ್ತೂರಿ
ಕಪ್ಪಾದರೇನು? "ಇಂಪು ಕಂಪು"ಗಳಿರಲು
ಕಪ್ಪನೆಣಿಸುವರೆ? ಪೂರ್ಣಜ್ಞ.

೨೨೭೮

ಸಂಪತ್ಸಮೃದ್ಧಿಯಿರೆ, ದಾಂಪತ್ಯ ಸುಖವೃದ್ಧಿ
ಪೆಂಪು ಸೊಂಪಿಂಪು ಕಂಪ್ರಗಳಿಗೆಲ್ಲಕ್ಕು
ಸಂಪತ್ತು ಪುಷ್ಟಿ ಪೂರ್ಣಜ್ಞ.

೨೨೭೯

ಅವರಸರದ ಪಾತವದು ಅವಗತವು ಆದೀತೆ?
ಅವಗಾಹಿಸಲ್ಕೆ ಅವಕಾಶವಿತ್ತರದು
ಯುವಜನಕೆ ಹಿತವು ಪೂರ್ಣಜ್ಞ.

೨೨೮೦

ಅರ್ಥವಿರದಿರೆ ಬದುಕು, ವ್ಯರ್ಥವಾಗುವದಯ್ಯ
ಆರ್ತ ಜನಹಿತಕೆ ಅರ್ಥವನು ನೀಡಿದರೆ
ಸಾರ್ಥಕವು ಅರ್ಥ ಪೂರ್ಣಜ್ಞ.

೨೨೮೧

ಹೊಸ ಹಳೆಯ ಪುರಗಳನು, ಹೊಸವಸ್ತ್ರಧರಿಸಿರುವ
ಹೊಸ ವಧುಗಳಂತೆ ಸಿಂಗರಿಸಿ ಕೊಡುತಿಹರು
ಹೊಸ ಕಲಾವಿದರು ಪೂರ್ಣಜ್ಞ.

೨೨೮೨

ವರನ ಗುಣವನು ಕನ್ಯೆ, ವರನ ಸಿರಿಯನು ತಾಯಿ
ನಿರುಕಿಪನು ತಂದೆ ವರನಕುಲಗೌರವ
ವರ ನೋಳ್ಪ ರೂಪ, ಪೂರ್ಣಜ್ಞ.

೨೨೮೩

ಭಿತ್ತಿಯಿಲ್ಲದ ಚಿತ್ರ, ಎತ್ತ ಬರೆಯುವದು? ಹೃ-
ದ್ಭಿತ್ತಿಯಲಿ ಸತ್ಯ ಚಿತ್ರ ಬರೆಯುವದು ಪರಮ
ಚಿತ್ರ ಕಲೆಯಯ್ಯ ಪೂರ್ಣಜ್ಞ.

೨೨೮೪

ವ್ಯಸನವನು ದೂಡಲ್ಕೆ, ಹಸನಾದ ಸದ್ಬುದ್ಧಿ
ಕಸುವು ನೀಡುವದು ಕತ್ತಲೆಯ ಕಳೆಯಲ್ಕೆ
ಶಶಿಕಾಂತಿಯಂತೆ ಪೂರ್ಣಜ್ಞ.

೨೨೮೫

ಮನದೊಳಗೆ ನಿರ್ಮಲತೆ, ತನುವಿನಲಿ ನಿರ್ಮೋಹ
ಮನೆಮಾಡಿಕೊಂಡಿರಲು ಅದುವೆ ನಿಜಮಡಿಯು
ತನುಮನವ ಬೆಳಗು ಪೂರ್ಣಜ್ಞ.

೨೨೮೬

ತಿಳಿವಳಿಕೆ ತಿರುಳಿರದ, ತಲೆಯೊಂದು ಬರಿಬುರುಡೆ
ತಿಳಿವಳಿಕೆ ತುಂಬಿ ಸೂಸಿದರೆ ಆ ತಲೆಯು
ಬೆಳಕಿನಸಮುದ್ರ ಪೂರ್ಣಜ್ಞ.

೨೨೮೭

ಅಷ್ಟವಿಧದರ್ಚನೆಯು, ನಿಷ್ಠೆಯಿಂ ಮಾಡೆಂದು
ಸ್ಪಷ್ಟ ಬಸವಣ್ಣ ಪೇಳಿರಲು, ಬೇಡೆಂಬ
ಗೋಷ್ಟಿಗೇನು ಬೆಲೆ ಪೂರ್ಣಜ್ಞ.

೨೨೮೮

ದೋಷಗಳನೆಣಿಸುವವೆ, ದ್ವೇಷಿಗಳ ಮನದೆಣಿಕೆ
ಲೇಸನೆಸಗುತ್ತ ಮುನ್ನುಗ್ಗುವವಗಿಲ್ಲ
ದ್ವೇಷಿಗಳ ಭಯವು ಪೂರ್ಣಜ್ಞ.

೨೨೮೯

ಪಕ್ಷಗಾರರ ಗೆಲಸ, ದಕ್ಷತೆಯಿಂದಲಿ ಗೈದು
ಪಕ್ಷಪಾತವನು ಮಾಡದ ವಕೀಲ, ಸಂ-
ರಕ್ಷಿಸುವದೊಳಿತು ಪೂರ್ಣಜ್ಞ.

೨೨೯೦

ರಸರುಚಿಗೆ ಕಾವ್ಯರಸ, ರಸಿಕರಿಗೆ ಕಾಮಿನಿಯು
ಮಿಸುಪ ಯತಿಗಳಿಗೆ ಸಂಯಮವು ಹಿತಕಾರಿ
ಮಿಸುನಿಕೃಪಣರಿಗೆ ಪೂರ್ಣಜ್ಞ.

೨೨೯೧

ಬರಿ ವಿಚಾರದಿ ಶಕ್ತಿ, ಅರಳಿಸದು ಹೃತ್ಕಮಲ
ಸರಸ ಸದ್ಭಾವ ರವಿಯುದಯ ಅರಳಿಪುದು
ಪರಿಮಳಿಸುವಂತೆ ಪೂರ್ಣಜ್ಞ.

೨೨೯೨

ಗಾತ್ರಕೊಬ್ಬಿದರೇನು? ವ್ಯರ್ಥಗುಣ ರಾಹಿತ್ಯ
ಗಾತ್ರಕ್ಕೆ ತಕ್ಕ ಗುಣಪುಷ್ಟಿಯಿದ್ದಲ್ಲಿ
ಸಾರ್ಥಕವು ಬದುಕು ಪೂರ್ಣಜ್ಞ.

೨೨೯೩

ಹೃದಯ ಹೃದಯದ ಮಾತು ಮಧುರವಪ್ಪುವ ಮನಕೆ
ಹೃದಯ ಬುದ್ಧಿಗಳು ಬೆರೆತೊಡನೆ ಜಗದಲ್ಲಿ
ಮುದವು ಜನಿಸುವದು ಪೂರ್ಣಜ್ಞ.

೨೨೯೪

ಬಲುಕಠಿಣವೆನಿಸುವದು, ತಿಳಿವಳಿಕೆ ತಿಳಿವನಕ
ಬಲುಕತ್ತಲಲ್ಲಿ ತೊಳಲಾಡಿ ಕೊನೆಗೊಮ್ಮೆ
ಬೆಳಕು ಕಂಡಂತೆ ಪೂರ್ಣಜ್ಞ.

೨೨೯೫

ಶಾಂತಿಯೆಂಬುದು ಚಂದ್ರ, ಕಾಂತಿಮನದಂಗಳಕೆ
ಚಿಂತೆಯೆಂಬುವಧ್ವಾಂತ ಅಳಿಸಲಾಗುವದು
ಶಾಂತಿಶಶಿಯುದಯ ಪೂರ್ಣಜ್ಞ.

೨೨೯೬

ಶಾಂತಿ ಸೌಖ್ಯಕೆ ರಕ್ತ, ಕ್ರಾಂತಿಗಿಳಿಯುವದೊಳಿತೆ?
ಭ್ರಾಂತಿಯದು ಹಿಂಸೆಯಿಂ ಸೌಖ್ಯಸಾಧಿಪುದು
ಶಾಂತಕ್ರಿಯೆ ಒಳಿತು ಪೂರ್ಣಜ್ಞ.

೨೨೯೭

ಕಡಲ ನೀರದ ಪಾರ ಸಡಗರವು ಕಂಗಳಿಗೆ
ಕುಡಿಯುವೆಯು? ಉಪ್ಪು, ಮಿಗಿಲಾಗಿ ಮಳೆಗರೆಯೆ
ಪೊಡಗವಿದು ಅಮೃತ ಪೂರ್ಣಜ್ಞ.

೨೨೯೮

ಜೀವನವು ಒಂದು ಕಲೆ, ಜೀವನಕೆ ಅಮಿತ ಬೆಲೆ
ಜೀವನದಿ ದುಡಿದು ಬದುಕುವದೆ ಸುಖದ ಸೆಲೆ
ಜೀವನವು ಲೀಲೆ ಪೂರ್ಣಜ್ಞ.

೨೨೯೯

ಇದರ ಹೆಸರು ಮರಾಳ,[೧] ಇದು ಮರುಳು ಮಾಡುವದು
ಹೃದಯಕ್ಕೆ ಹರುಷ, ಕಂಗಳಿಗೆ ಸಂತೋಷ
ಇದರ ವೈಮಾಟ ಪೂರ್ಣಜ್ಞ.

೨೩೦೦

ವೇದಾಂತ ತಿಳಿಯಲ್ಕೆ, ಬಾಧೆ ಮೂರನು ನೀಗಿ
ಪೋದದಿಂ ಮೂರವಸ್ಥೆಗಳ ತಿಳಿದವಗೆ
ವೇದಾಂತ ವೇದ್ಯ ಪೂರ್ಣಜ್ಞ.

೨೩೦೧

ಪರದಾಸ್ಯವಳಿದರೂ, ತುರುಗಿಹುದು ಒಳದಾಸ್ಯ
ಹಿರಿದಪ್ಪ ಗುರಿಯ ಸಾಧನೆಯು ಕುಂಟುತಿದೆ
ಅರಿವು ಕಿರಣಿಸಲಿ ಪೂರ್ಣಜ್ಞ.

೨೩೦೨

ಬಗೆದುಂಬಿ ದುಡಿಯುವದೆ, ಪ್ರಗತಿಪೊಂದುವ ಗುಟ್ಟು
ಹಗಲಿರುಳು ದುಡಿವ ದೇಶಗಳು ಜಗದಲ್ಲಿ
ಮಿಗೆ ಮೆರೆಯುತಿಹವು ಪೂರ್ಣಜ್ಞ.

೨೩೦೩

ದುಷ್ಟದಮನವ ಮಾಳ್ಪ, ಶಿಷ್ಟರಕ್ಷಣೆ ಮಾಳ್ಪ
ಶ್ರೇಷ್ಠ ಸದ್ಗುಣದ ಶಕ್ತಿ ಅವತರಿಸುವದು
ಇಷ್ಟ ಜಗಕಿಂದು ಪೂರ್ಣಜ್ಞ.

೨೩೦೪

ಈಸುವದು ಪ್ರಕೃತಿಗುಣ, ಈಸುತ್ತ ಜಯಿಸುವದು
ಈಶಗುಣ ನಿಜದಿ ಇದರಿಂದ ಜಗದ ಸುವಿ-
ಕಾಶ ತಾನಹುದು ಪೂರ್ಣಜ್ಞ.

---

೧ ಮರಾಳ=ಹಂಸ.

೨೩೦೫

ಅಂಬುಧಿಯ ಪ್ರಧ್ವಾನ, ಗಂಭೀರವನಿಸಿಹುದು
ತುಂಬಿರುವಜ್ಞಾನಿ ಮಾತಾಡಲಾಧ್ವನಿಯು
ಅಂಬುಧಿಗು ಮಿಗಿಲು ಪೂರ್ಣಜ್ಞ.

೨೩೦೬

ಅತಿಯಾಗಬಾರದೈ, ಕಟುಟೀಕೆ ನಿಂದೆಗಳು
ಮತಿಗೆ ಹೊಳೆವಂತೆ ಯುವಕರಿಗೆ ಪೇಳಿದರೆ
ಹಿತವುಂಟು ಮನಕೆ ಪೂರ್ಣಜ್ಞ.

೨೩೦೭

ಜಡವಾದ ಬೆಂಕಿಯನು, ಮೃಡಧ್ಯಾನ ಜಲದಿಂದ
ಗಡನೆ ತವಿಸಿದರೆ ಅಂತರಂಗಕೆ ಸ್ವಾಸ್ಥ್ಯಶ್ರೀ
ದೃಢಶಾಂತಿ ಮನಕೆ ಪೂರ್ಣಜ್ಞ.

೨೩೦೮

ಅವರವರ ಕೆಲಸಗಳ, ಅವರವರು ನಿಷ್ಠೆಯಿಂ
ಶಿವನೊಪ್ಪುವಂತೆ ಮಾಡಿದರೆ ನಾವಿರುವ
ಭವವೆ ದಿವವಕ್ಕು ಪೂರ್ಣಜ್ಞ.

೨೩೦೯

ನಾಳೆ ಎನ್ನುವ ಜನರ, ಬಾಳೆಲ್ಲ ಹಾಳಹುದು
ನಾಳೆ ಎನ್ನದಿಲೆ ಇಂದೇ ಮಾಳ್ಪುದು ದೇಶ
ದೇಳಿಗೆಯ ಹಾದಿ ಪೂರ್ಣಜ್ಞ.

೨೩೧೦

ಕೆಡುಗಾಲ ಬಂದಾಗ, ಕಡುವೈರಿ ಹಿಡಿಬೇಕು
ಬಿಡಬೇಕು ಅವನನ್ನು ಮುಕ್ತನಾದಾಗ
ಒಡೆಮಂತೆ ಕೊಡವು ಪೂರ್ಣಜ್ಞ.

೨೩೧೧

ಕತ್ತೆ ಹಾಲೊಮ್ಮೊಮ್ಮೆ, ಉತ್ತಮೌಷಧವಂತೆ
ಉತ್ತಮೋತ್ತಮರ ಹೊತ್ತಿಗಾಗಲುಬಹುದು
ಕತ್ತೆಯಂಥವರು ಪೂರ್ಣಜ್ಞ.

೨೩೧೨

ಉದ್ದುದ್ದ ಮಾತಿನ ಬಹಾದ್ದೂರ ಜನ ಬಹಳ
ಗುದ್ದಿ ಅವರನ್ನು ದುಡಿಸಿಕೊಂಡರೆ ಅವರ
ಉದ್ಧಾರವಹುದು ಪೂರ್ಣಜ್ಞ.

೨೩೧೩

ಬೆಳಗಿದರೆ ಕನ್ನಡಿಯು, ಥಳಥಳನೆ ಹೊಳೆಯುವದು
ಒಳಿತೆಸಗುವವರ ತೆಗಳಿದರವರ ಕೀರ್ತಿ
ಬೆಳಗುವದು ಜಗದಿ ಪೂರ್ಣಜ್ಞ.

೨೩೧೪

ಪ್ರೇಮ ಸತಿಪತಿಗಳಿಗೆ, ಹೇಮವದು ಭೂಷಣಕೆ
ಭೂಮಿ ಸೀಮೆಗಳು ಅತ್ತೆ ಮಾವರಿಗೆ ಘನ
ಧಾಮ ಸಚಿವರಿಗೆ ಪೂರ್ಣಜ್ಞ.

೨೩೧೫

"ಹಳೆಬೇರು, ಹೊಸ ಚಿಗುರು," ತಳಿರಾಗಿ ಹೂವಾಗಿ
ಚಲುವಿನಿಂ ತುಂಬಿ ಸಂಸ್ಕೃತಿ ಸುರದ್ರುಮವು
ಫಲವೀಯುತಿರಲಿ ಪೂರ್ಣಜ್ಞ.

೨೩೧೬

ಯೋಜನೆಗಳಿವೆ ಬಹಳ ಯೋಜನೆಗೆ ಸಹಕಾರ
ಸಜ್ಜನರು ನೀಡಿದರೆ ಸುಖವುಂಟು ಜಗಕೆ
ಅಜ್ಞನನುಭವವು ಪೂರ್ಣಜ್ಞ.

೧೩೧೭

ಸುಳ್ಳು ಮೋಸಗಳಡಗಿ ಕ್ಷುಲ್ಲಕರ ಬಲ ತಗ್ಗಿ
ಒಳ್ಳೆಯುವರೆಲ್ಲರಲಿ ಒಕ್ಕಟ್ಟು ಬೆಳೆದು
ಒಳ್ಳೆಯದು ಆಳ್ಗೆ ಪೂರ್ಣಜ್ಞ.

೨೩೧೮

ಪರಿಶುದ್ಧವಾಗಿರುವ ಆತ್ಮಪುಷ್ಪಗಳನ್ನು
ಅರಳಿಸುವವಗೆ ಸಕಲ ಸಿದ್ಧಿಗಳೊಲಿದು
ಕರತಲಕೆ ಬಹವು ಪೂರ್ಣಜ್ಞ.

೨೩೧೯

ಸಾಮರಸ್ಯವು ಇರದ ದಾಂಪತ್ಯ ಬರಿ ತೀಟೆ
ಪ್ರೇಮರಸಭರಿತ ಸಂಸಾರ ಸುಖಸಾರ
ಭೂಮಿಯಲಿ ಸ್ವರ್ಗ ಪೂರ್ಣಜ್ಞ.

೨೩೨೦

ಕಾಕು ವಿದ್ಯೆಗಳಿಂದು ಬೇಕಿಲ್ಲ ಜೀವನದ
ತೂಕ ತಪ್ಪಿಸದ ಸದ್ವಿಚಾರದ ವಿದ್ಯೆ
ಬೇಕು ತರುಣರಿಗೆ ಪೂರ್ಣಜ್ಞ.

೨೩೨೧

ಸೂರ್ಯನುದಯುವು ಚೆಲ್ವ ತಾವರೆಗೆ ಜೀವಾಳ
ಧೈರ್ಯ ಶೂರಂಗೆ ಜೀವಾಳ ಮಾನಸಕೆ
ಸ್ಥೈರ್ಯ ಜೀವಾಳ ಪೂರ್ಣಜ್ಞ.

೨೩೨೨

ಅಂಬುಸಂಭೃತವಾದ ಕುಂಭವದು ತುಳುಕುವದೆ?
ದಂಭವಿಲ್ಲದ ಸಾಧು ಜ್ಞಾನರಸ ತುಂಬಿರುವ
ಕುಂಭವಿದ್ದಂತೆ ಪೂರ್ಣಜ್ಞ.

೨೩೨೩

ಅರಳಿರುವ ಪುಷ್ಪವದು ಪರಿಮಳವ ಬೀರುವದು
ಕರುಳಿಂದ ಬರುವ ಮಾತು ತಿರುಳಿನ ಉರುಳಿ
ಸರಳು ಹೂವಿನದು ಪೂರ್ಣಜ್ಞ.

೨೩೨೪

ಆಡಂಬರದ ಮಾತು ಕೋಡಗನು ಕುಣಿದಂತೆ
ಪ್ರೌಢ ಸುವಿಚಾರ ವಾಗ್ವೈಖರಿಯು ಸೂರ್ಯ
ಮೂಡಿ ಬಂದಂತೆ ಪೂರ್ಣಜ್ಞ.

೨೩೨೫

ಏಲಕ್ಕಿ ಕಂಪಿಂದು ಎಲ್ಲೆಡೆಗು ತುಂಬಿಹುದು
ಲೋಲುಪ್ತಿಯಿಂ ಜನರು ಸೇವಿಸುತ ಸುಖದಿ
ಲೋಲಾಡುತಿಹರು! ಪೂರ್ಣಜ್ಞ.

೨೩೨೬

ಹೃದಯ ಸಿರಿಸಂಗಳಿಸೆ ಮೃದುಲ ಹೃದಯವು ಬೇಕು
ಹದ ಮಾಡಿ ಬೀಜ ಬಿತ್ತಿದರೆ ಹುಲುಸು ಬೆಳೆ
ಒದಗಿ ಬಂದುಪುದು! ಪೂರ್ಣಜ್ಞ.

೨೩೨೭

ಹರಗಿದರೆ ಹೊಲದ ಕಸ ಕರಿಕೆಗಳು ಅಳಿವಂತೆ
ಅರಿವಿನಿಂ ಮನವ ಹಸನು ಮಾಡಿದರಾತ್ಮ
ಸಿರಿಯು ಹುಲುಸಕ್ಕು ಪೂರ್ಣಜ್ಞ.

೨೩೨೮

ಜನನ ಮರಣಗಳಾಟ ಅನುಗಾಲ ನಡೆಯುವವು
ಮನುಜತೆ ವಿಕಾಸ ಮಂಥನದ ನವನೀತ
ಕೊನೆಯಿಲ್ಲವಿದಕೆ ಪೂರ್ಣಜ್ಞ.

೨೩೨೯

ಜಗವೊಂದು ಜೋಕಾಲಿ ನಗುನಗುತ ಜೀಕಿದರೆ
ಬಗೆಬಗೆಯ ಕಷ್ಟಕೋಟಲೆಗಳಳಿಯುವವು
ಸೊಗಸಹುದು ಪೂರ್ಣಜ್ಞ.

೨೩೩೦

ನಾಲಗೆಯ ತಡೆದಾತ ಬಾಲೆಯರ ತೊರೆದಾತ
ಕಾಲನಂ ಗೆದ್ದು ಶಿವಯೋಗ ಸುಖದಲ್ಲಿ
ಲೋಲಾಡಬಹುದು ಪೂರ್ಣಜ್ಞ.

೨೩೩೧

ಮುಪ್ಪು ಬರುವದು ಸಹಜ ಅಪ್ಪು ಬಂದಂತದನು
ಕಪ್ಪಿಲ್ಲದಂಥ ಬಾಳಿರಲಿ ಶಿವಮೆಚ್ಚಿ
ಒಪ್ಪುವಂತಿರಲಿ ಪೂರ್ಣಜ್ಞ.

೨೩೩೨

ವೃದ್ಧಾಪ್ಯದಲಿ ಬಿದ್ದು ಒದ್ದಾಡದಂತಿರಲಿ
ಶುದ್ಧ ಜೀವನಕೆ ಕೈಯಲ್ಲಿ ದ್ರವ್ಯವು
ಸಮೃದ್ಧವಾಗಿರಲಿ ಪೂರ್ಣಜ್ಞ.

೨೩೩೩

ಹೊಟ್ಟೆ ಹೊರೆಯಲು ತಾನೆ ಪಟ್ಟಣಕೆ ಬಂದ ಮಗ
ಕಷ್ಟದೊಳಗಿರಲು ನಿನಗೆ ನೀ ದುಡಿಯುವದು
ಬಿಟ್ಟದ್ದು ಅಲ್ಲ! ಪೂರ್ಣಜ್ಞ.

೨೩೩೪

ಅಟ್ಟವದು ಮಾಳಿಗೆಗೆ ದಟ್ಟಡವಿ ಪಶುಗಳಿಗೆ
ಮೆಟ್ಟು ಪಥಿಕರಿಗೆ ಲೇಸು ಕಡುನೀಚರಿಗೆ
ಖೊಟ್ಟಿ ಗುಣ ಲೇಸು ಪೂರ್ಣಜ್ಞ.

೨೩೩೫

ಕುಂಭಸ್ತನಂಗಳು ನಿ–ತಂಬಿನಿಯರಿಗೆ ಚೆಂದ
ಅಂಬೆಗಾಲಿಡುವ ಮಕ್ಕಳಿಗೆ ಬಲುಚೆಂದ
ತುಂಬುಗಲ್ಲಗಳು ಪೂರ್ಣಜ್ಞ.

೨೩೩೬

ಕಮಲಮುಖಿ ಸತಿ ಲೇಸು ಸುಮಧುರ ಶೃತಿ ಲೇಸು
ಸುಮದಃಥ ಸುಮನ ಸದುಹೃದಯುಗಳು ಲೇಸು
ವಿಮಲಧ್ಯಾನಕ್ಕೆ ಪೂರ್ಣಜ್ಞ.

೨೩೩೭

ದುಂಡುಮಲ್ಲಿಗೆ ಲೇಸು ಚೆಂಡು ಕಂದಗೆ ಲೇಸು
ತುಂಡು ಕಂಬಳಿಯು "ಸರ್ವಜ್ಞ"ನಿಗೆ ಲೇಸು
ಸೊಂಡೆ ಗಣಪತಿಗೆ ಪೂರ್ಣಜ್ಞ.

೨೩೩೮

ವಿರತಂಗೆ ಸಂಯಮನ ಅರಿತವಗೆ ಸುಜ್ಞಾನ
ಸಿರಿವಂತ ನರಗೆ ದಾನಗುಣ ಬಲು ಲೇಸು
ಸ್ವರವು ಗಾಯಕಗೆ ಪೂರ್ಣಜ್ಞ.

೨೩೩೯

ಭಕ್ತಿ ಭವಬಂಧನವ ಮುಕ್ತ ಮಾಡುವ ಶಕ್ತಿ
ಭಕ್ತಿಯದು ಸಕಲ ಸಿದ್ಧಿವೃದ್ಧಿಯ ಜನನಿ!
ಭಕ್ತಿ ಶಿವಭುಕ್ತಿ! ಪೂರ್ಣಜ್ಞ.

೨೩೪೦

ಸಂಪುಳ್ಳ ನಡೆನುಡಿಯು ಇಂಪುಳ್ಳ ಸಂಗೀತ
ಕಂಪುಳ್ಳ ಹೂವು ಪೆಂಪುಳ್ಳ ಮಾನಸವು
ಸೊಂಪುಗರೆಯುವವು ಪೂರ್ಣಜ್ಞ.

೨೩೪೧

ನೀರವತೆ ಆತ್ಮಕ್ಕೆ ಸಾರಶಾಂತಿಯ ನೀಡಿ
ಭೂರಿ ಶಕ್ತಿಯನು ಕೊಡುತಿಹುದು ಹೃದಯಕ್ಕೆ
ಧೀರತನವನ್ನು ಪೂರ್ಣಜ್ಞ.

೨೩೪೨

ಸೂರ್ಯ ಶಶಿತಾರೆಯರು ದೂರವಿರುವದರಿಂದ
ಚಾರು ರೂಪದಲಿ ತೋರುವರು ಕಂಗಳಿಗೆ
ದೂರ ಬಲುಚೆಂದ ಪೂರ್ಣಜ್ಞ.

೨೩೪೩

ಹಿರಿದಾದ ಸಂಕಲ್ಪ ಅರಿವು ಬೆರೆತೊಂದಾಗಿ
ನಿರುತ ಸಾಧನೆಯ ಮಾಡಿದರೆ ಜಗಕೆಲ್ಲ
ಪರಮಫಲ ಪ್ರಾಪ್ತಿ ಪೂರ್ಣಜ್ಞ.

೨೩೪೪

ಆಧ್ಯಾತ್ಮ ಸಾಧಕಗೆ ಸಾಧನೆಯು ಸೋಪಾನ
ಸಾಧನೆಯ ಬಲದಿ ಸಿದ್ಧಿಸೌಧವನೇರು
ಸಾಧಿಪುದು ಶಾಂತಿ ಪೂರ್ಣಜ್ಞ.

೨೩೪೫

ನೋವು ಮನುಜಗೆ ವೀರ್ಯ ನೋವು ಮನುಜಗೆ ಶೌರ್ಯ
ನೋವು ಮನುಜನ ಮನಕೆ ವಜ್ರಸಮಧೈರ್ಯ
ನೋವಿನಿಂ ಸ್ಥೈರ್ಯ ಪೂರ್ಣಜ್ಞ.

೨೩೪೬

ಭೋಗ ರೋಗದ ಮೂಲ ತ್ಯಾಗ ಯೋಗದ ಮೂಲ
ಯೋಗ ಸಾಧನೆಯು ಚಿತ್ತವೃತ್ತಿ ನಿರೋಧ
ಯೋಗ ಸುವಿರಾಗ ಪೂರ್ಣಜ್ಞ.

೨೩೪೭

ಹಿಂಸೆಯಿಂದು ಸೋಲುತ್ತ-ಹಿಂಸೆಯದು ಗೆದ್ದರದು
ದೇಶಕ್ಕೆ ಸುಖವುಂಟು ಬೆಳಗುವದು ಬೆಳೆದು
ಲೇಸು ಎಲ್ಲರಿಗೆ ಪೂರ್ಣಜ್ಞ.

## ಆರೋಗ್ಯ ವೈದ್ಯರು

೨೩೪೮

ಎಚ್ಚರತ್ತು ನಸುಕಿನಲಿ, ಸಂಚರಿಸಿ ಬಯಲಿನಲಿ
ಸ್ವಚ್ಛಹವೆಯುಂಡು ನಲಿವರಿಗೆ ಔಷಧಿಯ
ವೆಚ್ಚವೇ ಇಲ್ಲ ಪೂರ್ಣಜ್ಞ.

೨೩೪೯

ಉದಯಕಾಲದೊಳೆದ್ದು, ಸದಯ ಗುರುವಿನ ನೆನೆದು
ಮುದದಿ ಜಲಪಾನ ಮಾಡಿದರೆ ಆರೋಗ್ಯ
ಕುದುರುವದು ಬೇಗ ಪೂರ್ಣಜ್ಞ.

೨೩೫೦

ಬಳ್ಳೊಳ್ಳಿ ಸೇವನೆಯು, ಒಳ್ಳೆಯದು ದೇಹಕ್ಕೆ
ಎಲ್ಲ ರೋಗಕ್ಕೆ ದಿವ್ಯ ಔಷಧವೆಂದು
ಬಲ್ಲವರ ನುಡಿಯು ಪೂರ್ಣಜ್ಞ.

೨೩೫೧

ಪೊಡವಿಯಲಿ ಬಳ್ಳೊಳ್ಳಿ, ಬಡಜನರ ಕಸ್ತೂರಿ
ಬಡವ ಬಲ್ಲಿದರು ಅಡಿಗೆ ಅಂಬಲಿಗಿದನು
ಬಿಡದೆ ಬಳಸುವರು ಪೂರ್ಣಜ್ಞ.

೨೩೫೨

ವೀರ್ಯ ಬಂಧನದಿಂದ, ಧೈರ್ಯ ಸಂಜನಿಸುವದು
ಕಾರ್ಯ ಸಂಸ್ಫೂರ್ತಿ ಹಸ್ತದಲಿ ಪುಟಿಯುವದು
ಧೈರ್ಯ ಜಯ ಜನಕ ಪೂರ್ಣಜ್ಞ.

೨೩೫೩

ಮಧುಮೇಹವಿದ್ದವರು, ಮಧುರವನು ಬಿಡಬೇಕು
ಹದಗೈದ ಹಸಿರು ಪಲ್ಯಗಳ ತಿಂದುಂಡು
ಮುದದೊಳಿರಬೇಕು ಪೂರ್ಣಜ್ಞ.

೨೩೫೪

ಬೆರೆಸಿ ಗುಗ್ಗುಳ ಅಕ್ಕಿ, ಅರೆದು ನೀರೊಳಗದನು
ಕುರಕೆ ಲೇಪಿಸಲು ಕುರ ಒಡೆದು ಮಾಯುವದು
ಕೊರಗು ತಪ್ಪುವದು ಪೂರ್ಣಜ್ಞ.

೨೩೫೫

ಉರಿಜ್ವರವು ಬಂದಾಗ, ಮರೆಯದಿರು ಪಥ್ಯವನು
ವರವೈದ್ಯನೀವ ಔಷಧವ ಸೇವಿಸುತ
ಜ್ವರಮುಕ್ತನಾಗು ಪೂರ್ಣಜ್ಞ.

೨೩೫೬

ಇರುಳೆನದೆ ಹಗಲೆನದೆ, ಉರಿಜ್ವರವು ಬರುವಾಗ
ನೊರೆವಾಲು ಅನ್ನ ಬಳ್ಳೊಳ್ಳಿ ಚಟ್ಟಣಿಯು
ಸರಿಯಾದ ಪಥ್ಯ ಪೂರ್ಣಜ್ಞ.

೨೩೫೭

ಕ್ಷಯರೋಗಿ ಔಷಧದ, ನಿಯಮ ಪಾಲಿಪುದೊಳಿತು
ಭಯತೊರೆದು ಚಿತ್ತ ಶಾಂತಿಯಿಂ ವಿಶ್ರಮಿಸೆ
ಕ್ಷಯವು ತೊಲಗುವದು ಪೂರ್ಣಜ್ಞ.

೨೩೫೮

ಪ್ರಕೃತಿ ನಿಯಮವ ಬಿಟ್ಟು, ವಿಕೃತಮನದಿಂ ತನ್ನ
ಪ್ರಕೃತಿಯನೆ ಕೆಡಿಸಿಕೊಂಡು ಹಾಳಾದವಗೆ
ಧಿಕ್ಕಾರ ಜಗದಿ ಪೂರ್ಣಜ್ಞ.

೨೩೫೯

ಕಡೆದ ಮಜ್ಜಿಗೆಯುನ್ನು, ಬಿಡದೆ ಕುಡಿ ಉಂಡೊಡನೆ
ಅಡಿಗಡಿಗೆ ಬರುವ ಮಂದಾಗ್ನಿ ಅಪಚನಗ-
ಳಡಗಿ ಹೋಗುವವು ಪೂರ್ಣಜ್ಞ.

೨೩೬೦

ಕರಿದ ಭಜಿ ಸೇವು ಒಗ್ಗರಣೆ ಮಂಡರಳುಗಳ
ಬುರಿ ಬುರಿ ಜಿಲೇಬಿ ನಿರುತ ತಿನ್ನುವ ಚಟವು
ಹೊರಕಡೆಗೆ ಮೂಲ ಪೂರ್ಣಜ್ಞ.

೨೩೬೧

ಕೆಲವರಿಗೆ ಹುಳಿದೇಗು, ಕೆಲವರಿಗೆ ತಲೆನೋವು
ಕೆಲವರಿಗೆ ವಿವಿಧ ರೋಗಗಳು ಇವುಗಳಿಗೆ
ಒಳಿತುಷಃಪಾನ ಪೂರ್ಣಜ್ಞ.

೨೩೬೨

ಅತಿಗುಳಿಗೆ ನುಂಗಿದರೆ, ಅತಿಶಯದ ಕೇಡುಂಟು
ಅತಿಯಿಂದ ಜಗದಿ ಘಟಿಪ ಹಾನಿಗಳ ಮತಿ
ಮಿತಿ ಮೀರುತಿಹವು ಪೂರ್ಣಜ್ಞ.

೨೩೬೩

ಭಾವಿಗಳ ಹತ್ತಿರದಿ, ನೋವಿನಿಂದಿರಬೇಡ
ಯಾವ ಕಾಲದೊಳು ಮಲಮೂತ್ರವಿಡಬೇಡ
ಸೇವಿಸದಿರು ಮದ್ಯ ಪೂರ್ಣಜ್ಞ.

೨೩೬೪

ಕೆರೆಭಾವಿಹಳ್ಳ ಹೊಳೆಯಿರುವಲ್ಲಿ ಹೆಣ ಹೂಳ
ದಿರಬೇಕು ಆರೋಗ್ಯದಮೃತ ಜಲ
ಇರಲಿ ಅದು ವಿಮಲ ಪೂರ್ಣಜ್ಞ.

೨೩೬೫

ರಾಗಿ ಮುದ್ದಿಯು ಮದ್ದು, ರೋಗದಿಂ ದೂರಿದ್ದು
ಬೇಗದಿಂದ ಬಲಿತು ದೃಢತರದ ಆರೋಗ್ಯ
ಯೋಗಿ ನೀನಾಗು ಪೂರ್ಣಜ್ಞ.

೨೩೬೬

ದುಡಿಯದಲೆ ಉಂಬುವನ, ಜಡದೇಹ ಕೊಬ್ಬುವದು
ದುಡಿವವನ ಜಡತೆ ಕರಗಿ ಮೈಹಗುರಹುದು
ದುಡಿದುಣ್ಣು ಮನುಜ ಪೂರ್ಣಜ್ಞ.

೨೩೭೭

ಸೊಳ್ಳೆ ಚಿಕ್ಕಾಡಿರುವೆ, ಕಳ್ಳ ಇಲಿ ಹೆಗ್ಗಣವು
ಚುಳ್ಳು ಜೊಂಡಿಗವು ಇದ್ದಲ್ಲಿ ಇರಬೇಡ
ಒಳ್ಳೆ ಮನೆಯೊಳಿರು ಪೂರ್ಣಜ್ಞ.

೨೩೭೮

ಜೇನು ಸೇವಿಸೆ ಶಕ್ತಿ, ಜೇನು ಸೇವಿಸೆ ಸ್ಫೂರ್ತಿ
ಜೇನು ಔಷಧಿಯು, ಶಿವನ ಅಭಿಷೇಕಕ್ಕೆ
ಜೇನು ಜೀವಾಳ ಪೂರ್ಣಜ್ಞ.

೨೩೭೯

ತನುರೋಗ ಕಳೆಯಲ್ಕೆ, ಎನಿತೆನಿತೊ ಮದ್ದುಂಟು
ಮನರೋಗಕುಂಟೆ ಮದ್ದು? ಮದ್ದದಕೆ ಶಿವ
ಮನವೇ ಮದ್ದಯ್ಯ ಪೂರ್ಣಜ್ಞ.

೨೩೮೦

ದೇಗುಲವೆ ಆಸ್ಪತ್ರೆ, ರೋಗಿಗಳು ಶಿವಗೆ ಸಮ
ಹೀಗೆ ಭಾವಿಸುವ ಸೇವಿಸುವ ವೈದ್ಯ ಶಿವ-
ಯೋಗಿ ತಾನಪ್ಪ ಪೂರ್ಣಜ್ಞ.

೨೩೮೧

ರೋಗಿಗಳ ಸೇವೆ, ಶಿವ ಯೋಗವೆಂದೆಸಗುವರು
ಬೀಗಿದಲೆ ಬಾಗಿ ವೈದ್ಯರು ರೋಗಿಗಳ
ರೋಗ ಕಳೆಯುವರು ಪೂರ್ಣಜ್ಞ.

೨೩೮೨

ಗೋಗರೆದು ಗೋಳಿಡುವ, ರೋಗಿಗಳನುನಯದಿ
ಸ್ವಾಗತಿಸಿ ತಣಿಸು ಉಪಚರಿಪ ಸೇವೆ ಶಿವ
ಯೋಗದೊಂದು ಪರಿ ಪೂರ್ಣಜ್ಞ.

೨೩೮೩

ರೋಗಿ ಸೇವೆಯು ಮುಂದೆ, ತ್ಯಾಗ ಭೋಗಗಳಿಲ್ಲ
ರೋಗಿ ಸೇವೆಯಲಿ ದೇವರನು ಕಾಣುತ್ತ
ನೀಗು ಭವವನ್ನು ಪೂರ್ಣಜ್ಞ.

೨೩೭೪

ಕೊಬ್ಬನ್ನು ಕರಗಿಪುದು, ಮಬ್ಬನ್ನು ಕಳೆದಪುದು
ಶುಭ್ರ ಸಿಹಿಜೇನು ಚೈತನ್ಯದಾಯಕವು
ಈ ಭೂಮಿಯಮೃತ ಪೂರ್ಣಜ್ಞ.

೨೩೭೫

ಹಳ್ಳಿಗರ ಮನೆಯಲ್ಲಿ ಒಳ್ಳೆ ಹೈನಗಳಿರಲಿ
ಬಳ್ಳೊಳ್ಳಿ ಚಟ್ನಿ, ರೊಟ್ಟಿ ಮೊಸರೀರುಳ್ಳಿ
ಎಲ್ಲ ಹದವಿರಲಿ ಪೂರ್ಣಜ್ಞ.

೨೩೭೬

ನಿತ್ಯ ಮುದ್ದೆಯನುಂಡು, ನಿತ್ಯ ನಿದ್ರೆಯ ಮಾಡಿ
ನಿತ್ಯ ಸರಿಯಾಗಿ ಲದ್ದಿಯನು ಹಾಕಿದರೆ
ಎತ್ತಣದು ರೋಗ? ಪೂರ್ಣಜ್ಞ.

೨೩೭೭

ಮಲಮೂತ್ರ ಕಟ್ಟಿದರೆ, ಬಲವೆಲ್ಲ ನಶಿಸುವದು
ಜಲರೋಗ ಬಂದು ಕೈಕಾಲುಗಳು ಬಾತು
ಮುಳುವು ಜೀವಕ್ಕೆ ಪೂರ್ಣಜ್ಞ.

೨೩೭೮

ಮಲಮೂತ್ರ ತಡೆಯದಿರು, ಜಳಕವನು ತ್ಯಜಿಸದಿರು
ಮಲಿನ ವಸ್ತ್ರಗಳ ಧರಿಸದಿರು, ಹಸಿದುಣ್ಣು
ಒಳಿತಾಗಿ ಬಾಳು ಪೂರ್ಣಜ್ಞ.

೨೩೭೯

ಅತಿಯಾದ ರತಿಕ್ರೀಡೆ, ಅತಿವೀರ್ಯನಾಶಕೆಡೆ
ಮತಿದೇಹ–ಧೃತಿಗೆ ವೀರ್ಯವದು ರಸರತ್ನ
ಹಿತಮಿತದಿ ಬಳಸು ಪೂರ್ಣಜ್ಞ.

೨೩೮೦

ಸುಖನಿದ್ರೆಯೊಳಗುಂಟು, ಸಕಲ ಬ್ರಹ್ಮಾಂಡ ಸುಖ
ಸುಖನಿದ್ರೆ ತರುವ ಬದುಕು ಮಾಡುತ ಪರಮ
ಸುಖಿಯಾಗು ನೀನು ಪೂರ್ಣಜ್ಞ.

೨೩೮೧
ರೋಗ ಬಂದರೆ ಧೈರ್ಯ, ಯೋಗವೂ ಶುಶ್ರೂಷೆ
ರೋಗಕ್ಕೆ ಧೈರ್ಯವೂ ಗುಣಕಾರಿ ಮದ್ದು
ರೋಗಿ ಹೆದರದಿರು ಪೂರ್ಣಜ್ಞ.

೨೩೮೨
ಶುಂಠಿಯ ಕಷಾಯವನು, ಕಂಠಮಟ ಕುಡಿಯುವರೆ?
ಅಂಟುಗಸುವೆಂದು ಸಿಕ್ಕಂತೆ ತಿಂದರದು
ಕಂಟಕಕೆ ಮೂಲ ಪೂರ್ಣಜ್ಞ.

೨೩೮೩
ಹಸನಾದ ಬಿಸಿಯೂಟ, ರಸಪುಷ್ಟಿದಾಯಕವು
ಕಸದಂಥ ಕೂಳು ತಿಂಬವನೆ ಆರೋಗ್ಯ
ಕುಸಿದು ಬೀಳುವದು ಪೂರ್ಣಜ್ಞ.

೨೩೮೪
ಆರೋಗ್ಯ ವರ್ಧನೆಗೆ, ಸಾರತೆಂಗಿನನೀರು
ನಾರಿಯರ ಅಡುಗೆ ರುಚಿರುಚಿಯೆನಿಸೆ ಬೇಕು
ನಾರಿಕೇಳಫಲ ಪೂರ್ಣಜ್ಞ.

೨೩೮೫
ರೋಗಿಗಳ ಸೇವೆಯಲಿ, ಮೂಗು ಮುರಿಯಲುಬೇಡ
ರೋಗಿ ಪ್ರತ್ಯಕ್ಷ ದೇವರೆಂದೆ ಬಗೆದು
ಬಾಗಿ ಉಪಚರಿಸು ಪೂರ್ಣಜ್ಞ.

೨೩೮೬
'ಘಟಪ್ರಭಾದಲ್ಲಿರಲು ಜಠರರೋಗಗಳಿಲ್ಲ
ಜಟಿಲ ಕ್ಷಯರೋಗ' ವ್ಯಾಧಿಬಾಧೆಗಳೆಲ್ಲ
ಮಟಮಾಯುವಕ್ಕು ಪೂರ್ಣಜ್ಞ.

೨೩೮೭
ಹಸಿಶುಂಠಿ ಹಳೆಬೆಲ್ಲ, ಹಸನಾದ ಕಸಕಸಿಯು
ಹೊಸ ಕಸುವು ಕೊಟ್ಟು ಮುಸುಗುಡುವ ಹೋರಿಯಂ
ತೆಸಗುವದು ನಿನ್ನ ಪೂರ್ಣಜ್ಞ.

೨೩೮೮

ಮೂಲವ್ಯಾಧಿಗೆ ಮದ್ದು, ಮೂಲಂಗಿ ಸೇವನೆಯು
ಮೇಲೆ ಮೊಸರನ್ನ ಬೆಣ್ಣೆ ತಿಂಬವಗಿಲ್ಲ
ಮೂಲವ್ಯಾಧಿಭಯ ಪೂರ್ಣಜ್ಞ.

೨೩೮೯

ಪಥ್ಯದ ಮಿತಾಹಾರಿ, ನಿತ್ಯವಾಯುವಿಹಾರಿ
ಸ್ತುತ್ಯ ನೈಷ್ಠಿಕದ ಬ್ರಹ್ಮಚಾರಿಯ ಬಾಳು
ಅತ್ಯಂತ ಶ್ರೇಷ್ಠ ಪೂರ್ಣಜ್ಞ.

೨೩೯೦

ಅಜೀರ್ಣವಾದರದು, ಭೋಜನಕೆ ಬಲುವಿಷವು
ಸೋಜಿಗವು ತರದು ಮೂರ್ಖಂಗೆ ಗೋಷ್ಠಿಯು
ನೈಜತೆಗೆ ಕುಂದು ಪೂರ್ಣಜ್ಞ.

೨೩೯೧

ಆಡುತಿಹ ಮಕ್ಕಳನು, ಕಾಡುವವು ವೈರಿಗಳು
ಬಾಡಿಸುತ ಮುಖವನ್ನು ಆರು ರೋಗಗಳು
ಪೀಡಿಸುತ್ತಿಹವು ಪೂರ್ಣಜ್ಞ.

೨೩೯೨

ದಾದಿಯರು ಶುಶ್ರೂಷೆ, ಆದರದಿ ಮಾಡಿದರೆ
ವೇದಿಪುದು ಮೈಗೆ ಕೊಟ್ಟಂಥ ಔಷಧವು
ಮೋದಿಪನು ರೋಗಿ ಪೂರ್ಣಜ್ಞ.

೨೩೯೩

ಒಳಗಿರುವ ವೈರಿಗಳು, ಕಳವಳವ ಕೊಡುತಿಹವು
ಹಲವು ರೀತಿಯಲಿ ಕಾಡುವವು ದುರ್ಮದದಿ
ಬಲು ಜೋಕೆ ಆತ್ಮ! ಪೂರ್ಣಜ್ಞ.

೨೩೯೪

ತಲೆನೋವು ಕಳೆಯಲ್ಕೆ, ಬಳಸು ತುಂಬೆಯ ರಸವ
ಒಳಿತಾದ ಮದ್ದು ನೆಗಡಿ ಕಾಮಣೆಗಳಿಗೆ
ಭಲೆ ತುಂಬೆ ಗಿಡವೇ! ಪೂರ್ಣಜ್ಞ.

೨೩೯೫

ನಿಂಬದಳ, ನಿಂಬಫಲ, ನಿಂಬ ತೈಲಾದಿಗಳು
ತುಂಬಕಹಿ ಬಾಯ್ಗೆ; ಮದ್ದು ರೋಗಿಯ ಮೈಗೆ
ತುಂಬ ಗುಣಕಾರಿ ಪೂರ್ಣಜ್ಞ.

೨೩೯೬

ದೇಹ ಬೆಳೆಯಲು ಕ್ಷುಧೆಯು, ದಾಹಕಳೆಯಲುಬೇಕು
ದೇಹದಾರೋಗ್ಯಕ್ಕೆ ಪಚನಕ್ಕೆ ಬೇಕು
ಓಹೋ ಹಲ್ಬೇಕು! ಪೂರ್ಣಜ್ಞ.

೨೩೯೭

ಹಲ್ಲಿನಾರೋಗ್ಯಕ್ಕೆ, ಬೆಲ್ಲ ಬಿಡುವದು ಲೇಸು
ಹಲ್ಲುಜ್ಜಿ ನಿತ್ಯ ಶುಭ್ರಗೊಳಿಸಿದರವಗೆ
ಹಲ್ಬೇನೆಯಿಲ್ಲ ಪೂರ್ಣಜ್ಞ.

೨೩೯೮

ಕೃತಕದಂತಗಳಿಂದ, ಅತಶಯುವದೇನುಂಟು?
ಕೃತಕದಂತಗಳು ಹೊರಶೋಭೆ ಕೊಡುತಿಹವು
ಕೃತಕ ಬರಿ ಕೃತಕ ಪೂರ್ಣಜ್ಞ.

೨೩೯೯

ಮಲಮೂತ್ರ ಕಟ್ಟಿದರೆ, ಮಲಬದ್ಧತೆಯು ರೋಗ
ಜಲರೋಗ ಬಂದಪವು ತಂದಪವು ಬಾಧೆ
ಕಳವಳವು ಮನಕೆ ಪೂರ್ಣಜ್ಞ.

೨೪೦೦

ಮಲರೋಗ ವಿದ್ದವನು, ನಿಲದಿರಲಿ ಬೆಂಕಿ ಬಳಿ
ಹೊಳೆ ಹಳ್ಳ ಭಾವಿ ಕೆರೆ ಕಡಲ ಹತ್ತಿರದಿ
ಬಲು ಜೋಕೆ ಜೋಕೆ ಪೂರ್ಣಜ್ಞ.

೨೪೦೧

ಹೊಗೆಸೊಪ್ಪು ತಿನ್ನುವದು, ಸೊಗವಲ್ಲ ಮೈಮನಕೆ
ಹೊಗೆಸೊಪ್ಪು ಕ್ಯಾನ್ಸರ್ ರೋಗಗಳ ರಾಕ್ಷಸವು
ತೆಗೆಯುವದು ಪ್ರಾಣ ಪೂರ್ಣಜ್ಞ.

೨೪೦೨

ತುಳಸಿಕಟ್ಟೆಗೆ ಬೇರು, ತುಳಸಿದಳ ಬೀಜಗಳು
ಹಲವು ಔಷಧ ಪೂಜೆಗಳಿಗಾಗಿ ಬೇಕು
ತುಳಸಿ ಗುಣದರಸ ಪೂರ್ಣಜ್ಞ.

## ನಾಡು–ನುಡಿಗಳ ಅಭಿಮಾನ

೨೪೦೩

ರಾಷ್ಟ್ರಾಭಿಮಾನವದು, ರಾಷ್ಟ್ರ ರಕ್ಷಕ ಕವಚ
ರಾಷ್ಟ್ರ ಭಕ್ತಿಯದು ರಾಷ್ಟ್ರಕ್ಕೆ ಚೈತನ್ಯ
ಪುಷ್ಟಿದಾಯಕವು ಪೂರ್ಣಜ್ಞ.

೨೪೦೪

ರಾಷ್ಟ್ರಹಿತ ಬಯಸುವೊಡೆ, ನಿಷ್ಠುರಾಗಿರಬೇಕು
ಕಷ್ಟ ಸಹಿಸುತ್ತ ಮೈಮುರಿದು ದುಡಿವವರೆ
ರಾಷ್ಟ್ರ ಕಟ್ಟುವರು ಪೂರ್ಣಜ್ಞ.

೨೪೦೫

ಭಾಸ್ಕರನು ಬಂದೊಡನೆ, ತಸ್ಕರರು ಓಡುವೊಲು
ಮುಷ್ಕರವ ಬಿಟ್ಟಿಹರು ರಾಷ್ಟ್ರಹಿತ ನೆನೆದು
ಮುಷ್ಕರಿಗರೆಲ್ಲ ಪೂರ್ಣಜ್ಞ.

೨೪೦೬

ಪರದೇಶಗಳ ಕುಂದು, ಕೊರತೆಗಳು ನಿಮಗೇಕೆ?
ಹೊರೆಗಟ್ಲೆ ನಿನ್ನ ದೇಶದೊಳೆ ತುಂಬಿಹವು
ಹೊರಗಟ್ಟು ಮೊದಲು ಪೂರ್ಣಜ್ಞ.

೨೪೦೭

ಅನ್ಯದೇಶದ ಮುಂದೆ, ಸನ್ನುತಾದರ್ಶವನು
ಮುನ್ನ ತೋರುತ್ತ, ಬೆಳಕನ್ನು ಕೊಡುತ್ತಿರಲಿ
ಬನ್ನ ಕಳೆಯುತ್ತ ಪೂರ್ಣಜ್ಞ.

೨೪೦೮

ಭಾರತದ ಪ್ರಾಚೀನ, ಸಾರ ತತ್ವವ ಜಗಕೆ
ಸಾರುತಿಹ ನಾವು ಭಾರತ ಸುಧಾರಣೆಗೆ
ತೋರೋಣ ಶೌರ್ಯ ಪೂರ್ಣಜ್ಞ.

೨೪೦೯

ರಾಜ್ಯದಲಿ ಕೃಷಿಯೋಗ, ರಾಜ್ಯದಲಿ ಉದ್ಯೋಗ
ರಾಜ್ಯದಲಿ ಪ್ರಾಶಸ್ತ್ಯವಿರಲದಕೆ ದುಡಿಯೊ
ರಾಜ್ಯಾಭ್ಯುದಯಕೆ ಪೂರ್ಣಜ್ಞ.

೨೪೧೦

ದ್ವೇಷಭಾವಗಳಳಿದು, ಆಶ ರೋಷಗಳಳಿದು
ದೇಶ ಭಕ್ತಿರಸ ಜನಮನದಿ ಪ್ರಟದಂದು
ದೇಶಾಭ್ಯುದಯ ಪೂರ್ಣಜ್ಞ.

೨೪೧೧

ನಾನೆಂಬುದಳಿದಾಗ, ನೀನೆಂಬುದುಳಿದಾಗ
ಜ್ಞಾನ ಬೆಳೆದಾಗ ದೇಶದೇಕತೆಗೆ ಹೊಸ
ಪ್ರಾಣ ತುಂಬುವದು ಪೂರ್ಣಜ್ಞ.

೨೪೧೨

ಭಾರತೀಯರು ನಾವು, ಮೀರಲಾರೆವು ತತ್ವ
ಭಾರತೀಯತೆಯ ಉಳಿಸುತ್ತ ಬೆಳೆಸುವೆವು
ಸಾರಸಂಸ್ಕೃತಿಯ ಪೂರ್ಣಜ್ಞ.

೨೪೧೩

ಪರರ ಹೆಚ್ಚಳ ಕಂಡು ಕರುಬಿಲ್ಲ ಕೊರಗಿಲ್ಲ
ಹರುಷಿತಲಿಹುದು ತನ್ನ ನೆಲದಲಿ ತಾನು
ಭರತ ಖಂಡವಿದು ಪೂರ್ಣಜ್ಞ.

೨೪೧೪

ಬಗೆದುಂಬಿ ದುಡಿಯುವದೆ, ಪ್ರಗತಿ ಪೊಂದುವ ಗುಟ್ಟು
ಹಗಲಿರುಳು ದುಡಿವ ದೇಶಗಳು ಜಗದಲ್ಲಿ
ಮಿಗೆ ಮೆರೆಯುತಿಹವು ಪೂರ್ಣಜ್ಞ.

೨೪೧೫

ಭಾರತೀಯರು ನಾವು, ಭೂರಿಶಕ್ತಿಯ ಪಡೆದು
ಧೀರಗುಣದಿಂದ ಭಾರತಾಂಬೆಯ ಕೀರ್ತಿ
ಮೀರಿ ಮೆರೆಸೋಣ ಪೂರ್ಣಜ್ಞ.

೨೪೧೬

ಬಾಳ ಬೆಳಗುವ ತತ್ವ ಹಾಳಾಗಿ ಹೋಗಿಹವು
ಸಾಲ ಶೂಲದಲಿ ನೇತಾಡುತಿದೆ ದೇಶ
ಏಳಿಗೆಯು ಎಂತು? ಪೂರ್ಣಜ್ಞ.

೨೪೧೭

ಸ್ವಾತಂತ್ರ್ಯ ಬಂದಿಹುದು ಸಂತಸವ ತಂದಿಹುದು
ಆತ್ಮ ಸ್ವಾತಂತ್ರ್ಯ ಪಡೆಯುವದೆ ಸಂಪೂರ್ಣ
ಸ್ವಾತಂತ್ರ್ಯವಯ್ಯ ಪೂರ್ಣಜ್ಞ.

೨೪೧೮

ಸ್ವಾತಂತ್ರ್ಯ ವೃಕ್ಷಕ್ಕೆ ನೀತಿಯೇ ರಕ್ಷಕವು
ನೀತಿ ಮಲಗಿದರೆ ಸ್ವೈರ–ಪಶು ಅದನು ಮುರಿ
ದೀತು ಬಲು ಜೋಕೆ ಪೂರ್ಣಜ್ಞ.

೨೪೧೯

ಸ್ವಾತಂತ್ರ್ಯವಿದೆಯೆಂದು, ನೀತಿನಿಯಮವ ಮುರಿದು
ಸ್ವಾರ್ಥ ಸಾಧನೆಗೆ ಸಿಕ್ಕಂತೆ ನಡೆವವನು
ಸ್ವಾತಂತ್ರ್ಯದ್ರೋಹಿ ಪೂರ್ಣಜ್ಞ.

೨೪೨೦

ಭಾರತಕೆ ಬೇಕೀಗ, ಭಾರತೀಯತೆಯುಳಿಸಿ
ಸಾರ ಸಜ್ಜನಿಕೆ ಬೆಳೆಯಿಸುವ, ಹೊಳೆಯಿಸುವ
ಧೀರ ಸಾಹಸವು ಪೂರ್ಣಜ್ಞ.

೨೪೨೧

ಸಿಕ್ಕಿರುವ ಸ್ವಾತಂತ್ರ್ಯ, ರಕ್ಷಣೆಯ ನಿಜ ತಂತ್ರ
ದಕ್ಷತೆಯ ದುಡಿತ, ಬೆವರಿನ ಮಹಾಪೂರ
ಅಕ್ಷಯೋತ್ಸಾಹ ಪೂರ್ಣಜ್ಞ.

೨೪೨೨

ಸ್ವಾತಂತ್ರ್ಯ ಆಷಾಢ ಭೂತಿಗಳ ನಾಟಕಕೆ
ನೀತಿ ಹೀನತೆಗೆ ಆಶ್ರಯವ ನೀಡುತಿಹ
ಕೌತುಕವ ನೋಡು ಪೂರ್ಣಜ್ಞ.

೨೪೨೩

ಕನ್ನಡಿಗ ಕನ್ನಡವ ಮನ್ನಿಸುತ ಬೆಳೆಸಿದರೆ
ಕನ್ನಡದ ಹೆಮ್ಮೆ ನಾಡೆಲ್ಲ ತುಂಬಿದರೆ
ಕನ್ನಡದ ಮೇಲ್ಮೆ ಪೂರ್ಣಜ್ಞ.

೨೪೨೪

ಕನ್ನಡದ ನಾಡಿನಲಿ, ಕನ್ನಡದ ನುಡಿಯಲ್ಲಿ
ನಿನ್ನ ಬಯಕೆಯು ಸೊಮ್ಮು ಕರೆಯುತಿದೆ ನಿನ್ನ
ಕನ್ನಡಿಗ ಕೇಳು ಪೂರ್ಣಜ್ಞ.

೨೪೨೫

ಕನ್ನಡಗರೇ ಏಳಿ, ಕನ್ನಡಿಗರೆ ಕೇಳಿ
ಕನ್ನಡದ ಕಹಳೆ ಕರೆಯುತಿದೆ ಮುನ್ನಡೆಗೆ
ಪುಣ್ಯ ಭಾರತದಿ ಪೂರ್ಣಜ್ಞ.

೨೪೨೬

ಕರುನಾಡ ಮಣ್ಣಿನಲಿ, ಅರಿವು ಸ್ಥಿರವಾಗಿಹುದು
ಶರಣದಾಸರು—ಮಹಾಕವಿ ಸೂರಿ ವರರು
ಮೆರೆದಿಹುದೆ ಸಾಕ್ಷಿ ಪೂರ್ಣಜ್ಞ.

೨೪೨೭

ತಾಯಿ ಕನ್ನಡ ನಾಡು, ತಾಯಿ ಸತ್ವದ ಬೀಡು
ತಾಯಿ ಚಿಚ್ಛಕ್ತಿಗಳ ಸೂಡು ನಮ್ಮ
ತಾಯಿ ಗುಣಗರ್ಭೆ ಪೂರ್ಣಜ್ಞ.

೨೪೨೮

ತಾಯ್ನಾಡ ಸಂಸ್ಕೃತಿಯು, ತಾಯ್ನಾಡ ಕುಲಧನವ
ತಾಯ್ನಾಡಿನವರು ಉಳಿಸಿ ಬೆಳೆಸಲಿ ಸತತ
ತಾಯಿ ನಗುತಿರಲಿ ಪೂರ್ಣಜ್ಞ.

೨೪೨೯

ನಾಡೆಲ್ಲ ಹಸಿರಾಗಿ, ನಾಡೆಲ್ಲ ಬೆಳಕಾಗಿ
ನಾಡದೇವಿಯ ಪೂಜೆ ಸದ್ಭಕ್ತಿಯಿಂದೆ
ಮಾಡುವದೆ ಭಾಗ್ಯ ಪೂರ್ಣಜ್ಞ.

೨೪೩೦

ಕನ್ನಡವು ತಾಯ್ನುಡಿಯು, ಕನ್ನಡವು ಸಿರಿಗುಡಿಯು
ಕನ್ನಡದ ನಾಡುನುಡಿಗಳಿಗೆ ದುಡಿದವನೆ
ಕನ್ನಡಿಗ ನಿಜದಿ ಪೂರ್ಣಜ್ಞ.

೨೪೩೧

ಕರ್ನಾಟಕದೊಳು ಜನಿಸಿದೆನ್ನ ಪುಣ್ಯವೆ ಪುಣ್ಯ
ಕನ್ನಡದ ನಾಡು ಭಾರತಕೆ ಭೂಷಣವು
ಕನ್ನಡವು ಗೆಲ್ಗೆ ಪೂರ್ಣಜ್ಞ.

೨೪೩೨

ಕನ್ನಡಿಗರೊಳಗಿಂದು, ಪ್ರೋನ್ನತಾದರ್ಶಗಳು
ಕಣ್ಣ ಮರೆಯಾಗಿ ಮಸಕಾಗುವದ ಕಂಡು
ಸಂತಾಪವೆನಗೆ ಪೂರ್ಣಜ್ಞ.

೨೪೩೩

ಕನ್ನಡದ ನಾಡನುಡಿ, ಯುನ್ನತಿಗೆ ರಕ್ಷಣೆಗೆ
ಭಿನ್ನ ಭೇದಗಳ ಬಿಟ್ಟು ದುಡಿದವರು ನಿಜ
ಕನ್ನಡ ಕುಲಜರು ಪೂರ್ಣಜ್ಞ.

೨೪೩೪

ಭಾಷೆಯನು ಜರಿಯದಿರಿ, ತೋಷವನು ಕಳೆಯದಿರಿ
ಭಾಷೆ ಬಾಂಧವ್ಯ ಬೆಳೆಸಿದರೆ, ಸಾಹಿತ್ಯ
ರಾಶಿ ಹುಲುಸಹುದು ಪೂರ್ಣಜ್ಞ.

೨೪೩೫

ಸ್ವಾತಂತ್ರ್ಯ ಯೋಧರಿಂ, ಸ್ವಾತಂತ್ರ್ಯ ಸಿಕ್ಕಿಹುದು
ಸ್ವಾತಂತ್ರ್ಯ ರವಿಯು ಮೂಡಿಹನು ನೀಡಿಹನು
ಸ್ವಾತಂತ್ರ್ಯ ಪ್ರಭೆಯು ಪೂರ್ಣಜ್ಞ.

೨೪೩೬

ಸ್ವಾತಂತ್ರ್ಯವೆಂಬುದು ನೀತಿ ಪ್ರೀತಿಯ ರೀತಿ
ಶಿಸ್ತು ಸಂಯಮದ ನಡತೆಯಿಲ್ಲದ ಜನಕೆ
ಸ್ವಾತಂತ್ರ್ಯ ವ್ಯರ್ಥ ಪೂರ್ಣಜ್ಞ.

೨೪೩೭

ಭಾರತದಿ ಸ್ವಾತಂತ್ರ್ಯ, ಸಾರಸುಖ ನೀಡಿಹುದೆ?
ಘೋರತರ ಸ್ವೈರ ತಾಂಡವವು ನಡೆದಿರುವ
ಕಾರಣವ ಹುಡುಕು ಪೂರ್ಣಜ್ಞ.

೨೪೩೮

ಚೆನ್ನ ಕನ್ನಡ ನಾಡ, ಪ್ರೋನ್ನತಾದರ್ಶಗಳ
ಸ್ವರ್ಣರವಿ ಯಾಕೊ ಕಾರ್ಮೋಡಗಳು ಮುಸುಕಿ
ಕಣ್ಮರೆಯೊಳಿಹನು ಪೂರ್ಣಜ್ಞ.

೨೪೩೯

ಸಾಹಿತ್ಯ ಪರಿಷತ್ತು, ಗೇಹವಿದು ಶಾರದೆಗೆ
ನೇಹಕ್ಕೆ ನೆಲೆಯು ಜ್ಞಾನಕ್ಕೆ ನೆಲೆವನೆಯು
ಸಾಹಿತ್ಯ ಸೌಧ ಪೂರ್ಣಜ್ಞ.

೨೪೪೦

ಶಾರದಾ ಸೌಧದಲಿ ವೈರಸ್ಯ ಬೆಳೆಸಿದರೆ
ಶಾರದಾಂಬೆಯನು ಹಳಿದಂತೆ ಸಂಸ್ಕೃತಿಯ
ತೇರು ಸುಟ್ಟಂತೆ ಪೂರ್ಣಜ್ಞ.

೨೪೪೧

ಮಾತೃವೇ ದೈವತವು, ಪಿತೃತಾನೆ ದೈವತವು
ಧಾತ್ರಿಯಲಿ ಪತಿಯೆ ಪರದೈವ ಇದುಬರಿಯ
ಮಾತಿನೊಳಗುಂಟು ಪೂರ್ಣಜ್ಞ.

## ಪ್ರೇಕ್ಷಣೀಯ ಸ್ಥಳಗಳು, ನಿಸರ್ಗ ಸೌಂದರ್ಯ

೨೪೪೨

ಧರ್ಮದಲಿ ಬಾಳುತಿಹ, ಧರ್ಮದಲಿ ಬೆಳಗುತಿಹ
ಧರ್ಮ ಕಾರ್ಯವನು ನಿತ್ಯ ನಿರ್ವಹಿಪ
"ಧರ್ಮಸ್ಥಳ"ವಿದು ಪೂರ್ಣಜ್ಞ.

೨೪೪೩

'ಅನ್ನದಾನದ ಮುಂದೆ, ಇನ್ನು ದಾನಗಳಿಲ್ಲ'
ಸನ್ನೀತಿ ಸೂತ್ರವಿದಕೆ 'ಧರ್ಮಸ್ಥಳ'ವೆ
ಪುಣ್ಯದೃಷ್ಟಾಂತ ಪೂರ್ಣಜ್ಞ.

೨೪೪೪

'ಧರ್ಮಸ್ಥಳ'ದನೋಟ, ಧರ್ಮಸ್ಥಳದ ಊಟ
ಧರ್ಮಸಮನ್ವಯದ ಭಾವೈಕ್ಯ ನೋಡು
"ಧರ್ಮಸ್ಥಳ"ದಲಿ ಪೂರ್ಣಜ್ಞ.

೨೪೪೫

ಧರ್ಮದಿಂದಲಿ ಸುಖವು, ಧರ್ಮದಿಂದಲಿ ಜಯವು
ಕರ್ಮಜ್ಞಾನಿಗಳ ಸಂಗಮುವ ನೋಡಿಲ್ಲಿ
ಧರ್ಮಸ್ಥಳದಲಿ ಪೂರ್ಣಜ್ಞ.

೨೪೪೬

ಮಲೆನಾಡ ಚೆಲುವಿನಲಿ, ಬೆಳೆದ ಧರ್ಮಸ್ಥಳವು
ಇಳೆಯ ಜನಕೋಟಿಯನು ಎಳೆಯುತ್ತಲಿಹುದು
ತಳೆದಿಹುದು ಕೀರ್ತಿ ಪೂರ್ಣಜ್ಞ.

೨೪೪೭

ಬಡತನದಿ ಬೆಂದಿರುವ ಬಡಪಾಯಿಗಳಿಗೆಲ್ಲ
ಕಡುಶ್ರಮಿಸುತಿಹರು 'ವೀರೇಂದ್ರ ಹೆಗ್ಗಡೆ'
ಬಡವರುದ್ಧಾರ ಪೂರ್ಣಜ್ಞ.

೨೪೪೮

"ಕೃಷಿಮೇಳ" ನಡೆಸುತ್ತ, ಕೃಷಿಕಗಿಹ ಬಡತನವ
ನಳಿಸುತ್ತ ಮುಂದೆ ನಡೆಸುತ್ತ ಸಾಗಿಹರು
ಹಸಿವ ಹಿಂಗಿಸುತ ಪೂರ್ಣಜ್ಞ.

೨೪೪೯

'ಮಂಜುನಾಥ'ನ ಬಲದಿ, ರಾಜ್ಯ ಕರ್ನಾಟಕದ
ಉಜ್ವಲಾದರ್ಶ ಫಲಿಸುವಂತೆಸಗುವರು
ಪ್ರಾಜ್ಯವಪ್ಪಂತೆ ಪೂರ್ಣಜ್ಞ.

೨೪೫೦

ಅರಿವಿನರಮನೆಯಂಥ, ಸರಸತಿಯ ಸೌಧಗಳು
ಬೆರಗುಗೊಳಿಸುತ್ತ ಕಂಗೊಳಿಸುತಿವೆ ನೋಡು
'ತಿರುಪತಿ'ಯ ಮಹಿಮೆ ಪೂರ್ಣಜ್ಞ.

೨೪೫೧

'ತಿರುಪತಿ'ಯ ತಿಮ್ಮಪ್ಪ ವರಗಳನು ಕೊಡುತಿಹನು
ಪರಮಶ್ರದ್ಧಾಳುಗಳಿಗೆಲ್ಲ ಭಾಗ್ಯವನು
ಕರುಣಿಪನು ಮುದದಿ ಪೂರ್ಣಜ್ಞ.

೨೪೫೨

ಘಟ್ಟಗಳ ದಾಟುತ್ತ, ಬೆಟ್ಟವನ್ನೇರುವರು
ಬುಟ್ಟಿ ಬುಟ್ಟಿ ಹಣ ಸುರಿಯುವರು ಹುಂಡಿಯಲಿ
ಇಷ್ಟಾರ್ಥಿ ಜನರು ಪೂರ್ಣಜ್ಞ.

೨೪೫೩

ತಿಮ್ಮಪ್ಪನನು ಜನರು ನಮ್ಮಪ್ಪ ಎನ್ನುವರು
ಸುಮ್ಮಾನದಿಂದ ಬೆಟ್ಟವೇರುವ ನೋಟ
ಕಣ್ಮನಕೆ ತೃಪ್ತಿ ಪೂರ್ಣಜ್ಞ.

೨೪೫೪

ರಾಜ್ಯದಲಿ 'ಮೈಸೂರು' ಸೋಜಿಗಕೆ ತವರೂ॰
ರಾಜಮಾರ್ಗಗಳು ಸ್ವಚ್ಛಕನ್ನಡಿ, ಶಿಸ್ತು
ರಾಜಿಸುವವಿಲ್ಲಿ ಪೂರ್ಣಜ್ಞ.

೨೪೫೫

ಮೈಸೂರು ದಸರಾ ಪ್ರ-ಕಾಶ ವೈಭವದಲ್ಲಿ
ಲೇಸುಂಟು ಜನಕೆ ಮನದರಂಜನೆ ಮತಿ ವಿ-
ಕಾಸ ಸಾಧಿಪುದು ಪೂರ್ಣಜ್ಞ.

೨೪೫೬

ಮೈಸೂರಿನರಮನೆಯು, ಭೂಷಣವು ಭಾರತಕೆ
ದೇಶವಿದೇಶಗಳ ಜನರ ಕಣ್ಣಿಗೆ ಕಲೆಯು
ಮೈಸೂರ ಪಾಕ ಪೂರ್ಣಜ್ಞ.

೨೪೫೭

ಹಿರಿಯೂರು 'ಮೈಸೂರು' ಸರಮಾಲೆಯಂತಿಹುದು
ತರತರದ ಪುಷ್ಪಲತೆಗಳಿಂ ಕಲೆಗಳಿಂ
ಪರಿಶೋಭಿಸುಹುದು ಪೂರ್ಣಜ್ಞ.

೨೪೫೮

'ಹಂಪೆ'ನಾಡಿನ ಪೆಂಪು, ಹಂಪೆ ಶಿಲ್ಪದ ಸೊಂಪು
ಹಂಪೆ ಕರುನಾಡ ವೈಭವದ ಇತಿಹಾಸ
ಮುಂಪೇಳ್ವ ಕಾವ್ಯ ಪೂರ್ಣಜ್ಞ.

೨೪೫೯

ಭಾರತಾಂಬೆಯ ಧವಲ, ಕೀರುತಿಯ ಗೋಪುರವು
ಭಾರತದ ಪುಣ್ಯನಿಧಿಯಿದು 'ಹಿಮಾಲಯ'ವು
ಭೂರಿಗಂಭೀರ ಪೂರ್ಣಜ್ಞ.

೨೪೬೦

ಕಾಡನ್ನು ಬೆಳೆಸುವದು, ನಾಡನ್ನು ಉಳಿಸುವದು
ನಾಡಿಗರು ಮಾಳ್ಪ ಪ್ರಪ್ರಥಮ ಕರ್ತವ್ಯ
ಮಾಡಿದನು ಮೊದಲು ಪೂರ್ಣಜ್ಞ.

೨೪೬೧

ಕರುನಾಡ ಕಾನನದ, ಸರಸ ಜಲಪಾತಗಳು
ಹರುಷ ಕೊಡುತಿಹವು ನಗರ ಜೀವನದ ಬೇ
ಸರ ಕಳೆಯುತಿಹವು ಪೂರ್ಣಜ್ಞ.

೨೪೬೨

ಹೋಗಿ ನೋಡಿರಿ ಬಿಡದೆ, ಜೋಗ ಜಲಪಾತವನು
ರಾಗಿಸುತ ಸುರಿಯುವ ಶರಾವತಿಯ ನೃತ್ಯ
ಯೋಗ ದೃಶ್ಯವಿದು ಪೂರ್ಣಜ್ಞ.

೨೪೬೩

ಜಲರಾಣಿ ರೂಪದಲಿ, ನಲಿವಳಿದೊ ಬನಸಿರಿಯು,
ಜಲಧಾರೆಕೂಟ ಕಣ್ಮನಕೆ ಸವಿಯೂಟ
ಚಲುವಿನೀ ಮಾಟ ಪೂರ್ಣಜ್ಞ.

೨೪೬೪

ಖಲರು ತನ್ನಯ ಸಿರಿಯು ಸುಲಿವುದನು ತಾಳದೆಯ
ಅಳುತ ಬನದೇವಿ ಸುರಿವಶ್ರುಧಾರೆಯಿದು
ಜಲಪಾತವಲ್ತೆ, ಪೂರ್ಣಜ್ಞ.

೨೪೬೫

ಬಿಳಿವಸ್ತ್ರ ಧರಿಸಿರುವ, ಲಲನೆಯೊಬ್ಬಳು ಕೆಳಗೆ
ಇಳಿಯುತಿರುವಂತೆ ಜಲರಾಣಿ ಕಣ್ತುಂಬಿ
ನಲಿ ನಲಿಯುತಿಹಳು, ಪೂರ್ಣಜ್ಞ.

೨೪೬೬

ಧರಿಸಿರುವ ಹಸಿರುಡುಗೆ, ಹರಿದು ದೋಚುತಲಿಹರು
ಬರಿಮೈಯೊಳಿರೆನೆಂಬ ಬನಸಿರಿಯ ದುಃಖಾಶ್ರು
ಸುರಿವ ಜಲಪಾತ ಪೂರ್ಣಜ್ಞ.

೨೪೬೭

ಉದಕ ಮಂಡಲ ಮಾರ್ಗ, ಮುದವೀವ ವನಸ್ವರ್ಗ
ಎದೆಯಕದತೆರೆದು ನೋಡಿದರೆ ಹೃದಯದಲಿ
ಸುಧೆಯು ಪುಟಿಯುವದು ಪೂರ್ಣಜ್ಞ.

೨೪೬೮

ನೂರಾರು ಪಶುಪಕ್ಷಿ, ನೂರಾರುತರತರದಿ
ಸಾರತರುರಾಜಿ, ನೀಲಗಿರಿ ಬನದಸಿರಿ
ಭೂರಿಸುಖಕಾರಿ ಪೂರ್ಣಜ್ಞ.

೨೪೬೯

'ದೊಡ್ಡಬೆಟ್ಟ'ವಹತ್ತಿ, ಗುಡ್ಡಗಾಡನು ನೋಡು
ಎಡ್ಡವೇಗುಡ್ಡವಾಗಿಹುದು, ಬಗೆಗಣ್ಣ
ಜಿಡ್ಡು ತೊಲಗುವದು ಪೂರ್ಣಜ್ಞ.

೨೪೭೦

ಹಸಿರುಟ್ಟ ವನಲಕ್ಷ್ಮಿ, ಹಸನ ಬೀರುತಲಿಹಳು
ಕುಶಲವಾರ್ತೆಗಳ ಆಲಾಪಗೈಯ್ಯುವಳು
ರಸಿಕ ನೀಕೇಳು ಪೂರ್ಣಜ್ಞ.

೨೪೭೧

ಏನು ಎತ್ತರ ಬೆಟ್ಟ, ಏನು ಪರ್ವತ ಪಂಕ್ತಿ
ಏನಿದೀ ಸೊಬಗು, 'ಊಟಿ' ಇದುರಸದೂಟೆ
ನೀನಿಲ್ಲಿನೆಲೆಸು ಪೂರ್ಣಜ್ಞ.

೨೪೭೨

'ಊಟಿ'ಯಲಿ ಬನಸಿರಿಯು, ಆಟವಾಡುತಲಿಹಳು
ನೋಟಕರ ಮನವ ನವಭಾವ ಪುಷ್ಪಗಳ
ತೋಟಮಾಡಿಪಳು ಪೂರ್ಣಜ್ಞ.

೨೪೭೩

ಅಲ್ಲಲ್ಲಿಗಿಡಬಳ್ಳಿ, ಹಳ್ಳಕೊಳ್ಳಗಳಿಲ್ಲಿ
ಚೆಲ್ವಿನೊಸಗೆಯನು ಪಾಡುತಿವೆ ಪಶುಪಕ್ಷಿ
ಮೆಲ್ಲುಲಿಗಳಿಂದ ಪೂರ್ಣಜ್ಞ.

೨೪೭೪

ಕಾನನದ ಮಡಿಲಲ್ಲಿ, ಮೌನಧ್ಯಾನದಿ ದಿವ್ಯ
ಜ್ಞಾನಪಡೆಯಲ್ಕೆ 'ಸುತ್ತೂರುಮಠ'ವು ಆ-
ಹ್ವಾನವೀಯುತಿದೆ ಪೂರ್ಣಜ್ಞ.

೨೪೭೫

ಹಸಿರುಡೆಯ 'ಊಟಿಯಲಿ' ರಸದ ಆರೋಗಣೆಯು
ರಸಿಕರೆಲ್ಲವರು ಬನ್ನಿ, ಹೋಗುವಬನ್ನಿ
ರಸತೃಷೆಯ ತಣಿಸೆ ಪೂರ್ಣಜ್ಞ.

೨೪೭೬

ಸೃಷ್ಟಿಸೌಂದರ್ಯವನು ತುಷ್ಟಿಯಿಂದ ನೋಡಯ್ಯ
ಎಷ್ಟೊಂದು ವಿವಿಧತೆಯು, ಸೊಬಗಿನೇಕತೆಯು
ಸೃಷ್ಟೀಶ ಕಲೆಯು ಪೂರ್ಣಜ್ಞ.

೨೪೭೭

ಮರಗಳನು ಬೆಳೆಸಿದರೆ, ಮರಗಳನು ಉಳಿಸಿದರೆ
ಮರಗಳೆಮ್ಮನು ತಾಯಿ ತಂದೆಗಳಂತೆ
ಪರಿರಕ್ಷಿಸುವವು ಪೂರ್ಣಜ್ಞ.

೨೪೭೮

ಮಳೆಬಾರದಿದೆಯೆಂದು, ಅಳುವದು ಪ್ರಾರ್ಥನೆಯೆ?
ಹಳವು ಅಡವಿಗಳ ಬೆಳೆಸುವದೆ ನಿಜಪೂಜೆ
ಮಳೆಗೆ ಪ್ರಾರ್ಥನೆಯು ಪೂರ್ಣಜ್ಞ.

೨೪೭೯

ಒಂದೆ ತೋಟದಿ ಬಹಳ ಚೆಂದ ಚೆಂದದ ಹೂವು
ಸೌಂದರ್ಯ ಬೀರಿ ಅರಳಿ ನಗುತಿರುವಂತೆ
ಸುಂದರಿಸು ಜಗವ ಪೂರ್ಣಜ್ಞ.

೨೪೮೦

ನೆರಳೀವ ಗಿಡಗಳನು, ಕರುಣೆಯಿಲ್ಲದೆ ಕಡಿವ
ಹರಿವ ನದಿಗಳನು ಮಲಿನಗೊಳಿಸುವ ಜನರ
ಪರಿಯ ನೋಡಯ್ಯ ಪೂರ್ಣಜ್ಞ.

೨೪೮೧

ಅಂದಿನಾ ಮಲೆನಾಡು, ಇಂದಿಲ್ಲ ನೋಡಯ್ಯ
ಇಂದು ಗಿಡಕಡಿದು ಪ್ರಕೃತಿ ಸೌಂದರ್ಯವನು
ಕೊಂದು ಬಿಟ್ಟಿಹರು ಪೂರ್ಣಜ್ಞ.

೨೪೮೨

ಬರಿದಾದ ಕೆರೆಗಳಿಂ, ತರುವಿರದ ವನಗಳಿಂ
ಬಿರುಕು ಬಿಟ್ಟಿರುವ ಹೊಲಗಳಿಂ ಮಲೆನಾಡ
ಸಿರಿಯು ಕೊರಗಿಹುದು ಪೂರ್ಣಜ್ಞ.

೨೪೮೩

ಪ್ರಕೃತಿ ಸೌಂದರ್ಯ, ಬಲು ವಿಕೃತಿಗೊಂಡಿಹುದಿಂದು
ಪ್ರಕೃತಿ ವೈಭವವ ನೋಡಿಸಲೆ ನಲಿವಂಥ
ಸುಕೃತ ತೀರಿಹುದು ಪೂರ್ಣಜ್ಞ.

೨೪೮೪

ತೆಂಗು ಮಾವಿನ ಹಣ್ಣು ಕೌಂಗು ಪೇರಲ ಲಿಂಬೆ
ಚೆಂಗುಲಾಬಿಗಳು ಜನಕೆ ಬೇಕಾದನಿತು
ಕಂಗೊಳಿಸುತಿಲ್ಲ ಪೂರ್ಣಜ್ಞ.

೨೪೮೫

'ಸರ್ವಜ್ಞ' ಬಣ್ಣಿಸಿದ, ಸರ್ವ ತರುಗಳ ರಾಶಿ
ಸರ್ವಾರಣ್ಯದೊಳು ತುಂಬಿಲ್ಲ, ಹಸಿರಿಲ್ಲ
ಸರ್ವರಿಗೂ ಚಿಂತೆ ಪೂರ್ಣಜ್ಞ.

೨೪೮೬

ಗಿಳಿಕೋಗಿಲಾವಳಿಯು, ಚೆಲುವ ಬನಸಿರಿಗಾನ
ನಲಿವ ನವಿಲುಗಳು ನರ್ತಿಸುವ ನಲುನೋಟ
ಬಲುಸೊಗಸು ಮನಕೆ ಪೂರ್ಣಜ್ಞ.

೨೪೮೭

ಹಸಿರು ಇದ್ದರೆ ಚೆಲವು, ಹಸಿರು ಇದ್ದರೆ ಫಲವು
ಹಸಿರು ಗದ್ದೆಗಳು ಹೃದಯದಲಿ ಆನಂದ
ರಸ ಉಕ್ಕಿಸುವವು ಪೂರ್ಣಜ್ಞ.

೨೪೮೮

ಅಲ್ಲಲ್ಲಿ ತುಂಬಿರುವ, ಸಲ್ಲಲಿತ ಕೆರೆಭಾವಿ
ಚೆಲ್ವ ತೋರುತಿಹ ವನರಾಜಿ ಪಶುಪಕ್ಷಿ
ಮಲೆನಾಡ ನೋಡು ಪೂರ್ಣಜ್ಞ.

೨೪೮೯

ಮೇಲೆದ್ದು ಕಾಣುವವು, ನೀಲಗಿರಿ ವೃಕ್ಷಗಳು
ಮೇಲೆ ಮುಖ ಮಾಡಿ ನಿಂತಿಹವು ಇಕ್ಕೆಲದಿ
ಸಾಲುಕಂಬದೊಲು ಪೂರ್ಣಜ್ಞ.

೨೪೯೦

ಬೆಟ್ಟದೆತ್ತರ ನೋಡು, ವೆಷ್ಟೊಂದು ಗಿಡಬಳ್ಳಿ
ಮುಟ್ಟಲ್ಕೆ ಮುಗಿಲ ಪಂದ್ಯಾಟ ಹೂಡಿಹವು
ಶ್ರೇಷ್ಠ ಗುಣದಿಂದ ಪೂರ್ಣಜ್ಞ.

೨೪೯೧

ಹೊಸಹಸಿರ ಹೂಬಳ್ಳಿ, ಕಸುವು ತುಂಬುತ ಬೆಳೆದು
ರಸಬಳ್ಳಿಯಾಗಿ ಆಸರಂತೆ ನಗುತಿರಲಿ
ರಸಕಾವ್ಯದಂತೆ ಪೂರ್ಣಜ್ಞ.

೨೪೯೨

ಚೆಲುವಲ್ತೆ ಶಿವನನ್ನು, ಗೆಲುವ ಶಕ್ತಿಯುಜಗದಿ
ಚೆಲುವ ಮಲೆಯಲ್ಲಿ ಮಲೆಯ ಮಾದೇಶ್ವರನು
ನೆಲೆಸಿಹನು ನಗುತ ಪೂರ್ಣಜ್ಞ.

೨೪೯೩

ಹಸಿರುಭತ್ತದ ಗದ್ದೆ, ಹಸಿರು ಕಬ್ಬಿನ ತೋಟ
ಹಸಿರುಟ್ಟ ಬಸುರಿಯುಂತಿರುವ ಮಲೆನಾಡ
ಕೃಷಿಲೀಲೆ ನೋಡು ಪೂರ್ಣಜ್ಞ.

೨೪೯೪

ಜಗದಲ್ಲಿ ಹರಡಿಹುದು, ಮಿಗಿಲಾದ ಸೌಂದರ್ಯ
ಬಗೆಬಗೆಯ ಗಿಡಬಳ್ಳಿ ಹೂಹಣ್ಣು ಮನಕೆ
ಸೊಗವೀಯುತಿಹವು ಪೂರ್ಣಜ್ಞ.

೨೪೯೫

ಎಲ್ಲಿ ನೋಡಿದರಲ್ಲಿ ಸಲ್ಲಲಿತ ತೆಂಗುಗಳು
ನೆಲ್ಲ ಗದ್ದೆಗಳಿಹವು ಕಾಯಿ ಸೀಮೆಯಲಿ
ಕಲ್ಪವೃಕ್ಷಗಳು ಪೂರ್ಣಜ್ಞ.

೨೪೯೬

ಶಿವಮೊಗ್ಗೆ ಪ್ರಾಂತದಲಿ ಶಿವಮೊಗ್ಗೆ ತುಂಬಿಹವು
ನವಶಕ್ತಿ ಕೊಡುವ ಹಸಿರುಟ್ಟ ಗಿರಿಕಾನು
ಭುವಿಗೆ ಭೂಷಣವು ಪೂರ್ಣಜ್ಞ.

೨೪೯೭

ಅಲ್ಲಿರುವ ಶಿವಧರ್ಮ, ಒಳ್ಳೆ ಮಾನವಧರ್ಮ
ಬಳ್ಳಿಗಾವೆಯು ಶರಣ ಸಂಸ್ಕೃತಿಯ ಬಳ್ಳಿ
ಇಲ್ಲಿಹುದು ಬೆಲ್ಲ ಪೂರ್ಣಜ್ಞ.

೨೪೯೮

'ಎಪ್ಪತ್ತು ಗಿರಿಗಿಂತ ಕಪ್ಪತ್ತು ಗಿರಿಮೇಲು'
ಧೊಪ್ಪೆಂದು ಬಿತ್ತೊ ಸುರಪುರದ ಸಿರಿಯೆಲ್ಲ
ಪೆಂಪಿನಿಂದಿಲ್ಲಿ ಪೂರ್ಣಜ್ಞ.

೨೪೯೯

ಗಿರಿಸಾಲು ಗವಿಸಾಲು, ಹರವಾಗಿ ಹರಡಿಹವು
'ಕೊರಕಂಟಿ' ಪಕ್ಷಿ ಕಲ್‌ಪಡಿಯ ಮನೆಗಳಲಿ
ಇರುತಿಹವು ನೋಡು ಪೂರ್ಣಜ್ಞ.

೨೫೦೦

ಕಡುರೋಗ ಕಳೆವಂಥ ಗಿಡಮೂಲಿಕೆಗಳುಂಟು
ಹುಡುಕುವವರಿಲ್ಲ ಕಡವರದ ಕಣಿಗಳಿವೆ
ದುಡಿವವನು ಪಡೆವ ಪೂರ್ಣಜ್ಞ.

೨೫೦೧

ಸಿದ್ಧಗಂಗಾ ಕ್ಷೇತ್ರ, ಸಿದ್ಧರ ತಪೋಭೂಮಿ
ಶುದ್ಧ ಮನದಿಂದ ಮುದ್ದಿಯನು ಉಂಬುವನ
ಬುದ್ಧಿ ವರ್ಧಿಪುದು ಪೂರ್ಣಜ್ಞ.

೨೫೦೨

ತಂಪಿನ ತಪೋವನವು, ಸೊಂಪಾಗಿ ಶೋಭಿಸಿದೆ
ಪೆಂಪುಳ್ಳ ಧಾರವಾಡದಲಿ ಆಧ್ಯಾತ್ಮ
ದಿಂಪು ನಿನದಿಪುದು ಪೂರ್ಣಜ್ಞ.

೨೫೦೩

ಸಂಗಮೇಶ್ವರನ ಗುಡಿ–ಯಂಗಳದಿ ಹಾಡುವರು
ಮಂಗಲದ ಜಲಗಾನ ಕೃಷ್ಣಾ ಮಲಪ್ರಭೆಯರು
ಏಂ. ಗಾನ ಅಮಮ ಪೂರ್ಣಜ್ಞ.

೨೫೦೪

ಸಂಗಮದಕ್ಷೇತ್ರವದು, ಅಂಗಾಂತರಂಗಕ್ಕೆ
ಲಿಂಗಾಂಗ ಸಮರಸದ ಸಂತೃಪ್ತಿಯುಣಿಸಿ
ಪೊಂಗಿಪ್ಪುದು ಮನವ ಪೂರ್ಣಜ್ಞ.

೨೫೦೫

ಈ ಗುಡ್ಡಗಾಡುಗಳು, ಶೃಂಗಾರಗೊಂಡಿಹವು
ಮೇಘ ಚುಂಬನವು ಮನಮೋಹಿ ೦ಯು ಮುಖಕೆ
ಹೇಗಿಹುದು ಪ್ರಣಯ ಪೂರ್ಣಜ್ಞ.

೨೫೦೬

ಸೊಗಲ ಬೆಟ್ಟವನೇರು, ಸೊಗಲ ಸೊಬಗಿನ ತೇರು,
ಸೊಗಲ ಜಲಪಾತ ಕಣ್ಮನಕೆ ಸುಪ್ರೀತ
ಸೊಗಲ ಸುಕ್ಷೇತ್ರ ಪೂರ್ಣಜ್ಞ.

೨೫೦೭

ಉತ್ತರದ ಕರುನಾಡ, ತೀರ್ಥಯಾತ್ರೆಯ ತಾಣ
ಎತ್ತರದೊಳಿರುವ ಸೊಗಲ ಸೋಮೇಶ್ವರನ
ಉತ್ತಮನಿವಾಸ ಪೂರ್ಣಜ್ಞ.

೨೫೦೮

ಸೋಮನಾಥನ ಶಕ್ತಿ, ಸೋಮೇಶ ದರ್ಶನವು
ಧೀಮಂತರಿಗೂ ಕೊಡುತಿಹುದು ಸೊಗಲದೊಳು ಬೆಳಕನ್ನು
ಕಾಮಿತಾರ್ಥವ ಪೂರ್ಣಜ್ಞ.

೨೫೦೯

ಸೊಗಲ ನಾಡಿಗೆ ಕಣ್ಣು, ಸೊಗಲ ಶಾಂತಿಯಧಾಮ
ಸೊಗಲ ಕ್ಷೇತ್ರವದು ಭಕ್ತಿಂಗೆ ಬೀಡಿಹುದು
ಸೊಗಲ ಸಂಸ್ಕೃತಿ ಪೂರ್ಣಜ್ಞ.

೨೫೧೦

ಸೊಗಲವನು ಕವಿಕರ್ಕಿ, ಮಿಗೆ ಮೆಚ್ಚಿ ನುಡಿದಿಹನು
ಸೊಗಲ ನಿರ್ವೇಣ್ಣು ನರ್ತಿಸುವ ಶಿವನಮನೆ
ಸೊಗಸಾದ ಉಪಮೆ ಪೂರ್ಣಜ್ಞ.

೨೫೧೧
ಕಲೆಯ ಸಾಧನೆಯಿಂದ, ಕಲೆವೆಣ್ಣ ನೊಲವಕ್ಕು
ಕಲೆಯು ರಸಋುಷಿಯ ಬಗೆಯು ಹಾಲಿನ ಸೆಲೆಯು
ಕಾವ್ಯ ಕಲೆ ಸೊಗದ ಮಾಲೆ ಪೂರ್ಣಜ್ಞ.

೨೫೧೨
ಬಾದಾಮಿ ಬೆಟ್ಟಕ್ಕೆ, ಮೋದದಿಂ ಭೆಟ್ಟಿಕೊಡು
ಬಾದಾಮಿ ಹಾಲ ಹೊಳೆಯುಂಟು ಕಲೆಯ ಆ
ರಾಧಕರಿಗಲಿ ಪೂರ್ಣಜ್ಞ.

೨೫೧೩
ಪುಲಿಕೇಶಿ ಆಳಿರುವ, ಲಲಿತ ಶಿಲ್ಪದ ಪದ್ಮ
ಶಿಲೆಯೊಳರಳಿರುವ ಭವ್ಯ ಸೃಷ್ಟಿಯ ಪದ್ಮ
ಕಲೆಯದ್ಭುತವಿದು ! ಪೂರ್ಣಜ್ಞ.

೨೫೧೪
ಪುಲಿಕೇಶಿ ಪೋಷಿಸಿದ, ಶಿಲೆಯ ಕಲೆಯದ್ಭುತವು
ಬೆಲೆಗಟ್ಟ ಬಹುದೆ ಈ ಶಿಲ್ಪ ಮಹಿಮೆಯನು
ಇಳೆಗದ್ಭುತವಿದು, ಪೂರ್ಣಜ್ಞ.

೨೫೧೫
ಒರಟು ಕಲ್ಲುಗಳನ್ನು, ಕರಗಿಸುತ ಮೇಣದೊಲು
ಪಿರಿದಪ್ಪ ದೇವ ಪ್ರತಿಮೆಗಳನಚ್ಚೆರಿದ
ಪಿರಿಯ ಶಿಲ್ಪಕಲೆ, ಪೂರ್ಣಜ್ಞ.

೨೫೧೬
ಒಂದೆ ಹೆಬ್ಬಂಡೆಯಲಿ, ಸುಂದರ ಗುಹಾಗೃಹವ
ಅಂದಿನಾ ಶಿಲ್ಪಿಗಳು ಕೊರೆದು ಕೆತ್ತಿಹರು
ಇಂದೆಂತು ಸಾಧ್ಯ ? ಪೂರ್ಣಜ್ಞ.

೨೫೧೭
ಶಿಲೆಯ ಬಸಿರನು ಬಗಿದು, ಚೆಲುವ ಪ್ರತಿಮೆಯ ಕೆತ್ತಿ
ಕಲೆಯ ಸಾಮ್ರಾಜ್ಯ ಸಂಸ್ಥಾಪಿಸಿಹರಿಲ್ಲಿ
ಚಲಿಸದಲೆ ನೋಡು ಪೂರ್ಣಜ್ಞ.

೨೫೧೮

ಆನಂದಸಾಗರವು, ಈ ದೂಧಸಾಗರವು[೧]
ಕಾನನದ ರಾಜನಂತೆ ರಾಜಿಸುತಿಹುದು
ಏನಿದರ ಪೆಂಪು ! ಪೂರ್ಣಜ್ಞ.

೨೫೧೯

ಹಸಿರು ಕಾನನ ತಂಪು, ಹಸಿರು ಹಕ್ಕಿಯು ಸೊಂಪು
ಕಸುವಿನಿಂ ಸತತ ಜಲಧಾರೆ ಹರಿಯುತಿವೆ
ರಸಯೋಗಿ ನೋಡು! ಪೂರ್ಣಜ್ಞ.

೨೫೨೦

ಉತ್ತರ ಕನ್ನಡದಿ, ಉತ್ತಮರು ನೆನೆವಂತೆ
ಸ್ತುತ್ಯ ಮುರ್ಡೇಶ್ವರನು ತಾನು ನೆಲೆಸಿಹನು
ಉತ್ತುಂಗತೆಯಲಿ ಪೂರ್ಣಜ್ಞ.

೨೫೨೧

ಪಕೃತಿಮಡಿಲಲ್ಲಿ, ಭವ್ಯಾಕೃತಿಯು ತೋರುತಿಹ
ಸೌಖ್ಯಕ್ಕೆ ಸಗ್ಗವಾಗಿಪ ಮುರ್ಡೇಶ್ವರನು
ಶಕ್ತಿ ಲೋಕಕ್ಕೆ ಪೂರ್ಣಜ್ಞ.

೨೫೨೨

ಕಡಲದಂಡೆಯು ಮೇಲೆ, ಸಡಗರದಿ ಶೋಭಿಸುವ
"ಮುರ್ಡೇಶ" ಗುಡಿಯು ಶಿವಕೃಪೆಯು ಪ್ರಭೆಯಂತೆ
ಕೊಡುತಿಹುದು ಬೆಳಕು ಪೂರ್ಣಜ್ಞ.

೨೫೨೩

ಅಡಿಕೆ ತೆಂಗಿನ ಬೆಡಗು ಗುಡಿಸುತ್ತ ತುಂಬಿಹುದು
ಮೃಡನಂತೆ ಕಾಂಬ ಮುರ್ಡೇಶ್ವರನೆ ಬೇಗ
ಕೊಡು ಆತ್ಮಶಾಂತಿ ಪೂರ್ಣಜ್ಞ.

---

೧. ದೂಧಸಾಗರ ಜಲಪಾತ (ಗೋವಾ)

೨೫೨೪

ಹಸಿರು ವನಮಧ್ಯದಲಿ, ಎಸೆವ ಮುರ್ಡೇಶ್ವರನು
ಅಸಮ ಬಲಯುತನು ನೀಡುವನು ಕವಿಗಳಿಗೆ
ರಸದರ್ಶನವನು! ಪೂರ್ಣಾಜ್ಞ.

೨೫೨೫

ಮುರುಡೇಶ್ವರನು ಕೊಡುವ, ಬರಡು ಬಾಳಿಗೆ ಶಕ್ತಿ
ಕರುಣೆಪನು ಬೇಡಿದಿಷ್ಟಾರ್ಥಗಳನವನು
ಸರಳ ಭಕ್ತರಿಗೆ ಪೂರ್ಣಾಜ್ಞ.

೨೫೨೬

ಆರ್ ಶೆಟ್ಟಿ ಮನೆತನಕೆ, ವರಶಕ್ತರೂಪಾಗಿ
ಆರ್ ಶೆಟ್ಟಿಯುವರ ಸದ್ಭಕ್ತಿ ಬೆಳಕಾಗಿ
ಬೀರುತಿಹೆ ಮುದವ ಪೂರ್ಣಾಜ್ಞ.

೨೫೨೭

'ಕೊಡಗು' ವನಸಿರಿ ತಾಣ, ಕೊಡಗು ನದಿಗಳ ತವರು
ಸಡಗರದ ಗುಡ್ಡ ಏನೆಂಬೆನಿದು ಹಸಿರು
ಬೆಡಗಿನರಮನೆಯು ಪೂರ್ಣಾಜ್ಞ.

೨೫೨೮

ಕಿತ್ತಳೆಯ ವೃಕ್ಷಗಳು, ಸುತ್ತುವರಿದಿವೆ ಇಲ್ಲಿ
ಉತ್ತಮದ ಫಲವೀಯ ಕಾಫಿ ತೋಟಗಳು
ಚಿತ್ತ ಸೆಳೆಯುವವು ಪೂರ್ಣಾಜ್ಞ.

೨೫೨೯

ಏಲಕ್ಕಿ ಮೆಣಸುಗಳ, ಮೇಲಾದ ಮಳಿಗೆಯಿದು
ಮೇಳದಿಂದಿಹರು ಕೊಡಗಿನಲಿ ಜನರೆಲ್ಲ
ಗಾಳಿ ಬಲು ಸ್ವಚ್ಛ ಪೂರ್ಣಾಜ್ಞ.

೨೫೩೦

ಬಳಿಬಂದವರಿಗೆಲ್ಲ, ನಲವೀಯುವದು 'ಕೊಡಗು'
ಚೆಲುವು ಕಾಶ್ಮೀರಕ್ಕೆ ತಂಗಿಯಿದು 'ಕೊಡಗು'
ನೆಲಜಲದ ಬೆಡಗು ಪೂರ್ಣಾಜ್ಞ.

೨೫೩೧
ಕೊಡಗಿನಲಿ ಈಗೀಗ, ಬಡತನದ ರೇಖೆಗಳು
ಅಡಿಯಿಡುತಲಿಹವು ಸಂಘಟನೆ ಕಳಕೊಂಡು
ತಡತಡಿಸು[1]ತಿಹರು! ಪೂರ್ಣಜ್ಞ.

## ಶಿವನೊಲುಮೆ; ಮಹಿಮೆ

೨೫೩೨
ಗುರುಸಿದ್ಧ ಮಹಿಮೆಯದು, ಅರಿತವರಿಗಹುದರ್ಥ
ಅರಿವುಗೇಡಿಗಳ ಬರಡು ಜೀವನವೆಲ್ಲ
ಕರಿಕೆ ಹೊಲದಂತೆ ಪೂರ್ಣಜ್ಞ.

೨೫೩೩
ಚಿತ್ತವನು ಕಟ್ಟಿದೊಡೆ ಕುತ್ತುಗಳು ದೂರಹವು
ಚಿತ್ತಜಾರಿಯ ನೆನವು, ನಿಲ್ಲುವದು ಸ್ಥಿರದಿ
ಸತ್ಯವಿದು ಸತ್ಯ ಪೂರ್ಣಜ್ಞ.

೨೫೩೪
ನಡೆವವರು ಎಡಹುವರು, ನಡೆಯದವರೆಡಹುವರೆ
ಎಡಹಿದರು ಮುಂದೆ ದಿಟ್ಟಡಿಯನಿಡುವವಗೆ
ಮೃಡನೊಲ್ಮೆಯುಂಟು ಪೂರ್ಣಜ್ಞ.

೨೫೩೫
ಸಂಗವನು ಬಿಟ್ಟವಗೆ, ಸಂಗವನು ಹಿಡಿದವಗೆ
ಮಂಗಗುಣವಳಿಯದು ಶಿವಪೂಜೆ ಮಾಳ್ಪಂಗೆ
ಸಂಗಯ್ಯನೊಲುಮೆ ಪೂರ್ಣಜ್ಞ.

೨೫೩೬
ಲಿಂಗಪೂಜೆಯ ಜ್ಞಾನ ಅಂಗಜಾರಿಯ ಧ್ಯಾನ
ಅಂಗವಿಸಿಕೊಂಡು ಅಂಗ ಗುಣವಳಿದೊಡನೆ
ಸಂಗಯ್ಯನೊಲಿವ ಪೂರ್ಣಜ್ಞ.

---

೧. ತಡತಡಿಸು = ತತ್ತರಿಸು

೨೫೩೭

ಗುರಿ ಗರಿಮೆಯರಿಯದೆಲೆ, ಹಿರಿಗುರಿಯ ಬೆಳಕೆಂತು?
ಮರವೆಯದು ಮಾಜಿ ಅರಿವು ಮೂಡಿದರದು
ಗುರುಕರುಣೆಯಯ್ಯ ಪೂರ್ಣಜ್ಞ.

೨೫೩೮

ಬಡತನದ ಚಿಂತೆಗಳು, ಎಡಬಿಡದೆ ಬರುತಿಹವು
ಕಡುಕಷ್ಟದೊಳಗೆ ಮೃಡನ ನೆನೆಯುತ ದುಡಿಯೆ
ಬಡತನವು ಬಯಲು ಪೂರ್ಣಜ್ಞ.

೨೫೩೯

ನಾನು ನೀನೆಂದೆಂಬ, ಭಿನ್ನಭೇದವು ಬೇಡ
ನಾನು ನೀನೆಂದೆಂಬ ಭೇದವಳಿಯದಿರೆ
ಕಾಯನೈ ಶಿವನು, ಪೂರ್ಣಜ್ಞ.

೨೫೪೦

ಹಸಿವು–ತೃಷೆ–ವಿಷಯಗಳ, ಗಸಣೆಯಿಂ ಪಾರಾಗಿ
ನಿಸದದಿಂ ಭಕ್ತಿರಸಯೋಗ ನಿರತಂಗೆ
ಶಶಿಮೌಳಿಯೊಲಿವ ಪೂರ್ಣಜ್ಞ.

೨೫೪೧

ಎದೆಯಕದವನು ತೆರೆದು ಸದಮಲನನೆನೆಸಿದರೆ
ಮುದವೀಯುವನವನು ಅರಳಿಸುತ ಹೃತ್ಕಮಲ
ಉದಯರವಿಯಂತೆ, ಪೂರ್ಣಜ್ಞ.

೨೫೪೨

ಮೌನಿಯಾದವನು ಸುಯಿ–ಧಾನಿಯಾಗಿರಬೇಕು
ಸಾನುರಾಗದಿ ಶಿವನಧ್ಯಾನ ಮಾಳ್ಪವಗೆ
ತಾನೆ ಶಿವನೊಲಿವ ಪೂರ್ಣಜ್ಞ.

೨೫೪೩

ಲಿಂಗಪೂಜೆಯ ಮಾಡಿ, ಅಂಗಗುಣಗಳನಳಿದು
ಅಂಗಜಾರಿಯನು ಧ್ಯಾನಿಸುತಲಿರುವವಗೆ
ಲಿಂಗಯ್ಯನೊಲಿವ ಪೂರ್ಣಜ್ಞ.

೨೫೪೪

ದೇವನೊಲಿಯುಲು ತಾನು, ಯಾವ ಕುಲಗಿಲ ನೋಡ
ದೇವ ಮೆಚ್ಚುವನು ವಿಮಲಗುಣಧರ್ಮಿಗಳ
ದೇವಗಿಲ್ಲ ಕುಲ, ಪೂರ್ಣಜ್ಞ.

೨೫೪೫

ಆಲಸ್ಯವೇ ದಾಸ್ಯ, ಆಲಸ್ಯವೇ ದೂಷ್ಯ
ಆಲಸ್ಯ ಕೊಡಹಿ ಮೈಮುರಿದು ದುಡಿವವಗೆ
ಶ್ರೀ ಲಕ್ಷ್ಮಿ ಕೃಪೆಯು ಪೂರ್ಣಜ್ಞ.

೨೫೪೬

ಅರುಣನುದಯಿಸಿದೊಡನೆ, ಹರಿದೋಡುವದು ತಿಮಿರ
ಗುರುಕರುಣ ಕಿರಣ ಅಜ್ಞಾನ ತಿಮಿರವನು
ಹರಿದೋಡಿಸುವದು ಪೂರ್ಣಜ್ಞ.

೨೫೪೭

ನಂಬಿದವ ವಂಚಿಪೊಡೆ, ಸಾಂಬ ತಾನೊಲಿವನೆ?
ತುಂಬಿರುವ ಮೃಣ್ಮಯದ ಕುಂಭನೊಡೆಯಲು
ಕಂಭ ಬೇಕೇನು? ಪೂರ್ಣಜ್ಞ.

೨೫೪೮

ಮನವೆಂಬ ಕೋಗಿಲೆಯು ತನುವೆಂಬ ತರುವೇರಿ
ತನಗೆ ತಾನಾಗಿ ಮನಸಿಜನ ಮಹಿಮೆಗಳ
ದನಿಗೈಯುತಿಹುದು ಪೂರ್ಣಜ್ಞ.

೨೫೪೯

ಬಡತನದೊಳ್ಳಿದ್ದೆನಿತೊ, ಪಂಡಿತಾಗ್ರೇಸರರು
ಪಡುತ ಕಡುಕಷ್ಟ ಪಡೆದಿಹರು ಸಿದ್ಧಿಯನು
ದೃಢಮನದ ಮಹಿಮೆ ಪೂರ್ಣಜ್ಞ.

೨೫೫೦

ಶಿವನ ಕೃಪೆಯಿಂ ನರನ, ಭವಮಾಲೆ ಹಿಂಗುವದು
ಶಿವನಕೃಪೆಯಿಂದ ನರನು ಹರನಾಗುವನು
ಶಿವನನ್ನು ನಂಬು ಪೂರ್ಣಜ್ಞ.

೨೫೫೧

ಶಿವಚಿಂತೆ ಮಾಡುತ್ತ ಶಿವಶಕ್ತಿ ಪಡೆಯುತ್ತ
ಶಿವಮಂಗಲವನು ಬೇಡುತ್ತ ಬಾಳಿದರೆ
ಭವದೂರವಪುದು ಪೂರ್ಣಜ್ಞ.

೨೫೫೨

ಮಚ್ಚರವನಳಿದಿರುವ, ಮುಚ್ಚು-ಮರೆ ತೊರೆದಿರುವ
ಸ್ವಚ್ಛ ನಡೆ ನುಡಿಯ ಸರಳ ಸಜ್ಜನರನ್ನು
ಮೆಚ್ಚುವನು ಶಿವನು ಪೂರ್ಣಜ್ಞ.

೨೫೫೩

ಶೀಲ ಜೀವನದ ಜಪ, ಶೀಲ ಜೀವನದ ತಪ
ಶೀಲ ಬಲವುಳ್ಳ ಶೀಲವಂತರಿಗೆ ಶಶಿ-
ಮೌಳಿ ಮೆಚ್ಚುವನು ಪೂರ್ಣಜ್ಞ.

೨೫೫೪

ಶಿವಭಕ್ತಿ ಶಿವಶಕ್ತಿ, ಶಿವಜ್ಞಾನ ಪಡೆಯೋಣ
ಶಿವಧ್ವಜದಡಿಯಲಿ ಸಮ್ಮಿಲಿತರಾಗೋಣ
ಶಿವಮೆಚ್ಚುವಂತೆ ಪೂರ್ಣಜ್ಞ.

೨೫೫೫

ಕಡುಕಷ್ಟದೊಳಗಿರುವ, ಬಡರೋಗಿಗಳ ಸೇವೆ
ಎಡಬಿಡದೆ ಮಾಡಿ ನಿಜದೇವ ಪೂಜೆಯಿದು
ಮೃಡನೊಲಿವನಿದಕೆ ಪೂರ್ಣ ಜ್ಞ.

೨೫೫೬

ನೋಡಿಷ್ಟಲಿಂಗವನು, ಮಾಡು ಶಿವಧ್ಯಾನವನು
ಪಾಡವನ ಮಹಿಮೆ, ಶಿವಸಾಮರಸ್ಯ ಕೈ
ಗೂಡುವದುನಿನಗೆ ಪೂರ್ಣಜ್ಞ.

೨೫೫೭

"ಹರತನ್ನ ಭಕ್ತರನು, ತಿರಿವಂತೆ ಮಾಡುವನು"
ಒರೆದು ನೋಡುವನು, ಬೆದರದಿದ್ದರೆ ಕೊನೆಗೆ
ಕರೆದೆತ್ತಿಕೊಂಬ ಪೂರ್ಣಜ್ಞ.

೨೫೫೮

ಹಸಿದಿರುವ ಮನುಜನಿಗೆ, ಅಶನವನು ನೀಡುತ್ತ
ಕಸಿಪಿಸಿಯೊಳಿರುವ ಆತನನು ಸಂತೈಸೆ
ಬಸವ ಮೆಚ್ಚುವನು ಪೂರ್ಣಜ್ಞ.

೨೫೫೯

ಅನ್ನಸಂತರ್ಪಣೆಯು, ಪುಣ್ಯ ಪಡೆಯುವ ಪರಿಯು
ಅನ್ನ ಜಗಕುಣಿಸಿ ಶಿವನೊಲ್ಮೆ ಪಡೆದಿಹಳು
ಅನ್ನಪೂರ್ಣಾಂಬೆ ಪೂರ್ಣಜ್ಞ.

೨೫೬೦

ಭೂಮಿತಾಯಿಯ ಸೇವೆ ಪ್ರೇಮದಿಂದೆಸಗಿದರೆ
ಭೂಮಿಯಲಿ ಜನಕೆ ಸುಖವಿತ್ತು ಪೋಷಿಪಳು
ಕ್ಷೇಮಕಾರಿಣಿಯು ಪೂರ್ಣಜ್ಞ.

೨೫೬೧

ಸಕ್ಕರೆಯ ಸವಿದವಗೆ ಸಕ್ಕರೆಯ ಸವಿಗೊತ್ತು
ಭಕ್ತಂಗೆ ಗೊತ್ತು ಭಕ್ತಿರಸದನುಭವವು
ಮಿಕ್ಕವರಿಗರಿಯದು ಪೂರ್ಣಜ್ಞ.

೨೫೬೨

ಪರಮಾರ್ಥ ಕೃಷಿಯಲ್ಲಿ, ಗುರುಕರುಣೆ ಶಿವತತ್ವ
ಅರಿವು ನಿರ್ಮಲತೆ ಸದ್ಭಕ್ತಿ ಬೆರೆತಲ್ಲಿ
ಪರಮಾರ್ಥ ಸಿದ್ಧಿ ಪೂರ್ಣಜ್ಞ.

೨೫೬೩

ಬೊಮ್ಮನನು ಅರಿತಿಹರು, ಸುಮ್ಮನಿರುತಿಹರಯ್ಯ
ಒಮ್ಮನದಿ ಭಕ್ತಿ ಸಂಧಾನಗೈವವಗೆ
ಬೊಮ್ಮನೊಲಿಯುವನು ಪೂರ್ಣಜ್ಞ.

೨೫೬೪

ಆತ್ಮ ಜ್ಯೋತಿಯ ಮುಂದೆ, ಕತ್ತಲೆಯು ನಿಲಬಹುದೆ?
ಆತ್ಮನಲಿ ಪೂರ್ಣ ಲಕ್ಷ್ಯವನ್ನಿರಿಸಿದರೆ
ಆತ್ಮವೇ ಬ್ರಹ್ಮ ಪೂರ್ಣಜ್ಞ.

೨೫೬೫

ಅವನಿಯೊಳಗೆಲ್ಲೆಡೆಗೆ, ವಿವಿಧಯೊಳೇಕತೆಯು
ವಿವರಿಸುತ ಬಗೆಯ ಗೋಚರಿಪ್ಪದಿದು ತಾನೆ
ಶಿವಶಕ್ತಿ ಲೀಲೆ ಪೂರ್ಣಜ್ಞ.

೨೫೬೬

ಕಡುಜವ್ವನದಿ ವಿಕೃತಿ, ಅಡಿಗಡಿಗೆ ಬಂದಪ್ಪವು
ಎಡವದಿರು ನೀನು ಎಡೆಬಿಡದೆ ದೃಢಮನದಿ
ಮೃಡ ಧ್ಯಾನ ಮಾಡು ಪೂರ್ಣಜ್ಞ.

೨೫೬೭

ಕಾವಿತೊಟ್ಟವರೆಲ್ಲ, ದೇವರನು ಕಾಣುವರೆ?
ಭಾವ ಶುದ್ಧಿಯಲಿ ಧರ್ಮದಿಂ ನಡೆವರಿಗೆ
ದೇವ ತಾನೊಲಿವ ಪೂರ್ಣಜ್ಞ.

೨೫೬೮

ಶುದ್ಧಕಾಯಕದಿಂದ, ಎದ್ದು ಬಂದಿರುವ ಧನವ
ಬಿದ್ದ ಬಡಜನಕೆ ವಿತರಿಸಲು ಅಜ್ಜ ಗುರು-
ಸಿದ್ಧ ಮೆಚ್ಚುವನು ಪೂರ್ಣಜ್ಞ.

೨೫೬೯

ಭಾವರಸವಿಲ್ಲದಿರೆ, ಕಾವ್ಯಕ್ಕೆ ಕಸುವಿಲ್ಲ
ಕೈವಲ್ಯ ಸೌಖ್ಯ ಸುಲಭದಲಿ ಸಿಕ್ಕೀತೆ
ದೇವನೊಲಿಯದಿರೆ ಪೂರ್ಣಜ್ಞ.

೨೫೭೦

ಜನನ ಮರಣಗಳನ್ನು ಘನಬುದ್ಧಿವಂತರಿಗು
ಮನನ ಮಾಡುತ್ತರಿಯುವದು ಬಲುಕಷ್ಟ
ನೆನೆ ಶಿವನ ಧ್ಯಾನ ಪೂರ್ಣಜ್ಞ.

೨೫೭೧

ಪಾಪಬುದ್ಧಿಯ ಬಿಟ್ಟು, ಕೋಪಾದಿಗಳ ಸುಟ್ಟು
ತಾಪತ್ರಯಂಗಳನು ಮೆಟ್ಟಿ ಪೂಜಿಸಲು
ಕಾಪಾಲಿಯೊಲಿವ ಪೂರ್ಣಜ್ಞ.

೨೫೦೨

ಕುರಿಯ ಹಿಕ್ಕೆಯಲಿ ಶಿವ, ನಿರವಕಂಡನು ಭಕ್ತಿ-
ಭರದಿಂದ ಗೊಲ್ಲಾಳ, ಭಕ್ತಿಯೇ ಬಲವು
ಸ್ಥಿರ ಭಕ್ತಗಣಕೆ ಪೂರ್ಣಪ್ರಜ್ಞ.

೨೫೦೩

ಕುವಿಕೃತಿಗಳಂ ತುಳಿದು, ನವಸೃಷ್ಟಿ ರಚಿಸಲ್ಕೆ
ಸುವಿಶಾಲವಾದ ಲೋಕದಲಿ ನಡೆಯಲಿದೆ
ಶಿವನ ತಾಂಡವವು ಪೂರ್ಣಪ್ರಜ್ಞ.

೨೫೦೪

ಅಂಗಜಾರಿಯ ನೆನೆದು, ಲಿಂಗವನು ಧರಿಸುವದು
ಲಿಂಗವನು ನಿತ್ಯ ಪೂಜಿಪುದು ಜೀವನದ
ತುಂಗಸಾಧನೆಯು ಪೂರ್ಣಪ್ರಜ್ಞ.

೨೫೦೫

ಚಿನುಮಯನ ಧ್ಯಾನವನು, ಮನದೊಳಗೆ ಮಾಡಿದರೆ
ಅನುಭವಾಮೃತದ ರಸದೂಟ ಲಭಿಸುವದು
ತ್ರಿಣಯನೊಲಿಯುವನು ಪೂರ್ಣಪ್ರಜ್ಞ.

೨೫೦೬

ಬಂಧನವ ಹರಿಯುವದು, ಸೌಂದರ್ಯವರಿಯುವದು
ಬಂಧುರತೆಯಿಂದ ಜೀವನವ ನಡೆಸುವದು
ಚಂದ್ರಧರ ಕೃಪೆಯು ಪೂರ್ಣಪ್ರಜ್ಞ.

೨೫೦೭

ಇರುವುದೆಲ್ಲವ ಬಿಟ್ಟು, ಅರಿವು ಮನದೊಳಗಿಟ್ಟು
ಪರಿ ಪರಿಯ ರೀತಿಯಲಿ ಬೇಡಿದರೆ ಶಿವನ
ಕರುಣೆ ಉಕ್ಕುವದು ಪೂರ್ಣಪ್ರಜ್ಞ.

೨೫೦೮

ಸೌಂದರ್ಯ ಪಡೆಯುವದು, ಕುಂದಿರದೆ ಬಾಳುವದು
ಸೌಂದರ್ಯದಲ್ಲಿ ಶಿವನನ್ನೆ ಕಾಣುವದು
ಚಂದ್ರಧರನ ಕೃಪೆ ಪೂರ್ಣಪ್ರಜ್ಞ.

೨೫೭೯

ನಮ್ಮೊಳಗೆ ತುಂಬಿಹನು, ನಮ್ಮೊಳಗೆ ಆಡುವನು
ನಮ್ಮಂತರಂಗದಲ್ಲಿಹನು ಪರಬ್ರಹ್ಮ
ಒಮ್ಮನದಿ ನೋಡು ಪೂರ್ಣಜ್ಞ.

೨೫೮೦

ಪಾವನ ಸದಾಚಾರ–ಜೀವನವೇ ಶಿವಯೋಗ
ಪಾವನತೆಯಿರುವಲ್ಲಿ ಶಿವನಿರ್ಪನೆಂಬ
ಭಾವನೆಯು ಸತ್ಯ! ಪೂರ್ಣಜ್ಞ.

೨೫೮೧

ತುಂಬೆ ಹೂಗಳು ಶಿವಗೆ, ತುಂಬ ಪ್ರಿಯವಾಗಿಹವು
ತುಂಬೆ ಹೂ ತುಂಬು–ಮನದಿ ಲಿಂಗಕೆ ಧರಿಸು
ಸಾಂಬನೊಲಿಯುವನು ಪೂರ್ಣಜ್ಞ.

೨೫೮೨

ಕಣ್ಣುಗಳು ಎರಡಿಹವು, ಕಣ್ಣೋಟ ತಾನೊಂದು
ಬಣ್ಣ ಬಣ್ಣಗಳ ಮಡಕೆಗಳು ಹಲವಾರು
ಮಣ್ಣೊಂದೆ ನೋಡು ಪೂರ್ಣಜ್ಞ.

೨೫೮೩

ಎಲ್ಲವಸ್ತುಗಳನ್ನು, ಒಳ್ಳೆ ಸ್ಥಿತಿಯಲ್ಲಿಟ್ಟು
ಸಲ್ಲಲಿತ ಭಾವ–ಜೀವನದ ನಡೆಸಿದರೆ
ಅಲ್ಲಿರುವ ಶಿವನು ಪೂರ್ಣಜ್ಞ.

೨೫೮೪

ನಿಯಮಿತಗೆ ರೋಗಗಳ, ಭಯ ಭೀತಿಗಳು ಇಲ್ಲ;
ನಯ ನೀತಿವಂತನಿಗೆ ಶಿವನ ಕೃಪೆ ಕರುಣೆ
ದಯೆ ಜಯಗಳುಂಟು ಪೂರ್ಣಜ್ಞ.

## ಗುರು–ವಿರಕ್ತರು

೨೫೮೫

ದುರಿತ ವರ್ತನೆ ಬಿಡಿಸಿ, ವರಪುಣ್ಯ ಪಥ ಹಿಡಿಸಿ
ಅರಿವು ಸ್ಥಿರಗೊಳಿಸಿ ನಿರುತ ರಕ್ಷಿಸುವವನೆ
ಗುರುವರನು ನಿಜದಿ ಪೂರ್ಣಜ್ಞ.

೨೫೮೬

ಅಂಧತೆಯು ಮುಸುಗಿರಲು ಬಂಧನವು ಬಿಗಿದಿರಲು
ಬಂಧನವ ಬಿಡಿಸಿ ಬಿಗಿದಪ್ಪಿಕೊಂಬ ಗುರು–
ವೃಂದ ಬೇಕಿಂದು ಪೂರ್ಣಜ್ಞ.

೨೫೮೭

ಗುರುವೆಂಬ ಕೃಷಿಕನು, ಹರಗುವನು ಕುಂಟೆಯನು
ಹರಭಕ್ತ ದೇಹದಾ ಹೊಲದಿ ಬಿತ್ತುವನು
ಅರಿವೆಂಬ ಬೀಜ ಪೂರ್ಣಜ್ಞ.

೨೫೮೮

ಅರಿವು ಮೂಡಿಸುವವನೆ, ಗುರುವು ನಿಜಭಕ್ತನಿಗೆ
ಸರಿಯಾದ ನೀತಿ ಮಾರ್ಗದಲಿ ನಡೆಸುವನು
ಹಿರಿಗುರಿಯ ಕಡೆಗೆ ಪೂರ್ಣಜ್ಞ.

೨೫೮೯

ಸರಿದಾರಿ ತೋರಿಸುವ, ವರಗುರುಗಳೆಷ್ಟು ಜನ?
ಗುರುವರರೆ ಸುಳ್ಳು ಸುರಿಸಿದರೆ ಯಾರನ್ನು
ನೆರೆನಂಬಬೇಕು? ಪೂರ್ಣಜ್ಞ.

೨೫೯೦

ಪರಮತವನುದ್ಧರಿಸುವ, ಗುರು ವಿರತರೀರ್ವರು
ಮರೆತು ಭಾವೈಕ್ಯ ಅಸಹಕಾರದೊಳಿಹರು
ದುರಭಿಮಾನದಲಿ ಪೂರ್ಣಜ್ಞ.

೨೫೧

ಗುರುವಿರತ ಸ್ವಾಮಿಗಳು, ಮೆರವಣಿಗೆಯನು ತೊರೆದು
ಪರಹಿತದಿ ನಿರತರಾದಲ್ಲಿ ಜಗವೊಂದು
ಸುರಲೋಕವಪುದು ಪೂರ್ಣಜ್ಞ.

೨೫೨

ಗುರುವಿರತರೀರ್ವರೂ, ಅರಿವು ಪಡೆಯದೆ ಬರಿದೆ
ದುರಹಂತೆಯಿಂದೆ ಬೀಗಿದರೆ ತರುವೇರಿ
ತಿರೆಗೆ ಬಿದ್ದಂತೆ ಪೂರ್ಣಜ್ಞ.

೨೫೩

ನಾಡೆಲ್ಲನೆಚ್ಚರಿಸಿ, ಮೂಢತೆಯ ತೊಲಗಿಸಲು
ನಾಡಸ್ವಾಮಿಗಳು ದುಡಿದಿಹರು, ಬೆಳೆಸಿಹರು
ನಾಡಶಕ್ತಿಯನು ಪೂರ್ಣಜ್ಞ.

೨೫೪

ಸ್ವಾಮಿಯೆನಿಸಿರುವವರು, ಸ್ವಾಮಿತ್ವದಂತಿರದೆ
ನೇಮನಿಷ್ಠೆಯ ಬಿಟ್ಟು ಹಾದಿ ತಪ್ಪಿದರೆ
ಸೋಮಧರ ಮೆಚ್ಚ ಪೂರ್ಣಜ್ಞ.

೨೫೫

ರಬ್ಬುಗಾವಿಯ ತೊಟ್ಟು ಮಬ್ಬು ಮಾಡಲು ಜನರ
ಉಬ್ಬುಬ್ಬಿ ತತ್ವಹೇಳಿ ನಡೆಯದ ಸ್ವಾಮಿ
ಶುಂಭನಿಗು ಕೀಳು ಪೂರ್ಣಜ್ಞ.

೨೫೬

ಸ್ವಾಮಿಯಾದರೆ ತಾನು, ಕಾಮವನು ಬಿಡಬೇಕು
ಸ್ವಾಮಿಯಾದವರು ಬಿದ್ದವರನೆತ್ತುವದು
ಸ್ವಾಮಿತತ್ವವಿದು ಪೂರ್ಣಜ್ಞ.

೨೫೭

ಸ್ವಾಮಿ ಜೀವನ ಕಷ್ಟ, ಸ್ವಾಮಿ ನಡೆನುಡಿ ಕಷ್ಟ
ಸ್ವಾಮಿಯಾದವಗೆ ತಾಳದಿರೆ ಬಲುಕಷ್ಟ
ಸ್ವಾಮಿಗಿಲ್ಲ ಸುಖ ಪೂರ್ಣಜ್ಞ.

೨೫೯೮
ಸ್ವಾಮಿಪಟ್ಟದಿ ಕುಳಿತು, ಸಾಮಾನ್ಯ ಜನರಲ್ಲಿ
ಕೋಮು ಭಾವನೆಯ ಕಲಹವಬ್ಬಿಸುವವರು
ಸ್ವಾಮಿಯೆನಿಸುವರೆ? ಪೂರ್ಣಜ್ಞ.

೨೫೯೯
ತಮ್ಮ ದುಃಖಸ್ವಾರ್ಥಕ್ಕೆ, ಸ್ವಾಮಿತ್ವ ಶಕ್ತಿಯನು
ಕೆಮ್ಮನೇ ಕೆಡಿಸಿ ಕುಂದುಗೊಂಡಿರುವವರು
ಸ್ವಾಮಿಯೆನಿಸಿಹರು ಪೂರ್ಣಜ್ಞ.

೨೬೦೦
ಕೆಲಜನರು ಸ್ವಾಮಿಗಳು, ಮೆಲುಮಾತುಗಳನಾಡಿ
ಹಲವು ತಂತ್ರದಲಿ ತಮಗಾಗಿ ನಮ್ಮನ್ನು
ಎಳೆದುಕೊಳಲಿಹರು ಪೂರ್ಣಜ್ಞ.

೨೬೦೧
ಸ್ವಾಮಿಗಳ ಕಾಯಕವ, ಸ್ವಾಮಿಗಳು ಮಾಡಿದರೆ
ಸ್ವಾಮಿತ್ವದೇಳ್ಗೆ, ಇದಕಂಡು ಮತ್ಸರಿಪ-
ರಾಮೂರ್ಖ ಜನರು, ಪೂರ್ಣಜ್ಞ.

೨೬೦೨
ಸ್ವಾಮಿವರ್ಗದ ಕೆಲರು ನೇಮನಿತ್ಯವ ತೊರೆದು
ಕಾಮಾಂಧರಾಗಿ ನಿಜಸಿದ್ಧಿ ಸಾಧನೆಯ
ಹೋಮಿಸುತ್ತಿಹರು ಪೂರ್ಣಜ್ಞ.

೨೬೦೩
ಒಲುಮೆಯಲಿ ಶಿವಯೋಗ, ಶಕ್ತಿಯನು ಬೆಳೆಸದೆಯೆ?
ಫಲದೋಚಬಹರು, ಕಳವಳವ ಕೊಡುತಿಹರು
ಕೆಲವು ಸ್ವಾಮಿಗಳು ಪೂರ್ಣಜ್ಞ.

೨೬೦೪
ಶಿವಧ್ಯಾನವನು ಮರೆತು, ವ್ಯವಹಾರದೊಳು ಬೆರೆತು
ಯುವಕ ಸ್ವಾಮಿಗಳು ನಿಸ್ತೇಜರಾಗಿಹರು
ನವಯುಗದೊಳಿಂದು ಪೂರ್ಣಜ್ಞ.

೨೬೦೫

ವಿಜಯಿಸದೆ ರಿಪುಷಟ್ಕ, ನಿಜಸ್ವಾಮಿಯಾಗುವನೆ?
ನಿಜವನರಿಯದಲೆ ಪೀಠದಲಿ ಮೆರೆವವನು
ನಿಜಸ್ವಾಮಿಯೆಂತು ಪೂರ್ಣಜ್ಞ.

೨೬೦೬

ನಾಮಮಾತ್ರಕೆ ಮಠದ, ಸ್ವಾಮಿಗಳು ತಾವೆನಿಸಿ
ನೇಮಗೆಟ್ಟಿರುವ ಹುಲುನರರ ಮೆಚ್ಚುವನೆ
ಸೋಮಶೇಖರನು ಪೂರ್ಣಜ್ಞ.

೨೬೦೭

ದುರಿತ ಭೀರುವೆ ಪರಮ, ವಿರತ ಪೀಠಕೆ ಯೋಗ್ಯ
ಮರವೆ ಮಮಕಾರ ಷಡ್ರಿಪುಗಳಿಂ ದೂರ
ವಿರುವಾತ ವಿರತ ಪೂರ್ಣಜ್ಞ.

೨೬೦೮

ಚಲ್ವೆಸೆವ ಬಾಲೆಯರ ಲೀಲೆಯಲಿ ನಿತ್ಯದಿಂ
ಕಾಲವನು ಕಳೆಯುತಿಹ ವಿರತನೆಂತಹನು?
ಶೀಲವಿಲ್ಲದವನು ಪೂರ್ಣಜ್ಞ.

೨೬೦೯

ಲಲಿತ ಲೋಲಾಕ್ಷಿಯರ, ನೆಲೆಮೊಲೆಯುವಕ್ಷೆಯರ
ಸಲಿಗೆಗೊಳಗಾದ ಕಾವಿಧಾರಿಯು ಕೃಪ
ಕಳೆಯುದಿರ್ಪ್ಪುದೆ? ಪೂರ್ಣಜ್ಞ.

೨೬೧೦

ಹೆಣ್ಣನ್ನು ಹೊನ್ನನ್ನು ಮಣ್ಣನ್ನು ಮನದಲ್ಲಿ
ಮನ್ನಿಸುತ ನೆನೆದು ವಿರತ ನಾನೆಂಬುದದು
ಬಣ್ಣನೆಯ ಮಾತು ಪೂರ್ಣಜ್ಞ.

೨೬೧೧

ಮೂರವಸ್ಥೆಗಳನ್ನು, ಮೀರುತ್ತ ಜ್ಞಾನವನು
ಬೀರಿದರೆ ಜಗದಿ ನಿಜ ಜಗದ್ಗುರು ಸತ್ವ
ತೋರೀತು ಅಂದು ಪೂರ್ಣಜ್ಞ.

೨೬೧೨

ಪಡೆಯದಲೆ ತಾ ಮೊದಲು, ಮೃಢಶಕ್ತಿ ಸಾಮರ್ಥ್ಯ
ಬಡಬಡಿಸಿ 'ನಾನೆ' ಜಗದ್ಗುರು ಜಗದ್ಗುರುವೆಂದರೇಂ?
ಮೃಡನು ಮೆಚ್ಚುವನೆ? ಪೂರ್ಣಜ್ಞ.

೨೬೧೩

ತಾನೆಂಬುದನ್ನಳಿದು, ನೀನೆಂಬುದನ್ನರಿತು
ತಾನೆ ತಾನಾದ ಮಹಿಮನೆ ಜಗದ್ಗುರುವು
ಹೀನಂಗಸಾಧ್ಯ ಪೂರ್ಣಜ್ಞ.

೨೬೧೪

ಕಿರಿಯು ಕುಬ್ಜನ ಕೈಗೆ, ಮರದ ಫಲ ಸಿಲುಕೀತೆ?
ಅರೆಬುದ್ಧಿಯವಗೆ ಘನ ಜಗದ್ಗುರು ಪೀಠ
ದೊರಕುವದೆಂತು? ಪೂರ್ಣಜ್ಞ.

೨೬೧೫

ಗುರುತರಾಚರಣೆಯಲಿ, ನಿರತನಾಗದೆ ನಿರುತ
ಬರಿ ಕೀರ್ತಿ ಬಯಸೆ ನಿಜ ಜಗದ್ಗುರು ಶಕ್ತಿ
ದೊರಕೀತೆ ಜಗದಿ? ಪೂರ್ಣಜ್ಞ.

೨೬೧೬

ಅರಿವು ಗುರಿಯಾಗಿರಲಿ, ಗುರುಶಿಷ್ಯರಿಬ್ಬರಿಗೂ
ಬೆರೆಯಬೇಕವರು ಹಾಲು ಸಕ್ಕರೆಯಂತೆ
ಎರಡು ಒಂದಾಗಿ ಪೂರ್ಣಜ್ಞ.

೨೬೧೭

ಗುರುಶಿಷ್ಯರೀರ್ವರು, ಮರೆತು ಜನರುದ್ಧಾರ
ಅರಿವಿರದೆ ಕಲಹ ಮಾಡಿದರೆ ಗತಿಯೇನು?
ಹರಮೆಚ್ಚಬಹುದೆ? ಪೂರ್ಣಜ್ಞ.

೨೬೧೮

ನೇಮನಿಷ್ಠೆಯ ಬಿಟ್ಟು, ಸ್ವಾಮಿ ತಾ ತಪ್ಪಿದರೆ
ನಾಮ ಕುಂದುವದು ನಿನ್ನ ನೀರಿಳಿಯುವದು
ನೇಮ ಬಿಡಬೇಡ ಪೂರ್ಣಜ್ಞ.

೨೬೧೯

ಮೋಸ ವಂಚನೆಯಿಂದ, ಘಾಸಿಗೊಳಿಸುತಲಿಹರು
ದ್ವೇಷಛಲದಲ್ಲಿ ಅನ್ಯಾಯ ಕೆಳಿಸಿಹರು
ಈ ಸ್ವಾಮಿಗಡಣ ಪೂರ್ಣಜ್ಞ.

೨೬೨೦

ದೊಡ್ಡ ಸ್ವಾಮಿಗಳಾಗಿ, ದೊಡ್ಡ ಗುಣ ಮರೆತಿಹರು
ಗೊಡ್ಡು ಜೀವನದಿ ಕಾಲವನು ಕಳೆಯುತ್ತ
ಮಡ್ಡರಾಗಿಹರು ಪೂರ್ಣಜ್ಞ.

೨೬೨೧

ಮಠದ ಐಸಿರಿ ನೋಡಿ, ಮಠದ ಅಧಿಕಾರಕ್ಕೆ
ಕುಟಿಲ ತನದಿಂದ ಹೊಂಚನ್ನು ಹಾಕುತಿಪ
ಶಠವಟುವು ಬೇಡ ಪೂರ್ಣಜ್ಞ.

೨೬೨೨

ಗುರುವಿನಾಂತರ್ಯವನು, ನೆರೆತಿಳಿದು ನಿಷ್ಠೆಯಿಂ
ನೆರಳಿನಂದದಲಿ ಅನುಸರಿಸಿ ನಡೆವಂತ
ವರಶಿಷ್ಯಬೇಕು ಪೂರ್ಣಜ್ಞ.

೨೬೨೩

ಗುರುಶಿಷ್ಯರೀರ್ವರೂ, ವರನೀತಿ ಪಥವಿಡಿದು
ಹರಧರ್ಮವನ್ನು ಉದ್ಧರಿಸಿ ಸುಖಜಗಕೆ,
ಹರನಿಗೊಪ್ಪಿತವು ಪೂರ್ಣಜ್ಞ.

೨೬೨೪

ಮಠದ ಪೀಠಕೆ ಒರಲು, ಕುಟಿಲ ಕಾರಸ್ಥಾನ
ಪಟುಗಳೊಟ್ಟಿಹರು, ಸನ್ಮತಿಯು ಸತ್ಕೃತಿಯ
ವಟುವಿರಲಿ ಮಠಕೆ ಪೂರ್ಣಜ್ಞ.

೨೬೨೫

ಗುಣವಿರದ ನಯವಿರದ, ಒಣಜಂಭಕೊಚ್ಚುತಿಹ
ಹಣದಾಶೆ ತುಂಬಿರುವ ಮರಿಬೇಡ ಮಠಕೆ
ಗುಣಿಜ್ಞಾನಿಬೇಕು ಪೂರ್ಣಜ್ಞ.

೨೬೨೬

ಭೂವಿನುತಮಠಗಳಿಗೆ, ಸೇವೆಸ್ಥೈಯ್ಯುತ ಜಗದ
ನೋವುಕಳೆವಂಥ ಶಿವಯೋಗಿ ವಟುವಿರಲಿ
ಪಾವಿತ್ರ್ಯವಿರಲಿ ಪೂರ್ಣಜ್ಞ.

೨೬೨೭

ಒಂದೊಂದು ಮಠದಲ್ಲಿ, ಒಂದೊಂದು ರೀತಿಗಳು
ಕುಂದಿರದ ವಟುವಿರಲು ಗುರುವಿಗದು ಭೀತಿ
ಬಂಧನವು ಬಹಳ ಪೂರ್ಣಜ್ಞ.

೨೬೨೮

ತಂದೆ ತಾಯಿಯ ಮೋಹ, ಬಂಧುಗಳ ನೇಹದಾ
ಬಂಧನವ ತೊರೆಯುತ್ತ ಇರಬೇಕು ಮಠದಿ
ಕುಂದು ಬರದಂತೆ ಪೂರ್ಣಜ್ಞ.

೨೬೨೯

ಒಳ್ಳೆ ಗುಣಗಳ ನೋಡಿ, ಒಳ್ಳೆ ಗುರುವಾದವನು
ಒಳ್ಳೆ ಶಿಷ್ಯನಿಗೆ ಸಹಕಾರ ನೀಡಿದರೆ
ಬೆಲ್ಲ ತಿಂದಂತೆ ಪೂರ್ಣಜ್ಞ.

## ಮಾನವೀಯ ದೌರ್ಬಲ್ಯಗಳು

೨೬೩೦

ದ್ವೇಷರಕ್ತವ ಕುದಿಸಿ, ದ್ವೇಷ ಶಾಂತಿಯ ಕೆಡಿಸಿ
ಘಾಸಿಗೊಳಿಸುವದು ಮನುಜರಿಗೆ ಘೋರತರ
ಕ್ಲೇಶವೀಯುವದು ಪೂರ್ಣಜ್ಞ.

೨೬೩೧

ದ್ವೇಷದಿಂದಲಿ ಕ್ರಾಂತಿ, ದ್ವೇಷದಿಂದಲಿ ಭ್ರಾಂತಿ
ದ್ವೇಷದಿಂ ಕುದಿದು ಬಾಳ್ಗೆಡಲು ಕದಡುವದು
ರೋಷಾಗ್ನಿಯಲ್ಲಿ ಪೂರ್ಣಜ್ಞ.

೨೬೩೨

ಚಿಂತೆಯೆಂಬುದು ಮುಪ್ಪು, ಚಿಂತೆ ಮುಖ ಬಲು ಕಪ್ಪು
ಚಿಂತೆಯಲಿ ಮುಳುಗಿಕೊಂಡವರ ಕೊಂಡೊಯ್ವ
ನಂತಕನು ಬೇಗ ಪೂರ್ಣಜ್ಞ.

೨೬೩೩

ಹೊತ್ತಿ ಉರಿಯುವ ಚಿತೆಯು, ಸತ್ತವರ ದಹಿಸುವದು
ಉತ್ತಮಾರೋಗ್ಯ ವಿದ್ದವರನಾ ಚಿಂತೆ
ನಿತ್ಯ ದಹಿಸುವದು ಪೂರ್ಣಜ್ಞ.

೨೬೩೪

ಸುಳ್ಳು ಭಯ ಭೀತಿಗಳ, ಕಲ್ಪಿಸುತ ಮನದಲ್ಲಿ
ತಳ್ಳಂಕಗೊಂಬ ಪುಕ್ಕರಿಗೆ ಜೀವನದೊ-
ಳಿಲ್ಲ ನೆಮ್ಮದಿಯು ಪೂರ್ಣಜ್ಞ.

೨೬೩೫

ಬಡವನಾದರು ಚಿಂತೆ, ಒಡೆಯನಾದರು ಚಿಂತೆ
ಪಡೆದರೂ ಪಡೆಯದಿದ್ದರೂ ಚಿಂತೆ ಬೆಂ-
ಬಿಡದೆ ಕಾಡುವದು ಪೂರ್ಣಜ್ಞ.

೨೬೩೬

ವಿಪುಲ ಯಾಚನೆಯಿಂದ, ಅಪರಿಮಿತ ಸಾಹಸವು
ವಿಫಲವಾಗುತ್ತ ಚಿಂತೆಯಲಿ ಮುಳುಗಿಸಿ
ಅಪಮಾನಕೆಡೆಯು ಪೂರ್ಣಜ್ಞ.

೨೬೩೭

ಬಲವಿಲ್ಲ ಕೈಯಲ್ಲಿ, ಬಲವಿಲ್ಲ ಮೈಯಲ್ಲಿ
ತಿಲಮಾತ್ರ ಬಲವು ಇಲ್ಲದಿದ್ದರೆ 'ಆಶೆ'
ಜಲಧಿಯಷ್ಟಿಹುದು ಪೂರ್ಣಜ್ಞ.

೨೬೩೮

ಎಲ್ಲ ನದಿಗಳು ಜಲಧಿಯಲ್ಲಿ ಧುಮ್ಮಿಕ್ಕಿದರು
ಎಲ್ಲೆ ಮೀರುವದೆ? ಅದರಂತೆ 'ಆಶೆ'ಗಳಿ
ಗೆಲ್ಲೆ ತಾನಿಲ್ಲ ಪೂರ್ಣಜ್ಞ.

೨೬೩೯
ದುರ್ಬುದ್ಧಿಯನು ಬಿಡದೆ, ದುರ್ಭಾವ ದೂರಿಡದೆ
ದಾರಿದ್ರ್ಯ ನಿನ್ನ ಬೆಂಬಿಡದು ಮೊದಲು ನೀ
ದುರ್ವಿಚಾರ ಬಿಡು ಪೂರ್ಣಜ್ಞ.

೨೬೪೦
ಮಕ್ಕಳಿದ್ದರೆ ಚಿಂತೆ, ಮಕ್ಕಳಿರದಿರೆ ಚಿಂತೆ
ರೊಕ್ಕ ಬಂಗಾರ ಮನೆಯೊಳಗೆ ತುಂಬಿರಲು
ರಕ್ಷಿಸುವ ಚಿಂತೆ ಪೂರ್ಣಜ್ಞ.

೨೬೪೧
ಅರಿವನ್ನು ಮರೆಸುವದು, ಕರುಳನ್ನು ಕೊರೆಯುವದು
ಕೊರಗೆಂಬ ಕೀಟ ಕೊರಗಿಪ್ಪುದು ತನುಮನವ
ತೊರೆ ಚಿಂತೆ ಮೊದಲು ಪೂರ್ಣಜ್ಞ.

೨೬೪೨
ಸುಖನಿದ್ರೆ ನಶಿಸುವದು, ಸುಖರೆಲ್ಲ ತೊಲಗುವರು
ಮುಖಮ್ಲಾನವಹುದು, ಮೃತಿ ಸಮೀಪಕೆಬಹುದು
ಪ್ರಖರ ಚಿಂತೆಗೆ ಪೂರ್ಣಜ್ಞ.

೨೬೪೩
ಅರಿವಿರುವ ಮನುಜರನು, ಧರೆ ಕರೆದು ಮನ್ನಿಪ್ಪುದು
ಅರಿವುಗೇಡಾಗಿ ತಿರುಗಾಡುವವರ
ಕರೆವರಾರಯ್ಯ? ಪೂರ್ಣಜ್ಞ.

೨೬೪೪
ಪುಣ್ಯ ಪಾಪದ ಭಯವು, ಗಣ್ಯರಿಗೆ ಬಾರದಿರೆ
ಇನ್ನುಳಿದ ಜನಕೆ ಬರಬಹುದೆ ಎಂಬುದನು
ಗಣ್ಯರರಿಯುವರೆ? ಪೂರ್ಣಜ್ಞ.

೨೬೪೫
ಹಿರಿಕಿರಿಯರೆಂದೆಂಬ, ಗುರುಗೌರವಕೆ ದೊಡ್ಡ
ಬರವು ಬಂದಿಹುದು, ಗುಣಕಿಲ್ಲ ನಿಜಮೌಲ್ಯ
ಹರನೀನೆ ನೋಡು ಪೂರ್ಣಜ್ಞ.

೨೬೪೬

ಮುಟ್ಟದಿರು ಲಲನೆಯರ, ಗಟ್ಟಿಕುಚ ಮೋಹದಿಂ
ಬಟ್ಟ ಬಯಲಿನೊಳು ಈ ಆಟ ನಡೆದಿಹುದು
ಕುಟ್ಟುವರು ನಿನ್ನ ಪೂರ್ಣಜ್ಞ.

೨೬೪೭

ಮಾನವತೆಯಿಲ್ಲದಲೆ ಮಾನವತೆಯುರುಹಿದರೆ
ಮಾನವತೆ ಬರಬಹುದೆ? ಡಾಂಭಿಕರಿಗೆಲ್ಲ
ದಾನವರು ಅವರು ಪೂರ್ಣಜ್ಞ.

೨೬೪೮

ಉಪಕಾರ ಪಡಕೊಂಡು, ಅಪಕಾರ ಮಾಡುವರು
ಉಪಕಾರಗೇಡಿ ಹಾವಿನಂಥವರೀಗ
ವಿಪುಲವಾಗಿಹರು ಪೂರ್ಣಜ್ಞ.

೨೬೪೯

ಮೂಗು ಸೋರುವವೆಂದು ಮೂಗನ್ನೆ ಕೊಯ್ಯುವರೆ?
ಅಂಗೈಯ ಹುಣ್ಣೆಗಿಡಿಕೈಯ ಕೊಯ್ಯುವರೆ?
ತೂಗು ಮಾನಸದಿ ಪೂರ್ಣಜ್ಞ.

೨೬೫೦

'ಗದ್ದುಗೆಯ ಪೂಜೆಯದು, ಬುದ್ಧಿಹೀನರ ಕೆಲಸ'
ಬುದ್ಧಿಯಿದ್ದವರು ಬಿಡಿರೆನ್ನುವರು ಭಾವ-
ಶುದ್ಧಿಯಿರದವರು ಪೂರ್ಣಜ್ಞ.

೨೬೫೧

ಒಳಗಿರುವ ಚಿಜ್ಜ್ಯೋತಿ, ತಿಳಿದವರಿಗದು ಗೊತ್ತು
ತಿಳಿಗೇಡಿಗಳಿಗೆ ಕಾಣದದು ಶಿವನ ಚಿತ್-
ಕಳೆಯ ತಿಳಿಬೆಳಕು ಪೂರ್ಣಜ್ಞ.

೨೬೫೨

ಸದ್ಭಾವಿಗಳಿಗುಂಟು, ದುರ್ಭಾವಿಗಳಿಗಿಲ್ಲ
ಸದ್ಭಕ್ತಿ ಸುಖವು ಒಣತಾರ್ಕಿಕರಿಗಿಲ್ಲ
ಹೃದ್ಗುಣದ ಸುಖವು ಪೂರ್ಣಜ್ಞ.

೧೬೫೩

ಅದು ಬೇಡ, ಇದು ಬೇಡ, ಗದರಿದರೆ ಬಂತೇನು?
ಎದರಲ್ಲಿ ಲೇಸಿಹುದೊ ಅದನಷ್ಟು ಹೇಳು
ಒದರದಿರು ಬರಿದೆ ಪೂರ್ಣಜ್ಞ.

೧೬೫೪

ವೀರರ ಸಮಾಧಿಗಳ, ಗೌರವಿಸುತಿರುವಂತೆ
ಭೂರಿ ಮಹಿಮೆಯ ಗದ್ದುಗೆಯ ಪೂಜೆ ಧರ್ಮಕಪ–
ಚಾರವೆನಿಸುವದ? ಪೂರ್ಣಜ್ಞ.

೧೬೫೫

ಕಲ್ಲೆಂದು ಹಳಿಯದಿರಿ, ಕಲ್ಲಿಂಗೆ ಸಂಸ್ಕಾರ
ಬಲ್ಲವರು ಕೊಟ್ಟು ಶಕ್ತಿಯನು ತುಂಬಿಹರು
ಇಲ್ಲವೆನಬೇಡಿ ಪೂರ್ಣಜ್ಞ.

೧೬೫೬

ಎರಡುಪಟ್ಟೊಂದಕ್ಕೆ, ದರಹೇಳಿ ಮುಗ್ಧರನು
ಕರುಣೆಯಿಲ್ಲದಲೆ ಸುಲಿವಂಥ ವ್ಯಾಪಾರ
ಭರದಿ ಬೆಳೆಯುತಿದೆ ಪೂರ್ಣಜ್ಞ.

೧೬೫೭

ಪರರದೋಷವನೆಣಿಸಿ; ಪರಿವಾದ ಮಾಡದಿರು
ಅರಿಮೊದಲು ನಿನ್ನ ದೋಷಗಳ ರಾಶಿಗಳ
ತೊರೆದು ಬೋಧಿಸು ನೀ ಪೂರ್ಣಜ್ಞ.

೧೬೫೮

ಯಾರನೂ ನೋಯಿಸದೆ, ಸಾರು ಬಸವನತತ್ವ
ಚೂರಿಯಿರಿವಂತೆ ಆಡಿದರೆ ಬಸವಣ್ಣ
ಭಾರಿನೋಯುವನು ಪೂರ್ಣಜ್ಞ.

೧೬೫೯

ಹಾವುಗಳ ಹೆಜ್ಜೆಗಳು, ಹಾವುಗಳಿಗೇ ಗೊತ್ತು
ಯಾವ ಕದ್ದಿಹನು ಎಂಬುದನು ಅರಿವವನು
ಆ ವರ್ಗದವನು ಪೂರ್ಣಜ್ಞ.

೨೬೬೦

ಹಸಿರುಳ್ಳ ಸಸಿಗಳನು, ಕಸಿಮಾಡುವರುಂಟು
ರಸಯೋಗದಿಂದ ಹೃದಯ ಹೃದಯಗಳನ್ನು
ಕಸಿಮಾಳ್ಪರಾರು? ಪೂರ್ಣಜ್ಞ.

೨೬೬೧

ತುಂಬಿದೆದೆಯಲಿ ಪುಟಿವ, ಕುಂಭ ಕುಚಗಳನು ಕಣ್
ತುಂಬ ನೋಡುತ್ತ ಬೆಂಬತ್ತುವವಗೆ ನೂರು
ತುಂಬುವವು ಗಡನೆ ಪೂರ್ಣಜ್ಞ.

೨೬೬೨

ಉಳಿವಿಲ್ಲ, ಸುಖವಿಲ್ಲ, ಕಳೆಯಿಲ್ಲ ಜಗಕಿಂದು
ಬೆಳಕಿಲ್ಲ ಮನಕೆ ನಡೆ–ನುಡಿಯ ಸಂಸ್ಕೃತಿಯು
ಕಳೆಯಿಲ್ಲ ಜನಕೆ ಪೂರ್ಣಜ್ಞ.

೨೬೬೩

ನ್ಯಾಯ ಮೂರ್ತಿಗಳಿಂದು, ನ್ಯಾಯ ತತ್ವವ ಮರೆತು
ಧ್ಯೇಯ ಬದಿಗೊತ್ತಿ ಲಂಚವಿತ್ತವರೆಡೆಗೆ
ನ್ಯಾಯ ನೀಡುವರು ಪೂರ್ಣಜ್ಞ.

೨೬೬೪

ನ್ಯಾಯಾಲಯದಿ ನಿಜದ, ನ್ಯಾಯ ಸಿಗದಿರುವಾಗ
ನ್ಯಾಯವಿನ್ನೆಲ್ಲಿ–ವಿಶ್ವಾಸವಿನ್ನೆಲ್ಲಿ?
ನ್ಯಾಯ ಸತ್ತಿಹುದೆ? ಪೂರ್ಣಜ್ಞ.

೨೬೬೫

ಮಾತು ಬಲ್ಲಾತನಿಗೆ, ಮಾತು ಜ್ಯೋತಿರ್ಲಿಂಗ
ಮಾತಿನೊಳು ಮರ್ಮ ತಿಳಿಯದಾತಗೆ ಮಾತು
ತೂತಿನಂತಕ್ಕು ಪೂರ್ಣಜ್ಞ.

೨೬೬೬

ಶಾಲೀನ ಗುಣ ಬಿಟ್ಟು, ಬಾಲಕರ ವೇಷದಲಿ
ಲೋಲಾಡುತಿರುವ ಬಾಲೆಯರು ಸಂಸ್ಕೃತಿಗೆ
ಶೂಲವಾಗಿಹರು ಪೂರ್ಣಜ್ಞ.

೨೬೬೭

ಲಿಂಗಕಾಯದೊಳಿರುವ, ಜಂಗಮದ ಕುರುಹಾದ
ತುಂಗ ಗದ್ದುಗೆಗೆ ಸ್ಥಾವರವದೆನ್ನುವದು
ಮಂಗಬುದ್ಧಿಯದು ಪೂರ್ಣಜ್ಞ.

೨೬೬೮

ಸ್ನೇಹವಿಲ್ಲದ ಬಾಳು, ದಾಹ ತುಂಬಿದ ಮನವು
ದೇಹದಲಿ ತಾಪ ತುಂಬಿದರೆ ಜೀವನಕೆ
ರೂಹಿಲ್ಲ ಕಾಣು ಪೂರ್ಣಜ್ಞ.

೨೬೬೯

ಕಂಡಕಂಡವರಲ್ಲಿ, ರುಂಡ ಬಗ್ಗಿಸಿ ನಿಂತು
ಕಂಡಕಂಡಂತೆ ಹಣಕೆ ಕೈಯೊಡ್ಡಿದವ
ಭಂಡನೆನಿಸುವನು ಪೂರ್ಣಜ್ಞ.

೨೬೭೦

ಲೋಲಾಕ್ಷಿಯರ ಮೋಹ, ಜಾಲದಲಿ ಬಿದ್ದವರು
ಆಲಸಿಗಳಾಗಿ ಸಾಲಿಗರ ಆಳಾಗಿ
ಗೋಳಿಗೀಡಹರು ಪೂರ್ಣಜ್ಞ.

೨೬೭೧

ಎಷ್ಟೊಂದು ವೈಚಿತ್ರ್ಯ?! ಹುಟ್ಟುಸಾವುಗಳೆರಡು
ಇಷ್ಟೆಲ್ಲ ಗೊತ್ತಿರಲು ಬಿಡಿದಿಹೆವು ಆಶೆ
ಸೃಷ್ಟಿಲೀಲೆಯದು ಪೂರ್ಣಜ್ಞ.

೨೬೭೨

ತನ್ನ ಸುಖಕಿರುವವನು, ಇನ್ನೊಬ್ಬರನು ನೋಡಿ
ತನ್ನ ಸ್ವಾರ್ಥಾಗ್ನಿ ಕುಂಡದಲಿ ಪರಿತಪಿಸಿ
ಸಣ್ಣಾಗುತಿಹನು ಪೂರ್ಣಜ್ಞ.

೨೬೭೩

ಆಶಾನಿರಾಶೆಗಳ, ಪಾಶಗಳು ಬಿಗಿಯುವವು
ಕ್ಲೇಶಗಳು ಹಿಂಡು ಹಿಂಡಾಗಿ ಮುತ್ತುವವು
ಘಾಸಿಗೊಳಿಸುವವು ಪೂರ್ಣಜ್ಞ.

೨೬೭೪

ಹೊಡೆದಾಟ ಬಡಿದಾಟ, ಕುಡಿದಾಟ ಕಾದಾಟ
ಕಡಿದಾಟದಲ್ಲಿ ದೇಶಾಭಿಮಾನಕ್ಕೆ
ಎಡೆಸಿಗುವದೆಂತು? ಪೂರ್ಣಜ್ಞ.

೨೬೭೫

ಎಲ್ಲ ಒಳ್ಳೆಯದನ್ನು, ಕೊಳ್ಳಕ್ಕೆ ತಳ್ಳಿಹರು
ಎಲ್ಲಿಹನು ಗಾಂಧಿ, ಎಲ್ಲಿಹುದವನತತ್ವ?
ಎಲ್ಲೆಡೆಗುಹಿಂಸೆ ಪೂರ್ಣಜ್ಞ.

೨೬೭೬

ಗಾಂಧಿತಾತನೆ ನೀನು, ಇಂದು ಬಾ ಭಾರತಕೆ
ನೊಂದು ಬೆಂದಿರುವ ಜನಜೀವನಕೆ ನೀಡು
ಒಂದಿಷ್ಟು ಶಾಂತಿ! ಪೂರ್ಣಜ್ಞ.

೨೬೭೭

ಚಿತ್ರಹಿಂಸೆಗಳು ಪ್ರತಿ–ನಿತ್ಯವೂ ನಡೆಯುತಿವೆ,
ಕತ್ತಿ ಮಸೆದಾಡುತಿವೆ ತೆರೆಮರೆಗಳಲ್ಲಿ
ಮುತ್ತಿಹುದು ಭೀತಿ ಪೂರ್ಣಜ್ಞ.

೨೬೭೮

ಪಕ್ಷಗಳ ರಟ್ಟೆಯಲಿ, ದಕ್ಷತೆಯು ಸತ್ತಿಹುದು
ಪಕ್ಷ ಪಾತಗಳ ಪಕ್ಷವಾತವು ಬಡಿದು
ಭಿಕ್ಷೆ ಬೇಡುತಿವೆ, ಪೂರ್ಣಜ್ಞ.

೨೬೭೯

ರಕ್ಷಕರೆ ಜಗದಲ್ಲಿ, ಭಕ್ಷಕರು ಆಗಿರಲು
ರಕ್ಷಿಸುವರಾರು? ದೀನದಲಿತರ ನೋಡಿ
ಶಿಕ್ಷಣವ ನೀಡಿ ಪೂರ್ಣಜ್ಞ.

೨೬೮೦

ಹೊಸವೇಷ ಹಾಕುತ್ತ, ಹೊಸ ಘೋಷಣೆಯ ಮಾಡಿ
ಮೊಸಳೆಗಂಬನಿಯ ಸುರಿಸುತ್ತ ನಡೆದಿಹರು,
ಪಶುಗಳಂಥವರು ಪೂರ್ಣಜ್ಞ.

೨೬೮೧

ಓಟುಕೊಡಿ, ಓಟುಕೊಡಿ, ಓಟುಕೊಡಿರೆಂದೆನುತ
ನೋಟುಗಳ ನೀಡುವರು, ಸತ್ಕಾರ್ಯಗಳಿಗೆ
ಬೂಟುಗಾಲ್ ತುಳಿತ ಪೂರ್ಣಜ್ಞ.

೨೬೮೨

ಬಂಡಾಯ ಚಳವಳಿಯು, ಬಂಡೆಬ್ಬಿಸುವದಯ್ಯ
ಪುಂಡ ಪೋಕರರಂತೆ ಲೋಕದಲಿ ಜನರು
ಲಂಡರಾದಾರು! ಪೂರ್ಣಜ್ಞ.

೨೬೮೩

ಅವರು ಇವರನು ಜರಿದು, ಇವರು ಅವರನು ಜರಿದು
ಅವಿಚಾರದಿಂದ ಆಯ್ಕೆಯೆಂಬುದು ದೊಡ್ಡ
ಬವಣೆಯಾದೀತು! ಪೂರ್ಣಜ್ಞ.

೨೬೮೪

ಬರಿನಿಂದೆ ಮಾಡಿದರೆ, ಅರಿವು ಬರುವುದೆ ಜನಕೆ?
ಬರಿಸ್ವಾರ್ಥಕಾಗಿ ವೋಟುಗಳ ಕೇಳಿದರೆ
ನರರು ಒಲಿಯುವರೆ? ಪೂರ್ಣಜ್ಞ.

## ಸಾಲ

೨೬೮೫

ಸಾಲವನು ಮಾಡದಿರು, ಜೋಲು ಮುಖ ಹಾಕದಿರು
ಮೂಲೆಗುಂಪಾಗಿ ಕಾಲವಶವಾಗದಿರು
ಶೀಲವನು ತೊರೆದು ಪೂರ್ಣಜ್ಞ.

೨೬೮೬

ಸಾಲ ಕೊಂಡರೆ ನೀನು, ಸಾಲ ತೀರಿಸು ಬೇಗ
ಸಾಲ ಬಡ್ಡಿಗಳ ಭಾರಕ್ಕೆ ಜೀವನದ
ಕೀಲ ಮುರಿದೀತು ಪೂರ್ಣಜ್ಞ.

೨೬೮೭

ಸಾಲ ಮಾಡುತ ಜಟದಿ ಕಾಲವನು ಕಳೆಯುತ್ತ
ಲೋಲ ಹೊಡೆವವನ ರಟ್ಟೆ ಹಿಡಿದೆಳೆಯುವರು
ಸಾಲಿಗರು ಜಗ್ಗಿ ಪೂರ್ಣಜ್ಞ.

೨೬೮೮

ಸಾಲವದು ಕಳ್ಳಸುಕು, ಕಾಲು ಸಿಗದಂತಿರಿಸು
ಸಾಲ ಬಡ್ಡಿಗಳು ಬೆಳೆದು ಕೊಂಡವನನ್ನು
ಗೋಳಿಗೆಳೆದಾವು ಪೂರ್ಣಜ್ಞ.

೨೬೮೯

ಬಡ್ಡಿ ಬೆಳೆಯುತ ಸಾಲ, ಗುಡ್ಡದಂತಾಗುವದು
ಅಡ್ಡ ತರುಬುತ್ತ ಸಾಲ ತೀರಿಸೆ ನಿನ್ನ
ಮಡ್ಡನಿಳಿಸುವರು, ಪೂರ್ಣಜ್ಞ.

೨೬೯೦

ಸಾಲ ತೀರಿಸಲು ಮರು, ಸಾಲವನು ಮಾಡಿದರೆ
ಜಾಲದಲಿ ಸಿಕ್ಕ ಪ್ರಾಣಿಗಳ ತೆರದಿ ನೀ
ಗೋಳಾಡಿ ಮಡಿವೆ ಪೂರ್ಣಜ್ಞ.

೨೬೯೧

ಸಾಲವನು ಮಾಡದಿರು, ಸಾಲವನು ನೀಡದಿರು
ಕಾಲಕಳೆಯದಲೆ ದುಡಿವವಗೆ ಲಕ್ಷ್ಮಿ ಹೂ-
ಮಾಲೆ ಹಾಕುವಳು ಪೂರ್ಣಜ್ಞ.

೨೬೯೨

ಸಾಲದಲಿ ಮುಳುಗಿದವ, ಶೀಲಿರದ ಸತಿಯಿರುವ
ಜೇಲಿನಲಿ ಇದ್ದವಗೆ ನಿದ್ದೆ ಬರದವಗೆ
ವೇಳೆ ಕಳೆಯುವನು ಪೂರ್ಣಜ್ಞ.

೨೬೯೩

ಸಾಲವನು ಕೊಡಬೇಡ, ಗೋಳಿಗೀಡಾಗದಿರು
ಸಾಲವನು ಕೊಟ್ಟವನು ತನ್ನ ನೇಹಿಗನ
ಕಳೆದುಕೊಳ್ಳುವನು ಪೂರ್ಣಜ್ಞ.

೨೬೯೪

ಸಾಲತಂದವನುಂಬ ಕೂಳು ಕುತ್ತಿಗೆಯಲಿ
ಜಾಲಿ ಮುಳ್ಳ,ಹುದು ಸಾಲಿಗನುಪದ್ರವವು
ಶೂಲ ತಿವಿದಂತೆ ಪೂರ್ಣಜ್ಞ.

೨೬೯೫

ಸಾಲ ಕೊಡುಕೊಳ್ಳುವದು, ಗೋಳಾಟ ಕಳೆಯುವದು
ಸಾಲವನು ಹಗ್ಗ, ಗೆಳೆತನದ ಕುತ್ತಿಗೆಗೆ
ಮೇಲೆ ಧನ ಹಾನಿ ಪೂರ್ಣಜ್ಞ.

೨೬೯೬

ಸಾಲದಲಿ ಸಿಕ್ಕವನ ಬಾಳೆಲ್ಲ ಬರಿಗೋಳು,
ಸಾಲಿಗನು ಬಯ್ಯುತಿರುವಾಗ ಕಿವಿಯಲ್ಲಿ
ಚೇಳು ಹೊಕ್ಕಂತೆ ಪೂರ್ಣಜ್ಞ.

೨೬೯೭

ಸಾಲಕ್ಕೆ ಸಮನಾದ, ಗಾಳ ಮತ್ತೊಂದಿಲ್ಲ
ಗಾಳದಿಂ ಮೀನೊಂದು ಸಾವು, ಸಾಲದಿಂ
ಎಲ್ಲರದು ಸಾವು ಪೂರ್ಣಜ್ಞ.

## ಶ್ರೀ ಜಗದ್ಗುರು ಗುರುಸಿದ್ಧೇಶ್ವರ ಸಹಕಾರಿ ಆಸ್ಪತ್ರೆ, ಘಟಪ್ರಭಾ.

೨೬೯೮

ಗುರುಸಿದ್ಧರಾಸ್ಪತ್ರೆ, ನಿರುತ ಕಾಯಕದಿಂದ
ವರಸಿದ್ಧಿ ಪಡೆದು ಶೋಭಿಸಿದೆ ಬೆಟ್ಟದಲಿ
ಗುರುಸಿದ್ಧ ಮಹಿಮೆ ಪೂರ್ಣಜ್ಞ.

೨೬೯೯

ಸಹಕಾರ ಧರ್ಮಿಗಳ ಸಹಕಾರದಾಸ್ಪತ್ರೆ
ಇಹದಿ ಶೋಭಿಸಿದ ಜಗದಗುರು ಗುರುಸಿದ್ಧ
ಮಹಿಮೆ ಮೆರೆಯುತಿದೆ ಪೂರ್ಣಜ್ಞ.

೨೭೦೦

ಸಹಕಾರಿ ಬಂಧುಗಳ, ಸಹಾಕಾರ ಬಲದಿಂದ
ಸಹನೆ ಸ್ಪೈರಣೆಯ ವೈದ್ಯಮಂಡಲ ದುಡಿದು
ಸಿಹಿಯು ಬೆಳೆಯುತಿಹುದು ಪೂರ್ಣಜ್ಞ.

೨೭೦೧

ಘಟಪ್ರಭೆಯ ಹತ್ತಿರದಿ, ಜಟಿಲಕೋಟಲೆ ನೀಗಿ
ವಟವೃಕ್ಷದಂತೆ ಬೆಳೆಯುತಿರುಪಾಸ್ಪತ್ರೆ
ಕೊಟ್ಟಿಹುದು ನೆರಳು ಪೂರ್ಣಜ್ಞ.

೨೭೦೨

ಜಡ್ಡು ಕಳೆಯುತ ಜನರ, ಜಿಡ್ಡು ಬಿಡಿಸುತ ಮನದ
ಗುಡ್ಡದತ್ತರ ಶೋಭಾಯಮಾನ ಗುರು-
ಸಿದ್ಧರಾಸ್ಪತ್ರೆ ಪೂರ್ಣಜ್ಞ.

೨೭೦೩

ಕೆಟ್ಟ ಚಟ, ಕೆಟ್ಟ ಗುಣ, ಬಿಟ್ಟು ಬಾ ಬೆಟ್ಟಕ್ಕೆ
ಕೆಟ್ಟ ರೋಗಗಳು ಆಸ್ಪತ್ರೆಯೊಳು ಬೇಗ
ಸುಟ್ಟು ಹೋಗುವವು ಪೂರ್ಣಜ್ಞ.

೨೭೦೪

ಬೆಳದಿಂಗಳಂತಿರುವ ಬಿಳಿಬಟ್ಟೆಯುಟ್ಟಿರುವ
ಕಳೆಯುಳ್ಳದಾಯಿಯರ ಆರೈಕೆಯಲಿ
ತೊಲಗುವದು ನೋವು ಪೂರ್ಣಜ್ಞ.

೨೭೦೫

ಗುರುಸಿದ್ಧರಿಚ್ಛೆಯನು, ಅರಿಯುತ್ತ ಮನದೊಳಗೆ
ಆರಂಭಿಸಾಸ್ಪತ್ರೆ ಶ್ರಮದಿಂದ ದುಡಿದು
ಪೂರೈಸಿಹನ್ನೈ ಪೂರ್ಣಜ್ಞ.

೨೭೦೬

ಭಾರತದಿ ಬೆಳಗಿಹುದು, ಭೂರಿಶಕ್ತಿಯ ಪಡೆದು
ಸಾರತರ ಕೀರ್ತಿಯನು ಗಳಿಸಿಹುದು ದುಡಿದು
ಶ್ರೀರಕ್ಷೆಯಿಂದಲಿ ಪೂರ್ಣಜ್ಞ.

೨೭೦೭

ಜಗದ ಗುರುಗುರುಸಿದ್ಧ, ಮಿಗೆ ಮೆಚ್ಚುಂದದಲಿ
ಸೊಗಸುವಾಸ್ಪತ್ರೆ ಜನಸೇವೆ ಮಾಡುತಿದೆ
ಮಿಗಿಲು ಹಿಗ್ಗಿನಗೆ ಪೂರ್ಣಜ್ಞ.

೨೭೦೮

ಸಾರಗುರು ಕೃಪೆಯಿಂದ, ಭಾರತದ ಬಿತ್ತರದಿ
ಕೀರುತಿಯ ಪಡೆದು ಗುರುಸಿದ್ಧರಾಸ್ಪತ್ರೆ
ಮೀರಿ ಶೋಭಿಸಲಿ ಪೂರ್ಣಜ್ಞ.

೨೭೦೯

ಹಸಿರಸಿರಿ ಪಸರಿಸಿಹ, ಪೊಸತು ವಾತಾವರಣ
ಮಿಸುಪ ಪುದೋಟ ಆಸ್ಪತ್ರೆಯಂಗಣದಿ
ನಸುನಗುತಲಿಹುದು ಪೂರ್ಣಜ್ಞ.

೨೭೧೦

ಗುರುಸಿದ್ಧ ಕೃಪೆಯಿಂದ, ವರಪ್ರಸಾದವನುಂಡು
ಪರಮೌಷಧಿಯನು ಪಡೆದು ಕ್ಷಯರೋಗಿಗಳು
ಮರೆಯುವರು ದುಃಖ ಪೂರ್ಣಜ್ಞ.

## ದೃಷ್ಟಿಯೋಗ

೨೭೧೧

ದೃಷ್ಟಿಯೋಗದ ಮುಂದೆ, ಅಷ್ಟಾಂಗಯೋಗಗಳು
ಎಷ್ಟರವು? ಚಿತ್ತವೃತ್ತಿಯ ನಿರೋಧವದು
ದೃಷ್ಟಿಯೋಗದಲಿ, ಪೂರ್ಣಜ್ಞ.

೨೭೧೨

ಕಣ್ಣಿನಿಂದಲಿ ಪ್ರೇಮ, ಕಣ್ಣಿನಿಂದಲಿ ಕಾಮ
ಕಣ್ಣಿನಿಂದಲೆ ಬದುಕು, ಜಗವನೀಕ್ಷಿಸಲು
ಕಣ್ಣೇ ಬೇಕಯ್ಯ ಪೂರ್ಣಜ್ಞ.

೨೭೧೩

ಕಣ್ಣಿನಲಿ ಹೊರಗಣ್ಣು, ಕಣ್ಣಿನಲಿ ಒಳಗಣ್ಣು
ಕಣ್ಣಿನೊಳಗಿರುವ ತಿಳಿಗಣ್ಣ ತಿಳಿದಿರುವ
ಅಣ್ಣಗಳು ಯಾರು? ಪೂರ್ಣಜ್ಞ.

೨೭೧೪

ಕಣ್ಣೆರದು ನೋಡಿದರೆ, ಕಣ್ಣೆರದು ಬಾಳಿದರೆ
ಕಣ್ತ್ರಿವಿಧ ಭೇದಗಳನಳಿದು ತಿಳಿದಲ್ಲಿ
ಪುಣ್ಯದರ್ಶನವು ಪೂರ್ಣಜ್ಞ.

೨೭೧೫

ಕಣ್ಣಿನಿಂದಲಿ ಇಹವು, ಕಣ್ಣಿನಿಂದಲಿ ಪರವು
ಕಣ್ಣು ತಿಳಿಗೊಂಡಕ್ಷಣದಲ್ಲಿ ನಿನಗೆ ಮು-
ಕ್ಕಣ್ಣ ಕಾಣುವನು ಪೂರ್ಣಜ್ಞ.

೨೭೧೬

ಕಣ್ಣಿಂದ ಸತ್ಕಾರ್ಯ, ಕಣ್ಣಿಂದ ದುಷ್ಕಾರ್ಯ
ಕಣ್ಣಿಂದ ಕೊಲೆ ಸುಲಿಗೆ ಕೆಡುಕೊಳಿತುಗಳಿಗೆ
ಕಣ್ಣೇ ಕಾರಣವು ಪೂರ್ಣಜ್ಞ.

೨೭೧೭

ಕಣ್ಪೊರೆಯ ತೆಗೆಯುವರು, ಕಣ್ಣುಗಳ ನೀಡುವರು
ಕಣ್ಣಿಂದಗಳಿಸಿ ಒಳಗಣ್ಣ ತಮಕಳೆವ
ಕಣ್ವೈದ್ಯರಾರು? ಪೂರ್ಣಜ್ಞ.

೨೭೧೮

ಕಣ್ದೆರದು ನೋಡದಿರೆ, ಕಣ್ದೆರದು ಬಾಳದಿರೆ
ಕಣ್ಣೊಳಗಿನೊಳಗೆ ಚಿತ್ಕಳೆಯು ಕಾಣದಿರ
ಕಣ್ಣಿದ್ದು ಕುರುಡು ಪೂರ್ಣಜ್ಞ.

೨೭೧೯

ದೃಷ್ಟಿದೋಷವುನರಗೆ, ಕಷ್ಟದಾಯಕವಹುದು,
ದೃಷ್ಟಿಯದು ಪೀತವಾದರೆಲ್ಲವು ಪೀತ,
ದೃಷ್ಟಿಯೊಲು ಸೃಷ್ಟಿ, ಪೂರ್ಣಜ್ಞ.

## ಒಗಟುಗಳು

೨೭೨೦

[೧]ಕಾಲು ನಾಲ್ಕಿರೆ ಸೆಟೆದು, ಮೇಲೆದ್ದು ನಿಲ್ಲುವದು
ಕಾಲೊಂದು ಮುರಿದರಿದು ಹೊರಳಿ ಬೀಳುವದು
ಪೇಳಿ ಯಾವುದಿದು? ಪೂರ್ಣಜ್ಞ.

೨೭೨೧

[೨]ಬಾಯೊಳಗಿಡುತಿರಲು, ಮಾಯವಾಗುತ ಬೇಗ
ಕಾಯದೊಳು ಸೇರಿ ಸಮರಸವು ಆಗುವದು
ಈ ಯೊಗಟ ಬಿಡಿಸು ಪೂರ್ಣಜ್ಞ.

೨೭೨೨

[೩]ನುಡಿಯುವದು ಕೇಳುವದು, ನುಡಿವವರು ಕಾಣಸರು
ನಡುಮನೆಯೊಳೇ ಕುಳಿತು ಪೊಡವಿಯೆಲ್ಲವನು
ನುಡಿಸುವದಿದೇನು? ಪೂರ್ಣಜ್ಞ.

೨೭೨೩

[೪]ರೆಕ್ಕೆಯಿದಕಿಲ್ಲ ಗಗನಕ್ಕೆ ನೆಗೆದೋಡುವದು
ಚಿಕ್ಕವರು ನೋಡಿ ಇಕ್ಕುವರು ಚಪ್ಪಾಳೆ
ಹಕ್ಕಿ ಯಾವುದಿದು? ಪೂರ್ಣಜ್ಞ.

೨೭೨೪

[೫]ಎತ್ತರದ ಕಂಭಗಳು, ಬಿತ್ತರದ ಚತ್ತರಿಗೆ
ಅತ್ತಿತ್ತ ತೋರಣಗಳು ನೇತಾಡಿಹವು
ಗೊತ್ತುಂಟೆ ನಿಮಗೆ? ಪೂರ್ಣಜ್ಞ.

೨೭೨೫

[೬]ಒತ್ತಿದರೆ ತೇಲುವದು, ಸುತ್ತಲೂ ತಂಗಾಳಿ
ಒತ್ತರದಿ ಬರುವ ಬಿರುಗಾಳಿಯಂತಲ್ಲ
ಭೃತ್ಯನಂತಿಹದು ಪೂರ್ಣಜ್ಞ.

---

೧. ಖುರ್ಚಿ ೨. ಆಯಿಸ್ಕ್ರೀಮ್ ೩. ಟೆಲಿಫೋನ್ ೪. ವಿಮಾನ ೫. ಮೂರುಸಾವಿರಮಠ ೬. ಫ್ಯಾನ್.

೨೭೨೬

[೭]ಒತ್ತಿದರೆ ಮಿಗೆನಗುತ, ಸುತ್ತೆಲ್ಲ ಬೆಳಗುವದು
ಬತ್ತಿ ಎಣ್ಣೆಲ್ಲ, ಬರಿಯ ಕಾಜಿನ ಗಿಂಡಿ
ಬಿತ್ತರಿಸಿರಿದನು ಪೂರ್ಣಜ್ಞ.

೨೭೨೭

[೧]ಬಿಂಬಫಲ ಮೊದ ಮೊದಲು, ಜಂಬೀರ ಆಮೇಲೆ
ತುಂಬ ಬೆಳೆದಾಗ ವಜ್ರ ಚಕ್ರವಿದೇನು
ಎಂಬುದನು ಪೇಳಿ ಪೂರ್ಣಜ್ಞ.

೨೭೨೮

[೨]ಹಿಂಡಿದರೆ ಕಿವಿಗಳನು, ಹಿಂಡುವವು ನೀರನ್ನು
ಕಂಡ ಕಂಡಲ್ಲಿ ಕಾಣುತಿವೆ ಇವು ಏನು?
ಪಂಡಿತರೆ ಪೇಳಿ? ಪೂರ್ಣಜ್ಞ.

೨೭೨೯

[೩]ಕುಲು ಕುಲು ನಗುತಲಿಹುದು, ಚೆಲುವೆಯರ ಮುಖವಲ್ಲ
ಇಳೆಗೆ ಹಾಲಿಂದ ಜಳಕ ಮಾಡಿಸುತಿಹುದು
ತಿಳಿದವರು ಪೇಳಿ, ಪೂರ್ಣಜ್ಞ.

೨೭೩೦

[೪]ಸುತ್ತ ಮುತ್ತಲು ಸೊಳ್ಳೆ, ಮುತ್ತಿಗೆಯು ಹಾಕುತಿವೆ
ಎತ್ತ ಹೋದರೆಯು ಮೈ ಮನವ ಕಚ್ಚುತಿವೆ
ಆಶ್ಚರ್ಯಸಿರಿದನು ಪೂರ್ಣಜ್ಞ.

೨೭೩೧

[೫]ನಲ್ಲಿಯೊಳಗಿನದಲ್ಲ, ಎಲ್ಲರೊಳಗೂ ಇಹುದು
ಚೆಲ್ಲಲ್ಕೆ ಕುಡಿಯಲ್ಕೆ ಬಾರದೀ ನೀರು!
ಬಲ್ಲವರೆ ಪೇಳಿ ಪೂರ್ಣಜ್ಞ.

---

೭. ವಿದ್ಯುದ್ದೀಪ ೧. ರವಿ ೨. ನಲ್ಲಿ ೩. ಚಂದ್ರ ೪. ಅರಿಷಡ್ವೈರಿಗಳು ೫. ಕಣ್ಣೀರು

೨೭೩೨

[೧]ರೆಕ್ಕೆಯಿಲ್ಲದ ಪಕ್ಷಿ, ಸೊಕ್ಕಿನಿಂ ಹಾರುವದು
ನಿಕ್ಕವದಿ ಪೇಳ್ವೆ ಗೊತ್ತಿಹುದಿದೆಲ್ಲರಿಗು
ಚಕ್ಕನೇ ಪೇಳಿ ಪೂರ್ಣಜ್ಞ.

## ಯುದ್ಧ

೨೭೩೩

[೨]ಕ್ಷುದ್ರಕಾರಣದಿಂದ, ಕ್ರುದ್ಧರಾಗುತ ಘೋರ
ಯುದ್ಧ ಕಣಕಿಳಿವ ಹುಂಬರಿಗೆ ಬುಧ ಜನರು
ಬುದ್ಧಿ ಪೇಳುವರು ಪೂರ್ಣಜ್ಞ.

೨೭೩೪

ಮದ್ದುಗುಂಡಿನ ಕ್ರೂರ, ಕೃದ್ಧರಾಕ್ಷಸಲೀಲೆ!
ಬುದ್ಧಿಗೆಟ್ಟಿರುವ ಅಮೇರಿಕ–ಇರಾಕುಗಳ
ಯುದ್ಧ ಜಿದ್ದಿನದು ಪೂರ್ಣಜ್ಞ.

೨೭೩೫

ಉದ್ದಾಮ ಸದ್ದಾಮ, ಕೃದ್ಧ ಬುಶ್‌ಗಳ ನಡುವೆ
ಯುದ್ಧ ಭುಗಿಲೆದ್ದು ಮುಗ್ಧ ನಾಗರಿಕ ಜನ
ದಗ್ಧವಾಗಿಹರು ಪೂರ್ಣಜ್ಞ.

೨೭೩೬

ದಿನದಿನಕೆ ಹೆಚ್ಚುತಿದೆ, ರಣರಂಗದಲಿ ಯುದ್ಧ
ಕ್ಷಣವು ಬಿಡದಂತೆ ಕ್ಷಿಪಣಿಗಳು ಸಾಗಿಹವು
ಜನಕೆ ದಿಗ್‌ಭ್ರಾಂತಿ! ಪೂರ್ಣಜ್ಞ.

---

೧. ಮನಸ್ಸು
೨. ದಿ. ೧೭–೧–೯೧ ರಂದು ಕೊಲ್ಲಿಯುದ್ಧವು ಪ್ರಾರಂಭವಾಗಿ ದಿ. ೧–೩–೯೧ ರಂದು ಮುಗಿಯಿತು. ಆ ಅವಧಿಯಲ್ಲಿ ಬರೆದ ತ್ರಿಪದಿಗಳು.

೨೭೩೭

ಲಕ್ಷೋಪಲಕ್ಷ ಜನ, ಮಕ್ಕಳನು ಕಳಕೊಂಡು
ದುಃಖಿಸುತ್ತಿಹರು ರಕ್ಷಿಸಲು ಬಾರಯ್ಯ
ಮುಕ್ಕಣ್ಣ ಬೇಗ ಪೂರ್ಣಜ್ಞ.

೨೭೩೮

ನಾಶಕಾರಕ ಘೋರ, ತ್ವೇಷ–ದ್ವೇಷಾ–ಸೂಯೆ
ಘಾಸಿ ಮಾಳ್ಪವು ಜಗದ ಜಗದೀಶ ನೀನೆ
ಕ್ಲೇಶ ಪರಿಹರಿಸು ಪೂರ್ಣಜ್ಞ.

೨೭೩೯

ಕೊಲ್ಲಿಕಾಳಗ ಭರದಿ, ನಿಲ್ಲದಲೆ ನಡೆದಿಹುದು
ಬಲ್ಲವರು ಪೇಳಿದರು ಬ್ರಹ್ಮಾಸ್ತ್ರ ದಾಳಿ
ನಿಲ್ಲಿಸದೇ ಇಹರು ಪೂರ್ಣಜ್ಞ.

೨೭೪೦

ಯಂತ್ರಜ್ಞಾನದ ಸಮರ, ನಿಂತಿಲ್ಲ ಸುತ್ತೆಲ್ಲ
ಕುಂತಲ್ಲೇ ಜನರು ಸಾಯುತ್ತಲಿರುತಿಹರು
ಚಿಂತೆ ಜಗಕೆಲ್ಲ ಪೂರ್ಣಜ್ಞ.

೨೭೪೧

ಕಪಟಯುದ್ಧಗಳಿಂದು, ವಿಪರೀತವಾಗಿಹವು
ಉಪಕಾರಿಗಳಿಗೆ ಅಪಕಾರಗೈಯುವರು
ಕುಪಥಗಾಮಿಗಳು ಪೂರ್ಣಜ್ಞ.

೨೭೪೨

ಬಾಂಬುಗಳ ಸುರಿಮಳೆಯು, ಅಂಬುಧಿಯ ಪ್ರಾಣಿಗಳ
ಬೆಂಬಿಡದೆ ಕೊಲುತಿಹವು; ಮುಂದೇನೊ ಜಗಕೆ
ಶಂಭುವಿಗೆ ಗೊತ್ತು, ಪೂರ್ಣಜ್ಞ.

೨೭೪೩

ಬುದ್ಧಿ ಕಳಕೊಂಡಿರುವ, ಉದ್ದಾಮ ಸದ್ದಾಮ
ಕೃದ್ಧ ದೈತ್ಯನೊಲು ಕ್ಷಿಪಣಿಗಳ ಬಿಡುತಿಹನು
ಹದ್ದರಗಿದಂತೆ ಪೂರ್ಣಜ್ಞ.

೨೭೪೪

ಮಿತ್ರರಾಷ್ಟ್ರಗಳಾರು, ಗೊತ್ತಾಗದಿರದಲ್ಲಿ
ಮುತ್ತಿಗೆಯ ಹಾಕುವರು ಭರದಿಂದ ನೋಡು
ಕುತ್ತು ತಂದಿಹರು ಪೂರ್ಣಜ್ಞ.

೨೭೪೫

ಯುದ್ಧ[೧] ಮುಗಿಯಿತು ಇಂದು, ಮುದ್ದು ಮಕ್ಕಳಿಗಿನ್ನು
ಬಿದ್ದು ಸಾಯುವುದು ತಪ್ಪಿಹುದು, ಸಂತಸದಿ
ಮುದ್ದಿಕ್ಕುತಿಹರು ಪೂರ್ಣಜ್ಞ.

೨೭೪೬

ಯುದ್ಧದಿಂ ಸೆಣಸಾಟ, ಯುದ್ಧದಿಂ ಮಸೆದಾಟ
ಯುದ್ಧದಿಂ ಮನಮಲಿನವಾಗಿ ಜೀವಿಪರು
ಮೊದ್ದ ಕಪಿಯಂತೆ! ಪೂರ್ಣಜ್ಞ.

## ಭವಿಷ್ಯ ಪರಿಕಲ್ಪನೆ

೨೭೪೭

ಜಾತಿ ಜ್ವಾಲೆಯು ಹಬ್ಬಿ, ನೀತಿ ಮರಣವ ತಬ್ಬಿ
ಭೀತಿ ಭೂತವದು ತಾಂಡವಿಸುತಿದೆ ಸುತ್ತು
ಮುತ್ತೆಲ್ಲ ಕಡೆಗೆ ಪೂರ್ಣಜ್ಞ.

೨೭೪೮

ತಂದೆ ಮಕ್ಕಳ ನಡುವೆ, ಬಂಧು ಬಾಂಧವರಲ್ಲಿ
ಗೊಂದಲವೆ ಗೊಂದಲವು ಎಲ್ಲಿಂದರಲ್ಲಿ
ಸಂದಿಗ್ಧ ಬಹಳ, ಪೂರ್ಣಜ್ಞ.

೨೭೪೯

ಸೊಬಗು ಸೊಗಸುಗಳನ್ನು, ಕಬಳಿಪರು ಕೇಡಿಗರು
ಶುಭ ಶಕ್ತಿಗಳಿಗೆ ಅಸ್ತಿತ್ವವೇ ಇಲ್ಲ
ಅಭಿಪಾತ ಜಗಕೆ ಪೂರ್ಣಜ್ಞ.

---

೧ ದಿ. ೧-೩-೧೯೯೧.

೨೭೫೦

ಕಪಟಿಗಳ ವಂಚಕರ, ಉಪಟಳವು ಹೆಚ್ಚುವದು
ಕುಪಥಗಾಮಿಗಳ ದುಷ್ಕಾರ್ಯ ದೌರ್ಜನ್ಯ
ಉಪಮಿಸಲಸಾಧ್ಯ ಪೂರ್ಣಜ್ಞ.

೨೭೫೧

ಒಕ್ಕಟ್ಟು! ಒಕ್ಕಟ್ಟು! ಒಕ್ಕಟ್ಟು ಎಲ್ಲಿಹುದು?
ಒಕ್ಕಟ್ಟು ಎಂದು ಬಿಕ್ಕಟ್ಟಿನಲಿ ಸಿಕ್ಕು
ಬಿಕ್ಕಿ ಸಾಯುವದು ಪೂರ್ಣಜ್ಞ.

೨೭೫೨

ಸ್ವಾರ್ಥಿಗಳು ತಂತಮ್ಮ, ಸ್ವಾರ್ಥ ಸಾಧನೆಗಾಗಿ
ಮಿಥ್ಯಾ ಪ್ರಚಾರದಿಂ ಜಾತಿ ವೈಷಮ್ಯ
ಬಿತ್ತಿ ಬೆಳೆಸುವರು ಪೂರ್ಣಜ್ಞ.

೨೭೫೩

ಸತ್ಯವಂತರು ಸಿಗರು, ಎತ್ತ ನೋಡಿದಡತ್ತ
ಕುತ್ತಿಗೆಯ ಕೊಯ್ವ ಕ್ರೂರಿಗಳು ಬಾಳೀಗ
ಕುತ್ತುಗಳ ಹುತ್ತ ಪೂರ್ಣಜ್ಞ.

೨೭೫೪

ಉತ್ತಮರ ಕಾಲವದು, ಸತ್ತು ಹೋಗುತಲಿಹುದು,
ಸತ್ಯವಂತರನು ತೊತ್ತಳೆ ದುಳಿಯುತಿಹರು
ಸ್ವಾರ್ಥಿ ದುರ್ಜನರು ಪೂರ್ಣಜ್ಞ.

೨೭೫೫

ತಾಮಸವು ಹಿರಿದಾಗಿ, ನೇಮಗಳು ಸಡಿಲಾಗಿ
ಕಾಮ ಬೇಂಟೆಯನು ಆಡುತ್ತ ತಿರುಗುವರು
ಕ್ಷೇಮ ಕಡೆಗಣಿಸಿ ಪೂರ್ಣಜ್ಞ.

೨೭೫೬

ಒಳಗುಟ್ಟು ಹೊರಗಿಟ್ಟು, ಕಲಕು ಮಾಡುವ ಜನಕೆ
ಒಳಿತಿಲ್ಲ ಜಗದೊಳಗೆ ಬಲುಮೋಸದಲ್ಲಿ
ಕಳೆಯುವರು ಕಾಲ! ಪೂರ್ಣಜ್ಞ.

೨೭೫೭

ಮುಂಬರುವ ಜನಗಣಕೆ, ಇಂಬಿಲ್ಲವೀ ಜಗದಿ
ಕಂಬನಿಯು ಕಡಲು ತೆರೆಮಸಗುತೇರುವದು
ಶಂಭುವೇ ಕಾಯೋ ಪೂರ್ಣಜ್ಞ.

೨೭೫೮

ಶುಂಭ ಜನ ಲಯವಾಗಿ, ಡಾಂಭಿಕತೆ ತವಿಲಾಗಿ
ಸಾಂಬ ಭಕ್ತ ಜನ ಜನಿಸುವರು ರಕ್ಷಿಪರು
ಈ ಭುವಿಯನೆಲ್ಲ ಪೂರ್ಣಜ್ಞ.

೨೭೫೯

ಯಂತ್ರಶಕ್ತಿಯು ಅಳಿದು, ಮಂತ್ರಶಕ್ತಿಯು ಬೆಳೆದು
ತಂತ್ರಗಳು ದೂರಾಗಿ ಹುಟ್ಟುವರು ಯತಿಗ—
ಳುತ್ತಮರು ಮುಂದೆ ಪೂರ್ಣಜ್ಞ.

೨೭೬೦

ಮಾತು ಮಾತಿಗೆ ಮೋಸ, ಕೂತರೆದ್ದರೆ ಮೋಸ
ಸ್ವಾರ್ಥ ಸಾಧನೆಗೆ ಜಗವಿಂದು ಮೋಸಗಳ
ಸಂತೆಯಾಗಿಹುದು ಪೂರ್ಣಜ್ಞ.

೨೭೬೧

ಜಗವೆಲ್ಲ ಹಾಳಾಗಿ, ಸೊಗವೆಲ್ಲ ಅಳಿದಾಗ
ಹಗಲಿರುಳು ಬುದ್ಧಿ ಹೇಳುವರು ಬರುತಿಹರು
ಮಿಗೆ ಮೆರೆಯುತಿಹರು ಪೂರ್ಣಜ್ಞ.

೨೭೬೨

ಹಗಲಿರುಳ ತೆರದಲ್ಲಿ, ಜಗಕಿವೆ ಸುಖದುಃಖ
ಹಗಲೇನು ? ಇರುಳೇನು ? "ಆ ಕಾಲ ಪುರುಷ"
ನಗುತಿರುವ ಸತತ ಪೂರ್ಣಜ್ಞ.

೨೭೬೩

ಇಂದಿಂಗೆ ನಾಳಿಂಗೆ, ಮುಂದೆ ಬಹ ಬಾಳಿಂಗೆ
ಒಂದಿನಿತು ಕೊರತೆ ಬರಬಾರದೆಂಬಾಶೆ
ಬಂಧಿಸುತಲಿಹುದು ಪೂರ್ಣಜ್ಞ.

# ಪುಣ್ಯಪುರುಷರು

೨೭೬೪

ಆಧುನಿಕ ಯುಗದಲ್ಲಿ, ಮೇದಿನಿಯ ಹಿತಗೈದ
ಸಾಧು ಸಜ್ಜನರ ಗುಣಗಾನವನು ಕೇಳಿ
ಮೋದಿಸಲಿ ಜಗವು ಪೂರ್ಣಜ್ಞ.

೨೭೬೫

ವರಗುಣಗಳಿರುವಲ್ಲಿ, ಹಿರಿಕಿರಿಯರೆನಬೇಡ
'ವರ' ವೊಂದೆ ಗಣನೀಯವಾಗಿರಲಿ ಜಗದಿ
'ವರ' ಬೆಳೆಯುತಿರಲಿ ಪೂರ್ಣಜ್ಞ.

೨೭೬೬

ದೊಡ್ಡವರು ನಾವೆಂಬ, ದಡ್ಡತನವನು ತೊರೆದು
ದೊಡ್ಡಗುಣಕಂಡು ಮೆಚ್ಚಿ ಮುದ್ದಾಡುವದು
ದೊಡ್ಡಸಾಧನೆಯು ಪೂರ್ಣಜ್ಞ.

೨೭೬೭

ಜಾತಿಭೇದವ ಬಿಟ್ಟು, ನೀತಿವಂತರ ಬಾಳ–
ರೀತಿಯನು ಮೆಚ್ಚಿ ಅಂತೆನಡೆವಂಥವರೆ
ನೀತಿಜ್ಯೋತಿಗಳು ಪೂರ್ಣಜ್ಞ.

೨೭೬೮

'ಹಿರಿಯ ಗುರುಗಳು ಆಗಿ, ಅರಿಯದಲೆ ಬರೆದಿಹರು'
ಮರೆತು ಅನ್ನದಿರಿ, ಮಾಡದಿರಿ ಪಕ್ಷವನು
ಮುರಿಯದಿರಿ ಮೂಗು ಪೂರ್ಣಜ್ಞ.

೨೭೬೯

ಜಾತಿಭೇದವ ಮರೆತು, ನೀತಿಪಥವಿದ್ದವರ
ರೀತಿಯನು ತಿಳಕೊಂಡು ಬರೆದಿರುವೆ ಮನದಿ
ಆತುರದಿ ನೋಡಿ ಪೂರ್ಣಜ್ಞ.

೨೭೭೦

ಭಕ್ತರಿರೆ ಹಿರಿಯರಿರೆ, ಮುಕ್ತಮಾನಸದಿಂದ
ಸೂಕ್ತವೆನಿಸಿದ್ದು ಬರದಿಹೆನು ಇದರಲ್ಲಿ
ಯುಕ್ತಿಯೇನಿಲ್ಲ ಪೂರ್ಣಜ್ಞ.

೨೭೭೧

ಉದ್ದಾನಶಿವಯೋಗಿ, ಸಿದ್ಧಗಂಗೆಯ ಬೆಳಕು
ಬುದ್ಧಿವಂತರಿಗೆ ಶಕ್ತಿಯನು ನೀಡಿರುವ
ಸಿದ್ಧಗಂಗೆ ಜ್ಯೋತಿ ಪೂರ್ಣಜ್ಞ.

೨೭೭೨

ಶಿವರಾತ್ರಿ ಶುಭದಿನದಿ, ಶಿವನಲ್ಲಿ ಬೆರೆತಿರುವ
ಶಿವಯೋಗಿ ಮೂರು ಸಾವಿರದ ಗುರುಸಿದ್ಧ
ಶಿವಮತ ಧುರೀಣ ಪೂರ್ಣಜ್ಞ.

೨೭೭೩

ತೋಂಟದಾ ಸಿದ್ಧಯತಿ, ಕಂಟಕವ ಕಳೆದಿಹನು
ಷಟ್‌ಸ್ಥಲದ ಸಾರವನು ಬರೆದು ಬೆಳಗಿಹನು
ಷಟ್‌ಸ್ಥಲ ಜ್ಯೋತಿ ಪೂರ್ಣಜ್ಞ.

೨೭೭೪

ಶಿವರಾತ್ರಿ ರಾಜೇಂದ್ರ, ಶಿವಶಕ್ತಿಯೋಗೀಂದ್ರ
ಅವಿರತಂ ನೀನು ದುಡಿದಿರುವೆ ಶಿಕ್ಷಣಕೆ
ಅವನಿಯೊಳು ಮೆರೆದೆ ಪೂರ್ಣಜ್ಞ.

೨೭೭೫

ಚಿತ್ರದುರ್ಗದ ಬೃಹನ್ಮಠದ ಪೀಠಾಧಿಪತಿ
ಸ್ತುತ್ಯಜಗಹಿತ ಕಾರ್ಯಶಕ್ತಿ ಜಯದೇವ
ಉತ್ತುಂಗಧ್ಯೇಯ ಪೂರ್ಣಜ್ಞ.

೨೭೭೬

ಸರ್ವಧರ್ಮದ ಬಗ್ಗೆ, ಗೌರವವ ತಳೆದಿದ್ದ
ನಿರ್ಮಲದ ಮನವುಳ್ಳ ಬಸವಲಿಂಗಯತಿ
ಧರ್ಮಚಿನ್ಮೂರ್ತಿ ಪೂರ್ಣಜ್ಞ.

೨೭೭೭

ನವಿಲಗುಂದದ ಶಕ್ತಿ, ನವಿಲಗುಂದದಕೀರ್ತಿ
ಅವನಿಯೊಳು ಬೆಳೆಸಿ, ಬೆಳಗಿಸಿದ ಶಿವಯೋಗಿ
ಗವಿಮಠದ ಮೂರ್ತಿ ಪೂರ್ಣಜ್ಞ.

೨೭೭೮

ಶಿವಾಚಾರ್ಯರಾಗಿ, ಶಿವಶಕ್ತಿಪಡೆದಿಹರು
"ಶಿವ ಗುರುಕುಮಾರನಾಶ್ರಮ"ವ ಸ್ಥಾಪಿಸಿದ
ಸುವಿರಾಗಿ ಯೋಗಿ ಪೂರ್ಣಜ್ಞ.

೨೭೭೯

ಶಿವಯೋಗ ಮಂದಿರದ, ಶಿವತತ್ವ ನಿಷ್ಠೆಯನು
ಶಿವನೊಲಿಯುವಂತೆ ಪರಿಪಾಲಿಸುತ ಬೆಳೆದ
ಶಿವಸದಾಶಿವನು ಪೂರ್ಣಜ್ಞ.

೨೭೮೦

ವಿದ್ಯೆಯಲಿ ಯೋಗದಲಿ, ಬುದ್ಧಿಯಲಿ ತ್ಯಾಗದಲಿ
ಸಿದ್ಧಿಪಡೆದಿದ್ದ ಸಖರಾಯ ಪಟ್ಟಣದ
ಸಿದ್ಧ "ಸದಾಶಿವ" ಪೂರ್ಣಜ್ಞ.

೨೭೮೧

ಗೌರಿಶಂಕರ ಯೋಗಿ, ಗೌರಿಶಿಖರಸಮಾನ
ವೈರಾಗ್ಯ ನಿಮ್ಮದಾಗಿಹುದು ಗವಿಮಠದ
ಸಾರಪಂಡಿತರೆ ಪೂರ್ಣಜ್ಞ.

೨೭೮೨

ಮೈಸೂರಿನರಮನೆಯ, "ಪಂಚಗವಿಮಠ" ದೊಡೆಯ
ಮೈಸೂರು ಪ್ರಾಂತಕ್ಕೆ ಕವಿಯಾಗಿ ಸುಪ್ರ-
ಕಾಶರಾಗಿಹಿರಿ ಪೂರ್ಣಜ್ಞ.

೨೭೮೩

ಸಲ್ಲಲಿತ ಅನುಭಾವಿ [೧]ಮಲ್ಲಿಕಾರ್ಜುನಯೋಗಿ
ಚೆಲ್ವಯೋಗಾಶ್ರಮುವ ಸ್ಥಾಪಿಸಿದಿ ವಿಜಯಪುರ
ದಲ್ಲಿ ಮುದದಿಂದ ಪೂರ್ಣಜ್ಞ.

೨೭೮೪

ಶಿವಧರ್ಮ ಬೆಳಗಿಸಿದ, ಶಿವಾನಂದರ ಶಿಷ್ಯ
ಶಿವಶಕ್ತಿ ಪಡೆದು, ಬೋಧೆಯನು ಮಾಡುತ್ತ
ಶಿವನಲ್ಲಿ ಬೆರೆದೆ ಪೂರ್ಣಜ್ಞ.

೨೭೮೫

ಬಂಧನಾಳದ ಜ್ಯೋತಿ, ಕಂತುಹರ ಪ್ರತಿರೂಪ
ಚಿಂತೆಪರಿಹರಿಸಿ, ಬಿದ್ದವರನೆತ್ತಿರುವೆ
ಮಂತ್ರ ಬಲದಿಂದ ಪೂರ್ಣಜ್ಞ.

೨೭೮೬

ಲಿಂಗನಿಷ್ಠೆಯಬಲದಿ, ಅಂಗಗುಣಗಳನಳಿದ
ಸಂಗಮೇಶ್ವರನ ವರಪುತ್ರಬಸವೇಶ
ಲಿಂಗಗುಣಸಂಗ ಪೂರ್ಣಜ್ಞ.

೨೭೮೭

ಮುರಗೋಡದನುಭಾವಿ, ದುರದುಂಡಿಮಠದೊಡೆಯ
ವರಮಹಾಂತಶಿವಯೋಗಿ ಭಕುತರಪ್ರೇಮಿ
ವಿರತಿಶಿರೋಮಣಿ ಪೂರ್ಣಜ್ಞ.

೨೭೮೮

ಶರಣಬಸವೇಶ್ವರರು,[೨] ಶರಣರವತಾರಿಗಳು
ಶರಣ ಸಂಸ್ಕೃತಿಯನುಳಿಸಿಹರು "ದಾಸೋಹಿ"
ಪರಮಚೇತನರು ಪೂರ್ಣಜ್ಞ.

---

೧. ಮಲ್ಲಿಕಾರ್ಜುನ ಯೋಗಿಗಳು ಗದಗಿನ ಶ್ರೀ ಶಿವಾನಂದರ ಶಿಷ್ಯರು.
೨. ಶರಣಬಸವೇಶ್ವರರು–ಕಲಬುರ್ಗಿಯ ಮೂಲ ಶರಣಬಸವೇಶ್ವರರು.

೨೭೮೯

ವೈರಾಗ್ಯಮಲ್ಲಣ್ಣರು, ಧೀರಶಕ್ತಿಯ ಪಡೆದು
ಮೇರುಗಿರಿಯಂತೆ ಬೆಳೆಯುತ್ತ ಬೆಳೆಸಿಹರು
ಸಾರ ಸಂಸ್ಕೃತಿಯು ಪೂರ್ಣಜ್ಞ.

೨೭೯೦

ಧರೆಗಿಳಿದ ಗಂಧರ್ವ, ವರವಿರತಿ ಮಲ್ಲಯ್ಯ
ಅರುಹು ನೀಡಿದನು ಸರ್ವಮತದೊಡೆಯರಿಗೆ
ಕುರುಹು ತೋರಿದನು ಪೂರ್ಣಜ್ಞ.

೨೭೯೧

"ತನುವ ತೋಟವ ಮಾಡಿ, ಮನವ ಗುದ್ದಲಿ ಮಾಡಿ"
ಸನುಮಾರ್ಗ ತೋರಿರುವ ೧ಘನಮತದ ಯೋಗಿ
ಘನತರವಿರಾಗಿ ಪೂರ್ಣಜ್ಞ.

೨೭೯೨

ಕೃಷಿಜ್ಞಾನ ದೀಪಿಕೆಯು, ಪರಮಪ್ರಕಾಶಿಕೆಯು
ಧರೆಯ ಹದಮಾಡಿ ಬೆಳೆಯನ್ನು ಬೆಳೆಯಿಸುವ
ವರಸೂತ್ರ ಸೂಚಿ ಪೂರ್ಣಜ್ಞ.

೨೭೯೩

ಗರಗ ಮಡಿವಾಳೇಶ, ಪರಮಲೀಲಾ ಪುರುಷ
ವಿರತಿಗುಣಭೂಷ ಶಿವಯೋಗ ಪ್ರಕಾಶ
ವರಭಕ್ತತೋಷ ಪೂರ್ಣಜ್ಞ.

೨೭೯೪

ಶಿವಶರಣೆ ಮಲ್ಲಮ್ಮ, ಶಿವಭಕ್ತಿ ಸಂಪನ್ನೆ
ಭವದಿಂದ ಪಾರಾಗಿ ರೆಡ್ಡಿ ಮನೆತನಕೆ
ಶಿವಕಳೆಯು ತಂದೆ ಪೂರ್ಣಜ್ಞ.

---

೧. ಘನಮಠದ ಯೋಗಿ ಅಂದರೆ–ನಾಗಭೂಷಣಯೋಗಿಗಳು, ಕೃಷಿಜ್ಞಾನ ಪ್ರದೀಪಿಕೆಯ ಕರ್ತರು.

೨೭೯೫
ಕವಿ ಶರೀಫನು ತನ್ನ ಸುವಿಚಾರರಸಭರಿತ
ಕವನಗಳ ಹಾಡಿ, ಹಿಂದು–ಮುಸ್ಲಿಮರಲ್ಲಿ
ನವಮೈತ್ರಿ ಬೆಸೆದ ಪೂರ್ಣಜ್ಞ.

೨೭೯೬
ಒಳಬಳ್ಳಾರಿಯ ತಾತ, ಬೆಳಕು ಬೀರಿದ ವಿರತ
ಮಲಮೂರನಳಿದ ಯತಿಚೆನ್ನಬಸವನವ
ಬಲುಶಾಂತ ಮೂರ್ತಿ ಪೂರ್ಣಜ್ಞ.

೨೭೯೭
ಮಾಯೆ ಮೋಹಾದಿಗಳು, ಹೇಯವೆನ್ನುತ ತ್ಯಜಿಸಿ
ಈ ಯುಗದಿ ಮೆರೆದ ನಾಲತ್ವಾಡ ವೀರೇಶ
ಕಾಯಕವ ಮಾಡಿ ಪೂರ್ಣಜ್ಞ.

೨೭೯೮
ತಪ್ಪದಲೆ ಭಕ್ತರನು ಅಪ್ಪಿಕೊಂಡುದ್ಧರಿಸಿ
ಕೊಪ್ಪಳದ ಗವಿಸ್ವಾಮಿ ಸ್ವಾಮಿ ಸ್ಥಾನಕ್ಕೆ
ಒಪ್ಪಿದ್ದರವರು ಪೂರ್ಣಜ್ಞ.

೨೭೯೯
ಅಂಗಗುಣಗಳನಳಿದ, ಲಿಂಗಪೂಜಾನಿಷ್ಠ
ತುಂಗ ಹಾಲ್ಕೆರೆ ಅನ್ನದಾನಿಸ್ವಾಮಿಗಳು
ಮಂಗಲಾತ್ಮಕರು ಪೂರ್ಣಜ್ಞ.

೨೮೦೦
ಯರ್‍ರಿತಾತರು ತಾವು, ತಿರುತಿರುಗಿ ದೇಶದಲಿ
ಒರಗಿರುವ ಜನರನ್ನು ಎಚ್ಚರಿಸಿ ಮುದದಿ
ಕುರುಹುದೋರಿದರು ಪೂರ್ಣಜ್ಞ.

೨೮೦೧
ಜಡೆಸಿದ್ಧ ಶಿವಯೋಗಿ, ಮೃಡನವತಾರಿಗಳು
ಅಡಿಗಡಿಗೆ ಲೀಲೆ ಮಾಡುತ್ತ ಮೆರೆದಿಹರು
ಸಡಗರದಿ ಜಗದಿ ಪೂರ್ಣಜ್ಞ.

೨೮೦೨

ಹುರಕಡ್ಲಿ ಅಜ್ಜ ಹಗ-ಲಿರುಳು ದೇವಿಯ ಪೂಜೆ
ಸ್ಥಿರಭಕ್ತಿಯಿಂ ಮಾಡಿ ದೇವಿಯನು ಸಾಕ್ಷಾ-
ತ್ಕರಿಸಿಕೊಂಡವನು ಪೂರ್ಣಜ್ಞ.

೨೮೦೩

ನಾಗಲಿಂಗನಲೀಲೆ, ರೋಗಿಗೌಷಧವಂತೆ
ಭೋಗದಲಿ ಮುಳುಗುವರನೆಚ್ಚರಿಸಿ ಸುಖವ
ಬೇಗನೀಡಿದನು ಪೂರ್ಣಜ್ಞ.

೨೮೦೪

ಜಮದಗ್ನಿರುಷಿಪತ್ನಿ, ಎಲ್ಲಮ್ಮ ಮಹತಾಯಿ
ವಿಮಲ ಮಾನಸದಿ ನಂಬಿರುವ ಭಕ್ತರಿಗೆ
ಮಮತೆಯುಳ್ಳವಳು ಪೂರ್ಣಜ್ಞ.

೨೮೦೫

ದಾಸರೆಂದರೆ ದಾಸ, ದೋಷಿರದ ಪುರಂದರು
ದೇಶವನು ಸುತ್ತಿ ಸದ್ಬೋಧೆ ನೀಡಿಹರು
ದಾಸಶ್ರೇಷ್ಠರು ಪೂರ್ಣಜ್ಞ.

೨೮೦೬

ಕನಕದಂತಹ ಮನವು, "ಕನಕದಾಸನ"ದಿಹುದು
ಕನಕರಿಸಿ ಬೇಡುತ್ತ ಹರಿಯನ್ನು ಒಲಿಸಿಹನು
"ಕನಕ" ಶಕ್ತಿಯಿದು ಪೂರ್ಣಜ್ಞ.

೨೮೦೭

ಮೌಢ್ಯ ಜಾಡ್ಯಗಳನ್ನು, ಗಾಢಬಲದಿಂ ದೂರ
ದೂಡಿದ "ಎಳೆಂದೂರು ಬಸವಲಿಂಗರನು
ಹಾಡಿಹೊಗಳುತಿರು ಪೂರ್ಣಜ್ಞ.

೨೮೦೮

"ಕನಕನಾ ಕಿಂಡಿ"ಯದು, "ಉಡುಪಿ"ಯಲಿ ಬಲುಹೆಸರು
"ಕನಕ"ಪೇಳಿದನು ಹರಿಹರರು ಒಂದಿರಲು
ಅನುನಯದಿ ಜನಕೆ ಪೂರ್ಣಜ್ಞ.

೨೮೯

ಸಿದ್ಧಬಸವ ಘನಯತಿ, ಶುದ್ಧಾತ್ಮ "ಜಡೆಯೊಡೆಯ"
ತಿದ್ದಿಹನು ಶಿವಪೂಜೆಬಲದಿಂದ ಜನರ
ಸಿದ್ಧಶಿವಯೋಗಿ ಪೂರ್ಣಜ್ಞ.

೨೮೧೦

"ನಮ್ಮಪ್ಪ ಅಯ್ಯಪ್ಪ", ಎನ್ನುತ್ತ ನೆನೆಯುತ್ತ
ಒಮ್ಮನದಿ "ಶಬರಿಮಲೆ"ಯಲ್ಲಿ ಸಲ್ಲಿಪರು
ತಮ್ಮ ಹರಕೆಯನು ಪೂರ್ಣಜ್ಞ.

೨೮೧೧

ಮೂರುಸಾವಿರಮಠದ ಗೀರ್ವಾಣ ಪಂಡಿತರು
ಸಾರಗುಣ ಮಂಡಿತರು ಗಂಗಾಧರಾಖ್ಯ
ಧೀರ ಗುರುವರರು ಪೂರ್ಣಜ್ಞ.

೨೮೧೨

ವ್ಯಾಕರಣ ಪಂಡಿತರು, ನೂಕಿದರು ಭವವನ್ನು
ಬೇಕು ಬೇಡೆಂಬ ಭವಬೀಜಗಳ ಹುರಿದ
ಲೋಕೇಶರಿವರು ಪೂರ್ಣಜ್ಞ.

೨೮೧೩

ಬಿದರೆಯಾ ಮಠಕಾಗಿ, ಸದಮಲದ ಗುರುವಾಗಿ
ಮುದದಿ ಭಕ್ತರನು ಪೊರೆದಿರುವ "ಸುಕುಮಾರ"
ಮಿದುಮಾತಿನವರು ಪೂರ್ಣಜ್ಞ.

೨೮೧೪

ಕಾಲನಂ ಗೆದ್ದಿರುವ, ಬೀಳೂರು ಮಠದೊಡೆಯ
ಬಾಳಿಂಗೆ ಬೆಳಕಿತ್ತ ವರಬ್ರಹ್ಮಚಾರಿ
ಲೀಲಾಪ್ರಮೋದಿ ಪೂರ್ಣಜ್ಞ.

೨೮೧೫

"ಕಪನಹಳ್ಳಿಯ ಯೋಗಿ", ತಪದಿ ಬೆಳಗಿದ ತ್ಯಾಗಿ
ಉಪಕಾರಗೈದ ಕಾಯಕವನೆಸಗುತ್ತ
ಉಪಮೆಗೆ ಅತೀತ ಪೂರ್ಣಜ್ಞ.

೨೮೧೬

ತಿಪಟೂರಿನಲಿ ಸತತ ತಪಗೈದು ಕಟ್ಟಿಹರು
ಸಫಲ ತರುಭರಿತ ಶ್ರೀಷಡಕ್ಷರ ಹೆಸರ
ವಿಪುಲ ಶಾಂತಿಮಠ ಪೂರ್ಣಜ್ಞ.

೨೮೧೭

ಅಂಬೇಡಕರರಂದು, ಇಂಬಿರದ ದಲಿತರಿಗೆ
ಇಂಬಿತ್ತು ದಲಿತರನು ಎತ್ತಿದರು ಬಾಬಾ
ಬಾಬಾ ನಿಜ ಬಾಬಾ ಪೂರ್ಣಜ್ಞ.

೨೮೧೮

ಅಸ್ಪೃಶ್ಯರುದ್ಧಾರ ನಿಸ್ಪೃಹದಿ ಮಾಡುತ್ತ
ಶಾಶ್ವತದ ಶಕ್ತಿ ಕೊಟ್ಟಿಹನು ದೇಶಕ್ಕೆ
ಲೇಸುಗೈದಿಹನು ಪೂರ್ಣಜ್ಞ.

೨೮೧೯

ಅಂಬೇಡಕರ ರಾಷ್ಟ್ರ, ಸಂವಿಧಾನದ ಶಿಲ್ಪಿ
ಗಂಭೀರ ಸುವಿಚಾರಿ ದೇಶ ಹಿತಕಾರಿ
ತುಂಬಿರುವ ಜ್ಞಾನಿ ಪೂರ್ಣಜ್ಞ.

೨೮೨೦

ಧೀಮತ್ವ ಸುಬೋಧಿ, ಭೂಮಾಭ್ಯುದಯವಾದಿ
ಆ ಮಹಾಬುದ್ಧಪ್ರೇಮಿ ನವಭಾರತದ
ಧೀಮಂತ ಭೀಮ ಪೂರ್ಣಜ್ಞ.

೨೮೨೧

ಅಂಬೇಡಕರ ಜ್ಞಾನ, ತುಂಬಿದಂತಹ ಕುಂಭ
ಇಂಬಿರದ ಜನಕೆ ಬೆಂಬಲದ ಭೀಮನಿವ
ಜೃಂಭಿಸಿದ ಜಗದಿ ಪೂರ್ಣಜ್ಞ.

೨೮೨೨

ಭಾರತದ ರಾಷ್ಟ್ರೀಯು, ಮೇರು ಮೇಧಾವಿಗಳ
ಸಾರ ಮಂಡಳದಿ ರಾಜಿಸಿದ ಧೀಮಣಿಯು
ಭಾರಿ ಭೀಮನಿವ ಪೂರ್ಣಜ್ಞ.

೨೮೨೩

ಯಲ್ಲಾಲಿಂಗರು ತಾವು, ಎಲ್ಲರೊಳು ಒಂದಾಗಿ
ಎಲ್ಲರಿಗೂ ಬೇಕಾಗಿ ಲೀಲೆಗೈದಿರುವ
ಸಲ್ಲಲಿತ ಶರಣ ಪೂರ್ಣಜ್ಞ.

೨೮೨೪

ಮುಗುಳಖೇಡದ ಮಠವು, ಅಗಣಿತದ ಭಕ್ತರಿಗೆ
ಸುಗುಣ ಸಂಸ್ಕೃತಿಯು ಕಲಿಸುತ್ತ ಅನ್ನವನು
ಮಿಗೆ ನೀಡುತಿಹುದು ಪೂರ್ಣಜ್ಞ.

೨೮೨೫

ಶಿವಯೋಗ ಮಂದಿರಕೆ, ನವಶಕ್ತಿ ನೀಡಿಹನು
ಶಿವಭಕ್ತಗಣವ ಉದ್ಧರಿಸಿ ಬೆಳಗಿಹನು
ಶಿವ "ಸದಾಶಿವನು" ಪೂರ್ಣಜ್ಞ.

೨೮೨೬

ಸತ್ಯ ಪಥವನು ತೋರಿ, ನಿತ್ಯ ಜನರುದ್ಧರಿಸಿ
ಕುತ್ತು ಕಳೆದಿರುವ ಮುರುಘಮಠದದೊಡೆಯನೇ
ಮೃತ್ಯುಂಜಯನೆ ಪೂರ್ಣಜ್ಞ.

೨೮೨೭

ಓ! ಮುರುಘಮಠದೊಡೆಯ, ಶ್ರೀಮೃತ್ಯುಂಜಯಯೋಗಿ
ಪ್ರೇಮರಸವುಣಿಸಿ ಭಕ್ತರನು ಪೊರೆದ ನೀ
ಸ್ವಾಮಿಗಳ ಸ್ವಾಮಿ ಪೂರ್ಣಜ್ಞ.

೨೮೨೮

ಜಾತಿಬೇಧವ ತೂರಿ, ನೀತಿ ಪಥವನು ತೋರಿ
ಸಂತ "ಗುರುನಾನಕ"ನು ಜಗವೆಲ್ಲ ಮಿಥ್ಯ
ನಿಂತು ಪೇಳಿಹನು ಪೂರ್ಣಜ್ಞ.

೨೮೨೯

ದೇವನೊಬ್ಬನೆ ಎಂದು, ದೇವನೊಬ್ಬನೆ ಸತ್ಯ
ದೇವನನು ನೆನೆದು ದುಡಿದುಣ್ಣು ಪ್ರತಿನಿತ್ಯ
ಜೀವನದಿ ಸುಖಿಸು ಪೂರ್ಣಜ್ಞ.

೨೮೩೦

ಈ ರೀತಿ ಪೇಳಿದನು, ಭೂರಿ ಸಂತಸದಿಂದ
ಸಾರ ತತ್ವವನು "ಸಂತ ಗುರುನಾನಕನು"
ಧೀರತನದಿಂದ ಪೂರ್ಣಜ್ಞ.

೨೮೩೧

ಭರತ ಭೂಮಿಯ ರತ್ನ, ಕರುನಾಡ ವರಪುತ್ರ
ಪರಮ ತಂತ್ರಜ್ಞ "ಸರ್ ವಿಶ್ವೇಶ್ವರಯ್ಯ"
ಧರೆಗೆ ಪ್ರಖ್ಯಾತ ಪೂರ್ಣಜ್ಞ.

೨೮೩೨

ಸರ್ವಧರ್ಮದ ಬೆಳಕು, ಸರ್ವರಿಗು ಕೊಟ್ಟಿರುವ
ಸರ್ವಪಲ್ಲಿಯ ಸೂರಿ "ಶ್ರೀ ರಾಧಾಕೃಷ್ಣ"
ಸರ್ವಜನ ಮಾನ್ಯ ಪೂರ್ಣಜ್ಞ.

೨೮೩೩

ರಾಷ್ಟ್ರಪತಿ ತಾನಾಗಿ ರಾಷ್ಟ್ರಕ್ಕೆ ಬಲುದುಡಿದು
ರಾಷ್ಟ್ರ ಬೆಳಗಿಸಿದ ಬಾಬು ಶ್ರೀ ರಾಜೇಂದ್ರ
ರಾಷ್ಟ್ರಕ್ಕೆ ರತ್ನ ಪೂರ್ಣಜ್ಞ.

೨೮೩೪

ಚರಲಿಂಗ ಶಿವಯೋಗಿ, ವರನಿರಂಜನ ಮೂರ್ತಿ
ಭರದಿ ಭಕ್ತರನು ಗದ್ದುಗೆಯ ಮಠದಲ್ಲಿ
ನಿರುತ ಪಾಲಿಸಿದಿ ಪೂರ್ಣಜ್ಞ.

೨೮೩೫

ಸಜ್ಜಲಗಿರಿ ಶರಣೆ, ಸಜ್ಜನರು ನಿನ್ನನ್ನು
ಅಜ್ಜಿ ಕಾಪಾಡೆಂದು ಭಜಿಸುತ್ತಲಿಹರು
ಚಿಜ್ಜಲವ ಸುರಿಸು ಪೂರ್ಣಜ್ಞ.

೨೮೩೬

ಶಿವಶರಣೆ ರುದ್ರಮ್ಮ ಸುವಿರಕ್ತಿ ಸಂಪನ್ನೆ
ಸುವಿಚಾರಿ ಸೊನ್ನಲಾಪುರದ ಸನ್ಮಾತೆ
ಶಿವಶಾಂತಿ ನೀಡು ಪೂರ್ಣಜ್ಞ.

೨೮೩೭

ದಾದಾ ಪಾವಟೆಯವರು, ಮೇಧಾವಿಗಳು ನಿಜದಿ
ಸಾಧನೆಯವರದು ಶೈಕ್ಷಣಿಕ ರಂಗದಲಿ
ಮೇದಿನಿಗೆ ಮಾನ್ಯ ಪೂರ್ಣಜ್ಞ.

೨೮೩೮

ಶಿವಲಿಂಗಪ್ಪ ಕಂಠಿ, ಸವೆಯಲಾರದ ನೆನಪು
ಸವೆಯದಂತಹ ಸೇವೆ ಮಾಡಿ ಮಿಂಚಿಹನು
ಆವನು ಕೃತಿವಂತ ಪೂರ್ಣಜ್ಞ.

೨೮೩೯

ಕಂಠಿ ಶಿವಲಿಂಗಪ್ಪ, ಕಂಟಕವ ಕಳೆದಿಹನು
ಕುಂಟ ಕುರುಡರಿಗೆ ದುಡಿದಿಹನು ಕೃತಿಗೈದು
ಬಂಟನೆನಿಸಿಹನು ಪೂರ್ಣಜ್ಞ.

೨೮೪೦

ಹಳ್ಳಿಕೇರಿ ಗುದ್ಲೆಪ್ಪ, ಬಲ್ಲಿದರ ಬಲ್ಲಿದನು
ಒಳ್ಳೊಳ್ಳೆ ಕಾರ್ಯಗೈದಿಹನು ದೇಶಕ್ಕೆ
ಸಲ್ಲಿಸಿಹ ಸೇವೆ ಪೂರ್ಣಜ್ಞ.

೨೮೪೧

'ಸಿದ್ದಪ್ಪ ಕಂಬಳಿಯು', ಶುದ್ಧ ಶಿಕ್ಷಣದ ಪ್ರೇಮಿ
ಶುದ್ಧ ಹಸ್ತದ ಸಚಿವ ಕರುನಾಡ ಧೀರ
ಸದ್ವಿನಯ ಮೂರ್ತಿ ಪೂರ್ಣಜ್ಞ.

೨೮೪೨

ಕಾಶಿ ಹಿಂದೂ ವಿಶ್ವವಿದ್ಯಾಲಯದ ಜನಕ
ಮೀಸಲದ ಮದನ ಮೋಹನ ಮಾಲವೀಯ
ದೇಶ ಹಿತ ಧ್ಯೇಯ ಪೂರ್ಣಜ್ಞ.

೨೮೪೩

ಮದನ ಮೋಹನ ಹೆಸರು, ಅದು ಚರಿತೆಯಲಿ ಹಸಿರು
ಮುದದಿ ಸಂಸ್ಕೃತಕೆ ಶಿಕ್ಷಣಕೆ ದುಡಿದವನ
ಹದವರಿತ ಹಿರಿಯ ಪೂರ್ಣಜ್ಞ.

೨೮೪೪

ಹುನಗುಂದ ಗುರುಬಸವಮಠ, ಮಾಸ್ತರರು ತಾವು
ಅನುದಿನದಿ ದೀನ ದಲಿತ ಜನಹಿತಗೈದ
ಘನವಂತರವರು ಪೂರ್ಣಜ್ಞ.

೨೮೪೫

ಸಿದ್ಧ ಆರೂಢರವರದ್ವೈತ ಕಲ್ಪತರು
ಶುದ್ಧ ಆತ್ಮಜ್ಞಾನವಿತ್ತು ಲೋಕವನು
ಉದ್ಧರಿಸಿದವರು ಪೂರ್ಣಜ್ಞ.

೨೮೪೬

ಧ್ಯಾನಸದ್ಮದಿ ಕುಳಿತು, ಮೌನಿಯಾಗಿಹ ಮೂರ್ತಿ
ಮಾನವರ ಉದ್ಧಾರಿ "ಪರಮಹಂಸನ್" ನೀ
ದೀನ ರಕ್ಷಕನೆ ಪೂರ್ಣಜ್ಞ.

೨೮೪೭

ಶಿವಶಾಂತಿ ಸುರಸಾಬ್ಧಿ ಶಿವಯೋಗ ಗಗನಮಣಿ
ಭುವನ ಬೆಳಗಿದ್ದ ಶ್ರೀ ಮದಘಣಿ ಶಿವಯೋಗಿ
ಸುವಿರಾಗಿ ತ್ಯಾಗಿ ಪೂರ್ಣಜ್ಞ.

೨೮೪೮

ಸಿಂದಗಿಯು ಹಿರಿಮಠದ ಶಾಂತವೀರಾಧ್ಯಕ್ಷ
ವೈದಿಕ ಪಾಠಶಾಲೆಗಳ ಸ್ಥಾಪಿಸುತ
ಅಂದಗೊಳಿಸಿದರು ಪೂರ್ಣಜ್ಞ.

೨೮೪೯

ದೀಕ್ಷೆಯನು ಮಾಡುತ್ತ ಸಂಸ್ಕಾರ ನೀಡುತ್ತ
ರಕ್ಷಿಸುತ ವೈದಿಕರ ಪೂಜೆ ಮಾಡಿಸುತ
ಮೋಕ್ಷ ಪಡೆದಿಹರು ಪೂರ್ಣಜ್ಞ.

೨೮೫೦

ಬಬಲೇಶ್ವರೂರಿನಲಿ, ಶುಭಮೂರ್ತಿಯಾಗಿಹರು
ಅಭಯಹಸ್ತವನು ನೀಡಿಹರು ಶಾಂತಿಗುಣ
ಪ್ರಭುವೆನಿಸಿರುವರು ಪೂರ್ಣಜ್ಞ.

೨೮೫೧

ಗುರುಮಹಾಂತನು ಅಂದು, ಪರಿಪರಿಯಕಷ್ಟದಿಂ
ನಿರುತದುಡಿಯುತ್ತ ಇಳಕಲ್ಲಿನಲಿ ಬೆಳಗಿ
ಮರೆಯಾದ ಭರದಿ ಪೂರ್ಣಜ್ಞ.

೨೮೫೨

೧"ಇಳಕಲ್" 'ಕೊಪ್ಪ'ಕ್ಕೆ, ಬೆಳಕು ಕೊಟ್ಟಿಹ ಯೋಗಿ
ಬಲುವಾಗ್ಮಿಯಾದ ಮಹಾಂತಸ್ವಾಮಿಗಳು
ಛಲವಂತರವರು ಪೂರ್ಣಜ್ಞ.

೨೮೫೩

ನೂರುವರುಷವು ಬಾಳಿ, ಸಾರದಾಸೋಹದಲಿ
ಭಾರಿ ಹೆಸರಾದ "ಸೊನ್ನ" ಶಿವಾನಂದರು
ವೀರವಿರತಿಗಳು ಪೂರ್ಣಜ್ಞ.

೨೮೫೪

ಎರಡುಎತ್ತಿನಮಠದಿ, ಹಿರಿಯೊಡೆಯರಾಗಿಹರು
ಕರಳು ಮಿಡಿಯುವ ಚನ್ನವೀರಸ್ವಾಮಿಗಳು
ಮರೆಯದಂಥವರು ಪೂರ್ಣಜ್ಞ.

೨೮೫೫

ಕಷ್ಟವನು ಸಹಿಸುತ್ತ, ನಿಷ್ಠೆಯಿಂದಲಿ ತಾವು
ಶಿಷ್ಟ ಗುರುಸಿದ್ಧ ಸೇವೆಯನು ಮಾಡಿರುವ
ಸುಷ್ಮುಸನ್ಮೂರ್ತಿ ಪೂರ್ಣಜ್ಞ.

೨೮೫೬

ಹೊಸಮಠದಸ್ವಾಮಿಗಳು, ಶಿವಬಸವರಾಗಿಹರು
ಹೊಸಮಠವ ಬೆಳೆಸಿಹರು ಬಲುದುಡಿದು ಮುದದಿ
ಅಸಮ ಪಂಡಿತರು ಪೂರ್ಣಜ್ಞ.

---

೧ 'ಇಳಕಲ್' ಹಾಗೂ 'ಕೊಪ್ಪ' ಈ ಊರುಗಳ ಮಠದ ಅಧಿಕಾರಿಗಳಾಗಿದ್ದರು.

೨೮೫೭

ಗರಗಮಡಿವಾಳಪ್ಪ, ಅರಹು ನೀಡಿರುವಪ್ಪ
ಜರಿದವರ ನೆತ್ತಿ ಪೊರೆದಿರುವ ಪುಣ್ಯಾತ್ಮ
ಪರಮವಿರಕ್ತನು ಪೂರ್ಣಜ್ಞ.

೨೮೫೮

ಭಾರತಕೆ ದುಡಿಯುತ್ತ, ಭಾರತವ ಬೆಳಗಿಸಿದ
ಭಾರತದ ರತ್ನ 'ಸರದಾರ ವಲ್ಲಭಾಯಿ'
ಧೀರಗಂಭೀರ ಪೂರ್ಣಜ್ಞ.

೨೮೫೯

ಬಸರಿಗಿಡ ವೀರಪ್ಪ, ಅಸಮಶಕ್ತಿಯ ಪಡೆದು
ಎಸಗಿದನು ದಾನಧರ್ಮದಲಿ 'ಗದಗಿನಲಿ'
ಜಸವ ಪಡೆದಿಹನು ಪೂರ್ಣಜ್ಞ.

೨೮೬೦

'ಸುಭಾಸ ಭೋಸನು' ತಾ-ಶುಭವನ್ನು ಕೋರುತ್ತ
ಈ ಭಾರತಕ್ಕೆ ಸ್ವಾತಂತ್ರ್ಯ ನೀಡಿಹನು
ಮಬ್ಬು ಕಳೆದಿಹನು ಪೂರ್ಣಜ್ಞ.

೨೮೬೧

ಗುಬ್ಬಿಯಾ ವೀರಣ್ಣ, ಮಬ್ಬು ಕಳೆಯುತ ಜನರ
ನಿಬ್ಬೆರಗುವಂತೆ ಮಾಡಿದನು ನಾಟಕದಿ
ಸಭ್ಯಸನ್ಮೂರ್ತಿ ಪೂರ್ಣಜ್ಞ.

೨೮೬೨

ಕಲೆಯನ್ನು ಬೆಳೆಸಿದನು, ಕಲೆಯಲ್ಲಿ ಬೆಳಗಿದನು
ಕಲೆಯ ಬಲದಿಂದ ಜನರನ್ನು ಎಚ್ಚರಿಸಿ
ಸಲುಹಿದನು ನಟರ ಪೂರ್ಣಜ್ಞ.

೨೮೬೩

ಶಾಂತಾಶ್ರಮಧಿಪತಿಯು, ಶಾಂತಿಯನು ಪಡೆದಿರುವ
ಸಂತ ಶಿವಪುತ್ರ ಸ್ವಾಮಿಗಳು ಭಕ್ತರಾ-
ಚಿಂತೆ ಕಳೆದಿಹರು ಪೂರ್ಣಜ್ಞ.

೨೮೬೪

ದೊಡ್ಡಪ್ಪ ಅಪ್ಪವರು, ದೊಡ್ಡಗುಣ ಪಡೆದಿಹರು
ದೊಡ್ಡ ಸಂಖ್ಯೆಯಲಿ ಭಕ್ತರನು ಉದ್ಧರಿಸಿ
ಜಾಡ್ಯಕಳೆದಿಹರು ಪೂರ್ಣಜ್ಞ.

೨೮೬೫

ಹಳಕಟ್ಟಿ ಫಕೀರಪ್ಪ, ಬೆಳಕು ಕೊಟ್ಟನು ಜಗಕೆ
ಬೆಲೆಯುಳ್ಳವಚನದೋಲೆಗಳ ಸಂಚಯಿಸಿ
ತಿಳಿವಳಿಕೆ ಬೆಳೆಸಿ ಪೂರ್ಣಜ್ಞ.

೨೮೬೬

ಕರ್ನಾಟಕದ ಗಾಂಧಿ, ಹರ್ಡೇಕರ ಮಂಜಪ್ಪ
ಶರಣ ಸಂಸ್ಕೃತಿಯ ಆಶ್ರಮವ ನಡೆಸಿದನು
ವರಬ್ರಹ್ಮಚಾರಿ ಪೂರ್ಣಜ್ಞ.

೨೮೬೭

ಲಿಂಗರಾಜರದಾನ ಲಿಂಗ ಮೆಚ್ಚುವದಾನ
ತುಂಗದಾನಿಗಳ ಗಗನಕ್ಕೆ ಚಂದ್ರ, ಶಿರ–
ಸಂಗಿ ಲಿಂಗದೊರೆ ಪೂರ್ಣಜ್ಞ.

೨೮೬೮

ಅಪ್ಪಣ್ಣಗೌಡದೊರೆ, ಅಪ್ಪಿದರು ಬಡವರನು
ತಪ್ಪದಲೆ ಕಡೆತನಕ ತೃಪ್ತಿ ನೀಡಿದರು
ಮುಪ್ಪಿನೊಳು ಕೂಡ ಪೂರ್ಣಜ್ಞ.

೨೮೬೯

ಅಕ್ಷರವನೋದದಲೆ, ಶಿಕ್ಷಣದ ಸಂಸ್ಥೆಗಳ
ದಕ್ಷತೆಯ ಬಲದಿ ಕಟ್ಟಿಹರು ಅಪ್ಪಣ್ಣ
ದಕ್ಷತೆಯ ಅಣ್ಣ ಪೂರ್ಣಜ್ಞ.

೨೮೭೦

ಸಂಕೇಶ್ವರದಿದೊಡ್ಡ ಸಕ್ಕರೆಯ ಕಾರ್ಖಾನೆ
ಮುಕ್ಕಣ್ಣ ನೊಲಿವಂತೆ ಸಂಸ್ಥಾಪಿಸಿರುವ
ಪ್ರಖ್ಯಾತರಿವರು ಪೂರ್ಣಜ್ಞ.

೨೫೭೧

ದಿಕ್ಕಿಲ್ಲದಿಹ ಜನಕೆ, ದಿಕ್ಕಾಗಿರುವರಿವರು
ಮಕ್ಕಳೆಲ್ಲರಿಗೆ ಅಪ್ಪ ಅಪ್ಪಣ್ಣವರು
ಕಕ್ಕುಲಾತಿಯವರು ಪೂರ್ಣಜ್ಞ.

೨೮೭೨

ಸ್ವಾತಂತ್ರ್ಯ ಸಂಗ್ರಾಮ ನೇತಾರರಲಿ ಗಣ್ಯ
ಖ್ಯಾತ "ಸಂಯುಕ್ತ ಕರ್ನಾಟಕ" ದ "ರಂಗ–
ನಾಥ ದಿವಾಕರ" ಪೂರ್ಣಜ್ಞ.

೨೮೭೩

ವಿಶ್ವಶಾಂತಿಗೆ ದುಡಿದು, ವಿಶ್ವದಲಿ ಸಂಚರಿಸಿ
ವಿಶ್ವವಿಶ್ರುತರು ಆರ್. ಆರ್. ದಿವಾಕರರು
ದೇಶ ಸೇವಕರು ಪೂರ್ಣಜ್ಞ.

೨೮೭೪

ಶರಣಗಣ ವಚನಗಳ, ಪರಮ ಸಾರವಗ್ರಹಿಸಿ
ಶರಣ ವಚನೋಪನಿಷದೆಂದು ಕರೆದಿಹರು
ವರ ದಿವಾಕರರು ಪೂರ್ಣಜ್ಞ.

೨೮೭೫

ಜಾತಿಭೇದವನಳಿಸಿ, ನೀತಿರೀತಿಯ ಕಲಿಸಿ
ಸಾತಿಶಯದಿಂದ ತಿಳಿಸಿ ಸಂತಕಬೀರ
ಜ್ಯೋತಿಯಾಗಿದ್ದ ಪೂರ್ಣಜ್ಞ.

೨೮೭೬

ಹಿಂದಿ ತಿಳಿ ಭಾಷೆಯಲಿ, ಬಂಧುರದ ಕವನಗಳ
ಸೌಂದರ್ಯ ತುಂಬಿ ಬರೆದ "ಸಂತಕಬೀರ"
ಕುಂದಿಲ್ಲದಂತೆ ಪೂರ್ಣಜ್ಞ.

೨೮೭೭

ಸಿದ್ಧರಾಮನು ವಿಮಲ, ಸದ್ಭಕ್ತಿ ಸುಜ್ಞಾನ
ಸದ್ಬೋಧೆಗೈದು ಜನರನ್ನು ಜಾಗರಿಸಿ
ಉದ್ಧಾರಗೈದ ಪೂರ್ಣಜ್ಞ.

೨೮೭೮

ಬಿಚ್ಚು ಮಾತಿನ ವ್ಯಕ್ತಿ, ಸ್ವಚ್ಛ ನುಡಿ ಬರೆದಿಹನು
ಅಚ್ಚಗನ್ನಡದಿ "ಸರ್ವಜ್ಞ" ಮಹಶಕ್ತಿ
ಮೆಚ್ಚದವರಾರು? ಪೂರ್ಣಾಜ್ಞ.

೨೮೭೯

ಮೂರುಸಾಲುಗಳಲ್ಲಿ ಮೂರು ಲೋಕದ ಜ್ಞಾನ
ಸಾರವನು ತುಂಬಿ ತೂರಿರುವ "ಸರ್ವಜ್ಞ"-
ಗಾರುಸರಿಜಗದಿ ಪೂರ್ಣಾಜ್ಞ.

೨೮೮೦

ಚೊಕ್ಕ ಅಕ್ಕರಿಗರಿಗೆ ತಕ್ಕ ಆಶ್ರಯವಿತ್ತು
ಸಕ್ಕರೆಯು ಕರೆಡೆಪ್ಪ ಶರಣಸಂಪುಟದಿ
ಸೂಕ್ತನಾಗಿಹನು ಪೂರ್ಣಾಜ್ಞ.

೨೮೮೧

ಬಳ್ಳಾರಿ ನಗರದಲಿ, ಒಳ್ಳೆ ಜನರನು ಬೆಳೆಸಿ
ಬಳ್ಳಾರಿರತ್ನ ನೆನೆಸಿದ್ದ ಕರೆಡೆಪ್ಪ
ಬೆಲ್ಲದಂತಿದ್ದ ಪೂರ್ಣಾಜ್ಞ.

೨೮೮೨

ಚಿನ್ನದಂತಹ ಗ್ರಂಥ, ಚೆನ್ನ ಕವಿರಚಿಸಿಹನು
ಚೆನ್ನ ಕನ್ನಡದಿ ಪ್ರತಿಭೆಯಿಂ ಬೆಳಗಿ "ಕವಿ
ರತ್ನ" ನೆನಸಿಹನು ಪೂರ್ಣಾಜ್ಞ.

೨೮೮೩

ಕಾರಣಿಕ ಕರಡೀಶ, ಧಾರುಣಿಗೆ ಹಿರಿಶರಣ
ಮೂರುತತ್ವಗಳ ಅರ್ಥವನು ಕೃತಿಯಲ್ಲಿ
ತೋರಿಸಿದ ಮುದದಿ ಪೂರ್ಣಾಜ್ಞ.

೨೮೮೪

ದ್ಯಾಂಪುರದ ಚೆನ್ನಕವಿ ಸೊಂಪುಳ್ಳ ಕನ್ನಡದಿ
ಪೆಂಪುಳ್ಳ ಪೌರಾಣ ನೀಡಿ ಜನಮನಕೆ
ಇಂಪುಗರೆದಿಹನು ಪೂರ್ಣಾಜ್ಞ.

೨೮೮೫

ಸಿರಿಯಾಳ ಕೊಪ್ಪದಲಿ, ಅರಿವಿನಂಬುಧಿಯಾಗಿ
ಮೆರೆದಿರುವ ಚನ್ನಮಲ್ಲಪ್ಪ ಮಾಸ್ತರರು
ಮರೆಯದಂಥವರು ಪೂರ್ಣಾಜ್ಞ.

೨೮೮೬

ಚಿಕ್ಕೋಡಿ ಪಂಡಿತರು, ಲೆಕ್ಕವೇ ಇರದಷ್ಟು
ದಿಕ್ಕಿಲ್ಲದವರನ್ನು ಎತ್ತಿ ಸಲುಹಿರುವ
ಕಕ್ಕುಲತೆಯವರು ಪೂರ್ಣಾಜ್ಞ.

೨೮೮೭

ಸತ್ಯಾಗ್ರಹದಲ್ಲಿ, ತತ್ವ ನಿಷ್ಠೆಯು ಬಲದಿ
ಕ್ರಾಂತಿಯನು ಮಾಡಿರುವ ವಾಲಿಚನ್ನಪ್ಪ
ಕ್ರಾಂತಿವೀರನಿಜ ಪೂರ್ಣಾಜ್ಞ.

೨೮೮೮

"ಒಡೆಯ" ಹೆಸರಿಗೆ ತಕ್ಕ, ಒಡೆತನದ ಗುಣಪಡೆದ
ಒಡೆಯ ವಿರುಪಾಕ್ಷ ವಿದುಷರಿಗೆ ವರವಿತ್ತ
ಮೃಡರೂಪನೀತ ಪೂರ್ಣಾಜ್ಞ.

೨೮೮೯

ಅನ್ನ ಅರಿವನು ನೀಡಿ, ಬನ್ನವನು ಕಳೆದಿರುವ
ಚೆನ್ನ ಕನಕಪುರ ಮಹಾಲಿಂಗಸ್ವಾಮಿಗಳು
ಚೆನ್ನದಂಥವರು ಪೂರ್ಣಾಜ್ಞ.

೨೮೯೦

ಮಾಳವಾಡರು ನಾಡಿ–ನೇಳಿಗೆಯ ಪಳವಿಗೆಯ
ಮೇಲೆತ್ತಿ ಮೆರೆಸಿದರು ಬಾಳ ಕೊನೆತನಕ–
ತಾಳಿಹರು ಕೀರ್ತಿ ಪೂರ್ಣಾಜ್ಞ.

೨೮೯೧

[1]ಸಂಗಪ್ಪನಾಮದಿಂ, ತುಂಗಶಕ್ತಿಯ ಪಡೆದು
ಭಂಗಬರದಂಥ ಸಾಹಿತ್ಯ ನಿರ್ಮಿಸಿದ
ಮಂಗಲದ ಮೂರ್ತಿ ಪೂರ್ಣಜ್ಞ.

೨೮೯೨

ಶಿವಮೂರ್ತಿಶಾಸ್ತ್ರಿಗಳು, ಶಿವವಾಙ್ಮಯದ ನಿಧಿಯು
ಶಿವಕೀರ್ತನಂಗೈದು ತಣಿಸಿದರು ಜನರ
ನವಶೈಲಿಯಿಂದ ಪೂರ್ಣಜ್ಞ.

೨೮೯೩

ಶರಣ ಸಂದೇಶವನು, ಕರುನಾಡ ತುಂಬೆಲ್ಲ
"ಶರಣ ಸಾಹಿತ್ಯ" ಪತ್ರಿಕೆಯ ಮುಖದಿಂದ
ಪರುಟವಿಸಿರುವರು ಪೂರ್ಣಜ್ಞ.

೨೮೯೪

ನಾಗರಾಳ ದೊಡ್ಡಪ್ಪ, ಯೋಗಿಜನ ಸುಪ್ರೇಮಿ
ನಾಗರಾಳದ ಮನೆಗೆ ತ್ಯಾಗ ಸಂಸ್ಕೃತಿಯ
ಯೋಗ ಕಲಿಸಿದರು ಪೂರ್ಣಜ್ಞ.

೨೮೯೫

ಬಸವನಾಳರು ತಾವು, ಅಸಮಶಕ್ತಿಯ ಪಡೆದು
ಸುಸಮಾಜ ಬೆಳೆಸಿದರು ಕನ್ನಡವನುಳಿಸಿ
ಕಸುವನೀಡಿದರು ಪೂರ್ಣಜ್ಞ.

೨೮೯೬

"ಮೈಸೂರು ಬಸವಯ್ಯ", ದೇಶಬಂಧುವು ನಿಜದಿ
ಆಸರಿಲ್ಲದ ಜನರಿಗಾಸರವ ನಿತ್ತು,
ಲೇಸನೆಸಗಿದರು ಪೂರ್ಣಜ್ಞ.

೧. ಸಂಗಪ್ಪನಾಮದಿಂ ಅಂದರೆ ಸ.ಸ. ಮಾಳವಾಡರು.

೨೮೯೭

ಅರಹು ಮೂಡಿಸಿ ಜನಕೆ, ಕೊರಗುತಪ್ಪಿಸಿದಂಥ
ಅರಟಾಳ ರುದ್ರಗೌಡರದು ಘನಶಕ್ತಿ
ಮೆರೆದಿಹರು ಜಗದಿ ಪೂರ್ಣಜ್ಞ.

೨೮೯೮

ಕೀರ್ತನದ ಕಲೆಯಲ್ಲಿ, ಅತ್ಯಂತ ಬಲ್ಲಿದರು
ಕೀರ್ತಿಕಾಯರು ಬಸವಲಿಂಗ ಶಾಸ್ತ್ರಿಗಳು
ಧಾತ್ರಿಗತಿಶಯರು ಪೂರ್ಣಜ್ಞ.

೨೮೯೯

ಕಣಬರಗಿ ಮಠದಶ್ರೀ, ಶಿವಮೂರ್ತಿಸ್ವಾಮಿಗಳು
ಕನ್ನಡದ ರಂಗಭೂಮಿಯನು ಬೆಳಗಿಸಿದ
ಧನ್ಯಾತ್ಮರವರು ಪೂರ್ಣಜ್ಞ.

೨೯೦೦

ಹರಿಸರ್ವೋತ್ತಮರಾಗಿ, ಹರಕೀರ್ತನಂಗೈದು
ಮೆರೆದಿಹರು ಮೂರುಸಾವಿರಮಹಾಮಠದ
ಕರುಣೆಯನು ಪಡೆದು ಪೂರ್ಣಜ್ಞ.

೨೯೦೧

ಪಗಡದಿನ್ನಿಯ ಬಸವರಾಜ, ಶಾಸ್ತ್ರಿಗಳವರು
ಮಿಗಿಲಾದ ಪಂಡಿತರು ಲಿಂಗಪೂಜೆಯಲಿ
ಸೊಗವ ಪಡೆದವರು ಪೂರ್ಣಜ್ಞ.

೨೯೦೨

ಕಂದಗಲ್ಲಿನ ಪರ್ವ-ತದಶಾಸ್ತ್ರಿಗಳಿಹರೈ
ಅಂದ ಚಂಪುಗಳ ರಚಿಸಿಹರು ಸಂಸ್ಕೃತದಿ
ಬಂಧುರತೆಯಿಂದ ಪೂರ್ಣಜ್ಞ.

೨೯೦೩

ಕಂದಗಲ್ ಶಾಸ್ತ್ರಿಗಳ, ಬಂಧುರದ ಸಂಸ್ಕೃತದ
ಸುಂದರದ "ಸುಭಾಷಿತ ಸುಧಾಝುರಿ"ಯು ನೀಂಟು
ಒಂದುಹನಿಬಿಡದೆ ಪೂರ್ಣಜ್ಞ.

೨೯೦೪

ನಂದಾದೀವಿಗೆಯಂತೆ, ನಂದಿಮಠ ಶಿ. ಚೆಯವರು
ಕುಂದಿರದ ವಿದ್ವತ್ತಿನಲ್ಲಿ ಬೆಳಗಿದರು
ಚೆಂದದಿಂ ಜಗದಿ ಪೂರ್ಣಜ್ಞ.

೨೯೦೫

ಶೈಕ್ಷಣಿಕ ಮಣಿಹಕ್ಕೆ, ದೀಕ್ಷೆಯನು ಪಡೆದವರು
ಶೈಕ್ಷಣಿಕ ಧೀಮಂತ ನಂದಿಮಠರವರು
ದಕ್ಷರೆನಿಸಿದವರು ಪೂರ್ಣಜ್ಞ.

೨೯೦೬

ಹೊಸಮನೆಯ ಸಿದ್ಧಪ್ಪ, ಅಸಮಾನ ಮತಿವಂತ
ಕಸುವಿನಿಂ ಕಾಂಗ್ರೆಸ್ಸು ಬೆಳೆಸಿದನು ಭರದಿ
ರಸಭರಿತ ವಾಗ್ಮಿ ಪೂರ್ಣಜ್ಞ.

೨೯೦೭

ಸಿದ್ಧಪ್ಪನವರಂದು, ಮುಗ್ಧಜನತೆಯಮತಿಯ
ತಿದ್ದಿ ತೀಡಿದರು, ನೈತಿಕಾಚರಣೆಯಲಿ
ಶುದ್ಧಅಪರಂಜಿ ಪೂರ್ಣಜ್ಞ.

೨೯೦೮

ಚನ್ನಪ್ಪ ಹುಲಕೋಟಿ, ಚೆನ್ನದಂತಹ ವ್ಯಕ್ತಿ
ಸನ್ನುತಾದರ್ಶ ಪಡೆದಿದ್ದ, "ಕುಲಪತಿಯು"
ಕನ್ನಡದಶಕ್ತಿ ಪೂರ್ಣಜ್ಞ.

೨೯೦೯

ವಿದ್ಯಾರ್ಥಿವೃಂದದಲಿ, ಎದ್ದುಕಾಣಿಸುವಂಥ
ಬುದ್ಧಿವಂತಿಕೆಯ "ಹುಲಕೋಟಿ" ಬಲುಸುಪ್ರ-
ಸಿದ್ಧನೆನಿಸಿದನು ಪೂರ್ಣಜ್ಞ.

೨೯೧೦

"ಜಗವೆಲ್ಲ ನಗುತಿರಲಿ ಜಗದಳವು ನನಗಿರಲಿ"
ಜಗಕೆ ಸುಖಕೋರಿ ಈ ನುಡಿಯ ಸುರಿಸಿಹನು
ಸುಗುಣಿ "ಸಣಕಲ್ಲ" ಪೂರ್ಣಜ್ಞ.

೨೯೧೧

ಕಡುಕಷ್ಟದೊಳಗಿದ್ದು, ಬಡತನದಿ ಕವನಗಳ
ಮೃಡನೊಲಿಯುವಂತೆ ಬರೆದಿರುವ "ಸಣಕಲ್ಲ"
ನುಡಿಬಲುಗಂಭೀರ ಪೂರ್ಣಜ್ಞ.

೨೯೧೨

ಹರನ ಹೆಸರನು ಪಡೆದು, ವರಕವಿಯು ತಾನಾಗಿ
ಧರೆಯುಮನ ಮಿಡಿವಂತೆ ಬರೆದ ಸಣಕಲ್ಲ
ಹರನಡಿಯ ಪಿಡಿದ ಪೂರ್ಣಜ್ಞ.

೨೯೧೩

ಸದ್ಧರ್ಮ ದೀಪಿಕೆಯು, ಸಿದ್ಧಸಂಪಾದಕರು
ಸದ್ಧರ್ಮಿ ಶಿರಿಯಾಳಕೊಪ್ಪ ಮಾಸ್ತರರು
ಅದ್ಭುತಾದ್ಭುತರು ಪೂರ್ಣಜ್ಞ.

೨೯೧೪

ಆಚಾರತತ್ವಗಳ, ಆಚರಣೆಯಲಿ ತಂದು
"ಮಾಚರಸ" ಮುಂತಾದ ಶರಣ ಸಂಸ್ಕೃತಿಯ
[೧]ಶ್ರೀ ಚೆನ್ನನರಿತ ಪೂರ್ಣಜ್ಞ.

೨೯೧೫

[೨]ಗುಣವಂತ "ಗಣಮುಖಿ"ಯು, ಅಣ್ಣಾರಾವರು ತಾವು
ಕ್ಷಣಬಿಡದೆ ದುಡಿದಿಹರು ಶಿಕ್ಷಣಕೆ ಮುದದಿ
ತನುಮನವ ಸವೆಸಿ ಪೂರ್ಣಜ್ಞ.

೨೯೧೬

ಸಿದ್ಧರಾಮನ ಕುವರಿ, ಶುದ್ಧಮತಿ 'ಜಯದೇವಿ'
ತಿದ್ದಿದಳು ಕರುನಾಡ ಗಡಿಯಲ್ಲಿ ಜನರ
ಆಧ್ಯಾತ್ಮ ಶರಣೆ ಪೂರ್ಣಜ್ಞ.

---

೧. ಶ್ರೀಚೆನ್ನ ಅಂದರೆ ಚೆನ್ನಮಲ್ಲಿಕಾರ್ಜುನಪ್ಪ ಮೇಷ್ಟ್ರು.

೨. ಶಿಕ್ಷಣಮಂತ್ರಿಗಳಾಗಿದ್ದ "ಅಣ್ಣಾರಾವ್ ಗಣಮುಖಿ" ಅವರು.

೨೯೧೭

"ಲಿಗಾಡೆ" ಮನೆತನದ, ಸೊಗಯಿಸುವ ಕವಯಿತ್ರಿ
ಹಗಲಿರುಳು ಬರೆದ ಸಿದ್ಧರಾಮ ಚರಿತ್ರೆ
ಮಿಗಿಲಾದ ಕೃತಿಯು ಪೂರ್ಣಜ್ಞ.

೨೯೧೮

ನ್ಯಾಯತಕ್ಕಡಿ ಹಿಡಿದು, ನ್ಯಾಯವನು ಸರಿತೂಗಿ
ನ್ಯಾಯ ನಿರ್ಣಯಿಪ ಮಳಿಮಠ ಮಹೋದಯರು
ನ್ಯಾಯಸನ್ಮೂರ್ತಿ ಪೂರ್ಣಜ್ಞ.

೨೯೧೯

ಸದ್ದುಗದ್ದಲವಿರದೆ, ಬುದ್ಧಯ್ಯನವರಂದು
ಶುದ್ಧಮನದಿಂದ ಶೋಧಿಸುತ ಸಾಹಿತ್ಯ
ವೃದ್ಧಿಗೊಳಿಸಿದರು ಪೂರ್ಣಜ್ಞ.

೨೯೨೦

ಶ್ರೀಗಿರಿಯ ಒಡೆಯನಂ, ರಾಗದಿಂ ಪೂಜಿಸುತ
ಭೋಗದಿಂ ದೂರಾಗಿ ಕಷ್ಟಗಳ ಸಹಿಸಿ
ತ್ಯಾಗಿ ನೀನಾದೆ ಪೂರ್ಣಜ್ಞ.

೨೯೨೧

ಎಲ್ಲವರು ಮೆಚ್ಚುವೊಲು, ಎಲ್ಲಶಿವಗ್ರಂಥಗಳ
"ಮಲ್ಲಪ್ಪ ವಾರದರು" ಪ್ರಕಟಿಸಿದರಂದು
ಸೊಲ್ಲಾಪುರದಲಿ ಪೂರ್ಣಜ್ಞ.

೨೯೨೨

೧"ಚಿನಿವಾರ ಗಂಗಮ್ಮ" ಘನದಾನಿ ಶ್ರೀಮಂತೆ
ಘನಕನಕ ಮನೆಮಾರು ನೀಡಿಹಳು ಸಾರ್ವ-
ಜನಿಕ ಶಿಕ್ಷಣಕೆ ಪೂರ್ಣಜ್ಞ.

---

೧. "ಚಿನಿವಾರ ಗಂಗಮ್ಮ" ಮುದ್ದೇಬಿಹಾಳ ಶಿಕ್ಷಣ ಸಂಸ್ಥೆಗಳಿಗೆ ಎಲ್ಲವನ್ನು ದಾನಿಮಾಡಿದ ಶಿವಶರಣೆ

೨೯೨೩

ಸಾಖರೆಯು ಜೀವನವು, ಮಾಕ್ಷಿಕ೧ದೊಲತಿ ಮಧುರ
ಶೇಖರಿಸುವಂತಹದು ದಾಖಲೆಯು ಬಹಳ
ತೂಕವುಳ್ಳದ್ದು ಪೂರ್ಣಜ್ಞ.

೨೯೨೪

ಕಟ್ಟಿಹರು "ಕ.ಎಲ್.ಈ.", ಮಿಟ್ಟುಮಿಸಕದೆ ದುಡಿದು
ಕೊಟ್ಟವಚನವನು ಪಾಲಿಸುತ ಬೆಳೆಸಿಹರು
ಶ್ರೇಷ್ಠ ಸಂಸ್ಥೆಯನು ಪೂರ್ಣಜ್ಞ.

೨೯೨೫

ಸಾಖರೆಯ ವಿದ್ವತ್ತು, ಲೋಕಕ್ಕೆ ಮಾದರಿಯು
ಶೈಕ್ಷಣಿಕ ವಾಗ್ಮಿ "ಮಹಾರುದ್ರ" ನಾಮದಿಂ
ಪ್ರಖ್ಯಾತನವನು ಪೂರ್ಣಜ್ಞ.

೨೯೨೬

ವೀರಗುಣಿ ಸರದಾರ, ವೀರಗೌಡರು ತಮ್ಮ
ಭೂರಿಶಕ್ತಿಯನು ಹರಿಜನರ ಹಿತಕಾಗಿ
ಧಾರೆಯೆರೆದಿಹರು ಪೂರ್ಣಜ್ಞ.

೨೯೨೭

ಕೆ.ಎಲ್.ಈ. ಸಂಸ್ಥೆಯನು ನೆಲೆಗೊಳಿಸಿ ಬೆಳೆಸಲ್ಕೆ
ಎಲೆಮರೆಯ ಸುಮದಂಥ 'ಹಂಚಿನಾಳ'ವರು
ಸಲೆಶ್ರಮಿಸಿದವರು ಪೂರ್ಣಜ್ಞ.

೨೯೨೮

ನೆಲದಮಕ್ಕಳನೆಲ್ಲ, ಕುಲದಮಕ್ಕಳು ಎಂದು
ಒಲವಿಂದ "ಹಂಚಿನಾಳರು" ಕಷ್ಟಪಟ್ಟು
ಬೆಳೆಸಿದರು ಮುದದಿ ಪೂರ್ಣಜ್ಞ.

---

೧. ಮಾಕ್ಷಿಕ = ಜೇನುತುಪ್ಪ

೨೯೨೯

ಹುಬ್ಬಳ್ಳಿಯಲಿ ಹುಟ್ಟಿ, ಹುಬ್ಬಳ್ಳಿಯಲಿ ಬೆಳೆದು
ಹುಬ್ಬಳ್ಳಿ ಗುರುಸಿದ್ಧ ಸೇವೆಯನು ಮಾಡಿ
ಸಭ್ಯರೆನಿಸಿದರು ಪೂರ್ಣಜ್ಞ.

೨೯೩೦

'ಅಡಿವೆಪ್ಪಕಿತ್ತೂರು', ಮೃಡಚನ್ನಬಸವನಾ-
ಗುಡಿಯು ಬೆಳೆಸಿದನು ಉಳುವಿಂಗೆ ಕಳೆನೀಡಿ
ದುಡಿದ, ಜನ ಪ್ರೇಮಿ ಪೂರ್ಣಜ್ಞ.

೨೯೩೧

ಪಟ್ಟಣದ ಬಾದಾಮಿ, ಶೆಟ್ಟರವರಾಗಿಹರು
ಕಟ್ಟಿ ಶಿಕ್ಷಣದ ಸಂಸ್ಥೆಗಳ ಬೆಳೆಸಿಹರು
ಗಟ್ಟಿ "ಕಲ್ಲಪ್ಪ" ಪೂರ್ಣಜ್ಞ.

೨೯೩೨

[೧]ಕಟ್ಟಿಹರು ಕೆ.ಎಲ್.ಈ. ಕಟ್ಟೀಮನಿಯವರಿಹರು
ಗುಟ್ಟುಹೊರಬಿಡದೆ ಸಂಸ್ಥೆಯನು ಬೆಳೆಸಿಹರು
ಪಟ್ಟುಹಿಡಿಯುತ್ತ ಪೂರ್ಣಜ್ಞ.

೨೯೩೩

ಮಧುರ ಚೆನ್ನರ ಕಾವ್ಯ, ಮಧುರ ಫಲಗಳ ರಾಶಿ
ಎದೆಯ ಕದವನ್ನು ತೆರೆಯುವದು ಜೀವನಕೆ
ಮುದವ ನೀಡುವದು ಪೂರ್ಣಜ್ಞ.

೨೯೩೪

"ಅರಗಾವಿ ಬಸವಪ್ಪ" ನಿರುತ ದುಡಿಮೆಗೆ ಹೆಸರು
ಕೊರಗಿರುವ ಬಡವರಿಗೆ ಬಂಧುವೆನಿಸಿಹನು
ಸ್ಮರಣೆಯಲ್ಲಿಹನು ಪೂರ್ಣಜ್ಞ.

---

೧. ಕಟ್ಟೀಮನಿ ಅಂದರೆ H. F. ಕಟ್ಟೀಮನಿ ಆದರ್ಶ ಕಾರ್ಯಕರ್ತರಾಗಿದ್ದರು

೨೯೩೫

ಅಸಮಶಕ್ತಿಯು ಪಡೆದ, ಬಸವಪ್ರಭು ಪಂಪಣ್ಣ
ಕೃಷಿಯೋಗಿಯಾಗಿ ಕೊಡುಗೈಯದೊರೆಯಾಗಿ
ಜಸವಗಳಿಸಿಹನು ಪೂರ್ಣಜ್ಞ.

೨೯೩೬

ಮಾಗಿಶಿವಬಸವಪ್ಪ, ಮಾಗಿರುವ ಫಲವುಶಿವ–
ಯೋಗಮಂದಿರಕೆ ಎಡೆಬಿಡದೆ ದುಡಿದಿರುವ
ತ್ಯಾಗಿ ಸದ್ಭಕ್ತ ಪೂರ್ಣಜ್ಞ.

೨೯೩೭

ಶ್ರೀ ರೇವಣಸಿದ್ಧ, ಭಾರಿ ಪಂಡಿತರತ್ನ
ಧೀರಗಂಭೀರ ಯತಿಗಳಿಗೆ ಕಲಿಸಿಹನು
ಸಾರಸಂಸ್ಕೃತವ ಪೂರ್ಣಜ್ಞ.

೨೯೩೮

ಒಕ್ಕಲಿಗ ಮಗನವನು, ಸಕ್ಕರೆಯು ಖಣಿಯುವನು
ಚಿಕ್ಕಮಕ್ಕಳಿಗೆ ಎಂ. ಪಿ. ಪಾಟೀಲ ಮಂತ್ರಿ
ಕಕ್ಕುಲತೆಯುವನು ಪೂರ್ಣಜ್ಞ.

೨೯೩೯

ಸಾರಗುಣ ಮಣಿಹಾರ, ವೀರಶೈವರ ಮಂತ್ರಿ
ಕಾರ್ಯತತ್ಪರರು ಶಿಕ್ಷಣಕೆ ದುಡಿದಿಹರು
ಗೌರವಾನ್ವಿತರು ಪೂರ್ಣಜ್ಞ.

೨೯೪೦

ಹಲವಾರು ನಾಟ್ಯಕೃತಿ, ನಲವೀವ ಪದ ಪದ್ಯ
"ನಲವಡಿಯ ಶ್ರೀಕಂಠ" ಶಾಸ್ತ್ರಿರಚಿಸಿಹರು
ಗೆಲವು ಪಡೆದಿಹರು ಪೂರ್ಣಜ್ಞ.

೨೯೪೧

ಹೂಗಾರ ಕಾಯಕವ, ಸಾಗಿಸುವ ವಂಶಜರು
ತ್ಯಾಗಿ ಮಮುದಾಪೂರದ ಬಸವಂತ ನಾಮಕರು
ಧೀಗುಣಾನ್ವಿತರು ಪೂರ್ಣಜ್ಞ.

೨೯೪೨

ದೀನದಲಿತರ ಪ್ರೇಮಿ, ಮಾನವೀಯತೆಯುಳ್ಳ
ದಾನಗುಣವಂತ "ಬಸವಂತ ಮಾಸ್ತರರು"
ಮಾನಿತಚರಿತರು ಪೂರ್ಣಜ್ಞ.

೨೯೪೩

ಶಿಷ್ಟಜನಬಲದಿಂದ, ನಿಷ್ಠೆಯಿಂದುಡಿದಿಹಿರಿ
ಶ್ರೇಷ್ಠ ಕೆ.ಎಲ್.ಇ,ಯ ಸಂಸ್ಥಾಪನಂಗೈದು
ತುಷ್ಟಿ ಪಡೆದಿಹಿರಿ ಪೂರ್ಣಜ್ಞ.

೨೯೪೪

ಲಲಿತಕಲೆಗಳ ಹಿರಿಮೆ, ಸಲೆಬೆಳೆಸಿ ಬೆಳಗಿರುವ
ಕಲೆಗಾರ ಬಡಿಗೇರ 'ದೇವಪ್ಪ' ಸ್ಥಾಪಿಸಿದ
ಕಲೆಯ ಶಾಲೆಯನು ಪೂರ್ಣಜ್ಞ.

೨೯೪೫

ಸಂಚರಿಸಿ, ಪರದೇಶ, ಉಚ್ಚತರ ಚಿತ್ರಕಲೆ-
ಯಂಚತುರ ಮಿಣಜಗಿಯು ಸಾಧನಂಗೈದು
ಕುಂಚಬ್ರಹ್ಮನಾದ ಪೂರ್ಣಜ್ಞ.

೨೯೪೬

ಗುಣವಂತ ಹಣುಮಂತ, ರಾಯಮೊಹರೆಯವರು
ದಿನರಾತ್ರಿ "ಸಂಯುಕ್ತ ಕರ್ನಾಟಕ"ಕೆ ದುಡಿದ
ಘನತ್ಯಾಗಿವರರು ಪೂರ್ಣಜ್ಞ.

೨೯೪೭

ರಸರುಚಿರ ಶಾಕುಂತಲ, ದಸಿರಿಯ ಸಲೆಹೀರಿ
ಮಿಸುನಿಗನ್ನಡದಲ್ಲಿ ತುಂಬಿ ತಣಿದಿಹರು
ಬಸವಪ್ಪಶಾಸ್ತ್ರಿ ಪೂರ್ಣಜ್ಞ.

೨೯೪೮

ಹಿಂದಿ ಸಾಹಿತ್ಯದಂ-ಬುದ್ಧಿಯಲ್ಲಿ ಜನಿಸಿಹವು
ಹಿಂದೀ 'ನಿರಾಲಾ' ಕವಿಸೂಕ್ತಿ ರತ್ನಗಳು
ಬಂಧುರತೆಯಿದ ಪೂರ್ಣಜ್ಞ.

೨೯೪೯

ನಾಗೇಶಶಾಸ್ತ್ರಿಗಳು, ಆಗಮಂಗಳ ನೋದಿ
ರಾಗದಿಂ ಪೌರಾಣ ಗ್ರಂಥರಚಿಸಿಹರು
ಪ್ರಾಗಲ್ಭ್ಯದಿಂದ ಪೂರ್ಣಜ್ಞ.

೨೯೫೦

ಗುಬ್ಬಿತೋಟದ ಅಪ್ಪ, ಮಬ್ಬುಕಳೆಯುತಜನರ
ಉಬ್ಬಿಬಡವೀರಶೈವರನು ಉದ್ಧರಿಸಿ
ಕಬ್ಬು ಆಗಿದ್ದ ಪೂರ್ಣಜ್ಞ.

೨೯೫೧

ನೀಲಕಂಠ ಗವಾಯಿ, ಶೀಲದಿಂ ಕಲೆಗಳಿಸಿ
ಮೇಲಾದ ಗಾನ ಕಲಿಸಿದರು ಶಿಷ್ಯರಿಗೆ
ಲೀಲೆಯಿಂ ಜಗದಿ ಪೂರ್ಣಜ್ಞ.

೨೯೫೨

೧'ಪುಟ್ಟಣ್ಣಶೆಟ್ಟರು', ಕೊಟ್ಟಿಹರು ದಾನವನು
ಶಿಷ್ಟರನು ಮಠಕೆ ನೀಡುತ್ತ ಬೆಳೆಸಿಹರು
ಸುಷ್ಟು ಶಿವಭಕ್ತ ಪೂರ್ಣಜ್ಞ.

೨೯೫೩

ಕಲೆಯಲ್ಲಿ ಬೆಳಗಿರುವ, ಕಲೆಗೆ ಗುರುವಾಗಿದ್ದು
ಬೆಳೆದಿರುವ ದಂಡಾವತಿ ಮಠರು ಬೆಳೆಸಿದರು
ಕಲೆಯ ನಿಲಯವನು ಪೂರ್ಣಜ್ಞ.

೨೯೫೪

ನವಭಾವಗೀತಗಳ, "ನಕ್ಷತ್ರಗಾನ"ದಿಂ
ಸುವಿಶಾಲ "ಛಂದೋವಿಕಾಸದಿಂ" ಖ್ಯಾತ
ಕವಿಕರ್ಕಿಯವರು ಪೂರ್ಣಜ್ಞ.

---

೧. ಪುಟ್ಟಣ್ಣಶೆಟ್ಟರು=ಬೆಂಗಳೂರಿನ ಪುಟ್ಟಣ್ಣಶೆಟ್ಟರು.

೨೯೫೫

"ಚಿಟ್ಟಿ ಮಾಮಲೆದಾರ", ಕೆಟ್ಟ ಕೇಡಿಗಳನ್ನು
ಮಟ್ಟ ಹಾಕಿದರು[1] ಶ್ರೇಷ್ಠರನು ಎತ್ತಿದರು
ದಿಟ್ಟತನದಿಂದ ಪೂರ್ಣಜ್ಞ.

೨೯೫೬

ನಾಡಗೌಡರು ತಾವು, ನಾಡಿನಲಿ ಬೆಳಗಿಹರು
ನೀಡಿಹರು ಶಿಕ್ಷಣಕೆ ತನುಮನವ ಮುದದಿ
ತೀಡಿಪರು ಜನರ ಪೂರ್ಣಜ್ಞ.

೨೯೫೭

ಅಭ್ಯುದಯ ಶಕ್ತಿಯನು, ಬರ್ಬರತೆ ಕಬಳಿಸಿತು
ಕೊಬ್ಬಿಹಬ್ಬಿಹುದು ಹಿಂಸಾಪ್ರವೃತ್ತಿ ಬಲು
ಬೊಬ್ಬಿರಿಯುತಿಹುದು ಪೂರ್ಣಜ್ಞ.

೨೯೫೮

ರಾಜಕೀಯ ವಿತುಷ್ಟಿ, ರಾಜೀವನಂತ್ಯೇಷ್ಟಿ
ರಾಜಕೀಯ ವಿದೀಗ ತೇಜೋವಿಹೀನ
ಸೋಜಿಗವಿದಲ್ತೆ, ಪೂರ್ಣಜ್ಞ.

೨೯೫೯

[2]ಭಾರತಕೆ ದುಡಿಯುತ್ತ, ಭಾರತಕೆ ಬೆಳಕಿತ್ತ
ಭಾರತವ ಬಿಟ್ಟು ಬಹುದೂರ ಹೋದನವ
ಬಾರನವ ಮರಳಿ ಪೂರ್ಣಜ್ಞ.

೨೯೬೦

ಇಂದಿರಾಗಾಂಧಿಸುತ, ವಂದಿಸುತ ತಾಯಡಿಗೆ
ಮುಂದೆ ಕ್ಷಣದಲ್ಲಿ ರಾಜೀವಗತಜೀವ,
ನೊಂದಿಹುದು ಜಗವು, ಪೂರ್ಣಜ್ಞ.

---

೧. ಮಟ್ಟಹಾಕು—ತಲೆಎತ್ತದಂತೆ ಮಾಡು.
೨. ಮೇ ೨೧ರಂದು ರಾಜೀವಗಾಂಧಿ ಬಾಂಬಿನಿಂದ ದುರ್ಮರಣಕ್ಕೀಡಾದ ದಿನ. ಆ ಸಮಯ-ದಲ್ಲಿ ಬರೆದ ಪದ್ಯ.

೨೯೬೧

ತುಂಬ ತರುಣ ಧುರೀಣ, ಬಾಂಬಿಂಗೆ ಬಲಿಯಾದ,
ಕೊಂಬು ಉದ್ದಾಗಿ ಹಿಂಸೆ ಹಾರಾಡುತಿದೆ
ಸಾಂಬನೀಕಾಯೋ ಪೂರ್ಣಜ್ಞ.

೨೯೬೨

೧ಅತಿಚಿಕ್ಕವಯದಲ್ಲಿ, ಅತಿಶಕ್ತಿ ಪಡೆಯುತ್ತ
ಮತಿವಂತನಾಗಿ ಭಾರತವ ನಾಳಿದನು
ಸತತ ದುಡಿದಿಹನು ಪೂರ್ಣಜ್ಞ.

೨೯೬೩

ಶೀಲಗುಣ ಸಂಪನ್ನ, ಮೇಲಾದ ಶ್ರೀಮಂತ
ನೀಲಿ ರಾಚಪ್ಪ ಜೋಳದಂಬಲಿಯ ಬರ-
ಗಾಲದಲಿ ಕೊಟ್ಟ ಪೂರ್ಣಜ್ಞ.

೨೯೬೪

ಬಸವಪ್ಪಶೆಟ್ಟರಹ-ಹೊಸಮಠದ ಸ್ಥಾಪಕರು
ಹೊಸಹುಬ್ಬಳ್ಳಿಯನು ಕಟ್ಟಿಹರು ನಿಷ್ಠೆಯಲಿ
ಎಸೆದಿಹರು ಅಂದು ಪೂರ್ಣಜ್ಞ.

೨೯೬೫

ಶೀಲಗುಣಸಂಪನ್ನ, "ಲಾಲಬಹಾದ್ದೂರ"ವರು
ಮೂಲಭಾರತದ ಸಂಸ್ಕೃತಿಯ ಬಳಿವಿಡಿದು
ಆಳಿದರು ಮುದದಿ ಪೂರ್ಣಜ್ಞ.

೨೯೬೬

"ಬಸರಿಗಿಡ ವೀರಪ್ಪ" ಅಸಮಶಕ್ತಿಯ ಪಡೆದು
ಎಸಗಿದನು ದಾನ ಧರ್ಮದಲಿ ಗದಗಿನಲಿ
ಜಸವ ಪಡೆದಿಹನು ಪೂರ್ಣಜ್ಞ.

---

೧. ಶ್ರೀ ರಾಜೀವ ಗಾಂಧಿಯವರು

೨೯೬೭

ನೆಲವಗಿ ಮುರಿಗೆಪ್ಪ, ಬಲುದೊಡ್ಡ ಶ್ರೀಮಂತ
ಹಲವು ದೀನಾರ್ತ ಜನರಿಗುಪಕೃತಿಗೈದು
ನಲಿದ ಕರುಣಾಳು ಪೂರ್ಣಜ್ಞ.

೨೯೬೮

ನೋಟಕ್ಕೆ ಬಲುಚಿಕ್ಕ, ಕಾಟೇನಹಳ್ಳಿಯಲಿ
ಊಟ ಬಡಜನಕೆ ನೆಲವಗಿಯವರ ಮನೆಯ
ನೋಟ ದಿನನಿತ್ಯ ಪೂರ್ಣಜ್ಞ.

೨೯೬೯

ಚೆನ್ನಬಸವಪ್ಪಣ್ಣ, ಬೆಂಡಿಗೇರಿಯವರು
ಚೆನ್ನದಂಥವರು ಅಣ್ಣನವರೆಂಬ ಘನ
ಮನ್ನಣೆಯಿವರಿಗೆ ಪೂರ್ಣಜ್ಞ.

೨೯೭೦

ಮಿರಜಿ ಮಹರುದ್ರಪ್ಪ, ಪರಮಪೂಜಾನಿಷ್ಠ
ಅರವತ್ತು ಮೂವರರ ಚರಿತೆ ಬರೆದಿಹರು
ಶರಣ ಪುಂಗವರು ಪೂರ್ಣಜ್ಞ.

೨೯೭೧

"ಉತ್ತಂಗಿ ಚನ್ನಪ್ಪ" ಔತ್ತಮಿಕ ರೀತಿಯಲಿ
ಸ್ತುತ್ಯ "ಸರ್ವಜ್ಞ" ತ್ರಿಪದಿಗಳ ಶೋಧಿಸುತ
ಇತ್ತಿಹನು ಭುವಿಗೆ ಪೂರ್ಣಜ್ಞ.

೨೯೭೨

ನೂರಾರು ಕಥೆಗಳನು, ಸಾರಸಾಹಿತ್ಯವನು
ಮೀರಿ ರಚಿಸಿರುವ ಶ್ರೀ ಮಾಸ್ತಿ ಕನ್ನಡದ–
ಭಾರತದ ಆಸ್ತಿ ಪೂರ್ಣಜ್ಞ.

೨೯೭೩

ದೂರದೃಷ್ಟಿಯ "ಟಿ. ಎ. ಪೈ" ಸಾರವಿತ್ತಜ್ಞಾನಿ
ಧೀರತನದಿಂದ ಬೆಳೆಸಿದನು ಬ್ಯಾಂಕುಗಳ
ಭೂರಿ ಸಂಪದವ ಪೂರ್ಣಜ್ಞ.

೨೯೦೪

ಬಸವ ಮಂಟಪ ಕಟ್ಟಿ, ಬಸವತತ್ವವ ತಿಳುಹಿ
ಮಿಸುಪ ಸಾದರದಹಳ್ಳಿಯ ಮಲ್ಲೇಶಪ್ಪ
ಜಸವಪಡೆದಿಹನು ಪೂರ್ಣಾಜ್ಞ.

೨೯೦೫

ಪುಣ್ಯ ಪುರುಷರ ಚರಿತೆ, ಯನ್ನು ಸಂಕ್ಷೇಪಿಸುತ
ಸಣ್ಣ ಮೂರೇ ಮೂರು ಸಾಲಿನಲಿ ಬರೆದು
ಬಣ್ಣಿಸಿದೆ ನಾನು ಪೂರ್ಣಾಜ್ಞ.

೨೯೦೬

ತ್ಯಾಗಕ್ಕೆ ಹೆಸರಾದ, ಮೂಗಪ್ಪ ಸವದತ್ತಿ
ಯೋಗಿ ಹಾನ್ಗಲ್ಲ ಸುಕುಮಾರನ ಕೃಪಾನು–
ರಾಗಕ್ಕೆ ಪಾತ್ರ ಪೂರ್ಣಾಜ್ಞ.

## ಕ್ರಿಯಾಶೀಲರು

೨೯೦೭

'ಶಿವಕುಮಾರರು' ತಾವು ಶಿವಶಕ್ತಿ ಪಡೆದಿಹರು
ಅವನಿಯೊಳು ನೂರಾರು ಶಾಲೆಗಳ ಕಟ್ಟಿಹರು
ನವಶಕ್ತಿ ನೀಡಿ ಪೂರ್ಣಾಜ್ಞ.

೨೯೦೮

ಸಿರಿಗೆರೆಯ ಬೆಳಕಾಗಿ, ಹರತತ್ವ ಬೆಳೆಸುತ್ತ
ಅರಿವು ನೀಡಿಹರು ಜನಕೆಲ್ಲ ಹರುಷದಿಂ
ವರಶಕ್ತಿ ನೀಡಿ ಪೂರ್ಣಾಜ್ಞ.

೨೯೦೯

ಸಿದ್ಧಗಂಗೆಯ ಮೂರ್ತಿ, ಸಿದ್ಧಗಂಗೆಯ ಜ್ಯೋತಿ
ಸಿದ್ಧ 'ಸುಕುಮಾರ' ಬೆಳೆಸಿಹನು ನಾಡಿನಲಿ
ಶುದ್ಧ ಸಂಸ್ಕೃತಿಯ ಪೂರ್ಣಾಜ್ಞ.

೨೯೮೦

ನೂರು ವರುಷವ ಬಾಳಿ ನೂರೊಂದು ನೆಲೆಯರಿತ
ಸಾರನಾಗನೂರಿನಾಸ್ವಾಮಿಗಳಿಹರು
ಕಾರ್ಯತತ್ಪರರು ಪೂರ್ಣಜ್ಞ.

೨೯೮೧

ಚಿತ್ರದುರ್ಗಮಠದ, ಚಿತ್ಪ್ರಕಾಶದಯೋಗಿ
ಚಿತ್ತ ಭಿತ್ತಿಯಲಿ ಸುಜ್ಞಾನ ಚಿತ್ರಿಸಿದ
ಉತ್ತುಂಗಶಕ್ತಿ ಪೂರ್ಣಜ್ಞ.

೨೯೮೨

ತರಳಬಾಳಿನ ಮಠವು, ಹಿರಿಯ ಬಾಳಿನ ದಿಟವು
ಸಿರಿಗೆರೆಯ ಮಠದಿ ಬಸವಾದಿಗಳ ಬಾಳ
ಸಿರಿಯು ಬೆರೆತಿಹುದು ಪೂರ್ಣಜ್ಞ.

೨೯೮೩

ಸುತ್ತೆಲ್ಲ ತುಂಬಿಹವು, "ಸುತ್ತೂರು ಸಂಸ್ಥೆಗಳು"
ಕತ್ತಲೆಯ ಕಳೆದು ಶಿಕ್ಷಣದ ರಂಗದಲಿ
ಸ್ತುತ್ಯವಾಗಿಹವು ಪೂರ್ಣಜ್ಞ.

೨೯೮೪

ಧಾರವಾಡದೊಳಿಹುದು, ಚಾರು ಮುರುಘಾಮಠವು
ಮೂರುಪಥ ದಾಸೋಹ ಸಿದ್ಧರಿಹರಿಲ್ಲಿ
ಆರನಳಿದವರು ಪೂರ್ಣಜ್ಞ.

೨೯೮೫

ಆದಿಚುಂಚನಗಿರಿಯು, ಮೋದಾಮೃತದಝರಿಯು
ಬೋಧಿಸುವಕಲೆಯ ಶಿಕ್ಷಣ ಸಂಸ್ಥೆಗಳ
ಸ್ವಾದವನು ನೋಡು ಪೂರ್ಣಜ್ಞ.

೨೯೮೬

ಬಳಸಿಹರು ಬೆಟ್ಟವನು, ಒಳಿತಿಂಗೆ ಸಾಹಸದಿ
ಹೊಳೆವ ಮಂದಾರ ಪುಷ್ಪಗಳ ನವಿಲುಗಳ
ನಲವೀವ ಗಿರಿಯು ಪೂರ್ಣಜ್ಞ.

೨೯೮೭

ಆದಿಚುಂಚನಗಿರಿಯು, ಸಾಧುಸಿದ್ಧರ ಸಿರಿಯು
ವೇದಾದಿಶಾಸ್ತ್ರ ಆಧುನಿಕ ವಿದ್ಯೆಗಳ
ಬೋಧನೆಯ ಪುರಿಯು ಪೂರ್ಣಜ್ಞ.

೨೯೮೮

ಯತಿವರೇಣ್ಯರತಪದ, ಅತಿಶಯದ ಸಿದ್ಧಿರಸ
ಪ್ರತಿಯೊಬ್ಬ ಛಾತ್ರಗಿಲ್ಲಿ ಲಭಿಸುತಲಿಹುದು
ಹಿತವೀಯುತಿಹುದು ಪೂರ್ಣಜ್ಞ.

೨೯೮೯

ವೈದ್ಯವಿದ್ಯಾ ಶಾಲೆ, ಉದ್ಯೋಗಗಳ ಶಾಲೆ
ಸದ್ಧರ್ಮಶಾಲೆ ಹೃದ್ಯಸುಕಲಾ ಶಾಲೆ
ವಿದ್ಯಾರ್ಥಿಲೀಲೆ ಪೂರ್ಣಜ್ಞ.

೨೯೯೦

ಚುಂಚನಗಿರೀಂದ್ರದಲಿ, ಮಿಂಚೊಂದು ತುಂಬಿಹುದು
ಮುಂಚಾಚಿ ಮಕ್ಕಳನು ತಬ್ಬಿಕೊಳುತಿಹುದು
ಇಂಚರದಿ ನುಡಿದು ಪೂರ್ಣಜ್ಞ.

೨೯೯೧

ವೈದಿಕವ ಕಲಿಸುವರು ವೈದ್ಯಕವ ಕಲಿಸುವರು
ಮೋದದಿಂದಿಲ್ಲಿ ವಿಧವಿಧದ ವಿದ್ಯೆಗಳ
ಬೋಧಿಸುವರಿಲ್ಲಿ ಪೂರ್ಣಜ್ಞ.

೨೯೯೨

ಏರು ಚುಂಚನಗಿರಿಯ, ಮೀರಿದಾನಂದವಿದೆ
ಚಾರು ಗಂಗಾಧರ ಮಹಾಲಿಂಗ ದರ್ಶನದಿ
ಸಾರಸುಖಪಡೆವೆ ಪೂರ್ಣಜ್ಞ.

೨೯೯೩

ಬಾಲಗಂಗಾಧರರು, ಮೂಲಮಠವನು ಬೆಳೆಸಿ
ಬಾಲಕರ ಸಲಹುತ್ತ ಸಂಸ್ಕೃತಿಯನುಣಿಸಿ
ಲೀಲೆಗೈದಿಹರು ಪೂರ್ಣಜ್ಞ.

೯೯೪

ಬೆಂಗಳೂರಿನೊಳಿರುವ ಜಂಗಮರ ಮಠದಲ್ಲಿ
ತುಂಗಸಂಸ್ಕೃತಿಯು ಸೌರಭದ ಸೊಗಸುಂಟು
ಲಿಂಗಾರ್ಪಿತಕ್ಕೆ ಪೂರ್ಣಜ್ಞ.

೯೯೫

ಹೃದಯವಂತಿಕೆ ಎಲ್ಲಿ, ಇದೆ ನಿನಗೆ ಗೊತ್ತುಂಟೆ?
ಪುದಿದಿಹುದು ನೋಡು ನಿಜಗುಣರ ಜಂಗಮರ
ಸದುವಿಮಲ ಮಠದಿ ಪೂರ್ಣಜ್ಞ.

೯೯೬

ಮಾಯೆ ಮುಸುಕಿರದಂಥ, ಕಾಯಕದನೈಷ್ಠಿಕರ
ಕಾಯಕಷ್ಟದಲಿ ಕಟ್ಟಿಹರು ಶ್ರೀಮಠವ
ಧ್ಯೇಯನಿಶ್ಚಲರು ಪೂರ್ಣಜ್ಞ.

೯೯೭

ಅತಿಥಿಸತ್ಕಾರಕ್ಕೆ, ಪ್ರಥಮಬೆಲೆ ಈ ಮಠದಿ
ನುತಿವೆತ್ತ ಜಂಗಮದ ಶುಭಶಕ್ತಿ
ಕೃತಿಗೈವುದಿಲ್ಲಿ ಪೂರ್ಣಜ್ಞ.

೯೯೮

ನಿಜಗುಣರ ಸವಿಬದುಕು, ನಿಜತತ್ವಗಳ ಸರಕು
ನಿಜಗುಣನಿವಾಸ ಆಧ್ಯಾತ್ಮ ಸಾಧನೆಗೆ
ನಿಜಶಾಂತಿಧಾಮ ಪೂರ್ಣಜ್ಞ.

೯೯೯

ಬೆಂಗಳೂರಿನ ಪರಮ ಜಂಗಮರ ಮಠದಲ್ಲಿ
ಲಿಂಗ ತಾತ್ವಿಕದ ಚಿಂತನವು ನಡೆಯುವದು
ಸಂಗ ಮೆಚ್ಚುವೊಲು ಪೂರ್ಣಜ್ಞ.

೧೦೦೦

ಸದ್ದುಗದ್ದಲವಿರದೆ, ಸಿದ್ಧಾಂತದರ್ಶನವ
ಶುದ್ಧ ಮನದಿಂದ ಕೊಡುತಿಹರು ಜಂಗಮರ
ಸಿದ್ಧ ಮಠದಲ್ಲಿ ಪೂರ್ಣಜ್ಞ.

೩೦೦೧
ನವಕಾಂತಿ ನವರೀತಿ, ನವಸ್ಫೂರ್ತಿ ನವಸೂಕ್ತಿ
ನವಸುಕಲ್ಯಾಣ ಮತದ ಸುಕುಮಾರಯುತಿ
ನವಶಕ್ತಿ ಜಗಕೆ ಪೂರ್ಣಜ್ಞ.

೩೦೦೨
ಗಡ್ಡ ಬಿಟ್ಟಿಹರಿವರು, ಮಡ್ಡು ಕಳೆದಿಹರಿವರು
ಅಡ್ಡ ದಾರಿಯನು ಹಿಡಿದವರ ಮನತಿದ್ದಿ
ಎಡ್ಡ೧ಗೊಳಿಸಿಹರು ಪೂರ್ಣಜ್ಞ.

೩೦೦೩
ಗಾಢಚಿಂತನೆಗೈದು, ಗೂಢ ತತ್ವವ ತಿಳಿಸಿ
ನೀಡಿಹರು ಲೋಕಕ್ಕೆ ಆತ್ಮ ತತ್ವವನು
ಮೂಡಿಸುತ ಜನಕೆ ಪೂರ್ಣಜ್ಞ.

೩೦೦೪
ಅಪರಿಮಿತ ತಪಗೈದು, ವಿಪುಲಶಕ್ತಿಯ
ತಪದ ನಂದನದ ಋಷಿವರ್ಯರೆನಿಸಿಹರು
ಉಪಕೃತಿಯ ಮಾಡಿ ಪೂರ್ಣಜ್ಞ.

೩೦೦೫
ಶಿವಪೂಜೆ ಮಾಡುತ್ತ, ಶಿವಶಕ್ತಿ ಪಡೆದಿಹರು
ಶಿವಲಿಂಗ ಯೋಗಿ ಹಾವೇರಿ ಪುರದವರು
ಶಿವಭಕ್ತಪ್ರಿಯರು ಪೂರ್ಣಜ್ಞ.

೩೦೦೬
ಶ್ರೇಷ್ಠ ಹೊತ್ತಿಗೆ ಬರೆದು, ಪ್ರಟ್ಟರಾಜಗವಾಯಿ ತಾವು
ಶಿಷ್ಟ ಸಂಸ್ಕೃತಿಯ ಉಳಿಸಿಹರು ಲಿಂಗದಲಿ.
ನಿಷ್ಠೆ ಬೆಳೆಸಿಹರು ಪೂರ್ಣಜ್ಞ.

---

೧. ಎಡ್ಡ=ಸುಂದರ, ಒಳಿತು.

೩೦೦೭

ಬಡತನದಿ ಮುಳುಗಿರುವ, ಕಡು ಕುರುಡರಿಗೆ ಗಾನ
ಸಡಗರದಿ ವಾದ್ಯ ವಿದ್ಯೆಯನು ನೀಡಿಹರು
ಮೃಡ ಮೆಚ್ಚುವಂತೆ ಪೂರ್ಣಾಜ್ಞ.

೩೦೦೮

ಪೇಜಾವರದ-ಮಾರು ಉಡುಪೀಯ ಮಠದೊಡೆಯ
ರೋಜೆಯಿಂ ಹಿಂದುಜನ ಸಂಘಟನೆಗೈದು
ತೇಜ ನೀಡಿಹರು! ಪೂರ್ಣಾಜ್ಞ.

೩೦೦೯

ಅಚ್ಚಗನ್ನಡಸಿರಿಗೆ, ಉಚ್ಚ ಸಂಸ್ಕೃತಿ ಬೆರೆಸಿ
ಅಚ್ಚಳಿಯದುಳಿವ ಗ್ರಂಥ ರಚಿಸಿದ ಜ.ಚ.ನಿ.
ಅಚ್ಚರಿಯ ಸೂರಿ ಪೂರ್ಣಾಜ್ಞ.

೩೦೧೦

ಸಿದ್ಧಲಿಂಗರು ಸೇವೆ, ಶುದ್ಧ ಮನದೊಳು ಮಾಡಿ
ಬದ್ಧರಿಗೆ ಶಿಕ್ಷಣ ಸಂಸ್ಕೃತಿ ನೀಡುತ್ತ
ತಿದ್ದಿಹರು ಜನರ ಪೂರ್ಣಾಜ್ಞ.

೩೦೧೧

ಉದ್ವವಾಗ್ಮಿತ್ವದಿಂ, ಮುಗ್ಧಗೊಳಿಪರು ಸಭೆಯ
ಸಿದ್ಧಲಿಂಗರು ಯುವಶಕ್ತಿ ಪಡೆದು ಕೃಷಿಕಾರ್ಯ
ಸಿದ್ಧಿ ಪಡೆದಿಹರು ಪೂರ್ಣಾಜ್ಞ.

೩೦೧೨

ನಿಡಸೋಸಿ ಮಠದವರು, ದುಡಿಮೆಯಲಿ ಬಲುಹಿರಿದು
ಮೃಡಶಕ್ತಿ ಪಡೆದಿರುವ ಭಕ್ತಪ್ರಿಯರು
ಸಡಗರದೊಳಿಹರು ಪೂರ್ಣಾಜ್ಞ.

೩೦೧೩

ಮೃಡಗಿರಿಯ ಮಠದವರು, ಮೃಡತತ್ವ ಬರೆದಿಹರು
ಅಡಿಗಡಿಗೆ ಶಿವನ ನೆನೆಯುತ್ತ ಕಳೆದಿಹರು
ಜಡತನವ ಜನರ ಪೂರ್ಣಾಜ್ಞ.

೩೦೧೪

ಮಹಾಂತ ಶ್ರೀಗಳು ತಾವ್, ಮಹದ ಜೋಳಿಗೆ ಪಿಡಿದು
ಬಹುಜನರ ಕೆಟ್ಟ ಚಟಗಳನು ಬಿಡಿಸಿಹರು
ಮಹಿಮೆ ಬೀರಿಹರು ಪೂರ್ಣಜ್ಞ.

೩೦೧೫

ಶರಣ ಸಂಸ್ಕೃತಿಗಾಗಿ ಶರಣ ಬಸವಪ್ಪಗಳು
ನಿರುತ ದುಡಿಯುತ್ತ ಶಿಕ್ಷಣದ ಹಿರಿಬಳ್ಳಿ–
ಗೆರೆಯುವರು ಜಲವ ಪೂರ್ಣಜ್ಞ.

೩೦೧೬

ಗದ್ದುಗೆಯ ಮಠದವರು, ಶುದ್ಧ ಸಂಸ್ಕೃತಿ ಬೀರಿ
ಸದ್ಭಾವ ಗೋಷ್ಠಿ ಮಾಡಿಸುತ ಜನರನ್ನು
ಉದ್ಧರಿಸುತಲಿಹರು ಪೂರ್ಣಜ್ಞ.

೩೦೧೭

ನೂರುವರುಷದಿ ಬಾಳಿ, ಸಾರಬಸವನ ತತ್ವ
ಬೀರಿಹರು ಭಾಲ್ಕಿ ಚನ್ನಬಸವರು ಇವರೆ
ಧೀರ ಧರ್ಮಿಗಳು ಪೂರ್ಣಜ್ಞ.

೩೦೧೮

ಹಿರಿಯ ಮಠದ ತೆಲಸಂಗ, ಪರಮ ಪಟ್ಟಾಧ್ಯಕ್ಷ
ಸುರುಚಿರ ಪುರಾಣ ಪ್ರವಚನದಿ ದಕ್ಷ
ಸರಸಕವಿ ಪಕ್ಷ ಪೂರ್ಣಜ್ಞ.

೩೦೧೯

ಹಳ್ಳಿಹಳ್ಳಿಗಳಲ್ಲಿ, ಸುಳ್ಳು ಸೊಗಡನು ಅಳಿಸಿ
ನಿಲ್ಲದಲೆ ದುಡಿದು ಭಾತಂಬ್ರಾಶ್ರೀಗಳು
ಬೆಲ್ಲದಂತಿಹರು ಪೂರ್ಣಜ್ಞ.

೩೦೨೦

ಹಾಲಕೆರೆ ಮಠದವರು, ಸೋಲಿರದೆ ದುಡಿಯುತ್ತ
ಭಾಳಲೋಚನನ ಸಂಸ್ಕೃತಿಯ ನುಳಿಸಿಹರು
ಲೀಲೆಗೈಯ್ಯುತ್ತ ಪೂರ್ಣಜ್ಞ.

೩೦೨೧

ಅಥಣಿಶೆಟ್ಟರ ಮಠದ, ಮತಿವಂತ ಶಂಕರರು
ಜಿತ್‌ಕಾಮ ಯೋಗಿಗಳ ಚರಿತೆ ಪ್ರವಚಿಸುತ
ಮತವ ಬೆಳೆಸುವರು ಪೂರ್ಣಜ್ಞ.

೩೦೨೨

ಲೇಖನದಿ ಭಾಷಣದಿ, ಪ್ರಖ್ಯಾತ ಪಂಡಿತರು
ವ್ಯಾಕರಣ ತೀರ್ಥ ಚಂದ್ರಶೇಖರಶಾಸ್ತ್ರಿ
ಲೋಕಕ್ಕೆ ಪ್ರಿಯರು ಪೂರ್ಣಜ್ಞ.

೩೦೨೩

ಚಿಂಚಣಿಯ ಸಿದ್ಧಪ್ರಭು, ಮಿಂಚುವರು ಕೃಷಿಯಲ್ಲಿ
ಚಾಂಚಲ್ಯರಹಿತ ಲೌಕಿಕಾತ್ಮಕ ಫಲದ
ಗೊಂಚಲಾಗಿಹರು ಪೂರ್ಣಜ್ಞ.

೩೦೨೪

ಕಷ್ಟವನು ಸಹಿಸುತ್ತ, ನಿಷ್ಠೆಯಲಿ ದುಡಿಯುವರು
ಶ್ರೇಷ್ಠ ಚಿಂಚಣಿಯ ಸ್ವಾಮಿಗಳು ಸೇವೆಯಲಿ
ಶಿಷ್ಟರೆನಿಸಿಹರು ಪೂರ್ಣಜ್ಞ.

೩೦೨೫

ನಿಜಗುಣರ ತತ್ವವನು, ಸುಜನರಿಗೆ ತಿಳಿಸುತ್ತ
ಭಜಕರಿಗೆ ಪ್ರಿಯರಾದ ರುದ್ರಾಕ್ಷಿ ಮಠದವರು
ನಿಜವನರಿತವರು ಪೂರ್ಣಜ್ಞ.

೩೦೨೬

ಮೂರುಸಾವಿರಮಠದ ಶಾಖೆ "ಬಯಲು ಹೊಂಗಲ"ದಿ
ಭಾರಿ ಬೆಳೆದಿಹುದು "ಗಂಗಾಧರ" ಶ್ರಮದಿಂ
ತೋರುವದು ಬೆಳಕು ಪೂರ್ಣಜ್ಞ.

೩೦೨೭

ಮಾತೆ ಮಹಾದೇವಿಯರು, ಮಾತಿನಲಿ ಬಲು ಬೆಳಗಿ
ನೀತಿ ಮಾರ್ಗವನು ಜನಕೆ ತೋರಿಹರು
ಭೀತಿಯನು ಕಳೆದು ಪೂರ್ಣಜ್ಞ.

೩೦೨೮

ಕಾನನದಿ ನಿಷ್ಠೆಯಲಿ, ಜ್ಞಾನವನು ಬೆಳೆಸಿರುವ
ಆನಂದಪುರದ ಮಠದೊಡೆಯರಿಂದು ತವೆ
ಜ್ಞಾನ ಗಳಿಸಿಹರು ಪೂರ್ಣಜ್ಞ.

೩೦೨೯

ದುಧುನಿಮಠ ಋುಷಿ ಸ್ವಾಮಿ, ಉದಯಕಾಲದೊಳೆದ್ದು
ಮುದದಿ ಶಿವಪೂಜೆ ಮಾಡುತ್ತ ಭಕ್ತರನು
ಉದ್ಧರಿಸುತಿಹರು ಪೂರ್ಣಜ್ಞ.

೩೦೩೦

ಸಲ್ಲಲಿತ ಶ್ರೀಶೈಲ, ಮಲ್ಲಿಕಾರ್ಜುನನ ಮನ
ವೆಲ್ಲ ತುಂಬುವೊಲು ಪಾಡುವನು ಮನಸೂರ
೧ಮಲ್ಲಿಕಾರ್ಜುನನು ಪೂರ್ಣಜ್ಞ.

೩೦೩೧

ಗಂಗಾವತೀಮಠದ, ತುಂಗ ಶ್ರೀಗಳು ತಾವು
ಸಂಗನೊಲಿವಂತೆ ದುಡಿದುಡಿದು ಕಟ್ಟಿಹರು
ಸಂಘ ಸಂಸ್ಥೆಗಳ ಪೂರ್ಣಜ್ಞ.

೩೦೩೨

ಛಲವಂತ ಹಠವಾದಿ, ಕೆಳದಿ ಶ್ರೀಗಳು ತಾವು
ಬಲುದೊಡ್ಡ ಪಂಡಿತರು ಬರೆದಿಹರು ಗ್ರಂಥ
ಕೆಲವು ನಿಷ್ಠೆಯಲಿ ಪೂರ್ಣಜ್ಞ.

೩೦೩೩

ಜಡೆಮಠದಸ್ವಾಮಿಗಳು, ಮೃಡ ಪೂಜೆ ಮಾಡುತ್ತ
ಬಡಭಕ್ತರನ್ನು ಸಲುಹುತ್ತ ಸಂಸ್ಕಾರ–
ಕೊಡುತಿಹರು ನೋಡು ಪೂರ್ಣಜ್ಞ.

೩೦೩೪

ಮೂಡಿಮಠ ಸ್ವಾಮಿಗಳು, ತೀಡಿಹರು ಜನಮನವ
ಕಾಡುಗುಣ ಕಳೆದು ಜನಕೆಲ್ಲ ತಿಳಿಸಿಹರು
ಗಾಢತತ್ವಗಳ ಪೂರ್ಣಜ್ಞ.

---

೧. ಡಾ. ಮನಸೂರ ಮಲ್ಲಿಕಾರ್ಜುನ ಗವಾಯಿಗಳು

೩೦೩೫

ಗೊಗ್ಗಿಹಳ್ಳಿಯ ಯೋಗಿ, ಮುಗ್ಗರಿಸುತಿಹ ಜನರ
ಕಗ್ಗತನ ಪರಿಹರಿಸಿ, ಶಿವದೀಕ್ಷೆಯಿತ್ತು
ಹಿಗ್ಗುತ್ತಲಿಹರು ಪೂರ್ಣಜ್ಞ.

೩೦೩೬

ಶಿರಶಿ ಬಣ್ಣದ ಮಠದ, ಗುರುಸಿದ್ಧ ಯತಿವರರು
ಮರವೆ ಕಳೆದಿಹರು ಕಾಯಕವ ಮಾಡುತ್ತ
ಹರನೊಲುಮೆ ಪಡೆದು ಪೂರ್ಣಜ್ಞ.

೩೦೩೭

ನಿಜಗುಣರ ಷಟ್‌ಶಾಸ್ತ್ರ, ನಿಜದರ್ಥ ತಿಳಿದಿರುವ
ನಿಜಗುಣದ ನಿಲಯ ಸ್ಥಾಪಿಸಿಹ ಕೃತಿವೀರ
ನಿಜ, ಪಿ, ಬಸವಣ್ಣ ಪೂರ್ಣಜ್ಞ.

೩೦೩೮

"ಅಪ್ಪಣ್ಣ ದಾರಿಯನು, ಒಪ್ಪಿ ಮುನ್ನಡೆದಿಹರು
ತುಪ್ಪಂತಿರುವ[೧] ಬಸವಗೌಡರು ಥೇಟ
'ಅಪ್ಪ'ನಂತಿಹರು ಪೂರ್ಣಜ್ಞ.

೩೦೩೯

ಶಿಷ್ಟನಿಲವಿನ ವ್ಯಕ್ತಿ, ಸ್ಪಷ್ಟ ಹೃದಯದ ಶಕ್ತಿ
ಕಷ್ಟಪಡುವವರ ಉದ್ಧಾರಿ ಬಸಗೌಡ
ಎಷ್ಟು ಬಣ್ಣಿಸಲಿ? ಪೂರ್ಣಜ್ಞ.

೩೦೪೦

ಸಹಕಾರ ಬಂಧುಗಳ, ಸಹಕಾರ ಬಲದಿಂದ
ಸಹಕರಿಸಿ ದುಡಿದು ಸೇವೆಯನು ಮಾಡುತಿಹ
ಸಹಕಾರ ಮೂರ್ತಿ ಪೂರ್ಣಜ್ಞ.

೩೦೪೧

ಕಿರಿಯ ಪ್ರಾಯದಿ ಶ್ರಮಿಸಿ, ಪರಮಶಕ್ತಿಯ ಪಡೆದು
ಅರುಹು ಹರಹಿದರು ಹಾನಗಲ್ಲ ಕುಮಾರ
ವಿರತಮಠದೊಡೆಯ ಪೂರ್ಣಜ್ಞ.

---

೧. ಸಂಕೇಶ್ವ ಫ್ಯಾಕ್ಟರಿಯ ಚೇರಮನ್ನರಾದ ಬಸವನಗೌಡರು

೩೦೪೨

ಸತ್ಯವನು ತೋರುತಿಹ, 'ಸತ್ಯ ಸಾಯಿಯು' ತಾನು
ನಿತ್ಯ ಭಕ್ತರಿಗೆ ಸುಖಶಾಂತಿ ನೀಡುತ್ತ
ಸ್ತುತ್ಯನಾಗಿಹನು ಪೂರ್ಣಜ್ಞ.

೩೦೪೩

೧ಸಿದ್ಧೇಶ್ವರರಿಂದು, ಬದ್ಧಭವಭಾರಿಗಳ
ತಿದ್ದುತ್ತಲಿಹರು ಪ್ರವಚನವ ಮಾಡುತ್ತ
ಶುದ್ಧ ಮನದಿಂದ ಪೂರ್ಣಜ್ಞ.

೩೦೪೪

ವೀರಶೈವ ಸಿದ್ಧಾಂತ, ಕ್ಷೀರಾಂಬುನಿಧಿ ಚಂದ್ರ
ಸೂರಿವರ ನಾಗಭೂಷಣ ಧೀರಶಾಸ್ತ್ರೀ
ಸಾರಶಾಸ್ತ್ರಜ್ಞ ಪೂರ್ಣಜ್ಞ.

೩೦೪೫

"ಮೋದಿ" ಮೋದವ ನೀಡಿ, ಮೇದಿನಿಯು ಬಡಜನಕೆ
ಆದರದಿ ಕಣ್ಣು ಕೊಟ್ಟಿಹರು ಮನುಕುಲದ
ಆ ಧನ್ವಂತರಿಯು ಪೂರ್ಣಜ್ಞ.

೩೦೪೬

ಸಿದ್ಧಹಸ್ತದ ಶಸ್ತ್ರವೈದ್ಯ ಆರ್. ಬಿ. ಪಾಟೀಲ
ಶ್ರದ್ಧೆಯಿಂ ದೀನರೋಗಿಗಳನುದ್ಧರಿಸಿ
ಪದ್ಮಶ್ರೀ ಪಡೆದ ಪೂರ್ಣಜ್ಞ.

೩೦೪೭

ಬಡರೋಗಿಗಳು ಬರಲು, ಕಡುಕರುಣೆಯಿಂ ನೋಡಿ
ತಡವ ಮಾಡದಲೆ ಉಚಿತೋಪಚಾರಗಳ
ಬಿಡದೆ ನೀಡುವರು ಪೂರ್ಣಜ್ಞ.

೩೦೪೮

ಹುಕ್ಕೇರಿಮಠ ನೋಡು, ಒಕ್ಕಟ್ಟು ಭಕ್ತರಲಿ
ಎಕ್ಕರಿಸದಂಥ ನಿಷ್ಕಪಟ ಭಕ್ತಿರಸ
ಉಕ್ಕುತಿಹುದಿಲ್ಲಿ ಪೂರ್ಣಜ್ಞ.

---

೧. ಸಿದ್ಧೇಶ್ವರರು, ಲಿಂ. ವಿಜಾಪುರದ ಮಲ್ಲಿಕಾರ್ಜುನ ಸ್ವಾಮಿಗಳ ಶಿಷ್ಯರು

೩೦೪೯

ಗಾನರಸವನೆ ಉಂಡು, ಗಾನವೇ ತಾನಾಗಿ
ಗಾನರಸವನ್ನೇ ಜೀವಿಸುವ ರಾಜಗುರು[೧]
ಗಾನಸುರಮಣಿಯು ಪೂರ್ಣಜ್ಞ.

೩೦೫೦

ಗಂಗೂಬಾಯಿಯು[೨] ಗಾನ, ಬೃಂಗ ಕಂಠದ ಗಾನ
ದಂಗು ಬಡಿಸುವದು ಶ್ರೋತೃ ವೃಂದಕ್ಕೆಲ್ಲ
ಗುಂಗು ಹಿಡಿಸುವದು ಪೂರ್ಣಜ್ಞ.

೩೦೫೧

ಬಸವಸಮಿತಿಯು ರಚಿಸಿ, ಬಸವತತ್ವವ ತಿಳಿಸಿ
ಬಸವಪ್ಪ ಜತ್ತಿ ಉಪರಾಷ್ಟ್ರಪತಿಯಾಗಿ
ಮಿಸುನಿಯಾಗಿಹನು ! ಪೂರ್ಣಜ್ಞ.

೩೦೫೨

ನಿಜದ ನೆಲೆ ತಿಳಿದಿರುವ, ನಿಜಲಿಂಗ ಯಜಮಾನ
ಸುಜನ ಸಂಕುಲಕೆ ನಿಜಮಾರ್ಗ ತೋರುತಿಹ
ಸುಜನ ಸುಪ್ರೇಮಿ ಪೂರ್ಣಜ್ಞ.

೩೦೫೩

ರಾಷ್ಟ್ರಕ್ಕೆ ದುಡಿದಿಹನು, ರಾಷ್ಟ್ರಾಭಿಮಾನವನು
ರಾಷ್ಟ್ರದಾ ಜನಕೆ ಬೋಧಿಸುತಲಿಹನು ನಿಜ
ರಾಷ್ಟ್ರನಾಯಕನು ಪೂರ್ಣಜ್ಞ.

೩೦೫೪

ದೀನರಿಗೆ ಬೆಳಕಾಗಿ, ನ್ಯೂನತೆಯ ಕಳೆಯುತ್ತ
ದಾನವನು ಮಾಡಿ 'ಆರ್‌ಶೆಟ್ಟಿ' ಬೆಳೆದಿಹರು
ದೀನಬಂಧುಗಳು ಪೂರ್ಣಜ್ಞ.

---

೧. ಬಸವರಾಜ ರಾಜಗುರು
೨. ಗಂಗೂಬಾಯಿ ಹಾನಗಲ್ಲ

೩೦೫೫

ಕಾಯಕದ ಮಹತಿಯನು, 'ಆರ್‌ಶೆಟ್ಟಿ' ತಿಳಿದಿಹರು
ಕಾಯಕದ ಧನವನ್ನು ಸತ್ಪಾತ್ರಕಿತ್ತು
ಧ್ಯೇಯ ಸಾಧಿಸಿಹರು ಪೂರ್ಣಜ್ಞ.

೩೦೫೬

ಶಿಕ್ಷಣದ ಸಂಸ್ಥೆಗಳ, ದಕ್ಷತೆಯಿಂ ನಡೆಸುತ್ತ
ರಕ್ಷಣೆಯನು ಮಾಡಿ ಬೆಳೆಸಿಹರು ವೀರಚಂದ್
ಶ್ರೀ ಕಾನಜಿಹರು ಪೂರ್ಣಜ್ಞ.

೩೦೫೭

ಶಾಂಡಿಲ್ಯಾಶ್ರಮದಾ–ಚಂದ್ರಶೇಖರರಿಂದು
ಅಂದ ತತ್ವಗಳನರಹುತ್ತ ಬೆಳಗಿಹರು
ಬಂಧನವ ತೊರೆದು ಪೂರ್ಣಜ್ಞ.

೩೦೫೮

ಶಿವಭಕ್ತಿ ಸಂಪನ್ನೆ, ಅಸುಂಡೀ ನೀಲಮ್ಮ
ಶಿವತತ್ವ ತಿಳಿಸಿ ನಾಡಿನಲಿ ಬೆಳಗಿಹಳು
ಶಿವಶರಣೆಯಾಗಿ ಪೂರ್ಣಜ್ಞ.

೩೦೫೯

ಬಾಳಪ್ಪ ಹುಕ್ಕೇರಿ, ಜಾನಪದ ಭೂಷಣನು
ತಾಳಹಾಕುತ್ತ ಹಾಡುತ್ತ ನಗಿಸುವನು
ಬಾಳನಲಿ ಬೆಳಗಿ ಪೂರ್ಣಜ್ಞ.

## ಬಿಡಿವಚನಗಳು

### ಓಲೆಮಠ[೧]

೩೦೬೦

ಹನ್ನೆರಡನೆಯ ಶತಕ, ದುನ್ನತಿಯ ಕುರುಹಾದ
ಚೆನ್ನೋಲೆ ಗರಿಯ ಚಿನ್ನಿಧಿಯ ಓಲೆಮಠ
ಬಣ್ಣಿಸೈ ಕವಿಯೆ ಪೂರ್ಣಜ್ಞ.

೩೦೬೧

ಚೆನ್ನಬಸವೇಶ್ವರನು, ಪುಣ್ಯ ಉಳವಿಗೆ ತೆರಳ್ವ
ಮುನ್ನ ಈ ಮಠದಿ ನಿಕ್ಷೇಪಣಂಗೈದ
ಚೆನ್ನೋಲೆಗಳನು ಪೂರ್ಣಜ್ಞ.

೩೦೬೨

ಬಸವಾದಿ ಶಿವಶರಣ, ಹೊಸೆದು ಪೇಳಿದ ವಚನ
ದಸಮು ತಾಡೋಲೆ ಸಂರಕ್ಷಿಸಿದರಿಲ್ಲಿ
ಕುಶಲ ಮಾಳ್ಕೆಯಲಿ ಪೂರ್ಣಜ್ಞ.

೩೦೬೩

ಸಾಲುಕಂಭಕಮಾನು ಮೇಲೆ ಕೆತ್ತನೆಯ ಕಲ
ಲಾಲಿತ್ಯದಿಂ ಮೆರೆದ ಹಳೆಯ ಓಲೆಯ ಮಠವು
ತೇಲುತಿಹ ಮನದಿ ಪೂರ್ಣಜ್ಞ.

---

೧ ಹುಬ್ಬಳ್ಳಿಯ ಓಲೆಮಠ ಬಮ್ಮಾಪುರ ಓಣಿಯಲ್ಲಿ ಪ್ರಾಚೀನ ಕಾಲದಿಂದಲೂ (ಅಂದರೆ ಹನ್ನೆರಡನೇ ಶತಮಾನದಿಂದಲೂ ಕಟ್ಟಿಗೆಯ ಕೆತ್ತನೆಯಿಂದ ಬಲುಶೋಭಾಯ ಮಾನ ವಾಗಿತ್ತು. ಅದು ಬಿದ್ದುಹೋಗಿದ್ದರಿಂದ ಅಲ್ಲಿ ಈಗ ೬ ಅಂತಸ್ತಿನಲ್ಲಿ ಸುಂದರ ಕಲ್ಯಾಣ ಮಂಟಪ ಹಾಗೂ ಮೇಲಿನಂತಸ್ತಿನಲ್ಲಿ ಉಳುವಿ ಚನ್ನಬಸವೇಶ್ವರ ಹೆಸರಿನಲ್ಲಿ ವಿಶ್ವ ವೀರ-ಶೈವ ಸಂಶೋಧನೆ ಸಂಸ್ಥೆಯ ಕಟ್ಟಡ ಭರದಿಂದ ಸಾಗಿದೆ. ಜಗತ್ತಿನ ಎಲ್ಲ ಭಾಷೆಗಳಲ್ಲಿ ಪ್ರಕಟವಾದ ಎಲ್ಲ ವೀರಶೈವ ಗ್ರಂಥಗಳನ್ನು ಒಂದೆಡೆಯಲ್ಲಿಟ್ಟು ಸಂಶೋಧಕರಿಗೆ ಅನುಕೂಲ ಮಾಡುವ ಕಾರ್ಯವು ನಡೆದಿದೆ. ಮೊದಲು ಈ ಓಲೆಮಠವು ಹುಬ್ಬಳ್ಳಿ ಮೂರುಸಾವಿರ ಮಠದಂತೆ ಕಲಾಪೂರ್ಣವಾಗಿತ್ತು. ಆದರ ಕೆಲ ಭಾಗಗಳನ್ನು ಶ್ರೀಮಠದ ಮ್ಯೂಜಿಯಂ ದಲ್ಲಿ ಇಡಲಾಗಿದೆ. ಇದು ಮೂರುಸಾವಿರ ಮಠದ ಶಾಖಾಮಠ.

೩೦೬೪

ಚೀಲಗಟ್ಟಲೆ ಒಟ್ಟಿದೋಲೆಗರಿ ಗ್ರಂಥಗಳ
ಲೀಲೆಯಿಂ ರಕ್ಷಿಸಿದ ಶರಣರ ನಿವಾಸ
ಓಲೆಮಠ ನಿಜದಿ ಪೂರ್ಣಜ್ಞ.

೩೦೬೫

ಹಳೆಯಮಠ ಮುಪ್ಪಡಿಸಿ, ಬಲು ಜೀರ್ಣವಾಗಿಹುದು
ತಳಸೋಸಿ ಹೊಸದು ಕಟ್ಟಿಸುವ ಸಲಹೆಗಳ
ಗೆಲವಾಗಲಿಹುದು ಪೂರ್ಣಜ್ಞ.

೩೦೬೬

ಹಳೆಯ ಸತ್ವದ ಬಲದಿಕೆಲಸಗಳು ಸಾಗಿಹವು
ತಲೆಯೆತ್ತಲಿಹುದು "ಓಲೆಮಠ" ಭರದಿಂದ
ಚೆಲುವು ಮಂಟಪವು ಪೂರ್ಣಜ್ಞ.

೩೦೬೭

ಕಸುವು ಹಳೆಯುದನುಂಡು, ಹೊಸ ಶಿಲ್ಪದಲಿ ಬೆಳೆದ
ಹಸನಾದ ವಸತಿಯುಳ್ಳಂಥ ಕಟ್ಟಡವು
ನಸುನಗುತಬಹುದು ಪೂರ್ಣಜ್ಞ.

## ಮೂರುಸಾವಿರಮಠ

೩೦೬೮

ಮೂರುಸಾವಿರಮಠವು ಭೂರಿಶಕ್ತಿಯ ವಟವು
ಮೂರು ಕಾಲಂಗಳಲಿ ಸಾವಿಲ್ಲವಿದಕೆ
ಸಾರುವೆನು ಜಗಕೆ ಪೂರ್ಣಜ್ಞ.

## ಅನ್ನ

೩೦೬೯

ಅನ್ನವಿಲ್ಲದ ಹೊಟ್ಟೆ, ಬಣ್ಣನೆಗೆ ತಣಿಯುವದೆ?
ಕಣ್ಣೀರು ಕುಡಿದು ಅರೆಜೀವವಾದರಿಗೆ
ಗನ್ನವೆ ಅಮೃತ ಪೂರ್ಣಜ್ಞ.

೩೦೭೦

ಅನ್ನವಿದ್ದರೆ ಪ್ರಾಣ, ಅನ್ನವಿದ್ದರೆ ತ್ರಾಣ
ಅನ್ನವಿರದಿರೆ ಚೆನ್ನದಂತಹ ದೇಹ
ಮಣ್ಣು ಮುಸಿಯಕ್ಕು ಪೂರ್ಣಜ್ಞ.

೩೦೭೧

ಅನ್ನಪಾನಾದಿಗಳು ಚೆನ್ನದಂತಹ ಕಾಂತಿ
ಯನ್ನು ಕಾಯಕ್ಕೆ ತಂದುಕೊಡುವವು ಜಗದಿ
ಅನ್ನವೇ ದೇವ ಪೂರ್ಣಜ್ಞ.

**ಬಸವ ತತ್ವಾನುಯಾಯಿಗಳು**

೩೦೭೨

ಬಸವಾನುಯಾಯಿತ್ವ—ದಸಮಕೀರ್ತಿಯ ಬಯಸಿ
ಬಸವಭಕ್ತರನೆ ನಿಂದಿಪುದು ನೈಜದಲಿ
ಬಸವದ್ರೋಹವದು ಪೂರ್ಣಜ್ಞ.

೩೦೭೩

ಅಂದಂದು ಗಳಿಸಿರುವ, ಕುಂದಿರದ ಧನವನ್ನು
ಬೆಂದಜನಕಿತ್ತರದು ನಿಜ ಬಸವ ತತ್ವ
ಇಂದೆಂತುಸಾಧ್ಯ? ಪೂರ್ಣಜ್ಞ.

೩೦೭೪

ವಸುಧೆಯೊಳು ಹದವರಿತು, ಬಸವ ತತ್ವವ ಬೀರಿ
ವಿಷಮತೆಯ ಕಳೆದ ದುರಹಂತೆಯನು ತೊರೆದ
ಕುಶಲರಿಹರೆಲ್ಲಿ? ಪೂರ್ಣಜ್ಞ.

೩೦೭೫

ಬಸವತತ್ವಂಗಳನು, ಒಸೆದರಿತುಕೊಳ್ಳದಲೆ
ಹೆಸರಿಂಗೆ ಹಪಹಪಿಸಿ ಗೋಷ್ಠಿಗಳನ್ನು ನಡೆಸಿ
ಹಸಗೆಡಿಪರಯ್ಯ ಪೂರ್ಣಜ್ಞ.

೩೦೭೬

ಬಸವೇಶ ತತ್ವವನು, ಉಸುರುವದು ಬಲು ಸುಲಭ
ಬಸವಣ್ಣನಂತೆ ನಡೆಯುವದು ಕಡುಕಷ್ಟ
ನಿಸದವೀ ನುಡಿಯು ಪೂರ್ಣಜ್ಞ.

## ಮೌನ

೩೦೭೭

ಮೌನದಿಂದಲೆ ಜಪವು, ಮೌನದಿಂದಲೆ ತಪವು
ಮೌನದಲಿ [1]ವಿಷಯ ಚಿಂತನೆಯು ಚಿಗುರಿದರೆ
ಮೌನಕ್ಕೆ ಹಾನಿ ಪೂರ್ಣಜ್ಞ.

೩೦೭೮

ಮೌನವದು ಮಾನಸದ, ಧ್ಯಾನ ಧಾಮವುದಿಟದಿ
ಹೀನ ವಿಷಯದ ಧೂಳು ಒಳಗಾಡದಿರಲಿ
ಮೌನ ಫಲಿಸಲ್ಕೆ ಪೂರ್ಣಜ್ಞ.

೩೦೭೯

ಮೌನದಿಂದಲಿ ಶಾಂತಿ, ಮೌನದಿಂದಲೆದಾಂತಿ
ಮೌನವದು ಸಾಧನವು ಆತ್ಮ ಶುದ್ಧತೆಗೆ
ಮೌನವ್ರತಿಯಾಗು ಪೂರ್ಣಜ್ಞ.

೩೦೮೦

ಮೌನದೇಗುಲದಲ್ಲಿ, ಜ್ಞಾನತಪವಾಚರಿಸು
ಮಾನವನ ಬಾಳ್ಬಟ್ಟೆಗದು ತೋರುದೀಪ
ಮೌನವುಜ್ಞಾನ ಪೂರ್ಣಜ್ಞ.

೩೦೮೧

ಮೌನದಲಿ ಮನ ಜಯಿಸು, ಮೌನದಲಿ ಶುಭ ಬಯಸು
ಮೌನದಲಿ ಮನವು ಹೀನದೊಡನಾಡಿದರೆ
ಹಾನಿಕಾಣಯ್ಯ ಪೂರ್ಣಜ್ಞ.

---

೧. ವಿಷಯ ಅಂದರೆ=ಕಾಮಾದಿ ವಿಷಯಗಳು

೩೦೮೨

ಮೌನ ಪಾತ್ರೆಯ ಬೆಳಗಿ, ಧ್ಯಾನವರ್ತಿಯನಿರಿಸಿ
ಜ್ಞಾನ ತೈಲವನೆರೆದು ಜ್ಯೋತಿಸಾತ್ಮವನು
ಆನಂದಯೋಗಿ ಪೂರ್ಣಜ್ಞ.

೩೦೮೩

ಮೌನದಲಿ ಮಂಥನವು, ಮೌನದಲಿ ಚಿಂತನವು
ಮೌನದಲಿ ಚಿತ್ತ ಕೇಂದ್ರೀಕರಣಗೊಂಡು
ಧ್ಯಾನ ಸುಖಪ್ರಾಪ್ತಿ ಪೂರ್ಣಜ್ಞ.

## ಪ್ರಣಯ

೩೦೮೪

ಪ್ರಣಯದಿಂದಲೆ ಕಾಮ, ಪ್ರಣಯದಿಂದಲೆ ಕ್ರೋಧ
ಪ್ರಣಯದೊಡಲಿನಲಿ ಮದಮತ್ಸರಗಳುಂಟು
ಪ್ರಣಯ ದುರ್ಬೀಜ ಪೂರ್ಣಜ್ಞ.

೩೦೮೫

ಪ್ರಣಯದಲಿ ಸಾಮ್ರಾಜ್ಯ, ಪ್ರಣಯದಲಿ ಮತಮಾನ್ಯ
ಪ್ರಣಯ ಕುಂಡದಲಿ ಬಿದ್ದು ಹಾಳಾಗಿಹವು
ಪ್ರಣಯ ಪ್ರಳಯಾಗ್ನಿ ಪೂರ್ಣಜ್ಞ.

೩೦೮೬

ಪ್ರಣಯ ಮೋಹವ ಬೀರಿ, ತನುವಿನಲಿ ಮದತೂರಿ
ಧನವನ್ನು ಹೀರಿ ಮನವ ಥಕಥೈಯೆಂದು
ಕುಣಿಸುತಿಹುದಕಟ ಪೂರ್ಣಜ್ಞ.

೩೦೮೭

ಪ್ರಣಯ ಪುರೀಷದಲಿ, ಮನವ ಮುಳುಗಿಸಬೇಡ
ಮನುಜ ಕುಲವೆಲ್ಲ ಬೆಂದು ಕರಕಾಗಿಹುದು
ಪ್ರಣಯಾಗ್ನಿಯಲಿ, ಪೂರ್ಣಜ್ಞ.

೩೦೮೮

ಪ್ರಣವಗಾನವನೊದ್ದು, ಪ್ರಣಯಗಾಸದಿ ಬಿದ್ದು
ಘನಮೌನ ಧ್ಯಾನ ಮಹಿಮೆಯನು ಮರೆತು ಮುನಿ
ಪ್ರಣಯಿಯಾಗಿಹನು ಪೂರ್ಣಜ್ಞ.

**ಬಡತನ**

೩೦೮೯

ಕೊಡುಬಡವಗನ್ನವನು, ಕೊಡಬೇಡವನ್ನೆನಾ
ಕೊಡುವದೆಷ್ಟು ದಿನ? ದುಡಿಯಲ್ಕೆ ಕಲಿಸುವದೆ
ಬಡವನುದ್ಧಾರ ಪೂರ್ಣಜ್ಞ.

೩೦೯೦

ದುಡಿಯುದಲೆ ಬೇಡಿದರೆ, ಕಡುಧನವು ದೊರೆಯುವದೆ?
ನುಡಿಯು ಹೆಚ್ಚಾಗಿ ನಡೆಯುವದು ಇಲ್ಲದಿರೆ
ಬಡತನಳಿಯುವದೆ? ಪೂರ್ಣಜ್ಞ.

೩೦೯೧

ಬಡತನದ ಗುಡಿಸಲಕೆ, ದುಡಿತವೆ ಸುರಧೇನು
ಬಡವರಡಿಗೆಯದು ಬಿಸಿಯಿದ್ದರಮೃತರಸ
ಬಡಜನರ ಸಿರಿಯು ಪೂರ್ಣಜ್ಞ.

೩೦೯೨

ಬರಿಮೈಯು ಬರಿಕೈಯು, ಬರಿಹೊಟ್ಟೆ ಬರಿನೆತ್ತಿ
ಬರಿದೆ ಬರಿದಾಗಿ ತಿರಿಯುತ್ತ ತಿರುಗುವವರ
ಕೊರಗಳಿವುದೆಂತು? ಪೂರ್ಣಜ್ಞ.

೩೦೯೩

ನಡೆದಿಹುದು ಅಲ್ಲಲ್ಲಿ ಎಡೆಬಿಡದೆ ಹೋರಾಟ
ಬಡವರಿಗೆ ನ್ಯಾಯ ನೀಡಿದರೆ ಜಲವ ಗಿಡ–
ದಡಿಗುಣಿಸಿದಂತೆ! ಪೂರ್ಣಜ್ಞ.

## ಬೆಂಕಿ

೩೦೯೪

ಬೆಂಕಿಕಳೆ, ಬೆಂಕಿಹಗೆ, ಬೆಂಕಿಗುಣ ಎರಡುಂಟು
ಅಂಕೆಯಿಂಬಳಸೆ ಬೆಂಕಿಸರಿ ಸುಖರಿಲ್ಲ
ಶಂಕೆಯಿದಕಿಲ್ಲ ಪೂರ್ಣಜ್ಞ.

## ನಿರಾಭಾರಿ

೩೦೯೫

ವಿರತಿಮೃತ್ತಿಕೆ ಹಚ್ಚಿ, ಅರಿವೆಂಬ ಉದಕದಿಂ
ಮರವೆ ಕೈಗಳನು ತಿಕ್ಕಿ ತೊಳಕೊಂಡವನೆ
ವರ 'ನಿರಾಭಾರಿ' ಪೂರ್ಣಜ್ಞ.

## ವಿಶ್ವಪಥ

೩೦೯೬

ಮನುಜ ಹಿತ ಮತ ಬೆಳೆದು, ದನುಜದುರ್ಗುಣವಳಿದು
ತನಿಶಾಂತಿಗೊಡುವ ತತ್ವವದು 'ವಿಶ್ವಪಥ'
ವೆನಿಸುವದು ಮುದದಿ ಪೂರ್ಣಜ್ಞ.

## ಆತ್ಮಶಕ್ತಿ

೩೦೯೭

ಆತ್ಮಶಕ್ತಿಯ ಮುಂದೆ, ಭೌತಿಕದ ಬಲವೆಲ್ಲಿ?
ಭೌತಿಕವು ಅಚಿರ, ದಿವ್ಯ ಜ್ಯೋತಿರ್ಲಿಂಗ
ಆತ್ಮಸಂಪದವು ಪೂರ್ಣಜ್ಞ.

## ಪ್ರಕೃತಿ ವೈಚಿತ್ರ್ಯ

೩೦೯೮

ಒಂದುಕಡೆ ಬಲುಮಳೆಯು, ಒಂದುಕಡೆ ಬಲು ಬಿಸಿಲು
ಒಂದುಕಡೆ ಚಳಿಯು, ಇದು ಪ್ರಕೃತಿ ವೈಚಿತ್ರ್ಯ
ವೆಂದೆಂಬೆನಯ್ಯಾ ಪೂರ್ಣಜ್ಞ.

**ಅನುಭಾವ**

೩೯೯

ಅನುಭವದ ರಸದೂಟ, ಅನುಭವಿಗಳಿಗೆ ಗೊತ್ತು
ಅನುಭಾವವೆಂಬುದದು ಬಯ್ತಿಟ್ಟ ಬಯಕೆ
ಯೆನಿಸಿಹುದು ಜಗದಿ ಪೂರ್ಣಜ್ಞ.

**ಮಾಯೆ**

೩೧೦೦

ಆಲಿನಿಂದೊಡೆ ಮನದ, ಗಾಳಿ ನಿಲ್ವುದು ಮತ್ತೆ
ಕಾಲಕರ್ಮಗಳು ತೊಲಗುವವು ಮಾಯೆ ತಾ-
ಧೂಳಿಪಟವಹಳು ಪೂರ್ಣಜ್ಞ.

೩೧೦೧

ವಾಯುಪಟವಾಡುವೊಡೆ, ಕಾಯದೃಢಗೊಂಡಿರಲಿ
ಕೈಯೊಳಗೆ ನೂಲು ಬಿಗಿಹಿಡಿದು ಆಡಿದರೆ
ಮಾಯೆ ದೂರಹಳು ಪೂರ್ಣಜ್ಞ.

**ಲಂಚ**

೩೧೦೨

ಲಂಚದಿಂದಲಿ ಮನೆಯು, ಲಂಚದಿಂದಲಿ ಹೊಲವು
ಲಂಚವೇ ಲಂಚ ತಾನೆ ತಾನಾಗಿಹುದು
ಕೊಂಚ, ನೀ ನೋಡು ಪೂರ್ಣಜ್ಞ.

೩೧೦೩

ಲಂಚ ಕೊಟ್ಟವ ದಡ್ಡ, ಲಂಚ ಕೊಂಡವ ದಡ್ಡ
ಲಂಚ ನರಕದಲಿ ಮುಳುಗಿದವರಿಗೆ ಶಾಂತಿ
ಕಿಂಚಿತ್ತು ಇಲ್ಲ ಪೂರ್ಣಜ್ಞ.

೩೧೦೪

ಹೊಂಚುಹಾಕುವರಯ್ಯ, ಲಂಚಕ್ಕೆ ಕೈ ಚಾಚಿ
ಮಿಂಚುಹುಳದಂತೆ ಸಂಚರಿಸುವರು ಸತತ
ಲಂಚ ಭಕ್ಷಕರು ಪೂರ್ಣಜ್ಞ.

೩೧೦೫

ಲಂಚವಿಲ್ಲದೆ ಕಾರ್ಯ, ಸಂಚಲಿಸದಾಗಿಹವು
ಲಂಚಾಸುರನಿಗೆ ಕಿಂಚಿತ್ತು ದಯವಿಲ್ಲ
ಲಂಚ ಬಲು ಕ್ರೂರಿ ಪೂರ್ಣಜ್ಞ.

೩೧೦೬

ಲಂಚವನು ಪಡೆವಾಗ, ಮಂಚದಾಣೆಯ ಮಾಡಿ
ಮಿಂಚುತ್ತ ಹಣಪಡೆದು, ಕೈಕೊಟ್ಟು ಕೊನೆಗೆ
ಸಂಚುಮಾಡುವನು ಪೂರ್ಣಜ್ಞ.

೩೧೦೭

'ಕೊಳ್ಳದಿರಿ ಲಂಚ' ಎಂಬೊಳ್ಳೆ ಉಪದೇಶವದು
ಎಲ್ಲೆಡೆಗೆ ಕೇಳಿ ಬರುತಿಹುದು ಆದರದು
ಜೊಳ್ಳಾಗುತಿಹುದು ಪೂರ್ಣಜ್ಞ.

೩೧೦೮

ಶೋಷಕರ ಅತಿಯಾಶೆ, ಘಾಸಿಗೊಳಿಪುದು ಜಗವ
ಆಶಾತಿರೇಕ ನಿಲ್ಲದಿರೆ ಬಹುದೊಡ್ಡ
ಕ್ಲೇಶವೆದ್ದೀತು, ಪೂರ್ಣಜ್ಞ.

೩೧೦೯

ಲಂಚವಿಲ್ಲದೆ ಕಾರ್ಯ, ಕೊಂಚವೂ ಸಿದ್ಧಿಸದು
ಲಂಚಾಧಿಕಾರಿ ದೇವರ ಪ್ರಸನ್ನತೆಗೆ
ಲಂಚ ನೈವೇದ್ಯ, ಪೂರ್ಣಜ್ಞ.

೩೧೧೦

ಲಂಚವನು ಪಡೆವಾಗ, ಮಿಂಚುವದು ನಗೆ ಮೊಗದಿ
ಹೊಂಚು ಹೆಣೆದಿಹದು ಹೊರಗೆಂಬ ಎಚ್ಚರಿಕೆ
ಕೊಂಚವೂ ಇರದೆ, ಪೂರ್ಣಜ್ಞ.

೩೧೧೧

ಲಾಭಲೋಭಾಸುರರು, ವೈಭವದಿ ಮಲಗಿಹರು
ಕ್ಷೋಭೆಯಿಂ ಕ್ರಾಂತಿ ಎಂಬರಿವು ಮೂಡೀತೇ?
ಲೋಭಾಂಧಕರಿಗೆ ಪೂರ್ಣಜ್ಞ.

೩೧೧೨

ಭ್ರಷ್ಟತೆಯು ಜೀವನದ, ಶ್ರೇಷ್ಠ ಮೌಲ್ಯಗಳನು
ಸುಟ್ಟುಹಾಕುತಿದೆ ಈ ದುಷ್ಟ ಪದ್ಧತಿಯ
ಹುಟ್ಟಳಿವುದೆಂದು? ಪೂರ್ಣಜ್ಞ.

೩೧೧೩

ಅಂಕೆದಪ್ಪುತ ಬೆಳೆವ, ಸಾಂಕ್ರಾಮಿಕಗಳಂತೆ
ಭೀಂಕೃತಿಯ ಬೀರಿ ಲಂಚಲಂಕಾಧಿಪರು
ಧೀಂಕಿಡುತ ಬಹರು ಪೂರ್ಣಜ್ಞ.

೩೧೧೪

ಘೋರಸಂದರ್ಭದಲಿ, ಕ್ರೂರಾಧಿಕಾರಿಗಳು
ಬೀರಿಭಯವನ್ನು, ಹೀರುವರು ಲಂಚವನು
ಭೀರುಜನರಿಂದ ಪೂರ್ಣಜ್ಞ.

೩೧೧೫

ಅಡಕತ್ತರಿಗೆ ಸಿಕ್ಕ, ಅಡಕೆ ಬೆಟ್ಟದ ಹಾಗೆ
ಬಡಜನರು ಲಂಚರಾಕ್ಷಸರ ಇರುಕಿನಲಿ
ಬಿಡುತಿಹರು ಪ್ರಾಣ ಪೂರ್ಣಜ್ಞ.

**ಹೊಸವರುಷಕ್ಕೆ ಸ್ವಾಗತ**

೩೧೧೬

ಹೊಸವರುಷ ಮನಕೆ ಸಂತಸಹರುಷ ತರುತಿರಲಿ
ಹಸಿವುತೃಷೆ ತವಿಸಿ ವ್ಯಸನಂಗಳಂ ನಶಿಸಿ
ಜಸವೀಯುತಿರಲಿ ಪೂರ್ಣಜ್ಞ.

೩೧೧೭

ಬರಲಿಹೊಸವರುಷವದು ತರಲಿ ಪ್ರೇಮದನಂಟು
ಪರಮಗುಣದಿಂದ ದೇಶಕ್ಕೆ ಸುಖವಿರಲಿ
ಅರಿವಿರಲಿ ಜನಕೆ ಪೂರ್ಣಜ್ಞ.

೩೧೧೮

ಹೊಸವರುಷ ಬಂದಿಹುದು, ಹೊಸಬೆಳಕು ತಂದಿಹುದು
ಹೊಸಶಕ್ತಿ ಪಡೆದು ಹೊಸಮನುಜರೆಂದೆನಿಸಿ
ಹಸನಾಗಿರೋಣ ಪೂರ್ಣಜ್ಞ.

೩೧೧೯

ಬೇವು ಬೆಲ್ಲವ ತಿಂದು, ಭಾವ ಸಮರಸ ಪಡೆದು
ನೋವು ದ್ವೇಷಗಳ ಮರೆಯೋಣ, ಶಾಂತಿರಸ
ಸೇವಿಸುತಿರೋಣ ಪೂರ್ಣಜ್ಞ.

**ಮಣ್ಣಿನ ಮಹಿಮೆ**

೩೧೨೦

ಮಣ್ಣಿನಿಂದಲೇ ನೆಲವು, ಮಣ್ಣಿನಿಂದಲೇ ಬೆಲೆಯು
ಕಣ್ಣೊಬ್ಬಲದಿ ಕಾಂಬ ಜಗದ ಚಟುವಟಿಕೆಗಳು
ಮಣ್ಣಾಟವಯ್ಯ ಪೂರ್ಣಜ್ಞ.

೩೧೨೧

ಅಣ್ಣ ತಮ್ಮರ ನಡುವೆ, ಮಣ್ಣು ತರುವದು ಜಗಳ
ಮಣ್ಣಾಶೆಯಿಂದ ಕೊಲೆ ಸುಲಿಗೆ ನಡೆಯುವವು
ಮಣ್ಣ ಮಾಯೆಯಿದು ಪೂರ್ಣಜ್ಞ.

೩೧೨೨

ಭೂಮಿತಾಯಿಗೆ ಜಗದಿ, ಸಾಮ್ಯವಿನ್ನೊಂದುಂಟೆ?
ಈ ಮೇದಿನಿಯಲಿ ಪ್ರಾಣಿ ಸಂಕುಲಕೆಲ್ಲ
ಕಾಮಧೇನುವಿದು ಪೂರ್ಣಜ್ಞ.

**ಮಣ್ಣಿನ ಮಹಿಮೆ**

೩೧೨೩

ಅನ್ನಪೂರ್ಣೆಯು ಮೈಯು, ಮಣ್ಣಾತ್ತಿ ಗಣಪತಿಯು
ಮಣ್ಣು ಅದ್ಭುತದ ಶಕ್ತಿಯನೊಳಗೊಂಡ
ಪುಣ್ಯ ಗರ್ಭಿಣಿಯು ಪೂರ್ಣಜ್ಞ.

## ನಾಲಿಗೆ

೩೧೨೪

ನಾಲಗೆಯ ತುದಿಯಲ್ಲಿ, ಮೇಲು ಕೀಳುಗಳುಂಟು
ನಾಲಗೆಯ ತುದಿಯಲ್ಲಿ ಸಾವು ನೋವುಗಳು
ಜೇಲುವಾಸಗಳು ಪೂರ್ಣಜ್ಞ.

## ಪಾಶ್ಚಾತ್ಯ ವ್ಯಾಮೋಹ

೩೧೨೫

ಪಾಶ್ಚಾತ್ಯದೇಶಗಳ, ಸ್ವೇಚ್ಛೆ ಸ್ವೈರದ ದಾಳಿ
ಪ್ರಾಚ್ಯ ದೇಶಗಳ ನಿರ್ಮಲಾಧ್ಯಾತ್ಮವನು
ಕೊಚ್ಚಿ ಹಾಕುತಿವೆ ಪೂರ್ಣಜ್ಞ.

## ಜಾಣ

೩೧೨೬

ಓಲಗದಿ ವಾದದಲಿ, ನಾಲಗೆಯ ಬಿಗಿ ಹಿಡಿದು
ಮೂಲತತ್ವಗಳ ಬಿಡದೆ ಸಾಧಿಸುವವನು
ಮೇಲಾದ ಜಾಣ ಪೂರ್ಣಜ್ಞ.

## ಜ್ಞಾನ

೩೧೨೭

ಮರಕೆ ಮರವನು ಮಥಿಸೆ ಮರದಿ ಹೊತ್ತುವದಗ್ನಿ
ಶರಣ ಗೋಷ್ಠಿಯಲಿ ಬಾಗಿ ಬೆಳಗೊಂಡಲ್ಲಿ
ಅರಿವು ಸ್ಫುರಿಸುವದು ಪೂರ್ಣಜ್ಞ.

೩೧೨೮

ಹೆಣ್ಣು ಕೊಡುವವರುಂಟು, ಹೊನ್ನು ಕೊಡುವವರುಂಟು
ಮಣ್ಣು ಕೊಡುವವರು ಬಹಳುಂಟು, ಕೊಡರವರು
'ಸನ್ಮತಿ'ಯ ಸಿರಿಯ ಪೂರ್ಣಜ್ಞ.

೩೧೨೯

ಅಶ್ರು ನಾರಿಯರಸ್ತ್ರ, ಸ್ಮಶ್ರುಗಂಡಸರಸ್ತ್ರ
ಬೆಸ್ತಜನರಸ್ತ್ರಗಾಳ ಬುಧರಸ್ತ್ರವು ಬ–
ಹುಶ್ರುತ ಜ್ಞಾನ ಪೂರ್ಣಜ್ಞ.

೩೧೩೦

ವೇದಾಂತ ತಿಳಿಯಲ್ಕೆ, ಬಾಧೆ ಮೂರನು ನೀಗಿ
ಮೋದದಿಂ ಮೂರವಸ್ಥೆಗಳ ತಿಳಿದವಗೆ
ವೇದಾಂತ ವೇದ್ಯ ಪೂರ್ಣಜ್ಞ.

೩೧೩೧

ಹಲವು ನದಿಗಳು ಕೂಡಿ, ಜಲಧಿಯಾಗುವ ತೆರದಿ
ಹಲವಾರು ಗ್ರಂಥ ಓದುತ್ತ ಓದುತ್ತ
ಬೆಳೆದಪುದು ಜ್ಞಾನ ಪೂರ್ಣಜ್ಞ

೩೧೩೨

ಭವತಿಮಿರ ಕಳೆಯಲ್ಕೆ, ಶಿವಜ್ಞಾನ ಕೈದೀಪ
ಶಿವಶಕ್ತಿ ಭಕ್ತಿ ಬೆಳೆಯುತ್ತ ಬೆಳಗಿದರೆ
ಭವಹರನೆ ನೀನು ಪೂರ್ಣಜ್ಞ.

## ಅರವತ್ತರ ಅರಿವು

೩೧೩೩

"ಅರಿವೆ ಗುರು" ಎಂಬುದನು, ನೆರೆನಂಬಿ ನಡೆದಿಹೆನು
ಅರವತ್ತರೊಳಗೆ ಸೇವೆಗೈದಿಹ ತೃಪ್ತಿ
ಭರಿತನಾಗಿಹೆನು ಪೂರ್ಣಜ್ಞ.

೩೧೩೪

ಕುರುಹು ತಿಳಿದಿರಬೇಕು, ಅರುಹು ಗಳಿಸಿರಬೇಕು
ಮರವೆಯದು ಅಳಿದು ಬದುಕೆಲ್ಲ ಅರಿವಾದ-
ರರವತ್ತು ಸಫಲ ಪೂರ್ಣಜ್ಞ.

೩೧೩೫

ಅರವತ್ತರರಿವಿಂದ, ಸುರಿಸುತ್ತ ಮಕರಂದ
ಪರಿಮಳವ ಬೀರಿ ನೂರರೆಡೆ ನಡೆಯುವದೆ
ಪರತರಾನಂದ ಪೂರ್ಣಜ್ಞ.

೩೧೩೬

ಅರಿವಿರದ ಅರವತ್ತು, ಬರಿದೆ ಕಳೆದಿಹ ಹೊತ್ತು
ಅರವತ್ತು ವರುಷ ಸದುಪಯೋಗಿಸಿದರದು
ಅರಿವಿನರವತ್ತು ಪೂರ್ಣಜ್ಞ.

೩೧೩೭

ಅರಿವಿರದ ಅರವತ್ತು ಮರೆವು ತುಂಬಿದ ಕುತ್ತು
ಕರದೊಳಗೆ ಜಪಮಾಲೆ ಪಿಡಿದರೇಂ? ಬಂತು
ತಿರೆಗೆ ಬೇಸತ್ತು ಪೂರ್ಣಜ್ಞ.

**ಸಮಯ ಭೇದ**

೩೧೩೮

ಸಮಯ ಭೇದಗಳಿಂದ, ಅಮಿತ ಹಾನಿಗಳುಂಟು
ನಮಗೆಲ್ಲ ಹುಚ್ಚು ಹಮ್ಮು ಬಿಮ್ಮುಗಳೇಕೆ?
ಸನ್ಮತಿಯು ಬರಲಿ ಪೂರ್ಣಜ್ಞ.

೩೧೩೯

ಸಮಯ ಭೇದಗಳೆಲ್ಲ, ಭ್ರಮೆಯ ಭಾವಗಳಯ್ಯ
ಕ್ರಮಗೆಡಿಪ ಸಮಯ ಭೇದಗಳು ಬೇಡ, ಶಿವ
ಸಮಯವೊಂದಿರಲು ಪೂರ್ಣಜ್ಞ.

೩೧೪೦

'ಆ ಸಮಯ ಈ ಸಮಯ', ಕ್ಲೇಶದ ಸಮಯಗಳಿವು
ಲೇಸಿನ ಸಮಯದವರು ನಾವೆಲ್ಲರೆಂದು
ಘೋಷಿಸಿರಿ ಬೇಗ! ಪೂರ್ಣಜ್ಞ.

೩೧೪೧

ಸಮಯ ಬೇಧವ ಬೆಳೆಸಿ, ಸಮಯಕ್ಕೆ ಬೆಲೆಕೊಡದೆ
ಸಮಯವನು ಹಾಳು ಮಾಡಿದರೆ ಸುಖವಿಲ್ಲ
ಸಮದರ್ಶಿಯಾಗು ಪೂರ್ಣಜ್ಞ.

## ಹರಿಜನೋದ್ಧಾರ

೩೧೪೨
ಹರಿಜನರ ಉದ್ಧಾರ, ಬರಿಮಾತಿನಿಂದಹುದೆ?
ಇರಲು ಮನೆ ಅನ್ನ ಅಕ್ಷರಗಳನು ನೀಡು
ಶರಣರಹರವರು ಪೂರ್ಣಜ್ಞ.

೩೧೪೩
ದುಶ್ಚಟದ ದುಶ್ಚಕ್ರ, ಕೊಚ್ಚುತಿದೆ ಹರಿಜನರ
ಎಚ್ಚರಿಸಿ ತಿಳಿಸಿ ಸನ್ಮಾರ್ಗ ತೋರಿದರೆ
ಉಚ್ಚರಾಗುವರು ಪೂರ್ಣಜ್ಞ.

೩೧೪೪
ನೊಂದು ಬೆಂದವರೆಂದು, ಹಿಂದುಳಿದ ಹರಿಜನರ
ಬಂಧು ಭಾವದಲಿ ಮೈದಡವಿ ಪ್ರೀತಿಸುತ
ಮುಂದೆ ತರಬೇಕು ಪೂರ್ಣಜ್ಞ.

೩೧೪೫
ಕರುಳಿರದ ಮಾಳ್ಕೆಯದು, ಪರಿಪೂರ್ಣವಾದೀತೆ?
ಹರಿಜನರ ಏಳ್ಗೆ ಬರಿಮಾತಿನಿಂದಹುದೆ?
ಪರಿಕಿಸೈ ನೀನೆ ಪೂರ್ಣಜ್ಞ.

೩೧೪೬
ಶೂದ್ರ ಜನಗಣದವರ, ಬುದ್ಧಿ ಬೆಳೆಯುತ್ತಿಹುದು
ಶುದ್ಧ ಕಾಯಕದಿಂ ಸ್ವಾವಲಂಬಿಗಳಾಗಿ
ಎದ್ದಿಹರು ಕೆಲರು ಪೂರ್ಣಜ್ಞ.

೩೧೪೭
ಹಿಂದುಳಿದವರು ನಾವು ಎಂದೆನುತ ಕೊರಗದಿರಿ
ಹಿಂದು ಸಂಸ್ಕೃತಿಯ ಬೆಲೆಯರಿತು ನಡೆದಲ್ಲಿ
ಮುಂದೆ ಸಾಗುವಿರಿ ಪೂರ್ಣಜ್ಞ.

೩೧೪೮
ನಮಗಿಂದು ಸರಕಾರ, ಅಮಿತ ನೆರವೀಯುತಿದೆ
ಶ್ರಮಪಟ್ಟು ದುಡಿವುದೇಕೆಂದು ಹರಿಜನರು
ಕ್ರಮ ತಪ್ಪದಿರಲಿ ಪೂರ್ಣಜ್ಞ.

## ಮಂತ್ರಶಕ್ತಿ

೩೧೪೯

ಯಂತ್ರಗಳು ಬೆಳೆಯುತ್ತಿರಲು, ತಂತ್ರಗಳು ಬೆಳೆಯುತಿವೆ
ಯಂತ್ರದಾಡಳಿತೆ ಕೊನೆಗೊಮ್ಮೆ ಕುಸಿದಾತ್ಮ
ಮಂತ್ರ ಸ್ಥಿರವಹುದು ಪೂರ್ಣಜ್ಞ.

## ಮಠಗಳು

೩೧೫೦

ಘಟಬೆಳೆದು ಬೆಳಗಲ್ಕೆ, ಮಠದ ಆಶ್ರಯಬೇಕು
ಮಠ ಪಡೆದು ಘಟವು ದಿಟವರಿತು ನಡೆಯದಿರೆ
ಅಟವಿ ಹೊಕ್ಕಂತೆ ಪೂರ್ಣಜ್ಞ.

೩೧೫೧

ಕುಟಿಲ ಬೀಡುಗಳಾಗಿ, ಮಠಗಳಾಗದಿರಲಿ
ಮಠಗಳೇ ಅನುಭವದ ಮಂಟಪಗಳಾಗಿ
ದಿಟವ ಕೊಡುತಿರಲಿ ಪೂರ್ಣಜ್ಞ.

೩೧೫೨

ಧರ್ಮ ಉಳಿದಿಹುದಿಂದು, ಧರ್ಮಬೆಳೆದಿಹುದಿಂದು
ಧರ್ಮಕ್ಕೆ ಮೀಸಲಾಗಿರುವ ವಿರತರಿಂ
ಧರ್ಮ ಬೆಳಗುತಿದೆ ಪೂರ್ಣಜ್ಞ.

೩೧೫೩

ಮಠವು ಧರ್ಮನಿವಾಸ, ಮಠದಿ ಧರ್ಮಪ್ರಕಾಶ
ಮಠದಿಂದ ಧರ್ಮ ಸಂಸ್ಕೃತಿ ಸುವಿಕಾಸ
ಮಠಧರ್ಮಕೋಶ ಪೂರ್ಣಜ್ಞ.

೩೧೫೪

ಮಠಗಳನು ತೆಗಳದಿರು, ಮಠಗಳನು ತೊರೆಯದಿರು
ಮಠಗಳು ಬಡವರ ಆಧಾರಸ್ಥಾನಗಳು
ಸಟೆಯಲ್ಲ ದಿಟವು ಪೂರ್ಣಜ್ಞ.

೩೧೫೫.

ಮಠದಲ್ಲಿ ತಿಂದುಂಡು, ಮಠದಿಂದ ಬಲುಬೆಳೆದು
ಮಠದ ಉಪಕಾರ ಮರೆತಿರುವ ನಿಂದಕರ
ತುಟಿ ಕಸದ ಬುಟ್ಟಿ ಪೂರ್ಣಜ್ಞ.

೩೧೫೬

ಮಠದ ಹೆಚ್ಚಳಕಾಗಿ, ಮಠದಾಸ್ತಿಪಾಸ್ತಿಗಳ
ದಿಟಯತ್ನದಿಂದ ರಕ್ಷಣೆಯ ಮಾಡದಿರೆ
ಮಠ ಉಳಿಯಬಹುದೆ? ಪೂರ್ಣಜ್ಞ.

೩೧೫೭

ಸೇವೆ ಮಠಗಳ ನಿಷ್ಠೆ, ಸೇವೆ ಮಠಗಳ ಪುಷ್ಟಿ
ಸೇವೆ ಮಾಡುವದೇ ಮಠವು ನೀಡುವ ತುಷ್ಟಿ
ಸೇವೆ ಮಠದಾಸ್ತಿ! ಪೂರ್ಣಜ್ಞ.

೩೧೫೮

ವಿಶ್ವಶಾಂತಿಯ ನಿಧಿಯು, ವಿಶ್ವಪ್ರೇಮದ ನಿಧಿಯು
ವಿಶ್ವಬಾಂಧವ್ಯ ಬೆಳೆಸಲ್ಕೆ ಮಠ ಮಾನ್ಯ
ವಿಶ್ವಸ್ಥ ನಿಧಿಯು! ಪೂರ್ಣಜ್ಞ.

೩೧೫೯

ಮನುಕುಲೋತ್ಥಾನಕ್ಕೆ, ಮನುಕುಲೋದ್ಧಾರಕ್ಕೆ.
ಮನುಕುಲಕೆ ಬೆಳಕು ನೀಡಲ್ಕೆ ಮಠಗಳಿವೆ
ಗುಣದರ್ಶಿನಿಗಳು ಪೂರ್ಣಜ್ಞ.

೩೧೬೦

ಕಾಲಕರ್ಮದ ಹೀನ, ಜಾಲಗಳ ಸಂಹರಿಸಿ
ಶೀಲ ಸದ್ಗುಣಕೆ ಮಠಗಳಾಗಲಿ ಶಾಲೆ
ಮೂಲಧರ್ಮವಿದು ಪೂರ್ಣಜ್ಞ.

೩೧೬೧

ಕರುಣಿಕರು, ಸೇವಕರು, ಅರಿವಿನಿಂ ದುಡಿದಲ್ಲಿ
ವರಮಠಕೆ ಸಿರಿಯು, ಗೊರಕೆಗಳ ಹೊಡೆದಲ್ಲಿ
ಬರಗಾಲ ಮಠಕೆ ಪೂರ್ಣಜ್ಞ.

**ಸ್ಥಾವರವು**

೩೧೬೨

ಐಕ್ಯಸ್ಥಳದೊಳಗಿರುವ, ಭಕ್ತಂಗೆ ಸ್ಥಾವರವು
ಬೇಕಿಲ್ಲ ಪ್ರಥಮ ಸ್ಥಳದ ಭಕ್ತರ್ಗೆಲ್ಲ
ಬೇಕು ಸ್ಥಾವರವು ಪೂರ್ಣಜ್ಞ.

**ಪತ್ರಿಕೆಗಳು**

೩೧೬೩

ಸುಳ್ಳು ಹುಟ್ಟಿಸಿ ಬರೆದು, ಕಳ್ಳಹಾದರಿಗನೊಲು
ಒಳ್ಳೆಯುವರನ್ನು ತಲ್ಲಣಿಪ ಪತ್ರಿಕೆಯು
ಮುಳ್ಳಿಲಿಗೆ ಸರಿಯು ಪೂರ್ಣಜ್ಞ.

೩೧೬೪

ದುಡ್ಡು ಕೊಟ್ಟವರನ್ನು, ದೊಡ್ಡವರ ಮಾಡುತಿಹ
ದುಡ್ಡು ಕೊಡದವರ ತೆಗಳುತಿಹ ಪತ್ರಿಕೆಯು
ಎದ್ದು ನೋಡಯ್ಯ ಪೂರ್ಣಜ್ಞ.

೩೧೬೫

ಪ್ರಾಮಾಣಿಕತೆಯುಳ್ಳ, ಧೀಮಂತ ಪತ್ರಿಕೆಗ
ಳೀ ಮೇದಿನಿಯಲಿ ಹಲಕೆಲವು ಹೊಳೆಯುತಿವೆ
ತಾಮಸವಕಳೆದು ಪೂರ್ಣಜ್ಞ.

೩೧೬೬

ಮಿಥ್ಯಾಪ್ರಶಂಸೆಗಳ, ಸ್ವಾರ್ಥಿ ಪತ್ರಗಳುಂಟು
ಸ್ವಾರ್ಥಕ್ಕೆ ಕಬಳವಿಕ್ಕಿದಿರೆ ಅವು ನಿನ್ನ
ಕುತ್ತಿಗೆಗೆ ಉರುಲು ಪೂರ್ಣಜ್ಞ.

**ಕೆ.ಲ್.ಇ. ಸೊಸೈಟಿ**

೩೧೬೭

ದಕ್ಷಿಣದ ಭಾರತದಿ, ಶೈಕ್ಷಣಿಕ ರಂಗದಲಿ
ದಕ್ಷ ಕೆ.ಎಲ್.ಈ. ಸೊಸೈಟಿ ಸಾಗಿಹುದು
ಶಿಕ್ಷಣಾಗ್ರಣಿಯು ಪೂರ್ಣಜ್ಞ.

೩೧೬೮

ಬಲುಹಿರಿದು ನಾಡಿನಲಿ, ಬೆಳಗಿಹುದು ಶಿಕ್ಷಣದಿ
ಬಲವಂತ ಜನರ ಸಹಕಾರ ಬಲದಿಂದ
ಬೆಳೆದು ಬೆಳಗುತಿದೆ ಪೂರ್ಣಜ್ಞ.

೩೧೬೯

ಸರಸತಿಯು ನಿಲಯಗಳು, ಕರುನಾಡ ತುಂಬಿಹವು
ಭರದಿ ಬೆಳೆದಿಹವು ಜ್ಞಾನವನು ನೀಡುತ್ತ
ಹೊರರಾಜ್ಯದಲಿ ಪೂರ್ಣಜ್ಞ.

೩೧೭೦

ಮಳೆಬೆಳೆಯಿಲ್ಲ ಕಳವಳವು ರಾಜ್ಯಕ್ಕೆ
ಕಲಹನಡೆದಿಹುದು ಬರಿಕುರ್ಚಿ ಸ್ಥಾನಕ್ಕೆ
ಬಲವೆಂದು ದೇವ ಪೂರ್ಣಜ್ಞ.

## ಪತ್ರಕರ್ತರು

೩೧೭೧

ಪತ್ರಕರ್ತರು ವಿಮಲ, ಚಿತ್ತಕೊಪ್ಪುವ ತೆರದಿ
ಸತ್ಯಸಂಗತಿಯ ಬರೆಯುತ್ತ ನಿತ್ಯದಲಿ
ಬಿತ್ತರಿಸಬೇಕು ಪೂರ್ಣಜ್ಞ.

## ನೆಲ್ಸನ್ ಮಂಡೇಲಾ

೩೧೭೨

ಬಡವರಿಗೆ ಹೋರಾಡಿ, ಕಡುಶಕ್ತಿ ನೀಡುತ್ತ
ಮೃಡನಂತಿರುವನು 'ದಕ್ಷಿಣಾಫ್ರಿಕೆಯಲ್ಲಿ'
ಮಂಡೇಲಾ ತಾನು ಪೂರ್ಣಜ್ಞ.

## ಬಡತನ

೩೧೭೩

ದುಡಿಯುವವರನು ಕಂಡು, ಬಡತನವು ಅಂಜುವದು
ಎಡಬಿಡದೆ ದುಡಿವ ಮನೆತನದಿ ಧನಲಕ್ಷ್ಮಿ
ದೃಢವಾಗಿಹಳು ಪೂರ್ಣಜ್ಞ.

**ಕಲೆ**

೩೧೭೪

ನಿಜವಾದ ಕಲೆಯಿಂದ, ನಿಜಶಕ್ತಿ ಮೂಡುವದು
ಕುಜನರಿಗೆ ದಾರಿತೋರುವದು ಚಿತ್ಕಲೆಯು
ಸುಜನರಿಗೆ ಬೆಳಕು ಪೂರ್ಣಜ್ಞ.

**ಅಧಿಕಾರ**

೩೧೭೫

ಅಧಿಕಾರ ಲಾಲಸೆಯು, ಗುದಮುರಿಗೆ ನಡೆಸಿಹರು
ಹದಗೆಡಿಸಿ ಜನರ ಜೀವನದ ಶಾಂತಿಯನು
ಸದೆ ಬಡಿಯುತಿಹರು ಪೂರ್ಣಜ್ಞ.

೩೧೭೬

ಕುರ್ಚಿಸಿಕ್ಕರೆ ಸಾಕು, ಹುಚ್ಚೆದ್ದು ಕುಣಿಯುವರು
ಕುರ್ಚಿ ಕಳಕೊಂಡ ಮರುದಿನವೆ ನಿಜವಾದ
ಹುಚ್ಚರಾಗುವರು ಪೂರ್ಣಜ್ಞ.

೩೧೭೭

ಮತತೃಷೆಯು ನಾಯಕರ, ಮತಿಯಲ್ಲಿ ಉರಿಯುತಿದೆ
ಹಿತಗೈವ ವಚನ ಅಧಿಕಾರದಾಶೆಗಾ–
ಹುತಿಯಾಗುತಿಹುದು ಪೂರ್ಣಜ್ಞ.

**ಚಿಂತೆ**

೩೧೭೮

ವಿಪುಲಯಾಚನೆಯಿಂದ, ಅಪರಿಮಿತ ಸಾಹಸವು
ವಿಫಲವಾಗುತ್ತ ಚಿಂತೆಯಲಿ ಮುಳುಗಿಸಿ
ಅಪಮಾನಕೆಡೆಯು ಪೂರ್ಣಜ್ಞ.

೩೧೭೯

ಚಿಂತೆ ಚಿತ್ತಕೆ ಬೆಂಕಿ, ಚಿಂತನವು ಚೈತನ್ಯ
ಚಿಂತೆಯನು ತೊರೆದು ಚಿಂತನವನೆಸಗಿದರೆ
ಶಾಂತಿ ಸಮನಿಪುದು ಪೂರ್ಣಜ್ಞ.

## ಶ್ರೀ ಬಸವೇಶ್ವರ ವಿದ್ಯಾವರ್ಧಕ ಸಂಘ–ಬಾಗಲಕೋಟ

೩೧೮೦

ಬಸವೇಶ ಸಂಘವದು, ಅಸಮಶಕ್ತಿಯೊಳಿಂದು
ಎಸೆಯುತಿದೆ ಬೆಳೆದು ಶೈಕ್ಷಣಿಕ ರಂಗದಲಿ
ಬಸವ ಕೃಪೆಯಿಂದ ಪೂರ್ಣಜ್ಞ.

## ಆಶೆ

೩೧೮೧

ಆಶೆ ಬಾಳಿಗೆ ಶಕ್ತಿ, ಕೋಶವೇ ಆಗಿಹುದು
ಆಶೆಯಿಲ್ಲದಿರೆ ಸಂಸಾರ ತಾನೊಂದು
ಬೇಸರದ ಸಂತೆ ಪೂರ್ಣಜ್ಞ.

೩೧೮೨

ಆಶೆಯಿಲ್ಲದ ನರನು, ಮಾಂಸವಿಲ್ಲದ ತೊಗಲು
ಆಶೋತ್ತರಗಳು ಮಾನವನ ಜೀವನಕೆ
ಲೇಸನೆಸಗುವವು ಪೂರ್ಣಜ್ಞ.

೩೧೮೩

ಆಶೆ ಮುಳುಗುವ ಮನುಜ, ಗೀಸುಗುಂಬಳಕಾಯಿ
ಆಶೆಚುಕ್ಕಾಣಿ ಬಾಳ ನೌಕಾಗತಿಗೆ
ಆಶೆ ಘನಶಕ್ತಿ ಪೂರ್ಣಜ್ಞ.

೩೧೮೪

ಆಶೆ ಮಿತಿಯೊಳಗಿರಲು, ಲೇಸಹುದು ಜೀವನಕೆ
ಆಶೆಮಿತಿಮೀರಿ ದೇವಮಾನವರೆಲ್ಲ
ನಾಶವಾಗಿಹರು, ಪೂರ್ಣಜ್ಞ.

೩೧೮೫

ಬಲುಹಿರಿದು ಹಿಮಗಿರಿಯು, ಜಲಧಿಯುದರಿಂ ಹಿರಿದು
ಬಲುಹಿರಿದು ಮುಗಿಲು ಮುಗಿಲಿನಿಂ ಹಿರಿದಾಶೆ
ಬಲು ಮಿಗಿಲು ಮಿಗಿಲು ಪೂರ್ಣಜ್ಞ.

**ಪ್ರೀತಿ**

೩೧೮೬

ಭಕ್ತಿಶಕ್ತಿಯ ಸೆಲೆಯು, ಮುಕ್ತಿಗದುವೆ ನೆಲೆಯು
ವ್ಯಕ್ತಿತ್ವತುಂಬಿ ಸುಳಿದೆಗೆದು ಬೆಳೆವುದಕೆ
ಭಕ್ತಿಯೇಬೇಕು ಪೂರ್ಣಜ್ಞ.

೩೧೮೭

ಪರಿಶುದ್ಧ ಪ್ರೀತಿರಸ, ಪರಿಪೋಷಿಪುದು ಮನವ
ದರದಳಿತಹೃದಯ ಪರಿಮಳವ ಸೂಸುತ್ತ
ಅರಳುವದು ಪೂರ್ಣ ಪೂರ್ಣಜ್ಞ.

೩೧೮೮

ಪ್ರೀತಿ ಜೀವನರಸವು, ಪ್ರೀತಿಯಿಂ ಜನವಶವು
ಪ್ರೀತಿಯಿಲ್ಲದಿರೆ ಜಗದೈಶ್ವರ್ಯ ನೀರಸವು
ಪ್ರೀತಿಸುಖಜ್ಯೋತಿ ಪೂರ್ಣಜ್ಞ.

೩೧೮೯

**ಶ್ರಾವಣ**

ಶ್ರಾವಣದ ಆಗಮನ, ಜೀವನಕೆ ನವಚಲನ
ಭಾವರಸ ಪೂರ್ಣ ದಿವ್ಯಕೃತಿ ಸಂಜನನ
ಶ್ರಾವಣಕೆ ನಮನ ಪೂರ್ಣಜ್ಞ.

೩೧೯೦

ಶ್ರಾವಣದಿ ಮಳೆಮೋಡ, ಶ್ರಾವಣದಿ ನೆಲಸಿಹುದು
ಶ್ರಾವಣದಿ ಪುಣ್ಯ ಕಥೆಶ್ರವಣ ಮಠಗಳಲಿ
ಶ್ರಾವಣದ ಮಹಿಮೆ ಪೂರ್ಣಜ್ಞ.

೩೧೯೧

ಶ್ರಾವಣದ ಶುಭಮಾಸ, ಹೂವುಗಳ ಮಧುಮಾಸ
ಭಾವಜೀವಿಗದು ಭಾವರಸದವಿಲಾಸ
ಜೀವನೋತ್ಸಾಹ (ಜೀವನೋಲ್ಲಾಸ) ಪೂರ್ಣಜ್ಞ.

೩೧೯೨

ಶ್ರಾವಣವು ನೀಡುವದು, ಜೀವನಕೆ ಹೊಸಜೀವ
ನೋವಳಿಸುವದು ಮಾನವನ ಹೃನ್ಮನಕೆ
ಈವುದಾನಂದ ಪೂರ್ಣಜ್ಞ.

೩೧೯೩

ಜೋಕಾಲಿಯನ್ನೇರಿ ಜೀಕುವರು ಬಾಲಕರು
ಸಾಕಾಗುವಷ್ಟು ಉಂಡಿಗಳ ತಿನ್ನುತ್ತ
ಕೇಕೆ ಹೊಡೆಯುವರು ಪೂರ್ಣಜ್ಞ.

೩೧೯೪

ಕಾಡೆಲ್ಲ ಹಸಿರಾಗಿ, ನಾಡೆಲ್ಲ ಹೊಸದಾಗಿ
ಗೂಢತತ್ವಗಳ ಶೋಧನೆಗೆ ಶ್ರಾವಣವು
ನೀಡುವದು ಸ್ಫೂರ್ತಿ ಪೂರ್ಣಜ್ಞ.

**ಬೆಡಗಿನ ವಚನಗಳು**

೩೧೯೫

ಕಾವೇರಿ ನದಿಹೊಳಿಹ ಹಾವಿನಾ ಹಲ್ಗಳಿದು?
ಹಾವಿನಾಡಿಪನ ಮನದಲ್ಲಿತನಿಶಾಂತಿ
ಜೀವಭಯವಿಲ್ಲ ಪೂರ್ಣಜ್ಞ.

೩೧೯೬

ಚಿತ್ರದುರ್ಗದ ಗಿರಿಯು, ಸುತ್ತಿರುವ ಕೋಟೆಯುಲಿ
ಮೆತ್ತಿರುವ ಕೊಳೆಯ ಯುಕ್ತಿಯಿಂ ತೆಗೆದೊಗೆದು
ಎತ್ತರಕೆ ಏರು ಪೂರ್ಣಜ್ಞ.

೩೧೯೭

ಸೃಷ್ಟಿಯೊಳಗೆಲ್ಲೆಡೆಗೆ, ಕೆಟ್ಟ ಜಾಲಿಯ ಮುಳ್ಳು
ಕಟ್ಟೆಚ್ಚರದಲಿ ನಡೆವವನ ಬಾಳು ನಿ–
ಷ್ಕಂಟಕವು ನಿಜದಿ ಪೂರ್ಣಜ್ಞ.

೩೧೯೮

ಮೂರುಮಲಗಳ ತಿಂದು, ಆರು ಮಂದಿಯ ಕೊಂದು
ಆರು ಮಂದಿಯ ಸಂಗವನು ಮಾಡಿದರೆ
ಸೂರ್ಯನಲಿ ಬೆರೆವ ಪೂರ್ಣಾಜ್ಞ.

೩೧೯೯

ಬಿರುಗಾಳಿ ಬೀಸಿದರೆ, ಕೊರಗುಂಟು ಚಿತ್ತಕ್ಕೆ
ಅರಿವಿಲ್ಲ ಅಲ್ಲಿ ಕತ್ತಲದಿ ಸುತ್ತುತ್ತ
ತಿರುಗುವನು ಮರುಗಿ ಪೂರ್ಣಾಜ್ಞ.

೩೨೦೦

ಆರು ವರ್ಣದ ಪಕ್ಷಿ, ಮೂರು ವರ್ಣದ ಗೂಡು
ಭಾರಿ ಮರದಲ್ಲಿ ಕಟ್ಟಿ ಮರಿ ಇಟ್ಟಿಹುದು
"ಪಾರಮಾರ್ಥ"ವಿದು ಪೂರ್ಣಾಜ್ಞ.

**ಈಶ್ವರೀಯ ವಿಶ್ವವಿದ್ಯಾಲಯ**

೩೨೦೧

ಈಶ ಮನುಕುಲದ ಪಿತ, ಈಶನೇ ಸರ್ವಸ್ವ
ಈಶ್ವರೀ ವಿಶ್ವವಿದ್ಯಾಲಯಕೆ ಇದುವೆ
ಶಾಶ್ವತದ ಶ್ರದ್ಧೆ ಪೂರ್ಣಾಜ್ಞ.

೩೨೦೨

ಹರನೊಬ್ಬನೇ ಜಗಕೆ, ಪರದೈವ ಮತ್ತಿಲ್ಲ
ಬರಲಿರುವ ಯುಗವು ಶಿವಯುಗವು ಇದು ನಿಜವು
ಸ್ಥಿರವಿದೆಯೆನ್ನುವರು ಪೂರ್ಣಾಜ್ಞ.

೩೨೦೩

ಶುಭ್ರ ವಸ್ತ್ರವಧರಿಸಿ, ಶುಭ್ರಪಥದಲಿ ಚರಿಸಿ
ಶುಭ್ರ ಗೀತಗಳ ಬ್ರಹ್ಮಪುತ್ರಿಯರುಲಿದು
ಮಬ್ಬು ಕಳೆಯುವದು ಪೂರ್ಣಾಜ್ಞ.

೩೨೦೪

ಓಂ ಶಾಂತಿ ಮಂತ್ರವನು, ಶ್ವಾಸಿಪರಹೋರಾತ್ರಿ
ವಿಶ್ವಕ್ಕೆ ಶಾಂತಿ ಹಾರೈಸಿ ಸಜ್ಜನರು
ಈಶನಂ ನೆನೆದು ಪೂರ್ಣಜ್ಞ.

೩೨೦೫

ಅಬುಬೆಟ್ಟವೀ ಜನಕೆ, ಶುಭ ಶಕ್ತಿದಾಯಕವು
ಅಭಿಜಾತ ಪೂತ ಸಂಸ್ಕೃತಿಯ ಕಲಿಸುವದು
ಅಭಿರಾಮರಿವರು ಪೂರ್ಣಜ್ಞ.

೩೨೦೬

ರಾಜಯೋಗಕೆ ಇವರು, ರಾಜಮನ್ನಣೆ ಕೊಡುತ
ಓಜೆಯಿಂದೀ ಯೋಗ ಸತತ ಸಾಧಿಸುತ
ತೇಜ ಪೊಂದಿಹರು ಪೂರ್ಣಜ್ಞ.

೩೨೦೭

ಕರ್ಮಕ್ಷೇತ್ರಗಳೆಲ್ಲ, ಧರ್ಮಕ್ಷೇತ್ರಗಳೆಂದು
ಮರ್ಮವರಿಯುತ್ತ ಶಿವಕ್ಷೇತ್ರ ಮಾಡಿಹರು
ಧರ್ಮಮೂರ್ತಿಗಳು ಪೂರ್ಣಜ್ಞ.

೩೨೦೮

ಕಲ್ಲರಳಿ ಹೂವಾದ, ನಲ್ತೋಟ ಅಬುಬೆಟ್ಟ
ಎಲ್ಲರನು ಮೆಚ್ಚಿಸಿದೆ ಧ್ಯಾನಮಂದಿರವು
ಇಲ್ಲಿಹುದು ಶಕ್ತಿ ಪೂರ್ಣಜ್ಞ.

೩೨೦೯

ಭದ್ರಗಿರಿ ಅಚ್ಯುತರು, ಅಧ್ಯಾತ್ಮ ಪ್ರವಚನವ
ಶುದ್ಧಮನದಿಂದ ಪೇಳುತ್ತ ನಾಡನ್ನು
ತಿದ್ದುತ್ತಲಿಹರು ಪೂರ್ಣಜ್ಞ.

**ಪ್ರಾರ್ಥನೆ**

೩೨೧೦

ಓ ಎನ್ನ ಗುರುಸಿದ್ಧ, ವರಸಿದ್ಧ ಸಂಸಿದ್ಧ
ಓ ಎನ್ನ ತಪ್ಪನ್ನು ಮರೆತು ಕ್ಷಮಿಸಯ್ಯ
ಓ ಎನ್ನ ಗುರುವೆ ಪೂರ್ಣಜ್ಞ.

೩೨೧೧

ಮಂಗಲವ ನೀಡೆನಗೆ, ಮಂಗಲವು ದೇಶಕ್ಕೆ
ಮಂಗಲವ ಕೊಡುನೀನು ಸರ್ವರಿಗೆ ಮುದದಿ
ತುಂಗಶಕ್ತಿಯನು, ಪೂರ್ಣಜ್ಞ.

ಶುಭಂ.

# ಪಾರಿಭಾಷಿಕ ಶಬ್ದಗಳು

೧. **ತ್ರಿವಿಧ ಗುರು:** ೧. ದೀಕ್ಷಾಗುರು, ೨. ಶಿಕ್ಷಾಗುರು, ೩. ಮೋಕ್ಷಗುರು.
೨. **ತ್ರಿವಿಧ ದೀಕ್ಷೆ:** ೧. ಕ್ರಿಯಾದೀಕ್ಷೆ, ೨. ಮಂತ್ರದೀಕ್ಷೆ, ೩. ವೇದದೀಕ್ಷೆ.
೩. **ತ್ರಿವಿಧ ಮಲ:** ೧. ಕಾರ್ಮಿಕಮಲ, ೨. ಮಾಯಾಮಲ, ೩. ಆಣವಮಲ.
೪. **ತ್ರಿವಿಧ ಪ್ರಸಾದ:** ೧. ಶುದ್ಧಪ್ರಸಾದ, ೨. ಸಿದ್ಧಪ್ರಸಾದ, ೩. ಪ್ರಸಿದ್ಧಪ್ರಸಾದ.
೫. **ತ್ರಿವಿಧ ಪ್ರಸಾದಗಳು:** ೧. ಸಮಯ ಪ್ರಸಾದಿ, ೨. ನಿಚ್ಚಪ್ರಸಾದಿ, ೩. ಅಚ್ಚಪ್ರಸಾದಿ.
೬. **ತ್ರಿವಿಧಾರ್ಪಣ:** ೧. ಕಾಯಾರ್ಪಣ, ೨. ಕರಣಾರ್ಪಣ, ೩. ಭಾವಾರ್ಪಣ.
೭. **ತ್ರಿವಿಧತನು:** ೧. ಸ್ಥೂಲತನು, ೨. ಸೂಕ್ಷ್ಮತನು, ೩. ಕಾರಣತನು.
೮. **ಅಂಗತ್ರಯ:** ೧. ತ್ಯಾಗಾಂಗ, ೨. ಭೋಗಾಂಗ, ೩. ಯೋಗಾಂಗ.
೯. **ಭುವನತ್ರಯ:** ೧. ಸ್ವರ್ಗ, ೨. ಮರ್ತ್ಯ, ೩. ಪಾತಾಳ.
೧೦. **ಮೂರ್ತಿತ್ರಯ:** ೧. ಬ್ರಹ್ಮ, ೨. ವಿಷ್ಣು, ೩. ಮಹೇಶ್ವರ.
೧೧. **ಜೀವತ್ರಯ:** ೧. ವಿಶ್ವ, ೨. ತೈಜಸ, ೩. ಪ್ರಾಜ್ಞ.
೧೨. **ಈಷಣತ್ರಯ:** ೧. ದಾರೇಷಣ, ೨. ಪುತ್ರೇಷಣ, ೩. ವಿತ್ತೇಷಣ.
೧೩. **ಗುಣತ್ರಯ:** ೧. ಸತ್ವಗುಣ, ೨. ರಜೋಗುಣ, ೩. ತಮೋಗುಣ.
೧೪. **ಅಂತಕರಣಚತುಷ್ಟಯ:** ೧. ಮನ, ೨. ಬುದ್ಧಿ, ೩. ಚಿತ್ತ, ೪. ಅಹಂಕಾರ.
೧೫. **ಚತುರ್ವಿಧ ಅನುಭವ:** ೧. ಧ್ಯಾನ, ೨. ಮೌನ, ೩. ನಿತ್ಯ, ೪. ನೇಮ
೧೬. **ಪಂಚವಿಧ ವಿಭೂತಿ:** ೧. ಭಸಿತ, ೨. ಭೂತಿ, ೩. ಭಸ್ಮ, ೪. ಕ್ಷಾರ, ೫. ರಕ್ಷೆ.
೧೭. **ಪಂಚಕರ್ಮೇಂದ್ರಿಯ:** ೧. ಪಾದ, ೨. ಪಾಣಿ, ೩. ಗುದ, ೪. ಗುಹ್ಯ, ೫. ವಾಕ್.
೧೮. **ಪಂಚಜ್ಞಾನೇಂದ್ರಿಯ:** ೧. ಮೂಗು, ೨. ನಾಲಿಗೆ, ೩. ಕಣ್ಣು, ೪. ತ್ವಚ, ೫. ಕಿವಿ.
೧೯. **ಪಂಚವಾಯುಗಳು:** ೧. ಪ್ರಾಣ, ೨. ಅಪಾನ, ೩. ಉದಾನ, ೪. ಸಮಾನ. ೫. ವ್ಯಾನ.
೨೦. **ಪಂಚವಿಷಯಗಳು:** ೧. ಗಂಧ, ೨. ರೂಪ, ೩. ರಸ, ೪. ಸ್ಪರ್ಶ, ೫. ಶಬ್ದ.
೨೧. **ಪಂಚಭೂತಗಳು:** ೧. ಪೃಥ್ವಿ, ೨. ಅಪ್ಪು, ೩. ತೇಜ, ೪. ವಾಯು, ೫. ಆಕಾಶ.
೨೨. **ಷಟ್‌ಸ್ಥಲಗಳು:** ೧. ಭಕ್ತ, ೨. ಮಹೇಶ, ೩. ಪ್ರಸಾದಿ, ೪. ಪ್ರಾಣಲಿಂಗಿ, ೫. ಶರಣ, ೬. ಐಕ್ಯ.

೨೩. **ಷಡ್ವಿಧಭಕ್ತಿ:** ೧. ಶ್ರದ್ಧಾ, ೨. ನಿಷ್ಠಾ, ೩. ಅವಧಾನ, ೪. ಅನುಭವ ೫. ಆನಂದ, ೬. ಸಮರಸ.

೨೪. **ಅಷ್ಟಾವರಣ:** ೧. ಗುರು, ೨. ಲಿಂಗ ೩. ಜಂಗಮ, ೪. ಪಾದೋದಕ, ೫. ಪ್ರಸಾದ, ೬. ವಿಭೂತಿ, ೭. ರುದ್ರಾಕ್ಷಿ, ೮. ಮಂತ್ರ.

೨೫. **ಅಷ್ಟವಿಧಾರ್ಚನೆ:** ೧. ಭಸ್ಮ, ೨. ಗಂಧ, ೩. ಅಕ್ಷತೆ, ೪. ಪತ್ರಿ, ೫. ಪುಷ್ಪ, ೬. ಧೂಪ, ೭. ದೀಪ, ೮. ನೈವೇದ್ಯ.

೨೬. **ಅಷ್ಟೈಶ್ವರ್ಯ:** ೧. ರಾಜ್ಯ, ೨. ಭಾಂಡಾರ, ೩. ಸೈನ್ಯ, ೪. ಆನೆ, ೫. ಕುದುರೆ, ೬. ಛತ್ರ, ೭. ಚಾಮರ, ೮. ಆಂದೋಲನ.

೨೭. **ಅಷ್ಟಸಿದ್ಧಿಗಳು:** ೧. ಅಣಿಮಾ, ೨. ಮಹಿಮಾ, ೩. ಗರಿಮಾ, ೪. ಲಘಿಮಾ, ೫. ಪ್ರಾಪ್ತಿ, ೬. ಪ್ರಾಕಾಮ್ಯ, ೭. ಈಶತ್ವ, ೮. ವಶಿತ್ವ.

೨೮. **ಅಷ್ಟಭೋಗಗಳು:** ೧. ಮನೆ, ೨. ಹಾಸಿಕ, ೩. ವಸ್ತ್ರ, ೪. ಆಭರಣ, ೫. ಸ್ತ್ರೀ, ೬. ಪುಷ್ಪ, ೭. ಗಂಧ, ೮. ತಾಂಬೂಲ.

೨೯. **ದಶವಿಧ ಪಾದೋದಕ:** ೧. ಗುರು ಪಾದೋದಕ, ೨. ಲಿಂಗೋದಕ, ೩. ಜಂಗಮ ಪಾದೋದಕ, ೪. ಸ್ಪರ್ಶನೋದಕ, ೫. ಅವಧಾನೋದಕ, ೬. ಅಪ್ಯಾಯನೋದಕ, ೭. ಹಸ್ತೋದಕ, ೮. ಪರಿಣಾಮೋದಕ, ೯. ನಿರ್ನಾಮೋದಕ, ೧೦. ಸತ್ಯೋದಕ.

೩೦. **ಪಂಚವಿಂಶ–ತತ್ವ:** ೧. ಪಂಚ ಕರ್ಮೇಂದ್ರಿಯ, ೨. ಪಂಚಜ್ಞಾನೇಂದ್ರಿಯ, ೩. ಪಂಚವಿಷಯಗಳು, ೪. ಪಂಚವಾಯುಗಳು, ೫. ಪಂಚ ಕರಣಂಗಳು–೨೫.

೩೧. **ಮೂವತ್ತಾರು ತತ್ವಗಳು:** ೧. ಶಿವ, ೨. ಶಕ್ತಿ, ೩. ಸದಾಶಿವ, ೪. ಈಶ್ವರ, ೫. ಶುದ್ಧ ವಿದ್ಯಾ, ೬. ಮಾಯಾ, ೭. ಕಲಾ, ೮. ವಿದ್ಯಾ, ೯. ರಾಗ, ೧೦. ಕಾಲ, ೧೧. ನಿಯತಿ, ೧೨. ಪುರುಷ, ೧೩. ಪ್ರಕೃತಿ, ೧೪. ಬುದ್ಧಿ, ೧೫. ಅಹಂಕಾರ, ೧೬. ಮನ, ೧೭. ಶ್ರೋತೃ, ೧೮. ತ್ವಕ್, ೧೯. ನೇತ್ರ, ೨೦. ಜಿಹ್ವಾ, ೨೧. ಘ್ರಾಣ, ೨೨. ವಾಕ್, ೨೩. ಪಾಣಿ, ೨೪. ಪಾದ, ೨೫. ಪಾಯು, ೨೬. ಉಪಸ್ಥ, ೨೭. ಶಬ್ದ, ೨೮. ಸ್ಪರ್ಶ, ೨೯. ರೂಪ, ೩೦. ರಸ. ೩೧. ಗಂಧ, ೩೨. ಆಕಾಶ, ೩೩. ವಾಯು, ೩೪. ಅಗ್ನಿ, ೩೫. ಜಲ, ೩೬. ಪೃಥ್ವಿ.

೩೨. **ಸಪ್ತ ವ್ಯಸನಗಳು:** ೧. ಸನುವ್ಯಸನ, ೨. ಮನೋವ್ಯಸನ, ೩. ಕ್ರೋಧವ್ಯಸನ, ೪. ವಿಷಯುವ್ಯಸನ, ೫. ಧನವ್ಯಸನ, ೬. ರಾಜ್ಯವ್ಯಸನ, ೭. ಸೇವಕವ್ಯಸನ.

೩೩. **ಅಷ್ಟ ಮದಗಳು:** ೧. ಕುಲಮದ, ೨. ಶೀಲಮದ, ೩. ಧನಮದ, ೪. ರೂಪ ಮದ, ೫. ಯೌವನಮದ ೬. ವಿದ್ಯಾಮದ, ೭. ತಪೋಮದ, ೮. ರಾಜ್ಯ ಮದ.

೩೪. **ಷಡ್ವೈರಿಗಳು**: ೧. ಕಾಮ, ೨. ಕ್ರೋಧ, ೩. ಲೋಭ, ೪. ಮೋಹ, ೫. ಮದ, ೬. ಮತ್ಸರ.

೩೫. **ಪಂಚ ಕ್ಲೇಶಗಳು**: ೧. ಅವಿದ್ಯೆ, ೨. ಅಸ್ಮಿತ, ೩. ರಾಗ, ೪. ದ್ವೇಷ, ೫. ಅಭಿನಿವೇಶ.

೩೬. **ತಾಪತ್ರಯ**: ೧. ಅಧ್ಯಾತ್ಮಿಕ, ೨. ಆದಿಭೌತಿಕ, ೩. ಅಧಿದೈವಿಕ.

೩೭. **ಪಂಚಾಚಾರಗಳು**: ೧. ಲಿಂಗಾಚಾರ, ೨. ಸದಾಚಾರ, ೩. ಶಿವಾಚಾರ, ೪. ಗಣಾಚಾರ, ೫. ಭೃತ್ಯಾಚಾರ.

೩೮. **ಕರಣತ್ರಯ**: ೧. ಮನಸ್ಸು, ೨. ವಚನ, ೩. ಕಾಯ.

೩೯. **ಷಡೂರ್ಮಿಗಳು**: ೧. ಜನ್ಮ, ೨. ಮರಣ, ೩. ಕ್ಷುದಾ, ೪. ತೃಷಾ, ೫. ಹರ್ಷ, ೬. ಶೋಕ.

೪೦. **ಲಿಂಗತ್ರಯ**: ೧. ಇಷ್ಟಲಿಂಗ, ೨. ಪ್ರಾಣಲಿಂಗ, ೩. ಭಾವಲಿಂಗ.

೪೧. **ತ್ರಿವಿಧಕರ್ಮ**: ೧. ಸಂಚಿತಕರ್ಮ, ೨. ಆಗಾಮಿಕರ್ಮ, ೩. ಪ್ರಾರಬ್ಧಕರ್ಮ.

೪೨. **ಏಕೋತ್ತರ ಶತಸ್ಥಲ**: ೧. ಪಿಂಡಸ್ಥಲ, ೨. ಪಿಂಡಜ್ಞಾನಸ್ಥಲ, ೩. ಸಂಸಾರ ಹೇಯಸ್ಥಲ, ೪. ಗುರುಕಾರುಣ್ಯಸ್ಥಲ, ೫. ಲಿಂಗಧಾರಣ ಸ್ಥಲ, ೬. ಭಸ್ಮ ಧಾರಣಸ್ಥಲ, ೭. ರುದ್ರಾಕ್ಷಿಧಾರಣ ಸ್ಥಲ, ೮. ಮಂತ್ರ ಜಪಸ್ಥಲ, ೯. ಭಕ್ತಿ ಮಾರ್ಗ ಕ್ರಿಯಾಸ್ಥಲ, ೧೦. ಉಭಯ ಸ್ಥಲ, ೧೧. ತ್ರಿವಿಧ ಸಂಪತ್ತಿಸ್ಥಲ. ೧೨. ಚತುರ್ವಿಧ ಸಾರಾಯ ಸ್ಥಲ, ೧೩. ಸೋಪಾಧಿ ದಾನ (ಉಪಾಧಿ ಮಾಟ) ಸ್ಥಲ, ೧೪. ನಿರುಪಾಧಿದಾನ (ನಿರುಪಾಧಿ ಮಾಟ) ಸ್ಥಿತಿ. ೧೫. ಸಹಜದಾನ (ಸಹಜಮಾಟ) ಸ್ಥಲ, ೧೬. ದೀಕ್ಷಾ ಗುರುಸ್ಥಲ, ೧೭. ಶಿಕ್ಷಾ ಗುರುಸ್ಥಲ, ೧೮. ಜ್ಞಾನ ಗುರುಸ್ಥಲ, ೧೯. ಕ್ರಿಯಾ ಲಿಂಗಸ್ಥಲ, ೨೦. ಭಾವ ಲಿಂಗಸ್ಥಲ, ೨೧. ಜ್ಞಾನಲಿಂಗಸ್ಥಲ, ೨೨. ಸ್ವಯ ಜಂಗಮಸ್ಥಲ, ೨೩. ಚರ ಜಂಗಮಸ್ಥಲ, ೨೪. ಪರ ಜಂಗಮಸ್ಥಲ, ೨೫. ಮಹೇಶ ಪ್ರಶಂಸಾ ಸ್ಥಲ, ೨೬. ಲಿಂಗ ನಿಷ್ಠಾಸ್ಥಲ, ೨೭. ಪೂರ್ವಾಶ್ರಮ ನಿರಸನಸ್ಥಲ, ೨೮. ಸರ್ವಾದ್ವೈತ ನಿರಸನಸ್ಥಲ, ೨೯. ಆಹ್ವಾನ ವಿಸರ್ಜನ ನಿರಸನಸ್ಥಲ, ೩೦. ಅಷ್ಟ ಮೂರ್ತಿ ನಿರಸನಸ್ಥಲ, ೩೧. ಸರ್ವತತ್ವ ನಿರಸನಸ್ಥಲ, ೩೨. ಶಿವ ಜಗಮನ್ಮಯಸ್ಥಲ, ೩೩. ಭಕ್ತದೇಹಿಕ ಲಿಂಗಸ್ಥಲ, ೩೪. ಕ್ರಿಯಾಗಮಸ್ಥಲ, ೩೫. ಭಾವಾಗಮಸ್ಥಲ, ೩೬. ಜ್ಞಾನಾಗಮಸ್ಥಲ, ೩೭. ಸಕಾಯಸ್ಥಲ, ೩೮. ಅಕಾಯಸ್ಥಲ, ೩೯. ಪರಕಾಯಸ್ಥಲ, ೪೦. ಧರ್ಮಾಚಾರಸ್ಥಲ, ೪೧. ಭಾವಾಚಾರ ಸ್ಥಲ, ೪೨. ಜ್ಞಾನಾಚಾರಸ್ಥಲ, ೪೩. ಪ್ರಸಾವಸ್ಥಲ, ೪೪. ಗುರುಮಹಾತ್ಮ್ಯಸ್ಥಲ, ೪೫. ಲಿಂಗಮಹಾತ್ಮ್ಯಸ್ಥಲ, ೪೬. ಜಂಗಮ ಮಹಾತ್ಮ್ಯಸ್ಥಲ, ೪೭. ಭಕ್ತಮಹಾತ್ಮ್ಯಸ್ಥಲ, ೪೮. ಶರಣ ಮಹಾತ್ಮ್ಯ,

ಸ್ಥಲ, ೪೯. ಪ್ರಸಾದ ಮಹಾತ್ಮ್ಯಸ್ಥಲ, ೫೦. ಕಾಯಾನುಗ್ರಹಸ್ಥಲ, ೫೧. ಇಂದ್ರಿಯಾನುಗ್ರಹಸ್ಥಲ, ೫೨. ಪ್ರಾಣಾನುಗ್ರಹಸ್ಥಲ, ೫೩. ಕಾಯಾರ್ಪಣಸ್ಥಲ, ೫೪. ಕರಣಾರ್ಪಣಸ್ಥಲ, ೫೫. ಭಾವಾರ್ಪಣಸ್ಥಲ, ೫೬. ಶಿಷ್ಯಸ್ಥಲ, ೫೭. ಶುಶ್ರೂಷಾಸ್ಥಲ, ೫೮. ಸೇವ್ಯಸ್ಥಲ, ೫೯. ಪ್ರಾಣಲಿಂಗಿಸ್ಥಲ, ೬೦. ಪ್ರಾಣಲಿಂಗಾರ್ಚನಾಸ್ಥಲ, ೬೧. ಶಿವಯೋಗ ಸಮಾಧಿಸ್ಥಲ, ೬೨. ಲಿಂಗನಿಜಸ್ಥಲ, ೬೩. ಅಂಗ ಲಿಂಗಸ್ಥಲ, ೬೪. ಆತ್ಮಸ್ಥಲ, ೬೫. ಅಂತರಾತ್ಮಸ್ಥಲ, ೬೬. ಪರಮಾತ್ಮಸ್ಥಲ, ೬೭. ನಿರ್ದೇಹಾಗಮಸ್ಥಲ, ೬೮. ನಿರ್ಭಾವಾಗಮಸ್ಥಲ, ೬೯. ನಷ್ಟಾಗಮಸ್ಥಲ, ೭೦. ಆದಿ ಪ್ರಸಾದಿಸ್ಥಲ, ೭೧. ಅಂತ್ಯ ಪ್ರಸಾದಿಸ್ಥಲ, ೭೨. ಸೇವ್ಯ ಪ್ರಸಾದಿಸ್ಥಲ, ೭೩. ಶರಣಸ್ಥಲ, ೭೪. ತಾಮಸ ನಿರಸನಸ್ಥಲ, ೭೫. ನಿರ್ದೇಶಸ್ಥಲ, ೭೬. ಶಿಕ್ಷಾಪಾದೋದಕಸ್ಥಲ, ೭೭. ಶೀಲ ಸಂಪಾದನಸ್ಥಲ, ೭೮. ದೀಕ್ಷಾಪಾದೋದಕಸ್ಥಲ, ೭೯. ಜ್ಞಾನ ಪಾದೋದಕಸ್ಥಲ, ೮೦. ಕ್ರಿಯಾ ನಿಷ್ಪತ್ತಿಸ್ಥಲ, ೮೧. ಭಾವ ನಿಷ್ಪತ್ತಿಸ್ಥಲ, ೮೨. ಜ್ಞಾನ ನಿಷ್ಪತ್ತಿಸ್ಥಲ, ೮೩. ಪಿಂಡಾಕಾಶಸ್ಥಲ, ೮೪. ಬಿಂದ್ವಾಕಾಶಸ್ಥಲ, ೮೫. ಮಹಾಕಾಶಸ್ಥಲ, ೮೬. ಕ್ರಿಯಾಪ್ರಕಾಶಸ್ಥಲ, ೮೭. ಭಾವಪ್ರಕಾಶಸ್ಥಲ, ೮೮. ಜ್ಞಾನಪ್ರಕಾಶಸ್ಥಲ, ೮೯. ಐಕ್ಯಸ್ಥಲ, ೯೦. ಆಚಾರ ಸಂಪತ್ತಿ ಸ್ಥಲ, ೯೧. ಏಕ ಭಾಜನಸ್ಥಲ, ೯೨. ಸಹಭಾಜನಸ್ಥಲ, ೯೩. ಸ್ವೀಕೃತಿ ಪ್ರಸಾದಸ್ಥಲ, ೯೪. ಶಿಷ್ಟಾದನಸ್ಥಲ, ೯೫. ಚರಾಚರ ಲಯಸ್ಥಲ, ೯೬. ಭಾಂಡಸ್ಥಲ, ೯೭. ಭಾಜನಸ್ಥಲ, ೯೮. ಅಂಗಾಲೇಪನಸ್ಥಲ, ೯೯. ಸ್ವಪರಾಜ್ಞಸ್ಥಲ, ೧೦೦. ಭಾವಾಭಾವ ಲಯಸ್ಥಲ, ೧೦೧. ಜ್ಞಾನ ಶೂನ್ಯಸ್ಥಲ.

# ಪೂರ್ಣಜ್ಞ ವಚನಗಳು: ಸಾಮಾಜಿಕ ಸಮಾವಲೋಕನ

ಕನ್ನಡ ಅಧ್ಯಯನ ಪೀಠ:
ಕುವೆಂಪು ವಿಶ್ವವಿದ್ಯಾನಿಲಯ
ಬಿ. ಆರ್. ಪ್ರಾಜೆಕ್ಟ–೫೭೭೧೧೫

ಪ್ರೊ. ಸಿ. ಎಸ್. ಶಿವಕುಮಾರಸ್ವಾಮಿ
[ಕುಮಾರಚಲ್ಯ]

ಮೊದಲ ನೋಟದಲ್ಲಿಯೇ ಈ ಕೃತಿ ಎರಡು ಕಾರಣಕ್ಕಾಗಿ ಗಮನ ಸೆಳೆಯುತ್ತದೆ. ಒಂದು, ಇವು ವಚನಗಳು ಎಂಬುದು. ಎರಡು, 'ಪೂರ್ಣಜ್ಞ' ಎಂಬ ಹೆಸರು.

ವಚನಗಳು ಎಂದ ಕೂಡಲೇ, ನಿಜವಾದ ಓದುಗನ ಎದುರು ಹನ್ನೆರಡನೆಯ ಶತಮಾನ ತೆರೆದುಕೊಳ್ಳುತ್ತದೆ. ಅದು ಒಂದು ಆಂದೋಲನ ಯುಗ. ಸಾಮಾಜಿಕ ವಿಷಮತೆಗಳ ವಿರುದ್ಧ ಒಂದು ಸಾತ್ವಿಕ ಹೋರಾಟವೇ ಅಂದು ನಡೆಯಿತು. ಜಡಗಟ್ಟಿ ಹೋಗಿದ್ದ ಸಂಪ್ರದಾಯಶೀಲ ಸಮಾಜವನ್ನು ತಿದ್ದಿ, ಅಸಮಾನತೆ; ಮೂಢನಂಬಿಕೆ– ಇವುಗಳ ವಿರುದ್ಧ ಬಂಡಾಯ ಹೂಡಿದ ಕಾಲವದು. ಕ್ರಾಂತಿಯೆಂಬ ಸೋಗಿನಲ್ಲಿ ರಕ್ತ ಪಾತಕ್ಕೆ ಅವಕಾಶ ಮಾಡಿಕೊಟ್ಟ ಪ್ರತಿಭಟನೆ ಆದಾಗಿರಲಿಲ್ಲ. ಸಾಮಾಜಿಕರನ್ನು ಬದುಕಿನ ಬಗ್ಗೆ ಎಚ್ಚರಿಸುತ್ತ; ಅವರಲ್ಲಿ ಬಲವಾಗಿ ಬೇರೂರಿದ್ದ ಜಾತಿ ವೈಷಮ್ಯ, ಅಸಹಕಾರ ಮನೋಭಾವನೆಯನ್ನು ತೊಡೆದುಹಾಕಿದ ಶತಮಾನವದು. ಇಂಥ ಪ್ರಯತ್ನವನ್ನು ಕೆಲವು ಮುಖಂಡರು ಮಾಡಿದರು. ಅಧಿಕಾರ ದಾಹವಿಲ್ಲದ ನಿಸ್ವಾರ್ಥ ಮುಖಂಡತ್ವವನ್ನು ಅಲ್ಲಮಪ್ರಭು, ಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ–ಮೊದಲಾದವರು ವಹಿಸಿದರು. ಅವರು ಆ ಕಾಲದ ಬದುಕಿನ ಬಗೆಗೆ ತೀವ್ರವಾಗಿ ಸ್ಪಂದಿಸಿದರು. ಅಂದಿನ ಜೀವನಕ್ರಮ ವನ್ನು ಕುರಿತು ಏಕಮುಖವಾಗಿ ಆಲೋಚಿಸದೆ; ಬಹುಮುಖವಾಗಿ ಚಿಂತನೆ ನಡೆಸಿದರು. ಸಂವೇದನಾಶೀಲ ಮನಸ್ಸುಳ್ಳ ವಚನಕಾರರು ನಿಜವಾದ ಬದುಕಿನ ಅರ್ಥವನ್ನು ಸಾಮಾನ್ಯ ಜನತೆಯ ಮುಂದೆ ಸುಲಭ ಭಾಷೆಯಲ್ಲಿ ರಚಿಸಿದರು. ಆ ಕಾಲದ ಸಾಮಾಜಿಕ ಸ್ವರೂಪ ವನ್ನು ಕುರಿತು ಆಲೋಚಿಸಲು 'ಅನುಭವಮಂಟಪ' ಎಂಬ ವಿಚಾರ ವೇದಿಕೆ ಸಿದ್ಧ ವಾಯಿತು. ಕರ್ನಾಟಕದಲ್ಲಿ ನಡೆದ ಮೊಟ್ಟಮೊದಲ ವಿಚಾರಗೋಷ್ಠಿ ಇದೇ ಇರಬೇಕು. ಹೀಗಾಗಿ, ವಚನ ಸಾಹಿತ್ಯ ಮೊಟ್ಟಮೊದಲ ವಿಚಾರ ಸಾಹಿತ್ಯವಾಯಿತು. ಹನ್ನೆರಡನೆಯ ಶತಮಾನದ ವಚನಕಾರರ ಭಕ್ತಿ ಮಾರ್ಗ, ವಿಚಾರ ಪ್ರಣಾಳಿ ಮತ್ತು ದೇಸಿ ಅಭಿವ್ಯಕ್ತಿ ಈ ವಚನಗಳಲ್ಲೂ ವ್ಯಕ್ತವಾಗಿದೆ. ಈ ಕೃತಿಯಲ್ಲಿ ಅನೇಕ ಯಶಸ್ವಿ ವಚನಗಳಿವೆ.

'ಪೂರ್ಣಜ್ಞ' ಎಂಬುದು ಸರ್ವಜ್ಞನ ನೆನಪು ತರುತ್ತದೆ. ಸರ್ವಜ್ಞ ಜನಪ್ರಿಯ ವಚನಕಾರ. ಆತನ ವಚನಗಳು ಇಂದಿಗೂ ಜನಸಾಮಾನ್ಯರ ಸ್ಮೃತಿಯಲ್ಲಿ ಅಳಿಯದೇ ಉಳಿದಿವೆ. ಅವನ ವಚನಗಳಲ್ಲಿ ಆ ಕಾಲದ ಬದುಕಿನ ವ್ಯಾಖ್ಯಾನವಿದೆ; ಸಾರ್ವಕಾಲಿಕ

ವಿಚಾರ ಸರಣಿಯಿದೆ; ಲಲಿತ–ಪ್ರಸನ್ನವಾದ ಭಾಷಾಬಂಧವಿದೆ. ಸರ್ವಜ್ಞನ ಈ ಮಾರ್ಗವನ್ನು ಅನುಸರಿಸಿ ಬೆಳೆಯಬೇಕೆನ್ನುವ ಮಹತ್ವಾಕಾಂಕ್ಷೆಯಷ್ಟೇ 'ಪೂರ್ಣಜ್ಞ'ನೆಂಬ ಹೆಸರಿಗೆ ಕಾರಣ. ಈ ಹೆಸರಿನಲ್ಲಿ ನಾನು ಎಲ್ಲವನ್ನೂ ತಿಳಿದವನು ಎಂಬ 'ಅಹಂ' ಇಲ್ಲ:

"ಪೂರ್ಣಜ್ಞ"ನೆಂದೊಡನೆ ಪೂರ್ಣದರಿವಿನ ನುಡಿಯು
ಪೂರ್ಣತುಂಬಿಹುದೆಂದು ಬಗೆಯ ಬೇಡಿರಿದು
ಪೂರ್ಣಕ್ಕೆ ಪಥವು ಪೂರ್ಣಜ್ಞ. (ವ. ೧೦)

–ಎಂಬಲ್ಲಿ ವಿನಯವಿದೆ. ಸರ್ವಜ್ಞನ ಮಾದರಿಯಲ್ಲಿ ವಚನಗಳನ್ನು ಬರೆದಿರುವುದು ಆತನಿಗೆ ಸರಿಸಾಟಿಯಾಗುವೆನೆಂಬ ಧಾರ್ಷ್ಟ್ಯ ಭಾವದಲ್ಲಲ್ಲ. ಇದು ಸರ್ವರೊಳಗೆ ಒಂದಾಗಿ, ಪೂರ್ಣ ಬದುಕನ್ನು ತಿಳಿಯುವ ಮಾರ್ಗಾನ್ವೇಷಣೆ:

"ಸರ್ವಜ್ಞ"ನಂದದಲಿ ಸರ್ವರೊಳಗೊಂದೊಂದ–
ಪೂರ್ವ ನುಡಿಗಲಿತು ತ್ರಿಪದಿ ರಚಿಸುವ ಕಾರ್ಯ
ನಿರ್ವಿಘ್ನಗೊಳಿಸು ಪೂರ್ಣಜ್ಞ. (ವ. ೧೧)

ಲೋಕಾನುಭವವನ್ನು ಪಡೆದು, ಆ ಅನುಭವದ ಸಾರವನ್ನು ಲೋಕದ ಹಿತಕ್ಕೇ ವಿನಿಯೋಗಿಸುವ ಹಂಬಲ ಇಲ್ಲಿಯ ವಚನಗಳಲ್ಲಿ ವ್ಯಕ್ತವಾಗಿದೆ. ಇಂಥ ಸಮಾಜ ಕಾರ್ಯಗಳಿಗೆ ತೊಡಗುವಲ್ಲಿ ಜೀವನ ನಿಷ್ಠೆ, ಮಾನವೀಯತೆ, ಸಹೃದಯತೆ ಹಾಗೂ ಪ್ರಾಮಾಣಿಕತೆ ಬೇಕು. ನಟನೆ, ಡಾಂಭಿಕತನ–ಇವುಗಳಿಂದ ಲೋಕೋದ್ಧಾರ ಸಾಧ್ಯವಿಲ್ಲ.

ಸಿಹಿಯೂಟ ಸಿಹಿ ಮಾತು ಸುಹೃದಯಕೆ ಲೇಸಕ್ಕು
ಸಿಹಿ ಮಾತಿನೊಳಗೆ ಕೃತಕ ಬೆರೆತಿದ್ದರದು
ಕಹಿ ಕಾಳಕೂಟ ಪೂರ್ಣಜ್ಞ. (ವ. ೧೭)

ಧರ್ಮಬಾಹಿರವಾದ ಸಮಾಜಸೇವೆ, ಧರ್ಮವಿಲ್ಲದಿಹ ಗುರುಸ್ಥಾನ–ಇವುಗಳಿಂದ 'ಲೋಕ ಜನಹಿತ' ದೊರೆಯದು. ಇಂಥವರನ್ನು 'ಸಮಾಜ ಕ್ಷೇಮ ಕಂಟಕರು' (ವ. ೧೮) ಎನ್ನಲಾಗಿದೆ. ಸಮಾಜದ ಉದ್ಧಾರಕ್ಕಾಗಿ ಪಣ ತೊಟ್ಟವನು, ತನ್ನ ಪರಿಷ್ಕಾರವನ್ನೇ ಮೊದಲು ಮಾಡಿಕೊಳ್ಳಬೇಕು. ಮಾಡುವ ಕೆಲಸದಲ್ಲಿ ಏಕಾಗ್ರತೆ, ಚಿತ್ತ ಸ್ವಾಸ್ಥ್ಯವನ್ನು ಕಾಪಾಡಿಕೊಂಡರೆ ಮಾತ್ರ ಜೀವನ ಪರವಾದ ಹೋರಾಟಗಳನ್ನು ಮಾಡಲು ಸಾಧ್ಯ. ಪ್ರಸ್ತುತ ಸಮಾಜವನ್ನು ತಿದ್ದಬೇಕೆಂಬ ನಿಜವಾದ ಕಾಳಜಿ ಇರುವವರಿಗೆ ಪೂರ್ಣಜ್ಞ ವಚನಗಳು ಅನೇಕ ಸಲಹೆ, ಮಾರ್ಗದರ್ಶನವನ್ನು ನೀಡುತ್ತವೆ: 'ಬರೆವವರು ಬಹಳ ಜನ, ಧರಣಿಯೊಳು ತುಂಬಿಹರು, ಬರಹದಂತಿರುವ ಜನರೆಷ್ಟು ಗುರುದೇವ? (ವ. ೩೩) ಎಂಬ ಪ್ರಶ್ನೆ ಇಂದಿನ ಬರಹಗಾರರಿಗೆ ಹಾಕಿರುವ 'ಮುಂಡಿಗೆ'. ಕೃತಿಗೂ, ನಡತೆಗೂ ಬಹಳ ಅಂತರವನ್ನು ಸೃಷ್ಟಿಸಿಕೊಂಡೇ ದೊಡ್ಡವರೆನಿಸಿಕೊಂಡಿರುವ ಇಂದಿನ ಲೇಖಕರು ಈ ಬಗ್ಗೆ ಯೋಚಿಸಬೇಕು! 'ಅಪ್ಪ ಗತಿ ನೀವೆಂದು ಒಪ್ಪುವ ಮಾತಾಡಿ, ಜಪ್ಪಿಸುತ ನಿಂದು

ಬೆನ್ನಿರಿಯುವರು ಜಗದಿ ಗುಪ್ತ ಶತ್ರುಗಳು ಪೂರ್ಣಜ್ಞ'–(ವ. ೩೫) ಎಂಬಲ್ಲಿ ಬಳಕೆಯಾಗಿರುವ 'ಗುಪ್ತ ಶತ್ರು' ಎಂಬ ಉಕ್ತಿ ತುಂಬಾ ಅರ್ಥಪೂರ್ಣವಾದುದು. ಈ ಶತ್ರುಗಳಿಂದ ಸಮಾಜ–ಖಿಲವಾಗುವುದರ ಬಗ್ಗೆ ವಚನಕಾರನ ಅನುತಾಪವಿದೆ.

ಪ್ರಸ್ತುತ ಸಮಾಜದ ಎಲ್ಲ ಕಡೆ 'ನೀತಿ ಹೆಣ ಜೋತಾಡುತಿಹುದು'! (ವ. ೨೪) ಜಾತಿಯೆಂಬ ನೇಣುಗಂಬದಲ್ಲಿ ನೀತಿಯೆಂಬ ಹೆಣ ಜೋತಾಡುವ ಚಿತ್ರ ಅಪೂರ್ವ ಶಬ್ದ ಚಿತ್ರವಾಗಿ ಇಲ್ಲಿ ಮೂಡಿದೆ. ನೀತಿ-ನಿಯತ್ತುಗಳು ಅಪರೂಪವೆನಿಸಿರುವ ಕಾಲವಿದು. ವಚನಕಾರರು ಈ ನಿಟ್ಟಿನಲ್ಲಿ ಬಹಳಷ್ಟು ಹೋರಾಟ ನಡೆಸಿದರು. ಆದರೂ, ಈ ದೇಶದಲ್ಲಿ ಜಾತಿವಿನಾಶ ಆಗಲೇ ಇಲ್ಲ. 'ನೀತಿ ಜ್ಯೋತಿಯ ಬೆಳಗಿ, ಜಾತಿ ತಮವನು ಕಳೆದು, ಪ್ರೀತಿ ಗಂಗೆಯುಲಿ ಮಿಂದೊಡನೆ ಭಾರತದ, ಖ್ಯಾತಿ ಬೆಳೆದಪ್ಪುದು ಪೂರ್ಣಜ್ಞ' (ವ. ೧೧೪)–ಇದು ಭಾರತೀಯರ ನಿಡುಗಾಲದ ನಿರೀಕ್ಷೆ! ಮನುಷ್ಯನ ಸ್ವಾರ್ಥಕ್ಕೂ ಜಾತಿಗೂ ಬಿಡಿಸಲಾರದ ನಂಟು. ಸ್ವಾರ್ಥಿಗಳ 'ಧೂರ್ತ'ತನ ಭರತ ಖಂಡವನ್ನು ಆಳುತ್ತಲೇ ಇದೆ; ನಯವಂಚಕರ ಸಾಲು ಸಾಲು ದಟ್ಟಣೆಸುತ್ತಿದೆ. ಆ ಬಗ್ಗೆ ವಚನಕಾರನ ಕೊರಗು ಇಂತಿದೆ:

೧. ಸ್ವಾರ್ಥ ಸಾಧನೆಗಾಗಿ, ಹತ್ತೆಂಟು ಜಾತಿಗಳ
ಸ್ವಾರ್ಥಿಗಳು ರಚಿಸಿ ಮುಗ್ಧರನು ನೂಕಿಹರು
ಕತ್ತಲೆಯು ಗವಿಗೆ ಪೂರ್ಣಜ್ಞ. (ವ. ೨೧೦)

೨. ಜಾತ್ಯತೀತರು ಎಂದು, ಜಾತಿಯನು ಬಿಟ್ಟಿಲ್ಲ;
ಜಾತಿ ಜಗಳಗಳು ಉಲ್ಬಣಿಸಿ ಭಾರತಕೆ
ಘಾತವಾಗಿಹುದು ಪೂರ್ಣಜ್ಞ. (ವ. ೨೧೧)

ಸ್ವಾರ್ಥ ಹಿತಕ್ಕಾಗಿ ಸಲ್ಲದ ಪ್ರತಿಷ್ಠೆ ಮಾಡುವ ಕ್ಷುಲ್ಲಕ ಜನರ ಹಾವಳಿ ಹೆಚ್ಚಿದೆ: 'ಸಲ್ಲದ ಪ್ರತಿಷ್ಠೆಯನು, ಕ್ಷುಲ್ಲಕರಪೇಕ್ಷಿಪರು ಎಲ್ಲವೂ ತಮಗೆ ಬೇಕೆಂದು ಹಂಬಲಿಸಿ, ಜೊಲ್ಲು ಸುರಿಸುವರು! ಪೂರ್ಣಜ್ಞ' (ವ. ೩೧೨)–ಎಂದು ವಚನಕಾರ ಇಂಥವರ ಸ್ವಭಾವ ಚಿತ್ರಗಳನ್ನು ನೀಡುತ್ತಾನೆ:

೧. ಕೀಳು ಬಗೆಯಿಂ ಸ್ವಂತ, ಬೇಳೆ ಬೇಯಿಸಿಕೊಂಬ
ತಾಳಗೇಡಿಗಳು ತುಂಬಿಹ ಸಮಾಜದಲಿ
ಏಳ್ಗೆ ಬರಿಕನಸು ಪೂರ್ಣಜ್ಞ. (ವ. ೨೩೮)

೨. ಜಾತಿ ಜಾತಿಗೆ ವೈರ, ಮಾತು ಮಾತಿಗೆ ಜಗಳ
ಕೋತಿ ಗುಣದವರ ಗದ್ದಲದಿ ನೀತಿ ಹೆಣ
ಜೋತಾಡುತಿಹುದು ಪೂರ್ಣಜ್ಞ. (ವ. ೨೪)

೩. ಕೃತಕತೆಯು ನುಡಿಯಲ್ಲಿ, ಕೃತಕತೆಯು ನಡೆಯಲ್ಲಿ
ಕೃತಕತೆಯು ತುಂಬಿ ತುಳುಕುವ ಕೃತಘ್ನರನು
ಅತಿ ದೂರವಿರಿಸು ಪೂರ್ಣಜ್ಞ (ವ. ೧೦೮)

೪. ಮುಖಸ್ತುತಿಯ ಮಾಡುತ್ತ, ಸುಖದೋಚುವವರಿಹರು
ಬಕತಂತ್ರ ನರಿತಂತ್ರ ಪರಿಣತರ ಕಪಟ
ಮುಖ ನೋಡಬೇಡ ಪೂರ್ಣಜ್ಞ. (ವ. ೧೦೯)

ಈ 'ಚಿಂತೆಗಳ ಸಂತೆಯಲಿ, ಶಾಂತಿಸಿಗದಾಗಿಹುದು' (ವ. ೪೯). ಚಿಂತಿಸಿ ಬದುಕುವವ ನಿಗೆ ಚಿಂತೆ ಆವರಿಸಿಕೊಂಡಿದೆ. ಹೀಗಿರುವಾಗ ಲೋಕ ಸೇವೆಗೆ ಕಂಕಣಬದ್ಧರಾಗುವುದು ಹೇಗೆ? ಒಳ್ಳೆಯದನ್ನು ಮಾಡಲು ತೊಡಗಿದರೆ ಅದಕ್ಕೆ ಅಡ್ಡಿಪಡಿಸುವ ಜನರಿದ್ದಾರೆ: 'ಕಲ್ಯಾಣ ಕಾರ್ಯವನು, ಉಲ್ಲಾಸದಿಂ ಮಾಳ್ಪ, ಒಳ್ಳೆಯ ಜನರಿಂಗೆ ಅಡ್ಡಗಾಲಿಕ್ಕುವರು, ಕ್ಷುಲ್ಲಕರು ಜಗದಿ ಪೂರ್ಣಜ್ಞ' (ವ. ೫೨) ಎಂದಿದ್ದಾನೆ. ಸ್ವಾರ್ಥಪರ ವಂಚನೆಯೇ ಹೆಚ್ಚಿರುವ ಈ ಸ್ಥಿತಿ ಬದಲಾಗಬೇಕಾದರೆ ನಿಸ್ವಾರ್ಥ ಪ್ರೀತಿ, ಸೌಹಾರ್ದ ಮೂಡಬೇಕಿದೆ. ಆಗ ಮಾತ್ರ 'ಪ್ರೀತಿ ಗಂಗೆಯಲಿ' ಮಿಂಯುವ ಸದಾವಕಾಶ ಒದಗಬಹುದು. ಈ ಸಮಾಜ ದಲ್ಲಿ ನಿರಾಯಾಸವಾಗಿ ಕೀರ್ತಿ ಬರಬೇಕೆಂದು ಹಂಬಲಿಸುವವರೇ ಹೆಚ್ಚು. ಇದೂ ಒಂದು ಬಗೆಯ ಸ್ವಾರ್ಥವೇ! 'ನುಡಿಯಲ್ಲಿ ಪರಹಿತವು, ನಡೆಯಲ್ಲಿ ದುಃಸ್ವಾರ್ಥ ಅಡಿಯಿಂದ ಮುಡಿತನಕ ಸ್ವಾರ್ಥ; ಸ್ವಾರ್ಥಿಗಳ ಬೆಡಗು ನೋಡಯ್ಯ ಪೂರ್ಣಜ್ಞ' (ವ. ೨೧೨). ನೀತಿಯ ಅವಸಾನಕ್ಕೆ ವಚನಕಾರ ಕೊಡುವ ಕಾರಣಗಳು ಓದುಗನಿಗೆ ಉತ್ಪ್ರೇಕ್ಷೆ ಎನಿಸುವು ದಿಲ್ಲ; ಅಷ್ಟು ನಿಷ್ಠವಾದ ಲೋಕಾನುಭವ ಇಲ್ಲಿಯ ವಚನಗಳಲ್ಲಿದೆ. ಸ್ವಾರ್ಥ ಬದುಕಿನ ಹಲವು ಮುಖಗಳನ್ನು ಪರಿಚಯಿಸುವಾಗ, ಸಮಾಜದ ಲೋಪಗಳನ್ನು ತಿದ್ದುವ ಅನಿವಾರ್ಯತೆಯಿಂದಾಗಿ ಬಳಕೆಯಾಗುವ ಕಟು ಉಕ್ತಿಗಳು ಬಂದಿವೆ. 'ತಾಳಗೇಡಿ', 'ಕೋತಿ', 'ಬಕತಂತ್ರ ನರಿತಂತ್ರ'–ಮೊದಲಾದುವು ವ್ಯಕ್ತಿಗುಣದ ವಿಕೃತಿಯನ್ನು ಸಮಂಜಸವಾಗಿ ಹಿಡಿದಿಟ್ಟಿವೆ. ಆದ್ದರಿಂದ—

ಜಾತಿನಿರಸನಗೈದು, ನೀತಿ ಪರವಶಗೊಳಿಸಿ
ಪ್ರೀತಿ ರಸವುಣಿಸಿ ಸೌಹಾರ್ದ ಬೆಳೆಸುವದೆ
ಜಾತಿ ನಿರಪೇಕ್ಷೆ ಪೂರ್ಣಜ್ಞ.

(ವ. ೧೯೫)–ಎಂಬುದೇ ಪರಮಗುರಿಯಾಗಬೇಕು.

ಅಸಹಾಯಕರಲ್ಲಿ, ದೀನರಲ್ಲಿ, ದುರ್ಬಲರಲ್ಲಿ ಅನುಕಂಪ ತೋರಿಸುವುದು ಮಾನವಗುಣ. ಆದರೆ, ಮಾನವತೆ ಮಣ್ಣುಗೂಡಿ ಹೋಗುತ್ತಿರುವ ಈ ಕಾಲದಲ್ಲಿ ಸಜ್ಜನರ ಸಂಖ್ಯೆ ಕ್ಷೀಣಿಸುತ್ತದೆ. ನುಡಿಯಲ್ಲಿ ಮಾತ್ರ ಪರಹಿತ ಎಂಬುದಿದೆ. ಮಾನವತಾವಾದಿ ಎಂದು ತನ್ನ ಬಗ್ಗೆ ಸಾರಿಕೊಳ್ಳುವವನೂ, ಅಮಾನವೀಯವಾಗಿ ನಡೆದುಕೊಳ್ಳುವ ದೃಶ್ಯಗಳು

ಹೆಚ್ಚಿವೆ. ಇನ್ನೊಬ್ಬರ ಅಸ್ತಿತ್ವದ ಬಗ್ಗೆ ಚಿಂತಿಸುವವನು ನಿಜವಾದ ಅಸ್ತಿತ್ವವಾದಿ. ಆದರೆ, ಇದಕ್ಕೆ ವ್ಯತಿರಿಕ್ತವಾದ ಸ್ವಭಾವವುಳ್ಳವರನ್ನೇ ಇಂದು ಅಸ್ತಿತ್ವವಾದಿಗಳೆಂದೂ, ಮಾನವತಾವಾದಿಗಳೆಂದೂ ಪೂಜಿಸುತ್ತಿದ್ದಾರೆ.ನೊಂದವರನ್ನು, ಶ್ರಮಿಕರನ್ನು ಪೋಷಿಸುವ ಕೈಗಳಿಗೆ ಅಧಿಕಾರ ನೀಡಬೇಕು. 'ಅರಿವುಗೇಡಿಯ ಕೈಗೆ, ಹಿರಿತನವ ನೀಡಿದರೆ ,ಕರಿ ಕಾಗೆ ಕೈಯ್ಯಲ್ಲಿ ಕೊಟ್ಟಂತೆ ಕೊನೆಗೆ, ಕೊರಗುಹುದು ಮನಕೆ ಪೂರ್ಣಜ್ಞ' (ವ. ೧೧೧) ಎಂಬಲ್ಲಿನ ಕೊರಗು ಎಲ್ಲರಲ್ಲೂ ಮೂಡಬೇಕು. ಇಂಥ ಬುದ್ಧಿಗೇಡಿಗಳಿಗೆ ವೈಯಕ್ತಿಕ ಚಹರೆ ಎಂಬುದಿರುವುದಿಲ್ಲ: 'ಬಿದ್ದವರ ನೆತ್ತದಲೆ, ಶುದ್ಧಮನವಿಲ್ಲದಲೆ, ಉದ್ದುದ್ದ ಮಾತಾಡಿ ಗುದ್ದಾಡುವವರು, ಬುದ್ಧಿಗೇಡಿಗಳು ಪೂರ್ಣಜ್ಞ' (ವ. ೨೨೯). ಇವರು ಮಾತಿನಲ್ಲಿ ಸದಾ ಗುದ್ದಾಡುವ ಜನ. ಬದುಕಿನ ಬಗ್ಗೆ ಕ್ರಿಯಾತ್ಮಕ ಕಾಳಜಿವಹಿಸಿದ ಇವರಿಗೆ ಸ್ವಂತ ವ್ಯಕ್ತಿತ್ವವಿರುವುದಿಲ್ಲ. ತಮ್ಮ ಮಿತಿಗಳನ್ನು ಅರ್ಥಮಾಡಿಕೊಂಡು ಇಂಥವರು ಸುಮ್ಮನಿರುವುದಿಲ್ಲ. ಯಾವಾಗಲೂ 'ಕುತಂತ್ರ ಕುಶಲಿ'ಗಳಾಗಿ ಮತ್ತೊಬ್ಬರ ಜೀವಹರಣ ಮಾಡುತ್ತಿರುತ್ತಾರೆ: 'ವ್ಯಕ್ತಿತ್ವ ತಮಗಿಲ್ಲ, ಶಕ್ತಿಯಂತೂ ಇಲ್ಲ, ಕುತ್ತಿಗೆಯ ಕೊಯ್ಯುವರು ಕೂದಲಿಂದೀಕು, ತಂತ್ರಕುಶಲಿಗಳು' ಎಂಬಲ್ಲಿ (ವ. ೨೩೧) ಮಾನವತೆಯ ಅವಸಾನವನ್ನು ಸಮಂಜಸವಾಗಿ ಸೂಚಿಸಲಾಗಿದೆ—

ಮಾನವತೆ ಅಳಿಯುತಿದೆ, ದಾನವತೆ ಬೆಳೆಯುತಿದೆ
ಸ್ಥಾನಮಾನಗಳು ಮಸಿಗೂಡಿ ಸಜ್ಜನರು
ಕ್ಷೀಣರಾಗಿಹರು ಪೂರ್ಣಜ್ಞ (ವ. ೨೧೭)

ಇವರು 'ನಾನೆಂಬುದನು ಅಳಿದು, ನೀನೆಂಬುದನು ತಿಳಿದು' (ವ. ೧೦೪) ಜ್ಞಾನಿಗಳಾದವರಲ್ಲ. 'ನಾ ಹೆಚ್ಚು ನೀ ಹೆಚ್ಚು' (ವ. ೧೦೫) ಎಂಬ ಹುಚ್ಚಿನೊಳಗೇ ಮೂರ್ಖರಾದವರು. ಜೊತೆಗೆ ಕೀರ್ತಿದಾಹವನ್ನು ಹೆಚ್ಚಿಸಿಕೊಂಡವರು. ಈ ರೀತಿಯ ಸಮಾಜ ಸ್ಥಿತಿಯಲ್ಲಿ ಏಳಿಗೆಯೆಂಬುದು ಕನಸಾಗಿದೆ. ಹಸಿದು ಕೂಗುವ ಆರ್ತಧ್ವನಿ ದೇಶವನ್ನೇ ತುಂಬಿದ್ದರೂ, ಕಾರ್ಯಪ್ರವೃತ್ತವಾಗುವ ಕ್ರಿಯಾಶೀಲತೆ ಸತ್ತುಹೋಗಿದೆ. ವೇದಿಕೆಯಲ್ಲಿ ನಿಂತು 'ನುಡಿಗಡಣದ' ಜಡಿಮಳೆ ಸುರಿಸುವುದನ್ನು ಬಿಟ್ಟರೆ, ಒಡಲು ತಣಿಸುವಂಥ ಪ್ರಯತ್ನಗಳು ನಡೆದೇ ಇಲ್ಲ. 'ಒಡಲಲಿ ಹಸಿವೆಂಬ, ಬಡಬಾಗ್ನಿ ಸುಡುತಿರಲು, ನುಡಿಗಡಣ ಜಡಿದ ಭಾಷಣದಿಡುಗಿಂದ,ಒಡಲು ತಣಿದೀತೆ? ಪೂರ್ಣಜ್ಞ' ಎಂದು ವಚನಕಾರ ಪ್ರಶ್ನಿಸಿದ್ದಾನೆ:

ಬರಿಮೈಯು ಬರಿಕೈಯು, ಬರಿಹೊಟ್ಟೆ ಬರಿನೆತ್ತಿ
ಬರಿದೆ ಬರಿದಾಗಿ ತಿರಿಯುತ್ತ ತಿರುಗುವವರ
ಕೊರಗಳಿವುದೆಂತು? ಪೂರ್ಣಜ್ಞ. (ವ. ೨೪೨)

ವಿನಯ ಸದ್ಭಾವನೆಯನ್ನು ಪ್ರಕಟಿಸುವ ಗುಣ. ಆದರೆ, ಅದು ಕೃಪಣಕರ್ಮಿಗಳ ಆಯುಧವಾಗಿದೆ; ಮುಗ್ಧರನ್ನು ವಂಚಿಸುವ ಅಸ್ತ್ರವಾಗಿದೆ. ಇಂದು ವಂಚಕರಿಗಿಂತ ನಯವಂಚಕರ

ಹಾವಳಿ ಜಾಸ್ತಿಯಾಗಿದೆ: 'ಬಲುವಿನಯ ಬಾಹ್ಯದಲಿ, ಬಲಯೋಜನೆಯು ಮುದದಿ,ಎಳೆದೊಯ್ದು ಮುಗ್ಧರನು ಯಾವ ಹೊತ್ತಿನಲಿ, ಹೊಳೆಗೆ ನೂಕುವರೊ! ಪೂರ್ಣಜ್ಞ' (ವ. ೨೪೫)—ಇಲ್ಲಿನ 'ಹೊಳೆಗೆ ನೂಕುವರೊ' ಎಂಬ ಉದ್ಗಾರದ ಅರ್ಥವ್ಯಾಪ್ತಿ ಗಮನೀಯವಾದುದು. ಇಂಥ ತಿಳಿಗೇಡಿಗಳು ಮೂಲತಃ ಪಕ್ಷಪಾತಿಗಳು: 'ನೀತಿ ತತ್ತ್ವವ ತುಳಿದು, ಜಾತಿತಳಹದಿ ಮೇಲೆ, ಜಾತಿಕೆಲವಕೆ ಮೀಸಲಾತಿ ಕೊಡೆಪಕ್ಷ—/ಪಾತವೆನ್ನಿಸದೆ?' (ವ. ೨೪೮) ಎಂಬಲ್ಲಿ, ಮೀಸಲಾತಿಯು ನೆಪದಲ್ಲಿ ಮತ್ತೆ ಜಾತಿವ್ಯವಸ್ಥೆಯನ್ನೇ ಪೋಷಿಸುವಂತಾಯಿತು ಎನ್ನುವ ವಚನಕಾರನ ತರ್ಕ ಸಮಂಜಸವಾದದ್ದು.

ಭರತ ಖಂಡವನ್ನು ಕಾಡುತ್ತಿರುವ ಪ್ರಬಲ ಸಮಸ್ಯೆಗಳು ಬಡತನ ಮತ್ತು ನಿರುದ್ಯೋಗ. ಇವೆರಡನ್ನೂ ಪ್ರತ್ಯೇಕಿಸಲು ಸಾಧ್ಯವಿಲ್ಲ. ಹುದ್ದೆಗಳು ಲಂಚ, ಪ್ರಭಾವಗಳಿಗೆ ಮಾರಾಟವಾಗುತ್ತಿರುವಾಗ ನಿರುದ್ಯೋಗ ಸಮಸ್ಯೆ ಬಗೆಹರಿಯುವುದು ಯಾವಾಗ? ಈ ದೇಶದಲ್ಲಿ ಪ್ರತಿಭಾವಂತನಿಗೂ ಪುರಸ್ಕಾರವಿಲ್ಲ. ಪ್ರತಿಭಾವಂತ ನಿರುದ್ಯೋಗಿಗಳೂ ಒಂದು ಬಗೆಯ ಶೋಷಿತ ಜನಾಂಗವೇ ಆಗಿದೆ. ಉದ್ಯೋಗರಹಿತ ಬದುಕು ಬಡತನಕ್ಕೆ ಒಳಗಾಗಿದೆ. ಬಡತನವನ್ನು ಹೋಗಲಾಡಿಸಬೇಕು ಎಂಬ ಪ್ರಯತ್ನ ಸತತವಾಗಿ ನಡೆಯುತ್ತಿದೆ, ನಿಜ. ಆದರೆ, ಅದು ನ್ಯಾಯಬದ್ಧವಾಗಿ ಆಗಬೇಕು ಎಂಬುದು ವಚನಕಾರನ ನಿಲುವು:

ನಡೆದಿಹುದು ಅಲ್ಲಲ್ಲಿ, ಎಡೆಬಿಡದ ಹೋರಾಟ<br>
ಬಡವರಿಗೆ ನ್ಯಾಯ ನೀಡಿದರೆ ಜಲವ ಗಿಡ–<br>
ದಡಿಗುಣಿಸಿದಂತೆ! ಪೂರ್ಣಜ್ಞ. (ವ. ೨೫೦)<br>
ಕೊಡುಬಡವಗನ್ನವನು, ಕೊಡಬೇಡವೆನ್ನೆನಾ<br>
ಕೊಡುವದೆಷ್ಟುದಿನ? ದುಡಿಯಲ್ಕೆ ಕಲಿಸುವದೆ<br>
ಬಡವನುದ್ಧಾರ! ಪೂರ್ಣಜ್ಞ. (ವ. ೨೫೬)

ಕೇವಲ ಅನ್ನ ನೀಡುವುದರಿಂದ ಬಡತನದ ನಿವಾರಣೆಯಾಗುವುದಿಲ್ಲ; ದುಡಿದು ಬದುಕುವುದನ್ನು ಕಲಿಸಬೇಕು. ಏಕೆಂದರೆ, ಈ ದೇಶದಲ್ಲಿ ದುಡಿದು ತಿನ್ನಬೇಕೆಂಬ ಶ್ರಮಜೀವಿಗಳಿಗಿಂತ, ತಿರಿದು ತಿನ್ನುವ ಸೋಮಾರಿಗಳೇ ಬಹಳ. ಕೆಲವರು ಪ್ರಾಮಾಣಿಕವಾಗಿ ಕೆಲಸ ಮಾಡುವುದಿಲ್ಲ. ಅವರಿಗೆ ಹೆಸರುಬೇಕು ಅಷ್ಟೇ!–'ಹೆಸರೇನೋಬೇಕು, ಕೈಕೆಸರಾಗುವುದು ಬೇಡ,ಹಸಗೇಡಿ ಜನರು, ಮೈತುಂಬ ಅಲಸಿಕೆಯು, ನುಸಿಹತ್ತಿದವರು ಪೂರ್ಣಜ್ಞ' (ವ. ೧೨೩)–ಎಂದು ಆಲಸ್ಯ ಮನೋಭಾವದವರನ್ನು 'ಹಸಗೇಡಿ' ಜನ ಎನ್ನುವಲ್ಲಿ ಸೋಮಾರಿ ಜನಾಂಗದ ಬಗ್ಗೆ ತಳೆದ ಜುಗುಪ್ಸಾ ಭಾವ ತುಂಬಾ ತೀವ್ರವಾಗಿ ಪ್ರಕಟಗೊಂಡಿದೆ. ಅವರವರ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಿದರೆ ಯಾರ ಬದುಕೂ ಬಡತನದ ದಾರಿ ಹಿಡಿಯಲಾರದು: 'ದುಡಿದು ತಿನ್ನುವನ ಕೈ, ಬಿಡದು ಅಕ್ಷಯಪಾತ್ರೆ, ದುಡಿ

ಯದಲಸಿಗನ ಕೈಗೆ ಭಿಕ್ಷಾಪಾತ್ರೆ, ಕಡೆಯುಸಿರಿನ ತನಕ ಪೂರ್ಣಜ್ಞ' (ವ. ೨೯೦). ಆದರೆ, ದುಡಿಯು ಕೈಗಳಲ್ಲಿ ಕೆಲಸವನ್ನಿಡುವವರು ಎಷ್ಟು ಮಂದಿ ಇದ್ದಾರೆ!

ಸಂಘಟನೆಯಿಂದ ಒಂದು ಸಂಸ್ಥೆಯನ್ನು ಕಟ್ಟಲು ಸಾಧ್ಯ. ಆ ಮೂಲಕ ಎಲ್ಲರಲ್ಲೂ ಏಕತಾಭಾವವನ್ನು ಮೂಡಿಸಲು ಅವಕಾಶವಾಗುತ್ತದೆ. ಆದರೆ, ಇಂದಿನ ಸಂಘಟನೆಗಳೂ ಸ್ವಾರ್ಥಪರವಾದ ನಿಲುವುಳ್ಳವೇ ಆಗಿವೆ. ಹೀಗಾಗಿ, ಸಂಘ ಸಂಸ್ಥೆಗಳು ಹೆಚ್ಚು ಕ್ರಿಯಾಶೀಲವಾಗಲು ಸಾಧ್ಯವಾಗುತ್ತಿಲ್ಲ. ಸಭೆಯಲ್ಲಿ ನಿಂತು, 'ನಾವೆಲ್ಲರೂ ಒಂದೇ' ಎಂಬ ಭಾವನೆಯನ್ನು ಪ್ರಕಟಿಸಿದರೂ, ಅದರ ಹಿಂದೆ ನಿಸ್ವಾರ್ಥ ಮನೋಭಾವ ಕಡಿಮೆ ಇರುತ್ತದೆ. ಇದು ಇಂದಿನ ಸ್ಥಿತಿ:

೧. ಸಂಘಟನೆ ಸಭೆಗಳಲಿ, ಸಂಘಟನೆ ಮಾತಿನಲಿ
ಅಗ್ರಮಾನ್ಯತೆಯು ಸ್ವಾರ್ಥಕ್ಕೆ: ಇಂತಿರಲು
ಸಂಘಟನೆ–ನಟನೆ ಪೂರ್ಣಜ್ಞ. (ವ. ೬೭)

೨. ಒಳಪಂಗಡಂಗಳಿವು, ಹುಳದೊಲು ಸಮಾಜವನು
ಬಲುಕ್ಷೀಣಗೊಳಿಸಿ ಸಂಘಟನೆಗಳ ಕೀಲ.
ಕಳಚುತ್ತಲಿಹವು ಪೂರ್ಣಜ್ಞ. (ವ. ೨೩೯)

ಆದ್ದರಿಂದ, 'ಶೀಲವಿಲ್ಲದ ನರನು, ಸೀಳು ಬಿಟ್ಟಿಹ ಗಡಿಗೆ ಮೇಳವಿಲ್ಲದ ಸಂಸ್ಥೆ, ಇವು ಮೂರು ಕೆಟ್ಟು ಹಾಳು ಸುರಿಯುವವು' (ವ. ೫೫) ಎಂದಿದ್ದಾನೆ ವಚನಕಾರ.

ಪ್ರಸ್ತುತ ಸಂಪೂರ್ಣ ಹದಗೆಟ್ಟುಹೋಗುತ್ತಿರುವುದು ಶಿಕ್ಷಣಕ್ಷೇತ್ರ. ಯಾವುದು ಇಡೀ ಸಾಮಾಜಿಕ ವ್ಯವಸ್ಥೆಯನ್ನು ತಿಳಿಗೊಳಿಸಬೇಕಿತ್ತೋ ಅದೇ ಕ್ಷೇತ್ರ ರಾಡಿಯಾಗುತ್ತಿರುವುದು ದೊಡ್ಡ ವಿಪರ್ಯಾಸ ಸಂಗತಿ. ಶಿಕ್ಷಕರ ಮೇಲೆ, ವಿದ್ಯಾರ್ಥಿಗಳ ಮೇಲೆ ಆಡಳಿತಗಾರರ ಬಲಿಷ್ಠ ಮುಷ್ಟಿ ಪ್ರಹಾರ ನಡೆಯುತ್ತಲೇ ಇದೆ. 'ಬಿಗಿಯಿರದ ಆಡಳಿತ'ದಿಂದಾಗಿ ಸರ್ವಾಧಿಕಾರಿಗಳ ದಂಧೆ ಸತತವಾಗಿ ಮುಂದುವರಿದಿದೆ. ಸ್ನೇಹ, ಸೌಹಾರ್ದ, ಸಹಬಾಳ್ವೆಗಳನ್ನು ಕಲಿಸಬೇಕಾದ ವಿದ್ಯಾಸಂಸ್ಥೆಗಳು ಜಾತಿ, ರಾಜಕೀಯ, ಗುಂಪುಗಾರಿಕೆ, ಗೂಂಡಾತನ–ಇವುಗಳ ನಿಲ್ದಾಣಗಳಾಗಿ, ಚಲನಶೀಲ ಬದುಕು ಅಲ್ಲಿ ಸ್ಥಗಿತಗೊಂಡಿದೆ. ವಿದ್ಯೆಯನ್ನು ಅರಸಿ ಬರುವವರು ಅವಿದ್ಯಾವಂತರಾಗಿ, ಅನಾಗರಿಕರಾಗಿ, ಮನುಷ್ಯತ್ವವನ್ನು ಕಳೆದುಕೊಂಡ ಮೃಗಗಳಾಗಿ ಕಂಡುಬರುತ್ತಿದ್ದಾರೆ. ಒಂದೊಂದು ಸಂಸ್ಥೆಯೊಳಗೂ, ವ್ಯಕ್ತಿದ್ವೇಷ, ವೃತ್ತಿದ್ವೇಷ, ಜಾತಿದ್ವೇಷ–ಎಂಬ ದ್ವೇಷತ್ರಯರ ಕದನ ಎಡೆಬಿಡದೆ ಸಾಗಿದೆ. ಬೇಜವಾಬ್ದಾರಿ ಶಿಕ್ಷಕರು, ಸೋಮಾರಿ ಶಿಷ್ಯರು ಸೇರಿ ಶಿಕ್ಷಣ ಸಂಸ್ಥೆಗಳನ್ನು ಅಧೋಗತಿಗೆ ತಳ್ಳುತ್ತಿದ್ದಾರೆ. ಮುಂದಿನ ವಚನಗಳನ್ನು ಗಮನಿಸಿ—

೧. ಬುದ್ಧಿ ಬೆಳೆಯುತ್ತಿರಲಿ, ಸದ್ಗುಣದ ಜೊತೆಗೂಡಿ
ಬುದ್ಧಿಯಲಿ ದುರ್ವಿದ್ಯೆ ಬೆಳೆದಲ್ಲಿ ಜಗದಲ್ಲಿ
ಗುದ್ದಾಟ ನಿಲದು ಪೂರ್ಣಜ್ಞ. (ವ. ೬೮)

೨. ವಿನಯವಿಲ್ಲದ ವಿದ್ಯೆ, ಗುಣವ ಬೆಳೆಸದ ಬುದ್ಧಿ
ಜನಹಿತಕೆ ಒದಗದಿಹ ಧನವು ಇವು ಸತ್ತ–
ಶುನಕನಿಂಕೀಳು ಪೂರ್ಣಜ್ಞ. (ವ. ೭೩)

೩. ಶ್ರದ್ಧೆಯಿಲ್ಲದ ಶಿಷ್ಯ, ಬುದ್ಧಿಯಿಲ್ಲದ ಗುರುವು
ಶುದ್ಧವಿಲ್ಲದ ಮಠವು ಹಾಳುಹೆಗ್ಗಣದ
ಗುದ್ದು ಇದ್ದಂತೆ ಪೂರ್ಣಜ್ಞ. (ವ. ೭೫)

ಶಿಕ್ಷಣ ಸಂಸ್ಥೆಗಳಿರುವುದೇ ಬುದ್ಧಿವರ್ಧನೆಗಾಗಿ. ಅದು ಗುಣಾವಲಂಬಿಯಾಗಿ ಬೆಳೆಯ ಬೇಕು. ಅದನ್ನು ಮರೆತು ಅಲ್ಲಿ ದುರ್ವಿದ್ಯೆಯ ಬೀಜಬಿತ್ತುವ ಕಾರ್ಯ ನಡೆದಿದೆ. ವಿದ್ಯಾರ್ಥಿಗಳಲ್ಲಿ ನೈತಿಕ ಭಯವನ್ನು ಬೆಳೆಸುವುದಕ್ಕೆ ಬದಲಾಗಿ, ಗುದ್ದಾಡುವ ಕಲಹ ಪ್ರೀತಿ ಹೆಚ್ಚುತ್ತಿದೆ. ವಿನಯವಂತಿಕೆಗಿಂತ ಉದ್ಧಟತನ, ಶ್ರದ್ಧೆಗಿಂತ ಬೇಜವಾಬ್ದಾರಿ ತಲೆಎತ್ತಿದೆ. ಈ ಕ್ರಮರಹಿತ ಅವಸ್ಥೆಯನ್ನು 'ಸತ್ತ ಶುನಕನಿಂಕೀಳು', 'ಹಾಳು ಹೆಗ್ಗಣದ ಗುದ್ದು' ಎಂಬ ಸಾಲುಗಳು ಸಮರ್ಥವಾಗಿ ಪ್ರತಿಬಿಂಬಿಸಿವೆ. ಬೋಧನೆಯೂ ಒಂದು ಕಲೆ. ವಿದ್ಯಾರ್ಥಿ ಗಳಲ್ಲಿ ಜೀವನೋತ್ಸಾಹವನ್ನು ಉಂಟುಮಾಡುವ, ಮೌಲಿಕವಾದ ಆಲೋಚನಾ ಮಟ್ಟ ವನ್ನು ಬೆಳೆಸುವ ಕ್ರಿಯಾತ್ಮಕ ಗುಣ ಅದರಲ್ಲಿರಬೇಕು. ಕೇವಲ ಸಂಬಳಕ್ಕಾಗಿ ಪಾಠ ಮಾಡುವ, ಕಾಟಾಚಾರಕ್ಕಾಗಿ ಶಿಕ್ಷಕ ಕಸುಬು ಮಾಡುವವರಿಂದ ಯುವಜನಾಂಗ ಆರೋಗ್ಯ ಕರವಾಗಿ ಅಭಿವೃದ್ಧಿಯಾಗಲಾರದು. ಅಂಥವರನ್ನು ವಚನಕಾರ ಲೇವಡಿ ಮಾಡಿದ್ದಾನೆ:

ಅವಸರದ ಪಾಠವದು, ಅವಗತವು ಆದೀತೆ?
ಅವಗಾಹಿಸಲ್ಕೆ ಅವಕಾಶವಿತ್ತರದು
ಯುವಜನಕೆ ಹಿತವು ಪೂರ್ಣಜ್ಞ. (ವ. ೮೧)

ಶಿಕ್ಷಣ ಸಂಸ್ಥೆಗಳು ಸಂಸ್ಕೃತಿ,ಸಾಹಿತ್ಯಸಂರಕ್ಷಣೆಯ ಕಡೆಯೂ ಗಮನಹರಿಸಬೇಕು. ಈ ಕೆಲಸ ವನ್ನು ಒಂದು ಕಾಲದಲ್ಲಿ ಮಠಗಳು ನಿರ್ವಹಿಸುತ್ತಿದ್ದವು: 'ಹನ್ನೆರಡನೆಯ ಶತಕ, ದುನ್ನ ತಿಯ ಕುರುಹಾದ ಚೆನ್ನೋಲೆ ಗರಿಯ ಚೆನ್ನಿಧಿಯು ಓಲೆಮಠ' (ವ. ೯೪) ಎಂದಿದ್ದಾನೆ ವಚನಕಾರ. ಇಂದಿನ ದಿವಸ ಓಲೆಗರಿಗಳ ಸಂಗ್ರಹಕಾರ್ಯ, ಪುರಾತನ ಗ್ರಂಥಗಳ ಸಂಪಾ ದನಾ ಕಾರ್ಯ ನಡೆಯಬೇಕಿದೆ. ಏಕೆಂದರೆ, ಅನೇಕ ಗ್ರಾಮಗಳ ಹಳೆಮನೆಯ ಮೂಲೆ ಗಳಲ್ಲಿ ಗೆದ್ದಲು ತಿಂದು ನಾಶವಾಗುತ್ತಿರುವ ಓಲೆಗರಿಗಳು ದೊರೆಯುತ್ತವೆ. ಇದಕ್ಕೆ ಮುಖ್ಯಕಾರಣ ನಮ್ಮ ಜನರು ಆ ಬಗ್ಗೆ ಕಳೆದ ಆವಜ್ಞೆ; ಪರಂಪರೆಯನ್ನು ಕುರಿತ ತಾತ್ಸಾರ! 'ಚೀಲಗಟ್ಟಲೆ ಒಟ್ಟಿದೋಲೆಗರಿಗ್ರಂಥಗಳ, ಲೀಲೆಯಿಂ ರಕ್ಷಿಸಿದ ಶರಣರ ನಿವಾಸ, ಓಲೆಮಠ ನಿಜದಿ ಪೂರ್ಣಜ್ಞ' (ವ. ೯೮)–ಈ ಮಾತುಗಳು ಜನರಲ್ಲಿ ಸಾಂಸ್ಕೃತಿಕ ಜವಾಬ್ದಾರಿ ಯನ್ನು ಮೂಡಿಸುವಂಥವು. ಜನತೆಯಲ್ಲಿ ಈ ಎಲ್ಲಾ ಬಗೆಯ ವೈಚಾರಿಕತೆ ಬೆಳೆಯಲು

ವಿದ್ಯೆ ಎಂಬುದು ಬೇಕು. ವಿನಯ-ವಿದ್ಯೆಗಳ ಸಮಾವೇಶವಾದರೆ ಮಾತ್ರ ಸಾಮಾಜಿಕ ಶಾಂತಿ ನೆಲೆಸಲು ಸಾಧ್ಯ. ಇಲ್ಲವಾದರೆ—

೧. ವಿದ್ಯಾಪ್ರಸೂನಕ್ಕೆ, ಸದ್ವಿನಯ ಸೌಗಂಧ;
ಸದ್ವಿನಯರಹಿತ ವಿದ್ಯೆಯದು ಹೇಸರದ
ಲದ್ದಿಯಂತಕ್ಕೂ ಪೂರ್ಣಜ್ಞ. (ವ. ೧೫೭)

೨. ಮೂಢರನು ತಿದ್ದುವದು, ಕಾಡುದನ ಕಾಯುವದು:
ಮೂಢರಿಗೆ ಪಾಠಶ್ರಮ ಸಮಯಗಳ ದೊಡ್ಡ
ಕೇಡು ಕಾಣಯ್ಯ ಪೂರ್ಣಜ್ಞ. (ವ. ೧೭೯)

'ರಾಜಕೀಯ' ಎಂಬ ಪದಪ್ರಯೋಗ ವಿಶಿಷ್ಟವಾದುದು. ಇದರಷ್ಟು ಬೆಳಕೆಯಾಗುತ್ತಿರುವ ಪದ ಮತ್ತೊಂದಿಲ್ಲ! ಇದು ಈಗ ತನ್ನ ಅರ್ಥವ್ಯಾಪ್ತಿಯನ್ನೇ ಕಳೆದುಕೊಂಡುಬಿಟ್ಟಿದೆ. ಜಾತಿ, ಅನ್ಯಾಯ, ದ್ವೇಷ, ಗುಂಪು-ಈ ವಿಚಾರ ಸಂಬಂಧಿಯಾಗಿ ಜನಸಾಮಾನ್ಯ ತುಂಬಾ ಸುಲಭವಾಗಿ ಬಳಸುವ ಪದ ಇದು. ಏಕೆಂದರೆ ಸತ್ಯವನ್ನು ಕೊಲ್ಲುವ ಕರಾಳ ಹಸ್ತಗಳೇ ಜಗತ್ತಿನ ತುಂಬ ಚಾಚುತ್ತಿರುವಾಗ, ಕಪಟ, ಅಸತ್ಯ, ಸುಳ್ಳು, ಮೋಸ, ದರೋಡೆಗಳೂ ನಿಲ್ಲುವುದಿಲ್ಲ. ದೇಶವನ್ನು ವಿನಾಶದ ಹಾದಿಗೆ ಎಳೆಯುವ 'ರಾಜಕೀಯ' ಧರ್ಮಬಾಹಿರವಾದದ್ದು. ಅದರ ಸ್ವರೂಪವನ್ನು ವಚನಕಾರ ಹೀಗೆ ಬಣ್ಣಿಸಿದ್ದಾನೆ:

೧. ರಾಜಕೀಯದಿ ಧರ್ಮ ಓಜಯಿಂ ಕೂಡಿದರೆ
ರಾಜಕೀಯವದು ಧರ್ಮದೊಳು ಸೇರಿದರೆ
ರಾಜ್ಯಕ್ಕೆ ಹಿತವು ಪೂರ್ಣಜ್ಞ. (ವ. ೨೬೧)

೨. ಸತ್ಯವನು ಕಪಟಿಗಳು, ತೊತ್ತಳದುಲಿವರಯ್ಯಾ
ಮಿಥ್ಯೆಯನೆ ಸತ್ಯವೆಂದು ತೋರಿಸಿ ಮನವ
ಕತ್ತಲಿಪರಯ್ಯಾ! ಪೂರ್ಣಜ್ಞ. (ವ. ೨೬೪)

೩. ಅನ್ಯರೇಳ್ಗೆಯು ಸ್ವತಃ, ತನ್ನೇಳ್ಗೆಯೆಂಬಂತೆ
ಮನ್ನಿಪುದೆ ದೊಡ್ಡಗುಣ, ವಿಘ್ನ ಸಂತೋಷ
ಕುನ್ನಿಗುಣವಯ್ಯಾ! ಪೂರ್ಣಜ್ಞ. (ವ. ೨೬೬)

೪. ಎಲ್ಲಿ ನೋಡಿದರಲ್ಲಿ ಕಳ್ಳಕಾಕರ ಗುಂಪು
ಬೆಲ್ಲದೊಲು ನುಡಿದು ಬಾಗಿಲದ ಕದ ತೆಗೆಸಿ
ಕೊಲ್ಲುವರು ಬಡಿದು ಪೂರ್ಣಜ್ಞ. (ವ. ೨೭೪)

'ಪೂರ್ಣಜ್ಞ' ವಚನಗಳಲ್ಲಿ ಸಮಾಜವನ್ನು ಕುರಿತ ವಿಚಾರಧಾರೆ ಬಹಳಷ್ಟಿದೆ. ಒಂದೊಂದು ವಿಷಯವನ್ನು ಕುರಿತು ಪ್ರತ್ಯೇಕ ಪ್ರಬಂಧವನ್ನೇ ಬರೆಯುವಷ್ಟು ವಿಷಯದ ಹರವಿದೆ.

ಆದರೆ, ಪ್ರಬಂಧದ ವ್ಯಾಪ್ತಿ ಹಿರಿದಾಗಬಹುದೆಂಬ ಕಾರಣಕ್ಕಾಗಿ ಕೆಲವು ಮುಖ್ಯ ವಿಚಾರಗಳನ್ನು ಸ್ವಲ್ಪ ದೀರ್ಘವಾಗಿ ಇದುವರೆವಿಗೂ ವಿವರಿಸಿದ್ದೇನೆ. ಇಲ್ಲಿಯ ವಚನಗಳನ್ನು ವಿಶ್ಲೇಷಿಸುವಾಗ ಇಂದಿನ ವಿಮರ್ಶಾ ಮಾನದಂಡಗಳನ್ನೆಲ್ಲಾ ಬಳಸಿ ನಾನು ಚರ್ಚಿಸಿಲ್ಲ. ಏಕೆಂದರೆ, ಇದು ಸಹೃದಯ ವಿಮರ್ಶೆ. ಈಗ ನಾನು ಚರ್ಚಿಸಿದ ವಿಷಯಗಳೊಂದಿಗೆ– ವಚನಕಾರರು ರಚಿಸಿರುವ ಕೆಲವು ಪ್ರಾಸಂಗಿಕ ವಿಚಾರಗಳನ್ನು ಪ್ರಸ್ತಾಪಿಸುವುದು ಸೂಕ್ತವೆನಿಸುತ್ತದೆ. ಇಂಥ ವಿಚಾರಗಳನ್ನು ಬೇರೆ ಬೇರೆ ಪಟ್ಟಿಮಾಡಿಕೊಂಡು ಅವಲೋಕಿಸದೆ, ಒಟ್ಟಾಗಿ ಪರಿಶೀಲಿಸಲು ಪ್ರಯತ್ನಿಸಿದ್ದೇನೆ.

ಸಮಾಜ ಪರಿವರ್ತನ ಶೀಲವಾದದ್ದು. ಮನುಷ್ಯನ ಸ್ವಭಾವ ಬದಲಾದಂತೆ ಆತನ ಪರಿಸರವೂ ವ್ಯತ್ಯಾಸವಾಗುತ್ತದೆ. ಒಳ್ಳೆಯ ನಡತೆಯಿಂದ ಒಳಿತು ಆಗುವ ಹಾಗೆ, ಕೆಟ್ಟದ್ದರಿಂದ ಕೆಡುಕೂ ಆಗಬಹುದು. ಆದ್ದರಿಂದ, ಮನುಷ್ಯ ತಾನು ಬದುಕುವ ಪರಿಸರದ ಬಗ್ಗೆ ಸರಿಯಾದ ಎಚ್ಚರಿಕೆ ವಹಿಸುವುದು ಅಗತ್ಯ. ಸಾತ್ವಿಕ ಎನಿಸಿಕೊಂಡವನ ಒಳಗೂ ಕೆಲವೊಮ್ಮೆ ನೀಚತನ ತಲೆ ಎತ್ತುವ ಸಂಭವವೇ ಹೆಚ್ಚು. ಹೀಗಾಗಿ, ಸ್ನೇಹ ಸಂಪಾದನೆ ಎಂಬುದು ಮುಖ್ಯ; ಅದು ಶೀಲ ಸಂಪಾದನೆಯೂ ಆದರೆ ಒಳ್ಳೆಯದು. ಈ ವಿಚಾರವಾಗಿ ವಚನಕಾರನ ನುಡಿಯಿದು:

ಸಂಗಡಿಗರಂತೆ ಮತಿ, ಸಂಗಡಿಗರಂತೆ ಕೃತಿ
ಸಂಗಡಿಗರಂತೆ ನಡೆನುಡಿಗಳೆಲ್ಲಕ್ಕು
ಸಂಗವೇ ಮೂಲ! ಪೂರ್ಣಜ್ಞ. (ವ. ೧೪೧)

ದೊಡ್ಡವರೆನಿಪ ಕೆಲರು, ಅಡ್ಡಹಾದಿಯೊಳಿಹರು
ಗುಡ್ಡದೊಲು ನುಡಿದು ಜನ ಮರುಳು ಮಾಳ್ಪವರ
ಎಡ್ಡು ಬಿಡಿಸಯ್ಯ! ಪೂರ್ಣಜ್ಞ. (ವ. ೧೪೩)

ಇಂದಿನ ದಿವಸ ತಮ್ಮ ಕೆಲಸವಾಗಬೇಕೆಂದರೆ ಹೊಗಳಿಕೆ ಸರಮಾಲೆ ಹಾಕುವವರು ಬಹಳ ಜನ ಇದ್ದಾರೆ. ಆದರೆ, ಹೊಗಳಿಕೆಗಿಂತ ತೆಗಳಿಕೆಯೇ ಮಿಗಿಲು! ಇನ್ನೊಬ್ಬರ ಟೀಕೆ ಬುದ್ಧಿವಂತನ ಆರೋಗ್ಯವನ್ನು ಹೆಚ್ಚಿಸುತ್ತದೆ. ನಿಜವಾಗಿಯೂ ಬುದ್ಧಿವಂತನಾದವನು ಹೊಗಳು ಭಟ್ಟರನ್ನ ತನ್ನ ಬಳಿ ಸೇರಿಸುವುದಿಲ್ಲ. ಅದರಿಂದ ಯಾವ ರೀತಿಯ ಲಾಭವೂ ಆಗುವುದಿಲ್ಲ. ಒಂದು ಪಕ್ಷ ಅಂಥವರನ್ನು ನಂಬಿದ್ದರೂ, ಯಾವುದೋ ಒಂದು ಕ್ಷಣದಲ್ಲಿ ಅವರುಗಳೇ ವಿರೋಧಿಗಳಾಗುವ ಪ್ರಸಂಗಗಳೇ ಹೆಚ್ಚು. ಆದ್ದರಿಂದ, ಹೊಗಳುವವನಿಗಿಂತ ತೆಗಳುವವನೇ ಮೇಲು! ಏಕೆಂದರೆ—

ಸಂದಿಗೊಂದಿಯ ಹೊಲಸು, ತಿಂದು ಶುಚಿ ಗೊಳಿಸಲ್ಕೆ
ಹಂದಿ ಬೇಕಾದಂತೆ, ಕುಂದು ತೊಳೆಯಲ್ಕೆ
ನಿಂದಕರು ಬೇಕು ಪೂರ್ಣಜ್ಞ. (ವ. ೨೫೩)

ಹೊಗಳಿಕೆಗೆ ಮೆಚ್ಚದಿರು, ತೆಗಳಿಕೆಗೆ ಬೆಚ್ಚದಿರು
ಹೊಗಳಿಕೆಯು ತೃಣಕೆ ಸರಿಯೆಂದು ತಿಳಿದುಬಿಡು
ಸೊಗವಕ್ಕು ನಿನಗೆ ಪೂರ್ಣಜ್ಞ. (ವ. ೨೯೨)

ಪ್ರತಿಯೊಬ್ಬ ವ್ಯಕ್ತಿಗೂ ಸ್ವಾತಂತ್ರ್ಯವಿದೆ. ಆದರೆ, ಈ ದಿವಸ ಅದು ದುರುಪಯೋಗವಾಗುತ್ತಿದೆ. ಸ್ವೇಚ್ಛೆಯೆಂಬುದನ್ನೇ ಸ್ವಾತಂತ್ರ್ಯವೆಂದು ಭಾವಿಸಲಾಗಿದೆ. ಸ್ವಚ್ಛಂದ ಮನಸ್ಸುಗಳು ಸಂಸ್ಕೃತಿಹರಣ ಮಾಡುವ ಸನ್ನಿವೇಶಗಳು ನಿರ್ಮಾಣವಾಗಿರುವುದಕ್ಕೆ ಅನೇಕ ನಿದರ್ಶನಗಳು ದೊರೆಯುತ್ತವೆ. ಪಾಶ್ಚಾತ್ಯ ಸಂಸ್ಕೃತಿಯ ಅನುಕರಣೆ ಹೆಚ್ಚಾಗಿ, ಬಾಹ್ಯ ಆಡಂಬರಗಳಿಗೆ ಪಕ್ಕಾದ ಜನ ಪಾವಿತ್ರ್ಯ, ಸಂಯಮಗಳನ್ನು ಕಳೆದುಕೊಂಡಿದ್ದಾರೆ. ದೈಹಿಕ ಸೌಂದರ್ಯ ಪ್ರದರ್ಶನವೇ ಪರಮ ಗುರಿಯಾಗುಳ್ಳ ಸ್ತ್ರೀಯರು ಗಾಂಭೀರ್ಯವನ್ನು ಮರೆತು, ಪುರುಷರ ದೃಷ್ಟಿಗೆ ಪ್ರಚೋದಕ ವಸ್ತುಗಳಾಗಿ ಪರಿಣಮಿಸಿದ್ದಾರೆ. ಅದನ್ನು ಕುರಿತು ವಚನಕಾರ ಹೀಗೆ ಹೇಳಿದ್ದಾನೆ:

ಆಧುನಿಕ ಬೆಡಗಿಯರು, ಸೌಂದರ್ಯವರ್ಧಿಸಲು
ಮೇದುರದ ವೇಷ ಧರಿಸಿ ಸಂಸ್ಕೃತಿ ಮರೆತು
ಮೋದ ಪಡೆಯುವವರು ಪೂರ್ಣಜ್ಞ. (ವ. ೩೩೧)

ಇದೆಲ್ಲಕ್ಕೂ ಮುಖ್ಯ ಕಾರಣ 'ಕಣ್ಣು.' ಇದೊಂದು ಅರ್ಥಪೂರ್ಣವಾದ ಪ್ರತಿಮೆ. ಇದು ಜಗತ್ತನ್ನು ನೋಡುವ ಬಗೆಯಲ್ಲೇ ಆಕಾರ ಮತ್ತು ವಿಕಾರಗಳ ಸೃಷ್ಟಿಯಾಗುತ್ತದೆ. ಕಣ್ಣು ಹೊರಗಣ್ಣಾಗಿ, ಕಣ್ಣು ಒಳಗಣ್ಣಾಗಿ ಜಗತ್ತನ್ನು ನೋಡಿದರೂ, ದೃಷ್ಟಿ ಮಾತ್ರ ತಿಳಿಗಣ್ಣಾಗಬೇಕೆಂಬ ಮಾತು ಅರ್ಥಪೂರ್ಣ. ಇಂದ್ರಿಯ ಗ್ರಾಹ್ಯವಾದ ವಸ್ತು ವಿಶೇಷಗಳ ದೋಷಕ್ಕಿಂತ, ದೃಷ್ಟಿದೋಷವೇ ಹೊಸ ಲೋಕವನ್ನು ರೂಪಿಸುತ್ತದೆ. ಆದ್ದರಿಂದ, ನೋಡುವ ಬಗೆಯೇ ಹಿರಿದಾದದ್ದು; ಲೋಕವನ್ನು ಅಳೆಯುವಂಥದ್ದು ಕಣ್ಣು. ಕಣ್ಣಿನ ಮಹತ್ವವನ್ನು ವಚನಕಾರ ಹೀಗೆ ವಿವರಿಸಿದ್ದಾನೆ:

೧. ಕಣ್ಣಿನಿಂದಲೆ ಪ್ರೇಮ, ಕಣ್ಣಿನಿಂದಲೆ ಕಾಮ
ಕಣ್ಣಿನಿಂದಲೆ ಬದುಕು, ಜಗವನೀಕ್ಷಿಸಲು
ಕಣ್ಣೇ ಬೇಕಯ್ಯ ಪೂರ್ಣಜ್ಞ. (ವ. ೧೨೬)

೨. ಕಣ್ಣಿನಲಿ ಹೊರಗಣ್ಣು, ಕಣ್ಣಿನಲಿ ಒಳಗಣ್ಣು
ಕಣ್ಣಿನೊಳಗಿರುವ ತಿಳಿಗಣ್ಣು ತಿಳಿದಿರುವ
ಅಣ್ಣಗಳು ಯಾರು? ಪೂರ್ಣಜ್ಞ. (ವ. ೧೨೭)

೩. ಕಣ್ಣಿಂದ ಸತ್ಕಾರ್ಯ, ಕಣ್ಣಿಂದ ದುಷ್ಕಾರ್ಯ
ಕಣ್ಣಿಂದ ಕೊಲೆ ಸುಲಿಗೆ ಕೆಡುಕೊಳಿತುಗಳಿಗೆ
ಕಣ್ಣೇ ಕಾರಣವು ಪೂರ್ಣಜ್ಞ. (ವ. ೧೩೦)

ಭಾರತದಲ್ಲಿ ಇತ್ತೀಚೆಗೆ ಅಸ್ಪೃಶ್ಯತಾ ಮನೋಭಾವ ಜಾಸ್ತಿಯಾಗುತ್ತಿದೆ. ಹಿಂದೂ ಸಂಸ್ಕೃತಿಯಲ್ಲಿ ಇದಕ್ಕೆ ಅವಕಾಶ ನೀಡಬಾರದೆಂದು ವಚನಕಾರ ಕರೆ ನೀಡಿದ್ದಾನೆ. 'ಹಿಂದುಗಳು ಎಂಬುವರೆ, ಶೂದ್ರ-ವೈಶ್ಯ-ಬ್ರಾಹ್ಮಣಾದಿ ಮೇಣ್ ಶೈವ ವೀರಶೈವೇತ್ಯಾದಿ ಭೇದ ಮಾಡದಿರಿ ಪೂರ್ಣಜ್ಞ' (ವ. ೩೯೧) ಎಂಬಲ್ಲಿ ವರ್ಣವ್ಯವಸ್ಥೆಯನ್ನು ಶಬ್ದರೂಪದಲ್ಲಿಯೇ ಸ್ಥಾನಪಲ್ಲಟಗೊಳಿಸಲಾಗಿದೆ. ಬ್ರಾಹ್ಮಣ-ವೈಶ್ಯ-ಶೂದ್ರ ಎನ್ನುವ ಬದಲು ಶೂದ್ರ-ವೈಶ್ಯ-ಬ್ರಾಹ್ಮಣ ಎನ್ನಲಾಗಿದೆ. ಈ ಬಗೆಯ ಬದಲಾವಣೆ ಆದರೆ ಮಾತ್ರ ಭರತ ಖಂಡದಲ್ಲಿ ಸಮಾನತೆ, ಐಕ್ಯತೆ ಎಂಬುದು ಸಾಧ್ಯ. ನವನಾಗರಿಕರೆನಿಸಿಕೊಂಡ ಅನೇಕ ಮಂದಿ ಹರಿಜನರನ್ನು ಮಾನಸಿಕವಾಗಿ ಸಮಾನರೆಂದು ಒಪ್ಪಿಕೊಂಡಂತಿಲ್ಲ. ಅವರನ್ನು ಸಂಸ್ಕೃತಿ ಹೀನರೆಂದು ಭಾವಿಸಿದಂತಿದೆ. ಈ ಬಗ್ಗೆ ವಚನಕಾರನ ಸಲಹೆಯಿದು:

೧. ಹರಿಜನರ ಕಂಡೊಡನೆ, ಜರಿದು ಹಿಂಜರಿಯದಿರು
ಹರಿಜನರುಗಳಿಗೆ ಸಂಸ್ಕೃತಿಯ ತುಂಬಿದರೆ
ವರಜನರೆ ಆವರು ಪೂರ್ಣಜ್ಞ. (ವ. ೩೯೮)

೨. ನೊಂದು ಬೆಂದವರೆಂದು, ಹಿಂದುಳಿದ ಹರಿಜನರ
ಬಂಧು ಭಾವದಲಿ ಮೈದಡವಿ ಪ್ರೀತಿಸುತ
ಮುಂದೆ ತರಬೇಕು ಪೂರ್ಣಜ್ಞ. (ವ. ೪೦೦)

ಇಷ್ಟೇ ಅಲ್ಲದೆ, ಹರಿಜನರಲ್ಲಿ ಮನೆ ಮಾಡಿರುವ ದುಶ್ಚಟ, ದುರ್ನಡತೆಗಳನ್ನು ಟೀಕಿಸುವುದಕ್ಕೂ ವಚನಕಾರ ಮುಂದಾಗುತ್ತಾನೆ: 'ದುಶ್ಚಟದ ದುಶ್ಚಕ್ರ, ಕೊಚ್ಚುತಿದೆ ಹರಿಜನರ, ಎಚ್ಚರಿಸಿ ತಿಳಿಸಿ ಸನ್ಮಾರ್ಗ ತೋರಿದರೆ ಉಚ್ಚರಾಗುವರು ಪೂರ್ಣಜ್ಞ'. (ವ. ೪೦೧) ಚುನಾವಣೆ ಬಂತೆಂದರೆ ಹರಿಜನರ ಉದ್ಧಾರದ ಮಾತು ವೇದಿಕೆಯಲ್ಲಿ ಉರುಳುತ್ತವೆ. ಅಧಿಕಾರ ದೊರೆತ ಕೂಡಲೇ ಅಂಗಲಾಚಿದರೂ ಹರಿಜನರಿಗೆ ಅನ್ನ ದೊರೆಯುವುದಿಲ್ಲ. ಸುಳ್ಳು ಭರವಸೆ, ಆಶ್ವಾಸನೆಗಳಿಂದ ಮುಗ್ಧರನ್ನು ವಂಚಿಸುವವರಿಗೆ ವಚನಕಾರ ಹೇಳುವ ಮಾತುಗಳಿವು: 'ಹರಿಜನರ ಉದ್ಧಾರ, ಬರಿಮಾತಿನಿಂದಹುದೆ? ಇರಲು ಮನೆ ಅನ್ನ ಅಕ್ಷರಗಳನು ನೀಡು, ಶರಣರಹರವರು ಪೂರ್ಣಜ್ಞ'. (ವ. ೪೦೨). ಅಧಿಕಾರಕ್ಕಾಗಿ ಹಣದಾಸೆ ತೋರಿಸುವ ಜನ, ಅಧಿಕಾರ ಬಂದೊಡನೆ ಹಣಕ್ಕಾಗಿ ತವಕಿಸುವುದನ್ನು ಕಂಡು ವಚನಕಾರ ಹೀಗೆ ವಿಡಂಬಿಸಿದ್ದಾನೆ:

೧. ಅಧಿಕಾರಗಿಟ್ಟಿಸಲು, ಸದುವಿನಯವನು ನಟಿಸಿ
ಅಧಿಕಾರ ಬರಲು ಮರೆಯುವರು ಎಲ್ಲರನು
ಮುದದಿಂದ ಕೊಬ್ಬಿ ಪೂರ್ಣಜ್ಞ. (ವ. ೪೩೬)

೨. ಅಧಿಕಾರ ದೊರಕಿಸಲು, ಹದವರಿತು ಹಣಸುರಿಸಿ
ಅಧಿಕಾರ ದೊರೆತ ಮರುಚಣವೆ ಲಂಚಕ್ಕೆ
ಬೆದಕಾಡುತಿಹರು ಪೂರ್ಣಜ್ಞ. (ವ. ೪೩೭)

೩. ಹಣದ ಸೊಕ್ಕುಳ್ಳವರು, ಗುಣಗಳನು ಲೆಕ್ಕಿಸರು
ಹಣವೆಲ್ಲ ಹೋದ ಮರುದಿನವೇ ಹಾಳೂರ
ಹೆಣಕೆ ಸರಿಯಹರು! ಪೂರ್ಣಜ್ಞ. (ವ. ೪೪೦)

೪. ಹಣವು ಇದ್ದರೆ ಸಾಕು! ಗುಣವಂತರೆನಿಸುವರು
ಹಣದ ಹೆಗ್ಗಳಿಕೆಯಿಂದೆದೆಯ ಸೆಟಿಸುವರು
ಒಣಜಂಭದಲ್ಲಿ ಪೂರ್ಣಜ್ಞ. (ವ. ೪೪೧)

ಒಬ್ಬ ಮಠಾಧಿಕಾರಿಯಾಗಿರುವ 'ಪೂರ್ಣಜ್ಞ' ಮಠದ ವ್ಯವಸ್ಥೆ, ಶಿಸ್ತುಗಳನ್ನು ಅಪೇಕ್ಷಿಸುವಂಥವರು. ಆದಕ್ಕೆ ಭಿನ್ನವಾಗಿ ವರ್ತಿಸುವ ಸ್ವಾಮಿಗಳನ್ನು ಟೀಕಿಸುವುದರ ಹಿಂದಿರುವ ವಚನಕಾರನ ಪ್ರಾಮಾಣಿಕತೆಯನ್ನು ಗಮನಿಸಬೇಕು: "ಕೆಲಜನರು ಸ್ವಾಮಿಗಳು, ಮೆಲುಮಾತುಗಳನಾಡಿ, ಹಲವು ತಂತ್ರದಲಿ ತಮಗಾಗಿ ನಮ್ಮನ್ನು ಎಳೆದುಕೊಳಲಿಹರು" (ವ. ೪೮೦) ಎಂಬಲ್ಲಿ ಮಠದೊಳಗಿನ ಸ್ವಾರ್ಥ, ರಾಜಕೀಯಗಳನ್ನು ಬಯಲು ಮಾಡಿದ್ದಾನೆ:

೧. ಕೆಲಸವಾಗುವ ತನಕ, ಬಲುವಿನಯಶಾಲಿಗಳು
ಕೆಲಸ ಮುಗಿದೊಡನೆ ಉಪಕಾರಗೇಡಿಗಳು
ಬಲು ಸೊಕ್ಕುತಿಹರು ಪೂರ್ಣಜ್ಞ. (ವ. ೪೮೧)

೨. ಒಳಗೊಂದು ಹೊರಗೊಂದು, ಖಳತಂತ್ರ ಹೂಡುವರು
ಒಳಿತೆಂಬುದಿವರ ಬಳಿಸುಳಿಯದಿವರ
ತಲೆಕುಕ್ಕಯ್ಯ ಪೂರ್ಣಜ್ಞ. (ವ. ೪೮೨)

೩. ಉದ್ದುದ್ದ ಮಾತಾಡಿ, ಮುಗ್ಧ ಭಕ್ತರ ಸುಲಿದು
ಇದ್ದಲ್ಪಸ್ವಲ್ಪ ಶ್ರದ್ಧೆಗೆರವಾಗುವರು
ಬುದ್ಧಿಗೇಡಿಗಳು ಪೂರ್ಣಜ್ಞ. (ವ. ೪೮೨)

೪. ತೊರೆಯ ದಾಟಿದ ಮೇಲೆ, ಹರಿಗೋಲನೊದೆದಂತೆ
ನೆರವಾದವರಿಂಗೆ ಕೈಕೊಡುವ ಖಳಜನರ
ನೆರಳು ಸಹ ಬೇಡ ಪೂರ್ಣಜ್ಞ. (ವ. ೪೮೬)

ಹೀಗೆ, ವಚನಕಾರ ತನ್ನ ಸುತ್ತಲಿನ ಸಮಾಜವನ್ನು ತೆರೆದ ಕಣ್ಣಿನಿಂದ ಅವಲೋಕಿಸಿದ್ದಾನೆ. ಬದುಕಿನ ಪ್ರತಿಯೊಂದು ಮಗ್ಗುಲುಗಳನ್ನೂ ತರ್ಕಬದ್ಧವಾಗಿ ವಿವೇಚಿಸಿದ್ದಾನೆ. ಒಪ್ಪಿಗೆಯಾಗುವ ವಿಚಾರಗಳ ಬಗ್ಗೆ ಮೆಚ್ಚುಗೆ ಇರುವಂತೆಯೇ, ಒಪ್ಪಿಗೆಯಾಗದ ವಿಷಯಗಳ ಬಗ್ಗೆ ಖಂಡನೆಯಿದೆ. ಅದು ವಿನಾಕಾರಣವಾದ ಟೀಕೆಯಾಗದೆ, ಸಕಾರಣವಾಗಿ ಸಮಾಜ ವ್ಯವಸ್ಥೆಯನ್ನು ತಿದ್ದುವ ಪ್ರಯತ್ನವೆನಿಸುತ್ತದೆ. ಮೇಲ್ನೋಟಕ್ಕೆ ವಚನಗಳು ನೀತಿ ಪ್ರಧಾನವಾದವುಗಳು ಎನಿಸಿದರೂ, ಹಲವು ಕಡೆ ಕಲಾತ್ಮಕತೆಯನ್ನು ಸಾಧಿಸಿರುವ ಉಕ್ತಿಗಳಿವೆ:

೧. 'ಬಳಕೆ ಮಾಡದ ದುಡ್ಡು, ಹುಳ ತಿಂದು ಹೋದೀತು' (ವ. ೮೫)
೨. 'ಭಾವವಿಲ್ಲದ ಕವನ, ಜೀವವಿಲ್ಲದ ಕಾಯ' (ವ. ೧೪೭)
೩. 'ನೀರು ತುಂಬಿದ ಕೆರೆಯು, ನೀರೆಯರಿರುವ ಮನೆಯು' (ವ. ೧೪೯)
೪. 'ಎಲೆಗಳಿಲ್ಲದ ಮರದಿ, ನೆಳಲನರಸಬಹುದೆ?'
೫. 'ಹೆಸರಿನಾಶೆಯ ಹೊಗೆಯು, ಪಸರಿಸುತ ಮನದಲ್ಲಿ' (ವ. ೨೪೬)
೬. 'ಕಂಡದ್ದು ಬಿಟ್ಟು ಕೃತಕವನು ಬರೆದರೆ, ಶಿಖಂಡಿಯಂತಕ್ಕು' (ವ. ೪೩೦)
೭. 'ಬಾಯಿಂದ ಸವಿಗರೆದು, ಕೈಯಿಂದ ವಿಷಸುರಿದು' (ವ. ೫೮೪)
೮. 'ಗುಬ್ಬಿ ಹೆರವರ ಮನೆಯೊಳುಬ್ಬಿಗೂಡನು ಕಟ್ಟಿ' (ವ. ೬೦೪)
೯. 'ಆಡಂಬರಕೆ ಉದ್ದ ಕೋಡು ಮಾಡುತ್ತಿಹವು' (ವ. ೬೦೮)
೧೦. 'ತಲೆಬೋಳು ಆದರೇಂ? ಬಲವಿಲ್ಲ ಮೆದುಳಿನಲಿ' (ವ. ೬೬೪)
೧೧. 'ಮಾನವತೆಯಿಲ್ಲದಿಹ, ಸನ್ಯಾಸದಿಂದೇನು?' (ವ. ೧೩೫೫)
೧೨. 'ಕಾವಿ ತೊಟ್ಟವರೆಲ್ಲ, ದೇವರನು ಕಾಣುವರೆ?' (ವ. ೧೩೩೫)
೧೩. 'ಲಗ್ನವಾದವರೆಲ್ಲ, ಸದ್ಗೃಹಸ್ಥರೆ ನಿಜದಿ?' (ವ. ೧೩೩೩)

ಮೇಲಿನ ಪದಸರಣಿಯನ್ನು ಗಮನಿಸಿದರೇ ತಿಳಿಯುತ್ತದೆ— ಈ ವಚನಗಳಲ್ಲಿರುವ ಕಾವ್ಯಾಂಶವನ್ನು ಪ್ರತ್ಯೇಕವಾಗಿಯೇ ಅಧ್ಯಯನ ಮಾಡಬೇಕು ಎಂಬುದು. ಈ ಪ್ರಬಂಧದಲ್ಲಿ ಉಲ್ಲೇಖಿಸಿರುವ ವಿಚಾರಗಳಲ್ಲದೆ ಮದುವೆ, ವರದಕ್ಷಿಣೆಯ ದುರಂತಗಳು, ಕಾವಿ ಮಹತ್ವ, ಸಂಸ್ಕೃತಿಹರಣ, ಭಾಷಾಬಾಂಧವ್ಯ, ಕುಟುಂಬ ಕಲಹ– ಇತ್ಯಾದಿ ಅನೇಕ ವಿಚಾರಗಳನ್ನು ಕುರಿತ ಅರ್ಥಪೂರ್ಣ ವಚನಗಳ ಗುಚ್ಛವೇ ಈ ಕೃತಿಯಲ್ಲಿದೆ. ಇಂತಹ ಆದರ್ಶಮಯವಾದ ಬದುಕಿನ ಸಾರವನ್ನು ವಚನ ಸುಧೆಯಾಗಿ ನೀಡಿದ 'ಪೂರ್ಣಜ್ಞ' ಎಲ್ಲರ ಅಭಿನಂದನೆಗೆ ಅರ್ಹರು.

# "ಪೂರ್ಣಜ್ಞ ವಚನಗಳು"–ದರ್ಶನ, ಅನುಭವ, ಪರಾಮರ್ಶೆ

ಕನ್ನಡ ಅಧ್ಯಯನ ಪೀಠ:
ಕುವೆಂಪು ವಿಶ್ವವಿದ್ಯಾಲಯ
ಬಿ. ಆರ್. ಪ್ರಾಜೆಕ್ಟ್-೫೭೭ ೧೧೫

**ಡಾ. ಸುಶೀಲಾ ನೆಲ್ಲಿಸರ**

ಕನ್ನಡ ಸಾರಸ್ವತ ಲೋಕಕ್ಕೆ ಇದೊಂದು ಅಮೂಲ್ಯ ಕೃತಿ. ಸಾಹಿತ್ಯ, ಧರ್ಮ, ಇತಿಹಾಸ, ಸಂಸ್ಕೃತಿ, ಸಮಾಜ, ಶಿಕ್ಷಣ, ಬದುಕು ಹೀಗೆ ಜೀವನದ ವಿವಿಧ ಆಯಾಮಗಳನ್ನು ಮಾರ್ಮಿಕವಾಗಿ ಅನಾವರಣಗೊಳಿಸಿದ್ದಾರೆ. ಅವರೇ ಹೇಳಿರುವಂತೆ ೧೯ ನೇ ವರ್ಷದ ಪ್ರಾರಂಭದಿಂದ ತ್ರಿಪದಿ ರೂಪದಲ್ಲಿ 'ಪೂರ್ಣಜ್ಞನ ವಚನಗಳು' ಎಂಬ ಶಿರೋನಾಮೆಯಲ್ಲಿ ಬರೆಯುತ್ತಾ ಬಂದಿದ್ದ ಬೃಹತ್‌ರೂಪ ತಾಳಿರುವ ಈ ಕೃತಿಯಲ್ಲಿ ಬದುಕಿನ ನೂರಾರು ವಿಷಯುಗಳು ಸಮ್ಮಿಲನಗೊಂಡಿವೆ. ನಮ್ಮ ಜನಪದ ಸಾಹಿತ್ಯವೆಲ್ಲಾ ಹೆಚ್ಚಾಗಿ ಪಡಿಮೂಡಿರುವುದು ತ್ರಿಪದಿ ರೂಪದಲ್ಲಿ. ಹಾಗೆಯೇ ಸರ್ವಜ್ಞ ವಚನಗಳೂ 'ತ್ರಿಪದಿ'ಯಲ್ಲಿವೆ. ಅದರಂತೆಯೇ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಈ ರಚನೆಯೂ ಕೂಡ 'ತ್ರಿಪದಿ'ಯಲ್ಲಿಯೇ ಇರುವುದಕ್ಕೆ ಏನಾದರೊಂದು ಕಾರಣವಿರಬೇಕೆಂದೆನ್ನಿಸುತ್ತದೆ. ಸಾಮಾನ್ಯ ಓದುಗನಿಂದ ಹಿಡಿದು ಪಂಡಿತ ಪಾಮರರಿಗೆಲ್ಲಾ ಅರ್ಥವಾಗಲೆಂದೋ ಅಥವಾ ತಮ್ಮ ಭಾವನೆಗಳನ್ನು, ಆಲೋಚನೆಗಳನ್ನು, ಅನುಭವಗಳನ್ನು ಜನರೊಡನೆ ಹಂಚಿಕೊಳ್ಳಲು 'ತ್ರಿಪದಿಯೇ' ಸರಿಯಾದ ಮಾರ್ಗವೆಂದು ಸ್ವಾಮೀಜಿಯವರು ಈ ಕ್ರಮವನ್ನು ಅನುಸರಿಸಿರಬಹುದು. ಆಯಾ ಕಾಲಮಾನಕ್ಕನುಗುಣವಾಗಿ ಸನ್ನಿವೇಶಕ್ಕನುಸಾರವಾಗಿ ಅಂದಂದಿನ ಘಟನೆಗಳನ್ನು ಇಲ್ಲಿ ದಾಖಲುಗೊಳಿಸಿರುವುದೂ ಒಂದು ವಿಶೇಷವೇ ಸರಿ. ಇಂತಹ ಅಂದಂದಿನ ಬರವಣಿಗೆಯಲ್ಲಿ ಮೌಲ್ಯಯುತವಾದ ಅಂಶಗಳು ಒಳಗೊಂಡಿರುವಂತೆಯೇ ಪುನರಾವರ್ತನೆಯೂ ಆಗಿರುವ ಸಾಧ್ಯತೆಗಳೂ ಕಂಡುಬರುತ್ತವೆ.

ಜನಪದ ಗರತಿ ಯಾವುದೇ ಒಂದು ಹಾಡು ಹೇಳುವಾಗಲೂ ತನ್ನೂರಿನ ದೈವವನ್ನು, ಸರಸ್ವತಿಯುನ್ನು, ಗಣಪತಿಯುನ್ನು ಮೊದಲು ನೆನೆದು ಮುಂದಿನ ಕಥೆ ಹೇಳುವಂತೆ ಇವರೂ ಕೂಡ ಆರಂಭದಲ್ಲಿ ಗುರುಸಿದ್ಧರನ್ನು ಯೋಗಶಕ್ತಿಯುನ್ನು ನೆನೆದಿದ್ದಾರೆ.

ಸಿದ್ಧರಲಿ ಸಿದ್ಧೇಂದ್ರ, ಶುದ್ಧ ಸದ್ಗುಣ ಸಾಂದ್ರ
ಬಿದ್ದವರನೆತ್ತಿ ಬಿಗಿದಪ್ಪಿ ರಕ್ಷಿಸುವ
ಸಿದ್ಧ ಶ್ರೀಗುರುವೆ ಪೂರ್ಣಜ್ಞ

ಮೂರುಸಾವಿರಮಠದ ಕಾರಣ ಪುರುಷ ನೀನು
ಆರು ತತ್ವಗಳ ತಿಳುಹಿದ ಚಿದ್ಯೋಗಿ
ಕೋರುವೆನು ಸುಮತಿ ಪೂರ್ಣಜ್ಞ.

ಹೀಗೆ, ಗಂಗಾಧರ ರಾಜಯೋಗೀಂದ್ರರು ಪ್ರತಿಯೊಂದು ಹಂತದಲ್ಲೂ ದೈವಕ್ಕೆ ಶರಣಾಗಿದ್ದಾರೆ. ಬಸವಣ್ಣನವರು ಹೇಳುವಂತೆ "ಎನಗಿಂತ ಕಿರಿಯರಿಲ್ಲ" ಎಂಬ ವಿನೀತ ಭಾವವನ್ನು ವ್ಯಕ್ತಪಡಿಸಿದ್ದಾರೆ. ಜನಪದ ಗರತಿ ಹೇಳುವಂತೆ

ಮಾದೇವ ನಿನ ಹೊರತು ನಾನ್ಯಾರ ನಂಬಿಲ್ಲ
ನಾ ಮಾಡೆನೆಂಬ ಅಳವಿಲ್ಲ, ಮಲ್ಲಯ್ಯ
ನೀ ನಡಿಸು ನನ್ನ ಸರುವೆಲ್ಲ

ನಾನು ಎಷ್ಟೇ ಸಾಮರ್ಥ್ಯವುಳ್ಳವನಾಗಿದ್ದರೂ ನಿನ್ನ ಕರುಣೆ ಬೇಕು. ನನಗೆ, ಇದನ್ನು ನಾನು ಮಾಡಿದೆ 'ನಾನೂ ನಾನೂ' ಎಂಬ ಅಹಂಕಾರ ಮಮಕಾರಗಳಿಲ್ಲ. ಇದೆಲ್ಲಾ ನೀನೇ ಮಾಡಿಸಿದ್ದು ಎನ್ನುವುದನ್ನು ಎಷ್ಟು ನಮ್ರತೆಯಿಂದ ಹೇಳುತ್ತಾರೆಂದರೆ– "ಮೂರುಸಾವಿರ ಮಠದ ಕಾರಣ ಪುರುಷ ನೀನು", ಈ ಮಠ, ಈ ಭಕ್ತಾದಿಗಳು, ಈ ಅತುಲಐಶ್ವರ್ಯ, ಈ ಕೀರ್ತಿ, ಈ ಕೃತಿ ರಚನೆ ಇತ್ಯಾದಿಗಳಿಗೆಲ್ಲಾ ನೀನೇ ಕಾರಣಪುರುಷ ಎನ್ನುತ್ತಾರೆ. ಇದು ಎಲ್ಲಾ ಮಹಿಮಾನ್ವಿತರೂ ಅನುಸರಿಸಬೇಕಾದದ್ದು.

ಬದುಕಿನ ಪಾಠಶಾಲೆಯಲ್ಲಿ ನೂರಾರು ಅನುಭವಗಳಾಗಿವೆ. ಇದರ "ಅನುಭವದ ಸಾರವನು ಅನುಭವಿಸಿ ಹೇಳುವೆನು" ಅನುನಯದಿ ಕೇಳಿ ಎಂದು ಭಿನ್ನವಿಸುತ್ತಾರೆ. ಇವರದೊಂದು ಋಷಿ ಸದೃಶವಾದಂತಹ ಬಾಳ್ವೆ. ಹೀಚಾಗಿ, ಕಾಯಾಗಿ, ಹಣ್ಣಾಗಿ, ಪರಿಪಕ್ವವಾಗಿ ಅನುಭವದ ರಸಪಾಕವನ್ನು ನೀಡಿದ್ದಾರೇ ವಿನಃ 'ಹಸುಕಿಸುಗಾಯಿ'ಯ ಅಥವಾ ಅನುಭವವೇ ಇಲ್ಲದೆ ಊಹಿಸಿ, ಕಲ್ಪಿಸಿ ಹೇಳುವಂತಹ ನುಡಿಗಳಲ್ಲ ಇವು. "ಲೋಕ ಶಿಕ್ಷಣ ಶಾಲೆ ಲೋಕಾನುಭವವನ್ನು ಸಾಕನಿತು ಕಲಿಸಿದುದು ವಚನ ರಚಿಸಲ್ಕೆ" ಎಂದು ದಿಟ್ಟ ಮನಸ್ಸಿನಿಂದ ಹೇಳಿದ್ದಾರೆ. ಸಮಾಜದ ವಿವಿಧ ವರ್ಗದ ಜನರು ಮಾಡುವ ಮೋಸ, ವಂಚನೆ, ಕಪಟ, ಆಷಾಢಭೂತಿತನ, ಸಮಯ ಸಾಧಕತನ, ಆಸೆ ಆಮಿಷಗಳ ಬಲಿಬಿದ್ದು ಕುಡಿತ, ಜೂಜು, ಸೂಳೆಗಾರಿಕೆ ಮೊದಲಾದ ಕೆಟ್ಟ ವಸ್ತುಗಳ ದಾಸರಾಗಿರುವಂತಹವರನ್ನು, ತಮ್ಮ ಕೆಲಸ ಸಾಧನೆಗಾಗಿ ಏನನ್ನು ಬೇಕಾದರೂ ಮಾಡಲು ಮುಂದಾಗುವವರನ್ನು, ಸಂಸಾರ ಸುಖವನ್ನು ಅನುಭವಿಸದೆ ಮಕ್ಕಳಿಗೆ ಸರಿಯಾದ ಶಿಕ್ಷಣ ನೀಡದೆ ದುರ್ವ್ಯಸನಿಗಳಾಗಿ, ಲೋಕಕಂಟಕರಾದವನ್ನು, ಗೂಂಡಾಗಳಾಗಿ ವರ್ತಿಸುವವರನ್ನು, ಗಂಡನ ಮೇಲೆ ಇಷ್ಟವಿಲ್ಲದ ಹೆಂಡತಿಯರನ್ನು, ಹೆಂಡಂದಿರ ಮೇಲೆ ಪ್ರೀತಿ ಇಲ್ಲದೆ ಹಾಳಾದ ಸಂಸಾರವನ್ನು ಕಂಡು ಮರುಗಿದ್ದಾರೆ. ಅವರ ಉದ್ಧಾರಕ್ಕಾಗಿ, ಏಳ್ಗೆಗಾಗಿ ಹಂಬಲಿಸಿದ್ದಾರೆ. ಮನುಷ್ಯನಿಗೆ ಯಾವುದೇ ಒಂದು ಚಟವಿದ್ದರೆ ಸಾಕು ಹಾಳಾಗುತ್ತಾನೆ. ಆದರೆ ಇಂತಹ ಹತ್ತಾರು ಚಟಗಳ ದಾಸರಾಗಿ, ಹಗಲು ಹೊತ್ತೇ ಪಾನಮತ್ತರಾಗಿ, [ಮನುಷ್ಯನಾಗಿ ಜನ್ಮತಾಳುವುದೇ ಪುಣ್ಯದ ಫಲದಿಂದ ನಾಯಿಯಾಗಿಯೋ ಹಂದಿಯಾಗಿಯೋ ಅಥವಾ ಇನ್ನಾವುದೋ ಕ್ರೂರ ಜಂತುವಾಗಿಯೋ ಜನಿಸಿ ಮಾಡುವಂತಹ ರೀತಿಯಲ್ಲಿ ಅವಿವೇಕಿಗಳಂತೆ ವರ್ತಿಸುವರಲ್ಲಾ!] ಮಾನವ

ಜನ್ಮವನ್ನೇ ವ್ಯರ್ಥ ಮಾಡುತ್ತಿರುವವರಲ್ಲಾ! ಇವರಿಗೆ ಗುರು, ಗುರಿ, ಒಂದೂ ತಿಳಿದಿಲ್ಲ ವಲ್ಲಾ ಎಂದು ಮಮ್ಮಲ ಮರುಗಿದ್ದಾರೆ.

ದುರ್ಗುಣಗಳ ಕಿತ್ತಿ ಸದ್ಗುಣಂಗಳ ಬಿತ್ತಿ
ಹೃದ್ಗುಣದ ಸುಗ್ಗಿ ಮಾಡಿದರೆ ಈ ಜಗವೆ
ಸ್ವರ್ಗ ತಾನಕ್ಕು ಪೂರ್ಣಜ್ಞ.

ವಚನಕಾರರು ಹೇಳುವಂತೆ "ಸ್ವರ್ಗ ನರಕವೆಂಬುದು ಬೇರಿಲ್ಲ ಕಾಣಿರೋ, ಸತ್ಯವ ನುಡಿವುದೇ ಸ್ವರ್ಗಲೋಕ...." ಎಂದಂತೆ, ಇವರು ಹಲವಾರು ದೃಷ್ಟಾಂತಗಳ ಮೂಲಕ ಇದನ್ನು ಸ್ಪಷ್ಟೀಕರಿಸುತ್ತಾರೆ. ಮನುಷ್ಯರಲ್ಲಿ ಮೇಲು ಕೀಳು ಎಂಬುದಿಲ್ಲ. ನೂರಾರು ಜಾತಿ ಮತಗಳಿಲ್ಲ, ಇದೆಲ್ಲವನ್ನು ಸೃಷ್ಟಿಸಿಕೊಂಡವರು ಮನುಜರೇ. ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ಸರ್ವಜ್ಞ ಹೇಳುವಂತೆ "ಸುಡುವುದೊಂದೇ ಅಗ್ನಿ, ಸುಳಿವುದೊಂದೇ ಗಾಳಿ ಇರುತಿರಲು, ನಡುವೆ ಕುಲಗೋತ್ರಗಳು ಎತ್ತಣದು ಜಾತಿ ಸರ್ವಜ್ಞ" ಎಂದಂತೆ, ಶ್ರೀ ಗಂಗಾಧರ ರಾಜ ಯೋಗೀಂದ್ರರರು ಇದಕ್ಕೂ ಮುಂದೆ ಹೋಗಿ "ಅಯ್ಯಾ ನೀತಿ ನಿಯಮಗಳನ್ನೆಲ್ಲಾ ಗಾಳಿಗೆ ತೂರಿರುವಿರಿ. ಗುರುಹಿರಿಯರಲ್ಲಿ ಭಕ್ತಿ ಗೌರವಗಳೆಂಬುದೇ ಮೊದಲಿಲ್ಲ. ವಿಜ್ಞಾನ ಓದಿದಿರಷ್ಟೆ ಸುಜ್ಞಾನಿಗಳಾಗಲಿಲ್ಲ, ಎಲ್ಲೆಲ್ಲಿ ನೋಡಿದರೂ ಅರಾಜಕತೆ, ವೈರತ್ವ, ನಾನು, ತಾನು, ಜಾತಿ, ಮತ ಎಂದು ಕಚ್ಚಾಟ, ಜಗಳ, ದೊಂಬಿ, ಲೂಟಿ, ಕೊಲೆ, ಸುಲಿಗೆ– ಇದರಿಂದ 'ನೀತಿ' ಏನಾಗಿದೆ ಗೊತ್ತೇ?

ಜಾತಿ ಜಾತಿಗೆ ವೈರ ಮಾತು ಮಾತಿಗೆ ಜಗಳ
ಕೋತಿ ಗುಣದವರ ಗದ್ದಲದಿ ನೀತಿ ಹೆಣ
ಜೋತಾಡುತಿಹುದು ಪೂರ್ಣಜ್ಞ.

ಅಪ್ಪ ಗತಿ ನೀವೆಂದು, ಒಪ್ಪುಳ್ಳ ಮಾತಾಡಿ
ಜಪ್ಪಿಸುತ–ನಿಂದು ಬೆನ್ನಿರಿಯುವವರು ಜಗದಿ
ಗುಪ್ತ ಶತ್ರುಗಳು ಪೂರ್ಣಜ್ಞ.

"ಸ್ವಾಮಿ ಗುರುವೇ, ನೀನೇ ನನಗೆ ಗತಿ ಮತಿ" ಎಂದು ಕಪಟ ನಾಟಕವಾಡುತ್ತಾ ಮಾಡಬಾರದ ಸೋಗನ್ನೆಲ್ಲಾ ಮಾಡುತ್ತಾ, ಮುಂದೆ ಹೋದ ನಂತರ ಹಿಂದಿನಿಂದ ಇರಿದು ಕೊಲ್ಲುವ ಗುಪ್ತ ಚೋರರ ನಡವಳಿಕೆಯನ್ನು ಟೀಕಿಸಿದ್ದಾರೆ. ಇಷ್ಟಲ್ಲದೆ ಒಳಗೊಂದು ಹೊರಗೊಂದು, ಇವರ ನಡತೆ. 'ಬಾಯಲ್ಲಿ ಬಸಪ್ಪ, ಹೊಟ್ಟೆಯೊಳಗೆ ಇಸಪ್ಪ' ಅಥವಾ 'ಬಾಯಲ್ಲಿ ಬೆಣ್ಣೆ ಬಗಲಲ್ಲಿ ದೊಣ್ಣೆ' ಎಂಬ ಗಾದೆಯ ಮಾತಿನಂತೆ ಒಲವು, ನಿಜವಾದ ಪ್ರೀತಿ ಇರದ ವ್ಯಕ್ತಿಗಳ ಗೆಳೆತನದ ಸಹವಾಸ ಚರಂಡಿಯ ಕೊಳಚೆಯಷ್ಟೇ ಶ್ರೇಷ್ಠವಾದದ್ದು. "ಸಗಣಿಯವನ ಸರಸಾಟಕ್ಕಿಂತ ಗಂಧದವನ ಗುದ್ದಾಟ ಲೇಸು" ಎನ್ನುವಂತೆ, ಇಂತಹ

ಮೂರ್ಖರಿಂದ ದೂರವಿರುವುದು ತುಂಬಾ ಒಳ್ಳೆಯದೆಂದು ಹೇಳುತ್ತಾ, ಅದಕ್ಕೊಂದು ದೃಷ್ಟಾಂತವನ್ನು ಕೊಡುತ್ತಾರೆ.

ಶ್ರೇಷ್ಠ ನೀನಾಗುವೊಡೆ, ಶ್ರೇಷ್ಠ ಜನರೊಡನಾಡು
ದುಷ್ಟ ಸಂಗವು ಮೊದಲು ಮೃಷ್ಟಾನ್ನ; ಕೊನೆಗೆ
ಕೆಟ್ಟ ವಿಷದನ್ನ ಪೂರ್ಣಜ್ಞ.

ಮೋಸ ಮಾಡುವವರನ್ನು ಕಂಡು ರೋಸಿ ಹೋಗಿದ್ದೇನೆ. ಇವರಿಗೆ ಯಾವ ರೀತಿ ಬುದ್ಧಿ ಹೇಳಬೇಕೋ ತಿಳಿಯದಾಗಿದೆ ಹರನೇ; ನೀ ಈ ಕುಹಕಿಗಳ ದೋಷ ಪರಿಹರಿಸಯ್ಯಾ ಎಂದು ವಿಧ ವಿಧವಾಗಿ ಬೇಡಿಕೊಂಡಿದ್ದಾರೆ. ಉತ್ತಮ ವಿದ್ವಾಂಸರ, ಶ್ರೇಷ್ಠ ಗುರುಗಳ ಮಾರ್ಗದರ್ಶನ, ಮಾತು ಕಥೆ, ನೀತಿ ನಿಯಮ, ದುಷ್ಟ ಜನರಿಗೆ ಹಿಡಿಸದಾಗಿದೆ. ಇಂಥ ಸ್ವಾರ್ಥಾಂಧರೆಲ್ಲಾ (ಸ್ವಾರ್ಥಾಂಧರು, ಎನ್ನುವ ಮಾತು ಬಹು ಅರ್ಥಪೂರ್ಣವಾಗಿದೆ. ಇವರಿಗೆ ಅಹಂಕಾರ ಮಮಕಾರಗಳಿಂದ, ದುರಭಿಮಾನದಿಂದ ಕಣ್ಣಿಗೆ ಪೊರೆ ಬೆಳೆದು ಕುರುಡಾಗಿ ಬಿಟ್ಟಿದೆ) ದಾರಿ ಕಾಣದೆ ದೊಡ್ಡ ಕಂದಕದಲ್ಲಿ ಬೀಳ್ತಾ ಇದ್ದಾರೆ. ಹೀಗೆ ಒಮ್ಮೆ ಬಿದ್ದವರು ಮತ್ತೆ ಏಳಲಿಕ್ಕೇ ಸಾಧ್ಯವಿಲ್ಲ. ನನಗೆ ಏಕೆ ಹೀಗಾಯಿತು ಎಂದು ತಿರುಗಿ ನೋಡಿ ಕೊಳ್ಳಲಿಕ್ಕೂ ಆಗುವುದಿಲ್ಲ ಇವರ ಬದುಕು ಇಲ್ಲಿಗೇ ಪರಿಸಮಾಪ್ತಿಯಾದಂತೆಯೇ.

ಕಣ್ಣು ಮನ ನಾಲಿಗೆಯು ತನ್ನಂಕೆಯೊಳಗಿಟ್ಟು
ತನ್ನ ತಾನರಿದು ನಡೆವವಗೆ ಲೋಕದಲಿ
ಸನ್ಮಾನವುಂಟು ಪೂರ್ಣಜ್ಞ.

ಈ ತ್ರಿಪದಿಯ ಅರ್ಥವನ್ನು ಎಷ್ಟು ಬೇಕಾದರೂ ಹಿಗ್ಗಿಸಬಹುದು. ಅತ್ಯಂತ ಮಹತ್ವಪೂರ್ಣವೂ, ಮೌಲಿಕವೂ, ಸಕಾಲಿಕವೂ, ಸಾರ್ವಕಾಲಿಕವೂ ಆದ ಎಚ್ಚರಿಕೆಯ ಅರಿವನ್ನು ಹೇಳುತ್ತಿದೆ ಮನುಷ್ಯ ತಾನು ಎಷ್ಟೇ ದೊಡ್ಡ ವಿದ್ವಾಂಸನಾಗಿರಲಿ, ವಿಜ್ಞಾನಿಯಾಗಿರಲಿ, ಸಾಹಿತಿಯಾಗಿರಲಿ, ಗುರುವಾಗಿರಲಿ, ಪ್ರತಿ ಕ್ಷಣಕ್ಷಣಕ್ಕೂ 'ಕಣ್ಣು ಮನ ನಾಲಿಗೆ'ಯನ್ನು ತನ್ನಂಕೆಯೊಳಗಿಟ್ಟುಕೊಳ್ಳಬೇಕಾದ ಅಗತ್ಯ ಬಹು ಮುಖ್ಯವಾದದ್ದು. "ಅಡಕೆಯಲ್ಲಿ ಹೋದ ಮಾನ ಆನೆ ಕೊಟ್ಟರೂ ಬಂದೀತೆ?" ಎನ್ನುವಂತೆ, 'ಎಷ್ಟು ಸನ್ಮಾನವ ಮಾಡಿದರೇನು ನಿಮಿಷದ ಉದಾಸೀನ ಕೆಡಿಸಿತ್ತು ನೋಡಾ' ಎನ್ನುವಂತೆ, ತನ್ನ ಅರಿವು ತನಗಿರಬೇಕಾದ ಅತಿಸೂಕ್ಷ್ಮ ಗುಟ್ಟನ್ನು ನಮಗೆ ಈ ತ್ರಿಪದಿ ತಿಳಿಸುತ್ತದೆ. ಎಷ್ಟೋ ದೊಡ್ಡದೊಡ್ಡ ಜನರನ್ನು ಕಾಣುತ್ತೇವೆ. ಅವರ ಆಚಾರ, ವಿಚಾರಗಳಿಗೆ, ಮಾತು ಕೃತಿಗಳಿಗೆ ತುಂಬಾ ಅಂತರವಿರುತ್ತದೆ. ರಾಜಕಾರಣಿಗಳಾಗಬಹುದು, ಮಠಾಧಿಪತಿಗಳಾಗಬಹುದು, ಗುರುವಾಗಿರಬಹುದು ಯಾರಾದರೇನಂತೆ? ಅವರ ಮನಸ್ಸು ಮರ್ಕಟನಂತಿದ್ದರೆ ಅವರ ಡಾಂಭಿಕತನ ಒಂದಲ್ಲಾ ಒಂದು ದಿನ ಬಯಲಾಗೇ ಆಗುತ್ತದೆ. ಕಂಡ ಜನ ಥಿ, ಥೂ ಎಂದು ಬಯ್ದೇ ಬಯ್ಯುತ್ತಾರೆ. ಅವರು ಮಾನ ಮರ್ಯಾದೆ ಇಟ್ಟುಕೊಂಡು ಬದುಕಲಿಕ್ಕಾಗುವುದಿಲ್ಲ.

ಕರದಲ್ಲಿ ಜಪಮಾಲೆ ಉರದಲ್ಲಿ ಭವಮಾಲೆ
ಸ್ಮರಿಸುತ್ತ ಎಣಿಸಿದರೆ ಗಿಡವೇರಿ ತಾನು
ಧರೆಗೆ ಬಿದ್ದಂತೆ ಪೂರ್ಣಜ್ಞ.

ಅವರಿಗೆ ಬಿದ್ದ ಪೆಟ್ಟು, ಮನಸ್ಸಿನ ಮೇಲಾದ ಗಾಯ ಮಾಯುವುದೇ ಇಲ್ಲ. ಅಂತಹವರು ಬದುಕಿಯೂ ಸತ್ತಂತೆ ಎನ್ನುತ್ತಾರೆ. ಡಾಂಭಿಕ ಶರಣರು, ಕಪಟ ವೇಷಧಾರಿಗಳಷ್ಟೇ ಆಗಿರುತ್ತಾರೆ. ಅವರ ಮನಸ್ಸು ಕ್ಷಣಕ್ಷಣಕ್ಕೂ ಕೋತಿಯಂತೆ ಚಪಲಾಸಕ್ತದಿಂದ ಕೂಡಿರುತ್ತದೆ. "ಮಾತಿನಲಿ ಶಿವಶರಣ, ನೀತಿಯೋ ವಿಷಕಿರಣ" ಎಂದು ಅವರನ್ನು ವಿಡಂಬಿಸುತ್ತಾರೆ. ಸಮಾಜದಲ್ಲಿ ಕೆಲವರಿಗೆ ಬೇಕಾದಷ್ಟು ಐಶ್ವರ್ಯ, ಸಂಪತ್ತು, ಆಸ್ತಿ ಪಾಸ್ತಿ ಇರುತ್ತದೆ. ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಕುಂತು ತಿಂದರೂ ಕರಗದಷ್ಟದು. ಅದನ್ನು ಹೇಗೆ ಸತ್ಕಾರ್ಯಗಳಿಗೆ ವಿನಿಯೋಗಿಸಬೇಕೆಂಬುದೇ ತಿಳಿಯದು. "ನಾಯಿಯ ಮೊಲೆಯಲ್ಲಿ ಖಂಡುಗ ಹಾಲಿದ್ದಂತೆ. ಅಂತಹ ಮೂರ್ಖರ ಐಶ್ವರ್ಯ ಕೊನೆಗೆ ಏನಾಗುತ್ತದೆಂಬುದನ್ನು ಬಹು ಸುಂದರ ಸಾದೃಶ್ಯದೊಂದಿಗೆ ಸ್ಪಷ್ಟವಾಗಿ ವಿಷದೀಕರಿಸಿದ್ದಾರೆ.

ಬಳಕೆ ಮಾಡದ ದುಡ್ಡು ಹುಳ ತಿಂದು ಹೋದೀತು?
ಜಲವ ಕುಂಭದಿ ತುಂಬಿ ಬಳಸದಿದ್ದರದು
ಮಲೆತ ನಾತಂತೆ ಪೂರ್ಣಜ್ಞ.

ನೀರನ್ನು ಒಂದು ಕೊಡದಲ್ಲಿ ತುಂಬಿ ಎಷ್ಟು ದಿನ ಇಡಬಲ್ಲೆವು? ವರ್ಷಾನುಗಟ್ಟಲೆ ಅದರಲ್ಲೇ ಇದ್ದಾಗ ಅದನ್ನು ಬಳಸುವವರ್ಯಾರು? ಬಳಲಿ ಬೆಂಡಾಗಿ ಬಾಯಾರಿದವನಿಗೆ, ಪ್ರಾಣ ಹೋಗುತ್ತಿರುವವನಿಗೆ, ಬಿಸಿಲಲ್ಲಿ ದಣಿದು ದಾಹವೇರಿದವನಿಗೆ, ಉಪಯೋಗಿಸುವಂತಹ ಅತ್ಯಮೂಲ್ಯವಾದಂತಹ ಅಗತ್ಯವಾಗಿ ಬೇಕಾದಂತಹ ವಸ್ತು, ನೀರು. ಆಗಾಗ ಅಂತಂತಹ ಸಮಯದಲ್ಲಿ ಅದು ವಿನಿಯೋಗವಾಗುತ್ತಿರಲೇಬೇಕು. ಅದಿಲ್ಲದೆ 'ಕೊಡದೊಳಗೆ ನೀರನ್ನು ಕೂಡಿಟ್ಟು' ನೋಡದಿದ್ದಡೆ ಅದು ಕೊಳೆತು ಮಲೆತು ವಿಷವಾಗಿ ಪರಿಣಮಿಸುತ್ತದೇ ವಿನಃ ಅದರಿಂದ ಪ್ರಯೋಜನವೇನೂ ಆಗದು. ಆದ್ದರಿಂದ ನಿಮಗೆ ದೇವರು ಕೊಟ್ಟದ್ದನ್ನು ಸರಿಯಾಗಿ ಬಳಸುವುದನ್ನು ಕಲಿಯಿರಿ. ಇದು ಐಶ್ವರ್ಯಕ್ಕೇ ಮಾತ್ರ ಅನ್ವಯಿಸುವಂತಹ ಮಾತಲ್ಲ. ಸಹಕಾರ, ಸಹಬಾಳ್ವೆ, ಸಂಪತ್ತು, ಸಂಸಾರ, ಸಕಲಕ್ಕೂ ಹೇಳುವಂತಹದ್ದು. ದಾನ ಧರ್ಮವೆಂಬುದನ್ನು ಮರೆಯಬೇಡಿ. ಕೈಲಾಗದವರಿಗೆ, ಕುರುಡ ಕುಂಟರಿಗೆ ನೆರವಾಗುವುದೇ ನಿಜ ಧರ್ಮ ಎನ್ನುತ್ತಾರೆ.

ನಾನೆಂಬುದನು ಅಳಿದು, ನೀನೆಂಬುದನು ತಿಳಿದು
ಸ್ವಾನುಭಾವದಲಿ ಲೀನನಾಗಿಪ್ಪುದದು
ಜ್ಞಾನಿ ಲಕ್ಷಣವು ಪೂರ್ಣಜ್ಞ.

ಶ್ರೀ ಜಗದ್ಗುರುಗಳು ಕೆಲವೊಮ್ಮೆ ಸರಳವಾದ ಮಾತಿನಲ್ಲಿ ಎಲ್ಲರಿಗೂ ಅರ್ಥವಾಗುವ ರೀತಿ

ಯಲ್ಲಿ ಹೇಳುತ್ತಾರಾದರೂ ಈ ತ್ರಿಪದಿಯನ್ನು ಓದಿದಾಗ ಮಾತ್ರ ಇವರೊಬ್ಬ ಮಹಾ ದಾರ್ಶನಿಕನಾಗಿ ಸಂತನಾಗಿ ಸಾಮಾನ್ಯರಿಗೆ ಎಟಕುವುದೇ ಇಲ್ಲ ಎಂದೆನ್ನಿಸುತ್ತದೆ. ಇವರು ಒಮ್ಮೊಮ್ಮೆ ಜನಪದ ಗರತಿಯಂತೆ ತಮ್ಮ ಸುತ್ತಮುತ್ತಲ ವಸ್ತುಗಳನ್ನೇ ತಮ್ಮ ಕಾವ್ಯಕ್ಕೆ ವಸ್ತುವನ್ನಾಗಿ ಮಾಡಿಕೊಳ್ಳುತ್ತಾರೆ. ಸರ್ವಜ್ಞನ ವಚನಗಳಂತೆ ಕೆಲವೊಮ್ಮೆ ಕಂಡ ದೃಷ್ಟಾಂತಗಳನ್ನು ನೇರವಾಗಿ ನಿರೂಪಿಸುತ್ತಾರಾದರೂ, ಅಷ್ಟೇ ಸಾಲದೆಂಬಂತೆ ನಿಗೂಢ ವಾದ ವಸ್ತುವಿನಾಚೆಗೂ ನಮ್ಮನ್ನು ಕರೆದೊಯ್ಯುತ್ತಾರೆ. ಅಲ್ಲಮಪ್ರಭುವಿನಂತೆ ಆಧ್ಯಾತ್ಮಿಕ ನಿಲುವಿನಲ್ಲಿ ನಿಂತು, ಒಗಟಿನ ರೂಪದಲ್ಲಿ ಜೀವನದ ರಹಸ್ಯವನ್ನು, ಆಂತರಿಕ ಸತ್ಯದ ನಿಲುವನ್ನು ತಿಳಿಯಲು ಯತ್ನಿಸುತ್ತಾರೆ. ಅಂತಹ ನಿಗೂಢ ಗುಹೆಯೊಳಗೆ ಇಳಿಯಲು ತಿಳಿಯಲು ಜ್ಞಾನ ಬೇಕಾಗುತ್ತದೆ. ಕವಿಯೊಬ್ಬ ಹೇಳಿದಂತೆ **"ನಾನೇರಿದೆತ್ತರಕೆ ನೀನೇರ ಬಲ್ಲೆಯಾ?"** ಎಂದು ಪ್ರಶ್ನೆ ಮಾಡುವಂತಿರುತ್ತದೆ. ಇಂತಹ ಕೆಲವು ತ್ರಿಪದಿಗಳು ಇಲ್ಲಿ ಹೇರಳವಾಗಿ ಕಂಡುಬರುತ್ತವೆ. ವಚನಕಾರರನ್ನು, ದಾಸರನ್ನು, ಶರಣ ಸಂತರನ್ನು ತುಂಬಾ ಆಳವಾಗಿ ಅಧ್ಯಯನ ಮಾಡಿ ಘನೀಭೂತವಾದ ಸತ್ಯಶೋಧನೆಯನ್ನು, ನಿಜದ ನೆಲೆಯನ್ನು ನಮ್ಮ ಮುಂದಿಡುತ್ತಾರೆ. ಇಂತಹ ತ್ರಿಪದಿಗಳನ್ನು ಸರಳವಾಗಿ ಅರ್ಥೈಸುವುದೆಂದರೆ, ಅವರೇ ಹೇಳುವಂತೆ–

ಅರಿವುಗೇಡಿಯ ಕೈಗೆ ಹಿರಿತನವ ನೀಡಿದರೆ
ಕರಿ ಕಾಗೆ ಕೈಯ್ಯಲ್ಲಿ ಕೊಟ್ಟಂತೆ ಕೊನೆಗೆ
ಕೊರಗಹುದು ಮನಕೆ ಪೂರ್ಣಜ್ಞ.

ನಾನು ಮೊದಲೇ ಹೇಳಿದಂತೆ, ಕೆಲವು ಇಂತಹ ತ್ರಿಪದಿಗಳು ಅಲ್ಲಲ್ಲೆ ಮಧ್ಯ ಮಧ್ಯ ನುಸುಳಿ ಕೊಂಡು, ಇಡೀ ಕಾವ್ಯಕ್ಕೆ ಸ್ಪಷ್ಟ ವಿಭಜನೆ ನೀಡುವುದು ದುಸ್ಸಾಧ್ಯವಾಗಿದೆ. ಹಾಗೆಂದಾಗ ಇದಕ್ಕೆ ಏಕಸೂತ್ರತೆ ಬೇಕೆಂಬುದು ನನ್ನ ಅನಿಸಿಕೆಯಲ್ಲ. ಕೆಲವು ತ್ರಿಪದಿಗಳು ನೇರವಾದ ಪ್ರಶ್ನೆಯನ್ನೇ ನಮಗೆ ಕೇಳುವಂತಿವೆ. ಕೆಲವು ಗಾದೆಮಾತುಗಳಂತಿವೆ. ಕೆಲವು ನಾಣ್ಣುಡಿ ಗಳಿಂದಲೂ ಕೂಡಿವೆ.

ಉದಾಹರಣೆಗೆ:

೧. ಮಳೆ ಬಾರದಿದೆಯೆಂದು। ಅಳುವುದದು ಪ್ರಾರ್ಥನೆಯೆ?
೨. ಹೆಸರೇನೋ ಬೇಕು। ಕೈ ಕೆಸರಾಗುವುದು ಬೇಡ;
೩. ನಡೆವವರು ಎಡಹುವರು। ನಡೆಯದವರೆಡಹುವರೆ?
೪. ದೊಡ್ಡವರೆನಿಪ ಕೆಲರು। ಅಡ್ಡ ಹಾದಿಯೊಳಿಹರು!
೫. ಸೃಷ್ಟಿ ಸೌಂದರ್ಯವನು। ತುಷ್ಟಿಯಿಂ ನೋಡಯ್ಯ
೬. ಮಾತಿನಲಿ ಬಸವರಸ। ರೀತಿಯಲಿ ಬರಿ ಮೋಸ
೭. ಎಲೆಗಳಿಲ್ಲದ ಮರದಿ। ನೆಳಲನರಸಬಹುದೆ?

೮. ಸೂತ್ರಧಾರಿಯು ನೀನು। ಪಾತ್ರಧಾರಿಯು ನಾನು
೯. ಅಂಬುಳ್ಳ ಬತ್ತಳಿಕೆ! ಸಿಂಬೆ ತಳಕಿಹ ಪಾತ್ರೆ
೧೦. ಹಸಿರು ಗದ್ದೆಗೆ ಚೆಂದ। ಭಸಿತದಣೆಗತಿ ಚೆಂದ
೧೧. ಆತ್ಮಶಕ್ತಿಯು ಮುಂದೆ। ಭೌತಿಕದ ಬಲವೆಲ್ಲಿ?
೧೨. ಬಿದ್ದವರ ನೆತ್ತುವುದು। ಶುದ್ಧ ಮಾನವ ಧರ್ಮ
೧೩. ಮೂಢರನು ತಿದ್ದುವುದು। ಕಾಡುದನ ಕಾಯುವುದು
೧೪. ಎತ್ತು ಹೂಡದೆ ಹೊಲವ। ಉತ್ತಬಿತ್ತಲಬಹುದೆ?
೧೫. ಅನುಭವದ ರಸದೂಟ। ಅನುಭವಿಗಳಿಗೇ ಗೊತ್ತು
೧೬. ಕಳ್ಳತನ ಮಾಡದಿರು। ಸುಳ್ಳು ಮಾತಾಡದಿರು
೧೭. ಹೆಣ್ಣು ಮಾಯೆಯು ಅಲ್ಲ। ಮಣ್ಣು ಮಾಯೆಯು ಅಲ್ಲ
೧೮. ಹಾಸುಗೆಯು ಇರುವಷ್ಟು। ಲೇಸಾಗಿ ಕಾಲ್ ಚಾಚಿ
೧೯. ಕಂಡದ್ದನಾಡಿದರೆ। ಕೆಂಡದಂತಹ ಕೋಪ
೨೦. ಹಣವು ಇದ್ದರೆ ಸಾಕು। ಗುಣವಂತರೆನಿಸುವರು
೨೧. ಧನ ಲೋಭಿಯಾದವಗೆ। ಗುಣಲಾಭ ಲಭಿಸೀತೆ?
೨೨. ಮಾತಿನಲಿ ಸಹಕಾರ। ಕೃತಿಯು ಕಪಟಾಚಾರ
೨೩. ಕಲಹ ಕಂಟಕ ಯತಿಗೆ। ಬೆಲೆಯುಂಟೆ ಜಗದಲ್ಲಿ
೨೪. ಆಲಸ್ಯವೇ ದಾಸ್ಯ। ಆಲಸ್ಯವೇ ದೂಷ್ಯ
೨೫. ಕಸ್ತೂರಿಯ ಕಂಪನ್ನು। ಕತ್ತೆಯದು ಬಲ್ಲುದೇ?
೨೬. ಜ್ಞಾನಿಯಾಡುವ ಮಾತು। ಮಾಣಿಕದ ಸರದಂತೆ
೨೭. ರಾಟಿ ನೇಕಾರಂಗೆ। ಮೇಟಿ ಒಕ್ಕಲಿಗಂಗೆ
೨೮. ಹೇಸಿ ಗುಣದವರಲ್ಲಿ। ಲೇಸನರಸಿದವರುಂಟೆ?
೨೯. ಒಂದೆ ಗಾಲಿಯ ಮೇಲೆ। ಅಂದ ರಥ ನಿಲ್ಲುವುದೆ?
೩೦. ನೆರೆ ನಂಬಿದಂಥವರ। ಕೊರಳು ಕತ್ತರಿಸುವರೆ?
೩೧. ತಾಳುವುದು ಏಳುವುದು। ಆಳುವುದು ಹೆಣ್ಣಿಂದ
೩೨. ನಾರಿಯುರ ನೆಲೆಯನ್ನು। ಯಾರು ತಿಳಿದಿಹರಣ್ಣ ?
೩೩. ಕರ್ಮವನು ಮಾಡುತ್ತ। ಧರ್ಮವನು ಬಿಡಬೇಡ
೩೪. ಎತ್ತು ಇಲ್ಲದ ಮನೆಯು। ಎತ್ತರಿದ್ದೇನು ಫಲ?
೩೫. ಹೊತ್ತುಗಳೆಯದೆ ವ್ಯರ್ಥ। ನಿತ್ಯವೂ ಹೊಲದಿ ದುಡಿ
೩೬. ಬಲವಂತನಿಗೆ ಭೂಮಿ। ಛಲವಂತನಿಗೆ ಹೊನ್ನು
೩೭. ಸ್ವಾನುಭವ ಪಡೆಯದಲೆ। ಏನು ಕಲಿತೇನು ಫಲ?
೩೮. ಸಾಲವನು ಮಾಡದಿರು। ಜೋಲುಮುಖ ಹಾಕದಿರು

೩೯. ಮನೆಯು ಕಿರಿದಿದೆಯೆಂದು। ಮನದೊಳಗೆ ಕೊರಗದಿರು

೪೦. ಆತ್ಮಜ್ಯೋತಿಯ ಮುಂದೆ। ಕತ್ತಲೆಯು ನಿಲಬಹುದೆ?

೪೧. ಸಾಲಕ್ಕೆ ಸಮನಾದ। ಗಾಳ ಮತ್ತೊಂದಿಲ್ಲ

ಇಲ್ಲಿ ನಾನು ಪೂರ್ಣಜ್ಞ ವಚನಗಳಲ್ಲಿನ, ಕೆಲವು ತ್ರಿಪದಿಯ ಮೊದಲ ಸಾಲನ್ನು ಮಾತ್ರ ಪಟ್ಟಿ ಮಾಡಿದ್ದೇನೆ. ಇವು ಒಂದೊಂದೂ ಅಣಿ ಮುತ್ತಿನಂತೆ ನಮ್ಮ ವಿಚಾರವನ್ನು ಕೆದಕುತ್ತವೆ, ನಮ್ಮ ಬುದ್ಧಿಗೆ ಮಸೆ ಮಣೆಯಾಗುತ್ತವೆ. ಒಂದೊಂದರ ಅರ್ಥವನ್ನು ಎಷ್ಟು ಬೇಕಾದರೂ ಹಿಗ್ಗಿಸಬಹುದಾಗಿದೆ. ಗಾದೆ ಮಾತಿನಂತೆ, ನಾಣ್ಣುಡಿಯಂತೆ, ವಚನ ಕಾರರ ಒಳ್‌ನುಡಿಯಂತೆ, ಓದುತ್ತಿರುವಾಗಲೇ ನಮ್ಮ ಮನಸ್ಸನ್ನು ಸೂರೆಗೊಂಡು,ಹೃದಯ ದಾಳಕ್ಕೆ ಸೇರಿಬಿಡುತ್ತವೆ. ಮೇಲಿನ ಈ ಮಾತುಗಳು ಸಮತೋಲನ ಉಳ್ಳವಾಗಿ ಪೂರ್ವಾರ್ಧ, ಉತ್ತರಾರ್ಧ ಎರಡೂ ಹಿತ ಮಿತವಾಗಿದ್ದು, ಓದುತ್ತಿದ್ದಂತೇ ಕತ್ತಲೆಯಲ್ಲಿ ಕೋಲ್ಮಿಂಚು ಹೊಡೆದಂತೆ, ನಮ್ಮ ತಪ್ಪನ್ನು ತಿದ್ದುವ ಚಾವಟಿಯಾಗುತ್ತವೆ. ಒಟ್ಟಾರೆ ಈ ವಚನಗಳು ಒಂದೊಂದೂ ವಿವಿಧ ಬಗೆಯ ಅನುಭವವನ್ನು ಕೊಡುವ, ಅಜ್ಞಾನವನ್ನು ಹೊಡೆದೋಡಿಸುವ, ಸನ್ಮಾರ್ಗವನ್ನು ತೋರಿಸುವ ಕೈದೀವಿಗೆಯಾಗಿರುವುದನ್ನು ಕಾಣ ಬಹುದಾಗಿದೆ.

ಹೆಣ್ಣು ಗಂಡಿನ ಸಂಸಾರದ ಬಗೆಗಂತೂ ಬಹುವಾಗಿ ಹೇಳಿದ್ದಾರೆ. ಪ್ರೀತಿ ಪ್ರೇಮವೇ ಇಲ್ಲಿ ಮುಖ್ಯವಾದದ್ದು. ಅರ್ಥಮಾಡಿಕೊಂಡು ಒಬ್ಬರಿಗೊಬ್ಬರು ಅನ್ಯೋನ್ಯತೆಯಿಂದ ಸಾಗುವುದೇ ನಿಜ ಸಂಸಾರ. ಇಲ್ಲಿ ಸಂಪತ್ತಿಗೆ, ದರ್ಪಕ್ಕೆ, ಅಧಿಕಾರಕ್ಕೆ, ಅಹಂಕಾರಕ್ಕೆ ಸ್ಥಾನ ವಿಲ್ಲ. ಗಂಡನಾದವನು ಹೇಗಿರಬೇಕು? ಹೆಂಡತಿಯಾದವಳ ಕರ್ತವ್ಯವೇನು? ಮಕ್ಕಳನ್ನು ಹೇಗೆ ಬೆಳೆಸಬೇಕು ಇತ್ಯಾದಿ ಹಲವಾರು ವಿಷಯಗಳನ್ನು ತುಂಬಾ ಮಾರ್ಮಿಕವಾಗಿ ಮನಮುಟ್ಟುವಂತೆ ಹೇಳಿದ್ದಾರೆ.

ಹೆಣ್ಣು ಮುನಿದರೆ ಮಾರಿ, ಹೆಣ್ಣು ಒಲಿದರೆ ನಾರಿ
ಹೆಣ್ಣರಿತುಕೊಂಡಲ್ಲಿ ಪರಮ ಉಪಕಾರಿ
ಬಣ್ಣನೆಗೆ ಮೀರಿ ಪೂರ್ಣಜ್ಞ.

ಅತಿಯೂಟವತಿನಿದ್ರೆ, ಅತಿರಾಗವತಿಭೋಗ
ಮತಿಯ ಕೆಡಿಸುವದು, ಬಾಳಿನಲಿ ವಿಷಬೆರೆಸಿ
ದಂತಪ್ಪುದಯ್ಯ ಪೂರ್ಣಜ್ಞ.

ಹೆಣ್ಣು ಕಾಮುದ ಕಣ್ಣು, ಹೆಣ್ಣು ಮೋಹದ ಪಣ್ಣು
ಹೆಣ್ಣು ಹುಣ್ಣೆಂದು ಹೀಗಳೆಯದಿರು ಜಗದಿ
ಹೆಣ್ಣು ಜನಯಿತ್ರಿ ಪೂರ್ಣಜ್ಞ.

ಮೋಹ ಬೀರದ ಸತಿಯು, ದ್ರೋಹ ಬಗೆಯುವ ಪತಿಯ
ನೇಹದಲಿ ಕಪಟ ಜಾಲವನು ಹೆಣೆವವರ
ಸಹವಾಸ ಕ್ಲೇಷ ಪೂರ್ಣಜ್ಞ.

ಸಂಸಾರದಲ್ಲಿ ಕಾಮಲೀಲೆಯೊಂದೇ ಮುಖ್ಯವಲ್ಲ ನೇಮ ನೀತಿಗಳನ್ನನುಸರಿಸಿ ಸಾಗಬೇಕು. ಮಡದಿಯ ಮನಸ್ಸಿನ ಆಸೆ-ಆಕಾಂಕ್ಷೆಗಳನ್ನು ಅರಿಯಬೇಕು. ಅದು ಭೋಗದ ವಸ್ತು, ಹೆರುವ ಯಂತ್ರ, ಮನೆಯಲ್ಲಿ ಹೊಸ್ತಿಲೊಳಗೇ ಇರಬೇಕು ಎಂದು ಅಜ್ಞಾನದಿಂದ ಅಹಂಕಾರದಿಂದ ವರ್ತಿಸುವುದಲ್ಲ. ಅವಳಿಗೂ ರಾಗಲಾಲಸೆಗಳುಂಟು. ಗಂಡ-ಹೆಂಡಿರು ಜೀವನ ರಥಕ್ಕೆ ಸಮಾನ ಚಕ್ರಗಳೆಂದು ಭಾವಿಸಿದಾಗಲೇ ಸದ್ಭಕ್ತಿ, ಸುಂದರ ಜೀವನ.

"ಗುಣವುಳ್ಳ ಹೆಣ್ಣಿನೊಳು ಘನಶಕ್ತಿ ಧುನಿಯಿಹುದು
ಹೆಣ್ಣಿನಾಟದ ನೆಲೆಯ, ಅಣ್ಣಗಳೆ ಅರಿತಿಹರೆ?"

ಎಂದು ನಮ್ಮನ್ನೇ ಕೇಳುತ್ತಾರೆ. ಈ ಸಂಸಾರದ ನೆಲೆಯು ಯಾರಿಗೂ ಎಟುಕಿಲ್ಲ. ಅದು ಅರಿತು ನಡೆದವನಿಗೇ ಗೊತ್ತೆಂದೂ—

ಮನೆತನದ ಮರ್ಯಾದೆ ಘನತೆ ಗೌರವಗಳನ್ನು
ಅನವರತ ರಕ್ಷಿಸುವ ಹೊಣೆ ಹೊತ್ತು ನಡೆವ
ಗುಣವತಿಯೆ ಸತಿಯು ಪೂರ್ಣಜ್ಞ.

'ಸತಿಪತಿ'ಗಳಾಗಿ ಕೂಡುವುದೂ ದೈವ ಬಲದಿಂದಾಗಿ. ಈರ್ವರೂ ಅರಿತು ನಡೆದರದೇ 'ದೈವ'. ಇದಕ್ಕೆಲ್ಲಾ ಒಳ್ಳೆಯ ಬುದ್ಧಿ, ಸನ್ಮಾರ್ಗ ಬೇಕು ಎಂದು ಹೇಳುತ್ತಾ, "ಹೆಣ್ಣು ಶಕ್ತಿಯ ಮೂರ್ತಿ, ಹೆಣ್ಣು ಕಾಯಕ ಸ್ಫೂರ್ತಿ" ಎಂದು ಹೆಣ್ಣಿಗಿರುವ ಅಗಾಧ ಶಕ್ತಿಯನ್ನು ಅಂತರ್ಯದ ಒಲವನ್ನೂ, ಬಲವನ್ನೂ ತಿಳಿಸುತ್ತಾರೆ. **"ಹೆಣ್ಣು ತ್ಯಾಗದ ದೇವಿ ಹೆಣ್ಣು ಸಹನೆಯ ದೇವಿ....ಹೆಣ್ಣು ಗೃಹಲಕ್ಷ್ಮಿ"** ಯಾವ ಮನೆಯಲ್ಲಿ ಹೆಣ್ಣು ಸುಖ ಸಂತೋಷದಿಂದ ನಗುನಗುತ್ತಿರುತ್ತಾಳೋ ಅಲ್ಲಿ ಲಕ್ಷ್ಮಿ ನೆಲೆಸಿರುತ್ತಾಳೆಂಬುದನ್ನು ಸೂಕ್ಷ್ಮ ವಾಗಿ ಕಂಡರಿಸುತ್ತಾರೆ. ಹೆಂಡತಿಯಾದವಳು ಗಂಡನ ಸುಖ ಸೌಭಾಗ್ಯವನ್ನೂ, ಮಕ್ಕಳ ಹಿತವನ್ನು ಮಾತ್ರವೇ ಬಯಸುತ್ತಾಳೆ. ಜನಪದ ಗರತಿ ಹೇಳುವಂತೆ "ಮಕ್ಕಳ ಕೊಡು, ಮುತ್ತೈದೆತನ ಕೊಡು, ಮುಂಡೆ ಎಂದೆನ್ನಿಸಿಕೊಂಡು ಬಾಳ ಬದುಕಿಸಬೇಡ." ಸತಿ ಯಾದವಳು ಈ ಲೇಖಕರು ಹೇಳುವಂತೆ-

ಕಣ್ಣಿಟ್ಟು ಪ್ರೇಮದಲಿ, ಹೆಣ್ಣೊಮ್ಮೆ ಕೂಡಿದರೆ
ಮಣ್ಣಿಗಿಳಿವನಕ ಕೈಬಿಡಳು; ಸುರಸುಖಕೆ
ಹೆಣ್ಣು ಖಣಿಯಯ್ಯ ಪೂರ್ಣಜ್ಞ.

ಧರ್ಮ, ಪೂಜೆ, ನೀತಿ, ನಿಯಮಗಳೆಲ್ಲಾ ತೋರಾಟಿಕೆಯದಾಗಿರಬಾರದು. "ಚಿತ್ತ ವಿಲ್ಲದೆ ಗುಡಿಯ ಸುತ್ತಿದೊಡೆ ಬಂತೇನು? ಎಂದು ಪ್ರಶ್ನಿಸುತ್ತಾರೆ. ತನ್ನನ್ನೂ ಸೇರಿಸಿ

ಕೊಂಡು, ಬಸವಣ್ಣನವರು ಆತ್ಮಶೋಧನೆ ಮಾಡಿಕೊಳ್ಳುವಂತೆ ತಮ್ಮ ಆಲೋಚನೆಯ ಬಗ್ಗೆ, ತಮ್ಮ ನಿಲುವಿನ ಬಗ್ಗೆ, ತಮ್ಮನ್ನು ತಾವೇ ಪ್ರಶ್ನಿಸಿ ಕೊಳ್ಳುತ್ತಾರೆ.

ನಾನೊಂದು ನೆನೆಯುತಿರೆ, ತಾನೊಂದು ನೆನೆಯುವುದು
ನಾನಿತ್ತಲೆಳೆಯೆ ತಾನತ್ತಲೆಳೆಯುವುದು
ಏನದೀ ಮನವು ಪೂರ್ಣಜ್ಞ.

ನಾನು ಹೇಳಿದ್ದೇ ಸರ್ವಶ್ರೇಷ್ಠವೆಂದು, ನಾನು ನಡೆದದ್ದೇ ಪರಮ ಸತ್ಯದ ಹಾದಿಯೆಂದು ಯಾರೂ ತಿಳಿಯಬಾರದೆನ್ನುವ ವಿನೀತ ಭಾವವನ್ನು ವ್ಯಕ್ತಪಡಿಸುತ್ತಾರೆ. ಗುರುವಾಗಲೀ ಭಕ್ತನಾಗಲಿ ಬೇಡಿ ತಿನ್ನಬಾರದು, ದುಡಿದೇ ತಿನ್ನಬೇಕು ಎನ್ನುವ ಕಟು ಸತ್ಯವನ್ನು ಜನಪದರಲ್ಲಿ ಗರತಿಯೊಬ್ಬಳು ಹೇಳುವಂತೆ—

ಕುಟ್ಟಿ ಬೀಸೀ ನನ್ನ ಹೊಟ್ಟೆ ಹೊರೆದೇನವ್ವ
ರಟ್ಟೀಗೆ ಶಿವನ ದಯವಿರಲಿ ನಾನಿಲ್ಲಿ
ಋಣಗೂಳ ತಿಂದು ಇರಲಾರೆ

ಬಡವನಾಗಲಿ, ಶ್ರೀಮಂತನಾಗಲಿ ದುಡಿದುಣ್ಣಬೇಕು. ದೇವರು ಮನುಷ್ಯನಿಗೆ ಒಂದು ಬಾಯಿ ಕೊಟ್ಟು,ಎರಡು ಕೈಗಳನ್ನೂ, ಎರಡು ಕಾಲುಗಳನ್ನು ಕರುಣಿಸಿದ್ದಾನೆ. ಹೀಗಿರುವಾಗ 'ಬಿಟ್ಟಿ ಕೂಳು' ತಿಂದು ಸೋಮಾರಿಯಾಗಿ ಜೀವನ ಸಾಗಿಸುವುದು ಸಲ್ಲದ ಮಾತು. ಇದರಂತೆಯೇ ದುಡಿಯದವನ ಬಾಳ್ವೆ ಏನಾಗುತ್ತದೆಂಬುದನ್ನು ಸರಳವಾಗಿ ಇವರು ನಿರೂಪಿಸಿದ್ದಾರೆ.

ದುಡಿದು ತಿನ್ನುವನ ಕೈ ಬಿಡದು ಅಕ್ಷಯ ಪಾತ್ರೆ
ದುಡಿಯದಲಸಿಗನ ಕೈಗೆ ಭಿಕ್ಷಾಪಾತ್ರೆ
ಕಡೆಯುಸಿರಿ ತನಕ ಪೂರ್ಣಜ್ಞ.

ದುಡಿಮೆಯ ನೆಲೆ ಬೆಲೆಯನ್ನು ಪ್ರತಿಯೊಬ್ಬರೂ ಅರಿತುಕೊಳ್ಳಬೇಕು. 'ಭಿಕ್ಷೆ' ಮಾಡುವ ಬದಲು 'ಬದುಕು' ಮಾಡುವವನ ಕಡೆ ನೋಡಬೇಕು. ರಟ್ಟೆಯಲ್ಲಿ ಬಲವಿರುವಾಗ 'ಬೇಡಿ' ತಿನ್ನುವುದು ಹೀನ ಕೆಲಸವೆಂಬುದನ್ನು ಪ್ರತಿಯೊಬ್ಬರೂ ತಿಳಿಯಬೇಕೆಂದು ಸಾದರ ಪಡಿಸಿದ್ದಾರೆ.

ಹೊಗಳಿಕೆ ತೆಗಳಿಕೆಗೆ ಬಲಿಬೀಳಬಾರದೆಂಬುದನ್ನು ಹೇಳುತ್ತಾ "ಅವರು ಹಾಗೆಂದರು, ಇವರು ಹೀಗೆಂದರೆಂದು" ಎಂದು ತಲೆಕೆಡಿಸಿಕೊಳ್ಳಲೂಬಾರದು. "ಸುವಿಚಾರಿ ನೀ, ನಿನಗೆ ಸುವಿವೇಕ ಗುರುವು, ಶಿವ ಪಥದಿ ಸಾಗು ಪೂರ್ಣಜ್ಞ" ಎಂದು ಸ್ಪಷ್ಟ, ನೇರ, ದಿಟ್ಟ ನಡೆಯೆಡೆಗೆ ನಮ್ಮನ್ನು ಸಾಗುವಂತೆ ತಿಳಿಸುತ್ತಾರೆ.

ಇಲಿ ಕಂಡು ಬೆಕ್ಕುಗಳು, ಮೊಲ ಕಂಡು ನಾಯಿಗಳು
ಗಳಿಲನೇ ನೆಗೆದು ಹಿಡಿದಂತೆ ವಿಷಯ ಸುಖ
ಕೆಳೆಸುವುದು ಮನವು ಪೂರ್ಣಜ್ಞ.

ಬಸವಣ್ಣನವರು 'ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯಾ' ಎನ್ನುವಂತೆ ಗಂಗಾಧರ ರಾಜಯೋಗಿಂದ್ರರೂ ಕೂಡ "ವಿಷಯ ಸುಖಕ್ಕೆಳೆಸುವ ಮನಸ್ಸನ್ನು" ಬೆಕ್ಕು ನಾಯಿಗಳ ಸ್ವಭಾವಕ್ಕೆ ಹೋಲಿಸಿ ಚಿತ್ತ ಚಾಂಚಲ್ಯತೆಯನ್ನೂ, ಚಪಲತೆಯನ್ನೂ ನಿಗ್ರಹಿಸುವುದು ಎಷ್ಟು ಕಷ್ಟ ಸಾಧ್ಯವೆಂಬುದನ್ನು ವಿಷದೀಕರಿಸಿದ್ದಾರೆ. ಮಡದಿ ಮಕ್ಕಳು, ಎನ್ನುವರು, ತನ್ನವ ರೆಂದು ಅತಿಮೋಹಪಟ್ಟು ಕೊನೆಗೆ ಗತಿಗೆಡಬೇಡ ಎನ್ನುವುದನ್ನೂ ಸೂಚಿಸುತ್ತಾರೆ.

ಶ್ರೀಯುತರು ಆಧ್ಯಾತ್ಮ, ಧರ್ಮ, ಸತ್ಯ, ನ್ಯಾಯ, ನೀತಿ ಮುಂತಾದವುಗಳನ್ನು ತಿಳಿಯಪಡಿಸಿರುವಂತೆಯೇ, ಪ್ರಸ್ತುತ ಇಂದಿನ ರಾಜಕೀಯ, ಆಡಳಿತ, ವ್ಯವಹಾರ, ಹರಿಜನ ಗಿರಿಜನಗಳ ಸಮಸ್ಯೆಯ ಬಗ್ಗೆಯೂ ಸ್ಪಂದಿಸಿರುವುದು ಅವರ ಸುವಿಚಾರಕ್ಕೆ ಹಾಗೂ ಮಠಾಧೀಶರಾದವರು ಬರಿಯ ಕಾವಿತೊಟ್ಟು, ಭಕ್ತರಿಂದ ಕಾಲಿಗೆ ಅಡ್ಡ ನಮಸ್ಕಾರಮಾಡಿಸಿ ಕೊಳ್ಳುತ್ತಾ ಕುಳಿತು ಕೊಳ್ಳುವುದಷ್ಟೇ ಕೆಲಸವಲ್ಲ. ತನ್ನ ಸುತ್ತಣ ಸಮಾಜಕ್ಕೆ ನಾವೇನು ಮಾಡಬಲ್ಲೆವು? ಏನು ನಡೆಯುತ್ತಿದೆ? ಅದಕ್ಕೆ ಪರಿಹಾರಗಳೇನೆಂಬುದರ ಕಡೆಗೂ ಚಿಂತಿಸ ಬೇಕಾದದ್ದು ನಮ್ಮ ಕರ್ತವ್ಯವೆಂಬುದನ್ನು ಅವರ ಈ ತ್ರಿಪದಿಯಿಂದ ತಿಳಿಯಬಹುದಾಗಿದೆ.

ಹರಿಜನರ ಉದ್ಧಾರ, ಬರಿಮಾತಿನಿಂದಹುದೆ?
ಇರಲು ಮನೆ, ಅನ್ನ ಅಕ್ಷರಗಳನು ನೀಡು
ಶರಣರಹರವರು ಪೂರ್ಣಜ್ಞ.

ಈ ಹೊತ್ತು ನಮ್ಮ ರಾಜಕೀಯ ನೇತಾರರು ಹರಿಜನರ ಉದ್ಧಾರಕ್ಕಾಗಿ ಮಾಡುತ್ತಿರುವು ದೇನು? ಎತ್ತು, ಕತ್ತೆ, ಕುರಿಗಳ ಕೊಡಿಸಿ, ಅಲ್ಪ ಸ್ವಲ್ಪ ಸಾಲ ಕೊಡಿಸಿ, ಕೊಟ್ಟ ಸಾಲ: ಸರ್ಕಾರಿ ಸಾಲ ಹಿಂದಿರುಗಿಸಬೇಕಾದ್ದಿಲ್ಲ ಎಂದು ಕೋಟ್ಯಾಂತರ ರೂಪಾಯಿಗಳನ್ನು ಕರೆ ಕರೆದು ಸಾಲ ಕೊಡುವ, ಭರ್ಜರಿಯಾದ ಸಾಲಮೇಳಗಳನ್ನು ನಡೆಸುತ್ತ ಹರಿಜನರ ಉದ್ಧಾರ ಮಾಡಿದೆವೆಂದು ಪತ್ರಿಕೆಗಳಲ್ಲಿ ಪ್ರಚಾರಗಿಟ್ಟಿಸುವ ಈ ಕಾಳಸಂತೆ ಕೋರರನ್ನು ತರಾಟೆಗೆ ತೆಗೆದುಕೊಂಡಿದ್ದಾರಲ್ಲದೆ, ನೀವು ನಿಜವಾಗಿ ಅವರ ಉದ್ಧಾರಕ್ಕೆ ಏನನ್ನು ಮಾಡಬೇಕೆಂಬುದನ್ನು ತಿಳಿಸುತ್ತಾರೆ. ಸಾಲ ಕೊಟ್ಟು ಸೋಮಾರಿಗಳನ್ನಾಗಿಮಾಡುವುದಲ್ಲ. ಮೊದಲು ಅವರಿಗೆ ಅಕ್ಷರ ಕಲಿಸಿರಿ. ಭೂಮಿ ಕೊಡಿಸಿ, ಅನ್ನಕ್ಕೆ ಅವಕಾಶ ಕಲ್ಪಿಸಿರಿ. ಅದು ಬಿಟ್ಟು ಸಾಲದಲ್ಲಿ ಎತ್ತು, ಎಮ್ಮೆ ಕೊಡಿಸಿ, ಅಲ್ಲೇ ಅರ್ಧ ದುಡ್ಡಿಗೆ ಮಾರಿಕೊಂಡು ಬರುವವರನ್ನು ಸೃಷ್ಟಿಸಬೇಡಿ. ಇದರಿಂದ ನಿಮಗೂ ಉಪಯೋಗವಿಲ್ಲ. ಅವರು ಉದ್ಧಾರ ವಾಗುವುದಿಲ್ಲ. ದೇಶದ ಬೊಕ್ಕಸಕ್ಕೆ ನಷ್ಟವಷ್ಟೇ ಎಂಬುದನ್ನು ಮೂರು ಸಾಲಿನ ಈ 'ತ್ರಿಪದಿ'ಯಲ್ಲೇ ಹಿಡಿದಿಟ್ಟಿದ್ದಾರೆ.

ಹಾಗೆಯೇ ದುಷ್ಟರು, ಕುಹಕಿಗಳ ಸಹವಾಸ ಎಷ್ಟು ಕಷ್ಟವೆಂಬುದನ್ನು ಕೆಲವು ಪಶು ಪಕ್ಷಿಗಳ ಮುಖಾಂತರ ಸ್ಪಷ್ಟವಾಗಿ ನಿರೂಪಿಸುತ್ತಾ ಅವರು ಸ್ವಭಾವತಃ ಏನೂ ಮಾಡಿದರೂ ವಕ್ರತೆಯೇ.

ಚೇಳಿಂಗೆ ಬಾಲದಲಿ, ವ್ಯಾಳಂಗೆ ಹಲ್ಲಿನಲಿ
ಕಾಳ ವಿಷವಿರಲು ಕುಹಕಿಗಳ ಮೈತುಂಬಿ
ಪ್ವೇಳ ತುಂಬಿಹುದು ಪೂರ್ಣಜ್ಞ.

ಮನುಷ್ಯ ಮನುಷ್ಯತ್ವವನ್ನು ಮರೆತು, ಮಾನವ ದಾನವನಾದಾಗ ಎಂತಹ ಅನಾಹುತಗಳು ಸಂಭವಿಸುತ್ತವೆಂಬುದಕ್ಕೆ ಪಂಜಾಬಿನ ಜ್ವಲಂತ ಸಮಸ್ಯೆಯನ್ನು ತಮ್ಮ ಸಾಹಿತ್ಯಕ್ಕೆ ವಸ್ತುವನ್ನಾಗಿ ಮಾಡಿಕೊಂಡಿದ್ದಾರೆ.

ಹಿಂಸೆಯಲಿ ಪಂಜಾಬು, ಧ್ವಂಸವಾಗುತ್ತಿಹುದು
ದ್ವೇಷ ತ್ವೇಷಗಳು ತಾಂಡವಿಸುತಿವೆ ಜಗಕೆ
ಹಿಂಸೆ ಘಾತಕವು ಪೂರ್ಣಜ್ಞ.

ಪಂಜಾಬಿನಲ್ಲಿ ದಿನನಿತ್ಯ ನಡೆಯುವ ನರಮೇಧವನ್ನು ರಕ್ತಪಾತವನ್ನು ಕಂಡು ಮಮ್ಮಲ ಮರುಗಿದ್ದಾರೆ. ಈ ಹಿಂಸೆಯನ್ನು ಹೋಗಲಾಡಿಸುವುದೆಂತು ಎಂದು ಚಿಂತಿಸಿದ್ದಾರೆ. ಇದು ನಿಜವಾದ ಸಮಾಜ ಚಿಂತಕನ ಅಂದಂದಿನ ಸಮಸ್ಯೆಗೆ ಸ್ಪಂದಿಸುವ ಸಾಹಿತಿಯ ಮನೋಧರ್ಮವಾಗಬೇಕು. ಇಂತಹದ್ದನ್ನು ನಾವು ಇಲ್ಲಿನ ಬರವಣಿಗೆಯಲ್ಲಿ ಗುರುತಿಸಬಹುದಾಗಿದೆ.

ಬಿರುಕು ಬಿಟ್ಟಿಹ ಗೋಡೆ ಸರಿಪಡಿಸದಿರೆ ಬೇಗ
ಉರುಳಿ ಬಿದ್ದೀತು. ಬಿರುತಿರೆ ಸಮಾಜದಲಿ
ಸರಿಪಡಿಸು ಬೇಗ ಪೂರ್ಣಜ್ಞ.

ಬಿರುಕು ಬಿಟ್ಟಿರುವುದು ಗೋಡೆಯಲ್ಲಾಗಿರಬಹುದು, ಮನೆಯ ಕಟ್ಟಡದಲ್ಲಾಗಿರಬಹುದು ಅದನ್ನು ಸರಿಪಡಿಸದಿದ್ದರೆ ಇಡೀ ಮನೆಯೇ ಬಿದ್ದುಹೋಗುತ್ತದೆ. ಹಾಗೆಯೇ ಸಮಾಜದ ಜನರಲ್ಲಿ ಏನೇ ಭಿನ್ನಾಭಿಪ್ರಾಯಗಳು ಬಂದರೂ, ಎಲ್ಲಿ ತಪ್ಪಾಗಿದೆ? ಇದಕ್ಕೆ ಕಾರಣವೇನೆಂದು ಪರಿಹರಿಸಬೇಕೇ ವಿನಃ ಉಲ್ಬಣಗೊಳಿಸುವುದಲ್ಲ. ಮತೀಯ ಗಲಭೆಗಳು ನಮ್ಮಲ್ಲಿ ಆಗಾಗ್ಗೆ ಅಲ್ಲಲ್ಲಿ ಆಗುತ್ತಲೇ ಇರುತ್ತವೆ. ಇದಕ್ಕೆಲ್ಲಾ ನಮ್ಮ ಜಾತಿ, ಮತ, ಪಂಥಗಳ, ಸ್ವಾರ್ಥ ಸಾಧಕ ವ್ಯಕ್ತಿಗಳ ಸಮಯ ಸಾಧಕತನವೇ ಕಾರಣ. ಇವರನ್ನೆಲ್ಲಾ ಸರಿಯಾಗಿ ಶಿಕ್ಷಿಸಿ ಸನ್ಮಾರ್ಗಿಗಳನ್ನಾಗಿ ಮಾಡದಿದ್ದರೆ ಇನ್ನೂ ಹೆಚ್ಚಿನ ಅಪಾಯವನ್ನು ಎದುರಿಸಬೇಕಾಗುತ್ತದನ್ನುವುದನ್ನು ಮನಗಾಣಿಸಿದ್ದಾರೆ.

ಹಿಂದೆ ಊರೂರಿನಲ್ಲಿ ಒಟ್ಟಾಗಿ 'ತೇರು ಜಾತ್ರೆಗಳನ್ನು' ನಡೆಸುತ್ತಾ ಎಲ್ಲರೂ ಅಣ್ಣ ತಮ್ಮಂದಿರಂತೆ ಸಂತೋಷದಿಂದ ಸಹ ಬಾಳ್ವೆ ನಡೆಸುತ್ತಿದ್ದರು. ಆದರೆ ಈಗ ಹಳ್ಳಿಹಳ್ಳಿಗೆ

ರಾಜಕೀಯ ಪ್ರವೇಶಿಸಿ, ನಾನು ಆ ಪಕ್ಷ, ನೀನು ಈ ಪಕ್ಷ ಎಂದು ಭಿನ್ನ ಭೇದವ ಹುಟ್ಟಿಸಿ, ಒಟ್ಟಾಗಿದ್ದ ಮನೆಗಳನ್ನೂ, ಮನಗಳನ್ನೂ ಒಡೆದು ಊರಿನ ಜನರನ್ನೆಲ್ಲಾ ದಿಕ್ಕೆಡಿಸಿದ್ದಾರೆ.

ಊರ ಹಿರಿಯರು ಎಂದು ಸಾರಿಕೊಳ್ಳುತ ತಾವೆ
ಭಾರಿ ಸ್ವಾರ್ಥಕ್ಕೆ ಪಕ್ಷ ಪಂಗಡ ಬೆಳೆಸಿ
ಊರ ಕೆಡಿಸಿಹರು ಪೂರ್ಣಜ್ಞ.

ಹಳ್ಳಿ-ಹಳ್ಳಿಗಳು ರಾಜಕೀಯ ಮುಖಂಡರಿಂದ ಹೀಗೆ ಹಾಳಾಗುತ್ತಿದ್ದರೆ, ಓದಿದ ವಿದ್ಯಾವಂತರೆನ್ನಿಸಿಕೊಂಡ ಹಳ್ಳಿಯ ಯುವಕರು "ನಯ ವಿನಯ, ಸದಾಚಾರ, ಭಕ್ತಿ ಭಾವ, ಧರ್ಮ ಕರ್ಮ"ಗಳನ್ನೆಲ್ಲಾ ಮರೆತು ಗುರುಹಿರಿಯರೆನ್ನದೆ ತಮಗಿಷ್ಟ ಬಂದಂತೆ ಸ್ವೇಚ್ಛೆಯಾಗಿ ವರ್ತಿಸುವ, ಕಲಿಯದಿರುವ ಎಳೆಯರಿಗೆ ಹಾದಿ ತಪ್ಪಿಸುವ ಕಂಟಕರಾಗಿರುವುದನ್ನು ಕಣ್ಣಾರೆ ಕಂಡು ಕುದಿದಿದ್ದಾರೆ. ಇವರುಗಳು ಕೇವಲ ಅಕ್ಷರ ಕಲಿತ, ಡಿಗ್ರಿ ಪಡೆದ ಪಶುಗಳ ರೀತಿಯ ಮಾನವರೇ ವಿನಃ, ಮಾನವೀಯತೆ, ಪ್ರೀತಿ ಪ್ರೇಮ ಬಂಧು ಬಾಂಧವ್ಯ ನಮ್ಮವರು, ತಮ್ಮವರು, ಅಕ್ಕ ತಂಗಿಯರೆಂಬ ಯಾವುದೇ ಬಗೆಯ ಹೃದಯ ವೈಶಾಲ್ಯವಿಲ್ಲದ ಕ್ರೂರ ಜಂತುಗಳೆಂಬುದನ್ನು ಕಂಡರಿಸಿದ್ದಾರೆ.

ಪದವಿ ಪಡೆದಿಹ ಕೆಲರು ಸದುಗುಣಂಗಳ ತೊರೆದು
ಮದಮತ್ತರಾಗಿ ನಡೆಯುತ್ತಲಿಹರವರ
ಹೃದಯ ಕಗ್ಗವಿಯು ಪೂರ್ಣಜ್ಞ.

ಹೀಗೆ ಹಲವು ಹತ್ತು ವಿಚಾರಗಳ ಬಗ್ಗೆ ಚಿಂತಿಸುವ, ಆ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಕವಿಯ ಮನಸ್ಸು, ಸಮಾಜದಲ್ಲಿ ನಡೆಯುವ ಅನ್ಯಾಯ, ಅನೀತಿ, ಅಧರ್ಮಗಳಿಗೆಲ್ಲಾ ಕಾರಣ ಕಂಡುಕೊಂಡಿದೆ. ಹಿರಿಯರು, ಗುರುಗಳು, ಸದ್ಧರ್ಮ, ಸದಾಚಾರಗಳನ್ನು ಯುವ ಜನಾಂಗಕ್ಕೆ ಸರಿಯಾಗಿ ತಿಳಿಸದಿರುವುದು ಒಂದು ಕಾರಣವಾದರೆ ಮತ್ತೊಂದೆಡೆ ಗುರುಗಳೆನ್ನುವವರು, ಮುಖಂಡರು, ದೊಡ್ಡವರೇ ಅಡ್ಡ ಹಾದಿ ಹಿಡಿದಿರುವುದೂ ಮೂಲ ಕಾರಣವಾಗಿದೆ. ಬೇಲಿಯೇ ಹೊಲವೆದ್ದು ಮೆಯ್ದೊಡೆ, ತಾಯ ಮೊಲೆ ಹಾಲು ವಿಷವಾಗಿ ಕೊಲುವೊಡೆ ಇನ್ನಾರಿಗೆ ದೂರುವೆ ಎಂದ ಬಸವಣ್ಣನಂತೆ, ಈ ಕವಿ, ನನ್ನಲ್ಲೇ ಏನೋ ತಪ್ಪುಗಳಿವೆ ಇದಕ್ಕಾಗಿ ಮತ್ತ್ಯಾರನ್ನೂ ದೂರದೆ ತನ್ನ ತಪ್ಪುಗಳನ್ನು ದೈವಕ್ಕೆ ನಿವೇದಿಸುತ್ತಿದ್ದಾರೆ.

ಎನ್ನ ತಪ್ಪೊಪ್ಪುಗಳ, ನಿನ್ನಡಿಯ ಮುಂದಿಡುವೆ
ಮನ್ನಿಸುತಲೆನಗೆ ಜ್ಞಾನ-ಕ್ರಿಯಾಸಕ್ತಿ-
ಯನ್ನಿತ್ತು ಪೊರೆಯೊ ಪೂರ್ಣಜ್ಞ.

ಓ ದೈವವೇ ನನಗೆ ಜ್ಞಾನವನ್ನು ಕ್ರಿಯಾಸಕ್ತಿಯನ್ನು ನೀಡಿ ಸಮಾಜದಲ್ಲಿ ಕೈಲಾದ ಕೆಲಸ ಮಾಡಲಿಕ್ಕೆ ಚೈತನ್ಯವನ್ನು ಕೊಡು. ನಮ್ಮ ಇಂದಿನ ಸಮಾಜ ಹಣ, ಕೀರ್ತಿ,

ಅಧಿಕಾರ, ಹೆಣ್ಣು, ಮಣ್ಣಿಗಾಗಿ ಏನೇನೋ ಮಸಲತ್ತುಗಳನ್ನು ಮಾಡುತ್ತಿದೆ. ಧರ್ಮ, ನೀತಿ, ನ್ಯಾಯವಾಗಲಿ, ಮಾನವೀಯ ಮೌಲ್ಯಗಳಿಗಾಗಲಿ ಇಲ್ಲಿ ಬೆಲೆ ಇಲ್ಲ. ಹಣಕ್ಕೆ ಬೆಲೆಯೇ ವಿನಃ ಗುಣಕ್ಕಿಲ್ಲ. ಈ ಪರಂಪರೆ ಹೀಗೇ ಮುಂದುವರಿದರೆ ಏನೇನು ಕಾಣ ಬೇಕಾಗಿದೆಯೋ? ಮುಂದಿನ ಜನಾಂಗದ ಮಾರ್ಗದರ್ಶನಕ್ಕಾದರೂ ಕೆಲವು ಮೌಲ್ಯಗಳನ್ನು ಕಾಪಾಡಬೇಕಾದುದು ಜವಾಬ್ದಾರಿ ಮೊತ್ತ ನಾಗರಿಕರ ಕರ್ತವ್ಯ. ಅದಕ್ಕಾಗಿ ಪ್ರತಿ ಯೊಬ್ಬನೂ ತನ್ನ ತಪ್ಪುಗಳನ್ನು ತಾನು ತಿದ್ದಿಕೊಂಡು ಇತರರಿಗೆ ಬೋಧಿಸುವಂತಾಗಲೆಂದು ಈ ಕವಿ ಹೃದಯ ಸಾರಿ ಸಾರಿ ಹೇಳಿದೆ ಈ ವಚನಗಳಲ್ಲಿ.

# ಪೂರ್ಣಜ್ಞನ ವಚನಗಳಲ್ಲಿ ಜೀವನ ಪೌರ್ಣಿಮೆ

ನಿವೃತ್ತ ಸಹಸಂಪಾದಕರು:
ಸಂಯುಕ್ತ ಕರ್ನಾಟಕ ಹುಬ್ಬಳ್ಳಿ

ದ. ಲ. ಕೆರೂರ

ಕನ್ನಡ ಸಾಹಿತ್ಯದಲ್ಲಿ ವಚನಗಳು ಎಂದಾಕ್ಷಣ ಶಿವ–ಶರಣ ಶರಣೆಯರ ವಚನಗಳೇ ಕಣ್ಣ ಮುಂದೆ ಬಂದು ನಿಲ್ಲುತ್ತವಾದರೂ ಸಾಮಾನ್ಯರಿಗೆ ಹೊಳೆಯುವದು ಸರ್ವಜ್ಞನ ವಚನಗಳು ಎಂದು ಹೇಳಬಹುದು. ಜನಜೀವನದೊಂದಿಗೆ ಹಾಸುಹೊಕ್ಕಾಗಿವೆ ಸರ್ವಜ್ಞನ ವಚನಗಳು. ಸರ್ವಜ್ಞನ ಸಾರ್ವಕಾಲೀನ ಸಾರ್ವಜನಿಕ ಪ್ರಜ್ಞೆಯ ವಚನಗಳಲ್ಲಿ ಹಲಕೆಲ ವನ್ನಾದರೂ ಸಕಲರೂ ಅರಿತುಕೊಂಡಿರುವುದನ್ನು ನಾವು ಕಾಣಬಹುದಾಗಿದೆ. ತಮ್ಮ ಕಂಠಸ್ಥವಾಗಿರುವ ಆ ವಚನಗಳು ಸರ್ವಜ್ಞನವು ಎಂಬುದೂ ಅವರಿಗೆ ಗೊತ್ತಿರದಿರಬಹುದು. ಆದರೆ ಅವರ ಬಾಳಿನಲ್ಲಿ ಅಷ್ಟೊಂದು ಸಮರಸವಾಗಿ ಬೆರೆತುಕೊಂಡಿರುತ್ತವೆ. ಸರ್ವಜ್ಞನು ರೆವರೆಂಡ ಉತ್ತಂಗಿಯವರೆನ್ನುವಂತೆ, ಹದಿನಾರನೆ ಶತಮಾನದಲ್ಲಿ ಆಗಿಹೋದ. ಅನಂತರದ ಅವಧಿಯಲ್ಲಿ, ಅದರಲ್ಲೂ ಈ ಶತಮಾನದಲ್ಲಿ ಸರ್ವಜ್ಞನನ್ನು ಅನುಕರಿಸಿ ತಂತಮ್ಮ ಧಾಟಿ ಯಲ್ಲಿ, ಧರ್ಮಜ್ಞ, ಸಾರಜ್ಞ, ಕರ್ಮಜ್ಞ, ಬ್ರಹ್ಮಜ್ಞ, ಮರ್ಮಜ್ಞ ಎಂಬ ಹಲವಾರು ಕವಿಗಳು ವಚನಗಳಲ್ಲಿ ರಚಿಸಿದ್ದಾರೆ ಎಂದು ಪೂರ್ಣಜ್ಞರು ತಮ್ಮ ವಚನಗಳಲ್ಲಿ ಕಾಣಿಸಿ ದ್ದಾರೆ. ಈ ಪ್ರಾಜ್ಞರ ಪಂಕ್ತಿಯಲ್ಲಿ ಪೂರ್ಣಜ್ಞರ ಹೆಸರು ಸೇರಬೇಕಾದುದಷ್ಟೇ ಅಲ್ಲ, ಅವರ ಹೆಸರು ಈ ಕವಿ ಪಂಕ್ತಿಯಲ್ಲಿ ವೈಶಿಷ್ಟ್ಯ ಪೂರ್ಣವಾಗಿದೆ ಎಂದು ಹೇಳಬೇಕು. ಸರ್ವಜ್ಞನು ತ್ರಿಪದಿಗಳಲ್ಲಿ ರಚನೆ ಮಾಡಿದ್ದಾನಾದರೂ ಅವೆಲ್ಲ ವಚನಗಳೆಂದೇ ಪ್ರಸಿದ್ಧ ವಾಗಿವೆ. ಅದು ಏಕೋ ತಿಳಿಯದು. ಈ ಸರ್ವಜ್ಞ ವಚನಗಳಷ್ಟೇ ಪೂರ್ಣಜ್ಞರ ವಚನಗಳೂ ಸರಸವಾಗಿವೆ, ಸಾರವತ್ತಾಗಿವೆ, ಮಾರ್ಮಿಕವಾಗಿವೆ, ಸರ್ವಂಕಷವಾಗಿವೆ ಎಂಬುದು ಸತ್ಯ.

ಹದಿನಾರನೇ ಶತಮಾನದಲ್ಲಿ ಆಗಿ ಹೋದ ಸರ್ವಜ್ಞನು ತ್ರಿಪದಿ ಸಾರ್ವಭೌಮ ಎಂದು ಯಾರಾದರೂ ಹೇಳಬಹುದು. ಭವ–ಭೂತಿ ಕವಿಯು ತನ್ನ ವಾಣಿಯ ಬಗ್ಗೆ ಹೇಳುತ್ತ "ವಾಕ್‌ವಶ್ಯೇವಾನು ವರ್ತತೇ" ಎಂದು ಹೇಳಿಕೊಂಡಿರುವ ಮಾತನ್ನು ತ್ರಿಪದಿಯು ಸರ್ವಜ್ಞನಿಗೆ ವಶವರ್ತಿಯಾಗಿಯೇ ನಡೆದುಕೊಂಡಿದೆ ಎಂದು ಹೇಳಬೇಕಾಗಿಲ್ಲ. ಅಂದರೆ ೧೬ ನೇ ಶತಮಾನಕ್ಕೆ ಮುಂಚೆ ತ್ರಿಪದಿ ಛಂದಸ್ಸು ಇದ್ದಿರಲಿಲ್ಲ ಎಂದಲ್ಲ. ಕನ್ನಡ ನುಡಿ ಯೊಂದಿಗೇ ತ್ರಿಪದಿಯು ಜನನವಾಗಿದೆಂದು ನಂಬುವದು ತಪ್ಪೇನಾಗಲಾರದು. ಕನ್ನಡ ಜಾನಪದ ಸಾಹಿತ್ಯದಲ್ಲಿ ಅರ್ಧಕ್ಕಿಂತ ಹೆಚ್ಚು ಪಾಲು ತ್ರಿಪದಿಯಲ್ಲಿಯೆ ಇದೆ ಎಂಬುದನ್ನು ಗಮನಿಸಿದಾಗ ತ್ರಿಪದಿಯ ಹಳಮೆ ಗಮನಕ್ಕೆ ಬಾರದಿರದು. ಆದರೆ ಅಷ್ಟಾದಶ ವರ್ಣನಾ

ಸಂಪನ್ನ ಕಾವ್ಯಗಳ ರಚನೆಗೆ ತ್ರಿಪದಿ ಛಂದಸ್ಸು ಅಷ್ಟೊಂದು ಅನುಕೂಲವಲ್ಲ ಎಂದು ಮಹಾಕವಿಗಳು ತಮ್ಮ ಕೃತಿಗಳಿಗಾಗಿ ತ್ರಿಪದಿಯನ್ನು ಬಳಸಿಕೊಳ್ಳದೆ ಕೈಬಿಟ್ಟರು. ಆದರೂ ಅವರ ಕೃತಿಗಳಲ್ಲಿ ಅಲ್ಲಲ್ಲಿ ತ್ರಿಪದಿಗಳು ಇಣುಕಿವೆ.

ತ್ರಿಪದಿಯನ್ನು ಹೆಚ್ಚು ಅರ್ಥಪೂರ್ಣವಾಗಿ ದುಡಿಸಿಕೊಂಡವರು ವೀರಶೈವ ಕವಿಗಳೇ ಎಂಬುದು ಸಾಹಿತ್ಯಾಭ್ಯಾಸಿಗಳಿಗೆ ಕಂಡು ಬರದಿರದು. ಬಸವಣ್ಣನವರ ಕಾಲದಿಂದ ಅಂದರೆ ೧೨ ನೇ ಶತಮಾನದಿಂದ ೧೮ ನೇ ಶತಮಾನದವರೆಗೆ ಈ ವೀರಶೈವ ವಚನಕಾರರು ಕವಿಗಳು ತ್ರಿಪದಿಯನ್ನು ಧಾರ್ಮಿಕ, ನೈತಿಕ ಕಾವ್ಯಗಳ ರಚನೆಗೆ ಬಳಸಿಕೊಂಡರು. ಬಸವ-ಸ್ತೋತ್ರ ತ್ರಿವಿಧಿ, ಮಿಶ್ರ ಸ್ತೋತ್ರ ತ್ರಿವಿಧಿ, ಗುರುಕರಣ ತ್ರಿವಿಧಿ, ನೀಲಮ್ಮನ ತ್ರಿವಿಧಿ, ಅಷ್ಟಾವರಣ ಸ್ತೋತ್ರ ತ್ರಿವಿಧಿ ಹೀಗೆ ಹಲವಾರು ಧಾರ್ಮಿಕ, ನೀತಿಬೋಧಕ ಖಂಡ ಕಾವ್ಯಗಳು ತ್ರಿಪದಿಯಲ್ಲಿ ರಚಿತವಾಗಿರುವದು ಕಂಡು ಬರುತ್ತದೆ. ಉಪದೇಶ, ನೀತಿ ಬೋಧೆಗಳಿಗೆ ತ್ರಿಪದಿಯು ಇವರಿಗೆ ಅನುಕೂಲಕರವಾದ ಛಂದೋಪ್ರಕಾರವಾಗಿ ಕಂಡು ಬರುತ್ತದೆ.

ಜನಪದ ಸಾಹಿತ್ಯದಲ್ಲಿ ಹಾಡು ಗಬ್ಬಗಳಾದ ಸಾಂಗತ್ಯ, ತ್ರಿಪದಿಗಳಲ್ಲಿ ವಿಪುಲ ಸಾಹಿತ್ಯ ರಚನೆ ಆಗಿದೆ. ದಿಲ್ಲೀಶ್ವರನನ್ನು ಮಣಿಸಿದ ಕುಮಾರರಾಮು ಚರಿತೆ ಸಾಂಗತ್ಯದಲ್ಲಿ ಮೂಡಿ ಬಂದ ಒಂದು ಸರಸಕಾವ್ಯವಾಗಿದ್ದರೆ 'ಭರತೇಶ ವೈಭವ'ವು ಎಲ್ಲರೂ ಹಾಡಿ ಕೊಂಡಾಡುವಂಥ ಮಹಾ ಕಾವ್ಯವಾಗಿ ಖ್ಯಾತಿ ಪಡೆದಿದೆ. ಹೀಗೆ ಹೆಸರಿಸಬಹುದಾದ ಮಹಾಕಾವ್ಯವೊಂದು ಹಿಂದಿನ ಶತಮಾನಗಳಲ್ಲಿ ಮೂಡಿಬಂದಿಲ್ಲವಾದರೂ ಈ ಇಪ್ಪತ್ತನೆಯ ಶತಮಾನದಲ್ಲಿ ಸೊಲ್ಲಾಪುರದ ಶರಣೆ ಜಯದೇವಿ ತಾಯಿ ಲಿಗಾಡೆ ಅವರು ಸಿದ್ಧರಾಮೇಶ್ವರ ಪುರಾಣ ಎಂಬ ಮಹಾಕಾವ್ಯವನ್ನು ರಸಭರಿತವಾಗಿ ತ್ರಿಪದಿಯಲ್ಲಿ ಬರೆದು ಕನ್ನಡ ನಾಡಿಗೆ ನೀಡಿದ್ದಾರೆ. ಆದರೂ ಸರ್ವಜ್ಞನ ಕೈಯಲ್ಲಿ ಪಳಗಿದಂತೆ ತ್ರಿಪದಿ ಇನ್ನಾರಲ್ಲಿಯೂ ಪಳಗಿಲ್ಲ ಎಂದು ಹೇಳಬಹುದಾಗಿದೆ. ಆದರೆ ಈ ಶತಮಾನದಲ್ಲಿ ಪೂರ್ಣಜ್ಞರು ಮಾತ್ರ ಎಲ್ಲ ರೀತಿಯಲ್ಲಿ ಸರ್ವಜ್ಞನೊಡನೆ ಸೆಣಸಿ, ಆತನಿಗಿಂತಲೂ ತಾವೊಂದು ಕೈ ಮೇಲು ಎಂದು ತೋರಿಸಿಕೊಟ್ಟಿದ್ದಾರೆ ಎಂಬುದನ್ನು ಬಲ್ಲವರು ಬಲ್ಲರು!

ಯಾರು ಈ ಪೂರ್ಣಜ್ಞ? ಅವರ ಕೃತಿ ಗ್ರಂಥ ರೂಪದಲ್ಲಿ ಎಲ್ಲಿಯೂ ಇನ್ನೂ ನೋಡಸಿಗುವದಿಲ್ಲವಲ್ಲ! ಹೀಗೆ ಬೆರಗಾಗಬೇಕಾದ ಕಾರಣ ಇಲ್ಲ. ಇಂದಿನ ಕನ್ನಡ ಸಾಹಿತ್ಯ ಲೋಕದಲ್ಲಿ 'ಶ್ರೀ ಮೂಜಗಂ' ಎಂದು ತಮ್ಮ ಕೃತಿಗಳಿಂದ ಹೆಸರು ಪಡೆದ, ಮೂರುಸಾವಿರಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳೇ ಈಗ ಪೂರ್ಣಜ್ಞ ಎಂಬ ಕಾವ್ಯನಾಮದಿಂದ ತ್ರಿಪದಿಗಳನ್ನು ಬರೆಯಲು ಪ್ರಾರಂಭಿಸಿ ನಾಲ್ಕಾರು ವರ್ಷಗಳೇ ಕಳೆದಿವೆ. 'ಪರಂಜ್ಯೋತಿ' ಮಾಸಿಕದಲ್ಲಿ ಈ ಪೂರ್ಣಜ್ಞ ವಚನಗಳು ನಿಯಮಿತವಾಗಿ ಪ್ರಕಟವಾಗುತ್ತಿವೆಯೆಂಬುದು ಸಾಹಿತ್ಯಾಸಕ್ತರಿಗೆ ತಿಳಿದ ಮಾತು. ಶ್ರೀ ಮೂಜಗಂ ಅವರು ಸ್ವಭಾವದಿಂದ ಕವಿಗಳು. ಕಾವ್ಯ ರಚನೆಯಲ್ಲಿ ಅವರಿಗೆ ಆಸಕ್ತಿ,

ಚಿಕ್ಕವರಿದ್ದಾಗಿನಿಂದಲೂ, ಮೂರುಸಾವಿರಮಠದ ಪೀಠಕ್ಕೆ ಬಂದ ನಂತರ ಆ ಮಹಾ ಪೀಠದ ಗುರುತರ ಹೊಣೆಗಾರಿಕೆಯನ್ನು ನಿರ್ವಹಿಸುವಲ್ಲಿ ತೊಡಗಿಕೊಂಡು ಲೌಕಿಕ ಆಡಳಿತ ವ್ಯವಹಾರವೇ ಹೆಚ್ಚಿಕೊಂಡು ಸಾಹಿತ್ಯ ರಚನೆ ಕುಂಠಿತವಾಗಿತ್ತು ಎಂಬ ಮಾತನ್ನು ಅವರೇ ಹೇಳುತ್ತಿರುತ್ತಾರೆ. ಅಂಥದರಲ್ಲಿಯೂ ಅವರ ಸಾಹಿತ್ಯ ಸೇವೆ ನಡೆದೇ ಇತ್ತು. ಇತ್ತೀಚೆಗೆ ಅವರು ತುಸು ವಿಶ್ರಾಂತಿಬಯಸಿ ವಾರಕ್ಕೊಂದು ದಿನ ಮೌನವ್ರತವನ್ನು ಪ್ರಾರಂಭಿಸಿದರು; ಆ ಮೌನದಿನಗಳಲ್ಲಿಯ ಚಿಂತನೆಯ ಪ್ರೇರಣೆಯಿಂದಲೇ 'ಪೂರ್ಣಜ್ಞ' ಮೂಡಿಬಂದ. ಪೂರ್ಣಜ್ಞನೇ ಹೇಳುತ್ತಾರೆ—

ಹುಚ್ಚು ಹಿಡಿಯಿತು ಮತ್ತೆ, ಸ್ವಚ್ಛಕೃತಿ ರಚಯಿಸಲು
ಬಿಚ್ಚುಮನದಿಂದ ನೈಜಾನುಭವ, ರಸದೊ
ಳಚ್ಚೊತ್ತಿದಂತೆ ಪೂರ್ಣಜ್ಞ.

ಹೀಗೆ ಇಂದಿನ ನವ್ಯ ನವ್ಯಾತಿ ನವ್ಯ ಎಂಬ ತುರುಸಿನ ಸತ್ವಹೀನ ಸಾಹಿತ್ಯ ನಿರ್ಮಾಣ ನಡೆದಿರುವ ಕಾಲದಲ್ಲಿ ಸ್ವಚ್ಛಕೃತಿ ರಚಯಿಸಲು ಮನಸು ಮಾಡಿದ ಪೂರ್ಣಜ್ಞ ತಾನು ಬರೆವ ವಚನಗಳ ಗುರಿ ಏನು ಎಂಬುದನ್ನು ಮಾರ್ಮಿಕವಾಗಿ ಹೇಳುತ್ತಾರೆ.

ಮೂಜಗದ ಕತ್ತಲೆಯ ತೇಜದಿಂಕಳೆಯಲ್ಕೆ
ಓ, ಜಗದ್ಗುರುವೆ, ಕೃಪೆಮಾಡು, ಜವದಿಂದ
ಮೂಜಗದ ಓಜ ಪೂರ್ಣಜ್ಞ.

ಈ ಜಗತ್ತಿನಲ್ಲಿಯ ಅಜ್ಞಾನವನ್ನು ಕತ್ತಲೆಯನ್ನು ನಿವಾರಿಸಿ ಜಗತ್ತಿಗೆ ಬೆಳಕು, ಅರಿವು ನೀಡುವದಕ್ಕಾಗಿ ನನಗೆ ಕೃಪೆ ಮಾಡು ಎನ್ನುವ ಈ ನುಡಿ ಎನಿತು ಚೆನ್ನ.

ಜೀವನದ ವನದಲ್ಲಿ ಭಾವಪಕ್ಷಿಯು ನಲಿದು
ಕಾವ್ಯಗಾಯನದ ರಸ ಸುರಿಸಿದರೆ ಜಗಕೆ
ದಿವ್ಯ ಆನಂದ ಪೂರ್ಣಜ್ಞ.

ತಮ್ಮ ತ್ರಿಪದಿಗಳು ಹೇಗಿರಬೇಕು ಎಂಬುದನ್ನು ವಿವರವಾಗಿ ಈ ಮೇಲಿನ ತ್ರಿಪದಿಯಲ್ಲಿ ಹೇಳಿದ್ದಾರೆ.

ಅನುಭವದ ರಸಸಾರ ತನಿನುಡಿಗಳಲಿ ಮೂಡಿ
ಮನ ಸೆಳೆದ ಶೈಲಿಯೊಡಗೂಡಿ ಬಂದರದು
ವಿನುತಸತ್ಕಾವ್ಯ ಪೂರ್ಣಜ್ಞ.

ಸತ್ಕಾವ್ಯದ ವ್ಯಾಖ್ಯೆಯನ್ನು ಹೀಗೆ ಮಾಡುವ ಪೂರ್ಣಜ್ಞ ತನ್ನ ತ್ರಿಪದಿಗಳನ್ನು ಬೇಕಾದರೆ ಈ ಒರೆಗಲ್ಲಿಗೆ ತಿಕ್ಕಿ ನೋಡಬಹುದು ಎಂದು ಕೆಣಕಿದಂತಿದೆ.

ಹೀಗೆ ಸಮಾಜದ ಉದ್ಧಾರಕ್ಕಾಗಿ ತ್ರಿಪದಿಗಳನ್ನು ಬರೆಯಲು ಪೂರ್ಣಜ್ಞ ಗುರು ಸ್ತುತಿಯೊಂದಿಗೆ ಕೃತಿ ಪ್ರಾರಂಭ ಮಾಡಿದ್ದಾರೆ.

ಶ್ರೀಗುರುವೆ ಗುರುಸಿದ್ಧ ಯೋಗಶಕ್ತಿ ಸಮೃದ್ಧ
ಬಾಗುವೆನು ನಿನ್ನ ಮೆಲ್ಲಡಿಗೆ ಕೃಪೆಯಾಗಿ
ನೀಗಿಸೈ ಭವದ ಪೂರ್ಣಜ್ಞ.

ಭ್ರೂಲತಾ ಪುರವಾಸ, ಕಾಲ ಕರ್ಮಾತೀತ
ಭಾಳಲೋಚನಯುತಿಪ ಗುರುಸಿದ್ಧ
ಪಾಲಿಸೈ ಮುದದಿ ಪೂರ್ಣಜ್ಞ.

ಕವಿಗಳ ಸಂಪ್ರದಾಯದಂತೆ ಬೇರಾವ ಪೂರ್ವಕವಿಗಳನ್ನೂ ಪೂರ್ಣಜ್ಞ ಸ್ತುತಿಸಿಲ್ಲ. ಆದರೆ ಈ ಎರಡು ತ್ರಿಪದಿಗಳು ಆತನವಿನಯಕ್ಕೆ ಸಾಕ್ಷಿಯಾಗಿವೆಂಬುದನ್ನು ಗಮನಿಸ ಬಹುದು.

ಪೂರ್ಣಜ್ಞನೆಂಬೆನಗೆ ಪೂರ್ಣತ್ವದರಿವು ಪರಿ
ಪೂರ್ಣವಪ್ಪಂತೆ ಪ್ರಜ್ಞಾಪ್ರಕಾಶವನು
ಪೂರ್ಣ ತೋರಯ್ಯ ಪೂರ್ಣಜ್ಞ.

ಎಂಬುದಾಗಲಿ,

ಸುವಿಚಾರಿ ಸದ್ಭಕ್ತ ಕವಿ ವಾಲಿ ಗಂಗಪ್ಪ
ನವಸ್ಫೂರ್ತಿಯಿತ್ತ ಪೂರ್ಣಜ್ಞ ಮುದ್ರಿಕೆಯು
ತ್ರಿಪದಿ ಬರೆಯಲ್ಕೆ ಪೂರ್ಣಜ್ಞ.

ಎಂಬ ಕೃತಜ್ಞತಾಭಾವವಾಗಲಿ ಕವಿ ಪೂರ್ಣಜ್ಞನ ಸಜ್ಜನಿಕೆಗೊಂದು ಹೆಗ್ಗುರುತು.

ಕವಿ ಸರ್ವಜ್ಞನದು ಅಲೆಮಾರಿ ಜೀವನ. ಆತ ತನ್ನ ವಚನಗಳನ್ನು ಹಾಡುತ್ತ ನಾಡನ್ನೆಲ್ಲ ಸುತ್ತಾಡಿ ಬಂದವನು. ತನ್ನ ವಚನಗಳನ್ನು ಆತ ಬರೆದಿಡಲಿಲ್ಲ. ತಮ್ಮ ವಿಶಿಷ್ಟ ಗುಣಗಳಿಂದಾಗಿ ಅವು ಜನತೆಯಲ್ಲಿ ಕಂಠಸ್ಥವಾದವು. ಅಂತೇ ಆತನ ವಚನಗಳ ಕೈಬರಹದ ಪ್ರತಿ ದೊರೆಯಬೇಕಾದರೆ ಒಂದು ಶತಮಾನವೇ ಕಳೆಯಬೇಕಾ ಯಿತು. ಇಲ್ಲಿ ಪೂರ್ಣಜ್ಞರ ವಿಚಾರ ಹಾಗಲ್ಲ. ಒಂದು ಪ್ರಸಿದ್ಧ ಮಠದ ಪೀಠಾಧಿಪತಿ ಆಗಿ ಒತ್ತಟ್ಟಿಗೆ ನೆಲೆನಿಂತವರು ಇವರು. ಲೋಕ ಸಂಗ್ರಹಾರ್ಥ ಸಾಕಷ್ಟು ಸಂಚಾರವನ್ನೂ ಕೈಕೊಳ್ಳುತ್ತಾರೆಂಬುದೂ ನಿಜ. ಈ ವಚನಗಳನ್ನು ಅವರು ಹೆಚ್ಚಾಗಿ ಮೌನದ ದಿನ ಗಳಲ್ಲಿಯೆ ಬರೆಯುತ್ತಾರೆಂದು ಪ್ರತೀತಿ. ಆದರೂ ವಚನಗಳನ್ನು ಬರೆಯುವದು ಕೂಡ ಯಾಂತ್ರಿಕವಲ್ಲ. ಅಲ್ಲದೆ ಮುಕ್ತಕಗಳಂತೆ ಮೂಡಿ ಬರುವ ವಚನಗಳಿಗೆ ಯಾವ ವಿಷಯವೂ ಆಗಬಹುದು. ಹೀಗಾಗಿ ತಲೆಯಲ್ಲಿ ಸಮಸ್ತ ವಿಷಯಗಳ ಬಗೆಗೆ ವಿಚಾರಚಕ್ರ ಸುತ್ತುತ್ತಲೇ ಇರುತ್ತದೆ. ಹೀಗಿದ್ದರೂ ಕೆಲವೊಂದು ಸಮಯಕ್ಕೆ ಕೆಲವೊಂದು ವಿಷಯ ಗಟಿಗೊಂಡು

ಪ್ರತಿಭೆಯು ಮಿಂಚಿನ ಉಡುಗೆ ತೊಟ್ಟು ಮೂಡಿಬರುತ್ತದೆ, ಕೂಡಲೇ ಅದನ್ನು ಬರೆದಿಡಬೇಕು. ಇಲ್ಲದಿದ್ದರೆ ಮೂಡಿಬಂದ ಬೆಳಕಿನ ಸಾಲು ಥಕ್ಕನೇ ಮಾಯವಾಗಿಬಿಡಬಹುದು. ಹಾಗೆ ಬರೆದಿಡುವ ಅನುಕೂಲ ಪೂರ್ಣಜ್ಞ ಕವಿಗೆ ಧಾರಾಳವಾಗಿ ಇದೆ. ಅಲ್ಲದೆ ಮೌನ ದಿನಗಳೂ ವರಪ್ರದವಾಗಿ ಪರಿಣಮಿಸಿ ತ್ರಿಪದಿರಚನೆಗೆ ಪುಷ್ಟಿಕೊಟ್ಟಿವೆ. ಹೀಗಾಗಿ ಈಗ ನಮಗೆ ದೊರೆತಿರುವ ಕಡತದಲ್ಲಿ ೧೪೧೮ ತ್ರಿಪದಿ (ವಚನ)ಗಳಿವೆ. ಅವರ ಕೃತಿ ರಚನೆ ಇನ್ನೂ ಅಖಂಡವಾಗಿ ಸಾಗಿದೆ. ರೆ. ಚೆನ್ನಪ್ಪ ಉತ್ತಂಗಿಯವರು ಪ್ರಕಟಿಸಿದ "ಸರ್ವಜ್ಞ ವಚನಗಳು" ಗ್ರಂಥದಲ್ಲಿ ೧೯೨೮ ವಚನಗಳಿವೆ. ವಚನಗಳ ಸಂಖ್ಯೆಯ ವಿಚಾರದಲ್ಲಿ ಪೂರ್ಣಜ್ಞರು ಸರ್ವಜ್ಞರನ್ನು ಮೀರಿಸುವದರಲ್ಲಿ ಏನೇನೂ ಸಂದೇಹವಿಲ್ಲ. ಅಂಥ ಅವಕಾಶ ಆರೋಗ್ಯ ಅವರಿಗಿದೆ.

ಹಿಂಡನಗಲಿದ ಸಲಗನಂತಿದ್ದ ಸರ್ವಜ್ಞ ಆ ಹಿಂಡಿನಲ್ಲಿಯೆ ಸಂಚರಿಸುತ್ತ, ಅವರ ಒಡನಾಟದಲ್ಲಿಯೆ ತನ್ನ ವಚನಗಳನ್ನು ರಚಿಸಿದ. ಇಲ್ಲಿ ಪೂರ್ಣಜ್ಞರಿಗೆ ವಿಂದೆಯೊಡನಾಟ ವಿದ್ದರೂ ವಚನಗಳ ರಚನೆಗೆ ಬೇಕಾದ ಸಕಲ ಸೌಕರ್ಯ ಇದೆ. ಪುಂಖಾನು ಪುಂಖವಾಗಿ ಅವರಿಂದ ವಚನಗಳು ಸುರಿಯಬಹುದು ಎಂದು ಯಾರಾದರೂ ಅನ್ನಬಹುದು. ಆದರೆ ಪ್ರತಿಭೆಯಾರ ತೊತ್ತಲ್ಲವಷ್ಟೆ! ಅದೂ ಅಲ್ಲದೆ ಪ್ರತಿಭೆ ಸ್ಫುರಿಸಿ ದಾಕ್ಷಣ ಕಾವ್ಯ ರಚನೆಗೆ ಕುಳಿತುಕೊಳ್ಳಬಹುದೆಂದರೆ ಅದು ಕೂಡ, ಮಹಾಮಠದ ಗುರುಭಾರವನ್ನು ಹೊತ್ತ ಅವರಿಗೆ ಹಾಗೆ ಮಾಡಲು ಆಗುತ್ತಿಲ್ಲ. ಈ ಮಾತನ್ನು ಅವರ ವಚನದಲ್ಲಿಯೆ ಕಾಣಬಹುದು.

ಒಳಮನೆಯ ಗೌಪ್ಯದಲಿ, ಕುಳಿತು ಬರೆಯುತಲಿರಲು
ಒಳನುಗ್ಗಿ ಬಹರು ಗೂಳಿಗಳು ಬಂದಂತೆ
ಅಳಿಸುವರು ಸ್ಫೂರ್ತಿ ಪೂರ್ಣಜ್ಞ.

ಬರೆಯಲು ಕುಳಿತಾಗ ಈ ರೀತಿ ವಿಘ್ನವುಂಟಾಗುವದೆಂದರೆ ಹೃದಯದ ಶಸ್ತ್ರ ಚಿಕಿತ್ಸೆ ನಡೆಸುತಿರುವಾಗ ವಿದ್ಯುಚ್ಛಕ್ತಿ ಕೈಕೊಟ್ಟಂತೆ. ಆ ವೇದನೆಯನ್ನು ಬಲ್ಲವರೆ ಬಲ್ಲರು. ಇಂಥ ಪ್ರಸಂಗಗಳನ್ನು ಎದುರಿಸಿಯೂ ಪೂರ್ಣಜ್ಞ ವಚನಗಳನ್ನು ಬರೆಯುತ್ತಾನೆ.

ಮನಶಾಂತಿ ಇಲ್ಲದಿರೆ, ಘನ ಕಾವ್ಯ ಸ್ಫುರಿಸುವದೆ?
ದಿನದ ಲೌಕಿಕದ ಕಾರ್ಯಬಾಹುಲ್ಯದಲಿ
ಎನಿತೊ ಬರೆದಿಹೆನು ಪೂರ್ಣಜ್ಞ.

ಅವರ ಕಾವ್ಯರಚನೆಯ ಅವಸರ ಹೇಗಿದೆಂಬುದನ್ನು ನೋಡೋಣ.

ಸಿದ್ಧರಾಮನ ಕಾರ್ಯ, ಬದ್ಧನಾಗಿಯು ನಿತ್ಯ
ಸಿದ್ಧಗುರು ಸಿದ್ಧ ಸೇವೆಯನು ತಪ್ಪಿಸದೆ
ಪದ್ಯ ಬರೆಯುತಲಿಹೆ ಪೂರ್ಣಜ್ಞ.

ಬಿಡುವಿದ್ದ ಸಮಯದೊಳು ಮೃಡನನ್ನು ನೆನೆಯುತ್ತ
ಗಡಗಡನೆ ಕಾವ್ಯರಚಿಸಿಹೆನು ಅವಸರದಿ
ಎಡವಿದರೆ ಕ್ಷಮಿಸು ಪೂರ್ಣಜ್ಞ.

ಪೂರ್ಣಜ್ಞ ಹೀಗೆ ಗೊಣಗುತ್ತ ಗೊಣಗುತ್ತ ೧೪೦೦ ವಚನಗಳನ್ನು ರಚಿಸಿಯಾಗಿದ್ದು ಇನ್ನೂ ರಚನೆ ನಡದೇ ಇದೆ. ಅಂದರೆ ಇಷ್ಟು ವಿಪುಲ ವಚನಗಳಲ್ಲಿ ಅವರು ಬರೆದಿರುವದಾದರು ಏನು? ಎಂಬ ಕುತೂಹಲ ಸಹಜವಾಗಿ ಮೂಡುವದು, ಆಡು ಮುಟ್ಟದ ಸೊಪ್ಪಿಲ್ಲ ಎಂಬ ಮಾತನ್ನು ಸರ್ವಜ್ಞನ ಬಗೆಗೆ ಹೇಳುವಂತೆ ಈ ಪೂರ್ಣಜ್ಞರ ಕುರಿತೂ ಅದೇ ಮಾತನ್ನು ಹೇಳಬಹುದು. ಆದರೂ ಸರ್ವಜ್ಞನ ಪರಿವೇ ಬೇರೆ; ಪೂರ್ಣಜ್ಞರ ಪರಿವೇ ಬೇರೆ. ಸರ್ವಜ್ಞನು ತನ್ನ ವಚನಗಳಲ್ಲಿ ಶಾಸ್ತ್ರ ವಿಚಾರ ಪ್ರತಿಪಾದನೆ ಕಡೆಗೆ ಗಮನಹರಿಸಿದ್ದಾನೆ. ಆತನ ಅಂದಿನ ಕಾಲಕ್ಕೆ ಅದು ಅಗತ್ಯವೂ ಆಗಿತ್ತು ಎನ್ನಬಹುದು. ಪೂರ್ಣಜ್ಞರು ಶಾಸ್ತ್ರ ವಿವೇಚನೆಯನ್ನು ಅಷ್ಟೊಂದಾಗಿ ಎತ್ತಿಕೊಂಡಿಲ್ಲವಾದರೂ ವೀರಶೈವ ಧರ್ಮ, ಸ್ವಾಮಿಗಳು, ಮಠಾಧಿಪತಿಗಳು, ಅವರ ಆಚಾರ-ವಿಚಾರ, ಅವರು ಎಂತಿರಬೇಕು, ಎಂತಿರಬಾರದು, ಅವರ ಕರ್ತ್ತವ್ಯ ಮುಂತಾದ ಹಲವಾರು ಅಂಶಗಳ ಕುರಿತು ಸ್ಪಷ್ಟೋಕ್ತಿಯಲ್ಲಿ ವಚನ ರಚಿಸಿದ್ದಾರೆ.

ಪೂರ್ಣಜ್ಞರ ಕಳಕಳಿ ಕೇವಲ ಧರ್ಮ, ಸ್ವಾಮಿಗಳ ಮಟ್ಟಿಗೆ ಮಾತ್ರ ಸೀಮಿತವಾಗಿಲ್ಲ. ದೇಶ, ದೇಶದ ಸ್ವಾತಂತ್ರ್ಯ, ಜಾತ್ಯತೀತತೆ, ರಾಜಕಾರಣಗಳು ಅವರ ಲೇಸು-ದೋಷ ಪದ್ಧತಿ, ಆದರ ಬಗೆಗೆ ತಮ್ಮ ಅಭಿಪ್ರಾಯ, ಕರುನಾಡಿನ ಕುರಿತಾಗಿ ಚಿಂತನ, ವೀರಶೈವ ಸಮಾಜದ ಸ್ಥಿತಿ-ಗತಿ-ಪ್ರಗತಿ ವಿಚಾರಗಳ ಕುರಿತು ಅವರು ಮಾಡಿದ ಚಿಂತನೆ ಅವರ ವಚನಗಳ ವಿಷಯವಾಗಿ ಮೂಡಿಬಂದಿದೆ. ದುಷ್ಟರು-ಶಿಷ್ಟರು, ವಿದ್ಯಾರ್ಥಿಗಳು, ಭಾವೈಕ್ಯ, ಸಚಿವರು-ಶಾಸಕರು, ಶೀಲ, ಸಾಲ, ಕೃತಘ್ನರು, ಖೂಳರು, ಅಹಂಕಾರ, ಅಧಿಕಾರ, ಮೋಹ, ಪ್ರಜಾಪ್ರಭುತ್ವ ಹೀಗೆ ಸಮಾಜದ ಹಲವಾರು ಘಟಕಗಳ, ಮುಖಗಳ ಸ್ವರೂಪ ದರ್ಶನ ಪೂರ್ಣಜ್ಞರು ತಮ್ಮ ಈ ವಚನಗಳಲ್ಲಿ ಮೂಡಿಸಿದ್ದಾರೆ. ಸಮಾಜದ ಪ್ರಮುಖ ಘಟಕವಾದ ಕುಟುಂಬ ಪದ್ಧತಿ, ಸ್ತ್ರೀಪುರುಷ ವಿಚಾರ ಅವರವರ ಸಂಬಂಧ, ರೀತಿ ನಡೆವಳಿಕೆಗಳ ಕುರಿತೂ ಪೂರ್ಣಜ್ಞರ ಮಾರ್ಮಿಕ ವಚನಗಳು ಇಲ್ಲಿ ಮೂಡಿಬಂದಿವೆ. ಹೆಣ್ಣನ್ನು ಇವರು ಮಾರಿ ಎಂದೂ ಕರೆದಿದ್ದಾರೆ, ಗೃಹಲಕ್ಷ್ಮಿ ಎಂದೂ ಗೌರವಿಸಿದ್ದಾರೆ. ಅತ್ತೆ-ಸೊಸೆಯರ ಸಂಬಂಧದ ನೀತಿಪರ ವಚನಗಳನ್ನೂ ಪೂರ್ಣಜ್ಞರು ನೀಡಿದ್ದಾರೆ. ಆರೋಗ್ಯ ವಿಷಯಕವಾಗಿ ಇತ್ತಿರುವ ಮಾರ್ಮಿಕ ಸಲಹೆಗಳು ಗಮನಾರ್ಹ. ಕಾಡು ಸಂರಕ್ಷಿಸಿರಿ, ಕಾಡು ಬೋಳಾದರೆ ಮಳೆ ಎಲ್ಲಿಂದ ಬಂದೀತು ಎಂಬ ಹಿತವಚನಗಳನ್ನು ಹೇಳುವದರ ಜೊತೆಗೆ ರೈತಬಾಂಧವರಿಗೆ ಕೃಷಿ ವಿಷಯಕ ಸೂಚನೆಗಳನ್ನು ನೀಡುವ ತ್ರಿಪದಿಗಳೂ ಇಲ್ಲಿ ಬಂದಿವೆ. ಹುಬ್ಬಳ್ಳಿ ಪಟ್ಟಣದ ಮೂರುಸಾವಿರಮಠದಲ್ಲಿ ಮಂಡಿಸಿ ಕೃಷಿ

ಸಲಹೆ ರೈತರಿಗೆ ನೀಡುವರೆ? ಎಂಬ ಶಂಕೆ–ಉಂಟಾಗಬಹುದೆಂದು ಪೂರ್ಣಜ್ಞರು ಕೃಷಿ ವಿಷಯವನ್ನು ತಾವು ಗ್ರಂಥಗಳಿಂದ ಓದಿ ತಿಳಿದುಕೊಂಡು ನೀಡಿರುವದಾಗಿ ತಮ್ಮ ಒಂದು ತ್ರಿಪದಿಯಲ್ಲಿ ಸ್ಪಷ್ಟಪಡಿಸಿದ್ದಾರೆ. ಇದು ನಿಜವಾದ ಪ್ರಾಮಾಣಿಕತೆ ಕೆಲವಂ ಶಾಸ್ತ್ರಂಗಳಿಂದೋದುತಾ ಎಂದಿದೆಯಲ್ಲವೆ!

ಇನ್ನು ಶಿವಯೋಗ ಮಂದಿರ, ಹುಬ್ಬಳ್ಳಿ ಓಲೆಮಠ, ಧರ್ಮಸ್ಥಳ, ಉಡುಪಿಯಂಥ ಕ್ಷೇತ್ರ ವಿಶೇಷಗಳ ಕುರಿತು ಈ ಪೂರ್ಣಜ್ಞರು ಅನೇಕ ವಚನಗಳಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ. ಹಬ್ಬ ಹರಿದಿನಗಳ ವಿಚಾರದಲ್ಲಿಯೂ ತ್ರಿಪದಿಗಳು ಮೂಡಿಬಂದಿವೆ. "ಉಪಮಾ ಕಾಲಿದಾಸಸ್ಯ ಭಾರವೇರರ್ಥ ಗೌರವಂ। ದಂಡಿನಃ ಪದ ಲಾಲಿತ್ಯಂ ಮಾಘೇ ಸಂತಿ ತ್ರಯೋಗುಣಾಃ" ಎಂಬ ಸುಭಾಷಿತವು ಪೂರ್ಣಜ್ಞರ ತ್ರಿಪದಿಯಲ್ಲಿ ರೂಪಾಂತರಗೊಂಡಿದೆ. ಇನ್ನೂ ಹಲವಾರು ಸುಭಾಷಿತಗಳ ಛಾಯೆ ಇವರ ತ್ರಿಪದಿಗಳ ಮೇಲೆ ಕಂಡುಬಂದರೆ ಅಚ್ಚರಿ ಪಡಬೇಕಾಗಿಲ್ಲ. ಕವಿ ಮನಸ್ಸಿನ ಚಿಂತನೆಯಲ್ಲಿ ಹೀಗಾಗುವದು ಸ್ವಾಭಾವಿಕ. ಪೂರ್ಣಜ್ಞರ ಈ ತ್ರಿಪದಿಗಳಲ್ಲಿ ಇಡೀ ಸಮಾಜವೇ ಪ್ರತಿಬಿಂಬಿತವಾಗಿದೆ ಎಂದು ಧಾರಾಳವಾಗಿ ಹೇಳಬಹುದು. ಸಮಾಜಕ್ಕೆ ಪ್ರತಿಸ್ಪಂದಿಸುವ ಇಂಥ ಸಾಹಿತ್ಯವೇ ಸತ್ತ್ವಪೂರ್ಣ ಸಾಹಿತ್ಯವಲ್ಲವೆ!

ಪೂರ್ಣಜ್ಞರು ತಮ್ಮ ವಚನಗನ್ನಡಿಯಲ್ಲಿ ಸಮಾಜವನ್ನು ಹೇಗೆ ಪ್ರತಿಬಿಂಬಿಸಿ ತೋರಿದ್ದಾರೆ ಎಂಬ ವಿಚಾರದಲ್ಲಿ ಇದಿಷ್ಟು ಸ್ಥೂಲ ವಿವೇಚನೆ ಆಯಿತು. ಅವರ ಇಂಥ ಬಹುಮುಖ ಪ್ರತಿಭೆಯನ್ನು ಪರಿಚಯಿಸಲು ಅವರ ವಚನಗಳನ್ನೇ ಉದಾಹರಿಸಬೇಕಾದುದು ಅಗತ್ಯ, ಅನಿವಾರ್ಯ, ಮುಕ್ತಗಳಂತೆ ಮೂಡಿಬಂದಿರುವ ಈ ವಚನ ಮೌಕ್ತಿಕಗಳ ಲಾವಣ್ಯವನ್ನು ಕಂಡೇ ಅರಿಯಬೇಕು. ಅವಕ್ಕೆ ಟಿಪ್ಪಣಿ ಬೇಕಾಗಿಲ್ಲ, ವ್ಯಾಖ್ಯಾನ ಬೇಕಾಗಿಲ್ಲ; ಎಂಥವರೂ ಸವಿದು ಆನಂದಿಸಬಹುದಾಗಿದೆ. ಹಲಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ಈಗ ಸಾಂಕೇತಿಕವಾಗಿ ಸಾಕಷ್ಟು ವಚನಗಳನ್ನು ಪರಿಚಯಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ವೀರಶೈವ ಮತಸ್ಥಾಪಕರು ಯಾರು ಎಂಬ ಬಗ್ಗೆ ವಾದ–ವಿವಾದ ನಡೆದಿರುವದು ಜನಜನಿತ. ಈ ವಿಷಯದಲ್ಲಿ ಪೂರ್ಣಜ್ಞನ ಅಭಿಪ್ರಾಯವನ್ನು ತಿಳಿಯೋಣವೆ?

ಅವ(ರು) ಮತಸ್ಥಾಪಕರು! ಇವ(ರು) ಮತಸ್ಥಾಪಕರು
ಅವರಿವರು ಎಂದು ಬವರಕ್ಕೆ ಇಳಿಯದಿರಿ
ಶಿವನು ಸ್ಥಾಪಕನು ಪೂರ್ಣಜ್ಞ!

ಅಂತಾದ ಮೇಲೆ ನಮ್ಮ ಗುರಿಯಾವದು? ಇಲ್ಲಿ ಕೇಳಿ

ಶಿವಭಕ್ತಿ ಶಿವಶಕ್ತಿ । ಶಿವಜ್ಞಾನ ಪಡೆಯೋಣ
ಶಿವ ಧ್ವಜದಡಿಯಲಿ ಸಮ್ಮಿಲಿತರಾಗೋಣ
ಶಿವಮೆಚ್ಚುವಂತೆ ಪೂರ್ಣಜ್ಞ.

ಈ ಮಾತಿಗೆ ಎರಡಿಲ್ಲ. ಪೂರ್ಣಜ್ಞನ ಅತಿಸಮಂಜಸ ತಿಳಿವಳಿಕೆ ಇದು.

ಪೀಠಾಧಿಪತಿಗಳಾಗಿ ಧರ್ಮಪ್ರಚಾರ ಸಮಾಜಕಲ್ಯಾಣ ಕಾರ್ಯನಿರತರಾಗಿರಬೇಕ ಸ್ವಾಮಿಗಳು ಎಂಬುದು ಸಹಜ ಸ್ವಾಭಾವಿಕ. ಪೂರ್ಣಜ್ಞರಿಗೆ ಕಂಡ ಸ್ವಾಮಿವರ್ಗದ ಕುರಿತು ಅರಿಯೋಣವೆ?

ಹರಮತವನುದ್ಧರಿಪ ಗುರುವಿರತರೀರ್ವರುಂ
ಮರೆತು ಭಾವೈಕ್ಯ ಅಸಹಕಾರದೊಳಿಹರು
ದುರಭಿಮಾನದಲಿ ಪೂರ್ಣಜ್ಞ ||

ಇವರೂ ಸ್ವಾಮಿಗಳೇ! ನಮ್ಮ ಮಧ್ಯದಲ್ಲಿದ್ದಾರೆ.

ರಬ್ಬಗಾವಿಯ ತೊಟ್ಟು ಮಬ್ಬು ಮಾಡಲು ಜನರ
ಉಬ್ಬುಬ್ಬಿ ತತ್ವ ಹೇಳಿ ನಡೆಯುವ ಸ್ವಾಮಿ
ಶುಂಭನಿಗು ಕೀಳು ಪೂರ್ಣಜ್ಞ ||
ಸ್ವಾಮಿ ಎನಿಸಿರುವವರು ಸ್ವಾಮಿತ್ವದಂತಿರದೆ
ನೇಮನಿಷ್ಠೆಯ ಬಿಟ್ಟು ಹಾದಿತಪ್ಪಿದರೆ
ಸೋಮಧರ ಮೆಚ್ಚ ಪೂರ್ಣಜ್ಞ ||
ಸ್ವಾಮಿಯಾದವ ತಾನು ಕಾಮವನು ಬಿಡಬೇಕು
ಸ್ವಾಮಿಯಾದವರು ಬಿದ್ದವರನೆತ್ತುವದು
ಸ್ವಾಮಿತತ್ವವಿದು ಪೂರ್ಣಜ್ಞ ||
ಶಿವಧ್ಯಾನವನು ಮರೆತು | ವ್ಯವಹಾರದೊಳು ಬೆರೆತು
ಯುವಕ ಸ್ವಾಮಿಗಳು ನಿಸ್ತೇಜರಾಗಿಹರು
ನವಯುಗದೊಳಿಂದು ಪೂರ್ಣಜ್ಞ ||

ಪೂರ್ಣಜ್ಞರ ದೃಷ್ಟಿಯಲ್ಲಿ ನಿಜವಾದ ಸ್ವಾಮಿಗಳು ಹೀಗಿದ್ದಾರೆ–

ಆತ್ಮಶಕ್ತಿಯ ಮುಂದೆ ಭೌತಿಕದ ಬಲವೆಲ್ಲಿ?
ಭೌತಿಕವು ಅಚಿರ; ದಿವ್ಯಜ್ಯೋತಿರ್ಲಿಂಗ
ಆತ್ಮಸಂಪದವು ಪೂರ್ಣಜ್ಞ ||
ಅದ್ವೈತ ಸಿದ್ಧನಿಗೆ ಸದ್ದುಗದ್ದಲವಿಲ್ಲ
ಬದ್ಧತೆಗಳಿಲ್ಲ ಮೋಹ ಮಾಯೆಗಳಿಲ್ಲ
ಚಿದ್ಯೋಗಿಯವನು ಪೂರ್ಣಜ್ಞ ||
ತಾನೆಂಬುದನ್ನಳಿದು ನೀನೆಂಬುದನ್ನರಿತು
ತಾನೆ ತಾನಾದ ಮಹಿಮನೆ ಜಗದ್ಗುರುವು
ಹೀನಂಗಸಾಧ್ಯ ಪೂರ್ಣಜ್ಞ ||

ಗುರು ತರುಚರಣೆಯಲಿ ನಿರತನಾಗದೆ ನಿರುತ
ಬರಿಕೀರ್ತಿ ಬಯಸೆ ನಿಜಜಗದ್ಗುರುಶಕ್ತಿ
ದೊರಕೀತೆ ಜಗದಿ ಪೂರ್ಣಜ್ಞ||

ಜಗದ್ಗುರು ಪೀಠಾಧಿಪತಿಯಾಗಿರುವ ಪೂರ್ಣಜ್ಞನ ದೇಶಾಭಿಮಾನ ಕೂಡ ಶ್ರೇಷ್ಠ ದರ್ಜೆಯದು. ಭಾರತವು ಪರಕೀಯರ ಸಂಕೋಲೆಗಳನ್ನು ಕಳಚಿಕೊಂಡು ಸ್ವತಂತ್ರ ವಾಯಿತು. ಎಂಬ ಸುದ್ದಿ ಕೇಳಿ ಹರ್ಷಪುಲಕಿತರಾಗುತ್ತಾರೆ.

ಸ್ವಾತಂತ್ರ್ಯ ಬಂದಿಹುದು ಸಂತಸವ ತಂದಿಹುದು
ಆತ್ಮ ಸ್ವಾತಂತ್ರ್ಯ ಪಡೆಯುವದೆ ಸಂಪೂರ್ಣ
ಸ್ವಾತಂತ್ರ್ಯವಯ್ಯ ಪೂರ್ಣಜ್ಞ.

ಎಂದು ರಾಜಕೀಯ ಸ್ವಾತಂತ್ರ್ಯವೊಂದೇ ಸಾಲದು, ಆತ್ಮಸ್ವಾತಂತ್ರ್ಯ ಸಂಪೂರ್ಣ (ಆರ್ಥಿಕಾದಿ) ಸ್ವಾತಂತ್ರ್ಯ ಪಡೆಯಬೇಕು ಎಂದು ಎಚ್ಚರಿಸುತ್ತಾರೆ.

ಸ್ವಾತಂತ್ರ್ಯ ವೃಕ್ಷಕ್ಕೆ ನೀತಿಯೇ ರಕ್ಷಕವು
ನೀತಿ ಮಲಗಿದರೆ ಸ್ವೈರಪಶು ಅದನು ಮುರಿ
ದೀತು ಬಲು ಜೋಕೆ ಪೂರ್ಣಜ್ಞ.

ನೀತಿಗೆಟ್ಟು ಸ್ವೈರವರ್ತನೆಗೆ ಅನುವುಗೊಟ್ಟು ಸ್ವಾತಂತ್ರ್ಯ ವೃಕ್ಷಕ್ಕೆ ಆಘಾತ ತಂದು ಕೊಳ್ಳದಿರಿ ಎಂದು ಹಿತವಚನ ನುಡಿದಿದ್ದಾರೆ. ಅಲ್ಲದೆ ಇನ್ನು ಒಂದು ಹೆಜ್ಜೆ ಮುಂದೆ ಹೋಗಿ,

ಸ್ವಾತಂತ್ರ್ಯವಿದೆಯೆಂದು ನೀತಿ ನಿಯಮವ ಮುರಿದು
ಸ್ವಾರ್ಥ ಸಾಧನೆಗೆ ಸಿಕ್ಕಂತೆ ನಡೆವವನು
ಸ್ವಾತಂತ್ರ್ಯ ದ್ರೋಹಿ ಪೂರ್ಣಜ್ಞ

ಎಂದು ಘಂಟಾಘೋಷವಾಗಿ ಸಾರಿದ್ದಾರೆ. ಮತ್ತೆ ಸ್ವತಂತ್ರ ರಾಷ್ಟ್ರದ ಶಾಸಕರ ಲಕ್ಷಣ ಗಳನ್ನು ಹೇಳಿದ್ದಾರೆ.

ಶಾಸಕರು ದೇಶಕ್ಕೆ ಲೇಸುಗೈಯಲು ಬೇಕು
ಶೋಷಣೆಯ ಬಿಟ್ಟು ಜನಹಿತದ ಮಣಿಹಕ್ಕೆ
ಮೀಸಲಿರಬೇಕು ಪೂರ್ಣಜ್ಞ||

ಸೂತ್ರ ರೂಪದಂತಿರುವ ಈ ತ್ರಿಪದಿಯನ್ನು ನಮ್ಮ ಶಾಸಕ ವರ್ಗವೆಲ್ಲ ಅನುಸರಿಸಿದರೆ ರಾಷ್ಟ್ರ ಸುರಾಷ್ಟ್ರವಾಗುವದರಲ್ಲಿ ಸಂದೇಹವಿಲ್ಲ. ಆದರೆ ಇಂದು ದೇಶದಲ್ಲಿ ನಡೆದಿರುವ ರಾಜಕೀಯವನ್ನು ಎಲ್ಲರೂ ಬಲ್ಲವರಾಗಿರುವಂತೆ ಪೂರ್ಣಜ್ಞನೂ ಚೆನ್ನಾಗಿ ಅರಿತವನಾಗಿ ರುತ್ತಾನೆ. ಅಂತೆ ಚಾಟಿಯೇಟಿನಂತೆ ಅವರ ತ್ರಿಪದಿಗಳು ಮೂಡಿಬಂದಿವೆ.

ಅಧಿಕಾರ ಗಿಟ್ಟಿಸಲು ಸದುವಿನಯವನು ನಟಿಸಿ
ಅಧಿಕಾರ ಬರಲು ಮರೆಯುವರು ಎಲ್ಲರನು
ಮದದಿಂದ ಕೊಬ್ಬಿ ಪೂರ್ಣಜ್ಞ||

ಅಧಿಕಾರ ದೊರಕಿಸಲು ಹದವರಿತು ಹಣಸುರಿಸಿ
ಅಧಿಕಾರ ದೊರೆತ ಮರುಚಣವೆ ಲಂಚಕ್ಕೆ
ಬೆದಕಾಡುತಿಹರು ಪೂರ್ಣಜ್ಞ||

ಅಧಿಕಾರ ಗದ್ದುಗೆಗೆ ಗುದ್ದಾಟ ನಡೆದಿಹುದು
ಅಧಿಕಾರಕಾಗಿ ಕೊಲೆ ಸುಲಿಗೆ ಮೋಸಗಳು
ಗುದಮುರಿಗೆ ಎಷ್ಟು? ಪೂರ್ಣಜ್ಞ||

ಅಧಿಕಾರ ಮೋಹಿಗಳು ಅಧಿಕಾರ ದಾಹಿಗಳು
ಮದ ಬಧಿರರಾಗಿ ಕಿವುಡುಗೇಳುತ್ತಿಹರು
ಸದುಪದೇಶವನು ಪೂರ್ಣಜ್ಞ||

ದೇಶದ ಇಂದಿನ ರಾಜಕೀಯ ಚಿತ್ರವನ್ನು ಇದಕ್ಕಿಂತ ಇನ್ನೆಷ್ಟು ಸ್ಪಷ್ಟವಾಗಿ ಚಿತ್ರಿಸಲು ಸಾಧ್ಯ. ಈ ರಾಜಕಾರಣಿಗಳ ಸ್ವಭಾವ ಚಿತ್ರಿಸುವ ಇನ್ನೂ ಅನೇಕಾನೇಕ ವಚನಗಳೂ ಇವೆ. ವಿಸ್ತಾರ ಭಯದಿಂದ ಇಲ್ಲಿ ಇಷ್ಟೇ ಸಾಕು.

ಈ ರಾಜಕಾರಣಿಗಳು ಮಠಾಧಿಪತಿಗಳನ್ನು ಪೀಡಿಸುವದನ್ನೂ ಬಿಟ್ಟಿಲ್ಲ. ಇವರ ಪಕ್ಷಪಂಗಡಗಳ ಚಟುವಟಿಕೆಗಳ ಬಿಸಿ ಮಠಮಾನ್ಯಗಳನ್ನೂ ಆವರಿಸುವ ಹೆದರಿಕೆ ಇದೆ ಯಾದರೂ ಪೂರ್ಣಜ್ಞರು ಈ ವಿಚಾರದಲ್ಲಿ ಪ್ರಕಟಿಸಿರುವ ಸ್ಪಷ್ಟ ವಿಚಾರಗಳು ತುಂಬ ಗಮನಾರ್ಹವಾಗಿವೆ.

ಎಲ್ಲ ಪಕ್ಷಗಳೆಮಗೆ ಸಲ್ಲಲಿತವೆನಿಸುತಿವೆ
ಎಲ್ಲವುಗಳಲ್ಲಿ ಒಳ್ಳೆ ಅಂಶಗಳುಂಟು
ಎಲ್ಲರರಿತಿರಲಿ ಪೂರ್ಣಜ್ಞ||

ಆದರೆ

ಎಲ್ಲ ಪಕ್ಷಗಳಲ್ಲಿ ಖುಲ್ಲ ಸ್ವಾರ್ಥಿಗಳುಂಟು
ಎಲ್ಲವರು ರಾಷ್ಟ್ರ ಭಕ್ತಿಯಿಂ ದುಡಿದಲ್ಲಿ
ಎಲ್ಲರಿಗೆ ಹಿತವು ಪೂರ್ಣಜ್ಞ||

ಎಂದು ಉಪದೇಶಿಸಿ ದಾರಿತೋರುತ್ತಾರಲ್ಲದೆ—

ಎಮಗೇಕೆ ಪಕ್ಷಗಳು ಎಮಗೇಕೆ ಒಳತೋಟಿ
ಎಮಗಿರಲಿ ದೇಶಭಕ್ತಿ ರಸಸಾಮ್ರಾಜ್ಯ
ಎಮಗಿದುವೆ ಪ್ರಾಜ್ಯ ಪೂರ್ಣಜ್ಞ||

ಎಂದು ಮಠಾಧಿಪತಿಗಳ ಪರವಾಗಿ ಸಂಕೇತಿಕವಾಗಿ ಬರೆದಿದ್ದಾರೆ. ಅಲ್ಲದೆ ಜನತೆಯ ಪ್ರತಿನಿಧಿಗಳಾಗ ಬಯಸುವವರಿಗೆ ಪೂರ್ಣಜ್ಞರ ಕಿವಿಮಾತು ಇಂತಿವೆ—

ಅಧಿಕಾರವಿರುವಾಗ ಸದುಪಯೋಗಿಸಿ ಜನರ
ಹೃದಯ ಗೆದ್ದವನು ಮುಂಬರುವ ಆಯ್ಕೆಯಲಿ
ಮುದದಿ ಗೆಲ್ಲುವನು ಪೂರ್ಣಜ್ಞ ||

ಹಣದ ಆಮಿಷ ತೋರಿ ಗುಣವ ಗಾಳಿಗೆ ತೂರಿ
ಜನತಂತ್ರ ಕುಳಿವೆಂತು? ಆರಿಸಿದರಿಂತು
ಜನರೊಲುಮೆಯಲ್ಲಿ? ಪೂರ್ಣಜ್ಞ ||

ಜನಹಿತವೆ ಕರ್ತವ್ಯ ಜನಹಿತವೆಗಂತವ್ಯ
ಜನಹಿತವೆ ನಮ್ಮ ಭವಿತವ್ಯವೆಂಬುವದೆ
ಜನಧರ್ಮನಿಜದಿ ಪೂರ್ಣಜ್ಞ ||

ತಿಳಿದುಕೊಳ್ಳುವ ಮನಸ್ಸಿದ್ದವರಿಗೆ ಇದಕ್ಕಿಂತ ಹೆಚ್ಚಿನ ಹಿತವಚನಬೇಕಿಲ್ಲಾ.

ರಾಷ್ಟ್ರೀಯ ಭಾವನೆಯು ರಾಷ್ಟ್ರೀಯ ಚಿಂತನೆಯು
ರಾಷ್ಟ್ರೀಯ ಶ್ರದ್ಧೆ ಹುರಿಗೊಂಡು ದುಡಿದಲ್ಲಿ
ರಾಷ್ಟ್ರಾಭ್ಯುದಯವು ಪೂರ್ಣಜ್ಞ ||

ಎಂದು ಬಿಚ್ಚುಮಾತಿನಲ್ಲಿ ಎಚ್ಚರಿಸಿದ್ದಾರೆ.

ಕನ್ನಡವು ತಾಯ್ನುಡಿಯು ಕನ್ನಡವು ಸಿರಿಗುಡಿಯು
ಕನ್ನಡದ ನಾಡು ನುಡಿಗಳಿಗೆ ದುಡಿದವನೆ
ಕನ್ನಡಿಗ ನಿಜದಿ ಪೂರ್ಣಜ್ಞ ||

ಎಂದು ನಿರ್ದೇಶಿಸಿರುವ ಪೂರ್ಣಜ್ಞನ ಕನ್ನಡದ ಭಕ್ತಿಯನ್ನು ಸಾರಿಹೇಳುವ ಇನ್ನೂ ಅನೇಕಾನೇಕ ವಚನಗಳನ್ನು ಉದಾಹರಿಸಬಹುದು. ಇಂದು ಸಮಾಜದಲ್ಲಿ ಮೇಲುಗೈ ಹೊಂದಿರುವ ರಾಜಕೀಯದ ಬಗ್ಗೆ ಪೂರ್ಣಜ್ಞರ ವಿಚಾರಸರಣಿ ಇಂತಿದೆ.

ಕೇವಲ ಧರ್ಮ, ಸ್ವಾಮಿಗಳು, ರಾಜಕೀಯಗಳಿಷ್ಟರಿಂದಲೇ ಸಮಾಜ ಸಂಘಟಿತವಾಗಿಲ್ಲ. ಸಮಾಜದಲ್ಲಿ ಸಾಧುಗಳಿರುವಂತೆ ದುಷ್ಟರು, ಸ್ವಾರ್ಥಿಗಳು, ಸಮಯಸಾಧಕರು, ಅನುಕೂಲಸಿಂಧುಗಳು, ಛಿದ್ರಾನ್ವೇಷಗಳು, ಗೋಮುಖವ್ಯಾಘ್ರರು, ಕೃತಘ್ನರೂ ಕಂಡು ಬರುತ್ತಾರೆ ಪೂರ್ಣಜ್ಞರಿಗೆ. ಅಂಥವರನ್ನು ಗುರುತಿಸುವಲ್ಲಿ, ಅವರ ಸ್ವಭಾವ ಗುಣಗಳನ್ನು ವಿಶ್ಲೇಷಿಸುವಲ್ಲಿ, ಅಂಥ ಸಮಾಜ ಕಂಟಕರನ್ನು ಖಂಡಿಸುವಲ್ಲಿ ಪೂರ್ಣಜ್ಞರು ಹಿಂದೆ ಬಿದ್ದಿಲ್ಲ. ಅಂಥವರಿಂದ ತಮಗಾದ ಕಟು ಅನುಭವಗಳನ್ನೂ ತೋಡಿಕೊಂಡು, ಅಂಥವರಿಂದ ದೂರ ಇರಬೇಕಾದುದು ಅತ್ಯಗತ್ಯ ಎಂದೂ ಕಿವಿಮಾತು ಹೇಳಿದ್ದಾರೆ.

ಮುಖಸ್ತುತಿಯ ಮಾಡುತ್ತ ಸುಖದೋಚುವವರಿಹರು
ಬಕತಂತ್ರ ನರಿತಂತ್ರ ಪರಿಣತರ ಕಪಟ
ಮುಖ ನೋಡಬೇಡ ಪೂರ್ಣಜ್ಞ॥

ಗುಣ ಹೀನ ತತ್ವಗಳ ಕ್ಷಣ ಕ್ಷಣಕೆ ಗೋಣಗುವರು
ದಿನದಿನಕೆ ವೇಷ ಬದಲಿಪುದು ಕೋಡಂಗಿ
ಕುಣಿತಕ್ಕೆ ಸಮವು ಪೂರ್ಣಜ್ಞ॥

ಜಾತಿ ಜಂಜಡದಲ್ಲಿ ನೀತಿಯನು ಬಲಿಗೊಟ್ಟು
ಪ್ರೀತಿಯನು ಸುಟ್ಟು ಗಹಗಹಿಸುತಿರುವವರು
ಘಾತಕರು ಜಗಕೆ ಪೂರ್ಣಜ್ಞ॥

ಒಳಪಂಗಡಗಳೆಲ್ಲ ಅಳಿಯಬೇಕೆನ್ನುವರು
ಒಳಪಂಗಡಗಳ ಅಭಿಮಾನ ಬಿಟ್ಟಿಲ್ಲ
ಗಳಪುವರು ಬರಿದೆ ಪೂರ್ಣಜ್ಞ॥

ಹೀಗೆ ಉದ್ದಕ್ಕೆ ವಚನಗಳನ್ನು ಉದ್ಧರಿಸುತ್ತ ಸಾಗಬೇಕಾದೀತು. ಈ ಸ್ಪಷ್ಟೋಕ್ತಿಯನ್ನು ಮಾತ್ರ ಗಮನಿಸಬೇಕು ಅಲ್ಲವೆ!

ಎಲ್ಲವರ ನಾಲಗೆಯ ಸೊಲ್ಲಿಪುದು 'ಭಾವೈಕ್ಯ'
ಗುಲ್ಲು ಬರಿಗುಲ್ಲು ಕೃತ್ರಿಮದ ಮಾಣಿಕ್ಯ
ಜೊಳ್ಳಾದ ವಾಕ್ಯ ಪೂರ್ಣಜ್ಞ॥

ರಾಷ್ಟ್ರಸಂವರ್ಧನೆಗೆ ಅತ್ಯಗತ್ಯವಾದ ಭಾವೈಕ್ಯ ಇನ್ನೂ ಬಂದಿಲ್ಲ ಪೂರ್ಣಜ್ಞರ ಪ್ರಕಾರ. ಈ ನವ ವಂಚಕರನ್ನು ಇಲ್ಲಿಗೇ ಬಿಟ್ಟು ಬಿಡೋಣ. ಪೂರ್ಣಜ್ಞರ ವಚನ ರಾಶಿಯಲ್ಲಿ ಇವರ ಚಿತ್ರಣ ಪುಷ್ಕಳವಾಗಿ ಬಂದಿದೆ. ಕಾಲಿಗೆ ಬಿದ್ದು ತಮ್ಮ ಕೆಲಸ ಮಾಡಿಸಿಕೊಂಡು ನಂತರ ಮೋರೆ ತೋರಿಸದವರು, ಪರರ ಏಳಿಗೆ ಕಂಡು ಅವರ ಕಾಲು ಹಿಡಿದು ಹಿಂದೆ ಜಗ್ಗುವವರು, ಒಳ್ಳೆಯ ಕೆಲಸ ಮಾಡುತ್ತಿರುವವರ ಮೇಲೆ ಕಲ್ಲು ತೂರುವವರು, ಪರ ನಿಂದೆ-ಪರದೂಷಣೆಗಳಲ್ಲಿಯೆ ನಿರತರಾದವರು ಸಾಕಷ್ಟು ಮಂದಿ ಪೂರ್ಣಜ್ಞರ ಕಣ್ಣಿಗೆ ಬಿದ್ದಿದ್ದಾರೆ. ಅಂಥ ವಂಚಕರ ಬಗ್ಗೆ ನಾವೇ ಜಾಗರೂಕರಾಗಿರಬೇಕಲ್ಲದೆ ಇನ್ನೇನು ಮಾಡಲು ಸಾಧ್ಯ ಅನ್ನುತ್ತಾರೆ ಪೂರ್ಣಜ್ಞ.

ಸಮಾಜದ ಜೀವಾಳ ಎಂದರೆ ಕುಟುಂಬ ವ್ಯವಸ್ಥೆ. ಅದರ ಘಟಕಗಳು ಸತಿ-ಪತಿ-ಮಕ್ಕಳು, ನೆರೆಹೊರೆಯವರು ದೇಶದ ಕುಟುಂಬಗಳು ನೆಮ್ಮದಿಯಿಂದಿದ್ದರೆ ದೇಶದಲ್ಲಿ ಶಾಂತಿ ಸಮೃದ್ಧಿ ಇರುತ್ತದೆ ಎಂಬುದನ್ನು ಪೂರ್ಣಜ್ಞರ ವಚನಗಳಿಂದ ಅರಿಯೋಣ.

ಸಂಸ್ಕಾರ ಉಳ್ಳವರ ಸಂಸಾರ ಸುಖ ಸಾರ
ಸಂಸ್ಕಾರ ಹೀನ ಸಂಸಾರ ಬಲು ಖಾರ!
ಸಂಸ್ಕಾರ ಮಧುರ ಪೂರ್ಣಜ್ಞ॥

ದಾಂಪತ್ಯ ಜೀವನವು ಕಂಪುಳ್ಳ ರಸಪಾಕ
ಇಂಪುಳ್ಳ ಗಾನದಂತಿರಲಿ ಸೊಂಪಿರಲಿ
ತಂಪು ಮನೆಯಂತೆ ಪೂರ್ಣಜ್ಞ॥

ಸತಿಯನ್ನು ಬರಿ ಭೋಗ ರತಿಯೆಂದು ತಿಳಿಯದಿರಿ
ಸತಿಯು ಸಖಿಯೆಂದು ಅರಿತವನೆ ಪರಮಸುಖಿ
ಸತಿ ಸುಖದ ಶ್ರುತಿಯು ಪೂರ್ಣಜ್ಞ॥

ಪ್ರೇಮವಿಲ್ಲದ ಸತಿಯು ಪ್ರೇಮವಿಲ್ಲದ ಪತಿಯು
ಪ್ರೇಮವಿಲ್ಲದದು ಕಾಮಾಗ್ನಿಯಾಹುತಿಯು
ಪ್ರೇಮ ಸುಖಧಾಮ ಪೂರ್ಣಜ್ಞ॥

ಆದರ್ಶ ಕುಟುಂಬ ಜೀವನದ ಕುರಿತು ಪೂರ್ಣಜ್ಞನ ಹೇಳಿಕೆ ಇದು

ಗಂಡ ಬಂದರೆ ಮನೆಗೆ ಸಿಂಡರಿಸದಿರು ಮುಖವ
ದುಂಡು ಮಲ್ಲಿಗೆಯು ನಗೆಸೂಸಿ ಬರಮಾಡಿ-
ಕೊಂಡು ಸತ್ಕರಿಸು ಪೂರ್ಣಜ್ಞ॥

ಸತಿ ತಾನು ಮನಮೆಚ್ಚಿ। ಪತಿಯು ಮನ ಸೆರೆಗೈದು
ಶ್ರುತಿಗೊಂಡ ವೀಣೆಯೊಲು ನುಡಿದರೆ ಪತಿಯು
ಸತಿಯ ವಶವಕ್ಕು ಪೂರ್ಣಜ್ಞ॥

ಅತಿಥಿ ಸತ್ಕಾರ ಸಂಸ್ಕೃತಿ ಸುಮದ ಸೌರಭವು
ಅತಿಥಿ ಸತ್ಕಾರವಿರುವಂಥ ಸಿರಿಮನೆಯು
ಕ್ಷಿತಿಯಲ್ಲಿ ಕ್ಲಿಷ್ಟ ಪೂರ್ಣಜ್ಞ॥

ಸಿರಿವಂತರ ಮನೆಗಳಲ್ಲಿ ಎಲ್ಲ ಸಂಪತ್ತು ಇದ್ದು ಅತಿಥಿ ಸತ್ಕಾರ ನಡೆದರೂ ಅದಕ್ಕೆ ಅಷ್ಟೊಂದು ಮಹತ್ವ ಇಲ್ಲ. ಆದರೆ ಕಡು ಬಡವನ ಮನೆ ಅತೀ ಸತ್ಕಾರ ನೀಡಲು ಹೀಗೆ ಸಿದ್ಧವಾಗಿರಬೇಕು.

ಹಳ್ಳಿಗರ ಮನೆಗಳಲಿ ಒಳ್ಳೆ ಹೈನಗಳಿರಲಿ
ಬಳ್ಳೊಳ್ಳಿ ಚಟ್ನಿ ರೊಟ್ಟಿ ಮೊಸರೀರುಳ್ಳಿ
ಎಲ್ಲ ಹದವಿರಲಿ ಪೂರ್ಣಜ್ಞ॥

ನಾಡಿನ ಬಡವರ ಮನೆ ಕೂಡ ಹೀಗೆ ಸಮೃದ್ಧವಾಗಿರಬೇಕು ಎಂಬುದು ಪೂರ್ಣಜ್ಞರ ಮನದಾಸೆ! ಆದರಾತಿಥ್ಯ ನಮ್ಮ ಸಂಸ್ಕೃತಿ ಲಕ್ಷಣವಲ್ಲವೆ! ಬಡವರ ಮನೆಗಳು ಸಮೃದ್ಧ ವಾಗಬೇಕಾದರೆ ಅವರಿಗೆ ಕಾಯಕಯೋಗದ ಮಹತ್ವ ಬಿಂಬಿಸಿ ಹೇಳಬೇಕೆ ಹೊರತು ಬೇರೆ ಮಾರ್ಗದಿಂದ ಸಾಧ್ಯವಿಲ್ಲ. ಪೂರ್ಣಜ್ಞರ ದೃಷ್ಟಿಯಲ್ಲಿ ಆದರ್ಶ ಕುಟುಂಬ ಹೀಗಿರ ಬೇಕು.

ಮುತ್ತಿನಂತಹ ಅತ್ತೆ ರತ್ನದಂತಹ ಸೊಸೆಯು
ಸತ್ಪಥದ ಪತಿಯು, ಧರ್ಮನಂತಹ ಮಾವ
ಸ್ತುತ್ಯ ಸಂಸಾರ ಪೂರ್ಣಜ್ಞ॥

ಅತ್ತೆ ಅತ್ತಿಗೆಯುವರ ತೊತ್ತಾಗಿ ದುಡಿಯುತ್ತ
ಅರ್ತಿಯಿಂ ಪತಿಸೇವೆಗೈಯುವ ಸೊಸೆಯು
ರತ್ನ ಮನೆತನಕೆ ಪೂರ್ಣಜ್ಞ॥

ಹಾಗೇ ರತಿಯಂಥ ಸತಿಯನ್ನು ಬಯಸುವ ಗಂಡಸಿಗೂ ಒಂದು ಕಿವಿಮಾತು

ಕರಿಯ ಹೆಂಡತಿಯೆಂದು ಪರಿತಪಿಸದಿರು ಮನದಿ
ಕರಿದತ್ತಿ ಕಸ್ತೂರಿ, ಗುಣದ ಪರಿಮಳವಿರಲು
ಕರಿದಾದರೇನು ಪೂರ್ಣಜ್ಞ॥

ಈ ಉಪದೇಶ ಇಂದಿನ ಕಾಲಕ್ಕೆ ಸಲ್ಲತಕ್ಕದ್ದಲ್ಲ ಎಂದು ಯಾರಾದರೂ ಗೊಣಗಿ ದರೆ ಇಂದಿನ ಕಲಿತ ಸಮಾಜದಲ್ಲಿಯ ವಿರಸ ಚಿತ್ರವೂ ಇಲ್ಲಿದೆ ಪೂರ್ಣಜ್ಞ ಕಂಡ ಹಾಗೆ–

ಕಲಿತ ಸೊಸೆಯರು ಕೆಲರು ಮುಲೆತಿಹರು ಸ್ವೇಚ್ಛೆಯಲಿ
ಎಳೆಯುವರು ಮನೆಯ ಮರ್ಯಾದೆಯನು ಹೊರಗೆ
ಕಲಿಕಾಲ ಮಹಿಮೆ! ಪೂರ್ಣಜ್ಞ॥
ಅತ್ತೆಯದು ತಪ್ಪೆಂದು ಅತ್ತು ಗಂಡಗೆ ಹೇಳಿ
ಮತ್ತವನ ಕಿವಿಯೊಳೂದುವರು ಏನೇನೊ
ಕತ್ತಲಾಟದಲಿ ಪೂರ್ಣಜ್ಞ॥
ಚೈನಿ ಬಾಜಿಯ ಸೊಸೆಯು ಮಾನವನು ಮಾರುವಳು
ಊನವಿಲ್ಲದಿಹ ಮನೆತನದ ಗೌರವಕೆ
ಊನ ಮಾಡುವಳು ಪೂರ್ಣಜ್ಞ॥

ಆದರೂ ಸ್ತ್ರೀ ಸಮಾಜದ ಬಗ್ಗೆ ಪೂರ್ಣಜ್ಞರಿಗೆ ತುಂಬ ಗೌರವವಿದೆ. ಸ್ತ್ರೀ ಜೀವನದ ಸುರೂಪ ಮುಖಗಳಂತೆ ಆಕೆಯ ನಾನಾ ವಿಕಾರ ರೂಪಗಳನ್ನೂ ತಿಳಿದಿರುವ ಪೂರ್ಣಜ್ಞ ಸ್ತ್ರೀ ಕುಲದ ಬಗ್ಗೆ ಆಡಿದ ಗೌರವದ ನುಡಿ ಇಲ್ಲಿದೆ—

ಹೆಣ್ಣು ತ್ಯಾಗದ ದೇವಿ ಹೆಣ್ಣು ಸಹನೆಯ ದೇವಿ
ಹೆಣ್ಣು ಮನೆತನದ ಸುಖ ಶಾಂತಿ ಅಧಿದೇವಿ
ಹೆಣ್ಣು ಗೃಹಲಕ್ಷ್ಮಿ ಪೂರ್ಣಜ್ಞ॥

ವಾರಿಧಿಯ ತಡಿಯಲ್ಲಿ ನಿಂತು ಬೊಗಸೆಯಲ್ಲಿ ನೀರನ್ನೆತ್ತಿ 'ಅಯ್ಯಾ ನೋಡು ಇದು ಕಡಲು' ಎಂದು ಹೇಳಿದರೆ ಅದೆಷ್ಟು ಹಾಸ್ಯಾಸ್ಪದವೆನಿಸುವದೊ ಹಾಗೇ ಈ ವಚನದರ್ಶನ ಪ್ರಯತ್ನ ಸಾಗಿದೆ ಎನ್ನಬೇಕು. ಪೂರ್ಣಜ್ಞರ ಅಪಾರ ಅನುಭವ, ಸೂಕ್ಷ್ಮ ನಿರೀಕ್ಷಣ ದೃಷ್ಟಿ, ಅಗಾಧ ವಿಷಯಜ್ಞಾನ ಇವೆಲ್ಲದರ ಸಾರ ಸರ್ವಸ್ವವನ್ನು ತುಂಬಿಕೊಂಡು ನಳನಳಿಸುತ್ತಿರುವ ತ್ರಿಪದಿಗಳು ಸಮಗ್ರ ಸಮಾಜವನ್ನೇ ಕನ್ನಡಿಯಲ್ಲಿ ತೋರಿದಂತೆ ಪ್ರತಿಬಿಂಬಿಸುತ್ತಿವೆ. ಯಾವ ಪುಟ ತಿರುವಿ ನೋಡಿದರೂ ವಚನಗಳು ಚೆಲ್ಲುವ ಕಾಮನಬಿಲ್ಲಿನ ಕಾಂತಿ ಕಣ್ಮನ ತಣಿಸದಿರವು.

ಜೊತೆ ಜೊತೆಗೇ ನೀತಿ ವಚನಗಳೂ ಇಂಪಾಗಿ ಬಂದಿವೆ. ಸ್ವಾಮಿಗಳಿಗೆ, ಜನಸೇವಕರಿಗೆ, ರಾಜಕಾರಣಿಗಳಿಗೆ, ಸಂಸಾರಿಕರಿಗೆ ದಾರಿದೀಪವಾಗಬಲ್ಲಂಥ ಈ ನೀತಿ ವಚನಗಳ ಸೊಬಗನ್ನು ಸವಿದು ಆನಂದಿಸಬೇಕಲ್ಲದೆ ಅವುಗಳಿಗೆ ಸಾಂಕೇತಿಕವಾಗಿ ಒಂದೊಂದು ವಚನ ಹೇಳಬೇಕೆಂದರೂ ಪಟ್ಟಿ ಸುದೀರ್ಘವಾದೀತು ಎಂಬ ಹೆದರಿಕೆ.

ಅದ್ವೈತ, ದ್ವೈತ, ವೀರಶೈವ, ಹಿಂದೂ ಹೀಗೆ ಹಲವಾರು ವಿವಾದಾಸ್ಪದ ವಿಷಯಗಳ ಬಗೆಗೆ ಪೂರ್ಣಜ್ಞರ ನಿಲುವು ಸ್ಪಷ್ಟವಾಗಿದೆ. ಅದನ್ನು ಇಲ್ಲಿ ಅವಲೋಕಿಸುವದು ಅಗತ್ಯ.

ಅದ್ವೈತ ಮತವಲ್ಲ। ಗುದ್ದಾಡದಿರಿ ಮತ್ತೆ
ವೇದದಿಂ ತಿಳಿದಿರುವ ಸತ್ಯ ತತ್ವವದು
ವಾದ ಬೇಡಿದರೆ ಪೂರ್ಣಜ್ಞ॥

ಓದ್ವೈತಿಗಳೆ ಕೇಳಿ, ಅದ್ವೈತವಲ್ಲವಿದು
ವೇದ ಗರ್ಭಸ್ಥ ಸತ್ಯವಿದನಾಲಿಸಿರಿ
ಸದ್ಬುದ್ಧಿಯಿಂದ ಪೂರ್ಣಜ್ಞ॥

ಬೊಮ್ಮನನು ಅರಿತಿಹರು ಸುಮ್ಮನಿರುತಿಪರಯ್ಯ
ಒಮ್ಮನದಿ ಭಕ್ತಿ ಸಂಧಾನಗೈದವಗೆ
ಬೊಮ್ಮನೊಲಿಯುವನು ಪೂರ್ಣಜ್ಞ॥

ಬ್ರಹ್ಮಜ್ಞಾನವೇ, ಅರಿವಿನ ಅರಿವೇ, ಸರ್ವಧರ್ಮಗಳ ಗುರಿ ಆಗಿರುವಾಗ ಆ ಬ್ರಹ್ಮಜ್ಞಾನ ಅಂದರೇನು? ಬ್ರಹ್ಮಜ್ಞಾನಿ ಎಂತಿರುವ? ಎಂಬುದನ್ನು ನಮ್ಮ ಪೂರ್ಣಜ್ಞ ವ್ಯಾಖ್ಯಾನಿಸುವದರ ಜೊತೆಗೆ ಬ್ರಹ್ಮನನ್ನು ಒಲಿಸಿಕೊಳ್ಳುವ ರೀತಿಯನ್ನೂ ಹೇಳಿಕೊಟ್ಟಿದ್ದಾರೆ; ಅತ್ಯಂತ ಸರಳ ತ್ರಿಪದಿಗಳಲ್ಲಿ.

ಬಂಧುರದ ಸಂಘಟನೆ ಹಿಂದುಗಳದಾಗಿರಲಿ
ಹಿಂದು ಸಂಸ್ಕೃತಿ ಜಗವಮುನ್ನಡೆಸಲೆಂದು
ಮುಂದಾಗಬೇಕು ಪೂರ್ಣಜ್ಞ॥

ಹಿಂದುಗಳು ಎಂಬುವರೆ ಶೂದ್ರ ವೈಶ್ಯ ಬ್ರಾಹ್ಮ-
ಣಾದಿ ಮೇಣ್ ಶೈವ ವೀರಶೈವೇತ್ಯಾದಿ
ಭೇದ ಮಾಡದಿರಿ ಪೂರ್ಣಜ್ಞ॥

ಈ ತ್ರಿಪದಿಗಳನ್ನಷ್ಟು ನೋಡಬೇಕಲ್ಲವೆ?

ಹಿಂದುಗಳು ನಾವೆಲ್ಲ ಬಾಂಧವರು ಎಂದೆನುತ
ಹಿಂದುಧರ್ಮದಲಿ ನಡೆವಾತನೆ ನೈಜ
ಹಿಂದುವೆನಿಸುವನು ಪೂರ್ಣಜ್ಞ॥

ಜಾತಿಮತ ಜಂಜಡದಿ ಜೋತಾಡುತಿರಬೇಡ
ನೀತಿ ಪಥವಿಡಿದು ಹಿಂದುಧರ್ಮದಿ ನಡೆದು
ಜ್ಯೋತಿ ನೀನಾಗು ಪೂರ್ಣಜ್ಞ॥

ಹರಿಜನರ ಕಂಡೊಡನೆ ಜರಿದು ಹಿಂಜರಿಯದಿರು
ಹರಿಜನರುಗಳಿಗೆ ಸಂಸ್ಕೃತಿಯು ತುಂಬಿದರೆ
ವರಜನರೆ ಅವರು ಪೂರ್ಣಜ್ಞ॥

ಈ ತ್ರಿಪದಿಗಳಲ್ಲಿ ಕಂಡುಬರುವ ಹಿಂದೂ ಧರ್ಮಕ್ಕಿಂತ ಉತ್ತಮವಾದ ಹಿಂದೂ ಧರ್ಮ, ಬೇರಾವದಿದ್ದೀತು!

ವೀರಶೈವರು ತಾವು ಯಾರೆಂಬುದರಿವಿಲ್ಲ
ಯಾರಾರಿಗೊ ಆಗಿ ಒಡೆದಿನುವ ಹರವಿ
ಚೂರಿನಂತಿಹರು ಪೂರ್ಣಜ್ಞ॥

ಇಂಥ ವೀರಶೈವರ ಉದ್ಧಾರ ಆಗಬೇಕು. ಸಕಲ ರಂಗಗಳಲ್ಲಿ ಸರ್ವವಿಧದಿಂದಲೂ ಪ್ರಯತ್ನಗಳು ನಡೆದಿವೆ. ಫಲಪ್ರದವಾಗಿ ಸಾಗಿವೆ.

ಭಾರವನು ಹೊತ್ತಿಹೆನು ದಾರಿಯಲಿ ನಡೆದಿಹೆನು
ವೀರಶೈವರ ಸಂಘಟಿಪ ಮಣಿಹದಲಿ
ಕೋರುವೆನು ಯಶವ ಪೂರ್ಣಜ್ಞ॥

ಎಂದು ಈ ದಿಸೆಯಲ್ಲಿ ತಾನು ನಡೆಸಿರುವ ಪ್ರಯತ್ನವನ್ನೂ ಅರುಹಿದ್ದಾನೆ. ಈ ಕಾರ್ಯ ಸಾಗಬೇಕಾದದ್ದೇ.

ರಾಜಕೀಯದಿ ಧರ್ಮಓಜೆಯಿಂ ಕೂಡಿದೊಡೆ
ರಾಜಕೀಯವದು ಧರ್ಮದೊಳು ಸೇರದಿರೆ
ರಾಜ್ಯಕ್ಕೆ ಹಿತವು ಪೂರ್ಣಜ್ಞ||

ಎಂಥ ಮೌಲಿಕ ಅಭಿಪ್ರಾಯ. ಜಾತ್ಯಾತೀತ ರಾಷ್ಟ್ರಕ್ಕೆ ಇದು ಸಂಜೀವಿನಿ.

ಜಾತಿನಿರಸನಗೈದು ನೀತಿಪರವಶಗೊಳಿಸಿ
ಪ್ರೀತಿ ರಸವುಣಿಸಿ ಸೌಹಾರ್ದ ಬೆಳಸುವದೆ
ಜಾತಿ ನಿರಪೇಕ್ಷೆ ಪೂರ್ಣಜ್ಞ||

ಹೀಗೆ ಸುಸ್ಪಷ್ಟ ವಿಚಾರಗಳನ್ನಿಟ್ಟುಕೊಂಡ ಪೂರ್ಣಜ್ಞ ರಾಷ್ಟ್ರಾಭ್ಯುದಯ ಸಾಧಿಸಲು ನೀಡಿದ ಸೂತ್ರ ಇಲ್ಲಿದೆ.

ರಾಷ್ಟ್ರೀಯ ಭಾವನೆಯು ರಾಷ್ಟ್ರೀಯ ಚಿಂತನೆಯು
ರಾಷ್ಟ್ರೀಯ ಶ್ರದ್ಧೆ ಹುರಿಗೊಂಡು ದುಡಿದಲ್ಲಿ
ರಾಷ್ಟ್ರಾಭ್ಯುದಯವು ಪೂರ್ಣಜ್ಞ||

ಈ ಗುರಿ ಸಾಧನೆಗಾಗಿ ಪೂರ್ಣಜ್ಞ ದುಡಿಯುತ್ತಿದ್ದಾನೆ ಶ್ರೀ ಮೂಜಗಂ ಅವರ ರೂಪದಲ್ಲಿ ಎಂದರೆ ಎಲ್ಲರೂ ಒಪ್ಪುವ ಮಾತು!

ಕರ್ನಾಟಕದ ಏಳಿಗೆಯ ಬಗೆಗೂ ಪೂರ್ಣಜ್ಞರಿತ್ತ ಕರುಳಿನ ಕರೆ ಆಲಿಸೋಣವೆ?

ಕನ್ನಡದ ನಾಡಿನಲಿ ಕನ್ನಡದ ನುಡಿಯಲಿ
ನಿನ್ನ ಬಯಕೆಯ ಸೊಮ್ಮು ಕರೆಯುತಿದೆ ನಿನ್ನ
ಕನ್ನಡಿಗ ಕೇಳು ಪೂರ್ಣಜ್ಞ||

ಕನ್ನಡಿಗರೇ ಏಳಿ! ಕನ್ನಡಿಗರೇ ಕೇಳಿ
ಕನ್ನಡದ ಕಹಳೆ ಕರೆಯುತಿದೆ
ಪುಣ್ಯಭಾರತದಿ ಪೂರ್ಣಜ್ಞ||

ಕನ್ನಡಿಗ, ಕನ್ನಡವ ಮನ್ನಿಸುತ ಬೆಳಸಿದಡೆ
ಕನ್ನಡದ ಹೆಮ್ಮೆ ನಾಡೆಲ್ಲ ತುಂಬಿದರೆ
ಕನ್ನಡದ ಮೇಲ್ಮೆ ಪೂರ್ಣಜ್ಞ||

ಸುತ್ತು ಮುತ್ತಲಿನ ಸಮಾಜವನ್ನು, ಅದರ ವ್ಯವಹಾರ–ರೀತಿ–ನೀತಿಗಳನ್ನು ಪೂರ್ಣಜ್ಞ ಎಷ್ಟೊಂದು ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಿ, ಪರೀಕ್ಷಿಸಿ, ಮಥಿಸಿ, ಚಿಂತಿಸಿ ತಮ್ಮ ಈ ದಾರಿ ದೀಪಗಳಂತಿರುವ ವಚನಗಳನ್ನು ಬರೆದಿದ್ದಾರೆ ಎಂಬುದನ್ನು ಕಂಡುಕೊಳ್ಳಲು ವಿಶೇಷ ಪರಿಶ್ರಮ ಬೇಕಿಲ್ಲ.

ಲೋಕಸಂಗ್ರಹ ಕಾರ್ಯಕ್ಕೆಂದು, ಸಮಾಜ ಕಲ್ಯಾಣ ಸಾಧನೆಗೆಂದು ಪೂರ್ಣಜ್ಞ ದೇಶ-ವಿದೇಶಗಳನ್ನು ಸಂಚರಿಸಿ ಬಂದಿದ್ದಾರೆ. ಅಲ್ಲಿ ಕಂಡ ವಸ್ತು-ವಿಷಯಗಳ ಬಗ್ಗೆ ಕೂಡ ವಚನಗಳನ್ನು ನೀಡಿದ್ದಾರೆ. ಕುತೂಹಲಕ್ಕೆಂದು ಕೆಲವನ್ನು ಗಮನಿಸಬಹುದಾಗಿದೆ. ಹುಬ್ಬಳ್ಳಿಯ 'ಓಲೆಮಠ'ವನ್ನು ಹತ್ತಾರು ವಚನಗಳಲ್ಲಿ ಬಾಯಿತುಂಬ ಬಣ್ಣಿಸಿದ್ದಾರೆ ಪೂರ್ಣಜ್ಞ.

ಹನ್ನೆರಡನೆಯ ಶತಕದುನ್ನತಿಯ ಕುರುಹಾದ
ಚೆನ್ನೋಲೆಗರಿಯ ಚೆನ್ನಿಧಿಯು ಓಲೆಮಠ
ಬಣ್ಣಿಸೈ ಕವಿಯೆ ಪೂರ್ಣಜ್ಞ॥

ಚೀಲಗಟ್ಟಲೆ ಒಟ್ಟಿದೋಲೆಗರಿಗ್ರಂಥಗಳ
ಲೀಲೆಯಿಂ ರಕ್ಷಿಸಿದ ಶರಣರ ನಿವಾಸ
ಓಲೆಮಠ ನಿಜದಿ ಪೂರ್ಣಜ್ಞ॥

ವೀರಶೈವರ ಗುರುಕುಲವಾದ ಶಿವಯೋಗ ಮಂದಿರದಲ್ಲಿಯೆ ಪೂರ್ಣಜ್ಞ ಇದ್ದು ಕಲಿತು ಸಿದ್ಧನಾದುದು. ಆ ಬಗ್ಗೆ ಎದೆತುಂಬಿ ಹಾಡಿದ್ದಾರೆ.

ತಂದೆ ತಾಯಿಯ ತೊರೆದು ಬಂಧು ಬಳಗವ ಮರೆತು
ಮಂದಿರಕೆ ಬಂದಾಗ ನಾಲ್ಕು ವರ್ಷಗಳ
ಕಂದನಾಗಿದ್ದೆ ಪೂರ್ಣಜ್ಞ॥

ಶಿವಮಂದಿರವೆ ತಾಯಿ ಶಿವಮಂದಿರವೆ ತಂದೆ
ಶಿವಮಂದಿರವೆ ನನಗೆ ಬಾಳ ಬೆಳಕಿತ್ತ
ಶಿವಮಾರ್ಗದರ್ಶಿ ಪೂರ್ಣಜ್ಞ॥

ಜಾಗ್ರತ ಶಿವದೇವಾಲಯವೆಂದು ಖ್ಯಾತಿ ಪಡೆದಿರುವ ಮಂಜುನಾಥ ಸ್ವಾಮಿಯ ಧರ್ಮಸ್ಥಳ ಪೂರ್ಣಜ್ಞರನ್ನು ಆಕರ್ಷಿಸಿದೆ; ಅಲ್ಲಿಗೆ ಭೆಟ್ಟಿಕೊಟ್ಟೂ ಬಂದಿದ್ದಾರೆ.

ಧರ್ಮದಲಿ ಬಾಳುತಿಹ ಧರ್ಮದಲಿ ಬೆಳಗುತಿಹ
ಧರ್ಮಕಾರ್ಯವನು ನಿತ್ಯನಿರ್ವಹಿಪ
ಧರ್ಮಸ್ಥಳವಿದು ಪೂರ್ಣಜ್ಞ॥

ಅನ್ನದಾನದ ಮುಂದೆ ಇನ್ನು ದಾನಗಳಿಲ್ಲ
ಸನ್ನೀತಿಸೂತ್ರವಿದಕೆ ಧರ್ಮಸ್ಥಳವೆ
ಪುಣ್ಯ ದೃಷ್ಟಾಂತ ಪೂರ್ಣಜ್ಞ॥

ಧರ್ಮಸ್ಥಳದ ನೋಟ, ಧರ್ಮಸ್ಥಳದ ಊಟ
ಧರ್ಮಸಮನ್ವಯದ ಭಾವೈಕ್ಯ ನೋಡು
ಧರ್ಮಸ್ಥಳದಲಿ ಪೂರ್ಣಜ್ಞ॥

ದೇಶ ವಿದೇಶಗಳಲ್ಲಿ ಸಿರಿವಂತದೇವರೆಂದು ಖ್ಯಾತಿ ಪಡೆದ ಸಾಲಗಾರ ತಿರುಪತಿ ತಿಮ್ಮಪ್ಪ ಇಗೋ ಇಲ್ಲಿದ್ದಾನೆ.

ಘಟ್ಟಗಳ ದಾಟುತ್ತ ಬೆಟ್ಟವನ್ನೇರುವವರು
ಬುಟ್ಟಿ ಬುಟ್ಟಿ ಹಣ ಸುರಿಯುವವರು ಹುಂಡಿಯಲಿ
ಇಷ್ಟಾರ್ಥಿಜನರು ಪೂರ್ಣಜ್ಞ॥

ತಿರುಪತಿಯ ತಿಮ್ಮಪ್ಪ ವರಗಳನು ಕೊಡುತಿಹನು
ಪರಮಶ್ರದ್ಧಾಳುಗಳಿಗೆಲ್ಲ ಭಾಗ್ಯವನು
ಕರುಣಿಪನು ಮುದದಿ ಪೂರ್ಣಜ್ಞ॥

ವಿಶ್ವಜನಾಕರ್ಷಣೀಯ ಮೈಸೂರು ದಸರಾ ಪೂರ್ಣಜ್ಞನ ದೃಷ್ಟಿಯಲ್ಲಿ

ಮೈಸೂರಿನರಮನೆಯು ಭೂಷಣವು ಭಾರತಕೆ
ದೇಶ ದೇಶಗಳ ಜನರ ಕಣ್ಣಿಗೆ ಕಲೆಯ
ಮೈಸೂರುಪಾಕ ಪೂರ್ಣಜ್ಞ॥

ಮೈಸೂರು ದಸರಾ ಪ್ರಕಾಶ ವೈಭವದಲ್ಲಿ
ಲೇಸುಂಟು ಜನಕೆ ಮನದರಂಜನೆ ಮತಿ ವಿ–
ಕಾಸ ಸಾಧಿಪುದು ಪೂರ್ಣಜ್ಞ.

ಇಷ್ಟೆಲ್ಲ ಬಾಳ ಪರಿಪಾಕವನ್ನುಂಡು ಕನ್ನಡ ಕುಲಕೋಟಿಗೆ ತಮ್ಮ ವಚನಗಳ ತನಿರಸದೂಟ ನೀಡಿ ಸಂತೃಪ್ತಿ ಪಡಿಸಿರುವ, ಇನ್ನೂ ಸಮಾರಾಧನೆ ನಡೆಸಿರುವ ಪೂರ್ಣಜ್ಞನ ಮನದಾಸೆ ಇಷ್ಟೇ ಇಲ್ಲಿ ಕೇಳಿ—

ಸ್ವೇಚ್ಛೆ ಸ್ವೈರಗಳಳಿದು ಉಚ್ಚಸಂಸ್ಕೃತಿ ಬೆಳೆದು
ಸ್ವಚ್ಛಮನದಿಂದ ನಾಗರಿಕರೆಲ್ಲ ಶಿವ
ಮೆಚ್ಚುವಂತಿರಲಿ ಪೂರ್ಣಜ್ಞ॥

ಕೊನೆಯದಾಗಿ, ಅರಿವಿನ ಅರವತ್ತನ್ನೇರಿ, ತ್ರಿವಿಧ ದಾಸೋಹ ಮೂರ್ತಿಯಾಗಿ ಸಿದ್ಧಪುರುಷ ನಂತೆ ಸಿದ್ಧರಾಮನ ತೆರದಿ ಸಮಾಜಕಲ್ಯಾಣ ಕಾರ್ಯಗಳಿಗೆ ತನ್ನನ್ನು ಮೀಸಲಾಗಿರಿಸಿ ಕೊಂಡಿರುವ ಪೂರ್ಣಜ್ಞ, ತನ್ನ ಸುಖದುಃಖವನ್ನೂ ಹಲವಾರು ವಚನಗಳಲ್ಲಿ ಜನತಾ ಜನಾರ್ದನನ ಎದುರಿಗೆ ತೋಡಿಕೊಂಡಿದ್ದಾರೆ. ಎಂಥ ಮಹಿಮರಿಗೂ ಸಮಾಜ ಕಂಟಕರ ಉಪಟಳ ತಪ್ಪಿದ್ದಲ್ಲ ಎಂಬುದು ಅವರ ಈ ಕೆಲವಚನಗಳಿಂದ ಸೂಚಿತವಾಗುವದು.

ಇನ್ನೇನು, ಪ್ರಾಣಸಂಕಟಕ್ಕೆ ಬಂದಿತ್ತಂತೆ ಗುರುವಿನಲ್ಲಿಯ ದೃಢ ನಿಷ್ಠೆಯಿಂದ ಪಾರಾದ ಎಂದು ಉದ್ಗಾರ ಹೊರಡಿಸಿದ್ದಾರೆ. ರತ್ನ ದೀಪದ ಮೇಲೆ ಹುಡಿ ಉಗ್ಗಿದರೆ ಅದರ ಪ್ರಕಾಶ ಕಂದೀತೆ? ಕಸ್ತೂರಿಯ ಕಂಪನ್ನು ಬಚ್ಚಿಟ್ಟರೆ ಅದು ಹರಡದೆ ಇದ್ದೀತೆ? ಹೀಗಾಗಿ ಪೂರ್ಣಜ್ಞ ಆ ಗಂಡಾಂತರದಿಂದ ಪಾರಾಗಿ, ಕಾರ್ಮೋಡಗಳನ್ನೆಲ್ಲ ಹರಿದೊಗೆದು ನಡು ನೆತ್ತಿಯ ಸೂರ್ಯನಂತೆ ಪ್ರಕಾಶಿಸುತ್ತಿದ್ದಾನೆ. ಅವರ ವಚನಗಳಲ್ಲಿಯೆ ಆ ಪ್ರಸಂಗವನ್ನು ನೋಡೋಣ.

ಎನಿತೆನಿತೊಮಾಟಗಳ ಎನಿತೆನಿತೊಕೂಟಗಳ
ಹೆಣೆದಿದ್ದರೆನ್ನ ಮುಗಿಸಲ್ಕೆ ಆದರೇನ್?
ಘನ ಗುರುವ್ರಕಾಯ್ದ ಪೂರ್ಣಜ್ಞ॥
ಮೈಯ್ಯಲ್ಲ ಬೆವರ ಝುರಿ, ಕೈಯಲ್ಲ ನಿಃಶಕ್ತ
ಸುಯ್ಯೆಂದು ಗಾಳಿ ಬಂದಂತೆ ಬಂದಿತದು
ಕಾಯ್ದ ಗುರುಸಿದ್ಧ ಪೂರ್ಣಜ್ಞ॥
ಪ್ರಾಣ ಹಾರುವದೆನಿಸಿ ತ್ರಾಣವಿರದಿರೆ ಬರೆದೆ
ಧ್ಯಾನಿಸಿದೆ ಬಿಡದೆ ಗುರುಸಿದ್ಧನಡಿಗಳನು
ಪ್ರಾಣವುಳಿಸಿದನು ಪೂರ್ಣಜ್ಞ॥

ಈ ಗಂಡಾಂತರದಿಂದ ಪಾರಾದ ಪೂರ್ಣಜ್ಞನದು ಅದೆಂಥ ಘನಸತ್ವಚೇತನ. ಅಂತೇ ಇಂಥ ಗಂಡಾಂತರದಿಂದ ಪಾರಾದರು.

ಕಟ್ಟಿಕರಣಂಗಳನು ಮೆಟ್ಟಿಪಡ್ರಿಪುಗಳನು
ಸುಟ್ಟು ದುರ್ವ್ಯಸನ ಸಾಧನೆಯ ಶ್ರೀಗಿರಿಯ
ತುಟ್ಟುತುದಿಮುಟ್ಟು ಪೂರ್ಣಜ್ಞ॥

ಷಡಕ್ಷರ ಕವಿ ಹೇಳಿದಂತೆ, ಆ ಶ್ರೀಗಿರಿಯನ್ನು ಪೂರ್ಣಜ್ಞ ಏರಿ ತುಟ್ಟ ತುದಿಯನ್ನು ಮುಟ್ಟಬೇಕಾಗಿದೆ. ಸಮಾಜೋದ್ಧಾರಕಾರ್ಯ ಇನ್ನು ಅವರಿಂದ ನಡೆಯಬೇಕಾಗಿದೆ. ಅಂತೇ ನಮ್ಮೊಡನಿದ್ದಾರೆ.

ಪೂರ್ಣಜ್ಞರು ಸಮಾಜವನ್ನು ಹೇಗೆ ಕಂಡಿದ್ದಾರೆ, ಪ್ರತಿಸ್ಪಂದಿಸಿದ್ದಾರೆ, ಅನುಭವಿಸಿದ್ದಾರೆ, ಜಗದ್ಗುರುವಿನಂಥ ಹಿರಿಪದವಿಯಲ್ಲಿ ಇದ್ದುಕೊಂಡು ಹೇಗೆ ಸಮಾಜ ತಿದ್ದುವದಕ್ಕೆ ಮಾರ್ಗದರ್ಶನ ಮಾಡಿದ್ದಾರೆ ಎಂಬೆಲ್ಲ ಅಂಶಗಳನ್ನು ಅರಿತುಕೊಳ್ಳುವದಕ್ಕಾಗಿ ಇದುವರೆಗೆ ಅವರ ವಚನಮಣಿರತ್ನರಾಶಿಗಳನ್ನು ಕೆದಕಿ ಬೆದಕಿ ನೋಡಿದ್ದಾಯಿತು. ಈ ವಚನಗಳಲ್ಲಿ ಅವರು ಧರ್ಮೋಪದೇಶಕರಾಗಿದ್ದಾರೆ, ಸಮಾಜ ಸುಧಾರಕರಾಗಿದ್ದಾರೆ, ನೀತಿಬೋಧಕರಾಗಿದ್ದಾರೆ, ಸಾಂಸಾರಿಕರ ರಸವಿರಸಗಳನ್ನು ತಾದಾತ್ಮ್ಯದಿಂದ ಹಂಚಿಕೊಂಡಿದ್ದಾರೆ. ದೇಶದ, ನಾಡಿನ, ಸಮಾಜದ ಲೇಸನ್ನೇ ಬಯಸುವ ರಸಋಷಿಯಾಗಿ ರಾರಾಜಿಸಿದ್ದಾರೆ.

ಇವರಿಂದ ಇನ್ನೂ ವಚನಗಳು ಕ್ರಮಬದ್ಧವಾಗಿ ಪುಂಖಾನು ಪುಂಖವಾಗಿ ಬರುತ್ತಲೇ ಇರುವದು ಸಂತಸದ ಸಂಗತಿ. ಈಗಾಗಲೇ ೧೪೦೦ ಕ್ಕೂ ಮಿಕ್ಕಿ ವಚನಗಳನ್ನು ಬರೆದಿದ್ದಾರೆ. ಇನ್ನೂ ಬರೆಯುತ್ತಿದ್ದಾರೆ ಎಂದ ಮೇಲೆ ಹೀಗೆ ಒಂದು ಮಿತಿಯನ್ನು ಹೇಳುವದು ಸರಿಯಲ್ಲ ಎನಿಸುತ್ತದೆ. ಈ ವಚನಗಳು ಪರಂಜ್ಯೋತಿ ಮಾಸಪತ್ರಿಕೆಯಲ್ಲಿ, ಇತರ ನಿಯತಕಾಲಿಕಗಳಲ್ಲಿಯೂ, ಪ್ರಕಟವಾಗುತ್ತಲಿವೆ. ಪೂರ್ಣಜ್ಞರ ಷಷ್ಟ್ಯಬ್ದಿ ಸಮಾರಂಭದ ಕಾಲಕ್ಕೆ ಗ್ರಂಥರೂಪದಲ್ಲಿ ಪ್ರಕಟವಾಗಲೂ ಬಹುದು. ಪೂರ್ಣಜ್ಞರು ತಮ್ಮ ವಚನಗಳನ್ನು ಬರೆದಿಡುವಲ್ಲಿ ಯಾವದೊಂದು ಶಿಸ್ತಿಗಿಂತ ತಮ್ಮ ಸ್ಫೂರ್ತಿಯನ್ನೇ ಹೆಚ್ಚಾಗಿ ಅವಲಂಬಿಸಿರುವದರಿಂದ, ಇವರ ವಚನಗಳಲ್ಲಿ ವಿಷಯ ವೈವಿಧ್ಯ ಪ್ರಪಂಚದಷ್ಟೇ ವಿಶಾಲವಾಗಿದ್ದರೂ ಒಂದು ವ್ಯವಸ್ಥೆ ಇಲ್ಲದೆ ಚಲ್ಲಾಪಿಲ್ಲಿಯಾಗಿದೆ ಎಂದೆನಿಸುತ್ತವೆ. ಈ ವಚನಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸುವಾಗ ಆ ಆ ವಿಷಯಗಳ ಪ್ರಕಾರ ಇವನ್ನು ವರ್ಗೀಕರಿಸುವದು ಸಾಧ್ಯವೇ ಎಂಬುದನ್ನು ವಿಚಾರಿಸಬೇಕಾದುದು ಉಚಿತ. ಹಾಗಾದಲ್ಲಿ ಅಮೃತ ರಸಾಯನವಾದೀತು. ಈಗಿದ್ದಂತೆ ಇದ್ದರೂ ವಾಚಕರ ಕುತೂಹಲ ಕೆರಳಿಸುವಲ್ಲಿ ಏನೂ ಹಿಂದೆ ಬೀಳಲಾರವು. ಇಡೀ ಪ್ರಪಂಚವನ್ನೇ ಎತ್ತಿ ತೋರಿಸುತ್ತಿವೆ ಈ ವಚನಗಳು!

# ಸರ್ವಜ್ಞ ಮತ್ತು ಪೂರ್ಣಜ್ಞ
## ಒಂದು ತೌಲನಿಕ ದೃಷ್ಟಿ

ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ; ಧಾರವಾಡ: ೩

ಡಾ|| ದೇವೇಂದ್ರಕುಮಾರ
ಸಿ. ಹಕಾರಿ

ಮೌಖಿಕ ಪರಂಪರೆಯ ಜನಪದ ಸಾಹಿತ್ಯ ಮತ್ತು ಲಿಖಿತ ಪರಂಪರೆ ಬಂಧ ಬಳಿಕ ಸೃಷ್ಟಿಗೊಂಡ ಶಿಷ್ಟಪದ ಸಾಹಿತ್ಯದ ಕೊಳುಕೊಡೆಗಳು ನಿರಂತರವಾಗಿ ನಡೆದು ಬಂದಿವೆ. ಶಿಷ್ಟಪದ ಸಾಹಿತ್ಯ ತನ್ನ ಮೇಲೆ ತಾನೇ ಹಾಕಿಕೊಂಡ ನಿಬಂಧನೆಗಳಿಂದಾಗಿ ಅಥವಾ ತಾನೇ ನಿರ್ಮಿಸಿಕೊಂಡ ಸಿದ್ಧ ಚೌಕಟ್ಟುಗಳಿಂದಾಗಿ ಸತ್ವಹೀನವಾದಾಗ ಮತ್ತೆ ಜನಪದ ಸಾಹಿತ್ಯದ ವಿವಿಧರೂಪ ಪ್ರಕಾರಗಳಿಂದ ಪ್ರೇರಣೆ ಪಡೆದು ಹೊಸ ಸ್ವರೂಪದ ಸೃಜನಕ್ಕೆ ಕಾರಣವಾಗುವುದು ಪ್ರೇರಕವಾದುದು ಸಾಹಿತ್ಯ ಪ್ರಪಂಚದಲ್ಲಿ ಹೊಸಮಾತಲ್ಲ. ಚಂಪೂ, ಷಟ್ಪದಿ, ರಗಳೆ, ಸಾಂಗತ್ಯ ಕಂದ, ವಚನಪ್ರಕಾರಗಳು ಒಂದು ನಿಟ್ಟಿನಲ್ಲಿ ರೂಪಗೊಂಡು ಕಾವ್ಯ ಪರಂಪರೆಯನ್ನು ನಿರ್ಮಿಸುತ್ತಿದ್ದರೆ, ಇದಾವುದರ ಕಡೆಗೆ ವಿಶೇಷ ಗಮನಕೊಡದೆ, ವಾಸ್ತವ ಜೀವನಾನುಭವದ ಕುಲುಮೆಯಿಂದ ಸಿಡಿದ ವಿಸ್ಫುಲಿಂಗಗಳಂತೆ ನಡೆದುದೇ ದಾರಿ ಎನ್ನುವ ಕಾಡಾನೆಯ ಗಮನದಂತೆ, ಮುಡಿವವರ ಮುಖ ನೋಡದೆ, ಕತ್ತರಿಯಾಡದ ದಟ್ಟ ಅರಣ್ಯದ ಹೃದಯವನ್ನು ಘಮ ಘಮಿಸುತ್ತ ಅರಳುವ ಜಲ್ಲಿ ಜಲ್ಲಿ ಹೂಗಳಂತೆ ಜನಪದ ಸಾಹಿತ್ಯ ತನ್ನ ಪಾಡಿಗೆ ತಾನು ಅನಿರ್ಬಂಧಿತವಾಗಿ ಪ್ರವಹಿಸುತ್ತ ಬಂದಿತು. ಕನ್ನಡ ಸಾಹಿತ್ಯದ ಅಪೂರ್ವ ಘಟ್ಟವಾದ, ಸಾಹಿತ್ಯೇತರ ಕಾರಣಗಳಿಗಾಗಿ ಮತ್ತು ಅಖಂಡ ಮಾನವ ಕಲ್ಯಾಣದ 'ಸಕಲಜೀವಾತ್ಮರಿಗೆ ಲೇಸ ಬಯಸುವ' ಉದಾತ್ತ ಗುರಿ ಹೊಂದಿದ ವಚನ ಸಾಹಿತ್ಯ ಜನಪದ ಸಾಹಿತ್ಯ ಪರಂಪರೆಯ ಪ್ರಾಣ ಸತ್ವಗಳನ್ನು ಸಮೃದ್ಧವಾಗಿ ಬಳಸಿಕೊಂಡು ಇಡೀ ಕನ್ನಡ ಸಾಹಿತ್ಯಕ್ಕೆ ಒಂದು ಅಪೂರ್ವ ಅನುಭವವನ್ನು ನೀಡಿತು. ಆದರೆ ಕನ್ನಡದ ಜನಪದ ತ್ರಿಪದಿ ಛಂದಸ್ಸು ಅದರ ಲಯಗತ್ತು ಭಾಷಿಕಸತ್ವ, ಆಡುನುಡಿಯ ಸೊಗಡು ಇತ್ಯಾದಿಗಳ ಕಡೆಗೆ ವಚನಕಾರರು ವಿಶೇಷ ಗಮನ ಹರಿಸಲಿಲ್ಲ. ಹರಿಹರ ರಾಘವಾಂಕನಂಥ ಕವಿಗಳು ರಗಳೆ, ಷಟ್ಪದಿಗಳ ರಚನಾಕೌಶಲದಲ್ಲಿ ಜನಪದ ಗೀತೆಗಳ ಲಯ ಛಂದಸ್ಸುಗಳನ್ನು ಬಳಸಿದ್ದರೂ ಆಯಾಕವಿಗಳ ಸೃಜನಾತ್ಮಕ ದೃಷ್ಟಿಧೋರಣೆ ಮತ್ತು ಕಾವ್ಯ ಪ್ರಕಾರಗಳ ವ್ಯಕ್ತಿಗತ ಮನೋಭೂಮಿಕೆಗಳಲ್ಲಿ ತ್ರಿಪದಿ ರಚನೆ ಹುದುಗಿ ಹೋಯಿತು. ಹಲ್ಮಿಡಿಶಾಸನದಿಂದ ಮೊದಲುಗೊಂಡು ಸಾಹಿತ್ಯ ಪರಂಪರೆಯ ವಿವಿಧ ರಚನಾಕಾಲದಲ್ಲಿ ತ್ರಿಪದಿ ಅಲ್ಲಷ್ಟು ಇಲ್ಲಷ್ಟು ರಚನೆಗೊಂಡಿದ್ದರೂ ಪೂರ್ಣ ಪ್ರಮಾಣದ ಅಭಿವ್ಯಕ್ತಿಗೆ ಮೈಕೊಡಲಿಲ್ಲ ಅಥವಾ ಕವಿಗಳು ಅದನ್ನು ಸಮರ್ಥವಾಗಿ ದುಡಿಸಿಕೊಳ್ಳಲಿಲ್ಲ. ಹಾಡುಗಬ್ಬದ ಪರಂಪರೆಯ

ಅನೇಕ ಕವಿಗಳು ತ್ರಿಪದಿಗಳನ್ನು ಬಳಸಿಕೊಂಡಿದ್ದರೂ ನಿಜಗುಣರಿಂದ ಮುಪ್ಪಿನ ಷಡಕ್ಷರಿಯ ವರೆಗೂ ಕೇವಲ ತಾತ್ವಿಕ, ಆಧ್ಯಾತ್ಮಿಕ ಅನುಭಾವಗಳ ಹೊಮ್ಮುಗೆಗೆ ಅದು ಸೀಮಿತವಾಗ ಬೇಕಾಯಿತೆಂದು ತೋರುತ್ತದೆ. ಹಾಡುಗಬ್ಬದ ಪರಂಪರೆಯಲ್ಲಿ ಸಾಮಾಜಿಕ ನೀತಿ ಬೋಧೆ ಆಧ್ಯಾತ್ಮದ ಹಿರಿಮೆ ಇತ್ಯಾದಿಗಳು ವ್ಯಕ್ತಗೊಂಡಿದ್ದರೂ ಅವು ಸಾಮಾಜಿಕ ಬದ್ಧತೆಯ ಗಾಢ ಸಂಬಂಧ ಪ್ರೇರಣೆಗಳನ್ನು ಹೊಂದಲಿಲ್ಲ. ಅಲ್ಲದೆ ಯಾವುದೋ ಮಠ, ಚಾಕಿ, ಶಾಲೆ, ಗುಡಿ ಧಾರ್ಮಿಕ ವೇದಿಕೆಗಳಲ್ಲಿ ಮಾತ್ರ ಹಾಡಲಾದ ಈ ರಚನೆಗಳಿಗೆ ಸಮಾಜವನ್ನು ಎಚ್ಚರಿಸುವ, ಸಾಮಾಜಿಕರಲ್ಲಿ ಪ್ರಶ್ನೆಯನ್ನು ಕುದುರಿಸುವ ಸಂದರ್ಭವೇ ಬರಲಿಲ್ಲ. ವಚನಕಾರರ ಕಾಲದಲ್ಲಿ ಸಾಹಿತ್ಯ ರಚನೆಗೆ ವಿಶಿಷ್ಟ ರೂಪ ಪ್ರಾಪ್ತವಾದದ್ದಕ್ಕೆ ಮತ್ತು ವಚನ ಪ್ರಕಾರ ಜನಸಮುದಾಯದ ನೇರ ಸಂವಹನಕ್ಕೆ ಪ್ರಬಲ ಮಾಧ್ಯಮದಾದುದಕ್ಕೆ ಮುಖ್ಯ ಕಾರಣ ಎರಡು: ಒಂದು; ವಚನಕಾರರು ಸಕಲ ಜೀವಾತ್ಮರಿಗೆ ಲೇಸ ಬಯಸುವ ಸಮಷ್ಟಿ ಕಲ್ಯಾಣದ ಗುರಿ ಹೊಂದಿದ್ದರು. ಎರಡು; ಈ ಧ್ಯೇಯ ಸಿದ್ಧಿಗೆ, ತಮ್ಮ ವ್ಯಕ್ತಿತ್ವ ವಿಕಾಸ, ಆತ್ಮಶುದ್ಧಿ, ಚಾರಿತ್ರ್ಯ ನಿರ್ಮಾಣಗಳನ್ನು ಮೂಲ ಸಾಧನವನ್ನಾಗಿ ಮಾಡಿ ಕೊಂಡಿದ್ದರು. ಅಂದರೆ ಒಂದೆಡೆ ವ್ಯಕ್ತಿಗತ ದೌರ್ಬಲ್ಯಗಳನ್ನು ಮೆಟ್ಟಿ ಆತ್ಮಶಕ್ತಿಯನ್ನು ಆತ್ಮಶುದ್ಧಿಯನ್ನು ಸಂಪಾದಿಸಿಕೊಳ್ಳುವುದು ಮತ್ತು ಅದೇ ನಿಟ್ಟಿನಿಂದ ಮೂಢನಂಬಿಕೆ ಕಂದಾಚಾರ, ಅರ್ಥಶೂನ್ಯ ಆಚರಣೆಗಳಿಂದ ಜಡಗಟ್ಟಿ ಜೀವನ ಮೌಲ್ಯಗಳಿಂದ ವಿಮುಖ ರಾಗಿ ಕಂಗೆಟ್ಟು ಬಳಲುತ್ತಿರುವ ರೋಗಗ್ರಸ್ತ ಸಾಮಾಜಿಕರನ್ನು ಕಂಡು ಕೆರಳಿ, ಖಂಡಿಸಿ, ಜರಿದು ಅವರಿಗೆ ಹೊಸ ದಿಕ್ಕು ತೋರುವ ದಿಟ್ಟನಿಲವು ಮತ್ತು ಎಂಥ ಸಂದರ್ಭದಲ್ಲೂ ತಮ್ಮ ನಿಲವಿನಿಂದ ವಿಚಲಿತರಾಗದ ಬದ್ಧತೆ. ವಚನಕಾರರು ಒಂದು ಬಹುದೊಡ್ಡ ಸಮುದಾಯವಾಗಿ ಈ ಬಗೆಯ ನೂತನ ಸಾಮಾಜಿಕ ಮೌಲ್ಯಗಳ ಶೋಧ ಮತ್ತು ಹೊಸ ಮಾನವ ಸಮಾಜ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದರೆ, ಅವರ ಕಾಲದ ಸುಮಾರು ಐದು ಶತಮಾನಗಳ ಬಳಿಕ ಸರ್ವಜ್ಞ ಅಂಥ ಮಹತ್ತರವಾದ ಹೊಣೆಯನ್ನು ಹೊತ್ತು ಕೊಳ್ಳಬೇಕಾಯಿತು. ಶರಣರು ದಾಸರು ಮಾಡಿದ ಸಾಮೂಹಿಕ ಕಾರ್ಯವನ್ನು ಸರ್ವಜ್ಞ 'ಹಿಂಡಿನಗಲಿದ ಗಜದಂತೆ' ಇಡೀ ಮಾನವ ಸಮುದಾಯದಿಂದ ಸಿಡಿದು ನಿಂತು ಏಕಾಂಗಿ ಯಾಗಿ ನಿರ್ವಹಿಸ ಬೇಕಾಯಿತು. ಕನ್ನಡ ನಾಡಿನ ಸೀಮೆ ಸೀಮೆಗಳನ್ನು ಸುತ್ತಾಡಿದ ಸರ್ವಜ್ಞ ನಾಡಿನ ಮೂಲೆ ಮೂಲೆಯಲ್ಲಿ ಕೇಳಿ ಬರುತ್ತಿದ್ದ ತ್ರಿಪದಿಗಳಿಂದ ಪ್ರಭಾವಿತ ನಾಗಿದ್ದಾನೆ. ಜನಪದರು ಹಾಡುವ ಬೀಸುವ, ಕುಟ್ಟುವ, ಹಂತಿ ಹೊಡೆಯುವ, ಯಾತಿ ಬಲೋೀರಿ ಮುಂತಾದ ಕ್ರಿಯೆಗಳ ಮೂಲಕ ಭೋರ್ಗರೆವ ಹಾಡುಗಳನ್ನು ಕೇಳಿ ರೋಮಾಂಚಿತನಾಗಿದ್ದಾನೆ. ತನ್ನ ಈ ಜಾನಪದ ಬದುಕಿನ ವಿಸ್ತಾರವಾದ ಸಾಹಿತ್ಯಾನುಭವದ ಸಮೃದ್ಧ ಭಂಡಾರವನ್ನು ತನ್ನ ತ್ರಿಪದಿಗಳಲ್ಲಿ ಸೂರೆಗೈದಿದ್ದಾನೆ. ಎಲ್ಲರಿಂದಲೂ ಒಂದೊಂದು ಕಲಿತು ವಿದ್ಯೆಯ ಪರ್ವತವಾದ ಸರ್ವಜ್ಞ ತನ್ನನ್ನು ತಾನು ಕಂಡುಕೊಳ್ಳು ತ್ತಾನೆ; ಪರಿಪರಿಯ ರೀತಿಯಲ್ಲಿ ಆತ್ಮ ವಿಡಂಬನೆ ಮಾಡಿಕೊಳ್ಳುತ್ತ ಆತ್ಮ ಶೋಧದಲ್ಲಿ

ತೊಡಗುತ್ತಾನೆ. ಆತ್ಮ ಶೋಧದ ಕ್ರಿಯೆ ಗಾಢವಾಗುತ್ತ ಹೋಗುತ್ತದೆ; ಆತ್ಮಶೋಧ ಮತ್ತು ಸಮಾಜ ವಿಮರ್ಶೆ ಸಾಮಾಜಿಕ ವಿಡಂಬನೆಗಳು ತೀವ್ರಗೊಳ್ಳುತ್ತವೆ. ಯಾರ ಹಂಗಿಗೂ ಒಳಗಾಗದ ಯಾವ ಕಟ್ಟುಪಾಡುಗಳಿಗೂ ಸಿಲುಕದ, ಯಾವ ಸ್ಥಿತಿಗತಿಗಳಿಗೂ ಒಗ್ಗದ, ಬಗ್ಗದ ನೇರ ನಡೆ, ದಿಟ್ಟ ನುಡಿ ಸರ್ವಜ್ಞನ ಅಂತರ್ಯಕ್ಕೆ ಹೊಸ ಬೆಳಕು ನೀಡುತ್ತವೆ. ಒಳಗಿಂದ ಹೊರಗೆ ನುಗ್ಗುವ ಬೆಳಕಿನಲ್ಲಿ ಮುನ್ನಡೆಯುವ ಸರ್ವಜ್ಞ ತಾನು ಧೀಮಂತ ಅಷ್ಟೇ ಅಲ್ಲ; ಅತಿಸಿರಿವಂತ ಎಂದು ಸಾರುತ್ತಾನೆ.

ಕರದಿ ಕಪ್ಪರವುಂಟು ಹಿರಿದಪ್ಪನಾಡುಂಟು
ಹರನೆಂಬದೈವ ನಮಗುಂಟು ನಮ್ಮಿಂದ
ಸಿರಿವಂತರಾರೊ ಸರ್ವಜ್ಞ.

ಈ ಹಿನ್ನೆಲೆಯಲ್ಲಿ 'ಸರ್ವಜ್ಞ' ಮತ್ತು 'ಪೂರ್ಣಜ್ಞ' ವಚನಗಳ ಒಂದು ತೌಲನಿಕ ಟಿಪ್ಪಣಿಗೆ ಅರ್ಥವಿದೆ.

**'ಸರ್ವಜ್ಞ'–'ಪೂರ್ಣಜ್ಞ'**

ತನ್ನ ವ್ಯಕ್ತಿನಿಷ್ಠ ನೆಲೆಯ ಎಲ್ಲ ಬಗೆಯ ಜೀವನಾನುಭವಗಳನ್ನು ಅಂತಃಸ್ಫೂರ್ತಿ ಪ್ರತಿಭೆಯ ಮೂಸೆಯಲ್ಲಿ ಕರಗಿಸಿ ವಸ್ತುನಿಷ್ಠ ಪಾತಳಿಯಲ್ಲಿ ಎರಕಗೊಳಿಸಿ ಎಲ್ಲೆಂದರಲ್ಲಿ ('ಸರ್ಚ್‌ಲೈಟ್') ಕ್ಷಿಪ್ರಾನ್ವೇಷಕ ದೀಪವನ್ನು ಹಾಯಿಸುತ್ತ ಬಿಡಿ ಬಿಡಿಯಾಗಿ ತನ್ನ ನುಡಿಮುತ್ತುಗಳನ್ನು ಪೋಣಿಸಿ ಮುಕ್ತಕ ಮಾದರಿಯ ತ್ರಿಪದಿಗಳ ಮೂಲಕ ಕನ್ನಡ ಸಾಹಿತ್ಯದ ಕಾವ್ಯ ಪರಂಪರೆಗೆ ಒಂದು ಅಪೂರ್ವ ಪ್ರವಾಹವನ್ನು ತಂದು ಸೇರಿಸಿದ ಸರ್ವಜ್ಞ ತ್ರಿಪದಿ ಪ್ರಕಾರಗಳ ಸೃಷ್ಟಿ ಸಿದ್ಧಿಗೆ ಒಂದು ಉತ್ತುಂಗಶಿಖರವಾದರೆ, ಅದೇ ಪರಂಪರೆಯನ್ನು ಇಪ್ಪತ್ತನೆಯ ಶತಮಾನದಲ್ಲಿ ಮುಂದುವರೆಯಿಸಿದ ಶ್ರೇಯಸ್ಸು 'ಪೂರ್ಣಜ್ಞ' ವಚನಗಳ ಕವಿ ಮೂಜಗಂ ಅವರಿಗೆ ಸಲ್ಲುತ್ತದೆ. ಸರ್ವಜ್ಞ ಮತ್ತು ಪೂರ್ಣಜ್ಞ ವಚನಗಳ ರಚನಾ ಕಾಲದ ಮಧ್ಯಂತರ ಅವಧಿಯಲ್ಲಿ ಹಲವಾರು ಜನ ತ್ರಿಪದಿ ಛಂದಸ್ಸನ್ನು ತಮ್ಮ ಕಾವ್ಯ ಮಾಧ್ಯಮವಾಗಿ ಬಳಸಿಕೊಂಡಿದ್ದಾರೆ. ಅವರಲ್ಲಿ ಅತ್ಯಂತ ಪ್ರಮುಖರು ಜಯದೇವಿತಾಯಿ ಲಿಗಾಡೆ. ಸಾವಿರದ ತಾಯ ಪದಗಳಿಂದ ಮೊದಲುಗೊಂಡು 'ಸಿದ್ಧರಾಮೇಶ್ವರ ಪುರಾಣ' ರಚನೆಯವರೆಗೆ ಕನ್ನಡದ ಪ್ರಾಣವೆನಿಸುವ ತ್ರಿಪದಿಯ ಪ್ರಕಾರವನ್ನು ಸಮರ್ಥವಾಗಿ ಮತ್ತು ಅರ್ಥಪೂರ್ಣವಾಗಿ ದುಡಿಸಿಕೊಂಡ ಹಿರಿಮೆ, ಶಿವಯೋಗಿ ಸಿದ್ಧರಾಮನ ಮನೆಯ ಮಗಳೆನಿಸಿಕೊಂಡ ಕವಯಿತ್ರಿ ಜಯದೇವಿ ತಾಯಿ ಅವರದು. ಈಗ ಕನ್ನಡ ಕಾವ್ಯದ ತ್ರಿಪದಿ ಪರಂಪರೆಯನ್ನು ತಮ್ಮ ಪೂರ್ಣಜ್ಞ ವಚನಗಳ ಮೂಲಕ ಶ್ರೀಮಂತಗೊಳಿಸಿ ಸಮೃದ್ಧಗೊಳಿಸುತ್ತಿರುವ ಘನಮಹಿಮೆ 'ಮೂಜಗಂ' ಅವರದಾಗಿದೆ. 'ಸರ್ವಜ್ಞ' ಮತ್ತು 'ಪೂರ್ಣಜ್ಞ' ವಚನಗಳ ಕವಿದ್ವಯರಿಗೆ ಅನೇಕ ಸಾಮ್ಯಗಳಿವೆ. ಮೇಲು ನೋಟಕ್ಕೆ 'ಎತ್ತಣಿಂದೆತ್ತಣ ಸಂಬಂಧ' ಎಂದು

ಅನಿಸಿದರೂ ರಚನೆಗಳ ರೂಪ, ವಸ್ತು ವೈವಿಧ್ಯ, ಜಟಿಲ ಸಂಕೀರ್ಣಾನುಭವಗಳ ಅಭಿವ್ಯಕ್ತಿ, ಆತ್ಮಶೋಧ, ಸಾಮಾಜಿಕ ಕಳಕಳಿ, ಚಿಂತನಶೀಲ ಗುಣ, ಜೀವನಾನುಕಂಪೆ ಇತ್ಯಾದಿಗಳನ್ನು ಗಮನಿಸುತ್ತ ಹೋದಾಗ 'ಸರ್ವಜ್ಞ' ಪೂರ್ಣಜ್ಞ ಕರ್ತೃಗಳ ಸಾಮ್ಯದ ಆಳ ವ್ಯಾಪ್ತಿಗಳು ಮನದಟ್ಟಾಗುತ್ತವೆ.

ಯಾವ ಮಠ ಪೀಠಕ್ಕೆ ಹೊಂದಿಕೊಳ್ಳದೆ, ನಿರಂಕುಶಮತಿಯಾಗಿ ನಿರ್ಭೀತ ಚೇತನ ನಾಗಿ ಆತ್ಮಶೋಧ ಆತ್ಮಾನ್ವೇಷಣೆಗಳ ಜಾಡಿನಲ್ಲಿ ತನ್ನನ್ನು ವಿಡಂಬಿಸುತ್ತಲೇ ಸಮಾಜದ ದೋಷಗಳ ಬೆನ್ನಿಗೆ ಚಾಟಿಯೇಟು ಕೊಟ್ಟು ಎಚ್ಚರಿಸಿ 'ಲಿಂಗಕ್ಕೆ ದೇಗುಲವೆ ಇಲ್ಲ' ಎಂದು ಸಕಲ ಮಾನವ ಕುಲಕೋಟಿಗೆ ನೀತಿ ಬೋಧೆ ಮಾಡಿದ ಜಗದ ಗುರು ಸರ್ವಜ್ಞನಾದರೆ, ಒಂದು ಮಹಾ ಪರಂಪರೆಯ ಜಗದ್ಗುರು ಪೀಠಕ್ಕೆ ಪೀಠಾಧಿಪತಿಗಳಾಗಿ ಬಂದು, ಮೂಢ ನಂಬಿಕೆ ಕುಲಗೋತ್ರಗಳ ಸೀಮಾರೇಖೆಯಲ್ಲಿ ಬಂಧಿತರಾಗಿ ಉಳಿಯದೆ ಜಾತಿ ಮತ ಪಂಥಗಳ ಗಡಿಗೆರೆಗಳನ್ನು ದಾಟಿ ಮಾನವಕುಲವನ್ನೇ ಪ್ರೀತಿಸುವ, ಮಾನವ ಧರ್ಮವನ್ನೇ ಆರಾಧಿಸುವ ಜಗದ್ಗುರುಗಳ 'ಹಿಂಡನಗಲಿದ ಒಂಟಿಸಲಗದಂತೆ' ತಮ್ಮ ವ್ಯಕ್ತಿತ್ವದ ಘನತೆ ಯಿಂದ, ಸಕಲ ಧರ್ಮ ಸಮನ್ವಯದ ಹರಿಕಾರರಾಗಿ ಎಲ್ಲರ ಮಧ್ಯದಲ್ಲಿದ್ದೂ ಎಲ್ಲರಿಗಿಂತ ಭಿನ್ನರಾಗಿ ಖಂಡ ಖಂಡವಾಗಿರುವ ಮಾನವ ಜೀವನದ ವಾಸ್ತವತೆಯ ಅಂತರಾಳದಲ್ಲಿ ಅಖಂಡತೆಯನ್ನು ಗುರುತಿಸಿದ ಅಪೂರ್ಣತೆಯ ನೆಲೆಗಳಲ್ಲಿ ಪೂರ್ಣತೆಯನ್ನು ಸಾಪೇಕ್ಷ ಗೊಳಿಸಿಕೊಂಡ ದಾರ್ಶನಿಕ 'ಪೂರ್ಣಜ್ಞ'-ಮೂಜಗಂ, ಎಲ್ಲರಿಂದ ಒಂದೊಂದು ನುಡಿಗಲಿತು 'ಸರ್ವಜ್ಞ'ನಾದ ಕವಿ ಸರ್ವಜ್ಞನೆಂಬವನು ಗರ್ವದಿಂದಾದವನೆ ಎಂದು ಕೇಳಿ, ಎಲ್ಲರಿಂದಲೂ ಒಂದೊಂದು ನುಡಿಗಲಿತೆ ಎನ್ನುವ ನಿರಹಂಕಾರ ನಿರ್ಮಮತೆಗಳನ್ನು ಮೆರೆಯುತ್ತಾನೆ. ಅದೇ ರೀತಿ 'ಪೂರ್ಣಜ್ಞನೆಂದೊಡನೆ.... ಪೂರ್ಣ ತುಂಬಿಹುದೆಂದು ಬಗೆಯಬೇಡಿರಿ' ಎಂದು ವಿವರಿಸಿದ ಕವಿ 'ಮೂಜಗಂ' ಸರ್ವಜ್ಞನ ಹಾಗೆಯೇ ಸರ್ವರೊಳಗೊಂದೊಂದು ಅಪೂರ್ವ ನುಡಿಗಲಿತೆ ಎನ್ನುವ ಸದುವಿನಯ ಸಾರುತ್ತಾರೆ. ಈ ಹಂತದಲ್ಲಿ ಎದ್ದು ಕಾಣುವ ಮತ್ತೊಂದು ಅಂಶವೆಂದರೆ ಅಂಕಿತ. 'ಸರ್ವಜ್ಞ' ಎನ್ನುವುದು ಸರ್ವಜ್ಞ ವಚನಗಳ ಕರ್ತೃ ಆಯ್ದುಕೊಂಡ ಅಂಕಿತವಾದರೆ 'ಪೂರ್ಣಜ್ಞ' ಎನ್ನುವುದು 'ಮೂಜಗಂ' ಆವಿಷ್ಕರಿಸಿ ಕೊಂಡ ಅಂಕಿತ. ಶಿವಶರಣರ ವಚನಗಳ ಅಂಕಿತಗಳಾಗಿರಲಿ ಅಥವಾ 'ಸರ್ವಜ್ಞ' ಇತ್ಯಾದಿಗಳ ಅಂಕಿತಗಳಾಗಿರಲಿ ಅವು ಆಯಾ ವಚನಕಾರ ಕವಿಯ ದರ್ಶನ ವಿಶುದ್ಧಿಯ ಸಂಕೇತ. ಒಂದು ಅರ್ಥದಲ್ಲಿ ಅಂಕಿತ ಆಯಾ ವ್ಯಕ್ತಿಯ ದಿವ್ಯಾನುಭವದಿಂದ ಪ್ರೇರಿತ ವಾದ ಅಂತಃಸ್ಫುರಿತ ಮುದ್ರಿಕೆ. 'ಸರ್ವಜ್ಞ' ಅಂಕಿತ ಎಲ್ಲವನ್ನೂ ತಿಳಿದವ ಎಂದು ವಾಚ್ಯಾರ್ಥವಿದ್ದರೂ ಅದು ಅಂತರಂಗದಲ್ಲಿ ಆವಿಷ್ಕರಿಸಿದ ಸ್ವಯಂಜ್ಯೋತಿಗೆ ಸಂಕೇತ ಎನ್ನುವುದರ ಧ್ವನಿ ಎಲ್ಲವನ್ನೂ ತಿಳಿದಿರಬಹುದು. ಆದರೆ ಅದು ಪೂರ್ಣತೆಯ ಅರಿವು ಆಗದೆ ಇರಬಹುದು. ಅರಿವಿಗೆ ಸೀಮೆಗಳಿಲ್ಲ; ಹಾಗೆ ಪೂರ್ಣತೆಗೂ ಅಂತ್ಯವಿಲ್ಲ. ಎಷ್ಟು ಕೂಡಿಸಿ ಕಳೆದರೂ 'ಪೂರ್ಣಮೇವ ಅವಶಿಷ್ಯತೆ' ಪೂರ್ಣತೆಯೇ ಉಳಿದಿರುತ್ತದೆ.

ಕಾರಣ 'ಸರ್ವಜ್ಞ' ಎನ್ನುವುದು ಎಲ್ಲ ಅರಿವಿನ ಸೀಮೆಗಳನ್ನು ನಿರ್ದೇಶಿಸುತ್ತದೆ. ಆದರೆ ಪೂರ್ಣಜ್ಞ ಎನ್ನುವ ಅಂಕಿತ ಪೂರ್ಣತೆಯ ಅರಿವಿನ ನುಡಿಯಾದರೂ ಕವಿಯೇ ಹೇಳುವಂತೆ ಇದು 'ಪೂರ್ಣಕ್ಕೆ ಪಥವು.' ಅಂದರೆ ಪೂರ್ಣತೆ ಎನ್ನುವುದು ನಿರಂತರ ಸಾಧನೆ. ಪೂರ್ಣಜ್ಞನ ವಚನಗಳು ಆ ಪಥದ ಜ್ಯೋತಿ. ಈ ಹಂತದಲ್ಲಿ ಸಾಹಿತ್ಯ ಕೃಷಿ ಮಾಡಿದ ಕವಿ ಸಹೃದಯಿ, ಮೂಜಗಂ ಅನುಭಾವಿಯಾಗುತ್ತಾರೆ; ಅನುಭಾವ ಕವಿಯಾಗಿ ತಮ್ಮ ಅಂತರಂಗದ ಅಗಣಿತ ಸಂವೇದನೆಗಳಿಗೆ ತ್ರಿಪದಿಯ ರೂಪ ಕೊಟ್ಟು 'ಬಿಡಿ'ಯಲ್ಲಿ 'ಇಡಿ'ಯನ್ನು ಹಿಡಿದಿಡುವ ಕಾವ್ಯಕ್ರಿಯೆಯಲ್ಲಿ ಲೀನರಾಗುತ್ತಾರೆ. 'ಖಂಡ'ದಲ್ಲಿ 'ಅಖಂಡ'ವನ್ನು, ವ್ಯಷ್ಟಿಯಲ್ಲಿ ಸಮಷ್ಟಿಯನ್ನು ದರ್ಶಿಸುವ ವಿಶಿಷ್ಟ ಅನುಭೂತಿಯ ಆವಿಷ್ಕಾರಕ್ಕೆ ಕಾರಣರಾಗುತ್ತಾರೆ. ಇಂಥ ಅನುಭಾವಿ ಕವಿಗೆ ಪೂರ್ಣಜ್ಞನ ವಚನ ಸೃಷ್ಟಿಯ ಒತ್ತಾಸೆಗಳು ಕವಿಯೇ ವಿವರಿಸುವಂತೆ:

ಹುಚ್ಚು ಹಿಡಿಯಿತು ಮತ್ತೆ ಸ್ವಚ್ಛ ಕೃತಿ ರಚಯಿಸಲು
ಬಿಚ್ಚುಮನದಿಂದ ನೈಜಾನುಭವ! ರಸದೂ
ಳಚ್ಚೊತ್ತಿದಂತೆ ಪೂರ್ಣಜ್ಞ.

ಸ್ವಚ್ಛ ಕೃತಿ ರಚನೆಯ ಹಂಬಲ. ಬಿಚ್ಚುಮನ, ನೈಜ ಅನುಭವ ಇದೆಲ್ಲ ಕೂಡಿ ಹೃದಯದಲ್ಲಿ ಹೊಮ್ಮಿದ ಸೆಲೆ–ಅನುಭಾವರಸ, ಕವಿಯಾದವನನ್ನು ಒಂದು ಅರ್ಥದಲ್ಲಿ 'ಹುಚ್ಚ'ನೆಂದು ಕರೆಯಬಹುದು. ಇಷ್ಟೆಲ್ಲ ಇದ್ದು ಇವುಗಳಿಗೆ ಕಿರೀಟಪ್ರಾಯವಾಗಿ ತಾನು ತನ್ನ ಅನುಭವಗಳನ್ನು ಅನಿಸಿಕೆಗಳನ್ನು ಹೇಳದೆ ಇರಲಾರೆ. ಹೇಳದಿದ್ದರೆ ಹುಚ್ಚೇ ಹಿಡಿದೀತು ಅಥವಾ ಹೇಳಿ ಬಿಡಲೇಬೇಕು ಎನ್ನುವ ಗಾಢವಾದ ಹಂಬಲ, ಸಂವೇದನೆಯ ಒತ್ತಡಗಳು ವ್ಯಕ್ತಿಯಲ್ಲಿ ಮೈಗೂಡಿಬರಬೇಕು. ಅಂಥ ಆಂತರಿಕ ಕ್ರಿಯೆ ಪೂರ್ಣಜ್ಞ ವಚನ ರಚನೆಗೆ ಪ್ರೇರಣೆ. ಕವಿಯೇ ಹೇಳುವಂತೆ 'ಹುಚ್ಚು ಹಿಡಿಯಿತು....'ಆಗ ಅನುಭಾವ ರಸದಲ್ಲಿ ಅಚ್ಚೊತ್ತಿದ ನುಡಿಗಳಾಗಿ ಹೊಮ್ಮಿದ್ದು 'ಪೂರ್ಣಜ್ಞ' ವಚನಗಳು.

ಪೂರ್ಣಜ್ಞ ವಚನ ರಚನೆಗೆ ಪ್ರೇರಕವಾದ ಅಂಶಗಳು ಮತ್ತು ಆ ವಚನಗಳ ಗುರಿ 'ಮೂಜಗಂ' ಚಿತ್ತದ ಪಾತಳಿಯಲ್ಲಿ ಸ್ಪಷ್ಟವಾಗಿ ಮೂಡಿವೆ. ಲೋಕವೇ ಶಿಕ್ಷಣ ಶಾಲೆಯಾಯಿತು. ಈ ಶಾಲೆ ಪ್ರಪಂಚದ ಸಕಲ ಮುಖದ ಅನುಭವಗಳನ್ನು ಕಲಿಸಿತು. ಅನುಭವದ ಸಾರ ಹಳಕುಗಟ್ಟಿ ನುಡಿಗಳಲ್ಲಿ ಹೊಮ್ಮಿತು. ಮೃದು ವಚನಗಳೇ ಸಕಲ ಜಪಂಗಳು ಎನ್ನುವ ಶರಣ ಪರಂಪರೆಯ ಹರಿಕಾರ ಮೂಜಗಂ ಸಿಹಿಮಾತು ಸರಿ. ಆದರೆ ಅದರಲ್ಲಿ ಕೃತಕ ಬೆರೆತಿದ್ದರೆ ಅದು 'ಕಹಿ–ಕಾಳಕೂಟ' ಎಂದು ಎಚ್ಚರಿಸುತ್ತಾರೆ. 'ಪೂರ್ಣಜ್ಞ'ನ ವಚನಗಳು ಸರ್ವಜ್ಞನ ವಚನಗಳಂತೆ ಆತ್ಮ ಶೋಧ, ಆತ್ಮ ವಿಮರ್ಶೆ, ಸಾಮಾಜಿಕ ಕಳಕಳಿ, ಸಮಾಜ ವಿಡಂಬನೆ ಮುಂತಾದ ಕೆಲವು ಸಾಮ್ಯ ಗುಣಗಳನ್ನು ವಿವರಿಸುತ್ತಲೇ ಸರ್ವಜ್ಞನಿಗಿಂತ ಭಿನ್ನವಾದ ನೆಲೆಯಲ್ಲಿ ಜೀವನ ಮೌಲ್ಯಗಳ ಅನ್ವೇಷಣೆ ಅನುಸಂಧಾನ ನಡೆಸುತ್ತವೆ. ಇದು ಬಹುಶಃ ಸಮಕಾಲೀನ ಜೀವನದ ನಿಕಟ ಸಂಪರ್ಕ

ಮತ್ತು ನಿರೀಕ್ಷಣೆಗಳ ಫಲವಾಗಿರಬೇಕು. ವಿಜ್ಞಾನದ ಅನ್ವೇಷಣೆ–ಸಾಧನೆಗಳು ರಭಸದಿಂದ ಬೆಳೆದುವು ನಿಜ; ಆದರೆ ಅವು ಮಾನವ ಸಮುದಾಯದ ಸಮಷ್ಟಿ ಪ್ರಜ್ಞೆಗೆ ಮತ್ತು ಮಾನವ ಕಲ್ಯಾಣದ ಉದಾತ್ತ ಗುರಿಗೆ ಪೂರಕವಾಗಿವೆಯೇ? ಇಲ್ಲ.

‘ವಿಜ್ಞಾನ ಬೆಳೆದಂತೆ ಸುಜ್ಞಾನ ಬೆಳೆದಿಲ್ಲ
ವಿಜ್ಞಾನ ಸುಜ್ಞಾನ ಮಿಲನದೊಳೆ ಜಗದ
ಉಜ್ವಲ ಭವಿಷ್ಯ ಪೂರ್ಣಜ್ಞ.’

ಮಾನವ ಕುಲಕೋಟಿಯ ಭವಿಷ್ಯ ಉಜ್ವಲವಾಗಬೇಕಾದರೆ ವಿಜ್ಞಾನ ಮತ್ತು ಅದನ್ನು ಮಾನವ ಕಲ್ಯಾಣಕ್ಕೆ ಬಳಸುವ ಉನ್ನತ ಜ್ಞಾನ ‘ಸುಜ್ಞಾನ’ ಅಗತ್ಯ. ವಚನ ಸಾಹಿತ್ಯದ ಬಳಿಕ ತುಂಬ ನಿಷ್ಠುರಿಯಾಗಿ ಕಾಣುವ ಸರ್ವಜ್ಞ, ಸಮಾಜವನ್ನು–ಅಲ್ಲಿ ಕಾಣುವ ದೌರ್ಬಲ್ಯಗಳನ್ನು ಖಂಡ ಖಂಡವಾಗಿ–ತುಂಡರಿಸುತ್ತ–ಖಂಡಿಸುತ್ತಾನೆ. ಆದರೆ ‘ಪೂರ್ಣಜ್ಞ’ ಅದನ್ನೇ ಹೆಚ್ಚು ವಾತ್ಸಲ್ಯದಿಂದ ಕನಿಕರದಿಂದ ವಿವರಿಸುತ್ತಾನೆ. ಅದಕ್ಕೆ ಪ್ರತಿಯೊಬ್ಬನೂ ತನ್ನನ್ನು ತಾನು ಪರಿಶುದ್ಧಗೊಳಿಸುವ ಕ್ರಿಯೆಯುಲ್ಲಿ ತೊಡಗಬೇಕು. ಆಗ ಜೀವನ ಶ್ರದ್ಧೆ ಕಾವ್ಯ ಶ್ರದ್ಧೆ ಪರಸ್ಪರ ಎರಕಗೊಂಡು ಪೂರ್ಣಜ್ಞನ ವಚನ ರೂಪುಗೊಳ್ಳುತ್ತವೆ.

‘ದುರ್ಗುಣಂಗಳ ಕಿತ್ತಿ, ಸದ್ಗುಣಂಗಳ ಬಿತ್ತಿ
ಹೃದ್ಗುಣದ ಸುಗ್ಗಿ ಮಾಡಿದರೆ ಈ ಜಗವೆ
ಸ್ವರ್ಗ ತಾನಕ್ಕು ಪೂರ್ಣಜ್ಞ.’

ಸರ್ವಜ್ಞನ ವಚನ ಮತ್ತು ಪೂರ್ಣಜ್ಞನ ವಚನಗಳಲ್ಲಿ ಕಾಣುವ ಮತ್ತೊಂದು ಮಹತ್ವದ ಸಾಮ್ಯ ಗುಣವನ್ನು ಎತ್ತಿ ಹೇಳುವುದು ಅಗತ್ಯವೆನಿಸುತ್ತದೆ. ಆತ್ಮ ಶೋಧ, ಆತ್ಮ ವಿಡಂಬನೆ, ಸಾಮಾಜಿಕ ವಿಡಂಬನೆ, ಜನ ಸಮುದಾಯದಲ್ಲಿ ಕಾಣುವವ ಮೌಢ್ಯ ಅಜ್ಞಾನಗಳ ಖಂಡನೆಗಳಿಂದ ಮೊದಲುಗೊಂಡು ಆಧ್ಯಾತ್ಮಿಕ ಅನುಭವ ಅಮೂರ್ತ ವಸ್ತು ಸಂಗತಿಗಳ ಅನುಸಂಧಾನ ಅನುಭಾವಗಳವರೆಗೆ ಈ ಇಬ್ಬರ ವಚನಗಳೂ ತಮ್ಮ ವ್ಯಾಪ್ತಿಯನ್ನು ಪಡೆದುಕೊಳ್ಳುತ್ತವೆ.

‘ಅಳುಸದಿರು ಶಿವಭಕ್ತ ಹುಲುಸುಂಟು ನಿಮ್ಮಾಣೆ’ ಎಂದು ಮುಂತಾಗಿ ಸರ್ವಜ್ಞ ಸಾರುತ್ತಾನೆ.

‘ಭಕ್ತಿ ಶಕ್ತಿಯ ಮುಂದೆ ಯುಕ್ತಿ ತಂತ್ರಗಳೇನು?’ ಎಂದು ಸಾರಿದ ಪೂರ್ಣಜ್ಞ, ‘ಭಕ್ತಿ ಜ್ಞಾನ ಕ್ರಿಯೆ’ ಈ ಮೂರೂ ಶಕ್ತಿಗಳ ಸಂಗಮ ಜೀವನಕ್ಕೆ ಸಾರ್ಥಕತೆಯನ್ನು ತುಂಬುತ್ತದೆ ಎನ್ನುವುದನ್ನು ವಿವರಿಸುತ್ತಾನೆ.

ಸ್ತ್ರೀಯ ಶಕ್ತಿ ಅಪರಿಮಿತ. ಅವಳ ನಾನಾ ರೂಪಗಳಿದ್ದರೂ ಎಲ್ಲ ರೂಪ ಮತ್ತು ಹಂತಗಳಲ್ಲಿ ಒಲುಮೆಯೇ ಮುಖ್ಯ. ಒಲುಮೆಯಿಂದ ಮಾತ್ರ ಸ್ತ್ರೀ ಶಕ್ತಿಯನ್ನು ಪುರುಷ

ಜೀವನಕ್ಕೆ ಪ್ರಯೋಜನಕಾರಿಯಾದ ರೀತಿಯಲ್ಲಿ ಸಂಯೋಜಿಸಿಕೊಳ್ಳಲು ಸಾಧ್ಯ. ಇಲ್ಲ ವಾದರೆ ಆ ಶಕ್ತಿ ಜೀವನಕ್ಕೆ ಪೂರಕ ಪ್ರೇರಕ ಪೋಷಕವಾಗುವುದರ ಬದಲು ಮಾರಕ ವಾಗುತ್ತದೆ. ಈ 'ಸ್ತ್ರೀ ಶಕ್ತಿ' ಕುರಿತ ವಿವೇಚನೆ ಸರ್ವಜ್ಞನ ವಚನಗಳಲ್ಲಿ ಹೀಗೆ ಬರುತ್ತದೆ.

ಬಿಲ್ಲು ಬಲ್ಲಿತು ನಾರಿ, ಬಿಲ್ಲಿಂದೆ ಕಡು ಸಣ್ಣ
ಬಿಲ್ಲನೆ ಮರಳಿ ಎಱಗಿಸಿತು ನಾರಿಯಿಂ
ಬಲ್ಲಿದವರಾರು ಸರ್ವಜ್ಞ.

ಈ ವಿವೇಚನೆ ಪೂರ್ಣಜ್ಞನ ವಚನಗಳಲ್ಲಿ ಈ ಕೆಳಗಿನ ರೂಪಪಡೆದಿದೆ. 'ಮುನಿದರೆ ಮಾರಿ ಒಲಿದರೆ ನಾರಿ' ಎನ್ನುವ ಪಾರಂಪರಿಕ ಭಾವನೆಯನ್ನೇ ಎತ್ತಿಕೊಂಡ ಈ ಪದ್ಯ ಸರ್ವಜ್ಞನ ವಚನದಲ್ಲಿ 'ನಾರಿಯಿಂ ಬಲ್ಲಿದವರಾರು?' ಎನ್ನುವ ಪ್ರಶ್ನೆಗೆ ತುಂಬ ಅರ್ಥ ಪೂರ್ಣ ಉತ್ತರ ಕೊಡುತ್ತದೆ.

'ಹೆಣ್ಣು ಮುನಿದರೆ ಮಾರಿ। ಹೆಣ್ಣು ಒಲಿದರೆ ನಾರಿ'
ಹೆಣ್ಣರಿತುಕೊಂಡಲ್ಲಿ ಪರಮ ಉಪಕಾರಿ
ಬಣ್ಣನೆಗೆ ಮೀರಿ ಪೂರ್ಣಜ್ಞ'

'ನಾರಿಯಿಂ ಬಲ್ಲಿದವರಾರು?' ಎನ್ನುವ ಉತ್ತರದಿಂದ ಕೂಡಿದ ಪ್ರಶ್ನೆ ಸರ್ವಜ್ಞನದು. ಆದರೆ ಪೂರ್ಣಜ್ಞ ಒಂದುಹೆಜ್ಜೆ ಮುಂದೆ ಹೋಗುತ್ತಾನೆ. ಹೆಣ್ಣನ್ನು ಅರಿತು ನಡೆಯ ಬೇಕು. ಅವಳನ್ನು ಅರಿಯುವುದು ಅಂದರೆ ಅವರ ಮನಸ್ಸಿನ ಪರಿಯನ್ನು ಅರ್ಥ ಮಾಡಿ ಕೊಳ್ಳುವುದು. ಬಾಲಕಿ–ಮಗಳು–ಯಿಂದ ಮೊದಲುಗೊಂಡು ಯುವತಿ–ತಂಗಿ ಅಕ್ಕ ನಾದಿನಿ–ಇತ್ಯಾದಿ ಪತ್ನಿ, ತಾಯಿಯುವರೆಗೆ ಹೆಣ್ಣಿನ ಮನಸ್ಸನ್ನು ಅರಿತು ನಡೆದರೆ, ಅವಳು ಎಲ್ಲ ಹಂತದಲ್ಲೂ ಪುರುಷ ಜೀವನಕ್ಕೆ ಪರಮ ಉಪಕಾರ ಮಾಡುವ ಶಕ್ತಿ ಹೊಂದಿರುವುದ ರಿಂದ ಒಂದು ಮುಖ್ಯಶಕ್ತಿಯಾಗಿ ಸಂಜೀವಿನಿಯಾಗಿ ನೆರವು ನೀಡುತ್ತಾಳೆ; ಪ್ರೀತಿಯ ಅಮೃತಧಾರೆ ಸುರಿಸುತ್ತಾಳೆ. ಅದು 'ಬಣ್ಣನೆಗೆ ಮೀರಿ' ಜರುಗುತ್ತದೆ. ಇದು 'ಪೂರ್ಣಜ್ಞ' ವಚನಗಳ ವೈಶಿಷ್ಟ್ಯ.ಮೇಲುನೋಟಕ್ಕೆ 'ಬಿಲ್ಲು' 'ನಾರಿ' ಇತ್ಯಾದಿ ಉಪಮೆ ಗಳ ಸಾದೃಶ್ಯ ಸಂಗತಿಗಳ ಬಳಕೆಯಿಂದ ಸರ್ವಜ್ಞನ ಮೇಲಿನ ವಚನ ಹೊರ ನೋಟಕ್ಕೆ ಕಾವ್ಯಮಯವಾಗಿ ತೋರಿದರೂ ಅದರಾಚೆಗಿನ ಆಳಕ್ಕೆ, ತಾತ್ವಿಕ ವಿಶ್ಲೇಷಣೆಗೆ ತಲಸ್ಪರ್ಶಿ ವಿವೇಚನೆಗೆ ಇಳಿಯುವಲ್ಲಿ ಸಫಲವಾಗುವುದಿಲ್ಲ. ಆದರೆ 'ಪೂರ್ಣಜ್ಞ'ನ ವಚನ ಅಂಥ ತಾತ್ವಿಕ ಆಳವನ್ನು ಸ್ಪರ್ಶಿಸುತ್ತದೆ.ಇದು ಪೂರ್ಣಜ್ಞ ವಚನಗಳ ಹಿರಿಮೆಗೆ ಸಾಕ್ಷಿಯಾದೀತು.

'ಮೂರ್ಖಂಗೆ ನೂರ್ಕಾಲ ಬುದ್ಧಿಯನು ಹೇಳಿದರೆ'............ಇತ್ಯಾದಿ ವಚನ 'ಗೋರ್ಕಲ್ಲ ಮೇಲೆ ಮಳೆಯು ಸುರಿದಂತೆ' ಎಂದು ಒಂದು ಶಬ್ದ ಚಿತ್ರ ಕೊಡುವಲ್ಲಿ ಸರ್ವಜ್ಞನ ವಚನ ತೃಪ್ತಿ ಪಡೆಯುತ್ತದೆ. ಅದೇ ಮಾತನ್ನು ಪೂರ್ಣಜ್ಞನ ವಚನ ಹೆಚ್ಚು ಕಾವ್ಯಮಯವಾಗಿ ವಿವರಿಸುತ್ತದೆ.

'ಜಲದಿಂದ ಬೆಣ್ಣೆಯನು ಮಳಲಿನಿಂದೆಣ್ಣೆಯನು
ಹಿಳಿದು ಪಡೆದೆಂದು ಶತಮೂರ್ಖ ಮನುಜನಿಗೆ
ತಿಳಿವಳಿಕೆ ಬಹುದು ಪೂರ್ಣಜ್ಞ '

ಮೂರ್ಖನಿಗೆ ದಾರಿ ಸಿಗದು-ಸತ್ಪಥ-ಆಕಸ್ಮಾತ್ ಅವನು ದಾರಿಗೆ ಬಂದಿದ್ದಾನೆ ಎಂದರೆ ಅದು ಪ್ರಪಂಚದ ಅದ್ಭುತಗಳಲ್ಲಿ ಒಂದಾಗಬಹುದು. ಅದಕ್ಕೆ ಪೂರ್ಣಜ್ಞ ಕೊಡುವ ಒಂದು ಶಬ್ದ ಚಿತ್ರತುಂಬ ಅರ್ಥಪೂರ್ಣ ಮತ್ತು ಅಷ್ಟೇ ಸಾಂಕೇತಿಕ. ಪೂರ್ಣಜ್ಞ ನೀಡುವ ಉಪಮಾನ ಉಪಮೇಯಗಳು ಮತ್ತು ಈ ಹೋಲಿಕೆಗಳಿಂದ ಹೊಮ್ಮುವ ಅರ್ಥ, ಧ್ವನಿಗಳು ಈ ರಚನೆಯನ್ನು ಓದುತ್ತಿದ್ದಂತೆ ನಮ್ಮೆದುರು ಅಭಿನೀತಗೊಳ್ಳುತ್ತವೆ.

ಸೂಜಿಕಣ್ಣೊಳಗಿಂದ ತೇಜಿ ಹೊರ ಬಂದರದು
ಸೋಜಿಗವು ಅಲ್ಲ! ಮೂರ್ಖ ದಾರಿಗೆ ಬರಲು
ಸೋಜಿಗವು ಜಗದಿ! ಪೂರ್ಣಜ್ಞ.

ಒಂದುಕಡೆ ಸೂಜಿ-ಸೂಜಿಯ ಕಣ್ಣು ಮತ್ತೊಂದು ಕಡೆ ತೇಜಿ-ತೇಜಿಯು ಸೂಜಿಯ ಕಣ್ಣೊಳಗಿಂದ ಹಾಯ್ದು ಹೊರಬರುವ ಕ್ರಿಯೆ. ತುಂಬ ಉಪಯುಕ್ತ ಮತ್ತು ವಿರೋಧ ವಸ್ತುಗಳಿಂದ ಸಮಾವಿಷ್ಟವಾದ ಒಂದು ನಾಟ್ಯಾನುಕೃತಶೈಲಿ ಅಭಿನೀತಗೊಳ್ಳುವ ವಸ್ತುವಿನ ಅಸಂಗತಿಯಿಂದಾಗಿ-ಅಸಂಗತಗುಣದಿಂದಾಗಿ ವಿಫಲತೆ ಅಸಾಧ್ಯತೆಗಳ ಜೊತೆಗೆ ವಿಸ್ಮಯವೂ ಒಡನೊಡನೆ ನುಗ್ಗಿ ಇಡೀ ತ್ರಿಪದಿ ಒಂದು ಅರ್ಥಪೂರ್ಣ ಅಪೂರ್ವ ಕಾವ್ಯಗುಣ ಪಡೆಯುವುದನ್ನು ಕಾಣುತ್ತೇವೆ. 'ಪೂರ್ಣಜ್ಞ'ನ ಈ ಬಗೆಯ ವಚನಗಳನ್ನು ಆಯ್ದು ಓದುತ್ತ ಹೋದಂತೆ ಕನ್ನಡ ಭಾಷಾ ಶೈಲಿಯ ಸಮ್ಮೋಹಕತೆ, ವಸ್ತುವನ್ನು ಕಾವ್ಯ ಸಂವೇದನೆಗೆ ಅಳವಡಿಸುವ ಸಹಜತೆ, ಲೌಕಿಕ ಅನುಭವವನ್ನು ಕಾವ್ಯಾನುಭವಕ್ಕೆ ತಿರುಗಿಸುವ ನೂತನ ಸೃಷ್ಟಿಕ್ರಿಯೆ ಮತ್ತು ಇಡೀ ಅನುಭವಕ್ಕೆ ತ್ರಿಪದಿಯ ವಾಮನರೂಪದಲ್ಲಿಯೇ ಅಖಂಡವಾದ ತ್ರಿಪಾದಗಳ ಅನಿರ್ವಚನೀಯ ವ್ಯಾಪ್ತಿಯನ್ನು ತುಂಬುವ ಸೃಜನಶೀಲತೆಗಳು ಗುಡಿಗಟ್ಟಿರುವುದನ್ನು ಕಾಣುತ್ತೇವೆ. ಇಂಥ ರಚನೆಗಳ ಮತ್ತೊಂದು ವಿಶಿಷ್ಟ ಗುಣವೂ ವಿಮರ್ಶಕನಿಗೆ ಅಥವಾ ತೌಲನಿಕ ದೃಷ್ಟಿಯುಳ್ಳ ಸಹೃದಯನಿಗೆ ಕುತೂಹಲಕಾರಿಯಾಗುತ್ತದೆ; ಅಧ್ಯಯನಕ್ಕೂ ಒಂದು ಉತ್ತಮ ನಿದರ್ಶನವಾಗುತ್ತದೆ. ಕನ್ನಡ ಸಂಸ್ಕೃತ ಭಾಷೆಗಳ ಹಿತಮಿತವಾದ ಬಳಕೆ ಮತ್ತು ಬೆರಕೆ.

ಕನ್ನಡ ಮಣ್ಣಿನ ಚೆಲುವನ್ನು ಕನ್ನಡ ನುಡಿಯ ಬೆಡಗು ಶಕ್ತಿ ಸಾಮರ್ಥ್ಯಗಳನ್ನು ಅರಿತ ಮೂಜಗಂ ಸಂಸ್ಕೃತ ಭಾಷೆ ಕಾವ್ಯಗಳ ಆಳವಾದ ಅಧ್ಯಯನದಿಂದ ಸುಸಂಪನ್ನಗೊಂಡ ಸಮೃದ್ಧ ಚಿತ್ತ, ಸೃಜನಶೀಲ ಕವಿಯೂ ಆಗಿರುವುದರಿಂದ ಅವರ 'ಪೂರ್ಣಜ್ಞ'ನ ವಚನಗಳಲ್ಲಿ ಕನ್ನಡ ಮತ್ತು ಸಂಸ್ಕೃತ ಪದಗಳು, ನುಡಿಗಟ್ಟುಗಳು ಅತ್ಯಂತ ನಿರಾಳವಾಗಿ, ಲೀಲಾ ಜಾಲವಾಗಿ ಬಂದು ಒಂದುಗೊಳ್ಳುತ್ತವೆ. ಕನ್ನಡ ಮತ್ತು ಸಂಸ್ಕೃತ ಪದಗಳ

ಹಾಳತಾದ ಅಥವಾ ಹಿತ ಮಿತವಾದ ಒಳಕೆ ಬೆರಕೆಗಳ ಹಂತವನ್ನೂ ದಾಟಿ ಈ ಭಾಷೆಯ ಪದಗಳು ಅಭಿನ್ನವಾಗಿ ಪರಸ್ಪರ ಎರಕಗೊಳ್ಳುತ್ತವೆ; ವಿನೂತನ ಅರ್ಥ ಸ್ಫುರಣಕ್ಕೆ ಅನು ವಾಗುತ್ತದೆ. ಸೂಜಿ, (ಸೂಜಿಕಣ್ಣು) ತೇಜಿ, (ತೇಜಿ ಹೊರಬರುವುದು ಸೋಜಿಗ, ಜಗ ಮುಂತಾದ ಪದಗಳು ಭಾಷಾ ವಿಜ್ಞಾನದ 'ಶ್ಲೇಶಾಸ್ತ್ರದ' ದೃಷ್ಟಿಯಿಂದ ಗಮನಸೆಳೆದರೆ 'ಸೂಜಿಕಣ್ಣು' ಮುಂತಾದ ಪದಗಳು (semantics) ಅರ್ಥಶಾಸ್ತ್ರದ ದೃಷ್ಟಿಯಿಂದ ವಿಶಿಷ್ಟವಾಗುತ್ತವೆ. ಈ ಪದಗಳ ಒಳಕೆಯಿಂದ ರೂಪತಾಳುವ ಅನುರಣನ ಗುಣ, ಅರ್ಥ ದಿಂದ ಧ್ವನಿತಗೊಳ್ಳುವ ವಿಸ್ಮಯಗುಣಗಳು ಕಾವ್ಯ ಶೈಲಿಗೆ ವಿರಳ ಮಾದರಿಗಳಾಗಿ ನಿಲ್ಲುತ್ತವೆ. ಇವು ಯಾದೃಚ್ಛಿಕವಾಗಿ ಕಂಡುಬರುವ ಕೆಲವೇ ಮಾತುಗಳು–ವಿಶಿಷ್ಟಗುಣ ಲಕ್ಷಣಗಳು.

ಪೂರ್ಣಜ್ಞ ವಚನಗಳನ್ನು ಮೌನ ಮತ್ತು ಧ್ಯಾನಗಳ ಕಾಲದಲ್ಲಿ ಚಿಂತನೆಯ ಕ್ಷಣ ಗಳಲ್ಲಿ ರಚಿಸಲಾಗಿದೆ. ಕಾವ್ಯವನ್ನು ಬರೆದೇ ತೀರಬೇಕು ಎನ್ನುವ ಒಂದು ಕೇವಲ ಲೌಕಿಕ ಹಂಬಲದಿಂದ ಅಥವಾ ಲೋಕ ಮನ್ನಣೆಯ ಕಾಂಕ್ಷೆಯಿಂದ ರಚಿತವಾದವುಗಳಲ್ಲ.

'ಬಿಡುವಿದ್ದ ಸಮಯದೊಳು ಮೃಡನನ್ನು ನೆನೆಯುತ್ತ
ಗಡಗಡನೆ ಕಾವ್ಯ ರಚಿಸಿಹೆನು ಅವಸರದಿ
ಎಡವಿದರೆ ಕ್ಷಮಿಸು ಪೂರ್ಣಜ್ಞ'

ಮೃಡನ ಧ್ಯಾನದಲ್ಲಿ–ಶಿವಚಿಂತನೆ ಚಿತ್ತದ ಪಾತಳಿಯಲ್ಲಿ ಪಾರಜದಂತೆ ಪ್ರವಹಿಸಿ ಹೃದಯಕ್ಕೆ ಪ್ರೇರಣೆ ಉಂಟಾದಾಗ ರಚಿಸಿದ ಕಾವ್ಯವದು. 'ಗಡಗಡನೆ' ಎನ್ನುವ ಪದದ–ಅನುಕರಣ ಪದ–ಶ್ಲೇಷೆಯನ್ನು ಗಮನಿಸಬೇಕು. ಹೃದಯ ಅನುಕಂಪನಕ್ಕೆ ಒಳಗಾದಾಗ ಇಡೀ ವ್ಯಕ್ತಿತ್ವ ಒಂದು ರೀತಿಯ 'ಗಡಗಡನೆ' ಅನುಕಂಪಿಸುವ ಕ್ರಿಯೆಗೆ ಒಳಗಾಗುತ್ತದೆ. ಚಿತ್ತ ಕ್ಷೋಭೆ ಚಿತ್ತ ಸ್ಥಿರತೆಗೆ ಎಡೆಮಾಡಿದೆ; ಚಿತ್ತ ಸ್ಥಿರತೆ ಹೃದಯದಲ್ಲಿ ಸ್ಪಂದಿಸುವ ಪ್ರತಿಭೆಯ ಉದ್ಧರಣೆಗೆ, ಸಂವೇದನೆಗಳ ಆವಿಷ್ಕಾರಕ್ಕೆ ಪ್ರಚೋದಕವಾಗುತ್ತದೆ. ಆಗ ಅಂತಃಸ್ಫುರಣ! ಈ ಅಂತಃಸ್ಫುರಿತ ರಚನೆಗಳೇ ಪೂರ್ಣಜ್ಞನ ವಚನಗಳು. ಸಾವಿರಾರು ಸಂಖ್ಯೆಯಲ್ಲಿ 'ಪೂರ್ಣಜ್ಞ' ವಚನಗಳು ಕನ್ನಡ ಕಾವ್ಯ ಪ್ರಪಂಚಕ್ಕೆ ಸೇರುತ್ತಿವೆ. ನೂರಾರು ತೊರೆಗಳು ಹರಿದು ಬಂದು ಮಹಾನದಿಯ ಪಾತ್ರ ಪ್ರವಾಹಗಳನ್ನು ಸಂವರ್ಧಿಸುವ ರೀತಿಯಲ್ಲಿ ಪೂರ್ಣಜ್ಞ ವಚನಗಳ ತೊರೆ ವಿನೂತನ ಗುಣ ಲಕ್ಷಣಗಳಿಂದ ಬಂದು ಕಾವ್ಯ ಪ್ರವಾಹಕ್ಕೆ ಸೇರಿ ಅದನ್ನು ಸಂವರ್ಧಿಸುತ್ತಿದೆ. ಪುಬ್ಬಳ್ಳಿ, ಪುಟ್ಟು ಹಿಡಿದ ಹುಚ್ಚ, ಮೂರುಸಾವಿರ ಮಠ ಅನುಭವದಸಾರ, ಲೋಕ ಶಿಕ್ಷಣ, ಶಾಲೆ, ಜ್ಞಾನ, ವಿಜ್ಞಾನ, ಊಟ, ಮಾತು, ಕೃತ ಕತೆ, ಸ್ತ್ರೀ, ಪತ್ನಿ, ಪ್ರೇಮ, ಭವ, ಧ್ಯಾನ ಬಲ, ಶರಣರು, ವೀರಶೈವ ಪರಂಪರೆ, ಗುರು ಸಿದ್ಧ ಮಹಿಮೆ, ಗುರುಕುಮಾರಯೋಗಿ, ಗುಪ್ತಶುತ್ರು, ಪರಚಿಂತೆ, ಕೊಳಚೆ, ದೀನದಲಿತರು, ಕೃಷಿಕ, ಕಸಭೂಮಿ, ಸಂಸಾರ, ಕಾವ್ಯ, ಗಾಯನ, ಗೀತ, ಸಂಗೀತ, ದುಷ್ಟಸಂಗ, ಒಳಮನ, ಬಯಕೆ, ಚಿಂತೆ, ಮೋಸ, ಚಿತ್ತ ಜಾರಿ, ಶೀಲ, ಧ್ಯಾನ, ಮೌನ ಸಂಘಟನೆ, ಸಮಾಜ,

ಶಿಕ್ಷಣ, ಶಿಕ್ಷಣ ಸಂಸ್ಥೆ, ಧರ್ಮ, ಧರ್ಮಸಭೆ, ವಿಶ್ವದ ಧರ್ಮ–ವಿವಿಧ ಧರ್ಮಗುರುಗಳು, ಧರ್ಮಸಂಸ್ಥೆಗಳು, 'ಮೂರ್ತಿಶರಣರು, ನೀತಿ ವಿಷಕಿರಣರು, ಚಿನ್ನಾಟವಾಡುವ ಅಣ್ಣಗಳು ಲೌಕಿಕರ ಗದ್ದಲ, ಮಠದ ನಿಕ್ಷೇಪ, ಚೆನ್ನೋಲೆ, ಓಲಿಮಠ, ಸಕಲಧರ್ಮ ಸಮನ್ವಯ, ಭೌತಿಕ ಆಧ್ಯಾತ್ಮಿಕ', ಹೀಗೆ ಸಾರಜ್ಞನ ವಚನಗಳ ಒಂದು ವಿವರ ಪೂರ್ಣವಾದ ಅಕಾರಾದಿಯಿಂದ ಕೂಡಿದ ವಿಷಯ ಪಟ್ಟಿ ವಿಷಯ ಶಿರೋನಾಮೆಗೆ ಅನುಗುಣವಾಗಿ ಸಿದ್ಧಗೊಳ್ಳಬೇಕು, ವಿಷಯಗಳ ವರ್ಗೀಕರಣವಾಗಬೇಕು. ಪ್ರತಿಯೊಂದು ವರ್ಗೀಕೃತ ವಿಷಯ ಪಟ್ಟಿಯಿಂದ ಆಯಾ ವಿಷಯ ವಿಭಾಗದ ಪೂರ್ಣಜ್ಞನ ವಚನಗಳನ್ನು ಆಯ್ದು ವಿವಿಧ ಸಂಪುಟಗಳನ್ನು ಸಿದ್ಧಗೊಳಿಸಬೇಕು. ಒಂದೊಂದು ಸಂಪುಟದ ಹೃದ್ಯವಾದ ನೇರ ಸಂವಹನಗೊಳ್ಳುವ ರಾಚನಿಕ ದೃಷ್ಟಿಯಿಂದ ಶ್ರೇಷ್ಠವೆನಿಸುವ ಪೂರ್ಣಜ್ಞನ ವಚನಗಳನ್ನು ಹೆಕ್ಕಿ ಸೋಸಿ ತೆಗೆಯಬೇಕು.

'ಅವಸರದಿ
ಎಡವಿದರೆ ಕ್ಷಮಿಸು ಪೂರ್ಣಜ್ಞ'

ಎನ್ನುವ ಮಾತುಗಳ ಮೇಲುನೋಟದ ಅರ್ಥವನ್ನು ಮಾತ್ರಗ್ರಹಿಸದೆ ಕವಿ ಮೂಜಗಂ ಅವರ ಆತ್ಮ ಪ್ರಜ್ಞೆಯ ಸಂಕೇತವಾಗಿರುವ ಮಾತು ಎಂದು ಸ್ವೀಕರಿಸಬೇಕು. ಆ ನೆಲೆಯಲ್ಲಿ ಅಂಥ ಆಯ್ದ ಪೂರ್ಣಜ್ಞನ ವರ್ಗೀಕೃತ ವಿಷಯ ಪಟ್ಟಿಗಳಿಗೆ ಅನುಗುಣವಾದ ವಚನಗಳ ಅಧ್ಯಯನ–ಕಾವ್ಯಾನುಸಂಧಾನ, ಕಾವ್ಯ ವಿಮರ್ಶೆ ನಡೆಯಬೇಕು. ಪ್ರಸ್ತುತ ಪ್ರಬಂಧ, ಹೇಗೆ ಪೂರ್ಣಜ್ಞ ವಚನಗಳು, ಸರ್ವಜ್ಞನ ಹಾದಿಯಲ್ಲಿ ಮುನ್ನಡೆದು, ಸ್ಥಗಿತಗೊಂಡ ಕಾವ್ಯ ಪಥಕ್ಕೆ ಹೊಸ ದಿಕ್ಕು ದಿಸೆಯನ್ನು ತೋರಿಸುವ ಸಾಧ್ಯತೆಗಳನ್ನು ವಿವರಿಸುವುದಕ್ಕೆ ಮಾತ್ರ ಸೀಮಿತವಾಗಿದೆ. ಆ ಕಾರಣದಿಂದ ಸರ್ವಜ್ಞನ ವಚನಗಳ ರಚನೆಗೆ ತನ್ನ ಸಮಕಾಲೀನ ಜೀವನದ ಪರಿಮಿತಿಗಳಿದ್ದರೆ ಪೂರ್ಣಜ್ಞನ ವಚನಗಳಿಗೆ ಅಂಥ ಪರಿಮಿತಿಗಳಿದ್ದಂತೆ ಕಾಣುವುದಿಲ್ಲ. ಅದಕ್ಕೆ ಮೂಜಗಂ ಜೀವನ ಶ್ರದ್ಧೆ, ಧರ್ಮನಿಷ್ಠೆ, ದಿವ್ಯಾನುಭಾವ ಪಥದ ಸಾಧನೆ ಹಂಬಲುಗಳು ಎಲ್ಲಕ್ಕೂ ಮೇಲಾಗಿ ಸಮಕಾಲೀನ ಜೀವನ ಮತ್ತು ಸಮಕಾಲೀನ ವಿಶ್ವ, ಜನಾಂಗ, ಧರ್ಮಗಳ ಜೊತೆಗೆ ಮೂಜಗಂ ಹೊಂದಿರುವ ಸಂಪರ್ಕ, ಸಂಬಂಧಗಳು.

ವ್ಯಕ್ತಿ ಎಷ್ಟೆಷ್ಟು ಜೀವನದ ಆಳಕ್ಕೆ ಇಳಿಯುತ್ತಾನೆ ಅಷ್ಟಷ್ಟು ಬದುಕು ಬದುಕಿನ ಸಂವೇದನೆಗಳು ಆತನ ಒಳಕ್ಕೆ ಇಳಿಯುತ್ತವೆ. ಆತನ ಹೃದಯವೊಂದು ವಿಶ್ವಸಂವೇದನೆಗಳ ಸಂಚಯವಾಗುತ್ತದೆ. ಪೂರ್ಣಜ್ಞನ ವಚನಗಳು ಇಂಥ ಒಂದು ವಿಶ್ವಸಂಚಯ; ವಿಶ್ವಕೋಶವಾಗಿ ತೋರ್ಪಡುತ್ತದೆ. ಸರ್ವಜ್ಞ ಕನ್ನಡ ತ್ರಿಪದಿ ರಚನೆಗಳ ಅಭಿವ್ಯಕ್ತಿ ಸಾಧ್ಯತೆಗಳ ಒಂದು ಸ್ಥೂಲ ಹೊಳಹು ಹಾಕಿದ್ದರೆ, 'ಮೂಜಗಂ' ತಮ್ಮ ಪೂರ್ಣಜ್ಞನ ವಚನಗಳ ಮೂಲಕ ಜೀವನದ ಅಗಣಿತ ಆಯಾಮಗಳ, ಅನಂತ ಅನುಭವಗಳ ಅಭಿವ್ಯಕ್ತಿ

ಸಾಧ್ಯತೆಗಳನ್ನು ಸೂರೆಗೈಯುತ್ತಿದ್ದಾರೆ; ಚಿಂತನ. ಮಂಥನ ಅನುಭಾವದ ಅಮೂರ್ತ ನೆಲೆಗಳಿಗೆ ಲಗ್ಗೆ ಹಾಕುತ್ತಿದ್ದಾರೆ.

'ಅರುಹೆಂಬ ಜ್ಯೋತಿಯಿಂ। ಮರಹುಗತ್ತಲೆ ಕಳೆದು
ಕುರುಹಿನಾಚೆಗಿಹ ಬಯಲಿನಲಿ ಬೆರೆಯುವುದೆ
ಪರತರಾವಸ್ಥೆ ಪೂರ್ಣಜ್ಞ.'

'ತನ್ನನ್ನು ತಾನರಿತು ಅನ್ಯವನು ನೆನೆಯದಲೆ
ಕಣ್ಮುಚ್ಚಿ ಚಿನ್ಮಯನ ಧ್ಯಾನಗೆಯ್ಯುವದೆ
ಚಿನ್ಮಯಾನಂದ ಪೂರ್ಣಜ್ಞ'

ಇಂಥ ರಚನೆಗಳು ಅನುಭಾವ ಪಥದ ಯಾತ್ರಿಕನ ಕೈದೀಪಗಳು. ಈ ಲೋಕ ಆ ಲೋಕ ಎನ್ನುವ ಭೇದವನ್ನು ಅಳಿಸಿ ಕೈಲಾಸಕ್ಕೆ ನಿಚ್ಚಣಿಕೆ ಇಟ್ಟವರು ಶಿವಶರಣರು. ಅಂಥ ಒಂದು ಉಜ್ವಲ ಪರಂಪರೆಯನ್ನು ಕಾವ್ಯ ಸೃಷ್ಟಿಯ ಮೂಲಕವೂ ಸಾಪೇಕ್ಷಗೊಳಿಸುತ್ತಿರುವ 'ಪೂರ್ಣಜ್ಞ'ನ ವಚನಗಳ ಸಮಗ್ರ ಅಧ್ಯಯನ ಮಾಡುವ ಕಾಲ ಸನ್ನಿಹಿತವಾಗುತ್ತಿದೆ.

'ನನ್ನಂತೆ ಮಾತಾಡಿ, ನನ್ನ ಒಳಗುಟ್ಟುಗಳ
ಸನ್ನಯದಿ ಪಡೆದು'

ಬೆನ್ನಲ್ಲಿ ಇರಿವ ನಯ ವಂಚಕರು, ಭಕ್ತ ವೇಷದಿ ಬಂದು। ಮುಕ್ತಕಂಠದಿ ಹೊಗಳಿ ಯುಕ್ತಿಯಿಂ ಸ್ವಾರ್ಥ ಸಾಧಿಸುವ' ಠಕ್ಕರು ಡಾಂಭಿಕರು, ವೇಷಧಾರಿಗಳನ್ನು ಮೂಜಗಂ ಗುರುತಿಸಿರುವುದರಿಂದ ಅವರ ಆತ್ಮ ನಿರೀಕ್ಷಣೆ, ಆತ್ಮಪ್ರಜ್ಞೆ, ಅನುಭಾವ ಮತ್ತು ಆಶಯಗಳಿಗೆ ಕಾವ್ಯರೂಪ ಲಭ್ಯವಾದಾಗ ಅವು ವಿಶಿಷ್ಟವಾಗುತ್ತವೆ. ಪೂರ್ಣಜ್ಞನ ವಚನಗಳ ಉಜ್ವಲ ಕಾಂತಿಗೆ ಆರೋಗ್ಯಕರವಾದ ದ್ರವ್ಯ ಈಗಾಗಲೆ ದೊರೆತಿದೆ; ಅವು ವಿನೂತನ ಚಿಕಿತ್ಸೆ ಹೊಂದಿ ವಿಲಕ್ಷಣ ಗುಣಪಡೆದು ಕನ್ನಡದ ತ್ರಿಪದಿ ಸಾಹಿತ್ಯದ ವಿರಳ ಕಾಣಿಕೆಗಳಾಗಲಿ ಎನ್ನುವುದೇ ಪ್ರಸ್ತುತ ಲೇಖನದ ಆಶಯ.

# 'ಸರ್ವಜ್ಞ'ನ ದಾರಿಯಲ್ಲಿ ಪೂರ್ಣಜ್ಞ

ಪ್ರೊ: ಜಿ. ಡಿ. ನಾಡಕರ್ಣಿ

ಲೋಕಗುರು ಬಸವೇಶ್ವರರನ್ನು ಅನುಸರಿಸಿ, ಹುಬ್ಬಳ್ಳಿಯ ಶ್ರೀ ಮೂರುಸಾವಿರ ಮಠವು ನಾಡಿನ ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಎಲ್ಲರಿಗೂ ಅಭಿನಂದ ನೀಯ ಮತ್ತು ಅನುಕರಣೀಯ ಗಮನಾರ್ಹ ಸೇವೆ ಸಲ್ಲಿಸುತ್ತ ಬಂದಿದೆ. ಇದಕ್ಕೆ ಕಾರಣ ರಾದವರು ಅದರ ಈಗಿನ ಪೀಠಾಧಿಪತಿಗಳಾಗಿರುವ ಜಗದ್ಗುರು ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ದೇಶದ ಮತ್ತು ಸಮಾಜದ ಸಮಸ್ಯೆಗಳಿಗೆ ಸದಾ ಸ್ಪಂದಿಸುತ್ತ ಆ ಸಮಸ್ಯೆಗಳಿಗೆ ಪರಿಹಾರವನ್ನು ಕೂಡ ಪೂಜ್ಯ ಜಗದ್ಗುರುಗಳು ನೀಡುತ್ತಿರುವದು ಹೆಮ್ಮೆಯ ವಿಷಯ. ಕಾಯಕನಿಷ್ಠೆ, ಸಾಮಾಜಿಕ ಕಳಕಳಿ, ಸರ್ವಧರ್ಮ ಸಮನ್ವಯ, ವಿಶಾಲದೃಷ್ಟಿ, ಉತ್ಸಾಹ ಮತ್ತು ಕರ್ತೃತ್ವ ಶಕ್ತಿಗಳಿಂದ ಪೂಜ್ಯರು ಸ್ವತಃ ತಾವೇ ಒಂದು ಸಂಸ್ಥೆಯಂತಿದ್ದು, ಶಾಲೆ–ಕಾಲೇಜು, ಬ್ಯಾಂಕು, ಧರ್ಮಪ್ರಸಾರ ಮುಂತಾದ ಹಲವು ಬಗೆಯ ವಿಧಾಯಕ ಕಾರ್ಯಗಳಲ್ಲಿ ಅವರು ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಮೂರುಸಾವಿರಮಠವು| ಭಾರತದಿ ಹಿರಿಪೀಠ.| ಸಾರತರಶಕ್ತಿ ದುಡಿಯಲ್ಕೆ ಕೊಡ ಲೆಂದು ಕೋರಿದೆನು ಗುರುವ, ಪೂರ್ಣಜ್ಞ.

ಎಂದು ಶ್ರೀ ಮೂಜಗಂ ಅವರು ಸ್ವತಃ ವಿನಯದಿಂದ ನುಡಿದಿದ್ದಾರೆ. ಹೀಗೆ ಬಿಡುವಿಲ್ಲದ ಸತ್ಕಾರ್ಯಗಳಲ್ಲಿ ಪೂಜ್ಯ ಜಗದ್ಗುರುಗಳು ತೊಡಗಿದ್ದರೂ ಆಂತರಿಕವಾಗಿ ಅವರದು ಕವಿಹೃದಯ. ಹಲವಾರು ಹೊಣೆಗಾರಿಕೆಯ ಕರ್ತವ್ಯಗಳ ಮಧ್ಯದಲ್ಲಿಯೂ ಅವರು ಅನೇಕ ಸತ್ಕೃತಿಗಳನ್ನು ಸ್ವತಃ ರಚಿಸಿದ್ದಾರೆ. ಪ್ರಸ್ತುತ "ಪೂರ್ಣಜ್ಞ ವಚನಗಳು" ಅವರ ಮೇರುಕೃತಿಯಾಗಿದ್ದು, ಅದು ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಬಲ್ಲ ವ್ಯಾಪ್ತಿ–ದೀಪ್ತಿಗಳನ್ನುಳ್ಳದ್ದಾಗಿದೆ. ಶ್ರೀಮಠದಿಂದ ಹೊರಡುವ "ಪರಂಜ್ಯೋತಿ" ಮಾಸ ಪತ್ರಿಕೆಯಲ್ಲಿ ಇಲ್ಲಿಯ ಅನೇಕ ತ್ರಿಪದಿಗಳು ಈಗಾಗಲೇ ಪ್ರಕಟವಾಗಿ, ರಸಿಕರ ಮನವನ್ನು ಸೂರೆಗೊಂಡಿವೆ. ಪೂಜ್ಯ ಜಗದ್ಗುರುಗಳು ಸುಮಾರು ಐದು ಸಾವಿರ ತ್ರಿಪದಿಗಳನ್ನು ಇದುವರೆಗೆ ರಚಿಸಿದ್ದಾರೆಂಬುದು ವಿಸ್ಮಯದ ಸಂಗತಿಯೇ ಸರಿ. ಯಾವ ಮಠದ ಸ್ವಾಮಿ ಗಳು ಯಾವ ಸಾಹಿತಿಗಳು ಮಾಡದ ಕೆಲಸವನ್ನು ಅವರು ಮಾಡಿದ್ದಾರೆ. ಅದರಲ್ಲಿ ಮೊದಲನೆಯ ಭಾಗವಾಗಿ ಸುಮಾರು ೩೨೫೦ ತ್ರಿಪದಿಗಳು ಹೆಬ್ಬೊತ್ತಿಗೆಯ ರೂಪದಲ್ಲಿ ಮುದ್ರಣಗೊಳ್ಳುತ್ತಿದ್ದು, ಒಂದೆರಡು ತಿಂಗಳಲ್ಲಿ ಆಕೃತಿ ಬೆಳಕಿಗೆ ಬರಲಿದೆ. ಕೆಲಕಾಲದ ನಂತರ ಉಳಿದ ಎರಡುಸಾವಿರ ತ್ರಿಪದಿಗಳನ್ನು ಒಳಗೊಂಡು ಈ ಸಾಹಸದ ಎರಡನೆಯ ಭಾಗವು ಮುದ್ರಿತವಾಗಿ ಪ್ರಕಟವಾಗುತ್ತದೆ.

ವಿಜಯನಗರ ಸಾಮ್ರಾಜ್ಯದ ನಂತರ, ಜನಜೀವನವು ಅಸ್ತ-ವ್ಯಸ್ತವಾದಾಗ, ಹಿಂಡನಗಲಿದ ಗಜದಂತಿದ್ದ ಸರ್ವಜ್ಞ ಕವಿಯು ಜನಿಸಿ, ತನ್ನ ತ್ರಿಪದಿಗಳಿಂದ ಸಮಾಜದ ರುಜಿನಗಳಿಗೆ ಚಿಕಿತ್ಸೆ ನೀಡಿದ್ದು, ಸರ್ವ ವಿದಿತ. ಈಗ ಮತ್ತೊಮ್ಮೆ ನಮ್ಮ ದೇಶದಲ್ಲಿ ಎಲ್ಲ ಕ್ಷೇತ್ರಗಳಲ್ಲಿ ಅತೃಪ್ತಿ ನಿರಾಶೆಗಳು ಅನುಭವಕ್ಕೆ ಬರುವಂಥ ವಿಷಾದದ ಪರಿಸ್ಥಿತಿಯುಂಟಾಗಿದೆ. ಈಗ ಪೂರ್ಣಜ್ಞನು ಅವತರಿಸಿದ್ದಾನೆ, ಜನಪದ ಸಾಹಿತ್ಯದ ಗಾಯತ್ರಿಯಂತಿರುವ, ಸುಲಭ ತ್ರಿಪದಿಗಳಲ್ಲಿ ಜನತೆಗೆ ಬೋಧೆ ನೀಡುತ್ತಿದ್ದಾನೆ. ಸರ್ವಜ್ಞನ ಕಾಲದ ಜೀವನವು ಜಟಿಲವಾಗಿರಲಿಲ್ಲ; ಸರಳವಾಗಿತ್ತು. ಇಂದಿನ ನಮ್ಮ ಜೀವನವು ನಾಸ್ತಿಕತೆ, ವೈಜ್ಞಾನಿಕ ಪ್ರಗತಿ, ಯಂತ್ರಗಳು ಪಾಶ್ಚಿಮಾತ್ಯ ಪ್ರಭಾವಗಳಿಂದ ಬಿಡಿಸಲು ಸುಲಭವಲ್ಲದ ಕಗ್ಗಂಟಿನಂತಾಗಿದೆ. ಸ್ವಾತಂತ್ರ್ಯಪೂರ್ವದ ಮಹಾನ್ ನಾಯಕರು ಹೋದಮೇಲೆ ಇಂದು ಯುವಕರಿಗೆ ತಮ್ಮ ಚಾರಿತ್ರ್ಯದಿಂದ ಬೋಧಿಸಬಲ್ಲ ಶ್ರೇಷ್ಠ ನಾಯಕರು ಇಲ್ಲದಂತಾಗಿದೆ.

ಇಂಥ ಕಾಲದಲ್ಲಿ ಸಮಗ್ರ ಜೀವನವನ್ನು ವ್ಯಾಪಿಸಿ, ಜೀವನ ಮೌಲ್ಯಗಳನ್ನು ಪುನಃ ಸ್ಥಾಪಿಸಬಲ್ಲ ಯೋಗ್ಯತೆಯುಳ್ಳ "ಪೂರ್ಣಜ್ಞ ವಚನಗಳು" ಕೃತಿಯನ್ನು ಶ್ರೀ ಜಗದ್ಗುರುಗಳು ರಚಿಸಿದ್ದು ಸಕಾಲಿಕವಾಗಿದೆ. ಈ ಕೃತಿಯಲ್ಲಿ ಆತ್ಮವೃತ್ತಾಂತದ ಕೆಲವು ಆತ್ಮೀಯ ತ್ರಿಪದಿಗಳ ನಂತರ, ವಿಭೂತಿ ಪುರುಷರು, ಶಿವಾದ್ವೈತ ದರ್ಶನ, ಮಾನವೀಯ ಮೌಲ್ಯಗಳು, ಮಹಿಳೆ, ಮಕ್ಕಳು, ಸಮಾಜ, ಡಾಂಭಿಕತೆಯ ಖಂಡನೆ, ಶಿಕ್ಷಣ-ಸಂಗೀತ-ವಿಜ್ಞಾನ, ರಾಜಕೀಯ, ಕಾವ್ಯ-ಕವಿಗಳು, ನೀತಿಬೋಧೆ, ರೈತರು-ಕೃಷಿ, ಆರೋಗ್ಯ-ವೈದ್ಯರು, ನಾಡು-ನುಡಿಗಳ ಅಭಿಮಾನ, ಪ್ರೇಕ್ಷಣೀಯ ಸ್ಥಳಗಳು, ಮಾನವೀಯ ದೌರ್ಬಲ್ಯಗಳು, ಶಿವನೊಲುಮೆ-ಮಹಿಮೆ, ಬೆಡಗಿನ ವಚನಗಳು ಎಂದು ಮುಂತಾದ ಹಲವು ವಿಭಾಗಗಳಲ್ಲಿ ಈ ಕೃತಿಯು ವಿಭಾಗಿಸಲ್ಪಟ್ಟಿದೆ. ಈ ಪರಿವಿಡಿಯ ಮೇಲಿಂದಲೇ ಈ ಕೃತಿಯ ವ್ಯಾಪ್ತಿಯನ್ನು ಓದುಗರು ಕಲ್ಪಿಸಿಕೊಳ್ಳಬಹುದಾಗಿದೆ.

ಕಿರಿದರಲ್ಲಿ ಹಿರಿದು ಅರ್ಥವನ್ನು ಹೇಳಬಲ್ಲ ಶಕ್ತಿಯು ತ್ರಿಪದಿಗೆ ಮಾತ್ರ ಇದೆ. ಗಾತ್ರದಲ್ಲಿ ವಾಮನಾಕಾರವಾಗಿ ಕಂಡರೂ, ವ್ಯಾಪ್ತಿಯಲ್ಲಿ ತ್ರಿವಿಕ್ರಮ ಸ್ವರೂಪ ಪಡೆಯಬಲ್ಲ ಏಕೈಕ ಕನ್ನಡ ಛಂದಸ್ಸು-ತ್ರಿಪದಿ. ಇಂದಿನದು ಅವಸರದ ಯುಗ, ಜನಸಾಮಾನ್ಯರಿಗೆ ಸುದೀರ್ಘ ಕಾವ್ಯವನ್ನು, ಅದೆಷ್ಟೇ ಉತ್ಕೃಷ್ಟವಾಗಿದ್ದರೂ ಓದಿ ಪ್ರಯೋಜನ ಪಡೆಯುವ ವೇಳೆ ಇಲ್ಲ, ಇಚ್ಛೆಯು ಇಲ್ಲ, ಆದರೆ ತ್ರಿಪದಿಯನ್ನು ಸ್ತ್ರೀ-ಪುರುಷ-ಮಕ್ಕಳು ಎಲ್ಲರೂ ಓದಿ, ಸಂತಸಪಟ್ಟು, ನೆನಪಿನಲ್ಲಿ ಕೂಡ ಇಟ್ಟುಕೊಳ್ಳುವದು ಸಾಧ್ಯವಿದೆ. ಆದ್ದರಿಂದ ಪೂಜ್ಯರು ತ್ರಿಪದಿಯ ಮಾಧ್ಯಮವನ್ನು ಆಯ್ಕೆ ಮಾಡಿದ್ದು ಸೂಕ್ತ. ಪೂಜ್ಯ ಜಗದ್ಗುರುಗಳು ನಾನಾಬಗೆಯ ಕ್ಷೇತ್ರಗಳಲ್ಲಿ ಕೆಲಸ ಮಾಡುವಾಗ, ಭಿನ್ನ ಭಿನ್ನ ಸ್ವಭಾವದ ಜನರ ಸಂಪರ್ಕ ಬಂದಿದ್ದು, ಅದು ಅವರ ಲೋಕಾನುಭವವನ್ನು ವ್ಯಾವಹಾರಿಕವಾಗಿ ಹೆಚ್ಚಿಸಲು ಕಾರಣವಾಗಿದೆ. ಶಾಸ್ತ್ರಗಳ ಅನುಭವವಂತೂ ಪೂಜ್ಯರಿಗೆ ಇದ್ದೇ ಇದೆ.

ಇದರ ಜೊತೆಗೆ ಜನರು ಒಳ್ಳೆಯವರಾಗಿ ಬದುಕಬೇಕೆಂಬ ಕಳಕಳಿ, ಭಾಷೆಯ ಪ್ರಭುತ್ವ, ಸಹಜವಾದ ಕವಿತ್ವಶಕ್ತಿ ಇವೆಲ್ಲ ಮೇಳವಿಸಿ ಈ "ಪೂರ್ಣಜ್ಞ ವಚನಗಳು" ಕೃತಿ ಜನಿಸಲು ಕಾರಣವಾಗಿವೆ. ಜಗದ್ಗುರುಗಳಾಗಿ ದಂತಗೋಪುರದಲ್ಲಿ ಕುಳಿತುಕೊಳ್ಳದೆ, ಜನಸಾಮಾನ್ಯರ ಸುಖ-ದುಃಖದಲ್ಲಿ ಬೆರೆತು, ಅವರ ಭಾವನೆಗಳ ಜೊತೆಗೆ ಮಿಡಿದು, ವಿಧಾಯಕ ರಚನಾತ್ಮಕ ಕಾರ್ಯಗಳಲ್ಲಿ ದುಡಿದು ಮಾಗಿದ ಪರಿಪಕ್ವ ಅಂತಃಕರಣದ ತುಡಿತವನ್ನು ಇಲ್ಲಿಯ ತ್ರಿಪದಿಗಳಲ್ಲಿ ನಾವು ಕಾಣುತ್ತೇವೆ. "ಆಡು ಮುಟ್ಟದ ಗಿಡವಿಲ್ಲ" ಎನ್ನುವಂತೆ ಈ ತ್ರಿಪದಿಗಳಲ್ಲಿ ಒಳಗಾಗದ ವಿಷಯವೇ ಇಲ್ಲವೆಂದರೆ ಅತಿಶಯೋಕ್ತಿಯಲ್ಲ.

ಈ ತ್ರಿಪದಿಗಳು ಯಾವ ಹಿಂದಿನ ಮತ್ತು ಇಂದಿನ ಕವಿಗಳ ನೇರ ಪ್ರಭಾವಕ್ಕೆ (ಅನುಕರಣೆಗೆ) ಒಳಗಾಗವೆ, ಸ್ವಂತಿಕೆಯಿಂದ ಉಜ್ವಲವಾಗಿ ಬೆಳಗುತ್ತಲಿವೆ ಎಂಬುದು ಮಹತ್ವದ್ದಾಗಿದೆ. ಸರ್ವಜ್ಞ ಕವಿಯ ಅಥವಾ ಸಂಸ್ಕೃತ ಸುಭಾಷಿತಕಾರರ ದಟ್ಟಪ್ರಭಾವವು ಎಲ್ಲಿಯೂ ಕಾಣುವುದಿಲ್ಲ. ಇಲ್ಲಿಯ ಯಾವ ತ್ರಿಪದಿಯೂ ಹುಸಿಹೋಗದೆ, ಓದುಗರ ಮನಸ್ಸಿನ ಮೇಲೆ ಅಚ್ಚೊತ್ತುವಂಥ ಪ್ರಭಾವ ಬೀರಬಲ್ಲದ್ದಾಗಿದೆ. ಸರ್ವಜ್ಞನ ತ್ರಿಪದಿಗಳ ಉಪದೇಶದ ಧಾಟಿಯು ಓದುಗರ ಬೆನ್ನಮೇಲೆ ಚಾಟಿಯ ಏಟುಕೊಟ್ಟು ಎಚ್ಚರಿಸುವ, ನಿರ್ದೇಶಿಸುವ ಬಗೆಯದು, ಪೂರ್ಣಜ್ಞರ ತ್ರಿಪದಿಗಳ ಧಾಟಿಯು ಓದುಗರ ಬೆನ್ನಮೇಲೆ ಪ್ರೀತಿಯಿಂದ ಮೃದುವಾಗಿ ಕೈಯಾಡಿಸುತ್ತ ಮಿತ್ರ ಸಮ್ಮಿತ, ಕಾಂತಾಸಮ್ಮಿತಗಳ ಉಪದೇಶದ ರೀತಿಯಾಗಿದೆ. ಸರ್ವಜ್ಞನ ತ್ರಿಪದಿಗಳು ಕೆಂಡದ ಉಂಡೆಗಳಂತೆ ಇದ್ದರೆ, ಪೂರ್ಣಜ್ಞರ ತ್ರಿಪದಿಗಳು ಹಿತವಚನದ ತಂಪು ಬೀರುವ ನಂದಾದೀಪದ ಬೆಳಕಿನಂತಿವೆ ಎನ್ನಬಹುದು. ಇಲ್ಲಿ ಕವಿಯು ಒಮ್ಮೊಮ್ಮೆ ಸಮಾಜಸುಧಾರಕನಾಗಿ, ಗುರುವಾಗಿ, ತತ್ವಜ್ಞಾನಿಯಾಗಿ, ವ್ಯವಹಾರಬಲ್ಲವನಾಗಿ, ದೇಶಭಕ್ತನಾಗಿ, ಮಿತ್ರನಾಗಿ, ತಾಯಿಯಾಗಿ ಉಪದೇಶ ನೀಡಿದ್ದಾರೆ. ಭಾರತೀಯ ಸಂಸ್ಕೃತಿಯ ಉತ್ತಮಾಂಶಗಳೆಲ್ಲ ಇಲ್ಲಿಯ ತ್ರಿಪದಿಗಳಲ್ಲಿ ಪ್ರತಿಬಿಂಬಿತವಾಗಿವೆ. ಇಲ್ಲಿ ಹಳೆಯ ಹಾಗೂ ಹೊಸ ವಿಚಾರಗಳ, ದೃಷ್ಟಿಯ ಸುಂದರ ಸಮನ್ವಯವಿದೆ. ಜೀವನವನ್ನು ಇಡಿಯಾಗಿ ನೋಡಿದ್ದರಿಂದ, ದೈವ-ಪುರುಷ ಪ್ರಯತ್ನ, ಇಹ-ಪರ, ತ್ಯಾಗ-ಭೋಗ, ಸೋಲು-ಗೆಲುವು ಮೊದಲಾದ ದಂದ್ವಗಳನ್ನು ಧೈರ್ಯದಿಂದ ಸಮನ್ವಯಗೊಳಿಸುವ ಅಪರೂಪದ ದೃಷ್ಟಿಕೋನವಿದೆ. ಇಲ್ಲಿಯ ತ್ರಿಪದಿಗಳಲ್ಲಿ ಏನಿದೆ ಎಂಬುದಕ್ಕಿಂತ, ಏನಿಲ್ಲ ಎಂದು ಕೇಳಿದರೆ ಹೆಚ್ಚು ಸಮರ್ಪಕವೆನಿಸುತ್ತದೆ. ಇಲ್ಲಿ ವಿನೋದವಿದೆ, ವಿಡಂಬನೆಯಿದೆ,ಎಚ್ಚರಿಕೆ ಇದೆ, ಹಿತೋಕ್ತಿ ಇದೆ. ಸಾಮಾಜಿಕ ಕಳಕಳಿ ಇದೆ, ಜೀವನ ಮೌಲ್ಯಗಳಿವೆ. ಎಲ್ಲಕ್ಕಿಂತ ಮೇಲಾಗಿ ನಿರಾಶೆಯನ್ನು ಮೆಟ್ಟಿ ನಿಲ್ಲಬಲ್ಲ ಅದಮ್ಯ ಆಶಾವಾದವಿದೆ. ಪೂಜ್ಯರಿಗೆ ಇಂದಿನ ದೇಶದ ಅಸ್ತವ್ಯಸ್ತ ಸ್ಥಿತಿಯನ್ನು ಕಂಡು, ಕ್ಷಣಕಾಲ ಸ್ವಲ್ಪ ನಿರಾಶೆ ಎನಿಸಿದರೂ, ಪುನಃ ನಮ್ಮ ದೇಶದ ನಾಯಕರು ಮತ್ತು ಜನತೆ ಎಚ್ಚತ್ತು, ಕ್ಲೈಬ್ಯವನ್ನು ತೊರೆದು, ಭಾರತೀಯ ಜೀವನ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡರೆ ಮತ್ತೆ ಸುಖದ ದಿನಗಳು ಬಂದೇ ತೀರುವವು ಎಂಬ ಭರವಸೆ ಇವೆ.

ಜಗದ್ಗುರುಗಳು ವಿದೇಶ ಪ್ರಯಾಣ ಮಾಡಿ, ಅಲ್ಲಿಯ ಜೀವನ ಅಭ್ಯಸಿಸಿದ್ದರಿಂದ, ಕೂಪ ಮಂಡೂಕವೃತ್ತಿ ಇರದೆ, ವಿಶ್ವವಿಶಾಲ ಭಾವನೆಗೆ ಇಂಬು ದೊರಕಿದೆ.

ಪೂರ್ಣಜ್ಞನೆಂದೊಡನೆ ಪೂರ್ಣದರಿವಿನ ನುಡಿಯು
ಪೂರ್ಣ ತುಂಬಿಹುದೆಂದು ಬಗೆಯ ಬೇಡಿರಿದು
ಪೂರ್ಣಕ್ಕೆ ಪಥವು ಪೂರ್ಣಜ್ಞ.

ಎಂದು ತಮ್ಮ ಒಂದು ತ್ರಿಪದಿಯಲ್ಲಿ ನಮ್ರವಾಗಿ ನುಡಿದಿದ್ದಾರೆ. "ಬಿಡುವಿದ್ದ ಸಮಯದೊಳು ಮೃಡನನ್ನು ನೆನೆಯುತ್ತ" ಕಾವ್ಯ ರಚನೆ ಮಾಡಿದ್ದಾಗಿ ತಾವೇ ನಿವೇದಿಸಿದ್ದಾರೆ. "ಸುಲಿದ ಬಾಳೆಯಹಣ್ಣು, ಚೆಲುವ ದ್ರಾಕ್ಷಿಯ ಹಣ್ಣು, ಲಲಿತ ಭಾಷೆಯಲಿ ಬರೆದಿಹನು ತ್ರಿಪದಿಗಳ ಸುಲಭ ಶೈಲಿಯಲ್ಲಿ ಪೂರ್ಣಜ್ಞ." ಎಂಬ ಅವರ ಹೇಳಿಕೆ ಯತಾರ್ಥವಾಗಿದೆ. ಅವರ ತ್ರಿಪದಿಗಳಲ್ಲಿ ದ್ರಾಕ್ಷಾಪಾಕವಿದೆ. "ಕೆಲಸಗಳ ಸಂತೆಯಲ್ಲಿ ಕುಳಿತು ಬರೆಯುವದೆಂತು?" ಎಂದು ಒಮ್ಮೊಮ್ಮೆ ಪರಿತಪಿಸಿದ್ದಾರೆ. ಸಿದ್ಧರಾಮನ ಕಾರ್ಯಬದ್ಧನಾಗಿಯೂ ನಿತ್ಯ ಪದ್ಯಗಳನ್ನು ಬರೆದಿದ್ದಾರೆ. "ಆರೇನು ಮಾಡಿದರು ಸಾರುವೆನು ಸತ್ಯವನು" ಎಂದು ಮನೋ ಧೈರ್ಯದಿಂದ ಸಾರಿದ್ದಾರೆ. "ಮೂರು ಸಾಲೊಳು ಬಾಳಸಾರ ತತ್ವವೆ ತುಂಬಿದ" ರಚಿಸಿದ್ದಾಗಿಯೂ ಹೇಳಿದ್ದಾರೆ. "ವರಕಾವ್ಯ ಬರೆಯುವದು, ಸರಳವೆನ್ನದಿರಣ್ಣ!" ಎಂಬ ಮಾತಿನಲ್ಲಿ ಕಾವ್ಯ ರಚನೆಯ ಕಷ್ಟ ವಿವರಿಸಿದ್ದಾರೆ. "ಕಂಡದ್ದ ಬರೆದಿಹೆನು ಕೆಂಡವಾಗದಿರೆಂದಿ" ಎಂದು ಓದುಗರಿಗೆ ಸಲಹೆ ಮಾಡಿದ್ದಾರೆ. "ವನವಾಸಿ ನಾನಲ್ಲ, ಧನಕನಕ ತ್ಯಜಿಸಿಲ್ಲ, ಜನಹಿತಗೈವ ಸತ್ಕಾರ್ಯ ನಡೆಸಿಹೆನು ಮನ ಮುಟ್ಟಿ ನಿರುತ" ಎಂದು ತಮ್ಮ ನಿಲುವನ್ನು ಪ್ರಾಮಾಣಿಕವಾಗಿ, ಧೈರ್ಯದಿಂದ ವಿವರಿಸಿದ್ದಾರೆ.

ಕವಿಗಳು ಇಲ್ಲಿ ಹಳೆಯದರಲ್ಲಿಯ ಸತ್ವವನ್ನೂ ಹೊಸದರಲ್ಲಿಯ ನಾವೀನ್ಯತೆಯನ್ನೂ ಸಮನ್ವಯಮಾಡಿ, ಮೂರುಸಾವಿರಕ್ಕೂ ಮಿಕ್ಕಿ ತ್ರಿಪದಿಗಳ ಸಂಗ್ರಹವನ್ನು ಈಗ ಕನ್ನಡಿಗರಿಗೆ ನೀಡಿದ್ದಾರೆ. ಇಷ್ಟರಲ್ಲಿಯೇ ಪ್ರಕಟವಾಗಲಿರುವ ಹಿಮಾಲಿಯ ಸದೃಶ ಕೃತಿಯು ಕನ್ನಡಗರ ಮನೆ–ಮನೆಯನ್ನೂ ಪ್ರವೇಶಿಸಿ, ಜನರ ಬಾಳನ್ನು ಉತ್ತಮಗೊಳಿಸಲಿ ಎಂದು ಹಾರೈಸುವುದು ಸಮಯೋಚಿತ.

ವಿಶ್ವಕಾರುಣ್ಯಕ್ಕೆ, ವಿಶ್ವಕಲ್ಯಾಣಕ್ಕೆ
ವಿಶ್ವಸಮತೆಗೆ ಬಸವ ನೀಡಿರುವ ತತ್ತ್ವ
ವಿಶ್ವಕ್ಕೆ ಜ್ಯೋತಿ ಪೂರ್ಣಜ್ಞ.

ಕೊಲ್ಲುವದು ಪಶುಧರ್ಮ ಬಲ್ಲವರು ಪೇಳಿಪರು
ಕೊಲ್ಲದಲೆ ಇರುವ ಧರ್ಮವದು ನಿಜಧರ್ಮ
ಎಲ್ಲಕ್ಕು ಮಿಗಿಲು! ಪೂರ್ಣಜ್ಞ.

ಆರು ವರ್ಣದ ಪಕ್ಷಿ ಮೂರು ವರ್ಣದ ಗೂಡ
ಭಾರಿ ಮರದಲ್ಲಿ ಕಟ್ಟಿ ಮರಿ ಇಟ್ಟಿಹುದು
ಪಾರಮಾರ್ಥವಿದು! ಪೂರ್ಣಜ್ಞ.

ಆಧುನಿಕ ಅಣ್ವಸ್ತ್ರ ಮೇದಿನಿಯ ತುತ್ತಲಿದೆ
ಸಾಧುಗುಣ ಬೆಳೆಯದಿರೆ, ವಿಜ್ಞಾನದೊಡನೆ
ಮೇದಿನಿಗೆ ಪ್ರಳಯ! ಪೂರ್ಣಜ್ಞ.

ಬಿದ್ದವರನೆತ್ತುವದು ಶುದ್ಧಮಾನವಧರ್ಮ
ತಿದ್ದಿ ಜನಮನದ ಸಂಸ್ಕಾರ ಕೊಡುವವನು
ಸದ್ಧರ್ಮಿಯಯ್ಯಾ ಪೂರ್ಣಜ್ಞ.

ಶ್ರೀ ಮೂ.ಜ.ಗಂ.